॥ ಶ್ರೀಃ ॥

# ಶ್ರೀಕರಭಾಷ್ಯಂ

ಜೀವಬ್ರಹ್ಮಭೇದಾಭೇದಪ್ರತಿಪಾದಕಂ
ಬ್ರಹ್ಮಮೀಮಾಂಸಾಸೂತ್ರಭಾಷ್ಯಂ
ಶ್ರೀ ಶ್ರೀಪತಿಪಂಡಿತಭಗವತ್ಪಾದಾಚಾರ್ಯವಿರಚಿತಃ
ಕರ್ಣಾಟಕಾನುವಾದಸಹಿತಃ

ದ್ವಿತೀಯ ಭಾಗಃ



ಅನುವಾದಕ
ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ, ವಿದ್ವಾನ್, ಎಂ.ಎ., ಪಿಎಚ್.ಡಿ.,
ಸಂಸ್ಕೃತಾಧ್ಯಾಪಕ
ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ.
ಮೈಸೂರು.



ಗ್ರಂಥಪ್ರಕಾಶಕರು:
ಗುಬ್ಬಿ ಶ್ರೀ ಚನ್ನಬಸವೇಶ್ವರಸ್ವಾಮಿಗ್ರಂಥಪ್ರಕಟನಾಲಯ
372, ಶ್ರದ್ಧಾನಂದಭವನ ರಸ್ತೆ, ವಿಶ್ವೇಶ್ವರಪುರಂ,
ಬೆಂಗಳೂರು-4

[ಬೆಲೆ 10 ರೂ.

॥ ಶ್ರೀಃ ॥

# ಶ್ರೀಕರಭಾಷ್ಯಂ

## ಜೀವಬ್ರಹ್ಮಭೇದಾಭೇದಪ್ರತಿಪಾದಕಂ
## ಬ್ರಹ್ಮಮೀಮಾಂಸಾಸೂತ್ರಭಾಷ್ಯಂ
## ಶ್ರೀಪತಿಪಂಡಿತಭಗವತ್ಪಾದಾಚಾರ್ಯವಿರಚಿತಂ
## ಕರ್ಣಾಟಕಾನುವಾದಸಹಿತಃ

## ದ್ವಿತೀಯ ಭಾಗಃ

ಅನುವಾದಕ
ಡಾ॥ ಟಿ. ಜಿ. ಸಿದ್ಧಪ್ಪಾರಾಧ್ಯ, ವಿದ್ವಾನ್, ಎಂ.ಎ., ಪಿಎಚ್.ಡಿ.,
ಸಂಸ್ಕೃತಾಧ್ಯಾಪಕ
ಮಾನಸಗಂಗೋತ್ರಿ, ಮೈಸೂರು ವಿಶ್ವವಿದ್ಯಾನಿಲಯ,
ಮೈಸೂರು

ಶ್ರೀಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು
1963
[ ಬೆಲೆ 10 ರೂ.

# ಮುನ್ನುಡಿ

ಪೂಜ್ಯ ಬಾದರಾಯಣರು ಮಾನವನ ಹಿತಕ್ಕಾಗಿ ಅವನ ಸ್ವರೂಪವನ್ನು ತಿಳಿಸಲು ಅವ್ಯಾಜಪ್ರೇಮದಿಂದ ವೇದಾಂತಸೂತ್ರಗಳನ್ನು ರಚಿಸಿರುವರು. ವೇದಾಂತವೆಂದರೆ ವೇದಗಳ ಕೊನೆಯಭಾಗದಲ್ಲಿ ನಿರ್ದಿಷ್ಟವಾಗಿರುವ ಆತ್ಮನ ವಿಚಾರ. ಆತ್ಮನ ಸ್ವರೂಪವನ್ನು ವಿವೇಚನೆಮಾಡಿ ತಿಳಿಸುವ ಸೂತ್ರಗಳೇ ವೇದಾಂತಸೂತ್ರಗಳು. ಆತ್ಮನೆಂದರೆ ಎಲ್ಲಾ ಕಡೆಯೂ ಏಕಕಾಲದಲ್ಲಿ ವ್ಯಾಪಿಸಬಹುದಾದ ವಸ್ತು. ಜಡವಸ್ತುವಿಗೆ ಇಂತಹ ವ್ಯಾಪನಶಕ್ತಿ ಇಲ್ಲದ್ದರಿಂದ ಅದು ಆತ್ಮವೆನಿಸಲಾರದು. ಚೇತನವಸ್ತು ಒಂದೇ ಒಂದೆಡೆ ಇದ್ದರೂ ಎಲ್ಲೆಲ್ಲೂ ವ್ಯಾಪಿಸುವ ಸಾಮರ್ಥ್ಯವನ್ನು ಪಡೆದಿರುವುದರಿಂದ ಆತ್ಮವೆನಿಸಿದೆ. ಇಂತಹ ಆತ್ಮವು ವಿಶ್ವದ ಎಲ್ಲಾ ವಸ್ತುಗಳಲ್ಲೂ ಅದರದರ ಅಂತಸ್ತಿಗೆ ತಕ್ಕಂತೆ ನೆಲಸಿರುವುದು. ಆದರೆ ಮಾನವನೊಬ್ಬನಲ್ಲಿ ಮಾತ್ರವೇ ವಿಕಾಸೋನ್ಮುಖವಾಗಿರುವುದು. ಮನಸ್ಸಿನೊಡನೆ ಸೇರಿಕೊಂಡು ದೇಹೇಂದ್ರಿಯಗಳೊಡನೆ ವ್ಯವಹರಿಸುತ್ತಲೂ, ಅವುಗಳಿಂದ ಬರುವ ಸುಖದುಃಖಗಳನ್ನು ಅನುಭವಿಸುತ್ತಲೂ ಅವುಗಳಲ್ಲಿ ಅಭಿಮಾನಿಸಿಕೊಂಡು ಬಾಳುತ್ತಿರುವ ಆತ್ಮನಿಗೆ ಜೀವಾತ್ಮನೆಂದು ಹೆಸರು. ಇವನೇ ಪಂಚಭೂತಗಳಿಂದಾಗಿರುವ ಈ ದೇಹದಲ್ಲಿ ಜೀವಿಸುತ್ತ ಇದಕ್ಕೆ ಯಜಮಾನನಾಗಿರುವನು. ಆದರೆ ಇವನು ತನ್ನ ನಿಜಸ್ವರೂಪವನ್ನು ತಿಳಿಯದೆ ದೇಹವೇ ತಾನೆಂದು ಅಭಿಮಾನಿಸಿ ದೇಹದ ದುಃಖಗಳಿಗೆ ಅಂಟಿಕೊಂಡಿರುವನು. ಇವನು ಹೃದಯದಲ್ಲಿ ನೆಲಸಿದ್ದರೂ ಮನಸ್ಸಿನೊಡನೆ ಸೇರಿ ಎಲ್ಲಾ ಇಂದ್ರಿಯಗಳಲ್ಲೂ ತನ್ನ ಚೈತನ್ಯಶಕ್ತಿಯ ಪ್ರಭಾವದಿಂದ ವ್ಯಾಪಿಸಬಲ್ಲನು. ಆದರೆ ಇವನ ವ್ಯಾಪ್ತಿಯೆಲ್ಲವೂ ಈ ದೇಹೇಂದ್ರಿಯಗಳೊಳಗಷ್ಟೇ ಪರಿಮಿತವಾಗಿದ್ದು ಇದರಿಂದ ಹೊರಗೆ ಪ್ರಸರಿಸುವಷ್ಟು ವೈಶಾಲ್ಯವನ್ನು ಇವನು ಕಳೆದುಕೊಂಡಿದ್ದಾನೆ. ಈ ಬಗೆಯ ಪರಿಮಿತಿಯೇ ಇವನಲ್ಲಿ ಸ್ವಾರ್ಥತೆ, ವ್ಯಾಮೋಹ, ಅಭಿಮಾನಗಳನ್ನು ಹುಟ್ಟಿಸಿ ಆತ್ಮದ ಸ್ವಚ್ಛತೆ, ವೈಶಾಲ್ಯ, ಮತ್ತು ಪರಿಪೂರ್ಣತೆಗಳನ್ನು ಮರೆಮಾಚಿಸಿದೆ. ಈ ಪರಿಮಿತಿಯೇ ಜೀವರಲ್ಲಿ ಅನಂತವೈಚಿತ್ರ್ಯವನ್ನು ಕಲ್ಪಿಸಿ ಭೇದದೃಷ್ಟಿಯನ್ನು ಏರ್ಪಡಿಸಿ ಸಂಕೋಚಪ್ರಕೃತಿಯನ್ನು ಬೆಳೆಸಿದೆ. ಇದನ್ನು ವೇದಾಂತಸೂತ್ರಗಳು ಮಾಯೆ ಎಂದು ಕರೆದಿವೆ. ಈ ಮಾಯೆ ಕಣ್ಣು, ನಾಲಿಗೆ, ಮೂಗು ಚರ್ಮ, ಕಿವಿಗಳೆಂಬ ಐದು ಮುಖಗಳಿಂದ ರೂಪ, ರಸ, ಗಂಧ, ಸ್ಪರ್ಶ, ಶಬ್ದಗಳೆಂಬ ಐದು ವಿಷಯಸುಖಗಳನ್ನು ಜೀವನಿಗೆ ಪ್ರತಿನಿಮಿಷದಲ್ಲೂ ದೊರಕಿಸುತ್ತ ಈ ಐದರ ವಿಸ್ತಾರವೆನಿಸಿದ ಈ ಪ್ರಪಂಚದಲ್ಲಿಯೇ ಅವನನ್ನು ಮುಳುಗಿಸಿದೆ. ಇದರ ಪರಿಣಾಮವಾಗಿ ಜೀವನು ತನ್ನಂತೆಯೇ ಈ ದೇಹಗಳಲ್ಲಿ ಜೀವಿಸುತ್ತಿರುವ ತನ್ನ ಸೋದರರೊಡನೆ ಆತ್ಮೀಯತೆಯನ್ನು ಕಳೆದುಕೊಂಡು ಭೇದದೃಷ್ಟಿಯನ್ನು ಬೆಳೆಸಿಕೊಂಡಿರುವನು. ಇವನಂತೆಯೇ ಹೊರಗಡೆ ಪಂಚಭೂತಗಳೆಲ್ಲದರಲ್ಲೂ ನೆಲಸಿದ್ದರೂ ನಿರ್ಲಿಪ್ತವಾಗಿರುವ ಚೈತನ್ಯವು ಪರಮಾತ್ಮ—ಪರಬ್ರಹ್ಮ ಎಂದು ಪ್ರಸಿದ್ಧವಾಗಿದೆ. ಈ ಪರಮಾತ್ಮ

ನಿಂದಲೇ ಪಂಚಭೂತಗಳೂ ಮತ್ತು ಜೀವನೂ ಹೊರಗೆಬಂದು ಬದುಕಿ ಕೊನೆಗೆ ಅವ ನಲ್ಲಿಯೇ ಲಯವಾಗುತ್ತಲಿರುವುದರಿಂದ ಇವನು ವಿಶ್ವವೆಲ್ಲಕ್ಕೂ ವಿಶ್ರಾಂತಿಸ್ಥಲ ಮತ್ತು ಆಯತನ ಎನಿಸಿದ್ದಾನೆ. "ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ" ಎಂದು ಮುಂಡಕಶ್ರುತಿಯಲ್ಲಿ ವಿಶ್ವವ್ಯಾಪಕವೂ ವಿಶ್ವಾಧಾರವೂ ಆದ ಚೈತನ್ಯವನ್ನು ಶಿವನೆಂದೂ, ತ್ರಿಮೂರ್ತ್ಯತೀತನೆಂದೂ, ಏಕಮೇವಾದ್ವಿತೀಯನೆಂದೂ, ಆತ್ಮನೆಂದೂ ಕರೆಯಲಾಗಿದೆ.

ಹೀಗೆ ಶಿವನು ಪಂಚಭೂತಾತ್ಮಕವಾದ ಪ್ರಪಂಚಕ್ಕೂ ತನ್ನ ಸಾಕ್ಷಾತ್ ಚೇತನಾಂಶನಾದ ಜೀವನಿಗೂ ವಿಶ್ರಾಂತಿಸ್ಥಲವೆನಿಸಿರುವುದರಿಂದಲೇ ಇವನನ್ನು ಶ್ರುತಿಯು "ಆತ್ಮಾಯ ನಮಃ ಆತ್ಮಲಿಂಗಾಯ ನಮಃ" ಹೀಗೆ ಲಿಂಗವೆಂದು ಕರೆದು ಸ್ತುತಿಸಿದೆ. ಆದ್ದರಿಂದ ಲಿಂಗ, ಬ್ರಹ್ಮ, ಆತ್ಮ ಎಂಬ ಪದಗಳು ವಿಶ್ವಾಧಾರವಾದ ಚೈತನ್ಯವೆಂಬ ಅರ್ಥವನ್ನು ತಿಳಿಸುತ್ತ ಪರ್ಯಾಯಗಳೆನಿಸಿವೆ. ಇಂತಹ ಬ್ರಹ್ಮವನ್ನು ಶ್ರುತಿಯು "ಸರ್ವಂ ಖಲ್ವಿದಂ ಬ್ರಹ್ಮ" "ಆತ್ಮೇತ್ಯೇವೋಪಾಸೀತ" ಎಂದು ತಿಳಿಸಿರುವಂತೆಯೇ "ಸರ್ವೋ ವೈ ರುದ್ರಃ" ಎಂದು ಮುಂತಾಗಿ ರುದ್ರ ಲಿಂಗ ಎಂಬ ಪದಗಳನ್ನು ಸಮಾನಾರ್ಥಕವಾಗಿ ಪ್ರಯೋಗಿಸಿದೆ. ಈ ರುದ್ರನೇ ಭಕ್ತಾನುಗ್ರಹಕ್ಕಾಗಿ ಎಲ್ಲರ ದೇಹದಲ್ಲೂ ಪ್ರಾಣಲಿಂಗವಾಗಿ ನೆಲೆಸಿರುವನು. ಇಂತಹ ಲಿಂಗದಲ್ಲಿ ಜೀವನು ನಿರ್ಲಿಪ್ತತೆಯಿಂದ ಬೆರೆಯುವುದನ್ನೇ ಶ್ರುತಿಯು "ಲಿಂಗೇ ಸುಷುಪ್ತಿಃ" ಎಂದು ಹೇಳಿದೆ. ಇದೇ ಅವನಿಗೆ ದಿವ್ಯಾಮೃತ. ಇದನ್ನು ಮಾನವನಿಗೆ ದೊರಕಿಸಬೇಕೆಂಬ ಸದುದ್ದೇಶದಿಂದ ಪೂಜ್ಯಬಾದರಾಯಣರು ವೇದಾಂತಸೂತ್ರಗಳನ್ನು ರಚಿಸಿದರು. ಇವು ಅವನಿಗೆ ತನ್ನ ಸ್ವರೂಪವನ್ನೂ, ತನಗೂ ಮತ್ತು ಶಿವನಿಗೂ ಹಾಗೂ ಜಗತ್ತಿಗೂ ಇರುವ ಸಂಬಂಧವನ್ನೂ ವಿಶದವಾಗಿ ತಿಳಿಸುತ್ತವೆ. ಈ ಸೂತ್ರಗಳನ್ನು ಸಮನ್ವಯ, ಅವಿರೋಧ, ಸಾಧನ, ಫಲ ಎಂದು ನಾಲ್ಕು ಅಧ್ಯಾಯಗಳಾಗಿ ವಿಂಗಡಿಸಿದ್ದಾರೆ. ಈ ನಾಲ್ಕು ಅಧ್ಯಾಯಗಳ ಹದಿನಾರು ಪಾದಗಳಲ್ಲಿ ಮೊದಲನೆಯ ಆರು ಪಾದಗಳ ಮೂಲವನ್ನು ಅನುವಾದದೊಡನೆಯೂ, ವಿಸ್ತಾರವಾದ ಭೂಮಿಕೆಯೊಡನೆಯೂ ಪ್ರಥಮಭಾಗದಲ್ಲಿ ಹಿಂದೆಯೇ ಪ್ರಕಟಿಸಿಯಾಗಿದೆ. ಈಗ ಉಳಿದ ಹತ್ತು ಭಾಗಗಳ ಮೂಲವನ್ನು ಅದರ ಅನುವಾದ ಮತ್ತು ವಿಶಾಲವಾದ ಭೂಮಿಕೆಯೊಡನೆ ಪ್ರಕಟಿಸುವುದಾಗಿದೆ.

ಜೀವನಿಗೆ ಪ್ರಪಂಚಕ್ಕೂ ಮತ್ತು ಶಿವನಿಗೂ ಸಹಜವಾಗಿರುವ ಭೇದದೃಷ್ಟಿಯನ್ನು ಪರಿಹರಿಸುವ ಮೂಲಕ ಅವನಿಗೆ ಈ ಜಗತ್ತಿನಲ್ಲಿಯೇ ಶಿವಭಾವವನ್ನು ದೊರಕಿಸಲಿಕ್ಕೂ, ಆ ಮೂಲಕ ಅವನನ್ನು ಸಮರಸವಾಗಿ ಹೃದಯದ ಪ್ರಾಣಲಿಂಗದಲ್ಲಿ ಬೆರೆಸಲಿಕ್ಕೂ ಈ ಬ್ರಹ್ಮಸೂತ್ರಗಳು ಹೊರಟಿರುವುದರಿಂದ ಜೀವನಿಗೆ ಸಮನ್ವಯದೃಷ್ಟಿಯನ್ನು ದೊರಕಿಸುವುದೇ ಇವುಗಳ ಗುರಿಯಾಗಿದೆ. "ತತ್ತು ಸಮನ್ವಯಾತ್" ಎಂಬ ಸೂತ್ರದಲ್ಲಿ ಬಾದರಾಯಣರು ಸಮನ್ವಯದ ಮಹತ್ತ್ವವನ್ನು ತಿಳಿಸಿದ್ದಾರೆ. ಸೂತ್ರವು ಹಾಗೆ ತಿಳಿಸಿದ್ದರೂ ಅದರ ಪೂರ್ಣಪರಿಚಯವು ದೊರಕಬೇಕಾದರೆ ಭಾಷ್ಯವೇ

ನಮಗೆ ಆವಶ್ಯಕ. ಶ್ರೀಕರಭಾಷ್ಯವು ಬ್ರಹ್ಮಸೂತ್ರಗಳನ್ನು ಯಥಾರ್ಥವಾಗಿ ವಿವರಣ ಮಾಡುತ್ತ ಜೀವನಿಗೆ ಸಮನ್ವಯದೃಷ್ಟಿಯನ್ನು ದೊರಕಿಸಲಿದೆ. ಇದರಿಂದಲೇ ಜೀವನಿಗೆ ದಿವ್ಯಾಮೃತವು ದೊರಕಲಿದೆ. ಆದರೆ ಜಗತ್ತನ್ನು ಜೀವನು ಶಿವಮಯವಾಗಿ ಕಾಣುವವರೆಗೂ ಇಂತಹ ಅಮೃತ ಅವನಿಗೆ ಸುಗಮವಾಗಿ ದೊರಕಲಾರದು. ಇದು ಸಾಧಕರ ಆಧ್ಯಾತ್ಮದೃಷ್ಟಿಯನ್ನು ಅವಲಂಬಿಸಿದೆ. ಇದಕ್ಕೆ ಸರ್ವಾತ್ಮಭಾವವೆಂದು ಅನುಭವಿಗಳು ಕರೆಯುತ್ತಾರೆ. ಇಂತಹ ಆತ್ಮೌಪಮ್ಯದೃಷ್ಟಿಯನ್ನು ಮಾನವರಲ್ಲಿ ಬೆಳೆಸುವುದೇ ಭಾಷ್ಯದ ಉಜ್ವಲಧ್ಯೇಯವೆನಿಸಿದೆ. ಇದನ್ನು ರಚಿಸಿದವರು ಶ್ರೀಶೈಲ ಪೀಠಾಧ್ಯಕ್ಷರಾದ ಶ್ರೀಪತಿಪಂಡಿತಾರಾಧ್ಯಶಿವಾಚಾರ್ಯಮಹಾಸ್ವಾಮಿಗಳು: ಸೂರ್ಯನು ಹೇಗೆ ಸಮದೃಷ್ಟಿಯಿಂದ ಶೋಭಿಸುತ್ತಿರುವನೋ ಆ ಪೀಠಾಧಿಪತಿಗಳಾದ ಶ್ರೀಪತಿ ಪಂಡಿತಾರಾಧ್ಯರೂ ಹಾಗೆಯೇ ನಿರ್ಲಿಪ್ತರಾಗಿ ಸಮನ್ವಯದೃಷ್ಟಿಯಿಂದ ಶ್ರೀಕರಭಾಷ್ಯ ವನ್ನು ರಚಿಸಿ ಮಾನವಜೀವನವನ್ನು ಶ್ರೀಕರಗೊಳಿಸಿರುವುದು ನಮ್ಮ ನಾಡಿನ ಸೌಭಾಗ್ಯವೆನಿಸಿದೆ. ಆದರೆ ಇದು ಸಂಸ್ಕೃತದಲ್ಲಿದ್ದುದರಿಂದ ಇದನ್ನು ಕನ್ನಡಿಸ ಬೇಕೆಂದು ಪೂಜ್ಯ ಪಿತೃವರ್ಯರು ಶಿವೈಕ್ಯರಾಗುವಾಗ ಆಜ್ಞೆಮಾಡಿದ್ದಂತೆ ಪರಮೇ ಶ್ವರನು ಆ ಕಾರ್ಯವನ್ನು ಈ ಸೇವಕನ ಕಡೆಯಿಂದ ಈಗ ನೆರವೇರಿಸಿಕೊಂಡಿರುವನು. ಅದೇ ಶ್ರೀಶೈಲಪೀಠದ ಇಂದಿನ ಅಧ್ಯಕ್ಷರಾದ ಷ|| ಬ್ರ|| ಜಗದ್ಗುರು ಶ್ರೀವಾಗೀಶಪಂಡಿ ತಾರಾಧ್ಯಮಹಾಸ್ವಾಮಿಗಳು ತಮ್ಮ ಪೀಠಾಚಾರ್ಯರ ಭಾಷ್ಯವನ್ನು ಕನ್ನಡದಲ್ಲಿ ಪ್ರಕಾಶಪಡಿಸಲು ಸಂತೋಷದಿಂದ ಉದಾರಾಶ್ರಯವನ್ನು ನೀಡಿದರು. ಅದರಂತೆಯೇ ಇತರ ಕೆಲವು ಮಠಾಧಿಪತಿಗಳೂ ಮಹಾಜನರೂ ಅದಕ್ಕೆ ಪ್ರೋತ್ಸಾಹವನ್ನು ನೀಡಿದರು. ಇದೆಲ್ಲದರ ಸತ್ಪರಿಣಾಮವಾಗಿ ಪ್ರಥಮಭಾಗವು ಹಿಂದೆಯೇ ಹೊರಗೆಬಂದು ಎಲ್ಲರನ್ನೂ ಸಂತೋಷಪಡಿಸಿತು. ಅದನ್ನು ನೋಡಿದವರೆಲ್ಲರೂ ದ್ವಿತಿಯಭಾಗವನ್ನು ಆದಷ್ಟು ಬೇಗನೆ ಪ್ರಕಟಿಸಬೇಕೆಂದು ಒತ್ತಾಯಪಡಿಸುತ್ತ ಸ್ಫೂರ್ತ್ಯುತ್ಸಾಹಗಳನ್ನು ಹೆಚ್ಚಿಸಿ ಸಹಾಯಸಹಕಾರಗಳನ್ನು ನೀಡಿದ್ದರಿಂದ ದ್ವಿತೀಯಭಾಗವು ಇಂದು ಬೆಳಕಿಗೆ ಬಂದಿದೆ. ಇದರಿಂದ ಪೂಜ್ಯಪಿತೃವರ್ಯರ ದಿವ್ಯಸಂಕಲ್ಪವು ಈಡೇರಿರುವುದೆಂದೂ, ಮಹಾಜನರೂ ಮಹಾಸ್ವಾಮಿಗಳೂ ಸಂತೋಷಗೊಂಡಿರುವರೆಂದೂ ಭಾವಿಸುತ್ತೇನೆ.

ಈ ಮಹತ್ಕಾರ್ಯದಲ್ಲಿ ಸೂಕ್ತವಾದ ಸಲಹೆಗಳನ್ನು ನೀಡಿದ ಮತ್ತು ಧನಸಹಾಯ ಮಾಡಿದ ಮಹಾಜನರನ್ನು ಇಲ್ಲಿ ಸ್ಮರಿಸಲು ನನಗೆ ತುಂಬ ಸಂತೋಷ ವಾಗುತ್ತದೆ. ಬೆಂಗಳೂರಿನಲ್ಲಿರುವ ಮೈಸೂರು ಲಿಂಗಾಯತವಿದ್ಯಾಭಿವೃದ್ಧಿಸಂಸ್ಥೆಯ ಸದಸ್ಯರು ಮತ್ತು ಅಧ್ಯಕ್ಷರು ನನ್ನ ಅಲ್ಪ ಸೇವೆಯನ್ನು ಪುರಾಂಬರಿಸಿ ಒಮ್ಮತದಿಂದ ಪ್ರೋತ್ಸಾಹಿಸಿದುದಕ್ಕಾಗಿ ಅವರೆಲ್ಲರಿಗೂ ಅತ್ಯಂತ ಕೃತಜ್ಞನಿದ್ದೇನೆ. ಹಾಗೆಯೇ ಕಾಶಿ ವಿಶ್ವರಾಧ್ಯಜ್ಞಾನಸಿಂಹಾಸನಾಧೀಶ್ವರರಾದ ಷ|| ಬ್ರ|| ಶ್ರೀ ಜಗದ್ಗುರು ವಿಶ್ವೇಶ್ವರ ಶಿವಾಚಾರ್ಯಮಹಾಸ್ವಾಮಿಗಳು, ಹೊನ್ನಾಳಿ ಸಂಸ್ಥಾನ ಹಿರೇಮಠದ ಸ್ಥಿರಪಟ್ಟಾಧ್ಯಕ್ಷ ಒಡೆಯರ್ ಶ್ರೀ ಚನ್ನರಾಜದೇಶಿಕೇಂದ್ರಮೃತ್ಯುಂಜಯಶಿವಾಚಾರ್ಯಮಹಾ

ಸ್ವಾಮಿಗಳು, ಎಮ್ಮಿಗನೂರು ಮಹಂತಿನ ಮಠಾಧ್ಯಕ್ಷ ಶ್ರೀ|| ಷ|| ಬ್ರ|| ಸಿದ್ಧಲಿಂಗ ಶಿವಾಚಾರ್ಯಮಹಾಸ್ವಾಮಿಗಳು, ಹೊಟಗಿ ಮಠಾಧ್ಯಕ್ಷ ಶ್ರೀ|| ಷ|| ಬ್ರ|| ಯೋಗಿ ರಾಜೇಂದ್ರಶಿವಾಚಾರ್ಯಮಹಾಸ್ವಾಮಿಗಳು, ಶ್ರೀ|| ನಿ|| ಪ್ರ|| ಸ್ವರೂಪಿಗಳಾದ ಬಂಥನಾಳುಶಿವಯೋಗಿಮಹಾಸ್ವಾಮಿಗಳು, ಹುಣಸಮಾರನಹಳ್ಳಿ ಸಂಸ್ಥಾನ ಮಠಾಧ್ಯಕ್ಷ ಶ್ರೀ|| ಷ|| ಬ್ರ|| ಪಟ್ಟದ ಶ್ರೀ ಪರ್ವತರಾಜಶಿವಾಚಾರ್ಯಮಹಾಸ್ವಾಮಿಗಳು, ಕುದೇರು ಮಠಾಧ್ಯಕ್ಷರಾದ ಜೋತಿಷ್ಯವಿದ್ವಾನ್ ಶ್ರೀ||ಷ||ಬ್ರ|| ಶ್ರೀಗುರುಸ್ವಾಮಿಗಳು, ತಲಕಾಡು ಹಸ್ತಿಕೆರೆ ಮಠದ ಶ್ರೀ|| ಷ|| ಬ್ರ|| ಸಿದ್ಧಮಲ್ಲಿಕಾರ್ಜುನಸ್ವಾಮಿಗಳು, ಸಾಲೂರು ಹಿರೇಮಠಾಧ್ಯಕ್ಷರಾದ ಶ್ರೀ|| ಷ|| ಬ್ರ|| ಚನ್ನವೀರಶಿವಾಚಾರ್ಯ ಮಹಾ ಸ್ವಾಮಿಗಳು, ಮೈಸೂರು ಸಂಸ್ಕೃತಮಹಾಪಾಠಶಾಲೆಯಲ್ಲಿ ವೀರಶೈವಾಗಮಾಧ್ಯಾ ಪಕರಾಗಿರುವ ಶ್ರೀ|| ಷ|| ಬ್ರ|| ವಿದ್ವಾನ್ ಮಹಾಂತಸ್ವಾಮಿಗಳು ಈ ಗ್ರಂಥದ ಮುದ್ರ ಣಕ್ಕಾಗಿ ಸಂತೋಷದಿಂದ ಆಶೀರ್ವದಿಸಿ ಅನುಗ್ರಹಿಸಿದುದಕ್ಕಾಗಿ ಅತ್ಯಂತಕೃತಜ್ಞನಾಗಿ ಇವರೆಲ್ಲರಿಗೂ ಭಕ್ತಿಪೂರ್ವಕವಾದ ಸಾಷ್ಟಾಂಗಪ್ರಣಾಮಗಳನ್ನು ಸಮರ್ಪಿಸುತ್ತೇನೆ.

ಗುಲ್ಬರ್ಗ ಶರಣಬಸವೇಶ್ವರಸಂಸ್ಥಾನಮಠದ ಮಾನ್ಯ ಶ್ರೀ ದೊಡ್ಡಪ್ಪಅಪ್ಪನವರು, ಇಲಕಲ್ಲಿನ ಡಾ|| ಚಂದ್ರಶೇಖರಸ್ವಾಮಿಗಳು, ನವಿಲುಗುಂದ ತಾ|| ಹಾಳಕುಸುಗಲ್ಲಿನ ಶ್ರೀ ಪಟ್ಟದಯ್ಯ ಬಸವಯ್ಯ ಚಿಕ್ಕಮಠ ಅವರು, ದೆಹಲಿ ಪಾರ್ಲಿಮೆಂಟುಸದಸ್ಯರಾದ ಆಲ್ದೂರಿನ ಶ್ರೀ ಬಿ. ಪಿ. ಬಸಪ್ಪಶೆಟ್ಟರು, ಮೈಸೂರು ಪಬ್ಲಿಕ್‌ವರ್ಕ್ಸ್ ಇಲಾಖೆಯ ಶ್ರೀ ಬಿ. ವಿ. ಸೋಮಶೇಖರಯ್ಯನವರು, ಮೈಸೂರಿನ ಸುಪ್ರಸಿದ್ಧ ವಕೀಲರಾದ ಶ್ರೀ ಎಸ್. ಶಿವಸ್ವಾಮಿಯವರು, ದಾವಣಗೆರೆ ಡಾ|| ಎಂ. ಸಿ. ನಂಜಪ್ಪನವರು, ತಿಪಟೂ ರಿನ ಶ್ರೀ ಎ. ಎಂ. ಶಿವಲಿಂಗಾರಾಧ್ಯರು, ಮಾಡಾಳುಗ್ರಾಮದ ಶ್ರೀನಂಜಪ್ಪಶೆಟ್ಟರು, ಮೈಸೂರಿನ ಶ್ರೀ ಬಿ. ಎನ್. ಆರಾಧ್ಯರು, ಲಕ್ಷ್ಮೇಶ್ವರದ ಶ್ರೀ ಮಹಾಂತಶೆಟ್ಟರು, ತುಮಕೂರಿನ ಕೊಪ್ಪಲ ಶ್ರೀಚನ್ನವೀರಯ್ಯನವರು ಶ್ರೀಕರಭಾಷ್ಯದ ಪ್ರಥಮಭಾಗ ವನ್ನು ನೋಡಿ ಸಂತೋಷಪಟ್ಟು ದ್ವಿತೀಯಭಾಗದ ಮುದ್ರಣಕ್ಕೆ ಧನಸಹಾಯಮಾಡಿ ಪ್ರೋತ್ಸಾಹಿಸಿದ್ದುದಕ್ಕಾಗಿ ಇವರೆಲ್ಲರಿಗೂ ನನ್ನ ಹೃತ್ಪೂರ್ವಕವಾದ ಕೃತಜ್ಞತೆಯನ್ನು ಸಂತೋಷದಿಂದ ಅರ್ಪಿಸುತ್ತೇನೆ. ಹಾಗೆಯೇ ಬೆಂಗಳೂರಿನ ನಿವೃತ್ತ ನ್ಯಾಯಾಧೀಶ ರಾದ ಶ್ರೀ ಜಿ. ಪರಮಶಿವಯ್ಯನವರು, ಬೆಂಗಳೂರು ಸರ್ಕಲ್ಲಿನ ಸೂಪರಿಂಟೆಂಡಿಂಗ್ ಎಂಜಿನಿಯರ್ ಆದ ಶ್ರೀ ಬಸವಣ್ಣನವರು, ಮೈಸೂರಿನ ಜ್ಯೋತಿರ್ಭೂಷಣ ಕೆ. ಎಸ್. ಶಿವರುದ್ರಶಾಸ್ತ್ರಿಗಳು, ಮುಳಬಾಗಿಲು ಅಸಿಸ್ಟೆಂಟ್ ಇಂಜಿನಿಯರ್ ಆದ ಶ್ರೀ ಶಂಕರಶೆಟ್ಟರು, ಮೈಸೂರು ವಿಶ್ವವಿದ್ಯಾನಿಲಯದ ಮಾನಸಗಂಗೋತ್ರಿಯಲ್ಲಿ ಅರ್ಥಶಾಸ್ತ್ರಪ್ರಾಧ್ಯಾಪಕರಾದ ಡಾ|| ಜಿ. ಟಿ. ಹುಚ್ಚಪ್ಪನವರು, ಮೈಸೂರು ಮಹಾ ರಾಜಕಾಲೇಜಿನ ರಾಜ್ಯಶಾಸ್ತ್ರಾಧ್ಯಾಪಕರಾದ ಶ್ರೀ ಮಲ್ಲಯ್ಯನವರು, ಗುಬ್ಬಿ ಸಾಹು ಕಾರ್ ನಿಜಗುಣಯ್ಯನವರು, ಮೈಸೂರಿನ ಶ್ರೀ ಅಕ್ಕಿಸೋಮಣ್ಣನವರು ಮತ್ತು ಮೈಸೂರು ಸಂಸ್ಕೃತಪಾಠಶಾಲೆಯಲ್ಲಿ ಶೈವಾಗಮಪ್ರಾಧ್ಯಾಪಕರಾದ ವಿದ್ವಾನ್

ಶ್ರೀ ಸೀತಾರಾಮಸೋಮಯಾಜಿಗಳು, ಅಲ್ಲಿಯೇ ಪಾಂಚಾರಾತ್ರಾಗಮಪ್ರಾಧ್ಯಾಪಕ ರಾದ ವಿದ್ವಾನ್ ಶ್ರೀ ವಾಸುದೇವಭಟ್ಟಾಚಾರ್ಯರು ನನ್ನ ಅಲ್ಪಸೇವೆಯನ್ನು ದೊಡ್ಡದಾಗಿ ಪರಿಗಣಿಸಿ ನನಗೆ ಧನಸಹಾಯದಮೂಲಕ ಪ್ರೋತ್ಸಾಹಿಸಿದ್ದಕ್ಕಾಗಿ ಇವರೆಲ್ಲರಿಗೂ ಅತ್ಯಂತ ಕೃತಜ್ಞನಾಗಿದ್ದೇನೆ. ಇವರಿಗೆ ಪರಮೇಶ್ವರನು ಜೀವನದಲ್ಲಿ ಸುಖಶಾಂತಿಗಳನ್ನು ಅನುಗ್ರಹಿಸಲೆಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ನನ್ನಲ್ಲಿ ಶ್ರೀಕರಭಾಷ್ಯವನ್ನು ಅನುವಾದಮಾಡಬೇಕೆಂಬ ಇಚ್ಛೆಯನ್ನು ವಿಶೇಷವಾಗಿ ಬೆಳೆಸಿದ ಐವರು ಮಹನೀಯರನ್ನು ಈ ಸಮಯದಲ್ಲಿ ಸ್ಮರಿಸುವುದು ಅಗತ್ಯವೆಂದು ಭಾವಿಸುತ್ತೇನೆ. ಇವರಲ್ಲಿ ಮೊದಲನೆಯವರು ಮೈಸೂರು ಹೈಕೋರ್ಟಿನ ನಿವೃತ್ತ ಪ್ರಧಾನನ್ಯಾಯಾಧೀಶರಾದ ರಾಜಧರ್ಮಪ್ರವೀಣ ರಾವ್‌ಬಹದ್ದೂರ್, ಪಿ. ಮಹದೇವ ಯ್ಯನವರು. ಇವರಿಗೆ ಶ್ರೀಕರಭಾಷ್ಯವೆಂದರೆ ಪ್ರಾಣ. "ಇದು ಸಮನ್ವಯ ಭಾಷ್ಯ. ಶಿವಜೀವರಿಗೆ ಭೇದವಿದೆ ಎಂಬುದು ಸರ್ವಾನುಭವಸಿದ್ಧವಾದುದು. ಆದರೆ ಜೀವನು ಹೇಗೆ ಭೇದವನ್ನು ಕಳೆದುಕೊಂಡು ಅಭೇದಾನಂದವನ್ನು ಇಲ್ಲಿಯೇ ಅನುಭವಿಸ ಬಲ್ಲನು? ಎಂಬ ಗಹನವಾದ ವಿಷಯವನ್ನು ಶ್ರೀಕರಭಾಷ್ಯವು ನಿರೂಪಿಸಲಿದೆ. ಇದನ್ನು ನೀನು ಆದಷ್ಟು ಬೇಗನೆ ಕನ್ನಡಿಸಬೇಕು; ಅದಕ್ಕೆ ಬೇಕಾದ ಸಹಾಯಸೌಕರ್ಯಗಳನ್ನು ನಾನು ಒದಗಿಸುವೆನು" ಎಂದು ಅವರು ನನಗೆ ಮತ್ತೆ ಮತ್ತೆ ಒತ್ತಾಯಮಾಡುತ್ತಲಿದ್ದು ದರಿಂದ ಇದು ಇಷ್ಟು ಬೇಗನೆ ಸಿದ್ಧವಾಗಿ ಜನರ ಕೈಗೆ ದೊರಕಿದೆ. ದರ್ಶನಶಾಸ್ತ್ರದಲ್ಲಿ ಆಳವಾದ ವ್ಯಾಸಂಗದಿಂದ ಪೂರ್ಣಾನುಭವವನ್ನು ಪಡೆದಿರುವ ಮಾನ್ಯ ಶ್ರೀ ಪಿ. ಮಹ ದೇವಯ್ಯನವರು ನನಗೆ ಆಗಾಗ್ಗೆ ಕೊಟ್ಟ ಸಲಹೆಗಳು ತುಂಬ ಉಪಯುಕ್ತವಾಗಿ ನನ್ನ ಜೀವನದಮೇಲೆ ಸತ್ಪರಿಣಾಮವನ್ನುಂಟುಮಾಡಿವೆ. ಅವರ ಹೃತ್ಪೂರ್ವಕವಾದ ಆಶಯವು ಅವರ ಮನಮೆಚ್ಚುವಂತೆ ಈಶ್ವರಾನುಗ್ರಹದಿಂದ ನೆರವೇರಿದ್ದರೆ ನನ್ನ ಶ್ರಮ ಸಾರ್ಥಕವಾದೀತೆಂದು ಭಾವಿಸುತ್ತೇನೆ. ಇಂತಹ ಸತ್ಕಾರ್ಯವನ್ನು ಯಶಸ್ವಿ ಯಾಗಿ ನೆರವೇರಿಸಲು ಇವರಿಗೆ ಪರಮೇಶ್ವರನು ಸದ್ಬುದ್ಧಿಯನ್ನು ಕೊಟ್ಟಿರು ವಂತೆಯೇ ಚಿರಾಯುಷ್ಯವನ್ನು ಅನುಗ್ರಹಿಸಲೆಂದು ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಎರಡನೆಯವರು ರಾಯಿಚೂರು ಶಿಖರಮಠಾಧ್ಯಕ್ಷರಾದ ಷ|| ಬ್ರ|| ಶ್ರೀ ಗುರುಲಿಂಗ ಶಿವಾಚಾರ್ಯಮಹಾಸ್ವಾಮಿಗಳು. ಇವರು ಸಂಸ್ಕೃತವಾಙ್ಮಯದಲ್ಲಿ ವಿಶೇಷವಾದ ಪಾಂಡಿತ್ಯಾನುಭವಗಳನ್ನು ಪಡೆದು, ಲೋಕಕಲ್ಯಾಣಕ್ಕಾಗಿ ಶ್ರದ್ಧೆಯಿಂದ ಶಿವಯಜ್ಞ ವನ್ನು ನಿತ್ಯವೂ ನಡೆಸುತ್ತ ಭಾರತದಲ್ಲೆಲ್ಲಾ ಪ್ರವಾಸವನ್ನು ಕೈಕೊಂಡು ದೀನಾನಾಥ ರಿಗೆ ನಿರ್ಮಲಹೃದಯದಿಂದ ಕರಾವಲಂಬನವನ್ನು ನೀಡುತ್ತಲಿರುವರು. ಇವರು ತಮ್ಮ ಉಜ್ವಲತಪೋನಿಷ್ಠೆಯಿಂದ ಸಮದರ್ಶನರಾಗಿ ಆತ್ಮದ ಗಾಂಭೀರ್ಯ ಗೌರವ ಗಳಿಂದ ಸಾಧಕವೃಂದಕ್ಕೆ ಮಾರ್ಗದರ್ಶಕರಾಗಿ ಗುರುಕಾರ್ಯವನ್ನು ಯಶಸ್ವಿಯಾಗಿ ನೆರವೇರಿಸುತ್ತಿರುವರು. ಇವರ ಪೂರ್ಣ ಆಶೀರ್ವಾದವು ನನ್ನಮೇಲೆ ಪ್ರಸರಿಸಿದ್ದುದು ನನ್ನ ಪುಣ್ಯ. ಇವರು ಆಗಿಂದಾಗ್ಗೆ ಶ್ರೀಕರಭಾಷ್ಯದ ಅನುವಾದಕ್ಕಾಗಿ ನನ್ನನ್ನು

ಪ್ರೇರಿಸಿ ಉಪಯುಕ್ತಸಲಹೆಗಳ ಮೂಲಕ ಪ್ರೋತ್ಸಾಹಿಸಿದುದರಿಂದ ಇಂದು ಕರ್ಣಾಟಕವು ಶ್ರೀಕರಭಾಷ್ಯವನ್ನು ಕಾಣಲಿದೆ. ಇವರ ಮನಸ್ಸಿಗೆ ಇದರಿಂದ ಸಂತೋಷವುಂಟಾದರೆ ನನ್ನ ಶ್ರಮ ಫಲಿಸೀತೆಂದು ನಂಬಿದ್ದೇನೆ. ಶ್ರೀ ಸ್ವಾಮಿಗಳವರಲ್ಲಿ ನನ್ನ ಭಕ್ತಿಪೂರ್ವಕವಾದ ಸಾಷ್ಟಾಂಗಪ್ರಣಾಮಗಳನ್ನು ವಿನಯದಿಂದ ಸಮರ್ಪಿಸುತ್ತೇನೆ.

ಮೂರನೆಯವರು ಕರ್ಣಾಟಕವಿಭೂಷಣ ಆಸ್ಥಾನವಿದ್ವಾನ್ ಬಿ. ಶಿವಮೂರ್ತಿ ಶಾಸ್ತ್ರಿಗಳು. ಇವರು ಉತ್ತಮಸಾಹಿತಿಗಳು, ಆದರ್ಶವಿಮರ್ಶಕರು ಮತ್ತು ಸಹೃದಯರಾದ ವಾಗ್ಮಿಗಳು. ಇವರ ಅಂತಃಕರಣ ನಿರ್ಮಲವೂ ವಿಶಾಲವೂ ಆದದು. ಇವರಿಗೆ ಶ್ರೀಕರಭಾಷ್ಯದ ಮೇಲೆ ಹೆಚ್ಚಿನ ಅಭಿಮಾನ. ಇದನ್ನು ಕನ್ನಡಿಸಿರುವ ವಿಷಯವನ್ನು ಇವರಿಗೆ ತಿಳಿಸಿದಾಗ ಇವರ ಆನಂದಕ್ಕೆ ಎಲ್ಲೆಯೇ ಇರಲಿಲ್ಲ. ಆದಷ್ಟು ಬೇಗನೆ ಅದು ಪ್ರಕಟವಾಗಬೇಕೆಂದು ಇವರು ನನ್ನನ್ನು ಮತ್ತೆ ಮತ್ತೆ ಒತ್ತಾಯಪಡಿಸಿದ್ದರಿಂದ ಇಷ್ಟು ಬೇಗನೆ ಈ ಗ್ರಂಥವು ಮಹಾಜನರ ಕೈಸೇರಿದೆ. ಇವರ ಹೃತ್ಪೂರ್ವಕವಾದ ಪ್ರೇಮಾಭಿಮಾನಗಳಿಗಾಗಿ ಇವರಿಗೆ ಅತ್ಯಂತಕೃತಜ್ಞನಾಗಿ ಇವರ ಆದರ್ಶವಾದ ಪ್ರೋತ್ಸಾಹವನ್ನು ಸಂತೋಷದಿಂದ ನೆನೆಸುತ್ತೇನೆ. ಕನ್ನಡನಾಡಿನ ಭವ್ಯತೆಗೆ ನಿತ್ಯವೂ ಶ್ರಮಿಸುತ್ತ ಕನ್ನಡ ಪರಿಷತ್ತಿನ ಅಧ್ಯಕ್ಷರಾಗಿ ಸೂರ್ಯನಂತೆ ಶೋಭಿಸುತ್ತಿರುವ ಇವರನ್ನು ಶಿವನು ಚೆನ್ನಾಗಿರಿಸಲೆಂದೂ, ಸಮಾಜಕ್ಕೆ ಇವರಿಂದ ಇನ್ನೂ ಹೆಚ್ಚಿನ ಸೇವೆಯನ್ನು ದೊರಕಿಸಲೆಂದೂ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ನಾಲ್ಕನೆಯವರು ಕುಪ್ಪೂರುಗದ್ದಿಗೆಮಠದ ಚರಂತ ಷ॥ ಬ್ರ॥ ಶ್ರೀ ಚಂದ್ರಶೇಖರ ಶಿವಾಚಾರ್ಯಮಹಾಸ್ವಾಮಿಗಳು. ಇವರಿಗೆ ನನ್ನ ಮೇಲೆ ಬಹಳಕಾಲದಿಂದಲೂ ಕೃಪಾದೃಷ್ಟಿ ಉದಾರವೂ ಸಹಜವೂ ಆಗಿದೆ. ಇವರು ನನ್ನಿಂದ ಮಹಾಕಾರ್ಯಗಳನ್ನು ಮೊದಲಿಂದಲೂ ನಿರೀಕ್ಷಿಸುತ್ತಿದ್ದರು. ನಾನು ಶಕ್ತಿವಿಶಿಷ್ಟಾದ್ವೈತದರ್ಶನವನ್ನು ಸಂಸ್ಕೃತದಲ್ಲಿ ಬರೆದಿರುವುದಾಗಿ ಕೇಳಿ ಇವರು ಅಮಿತಾನಂದವನ್ನು ಅನುಭವಿಸುತ್ತ ಶ್ರೀಕರಭಾಷ್ಯವನ್ನು ಸುಲಭಶೈಲಿಯಲ್ಲಿ ಕನ್ನಡಿಸಬೇಕೆಂಬ ಸದಿಚ್ಛೆಯನ್ನು ನನ್ನಲ್ಲಿ ಹುಟ್ಟಿಸಿ ಬೆಳೆಸಿ ಜೀವಿತದ ಅಲ್ಪಾವಧಿಯಲ್ಲಿ ಆದಷ್ಟು ಬೇಗನೆ ಅದನ್ನು ಮುಗಿಸಬೇಕೆಂದು ನನಗೆ ಒತ್ತಾಯಮಾಡುತ್ತ ಬಂದರು. ತಾವೂ ಇದಕ್ಕೆ ಹೆಚ್ಚಿನ ಸಹಾಯವನ್ನು ಆಗಾಗ್ಯೆ ಮಾಡುತ್ತಲೇ ಧರ್ಮಾಭಿಮಾನಿಗಳೆಲ್ಲರಿಗೂ ಮನಃಪೂರ್ವಕವಾಗಿ ಈ ವಿಷಯವನ್ನು ತಿಳಿಸುತ್ತ ಅವರ ಕಡೆಯಿಂದಲೂ ಸಹಾಯವನ್ನು ಮಾಡಿಸುತ್ತ ನನ್ನ ಉತ್ಸಾಹವನ್ನು ಹೆಚ್ಚಿಸುತ್ತ ಬಂದಿದ್ದಾರೆ. ಶ್ರೀರಂಭಪುರೀಮಹಾಸಂಸ್ಥಾನಾಧ್ಯಕ್ಷರಾದ ಪರಮತಪೋನಿಧಿ ಪ್ರಸನ್ನರೇಣುಕ, ಷ॥ ಬ್ರ॥ ಜಗದ್ಗುರು ಶ್ರೀ ವೀರಗಂಗಾಧರರಾಜೇಂದ್ರಶಿವಾಚಾರ್ಯಮಹಾಸ್ವಾಮಿಗಳವರಿಂದಲೂ ಧಾರ್ಮಿಕ ಗ್ರಂಥಗಳ ಪ್ರಕಾಶಕ್ಕೆ ಉದಾರವಾಗಿ ಅನುಗ್ರಹಾಶೀರ್ವಾದಗಳನ್ನು ದೊರಕಿಸುತ್ತ ನನಗೆ ವಿಶೇಷವಾಗಿ ಪ್ರೋತ್ಸಾಹಿಸುತ್ತಲಿರುವುದಕ್ಕಾಗಿ ಕುಪ್ಪೂರುಗದ್ದಿಗೆಯ ಶ್ರೀಮಹಾಸ್ವಾಮಿಗಳಲ್ಲಿ ನನ್ನ ಸಾಷ್ಟಾಂಗಪ್ರಣಾಮಗಳನ್ನು ಭಕ್ತಿಯಿಂದ ಸಮರ್ಪಿಸುತ್ತೇನೆ.

ಐದನೆಯವರು ಬೆಂಗಳೂರಿನ ಸಂಸ್ಕೃತ ಪಾಠಶಾಲಾಧ್ಯಕ್ಷರಾದ ಶ್ರೀ ಶಂಕರಪ್ಪ ಎಂ.ಎ., ಬಿ.ಟಿ., ಅವರು. ಇವರ ಸಂಸ್ಕೃತಪ್ರೇಮ ಅಸದೃಶವಾದದು; ಹಾಗೆಯೇ ಪಾಂಡಿತ್ಯವೂ ಅಗಾಧವಾದುದು. ಅದನ್ನು ಅನುಭವಿಸಲಿಕ್ಕೆ ನಿರ್ಮಲವಾದ ಹೃದಯವೂ ಅವರಲ್ಲಿ ಬೆರಿತಿದೆ. ಈ ರಸಿಕತೆಯೊಂದಿಗೆ ಸರ್ವಾತ್ಮಭಾವವು ಇವರ ಸ್ವಭಾವವಾಗಿದೆ. ಸರ್ವಜೀವಿಗಳಿಗೆ ಲೇಸನ್ನು ಬಯಸುತ್ತ ಇವರು ಶಂಕರರೆನಿಸಿರುವುದು ಅನ್ವರ್ಥವಾಗಿದೆ. ಸಂಸ್ಕೃತಕ್ಷೇತ್ರದಲ್ಲಿ ಇವರ ದಕ್ಷತೆ ನ್ಯಾಯನಿಷ್ಠೆ ಸಮಭಾವನೆಗಳು ಎಲ್ಲರಿಗೂ ಪರಿಚಿತವಾಗಿವೆ. ಇವರು ಭಕ್ತರೂ ಶಕ್ತರೂ ಆದ ಅಧಿಕಾರಿಗಳು. ಇವರದು ಸಮನ್ವಯ ಮನೋಭಾವ. " ಸರ್ವ ಭೂತಹಿತೇ ರತಿಃ " ಎಂಬುದೇ ಇವರ ಜೀವನದ ಉಸಿರು. ಇಂತಹ ಮಹನಿಯರು ಶ್ರೀಕರಭಾಷ್ಯಾನುವಾದದ ಪ್ರಥಮಭಾಗವನ್ನು ಕಂಡು ಸಂತೋಷಪಟ್ಟು ಎರಡನೆಯ ಭಾಗಕ್ಕೆ ಬೆಂಗಳೂರಿನ ಧರ್ಮಾಭಿಮಾನಿಗಳಿಂದಲೂ, ತಮ್ಮ ಸ್ವಂತವಾಗಿಯೂ ಒಟ್ಟು ಒಂದುಸಾವಿರರೂಪಾಯಿಗಳನ್ನು ಸಹಾಯಮಾಡಿಸಿದ್ದಾರೆ. ಇವರ ಉದಾರಸಹಾಯಕ್ಕಾಗಿ ಇವರನ್ನು ಸಂತೋಷದಿಂದ ವಂದಿಸಿ ಇವರಿಗೆ ನನ್ನ ಹೃತ್ಪೂರ್ವಕವಾದ ಕೃತಜ್ಞತೆಯನ್ನು ಸಲ್ಲಿಸಿದ್ದೇನೆ. ಇವರಿಗೆ ಶ್ರೀಪತಿಪಂಡಿತಾರಾಧ್ಯರು ಸದ್ಬುದ್ಧಿ ಸದ್ಭಾವನೆಗಳನ್ನು ಸ್ಥಿರವಾಗಿ ಅನುಗ್ರಹಿಸಲೆಂದೂ, ಇವರಿಂದ ಇನ್ನೂ ಹೆಚ್ಚಿನ ಸೇವೆಯನ್ನು ಮಾಡಿಸಲೆಂದೂ ಅನನ್ಯಭಕ್ತಿಯಿಂದ ಪ್ರಾರ್ಥಿಸುತ್ತೇನೆ. ಈ ಐವರ ಉದಾರಪ್ರೋತ್ಸಹದಿಂದ ನಾನು ಹೆಚ್ಚಿನ ಸ್ಫೂರ್ತಿಯನ್ನು ಪಡೆದು ದೃಢನಿಷ್ಠೆಯಿಂದ ಪಿತ್ರಾಜ್ಞೆಯನ್ನು ಯಥಾವಿಧಿ ನಿರ್ವಹಿಸಿದ್ದೇನೆ.

ಆದರೂ ಇದನ್ನು ನಾನು ಆತುರದಿಂದ ಮಾಡಿರುವೆನೆಂದೂ, ಇದಕ್ಕಾಗಿ ಇತರರ ಸಹಾಯವನ್ನು ಪಡೆಯಬೇಕಾಗಿತ್ತೆಂದೂ ಕೆಲವರು ಆಕ್ಷೇಪಿಸುತ್ತಾರೆ. ಅವರಿಗೆ ಯಥಾರ್ಥಪರಿಸ್ಥಿತಿಯನ್ನು ಈಗ ತಿಳಿಸುವುದು ನನ್ನ ಕರ್ತವ್ಯ. ಇದನ್ನು ನಾನು ಆತುರಪಟ್ಟು ನಡೆಸಿಲ್ಲ. ಇದನ್ನು ಮಾಡುವಂತೆ ನಮ್ಮ ತಂದೆಯವರ ಆಜ್ಞೆಯಾಗಿ ಈಗಾಗಲೇ ೧೪ ವರ್ಷಗಳಾದವು. ಅಂದಿನಿಂದಲೂ ಇದು ನನ್ನ ಮನದಲ್ಲಿ ಬಾಧಿಸುತ್ತಲೇ ಇತ್ತು. ಆಡಿದ ಮಾತಿಗೆ ತಪ್ಪುವುದು ನನಗೆ ಇಷ್ಟವಿಲ್ಲ. ಈ ಸೇವಕನ ಜನ್ಮದಿನದ ಆರಿದ್ರಾನಕ್ಷತ್ರಕ್ಕೆ ರುದ್ರನು ಅಧಿದೇವತೆಯಾದ್ದರಿಂದ ಹಿಡಿದ ಕೆಲಸವನ್ನು ನೆರವೇರಿಸಲಿಕ್ಕೆ ರುದ್ರನೊಬ್ಬನು ನನ್ನ ಹೃದಯದಲ್ಲಿ ನಿಂತಿದ್ದಾನೆ. ಆದ್ದರಿಂದ ಬಹಳ ಕಾಲದಿಂದಲೂ ರುದ್ರನೊಡಗೂಡಿ ಈ ಕೆಲಸವನ್ನು ನೆರವೇರಿಸುತ್ತಿದ್ದರೂ ೧೨ ವರ್ಷಗಳು ಕಳೆದಮೇಲೆ ಈ ಭಂಡಜನ್ಮವನ್ನು ಸಾರ್ಥಕಗೊಳಿಸಬೇಕೆಂಬ ಸತ್ಯಸಂಕಲ್ಪದಿಂದ ಶ್ರೀ ರುದ್ರನೇ ಆಗಿರುವ ಪೂಜ್ಯಪಿತೃವರ್ಯರು ಈ ಕಾರ್ಯವನ್ನು ಆಗಮಾಡಿಸಿದ್ದಾರೆ. ಆದ್ದರಿಂದ ಆತುರದಲ್ಲಿ ನಾನೊಬ್ಬನೇ ಇದನ್ನು ಮಾಡಿಲ್ಲ. ರುದ್ರನೊಡಗೂಡಿಯೇ ಈ ಸೇವಕನು ಅವನ ಪ್ರೇರಣೆಯಂತೆ ಮುಂದೆ ಪ್ರವರ್ತಿಸಿರುವನಾದ್ದರಿಂದ ರುದ್ರಸ್ವರೂಪಿಗಳಾದ ಪಂಡಿತರೆಲ್ಲರ ನೆರವೂ ಅದರಲ್ಲೂ ವಿಶೇಷವಾಗಿ ನನ್ನ ಆತ್ಮಬಂಧುಗಳಾದ ಶ್ರೀ ಕೆ. ಎಸ್. ವರದಾಚಾರ್ಯರ ಸಹಾಯವೂ ನನಗೆ ಈ ಕಾರ್ಯದಲ್ಲಿ ದೊರೆತಿವೆ. ಶಿವನು ಪ್ರಸನ್ನ

ತನ್ನ ಪ್ರಾಣವೇ ಶ್ರೀಗುರುವಿನ ಕೃಪೆಯಿಂದ ತನ್ನ ಉದ್ಧಾರಕ್ಕಾಗಿ ಹೊರಗೆಬಂದಿದೆ ಎಂದು ಶಿಷ್ಯನು ಭಾವಿಸುತ್ತ ಅದನ್ನು ದೇಹದಲ್ಲಿ ನಿರಂತರವೂ ಧರಿಸಿ ಅರ್ಚಿಸಬೇಕು. ಅವನು ಈ ಲಿಂಗಕ್ಕಾಗಿಯೇ ಎಲ್ಲಾ ವ್ಯವಹಾರಗಳನ್ನು ನಡೆಸುತ್ತ ಅಂದಂದಿನ ಸುಖ ದುಃಖಗಳನ್ನೂ, ಲಾಭನಷ್ಟಗಳನ್ನೂ, ಸ್ತುತಿನಿಂದೆಗಳನ್ನೂ, ಆಗಾಗಲೇ ತನ್ನೊಡನೆ ಎಡೆಬಿಡದೆ ಸಾಕ್ಷಿಯಾಗಿರುವ ಪ್ರಾಣಲಿಂಗಕ್ಕೆ ಭಕ್ತಿಯಿಂದ ಅರ್ಪಿಸುತ್ತಬಂದರೆ ಅವನ ಮನ, ಬುದ್ಧಿ, ಚಿತ್ತ, ಅಹಂಕಾರಗಳು ಪ್ರಶಾಂತವೂ ಪ್ರಸನ್ನವೂ ಆಗತೊಡಗುವುವು. ಇಂತವನು ವಿಶ್ವದ ಎಲ್ಲ ಜೀವಿಗಳಲ್ಲೂ ಅಂದರೆ ಶತ್ರುವಿನಲ್ಲೂ ಮಿತ್ರನಲ್ಲು ಸಮ ದೃಷ್ಟಿಯಿಂದ ನೆಲಸಿರುವ ಶಿವನನ್ನೇ ಗಮನಿಸುತ್ತ ಅವನಿಗಾಗಿಯೇ ಬಾಳುತ್ತ ಅವನಿಗೆ ಪೂರ್ಣವಾಗಿ ಅಧೀನನಾಗುವನು. ಇದರಿಂದ ಅವನು ಲಿಂಗಾಯತ ನೆನಿಸುವನು. ಆದ್ದರಿಂದಲೇ ಲಿಂಗಾಯತವೆಂಬ ಪದವು ಒಂದು ಜಾತಿವಾಚಕವಲ್ಲ. ಬ್ರಾಹ್ಮಣಪದವು ಬ್ರಹ್ಮದಲ್ಲಿಯೇ ರಮಿಸುವವನಿಗೆ ಹೇಗೆ ಅನ್ವಯಿಸುವುದೋ ಹಾಗೆ ಲಿಂಗಕ್ಕೆ ಪೂರ್ಣವಾಗಿ ಅಧೀನರಾದವರೆಲ್ಲರೂ ಲಿಂಗಾಯತರೆನಿಸುತ್ತಾರೆ. ಆದ್ದರಿಂದ ವಿಷಯಸುಖಗಳ ಅಸ್ಥಿರತೆಗೆ ಜುಗುಪ್ಸೆಗೊಂಡವರೆಲ್ಲರಿಗೂ ನಿತ್ಯಸುಖದ ಹೆಬ್ಬಯಕೆ ಯಿಂದ ಗುರುವಿನಲ್ಲಿ ದೀಕ್ಷೆಯನ್ನು ಪಡೆದು ಬ್ರಹ್ಮಾನುಭವಕ್ಕೆ ಉತ್ತಮಾಧಿಕಾರಿ ಗಳಾಗುತ್ತಾರೆ. ಇವರೆಲ್ಲರೂ ಬ್ರಹ್ಮಜಿಜ್ಞಾಸೆಯ ಅಮೃತ ಫಲವನ್ನು ಹೊಂದಲು ಅರ್ಹರೆಂದು ಬಾದರಾಯಣರು ಜಿಜ್ಞಾಸಾಧಿಕರಣದಲ್ಲಿ ಹೇಳಿದ್ದಾರೆ.

ಇವರಿಗಾಗಿಯೇ ಅವರು ಪ್ರಥಮಸೂತ್ರದಲ್ಲಿ ಬ್ರಹ್ಮಜಿಜ್ಞಾಸೆಯನ್ನು ವಿಧಿಸಿ ಆ ಬ್ರಹ್ಮದ ಲಕ್ಷಣವನ್ನು ತಿಳಿಸದಿದ್ದರೆ ಅದರ ಜಿಜ್ಞಾಸೆ ಮುಂದುವರಿಯಲಾರ ದೆಂದು ಭಾವಿಸಿ "ಜನ್ಮಾದ್ಯಸ್ಯ ಯತಃ" ಎಂಬ ಎರಡನೆಯ ಸೂತ್ರದಲ್ಲಿ ಬ್ರಹ್ಮದ ಲಕ್ಷಣವನ್ನು ತಿಳಿಸಿದ್ದಾರೆ. ಜಗತ್ತಿನ ಸೃಷ್ಟಿ ಸ್ಥಿತಿ ಲಯ ತಿರೋಧಾನ ಅನುಗ್ರಹಗಳೆಂಬ ಐದು ಕ್ರಿಯೆಗಳನ್ನು ಅನಾಯಾಸವಾಗಿ ಲೀಲೆಯಿಂದ ನಡೆಸುವುದೇ ಬ್ರಹ್ಮದ ಪ್ರಧಾನಕರ್ತವ್ಯವೆನಿಸಿದೆ. ಇದು ಬ್ರಹ್ಮದ ಅಸಾಧಾರಣಲಕ್ಷಣ. ಇದು ಬೇರೆ ಯಾರಿಗೂ ಅನ್ವಯಿಸದೆ ಅವನೊಬ್ಬನಿಗೇ ಮೀಸಲಾಗಿದೆ. ಪಂಚಭೂತಗಳ ಸಮೂಹ ವೆನಿಸಿದ ಈ ಜಗತ್ತು ಬ್ರಹ್ಮದಿಂದ ಹುಟ್ಟಿರುವಂತೆಯೇ ಜೀವರೂ ಅವನಿಂದಲೇ ಹೊರಗೆ ಬಂದು ಅವನ ರಕ್ಷಣೆಗೇ ಒಳಪಟ್ಟು ಕೊನೆಗೆ ಎಲ್ಲರೂ ಅವನಲ್ಲಿಯೇ ಸೇರುವರು. ಭೂತಗಳು ಸದ್ರೂಪದಿಂದಲೂ, ಜೀವರು ಚಿದ್ರೂಪದಿಂದಲೂ ಬ್ರಹ್ಮ ದಲ್ಲಿಯೇ ಪ್ರಳಯಕಾಲದಲ್ಲಿ ಅವ್ಯಕ್ತವಾಗಿದ್ದು ಸೃಷ್ಟಿಕಾಲದಲ್ಲಿ ಹೊರಗೆ ಬರುವರಾದ್ದ ರಿಂದ ಬ್ರಹ್ಮವೇ ಎಲ್ಲರ ಯೋಗಕ್ಷೇಮಗಳನ್ನು ವಹಿಸಿಕೊಂಡಿರುವುದು. ಆದ್ದರಿಂದ ಯಾರಿಗೂ ಅಹಂಕಾರಾಭಿಮಾನಗಳ ಬೆಳವಣಿಗೆಗೆ ಅವಕಾಶವಿಲ್ಲವೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಬ್ರಹ್ಮಜಿಜ್ಞಾಸೆಯಲ್ಲಿ ತೊಡಗಿದವನು ಬ್ರಹ್ಮದ ಲಕ್ಷಣವನ್ನು ಹೀಗೆ ಗುರುವಿನಿಂದ ತಿಳಿದಮೇಲೆ ಅವನಿಗೆ ಅದರಲ್ಲಿ ಪೂರ್ಣ ವಿಶ್ವಾಸ ಹುಟ್ಟುವುದೂ ಸಹಜವೇ ಆಗಿದೆ. ಹೀಗೆ ಯುಕ್ತಿಯಿಂದ ಅವರು ಪ್ರವರ್ತಿಸಿದ್ದಾರೆ.

ಆದರೂ ಜೀವನಿಗೆ ಬ್ರಹ್ಮವಿರುವ ಬಗ್ಗೆ ಪ್ರಮಾಣವೇನೆಂಬಲ್ಲಿ ಸಂಶಯವು ಬರಬಹುದೆಂದು ಭಾವಿಸಿ ಬಾದರಾಯಣರು "ಶಾಸ್ತ್ರಯೋನಿತ್ವಾತ್" ಎಂಬ ತೃತೀಯ ಸೂತ್ರದಲ್ಲಿ ಬ್ರಹ್ಮದ ಬಗ್ಗೆ ನಿಗಮಾಗಮಶಾಸ್ತ್ರಗಳೇ ಪರಮಪ್ರಮಾಣವೆಂದು ಸ್ಪಷ್ಟಪಡಿಸಿದ್ದಾರೆ. ವಾಙ್ಮನೋಽಗೋಚರವಾದ ಬ್ರಹ್ಮದ ಬಗ್ಗೆ ಪ್ರತ್ಯಕ್ಷವಂತೂ ಪ್ರಮಾಣವಾಗುವಂತಿಲ್ಲ. ಅನುಮಾನವು ಪ್ರತ್ಯಕ್ಷವನ್ನೇ ಅವಲಂಬಿಸಿರುವುದರಿಂದ ಅದೂ ಪ್ರಮಾಣವಾಗಲಾರದು. ಆದ್ದರಿಂದ ಶಬ್ದವೊಂದೇ ಬ್ರಹ್ಮದ ಬಗ್ಗೆ ಪ್ರಮಾಣವಾಗಬಲ್ಲದು. ಇದಾದರೂ ಸಾಧಕರನ್ನು ವ್ಯವಸ್ಥಿತಕ್ರಮದಲ್ಲಿ ಕತ್ತಲೆಯಿಂದ ಬೆಳಕಿನ ಕಡೆಗೆ ಒಯ್ಯುವ ದಿವ್ಯಜ್ಯೋತಿ ಎನಿಸಿದೆ. ಆದ್ದರಿಂದ ಸಾಧಕರು ಶಬ್ದಪ್ರಮಾಣವೆನಿಸಿದ ನಿಗಮಾಗಮಗಳನ್ನು ಪರಮೇಶ್ವರನ ಆಜ್ಞೆ ಎಂದು ಭಾವಿಸಿ ಶ್ರದ್ಧೆಯಿಂದ ಅವುಗಳ ದಿವ್ಯಸಂದೇಶವನ್ನು ತಿಳಿದು ಆಚರಿಸಬೇಕು. ಆದರೆ ಈ ಸಂದೇಶದಿಂದಲೂ ಅವರ ಸಂದೇಹಗಳು ತೊಲಗುವಂತಿಲ್ಲ. ಅವರ ಶಕ್ತಿವಿಕಾಸಕ್ಕೆ ಕೊಂಚ ತಡೆ ಇದ್ದೇ ಇರುವುದು ; ಯಾಕೆಂದರೆ ಶ್ರುತಿಯು ಒಂದು ಪ್ರಕರಣದಲ್ಲಿ ಹೇಳಿದ ಅಂಶವನ್ನು ಬೇರೆ ಪ್ರಕರಣದಲ್ಲಿ ಬೇರೆ ರೀತಿಯಲ್ಲಿ ತಿಳಿಸಿದೆ. ಇದರಿಂದ ಶ್ರುತಿಯಲ್ಲಿ ಪರಸ್ಪರವಿರೋಧವಿರುವಂತೆ ಕಂಡುಬರುತ್ತದೆ. ಮಾಯೆಯ ವ್ಯಾಮೋಹಕ್ಕೆ ಸಿಲುಕಿ ದುರಾಚಾರಗಳಲ್ಲಿಯೇ ನಿರತನಾಗಿ ಅಹಂಕಾರದಿಂದ ಮೆರೆಯುತ್ತಿರುವ ಜೀವನು ಶ್ರುತಿಯಲ್ಲಿ ಹೀಗೆ ಪರಸ್ಪರವಿಪ್ರತಿಪತ್ತಿಯನ್ನು ಕಂಡು ಬ್ರಹ್ಮಜಿಜ್ಞಾಸೆಯನ್ನೇ ಕೈಬಿಡಬಹುದು. ಹೀಗಾಗಬಾರದೆಂದು ಬಾದರಾಯಣರು "ತತ್ತುಸಮನ್ವಯಾತ್" ಎಂಬ ಸೂತ್ರದಲ್ಲಿ ನಿಷ್ಕರ್ಷೆಮಾಡಿದ್ದಾರೆ. ಶ್ರುತಿಯಲ್ಲಿ ಹೇಳಿಕೆಗಳು ಬೇರೆಬೇರೆ ಪ್ರಕರಣಗಳಲ್ಲಿ ಬೇರೆಬೇರೆ ಅಧಿಕಾರಿಗಳನ್ನು ಉದ್ದೇಶಿಸಿ ಹೊರಟಿರುವುದರಿಂದ ವಿರೋಧಗಳು ತೋರಿದರೂ ಅವುಗಳಿಂದ ಸಾಧಕನು ನಿರಾಶನಾಗಬೇಕಾಗಿಲ್ಲವೆಂದೂ, ಅವನ್ನು ಕಾಲಭೇದದಿಂದಲೂ ಅವಸ್ಥಾಭೇದದಿಂದಲೂ ಶಿವಜೀವರಿಗೆ ಯಥಾಶ್ರುತವಾಗಿ ಅನ್ವಯಿಸಬೇಕೆಂದೂ ಅವರು ಇಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ. ಬ್ರಹ್ಮಜೀವರ ಸಂಬಂಧವನ್ನೂ, ಜೀವನ ಸ್ವರೂಪವನ್ನೂ, ಬ್ರಹ್ಮದ ಸ್ವರೂಪವನ್ನೂ, ಜಗತ್ಸ್ವರೂಪವನ್ನೂ ತಿಳಿಸುವುದೇ ಶ್ರುತಿಯ ಮುಖ್ಯೋದ್ದೇಶ. ಬ್ರಹ್ಮಜೀವರು ಭಿನ್ನರೆಂದು ಒಂದುಕಡೆಯೂ, ಅಭಿನ್ನರೆಂದು ಒಂದುಕಡೆಯೂ, ಬ್ರಹ್ಮವು ನಿರ್ಗುಣ, ನಿರ್ವಿಶೇಷ, ನಿರಾಕಾರ, ನಿಷ್ಕಲವೆಂದು ಕೆಲವುಕಡೆಯೂ, ಅದು ಸಗುಣ, ಸಾಕಾರ, ಸವಿಶೇಷ, ಸಕಲವೆಂದು ಕೆಲವುಕಡೆಯೂ, ಜೀವನು ಜ್ಞಾನಸ್ವರೂಪನೆಂದು ಕೆಲವು ಕಡೆಯೂ, ಅವನಿಗೆ ಜ್ಞಾನವೇ ಗುಣವೆಂದು ಕೆಲವುಕಡೆಯೂ ಶ್ರುತಿಯಲ್ಲಿ ತಿಳಿಸಲಾಗಿದೆ. ಆದರೆ ಇವೆಲ್ಲವೂ ಪರಸ್ಪರ ವಿರುದ್ಧಗಳಲ್ಲ. ಜೀವಬ್ರಹ್ಮರಿಗೆ ಅಜ್ಞಾನಾವಸ್ಥೆಯಲ್ಲಿ ಭೇದವಿರುವಂತೆಯೇ ಪರಿಪೂರ್ಣಸ್ಥಿತಿಯಲ್ಲಿ ಅಭೇದವಿರುವುದೂ ಸಹಜವೇ ಆಗಿದೆ. ಹಾಗೆಯೇ ಬ್ರಹ್ಮವು ಸವಿಶೇಷ ಮತ್ತು ಸಗುಣ ಎಂಬುದನ್ನು ಬ್ರಹ್ಮದ ಶಕ್ತಿಯು ವಿಕಾಸಗೊಳ್ಳುವ ಸೃಷ್ಟಿಕಾಲಕ್ಕೂ, ಹಾಗೆಯೇ ನಿರ್ವಿಶೇಷ ನಿರ್ಗುಣ ಎಂಬುದನ್ನು ಪ್ರಳಯಕಾಲದ ಶಕ್ತಿ

ಸಂಕೋಚಾವಸ್ಥೆಗೂ ಅನ್ವಯಿಸುವುದರಿಂದ ಯಾವ ವಿರೋಧಕ್ಕೂ ಅವಕಾಶವಿಲ್ಲ. ಹೀಗೆ ಸಮನ್ವಯದಿಂದ ಪರಸ್ಪರ ವಿರೋಧಗಳನ್ನು ಪರಿಹರಿಸಿಕೊಳ್ಳಬೇಕೆಂಬ ವಿಶಾಲದೃಷ್ಟಿಯನ್ನು ಬಾದರಾಯಣರು ಸಾಧಕರಿಗೆ ದೊರಕಿಸಿಕೊಟ್ಟಿದ್ದಾರೆ. ಈ ಬಗೆಯ ಸಮನ್ವಯದೃಷ್ಟಿಯನ್ನು ಬೆಳೆಸಿಕೊಳ್ಳದವನಿಗೆ ಶಾಸ್ತ್ರವೇ ನಿರರ್ಥಕ ವಾಗುತ್ತದೆ. ಅವನು ಸಾಮರಸ್ಯವನ್ನು ಅನುಭವಿಸದೆ ಭಯ ಶೋಕ ಮೋಹ ಗಳಲ್ಲಿಯೇ ನರಳಬೇಕಾಗುವುದು. ಜೀವರ ವೈವಿಧ್ಯದಲ್ಲೂ, ಪಂಚಭೂತಗಳ ವೈಚಿತ್ರ್ಯದಲ್ಲೂ ಏಕರೂಪದಿಂದ ನಿರ್ವಿಕಾರವಾಗಿ ನೆಲಸಿರುವ ಚಿತ್ಪ್ರಕಾಶದಲ್ಲಿಯೇ ದೃಷ್ಟಿ ಇಡುವವನು ಆತ್ಮಸೌಂದರ್ಯವನ್ನು ಪಡೆಯಬಲ್ಲನು ಮತ್ತು ನಿತ್ಯಾನಂದ ವನ್ನು ಅನುಭವಿಸಬಲ್ಲನು. ಅಂತವನ ಜನ್ಮವೇ ಸಾರ್ಥಕವಾದೀತು. ಇಲ್ಲವಾದರೆ ಅವನ ಬಾಳು ಪಶುವಿನಂತೆ ವ್ಯರ್ಥವೂ ನಿರರ್ಥಕವೂ ಆಗಿ ಭೂಮಿಗೆ ಭಾರವೆನಿಸೀತು.

ಲೋಕಕಲ್ಯಾಣಕ್ಕಾಗಿ ಕಂಕಣಬದ್ಧರಾಗಿ ದೀಕ್ಷೆಯನ್ನುಪಡೆದಿದ್ದ ಬಾದರಾಯ ಣರು ನಾಲ್ಕು ಹಂತಗಳಲ್ಲಿ ಜೀವನನ್ನು ಸುರಕ್ಷಿತವಾಗಿ ಹತ್ತಿಸಿ ಕೊನೆಗೆ ಅವನನ್ನು ಹೃದಯದ ದಿವ್ಯಪ್ರಕಾಶವೆಂಬ ಮಹಾಮನೆಯಲ್ಲಿ ಸಮರಸವಾಗಿ ಬೆರೆಸಿ ನಿತ್ಯಸುಖಿ ಯನ್ನಾಗಿ ಮಾಡಲಿದ್ದಾರೆ. ಆದರೆ ಮಾನವನಿಗೆ ಇಂತಹ ನಿತ್ಯಸುಖವು ದೊರಕಲಿಕ್ಕೆ ಕೆಲವು ಸಹಜವಾದ ಅಡಚಣೆಗಳಿವೆ. ಅವನ್ನು ಪರಿಹರಿಸುವುದು ದಾರ್ಶನಿಕರ ಪ್ರಥಮಕರ್ತವ್ಯ. ಬಾದರಾಯಣರು ಪರಮಾತ್ಮನ ದರ್ಶನಮಾಡಿದ ಅನುಭವಿ ಗಳಾದ್ದರಿಂದ ಅವರಿಗಿಂತ ಉತ್ತಮದಾರ್ಶನಿಕರು ನಮಗೆ ದೊರಕಲಾರರು. ಆದ್ದ ರಿಂದಲೇ ಸಾಧಕರು ಅವರ ಮಾತಿನಲ್ಲಿ ದೃಢವಿಶ್ವಾಸವಿಟ್ಟು ಅವರು ತೋರಿಸಿಕೊಡುವ ಸಮನ್ವಯಸಿದ್ಧಾಂತವನ್ನು ಆಚರಿಸಬೇಕಾಗಿದೆ. ಅವರ ವಿಶಾಲಮನೋಭಾವ ವನ್ನೂ, ಉದಾತ್ತವರ್ತನೆಯನ್ನೂ, ನಿಷ್ಕಲ್ಮಷವೂ ನಿಷ್ಪಕ್ಷಪಾತವೂ ಆದ ದಿವ್ಯದೃಷ್ಟಿ ಯನ್ನೂ ಪಡಿಯಚ್ಚಾಗಿ ಪಡೆದಿದ್ದ ಶ್ರೀಪತಿಪಂಡಿತಾರಾಧ್ಯ ಮಹಾಸ್ವಾಮಿಗಳು ತಮ್ಮ ಭಾಷ್ಯದಲ್ಲಿ ವಿಷಮಸಮಸ್ಯೆಗಳನ್ನು ಬಿಡಿಸಲಿಕ್ಕೆ ಸಮನ್ವಯದೃಷ್ಟಿಯನ್ನು ಸದುಪ ಯೋಗಪಡಿಸಿಕೊಂಡಿರುವುದು ಅವರ ಲೋಕಕಾರುಣ್ಯಲೀಲೆಯನ್ನು ವ್ಯಕ್ತಪಡಿಸು ತ್ತದೆ. ಸೂತ್ರಕಾರರ ಮನೋಭಾವವನ್ನು ಅರಿತು ಅದನ್ನು ಶ್ರುತಿ ಯುಕ್ತಿ ಅನುಭವ ಗಳಿಂದ ತುಲನಾತ್ಮಕವಾಗಿ ವಿಮರ್ಶಮಾಡಿರುವುದು ಅವರ ನಿರ್ಲಿಪ್ತವರ್ತನೆಯನ್ನು ತಿಳಿಸುತ್ತದೆ. ಶ್ರುತಿಗೆ ವಿರೋಧಬರದಂತೆ ಆಗಮಗಳ ಸಹಾಯದಿಂದ ಅದನ್ನು ಪುಷ್ಟೀಕರಿಸಿ ಜೀವಬ್ರಹ್ಮರ ಭೇದವನ್ನು ಸಂಸಾರದಶೆಗೂ ಅಭೇದವನ್ನು ಮುಕ್ತಿ ದಶೆಗೂ ಯಥಾರ್ಥವಾಗಿ ಅನ್ವಯಿಸುತ್ತ ಶ್ರೀ ಸ್ವಾಮಿಗಳವರು ವೈದಿಕಪ್ರಸ್ಥಾನವನ್ನು ಎತ್ತಿ ಹಿಡಿದಿದ್ದಾರೆ. ಯಾವ ಶ್ರುತಿಗೂ ಅರ್ಥಸಂಕೋಚಕ್ಕವಕಾಶವಿಲ್ಲದಂತೆ ಪ್ರತಿ ಯೊಂದು ಅಂಶವನ್ನೂ ಆಯಾ ಸನ್ನಿವೇಶಕ್ಕೆ ಅನ್ವಯಿಸುವುದರಿಂದ ಶ್ರುತಿಯ ಹೇಳಿಕೆಯಲ್ಲಿ ಯಾವ ವಿರೊಧಕ್ಕೂ ಅವಕಾಶವಿಲ್ಲವೆಂಬ ದಿವ್ಯ ಆದರ್ಶವನ್ನು ಶ್ರೀಕರ ಭಾಷ್ಯವು ವರ್ಧಿಷ್ಣುಗಳಾದ ಸಾಧಕರೆದುರಿಗೆ ನೆಲೆಗೊಳಿಸಿದೆ. ಜೀವಬ್ರಹ್ಮರಿಗೆ ಭೇದ

ವನ್ನು ತಿಳಿಸುವ ಶ್ರುತಿಗಳು ಸಂಸಾರದಶೆಯಲ್ಲಿ ಎಲ್ಲಾ ಜೀವರಿಗೂ ಯಥಾರ್ಥವಾಗಿ ಅನ್ವಯಿಸುತ್ತವೆ ಎಂಬ ಅಂಶ ಎಲ್ಲರಿಗೂ ತಿಳಿದೇಇದೆ. ಆದರೂ ಅಷ್ಟರಲ್ಲಿಯೇ ಜೀವರು ನಿಲ್ಲದೆ ತಮ್ಮ ಸ್ವರೂಪವನ್ನು ಚೆನ್ನಾಗಿ ತಿಳಿದು ಜ್ಞಾನಕ್ರಿಯಾಸಮುಚ್ಚಯ ಮಾರ್ಗದಿಂದ ತಮ್ಮ ಮೂಲ ದಿವ್ಯಪ್ರಕಾಶದಲ್ಲಿ ಸಮರಸವಾಗಿ ಬೆರೆಯಬಹುದೆಂಬ ಆದರ್ಶವನ್ನು ಅಭೇದಶ್ರುತಿಗಳು ತಿಳಿಸುತ್ತವೆ. ಆದ್ದರಿಂದ ಪರಸ್ಪರವಿಪ್ರತಿಪತ್ತಿಗೂ ಅನುಪಪತ್ತಿಗೂ ಅವಕಾಶವೇ ಇಲ್ಲವೆಂಬ ಅಂಶವನ್ನು ಶ್ರೀಕರಭಾಷ್ಯವು ನಮಗೆ ಮನವರಿಕೆಮಾಡಿದೆ. ಹಾಗೆಯೇ ಸಗುಣಶ್ರುತಿಗಳನ್ನು ಪರಮಾತ್ಮನ ಶಕ್ತಿವಿಕಾಸಕಾಲಕ್ಕೂ ನಿರ್ಗುಣಶ್ರುತಿಗಳನ್ನು ಶಕ್ತಿಸಂಕೋಚಕಾಲಕ್ಕೂ ಅನ್ವಯಿಸುವುದರಿಂದ ಎರಡು ಬಗೆಯ ಶ್ರುತಿಗಳೂ ನಮಗೆ ಗ್ರಾಹ್ಯವಾಗುತ್ತವೆ. ಈ ಬಗೆಯ ಸಮನ್ವಯಮನೋಭಾವವನ್ನು ಶ್ರೀಕರಭಾಷ್ಯವು ಪಳಗಿಸಿಕೊಂಡಿರುವುದರಿಂದ ಅದು ಪ್ರತಿಪಾದಿಸಿರುವ ದ್ವೈತಾದ್ವೈತಸಿದ್ಧಾಂತವು ಶ್ರುತಿಗೂ ಸೂತ್ರಗಳಿಗೂ ಯುಕ್ತಿಗೂ ಅನುಭವಕ್ಕೂ ಸಮಂಜಸವಾಗಿ ಹೊಂದುತ್ತಿದೆ. ಇದು ಶ್ರೀಕರಭಾಷ್ಯದ ಅನುವಾದದಿಂದ ಎಲ್ಲರಿಗೂ ಮನವರಿಕೆಯಾಗುವುದು. ಸಂಸಾರದಶೆಯಲ್ಲಿ ಜೀವಬ್ರಹ್ಮರಿಗೆ ಭೇದವು ಪಾರಮಾರ್ಥಿಕವಾಗಿದ್ದರೆ ಅದು ಮೋಕ್ಷದಶೆಯಲ್ಲಿ ಹೇಗೆ ತೊಲಗುವುದೆಂಬ ಅಂಶವೇ ಶ್ರೀಕರಭಾಷ್ಯದಲ್ಲಿ ಪ್ರಧಾನವಾದ ಚರ್ಚೆಯ ವಿಷಯ. ಈಗ ಸತ್ಯವಾಗಿರುವ ಭೇದವು ಕೊನೆಗೆ ಮೋಕ್ಷದಲ್ಲೂ ಇದ್ದೇಇರಬೇಕೆಂಬ ಆಕ್ಷೇಪವನ್ನು ಶ್ರೀಕರಭಾಷ್ಯವು ಹಲವಾರು ಸನ್ನಿವೇಶಗಳಲ್ಲಿ ಕೂಲಂಕಷವಾಗಿ ವಿಚಾರಮಾಡಿ ಸಮಂಜಸವಾಗಿ ನಿರ್ಣಯಿಸಿದೆ. ಶ್ರುತಿಯಲ್ಲಿ ಹೇಳಿದ ನದೀಸಮುದ್ರದ ದೃಷ್ಟಾಂತದಿಂದಲೂ, ಆಗಮಗಳಲ್ಲಿ ಹೇಳಿದ ಭ್ರಮರಕೀಟನ್ಯಾಯದಿಂದಲೂ, ಬ್ರಹ್ಮಸೂತ್ರಗಳಲ್ಲಿ ಹೇಳಿದ ದ್ವಾದಶಾಹದೃಷ್ಟಾಂತದಿಂದಲೂ, ಯುಕ್ತಿ ಮತ್ತು ಅನುಭವಗಳಿಂದಲೂ ಸ್ವಾಭಾವಿಕಭೇದವು ಕ್ರಮಕ್ರಮವಾಗಿ ತೊಲಗಿ ಜೀವನಿಗೆ ವಾಸ್ತವಿಕವಾದ ಶಿವಭಾವವು ದೊರಕುವುದರಲ್ಲಿ ಯಾವ ವಿರೋಧವೂ ಇಲ್ಲವೆಂಬ ಅಂಶವನ್ನು ಶ್ರೀಕರಭಾಷ್ಯವು ಆಧುನಿಕದರ್ಶನಿಕರೆಲ್ಲರ ಮನಸ್ಸಿನಮೇಲೆ ಸತ್ಪರಿಣಾಮವಾಗುವಂತೆ ಚಿತ್ರಿಸಿದೆ. ಇದಕ್ಕಾಗಿ ಭಾಷ್ಯಕಾರರು ಅವಲಂಬಿಸಿರುವ ಯುಕ್ತಿಗಳು ಮತ್ತು ಪ್ರಮಾಣಗಳು ಎಲ್ಲರ ಮನಸ್ಸಿಗೂ ಒಪ್ಪುವಂತಿವೆ. ದ್ವೈತಾದ್ವೈತಸಿದ್ಧಾಂತವೇ ಶ್ರುತ್ಯನುಸಾರವಾಗಿ ಸೂತ್ರಕಾರನಿಗೂ ಸಮ್ಮತವೆಂದು ಘಂಟಾಘೋಷವಾಗಿ ಇವರು ಸ್ಥಾಪಿಸಿರುವುದನ್ನು ಪ್ರತಿಯೊಬ್ಬರೂ ಕನ್ನಡಾನುವಾದದ ಮೂಲಕ ಓದಿ ಸಂತೋಷಪಡಬಹುದು. ಈ ವಿಷಯವನ್ನು ಶ್ರೀಕರಭಾಷ್ಯಾನುವಾದ ಪ್ರಥಮಭಾಗದ ಭೂಮಿಕೆಯಲ್ಲಿ ವಿಸ್ತಾರವಾಗಿ ನಿರೂಪಿಸಲಾಗಿದೆ. ಈಗಿನ ಭೂಮಿಕೆಯಲ್ಲೂ ಸಾಧ್ಯವಾದಷ್ಟನ್ನು ತಿಳಿಸಲಾಗುವುದು.

ಹಿಂದೆ ಪ್ರಕಟವಾಗಿದ್ದ ಶ್ರೀಕರಭಾಷ್ಯದ ಪ್ರಥಮ ಭಾಗದಲ್ಲಿ ಸಮನ್ವಯಾಧ್ಯಾಯವು ಪೂರ್ಣವಾಗಿಯೂ ಮತ್ತು ಅವಿರೋಧಾಧ್ಯಾಯದ ಎರಡು ಪಾದಗಳೂ, ಅನುವಾದದೊಡನೆ ಕನ್ನಡಿಗರಿಗೆ ಸುಪರಿಚಿತವಾಗಿದೆ. ಈಗ ಪ್ರಕಟವಾಗಲಿರುವ ದ್ವಿತೀಯ

ಭಾಗದಲ್ಲಿ ಅವಿರೋಧಾಧ್ಯಾಯದ ಕೊನೆಯ ಎರಡು ಪಾದಗಳೂ, ಸಾಧನ ಮತ್ತು ಫಲವನ್ನು ತಿಳಿಸುವ ಮೂರು ನಾಲ್ಕನೆಯ ಅಧ್ಯಾಯಗಳೂ ಅನುವಾದದೊಡನೆ ಜನತೆಯ ಕೈಗೆ ದೊರಕಲಿವೆ. ಇಲ್ಲಿ ಪ್ರತಿಪಾದಿತವಾಗಿರುವ ಅವಿರೋಧ, ಸಾಧನ ಮತ್ತು ಫಲಾಧ್ಯಾಯಗಳ ಬಗ್ಗೆ ಓದುಗರಮೇಲೆ ಬೆಳಕನ್ನು ಬೀರುವಂತೆ ಉಪಯುಕ್ತವಾದ ಸಲಹೆಯನ್ನು ಈ ಭೂಮಿಕೆಯಲ್ಲಿ ಯಥಾಮತಿ ಕೊಡಲಾಗುವುದು. ಬಾದರಾಯಣರು ತಮ್ಮ ಸೂತ್ರಗಳನ್ನು ನಾಲ್ಕು ಅಧ್ಯಾಯಗಳಾಗಿ ವಿಂಗಡಿಸಿರುವುದೇನೋ ಯುಕ್ತಿಯುಕ್ತವೂ ಸಮಂಜಸವೂ ಆಗಿದೆ. ಅವರ ಗುರಿ ಎಲ್ಲವೂ ಬ್ರಹ್ಮದ ಯಥಾರ್ಥ ಸ್ವರೂಪವನ್ನು ಜೀವನಿಗೆ ತಿಳಿಸುವುದೇ ಆಗಿದೆ. ಆದರೆ ಜೀವನಿಗೆ ಇಂತಹ ವಿವೇಚನವೂ ಸುಗಮವಾಗಿ ಆಗುವಂತಿಲ್ಲ. ಅವನಿಗೆ ತಾನು ಆತ್ಮನೆಂಬ ಅರಿವೇ ಇರುವುದಿಲ್ಲ. ಹಾಗೆಯೇ ತಾನು ವಿಶ್ವಾತ್ಮನ ಅಂಶನೆಂಬ ಅರಿವೂ ಅವನಿಗಿಲ್ಲ. ದೇಹಾಭಿಮಾನದಿಂದಲೂ ದೇಹಸಂಬಂಧಿಗಳಮೇಲಿನ ವ್ಯಾಮೋಹದಿಂದಲೂ ಭೋಗಸಾಧನೆಗಾಗಿ ಅವನು ಅಹಂಕಾರದಿಂದ ಹೋರಾಡುತ್ತಿರುವನು. ಅವನ ದೃಷ್ಟಿ ಎಲ್ಲವೂ ವಿಷಯಭೋಗವನ್ನೇ ಅವಲಂಬಿಸಿದೆ. ಭೋಗತ್ಯಾಗದಿಂದ ದೊರಕುವ ಯೋಗಾನಂದದ ಕಡೆಗೆ ಅವನಿಗೆ ಗಮನವೇ ಇರುವುದಿಲ್ಲ. ಈ ಭೋಗವಾದರೋ ಅವನಿಗೆ ಹಿಂದಿನ ಕರ್ಮಾನುಗುಣವಾಗಿ ನಿಯಾಮಕನ ಇಚ್ಛೆಯಂತೆಯೇ ಬರಬೇಕಾಗಿದೆ. ಅವನು ತಾನು ಇಚ್ಛಿಸಿದ್ದೆಲ್ಲವನ್ನೂ ಪಡೆಯಲಾರನು. ಅವನಿಗೆ ಎಷ್ಟು ಹೇಗೆ ಯಾವಾಗ ಬರಬೇಕೋ ಅಷ್ಟೇ ಆಗಲೇ ಆರೀತಿಯಲ್ಲಿಯೇ ಬರುತ್ತದೆ. ಈ ನಿಯಮವನ್ನು ಯಾರೂ ಉಲ್ಲಂಘಿಸಲಾರರು. ಆದರೆ ಜೀವನಿಗೆ ಸಲ್ಲಬೇಕಾದಷ್ಟು ಭೋಗವನ್ನಾದರೂ ದೊರಕಿಸಲಿಕ್ಕೆತನಗಿಂತ ಹೆಚ್ಚು ಶಕ್ತಿಯುಳ್ಳ ನಿಯಾಮಕನೊಬ್ಬನಿದ್ದಾನೆಂಬ ಅರಿವು ಅವನಿಗೆ ವ್ಯವಹಾರಕಾಲದಲ್ಲಿ ಸಹಜವಾಗಿ ಉಂಟಾಗುತ್ತದೆ. ಈ ಬಗೆಯ ಅರಿವು ಆದಾಗಲಾದರೂ ಅವನ ಗಮನವು ಆ ನಿಯಾಮಕನ ಕಡೆಗೆ ಹರಿದೇ ಹರಿಯುತ್ತದೆ. ಆಗ ಅವನು ಆ ನಿಯಾಮಕ ಅನುಗ್ರಹವನ್ನು ಪಡೆಯಲಿಕ್ಕೆ ಸ್ವಾರ್ಥತೆಯಿಂದಾದರೂ ಪ್ರವರ್ತಿಸುತ್ತಾನೆ. ಆ ಅನುಗ್ರಹವಾದರೂ ಕೇವಲ ಜ್ಞಾನದಿಂದಲೇ ಬರುವುದಿಲ್ಲ. ಅದಕ್ಕೆ ಯಥೋಚಿತವಾದ ಕ್ರಿಯೆಯೂ ಬೇಕು. ಕ್ರಿಯೆಯೊಡಗೂಡಿದ ಜ್ಞಾನವೇ ಜೀವನನ್ನು ಉದ್ಧರಿಸಬಲ್ಲದು. ಹೀಗೆ ನಿಯಾಮಕನ ಅನುಗ್ರಹವನ್ನು ಪಡಯಲಿಕ್ಕಾದರೂ ಜೀವನು ಅವನ ಅರ್ಚನೆಯಲ್ಲಿ ತೊಡಗುವನು. ಆದರೆ ಅವನಿಗೆ ನಿಯಾಮಕನಾದ ಈಶ್ವರನ ಅರ್ಚನೆ ಸುಲಭವಾಗಿ ಸಾಧ್ಯವಾಗುವುದಿಲ್ಲ. ಅವನಿಗೆ ಈಶ್ವರನೆಂದರೆ ಯಾರೆಂಬುದೇ ತಿಳಿಯದು. ಅವನು ಒಬ್ಬನೇ? ಇಬ್ಬರೇ ಅಥವಾ ಅನೇಕರೇ? ಅಥವಾ ಆಯಾಕಾಲಕ್ಕೂ ಮತ್ತು ಸನ್ನಿವೇಶಕ್ಕೂ ತಕ್ಕಹಾಗೆ ಒಬ್ಬನೇ ಅನೇಕ ರೂಪಗಳನ್ನು ತಾಳುವನೇ? ಇಂದ್ರ, ಚಂದ್ರ, ಸೂರ್ಯ, ವಾಯು, ಅಗ್ನಿ, ಯಮ ಮೊದಲಾದ ದೇವತೆಗಳೆಲ್ಲರೂ ಅವನಿಂದ ಬೇರೆಯೇ? ಅಥವಾ ಇವರೆಲ್ಲರೂ ಅವನೇ ಆಗಿರುವರೇ? ಬ್ರಹ್ಮ ವಿಷ್ಣು ರುದ್ರ ಎಂಬ ತ್ರಿಮೂರ್ತಿ

ಗಳು ಸೃಷ್ಟಿ ಸ್ಥಿತಿ ಲಯಗಳಿಗೆ ಅಧಿಕಾರಿಗಳಾಗಿದ್ದರೂ ಅವನಿಗಿಂತ ಬೇರೆಯೇ? ಅಥವಾ ಅವನೇ ಇವರೆಲ್ಲರೂ ಆಗಿರುವನೇ? ಹೀಗೆ ನಾವು ಅನೇಕ ಹೆಸರುಗಳಿಂದ ಕರೆಯುವ ದೇವರೆಲ್ಲರೂ ಈಶ್ವರನಾಗಬಹುದೇ? ದೇವನೆಂಬ ಹೆಸರು ಮೂಲತಃ ಒಬ್ಬ ನಿಯಾಮಕನಿಗೆ ಸೇರಿರುವುದೆ? ಅಥವಾ ಎಲ್ಲರಿಗೂ ಅನ್ವಯಿಸುತ್ತದೆಯೆ? ಹೀಗೆ ದೇವನ ಬಗ್ಗೆ ಜೀವನಿಗೆ ಅನೇಕ ಸಂಶಯಗಳು ಬರುತ್ತವೆ. ಇಂದ್ರ ಅಗ್ನಿ ವಾಯು ಸೂರ್ಯ ಮೊದಲಾದ ದೇವತೆಗಳು, ತ್ರಿಮೂರ್ತಿಗಳು, ಅವರ ಧರ್ಮಪತ್ನಿಯರು ಜಗತ್ತನ್ನು ಆವರಿಸಿರುವುದರಿಂದ ಜೀವನಿಗೆ "ಕಸ್ಮೈ ದೇವಾಯ ಹವಿಷಾ ವಿಧೇಮ" ಎಂಬ ಸಂಶಯಬರುವುದು ಸಹಜವೇ ಆಗಿದೆ. ಈ ಬಗೆಯ ಸಂಶಯವನ್ನು ಪರಿಹರಿಸಲಿಕ್ಕಾಗಿ ಬಾದರಾಯಣರ ಸಮನ್ವಯಾಧ್ಯಾಯವು ಹೊರಟಿದೆ. ಲೋಕದಲ್ಲೂ ವೇದದಲ್ಲೂ ಹೇಳಿರುವ ದೇವವಾಚಕವಾದ ಪದಗಳೆಲ್ಲವೂ ಪರಬ್ರಹ್ಮಕ್ಕೇ ಅನ್ವಯಿಸುತ್ತವೆ ಎಂಬುದನ್ನು ಅವರು ಅಲ್ಲಿ ಸಮರ್ಥನಮಾಡಿ ತೋರಿಸಿದ್ದಾರೆ. "ಸರ್ವೇಷಾಂ ವೇದಾಂತಾಂ ಪರೇ ಬ್ರಹ್ಮಣಿ ಸಮನ್ವಯಃ" ಎಂಬುದೇ ಸಮನ್ವಯಾಧ್ಯಾಯದ ಸಾರಾಂಶ. ಜೀವರು ಆಯಾ ಸನ್ನಿವೇಶಗಳಿಗನುಗುಣವಾಗಿ ಉತ್ತಮಸಂಸ್ಕಾರಗಳನ್ನು ಪಡೆಯಲಿಕ್ಕಾಗಿ ಒಬ್ಬೊಬ್ಬ ದೇವನನ್ನು ಪ್ರತ್ಯೇಕವಾಗಿ ಉಪಾಸನಮಾಡಬೇಕೆಂದು ವೇದಾಂತಗಳಲ್ಲಿ ಹೇಳದ್ದರೂ ಅವರೆಲ್ಲರೂ ಮೂಲತಃ ಒಬ್ಬ ಪರಮಾತ್ಮನೇ ಆಗಿರುವರೆಂಬ ಸಮನ್ವಯದೃಷ್ಟಿಯನ್ನು "ಏಕಂ ಸತ್" "ಏಕಮೇವಾದ್ವಿತೀಯಂ ಬ್ರಹ್ಮ" "ಸರ್ವಂ ಖಲ್ವಿದಂ ಬ್ರಹ್ಮ" "ಆತ್ಮೈವೇದಂ ಸರ್ವಂ" ಎಂಬ ಶ್ರುತಿಗಳ ಆಧಾರದಮೇಲೆ ಬಾದರಾಯಣರು ಸ್ಥಾಪಿಸಿದ್ದಾರೆ. ಹೀಗೆ ಸಮನ್ವಯದೃಷ್ಟಿಯನ್ನು ಜೀವನು ಬೆಳೆಸಿಕೊಳ್ಳದಿದ್ದರೆ ಅವನಿಗೆ ಬುದ್ಧಿ ವಿಪರ್ಯದಿಂದ ಅವ್ಯವಸ್ಥೆಯುಂಟಾದೀತು. ಒಬ್ಬನು ವೀರಭದ್ರ, ಆಂಜನೇಯ, ಗಣಪತಿ, ಸುಬ್ರಹ್ಮಣ್ಯ, ನಾರಾಯಣ ಹೀಗೆ ಅನೇಕ ದಿವ್ಯಮೂರ್ತರೂಪಗಳನ್ನು ಭಿನ್ನಭಾವನೆಯಿಂದ ಉಪಾಸನಮಾಡಲಿಕ್ಕೆ ಹೊರಟರೆ ಅವನ ಉಪಾಸನೆಗೆ ಕೊನೆ ಮೊದಲೇ ಇಲ್ಲದಂತಾಗುವುದು. ಅವನಿಗೆ ಆದರಿಂದ ಶಕ್ತಿವಿಕಾಸವೂ ಆಗದೆ ಅವನು ನಿರಾಶನಾಗಬೇಕಾಗುವುದು. ಒಂದು ನಿರ್ದಿಷ್ಟರೂಪವನ್ನು ಪರಮಾತ್ಮಭಾವನೆಯಿಂದ ದೃಢವಾಗಿ ನಂಬಿ ಅರ್ಚಿಸಿದರೆ ಮಾತ್ರವೇ ಅವನಿಗೆ ಸಿದ್ಧಿಯುಂಟಾದೀತು. ಎಲ್ಲರಿಗೂ ಸ್ನೇಹಿತನಾದವನು ಯಾರಿಗೂ ಸ್ನೇಹಿತನಾಗಲಾರನು. ಹಾಗೆ ಎಲ್ಲಾ ದೇವರನ್ನೂ ಅರ್ಚಿಸುವವನು ಯಾರನ್ನೂ ದೃಢವಾಗಿ ನಂಬಲಾರನು. ಜೀವನು ಯಾವ ಹೆಸರಿನಿಂದ ಯಾವ ಆಕಾರವನ್ನು ಅರ್ಚಿಸಿದರೂ ಅಲ್ಲಿ ಅವನಿಗೆ ಬ್ರಹ್ಮಭಾವದ ಐಕ್ಯತೆ ಇಲ್ಲದಿದ್ದರೆ ಅವನಿಗೆ ನಿರ್ದಿಷ್ಟಫಲವು ದೊರಕಲಾರದು. ಅದಕ್ಕಾಗಿಯೇ ಸಮನ್ವಯಾಧ್ಯಾಯದಲ್ಲಿ ಬಾದರಾಯಣರು ಎಲ್ಲಾ ದೇವರ ಅರ್ಚನೆಯೂ ಒಬ್ಬ ಪರಮಾತ್ಮನಿಗೇ ಅನ್ವಯಿಸುವುದೆಂಬ ದೃಢನಿಷ್ಠೆಯನ್ನು ಸಾಧಕರ ಮನಸ್ಸಿನಲ್ಲಿ ನೆಲೆಗೊಳಿಸಿದ್ದಾರೆ. ದೇವನೆಂಬ ಶಬ್ದವು ಪ್ರಕಾಶವೆಂಬ ಅರ್ಥವನ್ನು ತಿಳಿಸುತ್ತದೆ. ಯಾವನ ಪ್ರಕಾಶ

ದಿಂದ ಜಗತ್ತೆಲ್ಲವೂ ಬೆಳಗುತ್ತಿದೆಯೋ ಅವನೇ ದೇವನಾಗಲರ್ಹನೆಂಬ ಅಂಶವನ್ನು "ತಸ್ಯ ಭಾಸಾ ಸರ್ವಮಿದಂ ವಿಭಾತಿ" ಎಂಬ ಶ್ರುತಿಯೂ ತಿಳಿಸುತ್ತದೆ. ಇಂತಹ ದೇವನ ಸ್ವರೂಪವನ್ನು ಶ್ರೀಪತಿಪಂಡಿತರಾಧ್ಯರು ಶ್ರುತಿಸೂತ್ರಗಳಿಗೂ ಆಗಮಗಳಿಗೂ ಹೊಂದುವಂತೆ ಭಾಷ್ಯದಲ್ಲಿ ವಿವರಿಸಿದ್ದಾರೆ.

ಇವರು ಬಾದರಾಯಣರ ಮನೋಗತವನ್ನು ಅರಿತವರಾದ್ದರಿಂದ ಏಕದೇವ ವಾದವನ್ನು ಎತ್ತಿ ಹಿಡಿದಿದ್ದಾರೆ. ಶಿವನೇ ಸರ್ವಾಂತರ್ಯಾಮಿಯಾದ ಆ ಒಬ್ಬ ದೇವ ನೆಂಬುದನ್ನು ಶ್ರುತಿಯ ಆಧಾರದಮೇಲೆ ಸ್ಥಾಪಿಸಿದ್ದಾರೆ."ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿಂ ತಸ್ಮೈ । ತ ಹಿ ದೇವಮಾತ್ಮಬುದ್ಧಿ ಪ್ರಕಾಶಂ ಶರಣಮಹಂ ಪ್ರಪದ್ಯೇ ॥" ಎಂಬಲ್ಲಿ ಯಾವನು ಬ್ರಹ್ಮನನ್ನು ಸೃಷ್ಟಿಸಿ ಅವ ನಿಗೆ ವೇದಗಳನ್ನು ಅನುಗ್ರಹಿಸಿದನೋ ಅಂತಹ ದೇವನು ನಮ್ಮ ಮನಬುದ್ಧಿಗಳನ್ನು ಪ್ರಕಾಶಗೊಳಿಸುವನು.ಅವನಿಗೆ ನಾನು ಶರಣಾಗುತ್ತೇನೆ." "ಈಶಾನಸ್ಸರ್ವವಿದ್ಯಾನಾಂ ಈಶ್ವರಸ್ಸರ್ವಭೂತಾನಾಂ । ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಂ" ಎಂಬಲ್ಲಿ ಚತುರ್ಮುಖಬ್ರಹ್ಮನಿಗೆ ನಿಯಾಮಕನಾದ ಬ್ರಹ್ಮವೇ ಶಿವನೆಂದು ಸ್ಪಷ್ಟವಾಗಿ ಹೇಳಿದೆ. ಹಸ್ತ ಪಾಣಿ ಕರ ಎಂಬ ಪದಗಳು ಒಂದೇ ಅರ್ಥ ವನ್ನು ತಿಳಿಸುವಂತೆ ಶಿವ ಬ್ರಹ್ಮ ಎಂಬ ಪದಗಳು ಸಮಾನಾರ್ಥಕಗಳಾಗಿವೆ. "ಜನಿತಾಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ" ಎಂದು ಯಜುರ್ವೇದದಲ್ಲಿ ವಿಷ್ಣು ಮೊದಲಾದ ದೇವತೆಗಳೆಲ್ಲರೂ ಉಮಾಶಕ್ತಿವಿಶಿಷ್ಟನಾದ ಶಿವನಿಂದಲೇ ಹುಟ್ಟಿದರೆಂದು ಹೇಳಿದೆ. ಹೀಗೆ ಅವನೇ ಕಾರಣಕಾರಣ ಅಂದರೆ ಪರಮ ಕಾರಣನೆನಿಸಿ ಮುಮುಕ್ಷುಗಳಿಗೆ ಉಪಾಸ್ಯದೇವನಾಗಿರುವುದರಿಂದ ಪರಬ್ರಹ್ಮವೆಂದರೆ ಶಿವನೇಹೊರತು ಕಾರ್ಯಕೋಟಿಯಲ್ಲಿ ಸೇರಿದ ತ್ರಿಮೂರ್ತಿಗಳಲ್ಲವೆಂದು ಶ್ರೀಪತಿಪಂಡಿ ತಾರಾಧ್ಯರು ಯುಕ್ತಿಯಿಂದ ಪ್ರತಿಪಾದಿಸಿದ್ದಾರೆ. "ನಿಧನಪತಯೇ ನಮಃ" ಎಂಬಲ್ಲಿ ಯಜುರ್ವೇದವು ಪ್ರಳಯಾಧಿಕಾರಿಯಾದ ರುದ್ರನನ್ನು ತಿಳಿಸಿ, ಮುಂದೆ "ನಿಧನ ಪತಾಂತಿಕಾಯ ನಮಃ" ಎಂಬಲ್ಲಿ ಶಿವನನ್ನು ಪ್ರಳಯಾಧಿಕಾರಿಯಾದ ರುದ್ರನಿಗೂ ಸಂಹಾರಕನೆಂದು ಸ್ಪಷ್ಟವಾಗಿ ತಿಳಿಸಿದೆ. ಆದ್ದರಿಂದ ತ್ರಿಮೂರ್ತಿಗಳಿಗೂ ಮೂಲ ಕಾರಣನಾದ ಶಿವನೇ ಪರಬ್ರಹ್ಮವೆಂದು ಸಮನ್ವಯಾಧ್ಯಾಯದ ಭಾಷ್ಯದಲ್ಲಿ ಹೃದಯಂಗಮವಾಗಿ ಶ್ರೀಪತಿಪಂಡಿತರಾಧ್ಯರು ಸ್ಥಾಪಿಸಿದ್ದಾರೆ. ಹಾಗೆಯೇ ಪುರುಷ ಸೂಕ್ತವೂ ಶಿವಸೂಕ್ತವೆಂಬುದನ್ನೂ, ನಾರಾಯಣನು ಶಿವನ ಪರಮಭಕ್ತನೆಂಬು ದನ್ನೂ,ಗಾಯಿತ್ರೀಮಂತ್ರದಲ್ಲಿಯೂ ಶಿವನೇ ಪ್ರತಿಪಾದ್ಯನೆಂಬುದನ್ನೂ,ನಾರಾಯಣ ಪದವೂ ಶಿವನನ್ನೇ ಪ್ರತಿಪಾದಿಸುವುದೆಂಬುದನ್ನೂ ಶ್ರುತ್ಯಾಗಮಗಳ ಆಧಾರದ ಮೇಲೆ ಸಮಂಜಸವಾಗಿ ತಿಳಿಸಿದ್ದಾರೆ. "ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ" ಎಂಬಲ್ಲಿ ಭರ್ಗಶಬ್ದವೂ ಶಿವನಿಗೇ ಅನ್ವಯಿಸುವುದು. ಇದನ್ನು "ಹರಃ ಸ್ಮರಹರೋ ಭರ್ಗಃ" ಎಂದು ಅಮರಸಿಂಹನೂ ಹೇಳಿದ್ದಾನೆ. ಇವನಿಗೇ ದೇವನೆಂಬ ಹೆಸರು

ಸೂಸಲಾಗಿದೆ. ಇವನು ಅದ್ಭುತಪ್ರಕಾಶದಿಂದ ಸೂರ್ಯನಿಗೂ ತೇಜೋದಾಯಕನಾಗಿ ದ್ದಾನೆ. ಇಂತಹ ಮಹಾಪ್ರಕಾಶನೂ ಪರಂಜ್ಯೋತಿಯೂ ಆದ ಶಿವನನ್ನೇ ದೇವನೆಂದು ಭಾವಿಸಿ ಗಾಯತ್ರಿಯಲ್ಲಿ ಋಷಿಗಳು ತಮ್ಮ ಪ್ರಣಾಮಗಳನ್ನು ಹಿಂದಿನಿಂದಲೂ ಸಲ್ಲಿಸುತ್ತ ಬಂದಿದ್ದಾರೆ. ಹಾಗೆಯೇ "ಸರ್ವಂ ಖಲ್ವಿದಂ ಬ್ರಹ್ಮ" "ಸರ್ವೋ ವೈ ರುದ್ರಃ" ಎಂಬಲ್ಲಿ ಬ್ರಹ್ಮ ರುದ್ರ ಎಂಬ ಎರಡು ಪದಗಳೂ ಸಮಾನಾರ್ಥಕವೆನಿಸಿವೆ. "ತಮೀಶ್ವರಾಣಾಂ ಪರಮಂ ಚ ದೈವತಂ।ಪತಿಂ ಪತೀನಾಂ ಪ್ರಥಮಂ ಪುರಸ್ತಾತ್ ವಿಧಾಮ ದೇವಂ ಪರ ಮೇಶಮೀಡ್ಯಂ" ಎಂಬಂತೆ ಬ್ರಹ್ಮ ವಿಷ್ಣು ರುದ್ರರು ಜಗತ್ತಿನ ಸೃಷ್ಟಿಸ್ಥಿತಿ ಲಯಗಳಿಗೆ ಅಧಿಕಾರಿಗಳಾದ್ದರಿಂದ ಈಶ್ವರರೆನಿಸಿದ್ದಾರೆ. ಆದರೆ ಅವರಿಗೂ ನಿಯಾಮಕನಾದ ಶಿವನು ಪರಮೇಶ್ವರನೆನಿಸಿದ್ದಾನೆ. ಹೀಗೆ ಈಶಾನ, ಈಶ್ವರ ಎಂಬ ಶಬ್ದಗಳು ಶಿವನಲ್ಲಿಯೇ ರೂಢವಾಗಿವೆ. "ಸರ್ವಮಿದಂ ಶಿವ ಏವ ವಿಜಾನೀಹಿ । ಶುದ್ಧೋ ನಿರಂಜನೋ ವಿಭುರದ್ವಯಂ ಶಿವಮೇಕಂ।" "ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ" "ಶಿವೋಽದ್ವೈತಃ" "ವಿಶ್ವಾಧಿಕೋ ರುದ್ರೋ ಮಹರ್ಷಿಃ" "ಧ್ಯಾಯೀತೇಶಾನಂ." "ಬ್ರಹ್ಮವಿಷ್ಣು ರುದ್ರೇಂದ್ರಾಸ್ತೇ ಸಂಪ್ರಸೂಯಂತೇ" ಈ ಶ್ರುತಿಗಳಲ್ಲಿ ತ್ರಿಮೂರ್ತಿ ಗಳು ಮತ್ತು ಇಂದ್ರ ಮೊದಲಾದ ದೇವತೆಗಳೆಲ್ಲರಿಗೂ ಪರಮೇಶ್ವರನೇ ಕಾರಣ ನೆಂದೂ, ಅವನೇ ಧ್ಯೇಯನೆಂದೂ ತಿಳಿಸಲಾಗಿದೆ.

"ಸೋಮಃ ಪವತೇ ಜನಿತಾ ಮತೀನಾಂ ಜನಿತಾ ದಿವೋ ಜನಿತಾ ಪೃಥಿವ್ಯಾಃ" ಎಂಬಂತೆ ಶಿವ, ಬ್ರಹ್ಮ, ರುದ್ರ, ಮಹಾದೇವ, ಈಶ್ವರ, ಈಶಾನ ಎಂಬ ಪದಗಳು ಸಮಾನಾರ್ಥಕವೆನಿಸುವುದರಿಂದ, ತ್ರಿಮೂರ್ತಿಗಳೊಳಗಿನ ರುದ್ರನು ಪ್ರಳಯಾಧಿಕಾರಿ ಯಾಗಿ ಕಾಲರುದ್ರನೆನಿಸಿ ಕಾರ್ಯಕೋಟಿಯಲ್ಲಿಯೇ ಪ್ರವೇಶಿಸುವನೆಂಬುದು ನಿರ್ವಿ ವಾದವಾಗಿದೆ. ಹೀಗೆ ಶಿವನಲ್ಲಿ ದೇವಶಬ್ದವನ್ನು ಪ್ರಯೋಗಿಸಿರುವುದಷ್ಟೇ ಅಲ್ಲದೆ ಭಗವಚ್ಛಬ್ದವನ್ನೂ ಅವನಲ್ಲಿಯೇ ಅನೇಕವೇಳೆ ಪ್ರಯೋಗಿಸಿರುವುದನ್ನು ನಾವು ಶ್ರುತಿ ಯಲ್ಲಿ ಕಾಣುತ್ತೇವೆ. "ಪ್ರಿಯತಾಂ ಭಗವಾನೀಶಃ ಪರಮಾತ್ಮಾ ಸದಾಶಿವಃ" ಎಂದು ಪಿತೃಮೇಧದಲ್ಲಿ ಪಿತೃದೇವತೆಗಳಿಗೆ ತರ್ಪಣಕೊಡುವಾಗಲೂ ಮಹಾದೇವನಾದ ಮಹೇಶ್ವರನೇ ಪಿತೃರೂಪದಿಂದ ಬಂದು ಹವಿಸ್ಸನ್ನು ಸ್ವೀಕರಿಸುವನೆಂದು ಭಾವಿಸ ಲಾಗಿದೆ. ಶ್ವೇತಾಶ್ವತರದಲ್ಲಿ "ಸರ್ವವ್ಯಾಪೀ ಚ ಭಗವಾನ್ ತಸ್ಮಾತ್ಸರ್ವಗತಃ ಶಿವಃ" ಎಂದೂ, ಅಥರ್ವಶಿರಸ್ಸಿನಲ್ಲಿ "ಯೋ ವೈ ರುದ್ರಸ್ಸ ಭಗವಾನ್" ಯಾವನು ರುದ್ರನೋ ಅವನೇ ಭಗವಂತನು" ಎಂದೂ ಮತ್ತೆ ಮತ್ತೆ ರುದ್ರನಲ್ಲಿಯೇ ಭಗವ ಚ್ಛಬ್ದವನ್ನು ಪ್ರಯೋಗಿಸಿದೆ. "ನಮಸ್ತೇ ಅಸ್ತು ಭಗವನ್ ವಿಶ್ವೇಶ್ವರಾಯ ಮಹಾದೇವಾಯ" ಎಂದು ಶತರುದ್ರೀಯದಲ್ಲಿ ಶಿವನಲ್ಲಿಯೇ ಭಗವತ್ಪದವನ್ನು ಪ್ರಯೋಗಿಸಿದೆ. ಆದ್ದರಿಂದಲೇ "ಅಮೃತಸ್ಯ ದೇವಧಾರಣೋ ಭೂಯಾಸಂ" ಎಂಬಲ್ಲಿ ದೇವನೆಂದರೆ ಶಿವನೆಂದು ಶ್ರೀಪತಿಪಂಡಿತಾರಾಧ್ಯರು ನಿರ್ಣಯಿಸಿರುವುದು ಸಮಂಜಸವಾಗಿದೆ. ಹೀಗೆ ಎಲ್ಲಾ ವೇದಾಂತಗಳಿಗೂ ಪರಶಿವಬ್ರಹ್ಮದಲ್ಲಿಯೇ

ಸಮನ್ವಯವನ್ನು ತಿಳಿಸಿದಮೇಲೆ ಇಂತಹ ದೇವನ ನಿಜಸ್ವರೂಪವನ್ನು ತಿಳಿಸುವಾಗ ಸಂಭವಿಸುವ ವಿರೋಧವನ್ನು ಪರಿಹರಿಸಲಿಕ್ಕಾಗಿ ಅವಿರೋಧವೆಂಬ ದ್ವಿತಿಯಾಧ್ಯಾಯ ಹೊರಟಿತು. ಜಗದ್ವ್ಯಾಪಾರನಿರ್ವಾಹವೇ ಬ್ರಹ್ಮದ ಅಸಾಧಾರಣಲಕ್ಷಣವೆಂದು ಜನ್ಮಾದ್ಯಧಿಕರಣದಲ್ಲಿ ಹೇಳಿದ್ದು ಯುಕ್ತವಲ್ಲವೆಂದು ಸಾಂಖ್ಯರು ಹೇಳುತ್ತಾರೆ. ನಿರ್ಗುಣ ನಿರ್ವಿಶೇಷ ಬ್ರಹ್ಮ ಒಂದೇ ಸತ್ಯವೆಂದು ಹೇಳುವ ಅದ್ವೈತಿಗಳು ಇಂತಹ ಬ್ರಹ್ಮಕ್ಕೆ ಜಗತ್ಕಾರಣತ್ವವು ಅನ್ವಯಿಸುವುದಿಲ್ಲವೆಂದು ವಿರೋಧಿಸಿದ್ದಾರೆ. ಜಗದ್ವ್ಯಾಪಾರ ನಿರ್ವಾಹಕ್ಕಾಗಿ ಸಗುಣಬ್ರಹ್ಮವನ್ನು ಅದ್ವೈತಿಗಳು ಕಲ್ಪಿಸಿ ಅದಕ್ಕೇ ಈಶ್ವರನೆಂದು ನಾಮಕರಣಮಾಡಿದ್ದಾರೆ. ಆದರೆ ಆ ಈಶ್ವರನು ರಜ್ಜುಸರ್ಪದಂತೆ ಕಲ್ಪಿತನಾದ್ದರಿಂದ ಅವನಿಂದಾಗುವ ಜಗದ್ವ್ಯಾಪಾರಗಳು ಮಿಥ್ಯೆ ಎಂದು ಅವರು ಹೇಳುತ್ತಾರೆ. ಅಲ್ಲಿಗೆ ಬ್ರಹ್ಮವೇ ಜಗದ್ರೂಪದಿಂದ ತೋರುವುದೆಂದು ಅವರು ವಿವರ್ತವಾದವನ್ನು ಪ್ರತಿಪಾದಿಸುತ್ತಾರೆ. ಪ್ರಧಾನವೇ ಜಗತ್ಕಾರಣವೆಂದು ಭಾವಿಸಿ ಸಾಂಖ್ಯರು ಬ್ರಹ್ಮದ ಲಕ್ಷಣವನ್ನು ಪ್ರಧಾನದಲ್ಲಿ ಅನ್ವಯಿಸುತ್ತಾರೆ. ಹೀಗೆ ಬ್ರಹ್ಮಲಕ್ಷಣದ ಸಮನ್ವಯದಲ್ಲಿಯೇ ಪರಸ್ಪರ ವಿರೋಧವು ತೋರುವುದರಿಂದ ಅದರ ಪರಿಹಾರಕ್ಕಾಗಿ ಅವಿರೋಧಾಧ್ಯಾಯವು ಹೊರಟಿದೆ. ಇಲ್ಲಿ ಸಾಂಖ್ಯ, ಯೋಗ, ತಾರ್ಕಿಕ ಮತ್ತು ಅದ್ವೈತ ಮತಗಳನ್ನು ನಿರಾಕರಿಸಿ ಪರಮೇಶ್ವರನನ್ನು ನಿರ್ವಿಶೇಷನೆಂದು ಪ್ರತಿಪಾದಿಸುವ ಶುದ್ಧಾದ್ವೈತ, ಬುದ್ಧಾದ್ವೈತ, ಶುಷ್ಕಾದ್ವೈತ, ಶೂನ್ಯಾದ್ವೈತ, ಮಿಥ್ಯಾದ್ವೈತಗಳನ್ನು ಯುಕ್ತಿಯುಕ್ತವಾಗಿ ಖಂಡಿಸಿ ಸರ್ವಶ್ರುತಿಸಾರವೆನಿಸಿದ ಸವಿಶೇಷಾದ್ವೈತವನ್ನು ಸ್ಥಾಪಿಸಿದ್ದಾರೆ. ಬ್ರಹ್ಮಕಾರ್ಯವೆನಿಸಿದ ಆಕಾಶಾದಿಪಂಚಭೂತಗಳನ್ನು ಅನಿತ್ಯವೆಂದೂ ಹಾಗೆಯೇ ನಿತ್ಯವೆಂದೂ ತಿಳಿಸುವ ಶ್ರುತಿಗಳಲ್ಲಿ ಪರಸ್ಪರವಿರೋಧವನ್ನು ಪರಿಹರಿಸಿ ಪರಶಿವಬ್ರಹ್ಮವೇ ಆಕಾಶಾದಿಸಕಲಜಗತ್ತಿಗೂ ಕಾರಣವೆಂಬುದನ್ನು ಸಿದ್ಧಾಂತಮಾಡಿದ್ದಾರೆ. ಜೀವಾತ್ಮನು ಪರಶಿವಬ್ರಹ್ಮದಕಾರ್ಯವೇ ಆಗಿದ್ದರೂ ಚೇತನನಾದ್ದರಿಂದ ಅಜನ್ಯನೆಂದೂ ಆದರೂ ಅವನು ಶಿವನಿಂದ ಸಹಜವಾಗಿ ಭಿನ್ನನೆಂದೂ ಹೇಳಿ ಅವನ ಸ್ವರೂಪವನ್ನು ತಿಳಿಸಿದ್ದಾರೆ. ಹಾಗೆಯೇ ಪ್ರಾಣೇಂದ್ರಿಯಗಳೆಲ್ಲವೂ ಪರಶಿವಬ್ರಹ್ಮದಿಂದಲೇ ಹುಟ್ಟಿರುವುವೆಂದೂ ಜೀವರೊಳಗೆ ಪ್ರವೇಶಿಸಿ ಶಿವನೇ ನಾಮರೂಪಗಳ ವಿಭಾಗಮಾಡಿರುವನೆಂದೂ ತಿಳಿಸಿದ್ದಾರೆ. ಹೀಗೆ "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಎಂಬ ತೈತ್ತಿರೀಯಶ್ರುತಿಯಲ್ಲಿ ಪರಶಿವನೇ ಜೀವಾದಿಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳಿಗಾಶ್ರಯನಾಗಿರುವನೆಂದು ಹೇಳಿರುವುದನ್ನು ಸಮನ್ವಯಮಾಡಲಿಕ್ಕಾಗಿ "ಜನ್ಮಾದ್ಯಸ್ಯ ಯತಃ" ಎಂಬಲ್ಲಿ ಹೇಳಿದ ಬ್ರಹ್ಮಲಕ್ಷಣವನ್ನು ಯುಕ್ತವೆಂದು ಶ್ರೀಪತಿಪಂಡಿತಾರಾಧ್ಯರು ದುರ್ವಾದನಿರಕರಣಪೂರ್ವಕವಾಗಿ ಸ್ಥಾಪಿಸಿರುವುದು ಅಭಿನಂದನೀಯವಾಗಿದೆ.

ಜೀವಭಾವವು ಸ್ವಾಭಾವಿಕವೆಂದೂ ಶಿವಭಾವವು ವಾಸ್ತವಿಕವೆಂದೂ ತಿಳಿಸಿ ಹಾಲಿನಲ್ಲಿ ತುಪ್ಪವಡಗಿರುವಂತೆ ಜೀವನಲ್ಲಿ ಶಿವಭಾವವು ಅವ್ಯಕ್ತವಾಗಿ ನೆಲಸಿರುವು

ದೆಂದೂ, ಅದು ಶಿವನ ನಿರಂತರ ಧ್ಯಾನಧಾರಣಸಮಾಧಿಗಳಿಂದ ವ್ಯಕ್ತವಾಗುವು ದೆಂದೂ ಶ್ರೀಪತಿಪಂಡಿತಾರಾಧ್ಯರು ಶ್ರುತಿಯ ಆಧಾರದಮೇಲೆ ಸ್ಥಾಪಿಸಿದ್ದಾರೆ. "ಅಂಶೋ ನಾನಾವ್ಯಪದೇಶಾತ್" ಎಂಬ ಸೂತ್ರಭಾಷ್ಯದಲ್ಲಿ ಜೀವರು ಪರಮಶಿವನ ಸಾಕ್ಷಾದಂಶರೆಂದೂ, ಅವರು ಅನೇಕಬಗೆಯಾದ ವ್ಯಪದೇಶಗಳಿಂದ ಭಿನ್ನರಾಗಿರುವ ರೆಂದೂ ತಿಳಿಸಿದ್ದಾರೆ. "ಉರಿಯುವ ಬೆಂಕಿಯಿಂದ ಒಂದೇ ಬಣ್ಣದ ಸಣ್ಣ ಸಣ್ಣ ಕಿಡಿ ಗಳು ಅನೇಕ ಪ್ರಕಾರದಲ್ಲಿ ಕೆಳಗೆ ಉದುರುವಂತೆ ಅಕ್ಷರನೆನಿಸಿದ ಪರಶಿವನಿಂದ ಸಮಾ ನಾಕಾರದ ಜೀವರು ಅನಂತವಾಗಿ ಹೊರಬಂದಿದ್ದಾರೆ" ಎಂಬ ಶ್ರುತಿಯ ಆಧಾರದ ಮೇಲೆ ಶ್ರೀಪತಿಪಂಡಿತಾರಾಧ್ಯರು ಜೀವರನ್ನು ಪರಶಿವನಿಗೆ ನೇರವಾಗಿ ಸಂಬಂಧಿಸಿದವ ರೆಂದೂ, ಅವರು ಅವನಿಂದ ಹೊರಟಿದ್ದರಿಂದಲೇ ಅವರ ಸನಾತನತ್ವಕ್ಕೂ ಅಜನ್ಯ ತೆಗೂ ಯಾವ ಭಂಗವು ಬರುವುದಿಲ್ಲವೆಂದೂ ಸಮನ್ವಯಮಾಡಿದ್ದಾರೆ. "ಜ್ಞಾಽಜ್ಞೌ ದ್ವಾವಾಜಾವೀಶಾನೀಶೌ" ಎಂಬ ಶ್ರುತಿಯು ಜೀವರನ್ನು ಅಜಾತರೆಂದು ಹೇಳಿದೆ. "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಎಂಬ ತೈತ್ತಿರೀಯಶ್ರುತಿಯು ಅವರನ್ನು ಬ್ರಹ್ಮದಿಂದ ಹುಟ್ಟಿದವರೆಂದು ತಿಳಿಸಿದೆ. ಆದ್ದರಿಂದ ಈ ಬಗೆಯ ಹೇಳಿಕೆ ಪರಸ್ಪರವಿರುದ್ಧವಾಗಿ ಕಂಡರೂ ಜೀವರು ಚೇತನರ ಅಂಶರಾಗಿದ್ದು ಪ್ರಳಯದಲ್ಲಿ ಅವರವರ ಕರ್ಮವಾಸನೆಗಳೊಡನೆ ಶಿವನಲ್ಲಿಯೇ ಸೇರಿದ್ದು ಸೃಷ್ಟಿಕಾಲದಲ್ಲಿ ಶಕ್ತಿವಿಕಾ ಸಕ್ಕಾಗಿ ಆ ಶಿವನ ಉಪಾಸನೆಗಾಗಿ ಹೊರಗೆಬರುವರಷ್ಟರಿಂದಲೇ ಅವರನ್ನು ಜನ್ಯರೆಂದು ಶ್ರುತಿಯಲ್ಲಿ ಭಾವಿಸಲಾಗಿದೆ. ಇದರಿಂದ ಅವರ ನಿತ್ಯತೆಗೂ ಬ್ರಹ್ಮಜನ್ಯತೆಗೂ ಪರಸ್ಪರ ವಿರೋಧವು ಸಂಭವಿಸುವಂತಿಲ್ಲ. ಹೀಗೆ ಜೀವರು ಶಿವನ ಸಾಕ್ಷಾದಂಶರಾದ್ದರಿಂದ ಅವ ರನ್ನು ಅವಿದ್ಯಾಕಲ್ಪಿತರೆಂದೂ, ಜಗತ್ತನ್ನು ಮಿಥ್ಯೆ ಎಂದೂ ಹೇಳುವ ಅದ್ವೈತಮತವು ಎಷ್ಟು ಅಸಮಂಜಸವೆಂಬುದನ್ನು ಅವಿರೋಧಾಧ್ಯಾಯದ ಚತುರ್ಥಪಾದದಲ್ಲಿ ಶ್ರೀಕರ ಭಾಷ್ಯವು ನಿಷ್ಪಕ್ಷಪಾತದೃಷ್ಟಿಯಿಂದ ನಿರೂಪಿಸಿದೆ.

ತೃತೀಯಾಧ್ಯಾಯವು ಜೀವನ ಮರಣಾನಂತರದ ಅವಸ್ಥೆಯನ್ನು ಹೃದಯಂಗ ಮವಾಗಿ ಚಿತ್ರಿಸಿದೆ. ಜೀವನಿಗೆ ದೇಹದ ಸಂಪರ್ಕದಿಂದ ಬಾಲ್ಯ-ಯೌವನ, ವಾರ್ಧಕ್ಯ-ಮರಣವೆಂಬ ನಾಲ್ಕು ಅವಸ್ಥೆಗಳು ಅನಿವಾರ್ಯವೆನಿಸಿವೆ. ಇವು ಇಷ್ಟೂ ಎಲ್ಲರಿಗೂ ಗೋಚರವಾಗತಕ್ಕವು. ಇವುಗಳ ಮುಂದಿನದು ಐದನೆಯ ಅವಸ್ಥೆ. ಅದನ್ನು ಅವನು ಸ್ಥೂಲದೇಹದಿಂದ ಅನುಭವಿಸಲಾರನು. ಅದಕ್ಕೆ ಸೂಕ್ಷ್ಮ ದೇಹವಷ್ಟೇ ಆವಶ್ಯಕ. ಅದಿಲ್ಲದೆ ಅವನು ಮುಂದಕ್ಕೆ ಹೊರಡಲಾರನು ಮತ್ತು ಐದನೆಯ ಅವಸ್ಥೆಯನ್ನು ಅನುಭವಿಸಲಾರನು. ಆದರೆ ಮರಣಾವಸ್ಥೆಯನ್ನು ಯಾವನು ಅನಾಯಾಸವಾಗಿ ಪಡೆಯುವನೋ ಅವನಿಗೆ ಮುಂದಿನ ಅವಸ್ಥೆ ಸುಖ ಮಯವಾಗುವುದು. ಆಗ ಒದಗುವ ಸುಖದುಃಖಗಳು ಪೂರ್ಣವಾಗಿ ಮರಣಾವಸ್ಥೆ ಯನ್ನು ಅವಲಂಬಿಸಿವೆ. ಈ ಮರಣಾವಸ್ಥೆಯ ಸುಖದುಃಖಗಳು ಹಿಂದಿನ ಮೂರು ಅವಸ್ಥೆಗಳನ್ನೂ, ಮುಖ್ಯವಾಗಿ ಯೌವನಾವಸ್ಥೆಯನ್ನು ಅವಲಂಬಿಸಿವೆ. ಆದರೆ

ಜೀವನು ಮಾಯಾಪಾಶಬದ್ಧನಾಗಿ ಅವಿವೇಕದಿಂದ ಬಾಲ್ಯ, ಯೌವನ, ವಾರ್ಧಕ್ಯಗಳನ್ನು ದುರುಪಯೋಗಪಡಿಸಿಕೊಳ್ಳುತ್ತಿರುವನು. ಅಂತವನಿಗೆ ಮರಣಾವಸ್ಥೆ ದುಃಖದ ತೌರುಮನೆಯಾಗುವುದು. ಆದ್ದರಿಂದಲೇ ಜೀವನು ಸತ್ಸಂಗದಿಂದ ತನ್ನ ಮತ್ತು ಶಿವನ ಸಂಬಂಧಗಳನ್ನು ಪದೇಪದೇ ಕೇಳುತ್ತಲೂ, ತಿಳಿಯುತ್ತಲೂ, ಜಗತ್ತನ್ನು ಆತ್ಮೀಯತೆಯಿಂದ ಗೌರವಿಸುತ್ತಲೂ ಆತ್ಮಕಲ್ಯಾಣವನ್ನು ಮೊದಲು ಸಾಧಿಸಿಕೊಳ್ಳಬೇಕೆಂಬ ಉಚ್ಚಧ್ಯೇಯವನ್ನು ಭಾರತೀಯಸಂಸ್ಕೃತಿಯು ಮೊದಲಿಂದಲೂ ಸಾರುತ್ತ ಬಂದಿದೆ. ಹೀಗೆ ಆತ್ಮಕಲ್ಯಾಣದ ಸಾಧನೆಯು ಬಾಲ್ಯ-ಯೌವನ, ವಾರ್ಧಕ್ಯ ಮತ್ತು ಮರಣಗಳ ಸದ್ವಿನಿಯೋಗವನ್ನವಲಂಬಿಸಿದೆ. ಇವುಗಳ ಸದ್ವಿನಿಯೋಗವನ್ನು ಕಾಳಿದಾಸನು ಬಹು ಸೊಗಸಾಗಿ ತಿಳಿಸಿದ್ದಾನೆ. ಅದು ನಮ್ಮ ಯುವಯುವತಿಯರೆಲ್ಲರಿಗೂ ಯಾವಾಗಲೂ ನೆನೆಸಿಕೊಳ್ಳಬಹುದಾದ ದಿವ್ಯ ಆದರ್ಶವಾಗಿದೆ.

ಶೈಶವೇಽಭ್ಯಸ್ತವಿದ್ಯಾನಾಂ ಯೌವನೇ ವಿಷಯೈಷಿಣಾಂ ।
ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಂ ॥

ಇಲ್ಲಿ ನಾಲ್ಕು ಅವಸ್ಥೆಗಳಿಗೂ ನಾಲ್ಕು ಪವಿತ್ರ ಕರ್ತವ್ಯಗಳನ್ನು ಮಹಾಕವಿಯು ಸೂಚಿಸಿದ್ದಾನೆ. ಬಾಲ್ಯವು ವಿದ್ಯಾಭ್ಯಾಸಕ್ಕೆ ಮೀಸಲಾಗಿರಬೇಕು. ವಿದ್ಯೆ ಎಂದರೆ "ಅಧ್ಯಾತ್ಮವಿದ್ಯಾ ವಿದ್ಯಾನಾಂ" ಎಂಬಂತೆ ಆತ್ಮನ ಸ್ವರೂಪವನ್ನು ತಿಳಿಸಿ ಅವನಿಗೆ ಅಂಟಿಕೊಂಡಿರುವ ಮಲದೋಷಗಳನ್ನೂ ಕರ್ಮವಾಸನೆಗಳನ್ನೂ ತೊಲಗಿಸುವಂತಹದು; ಮಾಯೆಯಿಂದುಂಟಾಗುವ ರಾಗದ್ವೇಷಗಳನ್ನೂ ಕಾಮಕ್ರೋಧಗಳನ್ನೂ ಅಹಂಕಾರಮಮಕಾರಗಳನ್ನೂ ತೊಲಗಿಸುವಂತಹದು. ಮುಖ್ಯವಾಗಿ ಜೀವನಿಗೆ ಮಾಯೆಯಿಂದಾಗಿರುವ ದುಷ್ಪರಿಣಾಮಗಳೆಂದರೆ ಸ್ವಾರ್ಥತೆ, ವ್ಯಾಮೋಹ ಮತ್ತು ಅಹಂಕಾರ. ಇವು ಮೂರನ್ನು ತೊಲಗಿಸುವುದೇ ವಿದ್ಯೆಯ ಕೆಲಸ. ಈ ಮಹಾಕಾರ್ಯವನ್ನು ನಿರ್ವಹಿಸದೆ ಇದ್ದರೆ ಅದು ವಿದ್ಯೆ ಎನಿಸಲಾರದು; ಆದರೆ ಅದು ಅವಿದ್ಯೆ ಎನಿಸುವುದು. ಈ ಅವಿದ್ಯೆಯಿಂದ ಅಹಂಕಾರಾಭಿಮಾನಗಳು ಯಥೇಚ್ಛವಾಗಿ ಬೆಳೆಯುತ್ತಿವೆ. ಸಚ್ಚಿದಾನಂದಪ್ರಕಾಶದ ಅಂಶವು ಅವಿದ್ಯೆಗೆ ಸಿಲುಕಿ ರೂಪಾದಿ ವಿಷಯಗಳನ್ನು ಭೋಗಿಸುತ್ತ ಜೀವನೆನಿಸಿದೆ. ಅವಿದ್ಯೆಯಿಂದ ಆಗಿರುವ ಜೀವನು ಮತ್ತೆ ವಿದ್ಯೆಯ ಬಲದಿಂದ ಸಚ್ಚಿದಾನಂದಪ್ರಕಾಶವನ್ನು ಪಡೆದು ದೇವನಾಗಬೇಕಾಗಿದೆ. ಹೀಗೆ ಜೀವನು ದೇವನಾಗಬೇಕಾದರೆ ಬಾಲ್ಯದಲ್ಲಿ ವಿದ್ಯಾಭ್ಯಾಸವು ಎಷ್ಟು ದೃಢವಾಗಿ ನಡೆದರೆ ಅಷ್ಟು ಒಳ್ಳೆಯದು. ಅದು ನಮ್ಮಲ್ಲಿ ಉತ್ತಮಸಂಸ್ಕಾರಗಳನ್ನು ದೊರಕಿಸಬೇಕೆಂಬ ಅಂಶವನ್ನು ಎಲ್ಲರೂ ಮುಖ್ಯವಾಗಿ ಗಮನಿಸಬೇಕಾಗಿದೆ. ಸರ್ವಾತ್ಮಭಾವವೇ ಈ ಉತ್ತಮಸಂಸ್ಕಾರ. ಇದನ್ನು ಪಡೆದವನೇ ಸುಸಂಸ್ಕೃತನೆನಿಸುವನು. ಇವನೇ ಲೋಕಕಲ್ಯಾಣವನ್ನು ಸಾಧಿಸಬಲ್ಲನು. ಇವನಿಗೇ ಮುಂದಿನ ಯೌವನಾವಸ್ಥೆ ಸುಖಮಯವಾಗುವುದು. ಸುಸಂಸ್ಕೃತನು ಯೌವನವನ್ನು ಯೋಗಸಾಧನವೆಂದು ಭಾವಿಸಿ ಅದನ್ನು ಸದುಪಯೋಗಪಡಿಸಿಕೊಳ್ಳುವನು. ಅವನು ಎಲ್ಲರನ್ನೂ

ಆತ್ಮೀಯತೆಯಿಂದ ಪ್ರೀತಿಸುವ ಭಾವವನ್ನು ಬಾಲ್ಯದಲ್ಲಿಯೇ ಕಲಿತು ಯೌವನದಲ್ಲಿ ಸರ್ವೇಂದ್ರಿಯಗಳನ್ನೂ ಶಿವಮಯವಾದ ಈ ಜಗತ್ತಿನ ಸೇವೆಗಾಗಿ ಉಪಯೋಗಿಸುತ್ತ, ದೇಹ, ಮನ, ಬುದ್ಧಿಗಳ ದುಡಿಮೆಯಿಂದ ಆಯಾ ಕಾಲದಲ್ಲಿ ದೊರಕುವ ಸುಖದುಃಖಗಳನ್ನು ಶಿವಪ್ರಸಾದವೆಂದು ಸಂತೋಷದಿಂದ ಸ್ವೀಕರಿಸಿ ಭೋಗಿಸುವನು. ಜಗತ್ತಿನ ಭೋಗವೆಂದರೆ ಇಂತಹದಾಗಿರಬೇಕು. ಇದೇ ಯುವಕನ ದಿವ್ಯ ಆದರ್ಶ. ಈ ಭೋಗಕ್ಕೆ ಹಿಂದೆ ಧರ್ಮವು ಅವಲಂಬನವಾಗಿಯೂ ಮುಂದೆ ಮೋಕ್ಷವು ಫಲವಾಗಿಯೂ ನಿಂತಿವೆ. ಪ್ರಪಂಚದಲ್ಲಿ ಬಾಳುವವರೆಲ್ಲರೂ ಈ ಪ್ರಪಂಚವು ತಂದೊಡ್ಡುವ ರೂಪ ರಸ ಗಂಧ ಸ್ಪರ್ಶ ಶಬ್ದಗಳೆಂಬ ಐದು ವಿಷಯಗಳನ್ನು ಅನುಭವಿಸಲೇಬೇಕು. ಇವನ್ನು ಯಾರೂ ಬಿಡುವಂತಿಲ್ಲ. ಈ ಐದು ವಿಷಯಗಳನ್ನು ಜೀವನಿಗೆ ದೊರಕಿಸಲು ಈ ದೇಹದಲ್ಲೂ ಐದೇ ಇಂದ್ರಿಯಗಳು ಸಾಧನಗಳಾಗಿ ನಿಂತಿವೆ. ಒಂದೊಂದು ಇಂದ್ರಿಯವು ಒಂದೊಂದು ವಿಷಯವನ್ನೇ ದೊರಕಿಸುತ್ತದೆ. ಐದೇ ವಿಷಯಗಳು, ಐದೇ ಇಂದ್ರಿಯಗಳು; ಹೀಗೆ ಸುವ್ಯವಸ್ಥಿತವಾಗಿರುವ ಈ ಪ್ರಪಂಚದಲ್ಲಿ ಜೀವನು ಮಾಯಾಪಾಶದ ದುಷ್ಪ್ರೇರಣೆಯಿಂದ ಹಿಂದುಮುಂದುನರಿಯದೆ ಈ ವಿಷಯಗಳ ಸಂಗ್ರಹಕ್ಕೂ ಭೋಗಕ್ಕೂ ಹಾತುವರೆಯುತ್ತಿರುವನು. ಇವುಗಳಲ್ಲಿಯೇ ತನ್ನ ಶಕ್ತಿಯೆಲ್ಲವನ್ನೂ ಕಳೆದುಕೊಂಡು ಜೀವನು ಮರಣವನ್ನು ದುಃಖದ ಸನ್ನಿವೇಶವನ್ನಾಗಿ ಮಾಡಿಕೊಳ್ಳುವನು. ಆದರೆ ಬಾಲ್ಯವನ್ನು ಸದುಪಯೋಗಪಡಿಸಿಕೊಂಡವನು ಮಾತ್ರವೇ ಯೌವನದಲ್ಲಿ ಪ್ರಸಾದಭೋಗದಿಂದ ಸುವ್ಯವಸ್ಥಿತವಾದ ಜೀವನವನ್ನು ನಡೆಸಬಲ್ಲನು. ಹೀಗೆ ಪ್ರಸಾದಜೀವಿಗಳಾದ ಯುವಯುವತಿಯರು ಒಬ್ಬರನ್ನೊಬ್ಬರು ದುರ್ಭಾವನೆಯಿಂದ ಆಕರ್ಷಿಸದೆ, ಕೇವಲ ಪದಾರ್ಥಭೋಗಿಗಳೂ ಆಗದೆ, ಆಧ್ಯಾತ್ಮಪ್ರೇಮದಿಂದ ನಿತ್ಯಸೌಂದರ್ಯವನ್ನು ಅನುಭವಿಸುತ್ತ ವೀರ್ಯವಂತರೂ ಶ್ರದ್ಧಾವಂತರೂ ಭಕ್ತಿವಂತರೂ ಆಗಲೆಂಬ ಸದಾಶಯದಿಂದ ಕಾಳಿದಾಸನು ಅವರಿಗೆ ಉತ್ತಮಸಂದೇಶವನ್ನು ನೀಡಿದ್ದಾನೆ. ಇದನ್ನು ಶ್ರೀಪತಿಪಂಡಿತಾರಾಧ್ಯರು ಶ್ರೀಕರಭಾಷ್ಯದಲ್ಲಿ ಅನೇಕಕಡೆಗಳಲ್ಲಿ ಅದರಲ್ಲೂ ವಿಶೇಷವಾಗಿ "ಅರ್ಭಕೌಕಸ್ತ್ವಾತ್" ಎಂಬ ಸೂತ್ರದ ಅರ್ಥವನ್ನು ವಿವರಣಮಾಡುವಾಗ ಪ್ರಸಾದಸಿದ್ಧಾಂತವನ್ನು ಬಹಳ ಸೊಗಸಾಗಿ ನಿರೂಪಿಸಿದ್ದಾರೆ. ಕೇವಲ ಪಂಚಭೂತಗಳಲ್ಲಿಯೇ ಸಂಶೋಧನವನ್ನು ನಡೆಸುತ್ತಿರುವ ಈ ವಿಜ್ಞಾನಯುಗದಲ್ಲಿ ಆಧ್ಯಾತ್ಮಸುಖಕ್ಕೆ ಪ್ರಸಾದಸಿದ್ಧಾಂತವು ಎಷ್ಟು ವೀರ್ಯವತ್ತರವಾದುದೆಂಬ ಅಂಶವನ್ನು ಸಾಧಕರೆಲ್ಲರೂ ಶ್ರೀಕರಭಾಷ್ಯದಲ್ಲಿ ಮನಗಾಣಬಹುದಾಗಿದೆ. ಇಂತಹ ಪ್ರಸಾದಜೀವನದಿಂದ ಲೋಕಕಲ್ಯಾಣವನ್ನು ಸಾಧಿಸಲಿಕ್ಕಾಗಿ ಯೌವನವು ಬರುವುದೇ ಹೊರತು ಮೃಗಗಳಂತೆ ಮಾಯಾಂಧರಾಗಿ ಕೇವಲ ಸ್ವಾರ್ಥಸಾಧನೆಗಾಗಿ ಅಲ್ಲವೆಂಬ ಆದರ್ಶವು ಸಾಧಕರ ಮನದಲ್ಲಿ ನೆಲಸಬೇಕು. ಇಂತಹ ಪ್ರಸಾದಜೀವಿಗಳಿಗೆ ವಾರ್ಧಕ್ಯವು ಮೌನವನ್ನು ದೊರಕಿಸಿ ನಿತ್ಯಸುಖವನ್ನು ದೊರಕಿಸುತ್ತದೆ

ಬಾಲ್ಯ, ಮೌನ, ಪಾಂಡಿತ್ಯ ಇವು ಮೂರೂ ಆಧ್ಯಾತ್ಮಸುಖದ ಹೆದ್ದಾರಿಗಳು.

ಪಂಡಿತನೆಂದರೆ ಆತ್ಮಜ್ಞಾನಿ ; ಸಮದೃಷ್ಟಿ ಮತ್ತು ಸಮಭಾವನೆಯುಳ್ಳವನು. ಇವನು ಎಲ್ಲರಲ್ಲೂ ಒಬ್ಬ ಶಿವನನ್ನೇ ಕಾಣುತ್ತಿರುವುದರಿಂದ ಇವನಿಗೆ ಭಯ ಶೋಕ ಮೋಹ ಗಳೇ ಸುಳಿಯುವುದಿಲ್ಲ. ಅಭಯಸ್ಥಿತಿ ಮತ್ತು ವಿಶ್ವಪ್ರೇಮಗಳೇ ಇವನ ಲಕ್ಷಣ. ಸರ್ವವ್ಯಾಪಕನಾದ ಆತ್ಮನನ್ನು ತಿಳಿದವನು ಎಲ್ಲೆಲ್ಲೂ ಅದನ್ನೇ ಅನುಭವಿಸುತ್ತ ಬಾಲ ಕನಂತೆ ಸರಳಜೀವನವನ್ನು ನಡೆಸುತ್ತ ಮೌನದಿಂದಿರುವನು. ನಮ್ಮ ವಾರ್ಧಕಾ ವಸ್ಥೆ ಹೀಗಿರಬೇಕೆಂದು ಕಾಳಿದಾಸನು ಅಪೇಕ್ಷಿಸಿದ್ದಾನೆ. ಭೋಗಲಾಲಸೆಯಿಂದಲೂ ದ್ವೇಷಾಸೂಯೆಗಳಿಂದಲೂ ದುರ್ವ್ಯವಹಾರಗಳಿಂದಲೂ ವಾರ್ಧಕ್ಯವು ಕೆಡದಿದ್ದರೆ ಆದರ ಮುಂದಿನ ಮರಣಾವಸ್ಥೆ ಸುಖ ಶಾಂತಿಗಳಿಂದ ಕೂಡಿ ಮಹಾನವಮಿಯಂತೆ ಅಮೃತ ಗಳಿಗೆಯಾಗುವುದು. ಆದರೆ ಉತ್ತಮಸಾಧಕರಿಗೆ ಮಾತ್ರವೇ ಮರಣಾವಸ್ಥೆ ಹೀಗೆ ಸಂತೋಷದ ಸಮಾರಂಭವಾಗಬಲ್ಲದು. ಅದು ಹೀಗಾಗಬೇಕಾದರೆ ಅವರಲ್ಲಿ ಯೋಗಜೀವನ ಆವಶ್ಯಕ. ಯೋಗವೆಂದರೆ ಜೀವಪರಮರ ಸಂಯೋಗ. ಇದಕ್ಕೆ ಹಿಂದಿನಿಂದಲೂ ಸದಭ್ಯಾಸವು ನಡೆದಿರಬೇಕು. ದೇಹೇಂದ್ರಿಯಗಳನ್ನು ಶ್ರದ್ಧೆ ಯಿಂದ ಈಶ್ವರನ ಸೇವೆಗೆ ವಿನಿಯೋಗಿಸುವುದೇ ಈ ಅಭ್ಯಾಸ. ಇದರಿಂದ ಚಿತ್ತದ ಚಾಂಚಲ್ಯವೂ ಬುದ್ಧಿಯ ಕಲ್ಮಷವೂ ಕಳೆದು ಸ್ಥೈರ್ಯ ಪ್ರಸನ್ನತೆಗಳು ಉಂಟಾ ಗುತ್ತವೆ. ಇಂತಹವನಿಗೆ ಯೋಗಮಾರ್ಗವು ಇಲ್ಲಿಯೇ ನಿತ್ಯಸುಖವನ್ನು ದೊರಕಿಸ ಬಲ್ಲದು. ಯೋಗಜೀವಿಗೆ ಸಮದರ್ಶನವು ಸ್ವಭಾವವಾಗಿ ಪರಿಣಮಿಸುತ್ತದೆ. ಇವನು ಲೋಕದಲ್ಲಿ ಭಿನ್ನಭಿನ್ನಸ್ವಭಾವದವರೊಡನೆ ಬಾಳುತ್ತಿದ್ದರೂ ನಿರ್ಲಿಪ್ತತೆ ಯನ್ನು ರಕ್ಷಿಸಿಕೊಳ್ಳುವನು. ಇವನು ತನ್ನಲ್ಲಿರುವ ಶಿವನೇ ಎಲ್ಲರಲ್ಲೂ ಸಂಘಟ ನಾತ್ಮಕನಾಗಿ ನೆಲಸಿರುವನೆಂಬುದನ್ನು ತಿಳಿದಿರುವನು. ಆದರೆ ಮಾಯೆಗೆ ಸಿಲುಕಿ ದವರು ವಿವೇಚನೆ ಇಲ್ಲದೆ ಸ್ವಾರ್ಥತೆಯ ದುರುದ್ದೇಶದಿಂದ ತಮ್ಮ ಕಾರ್ಯಗಳನ್ನು ಬೇರೊಬ್ಬನ ಪೂರ್ಣಸಹಕಾರದಿಂದ ಸಾಧಿಸಿಕೊಂಡು ಅನುಭವಿಸುತ್ತಿದ್ದರೂ ಆದರ ಬಗ್ಗೆ ಕೃತಜ್ಞತೆಯನ್ನು ತಾಳದೆ, ತಮಗೆ ಸಹಜವಾಗಿ ತೊಂದರೆಯುಂಟಾದಾಗ ಅದನ್ನು ಒಬ್ಬನಮೇಲೆ ಆರೋಪಿಸುವಷ್ಟು ಮೂರ್ಖರಾಗುತ್ತಾರೆ. ಇಂತಹವರೇ ಲೋಕದಲ್ಲಿ ಹೇರಳವಾಗಿದ್ದಾರೆ. ಆದರೆ ಇದು ಸುಸಂಸ್ಕೃತ ಜೀವನವಲ್ಲ. ಮನುಷ್ಯ ಜೀವನವೇ ಕೃತಜ್ಞತೆಯ ಸತ್ಪರಿಣಾಮವಾಗಿರಬೇಕು. ಈ ಸದ್ಭಾವನೆಯನ್ನು ತೊರೆದು ಇಷ್ಟ ಫಲಗಳನ್ನು ಅಭಿಮಾನದಿಂದ ಭೋಗಿಸುತ್ತ ಅನಿಷ್ಟಫಲಗಳ ಹೊಣೆಯನ್ನು ನಿಷ್ಕಾರ ಣವಾಗಿ ಬೇರೊಬ್ಬರಮೇಲೆ ಸಂಶಯದಿಂದ ಹೊರಿಸುವುದು ಸೌಜನ್ಯಸೂಚಕವಲ್ಲ. ಹೀಗೆ ಸ್ವಾರ್ಥಸಾಧನೆಗಾಗಿಯೇ ದೇಹೇಂದ್ರಿಗಳನ್ನು ಉಪಯೋಗಿಸುವವರಿಗೆ ಮರಣ ದಿಂದ ಭಯವುಂಟಾಗುವುದು ಸಹಜವೇ ಆಗಿದೆ. ಆದರೆ ಮುಂದೆ ಯಾವುದೋ ಒಂದು ಕಾಲದಲ್ಲಿ ಸಂಭವಿಸುವ ಮರಣಕ್ಕಿಂತಲೂ ಹೆಚ್ಚಾಗಿ ಅಂತರ್ನಿಯಾಮಕನಾದ ಶಿವನ ಆಗ್ರಹವು ಅವರಿಗೆ ಪದೇಪದೇ ಸಂಭವಿಸುತ್ತ ಸಮನ್ವಯದೃಷ್ಟಿಯೇ ತೊಲ ಗುತ್ತಿರುವುದನ್ನೂ ಗಮನಿಸದಷ್ಟು ಅವರು ಅಂಧರಾಗುತ್ತಿದ್ದಾರೆ. ಇಂತಹವರು

ಕೇವಲ ವೇಷಭೂಷಣಗಳಿಂದಲೇ ತಮ್ಮೊಳಗಿನ ದಿವ್ಯಪ್ರಭೆಯನ್ನು ಎಂದಿಗೂ ಕಾಣಲಾರರು. ಆದರೆ ಅಂತವರಿಗೂ ಸಹ ಸರಳಸಾತ್ತ್ವಿಕನಿರಾಡಂಬರಜೀವನ ದಿಂದ ಶಿವಯೋಗದ ಪರಿಚಯವುಂಟಾಗಲೆಂದು ಬಯಸುವುದು ವಿವೇಕಿಯ ಲಕ್ಷಣ. "ಸರ್ವೇ ಜನಾಸ್ಸುಖಿನೋ ಭವಂತು" ಎಂಬ ದೈನಂದಿನಪ್ರಾರ್ಥನೆಯೂ ಸಹ ಇದೇ ದಿವ್ಯಸಂದೇಶವನ್ನು ವಿಶ್ವಕ್ಕೆ ಸಾರುತ್ತಿದೆ. ಜನರ ಈಬಗೆಯ ಸ್ತುತಿನಿಂದೆಗಳನ್ನು ಕೇಳಿದರೂ ಮನದಲ್ಲಿ ಕೋಪವ ತಾಳದೆ ಸಮಾಧಾನವಾಗಿ ಬಾಳುವುದೇ ಯೋಗ ಮಾರ್ಗವೆನಿಸುತ್ತದೆ. ಗೀತೆಯೂ ಸಹ "ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ। ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ॥" ಸ್ಪಷ್ಟವಾಗಿ ತಿಳಿಸಿದೆ. ಹೀಗೆ ಆತ್ಮೌಪಮ್ಯರೂಪವಾದ ಯೋಗಾನಂದವನ್ನು ಜೀವಿತಕಾಲದಲ್ಲಿಯೇ ಅನುಭವಿಸಿದವನಿಗೆ ಮರಣಾವಸ್ಥೆಯು ದುಃಖದ ಸನ್ನಿವೇಶವೇ ಆಗುವುದಿಲ್ಲ. ಅವನು ಅದನ್ನು ಬರಲೆಂದು ಬಯಸುವುದೂ ಇಲ್ಲ; ಬಂದರೆ ಅಲ್ಲಗಳೆ ಯುವುದೂ ಇಲ್ಲ. ಅದು ತಾನಾಗಿಯೇ ಬಂದಾಗ ಅದನ್ನು ಅತಿಥಿಯಂತೆ ಸಂತುಷ್ಟ ನಾಗಿ ಸ್ವಾಗತಿಸಿ ಗೌರವಿಸುವನು. ಇಲ್ಲಿ ಕೆಲವು ದಿವಸಗಳಕಾಲ ಉತ್ತಮ ಸಾಧನೆ ಯಿಂದ ಪಡೆದು ಅನುಭವಿಸಿದ್ದ ನಿತ್ಯಸುಖವನ್ನು ಮುಂದೆ ಶಾಶ್ವತವಾಗಿ ಅನುಭವಿ ಸಲು ಸದವಕಾಶವನ್ನು ದೊರಕಿಸುವಂತಹುದು ಮರಣ. ಇದನ್ನು ಯಾವ ಧೀರನು ತಾನೆ ಅಲ್ಲಗಳೆಯಬಲ್ಲನು? ಹೇಡಿಗೆ ಅದು ದುಃಖಯಾತನೆಯೇ ಹೊರತು ಧೀರನಿಗಲ್ಲ. ಹೇಡಿಯು ದಿನಕ್ಕೆ ಸಾವಿರವೇಳೆ ಸಾಯುತ್ತಾನೆ; ಆದರೆ ಧೀರನು ಜೀವನದಲ್ಲಿ ಒಂದೇಸಾರಿ ಸಾಯುವನು. ಆಗಲೇ ಅವನ ಧೈರ್ಯ, ಸ್ಥೈರ್ಯಗಳ ದಿವ್ಯ ಆದರ್ಶವು ಜಗತ್ತಿಗೆ ತಿಳಿಯಬಲ್ಲದು. ಹೀಗೆ ಆದರ್ಶಜೀವನವನ್ನು ನಮ್ಮ ಯುವ ಯುವತಿಯರು ಬಾಳಲೆಂದು ಕಾಳಿದಾಸನಂತಹ ಮಹಾಕವಿಯೂ, ಶ್ರೀಪತಿಪಂಡಿತಾ ರಾಧ್ಯರಂತಹ ಶಿವಾನುಭವಿಗಳೂ ನಮಗೆ ಎಚ್ಚರಿಸಿದ್ದಾರೆ.

ಈ ಆದರ್ಶವನ್ನು ಶ್ರೀಕರಭಾಷ್ಯವು ತೃತೀಯಾಧ್ಯಾಯದಲ್ಲಿ ನಮ್ಮ ಮನಸ್ಸಿನ ಮೇಲೆ ಪರಿಣಾಮಕಾರಿಯಾಗುವಂತೆ ನಿರೂಪಿಸಿದೆ. ಇದನ್ನು ಅನುವಾದದಲ್ಲಿ ಎಲ್ಲರೂ ಸುಗಮವಾಗಿ ತಿಳಿಯಬಹುದು. ಅದನ್ನು ಇಲ್ಲಿ ಸೂಕ್ಷ್ಮವಾಗಿ ಸಾಧಕರ ಗಮನಕ್ಕೆ ತರಲಾಗಿದೆ. ಮಾನವನು ಪರಮೇಶ್ವರನ ಮಾಯಾಶಕ್ತಿಯ ಪ್ರಭಾವಕ್ಕೆ ಸಹಜ ವಾಗಿ ಒಳಪಟ್ಟಿರುವುದರಿಂದ ಅದನ್ನು ಅವನು ಸ್ವಶಕ್ತಿಯಿಂದಲೇ ನಿಗ್ರಹಿಸಲಾರನು. "ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ" ಎಂದು ಸ್ವಾಮಿಯೇ ತನ್ನ ಮಾಯಾಶಕ್ತಿಯ ದುರವಗಾಹತೆಯನ್ನು ತಿಳಿಸಿದ್ದಾನೆ. ಇದನ್ನು ತೊರೆಯಲು ನಮಗೆ ಎಷ್ಟು ಕಷ್ಟವೆಂಬ ಅಂಶವನ್ನು "ದುರತ್ಯಯಾ" ಎಂಬ ಪದವು ತಿಳಿಸುತ್ತದೆ. ಈ ಮಾಯೆಯಾದರೋ ಸತ್ತ್ವ ರಜಸ್ಸು ಮತ್ತು ತಮಸ್ಸುಗಳ ದುಷ್ಪ್ರಭಾವವನ್ನು ಸತ್, ಚಿತ್, ಆನಂದಗಳೇ ಸ್ವರೂಪವಾಗಿರುವ ಈ ಜೀವನ ಮೇಲೆ ಪೂರ್ಣವಾಗಿ ಬೀರಿದೆ. ಅದರ ಸತ್ತ್ವಗುಣದಿಂದ ಆತ್ಮನ ಸದಂಶವು ಮುಚ್ಚಿ

ಹೋಗಿದೆ. ರಜೋಗುಣದಿಂದ ಚಿದಂಶವು ತಿರೋಹಿತವಾಗಿದೆ. ತಮೋಗುಣದಿಂದ ಆನಂದಾಂಶವು ಆಚ್ಛಾದಿತವಾಗಿದೆ. ಆದ್ದರಿಂದಲೇ ನಾವು ಒಮ್ಮೆ ಸಾತ್ತ್ವಿಕರು, ಮತ್ತೊಮ್ಮೆ ರಾಜಸರು, ಅನೇಕವೇಳೆ ತಾಮಸರು; ಹೀಗಾಗಿ ನಾವು ಮಾಯೆಯ ಕೈಗೊಂಬೆಯಂತೆ ವಿಷಯಭೋಗದಲ್ಲಿ ಲೀನರಾಗಿದ್ದೇವೆ. "ತರ್ರೋಣ, ತೆರ್ರೋಣ, ತಿಂಬೋಣ, ಮಲಗೋಣ" ಎಂಬುದೇ ನಮ್ಮ ಬಾಳಿನ ಗುರಿಯಾಗುವಷ್ಟರಮಟ್ಟಿಗೆ ನಾವು ಅಧೋಗತಿಗೆ ಇಳಿದಿದ್ದೇವೆ. ಅಂತವನಿಗೆ ಅವನ ದಿವ್ಯದರ್ಶನವನ್ನು ಮಾಡಿಸುವ ಒಂದು ಸದ್ಗ್ರಂಥವನ್ನು ನೋಡುವುದೆಂದರೆ ಬೆಂಕಿಯನ್ನು ಮುಟ್ಟಿದಂತಾಗುತ್ತದೆ. ಇಂತಹವರಿಗೆ ಇನ್ನು ಮನನ ನಿದಿಧ್ಯಾಸಗಳಿಗೆ ಅವಕಾಶವಿನ್ನೆಲ್ಲಿಬಂದೀತು? ಅಂತವರಿಗೆ ಮರಣಕಾಲ ಹೇಗೆ ಸುಖಮಯವಾದೀತು? ಆದ್ದರಿಂದ ಜೀವರೆಲ್ಲರೂ ಒಂದೇ ಸೂತ್ರಕ್ಕೆ ಸೇರಿದವರಾದರೂ ಮಾಯೆಯ ನಿತ್ಯಸಂಪರ್ಕದಿಂದ ಭಿನ್ನಭಿನ್ನಸ್ವಭಾವದವರಾಗಿ ವಿಚಿತ್ರರೆನಿಸಿದ್ದಾರೆ. ಹೀಗೆ ವಿಚಿತ್ರರಾದ ಜೀವರಿಗೆ ಮರಣದ ಮುಂದಿನ ಅವಸ್ಥೆಯೂ ವೈವಿಧ್ಯಪೂರ್ಣವಾಗಿಯೇ ಇರುವುದು. ಇಂತವರು ಶ್ರೀಕರಭಾಷ್ಯವನ್ನು ನೋಡಿದರೆ ಹೆದರುವುದು ಸಹಜ. ಇದನ್ನು ವೃದ್ಧರೇ ಓದಬೇಕೆಂದು ಅಲ್ಲಗಳೆಯುವ ಯುವಕರೂ ಇದ್ದಾರೆ. ಆತ್ಮದ ತೊಡಕನ್ನು ಬಗೆಹರಿಸಿ ಬಾಳಿನಲ್ಲಿ ನೆಮ್ಮದಿಯನ್ನು ಕೊಡುವ ಈ ಸಮನ್ವಯದರ್ಶನವು ಅನೇಕರಿಗೆ ಬಿರುಗಾಳಿಯಂತೆ ಅಪ್ರಿಯವಾಗುವುದು. ಅವರು ದೇಹದಲ್ಲಿದ್ದಾಗ ಸ್ವಭಾವಾನುಗುಣವಾಗಿ ಪರಸ್ಪರ ಭಿನ್ನವಾಗಿದ್ದಂತೆಯೇ ಮುಂದೆಯೂ ಇರಬೇಕೆಂದು ಬಯಸುತ್ತಾರೆ. ಈ ಬಗೆಯ ಲೋಕಾನುಭವವನ್ನೇ ಆಧಾರವಾಗಿಟ್ಟುಕೊಂಡು ಶ್ರುತಿಗೂ ಯುಕ್ತಿಗೂ ಹೊಂದುವಂತೆ ಸೂತ್ರಗಳಿಗೆ ವಿವರಣಮಾಡುತ್ತ ಶ್ರೀಪತಿಪಂಡಿತಾರಾಧ್ಯರು ಜೀವರಿಗೆ ಮರಣದ ಮುಂದಿನ ಅವಸ್ಥೆಯನ್ನು ತಿಳಿಸುವಾಗ ಅವರ ಹಿಂದಿನ ವೈವಿಧ್ಯತೆಯಿಂದಲೇ ಆರಂಭಿಸಿದ್ದಾರೆ. ಜೀವರು ಹಿಂದಿನ ಕರ್ಮವಾಸನೆಗಳ ಪರಿಣಾಮವಾಗಿ ಅನೇಕಬಗೆಯ ಅವಸ್ಥೆಗಳನ್ನು ಅನುಭವಿಸುತ್ತಾರೆ. ಕರ್ಮಗಳ ವೈಚಿತ್ರ್ಯ ಮತ್ತು ವೈವಿಧ್ಯಗಳಿಂದ ಜೀವರು ಅನಂತರೆನಿಸಿ ವಿಸ್ತಾರವಾದ ಪ್ರಪಂಚದಲ್ಲಿ ಸುಖದುಃಖಗಳನ್ನು ಅನುಭವಿಸುತ್ತ ಕಾಲಬಂದಾಗ ದೇಹವನ್ನು ತೊರೆದು ಮತ್ತೆ ಹುಟ್ಟುತ್ತಿರುವರು. ಆದ್ದರಿಂದಲೇ ಒಬ್ಬನ ಸುಖದುಃಖಗಳು ಮತ್ತೊಬ್ಬನಿಗೆ ಅಂಟುವುದಿಲ್ಲ. ಅವನವನ ಕರ್ಮದಂತೆ ಅವನವನು ಫಲಾಫಲಗಳನ್ನು ಅನುಭವಿಸಬೇಕಾಗಿದೆ. ಇಂತಹ ಜೀವರನ್ನು ದುಷ್ಕರ್ಮಿ, ಸತ್ಕರ್ಮಿ ಎಂದು ಶ್ರೀಪತಿಪಂಡಿತಾರಾಧ್ಯರು ಶ್ರುತಿಯ ಆಧಾರದಮೇಲೆ ವಿಭಾಗಿಸಿದ್ದಾರೆ. ಶ್ರುತಿ ಅವರನ್ನು "ಕಪೂಯಚರಣಾಃ", "ರಮಣೀಯಚರಣಾಃ" ಎಂದು ಕರೆದಿದೆ. ಕಪೂಯಚರಣಾಃ ಎಂದರೆ ಪಾಪಕೃತ್ಯಗಳನ್ನಾಚರಿಸಿದವರು, "ರಮಣೀಯಚರಣಾಃ" ಎಂದರೆ ಸತ್ಕರ್ಮಗಳನ್ನಾಚರಿಸಿದವರು. ಪಾಪಿಗಳಿಗೆ ದುಷ್ಟಯೋನಿಯೂ ಸುಕೃತಿಗಳಿಗೆ ಉತ್ತಮಯೋನಿಯೂ ದೊರಕುವುದೆಂದು ಆ ಶ್ರುತಿಯು ತಿಳಿಸಿದೆ. ಒಟ್ಟಿನಲ್ಲಿ ದುಷ್ಕರ್ಮಿಗಳಾಗಲೀ ಸತ್ಕರ್ಮಿಗಳಾಗಲಿ ಎಲ್ಲರೂ

ಒಮ್ಮೆ ದೇಹವನ್ನು ತೊರೆಯಬೇಕು. ಆದರೆ ದೇಹಗಳೊಳಗಿದ್ದ ಆ ಜೀವಗಳು ಇಲ್ಲಿಂದ ಹೊರಡುವ ಮಾರ್ಗಗಳೂ ಸಹ ಭಿನ್ನವೇ ಆಗಿವೆ. ದೇವಯಾನ ಅಥವಾ ಅರ್ಚಿರ್ಮಾರ್ಗ, ಪಿತೃಯಾನ ಅಥವಾ ಧೂಮಮಾರ್ಗ ಇವೇ ಈ ಎರಡು ಮಾರ್ಗಗಳು. ಧೂಮಮಾರ್ಗವೆಂದರೆ ಕತ್ತಲೆಯ ದಾರಿ. ಹೊಗೆಯಿಂದ ಕೂಡಿದ್ದರಿಂದ ಅದರಲ್ಲಿಬೆಳಕಿನ ಸುಳಿವೇ ಇಲ್ಲ. ಇದು ಪಾಪಿಗಳನ್ನು ಚಂದ್ರಲೋಕದ ಮೂಲಕ ನರಕಕ್ಕೆ ಒಯ್ಯುತ್ತದೆ. ಇವರನ್ನು ಕರೆದೊಯ್ಯಲು ಯಮಕಿಂಕರರು ಬರುತ್ತಾರೆ. ಅವರೊಡನೆ ಜೀವನು ಹೊರಡುತ್ತಾನೆ. ಅವರು ಯಮಲೋಕದಲ್ಲಿ ತಮ್ಮ ಕರ್ಮಾನುಗುಣವಾಗಿ ದೊರಕುವ ನರಕವನ್ನು ಹೊಕ್ಕು ಅಲ್ಲಿನ ಯಾತನೆಯನ್ನು ಅನುಭವಿಸಿ ಮತ್ತೆ ಕರ್ಮಶೇಷದೊಡನೆ ಭೂಮಿಯಲ್ಲಿ ಸಸ್ಯವೋ, ಧಾನ್ಯವೋ ಆಗಿ ಹುಟ್ಟಿ ಕತ್ತೆ, ನಾಯಿ ಮೊದಲಾದ ಪಶುಗಳಿಗೆ ಆಹಾರವಾಗಿ ಆ ಮೂಲಕ ಆಯಾಯೋನಿಯಲ್ಲಿ ಹುಟ್ಟುತ್ತಾರೆ. ಅರ್ಚಿರ್ಮಾರ್ಗವೆಂದರೆ ಬೆಳಕಿನ ದಾರಿ. ಈ ಬೆಳಕಾದರೋ ಹೃದಯದಲ್ಲಿರುವ ಈಶ್ವರನ ಅನುಗ್ರಹದಿಂದಲೇ ದೊರಕುವಂತಹದು. ಈ ಅನುಗ್ರಹವನ್ನು ಸತ್ಕರ್ಮಿಗಳು ಮಾತ್ರವೇ ಪಡೆಯಬಲ್ಲರು. ಇದೂ ಸಹ ಅವರವರ ಯೋಗ್ಯತೆಗೆ ತಕ್ಕಂತೆ ಲಭಿಸುವುದು. ಸತ್ಕರ್ಮಿಗಳೆಂದರೆ ಎಲ್ಲರೂ ಒಂದೇ ಬಗೆಯಾಗಿರುವುದಿಲ್ಲ. ಅವರಲ್ಲೂ ಸ್ವಭಾವಾನುಗುಣವಾಗಿ ವೈವಿಧ್ಯವಿದ್ದೇ ಇರುವುದು. ಇವರನ್ನು ಮುಖ್ಯವಾಗಿ ಎರಡು ಬಗೆಯಾಗಿ ವಿಂಗಡಿಸಬಹುದು. ಫಲದ ಬಯಕೆ ಮತ್ತು ವಿಷಯವಾಸನೆಯುಳ್ಳವರು ಮತ್ತು ಅವೆರಡೂ ಇಲ್ಲದವರು ಹೀಗೆ ಸತ್ಕರ್ಮಿಗಳಲ್ಲಿ ಎರಡು ಬಗೆಯಿದೆ. ವಿಷಯವಾಸನೆಯುಳ್ಳವರೆಂದರೆ ದಾರೇಷಣ, ಪುತ್ರೇಷಣ, ವಿತ್ತೇಷಣಗಳಿಗೆ ಸಿಲುಕಿದವರು; ಅಂದರೆ ಹೆಂಡತಿ, ಮಕ್ಕಳು ಮತ್ತು ಹಣವನ್ನು ಬಯಸುವವರು, ಇವರನ್ನು ಸಕಾಮೋಪಾಸಕರೆಂದು ಕರೆಯಲಾಗಿದೆ. ವಿಷಯವಾಸನೆ ಇಲ್ಲದವರು ನಿಷ್ಕಾಮೋಪಾಸಕರೆನಿಸುತ್ತಾರೆ. ಇವರು ಹೆಂಡತಿ, ಮಕ್ಕಳು, ಹಣಗಳೆಂಬ ವಿಷಯದ ವಾಸನೆಯನ್ನು ಪೂರ್ಣವಾಗಿ ಬಿಟ್ಟಿರುವರು. ಇವರೆಲ್ಲರೂ ಹೊರಡುವ ಮಾರ್ಗವು ಜ್ಯೋತಿರ್ಮಾರ್ಗವೇ ಆದರೂ ಈ ಜ್ಯೋತಿಯ ಆವಿರ್ಭಾವದಲ್ಲಿ ವ್ಯತ್ಯಾಸವಿರುತ್ತದೆ. ಈ ಜ್ಯೋತಿಯಾದರೋ ಹೊರಗಿನಿಂದ ಬರುವಂತಹದಲ್ಲ. ಹೃದಯದೊಳಗಿನ ದಹರಾಕಾಶದಿಂದಲೇ ಈಶ್ವರಾನುಗ್ರಹದಿಂದ ಹೊರಹೊಮ್ಮುವಂತಹದು. ಅವರವರ ಉಪಾಸನೆಗೆ ಅನುಗುಣವಾಗಿಯೇ ಈ ಪ್ರಕಾಶವು ಗೋಚರಿಸುವುದು. ಇದರಿಂದ ಜೀವನಿಗೆ ಬ್ರಹ್ಮರಂಧ್ರದ ಸುಷುಮ್ನನಾಡಿಯ ಪ್ರವೇಶವು ದೊರಕುವುದು. ಇದರ ಮೂಲಕ ಜೀವನು ಹೊರಟು ಉತ್ತಮ ಸಂಸ್ಕಾರಿಯಾಗಿದ್ದರೆ ಶಿರಸ್ಸಿನಿಂದಲೂ, ಹೀನಸಂಸ್ಕಾರಿಯಾಗಿದ್ದರೆ ಕಣ್ಣು, ಕಿವಿ, ಬಾಯಿಗಳ ಮೂಲಕವೂ ದೇಹವನ್ನು ಬಿಡುವನು. ಇಂತವನನ್ನು ಆತಿವಾಹಿಕನೆಂಬ ಅಮಾನವಪುರುಷನು ದೇವಯಾನಮಾರ್ಗದಿಂದ ಸೂರ್ಯಲೋಕಕ್ಕೆ ಕರೆದೊಯ್ಯುವನು. ಅಲ್ಲಿಂದ ಅವನು ದಿವ್ಯದೇಹದಲ್ಲಿ ಸ್ವರ್ಗಕ್ಕೆ ಹೋಗಿ ಅಲ್ಲಿನ ಭೋಗಗಳನ್ನು ಅನುಭವಿಸಿ

ಕರ್ಮಶೇಷದೊಡನೆ ಭೂಮಿಗೆ ಹಿಂತಿರುಗುವನು. ಆದರೆ ಅವನಿಗೆ ಸ್ವರ್ಗದ ಭೋಗವು ಪರಿಮಿತಿಗೊಳಪಟ್ಟಿರುವುದು. ಅಲ್ಲಿ ಆತ್ಮಸ್ವಾತಂತ್ರ್ಯವಿಲ್ಲದೆ ಅವನು ದೇವತೆಗಳಿಗೆ ಭೋಗ್ಯವೆನಿಸಿರುವನು. ಅವನು ಸ್ವರ್ಗಾಪೇಕ್ಷೆಯಿಂದ ಯಜ್ಞಗಳನ್ನಾಚರಿಸಿದ್ದುದರಿಂದ ಅದಕ್ಕೆ ತಕ್ಕ ಫಲವೇ ಅವನಿಗೆ ದೊರೆತು ಸ್ವರ್ಗದಲ್ಲಿ ಅಪ್ಸರೆಯರೊಡನೆ ವಿಹರಿಸುತ್ತ ಅಲ್ಲಿರುವಷ್ಟುಕಾಲವೂ ದೇವಪಶುವೆನಿಸಿದ್ದು ಕೊನೆಗುಳಿದ ಕರ್ಮದೊಡನೆ ಹಿಂತಿರುಗುವಾಗ ಆಕಾಶ ವಾಯು ಅಭ್ರ ಮೇಘಗಳ ಆಶ್ರಯದಲ್ಲಿ ಆ ರೂಪದಲ್ಲಿ ಕೊಂಚಕಾಲವಿದ್ದು ಅಲ್ಲಿಂದ ಮಳೆಯಾಗಿ ಭೂಮಿಗೆ ಬಿದ್ದು ಇಲ್ಲಿ ಸಸ್ಯರೂಪದಿಂದ ಬೆಳೆದು ಅಕ್ಕಿ, ಗೋಧಿ ಮೊದಲಾದ ಭೋಜ್ಯವಸ್ತುವಾಗುವನು. ಆದರೆ ಧಾನ್ಯರೂಪದಲ್ಲಿ ಅವನು ಬಹಳಕಾಲವಿರಬೇಕಾಗುವುದು. ಈ ಧಾನ್ಯವು ಪುರುಷನಿಗೆ ಆಹಾರವಾಗಿ ಅವನ ದೇಹವನ್ನು ಬೆಳೆಸಿ ಅಲ್ಲಿ ರೇತಸ್ಸಾಗುವುದು. ಅದು ಸ್ತ್ರೀಯೋನಿಯಲ್ಲಿ ಪ್ರವೇಶಿಸಿ ಅದರ ಹಿಂದಿನ ಕರ್ಮಾನುಸಾರವಾಗಿ ಜನ್ಮವನ್ನು ಪಡೆಯುವುದು. ಆದರೆ ಇಲ್ಲಿ ತಿಳಿಯಬೇಕಾದ ಅಂಶವಿಷ್ಟು. ಚೈತನ್ಯವು ಲಿಂಗಶರೀರದೊಡನೆ ಹೋಗಿ ಪರಲೋಕದಲ್ಲಿ ಸುಖದುಃಖಗಳನ್ನು ಅನುಭವಿಸಿ ಕರ್ಮಶೇಷದೊಡನೆ ಹಿಂತಿರುಗುವಾಗ ಯಾವುದಾದರೊಂದು ಆಶ್ರಯವಿಲ್ಲದೆ ಅದು ಬರಲಾರದು. ಅದಕ್ಕಾಗಿಯೇ ಅದು ಆಕಾಶ ವಾಯು ಮೇಘಗಳೊಂದಿಗೆ ಸೇರಿಕೊಂಡು ನೀರಿನ ರೂಪದಿಂದ ಭೂಮಿಗೆ ಬಿದ್ದು ಕರ್ಮಾನುಗುಣವಾದ ಯೋನಿಯನ್ನು ಪಡೆಯಲಿರುವುದು. ಹಾಗೆ ಪಡೆಯುವಾಗಲೂ ಯಾವ ಯೋನಿಯಲ್ಲಿ ಮುಂದೆ ಅದು ಹುಟ್ಟಬೇಕಾಗಿದೆಯೋ ಅಂತಹ ಪ್ರಾಣಿಗಳಿಗೆ ಆಹಾರವಾಗುವಂತಹ ಧಾನ್ಯದಲ್ಲಿಯೋ ಸಸ್ಯದಲ್ಲಿಯೋ ಅದು ಸೇರಿಕೊಳ್ಳುತ್ತದೆ. ಎಲ್ಲಾ ಜೀವರೂ ಅಕ್ಕಿ ಗೋಧಿ ಮೊದಲಾದ ಧಾನ್ಯಗಳಲ್ಲಿಯೇ ಸೇರಿಕೊಳ್ಳದೆ ಅವರವರ ಕರ್ಮಾನುಗುಣವಾದ ಭೋಜ್ಯವಸ್ತುವಾಗಿ ಹುಟ್ಟಿ ಆಯಾ ಸ್ವಭಾವದ ಪ್ರಾಣಿಗಳಿಗೇ ಆಹಾರವಾಗುವರು. ಆ ಆಹಾರವನ್ನು ಆ ಪ್ರಾಣಿಗಳು ತಿಂದಮೇಲೆ ಅದರೊಳಗಿದ್ದ ಜೀವರು ಶುಕ್ಲರೂಪದಿಂದ ಸ್ತ್ರೀಯೋನಿಯಲ್ಲಿ ಶೋಣಿತದೊಡನೆ ಬೆರೆತು ಕರ್ಮಾನುಗುಣವಾಗಿ ದೇಹವನ್ನು ಪಡೆದು ಹೊರಗೆ ಬರುವರು. ಒಟ್ಟಿನಲ್ಲಿ ಜೀವನಿಗೆ ಸ್ವತಃ ಗಮನಾಗಮನಶಕ್ತಿಯಿಲ್ಲ. ಅವನಿಗೆ ಯಾವಾಗಲೂ ಸೂಕ್ಷ್ಮಶರೀರದ ಸಹವಾಸವಿದ್ದೇ ಇರಬೇಕೆಂದು ಹಿಂದೆಯೇ ತಿಳಿಸಿದೆ. ಈ ಸೂಕ್ಷ್ಮದೇಹವೂ ಸಹ ಸ್ಥೂಲದೇಹದ ಅವಲಂಬನವಿಲ್ಲದೆ ವ್ಯವಹರಿಸಲಾರದು. ಈ ಸ್ಥೂಲದೇಹವನ್ನು ಜೀವನು ತೊರೆಯುವಾಗ ಸೂಕ್ಷ್ಮದೇಹಕ್ಕೆ ಯಾವ ಆಶ್ರಯವೂ ಇಲ್ಲದೆಹೋಗುವುದು. ಮೊದಲು ಯಾವ ಪಂಚಭೂತಗಳು ಸಂಯುಕ್ತವಾಗಿ ಸ್ಥೂಲದೇಹವಾಗಿದ್ದುವೋ ಅವೇ ಮರಣಕಾಲದಲ್ಲಿ ಪರಸ್ಪರವಿಯೋಗವನ್ನು ಹೊಂದುವುದರಿಂದ ಸೂಕ್ಷ್ಮದೇಹವು ಒಂದೊಂದು ಭೂತದಿಂದಲೂ ಹಿಂದುಹಿಂದಕ್ಕೆ ಸರಿಯುವುದು. ದೇಹಕ್ಕಾಧಾರವಾದ ಪೃಥಿವಿಯಿಂದ ನೀರಿನ ಅವಸ್ಥೆಗೂ, ನೀರಿನಿಂದ ಅಗ್ನಿ, ಅಗ್ನಿಯಿಂದ ವಾಯು, ವಾಯುವಿನಿಂದ ಆಕಾಶ ಈ ಮೂಲಕವಾಗಿ

ಜೀವನು ಹಿಂದಕ್ಕೆ ಸರಿಯುವನು. ಅವನು ಇಲ್ಲಿಗೆ ಬರುವಾಗಲೂ ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ನೀರಿನಿಂದ ಪೃಥಿವೀ ಹೀಗೆ ಆರೋಹಣಕ್ರಮದಿಂದ ಬಂದಿದ್ದನು. ಇಲ್ಲಿ ದೇಹೇಂದ್ರಿಯಗಳೊಡನೆ ವ್ಯವಹರಿಸುತ್ತಿದ್ದಾಗ ಅವನು ಐದು ಭೂತಗಳಿಂದಾದ ಸ್ಥೂಲದೇಹದೊಡನೆ ಒಟ್ಟಿಗೆ ಕಲೆತಿದ್ದನು. ಈ ಐವರ ವಿಘಟನೆಯೇ ಮರಣವೆನಿಸಿದ್ದರಿಂದ ಜೀವನು ತನ್ನ ಗಮನಾಗಮನಕಾಲದಲ್ಲಿ ಒಂದೊಂದು ಭೂತದ ಆಶ್ರಯದಲ್ಲೂ ಕೊಂಚಕೊಂಚಕಾಲವಿರಬೇಕಾಗುವುದು. ತೃಣಜಲೂಕ ಅಂದರೆ ಹುಲ್ಲಿನ ಹುಳುವು ಒಂದು ಹುಲ್ಲಿನಿಂದ ಮತ್ತೊಂದು ಹುಲ್ಲಿಗೆ ಹಾರುವಾಗ ಮತ್ತೊಂದು ಹುಲ್ಲಿನ ಆಶ್ರಯ ಸಿಕ್ಕುವವರೆಗೂ ಹಿಂದಿನ ಹುಲ್ಲನ್ನು ಹಿಡಿದೇ ಇರುತ್ತದೆ. ಹಾಗೆ ಸೂಕ್ಷ್ಮದೇಹದೊಡನೆ ಜೀವನು ಐದು ಭೂತಗಳ ಸಮಷ್ಟಿ ರೂಪವಾದ ದೇಹವನ್ನು ಬಿಟ್ಟು ಒಂದೊಂದು ವ್ಯಷ್ಟಿರೂಪವನ್ನಾದರೂ ಆಶ್ರಯಿಸಿಕೊಂಡೇ ಮೇಲಿನ ಅಥವಾ ಕೆಳಗಿನ ನೆಲೆಯನ್ನು ತಲುಪುವನು. ಹೀಗೆ ಫಲಾಪೇಕ್ಷೆಯಿಂದ ದೇವತೆಗಳ ಪ್ರೀತಿಗಾಗಿ ಜ್ಯೋತಿಷ್ಟೋಮಾದಿಕರ್ಮಗಳನ್ನಾಚರಿಸಿದವರು, ಲೋಕದ ಜನರ ಪ್ರೀತಿಗಾಗಿ ಕೆರೆ ಭಾವಿ ಛತ್ರ ಮೊದಲಾದವನ್ನು ಏರ್ಪಡಿಸಿದವರು ಕ್ಷಣಿಕಫಲಗಳನ್ನು ಪಡೆದು ಸ್ವರ್ಗದಲ್ಲಿ ದೇವಪಶುವಾಗಿದ್ದು ಅಲ್ಲಿಂದ ಮತ್ತೆ ಧಾನ್ಯರೂಪದಿಂದ ಭೂಮಿಯಲ್ಲಿ ಬೇರೊಬ್ಬ ಜೀವನಿಗೆ ಭೋಗ್ಯವಾಗಿದ್ದು ಮತ್ತೆ ಸ್ತ್ರೀಯೋನಿಯಲ್ಲಿ ಹುಟ್ಟಿ ಬಾಲ್ಯ-ಯೌವನ-ವಾರ್ಧಕ್ಯ-ಮರಣಗಳನ್ನು ಅನುಭವಿಸಲೇಬೇಕು. ಇದು ಸಕಾಮೋಪಾಸಕನಾದ ಸತ್ಕರ್ಮಿಯ ಬಾಳು.

ಇದೇ ಸಾಕಾಮೋಪಾಸಕನು ಸದ್ಗುರುವಿನ ಬೋಧಾಮೃತದಿಂದಲೂ ಮಹಾತ್ಮರ ಪುಣ್ಯಜೀವನದ ನಿರಂತರಶ್ರವಣದಿಂದಲೂ ಸದ್ಭಾವನೆಯನ್ನು ಪಡೆದು ಅನೇಕ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ಈಶ್ವರಪ್ರೀತ್ಯರ್ಥವಾಗಿಯೇ ಮಾಡುತ್ತ ಬಂದರೆ ಅವನು ಅದೇ ಜ್ಯೋತಿರ್ಮಾರ್ಗದಿಂದ ಸೂರ್ಯಮಂಡಲದ ಮೂಲಕ ಬ್ರಹ್ಮಪದವೆನಿಸಿದ ಮಹಾಕೈಲಾಸಕ್ಕೆ ಹೋಗಿ ಅಲ್ಲಿ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯವೆಂಬ ಮೂರುಬಗೆಯ ಕಲ್ಯಾಣವಿಭೂತಿಯನ್ನು ಅನುಭವಿಸುವನು. ಈ ಬಗೆಯ ವಿಭೂತಿ ಅವನಿಗೆ ದೊರಕಬೇಕಾದರೆ ಅವನು ಅಹಂಕಾರ ಮಮಕಾರಗಳನ್ನು ತೊರೆದು ಈಶ್ವರನಲ್ಲಿ ವಿಶ್ವಾಸವಿಟ್ಟು ಎಲ್ಲಾ ವ್ಯವಹಾರಗಳನ್ನೂ ಈಶ್ವರಪ್ರೀತ್ಯರ್ಥವಾಗಿಯೇ ನಡೆಸುವ ಮನಃಸ್ಥೈರ್ಯವನ್ನು ಪಡೆದಿರಬೇಕು. ಕೇವಲ ಈಶ್ವರಪ್ರೀತ್ಯರ್ಥವಾಗಿ ವ್ಯವಹರಿಸುವುದರಿಂದಲೇ ಅವನಿಗೆ ಕಲ್ಯಾಣವೈಭವ ದೊರಕಲಾರದು. ಆದರೆ ಅಹಂಕಾರ ಮಮಕಾರಗಳು ತೊಲಗಲಿಕ್ಕಾಗಿ ಅವನು ದೇಹದಲ್ಲಿ ಈಶ್ವರನ ಇರುವಿಕೆಯನ್ನು ಗುರುವಿನಿಂದ ತಿಳಿದು ಅವನು ದೇಹದಲ್ಲಿ ಮೂರುಬಗೆಯಾಗಿರುವುದರಿಂದ ಅವನನ್ನು ಮೂರುಬಗೆಯಲ್ಲಿ ಅರ್ಚಿಸಿ ಅವನ ಅನುಗ್ರಹವನ್ನು ಪಡೆಯಬೇಕೆಂದು ವ್ಯಾಸರು ಸಕಾಮೋಪಾಸಕರಿಗೆ ಉಪಾಸಾತ್ರೈವಿಧ್ಯದ ಅವಶ್ಯಕತೆಯನ್ನು ಒತ್ತಿ ಹೇಳಿದ್ದಾರೆ. ಇದನ್ನು ಶ್ರೀಪತಿಪಂಡಿತಾರಾಧ್ಯರು ನಮ್ಮ ಮನಸ್ಸಿಗೆ ಅಂಟುವಂತೆ ವಿವ

ಅವನ ಪ್ರಾಣಲಿಂಗವೆನಿಸಿದೆ. ಇದು ಅವನಿಗೆ ತನ್ನ ಪ್ರಾಣದಂತೆ ಇಷ್ಟವಾದ್ದರಿಂದ ಇಷ್ಟಲಿಂಗವೆನಿಸಿದೆ. ಇದು ದೇಹದೊಳಗಿನ ಶಿವನ ಅಮೂರ್ತಚಿತ್ಕಲೆಯ ಮೂರ್ತ ರೂಪ. ಆದ್ದರಿಂದಲೇ ಇಷ್ಟಲಿಂಗದ ಅರ್ಚನೆ ಮೂರ್ತಾಮೂರ್ತೋಪಾಸನೆ ಎನಿಸಿದೆ. ಮೂರ್ತರೂಪದಲ್ಲಿ ಅಮೂರ್ತಪ್ರಾಣಲಿಂಗದ ಸಮಾವೇಶವಾಗಿರುವುದರಿಂದ ಇಷ್ಟ ಲಿಂಗದ ಉಪಾಸನೆ ಕೇವಲ ಮೂರ್ತಿಪೂಜೆ ಎನಿಸದೆ ಸಾಧಕನ ಮುಖ್ಯಪ್ರಾಣವೆನಿ ಸಿದ ಅಮೂರ್ತ ದಿವ್ಯ ಅಪ್ರಾಕೃತ ಪ್ರಕಾಶದ ಉಪಾಸನೆ ಎನಿಸಿದೆ. ಶ್ರುತಿಯಲ್ಲಿ ಪರ ಮೇಶ್ವರನು ಮೂರ್ತನೂ ಅಮೂರ್ತನೂ ಆಗಿರುವನೆಂದು ಹೇಳಿರುವುದರಿಂದ ಉಭಯವಿಧವಾದ ಅರ್ಚನೆಯೂ ಮುಮುಕ್ಷುವಿಗೆ ಆವಶ್ಯಕವೆಂದು ಶ್ರೀಪತಿಪಂಡಿತಾ ರಾಧ್ಯರು ಮುಂದೆ ನಾಲ್ಕನೆಯ ಅಧ್ಯಾಯದಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ.

ಸತ್ಕರ್ಮಿಯು ಸ್ವರ್ಗವನ್ನು ಬಯಸದೆ ಈಶ್ವರಪ್ರೀತ್ಯರ್ಥವಾಗಿ ಇಷ್ಟಾಪೂರ್ತಾ ದಿಕರ್ಮಗಳನ್ನು ನಡೆಸಿದರೂ ಮೂರ್ತಾಮೂರ್ತರೂಪವಾದ ಇಷ್ಟಲಿಂಗದ ಧಾರ ಣಾರ್ಚನಧ್ಯಾನಾದ್ಯುಪಾಸನದಿಂದ ಅಹಂಕಾರ ಮಮಕಾರಗಳನ್ನು ಕಳೆದುಕೊಂಡು ಸುಖದುಃಖಗಳನ್ನು ಶಿವಪ್ರಸಾದವೆಂದು ಭೋಗಿಸುತ್ತ ಶಾಂತಿ, ದಾಂತಿ, ಉಪರತಿ, ತಿತಿಕ್ಷೆ, ಸಮಾಧಾನಗಳನ್ನುಪಡೆದು ಈಶ್ವರಾನುಗ್ರಹದಿಂದ ನಿರ್ಮಲನಾದರೆ ಜ್ಯೋತಿ ರ್ಮಾರ್ಗದಿಂದ ಸೂರ್ಯಮಂಡಲದಮೂಲಕ ಶಿವಲೋಕದಲ್ಲಿ ಕಲ್ಯಾಣವಿಭೂತಿ ಯನ್ನು ಪಡೆಯುವನು. ಕಲ್ಯಾಣವಿಭೂತಿ ಎಂದರೆ ದಿವ್ಯಮಂಗಳವಿಗ್ರಹದಿಂದ ಸಾಲೋಕ್ಯ ಸಾಮೀಪ್ಯ ಸಾರೂಪ್ಯಮುಕ್ತಿಗಳ ಅನುಭವವೆಂದರ್ಥ. ಅಂತವನು ಅಲ್ಲಿಯೂ ನಿರಾಕಾರ ನಿಷ್ಕಲ ನಿರಂಜನ ಶಿವತತ್ತ್ವವನ್ನು ಧ್ಯಾನಿಸುತ್ತ ಪೂರ್ಣವಾಗಿ ನಿರ್ವಿಷಯನಾದರೆ ಅಲ್ಲಿಂದಲೇ ಶಿವಾನುಗ್ರಹದಿಂದ ಅಮೂರ್ತಶಿವಸಾಯುಜ್ಯವೆಂಬ ಕೈವಲ್ಯವಿಭೂತಿಯನ್ನು ಪಡೆಯುತ್ತಾನೆ. ಅದನ್ನು ಶ್ರುತಿಯೇ ಸ್ಪಷ್ಟವಾಗಿ ತಿಳಿಸಿದೆ.
"ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ।
ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್ ॥"
ಎಂಬ ಶ್ರುತಿಯಲ್ಲಿ ಮುಕ್ತನು ಕೈಲಾಸದಲ್ಲಿ ದಿವ್ಯಮಂಗಳವಿಗ್ರಹನಾದ ಪರಮೇಶ್ವ ರನ ಅರ್ಚನೆಯನ್ನು ನಡೆಸುತ್ತಲೇ ಅಲ್ಲಿಂದಲೇ ನಿರಾಕಾರಶಿವೈಕ್ಯವನ್ನು ಪಡೆಯುವ ನೆಂದು ತಿಳಿಸಲಾಗಿದೆ. ಹೀಗೆ ಸಾಕಾರತತ್ತ್ವದ ಅನುಸಂಧಾನದಿಂದ ನಿರಾಕಾರ ತತ್ತ್ವದ ಪ್ರಾಪ್ತಿಯನ್ನು ಶ್ರುತಿಸೂತ್ರಗಳು ವಿಶದಪಡಿಸಿವೆ.

ಆದರೆ ಶ್ರೀಪತಿಪಂಡಿತಾರಾಧ್ಯರು ಇಲ್ಲಿ ಯುಕ್ತಿಯಿಂದ ವಿವೇಚನೆಮಾಡಿ ಮೂರ್ತಾ ಮೂರ್ತನಾದ ಪರಮಾತ್ಮನ ಉಭಯವಿಧಾರ್ಚನೆಯನ್ನು ಏಕಕಾಲದಲ್ಲಿ ಪ್ರಾಣಲಿಂಗದ ಅರ್ಚನದ ಮೂಲಕ ಸುಗಮಗೊಳಿಸಿದ್ದಾರೆ. ಮೂರ್ತರೂಪದ ಬಾಹ್ಯೋಪಾಸನ ವನ್ನು ಅಮೂರ್ತತತ್ತ್ವದ ಧ್ಯಾನವನ್ನು ಏಕಕಾಲದಲ್ಲಿ ಒಂದೆಡೆ ಸಮರಸವಾಗಿ ಹೊಂದಿಸಿ ಅರ್ಚನೆಮಾಡುವುದರಿಂದಲೇ ಜೀವನಿಗೆ ಮಾಯಾಪಾಶವು ಪೂರ್ಣವಾಗಿ ತೊಲಗುವುದೆಂದು "ದ್ವಾದಶಾಹವದುಭಯವಿಧಂ ಬಾದರಾಯಣೋsತಃ" ಎಂಬಲ್ಲಿ

ಬಾದರಾಯಣರು ತಿಳಿಸಿರುವುದನ್ನು ಶ್ರೀಪತಿಪಂಡಿತಾರಾಧ್ಯರು ತಮ್ಮ ಭಾಷ್ಯದ ವಿವರಣದಲ್ಲಿ ಸಮರ್ಥಿಸಿದ್ದಾರೆ. ಇಷ್ಟಲಿಂಗದ ನಿತ್ಯಾರ್ಚನದಿಂದ ಮೂರ್ತೋಪಾಸನವೂ ನಿತ್ಯಾನುಸಂಧಾನದಿಂದ ಅಮೂರ್ತೋಪಾಸನವೂ ನಡೆದು ಸದ್ಭಕ್ತನು ಶಿರಸ್ಸಿನ ಭಾವಲಿಂಗದಲ್ಲೂ ಹೃದಯದ ಪ್ರಾಣಲಿಂಗದಲ್ಲೂ ಸುಷುಪ್ತಿ ಅಂದರೆ ಸಮಾಗಮವನ್ನು ನಿತ್ಯವೂ ಅನುಭವಿಸಬಲ್ಲನು. ಆದ್ದರಿಂದಲೇ ಮುಮುಕ್ಷುಗಳೆಲ್ಲರಿಗೂ ಭಾವಪ್ರಾಣೇಷ್ಟರೂಪನಾದ ಪರಮೇಶ್ವರನ ಅಂತರ್ಬಹಿರರ್ಚನೆ ಅನಿವಾರ್ಯವೆಂದು ಶ್ರೀಪತಿಪಂಡಿತಾರಾಧ್ಯರು ತಮ್ಮ ಭಾಷ್ಯದಲ್ಲಿ ಜಿಜ್ಞಾಸಾಧಿಕರಣದಲ್ಲೂ, ವಿಶೇಷವಾಗಿ ಉಭಯಲಿಂಗಾಧಿಕರಣದಲ್ಲೂ ಸ್ಪಷ್ಟಪಡಿಸಿದ್ದಾರೆ. ಇದನ್ನು ಆ ಪ್ರಕರಣಗಳಲ್ಲಿ ಸಾಧಕರೆಲ್ಲರೂ ಮನಗಾಣಬಹುದಾಗಿದೆ. ಇದನ್ನು ಮುಂದೆ ವಿವೇಚನೆಮಾಡಲಾಗುವುದು. ಅಲ್ಲಿಗೆ ಸತ್ಕರ್ಮಿಗಳು ಶಿವದೀಕ್ಷೆಯಿಂದ ಶುದ್ಧರಾಗಿ ವರ್ಣಾಶ್ರಮೋಚಿತ ಕರ್ಮಗಳನ್ನು ಶಿವಪ್ರೀತ್ಯರ್ಥವಾಗಿ ಆಚರಿಸುತ್ತಲೇ ವಿಷಯವಾಸನೆಗಳನ್ನು ಕಳೆದುಕೊಂಡು ನಿರ್ಮಲರಾಗಿ ಶಿವಲೋಕದಲ್ಲಿ ಕಲ್ಯಾಣವಿಭೂತಿಯನ್ನು ಅನುಭವಿಸಬಹುದೆಂಬ ಅಂಶವಷ್ಟು ಇಲ್ಲಿ ಗಮನಾರ್ಹವಾಗಿದೆ. ಆದರೆ ಇದು ಸಕಾಮಭಕ್ತರ ಉಪಾಸನೆಗೂ, ಅವರು ಪಡೆಯುವ ಫಲಕ್ಕೂ ಅನ್ವಯಿಸುತ್ತದೆ. ಆದರೆ ಇಲ್ಲಿ ತಿಳಿಯಬೇಕಾದ ಅಂಶವಿಷ್ಟು. ಚೈತನ್ಯವು ಲಿಂಗಶರೀರದೊಡನೆ ಹೋಗಿ ಪರಲೋಕದಲ್ಲಿ ಸುಖದುಃಖಗಳನ್ನು ಅನುಭವಿಸಿ ಕರ್ಮಶೇಷದೊಡನೆ ಹಿಂತಿರುಗುವಾಗ ಯಾವುದಾದರೊಂದು ಆಶ್ರಯವಿಲ್ಲದೆ ಬರಲಾರರು. ಅದಕಾಗಿಯೇ ಅದು ಆಕಾಶ ವಾಯುಮೇಘಗಳೊಂದಿಗೆ ಸೇರಿಕೊಂಡು ನೀರಿನ ರೂಪದಿಂದ ಭೂಮಿಗೆ ಬಿದ್ದು ಇಲ್ಲಿ ಕರ್ಮನುಗುಣವಾದ ಯೋನಿಯನ್ನು ಪಡೆಯಲಿರುವುದು. ಹಾಗೆ ಪಡೆಯುವಾಗಲೂ ಯಾವ ಯೋನಿಯಲ್ಲಿ ಮುಂದೆ ಹುಟ್ಟಬೇಕಾಗಿದೆಯೋ ಅಂತಹ ಪ್ರಾಣಿಗೆ ಆಹಾರವಾಗುವಂತಹ ಧಾನ್ಯದಲ್ಲಿಯೋ ಸಸ್ಯದಲ್ಲಿಯೋ ಅದು ಸೇರಿಕೊಳ್ಳುತ್ತದೆ. ಎಲ್ಲಾ ಜೀವರೂ ಅಕ್ಕಿ ಗೋಧಿ ಮೊಲಾದ ಧಾನ್ಯಗಳಲ್ಲಿಯೇ ಸೇರಿಕೊಳ್ಳದೆ ಅವರವರ ಕರ್ಮಾನುಗುಣವಾದ ಭೋಜ್ಯವಸ್ತುವಾಗಿ ಹುಟ್ಟಿ ಆಯಾ ಸ್ವಭಾವದ ಪ್ರಾಣಿಗಳಿಗೇ ಆಹಾರವಾಗುವರು. ಆಹಾರವನ್ನು ಆ ಪ್ರಾಣಿಗಳು ತಿಂದಮೇಲೆ ಅದರೊಳಗಿದ್ದ ಜೀವರು ಶುಕ್ಲರೂಪದಿಂದ ಶೋಣಿತರೂಪದಲ್ಲಿ ಸ್ತ್ರೀಯೋನಿಯಲ್ಲಿ ಬೆರೆತು ಸ್ವರೂಪಾನುಗುಣವಾಗಿ ದೇಹವನ್ನು ಪಡೆದು ಹೊರಗೆ ಬರುವರು. ಒಟ್ಟಿನಲ್ಲಿ ಜೀವನಿಗೆ ಸ್ವತಃ ಗಮನಾಗಮನಶಕ್ತಿಯಿಲ್ಲ. ಅವನಿಗೆ ಸೂಕ್ಷ್ಮಶರೀರದ ಸಹವಾಸವಿದ್ದೇ ಇರಬೇಕೆಂದು ಹಿಂದೆ ತಿಳಿಸಿದೆ. ಈ ಸೂಕ್ಷ್ಮದೇಹವು ಸಹ ಸ್ಥೂಲದೇಹದ ಅವಲಂಬನವಿಲ್ಲದೆ ವ್ಯವಹರಿಸಲಾರದು. ಈ ಸ್ಥೂಲದೇಹವನ್ನು ಜೀವನು ತೊರೆಯುವಾಗ ಸೂಕ್ಷ್ಮದೇಹಕ್ಕೆ ಯಾವ ಆಶ್ರಯವೂ ಇಲ್ಲದೇ ಹೋಗುವುದು. ಮೊದಲು ಯಾವ ಪಂಚಭೂತಗಳು ಸಂಯುಕ್ತವಾಗಿ ಸ್ಥೂಲದೇಹವಾಗಿದ್ದುವೋ ಅವೇ ಮರಣಕಾಲದಲ್ಲಿ ವಿಯೋಗವನ್ನು ಹೊಂದುವುದರಿಂದ ಸೂಕ್ಷ್ಮದೇಹವು ಒಂದೊಂದು ಭೂತದಿಂದಲೂ

ಹಿಂದುಹಿಂದಕ್ಕೆ ಸರಿಯುವುದು. ದೇಹಕ್ಕಾಧಾರವಾದ ಪೃಥಿವಿಯಿಂದ ನೀರಿನ ಅವಸ್ಥೆಗೂ, ನೀರಿನಿಂದ ಅಗ್ನಿ, ಅಗ್ನಿಯಿಂದ ವಾಯು, ವಾಯುವಿನಿಂದ ಆಕಾಶ ಈ ಮೂಲಕವಾಗಿ ಜೀವನು ಆರೋಹಣಕ್ರಮದಲ್ಲಿ ಹೊರಡುವಂತೆ ಬರುವಾಗಲೂ ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ನೀರಿನಿಂದ ಪೃಥಿವಿ ಹೀಗೆ ಅವರೋಹಣಕ್ರಮದಿಂದ ಬಂದಿದ್ದನು. ಇಲ್ಲಿ ದೇಹೇಂದ್ರಿಯಗಳೊಡನೆ ವ್ಯವಹರಿಸುತ್ತಿದ್ದಾಗ ಐದು ಭೂತಗಳಿಂದಾದ ದೇಹದಲ್ಲಿ ಒಟ್ಟಿಗೆ ಕಲೆತಿದ್ದನು. ಈ ಐದರ ಪರಸ್ಪರವಿಯೋಗವೇ ಮರಣವೆನಿಸಿದ್ದರಿಂದ ಜೀವನು ಇಲ್ಲಿಂದ ಹೊರಡುವ ಕಾಲದಲ್ಲೂ ಒಂದೊಂದು ಭೂತದ ಆಶ್ರಯದಲ್ಲಿ ಕೊಂಚ ಕೊಂಚಕಾಲವಿರಬೇಕಾಗುವುದು. ಮರಣಕಾಲದಲ್ಲಿ ಜೀವನು ಐದು ಭೂತಗಳ ಸಮಷ್ಟಿರೂಪವಾದ ಸ್ಥೂಲದೇಹವನ್ನು ಬಿಟ್ಟು ಒಂದೊಂದು ವ್ಯಷ್ಟಿರೂಪವನ್ನಾದರೂ ಆಶ್ರಯಿಸಿಕೊಂಡೇ ಸೂಕ್ಷ್ಮದೇಹದೊಡನೆ ಮೇಲಿನ ಅಥವ ಕೆಳಗಿನ ನೆಲೆಯನ್ನು ತಲುಪುವನು. ಯಾವನು ನಿಷ್ಕಾಮಭಾವನೆಯಿಂದ ಪ್ರಾಕೃತಯಜ್ಞಗಳನ್ನು ತೊರೆದು ಹೃದಯದ ದಹರಾಕಾಶದಲ್ಲಿ ಶಿವನ ಧ್ಯಾನಧಾರಣರೂಪವಾದ ಅರ್ಚನೆಯಲ್ಲಿ ತೊಡಗುವನೋ ಅವನು ಇಲ್ಲಿಯೇ ಜ್ಯೋತಿರ್ಲಿಂಗದಲ್ಲಿ ಐಕ್ಯನಾಗಿ ಅಮೃತನಾಗುತ್ತಾನೆ. ಅವನಿಗೆ ಅರ್ಚಿರಾದಿಮಾರ್ಗಗಳಾಗಲೀ ಚಂದ್ರನೊಡನೆ ಸಂಭಾಷಣವಾಗಲೀ ಸೂರ್ಯಮಂಡಲದ ಪ್ರವೇಶವಾಗಲೀ ಸಂಭವಿಸುವಂತಿಲ್ಲ. ಅವನು ಇಲ್ಲಿಯೇ ವಿರಾಜಾದೀಕ್ಷೆಯಿಂದ ಶುದ್ಧನಾಗಿರುವುದರಿಂದ ಅವನಿಗೆ ಮುಂದೆ ವಿರಾಜಾನದಿಯನ್ನು ದಾಟುವ ಆವಶ್ಯಕತೆಯೂ ಇಲ್ಲ.

ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ ।
ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥

ಎಂಬ ಶ್ರುತಿಯಲ್ಲಿ ಹೇಳಿದಂತೆ ಹೃದಯದ ಎಲ್ಲಾ ಆಶೆಗಳೂ ಅವನಿಗೆ ತೊಲಗಿ ಅವನು ನಿರ್ವಿಷಯನೂ ನಿರ್ಮಲನೂ ಆಗಿರುವುದರಿಂದ ಅವನಿಗೆ "ಲಿಂಗೇ ಸುಷುಪ್ತಿ"ಯು ಸುಗಮವಾಗುವುದು."ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" ಎಂಬ ಶ್ರುತಿಯು ಮುಕ್ತನಿಗೆ ಹೃದಯಾಕಾಶದ ಜ್ಯೋತಿರ್ಲಿಂಗದ ಸಮಾಗಮದಿಂದ ಇಲ್ಲಿಯೇ ಅಮೃತಸ್ಥಿತಿಯನ್ನು ಉಪದೇಶಿಸಿದೆ. ಇಂತವನು ಇಲ್ಲಿಯೇ ಶಿವನಾಗಿ ಶಿವಾನಂದವನ್ನು ಅನುಭವಿಸುತ್ತಲಿದ್ದು ಪ್ರಾರಬ್ಧವು ಮುಗಿದೊಡನೆ ನಿರವಯವ ನಿರಂಜನ ನಿಷ್ಕಲ ಶಿವತತ್ತ್ವದಲ್ಲಿ ಸಮುದ್ರದೊಡನೆ ನದಿಯಂತೆ ಸಮರಸವಾಗಿ ಬೆರೆತು ಸಾಯುಜ್ಯಮುಕ್ತಿ ಎಂಬ ಕೈವಲ್ಯವಿಭೂತಿಯನ್ನು ಅನುಭವಿಸುತ್ತಾನೆ.

ಒಟ್ಟಿನಲ್ಲಿ ದುಷ್ಕರ್ಮಿಗಳನ್ನು ವಿನಾಯಿಸಿ ಉಳಿದ ಸತ್ಕರ್ಮಿಗಳೆಲ್ಲರೂ ಫಲಾಪೇಕ್ಷೆಯಿಂದ ದುಡಿದು ಸ್ವರ್ಗಾದಿಭೋಗಗಳನ್ನು ಅನುಭವಿಸಿ ಮತ್ತೆ ಹಿಂತಿರುಗುವರೆಂದೂ, ಅವರೇ ಆ ಕರ್ಮಗಳ ಫಲವನ್ನು ತಮಗಾಗಿ ಬಯಸದೆ ಈಶ್ವರನಿಗೆ ಅರ್ಪಿಸುತ್ತ ವಿಹಿತ ಕರ್ಮಗಳೆಲ್ಲವನ್ನು ಆಚರಿಸುತ್ತ ಒಳಗೂ ಹೊರಗೂ ಪ್ರಾಣಲಿಂಗದ ಧ್ಯಾನಧಾರಣಾದ್ಯರ್ಚನದಲ್ಲಿ ನಿರತರಾಗಿ ಮಲಕರ್ಮಗಳನ್ನೂ ವಿಷಯವಾಸನೆಗಳನ್ನೂ ಕಳೆದುಕೊಂಡು

ಶುದ್ಧರಾದರೆ ಕೈಲಾಸದಲ್ಲಿ ಸಾಲೋಕ್ಯಾದಿಕ್ರಮದಿಂದ ಸಾಯುಜ್ಯಮುಕ್ತಿಯನ್ನು ಪಡೆದು ಮತ್ತೆ ಹಿಂತಿರುಗುವುದಿಲ್ಲವೆಂದೂ ಇದರಿಂದ ಸ್ಪಷ್ಟವಾಯಿತು. "ತೇ ಬ್ರಹ್ಮ ಲೋಕೇ ತು ಪರಾಂತಕಾಲೇ ಪರಿಮುಚ್ಯಂತಿ ಸರ್ವೇ" ಎಂಬ ಶ್ರುತಿಯಲ್ಲಿ ಸಾಲೋಕ್ಯ ಮುಕ್ತರೂ ಸಹ ಬ್ರಹ್ಮಲೋಕದಲ್ಲಿ ಸಾಲೋಕ್ಯ ಸಾಮೀಪ್ಯ ಸಾರೂಪ್ಯಗಳನ್ನು ಅನು ಭವಿಸಿದಮೇಲೆ ಅಲ್ಲಿಂದಲೇ ಸಾಯುಜ್ಯಮುಕ್ತಿಯನ್ನು ಹೊಂದುವರೆಂದೂ, ಅವರು ಮತ್ತೆ ಭೂಲೋಕಕ್ಕೆ ಹಿಂತಿರುಗುವುದಿಲ್ಲವೆಂದೂ ಶ್ರೀಪತಿಪಂಡಿತಾರಾಧ್ಯರು ಸಮರ್ಥನ ಮಾಡಿದ್ದಾರೆ. ಆದರೆ ಎಲ್ಲಾ ಕಾಮವಾಸನಗಳನ್ನೂ ತೊರೆದು ನಿರ್ವಿಷಯರಾದವರು ಇಲ್ಲಿಯೇ ಹೃದಯದ ದಹರಾಕಾಶದಲ್ಲಿ ನಿರ್ಲಿಪ್ತನಾಗಿ ಶೋಭಿಸುತ್ತಿರುವ ನಿಷ್ಕಲಪರ ಶಿವನಲ್ಲಿ ಸಮರಸವಾಗಿ ಬೆರೆತು ಸದ್ಯೋಮುಕ್ತರೆನಿಸುವರು. ಇಂತವರಿಗೆ ಇಲ್ಲಿ ಇರುವವರೆಗೂ ಲೋಕಾನುಗ್ರಹಲೀಲೆಯೇ ಬಾಳಿನ ಗುರಿಯಾಗಿರುವುದು. ಇವರಿಗೆ ಪ್ರಾರಬ್ಧಕ್ಷಯವೇ ಸಾಯುಜ್ಯಮುಕ್ತಿಗೆ ವಿಳಂಬವಾಗಿರುವುದು. "ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ ಅಥ ಸಂಪತ್ಸ್ಯೇ" ಎಂದು ಶ್ರುತಿಯು ಇವರಿಗೆ ಸಾಯುಜ್ಯ ಮುಕ್ತಿಗೆ ಪ್ರಾರಬ್ಧವು ಮುಗಿದು ದೇಹ ಉದುರುವುದಷ್ಟೇ ವಿಳಂಬವೆಂದು ಸ್ಪಷ್ಟವಾಗಿ ತಿಳಿಸಿದೆ. ಒಟ್ಟಿನಲ್ಲಿ ಮರಣದ ಮುಂದಿನಸ್ಥಿತಿ ಮಾನವನ ವಿಷಯವಾಸನೆಯನ್ನವ ಲಂಬಿಸಿದೆ. ವಾಸನಾತಾನವಂ ಬ್ರಹ್ಮನ್ ಮೋಕ್ಷ ಇತ್ಯಭಿಧೀಯತೇ ।

ಸರ್ವಾಶಾಸಂಕ್ಷಯೇ ಚೇತಃಕ್ಷಯೋ ಮೋಕ್ಷ ಇತೀರ್ಯತೇ ॥

ಎಂಬಂತೆ ವಿಷಯವಾಸನೆ ಮತ್ತು ಸ್ವಾರ್ಥತೆಗಳಿಂದಲೇ ಮಾನವನು ಜನನಮರಣಗಳ ಗುರಿಯಲ್ಲಿ ಸಿಲುಕುವನೆಂದೂ, ಈ ಭೋಗಲಾಲಸೆಯನ್ನೇ ಪ್ರಸಾದಭಾವನೆಯಿಂದ ಅನುಭವಿಸುತ್ತ ಮಹಾವಿಷಯನೂ, ಸರ್ವಕಾರಣನೂ ಸರ್ವಾಶ್ರಯನೂ ಆದ ಪರಮೇಶ್ವರನನ್ನು ನಿರಂತರವೂ ಒಳಗೂ ಹೊರಗೂ ಧರಿಸಿ ಧ್ಯಾನಿಸಿ ಅರ್ಚಿಸುತ್ತ ಬಂದರೆ ಸಂಸಾರದ ಜಂಜಾಟದಿಂದ ಪಾರಾಗುವನೆಂದೂ ಶ್ರೀಪತಿಪಂಡಿತಾರಾಧ್ಯರು ಸಾಧನಾಧ್ಯಾಯದಲ್ಲಿ ಹೃದಯಂಗಮವಾಗಿ ತಿಳಿಸಿದ್ದಾರೆ. ಇದು ಸಾಧಕರೆಲ್ಲರಿಗೂ ನಿರಂತರವೂ ಸ್ಮರಣೀಯವಾಗಿದೆ. ಸಾಧಕರು ಅವರವರ ಯೋಗ್ಯತೆಗೆ ತಕ್ಕಂತೆ ಉತ್ತಮಗತಿಯನ್ನು ಪಡೆಯುವರಾದ್ದರಿಂದ ಯಾರೂ ನಿರಾಶರಾಗಲಿಕ್ಕವಕಾಶವಿಲ್ಲ. ಎಲ್ಲರೂ ಅಮೃತಪುತ್ರರೇ ಇರುವರು. ಆದರೆ ಮಾಯಾಶಕ್ತಿಯ ಹಿಡಿತಕ್ಕೆ ಸಿಕ್ಕಿ ಒಬ್ಬೊಬ್ಬರೂ ಸಹಜವಾಗಿ ಭಿನ್ನರಾಗಿರುವರು. ಹೀಗೆ ಸ್ವಭಾವದಲ್ಲಿ ಭೇದವಿರುವದ ರಿಂದಲೇ ಒಬ್ಬೊಬ್ಬ ಜೀವನೂ ವ್ಯಕ್ತಿಎನಿಸಿ ಅಹಂಕಾರದಿಂದ ಪ್ರವರ್ತಿಸುತ್ತಿದ್ದರೂ "ತಜ್ಜಲಾನಿತಿ ಶಾಂತ ಉಪಾಸೀತ" "ಸರ್ವೋ ಹ್ಯೇಷ ರುದ್ರಃ" ಎಂದು ಮುಂತಾದ ಮಹಾತ್ಮರ ದಿವ್ಯದರ್ಶನದ ಅನುಭವವನ್ನು ಪಡೆದು ಅವನು ತನ್ನ ವ್ಯಕ್ತಿತ್ವವನ್ನು ವಿಕಾಸಗೊಳಿಸಿಕೊಂಡು ತನ್ನ ವಾಸ್ತವವಾದ ಅಮೃತಸ್ಥಿತಿಯನ್ನು ಕ್ರಮವಾಗಿಯೋ ಅಥವಾ ಉತ್ಕಟವಾದ ಆಸಕ್ತಿಯಿದ್ದರೆ ಬೇಗನೆಯೋ ಪಡೆಯಲಿರುವನೆಂಬ ಸದಭಿಪ್ರಾ ಯವನ್ನು ಶ್ರೀಕರಭಾಷ್ಯದ ಪ್ರತಿಯೊಂದು ಅಧಿಕರಣದಲ್ಲೂ ಶ್ರೀಪತಿಪಂಡಿತಾರಾಧ್ಯರು

ಒತ್ತಿ ಹೇಳಿದ್ದಾರೆ. "ಅನ್ಯಾ ವಾಚೋ ವಿಮುಂಚಥ ತಮೇವೈಕಂ ಜಾನಥ ಆತ್ಮಾನಂ ಅಮೃತಸ್ಯೈಷ ಸೇತುಃ" "ಎಲ್ಲಾ ಮಾತುಗಳನ್ನು ಕಡಮೆಮಾಡಿರಿ. ವ್ಯವಹಾರಕ್ಕೆ ಎಷ್ಟು ಆವಶ್ಯಕವೋ ಅಷ್ಟನ್ನು ಮಾತ್ರವೇ ಉಪಯೋಗಿಸುತ್ತ ಸರ್ವೇಂದ್ರಿಯಗಳನ್ನು ಪರಶಿವನ ಸೇವೆಗೂ ಉಪಾಸನೆಗೂ ವಿನಿಯೋಗಿಸಿರಿ. ಮಾತನಾಡುವ ಶಕ್ತಿಯೂ ಪರಮೇಶ್ವರನ ಮಹಾಪ್ರಸಾದವೇ. ಇದನ್ನು ಅಮೃತಸಾಗರನಾದ ಶಿವನ ಸ್ವರೂಪ ವಿಜ್ಞಾನಕ್ಕಾಗಿಯೇ ಉಪಯೋಗಿಸಿರಿ." ಎಂದು ಉಪನಿಷತ್ತು ನಮ್ಮನ್ನು ಮೇಲಿಂದ ಮೇಲೆ ಎಚ್ಚರಿಸುತ್ತಿದೆ. ಅದೇ ಉಪನಿಷತ್ತು ಏಕವಿಜ್ಞಾನದಿಂದ ಸರ್ವವಿಜ್ಞಾನವೂ ಆಗುವುದೆಂಬ ಪ್ರತಿಜ್ಞೆಯನ್ನು ನಮ್ಮಮುಂದೆ ಪರಮಪವಿತ್ರಧ್ಯೇಯವನ್ನಾಗಿ ಇರಿಸಿದೆ. "ನಿನ್ನೊಳಗಿನ ಆತ್ಮನನ್ನು ತಿಳಿದರೆ ನಿನಗೆ ಹೊರಗಿನದೆಲ್ಲವೂ ತಿಳಿಯುವುದು" ಎಂಬ ದಿವ್ಯಸಂದೇಶವನ್ನು ಉಪನಿಷತ್ತು ನಮಗೆ ಘಂಟಘೋಷವಾಗಿ ಸಾರುತ್ತಿದೆ. ಆದರೂ ನಾವು ನಮ್ಮ ಸ್ವರೂಪವನ್ನು ತಿಳಿಯದೆ ಎದುರಿಸುವವರನ್ನು ಅನ್ಯರೆಂದು ಭಾವಿಸಿ ಹೀಯಾಳಿಸಿ ನಿಂದಿಸುತ್ತ, ಅವರೆಲ್ಲರೂ ನಮ್ಮ ಆತ್ಮೀಯಬಂಧುಗಳೆಂಬುದನ್ನೇ ಮರೆತಿದ್ದೀವೆ. ಈ ಮರೆವೆಯಿಂದಲೇ ಅನೇಕ ನರಕಗಳನ್ನು ನಾವು ನಿರ್ಮಿಸಿ ಕೊಂಡಿದ್ದೇವೆ. ಅತ್ಯುತ್ಕಟವಾದ ಪಾಪದಿಂದ ನಾವು ದೂರದ ನರಕಕ್ಕೆ ಹೋಗದೆ ಇಲ್ಲಿಯೇ ಅದರ ದುಷ್ಪರಿಣಾಮವನ್ನು ಅನುಭವಿಸುತ್ತಲಿದ್ದರೂ ಪಾಪಕ್ಕೆ ಪಶ್ಚಾತ್ತಾಪಪಡದೆ ಈಶ್ವರಾನುಗ್ರಹದಿಂದ ದೂರವಾಗುತ್ತಿದ್ದೇವೆ. ಇಂತಹ ಜೀವಿಗಳ ಉದ್ಧಾರಕ್ಕಾಗಿಯೇ ಶ್ರೀಕರಭಾಷ್ಯವು ವೈಯಕ್ತಿಕವಾದ ಆಶೆ ಅಭಿಮಾನ ವ್ಯಾಮೋಹ ಅಹಂಕಾರಗಳನ್ನು ತೊರೆಸಿ ಎಲ್ಲರಲ್ಲೂ ಸಮದೃಷ್ಟಿಯನ್ನಿಡುವಂತೆ ಪ್ರೇರಿಸುತ್ತಿದೆ. ಪ್ರತಿಯೊಂದು ಜೀವದಲ್ಲೂ ನಿಷ್ಪಕ್ಷಪಾತವಾಗಿ ನೆಲಸಿ "ಸಮ" "ಸರ್ವ" ಎನಿಸಿ ಶಿವಂಕರನಾಗಿರುವ ಶಿವನು ನಮ್ಮ ಹಿಂದೆ ಮುಂದೆ ಒಳಗೂ ಹೊರಗೂ ಸಮನಾಗಿ ಕಾದಿರುವಾಗ ಅವನನ್ನು ಮರೆಯುವುದು ನಮಗೆ ಮಹಾಪಾಪವಲ್ಲವೆ? ಅವನ ಸೇವೆ ನಾಗಿಯೇ ಬಂದಿರುವ ಈ ದೇಹೇಂದ್ರಿಯಗಳನ್ನು ಭೋಗಲಾಲಸೆಯಿಂದ ದುರುಪಯೋಗಪಡಿಸುತ್ತಿರುವ ನಾವು ಪರಾರ್ಥವಾಗಿಯೇ ಬಾಳುತ್ತಿರುವ ಪಶುಗಳಿಗಿಂತ ಹೇಗೆ ಉತ್ತಮರಾದೇವು? ನದಿ, ಗಿಡ, ಮರ, ಭೂಮಿ, ಗಾಳಿ, ನೀರು, ಬೆಂಕಿ, ಬಯಲು ಎಲ್ಲವೂ ಶಿವಮಯವಾದ ಜಗತ್ತಿನಲ್ಲಿ ನಿಸ್ಸ್ವಾರ್ಥತೆಯಿಂದ ಪರಹಿತವನ್ನೇ ಸಾಧಿಸುತ್ತಿರುವಾಗ, ಶಿವನ ಸಾಕ್ಷಾದಂಶರಾದ ನಾವು ಚೇತನರಾಗಿ ಚೈತನ್ಯಶಕ್ತಿಯ ವಿಕಾಸವನ್ನು ನಿಷ್ಠೆಯಿಂದಲೂ ಸದಭ್ಯಾಸದಿಂದಲೂ ಸಾಧಿಸಿಕೊಳ್ಳದೆ ಪಶುಗಳಿಗಿಂತಲೂ ಜಘನ್ಯವಾದ ವೃತ್ತಿಯಿಂದ ಪರನಿಂದೆಯಲ್ಲಿಯೇ ಪವಿತ್ರವಾದ ಕಾಲವನ್ನು ಕಳೆಯುತ್ತ ಮನೋಬುದ್ಧಿಗಳಿಗೆ ಉತ್ತಮ ಸಂಸ್ಕಾರವನ್ನು ದೊರಕಿಸದೆ ಅಹಂಕಾರ ಮಮಕಾರಗಳನ್ನು ಬೆಳೆಸಿಕೊಳ್ಳುತ್ತಿರುವುದು ಎಷ್ಟು ಶೋಚನೀಯವೆಂಬ ಅಂಶ ಶ್ರೀಕರಭಾಷ್ಯದ ಸಾಧನಾಧ್ಯಾಯದಲ್ಲಿ ಎಲ್ಲರಿಗೂ ಸ್ಪಷ್ಟವಾಗಿ ತಿಳಿಯಲಿದೆ. ಅಹಂಕಾರದ ಸಂಪರ್ಕದಿಂದಲೇ ಮಾನವನು ಹಿಂದುಮುಂದನರಿಯದೆ ಮೂರ್ಖತನ

ದಿಂದ ವೈಯಕ್ತಿಕದ್ವೇಷವನ್ನೇ ಸಾಧಿಸುತ್ತ ತನ್ನ ಪ್ರಗತಿಯೇ ಒಬ್ಬನಿಂದ ಕುಂಠಿತ ವಾಯಿತೆಂದು ದೂಷಿಸತೊಡಗುವನು. ತನ್ನ ಸುಖದುಃಖಗಳಿಗೆ ಯಾರೊಬ್ಬರೂ ಕಾರಣರಲ್ಲವೆಂದೂ, ಅವು ಹಿಂದಿನ ಕರ್ಮಾನುಗುಣವಾಗಿ ಆಗಾಗ ತಪ್ಪದೇ ಒದಗುತ್ತವೆ ಎಂಬೂ ತಿಳಿಯದೆ ಪಂಡಿತರೆನಿಸಿದವರೂ ಸಹ ಮಾಯೆಯ ಹಿಡಿತಕ್ಕೆ ಸಿಲುಕಿ ಎದುರಿಗಿಲ್ಲದವರನ್ನು ನಿಂದಿಸುತ್ತ ದೀರ್ಘದ್ವೇಷದಿಂದ ಅಮೋಘಕಾಲವನ್ನು ದುರಪಯೋಗಪಡಿಸಿಕೊಳ್ಳುತ್ತಿರುವುದು ಶೋಚನೀಯ. ಮಾತೇ ಮಿತವಾಗಿರಬೇಕೆಂದು ಶ್ರುತಿಯು ಹೇಳಿದೆ. ಅದರಲ್ಲೂ ಅದು ಹೃದಯದ ಗುಹೇಶ್ವರನಿಗೆ ಮೆಚ್ಚುಗೆಯಾಗಬೇಕು. ಇಂತಹ ಮಾತನ್ನು ತಮ್ಮ ಸೋದರರ ನಿಂದೆಗಾಗಿ ಉದ್ವೇಗಾಭಿನಿವೇಶಗಳಿಂದ ದುರುಪಯೋಗಪಡಿಸಿಕೊಳ್ಳುವುದು ಅವರ ಅಸಂಸ್ಕೃತ ಪಶುಜೀವನವನ್ನು ವ್ಯಕ್ತಪಡಿಸುತ್ತದೆ. ಯೋಗದಲ್ಲಿ ನಿಷ್ಠೆಯುಳ್ಳವನು ಮಿತಭಾಷಿಯಾಗಿ ಆವಶ್ಯಕತೆ ಇದ್ದಾಗಲೇ ತನ್ನ ಅಭಿಪ್ರಾಯವನ್ನು ಹೊರಗೆಡಹುವನು. ಆದರೆ ಶಿವಧ್ಯಾನಧಾರಣಗಳಿಂದ ನಿತ್ಯತೃಪ್ತನಾದವನಿಗೆ ಮಾತ್ರವೇ ಯೋಗಜೀವನವು ಲಭಿಸುತ್ತದೆ.

ಇಂದಿನ ವಿಷಮಪರಿಸ್ಥಿತಿಯಲ್ಲಿ ಮಾನವನಿಗೆ ಸಮದರ್ಶನದ ಆವಶ್ಯಕತೆ ಅನಿವಾರ್ಯವೆನಿಸಿದೆ. ಇದರಿಂದಲೇ ಆವನಿಗೆ ಇಲ್ಲಿ ಶಾಂತಿಯೂ ಮುಂದೆ ನಿತ್ಯಸುಖವೂ ದೊರಕಬೇಕಾಗಿದೆ. ಮುಂದೆ ಹುಟ್ಟದಂತಹ ಸ್ಥಿತಿ ದೊರಕಬೇಕಾದರೆ ಜೀವನಿಗೆ ಅಮೃತಪ್ರಾಪ್ತಿಯೊಂದೇ ದಿವ್ಯ ಸಂಜೀವನ. ಇದು ದೊರೆಯಬೇಕಾದರೆ ಅವನು ಮೊದಲು ತನ್ನ ಸ್ವರೂಪವನ್ನು ಅರಿಯಬೇಕು. ಅದನ್ನು ತಿಳಿಯದಿರುವುದೇ ಆವನ ಮೊದಲನೆಯ ಅಪರಾಧ. ಇದರಿಂದಲೇ ಅವನಿಗೆ ರಾಕ್ಷಸವರ್ತನೆಯೂ ಪಶುಜೀವನವೂ ಬಂದಿವೆ. ತನ್ನ ಸ್ವರೂಪವನ್ನು ತಿಳಿದವನು ಯಾವಾಗಲೂ ಎಲ್ಲರಲ್ಲೂ ತನ್ನನ್ನೇ ನೋಡುತ್ತ ಯಾರನ್ನೂ ನಿಂದಿಸುವ ಗೋಜಿಗೇ ಹೋಗುವುದಿಲ್ಲ ಮತ್ತು ಅವನು ಯಾರ ಹಂಗಿಗೂ ಸಿಲುಕದೆ ಯಾರನ್ನೂ ಕಾಡದೆ ಬೇಡದೆ ಗೌರವಯುತವಾದ ಜೀವನವನ್ನು ಶಿವನು ಮೆಚ್ಚುವಂತೆ ನಡೆಸುತ್ತಾನೆ. ಇದನ್ನು ಅಭಯಸ್ಥಿತಿ ಎಂದು ಅನುಭವಿಗಳು ಹೇಳುತ್ತಾರೆ. ಇದನ್ನು ಇಲ್ಲಿಯೇ ಪಡೆಯಬೇಕೆಂಬುದೇ ಬಾಳಿನ ಗುರಿ. "ಇಹ ಚೇದವೇದೀದಥ ಸತ್ಯಮಸ್ತಿ । ನ ಚೇದಿಹಾವೇದೀನ್ಮಹತೀ ವಿನಷ್ಟಿಃ ॥" ಇಲ್ಲಿ ಅದನ್ನು ಪಡೆಯದೇ ಇದ್ದರೆ ಮುಂದೆ ಎಲ್ಲಿಯೂ ಜೀವನು ಪಡೆಯಲಾರನು. ಇಲ್ಲಿ ಪಡೆಯಲಿಕ್ಕೆ ಮಾಯೆಯ ವಕ್ರಗತಿಯೊಂದೇ ಪ್ರಬಲವಾದ ಅಡಚಣೆಯಾಗಿದೆ. ಇದನ್ನು ನಿಗ್ರಹಿಸಲಿಕ್ಕೆ ಜೀವನು ಸ್ವಯಂ ಅಶಕ್ತನಾದ್ದರಿಂದ ಮಾಯಾಪತಿಯಾದ ಶಿವನಿಗೇ ಶರಣಾಗಬೇಕು. "ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ" ಯಾರು ಈಶ್ವರನಿಗೇ ಶರಣಾಗುವರೋ ಅವರಿಗೆ ಮಾತ್ರವೇ ಮಾಯೆ ಅನುಕೂಲವಾಗುವುದು. ಆದರೆ ಅವನಿಗೆ ಶರಣಾಗಬೇಕಾದರೆ ಜೀವನು ತನ್ನನ್ನು ಮೊದಲು ಅರಿಯಬೇಕು; ತನಗೆ ಮಾಯೆಯಿಂದ ಸಹಜವಾಗಿ ಉಂಟಾಗಿರುವ ಶಕ್ತಿಸಂಕೋಚವನ್ನರಿಯಬೇಕು. ಶಕ್ತಿವಿಕಾಸಕ್ಕಾಗಿ ಶ್ರಮಿಸಬೇಕೆಂಬ

ಇಚ್ಛೆ ಅವನಲ್ಲಿ ಹುಟ್ಟಬೇಕು. ಅದು ಪ್ರಬಲವಾದಾಗ ಶಿವನ ಅನುಗ್ರಹ ಅವನಿಗೆ ದೊರಕುವುದು. ಇದೇ ಶಕ್ತಿಪಾತವೆನಿಸುತ್ತದೆ. ಇದು ಮಂದ, ಮಧ್ಯಮ, ತೀವ್ರ ಎಂದು ಮೂರುಬಗೆಯಾಗಿದೆ. ಅವರವರ ಇಚ್ಛೆಗೆ ಅನುಗುಣವಾಗಿ ಶಕ್ತಿಪಾತವು ಲಭಿಸುವುದು. ಇದಕ್ಕಾಗಿಯೇ ಜೀವನಿಗೆ ಸ್ವರೂಪಜ್ಞಾನ ಮತ್ತು ವಿವೇಚನೆ ಇಲ್ಲದಿದ್ದಾಗ ಅವನು ಆಚರಿಸಿದ್ದ ಪಾಪಗಳ ಬಗ್ಗೆ ಪಶ್ಚಾತ್ತಾಪ ಇವು ಆವಶ್ಯಕ. ಇವಿಲ್ಲದಿದ್ದರೆ ಅವನಿಗೆ ಶ್ರೀಕರಭಾಷ್ಯವು ಏನೂಮಾಡಲಾರದು. ಯಾವನಿಗೆ ನಿರ್ಮಲಹೃದಯ ಮತ್ತು ಆತ್ಮವಿಶ್ವಾಸ ಇರುವುವೋ ಅವನಿಗೆ ಮಾತ್ರವೇ ಇದು ಅರ್ಥವಾಗುತ್ತದೆ. ಆದ್ದರಿಂದ ಮಾನವನು ತನ್ನ ಸ್ವರೂಪವನ್ನು ಅರಿತು ಹೃದಯದ ನೈರ್ಮಲ್ಯವನ್ನು ಮೊದಲು ಸಾಧಿಸಬೇಕು. ತನ್ನನ್ನು ತಾನೇ ತಿಳಿಯದೆ ಮಾನವನು ಎಷ್ಟು ಅಪರಾಧಿಯಾಗಿರುವನೆಂಬ ಅಂಶವನ್ನು ಬಾದರಾಯಣರು ಬಹಳ ಸೊಗಸಾಗಿ ತೋರಿಸಿದ್ದಾರೆ.

ಅನ್ಯಥಾ ಸಂತಮಾತ್ಮಾನಂ ಅನ್ಯಥಾ ಪ್ರತಿಪದ್ಯತೇ ।
ಕಿಂ ತೇನ ನ ಕೃತಂ ಪಾಪಂ ಚೋರೇಣಾತ್ಮಾಪಹಾರಿಣಾ ॥

ಇದು ಎಲ್ಲಾ ಮಾನವರ ಹೃದಯದಲ್ಲೂ ಸ್ಥಿರವಾಗಿ ನೆಲಸಬೇಕು. ಇದರ ಸಮಾಲೋಚನದಿಂದ ಎಲ್ಲರೂ ಪುನೀತರಾಗುವರು. ಬೇರೆ ರೀತಿಯಲ್ಲಿರುವ ಆತ್ಮನನ್ನು ಅದಕ್ಕಿಂತ ಬೇರೆ ರೀತಿಯಲ್ಲಿ ಮಾನವನು ತಿಳಿಯುತ್ತಿರುವನು. ಜನನಮರಣಗಳಿಗೆ ಸಿಲುಕದೆ ಸನಾತನಕಾಲದಿಂದಲೂ ನಿತ್ಯಸುಂದರನೆನಿಸಿರುವ ತನ್ನನ್ನು ದೇಹಸಂಪರ್ಕದಿಂದ ಸಾಯುವೆನೆಂದೂ, ಹುಟ್ಟುವನೆಂದೂ ತಿಳಿದು ಗೋಳಾಡುತ್ತಿರುವುದು ಎಷ್ಟು ಪಾಪಕೃತ್ಯವೆಂಬುದನ್ನು ಎಲ್ಲರೂ ಸಮಾಲೋಚಿಸಬೇಕಾಗಿದೆ. ತಾನಿರುವ ರೀತಿಯೇ ಬೇರೆ; ಆದರೆ ತಾನು ತಿಳಿಯುವುದೇ ಬೇರೆ. ಸತ್ಯನಿತ್ಯಸನಾತನವೆನಿಸಿದ ತನ್ನನ್ನು ಸಾಯುವೆನೆಂದು ಭಾವಿಸಿ ಹೀಗೆ ಮರಣಭಯಕ್ಕೀಡಾಗಿರುವುದು ಎಂತಹ ಅಪರಾಧವೆಂಬುದನ್ನು ನಾವು ಗಮನಿಸಬೇಕಾಗಿದೆ. ಬಾದರಾಯಣರ ದೃಷ್ಟಿಯಲ್ಲಿ ನಾವು ಆತ್ಮಾಪಹಾರಿಗಳಾದ ಕಳ್ಳರಾಗಿದ್ದೇವೆ. ಕಳ್ಳರಿಗೆ ಧೈರ್ಯ ಸ್ಥೈರ್ಯಗಳೆಲ್ಲಿ ಬಂದಾವು? ಶಾಂತಿ ಸಮಾಧಾನಗಳು ಹೇಗೆ ದೊರೆತಾವು? ತನ್ನ ನಿಜಸ್ಥಿತಿಯನ್ನೇ ಬೇರೆರೀತಿಯಾಗಿ ತಿಳಿಯುವ ಕಳ್ಳಜೀವನು ಎಷ್ಟು ಪಾಪಿಯಾಗಿ ಪೈಶಾಚವರ್ತನೆಯಿಂದ ತನ್ನನ್ನು ಅಧೋಗತಿಗೆ ಒಯ್ಯುತ್ತಿರುವನೆಂಬುದನ್ನು ಸ್ಮರಿಸಿಕೊಂಡರೆ ಆಗ ಶ್ರೀಕರಭಾಷ್ಯದ ಮಹತ್ತ್ವ ಎಲ್ಲರಿಗೂ ಮನವರಿಕೆಯಾಗುವುದು.

ಹೀಗೆ ತನ್ನ ಸ್ವರೂಪವನ್ನು ಅರಿತವನೇ ಸ್ವರೂಪದ ವಿಕಾಸಕ್ಕೂ ಅದರ ಐಕ್ಯತೆಗೂ ಹೋರಾಡಲು ಶಕ್ತನಾಗುತ್ತಾನೆ. ಅವನೇ ಪರಶಿವನ ಸರ್ವಜ್ಞತ್ವ, ಸರ್ವೇಶ್ವರತ್ವ, ಸತ್ಯಸಂಕಲ್ಪಾದಿಗುಣಗಳಲ್ಲಿ ದೃಢವಿಶ್ವಾಸವಿಟ್ಟು ಆ ದಿವ್ಯ ಆದರ್ಶಗಳ ಸ್ಫೂರ್ತಿಯಿಂದ ಉತ್ಸಾಹವನ್ನು ಪಡೆದು ನಿರಂತರವೂ ಅವನ ಉಪಾಸನೆಯಲ್ಲಿ ನಿರತನಾಗುವನೆಂದು ಸಕಲ ಶಾಸ್ತ್ರಾಧ್ಯೇತೃಗಳಾದ ರೇವಣಸಿದ್ಧ ಮರುಳಸಿದ್ಧ ಮೊದಲಾದ ಆಚಾರ್ಯರು ಹೇಳಿದ್ದಾರೆ. ಇವರು ವೀರಶೈವ ಧರ್ಮಸ್ಥಾಪನೆಗಾಗಿ ಕೈಲಾಸದಿಂದ ಬಂದ ಪ್ರಮಥಗಣ

ರೆಂದು ವಿಶ್ರುತರಾಗಿದ್ದಾರೆ. ಇವರಿಗೆ ಅಲ್ಲಿ ರೇಣುಕ ದಾರುಕ ಎಂಬ ಹೆಸರುಗಳಿದ್ದ ವೆಂದು ಶಿವಾಗಮಗಳಿಂದ ತಿಳಿದುಬರುತ್ತದೆ. ಇವರ ಭಾಷ್ಯಗ್ರಂಥಗಳಲ್ಲಿ ದರ್ಶನ ಕ್ಷೇತ್ರದ ಅನೇಕ ಸಮಸ್ಯೆಗಳಿಗೆ ಪರಿಹಾರಗಳನ್ನು ಪಡೆಯಬಹುದೆಂದು ಶ್ರೀಪತಿಪಂಡಿತಾರಾಧ್ಯರು ಅನೇಕ ಕಡೆಗಳಲ್ಲಿ ಉಲ್ಲೇಖಿಸಿದ್ದಾರೆ. ಹಾಗೆಯೇ ಉಳಿದ ಆಚಾರ್ಯರು ಅಂದರೆ ವಿಶ್ವಾರಾಧ್ಯ, ಏಕೋರಾಮಾರಾಧ್ಯ ಇವರ ಭಾಷ್ಯಗಳನ್ನೂ ಅಲ್ಲಲ್ಲಿ ಉಲ್ಲೇಖಿಸಿದ್ದಾರೆ; ಹಾಗೆಯೇ ತಮ್ಮ ಗುರುಗಳಾದ ಪಂಡಿತಾರಾಧ್ಯರನ್ನು ಪರಮಗುರುಗಳೆಂದು ಭಕ್ತಿಗೌರವಗಳಿಂದ ಸನ್ಮಾನಿಸಿದ್ದಾರೆ. ಆದರೆ ಅವರ ಭಾಷ್ಯಗಳು ಇನ್ನೂ ಬೆಳಕಿಗೆ ಬಾರದಿರುವುದು ಶೋಚನೀಯ. ಅಜ್ಞಾನದಲ್ಲಿ ಪರದಾಡುವ ಜೀವನಿಗೆ ಬೆಳಕನ್ನು ಕೊಡುವ ಪವಿತ್ರಗ್ರಂಥ ಎಲ್ಲರಿಗೂ ಎಲ್ಲಾ ಕಾಲದಲ್ಲೂ ಪ್ರಿಯವಾಗಿಯೇ ಇರುವುದು. ಇಂತಹ ಅಮೋಘಗ್ರಂಥಗಳನ್ನು ಸರ್ಕಾರವೂ ಮಹಾಜನರೂ ಒಮ್ಮನದಿಂದ ಆದಷ್ಟು ಬೇಗನೆ ಪ್ರಕಟಿಸಿದರೆ ಮಾನವನ ಕಲ್ಯಾಣಸಾಧನೆಗೆ. ಹೆಚ್ಚು ಸಹಾಯವಾದೀತೆಂದು ಭಾವಿಸಲಾಗಿದೆ. ಶ್ರೀಪತಿಪಂಡಿತಾರಾಧ್ಯರಂತಹ ದಾರ್ಶನಿಕರು ರೇವಣಸಿದ್ಧರನ್ನು ಕಲ್ಪವೃಕ್ಷವೆಂದು ಭಾವಿಸಿ ಅವರ ಉಪದೇಶಾಮೃತವನ್ನು ಭಕ್ತಿ ಗೌರವಗಳಿಂದ ಪುರಸ್ಕರಿಸಿರುವಾಗ್ಗೆ ಅವರ ಭಾಷ್ಯವೇ ನಮಗೆ ಸಿಕ್ಕಿದರೆ ಎಷ್ಟು ಪ್ರಯೋಜನವಾದೀತೆಂಬ ಅಂಶ ಸಹೃದಯರಿಗೂ ಅಧಿಕಾರಿಗಳಿಗೂ ತುಂಬ ವಿಚಾರಾರ್ಹವಾಗಿದೆ. ಹೀಗಿರುವುದರಿಂದಲೇ ಈ ಮಹಾತ್ಮರು ಬಹಳಕಾಲದ ಹಿಂದೆಯೇ ಅಗಸ್ತ್ಯಮಹರ್ಷಿಗಳಿಗೆ ಉಪದೇಶಿಸಿದ್ದ ವೇದಾಂತತತ್ತ್ವವು ಇಂದಿಗೂ ಸಿದ್ಧಾಂತಶಿಖಾಮಣಿಯಲ್ಲಿ ಪದ್ಯರೂಪದಲ್ಲಿ ಶೋಭಿಸುತ್ತಲಿದೆ. ಅದು ಭಗವದ್ಗೀತೆಯಂತೆ ಪರಮಪವಿತ್ರವೆನಿಸಿದೆ. ಅದು ನಮ್ಮ ಗಮನವನ್ನು ಹೃದಯದ ಪರಂಜ್ಯೋತಿಪ್ರಕಾಶದ ಕಡೆಗೆ ಸೆಳೆಯುತ್ತಿದೆ.

ಅಧ್ಯಾತ್ಮಭಾವನಾಜಾತಂ ಕ್ಷಣಮಾತ್ರೇಽಪಿ ಯತ್ಸುಖಂ ।
ತತ್ಸುಖಂ ಕೋಟಿವರ್ಷೈಸ್ತು ಲಭ್ಯತೇ ನೈವ ಭೋಗಿಭಿಃ ॥

ಎಂದು ಅವರು ಅಗಸ್ತ್ಯರಿಗೆ ಉಪದೇಶಿಸಿದ್ದಾರೆ. ನಮಗೆ ನಮ್ಮ ಸ್ವರೂಪದ ವಿಜ್ಞಾನದಿಂದ ನಾವು ಆತ್ಮರೆಂಬ ವಿಶ್ವಾಸ ಹುಟ್ಟಿ ಎಲ್ಲರಲ್ಲೂ ಆ ಒಂದು ಆತ್ಮವನ್ನೇ ಕಾಣುವುದಕ್ಕೆ ಅಧ್ಯಾತ್ಮಭಾವನೆಯೆಂದು ಹೆಸರು. ಇದರಿಂದ ನಮಗೆ ದೊರೆಯುವ ಸುಖ ಅದ್ಭುತವೂ ಅನಂತವೂ ಅಪಾರವೂ ಆದುದು. ದುಃಖಮಿಶ್ರವಿಲ್ಲದ ಸುಖವೆಂದರೆ ಇದೊಂದೆಯೇ. ಇದಲ್ಲದೆ ಉಳಿದವೆಲ್ಲವೂ ದುಃಖದ ಬೀಜಗಳು. ನಿತ್ಯಸುಖದ ಜೀವಾಳವೆನಿಸಿದ ಅಧ್ಯಾತ್ಮಭಾವನೆಯನ್ನು ಮಾನವನು ಒಂದುಕ್ಷಣಕಾಲವಾದರೂ ಪಡೆಯಲಿ, ಆದರಿಂದ ಅವನ ಜನ್ಮ ಸಾರ್ಥಕವಾಗುವುದೆಂದು ಗುರುವರ್ಯರು ಅಪೇಕ್ಷಿಸುತ್ತಾರೆ. ಇಂತಹ ಶಾಶ್ವತ ಸತ್ಯವಾದ ತತ್ತ್ವವನ್ನು ಜೀವನದಲ್ಲಿ ಅಳವಡಿಸಿಕೊಂಡು ಅದರಲ್ಲಿ ಸಮರಸವಾಗಿ ಬೆರೆತು ಲೋಕಕಲ್ಯಾಣಕ್ಕಾಗಿ ಅದನ್ನು ಉಪದೇಶಿಸಿರುವುದರಿಂದಲೇ ಅವರು ಆತ್ಮದ ಗಾಂಭೀರ್ಯ ಮಹತ್ತ್ವ ಮತ್ತು ವೈಶಾಲ್ಯಗಳಿಂದ ಜಗದ್ಗುರುವೆನಿಸಿ ಇಂದಿಗೂ ನಮ್ಮನ್ನು ಉದ್ಧಾರ ಮಾಡುತ್ತಲಿದ್ದಾರೆ. ಆದ್ದರಿಂದಲೇ

ಶಂಕರಾಚಾರ್ಯರಂತಹ ಮಹಾವ್ಯಕ್ತಿಯೂ ಅವರಿಂದ ಆತ್ಮಲಿಂಗವನ್ನು ಹೊರಗೆ ಅರ್ಚನೆಗಾಗಿ ಪಡೆದು ಆತ್ಮಕಲ್ಯಾಣವನ್ನೂ ಲೋಕಕಲ್ಯಾಣವನ್ನೂ ಸಾಧಿಸಿದ್ದಾರೆ. ಅದು ಚಂದ್ರಮೌಳೀಶ್ವರಲಿಂಗವೆಂಬ ಹೆಸರಿಂದ ಶಂಕರಾಚಾರ್ಯರ ಮಠದಲ್ಲಿ ಇಂದಿಗೂ ಶೋಭಿಸುತ್ತಲಿರುವುದು ಜಗದ್ವಿಖ್ಯಾತವಾಗಿದೆ. ಇಂತಹ ಸ್ಥಿತಿಯಲ್ಲಿ ನಮ್ಮಗಮನ ಆ ಮಹಾಗುರುವಿನ ಉಪದೇಶದಕಡೆಗೆ ಎಷ್ಟು ಪ್ರಸರಿಸಿದರೂ ಸಾಲದು. ಆಗಲೇ ನಮಗೆ ನಿತ್ಯಸುಖವೆಂಬ ಅಮೃತವು ನಮ್ಮ ಎಲ್ಲಾ ಆಧಿವ್ಯಾಧಿಗಳಿಗೆ ದಿವ್ಯ ಸಂಜೀವಿನಿಯಾಗಿ ದೊರಕಬಲ್ಲದು. ಈ ಸುಖ ಒಂದು ಕ್ಷಣಕಾಲವಿದ್ದರೂ ಅದರ ಮುಂದೆ ಭೋಗಿಗಳ ಸಾವಿರಾರುಜನ್ಮಗಳ ಸುಖವೂ ಸಮಾನವಾಗಿ ನಿಲ್ಲಲಾರದು. ಇಂತಹ ಶಾಶ್ವತಸುಖವನ್ನು ಮಹಾತ್ಮರು ಜೀವನಿಗೆ ದೊರಕಿಸಲಿಕ್ಕಾಗಿಯೇ ಅವನನ್ನು ಎಚ್ಚರಿಸುತ್ತ ಬಂದಿದ್ದಾರೆ. ಈ ಬಗೆಯ ದಿವ್ಯೋಪದೇಶವನ್ನು ಪಡೆದು ಪ್ರಭಾವಿತರಾದ್ದರಿಂದಲೇ ಅಗಸ್ತ್ಯಮಹರ್ಷಿಗಳು ದಿವ್ಯಜ್ಯೋತಿಗಳಾಗಿ ಲೋಕಕಾರುಣ್ಯದೃಷ್ಟಿಯಿಂದ ಆರ್ಯ ಸಂಸ್ಕೃತಿಯ ಉದಾತ್ತತತ್ತ್ವಗಳನ್ನು ದ್ರಾವಿಡರಿಗೆ ಪರಿಚಯಮಾಡಿಸಿಕೊಟ್ಟು ಶಕ್ತಿ ವಿಕಾಸಕ್ಕೆ ಅವಕಾಶವನ್ನು ಕಲ್ಪಿಸಿದ್ದಾರೆ. ಅವರು ಬ್ರಹ್ಮಸೂತ್ರಗಳ ವಿವರಣೆಗಾಗಿ ರಚಿಸಿರುವ ವೃತ್ತಿಯೇ ಶ್ರೀಪತಿಪಂಡಿತಾರಾಧ್ಯಸ್ವಾಮಿಗಳಿಗೆ ಶ್ರೀಕರಭಾಷ್ಯದ ರಚನೆಗೆ ಇಂದು ದಿವ್ಯಸ್ಫೂರ್ತಿಯನ್ನು ನೀಡಿರುವುದು ಮಾನವಸಮಾಜದ ಸೌಭಾಗ್ಯವೆನಿಸಿದೆ. ಇಂತಹ ಮಹಾತ್ಮರ ದಿವ್ಯದರ್ಶನದ ಅನುಭವವನ್ನು ಪಡೆದು ಮಾನವನ ದೃಷ್ಟಿ ಕತ್ತಲೆಯಿಂದ ಬೆಳಕಿನಕಡೆಗೆ ಹರಿಯಲೆಂಬುದೇ ಈ ಭೂಮಿಕೆಯ ಪವಿತ್ರಾಶಯವಾಗಿದೆ.

ಹೀಗೆ ಶ್ರೀಪತಿಪಂಡಿತಾರಾಧ್ಯರು ಮುಕ್ತಿಪಾದದಲ್ಲಿ ಕ್ರಮಮುಕ್ತಿ ಮತ್ತು ಸದ್ಯೋಮುಕ್ತಿ ಎಂದು ಎರಡುಬಗೆಯ ಮುಕ್ತಿಗಳನ್ನು ಒಪ್ಪಿ ಸಾಧಕರ ಉಪಾಸನೆಗನುಗುಣವಾಗಿ ಕೆಲವರಿಗೆ ಕ್ರಮಮುಕ್ತಿಯನ್ನೂ ಕೆಲವರಿಗೆ ಸದ್ಯೋಮುಕ್ತಿಯನ್ನೂ ಹೇಳಿದ್ದರಿಂದ "ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚಾಮೂರ್ತಂ ಚ" ಎಂಬ ಶ್ರುತಿಗನುಗುಣವಾಗಿ "ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ" (೪-೪-೭) ಎಂಬ ಸೂತ್ರಭಾಷ್ಯದಲ್ಲಿ ಪರಮೇಶ್ವರನು ಮೂರ್ತಾಮೂರ್ತರೂಪನಾಗಿರುವನೆಂದೂ, ಮೂರ್ತರೂಪದಿಂದ ಭಕ್ತರಿಗೆ ಉಪಾಸನೆಗೆ ದೊರೆತಿರುವನೆಂದೂ, ಅಮೂರ್ತಸ್ಥಿತಿಯಲ್ಲಿ ಮುಕ್ತರನ್ನು ತನ್ನೊಳಗೆ ಸೇರಿಸಿಕೊಳ್ಳುತ್ತಿರುವನೆಂದೂ ತಮ್ಮ ಅಭಿಪ್ರಾಯವನ್ನು ಸ್ಪಷ್ಟಪಡಿಸಿದ್ದಾರೆ. ಅದ್ವೈತಮತದಲ್ಲಿ ಹೇಳುವಂತೆ ಪರಮೇಶ್ವರನು ಕೇವಲ ಅಮೂರ್ತನಿಷ್ಕಲನಿರ್ವಿಶೇಷಚೈತನ್ಯನೆಂದು ಒಪ್ಪುವುದಾದರೆ "ಅವನು ವಿಸ್ತಾರವಾಗುವೆನೆಂದು ಇಚ್ಛಿಸಿದನು," "ಅದನ್ನು ಸೃಷ್ಟಿಸಿ ಅದರೊಳಗೆ ತಾನೇ ಪ್ರವೇಶಿಸಿದನು", "ಯಾವನಿಂದ ಈ ಜೀವರೆಲ್ಲರೂ ಹುಟ್ಟಿ ಬೆಳೆದು ಕೊನೆಗೆ ಅವರವರ ಕರ್ಮದೊಡನೆ ಯಾವನಲ್ಲಿ ಸೇರುತ್ತಾರೋ" ಎಂದು ಮುಂತಾದ ಶ್ರುತಿಗಳಲ್ಲಿ ಹೇಳಿರುವ ಜಗತ್ಕರ್ತೃತ್ವರೂಪವಾದ ಲಕ್ಷಣವು ಕೇವಲ ಅಮೂರ್ತಬ್ರಹ್ಮಕ್ಕೆ ಹೊಂದದೇಹೋಗುತ್ತಿತ್ತು, "ನಮೋ ಹಿರಣ್ಯಬಾಹವೇ ಹಿರಣ್ಯವರ್ಣಾಯ"

ಎಂದು ಮುಂತಾಗಿ ಪರಶಿವನ ದಿವ್ಯಮಂಗಳವಿಗ್ರಹವನ್ನು ತಿಳಿಸುವ ಅನೇಕ ಶ್ರುತಿಗಳ ವಿರೋಧವು ಸಂಭವಿಸುತ್ತಿತ್ತು. ಆದ್ದರಿಂದ ಪರಮಾತ್ಮನಲ್ಲಿ ಮೂರ್ತ ಮತ್ತು ಅಮೂರ್ತವೆಂಬೆರಡು ಅವಸ್ಥೆಗಳನ್ನು ನಾವು ಅವಶ್ಯವಾಗಿ ಒಪ್ಪಲೇಬೇಕು. "ಸ್ಥಿರೇಭಿರಂಗೈಃ ಪುರುರೂಪಃ ಉಗ್ರಃ" ಎಂಬಲ್ಲಿ ಅವನ ದಿವ್ಯಮೂರ್ತರೂಪವನ್ನು ಸ್ಥಿರವಾದದ್ದೆಂದು ತಿಳಿಸಲಾಗಿದೆ. "ನಮೋ ವಿರೂಪೇಭ್ಯೋ ವಿಶ್ವರೂಪೇಭ್ಯಶ್ಚ ವೋ ನಮಃ" ಎಂಬಲ್ಲಿ ಶತರುದ್ರೀಯವು ಪರಮಾತ್ಮನ ಮೂರ್ತ ಮತ್ತು ಅಮೂರ್ತಸ್ಥಿತಿಗಳೆರಡನ್ನು ಸ್ಪಷ್ಟವಾಗಿ ತಿಳಿಸಿದೆ. ವಿರೂಪವೆಂದರೆ ಅವನ ಅಮೂರ್ತ ನಿರವಯಸ್ಥಿತಿ; ವಿಶ್ವರೂಪವೆಂದರೆ ಮೂರ್ತಸಾವಯವಸ್ಥಿತಿ. ಷಡಧ್ವಮಯವಾದ ಈ ಜಗತ್ತೆಲ್ಲವೂ ಅವನ ಮೂರ್ತಾವಸ್ಥೆ. ಸಾಧಕನು ಇದರೊಳಗೆ ಸಮಾಧಾನಮನಸ್ಸಿನಿಂದ ಹೊಂದಿಕೊಂಡು ಬಾಳುತ್ತಲೇ ಈ ಆರು ಮಾರ್ಗಗಳನ್ನು ಕ್ರಮವಾಗಿ ದಾಟಿ ಕೊನೆಗೆ ಷಡಧ್ವಾತೀತವಾದ ಅಮೂರ್ತಸ್ಥಿತಿಯಲ್ಲಿ ಅಧ್ವಾತೀತನಾಗಬೇಕಾಗಿದೆ. ಅಧ್ವಗಳೆಂದರೆ ಜೀವನು ಪರಮಾತ್ಮನ ದರ್ಶನಕ್ಕಾಗಿ ಅನುಸರಿಸುವ ಸಾಧನಮಾರ್ಗಗಳು. ಇವು ವರ್ಣಾಧ್ವ, ಪದಾಧ್ವ, ಮಂತ್ರಾಧ್ವ, ಭುವನಾಧ್ವ, ತತ್ತ್ವಾಧ್ವ, ಕಲಾಧ್ವ ಎಂದು ಆರುಬಗೆಯಾಗಿವೆ. ವಿಶ್ವದಲ್ಲಿ ಇವು ಆರೂ ನೆಲಸಿವೆ. ವಿಶ್ವದ ಎಲ್ಲಾ ವ್ಯವಹಾರಗಳೂ ವರ್ಣಗಳನ್ನೂ ಪದಗಳನ್ನೂ ಸಹಜವಾಗಿ ಅವಲಂಬಿಸಿವೆ. ಈ ಪದಗಳ ಸಮೂಹದಿಂದ ಆಗಿರುವ ಮಂತ್ರವೇ ಭುವನಗಳನ್ನಾವರಿಸಿದೆ. ಈ ಭುವನಗಳು ಶಿವಾದಿಭೂವ್ಯಂತ ಮೂವತ್ತಾರುತತ್ತ್ವಗಳಿಂದ ತುಂಬಿಕೂಡಿದೆ. ಈ ತತ್ತ್ವಗಳಿಂದಾಚೆಗೆ ಜೀವನು ಪ್ರಯಾಣಮಾಡಿ ಮುಂದಿನ ಕಲಾಧ್ವವನ್ನು ಹಾಯ್ದು ಹೋಗಬೇಕು. ಕಲೆ ಎಂದರೆ ಪರಮಾತ್ಮನ ಶಕ್ತಿ. ಇದು ಆರುಬಗೆಯಾಗಿ ಜಗತ್ತನ್ನಾವರಿಸಿದೆ. ಶಿವನೇ ತನ್ನ ಚೈತನ್ಯಶಕ್ತಿಯ ಅತ್ಯಲ್ಪಾಂಶದಿಂದ ಇದೆಲ್ಲವೂ ಆಗಿ ತಾನು ಸ್ವಯಂಭುಸ್ಥಿತಿಯಲ್ಲಿ ಪರಿಪೂರ್ಣವಾಗಿ ಆತ್ಮಾರಾಮನಾಗಿರುವನು. ಇದು ಅವನ ಅಮೂರ್ತಸ್ಥಿತಿ. ಇದನ್ನು ಬಾದರಾಯಣರು "ಲೋಕವತ್ತು ಲೀಲಾಕೈವಲ್ಯಂ" ಎಂಬ ಸೂತ್ರದಲ್ಲಿ ತಿಳಿಸಿದ್ದಾರೆ. ಲೀಲಾವಸ್ಥೆಯೇ ಶಿವನ ದಿವ್ಯಮೂರ್ತಸ್ಥಿತಿ; ಕೈವಲ್ಯಾವಸ್ಥೆಯೇ ಅಮೂರ್ತಸ್ಥಿತಿ. ಇವೆರಡೂ ಅವನಲ್ಲಿ ಯಥಾರ್ಥವಾಗಿವೆ. ಇದನ್ನೇ ಪುರುಷಸೂಕ್ತವು "ಪಾದೋಽಸ್ಯ ವಿಶ್ವಾ ಭೂತಾನಿ", "ತ್ರಿಪಾದಸ್ಯಾಮೃತಂ ದಿವಿ" ಎಂದು ಸ್ಪಷ್ಟವಾಗಿ ತಿಳಿಸಿದೆ. "ಯಸ್ಯೈಕಶಕ್ತಿಶಕಲೇ ಸಕಲಸ್ಸಮಾಪ್ತಃ" ಎಂಬ ಆಗಮವಾಕ್ಯವು ಶಿವನ ಚೈತನ್ಯಶಕ್ತಿಯ ಅತ್ಯಲ್ಪಾಂಶದಲ್ಲಿ ಷಡಧ್ವಗಳೆಲ್ಲವೂ ಅಡಗಿರುವುವೆಂದು ತಿಳಿಸಿದೆ. "ವಿಷ್ಟಭ್ಯಾಹಮಿದಂ ಕೃತ್ಸ್ನಂ ಏಕಾಂಶೇನ ಸ್ಥಿತೋ ಜಗತ್" ಎಂಬಲ್ಲಿ ಪರಮಾತ್ಮನು ತನ್ನ ಒಂದು ಅಂಶದಿಂದ ವಿಶ್ವವೆಲ್ಲವನ್ನು ವ್ಯಾಪಿಸಿ ತಾನು ಮಾತ್ರ ನಿರಾಕಾರನಿಷ್ಕಲನಿರಂಜನಸ್ಥಿತಿಯಲ್ಲಿ ಸ್ವತಂತ್ರನೂ ಪರಿಪೂರ್ಣನೂ ಆನಂದಮಯನೂ ಆಗಿರುವನೆಂದು ತಾನೇ ತಿಳಿಸಿದ್ದಾನೆ. ಬಾದಾರಾಯಣರು ಲಿಂಗಭೂಯಸ್ತ್ವಾಧಿಕರಣದಲ್ಲಿ "ಊರ್ಧ್ವಾಯನಮಃ ಊರ್ಧ್ವಲಿಂಗಾಯನಮಃ, ಪರಮಾಯನಮಃ ಪರಮಲಿಂಗಾಯನಮಃ"

ಎಂಬ ತೈತ್ತಿರೀಯಃಶ್ರುತಿಯ ಆಧಾರದಮೇಲೆ ಪರಮೇಶ್ವರನು ಮೂರ್ತಾಮೂರ್ತ ಲಿಂಗರೂಪದಿಂದ ಜಗತ್ತನ್ನು ಆವರಿಸಿರುವನೆಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಅಲ್ಲಿಂದ ಮುಂದೆ ಉಭಯಲಿಂಗಾಧಿಕರಣದಲ್ಲಂತೂ ಪರಮೇಶ್ವರನು ಭಕ್ತಾನು ಗ್ರಹಕ್ಕಾಗಿ ಎಲ್ಲ ಜೀವಿಗಳ ಹೃದಯದಲ್ಲೂ ಅಂಗುಷ್ಠಪ್ರಮಾಣದಿಂದಲೂ, ಕಾಶೀ ಶ್ರೀಶೈಲ ಮೊದಲಾದ ದಿವ್ಯ ಕ್ಷೇತ್ರಗಳಲ್ಲಿ ಜ್ಯೋತಿರ್ಲಿಂಗರೂಪದಿಂದಲೂ ನೆಲಿಸಿರು ವುದಲ್ಲದೆ ಮಹಾಕೈಲಾಸ ಮೇರು ಮಂದರಗಳಲ್ಲಿ ಪರಾಶಕ್ತಿಯೊಡನೆ ದಿವ್ಯಮಂಗಳ ವಿಗ್ರಹನಾಗಿ ಚಂದ್ರಶೇಖರ ಗಂಗಾಧರ ತ್ರಿಲೋಚನ ಮೊದಲಾದ ಹೆಸರಿನಿಂದ ವಿಹರಿ ಸುತ್ತ ಭಕ್ತರಿಗೆ ಸಾಲೋಕ್ಯ ಸಾಮೀಪ್ಯ ಸಾರೂಪ್ಯವೆಂಬ ಕಲ್ಯಾಣವಿಭೂತಿಯನ್ನು ಅನುಗ್ರಹಿಸುತ್ತಿರುವನೆಂದೂ ಸ್ಪಷ್ಟವಾಗಿ ತಿಳಿಸಿದ್ದಾರೆ. ಶ್ರೀಪತಿಪಂಡಿತಾರಾಧ್ಯರು ಈ ಪ್ರಕರಣವನ್ನು ತಮ್ಮ ಭಾಷ್ಯದಲ್ಲಿ ಸಂಶಯಕ್ಕೆಡೆಯಿಲ್ಲದಂತೆ ಬಹಳ ಸುಂದರ ವಾಗಿ ಚಿತ್ರಿಸಿದ್ದಾರೆ. ಭಕ್ತರ ಹೃದಯದಲ್ಲಿ ಧ್ಯಾನಕ್ಕಾಗಿಯೂ, ಕಾಶಿ ಮೊದಲಾದ ಕ್ಷೇತ್ರಗಳಲ್ಲಿ ಅರ್ಚನೆಗಾಗಿಯೂ ಕೈಲಾಸದಲ್ಲಿ ಮುಕ್ತರ ದರ್ಶನಕ್ಕಾಗಿಯೂ ನೆಲಸಿರು ವುದೆಲ್ಲವೂ ಪರಶಿವನ ಮೂರ್ತರೂಪ. ಮೂಲಾಧಾರ, ಹೃದಯ, ಭ್ರೂಮಧ್ಯ, ಬ್ರಹ್ಮರಂಧ್ರಗಳಲ್ಲಿ ಚಿದಾಕಾಶರೂಪದಿಂದ ನೆಲಸಿರುವುದು ಅವನ ಅಮೂರ್ತಸ್ಥಿತಿ. ತೈತ್ತಿರೀಯವು "ದಹರಂ ವಿಪಾಪಂ" ಎಂಬ ಮಂತ್ರದಲ್ಲಿ ಹೇಳಿರುವ ಜ್ಯೋತಿರ್ಲಿಂ ಗಾನುಸಂಧಾನವು ಶಿವನ ಅಮೂರ್ತಾವಸ್ಥೆಯನ್ನು ತಿಳಿಸುತ್ತದೆ. "ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" ಎಂಬಲ್ಲಿ ಸಾಧಕನು ಗುರುವಿನಿಂದ ಪಡೆದು ಹಸ್ತಪೀಠದಲ್ಲಿ ಧರಿಸಿ ಅರ್ಚಿಸಬೇಕೆಂದು ಹೇಳಿರುವ ಬಾಹ್ಯಲಿಂಗಧಾರಣವು ಶಿವನ ಮೂರ್ತಸ್ಥಿತಿಯನ್ನು ತಿಳಿಸುವಂತೆಯೇ ಅವನ ಅಮೂರ್ತಸ್ಥಿತಿಯನ್ನೂ ತಿಳಿಸು ತ್ತದೆ. ಹೀಗೆ ಶಿವನ ಮೂರ್ತಾಮೂರ್ತವಸ್ಥೆಗಳೆರಡೂ ಸಹಜವೂ ಪರಮಾರ್ಥವೂ ಆಗಿರುವುದರಿಂದ ಅವನ ಮೂರ್ತರೂಪವೆನಿಸಿದ ಜಗತ್ತನ್ನು ಸುಳ್ಳೆಂದು ಕಲ್ಪಿಸಿದರೆ, ದಹರಾದಿವಿದ್ಯೆಗಳೆಲ್ಲವೂ ನಿಷ್ಪ್ರಯೋಜನವೇ ಆಗಬೇಕಾದೀತು. "ಅಮೃತಸ್ಯ ದೇವಧಾರಣೋ ಭೂಯಾಸಂ" ಎಂಬ ಮಂತ್ರವೂ, "ವಿಧಿರ್ವಾ ಧಾರಣವತ್" (೩-೪-೪೦) ಎಂಬ ಸೂತ್ರವೂ ಮೂರ್ತಾಮೂರ್ತರೂಪವಾದ ಪರಮೇಶ್ವರನ ಒಳಗಿನ ಮತ್ತು ಹೊರಗಿನ ಧಾರಣವನ್ನು ನೇರವಾಗಿ ವಿಧಿಸಿವೆ. "ಅತೋಽನಂತೇನ ತಥಾಹಿ ಲಿಂಗಂ" (೩-೨-೨೫) ಎಂಬ ಸೂತ್ರದಲ್ಲಿ ಬಾದರಾಯಣರು ಅತಃ=ಶಿವನ ಧ್ಯಾನಧಾರಣ ರೂಪವಾದ ಉಪಾಸನದಿಂದಲೇ, ಸಾಧಕನಿಗೆ ಲಿಂಗಂ=ಪರಶಿವಬ್ರಹ್ಮವು, ಅನಂತೇನ= ಚರಾಚರಾತ್ಮಕವಾದ ಜಗದ್ರೂಪದಿಂದ ಕಾಣಿಸುತ್ತಲಿದೆ. "ಧ್ಯಾನಧಾರಣಾದ್ಯು ಪಾಸನಕಾಲೇ ಉಪಾಸಕಾನಾಂ ಜ್ಞಾನದೃಷ್ಟ್ಯಾ ಮೂರ್ತಾಮೂರ್ತಾತ್ಮಕ ಪರಶಿವಬ್ರಹ್ಮಸಾಕ್ಷಾತ್ಕಾರೋ ಭವತಿ" ಎಂಬುದಾಗಿ ಶ್ರೀಪತಿಪಂಡಿತಾರಾಧ್ಯರು ಸೂತ್ರಭಾಷ್ಯದಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ. ಜಗತ್ತೆಲ್ಲವೂ ಪರಶಿವಬ್ರಹ್ಮದ ಸಾಕ್ಷಾತ್ಪರಿ ಣಾಮವೆಂದು "ಪರಿಣಾಮಾತ್" ಎಂಬ ಸೂತ್ರದಲ್ಲಿ ಸ್ಪಷ್ಟವಾಗಿ ತಿಳಿಸಿ ಬಾದರಾ

ಯಣರು ಅದ್ವೈವುತದ ವಿವರ್ತವಾದವನ್ನೂ ಜಗನ್ಮಿಥ್ಯಾತ್ವವನ್ನೂ ಅನುಭವಕ್ಕೆ ವಿರುದ್ಧವೆಂದು ಸ್ಪಷ್ಟಪಡಿಸಿದ್ದಾರೆ. ಇಷ್ಟೇಅಲ್ಲದೆ "ನ ಪ್ರಯೋಜನವತ್ತ್ವಾತ್" (೨-೧-೩೩) ಎಂಬ ಸೂತ್ರದಲ್ಲಿ ಮಹತ್ತಾದ ಪ್ರಯೋಜವಾಗಬೇಕಾಗಿರುವುದರಿಂದ ಬ್ರಹ್ಮವು ಎಂದಿಗೂ ನಿರ್ವಿಶೇಷವಾಗಲಾರದೆಂದು ಅವರು ಸ್ಪಷ್ಟವಾಗಿ ತಿಳಿಸಿದ್ದಾರೆ. ಇಲ್ಲಿ ಪ್ರಯೋಜನವೆಂದರೆ "ಪ್ರಕರ್ಷೇಣ ಪರಮಪ್ರೇಮಾಸ್ಪದತ್ವೇನ ಯೋಜನಂ ಪ್ರಯೋಜನಂ ಸಂಯೋಜನಂ. ಸ್ಥೂಲಾದಿಶರೀರೇಷು ಇಷ್ಟಾದಿಲಿಂಗರೂಪೇಣ ಧಾರಣಂ" ಎಂದು ಶ್ರೀಪತಿಪಂಡಿತಾರಾಧ್ಯರು ಸಾಧಕರೆಲ್ಲರಿಗೂ ಮನಮುಟ್ಟುವಂತೆ ವ್ಯಾಖ್ಯಾನಮಾಡಿದ್ದಾರೆ. "ಅಪಿ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಂ" (೩-೨-೨೩) ಎಂಬ ಸೂತ್ರಕ್ಕೆ ವ್ಯಾಖ್ಯಾನಮಾಡುವಾಗ "ಸಮ್ಯಗ್ಬಾಹ್ಯಾಂತರ್ಧ್ಯಾನ ಧಾರಣಪೂಜಾನಮಸ್ಕಾರಾದಿಧರ್ಮವಿಶಿಷ್ಟಶಿವಾರಾಧನೇ ಭಕ್ತಿರೂಪಾಸನ್ನೇ ಭಕ್ತಾಧಿಕಾರತಾರತಮ್ಯೇನ ಕೇಷಾಂಚಿತ್ ಸ್ವಪ್ನೇ ಕೇಷಾಂಚಿಜ್ಜಾಗ್ರದವಸ್ಥಾಯಾಂ ಚ ಮೂರ್ತಾಮೂರ್ತಾತ್ಮ ಕೋಭಯಲಿಂಗಸಾಕ್ಷಾತ್ಕಾರಃ" ಎಂದು ಹೇಳಿದ್ದಾರೆ. ಇಲ್ಲಿ ಮೂರ್ತಾಮೂರ್ತೋಭಯಾತ್ಮಕನಾದ ಶಿವನ ಆರಾಧನವೆಂದರೆ ಪ್ರಾಣಲಿಂಗದ ಧ್ಯಾನಧಾರಣಗಳೆಂಬ ಅಂಶವನ್ನು ಅವರು ಒತ್ತಿ ಹೇಳಿದ್ದಾರೆ. ಇದು ಎಷ್ಟು ಉತ್ಕಟ ಸ್ಥಿತಿಗೆ ಏರುತ್ತದೆಯೋ ಅಷ್ಟುಬೇಗನೆ ಸಾಧಕರಿಗೆ ಅವರವರ ಉಪಾಸನದ ಅಂತಸ್ತಿಗೆ ತಕ್ಕಂತೆ ಶಿವನ ದರ್ಶನವಾಗುತ್ತದೆ. ಆದ್ದರಿಂದಲೇ ಉಪಾಸಕರಲ್ಲಿ ಬ್ರಹ್ಮವಿತ್, ಬ್ರಹ್ಮವಿದ್ವರ, ಬ್ರಹ್ಮವಿದ್ವರೀಯಾನ್, ಬ್ರಹ್ಮವಿದ್ವರಿಷ್ಠನೆಂಬ ವೈವಿಧ್ಯವನ್ನು ಸ್ಕಾಂದಪುರಾಣವು ತಿಳಿಸಿದೆ. ಪೂರ್ಣಶುದ್ಧನಾಗಿ ಎಲ್ಲಾ ವಿಷಯವಾಸನೆಗಳನ್ನು ಕಳೆದು ರುದ್ರನಾಗಿ ರುದ್ರನನ್ನು ಲೋಕಕಲ್ಯಾಣಕ್ಕಾಗಿ ಅರ್ಚಿಸುವ ಮಹಾನುಭಾವನೇ ಬ್ರಹ್ಮವಿದ್ವರಿಷ್ಠನೆನಿಸುವನೆಂದೂ, ಅವನೇ ನೇರವಾಗಿ ಸಾಯುಜ್ಯಮುಕ್ತಿಯನ್ನು ಹೊಂದುವನೆಂದೂ ಅಲ್ಲಿ ತಿಳಿಸಲಾಗಿದೆ.

ಶ್ರೀಪತಿಪಂಡಿತಾರಾಧ್ಯರು ಉಭಯಲಿಂಗಾಧಿಕರಣದಲ್ಲಿ ಶಿವನ ಮೂರ್ತಾಮೂರ್ತಸ್ಥಿತಿಯನ್ನು "ಯತಃ ಸರ್ವತ್ರ ಶ್ರುತಿಸ್ಮೃತ್ಯಾಗಮಪುರಾಣಾದಿಷು ತಸ್ಯ ಶಿವಸ್ಯ ಉಭಯಲಿಂಗತ್ವಂ ಮೂರ್ತಾಮೂರ್ತೋಭಯಾತ್ಮಕತ್ವಮುಪದಿಶ್ಯತೇ ಅತಸ್ತಸ್ಯ ಬಾಹ್ಯೇ ಕಾಶಿ ಶ್ರೀಶೈಲ ಗೋಕರ್ಣ ಕೇದಾರ ಚಿದಂಬರಾದಿದಿವ್ಯಸ್ಥಲೇಷು ಸದ್ಭಕ್ತಗಾತ್ರೇಷು ಮೇರು ಮಂದರ ಕೈಲಾಸಾದಿಪ್ರದೇಶೇಷು ಚ ಭಕ್ತತಾರಣಾರ್ಥಂ ಅರ್ಚಾವತಾರೇಣ ಮೂರ್ತತ್ವಂ, ಮೂಲಾಧಾರಹೃದಯಭ್ರೂಮಧ್ಯ ಬ್ರಹ್ಮರಂಧ್ರಾದಿ ಸ್ಥಲೇಷು ಜಗದೇಕಕಾರಣಭೂತಚಿದಾಕಾಶರೂಪೇಣ ಅಮೂರ್ತತ್ವಂ ಚೋಪಪನ್ನಂ" ಹೀಗೆ ಸ್ಪಷ್ಟವಾಗಿ ವಿವರಿಸಿದ್ದಾರೆ. ಸದ್ಭಕ್ತರ ಗಾತ್ರದಲ್ಲಿ ಅಂದರೆ ಕಾರಣ ಸೂಕ್ಷ್ಮ ಸ್ಥೂಲದೇಹಗಳಲ್ಲಿ ಭಾವ ಪ್ರಾಣ ಇಷ್ಟರೂಪದಿಂದ ಶಿವನು ಮೂರ್ತಾಮೂರ್ತನಾಗಿ ಸಹಜವಾಗಿ ನೆಲಸಿದ್ದಾನೆ. ಶಿರಸ್ಸಿನ ಭಾವಲಿಂಗವೇ ಅಮೂರ್ತರೂಪ, ಹೃದಯದ ಪ್ರಾಣಲಿಂಗವೇ ಮೂರ್ತಾಮೂರ್ತರೂಪ, ಭ್ರೂಮಧ್ಯದ ಇಷ್ಟಲಿಂಗವೇ ಮೂರ್ತ

ರೂಪ. ಈ ಮೂರುಬಗೆಯಾಗಿರುವುದೆಲ್ಲವೂ ಒಂದೇಒಂದು ಚಿತ್ಪ್ರಕಾಶ. ಇದನ್ನೇ ಹೊರಗೆ ಗುರುವಿನಿಂದ ಅಂಗುಷ್ಠಪ್ರಮಾಣದ ಲಿಂಗದಲ್ಲಿ ಸಮಾವೇಶಗೊಳಿಸುವುದರಿಂದ ಈ ಲಿಂಗವೂ ಮೂರ್ತಾಮೂರ್ತೋಭಯಾತ್ಮಕವಾಗಿದೆ. ಇದರ ಧ್ಯಾನಧಾರಣಾದ್ಯರ್ಚನವೇ ಸಾಧಕನಿಗೆ ನಿತ್ಯಯಜ್ಞ. ಇದಕ್ಕೆ ಸೂತಕಾದಿದೋಷಗಳಿಲ್ಲ. ಇದು ಸಾಧಕನ ಪ್ರಾಣವೇ ಆದ್ದರಿಂದ ಅವನಿಗೆ ಇದು ಸ್ವೀಯವೆನಿಸಿದೆ. ಇದರ ಪೂಜೆಗೆ ವಿಧಿನಿಷೇಧಗಳು ಅಂಟುವುದಿಲ್ಲ. ಇದನ್ನು "ನಿಜಮಿಷ್ಟಲಿಂಗಂ" ಎಂದು ವ್ಯಾಸರು ಕರೆದಿದ್ದಾರೆ. ಇದನ್ನು ಧರಿಸಿದವನಿಗೆ ನಿರಂತರವೂ ಶಿವನ ಸಂಪರ್ಕವಿರುವುದರಿಂದಲೂ, ಶಿವನಿಗಾಗಿಯೇ ಶಿವನ ಪ್ರೇರಣೆಯಂತೆ ಇವನು ದುಡಿಯುತ್ತಿರುವುದರಿಂದಲೂ ಇವನಿಗೆ ಪುಣ್ಯಪಾಪಗಳ ಸೋಂಕಿರುವುದಿಲ್ಲ. "ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ" ಶರೀರವನ್ನೇ ಶಿವನಿಗರ್ಪಿಸಿ ಅವನ ಸೇವೆಯಲ್ಲಿ ತೊಡಗಿರುವ ಸೇವಕನಿಗೆ ಪ್ರಿಯಾಪ್ರಿಯಗಳು ಹೇಗೆ ಅಂಟಿಯಾವು? ಎಲ್ಲರಿಗೂ ಶಿವನ ಸಂಪರ್ಕವು ಸ್ಮರಣಕಾಲದಲ್ಲಿ ಮಾತ್ರವೇ ಉಂಟಾದರೆ ಶಿವಭಕ್ತನಿಗೆ ಲಿಂಗಧಾರಣದಿಂದ ನಿರಂತರವೂ ಸಂಪರ್ಕವಿರುವುದು. ಆದರೆ ಅದರ ಅರಿವು ಇದ್ದರೆ ಮಾತ್ರವೇ ಅವನಿಗೆ ಅದು ಸಾರ್ಥಕವಾಗಬಲ್ಲದು. ಇಲ್ಲವಾದರೆ ಹಸಿವಾದಾಗ ಹೊಟ್ಟೆಯಮೇಲೆ ಮೊಸರು ಅನ್ನದ ಬುತ್ತಿಯನ್ನು ಕಟ್ಟಿಟ್ಟಂತೆ ದೇಹದಮೇಲಿನ ಲಿಂಗವು ವ್ಯರ್ಥವೇ ಆದೀತು. ಅಜ್ಞಾನಿಗಳ ಲಿಂಗಧಾರಣವು ಬಿದಿರುಮೆಳೆಗೆ ಒಂದು ಕಲ್ಲು ಸಿಕ್ಕಿಕೊಂಡಂತೆ ಆದೀತು. ಆ ಮೆಳೆ ಭಕ್ತನೆನಿಸಲಾರದು. ಅಲ್ಲಿಗೆ ಕಲ್ಲು ಎಸೆದವನು ಗುರುವೆನಿಸಲಾರನು. ಆ ಕಲ್ಲು ಲಿಂಗವೂ ಆಗಲಾರದು. ಹೀಗೆ ಗುರುವಿನಿಂದ ಲಿಂಗವನ್ನು ಪಡೆಯದೆ, ಅದನ್ನು ತನ್ನ ಪ್ರಾಣವೆಂದು ಭಾವಿಸದೆ ಅಂಗಡಿಯಿಂದ ಒಂದು ಲಿಂಗವನ್ನು ತಂದು ಬೇಕಿದ್ದಾಗ ಧರಿಸುವುದು, ಬೇಕಿಲ್ಲದಾಗ ಎದೆಯಮೇಲೆ ಭಾರವಾಗುವುದೆಂದು ಗೂಟದಲ್ಲಿ ನೇತುಹಾಕುವುದು ಇದೆಲ್ಲವೂ ನ್ಯಾಯವಲ್ಲ. ಹೀಗೆ ನಮ್ಮ ಯುವಯುವತಿಯರ ದೃಷ್ಟಿಯಲ್ಲಿ ಲಿಂಗವು ಒಂದು ಆಟದ ಗೊಂಬೆಯಾಗುವಷ್ಟರಮಟ್ಟಕ್ಕೆ ಇಳಿದಿರುವುದು ಮಾನವಸಮಾಜದ ದೌರ್ಭಾಗ್ಯವೆಂದು ವ್ಯಸನಪಡಬೇಕಾಗಿದೆ. ಸಾಧಕನಿಗೆ ತನ್ನ ಸುತ್ತಮುತ್ತಣ ಜೀವಿಗಳೊಡನೆ ಮಧುರಬಾಂಧವ್ಯವನ್ನು ಏರ್ಪಡಿಸುವಂತಹ ದಿವ್ಯ ಸಂಜೀವಿನಿಯೇ ಈ ಪ್ರಾಣಲಿಂಗ. ಮಾನವನನ್ನು ದೇವನನ್ನಾಗಿಮಾಡುವುದರಿಂದ ಇದು ಅವನ ಇಷ್ಟಲಿಂಗವೆನಿಸಿದೆ. ಇಂತಹ ಲಿಂಗದ ಮಹತ್ತ್ವವನ್ನು ತಿಳಿಯದಿರುವುದು ಮತ್ತೆ ಇದನ್ನು ಗೌರವಿಸದಿರುವುದು ಅಕ್ಷಮ್ಯವಾದ ಅಪರಾಧವೇ ಸರಿ. ತಮ್ಮ ಪ್ರಾಣವನ್ನು ತೆಗೆದು ಹೊರಗಿಟ್ಟ ಜೀವಶ್ರವಗಳಂತೆ ಜೋಲಮುಖದಿಂದ ನಿರ್ವೀರ್ಯರಾಗಿ ಅಡ್ಡಾಡುವುದು ಎಷ್ಟು ನಾಚಿಕೆಗೇಡಾಗುವುದೆಂಬ ಅಂಶವು ನಮ್ಮ ನಾಡಿನ ಯುವಯುವತಿಯರ ಗಮನವನ್ನು ಸೆಳೆಯಲೆಂದು ವಿನಯದಿಂದ ಬಯಸುತ್ತೇನೆ. ಸಾರ್ವಜನಿಕಕ್ಷೇತ್ರಗಳಲ್ಲಿ ಸಹಕರಿಸುವ ಉದ್ದೇಶದಿಂದ ಸಾಂಪ್ರದಾಯಿಕವಾದ ಪ್ರಾಣಲಿಂಗವನ್ನು ಹೀಗೆ ತೆಗೆದು ಒಗೆಯುವುದು ತಿಳಿಗೇಡಿತನ. ಸರ್ವಾನ್ನಾಭಕ್ಷಣದಿಂದಲೂ

ಇತರರ ಸಂಪರ್ಕದಿಂದಲೂ ಲಿಂಗಕ್ಕೆ ದ್ರೋಹವುಂಟಾಗುವುದೆಂದು ಅದನ್ನು ಹೊರ ದೂಡುವುದು ಶುದ್ಧ ಅವಿವೇಕ. ಸಾರ್ವಜನಿಕಕ್ಷೇತ್ರಗಳಲ್ಲಿ ಎಲ್ಲರೊಡನೆ ಬೆರತು ಭಕ್ಷ್ಯ ಭೋಜ್ಯಗಳನ್ನು ತಿಂದಮಾತ್ರಕ್ಕೆ ಪ್ರಾಣಲಿಂಗವನ್ನು ಮನೆಯಲ್ಲಿಟ್ಟು ಹೋಗಬೇಕೆಂದು ಯಾವ ಶಾಸ್ತ್ರಕಾರನೂ ಹೇಳಿಲ್ಲ. ಪ್ರಾಣಕ್ಕೆ ಅಪಾಯ ಒದಗಿದಾಗ ಅದರ ರಕ್ಷಣೆಗಾಗಿ ಸರ್ವಾನ್ನವನ್ನು ತಿನ್ನುವುದರಲ್ಲಿ ತಪ್ಪೇನಿಲ್ಲವೆಂದು ೨,೫೦೦ ವರ್ಷಗಳಹಿಂದೆಯೇ ಬಾದರಾಯಣರು ಸರ್ವಾನ್ನಾಧಿಕರಣದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ. ಆದರೆ ಗೌರವ ಪಾದ ರೀತಿಯಲ್ಲಿ ಎಲ್ಲಿಯೂ ಅನ್ನವು ಸಿಕ್ಕದಿರುವಾಗ ಪ್ರಾಣಕ್ಕೆ ಅಪಾಯ ಒದಗಿದಾಗ ಮಾತ್ರವೇ ಸರ್ವಾನ್ನಭಕ್ಷಣವನ್ನು ಮಾಡಬಹುದೆಂದು ಶಾಸ್ತ್ರವೇ ತಿಳಿಸಿದೆ. ಪರಾನ್ನ ವನ್ನು ತಿಂದು ಅಗೌರವವನ್ನು ಪಡೆಯುವುದಕ್ಕಿಂತಲೂ ಸರ್ವಾನ್ನವನ್ನು ತಿಂದು ಗೌರವವನ್ನು ಉಳಿಸಿಕೊಳ್ಳುವುದರಲ್ಲಿ ದೋಷವೇನೂ ಇಲ್ಲ. ಹಾಗೆಯೇ ಸಾರ್ವ ಜನಿಕಕ್ಷೇತ್ರಗಳಲ್ಲಿ ದುಡಿಯುವವರು ಎಲ್ಲರೊಡನೆ ಕಲೆತಾಗ ಭಕ್ಷ್ಯಭೋಜ್ಯಗಳನ್ನು ಉಪಯೋಗಿಸಿದರೂ ಆತ್ಮಗೌರವವನ್ನು ಉಳಿಸಿಕೊಳ್ಳಬೇಕಾದರೆ ತಮ್ಮ ಸಾಂಪ್ರ ದಾಯಿಕಧರ್ಮಗಳನ್ನು ಭಕ್ತಿಶ್ರದ್ಧೆಗಳಿಂದ ಆಚರಿಸಲೇಬೇಕೆಂದು ದಾರ್ಶನಿಕರು ನಮ್ಮನ್ನೆಚ್ಚರಿಸುತ್ತ ಬಂದಿದ್ದಾರೆ. ಪರಾನ್ನದಿಂದಂತೂ ಮಾನವನು ತನ್ನ ಸ್ವಾತಂತ್ರ್ಯ ವನ್ನೇ ಪೂರ್ಣವಾಗಿ ಕಳೆದುಕೊಂಡು ಅನುಮಾನಪ್ರಕೃತಿಯನ್ನು ಬೆಳಸಿಕೊಳ್ಳುವನು. ಅವನು ಯಾವಾಗಲೂ ಅನ್ನ ಹಾಕುವವನ ಹಿತವನ್ನೇ ಸಾಧಿಸುತ್ತ ಅದಕ್ಕೆ ಯಾವ ಪುರಸ್ಕಾರವೂ ಇಲ್ಲದೆ ಕೊನೆಗೆ ಹುಲ್ಲಿನಂತೆ ಲಘುವಾಗುವನು. ಹೀಗೆ ಕಸದಂತೆ ಹಗುರವಾದವನು ವಿಹಿತಕರ್ಮಗಳನ್ನು ಹೇಗೆ ಆಚರಿಸಬಲ್ಲನು? ಆದ್ದರಿಂದಲೇ ಪರಾಶ್ರಯ ಪರಾನ್ನಗಳು ತಮಗೆ ಎಂದಿಗೂ ದೊರಕದಿರಲೆಂದು ಶಂಕರಾಚಾರ್ಯರೇ ಶಿವನಲ್ಲಿ ಬೇಡಿದ್ದಾರೆ. ಇಂತಹ ಸ್ಥಿತಿಯಲ್ಲಿ ಲೋಕದ ಮಾನವರ ಪಾಡೇನು? ಹೀಗೆ ಪರಾನ್ನದಿಂದ ಲಘುವಾಗಿ ಬಾಳುವುದಕ್ಕಿಂತ ಸರ್ವಾನ್ನದಿಂದ ಆತ್ಮಗೌರವ ವನ್ನು ಉಳಿಸಿಕೊಂಡು ಸ್ವಾವಲಂಬಿಯಾಗಿ ಸತ್ಕರ್ಮಗಳನ್ನು ಆಚರಿಸುವುದು ಸರ್ವೋತ್ತಮವೆನಿಸಿದೆ. ಆದ್ದರಿಂದಲೇ ಶಾಸ್ತ್ರಕಾರರು ಸಾಧಕನಿಗೆ ಪ್ರಾಣಾಪಾಯ ಕಾಲದಲ್ಲಿ ಸಾರ್ವಜನಿಕಸ್ಥಳಗಳಲ್ಲಿ ಭಕ್ಷ್ಯಭೋಜ್ಯಗಳನ್ನು ತಿಂದರೂ ತನ್ನೊಳಗಿನ ಪ್ರಾಣಕಲೆಯ ಧ್ಯಾನವನ್ನು ಎಂದಿಗೂ ಬಿಡಬಾರದೆಂದು ಎಚ್ಚರಿಸಿದ್ದಾರೆ. ಬಾದ ರಾಯಣರಂತೂ "ವಿಹಿತತ್ವಾದಾಶ್ರಮಕರ್ಮಾಪಿ" ಎಂಬ ಸೂತ್ರದಲ್ಲಿ ಪ್ರತಿಯೊಬ್ಬನೂ ಅವನವನ ಆಶ್ರಮಧರ್ಮವನ್ನು ಅವಶ್ಯವಾಗಿ ಆಚರಿಸಲೇಬೇಕೆಂದು ಒತ್ತಾಯಪಡಿಸಿ ದ್ದಾರೆ. ಆದ್ದರಿಂದ ಪ್ರತಿಯೊಬ್ಬ ಸಾಧಕನೂ ತನ್ನ ಜನ್ಮವನ್ನು ಸಾರ್ಥಕಪಡಿಸಿ ಕೊಳ್ಳಬೇಕಾದರೆ ಒಳಗೂ ಹೊರಗೂ ಈಶ್ವರನನ್ನು ಧರಿಸಿ ಧ್ಯಾನಿಸಬೇಕೆಂದು ಅವರು ತಿಳಿಸಿದ್ದಾರೆ. ಒಳಗೆ ಧ್ಯಾನಿಸಲಿಕ್ಕೆ ಆಗದಿದ್ದರೂ ಹೊರಗಾದರೂ ಪರಮೇಶ್ವರನನ್ನು ಧರಿಸಿ ಅದನ್ನು ತನ್ನೊಳಗಿನ ಪ್ರಾಣಶಕ್ತಿಯೆಂದು ಭಕ್ತಿಯಿಂದ ಗೌರವಿಸಬೇಕೆಂದೂ, ಇದು ಪ್ರತಿಯೊಬ್ಬಮಾನವನ ಧರ್ಮವೆಂದೂ ಅವರು ತಿಳಿಸಿದ್ದಾರೆ. ಇದರ ಸಂಪರ್ಕ

ದಿಂದಲೇ ನಮ್ಮ ಜೀವನ ಸುಂದರವಾಗಬೇಕು; ಸದ್ಗುಣಗಳ ತೌರುಮನೆಯಾಗಬೇಕು. ಸೌಶೀಲ್ಯಸೌಜನ್ಯಗಳ ಬೀಡಾಗಬೇಕು; ಇದರಿಂದಲೇ ಸಾಧಕನಿಗೆ ವಿಶ್ವದೊಡನೆ ಸೌಭ್ರಾತ್ರವು ನೆಲಸಬೇಕಾಗಿದೆ. ಇದೇ ಸಾಧಕನನ್ನು ವಿಶ್ವದೊಡನೆ ಸಮರಸವಾಗಿ ಬೆರೆಸುವ ದಿವ್ಯಮಂತ್ರ. ಇದೇ ಅವನಿಗೆ ಸಮನ್ವಯದ ದಿವ್ಯಔಷಧವನ್ನು ಅನುಗ್ರಹಿಸುವ ಭವರೋಗವೈದ್ಯ; ಅವನಿಗೆ ಭವ್ಯ ಸೌಂದರ್ಯವನ್ನು ದೊರಕಿಸುವ ಸುಗಂಧವಸ್ತು. ಇಂತಹ ಇಷ್ಟವಸ್ತುವನ್ನು ತೊರೆದವನು ಹೇಗೆ ಬದುಕಿಯಾನು? ಅವನ ಬಾಳು ಹೇಗೆ ಸುಖಮಯವಾದೀತು? ಭಿನ್ನ ಜಾತಿಯ ಸೋದರನೊಬ್ಬನನ್ನು ಮೆಚ್ಚಿಸಲಿಕ್ಕಾಗಿ ತನ್ನ ಪ್ರಾಣಲಿಂಗವನ್ನೇ ತೊರೆಯುವುದಕ್ಕಿಂತ ಆ ಪ್ರಾಣಲಿಂಗದ ಪ್ರಭೆಯನ್ನು ಅವನ ಮೇಲೆ ಬೀರುವಂತೆ ಮಾಡಿ ಅವನಲ್ಲಿ ಪವಿತ್ರಭಾವನೆಗಳನ್ನು ಹುಟ್ಟಿಸುವಷ್ಟು ನವಚೈತನ್ಯವನ್ನು ಲಿಂಗಧಾರಿಯು ಏಕೆ ಕಲಿಯಬಾರದು? ಇದನ್ನು ಲಿಂಗಧಾರಿಗಳೆಲ್ಲರೂ ಮನನಮಾಡಬೇಕಾಗಿದೆ. ಆದ್ದರಿಂದ ಮುಂದೆ ಭವ್ಯವಾದ ನಾಡನ್ನು ಕಟ್ಟಿ ಬೆಳೆಸುವವರು ಬಾಹ್ಯಸೌಂದರ್ಯಕ್ಕೆ ಮರುಳಾಗದಂತೆಯೂ, ತಮ್ಮೊಳಗೆ ನೆಲಸಿರುವ ನಿತ್ಯಸುಂದರನಾದ ಶಿವನಿಗೆ ದ್ರೋಹಮಾಡದಂತೆಯೂ, ಶಿವಮಯವಾದ ಈ ಜಗತ್ತಿನಲ್ಲಿ ದ್ವೇಷವೈಷಮ್ಯಗಳಿಂದ ಮನ ಬುದ್ಧಿಗಳನ್ನು ಕೆಡಿಸಿಕೊಳ್ಳದಂತೆಯೂ, ಎಲ್ಲರಲ್ಲೂ ಒಬ್ಬ ಶಿವನನ್ನೇ ಕಾಣುವಂತೆಯೂ, ತಮ್ಮ ಪವಿತ್ರಜೀವನದ ಈ ಸದವಕಾಶವನ್ನು ಹಾಳುಮಾಡಿಕೊಳ್ಳದಂತೆಯೂ, ಅವರಿಗೆ ಆತ್ಮಬುದ್ಧಿಪ್ರಕಾಶವನ್ನು ಶಿವನು ಅನುಗ್ರಹಿಸುವಂತೆಯೂ ಅನನ್ಯಭಕ್ತಿಯಿಂದ ಶಿವನಲ್ಲಿಯೇ ಪ್ರಾರ್ಥಿಸುತ್ತೇನೆ.

ಹೀಗೆ ಯುವಯುವತಿಯವರು ತಮ್ಮೊಳಗೆ ತಮ್ಮ ಉದ್ಧಾರಕ್ಕಾಗಿ ಪರಶಿವನ ಇರುವಿಕೆಯನ್ನು ತಿಳಿದಮೇಲೆ ಅವನ ಪರಿಚಯಕ್ಕಾಗಿ ಗುರುಚರಮೂರ್ತಿಗಳನ್ನಾಶ್ರಯಿಸಿ ಅವರ ಸದುಕ್ತಿಗಳನ್ನು ಪದೇಪದೇ ಕೇಳುತ್ತ, ಅವನ್ನು ಮನದಲ್ಲಿ ಭಾವಿಸುತ್ತ, ಮತ್ತೆಮತ್ತೆ ಸ್ಮರಿಸುತ್ತ, ಜೀವನದಲ್ಲಿ ಅವುಗಳ ಸಾರವನ್ನು ಸಮರಸವಾಗಿ ಹೊಂದಿಸಿಕೊಳ್ಳುತ್ತ ಸಂಸಾರವನ್ನು ಸಾರವುಳ್ಳದ್ದನ್ನಾಗಿ ಮಾಡಿಕೊಂಡು ಸಾರವಾದ ಈಶ್ವರನಲ್ಲಿ ಪ್ರತಿರಾತ್ರಿಯೂ ಬೆರೆಯಬೇಕು. ಹೀಗೆ ಜಾಗ್ರದ್ವ್ಯವಹಾರಗಳನ್ನು ಈಶ್ವರನಿಗೆಂದೇ ನಿಷ್ಕಲ್ಮಷಮನೋಭಾವದಿಂದ ನಡೆಸುತ್ತ ಆಗಾಗ ಒದಗುವ ಸುಖದುಃಖಗಳನ್ನು ಈಶ್ವರನ ಪ್ರಸಾದವೆಂದು ಭೋಗಿಸುತ್ತ ಬಂದರೆ ಪುಣ್ಯಪಾಪಗಳ ಸಂಪರ್ಕವಿಲ್ಲದೆ, ಸ್ತುತಿನಿಂದೆಗಳಿಗೆ ಅಳುಕದೆ, ಮನದಲ್ಲಿ ಕೋಪತಾಪಗಳಿಲ್ಲದೆ ಒಳಗೆ ಪೂರ್ಣವಿರಕ್ತಿಯಿಂದಲೂ, ಹೊರಗೆ ಲೋಕಕಲ್ಯಾಣದ ಸದಿಚ್ಛೆಯಿಂದಲೂ ದುಡಿಯುತ್ತಲೇ ಅವರು ಜಾಗ್ರತ್ತಿನಲ್ಲೂ ಸುಷುಪ್ತ್ಯಾನಂದವನ್ನು ಅನುಭವಿಸಬಹುದು. ಒಂದು ವ್ಯಕ್ತಿ ಮತ್ತೊಬ್ಬ ವ್ಯಕ್ತಿಯ ದರ್ಶನ ಸ್ಪರ್ಶ ಸಂಭಾಷಣೆಗಳಿಗಾಗಿ ನಿದ್ರೆಯಿಲ್ಲದ ರಾತ್ರಿಗಳನ್ನೂ ಊಟವಿಲ್ಲದ ಹಗಲುಗಳನ್ನೂ ಕಳೆದು ಮತಿಗೆಟ್ಟು ಶೋಕವಿಹ್ವಲನಾಗಿ ನರಳುವುದನ್ನು ಲೋಕದಲ್ಲಿ ನಾವು ಹೇರಳವಾಗಿ ಕಾಣುತ್ತೇವೆ. ಹೊನ್ನು ಹೆಣ್ಣು ಮಣ್ಣಿಗಾಗಿ ಸಾಯುವವರು ಅನಂತ; ಆದರೆ ನ್ಯಾಯ ಧರ್ಮ ಸತ್ಯಗಳಿಂದ ಶಿವನ

ಪ್ರೀತಿಗಾಗಿ ನಿಷ್ಕಲ್ಮಷಹೃದಯರಾಗಿ ಹೋರಾಡುವ ಧೀರರು ವಿರಳ. ಇಂತಹ ಧೀರನಿಗೆ ಮಾತ್ರವೇ ಶಿವನು ಸುಲಭಸಾಧ್ಯನು. "ನಾಯಮಾತ್ಮಾ ಬಲಹೀನೇನ ಲಭ್ಯಃ". ಇಂದ್ರಿಯಸುಖಗಳಿಗೆ ಮನಸೋಲದ ಬ್ರಹ್ಮಚಾರಿಗೇ ಶಿವನು ಸುಗಮ್ಯನು. ಶಿವನನ್ನು ಒಲಿಸಿಕೊಳ್ಳುವುದೊಂದು ಅಸಿಧಾರಾವ್ರತ. ಎಲ್ಲಾ ಆಶೆಗಳನ್ನೂ ಮಲ ಕರ್ಮಗಳನ್ನೂ ಕಳೆದುಕೊಂಡವನಿಗಲ್ಲದೆ ಬೇರೆ ಯಾರಿಗೂ ಅವನು ಒಲಿಯನು? ಆದ್ದರಿಂದಲೇ ಮುಕ್ತರಲ್ಲೂ ವೈಲಕ್ಷಣ್ಯಗಳನ್ನು ನಾವು ಕಾಣುತ್ತೇವೆ. ಅವರವರ ಅಂತಸ್ತಿಗೆ ತಕ್ಕಂತೆ ಮುಕ್ತಿಯಲ್ಲೂ ಭೇದವನ್ನು ದಾರ್ಶನಿಕರು ತಿಳಿಸಿದ್ದಾರೆ. ಮೂರ್ತೋಪಾಸಕರಿಗೆ ಕಲ್ಯಾಣವಿಭೂತಿ, ಅಮೂರ್ತೋಪಾಸಕರಿಗೆ ಕೈವಲ್ಯವಿಭೂತಿ ಹೀಗೆ ಭೇದವಿದೆ. ಮೂರ್ತೋಪಾಸಕರೆಂದರೆ ಪುಣ್ಯಕ್ಷೇತ್ರಗಳಲ್ಲಿ ನೆಲಸಿರುವ ಶಿವ ಲಿಂಗವನ್ನು ದೃಢಭಕ್ತಿಯಿಂದಾರಾಧಿಸಿದವರು; ಹಾಗೆಯೇ ತಮ್ಮ ಪ್ರಾಣಲಿಂಗವನ್ನು ನಿತ್ಯವೂ ದೇಹದಲ್ಲಿ ಧರಿಸಿ ಅರ್ಚಿಸಿದವರು; ಪರಮೇಶ್ವರನ ದಿವ್ಯಮಂಗಳವಿಗ್ರಹವನ್ನು ಚಂದ್ರಶೇಖರ, ಗೌರೀಪತಿ, ಮುಕುಂದಪ್ರಿಯ, ನೀಲಕಂಠ, ತ್ರಿಲೋಚನ ಎಂದು ಮುಂತಾಗಿ ಮನದಲ್ಲಿ ಭಾವಿಸುತ್ತ ಅವನ ಸರ್ವಜ್ಞತ್ವ, ಆನಂದಮಯತ್ವ, ನಿರ್ಭ ಯತ್ವ, ಪರಿಪೂರ್ಣತ್ವ, ಅವ್ಯಾಜಪ್ರೇಮ, ಪಾಪರಾಹಿತ್ಯ ಮೊದಲಾದ ದಿವ್ಯಗುಣ ಗಳನ್ನು ಯಾವಾಗಲೂ ಸ್ಮರಿಸುತ್ತ ಅವನಿಗಾಗಿಯೇ ಎಲ್ಲಾ ವ್ಯವಹಾರಗಳನ್ನೂ ನಡೆಸುತ್ತ, ಅವನಲ್ಲಿ ಜೀವಂತ ವಿಶ್ವಾಸವಿಟ್ಟು ಅಭಿಷೇಕಾರ್ಚನೆಗಳನ್ನು ಮಾಡುತ್ತ, ಅವನ ಭಕ್ತರನ್ನು ಯಥಾಶಕ್ತಿ ತೃಪ್ತಿಪಡಿಸುತ್ತ, "ತಚ್ಚಿತ್ತಾಃ ತದ್ಗತಪ್ರಾಣಾಃ ತನ್ನಿಷ್ಠಾಸ್ತತ್ಪರಾಯಣಾಃ" ಎಂಬಂತೆ ಅವನಲ್ಲಿಯೇ ಆಸಕ್ತರಾಗಿ ಅವನಿಗೆ ಪೂರ್ಣ ಅಧೀನರಾದವರು ಮೂರ್ತೋಪಾಸಕರು. ಇವರು ತಮ್ಮ ಆಶ್ರಮಕರ್ಮಗಳನ್ನು ನಡೆಸುತ್ತ ಹೆಚ್ಚು ಫಲವನ್ನು ಬಯಸದೆ ಬಂದಷ್ಟರಲ್ಲಿ ತೃಪ್ತರಾಗಿ ಗೌರವವಾದ ಜೀವ ನವನ್ನು ನಡೆಸುತ್ತಲೇ ಆಗಾಗ್ಗೆ ಸ್ವಪ್ನದಲ್ಲಿ ಶಿವನ ದಿವ್ಯಮಂಗಳರೂಪವನ್ನು ಕಾಣುತ್ತ ಜಾಗ್ರದವಸ್ಥೆಯಲ್ಲಿ ಎಲ್ಲರೊಳಗೂ ಶಿವನೇ ಇರುವನೆಂದು ದೃಢವಾಗಿ ನಂಬಿ ಎಲ್ಲ ರೊಡನೆಯೂ ಹೊಂದಿಕೊಂಡು ಬಾಳುತ್ತಲಿರುವರು. ಇಂತವರಿಗೆ ಹಿಂದಿನಕರ್ಮ ನಶಿಸುತ್ತದೆ; ಮುಂದಿನಕರ್ಮ ಅಂಟುವುದಿಲ್ಲ. ಈಗ ಮಾಡುವ ಕರ್ಮವು ಜ್ಞಾನದ ಪ್ರಭಾವದಿಂದ ಬಂಧಿಸುವ ಶಕ್ತಿಯನ್ನು ಕಳೆದುಕೊಂಡಿರುತ್ತದೆ. ಆದರೆ ಈ ಕರ್ಮ ದಲ್ಲಿ ಒಳ್ಳೆಯದು ಮಿತ್ರರಿಗೂ ಕೆಟ್ಟದ್ದು ಅವರ ನಿಂದಕರಿಗೂ, ಸೇರುತ್ತದೆ. ಇವರೂ ಎಲ್ಲರಂತೆ ಕರ್ಮಗಳನ್ನು ಮಾಡುತ್ತಲೇ ಇರುವರು. ಆದರೆ ಇವರು ಫಲದಲ್ಲಿ ಆಸಕ್ತಿ ಇಲ್ಲದೆ ನಿರಭಿಮಾನದಿಂದ ಎಲ್ಲವನ್ನೂ ತಮ್ಮ ಕರ್ತವ್ಯವೆಂದು ಮಾಡುತ್ತಾರೆ. ಕರ್ಮಿ ಗಳು ಆಸಕ್ತರಾಗಿ ಫಲಾಪೇಕ್ಷೆಯಿಂದ ಅಂದರೆ ಕೀರ್ತಿ ಪ್ರತಿಷ್ಠೆಗಳಿಗಾಗಿ ಅಭಿಮಾನಿಸಿ ಮಾಡುತ್ತಾರೆ. ಇಂತಹ ಮೂರ್ತೋಪಾಸಕರು ದೇಹವನ್ನು ತೊರೆಯುವಾಗ ಲಿಂಗ ಶರೀರದೊಡನೆ ಹೊರಡುವರು. ಇದಿಲ್ಲದೆ ಜೀವನಿಗೆ ಪ್ರಯಾಣ ಸಾಧ್ಯವಾಗುವುದಿಲ್ಲ. ಇವರು ಸ್ಥೂಲದೇಹವನ್ನು ಬಿಟ್ಟು ಪ್ರಮಥಗಣಗಳೊಡನೆ ಶಿವಲೋಕಕ್ಕೆ ಹೋಗಿ

ಸೇರಿದಮೇಲೆ ಇವರಿಗೆ ಲಿಂಗಶರೀರವು ತೊಲಗುವುದು. ಆಗ ಅವರಿಗೆ ಅಪ್ರಾಕೃತ ದಿವ್ಯ ಶರೀರ ಬರುವುದು. ಇದರಿಂದ ಅವರು ಅಲ್ಲಿ ಕಲ್ಯಾಣವಿಭೂತಿಯನ್ನು ಅನುಭವಿಸುವರು. ಈ ಕಲ್ಯಾಣವಿಭೂತಿಯಲ್ಲೂ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ ಎಂದು ಮೂರು ಪ್ರಧಾನಭೇದಗಳಿವೆ. "ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" ಎಂಬ ಶ್ರುತಿಯು ಈ ಮುಕ್ತಿಗಳನ್ನು ತಿಳಿಸುತ್ತದೆ. "ನಿರಂಜನಃ ಪರಮಂ ಸಾಮ್ಯಮುಪೈತಿ" ಎಂಬ ಶ್ರುತಿಯು ಶಿವಸಾರೂಪ್ಯವನ್ನು ತಿಳಿಸುತ್ತದೆ. ಸಾಲೋಕ್ಯವೆಂದರೆ ಮುಕ್ತನು ಶಿವಲೋಕದಲ್ಲಿ ವಾಸಮಾಡುವಿಕೆ. ಸಾಮೀಪ್ಯವೆಂದರೆ ಅಲ್ಲಿಯೇ ಶಿವನಿಗೆ ಹತ್ತಿರದಲ್ಲಿ ಇದ್ದುಕೊಂಡು ಶಿವನ ನಿಷ್ಕಲನಿರಂಜನಸ್ಥಿತಿಯನ್ನು ನೆನೆಯುವುದು. ಸಾರೂಪ್ಯವೆಂದರೆ ಶಿವನಂತೆ ಸರ್ವಜ್ಞತ್ವ ಸತ್ಯಸಂಕಲ್ಪತ್ವ ನಿರ್ಭಯತ್ವ ಮೊದಲಾದ ಅವನ ಗುಣಗಳನ್ನು ಪಡೆಯುವುದು. ಈ ಬಗೆಯ ಮುಕ್ತಿಗೆ ಸಶರೀರ ಮುಕ್ತಿ ಎಂದು ಹೆಸರು. ಆಗ ಮುಕ್ತರು ದಿವ್ಯಮೂರ್ತರೂಪವನ್ನು ಪಡೆಯುವರು. ಈ ಅಪ್ರಾಕೃತ ರೂಪಕ್ಕೆ ಕರ್ಮದ ಸಂಪರ್ಕವಿರುವುದಿಲ್ಲ. ಈ ಬಗೆಯ ರೂಪದಿಂದ ಅವರು ಶಿವನಂತೆಯೇ ಸರ್ವಜ್ಞರೂ ಸತ್ಯಸಂಕಲ್ಪರೂ ಆಗಿ ಸ್ವೇಚ್ಛೆಯಿಂದ ವಿಹರಿಸುವರು. ಇವರಿಗೆ ಶಿವನಲ್ಲದೆ ಬೇರೆ ಯಾರೂ ನಿಯಾಮಕರಿರುವುದಿಲ್ಲವಾದ್ದರಿಂದ ಇವರು ಸ್ವತಂತ್ರರಾಗಿರುತ್ತಾರೆ. ಇವರು ಇಚ್ಛಿಸಿದ್ದೆಲ್ಲವನ್ನು ಅನಾಯಾಸವಾಗಿ ಪಡೆದು ಅನುಭವಿಸುತ್ತಾರೆ. ಇವರು ಶಿವನೊಡನೆ ಎಲ್ಲಾ ಫಲಗಳನ್ನೂ ಪಡೆಯುತ್ತಾರೆಂದು ಶ್ರುತಿ ತಿಳಿಸಿದೆ. "ಸ ಸ್ವರಾಡ್ ಭವತಿ" ಎಂದು ಅದೇ ಶ್ರುತಿಯು ಇವರ ಸ್ವಾತಂತ್ರ್ಯವನ್ನೂ ತಿಳಿಸುತ್ತದೆ. ಆದರೆ ಹೀಗೆ ಸ್ವಾತಂತ್ರ್ಯವಿದ್ದರೂ ಇವರಿಗೆ ಜಗದ್ವ್ಯಾಪಾರವನ್ನು ನಿರ್ವಹಿಸುವ ಅಧಿಕಾರ ಒಂದು ಮಾತ್ರ ಇರುವುದಿಲ್ಲ. ಸೃಷ್ಟಿ ಸ್ಥಿತಿ ಸಂಹಾರ ತಿರೋಧಾನ ಅನುಗ್ರಹಗಳೆಂಬ ಜಗದ್ವ್ಯಾಪಾರಗಳನ್ನು ನಡೆಸುವ ಅಧಿಕಾರ ಶಿವನೊಬ್ಬನಿಗೇ ಮೀಸಲಾಗಿದೆ. ಮುಕ್ತರಿಗೆ ಶಿವನೊಡನೆ ಎಲ್ಲಾ ಭೋಗಗಳ ಅನುಭವವೂ ಇರುತ್ತದೆ. "ಭೋಗಮಾತ್ರಸಾಮ್ಯಲಿಂಗಾಚ್ಚ" ಎಂಬ ಸೂತ್ರವು ಇವರಿಗೂ ಶಿವನಿಗೂ ಜಗದ್ವ್ಯಾಪಾರವನ್ನು ಬಿಟ್ಟು ಉಳಿದ ಅಂಶಗಳಲ್ಲಿ ಸಾಮ್ಯವುಂಟೆಂದು ಸ್ಪಷ್ಟವಾಗಿ ತಿಳಿಸುತ್ತದೆ. ಆದರೆ ಇವರು ಹಿಂದೆ ಶಿವನ ಅಮೂರ್ತ ನಿರವಯವ ಪ್ರಕಾಶವನ್ನು ಉಪಾಸನೆ ಮಾಡದೇ ಇದ್ದುದರಿಂದ ಮಹಾಕೈಲಾಸದಲ್ಲಿ ಶಿವನ ಅಮೂರ್ತನಿಷ್ಕಲಪರಮಾಕಾಶಸ್ವರೂಪವನ್ನು ಧ್ಯಾನಿಸುತ್ತ ಎಲ್ಲಾ ಬಗೆಯ ವಾಸನೆಯನ್ನೂ ಕಳೆದುಕೊಂಡು ಪೂರ್ಣಶುದ್ಧರಾಗಿ ಅಲ್ಲಿಂದಲೇ ನಿರವಯವ ಶಿವಸಾಯುಜ್ಯವನ್ನು ಹೊಂದುವರೆಂದು ಶ್ರೀಪತಿಪಂಡಿತಾರಾಧ್ಯರು ತಿಳಿಸುತ್ತಾರೆ.

ಆದರೆ ಈ ದೇಹದಲ್ಲಿಯೇ ಅಮೂರ್ತಶಿವನನ್ನು ದಹರಾಕಾಶದಲ್ಲಿ ಅನುಸಂಧಾನ ಮಾಡುತ್ತ ಎಲ್ಲಾ ಬಗೆಯ ಕಾಮವಾಸನೆಗಳನ್ನೂ ವಿಷಯವಾಸನೆಗಳನ್ನೂ ಪೂರ್ಣವಾಗಿ ತೊರೆದು ನಿರ್ಮಲರಾದ ಅಮೂರ್ತೋಪಾಸಕರಿಗೆ ಇಲ್ಲಿಯೇ ಲಿಂಗಶರೀರವು ಹೃದಯಾಕಾಶದ ಚಿತ್ರಕಾಶದಲ್ಲಿ ಬೆರೆತಿರುವುದು. ಅವರು ಇಲ್ಲಿಯೇ ಶಿವಭಾವ

ವನ್ನು ಹೊಂದಿ ಸಾಯುಜ್ಯಸುಖವನ್ನು ಅನುಭವಿಸುತ್ತಿರುವರು. "ನ ತತ್ರೋತ್ಕ್ರಾಮಂತಿ ತತ್ರೈವ ಸಮವಲೀಯಂತೇ" ಎಂಬ ಶ್ರುತಿಯಲ್ಲಿ ಅಮೂರ್ತೋಪಾಸಕನಿಗೆ ಸ್ಥೂಲದೇಹವನ್ನು ಬಿಡುವ ಕಾಲದಲ್ಲಿ ಲಿಂಗಶರೀರವು ಅವನನ್ನು ಹಿಂಬಾಲಿಸದೆ ಇಲ್ಲಿಯೇ ಶಿವನಲ್ಲಿ ಲೀನವಾಗುತ್ತದೆ ಎಂದು ತಿಳಿಸಲಾಗಿದೆ. ಇವನು ನದೀಸಮುದ್ರನ್ಯಾಯದಂತೆ ಇಲ್ಲಿಯೇ ಶಿವನಲ್ಲಿ ಸಮರಸವಾಗಿ ಬೆರೆಯುತ್ತಾನೆ. ನದಿಯು ಸಮುದ್ರದಲ್ಲಿ ಸೇರಿ ತನ್ನ ನಾಮರೂಪಗಳನ್ನು ಕಳೆದುಕೊಳ್ಳುವಂತೆ ಅಮೂರ್ತೋಪಾಸಕನು ಶಿವನಲ್ಲಿ ಸೇರಿ ತನ್ನ ನಾಮರೂಪಗಳನ್ನು ಕಳೆದುಕೊಂಡು ತನ್ನ ವಾಸ್ತವವಾದ ಶಿವಭಾವದಲ್ಲಿ ಸಮರಸವಾಗಿ ಬೆರೆಯುವನು. ಇಲ್ಲಿ ಅಮೂರ್ತೋಪಾಸಕನು ಪಡೆಯುವ ಮುಕ್ತಿಯೇ ಇದು. "ಅತ್ರ ಬ್ರಹ್ಮ ಸಮಶ್ನುತೇ", "ಬ್ರಹ್ಮವಿದ್ಬ್ರಹ್ಮೈವ ಭವತಿ", "ಬ್ರಹ್ಮವಿದಾಪ್ನೋತಿ ಪರಂ"ಎಂಬ ಶ್ರುತಿಗಳು ಅವನ ಶಿವಸಾಯುಜ್ಯಸ್ಥಿತಿಯನ್ನು ಸ್ಪಷ್ಟವಾಗಿ ತಿಳಿಸಿವೆ. ಇಂತಹ ಮುಕ್ತನು ಪ್ರಾರಬ್ಧ ಕಳೆದೊಡನೆ ದೇಹವನ್ನು ತೊರೆದು ಹಿಂದೆ ಅನುಭವಿಸಿದ್ದ ಶಿವಸಾಯುಜ್ಯವನ್ನು ಮುಂದೆಯೂ ಶಾಶ್ವತವಾಗಿ ಅನುಭವಿಸುವನು. ಇವನು ಮತ್ತೆ ಹಿಂತಿರುಗುವುದಿಲ್ಲವೆಂದು "ನ ಸ ಪುನರಾವರ್ತತೇ" ಎಂದು ಶ್ರುತಿಯೂ, "ಅನಾವೃತ್ತಿಶ್ಶಬ್ದಾತ್" ಎಂಬ ಸೂತ್ರವೂ ಸ್ಪಷ್ಟವಾಗಿ ತಿಳಿಸಿವೆ. ಯಾವನಿಗೆ ಅಮೂರ್ತನಿಷ್ಕಲಶಿವಪ್ರಕಾಶದ ನಿರಂತರಾನುಸಂಧಾನದಿಂದ ದೇಹದಲ್ಲಿ ಇಂದ್ರಿಯ, ಮನ, ಬುದ್ಧಿ, ಚಿತ್ತ, ಅಹಂಕಾರಗಳೆಲ್ಲವೂ ಶಿವಮಯವಾಗಿವೆಯೋ ಅವನಿಗೆ ಮಾತ್ರವೇ ಇಲ್ಲಿಯೇ ಸದ್ಯೋಮುಕ್ತಿ ದೊರೆಯುವುದು. ಇದೇ ವಿದೇಹಕೈವಲ್ಯ ಅಥವಾ ಅಶರೀರಮುಕ್ತಿ. ಇವನಿಗೆ ದೇಹವಿದ್ದರೂ ಅದರ ಅರಿವೇ ಇರುವುದಿಲ್ಲ. ಇವನು ಬಾಲಕನಂತೆಯೂ ಮುಗ್ಧನಂತೆಯೂ ಮೌನದಿಂದಲೂ ಸರಳಜೀವಿಯಾಗಿರುವುದರಿಂದ ಇವನಿಗೆ ದೇಹವಿದ್ದರೂ ಇಲ್ಲದಂತೆಯೇ ಸರಿ. ಹೀಗೆ ಈ ದೇಹದಲ್ಲಿಯೇ ಅಮೃತನಾಗುವುದೇ ಸಾಯುಜ್ಯಮುಕ್ತಿ. ಆಗ ಪ್ರಾರಬ್ಧಾನುಭವಕ್ಕೆ ಮಾತ್ರವೇ ದೇಹವಿರುತ್ತದೆ. ಉಳಿದ ಎಲ್ಲಾ ಕರ್ಮಗಳೂ ಹೃದಯದ ಗಂಟುಗಳೂ, ಪಾಶಗಳೂ, ಸಂಶಯಗಳೂ, ಪೂರ್ಣವಾಗಿ ತೊಲಗಿರುತ್ತವೆ.

ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ ।
ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥

ಪ್ರಕಾಶಸ್ವರೂಪನಾದ ಪರಮಾತ್ಮನನ್ನು ಹೃದಯಾಕಾಶದಲ್ಲಿ ದೃಢವಾದ ಅನುಸಂಧಾನದಿಂದ ಅನುಭವಿಸಿದವನಿಗೆ ಇಲ್ಲಿಯೇ ಮಲಪಾಶಗಳು ತೊಲಗಿ ಶಿವನ ದರ್ಶನವಾಗಿರುವುದರಿಂದ ಅವನಿಗೆ ಮುಂದೆ ಶಿವಸಾಯುಜ್ಯವು ನಿರಾತಂಕವಾಗಿ ನೇರವಾಗಿ ಲಭಿಸುವುದೆಂಬ ಶ್ರುತಿಯಂತೆ ಶ್ರೀಕರಭಾಷ್ಯವು ಈ ಅಂಶವನ್ನು ನಿರ್ಣಯಿಸಿದೆ.

ಆದರೆ ಶ್ರೀಪತಿಪಂಡಿತಾರಾಧ್ಯರು ಸಾಯುಜ್ಯಮುಕ್ತಿಯನ್ನು ಒಪ್ಪಿಯೇ ಇಲ್ಲವೆಂದೂ, ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಮುಕ್ತಿಗಳಷ್ಟನ್ನೇ ಒಪ್ಪಿರುವರೆಂದೂ ಕೆಲವು ವಿಮರ್ಶಕರು ಅಭಿಪ್ರಾಯಪಟ್ಟಿದ್ದಾರೆ. ಶ್ರೀಕರಭಾಷ್ಯದಲ್ಲಿ ಮುಕ್ತಿಪಾದವನ್ನು

ವಿಶೇಷವಾಗಿ ಪರಿಶೀಲಿಸಿದರೆ ಈ ಅಭಿಪ್ರಾಯವು ಯುಕ್ತವಲ್ಲವೆಂಬುದು ಸಹೃದಯು ರೆಲ್ಲರಿಗೂ ಮನವರಿಕೆಯಾಗುವುದು. "ನ ಚ ಕಾರ್ಯೇ ಪ್ರತ್ಯಭಿಸಂಧಿಃ" (೪-೩-೧೪) ಎಂಬ ಸೂತ್ರಭಾಷ್ಯದಲ್ಲಿ "ಶಿವೈಕಜ್ಞಾನಾದೇವ ತಾದಾತ್ಮ್ಯರೂಪಸಾಯುಜ್ಯ ಮುಕ್ತ್ಯುಪದೇಶಾತ್" ಎಂದು ಸಾಯುಜ್ಯಮುಕ್ತಿಯನ್ನು ಸ್ಪಷ್ಟವಾಗಿ ತಿಳಿಸ ಲಾಗಿದೆ. ಅಮೂರ್ತೋಪಾಸಕರಿಗೆ ಇಲ್ಲಿಯೇ ಸಾಯುಜ್ಯಮುಕ್ತಿ ದೊರಕುವು ದೆಂದೂ, ಅವರ ಲಿಂಗಶರೀರವು ಇಲ್ಲಿಯೇ ದಹರಾಕಾಶದ ಪರಂಜ್ಯೋತಿರ್ಮಯಪರ ಶಿವನಲ್ಲಿ ಲೀನವಾಗಿ, ಅವರು ಇಲ್ಲಿಯೇ ಶಿವಸಾಯುಜ್ಯವನ್ನು ಅನುಭವಿಸುತ್ತ ಮುಂದೆ ಮಹಾಕೈಲಾಸದಲ್ಲೂ ನಿಷ್ಕಲನಿರಂಜನಶಿವಸಾಯುಜ್ಯವೆಂಬ ಕೈವಲ್ಯವಿಭೂತಿಯನ್ನು ಶಾಶ್ವತವಾಗಿ ಅನುಭವಿಸುತ್ತ ಶಿವನಂತೆಯೇ ಸ್ವತಂತ್ರರೂ ಸರ್ವಜ್ಞರೂ ಸತ್ಯಸಂಕ ಲ್ಪರೂ ಆಗುವರೆಂದೂ ಶ್ರೀಪತಿಪಂಡಿತಾರಾಧ್ಯರು ಶ್ರೀಕರಭಾಷ್ಯದಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾರೆ. ಮೂರ್ತೋಪಾಸಕರೂ ಸಹ ಮಹಾಕೈಲಾಸದಲ್ಲಿ ತ್ರಿವಿಧಮುಕ್ತಿ ಗಳನ್ನು ಅನುಭವಿಸಿ ಕೊನೆಗೆ ನಿಷ್ಕಲಶಿವತತ್ತ್ವದ ಉಪಾಸನೆಯಿಂದ ಅಲ್ಲಿಂದಲೇ ಶಿವಸಾಯುಜ್ಯವನ್ನು ಪಡೆಯುತ್ತಾರೆಂದು ಹೇಳಿದ್ದಾರೆ. ಸಾಯುಜ್ಯಮುಕ್ತಿಯೇ ಸಾಮರಸ್ಯ ಅಥವಾ ಅಶರೀರಮುಕ್ತಿ ಎನಿಸುತ್ತದೆ. ಉಳಿದ ಮುಕ್ತಿಗಳು ಸಶರೀರಮುಕ್ತಿಗಳೆನಿಸುತ್ತವೆ. ಅನಾವೃತ್ತ್ಯಧಿಕರಣದಲ್ಲಿ "ಮೂರ್ತಮಹೇಶ್ವರೋ ಪಾಸಕಾನಾಂ ತಲ್ಲೋಕೇ ತೇನ ಸಹ ಸರ್ವಕಾಮಾವಾಪ್ತಿಂ ಲಬ್ಧ್ವಾ ತದನಂತರಂ ತಲ್ಲೋಕಾದೇವ ಭ್ರಮರಕೀಟನ್ಯಾಯವತ್ ಶಿವಜ್ಞಾನಪೂರ್ಣಭಾವೇನ ಸರ್ವ ಪರಿಪೂರ್ಣಶಿವಸಾಯುಜ್ಯಸಿದ್ಧಿದರ್ಶನಾಚ್ಚ ಮೂರ್ತಪರಶಿವೋಪಾಸಕಾನಾಮಪಿ ಬದ್ಧಜೀವವತ್ ಪುನರಾವೃತ್ತಿರ್ನ ಸಂಭವತಿ" ಎಂದು ಮೂರ್ತೋಪಾಸಕರೂ ಸಹ ಮಹಾಕೈಲಾಸದಲ್ಲಿ ಸಾಲೋಕ್ಯಾದಿತ್ರಿವಿಧಮುಕ್ತಿಗಳನ್ನು ಅನುಭವಿಸಿದಮೇಲೆ ಅಲ್ಲಿಂದಲೇ ಶಿವಜ್ಞಾನದ ಪರಿಪೂರ್ಣತೆಯಿಂದ ಶಿವಸಾಯುಜ್ಯವನ್ನು ಹೊಂದುವ ರೆಂದೂ, ಅವರಿಗೂ ಪುನರ್ಜನ್ಮವಿಲ್ಲವೆಂದೂ ತಿಳಿಸಿದ್ದಾರೆ. ಶಿವೋಪಾಸಕರಿಗೆ ಅಶರೀರ ಮುಕ್ತಿಯೇ? ಸಶರೀರಮುಕ್ತಿಯೇ? ಎಂಬ ಸಂಶಯವನ್ನು ಆಶಂಕಿಸಿ ಪರಿಹರಿಸುತ್ತ ಮುಕ್ತಿಫಲಾಧಿಕರಣದಲ್ಲಿ ಶ್ರೀಪತಿಪಂಡಿತಾರಾಧ್ಯರು ಕೊಂಚ ವಾಸನೆ ಉಳಿದಿರುವ ಮುಕ್ತರಿಗೆ "ಅವನು ಬ್ರಹ್ಮದೊಡನೆ ಎಲ್ಲಾ ಕರ್ಮಗಳನ್ನು ಪಡೆಯುತ್ತಾನೆ" ಎಂಬ ಶ್ರುತಿಯಂತೆ ಸಾಲೋಕ್ಯಾದಿತ್ರಿವಿಧವಿಭೂತ್ಯಾತ್ಮಕವಾದ ಸಶರೀರಮುಕ್ತಿಯೂ, "ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್" ಎಂಬ ಕೈವಲ್ಯಶ್ರುತಿಯಂತೆ ಎಲ್ಲಾ ವಾಸನೆಗಳನ್ನು ತೊರೆದವರಿಗೆ ಸಾಯುಜ್ಯವೆಂಬ ಅಶರೀರಕೈವಲ್ಯವಿಭೂತಿಯೂ ದೊರಕುವುವೆಂದು ಸ್ಪಷ್ಟವಾಗಿ ತಿಳಿಸಿದ್ದಾರೆ. "ಅವಿ ಭಾಗೇನ ದೃಷ್ಟತ್ವಾತ್" (೪-೪-೪) ಎಂಬ ಸೂತ್ರದ ಭಾಷ್ಯದಲ್ಲಿ ಮೂರ್ತೋಪಾಸಕ ರಿಗೆ "ಶಿವತತ್ತ್ವಪ್ರಾಪ್ತಾನಾಂ ಜೀವಾನಾಂ ಬ್ರಹ್ಮಾಭಿನ್ನತ್ವೇನ ಸ್ಥಿತಿರುಪದಿಶ್ಯತೇ. ಕುತಃ? ದೃಷ್ಟತ್ವಾತ್ "ಹಿರಣ್ಮಯೋಽಹಂ ಶಿವರೂಪಮಸ್ಮಿ" ಇತ್ಯಾದಿಶ್ರುತಿಷು

ಮುಕ್ತಜೀವಸ್ಯ ಬ್ರಹ್ಮಾಭಿನ್ನತ್ವೇನ ದೃಷ್ಟತ್ವಾತ್. ಬದ್ಧಾವಸ್ಥಾವತ್ ಮುಕ್ತಾವಸ್ಥಾಯಾಂ ಜೀವಬ್ರಹ್ಮಣೋರ್ಭೇದೋ ನಾಂಗೀಕರಣೀಯಃ. "ನಿರಂಜನಃ ಪರಮಂ ಸಾಮ್ಯಮುಪೈತಿ," "ಸೋಽಶ್ನುತೇ ಸರ್ವಾನ್ ಕಾಮಾನ್ ಬ್ರಹ್ಮಣಾ ಸಹ" ಇತ್ಯಾದಿ ಶ್ರುತೀನಾಂ ಜೀವನ್ಮುಕ್ತದಶಾಯಾಂ ಕರ್ಣಿಕಾಂತರಭಾಸಮಾನಪರಂಜ್ಯೋತಿರ್ಲಿಂಗಾನುಭವವಿಷಯತ್ವಮಿತಿ ವೇದಿತವ್ಯಂ" ಹೀಗೆ ಸಾಯುಜ್ಯಮುಕ್ತಿಯಲ್ಲಿ ಜೀವನಿಗೆ ಶಿವನಲ್ಲಿ ಅಶರೀರಮುಕ್ತಿ ಎಂಬ ಸ್ವರೂಪೈಕ್ಯವುಂಟೆಂದು ಸ್ಪಷ್ಟವಾಗಿ ತಿಳಿಸಿದ್ದಾರೆ. ಈ ವಿಷಯವನ್ನು "ದ್ವಾದಶಾಹವದುಭಯವಿಧಂ ಬಾದರಾಯಣೋಽತಃ" (೪-೪-೧೨) ಎಂಬ ಸೂತ್ರದಲ್ಲಿ ಇನ್ನೂ ಸ್ಪಷ್ಟವಾಗಿ ತಿಳಿಯಪಡಿಸಿದ್ದಾರೆ. "ಸಂಸಾರದಶಾಯಾಂ ಬ್ರಹ್ಮಜೀವಯೋರುಪಾಸ್ಯೋಪಾಸಕಯೋಃ ಪಾರಮಾರ್ಥಿಕಸತ್ಯತ್ವಂ, ಮೋಕ್ಷದಶಾಯಾಂ ನದೀಸಮುದ್ರವತ್ ಭ್ರಮರಕೀಟನ್ಯಾಯವತ್ ಸ್ವಾಭಾವಿಕಜೀವಭಾವನಿವೃತ್ತಿಪೂರ್ವಕವ್ಯಾಪಕಾಖಂಡಪರಮಾಕಾಶರೂಪಪರಬ್ರಹ್ಮಪರಶಿವಶಂಕರರುದ್ರೇಶ್ವರಮಹಾದೇವಾದಿಶಬ್ದವಾಚ್ಯಪರತತ್ತ್ವಪ್ರಾಪ್ತಿತ್ವಂ ಚ ಜೀವಸ್ಯೇತಿ ನಿರ್ಣೀಯತೇ" ಹೀಗೆ ಮೂರ್ತೋಪಾಸಕರಿಗೆ ಮಹಾಕೈಲಾಸದಲ್ಲಿ ಕ್ರಮಮುಕ್ತಿಯೂ, ಸಶರೀರಮುಕ್ತಿಯೂ, ಕೊನೆಗೆ ಅಲ್ಲಿಂದಲೇ ಅಶರೀರಮುಕ್ತಿಯೂ ದೊರಕುವಂತೆ ಅಮೂರ್ತೋಪಾಸಕರಿಗೆ ಇಲ್ಲಿಯೇ ಸದ್ಯೋಮುಕ್ತಿಯೂ, ದೇಹ ವಳಿದೊಡನೆ ಶಿವೈಕ್ಯ ಎಂಬ ಅಶರೀರಮುಕ್ತಿಯೂ ಅಂದರೆ ಸಾಯುಜ್ಯವೆಂಬ ಕೈವಲ್ಯಮುಕ್ತಿಯೂ ದೊರಕುತ್ತವೆ ಎಂಬುದು ಸ್ಪಷ್ಟವಾಯಿತು. ಮುಕ್ತನ ಸ್ವಭಾವವನ್ನು ತಿಳಿಸುವಾಗ ಶ್ರೀಪತಿಪಂಡಿತಾರಾಧ್ಯರು ತಮ್ಮ ಆಶಯವನ್ನು ಮತ್ತಷ್ಟು ವಿಶದಪಡಿಸಿದ್ದಾರೆ. ಅವರ ದೃಷ್ಟಿಯಲ್ಲಿ ಮಹಾಕೈಲಾಸದಲ್ಲಿ ಸದಾಶಿವನೂ ಸಹ ಬಾಹ್ಯೇಂದ್ರಿಯಗಳ ಅಪೇಕ್ಷೆ ಇಲ್ಲದೆಯೇ ಪರಮಾನಂದವನ್ನು ಅನುಭವಿಸುವನು. ಅವನು ಮನಆನಂದನೂ, ಪ್ರಾಣಾರಾಮನೂ, ಆಕಾಶಶರೀರನೂ ಆಗಿರುವನು. ಹಾಗೆಯೇ ಮುಕ್ತನೂ ಸಹ ದಿವ್ಯದೇಹದಲ್ಲಿ ಪ್ರಕೃತಿಸಂಬಂಧವಿಲ್ಲದೆ ನಿತ್ಯಾನಂದವನ್ನು ಅನುಭವಿಸುತ್ತ ಸ್ವತಂತ್ರನಾಗಿರುವನು "ಆನಂದಾವಿರ್ಭಾವಃ ನಿರುಪಾಧಿಕತಯಾ ಬ್ರಹ್ಮಣಿ ಮುಕ್ತೇ ಚ ಪರಿಪೂರ್ಣೋ ವರ್ತತೇ," "ಮುಕ್ತಾನಾಂ ಜಗತ್ ಪರಮಾಕಾಶರೂಪಶರೀರಂ ಬ್ರಹ್ಮ ಭವತಿ. ಅತಃ ಪರಮಾನಂದಪ್ರವಿಷ್ಟಾನಾಮೇಷಾಂ ಬ್ರಹ್ಮಣ ಇವ ದುಃಖಾನುಷಂಗಾಭಾವೋ ದರ್ಶಿತಃ," "ಮುಕ್ತಸ್ಯ ತ್ವಸಂಕುಚಿತಜ್ಞಾನಸ್ಯ ಯಥಾಸಂಕಲ್ಪಂ ಆತ್ಮಾಭಿಮಾನಾನುಗುಣಾ ವ್ಯಾಪ್ತಿಃ" ಎಂದು "ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ" ಎಂಬ ಸೂತ್ರಭಾಷ್ಯದಲ್ಲಿ ಮುಕ್ತರ ಪರಮಾನಂದಸ್ಥಿತಿಯನ್ನು ಅವರು ಸ್ಪಷ್ಟಪಡಿಸಿದ್ದಾರೆ.

ಹೀಗೆ ಶ್ರೀಪತಿಪಂಡಿತಾರಾಧ್ಯರು ಪರಮಾತ್ಮ, ಶಕ್ತಿ, ಮಾಯೆ, ಜೀವ, ಜಗತ್ತು, ಮುಕ್ತಿ ಮೊದಲಾದ ದಾರ್ಶನಿಕತತ್ತ್ವಗಳ ಬಗ್ಗೆ ನಿಷ್ಪಕ್ಷಪಾತದೃಷ್ಟಿಯಿಂದ ಕೂಲಂಕಷವಾಗಿ ವಿಮರ್ಶೆಮಾಡಿ ನಿರ್ದಿಷ್ಟವಾದ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಭೇದಾಭೇದಮತವನ್ನು ಸಿದ್ಧಾಂತಮಾಡುವಾಗಲಂತೂ ಸಾವಧಾನವಾಗಿ ಇತರ ಮತಗಳನ್ನು ಪರ್ಯಾಲೋಚಿಸಿದ್ದಾರೆ. "ದ್ವಾ ಸುಪರ್ಣೇತ್ಯಾದಿವಾಕ್ಯೇಷು ಜೀವ ಬ್ರಹ್ಮಣೋಃ ಪರಸ್ಪರವೈಲಕ್ಷಣ್ಯಸ್ಯ, ತತ್ತ್ವಮಸ್ಯಾದಿವಾಕ್ಯೇಷು ತಯೋರೇಕತ್ವಸ್ಯ ಚ ವ್ಯವಸ್ಥಾಪನಾತ್ ಜೀವಬ್ರಹ್ಮಣೋಃ ಪಾರಮಾರ್ಥಿಕಭೇದಾಭೇದೋ ಹ್ಯಂಗೀ ಕರ್ತವ್ಯಃ. "ಶ್ರುತಿಃ ಸತ್ಯಾರ್ಥವಾದಿನೀ" ಇತಿ ಬಹುಶ್ರುತಿಪುರಾಣಪೂರ್ವಾ ಚಾರ್ಯವಾಕ್ಯೇಷು ದರ್ಶನಾತ್, ಶ್ರುತಿಸಂಕೋಚೇ ಮಾನಾಭಾವಾತ್, ವೈದಿಕೇತರ ಪ್ರಸಂಗಾಚ್ಚ "ಲೋಕವತ್ತು ಲೀಲಾಕೈವಲ್ಯಂ" ಇತ್ಯತ್ರ ಪರಮೇಶ್ವರಸ್ಯ ಲೀಲಾ ವ್ಯಪದೇಶೇನ ಭೇದತ್ವಂ ದ್ವೈತಶ್ರುತೀನಾಂ ಸರ್ವಾಸಾಂ ತತ್ಕಾಲಪರತ್ವಮಭಿಹಿತಂ. "ನೇಹ ನಾನಾಸ್ತಿ ಕಿಂಚನ" ಇತ್ಯಾದ್ಯಭೇದಶ್ರುತೀನಾಂ ತತ್ಪರಿಶೇಷಾವಸ್ಥಾಪರತ್ವ ಮಿತಿ ಸ್ಪಷ್ಟಮುಪದಿಷ್ಟಂ." ಭೇದಾಭೇದಶ್ರುತಿಗಳಿಗೆ ಹೀಗೆ ಸಮನ್ವಯ ಮಾಡಿರು ವುದಷ್ಟೇ ಅಲ್ಲದೆ ನಿರ್ಗುಣಶ್ರುತಿಗಳನ್ನು ಪ್ರಳಯಕಾಲದ ಶಕ್ತಿಸಂಕೋಚಾವಸ್ಥೆಗೂ ಸಗುಣಶ್ರುತಿಗಳನ್ನು ಸೃಷ್ಟಿಕಾಲದ ಶಕ್ತಿವಿಕಾಸಾವಸ್ಥೆಗೂ ಅನ್ವಯಿಸುತ್ತ ಶ್ರೀಕರ ಭಾಷ್ಯವು ಮೂರ್ತಾಮೂರ್ತಾತ್ಮಕವಾದ ಪರಶಿವನಿಗೆ ಜಗಜ್ಜನ್ಮಾದಿಲಕ್ಷಣವನ್ನು ಸಮರಸವಾಗಿ ಹೊಂದಿಸಿ ಮಾನವನನ್ನು ಶಿವನಿಗೂ ಜಗತ್ತಿಗೂ ಹೊಂದಿಕೆಯಾಗು ವಂತೆ ಮಾಡಿ ಸೌಹಾರ್ದಸಹಕಾರಗಳಿಂದಲೂ ಸಮತೆಸಮಾಧಾನಗಳಿಂದಲೂ ಕೂಡಿದ ಸುಂದರವಾದ ಜೀವನವನ್ನು ನಡೆಸುವಂತೆ ಅವನಿಗೆ ಸ್ಫೂರ್ತ್ಯುತ್ಸಾಹಗಳನ್ನು ದೊರಕಿಸುತ್ತಲಿದೆ. "ವ್ಯಾಪಕಸ್ಯ ಸರ್ವಜ್ಞಸ್ಯ ಶಿವಸ್ಯ ಪರಬ್ರಹ್ಮಣಃ ಮೂರ್ತ ತ್ವೇನ ಕಿಂ ಕಾರ್ಯಮಿತಿ ಚೇತ್ ಭಕ್ತತಾರಣಲೀಲೈವ ಪ್ರಯೋಜನಂ. ತಸ್ಮಾತ್ ಶಿವ ಏವ ಧೃತಕಾಠಿನ್ಯವಲ್ಲೀಲಾಮಂಗಲವಿಗ್ರಹಸ್ಸನ್ ಸರ್ವಲೋಕೇಷು ವೇದವೇದಾರ್ಥ ಪ್ರಾಚುರ್ಯಂ ಕೃತವಾನ್. ಅತೋ ಮುಮುಕ್ಷುಃ ಮೂರ್ತಾಮೂರ್ತಪರಶಿವತತ್ತ್ವ ಮುಪಾಸ್ಯ ಸಾಲೋಕ್ಯಾದಿದೇಹವಿದೇಹಕಲ್ಯಾಣಕೈವಲ್ಯವಿಭೂತಿಂ ಪ್ರಾಪ್ನೋತಿ" ಹೀಗೆ ಅಮೂರ್ತಶಿವನ ಮೂರ್ತಾವಸ್ಥೆಗೆ ಭಕ್ತಾನುಗ್ರಹಲೀಲೆಯೇ ಪ್ರಯೋಜನ ವೆಂದೂ, ಅದಕ್ಕಾಗಿಯೇ ಶಿವನು ಗಟ್ಟಿದುಪ್ಪವೇ ಭೋಜನಸೌಕರ್ಯಕ್ಕಾಗಿ ತಿಳಿದುಪ್ಪ ವಾದಂತೆ ದಿವ್ಯಮೂರ್ತರೂಪವನ್ನು ಧರಿಸಿ ತನ್ನ ತತ್ತ್ವವನ್ನು ತಿಳಿಸುವ ವೇದರಾಶಿ ಯನ್ನು ಬ್ರಹ್ಮನಿಗೆ ಅನುಗ್ರಹಿಸಿ ಅವನ ಮೂಲಕ ಲೋಕದಲ್ಲಿ ವೇದಾರ್ಥವನ್ನು ಪ್ರಚು ರಪಡಿಸಿದ್ದಾನೆಂದೂ, ಹೀಗೆ ಮೂರ್ತಾಮೂರ್ತಶಿವನನ್ನು ಶ್ರದ್ಧೆಯಿಂದ ಉಪಾಸನೆ ಮಾಡಿ ಸಾಧಕರು ಪಕ್ವಮಲರಾಗಿ ಸಾಲೋಕ್ಯ ಸಾಮೀಪ್ಯ ಸಾರೂಪ್ಯವೆಂಬ ಸದೇಹ ಮುಕ್ತಿಯನ್ನು ಅನುಭವಿಸಿ ಪೂರ್ಣಜ್ಞಾನಸಿದ್ಧರೂ ನಿರ್ವಿಷಯರೂ ಆಗಿ ಸಾಯುಜ್ಯ ವೆಂಬ ವಿದೇಹಕೈವಲ್ಯವನ್ನು ಪಡೆದು ನಿತ್ಯಸುಖಿಗಳಾಗಬಹುದೆಂದೂ ಸದಭಿಪ್ರಾಯ ವನ್ನು ಯುಕ್ತಿಯುಕ್ತವಾಗಿಯೂ ಅನುಭವಕ್ಕೆ ಹೊಂದುವಂತೆಯೂ ನಿಗಮಾಗಮ ಗಳಿಗೆ ಸಮ್ಮತವಾಗುವಂತೆಯೂ ಸೂತ್ರಕಾರರ ಹೃದಯವನ್ನು ಶ್ರೀಪತಿಪಂಡಿತಾ ರಾಧ್ಯರು "ದ್ವಾದಶಾಹವದುಭಯವಿಧಂ ಬಾದರಾಯಣೋऽತಃ" ಎಂಬ ಸೂತ್ರ

ಭಾಷ್ಯದಲ್ಲಿ ಸ್ಪಷ್ಟಪಡಿಸಿರುವುದು ಮಾನವಸಮಾಜದ ಸೌಭಾಗ್ಯವೆನಿಸಿದೆ.

"ತಸ್ಯಾವಯವಭೂತೈಸ್ತು ವ್ಯಾಪ್ತಂ ಸರ್ವಮಿದಂ ಜಗತ್" ಎಂದು ಶ್ವೇತಾಶ್ವತರ ಶ್ರುತಿಯು ಪರಮೇಶ್ವರನ ಚಿತ್‌ಶಕ್ತಿಯ ಸಂಪರ್ಕದಿಂದ ಅವತರಿಸಿದ ತ್ರಿಮೂರ್ತಿಗಳಿಂದಲೇ ಜಗತ್ತು ವ್ಯಾಪಿಸಿದೆ ಎಂದು ತಿಳಿಸಿದೆ. ಈ ತ್ರಿಮೂರ್ತಿಗಳಲ್ಲಿ ಬ್ರಹ್ಮನು ಸೃಷ್ಟಿಕರ್ತನಾದ್ದರಿಂದ ಜ್ಞಾನಶಕ್ತಿಪ್ರಾಧಾನ್ಯದಿಂದ ತನ್ನ ಕರ್ತವ್ಯವನ್ನು ನಿರ್ವಹಿಸುತ್ತಲೇ ಶಿವನ ಪ್ರೇಮಕ್ಕೆ ಪಾತ್ರನಾಗಿರುವನು. ವಿಷ್ಣುವಾದರೋ ಶಿವನಿಗೆ ಪ್ರಾಣಪ್ರಿಯನಾಗಿ ಅವನ ಹೃದಯವನ್ನರಿತು ಅವನ ಇಚ್ಛೆಯಂತೆ ಕ್ರಿಯಾಶಕ್ತಿಯಿಂದ ಜಗತ್ತನ್ನು ರಕ್ಷಿಸುತ್ತಿರುವನು. ಕಾಲರುದ್ರನು ಶಿವನ ಸಾಕ್ಷಾದಂಶನಾಗಿ ಜ್ಞಾನಕ್ರಿಯಾಸಮನ್ವಯದೃಷ್ಟಿಯಿಂದ ಪ್ರಳಯವನ್ನು ನಡೆಸುತ್ತಿರುವನು. ಈ ಮೂವರಲ್ಲಿ ವಿಷ್ಣುವು ಶಿವನ ಚಿತ್‌ಶಕ್ತಿಯ ಪುರುಷರೂಪನಾಗಿ ಶಿವನ ನಿತ್ಯಾರಾಧನದಿಂದ ಜಗದ್ರಕ್ಷಣಸಾಮರ್ಥ್ಯವನ್ನು ಹೇಗೆ ಪಡೆದಿರುವನೆಂಬ ಅಂಶವನ್ನೂ ಶಿವಶಕ್ತಿಗಳಿಗೆ ಸಾಮರಸ್ಯವು ಸಹಜವಾಗಿರುವಂತೆಯೇ ಶಿವವಿಷ್ಣುಗಳಿಗೂ ಹೇಗೆ ಅಭೇದವು ಉಪಾಸನದ ಮೂಲಕ ದೊರೆತಿರುವುದೆಂಬ ಅಂಶವನ್ನೂ ಶ್ರೀಪತಿಪಂಡಿತಾರಾಧ್ಯರು ಯಾರ ಮನಸ್ಸಿಗೂ ನೋವಾಗದಂತೆ ತೈತ್ತಿರೀಯಶ್ರುತಿಯ ಆಧಾರದಿಂದ ವಿಶದವಾಗಿ ತಿಳಿಸಿದ್ದಾರೆ. ಇದನ್ನು "ವಿಶೇಷಂ ಚ ದರ್ಶಯತಿ"(೪-೩-೧೬)ಎಂಬ ಸೂತ್ರದ ಭಾಷ್ಯದಲ್ಲಿ ಸಹೃದಯರೆಲ್ಲರೂ ಓದಿ ತಿಳಿಯಬಹುದು. ಅಲ್ಲಿ ಅವರು ಹೀಗೆ ಹೇಳಿದ್ದಾರೆ. "'ದಹರಂ ವಿಪಾಪ್ಮಂ' ಎಂಬಲ್ಲಿ ತೈತ್ತಿರೀಯಶ್ರುತಿಯು ದಹರಕಮಲದಲ್ಲಿ ಪರಮಾತ್ಮನ ಉಪಾಸನವನ್ನು ತಿಳಿಸಿ, ಅಲ್ಲಿ ಯಾರನ್ನು ಉಪಾಸನಮಾಡಬೇಕು? ಎಂಬ ಪ್ರಶ್ನೆಗೆ "ಯೋ ವೇದಾದೌ ಸ್ವರಃ" ಎಂಬಲ್ಲಿ ಮಹೇಶ್ವರನೇ ಉಪಾಸ್ಯನೆಂದು ನಿಶ್ಚಯಿಸಿ, "ನ ಕರ್ಮಣಾ" ಎಂಬುದರಿಂದ ಎಲ್ಲಾ ಆಶೆಗಳನ್ನೂ ತೊರೆದ ವಿರಕ್ತರಿಗೆ ಮಾತ್ರವೇ ಅವನು ದೊರಕುವನೆಂದು ತಿಳಿಸಿ, ಅಂತವನನ್ನು ಉಪಾಸನಮಾಡುವ ಅಧಿಕಾರ ದೇವತೆಗಳಲ್ಲಿ ಯಾರಿಗೆ ಇದೆ? ಎಂದು ಕೇಳಿ, "ಸಹಸ್ರಶೀರ್ಷಂ ದೇವಂ" ಎಂಬಲ್ಲಿ ನಾರಾಯಣನನ್ನು ಪ್ರಶಂಸಿಸಿ "ಪದ್ಮಕೋಶಪ್ರತೀಕಾಶಂ" ಎಂಬಲ್ಲಿ ನಾರಾಯಣನ ಹೃದಯಕಮಲದಲ್ಲಿ ತ್ರಿಮೂರ್ತ್ಯತೀತನಾದ ಶಿವನನ್ನು ಉಪಾಸ್ಯನೆಂದು ತಿಳಿಸಿ, ಅವನನ್ನೇ ಆದಿತ್ಯಮಂಡಲದಲ್ಲಿ ನೆಲಸಿರುವನೆಂದು ನಿರೂಪಿಸಿ, "ನಿಧನಪತಯೇ ನಮಃ" ಎಂಬಲ್ಲಿ ಅವನು ಅಮೂರ್ತನಾಗಿಯೇ ಮೂರ್ತನೂ ಆಗಿರುವನೆಂದು ತಿಳಿಸಿ, ಸದ್ಯೋಜಾತಾದಿಪಂಚಬ್ರಹ್ಮ ಮಂತ್ರಗಳಿಂದ ಮೂರ್ತಾಮೂರ್ತಶಿವನನ್ನು ಸ್ತುತಿಸಿ, "ನಮೋ ಹಿರಣ್ಯಬಾಹವೇ" ಎಂಬಲ್ಲಿ ಅವನನ್ನು ಜ್ಯೋತಿರ್ಮಯನೆಂದೂ, ಉಮಾಶಕ್ತಿವಿಶಿಷ್ಟನೆಂದೂ ತಿಳಿಸಿ "ಋತಂ ಸತ್ಯಂ" ಎಂಬಲ್ಲಿ ಅವನನ್ನು ಕೃಷ್ಣಪಿಂಗಳ, ವಿರೂಪಾಕ್ಷ, ವಿಶ್ವರೂಪ ಎಂದು ಮುಂತಾಗಿ ಪ್ರಶಂಸಿಸಲಾಗಿದೆ" ಎಂದು ಶ್ರುತಿಯ ಆಧಾರದಮೇಲೆ ತಿಳಿಸಿದ್ದಾರೆ. ಇದರಿಂದ ನಾರಾಯಣನು ಹೃದಯದಲ್ಲಿ ಶಿವನನ್ನು ಯಾವಾಗಲೂ ಧ್ಯಾನಿಸುತ್ತ ಶಿವನೊಡನೆ ಸಮರಸನಾಗಿ ಬೆರೆತಿರುವನೆಂಬುದು ಸ್ಪಷ್ಟವಾಗುತ್ತದೆ. ಹೀಗೆ ಅವನ ಭಕ್ತಿಗೆ ಮೆಚ್ಚಿ

ಶಿವನು ಅವನ ಹೃದಯದಲ್ಲಿ ಅಡಗಿರುವುದರಿಂದಲೇ ಶಿವನು ಹರಿವಂಶದಲ್ಲಿ ತನಗೂ ನಾರಾಯಣನಿಗೂ ಭೇದವಿಲ್ಲವೆಂದೂ, ನಾರಾಯಣನನ್ನು ಪ್ರಶಂಸಿಸಿರುವ ಹೆಸರುಗಳೆಲ್ಲವೂ ತನ್ನವೆಂದೂ ಹೇಳಿದ್ದಾನೆ. "ಯಾನಿ ನಾಮಾನಿ ಗೋವಿಂದ ತವ ಲೋಕೇ ಮಹಾಂತಿ ವೈ। ತಾನ್ಯೇವ ಮಮ ನಾಮಾನಿ ನಾತ್ರ ಕಾರ್ಯಾ ವಿಚಾರಣಾ॥" ಹೀಗೆ ಶಿವಶಕ್ತಿಗಳಂತೆ ಶಿವಕೇಶವರಿಗೆ ಎಳ್ಳಷ್ಟೂ ಭೇಧವಿಲ್ಲವೆಂಬ ಅಂಶವನ್ನು ಶಿವನೇ ಹೇಳಿದ್ದಾನೆ. ಇದರಿಂದ ಶಿವಭಕ್ತರಿಗೆ ವಿಷ್ಣು ಮಾತೃಸ್ವರೂಪನೆಂಬ ಅಂಶ ಸ್ಪಷ್ಟ ಪಡುತ್ತದೆ. ಆದ್ದರಿಂದಲೇ ಶಿವದೇವಾಲಯಗಳಲ್ಲಿ ಈಗಲೂ ನಾರಾಯಣನಿಗೆ ಅರ್ಚನೆ ಸಲ್ಲುತ್ತಲಿದೆ. ಭಕ್ತರು ಶಿವಲಿಂಗದ ಪ್ರದಕ್ಷಣಮಾಡುತ್ತ ಮೊದಲಿಗೆ ನಾರಾಯಣನನ್ನು ದರ್ಶನಮಾಡುತ್ತಾರೆ. ಇದನ್ನು ಇಂದಿಗೂ ದಾಕ್ಷಿಣಾತ್ಯದೇವಾಲಯಗಳಲ್ಲಿ ಎಲ್ಲರೂ ಕಾಣಬಹುದು. ಆದ್ದರಿಂದಲೇ ಶಿವಭಕ್ತರಿಗೆ ವಿಷ್ಣುವನ್ನು ಕಂಡರೆ ಮಾತೃಭಕ್ತಿಯೂ, ವೈಷ್ಣವರನ್ನು ಕಂಡರೆ ಸೋದರಭಾವವೂ ಸಹಜವಾಗಿ ಇಂದಿಗೂ ನೆಲಸಿವೆ. ಆದ್ದರಿಂದಲೇ ನನಗೆ ವೈಷ್ಣವಸೋದರರು ಹೇರಳವಾಗಿದ್ದಾರೆ. ಅವರಲ್ಲಿ ನನಗೆ ಆತ್ಮೀಯತೆ ಹೆಚ್ಚು. ಹೀಗೆ ಶೈವರಿಗೂ, ವೈಷ್ಣವರಿಗೂ, ಅದ್ವೈತಿಗಳಿಗೂ, ದ್ವೈತಿಗಳಿಗೂ, ವಿಶಿಷ್ಟಾದ್ವೈತಿಗಳಿಗೂ ಸಮನ್ವಯದೃಷ್ಟಿಯಿಂದ ಸಾಮರಸ್ಯವನ್ನು ಏರ್ಪಡಿಸಿರುವುದರಿಂದಲೇ ಶ್ರೀಕರಭಾಷ್ಯವು ಇಂದಿಗೂ ಸರ್ವರಿಗೂ ಮಾನ್ಯವಾಗಿದೆ. ಅದು ಕೇವಲ ವೀರಶೈವರ ಭಾಷ್ಯವೆಂಬುದು ಸಾಂಪ್ರದಾಯಿಕವಾದರೂ ತಾತ್ತ್ವಿಕವಾಗಿ ಮುಮುಕ್ಷುಗಳೆಲ್ಲರಿಗೂ ಸುವ್ಯವಸ್ಥಿತವಾದ ರೀತಿಯಲ್ಲಿ ಐಹಿಕವಾಗಿ ಸಮತೆಸಮಾಧಾನಗಳನ್ನೂ ತೃಪ್ತಿಶಾಂತಿಗಳನ್ನೂ, ಆಮುಷ್ಮಿಕವಾಗಿ ದಿವ್ಯಾಮೃತವನ್ನೂ ದೊರಕಿಸುತ್ತಿರುವುದೆಂದು ಘಂಟಾಘೋಷವಾಗಿ ಹೇಳಬಹುದಾಗಿದೆ. ಜೀವಂತರೆಲ್ಲರಲ್ಲೂ ಪರಮೇಶ್ವರನು ಸಹಜವಾಗಿ ನೆಲಸಿದ್ದಾನೆ. ಅವನ ಅನುಭವವನ್ನು ಪಡೆಯಲಿಕ್ಕೆ ಅಲಿಂಗಿಬ್ರಾಹ್ಮಣರಾದ ಸ್ಮಾರ್ತರು ಮತ್ತು ಲಿಂಗಿಬ್ರಾಹ್ಮಣರಾದ ವೀರಶೈವರು ಅಷ್ಟೆಯೇ ಅರ್ಹರೆಂದು ಹೇಳುವುದು ಶುದ್ಧ ಅವಿವೇಕವೇ ಸರಿ. ಪರಮಾತ್ಮನ ಅನುಭವವನ್ನು ಪಡೆಯಲಿಕ್ಕೆ ಜಿಜ್ಞಾಸುಗಳೆಲ್ಲರೂ ಅಧಿಕಾರಿಗಳಾಗಿರುವರು. ಮುಕ್ತಿಯ ಬಯಕೆ ಯಾರಿಗೆ ಹೆಚ್ಚಾಗಿರುವುದೋ ಅವರೆಲ್ಲರೂ ತಮ್ಮೊಳಗಿನ ಶಿವತತ್ತ್ವವನ್ನು ಅರಿಯಲು ಸಮರ್ಥರಿರುವರು. ಯಾರಿಗೆ ಆತ್ಮದ ಹಸಿವೆ ಹುಟ್ಟಿ ಬೆಳೆದು ಹೆಚ್ಚುವುದೋ ಅವರೆಲ್ಲರಿಗೂ ಶ್ರೀಕರಭಾಷ್ಯವು ಪ್ರಾಣಸ್ವರೂಪವೆನಿಸಿದೆ. ಪ್ರಾಣಪ್ರಿಯವಾದ ಇಂತಹ ಭಾಷ್ಯವು ಜನರಲ್ಲಿ ಸುಸಂಸ್ಕೃತಿಯನ್ನು ಹುಟ್ಟಿಸಿ ಬೆಳೆಸಿ ಅವರಿಗೆ ಅಂತರಾತ್ಮನ ಪರಿಚಯವನ್ನು ಮಾಡಿಸಲೆಂದೂ, ಇದರಿಂದ ಮಾನವ ಸಮಾಜದಲ್ಲಿ ಸಮತೆ ಸಮಾಧಾನಗಳಿಂದ ಕೂಡಿದ ಸೌಹಾರ್ದವಾತಾವರಣವು ಏರ್ಪಡಲೆಂದೂ ಬಯಸಲಾಗಿದೆ.

ಭವರೋಗದಿಂದ ನರಳುತ್ತಿರುವ ಮಾನವನಿಗೆ ಸಂಜೀವಿನಿಯನ್ನು ದೊರಕಿಸಲಿಕ್ಕಾಗಿ ಶ್ರೀಕರಭಾಷ್ಯವನ್ನು ಶ್ರೀಪತಿಪಂಡಿತಾರಾಧ್ಯಸ್ವಾಮಿಗಳು ಬರೆದಿರುವರೆಂದು

ಹಿಂದೆಯೇ ತಿಳಿಸಿದೆ. ಇಲ್ಲಿ ಭವರೋಗವೆಂದರೆ ಯಾವುದು ? ಇದಕ್ಕೆ ಸಂಜೀವಿನಿ ಯಾವುದು? ಎಂಬುದನ್ನು ಈಗ ವಿವೇಚಿಸಲಾಗುವುದು. ಹೊನ್ನು ಹೆಣ್ಣು ಮಣ್ಣುಗಳ ಆಶೆ ಎಂಬ ಈಷಣತ್ರಯವೇ ನಮಗೆ ಜನ್ಮಾಂತರಗಳಿಂದಲೂ ಅಂಟಿಕೊಂಡು ಬಂದಿರುವ ಭವರೋಗವೆಂದು ವೇದಾಂತವು ಮುಕ್ತಕಂಠದಿಂದ ಸಾರುತ್ತಿದೆ. ಈ ಹೊನ್ನು ಹೆಣ್ಣು ಮಣ್ಣುಗಳಾದರೋ ನಮಗೆ ಬರಬೇಕಾದಷ್ಟು ಮಾತ್ರವೇ ನಿಯಮಿತ ಕಾಲದಲ್ಲಿ ಈಶ್ವರನ ಇಚ್ಛೆಯಂತೆಯೇ ನಮ್ಮ ದುಡಿಮೆಯ ಫಲವಾಗಿಯೇ ನಮಗೆ ದೊರಕುತ್ತವೆ ಎಂಬ ದೃಢನಿಶ್ಚಯವೇ ಈ ಭವರೋಗದ ಸಂಜೀವಿನಿ ಎನಿಸಿದೆ. ಇದನ್ನು ತಿಳಿಯದೆ ನಾವು ಕಂಡಕಂಡವರಿಂದ ನಮಗೆ ಅದು ಇದು ಫಲ ದೊರಕಬಹುದೆಂದು ಬಿಸಿಲ್ಗುದುರೆಯ ವ್ಯಾಮೋಹದಿಂದ ಅವರೆಲ್ಲರನ್ನೂ ಆಶ್ರಯಿಸುವುದು ಅವಿವೇಕವೇ ಸರಿ. ಲೋಕದ ಜನರು ಬಹಳವಾಗಿ ಸ್ವಾರ್ಥತೆಯ ವೃಷ್ಟಿಯಿಂದ ಒಬ್ಬರನ್ನೊಬ್ಬರು ಪ್ರೀತಿಸುವಂತೆ ನಟಿಸುತ್ತಾರೆ. ಇವರಲ್ಲಿ ಅನೇಕರು ಪರಪುಷ್ಟರಂತೆ (Parasites) ಎಲ್ಲರನ್ನೂ ಆಶ್ರಯಿಸುತ್ತ ಎಲ್ಲರಿಂದಲೂ ಸಾಕಷ್ಟು ಪ್ರಯೋಜನಗಳನ್ನು ಪಡೆದರೂ ಆ ಬಗ್ಗೆ ಕೃತಜ್ಞತೆಯಿಲ್ಲದೆ ನಡೆನುಡಿ ಶುದ್ಧಿಯಿಲ್ಲದೆ ಜೀವನವನ್ನು ನಡೆಸುತ್ತಲಿರುವರು. ಇಂತವರ ಬಗ್ಗೆ ಅಭಿಮಾನ ವಹಿಸುವುದಂತೂ ಭಯಂಕರವಾದ ರೋಗ. ಇದಕ್ಕೆ ಔಷದವೇ ಸಿಕ್ಕುವುದಿಲ್ಲ. ಸಾತ್ತ್ವಿಕ ಜನರೇ ಹೆಚ್ಚಾಗಿ ಈ ದೊಡ್ಡ ರೋಗಕ್ಕೆ ಬಲಿಯಾಗುವರು. ಇಂತಹ ಸ್ವಾರ್ಥಸಾಧಕರು ಸಾತ್ತ್ವಿಕರನ್ನು ಒಲಿಸಿಕೊಂಡು ಪ್ರೇಮದ ಸೋಗಿನಿಂದ ಅನಾಯಾಸವಾಗಿ ಹೊಟ್ಟೆ ತುಂಬಿಸಿಕೊಳ್ಳುತ್ತಲಿರುವರು. ಹೇಗೆ ಭಿನ್ನಸ್ವಭಾವದ ಜನರಿಬ್ಬರ ಸಂಬಂಧವು ಗಾಳಿ ಗುದ್ದಿ ಕೈನೋಯಿಸಿಕೊಂಡಂತಾಗುವುದು. ನಿಷ್ಕಾಮಂತನಾದ ಸಾತ್ತ್ವಿಕಸಾಧಕನಿಗೆ ಇಂತಹ ಸ್ವಾರ್ಥಿಗಳ ಸಂಗವು ನಿಜವಾಗಿಯೂ ಜನ್ಮಾಂತರೀಯ ಪಾಪಶೇಷದ ದುಷ್ಪರಿಣಾಮವೇ ಸರಿ. ಇದರಿಂದ ಅವನು ಪಾರಾಗಬೇಕಾದರೂ ಈಶ್ವರನ ಪೂರ್ಣಾನುಗ್ರಹವೇ ಆಗಬೇಕು. ಆದರೆ ಇದಕ್ಕಾಗಿ ಅವನು ನೊಂದುಬೆಂದು ಸಾಕಷ್ಟು ನಿರ್ವೇದವನ್ನು ಹೊಂದಿರಬೇಕು. ಇಲ್ಲದೆಹೋದರೆ ಶಿವಾನುಗ್ರಹವು ದೊರೆಯುವಂತೆಯೇ ಇಲ್ಲ. ಆದರೆ ಸಾತ್ತ್ವಿಕನಿಗೆ ಜೀವನದಲ್ಲಿ ನಿರ್ವೇದವುಂಟಾಗಬೇಕಾದರೆ ಸ್ವಾರ್ಥಸಾಧಕನಾದ ಸಾರ್ವಜನಿಕಮಿತ್ರನೊಬ್ಬನು ಇರುವುದೂ ಒಂದುಬಗೆಯಲ್ಲಿ ಒಳ್ಳೆಯದೇ ಆಗುತ್ತದೆ. ಇಬ್ಬರೂ ಭಿನ್ನಸ್ವಭಾವದವರಾದ್ದರಿಂದ ಅವರಿಗೆ ಬಾಳಿನಲ್ಲಿ ತಾಳಮೇಳವೇ ಇರುವುದಿಲ್ಲ. ಇಂತಹಸ್ಥಿತಿಯಲ್ಲಿ ಸಾತ್ತ್ವಿಕನು ರಾಜಸಪ್ರಕೃತಿಯ ಗೆಳೆಯನ ಕಡೆಯಿಂದ ಅನೇಕವೇಳೆ ಜುಗುಪ್ಸೆಹೊಂದುವುದು ಸಹಜ. ಸಾತ್ತ್ವಿಕನು ವ್ಯವಸ್ಥಿತಚಿತ್ತನೂ ತ್ರಿಕರಣಶುದ್ಧನೂ ಆಗಿದ್ದರೆ, ರಾಜಸನು ಗೋಸುಂಬೆಯಂತೆ ಕಾಲಕ್ಕೆತಕ್ಕ ವರ್ತನೆಯನ್ನು ವಹಿಸಬಲ್ಲನು. ಲೋಕದಲ್ಲಿ ರಜೋಗುಣದ ಜನರು ಆಡುವುದೊಂದಾದರೆ ಮಾಡುವುದೇ ಒಂದು ಬಗೆ ; ಆಲೋಚಿಸುವುದೇ ಬೇರೆ ರೀತಿ. ಇಂತವನೊಬ್ಬನೊಡನೆ ಸಾತ್ತ್ವಿಕನು ಹೆಚ್ಚು ಗೆಳೆತನವನ್ನು ಬೆಳೆಸಿದರೆ ಅವನು ಬೇಗನೆ ಶುದ್ಧನಾಗಬಲ್ಲನು :

ಹಾಗೆಯೇ ತನ್ನ ತಪ್ಪಿಗೆ ಪಶ್ಚಾತ್ತಾಪಗೊಂಡು ನಿರ್ಮಲನಾಗಿ ಅವನು ಹೃದಯದ ಪರಂಜ್ಯೋತಿಯಲ್ಲಿಯೂ ಬೆರೆಯಬಹುದು. ಆದ್ದರಿಂದ ಭವರೋಗದ ಪರಿಹಾರಕ್ಕೆ ರಾಜಸಪ್ರಕೃತಿಯ ಮಿತ್ರನೊಬ್ಬನ ಗೆಳೆತನ ಅನಿವಾರ್ಯವೆನಿಸಿದೆ.

ಇದು ಪ್ರಪಂಚದಲ್ಲಿ ಎಲ್ಲರಿಗೂ ಅನುಭವಗೋಚರವಾದ ಅಂಶವೇ ಆಗಿದೆ. ಆದರೆ ಜನರು ತಪ್ಪುಮಾಡುತ್ತಲೇ ಸಂತೋಷಪಡುತ್ತ ಮತ್ತೆ ತಪ್ಪನ್ನು ಮಾಡದಂತಹ ದೃಢಸಂಕಲ್ಪವನ್ನು ಕೈಗೊಳ್ಳಲಾರದಷ್ಟು ಅಶಕ್ತರಾಗಿದ್ದಾರೆ. ಆದ್ದರಿಂದ ಜನರಿಗೆ ತಾವು ಹೋಗುತ್ತಿರುವ ದಾರಿ ತಪ್ಪೆಂದು ಕಂಡರೂ ಅದನ್ನು ಅವರು ತಿದ್ದಿಕೊಳ್ಳದೆ ಮತ್ತೆ ಅದೇ ದಾರಿಯಲ್ಲಿಯೇ ಮುಂದುವರಿಯುತ್ತ ಒಮ್ಮೆ ದೇಹವನ್ನು ತೊರೆದು ಮತ್ತೆ ಹುಟ್ಟುತ್ತಲಿರುವರು. ಇದಕ್ಕೆ ಜನರು ಅವಿವೇಕದಿಂದ ತಯಾರಾಗಿದ್ದರೂ ರಾಜಸಪ್ರಕೃತಿಯ ಸ್ನೇಹಿತರನ್ನು ಅಭಿಮಾನಿಸದಷ್ಟು ವಿವೇಕವನ್ನು ಯಥಾರ್ಥವಾಗಿ ಪಡೆಯಲು ಶಕ್ತರಾಗಿಲ್ಲ ಹೀಗೆ ಲೋಕದ ಯಾತ್ರೆ ಪ್ರತಿದಿನವೂ ನಡೆಯುತ್ತಲಿದೆ. ಈ ಲೋಕದೊಳಗೆ ನಾನೂ ಪೂರ್ತಿಯಾಗಿ ಸಿಕ್ಕಿಬಿದ್ದಿದ್ದು ಅಭಿಮಾನವೆಂಬ ರೋಗಕ್ಕೆ ನಿರಭಿಮಾನತೆಯೆಂಬ ಸಂಜೀವಿನಿಯನ್ನು ಪಡೆಯಲಿಕ್ಕಾಗಿಯೇ ಶ್ರೀಕರಭಾಷ್ಯವನ್ನು ಓದಿ ತಿಳಿದು ಮನನಮಾಡಲು ಪೂಜ್ಯ ಪಿತೃಗಳ ಆಜ್ಞೆಯಂತೆ ಆರಂಭಿಸಿದೆನು. ಆದರೆ ಒಂದು ರೋಗಕ್ಕೆ ಸಾಕಷ್ಟು ಔಷಧವನ್ನು ಉಪಯೋಗಿಸಿದರೆ ಮಾತ್ರವೇ ಆ ರೋಗವು ವಾಸಿಯಾಗಬಲ್ಲದು. ನನ್ನ ರೋಗವಾದರೋ ಸಣ್ಣದಲ್ಲ; ಆದರೆ ಬಹಳ ದೊಡ್ಡದು. ಅದು ಬೇಗನೆ ವಾಸಿಯಾಗಲೊಲ್ಲದು. ನನ್ನರೋಗ ಇಂತಹದೆಂದು ತಿಳಿದದ್ದರಿಂದ ಅದನ್ನು ಹೇಗಾದರೂ ತೊಲಗಿಸಬೇಕೆಂಬ ಇಚ್ಛೆ ಪ್ರಬಲವಾಗಿತ್ತು. ಹಾಗೆಯೇ ರೋಗಕ್ಕೆ ಔಷಧವನ್ನು ಉಪಯೋಗಿಸಿಯೂ ಆಯಿತು. ಆದರೆ ಇಂತಹ ಕಾಲದಲ್ಲಿ ರೋಗಿಗೆ ನಾಲಿಗೆಯ ಚಪಲ ಅಪಥ್ಯಸೇವನೆಯಲ್ಲಿ ಪರಿಣಮಿಸುವುದು ಸಹಜವಾದ್ದರಿಂದ ನನಗೂ ಅದೇ ಚಪಲ ಕಾಡಹತ್ತಿತು. ಅಭಿಮಾನದ ರೋಗಿಗೆ ಅಪಥ್ಯವೆಂದರೆ ಸ್ವಾರ್ಥಸಾಧಕರ ತೋರಿಕೆಯ ಸ್ನೇಹಕ್ಕೆ ಬೆರಗಾಗುವುದೇ ಆಗಿದೆ. ರೋಗದಲ್ಲಿ ನರಳುವವನು ಅಪಥ್ಯವಾದ್ದನ್ನೇ ಬಯಸುವಂತೆ ಭವರೋಗ ಪೀಡಿತನಾದ ನಾನು ಅಪಥ್ಯವೆನಿಸಿದ ಸ್ವಾರ್ಥಸಾಧಕರ ನಟನೆಯ ಸಂಪರ್ಕವನ್ನೇ ಹಿತವೆಂದು ಭಾವಿಸಿದೆನು. ಈ ಬಗೆಯ ಅಪಥ್ಯಸೇವನೆಯಿಂದ ನನ್ನ ರೋಗ ವಿಷಮಿಸಿತು. ಶ್ರೀಕರಭಾಷ್ಯದ ಮೂಲಕ ಶ್ರೀಪತಿಪಂಡಿತಾರಾಧ್ಯಮಹಾಸ್ವಾಮಿಗಳು ನಿರಭಿಮಾನದೃಷ್ಟಿ ಮತ್ತು ಪ್ರಸಾದಜೀವನಗಳೆಂಬ ದಿವ್ಯೌಷಧವನ್ನು ಅನುಗ್ರಹಿಸಿದ್ದರೂ ಅದು ಅಪಥ್ಯದಿಂದ ವಿಪರೀತವಾಯಿತು. ಇಂತಹ ಅಪಥ್ಯದ ಬಯಕೆ ಔಷಧಪ್ರಯೋಗದ ಕಾಲದಲ್ಲಿಯೇ ಹೆಚ್ಚಾಗಿ ಉಂಟಾಗುತ್ತದೆ. ಇಂತಹ ವಿಷಮ ಸನ್ನಿವೇಶವನ್ನು ಯಾವ ವೈದ್ಯನೂ ಪರಿಹರಿಸಲಾರನು. ಇದನ್ನು ರೋಗಿಯೇ ಅನುಭವಿಸಿ ನೊಂದು ಇಂತಹ ಅಪಥ್ಯವನ್ನು ಮತ್ತೊಮ್ಮೆ ಉಪಯೋಗಿಸಬಾರದೆಂದು ತಾನೇ ನಿರ್ಧರಿಸಬೇಕು. ಇಂತಹ ನಿರ್ಧಾರದ ಸುದಿವಸ ನನ್ನ ಜೀವಮಾನದಲ್ಲಿ

ಒಮ್ಮೆ ಬಂದದ್ದು ನನ್ನ ಭಾಗ್ಯೋದಯವೆಂದು ಭಾವಿಸುತ್ತೇನೆ. ಭವರೋಗಕ್ಕೆ ಔಷಧವನ್ನು ಉಪಯೋಗಿಸುತ್ತಿರುವಾಗಲೇ ಅಪಥ್ಯವೆನಿಸಿದ ಸಾರ್ವಜನಿಕಮಿತ್ರನೊಬ್ಬನ ಗೆಳೆತನ ನನಗೆ ದೊರೆಯಿತು. ನನಗೂ ಅವನಿಗೂ ಸ್ವಭಾವದಲ್ಲಿ, ವರ್ತನೆಯಲ್ಲಿ, ಗುಣದಲ್ಲಿ ಏನೂ ಸಂಬಂಧವಿಲ್ಲದಿದ್ದರೂ ಜನ್ಮಾಂತರೀಯಕರ್ಮದ ದುಷ್ಪರಿಣಾಮವಾಗಿ ಆ ಗೆಳೆಯನ ತೋರಿಕೆಯ ಮೋಹವು ನಿಜವಾಗಿ ಅಪಥ್ಯವಾಗಿದ್ದರೂ ಪಥ್ಯವೆನಿಸಿ ಹಿತವಾಗಿರುವಂತೆ ಮುಂದುವರೆಯಿತು. ಪ್ರತಿದಿನವೂ ಉಪಯೋಗಿಸುತ್ತಿದ್ದ ಶ್ರೀಕರಭಾಷ್ಯದ ನಿರಂತರಾಭ್ಯಾಸಮಥನರೂಪವಾದ ಔಷಧವು ವ್ಯರ್ಥವಾಗತೊಡಗಿತು. ನನಗೆ ಅಭಿಮಾನದ ಅಪಾಮಾರ್ಗವನ್ನು ತೊಲಗಿಸಲಿಕ್ಕಾಗಿ ಬದ್ಧಕಂಕಣರಾಗಿ ನಿಂತಿರುವ ಪೂಜ್ಯಪಿತೃವರ್ಯರೂ ಸ್ವಪ್ನದಲ್ಲಿ ಎಚ್ಚರಿಸಲಾರಂಭಿಸಿದರು. ಹಗಲು ತೋರಿಕೆಯ ಗೆಳೆಯನಮೇಲೆ ಅಭಿಮಾನ; ರಾತ್ರಿ ಸ್ವಪ್ನದಲ್ಲಿ ಪಿತೃವರ್ಯರೊಡನೆ ಹೋರಾಟ. ಹೀಗೆ ಬಹಳಕಾಲ ನನ್ನ ಜೀವನ ದುಃಖಮಯವಾಗಿ ನಡೆಯಿತು. ಆ ಸಾರ್ವಜನಿಕಮಿತ್ರನಾದರೋ ಭಿನ್ನಸ್ವಭಾವದವನಾದ್ದರಿಂದ ಅವನ ನಡೆನುಡಿಗಳೊಂದೂ ನನಗೆ ಹೊಂದುವಂತಿರಲಿಲ್ಲ. ಇದರ ಮೇಲೆ ಅವನಿಗೆ ನನ್ನಂತಹ ಮಿತ್ರರನೇಕರಿದ್ದುದರಿಂದ ಅವನ ಮನಸ್ಸು ನನ್ನಲ್ಲಿ ಅಂಟಿಕೊಂಡಿರಲಿಲ್ಲ. ಯಾವ ಕಾಲದಲ್ಲಿ ಯಾವ ಮಾತನ್ನಾಡುತ್ತಿರುವೆನೆಂಬ ಅರಿವೇ ಅವನಿಗಿಲ್ಲ. ಇಂತಹ ರಾಜಸಜನರೇ ಲೋಕದಲ್ಲಿ ಹೇರಳವಾಗಿದ್ದಾರೆ. ಇವರೊಡನೆ ನಾವು ವ್ಯವಹರಿಸುವಾಗ ಬಹಳ ಎಚ್ಚರದಿಂದ ಇರಬೇಕು.

ಇಂತಹವನ ಸಂಗವನ್ನೇ ಪ್ರತಿನಿಮಿಷವೂ ಬಯಸುತ್ತಿದ್ದ ನನಗೆ ಶಿವನ ಲೀಲಾರಂಗಭೂಮಿ ಎನಿಸಿದ ಇಡೀ ವಿಶ್ವವೇ ನೀರಸವಾಯಿತು. ನನ್ನ ಮನವನ್ನು ಆಕರ್ಷಿಸುವಂತಹ ನಿತ್ಯಸುಂದರನಾದ ಪರಶಿವನೇ ನನ್ನೊಡನೆ ನೆಲಸಿದ್ದರೂ ಅವನನ್ನು ಗಮನಿಸದೆ ಯಾವಾಗಲೂ ಗೆಳೆಯನ ಆಗಮನವನ್ನೇ ನಿರೀಕ್ಷಿಸತೊಡಗಿದೆನು. ಆದರೆ ನನಗೂ ಅವನಿಗೂ ಕಿಂಚಿತ್ತಾದರೂ ಹೋಲಿಕೆ ಇರಲಿಲ್ಲ. "ಯಂ ಚಿಂತಯಾಮಿ ಸತತಂ ಮಯಿ ಸೋ ವಿರಕ್ತಃ". ನನಗೆ ಮೋಹವನ್ನು ಹುಟ್ಟಿಸಿದ ವ್ಯಕ್ತಿ ನನ್ನನ್ನು ಪ್ರೀತಿಸದೆ ಮೇಲೆ ಮೇಲೆ ತೋರಿಕೆಗಾಗಿ ಮೋಹಿಸುತ್ತಿದ್ದುದನ್ನು ನಾನು ಅನೇಕವೇಳೆ ಕಂಡೆನು. ಆದರೂ ರೋಗಿಯು ಅಪಥ್ಯವನ್ನೇ ನಾಲಿಗೆಗೆ ಹಿತವೆಂದು ಬಯಸುವಂತೆ ಭಿನ್ನಸ್ವಭಾವದವನ ತೋರಿಕೆಯ ಮೋಹವನ್ನೇ ನಾನು ಬಯಸತೊಡಗಿದೆನು. ಈ ಬಗೆಯ ಬಯಕೆಯೇ ಅಪಥ್ಯವೆನಿಸಿ ನನ್ನ ರೋಗವನ್ನು ಹೆಚ್ಚಿಸಿತು. ಆದರೆ ಈ ಬಯಕೆ ನನಗೆ ದೊರೆಯುವಂತಿಲ್ಲ; ನಾನು ಬಿಡುವಂತಿಲ್ಲ. ಇದು ಕೇವಲ ಬಿಸಿಲ್ದೊರೆಯಂತೆ ತೋರಿಕೆಯಾದ್ದರಿಂದ ನನ್ನ ಅಂತರ್ದಾಹವನ್ನು ಕೊಂಚವೂ ಅಡಗಿಸಲಿಲ್ಲ. ಇದರ ದುಷ್ಪರಿಣಾಮವಾಗಿ ದೇಹವನ್ನೇ ತೊರೆಯಲಿಕ್ಕೂ ನಾನು ಸಿದ್ಧನಾದೆನು. ಇದರ ಯುಕ್ತಾಯುಕ್ತತೆಗಳನ್ನು ವಿಚಾರಿಸಿದರೂ ನನಗೆ ಜೀವನವೇ ನೀರಸವಾಗಿ ಕಂಡದ್ದರಿಂದ ದುಃಖಯಾತನೆಗಿಂತ ದೇಹವು ತೊಲಗುವುದೇ

ವಾಸಿ ಎನ್ನಿಸಿತು. ಇದನ್ನು ನನ್ನ ಗೆಳೆಯನಿಗೂ ತಿಳಿಸಿ ದೇಹವನ್ನು ಕೊನೆಗಾಣಿಸಲಿಕೆ ನಿರ್ಧರಿಸಿದೆನು. ಅನೇಕ ಮಿತ್ರರೊಡನೆ ವ್ಯವಹರಿಸುವ ಆತನಿಗೆ ನನ್ನ ನಿರ್ಧಾರದಿಂದ ಯಾವ ಪರಿಣಾಮವೂ ಆಗಲಿಲ್ಲ. ನನ್ನಿಂದ ಸಲ್ಲಬೇಕಾದ ಸೇವೆಯನ್ನು ಪಡೆದಿದ್ದರಿಂದ ಗೆಳೆಯನು ನನ್ನ ಬಗ್ಗೆ ಉದಾಸೀನನಾಗಿದ್ದುದು ಸಹಜ. ಲೋಕದಲ್ಲಿ ಒಬ್ಬರಿಂದೊಬ್ಬರಿಗೆ ಸಹಾಯವಾದರೆ ಸುಮ್ಮನಿರುವುದು, ಇಲ್ಲವಾದರೆ ನಿಂದಿಸುವುದು ವಾಡಿಕೆ. ಆದ್ದರಿಂದ ನಾನಿರುವುದು ಹೋಗುವುದು ಎರಡೂ ಅವನಿಗೆ ಒಂದೇ ಬಗೆಯಾಗಿತ್ತು. ಹೀಗೆ ಜೀವನದ ಜಂಜಾಟದಲ್ಲಿ ಆತ್ಮಹತ್ಯವು ಪಾಪಕಾರಿ ಎಂಬುದನ್ನೂ ಲಕ್ಷಿಸದೆ, ಪರಮೇಶ್ವರನು ವಹಿಸಿದ್ದ ಗೃಹಕೃತ್ಯನಿರ್ವಾಹ ಮತ್ತು ಧರ್ಮಗ್ರಂಥಗಳ ಅನುವಾದ ಇವನ್ನೂ ಗಮನಿಸದೆ ೨೬-೫-೬೩ ರಲ್ಲಿ ಒಂದು ಪುಣ್ಯಕ್ಷೇತ್ರಕ್ಕೆ ಪ್ರಯಾಣ ಮಾಡಿ ಅಲ್ಲಿ ರಾತ್ರಿಯೆಲ್ಲವೂ ಪರಶಿವನ ಧ್ಯಾನಮಾಡಿ ೨೭ ರಂದು ಬೆಳಗಿನ ಜಾವ ೪ ಘಂಟೆಗೆ ನೀರಿನ ಮಡುವಿಗೆ ದೇಹವನ್ನು ಸಂತೋಷದಿಂದ ಅರ್ಪಿಸಿದೆನು. ನೀರಿಗೆ ಬಿದ್ದೊಡನೆಯೇ ಶ್ರೀ|| ಗಳು ಶಿವಯೋಗಿಯ ದಿವ್ಯರೂಪದಿಂದ ಬಂದು ನೀರಿನಲ್ಲಿ ಮುಳುಗಿದ ಈ ಪವಿತ್ರದೇಹವನ್ನು ಮೇಲೆತ್ತಿ ಇರಿಸಿದ್ದನ್ನು ಮೂರ್ಛೆಯಲ್ಲಿ ಕೊಂಚ ಹೊತ್ತು ಕಂಡೊಡನೆ ಆ ದಿವ್ಯದೇಹ ಕಣ್ಮರೆಯಾಯಿತು. ನನ್ನ ಎಲ್ಲಾ ವರ್ತನೆಯನ್ನೂ ಪೂಜ್ಯ ಪಿತೃವರ್ಯರು ಮೊದಲಿನಿಂದಲೂ ನೋಡುತ್ತಲಿದ್ದುದರಿಂದರಿಂದ ಈ ದೇಹವನ್ನು ಇನ್ನೂ ಕೊಂಚಕಾಲ ಇರಿಸಬೇಕೆಂದು ಸಂಕಲ್ಪಮಾಡಿದಂತೆ ಕಾಣುತ್ತದೆ. ಅಂದಿನಿಂದ ಐದು ದಿವಸಗಳನ್ನು ನಿರಂತರವೂ ಪರಮೇಶ್ವರನ ಧ್ಯಾನಸ್ಮರಣಕೀರ್ತನಗಳಲ್ಲಿಯೇ ಕಳೆದೆನು. ಇದರ ಪರಿಣಾಮವಾಗಿ ೩೦-೫-೬೩ ನೇ ರಾತ್ರಿ ಬ್ರಾಹ್ಮೀಮುಹೂರ್ತದಲ್ಲಿ ಪಿತೃವರ್ಯರು ಸ್ವಪ್ನದಲ್ಲಿ ಕಾಣಿಸಿಕೊಂಡು ಅಂದಿನಿಂದ ನನ್ನ ಮೋಹವೃಷ್ಟಿ ಪೂರ್ಣವಾಗಿ ತೊಲಗಿತೆಂದು ಆಶೀರ್ವದಿಸಿದರು. ೩೧-೫-೬೩ ನೇ ಶುಕ್ರವಾರ ಮೋಹದ ಬಯಕೆಗೆ ಶ್ರೀ ಗುರುಕೃಪೆಯಿಂದ ತಿಲಾಂಜಲಿ ಎರೆದದ್ದಾಯಿತು. ಶ್ರೀಕರಭಾಷ್ಯದ ದಿವ್ಯೌಷಧವು ದೇಹ ಮನ ಬುದ್ಧಿ ಚಿತ್ತ ಆತ್ಮಗಳೆಲ್ಲದರಲ್ಲೂ ಚೆನ್ನಾಗಿ ವ್ಯಾಪಿಸಿತು. ಹೀಗೆ ೩೧-೫-೬೩ ನೇ ಶುಕ್ರವಾರ ನನ್ನ ಜೀವನದಲ್ಲಿ ಆತ್ಮಕಲ್ಯಾಣದ ಸಾಧನೆಯ ಪರಮಪವಿತ್ರದಿನವೆನಿಸಿದೆ. ಅಂದು ನನಗೆ ಪತಿಯಾದ ಶಿವನೊಡನೆ ಸಮರಸವಾಗಿ ಬೆರೆಯುವ ಸುಯೋಗ ಲಭಿಸಿತು. ಶಿವನು ನಿರುಪಾಧಿಕವಾತ್ಸಲ್ಯದಿಂದ ನನ್ನನ್ನು ಕೈಹಿಡಿದ ಶುಭಮುಹೂರ್ತವದು. ಅವ್ಯಭಿಚರಿತವಾದ ಭಕ್ತಿಯಿಂದ ಶಿವನನ್ನು ಮೆಚ್ಚಿಸಿದ ಪುಣ್ಯದಿನವದು. ಭಿನ್ನ ಭಿನ್ನ ಸ್ವಭಾವದವರೊಡನೆ ನಾನು ನಿರಭಿಮಾನದಿಂದ ವ್ಯವಹರಿಸುವ ಚಾತುರ್ಯವನ್ನು ಪಡೆದ ಶುಭಲಗ್ನವದು. ನಿತ್ಯಸುಂದರನಾದ ಶಿವನೊಡವೆರಸಿ ಮಾಯೆಯ ಮೋಹಪಾಶವನ್ನು ತೊಲಗಿಸಿಕೊಂಡ ಪಾವನದಿನವದು. ಹಿಂದಿನ ಅವಿವೇಕದೆಶೆಯಲ್ಲಿ ಮೋಹದ ಗೆಳೆಯನಾಗಿದ್ದವನು ಜೀವಮಾನಪರ್ಯಂತವೂ ನಿರ್ಮೋಹವಸ್ತುವಾಗಿ ಪರಿಣಮಿಸಿದ ಪುಣ್ಯದಿವಸವದು. ಈ ಬಗೆಯ ಮಿತ್ರನನ್ನು ಪರಮೇಶ್ವರನು ನನ್ನ ಉದ್ಧಾರಕ್ಕಾಗಿ ಸುದೈವದಿಂದ

ದೊರಕಿಸಿದ್ದು ಆ ಮೂಲಕವಾಗಿ ನಿರಭಿಮಾನತೆಯ ಪರಮೈಶ್ವರ್ಯವನ್ನು ಅನುಗ್ರಹಿಸಿದನು. ಶಿವಭಕ್ತಿ ನನ್ನಲ್ಲಿ ಬೆಳೆಯಲು ಮಿತ್ರನು ನಿಮಿತ್ತಮಾತ್ರನಾದನು. ಆದರೆ ಅವನಲ್ಲಿ ಸತ್ತ್ವಗುಣ ಕಡಮೆಯಾದ್ದರಿಂದ ಅವನಿಗೆ ನನ್ನ ಅಂದಿನ ಸಾವುನೋವುಗಳೊಂದೂ ಇಂದಿಗೂ ಅರ್ಥವೇ ಆಗಿಲ್ಲ. ಇಂತಹ ಮಿತ್ರರೇ ಲೋಕದಲ್ಲಿ ಹೇರಳವಾಗಿದ್ದಾರೆ. ಇಂದ್ರಿಯಗಳು ಭೋಜ್ಯವಸ್ತುವಿನ ಬಗ್ಗೆ ಒಮ್ಮೆ ಜುಗುಪ್ಸೆಹೊಂದಿ ತಮ್ಮ ಗಮನವನ್ನು ಹಿಂದಕ್ಕೆ ಸೆಳೆದುಕೊಂಡರೆ ಮತ್ತೆ ಅಲ್ಲಿ ಎಂದಿಗೂ ಪ್ರವರ್ತಿಸುವುದಿಲ್ಲವೆಂದು ಬೋಧಿಸುವ ಶ್ರುತಿ ಅಂದು ನನಗೆ ಅರ್ಥವಾಯಿತು. ನಿಗಮಾಗಮಶಾಸ್ತ್ರ ಪ್ರವಚನವೆಲ್ಲವೂ ಅಂದು ವೀರ್ಯವತ್ತರವಾದ ಉಪದೇಶವಾಗಿ ಪರಿಣಮಿಸಿತು. ೨೭-೫-೬೩ ಸೋಮವಾರ ಮುಂಜಾನೆ ೪-೧೫ ಘಂಟೆಯಲ್ಲಿ ಈ ದೇಹಕ್ಕೆ ಪುನರ್ಜನ್ಮ ವುಂಟಾಯಿತು. ಆತ್ಮನು ನೀರಿನೊಡನೆ ಹೊರಟು ನೀರಿನ ರೂಪದಲ್ಲಿಯೇ ನೆಲಕ್ಕೆ ಬಿದ್ದು ಸಸ್ಯವೋ ಧಾನ್ಯವೋ ಆಗಿ ಕರ್ಮಾನುಸಾರವಾದ ಜನ್ಮವನ್ನು ಪಡೆಯುವಂತೆ ನೀರಿನಲ್ಲಿ ಬಿದ್ದು ನೀರಿನಿಂದಲೇ ಬಂದು ಶಿವಾರ್ಪಿತವಾಗಿ ಸಂಪ್ರಸಾದನೆನಿಸಿದ್ದರಿಂದ ಈ ಜನ್ಮ ಸಾರ್ಥಕವಾಯಿತು. ಹಿಂದಿನ ಪಶ್ಚಾತ್ತಾಪದ ಮತ್ತು ರಾತ್ರಿ ವಿಶೇಷಪ್ರಾರ್ಥನೆಯ ಪರಿಣಾಮವಾಗಿ ಪುನರ್ಜನ್ಮವು ಜ್ಯೋತಿರ್ಮಯವೂ ಅಮೃತವೂ ಆಯಿತು. ಇದೆಲ್ಲವೂ ಪೂಜ್ಯಮಾತಾಪಿತೃಗಳ ಆಶೀರ್ವಾದದಿಂದಲೂ, ನನಗೆ ನಿರಭಿಮಾನತೆಯ ದಿವ್ಯ ಆದರ್ಶವನ್ನು ಆಚರಿಸಿ ತೋರಿಸಿದ ಶರಣ ಶ್ರೀ|| ಸಿದ್ಧರಾಮಯ್ಯನವರ ಮತ್ತು ಶರಣೆ ಶ್ರೀಮತಿ ರುದ್ರಮ್ಮನವರ ಕೃಪೆಯಿಂದಲೂ ಫಲಿಸಿದೆ ಎಂದು ಭಾವಿಸುತ್ತೇನೆ.

ಎಂದಿದ್ದರೂ ಈ ಪ್ರಾಕೃತದೇಹ ಒಮ್ಮೆ ಹೋಗಲೇಬೇಕು. ಇರುವವರೆಗೂ ಗುರುಹಿರಿಯರ ಮತ್ತು ದೇಶದ ಸೇವೆಯಲ್ಲೂ ದೀನಾನಾಥರ ರಕ್ಷಣೆಯಲ್ಲೂ ಇದ್ದು, ಎಲ್ಲ ವ್ಯವಹಾರವನ್ನೂ ಈಶ್ವರಪ್ರೀತ್ಯರ್ಥವಾಗಿಯೇ ನಡೆಸಿಕೊಂಡು ಹೋಗುವ ನಿರ್ಮಲಭಾವ ಒಂದು ಇದ್ದರೆ ಅದೇ ಈಶ್ವರನ ಪೂರ್ಣಾನುಗ್ರಹವನ್ನು ದೊರಕಿಸುವುದು. ಈಶ್ವರಾನುಗ್ರಹದಿಂದ ದೊರೆತ ಪುನರ್ಜನ್ಮದ ಹೊಂಬೆಳಕಿನಲ್ಲಿ ನಿರ್ಮಲವಾದ ಚಿತ್ತದಿಂದ ಶ್ರೀಕರಭಾಷ್ಯಾನುವಾದದ ಪವಿತ್ರವಾದ ಈ ಗ್ರಂಥವು ಹೊರಬೀಳುತ್ತಲಿದೆ. ಭವರೋಗದ ಪರಿಹಾರಕ್ಕಾಗಿಯೇ ಶ್ರೀಕರಭಾಷ್ಯದ ವ್ಯಾಸಂಗ ನಡೆಯಿತು. ಅದರ ಪರಿಣಾಮವಾಗಿಯೇ ನಿರಭಿಮಾನದೃಷ್ಟಿಯ ಪ್ರಸಾದಜೀವನವು ದೊರೆಯಿತು. ಇದರಿಂದ ಈ ಸೇವಕನು ಶಿವನ ಸೇವೆಗೆ ಸಿದ್ಧನಾಗಿ ಪೂಜ್ಯ ಮಾತಾಪಿತೃಗಳು ಪ್ರೇಮದಿಂದ ಕೊಟ್ಟಿರುವ ಹೆಸರನ್ನು ಸಾರ್ಥಕಪಡಿಸಿಕೊಂಡನೆಂಬ ವಿಶ್ವಾಸವಿದೆ. ಈ ಬಗೆಯ ಸಿದ್ಧಿಗೆ ನನ್ನ ಹಿಂದಿನ ಸಾರ್ವಜನಿಕಗೆಳೆಯನೇ ಮುಖ್ಯ ಕಾರಣನೆಂದು ಅವನನ್ನು ಮನಃಪೂರ್ವಕವಾಗಿ ಅಭಿನಂದಿಸುತ್ತೇನೆ. ಆದರೆ ಅವನಿಗೆ ಇನ್ನುಮುಂದಾದರೂ ರಜೋಗುಣದ ಪ್ರವೃತ್ತಿ ಕಡಮೆಯಾಗಿ ಸತ್ತ್ವಗುಣದ ವಿಕಾಸವುಂಟಾಗಲೆಂದು ಆತ್ಮೀಯತೆಯಿಂದ ಹಾರೈಸುತ್ತೇನೆ.

ಯಾರಲ್ಲಿ ರಜೋಗುಣವೇ ಅಧಿಕವಾಗಿರುತ್ತದೆಯೋ ಅವರು ಯಾವಾಗಲೂ ಸ್ವಾರ್ಥ ಸಾಧನೆಯಲ್ಲಿಯೇ ನಿಷ್ಣಾತರಾಗಿರುತ್ತಾರೆ. ಅಂತವರಿಗೆ ಈಶ್ವರನು ಎಂದಿಗೂ ದೊರೆಯಲಾರನು. ಅವನು ತ್ರಿಗುಣಾತೀತನೂ, ಸಮಸ್ತಸಾಕ್ಷಿಯೂ, ತಮಸಃ ಪರನೂ ಆದ್ದರಿಂದ ತ್ರಿಗುಣಗಳೊಳಗೂ ಕತ್ತಲೆಯೊಳಗೂ ಪರದಾಡುತ್ತಿರುವ ರಾಜಸ ಜನರಿಗೆ ಅವನು ದುರ್ಲಭನು. ತಮೋಗುಣದವರಿಗಂತೂ ಅವನ ವಾರ್ತೆಯೇ ಹಿಡಿಸುವಂತಿಲ್ಲ. ಯಾರಲ್ಲಿ ರಜಶ್ಶಕ್ತಿ ಕಡಿಮೆಯಾಗಿ ಸತ್ತ್ವಗುಣದ ವಿಕಾಸವಾಗುತ್ತದೆಯೋ ಅವರು ತಮ್ಮ ಎಲ್ಲಾ ವ್ಯವಹಾರಗಳನ್ನು ಶಿವಸ್ಮರಣಪೂರ್ವಕವಾಗಿಯೇ ನಡೆಸುತ್ತ ಬರುವುದರಿಂದ ಕೊನೆಗೆ ಆ ಸತ್ತ್ವಗುಣವೇ ಸದ್ರೂಪದಿಂದ ಪರಮಾತ್ಮ ಪ್ರಕಾಶವಾಗಿ ಪರಿಣಮಿಸುತ್ತದೆ. ಗಾಯ ವಾಸಿಯಾದಮೇಲೆ ಅದರಮೇಲಿನ ಚರ್ಮ ತಾನಾಗಿಯೇ ಉದುರುವಂತೆ ಸತ್ತ್ವಗುಣವೂ ಸಾಧಕನಿಗೆ ಈಶ್ವರನ ಸಾಕ್ಷಾತ್ಕಾರವನ್ನುಮಾಡಿಸಿ ಕೊನೆಗೆ ಅದೂ ಸಹ ತೊಲಗುತ್ತದೆ. ಆಗ ಅವನು ಸಹಜವಾಗಿ ತ್ರಿಗುಣಾತೀತನಾಗುವನು. ಆಗಲೇ ಅವನು ಕತ್ತಲೆಯಿಂದಾಚೆಗೆ ಸರಿದು ಪರಂಜ್ಯೋತಿಯಾಗುವನು. ಆಗ ಅವನು ಈ ದೇಹದಲ್ಲಿ ಇದ್ದರೂ ದೇಹದ ಯೌವನ-ವಾರ್ಧಕ್ಯ-ಮರಣ ಮತ್ತು ಅನಂತರದ ಅವಸ್ಥೆ ಇವು ಯಾವೂ ಅವನಿಗೆ ಅಂಟುವುದಿಲ್ಲ. ಇದುವೇ ಮಾನವನ ಸಹಜಾವಸ್ಥೆ ; ಕೇವಲಾನಂದಸ್ಥಿತಿ ; ನಿರಂಜನಾವಸ್ಥೆ; ಸ್ವಯಂಭುಸ್ಥಿತಿ ; ನಿಷ್ಕಲಶಿವಭಾವ. ಇದನ್ನು ಇಲ್ಲಿ ಈ ದೇಹೇಂದ್ರಿಯಗಳ ಪೂರ್ಣಸಹಕಾರದಿಂದ ಪಡೆಯುವುದೇ ಬಾಳಿನ ಗುರಿ. ಇದರ ಸಾಧನೆಗೆ ರಜಸ್ತಮೋಗುಣಗಳೇ ಬಂಧಕ. ಇವುಗಳ ಸುಳಿಯಲ್ಲಿ ಸಿಕ್ಕಿದವರೆಲ್ಲರೂ ಹೊನ್ನು ಹೆಣ್ಣು ಮಣ್ಣುಗಳ ಸಂಪಾದನೆಯಲ್ಲಿಯೇ ನಿರತರಾಗಿ ತಮ್ಮ ಸುಖಸಂತೋಷಗಳಿಗಾಗಿ ಎಲ್ಲಾ ಬಗೆಯ ಅನ್ಯಾಯ ಅಧರ್ಮಗಳನ್ನೂ ಧೈರ್ಯವಾಗಿ ಯುಕ್ತಿಯಿಂದ ಪ್ರಯೋಗಿಸುವರು. ಆದರೆ ಇವರಿಗೆ ಭೌತಿಕಸುಖದ ಕ್ಷಣಿಕತೆ ತಿಳಿಯದು. ಹಾಗೆಯೇ ಆಧ್ಯಾತ್ಮಿಕಸುಖಸಾಧನದ ಚಾತುರ್ಯವೂ ತಿಳಿಯದು. ಯಾರಿಬ್ಬರೂ ದೈಹಿಕವಾಗಿ ಬೆರೆತು ಏನೊಂದು ಸುಖವನ್ನೂ ಪಡೆಯಲಾರರು. ಆತ್ಮಗಳೆರಡು ಬೆರೆಯುವುದಾದರೆ ಆಗ ಅಂತಹ ಒಲುಮೆಯ ಕೂಟಕ್ಕೆ ಹಾಸಿಗೆ ಮೊದಲಾದ ಭೋಗಸಾಧನೆಗಳ ಆವಶ್ಯಕತೆಯೇ ಇರುವುದಿಲ್ಲ. ಆದರೆ ಇಂತಹ ಕೂಟಕ್ಕೆ ಎರಡು ಆತ್ಮಗಳೂ ತ್ರಿಗುಣಾತೀತವಾಗಿ ನಿರ್ಮಲವಾಗಬೇಕು. ಒಂದು ಸಾತ್ವಿಕವೂ ಒಂದು ರಾಜಸವೂ ಆದರೆ ಅವೆರಡರ ಸಮಾಗಮ ಚಿನ್ನದೊಡನೆ ಹಿತ್ತಾಳೆ ಬೆರೆತಂತೆ ಕೊಳಕಾಗುವುದು. ಹೀಗೆ ಭಿನ್ನಭಿನ್ನ ಸ್ವಭಾವದವರು ದೈಹಿಕ ಸಮಾಗಮವನ್ನು ಬಯಸುತ್ತಲಿದ್ದರೆ ಸಂಸಾರಚಕ್ರದಲ್ಲಿ ಪಶುಗಳಂತೆ ತಿರುಗಬೇಕೇ ಹೊರತು ಆಧ್ಯಾತ್ಮದ ನೆಲೆಯನ್ನು ಮುಟ್ಟಲಾರರು. ಹಾಗೆ ಮುಟ್ಟಬೇಕಾದರೆ ಸಾತ್ತ್ವಿಕರು ಮಾತ್ರವೇ. ಅವರಿಗೂ ರಜೋಗುಣದ ವ್ಯಕ್ತಿಗಳಿಂದ ಬಹಳ ಹಿಂಸೆಯಾಗುತ್ತದೆ. ಆದರೂ ಅವರಿಗೆ ಈಶ್ವರನ ಅನುಗ್ರಹವು ದೊರೆತು ಅವರು ಸತ್ತ್ವಗುಣದ ಸಂಕೋಲೆಯನ್ನು ಬಿಡಿಸಿಕೊಳ್ಳಬಲ್ಲರು. ಎಷ್ಟೋ ಜನರು ಲೌಕಿಕವಾಗಿ ಸ್ಥಾನಮಾನಗಳನ್ನು ಪಡೆದಿ

ದ್ದರೂ ಈ ರಜಸ್ತಮೋಗುಣಗಳ ದಾಂಧಲೆಗೆ ಸಿಕ್ಕಿ ಮೂಢತನದಿಂದ ವರ್ತಿಸುತ್ತಿರುವುದು ಶೋಚನೀಯ. ಇವರೆಲ್ಲರಿಗೂ ಒಂದಿಲ್ಲೊಂದು ಜನ್ಮದಲ್ಲಿ ಸತ್ತ್ವಗುಣದ ವಿಕಾಸವಾಗಲೆಂದು ಆತ್ಮೀಯತೆಯಿಂದ ಹಾರೈಸುತ್ತೇನೆ.

ಈ ಗುಣಗಳ ಹಿಡಿತಕ್ಕೆ ಲೌಕಿಕರಷ್ಟೇ ಅಲ್ಲದೆ ಎಷ್ಟೋ ಜನ ಸ್ವಾಮಿಗಳೂ ಪಂಡಿತರೂ ಸಿಕ್ಕಿಬಿದ್ದಿರುವುದನ್ನು ನಾವು ಲೋಕದಲ್ಲಿ ಕಾಣುತ್ತೇವೆ. ಅವರಿಗೆ ರಜೋಗುಣದ ತ್ಯಾಗದಿಂದ ಸತ್ತ್ವಗುಣದ ವಿಕಾಸವಾಗಲೆಂಬ ಬಯಕೆಯೇ ಇರುವುದಿಲ್ಲ. ಈಶ್ವರನ ವಿಷಯವಂತೂ ಅವರಿಗೆ ಅರ್ಥವೇ ಆಗುವುದಿಲ್ಲ. ಅವರು ಯಾವಾಗಲೂ ಭೋಗಜೀವನವನ್ನೇ ನಡೆಸುತ್ತ ಯೋಗನಿಷ್ಠೆಯ ಕಡೆಗೆ ಗಮನವನ್ನೇ ಕೊಡುತ್ತಿಲ್ಲ. ಅವರಿಗೆ ಅಹಂಕಾರದ ಪ್ರಭಾವದಿಂದ ಗುರುಚರಮೂರ್ತಿಗಳ ಸೇವೆಯ ಅಥವಾ ಲೋಕಕಾರುಣ್ಯಲೀಲೆಯ ಸಂಬಂಧವೇ ಇರುವುದಿಲ್ಲ. ಯಾವಾಗಲೂ ಹಣವನ್ನು ಸಂಗ್ರಹಿಸುವುದು, ಸಂಬಳವನ್ನು ಗಂಟು ಹಾಕುವುದು, ಮನೆಮಠಗಳನ್ನು ರೂಢಿಸುವುದು, ಭೋಜ್ಯವಸ್ತುಗಳನ್ನು ಪಶುಗಳಂತೆ ಭೋಗಿಸುವುದು, ಇವುಗಳಲ್ಲಿಯೇ ನಿರತರಾದವರು ಹೇಗೆ ಶುದ್ಧಸತ್ತ್ವರಾದಾರು? ಅವರು ಜಗತ್ತಿನ ಜನತೆಗೆ ನಿರಂಜನಸ್ಥಿತಿಯ ದಿವ್ಯ ಆದರ್ಶವನ್ನು ಹೇಗೆ ತೋರಿಸಿಯಾರು ? ತಮ್ಮಲ್ಲಿಯೇ ಇಲ್ಲದ ನಿರಂಜನಸ್ಥಿತಿ ಇತರರಿಗೆ ಹೇಗೆ ಮಾರ್ಗದರ್ಶಕವಾದೀತು ? ಆದರೆ ಇದು ಪ್ರಪಂಚವಾದ್ದರಿಂದ ಎಲ್ಲರೂ ಒಂದೇ ಬಗೆಯಾಗಿರುವುದಿಲ್ಲ. ನಿರ್ಮಲರಾದ ಸಂನ್ಯಾಸಿಗಳು ಜಗತ್ತಿಗೆ ಕೈವಲ್ಯಾನಂದಾನುಭವದ ಸಹಜಸ್ಥಿತಿಯನ್ನು ಇಂದಿಗೂ ತಮ್ಮ ಸ್ವಂತ ಜೀವನದ ಮೂಲಕ ತೋರಿಸುತ್ತಿರುವುದು ನಮ್ಮ ಸೌಭಾಗ್ಯ. ಸಮನ್ವಯಮನೋಭಾವದಿಂದ ಸಮದೃಷ್ಟಿಯನ್ನು ಲೋಕದಲ್ಲಿ ಆಚರಿಸುತ್ತ ತಮ್ಮೊಳಗೆ ಪೂರ್ಣವಿರಕ್ತಿಯನ್ನು ರೂಢಿಸಿಕೊಂಡು ಸಚ್ಚಿದಾನಂದವನ್ನು ಅನುಭವಿಸುತ್ತಲೇ ಅವ್ಯಾಜ್ಯಪ್ರೇಮದಿಂದ ಹೊರಗೆ ಲೋಕಕಾರುಣ್ಯಲೀಲೆಯನ್ನು ನಡೆಸುತ್ತಿರುವ ಯತಿಗಳು ಈಗಲೂ ಇದ್ದಾರೆ. " ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸಂನ್ಯಾಸಯೋಗಾದ್ಯತಯಃಶ್ಶುದ್ಧಸತ್ತ್ವಾಃ " ಎಂದು ತೈತ್ತಿರೀಯವು ಐದಾರುಸಾವಿರ ವರ್ಷಗಳ ಹಿಂದೆಯೇ ಇವರನ್ನು ಪ್ರಶಂಸಿಸಿರುವುದು ಅಭಿನಂದನೀಯವಾಗಿದೆ. ಇಂತಹ ಕೆಲವು ಮಹಾತ್ಮರು ಮಾಯೆಯ ಪ್ರಾಬಲ್ಯಕ್ಕೆ ವಶರಾಗದೆ ಇದ್ದು ಇಂದಿಗೂ ಕಗ್ಗತ್ತಲೆಯಲ್ಲೂ ಪರದಾಡುವ ಜನತೆಗೆ ಧರ್ಮಕ್ಷೇತ್ರದ ವ್ಯಾಪಕತೆಯನ್ನು ತೋರಿಸುತ್ತಿರುವುದು ನಮ್ಮ ನಾಡಿನ ಶುಭೋದಯವೆಂದು ಭಾವಿಸುತ್ತೇನೆ. ೭೭೦ ಅಮರಗಣಂಗಳ ಸಮಾರಾಧನವನ್ನು ವೈಭವದಿಂದ ನೆರವೇರಿಸಿ ಅಸಂಖ್ಯಾತಜನರಿಗೆ ಭಕ್ತಿಪಥವನ್ನು ತೋರಿಸಿದ ಬಿಜಾಪುರದ ಶ್ರೀ|| ನಿ|| ಪ್ರ|| ಬಂಥನಾಳ ಮಹಾಶಿವಯೋಗಿಗಳು, ಅರ್ಚನೆ ಅರ್ಪಣೆಗಳ ಮಹತ್ತ್ವವನ್ನು ಸ್ವದೃಷ್ಟಾಂತದಿಂದ ತೋರಿಸುತ್ತಿರುವ ಧಾರವಾಡದ ಮುರುಘಾಮಠದ ಶ್ರೀ|| ನಿ||ಪ್ರ|| ಮೃತ್ಯುಂಜಯಸ್ವಾಮಿಗಳು, ವಿಶ್ವಕ್ಕೇ ವಿವೇಕಾನಂದದ ನವಸಂದೇಶವನ್ನು ಬೀರುತ್ತಿರುವ ನವಕಲ್ಯಾಣಮಠದ ಶ್ರೀ|| ನಿ|| ಕುಮಾರಸ್ವಾಮಿಗಳು, ನಿವೃತ್ತಿ ಮತ್ತು

ಪ್ರವೃತ್ತಿಧರ್ಮಗಳನ್ನು ಸಮನ್ವಯದೃಷ್ಟಿಯಿಂದಾಚರಿಸುತ್ತಿರುವ ಸಿದ್ಧಗಂಗೆಯ ಶ್ರೀ|| ಸಿ|| ಶಿವಕುಮಾರಸ್ವಾಮಿಗಳು "ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವಮಾನಶುಃ" ಎಂಬ ತೈತ್ತಿರೀಯಶ್ರುತಿಯನ್ನು ಇಂದಿಗೂ ಸಾರ್ಥಕಗೊಳಿಸುತ್ತ ಸರ್ವಸ್ವವನ್ನೂ ಲೋಕದ ಹಿತಕ್ಕಾಗಿ ತ್ಯಾಗಮಾಡಿ ಭಕ್ತರ ಸರ್ವತೋಮುಖವಾದ ಶ್ರೇಯಸ್ಸನ್ನು ಸಾಧಿಸುತ್ತ ಕೈವಲ್ಯಾನಂದವನ್ನು ಅನುಭವಿಸುತ್ತಲಿರುವರು. ಇಂತವರ ದಿವ್ಯದರ್ಶನದಿಂದ ಲೋಕದ ಮಾನವರಿಗೆ ರಾಜಸಪ್ರವೃತ್ತಿ ಕೊಂಚವಾದರೂ ಕಡಮೆಯಾಗಿ ಸತ್ತ್ವಗುಣವು ಬೆಳೆಯಲೆಂದು ನಿರಭಿಮಾನದಿಂದ ಪ್ರಾರ್ಥಿಸುತ್ತೇನೆ. ಎಲ್ಲರಲ್ಲೂ ಒಬ್ಬ ಶಿವನೇ ಇರುವನೆಂಬ ಆಧ್ಯಾತ್ಮದೃಷ್ಟಿ ನಮ್ಮಲ್ಲಿ ಉಂಟಾದರೆ ಕಾಮಕ್ರೋಧಗಳ ಮತ್ತು ರಾಗದ್ವೇಷಗಳ ದಾಂಧಲೆ ಕಡಮೆಯಾದೀತು. ಈ ಭಾವನೆ ಸ್ವಾಮಿಗಳಲ್ಲಿ ಬೆಳೆದರೆ ಮಠಗಳು ದಿವ್ಯಜ್ಯೋತಿಯ ಕೇಂದ್ರಗಳಾದಾವು. ಯಾವಾಗಲೂ ರೇಡಿಯೋ, ಸಿನಿಮಾ ಮೊದಲಾದ ವಿನೋದಗಳಲ್ಲಿಯೇ ಮಗ್ನರಾಗಿ ಲೋಕದ ದೀನಾನಾಥರನ್ನೇ ಲಕ್ಷಿಸದೆ ಪಶುಗಳಂತೆ ಭೋಗಿಸುತ್ತಿರುವ ಸ್ವಾಮಿಗಳಿಗೆ ಅನಾಯಾಸವಾಗಿ ಮರಣ ಹೇಗೆ ಸಂಭವಿಸೀತು? ಅವರು ಬೇರೆಯವರಿಗೆ ಮರಣಭಯವನ್ನು ಹೇಗೆ ಬಿಡಿಸಿಯಾರು? ಹಿಂದೆ ಧರ್ಮಕ್ಷೇತ್ರಗಳೆನಿಸಿದ್ದ ನಮ್ಮ ಮಠಗಳು ಜನತೆಗೆ ಮರಣಭಯವನ್ನು ಬಿಡಿಸುವಂತಹ ರಕ್ಷಾಯಂತ್ರಗಳಾಗಿ ಈಗಲೂ ಏಕೆ ಪರಿಣಮಿಸಬಾರದು? ತೈತ್ತಿರೀಯದ ದಿವ್ಯಪ್ರಕಾಶವೂ ಪ್ರಸಾದಜೀವನವೂ ಅಮೃತಸ್ಥಿತಿಯೂ ಅಲ್ಲಿ ಹೊಕ್ಕ ಗೃಹಸ್ಥರಿಗೆ ಈಗಲೂ ಯಾಕೆ ದೊರೆಯಬಾರದು? ಭಕ್ತರಿಗೆ ಮಠಗಳು ಈಶ್ವರನ ಪರಿಚಯದ ಕಾತುರತೆಯನ್ನು ಏಕೆ ಹುಟ್ಟಿಸಬಾರದು? ಪವಿತ್ರಾಶ್ರಮಗಳೆನಿಸಬೇಕಾದ ಮಠಗಳಲ್ಲಿ ಹೊರಗಿನ ಪ್ರಪಂಚವ್ಯವಹಾರದ ಅಶಾಂತಿ ಏಕೆ ತಲೆದೋರಬೇಕು? ಪವಿತ್ರವಾದ ಪುಣ್ಯಭೂಮಿ ಶಿವಯೋಗಿಗಳ ಶಿವಪೂಜೆಗೆ ಆಶ್ರಯವನ್ನು ಕೊಡದೆ ಮಠೋದ್ಯಾನಗಳ ವಿಕ್ರಯದಿಂದ ಹಣಪ್ರಪಂಚವಾಗಿ ಏಕೆ ಪರಿಣಮಿಸಬೇಕು? ಮಠಗಳಲ್ಲಿ ಪ್ರವಚನಾನುಭವಕ್ಕೆ ಅವಕಾಶವಿಲ್ಲದ್ದರಿಂದ ಹೀಗೆ ಸಂಸಾರವು ಅಲ್ಲಿಯೂ ಪ್ರವೇಶಿಸಿರಬಹುದು. ಆದರೆ ಭಾರತದಲ್ಲಿ ಮಠಗಳು ಶಿವನ ಅರ್ಚನೆಗೂ, ಅರ್ಪಣಕ್ಕೂ, ಅನುಭವಕ್ಕೂ ಕೇಂದ್ರಗಳಾಗಿದ್ದುವೆಂಬ ಅಂಶವನ್ನು ತೈತ್ತಿರೀಯಶ್ರುತಿಯ "ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ" ಎಂಬ ಮಾತು ಸ್ಪಷ್ಟಪಡಿಸಿದೆ. ಆದ್ದರಿಂದಲೇ ಕೆಲವು ಮಠಗಳು ಇಂದಿಗೂ ವಿದ್ಯಾಪೀಠಗಳಾಗಿ ಲೋಕದ ಜನರಿಗೆ ಜ್ಞಾನದ ದಿವ್ಯಾಮೃತವನ್ನು ದೊರಕಿಸುತ್ತಲಿವೆ. ಲಕ್ಷ್ಮೇಶ್ವರದ ಮುಕ್ತಿಮಂದಿರ, ಬಂಥನಾಳು ಶಿವಯೋಗೀಶ್ವರಮಠ, ಧಾರವಾಡದ ವಿರಕ್ತಮಠ, ಸಿದ್ಧಗಂಗೆಯ ಪುಣ್ಯಾಶ್ರಮ, ಗುಬ್ಬಿಯ ತೋರೆಮಠ ಮೊದಲಾದವು ವಿದ್ಯಾರ್ಥಿಗಳಿಗೂ ಲೌಕಿಕರಿಗೂ ಜ್ಞಾನಾಮೃತವನ್ನು ದೊರಕಿಸುತ್ತ ಲೋಕಕಲ್ಯಾಣವನ್ನು ಸಾಧಿಸುತ್ತಲಿರುವುದು ಇತರ ಮಠಗಳಿಗೂ ಗೃಹಸ್ಥರಿಗೂ ಮಾರ್ಗದರ್ಶಕವೆನಿಸಿದೆ. ಮಠಗಳು ಸಾರ್ವಜನಿಕಸೇವಾಕ್ಷೇತ್ರಗಳೆಂದೂ, ಸ್ವಾಮಿಗಳು ಸಮಾಜಸೇವಕರೆಂದೂ ಕೆಲವು ಮಠಾಧಿ-

ಪತಿಗಳೇ ಭಾವಿಸಿ ದೇಶದ ಸರ್ವತೋಮುಖವಾದ ಶ್ರೇಯಸ್ಸನ್ನು ಉದಾರಮನೋಭಾವದಿಂದ ಸಾಧಿಸುತ್ತಿರುವುದು ಎಲ್ಲರಿಗೂ ಸ್ಫೂರ್ತ್ಯುತ್ಸಾಹಗಳನ್ನು ಹೆಚ್ಚಿಸುತ್ತಲಿದೆ. ಆದರೆ ಕೆಲವು ಮಠಗಳಲ್ಲಿ ರಸಕವಳನಿರ್ಮಾಣ ಮತ್ತು ಭಕ್ಷಣ ಹಾಗೆಯೇ ಆರ್ಥಿಕವ್ಯವಹಾರ ಇವೇ ನಿತ್ಯಕರ್ಮಗಳಾಗಿ ಪಾರಮಾರ್ಥಿಕಚಿಂತನೆಗೂ ವೇದಾಂತವಿಜ್ಞಾನಕ್ಕೂ ಅವಕಾಶವೇ ಇಲ್ಲದಿರುವುದು ಶೋಚನೀಯ. ಈ ಸ್ಥಿತಿಯಲ್ಲಿ ಭಿನ್ನಭಿನ್ನಸ್ವಭಾವದ ಗೃಹಸ್ಥರಿಗೆ ಧಾರ್ಮಿಕಪ್ರವೃತ್ತಿ ಹುಟ್ಟುವುದೇ ದುಸ್ತರವಾಗುತ್ತದೆ. ಎಷ್ಟೋ ಜನರಿಗೆ ಪರಮಾತ್ಮದರ್ಶನದ ಹೆಸರೇ ತಿಳಿಯದು. ಅವರಿಗೆ ಪರಮಾತ್ಮನ ಸ್ವರೂಪವನ್ನು ಅರಿತು ತಮ್ಮ ಜೀವನದಲ್ಲಿ ಹೊಂದಿಸಿಕೊಳ್ಳಬೇಕೆಂಬ ಬಯಕೆಯೇ ಇಲ್ಲ. ಇದನ್ನು ಆಯಾ ಜನಗಳಿಗೆ ಮಠಗಳು ಹುಟ್ಟಿಸಬೇಕು. ಈ ಜನರಲ್ಲೂ ಸತ್ತ್ವರಜಸ್ತಮೋಗುಣಗಳಿಂದ ಅನಂತ ವೈವಿಧ್ಯವಿದೆ. ಇಂತಹ ಸ್ಥಿತಿಯಲ್ಲೂ ಸಾತ್ತ್ವಿಕರು ಮಾತ್ರ ರಜೋಗುಣ ಪ್ರಕೃತಿಯ ಬೇರೊಬ್ಬ ಮಿತ್ರನ ನಿತ್ಯಸಂಪರ್ಕದಿಂದ ಜೀವನದಲ್ಲಿ ಪ್ರತಿನಿಮಿಷವೂ ನಿರ್ವೇದವನ್ನು ಹೊಂದಿ ಗುರುವಿನಬಳಿ ಸಾರಬಹುದೆಂದು ನಾನು ದೃಢವಾಗಿ ನಂಬಿದ್ದೇನೆ. ಹೀಗೆ ನಿರ್ವಿಣ್ಣನಾಗಿ ಗುರುಪಾದವನ್ನು ಯಾವನು ಮುಟ್ಟುವನೋ ಅವನು ನಿಜವಾಗಿಯೂ ಧನ್ಯನಾಗುವನು. ಆಗ ಅವನಿಗೆ ಪ್ರಪಂಚದ ಯಾವ ವ್ಯಕ್ತಿಯಿಂದಲೂ ಬಂಧನವುಂಟಾಗಲಾರದು. ಹೀಗೆ ಮೋಹದೃಷ್ಟಿ ತೊಲಗಿದಮೇಲೆ ಅಹಂಕಾರವೆಂಬ ಪಿಶಾಚಿಯು ದೂರಸರಿಯುವುದು. ಅಂದೇ ಗುರುವಿನ ದಿವ್ಯದರ್ಶನ ನಮಗೆ ಅನಾಯಾಸವಾಗಿ ದೊರೆಯುತ್ತದೆ. ನನ್ನ ಮೋಹಪಾಶವನ್ನು ತೊಲಗಿಸಲು ಪರಮಪೂಜ್ಯರಾದ ರಂಭಾಪುರೀ ಮಹಾಸನ್ನಿಧಾನದ ಜಗದ್ಗುರು ಶ್ರೀ ವೀರಗಂಗಾಧರಶಿವಾಚಾರ್ಯ ಮಹಾಸ್ವಾಮಿಗಳು ಬಹಳಮಟ್ಟಿಗೆ ಪ್ರೇರಕರಾಗಿರುವರು. ಅವರ ಉಜ್ವಲತಪೋನುಷ್ಠಾನ, ಪರಮವೈರಾಗ್ಯಪ್ರಕೃತಿ, ಗುರುರೇಣುಕರಲ್ಲೂ ಪ್ರಾಣಲಿಂಗದಲ್ಲೂ ಅವರಿಗಿರುವ ನಿಷ್ಠೆ, ಲೋಕಕಲ್ಯಾಣಕ್ಕಾಗಿ ಅವರು ಮಾಡುತ್ತಿರುವ ಅಹಂಗ್ರಹೋಪಾಸನೆ ಅಂದರೆ ರುದ್ರನಾಗಿ ರುದ್ರನನ್ನು ಅರ್ಚಿಸುವಿಕೆ, ಅವ್ಯಾಜಪ್ರೇಮ, ಆತ್ಮೌಪಮ್ಯದೃಷ್ಟಿ, ಆದರ್ಶವಾದ ಶಿವಯೋಗಸಾಧನ ಮತ್ತು ಅಖಂಡಾನಂದಾನುಭವ ಈ ಬಗೆಯ ಅವರ ಅಸಾಧಾರಣಸ್ವಭಾವವು ನನ್ನ ಮನಸ್ಸಿನಮೇಲೆ ಸತ್ಪರಿಣಾಮವನ್ನುಂಟುಮಾಡಿತು. ಅವರಿಗೆ ಗುರುವಿನಲ್ಲೂ ಲಿಂಗದಲ್ಲೂ ಇರುವ ಜೀವಂತವಿಶ್ವಾಸವು ಸಾಧಕರೆಲ್ಲರಿಗೂ ಅಚ್ಚಳಿಯದ ಭಕ್ತಿಮಾರ್ಗವನ್ನು ಹೊರಹೊಮ್ಮಿಸುತ್ತಲಿದೆ. ಇದನ್ನು ಇಂದಿಗೂ ಮುಕ್ತಿಮಂದಿರದಲ್ಲೂ ರಂಭಾಪುರೀಮಠದಲ್ಲೂ ನಾವು ಕಾಣುತ್ತಿದ್ದೇವೆ. ಲಿಂಗಕ್ಕೆ ಪೂರ್ಣವಾಗಿ ಅಧೀನರಾಗಿ ಲಿಂಗದ ಸೇವೆಯಲ್ಲಿಯೇ ನಿರತರಾಗಿ ಅದ್ವಿತೀಯಾನಂದವನ್ನು ಅನುಭವಿಸುತ್ತ ಶಿವನಂತೆಯೇ ಪರಿಪೂರ್ಣರೂ ಸ್ವತಂತ್ರರೂ ಆಗಿರುವ ಪೂಜ್ಯಪಾದರು ನಿಗ್ರಹಾನುಗ್ರಹಸಮರ್ಥರಾದರೂ ಅವ್ಯಾಜಪ್ರೇಮದಿಂದ ಲೋಕಕಾರುಣ್ಯಲೀಲೆಯನ್ನೇ ನಡೆಸುತ್ತ ಜಗತ್ತನ್ನು ಉದ್ಧರಿಸುತ್ತಲಿರುವುದು ನಮ ನಾಡಿನ ಸೌಭಾಗ್ಯವೆಂದು ಭಾವಿಸುತ್ತೇನೆ. ನನ್ನ ಜೀವನವನ್ನು

ಶಿವನೊಬ್ಬನನ್ನೇ ನಿರಭಿಮಾನದಿಂದ ನೋಡುತ್ತಿದ್ದ ಮಹಾಸ್ವಾಮಿಗಳ ಐಕ್ಯಾನಂದಾನುಭವವನ್ನು ನಾನು ಮನೋನೇತ್ರದಿಂದ ಅನುಭವಿಸಿದೆನು. ಆಗ ಮನಸ್ಸೆಂಬ ನೀರಿನಿಂದ ಧಾರಾಕಾರವಾಗಿ ಹೃದಯದ ಶಿವನನ್ನು ಅಭಿಷೇಕಮಾಡಿದೆನು; ವಿರತಿ ಎಂಬ ಭಸ್ಮವನ್ನು ಅವನಿಗೆ ಹಚ್ಚಿದೆನು; ಜ್ಞಾನವೆಂಬ ಪುಷ್ಪದಿಂದ ಆ ನನ್ನ ಪ್ರಭುವಾದ ಪ್ರಾಣದೇವನನ್ನು ನನ್ನೊಳಗೇ ಅಲಂಕರಿಸಿದೆನು. ಇಷ್ಟೆಲ್ಲದರ ಸತ್ಪರಿಣಾಮದಿಂದ ನನಗೆ ದೇಹದ ಅರಿವೇ ಇಲ್ಲದಂತಾಯಿತು. ಆ ಸಂದರ್ಭದಲ್ಲಿ ಮಹಾಸ್ವಾಮಿಗಳ ದಿವ್ಯದೃಷ್ಟಿ ನನ್ನ ಪುಣ್ಯವಶದಿಂದ ನನ್ನಮೇಲೆ ಬಿದ್ದಿತು. ಅವರು ಆ ಕಾಲದಲ್ಲಿ ಯಾರನ್ನೂ ಪೂರ್ಣಲಕ್ಷ್ಯದಿಂದ ನೋಡುತ್ತಿರಲಿಲ್ಲ. ಆದರೆ ಅಂದು ನನ್ನನ್ನು ಪ್ರೇಮದಿಂದ ನೋಡಿ ಹತ್ತಿರಕ್ಕೆ ಕರೆದರು; ತೀರ್ಥಪ್ರಸಾದಗಳನ್ನು ಕೊಟ್ಟು ನನ್ನ ಶಿರಸ್ಸಿನಮೇಲೆ ತಮ್ಮ ದಿವ್ಯಾಮೃತಹಸ್ತವನ್ನು ಇಟ್ಟು ಆಶೀರ್ವದಿಸಿದರು. ಅಂದು ನನಗೆ ವಿವೇಕೋದಯವಾಯಿತು. ಪರಶಿವನಿಗಧೀನನಾಗಿ ಆಗ ಹೊಸ ಚೈತನ್ಯವನ್ನು ಪಡೆದೆನು. ಹೀಗೆ ಪೂಜ್ಯರು ಅನುಗ್ರಹಿಸಿದ ವೇಧಾದೀಕ್ಷೆಯಿಂದ ಅಂದು ನನ್ನ ಮಲಪಾಶವು ಕಳೆದು ಜ್ಞಾನವಿಕಾಸವುಂಟಾಯಿತು. ಇಲ್ಲಿಗೆ ಒಂದು ಜನ್ಮವೇ ಕಳೆದಂತೆ ಭಾವಿಸಿದೆನು. ಅಂದಿನ ರಾತ್ರಿಯೇ ಶ್ರೀ|| ಗಳು ಸ್ವಪ್ನದಲ್ಲಿ ಕಾಣಿಸಿಕೊಂಡು ನನ್ನ ಮನೋಗತವನ್ನು ಅನುಮೋದಿಸಿದರು. ಇನ್ನೊಂದು ಜನ್ಮವಿದೆ ಎಂದೂ, ಅದನ್ನು ಇಲ್ಲಿಯೇ ಇನ್ನೂ ಕೆಲವುಕಾಲ ಅನುಭವಿಸಬೇಕೆಂದೂ ತಿಳಿಸಿದರು. ಆಗ ಇಲ್ಲಿಯೇ ಅದೂ ಮುಗಿದುಹೋಗುವುದೆಂದು ಕೇಳಿ ನನಗೆ ಸಂತೋಷವಾಯಿತು. ಆದರೆ ಆ ಕಾಲ ಎಷ್ಟುಬೇಗನೆ ಬಂದೀತೆಂದು ನಿರಂತರವೂ ನಿರೀಕ್ಷಿಸುತ್ತಲಿದ್ದೆನು. ಅದೂ ಸಹ ನನ್ನ ಗೆಳೆಯನ ಮಧುರಸಂಪರ್ಕದಿಂದ 27-5-63 ಸೋಮವಾರ ಬೆಳಗ್ಗೆ 4-15 ರಲ್ಲು ಶಿವಾನುಗ್ರಹದಿಂದ ಫಲಿಸಿತು. ಅಂದಿನಿಂದ ಐದುದಿನಗಳ ಸತತಪ್ರಾರ್ಥನೆಯಿಂದ 31-5-63 ರಲ್ಲು ಪರಮೇಶ್ವರನು ನನ್ನನ್ನು ಕೈಹಿಡಿದನು. ಅಲ್ಲಿಗೆ ಎರಡು ಜನ್ಮಗಳೂ ಕಳೆದುವೆಂದು ನಾನು ಸಂತೋಷಗೊಂಡೆನು. ಅಂದೇ ರಾತ್ರಿ ಶ್ರೀ|| ಗಳೂ ನನ್ನ ಮನೋಗತವನ್ನು ಸಮ್ಮತಿಸಿದರು. ಅದರಿಂದ ನನಗೆ ಪೂರ್ಣ ಸಮಾಧಾನವಾಯಿತು. ಅದೇ ದಿನವೇ ನಾಲ್ಕುವರ್ಷದ ಮುದ್ದುಕುಮಾರ ಮಲ್ಲಿಕಾರ್ಜುನನನ್ನು ಪ್ರೇಮದಿಂದ ತಬ್ಬಿಕೊಳ್ಳಲು ಅವನು ಸವಿನುಡಿಯಿಂದ "ಅಣ್ಣಾ, ನೀನು ಯಾರನ್ನೂ ತಬ್ಬಿಕೊಳ್ಳಲು ಬಯಸಬೇಡ. ದೇಹದಲ್ಲಿರುವ ಲಿಂಗ ಒಂದನ್ನೇ ಯಾವಾಗಲೂ ತಬ್ಬಿಕೊಳ್ಳಬೇಕು. ಅಮ್ಮನನ್ನಂತೂ ಇನ್ನೆಂದಿಗೂ ತಬ್ಬಲಿಚ್ಛಿಸಬೇಡ. ನೀನು ಯಾವಾಗಲೂ ಶಿವನಲ್ಲಿಯೇ ರಮಿಸಬೇಕು. ಅದನ್ನು ನಿನಗೆ ತಿಳಿಸಲಿಕ್ಕಾಗಿಯೇ ನಾನು ಬಂದಿರುವೆನು" ಎಂದು ಎಚ್ಚರಿಸಿದನು. ಶಿವನು ನನ್ನಮೇಲೆ ಎಷ್ಟೊಂದು ಪ್ರೇಮವನ್ನಿಟ್ಟಿರುವನೆಂಬುದು ಅಂದು ತಿಳಿಯಿತು. ಅವನೇ ಮಗನಾಗಿ ಬಂದು ಆ ರೂಪದಿಂದಲೂ ನನಗೆ ವಿವೇಕವನ್ನು ಹೇಳಿಸಬೇಕೆ? ಶತ್ರು ಮಿತ್ರರೆಲ್ಲರನ್ನೂ ಒಂದೇ ಬಗೆಯಾಗಿ ಕಾಣುವಂತೆಮಾಡಿ ಶಿವನು ತನ್ನ ಸೇವೆಗೆ ನನ್ನನ್ನು ಹೀಗೆ ಸಿದ್ಧಗೊಳಿಸಿ

ಕೊಂಡಿರುವುದಕ್ಕಾಗಿ ಅವನಿಗೆ ನಾನು ಎಷ್ಟು ಕೃತಜ್ಞನಾದರೂ ಸಾಲದು. ತನಗೆ ಶ್ರೀಕರಭಾಷ್ಯವೇ ದಿವ್ಯಾಭರಣವೆಂದು ಭಾವಿಸಿರುವ ಸಾಧ್ವೀಮಣಿಯಲ್ಲಿ ಪೂಜ್ಯ ಮಲ್ಲಿಕಾರ್ಜುನನೇ ನನ್ನ ಪ್ರಾರ್ಥನೆಯಂತೆ ಸತ್ಪುತ್ರನಾಗಿ ಜನಿಸಿ ನನ್ನನ್ನು ಲಿಂಗದೊಡನೆ ಸಮರಸವಾಗಿ ಬೆರೆಸಿದ ಭಾಗ್ಯವು ಪೂಜ್ಯಮಾತಾಪಿತೃಗಳ ಪರಮಪ್ರಸಾದವೆಂದು ಭಾವಿಸುತ್ತೇನೆ. ಇದರಮೇಲೆ ಪ್ರತಿನಿಮಿಷವೂ ಶಿವನನ್ನೇ ಸ್ಮರಿಸುವಂತೆ ಎಚ್ಚರಿಸುತ್ತಿರುವ ಸತ್ಪುತ್ರಿ ಚಿ|| ಸರ್ವಮಂಗಳೆಯಂತೂ ಒಮ್ಮೆ ನಾನು ಒಬ್ಬನನ್ನು ಕೋಪಾಗ್ರಹದಿಂದ ಬೈದರೂ “ ಅಣ್ಣಾ, ನಿಮ್ಮ ಸೋದರನನ್ನು ಹೀಗೇಕೆ ಬಯ್ದಿರಿ. ಅವನಲ್ಲಿರುವ ಶಿವನಿಗೆ ನೋವಾಗಲಿಲ್ಲವೆ? ನಿಮ್ಮೊಳಗೂ ಅದೇ ಶಿವನಿಲ್ಲವೆ ? ನಿಮ್ಮ ವರ್ತನೆಗೆ ಅವನು ಸಮ್ಮತಿಸಿದನೇ ? ” ಎಂದು ಅನೇಕವೇಳೆ ಕೇಳಿರುವಳು. ಇದೆಲ್ಲಕ್ಕಿಂತಲೂ ಹೆಚ್ಚಾಗಿ ನನ್ನ ಸಾದಿನಿ ಚಿ|| ಅನ್ನಪೂರ್ಣೆ ತ್ಯಾಗಮೂರ್ತಿ ಎನಿಸಿ ನನ್ನಲ್ಲಿ ಶಿವಭಕ್ತಿಯನ್ನು ಬೆಳೆಸಿ ದೃಢಪಡಿಸಿದ್ದಾಳೆ. ಇವರೆಲ್ಲರೂ ಶಿವಾನುಗ್ರಹದಿಂದ ಸುಖವಾಗಿ ಬಾಳಲೆಂದು ಹಾರೈಸುತ್ತೇನೆ. ಈ ಬಾಳಿನಲ್ಲಿಯೇ ಇಂತಹ ನಿತ್ಯಸುಖದ ಸಂನಿವೇಶವನ್ನು ಕೃಪೆಯಿಂದ ತಂದೊಡ್ಡಿದ ಶ್ರೀಗುರುರೇಣುಕರಿಗೂ ಮತ್ತು ಅವರ ಪೀಠಾಭಿಮಾನಿ ದೇವತೆಯಾದ ಶ್ರೀ ವೀರಭದ್ರಸ್ವಾಮಿಗೂ ಈ ಸೇವಕನು ಎಷ್ಟು ಕೃತಜ್ಞನಾಗಿದ್ದರೂ ಸಾಲದು. ಹೀಗೆ ಶಿವನನ್ನು ಕೈಹಿಡಿದು ಅವನ ಇಚ್ಛೆಯಂತೆ ಅವನು ಮಾಡಿಸಿದ್ದನ್ನು ಮಾಡುತ್ತಿರುವ ಈ ಸೇವಕನು ಎಲ್ಲರಲ್ಲೂ ನಿರಭಿಮಾನದಿಂದ ಅವನನ್ನೇ ಕಾಣುತ್ತಿರುವುದರಿಂದ ಇವನಿಗೆ ಇನ್ನು ಯಾರ ಹಂಗು ಇದ್ದೀತು ? ಯಾವ ರೋಗ ಭಯ ದುಃಖಗಳಿದ್ದಾವು ? ದೇಹದ ಎಲ್ಲಾ ಇಂದ್ರಿಯಗಳಲ್ಲೂ ಅವನೇ ನೆಲಸಿ ನಿರಭಿಮಾನದಿಂದ ಈ ಸೇವಕನ ಕಡೆಯಿಂದ ದುಡಿಸಿ ಫಲಾಫಲಗಳನ್ನು ಸಮಭಾವನೆಯಿಂದ ಅರ್ಪಿಸಿಕೊಂಡು ಭೋಗಿಸುತ್ತಲಿರುವಾಗ ಸೇವಕನಿಗೆ ಮಾನ, ಅಭಿಮಾನ, ಅವಮಾನಗಳ ಯಾತನೆ ಎಲ್ಲಿಂದ ಬರಬೇಕು ? ಇಂತಹ ಪರಿಸ್ಥಿತಿಯಲ್ಲಿ ಶ್ರೀಕರ ಭಾಷ್ಯದಂತಹ ಪವಿತ್ರ ಗ್ರಂಥವನ್ನು ಕನ್ನಡದಲ್ಲಿ ಪ್ರಕಾಶಪಡಿಸಿ ಸೋದರರಿಗೆ ದೊರಕಿಸುವಂತಹ ಶಿವಪೂಜೆ ಈ ಸೇವಕನಕಡೆಯಿಂದ ಏಕೆ ಆಗಬಾರದು ? ಶಿವನೊಲಿದರೆ ವಿಷವೂ ಅಮೃತವಾಗುತ್ತದೆ. “ ಇವನೊಬ್ಬನೇ ಇದನ್ನು ಹೇಗೆ ಮಾಡಿಯಾನು ? ” ಎಂದು ರಜೋಗುಣದ ಕೆಲವು ವ್ಯಕ್ತಿಗಳು ತಮ್ಮ ಸಂತೋಷಕ್ಕಾಗಿ ಅಂದುಕೊಂಡರೆ. ಅದಕ್ಕೆ ಈ ಸೇವಕನು ಏನುಮಾಡಿಯಾನು ? ಅವರ ವಿವಾದಕ್ಕೆ ದೇಹದೊಳಗಿನ ಪ್ರಭುದೇವನೇ ಉತ್ತರವನ್ನು ಕೊಡುವನು. ಅವನೇ ಇದನ್ನು ನೆರವೇರಿಸಿರುವಾಗ ಈ ಸೇವಕನಿಗೆ ಇದರ ಹೊಣೆಗಾರಿಕೆ ಏನಿದ್ದೀತು ? ಅಹಂಕಾರಪ್ರವೃತ್ತಿಯು ಜನರಿಗೆ ಇದು ಕಷ್ಟವಾದರೂ ದಾಸಭಾವದ ಶಿವಭಕ್ತನಿಗೆ ಎಂದಿಗೂ ಕಷ್ಟವಾಗದು. ಮಾನವನು ಮಾಯೆಯಿಂದ ಸಂಭವಿಸಿರುವ ಅಹಂಕಾರಾಭಿಮಾನಗಳನ್ನು ತ್ಯಾಗಮಾಡಿದರೆ ಶಿವನು ಲೋಕಕಲ್ಯಾಣಕ್ಕಾಗಿ ಪರಾಹಂತಾಸ್ಥಿತಿಯನ್ನು ಕರುಣಿಸುತ್ತಾನೆ. ಆಗ ಎಲ್ಲಾ ಅದ್ಭುತಕಾರ್ಯಗಳೂ ಲೀಲೆಯಿಂದ ನಡೆಯುತ್ತವೆ ಎಂಬುದಕ್ಕೆ ಈ ಗ್ರಂಥವೇ ಸಾಕ್ಷಿ.

ಇದೂ ಅಲ್ಲದೆ ದುರುದ್ದೇಶದ ಕೆಲವು ನನ್ನ ಸೋದರರು "ಇದನ್ನು ಇವನು ನಿಜವಾಗಿಯೂ ಅನುವಾದಮಾಡಿದನೆ? ಭಾಷ್ಯಕರ್ತರು ಬ್ರಾಹ್ಮಣರೇ? ಅಥವಾ ವೀರ ಶೈವರೇ ? ಅವರು ನಿಜವಾಗಿಯೂ ಶ್ರೀಶೈಲಪೀಠದ ಸ್ವಾಮಿಗಳಾಗಿದ್ದರೇ ? ಅವರು ಹಿಂದಿನ ಆಚಾರ್ಯರಲ್ಲಿ ಐವರನ್ನೂ ವಂದಿಸಿರುವರೇ ? ಅಥವಾ ನಾಲ್ವರನ್ನೇ ? ಈ ಭಾಷ್ಯವನ್ನು ಶ್ರೀಪತ್ಯಾಚಾರ್ಯರೆಂಬ ಹೆಸರಿನ ಓರ್ವ ಬ್ರಾಹ್ಮಣನು ಏಕೆ ಬರೆದಿರ ಬಾರದು ? ಈ ಬಗೆಯ ಶುಷ್ಕಾಲಾಪದಲ್ಲಿಯೇ ಅಮೋಘವಾದ ಕಾಲವನ್ನು ವ್ಯರ್ಥ ಗೊಳಿಸುತ್ತಿರುವರು. ಆದರೆ ಇವರು ತಮ್ಮ ಪವಿತ್ರವಾದ ಕಾಲವನ್ನು ಹೀಗೆ ದುರುಪ ಯೋಗಪಡಿಸುತ್ತಿರುವಾಗಲೇ ಸಾತ್ತ್ವಿಕಸಾಧಕರು ಶ್ರೀಕರಭಾಷ್ಯದ ಪ್ರಥಮ ಭಾಗ ವನ್ನು ಅನುವಾದದೊಡನೆ ಓದಿಮುಗಿಸಿ ಜೀರ್ಣಿಸಿಕೊಂಡು ಪ್ರತಿಗಳನ್ನೇ ಮುಗಿಸಿ ದ್ದಾರೆ. ಆದ್ದರಿಂದಲೇ "ವಯಂ ತತ್ತ್ವಾನ್ವೇಷಾನ್ಮಧುಕರ ಹತಾಃ ತ್ವಂ ಖಲು ಕೃತೀ" ಎಂದು ಕಾಳಿದಾಸಮಹಾಕವಿ ದುಷ್ಯಂತನ ಕಡೆಯಿಂದ ಶಕುಂತಲೆಯ ಅಧರಾಮೃತ ವನ್ನು ಪಾನಮಾಡುತಿದ್ದ ಭ್ರಮರದ ಬಗ್ಗೆ ಹೇಳಿಸಿದ್ದು ನನ್ನ ಈ ಅಳಿಲು ಸೇವೆಗೆ ಯಥಾರ್ಥವಾಗಿ ಅನ್ವಯಿಸುತ್ತದೆ. ಒಳಹೊಕ್ಕು ಪ್ರವೇಶಿಸದೆ ಮೇಲೆ ಮೇಲೆ ಹೋರಾಡುವವನಿಗೆ ರಸಾನುಭವ ದೊರಕಲಾರದು. ಬ್ರಹ್ಮಾನಂದವೇ ರಸಾನುಭವ. ಇದು ದೊರಕಬೇಕಾದರೆ ಸಾಧಕನು ನಿರ್ಮತ್ಸರನೂ ನಿಷ್ಕಲ್ಮಷಹೃದಯನೂ ಆಗ ಬೇಕು. ಇದೇ ಇಲ್ಲದವನಲ್ಲಿ ಪಾಂಡಿತ್ಯವಿದ್ದರೂ ಫಲವಿಲ್ಲ. ಲಿಂಗಧಾರಣದ ಮಹತ್ತ್ವವನ್ನು ಪ್ರಶಂಸಿಸುವ ಶ್ರೀಕರಭಾಷ್ಯದ ವ್ಯಾಸಂಗವು ಅಲಿಂಗಿಬ್ರಾಹ್ಮಣರಿಗೆ ಹೇಗೆ ಪ್ರಿಯವಾದೀತು ? ಸ್ಮಾರ್ತಬ್ರಾಹ್ಮಣರು ಮತ್ತು ಇತರ ಶೈವರು ಪ್ರತಿಷ್ಠಿತ ಲಿಂಗದ ಅರ್ಚನೆಯನ್ನು ಮಾಡುವರಾದರೂ ಅವರಿಗೆ ಆ ಕಾಲದಲ್ಲಿ ಮಾತ್ರವೇ ಪರಮೇಶ್ವರನ ಸಂಪರ್ಕವೇರ್ಪಡುವುದೇ ಹೊರತು ಅವನ ನಿತ್ಯಾಭಿಯೋಗವು ಲಭಿಸುವುದಿಲ್ಲ. ಆದರೆ ನಿತ್ಯಾಭಿಯುಕ್ತರಿಗೆ ಮಾತ್ರವೇ ಯೋಗಕ್ಷೇಮವನ್ನು ವಹಿಸಿಕೊಳ್ಳುವುದಾಗಿ ಪರಮೇಶ್ವರನು ಹೇಳಿದ್ದಾನೆ ? ಶಿವಭಕ್ತನನ್ನು ವಿನಾಯಿಸಿ ಪ್ರಪಂಚದಲ್ಲಿ ಯಾವ ಮಾನವನಿಗೂ ಪರಮೇಶ್ವರನ ನಿತ್ಯಾಭಿಯೋಗವು ಲಭಿಸು ವಂತಿಲ್ಲ. ಸಾಧಕರಿಗೆ ಇಂತಹ ನಿತ್ಯಾಭಿಯೋಗವನ್ನು ಲೋಕಕಲ್ಯಾಣಕ್ಕಾಗಿ ವಿಧಿಸುತ್ತ ಸೂರ್ಯನಂತೆ ನಿರ್ಲಿಪ್ತವಾಗಿ ಶೋಭಿಸುತ್ತಿರುವ ಈ ಶ್ರೀಕರಭಾಷ್ಯವನ್ನು ಸೂರ್ಯಪೀಠದಂತೆಯೇ ನಿರ್ಲಿಪ್ತರಾದ ಸ್ವಾಮಿಗಳಲ್ಲದೆ ಬೇರೆ ಯಾರು ಬರೆದಾರು? ಈ ಹೃದಯದ ದಹರಾಕಾಶದ ದಿವ್ಯಕ್ಷೇತ್ರದಲ್ಲಿ ವಿರಾಜಿಸುತ್ತಿರುವ ಮಹಾದೇವ ನೊಡನೆ ಸಮರಸವಾಗಿ ಬೆರೆಯಲಿಕ್ಕಾಗಿಯೇ ಪೂಜ್ಯ ಶ್ರೀ ಸಂಗಮಾರ್ಯೆಯ ಗರ್ಭ ದಿಂದ ಜನಿಸಿ ಪೂಜ್ಯ ಪಿತೃವಿನ ದಿವ್ಯಾನುಗ್ರಹದಿಂದ ಭವಮಾಯೆಯನ್ನು ತೊಲಗಿಸಿ ಕೊಂಡು ಶಿವನೊಡವೆರಸಿರುವ ಈ ದಾಸನಲ್ಲದೆ ಬೇರೆ ಯಾರು ಭವಹರವಾದ ಈ ಪವಿತ್ರ ಶ್ರೀಕರಭಾಷ್ಯದ ಅನುವಾದಕ್ಕೆ ಕೈಹಾಕಬಹುದು ? ರಾಜಸಜನರು ವಿಚಾರ ಮಾಡದೆ ಮನಬಂದಂತೆ ಮಾತನಾಡುವುದು ಸಹಜ. ಆದರೆ ಸಾತ್ತ್ವಿಕರ್ಯಾರೂ

ಇಂತಹ ಕುಚೋದ್ಯಗಳಲ್ಲಿ ಪ್ರವರ್ತಿಸುವುದಿಲ್ಲ. ಆದರೆ ರಾಜಸರು ಇಂತಹ ದುಷ್ಪ್ರವೃತ್ತಿಯನ್ನು ಎಂದಿಗೂ ತೊರೆಯುವುದಿಲ್ಲ. ಈ ಬಗೆಯ ಪ್ರಪಂಚದ ಪ್ರವಾಹವನ್ನು ಯಾರೂ ತಡೆಯಲಾರರು. ಆದರೆ ಅವರೆಲ್ಲರೂ ಕ್ರಮವಾಗಿ ರಜೋಗುಣದ ಬಂಧನದಿಂದ ಪಾರಾಗಲೆಂಬುದೇ ನನ್ನ ಹೆಬ್ಬಯಕೆ. ಗುಣವೆಂದರೆ ಹಗ್ಗ. ತ್ರಿಗುಣಗಳ ಈ ಬಗೆಯ ಬಂಧನಕ್ಕೆ ಲೋಕದ ಮಾನವರೆಲ್ಲರೂ ಒಳಪಟ್ಟು ಬದ್ಧರೆನಿಸಿದ್ದಾರೆ. ಪಶುವನ್ನು ಹಗ್ಗದಲ್ಲಿ ಕಟ್ಟುವಂತೆ ಪಶುಪತಿಯು ತನ್ನ ಮಾಯಾಪಾಶದಿಂದ ಈ ಜೀವರೆಲ್ಲರನ್ನು ಕಟ್ಟಿಹಾಕಿದ್ದಾನೆ. ಆದ್ದರಿಂದಲೇ ಅವನೊಬ್ಬನನ್ನು ವಿನಾಯಿಸಿ ಉಳಿದವರೆಲ್ಲರೂ ಪಶುಗಳೆನಿಸಿದ್ದಾರೆ. ತ್ರಿಮೂರ್ತಿಗಳೂ ಪಶುಗಳೇ ಆದರೂ ಅವರಲ್ಲಿ ಪರಮಾತ್ಮನ ಚಿತ್‌ಶಕ್ತಿ ಹೆಚ್ಚು ವ್ಯಾಪಿಸಿರುವುದರಿಂದ ಅವರಮೇಲೆ ಪಾಶಶಕ್ತಿಯ ಪ್ರಭಾವ ಕಡಮೆ. ಇಂದ್ರಾದಿದೇವತೆಗಳಲ್ಲಿ ಚಿತ್‌ಶಕ್ತಿಯ ವ್ಯಾಪ್ತಿ ಕೊಂಚ ಕಡಮೆಯಾದ್ದರಿಂದ ಪಾಶಶಕ್ತಿಯ ಪ್ರಭಾವ ಹೆಚ್ಚಾಗಿರುವುದು. ಆದರೆ ಮಾನವರಲ್ಲಂತೂ ಚಿತ್‌ಶಕ್ತಿಯ ವ್ಯಾಪ್ತಿ ಪೂರಾ ಕಡಮೆಯಾದ್ದರಿಂದ ಆ ನ್ಯೂನತೆ ಎಲ್ಲವೂ ಪಾಶಶಕ್ತಿಯಿಂದಲೇ ತುಂಬಿಹೋಗಿದೆ. ಹೀಗೆ ಪಾಶಶಕ್ತಿ ಅಥವಾ ಮಾಯೆ ಮಾನವರನ್ನು ಚಿತ್ರವಿಚಿತ್ರವಾದ ರೀತಿಗಳಲ್ಲಿ ಕಾಡಿಸುತ್ತಿರುವುದರಿಂದ ಅವರು ಈ ಮಾಯಾಪ್ರಪಂಚದಲ್ಲಿ ರಾಗದ್ವೇಷಗಳಲ್ಲಿ ತೊಡಗಿರುವುದು ಸಹಜ ಈ ಬಗೆಯ ಅರಿವು ಯಾರಿಗೆ ಆಗಿರುವುದೋ ಅವರು ಮಾತ್ರ ಯಾರನ್ನೂ ಎಂದಿಗೂ ನಿಂದಿಸಲಾರರು. ಇದನ್ನೇ ವೇದಾಂತವಿಜ್ಞಾನವೆಂದು ಶಿವಾನುಭವಿಗಳು ಹೇಳುತ್ತಾರೆ. ಈ ರೀತಿಯಲ್ಲಿ ಯಾರು ನಿಶ್ಚಯಜ್ಞಾನವನ್ನು ಪಡೆದಿರುವರೋ ಅವರೇ ನಿಜವಾಗಿಯೂ ಸಮತಾವಾದಿಗಳು; ಅವರೇ ಆದರ್ಶಕರ್ಮಯೋಗಿಗಳು; ಅವರೇ ಉಜ್ವಲತಪಸ್ವಿಗಳು. ಅವರಿಂದಲೇ ಲೋಕಕಲ್ಯಾಣವಾದೀತು. ಅಂತವರಿಗೆ ಮಾತ್ರವೇ ಶ್ರೀಕರಭಾಷ್ಯವು ಪ್ರಿಯವಾದೀತು. ಬೇರೆಯವರು ಇದನ್ನು ನೀರೊಳಗೆ ಇಡಬೇಕೆಂದು ಎಲ್ಲರೆದುರಿಗೆ ಆಡಿಕೊಳ್ಳುತ್ತ ತಮ್ಮ ಸಣ್ಣತನವನ್ನು ತೋರಿಸಿಕೊಳ್ಳುವುದು ಸಹಜ. ಆದರೆ ಅವರಲ್ಲೂ ನಿರ್ಮತ್ಸರಮನೋಭಾವವೂ, ಆತ್ಮದ ಘನತೆ ಗೌರವ ಮತ್ತು ಗಾಂಭೀರ್ಯಗಳೂ ಬೆಳೆಯಲೆಂದು ನಾನು ಭಕ್ತಿಯಿಂದಲೂ ನಿರಭಿಮಾನದಿಂದಲೂ ಪ್ರಾರ್ಥಿಸುತ್ತೇನೆ.

ಭಿನ್ನಭಿನ್ನಸ್ವಭಾವದ ಸೋದರರೆಲ್ಲರನ್ನು ಅದ್ವೈತಭಾವನೆಯಿಂದ ಪ್ರೀತಿಸಲಿಕ್ಕೆ ಹೆಣಗಾಡುತ್ತಿದ್ದ ನನಗೆ ಭಾವದಲ್ಲಿ ಮಾತ್ರವೇ ಅದು ಸಾಧ್ಯವಾದರೂ ಕ್ರಿಯಾರಂಗದಲ್ಲಿ ಶಕ್ಯವಿಲ್ಲವೆಂಬುದು ೩೧-೫-೬೩ ರಂದು ತಿಳಿಯಬಂದಿತು. "ಬಳಸಿದರು ಅದ್ವೈತವನ್ನು ಬಾಹ್ಯದೊಳು ನಿನ್ನೊಳಗೆ ಏಕೋಭಾವದಿಂದಿರು" ಎಂಬ ನಿಜಗುಣರ ಮಾತು ಅಂದು ನನಗೆ ನಿಜವೆನಿಸಿತು. ಸಾಧುಗಳಲ್ಲೂ ಪಾಪಿಗಳಲ್ಲೂ ಭಿನ್ನಭಿನ್ನ ಸ್ವಭಾವವು ಸಹಜವಾಗಿರುವುದರಿಂದ ಅವರೊಳಗೆ ನಿರ್ಲಿಪ್ತನಾಗಿ ನೆಲಸಿರುವ ಶಿವನೇ ತನ್ನಲ್ಲೂ ಸೂತ್ರದಂತೆ ಸಮನಾಗಿ ನೆಲಸಿರುವನೆಂಬ ಆತ್ಮೈಕ್ಯಭಾವನೆ ನಮಗೆ ಸಾಧ್ಯವೇ ಹೊರತು ಪಾಪಿಗಳನ್ನೂ ಸಾಧುಗಳನ್ನೂ ಒಂದುಗೂಡಿಸುವಿಕೆ ಯಾರಿಗೂ

ಶಿವನೊಬ್ಬನನ್ನೇ ನಿರಭಿಮಾನದಿಂದ ನೋಡುತ್ತಿದ್ದ ಮಹಾಸ್ವಾಮಿಗಳ ಐಕ್ಯಾನಂದಾನುಭವವನ್ನು ನಾನು ಮನೋನೇತ್ರದಿಂದ ಅನುಭವಿಸಿದೆನು. ಆಗ ಮನಸ್ಸೆಂಬ ನೀರಿನಿಂದ ಧಾರಾಕಾರವಾಗಿ ಹೃದಯದ ಶಿವನನ್ನು ಅಭಿಷೇಕಮಾಡಿದೆನು; ವಿರತಿ ಎಂಬ ಭಸ್ಮವನ್ನು ಅವನಿಗೆ ಹಚ್ಚಿದೆನು; ಜ್ಞಾನವೆಂಬ ಪುಷ್ಪದಿಂದ ಆ ನನ್ನ ಪ್ರಭುವಾದ ಪ್ರಾಣದೇವನನ್ನು ನನ್ನೊಳಗೇ ಅಲಂಕರಿಸಿದೆನು. ಇಷ್ಟೆಲ್ಲದರ ಸತ್ಪರಿಣಾಮದಿಂದ ನನಗೆ ದೇಹದ ಅರಿವೇ ಇಲ್ಲದಂತಾಯಿತು. ಆ ಸಂದರ್ಭದಲ್ಲಿ ಮಹಾಸ್ವಾಮಿಗಳ ದಿವ್ಯದೃಷ್ಟಿ ನನ್ನ ಪುಣ್ಯವಶದಿಂದ ನನ್ನಮೇಲೆ ಬಿದ್ದಿತು. ಅವರು ಆ ಕಾಲದಲ್ಲಿ ಯಾರನ್ನೂ ಪೂರ್ಣಲಕ್ಷ್ಯದಿಂದ ನೋಡುತ್ತಿರಲಿಲ್ಲ. ಆದರೆ ಅಂದು ನನ್ನನ್ನು ಪ್ರೇಮದಿಂದ ನೋಡಿ ಹತ್ತಿರಕ್ಕೆ ಕರೆದರು; ತೀರ್ಥಪ್ರಸಾದಗಳನ್ನು ಕೊಟ್ಟು ನನ್ನ ಶಿರಸ್ಸಿನಮೇಲೆ ತಮ್ಮ ದಿವ್ಯಾಮೃತಹಸ್ತವನ್ನು ಇಟ್ಟು ಆಶೀರ್ವದಿಸಿದರು. ಅಂದು ನನಗೆ ವಿವೇಕೋದಯವಾಯಿತು. ಪರಶಿವನಿಗಧೀನನಾಗಿ ಆಗ ಹೊಸ ಚೈತನ್ಯವನ್ನು ಪಡೆದೆನು. ಹೀಗೆ ಪೂಜ್ಯರು ಅನುಗ್ರಹಿಸಿದ ವೇಧಾದೀಕ್ಷೆಯಿಂದ ಅಂದು ನನ್ನ ಮಲಪಾಶವು ಕಳೆದು ಜ್ಞಾನವಿಕಾಸವುಂಟಾಯಿತು. ಇಲ್ಲಿಗೆ ಒಂದು ಜನ್ಮವೇ ಕಳೆದಂತೆ ಭಾವಿಸಿದೆನು. ಅಂದಿನ ರಾತ್ರಿಯೇ ಶ್ರೀ|| ಗಳು ಸ್ವಪ್ನದಲ್ಲಿ ಕಾಣಿಸಿಕೊಂಡು ನನ್ನ ಮನೋಗತವನ್ನು ಅನುಮೋದಿಸಿದರು. ಇನ್ನೊಂದು ಜನ್ಮವಿದೆ ಎಂದೂ, ಅದನ್ನು ಇಲ್ಲಿಯೇ ಇನ್ನೂ ಕೆಲವುಕಾಲ ಅನುಭವಿಸಬೇಕೆಂದೂ ತಿಳಿಸಿದರು. ಆಗ ಇಲ್ಲಿಯೇ ಅದೂ ಮುಗಿದುಹೋಗುವುದೆಂದು ಕೇಳಿ ನನಗೆ ಸಂತೋಷವಾಯಿತು. ಆದರೆ ಆ ಕಾಲ ಎಷ್ಟುಬೇಗನೆ ಬಂದೀತೆಂದು ನಿರಂತರವೂ ನಿರೀಕ್ಷಿಸುತ್ತಲಿದ್ದೆನು. ಅದೂ ಸಹ ನನ್ನ ಗೆಳೆಯನ ಮಧುರಸಂಪರ್ಕದಿಂದ 27-5-63 ಸೋಮವಾರ ಬೆಳಗ್ಗೆ 4-15 ರಲ್ಲು ಶಿವಾನುಗ್ರಹದಿಂದ ಫಲಿಸಿತು. ಅಂದಿನಿಂದ ಐದುದಿನಗಳ ಸತತಪ್ರಾರ್ಥನೆಯಿಂದ 31-5-63 ರಲ್ಲು ಪರಮೇಶ್ವರನು ನನ್ನನ್ನು ಕೈಹಿಡಿದನು. ಅಲ್ಲಿಗೆ ಎರಡು ಜನ್ಮಗಳೂ ಕಳೆದುವೆಂದು ನಾನು ಸಂತೋಷಗೊಂಡೆನು. ಅಂದೇ ರಾತ್ರಿ ಶ್ರೀ|| ಗಳೂ ನನ್ನ ಮನೋಗತವನ್ನು ಸಮ್ಮತಿಸಿದರು. ಅದರಿಂದ ನನಗೆ ಪೂರ್ಣ ಸಮಾಧಾನವಾಯಿತು. ಅದೇ ದಿನವೇ ನಾಲ್ಕುವರ್ಷದ ಮುದ್ದುಕುಮಾರ ಮಲ್ಲಿಕಾರ್ಜುನನನ್ನು ಪ್ರೇಮದಿಂದ ತಬ್ಬಿಕೊಳ್ಳಲು ಅವನು ಸವಿನುಡಿಯಿಂದ "ಅಣ್ಣ, ನೀನು ಯಾರನ್ನೂ ತಬ್ಬಿಕೊಳ್ಳಲು ಬಯಸಬೇಡ. ದೇಹದಲ್ಲಿರುವ ಲಿಂಗ ಒಂದನ್ನೇ ಯಾವಾಗಲೂ ತಬ್ಬಿಕೊಳ್ಳಬೇಕು. ಅಮ್ಮನನ್ನಂತೂ ಇನ್ನೆಂದಿಗೂ ತಬ್ಬಲಿಚ್ಛಿಸಬೇಡ. ನೀನು ಯಾವಾಗಲೂ ಶಿವನಲ್ಲಿಯೇ ರಮಿಸಬೇಕು. ಅದನ್ನು ನಿನಗೆ ತಿಳಿಸಲಿಕ್ಕಾಗಿಯೇ ನಾನು ಬಂದಿರುವೆನು" ಎಂದು ಎಚ್ಚರಿಸಿದನು. ಶಿವನು ನನ್ನಮೇಲೆ ಎಷ್ಟೊಂದು ಪ್ರೇಮವನ್ನಿಟ್ಟಿರುವನೆಂಬುದು ಅಂದು ತಿಳಿಯಿತು. ಅವನೇ ಮಗನಾಗಿ ಬಂದು ಆ ರೂಪದಿಂದಲೂ ನನಗೆ ವಿವೇಕವನ್ನು ಹೇಳಿಸಬೇಕೆ? ಶತ್ರು ಮಿತ್ರರೆಲ್ಲರನ್ನೂ ಒಂದೇ ಬಗೆಯಾಗಿ ಕಾಣುವಂತೆಮಾಡಿ ಶಿವನು ತನ್ನಸೇವೆಗೆ ನನ್ನನ್ನು ಹೀಗೆ ಸಿದ್ಧಗೊಳಿಸಿ

ಕೊಂಡಿರುವುದಕ್ಕಾಗಿ ಅವನಿಗೆ ನಾನು ಎಷ್ಟು ಕೃತಜ್ಞನಾದರೂ ಸಾಲದು. ತನಗೆ ಶ್ರೀಕರಭಾಷ್ಯವೇ ದಿವ್ಯಾಭರಣವೆಂದು ಭಾವಿಸಿರುವ ಸಾಧ್ವೀಮಣಿಯಲ್ಲಿ ಪೂಜ್ಯ ಮಲ್ಲಿಕಾರ್ಜುನನೇ ನನ್ನ ಪ್ರಾರ್ಥನೆಯಂತೆ ಸತ್ಪುತ್ರನಾಗಿ ಜನಿಸಿ ನನ್ನನ್ನು ಲಿಂಗದೊಡನೆ ಸಮರಸವಾಗಿ ಬೆರೆಸಿದ ಭಾಗ್ಯವು ಪೂಜ್ಯಮಾತಾಪಿತೃಗಳ ಪರಮಪ್ರಸಾದವೆಂದು ಭಾವಿಸುತ್ತೇನೆ. ಇದರಮೇಲೆ ಪ್ರತಿನಿಮಿಷವೂ ಶಿವನನ್ನೇ ಸ್ಮರಿಸುವಂತೆ ಎಚ್ಚರಿಸುತ್ತಿರುವ ಸತ್ಪುತ್ರಿ ಚಿ|| ಸರ್ವಮಂಗಳೆಯಂತೂ ಒಮ್ಮೆ ನಾನು ಒಬ್ಬನನ್ನು ಕೋಪಾಗ್ರಹದಿಂದ ಬೈದರೂ "ಅಣ್ಣ, ನಿಮ್ಮ ಸೋದರನನ್ನು ಹೀಗೇಕೆ ಬಯ್ದಿರಿ. ಅವನಲ್ಲಿರುವ ಶಿವನಿಗೆ ನೋವಾಗಲಿಲ್ಲವೆ? ನಿಮ್ಮೊಳಗೂ ಅದೇ ಶಿವನಿಲ್ಲವೆ? ನಿಮ್ಮ ವರ್ತನೆಗೆ ಅವನು ಸಮ್ಮತಿಸಿದನೇ?" ಎಂದು ಅನೇಕವೇಳೆ ಕೇಳಿರುವಳು. ಇದೆಲ್ಲಕ್ಕಿಂತಲೂ ಹೆಚ್ಚಾಗಿ ನನ್ನ ನಾದಿನಿ ಚಿ|| ಅನ್ನಪೂರ್ಣೆ ತ್ಯಾಗಮೂರ್ತಿ ಎನಿಸಿ ನನ್ನಲ್ಲಿ ಶಿವಭಕ್ತಿಯನ್ನು ಬೆಳೆಸಿ ದೃಢಪಡಿಸಿದ್ದಾಳೆ. ಇವರೆಲ್ಲರೂ ಶಿವಾನುಗ್ರಹದಿಂದ ಸುಖವಾಗಿ ಬಾಳಲೆಂದು ಹಾರೈಸುತ್ತೇನೆ. ಈ ಬಾಳಿನಲ್ಲಿಯೇ ಇಂತಹ ನಿತ್ಯಸುಖದ ಸಂನಿವೇಶವನ್ನು ಕೃಪೆಯಿಂದ ತಂದೊಡ್ಡಿದ ಶ್ರೀಗುರುರೇಣುಕರಿಗೂ ಮತ್ತು ಅವರ ಪೀಠಾಭಿಮಾನಿ ದೇವತೆಯಾದ ಶ್ರೀ ವೀರಭದ್ರಸ್ವಾಮಿಗೂ ಈ ಸೇವಕನು ಎಷ್ಟು ಕೃತಜ್ಞನಾಗಿದ್ದರೂ ಸಾಲದು. ಹೀಗೆ ಶಿವನನ್ನು ಕೈಹಿಡಿದು ಅವನ ಇಚ್ಛೆಯಂತೆ ಅವನು ಮಾಡಿಸಿದ್ದನ್ನು ಮಾಡುತ್ತಿರುವ ಈ ಸೇವಕನು ಎಲ್ಲರಲ್ಲೂ ನಿರಭಿಮಾನದಿಂದ ಅವನನ್ನೇ ಕಾಣುತ್ತಿರುವುದರಿಂದ ಇವನಿಗೆ ಇನ್ನು ಯಾರ ಹಂಗು ಇದ್ದೀತು? ಯಾವ ರೋಗ ಭಯ ದುಃಖಗಳಿದ್ದಾವು? ದೇಹದ ಎಲ್ಲಾ ಇಂದ್ರಿಯಗಳಲ್ಲೂ ಅವನೇ ನೆಲಸಿ ನಿರಭಿಮಾನದಿಂದ ಈ ಸೇವಕನ ಕಡೆಯಿಂದ ದುಡಿಸಿ ಫಲಾಫಲಗಳನ್ನು ಸಮಭಾವನೆಯಿಂದ ಅರ್ಪಿಸಿಕೊಂಡು ಭೋಗಿಸುತ್ತಲಿರುವಾಗ ಸೇವಕನಿಗೆ ಮಾನ, ಅಭಿಮಾನ, ಅವಮಾನಗಳ ಯಾತನೆ ಎಲ್ಲಿಂದ ಬರಬೇಕು? ಇಂತಹ ಪರಿಸ್ಥಿತಿಯಲ್ಲಿ ಶ್ರೀಕರಭಾಷ್ಯದಂತಹ ಪವಿತ್ರ ಗ್ರಂಥವನ್ನು ಕನ್ನಡದಲ್ಲಿ ಪ್ರಕಾಶಪಡಿಸಿ ಸೋದರರಿಗೆ ದೊರಕಿಸುವಂತಹ ಶಿವಪೂಜೆ ಈ ಸೇವಕನಕಡೆಯಿಂದ ಏಕೆ ಆಗಬಾರದು? ಶಿವನೊಲಿದರೆ ವಿಷವೂ ಅಮೃತವಾಗುತ್ತದೆ. "ಇವನೊಬ್ಬನೇ ಇದನ್ನು ಹೇಗೆ ಮಾಡಿಯಾನು?" ಎಂದು ರಜೋಗುಣದ ಕೆಲವು ವ್ಯಕ್ತಿಗಳು ತಮ್ಮ ಸಂತೋಷಕ್ಕಾಗಿ ಅಂದುಕೊಂಡರೆ ಅದಕ್ಕೆ ಈ ಸೇವಕನು ಏನುಮಾಡಿಯಾನು? ಅವರ ವಿವಾದಕ್ಕೆ ದೇಹದೊಳಗಿನ ಪ್ರಭುದೇವನೇ ಉತ್ತರವನ್ನು ಕೊಡುವನು. ಅವನೇ ಇದನ್ನು ನೆರವೇರಿಸಿರುವಾಗ ಈ ಸೇವಕನಿಗೆ ಇದರ ಹೊಣೆಗಾರಿಕೆ ಏನಿದ್ದೀತು? ಅಹಂಕಾರಪ್ರವೃತ್ತಿಯ ಜನರಿಗೆ ಇದು ಕಷ್ಟವಾದರೂ ದಾಸಭಾವದ ಶಿವಭಕ್ತನಿಗೆ ಎಂದಿಗೂ ಕಷ್ಟವಾಗದು. ಮಾನವನು ಮಾಯೆಯಿಂದ ಸಂಭವಿಸಿರುವ ಅಹಂಕಾರಾಭಿಮಾನಗಳನ್ನು ತ್ಯಾಗಮಾಡಿದರೆ ಶಿವನು ಲೋಕಕಲ್ಯಾಣಕ್ಕಾಗಿ ಪರಾಹಂತಾಸ್ಥಿತಿಯನ್ನು ಕರುಣಿಸುತ್ತಾನೆ. ಆಗ ಎಲ್ಲಾ ಅದ್ಭುತಕಾರ್ಯಗಳೂ ಲೀಲೆಯಿಂದ ನಡೆಯುತ್ತವೆ ಎಂಬುದಕ್ಕೆ ಈ ಗ್ರಂಥವೇ ಸಾಕ್ಷಿ.

ಇದೂ ಅಲ್ಲದೆ ದುರುದ್ದೇಶದ ಕೆಲವು ನನ್ನ ಸೋದರರು "ಇದನ್ನು ಇವನು ನಿಜವಾಗಿಯೂ ಅನುವಾದಮಾಡಿದನೆ? ಭಾಷ್ಯಕರ್ತರು ಬ್ರಾಹ್ಮಣರೇ? ಅಥವಾ ವೀರ ಶೈವರೇ ? ಅವರು ನಿಜವಾಗಿಯೂ ಶ್ರೀಶೈಲಪೀಠದ ಸ್ವಾಮಿಗಳಾಗಿದ್ದರೇ ? ಅವರು ಹಿಂದಿನ ಆಚಾರ್ಯರಲ್ಲಿ ಐವರನ್ನೂ ವಂದಿಸಿರುವರೇ ? ಅಥವಾ ನಾಲ್ವರನ್ನೇ ? ಈ ಭಾಷ್ಯವನ್ನು ಶ್ರೀಪತ್ಯಾಚಾರ್ಯರೆಂಬ ಹೆಸರಿನ ಓರ್ವ ಬ್ರಾಹ್ಮಣನು ಏಕೆ ಬರೆದಿರ ಬಾರದು ? ಈ ಬಗೆಯ ಶುಷ್ಕಾಲಾಪದಲ್ಲಿಯೇ ಅಮೋಘವಾದ ಕಾಲವನ್ನು ವ್ಯರ್ಥ ಗೊಳಿಸುತ್ತಿರುವರು. ಆದರೆ ಇವರು ತಮ್ಮ ಪವಿತ್ರವಾದ ಕಾಲವನ್ನು ಹೀಗೆ ದುರುಪ ಯೋಗಪಡಿಸುತ್ತಿರುವಾಗಲೇ ಸಾತ್ತ್ವಿಕಸಾಧಕರು ಶ್ರೀಕರಭಾಷ್ಯದ ಪ್ರಥಮ ಭಾಗ ವನ್ನು ಅನುವಾದದೊಡನೆ ಓದಿಮುಗಿಸಿ ಜೀರ್ಣಿಸಿಕೊಂಡು ಪ್ರತಿಗಳನ್ನೇ ಮುಗಿಸಿ ದ್ದಾರೆ. ಆದ್ದರಿಂದಲೇ "ವಯಂ ತತ್ತ್ವಾನ್ವೇಷಾನ್ಮಧುಕರ ಹತಾಃ ತ್ವಂ ಖಲು ಕೃತೀ" ಎಂದು ಕಾಳಿದಾಸಮಹಾಕವಿ ದುಷ್ಯಂತನ ಕಡೆಯಿಂದ ಶಕುಂತಲೆಯ ಅಧರಾಮೃತ ವನ್ನು ಪಾನಮಾಡುತಿದ್ದ ಭ್ರಮರದ ಬಗ್ಗೆ ಹೇಳಿಸಿದ್ದು ನನ್ನ ಈ ಅಳಿಲು ಸೇವೆಗೆ ಯಥಾರ್ಥವಾಗಿ ಅನ್ವಯಿಸುತ್ತದೆ. ಒಳಹೊಕ್ಕು ಪ್ರವೇಶಿಸದೆ ಮೇಲೆ ಮೇಲೆ ಹೋರಾಡುವವನಿಗೆ ರಸಾನುಭವ ದೊರಕಲಾರದು. ಬ್ರಹ್ಮಾನಂದವೇ ರಸಾನುಭವ. ಇದು ದೊರಕಬೇಕಾದರೆ ಸಾಧಕನು ನಿರ್ಮತ್ಸರನೂ ನಿಷ್ಕಲ್ಮಷಹೃದಯನೂ ಆಗ ಬೇಕು. ಇದೇ ಇಲ್ಲದವನಲ್ಲಿ ಪಾಂಡಿತ್ಯವಿದ್ದರೂ ಫಲವಿಲ್ಲ. ಲಿಂಗಧಾರಣದ ಮಹತ್ತ್ವವನ್ನು ಪ್ರಶಂಸಿಸುವ ಶ್ರೀಕರಭಾಷ್ಯದ ವ್ಯಾಸಂಗವು ಅಲಿಂಗಿಬ್ರಾಹ್ಮಣರಿಗೆ ಹೇಗೆ ಪ್ರಿಯವಾದೀತು ? ಸ್ಮಾರ್ತಬ್ರಾಹ್ಮಣರು ಮತ್ತು ಇತರ ಶೈವರು ಪ್ರತಿಷ್ಠಿತ ಲಿಂಗದ ಅರ್ಚನೆಯನ್ನು ಮಾಡುವರಾದರೂ ಅವರಿಗೆ ಆ ಕಾಲದಲ್ಲಿ ಮಾತ್ರವೇ ಪರಮೇಶ್ವರನ ಸಂಪರ್ಕವೇರ್ಪಡುವುದೇ ಹೊರತು ಅವನ ನಿತ್ಯಾಭಿಯೋಗವು ಲಭಿಸುವುದಿಲ್ಲ. ಆದರೆ ನಿತ್ಯಾಭಿಯುಕ್ತರಿಗೆ ಮಾತ್ರವೇ ಯೋಗಕ್ಷೇಮವನ್ನು ವಹಿಸಿಕೊಳ್ಳುವುದಾಗಿ ಪರಮೇಶ್ವರನು ಹೇಳಿದ್ದಾನೆ? ಶಿವಭಕ್ತನನ್ನು ವಿನಾಯಿಸಿ ಪ್ರಪಂಚದಲ್ಲಿ ಯಾವ ಮಾನವನಿಗೂ ಪರಮೇಶ್ವರನ ನಿತ್ಯಾಭಿಯೋಗವು ಲಭಿಸು ವಂತಿಲ್ಲ. ಸಾಧಕರಿಗೆ ಇಂತಹ ನಿತ್ಯಾಭಿಯೋಗವನ್ನು ಲೋಕಕಲ್ಯಾಣಕ್ಕಾಗಿ ವಿಧಿಸುತ್ತ ಸೂರ್ಯನಂತೆ ನಿರ್ಲಿಪ್ತವಾಗಿ ಶೋಭಿಸುತ್ತಿರುವ ಈ ಶ್ರೀಕರಭಾಷ್ಯವನ್ನು ಸೂರ್ಯಪೀಠದಂತೆಯೇ ನಿರ್ಲಿಪ್ತರಾದ ಸ್ವಾಮಿಗಳಲ್ಲದೆ ಬೇರೆ ಯಾರು ಬರೆದಾರು? ಈ ಹೃದಯದ ದಹರಾಕಾಶದ ದಿವ್ಯಕ್ಷೇತ್ರದಲ್ಲಿ ವಿರಾಜಿಸುತ್ತಿರುವ ಮಹಾದೇವ ನೊಡನೆ ಸಮರಸವಾಗಿ ಬೆರೆಯಲಿಕ್ಕಾಗಿಯೇ ಪೂಜ್ಯ ಶ್ರೀ ಸಂಗಮಾರ್ಯೆಯ ಗರ್ಭ ದಿಂದ ಜನಿಸಿ ಪೂಜ್ಯ ಪಿತೃವಿನ ದಿವ್ಯಾನುಗ್ರಹದಿಂದ ಭವಮಾಯೆಯನ್ನು ತೊಲಗಿಸಿ ಕೊಂಡು ಶಿವನೊಡವೆರೆಸಿರುವ ಈ ದಾಸನಲ್ಲದೆ ಬೇರೆ ಯಾರು ಭವಹರವಾದ ಈ ಪವಿತ್ರ ಶ್ರೀಕರಭಾಷ್ಯದ ಅನುವಾದಕ್ಕೆ ಕೈಹಾಕಬಹುದು ? ರಾಜಸಜನರು ವಿಚಾರ ಮಾಡದೆ ಮನಬಂದಂತೆ ಮಾತನಾಡುವುದು ಸಹಜ. ಆದರೆ ಸಾತ್ತ್ವಿಕರ್‍ಯಾರೂ

ಇಂತಹ ಕುಚೋದ್ಯಗಳಲ್ಲಿ ಪ್ರವರ್ತಿಸುವುದಿಲ್ಲ. ಆದರೆ ರಾಜಸರು ಇಂತಹ ದುಷ್ಪ್ರವೃತ್ತಿಯನ್ನು ಎಂದಿಗೂ ತೊರೆಯುವುದಿಲ್ಲ. ಈ ಬಗೆಯ ಪ್ರಪಂಚದ ಪ್ರವಾಹವನ್ನು ಯಾರೂ ತಡೆಯಲಾರರು. ಆದರೆ ಅವರೆಲ್ಲರೂ ಕ್ರಮವಾಗಿ ರಜೋಗುಣದ ಬಂಧನದಿಂದ ಪಾರಾಗಲೆಂಬುದೇ ನನ್ನ ಹೆಬ್ಬಯಕೆ. ಗುಣವೆಂದರೆ ಹಗ್ಗ. ತ್ರಿಗುಣಗಳ ಈ ಬಗೆಯ ಬಂಧನಕ್ಕೆ ಲೋಕದ ಮಾನವರೆರೂ ಒಳಪಟ್ಟು ಬದ್ಧರೆನಿಸಿದ್ದಾರೆ. ಪಶುವನ್ನು ಹಗ್ಗದಲ್ಲಿ ಕಟ್ಟುವಂತೆ ಪಶುಪತಿಯು ತನ್ನ ಮಾಯಾಪಾಶದಿಂದ ಈ ಜೀವರೆಲ್ಲರನ್ನು ಕಟ್ಟಿಹಾಕಿದ್ದಾನೆ. ಆದ್ದರಿಂದಲೇ ಅವನೊಬ್ಬನನ್ನು ವಿನಾಯಿಸಿ ಉಳಿದವರೆಲ್ಲರೂ ಪಶುಗಳೆನಿಸಿದ್ದಾರೆ. ತ್ರಿಮೂರ್ತಿಗಳೂ ಪಶುಗಳೇ ಆದರೂ ಅವರಲ್ಲಿ ಪರಮಾತ್ಮನ ಚಿತ್‌ಶಕ್ತಿ ಹೆಚ್ಚು ವ್ಯಾಪಿಸಿರುವುದರಿಂದ ಅವರಮೇಲೆ ಪಾಶಶಕ್ತಿಯ ಪ್ರಭಾವ ಕಡಮೆ. ಇಂದ್ರಾದಿದೇವತೆಗಳಲ್ಲಿ ಚಿತ್‌ಶಕ್ತಿಯ ವ್ಯಾಪ್ತಿ ಕೊಂಚ ಕಡಮೆಯಾದ್ದರಿಂದ ಪಾಶಶಕ್ತಿಯ ಪ್ರಭಾವ ಹೆಚ್ಚಾಗಿರುವುದು. ಆದರೆ ಮಾನವರಲ್ಲಂತೂ ಚಿತ್‌ಶಕ್ತಿಯ ವ್ಯಾಪ್ತಿ ಪೂರಾ ಕಡಮೆಯಾದ್ದರಿಂದ ಆ ನ್ಯೂನತೆ ಎಲ್ಲವೂ ಪಾಶಶಕ್ತಿಯಿಂದಲೇ ತುಂಬಿಹೋಗಿದೆ. ಹೀಗೆ ಪಾಶಶಕ್ತಿ ಅಥವಾ ಮಾಯೆ ಮಾನವರನ್ನು ಚಿತ್ರವಿಚಿತ್ರವಾದ ರೀತಿಗಳಲ್ಲಿ ಕಾಡಿಸುತ್ತಿರುವುದರಿಂದ ಅವರು ಈ ಮಾಯಾ ಪ್ರಪಂಚದಲ್ಲಿ ರಾಗದ್ವೇಷಗಳಲ್ಲಿ ತೊಡಗಿರುವುದು ಸಹಜ ಈ ಬಗೆಯ ಅರಿವು ಯಾರಿಗೆ ಆಗಿರುವುದೋ ಅವರು ಮಾತ್ರ ಯಾರನ್ನೂ ಎಂದಿಗೂ ನಿಂದಿಸಲಾರರು. ಇದನ್ನೇ ವೇದಾಂತವಿಜ್ಞಾನವೆಂದು ಶಿವಾನುಭವಿಗಳು ಹೇಳುತ್ತಾರೆ. ಈ ರೀತಿಯಲ್ಲಿ ಯಾರು ನಿಶ್ಚಯಜ್ಞಾನವನ್ನು ಪಡೆದಿರುವರೋ ಅವರೇ ನಿಜವಾಗಿಯೂ ಸಮತಾವಾದಿಗಳು; ಅವರೇ ಆದರ್ಶಕರ್ಮಯೋಗಿಗಳು; ಅವರೇ ಉಜ್ವಲತಪಸ್ವಿಗಳು. ಅವರಿಂದಲೇ ಲೋಕಕಲ್ಯಾಣವಾದೀತು. ಅಂತವರಿಗೆ ಮಾತ್ರವೇ ಶ್ರೀಕರಭಾಷ್ಯವು ಪ್ರಿಯವಾದೀತು. ಬೇರೆಯವರು ಇದನ್ನು ನೀರೊಳಗೆ ಇಡಬೇಕೆಂದು ಎಲ್ಲರೆದುರಿಗೆ ಆಡಿಕೊಳ್ಳುತ್ತ ತಮ್ಮ ಸಣ್ಣತನವನ್ನು ತೋರಿಸಿಕೊಳ್ಳುವುದು ಸಹಜ. ಆದರೆ ಅವರಲ್ಲೂ ನಿರ್ಮತ್ಸರಮನೋಭಾವವೂ, ಆತ್ಮದ ಘನತೆ ಗೌರವ ಮತ್ತು ಗಾಂಭೀರ್ಯಗಳೂ ಬೆಳೆಯಲೆಂದು ನಾನು ಭಕ್ತಿಯಿಂದಲೂ ನಿರಭಿಮಾನದಿಂದಲೂ ಪ್ರಾರ್ಥಿಸುತ್ತೇನೆ.

ಭಿನ್ನ ಭಿನ್ನ ಸ್ವಭಾವದ ಸೋದರರೆಲ್ಲರನ್ನು ಅದ್ವೈತಭಾವನೆಯಿಂದ ಪ್ರೀತಿಸಲಿಕ್ಕೆ ಹೆಣಗಾಡುತ್ತಿದ್ದ ನನಗೆ ಭಾವದಲ್ಲಿ ಮಾತ್ರವೇ ಅದು ಸಾಧ್ಯವಾದರೂ ಕ್ರಿಯಾರಂಗದಲ್ಲಿ ಶಕ್ಯವಿಲ್ಲವೆಂಬುದು ೩೧-೫-೬೩ ರಂದು ತಿಳಿಯಬಂದಿತು. “ಬಳಸಿದರು ಅದ್ವೈತವನ್ನು ಬಾಹ್ಯದೊಳು ನಿನ್ನೊಳಗೆ ಏಕೋಭಾವದಿಂದಿರು” ಎಂಬ ನಿಜಗುಣರ ಮಾತು ಅಂದು ನನಗೆ ನಿಜವೆನಿಸಿತು. ಸಾಧುಗಳಲ್ಲೂ ಪಾಪಿಗಳಲ್ಲೂ ಭಿನ್ನಭಿನ್ನ ಸ್ವಭಾವವು ಸಹಜವಾಗಿರುವುದರಿಂದ ಅವರೊಳಗೆ ನಿರ್ಲಿಪ್ತನಾಗಿ ನೆಲಸಿರುವ ಶಿವನೇ ತನ್ನಲ್ಲೂ ಸೂತ್ರದಂತೆ ಸಮನಾಗಿ ನೆಲಸಿರುವನೆಂಬ ಆತ್ಮೈಕ್ಯಭಾವನೆ ನಮಗೆ ಸಾಧ್ಯವೇ ಹೊರತು ಪಾಪಿಗಳನ್ನೂ ಸಾಧುಗಳನ್ನೂ ಒಂದುಗೂಡಿಸುವಿಕೆ ಯಾರಿಗೂ

ಸಾಧ್ಯವಿಲ್ಲವೆಂಬ ಅರಿವು ನನಗೆ ಆಗ ದೊರೆಯಿತು. ಆದರೆ ತಮ್ಮ ದೇಹದಲ್ಲಿಯೇ ಶಿವನ ಪರಿಚಯವನ್ನು ಮಾಡಿಕೊಳ್ಳದವರು ಬೇರೆಯವರಲ್ಲೂ ಶಿವನನ್ನು ಕಾಣಲಾರರು. ಅಂತವರು ಅಹಂಕಾರ ಮಮಕಾರಗಳಿಂದ ದೇಹೇಂದ್ರಿಯಗಳನ್ನು ದುರುಪಯೋಗ ಪಡಿಸುತ್ತಲಿರುವುದು ತುಂಬ ಶೋಚನೀಯ. ಅವರ ರಾಕ್ಷಸವರ್ತನೆ ಅವರಿಗಷ್ಟೇ ಅಲ್ಲದೆ ಲೋಕಕ್ಕೂ ಹಾನಿಕರವಾಗಿ ಪರಿಣಮಿಸುವುದು. ಅವರು ಯಾವಾಗಲೂ ಪರನಿಂದೆಯಲ್ಲಿಯೇ ಕಾಲವನ್ನು ಕಳೆಯುತ್ತ ಕೀರ್ತಿಪ್ರತಿಷ್ಠಾಕಾಂಕ್ಷೆಗಳಿಂದ ಮೆರೆಯುವರು. ಇಂತವರನ್ನು ತಿದ್ದಲಿಕ್ಕೆ ಬ್ರಹ್ಮನಿಗೂ ಸಾಧ್ಯವಿಲ್ಲ. ಅವರು ಭೂಮಿಗೆ ಹೊರೆಯಾಗಿ ಬಾಳುತ್ತಲಿದ್ದು ಒಂದುದಿನ ದೇಹವನ್ನು ತೊರೆದು ಮತ್ತೆ ನೀಚಜನ್ಮದಲ್ಲಿ ಹುಟ್ಟುವರು. ಇಂತವರು ರಜೋಗುಣದ ಪ್ರಭಾವದಿಂದ ಮನಸ್ಸನ್ನು ಕಲ್ಮಷಗೊಳಿಸಿಕೊಂಡು ಯಾವಾಗಲೂ ಎಲ್ಲರಮೇಲೂ ದ್ವೇಷವನ್ನು ಸಾಧಿಸುತ್ತಲೇ ಇರುವರು. ಅವರಬಗ್ಗೆ ಸಹಜವಾಗಿ ಆಡುವ ಒಳ್ಳೆಯ ಮಾತನ್ನೂ ಸಹ ಅವರು ತಪ್ಪಾಗಿ ತಿಳಿದು ಅದನ್ನು ಹುಚ್ಚನ ಮಾತೆಂದು ಅಲ್ಲಗಳೆಯುವರು. "ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ" ಅಂದರೆ ಶಿವನಿಂದಲೇ ಜನರಿಗೆ ಸ್ಮರಣ ಅರಿವು ಮರವೆಗಳಾಗುತ್ತವೆಯಾದ್ದರಿಂದಲೂ, ಜೀವರ ಆಗುಹೋಗುಗಳು ಶಿವನೊಡ್ಡುವ ಸಂಘಟನೆಗಳನ್ನು ಅವಲಂಬಿಸಿರುವುದರಿಂದಲೂ ಒಬ್ಬೊರಿಂದೊಬ್ಬರಿಗೆ ದ್ವೇಷವನ್ನು ಬೆಳೆಸಲು ಅವಕಾಶವೇ ಇಲ್ಲವೆಂಬ ಅಂಶವೇ ಅವರಿಗೆ ತಿಳಿಯದು. ಪಂಡಿತಂಮನ್ಯರಾದ ಇಂತಹ ಜನರೊಡನೆ ವ್ಯವಹರಿಸುವಾಗ ಆದಷ್ಟು ಎಚ್ಚರಿಕೆಯಿಂದಿರಬೇಕೆಂದೂ, ಇದೇ ಜೀವನದ ಮರ್ಮವೆಂದೂ ಗೀತೆ ಸ್ಪಷ್ಟಪಡಿಸಿದೆ. ಇದನ್ನು ಶಿವಯೋಗವೆಂದು ಅನುಭವಿಗಳು ಹೇಳುತ್ತಾರೆ. ಇದನ್ನು ತಿಳಿಯುವ ಅವ್ಮೃತಗಳಿಗೆ ನನ್ನ ಜೀವನದಲ್ಲಿ ಸುದೈವದಿಂದ ಅಂದು ದೊರೆಯಿತು.

ರುಚಿವೈಚಿತ್ರ್ಯದ ಈ ಪ್ರಪಂಚದಲ್ಲಿ ಸಾಧಕನಿಗೆ ಭಾವದಲ್ಲಿ ವಿರಕ್ತಿಯೂ ಕ್ರಿಯೆಯಲ್ಲಿ ಆಸಕ್ತಿಯೂ ಅವಶ್ಯಕ. ಸಾರ್ವಜನಿಕಮಿತ್ರರೆಲ್ಲರಿಗೂ ಸಾಮಾನ್ಯವಾಗಿ ಕ್ರಿಯೆಯಲ್ಲಿ ಆಸಕ್ತಿ ಇದ್ದರೂ ಭಾವದಲ್ಲಿ ವಿರಕ್ತಿ ಇರುವುದಿಲ್ಲ. ಆದರೂ ಅಂತವರೊಡನೆ ಸೇರಿದ ಸಾತ್ತ್ವಿಕನು ಭಾವದಲ್ಲಿ ವಿರಕ್ತಿಯನ್ನು ರೂಢಿಸಿಕೊಳ್ಳಬಹುದು. ಇಂತಹ ಉದಾತ್ತ ತತ್ತ್ವವನ್ನು ಒಮ್ಮೆ ನಾನು ಜೀವನದಲ್ಲಿ ಗುರುಕೃಪೆಯಿಂದ ಮನಗಂಡೆನು. ಈ ಬಗೆಯ ಪುಣ್ಯವು ನನಗೆ ಒದಗಿಬಂದದ್ದಕ್ಕಾಗಿ ಜನ್ಮದಾತೃಗಳಾದ ಪೂಜ್ಯ ಮಾತಾಪಿತೃಗಳಿಗೆ ಅತ್ಯಂತ ಕೃತಜ್ಞನಾಗಿದ್ದೇನೆ. ಯಾವ ಪೂಜ್ಯಮಾತೆಯು ಶಿವನ ನಿರಂತರ ಚಿಂತನೆಯಿಂದ ಗರ್ಭದಲ್ಲಿದ್ದವನಿಗೆ ಸದ್ಭಾವನೆಯನ್ನು ಹುಟ್ಟಿಸಿದರೋ ಅಂತಹ ಮಾತೆಯ ಪವಿತ್ರನಾಮ ನನ್ನ ಹೃದಯದಲ್ಲಿ ನಿರಂತರವೂ ಬೆಳಗುತ್ತಿರುವ ಸಂಗಮನಾಥನೊಡನೆ ನನ್ನನ್ನು ಬೆರೆಸಿರುವಾಗ್ಗೆ ಅದನ್ನು ನಾನು ಹೇಗೆ ಮರೆತೇನು? ಯಾವನ ಲಿಂಗಶರೀರವು ಇಲ್ಲಿಯೇ ಶಿವನಲ್ಲಿ ಲಯವಾಗುವುದೋ ಅವನೊಬ್ಬನೇ ಶಿವನನೊಡನೆ ಸಂಗಮನಾಗಬಲ್ಲನು. ಅವನಿಗೆ ಮಾತ್ರವೇ ಅಮೃತ ಹಾಗೂ ಬ್ರಾಹ್ಮೀಸ್ಥಿತಿ ದೊರಕಬಲ್ಲದು. ಇದನ್ನು ದೊರಕಿಸಲು ಪೂಜ್ಯಮಾತೆ ಶ್ರೀ|| ಸಂಗಮಾರ್ಯೆ ಇಂದಿಗೂ ನನಗೆ ದಿವ್ಯ

ಸ್ಫೂರ್ತಿಯಾಗಿರುವುದು ನನ್ನ ಭಾಗ್ಯೋದಯವೆಂದು ಭಾವಿಸುತ್ತೇನೆ. ಈ ಅಪ್ಪೃತಕ್ಕಾಗಿಯೇ ನಾವು ಈ ಪ್ರಪಂಚದಲ್ಲಿ ಅನಂತಜೀವರೊಡನೆಯೂ ಮತ್ತು ಭೋಜ್ಯವಸ್ತುಗಳೊಡನೆಯೂ ಸೇರಿದ್ದೇವೆ. ಎಲ್ಲ ಜೀವರನ್ನೂ ನಿರಭಿಮಾನದಿಂದ ಪ್ರೀತಿಸುತ್ತಲೂ, ಭೋಜ್ಯವಸ್ತುಗಳನ್ನು ಪ್ರಸಾದವೆಂದು ಭೋಗಿಸುತ್ತಲೂ ಇದ್ದರೆ ಎಲ್ಲರಿಗೂ ಈ ಬ್ರಾಹ್ಮೀಸ್ಥಿತಿ ಸುಗಮವಾಗುವುದು. ಆದರೆ ಎಲ್ಲ ಜೀವರನ್ನು ಪ್ರೀತಿಸುವುದರಲ್ಲಿಯೇ ಮಾನವನು ಶುದ್ಧನೂ ಧೀರನೂ ವಿವೇಕಿಯೂ ಆಗಿರಬೇಕು. ಎಲ್ಲರೂ ಗುಣಗಳೊಳಗೆ ಸಿಕ್ಕಿಬಿದ್ದಿದ್ದು ತ್ರಿಗುಣಾತೀತರಾಗಿಲ್ಲವಾದ್ದರಿಂದ ಅವರ ವರ್ತನೆಯನ್ನು ನೋಡಿಯೇ ಅವರನ್ನು ಪ್ರೀತಿಸಬೇಕು. ಒಬ್ಬನು ಎಷ್ಟೇ ಪಂಡಿತನಾದರೂ, ಎಂತಹ ಉನ್ನತಾಧಿಕಾರಿಯಾದರೂ ಅವನ ವರ್ತನವು ತ್ರಿಗುಣಗಳಿಂದಾಚೆಗೆ ಹೋಗದೆ ತ್ರಿಗುಣಗಳ ಕಗ್ಗತ್ತಲೆಯಲ್ಲಿಯೇ ಪರದಾಡುತ್ತಿದ್ದರೆ ಅವನು ಆತ್ಮಕಲ್ಯಾಣವನ್ನು ಸಾಧಿಸಲಾರನು. ಅವನಿಂದ ಲೋಕಕಲ್ಯಾಣವೂ ಆಗುವಂತಿಲ್ಲ. ಅವನಿಗೆ ವಯಸ್ಸಾಗಿದ್ದರೂ ಅಜಾಗಲಸ್ತನದಂತೆ ಅವನ ಹಿರಿಯತನ ವ್ಯರ್ಥವೇ ಅಗುವುದು. ಒಬ್ಬನ ಹಿರಿಯತನ ಅವನ ಅಧಿಕಾರದಲ್ಲಿಲ್ಲ ; ಪಾಂಡಿತ್ಯದಲ್ಲಿಲ್ಲ ; ಸಿರಿಸಂಪತ್ತುಗಳಲ್ಲಿಲ್ಲ ; ಭೋಗಭಾಗ್ಯಗಳಲ್ಲಿಲ್ಲ ; ನಿರರ್ಗಳವಾದ ಉಪನ್ಯಾಸದಲ್ಲಿಲ್ಲ ; ಆದರೆ ತ್ರಿಕರಣಶುದ್ಧಿಯಲ್ಲಿ, ಸಚ್ಚಾರಿತ್ರ್ಯದಲ್ಲಿ, ಸರ್ವಾತ್ಮಭಾವದಲ್ಲಿ, ಪರಹಿತರಕ್ಷಣೆಯಲ್ಲಿ, ನಿಸ್ಸ್ವಾರ್ಥದೃಷ್ಟಿಯಲ್ಲಿ, ಮತ್ತು ಕರ್ತವ್ಯನಿಷ್ಠೆಯಲ್ಲಿ ಅವನ ಹಿರಿಯತನ ಅಡಗಿದೆ. "ನ ಜ್ಞಾನವೃದ್ಧೇಷು ವಯಃ ಸಮೀಕ್ಷ್ಯತೇ." ಆತ್ಮಜ್ಞಾನವನ್ನು ಪಡೆದು ಅನುಭವಿಸಿದವರಲ್ಲಿ ವಯಸ್ಸಾಗಲೀ ಹೊರಗಿನ ಚಿಹ್ನಗಳಾಗಲೀ ಪ್ರಧಾನವಲ್ಲ. ಪ್ರತಿಯೊಬ್ಬನೂ ತನ್ನೊಳಗಿನ ಪರಶಿವನನ್ನು ವಿಶ್ವಾಸದಿಂದ ಅರಿತು ಅವನಲ್ಲಿ ಬೆರೆಯಬಹುದು. ಇದಕ್ಕೆ ಯಾವ ಅಡಚಣೆಯೂ ಇಲ್ಲ. ಆದರೆ ಅವನಿಗೆ ಈಬಗ್ಗೆ ಉತ್ಕಟವಾದ ಇಚ್ಛೆ ಹುಟ್ಟಬೇಕು. ಇದು ಹುಟ್ಟಲಿಕ್ಕಾಗಿಯೇ ಅವನು ಬುದ್ಧಿಶಕ್ತಿಗೆ ಶರಣಾಗಬೇಕು. ಇದರ ಬಲದಿಂದಲೇ ಅವನಿಗೆ ಯುಕ್ತಾಯುಕ್ತ ವಿವೇಚನೆಯುಂಟಾಗುತ್ತದೆ. ಕುಟಿಲಸ್ವಭಾವಧವರಲ್ಲಿ ಆರ್ಜವವನ್ನಾಚರಿಸುವುದರಿಂದ ಅನರ್ಥವುಂಟಾದೀತು. ಅಂತವರ ಬಗ್ಗೆ ಸಾಧಕನು ಉದಾಶೀನತೆಯನ್ನು ತಾಳುವುದೇ ಮೇಲು. ಸಾಧುಸಂತರಲ್ಲೂ, ಶಿವಯೋಗಿಗಳಲ್ಲೂ ರಮಿಸಿದಂತೆ ಕಪಟಿಗಳಲ್ಲಿ ಅವನ ಮನಸ್ಸು ರಮಿಸಬಾರದು. ಆದರೆ ಎಲ್ಲರಿಗೂ ಕ್ಷೇಮವನ್ನು ಬಯಸುವ ವಿಶಾಲಭಾವನೆ ತನ್ನಲ್ಲಿ ಅಡಗಿರಬೇಕು. ಅದು ಸಮಯೋಚಿತವಾಗಿ ಹೊರಹೊಮ್ಮಿ ಲೋಕಕಲ್ಯಾಣವನ್ನು ಸಾಧಿಸಬೇಕು. "ಸುಜನಗೆ ಮಂಗಳಂ, ಕುಜನಗೆ ಮಂಗಳಂ, ಸರ್ವರಿಗಾಗಲಿ ಮಂಗಳಂ," "ಸರ್ವೇ ಜನಾಸ್ಸುಖಿನೋ ಭವಂತು ಮಾ ಕಶ್ಚಿದ್ದುಃಖಭಾಗ್ಭವೇತ್" ಎಂಬ ಪ್ರಾರ್ಥನೆಗಳ ಉದ್ದೇಶವೂ ಇದೇಯೇ. ನಿಗಮಾಗಮಗಳೆಲ್ಲದರ ದಿವ್ಯಸಂದೇಶವೂ ಇದೆಯೇ. ಈ ಬಗೆಯ ವಿಶಾಲಪ್ರೇಮ, ಉನ್ನತವಿಚಾರಾಸಕ್ತಿ, ಎಲ್ಲ ಜೀವರಲ್ಲೂ ಒಂದೇಬಗೆಯಾಗಿ ನೆಲಸಿರುವ ಶಿವನನ್ನೇ ಕಾಣುವ ಔದಾರ್ಯ ಇವನ್ನು ಜೀವನದಲ್ಲಿ ಸಮರಸವಾಗಿ ಹೊಂದಿಸಿಕೊಂಡವನೇ ಜಾಣನೆನಿಸುವನು.

ಇವನೇ ಸುಸಂಸ್ಕೃತ, ಪಂಡಿತ, ಸ್ವತಂತ್ರ, ಪರಿಪೂರ್ಣ ಮತ್ತು ಸರ್ವಜ್ಞ ಎನಿಸುವನು. ಇದೇ ನೈಜವಾದ ಸಮದೃಷ್ಟಿಯ ಅನುಷ್ಠಾನ. ಭಿನ್ನಭಿನ್ನ ಸ್ವಭಾವದ ಜನರೆಲ್ಲರೂ ಒಂದೆಡೆ ಕುಳಿತು ಊಟಮಾಡುವುದಷ್ಟೇ ಸಮತಾವಾದವೆನಿಸುವುದಿಲ್ಲ. ಉಂಡವರು ಮನೆಗೆಹೋಗಿ ಒಬ್ಬರನ್ನೊಬ್ಬರು ಮತ್ತೆ ದ್ವೇಷಿಸಲಿಕ್ಕೇ ಆರಂಭಿಸುವರು. ಪಾಪಿಗಳನ್ನೂ ಸಾಧುಗಳನ್ನೂ ಒಟ್ಟಿಗೆ ಕೂಡಿಸುವಂತಹ ಶಿವಚೈತನ್ಯದ ಸರಪಣಿಯ ಅರಿವೇ ಸಮತಾವಾದದ ತಿರುಳು. ಇದನ್ನು ಅರಿತವನೇ ನೈಜವಾದ ಸಮತಾವಾದಿ ಎನಿಸಬಲ್ಲನು. ಒಬ್ಬನ ಮನಃಪರಿವರ್ತನವೇ ನಿಜವಾದ ಸಮತಾವಾದ. ಹೀಗೆ ಎಲ್ಲರೂ ಅವರವರ ಜಾತ್ಯಾಶ್ರಮಕರ್ಮಗಳನ್ನು ಆಚರಿಸುತ್ತಲೇ ಭಾವದಲ್ಲಿ ಜಾತ್ಯತೀತರಾದ ಸಮತಾವಾದಿಗಳಾಗಲೆಂಬ ಆಶಯವನ್ನು ಬಾದರಾಯಣರು ಮೂರುಸಾವಿರವರ್ಷಗಳ ಹಿಂದೆಯೇ ಜಗತ್ತಿಗೆ ಸಾರಿದ್ದಾರೆ. ಆದರೆ ಈ ದಿವ್ಯ ಸಂದೇಶವನ್ನು ಜೀವನದಲ್ಲಿ ಹೊಂದಿಸಿಕೊಂಡು ಬಾಳುವ ಚಾತುರ್ಯವನ್ನು ಈಗ ನಾವು ಕಲಿಯಬೇಕಾಗಿದೆ.

ಕೆಲವು ಶ್ರೀಮಂತರು ಮತ್ತು ಅಧಿಕಾರಿಗಳು ಶ್ರೀಕರಭಾಷ್ಯವನ್ನು ನೋಡಲಿಕ್ಕೇ ಅಸಹ್ಯಪಡುತ್ತಿರುವುದು ತುಂಬ ಶೋಚನೀಯ. ಇದು ಅವರ ಅವಿವೇಕವನ್ನು ವ್ಯಕ್ತಪಡಿಸುತ್ತದೆ. ಅವರೆಲ್ಲರೂ ರಜಸ್ತಮೋಗುಣಗಳ ಕಾರಾಗೃಹದಲ್ಲಿ ಸಹಜವಾಗಿ ಸೆರೆಸಿಕ್ಕಿರುವಾಗ ಅವರನ್ನು ಬಂಧನದಿಂದ ಬಿಡಿಸಿ ಅವರಿಗೆ ಸ್ವಾತಂತ್ರ್ಯದ ದಿವ್ಯಾಮೃತವನ್ನು ದೊರಕಿಸಲಿಕ್ಕಾಗಿ ಅವರ ಮನೆಯ ಬಾಗಿಲಿಗೆ ಪ್ರತಿಯನ್ನು ಕೊಂಡೊಯ್ದರೆ ಮಾಯಾಶಕ್ತಿಯ ದುಷ್ಪ್ರಭಾವದಿಂದ ಅವರು ಕಾದೆಣ್ಣೆಯಲ್ಲಿ ಬೆಂದು ಪುಡಿಪುಡಿಯಾಗುವ ಹೊಡೆಯಂತೆ ತಮ್ಮ ಆತ್ಮಶ್ರೀಯನ್ನು ವ್ಯರ್ಥಾಲಾಪಗಳಿಂದ ನುಚ್ಚುಮಾಡಿಕೊಳುತ್ತಿರುವರು. ಇಂತವರಿಗೆ ಆತ್ಮಶ್ರೀಯ ಕೇಂದ್ರಿಕರಣವಾದರೂ ಹೇಗೆ ಆದೀತು? ಅವರಲ್ಲಿ ಇಚ್ಛಾಜ್ಞಾನಕ್ರಿಯಾಶಕ್ತಿಗಳ ಪೂರ್ಣವಿಕಾಸ ಹೇಗೆ ಉಂಟಾದೀತು? ಅವರು ಇಲ್ಲಿಂದ ಹೊರಡುವಾಗ ಅವರೊಡನೆ ಅವರ ಐಶ್ವರ್ಯ ವಾಗಲೀ, ಅಧಿಕಾರವಾಗಲೀ ಹಿಂಬಾಲಿಸಬಲ್ಲದೆ? ಆಗಸನು ಮಾಲೀಕರಿಗೆ ಬಟ್ಟೆಯನ್ನು ಒಪ್ಪಿಸುವಂತೆ ಶ್ರೀಮಂತರು ಮತ್ತುಅಧಿಕಾರಿಗಳು ಶಿವನು ಕೊಟ್ಟಿರುವ ಶ್ರೀಮಂತತೆ ಮತ್ತು ಅಧಿಕಾರಗಳನ್ನು ತಮ್ಮಂತೆಯೇ ಶಿವಾಂಶರಾದ ಜೀವರಿಗೆ ನಿರ್ಮಲವಾದ ಮನದಿಂದ ನ್ಯಾಯವಾಗಿ ಅರ್ಪಿಸಿ ತಮ್ಮ ಕೊಳೆಯನ್ನು ಕಳೆದುಕೊಂಡು ಪವಿತ್ರರಾಗಬೇಕಾಗಿದೆ. ಶ್ರೀಮಂತಗಿರಿಯಾದರೋ ಕಾಡಬೆಳದಿಂಗಳಂತೆ ಸ್ಥಿರವಲ್ಲ. ಹಾಗೆಯೇ ಅಧಿಕಾರಿಗಳ ಅಂಧಾಧಿಕಾರವೂ ನಾಲ್ಕುದಿವಸಗಳವರೆಗೆ ಮಾತ್ರವೇ ಇರುವಂತಹದು. ಇದನ್ನು ನೆಚ್ಚಿದವನು ಬಾಳಿನಲ್ಲಿ ನಿತ್ಯಸುಖವನ್ನು ಎಂದಿಗೂ ಪಡೆಯಲಾರನು. ಅವನಿಗೆ ಶಾಂತಿ ತೃಪ್ತಿಗಳ ಪರಮೈಶ್ವರ್ಯವು ದೊರಕಲಾರದು. ಒಬ್ಬನ ಅಧಿಕಾರವಾಗಲೀ ಸಿರಿಯಾಗಲಿ ಪಶುವಿನಂತೆ ತಿಂದು ಉಂಡು ಮೆರೆಯಲಿಕ್ಕಾಗಿ ಬಂದಿಲ್ಲ; ಕೀರ್ತಿಪ್ರತಿಷ್ಠೆಗಳ ಆಕಾಂಕ್ಷೆಗಾಗಿಯಲ್ಲ; ಆದರೆ ದೀನಾನಾಥರ ರಕ್ಷಣೆಗಾಗಿ, ಸಾಧುಸಂತರ ಸೇವೆಗಾಗಿ, ಸಾರ್ವಜನಿಕರ ಹಿತಕ್ಕಾಗಿ, ನ್ಯಾಯಧರ್ಮಗಳ ಅಡಿಪಾಯವನ್ನು ಲೋಕದಲ್ಲಿ ಭದ್ರಗೊಳಿಸಲಿಕ್ಕಾಗಿ

ಅವನ್ನು ಒಬ್ಬನಿಗೆ ಪರಮೇಶ್ವರನು ಅನುಗ್ರಹಿಸಿದ್ದಾನೆ. ಇವೆರಡೂ ಒಬ್ಬನಿಗೆ ಪರಮೇಶ್ವರನಿಂದ ಬಂದಿರುವ ಋಣ. ಇದನ್ನು ಪಡೆದವನು ಎಂದಾದರೊಂದುದಿನ ತೀರಿಸಲೇಬೇಕು. ಇವನ್ನು ತನ್ನ ಸ್ವಂತವೆಂದು ತಿಳಿದವನು ಹುಚ್ಚನೇ ಸರಿ. ಹೀಗೆ ಅಧಿಕಾರ ಮತ್ತು ಐಶ್ವರ್ಯ ಇವು ಜಗಕ್ಕಿಕ್ಕಿದ್ದ ವಿಧಿ. ಇವುಗಳಲ್ಲಿ ಅಭಿಮಾನಿಸಿದವರು ಯಾವತ್ತೂ ಕಾಯ್ದ ಎಣ್ಣೆಯಲ್ಲಿ ಸಿಕ್ಕಿಕೊಂಡು ಬೇಯುತ್ತಲೇ ಇರುವರು. ಇವರು ಹೀಗೆ ಬೆಂದು ಸಾಯುವುದಕ್ಕಿಂತ ದೇಹವನ್ನು ಗುರುಲಿಂಗಜಂಗಮಸೇವೆಗೂ, ಭೋಗೈಶ್ವರ್ಯಗಳನ್ನು ದೀನಾನಾಥರ ರಕ್ಷಣೆಗೂ ಸಂತೋಷದಿಂದ ವಿನಿಯೋಗಿಸಿದರೆ ಇವರಲ್ಲಿ ರೂಪರಸಗಂಧಸ್ಪರ್ಶಶಬ್ದಗಳು ಪಕ್ವವಾಗಿ ಸತ್ಪರಿಣಾಮವನ್ನು ಹೊಂದುವುದರಿಂದ ಇವರು ಹಣ್ಣಾಗಿ ಮಹಾದೇವನಿಗೆ ಅರ್ಪಣಕ್ಕೆ ಯೋಗ್ಯರಾಗುವರು. ಅಲ್ಪ ಸುಖದಿಂದ ಹಿಗ್ಗುವುದಕ್ಕಿಂತ ಉತ್ತಮಾದರ್ಶಕ್ಕಾಗಿ ಹೆಣಗಾಡುವುದೇ ಉತ್ತಮ. ಇವರು ಇನ್ನು ಮುಂದಾದರೂ ಹೀಗೆ ಪರಿತಪಿಸದೆ ಅಂತ್ಯದಿವಸದ ಮರಣಾವಸ್ಥೆಯು ಬಂದಾಗ ಧೈರ್ಯದಿಂದ ಸ್ವಾಗತಿಸುವಂತಾಗಲೆಂದು ಮನಸಾರೆ ಹಾರೈಸುತ್ತೇನೆ. ಪ್ರಪಂಚದಲ್ಲಿ ಅನಂತ ವೈವಿಧ್ಯವಿರುವುದೇ ಜೀವನ ಕಲ್ಯಾಣಕ್ಕಾಗಿ. ಇಲ್ಲಿಯ ವಿವಿಧಸ್ವಭಾವದವರೆಲ್ಲರೂ ಒಬ್ಬ ಪ್ರಭುವಿಗೇ ಭಕ್ತರೆಂಬ ಐಕ್ಯಭಾವನೆಯನ್ನು ಯಾವನು ತಿಳಿದು ಧೈರ್ಯಚಾತುರ್ಯಗಳಿಂದ ಯುಕ್ತರೀತಿಯಲ್ಲಿ ಆಚರಿಸಬಲ್ಲನೋ ಅವನೇ ಬುದ್ಧಿವಂತನೆನಿಸುತ್ತಾನೆ. "ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್" ಹೀಗೇ ಅವನನ್ನು ಗೀತೆಯೂ ಪ್ರಶಂಸಿಸಿದೆ. ಅವನೇ ನಿತ್ಯ ಸಂನ್ಯಾಸಿ. ಅವನಲ್ಲಿಯೇ ಪರಮೇಶ್ವರನ ಲೀಲಾವಿಹಾರವು ಸಹಜವಾಗಿ ನಡೆಯಬಲ್ಲದು. ಹೀಗೆ ಪರಮೇಶ್ವರನಿಗೆ ವಿನೋದಭೂಮಿ ಎನಿಸಿದ ಮಾನವನ ಬಾಳು ಎಷ್ಟು ಪವಿತ್ರವೆಂಬುದನ್ನು ಹೃದಯಂಗಮವಾಗಿ ತಿಳಿಸುವ ಶ್ರೀಕರಭಾಷ್ಯವು ಇನ್ನು ಮುಂದೆಯಾದರೂ ಶ್ರೀಮಂತರಿಗೂ ಉನ್ನತಾಧಿಕಾರಿಗಳಿಗೂ ಮಾನ್ಯವಾಗಲಿ; ಅವರ ಮೋಹದೃಷ್ಟಿಯನ್ನು ತೊಲಗಿಸಲಿ; ಅವರಲ್ಲೂ ಸ್ವತಂತ್ರವಾದ ಧಾರ್ಮಿಕ ಪ್ರವೃತ್ತಿಯನ್ನು ಸಹಜವಾಗಿ ಹುಟ್ಟಿಸಲಿ; ಮರಣಭಯವನ್ನು ಪೂರ್ಣವಾಗಿ ತೊಲಗಿಸಲಿ; ಗೌರವಯುತವಾದ ಜೀವನವನ್ನು ದೊರಕಿಸಲಿ; ಯಾಕೆಂದರೆ ಶ್ರೇಯೋಽಭ್ಯುದಯಗಳು ಯಾವೊಬ್ಬನಿಗೂ ಮೀಸಲಾಗಿಲ್ಲ. ಅವನ್ನು ಪಡೆಯಲು ಎಲ್ಲರಿಗೂ ಸಮಾನಾಧಿಕಾರವಿದೆ. ಆದರೆ ಅದಕ್ಕಾಗಿ ಯಥೋಚಿತವಾದ ಸಾಧನೆ ಬೇಕು. ಅದನ್ನು ಶ್ರೀಕರಭಾಷ್ಯವು ಲಲಿತವಾಗಿ ಒದಗಿಸಬಲ್ಲದು. ಇದು ಸಮನ್ವಯ ಭಾಷ್ಯವಾದ್ದರಿಂದ ಸಾಧಕರ ಅಂತರ್ದೃಷ್ಟಿಯನ್ನು ಒಳಗೆ ಪ್ರಸರಿಸುವಂತೆ ಮಾಡಬಲ್ಲದು. ಈ ಬಗೆಯ ಯಥಾರ್ಥವಿಜ್ಞಾನವನ್ನು ಸಾಧಕರೆಲ್ಲರಿಗೂ ಶ್ರೀಕರಭಾಷ್ಯವು ದೊರಕಿಸಲೆಂದು ತ್ರಿಕರಣಪೂರ್ವಕವಾಗಿ ಈಶ್ವರನಲ್ಲಿ ಬೇಡುತ್ತೇನೆ.

ನಮಗಿರುವ ಮರಣಭಯವಾದರೋ ಸ್ವಾರ್ಥತೆ ವ್ಯಾಮೋಹ ಮತ್ತು ಅಹಂಕಾರಗಳಿಂದಲೇ ಹುಟ್ಟಿ ಬೆಳೆಯುತ್ತಲಿದೆ. ಹುಡುಗಿ ಮಕ್ಕಳೆಲ್ಲರನ್ನೂ ಸಾವೇ

ರಕ್ಷಿಸುತ್ತಿರುವೆವೆಂದು ತಪ್ಪಾಗಿ ತಿಳಿದದ್ದರಿಂದಲೇ ಮರಣಭಯವು ನಮ್ಮನ್ನು ಕಾಡು ತ್ತಲಿದೆ. "ನಾನು ದೇಹದಲ್ಲಿದ್ದರೂ ಅಥವಾ ದೇಹವನ್ನು ತೊರೆದರೂ ಇವರು ಬದು ಕಿಯೇ ಇರುವರು.ಆದ್ದರಿಂದ ಇವರೆಲ್ಲರನ್ನೂ ರಕ್ಷಿಸುವವನು ನಾನಲ್ಲ. ಅದರಂತೆಯೇ ಇವರೆಲ್ಲರೂ ನನಗಾಗಿಯೂ ಇಲ್ಲ; ಇವರಿಗಾಗಿಯೇ ನಾನೂ ಇಲ್ಲ. ಇವರ್‍ಯಾರೂ ನನ್ನೊ ಡನೆ ಸಾಯುವುದಿಲ್ಲ. ಇವರೆಲ್ಲರನ್ನೂ ರಕ್ಷಿಸುವ ಶಿವನು ಅವರವರಲ್ಲಿಯೇ ಕಾಯ್ದು ಕುಳಿತಿದ್ದಾನೆ. ಅವನ ಇಚ್ಛೆಯಂತೆ ಎಲ್ಲರ ರಕ್ಷಣೆಯೂ ಸಹಜವಾಗಿ ಆಗುತ್ತಲಿದೆ. ಆದ್ದರಿಂದ ನನ್ನೊಬ್ಬನಿಂದ ಯಾರಿಗೂ ಏನೂ ಆಗುವುದಿಲ್ಲ" ಹೀಗೆಂದು ತಿಳಿಯುವುದ ರಿಂದ ಮರಣಭಯವು ನಮಗೆ ಸಹಜವಾಗಿ ತೊಲಗುತ್ತದೆ. "ಇವರೆಲ್ಲರ ರಕ್ಷಣೆಗೂ ನಾನು ಇದ್ದರೆ ಎಷ್ಟು ಫಲವೋ ನಾನು ಹೋದರೂ ಅಷ್ಟೇ ಫಲ" ವೆಂಬ ಅರಿವು ನನಗಾದಮೇಲೆ ಈ ದೇಹವನ್ನು ನಾನು ತೊರೆಯುವಾಗ ಭಯವಿನ್ನೆಲ್ಲಿಂದ ಬರಬೇಕು? ಇವರೆಲ್ಲರೂ ಶಿವನ ಸೇವೆಗಾಗಿಯೇ ಬಂದು ಒಬ್ಬರನ್ನೊಬ್ಬರು ಪ್ರೀತಿಸಿ ಗೌರವಿಸುತ್ತ ಇದೆಲ್ಲವೂ ಶಿವನಿಗೇ ಸೇರಿದ್ದೆಂಬ ದೃಢಭಾವನೆಯುಳ್ಳವನಿಗೆ ಮರಣಭಯವೇಕೆ ಬಂದೀತು? ಹೇಗೆ ಬಂದಿತು? ಅವನಿಗೆ ಹೇಗೆ ಮರಣಕಾಲವು ಸಂತೋಷದ ಸಮಾರಂಭವಾಗದೇಹೋದೀತು? ಹೀಗೆ ತನ್ನ ವರ್ತನೆಯನ್ನು ಸರಿಪಡಿಸಿಕೊಳ್ಳದೆ ಶ್ರೀಮಂತರು ಮತ್ತು ಅಧಿಕಾರಿಗಳು ಊರಸೀರೆಗೆ ಅಗಸನು ತಳಮಳಗೊಂಡಂತೆ ಶಿವನ ಸ್ವತ್ತನ್ನು ತಮ್ಮದೆಂದು ವ್ಯರ್ಥವಾಗಿ ಬಡಿದಾಡುತ್ತಿರುವುದು ಎಷ್ಟು ಅವಿವೇಕ ವೆಂಬುದನ್ನು ಮೊದಲು ತಿಳಿಯಬೇಕಾಗಿದೆ. ತಮ್ಮ ಆತ್ಮಸ್ವರೂಪದ ವಿವೇಚನೆಯನ್ನು ಮಾಡಿಸುವಂತಹ ಪವಿತ್ರಭಾಷ್ಯವನ್ನೇ ನೋಡಲಿಕ್ಕವಕಾಶವಿಲ್ಲವೆಂದು ಹೇಳುವ ಈ ಜನರಿಗೆ ಮರಣಕಾಲದಲ್ಲಿ ತಮ್ಮ ಪ್ರಿಯವಸ್ತುಗಳನ್ನು ತೊರೆಯಲಿಕ್ಕೆ ಹೇಗೆ ಅವಕಾಶ ದೊರೆತೀತು? ನಿಜವಾಗಿಯೂ ಇಂತಹ ಸದವಕಾಶ ಅವರಿಗೆ ಎಂದೆಂದಿಗೂ ದೊರೆಯು ಲಾರದು. ಇದು ಕೇವಲ ಶಿವಯೋಗಿಗಳಿಗೆ ಮಾತ್ರವೇ ದೊರೆಯಬಲ್ಲದು. ಶ್ರೀಮಂತ ರಿಗೆ ಭಂಗಾರವನ್ನು ತೇಯ್ದು ಅದರ ರಸವನ್ನು ಬಾಯಿಗೆ ಬಿಡದೆ ಇದ್ದರೂ, ಹಣದ ಗಂಟನ್ನು ಎದುರಿಗೆತಂದು ತೋರಿಸದಿದ್ದರೂ ಪ್ರಾಣವು ದೇಹದಿಂದ ಹೊರಡಲಾರದು. ಅಧಿಕಾರಿಗಳಿಗಂತೂ ಅಧಿಕಾರದಿಂದ ನಿವೃತ್ತರಾಗಿ ಮನೆಗೆ ಬರುವಾಗಲೇ ತಿರಸ್ಕಾರ ವಿರುವುದರಿಂದ ಅವರನ್ನು ನೋಡುವವರೇ ಇರುವುದಿಲ್ಲ. ಶ್ರೀಮಂತರು ಮತ್ತು ಅಧಿಕಾರಿಗಳು ತಮ್ಮ ಬಾಳು ಇಷ್ಟು ನೀಚಮಟ್ಟದ್ದೆಂಬುದನ್ನು ಯೌವನಕಾಲ ದಲ್ಲಿಯೇ ತಿಳಿದು ಆದಷ್ಟು ಬೇಗನೆ ಆತ್ಮಜ್ಞಾನಿಗಳಾಗಲು ತನುಮನಭಾವಗಳನ್ನು ಸವೆಸಿದರೆ ಅವರ ಜೀವನ ಅವರಿಗೇ ಒಂದು ಹೊರೆಯಾಗದೆ ಹತ್ತುಗಂಟೆಗಳಲ್ಲಾಗುವ ಕೆಲಸ ನಾಲ್ಕೇ ಘಂಟೆಗಳಲ್ಲಿ ಚೆನ್ನಾಗಿ ನಡೆದು ಅವರಿಗೆ ಆರುಗಂಟೆಗಳ ಪೂರ್ಣವಿರಾ ಮವೇ ದೊರಕಬಲ್ಲದು. ಈ ಕಾಲವನ್ನು ಪರಮೇಶ್ವರನ ಶ್ರವಣಮನನಧ್ಯಾನಾನುಭವ ಗಳಿಗೆ ಉಪಯೋಗಿಸಿದರೆ ಶ್ರೇಯಃಪರಂಪರೆಯಾದರೂ ಅವರ ಮಡಲಿನಲ್ಲಿ ನೆಲೆಯಾಗಿ ನಿಲ್ಲುತ್ತದೆ. ಒಬ್ಬ ಅಧಿಕಾರಿ ಆತ್ಮಜ್ಞಾನಿಯಾದರೆ ಅವನ ರಾಷ್ಟ್ರದಲ್ಲಿ ಸುಖಸಂಪತ್ತು

ಗಳು ನಾಟ್ಯವಾಡುತ್ತವೆ. ಶ್ರೀಮಂತನು ಆಧ್ಯಾತ್ಮಸಂಪತ್ತಿನಿಂದ ಶೋಭಿಸಿದರೆ ನಿತ್ಯಸುಂದರನಾಗಬಲ್ಲನು. ಇಲ್ಲವಾದರೆ ಅವನ ದೇಹ ವೈದ್ಯರ ಸ್ವತ್ತೂ, ಐಶ್ವರ್ಯ ವಕೀಲರ ಆಸ್ತಿಯೂ ಆಗತೊಡಗುವುವು. ಜಗತ್ತಿನ ಜೀವರೆಲ್ಲರಿಗೂ ಆತ್ಮಜ್ಞಾನವಿಲ್ಲ ದಿದ್ದರೆ ಇದೇ ಗತಿ. "ಅಮೃತಸ್ಯ ತು ಆಶಾ ನಾಸ್ತಿ" ಎಂದು ಯಾಜ್ಞವಲ್ಕ್ಯನು ಪತ್ನಿ ಕಾತ್ಯಾಯಿನಿಗೆ ಹೇಳಿದಂತೆ ಅವರು ಕೇವಲ ಭೋಗದಲ್ಲಿಯೇ ಮೈಮರೆತು ಯೋಗ ವನ್ನೇ ಪೂರ್ತಿಯಾಗಿ ತೊರೆಯುವರು. ಹೀಗೆ ಭೋಗಜೀವನದಿಂದ ಪಶುಗಳಾಗು ವುದಕ್ಕಿಂತ ಯೋಗಜೀವನದಿಂದ ಅಮೃತರಾಗುವುದನ್ನು ಅವರು ಬಯಸಲಿ.

ಆದರೆ ಆಧ್ಯಾತ್ಮವ್ಯವಸಾಯಕ್ಕೆ ಒಬ್ಬನಲ್ಲಿ ಉತ್ಕಟವಾದ ಇಚ್ಛೆ ಹುಟ್ಟಬೇಕು. "ನಮಗೆ ಆ ಇಚ್ಛೆಯೂ ಇಲ್ಲ, ಆ ವ್ಯವಸಾಯವೂ ಬೇಡ" ಅನ್ನುವ ಶ್ರೀಮಂತರೂ ಅಧಿಕಾರಿಗಳೂ ಅನೇಕರಿದ್ದಾರೆ. ಅವರಿಗೆ ಮಾತನಾಡುವ ಶಕ್ತಿಯೂ ಸಹ ಈಶ್ವರಾನು ಗ್ರಹದಿಂದಲೇ ಬಂದಿದ್ದರೂ ಅದರ ಅರಿವೂ ಅವರಿಗೆ ಇಲ್ಲದೆ ಮನಬಂದಂತೆ ಮಾತ ನಾಡುತ್ತಿರುವುದಂತೂ ತುಂಬ ಶೋಚನೀಯವಾಗಿದೆ. ಅವರಿಗೆ ಸ್ವಂತ ಕಷ್ಟನಷ್ಟಗಳ ಅನುಭವದಿಂದಲೇ ಭಗವದನುಗ್ರಹವು ಲಭಿಸಬೇಕಾಗಿದೆ. ಆಗಲೇ ಅವರಿಗೆ ದೇಹವು ಧರ್ಮಸಾಧನವೆಂಬ ಅರಿವು ದೊರೆತೀತು. ಹೀಗೆ ದೇಹೇಂದ್ರಿಯಗಳ ಪವಿತ್ರ ತೆಯನ್ನು ತಿಳಿಸಿ ಅವುಗಳ ಪೂರ್ಣಸಹಕಾರದಿಂದಲೇ ಆತ್ಮಶ್ರೇಯಸ್ಸನ್ನು ಸಾಧಿಸುವ ಸುಯೋಗವನ್ನು ಶ್ರೀಮಂತರಿಗೂ ಅಧಿಕಾರಿಗಳಿಗೂ ದೊರಕಿಸಲು ಶ್ರೀಕರಭಾಷ್ಯವು ಸಿದ್ಧೌಷಧವಾಗಿ ನಿಂತಿದೆ. ಈ ವಿಸ್ತಾರವಾದ ಭೂಮಿಕೆಯು ಅವರಿಗೆ ಅಭಿಮಾನರೋ ಗದ ಪರಿಚಯವನ್ನು ಮಾಡಿಸಿಕೊಟ್ಟು, ಅದನ್ನು ಪರಿಹರಿಸಿಕೊಳ್ಳಬೇಕೆಂಬ ಇಚ್ಛೆಯನ್ನು ಹುಟ್ಟಿಸಿ ಬೆಳಸಿ ಸಿದ್ಧೌಷಧದಲ್ಲಿ ವಿಶ್ವಾಸವನ್ನು ದೊರಕಿಸಿ ಅವರನ್ನು ಭವರೋಗವೈದ್ಯ ವೆನಿಸಿದ ಶ್ರೀಕರಭಾಷ್ಯದೊಡನೆ ಸಮರಸವಾಗಿ ಹೊಂದಿಕೊಳ್ಳುವಂತೆ ಮಾಡುವು ದೆಂದು ದೃಢವಾಗಿ ನಂಬಲಾಗಿದೆ. ವೈದ್ಯನಿಗೂ ರೋಗಿಗೂ ಸಾಮರಸ್ಯವು ಮೊದಲು ಬೆಳೆದರೆ ರೋಗವೇ ಅರ್ಧವಾಸಿಯಾಗುವುದು. ರೋಗಿಯು ಕೆಲವುಕಾಲ ಶ್ರದ್ಧೆ ಯಿಂದ ಔಷಧವನ್ನು ಸೇವಿಸಿದರಂತೂ ಅದು ಮೂರು ದೇಹಗಳಲ್ಲೂ ವ್ಯಾಪಿಸಿ ಆಣವ ಮಲ (ಸ್ವಾರ್ಥತೆ), ಮಾಯೀಯಮಲ (ವ್ಯಾಮೋಹ), ಮತ್ತು ಕಾರ್ಮಿಕಮಲ (ಅಹಂ ಕಾರ)ಗಳನ್ನು ತೊಲಗಿಸಿ ಅವನನ್ನು ನಿರ್ಮಲನನ್ನಾಗಿ ಮಾಡಲಿಕ್ಕೇಬೇಕು. ಹಾಗೆ ಮಾಡದೇ ಇದ್ದರೆ ಭಾಷ್ಯವು ಭವಹರವಾದ ಔಷಧವೇ ಆಗದೇಹೋದೀತು. ಅದನ್ನು ಬರೆದವರು ಪೂರ್ಣತಪಸ್ವಿಗಳೂ, ಅನುಭವಿಗಳೂ, ಸಾಕ್ಷಾತ್ಕಾರಿಗಳೂ ಆದ ಶಿವಯೋಗಿಶಿವಾಚಾರ್ಯರಾದ್ದರಿಂದ ಅವರ ಮಾತು ಎಂದಿಗೂ ಹುಸಿಯಾಗ ಲಾರದು. ಅವರು ಸತ್ಯಭಾಷಿಗಳಾದ್ದರಿಂದಲೇ ಆಪ್ತರೆನಿಸಿದ್ದಾರೆ. "ಆಪ್ತಸ್ತು ಯಥಾರ್ಥವಕ್ತಾ." ಇಂತಹ ಆಪ್ತರ ಮಾತಿನಲ್ಲಿ ನನ್ನ ಸೋದರಸೋದರಿಯರೆಲ್ಲರಿಗೂ ಪೂರ್ಣವಿಶ್ವಾಸವು ಹುಟ್ಟಲೆಂದು ಬಯಸುತ್ತೇನೆ. ಹೃತ್ಪೂರ್ವಕವಾದ ಬಯಕೆ ಪರಮೇಶ್ವರನ ಮೆಚ್ಚುಗೆಗೆ ಪಾತ್ರವಾಗದಿರದು. ಕರ್ಣಾಟಕದ ಕೆಲವು ಜೀವಗಳಾ

ದರೂ ಶ್ರೀಕರಭಾಷ್ಯವೆಂಬ ದಿವ್ಯೌಷಧದ ನಿರಂತರಸೇವನೆಯಿಂದ ಭವರೋಗವನ್ನು ಕಳೆದುಕೊಂಡರೆ ಈ ಸೇವಕನ ಶ್ರಮವು ಸಾರ್ಥಕವಾದೀತೆಂದು ಭಾವಿಸಲಾಗಿದೆ. ಇಡೀ ವಿಶ್ವಕ್ಕೆ ಶಾಂತಿಯ ದಿವ್ಯಸಂದೇಶವನ್ನು ಬೀರುತ್ತಿರುವ ಧಾರವಾಡದ ನವ ಕಲ್ಯಾಣಮಠದ ಅಖಂಡಜ್ಯೋತಿಸ್ವರೂಪರಾದ ಶ್ರೀ|| ಸಿ|| ಪ್ರ|| ಕುಮಾರಸ್ವಾಮಿಜಿ ಯವರ ವಿವೇಕಪೂರ್ಣವಾದ ದಿವ್ಯಾಮೃತವಾಣಿಯಿಂದ ಸ್ಫೂರ್ತ್ಯುತ್ಸಾಹಗಳನ್ನು ಪಡೆದು ಈ ಭೂಮಿಕೆಯಲ್ಲಿ ಧೈರ್ಯದಿಂದ ಓದುಗರ ಗಮನವನ್ನು ಭಾಷ್ಯದ ಕಡೆಗೆ ಸೆಳೆದಿರುವೆನು. ನನ್ನಂತೆ ಅನೇಕ ನೊಂದ ಜೀವರಿಗೆ ದಿವ್ಯಸಂಜೀವಿನಿಯನ್ನು ದೊರಕಿಸುತ್ತಿರುವ ಶ್ರೀಗಳನ್ನು ಅವರ ಆದರ್ಶಜೀವನಕ್ಕಾಗಿಯೂ ಮತ್ತು ಅವರ ಸಂದೇಶಕ್ಕಾಗಿಯೂ ಭಕ್ತಿಯಿಂದ ವಂದಿಸುತ್ತೇನೆ.

ಪರ ಗುರು ಚರ ಮೂರ್ತಿಗಳ ಕೃಪಾಪ್ರಸಾದದಿಂದ ಅನುವಾದದೊಡನೆ ಪ್ರಕಟವಾಗಿ ಭವಹರವೆನಿಸಿದ ಶ್ರೀಕರಭಾಷ್ಯವು ಈ ಪಾಮರನನ್ನು ನಿಸಭಿಮಾನತೆಯ ಪರವೈಶ್ವರ್ಯದಿಂದ ಉದ್ಧರಿಸಿದಂತೆ ಲೋಕದ ಸಾಧಕರೆಲ್ಲರಿಗೂ ಈ ಪವಿತ್ರ ವೇದಾಂತಗ್ರಂಥದ ನಿರಂತರಾಭ್ಯಾಸವು ಅವರವರ ಯೋಗ್ಯತಾನುಸಾರವಾಗಿ ಭವ ರೋಗವನ್ನು ಪರಿಹರಿಸಿ ಶಿವಾನುಗ್ರಹವೆಂಬ ದಿವ್ಯೌಷಧವನ್ನು ದೊರಕಿಸಲೆಂದೂ, ಆದರಿಂದ ಅವರೆಲ್ಲರೂ ಸೌಮನಸ್ಯವನ್ನು ಪಡೆಯಲೆಂದೂ ಪ್ರಾರ್ಥಿಸಿ ಶ್ರೀಕರಭಾಷ್ಯದ ಮೂಲವನ್ನು ಕನ್ನಡದ ಅನುವಾದದೊಡನೆ ಮಹಾಜನರ ಎದುರಿಗೆ ಇರಿಸಿದ್ದೇನೆ. ಯುವಕರು ಮುದುಕರು ಹೆಂಗಸರು ರೈತರು ವೈದ್ಯರು ವ್ಯಾಪಾರಿಗಳು ವ್ಯವಹಾರಸ್ಥರು ಹೀಗೆ ಲೋಕದ ಎಲ್ಲಾ ಬಗೆಯ ಜನರನ್ನು ಶ್ರೀಕರಭಾಷ್ಯವು ಅವರವರ ಹೃದಯದ ಮಹಾಪ್ರಕಾಶದಲ್ಲಿ ಬೆರೆಸಿ ಶಕ್ತಿವಿಕಾಸದಿಂದ ಅವರ ಜೀವನವನ್ನು ಶ್ರೀಕರಗೊಳಿಸ ಬಲ್ಲದು. ಆದರೆ ವ್ಯಾಹಾರಿಕಜನರು ಭಾಷ್ಯವನ್ನು ಓದಲು ಅವಕಾಶವೇ ಇಲ್ಲವೆಂದು ಹೇಳುತ್ತಿರುವುದು ತುಂಬ ಶೋಚನೀಯ.ಆದರೆ ಈ ವ್ಯವಹಾರವೆಲ್ಲವೂ ಹೊಟ್ಟೆತುಂಬಿಸಿ ಕೊಳ್ಳಲಿಕ್ಕಾಗಿಯೇ ಆದರೂ ಅವರು ಅವಿವೇಕದಿಂದ ಮಿತಿಮೀರಿ ತುಂಬಿಸಲು ಹೋರಾಡುತ್ತ ಇದಕ್ಕಾಗಿ ಅನ್ಯಾಯ ಮತ್ತು ಅಧರ್ಮಗಳನ್ನೂ ಲಕ್ಷಿಸದೆ ಇರುವುದ ರಿಂದ ಅವರ ಜೀವನ ಅಶಾಂತವೂ ಅತೃಪ್ತವೂ ಆಗುತ್ತಲಿದೆ. ಇಂತವರಿಗೆ ಭಾಷ್ಯವು ಹಿಡಿಸದಿರುವುದು ಸಹಜ. ಅವರಿಗೆ ಭಾಷ್ಯವನ್ನು ನೋಡಲು ಸಮಯವು ಸಿಕ್ಕದಿರು ವುದೂ ಸಹಜ. ಆದರೆ ಮರಣಕಾಲದಲ್ಲಿ ಯಮದೂತರು ಬಂದು ಕರೆವಾಗ ನರಕಕ್ಕೆ ಹೋಗಲು ಅವರಿಗೆ ಸಮಯ ಹೇಗಾದರೂ ಸಿಕ್ಕುತ್ತದೆ. ಆ ಯಮದೂತರಿಗೆ ಬದಲಾಗಿ ಶಿವಶರಣರು ಬಂದು ಪ್ರೇಮಾದರಗಳಿಂದ ಶಿವಲೋಕಕ್ಕೆ ಕರೆದೊಯ್ಯುವ ಸದವಕಾಶ ವನ್ನು ಅವರು ಏಕೆ ಕಳೆದುಕೊಳ್ಳಬೇಕು? ಪರಮೇಶ್ವರನು ಪ್ರತಿಯೊಬ್ಬರಿಗೂ ಸಲ್ಲಬೇಕಾ ದಷ್ಟು ಕೂಲಿಯನ್ನು ಅವರವರ ಕೈಲಿ ದುಡಿಸಿಯೇ ಕೊಡುತ್ತಿರುವಾಗ ಹೆಚ್ಚು ಬಯಸಿ ತಲೆಕೆಡಿಸಿಕೊಂಡು ಎಲ್ಲವನ್ನೂ ಅತಿಯಾಗಿ ಕಟ್ಟಿಕೊಂಡು ಹೋರಾಡುವ ವ್ಯವಹಾ ರಿಕ ಜನರು ಎದುರಿಗೆ ಒಬ್ಬನೊಡನೆ ಮಾತನಾಡುತ್ತ, ಮನದಲ್ಲೊಂದು ಸಂಪಾದನೆ

ಯನ್ನಾಲೋಚಿಸುತ್ತ, ಕೈಯಲ್ಲೊಂದು ಅನ್ಯಾಯವನ್ನಾಚರಿಸುತ್ತ ಯಾವ ಪುರುಷಾರ್ಥವನ್ನು ತಾನೆ ಸಾಧಿಸಿಯಾರು ? ಹೀಗೆ ತಮ್ಮೊಳಗಿನ ಆತ್ಮಸ್ವರೂಪವನ್ನೇ ತಿಳಿಯಲು ಅವರು ಅಶಕ್ತರಾದರೆ ಬೇರೆ ಎಷ್ಟು ರೂಢಿಸಿ ಆಗುವ ಫಲವಾದರೂ ಏನು ? ತನ್ನನ್ನೇ ಕಳೆದುಕೊಂಡು ಎಲ್ಲವನ್ನೂ ಗಳಿಸಿ ಪಡೆಯುವ ಪುಣ್ಯವ್ಯಾವುದು ? "What does it profit a man if he loses himself but gains everything" ಎಂದು ಅವರು ತಮ್ಮನ್ನು ಕೇಳಿಕೊಳ್ಳುವುದು ಮೇಲು. ಆಗ ಅವರ ಸಣ್ಣತನ, ಅನಾಚಾರ, ದುರಾಚಾರಗಳ ಅರಿವು ಅವರಿಗೆ ಉಂಟಾಗುವುದು. ಈ ಬಗೆಯ ಲೋಪದೋಷಗಳನ್ನು ಸರಿಪಡಿಸಿಕೊಳ್ಳದೆ ಕೇವಲ ಹೊಟ್ಟೆಯೊಂದನ್ನೇ ಗಮನಿಸುವ ಅವಿವೇಕಿಗಳು ಭವಪಾಶದೊಳಗೆ ಸಿಕ್ಕಿ ನರಳಬೇಕಾದೀತು. ಜಗದ್ವ್ಯವಹಾರಗಳನ್ನು ನಿರಭಿಮಾನದಿಂದ ಫಲಾಪೇಕ್ಷೆಯಿಲ್ಲದೆ ಶಿವನೇ ನಡೆಸುತ್ತಿರುವಾಗ ಇವರು ಅವನೊಡನೆ ಸಹಕರಿಸಿಕೊಂಡು ಏಕೆ ಹೋಗಬಾರದು? ಆಯಾ ಕಾಲದಲ್ಲಿ ದೊರಕುವ ಸುಖದುಃಖಗಳನ್ನು ಪ್ರಸಾದವೆಂದು ಭಾವಿಸಿ ತೃಪ್ತಿ ಶಾಂತಿಗಳಿಂದ ನಿತ್ಯ ಸುಖವನ್ನು ಏಕೆ ಅನುಭವಿಸಬಾರದು ? ಈ ಬಗೆಯ ಸಮನ್ವಯದೃಷ್ಟಿಯನ್ನು ದೊರಕಿಸುವ ಶ್ರೀಕರಬಾಷ್ಯವು ಇವರಿಗೆ ಏಕೆ ಅಪ್ರಿಯವಾಗಿದೆ ? ಆದರೆ ಕೇವಲ ವ್ಯವಹಾರಗಳಲ್ಲಿಯೇ ಮಗ್ನರಾದವರು ಹೀಗೆ ಸುಖದುಃಖಗಳನ್ನು ಅನುಭವಿಸುವುದು ಸಹಜವೇ ಆಗಿದೆ. ಸಗಣಿಯಲ್ಲಿರುವ ಹುಳುವಿಗೆ ಸಗಣಿಯೇ ಪ್ರಿಯವಾಗಿ ಕಾಣುತ್ತದೆ. ಅದರ ದುರ್ಗಂಧದ ಅರಿವೇ ಅದಕ್ಕಾಗುವುದಿಲ್ಲ. ಹಾಗಾಗಿದೆ ನಮ್ಮ ವ್ಯಾವಹಾರಿಕರ ಬಾಳು. ವ್ಯವಹಾರದೊಳಗೆ ಸಿಕ್ಕಿಕೊಂಡೇ ಅದಕ್ಕಂಟದಂತೆ ಮನಸ್ಸಿನಲ್ಲಿ ಈಶ್ವರನನ್ನು ಚಿಂತನೆಮಾಡುತ್ತಲೇ, ವ್ಯವಹಾರಗಳೆಲ್ಲವನ್ನೂ ಈಶ್ವರನೇ ನಿರ್ವಹಿಸುವನೆಂದೂ, ತಾನು ಅವಕ್ಕೆ ಕೇವಲ ನಿಮಿತ್ತನೆಂದೂ ಭಾವಿಸುವ ಜಾಣತನ ಅವರಿಗೆ ತಿಳಿಯದು. ಇರುವೆಯಂತೆ ಕೇವಲ ಹೊಟ್ಟೆಹೊರೆಯುವುದೇ ಜಾಣತನವೆಂದು ಅವರು ತಪ್ಪಾಗಿತಿಳಿದಿದ್ದಾರೆ. ಆದರೆ ಜಾಣತನವಿರುವುದು ವ್ಯವಹಾರವನ್ನು ಲಲಿತವಾಗಿ ನಡೆಸುವುದರಲ್ಲಿ ; ಅಂಟಿಯೂ ಅಂಟದಂತೆ ಇದ್ದು ಅದನ್ನು ನಿರ್ವಹಿಸುವುದರಲ್ಲಿ ; ಆದರೆ ಇದು ಮುಖ್ಯವಾಗಿ ವ್ಯಾವಹಾರಿಕನ ಆಧ್ಯಾತ್ಮನಿಷ್ಠೆಯನ್ನು ಅವಲಂಬಿಸಿದೆ. ಪ್ರತಿಯೊಬ್ಬ ವ್ಯಾವಹಾರಿಕನೂ ಆತ್ಮಜ್ಞಾನಸಂಪನ್ನನಾದರೆ ಅವನ ವ್ಯವಹಾರವು ಆತ್ಮಕಲ್ಯಾಣ ಮತ್ತು ಲೋಕಕಲ್ಯಾಣಗಳೆರಡನ್ನೂ ಏಕಕಾಲದಲ್ಲಿ ಸಾಧಿಸಬಲ್ಲದು. ಇದರಲ್ಲಿಯೇ ಅವನ ಹಿರಿಮೆ ಅಡಗಿದೆ. ಇದನ್ನು ಅವನಿಗೆ ದೊರಕಿಸುವ ಪವಿತ್ರಗ್ರಂಥವೇ ಶ್ರೀಕರಭಾಷ್ಯ. ಇದನ್ನೇ ಓದಲಿಕ್ಕೆ ಸಮಯವಿಲ್ಲವೆನ್ನುವವನು ಮಾನವನೇ ಅಲ್ಲ ; ಆದರೆ ಅವನು ಹುಲ್ಲನ್ನು ತಿನ್ನದ ಎರಡುಕಾಲಿನ ಪಶುವೇ ಸರಿ. ಪವಿತ್ರವಾದ ಮಾನವಜನ್ಮವನ್ನು ಕೇವಲ ವ್ಯವಹಾರಗಳಿಗಾಗಿ ದುರುಪಯೋಗಪಡಿಸಿಕೊಳ್ಳುವುದು ಧರ್ಮವಲ್ಲ. ಆದರೆ ಯಾವನು ವ್ಯವಹಾರಗಳನ್ನು ನಿರಭಿಮಾನದಿಂದ ಕರ್ತವ್ಯವೆಂದು ನಡೆಸುವನೋ ಅವನೇ ತನ್ನ ಜನ್ಮವನ್ನು

ಸಾರ್ಥಕಪಡಿಸಿಕೊಳ್ಳುವನು. ಲೋಕದಲ್ಲಿ ಒಬ್ಬನಿಗೆ ಒಳ್ಳೆಯದಾದರೆ ನೋಡಿ ಕೇಳಿ ಮನದಲ್ಲಿ ಸಂತೋಷಪಡುವುದೇ ಸೌಜನ್ಯ. ಇದನ್ನು ಸಾಧಿಸಿದವನಿಗೆ ಮಾತ್ರವೇ ಶಿವನು ಒಲಿಯುಬಲ್ಲನು. ಈ ಬಗೆಯ ಆತ್ಮೀಯತೆ ಅವನ ಉತ್ತಮ ಸಂಸ್ಕೃತಿಯನ್ನು ತಿಳಿಸುತ್ತದೆ. ಇಂತಹ ಸಮನ್ವಯದೃಷ್ಟಿಯನ್ನು ದೊರಕಿಸುವ ಪವಿತ್ರವೇದಾಂತ ಗ್ರಂಥವನ್ನು ಪ್ರತಿಯೊಬ್ಬ ವ್ಯಾವಹಾರಿಕನೂ ತಿಳಿಯಲೆಂಬ ಸದಾಶಯದಿಂದ ಈಗ ಕನ್ನಡಿಸಲಾಗಿದೆ. ಇದನ್ನು ಎಲ್ಲರೂ ಸದುಪಯೋಗಪಡಿಸಿಕೊಂಡು ಸೋದರನ ಶ್ರಮವನ್ನು ಸಾರ್ಥಕಪಡಿಸುವರೆಂದು ನಂಬಲಾಗಿದೆ. ಶ್ರೀಪತಿಪಂಡಿತಾರಾಧ್ಯಸ್ವಾಮಿಗಳು ತಮ್ಮನ್ನು ಶಿವಭಕ್ತನ ಭಕ್ತನಿಗೆ ಭಕ್ತನಾಗುವಂತೆ ಅನುಗ್ರಹಿಸಲಿಕ್ಕಾಗಿ ಶಿವನಲ್ಲಿ ಮೊರೆಯಿಟ್ಟಿದ್ದಾರೆ. ಈ ಮೇಲ್ಪಂಕ್ತಿಯನ್ನು ಸಾಧಕರೆಲ್ಲರೂ ಮನಃಪೂರ್ವಕವಾಗಿ ಜೀವನದಲ್ಲಿ ಆಚರಿಸಲೆಂದು ಆಶಿಸಲಾಗಿದೆ. ಪೂರ್ವಾಚಾರ್ಯರ ಈ ದಿವ್ಯಾದರ್ಶವು ನಮ್ಮ ನಾಡಿನ ಯುವಯುವತಿಯರನ್ನೆಲ್ಲಾ ಕತ್ತಲೆಯಿಂದ ಬೆಳಕಿನಕಡೆಗೆ ಮೃತ್ಯುವಿನಿಂದ ಅಮೃತದ ಕಡೆಗೆ ಒಯ್ಯಲೆಂದು ಪ್ರಾರ್ಥಿಸುತ್ತೇನೆ.

ಒಂದು ದರ್ಶನದಲ್ಲಿ ಸಿದ್ಧಾಂತಕ್ಕೂ ಜೀವನಮಾರ್ಗಕ್ಕೂ ಸಾಮರಸ್ಯವಿದ್ದರೆಯೇ ಅದು ವೀರ್ಯವತ್ತರವೆನಿಸುತ್ತದೆ. ಅದರಿಂದ ಲೋಕಕಲ್ಯಾಣವೂ ಸಾಧಿತವಾಗುತ್ತದೆ. ಶ್ರೀಪತಿಪಂಡಿತಾರಾಧ್ಯರು ಪ್ರತಿಪಾದಿಸಿರುವ ಭೇದಾಭೇದಸಿದ್ಧಾಂತವು ದ್ವೈತಿಗಳ ಕ್ರಿಯಾಪ್ರಾಧಾನ್ಯವನ್ನೂ, ಅದ್ವೈತಿಗಳ ಜ್ಞಾನಪ್ರಾಶಸ್ತ್ಯವನ್ನೂ ಯುಕ್ತವಾದ ರೀತಿಯಲ್ಲಿ ಸಮನ್ವಯಮಾಡುತ್ತಲಿದೆ. ಇದು ಕೇವಲ ಜ್ಞಾನವನ್ನಾಗಲೀ, ಕೇವಲ ಕ್ರಿಯೆಯನ್ನಾಗಲೀ ಅವಲಂಬಿಸದೆ ಜ್ಞಾನಯುಕ್ತವಾದ ಕ್ರಿಯೆಯನ್ನೇ ಸಾಧನವನ್ನಾಗಿ ಅಂಗೀಕರಿಸಿದೆ. ಶ್ರುತ್ಯುಕ್ತವಾದ ಯಜ್ಞಾದಿಕರ್ಮಗಳನ್ನೂ ಸಹ ಈಶ್ವರಪ್ರೀತ್ಯರ್ಥವಾಗಿ ಆಚರಿಸುವುದರಿಂದ ಸಾಧಕನು ಸ್ವರ್ಗಾದಿಭೋಗವನ್ನು ಅನುಭವಿಸಿ ಆ ಮೂಲಕ ಮಹಾಕೈಲಾಸದಲ್ಲಿ ಸಾಲೋಕ್ಯ ಸಾಮೀಪ್ಯ ಸಾರೂಪ್ಯವೆಂಬ ಮುಕ್ತಿಗಳನ್ನು ಪಡೆಯಬಹುದೆಂದೂ, ಅಲ್ಲಿಯೇ ನಿಷ್ಕಲನಿರವಯಶಿವತತ್ತ್ವವನ್ನು ಧ್ಯಾನಿಸುತ್ತಲೇ ಕೊನೆಗೆ ಸಾಯುಜ್ಯಮುಕ್ತಿಯನ್ನು ಪಡೆಯಬಹುದೆಂದೂ ಶ್ರೀಪತಿಪಂಡಿತಾರಾಧ್ಯರು ತಮ್ಮ ಅಭಿಪ್ರಾಯವನ್ನು ಬಹಳ ಸುಗಮವಾಗಿ ಹೊಂದಿಸಿ ನಿರೂಪಿಸಿದ್ದಾರೆ. ಈ ಯಜ್ಞಾದಿಕ್ರಿಯಾಚರಣದಲ್ಲೂ ತನಗಾಗಿ ಫಲವನ್ನು ಅಪೇಕ್ಷಿಸದೆ ಅವನ್ನು ತನ್ನ ಕರ್ತವ್ಯವೆಂದು ಭಾವಿಸುವುದೇ ಜ್ಞಾನವೆನಿಸುತ್ತದೆ. ಹೀಗೆ ತಿಳಿದು ಆಚರಿಸುವುದೇ ಕ್ರಿಯೆ ಎನಿಸುತ್ತದೆ. ಹೀಗೆ ತಿಳಿಯದೆ ಅವುಗಳ ಫಲವನ್ನು ತನಗೆಂದು ಬಯಸಿದರೆ ಸಾಧಕನು ಅದನ್ನು ಅನುಭವಿಸಲು ಇಲ್ಲಿಂದ ಮೇಲಕ್ಕೂ ಕೆಳಕ್ಕೂ ಹೋಗುತ್ತಲೂ ಬರುತ್ತಲೂ ಇರಬೇಕಾಗುತ್ತದೆ. ಈ ಬಗೆಯ ಸಂಚಾರವನ್ನು ತಪ್ಪಿಸಿಕೊಳ್ಳಲು ಅವನಿಗೆ ಜ್ಞಾನಕ್ರಿಯಾಸಮನ್ವಯಮಾರ್ಗವು ಆವಶ್ಯಕ. ಮಾಡುವುದೆಲ್ಲವನ್ನು ಶಿವಪೂಜೆ ಎಂದು ತಿಳಿದು ಮಾಡುವುದೇ ಸಮನ್ವಯಮಾರ್ಗವೆನಿಸುತ್ತದೆ. ಹೀಗೆ ಮಾಡುವವನಿಗೆ ಕೈವಲ್ಯವಿಭೂತಿ ಎಂಬ ಸಾಯುಜ್ಯಮುಕ್ತಿ ಇಲ್ಲಿಯೇ ದೊರಕುವು

ದೆಂದು ಶ್ರೀಪತಿಪಂಡಿತಾರಾಧ್ಯರು ಸ್ಪಷ್ಟವಾಗಿ ತಿಳಿಸಿದ್ದಾರೆ. ಹೊನ್ನು ಹೆಣ್ಣು ಮಣ್ಣುಗಳ ಆಶೆಗೆ ಬಲಿಬೀಳದೆ ಶಾಂತಿ, ದಾಂತಿ, ಉಪರತಿ, ತಿತಿಕ್ಷಾ, ಸಮಾಧಾನಗಳೆಂಬ ಸತ್ಕರ್ಮಗಳಿಂದೊಡಗೂಡಿದ ಶಿವಜ್ಞಾನಿಗಳಿಗೆ ಸಾಯುಜ್ಯಮುಕ್ತಿಯೂ, ಕೇವಲ ಶಿವಭಕ್ತಿಯುಳ್ಳವರಿಗೆ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಮುಕ್ತಿಗಳೂ ದೊರಕುತ್ತವೆ ಎಂದು ಅವರು ಸ್ಪಷ್ಟವಾಗಿ ತಿಳಿಸಿದ್ದಾರೆ. "ವಿದ್ಯಾಕರ್ಮಣೋರಿತಿ ಪ್ರಕೃತತ್ವಾತ್" (೩-೧-೧೭) ಎಂಬ ಸೂತ್ರಭಾಷ್ಯದಲ್ಲಿ ಅವರು ಶಿವಜ್ಞಾನಕ್ಕೂ ಶಿವಪೂಜಾದಿಕರ್ಮಗಳಿಗೂ ಶಿವಾನುಗ್ರಹದಿಂದ ದೊರೆಯುವ ಯಥೋಚಿತವಾದ ಫಲವನ್ನು ತಿಳಿಸುವಾಗ ತಮ್ಮ ಅಭಿಪ್ರಾಯವನ್ನು ಸಮನ್ವಯದೃಷ್ಟಿಯಿಂದ "ಈಷಣತ್ರಯದೋಷಶೋಷಿತಶಮದಮಾದಿಸಹಕೃತಶಿವಜ್ಞಾನನಿಷ್ಠಾಗರಿಷ್ಠಾನಾಂ ಕೈವಲ್ಯವಿಭೂತ್ಯಾತ್ಮಕಶಿವಸಾಯುಜ್ಯಂ. ಶಿವಭಕ್ತಿವಿಶಿಷ್ಟಾನಾಂ ಸಾಲೋಕ್ಯಾದಿಮುಕ್ತಿತ್ರಯಂ ಚ ಅಧಿಕಾರಿಭೇದೇನ ವ್ಯಪದಿಶ್ಯತೇ. ಪರಶಿವಾಜ್ಞಾರೂಪಜ್ಯೋತಿಷ್ಟೋಮಾದಿಕರ್ಮಾವಲಂಬಿನಾಂ ದೇವಯಾನಮಾರ್ಗೇಣ ಸ್ವರ್ಗಲೋಕಸುಖಾನುಭೂತಿಃ, ತದಿತರಾಣಾಂ ದುಷ್ಕೃತಿನಾಂ ಪಿತೃಯಾನಮಾರ್ಗೇಣ ತತ್ಕರ್ಮಾನುಸಾರೇಣ ಯಮಲೋಕೇ ವಾ ಘೋರದುಃಖಾನುಭೂತಿಶ್ಚ ನಿರ್ಣೀಯತೇ" ಎಂದು ಸ್ಪಷ್ಟವಾಗಿ ತಿಳಿಯಪಡಿಸಿದ್ದಾರೆ. ಇದೂ ಅಲ್ಲದೆ "ವ್ಯತಿರೇಕಸ್ತದ್ಭಾವಭಾವಿತ್ವಾನ್ನ ತೂಪಲಬ್ಧಿವತ್" (೩-೩-೫೩) ಎಂಬ ಸೂತ್ರಭಾಷ್ಯದಲ್ಲಿ "ಮೋಕ್ಷದಶಾಯಾಂ ಸಾಲೋಕ್ಯಾದಿತ್ರಿವಿಧಮುಕ್ತೌ ಪರಮಾನಂದಪ್ರಾಚುರ್ಯಕಲ್ಯಾಣವಿಭೂತಿಃ, ಸಾಯುಜ್ಯಮುಕ್ತ್ಯಭಿಧಾನಕೈವಲ್ಯವಿಭೂತೌ ಅಹಂಮಮತ್ವಾದಿವಿಕಲ್ಪಶೂನ್ಯತ್ವೇನ ಪರಮಶಿವಾಕಾರಾಕಾರಿತನಿಃಶ್ರೇಯಸಫಲಂ ಚ ನಿರ್ದಿಶ್ಯತೇ" ಎಂದು ಸಾಯುಜ್ಯಮುಕ್ತಿಯಲ್ಲಿ ಜೀವನಿಗೆ ಶಿವತಾದಾತ್ಮ್ಯವನ್ನೂ, ಇತರ ಮುಕ್ತಿಗಳಲ್ಲಿ ಪರಮಾನಂದಾನುಭವವನ್ನೂ ಮುಕ್ತರ ಯೋಗ್ಯತಾನುಸಾರವಾಗಿ ತಿಳಿಸಲಾಗಿದೆ. ಹಾಗೆಯೇ "ದಹರಪುಂಡರೀಕೇ ಪರಮೇಶ್ವರೋಪಾಸಕಾನಾಂ ಅವಿಲಂಬೇನ ಶಿವಸಾಯುಜ್ಯಮುಕ್ತ್ಯುಪದೇಶಾತ್" ಎಂದು "ಅಂಗೇಷು ಯಥಾಶ್ರಯಭಾವಃ" (೩-೩-೫೪) ಎಂಬ ಸೂತ್ರಭಾಷ್ಯದಲ್ಲಿ ಸಾಯುಜ್ಯಮುಕ್ತಿಯನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. ಈ ಬಗೆಯ ಸಮನ್ವಯದೃಷ್ಟಿ ಇರುವುದರಿಂದಲೇ ಶ್ರೀಕರಭಾಷ್ಯವು ಪ್ರತಿಯೊಬ್ಬ ಸಾಧಕನಿಗೂ ಅವನವನ ಯೋಗ್ಯತಾನುಸಾರವಾಗಿ ನಿರ್ದಿಷ್ಟವಾದ ಫಲವನ್ನು ದೊರಕಿಸುತ್ತಲಿದೆ. ಹೀಗೆ ಶಿವಜ್ಞಾನಿಗೂ, ಸತ್ಕರ್ಮಿಗೂ, ಜ್ಞಾನಯುಕ್ತನಾಗಿ ಕರ್ಮವನ್ನಾಚರಿಸುವ ಯೋಗಿಗೂ, ಹಾಗೆಯೇ ದುಷ್ಕರ್ಮಿಗೂ ಆಯಾಯ ಫಲಗಳನ್ನು ಸ್ಪಷ್ಟವಾಗಿ ತಿಳಿಸಿರುವುದರಿಂದ ಇದು ಸರ್ವರಿಗೂ ಆದರಣೀಯವಾಗಿದೆ. ಆದ್ದರಿಂದ ಯಜ್ಞಾದಿಕರ್ಮಗಳನ್ನು ಆಚರಿಸುವವರೂ, ಲೋಕಕಲ್ಯಾಣಕ್ಕಾಗಿ ಸತತವೂ ಸಾರ್ವಜನಿಕಕರ್ಮಗಳನ್ನು ಆಚರಿಸುವವರೂ ತಮಗೆ ಶಿವಸಾಯುಜ್ಯವೇ ದೊರಕುವುದಿಲ್ಲವೆಂದು ನಿರಾಶರಾಗಲಿಕ್ಕೆ ಅವಕಾಶವೇ ಇಲ್ಲ. ಇವರೆಲ್ಲರೂ ಈಷಣ

ತ್ರಯದಿಂದ ದೂರವಾಗಬೇಕೆಂಬುದಷ್ಟೇ ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶ. ಆಶೆಯುಳ್ಳವರು ಮತ್ತು ಆಶೆಯನ್ನು ತೊರೆದವರು ಹೀಗೆ ಸಾಧಕರಲ್ಲಿ ಪ್ರಧಾನವಾದ ಎರಡು ವಿಭಾಗಗಳನ್ನು ಮಾತ್ರವೇ ಶ್ರೀಕರಭಾಷ್ಯದಲ್ಲಿ ನಾವು ಕಾಣಬಹುದಾಗಿದೆ. ಆಶೆ ಇಲ್ಲದ ಸಾಧಕರು ಇಲ್ಲಿಯೇ ಪ್ರಸಾದಕಾಯದಲ್ಲಿ ಸಾಯುಜ್ಯವನ್ನು ಪಡೆದರೆ ಆಶೆಯುಳ್ಳವರು ಕ್ರಮವಾಗಿ ಅದನ್ನು ಮುಂದೆ ಮಹಾಕೈಲಾಸದಲ್ಲಿ ಪಡೆಯುವರು. ಶ್ರೀಕರಭಾಷ್ಯವು ಸಾಧಕರಲ್ಲಿ ಇಷ್ಟನ್ನು ಮಾತ್ರವೇ ಪ್ರಾಧಾನವೆಂದೆಣಿಸಿ ಎಲ್ಲರ ಗಮನವನ್ನೂ ಜ್ಯೋತಿಯ ಕಡೆಗೆ ತಿರುಗಿಸುತ್ತದೆ.

ಹೀಗೆ ಶ್ರೀಕರಭಾಷ್ಯವು ಸಿದ್ಧಾಂತವನ್ನು ನಿರೂಪಿಸುವಾಗಲೂ, ಸಾಧನಮಾರ್ಗವನ್ನು ತಿಳಿಸುವಾಗಲೂ ಶ್ರುತ್ಯಾಗಮಗಳಿಗೆ ಸಮ್ಮತವಾಗುವಂತೆಯೂ ಯುಕ್ತ್ಯನುಭವಗಳಿಗೆ ಹೊಂದುವಂತೆಯೂ ವೀರ್ಯವತ್ತರವಾದ ಸಮನ್ವಯಮಾರ್ಗವನ್ನು ಆಶ್ರಯಿಸಿರುವುದೆಂಬ ಅಂಶ ಈ ಭೂಮಿಕೆಯಿಂದ ಸಹೃದಯರೆಲ್ಲರಿಗೂ ವೇದ್ಯವಾಗುವುದೆಂದು ಭಾವಿಸುತ್ತೇನೆ. ಆದ್ದರಿಂದಲೇ ಈ ಭಾಷ್ಯವನ್ನು ಓದುವ ಸಾಧಕರೆಲ್ಲರೂ ಜಾತಿ ಮತ ಕುಲ ಗೋತ್ರಗಳ ಮತ್ತು ವರ್ಣಾಶ್ರಮಗಳ ವೈವಿಧ್ಯವನ್ನೆಣಿಸದೆ ಒಮ್ಮನದಿಂದ ಆತ್ಮವಿಶ್ವಾಸವನ್ನು ಗಳಿಸಿಕೊಂಡು ಆತ್ಮಜ್ಞಾನದಿಂದ ಆತ್ಮಗೌರವವನ್ನು ಸಂರಕ್ಷಿಸಿಕೊಳ್ಳುವುದಲ್ಲದೆ ಶಿವಸಾಯುಜ್ಯವನ್ನು ಜೀವಿತಕಾಲದಲ್ಲಿಯೇ ಅನುಭವಿಸುತ್ತ ಅನಾಯಾಸವಾಗಿ ಮರಣವನ್ನು ಅಪ್ಪಿಕೊಳ್ಳುವ ಎದೆಗಾರಿಕೆಯನ್ನು ಪಡೆಯಲಿರುವರು. ಆದ್ದರಿಂದ ಸಾಧಕರಲ್ಲಿ ಯಾರೊಬ್ಬರೂ ಯಾವ ಕಾರಣದಿಂದಲೂ ನಿರಾಶರಾಗಬೇಕಾಗಿಲ್ಲವೆಂಬ ದಿವ್ಯಸಂದೇಶವನ್ನು ಶ್ರೀಕರಭಾಷ್ಯವು ಇಡೀ ಜಗತ್ತಿಗೆ ಸಾರುತ್ತಿದೆ. ಯಜ್ಞಗಳನ್ನಾಚರಿಸುವವರೂ ಸಹ ಸ್ವರ್ಗದ ಮೂಲಕ ಮಹಾಕೈಲಾಸದಲ್ಲಿ ಕ್ರಮಮುಕ್ತಿಯನ್ನು ಸಾಧಿಸಬಹುದೆಂಬ ಉದಾರಾಶಯವನ್ನು ಯಾವ ಭಾಷ್ಯವು ತಾನೆ ವ್ಯಕ್ತಪಡಿಸೀತು? ಎಲ್ಲಾ ಭಾಷ್ಯಗಳೂ ಪರಮೇಶ್ವರನ ದಿವ್ಯವೈಭವವನ್ನೂ ಭಕ್ತಾನುಗ್ರಹಲೀಲೆಯನ್ನೂ ವಿವರಿಸುತ್ತವೆ ಎಂಬುದೇನೋ ಅಕ್ಷರಶಃ ನಿಜ. ಆದರೆ ಈ ದೇಹದಲ್ಲಿಯೇ ಅವನ ಲೀಲೆಯನ್ನು ವಿಶದಪಡಿಸಿ, ಅವನಿಗಾಗಿ ಹುಡುಕುತ್ತ ಬೇರೆ ಎಲ್ಲಿಗೂ ಹೋಗುವ ಅವಶ್ಯಕತೆ ಇಲ್ಲವೆಂದೂ, ಗುರುಕೃಪೆಯಿಂದ ಈ ಪ್ರಸಾದಕಾಯದಲ್ಲಿಯೇ ಸಾಧಕನು ಸಂಪ್ರಸಾದನಾಗಬಹುದೆಂದೂ, ಶಿವಪ್ರೀತ್ಯರ್ಥವಾಗಿ ಯಜ್ಞವನ್ನಾಚರಿಸಿದವರಿಗೂ ಸ್ವರ್ಗದಮೂಲಕ ಶಿವಪದವು ಕ್ರಮವಾಗಿ ದೊರೆಯುವುದೆಂದೂ, ಶಿವನ ಬಗ್ಗೆ ಉತ್ಕಟವಾದ ಇಚ್ಛೆಯುಳ್ಳವನು ಪೂರ್ಣವಾಗಿ ನಿರ್ವಿಷಯನಾದರೆ ಈಗಲೇ ಇಲ್ಲಿಯೇ ಅಮೃತನಾಗಿ ಶಿವಸಾಯುಜ್ಯವನ್ನು ಪಡೆಯಬಹುದೆಂದೂ ಆವರವರ ಯೋಗ್ಯತಾನುಸಾರವಾಗಿ ಸಮನ್ವಯದೃಷ್ಟಿಯಿಂದಲೂ ಸರ್ವಮತಸಹಿಷ್ಣುತೆಯಿಂದಲೂ ಫಲಪ್ರಾಪ್ತಿಯನ್ನು ತಿಳಿಸಿರುವುದರಿಂದಲೇ ಶ್ರೀಕರಭಾಷ್ಯದ ಹಿರಿಮೆ ಜಗನ್ಮಾನ್ಯವಾಗಿದೆ. ವೀರಶೈವರಿಗಂತೂ ಇದು ವಿಧಿಸಿರುವ ಶಿವಯಜ್ಞವು ದಿವ್ಯವೂ ಭವ್ಯವೂ ಆಗಿದೆ. "ಯಜ್ ದೇವಪೂಜಾಯಾಂ" ಎಂಬ ಮೂಲಧಾತುವಿನ

ಅರ್ಥವನ್ನು ಅವಲಂಬಿಸಿ, ಯಜ್ಞವೆಂದರೆ ಮುಖ್ಯವೃತ್ತಿಯಿಂದ ದೇವಪೂಜೆ ಎಂಬು ದನ್ನೇ ಪ್ರಧಾನವೆಂದೆಣಿಸಿ ಶ್ರೀಕರಭಾಷ್ಯವು ಅನೇಕ ಪ್ರಕರಣಗಳಲ್ಲಿ ಅದನ್ನು ಘಂಟಾ ಘೋಷವಾಗಿ ನಿರೂಪಿಸಿದೆ. ದೇವನೆಂದರೆ ಶಿವನೆಂಬ ಅಂಶ ಶ್ರುತಿಗೆ ಸಮ್ಮತವೆಂದು ಹಿಂದೆಯೇ ವಿಸ್ತಾರವಾಗಿ ತಿಳಿಸಿಯಾಗಿದೆ. ಇಂತಹ ದೇವಪೂಜೆ ಯಾರಿಗೆ ತಾನೆ ನಿತ್ಯಯಜ್ಞವಾಗಲಾರದು?

ಅನೇನ ಪಂಚಯಜ್ಞೇನ ಯಃ ಪೂಜಯತಿ ಶಂಕರಂ ।
ಭಕ್ತ್ಯಾ ಪರಮಯಾ ಯುಕ್ತಃ ಸ ವೈ ಭಕ್ತ ಇತಿ ಸ್ಮೃತಃ॥ (ಸಿ.ಶಿ. ೯. ೨೫)

ಎಂದು ಪೂಜ್ಯ ಶ್ರೀ ರೇಣುಕಭಗವತ್ಪಾದಾಚಾರ್ಯರು ಅಗಸ್ತ್ಯಮಹರ್ಷಿಗಳಿಗೆ ಶಿವ ತತ್ವ್ತವನ್ನು ಉಪದೇಶಿಸುವಾಗ ತಪಸ್ಸು, ಕರ್ಮ, ಜಪ, ಧ್ಯಾನ, ಜ್ಞಾನವೆಂಬ ಐದು ಬಗೆಯ ಶಿವಯಜ್ಞವನ್ನು ಬಹಳ ಹಿಂದೆಯೇ ತಿಳಿಸಿದ್ದರು. ಇಲ್ಲಿ ತಪಸ್ಸೆಂದರೆ ಚಾಂದ್ರಾಯಣಾದಿವ್ರತಗಳಿಂದ ಶರೀರವನ್ನು ಒಣಗಿಸುವುದಲ್ಲ; ಆದರೆ ಶಿವಸ್ವರೂಪಿ ಗಳಾದ ಗುರುಜಂಗಮರ ಸೇವೆಗಾಗಿ ದೇಹವನ್ನು ಸವೆಸುವುದು. ಕರ್ಮವೆಂದರೆ ಕಷ್ಟಸಾಧ್ಯವಾದ ಜ್ಯೋತಿಷ್ಟೋಮಾದಿಕರ್ಮಗಳಲ್ಲ; ಆದರೆ ಪ್ರಾಣಲಿಂಗದ ಮತ್ತು ಗುರುಜಂಗಮರ ಅರ್ಚನೆ. ಜಪವೆಂದರೆ ಪ್ರಾಕೃತಕರ್ಮವನ್ನು ತಿಳಿಸುವ ವೇದದ ಕರ್ಮಕಾಂಡದ ಅಭ್ಯಾಸವಲ್ಲ; ಆದರೆ ಓಂಕಾರ ಅಥವಾ ಓಂಕಾರಸಹಿತ ಪಂಚಾಕ್ಷರ ಮಂತ್ರದ ಅಭ್ಯಾಸ; ಅಥರ್ವಶಿಖಾ ಶ್ವೇತಾಶ್ವರ ಕೈವಲ್ಯ ಮೊದಲಾದ ಶ್ರುತಿಗಳ ಪಠನ. ಧ್ಯಾನವೆಂದರೆ ಸ್ವಸ್ವರೂಪಚಿಂತನೆಯಲ್ಲ; ಆದರೆ ಶಿವನ ಮೂರ್ತಾಮೂರ್ತ ಸ್ವರೂಪದ ವಿವೇಚನೆ. ಜ್ಞಾನವೆಂದರೆ ಸಾಂಖ್ಯಾದಿಶಾಸ್ತ್ರಜ್ಞಾನವಲ್ಲ; ಆದರೆ ಶಿವಾಗಮಗಳ ಅರ್ಥದ ಪರಿಶೀಲನೆ. ಈ ರೀತಿಯಾದ ಶಿವಯಜ್ಞದಿಂದ ಯಾವನು ಅವ್ಯಭಿಚರಿತಭಕ್ತಿಯಿಂದೊಡಗೂಡಿ ಶಿವನನ್ನು ಅರ್ಚಿಸುವನೋ ಅವನು ಶಿವಭಕ್ತ ನೆನಿಸುವನು. ಮಾನವರೆಲ್ಲರೂ ಇಂತಹ ಸದ್ಭಕ್ತರಾಗಲೆಂದು ಶ್ರೀರೇಣುಕಭಗವ ತ್ಪಾದಾಚಾರ್ಯರು ಬಹಳ ಹಿಂದೆಯೇ ಮನಸಾರೆ ಬಯಸಿದ್ದಾರೆ. ಇದನ್ನೇ ಆಧಾರ ವಾಗಿಟ್ಟುಕೊಂಡು ಶ್ರೀಕರಭಾಷ್ಯವು ಲಿಂಗಿಬ್ರಾಹ್ಮಣರಿಗೆ ಐದುಬಗೆಯ ಅಪ್ರಾಕೃತ ಯಜ್ಞವನ್ನೂ, ಅಲಿಂಗಿಬ್ರಾಹ್ಮಣರಿಗೂ ಮತ್ತೆ ಇತರ ಭಕ್ತರಿಗೂ ಜ್ಯೋತಿಷ್ಟೋಮಾದಿ ಪ್ರಾಕೃತಯಜ್ಞವನ್ನೂ ವಿಧಿಸಿರುವುದು ಸಮಂಜಸವಾಗಿದೆ. ಹೀಗೆ ಯುವಯುವತಿಯ ರಿಗೆ ಸತ್ಕರ್ಮಾಸಕ್ತಿಯನ್ನೂ, ಸದ್ಬುದ್ಧಿ ಸದ್ಭಾವನೆಗಳನ್ನೂ, ಆಧ್ಯಾತ್ಮಪ್ರೇಮವನ್ನೂ, ನಿರಭಿಮಾನಸ್ಥಿತಿಯನ್ನೂ, ಪ್ರಸಾದಜೀವನವನ್ನೂ ಹುಟ್ಟಿಸುತ್ತಲೇ, ವಯಸ್ಕರಿಗೆ ಸಮಾಧಾನಪ್ರಕೃತಿಯನ್ನೂ, ತೃಪ್ತಿ ಶಾಂತಿ ನಿಶ್ಚಿಂತತೆಗಳನ್ನೂ, ಇಹಪರಸಾಮರಸ್ಯ ವನ್ನೂ, ಸರ್ವಾತ್ಮಭಾವವನ್ನೂ ಕರುಣಿಸುತ್ತ ಶ್ರೀಕರಭಾಷ್ಯವು ಎಲ್ಲರ ಜೀವನವನ್ನು ಶ್ರೀಕರಗೊಳಿಸುತ್ತಲಿರುವುದು ಅಭಿನಂದನೀಯವಾಗಿದೆ.

ಮಾನ, ಅಭಿಮಾನ, ಅವಮಾನಗಳ ಸಂಕೋಲೆಯಲ್ಲಿ ಸಿಲುಕಿ, ಅಜ್ಞಾನ, ವ್ಯಾಮೋಹ, ಸಂಶಯಗಳ ಕಗ್ಗತ್ತಲೆಯಲ್ಲಿ ಪರದಾಡುತ್ತಿದ್ದ ಈ ಸೇವಕನಿಗೆ ಶ್ರೀಕರ

ಭಾಷ್ಯವು ಜ್ಞಾನಾಮೃತದ ಸವಿಯೂಟವನುಣಿಸಿದಂತೆ ಕರ್ಣಾಟಕದ ಬಂಧುಗಳೆಲ್ಲರಿಗೂ ಅದರ ಅನುವಾದದ ಮೂಲಕ ಆತ್ಮಾನಂದದ ದಿವ್ಯಾನುಭವವನ್ನು ದೊರಕಿಸಲೆಂದು ಹಾರೈಸುತ್ತೇನೆ. ಅನುವಾದಮಾಡುವ ವೇಳೆಯಲ್ಲಿ ಭಾಷ್ಯದ ಪವಿತ್ರ ವಾಕ್ಯಗಳು ಒಳಗಿನ ಮತ್ತು ಹೊರಗಿನ ಇಂದ್ರಿಯಗಳೆಲ್ಲದರಲ್ಲೂ ಪೂರ್ಣವಾಗಿ ವ್ಯಾಪಿಸಿದ್ದರಿಂದ ಈ ಸೇವಕನಿಗೆ ಪ್ರಕೃತಿಯ ಸಂಕುಚಿತವಾದ ಚಿತ್ತಶಕ್ತಿಯು ಚಿಚ್ಛಕ್ತಿಯಾಗಿ ಪರಿಣಮಿಸಿದಂತೆ ನಾಡಿನ ಯುವಯುವತಿಯರೆಲ್ಲರಿಗೂ ಶಕ್ತಿಸಂಕೋಚವು ಶಕ್ತಿವೈಶಾಲ್ಯದಲ್ಲಿ ಪರಿಣಮಿಸಲೆಂದೂ, ಇದರಿಂದ ಅವರ ಇಚ್ಛಾಶಕ್ತಿಯು ಸ್ವಾರ್ಥತೆಯಿಂದ ಲೋಕಕಲ್ಯಾಣದ ಬಯಕೆಯಲ್ಲೂ, ಜ್ಞಾನಶಕ್ತಿಯು ಆತ್ಮಹಿತದ ವಿವೇಚನೆಯಿಂದ ಸಾರ್ವಜನಿಕಹಿತದ ಚಿಂತನೆಯಲ್ಲೂ, ಹಾಗೆಯೇ ಕ್ರಿಯಾಶಕ್ತಿಯು ಆತ್ಮಸುಖಸಾಧನೆಯಿಂದ ದೇಶದ ಮತ್ತು ಸಮಾಜದ ಸಾರ್ವತ್ರಿಕಸುಖರಕ್ಷಣೆಯಲ್ಲೂ ಪ್ರಸರಿಸಲೆಂದೂ, ಅದಕ್ಕಾಗಿ ಸೂರ್ಯಪೀಠಾಧೀಶ್ವರರಾದ ಶ್ರೀಪತಿಪಂಡಿತಾರಾಧ್ಯ ಮಹಾಸ್ವಾಮಿಗಳು ಶ್ರೀಕರಭಾಷ್ಯದ ವಾಚಕರೆಲ್ಲರನ್ನೂ ಕೃಪಾದೃಷ್ಟಿಯಿಂದ ಅನುಗ್ರಹಿಸಲೆಂದೂ ಭಕ್ತಿಯಿಂದ ಪ್ರಾರ್ಥಿಸುತ್ತೇನೆ.

ಮನುಷ್ಯನು ಈ ದೇಹಕ್ಕೆ ಆಗಂತುಕನಾಗಿ ಬಂದಿರುವುದರಿಂದ ಒಂದುದಿನ ಇದನ್ನು ಬಿಟ್ಟುಹೋಗಲೇಬೇಕು. ಆದರೆ ಆ ದಿನವನ್ನು ಅವನು ಯಾವಾಗಲೂ ಬಯಸುತ್ತಿರದೆ ಅದು ತಾನಾಗಿಯೇ ಬಂದಾಗ ಅಂಜದೆ ಅಳುಕದೆ ಅದನ್ನು ಚಿತ್ತಸ್ಥೈರ್ಯದಿಂದ ಸ್ವಾಗತಿಸಬೇಕು. ಇದರಲ್ಲಿಯೇ ಅವನ ಧೈರ್ಯ ಸ್ವಾತಂತ್ರ್ಯ ಮತ್ತು ಸಂಯಮಗಳನ್ನು ಬೇರೆಯವರು ಕಾಣುತ್ತಾರೆ. ಈ ಗುಣಗಳನ್ನು ಜೀವನದಲ್ಲಿ ಆಚರಿಸುತ್ತಲೇ ಒಬ್ಬನು ಇತರರಿಗೆ ಮಾರ್ಗದರ್ಶಕನಾಗಿರಬೇಕು. ಸತ್ಯವೂ ವೇದಾಂತಗಳನ್ನು ಕೇಳುತ್ತ, ಪರಮಾತ್ಮಸ್ವರೂಪವನ್ನು ತನ್ನಲ್ಲಿ ಅಳವಡಿಸಿಕೊಳುತ್ತ, ದೇಹದಲ್ಲಿ ಸಹಜವಾಗಿ ನಡೆಯುತ್ತಿರುವ ಆವನ ನಿರಭಿಮಾನದ ಲೀಲೆಯನ್ನು ತಿಳಿಯುತ್ತ, ಯಾರಿಂದಲೂ ಯಾವ ಫಲವನ್ನೂ ಬಯಸದೆ ಅವನು ಎಲ್ಲರನ್ನೂ ಸಮದೃಷ್ಟಿಯಿಂದ ಅವರವರ ಯೋಗ್ಯತಾನುಸಾರವಾಗಿ ರಕ್ಷಿಸುತ್ತಲೇ ಆತ್ಮಾನಂದವನ್ನು ಅನುಭವಿಸುತ್ತಲೇ ಚಿದಾಕಾಶದಲ್ಲಿ ರಮಿಸುತ್ತಿರುವುದನ್ನು ಮಾನವನು ಪ್ರತಿನಿಮಿಷವೂ ಗಮನಿಸುತ್ತಿರಬೇಕು ಇದೆಲ್ಲವೂ ಅವನ ಆಧ್ಯಾತ್ಮವ್ಯವಸಾಯವೆನಿಸಿದೆ. ಶ್ರವಣ, ಮನನ, ನಿದಿಧ್ಯಾಸನ, ಧಾರಣ, ಅರ್ಚನ, ಅರ್ಪಣ ಎಂದು ಇದು ಆರು ಬಗೆಯಾಗಿದೆ ರೈತನು ಪ್ರತಿನಿಮಿಷವೂ ತನ್ನ ಕರ್ತವ್ಯವನ್ನು ಎಚ್ಚರಿಕೆಯಿಂದ ಮಾಡುತ್ತಬಂದರೆ ಕೊನೆಗೆ ಉತ್ತಮಫಲವನ್ನು ಪಡೆಯುತ್ತಾನೆ. ಆಯಾಕಾಲದಲ್ಲಿ ಮಾಡಬೇಕಾದ ಕರ್ತವ್ಯದಲ್ಲಿ ಅವನು ಕೊಂಚ ಬೇಸರಗೊಂಡರೂ ಅವನಿಗೆ ಸುಗ್ಗಿಯ ಕಾಲದಲ್ಲಿ ಸುಖಸಂತೋಷಗಳು ದೊರಕಲಾರವು. ಆದ್ದರಿಂದಲೇ "ಕೃಷಿ ಕೆಡಗು ಉಪೇಕ್ಷೆಯಲಿ" ಎಂದು ಅನುಭವಿಗಳು ಹೇಳಿದ್ದಾರೆ. ಪ್ರಮಾದವೇ ಮೃತ್ಯುವೆಂದು ಜ್ಞಾನಿಗಳು ಹೇಳಿರುವುದು ಅನುಭವಪೂರ್ಣವಾದ ಸತ್ಯವೆನಿಸಿದೆ. ಹೀಗೆ ಮಾನವನು

ಹೊಟ್ಟೆಬಟ್ಟೆಗಳಿಗಾಗಿ ವ್ಯವಸಾಯೋದ್ಯಮಗಳನ್ನು ಕೈಗೊಳ್ಳುವಂತೆ ಆತ್ಮದ ಹಸಿವನ್ನು ಪರಿಹರಿಸಲಿಕ್ಕಾಗಿ ಆಧ್ಯಾತ್ಮವ್ಯವಸಾಯವನ್ನು ಪ್ರತಿನಿತ್ಯವೂ ನಿಯಮಿತಕ್ರಮದಲ್ಲಿ ನಡೆಸಿಕೊಂಡು ಹೋಗಲೇಬೇಕು. ಇಲ್ಲವಾದರೆ ಅವನಿಗೆ ಆತ್ಮವಂಚನೆಯಿಂದ ಧರ್ಮ ಲೋಪವು ಸಂಭವಿಸೀತು. ಹೊಟ್ಟೆಯ ಹಸಿವನ್ನು ತುಂಬಿಸಲು ಮುಂಜಾನಿಂದ ಸಂಜೆಯವರೆಗೂ ಎಲ್ಲರೂ ಪರದಾಡುವಂತೆ ಆತ್ಮದ ಹಸಿವನ್ನು ತುಂಬಿಸಲು ಅವರು ಏಕೆ ಹಾತುವರೆಯಬಾರದು? ಹಸಿವಿದ್ದರೆ ಅದನ್ನು ಪರಿಹರಿಸಿಕೊಳ್ಳಲು ಅವರು ಪ್ರಯತ್ನಿಸಿಯಾರು? ಆದರೆ ಹಸಿವೇ ಇಲ್ಲದಂತೆ ಅವರಿಗೆ ಅನಾರೋಗ್ಯವೇ ತುಂಬಿ ಕೊಂಡಿದೆ. ಇದಾದರೋ ಭವರೋಗವೆನಿಸಿದೆ. ಇದು ಎಷ್ಟೋ ಜನ್ಮಗಳಿಂದ ಬೆಳೆದು ರಕ್ತಗತವಾಗಿ ದೇಹವನ್ನು ತುಂಬಿಕೊಂಡಿದೆ. ಆತ್ಮನು ಹೀಗೆ ಭವರೋಗಪೀಡಿತ ನಾಗಿರುವುದರಿಂದ ಅವನಿಗೆ ಅಗ್ನಿಮಾಂದ್ಯವುಂಟಾಗಿ ಹಸಿವೇ ತೋರುತ್ತಿಲ್ಲ. ಅವನು ಮನಸ್ಸಿನೊಡನೆ ಕೂಡಿ ಲೋಕದಲ್ಲಿ ವ್ಯವಹರಿಸುವಾಗ ಅನಾರೋಗ್ಯದಿಂದಲೇ ಐಹಿಕಭೋಗವನ್ನು ರೂಢಿಸುತ್ತಿರುವನು. ಆದರೆ ಆರೋಗ್ಯವಂತನೇ ನಿಸ್ವಾರ್ಥತೆ ಯಿಂದ ನ್ಯಾಯ ನೀತಿ ಧರ್ಮಗಳನ್ನು ಪಾಲಿಸುವ ದಕ್ಷತೆಯನ್ನು ಪಡೆಯಬಲ್ಲನು. ಅನಾರೋಗ್ಯದಿಂದ ನರಳುವವನೇ ಜೀವಶ್ರವದಂತೆ ವ್ಯವಹರಿಸುತ್ತ ಇಲ್ಲಿ ಬಾಹ್ಯವೇಷ ಭೂಷಣಗಳಿಂದ ತನ್ನನ್ನು ನಿತ್ಯವೂ ಅಲಂಕರಿಸುತ್ತಿರುವನು. ಆತ್ಮನು ಆರೋಗ್ಯವಾಗಿ ದ್ದಿದ್ದರೆ ಪರಮಾತ್ಮನ ಪರಿಚಯಮಾಡಿಕೊಳುತ್ತ ತಾನೂ ಪರಮಾತ್ಮನಾಗಬೇಕೆಂಬ ಹಸಿವು ಅವನಿಗೆ ಹೆಚ್ಚಾಗಿರುತ್ತಿತ್ತು. ಈಗಿನ ಜನರಿಗೆ ಈ ಬಗೆಯ ಹಸಿವೇಇಲ್ಲದ್ದರಿಂದ ಅವರಿಗೆ ಆರೋಗ್ಯವಿಲ್ಲವೆಂಬುದು ತಾನಾಗಿಯೇ ವ್ಯಕ್ತವಾಗುತ್ತದೆ. ಈ ಅನಾ ರೋಗ್ಯದ ಪರಿಹಾರಕ್ಕಾಗಿಯೇ ಶ್ರವಣ, ಮನನ, ಧ್ಯಾನ, ಧಾರಣ, ಅರ್ಚನ, ಅರ್ಪಣವೆಂಬ ಆರು ಬಗೆಯ ಆಧ್ಯಾತ್ಮವ್ಯವಸಾಯವನ್ನು ಮಾನವನು ಶ್ರದ್ಧೆ ಯಿಂದ ಆಚರಿಸಬೇಕೆಂದು ಶ್ರೀಕರಭಾಷ್ಯವು ಪ್ರತಿಯೊಂದು ಅಧಿಕರಣದಲ್ಲೂ ಸ್ಪಷ್ಟ ವಾಗಿ ತಿಳಿಸಿದೆ. ಶ್ರದ್ಧಾಭಕ್ತಿಯಿಂದ ಯಾವನು ಪರಮಾತ್ಮನ ಗುಣಗಳನ್ನು ಕೇಳು ವನೋ ಅವನ ಭಕ್ತಿ ನಿಶ್ಚಲವಾಗಿ ನಿಂತು ನಿಷ್ಠಾಭಕ್ತಿ ಎನಿಸುವುದು. ಆಗ ಅವನು ಪರಮಾತ್ಮನನ್ನು ತನ್ನಲ್ಲಿಯೇ ಮನನಮಾಡಲಾರಂಭಿಸುವನು. ಅಂತವನ ಭಕ್ತಿ ಮತ್ತಷ್ಟು ವಿಕಾಸಗೊಂಡು ನಿತ್ಯವೂ ಅವನನ್ನು ಎಚ್ಚರಿಕೆಯಿಂದ ಪರಮಾತ್ಮನ ಕಡೆಗೆ ತಿರುಗಿಸುತ್ತ ಅವಧಾನಭಕ್ತಿ ಎನಿಸುವುದು. ಹೀಗೆ ಧ್ಯಾನಿಸುತ್ತಲೇ ಸಾಧಕನು ಹೃದಯದಲ್ಲಿ ಪರಮಾತ್ಮನನ್ನು ನಿತ್ಯವೂ ಧರಿಸಿ ಅನುಭವಿಸುವನು. ಆಗ ಅವನ ಭಕ್ತಿ ಅನುಭವಭಕ್ತಿಯಾಗಿ ಪರಿಣಮಿಸುವುದು. ಹೀಗೆ ಪರಮಾತ್ಮನನ್ನು ಧಾರಣ ಮಾಡಿದವನು ಅಲ್ಲಿಂದಮುಂದೆ ಅವನ ಅರ್ಚನೆಯಲ್ಲಿ ತೊಡಗಿ ಶರಣನೆನಿಸುವನು. ಇಂತಹ ಶರಣನು ಯಾವಾಗಲೂ ಅಂತರಂಗದಲ್ಲಿ ಶಿವನನ್ನು ಅರ್ಚಿಸುತ್ತಲೇ ಆನಂದ ಪಡುತ್ತಿರುವುದರಿಂದ ಅವನ ಭಕ್ತಿ ಆನಂದಭಕ್ತಿಯಾಗಿ ಪರಿಣಮಿಸುವುದು. ಈ ಶರ ಣನು ಪ್ರಾಣಲಿಂಗಕ್ಕೆ ತನ್ನನ್ನೇ ಅರ್ಪಿಸಿ ಆ ಲಿಂಗದೇವನಲ್ಲಿ ಸಮರಸವಾಗಿ ಬೆರೆಯು

ವುದರಿಂದ ಐಕ್ಯನೆನಿಸಿ ಲೋಕಕಲ್ಯಾಣವನ್ನು ಸಾಧಿಸತೊಡಗುವನು. ಹೀಗೆ ಸಾಧಕನ ಭಕ್ತಿ ಶ್ರದ್ಧೆಯಿಂದ ಆರಂಭಿಸಿ ಸಾಮರಸ್ಯದಲ್ಲಿ ಕೊನೆಗಾಣುವುದು. ಈ ಬಗೆಯು ಅರ್ಚನೆಯಿಂದ ಆತ್ಮನ ಅನಾರೋಗ್ಯವು ಕೊನೆಗೊಂಡು ಹಸಿವು ಹೆಚ್ಚುವುದು. ಇಂತಹ ಹಸಿವನ್ನು ಮಾನವನಿಗೆ ಹುಟ್ಟಿಸಿ ಭವರೋಗವನ್ನು ಪರಿಹರಿಸಲಿಕ್ಕಾಗಿಯೇ ಶ್ರೀಕರಭಾಷ್ಯವು ಸಿದ್ಧವಾಗಿ ನಿಂತಿದೆ. ಇಂತಹ ಸಂಜೀವಿನಿ ಶಿವಾನುಗ್ರಹದಿಂದ ಇಂದು ಅನಾಯಸವಾಗಿ ದೊರೆಯಲಿದೆ. ಇದನ್ನು ಮಾನವರೆಲ್ಲರೂ ಉಪಯೋಗಿಸಿ ತಮ್ಮ ರೋಗವನ್ನು ಕಳೆದುಕೊಂಡು ಆರೋಗ್ಯದೃಢಕಾಯರಾಗಿದ್ದು ನಾಡಿನ ಮತ್ತು ಸಮಾಜದ ಸಾರ್ವಜನಿಕಹಿತವನ್ನು ಎಲ್ಲಾ ವಿಧದಲ್ಲೂ ಸಾಧಿಸಲೆಂದು ತ್ರಿಕರಣ ಪೂರ್ವಕವಾಗಿ ಬಯಸುತ್ತೇನೆ. ತಮ್ಮ ರೋಗವನ್ನು ಪರಿಹರಿಸಿಕೊಳ್ಳಲು ಇಚ್ಛಿಸುವವರು ಭಾಷ್ಯವನ್ನು ಶ್ರದ್ಧೆಯಿಂದ ಓದಿದರೆ ಆಶಿಷ್ಠರೂ ದ್ರಢಿಷ್ಠರೂ ಬಲಿಷ್ಠರೂ ಆಗುವರೆಂದು ಸ್ವದೃಷ್ಟಾಂತದಿಂದ ಈ ಸೇವಕನು ತಿಳಿಸಿದ್ದಾನೆ. ತನ್ನ ಹಿಂದಿನ ಚಾಪಲ್ಯ-ಅಭಿಮಾನ-ವ್ಯಾಮೋಹ-ಸ್ವಾರ್ಥತೆ ಮೊದಲಾದ ಅನೇಕ ಬಗೆಯ ಲೋಪದೋಷಗಳ ಪರಿಹಾರಕ್ಕಾಗಿಯೇ ಪಿತ್ರಾಜ್ಞೆಯಂತೆ ಶ್ರೀಕರಭಾಷ್ಯವನ್ನು ಓದಿ ನಿರ್ಲಿಪ್ತತೆಯ ಪರಮಪ್ರಸಾದವನ್ನು ಪಡೆದು ಅನುಭವಿಸುತ್ತ ಸೊದರಸೋದರಿಯರೆಲ್ಲರ ಹಿತದೃಷ್ಟಿಯಿಂದ ಇಂದು ಶ್ರೀಕರಭಾಷ್ಯವನ್ನು ಅನುವಾದಮಾಡಿರುವನೆಂಬ ಅಂಶವು ಸಹೃದಯರೆಲ್ಲರಿಗೂ ಭೂಮಿಕೆಯಿಂದ ಮನವರಿಕೆಯಾಗಿದೆ. ಇದನ್ನು ಓದಿದವರು ತಮ್ಮಲ್ಲಿಯೇ ಈ ಸಂಜೀವಿನಿಯನ್ನು ಬಚ್ಚಿಡದೆ ತಮ್ಮಂತೆಯೇ ರೋಗಗ್ರಸ್ತರಾದ ಇತರರಿಗೂ ತಿಳಿಯಪಡಿಸಿ ಅವರನ್ನೂ ಆರೋಗ್ಯವಂತರನ್ನಾಗಿ ಮಾಡಿದರೆ ಸೇವಕನ ಶ್ರಮವು ಸಾರ್ಥಕವಾದೀತು. ಸಾಧಕರೆಲ್ಲರೂ ತಮ್ಮ ರೋಗದ ಸ್ವರೂಪವನ್ನು ಅರಿಯುವ ವೇಳೆಯಲ್ಲಿ ಈ ಸೇವಕನಿಂದ ಅಳಿಲುಸೇವೆಯನ್ನು ಯಾವಾಗಲಾದರೂ ಸ್ವತಂತ್ರವಾಗಿ ಧೈರ್ಯದಿಂದ ಪಡೆಯಬಹುದೆಂದು ವಿನಯದಿಂದ ಅರಿಕೆಮಾಡಿಕೊಳ್ಳಲಾಗಿದೆ. ಮಾನವರೆಲ್ಲರಿಗೂ ಕ್ರಮವಾಗಿ ಆತ್ಮದ ಅನಾರೋಗ್ಯವು ತೊಲಗಿ ಆರೋಗ್ಯ ಭಾಗ್ಯವು ಲಭಿಸಲೆಂದು ಸಂತೋಷದಿಂದ ಬಯಸಲಾಗಿದೆ.

ಶ್ರೀಶೈಲಕ್ಷೇತ್ರದಲ್ಲಿ ಜಗದ್ಗುರು ಪಂಡಿತಾರಾಧ್ಯಪರಂಪರೆಯೆಲ್ಲಿ ಹನ್ನೊಂದನೆಯ ಶತಮಾನದ ಕೊನೆಯ ಭಾಗದಲ್ಲಿ ಸೂರ್ಯಸಿಂಹಾಸನವನ್ನು ಅಲಂಕರಿಸಿದ ಶ್ರೀಪತಿ ಪಂಡಿತಾರಾಧ್ಯಮಹಾಸ್ವಾಮಿಗಳು ಲೋಕಕಾರುಣ್ಯದ ಲೀಲೆಯನ್ನು ಸರ್ವತೋಮುಖವಾಗಿ ನಡೆಸುತ್ತ ಜಗದ್ಗುರುವೆಂದು ಮಾನ್ಯವಾಗಿರುವುದು ಅಭಿನಂದನೀಯವಾಗಿದೆ. ಮಾನವನಿಗೆ ಸಾತ್ತ್ವಿಕ ರಾಜಸ ತಾಮಸ ಸ್ವಾರ್ಥತೆಗಳನ್ನು ನಿರ್ಮೂಲ ಮಾಡಿಸಿ ಆತ್ಮಸ್ವರೂಪದ ದರ್ಶನಮಾಡಿಸಿಕೊಟ್ಟ ಜಗದ್ಗುರು ಶ್ರೀಪತಿಪಂಡಿತಾರಾಧ್ಯ ಭಗವತ್ಪಾದರು ಜೀವನ ಸಹಜವಾದ ಗುಣಶಕ್ತಿಗಳನ್ನು ಲೋಕಹಿತಕ್ಕಾಗಿ ವಿನಿಯೋಗಿಸುವ ದಿವ್ಯ ಆದರ್ಶವನ್ನು ತೋರಿಸಿಕೊಟ್ಟು ಮಹೋಪಕಾರವನ್ನೆಸಗಿದ್ದಾರೆ. ಜೀವನ ಈ ಬಗೆಯು ವ್ಯಾಯಾಮವೇ ಅವನಲ್ಲಿ ಸತ್ತ್ವಗುಣದ ಉತ್ಕರ್ಷತೆಗೂ ಆ

ಮೂಲಕ ತನ್ನ ಜನ್ಮ ಸಾರ್ಥಕತೆಗೂ ದಿವ್ಯಮಾರ್ಗವೆಂಬುದನ್ನು ಪೂಜ್ಯಪಾದರು ತಮ್ಮ ಭಾಷ್ಯದಲ್ಲಿ ಹೃದಯಂಗಮವಾಗಿ ಪ್ರತಿಪಾದಿಸಿದ್ದಾರೆ. ಅನೇಕ ಜನ್ಮಗಳಿಂದಲೂ ವಿಷಯವಾಸನೆಗಳ ರೂಪದಲ್ಲಿ ಜೀವನಿಗಂಟಿಕೊಂಡುಬಂದಿರುವ ತ್ರಿಗುಣಮಲಗಳನ್ನು ಬಹುಕಾಲದ ದೃಢಪ್ರಯತ್ನದಿಂದ ತೊಳೆದು ನಿರ್ಮಲವಾಗುವಂತೆ ಅವನನ್ನು ಪ್ರೇರಿಸುವುದೇ ಭಾಷ್ಯದ ಪವಿತ್ರವಾದ ಕರ್ತವ್ಯ. ಮಲಗಳೆಂದರೆ ಹಿಂದಿನಿಂದ ಬಂದಿರುವ ವಾಸನೆಗಳು; ಬಗೆಬಗೆಯ ಅಭಿರುಚಿಗಳು, ಚಪಲಗಳು, ಮೋಹಗಳು ಇತ್ಯಾದಿ. ಅವುಗಳಲ್ಲಿ ಕೆಲವನ್ನು ನಿಗ್ರಹದಿಂದಲೂ ಕೆಲವನ್ನು ಭೋಗದಿಂದಲೂ ಕಳೆಯಬೇಕಾಗುತ್ತದೆ. ಇವನ್ನು ಲೋಕ ವ್ಯವಹಾರದಲ್ಲಿ ವಿನಿಯೋಗಿಸುವುದರಿಂದ ಇವುಗಳ ತೀಕ್ಷ್ಣತೆ ಕೊಂಚಕೊಂಚವಾಗಿ ಕಡಮೆಯಾಗತೊಡಗುವುದು. ರಜಸ್ತಮೋಗುಣಗಳನ್ನು ಸವೆಯಿಸುವುದಕ್ಕೂ ಸತ್ತ್ವವನ್ನು ಹೆಚ್ಚಿಸುವುದಕ್ಕೂ ಜೀವನಿಗೆ ಇರುವ ಸದವಕಾಶವೆಂದರೆ ಲೋಕಸಂಪರ್ಕ. ನಮ್ಮ ಪೂರ್ವಾರ್ಜಿತ ವಾಸನೆಗಳನ್ನು ಲೋಕದ ಬಂಡೆಗಳಮೇಲೆ ಎಷ್ಟು ತೇಯ್ದರೆ ಅಷ್ಟು ಸ್ವಚ್ಛವಾಗುತ್ತವೆ. ಸಾಣೆಯ ಕಲ್ಲಿನಮೇಲೆ ಶ್ರೀಗಂಧದ ಕೊರಡನ್ನು ತೆಯ್ದಂತೆ ನಮ್ಮ ಸ್ವಭಾವಗಳನ್ನು ಲೋಕಸೇವೆಯಲ್ಲಿ ತೆಯ್ದರೆ ಅವು ಸವೆದು ಹರಿತವಾಗುತ್ತವೆ. ಕತ್ತಿಯನ್ನು ಕಲ್ಲಿನಮೇಲೆ ತೇಯ್ದರೆ ಅದು ಚೂಪಾಗಿ ಅದರ ಕಾರ್ಯಯೋಗ್ಯತೆ ಹೆಚ್ಚುತ್ತದೆ. ಜೀವನೂ ಹಾಗೆಯೇ ಲೋಕಹಿತವನ್ನು ವಿಹಿತ ರೀತಿಯಲ್ಲಿ ನಡೆಸುವುದರಿಂದ ರಜಸ್ತಮೋಗುಣಗಳು ಸವೆಯುತ್ತವೆ; ಸತ್ತ್ವವು ವೃದ್ಧಿಯಾಗುತ್ತದೆ; ಸ್ವಶಕ್ತಿ ಅಭಿವೃದ್ಧಿಯಾಗುತ್ತದೆ; ಆತ್ಮಕ್ಕೆ ಸಂಸ್ಕಾರವಾಗುತ್ತದೆ. ಆತ್ಮಶಕ್ತಿಯ ಪ್ರಯೋಜಕತೆ ಹೆಚ್ಚುತ್ತದೆ. ಹೀಗೆ ಮಲಗಳ ತೊಲಗಲಿಕ್ಕೆ ಸಾರ್ವಜನಿಕಸೇವೆಯೇ ದಿವ್ಯ ಸಂಜೀವಿನಿ ಎಂಬ ಅಂಶವನ್ನು ಶ್ರೀಕರಭಾಷ್ಯವು ಪ್ರತಿಯೊಂದು ಪ್ರಕರಣದಲ್ಲಿಯೂ ಮನಮೆಚ್ಚುವಂತೆ ಚಿತ್ರಿಸಿದೆ.

ಈ ಬಗೆಯ ಲೋಕಹಿತೇಚ್ಛೆ ಮತ್ತು ಅದರ ಪರಿಶ್ರಮಗಳಿಂದಲೇ ಮಾನವನು ತನ್ನ ಸಣ್ಣತನವೆಂಬ ಸ್ವಾರ್ಥತೆಯ ಕಲ್ಮಷದಿಂದ ದೂರವಾಗಬಲ್ಲನೆಂಬುದೇ ಶ್ರೀಕರಭಾಷ್ಯದಲ್ಲಿ ಪ್ರಧಾನವಾದ ವಿಷಯ. ಈ ಸ್ವಾರ್ಥತೆ ಪಾರಿಭಾಷಿಕ ರೀತಿಯಲ್ಲಿ ಆಣವಮಲವೆನಿಸಿದೆ. ಇದು ಪರಮಾತ್ಮನ ಇಚ್ಛಾಶಕ್ತಿಯ ಸಂಕೋಚ. ಇಚ್ಛಾಶಕ್ತಿ ಎಷ್ಟು ವ್ಯಾಪಕವೋ ಆಣವಮಲ ಅಷ್ಟು ಸಂಕುಚಿತವಾಗಿರುವುದು. ಇದರಿಂದಲೇ ಮಾನವನು ಆತ್ಮಶಕ್ತಿಯ ತಿರೋಧಾನವನ್ನು ಹೊಂದಿದ್ದಾನೆ; ಅಂದರೆ ತನ್ನ ಜ್ಞಾನಕ್ರಿಯಾಶಕ್ತಿಗಳೆಂಬ ಗುಣಗಳ ವೈಶಾಲ್ಯವನ್ನು ಕಳೆದುಕೊಂಡಿದ್ದಾನೆ. ಈ ಶಕ್ತಿ ಸಂಕೋಚವೇ ಮಾನವನಲ್ಲಿ ಸ್ವಾರ್ಥತೆ ಎನಿಸಿ ಕಾಡಿಸುತ್ತಿದೆ. ತನ್ನ ಸುಖಕ್ಕಾಗಿಯೇ ವಿಶ್ವವೆಲ್ಲವೂ ದುಡಿಯುತ್ತಿದೆ ಎಂಬ ಭಾವನೆಯನ್ನು ಹುಟ್ಟಿಸಿರುವುದೇ ಈ ಸ್ವಾರ್ಥತೆ. ಇದು ಮಾನವನಿಗೆ ಬೇಕಾದ್ದೆಲ್ಲವನ್ನು ಲೋಕದಿಂದ ಕೊಡಿಸುತ್ತದೆ; ಆದರೆ ಅವನಿಂದ ಲೋಕಕ್ಕೆ ಏನನ್ನು ಕೊಡಿಸುವುದಿಲ್ಲ. ಇದು ಅವನಿಂದ ಲೋಕದ ಋಣವನ್ನು

ತೀರಿಸುವುದಿಲ್ಲ. ಲೋಕದಿಂದ ತನಗೆಷ್ಟು ಪ್ರಯೋಜನವಾಗಿದೆ ಎಂಬ ಋಣ ಬುದ್ಧಿಯೇ ಈ ಬಗೆಯ ಮಾನವನಿಗೆ ಇರುವುದಿಲ್ಲ. ಇಷ್ಟುಕೆಳಮಟ್ಟದ ಸ್ವಾರ್ಥತೆ ಇದು. ತನ್ನ ಮನೆ ತನ್ನ ಕುಲ, ತನ್ನ ಊರು, ತನ್ನ ದೇಶ ಎಂಬಿಷ್ಟುಮಟ್ಟಿಗೆ ತನ್ನ ತನವನ್ನು ವಿಶಾಲಗೊಳಿಸಿ ತನ್ನವರೆಂಬುವರ ಸುಖದುಃಖಗಳಲ್ಲಿ ಭಾಗಿಯಾಗಿ ತನ್ನ ಬಾಳನ್ನು ಲೋಕದ ಒಂದುಭಾಗದೊಡನೆ ಸೇರಿಸಿಕೊಳ್ಳುವುದು ರಾಜಸ ಸ್ವಾರ್ಥತೆ. "ಇವರು ನನಗೆ ಬೇಕಾದವರು" ಎಂದು ಕೆಲವರನ್ನು ತನ್ನೊಡನೆ ಸೇರಿಸಿಕೊಳ್ಳುವಷ್ಟರ ಮಟ್ಟಿಗೆ ವಿಸ್ತಾರವಾದುದು ಈ ಸ್ವಾರ್ಥತೆ. ಇದು ಮಾನವನಿಗೆ ಬೇಕಾದಷ್ಟನ್ನು ಲೋಕದಿಂದ ಕೊಡಿಸುತ್ತದೆ. ಹಾಗೆಯೇ ಅವನಿಂದ ಸಾಧ್ಯವಾದಷ್ಟನ್ನು ಲೋಕಕ್ಕೆ ಕೊಡಿಸುತ್ತದೆ. ತನ್ನೊಳಗಣ ಆತ್ಮವೇ ಜಗದಾತ್ಮ; ಜಗತ್ತು ಭಗವಂತನ ಲೀಲಾ ಶರೀರ. ಆ ಸರ್ವವ್ಯಾಪಕನಾದ ಭಗವಂತನೇ ತನ್ನಲ್ಲೂ ತುಂಬಿರುವನೆಂದು ತಿಳಿದು ಎಲ್ಲೆಲ್ಲೂ ತನ್ನನ್ನೇ ಅನುಭವಿಸುತ್ತ ಮನಸ್ಸನ್ನು ಸರ್ವಮಯವಾಗುವಂತೆ ಮಾಡು ವುದೇ ಸಾತ್ತ್ವಿಕಸ್ವಾರ್ಥತೆ. ಇದೇ ಶಿವಾನುಭವದ ಉಗಮಸ್ಥಾನ. ತನ್ನದು ಯಾವುದೂ ಇಲ್ಲವೆಂದು ಭಾವಿಸಿ ಎಲ್ಲವನ್ನೂ ಭಗವಂತನಿಗರ್ಪಿಸುವುದೇ ಈ ಬಗೆಯ ಸ್ವಾರ್ಥತೆ. ಭಗವಂತನು ಯಾವ ಕಾಲದಲ್ಲಿ ಯಾವ ರೂಪದಲ್ಲಿ ಬಂದರೂ ಅವನಿಗರ್ಪಿಸಲಿಕ್ಕಾಗಿ ಇದೆಲ್ಲವೂ ತನ್ನಲ್ಲಿ ಇದೆಯೆಂದು ಭಾವಿಸುತ್ತ ಅವನು ಬಂದಾಗ ಅವನ ಇಚ್ಛೆಯನ್ನು ಸಂತೋಷದಿಂದ ಪೂರೈಸುವುದೇ ಸಾತ್ತ್ವಿಕಸ್ವಾರ್ಥತೆ. ಸರ್ವ ಪ್ರಾಣಿಗಳನ್ನೂ ತನ್ನವರೆಂದು ಭಾವಿಸಿ ಅವರನ್ನು ಸಂತೋಷಪಡಿಸುವುದೇ ಈ ಬಗೆಯ ಸ್ವಾರ್ಥತೆ. ಇವನು ನನ್ನವನೋ ಪರಕೀಯನೋ ಎಂದು ವಿಚಾರಮಾಡದೆ ಎಲ್ಲರನ್ನು ತನ್ನವರೆಂದು ಭಾವಿಸುವ ಹೃದಯವೈಶಾಲ್ಯವೇ ಸಾತ್ತ್ವಿಕ ಸ್ವಾರ್ಥತೆ. ಹೀಗೆ ಎಲ್ಲಿ ಸತ್ತ್ವಗುಣವು ಲೋಕದ ಸ್ವಸ್ಥತೆಗೆ ಉಪಯುಕ್ತವಾಗಿ ಬೆಳೆಯುವುದೋ ಅವನಲ್ಲಿ ರಜಸ್ತಮೋಗುಣಗಳು ಇಳಿಮುಖವಾಗತೊಡಗುತ್ತವೆ. ಯಾವನಿಗೆ ರಜ ಸ್ತಮೋಗುಣಗಳು ಇಳಿದಿಳಿದು ಸತ್ತ್ವವು ಎರಡಕ್ಕಿಂತ ಮೇಲಿನಾದಾಗುವುದೋ ಅವನ ರುಚಿ ಪ್ರವೃತ್ತಿಗಳು ಉದಾತ್ತವೂ ಉನ್ನತವೂ ಆಗತೊಡಗುವುವು. ಮಾನವನ ವಿಕಾಸವಡಗಿರುವುದು ಈ ಬಗೆಯ ಸತ್ತ್ವೋತ್ಕರ್ಷದಲ್ಲಿಯೇ. ಇದನ್ನು ಬಹುಕಾಲದ ಅಭ್ಯಾಸದಿಂದ ಅವನು ಸಾಧಿಸಬೇಕು. ಮೋಸದಿಂದ ಅನ್ಯಾಯವಾಗಿ ಹಣವನ್ನು ಗಳಿಸುವ ಬಯಕೆ ತಾಮಸ ರಾಜಸ ಸ್ವಾರ್ಥಿಗಳಿಗೆ ಸ್ವಭಾವವಾಗಿರುತ್ತದೆ. ಧರ್ಮದ ಹೆಸರಿನಲ್ಲಿ ಎಷ್ಟೋ ಅಧರ್ಮವನ್ನು ಆಚರಿಸುತ್ತಿರುವವರಿಗಂತೂ ಸಾತ್ತ್ವಿಕ ಸ್ವಾರ್ಥತೆ ಬರುವುದು ಬಹಳ ದುಸ್ತರವಾಗುತ್ತದೆ. ಸಾವಿರಾರು ಪ್ರತಿಗಳನ್ನು ಒಮ್ಮೆಗೆ ಮುದ್ರಿಸಿ ಧನಸಂಗ್ರಹದ ದುರುದ್ದೇಶದಿಂದ ಕೆಲವೇ ಪ್ರತಿಗಳನ್ನು ಮುದ್ರಿಸಿದಂತೆ ಸುಳ್ಳಾಗಿ ಪ್ರಕಟಿಸುವ ವ್ಯಾಪಾರಿಗಳಿಗೆ ಸತ್ತ್ವೋತ್ಕರ್ಷವಾಗುವ ಸಂಭವವೇ ಇರುವುದಿಲ್ಲ. ಹೀಗೆ ಜೀವನದಲ್ಲಿ ಪ್ರಾಮಾಣಿಕತೆಯೇ ಇಲ್ಲದ್ದರಿಂದ ಅವರಿಗೆ ಅನಾಯಾಸದಿಂದ ಮರಣವೂ ಸಂಭವಿಸುವಂತಿಲ್ಲ. ಇಂತಹ ಸ್ವಾರ್ಥಿಗಳು ನ್ಯಾಯ ಧರ್ಮಗಳ ಹೆಸರಿ

ನಲ್ಲಿಯೇ ಅನ್ಯಾಯ ಅಧರ್ಮಗಳನ್ನು ರೂಢಿಸಿಕೊಳ್ಳುತ್ತ ಭೂಮಿಗೆ ಹೊರೆಯಾಗಿರುವುದು ತುಂಬ ಶೋಚನೀಯ. ಹೀಗೆ ಅನ್ಯಾಯವಾಗಿ ಸಂಪಾದಿಸಿದ ಹಣವೂ ಸಾಂಸಾರಿಕ ವ್ಯವಹಾಗಳಿಗಾಗಿ ಕೋರ್ಟು ಬಾಬುಗಳಿಗೆ ದುರುಪಯೋಗವಾಗುತ್ತ ವ್ಯರ್ಥವೇ ಆಗುವುದು.ಅಂತವರಿಗೆ ವೇದಾಂತದಿಂದ ಎಂದಿಗೂ ಸತ್ಪರಿಣಾಮವುಂಟಾಗಲಾರದು. ಅಂತಹ ಅಸಂಸ್ಕೃತಜನರು ಸರೋವರದ ದಡದಲ್ಲಿ ನೆಲಸಿ ನೀರನ್ನು ಕೆಸರುಮಾಡುವ ಎಮ್ಮೆಯಂತೆ ಜೀವನವನ್ನು ರಾಗದ್ವೇಷಗಳ ಕೆಸರಿನಲ್ಲಿ ಹದಗೆಡಿಸಿಕೊಳ್ಳುವರು. ಜೀವನದಲ್ಲಿ ಒಮ್ಮೆಯಾದರೂ ಮಾನವನು ಕಣ್ಣುಮುಚ್ಚಿಕೊಳ್ಳುವುದು ನಿಯತ. ಹಾಗೆ ಮುಚ್ಚುವಾಗ ಹಿಂದಿನ ಅನ್ಯಾಯದ ಸಂಪಾದನೆ ಅವನ ಮನಸ್ಸಿನಲ್ಲಿಯೇ ವಿಶೇಷವಾದ ದುಗುಡವನ್ನು ತಂಡುಕೊಡುತ್ತದೆ. ಇದನ್ನು ಪ್ರತಿದಿನವೂ ಮಾನವನು ಪರ್ಯಾಲೋಚಿಸುತ್ತ ಜೀವನವನ್ನು ನಿರ್ವಹಿಸುವಕಾಲದಲ್ಲಿಯೇ ಅನ್ಯಾಯಾಚರಣವನ್ನು ಕಡಮೆಮಾಡಿಕೊಳ್ಳುವುದು ಆವಶ್ಯಕ. ಇದಕ್ಕಾಗಿಯೇ ಅವನು ತನ್ನ ವರ್ತನೆ ಎಲ್ಲವನ್ನೂ ಪ್ರಾಣಲಿಂಗದೇವನು ಸದಾ ನಿರೀಕ್ಷಿಸುತ್ತಿರುವನೆಂದು ಹೆಜ್ಜೆಹೆಜ್ಜೆಗೂ ಭಾವಿಸುತ್ತಿರಬೇಕೆಂಬ ಅಂಶವನ್ನು ಶ್ರೀಕರಭಾಷ್ಯವು ಜೀವಮುಖ್ಯಪ್ರಾಣಲಿಂಗಾಂಧಿಕರಣದಲ್ಲಿ ಒತ್ತಿ ಹೇಳಿದೆ. ತನ್ನ ಅನ್ಯಾಯದ ಸಂಪಾದನೆಯಿಂದ ತಾನು ತನ್ನಲ್ಲಿಯೇ ನೆಲಸಿರುವ ಪ್ರಾಣಲಿಂಗಕ್ಕೆ ದ್ರೋಹಮಾಡುತ್ತಿರುವೆನೆಂಬ ಅರಿವು ತನಗೆ ಎಂದಿಗೆ ಆಗುವುದೋ ಆಗಲೇ ಮಾನವನು ಸರ್ವವ್ಯಾಪಕನಾದ ಭಗವಂತನ ಕೃಪೆಗೆ ಪಾತ್ರನಾಗಬಲ್ಲನು. ಈ ಬಗೆಯ ಅರಿವು ಇಲ್ಲದೆ ಲೋಕದ ಮೆಚ್ಚುಗೆಗಾಗಿ ಪ್ರಾರ್ಥನೆ ಪೂಜೆಗಳನ್ನು ನಡೆಸಿದಮಾತ್ರಕ್ಕೆ ಪ್ರಾಣದೇವನು ಮೆಚ್ಚಲಾರನು.

ಹೀಗೆ ಲೋಕದ ಜನರು ಮಮಕಾರರೂಪವಾದ ಸ್ವಾರ್ಥತೆಯನ್ನು ಬಿಡಲಿಕ್ಕಾಗದೆಹೋದರೂ ಎಲ್ಲರೊಳಗೂ ಸೂತ್ರದಂತೆ ನೆಲಸಿರುವ ಪರಶಿವನೇ ತನ್ನಲ್ಲೂ ಇರುವನೆಂದು ಭಾವಿಸುತ್ತಬಂದರೆ ಸರ್ವಾತ್ಮಭಾವದಿಂದ ಎಲ್ಲರನ್ನೂ ಪ್ರೀತಿಸುವ ಮನೋವೈಶಾಲ್ಯವನ್ನು ಪಡೆಯಬಲ್ಲರು. ಇದರಿಂದ ಅವರಿಗೂ ಲೋಕಕ್ಕೂ ಮಧುರವಾದ ಬಂಧವ್ಯವು ಬೆಳೆದು ಜನ್ಮ ಸಾರ್ಥಕತೆಗೆ ಅವಕಾಶವುಂಟಾಗುವುದು. ಮಾನವರೆಲ್ಲರೂ ತಮ್ಮ ಮಲದೋಷಗಳನ್ನು ಅರಿತು ಸತ್ಪ್ರೋತ್ಕರ್ಷದಿಂದ ಉತ್ತಮ ಸಾಧಕರಾಗಲೆಂಬುದೇ ಜಗದ್ಗುರು ಶ್ರೀಪತಿಪಂಡಿತಾರಾಧ್ಯಮಹಾಸ್ವಾಮಿಗಳ ದಿವ್ಯ ಸಂದೇಶವಾಗಿದೆ. ಹೀಗೆ ಲೋಕಕಲ್ಯಾಣದ ಬಯಕೆಯಿಂದ ಅದರ ಸಾಧನೆಗಾಗಿ ಅತ್ಯುಪಯುಕ್ತವಾದ ಸಲಹೆಗಳನ್ನು ಕೊಡುತ್ತಿರುವುದರಿಂದಲೇ ಶ್ರೀಕರಭಾಷ್ಯವು ಸಾಧಕರಿಗೆ ಪಾರಮೇಶ್ವರೀಶಕ್ತಿಯ ದಿವ್ಯ ವೈಭವವನ್ನು ದೊರಕಿಸುತ್ತಲೂ, ಅವರ ಭವರೋಗವನ್ನು ಪರಿಹರಿಸುತ್ತಲೂ "ಭವಹರ" ಎನಿಸಿದೆ ಎಂದು ಶ್ರೀಮಜ್ಜಗದ್ಗುರು ಶ್ರೀಪತಿಪಂಡಿತಭಗವತ್ಪಾದಾಚಾರ್ಯರು ಪ್ರಾರಂಭದಲ್ಲಿ ಪ್ರತಿಜ್ಞೆಮಾಡಿರುವುದು ಸರ್ವಮಾನ್ಯವಾಗಿದೆ. ಇದೂ ಅಲ್ಲದೆ, ಅನೇಕ ಸಂನ್ಯಾಸಿಗಳು ಇವರ ದಿವ್ಯ ಆದರ್ಶವನ್ನು ಅನುಸರಿಸುತಿದ್ದರೆಂಬುದೂ, ಇವರು ಪರಮೇಶ್ವರನ ಶಕ್ತಿವೈಭವ

ವನ್ನು ಲೋಕಾನುಗ್ರಹಕ್ಕಾಗಿ ವಿನಿಯೋಗಿಸುತ್ತಿದ್ದಂತೆಯೇ ಪರಮವೈರಾಗ್ಯಶೀಲರೂ ಆಗಿದ್ದರೆಂಬುದು "ಶ್ರೀಮದ್ಯತಿವ್ರಜಪರಿವೃಢ" ಎಂಬ ವಿಶೇಷಣದಿಂದ ತಿಳಿದುಬರುತ್ತದೆ. ಇವರಲ್ಲಿ ವೈಭವ ಮತ್ತು ವೈರಾಗ್ಯಗಳೆರಡೂ ನೆಲಸಿದ್ದವೆಂಬುದು ಇದರಿಂದ ವ್ಯಕ್ತವಾಗುತ್ತದೆ. ಪರಮೇಶ್ವರನೇ ಜೀವನದಲ್ಲಿ ಸಾರವಾದ ಭಾಗವೆಂದು ತಿಳಿದು ತಾವು ಪೂರ್ಣವಾಗಿ ಅವನಿಗೆ ದಾಸರಾಗಿ ಪ್ರಪಂಚದ ಎಲ್ಲಾ ಹೊರೆಯನ್ನೂ ಅವನಲ್ಲಿಯೇ ಅರ್ಪಿಸಿದ್ದುದರಿಂದ ಇವರು ನಿರಾಭಾರಿಜಂಗಮರೂ ಆಗಿದ್ದರೆಂಬ ಅಂಶ ನಿರ್ವಿವಾದವಾಗಿದೆ. ಗುರುವೆನಿಸಿ ವೈಭವದಿಂದ ಭಕ್ತಾನುಗ್ರಹಲೀಲೆಯನ್ನು ನಡೆಸುತ್ತಲೂ ಜಂಗಮರೆನಿಸಿ ಪರಮವೈರಾಗ್ಯವನ್ನು ದೃಢವಾಗಿ ತಾಳಿ ನಿರ್ಮಲವಾದ ಮನಸದಲ್ಲಿ ಶಿವಾನಂದವನ್ನು ಅನುಭವಿಸುತ್ತಲೂ ಇದ್ದರೆಂಬ ಅಂಶವನ್ನು ಶ್ರೀಕರಭಾಷ್ಯವು ಎಲ್ಲರಿಗೂ ಮನವರಿಕೆಮಾಡುತ್ತಲಿದೆ. ಆದ್ದರಿಂದಲೇ "ಲೋಕವತ್ತು ಲೀಲಾಕೈವಲ್ಯಂ" ಎಂಬ ಬಾದರಾಯಣಸೂತ್ರವು ಇವರಿಗೆ ಯಥಾರ್ಥವಾಗಿ ಅನ್ವಯಿಸುತ್ತದೆ. ಲೋಕಾನುಗ್ರಹಲೀಲೆಯ ದಿವ್ಯ ವೈಭವವೂ ಆತ್ಮಕಲ್ಯಾಣಾನಂದಾನುಭವವೆಂಬ ಕೈವಲ್ಯವೂ ಇವರಲ್ಲಿ ಏಕಕಾಲದಲ್ಲಿ ಸಹಜಸಿದ್ಧವಾಗಿದ್ದುದರಿಂದ ಇವರು ಜಗದ್ಗುರುವೆನಿಸಿ ಭವಹರವಾದ ಶ್ರೀಕರಭಾಷ್ಯದಮೂಲಕ ಜಗತ್ತಿಗೆ ಬೆಳಕನ್ನು ತೋರಿಸಿರುವುದು ಅಭಿನಂದನೀಯವಾಗಿದೆ. ಇಂತಹ ಬೆಳಕನ್ನು ಎಲ್ಲರೂ ಪಡೆಯಲೆಂದು ಆಶಿಸಲಾಗಿದೆ.

ಈ ಪವಿತ್ರಗ್ರಂಥವನ್ನು ಕನ್ನಡಿಸಲು ಪ್ರೋತ್ಸಾಹಿಸಿದ ಮೈಸೂರು ವಿಶ್ವವಿದ್ಯಾನಿಲಯದ ಸಂಸ್ಕೃತ ಪ್ರಾಧ್ಯಾಪಕರಾದ ಶ್ರೀ ಎಸ್. ರಾಮಚಂದ್ರರಾವ್ ಎಂ.ಎ., ಅವರಿಗೂ, ಗ್ರಂಥಮುದ್ರಣಕ್ಕಾಗಿ ಧನಸಹಾಯಮಾಡಿದ ಕೋಲಾರದ ಸಾಹುಕಾರ್ ಶ್ರೀ ಚನ್ನಬಸವಯ್ಯನವರಿಗೂ, ನಾಗಲಾಪುರಮಠದ ಏಜೆಂಟರಾದ ಶ್ರೀ ಗುರುಲಿಂಗದೇವರಿಗೂ, ಧರ್ಮರತ್ನಾಕರ ನಂದೀಬಸಪ್ಪನವರ ಪುತ್ರರಾದ ಶ್ರೀನಾಗಪ್ಪನವರಿಗೂ, ತುಂಕೂರಿನ ಧರ್ಮಾಭಿಮಾನಿ ಶ್ರೀ ಜಿ. ಎಂ. ಬಸಪ್ಪನವರಿಗೂ ಕೃತಜ್ಞತೆಯನ್ನು ಸಮರ್ಪಿಸಿ ಇವರೆಲ್ಲರನ್ನು ಪರಮಾತ್ಮನು ಸುಖವಾಗಿರಿಸಲೆಂದು ಪ್ರಾರ್ಥಿಸುತ್ತೇನೆ.

ಮಾನಸಗಂಗೋತ್ರಿ,
ಮೈಸೂರು ವಿಶ್ವವಿದ್ಯಾನಿಲಯ.

ಸಹೃದಯಬಂಧು,
ಟಿ. ಜಿ. ಸಿದ್ಧಪ್ಪಾರಾಧ್ಯ.

## ಅಧಿಕರಣಗಳ ಸಾರಾಂಶ

### ದ್ವಿತೀಯಾಧ್ಯಾಯ ತೃತೀಯಪಾದ

ಪರಮೇಶ್ವರನೇ ಜಗತ್ಕಾರಣನೆಂಬುದಕ್ಕೆ ಸಾಂಖ್ಯಾದಿಮತಗಳ ವಿರೋಧವನ್ನು ದ್ವಿತೀಯಾಧ್ಯಾಯದ ದ್ವಿತೀಯಪಾದದಲ್ಲಿ ಪರಿಹರಿಸಿ ಭೂತಸೃಷ್ಟಿಯ ಬಗ್ಗೆ ಶ್ರುತಿಗಳಲ್ಲಿ ಪರಸ್ಪರವಿರೋಧವಿರುವುದರಿಂದ ಬ್ರಹ್ಮವೇ ಜಗತ್ಕಾರಣವೆಂಬುದು ಅಸಂಗತವೆಂದು ತೃತೀಯಪಾದದಲ್ಲಿ ಆಕ್ಷೇಪಿಸಿ ನಿರಾಕರಿಸಲಾಗಿದೆ.

**ವಿಯದಧಿಕರಣ**—(೧) ಆಕಾಶದ ಉತ್ಪತ್ತಿಯ ಬಗ್ಗೆ ಶ್ರುತಿಯ ಹೇಳಿಕೆಗಳಲ್ಲಿ ಪರಸ್ಪರ ವಿರೋಧವಿದ್ದರೂ "ಒಂದನ್ನು ತಿಳಿದರೆ ಎಲ್ಲವೂ ತಿಳಿಯುವುದು" ಎಂಬ ಪ್ರತಿಜ್ಞೆಯ ನಿರ್ವಾಹಕ್ಕಾಗಿ ಬ್ರಹ್ಮಜ್ಞಾನದಿಂದ ಆಕಾಶಾದಿಗಳ ಜ್ಞಾನವೂ ಆಗುವುದರಿಂದ ಆಕಾಶವನ್ನೂ ಬ್ರಹ್ಮಜನ್ಯವೆಂದೇ ಅಂಗೀಕರಿಸಬೇಕೆಂದು ತಿಳಿಸಲಾಗಿದೆ.

**ಮಾತರಿಶ್ವಾಧಿಕರಣ**—(೨) ವಾಯುವನ್ನು ಅಮೃತವೆಂದು ಶ್ರುತಿಯಲ್ಲಿ ಹೇಳಿದ್ದರೂ "ಎಲ್ಲಾ ಇಂದ್ರಿಯಗಳೂ ಭೂತಗಳೊಡನೆ ಪರಮಾತ್ಮನಿಂದಲೇ ಹುಟ್ಟಿದವು" ಎಂಬ ಶ್ರುತಿಯ ಪ್ರಕಾರ ಆಕಾಶದಂತೆ ವಾಯುವೂ ಬ್ರಹ್ಮದಿಂದಲೇ ಹುಟ್ಟಿತೆಂದು ನಿರ್ಣಯಿಸಲಾಗಿದೆ. ಆಕಾಶವಾಯುಗಳಂತೆ ಬ್ರಹ್ಮವೂ ಯಾವುದಾದರೊಂದು ಕಾರಣದಿಂದ ಹುಟ್ಟಲೆಂದು ಆಕ್ಷೇಪಿಸಿ ಯಾವಾಗಲೂ ಇರುವ ಸದ್ವಸ್ತುವಿಗೆ ಉತ್ಪತ್ತಿಯನ್ನು ಹೇಳುವುದು ಯುಕ್ತವಲ್ಲವೆಂದು ಅದನ್ನೂ ನಿರಾಕರಿಸಲಾಗಿದೆ.

**ತೇಜೋಽಧಿಕರಣ**-(೩) **ಅಬಧಿಕರಣ**-(೪) **ಪೃಥಿವ್ಯಾದ್ಯಧಿಕರಣ**-(೫) ಇಲ್ಲಿ ತೇಜಸ್ಸು ನೀರು ಪೃಥಿವಿಗಳು ಶಿವನಿಂದಲೇ ಹುಟ್ಟಿದವೆಂದು ನಿರೂಪಿಸಲಾಗಿದೆ.

**ತದಭಿಧ್ಯಾನಾಧಿಕರಣ**—(೬) ಪಂಚಭೂತಗಳ ಉತ್ಪತ್ತಿಗೆ ಅವುಗಳ ಅಭಿಮಾನಿದೇವತೆಗಳು ಸ್ವತಂತ್ರವಾಗಿ ಕಾರಣವೋ ಅಥವಾ ಈಶ್ವರನ ಮೂಲಕವಾಗಿ ಕಾರಣವೋ ಎಂದಾಶಂಕಿಸಿ ದೇವತೆಗಳಿಗೆ ಸ್ವತಂತ್ರಪ್ರವೃತ್ತಿಗೆ ಅವಕಾಶವಿಲ್ಲವೆಂದು ತಿಳಿಸಿ ಅವುಗಳಲ್ಲಿ ಅಂತರ್ಯಾಮಿಯಾಗಿರುವ ಈಶ್ವರನ ಮೂಲಕವೇ ಅವು ಪ್ರವರ್ತಿಸುತ್ತವೆ ಎಂದು ತಿಳಿಸಲಾಗಿದೆ.

**ವಿಪರ್ಯಯಾಧಿಕರಣ**—(೭) ಭೂತಗಳು ಯಾವ ಕ್ರಮದಲ್ಲಿ ಉತ್ಪತ್ತಿಯಾಗುತ್ತವೆಯೋ ಅದಕ್ಕೆ ವಿರುದ್ಧವಾದ ಕ್ರಮದಲ್ಲಿ ಅವು ಪ್ರಳಯಕಾಲದಲ್ಲಿ ಪರಮಾತ್ಮನಲ್ಲಿಯೇ ವಿಲೀನವಾಗುತ್ತವೆ ಎಂದು ತಿಳಿಸಲಾಗಿದೆ.

**ಅಂತರಾ ವಿಜ್ಞಾನಾಧಿಕರಣ**—(೮) "ಏತಸ್ಮಾಜ್ಜಾಯತೇ ಪ್ರಾಣಃ" ಎಂಬ ಶ್ರುತಿಯು "ಇಂದ್ರಿಯಾದಿಗಳು ಪರಮಾತ್ಮನಿಂದ ಹುಟ್ಟುತ್ತವೆ" ಎಂಬುದನ್ನು ಹೇಳುತ್ತದೆಯೇ ಹೊರತು ಇಂದ್ರಿಯ ಮನಸ್ಸು ಅವುಗಳ ಉತ್ಪತ್ತಿಕ್ರಮವನ್ನು ತಿಳಿಸುವುದಿಲ್ಲ.

**ಚರಾಚರವ್ಯಪಾಶ್ರಯಾಧಿಕರಣ**- (೯) ಚರಾಚರಪ್ರಪಂಚವನ್ನು ತಿಳಿಸುವ ಪದಗಳೆಲ್ಲವೂ ಅದಷ್ಟನ್ನೇ ಅಲ್ಲದೆ ಅವುಗಳಲ್ಲಿ ಅಂತರ್ಯಾಮಿಯಾಗಿರುವ ಪರಮಶಿವನನ್ನೂ ಸಹ ತಿಳಿಸುತ್ತವೆ ಎಂದು ನಿರೂಪಿಸಲಾಗಿದೆ.

ಆದರೊಂದಿಗೆ ಅವನು ಹೊರಡುವನೆಂದು ಸಿದ್ಧಾಂತಮಾಡಲಾಗಿದೆ.

ಕೃತಾತ್ಯಯಾಧಿಕರಣ—(೨) ಕರ್ಮಿಗಳು ಸ್ವರ್ಗದ ಭೋಗವನ್ನು ಅನುಭವಿಸಿದಮೇಲೆ ಮರ್ತ್ಯಲೋಕಕ್ಕೆ ಕರ್ಮಶೇಷದೊಡನೆ ಹಿಂತಿರುಗುವರೆಂಬುದನ್ನು ಇಲ್ಲಿ ತಿಳಿಸಲಾಗಿದೆ. ಆದರೆ ಸತ್ಕರ್ಮಗಳನ್ನು ಈಶ್ವರಪ್ರೀತ್ಯರ್ಥವಾಗಿ ಆಚರಿಸಿದವರು ಮತ್ತೆ ಹಿಂತಿರುಗದೆ ಮಹಾಕೈಲಾಸದಲ್ಲಿ ನಿತ್ಯಮಂಗಳವಿಗ್ರಹದಿಂದ ಕಲ್ಯಾಣವಿಭೂತಿಯನ್ನು ಅನುಭವಿಸುತ್ತಾರೆಂದು ತಿಳಿಸಲಾಗಿದೆ.

ಅನಿಷ್ಟಾದಿಕಾರ್ಯಧಿಕರಣ—(೩) ಸತ್ಕರ್ಮಿಗಳು ಸ್ವರ್ಗಕ್ಕೆ ಹೋಗುವಂತೆ ದುಷ್ಕರ್ಮಿಗಳು ಯಮಕಿಂಕರರೊಡನೆ ಚಂದ್ರಲೋಕದ ಮೂಲಕ ನರಕಕ್ಕೆ ಹೋಗುತ್ತಾರೆ. ಆದರೆ ದೇಹದ ಒಳಗೂ ಹೊರಗೂ ಲಿಂಗದ ಧ್ಯಾನ ಧಾರಣ ಪೂಜಾ ನಮಸ್ಕಾರ ಸ್ಮರಣಗಳಲ್ಲಿ ನಿರತರಾದ ಭಕ್ತರು ಜ್ಞಾನ ಕರ್ಮಗಳ ಸತ್ಪರಿಣಾಮದಿಂದ ಈಷಣತ್ರಯದಿಂದ ದೂರರಾಗಿ ಸುಷುಮ್ನಾನಾಡಿಯ ಮೂಲಕ ಹೊರಟು ಕೈವಲ್ಯವಿಭೂತಿ ಎಂಬ ಶಿವಸಾಯುಜ್ಯವನ್ನೂ, ಉಳಿದವರು ಸಾಲೋಕ್ಯ ಸಾಮಿಪ್ಯ ಸಾರೂಪ್ಯವೆಂಬ ಕಲ್ಯಾಣವಿಭೂತಿಯನ್ನೂ ಪಡೆಯುತ್ತಾರೆ. ಜ್ಯೋತಿಷ್ಟೋಮಾದಿ ಕರ್ಮಗಳನ್ನು ಶಿವನ ಆಜ್ಞೆಯೆಂದು ಆಚರಿಸಿದವರು ದೇವಯಾನಮಾರ್ಗದಿಂದ ಹೊರಟು ಸ್ವರ್ಗದ ಫಲವನ್ನು ಅನುಭವಿಸುವರು. ದುಷ್ಕರ್ಮಿಗಳು ಪಿತೃಯಾನ ಮಾರ್ಗದಿಂದ ಹೊರಟು ಯಮಲೋಕದಲ್ಲಿ ಯಾತನೆಯನ್ನು ಅನುಭವಿಸುವರು.

ತತ್ಸ್ವಾಭಾವ್ಯಾಪತ್ತ್ಯಧಿಕರಣ— (೪) ನಾತಿಚಿರಾಧಿಕರಣ— (೫) ಸತ್ಕರ್ಮಿಗಳು ಸ್ವರ್ಗದಿಂದ ಹಿಂತಿರುಗುವಾಗ ಹಿಂದೆ ಹೋದ ಮಾರ್ಗವನ್ನೇ ಅವಲಂಬಿಸಿ ಆಕಾಶ ವಾಯು ಧೂಮ ಅಭ್ರ ಮೇಘಗಳ ಅವಸ್ಥೆಯಲ್ಲಿ ಕೊಂಚಕೊಂಚ ಕಾಲ ಮಾತ್ರವೇ ಇದ್ದು ಭೂಮಿಯಲ್ಲಿ ಮಳೆಯಾಗಿ ಬಿದ್ದು ಆದರಿಂದ ಧಾನ್ಯದ ಅವಸ್ಥೆಯಲ್ಲಿ ಬಹಳಕಾಲವಿರುವರೆಂದು ತಿಳಿಸಲಾಗಿದೆ.

ಅನನ್ಯಾಧಿಷ್ಠಿತಾಧಿಕರಣಂ—(೬) ಸತ್ಕರ್ಮಿಗಳು ಅಕ್ಕಿ ಗೋಧಿ ಎಂಬ ಧಾನ್ಯಗಳ ಅಭಿಮಾನಿದೇವತೆಗಳೊಡನೆ ನೆಲಸಿದ್ದರೂ ಅವರಿಗೆ ಅಲ್ಲಿ ಯಾವಭೋಗವೂ ಇಲ್ಲದ ಕೇವಲ ಸಂಬಂಧವಷ್ಟೇ ಇರುವುದು. ಧಾನ್ಯರೂಪದಲ್ಲಿರುವ ಸತ್ಕರ್ಮಿಯು ಉತ್ತಮ ಪುರುಷನ ಶರೀರದಲ್ಲಿ ಪ್ರವೇಶಿಸಿ ರೇತಸ್ಸಾಗಿ ಪರಿಣಮಿಸುತ್ತಾನೆ. ಹೀಗೆ ಸ್ವರ್ಗದಲ್ಲಿ ದೇವಭಾವವನ್ನು ಹೊಂದಿದ್ದ ಸತ್ಕರ್ಮಿಗಳು ರೇತಸ್ಸಿನ ರೂಪದಿಂದ ಸ್ತ್ರೀಯೋನಿಯನ್ನು ಪ್ರವೇಶಿಸಿ ಮತ್ತೆ ಹುಟ್ಟುವಾಗ ಗರ್ಭಯಾತನೆಯನ್ನು ಅನುಭವಿಸಿ ಬಾಲ್ಯಾದ್ಯವಸ್ಥೆಗಳಲ್ಲಿ ಆಯಾಯ ಕ್ಲೇಶಗಳನ್ನು ಅನುಭವಿಸುವರು. ಆದರೆ ಈ ವ್ಯಥೆಗಳಿಗೆ ಸಿಲುಕದಂತಾಗಲು ಸದ್ಗುರುವಿನ ಕೃಪಾಕಟಾಕ್ಷದಿಂದ ಅನುಗ್ರಹವನ್ನು ಹೊಂದಿ ಪಾಶವನ್ನು ಕಳೆದುಕೊಂಡವನು ಭಕ್ತನೆನಿಸಿ ಶಿವನ ಧ್ಯಾನಧಾರಣಗಳಿಂದಲೂ, ವೈರಾಗ್ಯದಿಂದಲೂ, ಶಮ ದಮ ಜೀವಕರುಣೆ ಮತ್ತು ಭಕ್ತಿಗಳಿಂದಲೂ ಶಿವನ ಉಪಾಸನೆಯಲ್ಲಿ ತೊಡಗಿ ಸಾಯುಜ್ಯಮುಕ್ತಿಯನ್ನು ಪಡೆಯಬೇಕೆಂದು ನಿರ್ಣಯಿಸಲಾಗಿದೆ.

## ದ್ವಿತೀಯಪಾದ

**ಸಂಧ್ಯಾಧಿಕರಣ**—(೧) ಸ್ವಪ್ನಕಾಲಗಳಲ್ಲಿ ಜೀವನು ಅನುಭವಿಸುವ ಪದಾರ್ಥಗಳನ್ನು ಸುಳ್ಳೆಂದಾಶಂಕಿಸಿ ಅವೆಲ್ಲವೂ ಯಥಾರ್ಥವೆಂದೂ, ಪರಮಾತ್ಮನಿಂದಲೇ ಸೃಷ್ಟವಾಗುವುವೆಂದೂ ಸಿದ್ಧಾಂತಮಾಡಲಾಗಿದೆ.

**ತದಭಾವಾಧಿಕರಣ**—(೨) ಸುಷುಪ್ತಿಯಲ್ಲಿ ಜೀವನು ದೇಹೇಂದ್ರಿಯಾಭಿಮಾನಗಳಿಲ್ಲದವನಾಗಿ ಹೃದಯಕಮಲದಲ್ಲಿರುವ ಪ್ರಾಣಲಿಂಗದಲ್ಲಿ ತಮೋರೂಪವಾದ ಮಾಯಾಶಕ್ತಿಯೊಡನೆ ನೆಲಸುತ್ತಾನೆ. ಆದರೆ ಮತ್ತೆ ಮಾಯೆಯಿಂದ ಎಚ್ಚರಗೊಂಡು ಜಾಗ್ರದ್ವ್ಯವಹಾರಗಳಲ್ಲಿ ಪ್ರವರ್ತಿಸುತ್ತಾನೆ.

**ಕರ್ಮಾನುಸ್ಮೃತಿಶಬ್ದವಿಧ್ಯಧಿಕರಣ**—(೩) ಸುಷುಪ್ತಿಯಲ್ಲಿ ಜ್ಯೋತಿರ್ಲಿಂಗದಲ್ಲಿ ಬೆರೆತಿದ್ದ ಜೀವನೇ ಜಾಗ್ರತ್ಕಾಲದಲ್ಲಿ ಕರ್ಮಫಲದ ಭೋಗಕ್ಕಾಗಿ ಮತ್ತೆ ಹಿಂತಿರುಗುತ್ತಾನೆ ಎಂದು ತಿಳಿಸಲಾಗಿದೆ.

**ಮುಗ್ಧಾಧಿಕರಣ**—(೪) ಮೂರ್ಛಾವಸ್ಥೆಯಲ್ಲೂ ಜೀವನು ಹೃದಯಕಮಲದ ಜ್ಯೋತಿರ್ಲಿಂಗದಲ್ಲಿ ದೇಹಾದ್ಯಭಿಮಾನದೊಡನೆ ಸುಷುಪ್ತಿಯಂತೆ ಪೂರ್ತಿಯಾಗಿ ಬೆರೆಯದೆ ಅರ್ಧಭಾಗದಷ್ಟು ಮಾತ್ರವೇ ಬೆರೆಯುವನೆಂದು ತಿಳಿಸಲಾಗಿದೆ.

**ಉಭಯಲಿಂಗಾಧಿಕರಣ**—(೫) ಪರಮೇಶ್ವರನು ಭಕ್ತಾನುಗ್ರಹಕ್ಕಾಗಿ ಶಿವಭಕ್ತರ ಹೃದಯದಲ್ಲೂ ಕಾಶೀ ಶ್ರೀಶೈಲಾದಿದಿವ್ಯಸ್ಥಳಗಳಲ್ಲೂ ಲಿಂಗರೂಪದಿಂದ ನೆಲಸಿರುವನು. ಮಹಾಕೈಲಾಸ ಮೇರು ಮಂದರಪರ್ವತಗಳಲ್ಲಿ ಪರಾಂಬಿಕೆಯೊಡನೆ ವಿಹರಿಸುತ್ತ ಭಕ್ತರಿಗೆ ಸಾಲೋಕ್ಯ ಸಾಮೀಪ್ಯ ಸಾರೂಪ್ಯವೆಂಬ ಕಲ್ಯಾಣವಿಭೂತಿಯನ್ನು ಅನುಗ್ರಹಿಸುತ್ತಿರುವನು. ಹೀಗೆ ಪರಮೇಶ್ವರನು ಮೂರ್ತನೆನಿಸಿ ಭಕ್ತಾನುಗ್ರಹಲೀಲೆಗಾಗಿ ದಿವ್ಯಮಂಗಳವಿಗ್ರಹವನ್ನು ಧರಿಸುವನೆಂದೂ, ಅಮೂರ್ತನೆನಿಸಿ ಸಮಸ್ತಜಗತ್ತಿನ ವ್ಯಾಪಾರಗಳನ್ನು ನಿರ್ವಹಿಸುವನೆಂದೂ ಸಿದ್ಧವಾಯಿತು.

**ಪ್ರಕೃತೈತಾವತ್ತ್ವಾಧಿಕರಣ**—(೬) ಪರಮಾತ್ಮನಲ್ಲಿ ಎಲ್ಲಾ ವಿಶೇಷಗಳನ್ನೂ ನೇತಿ ನೇತಿ ಎಂಬಲ್ಲಿ ನಿಷೇಧಿಸಿರುವುದರಿಂದ ಅವನನ್ನು ನಿರ್ವಿಶೇಷನೆಂದಾಶಂಕಿಸಿ ಆ ಶ್ರುತಿಯು ಪ್ರಸಕ್ತವಾದ ಪರಿಮಿತಿಯನ್ನು ಬ್ರಹ್ಮದಲ್ಲಿ ನಿಷೇಧಿಸಿದೆಯೇ ಹೊರತು ವಿಶೇಷವನ್ನು ನಿಷೇಧಿಸಿಲ್ಲ. ಆದ್ದರಿಂದ ಬ್ರಹ್ಮ ಸವಿಶೇಷವೇ ಇರುತ್ತದೆ.

**ಅಹಿಕುಂಡಲಾಧಿಕರಣ**—(೭) ಹಿಂದಿನ ಅಧಿಕರಣದಲ್ಲಿ ಉಪಾಸ್ಯೋಪಾಸಕರೆಂದು ನಿರೂಪಿತವಾಗಿರುವ ಬ್ರಹ್ಮಜೀವರಿಗೆ ಪರಸ್ಪರ ಭೇದವಿರುವುದೆ? ಅಥವಾ ಅಭೇದವಿರುವುದೆ? ಎಂದು ಇಲ್ಲಿ ಆಶಂಕಿಸಿ ಅವರಿಬ್ಬರಿಗೂ ಭೇದಾಭೇದವೇ ಸಮರಸವಾಗಿ ಹೊಂದುವುದೆಂದೂ, ಅದೇ ಮುಖ್ಯಸಿದ್ಧಾಂತವೆಂದೂ ನಿರೂಪಿಸಲಾಗಿದೆ.

**ಪರಾಧಿಕರಣ**—(೮) ಜಗತ್ಕಾರಣನೆಂದು ನಿರೂಪಿತವಾದ ಬ್ರಹ್ಮಕ್ಕಿಂತಲೂ ಉತ್ಕೃಷ್ಟವಾದ ವಸ್ತು ಒಂದಿರಬೇಕೆಂದು ಆಶಂಕಿಸಿ ಅವನಿಗಿಂತಲೂ ಉತ್ಕೃಷ್ಟವಾದ ವಸ್ತು ಬೇರೆ ಯಾವುದೂ ಇಲ್ಲವೆಂದು ಸಿದ್ಧಾಂತಮಾಡಲಾಗಿದೆ.

**ತಥಾನ್ಯಪ್ರತಿಷೇಧಾಧಿಕರಣ**—(೯) ಶಿವನಿಗೆ ಸಮಮಾನರಾಗಲಿ ಅಧಿಕರಾಗಲೀ ಬೇರೆ ಯಾರೂ ಇಲ್ಲವೆಂದು ಶ್ರುತಿಯಲ್ಲಿ ತಿಳಿಸಿರುವುದರಿಂದ ಜೀವರೆನಿಸಿದ ನಾರಾಯಣಾದಿಗಳು ಯಾರೂ ಅವನಿಗೆ ಸಮಾನರೆನಿಸಲಾರರೆಂದು ತಿಳಿಸಲಾಗಿದೆ. ಆಕಾಶವು ಸರ್ವವ್ಯಾಪಕವೂ ಸರ್ವವಿಲಕ್ಷಣವೂ ಸರ್ವಾಶ್ರಯವೂ ಆಗಿದ್ದರೂ ಗಾಳಿ ಮೊದಲಾದವುಗಳಿಗೆ ಕಾರಣವೂ ಆಗಿರುವಂತೆ ಒಬ್ಬ ಪರಮಾತ್ಮನೇ ಸರ್ವಗತನೂ ಸರ್ವಮಯನೂ ಸರ್ವವಿಲಕ್ಷಣನೂ ಆಗಿರುವುದು ಅಸಂಭವವಲ್ಲ.

**ಫಲಾಧಿಕರಣ**—(೧೦) ಜೀವನ ಕರ್ಮಗಳಿಗೆ ಮೆಚ್ಚಿ ಈಶ್ವರನೇ ಅವನಿಗೆ ಫಲಗಳನ್ನು ಕೊಡುತ್ತಿರುವನು. ಆದರೆ ಕೇವಲ ಕರ್ಮವೇ ಅವನಿಗೆ ಫಲವನ್ನು ಕೊಡಲಾರದೆಂದು ಭಾವಿಸಿ ಬಾದರಾಯಣರು ಅವನಿಗೆ ಯಜ್ಞದ ಆವಶ್ಯಕತೆಯನ್ನು ತಿಳಿಸಿರುವರು. ಯಜ್ಞವೆಂದರೆ "ಯಜ್ ದೇವಪೂಜಾಯಾಂ" ಎಂಬ ಧಾತ್ವರ್ಥಕ್ಕೆ ಅನುಗುಣವಾಗಿ ಈಶ್ವರನ ಆರಾಧನವೆಂದೂ, ಆ ಆರಾಧನವು ಕಾಯಕ ವಾಚಕ ಮಾನಸಿಕವೆಂದು ಮೂರುಬಗೆಯಾಗಿರುವುದೆಂದೂ ಅವರು ಇಲ್ಲಿ ತಿಳಿಸಿದ್ದಾರೆ.

## ತೃತೀಯಪಾದ

ಮೂರ್ತಾಮೂರ್ತಪರಮಾತ್ಮನ ಅರ್ಚನೆಗೆ ವಿಹಿತವಾದ ಮಾರ್ಗಗಳನ್ನು ತಿಳಿಸುತ್ತ ಸಗುಣಮೂರ್ತಿಯ ಉಪಾಸನದಿಂದಲೇ ನಿರವಯವವೂ ಸಗುಣವೂ ಆದ ಷಟ್ಸ್ಥಲಬ್ರಹ್ಮದ ಸಾಕ್ಷಾತ್ಕಾರವಾಗುವುದೆಂದು ತಿಳಿಸಲಾಗಿದೆ.

**ಸರ್ವವೇದಾಂತಪ್ರತ್ಯಯಾಧಿಕರಣಂ**—(೧) ಮೂರ್ತೋಪಾಸನೆಯಿಂದಲೇ ಅಮೂರ್ತತತ್ತ್ವವನ್ನು ಹೊಂದಬೇಕಾಗಿರುವುದರಿಂದ ಒಂದು ವಿದ್ಯೆಯಲ್ಲಿ ಹೇಳಿದ ಸತ್ಯಸಂಕಲ್ಪತ್ವ ಸರ್ವಜ್ಞತ್ವ ಸರ್ವೇಶ್ವರತ್ವ ಮೊದಲಾದ ಗುಣಗಳನ್ನು ಮತ್ತೊಂದು ವಿದ್ಯೆಯಲ್ಲೂ ಉಪಾಸಕನ ಉಪಾಸನೆಗಾಗಿ ಸೇರಿಸಿಕೊಳ್ಳಬೇಕೆಂದು ಸಕಲಶಾಖಾಧ್ಯೇತೃಗಳಾದ ರೇವಣಸಿದ್ಧ ಮರುಳಸಿದ್ಧ ಮೊದಲಾದ ಶಿವಾಚಾರ್ಯರು ತಮ್ಮ ವೇದಾಂತಭಾಷ್ಯಗ್ರಂಥಗಳಲ್ಲಿ ಅಪ್ಪಣೆಮಾಡಿರುವುದರಿಂದ ಮೂರ್ತೋಪಾಸನಗಳೆಲ್ಲವೂ ಅಮೂರ್ತ ಶಿವಸಾಯುಜ್ಯವನ್ನು ದೊರಕಿಸುತ್ತ ಸಫಲವೆನಿಸುತ್ತವೆ ಎಂದು ತಿಳಿಸಲಾಗಿದೆ.

**ಅನ್ಯಥಾತ್ವಾಧಿಕರಣ**—(೨) ಒಂದೊಂದು ಶಾಖೆಯಲ್ಲೂ "ಉಪಾಸೀತ" "ಧ್ಯಾಯೀತ" ಹೀಗೆ ಶಬ್ದಗಳು ಬೇರೆಬೇರೆಯಾಗಿ ಬಂದಿರುವುದರಿಂದ ಬ್ರಹ್ಮವಿದ್ಯೆಗಳನ್ನು ಪರಸ್ಪರ ಭಿನ್ನವೆಂದಾಶಂಕಿಸಿ ಹೀಗೆ ಶಬ್ದಭೇದವಿದ್ದರೂ ವಿಷಯಭೇದವಿಲ್ಲದಿದ್ದರೆ ಅವುಗಳಿಗೆ ಅಭೇದವುಂಟೆಂದು ಇಲ್ಲಿ ತಿಳಿಸಲಾಗಿದೆ.

**ಸರ್ವಾಭೇದಾಧಿಕರಣ**—(೩) ಪ್ರಾಣೋಪಾಸನವು ಎಲ್ಲಕ್ಕೂ ಶ್ರೇಷ್ಠವೆನಿಸಿದ್ದರೂ ಅನೇಕ ಶಾಖೆಗಳಲ್ಲಿ ಬೇರೆಬೇರೆಯಾಗಿರುವುದರಿಂದ ಅದು ಹೇಗೆ ಪ್ರಾಣಲಿಂಗದ ಉಪಾಸನವೆನಿಸುತ್ತದೆ ಎಂದಾಶಂಕಿಸಿ "ಪ್ರಾಣವೇ ಬ್ರಹ್ಮ" "ಮನಸ್ಸಿನೊಳಗಿನ ಪ್ರಾಣವೇ ಲಿಂಗವೆನಿಸಿದೆ." "ಅವನೇ ವಿಷ್ಣು, ಅವನೇ ಪ್ರಾಣ, ಅವನೇ

ಕಾಲ, ಅವನೇ ಅಗ್ನಿ, ಅವನೇ ಚಂದ್ರ" ಹೀಗೆಲ್ಲಾ ತಿಳಿಸಿ ಕೊನೆಗೆ ಪ್ರಾಣವನ್ನೇ ಸರ್ವಾತ್ಮಕವೆಂದು ಹೇಳಿರುವುದರಿಂದ ಅದರ ಅನುಸಂಧಾನದಿಂದ ಜೀವನು ಶಿವನಾಗಲಿಕ್ಕೆ ಯಾವ ವಿರೋಧವೂ ಇಲ್ಲವೆಂದು ತಿಳಿಸಲಾಗಿದೆ.

**ಆನಂದಾಧಿಕರಣ**—(೪) ಯಾವ ಗುಣಗಳಿಲ್ಲದಿದ್ದರೆ ಪರಶಿವನ ಸ್ವರೂಪವನ್ನು ಧ್ಯಾನಿಸಲಿಕ್ಕಾಗುವುದಿಲ್ಲವೋ ಅವೆಲ್ಲವನ್ನೂ ಎಲ್ಲಾ ವಿದ್ಯೆಗಳಲ್ಲೂ ಸೇರಿಸಿಕೊಳ್ಳಬೇಕು. ಧ್ಯಾನರೂಪವಾದ ಉಪಾಸನೆಗೆ ಗುಣಗಳು ಅನಿವಾರ್ಯವೆನಿಸಿರುವುದರಿಂದ ಆನಂದ ಸತ್ಯ ಕೃಷ್ಣಪಿಂಗಳ ನಿತ್ಯಮುಕ್ತ ಶುದ್ಧ ಬುದ್ಧ ಮೊದಲಾದ ಗುಣಗಳನ್ನು ಮೂರ್ತಾಮೂರ್ತರೂಪನಾದ ಪರಶಿವನ ಉಪಾಸನೆಯಲ್ಲಿ ಅವಶ್ಯವಾಗಿ ಹೊಂದಿಸಿಕೊಳ್ಳಬೇಕೆಂದು ಸಿದ್ಧಾಂತಮಾಡಲಾಗಿದೆ.

**ಕಾರ್ಯಾಖ್ಯಾಧಿಕರಣ**— (೫) ಮೂರ್ತಶಿವೋಪಾಸನಪ್ರಕರಣದಲ್ಲಿ ವಿಹಿತವಾಗಿರುವ ಅಗ್ನಿತ್ರಯ, ಜೀವ, ಮುಖ್ಯಪ್ರಾಣ, ನಾಮಾದ್ಯುಪಾಸನಗಳನ್ನು ಬ್ರಹ್ಮೋಪಾಸನದ ಅಂಗವೇ ಅಥವಾ ಸ್ವತಂತ್ರಫಲಸಾಧನವೇ ಎಂದಾಶಂಕಿಸಿ ಬ್ರಹ್ಮೋಪಾಸನದ ಅಂಗವೆಂದೇ ಸಿದ್ಧಾಂತಮಾಡಲಾಗಿದೆ.

**ಸಮಾನಾಧಿಕರಣ**—(೬) ಎಲ್ಲಾ ಬ್ರಹ್ಮವಿದ್ಯೆಗಳಲ್ಲೂ ಸ್ಥಾನಭೇದ ಮತ್ತು ಗುಣಭೇದವಿದ್ದರೂ ಚಿತ್ತೈಕಾಗ್ರತೆಯಿಂದ ದೊರಕುವ ಶಿವಸಾಕ್ಷಾತ್ಕಾರರೂಪವಾದ ಫಲವು ಒಂದೇ ಬಗೆಯಾಗಿರುವುದರಲ್ಲಿ ವಿರೋಧವಿಲ್ಲವೆಂದು ತಿಳಿಸಲಾಗಿದೆ.

**ಸಂಬಂಧಾಧಿಕರಣ** (೭) ವೈಶ್ವಾನರ ವಿದ್ಯೆಯಲ್ಲಿ ಪರಸ್ಪರಭೇದವಿದ್ದರೂ ಸಗುಣ ನಿರ್ಗುಣೋಪಾಸನೆಗಳಿಗೆ ಅಂಗಾಂಗಿಭಾವದಿಂದ ಪರಸ್ಪರಸಂಬಂಧವನ್ನು ಏರ್ಪಡಿಸುವುದರಿಂದ ಶಾಂಡಿಲ್ಯಾದಿವಿದ್ಯೆಗಳಂತೆಯೇ ಅಲ್ಲಿಯೂ ಐಕ್ಯವುಂಟು.

**ಸಂಭೃತ್ಯಧಿಕರಣ**—(೮) ಸಂಭೃತಿ (ಸರ್ವಸಂರಕ್ಷಣ) ಮೊದಲಾದ ಗುಣಗಳು ಒಂದೇ ಶಾಖೆಯಲ್ಲಿ ನಿರೂಪಿತವಾಗಿದ್ದರೂ ಅವನ್ನು ದಹರಶಾಂಡಿಲ್ಯಾದಿ ಸಗುಣವಿದ್ಯೆಗಳೆಲ್ಲದರಲ್ಲೂ ಸೇರಿಸಿಕೊಳ್ಳಬೇಕೆಂದು ನಿರೂಪಿಸಲಾಗಿದೆ.

**ಪುರುಷವಿದ್ಯಾಧಿಕರಣ**—(೯) ಮಾನಸಜ್ಯೋತಿಷ್ಟೋಮವು ಕರ್ಮಕಾಂಡದಲ್ಲಿ ಹೇಳಿರುವ ಜ್ಯೋತಿಷ್ಟೋಮಕ್ಕೆ ಅಂಗವೇ ಅಥವಾ ಸ್ವತಂತ್ರವೇ ಎಂದಾಶಂಕಿಸಿ ಅದು ಕರ್ಮಕ್ಕೆ ಅಂಗವಲ್ಲವೆಂದೂ ಆದರೆ ಸ್ವತಂತ್ರವಾಗಿ ಪರಶಿವಬ್ರಹ್ಮಲೋಕವನ್ನು ದೊರಕಿಸುವ ಸಾಧನವೆಂದೂ ಹೇಳಲಾಗಿದೆ.

**ವೇಧಾದ್ಯಧಿಕರಣ**—(೧೦) ಕೆಲವು ಉಪನಿಷತ್ತುಗಳ ಆರಂಭದಲ್ಲಿ ಪಠಿತವಾಗಿರುವ "ಶುಕ್ಲಂ ಪ್ರವಿಧ್ಯ" ಎಂಬ ಮಂತ್ರಗಳು ಬ್ರಹ್ಮವಿದ್ಯೆಗೆ ಅಂಗವೇ ಅಥವಾ ಶೂನ್ಯ ಪೊಂಪು ಮೊದಲಾದ ಕರ್ಮಗಳಿಗೆ ಅಂಗವೇ ಎಂದು ಸಂಶಯಬಂದರೆ ಅವು ಬ್ರಹ್ಮವಿದ್ಯೆಗೆ ಅಂಗವಲ್ಲವೆಂದೂ, ಶೂನ್ಯ ಮೊದಲಾದ ಆಭಿಚಾರಿಕ ಕರ್ಮಗಳ ಅಂಗವೆಂದೂ ನಿರೂಪಿಸಲಾಗಿದೆ.

**ಹಾನ್ಯಧಿಕರಣ**—(೧೧) ಶಮಾದಿಸಂಪನ್ನರಾದ ಉತ್ತಮಾಧಿಕಾರಿಗಳಿಗೆ,

ಇಲ್ಲಿಯೇ ಶಿವೈಕ್ಯವು ದೊರಕಿದರೆ, ಮಂದಾಧಿಕಾರಿಗಳಿಗೆ ದೇಹವಿಯೋಗವಾದಮೇಲೆ ಅವರ ಕರ್ಮಾನುಗುಣವಾದ ಫಲವು ದೊರಕುವುದೆಂದು ತಿಳಿಸಲಾಗಿದೆ.

**ಸಾಂಪರಾಯಾಧಿಕರಣ**—(೧೨) ಆದರೆ ಅವರಿಗೆ ಫಲಪ್ರಾಪ್ತಿಯು ಶರೀರವಿದ್ದಾಗಲೋ ಅಥವಾ ಶರೀರವನ್ನು ತೊರೆದಮೇಲೆಯೋ ಎಂಬ ಸಂಶಯಕ್ಕೆ ಪರಿಹಾರವಾಗಿ ಅವರಿಗೆ ವಿರಜಾದೀಕ್ಷೆಯಾದೊಡನೆಯೇ ಅವರ ಪುಣ್ಯ ಪಾಪ ಕರ್ಮಗಳು ನಶಿಸುತ್ತವೆ ಎಂದು ನಿರ್ಣಯಿಸಲಾಗಿದೆ.

**ಅನಿಯಮಾಧಿಕರಣ**—(೧೩) ಅರ್ಚಿರಾದಿಗತಿಯು ಕೆಲವು ವಿದ್ಯೆಗಳಲ್ಲಿ ಮಾತ್ರವೇ ಉಪದಿಷ್ಟವಾಗಿದ್ದರೂ ಅದು ಆ ವಿದ್ಯೆಗೆ ಮಾತ್ರವೇ ಸೇರಿರುವುದೆಂಬ ನಿಯಮವಿಲ್ಲದೆ ಎಲ್ಲಾ ವಿದ್ಯೆಗಳಿಗೂ ಸೇರಿದೆ ಎಂದು ಇಲ್ಲಿ ತಿಳಿಸಲಾಗಿದೆ. ಆದ್ದರಿಂದ ಬ್ರಹ್ಮವಿದ್ಯೋಪಾಸಕರೆಲ್ಲರೂ ಅರ್ಚಿರಾದಿಮಾರ್ಗದಿಂದಲೇ ಹೊರಡುವರೆಂಬ ನಿಯಮವು ಶ್ರುತಿಯಲ್ಲಿ ಕಂಡುಬಂದಿದೆ.

**ಅಕ್ಷರಾದ್ಯಧಿಕರಣ**—(೧೪) ಮೂರ್ತಶಿವನನ್ನು ಉಪಾಸನಮಾಡಿದವರು ಮಹಾಕೈಲಾಸದಲ್ಲಿ ಸಾಲೋಕ್ಯಾದಿಕಲ್ಯಾಣವಿಭೂತಿಯನ್ನು ಅನುಭವಿಸುತ್ತಾರೆ. ಅಮೂರ್ತೋಪಾಸಕರಿಗೆ ಇಲ್ಲಿಯೇ ಬ್ರಹ್ಮದಲ್ಲಿ ಸೂಕ್ಷ್ಮಶರೀರವು ವಿಲೀನವಾಗಿರುವುದರಿಂದ ಅವರು ಪರಲೋಕಕ್ಕೆ ಹೋಗಬೇಕಾಗಿಲ್ಲ. ಅವರು ಇರುವಲ್ಲಿಯೇ ಹೃದಯದಲ್ಲಿ ಪರಶಿವಸಾಯುಜ್ಯವನ್ನು ಅನುಭವಿಸುತ್ತಿರುವರು.

**ಅಂತರತ್ವಾಧಿಕರಣ**—(೧೫) "ಅಯಮಾತ್ಮಾ ಬ್ರಹ್ಮ" ಎಂದು ಮುಂತಾದ ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಅಭೇದವನ್ನು ಹೇಳಿರುವುದರಿಂದ ತನ್ನ ಉಪಾಸನವನ್ನೇ ಅಲ್ಲಿ ಶಿವೋಪಾಸನವೆಂದು ಹೇಳಿರುವುದಾಗಿ ಆಶಂಕಿಸಿ ಜೀವನಿಗೆ ಹೃದಯಕಮಲದ ಮಧ್ಯದಲ್ಲಿರುವ ಶಿವನೇ ಉಪಾಸ್ಯನೆಂದು ಸಿದ್ಧಾಂತಮಾಡಲಾಗಿದೆ.

**ಕಾಮ್ಯಾಧಿಕರಣ** (೧೬) ದಹರಶಾಂಡಿಲ್ಯಾದಿವಿದ್ಯೆಗಳಲ್ಲಿ ನಾರಾಯಣನನ್ನೇ ಉಪಾಸ್ಯನೆಂದಾಶಂಕಿಸಿ ಮುಂಡಕಬೃಹದಾರಣ್ಯಕಗಳು ದಹರಾಕಾಶದಲ್ಲಿ ಉಪಾಸ್ಯನಾದ ಪರಮಾತ್ಮನಲ್ಲಿ ಪರಶಿವನ ಧರ್ಮಗಳನ್ನೇ ಸ್ಪಷ್ಟವಾಗಿ ತಿಳಿಸಿರುವುದರಿಂದ ಇದರಂತೆ ಅಲ್ಲಿಯೂ ಶಿವನೇ ಉಪಾಸ್ಯನೆಂದು ಸಿದ್ಧಾಂತಮಾಡಲಾಗಿದೆ.

**ತನ್ನಿರ್ಧಾರಣಾನಿಯಮಾಧಿಕರಣ**—(೧೭) ಶಿವೋಪಾಸಕರಿಗೆ ಭೋಗವನ್ನೇ ಫಲವಾಗಿ ಹೇಳಿರುವುದರಿಂದ ಸಾರೂಪ್ಯಾದಿಮುಕ್ತಿಯೇ ಉಪಾಸನೆಗೆ ಫಲವೇ ಹೊರತು ಸಾಯುಜ್ಯಮುಕ್ತಿಯು ಫಲವಾಗಲಾರದೆಂದಾಶಂಕಿಸಿ ಎಲ್ಲಾ ಬ್ರಹ್ಮವಿದ್ಯೆಗಳೂ ಎಲ್ಲಾ ವಿಧವಾದ ಮುಕ್ತಿಗಳಿಗೂ ಸಾಧನವಾಗುವುವೆಂದು ಇಲ್ಲಿ ಹೇಳಲಾಗಿದೆ.

**ಪ್ರದಾನಾಧಿಕರಣ**—(೧೮) ಸಕಾಮರಾಗಿ ಬ್ರಹ್ಮವಿದ್ಯೆಯನ್ನು ಉಪಾಸನಮಾಡಿದವರಿಗೆ ಸಾಲೋಕ್ಯಾದಿಕಲ್ಯಾಣವಿಭೂತಿ ಎಂದೂ, ನಿಷ್ಕಾಮೋಪಾಸಕರಿಗೆ ಸಾಯುಜಮುಕ್ತಿ ಎಂದೂ ಮುಕ್ತಿಯಲ್ಲಿ ವಿಭಾಗವನ್ನು ಇಲ್ಲಿ ನಿರೂಪಿಸಲಾಗಿದೆ.

**ಲಿಂಗಭೂಯಸ್ತ್ವಾಧಿಕರಣ**—(೧೯) ಉಪಾಸನಗಳೆಲ್ಲವೂ ಪರಸ್ಪರ

ವಿಲಕ್ಷಣವಾಗಿರುವುದರಿಂದ ಎಲ್ಲಕ್ಕೂ ಶಿವನಲ್ಲಿಯೇ ಸಮನ್ವಯಮಾಡಲಾಗು ವುದಿಲ್ಲವೆಂದಾಶಂಕಿಸಿ ಸರ್ವಾತ್ಮಕನೂ ಲಿಂಗರೂಪಿಯೂ ಆದ ಪರಮೇಶ್ವರನೇ ಎಲ್ಲಾ ಕಡೆಯೂ ಉಪಾಸ್ಯನಾಗಿರುವುದರಿಂದ ಬ್ರಹ್ಮವಿದ್ಯೆಗಳೆಲ್ಲಕ್ಕೂ ಪರಶಿವನಲ್ಲಿಯೇ ಸಮನ್ವಯವು ಸುಗಮವೆಂದು ಸಿದ್ಧಾಂತಮಾಡಲಾಗಿದೆ.

ಪೂರ್ವಾವಿಕಲ್ಪಾಧಿಕರಣ—(೨೦) ಮೂರ್ತಾಮೂರ್ತೋಪಾಸಕರಲ್ಲೂ ಮಂದಾಧಿಕಾರಿಗಳಿಗೆ ಉತ್ತಮಾಧಿಕಾರಿಗಳಂತೆ ಸಾಯುಜ್ಯವೆಂಬ ಸದ್ಯೋಮುಕ್ತಿ ದೊರಕದೆ ಸಾಲೋಕ್ಯಾದಿಕ್ರಮದಿಂದ ಅದು ದೊರಕುವುದೆಂದು ನಿರೂಪಿಸಲಾಗಿದೆ.

ಏಕಆತ್ಮಾಧಿಕರಣ—(೨೧) ಜೀವನಿಗಿಂತಲೂ ವಿಲಕ್ಷಣನಾದ ಪರಶಿವನೇ ಇಲ್ಲವಾದ್ದರಿಂದ ಅವನ ಉಪಾಸನವೇ ಸಂಭವಿಸುವುದಿಲ್ಲವೆಂದಾಶಂಕಿಸಿ ಸರ್ವನಿಯಾ ಮಕನಾದ ಈಶ್ವರನು ಜೀವನಿಗಿಂತಲೂ ವಿಲಕ್ಷಣನಾಗಿರುವನೆಂದೂ, ಅವನ ಉಪಾ ಸನವು ನಿಯತವಾಗಿ ಸಂಭವಿಸುವುದೆಂದೂ ತಿಳಿಸಲಾಗಿದೆ.

ಅಂಗಾವಬದ್ಧಾಧಿಕರಣ—(೨೨) ಆಯಾ ಶಾಖೆಯಲ್ಲಿ ವಿಹಿತವಾಗಿರುವ ಬ್ರಹ್ಮವಿದ್ಯೆಗಳು ಆಯಾಶಾಖೆಯವರಿಗೆ ಮಾತ್ರವೇ ನಿಯಮಿತವೇ ಹೊರತು ಎಲ್ಲವನ್ನೂ ಎಲ್ಲರೂ ಆಚರಿಸಬಾರದೆಂದು ಆಶಂಕಿಸಿ ಬ್ರಹ್ಮವಿದ್ಯೆಯಲ್ಲಿ ಆ ಬಗೆಯ ಭೇದವಿಲ್ಲವೆಂದೂ, ಎಲ್ಲಾ ಉಪಾಸಕರಿಗೂ ಎಲ್ಲಾ ಬ್ರಹ್ಮವಿದ್ಯೆಗಳಲ್ಲೂ ಅಧಿಕಾರ ವುಂಟೆಂದೂ ಸಿದ್ಧಾಂತಮಾಡಲಾಗಿದೆ.

ಭೂಮ್ನಃ ಕ್ರತುವಜ್ಜ್ಯಾಯಸ್ತ್ವಾಧಿಕರಣ—(೨೩) ವೈಶ್ವಾನರವಿದ್ಯೆ ಯಲ್ಲಿ ಹೇಳಿರುವ ಉಪಾಸ್ಯವಾದ ಆಕಾರಗಳಲ್ಲಿ ಒಂದೊಂದು ಆಕಾರವೇ ಉಪಾ ಸ್ಯವೆ? ಅಥವಾ ಎಲ್ಲವನ್ನು ಸೇರಿಸಿ ಉಪಾಸನಮಾಡಬೇಕೇ ಎಂದು ಸಂಶಯಬಂದರೆ ಎಲ್ಲವನ್ನು ಒಟ್ಟಿಗೆ ಸೇರಿಸಿಯೇ ಉಪಾಸನಮಾಡಬೇಕೆಂದು ಸಿದ್ಧಾಂತಮಾಡಲಾಗಿದೆ.

ನಾನಾಶಬ್ದಾದಿಭೇದಾಧಿಕರಣ—(೨೪) ಅನೇಕ ಶಾಖೆಗಳಲ್ಲಿ ವಿಹಿತ ವಾಗಿರುವ ಎಲ್ಲಾ ಬ್ರಹ್ಮವಿದ್ಯೆಗಳಲ್ಲೂ ಉಪಾಸ್ಯವಾದ ಬ್ರಹ್ಮವು ಒಂದೇ ಆಗಿರುವುದ ರಿಂದ ಬ್ರಹ್ಮೋಪಾಸನವೆಲ್ಲವೂ ಒಂದೇ ಎಂದಾಶಂಕಿಸಿ ಹೆಸರುಗಳೇ ಮೊದಲಾದ ಅಂಶಗಳಲ್ಲಿ ಭೇದವಿರುವುದರಿಂದ ಅವನ್ನು ಭಿನ್ನವೆಂದೇ ಸಿದ್ಧಾಂತಮಾಡಲಾಗಿದೆ.

ವಿಕಲ್ಪಾಧಿಕರಣ—(೨೫) ಬ್ರಹ್ಮವಿದ್ಯೆಗಳು ಭಿನ್ನವಾದರೆ ಆ ಎಲ್ಲಾ ವಿದ್ಯೆಗಳನ್ನು ಅನುಷ್ಠಾನಮಾಡಿದರೆಯೇ ಮುಕ್ತಿಯು ದೊರಕುವುದೆಂದಾಶಂಕಿಸಿ ಒಂದೊಂದು ವಿದ್ಯೆಯೇ ಮುಕ್ತಿಯನ್ನು ಕೊಡಬಲ್ಲದೆಂದು ಸಿದ್ಧಾಂತಮಾಡಲಾಗಿದೆ.

ಅಂಗೇಷು ಯಥಾಭಾವಾಧಿಕರಣ—(೨೬) ಅನ್ನಂ ಬ್ರಹ್ಮ ಎಂಬ ಅಂಗೋಪಾಸನಗಳು ಸ್ವತಂತ್ರವಾಗಿ ಫಲಕ್ಕೆ ಸಾಧನವಾಗದೆ ದಹರಾದ್ಯುಪಾಸನ ಗಳೊಂದಿಗೆ ಸೇರಿಯೇ ಫಲವನ್ನು ಕೊಡಬಲ್ಲವೆಂದು ನಿರೂಪಿಸಲಾಗಿದೆ.

ಸಮಾಹಾರಾಧಿಕರಣ—(೨೭) ಚಿತ್ತವು ಅನೇಕ ಸಂಕಲ್ಪಗಳಿಂದ ಕೂಡಿರುವುದರಿಂದ ಅದರ ನಿರೋಧವಿಲ್ಲದೆ ಉಪಾಸನವು ಸಿದ್ಧಿಸಲಾರದೆಂದಾಶಂಕಿಸಿ

ಶಿವಯೋಗಮಾಹಾತ್ಮ್ಯದಿಂದ ಚಿತ್ತವ್ಯಾಪ್ತಿ ನಿರೋಧವು ದೊರಕಿ ಶಿವಸಾಕ್ಷಾತ್ಕಾರವು ಲಭಿಸುವುದೆಂದು ತಿಳಿಸಲಾಗಿದೆ.

**ನವಾ ತತ್ಸಹಭಾವಾಧಿಕರಣ**—(೨೮) ಉದ್ಗೀಥಾದ್ಯುಪಾಸನಗಳು ದಹರಾದ್ಯುಪಾಸನಗಳೊಂದಿಗೆ ಕೂಡಿರುತ್ತವೆಯೋ ಅಥವಾ ವಿಹಿತವಾಗಿರುವ ಕಡೆಗಳಲ್ಲಿ ಮಾತ್ರವೇ ಅವನ್ನು ಸೇರಿಸಿಕೊಳ್ಳಬೇಕೇ ಎಂದು ಸಂಶಯಬಂದರೆ ಅವನ್ನು ವಿಧಿಸಿರುವ ಶಾಖೆಗಳಲ್ಲಿ ಮಾತ್ರವೇ ಸೇರಿಸಿಕೊಳ್ಳಬೇಕೇ ಹೊರತು ದಹರಾದ್ಯುಪಾಸನಗಳಲ್ಲಿ ಸೇರಿಸಿಕೊಳ್ಳಬಾರದೆಂದು ನಿರೂಪಿಸಲಾಗಿದೆ.

## ತೃತೀಯಾಧ್ಯಾಯ ಚತುರ್ಥಪಾದ

**ಪುರುಷಾರ್ಥಾಧಿಕರಣ**—(೧) ಮೋಕ್ಷವು ವಿದ್ಯೆಯಿಂದ ದೊರಕುವುದೇ ಕರ್ಮದಿಂದ ದೊರಕುವುದೇ ಎಂದು ಸಂಶಯಬಂದರೆ ವಿದ್ಯೆಯಿಂದಲೇ ಅದು ದೊರಕುವುದೆಂದು ಸಿದ್ಧಾಂತಮಾಡಲಾಗಿದೆ.

**ಊರ್ಧ್ವರೇತಸ್ಸಾಧಿಕರಣ**—(೨) ವಸಿಷ್ಠ ಜನಕಾದಿಗಳೂ ಸಹ ಕರ್ಮವನ್ನು ಆಚರಿಸಿದುದಾಗಿ ಕಂಡುಬಂದಿರುವುದರಿಂದ ವಿದ್ಯೆಯಿಂದಲೇ ಭೋಗಮೋಕ್ಷಗಳು ದೊರಕುವುವೆಂದಾಶಂಕಿಸಿ ಕರ್ಮಕ್ಕೆ ಪ್ರಸಕ್ತಿಯೇ ಇಲ್ಲದ ಸಂನ್ಯಾಸಾಶ್ರಮದಲ್ಲೂ ವಿದ್ಯೆಯು ಕಂಡುಬರುವುದರಿಂದ ಬ್ರಹ್ಮವಿದ್ಯೆಗೆ ಕರ್ಮ ಅಂಗವಾಗಲಾರದು.

**ಸ್ತುತಿಮಾತ್ರಾಧಿಕರಣ**—(೩) ಸಂನ್ಯಾಸಾಶ್ರಮದಿಂದಲೇ ಮೋಕ್ಷವು ಸಾಧ್ಯವೇ ಹೊರತು ಉಳಿದ ಆಶ್ರಮಗಳಿಂದ ಸಾಧ್ಯವಲ್ಲವೆಂದಾಶಂಕಿಸಿ ಉಳಿದವರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟೆಂದೂ ಅವರ ಆಶ್ರಮವಿಹಿತವಾದ ಕರ್ಮಗಳು ಅದಕ್ಕೆ ಅಂಗವಾಗಿರುವುವೆಂದೂ ಹೇಳಲಾಗಿದೆ.

**ಪಾರಿಪ್ಲವಾಧಿಕರಣ**—(೪) ಅಶ್ವಮೇಧಕ್ಕೆ ಅಂಗವಾದ ಪಾರಿಪ್ಲವವೆಂಬ ಕರ್ಮವನ್ನಾಚರಿಸುವಾಗ ಆ ಪ್ರಕರಣದಲ್ಲಿ ಪ್ರೇರಿತವಾಗಿರುವ ಯಜ್ಞವಲ್ಕ್ಯಮೈತ್ರೇಯಿ ಸಂವಾದರೂಪವಾದ ಕತೆಗಳೂ ಸಹ ಪಾರಿಪ್ಲವಕರ್ಮಕ್ಕೆ ಅಂಗವೆಂದಾಕ್ಷೇಪಿಸಿ ಜ್ಞಾನಕಾಂಡದಲ್ಲಿ ಹೇಳಿರುವ ಈ ಕತೆಗಳು ಕರ್ಮಕಾಂಡದಲ್ಲಿ ಹೇಳಿರುವ ಪಾರಿಪ್ಲವಕರ್ಮಕ್ಕೆ ಅಂಗವಾಗಲಾರವೆಂದು ತಿಳಿಸಲಾಗಿದೆ.

**ಅಗ್ನೀಂಧನಾದ್ಯಧಿಕರಣ**—(೫) ವಿರಕ್ತರಿಗೂ ಆಧಾನಾದಿಕರ್ಮಗಳ ಅಪೇಕ್ಷೆಯುಂಟೆಂದಾಪೇಕ್ಷಿಸಿ ಸಂನ್ಯಾಸಾಶ್ರಮದಲ್ಲಿ ಕರ್ಮಕ್ಕೆ ಪ್ರಸಕ್ತಿ ಇಲ್ಲದಿರುವುದರಿಂದ ಅಗ್ನ್ಯಾಧಾನಗಳು ಎಲ್ಲರಿಗೂ ಅನ್ವಯಿಸುವುದಿಲ್ಲವೆಂದು ತಿಳಿಸಲಾಗಿದೆ.

**ಸರ್ವಾಪೇಕ್ಷಾಧಿಕರಣ**—(೬) "ಯಜ್ಞೇನ ದಾನೇನ" ಎಂಬ ಶ್ರುತಿಯಲ್ಲಿ ಯಜ್ಞಾದಿಗಳನ್ನು ಬ್ರಹ್ಮಸಾಕ್ಷಾತ್ಕಾರಕ್ಕೆ ಅಂಗವಾಗಿ ಹೇಳಿರುವುದರಿಂದ ಕರ್ಮವನ್ನು ಬ್ರಹ್ಮವಿದ್ಯೆಗೆ ಅಂಗವೆಂದಾಶಂಕಿಸಿ ಪರಂಪರೆಯಾಗಿ ಅದು ಮೋಕ್ಷಸಾಧನವೇ ಹೊರತು ಬ್ರಹ್ಮವಿದ್ಯೆಗೆ ಅಂಗವಲ್ಲವೆಂದು ಸಿದ್ಧಾಂತಮಾಡಲಾಗಿದೆ.

**ಶಮಾದ್ಯಧಿಕರಣ**—(೭) ಬ್ರಹ್ಮಸಾಕ್ಷಾತ್ಕಾರಕ್ಕೆ ಅಂಗವಾಗಿ ವಿಹಿತವಾದ

ಶಾಂತ್ಯಾದಿಗಳು ಯತ್ಯಾದ್ಯಾಶ್ರಮಗಳಿಗೆ ಸೇರಿದವೆಂದಾಶಂಕಿಸಿ ಎಲ್ಲಾ ಆಶ್ರಮ ಗಳಿಗೂ ಶಾಂತ್ಯಾದಿಗುಣಗಳು ಅತ್ಯಂತಾವಶ್ಯಕವೆಂದು ನಿರೂಪಿಸಲಾಗಿದೆ.

**ಸರ್ವಾನ್ನಾನುಮತ್ಯಧಿಕರಣ**—(೮) ಬ್ರಹ್ಮೋಪಾಸಕರಿಗೆ ಶಾಂತ್ಯಾದಿ ಗುಣಗಳಿದ್ದ ಮೇಲೆ ಸ್ವೇಚ್ಛಾಧೀನವಾದ ವರ್ತನೆಯಿರುವುದರಲ್ಲಿ ದೋಷವಿಲ್ಲವೆಂದಾ ಶಂಕಿಸಿ ಅವರವರ ಧರ್ಮವನ್ನು ಅವರು ಆಚರಿಸಲೇಬೇಕೆಂದೂ, ಕೆಲವುಕಡೆಗಳಲ್ಲಿ ಹೇಳಿರುವ ಸ್ವೇಚ್ಛಾಹಾರಾದಿಗಳು ಆಪತ್ಕಾಲಕ್ಕೆಮಾತ್ರವೇ ಅನ್ವಯಿಸುತ್ತವೆ ಎಂದೂ ತಿಳಿಸಲಾಗಿದೆ.

**ವಿಹಿತತ್ವಾಧಿಕರಣ**—(೯) ಶಮದಮಾದಿಗಳಂತೆ ಆಯಾ ಆಶ್ರಮವಿಹಿತ ವಾದ ಕರ್ಮಗಳೂ ಸಹ ಮುಮುಕ್ಷುವಿಗೆ ಉಪಾದೇಯವೆಂದು ತಿಳಿಸಲಾಗಿದೆ.

**ವಿಧುರಾಧಿಕರಣ**—(೧೦) ವಿಧುರರಿಗೆ ಆಶ್ರಮವೇ ಇಲ್ಲದ್ದರಿಂದ ಅವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವೇ ಇಲ್ಲವೆಂದಾಶಂಕಿಸಿ ಅವರಿಗೂ ಅಧಿಕಾರವುಂಟೆಂದು ನಿರೂಪಿಸಲಾಗಿದೆ.

**ತದ್ಭೂತಾಧಿಕರಣ** – (೧೧) ಆಶ್ರಮಧರ್ಮಗಳನ್ನು ತೊರೆದವರಿಗೆ ಬ್ರಹ್ಮ ವಿದ್ಯೆಯಲ್ಲಿ ಅಧಿಕಾರ ಉಂಟೇ ಇಲ್ಲವೇ ಎಂದು ಸಂಶಯಬಂದರೆ ಅವರಿಗೆ ಮತ್ತೆ ಹಿಂದಿನ ಆಶ್ರಮ ದೊರಕುವುದಿಲ್ಲವಾದ್ದರಿಂದ ಅವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವೇ ಇಲ್ಲವೆಂದು ತಿಳಿಸಲಾಗಿದೆ.

**ಸ್ವಾಮ್ಯಧಿಕರಣ**—(೧೨) ಶ್ರೌತ ಸ್ಮಾರ್ತ ಕರ್ಮಗಳೆಲ್ಲದರಲ್ಲೂ ವಿಷ್ಣುವೇ ಪೂಜ್ಯನು ಮತ್ತು ಫಲದಾತನೆಂದು ಆಶಂಕಿಸಿ ಸರ್ವಸ್ವಾಮ್ಯವನ್ನು ಹೊಂದಿರುವ ಪರಮೇಶ್ವರನೇ ಎಲ್ಲ ವಿದ್ಯೆಗಳಲ್ಲೂ ಉಪಾಸ್ಯನೂ ಮತ್ತು ಫಲಪ್ರದನೂ ಆಗಿರುವ ನೆಂದು ಸಮರ್ಥಿಸಲಾಗಿದೆ.

**ಸಹಕಾರ್ಯಂತರವಿಧ್ಯಧಿಕರಣ**—(೧೩) ಉಪಾಸಕನಿಗೆ ಶಮದಮಾದಿ ಗಳಂತೆಯೇ ಶ್ರವಣ ಮನನ ನಿದಿಧ್ಯಾಸಗಳೂ ಸಹ ಬ್ರಹ್ಮವಿದ್ಯೆಗೆ ಅಂಗವೆನಿಸಿವೆ.

**ಮೌನಾಧಿಕರಣ**—(೧೪) ಬ್ರಹ್ಮವಿದ್ಯೆಗೆ ಅಂಗವಾಗಿ ವಿಹಿತವಾದ ಮೌನವು ಯತಿಗಳಿಗೆ ಮಾತ್ರವೇ ಅನ್ವಯಿಸುವುದೆಂದೂ ಇತರರಿಗಿಲ್ಲವೆಂದೂ ಆಶಂಕೆಬಂದರೆ ಸಂನ್ಯಾಸಿಯಂತೆಯೇ ಉಳಿದವರಿಗೂ ಅದನ್ನು ಆವಶ್ಯಕವೆಂದು ತಿಳಿಸಲಾಗಿದೆ.

**ಅನಾವಿಷ್ಕಾರಾಧಿಕರಣ**—(೧೫) ಜ್ಞಾನಿಯು ಬಾಲಕನಂತೆ ವರ್ತಿಸುವು ದೆಂದರೆ ಸರಳನಿರಾಡಂಬರಜೀವನವೇ ಹೊರತು ಸ್ವೇಚ್ಛಾವಿಹಾರವಲ್ಲ.

**ಐಹಿಕಾಧಿಕರಣ**—(೧೬) ಉಪಾಸಕರಿಗೆ ಮುಕ್ತಿಯು ಈ ಜನ್ಮದಲ್ಲಿಯೇ ದೊರಕುವುದೋ ಅಥವಾ ಬೇರೆ ಜನ್ಮದಲ್ಲೋ ಎಂದು ಸಂಶಯಬಂದರೆ ಪ್ರತಿಬಂಧಕ ವಿಲ್ಲದಿದ್ದರೆ ಈ ಜನ್ಮದಲ್ಲೂ, ಪ್ರತಿಬಂಧಕವಿದ್ದರೆ ಮುಂದಿನ ಜನ್ಮದಲ್ಲೂ ದೊರೆಯು ವುದೆಂದು ಸಿದ್ಧಾಂತಮಾಡಲಾಗಿದೆ.

**ಮುಕ್ತಿಫಲಾಧಿಕರಣ**—(೧೭) ಜಗದ್ವಾಸನೆಯುಳ್ಳ ಬ್ರಹ್ಮವಿದ್ಯೋಪಾಸ

ಕರಿಗೂ ಮತ್ತು ಜಗದ್ವ್ಯಾಸನೆಯಿಲ್ಲದ ಉಪಾಸಕರಿಗೂ ಮೋಕ್ಷವು ಈ ಜನ್ಮದಲ್ಲಿಯೋ ಮುಂದೆಯೋ? ಎಂದು ಕೇಳಿದರೆ ಜಗದ್ವ್ಯಾಸನಾಯುಕ್ತರಿಗೆ ಜನ್ಮಾಂತರದಲ್ಲೂ, ಜಗದ್ವ್ಯಾಸನೆ ಇಲ್ಲದವರಿಗೆ ಈಗಲೂ ಅದು ದೊರಕುವುದೆಂದು ತಿಳಿಸಲಾಗಿದೆ.

## ಚತುರ್ಥಾಧ್ಯಾಯ ಪ್ರಥಮಪಾದ (ಉಪಾಸನಪಾದ)

**ಆವೃತ್ತ್ಯಧಿಕರಣ**—(೧) ಅಗ್ನಿಹೋತ್ರಾದಿಗಳನ್ನು ಒಂದುಸಾರಿ ಮಾಡಿದರೆಯೇ ಸ್ವರ್ಗವು ಸಿಕ್ಕುವಂತೆ ಬ್ರಹ್ಮೋಪಾಸನವನ್ನು ಒಂದುಸಲ ಮಾಡಿದರೂ ಮುಕ್ತಿ ದೊರಕುವುದೆಂದಾಕ್ಷೇಪಿಸಿ ಶರೀರವು ಕೆಳಗೆ ಬೀಳುವವರೆಗೂ ಉಪಾಸನವನ್ನು ಮುಂದುವರಿಸುತ್ತಿರಬೇಕೆಂದು ಸಿದ್ಧಾಂತಮಾಡಲಾಗಿದೆ.

**ಆತ್ಮಾಧಿಕರಣ**—(೨) "ನಾನೇ ಬ್ರಹ್ಮ"ವೆಂದು ಚೇತನದಲ್ಲಿ ಬ್ರಹ್ಮೋಪಾಸನವೂ, "ಮನಸ್ಸೇ ಬ್ರಹ್ಮ" ವೆಂದು ಅಚೇತನದಲ್ಲಿ ಬ್ರಹ್ಮೋಪಾಸನವೂ ವಿಹಿತವಾಗಿದ್ದರೂ ಇದಕ್ಕಿಂತಲೂ ವಿಲಕ್ಷಣವಾದ ರೀತಿಯಲ್ಲಿ ಬ್ರಹ್ಮೋಪಾಸನವು ವಿಹಿತವಲ್ಲದ್ದರಿಂದ ಶುದ್ಧಬ್ರಹ್ಮದ ಉಪಾಸನವೇ ಇಲ್ಲವೆಂದಾಶಂಕಿಸಿ ದಹರವಿದ್ಯಾದಿಗಳಲ್ಲಿ ದಹರಾಕಾಶದಲ್ಲಿರುವ ಅಮೂರ್ತನಿಷ್ಕಲಪರಶಿವನ ಉಪಾಸನವು ವಿಹಿತವಾಗಿರುವುದರಿಂದ ಶುದ್ಧಬ್ರಹ್ಮೋಪಾಸನವುಂಟೆಂದು ಇಲ್ಲಿ ನಿರೂಪಿಸಲಾಗಿದೆ.

**ಪ್ರತೀಕಾಧಿಕರಣ**—(೩) "ಅನ್ನಂ ಬ್ರಹ್ಮ" ಎಂಬಲ್ಲಿ ನಶ್ವರವಾದ ಅನ್ನಾದಿಗಳಲ್ಲಿ ನಿತ್ಯನಾದ ಶಿವನ ಉಪಾಸನವು ಯುಕ್ತವಲ್ಲವೆಂದರೆ ಉಪ್ಪರಿಗೆಯನ್ನು ಹತ್ತುವವರಿಗೆ ಮೆಟ್ಟಲಿನಂತೆ ದಹರಾದ್ಯುಪಾಸನೆಗೆ ಅಶಕ್ತರಾದ ಮಂದಾಧಿಕಾರಿಗಳಿಗೆ "ಅನ್ನಂ ಬ್ರಹ್ಮ" ಮುಂತಾದ ಅಂಗೋಪಾಸನಗಳೂ ಅವಶ್ಯಕವೆನಿಸಿವೆ.

**ಆದಿತ್ಯಾದಿಮತ್ಯಧಿಕರಣ**—(೪) "ಆದಿತ್ಯಂ ಯೂಪಂ ಉಪಾಸೀತ" ಎಂಬಲ್ಲಿ ಆದಿತ್ಯನಲ್ಲಿ ಯೂಪವೆಂಬ ಭಾವನೆಯನ್ನು ಮಾಡಬೇಕೆ? ಯೂಪದಲ್ಲಿ ಆದಿತ್ಯನೆಂದು ಭಾವನೆ ಮಾಡಬೇಕೆ? ಎಂಬ ಸಂಶಯಬಂದರೆ ಉತ್ಕೃಷ್ಟವಸ್ತುವನ್ನು ನಿಕೃಷ್ಟವೆಂದು ಭಾವಿಸಬಾರದೆಂಬ ನಿಯಮದಿಂದ ಬ್ರಹ್ಮವಿದ್ಯೆಗೆ ಅಂಗವಾಗಿ ಯೂಪದಲ್ಲಿಯೇ ಆದಿತ್ಯವೆಂದು ಭಾವಿಸಬೇಕೆಂದು ನಿರ್ಣಯಿಸಲಾಗಿದೆ.

**ಆಸೀನಾಧಿಕರಣ**—(೫) ಬ್ರಹ್ಮೋಪಾಸನವನ್ನು ಸುಖಾಸನದಲ್ಲಿ ಕುಳಿತು ಮಾಡಬೇಕೇ ಹೊರತು ಮನಬಂದಂತೆ ಮಾಡಬಾರದೆಂದು ತಿಳಿಸಲಾಗಿದೆ.

**ತದಧಿಗಮಾಧಿಕರಣ**—(೬) ಅನುಭವಿಸದೆ ಯಾವ ಕರ್ಮವೂ ತೀರುವುದಿಲ್ಲವೆಂಬ ನ್ಯಾಯದಿಂದ ಅನೇಕಜನ್ಮಗಳಲ್ಲಿ ಸಂಚಿತವಾಗಿದ್ದ ಕರ್ಮವು ಒಂದೇ ಜನ್ಮದಲ್ಲಿ ತೊಲಗುವುದಿಲ್ಲವಾದ್ದರಿಂದ ಈ ಜನ್ಮದಲ್ಲಿಯೇ ಮೋಕ್ಷ ದೊರಕುವುದಿಲ್ಲವೆಂದು ಆಕ್ಷೇಪಿಸಿ ಬ್ರಹ್ಮವಿದ್ಯೆಯು ಸಿದ್ಧಿಸಿದೊಡನೆಯೇ ಎಲ್ಲಾಬಗೆಯ ಕರ್ಮಗಳೂ ಮತ್ತು ಪಾಪಗಳೂ ತಾವಾಗಿಯೇ ತೊಲಗುವುದರಿಂದ ಆಗಲೇ ಶಿವಯೋಗವುಂಟಾಗುವುದೆಂದು ನಿರ್ಣಯಿಸಲಾಗಿದೆ.

**ಇತರಾಧಿಕರಣ**—(೭) ಬ್ರಹ್ಮೋಪಾಸನದಿಂದ ಇದುವರೆಗಿದ್ದ ಕರ್ಮಗಳು

ನಷ್ಟವಾಗಲು ಮುಂದೆ ಇವನು ಮಾಡುವ ಕರ್ಮಗಳು ಮೋಕ್ಷಕ್ಕೆ ಪ್ರತಿಬಂಧಕವಾಗ ಬಹುದೆಂದಾಶಂಕಿಸಿ ಬ್ರಹ್ಮವಿದ್ಯೆಯನ್ನು ಸಾಧಿಸಿದಮೇಲೆ ಮಾಡುವ ಯಾವ ಕರ್ಮವೂ ಇವನಿಗೆ ಅಂಟುವುದಿಲ್ಲವೆಂದು ನಿರೂಪಿಸಲಾಗಿದೆ.

**ಅನಾರಬ್ಧಕಾರ್ಯಾಧಿಕರಣ** --(೮) ಜಡಭರತಾದಿಗಳಿಗೆ ಬ್ರಹ್ಮಜ್ಞಾನವು ಸಿದ್ಧಿಸಿದಮೇಲೆಯೂ ಮೂರುಜನ್ಮಗಳಿದ್ದುವೆಂದು ಕಂಡುಬಂದಿರುವುದರಿಂದ ಬ್ರಹ್ಮ ಜ್ಞಾನದಿಂದ ಎಲ್ಲಾ ಕರ್ಮಗಳೂ ನಾಶವಾಗುವುವೆಂದಾಶಂಕಿಸಿ ಫಲವನ್ನು ಕೊಡ ಲಿಕ್ಕೆ ಆರಂಭಿಸಿರುವ ಕರ್ಮವು ತನ್ನ ಫಲವನ್ನು ಪೂರ್ತಿಯಾಗಿ ಕೊಟ್ಟೇಕೊಡ ಬೇಕಾಗಿರುವುದರಿಂದ ಅಂತಹ ಕರ್ಮದಿಂದಲೇ ಜಡಭರತಾದಿಗಳಿಗೆ ಮೂರುಜನ್ಮ ಗಳು ಬಂದಿವೆಯಾದರೂ ಉಳಿದ ಕರ್ಮಗಳು ನಾಶವಾಗುವುದಕ್ಕೆ ಯಾವ ವಿರೋ ಧವೂ ಇಲ್ಲವೆಂದು ನಿರ್ಣಯಿಸಲಾಗಿದೆ.

**ಅಗ್ನಿಹೋತ್ರಾಧಿಕರಣ**—(೯) ಜ್ಞಾನಿಯೂ ಸಹ ಲೋಕರಕ್ಷಣೆಗಾಗಿ ಕರ್ಮವನ್ನು ಮಾಡಲೇಬೇಕಾಗಿರುವುದರಿಂದ ಆ ಕರ್ಮಗಳು ಅವನನ್ನು ಬಂಧಿಸು ತ್ತವೆ ಎಂದಾಶಂಕಿಸಿ ಜ್ಞಾನಿಯ ಕರ್ಮಗಳೆಲ್ಲವೂ ಜ್ಞಾನರೂಪವಾದ ಫಲವನ್ನೇ ಕೊಡುವುದರಿಂದ ಆ ಕರ್ಮದಿಂದ ಅವನ ಮೋಕ್ಷಕ್ಕೆ ಅಡ್ಡಿ ಇಲ್ಲವೆಂದು ನಿರ್ಣಯಿಸ ಲಾಗಿದೆ.

**ಭೋಗಾಧಿಕರಣ**—(೧೦) ದಹರಾದ್ಯುಪಾಸಕರಿಗೆ ಪ್ರಾರಬ್ಧವಾದ ಪುಣ್ಯ ಪಾಪಗಳು ಹೇಗೆ ಕ್ಷಯಿಸುತ್ತವೆ ಎಂದು ಕೇಳಿದರೆ ಅನುಭವದಿಂದ ಪ್ರಾರಬ್ಧವನ್ನು ಮುಗಿಸಿ ಅವರು ಬ್ರಹ್ಮವನ್ನು ಹೊಂದುತ್ತಾರೆಂದು ನಿರ್ಣಯಿಸಲಾಗಿದೆ.

### ದ್ವಿತೀಯಪಾದ (ಉತ್ಕ್ರಾಂತಿಪಾದ)

**ವಾಗಧಿಕರಣ**—(೧) ಜ್ಞಾನಿಗೆ ಉತ್ಕ್ರಮಣಕಾಲದಲ್ಲಿ "ವಾಕ್ಕು ಮನ ಸ್ಸಿನಲ್ಲಿ ಲಯವಾಗುತ್ತದೆ" ಎಂಬ ಶ್ರುತಿಯು ವೃತ್ತಿಯ ಲಯವನ್ನು ಹೇಳುವುದೇ ಹೊರತು ವಾಗೀಂದ್ರಿಯದ ಲಯವನ್ನು ಹೇಳುವುದಿಲ್ಲವೆಂದಾಶಂಕಿಸಿ ವಾಗೀಂದ್ರಿಯದ ಲಯವೇ ಅಲ್ಲಿ ಸಂಭವಿಸುವುದೆಂದು ಸಿದ್ಧಾಂತಮಾಡಲಾಗಿದೆ.

**ಮನೋಽಧಿಕರಣ**-(೨) ಜ್ಞಾನಿಯ ಉತ್ಕ್ರಮಣಕಾಲದಲ್ಲಿ ಅವನ ಮನಸ್ಸು ಪ್ರಾಣದಲ್ಲಿ ಲೀನವಾಗುತ್ತದೆಂದು ತಿಳಿಸಲಾಗಿದೆ.

**ಅಧ್ಯಕ್ಷಾಧಿಕರಣ**—(೩) ಉತ್ಕ್ರಮಣಕಾಲದಲ್ಲಿ ಪ್ರಾಣವು ದೇಹ ಕ್ಷಧಿಪತಿಯಾದ ಜೀವನಲ್ಲಿಯೇ ಲಯವಾಗುವುದೆಂದು ತಿಳಿಸಲಾಗಿದೆ.

**ಭೂತಾಧಿಕರಣ**—(೪) ಪ್ರಾಣವು ತೇಜಸ್ಸಿನಲ್ಲಿ ಲೀನವಾಗುವುದೆಂಬ ಶ್ರುತಿ ಇರುವುದರಿಂದ ಪ್ರಾಣಕ್ಕೆ ಜೀವನಲ್ಲಿ ಲಯವನ್ನು ಹೇಳಿದ್ದು ಸರಿಯಲ್ಲವೆಂದಾ ಶಂಕಿಸಿ ಇಲ್ಲಿ ತೇಜಶ್ಶಬ್ದವು ಜ್ಯೋತಿರೂಪವಾದ ಪರಮಾತ್ಮನನ್ನು ತಿಳಿಸುವುದೇ ಹೊರತು ಭೌತಿಕವಾದ ತೇಜಸ್ಸನ್ನು ತಿಳಿಸುವುದಿಲ್ಲವಾದ್ದರಿಂದ ಪ್ರಾಣದೊಡಗೂಡಿದ ಜೀವನೇ ಪರಮಾತ್ಮನಲ್ಲಿ ಲೀನನಾಗುವನೆಂದು ಇಲ್ಲಿ ತಿಳಿಸಲಾಗಿದೆ.

**ಆಸೃತ್ಯುಪಕ್ರಮಾಧಿಕರಣ**—(೫) ಮೂರ್ತಾಮೂರ್ತೋಪಾಸಕರಿಗೂ ಇತರ ಕರ್ಮಿಗಳಿಗೂ ವ್ಯತ್ಯಾಸವೇನೆಂದು ಕೇಳಿದರೆ ಅವರವರ ಮಾರ್ಗದಲ್ಲಿ ಹೊರಡು ವವರೆಗೂ ಅವರವರ ಗತಿಗಳು ಒಂದೇಬಗೆಯಾಗಿರುತ್ತವೆ ಎಂದು ತಿಳಿಸಲಾಗಿದೆ.

**ಸರ್ವಸಂಪತ್ತ್ಯಧಿಕರಣ** (೬) ಜೀವಬ್ರಹ್ಮರು ಪರಸ್ಪರ ವಿಲಕ್ಷಣರಾದ್ದರಿಂದ ಇಬ್ಬರಿಗೂ ಐಕ್ಯ ಬರುವುದಿಲ್ಲವೆಂದಾಕ್ಷೇಪಿಸಿ ನದೀ ಸಮುದ್ರದೃಷ್ಟಾಂತದಿಂದ ಜೀವ ನಿಗೆ ಬ್ರಹ್ಮದಲ್ಲಿ ಪೂರ್ಣಲಯವನ್ನು ಶ್ರುತಿಯಲ್ಲಿ ಹೇಳಿರುವುದರಿಂದ ಇಬ್ಬರಿಗೂ ಅಭೇ ದವೇ ಇರುವುದೆಂದು ತಿಳಿಸಲಾಗಿದೆ.

**ಅವಿಭಾಗಾಧಿಕರಣ**-(೭) ಪ್ರಳಯದಲ್ಲೂ ಜೀವನಿಗೆ ಪರಮಾತ್ಮನಲ್ಲಿ ಲಯ ವನ್ನು ಹೇಳಿರುವುದರಿಂದ ಅಲ್ಲಿ ಹೇಗೆ ಮತ್ತೆ ಜನ್ಮವುಂಟೋ ಹಾಗೆ ಮುಕ್ತಿಯ ಅನಂತರವೂ ಜೀವರಿಗೆ ಜನ್ಮವುಂಟೆಂದಾಶಂಕಿಸಿ ಪ್ರಳಯದಲ್ಲಿ ಸೂಕ್ಷ್ಮಶರೀರವಿರು ವುದರಿಂದ ಪುನರ್ಜನ್ಮಕ್ಕೆ ಅವಕಾಶವಿದ್ದರೂ ಮುಕ್ತಿಯಲ್ಲಿ ಸೂಕ್ಷ್ಮಶರೀರವೇ ನಾಶ ವಾಗುವುದರಿಂದ ಪುನರ್ಜನ್ಮದ ಪ್ರಸಕ್ತಿಯೇ ಇಲ್ಲವೆಂದು ತಿಳಿಸಲಾಗಿದೆ.

**ತದೋಕೋಽಗ್ರಜ್ವಲನಾಧಿಕರಣ**-(೮) ಮೂರ್ತೋಪಾಸಕರು ಕೊನೆಯ ಕಾಲದಲ್ಲಿ ಪರಮಾತ್ಮಾನುಗ್ರಹದಿಂದ ತಾವು ಹೋಗುವ ದಾರಿಯ ಜ್ಞಾನವನ್ನು ಪಡೆದು ಸುಷುಮ್ನನಾಡಿಯ ಮೂಲಕ ಹೊರಡುತ್ತಾರೆಂದು ತಿಳಿಸಲಾಗಿದೆ.

**ರಶ್ಮ್ಯನುಸಾರಾಧಿಕರಣ**—(೯) ಶಿವೋಪಾಸಕನು ಸುಷುಮ್ನನಾಡಿಯಿಂದ ಹೊರಟಮೇಲೆ ಯಾವ ಆಧಾರದಮೇಲೆ ಪರಶಿವಲೋಕಕ್ಕೆ ಹೋಗಿ ಸೇರುವನೆಂದಾ ಶಂಕಿಸಿ ಸೂರ್ಯರಶ್ಮಿಯ ಮೂಲಕವೇ ಹೊರಡುತ್ತಾನೆಂದು ತಿಳಿಸಲಾಗಿದೆ.

**ನಿಶಾಧಿಕರಣ**—(೧೦) ರಾತ್ರಿಯಲ್ಲಿ ಸೂರ್ಯರಶ್ಮಿಯೇ ಇಲ್ಲದ್ದರಿಂದ ಆಗ ದೇಹ ಬಿಡುವ ಜ್ಞಾನಿಗಳಿಗೆ ಮೋಕ್ಷವಿಲ್ಲವೆಂದಾಶಂಕಿಸಿ ದೇಹವು ಕರ್ಮಾಧೀನವಾದ್ದರಿಂ ದಲೂ, ಕರ್ಮ ಯಾವಾಗಲಾದರೂ ಮುಗಿಯಬಹುದಾದ್ದರಿಂದಲೂ ರಾತ್ರಿಯಲ್ಲೂ ಸೂಕ್ಷ್ಮರೂಪದಲ್ಲಿರುವ ಸೂರ್ಯರಶ್ಮಿಯ ಮೂಲಕವೇ ಹೊರಟು ಜ್ಞಾನಿಗಳು ಮೋಕ್ಷವನ್ನು ಹೊಂದಬಹುದೆಂದು ನಿರ್ಣಯಿಸಲಾಗಿದೆ.

**ದಕ್ಷಿಣಾಯನಾಧಿಕರಣ**—(೧೧) ಹೀಗೆಯೇ ಉತ್ತರಾಯಣದಲ್ಲಿ ಮೃತ ರಾದವರಿಗೆ ಮಾತ್ರವೇ ಮೋಕ್ಷವುಂಟೆಂದೂ, ದಕ್ಷಿಣಾಯನದಲ್ಲಿ ಮೃತರಾದವರಿಗೆ ಮೋಕ್ಷವೇ ಇಲ್ಲವೆಂದೂ ಆಶಂಕಿಸಿ ದಕ್ಷಿಣಾಯನದಲ್ಲಿ ಮೃತರಾದವರಿಗೂ ಮೋಕ್ಷ ಉಂಟೆಂದು ನಿರ್ಣಯಿಸಲಾಗಿದೆ.

## ತೃತೀಯಪಾದ (ಗತಿಪಾದ)

**ಅರ್ಚಿರಾದ್ಯಧಿಕರಣ**- (೧) ಹೀಗೆ ಉತ್ಕ್ರಾಂತನಾದ ಮುಮುಕ್ಷುವು ಅರ್ಚಿರಾದಿಮಾರ್ಗದಿಂದಲೇ ಮೋಕ್ಷವನ್ನು ಪಡೆಯುತ್ತಾನೆಂದು ತಿಳಿಸಲಾಗಿದೆ.

**ವಾಯ್ವಧಿಕರಣ**—(೨) ಮುಮುಕ್ಷುವು ವಾಯುಲೋಕ, ವರುಣಲೋಕ, ಇಂದ್ರಲೋಕ, ಪ್ರಜಾಪತಿಲೋಕಗಳನ್ನು ದಾಟಿಹೋಗುತ್ತಾನೆ ಎಂದು ಬೃಹದಾರ

ಣ್ಯಕದಲ್ಲಿ ಹೇಳಿರುವ ಲೋಕಗಳನ್ನು ಅರ್ಚಿರ್ಮಾರ್ಗದಲ್ಲಿ ಎಲ್ಲಿ ಸೇರಿಸಬೇಕೆಂದಾಶಂಕಿಸಿ ಅರ್ಚಿರ್ಮಾರ್ಗದಲ್ಲಿ ಬರುವ ಸಂವತ್ಸರದ ಮುಂದೆ ವಾಯುಲೋಕವನ್ನು ಸೇರಿಸಬೇಕೆಂದು ತಿಳಿಸಲಾಗಿದೆ.

**ವರುಣಾಧಿಕರಣ**—(೩) ವಾಯುಲೋಕಕ್ಕೆ ಹೋದಮೇಲೆ ವರುಣಲೋಕ, ಇಂದ್ರಲೋಕ, ಪ್ರಜಾಪತಿಲೋಕಗಳನ್ನು ಅವನು ಸೇರುತ್ತಾನೆಂದು ತಿಳಿಸಲಾಗಿದೆ.

**ಆತಿವಾಹಿಕಾಧಿಕರಣ**—(೪) ಹೀಗೆ ಅರ್ಚಿರ್ಮಾರ್ಗದಲ್ಲಿ ಹೇಳಿರುವ ಅರ್ಚಿರಾದಿಗಳು ಭೋಗಭೂಮಿಗಳೇ ಅಥವಾ ಕೇವಲ ಮಾರ್ಗಚಿಹ್ನೆಗಳೇ ಎಂದಾಕ್ಷೇಪಿಸಿ ಇವೆರಡೂ ಅಲ್ಲವೆಂದೂ, ಅವು ಮುಕ್ತರನ್ನು ಕರೆದುಕೊಂಡುಹೋಗಲು ಪರಶಿವನಿಂದ ನೇಮಿತರಾದ ಆತಿವಾಹಿಕರೆಂಬ ದೇವತೆಗಳೆಂದು ನಿರ್ಣಯಿಸಲಾಗಿದೆ.

**ಕಾರ್ಯಾಧಿಕರಣ**—(೫) ಬ್ರಹ್ಮವೇ ಜೀವನಾದ್ದರಿಂದಲೂ, ಜೀವನಿಗೆ ಪ್ರಾಪ್ತಿ ಎಂಬುದು ಹೊಂದದೇಇರುವುದರಿಂದಲೂ ಬ್ರಹ್ಮಪ್ರಾಪ್ತಿ ಎಂದರೆ ಹಿರಣ್ಯಗರ್ಭಪ್ರಾಪ್ತಿ ಎಂದರ್ಥವೆಂದಾಕ್ಷೇಪಿಸಿ ಜೀವರೂ ಸಹ ಪರಮಾತ್ಮನಿಂದಲೇ ಹುಟ್ಟುವರೆಂದು ಶ್ರುತಿ ಇರುವುದರಿಂದ ಬ್ರಹ್ಮಕಾರ್ಯರೆನಿಸಿದ ಜೀವರು ಬ್ರಹ್ಮದಲ್ಲಿ ಸೇರಲಿಕ್ಕೆ ಅಡ್ಡಿಯಿಲ್ಲವೆಂದು ಬಾದರಿಯ ಮತವನ್ನು ತಿಳಿಸಿ ಮುಕ್ತರು ಹಿರಣ್ಯಗರ್ಭನಲ್ಲಿ ಸೇರದೆ ಪರಶಿವ ಬ್ರಹ್ಮದಲ್ಲಿಯೇ ಸೇರುವರೆಂದು ಜೈಮಿನಿಯ ಪಕ್ಷವನ್ನೂ ತಿಳಿಸಲಾಗಿದೆ. ಇಷ್ಟಲಿಂಗೋಪಾಸನದ ಮೂಲಕ ತ್ರಿವಿಧೋಪಾಸನವನ್ನು ಮಾಡಿದ ಉಪಾಸಕರೆಲ್ಲರನ್ನೂ ಆತಿವಾಹಿಕರೆಂಬ ಶರಣರು ಪರಮಶಿವನಲ್ಲಿಯೇ ಒಯ್ಯುತ್ತಾರೆ ಎಂದು ಬಾದರಾಯಣ ಮತವನ್ನೂ ಕೊನೆಯಲ್ಲಿ ತಿಳಿಸಲಾಗಿದೆ.

## ಚತುರ್ಥಪಾದ (ಮುಕ್ತಿಪಾದ)

**ಸಂಪದ್ಯಾವಿರ್ಭಾವಾಧಿಕರಣ** (೧) ಮೋಕ್ಷವನ್ನು ಪಡೆಯುವ ಜೀವನು ಹೊಸದಾದ ಆಕಾರವ್ಯಾವುದನ್ನೂ ಪಡೆಯದೆ ಮೊದಲು ಕರ್ಮದಿಂದ ತಿರೋಹಿತವಾಗಿದ್ದ ತನ್ನ ಸ್ವರೂಪದ ಆವಿರ್ಭಾವವನ್ನು ಹೊಂದುವನೆಂದು ತಿಳಿಸಲಾಗಿದೆ.

**ಅವಿಭಾಗಾಧಿಕರಣ**—(೨) ಮುಕ್ತನು ಮೋಕ್ಷದಲ್ಲಿ ಭೋಗವನ್ನು ಅನುಭವಿಸುತ್ತಾನೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಪೂರ್ಣೈಕ್ಯವು ಮುಕ್ತಿಯಲ್ಲಿ ಬರುವುದಿಲ್ಲವೆಂದಾಕ್ಷೇಪಿಸಿ ನದೀಸಮುದ್ರದೃಷ್ಟಾಂತದಂತೆ ಸಂಪೂರ್ಣಲಯವೆಂಬ ಸಾಯುಜ್ಯಮುಕ್ತಿಯನ್ನೇ ಹೇಳಲಾಗಿದೆ.

**ಸಂಕಲ್ಪಾಧಿಕರಣ**—(೩) ಮೂರ್ತೋಪಾಸಕರು ತನ್ನ ಸತ್ಯಸಂಕಲ್ಪತ್ವದಿಂದಲೇ ಎಲ್ಲಾ ವಿಧಗಳಾದ ಭೋಗಗಳನ್ನು ಸೃಷ್ಟಿಸಿಕೊಂಡು ಅನುಭವಿಸುವರೆಂದು ತಿಳಿಸಲಾಗಿದೆ. ಮತ್ತು ಇಲ್ಲಿ ಕೇವಲ ಭೇದವಾದವನ್ನೂ ಮತ್ತು ಕೇವಲ ಅಭೇದವಾದವನ್ನೂ ನಿರಾಕರಿಸಿ ಭೇದಾಭೇದವೇ ಬಾದರಾಯಣನಿಗೆ ಸಮ್ಮತವೆಂದು ತಿಳಿಸಲಾಗಿದೆ.

**ಸಂಧ್ಯಾಧಿಕರಣ**—(೪) ಭೇದಾಭೇದಗಳು ಪರಸ್ಪರ ವಿರುದ್ಧವಾದ್ದರಿಂದ ಒಂದೆಡೆ ಸಂಭವಿಸುವುದಿಲ್ಲವೆಂದಾಶಂಕಿಸಿ ಸ್ವಪ್ನಾವಸ್ಥೆಯು ಪರಸ್ಪರವಿರುದ್ಧವಾದ

ಪ್ರಬೋಧ ಮತ್ತು ಸುಷುಪ್ತಿಗಳೆರಡಕ್ಕೂ ಸಮನ್ವಯಿಸುವಂತೆ ಭೇದಾಭೇದವೆರಡೂ ಒಂದುಕಡೆ ಅನ್ವಯಿಸುವುದರಲ್ಲಿ ತಪ್ಪೇನಿಲ್ಲವೆಂದು ನಿರೂಪಿಸಲಾಗಿದೆ. ಹಾಗೆಯೇ ದೀಪವು ಅಲ್ಪಪ್ರಮಾಣದ್ದೇ ಆಗಿದ್ದರೂ ಅದರ ಪ್ರಭೆಯು ಎಲ್ಲಾಕಡೆಯೂ ವ್ಯಾಪಿಸುವಂತೆ ಮೂರ್ತೋಪಾಸಕರು ತಮ್ಮ ಚೈತನ್ಯವ್ಯಾಪ್ತಿಯಿಂದಲೇ ಪರಮಶಿವನಿಗೆ ಸಮಾನವಾದ ಭೋಗವನ್ನು ಅನುಭವಿಸುವರೆಂದೂ ಹೇಳಲಾಗಿದೆ.

**ಜಗದ್ವ್ಯಾಪಾರವರ್ಜಾಧಿಕರಣ**--(೫) ಮೂರ್ತೋಪಾಸಕರು ಪರಮಶಿವನ ಸಾಮ್ಯವನ್ನು ಪಡೆಯುವರೆಂದು ಹೇಳಿದ್ದರೂ ಜಗತ್ಕಾರಣತ್ವವು ಬ್ರಹ್ಮದ ಲಕ್ಷಣವಾದ್ದರಿಂದ ಅದೊಂದನ್ನು ಬಿಟ್ಟು ಭೋಗಾಂಶದಲ್ಲಿ ಮಾತ್ರವೇ ಮೂರ್ತೋಪಾಸಕರಂತೆ ಅಮೂರ್ತೋಪಸಕರಿಗೂ ಸಾಮ್ಯವಿರುವುದೆಂದು ತಿಳಿಸಲಾಗಿದೆ.

**ಅನಾವೃತ್ತ್ಯಧಿಕರಣ**--(೬) ಮೂರ್ತೋಪಾಸಕರು ಭೋಗಿಗಳಾದರೆ ಸ್ವರ್ಗಾದಿಭೋಗಗಳಂತೆ ಅವರಿಗೆ ಪುನರಾವೃತ್ತಿವುಂಟೆಂದಾಕ್ಷೇಪಿಸಿ ಅವರೂ ಕ್ರಮವಾಗಿ ಸಾಯುಜ್ಯಮನ್ನು ಪಡೆಯುವರಾದ್ದರಿಂದ ಅವರಿಗೂ ಅಮೂರ್ತೋಪಾಸಕರಂತೆಯೇ ಪುನರ್ಜನ್ಮದ ಪ್ರಸಕ್ತಿಇಲ್ಲವೆಂದು ತಿಳಿಸಲಾಗಿದೆ.

## ಅಧಿಕರಣಗಳ ವಿವರ

### ದ್ವಿತೀಯಾಧ್ಯಾಯ

| | | |
|---|---|---|
| ತೃತೀಯಪಾದ ಅಧಿಕರಣಗಳು | .... | ೧೫ |
| ಚತುರ್ಥಪಾದ ಅಧಿಕರಣಗಳು | .... | ೭ |

### ತೃತೀಯಾಧ್ಯಾಯ

| | | |
|---|---|---|
| ಪ್ರಥಮಪಾದ ಅಧಿಕರಣಗಳು | .... | ೬ |
| ದ್ವಿತೀಯಪಾದ " | .... | ೧೦ |
| ತೃತೀಯಪಾದ " | .... | ೨೮ |
| ಚತುರ್ಥಪಾದ " | .... | ೧೭ |

### ಚತುರ್ಥಾಧ್ಯಾಯ

| | | |
|---|---|---|
| ಪ್ರಥಮಪಾದ ಅಧಿಕರಣಗಳು | .... | ೧೦ |
| ದ್ವಿತೀಯಪಾದ " | .... | ೧೧ |
| ತೃತೀಯಪಾದ " | .... | ೫ |
| ಚತುರ್ಥಪಾದ " | .... | ೬ |



# ವಿಷಯಾನುಕ್ರಮಣಿಕೆ







# ಶ್ರೀಕರಭಾಷ್ಯಂ

## ದ್ವಿತೀಯೋ ಭಾಗಃ

### ಅಥ ಶ್ರೀಕರಭಾಷ್ಯೇ ದ್ವಿತೀಯಾಧ್ಯಾಯಸ್ಯ ತೃತೀಯಃ ಪಾದಃ

ಪೂರ್ವಪಾದೇ ಶ್ರುತಿವಿರುದ್ಧಾನಿ ಸಾಂಖ್ಯಯೋಗತಾರ್ಕಿಕಾದ್ವೈತಾದಿಮತಾನಿ ಅಧಿಷ್ಠಾನಬ್ರಹ್ಮಣೋ ಜಗದುಭಯಹೇತುತ್ವಾನಂಗೀಕಾರಿಣ್ನಿರಸ್ತಾಃ. ಶ್ರುತೀನಾಮನ್ಯೋನ್ಯವಿರುದ್ಧತ್ವದ್ಯೋತನಾತ್ ಜಗತೋ ಬ್ರಹ್ಮಕಾರಣತ್ವಮಸಂಗತಮಿತ್ಯಾಶಂಕಾಯಾಂ ತನ್ನಿರಾಕರಣಾರ್ಥಂ ತೃತೀಯಪಾದ ಆರಭ್ಯತೇ.

ವಿಯದಧಿಕರಣಂ ‖ ೧ ‖ ನ ವಿಯದಶ್ರುತೇಃ ‖ ೧ ‖

ಪೂರ್ವೋಕ್ತಪಾದದ್ವಯೇ ಶ್ರುತ್ಯಾಭಾಸಮತಾನಾಂ ಯುಕ್ತಿಮಾತ್ರಪ್ರಧಾನವಾದಿಮತಾನಾಂ ಚ ತಿರಸ್ಕೃತತ್ವೇನ ಬ್ರಹ್ಮಣಿ ಸರ್ವೇಷಾಂ ವೇದಾಂತನಾಮವಿರೋಧತ್ವಂ ಪ್ರದರ್ಶಿತಂ. ಏತತ್ಪಾದದ್ವಯೇ ಶ್ರುತಿಪರಸ್ಪರವಿರೋಧಪರಿಹಾರಾದಧ್ಯಾಯಸಂಗತಿಃ. ಇದಾನೀಂ ಸ್ವಪಕ್ಷವಿಕ್ಷೇಪಾದಿದೋಷಗಂಧಾಭಾವಖ್ಯಾಪನಾಯ ಬ್ರಹ್ಮಕಾರ್ಯತ್ವೇನಾಭಿಮತಚೇತನಾಚೇತನಪ್ರಪಂಚಕಾರ್ಯಪ್ರಕಾರೋ ವಿಶೋಧ್ಯತೇ. "ಏಕಮೇವಾದ್ವಿತೀಯಂ ಬ್ರಹ್ಮ", "ತತ್ತೇಜೋಽಸೃಜತ" ಇತಿ ಸೃಷ್ಟಿಪ್ರಕರಣೇ ತೇಜಃಪ್ರಭೃತೀನಾಮೇವೋತ್ಪತ್ತಿರಾಮ್ನಾಯತೇ. "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ" "ಏತಸ್ಮಾಜ್ಜಾಯತೇ ಪ್ರಾಣಃ" ಇತ್ಯಾದಿಷ್ವಾಕಾಶವಾಯ್ವೋರ್ಜನ್ಯತ್ವಶ್ರವಣಾದತ್ರ ವಿಯದುತ್ಪದ್ಯತೇ ವಾ ನವೇತಿ ಸಂಶಯ್ಯತೇ. "ಖಂ ಬ್ರಹ್ಮ" "ಆಕಾಶ ಆತ್ಮಾ" ಇತ್ಯಾದಿಶ್ರುತಿಷ್ವಾಕಾಶಸ್ಯೈವ ಬ್ರಹ್ಮತ್ವವ್ಯವಸ್ಥಾಪನಾತ್, "ಆಕಾಶೋ ಹ ವೈ ನಾಮರೂಪಯೋರ್ನಿರ್ವಹಿತಾ ತೇ ಯದಂತರಾ ಸ ಆತ್ಮಾ" ಇತ್ಯಾದಿಷು ತಸ್ಯೈವ ಸರ್ವಾಂತರ್ಯಾಮಿತ್ವಸ್ಯಾತ್ಮತ್ವೋಪದೇಶಸ್ಯ ಚ ನಿರ್ದೇಶಾತ್, ಛಾಂದೋಗ್ಯೇ ತೇಜಃಪ್ರಭೃತೀನಾಮೇವ ಸೃಷ್ಟ್ಯುಪದೇಶಾತ್, ನಿರವಯತ್ವಾತ್ಪೂರ್ಣತ್ವಾಚ್ಛೇದ್ಯತ್ವಾದಾಹ್ಯತ್ವಾಕ್ಲೇದ್ಯತ್ವಾಶೋಷ್ಯತ್ವಾದೀನಾಂ ದರ್ಶನಾಚ್ಚ ವಿಯದುತ್ಪತ್ತಿರ್ನ ಸಂಭವತಿ. ತದುತ್ಪತ್ತಿವಿಧಾಯಕತೈತ್ತಿರೀಯಾದಿವಾಕ್ಯಾನಾಂ ಭ್ರಮಮಾತ್ರತ್ವಮೇವೇತಿ ಪ್ರಾಪ್ತೇ

ಪ್ರಚಕ್ಷ್ಮಹೇ, ನ ವಿಯುದಶ್ರುತೇಃ—ವಿಯದಾಕಾಶಂ ನಿರವಯವತ್ವಾದ್ಬ್ರಹ್ಮವದಜನ್ಯಮಿತಿ ಚೇನ್ನ, ಕುತಃ, ಅಶ್ರುತೇಃ ಯತ್ರಕುತ್ರಾಪಿ ಶ್ರುತಿಷು ತಸ್ಯಾಜನ್ಯತ್ವಾಶ್ರವಣಾತ್ ಆಕಾಶಸ್ಯ ಅಜನ್ಯತ್ವಂ ಪರಬ್ರಹ್ಮತ್ವಂ ಚ ಸರ್ವಥಾ ನ ವಿಧೀಯತೇ. "ಖಂ ಬ್ರಹ್ಮ" "ಆಕಾಶ ಆತ್ಮಾ" ಇತ್ಯಾದಿಶ್ರುತೀನಾಂ "ಅನ್ನಂ ಬ್ರಹ್ಮ, ಪ್ರಾಣೋ ಬ್ರಹ್ಮ, ಮನೋ ಬ್ರಹ್ಮ, ವಿಜ್ಞಾನಂ ಬ್ರಹ್ಮ, ಆನಂದಂ ಬ್ರಹ್ಮ, ಓಮಿತ್ಯೇಕಾಕ್ಷರಂ ಬ್ರಹ್ಮ, ಅಸಾವಾದಿತ್ಯೋ ಬ್ರಹ್ಮ" ಇತ್ಯಾದಿವದೌಪಚಾರಿಕಮೇವ. "ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ" "ಯತ್ಪರಂ ಬ್ರಹ್ಮ ಸರ್ವಾತ್ಮ ವಿಶ್ವಸ್ಯಾಯತನಂ ಮಹತ್" ಇತ್ಯಾದಿಶ್ರುತಿಷ್ವಾಕಾಶವ್ಯತಿರೇಕತ್ವಸ್ಯ ಬ್ರಹ್ಮಣಿ ಶಿವೇ ಉಪದಿಷ್ಟತ್ವಾನ್ನಾನ್ಯಾರ್ಥೋ ಯುಕ್ತಃ.

ಕಿಂಚ, "ಆಕಾಶೋ ಹ ವೈ ನಾಮರೂಪಯೋರ್ನಿರ್ವಹಿತಾ" ಇತ್ಯಾದಾವಾಕಾಶಶಬ್ದಸ್ಯ ಆಸಮಂತಾತ್ಕಾಶತೇ ಪ್ರಕಾಶಯತೀತಿ ವ್ಯುತ್ಪತ್ತ್ಯಾ ಬ್ರಹ್ಮಪರತ್ವಂ. ಸ್ಥಾನಪ್ರಕರಣಲಿಂಗಾತ್ಸಮನ್ವಯ ಇತಿ ನ್ಯಾಯೇನ ಬ್ರಹ್ಮಧರ್ಮಾಣಾಂ ದ್ಯೋತನಾತ್ತತ್ಪರತ್ವಮೇವೇತಿ ನಿಶ್ಚೀಯತೇ. "ಶ್ರುತಿಸ್ಸತ್ಯಾರ್ಥವಾದಿನೀ" ಇತಿ ಸ್ಮೃತಿದರ್ಶನಾತ್ "ಅನ್ನಂ ಬ್ರಹ್ಮೇ"ತ್ಯಾದೀನಾಂ ಕಥಮೌಪಚಾರಿಕತ್ವಮಿತಿ ಚೇತ್,"ಯೋ ರುದ್ರೋ ಅಗ್ನೌ ಯೋ ಅಪ್ಸು" ಇತ್ಯಾದೌ ಶಿವಸ್ಯ ಬ್ರಹ್ಮಣ ಅಷ್ಟಮೂರ್ತ್ಯಾತ್ಮಕತ್ವೇನ ಸರ್ವಾಂತರ್ಯಾಮಿತ್ವೇನ ಚ ಸರ್ವಶಬ್ದವಾಚ್ಯತ್ವಂ ಪ್ರ್ಯಾಚಕ್ಷತೇ. "ಸ ಏವ ವಿಷ್ಣುಸ್ಸ ಪ್ರಾಣಸ್ಸ ಕಾಲೋಽಗ್ನಿಸ್ಸ ಚಂದ್ರಮಾ" "ಸ ಏವ ಸರ್ವಂ ಯದ್ಭೂತಂ ಯಚ್ಚ ಭವ್ಯಂ ಸನಾತನಂ" "ಸರ್ವೋ ವೈ ರುದ್ರಃ" ಇತ್ಯಾದಿಷು ಸರ್ವಸ್ಯ ಬ್ರಹ್ಮಕಾರ್ಯತ್ವೇನ ಬ್ರಹ್ಮಾತ್ಮಕತ್ವಂ "ತದನನ್ಯತ್ವಮಾರಂಭಣ" ಇತ್ಯತ್ರ ಸ್ಪಷ್ಟಮುಪದಿಷ್ಟಂ.

ಶ್ರುತಿವಿರುದ್ಧವಾದ ಸಾಂಖ್ಯ ಯೋಗ ತಾರ್ಕಿಕ ಮತ್ತು ಅದ್ವೈತಮತಗಳಲ್ಲಿ ಮೂಲಬ್ರಹ್ಮವನ್ನು ಜಗತ್ತಿಗೆ ನಿಮಿತ್ತ ಮತ್ತು ಉಪಾದಾನಕಾರಣವೆಂದು ಒಪ್ಪದಿರುವುದರಿಂದ ಅವನ್ನು ಹಿಂದಿನ ಅಧ್ಯಾಯದಲ್ಲಿ ನಿರಾಕರಿಸಲಾಯಿತು. ಶ್ರುತಿಗಳಲ್ಲಿ ಪರಸ್ಪರವಿರೋಧವಿರುವುದರಿಂದ ಬ್ರಹ್ಮವೇ ಜಗತ್ತಿಗೆ ಕಾರಣವೆಂಬುದು ಹೊಂದುವುದಿಲ್ಲವೆಂಬ ಆಕ್ಷೇಪನ್ನು ನಿರಾಕರಿಸಲು ಈ ತೃತೀಯಪಾದವನ್ನಾರಂಭಿಸಲಾಗಿದೆ. ಶ್ರುತಿಯನ್ನು ನೆಪಮಾತ್ರಕ್ಕೆ ಅವಲಂಬಿಸಿದ ಮತಗಳನ್ನೂ, ಕೇವಲ ಯುಕ್ತಿಯನ್ನೇ ಅವಲಂಬಿಸಿದ ಮತಗಳನ್ನೂ ಹಿಂದಿನ ಎರಡು ಪಾದಗಳಲ್ಲಿ ತಿರಸ್ಕರಿಸಿ ಎಲ್ಲಾ ವೇದಾಂತಗಳಿಗೂ ಬ್ರಹ್ಮದಲ್ಲಿಯೇ ಸಮನ್ವಯವಾಗಲಿಕ್ಕೆ ಏನೂ ವಿರೋಧವಿಲ್ಲವೆಂದು ತಿಳಿಸಿಯಾಯಿತು. ಶ್ರುತಿಗಳಲ್ಲಿ ಕಂಡುಬರುವ ಪರಸ್ಪರವಿರೋಧವನ್ನು ಅಲ್ಲಿ ಪರಿಹರಿಸಿದ್ದರಿಂದ ಅವಿರೋಧಾಧ್ಯಾಯಕ್ಕೆ ಅವು ಹೊಂದಿಕೆಯಾದವು. ನಮ್ಮ

ರ್ತಿಯೂ ಸರ್ವಾತ್ಮಕನೂ ಆಗಿ ಸರ್ವನೆನಿಸಿರುವನೆಂದು ಹೇಳಿದೆ. "ಅವನೇ ವಿಷ್ಣು, ಪ್ರಾಣ, ಕಾಲ, ಅಗ್ನಿ, ಚಂದ್ರನಿರುವನು. ಹಿಂದಿನದು ಮುಂದಿನದು ಎಲ್ಲವೂ ಅವನೇ. ಹೀಗೆ ಎಲ್ಲವೂ ಬ್ರಹ್ಮಕಾರ್ಯವಾದ್ದರಿಂದ ಬ್ರಹ್ಮರೂಪವಾಗಿದೆ" ಎಂಬುದನ್ನು "ತದನನ್ಯತ್ವಂ" ಎಂಬ ಸೂತ್ರದಲ್ಲಿ ಹಿಂದೆಯೇ ಸ್ಪಷ್ಟಪಡಿಸಲಾಗಿದೆ.

ಕಿಂಚ ಪೂರ್ವಾಧ್ಯಾಯೇ ಆಕಾಶಸ್ತಲ್ಲಿಂಗಾತ್" ಇತ್ಯತ್ರ ಬ್ರಹ್ಮ ಲಿಂಗವತ್ತ್ವಾದಾಕಾಶಾದಿಶಬ್ದಾನಾಂ ಬ್ರಹ್ಮಪರತ್ವಮಿತಿ ಪೂರ್ವಮೇವೋಕ್ತಂ. "ಯತೋ ವಾ ಇಮಾನಿ ಭೂತಾನಿ ಜಾಯಂತೇ" "ಯಥಾ ಸುದೀಪ್ತಾತ್ಪಾವಕಾದ್ವಿಸ್ಫುಲಿಂಗಾಸ್ಸಹಸ್ರಶಃ ಪ್ರಭವಂತೇ ತತ್ರ ಚೈವಾಪಿ ಯಂತಿ" ಇತ್ಯಾದೌ ಜೀವಾನಾಂ ಬ್ರಹ್ಮಜನ್ಯತ್ವಶ್ರವಣೇಽಪಿ ತೇಷಾಂ ನಿರವಯವತ್ವೇನ ಯಥೋತ್ಪತ್ತೇರೌಪಚಾರಿಕತ್ವಂ ನಿರ್ದಿಷ್ಟಂ ತದ್ವತ್ "ಆತ್ಮನ ಆಕಾಶಸ್ಸಂಭೂತಃ" ಇತ್ಯತ್ರಾಕಾಶೋತ್ಪತ್ತಿರೌಪಚಾರಿಕ ಏವೇತ್ಯಾಶಂಕಾಯಾಮಾಹ—ಅಸ್ತಿ ತು ||೨|| "ತು ಶಬ್ದೋ ನಿಶ್ಚಯಾರ್ಥಃ. ಅಸ್ತ್ಯಾಕಾಶೋತ್ಪತ್ತಿಃ."ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ" ಇತ್ಯಾದಿಶ್ರುತೌ ಘಟಾದಿವದಾಕಾಶೋತ್ಪತ್ತಿಃ ಶ್ರೂಯತೇ. ಜೀವವತ್ತದತೀಂದ್ರಿಯವಿಷಯತ್ವೇಽಪಿ ಜಡತ್ವಾತ್ತದ್ವದಯುಕ್ತಂ. "ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್" "ಜ್ಞಾಜ್ಞೌ ದ್ವಾವಜಾವೀಶಾನೀಶೌ" ಇತ್ಯಾದೌ ಜೀವವತ್ ಶ್ರುತ್ಯಂತರಪ್ರಮಾಣಾಭಾವತಯಾ ಆಕಾಶಜನ್ಯತ್ವಪ್ರತಿಪಾದಕತ್ವಾದರ್ಶನಾತ್ ನಿರವಯತ್ವೇಽಪಿ ಮನಃಪ್ರಾಣಾದಿವತ್ ತಜ್ಜನ್ಯತ್ವಮನಿವಾರಿತಂ.

ಹಿಂದಿನ ಅಧ್ಯಾಯದಲ್ಲಿ "ಆಕಾಶಸ್ತಲ್ಲಿಂಗಾತ್" ಎಂಬ ಸೂತ್ರದಲ್ಲಿ ಬ್ರಹ್ಮ ಧರ್ಮಗಳೇ ಇರುವುದರಿಂದ ಆಕಾಶಪದವು ಬ್ರಹ್ಮವನ್ನು ತಿಳಿಸುವುದಾಗಿಯೂ ಹೇಳಿದೆ. "ಉರಿಯುವ ಬೆಂಕಿಯಿಂದ ಕಿಡಿಗಳು ಉದುರುವಂತೆ ಅಕ್ಷರನೆನಿಸಿದ ಪರಮಾತ್ಮನಿಂದ ಸಮಾನಾಕಾರದ ಜೀವರು ಹುಟ್ಟಿದ್ದಾರೆ, ಕೊನೆಯಲ್ಲಿ ಅವನಲ್ಲಿಯೇ ಸೇರುತ್ತಾರೆ" ಎಂಬಲ್ಲಿ ಜೀವರನ್ನು ಬ್ರಹ್ಮದಿಂದ ಹುಟ್ಟುವರೆಂದು ಹೇಳಿದ್ದರೂ ಸಹ ಅವರು ನಿರವಯವರಾದ್ದರಿಂದ ಅವರ ಉತ್ಪತ್ತಿಯನ್ನು ಕೇವಲ ಉಪಚಾರದ ಮಾತೆಂದು ಹೇಳಲಾಗಿದೆ. ಅದರಂತೆ "ಆತ್ಮನಿಂದ ಆಕಾಶ ಹುಟ್ಟಿತು" ಎಂದು ಹೇಳುವ ಮಾತೂ ಔಪಚಾರಿಕವೆನಿಸಿದೆಯಲ್ಲವೇ? ಎಂದರೆ ಅದನ್ನು ಇಲ್ಲಿ ನಿರಾಕರಿಸಲಾಗಿದೆ. ಅಸ್ತಿ ತು- ಇಲ್ಲಿ ತು ಶಬ್ದವು ನಿಶ್ಚಯವನ್ನು ತಿಳಿಸುತ್ತದೆ. ಆಕಾಶ ಹುಟ್ಟುವುದೆಂಬ ಮಾತು ನಿಜ. "ಆ ಈ ಆತ್ಮನಿಂದ ಆಕಾಶ ಹುಟ್ಟಿತು" ಎಂಬ ಶ್ರುತಿಯು ಘಟದಂತೆ ಆಕಾಶದ ಉತ್ಪತ್ತಿಯನ್ನು ಹೇಳಿದೆ. ಆದರೆ ಜೀವನಂತೆ ಆಕಾಶವು ಅತೀಂದ್ರಿಯವೆನಿಸಿದರೂ ಜಡವಾದ್ದರಿಂದ ಅದನ್ನು ಹಾಗೆ ಹೇಳಲಾಗುವುದಿಲ್ಲ. "ಆತ್ಮನಿಗೆ ಹುಟ್ಟುಸಾವುಗಳಿಲ್ಲ" ವೆಂಬಲ್ಲಿ ಜೀವನನ್ನು ನಿತ್ಯನೆಂದು ಹೇಳಿರುವಂತೆ ಆಕಾಶವನ್ನು ನಿತ್ಯವೆಂದು ಹೇಳುವ

ಶ್ರುತಿಪ್ರಮಾಣವಿಲ್ಲದ್ದರಿಂದಲೂ, ಆಕಾಶವನ್ನು ಜನ್ಯವೆಂದು ಹೇಳುವ ಶ್ರುತಿ ಇರುವುದರಿಂದಲೂ ಆಕಾಶ ನಿರವಯವಾದರೂ ಮನಸ್ಸು ಪ್ರಾಣಗಳಂತೆ ಆತ್ಮನಿಂದಲೇ ಹುಟ್ಟಿತೆಂದೇ ಹೇಳಬೇಕಾಗುತ್ತದೆ.

"ವಾಯೋರಂತರಿಕ್ಷಂ ಚೇತ್ತದಮೃತಂ" ಇತಿ ಶ್ರುತೌ ಪವನಾಕಾಶಯೋರಮೃತತ್ವನಿರ್ದೇಶಾದಾಕಾಶೋತ್ಪತ್ತಿವಿಧಾಯಕಶ್ರುತೀನಾಂ ಗೌಣತ್ವಮೇವೇತ್ಯಾಶಂಕ್ಯ ನಿರಾಕರೋತಿ. ಗೌಣ್ಯಸಂಭವಾಚ್ಛಬ್ದಾಚ್ಚ ॥೩॥ ಛಾಂದೋಗ್ಯೇ "ತತ್ತೇಜೋಽಸೃಜತ" ಇತ್ಯತ್ರ ತೇಜಃಪ್ರಭೃತೀನಾಮೇವ ಸೃಷ್ಟ್ಯುಪದೇಶಾತ್, "ಆತ್ಮನ ಆಕಾಶಸ್ಸಂಭೂತಃ" ಇತ್ಯತ್ರಾಕಾಶೋತ್ಪತ್ತಿಪ್ರದರ್ಶಕಾನಾಂ ಶ್ರುತೀನಾಂ ಮುಖ್ಯತ್ವಾಸಂಭವಾತ್ ಗೌಣತ್ವಂ ಕಲ್ಪಯಿತುಂ ಯುಕ್ತಮೇವೇತಿ ಚೇನ್ನ, ಕುತಃ ಅಸಂಭವಾಚ್ಛಬ್ದಾಚ್ಚ. "ಆತ್ಮನ ಆಕಾಶಃ ಸಂಭೂತಃ" ಇತಿ ಶ್ರುತೇರ್ಗೌಣತ್ವಾಸಂಭವಾತ್, ಶಬ್ದಾಚ್ಚ. "ಯದಾ ತಮಃ—ಶಿವ ಏವ ಕೇವಲಃ" "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ" "ಏಕಮೇವಾದ್ವಿತೀಯಂ ಬ್ರಹ್ಮ" "ಸದೇವ ಸೌಮ್ಯೇದಮಗ್ರ ಆಸೀತ್" ಇತ್ಯಾದಿಶ್ರುತಿತಶದರ್ಶನಾತ್ ಘಟಾದಿವದಾಕಾಶೋತ್ಪತ್ತಿರ್ಮುಖ್ಯ ಏವೇತಿ ಸಿದ್ಧಂ. "ಕ್ಷರಂ ಪ್ರಧಾನಂ ಅಮೃತಾಕ್ಷರಂ ಹರಃ ಕ್ಷರಾತ್ಮಾನಾವೀಶತೇ ದೇವ ಏಕಃ" ಇತ್ಯಾದಾವಮೃತಶಬ್ದಸ್ಯ ಬ್ರಹ್ಮಲಿಂಗತ್ವವ್ಯವಸ್ಥಾಪನಾತ್, . ವಾಯೋರಂತರಿಕ್ಷಂ ಚೇತ್ತ್ರದಮೃತಂ" ಇತಿ ಶ್ರುತಿನಿಷ್ಠಾಮೃತಶಬ್ದಸ್ಯಾಪಿ ಬ್ರಹ್ಮಲಿಂಗತ್ವೇನ ಬ್ರಹ್ಮಪರತ್ವೇನ ಬ್ರಹ್ಮಪರತ್ವಂ. "ಆಕಾಶಸ್ತಲ್ಲಿಂಗಾತ್ ಅತ ಏವ ಪ್ರಾಣಃ" ಇತ್ಯತ್ರ ಪೂರ್ವಾಧ್ಯಾಯೇ ಬ್ರಹ್ಮಲಿಂಗವಿಧಾಯಕವಾಕ್ಯಾನಾಂ ಬ್ರಹ್ಮಪರತ್ವಮಿತಿ ಬಹುಧಾ ಪ್ರಪಂಚಿತತ್ವಾನ್ನ ಸಂದೇಹಕಲಂಕಃ. ನೋ ಚೇತ್ "ಸದೇವ ಸೌಮ್ಯೇದಮಗ್ರ ಆಸೀತ್" ಇತ್ಯಾದಿಶ್ರುತಿವಿರೋಧೋ ದುರ್ನಿವಾರಃ.

"ವಾಯುವಿನಿಂದ ಅಂತರಿಕ್ಷ ಹುಟ್ಟಿತು, ಅದೇ ಅಮೃತ" ಎಂಬ ಶ್ರುತಿಯಲ್ಲಿ ವಾಯು ಆಕಾಶಗಳನ್ನು ಅಮೃತವೆಂದು ಹೇಳಿರುವುದರಿಂದ ಆಕಾಶದ ಉತ್ಪತ್ತಿಯನ್ನು ಹೇಳುವ ಶ್ರುತಿಯನ್ನು ಅಮುಖ್ಯವೆಂದು ಏಕೆ ಹೇಳಬಾರದು? ಎಂದಾಶಂಕಿಸಿ ನಿರಾಕರಿಸುತ್ತಾನೆ. 'ಅದು ತೇಜಸ್ಸನ್ನು ಸೃಷ್ಟಿಸಿತು" ಎಂಬ ಛಾಂದೋಗ್ಯ ಮಂತ್ರದಲ್ಲಿ ತೇಜಸ್ಸು ಮೊದಲಾದವುಗಳ ಸೃಷ್ಟಿಯನ್ನು ಹೇಳಿರುವುದರಿಂದ "ಆತ್ಮನಿಂದ ಆಕಾಶ ಹುಟ್ಟಿತು" ಎಂದು ಆಕಾಶದ ಉತ್ಪತ್ತಿಯನ್ನು ತಿಳಿಸುವ ಶ್ರುತಿವಾಕ್ಯಗಳು ಮುಖ್ಯವೆನಿಸಲಾರವು. ಆದ್ದರಿಂದ ಅವನ್ನು ಗೌಣವೆಂದು ಏಕೆ ಭಾವಿಸಬಾರದು? ಅಂದರೆ ಹಾಗಲ್ಲ. ಹಾಗೆ ಭಾವಿಸಲಿಕ್ಕೆ ಶ್ರುತಿಯ ಆಧಾರವಿಲ್ಲ. "ಆತ್ಮನಿಂದ ಆಕಾಶ ಹುಟ್ಟಿತು" ಎಂಬ ಶ್ರುತಿಯನ್ನು ಗೌಣವೆಂದು ಹೇಳಲು ಸಾಧ್ಯವಿಲ್ಲ.

"ಪ್ರಳಯದಲ್ಲಿ ಏನೂ ಇಲ್ಲದೆ ಶಿವನೊಬ್ಬನೇ ಇದ್ದನು" ಎಂದು ತಿಳಿಸುವ ನೂರಾರು ಶ್ರುತಿಗಳು ಪರಮಾತ್ಮನೊಬ್ಬನನ್ನೇ ನಿತ್ಯನೆಂದು ಹೇಳಿರುವುದರಿಂದ ಘಟದಂತೆ ಆಕಾಶ ಹುಟ್ಟಿತೆಂದು ಹೇಳುವ ಮಾತು ಮುಖ್ಯವೆಂದೇ ಸಿದ್ಧಿಸುತ್ತದೆ. "ಜೀವ ಪ್ರಕೃತಿಗಳೆರಡಕ್ಕೂ ಅಮೃತರೂಪನಾದ ಪರಮಾತ್ಮನು ನಿಯಾಮಕನು" ಎಂಬಲ್ಲಿ ಅಮೃತಪದವು ಬ್ರಹ್ಮಕ್ಕೇ ಅನ್ವಯಿಸುವುದೆಂದು ವ್ಯವಸ್ಥೆಯಾಗಿದೆ. "ವಾಯುವಿನಿಂದ ಆಕಾಶ ಹೊರಬಂದು ಅಮೃತವೆನಿಸಿದೆ" ಎಂಬಲ್ಲಿ ಬರುವ ಅಮೃತಪದವೂ ಬ್ರಹ್ಮ ಧರ್ಮವಾದ್ದರಿಂದ ಬ್ರಹ್ಮಕ್ಕೇ ಅನ್ವಯಿಸುತ್ತದೆ. "ಆಕಾಶಸ್ತಲ್ಲಿಂಗಾತ್" "ಅತ ಏವ ಪ್ರಾಣಃ" ಎಂಬ ಸೂತ್ರಗಳಲ್ಲಿ ಬ್ರಹ್ಮಧರ್ಮಗಳನ್ನೇ ವಿಸ್ತಾರವಾಗಿ ಹೇಳಿರುವುದ ರಿಂದ ಸಂಶಯಕ್ಕವಕಾಶವಿಲ್ಲ. ಹೀಗೆ ಹೇಳದಿದ್ದರೆ ನೂರಾರು ಶ್ರುತಿಗಳ ವಿರೋಧ ಸಂಭವಿಸುತ್ತದೆ.

"ಖಂ ಬ್ರಹ್ಮ" ಇತ್ಯಾದಾವಾಕಾಶಸ್ಯ ಬ್ರಹ್ಮತ್ವವ್ಯಪದೇಶಾತ್, "ಆತ್ಮನ ಆಕಾಶಸ್ಸಂಭೂತಃ" ಇತಿ ಶ್ರುತಿನಿಷ್ಠಾಕಾಶೋತ್ಪತ್ತೇಃ ಕಥಂ ಮುಖ್ಯತ್ವಮಿತ್ಯಾಶಂಕ್ಯ ತತ್ರಾಹ. ಸ್ಯಾಚ್ಚೈಕಸ್ಯ ಬ್ರಹ್ಮಶಬ್ದವತ್ ॥ ೪ ॥ "ಖಂ ಬ್ರಹ್ಮ" ಇತ್ಯಾದಾವಾಕಾಶಸ್ಯ ಬ್ರಹ್ಮತ್ವಪ್ರದರ್ಶನೇಽಪಿ, "ಆತ್ಮನ ಆಕಾಶಸ್ಸಂಭೂತಃ" ಇತ್ಯತ್ರಾಕಾಶೋತ್ಪತ್ತಿರ್ಮುಖ್ಯ ಏವ, ಕುತಃ ಬ್ರಹ್ಮಶಬ್ದವತ್. "ಅಸಾವಾದಿತ್ಯೋ ಬ್ರಹ್ಮ" "ಅನ್ನಂ ಬ್ರಹ್ಮ" ಇತ್ಯಾದೌ ಕಾರ್ಯಭೂತಪ್ರಭಾಕರಾದೌ ಯಥಾ ಬ್ರಹ್ಮಶಬ್ದಸ್ಯ ಗೌಣತ್ವಂ, ಕಾರಣಭೂತೇ ಬ್ರಹ್ಮಣಿ ಯಚ್ಚ ಮುಖ್ಯತ್ವಂ ತದ್ವತ್ಕಾರ್ಯ ಭೂತಸ್ಯ ಚೈಕಸ್ಯಾಕಾಶಸ್ಯಾಪಿ "ಖಂ ಬ್ರಹ್ಮ" ಇತ್ಯಾದಿಬ್ರಹ್ಮಶಬ್ದವಾ ಚ್ಯತಂ ಗೌಣಮೇವ. ನಿರವಯವತ್ವೇನಾಜನ್ಯತ್ವಾಂಗೀಕಾರೇ ಪರ ಮಾಣ್ವಾದೀನಾಮಪಿ ನಿತ್ಯತ್ವಂ ಸ್ಯಾತ್. ತಸ್ಮಾದಾಕಾಶೋತ್ಪತ್ತಿರ್ನ ನಿವಾರ್ಯತೇ.

"ಆಕಾಶವೇ ಬ್ರಹ್ಮ" ವೆಂಬಲ್ಲಿ ಆಕಾಶಪದವು ಬ್ರಹ್ಮಪರವಾಗಿದೆಯಾದ್ದರಿಂದ "ಆತ್ಮನಿಂದ ಆಕಾಶ ಹುಟ್ಟಿತು" ಎಂಬಲ್ಲಿ ಹೇಳಿರುವ ಆಕಾಶದ ಉತ್ಪತ್ತಿ ಹೇಗೆ ಮುಖ್ಯವೆನಿಸೀತು? ಎಂದಾಶಂಕಿಸಿ ನಿರಾಕರಿಸುತ್ತಾನೆ "ಆಕಾಶವೇ ಬ್ರಹ್ಮ" ವೆಂಬಲ್ಲಿ ಆಕಾಶವನ್ನು ಬ್ರಹ್ಮವೆಂದು ಹೇಳಿದ್ದರೂ "ಆತ್ಮನಿಂದ ಆಕಾಶ ಹುಟ್ಟಿತು" ಎಂಬಲ್ಲಿ ಆಕಾಶದ ಉತ್ಪತ್ತಿಯನ್ನು ಮುಖ್ಯವೆಂದೇ ಭಾವಿಸಬೇಕು. ಬ್ರಹ್ಮಶಬ್ದ ದಂತೆಯೇ "ಈ ಆದಿತ್ಯನು ಬ್ರಹ್ಮ" "ಅನ್ನವೇ ಬ್ರಹ್ಮ" ಎಂಬ ಕಡೆಗಳಲ್ಲೂ ಕಾರ್ಯರೂಪವಾದ ಸೂರ್ಯ ಮೊದಲಾದವರಿಗೂ ಬ್ರಹ್ಮಶಬ್ದವನ್ನು ಉಪ ಯೋಗಿಸಿರುವುದು ಹೇಗೆ ಅಮುಖ್ಯವೋ, ಇವರೆಲ್ಲರಿಗೂ ಕಾರಣವೆನಿಸಿದ ಬ್ರಹ್ಮದಲ್ಲಿಯೇ ಬ್ರಹ್ಮಪದವನ್ನು ಪ್ರಯೋಗಿಸುವುದು ಹೇಗೆ ಮುಖ್ಯವೋ ಹಾಗೆ ಕಾರ್ಯವೆನಿಸಿದ ಆಕಾಶವನ್ನು ಬ್ರಹ್ಮವೆಂದು ಹೇಳಿರುವುದು ಅಮುಖ್ಯವೇ ಸರಿ.

ಆಕಾಶವು ನಿರವಯವವಾದ್ದರಿಂದ ಅದನ್ನು ನಿತ್ಯವೆಂದು ಅಂಗೀಕರಿಸಿದರೆ ಪರಮಾಣು ಗಳೂ ನಿತ್ಯವಾಗಬೇಕಾದೀತು. ಆದ್ದರಿಂದ ಆಕಾಶ ಹುಟ್ಟಿತೆಂಬುದೇ ನಿಶ್ಚಿತ.

ವಿಯಜ್ಜನ್ಯತ್ವೇ ಹೇತ್ವಂತರಮಾಹ. ಪ್ರತಿಜ್ಞಾಹಾನಿರ್ವ್ಯತಿರೇಕಾಚ್ಛಬ್ದೇಭ್ಯಃ ॥೫॥ ಛಾಂದೋಗ್ಯೇ "ತತ್ತೇಜೋಽಸೃಜತ" ಇತ್ಯತ್ರ ತೇಜಃಪ್ರಭೃತೀನಾಮೇವ ಸೃಷ್ಟ್ಯುಪದೇಶಾತ್ತದಿತರಶ್ರುತ್ಯಾಪಿ ವಿಯದುತ್ಪತ್ತ್ಯಂಗೀಕಾರೇ ತದ್ವಿರೋಧ ಇತಿಚೇತ್ ಆಕಾಶಸ್ಯಬ್ರಹ್ಮಕಾರ್ಯತ್ವಾಭಾವಾದ್ವ್ಯತಿರೇಕಾತ್ ಬ್ರಹ್ಮವಿಲಕ್ಷಣತ್ವಾತ್ಪ್ರತಿಜ್ಞಾಹಾನಿಃ. "ಯೇನಾಶ್ರುತಂ ಶ್ರುತಂ ಭವತಿ" ಇತ್ಯಾದಿನಾ ಬ್ರಹ್ಮಜ್ಞಾನೇನ ಸರ್ವವಿಜ್ಞಾನ ಪ್ರತಿಜ್ಞಾವಿರೋಧಸ್ಸಂಭವತಿ. ತಸ್ಮಾದ್ಬ್ರಹ್ಮಜನ್ಯತ್ವಮಂಗೀಕರ್ತವ್ಯಂ. ಕಿಂಚ, "ಐತದಾತ್ಮ್ಯಮಿದಂ ಸರ್ವಂ" "ಸರ್ವೋ ವೈ ರುದ್ರಃ" "ಸರ್ವಂ ಖಲ್ವಿದಂ ಬ್ರಹ್ಮ" "ವಿಶ್ವರೂಪಾಯ ವೈ ನಮೋ ನಮಃ" ಇತ್ಯಾದಿಶ್ರುತಿಶತೇಭ್ಯಃ ಬ್ರಹ್ಮಣಸ್ಸರ್ವಾತ್ಮಕತ್ವೋಪದೇಶಾತ್ತದ್ಭಿನ್ನತ್ವಂ ವಕ್ತುಂ ಶಕ್ಯಂ. ನನ್ವೇವಂ ಉತ್ಪತ್ತಿಮತ್ತ್ವೇ ಸಿದ್ಧೇ ಪೂರ್ವೋಕ್ತವಿರೋಧಪರಿಹಾರಃ ಕಥಂ ಸಿಧ್ಯತೀತಿ ಚೇದುಚ್ಯತೇ. ಛಾಂದೋಗ್ಯೇ ಹಿ ತೇಜಸ ಉತ್ಪತ್ತಿಮಾತ್ರಂ ಶ್ರೂಯತೇ ನಾದ್ಯತ್ವಮಪಿ. ತೈತ್ತಿರೀಯಕೇ ತು "ಆಕಾಶಾದ್ವಾಯುಃ, ವಾಯೋರಗ್ನಿಃ" ಇತಿ ತೇಜಸಸ್ತೃತೀಯತ್ವಂ ಶ್ರೂಯತೇ. ತಥಾಚ ತಯೋರ್ವಾಕ್ಯಯೋರೇಕವಾಕ್ಯತ್ವಾದನವಕಾಶಃ ತೈತ್ತಿರೀಯಶ್ರುತ್ಯನುಸಾರೇಣಾಕಾಶಂ ವಾಯುಂ ಚ ಸೃಷ್ಟ್ವಾ "ತದ್ಬ್ರಹ್ಮ ತೇಜೋಽಸೃಜತ" ಇತಿ ಛಾಂದೋಗ್ಯೇ ಶ್ರುತಿಃ ಪರಿಣಮ್ಯತ ಇತಿ ವ್ಯವಹ್ರಿಯತೇ. ಅತೋ ನಾನಯೋರ್ವಾಕ್ಯಯೋರ್ವಿರೋಧಃ.

ಇದರ ಬಗ್ಗೆ ಬೇರೊಂದು ಹೇತುವನ್ನು ಹೇಳುತ್ತಾನೆ. "ಅದು ತೇಜಸ್ಸನ್ನು ಸೃಜಿಸಿತು" ಎಂದು ಹೇಳಿರುವ ಛಾಂದೋಗ್ಯದ ಮಂತ್ರದಲ್ಲಿ ತೇಜಸ್ಸು ಮೊದಲಾದವುಗಳ ಸೃಷ್ಟಿಯನ್ನು ಹೇಳಿರುವಂತೆ ಬೇರೆ ಶ್ರುತಿಗಳಲ್ಲಿಯೂ ಆಕಾಶದ ಉತ್ಪತ್ತಿಯನ್ನು ಹೇಳಿರುವುದರಿಂದ ಅದನ್ನು ಅಂಗೀಕರಿಸಲು ಏನು ವಿರೋಧವಿದ್ದೀತು? ಎಂದು ಕೇಳಿದರೆ ಆಕಾಶವು ಬ್ರಹ್ಮದ ಕಾರ್ಯವಲ್ಲದ್ದರಿಂದಲೂ, ಹಾಗೆ ಹೇಳಲಿಕ್ಕೆ ವಿರೋಧವಿರುವುದರಿಂದಲೂ, ಅದು ಬ್ರಹ್ಮಕ್ಕಿಂತ ಬೇರೆಯಾದ್ದರಿಂದಲೂ ಏಕ ವಿಜ್ಞಾನದಿಂದ ಸರ್ವವಿಜ್ಞಾನವೂ ಆಗುವುದೆಂಬ ಪ್ರತಿಜ್ಞೆಗೆ ವಿರೋಧವುಂಟಾಗುವುದು. ಆದ್ದರಿಂದ ಆಕಾಶವನ್ನು ಬ್ರಹ್ಮದಿಂದ ಹುಟ್ಟಿತೆಂದೇ ಅಂಗೀಕರಿಸಬೇಕು. ಇದೂ ಅಲ್ಲದೆ, "ಇವೆಲ್ಲವೂ ಆತ್ಮವೇ, ಎಲ್ಲವೂ ರುದ್ರನೇ" ಈ ಬಗೆಯ ಶ್ರುತಿಗಳಲ್ಲಿ ಬ್ರಹ್ಮವನ್ನು ಸರ್ವಾತ್ಮಕವೆಂದು ಹೇಳಿರುವುದರಿಂದ ಆಕಾಶವನ್ನು ಅವನಿಂದ ಭಿನ್ನವೆಂದು ಹೇಳಲೇಬೇಕು. ಆಕಾಶ ಅವನಿಂದ ಹುಟ್ಟಿತೆಂದು ಹೇಳಿದರೆ ಅದನ್ನು ಬ್ರಹ್ಮವೆಂದು ಹೇಳಿದ್ದರಿಂದ ಉಂಟಾಗುವ ವಿರೋಧ ಹೇಗೆ ಪರಿಹಾರವಾಗುತ್ತದೆ?

ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ತಿಳಿಸಲಾಗಿದೆ. ಛಾಂದೋಗ್ಯದಲ್ಲಿ ತೇಜಸ್ಸು ಹುಟ್ಟಿತೆಂದು ಹೇಳಿದೆಯೇ ಹೊರತು ಅದನ್ನು ಎಲ್ಲಕ್ಕೂ ಮೊದಲಿಗೆ ಇತ್ತೆಂದು ಹೇಳಿಲ್ಲ. ತೈತ್ತಿರೀಯದಲ್ಲಿ "ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ" ಎಂದು ತೇಜಸ್ಸನ್ನು ಮೂರನೆಯದನ್ನಾಗಿಯೇ ಹೇಳಿದೆ. ಆದ್ದರಿಂದ ಇವೆರಡು ವಾಕ್ಯಗಳಿಗೂ ಹೊಂದಿಕೆಯಾಗುತ್ತದೆ. ತೈತ್ತಿರೀಯದಂತೆ ಆಕಾಶವಾಯುಗಳನ್ನು ಸೃಷ್ಟಿಸಿದ ಮೇಲೆ ಬ್ರಹ್ಮವು ತೇಜಸ್ಸನ್ನು ಸೃಷ್ಟಿಸಿತು ಎಂದು ಛಾಂದೋಗ್ಯಶ್ರುತಿಯಲ್ಲಿ ಹೇಳಿರುವುದು ಯುಕ್ತವಾಗಿರುವುದರಿಂದ ಈ ಎರಡು ವಾಕ್ಯಗಳಿಗೂ ವಿರೋಧವಿಲ್ಲ.

ಯದುಕ್ತಂ ತೈತ್ತಿರೀಯಕವಿಯದುತ್ಪತ್ತಿಶ್ರುತಿರ್ಗೌಣೀ ಸಾಮಗ್ರ್ಯಭಾವೇನ ವಾ ವಿಭುತ್ವೇನ ನಿತ್ಯತ್ವಾನುಮಾನಾಚ್ಚೇತಿ ತನ್ನ, ಶ್ರೌತಸ್ಯ ಬ್ರಹ್ಮಣ ಏವ ವಿಯತ್ಸಾಮಗ್ರಿತ್ವಾದಿತ್ಯಭಿಪ್ರೇತ್ಯ ಪರ್ಯಾಯಾನುಮಾನೇನೈವ ದೂಷಯತಿ. "ಯಾವದ್ವಿಕಾರಂ ತಂ ವಿಭಾಗೋ ಲೋಕವತ್ ||೭|| ತು ಶಬ್ದಶ್ಚಾಕಾಶೋತ್ಪತ್ತ್ಯಸಂಭವಶಂಕಾವ್ಯಾವೃತ್ತ್ಯರ್ಥಃ. ಯತೋ ಯಾವದ್ವಿಕಾರಜಾತಂ ವಿಭಾಗೇ ದೃಶ್ಯತೇ ತದ್ವದ್ವಿಕಾರೇ ಬ್ರಹ್ಮಣಿ ವಿಭಾಗಾದರ್ಶನಾತ್, ಲೋಕವತ್. ಯಥಾ ಲೋಕೇ "ಏತೇ ಸರ್ವೇ ದೇವದತ್ತಪುತ್ರಾಃ" ಇತ್ಯಭಿಧಾಯ ತೇಷು ಕೇಷಾಂಚಿದುತ್ಪತ್ತಿವಚನೇನ ಸರ್ವೇಷಾಮುತ್ಪತ್ತಿರುಕ್ತಾಃ ಸ್ಯಾತ್ ತದ್ವತ್. ಏವಂ ಚ ಸತಿ "ವಾಯುಶ್ಚಾಂತರಿಕ್ಷಂ ಚೈತ್ತದಮೃತಂ" ಇತಿ ಸುರಾಣಾಮಿವ ಚಿರಕಾಲಸ್ಥಾಯಿತ್ವಾಭಿಪ್ರಾಯಮೇವ ನಿರ್ದಿಷ್ಟಂ. ಕಿಂಚಾಕಾಶದಿಕ್ಕಾಲಮನಃಪರಮಾಣವಃ ಪರಾಧೀನಸತ್ತಾಕಾಃಸ್ವಸಮಾನಸತ್ತಾಕವಿಭಾಗವತ್ತ್ವಾತ್ ಘಟೇ ಶರಾವಾದಿವತ್ ಇತ್ಯಾಕಾಶೋತ್ಪತ್ತಿವಾದಿನಂ ಪ್ರತಿ ವಿಭುತ್ವಹೇತೋಃ ಪರೋಕ್ತಸ್ಯಾಸಿದ್ಧಿರಪಿ ಬೋಧ್ಯಾ. ನನು ಛಾಂದೋಗ್ಯೇ ವಾಯೋರುತ್ಪತ್ತಿರ್ನ ಶ್ರೂಯತೇ; ತೈತ್ತಿರೀಯಕೇ ತು ಶ್ರೂಯತೇ ತಥಾಚ ಪೂರ್ವವದನಯೋರ್ವಾಕ್ಯವಿರೋಧಪರಿಹಾರಾರ್ಥಂ ವಾಯೂತ್ಪತ್ತಿ ಗೌಣೀತಿ ವಾಚ್ಯಂ.

ತೈತ್ತಿರೀಯದಲ್ಲಿ ಆಕಾಶದ ಉತ್ಪತ್ತಿಯನ್ನು ತಿಳಿಸಿರುವುದು ಅಪ್ರಧಾನವೇ ಸರಿ; ಯಾಕೆಂದರೆ ಆಕಾಶದ ಉತ್ಪತ್ತಿಗೆ ಅಲ್ಲಿ ಸಾಧನಗಳನ್ನು ಹೇಳಿಲ್ಲ, ಇದೂ ಅಲ್ಲದೆ ಆಕಾಶ ನಿತ್ಯ ಮತ್ತು ವಿಭು ಎಂದು ಅನುಮಾನದಿಂದ ಸಿದ್ಧಿಸುತ್ತದೆ ಎಂದು ಹೇಳುವುದಾದರೆ ಶ್ರುತಿಯಲ್ಲಿ ಬ್ರಹ್ಮಕ್ಕೆ ಆಕಾಶವನ್ನು ಸಾಧನವನ್ನಾಗಿ ಹೇಳಿರುವುದರಿಂದ ಇದು ಯುಕ್ತವಲ್ಲವೆಂದು ನಿರಾಕರಿಸುತ್ತಾನೆ. ಸೂತ್ರದಲ್ಲಿ ತುಶಬ್ದವು ಆಕಾಶದ ಉತ್ಪತ್ತಿ ಸಾಧ್ಯವಿಲ್ಲವೆಂಬ ಶಂಕೆಯನ್ನು ತೊಲಗಿಸುತ್ತದೆ. ಲೋಕದಲ್ಲಿ ಕಂಡು ಬರುವ ವಿಕಾರಗಳಂತೆ ಬ್ರಹ್ಮದಲ್ಲಿ ವಿಕಾರಗಳು ಕಾಣದಿರುವುದರಿಂದಲೂ, "ಇವರೆಲ್ಲರೂ ದೇವದತ್ತನ ಮಕ್ಕಳು" ಎಂಬ ಲೋಕವ್ಯವಹಾರದಂತೆ ಆತ್ಮನಿಂದ ಆಕಾ

ಶಾದಿಗಳು ಹುಟ್ಟಿದವು ಎಂಬಲ್ಲೂ ಕೆಲವು ಹುಟ್ಟಿದವೆಂದರೆ ಎಲ್ಲವೂ ಹುಟ್ಟಿದವೆಂದೇ ಸ್ಪಷ್ಟವಾಗುತ್ತದೆ. ಹಾಗೆಯೇ " ವಾಯುವೇ ಆಕಾಶವಾದರೆ ಅದು ದೇವತೆಗಳಿಗೆ ಅಮೃತವೇ ಆಗುತ್ತದೆ " ಎಂಬಲ್ಲಿ ಅದನ್ನು ಬಹುಕಾಲವಿರತಕ್ಕ ವಸ್ತುವೆಂಬ ಅಭಿಪ್ರಾಯದಿಂದ ಹಾಗೆ ಹೇಳಿದೆ. ಇದೂ ಅಲ್ಲದೆ, ಆಕಾಶ, ದಿಕ್ಕು ಕಾಲ ಮನಸ್ಸು ಪರಮಾಣುಗಳ ಇರುವಿಕೆ ಪರಮಾತ್ಮನಿಗಧೀನವಾಗಿದೆ. ಗಡಿಗೆ ಮುಚ್ಚಳ ಮೊದಲಾದವುಗಳಂತೆ ಆಕಾಶವೂ ಹುಟ್ಟುವುದೆಂದು ಹೇಳುವವನಿಗೆ ಅದು ವಿಭುವಾದ್ದರಿಂದ ಅಂತಹವಾದವು ಸಿದ್ಧಿಸಲಾರದೆಂದೇ ಹೇಳಬೇಕಾಗುತ್ತದೆ.

ಕಿಂಚ " ಸೈಷಾನಸ್ತಮಿತದೇವತಾಯದ್ವಾಯುಃ " ಇತಿ ವಾಯೋರ್ಲಯಪ್ರತಿಷೇಧಾಚ್ಚ ನಿತ್ಯಮಿತ್ಯಾಶಂಕಾಮತಿದೇಶೇನ ನಿರಾಕರೋತಿ. ಮಾತರಿಶ್ವಾಧಿಕರಣಂ ||೨|| ಏತೇನ ಮಾತರಿಶ್ವಾ ವ್ಯಾಖ್ಯಾತಃ ||೭|| ಏತೇನ ವಿಯದುತ್ಪತ್ತಿಮತ್ತ್ವವ್ಯಾಖ್ಯಾನೇನ ವಾಯುರಪಿ ವಿಯದವಚ್ಛಿನ್ನಬ್ರಹ್ಮಜನ್ಯತ್ವೇನ ವ್ಯಾಖ್ಯಾತ ಇತ್ಯರ್ಥಃ. ವಾಯೋರ್ನಿತ್ಯತ್ವೇಽಪಿ ಏಕವಿಜ್ಞಾನೇನ ಪ್ರತಿಜ್ಞಾಹಾನ್ಯಾದೇಸ್ಸಮಾನತ್ವಾದಿತ್ಯರ್ಥಃ. ವಾಯೋರ್ಲಯಪ್ರತಿಷೇಧಶ್ಚಾಪೇಕ್ಷಕಃ. ಅತಿದೇಶತ್ವಾನ್ನ ಪೃಥಕ್ಸಂಗತ್ಯಪೇಕ್ಷೇತಿ ಮಂತವ್ಯಂ. " ವಿಯನ್ಮಾತರಿಶ್ವನೋಃ ಪೃಥಗ್ಯೋಗಕರಣಂ " " ತೇಜೋಽತಸ್ತಥಾ ಹ್ಯಾಹ " ಇತಿ ಮಾತರಿಶ್ವಪರಾಮರ್ಶಾರ್ಥಂ ಛಾಂದೋಗ್ಯೇ ವಾಯೋರುತ್ಪತ್ತ್ಯದರ್ಶನೇಽಪಿ " ಸಂದೇಹೇ ವಾಕ್ಯಶೇಷಾತ್ " ಇತಿ ನ್ಯಾಯೇನ ಗುಣಸಂಹಾರೋಪನ್ಯಾಸೇನ ಚ " ಆಕಾಶಾದ್ವಾಯುಃ " ಇತಿ ತೈತ್ತಿರೀಯಶ್ರುತ್ಯುಪಸಂಹಾರೇ ಸತಿ, ಬೃಹದಾರಣ್ಯಕೇ " ಸೈಷಾನಸ್ತಮಿತದೇವತಾಯದ್ವಾಯುಃ " ಇತಿಶ್ರುತಿಃ ಸ್ತುತಿಪರಾ ತದುಪಾಸನಾಪ್ರಕರಣಾತ್. ಅತೋ ವಾಯೋರ್ಜನ್ಯತ್ವಮನಿವಾರಿತಮೇವ.

ಛಾಂದೋಗ್ಯದಲ್ಲಿ ವಾಯುವಿನ ಉತ್ಪತ್ತಿಯನ್ನು ಹೇಳಿಲ್ಲ; ಆದರೆ ತೈತ್ತಿರೀಯದಲ್ಲಿ ಮಾತ್ರವೇ ಹೇಳಿದೆ. ಆದ್ದರಿಂದ ಹಿಂದಿನಂತೆ ಈ ಎರಡು ವಾಕ್ಯಗಳಿಗೆ ವಿರೋಧವನ್ನು ಪರಿಹರಿಸಲಿಕ್ಕಾಗಿ ವಾಯುವಿನ ಉತ್ಪತ್ತಿಯನ್ನು ಅಪ್ರಧಾನವೆಂದೇ ಭಾವಿಸಬೇಕು. ಆದರೆ " ಯಾವ ಈ ವಾಯುವಿದೆಯೋ ಅದೆಯೇ ನಾಶವಾಗದಂತಹ ದೇವತೆ ಎನಿಸಿದೆ " ಎಂಬಲ್ಲಿ ವಾಯುವಿಗೆ ನಾಶವನ್ನು ನಿಷೇಧಿಸಿರುವುದರಿಂದ ಅದು ಏಕೆ ನಿತ್ಯವಾಗಬಾರದು ಎಂದಾಶಂಕಿಸಿ ನಿರಾಕರಿಸುತ್ತಾನೆ. ಆಕಾಶ ಹುಟ್ಟುವುದೆಂದು ಹೇಳಿದ್ದರಿಂದಲೇ ವಾಯುವೂ ಸಹ ಆಕಾಶದೊಳಗಿರುವ ಬ್ರಹ್ಮದಿಂದಲೇ ಹುಟ್ಟಿರುವುದೆಂದು ಹೇಳದಂತಾಯಿತು. ವಾಯುವನ್ನು ನಿತ್ಯವೆಂದು ತಿಳಿದರೂ ಒಂದನ್ನು ತಿಳಿದರೆ ಎಲ್ಲವೂ ತಿಳಿಯುವುದೆಂಬ ಪ್ರತಿಜ್ಞೆಗೆ ಭಂಗಬಂದೀತೆಂಬ ದೋಷ ಸಮಾನವೇ ಆಗಿದೆ. ವಾಯುವಿಗೆ ನಾಶವಿಲ್ಲವೆಂದು ಹಿಂದಿನ ಪ್ರಕರಣವನ್ನು

ಅನುಸರಿಸಿ ಹೇಳಿರುವುದರಿಂದ ಅದಕ್ಕಾಗಿ ಬೇರೊಂದು ಸಂಗತಿಯನ್ನು ಮತ್ತೆ ತಿಳಿಸ ಬೇಕಾಗಿಲ್ಲ. ಆಕಾಶ ವಾಯುಗಳನ್ನು ಒಂದು ಗುಂಪಾಗಿ ಸೇರಿಸಿರುವುದರಿಂದ " ತೇಜೋಽತಸ್ತಥಾ ಹ್ಯಾಹ" ಎಂಬ ಮುಂದಿನ ಸೂತ್ರದಲ್ಲಿ ವಾಯುವಿನ ಸೂಚನೆ ಗವಕಾಶವಾಗುತ್ತದೆ. ಛಾಂದೋಗ್ಯದಲ್ಲಿ ವಾಯುವಿನ ಉತ್ಪತ್ತಿಯನ್ನು ಹೇಳಿಲ್ಲ ದಿದ್ದರೂ, "ಸಂಶಯ ಬಂದರೆ ಬೇರೊಂದು ವಾಕ್ಯದ ಶೇಷದಿಂದ ಸಮನ್ವಯಮಾಡಿ ಕೊಳ್ಳಬೇಕು" ಎಂಬ ನ್ಯಾಯದಿಂದಲೂ, ಗುಣಗಳು ಎಲ್ಲಿ ಕೊನೆಗೊಳ್ಳುವುವೆಂಬು ದನ್ನು ತಿಳಿಸುವ ಮೂಲಕವೂ " ಆಕಾಶದಿಂದ ವಾಯು ಹುಟ್ಟಿತು" ಎಂದು ತೈತ್ತಿ ರೀಯದಲ್ಲಿ ಕೊನೆಯಾಗಿದ್ದರೂ, "ವಾಯುವನ್ನು ನಾಶರಹಿತವಾದ ದೇವತೆ" ಎಂದು ಹೇಳುವ ಬೃಹದಾರಣ್ಯಕ ಶ್ರುತಿಯನ್ನು ವಾಯುವಿನ ಉಪಾಸನೆಯು ಪ್ರಕರಣವಾದ್ದ ರಿಂದ ಅದರ ಪ್ರಶಂಸೆ ಎಂದೇ ತಿಳಿಯಬೇಕು. ಹೀಗೆ ವಾಯುವನ್ನು ಹುಟ್ಟಿತೆಂದು ಭಾವಿಸುವುದೇ ಯುಕ್ತವೆನಿಸುತ್ತದೆ.

ಆಕಾಶವಾಯುವದ್ಬ್ರಹ್ಮಣೋಽಪಿ ಕೇನಚಿತ್ಕಾರಣೇನೋತ್ಪತ್ತಿರ ಸ್ತೀತ್ಯಾಶಂಕ್ಯ ತತ್ರಾಹ—ಅಸಂಭವಸ್ತು ಸತೋಽನುಪಪತ್ತೇಃ ||೮|| ತುಶಬ್ದೋ ಹ್ಯವಧಾರಣಾರ್ಥಃ. ಸತೋ ಬ್ರಹ್ಮಣ ಅಸಂಭವಃ, ಉತ್ಪ ತ್ತೇರಸಂಭವಃ,ಕುತಃ ಅನುಪಪತ್ತೇಃ. ಬ್ರಹ್ಮಣಃ ಕಾರಣಾಂತರಾಭಾವೇನ ಉತ್ಪತ್ತ್ಯಸಂಭವ ಇತ್ಯುಪದಿಶ್ಯತೇ. " ಸದೇವ ಸೌಮ್ಯ " ಇತ್ಯಾದಿಷು ಪ್ರಾಕ್ಸೃಷ್ಟೇರೇಕ ಏವಾವಧಾರಣಶ್ರವಣಾತ್ ತದ್ವ್ಯತಿರಿಕ್ತಸ್ಯ ಕಸ್ಯಚಿದ ಪ್ಯನುವೃತ್ತಿರ್ನ ಸಂಭವತಿ. ಕಿಂಚ, " ಧ್ಯಾಯೀತೇಶಾನಂ ಪ್ರಧ್ಯಾಯಿ ತವ್ಯಂ ಸರ್ವಮಿದಂ ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ ! ಸರ್ವಾಣಿ ಚೇಂದ್ರಿಯಾಣಿ ಸರ್ವಭೂತೈಸ್ಸ ಕಾರಣಂ ಕಾರಣಾನಾಂ ಧ್ಯಾತಾ ಕಾರಣಂ ತು ಧ್ಯೇಯಃ || " " ಸರ್ವೈಶ್ವರ್ಯಸಂಪನ್ನಸ್ಸರ್ವೇ ಶ್ವರಶ್ಶಂಭುರಾಕಾಶಮಧ್ಯೇ । ಶಿವ ಏಕೋ ಧ್ಯೇಯಶ್ಶಿವಂಕರಸ್ಸರ್ವಮ ನ್ಯತ್ಪರಿತ್ಯಜ್ಯ || " ಇತ್ಯಾದಾವಕಾರಣತ್ವಸ್ಯ ಕಾರಣಕಾರಣತ್ವಸ್ಯ ಚ ಪರ ಬ್ರಹ್ಮಣಿ ಶಿವೇ ವ್ಯಪದೇಶಾತ್ ವ್ಯೋಮವಾಯುವತ್ಸಾಮ್ಯತ್ವಂ ನೋಪ ಪದ್ಯತೇ. ಯದ್ವಾ ಅವ್ಯಕ್ತಮಹದಹಂಕಾರತನ್ಮಾತ್ರೇಂದ್ರಿಯವಿಯತ್ಪವ ನಾದೀನಾಂ ಬ್ರಹ್ಮಹೇತುತ್ವಂ ಶ್ರೂಯತೇ. ತಥಾ ತಸ್ಯಾಪಿ ಕಿಂ ಕಾರ ಣಾಂತರಮವಗಮ್ಯತೇ. " ಅಸದ್ವಾ ಇದಮಗ್ರ ಆಸೀತ್ ತತೋ ವೈ ಸದಜಾಯತ " ಇತಿಶ್ರುತೌ ಅಸತಸ್ಸದುತ್ಪತ್ತಿರಿತಿ ಚೇತ್ತದಸತ್, ಕಥಂ ಸದುತ್ಪದ್ಯತೇ ಅಸತಃ ? ಸತ ಏವೋತ್ಪತ್ತೌ ಆತ್ಮಾಶ್ರಯಾಪತ್ತೇಃ. ಪರಮಕಾರಣಸ್ಯ ಶಿವಸ್ಯೈವ ಏಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞಾ ಸಂಭವಾತ್ ತದ್ವಿಲಕ್ಷಣಸ್ಯ ಕೃತ್ಸ್ನಸ್ಯ ಪ್ರಪಂಚಸ್ಯ ತದದರ್ಶನಾಚ್ಚ ಬ್ರಹ್ಮೋತ್ಪತ್ತಿರ್ನೋಪಪದ್ಯತ ಇತಿ ಸಿದ್ಧಂ.

ಆಕಾಶದಿಂದ ವಾಯು ಹುಟ್ಟುವಂತೆ ಬ್ರಹ್ಮವೂ ಯಾವುದಾದರೊಂದು ಕಾರಣದಿಂದ ಹುಟ್ಟುವುದೆಂದಾಶಂಕಿಸಿ ನಿರಾಕರಿಸುತ್ತಾನೆ. ಸೂತ್ರದಲ್ಲಿ ಬಂದಿರುವ ತು ಶಬ್ದವು ನಿಶ್ಚಯವನ್ನು ತಿಳಿಸುತ್ತದೆ. ನಿತ್ಯವಾಗಿರುವ ಬ್ರಹ್ಮಕ್ಕೆ ಉತ್ಪತ್ತಿ ಎಂಬುದು ಎಂದಿಗೂ ಸಂಭವಿಸುವುದಿಲ್ಲ. ಹಾಗೆ ಉತ್ಪತ್ತಿಯನ್ನು ಹೇಳುವುದು ಯುಕ್ತವೂ ಅಲ್ಲ. ಬ್ರಹ್ಮಕ್ಕೆ ಬೇರೆ ಯಾವ ಕಾರಣವೂ ಇಲ್ಲದ್ದರಿಂದ ಉತ್ಪತ್ತಿ ಸಂಭವಿಸುವುದಿಲ್ಲವೆಂದು ಶ್ರುತಿಯಲ್ಲಿ ಹೇಳಿದೆ. "ಸದೇವ ಸೌಮ್ಯ" ಮೊದಲಾದ ನೂರಾರು ಶ್ರುತಿಗಳಲ್ಲಿ ಸೃಷ್ಟಿಗೆ ಮೊದಲು ಬ್ರಹ್ಮ ಒಂದೇ ಇತ್ತೆಂದು ಏವಪದದಿಂದ ನಿಶ್ಚಯಮಾಡಿರುವುದಾಗಿ ಕಂಡುಬಂದಿದೆ. ಆಗ ಬ್ರಹ್ಮಕ್ಕಿಂತ ಬೇರೆ ಯಾವುದಾದರೂ ಇತ್ತೆಂಬುದು ಎಂದಿಗೂ ಸಂಭವಿಸುವುದಿಲ್ಲ. "ಧ್ಯಾನಯೋಗ್ಯನಾದ್ದರಿಂದಲೇ ಈಶ್ವರನನ್ನೇ ಧ್ಯಾನಿಸಬೇಕು. ಅವನಿಂದಲೇ ಬ್ರಹ್ಮ, ವಿಷ್ಣು, ರುದ್ರ, ಇಂದ್ರ ಇವರು ಹುಟ್ಟಿದರು; ಸಕಲೇಂದ್ರಿಯಗಳು ಪಂಚಭೂತಗಳೊಡನೆ ಅವನಿಂದಲೇ ಹೊರಬಂದವು; ಅವನು ಕಾರಣಗಳೆಲ್ಲಕ್ಕೂ ಮೂಲಕಾರಣನು. ಅವನೇ ಎಲ್ಲರಿಗೂ ಧ್ಯೇಯನು", "ಸರ್ವೈಶ್ವರ್ಯಸಂಪನ್ನನೂ ಸರ್ವೇಶ್ವರನೂ ಆದ ಶಂಭುವು ಚಿದಾಕಾಶದಲ್ಲಿ ನೆಲಸಿದ್ದಾನೆ. "ಬೇರೆ ಎಲ್ಲರನ್ನೂ ತೊರೆದು ಶಿವಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು" ಇಲ್ಲಿ ಶಿವನನ್ನು ಪರಬ್ರಹ್ಮವೆಂದು ಹೇಳಿರುವುದರಿಂದ ಅವನಿಗೆ ಬೇರೆ ಯಾವ ಕಾರಣವೂ ಇಲ್ಲವೆಂದೂ, ಅವನೇ ಎಲ್ಲಕ್ಕು ಕಾರಣನೆಂದೂ ತಿಳಿದು ಬರುತ್ತದೆ. ಆದ್ದರಿಂದ ಅವನಿಗೆ ಆಕಾಶ ವಾಯುಗಳ ಸಾಮ್ಯ ಹೊಂದುವುದಿಲ್ಲ. ಮೂಲಪ್ರಕೃತಿ-ಬುದ್ಧಿ-ಅಹಂಕಾರ-ತನ್ಮಾತ್ರಗಳು-ಇಂದ್ರಿಯಗಳು-ಆಕಾಶ-ವಾಯು ಇವೆಲ್ಲವೂ ಬ್ರಹ್ಮದಿಂದಲೇ ಹುಟ್ಟುವುವೆಂದು ಶ್ರುತಿಯಲ್ಲಿ ಹೇಳಿದೆ. ಹಾಗೆ ಹೇಳಿದರೆ ಆ ಬ್ರಹ್ಮಕ್ಕೆ ಯಾವುದನ್ನು ಕಾರಣವೆಂದು ತಿಳಿಯಬೇಕು? ಶ್ರುತಿಯಲ್ಲಿ "ಮೊದಲು ಅಸದ್ವಸ್ತುವಿತ್ತು ಅದರಿಂದ ಸದ್ವಸ್ತು ಹುಟ್ಟಿತು" ಎಂದು ಹೇಳಿರುವುದರಿಂದ ಅಸದ್ವಸ್ತುವಿನಿಂದ ಸದ್ರೂಪವಾದ ಬ್ರಹ್ಮ ಹುಟ್ಟಿತೆಂದು ಹೇಳುವುದು ಯುಕ್ತವಲ್ಲ; ಏಕೆಂದರೆ ಅಸತ್ತಿನಿಂದ ಸದ್ವಸ್ತು ಹೇಗೆ ಹುಟ್ಟಲಿಕ್ಕೆ ಸಾಧ್ಯವಾದೀತು? ಸದ್ವಸ್ತುವಿನಿಂದಲೇ ಹುಟ್ಟಿತೆಂದರೆ ಆತ್ಮಾಶ್ರಯದೋಷ ಸಂಭವಿಸುತ್ತದೆ. ಎಲ್ಲಕ್ಕೂ ಮೂಲಕಾರಣನಾದ ಪರಶಿವನೊಬ್ಬನಲ್ಲಿಯೇ ಸರ್ವವಿಜ್ಞಾನಪ್ರತಿಜ್ಞೆ ಸಂಭವಿಸುವುದರಿಂದಲೂ, ಅವನಿಗಿಂತ ಭಿನ್ನವಾದ ಸಮಸ್ತಪ್ರಪಂಚಕ್ಕೂ ಆ ಪ್ರತಿಜ್ಞೆ ಹೊಂದದಿರುವುದರಿಂದಲೂ ಬ್ರಹ್ಮದ ಉತ್ಪತ್ತಿಯನ್ನು ಭಾವಿಸಲಾಗುವುದಿಲ್ಲ.

ಏವಮಾಕಾಶವಾಯ್ವೋರ್ಬ್ರಹ್ಮಜನ್ಯತ್ವಂ ಪ್ರಸಾಧ್ಯ ವಹ್ನ್ಯಾದೀನಾಮಪಿ ಬ್ರಹ್ಮಕಾರಣತ್ವಂ ದರ್ಶಯತಿ—ತೇಜೋಽಧಿಕರಣಂ ॥ ೩ ॥
ತೇಜೋಽತಸ್ತಥಾ ಹ್ಯಾಹ ॥೯॥ ಛಾಂದೋಗ್ಯೇ "ತತ್ತೇಜೋಽಸೃಜತ" ಇತ್ಯತ್ರ ವಹ್ನೇರ್ಬ್ರಹ್ಮಕಾರಣತ್ವಸ್ಯೋಪದಿಷ್ಟತ್ವಾತ್, "ವಾಯೋರಗ್ನಿಃ" ಇತಿ ತೈತ್ತಿರೀಯಕೇ ವಹ್ನೇರ್ವಾಯುಜನ್ಯತ್ವೋಪದೇಶಾತ್

ಛಾಂದೋಗ್ಯತೈತ್ತಿರೀಯವಾಕ್ಯಯೋಸ್ತಮಃಪ್ರಕಾಶವತ್ಪರಸ್ಪರವಿರೋಧಸ್ಸ್ವಭಾವದರ್ಶನಾಚ್ಚ ವಹ್ನ್ಯಾದೀನಾಂ ಸ್ವಸ್ವಪೂರ್ವಕಾರಣಂ ಬ್ರಹ್ಮಹೇತುತ್ವಂ ವೇತಿ ಸಂದಿಹ್ಯತೇ. "ಆಕಾಶಾದ್ವಾಯುಃ. ವಾಯೋರಗ್ನಿಃ. ಅಗ್ನೇರಾಪಃ. ಅದ್ಭ್ಯಃ ಪೃಥಿವೀ" ಇತ್ಯತ್ರಾಪಾರಂಪರ್ಯಹೇತುತ್ವೋಪದೇಶಾತ್ ನ ಬ್ರಹ್ಮಜನ್ಯತ್ವಂ ವಹ್ನ್ಯಾದೇರುಪಪದ್ಯತ ಇತಿ ಚೇದುಚ್ಯತೇ, "ಏತಸ್ಮಾಜ್ಜಾಯತೇ ಪ್ರಾಣೋ" ಇತ್ಯತ್ರ ಪ್ರಾಣಾದಿಸರ್ವಕಾರಣತ್ವಸ್ಯ ಸರ್ವಾಧಾರತ್ವಸ್ಯ ಸರ್ವವಿಲಕ್ಷಣತ್ವಸ್ಯ ಚ ಬ್ರಹ್ಮಣ್ಯೇವ ದರ್ಶನಾತ್ ಜಡಭೂತಸ್ಯ ವಾಯೋರ್ಬ್ರಹ್ಮಕಾರಣತ್ವಮನುಪಪನ್ನಂ. ವಾಯೋರಗ್ನಿಃ" ಇತ್ಯತ್ರ ಪತನಾವಚ್ಛಿನ್ನಬ್ರಹ್ಮಕಾರಣತ್ವಮೇವಾವಗಮ್ಯತೇ. "ಯೋ ರುದ್ರೋ ಅಗ್ನೌ" ಇತ್ಯಾದಿಷು ಸರ್ವಾಂತರ್ಯಾಮಿತ್ವಸ್ಯ ತಸ್ಮಿನ್ನೇವ ನಿರ್ದೇಶಾತ್ ಸರ್ವಕಾರಣತ್ವಂ ತಸ್ಯೈವೇತಿ ಸಿದ್ಧಂ. ನ ತಸ್ಮಾಚ್ಛಾಂದೋಗ್ಯತೈತ್ತಿರೀಯಯೋರ್ವಿರೋಧಃ. ನಚೇಯಂ ಪಂಚಮೀ ಕ್ರಮಾರ್ಥಾ. ವಾಯ್ವನಂತರಂ ತೇಜೋಽಬಾದಿಪದಾಂತರಕಲ್ಪನಾಪ್ರಸಂಗಾತ್. ಕಿಂಚ "ಆತ್ಮನ ಆಕಾಶಸ್ಸಂಭೂತಃ" ಇತ್ಯಾದೌ "ಪೃಥಿವ್ಯಾ ಓಷಧಯಃ" ಇತ್ಯಂತೇ ಚ ಹೇತುಪಂಚಮ್ಯಾಃ ದರ್ಶನಾತ್ ಮಧ್ಯೇ ಕಸ್ಮಾತ್ಕ್ರಮಾರ್ಥೇ ಪಂಚಮೀತ್ಯಸಂಗತಮೇವ. ನಚೈವಂ, ಕ್ವಚಿದ್ಬ್ರಹ್ಮಜನ್ಯತ್ವಂ ಕ್ವಚಿದ್ವಾಯುಜನ್ಯತ್ವಮಿತಿ ವಿರೋಧಃ. ವಾಯೋರ್ಬ್ರಹ್ಮಜನ್ಯತ್ವೇನ ವಾಯುಭಾವಾಪನ್ನಬ್ರಹ್ಮಜನ್ಯತ್ವಸ್ಯ ಛಾಂದೋಗ್ಯವಾಕ್ಯಾರ್ಥತ್ವೇನ "ವಾಯೋರಗ್ನಿಃ" ಇತಿ ವಾಕ್ಯಸ್ಯಾಪ್ಯರ್ಥತ್ವೇ ವಾಽವಿರೋಧಾದಿತಿ.

ಹೀಗೆ ಆಕಾಶವಾಯುಗಳು ಬ್ರಹ್ಮದಿಂದಲೇ ಹುಟ್ಟಿರುವುವೆಂದು ಸಾಧಿಸಿ ಅಗ್ನಿ ಮೊದಲಾದವೂ ಆ ಬ್ರಹ್ಮದಿಂದಲೇ ಹುಟ್ಟಿವೆ ಎಂದು ಮುಂದಿನ ಸೂತ್ರದಲ್ಲಿ ಸಾಧಿಸಲಾಗಿದೆ. ಛಾಂದೋಗ್ಯದಲ್ಲಿ "ಅದು ತೇಜಸ್ಸನ್ನು ಸೃಷ್ಟಿಸಿತು" ಎಂದು ತೇಜಸ್ಸಿಗೆ ಬ್ರಹ್ಮವನ್ನು ಕಾರಣವೆಂದು ಹೇಳಿದೆ. "ವಾಯುವಿನಿಂದ ಅಗ್ನಿ ಹುಟ್ಟಿತು" ಎಂದು ತೈತ್ತಿರೀಯದಲ್ಲಿ ತೇಜಸ್ಸಿಗೆ ವಾಯುವೇ ಕಾರಣವೆಂದು ಹೇಳಿರುವುದರಿಂದ ಇವೆರಡು ಶ್ರುತಿಗಳಿಗೂ ಕತ್ತಲೆ ಬೆಳಕುಗಳಂತೆ ಪರಸ್ಪರ ವಿರೋಧವು ಕಂಡುಬರುತ್ತದೆ. ಇದರಿಂದ ಬೆಂಕಿ ಮೊದಲಾದವುಗಳಿಗೆ ಅದರದರ ಹಿಂದಿನದು ಕಾರಣವೋ ಅಥವಾ ಬ್ರಹ್ಮವೇ ಕಾರಣವೋ ಎಂಬ ಸಂದೇಹ ಬರುತ್ತದೆ. "ಆಕಾಶದಿಂದ ಗಾಳಿ, ಗಾಳಿಯಿಂದ ಬೆಂಕಿ, ಬೆಂಕಿಯಿಂದ ನೀರು, ನೀರಿನಿಂದ ಭೂಮಿ" ಹೀಗೆ ಕ್ರಮವಾಗಿ ಕಾರ್ಯಕಾರಣಸಂಬಂಧವನ್ನು ಹೇಳಿರುವುದರಿಂದ ಇವೆಲ್ಲಕ್ಕೂ ಬ್ರಹ್ಮವೇ ಕಾರಣವೆಂಬುದು ಹೊಂದುವುದಿಲ್ಲವೆಂದು ಆಕ್ಷೇಪ ಬರುತ್ತದೆ. ಇದನ್ನು ಹೀಗೆ ಸಮಾಧಾನಮಾಡಲಾಗಿದೆ. "ಇದರಿಂದಲೇ ಪ್ರಾಣ ಮನಸ್ಸು ಇಂದ್ರಿಯ

ಗಳು ಆಕಾಶ ವಾಯು ಅಗ್ನಿ ನೀರು ಸರ್ವಾಶ್ರಯವಾದ ಭೂಮಿ ಇವೆಲ್ಲವೂ ಹುಟ್ಟಿವೆ. ಪರಬ್ರಹ್ಮವೇ ಸರ್ವಾತ್ಮಕವೂ ವಿಶ್ವಕ್ಕಾಶ್ರಯಸ್ಥಲವೂ ಆಗಿದೆ." ಈ ಶ್ರುತಿಯಲ್ಲಿ ಬ್ರಹ್ಮವನ್ನೇ ಪ್ರಾಣ ಮೊದಲಾದವೆಲ್ಲಕ್ಕೂ ಕಾರಣವೆಂದೂ, ಎಲ್ಲಕ್ಕೂ ಆಧಾರವೆಂದೂ, ಎಲ್ಲಕ್ಕೂ ವಿಲಕ್ಷಣವೆಂದೂ ಹೇಳಲಾಗಿದೆ. ಜಡವಾದ ವಾಯು ಬೆಂಕಿಗೆ ಕಾರಣವೆಂಬುದು ಎಂದೆಂದಿಗೂ ಯುಕ್ತವಲ್ಲ. "ಗಾಳಿಯಿಂದ ಬೆಂಕಿ ಹುಟ್ಟಿತು" ಎಂಬಲ್ಲಿ ಗಾಳಿಯಲ್ಲಿರುವ ಬ್ರಹ್ಮವನ್ನು ಬೆಂಕಿಗೆ ಕಾರಣವೆಂದು ತಿಳಿಯಬೇಕು. ಅಗ್ನಿ ಮೊದಲಾದ ಕಡೆಗಳಲ್ಲೆಲ್ಲಾ ರುದ್ರನೇ ಇರುವನೆಂದು ಶ್ರುತಿಯಲ್ಲಿ ಪರಬ್ರಹ್ಮವನ್ನೇ ಸರ್ವಾಂತರ್ಯಾಮಿ ಎಂದೂ, ಸರ್ವಕಾರಣವೆಂದೂ ಹೇಳಿದೆ. ಆದ್ದರಿಂದ ಛಾಂದೋಗ್ಯಕ್ಕೂ ತೈತ್ತಿರೀಯಕ್ಕೂ ವಿರೋಧವಿಲ್ಲ. ವಾಯೋಃ ಎಂಬಲ್ಲಿ ಬಂದಿರುವ ಪಂಚಮೀ ವಿಭಕ್ತಿಯು ಕ್ರಮವನ್ನು ತಿಳಿಸುವುದಿಲ್ಲ, ಹಾಗೆ ತಿಳಿಸುವುದಾದರೆ, ವಾಯುವಿನ ಅನಂತರವೇ ಅಗ್ನಿ ಮೊದಲಾದ ಪದಗಳನ್ನು ಕಲ್ಪಿಸಬೇಕಾದೀತು. ಇದೂ ಅಲ್ಲದೆ, "ಆತ್ಮನಿಂದ ಆಕಾಶ ಹುಟ್ಟಿತು" ಎಂದಾರಂಭಿಸಿ "ಭೂಮಿಯಿಂದ ಔಷದಿಲತೆಗಳು ಹುಟ್ಟಿದವು" ಎಂದು ಕೊನೆಯವರೆಗೂ ಎಲ್ಲಿಲ್ಲಿಯೂ ಹೇತ್ವರ್ಥದಲ್ಲಿಯೇ ಪಂಚಮೀ ವಿಭಕ್ತಿ ಬಂದಿದೆ. ಆದ್ದರಿಂದ ಮಧ್ಯದಲ್ಲಿ ಒಂದೇಕಡೆ ಮಾತ್ರ ಕ್ರಮವೆಂಬ ಅರ್ಥದಲ್ಲಿ ಪಂಚಮಿ ಬಂದಿದೆ ಎಂದು ಹೇಳುವುದೇ ಯುಕ್ತವಲ್ಲ. ಅಗ್ನಿಯನ್ನು ಬ್ರಹ್ಮದಿಂದ ಹುಟ್ಟಿತೆಂದು ಕೆಲವುಕಡೆಗಳಲ್ಲೂ, ವಾಯುವಿನಿಂದ ಹುಟ್ಟಿತೆಂದು ಕೆಲವುಕಡೆಗಳಲ್ಲೂ ಹೇಳಿದರೆ ವಿರೊಧವುಂಟಾಗುತ್ತದೆ. ವಾಯುವು ಬ್ರಹ್ಮದಿಂದಲೇ ಹುಟ್ಟಿದ್ದರಿಂದ ವಾಯರೂಪವಾದ ಬ್ರಹ್ಮದಿಂದ ಅಗ್ನಿ ಹುಟ್ಟಿತೆಂದು ಛಾಂದೋಗ್ಯದಲ್ಲಿ ಹೇಳಿರುವಂತೆ ವಾಯುವಿನಿಂದ ಅಗ್ನಿ ಹುಟ್ಟಿತೆಂಬ ತೈತ್ತಿರೀಯವಾಕ್ಯಕ್ಕೂ ಅರ್ಥ ಮಾಡುವುದರಿಂದ ವಿರೋಧಕ್ಕವಕಾಶವಿಲ್ಲ.

ಏವಮಗ್ನೇರಪಿ ಬ್ರಹ್ಮಜನ್ಯತ್ವಂ ಪ್ರದರ್ಶ್ಯ ಜಲಸ್ಯಾಪಿ ಬ್ರಹ್ಮಜನ್ಯತ್ವಂ ಅಧಿಕರಣಾಂತರೇಣಾಹ. ಅಬಧಿಕರಣಂ ॥ ೪ ॥ ಆಪಃ ॥ ೧೦ ॥ ಆಪಸ್ತಥಾಹ್ಯಾಹೇತ್ಯನುವರ್ತತೇ. ತೇಜೋಽನಂತರಭಾವಿತ್ವಾದಪಿ "ಪೃಥಿವ್ಯಾಃ" ಇತಿ ತೇಜಸೋ ವಾಯುಜನ್ಯತ್ವಕಥನಾನಂತರಂ ತಯೋರಪೀತ್ಯಪ್ಪೃಥಿವ್ಯುಪಕ್ರಮಸ್ಯ ಬುದ್ಧಿಸ್ಥತ್ವಾತ್ ಬುದ್ಧಿಸನ್ನಿಧಿಲಕ್ಷಣಸಂಗತಿಕ್ರಮೇಣಾಧಿಕರಣದ್ವಯಮಾರಭ್ಯತೇ. "ತದಪೋಽಸೃಜತ" ಇತ್ಯಾದಿ ವಾಕ್ಯಸ್ಯ ಬ್ರಹ್ಮಜನ್ಯತ್ವಪ್ರತಿಪಾದಕಸ್ಯ "ಅಗ್ನೇರಾಪಃ" ಇತಿ ವಾಕ್ಯೇನ ವಿರೋಧೋಽಸ್ತಿ ನ ವೇತಿ ಸಂದೇಹೇ ಪೂರ್ವವದ್ವಿರೋಧೋಽಸ್ತೀತಿ ಪೂರ್ವಪಕ್ಷೇ ಅಪಾಮಗ್ನಿನಿವಾರಕಹೇತುತ್ವಾತ್ತಜ್ಜನ್ಯತ್ವಂ ತತ್ರ ನಾಸ್ತ್ಯೇವೇತ್ಯವಿರೋಧ ಇತ್ಯೇಕದೇಶಸಿದ್ಧಾಂತಂ ದೂಷಯತಿ. ಆಪ ಇತಿ. ಆಪಸ್ತೇಜಸೋ ಜಾಯಂತೇ ಹಿ ಯಸ್ಮಾತ್ತಥಾ ತೇಜೋಜನ್ಯತ್ವಂ ಅಗ್ನೇರಾಪ ಇತಿ ಶ್ರುತಿರಾಹೇತ್ಯರ್ಥಃ. ತ್ರಿವೃತ್ಕೃತಯೋರಪ್ತೇಜಸೋರ್ದಾ-

ಹ್ಯದಾಹಕಭಾವೇಽಪ್ಯತ್ರಿವೃತ್ಕೃತಯೋರ್ನ ವಿರೋಧಃ. ಪೂರ್ವವದ್ವಿರೋಧಪರಿಹಾರೌ ಬೋಧ್ಯೌ.

ಹೀಗೆ ಅಗ್ನಿಗೆ ಬ್ರಹ್ಮವೇ ಕಾರಣವೆಂದು ಹೇಳಿ ಜಲಕ್ಕೂ ಅದೇ ಕಾರಣವೆಂದು ಹೇಳುತ್ತಾನೆ—ಅಗ್ನಿಯು ಹಾಗೆಯೇ ನೀರೂ ಸಹ ಬ್ರಹ್ಮದಿಂದಲೇ ಹುಟ್ಟಿದೆ. ಪೃಥ್ವಿಯು ಅಗ್ನಿಯ ಅನಂತರ ಬಂದಿರುವುದರಿಂದ ತೇಜಸ್ಸನ್ನು ವಾಯುವಿನಿಂದ ಹುಟ್ಟಿತೆಂದು ಹೇಳಿದಮೇಲೆ ಆ ನೀರು ಬೆಂಕಿ ಎರಡೂ ಪ್ರಸಕ್ತವಾದ್ದರಿಂದ ಈ ಪ್ರಸಂಗದಿಂದ ಎರಡು ಅಧಿಕರಣಗಳನ್ನು ಆರಂಭಿಸಲಾಗಿದೆ. “ಅದು ನೀರನ್ನು ಸೃಷ್ಟಿಸಿತು” ಎಂದು ಬ್ರಹ್ಮಸೃಷ್ಟಿಯನ್ನು ತಿಳಿಸುವ ವಾಕ್ಯಕ್ಕೂ “ಅಗ್ನಿಯಿಂದ ನೀರು ಹುಟ್ಟಿತು” ಎಂಬ ವಾಕ್ಯಕ್ಕೂ ವಿರೋಧವುಂಟೇ ಇಲ್ಲವೇ ಎಂದು ಸಂದೇಹ ಬಂದರೆ ಹಿಂದಿನಂತೆ ಇಲ್ಲಿಯೂ ವಿರೊಧವುಂಟೆಂದು ಆಕ್ಷೇಪ ಬರುತ್ತದೆ. ಹಾಗಲ್ಲ, ನೀರು ಬೆಂಕಿಯನ್ನು ಆರಿಸುವುದಾದ್ದರಿಂದ ಬೆಂಕಿಯಿಂದ ನೀರು ಹುಟ್ಟಿತೆಂಬುದು ಸಂಭವಿಸುವುದಿಲ್ಲ. ಹೀಗೆ ಅವೆರಡು ವಾಕ್ಯಗಳಿಗೂ ವಿರೊಧವಿಲ್ಲವೆಂಬ ಏಕದೇಶಸಿದ್ಧಾಂತವನ್ನು ಮುಂದೆ ದೂಷಿಸಲಾಗುವುದು. “ನೀರು ಬೆಂಕಿಯಿಂದ ಹುಟ್ಟುತ್ತದೆ” ಎಂಬ ಶ್ರುತಿಯು ನೀರಿಗೆ ಬೆಂಕಿಯೇ ಕಾರಣವೆಂದು ಹೇಳಿದೆ. ಆದರೆ ತ್ರಿವೃತ್ಕೃತವಾದ ನೀರು ಬೆಂಕಿಗಳಿಗೆ ಹೀಗೆ ದಾಹ್ಯದಾಹಕಭಾವವಿದ್ದರೂ ತ್ರಿವೃತ್ಕೃತವಲ್ಲದವುಗಳಿಗೆ ವಿರೊಧವೂ ಸಂಭವಿಸುವುದಿಲ್ಲ. ಹೀಗೆ ಇಂದಿನಂತೆಯೇ ಇಲ್ಲಿಯೂ ವಿರೊಧ ಪರಿಹಾರಗಳನ್ನು ತಿಳಿಯಬೇಕು.

ಏವಂ ಜಲಸ್ಯ ಬ್ರಹ್ಮಕಾರಣತ್ವಮಭಿಧಾಯ ಪೃಥಿವ್ಯಾಸ್ತಜ್ಜನ್ಯತ್ವಂ ದರ್ಶಯತಿ. ಪೃಥಿವ್ಯಧಿಕಾರಾಧಿಕರಣಂ ‖ ೫ ‖ ಪೃಥಿವ್ಯಧಿಕಾರರೂಪ ಶಬ್ದಾಂತರೇಭ್ಯಃ ‖ ೧೧ ‖ “ತಾ ಆಪ ಐಕ್ಷಂತ ಬಹು ಸ್ಯಾಮಃ ಪ್ರಜಾಯೇಮಹಿ” “ಇತಿ ತಾ ಅನ್ನಮಸೃಜಂತ” ಇತಿ ಶ್ರೂಯತೇ. ತತ್ರ ಸಂಶಯಃ, ಕಿಮನ್ನಶಬ್ದೇನ ಓದನಾದಿಕಮುಚ್ಯತೇ ಕಿಂ ವಾ ಪೃಥಿವೀತಿ. ತತ್ರಾನ್ನಶಬ್ದಸ್ಯೌದನಾದೌ ಪ್ರಸಿದ್ಧತ್ವಾದೋದನಾದಿಕಮೇವಾನ್ನಶಬ್ದೇನೋಚ್ಯತೇ. ತಥಾಚ ವ್ರೀಹಿಯವಾದೇಸ್ತಜ್ಜನ್ಯೋದನಸ್ಯ ಚ ಯೋಗೇನ ರೂಢ್ಯಾ ಚ ಅನ್ನಶಬ್ದವಾಚ್ಯಸ್ಯ ಕ್ವಚಿದನ್ನಜನ್ಯತ್ವಂ, ಕ್ವಚಿತ್ “ಪೃಥಿವ್ಯಾ ಓಷಧಯಃ, ಓಷಧೀಭ್ಯೋಽನ್ನಂ” ಇತ್ಯತ್ರ ಪೃಥಿವ್ಯಾದಿಜನ್ಯತ್ವಮಿತ್ಯನಯೋಃ ಶ್ರುತ್ಯೋರ್ವಿರೋಧಃ ಇತಿ ಪ್ರಾಪ್ತೇ ಬ್ರೂಮಃ. ಪೃಥಿವ್ಯೇವಾತ್ರಾನ್ನಶಬ್ದೇನೋಚ್ಯತೇ ನ ವ್ರೀಹ್ಯಾದಿಃ, ಕುತಃ ಅಧಿಕಾರರೂಪಶಬ್ದಾಂತರೇಭ್ಯಃ, “ತತ್ತೇಜೋಽಸೃಜತ” ಇತಿ ಮಹಾಭೂತೋತ್ಪತ್ತ್ಯಧಿಕಾರಾತ್ “ಯತ್ಕೃಷ್ಣಂ ತದನ್ನಸ್ಯ” ಇತಿ ಕೃಷ್ಣರೂಪಸ್ಯಾನ್ನಶಬ್ದವಾಚ್ಯಸ್ಯ ಪೃಥಿವೀತ್ವಜ್ಞಾಪಕಸ್ಯ ಶ್ರವಣಾಚ್ಚ. ಸಮಾನಪ್ರಕರಣ “ಅದ್ಭ್ಯಃ ಪೃಥಿವೀ” ಇತಿ ಚ ತದ್ಯದಪಾಂ ಶರ ಆಸೀತ್ತತ್ಸ

ಮಹನ್ಯತ ಸಾ ಪೃಥಿವ್ಯಭವತ್" ಇತಿ ಚ ಪೃಥಿವ್ಯಾ ಏವ ಜನ್ಯತ್ವಪ್ರತಿಪಾದಕಶಬ್ದಾಂತರಸತ್ತ್ವಾಚ್ಚೇತ್ಯರ್ಥಃ, ತತ್ರತತ್ರ ಸೃಷ್ಟಿಕಾಲೇ ಯುದಪಾಂಶರೋ ಘನೀಭಾವ ಆಸೀತ್ಸಮಹನ್ಯತ ಸ ಘನೀಭಾವಸ್ಸಂಭೂತಾತ್ಮನಾ ಪರಿಣತ ಆಸೀತ್. ಸೈವಾಪಾಂ ಕಠಿನಾಕಾರಪರಿಣಾಮರೂಪಪೃಥಿವ್ಯಭವತ್‌ದಿತಿ ಶ್ರುತ್ಯರ್ಥಃ. ತಥಾಚ ವ್ರೀಹ್ಯಾದ್ಯನ್ನಸ್ಯ ನಾಂಬೂಪಾದಾನಕತ್ವಂ ಕಿಂತು ಪೃಥಿವ್ಯಾದ್ಯುಪಾದಾನಕತ್ವಮೇವೇತ್ಯವಿರೋಧ ಇತಿ ಸಿದ್ಧಂ. ಏವಂ ತಾವತ್ಸೃಷ್ಟಿಕ್ರಮೇಣ ಮಹಾಭೂತಶ್ರುತೀನಾಮವಿರೋಧಃ ಪ್ರತಿಪಾದಿತಃ. "ಯಃ ಪೃಥಿವ್ಯಾಂ ತಿಷ್ಠನ್ ಯಸ್ಯ ಪೃಥಿವೀ ಶರೀರಂ" ಇತ್ಯಾದಿನಾ ಕಾಣ್ವಮಾಧ್ಯಂದಿನಾದಿಶಾಖಾಸು ಶಿವಸ್ಯ ಪರಬ್ರಹ್ಮಣಃ ಪೃಥಿವ್ಯಾದಿಸರ್ವಭೂತಶರೀರತ್ವೋಪದೇಶಾತ್, ಸ್ವಸ್ಯ ಸ್ವಶರೀರಕಾರಣತ್ವಾಯೋಗಾತ್, ಸ್ವಶರೀರಸ್ಯಾನಿತ್ಯತ್ವೇ ಜೀವತುಲ್ಯತ್ವಪ್ರಸಂಗಾತ್, ತದನ್ಯಸ್ಯ ಸರ್ವಕಾರಣತ್ವಾಸಂಭವಾಚ್ಚ ಪೃಥಿವ್ಯಾದೀನಾಂ ಪೂರ್ವಪೂರ್ವಸ್ಯೋತ್ತರೋತ್ತರಕಾರಣತ್ವಂ ಬ್ರಹ್ಮಹೇತುತ್ವಂ ಚ ನ ಸಂಭವತೀತಿ ಚೇನ್ನ, "ಯೋ ರುದ್ರೋ ಅಗ್ನೌ" ಇತ್ಯಾದಿಷು ಶಿವಸ್ಯ ಸರ್ವಾಂತರ್ಯಾಮಿತ್ವಪ್ರದರ್ಶನಾತ್, "ಯಃ ಪೃಥಿವ್ಯಾಂ ತಿಷ್ಠನ್" ಇತ್ಯಾದಿವಾಕ್ಯಾನಾಂ "ಅನ್ನಂ ಬ್ರಹ್ಮ" ಇತ್ಯಾದಿವತ್ ತಸ್ಯ ಸರ್ವಾಂತರ್ಯಾಮಿತ್ವಪ್ರದರ್ಶನಾರ್ಥಮೇವ ಶರೀರತ್ವೋಪದೇಶಃ ನ ತು ಸಾಕ್ಷಾಚ್ಛರೀರತ್ವಕಲ್ಪನಂ. ಕುತಃ ಪೃಥಿವ್ಯಾದೀನಾಮಪಿ ಘಟಸಂಕೋಚವಿಕಾಸನ್ಯಾಯೇನ ಪ್ರಳಯೇಽಪಿ ಬ್ರಹ್ಮಾತ್ಮಕತ್ವೇನ ಸ್ಥಿತತ್ವಾನ್ನಚಾಷ್ಟಮೂರ್ತಿತ್ವಹಾನಿಃ. ತದುಕ್ತಂ ಶೈವೇ "ಮಹೇಶ್ವರಾನ್ಮಹಾಶಕ್ತ್ಯಾಶ್ಚೇಶಾನಾಖ್ಯಃ ಖಗಾತ್ಮಕಃ।ಸಂಭೂತಃ ಪುರುಷಸ್ತಸ್ಮಾತ್ಪವನಾಖ್ಯೋ ಮಹಾಬಲಃ। ತಸ್ಮಾದಘೋರಸ್ಸಂಭೂತಃ ಜ್ವಲನಸ್ಸರ್ವಭಕ್ಷಕಃ। ಜಲಾತ್ಮಕೋ ವಾಮದೇವಸ್ತಸ್ಮಾಜ್ಜಾತಃ ಕೃಪಾನಿಧಿಃ। ತಸ್ಮಾದ್ಭೂಮ್ಯಾತ್ಮಕಸ್ಸದ್ಯೋಜಾತಮೂರ್ತಿಶ್ಶುಭಪ್ರದಃ। ತಸ್ಮಾದೋಷಧಯಸ್ಸರ್ವೇ ತತೋಽನ್ನಂ ಜಾಯತೇ ಕ್ರಮಾತ್। ತಸ್ಮಾತ್ಪ್ರಜಾ ಬಹಿರ್ಭೂತಾಶ್ಚೇತನಾತ್ಮಕಾಃ। ಸರ್ವಾಂತರ್ಯಾಮಿರೂಪೇಣ ಸರ್ವಕರ್ತಾ ಸದಾಶಿವಃ। ಪ್ರಥಮಂ ಸೂಕ್ಷ್ಮರೂಪೇಣ ಸದ್ಯೋಜಾತಾದಿಪಂಚಕಂ। ಜನಯಾಮಾಸ ದೇವೇಶಸ್ತಥಾ ಸ್ಥೂಲಪ್ರಪಂಚಕಂ ॥" ಇತಿ ದರ್ಶನಾಜ್ಜಗಜ್ಜನ್ಮಾದಿಕಾರಣತ್ವಂ ನೇತರಸ್ಯೇತಿ ನಿರ್ದಿಷ್ಟಂ.

ಹೀಗೆ ಅಗ್ನಿಗೆ ಬ್ರಹ್ಮವೇ ಕಾರಣವೆಂದು ಹೇಳಿ ಪೃಥ್ವಿಗೂ ಅದೇ ಕಾರಣವೆಂದು ಮುಂದೆ ಹೇಳುತ್ತಾನೆ:—"ನೀರು ವಿಸ್ತಾರವಾಗುವುದಾಗಿ ಇಚ್ಛಿಸಿತು. ಅದು ಅನ್ನವನ್ನು ಸೃಷ್ಟಿಸಿತು." ಎಂದು ಶ್ರುತಿಯಲ್ಲಿ ಹೇಳಿದೆ. ಇಲ್ಲಿ ಅನ್ನಶಬ್ಧ

ದಿಂದ ದೇಹಕ್ಕೆ ತಿನ್ನುವ ಆಹಾರವೇ ಅಥವಾ ಪೃಥ್ವಿಯೇ ಎಂಬ ಸಂದೇಹ ಬರುತ್ತದೆ. ಇಲ್ಲಿ ಅನ್ನಶಬ್ದವು ತಿನ್ನುವ ಆಹಾರದಲ್ಲಿಯೇ ಪ್ರಸಿದ್ಧವಾದ್ದರಿಂದ ಅದನ್ನೇ ತಿಳಿಸುತ್ತದೆ. ಆದರೆ ಭತ್ತ ಗೋಧಿ ಮೊದಲಾದವುಗಳಿಗೂ ಅವುಗಳಿಂದಾಗಿರುವ ಆಹಾರಕ್ಕೂ ಯೋಗದಿಂದಲೂ ರೂಢಿಯಿಂದಲೂ ಅನ್ನಪದದಿಂಲೇ ಅನ್ವಯವಾಗುವುದರಿಂದ ಅವು ಅನ್ನದಿಂದಲೇ ಹುಟ್ಟುವುವೆಂದು ಕೆಲವುಕಡೆಗಳಲ್ಲೂ, "ಪೃಥ್ವಿಯಿಂದ ಔಷಧಿಗಳೂ,ಅವುಗಳಿಂದ ಅನ್ನವೂ ಹುಟ್ಟಿದವು" ಎಂದು ತಿಳಿಸುವಕಡೆಗಳಲ್ಲೂ ಪೃಥ್ವಿಯೇ ಅನ್ನದ ಕಾರಣವೆಂದೂ ಹೇಳಿದ್ದರಿಂದ ಇವೆರಡು ಶ್ರುತಿಗಳಿಗೂ ವಿರೊಧವುಂಟೆಂದು ಆಕ್ಷೇಪ ಬಂದರೆ ಸಮಾಧಾನವನ್ನು ಹೇಗೆ ಹೇಳಬಹುದು. ಇಲ್ಲಿ ಅನ್ನವೆಂದರೆ ಪೃಥ್ವಿಯೇ ಹೊರತು ವ್ರೀಹಿ ಮೊದಲಾದ ಧಾನ್ಯವಲ್ಲ. "ಅದು ತೇಜಸ್ಸನ್ನು ಸೃಷ್ಟಿಸಿತು" ಎಂದು ಮಹಾಭೂತಗಳ ಉತ್ಪತ್ತಿಯನ್ನು ತಿಳಿಸುವ ಪ್ರಕರಣವಾದ್ದರಿಂದಲೂ "ಕಪ್ಪುರೂಪವೇ ಅನ್ನದ ರೂಪ" ಎಂಬಲ್ಲಿ ಅನ್ನಶಬ್ದದಿಂದ ತಿಳಿದುಬರುವ ಕೃಷ್ಣರೂಪವೇ ಪೃಥ್ವಿಯನ್ನು ಭೋಧಿಸುವುದಾಗಿ ತಿಳಿದಿರುವುದರಿಂದಲೂ ಸಮಾನ ಪ್ರಕರಣದಲ್ಲಿ "ನೀರಿನಿಂದ ಪೃಥ್ವಿ ಹುಟ್ಟಿತು, ನೀರಿನ ಗಟ್ಟಿಭಾಗವೇ ಹೆಪ್ಪಾಗಿ ಪೃಥ್ವಿಯಾಯಿತು" ಎಂದು ಹೇಳಿರುವುದರಿಂದಲೂ, ಪೃಥ್ವಿಯೇ ಹುಟ್ಟಿತೆಂದು ಶ್ರುತಿಗಳಲ್ಲಿ ಸ್ಪಷ್ಟವಾಗಿ ತಿಳಿಸುವ ಪದಗಳು ಬಂದಿರುವುದರಿಂದಲೂ ಅನ್ನವೆಂಬ ಪೃಥಿವಿಗೇ ಈ ಪದವು ಅನ್ವಯಿಸುತ್ತದೆ. ಆಗಾಗ ಸೃಷ್ಟಿಕಾಲದಲ್ಲಿ ನೀರಿನ ಕೆಲವಂಶಗಳಲ್ಲಿ ಗಟ್ಟಿಭಾಗವುಂಟಾಯಿತು. ಆ ಗಟ್ಟಿಭಾಗವೇ ಪೃಥ್ವಿಯಾಗಿ ಪರಿಣಮಿಸಿತು" ಎಂಬಿದೇ ಶ್ರುತಿಯ ಅರ್ಥ. ಅಲ್ಲದೆ ವ್ರೀಹಿ ಮೊದಲಾದ ಅನ್ನಕ್ಕೆ ನೀರು ಉಪಾದಾನಕಾರಣವಲ್ಲ ; ಆದರೆ ಪೃಥ್ವಿಯೇ ಉಪಾದಾನವೆಂಬಲ್ಲಿ ವಿರೋಧವಿಲ್ಲವೆಂಬುದು ಸಿದ್ಧವಾಯಿತು. ಹೀಗೆ ಸೃಷ್ಟಿಕ್ರಮದಿಂದ ಮಹಾಭೂತಗಳನ್ನು ತಿಳಿಸುವ ಶ್ರುತಿಗಳಲ್ಲಿ ವಿರೊಧವಿಲ್ಲವೆಂದು ತಿಳಿಸಲಾಯಿತು. "ನೀರಿನಲ್ಲಿ ಯಾವನಿರುವನೋ ಯಾವನಿಗೆ ಪೃಥ್ವಿಯೇ ಶರೀರವೊ" ಎಂಬಲ್ಲಿ ಶಿವನಿಗೆ ಪ್ರಥಿವಿ ಮೊದಲಾದ ಭೂತಗಳೆಲ್ಲವನ್ನೂ ಶರೀರವೆಂದು ಹೇಳಿದೆ. ಆದರೆ ತಾನೇ ತನ್ನ ಶರೀರಕ್ಕೆ ಕಾರಣವೆಂಬುದು ಹೊಂದುವುದಿಲ್ಲ. ತನ್ನ ಶರೀರವೇ ಅನಿತ್ಯವಾದರೆ ಶಿವನೂ ಜೀವನಿಗೆ ಸಮನಾಗಬೇಕಾದೀತು. ಅವನಿಗಿಂತ ಬೇರೆಯಾದವನೊಬ್ಬನು ಎಲ್ಲಕ್ಕೂ ಕಾರಣನೆಂಬುದೇ ಸಂಭವಿಸುವುದಿಲ್ಲ.ಪಂಚಭೂತಗಳಲ್ಲಿ ಹಿಂದಿನದು ಮುಂದಿನದಕ್ಕೆ ಕಾರಣವೆಂಬುದೂ, ಅವೆಲ್ಲಕ್ಕೂ ಬ್ರಹ್ಮವೇ ಕಾರಣವೆಂಬುದೂ ಸಂಭವಿಸುವಂತಿಲ್ಲ. ಹೀಗೆ ಆಕ್ಷೇಪ ಬಂದರೆ ಅದಕ್ಕೆ ಸಮಾಧಾನ ಹೀಗಿದೆ. "ಬೆಂಕಿ ಮೊದಲಾದವುಗಳಲ್ಲಿ ಇರುವವನು ರುದ್ರನೇ" ಈ ಶ್ರುತಿಯಲ್ಲಿ ಶಿವನನ್ನೇ ಸರ್ವಾಂತರ್ಯಾಮಿ ಎಂದು ಹೇಳಲಾಗಿದೆ. ಆದ್ದರಿಂದ "ಪೃಥ್ವಿಯಲ್ಲಿರುವನು" ಎಂಬ ಅಂತರ್ಯಾಮಿವಾಕ್ಯಗಳಿಗೆ "ಅನ್ನವೇ ಬ್ರಹ್ಮ" ಎಂಬ ಮಾತಿನಂತೆ ಶಿವನನ್ನು ಸರ್ವಾಂತರ್ಯಾಮಿ ಎಂದು ತಿಳಿಸುವುದು ಉದ್ದೇಶವೇ ಹೊರತು ಅವೆಲ್ಲವನ್ನೂ ಅವನ ಸಾಕ್ಷಾತ್ ಶರೀರವೆಂದು ತಿಳಿಸುವ

ಉದ್ದೇಶವಿಲ್ಲ. ಅಥವಾ ಪೃಥಿವ್ಯಾದಿಗಳೆಲ್ಲವೂ ಒಟ್ಟಿಯ ಸಂಕೋಚವಿಕಾಸಗಳಂತೆ ಪ್ರಳಯದಲ್ಲಿಯೂ ಶಿವರೂಪದಿಂದಲೇ ಅವ್ಯಕ್ತವಾಗಿ ನೆಲಸಿರುವ ಪ್ರಯುಕ್ತ ಶಿವನನ್ನೇ ಅಷ್ಟಮೂರ್ತಿ ಎಂದು ಕರೆಯಲಿಕ್ಕೆ ಅಡ್ಡಿ ಇಲ್ಲ. " ಮಹೇಶ್ವರನಿಂದಲೂ ಪರಾಶಕ್ತಿಯಿಂದಲೂ ಈಶಾನನೆಂಬ ಆಕಾಶವು ಹುಟ್ಟಿತು. ಅದರಿಂದ ತತ್ಪುರುಷನೆಂಬ ವಾಯುವೂ, ಅದರಿಂದ ಅಘೋರನೆಂಬ ಸರ್ವಭಕ್ಷಕನಾದ ಅಗ್ನಿಯೂ, ಅದರಿಂದ ಕರುಣಾನಿಧಿ ಎನಿಸಿದ ವಾಮದೇವನೆಂಬ ಜಲವೂ, ಅದರಿಂದ ಮಂಗಳಕರನಾದ ಸದ್ಯೋಜಾತನೆಂಬ ಭೂಮಿಯೂ ಹುಟ್ಟಿದವು. ಅದರಿಂದ ಓಷಧಿ ಅನ್ನ ಮೊದಲಾದವು ಹುಟ್ಟಿದವು. ಮುಂದೆ ಅದರಿಂದ ಚರಾಚರ ಪ್ರಪಂಚವು ಹುಟ್ಟಿತು. ಹೀಗೆ ಸರ್ವಾಂತರ್ಯಾಮಿಯಾದ್ದರಿಂದ ಸದಾಶಿವಾವಸ್ಥೆಯಲ್ಲಿ ಪರಮೇಶ್ವರನು ಮೊದಲಿಗೆ ಸೂಕ್ಷ್ಮವಾಗಿ ಸದ್ಯೋಜಾತಾದಿಬ್ರಹ್ಮರನ್ನು ಸೃಷ್ಟಿಸಿ ಅನಂತರ ಸ್ಥೂಲ ಪ್ರಪಂಚವನ್ನು ನಿರ್ಮಿಸಿದನು " ಈ ರೀತಿಯಾಗಿ ಶೈವಪುರಾಣದಲ್ಲಿ ಹೇಳಿರುವುದರಿಂದ ಶಿವನೇ ಜಗತ್ಕಾರಣನೆಂದು ಸ್ಪಷ್ಟವಾಗುತ್ತದೆ.

ಆಕಾಶಾದ್ವಾಯುರಿತ್ಯಾದೌ ಜಡಾನಾಂ ಭೂತಾನಾಂ ಪರಂಪರಾಕಾರಣತ್ವಂ ಮಾಸ್ತು, ತದಧಿಷ್ಠಾನದೇವತಾನಾಮುಸ್ತು ಇತ್ಯಾಶಂಕಾಯಾಂ ಅಧಿಕರಣಾಂತರಂ ದರ್ಶಯತಿ. ತದಭಿಧ್ಯಾನಾಧಿಕರಣಂ॥೬॥ ತದಭಿಧ್ಯಾನಾದೇವ ತು ತಲ್ಲಿಂಗಾತ್ಸಃ ॥೧೨॥ ಇದಾನೀಂ ತಾನಿ ಭೂತಾನ್ಯಾಶ್ರಿತ್ಯಾಶ್ರಯಾಶ್ರಯಿಭಾವಸಂಗತ್ಯಾ ಅನ್ಯದ್ವಿಚಾರ್ಯತೇ, ಕಿಂ ಮಹಾಭೂತಾಭಿಮಾನಿನ್ಯೋ ದೇವತಾಃ ಸ್ವತಂತ್ರಾ ಏವ ಭೌತಿಕೋತ್ಪಾದನೇ ಪ್ರವರ್ತಂತೇ ಉತೇಶ್ವರಾಧಿಷ್ಠಿತಾ ಇತಿ ವಿಷಯಃ. "ಆಕಾಶಾದ್ವಾಯುಃ" ಇತ್ಯಾದಿನಾ ಸ್ವಸ್ವಕಾರ್ಯೋತ್ಪತ್ತೌ ಸ್ವಾತಂತ್ರ್ಯಶ್ರವಣಾತ್ ಸ್ವತಂತ್ರಾ ಏವೇತಿ ಬ್ರಹ್ಮಣಸ್ಸರ್ವಸೃಷ್ಟಿಕರ್ತೃತ್ವಪ್ರತಿಪಾದಕಶ್ರುತ್ಯಾ ಭೂತಸೃಷ್ಟಿಶ್ರುತೀನಾಂ ವಿರೋಧ ಇತಿ ಪ್ರಾಪ್ತೇ ಬ್ರೂಮಃ. ಸ ಪರಮಾತ್ಮಾ ತತ್ತತ್ಕಾರ್ಯಗೋಚರೇಕ್ಷಣಾತ್ಮಕಾಭಿಧ್ಯಾನಾದೇವೇಕ್ಷಿತಃ ತತ್ಕಾರಣಾಧಿಷ್ಠಾನತಯಾ ಸರ್ವಂ ಕಾರ್ಯಂ ಸೃಜತಿ, ಕಸ್ಮಾತ್, ತಲ್ಲಿಂಗಾತ್, ತಸ್ಯ ಪರಮಾತ್ಮನಃ ಸರ್ವನಿಯಂತೃತ್ವರೂಪಲಿಂಗಸ್ಯ "ಯಃ ಪೃಥಿವ್ಯಾಂ ತಿಷ್ಠನ್" ಇತ್ಯಾದಿನಾ ಶ್ರುತತ್ವಾದಿತ್ಯರ್ಥಃ. ಪೃಥಿವ್ಯಾಂ ತದಭಿಮಾನಿದೇವತಾಯಾಂ ಅಯಂ ಭಾವಃ. ಆಕಾಶಾದಿಪದಾನಾಂ ಭೂತಮಾತ್ರರೂಢತ್ವಾತ್ ದೇವತಾಪರತ್ವೇ ಲಕ್ಷಣಾನುಪಪತ್ತೇಃ ಭೂತಾಭಿಮಾನಿದೇವತಾನಾಂ ಸ್ವಾತಂತ್ರ್ಯಂ " ಆಕಾಶಾದ್ವಾಯುಃ" ಇತ್ಯಾದೌ ಶ್ರುತಂ. ನಚ " ತಾ ಆಪ ಐಕ್ಷಂತ " ಇತಿ ತದಬಾದಿಪದಾನಾಂ ದೇವತಾಪರತ್ವೇ ಲಿಂಗಂ, ತಸ್ಯೇಕ್ಷಣಸ್ಯ ತದವಚ್ಛಿನ್ನಬ್ರಹ್ಮನಿಷ್ಠತ್ವಾದಿತಿ ನ ದೇವತಾನಾಂ ಸ್ವಾತಂತ್ರ್ಯೇ ಕಿಂಚಿನ್ಮಾನಮಿತಿ.

"ಆಕಾಶದಿಂದ ವಾಯು ಹುಟ್ಟಿತು" ಎಂದು ಮುಂತಾದ ಶ್ರುತಿಯಲ್ಲಿ ಹೇಳಿರುವಂತೆ ಹಿಂದಿನದು ಮುಂದಿನದಕ್ಕೆ ಕಾರಣವಾಗದೇ ಇರಲಿ; ಆದರೆ ಅವುಗಳೊಳಗೆ ನೆಲಸಿದ ಅಧಿದೇವತೆಯೇ ಅವುಗಳ ಕಾರಣವಾಗಲೆಂದು ಆಶಂಕಿಸಿ ನಿರಾಕರಿಸುತ್ತಾನೆ. ಇಲ್ಲಿ ಭೂತಗಳನ್ನಾಶ್ರಯಿಸಿ ಆಶ್ರಯಾಶ್ರಯಿಭಾವಸಂಬಂಧದಿಂದ ಬೇರೊಂದು ವಿಷಯವನ್ನು ವಿಚಾರಿಸಲಾಗಿದೆ. ಪಂಚಭೂತಗಳ ಉತ್ಪತ್ತಿಗೆ ಅವುಗಳ ಅಧಿಷ್ಠಾನ ದೇವತೆಗಳು ಸ್ವತಂತ್ರರಾಗಿ ಕಾರಣರೇ ಅಥವಾ ಈಶ್ವರನ ಆಶ್ರಯದಿಂದ ಕಾರಣರೇ ಎಂದು ಇಲ್ಲಿ ಸಂಶಯ ಬರುತ್ತದೆ. "ಆಕಾಶದಿಂದ ವಾಯು ಹುಟ್ಟಿತು" ಎಂಬಲ್ಲಿ ಆಯಾಯ ಕಾರ್ಯೋತ್ಪತ್ತಿಯಲ್ಲಿ ಸ್ವಾತಂತ್ರ್ಯವೇ ಕಂಡುಬರುವುದರಿಂದ ದೇವತೆಗಳು ಸ್ವತಂತ್ರರೇ ಇರುವರು. ಇದರಿಂದ ಬ್ರಹ್ಮವೇ ಎಲ್ಲಕ್ಕೂ ಕಾರಣವೆಂಬುದನ್ನು ತಿಳಿಸುವ ಶ್ರುತಿಗೂ ಭೂತಸೃಷ್ಟಿಯನ್ನು ತಿಳಿಸುವ ಶ್ರುತಿಗಳಿಗೂ ವಿರೋಧವುಂಟಾಯಿತು ಎಂದು ಆಕ್ಷೇಪ ಬಂದರೆ ಅದಕ್ಕೆ ಸಮಾಧಾನ ಹೀಗಿದೆ. ಆ ಪರಮಾತ್ಮನೇ ಆಯಾಯ ಕಾರ್ಯಗಳನ್ನು ಅಭಿಮಾನಿಸಿ ನೋಡುವ ಮೂಲಕವೇ ಎಲ್ಲವನ್ನು ತಾನೇ ಸೃಷ್ಟಿಸುತ್ತಾನೆ. ಈ ಅಂಶವನ್ನು ಶ್ರುತಿ ಹಾಗೆಯೇ ಸ್ಪಷ್ಟವಾಗಿ ತಿಳಿಸುತ್ತದೆ. ಆ ಪರಮಾತ್ಮನಿಗೆ ಸರ್ವನಿಯಾಮಕನೆಂಬ ಹೇತುವನ್ನು ಅಂತರ್ಯಾಮಿವಾಕ್ಯಗಳು ಸ್ಪಷ್ಟವಾಗಿ ತಿಳಿಸಿವೆ. ಪೃಥ್ವಿಗೂ ಅದರ ಅಭಿಮಾನಿದೇವತೆಗೂ ಇರುವ ಸಂಬಂಧ ಹೀಗಿದೆ. ಆಕಾಶಾದಿಪದಗಳು ಪಂಚಭೂತಗಳಲ್ಲಿಯೇ ರೂಢವಾಗಿವೆ. ಅವು ದೇವತೆಗೆ ಅನ್ವಯಿಸುತ್ತವೆ ಎಂದು ಹೇಳಲಿಕ್ಕೆ ಲಕ್ಷಣೆ ಹೊಂದುವುದಿಲ್ಲ. "ಆಕಾಶದ್ವಾಯುಃ" ಎಂಬ ಶ್ರುತಿಯಲ್ಲಿ ಭೂತಗಳ ಅಭಿಮಾನಿದೇವತೆಗಳಿಗೆ ಸ್ವಾತಂತ್ರ್ಯವುಂಟೆಂದು ಹೇಳಿಲ್ಲ. "ನೀರು ನೋಡಿತು" ಎಂಬಲ್ಲಿ ನೀರು ಮೊದಲಾದ ಪದಗಳು ದೇವತೆಗೆ ಅನ್ವಯಿಸುತ್ತವೆ ಎಂದು ಹೇಳಲಿಕ್ಕೆ ಸಾಧ್ಯವಿಲ್ಲ. ಆದರೆ ನೀರಿನ ನೋಡುವಿಕೆಯೂ ಅದರೊಳಗಿರುವ ಬ್ರಹ್ಮಕ್ಕೇ ಅನ್ವಯಿಸುವಂತಹದು. ಆದ್ದರಿಂದ ದೇವತೆಗಳಿಗೆ ಸ್ವಾತಂತ್ರ್ಯವಿರುವ ಬಗ್ಗೆ ಯಾವೊಂದು ಪ್ರಮಾಣವೂ ಇಲ್ಲ.

ಏವಂ ಪಂಚಮಹಾಭೂತಾನಾಂ ಬ್ರಹ್ಮಕಾರಣತ್ವಮಭಿಧಾಯ ತೇಷಾಂ ಬ್ರಹ್ಮಣ್ಯೇವ ವಿಲೀನತ್ವಂ ಪ್ರದರ್ಶಯತಿ. ವಿಪರ್ಯಯಾಧಿಕರಣಂ ||೭|| ವಿಪರ್ಯಯೇಣ ತು ಕ್ರಮೋಽತ ಉಪಪದ್ಯತೇ ಚ ||೧೩|| ಏವಂ ಭೂತಾನಾಮುತ್ಪತ್ತಿಕ್ರಮವಿಚಾರಣೇ ಲಯಕ್ರಮೋ ಬುದ್ಧಿಸ್ಥಃ ಪ್ರಸಂಗಸಂಗತ್ಯಾ ವಿಚಾರ್ಯತೇ. ಏತದ್ವಿಚಾರಸ್ಯ ಪ್ರಯೋಜನಂ ಜಗದ್ಬ್ರಹ್ಮಣೋರ್ಭೇದಾಭೇದವಿಜ್ಞಾನಂ. ಪ್ರಾಸಂಗಿಕತ್ವಾದೇವ ಅಸ್ಮಿನ್ ಪಾದೇ ಜಗದ್ವಿಲಯಕ್ರಮೋ ನಿರ್ದಿಷ್ಟಃ. ತತ್ರ ಕಿಂ ಭೂತಾನಾಂ ಶ್ರುತೋತ್ಪತ್ತಿಕ್ರಮೋಽಸ್ತ್ಯೇವ ಲಯಕ್ರಮಃ, ತದ್ವ್ಯತಿರೇಕೇಣ ವೇತಿ ಸಂಶಯಃ. ಮುಂಡಕೇ "ಏತಸ್ಮಾಜ್ಜಾಯತೇ ಪ್ರಾಣಃ ಮನಸ್ಸರ್ವೇಂದ್ರಿಯಾಣಿ ಚ" ಇತಿ ಪ್ರಾಣಾದೀನಾಂ ವಿಯದಾದಿಭ್ಯಃ ಪೂರ್ವಮುತ್ಪತ್ತಿಃ

ಕ್ರಮದಲ್ಲಿಯೋ ಎಂಬ ಸಂಶಯ ಇಲ್ಲಿ ಬರುತ್ತದೆ. ಮುಂಡಕದಲ್ಲಿ " ಇದರಿಂದಲೇ ಪ್ರಾಣಾದಿಗಳು ಹುಟ್ಟಿದವು" ಎಂಬಲ್ಲಿ ಪ್ರಾಣಾದಿಗಳು ಆಕಾಶದಿಂದ ಮೊದಲು ಹುಟ್ಟಿದವೆಂದು ಹೇಳಲಾಗಿದೆ. ಅಥರ್ವಶಿಖೆಯಲ್ಲಿ " ಬ್ರಹ್ಮ, ವಿಷ್ಣು, ರುದ್ರ, ಇಂದ್ರರೂ, ಪಂಚಭೂತಗಳೂ ಅವನಿಂದಲೇ ಹುಟ್ಟಿದರು " ಎಂಬಲ್ಲಿ ಬ್ರಹ್ಮಾದಿಗಳೂ ಭೂತಗಳೂ ಇಂದ್ರಿಯಗಳೂ ಒಟ್ಟಿಗೆ ಹುಟ್ಟಿದವೆಂದು ಹೇಳಿದೆ. ಆದ್ದರಿಂದ ಆಕಾಶ ಮೊದಲಾದವುಗಳಿಗೆ ಹಿಂದೆ ಹೇಳಿದ ಸೃಷ್ಟಿಕ್ರಮ ಹೊಂದುವುದಿಲ್ಲ. ಹೀಗೆ ಆಕ್ಷೇಪ ಬಂದರೆ ಸಮಾಧಾನವನ್ನು ಈ ಸೂತ್ರವು ತಿಳಿಸಿದೆ. ಹಿಂದೆ ಹೇಳಿದ ಸೃಷ್ಟಿಕ್ರಮವೇ ಯುಕ್ತವಾಗಿದೆ. " ಮನಸ್ಸು ಅನ್ನಮಯವೂ, ಪ್ರಾಣ ಜಲಮಯವೂ, ವಾಕ್ಕು ತೇಜೋಮಯವೂ ಆಗಿವೆ " ಎಂಬಲ್ಲಿ ಪ್ರಾಣಮೊದಲಾದವನ್ನು ಭೌತಿಕವೆಂದೇ ತಿಳಿಸಿದೆ. ಅವನ್ನು ಭೂತಗಳಲ್ಲಿಯೇ ಸೇರಿಸಿದ್ದರಿಂದ ಬೇರೆಯಾಗಿ ಹೇಳಿಲ್ಲ. ಬ್ರಹ್ಮಾದಿಗಳನ್ನು ತೇಜಸ್ಸ್ವರೂಪವಾದ ಪಂಚಭೂತಗಳಲ್ಲಿಯೇ ಸೇರಿಸಿರುವುದರಿಂದ ಅವರೆಲ್ಲರೂ ಒಟ್ಟಿಗೇ ಹುಟ್ಟಿದರೆಂದು ಹಿಂದೆ ಹೇಳಿರುವ ಕ್ರಮದಲ್ಲಿ ಯಾವ ವಿರೋಧವೂ ಇಲ್ಲ. " ಅದು ವಿಸ್ತಾರವಾಗಬೇಕೆಂದು ನೋಡಿತು" ಎಂಬಲ್ಲಿ ಶಿವನೇ ಸರ್ವಭೂತಗಳ ಉತ್ಪತ್ತಿಗೆ ಕಾರಣನೆಂದು ಸ್ಪಷ್ಟಪಡುತ್ತದೆ. ಚೇತನಜೀವರನ್ನು ಶಿವನು ಹುಟ್ಟಿಸಿದನೆಂದು ಹೇಳಿದ್ದರಿಂದ ಅಚೇತನಕ್ಕೂ ಅವನೇ ಕಾರಣನೆಂದು ಸಿದ್ಧವಾಯಿತು. ಅಥರ್ವಶಿಖೆಯಲ್ಲಿ ಬ್ರಹ್ಮವೇ ಚೇತನ ಮತ್ತು ಅಚೇತನವೆರಡಕ್ಕೂ ಕಾರಣವೆಂದು ಹೇಳಿದೆ. ಸ್ಕಾಂದದಲ್ಲಿ "ಸದಾಶಿವನೇ ಶಬ್ದವೂ, ಮಾಹೇಶ್ವರನೇ ಸ್ಪರ್ಶವೂ, ರುದ್ರನೇ ತೇಜಸ್ಸೂ, ವಿಷ್ಣುವೇ ರಸವೂ, ಬ್ರಹ್ಮನೇ ಗಂಧವೂ ಆಗಿರುವರು. ಈ ಐವರೇ ಪಂಚಬ್ರಹ್ಮರಾಗಿದ್ದಾರೆ, ಅವರು ಜಗತ್ತನ್ನು ಸೃಷ್ಟಿಸುವರೆಂದು ಎಲ್ಲಿಯೂ ಹೇಳಿಲ್ಲ. ಅವರಲ್ಲಿ ಶಿವನೇ ಅಂತರ್ಯಾಮಿರೂಪದಿಂದ ಜಗದ್ವ್ಯಾಪಾರಗಳನ್ನು ನಿರ್ವಹಿಸುತ್ತಿರುವನು. ಆದ್ದರಿಂದ ಇವರೆಲ್ಲರೂ ಬಟ್ಟೆಯ ಸಂಕೋಚ ವಿಕಾಸಗಳಂತೆ ಪರಮಕಾರಣನಾದ ಶಿವನ ಇಚ್ಛೆಯಂತೆ ಅವನಲ್ಲಿಯೇ ಲೀನರಾಗಿದ್ದು ಮತ್ತೆ ಹೊರಗೆ ಬರುತ್ತಾರೆ" ಎಂದು ಹೇಳಿದೆ. ಆದ್ದರಿಂದ ಶಿವನೇ ಪ್ರಳಯದಲ್ಲಿ ಪ್ರಪಂಚವನ್ನು ತನ್ನಲ್ಲಿ ಲಯಗೊಳಿಸುತ್ತಾನೆಂಬುದೇ ಸಿದ್ಧಾಂತವೆನಿಸಿದೆ.

" ಏತಸ್ಮಾಜ್ಜಾಯತೇ ಪ್ರಾಣಃ " ಇತಿ ಶ್ರುತೌ ಬ್ರಹ್ಮಣಃ ಪರಮಶಿವಾತ್ ಪ್ರಾಣೇಂದ್ರಿಯಾದಿಸೃಷ್ಟೇರೇವಾತ್ರ ಪ್ರಥಮೋಪದೇಶಾತ್, " ಆತ್ಮನ ಆಕಾಶಸ್ಸಂಭೂತಃ " ಇತಿ ಶ್ರುತಿನಿಷ್ಠಭೂತಪಂಚಕೋತ್ಪತ್ತಿಪ್ರಾಥಮಿಕೋಪದೇಶಕತೈತ್ತಿರೀಯವಾಕ್ಯವಿರೋಧೋಽಸ್ತೀತ್ಯಾಶಂಕಾಯಾಮಾಹ. ಅಂತರಾವಿಜ್ಞಾನಾಧಿಕರಣಂ ॥ ೮ ॥ ಅಂತರಾವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾದಿತಿ ಚೇನ್ನಾವಿಶೇಷಾತ್ ॥೧೪॥ ಅಂತರಾ ಬ್ರಹ್ಮಾಕಾಶಯೋರ್ಮಧ್ಯೇ ವಿಜ್ಞಾನಮನಸೀಂದ್ರಿಯಾಂತಃಕರಣೇ ಉತ್ಪದ್ಯೇತೇ ಕ್ರಮೇಣ ತಲ್ಲಿಂಗಾತ್. " ಏತಸ್ಮಾಜ್ಜಾಯತೇ ಪ್ರಾಣಃ "

ಇತಿ ಶ್ರುತೌ ಪ್ರಾಣಾದಿಸೃಷ್ಟ್ಯನಂತರಂ ಭೂತಪಂಚಕಸೃಷ್ಟಿಪ್ರತಿಪಾದನಾದಿತಿ ಚೇನ್ನ ಅವಿಶೇಷಾತ್, ತಸ್ಯಾಃ ಶ್ರುತೇರುತ್ಪತ್ತಿಮಾತ್ರಪ್ರತಿಪಾದಕತ್ವೇನ ಕ್ರಮಪ್ರತಿಪಾದಕತ್ವಾಭಾವಾತ್, ತಥಾ ಚ ಪ್ರಾಣೇಂದ್ರಿಯಾಂತಃಕರಣಾನಾಂ ಭೌತಿಕತ್ವಾತ್ಪಂಚಮಹಾಭೂತೋತ್ಪತ್ತ್ಯನಂತರಮೇವೇತಿ ಸೂತ್ರಸೂಚಿತಸೂಕ್ತ್ಯರ್ಥಃ. ವಿಜ್ಞಾನಸಾಧನತ್ವಾದಿಂದ್ರಿಯಾಣಿ ವಿಜ್ಞಾನಮಿತ್ಯುಚ್ಯಂತೇ. ಯದುಕ್ತಂ "ಏತಸ್ಮಾಜ್ಜಾಯತೇ ಪ್ರಾಣಃ" ಇತ್ಯಾದಿನಾ ಸರ್ವಸ್ಯ ಬ್ರಹ್ಮಣೋಽನಂತರಕಾರ್ಯತ್ವಂ ಶ್ರಾವ್ಯತೇ. ಅತಶ್ಚಾನೇನ ವಾಕ್ಯೇನ ಸರ್ವಸ್ಯ ಸಾಕ್ಷಾದ್ಬ್ರಹ್ಮಣಿ ಉತ್ಪತ್ತಿರಭಿಧಾನಲಿಂಗಾವಗತಾ ಉತ್ತಭ್ಯತ ಇತಿ ತನ್ನೋಪಪದ್ಯತೇ. ಕ್ರಮವಿಶೇಷಪರತ್ವಾದಸ್ಯ ವಾಕ್ಯಸ್ಯಾತ್ರಾಪಿ ಸರ್ವೇಷಾಂ ಕ್ರಮಪ್ರತೀತೇಃ ಖಾದೀಷು ತಾವಚ್ಛ್ರುತ್ಯಂತರಸಿದ್ಧಃ ಕ್ರಮೋಽತ್ರಾಪಿ ಪ್ರತೀಯತೇ. ತೈಸ್ಸಹ ಪಾಠಲಿಂಗಾದ್ಭೂತಪ್ರಾಣಯೋರಂತರಾಲೇ ವಿಜ್ಞಾನಮನಸೀ ಅಪಿ ಕ್ರಮೇಣೋತ್ಪದ್ಯೇತ ಇತಿ ಪ್ರತೀಯತೇ. ಅತಸ್ಸರ್ವಸ್ಯ ಸಾಕ್ಷಾದ್ಬ್ರಹ್ಮಣ ಏವ ಸಂಭವಸ್ಯೋತ್ತಂಭನಮಿದಂ ನ ಭವತೀತಿ ಚೇತ್ತನ್ನ ಅವಿಶೇಷಾತ್. "ಏತಸ್ಮಜ್ಜಾಯತೇ ಪ್ರಾಣಃ" ಇತ್ಯನೇನಾವಿಶೇಷಾತ್, ವಿಜ್ಞಾನಮನಸೋಃ ಖಾದೀನಾಂ ಚ "ಏತಸ್ಮಾಜ್ಜಾಯತೇ" ಇತ್ಯನೇನ ಸಾಕ್ಷಾತ್ಸಂಭವರೂಪಸಂಬಂಧಸ್ಯಾಭಿಧೇಯಸ್ಯ ಸರ್ವೇಷಾಂ ಪ್ರಾಣಾದಿಪೃಥಿವ್ಯಂತಾನಾಮವಿಶಿಷ್ಟತ್ವಾತ್ಸ ಏವ ವಿಧೇಯಃ, ನ ಕ್ರಮಃ. ಶ್ರುತ್ಯಂತರಸಿದ್ಧಕ್ರಮಾವಿಧಾನಾಚ್ಚ ನೇದಂ ಕ್ರಮಪರಂ. "ಪೃಥಿವ್ಯಪ್ಸು ಪ್ರಲೀಯತೇ" ಇತ್ಯಾರಭ್ಯ "ತಮ ಏಕಂ ಭವತಿ" ಇತ್ಯಂತೇನ ಕ್ರಮಾಂತರಪ್ರತೀತೇಃ ಪೂರ್ವೋಕ್ತಭೂತೋತ್ಪತ್ತಿಲಯಕ್ರಮ ಇಂದ್ರಿಯೋತ್ಪತ್ತಿಕ್ರಮೇಣ ನ ವಿರುಧ್ಯತೇ. ತಸ್ಮಾನ್ನ ಕೇನಾಪಿ ವಾಕ್ಯೇನ ಭೂತಸೃಷ್ಟಿವಾಕ್ಯಾನಾಂ ವಿರೋಧ ಇತಿ ಸಿದ್ಧಂ.

"ಇದರಿಂದ ಪ್ರಾಣ ಇಂದ್ರಿಯ ಮೊದಲಾದವು ಹುಟ್ಟಿವೆ" ಎಂಬಲ್ಲಿ ಪರಶಿವಬ್ರಹ್ಮದಿಂದಲೇ ಪ್ರಾಣಾದಿಗಳ ಸೃಷ್ಟಿಯಾಯಿತೆಂದು ಮೊದಲಿಗೆ ಹೇಳಿರುವುದರಿಂದ ತೈತ್ತಿರೀಯದಲ್ಲಿ "ಆತ್ಮನಿಂದ ಆಕಾಶ ಹುಟ್ಟಿತು" ಎಂಬಲ್ಲಿ ಪಂಚಭೂತಗಳ ಉತ್ಪತ್ತಿಯನ್ನು ತಿಳಿಸಿರುವ ವಾಕ್ಯಕ್ಕೆ ವಿರೋಧವುಂಟಾಯಿತೆಂದು ಆಶಂಕಿಸಿ ನಿರಾಕರಿಸುತ್ತಾನೆ—ಬ್ರಹ್ಮ ಮತ್ತು ಆಕಾಶಗಳ ಮಧ್ಯದಲ್ಲಿ ಇಂದ್ರಿಯಗಳೂ ಅಂತಃಕರಣಗಳೂ ಹುಟ್ಟುತ್ತವೆ. ಆ ಕ್ರಮದಲ್ಲಿಯೇ ಅವು ಹುಟ್ಟುವುವೆಂಬುದಕ್ಕೆ ಪ್ರಮಾಣವಿದೆ. ಯಾಕೆಂದರೆ "ಇದರಿಂದ ಪ್ರಾಣ ಮನಸ್ಸು ಮತ್ತು ಇಂದ್ರಿಯಗಳು ಹುಟ್ಟುತ್ತವೆ" ಎಂಬ ಶ್ರುತಿಯಲ್ಲಿ ಪ್ರಾಣಾದಿಗಳ ಸೃಷ್ಟಿಯಾದಮೇಲೆ ಪಂಚಭೂತಗಳ ಸೃಷ್ಟಿಯನ್ನು ಹೇಳಲಾಗಿದೆ. ಆದ್ದರಿಂದ ಇಲ್ಲಿಯೂ ಆ ಕ್ರಮವನ್ನು ಅನುಸರಿಸುವುದೇ ಯುಕ್ತ

ವಾಗುತ್ತದೆ ಎಂದು ಹೇಳುವುದು ಸರಿಯೆಂದರೆ ಶ್ರುತಿ ಉತ್ಪತ್ತಿಯನ್ನು ತಿಳಿಸುತ್ತದೆಯೇ ಹೊರತು ಕ್ರಮವನ್ನು ತಿಳಿಸಲಿಕ್ಕಾಗಿ ಹೊರಟಿಲ್ಲ. ಹೀಗೆ ಪ್ರಾಣ, ಇಂದ್ರಿಯ, ಅಂತಃಕರಣಗಳೂ ಭೌತಿಕವಾದ್ದರಿಂದ ಪಂಚಮಹಾಭೂತಗಳ ಉತ್ಪತ್ತಿಯಾದ ಮೇಲೆಯೇ ಹುಟ್ಟಿವೆ ಎಂದು ತಿಳಿಯಬೇಕು. ವಿಜ್ಞಾನಕ್ಕೆ ಸಾಧನವಾದ್ದರಿಂದ ಇಂದ್ರಿಯಗಳನ್ನು ಸೂತ್ರದಲ್ಲಿ ವಿಜ್ಞಾನವೆಂದು ಕರೆಯಲಾಗಿದೆ. "ಇದರಿಂದ ಪ್ರಾಣಾದಿಗಳು ಹುಟ್ಟಿವೆ" ಎಂಬುದರಿಂದ ಇದೆಲ್ಲವೂ ಬ್ರಹ್ಮದ ಕಾರ್ಯಗಳೆಂದು ತಿಳಿದು ಬರುತ್ತದೆ. ಹೀಗೆ ಎಲ್ಲವೂ ಸಾಕ್ಷಾತ್ತಾಗಿ ಬ್ರಹ್ಮದಿಂದಲೇ ಸಂಕಲ್ಪಮಾತ್ರದಿಂದಲೇ ಹುಟ್ಟಿತೆಂದು ಈ ವಾಕ್ಯದಿಂದ ತಿಳಿದುಬರುವುದು ಎಂದು ಭಾವಿಸುವುದು ಸರಿಯಲ್ಲ; ಯಾಕೆಂದರೆ ಈ ವಾಕ್ಯವು ಕ್ರಮವಿಶೇಷವನ್ನು ತಿಳಿಸುವುದರಿಂದ ಇಲ್ಲಿಯೂ ಎಲ್ಲ ವಸ್ತುಗಳ ಸೃಷ್ಟಿಯಲ್ಲೂ ಒಂದು ಕ್ರಮವಿರುವುದಾಗಿ ತಿಳಿದುಬರುತ್ತದೆ. ಆಕಾಶಾದಿಗಳ ಸೃಷ್ಟಿಯಲ್ಲಿ ಯಾವ ಕ್ರಮವನ್ನು ಬೇರೆ ಶ್ರುತಿಯಲ್ಲಿ ಹೇಳಿದೆಯೋ ಅದೇ ಕ್ರಮವೇ ಇಲ್ಲಿಯೂ ತೋರುತ್ತದೆ. ಅವುಗಳೊಡನೆ ಇವನ್ನು ಹೇಳಿರುವುದರಿಂದ ಭೂತಪ್ರಾಣಗಳ ನಡುವೆ ಇಂದ್ರಿಯಗಳು ಮನಸ್ಸು ಹುಟುತ್ತವೆ ಎಂದು ತಿಳಿದುಬರುತ್ತದೆ. ಆದ್ದರಿಂದ ಎಲ್ಲವೂ ಬ್ರಹ್ಮದಿಂದಲೇ ನೇರವಾಗಿ ಹುಟ್ಟುತ್ತವೆ ಎಂದು ಹೇಳಲಿಕ್ಕಾಗುವುದಿಲ್ಲ; ಯಾಕೆಂದರೆ ಹಾಗೆ ಹೇಳಿದರೆ "ಇದರಿಂದ ಪ್ರಾಣಾದಿಗಳು ಹುಟ್ಟಿವೆ" ಎಂಬ ಮಾತಿಗೆ ಬೆಲೆ ಇಲ್ಲದಂತಾಗುತ್ತದೆ. ಇಂದ್ರಿಯಮನಸ್ಸುಗಳಿಗೂ ಆಕಾಶಾದಿ ಭೂತಗಳಿಗೂ "ಇದರಿಂದ ಪ್ರಾಣ ಹುಟ್ಟಿದೆ" ಎಂಬುದರೊಡನೆ ಸಾಕ್ಷಾತ್ಸಂಬಂಧವು ಪ್ರಾಣದಿಂದಾರಂಭಿಸಿ ಪೃಥ್ವಿಯವರಿಗೂ ಸಮಾನವಾಗಿರುವುದರಿಂದ ಅದನ್ನೇ ಒಪ್ಪಬೇಕೇ ಹೊರತು ಕ್ರಮಸೃಷ್ಟಿಯನ್ನು ಒಪ್ಪಲಾಗುವುದಿಲ್ಲ. ಬೇರೆ ಶ್ರುತಿಯಲ್ಲಿ ಹೇಳಿರುವ ಕ್ರಮವನ್ನು ಅನುಸರಿಸುವುದರಿಂದ ಇದು ಕ್ರಮವೆನಿಸುವುದೂ ಇಲ್ಲ. "ಭೂಮಿ ನೀರಿನಲ್ಲಿ ಲಯಿಸುತ್ತದೆ' ಎಂದಾರಂಬಿಸಿ "ಇದೆಲ್ಲವೂ ಒಂದು ಬಗೆಯ ಪ್ರಳಯವೆನಿಸುತ್ತದೆ." ಎಂಬುವವರೆಗೂ ಬೇರೊಂದು ಕ್ರಮವೇ ತೊರುತ್ತದೆ. ಹೀಗೆ ಹಿಂದೆ ಹೇಳಿದ ಭೂತಗಳ ಉತ್ಪತ್ತಿ ಮತ್ತು ಲಯಗಳ ಕ್ರಮಕ್ಕೂ ಇಂದ್ರಿಯಗಳ ಉತ್ಪತ್ತಿ ಕ್ರಮಕ್ಕೂ ವಿರೋಧವಿಲ್ಲ. ಆದ್ದರಿಂದ ಯಾವ ವಾಕ್ಯದಿಂದಲೂ ಭೂತಸೃಷ್ಟಿಯನ್ನು ತಿಳಿಸುವ ವಾಕ್ಯಗಳಿಗೆ ವಿರೊಧವಿಲ್ಲವೆಂದು ಸಿದ್ಧವಾಯಿತು.

" ಆಕಾಶಾದ್ವಾಯುಃ " ಇತ್ಯಾದೌ ಆಕಾಶಾದೀನಾಮೇವ ಪಾರಂಪರ್ಯಕಾರಣತ್ವಮುಪಗಮ್ಯತೇ. ತದಾಶ್ರಯತ್ವೇನ ತಸ್ಯ ತಚ್ಛಬ್ದಾಭಾವಾದಿತ್ಯಾಶಂಕಾಯಾಮಾಹ. **ಚರಾಚರವ್ಯಪಾಶ್ರಯಾಧಿಕರಣಂ ||೯||**

**ಚರಾಚರವ್ಯಪಾಶ್ರಯಸ್ತು ಸ್ಯಾತ್ತದ್ವ್ಯಪದೇಶೋ ಭಾಕ್ತಸ್ತದ್ಭಾವಭಾವಿತ್ವಾತ್ || ೧೬ ||** ತುಶಬ್ದಃ ಶಂಕಾನಿರಾಸಾರ್ಥಃ. ನಿಖಿಲಜಂಗಮಸ್ಥಾವರವ್ಯಪಾಶ್ರಯಸ್ತಚ್ಛಬ್ದವ್ಯಪದೇಶಃ ಭಾಕ್ತಃ ಪಾಕ್ಷ್ಯೈಕದೇಶೇ ಭಜ್ಯತ ಇತ್ಯರ್ಥಃ. ಸಮಸ್ತವಸ್ತುಪ್ರಕಾರಿಣೋ ಬ್ರಹ್ಮಣಃ ಪ್ರಕಾರು

ಭೂತವಸ್ತುಗ್ರಾಹಿಪ್ರತ್ಯಕ್ಷಾದಿಪ್ರಮಾಣಾವಿಷಯತ್ವಾದ್ವೇದಾಂತಶ್ರವಣಾತ್ ಪ್ರಾಕ್ಪ್ರಕಾರ್ಯಪ್ರತೀತೇಃ ಪ್ರಕಾರಿಪ್ರತೀತಿಭಾವಭಾವಿತ್ವಾಚ್ಚ ತತ್ಪರ್ಯವಸಾನಸ್ಯ ಲೋಕೇ ತತ್ತದ್ವಸ್ತುಮಾತ್ರೇ ವಾಚ್ಯೈಕದೇಶೇ ತೇ ತೇ ಶಬ್ದಾ ಭಾಕ್ತಾಃ ವ್ಯಪದಿಶ್ಯಂತೇ ಅಥವಾ ತೇಜಃಪ್ರಭೃತಿ ಶಬ್ದೈಸ್ತತ್ತದ್ವಸ್ತುಮಾತ್ರವಾಚಿತಯಾ ವ್ಯುತ್ಪನ್ನೈರ್ಬ್ರಹ್ಮಣೋ ವ್ಯಪದೇಶೋ ಭಾಕ್ತಃ ಸ್ಯಾತ್ ಅಮುಖ್ಯಸ್ಸ್ಯಾದಿತ್ಯಾಶಂಕ್ಯ ಚರಾಚರವ್ಯಪಾಶ್ರಯಸ್ತ್ವಿತ್ಯಾದ್ಯುಚ್ಯತೇ. ಚರಾಚರವ್ಯಪಾಶ್ರಯಸ್ತದ್ವ್ಯಪದೇಶಸ್ತದ್ವಾಚಿಶಬ್ದಃ ಚರಾಚರವಾಚಿಶಬ್ದಃ ಬ್ರಹ್ಮಣ್ಯಭಾಕ್ತಃ ಮುಖ್ಯ ಏವ, ಕುತಃ ಬ್ರಹ್ಮಭಾವಭಾವಿತ್ವಾತ್. ಸರ್ವಶಬ್ದಾನಾಂ ವಾಚಕಭಾವಸ್ಯ ನಾಮರೂಪವ್ಯಾಕರಣಂ ಶ್ರುತ್ಯಾಹಿತಭಾವಗತಂ. ತದ್ಯಥಾ "ಸೇಯಂ ದೇವತೈಕ್ಷತ ಹಂತಾಹಮಿಮಾಸ್ತಿಸ್ರೋ ದೇವತಾಃ । ಅನೇನ ಜೀವೇನಾತ್ಮನಾ ಅನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ ॥" ಇತಿ ಸರ್ವವಸ್ತುನೋ ನಾಮರೂಪವಿಭಾಗಾಯ ತದಾತ್ಮಕತಯಾ ಬ್ರಹ್ಮಣೋಽನುಪ್ರವೇಶಭಾವಭಾವಿತ್ವಾತ್. "ಆದಿತ್ಯೋ ವಾ ಯೂಪಃ ಯಜಮಾನಃ ಪ್ರಸ್ತರಃ" ಇತ್ಯಾದಿಷು ಯೂಪಾದೀನಾಂ ಆದಿತ್ಯಾದಿಶಬ್ದವಾಚ್ಯತ್ವಮನುಪಪತ್ತ್ಯಾ ನ ಮುಖ್ಯಂ. "ಮಂಚಾಃ ಕ್ರೋಶಂತಿ" ಇತ್ಯತ್ರ ಮಂಚಾದಿಷು ಪುರುಷಾಣಾಮವಸ್ಥಾನಮಾತ್ರತ್ವಾತ್ತೇಷಾಮಪಿ ತಚ್ಛಬ್ದವಾಚ್ಯತ್ವಮಮುಖ್ಯಂ. ಇಹಾತ್ಮತಯಾ ಪ್ರಪಂಚಾನುಪ್ರವೇಶಾತ್ ಬ್ರಹ್ಮಣಸ್ತಚ್ಛಬ್ದವಾಚ್ಯತ್ವಂ ಮುಖ್ಯಮೇವ. ಯಥಾತ್ಮನೋ ಬ್ರಾಹ್ಮಣಾದಿಶರೀರಾವಿಷ್ಟಸ್ಯ ಬ್ರಾಹ್ಮಣಾದಿಶಬ್ದವಾಚ್ಯತ್ವಂ ಮುಖ್ಯಂ. ಅನ್ಯಥಾ ಉಪನಯನಾದಿಸಂಸ್ಕಾರಾದೇಶ್ಶರೀರಮಾತ್ರಪರ್ಯವಸಾನಾದಾತ್ಮನಸ್ಸಂಸ್ಕಾರತ್ವಾಭಾವಪ್ರಸಂಗಾತ್. "ಯಸ್ಯೈತೇ ಚತ್ವಾರಿಂಶತ್ಸಂಸ್ಕಾರಾಃ ಸ ಬ್ರಹ್ಮಣಸ್ಸಾಯುಜ್ಯಂ ಗಚ್ಛತಿ" ಇತ್ಯಾದಿನಾ ಆತ್ಮನಸ್ಸಂಸ್ಕಾರವತಃ ಫಲಶ್ರುತಿರಪಾರ್ಥಾ ಭವೇತ್. "ಬ್ರಾಹ್ಮಣೋ ಯಜೇತ" ಇತ್ಯಾದಿವಿಧಿವೈಯರ್ಥ್ಯಮುಪಪದ್ಯೇತ. ತಸ್ಮಾತ್ಸ್ಥಾವರಜಂಗಮಾತ್ಮಕಪ್ರಪಂಚಾವಚ್ಛಿನ್ನಪರಮಶಿವಸ್ಯ ಬ್ರಹ್ಮಣಸ್ತಚ್ಛಬ್ದವಾಚ್ಯತ್ವಂ ಮುಖ್ಯಮಿತಿ ಘಂಟಾಘೋಷಃ.

"ಆಕಾಶದಿಂದ ವಾಯು ಹುಟ್ಟಿತು" ಎಂಬಲ್ಲಿ ಆಕಾಶ ಮೊದಲಾದವುಗಳಲ್ಲಿ ಹಿಂದಿನದು ಮುಂದಿನದಕ್ಕೆ ಕ್ರಮವಾಗಿ ಕಾರಣವೆಂದು ತಿಳಿದುಬರುತ್ತದೆ–ಹಾಗಾದರೆ ಆಯಾ ಶಬ್ದಗಳು ಆಯಾ ಭೂತಗಳನ್ನೇ ಬೋಧಿಸುತ್ತವೆಯೇ ಹೊರತು ಅವಕ್ಕಾಶ್ರಯವಾದ ಪರಮಾತ್ಮನನ್ನು ಬೋಧಿಸುವಂತಿಲ್ಲವೆಂದು ಆಶಂಕಿಸಿ ನಿರಾಕರಿಸುತ್ತಾನೆ. ಚರಾಚರವ್ಯಪಾಶ್ರಯಸ್ತು—ಎಂಬಲ್ಲಿ ತುಶಬ್ದವು ಆಕ್ಷೇಪವನ್ನು ಪರಿಹರಿಸುತ್ತದೆ. ಸಮಸ್ತಸ್ಥಾವರಜಂಗಮರನ್ನು ತಿಳಿಸುವ ಆಯಾಯಶಬ್ದಗಳು ಗೌಣವಾಗಿ ಆಯಾ

ಅರ್ಥವನ್ನು ಮಾತ್ರವೇ ಬೋಧಿಸುತ್ತವೆ. ಗೌಣವೆಂದರೆ ಒಂದು ಪದದ ವಾಚ್ಯಾರ್ಥದಲ್ಲಿ ಏಕದೇಶವನ್ನು ಮಾತ್ರ ಬೋಧಿಸುವುದೆಂದರ್ಥ. ಬ್ರಹ್ಮವೇ ಸಕಲವಸ್ತುವಿಶಿಷ್ಟವಾಗಿರುವುದು. ವಿಶೇಷಣವಾದ ಚೇತನಾಚೇತನಗಳು ಲೋಕಾನುಭವಸಿದ್ಧವಾಗಿವೆ. ಆದರೆ ವಿಶೇಷ್ಯವಾದ ಪರಬ್ರಹ್ಮವನ್ನು ನಾವು ವೇದಾಂತದಿಂದಲೇ ತಿಳಿಯಬೇಕು. ಲೋಕದಲ್ಲಿ ಪರಮಾತ್ಮನ ಅನುಭವ ಬರಲಿಕ್ಕೆ ಸಾಧ್ಯವಿಲ್ಲವಾದ್ದರಿಂದ ಚಿದಚಿದ್ವಿಶಿಷ್ಟ ಪರಮಾತ್ಮನನ್ನು ಭೋಧಿಸುವ ಎಲ್ಲಾ ಶಬ್ದಗಳನ್ನು ವಿಶೇಷ್ಯನಾದ ಪರಮಾತ್ಮನನ್ನು ಬಿಟ್ಟು ವಿಶೇಷಣಗಳನ್ನು ಮಾತ್ರ ಬೋಧಿಸಲಿಕ್ಕಾಗಿಯೇ ವ್ಯವಹರಿಸಲಾಗಿದೆ. ಆದ್ದರಿಂದ ಏಕದೇಶವನ್ನೇ ಶಬ್ದಗಳು ಬೋಧಿಸುತ್ತವೆ. ಅಥವಾ ಈ ಸೂತ್ರಕ್ಕೆ ಬೇರೆ ರೀತಿಯಲ್ಲೂ ಅರ್ಥವನ್ನು ಹೇಳಬಹುದು. ತೇಜಸ್ಸು ಮೊದಲಾದ ಶಬ್ದಗಳು ಆ ವಸ್ತುವನ್ನೇ ಲೋಕದಲ್ಲಿ ಬೋಧಿಸುವುದರಿಂದ ಅವುಗಳಿಂದಲೇ ಪರಮಾತ್ಮನನ್ನು ಬೋಧಿಸಿದರೆ ಆ ಪದಗಳು ಗೌಣವಾಗಬೇಕಾದೀತು ಎಂದು ಹೇಳುವುದು ಸರಿಯಲ್ಲ. ಚರಾಚರವಸ್ತುಗಳನ್ನು ಬೋಧಿಸುವ ಶಬ್ದದಿಂದ ಬ್ರಹ್ಮವನ್ನು ಬೋಧಿಸುವುದು ಅಭಾಕ್ತ ಅಂದರೇ ಮುಖ್ಯವೆನಿಸುವುದೇ ಹೊರತು ಗೌಣವೆನಿಸುವುದಿಲ್ಲ; ಏಕೆಂದರೆ "ಪರಮಾತ್ಮನೇ ಈ ಜೀವರೊಳಗೆ ಪ್ರವೇಶಿಸಿ ನಾಮರೂಪಗಳನ್ನು ನಿರ್ವಹಿಸುವನು." ಇತ್ಯಾದಿ ಶ್ರುತಿಗಳಿಂದ ಪರಮಾತ್ಮನ ಇರುವಿಕೆಯಿಂದಲೇ ಎಲ್ಲಾ ವಸ್ತುಗಳಿಗೂ ಒಂದು ವಾಚಕಶಬ್ಧವೇರ್ಪಟ್ಟಿರುವುದರಿಂದ ಶಬ್ದಗಳೆಲ್ಲವೂ ಮುಖ್ಯವೃತ್ತಿಯಿಂದ ಪರಮಾತ್ಮನನ್ನೇ ಬೋಧಿಸುತ್ತವೆ. ಹೀಗೆ ಪರಮಾತ್ಮನ ಅನುಪ್ರವೇಶದಿಂದಲೇ ಎಲ್ಲಾ ಶಬ್ದಗಳೂ ಅವನನ್ನೇ ಭೋಧಿಸುತ್ತವೆಯಾದ್ದರಿಂದ "ಆದಿತ್ಯನೇ ಯೂಪವು" "ಮಂಚಗಳು ಅಳುತ್ತವೆ" ಎಂಬ ಕಡೆ ಇರುವಂತೆ, ಶಬ್ದಗಳಿಗೆ ಗೌಣಪ್ರಯೋಗವಿಲ್ಲ. ಅಲ್ಲಿ ಮಂಚವಲ್ಲಿ ಪುರುಷರಿಗೆ ಕೇವಲಸಂಬಂಧವೇ ಹೊರತು ಅವಿನಾಭಾವಸಂಬಂಧವಿಲ್ಲ. ಇಲ್ಲಂತೂ ಅಂತರ್ಯಾಮಿಯಾಗಿ ಪರಮಾತ್ಮನು ಎಲ್ಲಾ ಕಡೆಯೂ ಇರುವುದರಿಂದ ಶಬ್ದಗಳೆಲ್ಲವೂ ಅವನನ್ನು ಮುಖ್ಯವೃತ್ತಿಯಿಂದಲೇ ಬೋಧಿಸುತ್ತವೆ. ಬ್ರಾಹ್ಮಣಾದಿಶರೀರದೊಳಗಿರುವ ಆತ್ಮನನ್ನು ಬ್ರಾಹ್ಮಣಾದಿಪದಗಳಿಂದ ಬೋಧಿಸುವುದು ಮುಖ್ಯವೇ ಹೊರತು ಗೌಣವಲ್ಲ. ಶರೀರವನ್ನೇ ಅವು ಮುಖ್ಯವಾಗಿ ಬೋಧಿಸುವುದಾದರೆ ಉಪನಯನಾದಿಸಂಸ್ಕಾರಗಳೂ ಸಹ ಶರೀರ ಒಂದಕ್ಕೇ ಸಂಸ್ಕಾರವಾಗಿ ಉಳಿದು ಆತ್ಮನಿಗೆ ಸಂಸ್ಕಾರವೇ ಇಲ್ಲದೇಹೋಗಬೇಕಾಗುವುದು. ಹಾಗಾದರೆ "ಯಾವನಿಗೆ ಈ ೪೦ ಸಂಸ್ಕಾರಗಳು ಇರುತ್ತವೆಯೊ ಅವನು ಸಾಯುಜ್ಯವನ್ನು ಹೊಂದುತ್ತಾನೆ" ಈ ಬಗೆಯ ಶಾಸ್ತ್ರಗಳಲ್ಲಿ ಆತ್ಮನಿಗೆ ಸಂಸ್ಕಾರವನ್ನು ಹೇಳಿದ್ದು ತಪ್ಪಾದೀತು. "ಬ್ರಾಹ್ಮಣನೇ ಯಜ್ಞಮಾಡಬೇಕು" ಎಂದು ಹೇಳುವವಿಧಿಗಳೂ ವ್ಯರ್ಥವಾಗಬೇಕಾದೀತು. ಆದ್ದರಿಂದ ಎಲ್ಲಾ ಶಬ್ದಗಳೂ ಅಲ್ಲಲ್ಲಿ ಅಂತರ್ಯಾಮಿಯಾಗಿರುವ ಪರಮಾತ್ಮನನ್ನೇ ಬೋಧಿಸುವುದರಿಂದ ಅಮುಖ್ಯವಲ್ಲ.

"ಯತೋ ವಾ ಇಮಾನಿ ಭೂತಾನಿ ಜಾಯಂತೇ" ಇತ್ಯಾದಿಶ್ರು

ತಿಷು ಜೀವೋತ್ಪತ್ತಿನಿರ್ದೇಶಾದಾಕಾಶಾದಿವತ್ತಸ್ಮಿಂಸ್ತದುತ್ಪತ್ತಿರಸ್ತ್ವಿತ್ಯಾಶಂಕಾಂ ನಿರಾಕರೋತಿ. ಆತ್ಮಾಧಿಕರಣಂ ॥ ೧೦ ॥ ನಾತ್ಮಾಶ್ರುತೇರ್ನಿತ್ಯತ್ವಾಚ್ಚ ತಾಭ್ಯಃ ॥ ೧೬ ॥ ಆತ್ಮಾ ಶಾರೀರೋ ನೋಪಪದ್ಯತೇ, ಕುತಃ ಅಶ್ರುತೇಃ ಸೃಷ್ಟಿಶ್ರುತಿಷು ಜೀವಾನಾಮುತ್ಪತ್ತೇರಶ್ರವಣಾತ್. "ಜ್ಞಾಽಜ್ಞೌ" ಇತ್ಯಾದಿಭ್ಯಸ್ತಾಭ್ಯಃ ಶ್ರುತಿಭ್ಯಃ ನಿತ್ಯತ್ವವ್ಯಪದೇಶಾತ್ ಇತಿ ಸೂಕ್ತಾರ್ಥಃ. ವಿಯದಾದೇಃ ಕೃತ್ಸ್ನಸ್ಯ ಪರಬ್ರಹ್ಮಣ ಉತ್ಪತ್ತಿರುಕ್ತಾ. ಇದಾನೀಂ ಜೀವಸ್ಯಾಪ್ಯುತ್ಪತ್ತಿರಸ್ತಿ ನವೇತಿ ಸಂಶಯ್ಯತೇ. ಕಿಂ ಯುಕ್ತಂ, ಅಸ್ತೀತಿ, ಕುತಃ, ಏಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞೋಪಪತ್ತೇಃ. ಪ್ರಾಕ್ಸೃಷ್ಟೇರೇಕತ್ವಾವಧಾರಣಾಚ್ಚ ವಿಯದಾದೇರಿವ ಜೀವಸ್ಯಾಪ್ಯುತ್ಪತ್ತಿವಾದಿನ್ಯಃ ಶ್ರುತಯಶ್ಚ ಸಂತಿ. ಯತಃ ಪ್ರಸೂತಾ ಜಗತಃ ಪ್ರಸೂತೀ ಯೇನ ಜೀವಾನ್ವಿಸಸರ್ಜ ಭೂಮ್ಯಾಂ". "ಪ್ರಜಾಪತಿಃ ಪ್ರಜಾ ಅಸೃಜತ". "ಸನ್ಮೂಲಾಸ್ಸೌಮ್ಯೇಮಾಸ್ಸರ್ವಾಃ ಪ್ರಜಾಸ್ಸದಾಯತನಾಸ್ಸತ್ಪ್ರತಿಷ್ಠಾಃ" ಇತಿ. ಏವಂ ಸಚೇತನಸ್ಯ ಜಗತಃ ಉತ್ಪತ್ತಿವಚನಾಜ್ಜೀವಸ್ಯಾಪ್ಯುತ್ಪತ್ತಿಃ ಪ್ರತೀಯತೇ. ನಚ ವಾಚ್ಯಂ ಬ್ರಹ್ಮಣೋ ನಿತ್ಯತ್ವಾತ್ ತತ್ತ್ವಮಸ್ಯಾದಿಭಿಶ್ಚ ಜೀವಸ್ಯ ಬ್ರಹ್ಮತ್ವಾವಗಮಾಜ್ಜೀವಸ್ಯ ನಿತ್ಯತ್ವಮಿತಿ. "ಐತದಾತ್ಮ್ಯಮಿದಂ ಸರ್ವಂ" "ಸರ್ವಂ ಖಲ್ವಿದಂ ಬ್ರಹ್ಮ" ಇತ್ಯೇವಮಾದಿಭಿರ್ವಿಯದಾದೇರಪಿ ಬ್ರಹ್ಮತ್ವಾವಗಮಾತ್ ತಸ್ಯಾಪಿ ನಿತ್ಯತ್ವಪ್ರಸಕ್ತೇಃ. ಅತೋ ಜೀವೋಽಪಿ ವಿಯದಾದಿವದುತ್ಪದ್ಯತ ಇತ್ಯೇವಂ ಪ್ರಾಪ್ತೇಽಭಿಧೀಯತೇ, ನಾತ್ಮಾ ಶ್ರುತೇರಿತಿ ನಾತ್ಮೋತ್ಪದ್ಯತೇ, ಕುತಃ ಅಶ್ರುತೇಃ, "ನ ಜಾಯತೇ ಮ್ರಿಯತೇ ವಾ ವಿಪಶ್ಚಿತ್" "ದ್ವಾವಜೌ" ಇತ್ಯಾದಿಭಿರ್ಜೀವಸ್ಯೋತ್ಪತ್ತಿಪ್ರತಿಷೇಧೋ ಹಿ ಶ್ರೂಯತೇ. ಆತ್ಮನೋ ನಿತ್ಯತ್ವಂ ಚ ತಾಭ್ಯಃ ಶ್ರುತಿಭ್ಯ ಏವಾವಗಮ್ಯತೇ. "ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ ಯೋ ವಿದಧಾತಿ ಕಾಮಾನ್" "ಅಜೋ ನಿತ್ಯಶ್ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ" ಇತ್ಯಾದಿಭ್ಯಃ. ಅತಶ್ಚ ನಾತ್ಮೋತ್ಪದ್ಯತೇ. ಕಥಂ ತರ್ಹ್ಯೇಕವಿಜ್ಞಾನೇನ ಸರ್ವವಿಜ್ಞಾನಪ್ರತಿಜ್ಞೋಪಪದ್ಯತೇ. ಇತ್ಥಮುಪಪದ್ಯತೇ, ಜೀವಸ್ಯಾಪಿ ಕಾರ್ಯತ್ವಾತ್ಕಾರ್ಯಕಾರಣಯೋರನನ್ಯತ್ವಾಚ್ಚ. ಏವಂ ತರ್ಹಿ ವಿಯದಾದಿವದುತ್ಪತ್ತಿಮತ್ತ್ವಮಂಗೀಕೃತಂ ಸ್ಯಾತ್. ನೇತ್ಯುಚ್ಯತೇ. ಕಾರ್ಯತ್ವಂ ಹಿ ನಾಮೈಕಸ್ಯ ದ್ರವ್ಯಸ್ಯಾವಸ್ಥಾಂತರಾಪತ್ತಿಃ. ತಚ್ಚೀವಸ್ಯಾಪ್ಯಸ್ತ್ಯೇವ. ಇಯಾಂಸ್ತು ವಿಶೇಷಃ. ವಿಯದಾದೇರಚೇತನಸ್ಯ ಯಾದೃಶೋಽನ್ಯಥಾಭಾವೋ ನ ತಾದೃಶೋ ಜೀವಸ್ಯ. ಜ್ಞಾನಸಂಕೋಚವಿಕಾಸಲಕ್ಷಣೋ ಜೀವಸ್ಯಾನ್ಯಥಾಭಾವಃ. ವಿಯದಾದೇಸ್ತು

ಸ್ವರೂಪಾನ್ಯಥಾಭಾವಲಕ್ಷಣಃ. ಸೇಯಂ ಸ್ವರೂಪಾನ್ಯಥಾಭಾವಲಕ್ಷಣಾ ಉತ್ಪತ್ತಿರ್ಜೀವೇ ಪ್ರತಿಷಿದ್ಧ್ಯತೇ. ಏತದುಕ್ತಂ ಭವತಿ. ಭೋಗ್ಯಭೋಕ್ತೃ ನಿಯಂತ್ರ್ಯಾನ್ ವಿವಿಕ್ತಸ್ವಭಾವಾನ್ ಪ್ರತಿಪಾದ್ಯ ಭೋಗ್ಯಗತಮುತ್ಪತ್ತ್ಯಾ ದಿಕಂ ಭೋಕ್ತರಿ ಪ್ರತಿಷಿದ್ಧ್ಯ ತಸ್ಯ ನಿತ್ಯತಾಂ ಚ ಪ್ರತಿಪಾದ್ಯ ಭೋಗ್ಯಗ ತಮುತ್ಪತ್ತ್ಯಾದಿಕಂ ಭೋಕ್ತೃಗತಂ ಚಾಪುರುಷಾರ್ಥಾಶ್ರಯತ್ವಂ ನಿಯಂತರಿ ಪ್ರತಿಷಿದ್ಧ್ಯ ತಸ್ಯ ನಿತ್ಯತ್ವಂ ನಿರವದ್ಯತ್ವಂ ಸರ್ವದಾ ಸರ್ವ ಜ್ಞತ್ವಂ ಸತ್ಯಸಂಕಲ್ಪತ್ವಂ ಕಾರಣಾಧಿಪಾಧಿಪತಿತ್ವಂ ವಿಶ್ವಪತಿತ್ವಂ ಚ ಪ್ರತಿ ಪಾದ್ಯ ಸರ್ವಾವಸ್ಥಯೋಶ್ಚಿದಚಿದಚಿತೋಸ್ತಂ ಪ್ರತಿ ನಿಯಮ್ಯತ್ವಂ ತಸ್ಯ ನಿಯಾಮಕತ್ವಂ ಪ್ರತಿಪಾದಿತಂ. ಅತಸ್ಸರ್ವದಾ ಚಿದಚಿದ್ವಸ್ತುಪ್ರಕಾಶ ಕತಯಾ ಸರ್ವಪರಿಪೂರ್ಣಂ ಬ್ರಹ್ಮ ತತ್ಕದಾಚಿದಪಿ ತದ್ಧರ್ಮಂ ಪ್ರಾಪ್ತುಂ ನಾರ್ಹತಿ ; ಸೂಕ್ಷ್ಮದಶಾಯಾಮಪಿ ಸ್ವಾಂತರ್ಲೀನಚಿದಚಿ ದ್ವಸ್ತುಪ್ರಕಾಶ್ಯತ್ವೇನ ತಿಷ್ಠತಿ. ತಸ್ಮಾದ್ದ್ವೈತಸ್ಯ ನಿತ್ಯತ್ವಂ. ಮೋಕ್ಷದ ಶಾಯಾಂ ಭ್ರಮರಕೀಟನ್ಯಾಯೇನ ಸ್ವಾಭಾವಿಕಜೀವತ್ವನಿವೃತ್ತಿ ಪೂರ್ವಕಶಿವತ್ವಪ್ರಾಪ್ತಿಃ "ಬ್ರಹ್ಮ ವೇದ ಬ್ರಹ್ಮೈವ ಭವತಿ" ಇತ್ಯಾ ದಿಷು ಸ್ಪಷ್ಟಮುಪದಿಷ್ಟಃ. ಅತೋ ಬದ್ಧದಶಾಯಾಂ ಜೀವಬ್ರಹ್ಮಣೋ ರ್ಭೇದಸ್ಯ ಮುಕ್ತದಶಾಯಾಂ ಅಭೇದಸ್ಯ ಚಾಂಗೀಕಾರಾತ್ ಸರ್ವಶ್ರುತಿ ಸಮನ್ವಯೋ ಭವತಿ. ತದ್ಯಥಾ, ಶಿವಸ್ವಾಭಾವಿಕಸ್ವಶಕ್ತಿವಿಕಾಸತಯಾ "ಯಥೋರ್ಣನಾಭಿಃ ಸೃಜತೇ ಗೃಹ್ಯತೇ ಚ" ಇತ್ಯಾದಿವಜ್ಜಗದುಭಯ ಕಾರಣತ್ವೇನ ವ್ಯಪದೇಶಾದ್ದ್ವೈತಾದ್ವೈತಮೇವ ಸಂಭವತಿ. ಕಾರ್ಯ ತ್ವೇನ ಭೇದತ್ವಂ ಉಪಾದಾನತ್ವೇನ ಅಭೇದತ್ವಂ ಚ ಸಿದ್ಧ್ಯತಿ. ಕಾರ್ಯಾ ವಸ್ಥಾಕಾರಣಾವಸ್ಥಯೋರಪಿ ಜಗದೀಶ್ವರಯೋರ್ಭೇದಾಭೇದತ್ವಂ ಪ್ರಚಕ್ಷ್ಯತೇ. ಕಾರ್ಯಾವಸ್ಥಾಯಾಂ ತು ಸ್ವಶಕ್ತಿಪರಿಣಾಮಿತ್ವೇನ ಭೇದತ್ವಂ ಸ್ವನಿಯಾಮಕತ್ವೇನ ಸ್ವಭಿನ್ನತ್ವಂ. ಕಾರಣಾವಸ್ಥಾಯಾಮಪಿ ಸ್ವಾಂತ ರ್ಲೀನತ್ವೇನಾಭೇದತ್ವಂ ಸ್ವಕರ್ಮಾನುಸ್ಯೂತತ್ವೇನ ಗ್ರೀಷ್ಮಕಾಲೇ ಭೂತೃಣಾದಿವತ್ ಸೂಕ್ಷ್ಮರೂಪೇಣ ಸ್ಥಿತತ್ವಾತ್ ಸ್ವಭಿನ್ನತ್ವಂ ಸರ್ವವೇ ದಾಂತಸಿದ್ಧಂ. "ಸದೇವ ಸೌಮ್ಯ" ಇತ್ಯತ್ರ ಚಿದಾಚಿದಾತ್ಮಕಪ್ರಪಂಚಸ್ಯ ಪ್ರಳಯೇ ಬ್ರಹ್ಮಾತ್ಮಕತ್ವೇನ ಸ್ಥಿತತ್ವಂ, ತದನಂತರಸೃಷ್ಟಿವಿಧಾಯಕ ತ್ವೇನ ತದ್ಭಿನ್ನತ್ವಂ ಚ ನಿರ್ದಿಶ್ಯತೇ. "ಅಸದ್ವಾ ಇದಮಗ್ರ ಆಸೀತ್ತತೋ ವೈ ಸದಜಾಯತ" ಇತ್ಯತ್ರಾಸತ್ಪದೇನ ಪ್ರಳಯೇ ಚಿದಚಿದಾತ್ಮಕ ಪ್ರಪಂಚಸ್ಯ ಸೂಕ್ಷ್ಮರೂಪೇಣ ಸ್ಥಿತತ್ವಂ. "ತತೋ ವೈ ಸದಜಾಯತ" ಇತ್ಯನೇನ ಸೂಕ್ಷ್ಮರೂಪಪ್ರಪಂಚಾನುಸ್ಯೂತತಯಾ ಬ್ರಹ್ಮಣಃ ಸ್ಥೂಲ ಪ್ರಪಂಚಕಾರಣತ್ವಂ ಚ ವ್ಯಪದಿಶ್ಯತೇ. ತತ್ರ ಕಾರಣಾವಸ್ಥಸ್ಯ ಕಾರ್ಯಾ

ವಸ್ಥಾಪತ್ತೌ ಅಚಿದಂಶಸ್ಯ ಕಾರಣಾವಸ್ಥಾಯಾಂ ಶಬ್ದಾದಿವಿಹೀನಸ್ಯ ಭೋಗ್ಯತ್ವಾಯ ಶಬ್ದಾದಿಮತ್ತಯಾ ಸ್ವರೂಪಾನ್ಯಥಾಭಾವರೂಪವಿಕಾರೋ ಭವತಿ. ಚಿದಂಶಸ್ಯ ಚ ಕರ್ಮಫಲಭೋಕ್ತೃತ್ವಾಯ ತದನುರೂಪಜ್ಞಾನವಿಕಾಸರೂಪೋ ವಿಕಾರೋ ಭವತಿ. ಉಭಯಪ್ರಕಾರವಿಶಿಷ್ಟೇ ನಿಯಂತರಿ ಏತದವಸ್ಥಾತದುಭಯವಿಶಿಷ್ಟತಾರೂಪವಿಕಾರೋ ಭವತಿ. ಕಾರಣಾವಸ್ಥಾಯಾ ಅವಸ್ಥಾಂತರಾಪತ್ತಿರೂಪೋ ವಿಕಾರಃ ಪ್ರಕಾರದ್ವಯೇ ಪ್ರಕಾರಿಣಿ ಚ ಸಮಾನಃ. ಅತ ಏವೈಕಸ್ಯಾವಸ್ಥಾಂತರಾಪತ್ತಿರೂಪವಿಕಾರಾಪೇಕ್ಷಯಾ "ಯೇನಾ ಶ್ರುತಂ ಶ್ರುತಂ" ಇತಿ ಏಕವಿಜ್ಞಾನೇನ ಸರ್ವವಿಜ್ಞಾನಂ ಪ್ರತಿಜ್ಞಾಯ ಮೃದಾದಿದೃಷ್ಟಾಂತೋ "ಯಥಾ ಸೌಮ್ಯ" ಇತ್ಯಾದಿನಾ ನಿರ್ದಿಷ್ಟಃ. ಈದೃಶಜ್ಞಾನಸಂಕೋಚವಿಕಾಸಕರತತ್ತದ್ದೇಹಸಂಬಂಧವಿಯೋಗಾಭಿಪ್ರಾಯಾಃ ಜೀವಸ್ಯೋತ್ಪತ್ತಿಮರಣವಾದಿನ್ಯಃ "ಪ್ರಜಾಪತಿಃ ಪ್ರಜಾ ಅಸೃಜತ" ಇತ್ಯಾದ್ಯಾಃ ಶ್ರುತಯಃ. ಅಚಿದಂಶವತ್ಸ್ವರೂಪಾನ್ಯಥಾಭಾವಾಭಿಪ್ರಾಯಾ ಉತ್ಪತ್ತಿಪ್ರತಿಷೇಧವಾದಿನ್ಯೋ ನಿತ್ಯತ್ವವಾದಿನ್ಯಶ್ಚ "ನ ಜಾಯತೇ ಮ್ರಿಯತೇ" ಇತ್ಯಾದ್ಯಾಃ. "ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ" ಇತ್ಯಾದ್ಯಾಶ್ಚ ಶ್ರುತಯಃ ಸ್ವರೂಪಾನ್ಯಥಾತ್ವಜ್ಞಾನಸಂಕೋಚವಿಕಾಸರೂಪೋಭಯವಿಧಾನಿಷ್ಟವಿಕಾರಭಾವಾಭಿಪ್ರಾಯಾಃ. "ಸ ವಾ ಏಷ ಮಹಾನಜ ಆತ್ಮಾಜರೋಽಮರೋಽಮೃತೋ ಬ್ರಹ್ಮ" ಇತ್ಯಾದ್ಯಾಃ ಪರವಿಷಯಾಃ ಶ್ರುತಯಃ. ಏವಂ ಸರ್ವದಾ ಚಿದಚಿದ್ವಸ್ತುಪೂರ್ಣಸ್ಯ ಪರಶಿವಬ್ರಹ್ಮಣಃ ಪ್ರಾಕ್ಸೃಷ್ಟೇರೇಕತ್ವಾವಧಾರಣಂ ಚ ನಾಮರೂಪವಿಭಾಗಾಭಾವಾದುಪಪದ್ಯತೇ. ತದೇತ್ಥಂ, "ತರ್ಹ್ಯವ್ಯಾಕೃತಮಾಸೀತ್ತನ್ನಾಮರೂಪಾಭ್ಯಾಂ ವ್ಯಾಕ್ರಿಯತ" ಇತಿ ಹಿ ನಾಮರೂಪವಿಭಾಗಭಾವಾಭಾವಾಭ್ಯಾಂ ನಾನಾತ್ವೈಕತ್ವೇ ವದಂತೀತಿ. ಯೇ ತು ಅವಿದ್ಯೋಪಾಧಿಕಂ ಜೀವತ್ವಂ ವದಂತಿ ಯೇ ಚ ಪಾರಮಾರ್ಥಿಕೋಪಾಧಿಕೃತಂ ಯೇ ಚ ಸನ್ಮಾತ್ರಸ್ವರೂಪಂ ಬ್ರಹ್ಮ ಸ್ವಯಮೇವ ಭೋಕ್ತೃಭೋಗ್ಯನಿಯಂತೃರೂಪೇಣ ತ್ರಿಧಾವಸ್ಥಿತಂ ವದಂತಿ ಸರ್ವೇಽಪ್ಯೇತೇಽವಿದ್ಯಾಶಕ್ತೇರುಪಾಧಿಶಕ್ತೇರ್ಭೋಕ್ತೃಭೋಗ್ಯನಿಯಂತೃಶಕ್ತೀನಾಂ ಚ ಪ್ರಳಯಕಾಲೇಽವಸ್ಥಾನೇಽಪಿ ತದಾನೀಮೇಕತ್ವಾವಧಾರಣಂ ನಾಮರೂಪವಿಭಾಗಾಭಾವಾದೇವೋಪಪಾದಯಂತಿ. "ವೈಷಮ್ಯನೈರ್ಘೃಣ್ಯೇನ ಸಾಪೇಕ್ಷತ್ವಾತ್", "ನ ಕರ್ಮವಿಭಾಗಾತ್" ಇತಿ ಸೂತ್ರಾಭ್ಯಾಂ ಜೀವಭೇದಸ್ಯ ತತ್ಕರ್ಮಪ್ರವಾಹಸ್ಯ ಚಾನಾದಿತ್ವಾಭ್ಯುಪಗಮಾಚ್ಚ. ಇಯಾನ್ವಿಶೇಷಃ. ಏಕಸ್ಯಾನಾದ್ಯುಪಾಧಿನಾ ಬ್ರಹ್ಮ ಸ್ವಯಮೇವ ಬಧ್ಯತೇ.

ಉಪಾಧಿಬ್ರಹ್ಮವ್ಯತಿರಿಕ್ತವಸ್ತ್ವಂತರಾಭಾವಾದಪರಸ್ಯ ಬ್ರಹ್ಮೈವ ವಿಚಿತ್ರಾಕಾರೇಣ ಪರಿಣಮತೇ, ಕರ್ಮಫಲಾನಿ ಚಾನಿಷ್ಟಾನಿ ಭುಂಕ್ತೇ. ನಿಯಂತ್ರಂಶಸ್ಯ ಭೋಕ್ತೃತ್ವಾಭಾವೇಽಪಿ ಸರ್ವಜ್ಞತ್ವಾತ್ಸ್ವಾತ್ಮಾಭಿನ್ನಂ ಭೋಕ್ತಾರಮನುಸಂದಧಾತೀತಿ ಸ್ವಯಮೇವ ಭುಂಕ್ತೇ. ಅಸ್ಮಾಕಂ ತು ಸ್ವಶಕ್ತಿಸಂಕೋಚವಿಕಾಸಾತ್ಮಕತಯಾ ಬ್ರಹ್ಮ ಕಾರ್ಯಕಾರಣೋಭಯಾವಸ್ಥಾಸ್ಥಿತಮಪಿ ಸರ್ವದಾ ನಿರಸ್ತನಿಖಿಲದೋಷಗಂಧಂ ಸತ್ಯಸಂಕಲ್ಪತ್ವಾದ್ಯಪಾರಮಿತೋದಾರಗುಣಸಾಗರಮವತಿಷ್ಠತೇ. ಪ್ರಕಾರಭೂತಚಿದಚಿದ್ವಸ್ತುಗತಾಃ ಅಪುರುಷಾರ್ಥಾಃ ಸ್ವರೂಪಾನ್ಯಥಾಭಾವಾಶ್ಚೇತಿ ಸರ್ವಂ ಸಮಂಜಸಮಿತಿ ರಾದ್ಧಾಂತಃ.

" ಯಾವನಿಂದ ಈ ಪ್ರಾಣಿಗಳು ಹುಟ್ಟಿವೆಯೋ" ಎಂಬಲ್ಲಿ ಜೀವರ ಉತ್ಪತ್ತಿಯನ್ನು ಹೇಳಿರುವುದರಿಂದ ಆಕಾಶದಂತೆ ಅವರೂ ಅವನಿಂದಲೇ ಹುಟ್ಟಿದರೆಂದು ಆಶಂಕಿಸಿ ನಿರಕರಿಸುತ್ತಾನೆ. ಸೃಷ್ಟಿಯನ್ನು ಬೋಧಿಸುವ ಶ್ರುತಿಗಳಲ್ಲಿ ಜೀವರ ಉತ್ಪತ್ತಿಯನ್ನು ಹೇಳಿಲ್ಲವಾದ್ದರಿಂದ ಜೀವನು ಹುಟ್ಟುವುದಿಲ್ಲ." ಇಬ್ಬರು ಆತ್ಮರೂ ನಿತ್ಯರು" ಎಂದು ಮುಂತಾದ ಶ್ರುತಿಗಳಲ್ಲಿ ಜೀವರನ್ನು ನಿತ್ಯರೆಂದು ಹೇಳಲಾಗಿದೆ. ಆಕಾಶ ಮೊದಲಾದ ಸಮಸ್ತವಸ್ತುಗಳಿಗೂ ಬ್ರಹ್ಮದಿಂದಲೇ ಉತ್ಪತ್ತಿಯನ್ನು ಹೇಳಿದೆ. ಇಲ್ಲಿ ಜೀವನಿಗೆ ಉತ್ಪತ್ತಿಯುಂಟೇ ಇಲ್ಲವೇ ಎಂದು ಸಂದೇಹಬಂದಾಗ ಉಂಟೆಂದೇ ಹೇಳಬೇಕಾಗುತ್ತದೆ. ಹಾಗೆ ಹೇಳಿದರೆಯೇ " ಒಂದನ್ನು ತಿಳಿದರೆ ಎಲ್ಲವೂ ತಿಳಿಯುವುದು" ಎಂಬ ಪ್ರತಿಜ್ಞೆಯುಕ್ತವಾಗಿ ಹೊಂದುತ್ತದೆ. ಸೃಷ್ಟಿಗೆ ಮೊದಲು ಬ್ರಹ್ಮ ಒಂದೇ ಇತ್ತೆಂದೂ ಹೇಳಿದೆ. ಇದೂ ಅಲ್ಲದೆ, ಆಕಾಶಾದಿಗಳಂತೆ ಜೀವರಿಗೆ ಉತ್ಪತ್ತಿಯನ್ನು ಹೇಳುವ ಶ್ರುತಿಗಳೂ ಇವೆ. "ಯಾವನಿಂದ ಜಗತ್ತು ಹುಟ್ಟಿತೋ, ಯಾವನು ಜೀವರನ್ನು ಭೂಮಿಗೆ ಕಳುಹಿಸಿದನೋ" " ಬ್ರಹ್ಮ ಪ್ರಜೆಗಳನ್ನು ಸೃಷ್ಟಿಸಿದನು" " ಈ ಜೀವರೆಲ್ಲರಿಗೂ ಪರಮಾತ್ಮನೇ ಆಧಾರನು ಆಶ್ರಯನು ಮತ್ತು ಅವಕಾಶನೂ ಆಗಿದ್ದಾನೆ" ಹೀಗೆ ಶ್ರುತಿಗಳಲ್ಲಿ ಚೇತನರಿಗೂ ಜಡವಸ್ತುಗಳಿಗೂ ಉತ್ಪತಿಯನ್ನು ಹೇಳಿರುವುದರಿಂದ ಜೀವರು ಹುಟ್ಟುವರೆಂದು ತಿಳಿದುಬರುತ್ತದೆ. ಬ್ರಹ್ಮ ನಿತ್ಯವಾದ್ದರಿಂದಲೂ, ತತ್ತ್ವಮಸಿ ಮೊದಲಾದ ವಾಕ್ಯಗಳಿಂದ ಜೀವರು ಬ್ರಹ್ಮವೆಂದೇ ತಿಳಿದುಬರುವುದರಿಂದಲೂ ಜೀವನು ನಿತ್ಯನಾಗಬಹುದಲ್ಲವೆ ? ಎಂದರೆ " ಇದೆಲ್ಲವೂ ಆತ್ಮವೇ " " ಇದೆಲ್ಲವೂ ಬ್ರಹ್ಮವೇ" ಎಂಬುದರಿಂದ ಆಕಾಶ ಮೊದಲಾದವೆಲ್ಲವೂ ಬ್ರಹ್ಮವಾದ್ದರಿಂದ ನಿತ್ಯವೆನಿಸಬೇಕಾಗುತ್ತದೆ. ಆದ್ದರಿಂದ ಜೀವನು ಆಕಾಶದಂತೆ ಹುಟ್ಟಿದನೆಂದು ಆಕ್ಷೇಪ ಬಂದರೆ ಸೂತ್ರದಲ್ಲಿ ಸಮಾಧಾನವಿದೆ. ಆತ್ಮ ಹುಟ್ಟುವ ಬಗ್ಗೆ ಶ್ರುತಿಯು ಆಧಾರವಿಲ್ಲ. " ಇವನಿಗೆ ಹುಟ್ಟುಸಾವುಗಳಿಲ್ಲ" " ಇಬ್ಬರು ಅಜರು " ಎಂಬ ಶ್ರುತಿಗಳಲ್ಲಿ ಜೀವನಿಗೆ ಉತ್ಪತ್ತಿಯನ್ನು ನಿಷೇಧಿಸಿರುವುದಾಗಿ ಹೇಳಿದೆ. ಆತ್ಮ ನಿತ್ಯವೆಂಬುದು ಆ ಶ್ರುತಿಗಳಿಂದಲೇ ತಿಳಿದುಬರುತ್ತದೆ. " ನಿತ್ಯವಸ್ತು

ಗಳೆಲ್ಲಕ್ಕೂ ನಿತ್ಯವೆನಿಸಿ ಚೇತನರಿಗೆ ಚೇತನನೆನಿಸಿ ಅನೇಕರೊಳಗೆ ಏಕನೆನಿಸಿ ಪರಮಶಿವನು ಜೀವರ ಇಷ್ಟಗಳನ್ನು ನೆರವೇರಿಸುತ್ತಾನೆ ” “ ಶರೀರದ ಕೊಲೆಯಾದರೂ ಅವನು ಸನಾತನನೂ ಆಗಿರುವನು”ಎಂದು ಶ್ರುತಿಗಳಲ್ಲಿ ಹೇಳಿರುವುದರಿಂದ ಆತ್ಮನಿಗೆ ಉತ್ಪತ್ತಿ ಇಲ್ಲ. ಹಾಗೇದರೆ ಸರ್ವವಿಜ್ಞಾನಪ್ರತಿಜ್ಞೆ ಹೇಗೆ ಹೊಂದುತ್ತದೆ. ಎಂದರೆ ಜೀವನು ಕಾರ್ಯವಾದ್ದರಿಂದಲೂ, ಕಾರ್ಯಕಾರಣಗಳು ವಾಸ್ತವವಾಗಿ ಬೇರೆಯಲ್ಲವಾದ್ದರಿಂದಲೂ ಆ ಪ್ರತಿಜ್ಞೆ ಹೊಂದುತ್ತದೆ. ಹಾಗಾದರೆ ಆಕಾಶಾದಿಗಳಂತೆ ಜೀವರಿಗೆ ಉತ್ಪತ್ತಿಯುಂಟೆಂಬುದನ್ನು ಒಪ್ಪಿದಂತಾಗುತ್ತದೆ. ಅಂದರೆ ಅದು ಸರಿಯಲ್ಲ. ಒಂದುವಸ್ತು ಕಾರ್ಯವಾಗುವುದೆಂದರೆ ಅದು ಬೇರೆ ಅವಸ್ಥೆಯನ್ನು ಪಡೆಯುವುದೇ ಆಗಿದೆ. ಅದು ಜೀವನಿಗೂ ಇದ್ದೇಇದೆ. ಆದರೆ ಇಲ್ಲಿ ಒಂದು ವಿಶೇಷವಿದೆ. ಅಚೇತನವಾದ ಆಕಾಶ ಮೊದಲಾದವುಗಳಿಗೆ ಹೇಗೆ ಬೇರೆ ಅವಸ್ಥೆಯುಂಟಾಗುವುದೋ ಹಾಗೆ ಜೀವನಿಗೆ ಆಗುವುದಿಲ್ಲ. ಇಲ್ಲಿ ಜ್ಞಾನದ ಸಂಕೋಚವಿಕಾಸಗಳೇ ಜೀವನ ಪರಿಣಾಮವೆನಿಸಿದೆ. ಆಕಾಶಾದಿಗಳಿಗಾದರೋ ಸ್ವರೂಪವೇ ಬದಲಾವಣೆಯಾಗುತ್ತದೆ. ಈ ಬಗೆಯ ಸ್ವರೂಪದ ಬದಲಾವಣೆ ಜೀವನಿಗೆ ಅನ್ವಯಿಸುವುದಿಲ್ಲ. ಇದರಿಂದ ಇಷ್ಟನ್ನು ಹೇಳಿದಂತಾಗುತ್ತದೆ. ಭೋಜ್ಯವಸ್ತು, ಭೋಕ್ತೃಜೀವ, ನಿಯಾಮಕ ಇವರ ಬೇರೆ ಬೇರೆ ಸ್ವಭಾವಗಳನ್ನು ತಿಳಿಸಿ ಭೋಜ್ಯವಸ್ತುವಿನಲ್ಲಿರುವ ಉತ್ಪತ್ತಿ ಮೊದಲಾದವನ್ನು ಭೋಕ್ತೃ ಜೀವನಲ್ಲಿ ತಡೆದು, ಅವನನ್ನು ನಿತ್ಯನೆಂದು ತಿಳಿಸಿ, ಭೋಜ್ಯವಸ್ತುವಿನಲ್ಲಿರುವ ಉತ್ಪತ್ತಿ ಮೊದಲಾದ ವಿಕಾರಗಳನ್ನೂ, ಭೋಕ್ತೃವಿನಲ್ಲಿರುವ ಸಾಧಕತ್ವವನ್ನೂ ನಿಯಾಮಕೇಶ್ವರಲ್ಲಿ ನಿಷೇಧಿಸಿ ಅವನನ್ನು ನಿತ್ಯ, ನಿರ್ದುಷ್ಟ, ಸರ್ವಜ್ಞ, ಸತ್ಯಸಂಕಲ್ಪ, ಸರ್ವಕಾರಣ, ವಿಶ್ವಾಧಿಪತಿ ಎಂದು ತಿಳಿಸಿ ಚಿತಚಿತ್ಪ್ರಪಂಚಗಳಿಗೆ ಎಲ್ಲಾ ಅವಸ್ಥೆಗಳಲ್ಲೂ ಅವನನ್ನೇ ನಿಯಾಮಕನೆಂದು ತಿಳಿಸಲಾಗಿದೆ. ಆದ್ದರಿಂದ ಯಾವಾಗಲೂ ಚಿದಚಿದ್ವಸ್ತುಗಳನ್ನು ಪ್ರಕಾಶಪಡಿಸುವುದರಿಂದ ಸರ್ವಪರಿಪೂರ್ಣವಾದ ಬ್ರಹ್ಮ ಚಿದಚಿದ್ವಸ್ತುಗಳ ಧರ್ಮವನ್ನು ಎಂದಿಗೂ ಹೊಂದುವುದಿಲ್ಲ. ಸೂಕ್ಷ್ಮದಶೆಯಲ್ಲೂ ತನ್ನಲ್ಲಿ ಅಡಗಿಸಿಕೊಂಡಿರುವ ಸದಸದ್ವಸ್ತುಗಳನ್ನು ಅದು ಪ್ರಕಾಶಿಸುತ್ತಲೇ ಇರುತ್ತದೆ. ಆದ್ದರಿಂದ ದ್ವೈತವೂ ನಿತ್ಯವೆನಿಸಿದೆ. ಆದರೂ ಮೋಕ್ಷದಶೆಯಲ್ಲಿ ಜೀವನು ಭ್ರಮರಕೀಟನ್ಯಾಯದಂತೆ ಸ್ವಾಭಾವಿಕವಾದ ಜೀವಭಾವವನ್ನು ಕಳೆದುಕೊಂಡು ಶಿವಭಾವವನ್ನು ಹೊಂದುತ್ತಾನೆ. “ ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ.” ಎಂದು ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ ಬದ್ಧದಶೆಯಲ್ಲಿ ಜೀವಬ್ರಹ್ಮರಿಗೆ ಭೇದವನ್ನೂ, ಮುಕ್ತದಶೆಯಲ್ಲಿ ಅಭೇದವನ್ನೂ ಒಪ್ಪಿದ್ದರಿಂದ ಸರ್ವಶ್ರುತಿಗಳಿಗೂ ಸಮನ್ವಯವುಂಟಾಗುತ್ತದೆ. ಜೇಡರಹುಳು ತನ್ನಿಂದಲೇ ನೂಲನ್ನು ಹೊರಹೊಮ್ಮಿಸಿ ತನ್ನೊಳಗೇ ಸೇರಿಸಿಕೊಳ್ಳುವಂತೆ ಶಿವನ ಸ್ವಭಾವವೆನಿಸಿದ ಶಕ್ತಿವಿಕಾಸದಿಂದ ಅವನನ್ನೇ ಜಗತ್ತಿಗೆ ಉಭಯಕಾರಣನೆಂದು ಹೇಳಿದ್ದರಿಂದ ದ್ವೈತಾದ್ವೈತವೇ ಸಂಭವಿಸುತ್ತದೆ. ಜೀವಭಾವದಿಂದ ಭೇದವೂ, ಉಪಾದಾನವಾದ್ದರಿಂದ ಅಭೇದವೂ

ಸಿದ್ಧಿಸುತ್ತವೆ. ಹೀಗೆ ಕಾರ್ಯಾವಸ್ಥೆ ಕಾರಣಾವಸ್ಥೆಗಳೆರಡರಲ್ಲೂ ಜಗದೀಶ್ವರರಿಗೆ ಭೇದಾಭೇದಸಂಬಂಧವನ್ನು ಹೇಳಲಾಗಿದೆ. ಕಾರ್ಯಾವಸ್ಥೆಯಲ್ಲಿ ತನ್ನ ಶಕ್ತಿಯ ವಿಕಾಸದಿಂದ ಅಭೇದವೂ, ತಾನೇ ನಿಯಾಮಕನಾದ್ದರಿಂದ ಭೇದವೂ ಹೊಂದುತ್ತವೆ. ಕಾರಣಾವಸ್ಥೆಯಲ್ಲಿ ತನ್ನಲ್ಲಿಯೇ ವಿಶ್ವವಡಗಿರುವುದರಿಂದ ತನಗೂ ಅದಕ್ಕೂ ಅಭೇದವೇ ಇದ್ದರೂ ಗ್ರೀಷ್ಮಕಾಲದಲ್ಲಿ ನೆಲದಲ್ಲಿ ಬಿದ್ದ ತೃಣದಂತೆ ಜೀವರು ಅವರವರ ಕರ್ಮವನ್ನು ಅನುಸರಿಸಿಕೊಂಡೇ ಇರುವುದರಿಂದ ಭಿನ್ನರೂ ಆಗಿರುವರೆಂದು ವೇದಾಂತದಲ್ಲಿ ಪ್ರತಿಪಾದಿಸಲಾಗಿದೆ. "ಇದೆಲ್ಲವೂ ಮೊದಲು ಸದ್ರೂಪವಾಗಿತ್ತು" ಎಂಬಲ್ಲಿ ಚಿದಚಿದ್ರೂಪವಾದ ಪ್ರಪಂಚವು ಪ್ರಳಯದಲ್ಲಿ ಬ್ರಹ್ಮರೂಪದಿಂದಲೇ ಇತ್ತು. ಅನಂತರ ಸೃಷ್ಟಿಯನ್ನು ಹೇಳಿರುವುದರಿಂದ ಇದೆಲ್ಲವೂ ಅವನಿಂದ ಭಿನ್ನವಾಯಿತು. "ಮೊದಲು ಇದೆಲ್ಲವೂ ಅಸದ್ರೂಪವಾಗಿತ್ತು, ಆಮೇಲೆ ಸದ್ರೂಪವಾಯಿತು" ಎಂಬಲ್ಲಿ ಅಸತ್ಪದವು ಪ್ರಪಂಚವನ್ನು ಪರಮಾತ್ಮನಲ್ಲಿ ಸೂಕ್ಷ್ಮರೂಪದಿಂದ ನೆಲಸಿತ್ತೆಂದೂ–ಸತ್ಪದವು ಸೂಕ್ಷ್ಮಪ್ರಪಂಚದೊಳಗೆ ನೆಲಸಿದ್ದ ಬ್ರಹ್ಮವನ್ನು ಸ್ಥೂಲಪ್ರಪಂಚಕ್ಕೆ ಕಾರಣವೆಂದೂ ತಿಳಿಸುತ್ತವೆ. ಇಲ್ಲಿ ಕಾರಣವಸ್ಥೆಯು ಕಾರ್ಯಾವಸ್ಥೆಯನ್ನು ಹೊಂದುವಾಗ ಅಚಿದ್ವಸ್ತುವು ಕಾರಣಾವಸ್ಥೆಯಲ್ಲಿ ವ್ಯವಹಾರಯೋಗ್ಯವಲ್ಲದ್ದರಿಂದ ಭೋಜ್ಯವಸ್ತುವೆನಿಸಲಿಕ್ಕಾಗಿ ಶಬ್ದಾದಿವ್ಯವಹಾರಕ್ಕೆ ಸಿಲುಕಿ ಸ್ವರೂಪದ ಬದಲಾವಣೆಯನ್ನು ಹೊಂದುತ್ತದೆ. ಚಿದಂಶವು ಕರ್ಮಫಲವನ್ನು ಅನುಭವಿಸಲಿಕ್ಕಾಗಿ ಜ್ಞಾನವಿಕಾಸರೂಪವಾದ ವಿಕಾರವನ್ನು ಹೊಂದುತ್ತದೆ. ಈ ಎರಡು ವಿಶೇಷಣಗಳಿಂದೊಡಗೂಡಿದ್ದ ಬ್ರಹ್ಮಾಂಶದಲ್ಲಿಯೂ ಹೀಗೆ ಪರಿಣಾಮ ಹೊಂದುವಂತಹ ಎರಡು ವಸ್ತುಗಳ ಕೂಡಿರುವಿಕೆಯೇ ಒಂದು ವಿಕಾರವೆನಿಸುತ್ತದೆ. ಕಾರಣಾವಸ್ಥೆಯಲ್ಲಿ ಬೇರೆ ಅವಸ್ಥೆಯನ್ನು ಹೊಂದುವುದೇ ವಿಕಾರವೆನಿಸುತ್ತದೆ. ಇದನ್ನು ವಿಶೇಷಣ ಮತ್ತು ವಿಶೇಷ್ಯಗಳೆರಡಕ್ಕೂ ಸಮಾನವೆಂದು ತಿಳಿಸಿದೆ. ಹೀಗೆ ಒಂದುವಸ್ತುವಿಗೆ ಬೇರೆ ಅವಸ್ಥೆಯು ಬರುವುದರಿಂದಲೇ ಏಕವಿಜ್ಞಾನದಿಂದ ಸರ್ವವಿಜ್ಞಾನವೂ, ಮೃದ್ಘಟದೃಷ್ಟಾಂತವೂ ಹೊಂದಿಕೆಯಾಗುತ್ತವೆ. ಜೀವನಿಗೆ ಜ್ಞಾನಸಂಕೋಚವಿಕಾಸರೂಪವಾದ ಅವಸ್ಥೆಯು ದೇಹವಿಯೋಗ ಮತ್ತು ಸಂಯೋಗಗಳಿಂದ ಬರುತ್ತದೆ. ಇದನ್ನು ಅವಲಂಬಿಸಿಯೇ ಜೀವನ ಉತ್ಪತ್ತಿ ಮರಣಗಳನ್ನು ತಿಳಿಸುವ ಶ್ರುತಿಗಳು ಹೊರಟಿವೆ. ಅಚೇತನಾಂಶದಂತೆ ಜೀವನಿಗೆ ಸ್ವರೂಪದಲ್ಲಿ ಪರಿಣಾಮವಿಲ್ಲದ್ದರಿಂದ ಅಚೇತನದಂತೆ ಉತ್ಪತ್ತಿಯನ್ನು ನಿರಾಕರಿಸಿ ತತ್ತ್ವವನ್ನು ತಿಳಿಸುವ ಶ್ರುತಿಗಳು "ಜೀವನಿಗೆ ಹುಟ್ಟುಸಾವುಗಳಿಲ್ಲ" ಹೀಗೆ ಹೊರಟಿವೆ. ಪರಮಾತ್ಮನಲ್ಲಿ ಅಚೇತನದಂತೆ ಸ್ವರೂಪವಿಕಾರವಾಗಲಿ ಚೇತನನಂತೆ ಜ್ಞಾನಸಂಕೋಚವಿಕಾಸರೂಪವಾದ ಸ್ವಭಾವವಿಕಾರಗಳಾಗಲೀ ಇಲ್ಲದ್ದರಿಂದ ಅವನನ್ನು "ಜರಾಮರಣರಹಿತನು, ಸರ್ವಕಾರಣನು" ಎಂದು ಶ್ರುತಿಗಳಲ್ಲಿ ಘೋಷಿಸಲಾಗಿದೆ. ಹೀಗೆ ಚೇತನಾಚೇತನ ವಿಶಿಷ್ಟವಾದ ಬ್ರಹ್ಮವು ಪ್ರಳಯಕಾಲದಲ್ಲಿ ನಾಮರೂಪವಿಭಾಗಕ್ಕವಕಾಶವಿಲ್ಲದ್ದರಿಂದ

ಅದ್ವಿತೀಯವೆನಿಸಿದೆ. "ಈ ಪ್ರಪಂಚವು ವಿಭಾಗವಿಲ್ಲದ ಅವಸ್ಥೆಯಲ್ಲಿದ್ದು ನಾಮ ರೂಪವಿಭಾಗವನ್ನು ಅನಂತವಾಗಿ ಹೊಂದಿದೆ" ಎಂಬ ಶ್ರುತಿಯಲ್ಲಿ ನಾಮರೂಪವಿಭಾಗ ವಿರುವಿಕೆ ಮತ್ತು ಇಲ್ಲದಿರುವಿಕೆ, ಇವುಗಳಿಂದಲೇ ಅನೇಕತ್ವ ಮತ್ತು ಏಕತ್ವಗಳು ತಿಳಿದುಬರುತ್ತವೆ. ಅವಿದ್ಯೆ ಎಂಬ ಉಪಾಧಿಯಿಂದ ಕೂಡಿದ ಚೈತನ್ಯವೇ ಜೀವನೆಂದು ಕೆಲವರು ಹೇಳುವರು (ಶಂಕರ). ವಾಸ್ತವವಾದ ಉಪಾಧಿಯಿಂದೊಡಗೂಡಿದ ಚೇತ ನವೇ ಜೀವನೆಂದು ಕೆಲವರು ಹೇಳುವರು(ಭಾಸ್ಕರ). ಬ್ರಹ್ಮವೇ ಭೋಕ್ತೃ, ಭೋಜ್ಯ, ನಿಯಂತೃವೆಂಬ ಮೂರು ರೂಪಗಳಿಂದ ತಾನಾಗಿಯೇ ಪರಿಣಮಿಸುವುದು ಎಂದು ಮತ್ತೆ ಕೆಲವರು ಹೇಳುವರು (ಯಾದವಪ್ರಕಾಶ). ಈ ಎಲ್ಲಾ ಮತಗಳಲ್ಲೂ ಅವಿದ್ಯಾ ಶಕ್ತಿಯಾಗಲೀ, ಉಪಾಧಿಶಕ್ತಿಯಾಗಲಿ, ಭೋಕ್ತೃಭೋಜ್ಯ ನಿಯಂತೃಶಕ್ತಿಗಳಾಗಲೀ ಪ್ರಳಯಕಾಲದಲ್ಲಿ ಅವಿಭಕ್ತಾವಸ್ಥೆಯಲ್ಲಿದ್ದುದರಿಂದಲೇ ಇಲ್ಲಿ ಏಕತ್ವವನ್ನು ನಿರ್ವಹಿಸ ಲಾಗಿದೆ ; ಏಕೆಂದರೆ "ನ ಕರ್ಮವಿಭಾಗಾದಿತಿ" ಎಂಬ ಸೂತ್ರದಂತೆ ಸಂಸಾರವನ್ನು ಅನಾದಿ ಎಂದು ಎಲ್ಲರೂ ಒಪ್ಪಿರುವರು. ಮೊದಲನೇಮತದಲ್ಲಿ ಅನಾದಿ ಅವಿದ್ಯೆ ಯಿಂದ ಬ್ರಹ್ಮವೇ ಮೋಹಗೊಳ್ಳುತ್ತದೆ. ಎರಡನೇ ಮತದಲ್ಲಿ ಉಪಾಧಿ ಸತ್ಯವಿದ್ದರೂ ಬ್ರಹ್ಮವೇ ಬಂಧನಕ್ಕೊಳಗಾಗುತ್ತದೆ. ಮೂರನೇಮತದಲ್ಲಿ ಬ್ರಹ್ಮವೇ ವಿಚಿತ್ರಾಕಾರ ದಿಂದ ಪರಿಣಮಿಸುತ್ತದೆ. ಇದರಿಂದ ಕರ್ಮಫಲಭೋಗವು ಬ್ರಹ್ಮಕ್ಕೇ ಸಂಭವಿಸು ತ್ತದೆ. ನಿಯಂತ್ರಂಶಕ್ಕೆ ಭೋಕ್ತೃತ್ವವನ್ನು ಒಪ್ಪದಿದ್ದರೂ ಅವನು ಸರ್ವಜ್ಞನಾದ್ದ ರಿಂದ ಭೋಕ್ತೃವನ್ನು ತನಗಭಿನ್ನನೆಂದು ತಿಳಿದಿರುವುದರಿಂದ ಅವನ ದುಃಖಾನು ಭವವು ನಿಯಂತನಿಗೆ ಅನಿವಾರ್ಯವಾಗಿ ಸಂಭವಿಸುತ್ತದೆ. ನಮ್ಮ ಮತದಲ್ಲಂತೂ ಬ್ರಹ್ಮದ ಶಕ್ತಿಸಂಕೋಚವಿಕಾಸಗಳಿಂದಲೇ ಈ ಕಾರ್ಯಕಾರಣಭಾವಗಳನ್ನು ನಿರ್ವ ಹಿಸುವುದರಿಂದ ಪರಬ್ರಹ್ಮ ಸ್ವತಃ ಶುದ್ಧವಾಗಿಯೂ ಸಮಸ್ತಕಲ್ಯಾಣಗುಣಾಕರ ವಾಗಿಯೂ ಇರುತ್ತದೆ. ದೋಷವೆಲ್ಲವೂ ವಿಶೇಷಣಾಂಶದಲ್ಲಿಯೇ ನಿಲ್ಲುತ್ತದೆ. ಬ್ರಹ್ಮಕ್ಕೆ ಸ್ವರೂಪವಿಕಾರಗಳನ್ನು ಒಪ್ಪದಿರುವುದರಿಂದ ಅವನು ನಿರ್ವಿಕಾರನೇ ಆಗಿ ರುವನು. ಆದ್ದರಿಂದ ಎಲ್ಲವೂ ಹೊಂದಿಕೆಯಾಗುತ್ತದೆ.

**ಆಕಾಶಾದೀನಾಂ ಜನ್ಯತ್ವೇ ಜೀವಾನಾಮಜನ್ಯತ್ವೇ ಚ ಕೋ ಹೇತು ರಿತ್ಯಾಶಂಕಾಯಾಮಾಹ. ಜ್ಞಾಧಿಕರಣಂ ||೧೧|| ಜ್ಞೋತ ಏವ ||೧೭|| ಜ್ಞ ಏವ ಜೀವಃ ಜ್ಞಾತೃಸ್ವರೂಪಃ ನಾಚೇತನಸ್ವರೂಪಃ. ತಸ್ಮಾ ಜ್ಜ್ಞಸ್ಯತ್ವಂ ನ ಸಂಭವತಿ. ಜಡಾನಾಮೇವ ಜನ್ಯತ್ವಂ ಕುಂಭಾದೀನಾಂ ಚ ಸಮ್ಮತಂ ಇತಿ ಸ್ಮೃತಿದರ್ಶನಾಜ್ಜಡತ್ವಾದಾಕಾಶಾದೀನಾಮೇವೋ ತ್ಪತ್ತಿಃ ಅಜಡತ್ವಾಜ್ಜೀವೋತ್ಪತ್ತಿರಸಂಗೀಕರಣೀಯೇತಿ ಸೂಕ್ತಾರ್ಥಃ. ವಿಯದಾದಿವಜ್ಜೀವೋ ನೋತ್ಪದ್ಯತ ಇತ್ಯುಕ್ತಂ. ತತ್ಪ್ರಸಂಗೇನ ಜೀವ ಸ್ವರೂಪಂ ನಿರೂಪ್ಯತೇ. ಕಿಂ ಸುಗತಕಪಿಲಾಭಿಮತಚಿನ್ಮಾತ್ರಮೇವಾತ್ಮ ನಃ ಸ್ವರೂಪಂ ಉತ ಕಣಭುಗಭಿಮತಂ ಪಾಷಾಣಕಲ್ಪಸ್ವರೂಪಮುಚಿತ್ಸ್ವ**

ಭಾವಮೇವಾಗಂತುಕಚೈತನ್ಯಗುಣಕಂ, ಅಥ ಜ್ಞಾತೃತ್ವಮೇವಾಸ್ಯ ಸ್ವರೂಪಮಿತಿ, ಕಿಂ ಯುಕ್ತಂ? ಚಿನ್ಮಾತ್ರಮಿತಿ ಕುತಃ? ತಥಾ ಶ್ರುತೇಃ, ಅಂತರ್ಯಾಮಿಬ್ರಾಹ್ಮಣೇ ಹಿ "ಯ ಆತ್ಮನಿ ತಿಷ್ಠನ್" ಇತಿ ಮಾಧ್ಯಂದಿನೀಯಪರ್ಯಾಯಸ್ಯ ಸ್ಥಾನೇ "ಯೋ ವಿಜ್ಞಾನೇ ತಿಷ್ಠನ್" ಇತಿ ಕಾಣ್ವಾ ಅಧೀಯತೇ. ತಥಾ "ವಿಜ್ಞಾನಂ ಯಜ್ಞಂ ತನುತೇ" "ಕರ್ಮಾಣಿ ತನುತೇಽಪಿ ಚ" ಇತಿ ಕರ್ತುರಾತ್ಮನೋ ಜ್ಞಾನಸ್ವರೂಪತ್ವಂ ಪ್ರತೀಯತೇ. ಅಪರಸ್ತು ಜೀವಾತ್ಮನೋ ಜ್ಞಾನತ್ವೇ ಜ್ಞಾತೃತ್ವೇ ಚ ಸ್ವಾಭಾವಿಕೇಽಭ್ಯುಪಗಮ್ಯಮಾನೇ ತಸ್ಯ ಸರ್ವಗತಸ್ಯ ಸರ್ವದಾ ಸರ್ವತ್ರೋಪಲಬ್ಧಿಪ್ರಸಂಗಾತ್ ಕರ್ಮಣಾಂ ಚ ವೈಯರ್ಥ್ಯಾತ್ ಸುಷುಪ್ತಿಮೂರ್ಛಾದಿಷು ಸತೋಽಪ್ಯಾತ್ಮನಶ್ಚೈತನ್ಯಾನುಪಲಬ್ಧೇಃ ಜಾಗ್ರತಸ್ಸಾಮಗ್ರ್ಯಾಂ ಸತ್ಯಾಂ ಜ್ಞಾನೋತ್ಪತ್ತಿದರ್ಶನಾದಸ್ಯಾಂ ನ ಜ್ಞಾನಂ ಸ್ವರೂಪಂ ನಾಪಿ ಜ್ಞಾತೃತ್ವಮಾಗುಂತಕಮೇವ ಚೈತನ್ಯಂ. ಸರ್ವಗತಂ ಚಾತ್ಮನೋಽವಶ್ಯಾಭ್ಯುಪೇತ್ಯಂ ಸರ್ವತ್ರ ಕಾರ್ಯೋಪಲಬ್ಧೇಃ ಸರ್ವತ್ರಾತ್ಮನಸ್ಸನ್ನಿಧಾನಾಭ್ಯುಪಗಮಾತ್ ಶರೀರಗಮನೇನೈವ ಕಾರ್ಯಸಂಭವೇ ಸತಿ ಗತಿಕಲ್ಪನಾಯಾಂ ಪ್ರಮಾಣಾಭಾವಾಚ್ಚ. ಶ್ರುತಿರಪಿ ಸುಷುಪ್ತಿವೇಳಾಯಾಂ ಜ್ಞಾನಾಭಾವಂ ದರ್ಶಯತಿ "ನಾಹಂ ಖಲ್ವಯಮೇವ ಸಂಪ್ರತ್ಯಾತ್ಮಾನಂ ಜಾನಾತ್ಯಯಮಹಮಸ್ಮಿ ನೋ ಏವೇಮಾನಿ ಭೂತಾನಿ" ಇತಿ. ತಥಾ ಮೋಕ್ಷದಶಾಯಾಂ ಜ್ಞಾನಾಭಾವಂ ದರ್ಶಯತಿ "ನ ಪ್ರೇತ್ಯಸಂಜ್ಞಾಸ್ತಿ" ಇತಿ. ಜ್ಞಾನಸ್ವರೂಪಮಿತ್ಯಾದಿಪ್ರಯೋಗಸ್ತು ಜ್ಞಾನಸ್ಯ ತದಸಾಧಾರಣಗುಣತ್ವೇನ ಲಾಕ್ಷಣಿಕಮಿತ್ಯೇವಂ ಪ್ರಾಪ್ತೇ ಪ್ರಚಕ್ಷ್ಮಹೇ. ಜ್ಞೋಽತ ಏವ, ಅಯಮಾತ್ಮಾ ಜ್ಞಾನಸ್ವರೂಪ ಏವ ನ ಜ್ಞಾನಮಾತ್ರಂ ನಾಪಿ ಜಡಸ್ವರೂಪಃ, ಕುತಃ? ಅತ ಏವ ಶ್ರುತೇರೇವೇತ್ಯರ್ಥಃ. "ನಾತ್ಮಾ ಶ್ರುತೇಃ" ಇತಿ ಪ್ರಕೃತಾ ಶ್ರುತಿಃ ಅತ್ಮಾ ಇತಿಶಬ್ದೇನ ಪರಾಮೃಶ್ಯತೇ. ತಥಾ ಛಾಂದೋಗ್ಯೇ ಪ್ರಜಾಪತಿವಾಕ್ಯೇ ಮುಕ್ತಾತ್ಮಸ್ವರೂಪಕಥನೇ "ಅಥ ಯೋ ವೇದೇದಂ ಜಿಘ್ರಾಣೀತಿ ಸ ಆತ್ಮಾ ಮನಸೈವೈತಾನ್ ಕಾಮಾನ್ ಪಶ್ಯನ್ ರಮತೇ ಯ ಏತೇ ಬ್ರಹ್ಮಲೋಕೇ ಸತ್ಯಕಾಮಸ್ಸತ್ಯಸಂಕಲ್ಪಃ ನೋಪಜನಂ ಸ್ಮರನ್ನಿದಂ ಶರೀರಂ," ಅನ್ಯತ್ರಾಪಿ "ನ ಪಶ್ಯೋ ಮೃತ್ಯುಂ ಪಶ್ಯತಿ." ತಥಾ ವಾಜಸನೇಯಕೇ "ಕತಮ ಆತ್ಮಾ" ಇತಿ ಪೃಷ್ಟ್ವಾ "ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಃ" ಇತಿ, ತಥಾ "ವಿಜ್ಞಾತಾರಮರೇ ಕೇನ ವಿಜಾನೀಯಾತ್," "ಜಾನಾತ್ಯೇವಾಯಂ ಪುರುಷಃ." ತಥಾ "ಏಷ ಹಿ ದ್ರಷ್ಟಾ ಶ್ರೋತಾ ಘ್ರಾತಾ ರಸಯಿತಾ ಮಂತಾ ಬೋದ್ಧಾ ಕರ್ತಾ ವಿಜ್ಞಾ

**ನಾತ್ಮಾ ಪುರುಷಃ.” “ಏವಮೇವಾಸ್ಯ ಪರಿದ್ರಷ್ಟುರಿಮಾಃ ಷೋಡಶ ಕಲಾಃ” ಇತಿ.**

ಆಕಾಶ ಮೊದಲಾದ ಭೂತಗಳ ಉತ್ಪತ್ತಿಗೂ ಜೀವರ ನಿತ್ಯತೆಗೂ ಏನು ಕಾರಣವೆಂದಾಶಂಕಿಸಿ ನಿರಾಕರಿಸುತ್ತಾನೆ. ಜೀವನು ಜಡವಸ್ತುವಲ್ಲ; ಆದರೆ ಜ್ಞಾತೃಸ್ವರೂಪನಿರುವನು. ಆದ್ದರಿಂದಲೇ ಅವನಿಗೆ ಉತ್ಪತ್ತಿ ಸಂಭವಿಸುವುದಿಲ್ಲ. ಜಡವಾದ ಗಡಿಗೆ ಮೊದಲಾದವೇ ಹುಟ್ಟುತ್ತವೆ ಎಂದು ಹಿರಿಯರು ಹೇಳಿರುವುದರಿಂದ ಜಡವಾದ್ದರಿಂದಲೇ ಆಕಾಶಾದಿಗಳಿಗೂ ಉತ್ಪತ್ತಿಯುಂಟು. ಜಡವಲ್ಲದ್ದರಿಂದ ಜೀವರು ಹುಟ್ಟುವರೆಂಬುದನ್ನು ಒಪ್ಪಲಾಗುವುದಿಲ್ಲ. ಆಕಾಶಾದಿಗಳಂತೆ ಜೀವನು ಹುಟ್ಟುವುದಿಲ್ಲವೆಂದು ಹೇಳುವ ಈ ಪ್ರಸಂಗದಲ್ಲಿ ಜೀವಸ್ವರೂಪವನ್ನು ತಿಳಿಸಲಾಗಿದೆ. ಬೌದ್ಧರೂ ಸಾಂಖ್ಯರೂ ಹೇಳುವಂತೆ ಕೇವಲ ಚೈತನ್ಯವೇ ಆತ್ಮಸ್ವರೂಪವೋ ಅಥವಾ ವೈಶೇಷಿಕರು ಹೇಳುವಂತೆ ಪಾಷಾಣಸದೃಶವೋ? ಅಚಿದ್ರೂಪವೆನಿಸಿ ಆಗಂತುಕವಾಗಿ ಚೈತನ್ಯವೆನಿಸಿದ್ದು ಆತ್ಮವೋ? ಅಥವಾ ಬೆಳೆಯುವಿಕೆಯೇ ಆತ್ಮದ ಸ್ವರೂಪವೋ? ಇವುಗಳಲ್ಲಿ ಯಾವುದು ಯುಕ್ತವಾದುದು. ಕೇವಲ ಚೈತನ್ಯವೇ ಆತ್ಮವೆಂಬುದು ಹೇಗೆ ಹೊಂದುತ್ತದೆ. ಅಂತರ್ಯಾಮಿಬ್ರಾಹ್ಮಣದಲ್ಲಿ ‘ಆತ್ಮನಲ್ಲಿ ಯಾವನಿರುವನೋ’ ಎಂಬ ಮಾಧ್ಯಂದಿನಪಾಠದ ಸ್ಥಾನದಲ್ಲಿ ಬಂದಿರುವ ‘ವಿಜ್ಞಾನದಲ್ಲಿ ಯಾವನಿರುವನೋ’ ಎಂಬ ಕಾಣ್ವಪಾಠದಲ್ಲಿಯೂ “ವಿಜ್ಞಾನವೇ ಯಜ್ಞವನ್ನು ಮಾಡಿಸುತ್ತದೆ, ಬೇರೆ ಕರ್ಮಗಳನ್ನು ಆಚರಿಸುತ್ತದೆ” ಎಂಬಲ್ಲಿಯೂ ಕರ್ತನಾದ ಆತ್ಮನನ್ನು ಜ್ಞಾನಸ್ವರೂಪನೆಂದೇ ಹೇಳಲಾಗಿದೆ. ಜೀವನಲ್ಲಿ ಜ್ಞಾನವೂ ಜ್ಞಾತೃತ್ವವೂ ಸ್ವಾಭಾವಿಕವೆಂದು ಅಂಗೀಕರಿಸಿದರೆ ಎಲ್ಲಾಕಡೆಯೂ ಇರುವ ಅವನು ಯಾವಾಗಲೂ ಎಲ್ಲೆಲ್ಲಿಯೂ ಚೈತನ್ಯವೆನಿಸಬೇಕಾದೀತು. ಕರ್ಮಗಳೆಲ್ಲವೂ ವ್ಯರ್ಥವೇ ಆಗಬೇಕಾದೀತು. ಸುಷುಪ್ತಿಯಲ್ಲೂ ಇರತಕ್ಕ ಆತ್ಮನು ಚೈತನ್ಯನೆನಿಸದೆಹೋಗಬೇಕಾದೀತು. ಜಾಗ್ರದವಸ್ಥೆಯಲ್ಲಿ ಸಾಮಗ್ರಿಗಳಿದ್ದರೆ ಜ್ಞಾನ ಹುಟ್ಟುವುದು ಸಹಜವಾದರೂ ಆಗ ಜ್ಞಾನ ಅವನ ಸ್ವರೂಪವಾಗದೆ ಹೋಗಬೇಕಾದೀತು. ಜ್ಞಾತೃತ್ವವು ಆಗಂತುಕವಾಗಿದ್ದರೂ ಚೈತನ್ಯವಾಗದೆಹೋಗಬೇಕಾದೀತು. ಆತ್ಮನು ಸರ್ವಗತನೆಂಬುದನ್ನು ಅವಶ್ಯವಾಗಿ ಅಂಗೀಕರಿಸಲೇಬೇಕು. ಹೀಗೆ ಎಲ್ಲಾಕಡೆಯೂ ಕಾರ್ಯವು ಕಾಣುತ್ತಿರುವುದರಿಂದ ಎಲ್ಲೆಲ್ಲಿಯೂ ಆತ್ಮನಿರುವನೆಂಬುದನ್ನು ಒಪ್ಪುವುದರಿಂದ ಶರೀರದಿಂದಲೇ ಕಾರ್ಯ ನಡೆಯುವಾಗ ಗಮನವನ್ನು ಕಲ್ಪಿಸುವುದರಲ್ಲಿ ಪ್ರಮಾಣವಿಲ್ಲ. ಶ್ರುತಿಯೂ ಸುಷುಪ್ತಿಕಾಲದಲ್ಲಿ ಜ್ಞಾನವಿಲ್ಲವೆಂಬುದನ್ನು ತೋರಿಸಿದೆ. “ದೇಹ ಅಳಿದಮೇಲೆ ಚೈತನ್ಯವೇ ಇರುವುದಿಲ್ಲ” ಎಂದು ಹೇಳಿದ್ದರಿಂದ ಮೋಕ್ಷದಶೆಯಲ್ಲೂ ಜ್ಞಾನವಿರುವುದಿಲ್ಲವೆಂಬುದನ್ನು ಅದೇ ಶ್ರುತಿ ತೋರಿಸಿದೆ. ಇವನು ಜ್ಞಾನಸ್ವರೂಪನು ಎಂಬ ಪ್ರಯೋಗವಾದರೂ ಜ್ಞಾನವು ಅವನ ಅಸಾಧಾರಣಗುಣವಾದ್ದರಿಂದ ಲಾಕ್ಷಣಿಕವೆನಿಸಿದೆ. ಹೀಗೆ ಆಕ್ಷೇಪ ಬಂದರೆ ಸೂತ್ರವು ಸಮಾಧಾನವನ್ನು ತಿಳಿಸಿದೆ. ಈ ಆತ್ಮನು ಜ್ಞಾನಸ್ವರೂಪನೇ

ಇರುವನು, ಆದರೆ ಜ್ಞಾನವಷ್ಟೇ ಅಲ್ಲ; ಹಾಗೆಯೇ ಜಡಸ್ವರೂಪನೂ ಅಲ್ಲ. ಇದನ್ನು ಶ್ರುತಿಯೇ ಸ್ಪಷ್ಟವಾಗಿ ತಿಳಿಸಿದೆ. ಛಾಂದೋಗ್ಯದಲ್ಲಿ ಮುಕ್ತಾತ್ಮನ ಸ್ವರೂಪವನ್ನು ಹೇಳುವಾಗ "ಯಾವನು ಇದನ್ನು ಮೂಸಿಸುವೆನೆಂದು ತಿಳಿವನೋ ಆ ಆತ್ಮನೇ ಈ ಕಾಮುಗಳನ್ನು ನೋಡಿ ರಮಿಸುತ್ತಾನೆ. ಯಾವನು ಸತ್ಯಕಾಮನೂ ಸತ್ಯಸಂಕಲ್ಪನೂ ಆಗಿರುವನೋ ಅವನು ಬ್ರಹ್ಮಲೋಕದಲ್ಲಿ ಈ ಶರೀರವನ್ನು ಸ್ಮರಿಸುವುದಿಲ್ಲ." ಹಾಗೆಯೇ "ಅವನು ಮೃತ್ಯುವನ್ನೂ ಕಾಣುವುದಿಲ್ಲ" ಎಂದೂ ಹೇಳಿದೆ. ವಾಜಸನೇಯದಲ್ಲಿ "ಆತ್ಮನಾರು" ಎಂದು ಕೇಳಿ "ಪ್ರಾಣಗಳಲ್ಲಿ ಯಾವ ಈ ವಿಜ್ಞಾನಮಯನಿರುವನೋ ಅವನೇ ಹೃದಯದೊಳಗೆ ಪ್ರಕಾಶಮಾನನಾದ ಪುರುಷನು" ಎಂದೂ, "ವಿಜ್ಞಾತೃವನ್ನು ಹೇಗೆ ತಿಳಿಯಬೇಕು" "ಈ ಪುರುಷನೇ ತಿಳಿಯುತ್ತಾನೆ" "ಈ ವಿಜ್ಞಾನರೂಪನಾದ ಪುರುಷನೇ ನೋಡುವವನು, ಕೇಳುವವನು, ಮೂಸಿಸುವನು, ರುಚಿಸುವವನು, ಆಲೋಚಿಸುವವನು, ತಿಳಿಯುವವನು, ಮಾಡುವವನು". "ಹೀಗೆ ನೋಡುತ್ತಿರುವ ಇವನಿಗೆ ಹದಿನಾರು ಕಲೆಗಳಿವೆ" ಎಂದು ಮುಂತಾಗಿ ಹೇಳಲಾಗಿದೆ.

ಯತ್ತೂಕ್ತಂ ಜ್ಞಾತೃತ್ವೇ ಸ್ವಾಭಾವಿಕೇ ಸತಿ ಸರ್ವಗತಸ್ಯ ತಸ್ಯ ಸರ್ವದಾ ಸರ್ವತ್ರೋಪಲಬ್ಧಿಃ ಪ್ರಸಜ್ಯೇತ ಇತಿ ತತ್ರೋಚ್ಯತೇ. ಉತ್ಕ್ರಾಂತಿಗತ್ಯಧಿಕರಣಂ ॥ ೧೨ ॥ ಉತ್ಕ್ರಾಂತಿಗತ್ಯಾಗತೀನಾಂ ॥ ೧೯ ॥ "ಕರ್ಮಚಿತೋ ಲೋಕಃ ಕ್ಷೀಯತೇ । ಪುಣ್ಯಚಿತೋ ಲೋಕಃ ಕ್ಷೀಯತೇ ॥", "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ", "ಕ್ಷೀಣೇ ಪುಣ್ಯೇ ಮೃತ್ಯುಲೋಕಂ ವಿಶಂತಿ" ಇತ್ಯಾದಿಶ್ರುತಿಷು ಜೀವಾನಾಂ ಉತ್ಕ್ರಾಂತಿರ್ದೇಹನಿರ್ಗಮನಂ, ಗತಿಸ್ಸ್ವರ್ಗನರಕಲೋಕಗಮನಂ, ಆಗತಿಃ ಪುಣ್ಯಪಾಪಫಲಭೋಗಾನಂತರಂ ಭೂಲೋಕಂ ಪ್ರತ್ಯಾಗಮನಂ. ಏತಾಸಾಂ ಶ್ರವಣಾಜ್ಜೀವೋಽಣುರೇವ, ವಿಭುತ್ವೇ ಗಮನಾಸಂಭವಾತ್ ಇತಿ ಸೂತ್ರಸೂಚಿತಃ ಸೂಕ್ಷ್ಮಾರ್ಥಃ. ದ್ವೈತಕ್ಷಪಣಕತಾರ್ಕಿಕಾದಿಭಿಃ ಜೀವಾನಾಂ ವಿಭುತ್ವಾಂಗೀಕಾರಾತ್ತನ್ನಿರಾಸನಾರ್ಥಮೇತದಧಿಕರಣಪ್ರಾರಂಭಃ. "ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ" ಇತಿ, "ಸ ವಾ ಏಷ ಮಹಾನಜ ಆತ್ಮಾ" ಇತಿ ಚ ಪೂರ್ವೋಕ್ತಜ್ಞಾತೃತ್ವೇನ ವ್ಯಪದಿಶ್ಯಮಾನಸ್ಯ ಜೀವಸ್ಯ ಅಣುತ್ವವಿಭುತ್ವವ್ಯವಸ್ಥಾಪನಾತ್ಸಂದೇಹಃ. "ಏಷ ಮಹಾನಜ ಆತ್ಮಾ" ಇತ್ಯಾದಿಷು ಕ್ಷೇತ್ರಜ್ಞಸ್ಯ ವಿಭುತ್ವನಿರ್ದೇಶಾತ್. ಅನ್ಯತ್ರ "ವಿಶ್ವಂ ಭುವನಮಭ್ಯಭವತ್" ಇತಿ ಕ್ಷೇತ್ರಜ್ಞಸ್ಯ ಸಕಲಲೋಕವ್ಯಾಪಕತ್ವವ್ಯಪದೇಶಾಚ್ಚ ತಸ್ಯ ನಾಣುತ್ವಂ ಸಂಭವತೀತಿ ಪ್ರಾಪ್ತೇ ಪ್ರಚಕ್ಷ್ಮಹೇ. ನಾಯಂ ಸರ್ವಗತಃ, ಅಪಿತ್ವಣುರೇವಾಯಮಾತ್ಮಾ, ಕುತಃ, ಉತ್ಕ್ರಾಂತಿಗತ್ಯಾಗತೀನಾಂ ಶ್ರುತೇಃ. ಉತ್ಕ್ರಾಂತಿಸ್ತಾವತ್ ಶ್ರೂಯತೇ. "ತೇನ ಪ್ರದ್ಯೋತ ನೈಷ ಆತ್ಮಾ ನಿಷ್ಕ್ರಾಮತಿ ಚಕ್ಷುಷೋ ವಾ ಮೂರ್ಧ್ನೋ

ವಾನ್ಯೇಭ್ಯೋ ವಾ ಶರೀರದೇಶೇಭ್ಯಃ" ಇತಿ. ಗತಿರಪಿ "ಯೇ ವೈಕೇ ಚಾಸ್ಮಾಲ್ಲೋಕಾತ್ಪ್ರಯಾಂತಿ ಚಂದ್ರಮಸಮೇವ ತೇ ಸರ್ವೇ ಗಚ್ಛಂತಿ" ಇತಿ. ಅಗತಿರಪಿ "ತಸ್ಮಾಲ್ಲೋಕಾತ್ಪುನರೇತ್ಯಸ್ಮೈ ಲೋಕಾಯ ಕರ್ಮಣ" ಇತಿ ಜೀವಸ್ಯ ಪರಲೋಕಗಮನಪ್ರದರ್ಶನಾತ್, ವಿಭುತ್ವೇ ಶರೀರವಿಯೋಗಾಸಂಭವಾಚ್ಚ, "ಏಷೋಽಣುರಾತ್ಮಾ" ಇತಿ ಶ್ರುತಿನಿರ್ದಿಷ್ಟಾಣುತ್ವಮೇವ ಜೀವಸ್ಯಾಂಗೀಕರಣೀಯಂ. "ಸ ವಾ ಏಷ ಮಹಾನಜಃ" ಇತ್ಯಾದಿವಿಭುತ್ವವಾಚಕಶ್ರುತೀನಾಂ ಪರಮಾತ್ಮಪರಮಿತಿ ವೇದಿತವ್ಯಂ. "ಅಣೋರಣೀಯಾನ್ಮಹತೋ ಮಹೀಯಾನಾತ್ಮಾ ಗುಹಾಯಾಂ ನಿಹಿತೋಽಸ್ಯ ಜಂತೋಃ । ತಮಕ್ರತುಂ ಪಶ್ಯತಿ ವೀತಶೋಕೋ ಧಾತುಃ ಪ್ರಸಾದಾನ್ಮಹಿಮಾನಮೀಶಂ ॥" "ಯತ್ಪರಂ ಬ್ರಹ್ಮ ಸರ್ವಾತ್ಮಾ ವಿಶ್ವಸ್ಯಾಯತನಂ ಮಹತ್" ಇತ್ಯಾದಿಶ್ರುತಿಶತದರ್ಶನಾತ್. ಉತ "ನೀಲತೋಯದಮಧ್ಯಸ್ಥಾ ವಿದ್ಯುಲ್ಲೇಖೇವ ಭಾಸ್ವರಾ । ನೀವಾರಶೂಕವತ್ತನ್ವೀ ಪೀತಾ ಭಾಸ್ವತ್ಯಣೂಪಮಾ । ತಸ್ಯಾಶ್ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ॥" ಇತ್ಯತ್ರ ಪಶುಪತಿಪಾಶಾತ್ಮಕತತ್ತ್ವತ್ರಯಸ್ವರೂಪಂ ಸ್ಪಷ್ಟಮುಪದಿಷ್ಟಂ. ನೀಲತೋಯದಪದವ್ಯಪದೇಶೇನ ಗುಣತ್ರಯಾತ್ಮಕಪಾಶರೂಪಾ ಪ್ರಕೃತಿರುಪದಿಶ್ಯತೇ. "ವಿದ್ಯುಲ್ಲೇಖೇವ ಭಾಸ್ವರಾ–ಅಣೂಪಮಾ" ಇತ್ಯಂತಂ ಪಶುಶಬ್ದವಾಚ್ಯಸ್ಯ ಜೀವಸ್ಯ ನೀವಾರಶೂಕೋಪಮಾನಾಣುತ್ವಂ ತತ್ಸ್ವರೂಪಮುಪದಿಷ್ಟಂ. "ತಸ್ಯಾಶ್ಶಿಖಾಯಾ–ವ್ಯವಸ್ಥಿತಃ" ಇತ್ಯನೇನ ಜೀವವಿಲಕ್ಷಣಪತ್ಯಾತ್ಮಕಂ ಶಿವತತ್ತ್ವಮುಪದಿಷ್ಟಂ. "ಸ ಬ್ರಹ್ಮಾ ಸ ಶಿವಸ್ಸ ಹರಿಸ್ಸೇಂದ್ರಸ್ಸೋಽಕ್ಷರಃ ಪರಮಸ್ಸ್ವರಾಟ್" ಇತ್ಯನೇನ ಜೀವವಿಲಕ್ಷಣಸ್ಯ ಶಿವಸ್ಯ ಸರ್ವಶಬ್ದವಾಚ್ಯತ್ವಂ ಮೂರ್ತಿತ್ರಯಾತೀತತ್ವಂ ಚ ನಿರೂಪಿತಂ. ತಥಾ ಮಾಂಡೂಕ್ಯೇಽಪಿ "ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ" ಇತಿ. "ಧ್ಯಾಯೀತೇಶಾನಂ ಪ್ರಧ್ಯಾಯಿತವ್ಯಂ, ಸರ್ವಮಿದಂ ಬ್ರಹ್ಮ, ಸ ಏವ ವಿಷ್ಣುಸ್ಸ ಪ್ರಾಣಸ್ಸ ಕಾಲೋಽಗ್ನಿಸ್ಸ ಚಂದ್ರಮಾಃ ಸ ಏವ ಸರ್ವಂ ಯದ್ಭೂತಂ ಯಚ್ಚ ಭವ್ಯಂ ಸನಾತನಂ" "ಧ್ಯಾತ್ವಾ ತಂ ಮೃತ್ಯುಮತ್ಯೇತಿ ನಾನ್ಯಃ ಪಂಥಾ ವಿಮುಕ್ತಯೇ" "ಸರ್ವೋ ವೈ ರುದ್ರಃ" ಇತ್ಯಾದಿಷು ಶಿವಸ್ಯ ಮೂರ್ತಿತ್ರಯವಿಲಕ್ಷಣತ್ವಸರ್ವಶಬ್ದವಾಚ್ಯತ್ವಯೋಃ ತನ್ನಿಷ್ಠಸ್ಯ ಮೋಕ್ಷೋಪದೇಶತ್ವಸ್ಯ ಚ ನಿರ್ದೇಶಾತ್ ನೇತರಸ್ಯ ವಿಭುತ್ವಾದಿಕಂ ಸಂಭವತಿ.

ಜ್ಞಾತೃತ್ವವೆಂಬುದು ಸ್ವಾಭಾವಿಕವಾದ್ದರಿಂದ ಎಲ್ಲೆಲ್ಲಿಯೂ ಇರುವ ಜೀವನಿಗೆ ಯಾವಾಗಲೂ ಜ್ಞಾನವೇ ಇರಬೇಕಾಗುತ್ತದೆ ಎಂದಾಶಂಕಿಸಿ ಪರಿಹರಿಸುತ್ತಾನೆ.

" ಕರ್ಮದಿಂದ ಗಳಿಸಿದ ಲೋಕವು ಕ್ಷಯಿಸುತ್ತದೆ. ಪುಣ್ಯದಿಂದ ಗಳಿಸಿದ ಲೋಕವೂ ನಶಿಸುತ್ತದೆ". "ಸ್ವರ್ಗಾಪೇಕ್ಷಿಯು ಜ್ಯೋತಿಷ್ಟೋಮವನ್ನಾಚರಿಸಬೇಕು". " ಪುಣ್ಯ ಕಳೆದಮೇಲೆ ಮರ್ತ್ಯಲೋಕಕ್ಕೆ ತೆರಳುತ್ತಾರೆ" ಎಂಬ ಶ್ರುತಿಗಳಲ್ಲಿ ಜೀವರಿಗೆ ದೇಹವನ್ನು ಬಿಡುವಿಕೆ, ಸ್ವರ್ಗಾದಿಲೋಕಗಳಿಗೆ ತೆರಳುವಿಕೆ, ಅಲ್ಲಿನ ಫಲಗಳನ್ನು ಅನುಭವಿಸಿದ ಮೇಲೆ ಮತ್ತೆ ಭೂಮಿಗೆ ಹಿಂತಿರುಗುವಿಕೆ ಇವನ್ನು ಹೇಳಿರುವುದರಿಂದ ಜೀವನು ಅಣುವೆನಿಸಿದ್ದಾನೆ. ಅವನು ವಿಭುವಾದರೆ ಹೀಗೆಲ್ಲಾ ಗಮನವು ಸಂಭವಿಸುವುದಿಲ್ಲ. ದ್ವೈತಿಗಳು ಬೌದ್ಧರು ತಾರ್ಕಿಕರೇ ಮೊದಲಾದವರು ಜೀವರನ್ನು ವಿಭುವೆಂದು ಹೇಳಿರುವುದರಿಂದ ಅದನ್ನು ನಿರಾಕರಿಸಲಿಕ್ಕಾಗಿ ಈ ಅಧಿಕರಣ ಬಂದಿದೆ. " ಈ ಅಣುವಾದ ಆತ್ಮನನ್ನು ಮನಸ್ಸಿನಿಂದಲೇ ತಿಳಿಯಬೇಕು." " ಈ ಆತ್ಮನು ವಿಭುವೂ ನಿತ್ಯನೂ ಆಗಿದ್ದಾನೆ" ಎಂಬೀ ಶ್ರುತಿಗಳಲ್ಲಿ ಜ್ಞಾತೃವೆನಿಸಿದ ಜೀವನನ್ನು ಅಣುವೆಂದೂ, ವಿಭುವೆಂದೂ ಹೇಳಿರುವುದರಿಂದ ಸಂದೇಹವುಂಟಾಗುತ್ತದೆ. " ಈ ಆತ್ಮನು ವಿಭು ಎಂಬಲ್ಲಿ ಜೀವನನ್ನು ವಿಭುವೆಂದೇ ತಿಳಿಸಿದೆ. "ಸಕಲವಿಶ್ವವನ್ನೂ ವ್ಯಾಪಿಸಿದ್ದಾನೆ" ಎಂಬಲ್ಲೂ ಜೀವನನ್ನು ಸಕಲ ಲೋಕವ್ಯಾಪಕನೆಂದು ಹೇಳಲಾಗಿದೆ. ಆದ್ದರಿಂದ ಜೀವನು ಅಣುವೆನಿಸಲಾರನು. ಹೀಗೆ ಆಕ್ಷೇಪ ಬಂದರೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಈ ಜೀವನು ಸರ್ವವ್ಯಾಪಿಯಲ್ಲ ಆದರೆ ಅಣುವೇ ಇರುವನು ; ಯಾಕೆಂದರೆ ಶ್ರುತಿಯಲ್ಲಿ " ಆತ್ಮನು ಕಣ್ಣು ತಲೆ ಮೊದಲಾದ ಶರೀರದ ಅವಯವಗಳಿಂದ ಹೊರಡುತ್ತಾನೆ" ಎಂಬಲ್ಲಿ, ಅವನಿಗೆ ಉತ್ಕ್ರಮಣವನ್ನು "ಇವರು ಈ ಲೊಕದಿಂದ ಹೊರಟು ಚಂದ್ರಲೊಕಕ್ಕೆ ತೆರಳುವರು " ಎಂಬಲ್ಲಿ ಪರಲೋಕಗಮನವನ್ನೂ, " ಆ ಲೊಕದಿಂದ ಮತ್ತೆ ಈ ಕರ್ಮಭೂಮಿಗೆ ಬರುತ್ತಾರೆ" ಎಂಬಲ್ಲಿ ಇಲ್ಲಿಗೆ ಹಿಂತಿರುಗುವಿಕೆಯನ್ನೂ ಹೇಳಲಾಗಿದೆ. ಅವನು ವಿಭುವಾದರೆ ಅವನಿಗೆ ಶರೀರದಿಂದ ವಿಯೋಗವೇ ಸಂಭವಿಸಲಾರದು. ಆದ್ದರಿಂದ " ಈ ಅಣುವಾದ ಆತ್ಮವನ್ನು ಮನಸ್ಸಿನಿಂದ ತಿಳಿಯಬೇಕು " ಎಂಬ ಶ್ರುತಿಯಲ್ಲಿ ಹೇಳಿದಂತೆ ಜೀವನನ್ನು ಅಣುವೆಂದೇ ಒಪ್ಪಬೇಕು. " ಈ ಆತ್ಮನು ವಿಭುವೂ ನಿತ್ಯನೂ ಇರುವನು " ಎಂಬಲ್ಲಿ ಹೇಳಿರುವ ವಿಭುತ್ವವನ್ನು ಪರಮಾತ್ಮನಿಗೆ ಅನ್ವಯಿಸವುದೆಂದು ತಿಳಿಯಬೇಕು. " ಆತ್ಮನು ಸಣ್ಣದಕಿಂತಲೂ ಸಣ್ಣದು, ದೊಡ್ಡದಕಿಂತ ದೊಡ್ಡದೂ ಆಗಿ ಈ ಜೀವನ ಎದೆಗುಹೆಯಲ್ಲಿ ನೆಲಸಿದ್ದಾನೆ." " ದುಃಖರಹಿತನಾದವನು ಈಶ್ವರಾನುಗ್ರಹದಿಂದ ಪ್ರಭಾವಶಾಲಿಯಾದ ಈ ಪ್ರಕಾಶವನ್ನು ಕಾಣುತ್ತಾನೆ " " ಪರಬ್ರಹ್ಮವೇ ವಿಶ್ವವ್ಯಾಪಕವೂ ವಿಶ್ವದ ಆಶ್ರಯಸ್ಥಲವೂ ಆಗಿದೆ". ಹೀಗೆ ಅನೇಕ ಶ್ರುತಿಗಳಲ್ಲಿ ಹೇಳಲಾಗಿದೆ. " ನೀಲಮೇಘದ ಮಧ್ಯದಲ್ಲಿರುವ ಮಿಂಚಿನಂತೆ ಶೋಭಿಸುತ್ತ ನೀವಾರಧಾನ್ಯದಂತೆ ಕೃಶವೂ ಹೊಂಬಣ್ಣವೂ ಅಣುರೂಪವೂ ಆದ ಜೀವಜ್ಯೋತಿಯು ಶೋಭಿಸುತ್ತಿದೆ. ಅದರ ಮಧ್ಯದಲ್ಲಿ ಪರಮಾತ್ಮನು ನೆಲಸಿದ್ದಾನೆ". ಇಲ್ಲಿ ಪಶು ಪಾಶ ಪತಿ ಎಂಬ ಮೂರು ತತ್ತ್ವಗಳ ಸ್ವರೂಪವನ್ನು ತಿಳಿಸಲಾಗಿದೆ. ನೀಲಮೇಘ ಎಂಬ ಪದದಿಂದ ತ್ರಿಗುಣಾ

ತ್ಮಕವಾದ ಪಾಶವೆಂಬ ಪ್ರಕೃತಿಯನ್ನು ತಿಳಿಸಲಾಗಿದೆ. "ಮಿಂಚಿನಂತೆ ಶೋಭಿಸುವ ಅಣುಜೀವಜ್ಯೋತಿ ಹೊಳೆಯುತ್ತಿದೆ" ಎಂಬುದರಿಂದ ಪಶುವೆನಿಸಿದ ಜೀವನನ್ನು ನೀವಾರಧಾನ್ಯಕ್ಕೆ ಸದೃಶ್ಯವೆಂದೂ ಅಣುವೆಂದೂ ತಿಳಿಸಲಾಗಿದೆ. "ಅದರ ಮಧ್ಯದಲ್ಲಿ ಪರಮಾತ್ಮನು ನೆಲಸಿದ್ದಾನೆ" ಎಂಬುದರಿಂದ ಜೀವರಿಗಿಂತ ಬೇರೆಯಾಗಿ ಪತಿಎನಿಸಿದ ಶಿವನ ಸ್ವರೂಪವನ್ನು ತಿಳಿಸಲಾಗಿದೆ. "ಆ ಪರಮಾತ್ಮನೇ ಬ್ರಹ್ಮ, ಶಿವ, ಹರಿ, ಇಂದ್ರ, ಅಕ್ಷರನೆನಿಸಿದ್ದಾನೆ." ಎಂಬುದರಿಂದ ಜೀವರಿಗಿಂತ ಬೇರೆಯಾದ ಶಿವನೇ ಸರ್ವಾತ್ಮಕನೂ ಮೂರ್ತಿತ್ರಯಾತೀತನೂ ಆಗಿರುವನೆಂದು ತಿಳಿಸಲಾಗಿದೆ. ಮಾಂಡೂಕ್ಯದಲ್ಲಿ ಪ್ರಪಂಚಕ್ಕಾಶ್ರಯನೂ ಅದ್ವೈತನೂ ಆದ ಶಿವನನ್ನು ತ್ರಿಮೂರ್ತ್ಯತೀತನೆಂದು ಹೇಳಿದೆ. "ಅವನೇ ಧ್ಯೇಯನು, ಇದೆಲ್ಲವೂ ಅವನೇ, ಅವನಿಂದಲೇ ತ್ರಿಮೂರ್ತಿಗಳೂ ಇಂದ್ರನೂ ಹುಟ್ಟಿದ್ದಾರೆ. ಅವನೇ ವಿಷ್ಣು, ಪ್ರಾಣ, ಕಾಲ, ಅಗ್ನಿ ಚಂದ್ರ ಎಲ್ಲವೂ ಆಗಿದ್ದಾನೆ, ಹಿಂದಿನದು ಮುಂದಿನದು ಎಲ್ಲವೂ ಅವನೇ. ಅವನನ್ನು ಧ್ಯಾನಿಸಿ ಮೃತ್ಯುವಿನಿಂದ ಪಾರಾಗಬೇಕು. ಮುಕ್ತಿಗೆ ಇದಕ್ಕಿಂತ ಬೇರೆ ದಾರಿಯಿಲ್ಲ." "ಎಲ್ಲವೂ ರುದ್ರನೇ" ಈ ಶ್ರುತಿಗಳಲ್ಲಿ ಪರಶಿವನನ್ನು ಸರ್ವಾತ್ಮಕನೆಂದೂ ಮೂರ್ತಿತ್ರಯಾತೀತನೆಂದೂ, ಅವನಲ್ಲಿ ಆಸಕ್ತನಾದವನಿಗೇ ಮೋಕ್ಷ ದೊರಕುವುದು ಎಂದೂ ತಿಳಿಸಿರುವುದರಿಂದ ಅವನಲ್ಲದೆ ಬೇರೆ ಯಾರೂ ವಿಭುವೆನಿಸಲಾರರು.

**ಜೀವವಿಭುತ್ವಂ ಪುನರ್ನಿರಾಕರೋತಿ. ಸ್ವಾತ್ಮನಾ ಚೋತ್ತರಯೋಃ ॥ ೧೯ ॥ ಚಶಬ್ದೋಽವಧಾರಣೇ. ಯದ್ಯಪಿ ಶರೀರವಿಯೋಗರೂಪತ್ವೇನೋತ್ಕ್ರಾಂತಿಃ ಸ್ಥಿತಸ್ಯಾಪ್ಯಾತ್ಮನಃ ಕಥಂಚಿದುಪಪದ್ಯತೇ. ಗತ್ಯಾಗತೀ ತು ನ ಕಥಂಚಿದುಪಪದ್ಯೇತೇ. ತಸ್ಮಾತ್ತಸ್ಯಾಣುತ್ವಮೇವೋಪಪನ್ನಂ.**

ಜೀವನು ವಿಭುವೆನಿಸಲಾರನೆಂದು ಮತ್ತೆ ತಿಳಿಸುತ್ತಾನೆ. ಶರೀರವಿಯೋಗದಿಂದ ಉತ್ಕ್ರಮಣವು ದೇಹದಲ್ಲಿರುವ ಆತ್ಮನಿಗೆ ಹೇಗಾದರೂ ಹೊಂದುತ್ತದೆ. ಗಮನ ಮತ್ತು ಆಗಮನಗಳಂತೂ ಅವನಿಗೆ ಎಂದೆಂದಿಗೂ ಹೊಂದಿಕೆಯಾಗಲಾರವು. ಆದ್ದರಿಂದ ಅವನು ಅಣುವೆಂಬುದೇ ಯುಕ್ತವಾಗುತ್ತದೆ.

**ಅತ್ರ ಪುನರ್ಹೇತುಮಾಹ. ನಾಣುರತಚ್ಛ್ರುತೇರಿತಿ ಚೇನ್ನೇತರಾಧಿಕಾರಾತ್ ॥ ೨೦ ॥ "ಯೋಽಯಂ ವಿಜ್ಞಾನಮಯಃ ಪ್ರಾಣೇಷು" ಇತಿ ಜೀವಂ ಪ್ರಸ್ತುತ್ಯ "ಸವಾ ಏಷ ಮಹಾನಜ ಆತ್ಮಾ" ಇತಿ ಮಹತ್ತ್ವಶ್ರುತೇರ್ನಾಣುರ್ಜೀವ ಇತಿ ಚೇನ್ನ, ಇತರಾಧಿಕಾರಾಜ್ಜೀವಾದಿತರಸ್ಯ ಪ್ರಾಜ್ಞಸ್ಯ ತತ್ರಾಧಿಕಾರಾತ್. ಯದ್ಯಪ್ಯುಪಕ್ರಮೇ ಜೀವಃ ಪ್ರಸ್ತುತಃ. ತಥಾಪಿ "ಯಸ್ಯಾನುವಿತ್ತಃ ಪ್ರತಿಬುದ್ಧಸ್ಸ ಆತ್ಮಾ" ಇತಿ ಮಧ್ಯೇ ಪರಃ ಪ್ರತಿಪಾದ್ಯತ ಇತಿ ತತ್ಸಂಬಂಧೀದಂ ಮಹತ್ತ್ವಂ ನ ಜೀವಸ್ಯ.**

ಈ ಬಗ್ಗೆ ಬೇರೊಂದು ಕಾರಣವನ್ನು ತಿಳಿಸುತ್ತಾನೆ. "ಪ್ರಾಣದಲ್ಲಿ ಯಾವ ಈ ವಿಜ್ಞಾನಮಯ ಜೀವನಿರುವನೋ" ಎಂಬಲ್ಲಿ ಜೀವನನ್ನು ತಿಳಿಸಿ, "ಅವನೇ ವಿಭುವಾಗಿ

ದ್ದಾನೆ" ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಜೀವನು ಅಣುವಾಗಲಾರನು ಎಂದು ಹೇಳಿದರೂ ಜೀವನಿಗಿಂತ ಬೇರೆಯಾದ ಪ್ರಾಜ್ಞನನ್ನೇ ಆಪ್ರಕರಣದಲ್ಲಿ ಹೇಳಿರುವುದರಿಂದ ಅದು ಇಲ್ಲಿ ಹೊಂದುವುದಿಲ್ಲ. ಶ್ರುತಿಯು ಆರಂಭದಲ್ಲಿ ಜೀವನನ್ನೇ ತಿಳಿಸಿದೆ. ಆದರೂ "ಯಾವನ ಸ್ಮರಣದಿಂದಲೇ ಎಚ್ಚರಗೊಳ್ಳುವನೋ ಅವನೇ ಆತ್ಮನು" ಎಂದು ಮಧ್ಯದಲ್ಲಿ ಪರಮಾತ್ಮನನ್ನೇ ಪ್ರತಿಪಾದಿಸಲಾಗಿದೆ. ಇದರ ಪ್ರಕಾರ ಮಹತ್ತ್ವವೆಂಬುದು ಪರಮಾತ್ಮನಿಗೆ ಸಂಬಂಧಿಸಿದೆಯೇ ಹೊರತು ಜೀವನಿಗಲ್ಲ.

**ಪುನರ್ಹೇತ್ವಂತರಮಾಹ. ಸ್ವಶಬ್ದೋನ್ಮಾನಾಭ್ಯಾಂ ಚ ॥೨೧॥** ಸಾಕ್ಷಾದಣುಶಬ್ದ ಏವ ಶ್ರೂಯತೇ. "ಏಷೋಽಣುರಾತ್ಮಾ ಯಸ್ಮಿನ್ ಪ್ರಾಣಃ ಪಂಚಧಾ ಸಂವಿವೇಶ" ಇತಿ. ಉದ್ಧೃತ್ಯ ಮಾನಮುನ್ಮಾನಂ. ಅಣುಸದೃಶಂ ವಸ್ತೂದ್ಧೃತ್ಯ ತನ್ಮಾನತ್ವಂ ಜೀವಸ್ಯ ಶ್ರೂಯತೇ. "ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ ಭಾಗೋ ಜೀವಸ್ಸ ವಿಜ್ಞೇಯಃ" ಇತಿ. ವಾಲಾಗ್ರಮಾತ್ರವ್ಯವಹಾರೋಽಪಿ ದೃಷ್ಟ ಇತಿ ಚ. ಅತೋಽಣುರೇವಾಯಮಾತ್ಮಾ.

ಇದಕ್ಕೆ ಬೇರೊಂದು ಕಾರಣವೂ ಇದೆ—ಶ್ರುತಿಯಲ್ಲಿ ಜೀವನ ಬಗ್ಗೆ ಅಣುಶಬ್ದವನ್ನೇ ಸ್ಪಷ್ಟವಾಗಿ ಪ್ರಯೋಗಿಸಲಾಗಿದೆ. "ಈ ಅಣುವಾದ ಆತ್ಮನನ್ನು ಮನದಿಂದಲೇ ಭಾವಿಸಬೇಕು." "ಇದರಲ್ಲಿಯೇ ಪ್ರಾಣವು ಐದು ಬಗೆಯಾಗಿ ಸೇರಿಕೊಂಡಿದೆ" ಹೀಗೆ ಶ್ರುತಿಯಲ್ಲಿ ಹೇಳಿದೆ. ಶ್ರುತಿಯಲ್ಲಿ ಜೀವನಿಗೆ ಒಂದುವಸ್ತುವಿನ ಪ್ರಮಾಣವನ್ನು ತಿಳಿಸಿ ಅದಕ್ಕೆ ಸದೃಶನೆಂದು ಹೇಳಿದೆ. ಬಾಲದ ತುದಿಯ ನೂರನೇ ಒಂದು ಭಾಗದಷ್ಟು ಅವನ ಪರಿಮಾಣವೆಂದು ಹೇಳಿರುವುದರಿಂದ ಜೀವನು ಅಣುವೇ ಇರುವನು.

**ಅಥ ಸ್ಯಾದಾತ್ಮನೋಽಣುತ್ವೇ ಸಕಲಶರೀರವ್ಯಾಪಿನೀ ವೇದನಾ ನೋಪಪದ್ಯತ ಇತ್ಯಾಶಂಕಾಯಾಮಾಹ. ಅವಿರೋಧಶ್ಚಂದನವತ್ ॥ ೨೨ ॥** ಯಥಾ ಚಂದನಸ್ಯೈಕದೇಶಸ್ಥಿತಸ್ಯ ಸಕಲಶರೀರಶೈತ್ಯಜನಕತ್ವಂ ಏವಂ ಕ್ಷೇತ್ರಜ್ಞಸ್ಯೈಕಸ್ಮಿನ್ ಪ್ರದೇಶೇ ಸ್ಥಿತಸ್ಯಾಪಿ ಸರ್ವಾಂಗೆ ಸುಖದುಃಖಭೋಕ್ತೃತ್ವಮುಪಪನ್ನಂ, ಚಂದನಸ್ಯೈಕಸ್ಮಿನ್ ಪ್ರದೇಶೇಽವಸ್ಥಾನಂ ಪ್ರತ್ಯಕ್ಷದೃಷ್ಟಂ.

ಹಾಗೆ ಜೀವನು ಅಣುವಾದರೆ ದೇಹದ ಎಲ್ಲಾ ಭಾಗಗಳಲ್ಲೂ ಆಗುವ ನೋವು ಅವನಿಗೆ ಆಗದೇಹೋಗಬೇಕಾದೀತೆಂದು ಆಶಂಕಿಸಿ ನಿರಾಕರಿಸುತ್ತಾನೆ. ಶ್ರೀಗಂಧವು ದೇಹದಲ್ಲಿ ಒಂದೇಕಡೆ ಇದ್ದರೂ ಎಲ್ಲಾಭಾಗದಲ್ಲೂ ಶೈತ್ಯವನ್ನು ಉಂಟುಮಾಡುವಂತೆ ದೇಹದಲ್ಲಿ ಒಂದೇ ಕಡೆ ಆತ್ಮನಿದ್ದರೂ ಎಲ್ಲಾ ಅಂಗಗಳ ಸುಖದುಃಖಗಳನ್ನೂ ಅವನು ಅನುಭವಿಸುವನೆಂಬುದು ಯುಕ್ತವಾಗಿದೆ.

**ತದ್ವಜ್ಜೀವಸ್ಯ ಕಸ್ಮಿನ್ನಂಶೇಽವಸ್ಥಾನಮಿತ್ಯಾಶಂಕಾಯಾಂ ಸ್ಥಾನವಿಶೇಷಮಾಹ. ಅವಸ್ಥಿತಿವೈಶೇಷ್ಯಾದಿತಿ ಚೆನ್ನಾಭ್ಯುಪಗಮಾದ್ಧೃದಿ ಹಿ**

**॥೨೩॥ ಹರಿಚಂದನಬಿಂದ್ವಾದೇರ್ದೇಹದೇಶವಿಶೇಷಾವಸ್ಥಿತಿವಿಶೇಷಾತ್ತಥಾಭಾವಃ ಆತ್ಮನಸ್ತು ತನ್ನ, ಆತ್ಮನೋಽಪಿ ಹಿ ದೇಹದೇಶವಿಶೇಷೇ ಸ್ಥಿತ್ಯಭ್ಯುಪಗಮಾತ್ "ಹೃದಯದೇಶೇ ಹ್ಯಾತ್ಮನಃ ಸ್ಥಿತಿಃ" ಶ್ರೂಯತೇ. "ಹೃದಿ ಹ್ಯಯಮಾತ್ಮಾ ತತ್ರೈಕಶತಂ ನಾಡೀನಾಂ" ಇತಿ. ತಥಾ "ಕತಮ ಆತ್ಮಾ" ಇತಿ ಪ್ರಕೃತ್ಯ "ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ" ಇತಿ. ಆತ್ಮನೋ ದೇಶವಿಶೇಷಸ್ಥಿತಿಖ್ಯಾಪನಾಯ ಚ ಚಂದನದೃಷ್ಟಾಂತಃ ಪ್ರದರ್ಶಿತಃ, ನತು ಚಂದನಸ್ಯ ದೇಶವಿಶೇಷಾಪೇಕ್ಷಾ.**

ಚಂದನ ಒಂದೇ ಕಡೆ ಇರುವುದೆಂಬುದನ್ನು ಎಲ್ಲರೂ ಕಂಡಿದ್ದಾರೆ. ಹಾಗೆ ಜೀವನು ದೇಹದಲ್ಲಿ ಯಾವಕಡೆ ನೆಲಸಿರುವನೆಂದಾಶಂಕಿಸಿ ಅವನಿಗೆ ಒಂದು ಸ್ಥಾನವನ್ನು ತಿಳಿಸುತ್ತಾನೆ. ಶ್ರೀಗಂಧದ ಬಿಂದುವಿಗೆ ದೇಹದಲ್ಲಿ ಒಂದು ಸ್ಥಾನವಿರುವಂತೆ ಆತ್ಮನಿಗೆ ನಿರ್ದಿಷ್ಟವಾದ ಸ್ಥಾನವಿಲ್ಲವೆಂದು ಹೇಳುವುದು ಸರಿಯಲ್ಲ; ಯಾಕೆಂದರೆ ಶ್ರುತಿಯಲ್ಲಿ ಆತ್ಮನಿಗೆ ದೇಹದಲ್ಲಿ ಒಂದು ಸ್ಥಾನವನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. "ಹೃದಯದಲ್ಲಿ ಆತ್ಮನು ನೆಲಸಿದ್ದಾನೆ. ಅಲ್ಲಿ ನೂರೊಂದು ನಾಡಿಗಳಿವೆ" ಎಂದು ಮುಂತಾಗಿ ಶ್ರುತಿಯಲ್ಲಿ ಹೇಳಿದೆ. "ಆತ್ಮನು ಯಾರು" ಎಂದು ಕೇಳಿ ಈ "ವಿಜ್ಞಾನಮಯನಾದ ಆತ್ಮನು ಹೃದಯದಲ್ಲಿ ಬೆಳಗುವ ಜ್ಯೋತಿಯಾಗಿದ್ದಾನೆ" ಎಂದು ಶ್ರುತಿಯಲ್ಲಿ ತಿಳಿಸಿದೆ. ಆತ್ಮನಿಗೆ ಒಂದು ಸ್ಥಾನವಿಶೇಷವನ್ನು ತಿಳಿಸಲಿಕ್ಕಾಗಿ ಶ್ರೀಗಂಧದ ದೃಷ್ಟಾಂತವನ್ನು ಇಲ್ಲಿ ಕೊಟ್ಟಿದೆಯೇ ಹೊರತು ಶ್ರೀಗಂಧವು ಇಂತಹದೊಂದು ನಿರ್ದಿಷ್ಟವಾದ ಸ್ಥಾನವನ್ನು ಅಪೇಕ್ಷಿಸುವಂತಿಲ್ಲ.

**ಏಕದೇಶವರ್ತಿನಸ್ಸಕಲದೇಹಸ್ಯಾಪಿ ಕಾರ್ಯಕರತ್ವಪ್ರಕಾರಂ ಪುನರ್ಹೇತ್ವಂತರೇಣಾಹ. ಗುಣಾದ್ವಾಲೋಕವತ್ ॥ ೨೪ ॥ ವಾಶಬ್ದೋ ಮತಾಂತರವ್ಯಾವೃತ್ತ್ಯರ್ಥಃ. ಆತ್ಮಾ ಸ್ವಗುಣೇನ ಜ್ಞಾನೇನ ಸಕಲದೇಹಂ ವ್ಯಾಪ್ಯಾವಸ್ಥಿತಃ. ಅತಃ ಆಲೋಕವತ್, ಯಥಾ ಮಣಿದ್ಯುಮಣಿಪ್ರಭೃತೀನಾಂ ಏಕದೇಶವರ್ತಿನಾಮಾಲೋಕೋಽನೇಕದೇಶವ್ಯಾಪೀ ದೃಶ್ಯತೇ, ತದ್ವತ್ ಹೃದಯಸ್ಥಸ್ಯಾತ್ಮನೋ ಜ್ಞಾನಂ ಸಕಲದೇಹಂ ವ್ಯಾಪ್ಯ ಪ್ರವರ್ತತೇ. ಜ್ಞಾತುಃ ಪ್ರಭಾಸ್ಥಾನೀಯಸ್ಯ ಜ್ಞಾನಸ್ಯ ಸ್ವಾಶ್ರಯಾದನ್ಯತ್ರ ವೃತ್ತಿರ್ಮಣಿಪ್ರಭಾವದುಪಪದ್ಯತ ಇತಿ ನಿಶ್ಚೀಯತೇ.**

ಒಂದೇಕಡೆ ಇದ್ದರೂ ಆತ್ಮನು ಹೇಗೆ ಕಾರ್ಯಗಳನ್ನು ನಿರ್ವಹಿಸಬಲ್ಲನೆಂಬುದಕ್ಕೆ ಬೇರೊಂದು ಹೇತುವನ್ನು ಹೇಳುತ್ತಾನೆ. ಆತ್ಮನು ತನ್ನ ಗುಣವೆನಿಸಿದ ಜ್ಞಾನದಿಂದ ದೇಹವೆಲ್ಲವನ್ನೂ ವ್ಯಾಪಿಸಿದ್ದಾನೆ. ಮಣಿ ಸೂರ್ಯ ಮೊದಲಾದ ಪ್ರಕಾಶಗಳು ಒಂದೇಕಡೆ ಇದ್ದರೂ ಅನೇಕಸ್ಥಾನಗಳನ್ನು ವ್ಯಾಪಿಸುತ್ತವೆ ಎಂದು ಕಂಡುಬಂದಿದೆ. ಹಾಗೆ ಆತ್ಮನು ಹೃದಯದಲ್ಲಿದ್ದರೂ ಅವನ ಜ್ಞಾನವು ದೇಹವೆಲ್ಲವನ್ನೂ ವ್ಯಾಪಿಸಿರು

ತ್ತದೆ. ಆದ್ದರಿಂದಲೇಪ್ರಕಾಶದ ಸ್ಥಾನದಲ್ಲಿರುವ ಜ್ಞಾನವು ತನ್ನ ಆಶ್ರಯವನ್ನು ಬಿಟ್ಟು ಬೇರೆ ಕಡೆ ಇರಲಾರದೆಂದು ನಿಶ್ಚಯಿಸಲಾಗಿದೆ.

**ನನೂಕ್ತಂ ಜ್ಞಾನಮಾತ್ರಮೇವಾತ್ಮೇತಿ ತತ್ಕಥಂ ಜ್ಞಾನಸ್ಯ ಸ್ವರೂಪವ್ಯತಿರಿಕ್ತಗುಣತ್ವಮುಚ್ಯತ ಇತ್ಯಾಶಂಕ್ಯ ತತ್ರಾಹ. ವ್ಯತಿರೇಕೋ ಗಂಧವತ್ತಥಾಚ ದರ್ಶಯತಿ ||೨೮|| ಯಥಾ ಪೃಥಿವ್ಯಾ: ಗಂಧಸ್ಯ ಗುಣತ್ವೇನೋಪಲಭ್ಯಮಾನಸ್ಯ ತತೋ ವ್ಯತಿರೇಕಃ. ತಥಾ ಜಾನಾಮೀತಿ ಜ್ಞಾತೃಗುಣತ್ವೇನ ಪ್ರತೀಯಮಾನಸ್ಯ ಜ್ಞಾನಸ್ಯಾತ್ಮನೋ ವ್ಯತಿರೇಕಸಿದ್ಧಿಂ ದರ್ಶಯತಿ ಚ ಶ್ರುತಿಃ. "ಆಲೋಮಭ್ಯ ಆನಖಾಗ್ರೇಭ್ಯಃ ಜಾನಾತ್ಯೇವಾಯಂ ಪುರುಷಃ" ಇತಿ ಜೀವಸ್ಯ ಹೃದ್ಯಾಯತನತ್ವಂ ಅಣುಪರಿಮಾಣತ್ವಂ ಚ ವ್ಯಪದಿಶ್ಯ ದೇಹವ್ಯಾಪಿತ್ವಮಪಿ ವ್ಯವಹ್ರಿಯತೇ.**

ಜ್ಞಾನವೇ ಆತ್ಮನ ಸ್ವರೂಪವೆಂದಮೇಲೆ ಈ ಸ್ವರೂಪಕ್ಕಿಂತ ಬೇರೆಯಾಗಿ ಜ್ಞಾನವೆಂಬ ಗುಣವು ಅವನಲ್ಲಿ ಹೇಗೆ ಇರುತ್ತದೆ ಎಂದು ಆಶಂಕಿಸಿ ತಿಳಿಸುತ್ತಾನೆ. ಪೃಥ್ವಿಗೆ ಗಂಧವೇ ಗುಣವೆಂದು ಹೇಳಿದರೆ ಗಂಧವು ಪೃಥ್ವಿಗಿಂತಲೂ ಹೇಗೆ ಬೇರೆಯೋ ಹಾಗೆ ಆತ್ಮನಲ್ಲಿ ತಿಳಿವೇ ಗುಣವೆಂದು ಹೇಳಿದರೆ ಎರಡಕ್ಕೂ ಭೇದ ಸಿದ್ಧವಾಗುತ್ತದೆ. "ಕೂದಲಿನಿಂದ ಉಗುರಿನ ತುದಿಯವರೆಗೂ ಈ ಆತ್ಮನು ತಿಳಿಯುತ್ತಾನೆ" ಎಂದು ಶ್ರುತಿ ತಿಳಿಸಿದೆ. ಹೀಗೆ ಜೀವನನ್ನು ಹೃದಯದಲ್ಲಿ ಅಣುಪರಿಮಾಣನೆಂದು ಹೇಳಿದ್ದರೂ ಅವನು ದೇಹವೆಲ್ಲವನ್ನೂ ವ್ಯಾಪಿಸಿರುವುದಾಗಿಯೂ ಹೇಳಿದೆ.

**"ತತ್ತ್ವಮಸಿ" ಇತ್ಯಾದೌ ಜೀವಬ್ರಹ್ಮಣೋರೇಕತ್ವೋಪದೇಶಾತ್ ಬ್ರಹ್ಮವಜ್ಜೀವಸ್ಯಾಪಿ ವಿಭುತ್ವಂ ಕಿಂ ನ ಸ್ಯಾದಿತ್ಯಾಶಂಕ್ಯಾಹ. ಪೃಥಗುಪದೇಶಾತ್ || ೨೯ || "ಈಶ್ವರಸ್ಸರ್ವಭೂತಾನಾಂ", "ವಿಶ್ವಾಧಿಕೋ ರುದ್ರೋ ಮಹರ್ಷಿಃ" "ಪ್ರಧಾನಕ್ಷೇತ್ರಜ್ಞ ಪತಿರ್ಗುಣೇಶಃ ಸಂಸಾರಮೋಕ್ಷಸ್ಥಿತಿಬಂಧಹೇತುಃ" "ದ್ವಾ ಸುಪರ್ಣಾ" ಇತ್ಯಾದಿಷು ಜೀವಬ್ರಹ್ಮಣೋರ್ನಿಯಮ್ಯನಿಯಾಮಕತ್ವಂ ಜಗಜ್ಜೀವ ವಿಲಕ್ಷಣತ್ವಂ ಜೀವಬಂಧಮೋಕ್ಷಹೇತುತ್ವಂ, ಸಂಸಾರಭೋಕ್ತೃತ್ವಾಭೋಕ್ತೃತ್ವಾದಿನಾ ಪೃಥಗುಪದೇಶಾತ್ ಜೀವವ್ಯತಿರಿಕ್ತಸ್ಯೈವ ವಿಭುತ್ವಂ ಚ ಸಿದ್ಧಂ.**

"ನೀನು ಅದೇ ಆಗಿದ್ದೀಯೆ-ನಾನು ಬ್ರಹ್ಮನಿದ್ದೇನೆ-ಈ ಆತ್ಮನು ಬ್ರಹ್ಮನೇ" ಎಂಬಕಡೆ ಜೀವಬ್ರಹ್ಮರನ್ನು ಒಂದೇ ಎಂದು ಹೇಳಿರುವುದರಿಂದ ಬ್ರಹ್ಮದಂತೆ ಜೀವನೂ ಏಕೆ ವಿಭುವಾಗಬಾರದು ಎಂದಾಶಂಕಿಸಿ ನಿರಾಕರಿಸುತ್ತಾನೆ. ಶ್ರುತಿಯಲ್ಲಿ "ಜೀವರೆಲ್ಲರಿಗೂ ನಿಯಾಮಕನು" "ವಿಶ್ವಕ್ಕೂ ಅಧಿಕನಾದ ರುದ್ರನು ಮಹಾಜ್ಞಾನಿ" "ಪ್ರಧಾನಜೀವರಿಗೆ ಪತಿ" "ಆತ್ಮರು ಇಬ್ಬರೂ ಅಜರು" ಹೀಗೆ ಜೀವಬ್ರಹ್ಮರಿಗೆ ನಿಯಮ್ಯನಿಯಾಮಕಭಾವವನ್ನು ಹೇಳಿ ಪರಮಾತ್ಮನನ್ನು ಜಗಜ್ಜೀವರಿಗಿಂತ ಭಿನ್ನನೆಂದೂ, ಜೀವನ ಬಂಧಮೋಕ್ಷಗಳಿಗೆ ಕಾರಣನೆಂದೂ ತಿಳಿಸಿದೆ. ಜೀವನು ಸಂಸಾರ

ದಲ್ಲಿ ವಿಷಯವನ್ನು ಭೋಗಿಸುವನೆಂದೂ ಈಶ್ವರನು ಭೋಗಿಸುವುದಿಲ್ಲವೆಂದೂ ಇಬ್ಬರಿಗೂ ಬೇರೆಬೇರೆ ವಿಧಾನವನ್ನು ತಿಳಿಸಿರುವುದರಿಂದ ಜೀವನಿಗಿಂತ ಬೇರೆಯಾದವನೇ ವಿಭುವೆನಿಸಿದ್ದಾನೆಂಬುದು ಸ್ಪಷ್ಟಪಡುತ್ತದೆ.

ಯತ್ತೂಕ್ತಂ " ಯೋ ವಿಜ್ಞಾನೇ ತಿಷ್ಠನ್ " ಇತ್ಯಾದೌ ಜ್ಞಾನಮೇವಾತ್ಮೇತಿ ವ್ಯಪದಿಶ್ಯತ ಇತ್ಯಾಶಂಕ್ಯಾಹ. ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್ ॥೨೭॥ ತುಶಬ್ದಶ್ಚೋದ್ಯಂ ವ್ಯಾವರ್ತಯತಿ. ತದ್ಗುಣಸಾರತ್ವಾತ್ ವಿಜ್ಞಾನಗುಣಸಾರತ್ವಾತ್. ಆತ್ಮನೋ ವಿಜ್ಞಾನಮಿತಿ ವ್ಯಪದೇಶಃ. ವಿಜ್ಞಾನಮೇವಾಸ್ಯ ಸಾರಭೂತೋ ಗುಣಃ. ಯಥಾ " ಪ್ರಾಜ್ಞಸ್ಯಾನಂದಸ್ಸಾರಭೂತೋ ಗುಣಃ " ಇತಿ ಪ್ರಾಜ್ಞ ಆನಂದಶಬ್ದೇನ ವ್ಯವಹ್ರಿಯತೇ. "ಯದೇಷ ಆಕಾಶ ಆನಂದೋ ನ ಸ್ಯಾತ್", ಆನಂದೋ ಬ್ರಹ್ಮೇತಿ ವ್ಯಜಾನಾತ್ ಇತಿ. ಪ್ರಾಜ್ಞಸ್ಯ ಹ್ಯಾನಂದಸಾರಭೂತೋ ಗುಣಃ."ಸ ಏಕೋ ಬ್ರಹ್ಮಣ ಆನಂದಃ""ಆನಂದಂ ಬ್ರಹ್ಮಣೋ ವಿದ್ವಾನ್ನ ಬಿಭೇತಿ ಕುತಶ್ಚನ " ಇತಿ. ಯಥಾ ವಾ " ಸತ್ಯಂ ಜ್ಞಾನಮನಂತಂ ಬ್ರಹ್ಮ " ಇತಿ ವಿಪಶ್ಚಿತಃ ಪ್ರಾಜ್ಞಸ್ಯ ಜ್ಞಾನಶಬ್ದೇನ ವ್ಯಪದೇಶಃ. "ಸಹ ಬ್ರಹ್ಮಣಾ ವಿಪಶ್ಚಿತಾ" "ಯಸ್ಸರ್ವಜ್ಞಃ" ಇತ್ಯಾದಿಷು ಪ್ರಾಜ್ಞಸ್ಯ ಜ್ಞಾನಂ ಸಂಸ್ಕಾರಭೂತೋ ಗುಣ ಇತಿ ವಿಜ್ಞಾಯತೇ.

" ವಿಜ್ಞಾನನಲ್ಲಿ ಯಾವನಿದ್ದಾನೆಯೋ" ಎಂಬಲ್ಲಿ ಜ್ಞಾನವೇ ಆತ್ಮವೆಂದು ಹೇಗೆ ಹೇಳಬಹುದು ಎಂದಾಶಂಕಿಸಿ ನಿರಾಕರಿಸುತ್ತಾನೆ. ಸೂತ್ರದಲ್ಲಿರುವ ತುಶಬ್ದವು ಆಕ್ಷೇಪವನ್ನು ಅಲ್ಲಗಳೆಯುತ್ತದೆ. ವಿಜ್ಞಾನವೇ ಜೀವನಲ್ಲಿ ಶ್ರೇಷ್ಠವಾದ ಗುಣವಾದ್ದರಿಂದ ಅವನನ್ನು ವಿಜ್ಞಾನನೆಂದು ಕರೆಯಲಾಗಿದೆ. " ಪ್ರಾಜ್ಞನಿಗೆ ಆನಂದವೇ ಶ್ರೇಷ್ಠವಾದ ಗುಣ "ವೆಂದು ಶ್ರುತಿಯಲ್ಲಿ ಹೇಳಿದೆ. ಆದ್ದರಿಂದಲೇ ಅವನನ್ನು ಆನಂದನೆಂದು ಕರೆಯಲಾಗಿದೆ. " ಈ ಆಕಾಶ ಆನಂದವಾಗಿರದಿದ್ದರೆ ಯಾರು ಉಸಿರಾಡುತ್ತಿದ್ದರು? ಆನಂದವೇ ಬ್ರಹ್ಮವೆಂದು ತಿಳಿ. ಬ್ರಹ್ಮದ ಆನಂದವನ್ನು ತಿಳಿದವನು ಯಾತರಿಂದಲೂ ಹೆದರುವುದಿಲ್ಲ. ಇದೊಂದೇ ಬ್ರಹ್ಮದ ಆನಂದ" ಹೀಗೆ ಶ್ರುತಿಯಲ್ಲಿ ಹೇಳಿದೆ. ಇದೂ ಅಲ್ಲದೆ, " ನಿತ್ಯಂ ಜ್ಞಾನಂ ಅನಂತಂ ಬ್ರಹ್ಮ" ಎಂಬಲ್ಲಿ ಪ್ರಾಜ್ಞನಿಗೆ ಜ್ಞಾನಶಬ್ದವನ್ನು ಪ್ರಯೋಗಿಸಲಾಗಿದೆ. " ಪ್ರಾಜ್ಞನಾದ ಬ್ರಹ್ಮದೊಡನೆ ಸೇರುತ್ತಾನೆ" ಎಂದು ಮುಂತಾಗಿ ಪ್ರಾಜ್ಞನಿಗೆ ಜ್ಞಾನಗುಣವೇ ಸಂಸ್ಕಾರವೆನಿಸಿದೆ ಎಂದು ತಿಳಿದುಬರುತ್ತದೆ.

ಪುನರುಪಪತ್ತಿಮಾಹ. ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್ ॥ ೨೮ ॥ " ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಸ್ಸಮಾನಸ್ಸನ್ನುಭೌ ಲೋಕಾವನುಸಂಚರತಿ " ಇತಿ ಶ್ರುತಿದರ್ಶನಾತ್ ವಿಜ್ಞಾನಮಯಸ್ಯ ಜೀವಸ್ಯ ಯಾವದಾತ್ಮ

ತ್ತದೆ. ಆದ್ದರಿಂದಲೇಪ್ರಕಾಶದ ಸ್ಥಾನದಲ್ಲಿರುವ ಜ್ಞಾನವು ತನ್ನ ಆಶ್ರಯುವನ್ನು ಬಿಟ್ಟು ಬೇರೆ ಕಡೆ ಇರಲಾರದೆಂದು ನಿಶ್ಚಯಿಸಲಾಗಿದೆ.

ನನೂಕ್ತಂ ಜ್ಞಾನಮಾತ್ರಮೇವಾತ್ಮೇತಿ ತತ್ಕಥಂ ಜ್ಞಾನಸ್ಯ ಸ್ವರೂಪವ್ಯತಿರಿಕ್ತಗುಣತ್ವಮುಚ್ಯತ ಇತ್ಯಾಶಂಕ್ಯ ತತ್ರಾಹ. ವ್ಯತಿರೇಕೋ ಗಂಧವತ್ತಥಾಚ ದರ್ಶಯತಿ ||೨೭|| ಯಥಾ ಪೃಥಿವ್ಯಾಃ ಗಂಧಸ್ಯ ಗುಣತ್ವೇನೋಪಲಭ್ಯಮಾನಸ್ಯ ತತೋ ವ್ಯತಿರೇಕಃ. ತಥಾ ಜಾನಾಮೀತಿ ಜ್ಞಾತೃಗುಣತ್ವೇನ ಪ್ರತೀಯಮಾನಸ್ಯ ಜ್ಞಾನಸ್ಯಾತ್ಮನೋ ವ್ಯತಿರೇಕಸಿದ್ಧಿಂ ದರ್ಶಯತಿ ಚ ಶ್ರುತಿಃ. "ಆಲೋಮಭ್ಯ ಆನಖಾಗ್ರೇಭ್ಯಃ ಜಾನಾತ್ಯೇವಾಯಂ ಪುರುಷಃ" ಇತಿ ಜೀವಸ್ಯ ಹೃದ್ಯಾಯತನತ್ವಂ ಅಣುಪರಿಮಾಣತ್ವಂ ಚ ವ್ಯಪದಿಶ್ಯ ದೇಹವ್ಯಾಪಿತ್ವಮಪಿ ವ್ಯವಹ್ರಿಯತೇ.

ಜ್ಞಾನವೇ ಆತ್ಮನ ಸ್ವರೂಪವೆಂದಮೇಲೆ ಈ ಸ್ವರೂಪಕ್ಕಿಂತ ಬೇರೆಯಾಗಿ ಜ್ಞಾನವೆಂಬ ಗುಣವು ಅವನಲ್ಲಿ ಹೇಗೆ ಇರುತ್ತದೆ ಎಂದು ಅಶಂಕಿಸಿ ತಿಳಿಸುತ್ತಾನೆ. ಪೃಥ್ವಿಗೆ ಗಂಧವೇ ಗುಣವೆಂದು ಹೇಳಿದರೆ ಗಂಧವು ಪೃಥ್ವಿಗಿಂತಲೂ ಹೇಗೆ ಬೇರೆಯೋ ಹಾಗೆ ಆತ್ಮನಲ್ಲಿ ತಿಳಿವೇ ಗುಣವೆಂದು ಹೇಳಿದರೆ ಎರಡಕ್ಕೂ ಭೇದ ಸಿದ್ಧವಾಗುತ್ತದೆ. "ಕೂದಲಿನಿಂದ ಉಗುರಿನ ತುದಿಯವರೆಗೂ ಈ ಆತ್ಮನು ತಿಳಿಯುತ್ತಾನೆ" ಎಂದು ಶ್ರುತಿ ತಿಳಿಸಿದೆ. ಹೀಗೆ ಜೀವನನ್ನು ಹೃದಯದಲ್ಲಿ ಅಣುಪರಿಮಾಣನೆಂದು ಹೇಳಿದ್ದರೂ ಅವನು ದೇಹವೆಲ್ಲವನ್ನೂ ವ್ಯಾಪಿಸಿರುವುದಾಗಿಯೂ ಹೇಳಿದೆ.

"ತತ್ತ್ವಮಸಿ" ಇತ್ಯಾದೌ ಜೀವಬ್ರಹ್ಮಣೋರೇಕತ್ವೋಪದೇಶಾತ್ ಬ್ರಹ್ಮವಜ್ಜೀವಸ್ಯಾಪಿ ವಿಭುತ್ವಂ ಕಿಂ ನ ಸ್ಯಾದಿತ್ಯಾಶಂಕ್ಯಾಹ. ಪೃಥಗುಪದೇಶಾತ್ || ೨೮ || "ಈಶ್ವರಸ್ಸರ್ವಭೂತಾನಾಂ", "ವಿಶ್ವಾಧಿಕೋ ರುದ್ರೋ ಮಹರ್ಷಿಃ" "ಪ್ರಧಾನಕ್ಷೇತ್ರಜ್ಞ ಪತಿರ್ಗುಣೇಶಃ ಸಂಸಾರಮೋಕ್ಷಸ್ಥಿತಿಬಂಧಹೇತುಃ" "ದ್ವಾ ಸುಪರ್ಣಾ" ಇತ್ಯಾದಿಷು ಜೀವಬ್ರಹ್ಮಣೋರ್ನಿಯಮ್ಯನಿಯಾಮಕತ್ವಂ ಜಗಜ್ಜೀವ ವಿಲಕ್ಷಣತ್ವಂ ಜೀವಬಂಧಮೋಕ್ಷಹೇತುತ್ವಂ, ಸಂಸಾರಭೋಕ್ತೃತ್ವಾಭೋಕ್ತೃತ್ವಾದಿನಾ ಪೃಥಗುಪದೇಶಾತ್ ಜೀವವ್ಯತಿರಿಕ್ತಸ್ಯೈವ ವಿಭುತ್ವಂ ಚ ಸಿದ್ಧಂ.

"ನೀನು ಅದೇ ಆಗಿದ್ದೀಯೆ-ನಾನು ಬ್ರಹ್ಮನಿದ್ದೇನೆ-ಈ ಆತ್ಮನು ಬ್ರಹ್ಮನೇ" ಎಂಬಕಡೆ ಜೀವಬ್ರಹ್ಮರನ್ನು ಒಂದೇ ಎಂದು ಹೇಳಿರುವುದರಿಂದ ಬ್ರಹ್ಮದಂತೆ ಜೀವನೂ ಏಕೆ ವಿಭುವಾಗಬಾರದು ಎಂದಾಶಂಕಿಸಿ ನಿರಾಕರಿಸುತ್ತಾನೆ. ಶ್ರುತಿಯಲ್ಲಿ "ಜೀವರೆಲ್ಲರಿಗೂ ನಿಯಾಮಕನು" "ವಿಶ್ವಕ್ಕೂ ಅಧಿಕನಾದ ರುದ್ರನು ಮಹಾಜ್ಞಾನಿ" "ಪ್ರಧಾನಜೀವರಿಗೆ ಪತಿ" "ಆತ್ಮರು ಇಬ್ಬರೂ ಅಜರು" ಹೀಗೆ ಜೀವಬ್ರಹ್ಮರಿಗೆ ನಿಯಮ್ಯನಿಯಾಮಕಭಾವವನ್ನು ಹೇಳಿ ಪರಮಾತ್ಮನನ್ನು ಜಗಜ್ಜೀವರಿಗಿಂತ ಭಿನ್ನನೆಂದೂ, ಜೀವನ ಬಂಧಮೋಕ್ಷಗಳಿಗೆ ಕಾರಣನೆಂದೂ ತಿಳಿಸಿದೆ. ಜೀವನು ಸಂಸಾರ

ದಲ್ಲಿ ವಿಷಯವನ್ನು ಭೋಗಿಸುವನೆಂದೂ ಈಶ್ವರನು ಭೋಗಿಸುವುದಿಲ್ಲವೆಂದೂ ಇಬ್ಬರಿಗೂ ಬೇರೆಬೇರೆ ವಿಧಾನವನ್ನು ತಿಳಿಸಿರುವುದರಿಂದ ಜೀವನಿಗಿಂತ ಬೇರೆಯಾದವನೇ ವಿಭುವೆನಿಸಿದ್ದಾನೆಂಬುದು ಸ್ಪಷ್ಟಪಡುತ್ತದೆ.

ಯತ್ತೂಕ್ತಂ " ಯೋ ವಿಜ್ಞಾನೇ ತಿಷ್ಠನ್ " ಇತ್ಯಾದೌ ಜ್ಞಾನಮೇವಾತ್ಮೇತಿ ವ್ಯಪದಿಶ್ಯತ ಇತ್ಯಾಶಂಕ್ಯಾಹ. ತದ್ಗುಣಸಾರತ್ವಾತ್ತು ತದ್ವ್ಯಪದೇಶಃ ಪ್ರಾಜ್ಞವತ್ ॥೨೭॥ ತುಶಬ್ದಶ್ಚೋದ್ಯಂ ವ್ಯಾವರ್ತಯತಿ. ತದ್ಗುಣಸಾರತ್ವಾತ್ ವಿಜ್ಞಾನಗುಣಸಾರತ್ವಾತ್. ಆತ್ಮನೋ ವಿಜ್ಞಾನಮಿತಿ ವ್ಯಪದೇಶಃ. ವಿಜ್ಞಾನಮೇವಾಸ್ಯ ಸಾರಭೂತೋ ಗುಣಃ. ಯಥಾ " ಪ್ರಾಜ್ಞಸ್ಯಾನಂದಸ್ಸಾರಭೂತೋ ಗುಣಃ " ಇತಿ ಪ್ರಾಜ್ಞ ಆನಂದಶಬ್ದೇನ ವ್ಯವಹ್ರಿಯತೇ. "ಯದೇಷ ಆಕಾಶ ಆನಂದೋ ನ ಸ್ಯಾತ್", ಆನಂದೋ ಬ್ರಹ್ಮೇತಿ ವ್ಯಜಾನಾತ್ ಇತಿ. ಪ್ರಾಜ್ಞಸ್ಯ ಹ್ಯಾನಂದಸಾರಭೂತೋ ಗುಣಃ."ಸ ಏಕೋ ಬ್ರಹ್ಮಣ ಆನಂದಃ""ಆನಂದಂ ಬ್ರಹ್ಮಣೋ ವಿದ್ವಾನ್ನ ಬಿಭೇತಿ ಕುತಶ್ಚನ " ಇತಿ. ಯಥಾ ವಾ " ಸತ್ಯಂ ಜ್ಞಾನಮನಂತಂ ಬ್ರಹ್ಮ " ಇತಿ ವಿಪಶ್ಚಿತಃ ಪ್ರಾಜ್ಞಸ್ಯ ಜ್ಞಾನಶಬ್ದೇನ ವ್ಯಪದೇಶಃ. "ಸಹ ಬ್ರಹ್ಮಣಾ ವಿಪಶ್ಚಿತಾ" "ಯಸ್ಸರ್ವಜ್ಞಃ" ಇತ್ಯಾದಿಷು ಪ್ರಾಜ್ಞಸ್ಯ ಜ್ಞಾನಂ ಸಂಸ್ಕಾರಭೂತೋ ಗುಣ ಇತಿ ವಿಜ್ಞಾಯತೇ.

" ವಿಜ್ಞಾನನಲ್ಲಿ ಯಾವನಿದ್ದಾನೆಯೋ " ಎಂಬಲ್ಲಿ ಜ್ಞಾನವೇ ಆತ್ಮವೆಂದು ಹೇಗೆ ಹೇಳಬಹುದು ಎಂದಾಶಂಕಿಸಿ ನಿರಾಕರಿಸುತ್ತಾನೆ. ಸೂತ್ರದಲ್ಲಿರುವ ತುಶಬ್ದವು ಆಕ್ಷೇಪವನ್ನು ಅಲ್ಲಗಳೆಯುತ್ತದೆ. ವಿಜ್ಞಾನವೇ ಜೀವನಲ್ಲಿ ಶ್ರೇಷ್ಠವಾದ ಗುಣವಾದ್ದರಿಂದ ಅವನನ್ನು ವಿಜ್ಞಾನನೆಂದು ಕರೆಯಲಾಗಿದೆ. " ಪ್ರಾಜ್ಞನಿಗೆ ಆನಂದವೇ ಶ್ರೇಷ್ಠವಾದ ಗುಣ "ವೆಂದು ಶ್ರುತಿಯಲ್ಲಿ ಹೇಳಿದೆ. ಆದ್ದರಿಂದಲೇ ಅವನನ್ನು ಆನಂದನೆಂದು ಕರೆಯಲಾಗಿದೆ. " ಈ ಆಕಾಶ ಆನಂದವಾಗಿರದಿದ್ದರೆ ಯಾರು ಉಸಿರಾಡುತ್ತಿದ್ದರು? ಆನಂದವೇ ಬ್ರಹ್ಮವೆಂದು ತಿಳಿ. ಬ್ರಹ್ಮದ ಆನಂದವನ್ನು ತಿಳಿದವನು ಯಾತರಿಂದಲೂ ಹೆದರುವುದಿಲ್ಲ. ಇದೊಂದೇ ಬ್ರಹ್ಮದ ಆನಂದ" ಹೀಗೆ ಶ್ರುತಿಯಲ್ಲಿ ಹೇಳಿದೆ. ಇದೂ ಅಲ್ಲದೆ, " ನಿತ್ಯಂ ಜ್ಞಾನಂ ಅನಂತಂ ಬ್ರಹ್ಮ" ಎಂಬಲ್ಲಿ ಪ್ರಾಜ್ಞನಿಗೆ ಜ್ಞಾನಶಬ್ದವನ್ನು ಪ್ರಯೋಗಿಸಲಾಗಿದೆ. " ಪ್ರಾಜ್ಞನಾದ ಬ್ರಹ್ಮದೊಡನೆ ಸೇರುತ್ತಾನೆ" ಎಂದು ಮುಂತಾಗಿ ಪ್ರಾಜ್ಞನಿಗೆ ಜ್ಞಾನಗುಣವೇ ಸಂಸ್ಕಾರವೆನಿಸಿದೆ ಎಂದು ತಿಳಿದುಬರುತ್ತದೆ.

ಪುನರುಪಪತ್ತಿಮಾಹ. ಯಾವದಾತ್ಮಭಾವಿತ್ವಾಚ್ಚ ನ ದೋಷಸ್ತದ್ದರ್ಶನಾತ್ ॥ ೨೮ ॥ " ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯಂತರ್ಜ್ಯೋತಿಃ ಪುರುಷಸ್ಸಮಾನಸ್ಸನ್ನುಭೌ ಲೋಕಾವನುಸಂಚರತಿ " ಇತಿ ಶ್ರುತಿದರ್ಶನಾತ್ ವಿಜ್ಞಾನಮಯಸ್ಯ ಜೀವಸ್ಯ ಯಾವದಾತ್ಮ

ಭಾವಿತ್ವಾತ್ತೇನ ತದ್ವ್ಯಪದೇಶೋ ನ ದೋಷಃ. ತದ್ದರ್ಶನಾತ್ "ಯಥಾ ನದ್ಯಸ್ಸ್ಯಂದಮಾನಾಸ್ಸಮುದ್ರೇ ಅಸ್ತಂ ಗಚ್ಛಂತಿ ನಾಮ ರೂಪೇ ವಿಹಾಯ । ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ ॥" "ಗತಾಃ ಕಲಾಃ ಪಂಚದಶಾಃ ಪ್ರತಿಷ್ಠಾ ದೇವಾಶ್ಚ ಸರ್ವೇ ಪ್ರತಿದೇವತಾಸು । ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ ॥" "ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ।" ಇತ್ಯಾದಿಶ್ರುತಿಶತೇಷು ಸ್ವಾಭಾವಿಕಜೀವತ್ವನಿವೃತ್ತಿಪೂರ್ವಕಶಿವತ್ವಪ್ರಾಪ್ತಿರೂಪವಿದೇಹಮುಕ್ತಿಪರ್ಯಂತಂ ಶಿವಯೋಗಶಿವಧ್ಯಾನಶಿವಜ್ಞಾನನಿಷ್ಠಸ್ಯ ಜೀವನ್ಮುಕ್ತಸ್ಯ ಶಿವಧ್ಯಾನಸಮಾಧಿಕಾಲೇಷ್ವಪಿ ಪ್ರಚಂಡಾತಪಮಧ್ಯನಿಕ್ಷಿಪ್ತಕರ್ಪೂರದೀಪವತ್ ಶುದ್ಧಜೀವತ್ವಸ್ಯ ವಿದ್ಯಮಾನತ್ವಾದಣುತ್ವವ್ಯಪದೇಶೋ ನ ವಿರುದ್ಧಃ. ಪ್ರಾರಬ್ಧಾವಸಾನಪರ್ಯಂತಂ ಸುಪ್ತಪುರುಷವತ್ ಜ್ಞಾನನಿಷ್ಠಾನಾಂ ಸಮಾಧ್ಯನಂತರಂ ಪುನರುತ್ಥಾನದರ್ಶನಾದಿತಿ ಭಾವಃ. ಜೀವಸ್ಯ ವಿಭುತ್ವಾಂಗೀಕಾರೇ ಅಣುತ್ವವಿಭುತ್ವಯೋರೇಕತ್ವಾಸಂಭವಾನ್ನದೀಸಮುದ್ರವಜ್ಜೀವಬ್ರಹ್ಮಣೋಃ ಪ್ರಾಪ್ಯಪ್ರಾಪಕತ್ವವಿಧಾಯಕಶ್ರುತೀನಾಂ ವಿರೋಧೋ ದುರ್ನಿವಾರಃ. ಕಿಂಚೇಶ್ವರಸ್ಯಾಂತರ್ಯಾಮಿತ್ವಾದಿಕಮಪಿ ನ ಸಂಭವೇತ್. ಜೀವಸ್ಯಾಣುತ್ವಮಂತಃಕರಣೋಪಾಧಿಮಾತ್ರಮಿತಿ ಚೇತ್ತದಸಂಗತಂ. "ಜ್ಞಾಽಜ್ಞೌ ದ್ವಾವಜಾವೀಶಾನೀಶೌ" ಇತ್ಯಾದಿಷು ಭೂತಸೃಷ್ಟೇಃ ಪ್ರಾಗಪ್ಯಜಾತತ್ವೇನ ಜೀವಸ್ಥಿತ್ಯುಪದೇಶಾತ್. ತಸ್ಮಾಜ್ಜೀವಸ್ಯಾಣುತ್ವಂ ಸ್ವಾಭಾವಿಕಮಿತಿ ನಿಶ್ಚೀಯತೇ.

ಇಲ್ಲಿ ಬೇರೊಂದು ಯುಕ್ತಿಯೂ ಇದೆ. "ಪ್ರಾಣದಲ್ಲಿರುವ ಈ ವಿಜ್ಞಾನಮಯ ಪುರುಷನೇ ಎರಡು ಲೋಕಗಳಲ್ಲೂ ಸಂಚರಿಸುತ್ತಾನೆ" ಎಂದು ಶ್ರುತಿಯಲ್ಲಿಹೇಳಿರುವುದರಿಂದಲೂ, ವಿಜ್ಞಾನಮಯಜೀವನು ದೇಹದಲ್ಲಿ ತುಂಬಿಕೊಂಡಿರುವುದರಿಂದಲೂ ಹಾಗೆ ಹೇಳಿದ್ದರಲ್ಲಿ ತಪ್ಪೇನಿಲ್ಲ. ಶ್ರುತಿಯಲ್ಲಿ ನದೀಸಮುದ್ರದೃಷ್ಟಾಂತದಿಂದಲೂ ಹಾಗೆಯೇ ತಿಳಿದುಬರುತ್ತದೆ. "ಹದಿನೈದು ಕಲೆಗಳು, ಎಲ್ಲಾ ಇಂದ್ರಿಯಗಳು, ಕರ್ಮಗಳು,ವಿಜ್ಞಾನಮಯವಾದ ಆತ್ಮನು,ಇವೆಲ್ಲವೂ ಪರಮಾತ್ಮನಲ್ಲಿ ಏಕೀಭವಿಸುತ್ತವೆ." "ಈ ಸಂಪ್ರಸಾದನೆನಿಸಿದ ಮುಕ್ತಜೀವನು ದೇಹದಿಂದ ಹೊರಟು ಪರಂಜ್ಯೋತಿಯನ್ನು ಹೊಂದಿ ತನ್ನ ವಾಸ್ತವಸ್ವರೂಪವನ್ನು ಹೊಂದುತ್ತಾನೆ." ಹೀಗೆ ನೂರಾರು ಶ್ರುತಿಗಳಲ್ಲಿ ಜೀವನು ಸ್ವಾಭಾವಿಕವಾದ ಜೀವಭಾವವನ್ನು ಕಳೆದುಕೊಂಡು ಶಿವಭಾವವನ್ನು ಹೊಂದುವನೆಂದು ಹೇಳಿದೆ.ಹೀಗೆ ವಿದೇಹಕೈವಲ್ಯವಾಗುವವರೆಗೂ ಶಿವಯೋಗ ಶಿವಧ್ಯಾನ ಶಿವಜ್ಞಾನಗಳಲ್ಲಿಯೇ ನೆಲಸಿರುವ ಜೀವನು ಶಿವಧ್ಯಾನಸಮಾಧಿಗಳ

ಕಾಲದಲ್ಲಿ ಸೂರ್ಯಪ್ರಕಾಶದ ನಡುವೆ ಉರಿಯುವ ಕರ್ಪೂರದೀಪದಂತೆ ಶುದ್ಧನಾಗಿರುವುದರಿಂದ ಅವನನ್ನು ಅಣುವೆಂದು ಹೇಳಿದ್ದರಲ್ಲಿ ತಪ್ಪೇನಿಲ್ಲ. ಪ್ರಾರಬ್ಧಕರ್ಮ ಕೊನೆಯಾಗುವವರೆಗೂ ಸುಪ್ತಪುರುಷನಂತೆ ಜ್ಞಾನದಲ್ಲಿಯೇ ನೆಲಸಿರುವ ಯೋಗಿಯು ಸಮಾಧಿ ಮುಗಿದಮೇಲೆ ಮತ್ತೆ ಬಹಿರ್ಮುಖನಾಗುವುದಾಗಿ ಕಂಡುಬಂದಿದೆ. ಜೀವನನ್ನು ವಿಭುವೆಂದು ಒಪ್ಪಿದರೆ ಅಣುತ್ವ ವಿಭುತ್ವವೆರಡಕ್ಕೂ ಐಕ್ಯವು ಸಂಭವಿಸದಿರುವುದರಿಂದ ನದೀಸಮುದ್ರಗಳಂತೆ ಜೀವಬ್ರಹ್ಮರಿಗೆ ಪ್ರಾಪ್ಯಪ್ರಾಪಕಸಂಬಂಧವನ್ನು ತಿಳಿಸಿರುವ ಶ್ರುತಿಗಳಲ್ಲಿ ವಿರೋಧವುಂಟಾಗುತ್ತದೆ. ಇದೂ ಅಲ್ಲದೆ, ಈಶ್ವರನು ಅಂತರ್ಯಾಮಿ ಎನಿಸಲಿಕ್ಕೂ ಆಗದೇಹೋಗುತ್ತದೆ. ಜೀವನನ್ನು ವಿಭುವೆಂದು ಕರೆದಿರುವುದಕ್ಕೂ ಅಂತಃಕರಣವೇ ಉಪಾಧಿ ಎನಿಸಿದೆ ಎಂದು ಹೇಳುವುದೂ ಯುಕ್ತವಲ್ಲ. "ಇಬ್ಬರು ಆತ್ಮರೂ ನಿತ್ಯರು" ಎಂಬಲ್ಲಿ ಭೂತಸೃಷ್ಟಿಯ ಮೊದಲಿಗೇ ಜೀವರಿದ್ದರೆಂದು ಹೇಳಿದೆ. ಆದ್ದರಿಂದ ಜೀವ ಅಣುವೆಂಬುದು ಸ್ವಾಭಾವಿಕವೆನಿಸಿದೆ.

ಯಚ್ಚೋಕ್ತಂ ಸುಷುಪ್ತ್ಯಾದಿಷು ಜ್ಞಾನಾಭಾವಾತ್ ಜ್ಞಾನಸ್ಯ ನ ಸ್ವರೂಪಾನುಬಂಧಿಧರ್ಮತ್ವಮಿತಿ ತತ್ರಾಹ. **ಪುಂಸ್ತ್ವಾದಿವತ್ತ್ವಸ್ಯ ಸತೋಽಭಿವ್ಯಕ್ತಿಯೋಗಾತ್ ॥ ೨೯ ॥** ತುಶಬ್ದಾಶ್ಶಾತ್ರ ಶಂಕಾನಿವೃತ್ತ್ಯರ್ಥಃ. ಸ್ವಜ್ಞಾನಸ್ಯ ಸುಷುಪ್ತ್ಯಾದಿಷ್ವಪಿ ವಿದ್ಯಮಾನಸ್ಯ ಜಾಗರ್ಯಾದಿಷ್ವಭಿವ್ಯಕ್ತೇಸ್ಸಂಭವಾತ್ ಸ್ವರೂಪಾನುಬಂಧಿಧರ್ಮತ್ವೋಪಪತ್ತಿಃ ಪುಂಸ್ತ್ವಾದಿವತ್ ಯಥಾ ಪುಂಸ್ತ್ವಾದ್ಯಸಾಧಾರಣಸ್ಯ ಧಾತೋರ್ಬಾಲ್ಯಾವಸ್ಥಾಯಾಂ ಸತೋಽಪ್ಯನಭಿವ್ಯಕ್ತಸ್ಯ ಯುವತ್ವೇಽಭಿವ್ಯಕ್ತೌ ಪುಂಸಸ್ತದ್ವತ್ತ್ವಂ ನ ಕಾದಾಚಿತ್ಕಂ ಭವತಿ. ಸಪ್ತಧಾತುಮಯತ್ವಂ ಹಿ ಶರೀರಸ್ಯ ಸ್ವರೂಪಾನುಬಂಧಿ. "ತತ್ಸಪ್ತಧಾತು ತ್ರಿಮಲಂ ದ್ವಿಯೋನಿ ಚತುರ್ವಿಧಾಹಾರಮಯಂ ಶರೀರಂ" ಇತಿ ಶರೀರಸ್ವರೂಪವ್ಯಪದೇಶಾತ್. ಸುಷುಪ್ತ್ಯಾದಿಷ್ವಪ್ಯಯಮರ್ಥಃ ಪ್ರಕಾಶತ ಇತಿ ಪ್ರಾಗೇವೋಕ್ತಂ. ತಸ್ಯ ವಿದ್ಯಮಾನಸ್ಯ ಜ್ಞಾನಸ್ಯ ವಿಷಯಗೋಚರತ್ವಂ ಜಾಗರ್ಯಾದಾವುಪಲಭ್ಯತೇ. ಏತೇ ಚಾತ್ಮನೋ ಜ್ಞಾತೃತ್ವಾದಯೋ ಧರ್ಮಾಃ ಪ್ರಾಗೇವೋಪಪಾದಿತಾಃ. ಅತಃ ಪ್ರಾಜ್ಞಾತ್ಪೂರ್ವಮೇವ ಜೀವಾತ್ಮಸ್ವರೂಪಂ. ಸ ಚಾಯಮಾತ್ಮಾಣುಪರಿಮಾಣಃ. "ನ ಪ್ರೇತ್ಯಸಂಜ್ಞಾಸ್ತೀ" ತ್ಯತ್ರಾಪಿ ನ ಮುಕ್ತಸ್ಯ ಜ್ಞಾನಾಭಾವ ಉಚ್ಯತೇ. ಅಪಿತು "ಏತೇಭ್ಯೋ ಭೂತೇಭ್ಯಸ್ಸಮುತ್ಥಾಯ ತಾನ್ಯೇವಾನುವಿಶ್ಯತಿ" ಇತಿ ಸಂಸಾರದಶಾಯಾಂ ಯದ್ಭೂತಾನುವಿಧಾಯಿತ್ವ ಪ್ರಯುಕ್ತಂ ಜನ್ಮನಾಶಾದಿದರ್ಶನಂ ತನ್ಮುಕ್ತಸ್ಯ ನ ವಿದ್ಯತ ಇತಿ, "ಯಥಾನದ್ಯಃ"ಇತ್ಯಾದಿಶ್ರುತಿಷು ಜಲೇ ಜಲವನ್ಮುಕ್ತದಶಾಯಾಂ ಶುದ್ಧಜೀವಸ್ಯ ತತ್ಪ್ರಾಪ್ತಿತ್ವದರ್ಶನಾತ್. "ನ ಪಶ್ಯೋ ಮೃತ್ಯುಂ ಪಶ್ಯತಿ ನ ರೋಗಂ ನೋಽತ ದುಃಖತಾಂ। ಸರ್ವಂ ರಹಃ ಪಶ್ಯಃ ಪಶ್ಯತಿ ಸರ್ವಮಾ

ಪ್ನೋತಿಸರ್ವಶಃ । ನೋಪಜನಂ ಸ್ಮರನ್ನಿದಂ ಶರೀರಂ ಮನಸ್ಯೈತಾನ್ಕಾಮಾನ್ ಪಶ್ಯನ್ ರಮತೇ॥"ಇತ್ಯಾದಿಶ್ರುತ್ಯೈಕಾರ್ಥ್ಯಾಚ್ಚ. ತಸ್ಮಾಜ್ಜೀವಸ್ಯಾಣುತ್ವಂ ಜ್ಞಾತೃಸ್ವರೂಪತ್ವಂ ಚಾವಿರೋಧಂ.

ಸುಷುಪ್ತಿಯಲ್ಲಿ ಜ್ಞಾನವಿಲ್ಲದ್ದರಿಂದ ಜ್ಞಾನವು ಸ್ವರೂಪವನ್ನು ಅನುಸರಿಸಿಕೊಂಡು ಬರುವ ಧರ್ಮವಲ್ಲವೆಂದು ಆಶಂಕಿಸಿ ನಿರಾಕರಿಸುತ್ತಾನೆ. ಸುಷುಪ್ತಿಯಲ್ಲೂ ಆತ್ಮನಿಗೆ ಜ್ಞಾನವು ಇದ್ದುದರಿಂದ ಜಾಗ್ರದವಸ್ಥೆಯಲ್ಲಿ ಹೊರಹೊಮ್ಮಲು ಸಾಧ್ಯವಾಗುತ್ತದೆ. ಪುಂಸ್ತ್ವವೆಂಬ ಅಸಾಧಾರಣಧರ್ಮವನ್ನು ಹೊಂದಿದವನಿಗೆ ಬಾಲ್ಯದಲ್ಲಿ ಆಸ್ಥಿತಿ ಹೊರಪಡದಿದ್ದರೂ ಯುವಕನಾದಾಗ ಅದರ ವಿಕಾಸವಾಗುವಂತೆ ಜ್ಞಾನವೆಂಬುದು ಆತ್ಮನ ಸ್ವರೂಪವೆನಿಸಿ ಅವನಲ್ಲಿ ಅದು ಕೆಲವುವೇಳೆ ಮಾತ್ರವೇ ಇರದೆ ಯಾವಾಗಲೂ ಇರುತ್ತದೆ,ಆದರೆ ಸಮಯಬಂದಾಗ ವಿಕಾಸವಾಗುತ್ತದೆ. "ಶರೀರದಲ್ಲಿ ಏಳುಬಗೆಯ ಧಾತುಗಳಿವೆ"ಎಂಬುದು ಅದರ ಸ್ವರೂಪಕ್ಕೇ ಅನ್ವಯಿಸುತ್ತದೆ." ಶರೀರದಲ್ಲಿ ಏಳು ಧಾತುಗಳೂ, ಮೂರು ಮಲಗಳೂ, ಎರಡು ಯೋನಿಗಳೂ, ನಾಲ್ಕು ಬಗೆಯ ಆಹಾರವಿಕಾರಗಳೂ ಇವೆ" ಎಂದು ಶರೀರದ ಸ್ವರೂಪವನ್ನು ತಿಳಿಸಲಾಗಿದೆ. ಸುಷುಪ್ತಿಯಲ್ಲೂ ಇದೇ ಸ್ಥಿತಿಯೇ ಇರುತ್ತದೆ ಎಂದು ಹಿಂದೆ ಹೇಳಿದೆ. ಆತ್ಮನೊಳಗೆ ಇರುವ ಜ್ಞಾನವು ಜಾಗ್ರದವಸ್ಥೆಯಲ್ಲಿಯೇ ವಿಷಯಗಳನ್ನು ಗ್ರಹಿಸುವ ಮೂಲಕ ಹೊರಬೀಳುವುದು. ಜ್ಞಾತೃತ್ವವೇ ಮೊದಲಾದ ಆತ್ಮಧರ್ಮಗಳನ್ನು ಹಿಂದೆಯೇ ತಿಳಿಸಿಯಾಗಿದೆ. ಆದ್ದರಿಂದ ಪ್ರಜ್ಞೆಹುಟ್ಟುವುದಕ್ಕೂ ಹಿಂದೆಯೇ ಜೀವಾತ್ಮನಿದ್ದನೆಂಬ ಬಗ್ಗೆ ಸಂಶಯವಿಲ್ಲ. ಈ ಆತ್ಮನು ಅಣುಪರಿಮಾಣನಿರುವನು. ಸಂಸಾರದಶೆಯಲ್ಲಿ ಪಂಚಭೂತಗಳ ಸಂಪರ್ಕದಿಂದಲೇ ಜೀವನಿಗೆ ಜ್ಞಾನವಿಕಾಸವನ್ನು ಶ್ರುತಿಯು ಹೇಳಿದೆ. ಆದ್ದರಿಂದ "ಸತ್ತಮೇಲೆ ಎಚ್ಚರವಿರುವುದಿಲ್ಲ" ಎಂಬಲ್ಲಿ ಮುಕ್ತನಿಗೆ ಜ್ಞಾನವಿಲ್ಲವೆಂದು ಹೇಳಿಲ್ಲ; ಆದರೆ "ಈ ಭೂತಗಳೊಡನೆ ಹೊರಟು ಅವುಗಳೊಡನೆಯೇ ನಾಶಹೊಂದುತ್ತಾನೆ" ಎಂಬಲ್ಲಿ ಹೇಳಿದಂತೆ ಸಂಸಾರದಶೆಯಲ್ಲಿ ಭೂತಗಳನ್ನು ಅನುಸರಿಸಿಕೊಂಡು ಬರುವ ಜನನ ಮರಣಗಳು ಮುಕ್ತನಿಗೆ ಸಂಭವಿಸುವುದಿಲ್ಲವೆಂದು ಮಾತ್ರವೇ ಶ್ರುತಿಯಿಂದ ತಿಳಿದುಬರುತ್ತದೆ. ನೀರಿನಲ್ಲಿ ನೀರು ಬೆರೆತಂತೆ ಮುಕ್ತದಶೆಯಲ್ಲಿ ಶುದ್ಧಜೀವನು ಪರಮಾತ್ಮನಲ್ಲಿ ಬೆರೆಯುವನೆಂದು ಶ್ರುತಿಯುಲ್ಲಿ ಹೇಳಿದೆ. "ಮುಕ್ತನು ಮೃತ್ಯುವನ್ನೂ ರೋಗರುಜಿನಗಳನ್ನೂ ಕಾಣುವುದಿಲ್ಲ. ಅವನು ಎಲ್ಲವನ್ನೂ ನೋಡುತ್ತಾನೆ, ಎಲ್ಲವನ್ನೂ ಹೊಂದುತ್ತಾನೆ. ಈ ಅನಿತ್ಯ ಶರೀರವನ್ನು ಸ್ಮರಿಸದೆಯೇ ಮನಸ್ಸಿನಿಂದಲೇ ಎಲ್ಲಾ ಭೋಗವನ್ನೂ ಅನುಭವಿಸುತ್ತಾನೆ" ಹೀಗೆ ಶ್ರುತಿಗಳು ಮುಕ್ತನನ್ನೂ ಜ್ಞಾತೃವೆಂದೇ ಹೇಳುತ್ತವೆ. ಆದ್ದರಿಂದ ಜೀವನು ಅಣುವಾದರೂ ಜ್ಞಾತೃವಾಗುವುದರಲ್ಲಿ ವಿರೋಧವಿಲ್ಲ.

ಸಂಪ್ರತಿಜ್ಞಾನಾತ್ಮವಾದೇ ತಸ್ಯ ಸರ್ವಗತತ್ವೇ ದೂಷಣಮಾಹ. ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಂಗೋಽನ್ಯತರನಿಯಮೋ ವಾನ್ಯಥಾ

॥ ೩೦ ॥ ಅನ್ಯಥಾ ಸರ್ವಗತತ್ವಪಕ್ಷೇ ತಸ್ಯ ಜ್ಞಾನಮಾತ್ರತ್ವಪಕ್ಷೇ ಚ ನಿತ್ಯಮುಪಲಬ್ಧ್ಯನುಪಲಬ್ಧೀ ಸಹೈವ ಪ್ರಸಜ್ಯೇಯಾತಾಂ. ಅನ್ಯತರನಿಯಮೋ ವಾ ಉಪಲಬ್ಧಿರೇವಾನಿತ್ಯಾ ಸ್ಯಾತ್ ಅನುಪಲಬ್ಧಿರೇವ ವಾ. ಏತದುಕ್ತಂ ಭವತಿ. ಲೋಕೇ ತಾವದ್ವರ್ತಮಾನಯೋರಾತ್ಮೋಪಲಬ್ಧ್ಯನುಪಲಬ್ಧ್ಯೋರಯಂ ಜ್ಞಾನಾತ್ಮಾ ಸರ್ವಗತೋ ಹೇತುಃ ಸ್ಯಾತ್. ಉಪಲಬ್ಧೇರೇವ ವಾ ಅನುಪಲಬ್ಧೇರೇವ ವಾ ಉಭಯಹೇತುತ್ವೇ ಸರ್ವದಾ ಸರ್ವತ್ರಾನುಪಲಂಭೋ ನ ಸ್ಯಾತ್. ಅಥಾನುಪಲಬ್ಧೇರೇವ ಸರ್ವದಾ ಸರ್ವತ್ರೋಪಲಬ್ಧಿರ್ನ ಸ್ಯಾದಿತಿ. ಅಸ್ಮಾಕಂ ಶರೀರಸ್ಯಾಂತರೇವಾವಸ್ಥಿತತ್ವಾದಾತ್ಮನಸ್ತತ್ರೈವೋಪಲಬ್ಧಿರ್ನಾನ್ಯತ್ರೇತಿ ವ್ಯವಸ್ಥಾಸಿದ್ಧಿಃ. ಕರಣೈರ್ಯತ್ರೋಪಲಬ್ಧೇರಪಿ ಸರ್ವೇಷಾಮಾತ್ಮನಾಂ ಸರ್ವಗತತ್ವೇನ ಸರ್ವೈಃ ಕರಣೈಸ್ಸರ್ವದಾ ಸಂಯುಕ್ತತ್ವಾದದೃಷ್ಟಾದೇರಪಿ ಅನಿಯಾಮಾದುಕ್ತದೋಷಸ್ಸಮಾನಃ. ತಸ್ಮಾತ್ಪೂರ್ವೋಕ್ತಮೇವ ಯುಕ್ತಂ.

ಜ್ಞಾನಸ್ವರೂಪನೇ ಆತ್ಮನೆಂಬ ಪಕ್ಷದಲ್ಲಿ ಅವನನ್ನು ವಿಭುವೆಂದು ಒಪ್ಪಿದರೆ ದೋಷವನ್ನು ಹೇಳುತ್ತಾನೆ. ಆತ್ಮನು ವಿಭುವೂ ಜ್ಞಾನಸ್ವರೂಪನೂ ಆಗುವುದಾದರೆ ಸರ್ವಕಾಲಗಳಲ್ಲೂ ಜ್ಞಾನದ ಅನುಭವ ಮತ್ತು ಅನನುಭವ ಎರಡೂ ಬರಬೇಕಾಗುವುದು ಅಥವಾ ಎರಡರಲ್ಲಿ ಒಂದೇ ಸ್ಥಿರವಾಗಿ ಉಳಿಯಬೇಕಾಗುವುದು. ಇದರ ಅಭಿಪ್ರಾಯವಿಷ್ಟು. ಆತ್ಮನು ಜ್ಞಾನೋತ್ಪತ್ತಿಗೆ ಕಾರಣನೆಂಬ ಪಕ್ಷದಲ್ಲಿ ಅವನು ನಿತ್ಯ ಮತ್ತು ವಿಭುವಾಗಿರುವುದರಿಂದ ಎಲ್ಲಾ ಕಡೆಯಲ್ಲೂ ಎಲ್ಲಾ ಕಾಲಗಳಲ್ಲೂ ಜ್ಞಾನ ಹುಟ್ಟಲೇಬೇಕು. ಅವನು ಕಾರಣನಲ್ಲವೆಂಬ ಪಕ್ಷದಲ್ಲಿ ಯಾವಾಗಲೂ ಜ್ಞಾನ ಹುಟ್ಟದೆಹೋಗಬೇಕಾದೀತು. ಎರಡಕ್ಕೂ ಅವನು ಕಾರಣನಾದರೆ ಅವನಲ್ಲಿ ಎರಡನ್ನೂ ಒಟ್ಟಿಗೆ ಒಪ್ಪಬೇಕಾಗುವುದು. ನಮ್ಮ ಶರೀರದೊಳಗೆ ಅವನ ಅನುಭವವಾದರೂ ಹೊರಗೆ ಆಗುವುದಿಲ್ಲವೆಂಬ ವ್ಯವಸ್ಥೆಯೂ ಸಿದ್ಧಿಸದೆಹೋಗುವುದು. ಜ್ಞಾನವಿಕಾಸವು ಇಂದ್ರಿಯಾಧೀನವಾದರೂ ವಿಭುವಾದ ಆತ್ಮನಿಗೆ ಇಂದ್ರಿಯಸಂಬಂಧ ಯಾವಾಗಲೂ ಇದ್ದು ಅದೃಷ್ಟವೂ ಇವನ ಜೊತೆಯಲ್ಲಿಯೇ ಇರುವುದರಿಂದ ಹಿಂದೆ ಹೇಳಿದ ದೋಷಗಳಿಗೆ ಪರಿಹಾರದೊರೆಯುವುದಿಲ್ಲ. ಆದ್ದರಿಂದ ಆತ್ಮ ವಿಭುವಲ್ಲ.

“ ಅಯಮಾತ್ಮಾ ಬ್ರಹ್ಮ ” ಇತ್ಯಾದಿಶ್ರುತಿಷು ಕ್ಷೇತ್ರಜ್ಞಸ್ಯೈವ ಬ್ರಹ್ಮತ್ವೋಪದೇಶಾತ್ತಸ್ಯ ಕರ್ತೃತ್ವಾದಿಕಮನುಪಪನ್ನಂ, ತದುಪಾಧಿಭೂತಾಂತಃಕರಣಸ್ಯೈವ ಕರ್ತೃತ್ವಾದಿಕಮುಪಪನ್ನಮಿತ್ಯಾಶಂಕಾಯಾಂ ತಜ್ಜೀವಬ್ರಹ್ಮವಾದಕಾದ್ವೈತಮತನಿರಾಕರಣಾರ್ಥಮಾಹ. ಕರ್ತಾಧಿಕರಣಂ ॥ ೧೩ ॥ ಕರ್ತಾ ಶಾಸ್ತ್ರಾರ್ಥವತ್ತ್ವಾತ್ ॥ ೩೧ ॥ ಅಯಮಾತ್ಮಾ ಜ್ಞಾತಾ, ಸ ಚಾಣುಪರಿಮಾಣ ಇತ್ಯುಕ್ತಂ. ಇದಾನೀಂ ಕಿಂ ಸ ಏವ ಕರ್ತಾ ಉತ ಸ್ವಯಮಕರ್ತೈವ ಸನ್ ಅಚೇತನಾನಾಂ ಗುಣಾನಾಂ

ಕರ್ತೃತ್ವಮಾತ್ಮನ್ಯಧ್ಯಸ್ಯತೀತಿ ಚಿಂತ್ಯತೇ. ಕಿಮತ್ರ ಯುಕ್ತಂ. ಅಕರ್ತೈ ವಾತ್ಮೇತಿ, ಕುತಃ,ಆತ್ಮನೋ ಹ್ಯಕರ್ತೃತ್ವಂ ಗುಣಾನಾಮೇವ ಚ ಕರ್ತೃತ್ವಂ ಅಧ್ಯಾತ್ಮಶಾಸ್ತ್ರೇಷು ಶ್ರೂಯತೇ. ತಥಾಹಿ ಕಠವಲ್ಲೀಷು ಜೀವಸ್ಯ "ನ ಜಾಯತೇ ಮ್ರಿಯತೇವಾ" ಇತ್ಯಾದಿನಾ ಜನ್ಮಮರಣಾದಿಕಂ ಸರ್ವಂ ಪ್ರಕೃತಿಧರ್ಮಂ ಪ್ರತಿಷಿಧ್ಯ ಹನನಾದಿಷು ಕ್ರಿಯಾಸ್ವಪಿ ಕರ್ತೃತ್ವಮಪಿ ಪ್ರತಿಷಿಧ್ಯತೇ. "ಹಂತಾ ಚೇನ್ಮನ್ಯತೇ ಹಂತುಂ ಹತಶ್ಚೇನ್ಮನ್ಯತೇ ಹತಂ। ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ॥" ಇತಿ. ಹಂತಾರಮಾತ್ಮಾನಂ ಅಜಾನತಾತ್ಮಾನಮಿತ್ಯರ್ಥಃ. ತಥಾಚ ಭಗವತಾ ಸ್ವಯಮೇವ ಜೀವಸ್ಯಾಕರ್ತೃತ್ವಂ ಸ್ವರೂಪಂ, ಕರ್ತಾಭಿಮಾನಸ್ತು ವ್ಯಾಮೋಹ ಇತ್ಯುಚ್ಯತೇ. "ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ । ಅಹಂಕಾರವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ॥ ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ। ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ॥ ಪುರುಷಸ್ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥" ಇತಿ ಚಾಂತಃಪುರುಷಸ್ಯ ಭೋಕ್ತೃತ್ವಮೇವ, ಪ್ರಕೃತೇರೇವ ತು ಕರ್ತೃತ್ವಂ. ಏವಂ ಪ್ರಾಪ್ತೇ ಪ್ರಚಕ್ಷ್ಮಹೇ,ಕರ್ತಾ ಶಾಸ್ತ್ರಾರ್ಥವತ್ತ್ವಾತ್ ಇತಿ.ಆತ್ಮೈವ ಕರ್ತಾ, ನ ಗುಣಾಃ, ಕಸ್ಮಾತ್ ಶಾಸ್ತ್ರಾರ್ಥವತ್ತ್ವಾತ್. ಶಾಸ್ತ್ರಾಣಿ ಹಿ "ಯಜೇತ ಸ್ವರ್ಗಕಾಮಃ, ಮುಮುಕ್ಷುರ್ಬ್ರಹ್ಮೋಪಾಸೀತ" ಇತ್ಯೇವಮಾದೀನಿ ಸ್ವರ್ಗಮೋಕ್ಷಾದಿಫಲಸ್ಯ ಭೋಕ್ತಾರಮೇವ ಕರ್ತೃತ್ವೇ ನಿಯುಂಜತೇ. ನಹ್ಯಚೇತನಸ್ಯ ಕರ್ತೃತ್ವೇಽನ್ಯೋ ನಿಯುಜ್ಯತೇ. ಶಾಸನಾಚ್ಚ ಶಾಸ್ತ್ರಂ. ಶಾಸನಂ ಚ ಪ್ರವರ್ತನಂ. ಶಾಸ್ತ್ರಸ್ಯ ಚ ಪ್ರವರ್ತಕತ್ವಂ ಬೋಧಜನನದ್ವಾರೇಣ. ಅಚೇತನಂ ಚ ಪ್ರಧಾನಂ ನ ಬೋಧಯಿತುಂ ಶಕ್ಯಂ. ಅತಶ್ಶಾಸ್ತ್ರಾಣಾಮಚೇತನಾರ್ಥತ್ವಂ ಭೋಕ್ತುಶ್ಚೇತನಸ್ಯೈವ ಕರ್ತೃತ್ವೇ ಸಂಭವೇತ್. ತದುಕ್ತಂ ಶಾಸ್ತ್ರಫಲಂ ಪ್ರಯೋಕ್ತರೀತಿ. ಯದುಕ್ತಂ, "ಹಂತಾ ಚೇನ್ಮನ್ಯತೇ" ಇತ್ಯಾದಿನಾ ಹನನಕ್ರಿಯಾಯಾಮಕರ್ತೃತ್ವಮಾತ್ಮನಃ ಶ್ರೂಯತ ಇತಿ ತದಾತ್ಮನೋ ನಿತ್ಯತ್ವೇನ ಹಂತವ್ಯತ್ವಾಭಾವಾದುಚ್ಯತೇ. ಯಚ್ಚ "ಪ್ರಕೃತೇಃ ಕ್ರಿಯಮಾಣಾನಿ" ಇತ್ಯಾದಿನಾ ಗುಣಾನಾಮೇವ ಕರ್ತೃತ್ವಂ ಸ್ಮರ್ಯತ ಇತಿ. ತತ್ಸಾಂಸಾರಿಕಪ್ರವೃತ್ತಿಷ್ವಸ್ಯ ಕರ್ತೃತಾ ಸತ್ತ್ವರಜಸ್ತಮೋಗುಣಸಂಸರ್ಗಕೃತಾ, ನ ಸ್ವರೂಪಪ್ರಯುಕ್ತೇತಿ. ಪ್ರಾಪ್ತಾಪ್ರಾಪ್ತವಿವೇಕೇನ ಗುಣಾನಾಮೇವ ಕರ್ತೃತಾ ಇತ್ಯುಚ್ಯತೇ. ತಥಾಚ ತತ್ರೈವೋಚ್ಯತೇ, "ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು" ಇತಿ, ತಥಾ ತತ್ರೈವಾತ್ಮನಶ್ಚ ಕರ್ತೃತ್ವಮಭ್ಯುಪೇತ್ಯೋ

ಚ್ಯತೇ. "ತತ್ರೈವಂ ಸತಿ ಕರ್ತಾರಂ ಆತ್ಮಾನಂ ಕೇವಲಂ ತು ಯಃ। ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ॥" ಇತಿ. "ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಂ। ವಿವಿಧಾಶ್ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಂ॥" ಇತ್ಯಧಿಷ್ಠಾನಾದಿದೈವಪರ್ಯಂತಂ ಸಾಪೇಕ್ಷೇ ಸತ್ಯಾತ್ಮನಃ ಕರ್ತೃತ್ವೇ ಯ ಆತ್ಮಾನಮೇವ ಕೇವಲಂ ಕರ್ತಾರಂ ಮನ್ಯತೇ ಸಃ ನ ಪಶ್ಯತ್ಯತೋ ಮೂಢ ಇತ್ಯರ್ಥಃ.

"ಈ ಆತ್ಮನೇ ಬ್ರಹ್ಮ" ಎಂಬಲ್ಲಿ ಜೀವನನ್ನೇ ಬ್ರಹ್ಮವೆಂದು ಹೇಳಿದ್ದರಿಂದ ಅವನೇ ಕರ್ತನೆಂಬುದು ಹೊಂದಿಕೆಯಾಗುವುದಿಲ್ಲ. ಆದ್ದರಿಂದ ಅವನಿಗೆ ಉಪಾಧಿ ಎನಿಸಿದ ಅಂತಃಕರಣವನ್ನು ಕರ್ತೃವೆಂದು ಹೇಳುವುದೇ ಯುಕ್ತವೆಂದಾಶಂಕಿಸಿ ಜೀವನೇ ಬ್ರಹ್ಮನೆಂದು ಹೇಳುವ ಅದ್ವೈತಮತವನ್ನು ನಿರಾಕರಿಸುತ್ತಾನೆ. ಈ ಆತ್ಮನನ್ನು ಜ್ಞಾತೃವೆಂದೂ, ಅಣುವೆಂದೂ ಹಿಂದೆ ಹೇಳಿದೆ. ಆದರೆ ಅವನು ಕರ್ತನೇ ಅಲ್ಲವೇ? ಹಾಗೆ ಕರ್ತನಲ್ಲದಿದ್ದರೂ ಅಚೇತನಗುಣಗಳ ಕರ್ತೃತ್ವವನ್ನು ಅವನು ತನ್ನಲ್ಲಿ ಆರೋಪಿಸಿಕೊಳ್ಳುವನೇ? ಎಂಬುದನ್ನು ಈಗ ವಿಚಾರಿಸಲಾಗಿದೆ. ಇಲ್ಲಿ ಯಾವುದು ಯುಕ್ತವಾದುದು? ಗುಣಗಳೇ ಕರ್ತೃವೆಂದು ಶಾಸ್ತ್ರದಲ್ಲಿ ಹೇಳಿರುವುದರಿಂದ ಆತ್ಮನು ಕರ್ತೃವಾಗಲಾರನು. ಆದರೆ ಕಠಶ್ರುತಿಯಲ್ಲಿ ಜೀವನಿಗೆ ಜನನಮರಣಗಳೇ ಮೊದಲಾದ ಪ್ರಕೃತಿಧರ್ಮಗಳನ್ನು ನಿಷೇಧಿಸಿ ಹನನಾದಿಕ್ರಿಯೆಗಳಿಗೂ ಅವನು ಕರ್ತನಲ್ಲವೆಂದು ಹೇಳಿದೆ. "ಕೊಂದವನು ಕೊಂದೆನೆಂದೂ, ಕೊಲೆಯಾದವನು ತನ್ನ ಕೊಲೆಯಾಯಿತೆಂದೂ ತಿಳಿದರೆ ಇಬ್ಬರ ತಿಳಿವೂ ಯುಕ್ತವಲ್ಲ; ಯಾಕೆಂದರೆ ಇವನು ಕೊಲ್ಲುವವನೂ ಅಲ್ಲ ಮತ್ತು ಕೊಲೆಯಾಗುವವನೂ ಅಲ್ಲ." ಇದರಂತೆ ತನ್ನನ್ನು ಕೊಲೆಪಾತಕನೆಂದು ತಿಳಿದವನೂ ಅಜ್ಞಾನಿ ಎನಿಸುವನು. ಜೀವನು ಕರ್ತನಲ್ಲವೆಂದೂ, ಹಾಗೆ ಕರ್ತನೆಂದು ಭಾವಿಸಿದರೆ ಅದು ಅವನ ವ್ಯಾಮೋಹವೆಂದೂ ಕೃಷ್ಣನೇ ಗೀತೆಯಲ್ಲಿ ಸ್ಪಷ್ಟವಾಗಿ ತಿಳಿಸಿದ್ದಾನೆ. "ಪ್ರಕೃತಿಯ ಗುಣಗಳಿಂದಲೇ ಎಲ್ಲಾ ಕೆಲಸಗಳೂ ನಡೆಯುತ್ತಿರುವಾಗ ಅಹಂಕಾರದಿಂದ ಭ್ರಾಂತನಾದವನು ತನ್ನನ್ನು ಕರ್ತನೆಂದು ತಿಳಿಯುತ್ತಾನೆ. ಗುಣಗಳಿಗಿಂತ ಬೇರೆ ಕರ್ತನನ್ನು ಯಾವನು ಕಾಣುವುದಿಲ್ಲವೋ ಅವನು ಜ್ಞಾನಿ ಎನಿಸುವನು. ಪ್ರಕೃತಿಯೇ ಕಾರ್ಯಕಾರಣಗಳಿಗೆ ಕರ್ತೃವೆನಿಸುವುದು; ಪುರುಷನು ಸುಖದುಃಖಗಳ ಭೋಗಕ್ಕೆ ಕಾರಣನೆನಿಸುವನು." ಹೀಗೆ ದೇಹದೊಳಗಿನ ಜೀವನು ಭೋಕ್ತೃವೆನಿಸಿ ಪ್ರಕೃತಿಯೇ ಕರ್ತೃವೆನಿಸಿದೆ ಎಂಬ ಆಕ್ಷೇಪ ಬಂದರೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಆತ್ಮನೇ ಕರ್ತನು; ಆದರೆ ಗುಣಗಳು ಕರ್ತೃವಾಗಲಾರವು. ಶಾಸ್ತ್ರಧರ್ಮವನ್ನು ಆತ್ಮನೇ ತಿಳಿಯುವನಾದ್ದರಿಂದ ಕರ್ತನೆನಿಸುವನು. "ಸ್ವರ್ಗಾಪೇಕ್ಷಿಯು ಯಾಗ ಮಾಡಬೇಕು" "ಮುಮುಕ್ಷುವು ಬ್ರಹ್ಮವನ್ನು ಉಪಾಸನಮಾಡಬೇಕು" ಇವೇ ಮೊದಲಾದ ಶ್ರುತಿಗಳು ಸ್ವರ್ಗ ಮೋಕ್ಷ ಮೊದಲಾದ ಫಲಗಳ ಭೋಕ್ತೃವನ್ನೇ ಕರ್ತೃವೆಂದು ನೇಮಿಸಿವೆ. ಅಚೇ

ತನವಾದುದು ಕರ್ತೃವಾದರೆ ಬೇರೊಬ್ಬನನ್ನು ಭೋಕ್ತೃವೆಂದು ಏರ್ಪಡಿಸಲು ಸಾಧ್ಯವಿಲ್ಲ. ಶಾಸನದಿಂದಲೇ ಶಾಸ್ತ್ರವೆನಿಸಿದೆ. ಶಾಸನವೆಂದರೆ ಒಬ್ಬನನ್ನು ಒಂದು ಕಾರ್ಯದಲ್ಲಿ ಪ್ರವರ್ತಿಸುವಿಕೆ. ಶಾಸ್ತ್ರವು ಬೋಧಿಸುವ ಮೂಲಕ ಒಬ್ಬನಲ್ಲಿ ಪ್ರವೃತ್ತಿಯನ್ನು ಹುಟ್ಟಿಸುತ್ತದೆ. ಅಚೇತನವಾದ ಪ್ರಧಾನವು ಯಾರಿಗೂ ಏನನ್ನೂ ಬೋಧಿಸಲಾರದು. ಆದರೆ ಭೋಕ್ತೃಚೇತನನಿಗೆ ಕರ್ತೃತ್ವವನ್ನು ಒಪ್ಪಿದರಯೇ ಶಾಸ್ತ್ರ ಅಚೇತನವಾಗಿದ್ದರೂ ಒಬ್ಬನಿಗೆ ಪ್ರವೃತ್ತಿಯನ್ನು ಹುಟ್ಟಿಸಬಲ್ಲದು. "ಶಾಸ್ತ್ರದ ಫಲ ಅದನ್ನು ಪ್ರಯೋಗಿಸುವವನಿಗೇ ಸಂಬಂಧಿಸಿದೆ." "ಕೊಂದವನು ತನ್ನನ್ನು ಕೊಲೆಗೆ ಕರ್ತನಲ್ಲವೆಂದು ತಿಳಿಯಬೇಕು" ಹೀಗೆ ಶ್ರುತಿಯಲ್ಲಿ ಹೇಳಿದ್ದು ಯುಕ್ತವೇ ಸರಿ; ಯಾಕೆಂದರೆ ಆತ್ಮ ನಿತ್ಯನಾದುದರಿಂದ ಅವನನ್ನು ಕೊಲ್ಲಲಾಗುವುದಿಲ್ಲವೆಂದು ಅಲ್ಲಿ ಹೇಳಿದೆ. ಪ್ರಕೃತಿಯ ಗುಣಗಳನ್ನೇ ಕರ್ತೃವೆಂದು ಹೇಳಿದ್ದರಿಂದ ಸಾಂಸಾರಿಕಪ್ರವೃತ್ತಿಗಳಲ್ಲಿ ಆತ್ಮನು ಗುಣಸಂಪರ್ಕದಿಂದ ಕರ್ತನಾಗುವುದಾದರೂ ಸ್ವರೂಪದಿಂದ ಕರ್ತನಾಗಲಾರನು. ಅನ್ವಯವ್ಯತಿರೇಕಗಳಿಂದ ಗುಣಗಳೇ ಕರ್ತೃವೆಂಬುದು ಸಿದ್ಧಿಸುತ್ತದೆ. "ಇವನು ಒಳ್ಳೆಯ ಅಥವಾ ಕೆಟ್ಟ ಜಾತಿಗಳಲ್ಲಿ ಹುಟ್ಟಲಿಕ್ಕೆ ಗುಣಸಂಪರ್ಕವೇ ಕಾರಣವಾಗಿದೆ." ಎಂದು ಗೀತೆಯೇ ಸ್ಪಷ್ಟವಾಗಿ ತಿಳಿಸಿದೆ. ಅಲ್ಲಿಯೇ ಆತ್ಮನು ಕರ್ತನೆಂಬುದನ್ನು ಅಂಗೀಕರಿಸಿ ತಿಳಿಸಲಾಗಿದೆ. "ವಸ್ತುಸ್ಥಿತಿ ಹೀಗಿರುವಾಗ ಯಾವನು ಅವಿವೇಕದಿಂದ ತನ್ನನ್ನುಮಾತ್ರವೇ ಕರ್ತನೆಂದು ತಿಳಿಯುವನೋ ಅವನು ಅಜ್ಞಾನಿಎನಿಸುವನು. ಒಂದು ಕಾರ್ಯವಾಗಲಿಕ್ಕೂ ಆಶ್ರಯವಾದ ಶರೀರ, ಕರ್ತೃವಾದ ಜೀವ, ಅನೇಕಬಗೆಯ ಸಾಧನಗಳು, ಬೇರೆಬೇರೆ ಪ್ರಯತ್ನಗಳು, ಐದನೆಯದಾಗಿ ಅದೃಷ್ಟ ಇಷ್ಟೂ ಬೇಕಾಗುತ್ತವೆ. ಹೀಗೆ ಆತ್ಮನು ಕರ್ತನಾಗಬೇಕಾದರೆ ಇಷ್ಟೆಲ್ಲಾ ಸಾಧನಗಳ ಅಪೇಕ್ಷೆಯಿರುವುದರಿಂದ ಯಾವನು ತನ್ನನ್ನೊಬ್ಬನನ್ನು ಕರ್ತನೆಂದು ತಿಳಿಯುತ್ತಾನೋ ಅವನು ಮೂಢನೆನಿಸುವನು." ಒಬ್ಬನಲ್ಲಿ ಹೀಗೆ ಸಾಧನಗಳ ಅಪೇಕ್ಷೆಯಿದ್ದರೂ ಆತ್ಮನೇ ಕರ್ತನನಿಸಿದ್ದಾನೆ.

**ಅತ್ರ ಹೇತ್ವಂತರಮಾಹ. ಉಪದಾನಾದ್ವಿಹಾರೋಪದೇಶಾಚ್ಚ. ॥ ೩೨ ॥ "ಸ ಯಥಾ ಮಹಾರಾಜಃ" ಇತಿ ಪ್ರಕೃತ್ಯ "ಏವಮೇವೈಷ ಏತಾನ್ ಪ್ರಾಣಾನ್ ಗೃಹೀತ್ವಾ ಸ್ವಶರೀರೇ ಯಥಾಕಾಮಂ ಪರಿವರ್ತತ" ಇತಿ. ಪ್ರಾಣಾನಾಂ ಉಪಾದಾನೇ ವಿಹಾರೇ ಚ ಕರ್ತೃತ್ವಮುಪದಿಶ್ಯತೇ.**

ಈ ಬಗ್ಗೆ ಬೇರೊಂದು ಕಾರಣವೂ ಇದೆ. "ಅವನು ಮಹಾರಾಜನಿದ್ದಾನೆ" ಎಂದಾರಂಭಿಸಿ "ಇವನು ಈ ಪ್ರಾಣಗಳನ್ನು ಹಿಡಿದುಕೊಂಡು ತನ್ನ ಶರೀರದಲ್ಲಿ ಇಚ್ಛೆಬಂದಂತೆ ಓಡಾಡುತ್ತಾನೆ" ಎಂಬಲ್ಲಿ ಪ್ರಾಣಗಳನ್ನು ಹಿಡಿಯಲಿಕ್ಕೂ ಅವುಗಳೊಡನೆ ವಿಹರಿಸಲಿಕ್ಕೂ ಆತ್ಮನಿಗೆ ಕರ್ತೃತ್ವವನ್ನು ತಿಳಿಸಲಾಗಿದೆ.

**ಯದುಕ್ತಂ ಬುದ್ಧಿಪ್ರಕೃತ್ಯೋರೇವ ಕರ್ತೃತ್ವಮಿತಿ ತತ್ರ ಬುದ್ಧೇಃ ಕರ್ತೃತ್ವಂ ನಿರಾಕರೋತಿ. ವ್ಯಪದೇಶಾಚ್ಚ ಕ್ರಿಯಾಯಾಂ ನ ಚೇನ್ನಿರ್ದೇ.**

ಶವಿಪರ್ಯಯಃ ॥೩೩॥ "ವಿಜ್ಞಾನಂ ಯಜ್ಞಂ ತನುತೇ" "ಕರ್ಮಾಣಿ ತನುತೇಽಪಿ ಚ" ಇತಿ ಲೌಕಿಕವೈದಿಕಕ್ರಿಯಾಸು ಕರ್ತೃತ್ವವ್ಯಪದೇಶಾಚ್ಚ ಕರ್ತಾ ವಿಜ್ಞಾನಶಬ್ದೇನ ವ್ಯಪದಿಶ್ಯತೇ. ಅತ್ರ ನಾತ್ಮನೋ ವ್ಯಪದೇಶಃ ಅಪಿತ್ವಂತಃಕರಣಸ್ಯ ಬುದ್ಧೇರಿತಿ ಚೇತ್ ಏವಂ ಸತಿ ನಿರ್ದೇಶವಿಪರ್ಯಯಸ್ಸ್ಯಾತ್. ಬುದ್ಧೇಃ ಕರಣತ್ವಾದ್ವಿಜ್ಞಾನೇನೇತಿ ಕರಣವಿಭಕ್ತಿನಿರ್ದೇಶಸ್ಸ್ಯಾತ್. "ತದೇಷಾಂ ಪ್ರಮಾಣಾನಾಂ ವಿಜ್ಞಾನೇನ ವಿಜ್ಞಾನಮಾದದಾತಿ" ಇತ್ಯತ್ರ ಬುದ್ಧೇಃ ಕರಣತ್ವಂ ಕರ್ತೃತ್ವಂ ಚ ನ ಪ್ರತಿಪದ್ಯತೇ.

ಬುದ್ಧಿ ಪ್ರಕೃತಿಗಳೇ ಕರ್ತೃವೆಂದು ಹಿಂದೆ ಹೇಳಿದೆ. ಆದರಲ್ಲಿ ಬುದ್ಧಿಯೇ ಕರ್ತೃ ಎಂಬುದನ್ನು ಈಗ ನಿರಾಕರಿಸಲಾಗುವುದು. "ವಿಜ್ಞಾನನು ಯಜ್ಞಾದಿ ಕರ್ಮಗಳನ್ನಾಚರಿಸುತ್ತಾನೆ" ಇಲ್ಲಿ ಲೌಕಿಕ ವೈದಿಕ ಕ್ರಿಯೆಗಳಿಗೆ ವಿಜ್ಞಾನಾತ್ಮನೇ ಕರ್ತನೆಂದು ಹೇಳಲಾಗಿದೆ. ಇಲ್ಲಿ ವಿಜ್ಞಾನಶಬ್ದವು ಆತ್ಮನಿಗೆ ಅನ್ವಯಿಸುವುದಿಲ್ಲ; ಆದರೆ ಅಂತಃಕರಣವೆನಿಸಿದ ಬುದ್ಧಿಗೇ ಅನ್ವಯಿಸುತ್ತದೆ ಎಂದು ಹೇಳುವುದಾದರೆ ಶ್ರುತಿಯಲ್ಲಿ ಹೇಳಿದ್ದಕ್ಕೆ ವ್ಯತ್ಯಾಸವಾಗುತ್ತದೆ. ಬುದ್ಧಿ ಕರಣವಾದ್ದರಿಂದ ವಿಜ್ಞಾನೇನ ಎಂದು ಕರಣಾರ್ಥದಲ್ಲಿ ತೃತೀಯಾವಿಭಕ್ತಿಯನ್ನು ಹೇಳಬೇಕಾಗಿತ್ತು. "ಈ ಪ್ರಮಾಣಗಳ ವಿಜ್ಞಾನದಿಂದ ವಿಜ್ಞಾನವನ್ನು ಸ್ವೀಕರಿಸುತ್ತಾನೆ" ಎಂಬಲ್ಲಿ ಬುದ್ಧಿ ಕರಣವಾಗಿದೆಯೇ ಹೊರತು ಕರ್ತೃವಾಗಲಾರದು.

ಕ್ಷೇತ್ರಜ್ಞಸ್ಯ ಕರ್ತೃತ್ವವ್ಯಪದೇಶೇ ಸುಷುಪ್ತಿಮೂರ್ಛಾದಾವಪಿ ತತ್ಸಂಭವೇತ್, ತಸ್ಮಾದ್ಬ್ರಹ್ಮರೂಪಸ್ಯ ಜೀವಸ್ಯ ತದಸಂಭವಾತ್ತದಂತಃಕರಣಸ್ಯೈವ ಕರ್ತೃತ್ವಮುಪಪನ್ನಮಿತ್ಯಾಶಂಕಾಯಾಮಾಹ. ಉಪಲಬ್ಧಿವದನಿಯಮಃ ॥ ೩೪ ॥ ಯಥಾ ಅದ್ವೈಮತೇ ಜೀವಸ್ಯ ಜ್ಞಾನಾತ್ಮಕಬ್ರಹ್ಮರೂಪತ್ವೇನಾಂತಃಕರಣಸ್ಯೈವ ಕರ್ತೃತ್ವಮುಪಪನ್ನಂ. ತತ್ಕರ್ತೃತ್ವೇ ತು ಸುಪ್ತ್ಯಾದೌ ತಸ್ಯ ತದದರ್ಶನಾತ್ ನಿಷ್ಕರ್ತೃತ್ವಮಿತಿ ಯತ್ತದಸಂಗತಂ. ಉಪಲಬ್ಧಿವತ್ ಯಥಾ ಸರ್ವಶಾಸ್ತ್ರಪ್ರವಚನಶೀಲಸ್ಯ ಪಂಡಿತಸ್ಯ ಶಿಷ್ಯಸಾನ್ನಿಧ್ಯಾಭಾವೇ ತದ್ವಿದ್ಯಾಪ್ರವಚನೀಯಕರ್ತೃತ್ವಶಕ್ತಿಸಂಕೋಚಕತ್ವಮವಿರೋಧಂ. ತಾವನ್ಮಾತ್ರೇಣ ನಿಷ್ಕ್ರಿಯತ್ವಮಯುಕ್ತಂ. ತಸ್ಮಾತ್ಸರ್ವಕಾಲಕರ್ತೃತ್ವನಿಯಮೋ ನ ಸಂಭವತಿ. ತಥಾಪಿ ಕರ್ತೃತ್ವಮನಿವಾರ್ಯಂ. ಕಿಂಚ ರಥಪ್ರಾಸಾದಮಂಟಪಗೋಪುರವಾಪೀಕೂಪತಟಾಕಾದಿನಿರ್ಮಾಣಕುಶಲಾನಾಂ ತತ್ಸಾಧನಾಂಗವಸ್ತ್ವಭಾವೇನ ತತ್ಕರ್ತೃಶಕ್ತಿಸಂಕೋಚತ್ವೇಽಪಿ ತೇಷಾಂ ತತ್ಕರ್ತೃತ್ವಶಕ್ತಿಸತ್ತ್ವವತ್ ಶರೀರೇಂದ್ರಿಯಮನಃಪ್ರಾಣಾದ್ಯಯೋಗೇ ಜೀವಾನಾಂ ಸ್ವನಿಷ್ಠಕರ್ತೃತ್ವಶಕ್ತಿಪ್ರಕಾಶಕಾತ್ಮಾಭಾವೇಽಪಿ ತತ್ಕರ್ತೃತ್ವಶಕ್ತಿರ್ನವಾರ್ಯತೇ. ಜೀವಸ್ಯೈವ ತದನಾಂಗೀಕಾರೇ, "ತಯೋರನ್ಯಃ

**ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋಽಭಿಚಾಕಶೀತಿ" ಇತ್ಯಾದಿಜೀವ ಕರ್ತೃತ್ವವಿಧಾಯಕಬಹುಶ್ರುತಿವಿರೋಧೋ ದುರ್ನಿವಾರಃ. ಅತೋ ಜಡಸ್ಯಾಂತಃಕರಣಸ್ಯ ಕರ್ತೃತ್ವಮಯುಕ್ತಮಿತಿ ವೇದಿತವ್ಯಂ.**

ಜೀವನನ್ನು ಕರ್ತೃವೆಂದು ಕರೆದರೆ ಸುಷುಪ್ತಿಮೂರ್ಛೆಗಳಲ್ಲೂ ಅವನಿಗೆ ಕರ್ತೃತ್ವವು ಸಂಭವಿಸಬೇಕಾಗುತ್ತದೆ. ಇದರಿಂದ ಬ್ರಹ್ಮರೂಪನಾದ ಜೀವನಿಗೆ ಕರ್ತೃತ್ವವು ಸಂಭವಿಸದಿರುವುದರಿಂದ ಅಂತಃಕರಣವನ್ನು ಕರ್ತೃವೆಂದು ಹೇಳುವುದು ಯುಕ್ತವಲ್ಲವೇ ಎಂದಾಶಂಕಿಸಿ ನಿರಾಕರಿಸುತ್ತಾನೆ. ಅದ್ವೈತಮತದಲ್ಲಿ ಜೀವನು ಜ್ಞಾನರೂಪನಾದ ಬ್ರಹ್ಮವೇ ಆದ್ದರಿಂದ ಅಂತಃಕರಣವೇ ಕರ್ತೃವೆಂಬುವುದು ಹೊಂದುತ್ತದೆ. ಜೀವನೇ ಕರ್ತನೆಂದು ಹೇಳಲಿಕ್ಕೆ ಸುಷುಪ್ತಿಯಲ್ಲಿ ಅವನು ಕರ್ತನಲ್ಲವೆಂದು ಕಂಡುಬಂದಿದೆ. ಆದ್ದರಿಂದ ಅವನು ಎಂದಿಗೂ ಕರ್ತನೇ ಆಗಲಾರನೆಂದು ಹೇಳುವುದಾದರೆ ಅದೂ ಯುಕ್ತವಲ್ಲ. ಎಲ್ಲಾ ಶಾಸ್ತ್ರಗಳನ್ನು ಭೋದಿಸಲು ಶಕ್ತನಾದ ಪಂಡಿತನಿಗೆ ಶಿಷ್ಯರು ಹತ್ತಿರದಲ್ಲಿ ಇಲ್ಲದೇಇದ್ದರೆ ಅವನ ಪ್ರವಚನಶಕ್ತಿ ಮೊಟಕಾಗುವುದು. ಹಾಗೆ ಜೀವನು ಜಡವಾದ ಅಂತಃಕರಣದ ಸಂಯೋಗದಿಂದ ಸರ್ವಕರ್ತನೆನಿಸುವನು. ಹಾಗೆ ಸಂಪರ್ಕವಿಲ್ಲದಿದ್ದರೆ ಅವನ ಕರ್ತೃತ್ವಶಕ್ತಿಯೇ ಸಂಕೋಚಗೊಳ್ಳುತ್ತದೆ. ಅಷ್ಟರಿಂದಲೇ ಅವನನ್ನು ನಿಷ್ಕ್ರಿಯನೆಂದು ಹೇಳುವುದು ಯುಕ್ತವಲ್ಲ. ಆದ್ದರಿಂದ ಒಬ್ಬನು ಎಲ್ಲಾಕಾಲಗಳಲ್ಲೂ ಕರ್ತನೇ ಆಗಿರಬೇಕೆಂಬ ನಿಯಮ ಹೊಂದುವುದಿಲ್ಲ; ಹಾಗಾದರೂ ಒಬ್ಬನು ಕರ್ತನೆನಿಸಬಹುದು. ರಥ, ಪ್ರಾಸಾದ, ಮಂಟಪ, ಗೋಪುರ, ಬಾವಿ, ಕೆರೆಗಳನ್ನು ಕಟ್ಟಲು ನಿಪುಣರಾದವರಿಗೆ ಆ ಕೆಲಸಕ್ಕೆ ಬೇಕಾದ ಸಾಧನಸಾಮುಗ್ರಿಗಳು ಇಲ್ಲದಿದ್ದರೆ ಅವರಶಕ್ತಿ ಸಂಕೋಚಗೊಂಡಿದ್ದರೂ ಅವರಲ್ಲಿ ಶಕ್ತಿಮಾತ್ರ ಇದ್ದೇಇರುತ್ತದೆ. ಹಾಗೆಯೇ ಶರೀರೇಂದ್ರಿಯಗಳ ಸಂಪರ್ಕವಿಲ್ಲದಿದ್ದರೆ ಜೀವರಿಗೆ ತಮ್ಮ ಕರ್ತೃತ್ವಶಕ್ತಿ ಹೊರಬೀಳುವುದಿಲ್ಲ. ಆದರೂ ಅವರಲ್ಲಿ ಅದು ಇರಲಿಕ್ಕಂತೂ ತಡೆ ಇಲ್ಲ. ಜೀವನಿಗೆ ಕರ್ತೃತ್ವವನ್ನು ಒಪ್ಪದಿದ್ದರೆ "ಅವರಿಬ್ಬರಲ್ಲಿ ಒಬ್ಬನು ಸುಖದುಃಖಗಳನ್ನು ಭೋಗಿಸುತ್ತಲೂ, ಮತ್ತೊಬ್ಬನು ಉದಾಸೀನನಾಗಿ ನೋಡುತ್ತಲೂ ಇರುವರು" ಎಂದು ಜೀವನಿಗೆ ಕರ್ತೃತ್ವವನ್ನು ಹೇಳುವ ಅನೇಕ ಶ್ರುತಿಗಳು ವಿರುದ್ಧವಾಗುತ್ತವೆ. ಆದ್ದರಿಂದ ಜೀವನು ಕರ್ತನಾಗುವನೇ ಹೊರತು ಜಡವಾದ ಅಂತಃಕರಣವು ಕರ್ತೃವಾಗಲಾರದು.

**ಜೀವಸ್ಯ ಸುಷುಪ್ತ್ಯಾದಿಷ್ವಪಿ ಕರ್ತೃತ್ವಶಕ್ತಿಸತ್ತ್ವಸಾಧನತ್ವೇ ಸ್ವತಂತ್ರತ್ವಪ್ರಸಂಗಾತ್ ಸುಪ್ತಾವಪಿ ಸ್ವಜ್ಞಾನಪರಜ್ಞಾನತ್ವಂ ಚ ಕಿಂ ನ ಸ್ಯಾದಿತ್ಯಾಶಂಕಾಯಾಮಾಹ. ಶಕ್ತಿವಿಪರ್ಯಯಾತ್ ||೩೮|| ಸುಪ್ತೌ ಬುದ್ಧ್ಯಭಾವಾಜ್ಜೀವಸ್ಯ ಸ್ವಪರಜ್ಞಾನಶಕ್ತಿಸಂಕೋಚದರ್ಶನಾದಿತಶ್ಚ ಬುದ್ಧೇರೇವ ಕರ್ತೃತ್ವಮಿತಿ ಚೇನ್ನ, ಕುತಃ, ಶಕ್ತಿವಿಪರ್ಯಯಾತ್. "ಸುಷುಪ್ತಿಕಾಲೇ ಸಕಲೇ ವಿಲೀನೇ ತಮೋಽಭಿಭೂತಸ್ಸುಖರೂಪಮೇತಿ"**

ಇತ್ಯಾದಿಶ್ರುತಿಷು ಸುಪ್ತೌ ಪರಮೇಶ್ವರಮಾಯಾರೂಪಜಡತಮಶ್ಯಕ್ತ್ಯಾ ಜೀವಶಕ್ತಿವಿಪರ್ಯಯಾತ್ ತಿರೋಧಾನಾತ್ ಬುದ್ಧೇಃ ಕರ್ತೃತ್ವಮನುಪಪನ್ನಂ. ಯಥಾ ಲೋಕೇ ವೈಶ್ವಾನರಸ್ವಭಾವಶಕ್ತೇರ್ಮಣಿಮಂತ್ರಾದಿಭಿಃ ಕಂಚಿತ್ಕಾಲಂ ತಿರೋಹಿತತ್ವಂ, ಶೈತ್ಯಸ್ವಭಾವಸ್ಯ ಜಲಸ್ಯ ಭಾನು ವೈಶ್ವಾನರಾದಿಸ್ಪರ್ಶೇನ ಸ್ವನಿಷ್ಠಶೈತ್ಯತಿರೋಹಿತತ್ವಂ, ಪರ್ಜನ್ಯಾಚ್ಛಾದನೇನ ಪ್ರಭಾಕರಸ್ಯ ಸ್ವಪ್ರಭಾತಿರೋಹಿತತ್ವಂ ತದ್ವಜ್ಜೀವಸ್ಯ ಪರಶಿವಪಾಶಶಕ್ತ್ಯಾ ಸ್ವಶಕ್ತಿಸಂಕೋಚೇನ ಸ್ವಪರಜ್ಞಾನತಿರೋಹಿತತ್ವಂ ಉಪಪದ್ಯತೇ. ತಾವನ್ಮಾತ್ರೇಣ ಸ್ವನಿಷ್ಠಧರ್ಮಾಣಾಮನನ್ಯಸಾಧಾರಣತ್ವಂ ವಕ್ತುಂ ಯುಕ್ತಂ. ಕಿಂಚ ಬುದ್ಧೇಃ ಕರ್ತೃತ್ವೇ ಕರ್ತುರನ್ಯಸ್ಯ ಭೋಕ್ತೃತ್ವಾನುಪಪತ್ತೇರ್ಭೋಕ್ತೃತ್ವಶಕ್ತಿರಪಿ ತಸ್ಯಾ ಏವ ಸ್ಯಾದಿತ್ಯಾತ್ಮನೋ ಭೋಕ್ತೃತ್ವಶಕ್ತಿರ್ಹೀಯೇತ. ಭೋಕ್ತೃತ್ವಂ ಚ ಬುದ್ಧೇರೇವ ಸಂಪದ್ಯತ ಇತಿ ಚೇದಾತ್ಮಸದ್ಭಾವೇ ಪ್ರಮಾಣಾಭಾವಶ್ಚ ಸ್ಯಾತ್. "ಪುರುಷೋಽಸ್ತಿ ಭೋಕ್ತೃಭಾವಾತ್" ಇತಿ ಹಿ ತೇಷಾಮಭ್ಯುಪಗಮಃ. ಉತ ಬುದ್ಧೇಃ ಕರ್ತೃತ್ವೇ ಕರಣಶಕ್ತಿವಿಪರ್ಯಯಾತ್ ಕರಣಶಕ್ತಿರ್ನಾಯೇತ. ನಚೇಷ್ಟಾಪತ್ತಿಃ. ಕರಣಸಹಿತಸ್ಯೈವ ಕರ್ತುರ್ಲೋಕೇ ಕಾರ್ಯಕಾರಿತ್ವದರ್ಶನಾತ್ ಬುದ್ಧೇರಪಿ ಕರಣಾಂತರಂ ಕಲ್ಪನೀಯಂ ಸ್ಯಾತ್ತಥಾ ಚ ನಾಮಮಾತ್ರೇ ವಿವಾದೋ ನ ವಸ್ತುನಿ, ಕರಣವ್ಯತಿರಿಕ್ತಸ್ಯೈವ ತ್ವಯಾಪಿ ಕರ್ತೃತ್ವಾಭ್ಯುಪಗಮಾತ್.

ಜೀವನಿಗೆ ಸುಷುಪ್ತಿಯಲ್ಲೂ ಕರ್ತೃತ್ವಶಕ್ತಿ ಇರುವುದರಿಂದ ಸಾಧನಮಾಡಿದರೆ ಅವನು ಸ್ವತಂತ್ರನೆನಿಸುವ ಪ್ರಸಂಗ ಬರುತ್ತದೆ. ಆದ್ದರಿಂದ ಸುಷುಪ್ತಿಯಲ್ಲೂ ಜೀವನಿಗೆ ತನ್ನ ಜ್ಞಾನವೂ ಪರಜ್ಞಾನವೂ ಯಾಕೆ ಇರುವುದಿಲ್ಲ ? ಎಂದಾಶಂಕಿಸಿ ನಿರಾಕರಿಸುತ್ತಾನೆ. ಸುಷುಪ್ತಿಯಲ್ಲಿ ಬುದ್ಧಿ ಇರುವುದಿಲ್ಲ ಮತ್ತು ಜೀವನಿಗೆ ಸ್ವಪರಜ್ಞಾನಶಕ್ತಿಯೂ ಸಂಕೋಚಗೊಂಡಿರುವುದು. ಆದ್ದರಿಂದ ಆಗ ಅವನಿಗೆ ಪರಜ್ಞಾನವಿರುವುದಿಲ್ಲ. ಹಾಗಾದರೆ ಬುದ್ಧಿಯು ಏಕೆ ಕರ್ತೃವಾಗಬಾರದು ? ಅಂದರೆ ಹಾಗಲ್ಲ, ಸುಷುಪ್ತಿಯಲ್ಲಿ ಎಲ್ಲವೂ ವಿಲೀನವಾಗಿ ಆತ್ಮನು ಕತ್ತಲೆಯ ವ್ಯಾಪ್ತಿಯಿಂದ ಸುಖಸ್ವರೂಪದಲ್ಲಿ ಉಳಿಯುತ್ತಾನೆ. ಈ ಸುಷುಪ್ತಿಯಲ್ಲಿ ಪರಮೇಶ್ವರನ ಮಾಯಾರೂಪವಾದ ಜಡಶಕ್ತಿಯಿಂದ ಜೀವಶಕ್ತಿ ತಿರೋಹಿತವಾಗಿರುತ್ತದೆ. ಆದ್ದರಿಂದ ಬುದ್ಧಿಯೇ ಕರ್ತೃವೆಂಬುವುದು ಹೊಂದುವುದಿಲ್ಲ. ಲೋಕದಲ್ಲಿ ಮಣಿಮಂತ್ರಗಳ ಪ್ರಭಾವದಿಂದ ಅಗ್ನಿಯು ಸ್ವಾಭಾವಿಕವಾದ ದಾಹಕಶಕ್ತಿಯು ತಿರೋಹಿತವಾಗುವುದು. ನೀರು ಶೀತಸ್ವಭಾವವಾದರೂ ಸೂರ್ಯ ಅಗ್ನಿ ಇವರ ಸಂಕರ್ಪದಿಂದ ತನ್ನ ಶೈತ್ಯವನ್ನು ಕಳೆದುಕೊಳ್ಳುತ್ತದೆ. ಮೋಡದ ವ್ಯಾಪ್ತಿಯಿದ ಸೂರ್ಯನ ಪ್ರಭೆ ತಿರೋಹಿತವಾಗುವುದು. ಅದರಂತೆ ಜೀವನಿಗೆ ಪರಶಿವನ ಪಾಶಶಕ್ತಿಯು ಆಚ್ಛಾದನದಿಂದ ತನ್ನ ಮತ್ತು ಪರಮಾತ್ಮನ

ಅರಿವು ಇರುವುದಿಲ್ಲವೆಂಬುದು ಹೊಂದುತ್ತದೆ. ಇಷ್ಟರಿಂದಲೇ ಜೀವನ ಧರ್ಮಗಳನ್ನು ಅವನಲ್ಲಿಯೇ ಅಸಾಧಾರಣವೆಂದು ಹೇಳಿದ್ದು ಯುಕ್ತವಾಗುತ್ತದೆ. ಬುದ್ಧಿಯೇ ಕರ್ತೃವಾದರೆ ಬೇರೊಬ್ಬ ಕರ್ತನನ್ನು ಭೋಕ್ತೃವೆಂದು ಒಪ್ಪಲಾಗುವುದಿಲ್ಲವಾದ್ದರಿಂದ ಬುದ್ಧಿಯೇ ಭೋಕ್ತೃವಾಗಲೆಂದು ಹೇಳಿದರೆ ಆತ್ಮನಲ್ಲಿ ಭೋಕ್ತೃತ್ವಶಕ್ತಿಯೇ ತಪ್ಪಿಹೋದೀತು. ಬುದ್ಧಿಗೇ ಭೋಕ್ತೃತ್ವವೂ ಸಂಭವಿಸುತ್ತದೆ ಎಂದು ಹೇಳುವುದಾದರೆ ಆತ್ಮನಿರುವುದರಲ್ಲಿ ಪ್ರಮಾಣವೇ ಇಲ್ಲವಾದೀತು. ಭೋಕ್ತೃವಾದ್ದರಿಂದಲೇ ಪುರುಷನಿದ್ದಾನೆಂದು ಸಾಂಖ್ಯರು ಒಪ್ಪಿದ್ದಾರೆ. ಬುದ್ಧಿಯೇ ಕರ್ತೃವಾಗುವುದಾದರೆ ಕರಣಶಕ್ತಿಯ ಬದಲಾವಣೆಯಿಂದ ಬುದ್ಧಿಗೆ ಆ ಬಗೆಯ ಶಕ್ತಿಯೂ ತಪ್ಪಿಹೋಗಬೇಕಾದೀತು ? ತಪ್ಪಿಹೋಗಲೆಂದು ಹೇಳುವುದಾದರೆ ಕರಣಗಳೊಡಗೂಡಿದ ಕರ್ತನೇ ಲೋಕದಲ್ಲಿ ಕಾರ್ಯಗಳನ್ನು ನಡೆಸುವವನೆಂದು ತಿಳಿದುಬಂದಿದೆ. ಆದ್ದರಿಂದ ಬುದ್ಧಿಗೂ ಬೇರೊಂದು ಕರಣವನ್ನು ಕಲ್ಪಿಸಬೇಕಾಗುವುದು. ಇದರಿಂದ ಹೆಸರಿನಲ್ಲಿ ಮಾತ್ರವೇ ವಿವಾದವಲ್ಲದೆ ವಸ್ತುವಿನಲ್ಲಿ ಏನೂ ವಿವಾದವೇ ಕಾಣುವುದಿಲ್ಲ ; ಯಾಕೆಂದರೆ ಕರಣಕ್ಕಿಂತಲೂ ಬೇರೆಯಾಗಿ ಒಬ್ಬ ಕರ್ತನನ್ನು ನೀವೂ ಸಹ ಒಪ್ಪಿದ್ದೀರಿ. ಆದ್ದರಿಂದ ಹೆಸರು ಬೇರೆಯಾಯಿತೇ ಹೊರತು ವಸ್ತುವನ್ನು ನಿಷೇಧಿಸುವಂತಿಲ್ಲ.

ಬುದ್ಧೇಃ ಕರ್ತೃತ್ವನಿರಾಕರಣೇ ಪುನರ್ಹೇತ್ವಂತರಮಾಹ. ಸಮಾಧ್ಯಭಾವಾಚ್ಚ ॥ ೩೯ ॥ ಬುದ್ಧೇಃ ಕರ್ತೃತ್ವೇ ಮೋಕ್ಷಸಾಧನಭೂತಸಮಾಧಾವಪಿ ಸೈವ ಕರ್ತ್ರೀ ಸ್ಯಾತ್. ಸಚ ಸಮಾಧಿಃ " ಪ್ರಕೃತೇರನ್ಯೋಽಸ್ಮಿ " ಇತ್ಯೇವಂ ಪ್ರಕೃತಿಂ ಸಮಾಧಾತುಮಲಂ. ಅತೋಽಪ್ಯಾತ್ಮೈವ ಕರ್ತಾ. ಸಮಾಧಿರ್ನಾಮ ಶಿವಪ್ರಸಾದಾಚ್ಛಿವಯೋಗೇನಾವಿದ್ಯಾಪಾಶವಿಚ್ಛೇದಕೇ ಪರಮಶಿವಸ್ವಪ್ರಕಾಶಸಾಕ್ಷಾತ್ಕಾರಾನುಭವಕಾಲೇ ಶರೀರೇಂದ್ರಿಯಮನಃಪ್ರಾಣಾದಿಚೇಷ್ಟಾನಿರ್ಮುಕ್ತಜಾಗ್ರತ್ಸ್ವಪ್ನಸುಷುಪ್ತ್ಯವಸ್ಥಾಮತಿಕ್ರಮ್ಯ ನಿಷ್ಪ್ರಪಂಚನಿರಾಮಯಪರಮತೇಜಃಪ್ರಕಾಶಕಪರಮಾಕಾಶೇ ಶಿವತತ್ತ್ವಮನುಸೃತ್ಯ ನಿರ್ಭರಾನಂದಸಮುದ್ರೇ ನಿಮಜ್ಯ ಜ್ಞಾನಾಜ್ಞಾನಾತೀತತುರ್ಯಾತೀತಾವಸ್ಥಾಯಾಮಪಿ ತದವಿಸ್ಮರಣೇನ ಪ್ರಚಂಡಾತಪಮಧ್ಯನಿಕ್ಷಿಪ್ತಕರ್ಪೂರದೀಪವತ್ಸಂಕಲ್ಪವಿಕಲ್ಪವಿಹೀನಶಿವಾಕಾರಾಕಾರಿತಬುದ್ಧಿಸತ್ತ್ವಾವಸ್ಥಾ ಸಮಾಧಿರಿತ್ಯುಪದಿಶ್ಯತೇ. " ಸ ಏಕೋ ಬ್ರಹ್ಮಣ ಆನಂದಃ " ಇತಿ ತದಾನಂದಸ್ಯೈವ ನಿರತಿಶಯತ್ವಂ ಸರ್ವಶ್ರುತಿಸಿದ್ಧಂ. ಜೀವಸ್ಯ ಪುಣ್ಯಪಾಪಕರ್ತೃತ್ವಾದ್ಯಭಾವೇ ಸಮಾಧ್ಯಭಾವಾತ್, ತದಭಾವೇ " ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ, " " ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ " " ಆತ್ಮಾನಮರಣಿಂ ಕೃತ್ವಾ ಪ್ರಣವಂಚೋತ್ತರಾರಣಿಂ । ಧ್ಯಾನನಿರ್ಮಥನಾಭ್ಯಾಸಾತ್ ಪಾಶಂ ದಹತಿ ಪಂಡಿತಃ. " " ಆತ್ಮಾ ವಾರೇ

ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ" ಇತ್ಯಾದಿಬಹು ಶ್ರುತಿಸಿದ್ಧರೇವಣಸಿದ್ಧಮರುಳಸಿದ್ಧೈಕೋರಾಮಸಿದ್ದವೇಮಾರಾಧ್ಯೋದ್ಭಟಾರಾಧ್ಯಾದಿಬ್ರಹ್ಮನಿಷ್ಠಾಚರಿತಭಕ್ತಿವೈರಾಗ್ಯಶ್ರದ್ಧಾಶ್ರವಣಮನನಾದ್ಯುಪಾಸನಾಫಲಕಮೋಕ್ಷವೈಫಲ್ಯಪ್ರಸಂಗಃ. ನಚ ಬುದ್ಧೇರೇವ ಮೋಕ್ಷ ಇತಿ ವಾಚ್ಯಂ, ತತ್ತ್ವಮಸಿ ಇತ್ಯಾದಿಶ್ರುತಿಸಿದ್ಧಜೀವಬ್ರಹ್ಮೈಕ್ಯ ರೂಪಮೋಕ್ಷನಿರ್ದೇಶೋ ನ ಸ್ಯಾತ್. ಬುದ್ಧೇರ್ಮೋಕ್ಷಕಾಲೇ ಜಡತ್ವೇನ ನಷ್ಟತ್ವಾದಾತ್ಮಹನನಪ್ರಸಂಗಃ ||

ಬುದ್ಧಿಗೆ ಕರ್ತೃತ್ವವನ್ನು ನಿರಾಕರಿಸಲು ಬೇರೊಂದು ಹೇತುವಿದೆ. ಬುದ್ಧಿಯೇ ಕರ್ತೃವಾದರೆ ಮೋಕ್ಷಕ್ಕೆ ಸಾಧನವೆನಿಸಿದ ಸಮಾಧಿಯಲ್ಲೂ ಅದೇ ಕರ್ತೃವಾಗಬೇಕಾದೀತು. ಸಮಾಧಿ ಎಂದರೂ "ನಾನು ಪ್ರಕೃತಿಗೆ ಬೇರೆಯಾಗಿದ್ದೇನೆ" ಎಂದು ಪ್ರಕೃತಿಯನ್ನು ಸಮಾಧಾನಪಡಿಸುವುದೇ ಆಗಿದೆ. ಆದ್ದರಿಂದ ಇಲ್ಲಿ ಆತ್ಮನೇ ಕರ್ತನೆಸಿದ್ದಾನೆ. ಶಿವಪ್ರಸಾದದಿಂದ ದೊರೆಯುವ ಶಿವಯೋಗದಿಂದ ಅವಿದ್ಯಾಪಾಶವನ್ನು ನಾಶಪಡಿಸುವಂತಹ ಶಿವಸಾಕ್ಷಾತ್ಕಾರವನ್ನು ಪಡೆದು ಅನುಭವಿಸುವಾಗ ಶರೀರ ಇಂದ್ರಿಯ ಮನಸ್ಸು ಪ್ರಾಣಗಳ ಚೇಷ್ಟೆಯಿಂದೊಡಗೂಡಿದ ಜಾಗ್ರತ್ಸ್ವಪ್ನಸುಷುಪ್ತಿಗಳ ಅವಸ್ಥೆಯನ್ನು ಮೀರಿ ನಿಷ್ಪ್ರಪಂಚವೂ ನಿರಾಮಯವೂ ಆದ ಮಹಾತೇಜಸ್ಸನ್ನು ಪ್ರಕಾಶಗೊಳಿಸುವ ಚಿದಾಕಾಶರೂಪವಾದ ಶಿವತತ್ತ್ವವನ್ನು ಅನುಸರಿಸುತ್ತ ನಿರತಿಶಯಾನಂದ ಸಾಗರದಲ್ಲಿ ಮುಳುಗಿ ಜ್ಞಾನ ಅಜ್ಞಾನಗಳೆರಡಕ್ಕೂ ಮೀರಿದ ತುರ್ಯಾತೀತಾವಸ್ಥೆಯಲ್ಲೂ ಅದನ್ನು ಮರೆಯದಂತೆ ಸ್ಮರಿಸುತ್ತ ಪ್ರಚಂಡಸೂರ್ಯಪ್ರಕಾಶದೊಳಗೆ ಉರಿಯುವ ಕರ್ಪೂರದ ದೀಪದಂತೆ ಸಂಕಲ್ಪವಿಕಲ್ಪಗಳಿಲ್ಲದೆ ಶಿವಾಕಾರವನ್ನು ಹೊಂದಿದ ಸಾತ್ತ್ವಿಕಾವಸ್ಥೆಯೇ ಸಮಾಧಿ ಎನಿಸುತ್ತದೆ. "ಇದೊಂದೇ ಬ್ರಹ್ಮದ ಆನಂದ." ಎಂಬುದರಿಂದ ಇದೊಂದೇ ನಿರಾತಿಶಯುವಾದುದೆಂದು ಶ್ರುತಿಗೆ ಸಮ್ಮತವಾಗುತ್ತದೆ. ಜೀವನು ಪುಣ್ಯಾಪಾಪಗಳ ಕರ್ತನಲ್ಲದಿದ್ದರೆ ಸಮಾಧಿಯೇ ಸಂಭವಿಸುವುದಿಲ್ಲ. ಅದೇ ಇಲ್ಲದಿದ್ದರೆ "ಶುದ್ಧಭಕ್ತಿಧ್ಯಾನಗಳೊಡಗೂಡಿದ ಯೋಗದಿಂದ ತಿಳಿ." "ಅವನ ಧ್ಯಾನಧಾರಣಸಮಾಧಿಗಳಿಂದ ಕೊನೆಗೆ ಮಾಯೆ ತೊಲಗುತ್ತದೆ." "ಆತ್ಮನನ್ನು ಬೆರಣಿಯೆಂದೂ ಪ್ರಣವವನ್ನು ಬೆಂಕಿಯೆಂದೂ ಭಾವಿಸಿ ಪಂಡಿತನು ಧ್ಯಾನವೆಂಬ ಅಗ್ನಿಯಿಂದ ಪಾಶವನ್ನು ಸುಡುತ್ತಾನೆ." "ಆತ್ಮನನ್ನು ಕೇಳಿ ತಿಳಿದು ಧ್ಯಾನಿಸುತ್ತ ಸಾಕ್ಷಾತ್ಕರಿಸಬೇಕು" ಹೀಗೆ ಅನೇಕಶ್ರುತಿಗಳಲ್ಲಿ ಹೇಳಿರುವುದರಿಂದಲೂ, ರೇವಣಸಿದ್ಧ ಮರುಳಸಿದ್ಧ ಏಕೋರಾಮಾರಾಧ್ಯ ವೇಮನಾರಾಧ್ಯ ಉದ್ಭಟರಾಧ್ಯ ಮೊದಲಾದ ಶಿವಾಚಾರ್ಯರು ಆಚರಿಸಿದ್ದರಿಂದಲೂ ಭಕ್ತಿ-ವೈರಾಗ್ಯ-ಶ್ರದ್ಧೆ-ಶ್ರವಣ-ಮನನ-ಉಪಾಸನಗಳ ಫಲವಾಗಿ ದೊರಕುವ ಮೋಕ್ಷವೇ ವ್ಯರ್ಥವಾಗಬೇಕಾದೀತು. ಬುದ್ಧಿಗೇ ಮೋಕ್ಷವಾಗಲೆಂದು ಹೇಳುವುದಾದರೆ, ತತ್ತ್ವಮಸಿ ಮೊದಲಾದ ಶ್ರುತಿಗಳಲ್ಲಿ ಜೀವಬ್ರಹ್ಮೈಕ್ಯರೂಪವಾದ ಮೋಕ್ಷವನ್ನು ತಿಳಿಸಿದ್ದೇ ವ್ಯರ್ಥವಾಗುವುದು. ಬುದ್ಧಿಯೂ ಮೋಕ್ಷ

ಕಾಲದಲ್ಲಿ ಜಡವಾದ್ದರಿಂದ ನಷ್ಟವಾಗುತ್ತದೆ. ಆದ್ದರಿಂದ ಸರ್ವನಾಶವಾಗಬೇಕಾದೀತು. ಇದರಿಂದ ಬುದ್ಧಿ ಕರ್ತೃವಾಗಲಾರದೆಂಬುದು ಸ್ಪಷ್ಟವಾಗಿದೆ.

**ನ ಚಾತ್ಮನಃ ಕರ್ತೃತ್ವೇಽಭ್ಯುಪಗಮ್ಯಮಾನೇ ಸರ್ವದಾ ಕರ್ತೃತ್ವಂ ನೋಪರಮೇದಿತ್ಯತ್ರಾಹ. ಯಥಾ ಚ ತಕ್ಷೋಭಯಥಾ||೩೭|| ವಾಗಾದಿಕರಣಸಂಪನ್ನೋಽಪ್ಯಾತ್ಮಾ ಯದೇಚ್ಛತಿ ತದಾ ಕರೋತಿ. "ಯದ್ಧಿ ಮನಸಾ ಧ್ಯಾಯತೇ ತದ್ವಾಚಾ ವದತಿ ತತ್ಕರ್ಮಣಾ ಕರೋತಿ" ಇತಿ ಶ್ರುತಿರಪಿ ತಥಾ ವ್ಯಪದಿಶತಿ. "ಯದಾ ತು ನೇಚ್ಛತಿ ತದಾ ನ ಕರೋತಿ." ಯಥಾ ತಕ್ಷಾ ಆವಶ್ಯಕಕರಣಸನ್ನಿಧಾನೇಽಪಿ ಸ್ವೇಚ್ಛಾಪಸುಗುಣ್ಯೇನ ಕರೋತಿ, ನ ಕರೋತಿ ಚ ತಥಾ ಬುದ್ಧೇಸ್ತ್ವಚೇತನಾಯಾಃ ಕರ್ತೃತ್ವೇ ತಸ್ಯಾಃ ಭೋಗವಾಂಛಾದಿನಿಯಮಕಾರಣಾಭಾವಾತ್ ಸರ್ವದಾ ಕರ್ತೃತ್ವಮೇವ ಸ್ಯಾತ್. ತಸ್ಮಾತ್ಕರ್ತೃತ್ವಂ ನ ಬುದ್ಧೇರ್ನ ಪ್ರಧಾನಸ್ಯೇತಿ ವ್ಯಾಚಕ್ಷ್ಯತೇ. ಇಚ್ಛಾಯಾಃ ಚೇತನಧರ್ಮತ್ವಾತ್ ಚೇತನಸ್ಯೈವ ಜೀವಸ್ಯ ಸರ್ವಕರ್ತೃತ್ವಂ ತಕ್ಷಾದಿವದುಪಪನ್ನಂ. ಯಥಾ ತಕ್ಷಾ ವ್ಯಾಪಾರಕರ್ತಾ ಉಭಯಥಾ ಉಭಯರೂಪೇಣ ತಿಷ್ಠತಿ ಏವಂ ಜೀವೋಽಪಿ ಸ್ವೇಚ್ಛಯಾ ಜಾಗ್ರತ್ಸ್ವಪ್ನಕಾಲಯೋಃ ಸ್ಥೂಲಸೂಕ್ಷ್ಮಶರೀರವಿಶಿಷ್ಟಸ್ಸನ್ ಲೌಕಿಕವೈದಿಕವ್ಯಾಪಾರಾನ್ಕುರ್ವನ್ ವೈಷಯಿಕಸುಖದುಃಖಮನುಭವತಿ. ಸುಪ್ತಿಕಾಲೇ ಶರೀರೇಂದ್ರಿಯವ್ಯಾಪಾರಶೂನ್ಯತಯಾ ಪರಮಶಿವತಪೋರೂಪಪಾಶಶಕ್ತಿನಿಷ್ಠಃ ಪರಮಾನಂದಮನುಭವತಿ. ಅತಶ್ಚೇತನಸ್ಯ ಜೀವಸ್ಯೈವ ಕರ್ತೃತ್ವಮುಪಪನ್ನಮಿತಿ ಸಿದ್ಧಂ.**

ಆತ್ಮನನ್ನೇ ಕರ್ತೃವೆಂದು ಒಪ್ಪಿದರೆ ಯಾವಾಗಲೂ ಕರ್ತೃತ್ವವು ತಪ್ಪುವಂತೆಯೇ ಇಲ್ಲವೆಂದಾಶಂಕಿಸುತ್ತಾನೆ. "ವಾಕ್ ಮೊದಲಾದ ಕರಣಗಳಿಂದೊಡಗೂಡಿದ್ದರೂ ಆತ್ಮನು ಯಾವಾಗ ಇಚ್ಛಿಸುತ್ತಾನೋ ಆಗಲೇ ಕಾರ್ಯವನ್ನು ಮಾಡುತ್ತಾನೆ" "ಮನಸ್ಸಿನಿಂದ ಯಾವುದನ್ನು ಧ್ಯಾನಿಸುತ್ತಾನೋ, ಬಾಯಿಂದ ಹೇಳುತ್ತಾನೋ, ಅದನ್ನೇ ಕ್ರಿಯೆಯಿಂದ ಮಾಡುತ್ತಾನೆ" ಎಂದು ಶ್ರುತಿಯೂ ಇದನ್ನೇ ತಿಳಿಸುತ್ತದೆ. ಯಾವಾಗ ಇಚ್ಛಿಸುವುದಿಲ್ಲವೋ ಆಗ ಅವನು ಮಾಡುವುದೇ ಇಲ್ಲ. ಲೋಕದಲ್ಲಿ ಬಡಗಿಯು ತನ್ನಲ್ಲಿ ಸಾಧನಗಳಿದ್ದರೂ ತನ್ನ ಇಚ್ಛೆಗನುಗುಣವಾಗಿ ಕೆಲಸವನ್ನು ಮಾಡಬಹುದು ಅಥವಾ ಮಾಡದಿರಬಹುದು. ಜಡವಾದ ಬುದ್ಧಿ ಕರ್ತೃವಾದರೆ ಅದಕ್ಕೆ ಭೋಗಿಸುವ ಇಚ್ಛೆ, ಆ ಬಗೆಯ ನಿಯಮ, ಈ ಬಗೆಯ ಕಾರಣಗಳೊಂದೂ ಇಲ್ಲದ್ದರಿಂದ ಅದು ಯಾವಾಗಲೂ ಕರ್ತೃವೇ ಆಗಬೇಕಾದೀತು. ಆದ್ದರಿಂದಲೇ ಬುದ್ಧಿಯಾಗಲೀ ಪ್ರಧಾನವಾಗಲೀ ಕರ್ತೃವಾಗಲಾರದೆಂದು ಅನುಭವಿಗಳು ಹೇಳುತ್ತಾರೆ. ಇಚ್ಛೆ ಎಂಬುದೇ ಚೇತನನ ಧರ್ಮವೆನಿಸಿದೆ. ಬಡಗಿಯಂತೆ ಚೇತನಜೀವನೇ ಎಲ್ಲಕ್ಕೂ ಕರ್ತೃವೆಂಬುದು ಯುಕ್ತವೆನಿಸುತ್ತದೆ. ಬಡಗಿಯು ಒಮ್ಮೆ ಕೆಲಸಮಾಡುತ್ತಲೂ ಒಮ್ಮೆ ಮಾಡದೆಯೂ

ಎರಡುವಿಧವಾಗಿಯೂ ಇರುವಂತೆ ಜೀವನೂ ತನ್ನ ಇಚ್ಛೆಯಂತೆ ಜಾಗ್ರತ್ಸ್ವಪ್ನಗಳಲ್ಲಿ ಸ್ಥೂಲಸೂಕ್ಷ್ಮಶರೀರಗಳಿಂದೊಡಗೂಡಿ ಲೌಕಿಕ ವೈದಿಕ ವ್ಯಾಪಾರಗಳನ್ನು ನಡೆಸುತ್ತಲೇ ವಿಷಯಗಳ ಸುಖಗಳನ್ನು ಅನುಭವಿಸುತ್ತಾನೆ. ಸುಷುಪ್ತಿಯಲ್ಲಿ ಶರೀರೇಂದ್ರಿಯಗಳ ವ್ಯಾಪಾರವಿಲ್ಲದ್ದರಿಂದ ಪರಮಶಿವನ ಪಾಶಶಕ್ತಿಎಂಬ ತಮೋಗುಣದಿಂದೊಡಗೂಡಿ ಪರಮಾನಂದವನ್ನು ಅನುಭವಿಸುತ್ತಾನೆ. ಆದ್ದರಿಂದ ಚೇತನ ಜೀವನೇ ಕರ್ತನೆಂಬುದು ಸಿದ್ಧಿಸುತ್ತದೆ.

ಜೀವಸ್ಯೈವ ಕರ್ತೃತ್ವಾಂಗೀಕಾರೇ ಪರಮೇಶ್ವರವತ್ಸ್ವತಂತ್ರತ್ವಮರ್ಥಾತ್ಸಿದ್ಧಂ. ತಸ್ಮಾತ್ತಯೋರ್ವೈಲಕ್ಷಣ್ಯಂ ಕಥಮಿತ್ಯಾಶಂಕಾಯಾಂ ತತ್ತಾರತಮ್ಯಮಾಹ. ಪರಾಯತ್ತಾಧಿಕರಣಂ ॥ ೧೪ ॥ ಪರಾತ್ತು ತಚ್ಛ್ರುತೇಃ ॥ ೩೮ ॥ ತತ್ರಾಜ್ಞಸ್ಯ ಪುಣ್ಯಾಪುಣ್ಯಕರ್ತೃತ್ವಂ ಪರಾತ್ತು ಪರಶಿವಪ್ರೇರಣಾತ್ಸಂಭವತಿ, ಕಸ್ಮಾತ್ ಶ್ರುತೇಃ. "ಏಷ ಹ್ಯೇವ ಸಾಧು ಕರ್ಮ ಕಾರಯತಿ" ಇತಿ ಶ್ರುತೇಃ. ತಸ್ಮಾಜ್ಜೀವಸ್ಯ ನ ಸ್ವಾತಂತ್ರ್ಯಂ. ಅತ್ರ ಕ್ಷೇತ್ರಜ್ಞಸ್ಯ ಕರ್ತೃತ್ವಂ ಸ್ವಾತಂತ್ರ್ಯೇಣ? ಉತ ಪರಮಾತ್ಮಾಯತ್ತಂ? ಸ ಪರಮಾತ್ಮಾ ಶಿವೋ ವಾ ನಾರಾಯಣೋ ವಾ ಇತಿ ಸಂದಿಹ್ಯತೇ. ಪರಮಾತ್ಮಾಯತ್ತತ್ವೇ ಹಿ ವಿಧಿನಿಷೇಧಶಾಸ್ತ್ರಾನರ್ಥಕ್ಯಂ ಪ್ರಸಜ್ಯೇತ. ಯೋ ಹಿ ಸ್ವಬುದ್ಧ್ಯಾ ಪ್ರವೃತ್ತಿನಿವೃತ್ತ್ಯಾರಂಭಶಕ್ತಃ ಸ ಏವ ನಿಯೋಜ್ಯೋ ಭವತಿ. ಅತಸ್ಸ್ವಾತಂತ್ರ್ಯೇಣಾಸ್ಯ ಕರ್ತೃತ್ವಂ. ಕಿಂಚ "ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಂ । ನಾರಾಯಣ ಪರಂಜ್ಯೋತಿರಾತ್ಮಾ ನಾರಾಯಣಃ ಪರಃ॥" ಇತ್ಯಾರಭ್ಯ "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ" ಇತ್ಯಂತಂ ನಾರಾಯಣಸ್ಯ ಸರ್ವಾತ್ಮಕತ್ವಸರ್ವಾಂತರ್ಯಾಮಿತ್ವಸರ್ವವ್ಯಾಪಕತ್ವಾದಿಪರಮಾತ್ಮಧರ್ಮಾಣಾಂ ವ್ಯವಸ್ಥಾಪನಾತ್, "ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಸ್ಸ್ಮೃತಿರ್ಜ್ಞಾನಮಪೋಹನಂ ಚ" ಇತಿ ಗೀತಾಯಾಮಪಿ ತಥಾ ವ್ಯಪದೇಶಾತ್, ನಾರಾಯಣಶಬ್ದಸ್ಯ ಶಿವೇ ರೂಢ್ಯಭಾವಾತ್ ಗೌಣತ್ವವ್ಯಪದೇಶೇ ಣತ್ವಬಾಧೋ ದುರ್ನಿವಾರಃ. ತಸ್ಮಾಜ್ಜೀವಸ್ಯ ನಾರಾಯಣಸ್ಯ ವಾ ಕರ್ತೃತ್ವಮುಪಪನ್ನಮಿತಿ ಪ್ರಾಪ್ತೇಽಭಿಧೀಯತೇ. ಪರಾತ್ತ್ವಿತ್ಯತ್ರ ತುಶಬ್ದಃ ಪಕ್ಷಂ ವ್ಯಾವರ್ತಯತಿ. ತತ್ಕರ್ತೃತ್ವಮಸ್ಯ ಪರಾತ್ತು ಜೀವಭಿನ್ನೇಶ್ವರಾದೇವ ಹೇತೋರ್ಭವತಿ, ಕುತಃ, ಶ್ರುತೇಃ. "ಕ್ಷರಾತ್ಮಾನಾವೀಶತೇ ದೇವ ಏಕಃ" "ಈಶ್ವರಸ್ಸರ್ವಭೂತಾನಾಂ" "ಅಂತಃಪ್ರವಿಷ್ಟಶ್ಶಾಸ್ತಾ ಜನಾನಾಂ" "ಏಷ ಹ್ಯೇವ ಸಾಧುಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತೇ, ಏಷ ಹ್ಯೇವಾಸಾಧುಕರ್ಮ ಕಾರಯತಿ ತಂ ಯಮಧೋ ನಿನೀಷತೇ" ಇತಿ

"ಯ ಆತ್ಮನಿ ತಿಷ್ಠನ್ನಾತ್ಮನೋಽಂತರಃ ಯಮಾತ್ಮಾ ನ ವೇದ, ಯಸ್ಯಾತ್ಮಾ ಶರೀರಂ ಯ ಆತ್ಮಾನಮಂತರೋ ಯಮಯತಿ ಸ ತ ಆತ್ಮಾಂತರ್ಯಾಮ್ಯಮೃತಃ" ಇತ್ಯಾದಿಶ್ರುತಿಷು ಶಿವಸ್ಯ ಸರ್ವನಿಯಾಮಕತ್ವಶ್ರವಣಾತ್ ನ ಜೀವನಾರಾಯಣಯೋಃ ಕರ್ತೃತ್ವಮುಪಪದ್ಯತೇ. "ಸಹಸ್ರಶೀರ್ಷಂ ದೇವಂ" ಇತ್ಯುಪಕ್ರಮ್ಯ "ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ" ಇತ್ಯಂತೇನ ನಾರಾಯಣಸ್ಯೈವ ಸರ್ವಾಂತರ್ಯಾಮಿತ್ವಾದಿಕಮುಪದಿಶ್ಯತ ಇತಿ ಯದುಕ್ತಂ ತದಯುಕ್ತಂ. ಸರ್ವಾಧಿಕರಣೇ ಷಡ್ವಿಧತಾತ್ಪರ್ಯಲಿಂಗೈಃ ಪೂರ್ವಂ ತದ್ಬಹುಧಾ ಪ್ರಪಂಚಿತಂ. ಶಿವೇ ನಾರಾಯಣಶಬ್ದರೂಢ್ಯಭಾವೇ "ಸರ್ವಮಂಗಳಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ । ಶರಣ್ಯೇ ತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ ॥" "ನಾರಾಯಣೀ ನಾದರೂಪಾ" ಇತ್ಯಾದಿಷು ಪಾರ್ವತ್ಯಾಃ ನಾರಾಯಣೀತಿರೂಢಿಃ ಕಥಮುಪಪದ್ಯತೇ? "ನಾರಾಯಣಸ್ಯ ಸೋದರೀ ನಾರಾಯಣೀ" ಇತಿ ವ್ಯುತ್ಪತ್ತ್ಯಾ ಸಂಭವತೀತಿ ಚೇತ್ತದಸತ್, ಯತ್ರಕುತ್ರಾಪಿ ತದ್ವ್ಯತ್ಪ್ರಯೋಗಾದರ್ಶನಾತ್, ರುದ್ರಸ್ಯ ಪತ್ನೀ ರುದ್ರಾಣೀ, ಇಂದ್ರಸ್ಯ ಪತ್ನೀ ಇಂದ್ರಾಣೀ ಇತ್ಯಾದಿಷು ಪತ್ನೀಪರತ್ವೇನ ದ್ಯೋತನಾಚ್ಚ. ನರಾಣಾಂ ಸಮೂಹಃ ನಾರಂ, ನಾರಂ ಅಯನಂ ಸ್ಥಾನಂ ಯಸ್ಯ ಸಃ ನಾರಾಯಣಃ ಇತ್ಯಾದಿವ್ಯುತ್ಪತ್ತ್ಯಾ ನಸ್ಯ ಣತ್ವಬಾಧ ಇತಿಚೇತ್ತನ್ನ ವಿಷ್ಣೋರಿವ ಶಿವಸ್ಯಾಪಿ ರೂಢತ್ವಾತ್, "ಬಾದರಾಯಣಃ" "ಉತ್ತರಾಯಣಂ" "ರಾಮಾಯಣಂ" ಇತ್ಯಾದಿಷು ಯೋಗರೂಢ್ಯಾಪಿ ಸಂಭವಾದ್ರೂಢೇಃ ಕಿಂ ವ್ಯಕ್ತವ್ಯಂ. "ಸ ಏವ ವಿಷ್ಣುಸ್ಸಪ್ರಾಣಸ್ಸ ಕಾಲೋಽಗ್ನಿಸ್ಸ ಚಂದ್ರಮಾಃ ಸ ಏವ ಸರ್ವಂ ಯದ್ಭೂತಂ ಯಚ್ಚ ಭವ್ಯಂ ಸನಾತನಂ" ಇತಿ ಕೈವಲ್ಯಶ್ರುತೇಃ, "ಯಾನಿ ನಾಮಾನಿ ಗೋವಿಂದ ತವ ಲೋಕೇ ಮಹಾಂತಿ ವೈ । ತಾನ್ಯೇವ ಮಮ ನಾಮಾನಿ ನಾತ್ರ ಕಾರ್ಯಾ ವಿಚಾರಣಾ" ಇತಿ ಹರಿವಂಶೇ ವಿಷ್ಣುಂ ಪ್ರತಿ ಶಿವವಚನಾತ್, "ಮಮೈಷಾ ಪರಮಾ ಮೂರ್ತಿರ್ನಾರಾಯಣಸಮಾಹ್ವಯಾ" ಇತಿ ಕೂರ್ಮೇ ಈಶ್ವರಗೀತಾಯಾಂ ಚ ದರ್ಶನಾತ್, ಕಾರಣಗುಣಾಃ ಕಾರ್ಯೇ ಪರಿಸಂಕ್ರಾಮಂತೀತಿ ನ್ಯಾಯೇನ "ಆತ್ಮಾ ವೈ ಪುತ್ರನಾಮಾಸಿ" ಇತಿ ಶ್ರುತಿನಿರ್ದೇಶಾತ್ ಶಿವೇ ನಾರಾಯಣಪದರೂಢತ್ವೇಽಪಿ ತದಂಶತ್ವೇನ ವಿಷ್ಣೋರಪಿ ಸಮುಚಿತಂ. ಕಿಂಚ ಸ್ಕಾಂದೇ "ಅರಾಸ್ತು ನಿರ್ಧನೋ ಜ್ಞೇಯಃ ನಾರಾಃ ಕಿಲ ಧನಾಧಿಪಃ । ತದ್ಯಣಂ ಸಲ್ಲಪಂ ಸಖ್ಯಾತ್ಸ ವೈ ನಾರಾಯಣಶ್ಶಿವಃ" ಇತಿಣತ್ವವ್ಯತಿರಿಕ್ತತಯಾ ಶಿವೇ ಪ್ರಯೋಗದರ್ಶನಾತ್, ಸರ್ವಥಾ ಣತ್ವಬಾಧವಾದೋ ಹ್ಯವಿಚಾರಿತ

**ರಮಣೀಯಃ. ಗೀತಾಯಾಮಪಿ " ಈಶ್ವರಸ್ಸರ್ವಭೂತಾನಾಂ ಹೃದ್ದೇ ಶೇಽರ್ಜುನ ತಿಷ್ಠತಿ। ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ॥ ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ॥ " ಇತ್ಯಾದಿನಾ ಸರ್ವಭೂತನಿಯಾಮಕತ್ವಂ ಶಿವಸ್ಯೈವ ನಿರ್ದಿಷ್ಟಂ, ನಿರುಪಪದೇಶ್ವರಪದಸ್ಯ ನಾನ್ಯೇಷಾಂ ಸಿದ್ಧತ್ವಾತ್. " ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟಃ " ಇತ್ಯಾದಿನಾ ಸ್ವಸ್ಯೈವ ಸ್ವತಂತ್ರತಯಾ ಕೃಷ್ಣೇನ ಸರ್ವಾಂತರ್ಯಾಮಿತ್ವಾದಿಪರಮಶಿವಧರ್ಮೋಪದೇಶಾತ್ ತಸ್ಯೈವೋಪಪನ್ನಮಿತಿ ಚೇತ್ "ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್" ಇತಿ ಸೂತ್ರೇ ಶಾಸ್ತ್ರದೃಷ್ಟ್ಯಾ ವಾಮದೇವವತ್ಕೃಷ್ಣಸ್ಯ ಬ್ರಹ್ಮಧರ್ಮೋಪದೇಶಃ ಅವಿರುದ್ಧ ಇತಿ ಪೂರ್ವಮೇವ ನಿರ್ದಿಷ್ಟಂ.**

ಜೀವನನ್ನೇ ಕರ್ತನೆಂದು ಒಪ್ಪಿದರೆ ಪರಮೇಶ್ವರನಂತೆ ಅವನೂ ಸ್ವತಂತ್ರನೆನ್ನಿಸುವನು. ಆದ್ದರಿಂದ ಅವರಿಬ್ಬರಿಗೆ ಏನು ವೈಲಕ್ಷಣ್ಯವೆಂದು ಆಶಂಕಿಸಿ ಅವರಿಬ್ಬರಿಗೂ ಇರುವ ತಾರತಮ್ಯವನ್ನು ತಿಳಿಸುತ್ತಾನೆ. ಅವರಿಬ್ಬರಲ್ಲಿ ಅಜ್ಞನೆನಿಸಿದ ಜೀವನಿಗೆ ಪುಣ್ಯಪಾಪಗಳ ಕರ್ತೃತ್ವವು ಪರಶಿವನ ಪ್ರೇರಣದಿಂದಲೇ ಸಂಭವಿಸುತ್ತದೆ. ಹಾಗೆಯೇ ಶ್ರುತಿಯಲ್ಲಿ ಹೇಳಿದೆ. "ಇವನೇ ಕರ್ಮಗಳನ್ನು ಮಾಡಿಸುತ್ತಾನೆ" ಹೀಗೆ ಶ್ರುತಿಯಿರುವುದರಿಂದ ಜೀವನಿಗೆ ಸ್ವಾತಂತ್ರ್ಯವಿಲ್ಲ. ಇಲ್ಲಿ ಜೀವನೇ ಕರ್ತನೆಂಬುದು ಸ್ವಾತಂತ್ರ್ಯದಿಂದಲೋ ಅಥವಾ ಪರಮಾತ್ಮನಿಗಧೀನನಾಗಿಯೋ? ಆ ಪರಮಾತ್ಮನು ಶಿವನೋ ನಾರಾಯಣನೋ? ಎಂದು ಸಂದೇಹ ಬರುತ್ತದೆ. ಪರಮಾತ್ಮನಿಗಧೀನನಾಗಿ ಜೀವನು ಕರ್ತನಾದರೆ ವಿಧಿ ನಿಷೇಧಗಳನ್ನು ತಿಳಿಸುವ ಶಾಸ್ತ್ರವೇ ನಿರರ್ಥಕವಾದೀತು. ಯಾವನು ತನ್ನ ಬುದ್ಧಿಯಿಂದಲೇ ಪುಣ್ಯದಲ್ಲಿ ಪ್ರವರ್ತಿಸಲಿಕ್ಕೂ ಪಾಪವನ್ನು ತೊರೆಯಲಿಕ್ಕೂ ಸಮರ್ಥನಿರುವನೋ ಅವನೇ ಶಾಸನಕ್ಕೆ ಯೋಗ್ಯನಾಗುತ್ತಾನೆ. ಆದ್ದರಿಂದ ಜೀವನು ಸ್ವತಂತ್ರನಾಗಿಯೇ ಕರ್ತನಾಗುತ್ತಾನೆ. " ನಾರಾಯಣನೇ ವಿಶ್ವಾತ್ಮನೂ ಪರಾಯಣನೂ ಆಗಿದ್ದಾನೆ. ಅವನೇ ಪರಂಜ್ಯೋತಿ ಮತ್ತು ಪರಮಾತ್ಮನು " ಎಂದಾರಂಭಿಸಿ " ಹೊರಗೆ ಒಳಗೆ ಇರುವುದೆಲ್ಲವನ್ನೂ ವ್ಯಾಪಿಸಿಕೊಂಡು ನಾರಾಯಣನಿದ್ದಾನೆ" ಇಲ್ಲಿ ನಾರಾಯಣನೇ ಸರ್ವಾತ್ಮಕ–ಸರ್ವಾಂತರ್ಯಾಮಿ—ಸರ್ವವ್ಯಾಪಕ ಎಂದು ಪರಮಾತ್ಮನ ಧರ್ಮಗಳೇ ಅವನಲ್ಲಿ ಇರುವುವೆಂದು ತಿಳಿಸಿದೆ. " ಎಲ್ಲರ ಹೃದಯದಲ್ಲೂ ನಾನೇ ಇದ್ದೇನೆ. ನನ್ನಿಂದಲೇ ಅರಿವು ಮರೆವು ಸ್ಮರಣಗಳುಂಟಾಗುತ್ತವೆ"ಎಂದು ಗೀತೆಯಲ್ಲಿಯೂ ಹೇಳಿದೆ. ನಾರಾಯಣಶಬ್ದವು ಶಿವನಲ್ಲಿ ರೂಢವಾಗಿಲ್ಲ; ಆದರೆ ಅದನ್ನು ಗೌಣಪ್ರಯೋಗವೆಂದು ಭಾವಿಸಿದರೆ ನಕಾರಕ್ಕೆ ಣಕಾರಬರುವಂತಿಲ್ಲ. ಆದ್ದರಿಂದ ಜೀವನನ್ನಾಗಲೀ ನಾರಾಯಣನನ್ನಾಗಲೀ ಕರ್ತನೆಂದು ಭಾವಿಸುವುದೇ ಯುಕ್ತವೆಂದು ಆಕ್ಷೇಪವು ಬರುತ್ತದೆ. ಇದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸಿದೆ. ಈ ಜೀವನಿಗೆ ಕರ್ತೃತ್ವವಾದರೋ ಅವನಿಗಿಂತಲೂ ಭಿನ್ನನಾದ ಈಶ್ವರನಿಂ

ದಲೇ ದೊರೆತಿದೆ. ಹಾಗೆಯೇ ಶ್ರುತಿಯಲ್ಲಿ ಹೇಳಿದೆ. "ಜೀವಪ್ರಕೃತಿಗಳೆರಡಕ್ಕೂ ದೇವನೊಬ್ಬನೇ ನಿಯಾಮಕನು" "ಜೀವರೆಲ್ಲರಿಗೂ ಈಶ್ವರನೇ ಅಧಿಪತಿ" "ಅವನೇ ಬ್ರಹ್ಮನೂ, ಶಿವನೂ, ಸದಾಶಿವನೂ, ಓಂಕಾರವೂ ಆಗಿದ್ದಾನೆ." "ಇವನು ಯಾವನನ್ನು ಈ ಲೋಕಗಳಿಂದ ಮೇಲಕ್ಕೆ ಎತ್ತಲಿಚ್ಛಿಸುವನೋ ಅವನಿಂದ ಒಳ್ಳೆಯ ದನ್ನು ಮಾಡಿಸುತ್ತಾನೆ. ಯಾವನನ್ನು ಕೆಳಗೆ ತುಳಿಯಲಿಚ್ಛಿಸುತ್ತಾನೋ ಅವನಿಂದ ಕೆಟ್ಟದನ್ನು ಮಾಡಿಸುತ್ತಾನೆ." "ಯಾವನು ಆತ್ಮನಲ್ಲಿದ್ದು ಆತ್ಮನಿಂದಲೂ ಹೊರಗಿರು ವನೋ ಯಾವನನ್ನು ಆತ್ಮನೇ ತಿಳಿಯನೋ ಯಾವನಿಗೆ ಆತ್ಮವೇ ಶರೀರವೋ, ಯಾವನು ಆತ್ಮನನ್ನು ಒಳಗೇ ನಿಯಮನಮಾಡುತ್ತಾನೋ ಅವನೇ ನಿನ್ನ ಅಂತರ್ಯಾಮಿ ಮತ್ತು ಅಮೃತನೆನಿಸಿರುವನು" ಹೀಗೆ ಶ್ರುತಿಯಲ್ಲಿ ಶಿವನನ್ನೇ ಸರ್ವರಿಗೂ ನಿಯಾಮಕ ನೆಂದು ಹೇಳಿದೆ. ಆದ್ದರಿಂದ ಜೀವನಾರಾಯಣರೇ ಕರ್ತರೆಂಬುದು ಹೊಂದುವುದಿಲ್ಲ. "ಸಹಸ್ರಶೀರ್ಷಂ ದೇವಂ" ಎಂದಾರಂಭಿಸಿ ಒಳಗೆ ಹೊರಗೆ ಇರುವುದೆಲ್ಲವನ್ನೂ ನಾರಾಯಣನು ವ್ಯಾಪಿಸಿದ್ದಾನೆ ಎಂದು ಕೊನೆಗೊಂಡಿರುವುದರಿಂದ ನಾರಾಯಣನನ್ನೇ ಸರ್ವಾಂತರ್ಯಾಮಿ ಎಂದು ಹೇಳಿದೆಯಲ್ಲಾ ? ಅಂದರೆ ಅದು ಯುಕ್ತವಲ್ಲವೆಂದು ಸರ್ವಾಧಿಕರಣದಲ್ಲಿ ಆರುಬಗೆಯ ತಾತ್ಪರ್ಯಲಿಂಗಗಳಿಂದ ಹಿಂದೆಯೇ ವಿಸ್ತಾರವಾಗಿ ತಿಳಿಸಿದೆ. ಶಿವನಲ್ಲಿ ನಾರಾಯಣಶಬ್ದಕ್ಕೆ ರೂಢಿಯಿಲ್ಲದಿದ್ದರೆ, "ಸರ್ವಮಂಗಳಗಳಿಗೂ ಕಾರಣಳೂ ಸರ್ವಾರ್ಥಗಳನ್ನು ದೊರಕಿಸುವವಳೂ ಶರಣಾಗತರಕ್ಷಕಳೂ ತ್ರಿಯಂಬಕಳೂ ನಾರಾಯಣಿಯೂ ಆದ ಮಹಾದೇವಿಗೆ ನಮಸ್ಕರಿಸುತ್ತೇನೆ." "ನಾದಸ್ವರೂಪಳಾದ ನಾರಾಯಣಿ" ಈ ರೀತಿಯಲ್ಲಿ ಪಾರ್ವತಿಗೆ ನಾರಾಯಣೀಪದಪ್ರಯೋಗವು ಹೇಗೆ ಹೊಂದುತ್ತದೆ? "ನಾರಾಯಣನ ಸೋದರಿ ನಾರಾಯಣಿ" ಎಂಬ ವ್ಯುತ್ಪತ್ತಿಯಿಂದ ಹೀಗೆ ಪ್ರಯೋಗವುಂಟೆಂದು ಹೇಳುವುದು ಯುಕ್ತವಲ್ಲ. ಯಾಕೆಂದರೆ ಎಲ್ಲಿಯಾದರೂ ಅಂತಹ ಪ್ರಯೋಗವೇ ಕಂಡುಬಂದಿಲ್ಲ. ರುದ್ರನ ಹೆಂಡತಿ ರುದ್ರಾಣಿ ಎನಿಸಿದ್ದಾಳೆ. ಹೀಗೆ ರುದ್ರಾಣಿ ಇಂದ್ರಾಣಿ ಎಂಬ ಪದಗಳು ಪತ್ನೀ ಎಂಬ ಅರ್ಥವನ್ನು ತಿಳಿಸುತ್ತವೆ. ಮನುಷ್ಯರ ಸಮೂಹವೇ ನಾರವೆನಿಸುತ್ತದೆ. ಈ ಜನಸಮೂಹವೇ ಅಯನ ಅಂದರೆ ಸ್ಥಾನವಾಗುಳ್ಳವನು ನಾರಾಯಣ (ಸರ್ವಾಂತರ್ಯಾಮಿ) ಎಂಬ ವ್ಯುತ್ಪತ್ತಿಯಿಂದ ಈ ಪದವು ಶಿವನನ್ನು ಬೋಧಿಸುವುದಾದರೆ ನಕಾರಕ್ಕೆ ಣಕಾರವು ಹೇಗೆ ಬರುವುದೆಂದರೆ, ವಿಷ್ಣುವಿನಂತೆಯೇ ಶಿವನಲ್ಲಿಯೂ ಈ ಪದವು ರೂಢವಾಗಿದೆ ಎಂದು ಒಪ್ಪಬೇಕು. ಬಾದರಾಯಣ ಉತ್ತರಾಯಣ ರಾಮಯಣ ಈ ಪದಗಳಲ್ಲಿ ಯೋಗರೂಢಿಯಿಂದಲೇ ಣತ್ವವು ಬರುವುದರಿಂದ ರೂಢಿಯಬಗ್ಗೆ ಮತ್ತೆ ಹೇಳುವುದೇನಿದೆ? "ಅವನೇ ವಿಷ್ಣು, ಪ್ರಾಣ, ಕಾಲ, ಚಂದ್ರ ಎಲ್ಲವೂ ಆಗಿದ್ದಾನೆ" ಎಂದು ಕೈವಲ್ಯದಲ್ಲಿ ಹೇಳಿದೆ. "ಗೋವಿಂದನೇ, ಲೋಕದಲ್ಲಿ ಪ್ರಸಿದ್ಧವಾಗಿರುವ ನಿನ್ನ ಹೆಸರುಗಳೆಲ್ಲವೂ ನನ್ನವೇ ಆಗಿವೆ. ಈ ಬಗ್ಗೆ ಸಂದೇಹಮಾಡಬೇಕಾಗಿಲ್ಲ." ಹೀಗೆ ಹರಿವಂಶದಲ್ಲಿ ಶಿವನೇ ವಿಷ್ಣುವಿಗೆ ಹೇಳಿದ್ದಾನೆ. "ನನ್ನ ಈ ಪರಮಮೂರ್ತಿಯೇ ನಾರಾಯಣನೆಂಬ ಹೆಸರಿನಿಂದ ಲೋಕವನ್ನು

ರಕ್ಷಿಸುತ್ತಿದೆ" ಎಂದು ಕೂರ್ಮಪುರಾಣದ ಈಶ್ವರಗೀತೆಯಲ್ಲೂ ಹೇಳಿದೆ. "ಕಾರಣ ಗುಣಗಳು ಕಾರ್ಯದಲ್ಲಿ ಸಂಭಸುತ್ತವೆ" ಎಂಬ ನ್ಯಾಯದಿಂದಲೂ, "ಆತ್ಮನೇ ಮಗನೆಂಬ ಹೆಸರಿನಿಂದ ಬಂದಿದ್ದಾನೆ" ಎಂದು ಶ್ರುತಿಯಲ್ಲಿ ಹೇಳಿಸುವುದರಿಂದಲೂ, ಶಿವನಲ್ಲಿಯೇ ನಾರಾಯಣಪದವು ರೂಢವಾಗಿದ್ದರೂ ಅವನ ಅಂಶವಾದ್ದರಿಂದ ವಿಷ್ಣುವಿಗೂ ಅದು ಅನ್ವಯಿಸುತ್ತದೆ. ಸ್ಕಾಂದದಲ್ಲಿ ಆರಾಃ ಎಂದರೆ ದರಿದ್ರರು, ನಾರಾಃ ಎಂದರೆ ಧನಿಕರು, ಅವರ ಅಧಿಪತಿ ಕುಬೇರನು,ಅವನೊಡನೆ ಸ್ನೇಹದಿಂದ ಸಂಭಾಷಣ ಮಾಡುವವನು ನಾರಾಯಣ ಎಂದರೆ ಶಿವನು." ಎಂದು ಹೇಳಿರುವುದರಿಂದ ಣತ್ವಕ್ಕೆ ಪ್ರಸಕ್ತಿಯೇ ಇಲ್ಲ. ಗೀತೆಯಲ್ಲೂ "ಈಶ್ವರನು ಎಲ್ಲರ ಹೃದಯದಲ್ಲೂ ನೆಲಸಿ ತನ್ನ ಮಾಯಾಶಕ್ತಿಯಿಂದ ದೇಹಯಂತ್ರದಲ್ಲಿ ಸಿಲುಕಿರುವ ಜೀವರನ್ನು ಪ್ರೇರಿಸುತ್ತಿದ್ದಾನೆ. ಅವನಿಗೇ ಸರ್ವಭಾವದಿಂದ ಶರಣಾಗು" ಎಂದು ಹೇಳಿರುವುದರಿಂದ ಶಿವನೇ ಸರ್ವರಿಗೂ ನಿಯಾಮಕನೆಂಬುದು ಸ್ಪಷ್ಟಪಡುತ್ತದೆ. ಯಾವೊಂದು ವಿಶೇಷಣವೂ ಇಲ್ಲದ ಈಶ್ವರಪದವು ಶಿವನಲ್ಲದೆ ಬೇರೆಯವರಿಗೆ ಅನ್ವಯಿಸುವುದಿಲ್ಲ. "ಎಲ್ಲರ ಹೃದಯದಲ್ಲಿ ನಾನೇ ನೆಲಸಿದ್ದೇನೆ" ಎಂಬಲ್ಲಿ ಕೃಷ್ಣನು ಸ್ವತಂತ್ರನಾಗಿ ತನ್ನನ್ನೇ ಸರ್ವಾಂತರ್ಯಾಮಿ ಎಂದು ಹೇಳಿ ತನ್ನಲ್ಲಿಯೂ ಶಿವನ ಧರ್ಮಗಳನ್ನು ತಿಳಿಸಿರುವುದರಿಂದ ಅವನೇ ಪರಬ್ರಹ್ಮನೆನಿಸಬಹುದಲ್ಲವೆ? ಅಂದರೆ "ಶಾಸ್ತ್ರದೃಷ್ಟ್ಯಾ ತೂಪದೇಶೋ ವಾಮದೇವವತ್" ಎಂಬ ಸೂತ್ರದಲ್ಲಿ ಶಾಸ್ತ್ರದೃಷ್ಟಿಯಿಂದ ವಾಮದೇವನಂತೆ ಕೃಷ್ಣನು ಬ್ರಹ್ಮಧರ್ಮಗಳನ್ನು ತನ್ನಲ್ಲಿ ಇರುವಂತೆ ಹೇಳಿದ್ದರಲ್ಲಿ ವಿರೋಧವೇನೂ ಇಲ್ಲವೆಂದು ಹಿಂದೆಯೇ ಸ್ಪಷ್ಟವಾಗಿ ತಿಳಿಸಲಾಗಿದೆ.

ನನ್ವೇವಂ ವಿಧಿನಿಷೇಧಶಾಸ್ತ್ರಾನರ್ಥಕ್ಯಂ ಪ್ರಸಜ್ಯೇತೇತ್ಯುಕ್ತಂ. ತತ್ರಾಹ. **ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ ॥ ೩೯ ॥** ಈಶ್ವರಃ ಕ್ಷೇತ್ರಜ್ಞಃ ಕೃತಕರ್ಮಾಪೇಕ್ಷಸ್ಸನ್ನೇವ ತೇಷಾಂ ಸುಖಂ ದುಃಖಂ ಚ ದದಾತಿ, ವಿಹಿತಾನಾಂ ಪ್ರತಿಷಿದ್ಧಾನಾಂ ಚ ಕರ್ಮಣಾಂ ಅವೈಯರ್ಥ್ಯಾದಿಭ್ಯ ಅವಿರೋಧಾದಿಭ್ಯಃ ಇತ್ಯರ್ಥಃ. ಅನ್ಯಥಾ ವಿಧಿನಿಷೇಧಶಾಸ್ತ್ರಸ್ಯಾಪ್ರಾಮಾಣ್ಯಂ ಸ್ಯಾತ್. ಸರ್ವಾಸು ಕ್ರಿಯಾಸು ಪುರುಷೇಣ ಕೃತಂ ಪ್ರಯತ್ನಮುದ್ಯೋಗಮಪೇಕ್ಷ್ಯಾಂತರ್ಯಾಮೀ ಪರಮಾತ್ಮಾ ತದನುಮತಿದಾನೇನ ಪ್ರವರ್ತಯತಿ. ಪರಮಾತ್ಮಾನುಮತಿಮಂತರೇಣಾಸ್ಯ ಪ್ರವೃತ್ತಿರ್ನೋಪಪದ್ಯತೇ. ಕುತಃ ಏತತ್? ವಿಹಿತಪ್ರತಿಷಿದ್ಧಾವೈಯರ್ಥ್ಯಾದಿಭ್ಯಃ. ಅತ್ರಾದಿಶಬ್ದೇನಾನುಗ್ರಹನಿಗ್ರಹಾದಯೋ ಗೃಹ್ಯಂತೇ. ಯಥಾ ದ್ವಯೋಸ್ಸಾಧಾರಣೇ ಧನೇ ಪರಸ್ವತ್ವಾಪಾದನಮನ್ಯತರಾನುಮತಿಮಂತರೇಣ ನೋಪಪದ್ಯತೇ. ಅಥಾಪೀತರಾನುಮತಿಃ ಸ್ವೇನೈವ ಕೃತೇತಿ ತತ್ಫಲಂ ಸ್ವಸ್ಯೈವ ಭವತಿ. ಪಾಪಕರ್ಮಸು ನಿವರ್ತನಶಕ್ತಸ್ಯಾಪ್ಯನುಮಂತೃತ್ವಂ ಸನಿರ್ದಯತ್ವಮಾವಹತೀತಿ ಪೂರ್ವಮೇವ

ಪ್ರತಿಪಾದಿತಂ. “ ನನ್ವೇವಂ ಏಷ ಹ್ಯೇವ ಸಾಧುಕರ್ಮ ಕಾರಯತಿ.... ತಮಧೋ ನಿನೀಷತಿ ” ಇತ್ಯುನ್ನಿನೀಷಯಾಧೋನಿನೀಷಯಾ ಚ ಸ್ವಯಮೇವ ಸಾಧ್ವಸಾಧುನೀ ಕರ್ಮಣೀ ಕಾರಯತೀತ್ಯೈತನ್ನೋಪಪದ್ಯತ ಇತಿ ಚೇದುಚ್ಯತೇ. ಏತನ್ನ ಸರ್ವಸಾಧಾರಣಂ. ಯಸ್ತ್ವತಿಮಾತ್ರಪರಮಪುರುಷಾನುಕೂಲ್ಯೇ ವ್ಯವಸ್ಥಿತಃ ಪ್ರವರ್ತತೇ ತಮನುಗೃಹ್ಣನ್ ಭಗವಾನ್ ಶಿವಸ್ಸ್ವಯಮೇವ ಸ್ವಪ್ರಾಪ್ತ್ಯುಪಾಯೇಷ್ವತಿಕಲ್ಯಾಣೇಷು ಕರ್ಮಸ್ವೇವ ರುಚಿಂ ಜನಯತಿ. ಯಶ್ಚಾತಿಮಾತ್ರಪ್ರಾತಿಕೂಲ್ಯೇ ವ್ಯವಸ್ಥಿತಃ ಪ್ರವರ್ತತೇ ತಂ ಸ್ವಪ್ರಾಪ್ತಿವಿರೋಧಿಷ್ವಧೋಗತಿಸಾಧನೇಷು ಕರ್ಮಸು ರುಚಿಂ ಜನಯತಿ. ತದುಕ್ತಂ ಕೃಷ್ಣಗೀತಾಯಾಮಪಿ “ ಅಹಂ ಸರ್ವಸ್ಯ ಪ್ರಭವೋ ಮತ್ತಸ್ಸರ್ವಂ ಪ್ರವರ್ತತೇ । ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥ ” ಇತ್ಯಾರಭ್ಯ “ ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ । ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥ ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ । ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ ” ಇತಿ. ತಥಾ “ ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ ” ಇತ್ಯಾದಿ “ ಮಾಮಾತ್ಮಪರದೇಹೇಷು ವಿದ್ವಿಷಂತೋಽಭ್ಯಸೂಯಕಾಃ ” ಇತ್ಯಂತಮುಕ್ತ್ವಾ “ ತಾನಿಹ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ । ಕ್ಷಿಪಾಮ್ಯಜಸ್ರಮಶುಭಾನ್ ಆಸುರೀಷ್ವೇವ ಯೋನಿಷು ” ಇತಿ. ತಥೋಕ್ತಂ ಭಗವತಾ ಸ್ವಯಮೇವ ಶಿವಗೀತಾಸು “ ಅಥ ಕಿಂ ಬಹುನೋಕ್ತೇನ ಮಯ್ಯೈವೋತ್ಪಾದಿತಂ ಜಗತ್ । ಮಯ್ಯೈವ ಪಾಲ್ಯತೇ ನಿತ್ಯಂ ಮಯಾ ಸಂಹ್ರಿಯತೇಽಪಿ ಚ ॥ ” ಇತ್ಯುಪಕ್ರಮ್ಯ “ ವಾಲಾಗ್ರಮಾತ್ರಂ ಹೃದಯಸ್ಯ ಮಧ್ಯೇ ವಿಶ್ವೇದೇವಂ ಜಾತವೇದಸಂ ವರೇಣ್ಯಂ । ತಮಾತ್ಮಾನಂ ಯೇಽನುಪಶ್ಯಂತಿ ಧೀರಾಸ್ತೇಷಾಂ ಶಾಂತಿಶ್ಶಾಶ್ವತೀ ನೇತರೇಷಾಂ ॥ ”“ ಅಹಂ ಯೋನಿಂ ಯೋನಿಮಧಿತಿಷ್ಠಾಮ್ಯೇಕೋ ಮಯೇದಂ ಪೂರ್ವಂ ಪಂಚವಿಧಂ ಚ ಸರ್ವಂ । ಮಾಮೀಶಾನಂ ಪುರುಷಂ ದೇವಮೀಢ್ಯಂ ನಿಚಾಯ್ಯ ಮಾಂ ಶಾಂತಿಮತ್ಯಂತಮೇತಿ ॥ ಯೇನಾಕಾರೇಣ ಯೇ ಮರ್ತ್ಯಾ ಮಾಮೇವೈಕಮುಪಾಸತೇ। ತೇನಾಕಾರೇಣ ತೇಭ್ಯೋಽಹಂ ಪ್ರಸನ್ನೋ ವಾಂಛಿತಂ ದದೇ ॥ ವಿಧಿನಾಽವಿಧಿನಾ ವಾಪಿ ಭಕ್ತ್ಯಾ ಯೇ ಮಾಮುಪಾಸತೇ । ತೇಭ್ಯಃ ಫಲಂ ಪ್ರಯಚ್ಛಾಮಿ ಪ್ರಸನ್ನೋಽಹಂ ನ ಸಂಶಯಃ ॥ ಅಪಿಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ । ಸಾಧುರೇವ ಸಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುರ್ನ ಲಿಪ್ಯತೇ ಚಾಕ್ಷುಷೈಸ್ಸರ್ವದೋಷೈಃ । ಏಕಸ್ತಥಾ

ಸರ್ವಭೂತಾಂತರಾತ್ಮಾ ನ ಲಿಪ್ಯತೇ ಲೋಕದುಃಖೇನ ಸರ್ವೈಃ ॥ ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ। ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥ ಅಭಕ್ತಾ ಯೇ ಮಹಾಬಾಹೋ ಮಯಿ ಶ್ರದ್ಧಾವಿವರ್ಜಿತಾಃ। ಫಲಂ ಕಾಮಯಮಾನಾಸ್ತೇ ಹ್ಯೈಹಿಕಾಮುಷ್ಮಿಕಾದಿಕಂ । ಕ್ಷಯಿಷ್ಣ್ವಲ್ಪಂ ಸಾತಿಶಯಂ ಯತಃ ಕರ್ಮಫಲಂ ಮತಂ ॥ ತದವಿಜ್ಞಾಯ ಕರ್ಮಾಣಿ ಯೇ ಕುರ್ವಂತಿ ನರಾಧಮಾಃ । ಮಾತುಃ ಪತಂಗಗರ್ಭೇಷು ಮೃತ್ಯುವಕ್ತ್ರೇ ಪುನಃ ಪುನಃ। ನಾನಾಯೋನಿಷು ಜಾತಸ್ಯ ದೇಹಿನೋ ಯಸ್ಯ ಕಸ್ಯಚಿತ್। ಕೋಟಿಜನ್ಮಾರ್ಜಿತೈಃ ಪುಣ್ಯೈರ್ಮಯಿ ಭಕ್ತಿಃ ಪ್ರಜಾಯತೇ । ಸ ಏವ ಲಭತೇ ಜ್ಞಾನಂ ಮದ್ಭಕ್ತಃ ಶ್ರದ್ಧಯಾನ್ವಿತಃ। ನಾನಾಕರ್ಮಾಣಿ ಕುರ್ವಾಣೋ ಜನ್ಮಕೋಟಿಶತೈರಪಿ । ತತಸ್ಸರ್ವಂ ಪರಿತ್ಯಜ್ಯ ಮದ್ಭಕ್ತಿಂ ಸಮುಪಾಹರ ॥ ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ । ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ॥ ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ । ಯತ್ತಪಸ್ಯಸಿ ರಾಮ ತ್ವಂ ತತ್ಕುರುಷ್ವ ಮದರ್ಪಣಂ ॥ ತತಃ ಪರತರಾ ನಾಸ್ತಿ ಭಕ್ತಿರ್ಮಯಿ ರಘೂತ್ತಮ ॥ ” ಇತಿ.

ಹಾಗಾದರೆ ವಿಧಿನಿಷೇಧಗಳನ್ನು ತಿಳಿಸುವ ಶಾಸ್ತ್ರವೇ ಅನರ್ಥಕಾರಿಯಾದೀತು ಎಂದಾಶಂಕಿಸಿ ನಿರಾಕರಿಸುತ್ತಾನೆ—ಈಶ್ವರನು ಜೀವರ ಕರ್ಮಗಳೆಲ್ಲವನ್ನೂ ನೋಡಿ ಅವಕ್ಕನುಗುಣವಾಗಿಯೇ ಅವರಿಗೆ ಸುಖದುಃಖಗಳನ್ನು ಕೊಡುತ್ತಾನೆ. ಆದ್ದರಿಂದ ವಿಹಿತ ಅಥವಾ ನಿಷಿದ್ಧಕರ್ಮಗಳೊಂದೂ ವ್ಯರ್ಥವಾಗಲಿಕ್ಕವಕಾಶವಿಲ್ಲ. ಇಲ್ಲವಾದರೆ ವಿಧಿನಿಷೇಧಗಳನ್ನು ತಿಳಿಸುವ ಶಾಸ್ತ್ರವೇ ಪ್ರಮಾಣವಾಗದೇ ಹೋದೀತು. ಎಲ್ಲಾ ಕ್ರಿಯೆಗಳಲ್ಲೂ ಪುರುಷನ ಪ್ರಯತ್ನವನ್ನು ಅನುಸರಿಸಿಯೇ ಶಿವನು ಅವನಿಗೆ ಅನುಮತಿಯನ್ನು ನೀಡುವನು. ಪರಮಾತ್ಮನ ಪ್ರವೃತ್ತಿಯಾದರೂ ಪ್ರೇರಣೆಯ ರೂಪದಿಂದಲೇ ಸಂಭವಿಸುತ್ತದೆ. ಇದರಿಂದ ವಿಹಿತ ಮತ್ತು ನಿಷಿದ್ಧವಾದ ಕರ್ಮಗಳು ವ್ಯರ್ಥವಾಗುವಂತಿಲ್ಲ. ಹೀಗೆಯೇ ಅನುಗ್ರಹ ನಿಗ್ರಹಗಳೂ ಸಾರ್ಥಕವೆನಿಸುತ್ತವೆ. ಇಬ್ಬರಿಗೂ ಸಾಮಾನ್ಯವಾಗಿ ಸೇರಿದ ಹಣವನ್ನು ಬೇರೊಬ್ಬನಿಗೆ ಒಪ್ಪಿಸುವುದಾದರೆ ಇಬ್ಬರ ಅನುಮತಿಯೂ ಬೇಕಾದ್ದರಿಂದ ಇವರಿಬ್ಬರಲ್ಲೊಬ್ಬನ ಅನುಮತಿಯಿಲ್ಲದೆ ಸಾಧ್ಯವಾಗುವುದಿಲ್ಲ. ಆದರೂ ಬೇರೆಯವನ ಅನುಮತಿಯನ್ನು ತಾನೇ ಮಾಡುವುದಾದರೆ ಅದರ ಫಲವೂ ತನಗೇ ಬರಬೇಕಾಗುತ್ತದೆ. ಪಾಪಕರ್ಮಗಳಿಂದ ಒಬ್ಬನನ್ನು ತಪ್ಪಿಸಲಿಕ್ಕೆ ಶಕ್ತಿಯಿದ್ದರೂ ಅದನ್ನು ಅನುಮೋದಿಸುವವನು ನಿಷ್ಕರುಣಿ ಎನಿಸುವನು ಎಂದು ಹಿಂದೆಯೇ ತಿಳಿಸಲಾಗಿದೆ. “ಇವನೇ ಒಳ್ಳೆಯದನ್ನೂ ಕೆಟ್ಟದನ್ನೂ ಮಾಡಿಸುತ್ತಾನೆ” ಎಂದು ಮುಂತಾಗಿ ಹೇಳಿದ್ದರೂ ಸಹ ಅದೂ ಹೊಂದುವುದಿಲ್ಲವೆಂದರೆ ಅದಕ್ಕೂ ಸಮಾಧಾನವಿದೆ. ಇದು

ಎಲ್ಲ ಜೀವರಿಗೂ ಸಾಮಾನ್ಯವಾಗಿ ಅನ್ವಯಿಸುವುದಿಲ್ಲ. ಯಾವನು ವಿಶೇಷವಾಗಿ ಪರಮಾತ್ಮನಿಗೆ ಅನುಕೂಲನಾಗಿ ವರ್ತಿಸುವನೋ ಅಂತಹಭಕ್ತನನ್ನು ಅನುಗ್ರಹಿಸುತ್ತ ಶಿವನು ತಾನಾಗಿಯೇ ತನ್ನನ್ನೇ ಆ ಭಕ್ತನಿಗೆ ದೊರಕಿಸಲು ಅನುರೂಪವಾಗುವಂತೆ ಅವನಿಗೆ ಅತ್ಯಂತ ಶುಭಕರ್ಮಗಳಲ್ಲಿಯೇ ಪ್ರೀತಿಯನ್ನು ಹುಟ್ಟಿಸುತ್ತಾನೆ. ಯಾವನು ಅತ್ಯಂತವಿರುದ್ಧಮಾರ್ಗಗಳನ್ನೇ ಆಚರಿಸುತ್ತಿರುವನೋ ಅವನಿಗೆ ತನ್ನನ್ನು ದೊರಕಿಸ ಲಿಕ್ಕಾಗದಂತೆ ಅಧೋಗತಿಯನ್ನೇ ಕೊಂಡಿಸುವಂತಹ ದುಷ್ಕರ್ಮಗಳಲ್ಲಿಯೇ ಪ್ರೀತಿ ಯನ್ನು ಹುಟ್ಟಿಸುತ್ತಾನೆ.ಹೀಗೆಯೇ ಕೃಷ್ಣನು ಗೀತೆಯಲ್ಲಿ"ನಾನೇ ಎಲ್ಲಕ್ಕೂಕಾರಣನು, ನನ್ನಿಂದಲೇ ಎಲ್ಲವೂ ಹೊರಟಿದೆ"ಎಂದು ಜ್ಞಾನಿಗಳು ತಿಳಿದು ಸದ್ಭಾವದಿಂದೊಡಗೂಡಿ ನನ್ನನ್ನು ಆಶ್ರಯಿಸುತ್ತಾರೆ " ಎಂದಾರಂಭಿಸಿ "ಹೀಗೆ ನಿತ್ಯಯುಕ್ತರಾಗಿ ಪ್ರೀತಿಯಿಂದ ಭಜಿಸುವವರಿಗೆ ಸದ್ಬುದ್ಧಿಯನ್ನು ಅನುಗ್ರಹಿಸುತ್ತೇನೆ. ಅದರಿಂದ ಅವರು ನನ್ನಲ್ಲಿ ಯೇ ಸೇರುತ್ತಾರೆ. ಅವರ ಸೌಕರ್ಯಕ್ಕಾಗಿ ಅವರೊಳಗೆ ನಾನೇ ನೆಲಸಿ ನನ್ನ ಜ್ಞಾನ ದೀಪದಿಂದ ಅವರ ಅಜ್ಞಾನಾಂಧಕಾರವನ್ನು ಪರಿಹರಿಸುತ್ತೇನೆ" ಎಂದೂ,"ವಂಚಕರು ಲೋಕದಲ್ಲಿ ಈಶ್ವರನಿಲ್ಲವೆಂದೂ, ಇದನ್ನುಮಿಥ್ಯೆಎಂದೂ ಹೇಳುತ್ತ ಅವರ ಮತ್ತು ಇತರ ದೇಹಗಳಲ್ಲಿ ನೆಲಸಿರುವ ನನ್ನನ್ನು ಅಸೂಯೆಯಿಂದ ನಿಷೇಧಿಸುತ್ತಲಿರುವರು" ಎಂದು ತಿಳಿಸಿ, "ಅಂತಹ ಕ್ರೂರರೂ ಪಾಪಿಗಳೂ ಆದ ನರಾಧಮರನ್ನು ಈ ಸಂಸಾ ರದಲ್ಲಿ ರಾಕ್ಷಸಯೋನಿಗಳಿಗೆ ತಳ್ಳುತ್ತೇನೆ" ಎಂದು ಹೇಳಿದ್ದಾನೆ. ಶಿವಗೀತೆಯಲ್ಲಿ " ಹೆಚ್ಚುಹೇಳಿ ಫಲವೇನು? ನನ್ನಿಂದಲೇ ಇದೆಲ್ಲವೂ ಹೊರಬಂದಿದೆ, ನಾನೇ ಇದನ್ನು ರಕ್ಷಿಸುತ್ತೇನೆ, ಕೊನೆಗೆ ಇದು ನನ್ನಲ್ಲಿಯೇ ಸೇರುತ್ತದೆ " ಎಂದು ಹೇಳಿ " ಹೃದಯ ದಲ್ಲಿ ಬಾಲದ ತುದಿಯಷ್ಟೇ ಪ್ರಮಾಣದಲ್ಲಿ ನೆಲಸಿರುವ ವಿಶ್ವಪ್ರಕಾಶನಾದ ಪರಮಾತ್ಮ ನನ್ನುಯಾರು ಕಾಣುವರೋ ಅವರೇ ಧೀರರು; ಅವರಿಗೇ ಶಾಶ್ವತವಾದ ಶಾಂತಿಯುಂ ಟು. ಬೇರೆಯವರಿಗೆ ಅದು ದೊರೆಯಲಾರದು." "ನಾನೊಬ್ಬನೇ ಪ್ರತಿಯೊಂದು ದೇಹ ದಲ್ಲೂ ನೆಲಸಿದ್ದೇನೆ.ಪಂಚಭೂತಮಯವಾದ ಇದೆಲ್ಲವೂ ನನ್ನಿಂದಲೇ ಬಂದಿದೆ.ಸರ್ವ ನಿಯಾಮಕನೂ ಸರ್ವವಂದ್ಯನೂ ಮಹಾದೇವನೂ ಆದ ನನ್ನನ್ನು ಧ್ಯಾನಿಸಿದವನೇ ಶಾಂತಿಯನ್ನುಹೊಂದುತ್ತಾನೆ" "ಮಾನವನು ನನ್ನನ್ನು ಯಾವ ಆಕಾರದಿಂದ ಉಪಾ ಸನಮಾಡುವನೋ ಅವನಿಗೆ ಆ ಆಕಾರದಿಂದಲೇ ನಾನು ಪ್ರಸನ್ನನಾಗುವೆನು" " ಯಾರು ನನ್ನನ್ನು ವಿಧಿಪೂರ್ವಕವೋ ಅಥವಾ ಬೇರೆರೀತಿಯಲ್ಲೋ ಅರ್ಚಿಸುವರೋ ಅವರಿಗೆ ಹಾಗೆಯೇ ಪ್ರಸನ್ನನಾಗಿ ನಾನು ಫಲವನ್ನು ಕೊಡುವೆನು. ದುಷ್ಟನೂ ಸಹ ತನಗೆ ಬೇರೆಗತಿಯಿಲ್ಲವೆಂದು ನನ್ನನ್ನೇ ಆಶ್ರಯಿಸಿದರೂ ಅವನೂ ಸಹ ವ್ಯವಸ್ಥಿತನಾಗಿ ಸಾಧುವೆನಿಸುವನು. ಲೋಕವೆಲ್ಲಕ್ಕೂ ನೇತ್ರವಾಗಿರುವ ಸೂರ್ಯನು ಲೋಕದ ದುಃಖ ಗಳಿಗೆ ಹೇಗೆ ಅಂಟುವುದಿಲ್ಲವೋ ಹಾಗೆಯೆ ಎಲ್ಲಜೀವರೊಳಗೂ ಇರುವ ನಾನು ಲೋಕ ದುಃಖಗಳಿಗೆ ಅಂಟುವುದಿಲ್ಲ". "ಈ ತ್ರಿಗುಣಾತ್ಮಕವಾದ ನನ್ನ ಮಾಯೆಯನ್ನುಜೀವರು ಸಾಮಾನ್ಯವಾಗಿ ಜಯಿಸಲಾರರು. ಯಾರು ನನ್ನನ್ನೇ ಆಶ್ರಯಿಸುವರೋ ಅವರು ಈ

ಮಾಯೆಯನ್ನು ದಾಟಬಲ್ಲರು." "ಭಕ್ತರಲ್ಲದವರು, ನನ್ನಲ್ಲಿ ಶ್ರದ್ಧೆಯಿಲ್ಲದವರು, ಐಹಿಕಾಮುಷ್ಮಿಕ ಫಲಗಳನ್ನು ಬಯಸುವವರು, ಕರ್ಮಫಲವು ಅತ್ಯಲ್ಪವೂ ಕ್ಷಣಿಕವೂ ಆದುದೆಂದು ತಿಳಿಯದೆ ಕರ್ಮಗಳನ್ನಾಚರಿಸುವವರು ಇವರೆಲ್ಲರೂ ಪಕ್ಷಿಜನ್ಮದಲ್ಲಿ ಹುಟ್ಟಿ ಮತ್ತೆ ಮತ್ತೆ ಮೃತ್ಯುವಿಗೀಡಾಗುತ್ತಾರೆ. ಹೀಗೆ ಅನೇಕ ಯೋನಿಗಳಲ್ಲಿ ಹುಟ್ಟುತ್ತಿರುವ ಜೀವನೊಬ್ಬನಿಗೆ ಕೋಟಿಜನ್ಮಗಳಲ್ಲಿ ಸಂಪಾದಿಸಿದ ಪುಣ್ಯದಿಂದ ನನ್ನಲ್ಲಿ ಭಕ್ತಿ ಹುಟ್ಟುತ್ತದೆ. ನನ್ನಲ್ಲಿ ಶ್ರದ್ಧೆಯುಳ್ಳವನೇ ನನ್ನ ಜ್ಞಾನವನ್ನು ಪಡೆಯುತ್ತಾನೆ. ಕೋಟಿ ಜನ್ಮಗಳವರೆಗೂ ಬೇರೆ ಕರ್ಮಗಳನ್ನು ಎಷ್ಟುಮಾಡಿದರೂ ಅವುಗಳಿಂದ ಏನೂ ಫಲವಿಲ್ಲ. ಆದ್ದರಿಂದ ಎಲ್ಲವನ್ನೂ ತೊರೆದು ನನ್ನ ಮಾಯಾಶಕ್ತಿಯನ್ನು ತಡೆಗಟ್ಟಿ ಎಲ್ಲಾ ಧರ್ಮಗಳನ್ನೂ ತೊರೆದು ನನಗೇ ಶರಣಾಗತನಾಗು. ನಾನು ನಿನ್ನನ್ನು ಎಲ್ಲಾ ಪಾಪಗಳಿಂದಲೂ ವಿಮೋಚನಗೊಳಿಸುತ್ತೇನೆ. ಆದ್ದರಿಂದ ಅಳಬೇಡ. ರಾಮನೇ, ನೀನು ಮಾಡುವುದನ್ನೂ, ತಿನ್ನುವುದನ್ನೂ, ದೇವನಿಗೆ ಅರ್ಪಿಸುವುದನ್ನೂ, ಒಬ್ಬನಿಗೆ ಕೊಡುವುದನ್ನೂ, ದೇಹದಂಡಿಸಿ ಮಾಡುವ ತಪಸ್ಸನ್ನೂ ನನಗೇ ಅರ್ಪಿಸು. ನನ್ನನ್ನು ಮೆಚ್ಚಿಸಲು ಭಕ್ತಿಗಿಂತ ಬೇರೆ ಮಾರ್ಗವಿಲ್ಲ." ಹೀಗೆ ಜೀವನಿಗೆ ಪರಶಿವನೇ ಪ್ರೇರಕನೆಂದೂ ಕಾರಣನೆಂದೂ ಶಿವಗೀತೆಯಲ್ಲಿ ಹೇಳಿರುವುದರಿಂದ ಜೀವನೇ ಬ್ರಹ್ಮವೆಂದು ಹೇಳುವ ಅದ್ವೈತಮತವು ನಿರಾಕೃತವಾಯಿತು.

ಏವಂ ಜೀವಸ್ಯ ಬ್ರಹ್ಮಪ್ರೇರಕತ್ವಹೇತುತ್ವೇನ ಚ ಸಾಕ್ಷಾತ್ತಸ್ಯೈವ ಬ್ರಹ್ಮತ್ವಸಾಧಕಾದ್ವೈತಮತಂ ನಿರಸ್ಯ ತದಂತರ್ಭೂತಜೀವಾಲೀಕತ್ವ ಜೀವೈಕತ್ವಪ್ರತಿಬಿಂಬತ್ವಾದಿವಾದಂ ನಿರಾಕರೋತಿ. ಅಂಶಾಧಿಕರಣಂ ||೧೩||

ಅಂಶೋ ನಾನಾವ್ಯಪದೇಶಾದನ್ಯಥಾ ಚಾಪಿದಾಶಕಿತವಾದಿತ್ವಮಧೀಯತ ಏಕೇ ||೪೦|| ಪೂರ್ವತ್ರ ಜೀವಸ್ಯಾಣುತ್ವಜ್ಞಾತೃತ್ವಪರಮಶಿವಾಯತ್ತ ಕರ್ತೃತ್ವಾದಿಕಂ ಪ್ರಸಾಧ್ಯೇದಾನೀಂ ಜೀವೈಕತ್ವಜೀವಬ್ರಹ್ಮತ್ವಜೀವಾಳೀಕತ್ವಜೀವಪ್ರಬಿಂಬತ್ವಾದಿಕಂ ಅನುಪಪನ್ನಮವೈದಿಕತ್ವಾದಿತಿ ಪ್ರಚಕ್ಷ್ಯತೇ. "ಯಥಾ ಸುದೀಪ್ತಾತ್ಪಾವಕಾದ್ವಿಸ್ಫುಲಿಂಗಾಸ್ಸಹಸ್ರಶಃ ಪ್ರಭವಂತೇ ಸರೂಪಾಃ|ತಥಾಕ್ಷರಾದ್ವಿವಿಧಾಸ್ಸೌಮ್ಯ ಭಾವಾಃ ಪ್ರಜಾಯಂತೇ ತತ್ರ ಚೈವಾಪಿ ಯಂತಿ." "ಮಾಯಾಂ ತು ಪ್ರಕೃತಿಂ" ಇತ್ಯಾದಿಶ್ರುತಿಶತೈಃ ಜೀವಾನಾಂ ಬ್ರಹ್ಮಾಂಶತ್ವಶ್ರವಣಾತ್ ನ ಜೀವೈಕತ್ವಾದಿವಾದೋ ಯುಕ್ತಃ, ನಾನಾವ್ಯಪದೇಶಾತ್. "ದ್ವಾ ಸುಪರ್ಣಾ" ಇತ್ಯಾದೌ ಜೀವಬ್ರಹ್ಮಣೋರ್ಭೇದವ್ಯಪದೇಶಾತ್, ಅನ್ಯಥಾ ಚಾಪಿ, ತತ್ತ್ವಮಸ್ಯಾದಿಶ್ರುತಾವಭೇದವ್ಯಪದೇಶಾಚ್ಚ ಜೀವಬ್ರಹ್ಮಣೋರ್ಭೇದಾಭೇದ ಏವಾಂಗೀಕರ್ತವ್ಯಃ. ಜೀವಾಃ ಬ್ರಹ್ಮಣ ಅಂಶಾ ಏವ, ನತ್ವಿತರೇ, ಶ್ರುತೇರ್ದೃಷ್ಟತ್ವಾತ್. ತಥಾಪಿ ದಾಶಕಿತವಾದಿತ್ವಮಧೀಯತ ಏಕೇ, ಏಕೇ ಶಾಖಿನಃ ಆಥರ್ವಣಿಕಾಃ ಬ್ರಹ್ಮಣಃ ದಾಶಕಿತವತ್ವಂ ದಾಸ್ಯದಾಸಕತ್ವೇನ ಸದಾ ಜೀವ

ಬ್ರಹ್ಮಣೋಽಭೇದಮಧೀಯತೇ ವದಂತಿ. "ಬ್ರಹ್ಮದಾಶಾ ಬ್ರಹ್ಮದಾಸಾ ಬ್ರಹ್ಮೈವೇಮೇ ಕಿತವಾಃ" ಇತ್ಯಾದಿಶ್ರುತ್ಯಾ ಮೋಕ್ಷದಶಾಯಾಮಪಿ ಮುಕ್ತಜೀವಾನಾಂ ಬ್ರಹ್ಮಸಾರೂಪ್ಯಸಿದ್ಧಾನಾಮಪಿ ದಾಸತ್ವೇ ಕೈಂಕರ್ಯಪಾರತಂತ್ರ್ಯಾದಿಕಮವಿರೋಧೇನ ಸಾಧಯಂತಿ. ಸೂತ್ರಕಾರೇಣ ಏಕೇ ಶಾಖಿನ ಇತಿ ತನ್ಮತಸ್ಯ ವೇದೈಕದೇಶವರ್ತಿತ್ವೇನ ನಿರ್ದೇಶಾತ್. ಸಂಸಾರದಶಾಯಾಂ ಬದ್ಧಶುದ್ಧಜೀವಾನಾಂ ಪರಮೇಶ್ವರಶೇಷಶೇಷಿತ್ವಾದಿಕಮುಪಪನ್ನಮಪಿ ಮೋಕ್ಷದಶಾಯಾಂ ಪಾರತಂತ್ರ್ಯಾದಿಕಂ ಭಯಹೇತುತ್ವೇನ ಮುಕ್ತಜೀವಾನಾಮನಂಗೀಕರಣೀಯಂ. "ಯಥಾ ನದ್ಯಃ" ಇತ್ಯಾದಿಶ್ರುತಿಷು ಜೀವಬ್ರಹ್ಮಣೋಸ್ಸ್ವರೂಪೈಕ್ಯೋಪದೇಶಾತ್. ನಚ ಭೇದಾಭೇದಯೋರ್ವಿರೋಧ ಇತಿವಾಚ್ಯಂ, ವಯಂ ಶ್ರುತಿಪ್ರಮಾಣವಾದಿನಃ, ನ ಯುಕ್ತಿಂ ಬಹುಮನ್ಮಹೇ ಇತಿ ಪೂರ್ವಮೇವೋಕ್ತತ್ವಾತ್, ಶ್ರುತಿಯುಕ್ತ್ಯನುಭವವತ್ತ್ವೇನ ಜಿಜ್ಞಾಸಾದ್ಯಧಿಕರಣೇಷು ಪೂರ್ವಮೇವ ಬಹುಧಾ ಪ್ರಸಾಧಿತತ್ವಾಚ್ಚ. ಅದ್ವೈತವಿಶಿಷ್ಟಾದ್ವೈತಮತಯೋರಪಿ ಶ್ರುತಿಸಮನ್ವಯಾಭಾವತ್ವೇನ ಭೇದಾಭೇದಮತಚ್ಛಾಯಾವಲಂಬನಾತ್ ಗೌಣತ್ವೇನ ಸರ್ವಶ್ರುತಿಸಮನ್ವಯೋ ನಿರ್ದಿಷ್ಟಃ. ತಾರ್ಕಿಕಾದಿಕೇವಲಭೇದವಾದಿನಾಂ ಬೌದ್ಧಾದಿವತ್ಸರ್ವಶ್ರುತಿಸಮಾನ್ವಯಾಭಾವಾತ್ ತನ್ಮತಂ ಸುತರಾಮಸಂಗತಂ. ಇದಾನೀಂ ಕಿಮಯಂ ಜೀವಃ ಪರಸ್ಮಾದತ್ಯಂತಭಿನ್ನಃ ಉತ ಪರಮೇವ ಬ್ರಹ್ಮ ಭ್ರಾಂತಂ. ಉತ ಬ್ರಹ್ಮೈವೋಪಾಧ್ಯವಚ್ಛಿನ್ನಂ. ಅಥ ಬ್ರಹ್ಮಾಂಶಃ? ಇತಿ ಸಂಶಯ್ಯತೇ. ಶ್ರುತಿವಿಪ್ರತಿಪತ್ತೇಸ್ಸಂಶಯಃ. ನನು "ತದನನ್ಯತ್ವಂ", ಅಧಿಕಂ ತು ಭೇದನಿರ್ದೇಶಾತ್" ಇತ್ಯತ್ರಾಯಮರ್ಥೋ ನಿರ್ಣೀತಃ. ಸತ್ಯಂ ಸ ಏವ ನಾನಾತ್ವೈಕತ್ವಶ್ರುತಿವಿಪ್ರತಿಪತ್ತ್ಯಾ ಆಕ್ಷಿಪ್ಯ ಜೀವಸ್ಯ ಬ್ರಹಾಂಶತ್ವೋಪಪಾದನೇನ ವಿಶೇಷತೋ ನಿರ್ಣೀಯತೇ. ಯಾವದ್ಧಿ ಜೀವಸ್ಯ ಬ್ರಹ್ಮಾಂಶತ್ವಂ ನ ನಿರ್ಣೀತಂ ತಾವಜ್ಜೀವಸ್ಯ ಬ್ರಹ್ಮಣೋಽನನ್ಯತ್ವಂ ಬ್ರಹ್ಮಣಸ್ತಸ್ಮಾದಧಿಕತ್ವಂ ಚ ನ ಪ್ರತಿತಿಷ್ಠತಿ. ಕಿಂತಾವತ್ಪ್ರಾಪ್ತಂ, ಅತ್ಯಂತಭಿನ್ನ ಇತಿ. ಕುತಃ, "ದ್ವಾವಜೌ" ಇತ್ಯಾದಿಭೇದನಿರ್ದೇಶಾತ್. "ಜ್ಞಾಜ್ಞಯೋರೇವಾಭೇದಂ ಶ್ರುತಯಸ್ತ್ವಗ್ನಿನಾ ಸಿಂಚತಿ ಇತಿವದ್ವಿರುದ್ಧಾರ್ಥಪ್ರತಿಪಾದನಾದೌಪಚಾರಿಕ್ಯಃ. ಬ್ರಹ್ಮಣೋಽಂಶೋ ಜೀವ ಇತ್ಯಪಿ ನ ಸಾಧೀಯಃ. ಏಕವಸ್ತ್ವೇಕದೇಶವಾಚೀ ಹ್ಯಂಶಶಬ್ದಃ. ಜೀವಸ್ಯ ಬ್ರಹ್ಮೈಕದೇಶತ್ವೇ ತದ್ಗತಾಃ ದೋಷಾಃ ಬ್ರಹ್ಮಣಿ ಭವೇಯುಃ. ನಚ ಬ್ರಹ್ಮಖಂಡೋ ಜೀವ ಇತ್ಯಂಶತ್ವೋಪಪತ್ತಿಃ, ಖಂಡನಾನರ್ಹತ್ವಾದ್ಬ್ರಹ್ಮಣಃ ಪ್ರಾಗುಕ್ತದೋಷಪ್ರಸಂಗಾಚ್ಚ. ತಸ್ಯಾತ್ಯಂತಭಿನ್ನಸ್ಯ ಚ ತದಂಶತ್ವಂ ದುರುಪಪಾದಂ. ಯದ್ವಾ ಭ್ರಾಂತಂ ಬ್ರಹ್ಮೈವ

ಜೀವಃ, ಕುತಃ, ತತ್ತ್ವಮಸಿ ಇತ್ಯಾದೌ ಬ್ರಹ್ಮಾತ್ಮಭಾವೋಪದೇಶಾತ್. ನಾನಾತ್ವವಾದಿನ್ಯಸ್ತು ಪ್ರತ್ಯಕ್ಷಾದಿಸಿದ್ಧಾರ್ಥಾನುವಾದಿತ್ವಾದನ್ಯಥಾಸಿದ್ಧಾದ್ವೈತೋಪದೇಶಪರಾಭಿಃ ಶ್ರುತಿಭಿಃ ಪ್ರತ್ಯಕ್ಷಾದಯ ಇವ ಅವಿದ್ಯಾಂತರ್ಗತಾಃ ಖ್ಯಾಪ್ಯಂತೇ. ಅಥವಾ ಬ್ರಹ್ಮೈವ ಅನಾದ್ಯುಪಾಧ್ಯವಚ್ಛಿನ್ನಂ ಜೀವಃ? ಕುತಃ ತತ ಏವ ಬ್ರಹ್ಮಾತ್ಮಭಾವೋಪದೇಶಾತ್. ನಚಾಯಮುಪಾಧಿರ್ಭ್ರಾಂತಿಪರಿಕಲ್ಪಿತ ಇತಿವಕ್ತುಂಶಕ್ಯಂ, ಬಂಧಮೋಕ್ಷಾದಿವ್ಯವಸ್ಥಾನುಪಪತ್ತೇರಿತಿ ಪ್ರಾಪ್ತೇಽಭಿಧೀಯತೇ. ಬ್ರಹ್ಮಾಂಶ ಇತಿ ಕುತಃ? ನಾನಾವ್ಯಪದೇಶಾತ್. ಉಭಯಥಾ ಹಿ ವ್ಯಪದೇಶೋ ದೃಶ್ಯತೇ. ನಾನಾತ್ವವ್ಯಪದೇಶಸ್ತಾವತ್ಸ್ರಷ್ಟೃತ್ವಸೃಜ್ಯತ್ವನಿಯಂತೃತ್ವನಿಯಾಮ್ಯತ್ವಸರ್ವಜ್ಞತ್ವಾಜ್ಞತ್ವಸ್ವಾಧೀನತ್ವಪರಾಧೀನತ್ವಶುದ್ಧತ್ವಾಶುದ್ಧತ್ವಕಲ್ಯಾಣಗುಣಾಕರತ್ವತದ್ವಿಪರೀತತ್ವಪತಿತ್ವಶೇಷತ್ವಾದಿಭಿರ್ದೃಶ್ಯತೇ. ಅನ್ಯಥಾ ಚ ಅಭೇದೇನ ವ್ಯಪದೇಶೋಽಪಿ "ಅಯಮಾತ್ಮಾ ಬ್ರಹ್ಮ" ಇತ್ಯಾದಿಭಿರ್ದೃಶ್ಯತೇ. ಅಪಿ ದಾಶಕಿತವಾದಿತ್ವಮಧೀಯತ ಏಕೇ. "ಬ್ರಹ್ಮದಾಶಾಃ-ಕಿತವಾಃ" ಇತ್ಯಾಥರ್ವಣಿಕಾಃ ಬ್ರಹ್ಮಣೋ ದಾಶಕಿತವಾದಿತ್ವಮಧೀಯತೇ. ತತಶ್ಚ ಸರ್ವಜೀವವ್ಯಾಪಿತ್ವೇನಾಭೇದೋ ವ್ಯಪದಿಶ್ಯತ ಇತ್ಯರ್ಥಃ. ಏವಮುಭಯವ್ಯಪದೇಶಮುಖ್ಯತ್ವಸಿದ್ಧಯೇ "ಜೀವೋಽಯಂ ಬ್ರಹ್ಮಣೋಂಽಶಃ" ಇತ್ಯಭ್ಯುಪಗಂತವ್ಯಃ. ನಚ ಭೇದವ್ಯಪದೇಶಾನಾಂ ಪ್ರತ್ಯಕ್ಷಾದಿಪ್ರಸಿದ್ಧಾರ್ಥತ್ವೇನಾನ್ಯಥಾಸಿದ್ಧತ್ವಂ. ಬ್ರಹ್ಮಸೃಜ್ಯತ್ವತನ್ನಿಯಾಮ್ಯತ್ವತತ್ಪ್ರಕಾಶಕತ್ವತಚ್ಛೇಷತ್ವತದಾಧಾರತ್ವತತ್ಪಾಲ್ಯತ್ವತತ್ಸಂಹಾರ್ಯತ್ವತದುಪಾಸಕತ್ವತತ್ಪ್ರಸಾದಲಭ್ಯಧರ್ಮಾರ್ಥಕಾಮಮೋಕ್ಷರೂಪಪುರುಷಾರ್ಥಭೋಕ್ತೃತ್ವಾದಯಸ್ತತ್ಕೃತಶ್ಚ ಜೀವಬ್ರಹ್ಮಣೋರ್ಭೇದಃ ಪ್ರತ್ಯಕ್ಷಾದ್ಯಗೋಚರತ್ವೇನಾನಾನ್ಯಥಾಸಿದ್ಧಃ. ಅತೋ ನ ಜಗತ್ಸ್ರಷ್ಟ್ರ್ಯಾದೀನಾಂ ಪ್ರಮಾಣಾಂತರಸಿದ್ಧಭೇದಾನುವಾದೇನ ಮಿಥ್ಯಾರ್ಥೋಪದೇಶಪರತ್ವಂ. ನ ಚಾಖಂಡೈಕರಸಚಿನ್ಮಾತ್ರಸ್ವರೂಪೇಣ ಬ್ರಹ್ಮಣಾ ಆತ್ಮನಸ್ತದ್ಭಾವಾನುಸಂಧಾನಂ, ಬಹುಭವನಸಂಕಲ್ಪಪೂರ್ವಕವಿಯದಾದಿಸೃಷ್ಟಿಂ, ಜೀವಭಾವೇನ ತತ್ಪ್ರವೇಶಂ, ವಿಚಿತ್ರನಾಮರೂಪವ್ಯಾಕರಣಂ, ತತ್ಕೃತಾನಂತವಿಷಯಾನುಭವನಿಮಿತ್ತಸುಖದುಃಖಭಾಗಿತ್ವಮುಭೋಕ್ತೃತ್ವೇನ ತತ್ರ ಸ್ಥಿತ್ವಾ ತನ್ನಿಯಮನೇನಾಂತರ್ಯಾಮಿತ್ವಂ, ಜೀವಭೂತಸ್ಯ ಸ್ವಸ್ಯ ಕಾರಣಬ್ರಹ್ಮಭಾವಾನುಸಂಧಾನಂ ಸಂಸಾರಮೋಕ್ಷೋಪದೇಶಶಾಸ್ತ್ರಂ ಚ ಕುರ್ವಾಣೇನ ಭ್ರಮಿತವ್ಯಮಿತ್ಯುಪದಿಶ್ಯತೇ, ತಥಾ ಸತ್ಯುನ್ಮತ್ತಪ್ರಲಪಿತತ್ವಾಪಾತಾತ್. ಉಪಾಧ್ಯವಚ್ಛಿನ್ನಂ ಬ್ರಹ್ಮ ಜೀವ ಇತ್ಯಪಿ ನ ಸಾಧೀಯಃ, ಪೂರ್ವನಿರ್ದಿಷ್ಟನಿಯಮ್ಯತ್ವನಿಯಂತೃತ್ವಾದಿವ್ಯಪದೇಶಬಾಧಾದೇವ.

**ನಹಿ ದೇವದತ್ತಾದೇರೇಕಸ್ಯೈವ ಗೃಹಾದ್ಯುಪಾಧಿಭೇದಾನ್ನಿಯಂತೃನಿಯಾಮ್ಯತ್ವಾದಿಸಿದ್ಧಿಃ. ಉತ ಉಭಯವ್ಯಪದೇಶೋಪಪತ್ತಯೇ ಜೀವೋಽಯಂ ಬ್ರಹ್ಮಣೋಽಂಶ ಇತ್ಯಭ್ಯುಪೇತ್ಯಂ. ತಸ್ಮಾದ್ವೇದಮಾರ್ಗಾವಲಂಬಿನಾ ಮುಖ್ಯತ್ವೇನ ಸರ್ವಶ್ರುತಿಸಮನ್ವಯಾಖ್ಯಂ ದ್ವೈತಾದ್ವೈತಮತಮೇವಾಂಗೀಕರ್ತವ್ಯಮಿತಿ ನಿಶ್ಚೀಯತೇ. ಸ್ಮೃತಾವಪಿ "ಶಿವಸ್ಸತ್ಯಂ ಜಗತ್ಸತ್ಯಂ ಜೀವಸ್ಸತ್ಯಂ ಸ್ವಭಾವತಃ । ತೇಷಾಮಭೇದಸ್ಸತ್ಯೋವಾ ಕ್ರಿಮಿಭ್ರಮರಯೋರಿವ ॥" ಇತಿ ಸ್ಮರಣಾತ್ತದೇವ ರಮಣೀಯಂ.**

ಜೀವರೆಲ್ಲರೂ ಸುಳ್ಳೆಂಬ ವಾದವನ್ನೂ, ಎಲ್ಲರೂ ಒಬ್ಬನೇ ಎಂಬ ವಾದವನ್ನೂ, ಅವರೆಲ್ಲರೂ ಒಬ್ಬನ ಪ್ರತಿಬಿಂಬವೆಂಬ ವಾದವನ್ನೂ ಇನ್ನುಮುಂದೇ ನಿರಾಕರಿಸಲಾಗುವುದು. ಹಿಂದಿನ ಅಧಿಕರಣಗಳಲ್ಲಿ ಜೀವನನ್ನು ಅಣುವೆಂದೂ, ಜ್ಞಾತೃವೆಂದೂ ಪರಶಿವನಿಗಧೀನನಾದ ಕರ್ತನೆಂದೂ ಸಾಧಿಸಿ ಈಗ ಜೀವರೆಲ್ಲರೂ ಒಬ್ಬನೆಂಬುದನ್ನೂ, ಜೀವನೇ ಬ್ರಹ್ಮನೆಂಬುದನ್ನೂ, ಜೀವನು ಸುಳ್ಳೆಂಬುದನ್ನೂ, ಜೀವನು ಬ್ರಹ್ಮದ ನೆರಳೆಂಬುದನ್ನೂ ವೇದದಲ್ಲಿ ಹೇಳದೇಇರುವುದರಿಂದ ಅಯುಕ್ತವೆಂದು ತಿಳಿಸಲಾಗುವುದು. "ಬೆಂಕಿಯಿಂದ ಸಮಾನಾಕಾರದ ಅನೇಕ ಕಿಡಿಗಳು ಉದುರುವಂತೆ ಅಕ್ಷರನಾದ ಪರಶಿವನಿಂದ ನಾನಾಬಗೆಯ ಜೀವರು ಬಂದಿದ್ದಾರೆ, ಕೊನೆಗೆ ಅವನಲ್ಲಿಯೇ ಲೀನರಾಗುತ್ತಾರೆ." "ಮಹೇಶ್ವರನ ಅವಯುವಗಳೆನಿಸಿದ ತ್ರಿಮೂರ್ತಿಗಳಿಂದ ಈ ವಿಶ್ವವು ವ್ಯಾಪಿಸಿದೆ" ಹೀಗೆ ನೂರಾರು ಶ್ರುತಿಗಳಲ್ಲಿ ಜೀವರನ್ನು ಬ್ರಹ್ಮದ ಅಂಶವೆಂದು ಹೇಳಿರುವುದರಿಂದ ಜೀವರೆಲ್ಲರೂ ಒಬ್ಬನೇ ಎಂಬ ವಾದ ಯುಕ್ತವಲ್ಲ. "ದ್ವಾ ಸುಪರ್ಣಾ" ಎಂಬ ಶ್ರುತಿಯಲ್ಲಿ ಜೀವಬ್ರಹ್ಮರಿಗೆ ಭೇದವನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. ಹಾಗೆಯೇ ಶ್ರುತಿಯಲ್ಲಿ "ತತ್ತ್ವಮಸಿ" ಎಂದು ಮುಂತಾಗಿ ಅಭೇದವನ್ನೂ ಹೇಳಿದೆ. ಆದ್ದರಿಂದ ಜೀವಬ್ರಹ್ಮರಿಗೆ ಭೇದಾಭೇದವನ್ನೇ ಅಂಗೀಕರಿಸಬೇಕು. ಜೀವರು ಬ್ರಹ್ಮದ ಅಂಶರಲ್ಲದೆ ಬೇರೆಯಲ್ಲವೆಂದು ಶ್ರುತಿಯಲ್ಲಿ ಕಂಡುಬಂದಿದೆ. ಆದರೂ ಆಥರ್ವಣಿಕರು ಜೀವಬ್ರಹ್ಮರಿಗೆ ಸೇವ್ಯಸೇವಕಭಾವದಿಂದ ಯಾವಾಗಲೂ ಭೇದವೇ ಇರುವುದೆಂದು ತಿಳಿಸುತ್ತಾರೆ. "ದೂತನು ಬೆಸ್ತರು ಮೊದಲಾದವರೆಲ್ಲರೂ ಬ್ರಹ್ಮದ ದಾಸರು" ಎಂಬ ಶ್ರುತಿಯಂತೆ ಮೋಕ್ಷದಲ್ಲಿ ಬ್ರಹ್ಮಸಾರೂಪ್ಯವನ್ನು ಹೊಂದಿದ ಮುಕ್ತರಿಗೂ ದಾಸ್ಯವೇ ಇರುವುದರಿಂದ ಕೈಂಕರ್ಯಕ್ಕೂ ಪರಾಧೀನತೆಗೂ ಏನೂ ವಿರೋಧವಿಲ್ಲವೆಂದು ಅವರು ಸಾಧಿಸುತ್ತಾರೆ. ಆದರೆ ಸಂಸಾರದಶೆಯಲ್ಲಿ ಬದ್ಧರಿಗೂ ಶುದ್ಧರಿಗೂ ಪರಮೇಶ್ವರನ ಸೇವೆ ಮೊದಲಾದವು ಹೊಂದಿದರೂ ಮೋಕ್ಷದಶೆಯಲ್ಲಿ ಪರಾಧೀನತೆಯು ಭಯಹೇತುವಾದ್ದರಿಂದ ಮುಕ್ತರಿಗೆ ಅದನ್ನು ಒಪ್ಪಲಾಗುವುದಿಲ್ಲವೆಂದು ಮತ್ತೆಕೆಲವರು ಅಭಿಪ್ರಾಯಪಡುತ್ತಾರೆ. "ಯಥಾ ನದ್ಯಃ" ಎಂಬ ಶ್ರುತಿಯಲ್ಲಿ ಜೀವಬ್ರಹ್ಮರಿಗೆ ಸ್ವರೂಪೈಕ್ಯವನ್ನೇ ತಿಳಿಸಲಾಗಿದೆ. ಆದ್ದರಿಂದ ಭೇದಕ್ಕೂ ಅಭೇದಕ್ಕೂ ವಿರೋಧವುಂಟೆಂದು ಹೇಳಲಾಗುವುದಿಲ್ಲ. ನಾವು ಇಲ್ಲಿ ಶ್ರುತಿಯನ್ನೇ ಪ್ರಮಾಣವೆಂದು

ಭಾವಿಸಿದ್ದೇವೆ.ಕೇವಲ ಯುಕ್ತಿಯನ್ನು ನಾವು ಹೆಚ್ಚಾಗಿ ಒಪ್ಪುವುದಿಲ್ಲವೆಂದು ಹಿಂದೆ ತಿಳಿಸಿದೆ. ಹೀಗೆ ಶ್ರುತಿ ಯುಕ್ತಿ ಅನುಭವಗಳ ಆಧಾರದಮೇಲೆ ಜಿಜ್ಞಾಸಾದ್ಯಧಿಕರಣ ಗಳಲ್ಲಿ ಮೊದಲೇ ವಿಸ್ತಾರವಾಗಿ ತಿಳಿಸಲಾಗಿದೆ. ಅದ್ವೈತ ವಿಶಿಷ್ಟಾದ್ವೈತ ಮತಗಳ ಲ್ಲಿಯೂ ಶ್ರುತಿಸಮನ್ವಯವಿಲ್ಲದ್ದರಿಂದ ಭೇದಾಭೇದಮತದಛಾಯೆಯನ್ನೇ ಆಶ್ರಯಿಸಿ ಗೌಣರೀತಿಯಲ್ಲಿ ಶ್ರುತಿಸಮನ್ವಯವನ್ನು ಸಾಧಿಸಲಾಗಿದೆ. ತಾರ್ಕಿಕರೇ ಮೊದಲಾದ ಭೇದವಾದಿಗಳಲ್ಲೂ ಬೌದ್ಧಾದಿಮತಗಳಂತೆ ಸರ್ವಶ್ರುತಿಸಮನ್ವಯವಿಲ್ಲದ್ದರಿಂದ ಆ ಮತಗಳೂ ಅಯುಕ್ತವೆನಿಸಿವೆ. ಆದ್ದರಿಂದ ಜೀವನು ಪರಮಾತ್ಮನಿಂದ ಅತ್ಯಂತ ಭಿನ್ನನೇ ?ಅಥವಾ ಸಾಕ್ಷಾತ್‌ಪರಬ್ರಹ್ಮವೇ,ಅಥವಾ ಉಪಾಧಿಯೊಡಗೂಡಿದ ಬ್ರಹ್ಮನೇ ಅಥವಾ ಬ್ರಹ್ಮದ ಅಂಶವೇ? ಎಂಬ ಸಂಶಯ ಬರುತ್ತದೆ. ಶ್ರುತಿಯಲ್ಲಿ ಪರಸ್ಪರವಿರೊಧ ವಿರುವುದರಿಂದ ಹೀಗೆ ಸಂಶಯಕ್ಕವಕಾಶವಾಗಿದೆ. " ತದನನ್ಯತ್ವಂ " " ಅಧಿಕಂ ತು " ಎಂಬ ಸೂತ್ರಗಳಲ್ಲಿ ಈ ವಿಷಯವನ್ನು ನಿರ್ಣಯಿಸಲಾಗಿದೆ. ಈಗಲೂ ಅದೇ ವಿಷಯ ವನ್ನು ಬೇರೊಂದು ಬಗೆಯಲ್ಲಿ ಆಕ್ಷೇಪಿಸಿ ಜೀವನನ್ನು ಬ್ರಹ್ಮಾಂಶವೆಂದು ನಿರ್ಣಯಿಸ ಲಾಗುವುದು. ಹಾಗೆ ನಿರ್ಣಯಿಸದಿದ್ದರೆ ಜೀವನು ಬ್ರಹ್ಮಕ್ಕಿಂತ ಬೇರೆಯಲ್ಲವೆಂಬು ದನ್ನೂ,ಬ್ರಹ್ಮನು ಜೀವನಿಗಿಂತ ಅಧಿಕನೆಂಬುದನ್ನೂ ಸಾಧಿಸಲಾಗುವುದಿಲ್ಲ. ಇದರಿಂದ ಏನಾಯಿತೆಂದರೆ ಜೀವನು ಬ್ರಹ್ಮಕ್ಕಿಂತ ಅತ್ಯಂತಭಿನ್ನನೆಂದು ಸಾಧಿಸಿದ್ದಾಯಿತು. " ಆತ್ಮರಿಬ್ಬರೂ ಅಜರು" ಎಂಬಲ್ಲಿ ಭೇದವನ್ನು ಹೇಳಲಾಗಿದೆ. ಸರ್ವಜ್ಞನಿಗೂ ಅಜ್ಞ ನಿಗೂ "ಅಗ್ನಿನಾ ಸಿಂಚತಿ" ಎಂಬಂತೆ ವಿರುದ್ಧಾರ್ಥವೇ ತೋರುವುದರಿಂದ ಜೀವನು ಬ್ರಹ್ಮಾಂಶನೆಂಬುದು ಔಪಚಾರಿಕವಾದರೂ ಯುಕ್ತವಲ್ಲ. ಒಂದು ವಸ್ತುವಿನ ಒಂದು ಭಾಗವನ್ನು ಅಂಶಶಬ್ದವು ತಿಳಿಸುತ್ತದೆ. ಜೀವನು ಬ್ರಹ್ಮದ ಅಂಶವೆನಿಸಿದರೆ ಜೀವ ದೋಷಗಳೂ ಬ್ರಹ್ಮದಲ್ಲಿ ಸಂಭವಿಸುತ್ತವೆ. ಹಾಗೆಯೇ ಜೀವನು ಬ್ರಹ್ಮದ ಖಂಡ ವೆಂಬುದೂ ಯುಕ್ತವಲ್ಲ ; ಯಾಕೆಂದರೆ ಖಂಡನಕ್ಕೆ ಅನರ್ಹವಾದ್ದರಿಂದ ಬ್ರಹ್ಮಕ್ಕೆ ಹಿಂದೆ ಹೇಳಿದ ದೋಷಗಳೇ ಸಂಭವಿಸುತ್ತವೆ. ಆದ್ದರಿಂದ ಅತ್ಯಂತಭಿನ್ನವಾದ್ದನ್ನು ಒಂದು ವಸ್ತುವಿನ ಅಂಶವೆಂದು ತಿಳಿಯಲಿಕ್ಕಾಗುವುದಿಲ್ಲ. ಭ್ರಾಂತಿಗೊಂಡ ಬ್ರಹ್ಮವೇ ಜೀವನೆನಿಸಿದೆ ಎಂದರೆ " ನೀನು ಅದೇ ಆಗಿದ್ದೀಯೆ." " ಈ ಆತ್ಮನು ಬ್ರಹ್ಮವೇ" ಎಂಬಲ್ಲಿ ಜೀವನಿಗೆ ಬ್ರಹ್ಮಭಾವವನ್ನು ಹೇಳಿರುವುದರಿಂದ ಬ್ರಹ್ಮದಲ್ಲಿ ಭ್ರಾಂತಿಯು ಹೊಂದುವುದಿಲ್ಲ. ಅನೇಕಜೀವರನ್ನು ತಿಳಿಸುವ ಶ್ರುತಿಗಳು ಪ್ರತ್ಯಕ್ಷಸಿದ್ಧವಾದ ಅರ್ಥ ವನ್ನು ತಿಳಿಸುತ್ತಲಿದ್ದರೂ ಬೇರೆರೀತಿಯಲ್ಲಿ ಸಿದ್ಧವಾಗದ ಅದ್ವೈತವನ್ನು ಬೋಧಿಸುವ ಶ್ರುತಿಗಳಿಂದ ಬಾಧಿತವಾಗಿ ಪ್ರತ್ಯಕ್ಷಾದಿಗಳಂತೆ ಅವಿದ್ಯೆಯೊಳಗೇ ಸೇರುತ್ತವೆ. ಅಥವಾ ಅನಾದಿಯಾದ ಉಪಾಧಿಯೊಳಗೆಸಿಲುಕಿದ ಬ್ರಹ್ಮವೇ ಜೀವನೆನಿಸಲಿ; ಯಾಕೆಂದರೆ ಇದ ರಿಂದಲೇ ಶ್ರುತಿಯಲ್ಲಿ ಜೀವನಿಗೆ ಬ್ರಹ್ಮಭಾವವನ್ನು ಹೇಳಲಾಗಿದೆ. ಆದರೆ ಈ ಉಪಾಧಿ ಭ್ರಾಂತಿಯಿಂದ ಕಲ್ಪಿತವಾದದ್ದು ಎಂದು ಹೇಳಲಿಕ್ಕಾಗುವುದಿಲ್ಲ ; ಹಾಗೆ ಹೇಳಿದರೆ ಬಂಧಮೋಕ್ಷಗಳ ವ್ಯವಸ್ಥೆಯೇ ತಪ್ಪಿಹೋಗಬೇಕಾದೀತು. ಹೀಗೆ ಪೂರ್ವಪಕ್ಷ ಬಂದರೆ

ಸೂತ್ರದಲ್ಲಿಯೇ ಸಮಾಧಾನವಿದೆ. ಜೀವನು ಬ್ರಹ್ಮಾಂಶನೇ ಸರಿ. ಅವನು ಅನೇಕಬಗೆ ಯಾಗಿರುವನೆಂದು ವ್ಯವಹಾರದಲ್ಲೂ ಕಂಡುಬಂದಿದೆ. ಸೃಷ್ಟಿಸತಕ್ಕವನು ಮತ್ತು ಸೃಷ್ಟಿಗೆ ವಿಷಯನು, ನಿಯಮನಮಾಡುವವನು, ನಿಯಮನಕ್ಕೆ ಒಳಪಟ್ಟವನು, ಮತ್ತು ಸರ್ವಜ್ಞನು ಮತ್ತು ಅಜ್ಞನು, ಸ್ವಾಧೀನನು ಪರಾಧೀನನು ಶುದ್ಧನು ಮತ್ತು ಅಶುದ್ಧನು, ಮಂಗಳಕರನು ಮತ್ತು ಅಮಂಗಳಕರನು, ಪತಿಯು ಮತ್ತು ದಾಸನು ಹೀಗೆ ಜೀವಬ್ರಹ್ಮ ಭೇದದಿಂದ ಜೀವರು ಅನೇಕಬಗೆಯಾಗಿದ್ದಾರೆ. ಇದೂ ಅಲ್ಲದೆ ತತ್ತ್ವಮಸಿ ಮೊದಲಾದ ಕಡೆಗಳಲ್ಲಿ ಅವನನ್ನು ಅಭೇದದಿಂದಲೂ ವ್ಯಹರಿಸಲಾಗಿದೆ. ಆದರೂ ಕೆಲವರು(ಆಥರ್ವಣಿಕರು)ಬೆಸ್ತ ದಾಸ ವಂಚಕ ಇವರೆಲ್ಲರನ್ನು ಬ್ರಹ್ಮವೆಂದೇ ಹೇಳುತ್ತಾರೆ. ಆದ್ದರಿಂದ ಜೀವರೆಲ್ಲರಲ್ಲೂ ಒಬ್ಬ ಬ್ರಹ್ಮನೇ ವ್ಯಾಪಿಸಿರುವುದರಿಂದ ಅಭೇದವನ್ನು ಹೇಳಲಾಗಿದೆ. ಹೀಗೆ ಎರಡುಬಗೆಯ ವ್ಯಪದೇಶವನ್ನೂ ಮುಖ್ಯವೆಂದು ತಿಳಿಸಲಿಕ್ಕಾಗಿ ಜೀವನನ್ನು ಬ್ರಹ್ಮಾಂಶವೆಂದು ಅಂಗೀಕರಿಸಲೇಬೇಕು. ಭೇದವನ್ನು ಹೇಳುವ ಶ್ರುತಿಗಳು ಪ್ರತ್ಯಕ್ಷಸಿದ್ಧವಾದ ಅರ್ಥವನ್ನು ಹೇಳುವುದರಿಂದ ಪ್ರಮಾಣವಲ್ಲವೆಂದು ಹೇಳುವುದು ಯುಕ್ತವಲ್ಲ; ಏಕೆಂದರೆ ಜೀವನು ಬ್ರಹ್ಮದಿಂದಲೇ ಹುಟ್ಟಿ ಅವನ ರಕ್ಷಣೆಗೆ ವಶನಾಗಿ ಅವನ ಆಧಾರದಿಂದಲೇ ಶೋಭಿಸುತ್ತ ಅವನನ್ನೇ ಉಪಾಸನಮಾಡುತ್ತ ಅವನ ಪ್ರಸಾದದಿಂದ ದೊರೆತ ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥವನ್ನು ಭೋಗಿಸುತ್ತಲಿರುವುದರಿಂದ ಬ್ರಹ್ಮದಿಂದ ಭಿನ್ನನಿರುವನು, ಈ ಅಂಶವು ಪ್ರತ್ಯಕ್ಷಸಿದ್ಧವಲ್ಲವಾದ್ದರಿಂದ ಈ ಬಗೆಯ ಭೇದಶ್ರುತಿಗಳು ಪ್ರತ್ಯಕ್ಷಸಿದ್ಧವಾದ ಅರ್ಥವನ್ನು ಹೇಳದೆ ಇರುವುದರಿಂದ ಅವನ್ನು ಪ್ರಮಾಣವಲ್ಲವೆಂದು ಹೇಳುವುದು ಸರಿಯಲ್ಲ; ಯಾಕೆಂದರೆ ಅಖಂಡಸ್ವರೂಪನಾದ ಬ್ರಹ್ಮಕ್ಕೂಜೀವನಿಗೂ ಅಭೇದಾನುಸಂಧಾನವನ್ನೂ, ಸಂಕಲ್ಪಪೂರ್ವಕವಾದ ಪ್ರಪಂಚಸೃಷ್ಟಿಯನ್ನೂ, ಜೀವನಮೂಲಕ ಎಲ್ಲಾವಸ್ತುಗಳಲ್ಲೂ ಪ್ರವೇಶವನ್ನೂ, ವಿಚಿತ್ರವಾದ ನಾಮರೂಪಗಳ ನಿರ್ವಾಹವನ್ನೂ, ಅನಂತವಿಷಯಗಳ ಭೋಗದೊಡಗೂಡಿದ ಜೀವರಲ್ಲಿ ಅಂತರ್ಯಾಮಿಯಾಗಿರುವಿಕೆಯನ್ನೂ, ಜೀವನು ಕಾರಣವೆನಿಸಿದ ಬ್ರಹ್ಮಸ್ವರೂಪನೇ ಇರುವನೆಂಬ ಅನುಸಂಧಾನವನ್ನೂ, ಅವನಿಗೆ ಸಂಸಾರದಿಂದ ಬಿಡುಗಡೆಯನ್ನೂ, ಜೀವನಿಗೆ ಬಂಧಮೋಕ್ಷಗಳನ್ನು ಬೋಧಿಸುವ ಶಾಸ್ತ್ರವನ್ನೂ ರಚಿಸಿರುವ ಪರಮಾತ್ಮನಿಂದ ಎಲ್ಲರೂ ಭ್ರಾಂತಿಗೊಳ್ಳಲೆಂಬ ಉದ್ದೇಶದಿಂದ ಹೀಗೆ ಉಪದೇಶ ಹೊರಬರಲಾರದು. ಹಾಗೆ ಈ ಉದ್ದೇಶದಿಂದ ಉಪದೇಶ ಹೊರಟಿದ್ದರೆ ಎಲ್ಲವೂ ಉನ್ಮತ್ತಪ್ರಲಾಪವಾಗುತ್ತಿತ್ತು. ಉಪಾಧಿಯೊಡಗೂಡಿದ ಬ್ರಹ್ಮವೇ ಜೀವನೆಂಬ ವಾದವೂ ಸಾಧುವಲ್ಲ. ಹಿಂದೆ ಹೇಳಿದಂತೆ ಒಬ್ಬನೇ ನಿಯಮ್ಯನೂ ನಿಯಂತೃವೂ ಆಗಿರುವನೆಂಬುದು ವಿರುದ್ಧವಾಗುವುದರಿಂದ ದೇವದತ್ತನೊಬ್ಬನಿಗೆ ಮನೆ ಮೊದಲಾದ ಉಪಾಧಿಗಳ ಭೇದದಿಂದ ಅವನು ನಿಯಂತೃ ಮತ್ತು ನಿಯಾಮ್ಯನೆಂಬ ಭೇದವು ಸಿದ್ಧಿಸುವುದಿಲ್ಲ. ಹೀಗೆ ಎರಡುಬಗೆಯ ಹೇಳಿಕೆಗಳನ್ನು ಹೊಂದಿಸಲಿಕ್ಕಾಗಿಯೇ ಜೀವನನ್ನು ಬ್ರಹ್ಮಾಂಶವೆಂದು ಒಪ್ಪಬೇಕು. ಆದ್ದರಿಂದ ವೈದಿಕರು ಸರ್ವಶ್ರುತಿಸಮನ್ವಯಕ್ಕಾಗಿ ದ್ವೈತಾದ್ವೈತ

ಮತವನ್ನೇ ಮುಖ್ಯವಾಗಿ ಅಂಗೀಕರಿಸಬೇಕೆಂದು ನಿಶ್ಚಯಿಸಲಾಗಿದೆ. ಸ್ಮೃತಿಯೂ ಸಹ "ಶಿವನೂ ಸತ್ಯವೇ, ಜಗತ್ತೂ ಸತ್ಯವೇ, ಜೀವನೂ ಸಹಜವಾಗಿ ಸತ್ಯವೇ, ಕ್ರಿಮಿ ಭ್ರಮರಗಳಂತೆ ಜೀವಶಿವರ ಅಭೇದವೂ ಸತ್ಯವೇ" ಎಂದು ಹೇಳಿರುವುದರಿಂದ ಭೇದಾಭೇದ ವಾದವೇ ಸುಂದರವಾಗಿದೆ.

"ಅಯಮಾತ್ಮಾ ಬ್ರಹ್ಮ" ಇತ್ಯಾದಿಶ್ರುತಿಷು ಜೀವಸ್ಯೈವ ಬ್ರಹ್ಮತ್ವೋಪದೇಶಾತ್ "ಬ್ರಹ್ಮದಾಶಾ ಬ್ರಹ್ಮದಾಸಾ" ಇತ್ಯಾದಿಭೇದಶ್ರುತೀನಾಂ ರಜ್ಜುಸರ್ಪವತ್ಕಲ್ಪಿತತ್ವಮೇವೋಪದಿಶ್ಯತ ಇತ್ಯಾಶಂಕಾಯಾಮಾಹ, ಮಂತ್ರವರ್ಣಾತ್ ॥ ೪೧ ॥ "ಮಾಯಾಂ ತು ಪ್ರಕೃತಿಂ ವಿಂದ್ಯಾನ್ಮಾಯಿನಂ ತು ಮಹೇಶ್ವರಂ । ತಸ್ಯಾವಯವಭೂತೋತ್ಥಂ ವ್ಯಾಪ್ತಂ ಸರ್ವಮಿದಂ ಜಗತ್ ॥" "ಪಾದೋಽಸ್ಯ ವಿಶ್ವಾ ಭೂತಾನಿ ತ್ರಿಪಾದಸ್ಯಾಮೃತಂ ದಿವಿ" ಇತ್ಯಾದಿಮಂತ್ರವರ್ಣಶ್ಚ. ಶಿವಾಂಶೋ ಜೀವಃ, ಮಾಯಾಯಾಃ ಪ್ರಕೃತಿತ್ವಂ. ತದವಚ್ಛಿನ್ನತ್ವಂ ಮಹೇಶ್ವರಸ್ಯ. ತದವಯವಭೂತೋತ್ಥತ್ವಂ ಸರ್ವಸ್ಯ ಜಗತೋ ದರ್ಶಯತಿ. ತಸ್ಮಾನ್ಮಾಯಿನಃ ಪರಮಶಿವಸ್ಯಾವಯವಲೇಶಃ ಪುರುಷೋ ಜೀವಃ. ಕಿಂಚ ಅಂಶವಾಚೀ ಹಿ ಪಾದಶಬ್ದಃ, ವಿಶ್ವಾ ಭೂತಾನೀತಿ ಜೀವಿನಾಂ ಬಹುತ್ವಾದ್ಬಹುವಚನಂ. ಮಂತ್ರೇ ಸೂತ್ರೇ ಚ ಅಂಶ ಇತ್ಯೇಕವಚನಂ ಜಾತ್ಯಭಿಪ್ರಾಯಂ. ಆತ್ಮಶ್ರುತೇರಿತ್ಯತ್ರಾಪ್ಯೇಕವಚನಂ ಜಾತ್ಯಭಿಪ್ರಾಯಂ. "ನಿತ್ಯೋ ನಿತ್ಯಾನಾಂ-ಏಕೋ ಬಹೂನಾಂ" ಇತ್ಯಾದಿಶ್ರುತಿಭ್ಯಃ ಈಶ್ವರಾದ್ಭೇದಸ್ಯ ಆತ್ಮನಾಂ ಬಹುತ್ವನಿತ್ಯತ್ವಯೋಶ್ಚಾಭಿಧೀಯಮಾನತ್ವಾದೇವಂ ನಿತ್ಯಾನಾಮಾತ್ಮನಾಂ ಬಹುತ್ವೇ ಪ್ರಾಮಾಣಿಕೇ ಸತಿ ಜ್ಞಾನಸ್ವರೂಪತ್ವೇನ ಸರ್ವೇಷಾಮೇಕತ್ವೇಽಪಿ ಭೇದಕಾಕಾರಃ ಆತ್ಮಯಾಥಾತ್ಮ್ಯವೇದನಕ್ಷಮೈರವಗಮ್ಯತೇ. "ಅಸಂತತೇಶ್ಚಾವ್ಯತಿಕರ" ಇತ್ಯನಂತರಮೇವ ಚಾತ್ಮಬಹುತ್ವಂ ವಕ್ಷ್ಯತಿ. ತಸ್ಮಾದಾತ್ಮೈಕತ್ವಾದ್ವೈತವಾದ ಅಯುಕ್ತಃ.

ಈ ಆತ್ಮವೇ ಬ್ರಹ್ಮ ಎಂದು ಶ್ರುತಿಗಳಲ್ಲಿ ಜೀವನನ್ನೇ ಬ್ರಹ್ಮವೆಂದು ಹೇಳಿರುವುದರಿಂದ "ಇವರು ಬ್ರಹ್ಮದಾಸರು" ಮೊದಲಾದ ಶ್ರುತಿಗಳನ್ನು ರಜ್ಜುಸರ್ಪದಂತೆ ಕಲ್ಪಿತವೆಂದು ಏಕೆ ಭಾವಿಸಬಾರದು ? ಎಂದಾಶಂಕಿಸಿ ನಿರಾಕರಿಸುತ್ತಾನೆ. "ಮಾಯೆಯನ್ನು ಪ್ರಕೃತಿ ಎಂದೂ, ಮಹೇಶ್ವರನನ್ನು ಮಾಯಾಪತಿ ಎಂದೂ ತಿಳಿ" "ಅವನ ಅವಯವಗಳೆನಿಸಿದ ಜೀವರಿಂದ ಈ ಜಗತ್ತು ವ್ಯಾಪಿಸಿದೆ" "ಅವನ ಒಂದು ಪಾದವೇ ಸಕಲ ವಿಶ್ವವೂ ಆಗಿದೆ, ಉಳಿದ ಮೂರುಪಾದಗಳು ದಿವ್ಯವೂ ಅಮೃತವೂ ಆಗಿವೆ" ಎಂದು ಮಂತ್ರಗಳಲ್ಲಿ ಹೇಳಿದೆ. ಶಿವಾಂಶವೇ ಜೀವ, ಮಾಯೆಯೇ ಪ್ರಕೃತಿ,ಅದರೊಳಗಿರುವವನು ಮಹೇಶ್ವರ. ಅವನ ಅವಯವಗಳೆನಿಸಿದ ತ್ರಿಮೂರ್ತಿಗಳಿಂದ ಈ ಜಗತ್ತು ಹುಟ್ಟಿದೆ ಎಂದು ಈ ಮಂತ್ರದಲ್ಲಿ ಹೇಳಿರುವುದರಿಂದ ಶಕ್ತಿವಿಶಿಷ್ಟಪರಮಶಿವನ

ಅವಯವ ಲೇಶವೇ "ಜೀವನೆನಿಸಿದ್ದಾನೆ. ಇದೂ ಅಲ್ಲದೆ, ಪಾದಶಬ್ದವು ಅಂಶವನ್ನು ತಿಳಿಸುತ್ತದೆ." ವಿಶ್ವಾ ಭೂತಾನಿ"ಎಂದರೆ ಸಕಲಜೀವರು ಎಂದು ಅರ್ಥ.ಜೀವರು ಅನೇಕರಾದ್ದರಿಂದ ಇಲ್ಲಿ ಬಹುವಚನ ಬಂದಿದೆ. ಆದರೆ ಮಂತ್ರದಲ್ಲೂ ಸೂತ್ರದಲ್ಲೂ ಅಂಶವೆಂಬುದು ಜಾತಿವಾಚಕವಾದ್ದರಿಂದ ಏಕವಚನದಲ್ಲಿದೆ. ಹೀಗೆಯೇ "ಆತ್ಮಶ್ರುತೇಃ" ಎಂಬಲ್ಲೂ ಜಾತ್ಯೇಕ ವಚನವೇ ಬಂದಿದೆ. " ನಿತ್ಯರೊಳಗೆ ನಿತ್ಯನೂ ಚೇತನರೊಳಗೆ ಚೇತನನೂ ಅನೇಕರೊಳಗೆ ಏಕನೂ ಆಗಿ ಯಾವನು ಎಲ್ಲರ ಇಷ್ಟಾರ್ಥಗಳನ್ನೂ ಕೊಡುತ್ತಾನೋ" ಎಂಬಲ್ಲಿ ಜೀವರಿಗೆ ಈಶ್ವರನಿಂದ ಭೇದವನ್ನೂ, ಆತ್ಮರು ಅನೇಕರು ಮತ್ತು ನಿತ್ಯರು ಎಂಬುದನ್ನೂ ಹೇಳಿದೆ. ಹೀಗೆ ನಿತ್ಯರಾದ ಆತ್ಮರು ಅನೇಕರೆನಿಸಿ ಜ್ಞಾನಾಕಾರದಿಂದ ಎಲ್ಲರೂ ಒಂದೇಆಗಿದ್ದರೂ ಅವರ ಪರಸ್ಪರ ವೈಲಕ್ಷಣ್ಯಗಳು ತತ್ತ್ವಜ್ಞಾನಿಗಳಿಗೆ ಗೋಚರವಾಗುತ್ತವೆ. ಆತ್ಮರು ಅನೇಕರು ಎಂಬುದನ್ನು "ಅಸಂತತೇಶ್ಚಾವ್ಯತಿಕರಃ" ಎಂಬ ಸೂತ್ರದಲ್ಲಿ ಹೇಳಲಾಗುವುದು. ಆದ್ದರಿಂದ ಒಬ್ಬನೇ ಆತ್ಮನೆಂಬ ವಾದವು ಯುಕ್ತವಲ್ಲ.

ಏತದರ್ಥೇ ಪುನರ್ಹೇತ್ವಂತರಮಾಹ. ಅಪಿ ಚ ಸ್ಮರ್ಯತೇ ॥ ೪೨ ॥ " ಸತ್ಯಜ್ಞಾನಾತ್ಮಕೋಽನಂತೋ ವಿಭುರಾತ್ಮಾ ಮಹೇಶ್ವರಃ । ತಸ್ಯೈವಾಂಶೋ ಜೀವಲೋಕೋ ಹೃದಯೇ ಪ್ರಾಣಿನಾಂ ಸ್ಥಿತಃ ॥ " " ವಿಸ್ಫುಲಿಂಗಾ ಯಥಾ ವಹ್ನೌ ಜಾಯಂತೇ ಕಾಷ್ಠಯೋಗತಃ । ಅನಾದಿವಾಸನಾಯುಕ್ತಾಃ ಕ್ಷೇತ್ರಜ್ಞಾ ಇತಿ ತೇ ಸ್ಮೃತಾಃ ॥ " ಇತಿ ಶಿವಗೀತಾಯಾಂ, " ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ " ಇತಿ ಕೃಷ್ಣಗೀತಾಯಾಂ ಚ ಜೀವಾನಾಂ ಈಶ್ವರಾಂಶತ್ವಂ ಬಹುತ್ವಂ ಚೋಪದಿಷ್ಟಂ. " ಯತೋ ವಾ ಇಮಾನಿ ಭೂತಾನಿ ಜಾಯಂತೇ " ಇತ್ಯಾದಿನಾ ತೈತ್ತಿರೀಯಶಾಖಾಯಾಮಪಿ ಜೀವಬಹುತ್ವಂ ದೃಶ್ಯತೇ. ಅತಃ ಜೀವಾಣೀಕತ್ವಜೀವೈಕತ್ವಜೀವಬ್ರಹ್ಮತ್ವವಾದೋ ಹ್ಯಯುಕ್ತಃ. ನನು " ಪಾದೋಽಸ್ಯ ವಿಶ್ವಾ ಭೂತಾನಿ " ಇತಿ ವಿಷ್ಣುಪರತ್ವವಿಧಾಯಕ ಪುರುಷಸೂಕ್ತೇ ದರ್ಶನಾತ್, " ಮಮೈವಾಂಶಃ " ಇತಿ ಕೃಷ್ಣಗೀತಾಯಾಂ ಕೃಷ್ಣಸ್ಯ ಸ್ವಾಂಶತ್ವೇನ ಜೀವನಿರ್ದೇಶಾತ್, " ಹರಿಃ ಓಂ " ಇತಿ ವೇದವೇದಾಂತೋಚ್ಚಾರಣೇ ಪ್ರಾಥಮಿಕತ್ವೇನ ವಿಷ್ಣುಸ್ಮರಣವಿಧಾನಾತ್ " ವೇದವಾಕ್ಯಾನಿ ಸರ್ವಾಣಿ ಹರಿನಾಮಾನಿ ವೈ ಸ್ಮೃತಾಃ " ಇತಿ ಕಪಿಲಸ್ಮೃತಿಶ್ರವಣಾಚ್ಚ ಜೀವಾನಾಂ ವಿಷ್ಣ್ವಂಶತ್ವಮೇವೇತಿ ಚೇನ್ನ ಪೂರ್ವೋಕ್ತಬಹುಶ್ರುತಿಸ್ಮೃತಿವಿರೋಧಾತ್, ಪ್ರಥಮಾಧ್ಯಾಯಪ್ರಥಮಪಾದೇ ಪುರುಷಸೂಕ್ತಕೃಷ್ಣಗೀತಾಭಿಪ್ರಾಯಸ್ಯ ಬಹುಧಾ ಪ್ರಪಂಚಿತತ್ವಾತ್, ಮೂರ್ತಿತ್ರಯಾಂತರ್ಭೂತಸ್ಯ ನಾರಾಯಣಸ್ಯ ಜೀವಪದವಾಚ್ಯಸ್ಯ ಸರ್ವಜೀವಾಂಶತ್ವಪ್ರತಿಪಾದನೇ ಸರ್ವಶ್ರುತಿವಿರೋಧಾತ್,

"ಏಕೋ ವಿಷ್ಣುರ್ಮಹದ್ಭೂತಾನ್ಯನೇಕಶಃ" ಇತಿ ಶ್ರುತೌ "ವಿಷ್ಣ್ವಾದ್ಯುತ್ತಮದೇಹೇಷು ಪ್ರವಿಷ್ಟಾ ದೈವತಾ ಭವೇತ್ । ಮನುಷ್ಯಾದ್ಯಧಮದೇಹೇಷು ಪ್ರವಿಷ್ಟೋ ಮಾನವೋ ಭವೇತ್ ॥" ಇತಿ ಶ್ರುತಾವಪಿ ವಿಷ್ಣೋರ್ಜೀವತ್ವಾವಗಮಾತ್, ಶಿವಸ್ಯ ಮೂರ್ತಿತ್ರಯಾತೀತತತ್ವಸ್ಯ ಪ್ರಾತ್ಯಕ್ಷಿಕಶ್ರುತಿಷು ವಿಷ್ಣೋರದರ್ಶನಾತ್, ಶಿವಸ್ಯ ಸರ್ವಾತ್ಮಕತ್ವೇನ ಸರ್ವಶಬ್ದವಾಚ್ಯತ್ವಾದ್ವಿಷ್ಣುಶಬ್ದಸ್ಯಾಪಿ ಪರ್ಯಾಯತ್ವೇನ ಶಿವವಾಚಕತ್ವಾಂಗೀಕಾರೇ ಶಂಖಚಕ್ರೋರ್ಧ್ವಪುಂಡ್ರಾವಚ್ಛಿನ್ನಜಗನ್ಮೋಹಕವಿಗ್ರಹಪರತ್ವಾಯೋಗಾಚ್ಚ ಜೀವಾನಾಂ ಶಿವಾಂಶತ್ವಮೇವಾಭಿಧೀಯತೇ. "ಹರಿಃ ಓಂ" ಇತ್ಯತ್ರ ಪ್ರಾಥಮಿಕವಿಷ್ಣುಶಬ್ದದ್ಯೋತನಾದ್ವೇದಸ್ಯ ವಿಷ್ಣ್ವಾತ್ಮಕತ್ವಮಿತಿ ಯತ್ತದವಿಚಾರಿತರಮಣೀಯಂ. "ಸರ್ವೋ ವೈ ರುದ್ರಃ", "ಶಿವೋ ಮಾಮೇವ ಪಿತರಃ", "ಈಶಾನಸ್ಸರ್ವವಿದ್ಯಾನಾಂ" ಇತ್ಯಾದಿಶ್ರುತಿಶತೇಷು, "ವೇದಶ್ಶಿವೋ ಶಿವೋ ವೇದಃ ವೇದಾಧ್ಯಾಯೀ ಸದಾಶಿವಃ", "ನಾರುದ್ರಃ ಕ್ರಮುಪಾಠಕಃ" ಇತ್ಯಾದಿಸ್ಮೃತಿಷು ಚ ಸರ್ವಾತ್ಮಕತ್ವಸರ್ವಶ್ರುತಿಜನಕತ್ವಸರ್ವವೇದನಿಯಾಮಕತ್ವಾದೇಶ್ಶಿವಸ್ಯೈವ ದರ್ಶನಾನ್ನಾನ್ಯೇಷಾಂ ಯುಕ್ತಂ. ತಸ್ಮಾತ್ "ಹರಿಃ ಓಂ" ಇತಿ ವಾಕ್ಯೇ ಹರಿಶಬ್ದಾಭಿಧಾನವಿಷ್ಣುವಿಶಿಷ್ಟಸ್ಯ ಓಂಕಾರವಾಚ್ಯಸ್ಯ ಶಿವಸ್ಯೈವೋಚ್ಚಾರಣಮುಪದಿಷ್ಟಂ. "ಯೋ ವೇದಾದೌ ಸ್ವರಃ" ಇತಿ ಸ್ಮೃತೌ ನಿರುಪಪದೋಂಕಾರಮಾತ್ರಮೇವ ವೇದಾದ್ಯಂತಯೋರುಚ್ಚಾರಣೇ ಶ್ರೌತವಿಧಿಃ ಶ್ರೂಯತೇ. "ಓಮಿತ್ಯೇತದಕ್ಷರಮಿದಂ ಸರ್ವಂ" ಇತ್ಯುಪಕ್ರಮ್ಯ "ಪ್ರಪಂಚೋಪಶಮಶ್ಶಿವೋಽದ್ವೈತ ಏವಮೋಂಕಾರಸ್ಸಂವಿಶತ್ಯಾತ್ಮನಾತ್ಮಾನಂ ಯ ಏವಂ ವೇದ" ಇತ್ಯಂತೇನ ಸರ್ವವೇದಾಂತಪ್ರಧಾನಮಾಂಡೂಕ್ಯೋಪನಿಷದಿ ಶಿವಸ್ಯ ಪ್ರಣವಾತ್ಮಕತ್ವಂ ಪ್ರಣವಾರ್ಥವಾಚ್ಯತ್ವಂ ಪ್ರಣವಾತೀತತತ್ವಂ ಚ ನಿರ್ದಿಷ್ಟಂ. ತಥಾ "ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿರ್ಬ್ರಹ್ಮಾ ಶಿವೋ ಮೇಽಅಸ್ತು ಸದಾಶಿವೋಂ" ಇತಿ ತೈತ್ತಿರೀಯೇ, "ಅಕಾರೋ ಬ್ರಹ್ಮಾ ಉಕಾರೋ ವಿಷ್ಣುರ್ಮಕಾರಃ ಕಾಲಕಾಲೋ ಹ್ಯರ್ಧಮಾತ್ರಃ ಪರಮಶಿವಸ್ತಸ್ಮಾದೋಂಕಾರಂ ಲಿಂಗಮಾಹುಃ" ಇತಿ ಸಾಮಶ್ರುತಾವಪಿ ಪ್ರಣವಾತ್ಮಕತ್ವಂ ತಸ್ಮೈ ಸ್ಪಷ್ಟಮುಪದಿಷ್ಟಂ. "ಪರಾತ್ಪರತರೋ ಬ್ರಹ್ಮಾ ತತ್ಪರಾತ್ಪರತೋ ಹರಿಃ । ಯತ್ಪರಾತ್ಪರತೋಽಧೀಶಸ್ತನ್ಮೇ ಮನಶ್ಶಿವಸಂಕಲ್ಪಮಸ್ತು ॥" ಇತಿ ಶ್ರುತಿದರ್ಶನಾತ್ ವಿಷ್ಣೋರುಪರಿ ಪ್ರಣವಾತ್ಮಕಶಿವೋಚ್ಚಾರಣಂ ಯುಕ್ತಮೇವ. "ಅರ್ಥೋ ವಾ ಪತ್ನೀ ಏಷಾತ್ಮನೋ ಗೃಹೇಷು" ಇತಿ ಶ್ರುತಿದರ್ಶನಾತ್, "ನಮೋ ಭಗವತೇ ರುದ್ರಾಯ -

ವಿಷ್ಣವೇ ಮೃತ್ಯುರ್ಮೇ ಪಾಹಿ " ಇತಿ ಶ್ರುತಿನಿರ್ದೇಶಾತ್, " ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ " ಇತಿ ಸ್ಮೃತಿದರ್ಶನಾತ್, " ಮಮೈಷಾ ಪರಮಾ ಮೂರ್ತಿರ್ನಾರಾಯಣಸಮಾಹ್ವಯಾ " ಇತಿ ಕೂರ್ಮೇಶ್ವರಗೀತಾಶ್ರವಣಾಚ್ಚ ವಿಷ್ಣೋಃ ಶಿವಶರೀರತ್ವಮವಿರೋಧಂ. " ಶಿವಸ್ಯ ಶಕ್ತಿರ್ವಿನಿಯೋಗಕಾಲೇ ಚತುರ್ವಿಧಾಭೂಚ್ಛಿವಸತ್ಪ್ರಸಾದಾತ್ । ಭೋಗೇ ಭವಾನೀ ಸಮರೇ ಚ ದುರ್ಗಾ ಕ್ರೋಧೇ ಚ ಕಾಲೀ ಪುರುಷೇಷು ವಿಷ್ಣುಃ ॥" ಇತಿ ಸಾಮಶಾಖಾಯಾಂ ವಿಷ್ಣೋಃ ಪಾರ್ವತ್ಯಂಶತ್ವೋಪದೇಶಾತ್, " ಶಂಕರಶ್ಶೂಲಪಾಣಿಶ್ಚ ಖಟ್ವಾಂಗೀ ವಿಷ್ಣುವಲ್ಲಭಃ " ಇತಿ ಶಿವಾಷ್ಟೋತ್ತರಶತನಾಮಾವಳ್ಯಾಂ, " ವಂದೇ ಸೂರ್ಯಶಶಾಂಕವಹ್ನಿನಯನಂ ವಂದೇ ಮುಕುಂದಪ್ರಿಯಂ " ಇತಿ ಸ್ಕಾಂದೇ ಚ ವಿಷ್ಣುವಲ್ಲಭತ್ವಂ ತತ್ಪ್ರಿಯತ್ವಂ ಚ ನಿರ್ದಿಷ್ಟಂ. ತಸ್ಮಾತ್ ಚಂದ್ರಚಂದ್ರಿಕಾವದ್ವಿಷ್ಣುಶಬ್ದಾನುಸ್ಯೂತತ್ವಂ ಪ್ರಣವಾತ್ಮಕಶಿವಸ್ಯ ಸಮುಚಿತಂ. " ಶಿವಕೇಶವಸಂಭೂತಂ ಕಲಯೇ ಕಾಲಭೈರವಂ " ಇತಿ ವೈಯಾಸಿಕಸ್ಕಾಂದಾದಿಪುರಾಣವಚನಶ್ರವಣಾದ್ವಿಷ್ಣುವಲ್ಲಭತ್ವಂ ತಸ್ಯ ನಿಷ್ಪ್ರತ್ಯೂಹಂ. ಶಿವಸ್ಯ ಗೌರೀಪತಿತ್ವಸ್ಯೈವ ಮುಖ್ಯತ್ವೇನ ಸ್ವೀಕಾರಾತ್ ತದುಚ್ಚಾರಣಮೇವ ವೇದಾದ್ಯಂತಯೋರಭಿಹಿತಮಿತಿ ಚೇತ್ " ಯೋಷಾ ಜಾರಮಿವ ಪ್ರಿಯಾ " ಇತಿ ಲೋಕೇ ವೇದೇಷು ಸ್ತ್ರೀಪುರುಷಾಣಾಂ ಪರಸ್ತ್ರೀಪುರುಷಯೋರೇವ ಪರಸ್ಪರಪರಮಪ್ರೇಮಾಸ್ಪದತ್ವಸ್ವಭಾವದ್ಯೋತನಾತ್, ಯಾಗಾದಿಷ್ವಿಂದ್ರಾಹ್ವಾನೇ ಅಹಲ್ಯಾಜಾರೇತೀಂದ್ರಸ್ಯ ಶಚೀಪತಿತ್ವೇಽಪಿ ತದಾನಂದಕತ್ವೇನ ತದ್ವ್ಯಪದೇಶಾತ್ ತದ್ವದ್ವಿಷ್ಣುಶಬ್ದಾನುಸ್ಯೂತತ್ವಸ್ಯ ಶಿವಪ್ರೇಮಾಸ್ಪದತ್ವಾತ್ ವಿಷ್ಣೋರ್ಗೌರ್ಯಂಶತ್ವಾದಂಶಾಂಶಿನೋರಭೇದಾಚ್ಚ " ಹರಿಃ ಓಂ " ಇತಿ ವೇದಾದ್ಯಂತಯೋರುಚ್ಚಾರಣಂ ಸಮಂಜಸಂ.

ಈ ಬಗ್ಗೆ ಬೇರೊಂದು ಹೇತುವಿದೆ. " ಸತ್ಯಜ್ಞಾನರೂಪನೂ ಅನಂತನೂ ವಿಭುವೂ ಆದ ಮಹೇಶ್ವರನೊಬ್ಬನಿರುವನು. ಅವನ ಅಂಶವೇ ಜೀವಲೋಕವೆನಿಸಿದೆ. ಅವನೇ ಈ ಜೀವಿಗಳ ಹೃದಯದಲ್ಲಿ ನೆಲಸಿದ್ದಾನೆ. ಬೆಂಕಿಯಲ್ಲಿ ಕಾಷ್ಠಯೋಗದಿಂದ ಕಿಡಿಗಳುದುರುವಂತೆ ಅನಾದಿವಾಸನೆಯಿಂದ ಕೂಡಿದ ಜೀವರು ಕ್ಷೇತ್ರಜ್ಞರೆನಿಸಿದ್ದಾರೆ" ಎಂದು ಶಿವಗೀತೆಯಲ್ಲಿ ಹೇಳಿದೆ. "ನನ್ನ ಅಂಶವೇ ಜೀವಲೋಕದಲ್ಲಿ ಜೀವನೆನಿಸಿ ಸನಾತನನಾಗಿದ್ದಾನೆ. ಈಶ್ವರನು ಎಲ್ಲರ ಹೃದಯದಲ್ಲೂ ನೆಲಸಿದ್ದಾನೆ. ಅವನು ಎಲ್ಲ ಜೀವರನ್ನೂ ತನ್ನ ಮಾಯೆಯಿಂದ ನಿಯಮನಮಾಡುತ್ತಿದ್ದಾನೆ" ಎಂದು ಗೀತೆಯಲ್ಲೂ ಹೇಳಿದೆ. ಹೀಗೆ ಜೀವರನ್ನು ಈಶ್ವರನ ಅಂಶರೆಂದೂ, ಅನೇಕರೆಂದೂ ತಿಳಿಸಲಾಗಿದೆ. "ಯಾವನಿಂದ ಈ ಭೂತಗಳು ಹುಟ್ಟಿ ಜೀವಿಸುತ್ತಿರುವುವೋ"

ಎಂಬುದರಿಂದ ಜೀವರು ಅನೇಕರೆಂದು ತಿಳಿದುಬರುತ್ತದೆ. ಆದ್ದರಿಂದ ಜೀವರು ಸುಳ್ಳೆಂಬುದೂ, ಜೀವರೆಲ್ಲರೂ ಒಬ್ಬನೆಂಬುದೂ, ಜೀವನೇ ಬ್ರಹ್ಮವೆಂಬುದೂ ಯುಕ್ತವಲ್ಲ. "ಇವನ ಪಾದವೇ ಸಕಲವಿಶ್ವವೂ ಆಗಿದೆ " ಎಂಬುದು ಪುರುಷಸೂಕ್ತದಲ್ಲಿ ವಿಷ್ಣುವಿಗೆ ಅನ್ವಯಿಸುವುದರಿಂದಲೂ,"ಜೀವರೆಲ್ಲರೂ ನನ್ನ ಅಂಶರು"ಎಂದು ಗೀತೆಯಲ್ಲಿ ಕೃಷ್ಣನು ಜೀವರನ್ನು ತನ್ನ ಅಂಶವೆಂದು ಹೇಳಿರುವುದರಿಂದಲೂ ವೇದವೇದಾಂತಗಳನ್ನು ಹೇಳುವಾಗ ಮೊದಲು "ಹರಿಃ ಓಂ" ಎಂದು ವಿಷ್ಣುವಿನ ಸ್ಮರಣವನ್ನೇ ಮಾಡುವುದರಿಂದಲೂ " ವೇದವಾಕ್ಯಗಳೆಲ್ಲವೂ ಹರಿನಾಮಗಳೇ ಆಗಿವೆ " ಎಂದು ಕಪಿಲಸ್ಮೃತಿಯಲ್ಲಿ ಹೇಳಿರುವುದರಿಂದಲೂ ಜೀವರೆಲ್ಲರೂ ವಿಷ್ಣುವಿನ ಅಂಶರೇ ಇರುವರು ಎಂದು ಹೇಳುವುದಾದರೆ ಅನೇಕ ಶ್ರುತಿಗಳ ವಿರೊಧ ಸಂಭವಿಸುತ್ತದೆ. ಪ್ರಥಮಾಧ್ಯಾಯದ ಪ್ರಥಮಪಾದದಲ್ಲಿ ಪುರುಷಸೂಕ್ತ ಮತ್ತು ಕೃಷ್ಣಗೀತೆಗಳ ಅಭಿಪ್ರಾಯವನ್ನು ವಿಸ್ತಾರವಾಗಿ ತಿಳಿಸಲಾಗಿದೆ. ತ್ರಿಮೂರ್ತಿಗಳೊಳಗಿನ ನಾರಾಯಣನು ಜೀವನೆನಿಸಿದ್ದರಿಂದ ಅವನನ್ನೇ ಜೀವರೆಲ್ಲರಿಗೂ ಆಶ್ರಯನೆಂದು ಹೇಳಿದರೆ ಎಲ್ಲಾ ಶ್ರುತಿಗಳ ವಿರೋಧವುಂಟಾಗುವುದು. "ವಿಷ್ಣುಒಬ್ಬನೇ ಪ್ರಧಾನಜೀವನು,ಉಳಿದವರೆಲ್ಲವೂ ಬೇರೆ ಬೇರೆ ಜೀವರು" "ವಿಷ್ಣುವೇ ಮೊದಲಾದವರ ಉತ್ತಮದೇಹಗಳಲ್ಲಿ ಪ್ರವೇಶಿಸಿದ ಚೇತನವೇ ದೇವನೆನಿಸಿತು. ಮನುಷ್ಯನೇ ಮೊದಲಾದವರ ದೇಹಗಳಲ್ಲಿ ಪ್ರವೇಶಿಸಿದ ಚೇತನ ಮಾನವನೆನಿಸಿತು" ಎಂಬ ಶ್ರುತಿಯಲ್ಲಿ ವಿಷ್ಣುವು ಜೀವನೆಂದೇ ತಿಳಿದುಬರುತ್ತದೆ. ಶಿವನಂತೆ ವಿಷ್ಣುವೂ ತ್ರಿಮೂರ್ತ್ಯತೀತನೆಂಬುದು ಪ್ರತ್ಯಕ್ಷ ಶ್ರುತಿಗಳಲ್ಲಿ ಎಲ್ಲಿಯೂ ಕಂಡುಬಂದಿಲ್ಲ. ಆದರೆ ಶಿವನು ಸರ್ವಾತ್ಮಕನಾದ್ದರಿಂದ ಸರ್ವನೆನಿಸಿದ್ದಾನೆ. ವಿಷ್ಣುಶಬ್ದವೂ ಹಾಗೆಯೇ ಸಮಾನಾರ್ಥಕವಾದ್ದರಿಂದ ಶಿವನಿಗೂ ಅನ್ವಯಿಸುವುದೆಂದು ಒಪ್ಪಿದರೆ, ಶಂಖ, ಚಕ್ರ, ಊರ್ಧ್ವಪುಂಡ್ರಗಳಿಂದ ಕೂಡಿದ ಸುಂದರವಿಗ್ರಹವೂ ಶಿವನಿಗೆ ಇರಲೆಂದು ಆಕ್ಷೇಪ ಬರುತ್ತದೆ. ಆದ್ದರಿಂದ ಜೀವರು ಶಿವನ ಅಂಶರೆಂಬುದೇ ಯುಕ್ತವಾಗುತ್ತದೆ. ಹರಿಃ ಓಂ ಎಂಬಲ್ಲಿ ಮೊದಲು ವಿಷ್ಣುಶಬ್ದವು ಬಂದಿರುವುದರಿಂದ ವೇದವನ್ನು ವಿಷ್ಣುರೂಪವೆಂದು ಭಾವಿಸುವುದು ಮೂಢನಂಬಿಕೆ ಎನಿಸಿದೆ. " ಎಲ್ಲವೂ ರುದ್ರನೇ " " ಶಿವನೇ ನನಗೆ ರಕ್ಷಕನು " " ಸರ್ವ ವಿದ್ಯೆಗಳಿಗೂ ಈಶ್ವರನೇ ನಿಯಾಮಕನು " ಹೀಗೆ ಶ್ರುತಿಗಳಲ್ಲೂ,"ಶಿವನೇ ವೇದ, ವೇದವೇ ಶಿವನು, ವೇದವನ್ನು ಓದಿದವನು ಸದಾಶಿವನು", " ರುದ್ರನಲ್ಲದವನು ಕ್ರಮಪಾಠವನ್ನು ಕಲಿಯಲಾರನು " ಎಂದು ಅನೇಕಸ್ಮೃತಿಗಳಲ್ಲೂ ಶಿವನೇ ಸರ್ವಾತ್ಮಕನೂ, ಮತ್ತು ಸರ್ವಶ್ರುತಿಗಳಿಗೆ ಜನಕನೂ, ಸರ್ವವೇದಗಳ ನಿಯಾಮಕನೂ ಆಗಿರುವನೆಂದು ಹೇಳಿದ್ದರಿಂದ ಶಿವನಲ್ಲದೆ ಬೇರೆ ಯಾರೂ ವೇದಪತಿ ಎನಿಸಲಾರನು. ಆದ್ದರಿಂದ ಹರಿಃ ಓಂ ಎಂಬ ಮಾತಿನಲ್ಲಿ ಹರಿಶಬ್ದದಿಂದ ತಿಳಿದುಬರುವ ವಿಷ್ಣುವಿನೊಡಗೂಡಿ ಓಂಕಾರದಿಂದ ಬೋಧಿತನಾಗಿರುವ ಶಿವನ ಉಚ್ಚಾರಣವನ್ನೇ ತಿಳಿಸಲಾಗಿದೆ. " ವೇದಗಳ ಆದಿಯಲ್ಲಿ ಯಾವ ಓಂಕಾರಪ್ರಣವವಿದೆಯೋ, ಯಾವುದು ವೇದಾಂತದಲ್ಲಿ ವರ್ಣಿತವಾಗಿದೆಯೋ ಅದರ ಆಚೆಗೆ ಇರು

ವವನು ಮಹೇಶ್ವರನು" ಎಂಬಲ್ಲಿ ಹೇಳಿರುವ ಓಂಕಾರವನ್ನು ವೇದವೇದಾಂತಗಳ ಆರಂಭದಲ್ಲಿ ಉಚ್ಚರಿಸಬೇಕೆಂದು ವೈದಿಕವಿಧಾನವಿದೆ. "ಓಂ ಎಂಬ ಈ ಅಕ್ಷರವೇ ಸಮಸ್ತವೂ ಆಗಿದೆ" ಎಂದು ಆರಂಭಿಸಿ "ಪ್ರಪಂಚಕ್ಕಾಶ್ರಯನೂ ಅದ್ವೈತನೂ ಆದ ಶಿವನೇ ಓಂಕಾರನೆಂದು ಯಾವನು ತಿಳಿಯುವನೋ ಅವನೇ ತನ್ನೊಳಗಿನ ಶಿವನಲ್ಲಿ ಪ್ರವೇಶಿಸುತ್ತಾನೆ"ಎಂದು ಕೊನೆಯಾಗಿರುವ ಸರ್ವಶ್ರೇಷ್ಠವಾದ ಮಾಂಡೂಕ್ಯಶ್ರುತಿಯಲ್ಲಿ ಶಿವನನ್ನು ಪ್ರಣವರೂಪನೆಂದೂ, ಆ ರೂಪದಿಂದಲೇ ಭೋದಿತನೆಂದೂ,ಆದರೂ ಪ್ರಣವಾತೀತನೆಂದೂ ತಿಳಿಸಲಾಗಿದೆ. "ಸರ್ವಾಧಿಪತಿಯಾದ ಶಿವನೇ ಬ್ರಹ್ಮನಿಗೂ ಅಧಿಪತಿಯಾಗಿ ಬ್ರಹ್ಮನೂ ರುದ್ರನೂ ಎನಿಸಿದ್ದಾನೆ" ಎಂದು ತೈತ್ತಿರೀಯದಲ್ಲೂ, "ಅಕಾರವೇ ಬ್ರಹ್ಮ, ಉಕಾರವೇ ವಿಷ್ಣು, ಮಕಾರವೇ ಕಾಲರುದ್ರ, ಅರ್ಧಮಾತ್ರವೇ ಪರಮಶಿವನು. ಆದ್ದರಿಂದ ಓಂಕಾರವನ್ನು ಲಿಂಗವೆಂದು ಹೇಳುತ್ತಾರೆ"ಎಂದು ಸಾಮಶ್ರುತಿಯಲ್ಲಿ ಶಿವನೇ ಪ್ರಣವಾತ್ಮಕನೆಂದು ಹೇಳಿದೆ. "ಶ್ರೇಷ್ಠವಸ್ತುಗಳೆಲ್ಲಕ್ಕಿಂತಲೂ ಬ್ರಹ್ಮನು ಶ್ರೇಷ್ಠನು, ಅವನಿಗಿಂತಲೂ ಹರಿ ಶ್ರೇಷ್ಠನು, ಅವನಿಗಿಂತಲೂ ರುದ್ರನು ಶ್ರೇಷ್ಠನು. ಇಂತಹ ತ್ರಿಮೂರ್ತಿಗಳಿಗಿಂತ ಅತೀತನಾದ ಶಿವನಲ್ಲಿ ನನ್ನ ಮನಸ್ಸು ನೆಲಸಲಿ" ಎಂದು ಶ್ರುತಿಯಲ್ಲಿ ಹೇಳಿದೆ. ಆದ್ದರಿಂದ ವಿಷ್ಣುವಿನಮೇಲೆ ಪ್ರಣವರೂಪನಾದ ಶಿವನ ಸ್ಮರಣವು ಯುಕ್ತವೇ ಆಗಿದೆ. ಈಶ್ವರನ ಅರ್ಧಭಾಗವೇ ವಿಷ್ಣುವೆಂದು ಶ್ರುತಿಯಲ್ಲಿ ಹೇಳಿದೆ. "ಸರ್ವವ್ಯಾಪಕನಾದ ಪೂಜ್ಯರುದ್ರನಿಗೆ ನಮಸ್ಕಾರ. ನನ್ನನ್ನು ಮೃತ್ಯುವಿನಿಂದ ಪಾರುಮಾಡು" ಎಂದು ಶ್ರುತಿಯಲ್ಲಿ ಹೇಳಿದೆ. "ವಿಷ್ಣುರೂಪನಾದ ಶಿವನಿಗೂ ಶಿವರೂಪನಾದ ವಿಷ್ಣುವಿಗೂ ನಮಸ್ಕಾರ" ವೆಂದು ಶ್ರುತಿಯಲ್ಲಿ ಹೇಳಿದೆ. "ನನ್ನ ಅದ್ಭುತಮೂರ್ತಿಯೇ ನಾರಾಯಣನೆನಿಸಿದೆ" ಎಂದು ಕೂರ್ಮಪುರಾಣದ ಈಶ್ವರಗೀತೆಯಲ್ಲಿ ಹೇಳಿದೆ. ಹೀಗೆ ವಿಷ್ಣು ಶಿವನ ಶರೀರವೆಂಬುದರಲ್ಲಿ ಯಾವ ವಿರೋಧವೂ ಇಲ್ಲ. "ಶಿವನ ಶಕ್ತಿಯೇ ವಿನಿಯೋಗಕಾಲದಲ್ಲಿ ಶಿವಾನುಗ್ರಹದಿಂದ ನಾಲ್ಕು ಬಗೆಯಾಯಿತು. ಆ ಶಕ್ತಿಯೇ ಅವನ ಭೋಗಕ್ಕಾಗಿ ಭವಾನಿ ಎಂದೂ, ಸಮರದಲ್ಲಿ ದುರ್ಗಿ ಎಂದೂ, ಕ್ರೋಧದಲ್ಲಿ ಕಾಳಿ ಎಂದೂ, ಪುರುಷರಲ್ಲಿ ವಿಷ್ಣುವೆಂದೂ ಪ್ರಸಿದ್ಧವಾಗಿದೆ,"ಎಂದು ಸಾಮಶಾಖೆಯಲ್ಲಿ ಹೇಳಿದೆ. ವಿಷ್ಣು ಪಾರ್ವತಿಯ ಅಂಶನೆಂದು ಶಿವಾಷ್ಟೋತ್ತರನಾಮಾವಳಿಯಲ್ಲಿ "ವಿಷ್ಣುವಲ್ಲಭಾಯ ನಮಃ" ಎಂದು ಹೇಳಿದೆ. "ವಂದೇ ಮುಕುಂದಪ್ರಿಯಂ" ಎಂದು ಸ್ಕಾಂದದಲ್ಲಿ ಹೇಳಿದೆ. ಹೀಗೆ ವಿಷ್ಣುವಲ್ಲಭ ಮುಕುಂದಪ್ರಿಯ ಎಂಬ ಶಬ್ದಗಳು ಶಿವನಿಗೇ ಅನ್ವಯಿಸುತ್ತವೆ. ಪ್ರಣವರೂಪನಾದ ಶಿವನಿಗೆ ವಿಷ್ಣುವು ಚಂದ್ರನಿಗೆ ಚಂದ್ರಿಕೆಯಂತೆ ಪ್ರಾಣಶಕ್ತಿಯಾಗಿರುವನು." ಶಿವಕೇಶರಿಂದ ಹುಟ್ಟಿದವನೇ ಕಾಲಭೈರವನು" ಎಂದು ಪುರಾಣಗಳಲ್ಲಿ ಹೇಳಿರುವುದರಿಂದ ಶಿವನಿಗೆ ವಿಷ್ಣುವಲ್ಲಭನೆಂಬ ಹೆಸರು ನಿರ್ವಿವಾದವಾಗಿ ಅನ್ವಯಿಸುತ್ತದೆ. ಆದರೆ ಶಿವನಿಗೆ ಗೌರೀಪತಿ ಎಂಬ ಹೆಸರು ಮುಖ್ಯವೆಂದು ಒಪ್ಪಲಾಗಿದೆ. ಆದ್ದರಿಂದ ವೇದವೇದಾಂತಗಳಲ್ಲಿ ಶಿವನ ಹೆಸರನ್ನು ಹಾಗೆಯೇ ಉಚ್ಚರಿಸಬೇಕಲ್ಲವೇ? ಅಂದರೆ ಹಾಗಲ್ಲ, ಲೋಕ

ದಲ್ಲೂ ವೇದದಲ್ಲೂ ಸ್ತ್ರೀಪುರುಷರಿಗೆ ಪರಸ್ತ್ರೀಪುರುಷರೇ ಪರಸ್ಪರವಾಗಿ ಪರಮ ಪ್ರೇಮ ಪಾತ್ರರಿರುವರೆಂಬುದು ಸ್ವಾಭಾವಿಕ. ಯಾಗದಲ್ಲಿ ಇಂದ್ರನನ್ನು ಕರೆಯುವಾಗ ಅವನು ಶಚೀಪತಿಯಾಗಿದ್ದರೂ ಅವನನ್ನು ಹಾಗೆ ಕರೆಯದೆ ಅಹಲ್ಯಾಜಾರನೆಂದು ಕರೆದರೆ ಅವನಿಗೆ ಆನಂದವುಂಟಾಗುವುದರಿಂದ ಹಾಗೆ ಕರೆಯಲಾಗಿದೆ. ಅದರಂತೆ ಶಿವನನ್ನು ಗೌರೀಪತಿ ಎಂದು ಕರೆಯುವುದಕ್ಕಿಂದ ವಿಷ್ಣುವಲ್ಲಭನೆಂದು ಕರೆಯುವುದು ಅವನಿಗೆ ಪ್ರೇಮಾಸ್ಪದವೆನಿಸುತ್ತದೆ. ವಿಷ್ಣು ಗೌರಿಯು ಅಂಶನಾದ್ದರಿಂದ ಅಂಶಾಂಶಿಗಳಿಗೆ ಅಭೇದವು ಸಹಜವಾಗಿ ಹೊಂದುತ್ತದೆ. ಆದ್ದರಿಂದ ಹರಿಃ ಓಂ ಎಂದು ವೇದಗಳ ಆದಿಯಲ್ಲಿ ಹೇಳುವುದು ಯುಕ್ತವೇ ಆಗಿದೆ.

ಜೀವಸ್ಯಾಂಶತ್ವೇ ಬ್ರಹ್ಮೈಕದೇಶತ್ವೇನ ಜೀವಗತದೋಷಾಃ ಬ್ರಹ್ಮಣ ಏವೋಪಪದ್ಯಂತೇ ಇತ್ಯಾಶಂಕಾಯಾಮಾಹ. ಪ್ರಕಾಶಾದಿವತ್ತು ನೈವಂ ಪರಃ ॥ ೪೩ ॥ ತುಶಬ್ದಶ್ಚೋದ್ಯಂ ವ್ಯಾವರ್ತಯತಿ. ಪ್ರಕಾಶಾದಿವಜ್ಜೀವಃ ಪರಮಾತ್ಮನೋಽಂಶಃ. ಯಥಾಗ್ನ್ಯಾದಿತ್ಯಾದೇರ್ಭಾಸ್ವತೋ ಭಾರೂಪಃ ಪ್ರಕಾಶೋಽಂಶೋ ಭವತಿ, ಯಥಾ ಗವಾಶ್ವಶುಕ್ಲಕೃಷ್ಣಾದೀನಾಂ ಗೋತ್ವಾದಿವಿಶಿಷ್ಟಾನಾಂ ವಸ್ತೂನಾಂ ಗೋತ್ವಾದಿ ವಿಶೇಷಣಾನ್ಯಂಶಾಃ, ಯಥಾ ವಾ ದೇಹಿನೋ ದೇವಮನುಷ್ಯಾದಿದೇಹೋಽಂಶಃ ತದ್ವತ್ ಏಕವಸ್ತ್ವೇಕದೇಶತ್ವಂ ಹ್ಯಂಶತ್ವಂ, ವಿಶಿಷ್ಟೈಕಸ್ಯ ವಸ್ತುನೋ ವಿಶೇಷಣಮಂಶ ಏವ. ತಥಾ ಚ ವಿವೇಚಕಾಃ ವಿಶಿಷ್ಟೇ ವಸ್ತುನಿ ವಿಶೇಷಣಾಂಶೋಽಯಂ ವಿಶೇಷ್ಯಾಂಶೋಽಯಮಿತಿ ವ್ಯಪದಿಶಂತಿ. ಏವಂ ವಿಶೇಷಣವಿಶೇಷ್ಯಯೋರಂಶಾಂಶಿತ್ವೇಽಪಿ ಸ್ವಭಾವವೈಲಕ್ಷಣ್ಯಂ ದೃಶ್ಯತೇ. ಅತೋ ಜೀವಪರಯೋರ್ವಿಶೇಷಣವಿಶೇಷ್ಯಯೋರಂಶಾಂಶಿತ್ವಂ ಸ್ವಭಾವಭೇದಶ್ಚೋಪಪದ್ಯತೇ. ತದಿದಮುಚ್ಯತೇ ನೈವಂ ಪರ ಇತಿ. ಯಥಾಭೂತೋ ಜೀವಃ ನ ತಥಾಭೂತಃ ಪರ ಇತ್ಯರ್ಥಃ. ತಥೈವ ಹಿ ಪ್ರಭಾಯಾಃ ಪ್ರಭಾವಾನನ್ಯಥಾಭೂತಃ ತಥಾ ಪ್ರಭಾಸ್ಥಾನೀಯತ್ವಾಂಶಾಜ್ಜೀವಾದಂಶೀ ಶಿವಪರೋಽಪ್ಯರ್ಥಾಂತರಂ ಬ್ರೂತ ಇತ್ಯರ್ಥಃ. ಏವಂ ಜೀವಪರಯೋರ್ವಿಶೇಷಣವಿಶೇಷ್ಯತ್ವಕೃತಂ ಸ್ವಭಾವವೈಲಕ್ಷಣ್ಯಮಾಶ್ರಿತ್ಯ ಭೇದನಿರ್ದೇಶಾಃ ಪ್ರವರ್ತಂತೇ. ಅಭೇದನಿರ್ದೇಶಾಸ್ತು ಪೃಥಕ್ಸಿದ್ಧ್ಯನರ್ಹವಿಶೇಷಣಾನಾಂ ವಿಶೇಷ್ಯಪರ್ಯಂತತ್ವಮಾಶ್ರಿತ್ಯ ಮುಖ್ಯತ್ವೇನ ಉಪಪದ್ಯಂತೇ, " ತತ್ತ್ವಮಸಿ " " ಅಯಮಾತ್ಮಾ ಬ್ರಹ್ಮ " ಇತ್ಯಾದಿಷು ತಚ್ಛಬ್ದಬ್ರಹ್ಮಶಬ್ದವತ್ "ಅಯಮಾತ್ಮೇ"ತಿ ಶಬ್ದಾನಾಮಪಿ ಜೀವಾಂತರ್ಯಾಮಿಬ್ರಹ್ಮವಾಚಕತ್ವೇನ ಏಕಾರ್ಥಾಭಿಧಾಯಿತ್ವಾದಿತ್ಯಯಮರ್ಥಃ ಪ್ರಾಗೇವ ಪ್ರಪಂಚಿತಃ.

ಜೀವನು ಅಂಶನಾದರೆ ಬ್ರಹ್ಮದ ಏಕದೇಶವಾದ್ದರಿಂದ ಜೀವನ ದೋಷಗಳು

ಬ್ರಹ್ಮಕ್ಕೂ ಅನ್ವಯಿಸುತ್ತವೆ ಎಂದು ಆಶಂಕಿಸಿ ನಿರಾಕರಿಸುತ್ತಾನೆ. ಪ್ರಕಾಶದಂತೆ ಜೀವನು ಪರಮಾತ್ಮನ ಅಂಶನು. ಪ್ರಕಾಶಿಸುತ್ತಿರುವ ಅಗ್ನಿ-ಸೂರ್ಯ ಮೊದಲಾದವರ ಪ್ರಕಾಶವು ಅಂಶವೆನಿಸುತ್ತದೆ. ಗೋತ್ವವೆಂಬ ಜಾತಿಯೊಡಗೂಡಿದ ಗೋವಿನಲ್ಲಿ ಗೋತ್ವವೆಂಬ ಜಾತಿಯು ಅದರ ಒಂದು ಅಂಶವೇ ಆಗುತ್ತದೆ. ಮನುಷ್ಯಾದಿಗಳ ದೇಹದಿಂದ ಕೂಡಿದ ಜೀವನಲ್ಲಿ ದೇಹವೂ ಒಂದು ಅಂಶವೇ ಆಗುತ್ತದೆ. ಒಂದು ವಿಶಿಷ್ಟ ವಸ್ತುವಿನ ಏಕದೇಶವೇ ಅಂಶವೆನಿಸುತ್ತದೆ. ಲೋಕದಲ್ಲಿ ತಿಳಿದವರೂ ಸಹ "ಇದು ವಿಶೇಷಣಾಂಶ,ಇದು ವಿಶೇಷ್ಯಾಂಶ"ವೆಂದೇ ವ್ಯವಹರಿಸುತ್ತಾರೆ. ಹೀಗೆ ವಿಶೇಷಣವಿಶೇಷ್ಯಗಳಿಗೆ ಅಂಶಾಂಶಿಭಾವವಿದ್ದರೂ ಪರಸ್ಪರವಾಗಿ ಗುಣಗಳ ವಿನಿಮಯಕ್ಕೆ ಅವಕಾಶವಿಲ್ಲ. ಹೀಗೆಯೇ ಜೀವಪರಮರಿಗೂ ವಿಶೇಷಣವಿಶೇಷ್ಯಭಾವದಿಂದ ಅಂಶಾಂಶಿಭಾವವಿದ್ದರೂ ಪರಸ್ಪರಗುಣಗಳ ವಿನಿಮಯಕ್ಕೆ ಅವಕಾಶವಿಲ್ಲ. ಇದನ್ನೇ "ನೈವಂ ಪರಃ" ಎಂಬ ಸೂತ್ರಖಂಡದಲ್ಲಿ ಹೇಳಿದೆ. ಪರಮಾತ್ಮನು ಜೀವನಂತೆ ವರ್ತಿಸುವುದಿಲ್ಲವೆಂಬುದೇ ಇದರ ಅರ್ಥ. ಲೋಕದಲ್ಲಿಯೂ ಪ್ರಭೆ ಮತ್ತು ಪ್ರಭೆಯುಳ್ಳ ವಸ್ತುವಿಗೂ ಭೇದವಿದ್ದೇ ಇರುತ್ತದೆ. ಹಾಗೆಯೇ ಪ್ರಭೆಯ ಸ್ಥಾನದಲ್ಲಿರುವ ಜೀವನಿಗಿಂತಲೂ ಪ್ರಭೆಯುಳ್ಳ ವಸ್ತುವಿನ ಸ್ಥಾನದಲ್ಲಿರುವ ಪರಮಾತ್ಮನಿಗೆ ಭೇದವಿದ್ದೇ ಇರುತ್ತದೆ. ಹೀಗೆ ಜೀವಪರಮರಿಗೆ ವಿಶೇಷಣವಿಶೇಷ್ಯಭಾವದಿಂದ ವೈಲಕ್ಷಣ್ಯವಿರುವುದರಿಂದಲೇ ಭೇದಶ್ರುತಿಗಳು ಹೊರಟಿವೆ. ತತ್ತ್ವಮಸಿ ಮೊದಲಾದ ಶ್ರುತಿಗಳೂ ಸಹ ಜೀವಪರಮರಿಗೆ ಶರೀರಶರೀರಿಭಾವವನ್ನು ಅವಲಂಬಿಸಿ ಐಕ್ಯವನ್ನು ಬೋಧಿಸುತ್ತವೆ ಎಂಬ ಅಂಶವನ್ನು ಹಿಂದೆಯೇ ವಿಸ್ತರಿಸಲಾಗಿದೆ.

**ಜೀವದುಃಖೇನೇಶ್ವರದುಃಖಾಭಾವೇ ಸ್ಮೃತಿಮುಪ್ಯಾಹ–ಸ್ಮರಂತಿ ಚ ॥ ೪೪ ॥ "ತತ್ರ ಯಃ ಪರಮಾತ್ಮಾಸೌ ಸ ಸತ್ಯೋ ನಿರ್ಗುಣಃ ಸ್ಮೃತಃ । ನ ಲಿಪ್ಯತೇ ಫಲೈಶ್ಚಾಪಿ ಪದ್ಮಪತ್ರಮಿವಾಂಭಸಾ ॥", "ಕರ್ಮಾತ್ಮಾತ್ವಪರೋ ಯೋಽಸೌ ಮೋಕ್ಷಬಂಧೈಸ್ಸ ಯುಜ್ಯತೇ", "ವಿಗ್ರಹಂ ದೇವದೇವಸ್ಯ ಜಗದೇತಚ್ಚರಾಚರಂ । ಏತಮರ್ಥಂ ನ ಜಾನಂತಿ ಪಶವಃ ಪಾಪಗೌರವಾತ್ ॥" ಇತಿ ಪ್ರಭಾಪ್ರಭಾವದ್ರೂಪೇಣ ಶಕ್ತಿಶಕ್ತಿಮದ್ರೂಪೇಣ ಚಾಂಶಾಂಶಿಭಾವಂ ಜೀವಬ್ರಹ್ಮಣೋಃ ಪರಾಶರಾದಯಃ ಸ್ಮರಂತಿ. "ಏಕದೇಶಸ್ಥಿತಸ್ಯಾಗ್ನೇರ್ಜ್ಯೋತ್ಸ್ನಾ ವಿಸ್ತಾರಿಣೀ ಯಥಾ । ಪರಸ್ಯ ಬ್ರಹ್ಮಣಶ್ಶಕ್ತಿಸ್ತಥೇದಮಖಿಲಂ ಜಗತ್ ॥" ಇತಿ ಜೀವದುಃಖೇ ನ ದುಃಖಿತ್ವಮೀಶ್ವರಸ್ಯ ಸ್ಮರಂತೀತ್ಯರ್ಥಃ. ಚಶಬ್ದೇನ "ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋಽಭಿಚಾಕಶೀತಿ" ಇತ್ಯಾದಿಕಾ ಶ್ರುತಿಸ್ಸೂಚಿತಾ.**

ಹೀಗಿದ್ದರೂ ಜೀವರ ದುಃಖದಿಂದ ಈಶ್ವರನಿಗೆ ದುಃಖ ಅಂಟುವುದಿಲ್ಲವೆಂಬುದಕ್ಕೆ ಸ್ಮೃತಿಯನ್ನು ಹೇಳುತ್ತಾನೆ. "ಈ ದೇಹದಲ್ಲಿರುವ ಪರಮಾತ್ಮನು ಸತ್ಯನೂ ನಿರ್ಗುಣನೂ ಇರುವನು. ನೀರಿನಿಂದ ಪದ್ಮಪತ್ರಕ್ಕೆ ಲೇಪನವಿಲ್ಲದಂತೆ ಪರಮಾತ್ಮನಿಗೂ

ಜೀವನು ಮಾಡುವ ಪುಣ್ಯಪಾಪಕರ್ಮಗಳ ಫಲದ ಲೇಪನವಾಗುವುದಿಲ್ಲ. ಕರ್ಮಾತ್ಮ ನೆನಿಸಿದ ಜೀವನು ಬಂಧಮೋಕ್ಷಗಳಿಗೆ ಸಿಲುಕಿದ್ದಾನೆ. ಜಗತ್ತೆಲ್ಲವೂ ಮಹಾದೇವನ ಶರೀರವಾಗಿದೆ. ಇದನ್ನು ತಿಳಿಯದೆ ಜೀವರು ಪಾಪಗಳನ್ನಾಚರಿಸುತ್ತಾರೆ" ಹೀಗೆ ಪರಾಶರಾದಿಗಳು ಸೂರ್ಯನಿಗೂ ಪ್ರಭೆಗೂ, ಶಕ್ತಿಗೂ ಶಕ್ತನಿಗೂ ಇರುವಂತೆ ಜೀವ ಬ್ರಹ್ಮರಿಗೆ ಅಂಶಾಂಶಿಭಾವವನ್ನು ಹೇಳುತ್ತಾರೆ. "ಒಂದುಕಡೆಯೇ ನೆಲಸಿದ್ದರೂ ಬೆಂಕಿಯ ಉರಿಯು ಎಲ್ಲಾ ಕಡೆಯಲ್ಲೂ ವ್ಯಾಪಿಸುವಂತೆ ಪರಮಾತ್ಮನ ಶಕ್ತಿಯೇ ಈ ವಿಶ್ವವೆಲ್ಲವೂ ಆಗಿದೆ" ಎಂಬ ಸ್ಮೃತಿಯಂತೆ ಜೀವನ ದುಃಖದಿಂದ ಈಶ್ವರನಿಗೆ ದುಃಖ ವಿಲ್ಲವೆಂದು ಅವರು ತಿಳಿಸುತ್ತಾರೆ. ಸೂತ್ರದಲ್ಲಿ ಬಂದಿರುವ ಚಶಬ್ದವು "ಎರಡು ಆತ್ಮ ಗಳಲ್ಲಿ ಒಬ್ಬನು ಸುಖದುಃಖಗಳನ್ನು ಅನುಭವಿಸುತ್ತಲೂ ಮತ್ತೊಬ್ಬನು ಅಸಂಗನಾಗಿ ನೋಡುತ್ತಲೂ ಇರುವನು" ಎಂಬ ಶ್ರುತಿಯನ್ನು ಸೂಚಿಸುತ್ತದೆ.

ಏವಂ ಬ್ರಹ್ಮಾಂಶತ್ವೇ ಬ್ರಹ್ಮಪ್ರವರ್ತ್ಯತ್ವೇ ಜ್ಞತ್ವೇ ಚ ಸರ್ವೇಷಾಂ ಸಮಾನೇ ಕೇಷಾಂಚಿದ್ವೇದಾಧ್ಯಯನತದರ್ಥಾನುಷ್ಠಾನಾದ್ಯನುಜ್ಞಾ, ಕೇಷಾಂಚಿತ್ಪರಿಹಾರಃ, ಕೇಷಾಂಚಿದ್ದರ್ಶನಸ್ಪರ್ಶನಾದ್ಯನುಜ್ಞಾ ಕೇಷಾಂ ಚಿತ್ಪರಿಹಾರಶ್ಚ ಶಾಸ್ತ್ರೇಷು ಕಥಮುಪಪದ್ಯತ ಇತ್ಯಾಶಂಕ್ಯಾಹ, "ಅನು ಜ್ಞಾಪರಿಹಾರೌ ದೇಹಸಂಬಂಧಾಜ್ಜ್ಯೋತಿರಾದಿವತ್" ॥ ೪೮ ॥ ಸರ್ವೇಷಾಂ ಬ್ರಹ್ಮಾಂಶತ್ವಜ್ಞತ್ವಾದಿನೈಕರೂಪತ್ವೇ ಸತ್ಯಪಿ ಬ್ರಾಹ್ಮಣ ಕ್ಷತ್ರಿಯವೈಶ್ಯಶೂದ್ರಾದಿರೂಪಶುಚ್ಯಶುಚಿದೇಹಸಂಬಂಧನಿಬಂಧನೌ ಅನುಜ್ಞಾಪರಿಹಾರೌ ಉಪಪದ್ಯೇತೇ. ಜ್ಯೋತಿರಾದಿವತ್, ಯಥಾಗ್ನೇ ರಗ್ನಿತ್ವೇನೈಕರೂಪತ್ವೇಽಪಿ ಶ್ರೋತ್ರಿಯಾಗಾರಾದಗ್ನಿರಾಹ್ರಿಯತೇ,ಸ್ಮಶಾ ನಾದೇಸ್ತು ಪರಿಹ್ರಿಯತೇ. ಯಥಾ ಚಾನ್ನಾದಿ ಶ್ರೋತ್ರಿಯಾದೇರನು ಜ್ಞಾಯತೇ ಅಭಿಶಸ್ತಾದೇಸ್ತು ಪರಿಹ್ರಿಯತೇ.

ಹೀಗೆ ಜೀವನು ಬ್ರಹ್ಮದ ಅಂಶನೆಂಬುದೂ, ಬ್ರಹ್ಮದ ಪ್ರೇರಣದಿಂದಲೇ ತನ್ನ ಕಾರ್ಯಗಳಲ್ಲಿ ಪ್ರವರ್ತಿಸುವನೆಂಬುದೂ, ಅವನು ಜ್ಞಾನರೂಪನೆಂಬುದೂ ಎಲ್ಲ ಮತ ದವರಿಗೂ ಸಮಾನವಾಗಿರುವಾಗ ಕೆಲವರಿಗೆ ವೇದಾಧ್ಯಾಯನ ಮಾಡಿ ಅದರ ಅರ್ಥ ವನ್ನು ತಿಳಿದು ಆಚರಿಸಬೇಕೆಂದು ಅನುಜ್ಞೆಮಾಡಲಾಗಿದೆ. ಕೆಲವರಿಗೆ ಅದನ್ನು ನಿಷೇಧಿಸಲಾಗಿದೆ. ಕೆಲವರಿಗೆ ವೇದವನ್ನು ನೋಡಲಿಕ್ಕೂ ಮುಟ್ಟಲಿಕ್ಕು ಅವಕಾಶವಿದೆ; ಆದರೆ ಕೆಲವರಿಗೆ ಅದಕ್ಕವಕಾಶವಿಲ್ಲ. ಇಂತಹ ಪರಸ್ಪರ ವಿರೋಧಗಳಿಗೆ ಶಾಸ್ತ್ರ ಗಳಲ್ಲಿ ಹೇಗೆ ಪರಿಹಾರ ದೊರೆತೀತು? ಎಂದಾಶಂಕಿಸಿ ಸಮಾಧಾನವನ್ನು ಹೇಳು ತ್ತಾನೆ. ಜೀವರೆಲ್ಲರೂ ಬ್ರಹ್ಮಾಂಶರೂ ಜ್ಞಾನರೂಪರೂ ಆಗಿ ಒಂದೇ ಬಗೆಯಾಗಿ ದ್ದರೂ ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ಜಾತಿಭೇದದಿಂದ ದೇಹದ ಶುಚಿ ಮತ್ತು ಅಶುಚಿಗಳನ್ನವಲಂಬಿಸಿ ವೇದಾಧ್ಯಯನದ ಅವಕಾಶ ಮತ್ತು ನಿಷೇಧಗಳನ್ನು ಕಲ್ಪಿಸಲಾಗಿದೆ. ಅಗ್ನಿ ಒಂದೇಬಗೆಯಾದರೂ ಶ್ರೋತ್ರಿಯರ ಮನೆಯ ಬೆಂಕಿ

ಯನ್ನು ಸ್ವೀಕರಿಸುತ್ತೇವೆ; ಆದರೆ ಸ್ಮಶಾನದ ಬೆಂಕಿಯನ್ನು ನಿಷೇಧಿಸುತ್ತೇವೆ. ಹಾಗೆಯೇ ಶ್ರೋತ್ರಿಯರ ಮನೆಯಲ್ಲಿ ಅನ್ನವನ್ನು ಸ್ವೀಕರಿಸುತ್ತೇವೆ. ಪಾಪಿಗಳ ಮನೆಯಲ್ಲಿ ಅನ್ನವನ್ನು ಸ್ವೀಕರಿಸುವುದಿಲ್ಲ. ಆದ್ದರಿಂದ ಆಯಾ ದೇಹಸಂಬಂಧ ದಿಂದಲೇ ಆತ್ಮರಿಗೆ ವಿಧಿನಿಷೇಧಗಳು ಪ್ರವರ್ತಿಸಿವೆ.

ನನು ತಥಾಪಿ ಸರ್ವಶರೀರೇಷು ಕರ್ಮಕರ್ತುಶ್ಚೇತನಸ್ಯೈಕತ್ವಾ ದ್ದೇವದತ್ತಶರೀರಾವಚ್ಛೇದೇನ ಕರ್ಮಕರಣಧರ್ಮಾಧಿಕಂ ಯಜ್ಞದತ್ತ ಶರೀರಾವಚ್ಛೇದೇನ ನ ಜ್ಞಾಯತೇ ಇತ್ಯಾಶಂಕ್ಯಾಹ. ಅಸಂತತೇಶ್ಚಾ ವ್ಯತಿಕರಃ ॥ ೪೬ ॥ ಬ್ರಹ್ಮಾಂಶತ್ವಾದಿನೈಕರೂಪತ್ವೇ ಸತ್ಯಪಿ ಜೀವಾನಾ ಮನ್ಯೋನ್ಯಭೇದಾದಣುತ್ವೇನ ಪ್ರತಿಶರೀರಂ ಭಿನ್ನತ್ವಾಚ್ಚ ಭೋಗವ್ಯತಿಕ ರೋಽಪಿ ನ ಭವತಿ. ಭ್ರಾಂತಬ್ರಹ್ಮಜೀವವಾದೇ ಉಪಹಿತಬ್ರಹ್ಮಜೀವ ವಾದೇ ಚ ಜೀವಾನಾಂ ಭೋಗವ್ಯತಿಕರಾಭಾವ ಉಕ್ತಃ. ಉತ ಪರಿಚ್ಛಿ ನ್ನಸ್ಯ ದೇವದತ್ತಸ್ಯಾತ್ಮನಃ ಕರ್ತುಃ ಯಜ್ಞದತ್ತಶರೀರಾಸಂತತೇಃ ಸಂಬಂಧಧರ್ಮಾದೇರಸಂಕರಃ. ಬ್ರಹ್ಮಜ್ಞಾನಾಪನ್ನಾನಾಂ ಜೀವನ್ಮು ಕ್ತಾನಾಂ ವಿದೇಹಮುಕ್ತಿಪರ್ಯಂತಂ ದೇಹಾದ್ಯುಪಾಧಿಭೇದೇನ ಜೀವಾ ನಾಮಣುರೂಪತ್ವೇನ ಪರಿಚ್ಛಿನ್ನತ್ವಾದವ್ಯತಿಕರಃ. ಬದ್ಧಜೀವವತ್ಸುಖ ದುಃಖಾತ್ಮಕಪ್ರಾರಬ್ಧಭೋಗಸತ್ತ್ವೇಽಪಿ ಅಸಾಂಕರ್ಯಂ. ಶಿವಜ್ಞಾನಾಧಿ ಕ್ಯೇನ ಚ ಸಾಂಸಾರಿಕಬದ್ಧಶುದ್ಧವೈಲಕ್ಷಣ್ಯಂ ಸಂಭವತಿ. ತದುಕ್ತಂ ಶಿವಾಗಮೇ "ಬದ್ಧಶುದ್ಧಾದಿಭೇದೇನ ಜೀವತ್ರಯಮಿದಂ ಸ್ಮೃತಂ। ಗುರುದೀಕ್ಷಾವಿಹೀನಶ್ಚ ಶಿವಭಕ್ತಿವಿವರ್ಜಿತಃ । ಸ್ವಕರ್ತೃತ್ವಾಭಿಮಾನೀ ತು ಬದ್ಧಸ್ಸ ಪಶುರುಚ್ಯತೇ । ಗುರುದೀಕ್ಷಾಂ ಪರಾಂ ಲಬ್ಧ್ವಾ ಕೈಂಕ ರ್ಯತ್ರಯಸಂಯುತಃ । ಶಾಂತ್ಯಾದಿಸದ್ಗುಣೋಪೇತೋ ಮುಮುಕ್ಷೂ ರಾಗವರ್ಜಿತಃ । ಶಿವಾಧೀನಸುಧೀರ್ಭಕ್ತಶ್ಶುದ್ಧಜೀವ ಇತಿ ಸ್ಮೃತಃ । ಶಿವ ಯೋಗಶಿವಜ್ಞಾನವಿಭವಾನಂದಸಂಯುತಃ । ಪ್ರಚಂಡಾತಪಮಧ್ಯಸ್ಥ ಶುದ್ಧಕರ್ಪೂರದೀಪವತ್ । ಶಿವಾಕಾರೇ ಪರಾಕಾಶೇ ಕೋಟಿಸೂರ್ಯ ಪ್ರಕಾಶಕೇ । ವಿಲೀನಚಿತ್ತವೃತ್ತಿಸ್ತು ಮುಕ್ತಜೀವ ಇತಿ ಸ್ಮೃತಃ । ಸ ಜೀವ ನ್ಮುಕ್ತ ಇತ್ಯುಕ್ತೋ ರಾಗದ್ವೇಷವಿವರ್ಜಿತಃ" ಇತಿ ಸ್ಪಷ್ಟಮುಪದಿಷ್ಟಂ.

ಹಾಗಾದರೂ ಎಲ್ಲಾ ಶರೀರಗಳನ್ನೂ ನಡೆಸುತ್ತಿರುವ ಚೇತನನು ಒಬ್ಬನೇ ಆದ್ದರಿಂದ ದೇವದತ್ತನ ಶರೀರದಲ್ಲಿದ್ದು ಮಾಡುತ್ತಿರುವ ಕೆಲಸವನ್ನು ಯಜ್ಞದತ್ತನ ಶರೀರದಲ್ಲಿ ಏಕೆ ಅವನು ತಿಳಿಯಲಾರನು? ಹೀಗೆ ಆಶಂಕಿಸಿ ಸಮಾಧಾನವನ್ನು ತಿಳಿಸುತ್ತಾನೆ. ಬ್ರಹ್ಮದ ಅಂಶವಾದ್ದರಿಂದ ಜೀವರೆಲ್ಲರೂ ಒಂದೇಬಗೆಯಾಗಿದ್ದರೂ, ಪರಸ್ಪರಭೇದದಿಂದಲೂ ಅಣುವಾದ್ದರಿಂದಲೂ ಪ್ರತಿಶರೀರದಲ್ಲೂ ಭಿನ್ನರಾಗಿರುವುದ ರಿಂದಲೂ ಜೀವರಿಗೆ ಭೋಗದ ಸಾಂಕರ್ಯವುಂಟಾಗುವುದಿಲ್ಲ. ಭ್ರಾಂತಿಯಿಂದೊಡ

ಗೂಡಿದ ಬ್ರಹ್ಮವೇ ಜೀವನೆಂಬ ವಾದದಲ್ಲೂ, ಉಪಾಧಿಯಿಂದ ಕೂಡಿದ ಬ್ರಹ್ಮವೇ ಜೀವನೆಂಬ ವಾದದಲ್ಲೂ ಜೀವಬ್ರಹ್ಮರಿಗೂ ಪರಸ್ಪರಜೀವರಿಗೂ ಭೋಗಸಾಂಕರ್ಯ ಮೊದಲಾದ ದೋಷಗಳು ಸಂಭವಿಸುತ್ತವೆ. ಸಿದ್ಧಾಂತವೆನಿಸಿದ ನಮ್ಮ ಪಕ್ಷದಲ್ಲಿ ಈ ದೋಷಗಳಿಗವಕಾಶವಿಲ್ಲ. ಇದಲ್ಲದೆ, ದೇವದದತ್ತನ ಶರೀರದೊಳಗೆ ಕರ್ತನಾಗಿರುವ ಆತ್ಮನು ಅಣುವಾದ್ದರಿಂದ ಯಜ್ಞದತ್ತನ ಶರೀರವಲ್ಲಿ ವ್ಯಾಪಿಸಿರುವುದಿಲ್ಲ. ಇದರಿಂದ ಅವನಿಗೆ ಪುಣ್ಯಪಾಪಗಳ ವ್ಯತ್ಯಾಸವುಂಟಾಗುವುದಿಲ್ಲ. ಬ್ರಹ್ಮಜ್ಞಾನವನ್ನು ಹೊಂದಿ ಜೀವನ್ಮುಕ್ತರಾದವರಿಗೂ ಸಹ ವಿದೇಹಕೈವಲ್ಯದವರೆಗೆ ಶರೀರವೇ ಮೊದಲಾದ ಉಪಾಧಿಗಳಿರುವುದರಿಂದಲೂ, ಅವರ ಆತ್ಮವು ಅಣುವಾಗಿಯೇ ಇರುವುದರಿಂದಲೂ ಭೋಗಗಳಲ್ಲಿ ಸಾಂಕರ್ಯವುಂಟಾಗುವುದಿಲ್ಲ. ಬದ್ಧಜೀವರಂತೆ ಅವರಿಗೂ ಸುಖ ದುಃಖರೂಪವಾದ ಪ್ರಾರಬ್ಧಕರ್ಮಗಳ ಭೋಗವಿದ್ದರೂ ಅವರು ಪರಮಾತ್ಮತತ್ತ್ವವನ್ನು ತಿಳಿದಿರುವುದರಿಂದ ಸಂಸಾರದಲ್ಲಿ ಮುಳುಗಿದ ಬದ್ಧರಿಗಿಂತಲೂ ಮತ್ತು ಮುಕ್ತರಿಗಿಂತಲೂ ವಿಲಕ್ಷಣರಾಗಿಯೇ ಇರುವರು. ಆದ್ದರಿಂದ ಇಲ್ಲಿ ಸಾಂಕರ್ಯಕ್ಕವಕಾಶವಿಲ್ಲ. ಶಿವಾಗಮದಲ್ಲಿ " ಬದ್ಧ, ಶುದ್ಧ, ಮುಕ್ತ ಎಂಬ ಭೇದದಿಂದ ಜೀವರು ಮೂರುಬಗೆಯಾಗಿದ್ದಾರೆ. ಗುರುವಿನಿಂದ ದೀಕ್ಷೆಯನ್ನು ಹೊಂದದೆ, ಶಿವಭಕ್ತಿಯಿಲ್ಲದೆ, ವ್ಯವಹಾರಗಳಲ್ಲಿ ತಾನೇ ಕರ್ತನೆಂದು ಅಭಿಮಾನಿಸುವವನು ಬದ್ಧನು. ಗುರುದೀಕ್ಷೆಯನ್ನು ಹೊಂದಿ ಕೈಂಕರ್ಯವನ್ನಾಚರಿಸುತ್ತ ಶಾಂತ್ಯಾದಿಗುಣಗಳಿಂದೊಡಗೂಡಿ ಮೋಕ್ಷದ ಬಯಕೆಯಿಂದ ಪ್ರಾಪಂಚಿಕ ವ್ಯಾಮೋಹವನ್ನು ತೊರೆದು ಶಿವನಿಗೆ ಪೂರ್ಣ ವಶನಾದವನು ಶುದ್ಧನೆನಿಸುವನು. ಶಿವಯೋಗಶಿವಜ್ಞಾನಗಳಿಂದ ದೊರಕುವ ಆನಂದವನ್ನು ಅನುಭವಿಸುತ್ತ, ಸೂರ್ಯಪ್ರಕಾಶದೊಳಗೆ ಬೆರೆತು ಉರಿಯುತ್ತಿರುವ ಕರ್ಪೂರದಂತೆ ಶಿವಮಯವಾದ ಮಹಾಪ್ರಕಾಶದ ಚಿದಾಕಾಶದಲ್ಲಿ ಚಿತ್ತವೃತ್ತಿಗಳೆಲ್ಲವನ್ನೂ ಬೆರಸಿದವನು ಮುಕ್ತನೆನಿಸುವನು. ಇವನಿಗೆ ರಾಗದ್ವೇಷಗಳಿರುವುದಿಲ್ಲ. ಇವನೇ ಜೀವನ್ಮುಕ್ತನು " ಎಂದು ಹೇಳಿದೆ.

ನನು ಭ್ರಾಂತಬ್ರಹ್ಮಜೀವವಾದೇಽಪ್ಯವಿದ್ಯಾಕೃತೋಪಾಧಿಭೇದಾದ್ಭೋಗವ್ಯವಸ್ಥಾದಯ ಉಪಪದ್ಯಂತೇ, ನ ಸ್ವತಸ್ಸಂಭವತೀತ್ಯಾಶಂಕಾಯಾಮಾಹ. ಆಭಾಸ ಏವ ಚ ॥ ೩೭ ॥ ಅಖಂಡೈಕರಸಪ್ರಕಾಶಮಾತ್ರರೂಪಸ್ಯ ಸ್ವರೂಪತಿರೋಧಾನಪೂರ್ವಕೋಪಾಧಿಭೇದೋಪಪಾದನಹೇತುರಾಭಾಸ ಏವ. ಪ್ರಕಾಶೈಕಸ್ವರೂಪಸ್ಯ ಪ್ರಕಾಶಕತಿರೋಧಾನಂ ಪ್ರಕಾಶನಾದೇವೇತಿ ಪ್ರಾಗೇವೋಪಪಾದಿತಂ. ಆಭಾಸಾ ಏವೇತಿ ವಾ ಪಾಠಃ. ತಥಾ ಸತಿ ಹೇತವಃ ಆಭಾಸಾಸ್ಸ್ಯುಃ. ಚಕಾರಾತ್ " ಪೃಥಗಾತ್ಮಾನಂ ಪ್ರೇರಿತಾರಂ ಚ ಜ್ಞಾತ್ವಾ ", " ಜ್ಞಾಜ್ಞೌ ದ್ವಾವಜೌ," " ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ " ಇತ್ಯಾದಿಶ್ರುತಿವಿರೋಧಶ್ಚ. ಅವಿದ್ಯಾಕಲ್ಪಿತೋಪಾಧಿಭೇದೇಽಪಿ ಸರ್ವೋಪಾಧ್ಯುಪಹಿತಸ್ವರೂಪಸ್ಯೈ

**ಕತ್ವಾಭ್ಯುಪಗಮಾದ್ಭೋಗವ್ಯತಿಕರಸ್ತದವಸ್ಥ ಏವ. ಕಿಂಚ ಜೀವಾನಾಮಂತಃಕರಣಪ್ರತಿಬಿಂಬತ್ವಾಂಗೀಕಾರೇ ಬಿಂಬಪ್ರತಿಬಿಂಬಯೋರೇಕತ್ರಾವಸ್ಥಾಽದರ್ಶನಾತ್ "ಗುಹಾಪ್ರತಿಷ್ಟೇ ಪರಮೇ ಪರಾರ್ಧೇ" "ಗುಹಾಂ ಪ್ರವಿಷ್ಟಾವಾತ್ಮಾನೌ" ಇತ್ಯಾದಿಶ್ರುತಿಸೂತ್ರವಿಶಿಷ್ಟಗುಹಾಧಿಕರಣವಿರೋಧಾಚ್ಚ ತದವಿಚಾರಿತರಮಣೀಯಂ.**

ಪರಮಾತ್ಮನೇ ಭ್ರಾಂತಿಗೊಂಡು ಜೀವನೆನಿಸಿರುವನೆಂಬ ವಾದದಲ್ಲೂ ಅವಿದ್ಯೆಯಿಂದಾಗಿರುವ ಉಪಾಧಿಭೇದದಿಂದಲೇ ಭೋಗವ್ಯವಸ್ಥೆ ಹೊಂದಬಹುದು. ಅದಕ್ಕಾಗಿ ಜೀವಬ್ರಹ್ಮರ ಭೇದವನ್ನು ಏಕೆ ಹೇಳಬೇಕು ಎಂದಾಶಂಕಿಸಿ ನಿರಾಕರಿಸುತ್ತಾನೆ. ಅಖಂಡಾನಂದಸ್ವರೂಪನಾದ ಪರಮಾತ್ಮನಿಗೆ ಸ್ವರೂಪವನ್ನು ಮುಚ್ಚುವಂತಹ ಉಪಾಧಿಯೊಂದನ್ನು ತಿಳಿಸುವುದೇ ಆಭಾಸವೆನಿಸುತ್ತದೆ. ಹೀಗೆ ಪ್ರಕಾಶವೇ ಸ್ವರೂಪವಾಗಿರುವ ಪರಮಾತ್ಮನ ಸ್ವರೂಪಕ್ಕೆ ಮರೆಯನ್ನು ಒಪ್ಪಿದರೆ ಪ್ರಕಾಶವೇ ನಾಶವಾದೀತೆಂದು ಹಿಂದೆ ಹೇಳಿಯಾಗಿದೆ. "ಆಭಾಸಾ ಏವ" ಎಂಬ ಪಾಠದಲ್ಲೂ ಹಿಂದೆ ಹೇಳಿದ ಹೇತುಗಳೆಲ್ಲವೂ ದುಷ್ಟಹೇತುಗಳು ಎಂದರ್ಥವಾಗುತ್ತದೆ. ಚಕಾರದಿಂದ "ಬೇರೊಬ್ಬ ಆತ್ಮನನ್ನು ಪ್ರೇರಕನೆಂದು ತಿಳಿದು", "ಇಬ್ಬರೂ ಅಜರಿದ್ದಾರೆ", "ಇಬ್ಬರಲ್ಲಿ ಒಬ್ಬನು ಭೋಗಿಯೂ, ಮತ್ತೊಬ್ಬನು ದ್ರಷ್ಟನೂ ಆಗಿದ್ದಾರೆ" ಎಂಬ ಶ್ರುತಿಗಳ ವಿರೋಧವು ಸೂಚಿತವಾಗುತ್ತದೆ. ಅವಿದ್ಯೆಯಿಂದ ಕಲ್ಪಿತವಾದ ಭೇದನ್ನು ಒಪ್ಪುವುದಾದರೂ ಎಲ್ಲಾ ಉಪಾಧಿಗಳಿಂದಲೂ ಕೂಡಿದ ಸ್ವರೂಪ ಒಂದೇ ಆಗಿರುವುದರಿಂದ ಭೋಗಸಾಂಕರ್ಯವು ಹಿಂದಿನಂತೆಯೇ ಸಂಭವಿಸುವುದು. ಇದೂ ಅಲ್ಲದೆ, ಜೀವರನ್ನು ಅಂತಃಕರಣದ ಪ್ರತಿಬಿಂಬರೆಂದು ಅಂಗೀಕರಿಸಿದರೆ ಬಿಂಬ ಪ್ರತಿಬಿಂಬಗಳೆರಡೂ ಒಂದೇ ಕಡೆ ಇರುವುದಾಗಿ ಕಂಡಿಲ್ಲವಾದ್ದರಿಂದ "ಚಿದಾಕಾಶವೆಂಬ ಗವಿಯುಲ್ಲಿ ಸೇರಿದ್ದಾರೆ", "ಆತ್ಮಗಳಿಬ್ಬರು ಎದೆಗುಹೆಯನ್ನು ಪ್ರವೇಶಿಸಿದ್ದಾರೆ" ಎಂದು ಮುಂತಾಗಿ ಶ್ರುತಿ ಸೂತ್ರಗಳಲ್ಲಿ ಹೇಳಿರುವುದಕ್ಕೆ ವಿರೋಧ ಉಂಟಾಗುತ್ತದೆ. ಆದ್ದರಿಂದ ಬಿಂಬ ಪ್ರತಿಬಿಂಬವಾದವು ಶೋಭಿಸುವುದಿಲ್ಲ.

**ಪಾರಮಾರ್ಥಿಕೋಪಾಧ್ಯುಪಹಿತಬ್ರಹ್ಮಜೀವವಾದೇಽಪ್ಯುಪಾಧಿಭೇದಹೇತುಭೂತಾನಾದ್ಯದೃಷ್ಟವಶಾದ್ವ್ಯವಸ್ಥಾ ಭವಿಷ್ಯತೀತ್ಯಾಶಂಕ್ಯಾಹ. ಅದೃಷ್ಟಾನಿಯಮಾತ್ ॥ ೫೮ ॥ ಉಪಾಧಿಪರಂಪರಾಹೇತುಭೂತಸ್ಯಾದೃಷ್ಟಸ್ಯಾಪಿ ಬ್ರಹ್ಮರೂಪಾಶ್ರಯತ್ವೇನ ನಿಯಮಹೇತ್ವಭಾವಾದವ್ಯವಸ್ಥೈವ, ಉಪಾಧಿಭಿರದೃಷ್ಟೈಶ್ಚ ಸ್ವಸಂಬಂಧೇ ಬ್ರಹ್ಮಸ್ವರೂಪೋಚ್ಛೇದಸಂಭವಾತ್. ಕಿಂಚಾದ್ವೈತಮತೇ ಜೀವಾನಾಂ ವಿಭುತ್ವೇನ ಸರ್ವೇಷಾಂ ಪ್ರತಿಬಿಂಬಭೂತಸ್ವಶರೀರೇಷು ವಿದ್ಯಮಾನತ್ವಾದದೃಷ್ಟಾನಿಯಮಾತ್ ಅದೃಷ್ಟಾನಾಂ ಪುಣ್ಯಪಾಪಾನಾಮನಿಯಮಾತ್ ನಿಯಮಾಭಾವಾತ್, ಕೇಷಾಂಚಿದ್ದಾರಿದ್ರ್ಯಂ ಕೇಷಾಂಚಿದೈಶ್ವರ್ಯಮಿತಿ ವ್ಯವಸ್ಥಾ ನ**

ಸ್ಯಾತ್. ತಸ್ಮಾಜ್ಜೀವಾನಾಮಣುತ್ವಂ ಬಹುತ್ವಂ ಪ್ರತಿಶರೀರಂ ಸ್ವಾಭಾವಿಕಭಿನ್ನತ್ವಂ ಚಾಂಗೀಕರ್ತವ್ಯಂ.

ಯಥಾರ್ಥವಾದ ಉಪಾಧಿಯಿಂದ ಕೂಡಿದ ಬ್ರಹ್ಮವೇ ಜೀವನೆನಿಸಿರುವುದೆಂಬ ವಾದದಲ್ಲಿ ಉಪಾಧಿಭೇದಕ್ಕೆ ಕಾರಣವೆನಿಸಿದ ಅನಾದ್ಯದೃಷ್ಟದಿಂದಲೇ ಭೋಗವ್ಯವಸ್ಥೆಯನ್ನು ಹೊಂದಿಸಬಹುದಲ್ಲವೇ? ಎಂದಾಶಂಕಿಸಿ ನಿರಾಕರಿಸುತ್ತಾನೆ. ಉಪಾಧಿಪರಂಪರೆಗೆ ಹೇತುವಾದ ಅದೃಷ್ಟವೂ ಬ್ರಹ್ಮವನ್ನೇ ಆಶ್ರಯಿಸಿರುವುದರಿಂದಲೂ, ಬ್ರಹ್ಮವು ಸರ್ವಕ್ಕೂ ಸಾಧಾರಣವಾಗಿರುವುದರಿಂದಲೂ ಭೋಗದ ವ್ಯವಸ್ಥೆಯನ್ನು ನಿರ್ವಹಿಸಲಾಗುವುದಿಲ್ಲ. ಉಪಾಧಿಗಳೆನಿಸಿದ ಅದೃಷ್ಟಗಳಿಂದಲೂ, ಅವುಗಳ ಸಂಬಂಧದಿಂದಲೂ ಬ್ರಹ್ಮಸ್ವರೂಪಕ್ಕೆ ಭಂಗಉಂಟಾದೀತು. ಇದೂ ಅಲ್ಲದೆ, ಅದ್ವೈತಮತದಲ್ಲಿ ಜೀವರು ವಿಭುವಾದ್ದರಿಂದ ಎಲ್ಲ ಜೀವರೂ ಪ್ರತಿಬಿಂಬವೆನಿಸಿದ ತಮ್ಮ ತಮ್ಮ ಶರೀರಗಳಲ್ಲಿರುವುದರಿಂದಲೂ, ಅದೃಷ್ಟವೆನಿಸಿದ ಪುಣ್ಯಪಾಪಗಳಲ್ಲಿ ನಿರ್ದಿಷ್ಟನಾದ ವ್ಯವಸ್ಥೆಯಿಲ್ಲದ್ದರಿಂದಲೂ ಕೆಲವರು ದರಿದ್ರರು, ಕೆಲವರು ಶ್ರೀಮಂತರು ಎಂಬ ವ್ಯವಸ್ಥೆಯೇ ತಪ್ಪಿಹೋಗಬೇಕಾದೀತು. ಆದ್ದರಿಂದ ಜೀವರನ್ನು ಅಣುವೆಂದೂ, ಅನೇಕರೆಂದೂ, ಪ್ರತಿಯೊಂದು ಶರಿರದಲ್ಲೂ ಸ್ವಭಾವಿಕವಾಗಿ ಭಿನ್ನರೆಂದೂ ಅಂಗೀಕರಿಸಲೇಬೇಕು.

ನನ್ವಹಮಿದಂ ಫಲಂ ಪ್ರಾಪ್ನುಯಾಂ ಇದಂ ಹರಿಷ್ಯಾಮೀದಂ ಕರಿಷ್ಯಾಮೀದಂ ನ ಕರಿಷ್ಯೇ ಇತ್ಯೇವಂರೂಪಾಭಿಸಂಧ್ಯಾದಯಃ ಪ್ರತ್ಯಾತ್ಮನಿಯತಾಸ್ಸಂತಃ ಸ್ವಯೋಚ್ಯಾದೃಷ್ಟನಿಯಮಹೇತವೋ ಭವಿಷ್ಯಂತೀತ್ಯಾಶಂಕ್ಯಾಹ. ಅಭಿಸಂಧ್ಯಾದಿಷ್ವಪಿ ಚೈವಂ ॥ ೪೯ ॥ ಅಭಿಸಂಧ್ಯಾದಿಷ್ವಪಿ ರಾಗದ್ವೇಷಾದಿಸಾಧಾರಣಮನಸ್ಸಂಯೋಗಸಾಧ್ಯೇಷ್ವಪ್ಯೇವಮನಿಯಮಃ. ತಥಾಚ ಕೇಷಾಂಚಿಜ್ಜೀವಾನಾಂ ರಾಗವತ್ತ್ವಂ, ಕೇಷಾಂಚಿದ್ದ್ವೇಷವತ್ತ್ವಮಿತಿ ವ್ಯವಸ್ಥಾ ನ ಸ್ಯಾತ್. ತಸ್ಮಾದದೃಷ್ಟಹೇತುಭೂತಾಭಿಸಂಧ್ಯಾದಿಷ್ವಪ್ಯುಕ್ತಾದೇವ ಹೇತೋರನಿಯಮ ಇತಿ ಭಾವಃ. ನನು "ಏಷ ಏವ ಸಾಧುಕರ್ಮ ಕಾರಯತಿ" ಇತ್ಯಾದಿಶ್ರುತಿಷು ಜೀವಾನಾಂ ಸ್ವಾತಂತ್ರ್ಯಾಭಾವವ್ಯಪದೇಶಾಜ್ಜೀವಕೃತಪುಣ್ಯಾಪುಣ್ಯಫಲಭೋಕ್ತೃತ್ವಮೀಶ್ವರಸ್ಯೈವ ಸಂಭವತಿ. ತಸ್ಯ ಕರ್ಮಾಧೀನಪ್ರೇರಕತ್ವಂ ಕರ್ಮಣಾಮನಾದಿತ್ವಮಿತಿ ಚೇತ್ತಸ್ಮಾತ್ಸ್ವತಂತ್ರತ್ವೇನ ಕರ್ಮಜೀವೋಭಯಪ್ರೇರಕತ್ವೇನ ಚ ವಿಹಿತಾವಿಹಿತಫಲಭೋಕ್ತೃತ್ವಂ ನೇತರಸ್ಯೈವೇತಿ ಚೇನ್ನ ಜೀವಾನಾಮೀಶ್ವರವತ್ಸರ್ವಜ್ಞತ್ವಾಭಾವೇಽಪಿ ಜ್ಞೇಯತ್ವೇನ ಘಟಪಟಾದಿವಜ್ಜಡತ್ವಾಭಾವಾತ್ ರಾಜಭೃತ್ಯವದೀಶ್ವರಾಧೀನತ್ವೇಽಪಿ ಸ್ವೇಚ್ಛಾಕರ್ಮಕರ್ತೃತ್ವಂ ಸಂಭವತಿ. ತಸ್ಮಾತ್ತೇಷಾಮೇವ ಪುಣ್ಯಾಪುಣ್ಯಫಲಭೋಕ್ತೃತ್ವಮನಿವಾರ್ಯಂ. "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ", "ಕರ್ಮಚಿತೋ ಲೋಕಃ ಕ್ಷೀಯತೇ",

"ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್", "ಸತ್ಯಂ ವದ, ಧರ್ಮಂ ಚರ" ಇತ್ಯಾದಿಶ್ರುತಿಶತೇಷು, "ಕಿಂಚಿತ್ಕರ್ತಾ ಚ ಕಿಂಚಿದ್ಜ್ಞೋ ಬದ್ಧಾನಾದಿಶರೀರವಾನ್। ಈಕ್ಷಣಾದಿಪ್ರವೇಶಾಂತಂ ಸೃಷ್ಟಿರೀಶೇನ ಕಲ್ಪಿತಾ। ಜಾಗ್ರದಾದಿಪ್ರಪಂಚಸ್ಯ ಸೃಷ್ಟಿರ್ಜೀವೇನ ಕಲ್ಪಿತಾ॥" ಇತ್ಯಾದಿಶ್ರುತಿಷ್ವಪಿ ಜೀವಕರ್ತೃತ್ವಂ ಸ್ಪಷ್ಟಮುಪದಿಷ್ಟಂ. ಕಿಂಚ ಪ್ರಭಾಕರಪ್ರಭಾನುಸ್ಯೂತತ್ವೇನ ಪಶುಪಕ್ಷಿಮೃಗಕೀಟಾದಿಚೇತನವ್ಯವಹಾರಸಂಭವೇಽಪಿ ನ ತೇಷಾಂ ಕರ್ತೃತ್ವಹಾನಿಃ. ತದ್ವದೀಶ್ವರನಿಯಾಮಕತ್ವೇಽಪಿ ಚೇತನತ್ವೇನ ಜೀವಾನಾಂ ಕಿಂಚಿತ್ಕರ್ತೃತ್ವಮವಿರೋಧಂ. ನೋ ಚೇತ್ಪೂರ್ವೋದಾಹೃತಶ್ರುತಿಯುಕ್ತ್ಯನುಭವವಿರೋಧಪ್ರಸಂಗಃ. ತಸ್ಮಾಜ್ಜೀವೇಶ್ವರಯೋರುಭಯೋಃ ಕರ್ತೃತ್ವವಿಧಾಯಕಶ್ರುತೀನಾಮವಿರೋಧಃ.

"ನಾನು ಈ ಫಲವನ್ನು ಹೊಂದುವೆನು, ಇದನ್ನು ತೆಗೆದುಕೊಳ್ಳುವೆನು, ಇದನ್ನು ಮಾಡುವೆನು" ಈ ಬಗೆಯ ಆಲೋಚನೆಗಳು ಪ್ರತಿಯೊಬ್ಬ ಆತ್ಮನಲ್ಲಿಯೂ ಇರುವುದರಿಂದ ಅವೇ ಪುಣ್ಯಪಾಪಗಳೆಂಬ ಅದೃಷ್ಟವನ್ನು ವ್ಯವಸ್ಥೆಗೊಳಿಸಬಹುದಲ್ಲವೆ? ಎಂದಾಶಂಕಿಸಿ ನಿರಾಕರಿಸುತ್ತಾನೆ. ರಾಗದ್ವೇಷಗಳೆರಡಕ್ಕೂ ಅನ್ವಯಿಸುವ ಮನಸ್ಸಿನ ಸಂಪರ್ಕದಿಂದ ಸಂಭವಿಸಬಹುದಾದ ಸಮಾಲೋಚನೆಗಳಲ್ಲೂ ಒಂದು ವ್ಯವಸ್ಥೆ ಕಂಡುಬರುವುದಿಲ್ಲ. ಹೀಗಾದರೆ ಕೆಲವರಿಗೆ ರಾಗ ಮತ್ತೆ ಕೆಲವರಿಗೆ ದ್ವೇಷವುಂಟಾಗುವುದೆಂಬ ವ್ಯವಸ್ಥೆಯೇ ಇಲ್ಲದೆಹೋಗುವುದು. ಆದ್ದರಿಂದ ಅದೃಷ್ಟದಿಂದ ಸಂಭವಿಸುವ ಸಮಾಲೋಚನೆಯನ್ನು ಹಿಂದೆ ಹೇಳಿದ ಕಾರಣದಿಂದಲೇ ವ್ಯವಸ್ಥೆಗೊಳಿಸಲಾಗುವುದಿಲ್ಲ. "ಇವನೇ ಒಳ್ಳೆಯದನ್ನು ಮಾಡಿಸುತ್ತಾನೆ" ಎಂಬ ಶ್ರುತಿಯಲ್ಲಿ ಜೀವರಿಗೆ ಸ್ವಾತಂತ್ರ್ಯವಿಲ್ಲವೆಂದು ಹೇಳಿರುವುದರಿಂದ ಜೀವರು ಮಾಡಿದ ಪುಣ್ಯಪಾಪಗಳ ಫಲವನ್ನು ಈಶ್ವರನೇ ಅನುಭವಿಸಬೇಕಾಗುತ್ತದೆ. ಕರ್ಮಗಳು ಅನಾದಿಯಾದ್ದರಿಂದ ಅವನು ಜೀವರ ಕರ್ಮಕ್ಕನುಗುಣವಾಗಿಯೇ ಪ್ರೇರಕನಾಗುತ್ತಾನೆ. ಹೀಗೆ ಈಶ್ವರನು ಸ್ವತಂತ್ರನಾಗಿ ಕರ್ಮಕ್ಕೂ ಜೀವನಿಗೂ ಪ್ರೇರಕನಾದ್ದರಿಂದಲೇ ಒಳ್ಳೆಯ ಮತ್ತು ಕೆಟ್ಟಫಲಗಳೆರಡನ್ನೂ ಭೋಗಿಸಲೇಬೇಕಾಗುತ್ತದೆ ಎಂದು ಆಕ್ಷೇಪಬಂದರೆ ಅದನ್ನು ಹೀಗೆ ಪರಿಹರಿಸಲಾಗಿದೆ. ಜೀವರು ಈಶ್ವರನಂತೆ ಸರ್ವಜ್ಞರಲ್ಲದಿದ್ದರೂ ಜ್ಞಾನಗೋಚರವಾಗುವ ಘಟಪಟಗಳಂತೆ ಜಡರಲ್ಲದ್ದರಿಂದ ರಾಜಭೃತ್ಯರಂತೆ ಈಶ್ವರನಿಗೆ ಅಧೀನರಾಗಿದ್ದುಕೊಂಡೇ ಸ್ವೇಚ್ಛೆಯಿಂದ ಕರ್ಮಗಳನ್ನು ಆಚರಿಸಬಲ್ಲರು. ಆದ್ದರಿಂದ ಅವರೇ ತಾವು ಮಾಡಿದ ಪುಣ್ಯಪಾಪಕರ್ಮಗಳ ಫಲವನ್ನು ಅವಶ್ಯವಾಗಿ ಅನುಭವಿಸಬೇಕಾಗುತ್ತದೆ. "ಸ್ವರ್ಗಕಾಮನು ಜ್ಯೋತಿಷ್ಟೋಮವನ್ನಾಚರಿಸಬೇಕು" "ಕರ್ಮದಿಂದ ಗಳಿಸಿದ ಲೋಕವು ನಶಿಸುತ್ತದೆ" "ಪುಣ್ಯದಿಂದ ಗಳಿಸಿದ್ದೂ ನಶಿಸುತ್ತದೆ" "ಮುಮುಕ್ಷುವು ಕರ್ಮದಿಂದ ಗಳಿಸಿದ ಲೋಕಗಳ ಅಸ್ಥಿರತೆಯನ್ನು ಅರಿತು ಜುಗುಪ್ಸೆಹೊಂದಬೇಕು."

ಹೀಗೆ ಜೀವನು ಅನಾದಿಕಾಲದಿಂದಲೂ ಶರೀರವನ್ನು ಪಡೆದು ಕೊಂಚವಾದರೂ ತಿಳಿಯುತ್ತಲೂ ದುಡಿಯುತ್ತಲೂ ಇರುವನೆಂದು ಶ್ರುತಿಗಳಲ್ಲಿ ತಿಳಿದುಬರುತ್ತದೆ. "ಎಲ್ಲ ವನ್ನು ನೋಡಿ ಅದರೊಳಗೆ ಪ್ರವೇಸಿಸುವವಮೂಲಕ ಸೃಷ್ಟಿಯನ್ನು ಈಶ್ವರನೂ, ಜಾಗ್ರತ್ತೇ ಮೊದಲಾದ ಪ್ರಪಂಚಗಳ ಸೃಷ್ಟಿಯನ್ನು ಜೀವನೂ ನಡೆಸುತ್ತಿರುವರು" ಎಂಬ ಶ್ರುತಿಯಲ್ಲಿ ಜೀವನು ಕರ್ತನೆಂಬುದು ಸ್ಪಷ್ಟವಾಗಿದೆ.

ಜೀವಾನಾಂ ಬ್ರಹ್ಮಾಂಶತ್ವೇನ ಪರಿಚ್ಛಿನ್ನತ್ವಾತ್ ಅಂಶಾಂಶಿನೋರ ಭೇದಾತ್ ತಸ್ಯೈವ ಸುಖದುಃಖವ್ಯವಸ್ಥೋಪಪದ್ಯತ ಇತ್ಯಾಶಂಕ್ಯಾಹ. **ಪ್ರವೇಶಭೇದಾದಿತಿ ಚೇನ್ನಾಂತರ್ಭಾವಾತ್ ॥ ೫೦ ॥** ಯದ್ಯಪ್ಯೇಕ ಮೇವ ಬ್ರಹ್ಮಸ್ವರೂಪಂ ತದ್ಭೇದಾನರ್ಹಂ ನಾನಾವಿಧೋಪಾಧಿಭಿಸ್ಸಂಬ ಧ್ಯತೇ. ತಥಾಪ್ಯುಪಾಧಿಸಂಬಂಧಿಬ್ರಹ್ಮಪ್ರದೇಶಭೇದಾದುಪಪದ್ಯತ ಏವ ಭೋಗವ್ಯವಸ್ಥಾ ಇತಿಚೇನ್ನ ಉಪಾಧೀನಾಂ ತತ್ರತತ್ರ ಗಮನಾತ್ಸರ್ವ ದೇಶಾನಾಂ ಸರ್ವೋಪಾಧ್ಯಂತರ್ಭಾವಾತ್ ವ್ಯತಿಕರಸ್ತದವಸ್ಥ ಏವ. ಪ್ರದೇಶಭೇದೇನ ಸಂಬಂಧೇಽಪಿ ಸರ್ವಸ್ಯ ಬ್ರಹ್ಮಪ್ರದೇಶತ್ವಾತ್, ತತ್ತ ತ್ಪ್ರದೇಶಸಂಬಂಧಃ ಬ್ರಹ್ಮಣ ಏವ ಸ್ಯಾತ್. ಅತೋ ಬ್ರಹ್ಮ ಉಪಾಧಿವ ಶೇನ ಜೀವ ಇತಿ ವಾದೋಹ್ಯವಿಚಾರಿತರಮಣೀಯಃ, "ಯತೋ ವಾ ಇಮಾನಿ ಭೂತಾನಿ ಜಾಯಂತೇ", "ಜ್ಞಾಜ್ಞೌ ದ್ವಾವಜಾ" ಇತಿ ಶ್ರೌತವಿಧಿನಿರೋಧೇನ "ಉತ್ಪತ್ತ್ಯಸಂಭವಾತ್" ಇತ್ಯಾದಿಸೂತ್ರೇಷು ಭಗವತಾ ಬಾದರಾಯಣೇನ ಪೂರ್ವಮೇವ ಜೀವಾನಾಮಜನ್ಯತ್ವೋಪ ದೇಶಾತ್. ಅತ್ರ "ಅಂಶೋ ನಾನಾವ್ಯಪದೇಶಾದಿ"ತ್ಯಾದಿನಾ ತೇಷಾಂ ಬ್ರಹ್ಮಾಂಶತ್ವೋಪದೇಶೇನ ಚ ಪ್ರಳಯೇ ಬ್ರಹ್ಮಾನುಪ್ರವಿಷ್ಟಾನಾಮ ಕಲ್ಪಿತಾನಾಂ ಸ್ವಭಾವಭಿನ್ನಾನಾಂ ಸೃಷ್ಟಿಕಾಲೇ ಪುನರಾವಿರ್ಭೂ ತತ್ವಮಾತ್ರೇಣ ಬ್ರಹ್ಮಾಂಶತ್ವಮಿತ್ಯಂಗೀಕಾರಾದವಯವಾವಯವಿವ ದಂಶಾಂಶಿತ್ವಂ ನೋಪಪದ್ಯತೇ. ಯಥಾ ಲೋಕೇ ನಾನಾವಿಧಪೂರ್ವ ವಾಸನಾಬದ್ಧಶರೀರಾನುಪ್ರವಿಷ್ಟಶುಕ್ಲರೂಪೇಣ ಸ್ತ್ರೀಗರ್ಭಾನುಸ್ಯೂ ತೋತ್ಪನ್ನಪುತ್ರಸ್ಯ "ಆತ್ಮಾ ವೈ ಪುತ್ರನಾಮಾಸಿ" ಇತಿ ಸ್ವಾಂಶತ್ವಮು ಪದಿಷ್ಟಂ,ತಥಾಸ್ಮನ್ಮತೇ ಪ್ರಳಯೇ ಬ್ರಹ್ಮಾನುಪ್ರವಿಷ್ಟಜೀವಬಹಿರ್ಭೂತ ಮಾತ್ರತ್ವೇನ ಸ್ವಾಂಶತ್ವಾಂಗೀಕಾರಾತ್ ಜನ್ಯತ್ವಾಜನ್ಯತ್ವಾಭೋದಕ ಶ್ರುತಿಸೂತ್ರಬಾಧೋ ನ ಸಂಯುಜ್ಯತೇ. ತಸ್ಮಾತ್ "ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ" ಇತ್ಯಾದಿಶ್ರುತಿಸಿದ್ಧಜೀವಭೋಕ್ತೃತ್ವಮವಿರುದ್ಧಂ. ಅತ ಏವ ಪ್ರದೇಶವಿಶೇಷೇಣ ಅಂಶಾಂಶಿನೋರಭೇದತಯಾ ಬ್ರಹ್ಮಾಂಶ ತ್ವೇನ ಜೀವಾನಾಂ ಸುಖದುಃಖಭೋಕ್ತೃತ್ವೇ ಬ್ರಹ್ಮಣಃ ಪರಮಶಿವಸ್ಯ ಭೋಕ್ತೃತ್ವವಾದೋ ನಿರಾಕೃತಃ. "ಸೋಽಂತರಾದಂತರಂ ಪ್ರಾವಿಶತ್",

“ ಅಂತಃ ಪ್ರವಿಷ್ಟಶ್ಶಾಸ್ತಾ ಜನಾನಾಂ ”, “ ಈಶಾನಃ ಸರ್ವವಿದ್ಯಾನಾಂ ” ಇತ್ಯಾದಿಶ್ರೌತವಿಧಿನಾ ಜೀವಾಂತರ್ಯಾಮಿತ್ವೇನ ಜೀವನಿಯಾಮಕತ್ವಾಂಗೀಕಾರಾತ್ ಜೀವಕೃತಕರ್ಮಸಿದ್ಧೇಷ್ಟಾನಿಷ್ಟಫಲಭೋಕ್ತೃತ್ವಂ ನೇಶ್ವರಸ್ಯೇತಿ ನಿರ್ಣೀಯತೇ.

ಇತಿ ಶ್ರೀಮದ್ಯತಿವ್ರಜಪರಿವೃಢಶ್ರೀಪತಿಪಂಡಿತಭಗವತ್ಪಾದಾಚಾರ್ಯ
ಕೃತಭೇದಾಭೇದಾತ್ಮಕವಿಶೇಷಾದ್ವೈತಸಿದ್ಧಾಂತವ್ಯವಸ್ಥಾಪಕ
ಬ್ರಹ್ಮಮೀಮಾಂಸಾಸೂತ್ರಾರ್ಥಪ್ರಕಾಶಕೇ ಶ್ರೀಕರ
ಭಾಷ್ಯೇ ವಿರೋಧಪರಿಹಾರಾಭಿಧಾನಸ್ಯ ದ್ವಿತೀ
ಯಾಧ್ಯಾಯಸ್ಯ ತೃತೀಯಃ ಪಾದಃ ಸಮಾಪ್ತಃ

ಪಶು, ಪಕ್ಷಿ, ಮೃಗ, ಕೀಟ ಮೊದಲಾದ ಪ್ರಾಣಿಗಳ ವ್ಯವಹಾರಗಳೆಲ್ಲವೂ ಸೂರ್ಯನ ಪ್ರಕಾಶದಿಂದಲೇ ನಡಯುತ್ತವೆಯಾದರೂ ಅವುಗಳ ಕರ್ತೃತ್ವಕ್ಕೆ ಏನೂ ಧಕ್ಕೆ ಬರುವುದಿಲ್ಲ. ಅದರಂತೆ ಈಶ್ವರನು ಪ್ರೇರಕನಾಗಿದ್ದರೂ ಚೇತನರಾದ್ದರಿಂದ ಜೀವರಿಗೆ ಕಿಂಚಿತ್ಕರ್ತೃತ್ವವು ಸಂಭವಿಸಲಿಕ್ಕೆ ಏನೂ ಅಡ್ಡಿಯಿಲ್ಲ. ಇಲ್ಲವಾದರೆ ಹಿಂದೆ ಹೇಳಿದ ಶ್ರುತಿ ಯುಕ್ತಿಮತ್ತು ಲೋಕಾನುಭವಗಳೆಲ್ಲಕ್ಕು ವಿರೋಧವುಂಟಾದೀತು. ಆದ್ದರಿಂದಲೇ ಜೀವ ಈಶ್ವರ ಇಬ್ಬರಿಗೂ ಕರ್ತೃತ್ವವುಂಟೆಂದು ತಿಳಿಸುವ ಶ್ರುತಿಗಳಿಗೆ ವಿರೋಧ ಪರಿಹಾರವಾಗುತ್ತದೆ. ಜೀವರು ಶಿವನ ಅಂಶರಾದ್ದರಿಂದ ಅವರಿಗೆ ಪರಿಮಿತವಾದ ವ್ಯಾಪ್ತಿಯೇ ಇರುತ್ತದೆ. ಆದರೂ ಅಂಶಾಂಶಿಗಳಿಗೆ ಅಭೇದವಿರುವುದರಿಂದ ಈಶ್ವರನಿಗೂ ಸುಖದುಃಖಗಳು ಅಂಟಬಹುದಲ್ಲವೆ? ಎಂದಾಶಂಕಿಸಿ ಪರಿಹರಿಸುತ್ತಾನೆ. ಜೀವರೆಲ್ಲರಲ್ಲೂ ಬ್ರಹ್ಮಸ್ವರೂಪವು ಒಂದೇಬಗೆಯಾಗಿದ್ದು ಭಿನ್ನವಾಗದಂತೆ ಅನೇಕ ಉಪಾಧಿಗಳೊಡನೆ ಕೂಡಿಕೊಂಡಿರುತ್ತದೆ. ಆದರೂ ದೇಹಾದ್ಯುಪಾಧಿಗಳಿಗೆ ಸಂಬಂಧಿಸಿದ ಪ್ರದೇಶಗಳು ಭಿನ್ನವಾಗಿರುವುದರಿಂದ ಸುಖದುಃಖಗಳ ವ್ಯವಸ್ಥೆ ಹೊಂದುತ್ತದೆ ಎಂದು ಹೇಳುವುದಾದರೆ ಅದು ಸರಿಯಲ್ಲ. ಉಪಾಧಿಗಳೆಲ್ಲಕ್ಕು ಎಲ್ಲಾ ದೇಶಗಳ ಸಂಬಂಧವೂ ಇರುವುದರಿಂದ ಸುಖದುಃಖಗಳೆಲ್ಲಕ್ಕೂ ಸಾಂಕರ್ಯವುಂಟಾದೀತು. ಇದೂ ಅಲ್ಲದೆ, ಎಲ್ಲವೂ ಬ್ರಹ್ಮದ ಪ್ರದೇಶಗಳೇ ಆಗಿರುವುದರಿಂದ ಕೊನೆಯಲ್ಲಿ ಸುಖದುಃಖಗಳೆಲ್ಲವೂ ಬ್ರಹ್ಮಕ್ಕೂ ಬರಬೇಕಾದೀತು. ಆದ್ದರಿಂದ ಉಪಾಧಿಯಿಂದೊಡಗೂಡಿದ ಬ್ರಹ್ಮವೇ ಜೀವನೆಂಬ ವಾದವು ಯುಕ್ತವಲ್ಲ. “ಯಾವನಿಂದ ಈ ಜೀವರು ಹುಟ್ಟಿದ್ದಾರೋ” “ಇಬ್ಬರು ಆತ್ಮರೂ ಅಜರು” ಎಂದು ವೈದಿಕವಿಧಿಯಲ್ಲಿ ವಿರೋಧವಿರುವುದರಿಂದ “ಉತ್ಪತ್ತ್ಯಸಂಭವಾತ್” ಎಂಬ ಸೂತ್ರದಲ್ಲಿ ಪೂಜ್ಯ ಬಾದರಾಯಣರು ಹಿಂದೆಯೇ ಜೀವರನ್ನು ನಿತ್ಯರೆಂದು ತಿಳಿಸಿದ್ದಾರೆ. ಅದರಲ್ಲೂ “ ಅಂಶೋ ನಾನಾ ” ಎಂಬ ಸೂತ್ರದಲ್ಲಿ ಅವರನ್ನು ಬ್ರಹ್ಮದ ಅಂಶರೆಂದು ತಿಳಿಸಿ,ಮತ್ತೆ ಅವರೆಲ್ಲರೂ ಪ್ರಳಯದಲ್ಲಿ ಬ್ರಹ್ಮದಲ್ಲಿಯೇ ಪ್ರವೇಶಿಸುವರೆಂದೂ, ಅಲ್ಲಿ ಅವನಿಂದ ಸಹಜವಾಗಿಯೇ ಭಿನ್ನರಾಗಿದ್ದು ಮತ್ತೆ ಸೃಷ್ಟಿಕಾಲದಲ್ಲಿ ಹೊರಗೆಬರುವರೆಂದೂ ಹೇಳಿದ್ದರಿಂದಲೇ ಅವರನ್ನು

ಬ್ರಹ್ಮಾಂಶರೆಂದು ಅಂಗೀಕರಿಸಿದ್ದರೂ ಅವರಿಗೆ ಲೋಕರೂಢಿಯಾದ ಅಂಗಾಂಗಿಭಾವದಂತೆ ಅಂಶಾಂಶಿಭಾವವು ಹೊಂದುವುದಿಲ್ಲ. ಲೋಕದಲ್ಲಿ ಅನೇಕಬಗೆಯ ಹಿಂದಿನ ಸಂಸ್ಕಾರದಿಂದ ಕೂಡಿದ ಪುರುಷನ ಶರೀರದಲ್ಲಿ ಹಿಂದೆಯೇ ಶುಕ್ಲರೂಪದಿಂದ ಪ್ರವೇಶಿಸಿದ್ದ ಆತ್ಮಾಂಶವೇ ಸ್ತ್ರೀಗರ್ಭವನ್ನು ಪ್ರವೇಶಿಸಿ ಆ ಮೂಲಕ ಹುಟ್ಟಿದ ಮಗನಿಗೆ "ನನ್ನ ಆತ್ಮವೇ ಮಗನೆಂಬ ಹೆಸರಿನಿಂದ ಬಂದಿದೆ" ಎಂದು ಮಗನನ್ನು ತನ್ನ ಅಂಶವೆಂದು ಹೇಳುವ ವಾಡಿಕೆ ಇದೆ. ಹಾಗೆಯೇ ನಮ್ಮ ಮತದಲ್ಲಿ ಬ್ರಹ್ಮದಲ್ಲಿ ಪ್ರವೇಶಿಸಿದ್ದ ಜೀವರು ಹೊರಗೆ ಬರುವಷ್ಟರಿಂದಲೇ ಅವರನ್ನು ಬ್ರಹ್ಮಾಂಶರೆಂದು ಅಂಗೀಕರಿಸಿರುವುದರಿಂದ ಜೀವರು ಹುಟ್ಟುವರೆಂದೂ, ಅಜನ್ಯರೆಂದೂ ಹೇಳಿರುವ ಶ್ರುತಿಗಳಿಗೂ ಸೂತ್ರಗಳಿಗೂ ವಿರೊಧವುಂಟಾಗುವುದಿಲ್ಲ. ಆದ್ದರಿಂದಲೇ "ಇಬ್ಬರಲ್ಲಿ ಒಬ್ಬನು ಸಿಹಿಕಹಿಗಳೆರಡನ್ನೂ ಭೋಗಿಸುತ್ತಿರುವನು, ಮತ್ತೊಬ್ಬನು ಏನನ್ನೂ ತಿನ್ನದೆ ಶೋಭಿಸುತ್ತಿರುವನು" ಈಬಗೆಯ ಅನೇಕ ಶ್ರುತಿಗಳಲ್ಲಿ ಜೀವರು ಕರ್ಮಫಲವನ್ನು ಭೋಗಿಸುವರೆಂಬುದು ಸ್ಪಷ್ಟವಾಗಿದೆ. ಆದ್ದರಿಂದಲೇ ಪ್ರದೇಶವಿಶೇಷದಿಂದ ಅಂಶಾಂಶಿಗಳಿಗೆ ಅಭೇದವಿದ್ದರೂ ಬ್ರಹ್ಮಾಂಶರಾದ್ದರಿಂದ ಜೀವರು ಸುಖದುಃಖಗಳನ್ನು ಭೋಗಿಸುತ್ತಿರುವಾಗ ಪರಶಿವಬ್ರಹ್ಮವೇ ಭೋಗಿಸುವುದೆಂಬ ವಾದವು ತಿರಸ್ಕೃತವಾಯಿತು. "ಅವನು ಒಳಗಿಂದ ಒಳಗೇ ಪ್ರವೇಶಿಸಿದನು" "ಒಳಗೆ ಪ್ರವೇಶಿಸಿ ಜನರನ್ನು ದಂಡಿಸುತ್ತಾನೆ," "ವಿದ್ಯೆಗಳೆಲ್ಲಕ್ಕೂ ಅಧಿಪತಿ ಮತ್ತು ಜೀವರೊಳಗೆ ಅಂತರ್ಯಾಮಿಯಾಗಿದ್ದುಕೊಂಡೇ ಈಶ್ವರನು ಅವರಿಗೆ ನಿಯಾಮಕನಾಗಿರುವನು" ಎಂದು ಹೇಳಿರುವುದರಿಂದ ಜೀವರು ಮಾಡಿದ ಪುಣ್ಯಪಾಪಕರ್ಮಗಳ ನಿರ್ದಿಷ್ಟವಾದ ಫಲವನ್ನು ಭೋಗಿಸುವವನು ಈಶ್ವನಲ್ಲವೆಂದು ನಿರ್ಣಯಿಸಲಾಗಿದೆ.

ಅಥ ಶ್ರೀಕರಭಾಷ್ಯೇ ದ್ವಿತೀಯಾಧ್ಯಾಯಸ್ಯ ಚತುರ್ಥಃ ಪಾದಃ.

ಪೂರ್ವಪಾದೇ ಬ್ರಹ್ಮಕಾರ್ಯಸ್ಯ ಕೃತ್ಸ್ನಸ್ಯ ವಿಯದಾದೇರ್ಭೂತಪಂಚಕಸ್ಯ ಜನ್ಯತ್ವಾಜನ್ಯತ್ವವಿಧಾಯಕಪರಸ್ಪರಶ್ರುತಿವಿರೋಧಂ ಪರಿಹೃತ್ಯ ಜೀವಸ್ಯ ಬ್ರಹ್ಮಕಾರ್ಯತ್ವೇಽಪಿ ಚೇತನತ್ವಾದಜನ್ಯತ್ವಂ ಸ್ವಾಭಾವಿಕಭಿನ್ನತ್ವಂ ತತ್ಸ್ವರೂಪಂ ಚ ಪ್ರದರ್ಶ್ಯ ತಸ್ಯ ತಲ್ಲಿಂಗಶರೀರತ್ವಸ್ಯ ಅರ್ಥಸಿದ್ಧತ್ವಾತ್ ತದ್ವಿಚಾರೋಽತ್ರ ಚರಮಪಾದೇ ಕ್ರಿಯತೇ. "ಆಕಾಶಶರೀರಂ ಬ್ರಹ್ಮ, ಸತ್ಯಾತ್ಮ ಪ್ರಾಣಾರಾಮಂ ಮನಆನಂದಂ" ಇತ್ಯಾದೌ ಬ್ರಹ್ಮಣಃ ಪರಶಿವಸ್ಯ ಮನಃಪ್ರಾಣಾತ್ಮಕಸ್ವಾಭಾವಿಕಲಿಂಗಶರೀರತ್ವಾವಗಮಾತ್ ಜೀವಾನಾಮಪಿ ಲಿಂಗಶರೀರಜನ್ಯತ್ವಂ ನಿಷ್ಪ್ರತ್ಯೂಹಂ. ಅತೋ ಲಿಂಗಶರೀರಭಂಗಪೂರ್ವಕಂ ನದೀಸಮುದ್ರವಜ್ಜೀವಬ್ರಹ್ಮಣೋಃ ಸ್ವರೂಪೈಕ್ಯಂ ಸರ್ವಥಾ ನ ಸಂಭವತೀತ್ಯಾಶಂಕಾಯಾಮಾಹ. ಪ್ರಾಣೋತ್ಪತ್ತ್ಯಧಿಕರಣಂ ॥ ೧ ॥ ತಥಾ ಪ್ರಾಣಾಃ ॥ ೧ ॥ ಯಥಾ ಪಂಚಮಹಾಭೂತಾನಾಂ ಬ್ರಹ್ಮಜನ್ಯತ್ವಂ ತಥಾ ಪ್ರಾಣೇಂದ್ರಿ

ಯಾಣಾಮಪಿ ಬ್ರಹ್ಮಕಾರಣತ್ವಮುಪಪನ್ನಂ, "ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ" ಇತ್ಯಾದಿಶ್ರುತಿಶ್ರವಣಾತ್. ಅಸ್ಮಿನ್ನಪಿ ಪಾದೇ ಪೂರ್ವಪಕ್ಷೇ ಶ್ರುತೀನಾಂ ಮಿಥೋ ವಿರೋಧೇನಾ ಪ್ರಾಮಾಣ್ಯಾದ್ಬ್ರಹ್ಮಸಮನ್ವಯಾಸಿದ್ಧಿಃ. ಫಲಸಿದ್ಧಾಂತೇ ತಾಸಾಮ ವಿರೋಧೇನ ಪ್ರಾಮಾಣ್ಯಾತ್ಸಮನ್ವಯಸಿದ್ಧಿರಿತಿ ಬೋಧ್ಯಂ. "ಆತ್ಮನ ಆಕಾಶಸ್ಸಂಭೂತಃ" ಇತ್ಯಾದಿನಾ ಪಂಚಮಹಾಭೂತೋತ್ಪತ್ತಿಪ್ರಕರಣೇ ಪ್ರಾಣೇಂದ್ರಿಯಾದ್ಯುತ್ಪತ್ತ್ಯಶ್ರವಣಾತ್, "ಋಷಯ ಏತೇಽಗ್ರೇ ಸದಾ ಸತ್ತ್ವ ಏತೇ ಋಷಯಃ" ಇತಿ, "ಪ್ರಾಣಾ ವಾ ಋಷಯಃ" ಇತ್ಯಾದೌ ಪ್ರಾಕ್ಸೃಷ್ಟೇಃ ಪ್ರಾಣೇಂದ್ರಿಯಸದ್ಭಾವದರ್ಶನಾದಜನ್ಯತ್ವಮಸಂದಿಗ್ಧ ತಯಾ ಸೂಚ್ಯತೇ. "ಏತಸ್ಮಾಜ್ಜಾಯತೇ ಪ್ರಾಣಃ" ಇತ್ಯಾದೌ ಬ್ರಹ್ಮ ಕಾರ್ಯತ್ವಂ ಪ್ರಾಣಾದೀನಾಂ ಪ್ರತಿಭಾತಿ. ತಸ್ಮಾದ್ವಿಯದಾದಿಪ್ರಾಣಾ ದ್ಯುತ್ಪತ್ತಿಃ ಯುಕ್ತೋ ವಾ ನವೇತಿ ಚಿಂತ್ಯತೇ. ವಿನಿಗಮಕಾಭಾವಾ ದಸ್ತಿ ವಿರೋಧಃ, ಜೀವವದೇವೇತ್ಯಾಹ ಪೂರ್ವಪಕ್ಷಃ. ಯಥಾ ಜೀವೋ ನೋತ್ಪದ್ಯತೇ ತಥೇಂದ್ರಿಯಾಣ್ಯಪಿ ನೋತ್ಪದ್ಯಂತೇ. ಯಥಾ ಜೀವೋ ತ್ಪತ್ತಿಶ್ರುತಿರ್ಗೌಣೀ ತಥಾ ಪ್ರಾಣೋತ್ಪತ್ತಿಶ್ರುತಿರ್ಗೌಣೀತ್ಯವಗಮ್ಯತೇ. ತಥಾ ಪ್ರಾಣಾ ಇತಿ ಪ್ರಾಣಮುಪ್ಯತಿದಿಶತಿ, ಕಾ ಪುನರತ್ರ ಶ್ರುತಿಃ. "ಅಸದ್ವಾ ಇದಮಗ್ರ ಆಸೀತ್" ಇತ್ಯತ್ರ ತದಾಹುಃ ಕಿಂ ತದಾಸೀದಿತಿ. "ಋಷಯೋ ವಾ ಏತೇ ಅಗ್ರೇ ಸದಾಸನ್". ತದಾಹುಃ "ಕೇ ಕೇ ಋಷಯಃ", "ಪ್ರಾಣಾ ವಾ ಋಷಯ" ಇತಿ. ಅತೋಜಗದುತ್ಪತ್ತೇಃ ಪ್ರಾಗಿಂದ್ರಿಯಾಣಾಂ ಸದ್ಭಾವಃ ಶ್ರೂಯತೇ. ಪ್ರಾಣಶಬ್ದಬಹುವಚ ನಾದಿಂದ್ರಿಯಾಣ್ಯೇವೇತಿ ಶ್ರೂಯತೇ. ನಚೇಯಂ ಶ್ರುತಿಃ "ವಾಯು ಶ್ಚಾಂತರಿಕ್ಷಂ ಚೈತದಮೃತಂ ಸೈಷಾನಸ್ತಮಿತಾ ದೇವತಾ ಯದ್ವಾಯುಃ" ಇತಿವಚ್ಚಿರಕಾಲಾವಸ್ಥಾಯಿತ್ವೇನ ಪರಿಣೇತುಂ ಶಕ್ಯಾ. "ಅಸದ್ವಾ ಇದಮಗ್ರ ಆಸೀತ್" ಇತಿ ಕೃತ್ಸ್ನಪ್ರಪಂಚಪ್ರಳಯವೇಲಾಯಾಮವ ಸ್ಥಿತತ್ವಶ್ರವಣಾತ್. ಉತ್ಪತ್ತಿವಾದಿನ್ಯಸ್ತು ಜೀವೋತ್ಪತ್ತಿವಾದಿನ್ಯ ಇವೋಪನೇತವ್ಯಾ ಇತ್ಯೇವಂ ಪ್ರಾಪ್ತೇಽಭಿಧೀಯತೇ. ತಥಾ ಪ್ರಾಣಾಃ. ವಿಯದಾದಿವದೇವ ಪ್ರಾಣಾಶ್ಚೋತ್ಪದ್ಯಂತೇ. ಕುತಃ, "ಸದೇವ ಸೌಮ್ಯೇದಮಗ್ರ ಆಸೀತ್", "ಆತ್ಮಾ ವಾ ಇದಮಗ್ರ ಆಸೀತ್", "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ", "ಯದಾ ತಮಃ— ಶಿವ ಏವ ಕೇವಲಃ" ಇತ್ಯಾದಿಷು ಪ್ರಾಕ್ಸೃಷ್ಟೇಶ್ಶಿವಸ್ಯೈಕಸ್ಥಿತ್ಯವಧಾರ ಣಾತ್, "ಏತಸ್ಮಾಜ್ಜಾಯತೇ ಪ್ರಾಣಃ" ಇತೀಂದ್ರಿಯಾಣಾಮುತ್ಪತ್ತಿ ಶ್ರವಣಾತ್ ಪ್ರಾಗವಸ್ಥಾ ನ ಸಂಭವೇತ್. ನಚಾತ್ಮೋತ್ಪತ್ತಿವಾದವ

**ದಿಂದ್ರಿಯೋತ್ಪತ್ತಿವಾದಾಃ ಪರಿಣೇತುಂ ಶಕ್ಯಾಃ, ಆತ್ಮೋತ್ಪತ್ತಿಪ್ರತಿಷೇಧ ಶ್ರುತೀನಾಂ ನಿತ್ಯತ್ವಶ್ರುತೀನಾಂ ಚ ದರ್ಶನಾತ್. “ ಅಸದ್ವಾ ಇದಮಗ್ರ ಆಸೀತ್ ” ಇತಿ ವಾಕ್ಯೇऽಪಿ ಪ್ರಾಣಶಬ್ದವಾಚ್ಯಃ ಪರಮಾತ್ಮೈವ ನಿರ್ದಿಶ್ಯತೇ. “ ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವ ಸಂವಿಶಂತಿ ಪ್ರಾಣಾಮಭ್ಯುಜ್ಜಿಹತೇ ” ಇತಿ ಪ್ರಾಣಶಬ್ದಸ್ಯ ಪರಮಾತ್ಮನ್ಯಪಿ ಪ್ರಸಿದ್ಧೇಃ “ ಪ್ರಾಣಸ್ತಥಾನುಗಮಾತ್ ” ಇತ್ಯಧಿಕರಣೇ ಬಹುಧಾ ಪ್ರಪಂಚಿತಂ. “ ಪ್ರಾಣಾ ವಾವ ಋಷಯಃ ” ಇತಿ ಋಷಿಶಬ್ದಶ್ಚ ಸರ್ವಜ್ಞೇ ಶಿವೇ ಯುಜ್ಯತೇ, ನತ್ವಚೇತನೇಷ್ವಿಂದ್ರಿಯೇಷೂಪಪತ್ತಿಃ, “ ಯೋ ದೇವಾನಾಂ ಪ್ರಥಮಂ ಪುರಸ್ತಾದ್ವಿಶ್ವಾಧಿಕೋ ರುದ್ರೋ ಮಹರ್ಷಿಃ ” ಇತಿ ಶ್ವೇತಾಶ್ವತರೇ, “ ವಿಶ್ವಾಧಿಕೋ ರುದ್ರೋ ಮಹರ್ಷಿಃ ” ಇತಿ ತೈತ್ತಿರೀಯೇ ದರ್ಶನಾತ್.**

ಬ್ರಹ್ಮಕರ್ಮವೆನಿಸಿದ ಪಂಚಭೂತಾತ್ಮಕವಾದ ಜಗತ್ತನ್ನು ಜನ್ಯವೆಂದೂ, ಅಜನ್ಯವೆಂದೂ ತಿಳಿಸುವ ಎರಡು ಬಗೆಯ ಶ್ರುತಿಗಳಿಗೂ ಪರಸ್ಪರವಿರೋಧವನ್ನು ಹಿಂದಿನಪಾದಲ್ಲಿ ಪರಿಹರಿಸಿ, ಜೀವನು ಬ್ರಹ್ಮಕಾರ್ಯವಾದರೂ ಚೇತನನಾದ್ದರಿಂದ ಅಜನ್ಯನೆಂದೂ, ಸ್ವಭಾವಿಕವಾಗಿ ಭಿನ್ನನೆಂದೂ ಹೇಳಿ ಅವನ ಸ್ವರೂಪವನ್ನು ತಿಳಿಸಿದ್ದರಿಂದ ಅವನು ಪರಬ್ರಹ್ಮದ ಅಂಗನಾಗಿರುವನೆಂಬುದು ಸ್ವತಸ್ಸಿದ್ಧವಾಗುವುದು. ಅದನ್ನು ಮುಂದಿನಪಾದದಲ್ಲಿ ವಿಚಾರಮಾಡಲಾಗಿದೆ. “ ಬ್ರಹ್ಮಕ್ಕೆ ಆಕಾಶವೇ ಶರೀರ, ಸತ್ಯವೇ ಆತ್ಮ, ಪ್ರಾಣವೇ ವಿನೋದಭೂಮಿ, ಮನಸ್ಸೇ ಆನಂದನಿಲಯ ” ಎಂಬ ಈ ಶ್ರುತಿಯಲ್ಲಿ ಪರಶಿವನಿಗೆ ಮನಸ್ಸು ಪ್ರಾಣ ಎಂಬ ಸ್ವಾಭಾವಿಕವಾದ ಲಿಂಗಶರೀರವಿರುವುದಾಗಿ ತಿಳಿದುಬರುವುದರಿಂದ ಜೀವರೂ ಲಿಂಗಶರೀರದಿಂದಲೇ ಹುಟ್ಟಿರಬೇಕೆಂದು ಒಪ್ಪಬೇಕು. ಆದ್ದರಿಂದ ಲಿಂಗಶರೀರವು ನಷ್ಟನಾಗಿ ನದೀಸಮುದ್ರಗಳಂತೆ ಜೀವಬ್ರಹ್ಮರಿಗೆ ಸ್ವರೂಪೈಕ್ಯವು ಎಂದಿಗೂ ಸಂಭವಿಸಲಾರದೆಂದಾಶಂಕಿಸಿ ಪರಿಹರಿಸುತ್ತಾನೆ. ಪಂಚಭೂತಗಳು ಹೇಗೆ ಬ್ರಹ್ಮದಿಂದ ಹುಟ್ಟಿರುವುವೋ ಹಾಗೆಯೇ ಪ್ರಾಣೇಂದ್ರಿಯಗಳೂ ಬ್ರಹ್ಮದಿಂದಲೇ ಹುಟ್ಟಿವೆ ಎಂಬುದೇ ಯುಕ್ತವಾಗಿದೆ. “ ಇದರಿಂದಲೇ ಪ್ರಾಣ ಮನಸ್ಸು ಇಂದ್ರಿಯಗಳು ಹುಟ್ಟಿವೆ ” ಎಂದು ಶ್ರುತಿಯೂ ತಿಳಿಸಿದೆ. ಶ್ರುತಿಗಳಲ್ಲಿ ಪರಸ್ಪರವಿರೋಧದಿಂದ ಪ್ರಾಮಾಣ್ಯವು ತಪ್ಪಿಹೋಗಿ ಪೂರ್ವಪಕ್ಷದಲ್ಲಿ ಸಮನ್ವಯವಾಗದಿದ್ದರೂ ಸಿದ್ಧಾಂತದಲ್ಲಿ ಅವೆಲ್ಲಕ್ಕೂ ಯಾವ ವಿರೋಧವೂ ಇಲ್ಲದೆ ಸಮನ್ವಯವುಂಟಾಗುವುದೆಂದು ತಿಳಿಯಬೇಕು. “ ಆತ್ಮನಿಂದ ಆಕಾಶ ಹುಟ್ಟಿತು ” ಎಂದು ಪಂಚಭೂತಗಳ ಉತ್ಪತ್ತಿಯನ್ನು ತಿಳಿಸುವಾಗ ಪ್ರಾಣ ಮತ್ತು ಇಂದ್ರಿಯಗಳ ಉತ್ಪತ್ತಿಯನ್ನು ಹೇಳಿಲ್ಲವಾದ್ದರಿಂದ “ ಈ ಇಂದ್ರಿಯಗಳು ಸೃಷ್ಟಿಗೆ ಮೊದಲೂ ಇದ್ದುವು ” “ ಇಂದ್ರಿಯಗಳೇ ಋಷಿಗಳೆನಿಸಿವೆ ” ಎಂಬಲ್ಲಿ ಸೃಷ್ಟಿಗೆ ಮೊದಲು ಪ್ರಾಣ ಮತ್ತು ಇಂದ್ರಿಯಗಳು ಇದ್ದವೆಂಬುದು ತಿಳಿದುಬರುವುದರಿಂದ ಅವು ಹುಟ್ಟುವುದಿಲ್ಲ

ವೆಂಬುದು ಸ್ಪಷ್ಟವಾಗುತ್ತದೆ. "ಇದರಿಂದಲೇ ಪ್ರಾಣ ಮನಸ್ಸು ಮತ್ತು ಎಲ್ಲಾ ಇಂದ್ರಿಯಗಳು ಹುಟ್ಟಿವೆ" ಎಂಬಲ್ಲಿ ಪ್ರಾಣಾದಿಗಳು ಬ್ರಹ್ಮದ ಕಾರ್ಯಗಳೆಂದು ತಿಳಿದುಬಂದಿದೆ. ಆದ್ದರಿಂದ ಆಕಾಶಾದಿಭೂತಗಳು ಮತ್ತು ಪ್ರಾಣಾದಿಗಳು ಹುಟ್ಟುತ್ತವೆ ಎಂಬುದು ಯುಕ್ತವೇ ಅಲ್ಲವೇ? ಎಂದು ವಿಚಾರಿಸಲಾಗಿದೆ. ಈ ಬಗ್ಗೆ ಖಚಿತವಾದ ಪ್ರಮಾಣವಿಲ್ಲದ್ದರಿಂದ ಪರಸ್ಪರವಿರೋಧವಿದೆ ಎಂದು ಆಕ್ಷೇಪಬಂದರೆ ಇದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಜೀವನು ಹೇಗೆ ಹುಟ್ಟುವುದಿಲ್ಲವೋ ಹಾಗೆ ಇಂದ್ರಿಯಗಳೂ ಹುಟ್ಟುವುದಿಲ್ಲ. ಜೀವರು ಹುಟ್ಟುವರೆಂಬ ಶ್ರುತಿ ಹೇಗೆ ಅಪ್ರಧಾನವೋ ಹಾಗೆ ಪ್ರಾಣಾದಿಗಳು ಹುಟ್ಟುವುವೆಂಬ ಶ್ರುತಿಯೂ ಅಪ್ರಧಾನವೆನಿಸುತ್ತದೆ. "ಹಾಗೆಯೇ ಪ್ರಾಣಗಳು" ಎಂಬಲ್ಲಿ ಪ್ರಾಣದ ಉತ್ಪತ್ತಿಯನ್ನು ಹೇಳುವ ಶ್ರುತಿಯೂ ಗೌಣವೆನಿಸುತ್ತದೆ. ಇಲ್ಲಿ ಅಂತಹ ಶ್ರುತಿ ಯಾವುದು? ಎಂದರೆ, "ಇದೆಲ್ಲವೂ ಮೊದಲು ಅಸದ್ರೂಪವಾಗಿತ್ತು" ಎಂಬಲ್ಲಿ "ಅದು ಏನಾಗಿತ್ತು" ಎಂದು ಕೇಳಿದಾಗ "ಇದೆಲ್ಲವೂ ಮೊದಲು ಋಷಿಗಳ ರೂಪದಲ್ಲಿತ್ತು" ಎಂದೇ ಹೇಳಬೇಕಾಗುತ್ತದೆ. "ಈ ಋಷಿಗಳ್ಯಾರು" ಎಂದರೆ "ಇಂದ್ರಿಯಗಳೇ ಋಷಿಗಳು" ಎಂದು ಹೇಳಿರುವುದರಿಂದ ಈ ಜಗತ್ತು ಹುಟ್ಟುವುದಕ್ಕೂ ಮೊದಲು ಇಂದ್ರಿಯಗಳು ಇದ್ದವೆಂದು ತಿಳಿಯಬೇಕು. ಇಲ್ಲಿ ಪ್ರಾಣಶಬ್ದಕ್ಕೆ ಬಹುವಚನವಿರುವುದರಿಂದ ಪ್ರಾಣಗಳೆಂದರೆ ಇಂದ್ರಿಯಗಳೆಂದು ತಿಳಿದುಬರುತ್ತದೆ. "ವಾಯು ಮತ್ತು ಆಕಾಶಗಳೆರಡು ನಿತ್ಯವಾಗಿವೆ. ವಾಯು ದೇವತೆಯೂ ನಿತ್ಯವಾಗಿದೆ" ಎಂಬ ಶ್ರುತಿಗಳಂತೆ ಇಂದ್ರಿಯಗಳನ್ನು ನಿತ್ಯವೆಂದು ಹೇಳುವ ಶ್ರುತಿಯು ಗೌಣವೆನಿಸಿದೆ ಎಂದು ಹೇಳಲು ಸಾಧ್ಯವಿಲ್ಲ. "ಇದೆಲ್ಲವೂ ಅಸದ್ರೂಪವಾಗಿತ್ತು" ಎಂಬಲ್ಲಿ ಸಮಸ್ತ ಪ್ರಪಂಚವೂ ಪ್ರಳಯದಲ್ಲಿ ಇತ್ತೆಂದೇ ಸ್ಪಷ್ಟಪಡುತ್ತದೆ. ಇದೆಲ್ಲವೂ ಹುಟ್ಟಿತೆಂದು ಹೇಳುವ ಶ್ರುತಿಗಳಿಗೆ ಜೀವೋತ್ಪತ್ತಿಯನ್ನು ತಿಳಿಸುವ ಶ್ರುತಿಗಳಂತೆ ಸಮನ್ವಯಮಾಡಿಕೊಳ್ಳಬೇಕು. ಹೀಗೆ ಆಕ್ಷೇಪಬಂದರೆ ಸೂತ್ರದಲ್ಲಿ ಸಮಾಧಾನವಿದೆ. ಆಕಾಶಾದಿಗಳಂತೆ ಪ್ರಾಣಗಳೂ ಹುಟ್ಟುತ್ತವೆ; ಯಾಕೆಂದರೆ ಪ್ರಳಯದಲ್ಲಿ ಶಿವನಲ್ಲದೆ ಬೇರೆ ಏನೂ ಇರಲಿಲ್ಲವೆಂಬ ಶ್ರುತಿಯಲ್ಲಿ ಸೃಷ್ಟಿಗೆ ಮೊದಲು ಶಿವನೊಬ್ಬನೇ ಇದ್ದನೆಂಬುದು ಸ್ಪಷ್ಟಪಡುತ್ತದೆ. "ಇವನಿಂದ ಪ್ರಾಣಾದಿಗಳು ಹುಟ್ಟಿವೆ" ಎಂದು ಶ್ರುತಿಯಲ್ಲಿ ಇಂದ್ರಿಯಗಳ ಉತ್ಪತ್ತಿಯನ್ನು ಹೇಳಿ, ಅವು ಹಿಂದೆ ಇದ್ದವೆಂದು ಹೇಳದಿರುವುದರಿಂದ ಜೀವೋತ್ಪತ್ತಿವಾದದಂತೆಯೇ ಇಂದ್ರಿಯೋತ್ಪತ್ತಿವಾದವನ್ನು ಸಮನ್ವಯಮಾಡಲು ಸಾಧ್ಯವಿಲ್ಲ. ಜೀವನ ಉತ್ಪತ್ತಿಯನ್ನು ನಿಷೇಧಿಸುವ ಶ್ರುತಿಗಳಂತೆಯೇ ಅವನು ಹುಟ್ಟುವುದಿಲ್ಲವೆಂದು ತಿಳಿಸುವ ಶ್ರುತಿಗಳೂ ಇರುವುದರಿಂದ ಅವನು ನಿತ್ಯನೇ ಆಗಿರುವನು. "ಇದೆಲ್ಲವೂ ಮೊದಲು ಅಸದ್ರೂಪವಾಗಿತ್ತು" ಎಂಬ ವಾಕ್ಯದಲ್ಲಿಯೂ ಪ್ರಾಣಶಬ್ದವಾಚ್ಯನಾದ ಪರಮಾತ್ಮನೇ ಬೋಧಿತನಾಗಿದ್ದಾನೆ. "ಈ ಜೀವರೆಲ್ಲರೂ ಪ್ರಾಣವನ್ನೇ ಸೇರುತ್ತಾರೆ. ಪ್ರಾಣವನ್ನೇ ಆಶ್ರಯಿಸಿ ಬದುಕಿದ್ದಾರೆ" ಇಲ್ಲಿಯೂ ಪ್ರಾಣಶಬ್ದವು ಪರಮಾತ್ಮನಲ್ಲಿಯೇ ಪ್ರಸಿ

ದ್ಧವಾಗಿದೆ. ಪ್ರಾಣಾಧಿಕರಣದಲ್ಲಿ ಇದನ್ನು ಹಿಂದೆಯೇ ತಿಳಿಸಲಾಗಿದೆ. "ಪ್ರಾಣಗಳೇ ಋಷಿಗಳು" ಎಂಬಲ್ಲಿ ಋಷಿಶಬ್ದವೂ ಅಚೇತನವಾದ ಇಂದ್ರಿಯಗಳಿಗೆ ಅನ್ವಯಿಸದೆ ಸರ್ವಜ್ಞನಾದ ಶಿವನಲ್ಲಿಯೇ ಅನ್ವಯಿಸುತ್ತದೆ. "ಮಹರ್ಷಿಯಾದ ರುದ್ರನು ದೇವತೆಗಳೆಲ್ಲಕ್ಕೂ ಮೊದಲಿಗಿದ್ದನು" ಎಂದು ಶ್ವೇತಾಶ್ವರ ಮತ್ತು ತೈತ್ತಿರೀಯಶ್ರುತಿಗಳಲ್ಲೂ ಹೇಳಲಾಗಿದೆ.

"ಋಷಯಃ ಪ್ರಾಣಾಃ" ಇತಿ ಬಹುವಚನಶ್ರುತಿಃ ಕಥಮುಪಪದ್ಯತ ಇತ್ಯಾಶಂಕಾಯಾಮಾಹ. **ಗೌಣ್ಯಸಂಭವಾತ್ತತ್ಪ್ರಾಕ್ ಶ್ರುತೇಶ್ಚ ॥ ೨ ॥** ಬಹುವಚನಶ್ರುತಿರ್ಗೌಣೀ, ಬಹ್ವರ್ಥಾಸಂಭವಾತ್ತಸ್ಯೈವ ಪರಮಾತ್ಮನಃ ಶಿವಸ್ಯ ಸೃಷ್ಟೇಃ ಪ್ರಾಗವಸ್ಥಾನಶ್ರುತೇರೇವ ದರ್ಶನಾತ್. ಕಿಂಚ, "ನಮೋ ರುದ್ರೇಭ್ಯೋ ಯೇ ಪೃಥಿವ್ಯಾಂ ಯೇಽಂತರಿಕ್ಷೇ ಯೇ ದಿವಿ ಏಷಾಮನ್ನಂ ವಾತೋ ವರ್ಷಮಿಷವಸ್ತೇಭ್ಯೋ ದಶಪ್ರಾಚೀರ್ದಶ ದಕ್ಷಿಣಾ ದಶಪ್ರತೀಚೀರ್ದಶೋದೀಚೀರ್ದಶೋರ್ಧ್ವಾಸ್ತೇಭ್ಯೋ ನಮಸ್ತೇ ನೋ ಮೃಡಯಂತು ತೇ ಯಂ ದ್ವಿಷ್ಮೋ ಯಶ್ಚ ನೋ ದ್ವೇಷ್ಟಿ ತಂ ವೋ ಜಂಭೇ ದಧಾಮಿ" ಇತಿ ಶತರುದ್ರೀಯೇ ಶಿವಸ್ಯ ಪರಬ್ರಹ್ಮಣಃ ಲೀಲಾಮಂಗಳವಿಗ್ರಹವತ್ತ್ವೇನ ಪೃಥಿವ್ಯಾದಿಭೂತೇಷು ಪ್ರಾಗಾದಿದಿಕ್ಷ್ವಪಿ ಬಹುತ್ವವ್ಯವಸ್ಥಾಪನಾನ್ನ ಸಂದೇಹಕಳಂಕಃ. ತತ್ರತತ್ರ "ಏತಸ್ಮಾಜ್ಜಾಯತೇ ಪ್ರಾಣಃ" ಇತಿ ವಾಕ್ಯೇ ತೇಷಾಂ ಪಂಚಮಹಾಭೂತಾನಾಂ ಪ್ರಾಣಾದೀಂದ್ರಿಯಾಣಾಂ ಚೋತ್ಪತ್ತಿಶ್ರವಣಾತ್ ಇಂದ್ರಿಯಾಣಾಮುತ್ಪತ್ತಿರ್ಮುಖ್ಯೈವ. ಏಕಸ್ಮಿನ್ವಾಕ್ಯೇ ಏಕಸ್ಯ ಪದಸ್ಯ ಕ್ವಚಿದ್ಗೌಣತ್ವಂ ಕ್ವಚಿನ್ಮುಖ್ಯತ್ವಮಿತ್ಯಸ್ಯಾಸಂಭವ ಇತಿಭಾವಃ. ಪ್ರಾಣಾನಾಂ ನಿತ್ಯತ್ವೇ ಏಕವಿಜ್ಞಾನೇನ ಸರ್ವವಿಜ್ಞಾನಂ ನ ಸ್ಯಾತ್. "ಏಕೋ ಹಿ ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ" ಇತ್ಯಾದಿಶ್ರುತಿಸಿದ್ಧಕಾರಣರೂಪಬ್ರಹ್ಮಜ್ಞಾನೇನ ಕಾರ್ಯರೂಪಸರ್ವವಿಜ್ಞಾನಪ್ರತಿಜ್ಞಾಸಿದ್ಧ್ಯರ್ಥಂ ಪ್ರಾಣೇಂದ್ರಿಯಾಣಾಮಪಿ ಬ್ರಹ್ಮಜನ್ಯತ್ವಂ ಸಿದ್ಧಂ.

ಹಾಗಾದರೆ, "ಪ್ರಾಣಗಳೇ ಋಷಿಗಳು" ಎಂಬಲ್ಲಿ ಬಹುವಚನ ಹೇಗೆ ಹೊಂದುತ್ತದೆ? ಎಂದಾಶಂಕಿಸಿ ಪರಿಹರಿಸುತ್ತಾನೆ. ಒಬ್ಬ ಪರಮಾತ್ಮನಲ್ಲಿ ಬಹುವಚನವು ಸಂಭವಿಸದೇ ಇರುವುದರಿಂದಲೂ ಸೃಷ್ಟಿಗೆ ಮೊದಲು ಅವನೊಬ್ಬನೇ ಇದ್ದನೆಂದು ಶ್ರುತಿಯಲ್ಲಿ ಸ್ಪಷ್ಟಪಡುವುದರಿಂದಲೂ ಶ್ರುತಿಯಲ್ಲಿ ಬಹುವಚನ ಗೌಣವೆನಿಸಿದೆ. ಇದೂ ಅಲ್ಲದೆ, "ಯಾರು ಭೂಮಿಗೆ ಒಡೆಯರಾಗಿ ಇಲ್ಲಿ ನೆಲಸಿರುವರೋ ಅವರಿಗೆ ಭೂಮಿಯಲ್ಲಿ ಹುಟ್ಟಿದ ಅನ್ನವೆ, ಆಯುಧವಾಗಿರುವುದು. ಯಾರು ಭುವರ್ಲೋಕವೆನಿಸಿದ ಆಕಾಶಕ್ಕೆ ಒಡೆಯರಾಗಿ ಅಲ್ಲಿ ನೆಲಸಿರುವರೋ ಅವರಿಗೆ ಅಲ್ಲಿನ ವಾಯುವೇ ಆಯುಧವಾಗಿರುವುದು. ಯಾರು ಸ್ವರ್ಗಕ್ಕೆ ಒಡೆಯರಾಗಿ ಅಲ್ಲಿಯೇ ನೆಲಸಿರುವರೊ ಅವರಿಗೆ

ವೃಷ್ಟಿಯೇ ಆಯುಧವೆನಿಸಿರುವುದು. ಇಂತಹ ರುದ್ರರೆಲ್ಲರಿಗೂ ನಮಸ್ಕರಿಸುತ್ತೇನೆ. ಯಾರು ಪೂರ್ವ,ದಕ್ಷಿಣ,ಪಶ್ಚಿಮ, ಉತ್ತರದಿಕ್ಕುಗಳಿಗೆ ಕ್ರಮವಾಗಿ ನಿಯಾಮಕರೋ, ಯಾರು ಊರ್ಧ್ವದಿಕ್ಕುಗಳಿಗೂ,ಅಗ್ನಿನೈರುತ್ಯ ವಾಯುವ್ಯೇಶಾನ್ಯರೂಪವಾದ ವಿದಿಕ್ಕುಗಳಿಗೂ ಒಡೆಯರೋ ಅಂತಹ ಶತರುದ್ರರಿಗೆ ಈ ನಮಸ್ಕಾರ ಸಲ್ಲಲಿ. ಶತರುದ್ರರು ಭಕ್ತರಾದ ನಮಗೆ ಇಷ್ಟಪ್ರಾಪ್ತ್ಯನಿಷ್ಟನಿವೃತ್ತಿಗಳಿಂದ ಸುಖಪಡಿಸಲಿ. ಪೂಜ್ಯರುದ್ರರೇ, ನಮ್ಮನ್ನು ಯಾವನು ದ್ವೇಷಿಸುವನೋ ನಾವು ಯಾರನ್ನು ದ್ವೇಷಿಸುತ್ತೇವೆಯೋ ಅಂತವರೆಲ್ಲರನ್ನೂ ನಿಮ್ಮ ದವಡೆಹಲ್ಲುಗಳೊಳಗೆ ಸೇರಿಸುವೆವು. ನೀವು ಆ ಶತ್ರುವನ್ನು ಅಗಿದು ಸಂಹರಿಸಿ ನಮ್ಮನ್ನು ನಿತ್ಯ ಸುಖಿಗಳನ್ನಾಗಿ ಮಾಡಿರಿ." ಎಂದು ಶತರುದ್ರೀಯದಲ್ಲಿ ಹೇಳಿದೆ. ಶಿವನಿಗೆ ಭಕ್ತಾನುಗ್ರಹಲೀಲೆಗಾಗಿ ಮಂಗಳವಿಗ್ರಹವಿರುವುದರಿಂದಲೂ, ಪೃಥಿವ್ಯಾದಿಭೂತಗಳಲ್ಲೂ, ಪೂರ್ವಾದಿದಿಕ್ಕುಗಳಲ್ಲೂ ಅವನ ವ್ಯಾಪ್ತಿ ಇರುವುದರಿಂದಲೂ ಇಲ್ಲಿ ಯಾವ ಸಂದೇಹಕ್ಕೂ ಅವಕಾಶವಿಲ್ಲ. ಆದರೆ ಅಲ್ಲಲ್ಲಿ ಪಂಚಭೂತಗಳ ಮತ್ತು ಪ್ರಾಣಾದಿಇಂದ್ರಿಯಗಳ ಉತ್ಪತ್ತಿಯನ್ನು ಹೇಳಿರುವುದರಿಂದ ಇಂದ್ರಿಯಗಳ ಉತ್ಪತ್ತಿ ಪ್ರಧಾನವೆನಿಸಿದೆ. ಒಂದೇ ವಾಕ್ಯದಲ್ಲಿ ಒಂದು ಪದವನ್ನು ಗೌಣವೆಂದೂ, ಬೇರೆಕಡೆ ಪ್ರಧಾನವೆಂದೂ ಭಾವಿಸಲಾಗುವುದಿಲ್ಲ. ಪ್ರಾಣಗಳು ನಿತ್ಯವಾದರೆ ಒಂದನ್ನು ತಿಳಿದರೆ ಎಲ್ಲವೂ ತಿಳಿಯುವುದೆಂಬ ಪ್ರತಿಜ್ಞೆ ಹೊಂದುವುದಿಲ್ಲ. ಕಾರಣವೆನಿಸಿದ ಬ್ರಹ್ಮದ ಜ್ಞಾನದಿಂದ ಕಾರ್ಯವೆನಿಸಿದ ವಸ್ತುಗಳ ಜ್ಞಾನವೂ ಆಗುವುದೆಂಬ ಪ್ರತಿಜ್ಞೆ ಸಿದ್ಧಿಸಬೇಕಾದರೆ ಪ್ರಾಣೇಂದ್ರಿಯಗಳು ಬ್ರಹ್ಮದಿಂದಲೇ ಹುಟ್ಟುವುವೆಂದು ಒಪ್ಪಲೇಬೇಕು.

"ಆತ್ಮನ ಆಕಾಶಸ್ಸಂಭೂತಃ", "ತತ್ತೇಜೋಽಸೃಜತ" ಇತ್ಯಾದಿ ತೈತ್ತಿರೀಯಛಾಂದೋಗ್ಯಾದ್ಯುತ್ಪತ್ತಿಪ್ರಕರಣೇ ಇಂದ್ರಿಯಾದ್ಯುತ್ಪತ್ತ್ಯದರ್ಶನಾತ್ಕಥಂ ತದುತ್ಪತ್ತಿರಿತ್ಯಾಶಂಕಾಯಾಂ ಛಾಂದೋಗ್ಯೇ ತೇಷಾಮುತ್ಪತ್ತಿದರ್ಶನಾದ್ಬ್ರಹ್ಮಜನ್ಯತ್ವಂ ಮುಖ್ಯಮೇವೇತ್ಯಾಹ. **ತತ್ಪೂರ್ವಕತ್ವಾದ್ವಾಚಃ ॥ ೩ ॥** ಬ್ರಹ್ಮಪ್ರಕೃತಿತೇಜೋಽಬನ್ನಾನಿ ತಚ್ಛಬ್ದೇನೋಚ್ಯಂತೇ. ಪ್ರಾಣೇನ ಮನಸಾ ಚ ಸಹಿತಾಯಾಃ ವಾಚಃ, "ಅನ್ನಮಯಂ ಹಿ ಸೌಮ್ಯ ಮನಃ, ಆಪೋಮಯಃ ಪ್ರಾಣಃ, ತೇಜೋಮಯೀ ವಾಕ್" ಇತ್ಯನೇನ ತೇಜೋಽಬನ್ನತ್ವಾಭಿಧಾನಾದುತ್ಪತ್ತಿಶ್ರುತಿರುಪದಿಷ್ಟಾ. ತಸ್ಮಾದುತ್ಪತ್ತಿಶ್ರುತಿಸದ್ಭಾವಾತ್ಸೃಷ್ಟೇಃ ಪ್ರಾಗಿಂದ್ರಿಯಾಣಾಮಭಾವಾತ್ ತೇಷಾಂ ಪಂಚಮಹಾಭೂತಾನಾಂಜನ್ಯತ್ವಮಜನ್ಯತ್ವಂ ಚಾಚಕ್ಷ್ಯತೇ. ಅತಃ ಶ್ರುತೀನಾಮವಿರೋಧಃ. ತದ್ಧೇದಂಸ್ತರ್ಹ್ಯವ್ಯಾಕೃತಮಾಸೀತ್ತನ್ನಾಮರೂಪಾಭ್ಯಾಂ ವ್ಯಾಕ್ರಿಯತೇ. ಶ್ರುತೌ ನಾಮರೂಪಾತ್ಮಕವಾಗ್ವಿಷಯಭೂತವಿಯದಾದಿಸೃಷ್ಟ್ಯಭಾವತ್ವಸ್ಯೈವ ನಿರ್ದೇಶಾತ್, ತದಾನೀಂ ವಾಗಿಂದ್ರಿಯಾದಿಕಾರ್ಯಾಭಾವಾಚ್ಚ, "ಯದಾ ತಮಃ—ಶಿವ

ಏವ ಕೇವಲಃ " ಇತ್ಯಾದಿಶ್ರುತಿಶತೇಷು ಪ್ರಾಕ್ಸೃಷ್ಟೇಃ ಶಿವಸ್ಯ ತತ್ತ್ವಮಾತ್ರಸ್ಥಿತೇಃ ಶ್ರವಣಾತ್, " ಏತಸ್ಮಾಜ್ಜಾಯತೇ ಪ್ರಾಣಃ " ಇತ್ಯಾದಿ ಶ್ರುತಿನಿಷ್ಠಜನ್ಯತ್ವಂ ಪ್ರಾಣಾದೀನಾಮಗೌಣತ್ವಂ. ಉತ ಮೋಕ್ಷದಶಾಯಾಮಪಿ ಕರ್ಮವೈರಾಗ್ಯಗುರುಚರೇಶ್ವರಶೇಷತ್ವಕೈಂಕರ್ಯಪಾರತಂತ್ರ್ಯಭೂತದಯಾಶಮದಮಾದಿಸಹಕೃತಪರಮಭಕ್ತಿಚರಮಜ್ಞಾನವಿಶಿಷ್ಟಾನಾಂ ಜೀವನ್ಮುಕ್ತಾನಾಂ ವಿದೇಹಮುಕ್ತೌ " ಗತಾಃ ಕಲಾಃ ಪಂಚದಶ ಪ್ರವಿಷ್ಟಾ ದೇವಾಶ್ಚ ಸರ್ವೇ ಪ್ರತಿದೇವತಾಸು ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ ", " ಸ ಯೋ ವೈ ಪರಮಂ ", " ಬ್ರಹ್ಮ ವೇದ ಬ್ರಹ್ಮೈವ ಭವತಿ ", " ನಾಸ್ಮಾದಬ್ರಹ್ಮವಿತ್ಕೃತೋ ಭವತು ತರತಿ ಶೋಕಂ ತರತಿ ಪಾಪ್ಮಾನಂ ಗುಹಾಗ್ರಂಥಿಭ್ಯೋ ವಿಮುಕ್ತೋಽಮೃತೋ ಭವತಿ"ಇತಿ ಶ್ರುತೌ ಲಿಂಗಶರೀರವಿಲಯಪೂರ್ವಕ ನದೀಸಮುದ್ರವಚ್ಛಿವತತ್ತ್ವಪ್ರಾಪ್ತ್ಯುಪದೇಶಾತ್ ಸಾಯುಜ್ಯಮುಕ್ತೌ ಲಿಂಗಶರೀರಾಸದ್ಭಾವಾತ್ತತೋ ಹ್ಯವೈದಿಕಃ. " ಆಕಾಶಶರೀರಂ ಬ್ರಹ್ಮ ಸತ್ಯಾತ್ಮ ಪ್ರಾಣರಾಮಂ ಮನಆನಂದಂ " ಇತ್ಯತ್ರ ಶಿವಸ್ಯ ಪರಬ್ರಹ್ಮಣಃ ಪ್ರಾಣೇಷ್ವಾಸಮಂತಾದ್ರಮತ ಇತಿ ಪ್ರಾಣರಾಮಃ. ಮನಸಿ ಆನಂದೋ ಯಸ್ಯ ಸಃ ಮನಆನಂದಃ ಇತ್ಯನೇನ ಗುಣತ್ರಯಾತ್ಮಕಕರ್ಮಜನ್ಯಪ್ರಕೃತಿಪರಿಣಾಮಕಬಾಹ್ಯೇಂದ್ರಿಯನಿರಪೇಕ್ಷತಯಾ ದಿವ್ಯಪ್ರಕೃತ್ಯಾತ್ಮಕ ಸತ್ಯಜ್ಞಾನಾನಂದಸ್ವರೂಪಲೀಲಾಮಂಗಳವಿಗ್ರಹವತ್ತ್ವೇನ ತಸ್ಯ ಲಿಂಗ ಶರೀರಸ್ಯ ನಿತ್ಯತ್ವಮನಿವಾರ್ಯಂ. " ಸ್ಥಿರೈರಂಗೈಃ ಪುರುರೂಪ ಉಗ್ರಃ " " ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ । ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿಃ । ವ್ಯಶೇಮ ದೇವಹಿತಂ ಯದಾಯುಃ ॥ " ಇತಿ ಭಗವತೀ ಶ್ರುತಿರೇವಾತ್ರ ಪ್ರಮಾಣಂ. ಅತೋ ಭೂತಭೌತಿಕಕರ್ಮಜನ್ಯಾಸುರಪ್ರಕೃತಿಕಜೀವಲಿಂಗಶರೀರಾಣಾಮೇವ ಜನ್ಯತ್ವಂ ಮೋಕ್ಷದಶಾಯಾಮಪಿ ವಿಲಯತ್ವಮಿತಿ ವೇದಿತವ್ಯಂ.

" ಆತ್ಮನಿಂದ ಆಕಾಶ ಹುಟ್ಟಿತು " " ಅದು ತೇಜಸ್ಸನ್ನು ಸೃಷ್ಟಿಸಿತು " ಈ ಬಗೆಯ ಶ್ರುತಿಗಳಲ್ಲಿ ಇಂದ್ರಿಯಗಳ ಉತ್ಪತ್ತಿಯನ್ನು ಹೇಳಿಲ್ಲವಾದ್ದರಿಂದ ಅವಕ್ಕೆ ಉತ್ಪತ್ತಿ ಹೇಗೆ ಸಂಭವಿಸುತ್ತದೆ ? ಎಂದಾಶಂಕಿಸಿ ಛಾಂದೋಗ್ಯದಲ್ಲಿ ಅವುಗಳ ಉತ್ಪತ್ತಿಯನ್ನು ಹೇಳಿರುವುದರಿಂದ ಅವು ಬ್ರಹ್ಮದಿಂದ ಹುಟ್ಟುತ್ತವೆ ಎಂಬುದೇ ಮುಖ್ಯವೆಂದು ಹೇಳುತ್ತಾನೆ. ಸೂತ್ರದಲ್ಲಿ ತತ್ ಎಂದರೆ ಬ್ರಹ್ಮಸ್ವರೂಪವೆನಿಸಿದ ತೇಜಸ್ಸು-ನೀರು ಪೃಥ್ವಿಗಳೆಂದು ತಿಳಿಯಬೇಕು. " ಅನ್ನಮಯವಾದ್ದು ಮನಸ್ಸು, ಜಲಮಯವಾದ್ದು ಪ್ರಾಣ, ತೇಜೋಮಯವಾದ್ದು ವಾಕ್ಕು" ಹೀಗೆ ಶ್ರುತಿಯಲ್ಲಿ ಪ್ರಾಣ ಮನಸ್ಸುಗಳೊಡನೆ ವಾಕ್ಕನ್ನು ಸೇರಿಸಿ ಹೇಳಿದ್ದರಿಂದ ಪ್ರಾಣಾದಿಗಳು ಹುಟ್ಟುತ್ತವೆ ಎಂದು ಶ್ರುತಿ

ಯಲ್ಲಿಯೇ ಹೇಳಿದಂತಾಯಿತು. ಹೀಗೆ ಅವುಗಳ ಉತ್ಪತ್ತಿಯ ಬಗ್ಗೆ ಶ್ರುತಿ ಇರುವುದರಿಂದಲೂ, ಸೃಷ್ಟಿಗೆ ಮೊದಲು ಇಂದ್ರಿಯಗಳು ಇರಲಿಲ್ಲವಾದ್ದರಿಂದಲೂ ಅವು ಪಂಚಭೂತಗಳಂತೆ ಹುಟ್ಟುವುವೆಂದೂ, ಅನಿತ್ಯವೆಂದೂ, ತಿಳಿಸಲಾಗಿದೆ. ಆದ್ದರಿಂದ ಈ ಶ್ರುತಿಗಳಲ್ಲಿ ಯಾವ ವಿರೋಧವೂ ಇಲ್ಲ. ಆಗ ಅವೆಲ್ಲವೂ ವಿಭಾಗವಾಗದ ಸ್ಥಿತಿಯಲ್ಲಿದ್ದು ನಾಮರೂಪಗಳಿಂದ ವಿಸ್ತಾರವಾಯಿತು. ಪ್ರಳಯದಲ್ಲಿ ನಾಮರೂಪಾತ್ಮಕವಾಗಿ ವಾಗ್ವ್ಯವಹಾರಕ್ಕೆ ಅನುಗುಣವಾದ ಸೃಷ್ಟಿ ಇಲ್ಲದಿರುವುದರಿಂದಲೂ, ಆಗ ವಾಗಿಂದ್ರಿಯಕ್ಕೆ ಕಾರ್ಯಾವಕಾಶವಿರಲಿಲ್ಲವಾದ್ದರಿಂದಲೂ ಸೃಷ್ಟಿಗೆ ಮೊದಲು ಶಿವನೊಬ್ಬನೇ ಇದ್ದನೆಂದು ಹೇಳಿರುವುದರಿಂದಲೂ, ಆ ಕಾಲದಲ್ಲಿ ಶಿವನೊಬ್ಬನೇ ಇದ್ದನೆಂದು ಹೇಳಿರುವುದರಿಂದಲೂ ಶ್ರುತಿಯಲ್ಲಿ ತಿಳಿಸಿರುವಂತೆ ಪ್ರಾಣಾದಿಗಳು ಹುಟ್ಟುವುವೆಂಬುದೇ ಮುಖ್ಯವೆನಿಸಿದೆ. ಮೋಕ್ಷದಶೆಯಲ್ಲೂ ನಿಷ್ಕಾಮಭಾವನೆ, ಗುರುಚರೇಷ್ಟಲಿಂಗಗಳ ಸೇವೆ, ಪರಮೇಶ್ವರನಿಗಧೀನವಾಗಿರುವಿಕೆ, ಸರ್ವ ಪ್ರಾಣಿಗಳಮೇಲೂ ದಯೆ, ಶಮದಮಗಳೊಡಗೂಡಿದ ಪರಾಭಕ್ತಿ, ಶಿವಸ್ವರೂಪದ ವಿಜ್ಞಾನ ಇವುಗಳಿಂದ ಶೋಭಿಸುತ್ತಿರುವ ಜೀವನ್ಮುಕ್ತರಿಗೆ ವಿದೇಹ ಮುಕ್ತಿಯಲ್ಲಿ "ಸಮಸ್ತ ಕಲೆಗಳು ಇಂದ್ರಿಯಗಳು ಕರ್ಮಗಳು ವಿಜ್ಞಾನಮಯನಾದ ಜೀವನು ಎಲ್ಲವೂ ಚಿದಾಕಾಶದಲ್ಲಿ ಏಕೀಭವಿಸುತ್ತವೆ." "ಅವನೇ ಪರಮಾತ್ಮನು" "ಬ್ರಹ್ಮವನ್ನರಿತವನು ಬ್ರಹ್ಮವೇ ಆಗುತ್ತಾನೆ." "ಇವನಿಗೆ ಬ್ರಹ್ಮದ ವಿಯೋಗವಾಗದಿರಲಿ," "ಇವನು ದುಃಖವನ್ನೂ ಪಾಪವನ್ನೂ ದಾಟುತ್ತಾನೆ." "ಹೃದಯದ ಮಹಾಪಾಶಗಳಿಂದ ಬಿಡುಗಡೆಹೊಂದಿ ಇವನು ಅಮೃತನಾಗುತ್ತಾನೆ" ಎಂದು ಮುಂತಾದ ಶ್ರುತಿಗಳಲ್ಲಿ ಲಿಂಗಶರೀರ ನಷ್ಟವಾಗಿ ನದಿಯು ಸಮುದ್ರವೇ ಆಗುವಂತೆ ಜೀವನು ಶಿವನೇ ಆಗುವನೆಂದು ಹೇಳಿದೆ. ಹೀಗೆ ಸಾಯುಜ್ಯ ಮುಕ್ತಿಯಲ್ಲಿ ಲಿಂಗಶರೀರವಿಲ್ಲದ್ದರಿಂದ ಆಗಲೂ ಅದನ್ನು ಒಪ್ಪಿದರೆ ಅದು ವೇದ ವಿರುದ್ಧವೆನಿಸುತ್ತದೆ. "ಬ್ರಹ್ಮಕ್ಕೆ ಆಕಾಶವೇ ಶರೀರ, ಸತ್ಯವೇ ಆತ್ಮ, ಪ್ರಾಣವೇ ವಿನೋದಸ್ಥಾನ, ಮನವೇ ಆನಂದ ಭೂಮಿ" ಎಂಬಲ್ಲಿ ಶಿವನು ಪ್ರಾಣಗಳಿಲ್ಲದೆಯೇ ಸಂಪೂರ್ಣವಾಗಿ ರಮಿಸುತ್ತಿರುವನೆಂದೂ, ಮನಸ್ಸಿನಲ್ಲಿಯೇ ಆನಂದಪಡುವನೆಂದೂ ಅರ್ಥವಾಗುತ್ತದೆ. ತ್ರಿಗುಣಾತ್ಮಕವಾದ ಕರ್ಮದಿಂದ ಪಡೆದ ಪ್ರಕೃತಿವಿಕಾರಗಳೆನಿಸಿದ ಬಾಹ್ಯೇಂದ್ರಿಯಗಳನ್ನು ಅಪೇಕ್ಷಿಸದೆಯೇ ದಿವ್ಯಾಮೃತಮಯವಾದ ಸತ್ಯಜ್ಞಾನಾನಂದಸ್ವರೂಪದಿಂದಲೇ ಶಿವನು ದಿವ್ಯಮಂಗಳವಿಗ್ರಹನಾಗಿರುವನು. ಆದ್ದರಿಂದಲೇ ಅವನ ದಿವ್ಯ ಶರೀರ ನಿತ್ಯವೆನಿಸಿದೆ. "ಶಿವನು ನಿಶ್ಚಲವಾದ ಅಂಗಗಳಿಂದ ವಿಚಿತ್ರಾಕಾರನೂ ಭಯಂಕರನೂ ಆಗಿದ್ದಾನೆ." "ಸದ್ಭಕ್ತರೇ, ಮಂಗಳಕರನಾದ ಶಿವನನ್ನೇ ಕಿವಿಗಳಿಂದ ಕೇಳೋಣ, ಕಣ್ಣಿಂದ ನೋಡೋಣ. ಸಾಧಕರೇ, ದೃಢವಾದ ಅವಯವಗಳಿಂದಲೂ ದೇಹಗಳಿಂದಲೂ ಅವನನ್ನೇ ಸ್ತುತಿಸೋಣ. ನಮಗೆ ಆಯುಸ್ಸಿರುವವರೆಗೂ ಶಿವನಿಗೆ ಪ್ರಿಯವಾದದ್ದನ್ನೇ ಆಚರಿಸೋಣ" ಎಂಬ ಪೂಜ್ಯ ಶ್ರುತಿಯೇ ಈ ಬಗ್ಗೆ ಪ್ರಮಾಣವೆನಿಸಿದೆ. ಆದ್ದರಿಂದ ಪಂಚಭೂತಾತ್ಮಕ ಕರ್ಮಗಳಿಂದ

ಹುಟ್ಟಿದ ಜೀವರ ಆಸುರೀ ಪ್ರಕೃತಿಯ ಲಿಂಗಶರೀರಗಳೇ ಅನಿತ್ಯವೆನಿಸಿದ್ದು ಮೋಕ್ಷ ದಶೆಯಲ್ಲಿ ಪರಶಿವನಲ್ಲಿಯೇ ಲಯವಾಗುತ್ತವೆ ಎಂದು ತಿಳಿಯಬೇಕು.

ಏವಂ ಜೀವಲಿಂಗಶರೀರಯೋರ್ಬ್ರಹ್ಮಜನ್ಯತ್ವಪ್ರಸಾಧನೇ ತದ್ವಿಶಿಷ್ಟಾನಿ ತತ್ತ್ವಾನಿ ಕಾನೀತ್ಯಾಶಂಕಾಯಾಂ ತದಂಗಶರೀರಸ್ವರೂಪಂ, ತದ್ವಿಶಿಷ್ಟಾನಿ ತತ್ತ್ವಾನಿ ಚಾಧಿಕರಣಾಂತರೇಣಾಹ. ಸಪ್ತಗತ್ಯಧಿಕರಣಂ ॥ ೨ ॥
ಸಪ್ತಗತೇರ್ವಿಶೇಷಿತತ್ವಾಚ್ಚ ಹಸ್ತಾದಯಸ್ತು ಸ್ಥಿತೇಽತೋ ನೈವಂ ॥ ೪ ॥ ಇಂದ್ರಿಯಾಣಿ ಸಪ್ತ ಕುತಃ, "ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್" ಇತಿ ಶ್ರುತೌ ಸಪ್ತೇಂದ್ರಿಯಾವಗತೇಃ ಪರಲೋಕಗಮನಸ್ಯ ವಿಶೇಷಿತತ್ವಾದಿಂದ್ರಿಯಾಣಿ ಸಪ್ತೈವ, ತಸ್ಮಾತ್ ಶ್ರೋತ್ರಾದಿಜ್ಞಾನೇಂದ್ರಿಯಪಂಚಕಂ ವಾಗಿಂದ್ರಿಯಮೇಕಂ ಅಂತಃಕರಣಮೇಕಂ ಏತಾನಿ ಸಪ್ತೇಂದ್ರಿಯಾಣಿ ಚೇತ್ ಹಸ್ತಾದಯಸ್ತು ಸ್ಥಿತೇಽತೋ ನೈವಂ, ಹಸ್ತಾದಯಃ ಪಾಣಿಪಾದಪಾಯೂಪಸ್ಥಾನ್ಯಪಿ ಜೀವೇ ಸ್ಥಿತೇ ಸತಿ ಜೀವೇನ ಸಹ ಶರೀರೇ ತಿಷ್ಠಂತಿ, ಜೀವೇ ಲೋಕಾಂತರಗತೇ ಸತಿ ತೇನ ಸಹ ಲೋಕಾಂತರಂ ಗಚ್ಛಂತಿ. "ತಮುತ್ಕ್ರಾಮಂತಂ ಪ್ರಾಣೋಽನೂತ್ಕ್ರಾಮತಿ ಪ್ರಾಣಮನೂತ್ಕ್ರಾಮಂತಂ ಸರ್ವೇ ಪ್ರಾಣಾ ಅನೂತ್ಕ್ರಾಮಂತಿ" ಇತಿ ಶ್ರುತೌ ಸರ್ವೇಷಾಮಿಂದ್ರಿಯಾಣಾಂ ಜೀವೇನ ಸಹ ಪರಲೋಕಗಮನಶ್ರವಣಾತ್, ಅತಃ ಅಸ್ಮಾತ್ತು ಕಾರಣಾನ್ನೈವಂ, ಸಪ್ತೇಂದ್ರಿಯಾಣಿ ನ ಭವಂತಿ, ಕಿಂತು ಏಕಾದಶೇಂದ್ರಿಯಾಣೀತ್ಯರ್ಥಃ. ಏಕಮೇವಾಂತಃಕರಣಂ ಸಂಶಯಾತ್ಮಕತ್ವಾನ್ಮನ ಇತಿ, ನಿಶ್ಚಯಾತ್ಮಕತ್ವಾದ್ಬುದ್ಧಿರಿತಿ, ಅಭಿಮಾನತತ್ತ್ವಾದಹಂಕಾರ ಇತಿ, ಸ್ಮರಣಾತ್ಮಕತ್ವಾಚ್ಚಿತ್ತಮಿತ್ಯುಪದೇಶಾತ್ ತಥಾಚ ನ ಸಂಖ್ಯಾಧಿಕ್ಯಂ. "ಸಪ್ತ ಪ್ರಾಣಾಃ ಪ್ರಭವಂತಿ ತಸ್ಮಾತ್" ಇತಿ ಸಪ್ತೇಂದ್ರಿಯಾಣಿ ಶ್ರೂಯಂತೇ. ಕ್ವಚಿತ್ "ಅಷ್ಟೌ ಗ್ರಹಾಃ ಅಷ್ಟಾವತಿಗ್ರಹಾಃ" ಇತ್ಯಷ್ಟೌ ಗ್ರಹಾಃ. ಪುರುಷಪಶುಬಂಧಕಾನಿ ಇಂದ್ರಿಯಾಣಿ. ರಾಗಾದ್ಯುತ್ಪತ್ತಿದ್ವಾರಾ ಇಂದ್ರಿಯಾಕರ್ಷಕಾದಿವಿಷಯಾಃ ಅತಿಗ್ರಹಾ ಇತ್ಯರ್ಥಃ. "ಸಪ್ತ ವೈ ಶೀರ್ಷಣ್ಯಾಃ ಪ್ರಾಣಾ ದ್ವಾವವಾಂಚೌ" ಇತ್ಯತ್ರ, "ನಹಿ ವಾಕ್ಪಾಯೂಪಸ್ಥಾ ನವ ವೈ ಪುರುಷೇ ಪ್ರಾಣಾಃ ನಾಭಿರ್ದಶಮೀ" ಇತ್ಯತ್ರ, "ದಶದಶ ವೈ ಪುರುಷೇ ಪ್ರಾಣಾಃ ಆತ್ಮೈಕಾದಶ" ಇತ್ಯತ್ರೈಕಾದಶಾತ್ಮ ಮನಃ, ಏವಂ ಕ್ವಚಿತ್ತ್ರಯೋದಶೇಂದ್ರಿಯಾಣಿ ಶ್ರೂಯಂತೇ. ಅಥ ಚೈಕಾದಶೇಂದ್ರಿಯಾಣೀತ್ಯತ್ರ ಚಿಂತ್ಯತೇ. ಕಾನೀಂದ್ರಿಯಾಣಿ? ಕಿಂ ಸಪ್ತೈವ ಸ್ಯುಃ? ಏವಂ ಶ್ರುತಿವಿಪ್ರತಿಪತ್ತೌ ಸಂಶಯಃ. ಕಿಂ ಪ್ರಾಪ್ತಂ, ಸಪ್ತೇತಿ ಕುತಃ? "ಸಪ್ತ ಇಮೇ ಲೋಕಾ ಯೇಷು ಚರಂತಿ" ಇತಿ ಗತೇರ್ವಿಶೇಷಿತತ್ವಾಚ್ಚ. ಗತಿಸ್ತಾವ

ಜ್ಞಾಯಮಾನೇನ ಮ್ರಿಯಮಾಣೇನ ಚ ಜೀವೇನ ಸಹ ಲೋಕೇಷು ಸಂಚರಣರೂಪಾ. ಅತಃ ಸಪ್ತ ಏವ ಶ್ರೂಯಂತೇ. "ಸಪ್ತ ಇಮೇ ಲೋಕಾ ಏಷು ಚರಂತಿ ಪ್ರಾಣಾ ಗುಹಾಶಯಾನ್ನಿಹಿತಾಸ್ಸಪ್ತಸಪ್ತ " ಇತಿವೀಪ್ಸಾ ಪುರುಷಭೇದಾಭಿಪ್ರಾಯಾ. ವಿಶೇಷಿತತ್ವಾಚ್ಚ ತೇ ಗತಿಮಂತಃ ಪ್ರಾಣಾಃ ಸ್ವರೂಪತಃ " ಯದಾ ಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ । ಬುದ್ಧಿಶ್ಚ ನ ವಿಚೇಷ್ಟೇತ ತಾಮಾಹುಃ ಪರಮಾಂ ಗತಿ ॥ " ಇತಿ ಶರೀರಾಂತಸ್ಸಂಚರಣಂ ವಿಹಾಯ ಮೋಕ್ಷಾರ್ಥಗಮನಂ ಪರಮಗತಿಃ. ಏವಂ ಜೀವೇನ ಸಹ ಜನ್ಮಮರಣಯೋಸ್ಸಪ್ತಾನಾಮೇವ ಗತಿಶ್ರವಣಾತ್ ಯೋಗದಶಾಯಾಂ ಜ್ಞಾನಾನೀತಿವಿಶೇಷಿತತ್ವಾಚ್ಚ ಜೀವಸ್ಯ ಕರಣಾನಿ ಶ್ರೋತ್ರತ್ವಕ್ಚಕ್ಷುರ್ಜಿಹ್ವಾಘ್ರಾಣಬುದ್ಧಿಮನಾಂಸಿ ಸಪ್ತೈವೇತಿ ಗಮ್ಯತೇ. ಯಾನಿ ತ್ವಿತರಾಣಿ ವಿಷಯಾಣಾಂ ಗ್ರಾಹಕತ್ವೇನ ಅಷ್ಟೌಗ್ರಹಾಃ, " ಸಪ್ತ ವೈ ಶೀರ್ಷಣ್ಯಾ ವಾ ಪ್ರಾಣಾ ವಾ ದ್ವಾವವಾಂಚೌ " ಇತ್ಯಾದಿಷು ಚತುರ್ದಶಪರ್ಯಂತಪ್ರಾಣಪ್ರತಿಪಾದಕವಾಕ್ಯೇಷು ವಾಕ್ಪಾಣಿಪಾದಪಾಯೂಪಸ್ಥಾಹಂಕಾರಚಿತ್ತಾಖ್ಯಾನೀಂದ್ರಿಯಾಣಿ ಪ್ರತೀಯಂತೇ. ತೇಷಾಂ ಜೀವೇನ ಸಹ ಗತಿಶ್ರವಣಾಭಾವಾತ್ ಜೀವಸ್ಯ ಲೋಕೋಪಕಾರಕತ್ವಮಾತ್ರೇಣೌಪಚಾರಿಕಃ ಪ್ರಾಣವ್ಯಪದೇಶಃ ಇತಿ ಪ್ರಾಪ್ತೇ ಪ್ರಚಕ್ಷ್ಮಹೇ, ಹಸ್ತಾದಯಸ್ತ್ವಿತಿ. ನ ಸಪ್ತೇಂದ್ರಿಯಾಣಿ ಅಪಿತ್ವೇಕಾದಶ, ಹಸ್ತದೀನಾಮಪಿ ಶರೀರೇ ಸ್ಥಿತಸ್ಯ ಜೀವಸ್ಯ ಭೋಗೋಪಕಾರಕತ್ವಕಾರ್ಯಭೇದಾಶ್ಚ ದೃಶ್ಯಂತೇ ಹಿ. ಶ್ರೋತ್ರಾದೀನಾಮಿವ ಹಸ್ತಾದೀನಾಮಪಿ ಕಾರ್ಯಭೇದಾತ್ ಆದಾನಾದೀನ್ಯತೀತಾನ್ಯಪಿ ಸಂತ್ಯೇವ. ಅತೋ ನೈವಂ ಹಸ್ತಾದಯೋ ನ ಸಂತೀತ್ಯೇವಂ ನ ಮಂತವ್ಯಮಿತ್ಯುಚ್ಯತೇ. ಅಧ್ಯವಸಾಯಮಾನಚಿತ್ತವೃತ್ತಿಭೇದಾತ್ ಮನ ಏವ ಬುದ್ಧ್ಯಹಂಕಾರಚಿತ್ತಶಬ್ದೈರ್ವ್ಯವಹ್ರಿಯತ ಇತ್ಯೇಕಾದಶೇಂದ್ರಿಯಾಣಿ.

ಹೀಗೆ ಜೀವ ಮತ್ತು ಲಿಂಗಶರೀರವೆರಡಕ್ಕೂ ಬ್ರಹ್ಮವೇ ಕಾರಣವೆಂದು ಸಾಧಿಸಿ ಆ ಲಿಂಗಶರೀರದ ಸ್ವರೂಪವನ್ನೂ ಅದರಲ್ಲಿರುವ ತತ್ತ್ವಗಳನ್ನೂ ಮುಂದೆ ತಿಳಿಸುತ್ತಾನೆ. ಇಂದ್ರಿಯಗಳು ಏಳು ಎಂಬುದಕ್ಕೆ ಆಧಾರವೇನು? ಅಂದರೆ " ಅವನಿಂದಲೇ ಏಳು ಪ್ರಾಣಗಳು ಹುಟ್ಟಿವೆ " ಎಂಬ ಶ್ರುತಿಯೇ ಈ ಬಗ್ಗೆ ಪ್ರಮಾಣವಾಗಿದೆ. ಪರಲೋಕಕ್ಕೆ ಹೋಗುವಿಕೆ ಎಂಬ ವಿಶೇಷ ಒಂದಿರುವುದರಿಂದ ಐದು ಜ್ಞಾನೇಂದ್ರಿಯಗಳು, ವಾಗಿಂದ್ರಿಯ ಮತ್ತು ಅಂತಃಕರಣವೆಂದು ಇಂದ್ರಿಯಗಳು ಏಳುಮಾತ್ರವೇ ಇವೆ ಎಂದು ಹೇಳಿದರೆ ಹಸ್ತ ಪಾದ ಪಾಯು ಉಪಸ್ಥ ಎಂಬಿವೂ ಸಹ ಶರೀರದಲ್ಲಿ ಜೀವನೊಡನೆ ಸೇರಿರುವುದರಿಂದಲೂ, ಜೀವನು ಪರಲೋಕಕ್ಕೆ ಹೋದರೆ ಇವೂ ಸಹ ಅವನೊಡನೆ ಹೋಗುವುದರಿಂದಲೂ, " ಅವನು ಹೊರಟರೆ ಇವೂ ಹೊರಡುತ್ತವೆ. ಪ್ರಾಣವನ್ನು

ಅನುಸರಿಸಿ ಎಲ್ಲಾ ಇಂದ್ರಿಯಗಳೂ ಹೊರಡುತ್ತವೆ" ಎಂದು ಶ್ರುತಿಯಲ್ಲಿ ಎಲ್ಲಾ ಇಂದ್ರಿಯಗಳಿಗೂ ಜೀವನೊಡನೆ ಪರಲೋಕಗಮನವನ್ನು ಹೇಳಿರುವುದರಿಂದಲೂ ಇಂದ್ರಿಯಗಳು ಏಳೆಂಬುದು ಹೊಂದುವುದಿಲ್ಲ; ಇದರೆ ಇವು ಹನ್ನೊಂದು ಇರುವುವೆಂಬುದೇ ಯುಕ್ತವಾಗುತ್ತದೆ, ಅಂದರೆ ಹಾಗಲ್ಲ ಒಂದೇ ಅಂತಃಕರಣವು ಸಂಶಯಾತ್ಮಕವಾಗಿ ಮನಸ್ಸೆಂದೂ, ನಿಶ್ಚಯಾತ್ಮಕವಾಗಿ ಬುದ್ಧಿ ಎಂದೂ, ಅಭಿಮಾನಿಸುತ್ತ ಅಹಂಕಾರವೆಂದೂ, ಸ್ಮರಣಾತ್ಮಕವಾಗಿ ಚಿತ್ತವೆಂದೂ ಕರೆಯಲ್ಪಡುತ್ತದೆ. ಆದ್ದರಿಂದ ಸಂಖ್ಯೆ ಏಳಕ್ಕಿಂತಲೂ ಹೆಚ್ಚುವುದಿಲ್ಲ. ಇದು ಸೂತ್ರದ ಸೂಕ್ಷ್ಮಾರ್ಥ. ಶ್ರುತಿಯಲ್ಲಿ ಇಂದ್ರಿಯಗಳು ಏಳು ಎಂದು ಹೇಳಲಾಗಿದೆ. ಆದರೆ ಕೆಲವುಕಡೆ ಎಂಟು ಇಂದ್ರಿಯಗಳೆಂದು ಹೇಳಿದೆ. ಇಂದ್ರಿಯಗಳು ಜೀವಪಶುವನ್ನು ಬಂಧಿಸುತ್ತ ಅವನಿಗೆ ವ್ಯಾಮೋಹವನ್ನು ಹುಟ್ಟಿಸುತ್ತ ಅವನನ್ನು ಭೋಗ್ಯವಿಷಯಗಳ ಕಡೆಗೆ ಸೆಳೆಯುತ್ತಿರುವುದರಿಂದ ಅವು ಅತಿಗ್ರಹವೆನಿಸಿವೆ. "ಏಳು ಪ್ರಾಣಗಳು ಮತ್ತು ಪಾಯು ಉಪಾಸ್ಥವೆಂಬ ಎರಡು ಕರ್ಮೇಂದ್ರಿಯಗಳು" ಎಂದೂ, "ಪುರುಷನಲ್ಲಿ ಒಂಭತ್ತು ಪ್ರಾಣಗಳು ಹತ್ತನೆಯದು ನಾಭಿ ಎಂದೂ, ಹಾಗೆಯೇ ಹತ್ತು ಇಂದ್ರಿಯಗಳು ಹನ್ನೊಂದನೆಯದು ಮನಸ್ಸು" ಎಂದೂ ಶ್ರುತಿಯಲ್ಲಿ ಅನೇಕವಿಧವಾಗಿ ಹೇಳಲಾಗಿದೆ. ಕೆಲವುಕಡೆ 13 ಇಂದ್ರಿಯಗಳನ್ನು ಹೇಳಲಾಗಿದೆ. ಹಾಗಾದರೆ ಹನ್ನೊಂದು ಇಂದ್ರಿಯಗಳೆಂಬುದನ್ನು ವಿಚಾರ ಮಾಡಬೇಕಾಗಿದೆ. ಅವು ಯಾವು? ಅಷ್ಟೇ ಇವೆಯೇ? ಅಥವಾ ಏಳೇ ಇವೆಯೊ? ಹೀಗೆ ಶ್ರುತಿಯಲ್ಲಿ ವಿರೋಧ ಕಂಡುಬರುವುದರಿಂದ ಸಂಶಯಕ್ಕವಕಾಶವಿದೆ. "ಶ್ರುತಿಯಲ್ಲಿ "ಏಳು ರೂಪಗಳಲ್ಲಿಯೂ ಸಂಚರಿಸುತ್ತವೆ" ಎಂದು ಸಂಚಾರವನ್ನು ವಿಶೇಷವಾಗಿ ಹೇಳಿರುವುದರಿಂದಲೂ, ಜೀವನೊಡನೆ ಹುಟ್ಟುತ್ತಲೂ ಸಾಯುತ್ತಲೂ ಸಂಚರಿಸುತ್ತಲೂ ಇರುವುದರಿಂದಲೂ ಇಂದ್ರಿಯಗಳು ಏಳೆಂದೇ ತಿಳಿದುಬರುತ್ತದೆ. ಶ್ರುತಿಯಲ್ಲಿ ಬಂದಿರುವ "ಸಪ್ತ ಸಪ್ತ" ಎಂಬ ದ್ವಿರುಕ್ತಿಯು ಜೀವರ ವೈವಿಧ್ಯವನ್ನು ಅನುಸರಿಸಿಕೊಂಡುಬಂದಿದೆ. "ಐದು ಜ್ಞಾನೇಂದ್ರಿಯಗಳು ಯಾವಾಗ ಮನಸ್ಸಿನೊಡನೆ ಸ್ಥಿರವಾಗಿರುತ್ತವೆಯೋ, ಬುದ್ಧಿ ಯಾವಾಗ ಚಲಿಸುವುದಿಲ್ಲವೋ ಅಂತಹ ಸ್ಥಿತಿಯೇ ಪರಮೋತ್ತಮವಾದುದು" ಎಂಬಲ್ಲಿ ಶರೀರದೊಳಗೆ ಸಂಚರಿಸದೆ ಮೋಕ್ಷಕ್ಕಾಗಿ ಹೊರಡುವುದನ್ನೇ ಪರಮಗತಿ ಎಂದು ಕರೆಯಲಾಗಿದೆ. ಹೀಗೆ ಜೀವನೊಡನೆ ಜನನ ಮರಣಗಳಲ್ಲಿ ಏಳಕ್ಕೆ ಮಾತ್ರವೇ ಗಮನವನ್ನು ಹೇಳಿರುವುದರಿಂದ ಶ್ರುತಿಯಲ್ಲಿ ಜ್ಞಾನಗಳೆಂದರೆ ಜ್ಞಾನಸಾಧನಗಳಾದ ಕಿವಿ ಚರ್ಮ ಕಣ್ಣು ಮೂಗು ನಾಲಿಗೆ ಬುದ್ಧಿ ಮನಸ್ಸುಗಳಷ್ಟೆಂದೇ ತಿಳಿದುಬರುತ್ತದೆ. ಇವಲ್ಲದೆ ಬೇರೆಯಾದವು ಭೋಗ್ಯವಿಷಯಗಳನ್ನು ದೊರಕಿಸುವುದರಿಂದ ಅಷ್ಟಗ್ರಾಹಗಳೆನಿಸಿವೆ, "ಏಳು ಪ್ರಾಣಗಳು ಮತ್ತು ಪಾಯು ಉಪಸ್ಥಗಳೆರಡು" ಎಂದು ಮುಂತಾದ ಶ್ರುತಿಗಳಲ್ಲಿ ಅನೇಕವಿಧವಾಗಿ ಹೇಳಿದ್ದರೂ, ಹದಿನಾಲ್ಕು ಪ್ರಾಣಗಳನ್ನು ತಿಳಿಸುವ ವಾಕ್ಯಗಳಲ್ಲಿ ವಾಕ್, ಪಾಣಿ, ಪಾದ, ಪಾಯು ಉಪಸ್ಥ, ಅಹಂಕಾರ, ಚಿತ್ತ ಇವಿಷ್ಟೂ ಇಂದ್ರಿಯಗಳೆಂದೇ ತಿಳಿದುಬರುತ್ತದೆ.

"ಇವೆಲ್ಲವೂ ಜೀವನೊಡನೆ ಹೊರಡುತ್ತವೆ" ಎಂದು ಶ್ರುತಿಯಲ್ಲಿ ಹೇಳಿಲ್ಲವಾದ್ದರಿಂದಲೂ,ಜೀವನಿಗೆ ಉಪಕಾರಮಾಡಲಿಕ್ಕೆಮಾತ್ರವೇ ಇವನ್ನು ಹೇಳಿರುವುದರಿಂದಲೂ ಇವನ್ನು ಪ್ರಾಣಶಬ್ದದಿಂದ ಕರೆದಿರುವುದು ಗೌಣವೆನಿಸಿದೆ ಎಂದು ಆಕ್ಷೇಪ ಬಂದರೆ ಸೂತ್ರದಲ್ಲಿ ಸಮಾಧಾನವನ್ನು ಹೇಳಲಾಗಿದೆ. ಇಂದ್ರಿಯಗಳು ಏಳಲ್ಲ; ಆದರೆ ಹನ್ನೊಂದು ಇವೆ. ಯಾಕೆಂದರೆ ಹಸ್ತ ಮೊದಲಾದವೂ ಸಹ ಈ ಶರೀರದಲ್ಲಿಯೇ ಜೀವನಿಗೆ ಉಪಕಾರಮಾಡಲಿಕ್ಕಾಗಿಯೇ ನೆಲಸಿವೆ. ಕಿವಿ ಮೊದಲಾದವುಗಳಂತೆ ಹಸ್ತ ಮೊದಲಾದವುಗಳಿಗೂ ಕೊಡುವಿಕೆ ತೆಗೆದುಕೊಳ್ಳುವಿಕೆ ಮೊದಲಾದ ಕಾರ್ಯಗಳಿವೆ. ಆದ್ದರಿಂದಲೇ ಹಸ್ತಮೊದಲಾದವನ್ನು ಇಲ್ಲವೆಂದು ಹೇಳಲಾಗುವುದಿಲ್ಲ. ಅಂತಃಕರಣದ ವೃತ್ತಿಭೇದದಿಂದ ಮನಸ್ಸನ್ನೇ ಬುದ್ಧಿ ಅಹಂಕಾರ ಮತ್ತು ಚಿತ್ತಗಳೆಂದ ವ್ಯವಹರಿಸಲಾಗಿದೆ. ಆದ್ದರಿಂದ ಹನ್ನೊಂದು ಇಂದ್ರಿಯಗಳು ಪ್ರಸಿದ್ಧವಾಗಿವೆ.

**ಅತಃ "ದಶನೇ ಪುರುಷೇ ಪ್ರಾಣಾ ಆತ್ಮೈಕಾದಶ" ಇತ್ಯತ್ರಾತ್ಮಶಬ್ದೇನ ಮನ ಆಧೀಯತೇ."ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ।ತೈಜಸಾನೀಂದ್ರಿಯಾಣ್ಯಾಹುರ್ದೇವಾ ವೈಕಾರಿಕಾದಶ॥"** "ಏಕಾದಶಂ ಮನಶ್ಚಾತ್ರ" ಇತ್ಯಾದಿಶ್ರುತಿಸ್ಮೃತಿಶ್ರುತಸಂಖ್ಯಾ ಅಧಿಕಾಃ. ಅಧಿಕಸಂಖ್ಯಾವಾದಕಾಃ ಮನೋವೃತ್ತಿಭೇದಾಭಿಪ್ರಾಯಾಃ. ನೂನಂ ವ್ಯಪದೇಶಾಸ್ತು ತತ್ರತತ್ರ ವಿವಕ್ಷಿತಗಮನಾದಿಕಾರ್ಯವಿಶೇಷಪ್ರಯುಕ್ತಾಃ. ಕಿಂಚಾತ್ರ ತುಶಬ್ದೇನ ಪ್ರಾಣಾನಾಂ ಸಪ್ತಾತ್ವನಿರಾಸಃ. ಯತೋ "ಹಸ್ತೋ ವೈ ಗ್ರಹಃ" ಇತ್ಯಾದಿನಾ ಹಸ್ತಾದಿವ್ಯತಿರಿಕ್ತಾಃ ಪ್ರಾಣಾಃ ಶ್ರೂಯಂತೇ,ಸಪ್ತತ್ವಸಂಖ್ಯಾಯಾಮಸಂಭಾವಿತಾಂತರ್ಭಾವೇ ಸಪ್ತತ್ವಾದಿವ್ಯತಿರೇಕಸ್ಥಿತಿಂ ಸಪ್ತತ್ವೇಂದ್ರಿಯನಿಷ್ಠೈಕಾದಶತ್ವಸಂಖ್ಯಾಯಾಮಪ್ಯಂತರ್ಭಾವಯಿತುಂ ಶಕ್ಯತೇ. ನ್ಯೂನಸಂಖ್ಯಾಯಾಃ ಅಧಿಕಸಂಖ್ಯಾಯಾಮಂತರ್ಭಾವಸಂಭವಾದತೋ ನೈವಂ ಮಂತವ್ಯಂ. ಸಪ್ತೈವ ಪ್ರಾಣಾ ಇತಿ ಸೂತ್ರಾರ್ಥಃ. ಯದ್ಯಪಿ ಜ್ಞಾನೇಂದ್ರಿಯಪಂಚಕಂ ಕರ್ಮೇಂದ್ರಿಯಪಂಚಕಂ ಮನಶ್ಚೈಕಮಿತ್ಯೇಕಾದಶಸಂಖ್ಯಾಮಾಲಿಕಾ ಶ್ರೂಯತೇ. ತಥಾಪಿ ತಯೋರಂತಃಕರಣಪ್ರಭೇದತ್ವಾನ್ನಾಧಿಕಸಂಖ್ಯಾಪಾದಕತ್ವಮಿತ್ಯೇಕಾದಶೇಂದ್ರಿಯಾಣೀತಿ ನಿರವದ್ಯಂ. ಕಿಂತು ಪ್ರಾಣೋಪದೇಶೇ ಸ್ಥಾನಭೇದಮಾತ್ರೇಣ ಚತುರ್ಣಾಮೇವೇಂದ್ರಿಯಾಣಾಂ ಸಪ್ತತ್ವಮಿತಿ ನ ತತ್ತ್ವವಿರೋಧಃ. "ನವ ವೈ ಪುರುಷೇ ಪ್ರಾಣಾ ನಾಭಿರ್ದಶಮೀ" ಇತಿ ವಾಕ್ಯಂ ಪುರುಷಾಕಾರದೇಹಾಭಿಪ್ರಾಯಂ ನ ಪ್ರಾಣಾಭಿಪ್ರಾಯಂ ಇತ್ಯವಿರೋಧಸ್ಸಿದ್ಧಃ. ನನ್ವಸ್ಯ ಸೂತ್ರಸ್ಯ ಪೂರ್ವೋತ್ತರವ್ಯಾಖ್ಯಾನಮಸಂಗತಂ. "ಸಪ್ತ ಪ್ರಾಣಾಃ ಪ್ರಭವಂತಿ" ಇತಿ ಘ್ರಾಣರಸನಚಕ್ಷುಶ್ಶ್ರೋತ್ರತ್ವಙ್ಮನೋವಾಚಾಂ ಸಪ್ತತ್ವಾವಗತೇಃ,ಶೇಷಾಣಾಂ ವಿಶೇಷಿತ

ತ್ವಾತ್ ಇತಿ ಹೇತುದ್ವಯವೈಯಧಿಕರಣ್ಯೇನ ಸೂತ್ರೇ ಚಕಾರಾನುಪಪತ್ತೇಃ. "ಯೋ ವೈ ಶೀರ್ಷಣ್ಯಾಸ್ಸಪ್ತ ತೇ ಪ್ರಾಣಾಃ ನೇತರಃ" ಇತ್ಯತ್ರ ಪರಿಸಂಖ್ಯಾ ಇತಿ ಚ. ಅತ ಏವ ತದುತ್ತರವಾಕ್ಯವ್ಯಾಖ್ಯಾನಮಪ್ಯಸಂಗತಮಿತಿ ಚೇತ್ತರ್ಹಿ ಅನ್ಯಥಾ ಪೂರ್ವೋತ್ತರವಾಕ್ಯದ್ವಯಂ ವ್ಯಾಖ್ಯಾಸ್ಯಾಮಃ. ಮರಣಸಮಯೇ ಯೇಷಾಂ ಸಹಗಮನಂ ತೇಷಾಮೇವ ಭೋಗಸಾಧನತ್ವಾದಿಂದ್ರಿಯತ್ವಂ. ತಥಾಚ "ತೇ ಮುಖ್ಯಪ್ರಾಣಮನೂತ್ಕ್ರಾಮಂತಸ್ಸರ್ವೇ ಪ್ರಾಣಾ ಅನೂತ್ಕ್ರಾಮಂತಿ" ಇತಿ. "ಘ್ರಾಣಾದೀನಾಂ ಸಪ್ತಾನಾಮೇವ ಗತಿಃ" ಇತಿ ಜೀವೇನ ಸಹ ಗಮನಶ್ರವಣಾತ್ಸಪ್ತೈವೇಂದ್ರಿಯಾಣಿ. ನನು ಸರ್ವಶಬ್ದಶ್ರವಣಾತ್ಕಥಂ ಸಪ್ತಾನಾಮೇವ ಗತಿಶ್ರವಣಂ ಇತಿ ಚೇತ್ತತ್ರಾಹ, ವಿಶೇಷಿತತ್ವಾಚ್ಚೇತಿ. ಯತ್ರೈವ ಸ ಚಾಕ್ಷುಷಃ ಪುರುಷಃ ಪರಾಙ್ ಪರ್ಯಾವರ್ತತೇ ಅಥಾರೂಪಜ್ಞೋ ಭವತ್ಯೇಕೋ ಭವತಿ; ತದಾ ನ ಪಶ್ಯತಿ, ನ ಜಿಘ್ರತಿ, ನ ಶಯತಿ, ನ ವದತಿ, ನ ಶೃಣೋತಿ, ನ ಮನುತೇ, ನ ಸ್ಪೃಶತೀತ್ಯಾಹುರಿತಿ, ಚಕ್ಷುರಾದೀನಾಂ ಸಪ್ತಾನಾಮೇವ ಪ್ರಾಕೃತಾನಾಂ ವಿಶೇಷಿತತ್ವಾಚ್ಚ. ಸರ್ವಶಬ್ದಃ ಪ್ರಾಕೃತಾನಾಂ "ಸರ್ವೇ ಬ್ರಾಹ್ಮಣಾಃ ಭೋಜಯಿತವ್ಯಾಃ" ಇತ್ಯತ್ರ ಸರ್ವಶಬ್ದೋ ಯಥಾ ವಿನಿಮಂತ್ರಿತಬ್ರಾಹ್ಮಣಪರಸ್ತದ್ವದಿತಿ ಶಂಕಾನಿರಾಸಾರ್ಥಃ. ಯತ್ರ ಸ್ವಪ್ನವಸ್ಥಾಯಾಂ ಚಕ್ಷುರನುಷ್ಠಾತೃದೇಶಃ, ಸ ಏಷಶ್ಚಾಕ್ಷುಷಶಬ್ದವಾಚ್ಯಃ. ಪುರುಷೋ ಯದಾ ರೂಪಾದಿವಿಷಯವ್ಯಾಪ್ತಿಂ ವಿಹಾಯ ವರ್ತತೇ ತದಾ ನಾಮ ರೂಪಜ್ಞೋ ಭವತಿ. "ಹೃದಯಚಕ್ಷುಷೋರೇಕೋ ಭವತಿ, ಪಾರ್ಶ್ವಸ್ಥಾಂಶ್ಚ ನಾಯಂ ಪಶ್ಯತೀತ್ಯಾಹುರಿತಿ ಶ್ರುತ್ಯರ್ಥಃ. ತದುತ್ತರವಾಕ್ಯಾರ್ಥಸ್ತು, ಸಪ್ತಭ್ಯೋಽತಿರಿಕ್ತಾ ಹಸ್ತಾದಯೋಽಪಿ ಬಂಧಕತ್ವೇನ ಶ್ರೂಯಂತೇ. "ಹಸ್ತೋ ವೈ ಗ್ರಹಃ" ಇತ್ಯಾದಿನಾ ಗ್ರಾಹಕತ್ವಂ ಬಂಧಕತ್ವಂ ಚ ಹಸ್ತಾದೀನಾಂ ಸಹಗಮನಂ ವಿನಾ ನ ಸಂಭವತಿ. "ಸರ್ವೇ ಪ್ರಾಣಾಃ ಅನುತ್ಕ್ರಾಮಂತಿ" ಇತಿ ವಿಶೇಷತಃ ಸರ್ವೇಂದ್ರಿಯಾಣಾಮುತ್ಕ್ರಾಂತಿಶ್ರವಣಾಚ್ಚ ಭವಂತ್ಯೇಕಾದಶೋತ್ಕ್ರಾಂತಿಮಂತಸ್ಸಂತಃ ಪ್ರಾಣಾಃ. ನಚ ಸರ್ವಶಬ್ದಸ್ಯ ಪ್ರಕೃತವಿಶೇಷಿತಸಪ್ತಪ್ರಾಣಪರತ್ವಂ, ಕಿಂತು ಕರಣಾಕೃತೇರ್ಬಲೀಯಸ್ತ್ವಾತ್ ಸರ್ವಕರಣಾಕೃತಿಪರತ್ವಂ. "ಸರ್ವೇ ಬ್ರಾಹ್ಮಣಾಃ ಭೋಜಯಿತವ್ಯಾಃ" ಇತ್ಯತ್ರ ನಾನ್ಯಾನಾಗತಾನಿಮಂತ್ರಿತಬ್ರಾಹ್ಮಣಪರತ್ವಂ ಸರ್ವಶಬ್ದಶ್ರುತೇರಿತಿ ನಿರ್ದಿಶ್ಯತೇ. ಪೂರ್ವವದಿತಿ ತಸ್ಮಾದೇಕಾದಶೈವೋತ್ಕ್ರಾಮಂತ್ಯಂತಃ ಪ್ರಾಣಾ ಇತಿ ಸಿದ್ಧಂ.

"ಪುರುಷನಲ್ಲಿ ಹತ್ತು ಪ್ರಾಣಗಳು ಇವೆ; ಆತ್ಮನು ಹನ್ನೊಂದನೆಯವನು"ಎಂಬ ಶ್ರುತಿಯಲ್ಲಿ ಆತ್ಮಶಬ್ದವು ಮನಸ್ಸನ್ನೇ ತಿಳಿಸುತ್ತದೆ. "ಇಂದ್ರಿಯಗಳು ಹತ್ತು ಮತ್ತು ಮನಸ್ಸು, ಆದರೆ ಇಂದ್ರಿಯವಿಷಯಗಳು ಐದು," "ಎಲ್ಲಾ ಇಂದ್ರಿಯಗಳೂ ತೈಜಸ ವೆನಿಸಿವೆ. ಅವುಗಳಲ್ಲಿ ಹತ್ತು ವೈಕಾರಿಕಗಳೆನಿಸಿ ಹನ್ನೊಂದನೆಯದು ಮನಸ್ಸೆನಿಸಿದೆ" ಹೀಗೆ ಶ್ರುತಿಸ್ಮೃತಿಗಳಲ್ಲಿ ಇಂದ್ರಿಯಗಳ ಸಂಖ್ಯೆಯನ್ನು ತಿಳಿಸಲಾಗಿದೆ. ಇವಕ್ಕಿಂತಲೂ ಹೆಚ್ಚಿನ ಸಂಖ್ಯೆ ಮನಸ್ಸಿನ ವೃತ್ತಿಭೇದಗಳಿಗೆ ಅನ್ವಯಿಸುತ್ತದೆ. ಈ ಬಗೆಯ ವ್ಯಪದೇಶ ಗಳೆಲ್ಲವೂ ಅಲ್ಲಲ್ಲಿ ಹೇಳಿರುವ ಗಮನವೆಂಬ ಕಾರ್ಯವನ್ನೇ ಅವಲಂಬಿಸಿವೆ. "ಹಸ್ತಾದ ಯಸ್ತು" ಎಂಬಲ್ಲಿ ತು ಶಬ್ದವು ಇಂದ್ರಿಯಗಳು ಏಳೆಂಬುದನ್ನು ನಿರಾಕರಿಸ್ಸುತ್ತದೆ; ಯಾಕೆಂದರೆ "ಹಸ್ತವೂ ಒಂದು ಗ್ರಹ" ಎಂಬಲ್ಲಿ ಹಸ್ತಕ್ಕಿಂತ ಬೇರೆಯಾದ ಇಂದ್ರಿ ಯಗಳನ್ನು ಹೇಳಲಾಗಿದೆ. ಏಳು ಎಂಬ ಸಂಖ್ಯೆ ಹೊಂದುವುದಿಲ್ಲವೆಂದಮೇಲೆ ಏಳ ಕ್ಕಿಂತಲೂ ಹೆಚ್ಚಿನ ಇಂದ್ರಿಯಗಳನ್ನು ಒಪ್ಪಿದರೆ ಹನ್ನೊಂದು ಇಂದ್ರಿಯಗಳಲ್ಲಿ ಏಳನ್ನು ಅಡಗಿಸಬಹುದಾದ್ದರಿಂದ ಕಡಮೆಸಂಖ್ಯೆಗಿಂತಲು ಹೆಚ್ಚಿನಸಂಖ್ಯೆಯನ್ನೇ ಒಪ್ಪಬೇಕು. ಆದ್ದರಿಂದ ಇಂದ್ರಿಯಗಳು ಏಳೇ ಎಂಬುದು ಸರಿಯಲ್ಲ. ಐದು ಜ್ಞಾನೇಂದ್ರಿಯಗಳು, ಐದು ಕರ್ಮೇಂದ್ರಿಯಗಳು, ಮನಸ್ಸು ಹೀಗೆ ಹನ್ನೊಂದು ಇಂದ್ರಿಯಗಳಲ್ಲಿ ಕೆಲವರು ಮನಸ್ಸಿನ ಸ್ಥಾನದಲ್ಲಿ ಹೃದಯ, ಅಹಂಕಾರ, ಪ್ರಾಣವನ್ನು ಸೇರಿಸಿ ಹದಿಮೂರು ಇಂದ್ರಿಯಗಳನ್ನು ಹೇಳುತ್ತಾರೆ. ಆದರೂ ಅವು ಅಂತಃಕರಣದ ಪ್ರಭೇದಗಳಾದ್ದರಿಂದ ಸಂಖ್ಯೆ ಹೆಚ್ಚಾಗಿದ್ದರೂ ಇಂದ್ರಿಯಗಳು ಹನ್ನೊಂದೆಂಬುದೇ ಯುಕ್ತವಾಗುತ್ತದೆ. "ಸಪ್ತ ವೈ ಶೀರ್ಷಣ್ಯಾಃ ಪ್ರಾಣಾಃ" ಎಂಬಲ್ಲಿ "ಸಪ್ತ" ಎಂಬ ಪದವು ಇಂದ್ರಿಯಗಳ ಸಂಖ್ಯೆಯನ್ನು ಹೇಳಿಲ್ಲ; ಆದರೆ ಪ್ರಾಣವೊಂದನ್ನೇ ಅಲ್ಲಿ ಹೇಳಿರುವುದರಿಂದ ಕೇವಲ ಸ್ಥಾನಭೇದದಿಂದ ನಾಲ್ಕು ಇಂದ್ರಿಯಗಳೇ ಏಳು ಸ್ಥಾನಗಳಲ್ಲಿ ಓಡಾಡುತ್ತ ಏಳು ಇಂದ್ರಿಯಗಳೆನಿಸಿವೆ ಎಂಬುದನ್ನುಮಾತ್ರವೇ ಅದು ತಿಳಿಸುತ್ತದೆ. ಆದ್ದರಿಂದ ಯಾವ ವಿರೋಧಕ್ಕೂ ಅವಕಾಶವಿಲ್ಲ. "ಒಂಬತ್ತೇ ಪ್ರಾಣಗಳಿವೆ, ಹತ್ತನೆಯದು ನಾಭಿ"ಎಂಬ ವಾಕ್ಯವು ಪುರುಷಾಕಾರದ ದೇಹದೃಷ್ಟಿಯಿಂದ ಬಂದಿದೆಯೇ ಹೊರತು ಪ್ರಾಣದೃಷ್ಟಿ ಯಿಂದ ಬಂದಿಲ್ಲ. ಆದ್ದರಿಂದ ಏನೂ ವಿರೋಧವಿಲ್ಲ. ಆದರೂ ಈ ಸೂತ್ರದ ಹಿಂದು ಮುಂದಿನ ವಾಕ್ಯಗಳ ಈ ವಿವರಣವು ಇಲ್ಲಿ ಹೊಂದುವುದಿಲ್ಲ, ಯಾಕೆಂದರೆ "ಸಪ್ತ ಪ್ರಾಣಾಃ ಪ್ರಭವಂತಿ" ಎಂಬಲ್ಲಿ ಮೂಗು, ನಾಲಿಗೆ, ಕಣ್ಣು, ಕಿವಿ, ಚರ್ಮ, ಮನಸ್ಸು, ವಾಕ್ಕು ಇವೇಳನ್ನು ಇಂದ್ರಿಯಗಳೆಂದು ಹೇಳಿರುವ ಹೇತುವಿಗೂ, ಅವಕ್ಕೆ "ಜ್ಞಾನಾನಿ" ಎಂಬ ವಿಶೇಷಣವನ್ನು ಕೊಟ್ಟಿರುವುದಕ್ಕೂ ಪರಸ್ಪರ ಹೊಂದಿಕೆಯಾಗುವುದಿಲ್ಲ. "ಯಾವುದು ಪ್ರಧಾನವೋ ಅವು ಏಳೇ ಹೊರತು ಹೆಚ್ಚಾಗಿಲ್ಲ" ಎಂಬ ವಿವರಣವೂ ಸರಿಯಲ್ಲ. ಹೀಗೆಯೇ ಮುಂದಿನ ವಾಕ್ಯವಿವರಣವೂ ಹೊಂದುವುದಿಲ್ಲವಾದ್ದರಿಂದ ಹಿಂದಿನ ಮುಂದಿನ ವಾಕ್ಯಗಳೆರಡನ್ನೂ ಬೇರೆರೀತಿಯಲ್ಲಿ ವಿವರಿಸಲಾಗಿದೆ. ಮರಣ ಕಾಲದಲ್ಲಿ ಯಾವುದು ಆತ್ಮನಜೊತೆಯಲ್ಲೇ ಹೊರಟು ಅವನ ಭೋಗಕ್ಕೆ ಸಾಧನ

ವಾಗುವುದೋ ಅದು ಇಂದ್ರಿಯವೆನಿಸುತ್ತದೆ. ಆ ಇಂದ್ರಿಯಗಳು ಮುಖ್ಯಪ್ರಾಣವನ್ನೇ ಅನುಸರಿಸುತ್ತವೆ. ಆದರೆ ಕಿವಿ ಮೊದಲಾದ ಏಳಕ್ಕೆ ಮಾತ್ರವೇ ಈಬಗೆಯ ಗಮನ ಹೊಂದುತ್ತದೆ. ಹೀಗೆ ಜೀವನ ಜೊತೆಯಲ್ಲೇ ಹೋಗುವುದರಿಂದಲೇ ಇವು ಏಳೇ ಇಂದ್ರಿಯಗಳೆನಿಸಿವೆ. ಶ್ರುತಿಯಲ್ಲಿ "ಸರ್ವ" ಎಂಬ ಶಬ್ದವಿರುವುದರಿಂದ ಏಳಕ್ಕೆ ಮಾತ್ರವೇ ಹೇಗೆ ಗಮನ ಸಂಭವಿಸುತ್ತದೆ ಎಂದು ಕೇಳಿದರೆ "ವಿಶೇಷಿತತ್ವಾಚ್ಚ" ಎಂಬಲ್ಲಿ ಇದಕ್ಕೆ ಸಮಾಧಾನವನ್ನು ಹೇಳಲಾಗಿದೆ. "ಕಣ್ಣಿನಿಂದ ನೋಡುತ್ತಿರುವ ಜೀವನು ಒಮ್ಮೆ ಹಿಂದಕ್ಕೆತಿರುಗಿದರೆ ಯಾವ ರೂಪವನ್ನೂ ಗಮನಿಸದೆ ಒಂದೇ ಬಗೆಯಾಗುವನು; ಆಗ ಅವನು ನೋಡುವುದೂ ಇಲ್ಲ; ಮೂಸಿಸುವುದೂ ಇಲ್ಲ, ಮುಲಗುವುದೂ ಇಲ್ಲ; ಮಾತನಾಡುವುದೂ ಇಲ್ಲ; ಕೇಳುವುದೂ ಇಲ್ಲ; ತಿಳಿಯುವುದೂ ಇಲ್ಲ; ಹೀಗೆ ಇಲ್ಲಿ ನೋಟ ಮೊದಲಾದ ಏಳು ಬಗೆಯ ಪ್ರಾಕೃತವ್ಯಾಪಾರಗಳನ್ನೇ ಪ್ರಧಾನವಾಗಿ ಹೇಳಿದ್ದರಿಂದ ಸರ್ವಶಬ್ದವು "ಎಲ್ಲಾ ಬ್ರಾಹ್ಮಣರಿಗೂ ಊಟಮಾಡಿಸು" ಎಂಬಲ್ಲಿ ಆಹ್ವಾನಿಸಿದವರಿಗೆ ಮಾತ್ರವೇ ಅನ್ವಯಿಸುವಂತೆ ಏಳುಇಂದ್ರಿಯಗಳಿಗೆ ಮಾತ್ರವೇ ಅನ್ವಯಿಸುತ್ತದೆ ಎಂಬ ಅರ್ಥವನ್ನು ಸ್ಪಷ್ಟಪಡಿಸುತ್ತದೆ. ಹಾಗಾದರೆ ಜೀವನಿಗೆ ಎಲ್ಲಾ ಕಾಲದಲ್ಲೂ ಎಲ್ಲಾ ಬಗೆಯ ಜ್ಞಾನವೂ ಹುಟ್ಟಲೆಂಬ ಅವ್ಯವಸ್ಥೆ ಯುಂಟಾದರೆ ಅವನಿಗೆ ಕಣ್ಣೊಂದೇ ಕಾರ್ಯಕ್ಷೇತ್ರವೆನಿಸುವಾಗ ಅವನು ಚಾಕ್ಷುಷನೆನಿಸುತ್ತಾನೆಂದು ಹೇಳಬೇಕಾಗುತ್ತದೆ. ಇತರ ವಿಷಯಗಳನ್ನು ತೊರೆದು ರೂಪ ಒಂದನ್ನೇ ಗಮನಿಸುವಾಗ ಅವನು ರೂಪವನ್ನೇ ತಿಳಿಯುತ್ತಾನೆ. ಆಗ ಅವನು ರೂಪಜ್ಞನೆನಿಸುತ್ತಾನೆ. ಆ ಕಾಲದಲ್ಲಿ ಅವನ ಹೃದಯ ಮತ್ತು ಕಣ್ಣುಗಳೆರಡೂ ಒಂದೇ ಬಗೆಯಾಗಿರುವುದರಿಂದ ಪಕ್ಕದಲ್ಲಿರುವವರನ್ನೂ ಅವನು ಕಾಣುವುದಿಲ್ಲ. ಇದು ಶ್ರುತಿಯ ಅರ್ಥ. ಮುಂದಿನ ವಾಕ್ಯಕ್ಕೆ "ಏಳಕ್ಕಿಂತಲೂ ಹೆಚ್ಚಿನ ಹಸ್ತಾದಿಗಳೂ ಸಹ ಬಂಧಕವೆನಿಸಿವೆ" ಎಂದು ವಿವರಣ ಮಾಡಬಹುದು. "ಹಸ್ತವೇ ಗ್ರಹ" ಎಂಬಲ್ಲಿ ಹಸ್ತಾದಿಗಳು ಗ್ರಾಹಕವೂ ಬಂಧಕವೂ ಆಗಬೇಕಾದರೆ ಅವು ಜೀವನೊಡನೆ ಹೊರಟರೆ ಮಾತ್ರವೇ ಸಾಧ್ಯವಾದೀತು. "ಎಲ್ಲಾಪ್ರಾಣಗಳೂ ಅವನನ್ನು ಅನುಸರಿಸಿ ಹೊರಡುತ್ತವೆ" ಎಂದು ಶ್ರುತಿಯಲ್ಲಿ ಎಲ್ಲಾ ಇಂದ್ರಿಯಗಳಿಗೂ ಉತ್ಕ್ರಮಣವನ್ನು ಹೇಳಿದ್ದರಿಂದ ಹನ್ನೊಂದಕ್ಕೂ ಉತ್ಕ್ರಮಣವು ಸಹಜವಾಗಿ ಅನ್ವಯಿಸುತ್ತದೆ. ಆದ್ದರಿಂದ ಅವೆಲ್ಲವೂ ಇಂದ್ರಿಯಗಳೆನಿಸಿವೆ. ಹೀಗೆ ಸರ್ವಪದವು ಕೇವಲ ಏಳಕ್ಕೆ ಮಾತ್ರವೇ ಅನ್ವಯಿಸದೆ ಇಂದ್ರಿಯಗಳಂತೆ ಆಕಾರವಿರುವವೆಲ್ಲಕ್ಕೂ ಅನ್ವಯಿಸುತ್ತದೆ. "ಎಲ್ಲಾ ಬ್ರಾಹ್ಮಣರನ್ನೂ ಭೋಜನಮಾಡಿಸಬೇಕು" ಎಂಬಲ್ಲಿ ಸರ್ವಪದವು ಆಹ್ವಾನಿಸದಿರುವವರನ್ನು ಬಿಟ್ಟು ಆಹ್ವಾನಿತರಾದ ಎಲ್ಲಾ ಬ್ರಾಹ್ಮಣರಿಗೂ ಅನ್ವಯಿಸುವಂತೆ ಇಲ್ಲಿಯೂ ಸರ್ವಪದವು ಎಲ್ಲಾ ಇಂದ್ರಿಯಗಳಿಗೂ ಅನ್ವಯಿಸುತ್ತದೆ. ಆದ್ದರಿಂದ ಹಿಂದೆ ಹೇಳಿದಂತೆ ಇಂದ್ರಿಯಗಳು ಅಂತಃ ಪ್ರಾಣಗಳೆನಿಸಿದೆ. ಅಲ್ಲಿಗೆ ಹನ್ನೊಂದು ಇಂದ್ರಿಯಗಳು ಜೀವನೊಡನೆ ಹೊರಡುತ್ತವೆ ಎಂದು ಸಿದ್ಧವಾಯಿತು.

ನನ್ವಿಂದ್ರಿಯಾಣಾಮುತ್ಕ್ರಾಂತಿರ್ನ ಸಂಭವತಿ, ತೇಷಾಮಪರಿಚ್ಛಿನ್ನಾಹಂಕಾರಜನ್ಯತ್ವೇನ ವಿಭುತ್ವಾದಿತ್ಯಾಕ್ಷೇಪೇ ತನ್ನಿರಾಕರಣಮಧಿಕರಣಾಂತರೇಣ ಕರೋತಿ. ಪ್ರಾಣಾಣುತ್ವಾಧಿಕರಣಂ || ೩ || ಅಣವಶ್ಚ || ೭ || "ಇಮೇ ಪ್ರಾಣಾ ಅಣವಃ", "ಪರಿಚ್ಛಿನ್ನಾ ಇಂದ್ರಿಯಾಣಿ ಚ" ಇತಿ ಶ್ರುತೌ ಪ್ರಾಣೇಂದ್ರಿಯಾಣಾಮಣುತ್ವವ್ಯಪದೇಶಾತ್ "ತ ಏತೇ ಸರ್ವ ಏವ ಸಮಾಸ್ಸರ್ವೇಽನಂತಾಃ" ಇತ್ಯಾನಂತ್ಯಶ್ರವಣಾದ್ವಿಭುತ್ವಂ. ತಸ್ಮಾದಣುತ್ವಂ ವಿಭುತ್ವಂ ವೇತಿ ಸಂದಿಹ್ಯತೇ. ನಚೇಂದ್ರಿಯಾಣಾಮಣುತ್ವಮುಪಪನ್ನಂ. ಇಂದ್ರಿಯಾಣಾಮಣುತ್ವೇ ಶರೀರಗತಸ್ಪರ್ಶೇಂದ್ರಿಯಸ್ಯ ಸರ್ವಶರೀರಗತಶೀತೋಷ್ಣಮೃದುತ್ವಾದಿಸ್ಪರ್ಶಗ್ರಾಹಕತ್ವಾಯೋಗಾತ್ ಪೂರ್ವೋಕ್ತಶ್ರುತಿವಿರೋಧಾಚ್ಚ ವಿಭುತ್ವಂ ಯುಕ್ತಮಿತಿ ಚೇದಭಿಧೀಯತೇ. ಅಣವಶ್ಚೇತಿ ಸ್ವಭಾವತಃ ಇಂದ್ರಿಯಾಣಾಮಣುತ್ವೇಽಪಿ ಚಕಾರೇಣ ಕಾರ್ಯಾವಸ್ಥಾಯಾಮಪ್ಯಣುತ್ವಂ ನಿರ್ದಿಷ್ಟಂ. "ಆತ್ಮಾ ಮನಸಾ ಸಂಯುಜ್ಯತೇ, ಮನ ಇಂದ್ರಿಯೇಣ, ಇಂದ್ರಿಯಮರ್ಥೇನ, ತತಃ ಪ್ರತ್ಯಕ್ಷಂ" ಇತಿ ಸರ್ವೇಷಾಮಿಂದ್ರಿಯಾಣಾಂ ಸೂಕ್ಷ್ಮತ್ವೇಽಪಿ ಪದಾರ್ಥಸನ್ನಿಕರ್ಷತಯಾ ವ್ಯಾಪಕತ್ವಮಪಿ ಗಮ್ಯತೇ, ನ ತಸ್ಮಾಚ್ಛ್ರುತಿವಿರೋಧಃ. ಇಂದ್ರಿಯಾಣಾಂ ವಿಭುತ್ವಮಾತ್ರತ್ವೇ ಕಾಶಿಸ್ಥವಿಶ್ವೇಶ್ವರದರ್ಶನಸ್ಪರ್ಶೌ ಸೇತುವಾಸಿನಾಮಪಿ ಸ್ಯಾತಾಂ. ಉತ "ಪ್ರಾಣಮನೂತ್ಕ್ರಾಮಂತಂ ಸರ್ವೇ ಪ್ರಾಣಾ ಅನೂತ್ಕ್ರಾಮಂತಿ" ಇತ್ಯುತ್ಕ್ರಾಂತ್ಯಾದಿಶ್ರವಣಾತ್ ಪರಿಮಿತತ್ವೇನ ನಿರ್ದೇಶಾದುತ್ಕ್ರಾಂತ್ಯಾದಿಷು ಪಾರ್ಶ್ವಸ್ಥೈರನುಪಲಭ್ಯಮಾನತ್ವಾತ್, ಶ್ರೋತ್ರೇಂದ್ರಿಯಾಣಾಂ ಪ್ರದೇಶಾಂತರಶಬ್ದಗ್ರಹಣಸಾಮರ್ಥ್ಯಾಭಾವಾತ್, ಶತಪತ್ರಸೂಚೀನ್ಯಾಯವತ್ ಶಬ್ದಾದಿವಿಷಯೇಷು ಕ್ಷಿಪ್ರಗತ್ಯನುಭವಾಚ್ಚ ಪ್ರಾಣೇಂದ್ರಿಯಾಣಾಮಣುತ್ವಮೇವೇತಿ ನಿಶ್ಚೀಯತೇ. ಅನಂತಶ್ರುತಿಸ್ತು "ಅಥ ಯೋ ಹ ವೈತಾನಾನಾಂದಾನುಪಾಸ್ತೇ" ಇತ್ಯುಪಾಸನಶ್ರವಣಾದುಪಾಸ್ಯಪ್ರಾಣವಿಶೇಷಭೂತಕಾರ್ಯಬಾಹುಳ್ಯಾಭಿಪ್ರಾಯಾ.

ಈ ಇಂದ್ರಿಯಗಳು ವ್ಯಾಪಕವಾದ ಅಹಂಕಾರದಿಂದ ಹುಟ್ಟಿರುವುದರಿಂದ ವಿಭುವೆನಿಸಿವೆ. ಆದ್ದರಿಂದ ಅವುಗಳಿಗೆ ಉತ್ಕ್ರಮಣವೇ ಸಂಭವಿಸುವುದಿಲ್ಲ ಎಂದಾಕ್ಷೇಪ ಬಂದರೆ ಅದನ್ನು ಮುಂದಿನ ಅಧಿಕರಣದಲ್ಲಿ ನಿರಾಕರಿಸುತ್ತಾನೆ. "ಈ ಪ್ರಾಣಗಳು ಅಣುವಾಗಿವೆ. ಇಂದ್ರಿಯಗಳು ಸಣ್ಣವು" ಎಂದು ಶ್ರುತಿಯಲ್ಲಿ ಪ್ರಾಣೇಂದ್ರಿಯಗಳನ್ನು ಅಣುವೆಂದು ತಿಳಿಸಿದೆ. "ಆ ಇವೆಲ್ಲವೂ ಸಮ ಮತ್ತು ಅನಂತಗಳು" ಎಂಬ ಶ್ರುತಿಯಲ್ಲಿ ಅವನ್ನು ಅನಂತವಾದ್ದರಿಂದ ವಿಭುವೆಂದೂ ಹೇಳಿದೆ. ಆದ್ದರಿಂದ ಇಂದ್ರಿಯಗಳು ಅಣುವೋ ವಿಭುವೋ ಎಂಬ ಸಂದೇಹವುಂಟಾಗುತ್ತದೆ. ಆದರೆ ಇಂದ್ರಿ

ಯಗಳು ಅಣುವಾಗಲಾರವು, ಅವು ಅಣುವಾದರೆ, ಶರೀರದಲ್ಲಿ ಒಂದುಕಡೆ ಇರುವ ಇಂದ್ರಿಯಕ್ಕೆ ಅಲ್ಲಿಯೇ ಎಲ್ಲಾ ಕಡೆಯೂ ಸಂಭವಿಸುವ ಶೀತ, ಉಷ್ಣ, ಮೃದು ಮೊದಲಾದ ಸ್ಪರ್ಶವನ್ನು ತಿಳಿಯಲಿಕ್ಕಾಗದೇ ಹೋಗುತ್ತದೆ. ಇದೂ ಅಲ್ಲದೆ, ಹಿಂದೆ ಹೇಳಿದ ಶ್ರುತಿಯೂ ವಿರುದ್ಧವಾಗುತ್ತದೆ. ಆದ್ದರಿಂದ ಇಂದ್ರಿಯಗಳು ವಿಭುವೆನಿಸುವುದೇ ಯುಕ್ತ ಎಂದು ಆಕ್ಷೇಪ ಬಂದರೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಇಂದ್ರಿಯಗಳು ಸಹಜವಾಗಿ ಅಣುವೆನಿಸಿವೆ. ಚಕಾರವು ಅವನ್ನು ಕಾರ್ಯಾವಸ್ಥೆಯಲ್ಲೂ ಅಣುವೆಂದು ತಿಳಿಸುತ್ತದೆ. ಆತ್ಮನು ಮನಸ್ಸಿನೊಡನೆಯೂ, ಮನಸ್ಸು ಇಂದ್ರಿಯದೊಡನೆಯೂ, ಇಂದ್ರಿಯವು ವಸ್ತುವಿನೊಡನೆಯೂ ಸೇರುವುದರಿಂದ ಪ್ರತ್ಯಕ್ಷ ಉಂಟಾಗುತ್ತದೆ ಎಂದು ಹೇಳಿದ್ದರಿಂದ ಇಂದ್ರಿಯಗಳೆಲ್ಲವೂ ಸೂಕ್ಷ್ಮಗಳಾಗಿದ್ದರೂ ವಸ್ತುವಿನ ಸಾನ್ನಿಧ್ಯದಿಂದ ವ್ಯಾಪಕವೂ ಆಗುತ್ತವೆ ಎಂದು ತಿಳಿದುಬರುತ್ತದೆ. ಆದ್ದರಿಂದ ಶ್ರುತಿಯವಿರೋಧವಿಲ್ಲ. ಆದರೆ ಇಂದ್ರಿಯಗಳು ಕೇವಲ ವಿಭುವೆನಿಸಿದರೆ ಕಾಶಿಯಲ್ಲಿರುವವನಿಗೆ ವಿಶ್ವೇಶ್ವರನ ದರ್ಶನಸ್ಪರ್ಶಗಳು ರಾಮೇಶ್ವರದಲ್ಲಿರುವವರಿಗೂ ಆಗಬೇಕಾದೀತು. ಇದೂ ಅಲ್ಲದೆ, "ಅನುಸರಿಸಿಹೋಗುತ್ತಿರುವ ಪ್ರಾಣವನ್ನು ಎಲ್ಲಾ ಪ್ರಾಣಗಳೂ ಅನುಸರಿಸುತ್ತವೆ" ಎಂಬಲ್ಲಿ ಉತ್ಕ್ರಮಣವನ್ನು ಹೇಳಿದೆ. ಇಂದ್ರಿಯಗಳನ್ನು ಪರಿಮಿತವೆಂದು ಹೇಳಿರುವುದರಿಂದಲೂ, ಉತ್ಕ್ರಮಣಕಾಲದಲ್ಲಿ ಪಕ್ಕದಲ್ಲಿರುವವರಿಗೆ ಗೊತ್ತಾಗದೇ ಇರುವುದರಿಂದಲೂ, ಕಿವಿಯೇ ಮೊದಲಾದ ಇಂದ್ರಿಯಗಳಿಗೆ ಬೇರೆ ಪ್ರದೇಶದಲ್ಲಿ ಹುಟ್ಟುವ ಶಬ್ದವನ್ನು ಗ್ರಹಿಸಲು ಶಕ್ತಿ ಇಲ್ಲದ್ದರಿಂದಲೂ ಕಮಲದ ನೂರಾರು ದಳಗಳನ್ನು ಒಂದೇಸೂಜಿಯಿಂದ ಪೋಣಿಸುವಂತೆ ಶಬ್ದಾದಿ ವಿಷಯಗಳನ್ನು ಗ್ರಹಿಸುವಾಗ ಅವು ಬೇಗನೆ ಪ್ರವರ್ತಿಸುವುದನ್ನು ಎಲ್ಲರೂ ತಿಳಿದಿರುವುದರಿಂದಲೂ ಪ್ರಾಣೇಂದ್ರಿಯಗಳನ್ನು ಅಣುವೆಂದೇ ನಿಶ್ಚಯಿಸಲಾಗಿದೆ. ಅವನ್ನು ಅನಂತವೆಂದು ತಿಳಿಸುವ ಶ್ರುತಿಯು ಅವನ್ನು ಹಾಗೆಂದು ಭಾವಿಸಿ ಉಪಾಸನ ಮಾಡಲಿಕ್ಕಾಗಿ ವಿಧಿಸಿದೆ. ಉಪಾಸ್ಯವಾದ ಪ್ರಾಣಗಳ ಕಾರ್ಯಗಳು ಅನಂತವಾಗಿರುವುದರಿಂದ ಅವನ್ನು ಅಲ್ಲಿ ಅನಂತವೆಂದು ಹೇಳಲಾಗಿದೆ.

ಜೀವಸ್ಯ ಬಹುಶರೀರಪ್ರವೇಶನಿರ್ಗಮನವ್ಯಾಪಾರವಿಧಾಯಕಶ್ರುತಿಷ್ವಪಿ ಇಂದ್ರಿಯಗಮನಸ್ಯಾಪ್ಯುಪದೇಶಾನ್ಮುಖ್ಯತ್ವೇನ ಪ್ರಾಣೋತ್ಕ್ರಮಣವಿಧಾಯಕವಾಕ್ಯಮುಪಪನ್ನಮಿತ್ಯಾಶಂಕಾಯಾಮಾಹ. ಶ್ರೇಷ್ಠಶ್ಚ ॥ ೬ ॥ "ಪ್ರಾಣಮುತ್ಕ್ರಾಮಂತಂ ಸರ್ವೇ ಪ್ರಾಣಾ ಅನೂತ್ಕ್ರಾಮಂತಿ" ಇತ್ಯಾದಿಪ್ರಾಣಸಂವಾದೇ ಶರೀರಸ್ಥಿತತ್ವೇನ ಸರ್ವೇಂದ್ರಿಯಾಧಾರತ್ವೇನ ಚ ಶ್ರೇಷ್ಠತಯಾ ನಿರ್ಣೀತೋ ಮುಖ್ಯಪ್ರಾಣಃ. ಕಿಂಚ "ಸುಪ್ತೌ ಸರ್ವೇಂದ್ರಿಯೋಪರಮೇ ಪ್ರಾಣವಾಯುವ್ಯಾಪಾರದರ್ಶನಾತ್", "ಏತಸ್ಮಾಜ್ಜಾಯತೇ ಪ್ರಾಣಃ" ಇತಿಶ್ರುತೌ ಸರ್ವೇಂದ್ರಿಯಾಣಾಂ ಪ್ರಾಗೇವ ಪ್ರಾಣೋತ್ಪತ್ತಿಶ್ರವಣಾತ್, "ತತ್ಪ್ರಾಣೇಷ್ವಂತ

ರ್ಮನಸೋ ಲಿಂಗಮಾಹುಃ" ಇತಿ ಶ್ರುತೌ ಸರ್ವೇಂದ್ರಿಯಾಧಾರಮಾನಸೇಂದ್ರಿಯಸ್ಯಾಪಿ ಪ್ರಾಣಾಧಾರತ್ವನಿರ್ದೇಶಾತ್, "ಇಂದ್ರಿಯಾಣಾಂ ಮನೋ ನಾಥಃ ಮನೋನಾಥಸ್ತು ಮಾರುತಃ" ಇತಿ ಸ್ಮೃತಾವಪಿ ಪ್ರಾಣಾತ್ಮಕಸ್ಯ ಮಾರುತಸ್ಯ ಸರ್ವಾಧಿಕ್ಯಾವಗಮಾಚ್ಚ ಜೀವವತ್ಪ್ರಾಣಸ್ಯಾಪಿ ಶ್ರೇಷ್ಠತ್ವಮನಿವಾರ್ಯಂ. ಅತಃ ಪ್ರಾಣೋತ್ಕ್ರಮಣಮುಖ್ಯತ್ವವಿಧಾನ ವಿರೋಧಃ. ನನು "ಆನೀದವಾತಂ ಸ್ವಧಯಾ ತದೇಕಂ" ಇತಿ ಪ್ರಳಯಸಮಯೇ ಸರ್ವಾಧಾರತಯಾ ಪ್ರಾಣಸದ್ಭಾವಶ್ರವಣಾತ್ "ಏತಸ್ಮಾಜ್ಜಾಯತೇ ಪ್ರಾಣಃ" ಇತಿ ಜನ್ಮಶ್ರವಣಸ್ಯ ಜೀವೋತ್ಪತ್ತಿವದೌಪಚಾರಿಕತ್ವಮಿತಿ ಚೇನ್ನ, "ನ ಸನ್ನ ಚಾಸಚ್ಛಿವ ಏವ ಕೇವಲಃ" ಇತ್ಯಾದಿಷು ಪ್ರಾಕ್ಸೃಷ್ಟೇಃ ಶಿವಸ್ಥಿತ್ಯವಧಾರಣಶ್ರುತಿವಿರೋಧಾತ್, "ಏತಸ್ಮಾಜ್ಜಾಯತೇ ಪ್ರಾಣಃ" ಇತ್ಯತ್ರ ಪ್ರಾಣಸ್ಯ ಪೃಥಿವ್ಯಾದಿತುಲ್ಯೋತ್ಪತ್ತಿಶ್ರವಣಾತ್, ಉತ್ಪತ್ತಿನಿಷೇಧಾಭಾವಾಚ್ಚ. "ಆನೀದವಾತಂ" ಇತ್ಯತ್ರ ನಚೈವ ಶ್ರೇಷ್ಠಃ ಪ್ರಾಣೋಽಭಿಪ್ರೇತ್ಯೋಽಚ್ಯತೇ ಅಪಿತು ಪರಶಿವಬ್ರಹ್ಮಣ ಏಕಸ್ಯೈವ ವಿದ್ಯಮಾನತ್ವಮುಚ್ಯತೇ, "ಅವಾತಂ" ಇತಿ ತತ್ರೈವ ಶ್ರವಣಾತ್. ಪೂರ್ವೇಣೈವ ತುಲ್ಯನ್ಯಾಯತ್ವೇಽಪಿ ಪೃಥಗ್ಯೋಗಕರಣಮುತ್ತರಚಿಂತಾರ್ಥಮಿತಿ ಸಿದ್ಧಂ.

ಜೀವನು ಅನೇಕ ಶರೀರಗಳನ್ನು ಪ್ರವೇಶಿಸುತ್ತಲೂ ಅಲ್ಲಿಂದ ಹೊರಡುತ್ತಲೂ ಇರುವನೆಂದು ತಿಳಿಸುವ ಶ್ರುತಿಗಳಲ್ಲಿ ಇಂದ್ರಿಯಗಳ ಗಮನವನ್ನು ತಿಳಿಸಿರುವುದರಿಂದ ಪ್ರಾಣದ ಉತ್ಕ್ರಮಣವನ್ನು ತಿಳಿಸುವ ವಾಕ್ಯವು ಏಕೆ ಗೌಣವಾಗಬಾರದೆಂದು ಆಶಂಕಿಸಿ ನಿರಾಕರಿಸುತ್ತಾನೆ. "ಹೋಗುತ್ತಿರುವ ಪ್ರಾಣವನ್ನು ಎಲ್ಲಾ ಪ್ರಾಣಗಳೂ ಹಿಂಬಾಲಿಸುತ್ತವೆ" ಎಂಬ ಪ್ರಾಣಸಂವಾದದಲ್ಲಿ ಶರೀರದಲ್ಲಿದ್ದು ಸರ್ವೇಂದ್ರಿಯಗಳಿಗೂ ಆಧಾರವಾದ್ದರಿಂದ ಮುಖ್ಯಪ್ರಾಣವನ್ನು ಶ್ರೇಷ್ಠವೆಂದು ನಿರ್ಣಯಿಸಲಾಗಿದೆ. ಇದೂ ಅಲ್ಲದೆ, "ಸುಷುಪ್ತಿಯಲ್ಲಿ ಎಲ್ಲಾ ಇಂದ್ರಿಯಗಳು ಶಾಂತವಾದರೂ ಪ್ರಾಣವಾಯುವಿನ ವ್ಯಾಪಾರವಿದ್ದೇ ಇರುತ್ತದೆ", "ಇದರಿಂದಲೇ ಪ್ರಾಣ ಮನಸ್ಸು ಮತ್ತು ಇಂದ್ರಿಯಗಳು ಹುಟ್ಟುತ್ತವೆ" ಎಂಬ ಶ್ರುತಿಗಳಲ್ಲಿ ಎಲ್ಲಾ ಇಂದ್ರಿಯಗಳಿಗೂ ಮೊದಲೇ ಪ್ರಾಣ ಹುಟ್ಟಿತೆಂದು ಹೇಳಲಾಗಿದೆ. "ಪ್ರಾಣಗಳೊಳಗಿನ ಮನಸ್ಸೇ ಲಿಂಗವೆನಿಸಿದೆ" ಎಂಬಲ್ಲಿ ಎಲ್ಲಾ ಇಂದ್ರಿಯಗಳಿಗೂ ಆಧಾರವಾದ ಮನಸ್ಸೂ ಸಹ ಪ್ರಾಣವನ್ನೇ ಆಶ್ರಯಿಸಿದೆ ಎಂದು ತಿಳಿಸಿದೆ. "ಇಂದ್ರಿಯಗಳಿಗೆ ಮನಸ್ಸು ಅಧಿಪತಿಯಾದರೆ ಮನಸ್ಸಿಗೆ ಪ್ರಾಣವಾಯು ಅಧಿಪತಿ" ಎಂದು ಸ್ಮೃತಿಯಲ್ಲೂ ಪ್ರಾಣವಾಯುವನ್ನು ಎಲ್ಲಕ್ಕೂ ಹೆಚ್ಚಿನದೆಂದು ಹೇಳಿದೆ. ಹೀಗೆ ಜೀವನಂತೆ ಪ್ರಾಣವೂ ಶ್ರೇಷ್ಠವೆನಿಸಿದೆ. ಆದ್ದರಿಂದ ಪ್ರಾಣೋತ್ಕ್ರಮಣವನ್ನು ವಿಧಿಸುವ ವಾಕ್ಯವು ಮುಖ್ಯವೆಂಬಲ್ಲಿ ವಿರೋಧವೇನಿಲ್ಲ. "ಮೊದಲು ಪ್ರಾಣ

ಒಂದೇ ಇತ್ತು" ಎಂಬಲ್ಲಿ ಎಲ್ಲವೂ ವಿಸ್ತಾರವಾಗುವುದಕ್ಕಿಂತಲೂ ಮುಂಚೆಯೇ ಪ್ರಾಣವಿದ್ದುದಾಗಿ ಹೇಳಿದೆ. ಆದ್ದರಿಂದ "ಇದರಲ್ಲಿ ಪ್ರಾಣ ಹುಟ್ಟಿತು" ಎಂಬಲ್ಲಿ ಪ್ರಾಣದ ಉತ್ಪತ್ತಿಯನ್ನು ಜೀವೋತ್ಪತ್ತಿಯಂತೆ ಕೇವಲ ಉಪಚಾರಕ್ಕಾಗಿ ಹೇಳಿದೆ ಎಂದು ಆಕ್ಷೇಪಿಸಿದರೆ, ಅದು ಸರಿಯಲ್ಲ; ಏಕೆಂದರೆ "ಪ್ರಳಯದಲ್ಲಿ ಏನೊಂದೂ ಇರದೆ ಶಿವನೊಬ್ಬನೇ ಇದ್ದನು", "ಮೊದಲಿಗೆ ಇದೆಲ್ಲವೂ ಸದ್ರೂಪವಾಗಿಯೇ ಇತ್ತು" ಎಂಬ ಶ್ರುತಿಗಳಲ್ಲಿ ಸೃಷ್ಟಿಗೆ ಮೊದಲು ಶಿವನೊಬ್ಬನೇ ಇದ್ದನೆಂದು ಹೇಳಿರುವುದರಿಂದ ಇದು ವಿರುದ್ಧವಾಗುವುದು. "ಇವನಿಂದ ಪ್ರಾಣ ಹುಟ್ಟಿತು" ಎಂಬಲ್ಲಿ ಪೃಥಿವ್ಯಾದಿಗಳಂತೆಯೇ ಪ್ರಾಣಾದಿಗಳ ಉತ್ಪತ್ತಿಯನ್ನು ಸ್ಪಷ್ಟವಾಗಿ ತಿಳಿಸಿದೆ. ಹೀಗೆ ಉತ್ಪತ್ತಿಯನ್ನು ತಿಳಿಸಿದಮೇಲೆ ಅದನ್ನು ನಿಷೇಧಿಸಲಿಕ್ಕಂತೂ ಆಗುವುದಿಲ್ಲ. ಆದ್ದರಿಂದ "ಆನೀದವಾತಂ" ಎಂಬುದು ಮುಖ್ಯಪ್ರಾಣವನ್ನು ಉದ್ದೇಶಿಸಿ ಹೊರಟಿಲ್ಲ; ಆದರೆ ಪರಶಿವಬ್ರಹ್ಮನೊಬ್ಬನ ಇರುವಿಕೆಯನ್ನು ಮಾತ್ರವೇ ತಿಳಿಸಲು ಹೊರಟಿದೆ. "ಆಗ ಗಾಳಿಯೂ ಇರಲಿಲ್ಲ"ವೆಂದು ಆ ಶ್ರುತಿಯಲ್ಲಿಯೇ ಸ್ಪಷ್ಟವಾಗಿ ಹೇಳಿದೆ. ಆದ್ದರಿಂದಲೇ ಹಿಂದಿನ ಅಧಿಕರಣದ ನ್ಯಾಯವೇ ಇಲ್ಲಿಯೂ ಸಮಾನವಾಗಿದ್ದರೂ ಇಲ್ಲಿ ಪ್ರತ್ಯೇಕ ಅಧಿಕರಣವನ್ನು ರಚಿಸಲಾಗಿದೆ.

ಪ್ರಾಣಸ್ಯ ಸರ್ವಶ್ರೇಷ್ಠತ್ವೇಽಪಿ ಸ ವಾಯುರ್ವಾತನಿಷ್ಠಸ್ಪರ್ಶಕ್ರಿಯಾ ವಾ ತತ್ಸ್ವರೂಪಮಿತ್ಯಾಶಂಕಾಮಧಿಕರಣಾಂತರೇಣ ಪರಿಹರತಿ. ವಾಯುಕ್ರಿಯಾಧಿಕರಣಂ ||೪|| ಸ ವಾಯುಕ್ರಿಯೇ ಪೃಥಗುಪದೇಶಾತ್ ||೭|| "ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ । ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ ||" ಇತಿ ಶ್ರುತೌ ವಾಯುಪ್ರಾಣಯೋಃ ಪೃಥಗುತ್ಪತ್ತಿವ್ಯಪದೇಶಾತ್ತಯೋರ್ನ ಚೈಕತ್ವಮಿತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಸೋಽಯಂ ಶ್ರೇಷ್ಠಃ ಪ್ರಾಣಃ ಕಿಂ ಮಹಾಭೂತದ್ವಿತೀಯವಾಯುಮಾತ್ರಂ? ತಸ್ಯ ವಾ ಸ್ಪಂದರೂಪಕ್ರಿಯಾ? ಅಥವಾ ವಾಯುರೇವ ಕಂಚನ ವಿಶೇಷಮಾಪನ್ನ ಇತಿ ವಿಶಯೇ ವಾಯುರೇವೇತಿ ಪ್ರಾಪ್ತಂ, "ಯಃ ಪ್ರಾಣಸ್ಸ ವಾಯುಃ" ಇತಿ ವ್ಯಪದೇಶಾತ್, ಯದ್ವಾ ವಾಯುಮಾತ್ರೇ ಪ್ರಾಣತ್ವಪ್ರಸಿದ್ಧ್ಯಾಃ ಉಚ್ಛ್ವಾಸನಿಶ್ವಾಸಾದಿವಾಯುಕ್ರಿಯಾಯಾಃ ಪ್ರಾಣಶಬ್ದಪ್ರಸಿದ್ಧೇಶ್ಚ. ಕಿಂಚ ಛಾಂದೋಗ್ಯೇ "ಮನೋ ಬ್ರಹ್ಮೇತ್ಯುಪಾಸೀತ" ಇತ್ಯುಪಕ್ರಮ್ಯ "ಮನೋರೂಪಬ್ರಹ್ಮಣೋ ವಾಕ್ಪ್ರಾಣಚಕ್ಷುಶ್ಶ್ರೋತ್ರಚತುಷ್ಪಾತ್ತ್ವಾತ್", "ಪ್ರಾಣ ಏವ ಬ್ರಹ್ಮಣಃ ಚತುರ್ಥಃ ಪಾದಃ ಸ ವಾಯುನಾ ಜ್ಯೋತಿಷಾ ಭಾತಿ ಚ ತಪತಿ ಚ" ಇತ್ಯತ್ರ ಭಾತಿ ಅಭಿವ್ಯಕ್ತೋ ಭವತಿ, ತಪತಿ ಸ್ವವ್ಯಾಪಾರೇ ಉದ್ಗಚ್ಛತಿ" ಇತಿ ವಾಯ್ವಪೇಕ್ಷಯಾ ಪ್ರಾಣಸ್ಯ ಭಿನ್ನತ್ವಕಥನೇನ ನಿರ್ಧಾರಾಭಾವಾದಿತಿ ಚೇದೇತಚ್ಛ್ರುತಿದ್ವಯೇನ

ಮಿಥೋ ವಿರುದ್ಧಯಾ ಖಂಡರೀತ್ಯಾ ಇಂದ್ರಿಯವ್ಯಾಪಾರಃ ಪ್ರಾಣೋಽಸ್ತ್ವಿತಿ ಪ್ರಾಪ್ತೇ ಪ್ರಚಕ್ಷ್ಮಹೇ. ಪ್ರಾಣೋ ನ ವಾಯುಕ್ರಿಯಾ, ನ ವಾಯುರ್ನಾಪೀಂದ್ರಿಯವ್ಯಾಪಾರ ಇತಿ. ನನ್ವಿಂದ್ರಿಯೇಭ್ಯಃ ಪೃಥಗುಪದೇಶೇಷ್ವಿಂದ್ರಿಯವ್ಯಾಪಾರಾತ್ಪ್ರಾಣೋ ಭಿನ್ನ ಇತಿ ಚೇನ್ನ ವೃತ್ತಿವೃತ್ತಿಮತೋರಭೇದಾತ್. ತರ್ಹಿ "ಯಃ ಪ್ರಾಣಸ್ಸ ವಾಯುಃ" ಇತಿ ಶ್ರುತಿವಿರೋಧಃ ಕಥಂ ಪರಿಹರಣೀಯ ಇತಿ ಚೇದುಚ್ಯತೇ. ತಥಾಚ ವಿಕಾರವಿಕಾರಿಣೋರ್ವಾಸ್ತವಾಭೇದಕಾಲ್ಪನಿಕಭೇದಯೋಸ್ಸತ್ತ್ವಾನ್ನ ಭೇದಾಭೇದಶ್ರುತ್ಯೋರ್ವಿರೋಧ ಇತಿ ವ್ಯಾಚಕ್ಷ್ಯತೇ. ಉತ "ಏತಸ್ಮಾಜ್ಜಾಯತೇ ಪ್ರಾಣಃ ಖಂ ವಾಯುಃ" ಇತಿ ವಾಯುಪ್ರಾಣಯೋಸ್ತತ್ತವೇವ ಪೃಥಗ್ವ್ಯಪದೇಶಾದ್ವಾಯುಕ್ರಿಯಾಪಿ ನ ಭವತಿ ಪ್ರಾಣಃ. ನಹಿ ತೇಜಃಪ್ರಭೃತಿವತ್ ತತ್ತ್ವಾಂತರಮಿತಿ ಜ್ಞಾಪನಾರ್ಥಂ "ಉಚ್ಛ್ವಾಸನಿಶ್ವಾಸಾದಾವಪಿ ಪ್ರಾಣಸ್ಪಂದಃ" ಇತಿ ಕ್ರಿಯಾವತಿ ದ್ರವ್ಯ ಏವ ಪ್ರಾಣಶಬ್ದಪ್ರಸಿದ್ಧಿಃ ನ ಕ್ರಿಯಾಮಾತ್ರ ಇತಿ ಸಿದ್ಧಂ.

ಪ್ರಾಣವು ಸರ್ವಶ್ರೇಷ್ಠವಾದರೂ, ಅದು ಒಂದು ಪ್ರತ್ಯೇಕವಸ್ತುವಲ್ಲ; ಆದರೆ ಸಾಮಾನ್ಯವಾಯುವೇ ಪ್ರಾಣವೆನಿಸಿದೆ. ಅಥವಾ ವಾಯುವಿನ ಕ್ರಿಯೆಯಾದರೂ ಪ್ರಾಣವಾಗಲಿ ಎಂದು ಆಶಂಕಿಸಿ ಸಮಾಧಾನಮಾಡುತ್ತಾನೆ. ವಾಯುವನ್ನೂ ಅದರ ಕ್ರಿಯೆಯಾದ ಪ್ರಾಣವನ್ನು ಶ್ರುತಿಯಲ್ಲಿ ಬೇರೆ ಬೇರೆಯಾಗಿ ಹೇಳಿರುವುದರಿಂದ ಅವೆರಡೂ ಒಂದೇ ಆಗೆಯಾಗಲಾರವು. "ಇದರಿಂದಲೇ ಪ್ರಾಣ, ಆಕಾಶ, ವಾಯು, ತೇಜಸ್ಸು, ನೀರು, ಸರ್ವಧಾರವಾದ ಪೃಥಿವಿ, ಇವೆಲ್ಲವೂ ಹುಟ್ಟಿವೆ" ಎಂಬಲ್ಲಿ ವಾಯು ಪ್ರಾಣಗಳ ಉತ್ಪತ್ತಿಯನ್ನು ಪ್ರತ್ಯೇಕವಾಗಿ ತಿಳಿಸಿದೆ. ಆದ್ದರಿಂದ ಅವೆರಡೂ ಒಂದೇ ವಸ್ತುವಲ್ಲ. ಆ ಶ್ರೇಷ್ಠಪ್ರಾಣವೆಂಬುದು ಯಾವುದು? ಪಂಚಭೂತಗಳಲ್ಲಿ ಎರಡನೆಯದಾದ ವಾಯುವೇ ಅಥವಾ ಅದರ ಚಲನವೇ? ಅಥವಾ ವಾಯುವೇ ಏನಾದರೊಂದು ವಿಶೇಷದಿಂದ ಶ್ರೇಷ್ಠಪ್ರಾಣವೆನಿಸಿದೆಯೆ? ಎಂಬ ಸಂಶಯಬಂದರೆ "ಪ್ರಾಣವೇ ವಾಯು" ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ವಾಯುವನ್ನೇ ಹೀಗೆ ವ್ಯವಹರಿಸಲಾಗಿದೆ. ಅಥವಾ ವಾಯುವೆಲ್ಲವೂ ಪ್ರಾಣವೇ ಆಗಿರುವುದರಿಂದ ಉಚ್ಛ್ವಾಸ ನಿಶ್ವಾಸ ಮೊದಲಾದ ವಾಯುವಿನ ಕ್ರಿಯೆಯಲ್ಲೂ ಪ್ರಾಣಶಬ್ದವು ಪ್ರಸಿದ್ಧವಾಗಿದೆ. ಛಾಂದೋಗ್ಯದಲ್ಲಿ "ಮನಸ್ಸನ್ನು ಬ್ರಹ್ಮವೆಂದು ತಿಳಿ" ಎಂದಾರಂಭಿಸಿ ಮನಸ್ಸೆಂಬ ಬ್ರಹ್ಮಕ್ಕೆ ವಾಕ್ಕು, ಪ್ರಾಣ, ಕಣ್ಣು, ಕಿವಿ ಇವು ನಾಲ್ಕು ಪಾದಗಳಿರುವುದರಿಂದ ಪ್ರಾಣವೇ "ಬ್ರಹ್ಮದ ನಾಲ್ಕನೇ ಪಾದವು" "ಅವನು ವಾಯುವಿನಿಂದ ಪ್ರಕಾಶಿಸುತ್ತಲೂ, ಅಗ್ನಿಯಿಂದ ಸುಡುತ್ತಲೂ ಇರುವನು" ಎಂದು ಹೇಳಿದೆ. ಇಲ್ಲಿ "ಭಾತಿ" ಎಂದರೆ ವ್ಯಕ್ತವಾಗುತ್ತದೆ ಎಂದೂ, "ತಪತಿ" ಎಂದರೆ "ತನ್ನ ವ್ಯಾಪಾರದಲ್ಲಿ ನಿರತವಾಗುತ್ತಾನೆ" ಎಂದೂ ಹೇಳಿ ವಾಯುವಿಗಿಂತಲೂ ಪ್ರಾಣವನ್ನು ಬೇರೆಯಾಗಿ ತಿಳಿಸಿದ್ದರಿಂದ

ಈ ಬಗ್ಗೆ ನಿರ್ಧಾರವೇ ಇಲ್ಲವಾಗುತ್ತದೆ. ಹೀಗೆ ಶ್ರುತಿಗಳಲ್ಲಿ ಪರಸ್ಪರವಿರೋಧವಿರುವುದರಿಂದ ಇಂದ್ರಿಯವ್ಯಾಪಾರವೇ ಪ್ರಾಣವಾಗಲೆಂದು ಆಕ್ಷೇಪ ಬಂದರೆ ಸಿದ್ಧಾಂತವನ್ನು ಮುಂದೆ ಹೇಳಲಾಗಿದೆ. ಪ್ರಾಣವು ವಾಯುವಿನ ಕ್ರಿಯೆಯೂ ಅಲ್ಲ, ವಾಯುವೂ ಅಲ್ಲ; ಇಂದ್ರಿಯವ್ಯಾಪಾರವೂ ಅಲ್ಲ. ಆದರೆ ಇಂದ್ರಿಯಗಳಿಗಿಂತ ಬೇರೆಯಾಗಿ ಪ್ರಾಣವನ್ನು ಹೇಳಿರುವ ಕಡೆಗಳಲ್ಲಿ ಅದನ್ನು ಇಂದ್ರಿಯವ್ಯಾಪಾರಗಳಿಗಿಂತ ಬೇರೆ ಎಂದು ಹೇಳಿಲ್ಲವಾದ್ದರಿಂದ ಇಂದ್ರಿಯವ್ಯಾಪಾರಗಳೇ ಏಕೆ ಪ್ರಾಣವಾಗಬಾರದು? ಎಂದರೆ ಇಂದ್ರಿಯವ್ಯಾಪಾರಕ್ಕೂ ಇಂದ್ರಿಯಕ್ಕೂ ಅಭೇದವಿರುವುದರಿಂದ ಇಂದ್ರಿಯವ್ಯಾಪಾರಕ್ಕಿಂತಲೂ ಪ್ರಾಣರೂಪವಾದ ಇಂದ್ರಿಯವು ಭಿನ್ನವಾಗಲಾರದು. ಹಾಗಾದರೆ ಪ್ರಾಣವೇ ವಾಯುವೆಂಬ ಶ್ರುತಿಯ ವಿರೋಧವನ್ನು ಹೇಗೆ ಪರಿಹರಿಸಬಹುದು? ಎಂದು ಆಕ್ಷೇಪಬಂದರೆ "ಮಹಾವಾಯುವೇ ಪ್ರಾಣ ಅಪಾನ ವ್ಯಾನ ಉದಾನ, ಸಮಾನವೆನಿಸಿದ್ದು ಪ್ರಾಣವಾಗಿದೆ" ಎಂಬ ಶ್ರುತಿ ಸಮಾಧಾನವನ್ನು ತಿಳಿಸಿದೆ. ಹೀಗೆ ವಿಕಾರಕ್ಕೂ ವಿಕೃತವಸ್ತುವಿಗೂ ವಾಸ್ತವಿಕಾಭೇದವೂ ಮತ್ತು ಕಲ್ಪನಿಕಭೇದವೂ ಇರುವುದರಿಂದ ಭೇದಾಭೇದ ಶ್ರುತಿಗಳೆರಡಕ್ಕೂ ವಿರೋಧವಿಲ್ಲವೆಂದು ಹೇಳಲಾಗಿದೆ. ಇದೂಅಲ್ಲದೆ, ಶ್ರುತಿಯಲ್ಲಿ ಬ್ರಹ್ಮದಿಂದಲೇ ಪ್ರಾಣವಾಯುಗಳೆರಡೂ ಪ್ರತ್ಯೇಕವಾಗಿ ಹುಟ್ಟಿರುವುವೆಂದು ಹೇಳಿದೆ. ಆದ್ದರಿಂದ ವಾಯುವಿನ ಕ್ರಿಯೆಯೂ ಪ್ರಾಣವೆನಿಸುವುದಿಲ್ಲ. ಅಗ್ನಿ ಮೊದಲಾದವುಗಳ ಕ್ರಿಯೆಯನ್ನು ಅವುಗಳಿಗಿಂತ ಬೇರೆಯಾದ ವಸ್ತುಗಳಿಗೆ ಎಂದಿಗೂ ಅನ್ವಯಿಸಲಾಗುವುದಿಲ್ಲ. "ಯಾವದು ಪ್ರಾಣವೋ ಅದೇ ವಾಯು" ಎಂಬಲ್ಲಿ ಪ್ರಾಣವಾಯುವೇ ಬೇರೆ ಅವಸ್ಥೆಯನ್ನು ಹೊಂದಿ ಪ್ರಾಣವೆನಿಸಿದೆಯೇಹೊರತು ಅಗ್ನಿ ಮೊದಲಾದ ವಸ್ತುಗಳಲ್ಲಿ ಇದು ಬೇರೊಂದು ತತ್ತ್ವವಲ್ಲವೆಂದು ತಿಳಿಸಲಿಕ್ಕಾಗಿಯೇ ಪ್ರಾಣವನ್ನು ವಾಯುವೆಂದು ಹೇಳಿದೆ. "ಉಚ್ಛ್ವಾಸ ನಿಶ್ವಾಸಗಳೂ ಪ್ರಾಣದ ಚಲನೆಗಳು" ಎಂಬಂತೆ ಪ್ರಾಣಶಬ್ದವು ಕ್ರಿಯೆಗೂ ಕ್ರಿಯೆಯುಳ್ಳವಸ್ತುವಿಗೂ ಅನ್ವಯಿಸುತ್ತದೆ.

ಕಿಮಯಂ ಪ್ರಾಣಃ ವಾಯೋರ್ವಿಕಾರಸ್ಸನ್ ಅಗ್ನಿವದ್ಭೂತಾಂತರಂ ಸ್ಯಾದುತ ಪ್ರಾಣವಾಯ್ವೋಃ ಪೃಥಗ್ವ್ಯಪದೇಶಾತ್ಪ್ರಾಣಃ ಕೇನೋತ್ಪನ್ನ ಇತ್ಯಾಶಂಕ್ಯಾಹ. ಚಕ್ಷುರಾದಿವತ್ತು ತತ್ಸಹಶಿಷ್ಟ್ಯಾದಿಭ್ಯಃ ॥ ೮ ॥ ನಾಯಂ ಪ್ರಾಣಃ ಭೂತವಿಶೇಷಃ ಕಿಂತು ಚಕ್ಷುರಾದಿವಜ್ಜೀವೋಪಕರಣವಿಶೇಷಃ. ಸ ಚೋಪಕರಣೈಂದ್ರಿಯೈಸ್ಸಹ ಶಿಷ್ಟ್ಯಾದಿಭ್ಯೋಽವಗಮ್ಯತೇ. ಚಕ್ಷುರಾದಿಭಿಸ್ಸಹಾಯಂ ಪ್ರಾಣಶ್ಶಿಷ್ಯತೇ. ಪ್ರಾಣಸಂವಾದಿಷು ತತ್ಸಜಾತೀಯತ್ವೇ ಹಿ ತೈಸ್ಸಹ ಶಾಸನಂ ಯುಜ್ಯತೇ, ಪ್ರಾಣಶಬ್ದಪರಿಗೃಹೀತೇಷು ಕರಣೇಷ್ವಸ್ಯ ವಿಶಿಷ್ಟಾಭಿಧಾನಮಾದಿಶಬ್ದೇನ ಗೃಹ್ಯತೇ. ಅಥವಾ "ಯ ಏವಾಯಂ ಮುಖ್ಯಃ ಪ್ರಾಣಃ ಯೋಽಯಂ ಮಧ್ಯಮಃ ಪ್ರಾಣಃ" ಇತ್ಯಾದಿಶ್ರುತಿಷು ವಿಶಿಷ್ಟಾಭಿಧಾನಾತ್, "ತೇಜೋರೂಪತಯಾ ಪ್ರಾಣೋ ಹೃದಯೇ ತ್ವನುರೂಪತಃ। ಜೀವಾಧೀನತಯಾ ಸ್ಥಿತ್ವಾ

ಪ್ರಾಣಾಪಾನಾದಿವೃತ್ತಿಭಿಃ । ಇಡಾಪಿಂಗಳಮಾರ್ಗೇಣ ನಿಶ್ವಾಸೋಚ್ಛ್ವಾಸರೂಪತಃ । ಬಹಿರ್ನಿರ್ಗತ್ಯ ನಿರ್ಗತ್ಯ ಸ್ವಾಂತರ್ಗಚ್ಛತಿ ಚ ಕ್ರಮಾತ್ ॥" ಇತಿ ಯೋಗಶಾಸ್ತ್ರೇ ಪ್ರಾಣಸ್ಯ ಸ್ವರೂಪಂ ಸ್ಪಷ್ಟಮುಪದಿಷ್ಟಂ. ತಸ್ಮಾದೀಶ್ವರೇಚ್ಛಯಾ ಭೂತಪಂಚಕರಜೋಗುಣೋದ್ಭೂತಃ ಪ್ರಾಣ ಇತಿ ವೇದಿತವ್ಯಃ. ಕಿಂಚ ಸರ್ವಾಸು ಶ್ರುತಿಷು ಚಕ್ಷುರಾದೀಂದ್ರಿಯಾಣಾಂ ಪ್ರಾಣಸ್ಯ ಪಠಿತತ್ವಾತ್ ಇಂದ್ರಿಯಸಾಹಚರ್ಯಾಚ್ಚ ಚಕ್ಷುರಾದಿವತ್ಪ್ರಾಣಶ್ಚ ಭೌತಿಕ ಇತಿ ವ್ಯವಹ್ರಿಯತೇ, "ಭರ್ತಾ ಸಂಭ್ರಿಯಮಾಣೋ ಬಿಭರ್ತಿ", "ಏಕೋ ದೇವೋ ಬಹುಧಾ ಸನ್ನಿವಿಷ್ಟಃ", "ತ್ವಮೇಕೋ ಬಹೂನನುಪ್ರವಿಷ್ಟಃ" "ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾ ವಿಶಾಂತಕಃ" ಇತ್ಯಾಧಿಶ್ರುತಿಭ್ಯಃ ಪ್ರಾಣಃ ಪರಮೇಶ್ವರಾಧಾರಃ. ತುಶಬ್ದ ಉಕ್ತಶಂಕಾನಿರಾಸಾರ್ಥಃ. ಪ್ರಾಣಸ್ಯ ಜೀವವನ್ನ ಸ್ವಾತಂತ್ರ್ಯಂ ಕಿಂತು ರಾಜಾಪೇಕ್ಷಯಾ ಮಂತ್ರಿಣ ಇವ, ಸಾರಥ್ಯಪೇಕ್ಷಯಾ ಅಶ್ವಾ ಇವ ಇಂದ್ರಿಯಾಪೇಕ್ಷಯಾ ಸಮುತ್ಕೃಷ್ಟತ್ವಾನ್ನೋಕ್ತದೋಷಃ. ಪ್ರಾಣಸ್ಯ ಭೂತಪಂಚಕರಜೋಗುಣಾರ್ಥಜನ್ಯತ್ವೇನಾಪಿ ವಾಯೂಪಾದಾನಕಾರಣತ್ವಾದ್ವಾಯ್ವಂತರ್ಭೂತ ಇತಿ ಚ ವ್ಯವಹ್ರಿಯತೇ. ತಥಾ ವಾತುಲಾಗಮೇ "ಆತ್ಮಾಕಾಶಮಯೋ ಜ್ಞೇಯಃ ಪ್ರಾಣೋ ವಾಯುಮಯಸ್ತಥಾ । ತೇಜೋಮಯೋ ಹ್ಯಹಂಕಾರಸ್ತಥಾ ಜಲಮಯಂ ಮನಃ ॥" ಇತಿ ಸಮ್ಯಗುಪದಿಷ್ಟಂ.

ಈ ಪ್ರಾಣವು ವಾಯುವಿನ ವಿಕಾರವೆನಿಸಿ ಅಗ್ನಿಯಂತೆ ಬೇರೊಂದು ವಸ್ತುವೇ? ಹಾಗಾದರೆ ಪ್ರಾಣ ಮತ್ತು ವಾಯುಗಳನ್ನು ಬೇರೆಯಾಗಿ ಹೇಳಿರುವುದರಿಂದ ಪ್ರಾಣ ಎಲ್ಲಿಂದ ಹುಟ್ಟಿರಬೇಕು? ಎಂದಾಶಂಕಿಸಿ ಪರಿಹರಿಸುತ್ತಾನೆ. ಈ ಪ್ರಾಣವು ಭೂತವಿಶೇಷವಲ್ಲ ಆದರೆ, ಕಣ್ಣು ಮೊದಲಾದ ಇಂದ್ರಿಯದಂತೆ ಜೀವನ ಉಪಕರಣವೆನಿಸಿದೆ. ಉಪಕರಣವಾದ ಇಂದ್ರಿಯಗಳೊಂದಿಗೆ ಇವಕ್ಕೂ ಸೃಷ್ಟಿಯನ್ನು ಶ್ರುತಿಯು ತಿಳಿಸಿದೆ. ಆದ್ದರಿಂದ ಚಕ್ಷುರಾದಿ ಇಂದ್ರಿಯಗಳೊಡನೆ ಪ್ರಾಣವನ್ನೂ ವಿಧಿಸಲಾಗಿದೆ. ಪ್ರಾಣಸಂವಾದದಲ್ಲಿ ಇಂದ್ರಿಯಗಳಿಗೆ ಸದೃಶವಾಗಿರುವುದರಿಂದಲೇ ಪ್ರಾಣವನ್ನೂ ಸಹ ಇಂದ್ರಿಯಗಳೊಡನೆ ಸೇರಿಸಲಾಗಿದೆ. ಸೂತ್ರದಲ್ಲಿ ಆದಿಪದವು ಪ್ರಾಣಶಬ್ದದಿಂದ ತಿಳಿದುಬರುವ ಕರಣಗಳಲ್ಲಿ ಪ್ರಾಣದ ವೈಶಿಷ್ಟ್ಯವನ್ನು ಸೂಚಿಸುತ್ತದೆ. "ಯಾವುದು ಮುಖ್ಯಪ್ರಾಣವೋ ಅದುವೇ ಮಧ್ಯಮ ಪ್ರಾಣವು" ಎಂದು ಶ್ರುತಿಯಲ್ಲಿ ಎರಡನ್ನೂ ಬೇರೆಯಾಗಿ ಹೇಳಲಾಗಿದೆ. "ತೇಜೋರೂಪದಿಂದ ಪ್ರಾಣವು ಹೃದಯದಲ್ಲಿ ಅದಕ್ಕನುಗುಣವಾಗಿ ನೆಲಸಿ ಪ್ರಾಣ, ಅಪಾನ ಮೊದಲಾದ ವೃತ್ತಿಗಳಿಂದ ಜೀವನಿಗೆ ಅಧೀನವಾಗಿದ್ದುಕೊಂಡು, ಇಡಾಪಿಂಗಳವೆಂಬ ನಾಡಿಗಳ ಮಾರ್ಗದಿಂದ ನಿಶ್ವಾಸೋಚ್ಛ್ವಾಸರೂಪದಿಂದ ಕ್ರಮವಾಗಿ ಹೊರಗೆ ಬರುತ್ತಲೂ, ಒಳಗೆ ಹೋಗುತ್ತಲೂ ಇದೆ."

ಹೀಗೆ ಯೋಗಶಾಸ್ತ್ರದಲ್ಲಿ ಪ್ರಾಣದ ಸ್ವರೂಪವನ್ನು ತಿಳಿಸಲಾಗಿದೆ. ಆದ್ದರಿಂದ ಈಶ್ವರೇಚ್ಛೆಯಂತೆ ಪಂಚಭೂತಗಳಿಗೆ ಸಂಬಂಧಿಸಿದ ರಜೋಗುಣದಿಂದ ಹುಟ್ಟಿದ್ದನ್ನೇ ಪ್ರಾಣವೆಂದು ತಿಳಿಯಬೇಕು. ಹೀಗೆಯೇ ಎಲ್ಲಾ ಶ್ರುತಿಗಳಲ್ಲೂ ಕಣ್ಣು ಮೊದಲಾದ ಇಂದ್ರಿಯಗಳನ್ನೇ ಪ್ರಾಣವೆಂದು ಹೇಳಿರುವುದರಿಂದಲೂ, ಇಂದ್ರಿಯಗಳೊಡನೆಯೇ ಇರುವುದರಿಂದಲೂ ಚಕ್ಷುರಾದಿಗಳಂತೆಯೇ ಪ್ರಾಣವನ್ನು ಭೌತಿಕವೆಂದು ವ್ಯವಹರಿಸಲಾಗಿದೆ. "ಜಗತ್ತಿಗೆಲ್ಲಾ ಪ್ರಭುವಾದವನು ಎಲ್ಲವನ್ನು ಧರಿಸುತ್ತಾನೆ" "ಒಬ್ಬನೇ ದೇವನು ಅನೇಕ ಬಗೆಯಾಗಿದ್ದಾನೆ," "ನೀನೊಬ್ಬನೇ ಅನೇಕರಲ್ಲಿ ಪ್ರವೇಶಿಸಿದ್ದೀಯೆ," "ಪ್ರಾಣಗಳಿಗಾಧಾರವಾಗಿದ್ದೀಯೆ," "ಸರ್ವ ಸಂಹರ್ತನಾದ ರುದ್ರನೇ, ನನ್ನಲ್ಲಿ ಪ್ರವೇಶಿಸು" ಈ ಬಗೆಯ ಶ್ರುತಿಗಳಲ್ಲಿ ಪ್ರಾಣಕ್ಕೆ ಪರಶಿವನೇ ಆಧಾರನೆನಿಸಿದ್ದಾನೆಂದು ಹೇಳಿದೆ. ತು ಶಬ್ದವು ಹಿಂದೆ ಹೇಳಿದ ಶಂಕೆಯನ್ನು ಪರಿಹರಿಸುತ್ತದೆ. ಪ್ರಾಣಕ್ಕೆ ಜೀವನಂತೆ ಸ್ವಾತಂತ್ರ್ಯವಿಲ್ಲ; ಆದರೆ ರಾಜನಿಗಿಂತ ಮಂತ್ರಿಯಂತೆಯೂ, ಸಾರಥಿಗಿಂತ ಕುದುರೆಗಳಂತೆಯೂ ಇಂದ್ರಿಯಗಳಿಗಿಂತ ಪ್ರಾಣವು ಹೆಚ್ಚಿನದೆನಿಸಿರುವುದರಿಂದ ಪ್ರಾಣವೇ ಸರ್ವಶ್ರೇಷ್ಠವೆನಿಸುವುದಕ್ಕೆ ಅವಕಾಶವಿಲ್ಲ. ಪಂಚಭೂತಗಳ ರಜೋಗುಣದಿಂದ ಪ್ರಾಣವು ಹುಟ್ಟಿದ್ದರೂ ಅದಕ್ಕೆ ವಾಯುವೇ ಉಪಾದಾನಕಾರಣವಾದ್ದರಿಂದ ಅದು ವಾಯುವಿನಲ್ಲಿಯೇ ಸೇರಿದೆ ಎಂದು ಹೇಳಲಾಗಿದೆ. ವಾತುಲಾಗಮದಲ್ಲಿ "ಆತ್ಮನು ಆಕಾಶಮಯನೂ, ಪ್ರಾಣವು ವಾಯುಮಯವೂ, ಅಹಂಕಾರವು ತೇಜೋಮಯವೂ, ಮನಸ್ಸು ಜಲಮಯವೂ ಆಗಿವೆ" ಎಂದು ಸ್ಪಷ್ಟವಾಗಿ ಹೇಳಿದೆ.

ಚಕ್ಷುರಾದಿವದಸ್ಯಾಪಿ ಕರಣತ್ವೇ ತದ್ವದಸ್ಯಾಪಿ ಜೀವಪ್ರತ್ಯುಪಕಾರರೂಪಕ್ರಿಯಯಾ ಭವಿತವ್ಯಂ. ಸಾ ತು ನ ದೃಶ್ಯತೇ. ತಸ್ಮಾನ್ನಾಯಂ ಚಕ್ಷುರಾದಿವದ್ಭವಿತುಮರ್ಹತೀತ್ಯಾಶಂಕಾಯಾಮಾಹ. ಅಕರಣತ್ವಾಚ್ಚ ನ ದೋಷಸ್ತಥಾಹಿ ದರ್ಶಯತಿ ॥ ೯ ॥ ಅಕರಣತ್ವಾತ್, ಕರಣಂ ಕ್ರಿಯಾ, ತದಭಾವಾದಕ್ರಿಯತ್ವಾತ್ ಅಸ್ಯ ಪ್ರಾಣಸ್ಯ ಜೀವಂ ಪ್ರತ್ಯುಪಕಾರವಿಶೇಷರೂಪಕ್ರಿಯಾರಹಿತತ್ವಾಚ್ಚ ಯೋ ದೋಷ ಉದ್ಭಾವ್ಯತೇ ಸ ನಾಸ್ತಿ, ಯತಃ ಉಪಕಾರವಿಶೇಷರೂಪಂ ಶರೀರೇಂದ್ರಿಯಧಾರಣಾದಿರೂಪಂ ದರ್ಶಯತಿ ಶ್ರುತಿಃ "ಯಸ್ಮಿನ್ನುತ್ಕ್ರಾಂತೇ ಇದಂ ಶರೀರಂ ಪಾಪಿಷ್ಠತರಮಿವ ದೃಶ್ಯತೇ ಸ ಏವ ಶ್ರೇಷ್ಠಃ" ಇತ್ಯುಕ್ತ್ವಾ ವಾಗಾದ್ಯುತ್ಕ್ರಮಣೇಽಪಿ ಶರೀರಸ್ಯೇಂದ್ರಿಯಾಣಾಂ ಕರಣಾನಾಂ ಚ ಸ್ಥಿತಿಂ ದರ್ಶಯಿತ್ವಾ ಪ್ರಾಣೋತ್ಕ್ರಮಣೇ ಶರೀರೇಂದ್ರಿಯಶೈಥಿಲ್ಯಾಭಿಧಾನಾತ್. ಅತಃ ಪ್ರಾಣಾಪಾನವ್ಯಾನೋದಾನಸಮಾನಾಕಾರೇಣ ಪಂಚಧಾವಸ್ಥಿತೋಽಯಂ ಪ್ರಾಣಃ ಶರೀರೇಂದ್ರಿಯಧಾರಣಾದಿನಾ ಜೀವಸ್ಯೋಪಕರೋತೀತಿ ಚಕ್ಷುರಾದಿವದುಪಕರಣತ್ವಂ ಸಿದ್ಧಂ. ಕಿಂಚ ಪ್ರಾಣಸ್ಯಾಕರ

ಣತ್ವಾದೇವ ಕಥಂ ತರ್ಹ್ಯಾತ್ಮಾನಂ ಪ್ರತಿ ಕರಣಾಭಾವಃ? ಇಂದ್ರಿಯಾಂತರೇಷ್ವಸಂಭಾವಿತಸ್ಯಾಸಾಧಾರಣಸ್ಯ ದೇಹಧಾರಣಕಾರ್ಯಸ್ಯ ಕಥಂ ನಿರ್ವಾಹಃ? ಇತಿ ಚೇದ್ಬ್ರೂಮಃ. ತಥಾಹಿ ಶ್ರುತಿರುಕ್ತಾ ಕಾರ್ಯಂ ಪ್ರಾಣಸ್ಯ ಸಾಧಾರಣ್ಯಂ ದರ್ಶಯತಿ. ಪ್ರಾಣಸಂವಾದೇ ಮುಖ್ಯಪ್ರಾಣಸ್ಯ ಶ್ರೇಷ್ಠತ್ವಂ ನಿರ್ಧಾರ್ಯ ತಾನ್ ವರಿಷ್ಠಪ್ರಾಣ ಉವಾಚ, " ಮಾ ಮೋಹಮಾಪದ್ಯಥಾಃ ಅಹಮೇವೈತತ್ಪಂಚಧಾತ್ಮಾನಂ ಪ್ರವಿಭಜ್ಯೈತತ್ಪ್ರಾಣಮವಷ್ಟಭ್ಯ ವಿಧಾರಯಾಮಿ " ಇತಿ, " ಬಾಣಂ ಶರೀರಂ ಪ್ರಾಣೇನ ರಕ್ಷನ್ನಪರಂ ಕುಲಾಯಂ " ಇತಿ ಶ್ರುತಿರಪಿ ದೇಹಸ್ಥಿತಂ ಹಿ ಪ್ರಾಣಮೇವಮಾಹ. ಅಪರಂ ಅನೇಕಾಶುಚಿನೀಡಕುಲಾಯಂ ದೇಹಾಖ್ಯಂ ಗೃಹಂ ಪ್ರಾಣಸ್ಥಿತ್ಯೈ ರಕ್ಷತಿ ಪುನಸ್ಸುಪ್ತಿಂ ಯಾತೀತಿ. ಉತ " ಪ್ರಾಣಮೇವ ಪ್ರಜ್ಞಾತ್ಮ ಇದಂ ಶರೀರಂ ಪರಿಗೃಹ್ಯೋದ್ಭಾಪಯತಿ " ಇತಿ ಶ್ರುತೌ ಪ್ರಾಣಸ್ಯ ಶರೀರೋದ್ಭಾಪಕತ್ವಾತ್ಮಕಂ ಕಾರ್ಯಾಂತರಂ ನಿರ್ದಿಶತಿ. ತಸ್ಮಾತ್ಪ್ರಾಣಸ್ಯ ಮುಖ್ಯತ್ವಮನಿವಾರ್ಯಂ.

ಕಣ್ಣು ಮೊದಲಾದ ಇಂದ್ರಿಯಗಳಂತೆ ಪ್ರಾಣವೂ ಒಂದು ಉಪಕರಣವಾದ್ದರಿಂದ ಅವುಗಳಂತೆಯೇ ಇದರಿಂದಲೂ ಜೀವನಿಗೆ ಏನಾದರೊಂದು ಉಪಕಾರವಾಗಬಹುದು.ಆದರೆ ಅವು ಹಾಗೆ ಆಗುತ್ತಿರುವುದಾಗಿ ಕಂಡುಬಂದಿಲ್ಲ. ಆದ್ದರಿಂದ ಪ್ರಾಣವು ಚಕ್ಷುರಾದಿಗಳಂತೆ ಜೀವನಿಗೆ ಉಪಕರಣವಾಗಲಾರದೆಂದು ಆಶಂಕಿಸಿ ಅದನ್ನು ಪರಿಹರಿಸುತ್ತಾನೆ. ಸೂತ್ರದಲ್ಲಿ ಬಂದಿರುವ ಕಾರಣಪದಕ್ಕೆ ಕ್ರಿಯೆ ಎಂದರ್ಥ. ಅಕರಣವೆಂದರೆ ಪ್ರಾಣದಿಂದ ಯಾವ ಕ್ರಿಯೆಯೂ ಆಗುವುದಿಲ್ಲವೆಂದರ್ಥ. ಜೀವನಿಗೆ ಉಪಕಾರ ಮಾಡುವಂತೆ ಯಾವ ಕ್ರಿಯೆಯೂ ಪ್ರಾಣಕ್ಕೆ ಹೊಂದುವುದಿಲ್ಲವೆಂದು ಹಿಂದೆ ಹೇಳಿದ ದೋಷಕ್ಕೆ ಇಲ್ಲಿ ಅವಕಾಶವಿಲ್ಲ; ಯಾಕೆಂದರೆ, ಶರೀರೇಂದ್ರಿಯಗಳನ್ನು ಧರಿಸುವ ಮೂಲಕ ಪ್ರಾಣವಾಯು ಜೀವನಿಗೆ ವಿಶೇಷವಾದ ಉಪಕಾರವನ್ನೇ ಮಾಡುತ್ತಿದೆ. " ಯಾವುದು ಹೊರಟುಹೋದಮೇಲೆ ಈ ಶರೀರವೇ ತುಚ್ಛವಾಗಿ ಕಾಣುವುದೋ ಅದೇ ಶ್ರೇಷ್ಠವಾದುದು " ಎಂದು ಹೇಳಿ ಶ್ರುತಿಯಲ್ಲಿ ವಾಗಾದಿಗಳು ಹೋದಮೇಲೂ ಶರೀರ ಇಂದ್ರಿಯಗಳು ಮತ್ತು ಕರಣಗಳು ಇರುವುವೆಂದು ತೋರಿಸಿ, ಪ್ರಾಣ ಹೋದ ಮೇಲೆ ಶರೀರೇಂದ್ರಿಯಗಳು ಶಿಥಿಲವಾಗುವುವೆಂದು ಹೇಳಿರುವುದರಿಂದ ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನವೆಂದು ಐದು ಬಗೆಯಾಗಿರುವ ಪ್ರಾಣವು ಶರೀರೇಂದ್ರಿಯಗಳನ್ನು ಬಿಗಿಯಾಗಿ ಹಿಡಿದು ಜೀವನಿಗೆ ಸಹಾಯಮಾಡುತ್ತಿವೆ ಎಂದೂ ಸ್ಪಷ್ಟವಾಗಿ ತಿಳಿಸಲಾಗಿದೆ.ಇದರಿಂದ ಚಕ್ಷುರಾದಿಗಳಂತೆ ಪ್ರಾಣವು ಜೀವನಿಗೆ ಉಪಕರಣವೆನಿಸಿದೆ. ಪ್ರಾಣಕ್ಕೆ ಕ್ರಿಯೆ ಇಲ್ಲದ ಮಾತ್ರಕ್ಕೆ ಅದು ಜೀವನಿಗೆ ಹೇಗೆ ಕರಣವಾಗದೆ ಹೋದೀತು ? ಬೇರೆ ಇಂದ್ರಿಯಗಳಿಂದ ಆಗದಿರುವ ದೇಹಧಾರಣವೆಂಬ ಕಾರ್ಯವನ್ನು ಪ್ರಾಣದ ಅಸಾಧಾರಣಧರ್ಮವೆಂದು ಹೇಗೆ ಹೇಳಬಹುದು ? ಹೀಗೆ ಆಕ್ಷೇಪಬಂದರೆ

ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. ಶ್ರುತಿಯು ಪ್ರಾಣದ ಕಾರ್ಯವನ್ನು ಅಸಾಧಾರಣವೆಂದೇ ತಿಳಿಸಿದೆ. ಪ್ರಾಣಸಂವಾದದಲ್ಲಿ ಮುಖ್ಯಪ್ರಾಣವೇ ಶ್ರೇಷ್ಠವೆಂದು ನಿರ್ಧರಿಸಲಾಗಿದೆ. ಆ ಶ್ರೇಷ್ಠಪ್ರಾಣವು ಇತರರಿಗೆ "ನೀವು ಮೋಹಪಡಬೇಡಿ, ನಾನೇ ಐದು ಬಗೆಯಾಗಿ ವಿಭಾಗವನ್ನು ಹೊಂದಿ ಈ ಶರೀರವನ್ನು "ಧರಿಸಿರುವೆನು." ಎಂದು ಹೇಳಿತು. "ಈ ಶರೀರವನ್ನು ಪ್ರಾಣವು ರಕ್ಷಿಸುತ್ತಿದೆ." ಅನೇಕ ಅಶುಚಿಗಳಿಗೆ ಬೀಡಾಗಿರುವ ದೇಹವೆಂಬ ಮನೆಯನ್ನು ಪ್ರಾಣದಿಂದ ಆತ್ಮನು ರಕ್ಷಿಸುತ್ತಿರುವನು. ಮತ್ತು ಅಲ್ಲಿಯೇ ನಿದ್ರಿಸುವನು." ಇದೂ ಅಲ್ಲದೆ, "ಪ್ರಾಣವೇ ಪ್ರಜ್ಞಾತ್ಮವು, ಇದು ಶರೀರವನ್ನು ಹಿಡಿದು ಬೆಳಗುತ್ತಿದೆ" ಈ ಬಗೆಯ ಶ್ರುತಿಗಳಲ್ಲಿ ಶರೀರವನ್ನು ಬೆಳಗಿಸುವಿಕೆ ಎಂಬ ಬೇರೊಂದು ಕಾರ್ಯವನ್ನು ಪ್ರಾಣಕ್ಕೆ ಹೇಳಿರುವುದರಿಂದ ಅದೇ ಮುಖ್ಯವೆನಿಸಿದೆ.

ನನ್ವೇವಂ ನಾಮಭೇದಾತ್ಕಾರ್ಯಭೇದಾಚ್ಚ ಪ್ರಾಣಾದೀನಾಂ ಸತ್ತ್ವಾತ್ ಪ್ರಾಣ ಏಕ ಏವೇತಿ ವ್ಯವಸ್ಥಾ ಕಥಮುಪಪದ್ಯತ ಇತ್ಯಾಶಂಕ್ಯ ತತ್ರಾಹ, ಪಂಚವೃತ್ತಿರ್ಮನೋವದ್ವ್ಯಪದಿಶ್ಯತೇ ॥ ೧೧ ॥ ಯಥಾ ಕಾಮಾದಿವೃತ್ತಿಭೇದೇ ತತ್ಕಾರ್ಯಭೇದೇಽಪಿ ಸ ಕಾಮಾದಿಕಂ ಮನ ಸೋಽಂತರಂ, "ಕಾಮಸ್ಸಂಕಲ್ಪೋ ವಿಚಿಕಿತ್ಸಾ ಶ್ರದ್ಧಾಧೃತಿರಧೃತಿ ರ್ಹ್ರೀರ್ಧೀಃ" ಇತ್ಯೇತತ್ಸರ್ವಂ ಮನ ಏವೇತಿ ವಚನಾತ್, ಏವಂ ಪ್ರಾಣಾಪಾನವ್ಯಾನೋದಾನಸಮಾನಾಖ್ಯಂ ಸರ್ವಮೇತತ್ಪ್ರಾಣ ಏವೇತಿ ಶ್ರುತಿದರ್ಶನಾತ್ ಅಪಾನಾದಯೋಽಪಿ ಪ್ರಾಣಸ್ಯೈವ ವೃತ್ತಿವಿಶೇಷಾಃ ನ ತತ್ತ್ವಾಂತರಮಿತ್ಯವಗಮ್ಯತೇ. ಕಿಂಚ ಪ್ರಾಣಸ್ಯೋಚ್ಛ್ವಸನಿಸ್ವಾಸ ಸರ್ವಶರೀರಕ್ರಿಯೋತ್ಕ್ರಾಂತ್ಯಾಖ್ಯಾನಿ ಚತ್ವಾರಿ ಕಾರ್ಯಾಣಿ. ಪಂಚ ಪಂಚಕಾರ್ಯಂ ಭಕ್ಷಿತಾನ್ನಾದಿರಸಾನಾಂ ಸಮತ್ವೇನ ಸರ್ವಾಂಗೇಷು ಸಂಯುನಮಪೇಕ್ಷ್ಯ ಪಂಚವಿಧಕಾರ್ಯಭೇದೇಽಪಿ ಕಾರಣರೂಪಪ್ರಾಣ ವಾಯುರೇಕ ಏವ. ಜಡಸ್ಯ ಪ್ರಾಣಸ್ಯ ಕಾರ್ಯರೂಪಪರಿಣಾಮ ಸತ್ತ್ವಾಭಾವೇಽಪಿ ತದ್ವಿಶಿಷ್ಟತಯಾ ಪ್ರಾಣಲಿಂಗಾತ್ಮಕಸ್ಯ ಪರಶಿವಸ್ಯ ಸತ್ತ್ವಾತ್ ತಸ್ಯ ಕ್ರಿಯಾಕಾರಿತ್ವಮವಿರೋಧಂ.

ಹೀಗೆ ಹೆಸರಿನಲ್ಲೂ ಕಾರ್ಯದಲ್ಲೂ ಪ್ರಾಣಾದಿಗಳು ಅನೇಕವಾಗಿರುವಾಗ್ಗ "ಪ್ರಾಣ ಒಂದೇ" ಎಂಬ ವ್ಯವಸ್ಥೆ ಹೇಗೆ ಹೊಂದುತ್ತದೆ ಎಂದಾಶಂಕಿಸಿ ಪರಿಹರಿಸುತ್ತಾನೆ. ವೃತ್ತಿಯಿಂದಲೂ ಮತ್ತು ಕಾರ್ಯದಿಂದಲೂ ಭೇದವಿದ್ದರೂ ಕಾಮಾದಿಗಳು ಮನಸ್ಸಿಗಿಂತ ಬೇರೆಯಲ್ಲ. ಕಾಮ, ಸಂಕಲ್ಪ, ಸಂಶಯ, ಶ್ರದ್ಧೆ, ಧೈರ್ಯ, ಅಧೈರ್ಯ, ಲಜ್ಜೆ, ಬುದ್ಧಿ, ಭಯ ಇವೆಲ್ಲವೂ ಮನಸ್ಸೆನಿಸಿವೆ" ಎಂಬ ವಚನವೂ ಈಬಗ್ಗೆ ಪ್ರಮಾಣವಾಗಿದೆ. ಹಾಗೆಯೇ ಪ್ರಾಣ ಅಪಾನ ಮೊದಲಾದವೆಲ್ಲವೂ ಪ್ರಾಣವೆನಿಸಿವೆ. ಇದರಿಂದ ಅಪಾನ ಮೊದಲಾದವೂ ಸಹ ಪ್ರಾಣದ ವ್ಯಾಪಾರ

ವಿಶೇಷಗಳೇ ಹೊರತು ಬೇರೊಂದು ವಸ್ತುವಲ್ಲವೆಂದು ತಿಳಿಯಬರುತ್ತದೆ. ಇದೂ ಅಲ್ಲದೆ, ಪ್ರಾಣಕ್ಕೆ ಉಚ್ಛ್ವಾಸ, ನಿಶ್ವಾಸ, ಶರೀರದ ಕ್ರಿಯೆ, ಉತ್ಕ್ರಮಣ ಎಂಬ ನಾಲ್ಕು ಕಾರ್ಯಗಳಿವೆ. ತಿಂದ ಅನ್ನದ ರಸವನ್ನು ಸಮವಾಗಿ ಎಲ್ಲಾ ಅವಯವಗಳಿಗೂ ಸಾಗಿಸುವ ಮೂಲಕ ಪ್ರಾಣಾದಿಗಳಿಗೆ ಸಹಜವಾಗಿ ಐದು ಬಗೆಯ ಕಾರ್ಯಗಳು ಪ್ರತ್ಯೇಕವಾಗಿದ್ದರೂ ಕಾರಣವೆನಿಸಿದ ಪ್ರಾಣವಾಯು ಮಾತ್ರ ಒಂದೇ ಆಗಿದೆ. ಆದರೆ ಜಡವಾದ ಪ್ರಾಣವು ಕಾರ್ಯರೂಪದಿಂದ ಪರಿಣಮಿಸಲಾರದು. ಆದ್ದರಿಂದ ಅದ ರೊಡಗೂಡಿದ ಪ್ರಾಣಲಿಂಗರೂಪನಾದ ಪರಶಿವನ ಸಾನ್ನಿಧ್ಯದಿಂದ ಅದು ಕ್ರಿಯೆ ಯನ್ನು ನಡೆಸುವುದರಲ್ಲಿ ವಿರೋಧವೇನಿಲ್ಲ.

"ಪ್ರಾಣಸ್ಯ ಪ್ರಾಣಃ" ಇತ್ಯಾದಿಶ್ರುತಿಶ್ರವಣಾತ್, "ತಮು ತ್ಕ್ರಾಂತಂ"ಇತಿ ಶ್ರುತೌ ಪ್ರಾಣಸ್ಯೋತ್ಕ್ರಾಂತಿಹೇತುತ್ವೇನ ಸೂಕ್ಷ್ಮತ್ವ ಮಿತಿ ಚೇತ್ಸರ್ವೇಷಾಂ ಸರ್ವಶರೀರವ್ಯಾಪಕತ್ವೇನ ತಸ್ಯೈವ ಮಹತ್ತ್ವಾ ವಗಮಾದಣುರೂಪಸ್ಯ ವ್ಯಾಪಕತ್ವಾಯೋಗಾತ್, "ಸಮ ಏಭಿ ಸ್ತ್ರಿಭಿರ್ಲೋಕೈಸ್ಸಮಾನೇನ ಸರ್ವೇಣ" ಇತಿಶ್ರುತಿವ್ಯಪದೇಶಾಚ್ಚ ಉತ್ಕ್ರಾಂತಿಶ್ರುತ್ಯಾ ಅಣುತ್ವವಾದೋ ಹ್ಯಸಂಗತ ಇತ್ಯಾಶಂಕ್ಯಾಹ. ಅಣುಶ್ಚ||೧೧||"ಪ್ರಾಣೇ ಸರ್ವಂ ಪ್ರತಿಷ್ಠಿತಂ ಸರ್ವಂ ಹೀದಂ ಪ್ರಾಣೇನಾ ವೃತಂ" ಇತ್ಯಾದಿಶ್ರುತಿಶ್ರವಣಾತ್ ಪ್ರಾಣಸ್ಯ ಮಹತ್ಪರಿಮಾಣಮೇವೇತಿ ಯತ್ತದುಕ್ತಂ ತನ್ನ ಯುಜ್ಯತೇ. ಪ್ರಾಣಸ್ತು ಹೃದಯೇ ಜೀವವತ್ಸೂ ಕ್ಷ್ಮರೂಪೇಣ ಸ್ಥಿತ್ವಾ ಪ್ರಾಣಾಪಾನಾದಿವೃತ್ತ್ಯಾ ಬೃಹತ್ಪರಿಮಾಣ ಇತ್ಯ ವಿರುದ್ಧಂ. ತಸ್ಯ ಮಹತ್ತ್ವೇ "ತಮುತ್ಕ್ರಾಮಂತಂ ಸರ್ವೇ ಪ್ರಾಣಾ ಉತ್ಕ್ರಾಮಂತಿ" ಇತ್ಯಾದಿಬಹುಶ್ರುತಿಯುಕ್ತ್ಯನುಭವತಯಾ ಪ್ರಾಣೋ ತ್ಕ್ರಮಣಸ್ಯ ದರ್ಶನಾತ್, ಮಹತ್ತ್ವಮಾತ್ರತ್ವೇ ಉತ್ಕ್ರಾಂತ್ಯಸಂಭ ವಾಚ್ಚ ಪ್ರಾಣಃ ಅಣುಶ್ಚೇತಿ ನಿಶ್ಚೀಯತೇ. "ಸಮ ಏಭಿಸ್ತ್ರಿಭಿ ರ್ಲೋಕೈಃ"ಇತಿ ಶ್ರುತಿಸ್ತು ಸರ್ವವಾಯುಪರಾ; ನಾಧ್ಯಾತ್ಮಿಕವಾಯುಪ ರೇತ್ಯವಿರೋಧಃ. ಕಿಂಚ "ಆಕಾಶಶರೀರಂ ಬ್ರಹ್ಮ ಸತ್ಯಾತ್ಮ ಪ್ರಾಣಾ ರಾಮಂ ಮನಆನಂದಂ", "ಶಾಂತಿಸಮೃದ್ಧಮಮೃತಂ" ಇತಿಶ್ರುತಿ ದರ್ಶನಾತ್ ಪರಶಿಕಳಾಭಿವ್ಯಕ್ತಾಪ್ರಾಕೃತಪಂಚಬ್ರಹ್ಮಮಯಸಕಲಜೀವ ನಿಯಾಮಕಚಿದಾಕಾಶಶರೀರಾಮೃತಾನಂತಮಹಿಮಾಕರಮಹಾಕೈಲಾ ಸವಾಸಮಹೇಶ್ವರಪ್ರಾಣಪರತ್ವೇ ವಾ ಮಹತ್ತ್ವಶ್ರುತಿರಿತಿ ವೇದಿತವ್ಯಾ. ತಸ್ಯಾಮೃತತ್ವವ್ಯಪದೇಶೇನೋತ್ಕ್ರಾಂತ್ಯಸಂಭವಾತ್ ಪ್ರಾಕೃತರಜೋ ಗುಣಜನ್ಯತ್ವಾಭಾವಾಚ್ಚ.

"ಅವನು ಪ್ರಾಣಕ್ಕೆ ಆಧಾರವಾದ್ದರಿಂದ ಪ್ರಾಣನಾಗಿದ್ದಾನೆ" ಎಂದು ಶ್ರುತಿಯಲ್ಲಿ ಹೇಳಿರುವುದರಿಂದ "ದೇಹದಿಂದ ಹೊರಡುತ್ತಿರುವ ಮುಖ್ಯ ಪ್ರಾಣವನ್ನು

ಅನುಸರಿಸಿಕೊಂಡೇ ಇಂದ್ರಿಯಗಳು ಹೊರಡುತ್ತವೆ" ಎಂಬಲ್ಲಿ ಪ್ರಾಣವು ಉತ್ಕ್ರಮಣಕ್ಕೆ ಕಾರಣವಾದ್ದರಿಂದ ಸೂಕ್ಷ್ಮವೆನಿಸಿದೆ ಎಂದು ಹೇಳುವುದಾದರೆ ಪ್ರಾಣವು ಶರೀರದ ಎಲ್ಲಾ ಕಡೆಗಳಲ್ಲೂ ವ್ಯಾಪಿಸಿರುವುದರಿಂದ ಅದು ಅಣುವಾದರೆ ಅದಕ್ಕೆ ಅಂತಹ ವ್ಯಾಪ್ತಿ ಬರುವುದಿಲ್ಲವಾದ್ದರಿಂದ ಅದನ್ನು ಮಹತ್ತೆಂದೇ ಹೇಳಬೇಕು. "ಈ ಮೂರು ಲೋಕಕ್ಕೂ ಪ್ರಾಣವು ಸಮಾನವಾಗಿದೆ" ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಉತ್ಕ್ರಾಂತಿಶ್ರುತಿಯಿಂದ ಪ್ರಾಣವನ್ನು ಅಣುವೆಂದು ವಾದಿಸುವುದು ಹೊಂದುವುದಿಲ್ಲವೆಂದು ಆಶಂಕಿಸಿ ಪರಿಹರಿಸುತ್ತಾನೆ. "ಮೂರುಲೋಕಕ್ಕೂ ಪ್ರಾಣವು ಸಮಾನವಾಗಿದೆ ಮತ್ತುಎಲ್ಲಕ್ಕೂ ಸಮಾನವಾಗಿದೆ" "ಪ್ರಾಣದಲ್ಲಿ ಎಲ್ಲವೂ ನೆಲಸಿದೆ. ಇದೆಲ್ಲವೂ ಪ್ರಾಣದಿಂದಾವೃತವಾಗಿದೆ" ಹೀಗೆ ಶ್ರುತಿಯಲ್ಲಿ ಹೇಳಿರುವ ಪ್ರಾಣವನ್ನು ವಿಭುವೆಂದು ಹೇಳುವುದು ಯುಕ್ತವಲ್ಲ; ಯಾಕೆಂದರೆ ಜೀವನಂತೆ ಪ್ರಾಣವು ಹೃದಯದಲ್ಲಿ ಸೂಕ್ಷ್ಮರೂಪದಿಂದಿದ್ದು ಪ್ರಾಣ ಅಪಾನ ಮೊದಲಾದ ವೃತ್ತಿಗಳಿಂದ ಬೃಹದಾಕಾರವನ್ನು ಹೊಂದಬಹುದು. ಇದರಲ್ಲಿ ಏನೂ ವಿರೋಧವಿಲ್ಲ, ಆದರ ಮಹತ್ತ್ವದಂತೆಯೇ ಉತ್ಕ್ರಮಣವೂ ಅನೇಕ ಶ್ರುತಿಗಳಿಗೆ ಸಮ್ಮತವಾದ್ದರಿಂದ ಅದು ಮಹತ್ತಾದರೆ ಉತ್ಕ್ರಮಣವು ಸಂಭವಿಸದಿರುವುದರಿಂದ ಅದನ್ನು ಅಣುವೆಂದೂ ನಿಶ್ಚಯಿಸಲಾಗಿದೆ. "ಈ ಮೂರು ಲೋಕಗಳಿಗೆ ಸಮಾನವೆನಿಸಿದೆ" ಎಂಬ ಶ್ರುತಿಯು ಎಲ್ಲಾ ವಾಯುಗಳಿಗೂ ಅನ್ವಯಿಸುತ್ತದೆಯೇ ಹೊರತು ಪ್ರಾಣವಾಯುವಿಗೆ ಮಾತ್ರವೇ ಅನ್ವಯಿಸುವುದಿಲ್ಲವಾದ್ದರಿಂದ ವಿರೋಧವಿಲ್ಲ. "ಆಕಾಶವೇ ಬ್ರಹ್ಮದ ಶರೀರ, ಸತ್ಯವೇ ಆತ್ಮ", "ಶಾಂತಿಯಿಂದ ಶೋಭಿಸುವ ಅಮೃತನು" "ಈಬಗೆಯ ಶ್ರುತಿಗಳಲ್ಲಿ ಪರಶಿವನ ಕಲೆಯಿಂದ ಅಭಿವ್ಯಕ್ತವಾದ ಸದ್ಯೋಜಾತಾದಿದಿವ್ಯ ಪಂಚಬ್ರಹ್ಮಮಯವೂ,ಸಕಲಜೀವನಿಯಾಮಕವೂ ಆದ ಚಿದಾಕಾಶವೇ ಶರೀರವೆನಿಸಿ, ಅಮೃತವೂ ಅನಂತವೂ ಆದ ಮಹಿಮೆಗಾಕರವಾದ ಮಹಾಕೈಲಾಸದಲ್ಲಿ ನೆಲಸಿರುವ ಮಹೇಶ್ವರನೇ ಪ್ರಾಣನೆನಿಸಿರುವುದರಿಂದ ಅಂತಹ ಪ್ರಾಣದೇವನನ್ನು ಶ್ರುತಿಯು ಮಹತ್ತೆಂದು ಕರೆದಿರುವುದು ಯುಕ್ತವೇ ಆಗಿದೆ. ಅಂತಹ ಪ್ರಾಣದೇವನನ್ನು ಅಮೃತವೆಂದು ಕರೆದದ್ದರಿಂದ ಅದಕ್ಕೆ ಉತ್ಕ್ರಮಣವೂ ಸಂಭವಿಸುವುದಿಲ್ಲ, ಅದು ಪಂಚಭೂತಗಳ ಸಂಬಂಧವಾದ ರಜೋಗುಣದಿಂದ ಹುಟ್ಟುವುದೂ ಇಲ್ಲ. ಅದು ಜಡವೂ ಅಲ್ಲ. ಈ ದೃಷ್ಟಿಯಿಂದ ಪ್ರಾಣಕ್ಕೆ ಮಹತ್ತ್ವವನ್ನು ಶ್ರುತಿ ತಿಳಿಸಿದೆ.

**ಜಡತ್ವಾಚ್ಚ ಪ್ರಧಾನಸ್ಯ ಜಗತ್ಕಾರಣತ್ವಂ ಪುರಾ ನಿರಸ್ತಮತೋ ಹ್ಯಚೇತನಾನಾಂ ಪ್ರಾಣೇಂದ್ರಿಯಾಣಾಂ ಸ್ವತಃ ಸ್ವವ್ಯಾಪಾರಪ್ರವರ್ತಕತ್ವಂ ಕಥಮುಪಪದ್ಯತ ಇತ್ಯಾಶಂಕಾಯಾಮಧಿಕರಣಾಂತರೇಣಾಹ. ಜ್ಯೋತಿರಾದ್ಯಧಿಕರಣಂ ॥ ೫ ॥ ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ಪ್ರಾಣವತಾ ಶಬ್ದಾತ್ ॥ ೧೨ ॥ ತುಶಬ್ದೋಽತ್ರ ನಿಶ್ಚಯಾರ್ಥಕಃ. ಚಕ್ಷುರಾದೀಂದ್ರಿಯಾಣಿ ಜ್ಯೋತಿರಾದೀನಾಂ ಸೂರ್ಯಾದಿದೇವತಾನಾಮ**

ಧಿಷ್ಠಾನಾನಿ ನಿವಾಸಸ್ಥಾನಾನಿ, ಕುತಃ ತದಾಮನನಾತ್ “ ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶತ್ ” ಇತಿ ಶ್ರುತೌ ತಾಸಾಂ ಸೂರ್ಯಾದಿದೇವತಾನಾಂ ಆಮನನಾತ್ ಮುಖಾದಿಸ್ಥಾನೇಷು ಪ್ರವೇಶಕಥನಾತ್ ಪ್ರಾಣವತಾ ಜೀವೇನ ಸಹ ಸೂರ್ಯಾದಿದೇವತಾನಾಂ ಪರಶಿವಾಂತರ್ಯಾಮಿತಯಾ ಇಂದ್ರಿಯಪ್ರೇರಕತ್ವಂ ಉತ ಸ್ವಾತಂತ್ರ್ಯೇಣ ? ಕಥಂ, ಶಬ್ದಾತ್. “ ಯ ಆದಿತ್ಯಮಂತರೋ ಯಮಯತಿ ಸ ತ ಆತ್ಮಾಂತರ್ಯಾಮ್ಯಮೃತಃ ” “ ಏಕೋ ವಿಷ್ಣುರ್ಮಹದ್ಭೂತಂ ಪೃಥಗ್ಭೂತಾನ್ಯನೇಕಶಃ ” “ ಈಶ್ವರಸ್ಸರ್ವಭೂತಾನಾಂ ” ಇತ್ಯಾದಿಶ್ರುತಿಷು ಇಂದ್ರಿಯಾಭಿಮಾನಿವಿಷ್ಣ್ವಾದಿಸರ್ವದೇವತಾಂತರ್ಯಾಮಿತಯಾ ಮಹೇಶ್ವರಸ್ಯೈವ ಜೀವಕೃತಕರ್ಮಾನುಸಾರೇಣೇಂದ್ರಿಯಪ್ರೇರಕತ್ವಪ್ರತಿಪಾದಕಶ್ರುತಿಬಲಾದೇತದುಪಪನ್ನಮಿತಿ ಸೂಕ್ತ್ಯಾರ್ಥಃ. ಶ್ರೇಷ್ಠಾನಾಂ ಪ್ರಾಣಾನಾಂ ಬ್ರಹ್ಮಣ ಉತ್ಪತ್ತಿರಿತಿ ಯತ್ಪರಿಣಾಮ ಉಕ್ತಸ್ತೇಷಾಂ ಪ್ರಾಣಾನಾಮಗ್ನ್ಯಾದಿದೇವತಾಧಿಷ್ಠಿತತ್ವಂ ಚ ಪೂರ್ವಮೇವ “ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ” ಇತ್ಯನೇನ ಸೂತ್ರೇಣ ಪ್ರಸಂಗಾದುಪಪಾದಿತಂ. ಜೀವಸ್ಯ ಚ ಸ್ವಭೋಗಸಾಧನಾನಾಮೇಷಾಮಧಿಷ್ಠಾತೃತ್ವಂ ಲೋಕಪ್ರಸಿದ್ಧಂ, “ ಏಷ ಏವೈತಾನ್ಪ್ರಾಣಾನ್ ಗೃಹೀತ್ವಾ ಸ್ವೇ ಶರೀರೇ ಯಥಾಕಾಮಂ ಪರಿವರ್ತತೇ ” ಇತ್ಯಾದಿಶ್ರುತಿಸಿದ್ಧಂ ಚ. ಏವಮಿಹ “ ಆದಿತ್ಯಶ್ಚಕ್ಷುರ್ಭೂತ್ವಾಕ್ಷಿಣೀ ಪ್ರಾವಿಶತ್ ” ತತ್ರ “ ಚಕ್ಷುಷಾ ರೂಪಾಣಿ ಪಶ್ಯತಿ ” ಇತ್ಯಾದಿಶ್ರುತಿಷು ಪರಮೇಶ್ವರಾದಿತರಜೀವಸ್ಯಾಗ್ನ್ಯಾದಿದೇವತಾನಾಂ ಚ ಪ್ರಾಣವಿಷಯಮಧಿಷ್ಠಾನಂ ಕಿಂ ಸ್ವಾಯತ್ತಂ ಉತ ಪರಾಯತ್ತಮಿತಿ ವಿಶಯಃ. ತತ್ರ ಚಕ್ಷುಷಾ ರೂಪಾಣಿ ಪಶ್ಯತಿ, “ ಆದಿತ್ಯಶ್ಚಕ್ಷುರ್ಭೂತ್ವಾಕ್ಷಿಣೀ ಪ್ರಾವಿಶತ್ ” ಇತಿ ಶ್ರುತಿದರ್ಶನಾಜ್ಜೀವಸೂರ್ಯಾದೀನಾಮೇವ ಪ್ರಾಣೇಂದ್ರಿಯಪ್ರೇರಕತ್ವಂ. ಶಿವಸ್ಯ ಬ್ರಹ್ಮಣಸ್ತತ್ಪ್ರೇರಕತ್ವೇ ಭೋಕ್ತೃತ್ವಪ್ರಸಂಗೇನ ಜೀವಸ್ಯ ಭೋಕ್ತೃತ್ವಂ ನ ಸ್ಯಾತ್, ತಥಾ ಚೇತ್ಪುಣ್ಯಪಾಪಕರ್ಮಫಲಕಸುಖದುಃಖಾತ್ಮಕಸ್ವರ್ಗನರಕಫಲಭೋಕ್ತೃತ್ವಾದನೀಶ್ವರತ್ವಂ ತಸ್ಯೈವೋಪಪದ್ಯತೇ. ತಸ್ಮಾಜ್ಜೀವಸ್ಯ ಸೂರ್ಯಾದೀನಾಂ ವಾ ಪ್ರಾಣಾದಿಪ್ರೇರಕತ್ವಮಿತಿ ಪ್ರಾಪ್ತೇ ಪ್ರಚಕ್ಷ್ಮಹೇ. ಜ್ಯೋತಿರಾದ್ಯಧಿಷ್ಠಾನಮಿತಿ ಪ್ರಾಣವತಾ ಜೀವೇನ ಸಹ ಜ್ಯೋತಿರಾದೀನಾಂ ಸೂರ್ಯವಹ್ನ್ಯಾದಿದೇವತಾನಾಂ ಪ್ರಾಣಾದಿವಿಷಯಃ ಅಧಿಷ್ಠಾನಂ ತದಾಮನನಾತ್ ತಸ್ಯ ಪರಮಾತ್ಮನಃ ಶಿವಸ್ಯ ಆಮನನಾದ್ಭವತಿ, ಆಮನನಮಾಭಿಮುಖ್ಯೇನ ಮನನಂ ಪರಮಾತ್ಮನಸ್ಸಂಕಲ್ಪಾದೇವ ಸಂಭವತಿ. “ ಓಂ ತತ್ಸವಿತುರ್ವರೇಣ್ಯಂ

ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್ ”, “ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ಪ್ರಸೃತಾ ಪುರಾಣೀ ॥ ” ಇತ್ಯಾದಿಶ್ರುತಿಷು ಸವಿತುಸ್ಸೂರ್ಯಸ್ಯ ವರೇಣ್ಯಂ ವರಣೀಯಮುಪಾಸನೀಯಂ ಇತ್ಯಾದಿನಾ ಸೂರ್ಯಾಂತರ್ಯಾಮಿತಯಾ ಪರಮೇಶ್ವರಸ್ಯ ಪ್ರೇರಕತ್ವದರ್ಶನಾತ್ ತತ್ಸಂಕಲ್ಪಾದೇವ ಸರ್ವೇಷಾಂ ಇಂದ್ರಿಯಾಧಿಷ್ಠಾನದೇವತಾನಾಂ ಪ್ರಯೋಜಕತ್ವಮಿತ್ಯರ್ಥಃ. ಕುತಃ, ಶಬ್ದಾತ್, ಪಾದಾದೀಂದ್ರಿಯಾಣಾಂ ವಿಷ್ಣ್ವಾದ್ಯಭಿಮಾನದೇವತಾನಾಂ ಜೀವಾತ್ಮನಶ್ಚ ಸ್ವಕಾರ್ಯೇಷು ಪರಮಪುರುಷಶಿವಮನನಾಯತ್ತತ್ವಶಾಸ್ತ್ರಾತ್. ಯಥಾಂತರ್ಯಾಮಿಬ್ರಾಹ್ಮಣೇ “ಯೋಽಗ್ನೌ ತಿಷ್ಠನ್ನಗ್ನೇರಂತರಃ ಯಮಗ್ನಿರ್ನ ವೇದ ಯಸ್ಯಾಗ್ನಿಶ್ಶರೀರಂ ಯೋಽಗ್ನಿಮಂತರೋ ಯಮಯತಿ ಸ ತ ಆತ್ಮಾಂತರ್ಯಾಮ್ಯಮೃತಃ ”, “ಯೋ ವಾಯೌ ತಿಷ್ಠನ್, ಯ ಆದಿತ್ಯೇ ತಿಷ್ಠನ್, ಯ ಆತ್ಮನಿ ತಿಷ್ಠನ್, ಯಶ್ಚಕ್ಷುಷಿ ತಿಷ್ಠನ್ ” ಇತ್ಯಾದಿನಾ ಸರ್ವಾಂತರ್ಯಾಮಿತ್ವಂ ಸರ್ವನಿಯಾಮಕತ್ವಂ ಚೋಪದಿಷ್ಟಂ. “ಯೋ ರುದ್ರೋ ಅಗ್ನೌ ಯೋ ಅಪ್ಸು”, “ಭೀಷಾಽಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ । ಭೀಷಾಸ್ಮಾದಗ್ನಿಶ್ಚೇಂದ್ರಶ್ಚ ಮೃತ್ಯುರ್ಧಾವತಿ ಪಂಚಮಃ ॥ ” “ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಾ ನೇಮೋ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ”, “ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ” “ಏತಸ್ಯ ವಾಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ ” ಇತ್ಯಾದಿಷು ಶಿವಸ್ಯ ಸರ್ವಾಂತರ್ಯಾಮಿತ್ವಂ ಸರ್ವಭಯಹೇತುತ್ವಂ ಸರ್ವಪ್ರಕಾಶಕತ್ವಂ ಸರ್ವಾಧಾರತ್ವಂ ಚ ಸ್ಪಷ್ಟಮುಪದಿಷ್ಟಂ. ಅತೋ ಜೀವವಿಷ್ಣ್ವಾದಿಭೂತಾನಾಂ ಸ್ವಾತಂತ್ರ್ಯೇಣ ಪ್ರಾಣೇಂದ್ರಿಯಪ್ರೇರಕತ್ವಮನುಪಪನ್ನಮಿತಿ ನಿರ್ದಿಷ್ಟಂ.

ಜಡವಾದ್ದರಿಂದ ಪ್ರಧಾನವು ಜಗತ್ಕಾರಣವಾಗಲಾರದೆಂದು ನಿಷೇಧಿಸಿದಂತೆ ಅಚೇತನವಾದ ಪ್ರಾಣೇಂದ್ರಿಯಗಳು ಸ್ವತಂತ್ರವಾಗಿ ತಮ್ಮ ವ್ಯಾಪಾರಗಳಲ್ಲಿ ಹೇಗೆ ಪ್ರವರ್ತಿಸಬಹುದು ? ಎಂದಾಶಂಕಿಸಿ ಪರಿಹರಿಸುತ್ತಾನೆ. ಸೂತ್ರದಲ್ಲಿ ತುಶಬ್ದವು ನಿಶ್ಚಯವನ್ನು ತಿಳಿಸುತ್ತದೆ. “ಅಗ್ನಿಯೇ ವಾಕ್ಕೆನಿಸಿ ಬಾಯನ್ನು ಹೊಕ್ಕನು ” ಹೀಗೆ ಶ್ರುತಿಯಲ್ಲಿ ಸೂರ್ಯಾದಿದೇವತೆಗಳೇ ಬಾಯಿ ಮೊದಲಾದ ಸ್ಥಾನಗಳಲ್ಲಿ ಪ್ರವೇಶಿಸಿರುವುದಾಗಿ ಹೇಳಲಾಗಿದೆ. ಆದರೆ ಅವರು ಸ್ವತಂತ್ರವಾಗಿ ಇಂದ್ರಿಯಗಳನ್ನು ಪ್ರೇರಿಸುತ್ತಿರುವರೊ ? ಅಥವಾ ಅವರೊಳಗೆ ಅಂತರ್ಯಾಮಿಯಾಗಿರುವ ಪರಶಿವನ ಪ್ರಭಾವದಿಂದ ಅವನ್ನು ಪ್ರೇರಿಸುತ್ತಿರುವರೋ? ಅಂದರೆ, “ಯಾವನು ಆದಿತ್ಯನೊಳಗೇ ಇದ್ದು ಅವನನ್ನು ನಿಯಮನಮಾಡುವನೋ ಅವನೇ ನಿನ್ನ ಅಂತರ್ಯಾಮಿ “ವಿಷ್ಣು

ಒಬ್ಬನೇ ಪ್ರಧಾನಜೀವನು, ಉಳಿದವರೆಲ್ಲರೂ ಭಿನ್ನರಾಗಿದ್ದಾರೆ." "ಜೀವರೆಲ್ಲರಿಗೂ ಈಶ್ವರನೇ ನಿಯಾಮಕನು" ಈ ಶ್ರುತಿಗಳಲ್ಲಿ ಇಂದ್ರಿಯಗಳಿಗೆ ಅಭಿಮಾನಿಗಳೆನಿಸಿದ ವಿಷ್ಣ್ವಾದಿದೇವತೆಗಳೆಲ್ಲರಲ್ಲೂ ಅಂತರ್ಯಾಮಿಯಾದ್ದರಿಂದ ಮಹೇಶ್ವರನೇ ಜೀವನ ಕರ್ಮಾನುಸಾರವಾಗಿ ಇಂದ್ರಿಯಗಳನ್ನು ಪ್ರೇರಿಸುವನೆಂದು ಪ್ರತಿಪಾದಿಸಲಾಗಿದೆ. "ಶ್ರೇಷ್ಠಪ್ರಾಣಗಳು ಬ್ರಹ್ಮದಿಂದ ಹುಟ್ಟಿವೆ" ಎಂಬಂತೆ ಪ್ರಾಣಗಳು ಬ್ರಹ್ಮದ ಪರಿಣಾಮವೆಂದೂ, ಅವೇ ಅಗ್ನ್ಯಾದಿ ದೇವತೆಗಳಿಗೆ ಆಶ್ರಯವೆಂದೂ ಹಿಂದೆಯೇ "ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ" (೨-೧-೭) ಎಂಬ ಸೂತ್ರದಲ್ಲಿ ಪ್ರಾಸಂಗಿಕವಾಗಿ ತಿಳಿಸಲಾಗಿದೆ. ಜೀವನು ತನ್ನ ಭೋಗಸಾಧನಗಳೆಲ್ಲಕ್ಕೂ ಆಶ್ರಯನೆಂಬುದು ಲೋಕಪ್ರಸಿದ್ಧವಾಗಿದೆ. "ಇವನು ಈ ಪ್ರಾಣಗಳನ್ನು ಹಿಡಿದು ತನ್ನ ಶರೀರದಲ್ಲಿ ಯಥೇಚ್ಛವಾಗಿ ವ್ಯವಹರಿಸುತ್ತಾನೆ" ಎಂಬ ಶ್ರುತಿಯಲ್ಲೂ ಇದೇ ಅಂಶವನ್ನು ತಿಳಿಸಲಾಗಿದೆ. ಹೀಗೆಯೇ "ಆದಿತ್ಯನು ಕಣ್ಣೆನಿಸಿ ಕಣ್ಣಿನಲ್ಲಿ ಪ್ರವೇಶಿಸಿದನು," ಅದರಲ್ಲೂ "ಕಣ್ಣಿಂದ ರೂಪವನ್ನು ನೋಡುತ್ತಾನೆ" ಎಂಬ ಈ ಶ್ರುತಿಗಳಲ್ಲಿ ಜೀವನಿಗೂ ಅಗ್ನ್ಯಾದಿದೇವತೆಗಳಿಗೂ ಪ್ರಾಣದ ಆಶ್ರಯ ದೊರೆತಿರುವುದು ಅವರ ಸ್ವಾತಂತ್ರ್ಯದಿಂದಲೋ ಅಥವಾ ಪರಮೇಶ್ವರನ ಇಚ್ಛೆಯಿಂದಲೋ ? ಎಂಬ ಸಂಶಯ ಬರುತ್ತದೆ. ಆದಿತ್ಯನೇ ಕಣ್ಣನ್ನು ಪ್ರವೇಶಿಸಿರುವನೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಜೀವ, ಸೂರ್ಯ ಮೊದಲಾದವರೇ ಪ್ರಾಣ ಮತ್ತು ಇಂದ್ರಿಯಗಳಿಗೆ ಪ್ರೇರಕರೆನಿಸಿದ್ದಾರೆ. ಪರಶಿವನು ಅವುಗಳ ಪ್ರೇರಕನಾದರೆ ಅವನೇ ಭೋಕ್ತೃವೂ ಆಗಬೇಕಾದ್ದರಿಂದ ಜೀವನಿಗೆ ಭೋಗವೇ ಇಲ್ಲವಾಗುವುದು. ಹೀಗಾದರೆ ಪುಣ್ಯಪಾಪಕರ್ಮಗಳಿಂದ ಉಂಟಾಗುವ ಸುಖ ದುಃಖರೂಪವಾದ ಸ್ವರ್ಗ ನರಕಗಳನ್ನು ಭೋಗಿಸುವುದರಿಂದ ಪರಶಿವನು ಈಶ್ವರನೇ ಆಗದೇಹೊಗಬೇಕಾಗುತ್ತದೆ. ಆದ್ದರಿಂದ ಜೀವನಾಗಲೀ ಸೂರ್ಯಾದಿದೇವತೆಗಳಾಗಲೀ ಪ್ರಾಣಾದಿಗಳಿಗೆ ಪ್ರೇರಕರಾಗುವರೆಂದೇ ಹೇಳಬೇಕು. ಹೀಗೆ ಆಕ್ಷೇಪಬಂದರೆ ಸಮಾಧಾನವನ್ನು ಸೂತ್ರವೇ ತಿಳಿಸುತ್ತದೆ. ಪ್ರಾಣಸಹಿತನಾದ ಜೀವನೊಡನೆ ಸೂರ್ಯಾದಿದೇವತೆಗಳು ಪ್ರಾಣೇಂದ್ರಿಯಗಳಲ್ಲಿ ನೆಲಸಿರುವರೆಂದು ಶ್ರುತಿಯಿಂದ ತಿಳಿದುಬರುತ್ತದೆ. ಇಲ್ಲಿ ತದಾಮಾನನವೆಂದರೆ ತತ್—ಆ ಪರಶಿವನ—ಆಸಮಂತಾನ್ಮನನಂ—ಆಭಿಮುಖ್ಯದಿಂದ ನಡೆಯುವ ಸಂಕಲ್ಪವೆಂದರ್ಥ. ಆದ್ದರಿಂದ ಸೂರ್ಯಾದಿದೇವತೆಗಳು ಅಲ್ಲಲ್ಲಿ ನೆಲಸಿದ್ದರೂ ಅವರೊಳಗೆ ನೆಲಸಿರುವ ಪರಮೇಶ್ವರನೇ ಅವೆಲ್ಲಕ್ಕೂ ಪ್ರೇರಕನೆನಿಸಿದ್ದಾನೆ. ಅವನ ಸಂಕಲ್ಪದಿಂದಲೇ ಎಲ್ಲಾ ಇಂದ್ರಿಯಾಧಿಷ್ಠಾನದೇವತೆಗಳೂ ತಮ್ಮ ತಮ್ಮ ಕಾರ್ಯದಲ್ಲಿ ಪ್ರವರ್ತಿಸುತ್ತಾರೆ. "ಸೂರ್ಯನಿಗಿಂತಲೂ ಹೆಚ್ಚು ಪ್ರಕಾಶವೆನಿಸಿದ ಪರಶಿವನ ತೇಜಸ್ಸನ್ನು ಸ್ತುತಿಸುತ್ತೇವೆ. ಯಾವ ಈ ಮಹಾದೇವನು ನಮ್ಮ ಬುದ್ಧಿಯನ್ನು ಪ್ರೇರಿಸಲಿ" "ಪ್ರಳಯದಲ್ಲಿ ಹಗಲು ರಾತ್ರಿಗಳಿಲ್ಲದೆ, ಸದಸದ್ವಸ್ತುವಿವೇಚನವೇ ಇಲ್ಲದಿರುವಾಗ ಶಿವನೊಬ್ಬನೇ ಶೋಭಿಸುತ್ತಿದ್ದನು. ಅವನು ನಾಶರಹಿತನೂ, ಕೋಟಿಸೂರ್ಯಪ್ರಾಕಾಶನೂ

ಆಗಿದ್ದಾನೆ. ಅವನಿಂದಲೇ ಸನಾತನವಾದ ಪ್ರಜ್ಞಾಶಕ್ತಿ ಹೊರಹೊಮ್ಮಿತು." ಈ ಶ್ರುತಿಗಳಲ್ಲಿ ಸೂರ್ಯನಿಗೂ "ವರೇಣ್ಯಂ—ಉಪಾಸನಯೋಗ್ಯನು" ಎಂದು ಹೇಳಿದ್ದರಿಂದ ಸೂರ್ಯಾಂತರ್ಯಾಮಿಯಾಗಿ ಈಶ್ವರನೇ ಎಲ್ಲಕ್ಕೂ ಪ್ರೇರಕನೆನಿಸಿದನೆಂಬುದು ಸ್ಪಷ್ಟವಾಗುತ್ತದೆ. ಹೀಗೆ ಪಾದಾದಿ ಇಂದ್ರಿಯಗಳೂ, ವಿಷ್ಣು ಮೊದಲಾದ ಅಭಿಮಾನ ದೇವತೆಗಳೂ, ಜೀವನೂ ತಮ್ಮ ತಮ್ಮ ಕಾರ್ಯಗಳಲ್ಲಿ ಪರಶಿವನಿಗಧೀನವಾಗಿಯೇ ಪ್ರವರ್ತಿಸುತ್ತಿರುವರು. ಅಂತರ್ಯಾಮಿಬ್ರಾಹ್ಮಣದಲ್ಲಿ "ಯಾವನು ಅಗ್ನಿಯಲ್ಲಿ ಇದ್ದರೂ ಅಗ್ನಿಗೆ ಹೊರಗಿರುವನೋ, ಯಾವನನ್ನು ಅಗ್ನಿ ತಿಳಿಯದೋ, ಯಾವನಿಗೆ ಅಗ್ನಿಯೇ ಶರೀರವೋ, ಯಾವನು ಅಗ್ನಿಯನ್ನು ಒಳಗೇ ನಿಯಮನ ಮಾಡುವನೋ ಅವನೊಬ್ಬನೇ ನಿನ್ನೊಳಗಿದ್ದು ನಿನಗೆ ನಿಯಾಮಕನಾಗಿರುವನು." ಹೀಗೆ ಹೇಳಿರುವುದರಿಂದ ವಾಯು ಆದಿತ್ಯ—ಕಣ್ಣು ಮೊದಲಾದ ಕಡೆಗಳಲ್ಲೂ ಶಿವನೇ ಅಂತರ್ಯಾಮಿಯೂ ನಿಯಾಮಕನೂ ಆಗಿರುವನೆಂಬುದು ಸ್ಪಷ್ಟ. "ಅಗ್ನಿ ನೀರು ಓಷಧಿಲತೆಗಳಲ್ಲಿ ಯಾವ ರುದ್ರನಿರುವನೋ, ಯಾವನು ಸಮಸ್ತಪ್ರಪಂಚವನ್ನು ಪ್ರವೇಶಿಸಿದನೋ ಅಂತಹ ರುದ್ರನಿಗೆ ನಮಸ್ಕಾರ." "ಯಾವನ ಭಯದಿಂದ ಗಾಳಿ ಬೀಸುವುದೋ, ಸೂರ್ಯ ಉದಯಿಸುವನೋ ಅಗ್ನೀಂದ್ರರು ತಮ್ಮ ಕೆಲಸಗಳನ್ನು ನಿರ್ವಹಿಸುವರೋ, ಐದನೆಯವನಾದ ಯಮನು ಬೆದರಿ ಓಡುವನೋ." "ಅಲ್ಲಿ ಸೂರ್ಯನು ಶೋಭಿಸುವುದಿಲ್ಲ. ಚಂದ್ರನಕ್ಷತ್ರಗಳಿಗಾಗಲಿ ಮಿಂಚಿಗಾಗಲಿ ಅಲ್ಲಿ ಅವಕಾಶವಿಲ್ಲ; ಇನ್ನು ಬೆಂಕಿ ಹೇಗೆ ಪ್ರವೇಶಿಸೀತು" "ಎಲ್ಲೆಲ್ಲೂ ಶೋಭಿಸುತ್ತಿರುವ ಅವನನ್ನೇ ಎಲ್ಲವೂ ಹಿಂಬಾಲಿಸುತ್ತದೆ. ಅವನ ಪ್ರಕಾಶದಿಂದಲೇ ಇದೆಲ್ಲವೂ ಶೋಭಿಸುತ್ತಿದೆ" "ಅಕ್ಷರನೆನಿಸಿದ ಪರಶಿವನ ಆಜ್ಞೆಯಂತೆ ಸೂರ್ಯಚಂದ್ರರು ಹಗಲು ರಾತ್ರಿಗಳನ್ನು ನಿರ್ವಹಿಸುತ್ತಿದ್ದಾರೆ." ಈ ಶ್ರುತಿಗಳಲ್ಲಿ ಶಿವನೇ ಸರ್ವಾಂತರ್ಯಾಮಿ ಎಂದೂ, ಸರ್ವಭಯಂಕರನೆಂದೂ, ಸರ್ವಪ್ರಕಾಶನೆಂದೂ, ಸರ್ವಾಧಾರನೆಂದೂ ಸ್ಪಷ್ಟವಾಗಿ ತಿಳಿಸಲಾಗಿದೆ. ಆದ್ದರಿಂದ ವಿಷ್ಣು ಮೊದಲಾದವರು ಸ್ವತಂತ್ರರಾಗಿ ಪ್ರಾಣೇಂದ್ರಿಯಗಳಿಗೆ ಪ್ರೇರಕರಾಗಲಾರರು.

ನನು "ಸ ವೈ ವಾಚಮೇವ ಪ್ರಥಮಮತ್ಯವಹತ್ಸಾ ಯದಾ ಮೃತ್ಯುಮತ್ಯಮುಚ್ಯತ ಸೋಽಗ್ನಿರಭವತ್" ಇತ್ಯಾದಿನಾ ವಾಗಾದೀನಾಮಗ್ನ್ಯಾದಿಭಾವಾಪತ್ತಿಕಥನಾತ್ ಅಗ್ನ್ಯಾದಿಭಾವಸ್ಯ ತದಧಿಷ್ಠಾತೃಕತ್ವಮೇವ ಸ್ಯಾತ್, ಅತಃ ಪ್ರಾಣದೇವತಯೋರಧಿಷ್ಠಾತ್ರಧಿಷ್ಠೇಯಭಾವ ಏವೋಪಪನ್ನ ಇತ್ಯಾಶಂಕಾಯಾಮಾಹ, ತಸ್ಯ ಚ ನಿತ್ಯತ್ವಾತ್ ॥೧೩॥ ಸರ್ವೇಷಾಂ ಪರಶಿವಾಧಿಷ್ಠಿತತ್ವೇನ ನಿತ್ಯತ್ವಾತ್ ಸ್ವರೂಪಾನುಬಂಧಿತ್ವೇನ ನಿಯತತ್ವಾಚ್ಚ ತತ್ಸಂಕಲ್ಪಾದೇವೈಷಾಮಧಿಷ್ಠಾತೃತ್ವಮವರ್ಜನೀಯಮ್. "ತತ್ಸೃಷ್ಟ್ವಾ ತದೇವಾನುಪ್ರಾವಿಶತ್ ತದನುಪ್ರವಿಶ್ಯ ಸಚ್ಚ ತ್ಯಚ್ಚಾಭವತ್" ಇತ್ಯಾದಿನಾ ಶಿವಸ್ಯ ಪರಮಪುರುಷಸ್ಯ ಸ್ವಾಭಾವಿಕಚಿಚ್ಛಕ್ತಿವಿಶಿಷ್ಟಸ್ಯ ಸ್ವತಂತ್ರಸ್ಯ ನಿಯಂತೃತ್ವೇನ ಸರ್ವಚಿದಚಿದ್ವಸ್ತು

ಪ್ರವೇಶಸ್ಸ್ವರೂಪಾನುಬಂಧಿತ್ವಂ ಸ್ಮರ್ಯತೇ. ತಸ್ಮಾತ್ಪ್ರಾಣೇಂದ್ರಿಯ ದೇವತಾನಿಯಾಮಕತ್ವಂ ತದಂತರ್ಯಾಮಿತ್ವಂ ಚ ನೇತರಸ್ಯೇತಿ ಸಿದ್ಧಂ. ನನು ಶಿವಸ್ಯ ಪರಬ್ರಹ್ಮಣಃ ಜೀವಾದಿನಿಯಾಮಕತ್ವೇ ತಸ್ಯೈವ ಕರ್ತೃತ್ವಾವಗಮಾತ್ ಜೀವಕೃತಪುಣ್ಯಪಾಪಫಲಭೋಕ್ತೃತ್ವಮಪಿ ತಸ್ಯೈವೇತಿ ಚೇನ್ನ ಇಂದ್ರಿಯಾದಿಪ್ರೇರಣೇ ಸರ್ವದಾ ಜೀವಸ್ಯೈವ ಸ್ವತಂತ್ರಾಭಿಮಾನಿತ್ವೇನ ನೇತರಸ್ಯ ತದಿಂದ್ರಿಯಜನ್ಯಕರ್ಮಫಲಭೋಕ್ತೃತ್ವಂ. ಕಿಂಚ ತದಿಂದ್ರಿಯಾದ್ಯಧಿಷ್ಠಾನಪ್ರಭಾಕರವಿಷ್ಣ್ವಾದಿದೇವತಾಂತರ್ಯಾಮಿತಯಾ ಶಿವಸ್ಯ ಜೀವಕೃತಕರ್ಮಾನುಸಾರೇಣ ತದಿಂದ್ರಿಯಪ್ರೇರಕತ್ವಾಸಂಭವಾತ್ ನ ತತ್ಕೃತಕರ್ಮಫಲಭೋಕ್ತೃತ್ವಮೀಶ್ವರಸ್ಯ. "ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ" "ಅಜೋ ಹ್ಯೇಕೋ ಜುಷಮಾಣೋಽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ" ಇತಿ ಭಗವತೀ ಶ್ರುತಿರಪಿ ತಥೈವೋಪದಿಶತಿ. ತಸ್ಮಾನ್ನ ಶಂಕಾಕಳಂಕಃ.

"ಪರಮಾತ್ಮನು ಮೊದಲು ವಾಕ್ಕನ್ನು ಪ್ರವೇಶಿಸಿದನು, ಮರಣಕಾಲದಲ್ಲಿ ಆ ವಾಕ್ಕು ದೇಹದಿಂದ ಹೊರಟಮೇಲೆ ಅಗ್ನಿಯಾಯಿತು" ಎಂಬಲ್ಲಿ ವಾಗಾದಿಗಳೇ ಅಗ್ನಿ ಮೊದಲಾದ ರೂಪಗಳನ್ನು ಹೊಂದಿದರೆಂದು ಹೇಳಿದ್ದರಿಂದ ಅಗ್ನ್ಯಾದಿಭಾವಗಳಿಗೆ ಪ್ರಾಣಾದಿಗಳು ಆಶ್ರಯವೆನಿಸಿದವು. ಆದ್ದರಿಂದ ಪ್ರಾಣಗಳಿಗೂ ದೇವತೆಗಳಿಗೂ ಆಶ್ರಯಾಶ್ರಯಿಭಾವವೇ ಹೊಂದಿಕೆಯಾಗುವುದೆಂದಾಶಂಕಿಸಿ ನಿರಾಕರಿಸುತ್ತಾನೆ. ಪರಶಿವನ ಆಶ್ರಯದಿಂದಲೇ ಎಲ್ಲವೂ ನಿತ್ಯವೆನಿಸಿ ಸ್ವಸ್ವರೂಪವನ್ನು ಅನುಸರಿಸುತ್ತಿರುವುದರಿಂದ ಅವನ ಸಂಕಲ್ಪದಿಂದಲೇ ಹೀಗೆ ಅವೆಲ್ಲವೂ ಬೇರೊಂದಕ್ಕೆ ಆಶ್ರಯವಾಗಿರುವುವು. "ಅದನ್ನು ಸೃಜಿಸಿ ಅವನೇ ಅದರೊಳಗೆ ಪ್ರವೇಶಿಸಿದನು". "ಒಳಗೆ ಪ್ರವೇಶಿಸಿ ಅವನೇ ಇದೆಲ್ಲವೂ ಆದನು". ಈ ಶ್ರುತಿಗಳಲ್ಲಿ ಪರಮಪುರುಷನೂ ಸ್ವಾಭಾವಿಕಶಕ್ತಿವಿಶಿಷ್ಟನೂ ಸ್ವತಂತ್ರನೂ ಆದ ಪರಶಿವನು ನಿಯಾಮಕನಾಗಿ ಚಿದಚಿದ್ವಸ್ತುಗಳೆಲ್ಲದರಲ್ಲೂ ಪ್ರವೇಶಿಸಿದ್ದರೂ ಸ್ವರೂಪವನ್ನು ಅನುಸರಿಸಿಕೊಂಡೇ ಇರುವನೆಂದು ತಿಳಿದುಬರುತ್ತದೆ. ಆದ್ದರಿಂದ ಪ್ರಾಣಗಳಿಗೂ ಇಂದ್ರಿಯಗಳಿಗೂ ಅಧಿಷ್ಠಾನದೇವತೆಗಳಿಗೂ ಶಿವನೇ ಅಂತರ್ನಿಯಾಮಕನಾಗಿರುವನೆಂದು ಸಿದ್ಧವಾಯಿತು. ಪರಶಿವಬ್ರಹ್ಮವು ಜೀವರಿಗೆ ನಿಯಾಮಕನಾದರೆ ಅವನೇ ಕರ್ತೃವೆನಿಸುವುದರಿಂದ ಜೀವರು ಮಾಡುವ ಪುಣ್ಯಪಾಪಕರ್ಮಗಳ ಫಲಭೋಗವೂ ಅವನಿಗೇ ಇರಬೇಕಾಗುತ್ತದೆ ಎಂದು ಹೇಳಿದರೆ ಅದು ಹೊಂದುವುದಿಲ್ಲ. ಇಂದ್ರಿಯಗಳನ್ನು ಪ್ರೇರಣಮಾಡಲಿಕ್ಕೆ ಜೀವನೇ ಯಾವಾಗಲೂ ಸ್ವತಂತ್ರವಾಗಿ ಅಭಿಮಾನಿಸುತ್ತಿರುವುದರಿಂದ ಆ ಇಂದ್ರಿಯಗಳಿಂದ ದೊರಕುವ ಕರ್ಮಫಲದ ಅನುಭವವೂ ಅವನಿಗಲ್ಲದೆ ಬೇರೆಯವರಿಗೆ ಸಂಬಂಧಿಸುವುದಿಲ್ಲ. ಆ ಇಂದ್ರಿಯಗಳಲ್ಲಿ ನೆಲಸಿರುವ ಸೂರ್ಯ, ವಿಷ್ಣು ಮೊದಲಾದ ದೇವತೆಗಳೊಳಗೆ ಅಂತರ್ಯಾಮಿಯಾಗಿರುವುದರಿಂದ ಶಿವನಿಗೆ.

ಜೀವನು ಮಾಡಿದ ಕರ್ಮದಂತೆ ಇಂದ್ರಿಯಗಳ ಪ್ರೇರಣವು ಸಂಭವಿಸದಿರುವುದರಿಂದ ಆ ಕರ್ಮದ ಫಲಭೋಗವೂ ಈಶ್ವರನಿಗೆ ಅನ್ವಯಿಸುವುದಿಲ್ಲ. "ಅವರಿಬ್ಬರಲ್ಲಿ ಒಬ್ಬನು ಸಿಹಿ ಕಹಿ ಫಲಗಳನ್ನು ಭೋಗಿಸುತ್ತಲೂ, ಮತ್ತೊಬ್ಬನು ಏನನ್ನೂ ಭೋಗಿಸದೆ ಪ್ರಕಾಶಿಸುತ್ತಲೂ ಇರುವರು." "ನಿತ್ಯನಾದ ಪುರುಷನೊಬ್ಬನು ಪ್ರಕೃತಿಯನ್ನು ಭೋಗಿಸುತ್ತಲೇ ಸಂತಾಪಗೊಳ್ಳುತ್ತಾನೆ. ಮತ್ತೊಬ್ಬನು ಪ್ರಕೃತಿಯ ಭೋಗಗಳನ್ನು ಅನುಭವಿಸಿ ಅದನ್ನು ತೊರೆಯುತ್ತಾನೆ" ಹೀಗೆ ಪೂಜ್ಯವೇದಮಾತೆಯ ಉಪದೇಶವಿರುವುದರಿಂದ ಶಂಕೆಗೆ ಅವಕಾಶವೇ ಇಲ್ಲ.

"ಹಂತಾಸ್ಯೈವ ಸರ್ವೇ ರೂಪಮಾಸ ತ ಏತಸ್ಯೈವ ಸರ್ವೇ ರೂಪಮಭವನ್ವಾಗಾದಯ ಏತಸ್ಯೈವ ಪ್ರಾಣಸ್ಯ ರೂಪಂ ಪಂಚಧಾ ಬಭೂವುಃ" ಇತಿ ಶ್ರುತೌ ಪ್ರಾಣೇಂದ್ರಿಯಯೋರೇಕತ್ವೋಪದೇಶಾತ್ ಪ್ರಾಣಸ್ಯೇಂದ್ರಿಯತ್ವಂ ಸ್ಯಾದಿತ್ಯಾಶಂಕ್ಯಾಹ. ಇಂದ್ರಿಯವ್ಯಪದೇಶಾಧಿಕರಣಂ ||೬|| ತ ಇಂದ್ರಿಯಾಣಿ ತದ್ವ್ಯಪದೇಶಾದನ್ಯತ್ರ ಶ್ರೇಷ್ಠಾತ್ ||೧೪|| "ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿ ಚ" ಇತ್ಯತ್ರ ಪ್ರಾಣೇಂದ್ರಿಯಾಣಾಂ ತತ್ತ್ವಾಂತರತ್ವಂ ಪ್ರತೀಯತೇ. "ಹಂತಾಸ್ಯೈವ ಸರ್ವೇ ರೂಪಮಾಸ ತ ಏತಸ್ಯೈವ ರೂಪಮಭವನ್" ಇತಿ ಶ್ರುತೌ ತು ಮುಖ್ಯಪ್ರಾಣತ್ವಮಿಂದ್ರಿಯಾಣಾಂ ಬೋಧ್ಯತೇ. ತಸ್ಮಾತ್ಪ್ರಾಣೇಂದ್ರಿಯಾಣಾಮೇಕತ್ವಮುತ ಪೃಥಕ್ತ್ವಂ ವೇತಿ ಸಂದಿಹ್ಯತೇ. ಮುಖ್ಯಪ್ರಾಣಸ್ಯೇಂದ್ರಿಯತ್ವಂ ಯುಕ್ತಂ"ಏತಸ್ಮಾಜ್ಜಾಯತೇ ಪ್ರಾಣಃ" ಇತ್ಯತ್ರ ಮಾನಸೇಂದ್ರಿಯಾಣಾಂ ಪೃಥಗ್ವ್ಯಪದೇಶೇಽಪಿ ತಯೋರ್ನ ತತ್ತ್ವಾಂತರತ್ವಂ. "ಹಂತಾಸ್ಯೈವ ಸರ್ವೇ ರೂಪಮಾಸ" ಇತಿ ಶ್ರುತೇರ್ಬಲೀಯಸ್ತ್ವಾತ್ ಪ್ರಾಣಸ್ಯ ಕರಣತ್ವಮುಪಪನ್ನಮಿತಿ ಪ್ರಾಪ್ತೇಽತ್ರಾಭಿಧೀಯತೇ, ತ ಇಂದ್ರಿಯಾಣೀತಿ. ಪ್ರಾಣಸ್ತತ್ತ್ವಾಂತರಮಿಂದ್ರಿಯೇಭ್ಯ ಇತಿ. ತತ್ರ ಹೇತುಂಸ್ತದ್ವ್ಯಪದೇಶಾದುಕ್ತಹೇತುಮಿತರೇಣ 'ಸೂತ್ರಭಾಗೇನ ವಿವೃಣೋತಿ, ಶ್ರೇಷ್ಠಾನ್ಮುಖ್ಯಪ್ರಾಣಾದನ್ಯೇ ತೇ ಪ್ರಕೃತಾ ವಾಗಾದಯಃ ಪ್ರಾಣೇಂದ್ರಿಯಾಣೇತ್ಯುಚ್ಯಂತೇ ನ ಪ್ರಾಣಃ, "ಏತಸ್ಮಾಜ್ಜಾಯತೇ ಪ್ರಾಣಃ" ಇತ್ಯಾದೌ ವೈಲಕ್ಷಣ್ಯೋಪದೇಶಾತ್. ನನ್ವಯಂ ಭೇದವ್ಯಪದೇಶಃ ಇಂದ್ರಿಯಮನಸೋರಪಿ ಸಮಾನ ಇತ್ಯುಕ್ತಮಿತಿ ಚೇನ್ನ "ಮನಷ್ಷಷ್ಠಾನೀಂದ್ರಿಯಾಣಿ" ಇತಿ ಸ್ಮೃತ್ಯಾ ಮಾನಸೇಂದ್ರಿಯಯೋಸ್ತತ್ತ್ವಾಂತರತ್ವಾಭಾವಾಭ್ಯುಪಗಮಾತ್, ನ ಚ ಪ್ರವೃತ್ತೇಽಪಿ "ಹಂತಾಸ್ಯೈವ" ಇತಿ ಶ್ರುತೇರಿಂದ್ರಿಯಾಣಾಂ ಪ್ರಾಣತ್ವಾಂತರತ್ವಾಭಾವಾಭ್ಯುಪಗಮಃ. "ತ ಏತಸ್ಯೈವ ಸರ್ವೇ ರೂಪಮಭವನ್" "ತಸ್ಮಾದೇತಾನಾಖ್ಯಾಯಂತೇ ಪ್ರಾಣ" ಇತಿ ವಾಕ್ಯಶೇಷೇಣೇಂದ್ರಿ

ಯೋಷು ಪ್ರಾಣಶಬ್ದಸ್ಯ ಲಾಕ್ಷಣಿಕತ್ವಪ್ರತಿಪಾದನೇನ ಪ್ರಾಣೇಂದ್ರಿಯಾಣಾಂ ತತ್ತ್ವಾಂತರತ್ವಾಭ್ಯುಪಗಮಾತ್. ನ ಹಿ ಇಂದ್ರಿಯೇಭ್ಯಸ್ತತ್ತ್ವಾಂತರೇ ಚಕ್ಷುರಿಂದ್ರಿಯಶಬ್ದೋ ಲಾಕ್ಷಣಿಕೋ ದೃಷ್ಟಃ. ತಸ್ಮಾತ್ "ತ ಏತಸ್ಯೈವ ಸರ್ವೇ ರೂಪಮಭವನ್" ಇತ್ಯನೇನ ಪ್ರಾಣಾಧೀನಚೇಷ್ಟತ್ವಂ ಇಂದ್ರಿಯಾಣಾಂ ದೃಶ್ಯತೇ ನ ತದ್ವ್ಯಾಪಾರತ್ವಂ. ಕಿಂಚ ಭೇದಶ್ರುತೇಃ ವಾಗಾದೀಂದ್ರಿಯಪ್ರಕರಣಮುಪಸಂಹೃತಂ. "ಅಥ ಹ ಇಮಮಾಸ್ಯಂ ಪ್ರಾಣಮೂಚುಃ" ಇತಿ ಭಿನ್ನಪ್ರಕರಣೇ ಪ್ರಾಣಸ್ಯೇಂದ್ರಿಯೇಭ್ಯೋ ಭೇದಶ್ರವಣಾತ್ಪ್ರಾಣವ್ಯಾಪಾರತ್ವಮಿಂದ್ರಿಯಾಣಾಮಿತ್ಯುಪದಿಶ್ಯತೇ. "ಅಥ ಹ ಆಸ್ಯೇ ಭವಮಾಸ್ಯಮಿಮಂ ಪ್ರಾಣಂ ವಾಗಾದಯ ಊಚುಃ" ಇತಿ ಪ್ರಾಣೇಂದ್ರಿಯಾಣಾಂ ತತ್ತ್ವಾಂತರತ್ವಮುಪದಿಷ್ಟಂ, ಕುತಃ, ವೈಲಕ್ಷಣ್ಯಾನುಭವದ್ಯೋತನಾತ್. ಸುಪ್ತೌ ಪ್ರಾಣಸ್ಯೇಂದ್ರಿಯಲಯೇಽಪಿ ವ್ಯಾಪಾರದರ್ಶನಾದತೋ ನೋದಾಹೃತವಾಕ್ಯವಿರೋಧ ಇತಿ ಸಿದ್ಧಂ. ಅಪಿಚ ಶ್ರೇಷ್ಠಾದನ್ಯೇಷ್ವೇವ ಪ್ರಾಣೇಷು ತದ್ವ್ಯಪದೇಶಾತ್ "ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ" ಇತ್ಯಾದಿಭಿಶ್ಚಕ್ಷುರಾದಿಷು ಸಮಸ್ತೇಷ್ವೇವೇಂದ್ರಿಯಶಬ್ದೋ ವ್ಯಪದಿಶ್ಯತೇ. ತಸ್ಮಾತ್ ಶ್ರೇಷ್ಠವ್ಯತಿರಿಕ್ತಾ ಏವ ಪ್ರಾಣಾಸ್ತಥಾಪಿ ನೇಂದ್ರಿಯಾಂತರ್ಭೂತತ್ವಂ.

"ಇವೆಲ್ಲವೂ ಈ ಪ್ರಾಣದ ನಾಮರೂಪಗಳೇ ಆಗಿವೆ. ವಾಗಾದಿಗಳೂ ಇದರ ರೂಪವನ್ನೇ ತಾಳಿವೆ. ಈ ಪ್ರಾಣದ ರೂಪವೇ ಐದು ಬಗೆಯಾಯಿತು" ಎಂಬ ಶ್ರುತಿಯಲ್ಲಿ ಪ್ರಾಣಗಳನ್ನೂ ಇಂದ್ರಿಯಗಳನ್ನೂ ಒಂದೇಬಗೆಯೆಂದು ಹೇಳಿರುವುದರಿಂದ ಪ್ರಾಣವೇ ಇಂದ್ರಿಯವಾಗಲೆಂದಾಶಂಕಿಸಿ ನಿರಾಕರಿಸುತ್ತಾನೆ. "ಇದರಿಂದ ಪ್ರಾಣ ಮನಸ್ಸು ಇಂದ್ರಿಯಗಳು ಹುಟ್ಟಿವೆ" ಎಂಬಲ್ಲಿ ಪ್ರಾಣ ಮತ್ತು ಇಂದ್ರಿಯಗಳು ಬೇರೆ ಬೇರೆ ವಸ್ತುಗಳೆಂಬುದು ತಿಳಿದುಬರುತ್ತದೆ. "ಎಲ್ಲವೂ ಅದರ ವಿಕಾರಗಳೇ ಆಗಿವೆ. ಇವೆಲ್ಲವೂ ಅದರ ಆಕಾರವನ್ನೇ ಹೊಂದಿವೆ" ಎಂಬ ಶ್ರುತಿಯಲ್ಲಿ ಇಂದ್ರಿಯಗಳೇ ಮುಖ್ಯಪ್ರಾಣವಾಗಿರುವುವೆಂದು ತಿಳಿದುಬರುತ್ತದೆ. ಆದ್ದರಿಂದ ಇಲ್ಲಿ ಪ್ರಾಣ ಮತ್ತು ಇಂದ್ರಿಯಗಳು ಒಂದೇಬಗೆಯೇ ಅಥವಾ ಬೇರೆಯೆ? ಎಂಬ ಸಂದೇಹವುಂಟಾಗಿದೆ. ಇಲ್ಲಿ ಮುಖ್ಯಪ್ರಾಣವೇ ಇಂದ್ರಿಯವೆಂಬುದು ಹೊಂದುತ್ತದೆ. "ಇದರಿಂದ ಪ್ರಾಣ ಹುಟ್ಟಿದೆ" ಎಂಬಲ್ಲಿ ಮನಸ್ಸು ಮತ್ತು ಇಂದ್ರಿಯಗಳನ್ನು ಬೇರೆಯಾಗಿ ಹೇಳಿದ್ದರೂ "ಇವೆಲ್ಲವೂ ಅದರ ವಿಕಾರಗಳೇ ಆಗಿವೆ" ಎಂಬ ಶ್ರುತಿ ಪ್ರಬಲವಾಗಿರುವುದರಿಂದ ಅವು ಸ್ವತಂತ್ರವಸ್ತುಗಳಲ್ಲ; ಆದರೆ ಪ್ರಾಣವನ್ನು ಇಂದ್ರಿಯವೆಂದು ಭಾವಿಸುವುದೇ ಯುಕ್ತವಾಗುತ್ತದೆ ಎಂದು ಆಕ್ಷೇಪ ಬಂದರೆ ಇದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಪ್ರಾಣಕ್ಕಿಂತಲೂ ಇಂದ್ರಿಯಗಳು ಬೇರೆಯೇ ಆಗಿವೆ. ಮುಖ್ಯಪ್ರಾಣಕ್ಕಿಂತಲೂ ವಾಗಾದಿಇಂದ್ರಿಯಗಳು ಭಿನ್ನವೇ ಆಗಿವೆ. ಆದ್ದರಿಂದ ಪ್ರಾಣೇಂ

ದ್ರಿಯಗಳು ಒಂದೇ ಬಗೆಯಲ್ಲ; ಯಾಕೆಂದರೆ, "ಇದರಿಂದ ಪ್ರಾಣ ಹುಟ್ಟುತ್ತದೆ" ಎಂಬ ಶ್ರುತಿಯಲ್ಲಿ ಪ್ರಾಣೇಂದ್ರಿಯಗಳಿಗೆ ವೈಲಕ್ಷಣ್ಯವನ್ನು ಹೇಳಿದೆ. ಹೀಗೆ ಬೇರೆ ಎಂದು ಹೇಳಿರುವುದು ಇಂದ್ರಿಯಗಳಿಗೂ ಮನಸ್ಸಿಗೂ ಸಮಾನವೇ ಆಗಲಿ ಎಂದು ಹೇಳುವುದೂ ಸರಿಯಲ್ಲ. "ಮನಸ್ಸೇ ಆರನೆಯದಾಗಿರುವ ಇಂದ್ರಿಯಗಳು" ಎಂಬ ಸ್ಮೃತಿಯಲ್ಲಿ ಮನಸ್ಸು ಮತ್ತು ಇಂದ್ರಿಯಗಳನ್ನು ಬೇರೆ ವಸ್ತುಗಳಲ್ಲವೆಂದು ಒಪ್ಪಿರುವುದರಿಂದ ಮನಸ್ಸು ಇಂದ್ರಿಯವೇ ಆಗುತ್ತದೆ. "ಇದೆಲ್ಲವೂ ಪ್ರಾಣದ ರೂಪಗಳೇ ಆಗಿವೆ" ಎಂಬ ಶ್ರುತಿಯಿಂದ ಪ್ರಾಣಕ್ಕಿಂತಲೂ ಇಂದ್ರಿಯಗಳು ಬೇರೆಯಲ್ಲವೆಂದು ಒಪ್ಪುವುದು ಯುಕ್ತವಲ್ಲ. "ಇವೆಲ್ಲವೂ ಅದರ ರೂಪಗಳೇ" ಎಂಬ ವಾಕ್ಯಶೇಷದಲ್ಲಿ ಪ್ರಾಣಶಬ್ದವನ್ನು ಇಂದ್ರಿಯಗಳಲ್ಲಿ ಲಕ್ಷಣೆಯಿಂದ ಪ್ರಯೋಗಿಸಲಾಗಿದೆ. ಆದ್ದರಿಂದ ಪ್ರಾಣಕ್ಕಿಂತಲೂ ಇಂದ್ರಿಯಗಳು ಬೇರೆಯೇ ಆಗುತ್ತವೆ. ಇಂದ್ರಿಯಗಳಿಗಿಂತ ಬೇರೆ ಒಂದುವಸ್ತುವಿನಲ್ಲಿ ಚಕ್ಷುರಿಂದ್ರಿಯವೆಂಬ ಶಬ್ದವನ್ನು ಲಕ್ಷಣೆಯಿಂದಲೂ ಉಪಯೋಗಿಸಲಾಗುವುದಿಲ್ಲ. ಆದ್ದರಿಂದ "ಇವೆಲ್ಲವೂ ಅದರ ರೂಪಗಳೇ ಆಗಿವೆ" ಎಂಬಲ್ಲಿ ಇಂದ್ರಿಯವ್ಯಾಪಾರಗಳು ಪ್ರಾಣಕ್ಕಧೀನವಾಗಿರುವುವೇ ಹೊರತು ಅವು ಪ್ರಾಣದ ಕಾರ್ಯಗಳಾಗಲಾರವು. ಬೇರೆ ಪ್ರಕರಣದಲ್ಲಿ ಪ್ರಾಣವನ್ನು ಇಂದ್ರಿಯಗಳಿಗಿಂತ ಬೇರೆ ಎಂದು ಹೇಳಿರುವುದರಿಂದ ಇಂದ್ರಿಯಗಳಿಗೂ ಪ್ರಾಣದ ವ್ಯಾಪಾರಗಳುಂಟೆಂದು ಹೇಳಲಾಗಿದೆ. "ಬಾಯಲ್ಲಿ ಹುಟ್ಟಿದ ಪ್ರಾಣಕ್ಕೆ ವಾಕ್ಕು ಹೇಳಿತು" ಎಂಬಲ್ಲಿ ಪ್ರಾಣ ಮತ್ತು ವಾಗಿಂದ್ರಿಯವನ್ನು ಸ್ವತಂತ್ರವಸ್ತುಗಳೆಂದು ಭಾವಿಸಲಾಗಿದೆ. ಆದರೂ ಅವೆರಡಕ್ಕೂ ವೈಲಕ್ಷಣ್ಯ ಕಂಡುಬರುವುದರಿಂದಲೂ, ಸುಷುಪ್ತಿಯಲ್ಲಿ ಇಂದ್ರಿಯಗಳು ಶಾಂತವಾಗಿದ್ದರೂ ಪ್ರಾಣದ ವ್ಯಾಪಾರವಿರುವುದರಿಂದಲೂ ಹಿಂದೆ ಹೇಳಿದ ವಾಕ್ಯಗಳಿಗೆ ವಿರೋಧವಿಲ್ಲವೆಂದು ಸಿದ್ಧವಾಯಿತು. ಇದೂ ಅಲ್ಲದೆ, ಶ್ರೇಷ್ಠವಾದ್ದಕ್ಕಿಂತಲೂ ಬೇರೆಯಾಗಿರುವ ಪ್ರಾಣಗಳನ್ನೇ ಇಂದ್ರಿಯಗಳೆಂದು ಹೇಳಿರುವುದರಿಂದ "ಇಂದ್ರಿಯಗಳು ಹನ್ನೊಂದು, ಅವುಗಳ ವಿಷಯಗಳು ಐದು" ಎಂಬಲ್ಲಿ ಮನಸ್ಸಿನೊಡಗೂಡಿದ ಕಣ್ಣು ಮೊದಲಾದವುಗಳಲ್ಲಿಯೇ ಇಂದ್ರಿಯಶಬ್ದವನ್ನು ಪ್ರಯೋಗಿಸಲಾಗಿದೆ. ಆದ್ದರಿಂದ ಶ್ರೇಷ್ಠಕ್ಕಿಂತಲೂ ಬೇರೆಯಾದದ್ದೇ ಪ್ರಾಣವೆನಿಸಿದೆ. ಆದರೂ ಅದು ಇಂದ್ರಿಯಗಳಲ್ಲಿ ಸೇರುವುದಿಲ್ಲವೆಂದು ಸಿದ್ಧವಾಯಿತು.

ಅಸ್ಮಿನ್ನರ್ಥೇ ಹೇತ್ವಂತರಮುಪ್ಯಾಹ. ಭೇದಶ್ರುತೇರ್ವೈಲಕ್ಷಣ್ಯಾಚ್ಚ ||೧೫|| "ಏತಸ್ಮಾಜ್ಜಾಯತೇ ಪ್ರಾಣಃ" ಇತ್ಯಾದಿಬಹುಶ್ರುತಿವಿರೋಧಾತ್, ಸುಪ್ತಾವಿಂದ್ರಿಯವತ್ಕಾರಣಶರೀರೇ ಮನಸೋ ಲಯಾನುಭವೇಽಪಿ "ಮನಷ್ಷಷ್ಠಾನೀಂದ್ರಿಯಾಣಿ" ಇತ್ಯಾದಿಸ್ಮೃತೇರ್ದುರ್ಬಲತ್ವಾತ್ ಮನಸ ಇಂದ್ರಿಯತ್ವಂ ನ ಯುಜ್ಯತೇ. "ಇಂದ್ರಿಯಾಣಾಂ ಮನೋ ನಾಥಃ ಮನೋನಾಥಸ್ತು ಮಾರುತಃ, ಇಂದ್ರಿಯೇಭ್ಯಃ ಪರಂ ಮನಃ" ಇತ್ಯಾದಿ ಶ್ರುತ್ಯನುಕೂಲಬಹುಸ್ಮೃತಿದರ್ಶನಾನ್ಮನಸೋ ವೈಲ

ಕ್ಷಣ್ಯಂ. "ತತ್ಪ್ರಾಣೇಷ್ವಂತರ್ಮನಸೋ ಲಿಂಗಮಾಹುಃ", "ಅನ್ನಮಯಪ್ರಾಣಮಯಮನೋಮಯವಿಜ್ಞಾನಮಯಾನಂದಮಯಾ ಮೇ ಶುದ್ಧ್ಯಂತಾಂ" ಇತ್ಯಾದಿಶ್ರುತಿಶತೇಷು ಪ್ರಾಣಾದಧಿಕಸ್ಥಿತತ್ವೋಪದೇಶಾತ್. ಕಿಂಚ ಸಾಂಖ್ಯಯೋಗಶಾಸ್ತ್ರೇಷು ಸೂಕ್ಷ್ಮಭೂತಪಂಚಕ ತತ್ತ್ವಾರ್ಧೇನ ಮಾನಸೋತ್ಪತ್ತೇಃ, ತದ್ಭಿನ್ನಾರ್ಧೇನ ಜ್ಞಾನೇಂದ್ರಿಯೋತ್ಪತ್ತೇಶ್ಚ ನಿರ್ದೇಶಾತ್, ಸೂಕ್ಷ್ಮಭೂತಪಂಚಕರಜೋಗುಣಾರ್ಧೇನ ಪ್ರಾಣೋತ್ಪತ್ತೇಸ್ತದ್ಭಿನ್ನಾರ್ಧೇನ ಕರ್ಮೇಂದ್ರಿಯೋತ್ಪತ್ತೇಶ್ಚ ದ್ಯೋತನಾತ್, "ಆತ್ಮಾ ಮನಸಾ ಸಂಯುಜ್ಯತೇ ಮನ ಇಂದ್ರಿಯೇಣ ಇಂದ್ರಿಯಮರ್ಥೇನ ತತಃ ಪ್ರತ್ಯಕ್ಷಂ" ಇತಿ ನ್ಯಾಯೇನ ಸರ್ವೇಂದ್ರಿಯವ್ಯಾಪಕತ್ವೇನ ಮನಸ ಇಂದ್ರಿಯತ್ವಮೌಪಚಾರಿಕಂ. ತಸ್ಮಾತ್ಪ್ರಾಣಮನಸೋರಿಂದ್ರಿಯಾದಧಿಕತ್ವಂ ನಿಷ್ಪ್ರತ್ಯೂಹಂ.

ಈ ಬಗ್ಗೆ ಬೇರೊಂದು ಕಾರಣವನ್ನು ಹೇಳುತ್ತಾನೆ. "ಇದರಿಂದ ಪ್ರಾಣಾದಿಗಳು ಹುಟ್ಟಿವೆ" ಈ ಬಗೆಯ ಅನೇಕ ಶ್ರುತಿಗಳ ಬಲದಿಂದಲೂ, ಸುಷುಪ್ತಿಯಲ್ಲಿ ಇಂದ್ರಿಯಗಳಂತೆಯೇ ಕಾರಣಶರೀರದಲ್ಲಿ ಮನಸ್ಸು ಲಯಿಸುವುದಾದರೂ "ಮನಸ್ಸೇ ಆರನೆಯದಾಗಿರುವ ಇಂದ್ರಿಯಗಳು" ಎಂಬ ಸ್ಮೃತಿ ದುರ್ಬಲವಾದ್ದರಿಂದಲೂ ಮನಸ್ಸು ಇಂದ್ರಿಯವೆನಿಸಲಾರದು. "ಇಂದ್ರಿಯಗಳಿಗೆ ಮನಸ್ಸು ಅಧಿಪತಿ. ಮನಸ್ಸಿಗೆ ವಾಯು ಅಧಿಪತಿ. ಇಂದ್ರಿಯಗಳಿಗಿಂತಲೂ ಮನಸ್ಸು ಬೇರೆಯಾದುದು" ಎಂಬ ಶ್ರುತಿಗನುಗುಣವಾಗಿ ಅನೇಕಸ್ಮೃತಿಗಳಿರುವುದರಿಂದ ಮನಸ್ಸುಬೇರೆ ಎನಿಸಿದೆ."ಪ್ರಾಣಗಳೊಳಗಿನ ಮನಸ್ಸೇ ಲಿಂಗವೆನಿಸಿದೆ," "ನನ್ನ ಶರೀರ, ಮನಸ್ಸು, ಬುದ್ಧಿ, ಆತ್ಮಗಳು ಶುದ್ಧವಾಗಲಿ"ಎಂದು ಮುಂತಾದ ಶ್ರುತಿಗಳಲ್ಲಿ ಮನಸ್ಸನ್ನು ಪ್ರಾಣಕ್ಕಿಂತ ಬೇರೆ ಎಂದು ಹೇಳಲಾಗಿದೆ. ಸಾಂಖ್ಯಯೋಗಶಾಸ್ತ್ರಗಳಲ್ಲಿ ಸೂಕ್ಷ್ಮಭೂತಗಳ ಸತ್ತ್ವಗುಣದ ಅರ್ಧದಲ್ಲಿ ಮನಸ್ಸೂ, ಉಳಿದ ಅರ್ಧಭಾಗದಿಂದ ಜ್ಞಾನೇಂದ್ರಿಯಗಳೂ, ಅದೇ ಸೂಕ್ಷ್ಮಭೂತಗಳ ರಜೋಗುಣದ ಅರ್ಧದಲ್ಲಿ ಪ್ರಾಣವೂ, ಉಳಿದ ಅರ್ಧದಿಂದ ಕರ್ಮೇಂದ್ರಿಯಗಳೂ ಹುಟ್ಟುತ್ತವೆ ಎಂದು ಹೇಳಿದೆ. "ಆತ್ಮವು ಮನಸ್ಸಿನೊಡನೆಯೂ ಮನಸ್ಸು ಇಂದ್ರಿಯದೊಡನೆಯೂ ಇಂದ್ರಿಯವು ವಸ್ತುವಿನೊಡನೆಯೂ ಕೂಡಿದರೆ ವಸ್ತುವಿನ ಪ್ರತ್ಯಕ್ಷವುಂಟಾಗುತ್ತದೆ" ಎಂಬ ನ್ಯಾಯದಿಂದ ಎಲ್ಲಾ ಇಂದ್ರಿಯಗಳಲ್ಲೂ ಮನಸ್ಸು ವ್ಯಾಪಿಸಿರುವುದರಿಂದ ಮನಸ್ಸನ್ನು ಇಂದ್ರಿಯವೆಂದು ಹೇಳುವುದು ಉಪಚಾರವೆನಿಸಿದೆ. ಆದ್ದರಿಂದ ಪ್ರಾಣಮನಸ್ಸುಗಳು ಇಂದ್ರಿಯಕ್ಕಿಂತಲೂ ಬೇರೆ ಎಂಬುದು ನಿರ್ವಿವಾದವಾಗಿದೆ.

"ಹಿರಣ್ಯಗರ್ಭಸ್ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್," "ನಾರಾಯಣಾದ್ಬ್ರಹ್ಮಾ ಜಾಯತೇ" ಇತ್ಯಾದೌ ಹಿರಣ್ಯಗರ್ಭನಾರಾಯಣಾದೀನಾಂ ಜಗತ್ಕಾರಣತ್ವಾವಗಮಾತ್, "ಏತಸ್ಮಾ

ಜ್ಜಾಯತೇ ಪ್ರಾಣಃ” ಇತ್ಯಾದಿಶ್ರುತಿನಿಷ್ಠ ಜಗಜ್ಜನ್ಮಾದಿಕಾರಣತ್ವಂ ಪರಬ್ರಹ್ಮಣಶ್ಶಿವಸ್ಯೈವ ಕಥಮುಪಪದ್ಯತ ಇತ್ಯಾಶಂಕಾಯಾಮಾಧಿಕರ ಣಾಂತರೇಣಾಹ, ಸಂಜ್ಞಾಮೂರ್ತಿಕ್ಲಪ್ತ್ಯಧಿಕರಣಂ ‖ ೭ ‖ ಸಂಜ್ಞಾ ಮೂರ್ತಿಕ್ಲಪ್ತಿಸ್ತು ತ್ರಿವೃತ್ಕುರ್ವತ ಉಪದೇಶಾತ್ ‖ ೧೬ ‖ ತ್ರಿವೃತ್ಕು ರ್ವತಃ ತ್ರಿವೃತ್ಕರಣಕರ್ತುಃ ಪರಮಾತ್ಮನಶ್ಶಿವಸ್ಯ ಸಕಾಶಾದೇವ ಸಂಜ್ಞಾಮೂರ್ತಿಕ್ಲಪ್ತಿಃ ನಾಮರೂಪಾತ್ಮಕಚರಾಚರಸೃಷ್ಟಿರ್ಭವತಿ. ಕಸ್ಮಾತ್ ಉಪದೇಶಾತ್. “ ಸೇಯಂ ದೇವತೈಕ್ಷತ ” ಇತಿ ಶ್ರುತೌ ಪರ ಮಾತ್ಮನಶ್ಶಿವಸ್ಯೈವ ನಾಮರೂಪಾತ್ಮಕಶರೀರಸೃಷ್ಟಿಕರ್ತೃತ್ವೋಪ ದೇಶಾತ್ ಹಿರಣ್ಯಗರ್ಭವಿಷ್ಣ್ವಾದಿಕರ್ತೃತ್ವವಿಧಾಯಕಾನಾಂ ಶ್ರುತಿ ಸ್ಮೃತಿಪುರಾಣವಾಕ್ಯಾನಾಂ ಅವಾಂತರಸೃಷ್ಟಿವಿಷಯತ್ವಮಿತಿ ವಾಯ ವೀಯಸಂಹಿತಾದಿವಾಕ್ಯಾನುರೇಣ ಜನ್ಮಾಧಿಕರಣೇ ಬಹುಧಾ ಪ್ರಪಂ ಚಿತಂ. ತತ್ರಾಪಿ ಪರಮಶಿವ ಏವ ಹಿರಣ್ಯಗರ್ಭವಿಷ್ಣುಕಾಲರುದ್ರಶರೀ ರೇಷು ಸ್ಥಿತ್ವಾ ಸ್ಥಾವರಜಂಗಮಾತ್ಮಕಜಗಜ್ಜನ್ಮಾದಿಕಂ ಕರೋತೀತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಪೂರ್ವತ್ರ ವ್ಯೋಮಾದ್ಯಂತರ್ಯಾಮಿತಯಾ ಶಿವಸ್ಯ ಪರಬ್ರಹ್ಮಣಃ ಪವನಾದಿಕಾರಣತ್ವಮುಪದಿಷ್ಟಂ. “ ಧ್ಯಾಯಿತೇ ಶಾನಂ ಪ್ರಧ್ಯಾಯಿತವ್ಯಂ ” ಇತ್ಯಾದಿನಾ ಬ್ರಹ್ಮಾದಿಕಾರಣತ್ವಂ ತಸ್ಯೈವ ವ್ಯಪದಿಷ್ಟಂ. ಅಥಾಪ್ಯವಾಂತರಸೃಷ್ಟೌ ತದಂತರ್ಯಾಮಿತಯಾ ಸ್ಥಾವರ ಜಂಗಮಾತ್ಮಕಜಗತ್ಕಾರಣತ್ವಂ ತತ್ರಾನುಕ್ತಂ. ತಸ್ಮಾದತ್ರಾಧಿಕರಣಾಂತ ರೋ ನಿರ್ಣೀತಃ.“ಯೋ ರುದ್ರೋ ಅಗ್ನೌ ಯೋ ಅಪ್ಸು” “ಅಹಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ ” “ ನಾನ್ಯಃ ಕಶ್ಚಿನ್ಮ ತ್ತೋ ವ್ಯತಿರಿಕ್ತಃ, ಸೋಽಂತರಾದಂತರಂ ಪ್ರಾವಿಶತ್ ” ಇತ್ಯಾದೌ ಶಿವಸ್ಯ ಸಕಲಪೂರ್ವಭಾವಿತ್ವಸರ್ವಾಂತರ್ಯಾಮಿತ್ವಾದ್ಯನನ್ಯಸಾಧಾರಣ ಧರ್ಮೋಪದೇಶಾತ್. “ ಧಾತಾ ಯಥಾಪೂರ್ವಮಕಲ್ಪಯತ್ ದಿವಂ ಚ ಪೃಥಿವೀಂ ಚಾಂತರಿಕ್ಷಂ ಚ ” ಇತ್ಯಾದಿನಾ ಹಿರಣ್ಯಗರ್ಭಸ್ಯ ಜಗ ತ್ಕಾರಣತ್ವಾವಗಮಾತ್, “ ನಾರಾಯಣಾದ್ಬ್ರಹ್ಮಾ ಜಾಯತೇ ” ಇತ್ಯಾದೌ ನಾರಾಯಣಸ್ಯ ಚತುರ್ಮುಖಾದಿಕಾರಣತ್ವದರ್ಶನಾತ್ “ ತತ್ತೇಜ ಐಕ್ಷತ, ಬಹು ಸ್ಯಾಂ ಪ್ರಜಾಯೇಯ ”, ಇತಿ “ ತದಾ ಪೋಽಸೃಜತ” “ತಥಾಪ ಐಕ್ಷಂತ” “ತಥಾನ್ನಮಸೃಜತ ” ಇತ್ಯಾದೌ ಚ ವಹ್ನ್ಯಾದಿಭೂತಾಭಿಮಾನದೇವತಾನಾಂಕಾರಣತ್ವ ನಿರ್ದೇಶಾತ್,“ವಿಜ್ಞಾ ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ ” ಇತ್ಯಾದೌ ಜೀವಸ್ಯ ಭೂತಕರ್ತೃತ್ವದ್ಯೋತನಾಚ್ಚ ಶಿವಸ್ಯ ಹಿರಣ್ಯಗರ್ಭಾದೀನಾಂ ವಾ ಸರ್ವ ಭೂತಜಗಜ್ಜನ್ಮಾದಿಕಾರಣತ್ವಮಿತಿ ಸಂದಿಹ್ಯತೇ. “ ಹಿರಣ್ಯಗರ್ಭಸ್ಸ

ಮವರ್ತತಾಗ್ರೇ" ಇತ್ಯಾದೌ ಪ್ರಜಾಪತಿಶಬ್ದಸ್ಯ ಹಿರಣ್ಯಗರ್ಭ ಏವ ರೂಢತ್ವಾತ್, "ನಾರಾಯಣಾದ್ಬ್ರಹ್ಮಾ ಜಾಯತೇ" ಇತ್ಯಾದೌ ನಾರಾಯಣಸ್ಯೈವ ಸರ್ವಕಾರಣತ್ವದ್ಯೋತನಾತ್, ಕಿಂಚ "ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ" ಇತಿ ಜೀವಕರ್ತೃಕತ್ವಶ್ರವಣಾತ್, ನಹಿ ಪರದೇವತಾ ಸ್ವೇನ ರೂಪೇಣ ನಾಮರೂಪೇ ವ್ಯಾಕರವಾಣೀತ್ಯೈಕ್ಷತ ಅಪಿತು ಸ್ವಾಂಶಭೂತೇನ ಜೀವರೂಪೇಣ, "ಅನೇನ ಜೀವೇನಾತ್ಮನಾ" ಇತಿ ವಚನಾತ್. ನನ್ವೇವಂ ಚಾರೇಣಾನುಪ್ರವಿಶ್ಯ ಪರಬಲಂ ಸಂಕಲಯಾನೀತಿವತ್ ವ್ಯಾಕರವಾಣೀತ್ಯುತ್ತಮಪುರುಷಃ ಕರ್ತೃಸ್ಥಕ್ರಿಯಶ್ಚ ಲಾಕ್ಷಣಿಕಸ್ಸ್ಯಾತ್. ನೈವಂ ತತ್ರ ರಾಜಚಾರಯೋಃ ಸ್ವರೂಪಭೇದಾಲ್ಲಾಕ್ಷಣಿಕತ್ವಂ, ಇಹ ತು ಜೀವಸ್ಯಾಪಿ ಸ್ವಾಂಶತ್ವೇನ ಸ್ವರೂಪತ್ವಾತ್ತೇನ ರೂಪೇಣ ಪ್ರವೇಶೋ ವ್ಯಾಕರಣಂ ಚಾತ್ಮನ ಏವೇತಿ ನ ಲಾಕ್ಷಣಿಕತ್ವಪ್ರಸಂಗಃ. ನಚ ಸಹಯೋಗಲಕ್ಷಣೇಯಂ ತೃತೀಯಾ, ಕಾರಕವಿಭಕ್ತಾ ಸಂಭವತ್ಯಾಮುಪಪದವಿಭಕ್ತೇರನ್ಯಾಯ್ಯತ್ವಾತ್. ನಚ ಕರಣೇ ತೃತೀಯಾ, ಬ್ರಹ್ಮಕರ್ತೃಕಯೋಃ ಪ್ರವೇಶವ್ಯಾಕರಣಯೋರವಶ್ಯಸಾಧಕತಮತ್ವಾಭಾವಾತ್. ನಚ ಜೀವಸ್ಯ ಕರ್ತೃತ್ವಂ ಪ್ರವೇಶಮಾತ್ರೇ ಪರ್ಯವಸ್ಯತಿ, ನಾಮರೂಪವ್ಯಾಕರಣಂ ತು ಬ್ರಹ್ಮಣ ಏವೇತಿ ವಕ್ತುಂ ಶಕ್ಯಂ, ಕ್ತ್ವಾಪ್ರತ್ಯಯೇನ ಸಮಾನಕರ್ತೃಕತ್ವಪ್ರತೀತೇ; ದೇವಸ್ಯ ಸ್ವಾಂಶತ್ವೇನ ಸ್ವರೂಪತ್ವೇಽಪಿ ಪರಸ್ವರೂಪವ್ಯಾವೃತ್ತ್ಯರ್ಥಃ ಅನೇನ ಜೀವೇನೇತಿ ಪರಾಕ್ತ್ವೇನ ಪರಾಮರ್ಶಃ. ಅತೋ ಹಿರಣ್ಯಗರ್ಭಕರ್ತೃಕೇಯಂ ನಾಮರೂಪವ್ಯಾಕ್ರಿಯಾ. ತಸ್ಮಾತ್ "ನಾಮರೂಪಂ ಚ ಭೂತಾನಾಂ ಕೃತ್ಸ್ನಾನಾಂ ಚ ಪ್ರಪಂಚಸಂ। ವೇದಶಬ್ದೇಭ್ಯ ಏವಾದೌ ದೇವದೀನಾಂ ಚಕಾರ ಸಃ ॥" ಇತ್ಯಾದಿಸ್ಮೃತಿಷು ಚತುರ್ಮುಖಕರ್ತೃಕಸೃಷ್ಟಿಪ್ರಕರಣೇ ನಾಮರೂಪವ್ಯಾಕರಣಂ ಸಂಕೀರ್ತ್ಯತೇ. ಅತ ಏವ ಜೀವಸ್ಯ ವಾ ತತ್ಸಮಷ್ಟಿರೂಪಹಿರಣ್ಯಗರ್ಭಸ್ಯ ವಾ ತತ್ಕಾರಣಭೂತನಾರಾಯಣಸ್ಯ ವಾ ನಾಮರೂಪವ್ಯಾಕರಣಂ ಸಮಂಜಸಮಿತಿ ಪ್ರಾಪ್ತೇ ಪ್ರಚಕ್ಷ್ಮಹೇ ಸಂಜ್ಞಾಮೂರ್ತಿಕ್ಲೃಪ್ತಿಸ್ತ್ವಿತಿ. ತುಶಬ್ದಃ ಪೂರ್ವಪಕ್ಷಂ ವ್ಯಾವರ್ತಯತಿ. ಸಂಜ್ಞಾಮೂರ್ತಿಕ್ಲೃಪ್ತಿಃ ನಾಮರೂಪವ್ಯಾಕರಣಂ ತತ್ತ್ರಿವೃತ್ಕುರ್ವತಃ ಪರಬ್ರಹ್ಮಣ ಏವ, ತಸ್ಯೈವ ನಾಮರೂಪವ್ಯಾಕರಣೋಪದೇಶಾತ್. "ಸದೇವ ಸೌಮ್ಯೇದಮಗ್ರ ಆಸೀತ್" ಇತ್ಯತ್ರ ಸಚ್ಛಬ್ದವಾಚ್ಯಃ ಮಹಾಪ್ರಳಯಸಾಕ್ಷೀ ಸರ್ವಕಾರಣಶ್ಶಿವ ಏವ. ಕಾಲತ್ರಯಾಬಾಧ್ಯತ್ವೇನ ತಸ್ಯೈವ ಮುಖ್ಯತ್ವಂ, "ಋತಂ ಸತ್ಯಂ ಪರಂ ಬ್ರಹ್ಮ" ಇತ್ಯಾದಿ ಶ್ರುತಿದರ್ಶನಾತ್. ಅವಾಂತರ

ಸೃಷ್ಟ್ಯಾದಿಕಾರಣತ್ವಮಪಿ ನಾನ್ಯಸ್ಯೋಪಪನ್ನಂ. "ಅಂಡಂ ಹಿರಣ್ಮಯಂ ಮಧ್ಯೇ ಸಮುದ್ರಂ ರುದ್ರಸ್ಯ ವೀರ್ಯಾತ್ಪ್ರಥಮಂ ಬಭೂವ ತಸ್ಮಿನ್ ಬ್ರಹ್ಮವಿಷ್ಣೂ ಜಾಯತೇ ಜಾತವೇದಾಃ" ಇತಿಶ್ರುತೌ ತ್ರಿವೃತ್ಕರಣೇನ ಪರಮಶಿವಸ್ತೇಜೋಽಂಡಮುತ್ಪಾದ್ಯ ತತ್ರ ಪಶ್ಚಾಚ್ಚತುರ್ಮುಖಾದಿ ಸೃಷ್ಟ್ಯುಪದೇಶಾತ್ ಹಿರಣ್ಯಗರ್ಭಾದೀನಾಂ ತ್ರಿವೃತ್ಕರಣತ್ವಂ ನೋಪಪನ್ನಂ. ಆಥರ್ವಣಶಿಖಾಯಾಮಪಿ "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ ಸರ್ವಾಣಿ ಚೇಂದ್ರಿಯಾಣಿ ಸಹ ಭೂತೈಃ" "ಸರ್ವೈಶ್ವರ್ಯಸಂಪನ್ನಃ ಸರ್ವೇಶ್ವರಶ್ಶಂಭುರಾಕಾಶಮಧ್ಯೇ" ಇತಿ. ಅಥರ್ವಶಿರಸಿ ಪ್ರಥಮಖಂಡೇ "ಸೋಽಬ್ರವೀದಹಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ । ನಾನ್ಯಃ ಕಶ್ಚಿನ್ಮತ್ತೋ ವ್ಯತಿರಿಕ್ತಃ । ಸೋಽಂತರಾದಂತರಂ ಪ್ರಾವಿಶತ್" ಇತ್ಯುಪಕ್ರಮ್ಯ "ಸರ್ವಂ ಚ ಮಾಮೇವ ಯೋ ವೇದ ಸ ಸರ್ವಂ ವೇದ" ಇತ್ಯಂತೇನ ಸರ್ವಚಿದಚಿತ್ಪ್ರಪಂಚಾನುಪ್ರವಿಷ್ಟತಯಾ ಸರ್ವಶಬ್ದವಾಚ್ಯತ್ವಮುಪದಿಶ್ಯ, ದ್ವಿತೀಯಖಂಡೇ ಚ ಪೂರ್ವಾನುಪ್ರವೇಶಾದೇವ "ಯೋ ವೈ ರುದ್ರಸ್ಸ ಭಗವಾನ್ಯಚ್ಚ ಬ್ರಹ್ಮ ತಸ್ಮೈ ನಮೋ ನಮಃ, ಯೋ ವೈ ರುದ್ರಸ್ಯ ಭಗವಾನ್ಯಶ್ಚ ವಿಷ್ಣುಸ್ತಸ್ಮೈ ನಮೋ ನಮಃ" ಇತ್ಯಾರಭ್ಯ ಬ್ರಹ್ಮವಿಷ್ಣುಮಹೇಶ್ವರೇಂದ್ರವಿನಾಯಕಾದಿಸರ್ವಶಬ್ದವಾಚ್ಯತ್ವಂ ಶಿವಸ್ಯೈವ ವಿಜ್ಞಾಯತೇ. ತಸ್ಮಾತ್ಸರ್ವಭೂತಭೌತಿಕಕಾರಣತ್ವಂ ಸರ್ವಶಬ್ದವಾಚ್ಯತ್ವಂ ತಸ್ಯೈವೋಪಪನ್ನಂ. ಮನುಸ್ಮೃತೌ. "ಅಪ ಏವ ಸಸರ್ಜಾದೌ ತಾಸು ವೀರ್ಯಮವಾಸೃಜತ್ । ತದಂಡಮಭವದ್ಧೈಮಂ ಸಹಸ್ರಾರ್ಕಸಮಪ್ರಭಂ । ತಸ್ಮಿನ್ ಜಜ್ಞೇ ಸ್ವಯಂ ಬ್ರಹ್ಮಾ ಸರ್ವಲೋಕಪಿತಾಮಹಃ । ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರಸೂನವಃ । ತಾ ಏವಾಯತನಂ ತಸ್ಯ ತತೋ ನಾರಾಯಣಃ ಸ್ಮೃತಃ ॥ ನಾರಾಯಣಃ ಪರೋಽವ್ಯಕ್ತಾದವ್ಯಕ್ತಾದಂಡಸಂಭವಃ । ಅಂಡಸ್ಯಾಂತಸ್ತ್ರಯೋ ಲೋಕಾಃ ಸಪ್ತದ್ವೀಪಾ ಚ ಮೇದಿನೀ ।" ಇತಿ. "ರುದ್ರಸಂಜ್ಞಸ್ಯ ದೇವಸ್ಯ ರೂಪೇ ಮೂರ್ತಿಃ ಪ್ರಜಾಯತೇ । ತೇನ ಕ್ಷಿಪ್ತಂ ರಸೇ ವೀರ್ಯಂ ಪರಮೂರ್ತ್ಯಭಿಮಾನಿನಾ । ತದಂಡಮಭವದ್ದಿವ್ಯಂ ಸಹಸ್ರಕಿರಣಪ್ರಭಂ । ವಿಷ್ಣುಸ್ತತ್ರಾವಿಶತ್ಸಾಕ್ಷಾನ್ಮಮ ಶಕ್ತೇಸ್ತು ವೈಭವಾತ್ ॥ ಪುನರ್ನಾರಾಯಣಾಖ್ಯಂ ಮೇ ನಿಯೋಗಾತ್ಪ್ರಾಪ್ತವಾನಸೌ । ಇಮಂ ಚೋದಾಹರಂತ್ಯತ್ರ ಶ್ಲೋಕಂ ನಾರಾಯಣಂ ಪ್ರತಿ। ಆಪಸ್ಸೂಕ್ಷ್ಮೋ ರಸೋ ಜ್ಞೇಯಃ ರಸೋ ನಾರಃ ಪ್ರಕೀರ್ತಿತಃ । ನರಹೇತುಃ ಪರೋ ಬ್ರಹ್ಮ ನರಸಾಕ್ಷಾಚ್ಛಿವೋ ಮತಃ । ನಾರಮಸ್ಯಾ-

**ಯನಂ ಪ್ರೋಕ್ತಂ ತೇನ ನಾರಾಯಣಃ ಸ್ಮೃತಃ । ಬ್ರಹ್ಮಾಪಿ ನರ ಶಾರ್ದೂಲ ಗಂಧಮೂರ್ತಿಸ್ಸಮಾವಿಶತ್ ॥ " ಇತಿ ಶೈವಪುರಾಣೇ.**

" ಹಿರಣ್ಯಗರ್ಭನು ಮೊದಲಿಗೆ ಇದ್ದನು. ಅವನೊಬ್ಬನೇ ವಿಶ್ವವೆಲ್ಲಕ್ಕೂ ಪತಿಯಾದನು," " ನಾರಾಯಣನಿಂದ ಬ್ರಹ್ಮನು ಹುಟ್ಟಿದ್ದಾನೆ " ಎಂಬಲ್ಲಿ ಹಿರಣ್ಯಗರ್ಭ, ನಾರಾಯಣ ಇವರನ್ನು ಜಗತ್ಕಾರಣರೆಂದು ಹೇಳಿದ್ದರಿಂದ, " ಏತಸ್ಮಾಜ್ಜಾಯತೇ ಪ್ರಾಣಃ " ಎಂಬ ಶ್ರುತಿಯಲ್ಲಿ ಹೇಳಿದಂತೆ ಜಗಜ್ಜನ್ಮಾದಿಗಳಿಗೆ ಪರಶಿವಬ್ರಹ್ಮವೇ ಕಾರಣವೆಂಬುದು ಹೇಗೆ ಹೊಂದಿಕೆಯಾಗುತ್ತದೆ ಎಂದಾಶಂಕಿಸಿ ನಿರಾಕರಿಸುತ್ತಾನೆ. ತ್ರಿವೃತ್ಕರಣವನ್ನೆಸಗುವ ಪರಶಿವನಿಂದಲೇ ನಾಮರೂಪಗಳಿಂದೊಡಗೂಡಿದ ಜಗತ್ತಿನ ಸೃಷ್ಟಿಯಾಗುತ್ತದೆ ; ಏಕೆಂದರೆ " ಆ ಈ ದೇವತೆ ನೋಡಿತು " ಎಂಬ ಶ್ರುತಿಯಲ್ಲಿ ಪರಶಿವನೇ ನಾಮರೂಪಾತ್ಮಕವಾದ ಶರೀರವನ್ನು ಸೃಷ್ಟಿಸುವನೆಂದು ಹೇಳಲಾಗಿದೆ. " ಹಿರಣ್ಯಗರ್ಭ ವಿಷ್ಣು ಮೊದಲಾದವರನ್ನು ಜಗತ್ಕಾರಣವೆಂದು ತಿಳಿಸುವ ಶ್ರುತಿ ಸ್ಮೃತಿ ಪುರಾಣವಾಕ್ಯಗಳು ಅವಾಂತರಸೃಷ್ಟಿಗೆ ಅನ್ವಯಿಸುತ್ತವೆ " ಎಂಬ ವಾಯವೀಯ ಸಂಹಿತೆಯ ವಾಕ್ಯದಂತೆ ಜನ್ಮಾದ್ಯಧಿಕರಣದಲ್ಲಿ ವಿಸ್ತಾರವಾಗಿ ತಿಳಿಸಲಾಗಿದೆ. ಅದರಲ್ಲೂ ಪರಶಿವನೇ ಹಿರಣ್ಯಗರ್ಭ ವಿಷ್ಣು ಕಾಲರುದ್ರ ಇವರ ಶರೀರಗಳಲ್ಲಿ ನೆಲಸಿ ಜಗಜ್ಜನ್ಮಾದಿವ್ಯಾಪಾರಗಳನ್ನು ನಡೆಸುತ್ತಾನೆ. ಆಕಾಶಾದಿಗಳಲ್ಲಿ ಅಂತರ್ಯಾಮಿಯಾದ್ದರಿಂದ ಪರಶಿವನೇ ವಾಯು ಮೊದಲಾದವುಗಳಿಗೆ ಕಾರಣನೆಂದು ಹಿಂದೆಯೇ ಹೇಳಿದೆ. " ಬ್ರಹ್ಮ ವಿಷ್ಣು ರುದ್ರರೆಲ್ಲರೂ ಅವನಿಂದಲೇ ಹುಟ್ಟಿದ್ದಾರೆ " ಎಂಬಲ್ಲಿ ಅವನೇ ಬ್ರಹ್ಮಾದಿಗಳಿಗೆ ಕಾರಣನೆಂದು ಹೇಳಿದ್ದರೂ ಅವಾಂತರಸೃಷ್ಟಿಯಲ್ಲೂ ಶಿವನೇ ಅವರೊಳಗೆ ಅಂತರ್ಯಾಮಿಯಾಗಿದ್ದು ಜಗತ್ಕಾರಣನಾಗುವನೆಂದು ಹೇಳಿಲ್ಲ; ಅದಕ್ಕಾಗಿಯೇ ಬೇರೊಂದು ಅಧಿಕರಣವೇ ಈಗ ಹೊರಟಿದೆ. "ಅಗ್ನಿ ನೀರು ಓಷಧಿ ಲತೆ,ಭೂಮಿ ಇವೆಲ್ಲದರಲ್ಲೂ ರುದ್ರನಿರುವನು" "ನಾನು ಮೊದಲೂ ಇದ್ದೆನು, ಈಗಲೂ ಇದ್ದೇನೆ, ಮುಂದೆಯೂ ಇರುವೆನು. ನನಗಿಂತ ಅಧಿಕರು ಬೇರೆ ಯಾರೂ ಇಲ್ಲ" ಎಂಬಲ್ಲಿ ಶಿವನೇ ಎಲ್ಲರಿಗೂ ಮೊದಲು ಇದ್ದವನು, ಎಲ್ಲರೊಳಗೂ ಇರುವನು ಎಂದು ಅವನ ಅಸಾಧಾರಣಗುಣಗಳನ್ನೇ ತಿಳಿಸಲಾಗಿದೆ. ಆದರೆ " ಬ್ರಹ್ಮನು ಸ್ವರ್ಗ ಭೂಮಿ ಅಂತರಿಕ್ಷಗಳನ್ನು ಹಿಂದಿನಂತೆಯೇ ರಚಿಸಿದನು"ಎಂಬಲ್ಲಿ ಹಿರಣ್ಯಗರ್ಭನನ್ನು ಜಗತ್ಕಾರಣನೆಂದು ಹೇಳಿದೆ. ನಾರಾಯಣನಿಂದ ಬ್ರಹ್ಮ ಹುಟ್ಟಿದನು ಎಂಬಲ್ಲಿ ನಾರಾಯಣನೇ ಬ್ರಹ್ಮನ ಕಾರಣನೆಂದು ಹೇಳಿದೆ. " ಆ ತೇಜಸ್ಸು ನೋಡಿತು, ವಿಸ್ತಾರವಾಗಲಿಚ್ಛಿಸಿತು. " " ಅದು ನೀರನ್ನು ಸೃಜಿಸಿತು, ಹಾಗೆಯೇ ನೀರು ನೋಡಿತು, ಅನ್ನವನ್ನು ಸೃಷ್ಟಿಸಿತು " ಈ ಶ್ರುತಿಗಳಲ್ಲಿ ಬೆಂಕಿ ಮೊದಲಾದವುಗಳ ಅಭಿಮಾನದೇವತೆಗಳನ್ನು ಕಾರಣವೆಂದು ತಿಳಿಸಲಾಗಿದೆ. " ವಿಜ್ಞಾನದಿಂದಲೇ ಈ ಜೀವರು ಹುಟ್ಟಿದ್ದಾರೆ " ಎಂಬಲ್ಲಿ ಜೀವನೇ ಭೂತಗಳ ಕರ್ತೃವೆಂದು ಹೇಳಿದೆ. ಆದ್ದರಿಂದ ಸಮಸ್ತ ಜಗತ್ತಿಗೂ ಕಾರಣನು ಶಿವನೇ ಅಥವಾ ಹಿರಣ್ಯಗರ್ಭಾದಿಗಳೇ ? ಎಂಬ ಸಂದೇಹ ಬರುತ್ತದೆ.

“ಹಿರಣ್ಯಗರ್ಭನು ಮೊದಲಿಗೆ ಇದ್ದನು, ಅವನು ಪ್ರಜಾಪತಿಯಾದನು” ಎಂಬಲ್ಲಿ ಪ್ರಜಾಪತಿ ಶಬ್ದವು ಹಿರಣ್ಯಗರ್ಭನಲ್ಲಿಯೇ ರೂಢವಾಗಿದೆ. “ನಾರಾಯಣನಿಂದ ಬ್ರಹ್ಮ ಹುಟ್ಟಿದ್ದಾನೆ” ಎಂಬಲ್ಲಿ ನಾರಾಯಣನೇ ಸರ್ವಕಾರಣನೆಂದು ತಿಳಿದುಬರುತ್ತದೆ. “ಈ ಜೀವನಲ್ಲಿ ಪ್ರವೇಶಿಸಿ ನಾಮರೂಪಗಳನ್ನು ವಿಭಾಗಿಸುತ್ತೇನೆ” ಎಂಬಲ್ಲಿ ಜೀವನೇ ಕರ್ತನೆಂದು ಹೇಳಿದೆ. ಪರಮಾತ್ಮನು ನಾಮರೂಪಗಳನ್ನು ವಿಸ್ತರಿಸಲಿಕ್ಕಾಗಿ ತನ್ನ ಸ್ವರೂಪದಿಂದ ನೋಡಲಿಲ್ಲ ಆದರೆ ತನ್ನ ಅಂಶನಾದ ಜೀವನಮೂಲಕವೇ ನೋಡಿದನು ಎಂದು ಶ್ರುತಿಯಲ್ಲಿ ಹೇಳಿದೆ. “ಗೂಢಚಾರನಿಂದ ಶತ್ರುಸೈನ್ಯವನ್ನು ಪ್ರವೇಶಿಸಿ ಅಲ್ಲಿನ ಸ್ಥಿತಿಯನ್ನು ತಿಳಿಯುತ್ತೇನೆ” ಎಂದು ಹೇಳುವಂತೆ ಪ್ರವೇಶಮಾಡುವ ಪರಮಾತ್ಮನೇ ನಾಮರೂಪಗಳನ್ನು ಸೃಷ್ಟಿಸುತ್ತಾನೆ, ಅವನ ಅನುಪ್ರವೇಶವನ್ನು ಜೀವರ ಮೂಲಕವೇ ಲಕ್ಷಣೆಯಿಂದ ನಿರ್ವಹಿಸಬೇಕು ಎಂದು ಆಕ್ಷೇಪ ಬಂದರೆ ಸಮಾಧಾನವನ್ನು ಹೇಳಲಾಗಿದೆ. ರಾಜನಿಗೂ ಗೂಢಚಾರನಿಗೂ ಸ್ವರೂಪಭೇದವಿರುವುದರಿಂದ ಲಕ್ಷಣೆಯಿಂದಲೇ ಅಲ್ಲಿ ನಿರ್ವಹಿಸಬಹುದಾದರೂ ಜೀವನು ಪರಮಾತ್ಮನ ಅಂಶನೇ ಆಗಿರುವುದರಿಂದ ಎಲ್ಲದರಲ್ಲೂ ಪರಮಾತ್ಮನ ಅನುಪ್ರವೇಶವು ಮುಖ್ಯವೃತ್ತಿಯಿಂದಲೇ ಬೋಧಿತವಾಗುತ್ತದೆ. ಹೀಗೆ ಇಲ್ಲಿ ಲಕ್ಷಣೆಯ ಆವಶ್ಯಕತೆ ಇಲ್ಲ. ಜೀವೇನಾತ್ಮನಾ ಎಂಬಲ್ಲಿ ತೃತೀಯೆಗೆ ಸಾಹಚರ್ಯವೇ ಅರ್ಥವೆಂಬುದು ಯುಕ್ತವಲ್ಲ ; ಯಾಕೆಂದರೆ ಉಪಪದವಿಭಕ್ತಿಗಿಂತಲೂ ಕಾರಕವಿಭಕ್ತಿಯೇ ಪ್ರಬಲವಾದ್ದರಿಂದ ಕರ್ತ್ರರ್ಥದಲ್ಲಿ ತೃತೀಯಾವಿಭಕ್ತಿಯನ್ನು ಹೇಳುವುದೇ ಯುಕ್ತವೆನಿಸುತ್ತದೆ. ಹಾಗೆಯೇ ಕರಣಾರ್ಥದಲ್ಲಿ ತೃತೀಯಾವಿಭಕ್ತಿಯನ್ನು ಹೇಳುವುದೂ ಉಚಿತವಲ್ಲ; ಬ್ರಹ್ಮಪ್ರವೇಶ ಮತ್ತು ನಾಮರೂಪವಿಭಜನಗಳಲ್ಲಿ ಜೀವನು ಅತ್ಯಂತಸಾಧಕನಲ್ಲವಾದ್ದರಿಂದ ಜೀವೇನಾತ್ಮನಾ ಎಂಬಲ್ಲಿ ಕರಣಾರ್ಥದಲ್ಲಿ ತೃತೀಯೆ ಬಂದಿದೆ ಎಂದು ಹೇಳುವುದು ಸರಿಯಲ್ಲ. ಪ್ರವೇಶಮಾತ್ರದಲ್ಲಿಯೇ ಜೀವನನ್ನು ಕರ್ತೃವೆಂದು ಹೇಳಿ, ನಾಮರೂಪ ವಿಭಜನವನ್ನು ಪರಮಾತ್ಮನೇ ಮಾಡುವನೆಂದು ಹೇಳುವುದೂ ಯುಕ್ತವಲ್ಲ. ; ಯಾಕೆಂದರೆ ಇಲ್ಲಿ ಅನುಪ್ರವಿಶ್ಯ ಎಂಬಲ್ಲಿ ಕ್ತ್ವಾ ಪ್ರತ್ಯಯವಿರುವುದರಿಂದ ಎರಡು ಕ್ರಿಯೆಗಳನ್ನು ಮಾಡುವವನು ಒಬ್ಬನೇ ಎಂಬುದು ಸ್ಪಷ್ಟವಾಗುತ್ತದೆ. ಜೀವನು ಪರಮಾತ್ಮನ ಅಂಶನಾಗಿ ಅವನ ಸ್ವರೂಪವೇ ಆದರೂ ಬೇರೆ ರೂಪದಿಂದ ಪ್ರವೇಶವನ್ನು ತಡೆಯಲಿಕ್ಕಾಗಿ ಜೀವಸ್ವರೂಪದಿಂದಲೇ ಪರಮಾತ್ಮನ ಪ್ರವೇಶವನ್ನು ಶ್ರುತಿಯಲ್ಲಿ ಹೇಳಲಾಗಿದೆ. ಆದ್ದರಿಂದ “ಈ ನಾಮರೂಪವಿಭಾಗವನ್ನು ಹಿರಣ್ಯಗರ್ಭನೇ ಮಾಡುತ್ತಾನೆ” “ಸಮಸ್ತಪ್ರಾಣಿಗಳ ಸೃಷ್ಟಿಯನ್ನೂ ನಾಮರೂಪವಿಭಾಗವನ್ನೂ ಅವನು ಆದಿಯಲ್ಲಿ ವೇದಪ್ರಮಾಣ್ಯದಿಂದಲೇ ಮಾಡಿದನು” ಎಂದು ಸ್ಮೃತಿಯಲ್ಲಿ ಚತುರ್ಮುಖನಿಂದಾಗಿರುವ ಸೃಷ್ಟಿಯನ್ನು ತಿಳಿಸುವಾಗ ನಾಮರೂಪಗಳ ವಿಭಾಗವನ್ನು ಹೇಳಿದೆ. ಆದ್ದರಿಂದಲೇ ಜೀವನಾಗಲೀ, ಜೀವಸಮಷ್ಟಿ ಎನಿಸಿದ ಹಿರಣ್ಯಗರ್ಭನಾಗಲೀ ಅವನಿಗೆ ಕಾರಣನಾದ ನಾರಾಯಣನಾಗಲೀ ನಾಮರೂಪಗಳ ವಿಭಾಗ-

ಮಾಡಿದರೆಂದು ಹೇಳುವುದೇ ಸಮಂಜಸವೆಂದು ಪೂರ್ವಪಕ್ಷ ಬರುತ್ತದೆ. ಅದಕ್ಕೆ ಸೂತ್ರದಲ್ಲಿ ಸಮಾಧಾನವನ್ನು ಹೇಳಲಾಗಿದೆ. ತು ಶಬ್ದವು ಪೂರ್ವಪಕ್ಷವನ್ನು ಪರಿಹರಿಸುತ್ತದೆ. ನಾಮರೂಪವಿಭಾಗವು ತ್ರಿವೃತ್ಕರಣದಲ್ಲಿ ನಿರತನಾದ ಪರಶಿವನಿಗೇ ಸಂಬಂಧಿಸಿದ್ದೆಂದು ಶ್ರುತಿ ತಿಳಿಸಿದೆ. ತ್ರಿವೃತ್ಕರಣವೆಂದರೆ ಪೃಥ್ವಿ ಅಪ್ ತೇಜಸ್ಸುಗಳ ಸಮನ್ವಯವೆಂದರ್ಥ. ಇವು ಮೂರನ್ನು ವ್ಯವಸ್ಥಿತವಾದ ರೀತಿಯಲ್ಲಿ ಸೇರಿಸಿ ಪರಮಾತ್ಮನು ಪ್ರಪಂಚವನ್ನು ಸೃಷ್ಟಿಸುವನು. "ಸದ್ರೂಪವೂ ಅದ್ವಿತೀಯವೂ ಆದ ಪರಬ್ರಹ್ಮ ವಿಸ್ತಾರವಾಗಬೇಕೆಂದು ನೋಡಿತು" ಎಂಬಲ್ಲಿ ಸತ್ಪದವಾಚ್ಯನೂ, ಸರ್ವಕಾರಣನೂ ಮಹಾಪ್ರಳಯಸಾಕ್ಷಿಯೂ ಆದ ಪರಶಿವನೇ ಮೂರುಕಾಲಗಳಲ್ಲೂ ಅಬಾಧಿತನಾಗಿರುವುದರಿಂದ ಅವನೇ ಮುಖ್ಯನೆನಿಸಿದ್ದಾನೆ. ಪರಮಾತ್ಮನು ಸತ್ಯವೂ ಜ್ಞಾನವೂ ಅನಂತವೂ ಆಗಿರುವುದರಿಂದ ಅವಾಂತರಸೃಷ್ಟಿಗೂ ಅವನಲ್ಲದೆ ಬೇರೆ ಯಾರೂ ಕಾರಣರಾಗಲಾರರು. "ರುದ್ರನ ವೀರ್ಯದಿಂದ ಸಮುದ್ರದ ಮಧ್ಯದಲ್ಲಿ ಸ್ವರ್ಣಮಯವಾದ ಅಂಡ ಒಂದು ಹೊರಬಂದಿತು. ಅದರಲ್ಲಿ ಬ್ರಹ್ಮ ವಿಷ್ಣುಗಳು ಅವತರಿಸಿದರು" ಎಂಬ ಶ್ರುತಿಯಲ್ಲಿ ತ್ರಿವೃತ್ಕರಣದಿಂದ ಪರಶಿವನು ತೇಜೋರೂಪವಾದ ಅಂಡವನ್ನು ಹುಟ್ಟಿಸಿ ಅದರಿಂದ ಮುಂದೆ ಚತುರ್ಮುಖಾದಿಗಳನ್ನು ಸೃಜಿಸಿದನೆಂದು ಹೇಳಿರುವುದರಿಂದ ಹಿರಣ್ಯಗರ್ಭಾದಿಗಳಿಗೆ ತ್ರಿವೃತ್ಕರಣದ ಸಂಬಂಧವೇ ಹೊಂದುವುದಿಲ್ಲ. ಅಥರ್ವಣಶಿಕ್ಷೆಯಲ್ಲಿಯೂ, "ತ್ರಿಮೂರ್ತಿಗಳೂ ಇಂದ್ರಿಯಗಳೂ ಪಂಚಭೂತಗಳೊಡನೆ ಶಿವನಿಂದಲೇ ಹುಟ್ಟಿರುವರಾದ್ದರಿಂದ ಸರ್ವ ಕಾರಣನಾದ ಶಿವನೇ ಧ್ಯೇಯನು" ಎಂದು ಹೇಳಿದೆ, ಅಥರ್ವಶಿರಸ್ಸಿನ ಪ್ರಥಮಕಾಂಡದಲ್ಲಿ ರುದ್ರನು ದೇವತೆಗಳೆಲ್ಲರಿಗೂ ತಾನೇ ಮೊದಲಿಗೂ ಈಗಲೂ ಮುಂದೆಯೂ ಇರುತ್ತ ಎಲ್ಲರೊಳಗೂ ಪ್ರವೇಶಿಸಿರುವುದಾಗಿಯೂ, ತನಗಿಂತ ಬೇರೆ ಏನೂ ವಿಶ್ವದಲ್ಲಿಲ್ಲವೆಂದೂ ಹೇಳಿ "ನನ್ನನ್ನು ತಿಳಿದವನು ಎಲ್ಲವನ್ನು ತಿಳಿಯುವನು" ಎಂದು ಕೊನೆಗೆ ತಿಳಿಸಿ ಸಕಲ ಪ್ರಪಂಚವನ್ನು ತಾನೇ ಪ್ರವೇಶಿಸಿರುವುದಾಗಿ ಹೇಳಿ, ದ್ವಿತೀಯ ಕಾಂಡದಲ್ಲಿ "ಯಾವ ಈ ರುದ್ರನೇ ಬ್ರಹ್ಮನೂ ವಿಷ್ಣುವೂ ಆಗಿರುವನು. ಇಂತಹ ಪೂಜ್ಯದೇವನಿಗೆ ನಮಸ್ಕರಿಸುತ್ತೇನೆ" ಎಂದು ತಿಳಿಸಿರುವುದರಿಂದ ಬ್ರಹ್ಮ ವಿಷ್ಣು ಮಹೇಶ್ವರ ಇಂದ್ರ ವಿನಾಯಕ ಮೊದಲಾದ ಎಲ್ಲಾ ಶಬ್ದಗಳೂ ಶಿವನನ್ನೇ ತಿಳಿಸುತ್ತವೆ ಎಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಆದ್ದರಿಂದ ಶಿವನೇ ವಿಶ್ವಕಾರಣ ಮತ್ತು ಸರ್ವಶಬ್ದವಾಚ್ಯ ಎಂಬುದೇ ಯುಕ್ತವಾಗಿದೆ. ಮನುಸ್ಮೃತಿಯಲ್ಲಿ "ಪರಶಿವನು ನೀರನ್ನು ಮೊದಲು ಸೃಷ್ಟಿಸಿ ಅದರಲ್ಲಿ ತನ್ನ ವೀರ್ಯವನ್ನು ಬಿಟ್ಟನು. ಅದು ಸ್ವರ್ಣಮಯವಾದ ಅಂಡವಾಗಿ ಸಹಸ್ರಸೂರ್ಯರಂತೆ ಪ್ರಕಾಶಮಾನವಾಯಿತು. ಅದರಲ್ಲಿ ಬ್ರಹ್ಮನು ಜನಿಸಿದನು. ಆಪಃ ಎಂದರೆ ಜೀವಸಮೂಹವೆಂದರ್ಥ. ಅವರೊಳಗೆ ಸ್ಥಾನವುಳ್ಳವನು ಅಂದರೆ ಅಲ್ಲಿ ನೆಲಸಿರುವವನು ನಾರಾಯಣನೆನಿಸಿದ್ದಾನೆ. ನಾರಾಯಣನು ಮೂಲಪ್ರಕೃತಿಗಿಂತ ಹೆಚ್ಚಿನವನು. ಈ ಪ್ರಕೃತಿಯಿಂದಲೇ ಅಂಡವು ಹೊರಬಂದಿತು. ಇದರೊಳಗೆ ಮೂರು ಲೋಕಗಳು, ಏಳುದ್ವೀಪ

ಗಳಷ್ಟು ವಿಸ್ತಾರವಾದ ಭೂಮಿಯೂ ನೆಲಸಿವೆ " ಎಂದೂ, " ಕಾಲರುದ್ರನೆಂಬ ದಿವ್ಯ ಮೂರ್ತಿ ಹುಟ್ಟಿದನು. ಅವನು ಸಂಕಲ್ಪಪೂರ್ವಕವಾಗಿ ನೀರಿನಲ್ಲಿ ತನ್ನ ವೀರ್ಯ ವನ್ನು ಬಿಟ್ಟನು. ಅದು ದಿವ್ಯಾಂಡವಾಗಿ ಶೋಭಿಸಿತು. ಅದರಲ್ಲಿ ನನ್ನ ಶಕ್ತಿ ವೈಭವ ದಿಂದ ವಿಷ್ಣು ಸಾಕ್ಷಾತ್ತಾಗಿ ಪ್ರವೇಶಿಸಿದನು. ಆಗ ವಿಷ್ಣುವಿಗೆ ನಾರಾಯಣನೆಂಬ ಹೆಸರು ಬಂದಿತು. ಆಪಃ ಎಂದರೆ ಸೂಕ್ಮರಸವೆಂದರ್ಥ. ಈ ರಸದಿಂದಲೇ ಜೀವರು ಹುಟ್ಟಿದ್ದರಿಂದ ಇದು ನಾರ–ನರಸಮೂಹವೆನಿಸಿದೆ. ಈ ನರಸಮೂಹಕ್ಕೆ ಪರಶಿವನೇ ಅಯನ ಅಂದರೆ ಆಶ್ರಯಸ್ಥಲವಾದ್ದರಿಂದ ನಾರಾಯಣನೆಂದರೆ ಶಿವನೆಂದರ್ಥ" ಎಂದು ಶೈವಪುರಾಣದಲ್ಲೂ ಹೇಳಿದೆ.

ಕಿಂಚ ಶ್ರುತ್ಯಂತರೇಽಪಿ " ತೇಜೋಽಭಿಮಾನೀ ರುದ್ರಃ ಅಪಸ್ಸೃಜತಿ. ತಾಸು ಚ ಸ್ವವೀರ್ಯಂ ನಿಕ್ಷಿಪತಿ. ತಾಸು ತತ್ತ್ವಸಹಿತೋ ವಿಷ್ಣುರಭಿವರ್ತತೇ," " ಆಪೋ ನರಾ। ನರೋ ರುದ್ರಃ " ಇತಿ ರುದ್ರಸಂಭೂತ ಜಲತತ್ತ್ವಾಯತನತ್ವೇನ ವಿಷ್ಣೋರ್ನಾರಾಯಣಸಂಜ್ಞಾ ಉಪದಿಷ್ಟಾ. ವೇದಾಂತೇಷು ಹಿರಣ್ಯಗರ್ಭಾತ್ಪೂರ್ವಮೇವ ಸೂಕ್ಷ್ಮಭೂತೋದ್ಭೂತ ಲಿಂಗಶರೀರಾನಂತರಮೇವ ತ್ರಿವೃತ್ಕೃತಸ್ಥೂಲಾಂಡೇ ವೃತ್ತಿವ್ಯಪದೇಶಾತ್ ನ ಸರ್ವಥಾ ಹಿರಣ್ಯಗರ್ಭಾದೀನಾಂ ತ್ರಿವೃತ್ಕೃತಾಂಡ ಹೇತುತ್ವಂ ನಿರ್ದಿಶ್ಯತೇ. ಉತ ತ್ರಿವೃತ್ಕರಣಂ ಕುರ್ವತ ಏವ ವಾ ನಾಮ ರೂಪವ್ಯಾಕರಣಮುಪದಿಶ್ಯತೇ. " ಅನೇನ ಜೀವೇನಾತ್ಮನಾನುನಪ್ರವಿಶ್ಯ ನಾಮರೂಪೇ ವ್ಯಾಕರವಾಣಿ, ತಾಸಾಂ ತ್ರಿವೃತಂ ತ್ರಿವೃತಮೇಕೈಕಾಂ ಕರವಾಣಿ " ಇತಿ ಸಮಾನಕರ್ತೃಕತ್ವಪ್ರತೀತೇಃ, ತ್ರಿವೃತ್ಕರಣಂ ಚ ಚತುರ್ಮುಖಸ್ಯಾಂಡಾಂತರ್ವರ್ತಿನೋ ನ ಸಂಭವತಿ. ತ್ರಿವೃತ್ಕೃತೈಸ್ತೇಜೋಽಬನ್ನೈರ್ಹ್ಯಂಡಮುತ್ಪದ್ಯತೇ. ಚತುರ್ಮುಖಸ್ಯ ಚಾಂಡೇ ಸಂಭವಸ್ಸ್ಮರ್ಯತೇ, " ತಸ್ಮಿನ್ನಂಡೇಽಭವದ್ಬ್ರಹ್ಮಾ ಸರ್ವಲೋಕಪಿತಾಮಹಃ " ಇತಿ. ಅತಸ್ತ್ರಿವೃತ್ಕರಣಂ ಶಿವಸ್ಯೈವ, ತತ್ಸಮಾನಕರ್ತೃಕಂ ನಾಮರೂಪವ್ಯಾಕರಣಂ ಚ ತಸ್ಯೈವೇತಿ ವಿಜ್ಞಾಯತೇ. ಕಥಂ ತರ್ಹ್ಯನೇನ ಜೀವೇನೇತಿ ಸಂಗಚ್ಛತೇ ? ಆತ್ಮನಾ ಜೀವೇನೇತಿ ಸಾಮಾನಾಧಿಕರಣ್ಯಾತ್ ಜೀವಶರೀರಕಂ ಪರಬ್ರಹ್ಮೈವ ಜೀವಶಬ್ದೇನಾಭಿಧೀಯತೇ. ಯಥಾ "ತತ್ತೇಜ ಐಕ್ಷತ ಅಪೋಽಸೃಜತ, ತಾ ಆಪ ಐಕ್ಷಂತ ಅನ್ನಮಸೃಂಜತ" ಇತಿ, ವೇದಪ್ರಭೃತಿಶರೀರಕಂ ಪರಮೇವ ಬ್ರಹ್ಮಾಭಿಧೀಯತೇ. " ಯೋ ರುದ್ರೋ ಅಗ್ನೌ " ಇತ್ಯಾದಿನಾ ಸರ್ವಾಂತರ್ಯಾಮಿತ್ವಂ ತಸ್ಯೈವ ಸ್ಪಷ್ಟಮುಪದಿಷ್ಟಂ. ಅಷ್ಟಮೂರ್ತಿತ್ವಂ ವೇದಶಾಸ್ತ್ರ ಪುರಾಣೇಷು ತಸ್ಯೈವ ಪ್ರಸಿದ್ಧಂ. ತಸ್ಮಾಜ್ಜೀವಸಮಷ್ಟಿಭೂತ ಹಿರಣ್ಯಗರ್ಭಶರೀರಕಸ್ಯ ಪರಬ್ರಹ್ಮಣ ಏವ ಕರ್ಮೇದಂ ನಾಮರೂಪ

ವ್ಯಾಕರಣಂ. ಏವಂಚ ಪ್ರವಿಶ್ಯ " ನಾಮರೂಪೇ ವ್ಯಾಕರವಾಣಿ " ಇತಿ ಪ್ರವಿಶತಿರುತ್ತಮಪುರುಷಶ್ಚಾಪೀಹ ಮುಖ್ಯಾರ್ಥಾವೇವ ಭವತಃ. ಪ್ರವೇಶವ್ಯಾಕರಣಯೋಸ್ಸಮಾನಕರ್ತೃಕತ್ವಮುಪ್ಯುಪಪದ್ಯತೇ. ಚತುರ್ಮುಖಕರ್ತೃಕಸೃಷ್ಟಿಪ್ರಕರಣೇ ನಾಮರೂಪವ್ಯಾಕ್ರಿಯೋಪದೇಶಶ್ಚೋಪಪದ್ಯತೇ. ಅಥ " ಸೇಯಂ ದೇವತಾ " ಇತ್ಯಾದಿವಾಕ್ಯಸ್ಯಾಯಮರ್ಥಃ. " ಇಮಾಸ್ತೇಜೋಽಬನ್ನರೂಪಾಸ್ತಿಸ್ರೋ ದೇವತಾಃ ಅನೇನ ಜೀವೇನ ಜೀವಸಮಷ್ಟಿವಿಶಿಷ್ಟೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ ದೇವಾದಿವಿಚಿತ್ರಸೃಷ್ಟಿಂ ತನ್ನಾಮಧೇಯಾನಿ ಚ ಕರವಾಣಿ, ತದರ್ಥಮನ್ಯೋನ್ಯಸಂಸರ್ಗಮಪ್ರಾಪ್ತಾನಾಂ ಏಷಾಂ ತೇಜೋಽಬನ್ನಾನಾಂ ವಿಶೇಷಸೃಷ್ಟ್ಯಸಮರ್ಥಾನಾಂ ತತ್ಸಾಮರ್ಥ್ಯಾಯೈಕೈಕಾಂ ತ್ರಿವೃತಂ ತ್ರಿವೃತಂ ಕರವಾಣಿ"ಇತಿ. ತಾಸ್ಮಾತ್ ಶಿವಸ್ಯೈವ ಪರಬ್ರಹ್ಮಣಃ ಕರ್ಮೇದಂ ನಾಮರೂಪವ್ಯಾಕರಣಂ.

ಬೇರೆ ಶ್ರುತಿಯಲ್ಲೂ " ತೇಜೋಽಭಿಮಾನಿಯಾದ ರುದ್ರನು ನೀರನ್ನು ಸೃಜಿಸಿ ಅದರಲ್ಲಿ ತನ್ನ ವೀರ್ಯವನ್ನು ಬಿಟ್ಟನು. ಆ ಜಲದಲ್ಲಿ ಶಿವನ ಶಕ್ತಿ ಎನಿಸಿದ ವಿಷ್ಣು ಯಥಾರ್ಥವಾಗಿ ನೆಲಸಿದ್ದಾನೆ. ಹೀಗೆ ರುದ್ರನಿಂದ ಹುಟ್ಟಿದ ಜಲವೇ ಆಶ್ರಯಸ್ಥಲವಾಗಿರುವುದರಿಂದ ವಿಷ್ಣುವಿಗೆ ನಾರಾಯಣನೆಂಬ ಸಂಜ್ಞೆ ಬಂದಿದೆ. ವೇದಾಂತದಲ್ಲಿ ಹಿರಣ್ಯಗರ್ಭನಿಗೂ ಮೊದಲು ಪಂಚಭೂತಗಳ ಸೂಕ್ಷ್ಮಾಣುಗಳಿಂದ ಹುಟ್ಟಿದ ಲಿಂಗಶರೀರದ ಅನಂತರವೇ ತ್ರಿವೃತ್ಕರಣದಿಂದ ಸ್ಥೂಲಾಂಡದ ಸೃಷ್ಟಿಯನ್ನು ಹೇಳಲಾಗಿದೆ. ಆದರೆ ಹಿರಣ್ಯಗರ್ಭಾದಿಗಳು ತ್ರಿವೃತ್ಕೃತವಾದ ಅಂಡಕ್ಕೆ ಎಂದಿಗೂ ಕಾರಣರಾಗಲಾರರು. ತ್ರಿವೃತ್ಕರಣವನ್ನು ಮಾಡುವವನೇ ನಾಮರೂಪವಿಭಾಗವನ್ನೂ ಮಾಡುವುದಾಗಿ ಶ್ರುತಿಯಲ್ಲಿ ಹೇಳಿದೆ. ಆ ಪರಮಾತ್ಮನು ಭೂಮಿ ನೀರು ಬೆಂಕಿಗಳನ್ನು ಸೃಜಿಸಿ"ಅವುಗಳ ಮೂಲಕ ನಾಮರೂಪಗಳನ್ನು ವಿಭಾಗಮಾಡುತ್ತೇನೆ. ಅವುಗಳಲ್ಲಿ ಮೂರುಮೂರುಬಗೆಯಾದದ್ದನ್ನು ಒಂದೊಂದನ್ನಾಗಿ ಮಾಡುತ್ತೇನೆ " ಎಂದು ಸಂಕಲ್ಪಮಾಡುವುದಾಗಿ ಶ್ರುತಿಯಲ್ಲಿ ಹೇಳಿರುವುದರಿಂದ ತ್ರಿವೃತ್ಕರಣಕ್ಕೂ ನಾಮರೂಪವಿಭಾಗಕ್ಕೂ ಕರ್ತನೊಬ್ಬನೇ ಇರುವನೆಂದು ತಿಳಿದುಬರುತ್ತದೆ. ಈ ತ್ರಿವೃತ್ಕರಣವಾದರೋ ಅಂಡದೊಳಗಿರುವ ಚತುರ್ಮುಖನಿಗೆ ಸಂಭವಿಸುವಂತಿಲ್ಲ. ತ್ರಿವೃತ್ಕೃತವಾದ ತೇಜಸ್ಸುಗಳಿಂದಲೇ ಬ್ರಹ್ಮಾಂಡ ಹುಟ್ಟುತ್ತದೆ. ಚತುರ್ಮುಖನು ಅಂಡದಿಂದಲೇ ಹುಟ್ಟಿದವನಾದ್ದರಿಂದ ತ್ರಿವೃತ್ಕರಣವೂ ನಾಮರೂಪವಿಭಜನವೂ ಶಿವನಿಗೇ ಸಂಬಂಧಿಸಿರುವುದೆಂದು ತಿಳಿಯುತ್ತದೆ. ಹಾಗಾದರೆ " ಈ ಜೀವನೊಳಗೆ ಪ್ರವೇಶಿಸಿ " ಎಂದು ಹೇಳಿದ್ದು ಹೇಗೆ ಹೊಂದುತ್ತದೆ. "ಜೀವೇನಾತ್ಮನಾ" ಎಂಬ ಎರಡು ಪದಗಳೂ ಒಬ್ಬನಿಗೇ ಅನ್ವಯಿಸುತ್ತವೆಯಾದ್ದರಿಂದ ಜೀವಶಬ್ದವು ಜೀವವೇ ಶರೀರವಾಗಿರುವ ಪರಬ್ರಹ್ಮವನ್ನೇ ತಿಳಿಸುತ್ತದೆ. " ಆ ತೇಜಸ್ಸು ನೋಡಿತು, ನೀರನ್ನು ಸೃಜಿಸಿತು, ಆ

ನೀರು ನೋಡಿತು ಅನ್ನವನ್ನು ಸೃಜಿಸಿತು" ಇಲ್ಲೆಲ್ಲಾ ಶರೀರದೊಳಗಿರುವ ಪರಬ್ರಹ್ಮವನ್ನೇ ಹೇಳಲಾಗಿದೆ. "ಅಗ್ನಿ ಮೊದಲಾದವುಗಳಲ್ಲಿ ಯಾವ ರುದ್ರನಿರುವನೋ" ಎಂಬ ಮಂತ್ರದಲ್ಲಿ ರುದ್ರನೇ ಸರ್ವಾಂತರ್ಯಾಮಿ ಎಂಬುದು ಸ್ಪಷ್ಟವಾಗಿದೆ. ವೇದ ಶಾಸ್ತ್ರಪುರಾಣಗಳಲ್ಲಿ ಶಿವನೇ ಅಷ್ಟಮೂರ್ತಿ ಎಂದು ಪ್ರಸಿದ್ಧನಾಗಿದ್ದಾನೆ. ಆದ್ದರಿಂದ ನಾಮರೂಪವಿಭಾಗವು ಜೀವಸಮಷ್ಟಿರೂಪನಾದ ಹಿರಣ್ಯಗರ್ಭನೇ ಶರೀರವಾಗಿರುವ ಪರಬ್ರಹ್ಮನ ಕರ್ಮವೆನಿಸಿದೆ. ಇಲ್ಲಿ "ಪ್ರವಿಶ್ಯ ವ್ಯಾಕರವಾಣಿ" ಎಂಬಲ್ಲಿ ಪ್ರವೇಶವೂ ಮತ್ತು ಉತ್ತಮಪುರುಷವೂ ಮುಖ್ಯವೇ ಆಗಿವೆ. ಆದ್ದರಿಂದ ಪ್ರವೇಶಕ್ಕೂ ವ್ಯಾಕರಣಕ್ಕೂ ಒಬ್ಬನೇ ಕರ್ತನೆಂಬುದು ಹೊಂದಿಕೆಯಾಗುತ್ತದೆ. ಬ್ರಹ್ಮದಿಂದಾಗುವ ಸೃಷ್ಟಿಯನ್ನು ತಿಳಿಸುವ ಪ್ರಕರಣದಲ್ಲಿ ನಾಮರೂಪಗಳ ವಿಭಜನವನ್ನು ಹೇಳಿದ್ದೂ ಯುಕ್ತವೇ ಆಗುತ್ತದೆ. ಹಾಗಾದರೆ "ಸೇಯಂ ದೇವತಾ" ಎಂಬ ವಾಕ್ಯಕ್ಕೆ ಹೇಗೆ ಅರ್ಥಮಾಡಬೇಕು? ಅಂದರೆ ಇಮಾಃ ತೇಜಸ್ಸು, ನೀರು, ಪೃಥ್ವಿ ಎಂಬ ಮೂರನ್ನೂ, ಅನೇನ ಜೀವೇನ–ಜೀವಸಮುಹದಿಂದೊಡಗೂಡಿದ, ಆತ್ಮನಾ–ತನ್ನ ಸ್ವರೂಪದಿಂದ ಪರಶಿವನು ಪ್ರವೇಶಿಸಿ ನಾಮರೂಪಗಳನ್ನು ವಿಭಜಿಸಲು ಇಚ್ಛಿಸಿದನು. ಅಂದರೆ ದೇವಾದಿವಿಚಿತ್ರಸೃಷ್ಟಿಯನ್ನೂ, ಅವರ ಹೆಸರುಗಳನ್ನೂ ಏರ್ಪಡಿಸಿದನು. ಹೀಗೆ ಪರಸ್ಪರಸಂಪರ್ಕವನ್ನು ಹೊಂದದೆ ಇದ್ದು ವಿಶೇಷಸೃಷ್ಟಿಗೆ ಅಸಮರ್ಥಗಳೆನಿಸಿದ್ದ ತೇಜಸ್ಸು ನೀರು ಪೃಥ್ವಿಗಳಿಗೆ ಸೃಷ್ಟಿಸುವ ಸಾಮರ್ಥ್ಯವನ್ನು ದೊರಕಿಸಲಿಕ್ಕಾಗಿ ಒಂದೊಂದನ್ನು ಮೂರು ಮೂರು ಭಾಗಗಳನ್ನಾಗಿ ಮಾಡುವೆನೆಂದು ಪರಶಿವನೇ ಇಚ್ಛಿಸಿದನೆಂದು ಶ್ರುತಿಯಲ್ಲಿ ಹೇಳಿದೆ. ಆದ್ದರಿಂದ ನಾಮರೂಪವ್ಯಾಕರಣವೂ ಅವಶ್ಯವಾಗಿ ಶಿವನ ಕರ್ಮವೇ ಆಗಿದೆ.

ಅಥ ಸ್ಯಾನ್ನಾಮರೂಪವ್ಯಾಕರಣಸ್ಯ ತ್ರಿವೃತ್ಕರಣೇನೈಕಕರ್ತೃಕತ್ವಾತ್ಪರಮಾತ್ಮಕರ್ತೃಕಮಿತಿ ನ ಶಕ್ಯತೇ ವಕ್ತುಂ, ತ್ರಿವೃತ್ಕರಣಸ್ಯಾಪಿ ಜೀವಕರ್ತೃಕತ್ವಸಂಭವಾತ್. ಅಂಡಸೃಷ್ಟ್ಯುತ್ತರಕಾಲೇ ಹಿ ಚತುರ್ಮುಖಸೃಷ್ಟಜೀವೇಷು ತ್ರಿವೃತ್ಕರಣಪ್ರಕಾರ ಉಪದಿಶ್ಯತೇ "ಯಥಾ ನು ಖಲು ಸೌಮ್ಯೇಮಾಸ್ತಿಸ್ರೋ ದೇವತಾಃ ಪುರುಷಂ ಪ್ರಾಪ್ಯ ತ್ರಿವೃತ್ತ್ರಿವೃದೇಕೈಕಾ ಭವತಿ ತನ್ಮೇ ವಿಜಾನೀಹಿ" ಇತಿ, "ಅನ್ನಮಶಿತಂ ತ್ರೇಧಾ ವಿಧೀಯತೇ. ತಸ್ಯ ಯಃ ಸ್ಥವಿಷ್ಠೋ ಭಾಗಸ್ತತ್ಪುರೀಷಂ ಭವತಿ. ಯೋ ಮಧ್ಯಮಸ್ತನ್ಮಾಂಸಂ, ಯೋಽಣಿಷ್ಠಸ್ತನ್ಮನಃ" ಇತ್ಯಾದಿನಾ. ತಥಾ ಪೂರ್ವಸ್ಮಿನ್ನಪಿ ವಾಕ್ಯೇ "ಯದಗ್ನೇ ರೋಹಿತಂ ರೂಪಂ ತೇಜಸಸ್ತದ್ರೂಪಂ, ಯಚ್ಛುಕ್ಲಂ ತದಪಾಂ, ಯತ್ಕೃಷ್ಣಂ ತದನ್ನಸ್ಯ" ಇತ್ಯಾದಿನಾ ಚತುರ್ಮುಖಸೃಷ್ಟಾಗ್ನ್ಯಾದಿತ್ಯಚಂದ್ರವಿದ್ಯುತ್ಸು ತ್ರಿವೃತ್ಕರಣಂ ಪ್ರದರ್ಶ್ಯತೇ. ನಾಮರೂಪವ್ಯಾಕರಣೋತ್ತರಕಾಲಂ ಚ ತ್ರಿವೃತ್ಕರಣಂ ಶ್ರೂಯತೇ ಇತ್ಯತ್ರಾಹ–ಮಾಂಸಾದಿ ಭೌಮಂ ಯಥಾಶಬ್ದಮಿತರ

ಯೋಶ್ಚ ||೧೭|| ಪೂರ್ವತ್ರ ತ್ರಿವೃತ್ಕರಣಹೇತುತ್ವಂ ಹಿರಣ್ಯಗರ್ಭಾದೀನಾಮಸ್ತೀತ್ಯಾಶಂಕಾಯಾಂ ತದತಿವ್ಯಾಪ್ತಿವಾರಣಾರ್ಥಂ ಅವಾಂತರ ಸೃಷ್ಟ್ಯಾದಿಷ್ವಪಿ " ಅನೇನ ಜೀವೇನಾತ್ಮನಾನುಪ್ರವಿಶ್ಯ " ಇತ್ಯಾದಿನಾ ಹಿರಣ್ಯಗರ್ಭವಿಷ್ಣ್ವಾದಿಜೀವಶರೀರಾನುಪ್ರವಿಷ್ಟತಯಾ ಶಿವಸ್ಯ ಪರಬ್ರಹ್ಮಣಸ್ತತ್ಕರ್ತೃತ್ವಂ ಸಾಧಿತಂ, ತತ್ತ್ರಿವೃತ್ಕರಣಂ ಕಿಮಿತ್ಯಾಕಾಂಕ್ಷಾಯಾಮೇತತ್ಸೂತ್ರಾರಂಭಃ. ಅವಿಜ್ಞಾತಂ ವಿಶೇಷರೂಪೇಣಾದೃಷ್ಟಮೇವಾಭೂದಿತಿ ಯಾವತ್. ತಾಸಾಂ ತಿಸೃಣಾಂ ದೇವತಾನಾಂ ಸಮಾಸಸ್ಸಮುದಾಯ ಇತಿ ಯಾವದಿತಿ ಶ್ರುತ್ಯರ್ಥಃ. ಇಮಾಸ್ತಿಸ್ರಸ್ತ್ರಿವೃತಾ ದೇವತಾಃ ಪುರುಷಶರೀರಂ ಪ್ರಾಪ್ಯ ತ್ರಿವೃತ್ಕಾರ್ಯತ್ರಯರೂಪೇಣೈಕೈಕಾ ದೇವತಾ ತೇಜ ಆದಿಲಕ್ಷಣಾ ಅವರ್ತಂತ ಇತಿ ದ್ವಿತೀಯ ಶ್ರುತ್ಯರ್ಥಃ. ತಥಾಹಿ ಪೃಥಿವ್ಯಾಃ ವ್ರೀಹಿಯವಾದಿರೂಪಾಯಾಃ ಪುರುಷೇಣ ಅಶಿತಾಯಾಃ ಕಾರ್ಯತ್ರಯಂ ಶರೀರೇ ವರ್ತತೇ, ಪುರೀಷಂ ಮಾಂಸಂ ಮನಶ್ಚೇತಿ. ಏವಂ ಪೀತಾನಾಮಪಾಂ ಮೂತ್ರಂ ಲೋಹಿತಂ ಪ್ರಾಣಶ್ಚೇತಿ ಕಾರ್ಯತ್ರಯಂ, ತೇಜೋಽಗ್ನ್ಯಾದಿದೀಪಿತಸ್ಯ ಘೃತಾದಿರೂಪಸ್ಯ ಕಾರ್ಯತ್ರಯಂ ಅಸ್ಥಿಮಜ್ಜಾವಾಕ್ಚೇತಿ. ಪ್ರಾಣೇ ಜಲಾಧೀನಸ್ಥಿತಿಮತ್ತ್ವಮಾತ್ರೇಣ ಜಲಕಾರ್ಯತ್ವವ್ಯಪದೇಶಃ, ತಸ್ಯ ವಾಯುಕಾರ್ಯತ್ವೇನ ಪ್ರಸಿದ್ಧೇಃ. ಏವಂ ಮನಸೋಽಪ್ಯನ್ನಭಕ್ಷಣೇ ಸ್ವಾಸ್ಥ್ಯಮಾತ್ರೇಣ ತತ್ಕಾರ್ಯತ್ವಂ, ವಾಚೋಽಪಿ ಜ್ಞಾನಾನುಕೂಲಸಾಮ್ಯತ್ವೇನ ತೇಜಃ ಕಾರ್ಯತ್ವಂ ವ್ಯಪದಿಶ್ಯತೇ. ಏವಂ ದೇಹೇ ಕಾರ್ಯತ್ರಯರೂಪೇಣ ವರ್ತನಮೇವಾಧ್ಯಾತ್ಮಿಕಂ ತ್ರಿವೃತ್ಕರಣಮಿತಿ ತದಿದಮಾಹ ಸೂತ್ರಕಾರಃ ಮಾಂಸಾದೀತಿ. ಯದುಕ್ತಮಂಡಸೃಷ್ಟ್ಯುತ್ತರಕಾಲಂ ಚತುರ್ಮುಖಸೃಷ್ಟದೇವತಾದಿವಿಷಯೋಽಯಂ ತಾಸಾಂ ತ್ರಿವೃತಂ ತ್ರಿವೃತಮೇಕೈಕಾಂ ಅಕರೋದಿತಿ ತ್ರಿವೃತ್ಕರಣೋಪದೇಶ ಇತಿ ತನ್ನೋಪಪದ್ಯತೇ " ಅನ್ನಮಶಿತಂ ತ್ರೇಧಾ ವಿಧೀಯತ" ಇತ್ಯತ್ರ ಮಾಂಸಮನಸೋಃ ಪುರೀಷಾದಣುತ್ವೇನಾಣೀಯಸ್ತ್ವೇನ ಚ ವ್ಯಪದಿಷ್ಟಯೋಃ ಕಾರಣಾನುವಿಧಾಯಿತ್ವೇನ ಆಪ್ಯತ್ವೈಜಸತ್ವಪ್ರಸಂಗಾತ್, " ಆಪಃ ಪೀತಾಃ " ಇತ್ಯತ್ರಾಪಿ ಮೂತ್ರಪ್ರಾಣಯೋಃ ಸ್ಥವಿಷ್ಠಾಣೀಯಸೋಃ ಪಾರ್ಥಿವತ್ವತೈಜಸತ್ವಪ್ರಸಂಗಾಚ್ಚ. ನಚ್ಚೈವಮಿಷ್ಯತೇ. ಮಾಂಸಾದಿ ಭೌಮಮಿಷ್ಯತೇ. ಪುರೀಷವನ್ಮಾಂಸಮನಸೀ ಅಪಿ ಭೌಮೇ ಪಾರ್ಥಿವೇ ಇಷ್ಯೇತೇ. " ಅನ್ನಮಶಿತಂ ತ್ರೇಧಾ" ಇತಿ ಪ್ರಕ್ರಮಾತ್ ಯಥಾಶಬ್ದಮಿತರಯೋಶ್ಚ ಇತರಯೋರಪಿ " ಆಪಃ ಪೀತಾಃ, ತೇಜೋಽಶಿತಂ " ಇತಿ ಪರ್ಯಾಯಯೋರ್ಯಥಾಶಬ್ದಂ ವಿಕಾರಾ ಇಷ್ಯಂತೇ. " ಆಪಃ ಪೀತಾಸ್ತ್ರೇಧಾ ವಿಧೀಯಂತೇ " ಇತ್ಯಪಾ

ಮೇವ ತ್ರೇಧಾ ಪರಿಣಾಮಶ್ಶಬ್ದಾತ್ಪ್ರತೀಯತೇ. ತಥಾ "ತೇಜೋಽಶಿತಂ ತ್ರೇಧಾ ವಿಧೀಯತೇ" ಇತ್ಯತ್ರಾಪಿ ತೇಜಸ ಏವ ತ್ರೇಧಾ ಪರಿಣಾಮಃ ಶಬ್ದಾತ್ಪ್ರತೀಯತೇ. ಅತಃ ಪುರೀಷಮಾಂಸಮನಾಂಸಿ ಪೃಥಿವೀವಿಕಾರಾಃ, ಮೂತ್ರಲೋಹಿತಪ್ರಾಣಾಃ ಅಬ್ವಿಕಾರಾಃ, ಅಸ್ಥಿಮಜ್ಜಾವಾಚಸ್ತೇಜೋ ವಿಕಾರಾ ಇತಿ ಪ್ರತಿಪತ್ತವ್ಯಂ. "ಅನ್ನಮಯಂ ಹಿ ಸೌಮ್ಯ ಮನಃ ಆಪೋಮಯಃ ಪ್ರಾಣಸ್ತೇಜೋಮಯೀವಾಕ್" ಇತಿವಾಕ್ಯಶೇಷವಿರೋಧಾಚ್ಚ. ಅತಸ್ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋದಿತ್ಯುಕ್ತಸ್ತ್ರಿವೃತ್ಕರಣಪ್ರಕಾರಃ ಅನ್ನಮಶಿತಮಿತ್ಯಾದಿನಾ ನ ಪ್ರದರ್ಶ್ಯತೇ. ತಥಾ ಸತಿ ಮನಃಪ್ರಾಣವಾಚಾಂ ತ್ರಯಾಣಾಮಪ್ಯಣೀಯಸ್ತ್ವೇನ ತ್ವೈಜಸತ್ವಾತ್ "ಅನ್ನಮಯಂ ಹಿ ಸೌಮ್ಯ ಮನಃ" ಇತ್ಯಾದಿರ್ವಿರುಧ್ಯತೇ, ಪ್ರಾಗೇವ ತ್ರಿವೃತ್ಕೃತತ್ವಾತ್. ಪೃಥಿವ್ಯಾದೀನಾಂ ಪುರುಷಂ ಪ್ರಾಪ್ತಾನಾಂ "ಅನ್ನಮಶಿತಂ" ಇತ್ಯಾದಿನಾ ಏಕೈಕಸ್ಯ ತ್ರೇಧಾ ಪರಿಣಾಮ ಉಚ್ಯತೇ ಆಂಡಸೃಷ್ಟೇಃ ಪ್ರಾಗೇವ ಚ ತೇಜೋಽಬನ್ನಾನಾಂ ತ್ರಿವೃತ್ಕರಣೇನ ಭವಿತವ್ಯಂ, ಅತ್ರಿವೃತ್ಕೃತಾನಾಂ ತೇಷಾಂ ಕಾರ್ಯಾರಂಭಾಸಾಮರ್ಥ್ಯಾತ್, ಅನ್ಯೋನ್ಯಸಂಯುಕ್ತಾನಾಮೇವ ಹಿ ಕಾರ್ಯಾರಂಭಸಾಮರ್ಥ್ಯಂ, ತದೇವ ಚ ತ್ರಿವೃತ್ಕರಣಂ. ತಥಾಚ ಸ್ಮರ್ಯತೇ "ನಾನಾವೀರ್ಯಾಃ ಪೃಥಗ್ಭೂತಾಸ್ತತಸ್ತೇ ಸಂಹತಿಂ ವಿನಾ । ನಾಶಕ್ನುವನ್ಪ್ರಜಾಃ ಸ್ರಷ್ಟುಂ ಅಸಮಾಗಮ್ಯ ಕೃತ್ಯಶಃ । ಸಮೇತ್ಯಾನ್ಯೋನ್ಯಸಂಯೋಗಂ ಪರಸ್ಪರ ಸಮಾಶ್ರಯಾಃ। ಮಹದಾದಿವಿಶೇಷಾಂತಾ ಹ್ಯಂಡಮುತ್ಪಾದ್ಯ ಸಂತಿ ತೇ" ಇತಿ. ಅತ ಏವ ಚ "ಅನೇನ ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರೋತ್." "ತಾಸಂ ತ್ರಿವೃತಂ ತ್ರಿವೃತಮೇಕೈಕಾಮಕರೋತ್" ಇತಿ ಪಾಠಕ್ರಮೋಽರ್ಥಕ್ರಮೇಣ ಬಾಧ್ಯತೇ. ಅಂಡಾಂತರ್ವರ್ತಿಷ್ವಗ್ನ್ಯಾದಿತ್ಯಾದಿಷು ತ್ರಿವೃತ್ಕರಣಪ್ರದರ್ಶನಂ ಶ್ವೇತಕೇತೋಶ್ಶುಶ್ರೂಷೋಃ ಅಂಡಾಂತರ್ವರ್ತಿತ್ವೇನ ತಸ್ಯ ಬಹಿಷ್ಠವಸ್ತುಷು ತ್ರಿವೃತ್ಕರಣಪ್ರದರ್ಶನಾಯೋಗಾತ್ ತ್ರಿವೃತ್ಕೃತಾನಾಂ ಕಾರ್ಯೇಷ್ವಗ್ನ್ಯಾದಿತ್ಯಾದಿಷು ಕ್ರಿಯತೇ.

ನಾಮರೂಪಗಳ ವಿಭಾಗ ಮತ್ತು ತ್ರಿವೃತ್ಕರಣ ಇವೆರಡಕ್ಕೂ ಒಬ್ಬನೇ ಕರ್ತನೆನಿಸಿದರೂ ಆ ಕರ್ತನು ಪರಮಾತ್ಮನೇ ಇರುವನೆಂದು ಹೇಳಲಾಗುವುದಿಲ್ಲ; ಯಾಕೆಂದರೆ ತ್ರಿವೃತ್ಕರಣವು ಜೀವನಿಗೂ ಸಂಭವಿಸಬಹುದು. ಆದ್ದರಿಂದ ಅಂಡಸೃಷ್ಟಿಯ ಅನಂತರ ಚತುರ್ಮುಖನು ಸೃಷ್ಟಿಸಿದ ಜೀವರಲ್ಲಿಯೂ ತ್ರಿವೃತ್ಕರಣಕ್ರಮವನ್ನು ಹೇಳಲಾಗಿದೆ."ಈ ಮೂರು ತೇಜೋಽಬನ್ನಗಳು ಜೀವನಲ್ಲಿಸೇರಿ,ಒಂದೊಂದೂ ಮೂರುಬಗೆಯಾಗುತ್ತದೆ. ಇದನ್ನು ನನಗೆ ತಿಳಿಸು." ಎಂದು ಕೇಳಿ "ಅನ್ನವು ಮೂರುಬಗೆಯಾಗುತ್ತದೆ. ಅದರಲ್ಲಿ ಗಟ್ಟಿಭಾಗವು ಪುರೀಷವೂ,ಮಧ್ಯಭಾಗವು ಮಾಂಸವೂ,ಉಳಿದ ಭಾಗವು ಮನಸ್ಸೂ

ಆಗುತ್ತದೆ" ಎಂದು ಉತ್ತರಿಸಲಾಗಿದೆ. ಹಾಗೆಯೇ ಹಿಂದಿನ ವಾಕ್ಯದಲ್ಲಿ "ಅಗ್ನಿಯ ಕೆಂಪುಬಣ್ಣವು ತೇಜಸ್ಸಿನದು, ಬಿಳುಪು ನೀರಿನದು, ಕಪ್ಪುಬಣ್ಣವು ಪೃಥ್ವಿಯದು" ಎಂದು ಹೇಳಿ ಬ್ರಹ್ಮಸೃಷ್ಟವಾದ ಅಗ್ನಿ ಆದಿತ್ಯ ಚಂದ್ರ ಮಿಂಚು ಮೊದಲಾದವುಗಳಲ್ಲಿಯೂ ತ್ರಿವೃತ್ಕರಣವನ್ನು ಹೇಳಲಾಗಿದೆ. ಹೀಗೆ ನಾಮರೂಪಗಳ ವಿಭಾಗವಾದ ಮೇಲೆಯೇ ತ್ರಿವೃತ್ಕರಣವನ್ನು ಶ್ರುತಿಯು ತಿಳಿಸಿರುವುದಾದರೂ ಹಿರಣ್ಯಗರ್ಭ ಮೊದಲಾದವರಿಗೂ ತ್ರಿವೃತ್ಕರಣದ ಸಂಬಂಧವಿರುವುದೆಂದಾಕ್ಷೇಪಿಸಿ ಅದನ್ನು ಪರಿಹರಿಸಲಿಕ್ಕಾಗಿ ಅವಾಂತರಸೃಷ್ಟಿಯಲ್ಲೂ ಪರಶಿವನೇ ಹಿರಣ್ಯಗರ್ಭ ಮೊದಲಾದ ಜೀವಾತ್ಮರ ಶರೀರಗಳೊಳಗೆ ಪ್ರವೇಶಿಸಿರುವನೆಂದು ಹಿಂದೆ ತಿಳಿಸಿಯಾಯಿತು. ಈಗ ತ್ರಿವೃತ್ಕರಣವೆಂದರೇನು? ಎಂದಾಶಂಕಿಸಿ ಅದಕ್ಕೆ ಸಮಾಧಾನಮಾಡಲಿಕ್ಕಾಗಿ ಈ ಸೂತ್ರ ಹೊರಟಿದೆ. "ಯತ್ತು ಅವಿಜ್ಞಾತಮಿವಾಭೂತ್ ತಾಸಾಂ ತಿಸೃಣಾಂ ದೇವತಾನಾಂ ಸಮಾಸಃ" ಎಂಬ ಛಾಂದೋಗ್ಯಶ್ರುತಿಯಲ್ಲಿ ವಿಶೇಷರೂಪದಿಂದ ಗೋಚರವಾಗದಿರುವ ಪೃಥ್ವಿ, ಅಪ್ ತೇಜಸ್ಸುಗಳ ಸಂಘಟನೆಯೇ ತ್ರಿವೃತ್ಕರಣವೆಂದು ತಿಳಿಸಲಾಗಿದೆ. "ಈ ಮೂರು ಭೂತಗಳು ಪುರುಷನ ಶರೀರದಲ್ಲಿ ಮೂರುಬಗೆಯಾಗಿ ಸೇರಿದುವು" "ಎಂಬ ಶ್ರುತಿಯಲ್ಲಿ ತ್ರಿವೃತ್ಕರಣವನ್ನು ಹೇಳಲಾಗಿದೆ. ನಾವು ತಿನ್ನುವ ಅನ್ನ ಮೊದಲಾದ ಪಾರ್ಥಿವವಸ್ತುವಿನಿಂದ ಶರೀರದಲ್ಲಿ ಪುರೀಷ ಮಾಂಸ ಮನಸ್ಸು ಎಂಬ ಪರಿಣಾಮಗಳು ಸಂಭವಿಸುತ್ತವೆ. ಹಾಗೆಯೇ ಕುಡಿಯುವ ನೀರಿನಿಂದಲೂ ಮೂತ್ರ ರಕ್ತ ಪ್ರಾಣವೆಂಬ ಮೂರು ಕಾರ್ಯಗಳು ಹುಟ್ಟುತ್ತವೆ. ತೇಜಸ್ಸು ಅಗ್ನಿ ಮೊದಲಾದವುಗಳಿಂದ ಹುಟ್ಟುವ ತುಪ್ಪ ಮೊದಲಾದ ವಸ್ತುಗಳಿಂದ ಮೂಳೆ, ಮಜ್ಜೆ ವಾಕ್ಕು ಎಂಬ ಮೂರು ಪರಿಣಾಮಗಳಾಗುತ್ತವೆ. ಪ್ರಾಣವು ನೀರನ್ನಾಶ್ರಯಿಸಿರುವುದರಿಂದ ಪ್ರಾಣವನ್ನು ನೀರಿನ ಪರಿಣಾಮವೆಂದು ಹೇಳಲಾಗಿದೆ. ಆದರೆ ಅದು ವಾಯುವಿನ ಪರಿಣಾಮವೆಂದು ಪ್ರಸಿದ್ಧವಾಗಿದೆ. ಹೀಗೆಯೇ ಅನ್ನದ ಊಟದಿಂದ ಮನಸ್ಸುಶಾಂತವಾಗುವುದರಿಂದ ಮನಸ್ಸನ್ನು ಅನ್ನದ ಪರಿಣಾಮವೆಂದು ಹೇಳಲಾಗಿದೆ. ವಾಕ್ಕು ಸಹ ಜ್ಞಾನವನ್ನು ಹುಟ್ಟಿಸುವುದರಿಂದ ಅದು ತೇಜಸ್ಸಿನ ಪರಿಣಾಮವಾಗಿದೆ. ಹೀಗೆ ದೇಹದಲ್ಲಿ ತೇಜೋಽಬನ್ನಗಳು ಮೂರುಬಗೆಯ ಕಾರ್ಯಗಳನ್ನು ಹುಟ್ಟಿಸುತ್ತಿರುವುದನ್ನೇ ಆಧ್ಯಾತ್ಮಿಕತ್ರಿವೃತ್ಕರಣವೆಂದು ಸೂತ್ರಕಾರನು ಹೇಳಿದ್ದಾನೆ. ಇದರಿಂದ ಅಂಡಸೃಷ್ಟಿಯಾದಮೇಲೆ ತೇಜೋಽಬನ್ನಗಳ ಸೃಷ್ಟಿಯನ್ನು ಅವಲಂಬಿಸಿಕೊಂಡೇ ತ್ರಿವೃತ್ಕರಣವಾಗಿರುವುದೆಂದು ಹಿಂದೆ ಹೇಳಿದ್ದು ಯುಕ್ತವೆನಿಸುತ್ತದೆ; ಯಾಕೆಂದರೆ, ತಿಂದ ಅನ್ನ ಮೂರುಬಗೆಯಾಗುತ್ತದೆ" ಎಂಬಲ್ಲಿ ಪುರೀಷಕ್ಕಿಂತಲೂ ಮಾಂಸ ಮನಸ್ಸುಗಳನ್ನು ಸೂಕ್ಷ್ಮವೆಂದು ಹೇಳಿದ್ದರಿಂದ ಕರಣವನ್ನು ಅನುಸರಿಸಿ ಮಾಂಸವನ್ನು ಜಲಮಯವೆಂದೂ, ಮನಸ್ಸನ್ನು ತೇಜೋಮಯವೆಂದೂ ಹೇಳಬೇಕಾದೀತು; ಹಾಗೆಯೇ "ಕುಡಿದ ನೀರು ಮೂರುಬಗೆಯಾಯಿತು" ಎಂಬಲ್ಲೂ ಮೂತ್ರವನ್ನು ಸ್ಥೂಲವಾದ್ದರಿಂದ ಪಾರ್ಥಿವವೆಂದೂ, ಪ್ರಾಣವನ್ನು ಸೂಕ್ಷ್ಮವಾದ್ದರಿಂದ

ತೈಜಸವೆಂದೂ ಹೇಳಬೇಕಾದೀತು. ಆದರೆ ಹಾಗೆ ಹೇಳುವುದನ್ನು ಯಾರೂ ಒಪ್ಪುವುದಿಲ್ಲ. ಪುರೀಷದಂತೆಯೇ ಮಾಂಸ ಮತ್ತು ಮನಸ್ಸುಗಳನ್ನು ಪಾರ್ಥಿವವಸ್ತುಗಳೆಂದೇ ಒಪ್ಪಲಾಗಿದೆ. ಇದೇ ಸರ್ವರಿಗೂ ಸಮ್ಮತವಾಗಿದೆ. "ತಿಂದ ಅನ್ನ ಮೂರು ಬಗೆಯಾಯಿತು" ಎಂದಾರಂಭಿಸಿ ಹಾಗೆಯೇ ಉಳಿದವೆರಡಕ್ಕೂ "ಕುಡಿದ ನೀರು, ಭೋಗಿಸಿದ ತೇಜಸ್ಸು" ಎಂದು ಅವುಗಳ ಮೂರು ವಿಕಾರಗಳನ್ನು ತಿಳಿಸುವುದೇ ಎಲ್ಲರಿಗೂ ಇಷ್ಟವೆನಿಸಿದೆ. "ಕುಡಿದ ನೀರು ಮೂರುಬಗೆಯಾಯಿತು" ಎಂಬಲ್ಲಿ ನೀರಿನ ಮೂರುಬಗೆಯ ಪರಿಣಾಮವನ್ನು ಸ್ಪಷ್ಟವಾಗಿ ಹೇಳಿದೆ. ಹಾಗೆಯೇ ತೇಜಸ್ಸಿನ ಮೂರುಬಗೆಯ ಪರಿಣಾಮವನ್ನೂ ಸ್ಪಷ್ಟವಾಗಿ ತಿಳಿಸಿದೆ. ಇದೆಲ್ಲವೂ ಶ್ರುತಿಯಿಂದಲೇ ತಿಳಿದಬರುವುದರಿಂದ ಪುರೀಷ ಮಾಂಸ ಮನಸ್ಸುಗಳು ಪೃಥ್ವಿಯ ವಿಕಾರಗಳೆಂದೂ, ಮೂತ್ರ ರಕ್ತ, ಪ್ರಾಣಗಳೂ ನೀರಿನ ವಿಕಾರವೆಂದೂ, ಮೂಳೆ, ಮಜ್ಜೆ ವಾಕ್ಕು ಇವು ಮೂರು ತೇಜಸ್ಸಿನ ವಿಕಾರಗಳೆಂದೂ ತಿಳಿಯಬೇಕು. ಇದರಿಂದ "ಮನಸ್ಸು ಅನ್ನಮಯವೂ, ಪ್ರಾಣ ಜಲಮಯವೂ, ವಾಕ್ಕು ತೇಜೋಮಯವೂ ಆಗಿವೆ" ಎಂಬ ಶ್ರುತಿಯ ವಿರೋಧವೂ ಬರುವುದಿಲ್ಲ. ಆದ್ದರಿಂದ "ಬೇರೆ ಬೇರೆಯಾಗಿದ್ದ ಈ ಮೂರನ್ನು ಒಟ್ಟುಗೂಡಿಸಿ ದೇಹವನ್ನು ರಚಿಸಿದನು" ಎಂಬಲ್ಲಿ ಹೇಳಿರುವ ತ್ರಿವೃತ್ಕರಣಕ್ರಮವನ್ನು "ತಿಂದ ಅನ್ನ ಮೂರುಬಗೆಯಾಯಿತು" ಎಂಬ ಶ್ರುತಿಯಲ್ಲಿ ಹೇಳಿಲ್ಲ. ಹಾಗಾದರೆ ಮನಸ್ಸು ಪ್ರಾಣ ವಾಕ್ಕು ಇವು ಮೂರನ್ನು ಸೂಕ್ಷ್ಮವಾದ್ದರಿಂದ ತೈಜಸವೆಂದು ಭಾವಿಸಿದರೆ, ಮನಸ್ಸು ಅನ್ನಮಯವೆಂದು ಹೇಳಿದ್ದು ವಿರುದ್ಧವಾಗುತ್ತದೆ. ಹಿಂದೆಯೇ ತ್ರಿವೃತ್ಕೃತವಾಗಿದ್ದುದರಿಂದ ನಾವು ತಿಂದ ತೇಜೋಽಬನ್ನಗಳಲ್ಲಿ ಒಂದೊಂದಕ್ಕೂ ಮೂರುಬಗಯ ಪರಿಣಾಮವನ್ನು ಹೇಳಲಾಗಿದೆ. ಅಂಡಸೃಷ್ಟಿಗೆ ಮೊದಲೇ ತೇಜೋಽಬನ್ನಗಳ ತ್ರಿವೃತ್ಕರಣವಾಗಿತ್ತು; ತ್ರಿವೃತ್ಕೃತವಲ್ಲದ ಆ ಮೂರು ವಸ್ತುಗಳಿಗೆ ಯಾವ ಕಾರ್ಯವನ್ನಾರಂಭಿಸಲಿಕ್ಕೂ ಸಾಧ್ಯವಾಗದು, ಅವು ಒಂದಕ್ಕೊಂದು ವ್ಯವಸ್ಥಿತರೀತಿಯಲ್ಲಿ ಸೇರಿಕೊಂಡರೇಯೇ ಅವುಗಳಿಂದ ಏನಾದರೂ ಕಾರ್ಯವನ್ನು ನಡೆಸಲು ಸಾಧ್ಯವಾದೀತು. ಇದೇ ತ್ರಿವೃತ್ಕರಣವೆನಿಸಿದೆ. "ಬೇರೆ ಬೇರೆ ಶಕ್ತಿಗಳನ್ನು ಪಡೆದಿರುವ ಭೂತಗಳು ಒಂದಕ್ಕೊಂದು ಸೇರದಿದ್ದರೆ ಅವು ಜಗತ್ತನ್ನು ಸೃಷ್ಟಿಸಲಾರವು. ಅವು ಪರಸ್ಪರವಾಗಿ ಬೆರೆತಾಗಲೇ ಮಹದಾದಿವಸ್ತುಗಳಾಗಿ ಪರಿಣಮಿಸಿ ಬ್ರಹ್ಮಾಂಡವನ್ನು ಹುಟ್ಟಿಸುತ್ತವೆ" ಎಂದು ಸ್ಮೃತಿಯಲ್ಲೂ ಹೇಳಿದೆ. ಆದ್ದರಿಂದಲೇ ಶ್ರುತಿಯಲ್ಲೂ "ಜೀವನ ಮೂಲಕ ಪ್ರವೇಶಿಸಿ ನಾಮರೂಪಗಳನ್ನು ವಿಭಜನಮಾಡಿದನು" "ಮೂರುಬಗೆಯಾಗಿದ್ದವನ್ನು ಒಂದುಗೂಡಿಸಿದನು" ಎಂಬಲ್ಲಿ ಪಾಠಕ್ರಮವನ್ನು ಅರ್ಥಕ್ರಮವು ಬದಲಾಯಿಸಿದೆ; ಅಂದರೆ ಮೊದಲು ತ್ರಿವೃತ್ಕರಣವೂ, ಅನಂತರ ನಾಮರೂಪವಿಭಜನವೂ ಆಯಿತೆಂದು ಭಾವಿಸಬೇಕು. ಆದರೆ ಶಿಷ್ಯನಾದ ಶ್ವೇತಕೇತುವಿಗೆ ತಿಳಿಸುವ ಉದ್ದೇಶದಿಂದಲೇ ಅಂಡದೊಳಗಿನ ಅಗ್ನಿ ಆದಿತ್ಯ ಮೊದಲಾದವುಗಳಲ್ಲಿಯೂ ತ್ರಿವೃತ್ಕರಣವನ್ನು ಹೇಳಿದೆ. ಅವನು ಅಂಡದೊಳಗೇ ಇರುವವನಾದ್ದ

ರಿಂದ ಅವನು ತಿಳಿದಿರುವ ದೃಷ್ಟಾಂತವನ್ನೇ ಆರಿಸಿಕೊಂಡು ಅವುಗಳಲ್ಲಿಯೂ ತ್ರಿವೃತ್ಕರಣವನ್ನು ಹಾಗೆ ಹೇಳಲಾಗಿದೆ. ಆದರೂ ಸೃಷ್ಟಿಯ ಆದಿಯಲ್ಲಿಯೇ ಈಶ್ವರನಿಂದಲೇ ತ್ರಿವೃತ್ಕರಣವು ಆಗಿದ್ದುದರಿಂದ ತ್ರಿವೃತ್ಕರಣವಾದಮೇಲೆಯೇ ನಾಮರೂಪಗಳ ವಿಭಜನವಾಯಿತೆಂಬುದು ಸ್ಪಷ್ಟವಾಗುತ್ತದೆ.

ಸ್ಯಾದೇತತ್, "ಅನ್ನಮಶಿತಂ, ಆಪಃ ಪೀತಾಃ, ತೇಜೋಽಶಿತಂ" ಇತಿ ತ್ರಿವೃತ್ಕೃತಾನಾಮನ್ನಾದೀನಾಮೇಕೈಕಸ್ಯ ತೇಜೋಽಬನ್ನಾತ್ಮಕತ್ವೇನ ತ್ರಿರೂಪಸ್ಯ ಕಥಮನ್ನರೂಪಂ ತೇಜ ಇತ್ಯೇಕೈಕರೂಪೇಣ ವ್ಯಪದೇಶ ಉಪಪದ್ಯತ ಇತ್ಯಾಶಂಕಾಯಾಮಾಹ. ವೈಶೇಷ್ಯಾತ್ತು ತದ್ವಾದಸ್ತದ್ವಾದಃ ||೧೮|| ವೈಶೇಷ್ಯಂ ವಿಶೇಷಭಾವಃ, ವಿಶೇಷಶಬ್ದೋ ವಿಕಾರಶಬ್ದವದ್ಧರ್ಮಪರೋ ಧರ್ಮಿಪರಶ್ಚ. ಅತ್ರ ತು ಧರ್ಮಿಪರಃ. ವಿಶೇಷಭಾವೋ ವೈಶೇಷ್ಯಮಾಧಿಕ್ಯರೂಪಂ. ತ್ರಿವೃತ್ಕರಣೇನ ತ್ರಿರೂಪೇಽಪ್ಯೇಕೈಕಸ್ಮಿನ್ನಾಧಿಕ್ಯಾತ್ತತ್ರ ತತ್ರಾನ್ನಾದಿವಾದಃ. ದ್ವಿರುಕ್ತಿರ್ನಿಶ್ಚಯಾತ್ಮಕತ್ವಮಧ್ಯಾಯಪರಿಸಮಾಪ್ತಿಭಾವಂ ಚ ದರ್ಶಯತಿ. ಕಿಂಚಾತ್ರ ಗಮನಾಕುಂಚನಪ್ರಸಾರಣಾದಿರೂಪೇಣ ಪ್ರಾಣಾದಿರೂಪೇಣ ಚ ವಾಯುಕಾರ್ಯಸ್ಯ ದರ್ಶನಾತ್ ತದ್ಭಿನ್ನಭೂತಚತುಷ್ಟಯಾನಾಮವಕಾಶಪ್ರದಾನೇನಾಕಾಶಕಾರ್ಯಸ್ಯ ಸರ್ವಾನುಭವಸಿದ್ಧತ್ವಾಕ್ ಕಥಂ ತ್ರಿವೃತ್ಕರಣಮಾತ್ರತ್ವಮುಪಪನ್ನಮಿತಿ ಚೇತ್ ಭೂತತ್ರಯೋಪದೇಶಮಾತ್ರೇಣ ಕೈಮುತಿಕನ್ಯಾಯೇನ ಪರಿಶೇಷಭೂತದ್ವಯಮರ್ಥಾತ್ಸೂಚಿತಂ. ಅತಶ್ಶರೀರಸ್ಯ ಪಾಂಚಭೌತಿಕಬಾಹ್ಯತ್ವೇ ವಿರೋಧಃ, "ಯಥಾ ಲಿಂಗಶರೀರೋತ್ಪತ್ತಿನಿರೂಪೇಣ ಹ್ಯಪಂಚೀಕೃತಸೂಕ್ಷ್ಮಭೂತೋದ್ಭೂತಾಂತಃಕರಣಜ್ಞಾನೇಂದ್ರಿಯಾದ್ಯುಕ್ತೌ ಸರ್ವತ್ರ ಗುಣತ್ರಯತ್ರಿವೃತ್ಕರಣಸಂಕ್ರಮಸತ್ತ್ವೇಽಪಿ ಸೂಕ್ಷ್ಮಭೂತಸಮಷ್ಟಿಸಾತ್ತ್ವಿಕಾರ್ಧೇನಾಂತಃಕರಣಂ ತದ್ಭಿನ್ನಾರ್ಧೇನ ಜ್ಞಾನೇಂದ್ರಿಯಪಂಚಕೋತ್ಪತ್ತಿಸ್ತದ್ವತ್ಸೂಕ್ಷ್ಮಪಂಚಭೂತಸಮಷ್ಟಿರಜೋಗುಣಾರ್ಧೇನ ಪ್ರಾಣಸ್ತದಿತರಾರ್ಧೇನ ಕರ್ಮೇಂದ್ರಿಯಪಂಚಕೋತ್ಪತ್ತಿಃ" ಇತಿ. ಗುಣಾಧಿಕ್ಯತಯಾ ತದಾತ್ಮಕತ್ವಂ ಶಾಸ್ತ್ರವ್ಯಪದೇಶವದತ್ರ ಸ್ಥೂಲಶರೀರೇ ಭೂತತ್ವಾಧಿಕ್ಯೇನ ಪೃಥಿವೀತ್ವವ್ಯವಹಾರೋ ನ ವಿರುಧ್ಯತೇ. ನನ್ವಂತಃಕರಣಾದ್ಯುತ್ಪತ್ತೌ ನ ಗುಣತ್ರಯಸಂಕ್ರಮಣತ್ವಂ ಇತಿ ಚೇನ್ನ ಮಾನಸೇಂದ್ರಿಯಾದೌ ಗುಣತ್ರಯಾತ್ಮಕತ್ವಸ್ಯ ಕಾಲಭೇದೇನ ಸರ್ವಾನುಭವಸಿದ್ಧತ್ವಾತ್, ಕಾರಣಗುಣಾಃ ಕಾರ್ಯೇ ಪರಿಸಂಕ್ರಾಮಂತೀತಿ ನ್ಯಾಯಾಚ್ಚ ಪರಿಭೇದವಾದಾಃ. ಅನೇನ ಜೀವೇನಾನುಪ್ರವಿಶ್ಯೇತ್ಯತ್ರ "ಜೀವಸ್ಯಾನುಪ್ರವೇಶಕರ್ತೃತ್ವಂ, ನಾಮರೂಪವ್ಯಾಕರಣಕರ್ತಾ ತು ಪರಮೇಶ್ವರಃ" ಇತ್ಯಾಹುಃ. ತನ್ಮತೇ ಶ್ರುತಿ

ವಿರೋಧಃ "ತತ್ಸೃಷ್ಟ್ವಾ ತದೇವಾನುಪ್ರಾವಿಶತ್ ತದನುಪ್ರವಿಶ್ಯ ಸಚ್ಚ ತ್ಯಚ್ಚಾಭವತ್" ಇತಿ. ನಾಮರೂಪವ್ಯಾಕರಣಸ್ಯ ತದಭಿವ್ಯಾಹೃತಾನು ಪ್ರವೇಶಸ್ಯ ಚ ಪರಮಾತ್ಮಕರ್ತೃಕತ್ವಾವಾಗಮಾತ್ ಸಮಾನಕರ್ತೃಕತ್ವಂ ನ ಘಟತೇ. ಜೀವಸ್ಯಾಪೀಶ್ವರಾದ್ವಸ್ತುತೋಽನನ್ಯತ್ವೇನ ತದನುಪ್ರವೇಶೋ ಹ್ಯೌಪಚಾರಿಕ ಇತ್ಯದ್ವೈತವಾದಿನೋ ವದಂತಿ. ತದಸಮಂಜಸಂ, ಪ್ರಾತ್ಯಕ್ಷಿಕಶ್ರುತಿಸ್ಮೃತಿವಿರೋಧಾತ್, ಕಲ್ಪಿತಗಜಾಶ್ವಯೋರಿವ ಜೀವೇ ಶ್ವರಯೋಃ ಕಲ್ಪಿತತ್ವೇ ಚೇತನತ್ವಾಯೋಗೇನ ಕರ್ತೃತ್ವಾಯೋಗಾತ್ ಬಿಂಬಪ್ರತಿಬಿಂಬಯೋರೇಕತ್ರ ವ್ಯವಸ್ಥಾಪನಾಸಂಭವಾಚ್ಚ. "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಇತ್ಯಾದಿಶ್ರುತಿಷು ಚೇತನಾಽ ಚೇತನಜೀವೇಶ್ವರೋತ್ಪತ್ತಿಸ್ಥಿತಿಲಯಕಾರಣತ್ವಂ ಸಂಭವತಿ. "ಪ್ರಧಾನ ಕ್ಷೇತ್ರಜ್ಞಪತಿರ್ಗುಣೇಶಸ್ಸಂಸಾರಮೋಕ್ಷಸ್ಥಿತಿಬಂಧಹೇತುಃ" ಇತ್ಯತ್ರ ಸರ್ವಜೀವಾನಾಂ ತಿರೋಧಾನಾನುಗ್ರಹಕರ್ತೃತ್ವಸ್ಯ ಚ ಪರಮೇಶ್ವರಾ ಧೀನತ್ವಾವಗಮಾತ್, ಭಕ್ತಾನಾಂ ಚರಮಶರೀರಿಣಾಂ ಸರ್ವಕಾಲಸರ್ವಾ ವಸ್ಥಾಸು ಪುನರ್ಜನ್ಮಹೇತುಭೂತಶರೀರೇಂದ್ರಿಯಾದ್ಯಭಿಮಾನಕರ್ತೃ ತ್ವನಿರಾಕರಣೇನ ಶಿವಾಧೀನತಾಬುದ್ಧಿಪ್ರಸರಣೇನ ನಿರಾಭಾರತಯಾ ಭ್ರಮರಕೀಟನ್ಯಾಯೇನ ಸ್ವಾಭಾವಿಕಜೀವತ್ವನಿವೃತ್ತಿಪೂರ್ವಕಶಿವತ್ವ ಪ್ರಾಪ್ತಿಸ್ಸಿದ್ಧ್ಯತೀತಿ ದ್ವೈತಾದ್ವೈತಸಿದ್ಧಾಂತಸ್ಥಾಪಕಸರ್ವವೇದಾಂತತಾ ತ್ಪರ್ಯಾರ್ಥಸ್ಸಂಗೃಹ್ಯತೇ."

ಇತಿ ಶ್ರೀಕರಭಾಷ್ಯೇ ದ್ವಿತಿಯಾಧ್ಯಾಯಚತುರ್ಥಪಾದಸ್ಸಮಾಪ್ತಃ

ಹೀಗೆ ಪ್ರತಿಯೊಂದು ಭೂತದಲ್ಲಿಯೂ ಉಳಿದ ಭೂತಗಳೂ ಸೇರಿರುವುದಾ ದರೆ ಎಲ್ಲಾ ಭೂತಗಳಲ್ಲೂ ಎಲ್ಲವೂ ಸೇರಿರುವುದರಿಂದ ಇದು ಪೃಥ್ವಿ, ಇದು ಜಲ, ಇದು ತೇಜಸ್ಸು ಎಂಬ ವಿಶೇಷಗಳು ಹೇಗೆ ತೋರುತ್ತವೆ ಎಂದಾಶಂಕಿಸಿ ಸಮಾಧಾನ ವನ್ನು ಹೇಳುತ್ತಾನೆ. ಇಲ್ಲಿ ವೈಶಿಷ್ಯವೆಂದರೆ ವಿಶೇಷಭಾವವೆಂದರ್ಥ. ವಿಶೇಷ ಶಬ್ದವು ವಿಕಾರ ಎಂಬ ಶಬ್ದದಂತೆ ಧರ್ಮಕ್ಕೂ ಧರ್ಮಿಗೂ ಅನ್ವಯಿಸುತ್ತದೆ. ಆದರೆ ಇಲ್ಲಿ ಅದು ಧರ್ಮಿಗೆ ಮಾತ್ರವೇ ಅನ್ವಯಿಸುತ್ತದೆ. ಅಲ್ಲಿಗ ವಿಶೇಷ್ಯಭಾವವೆಂದರೆ ಆಧಿಕ್ಯ ಅಥವಾ ಹೆಚ್ಚು ಎಂದು ಅರ್ಥವಾಗುತ್ತದೆ. ತ್ರಿವೃತ್ಕರಣದಿಂದ ತೇಜಸ್ಸು ನೀರು ಪೃಥ್ವಿಗಳಲ್ಲಿ ಒಂದೊಂದರಲ್ಲೂ ಉಳಿದ ಭೂತಗಳು ಇದ್ದರೂ ಯಾವ ಭಾಗವು ಹೆಚ್ಚಾಗಿದೆಯೋ ಅದನ್ನು ಅನುಸರಿಸಿ ಇದು ಪೃಥ್ವಿ, ಇದು ಜಲ, ಇದು ತೇಜಸ್ಸು ಎಂಬ ವ್ಯವಹಾರಗಳುಂಟಾಗುತ್ತವೆ ಎಂದು ತಿಳಿಯಬೇಕು. ಸೂತ್ರದಲ್ಲಿ ಬಂದಿರುವ ದ್ವಿರುಕ್ತಿ ನಿಶ್ಚಯಬುದ್ಧಿಯನ್ನೂ, ಅಧ್ಯಾಯದ ಪರಿಸಮಾಪ್ತಿಯನ್ನೂ ತಿಳಿಸುತ್ತದೆ. ಆದರೆ ಇಲ್ಲಿ ಗಮನ, ಆಕುಂಚನ, ಪ್ರಸಾರಣ ಎಂಬಿವು ವಾಯುವಿನ ಕಾರ್ಯಗಳಾದ್ದ ರಿಂದ ವಾಯುವೆಂಬ ಭೂತವು ಅನುಭವಸಿದ್ಧವಾಗಿದೆ. ಹಾಗೆಯೇ ಎಲ್ಲಕ್ಕು ಅವ

ಕಾಶವನ್ನು ಕೊಡುತ್ತಿರುವುದರಿಂದ ಆಕಾಶವೆಂಬ ಭೂತವೊಂದು ಇರುವುದಾಗಿ ಸರ್ವರಿಗೂ ತಿಳಿದುಬಂದಿದೆ. ಹೀಗೆ ಇವೆರಡು ಭೂತಗಳು ಇರುವುದರಿಂದ ತ್ರಿವೃತ್ಕರಣವು ಹೇಗೆ ಸಮಂಜಸವಾದೀತು? ಎಂದು ಹೇಳಿದರೆ ಇಲ್ಲಿ ಮೂರು ಭೂತಗಳನ್ನು ಮಾತ್ರವೇ ಹೇಳಿದ್ದರೂ ಕೈಮುತಿಕನ್ಯಾಯದಿಂದ ಮೂರನ್ನು ಹೇಳಿದಮೇಲೆ ಉಳಿದ ಎರಡನ್ನೂ ಹೇಳಿದಂತಾಯಿತೆಂಬ ಅಂಶ ತಾನಾಗಿಯೇ ಸಿದ್ಧಿಸುತ್ತದೆ. ಆದ್ದರಿಂದ ಶರೀರವು ಪಂಚಭೂತಗಳಿಂದಾಗಿದೆ ಎಂಬುದಕ್ಕೆ ವಿರೋಧವೇನೂ ಇಲ್ಲ. ಲಿಂಗಶರೀರದ ಉತ್ಪತ್ತಿಯನ್ನು ತಿಳಿಸುವಾಗ ಪಂಚೀಕೃತವಾಗದ ಸೂಕ್ಷ್ಮಭೂತಗಳಿಂದ ಅಂತಃಕರಣ ಮತ್ತು ಜ್ಞಾನೇಂದ್ರಿಯಗಳು ಮಾತ್ರವೇ ಹುಟ್ಟಿದವೆಂದು ಹೇಳಲಾಗಿದೆ. ಅಲ್ಲಿ ಕರ್ಮೇಂದ್ರಿಯಗಳ ಬಗ್ಗೆ ಹೇಳದಿದ್ದರೂ ಎಲ್ಲಾ ಕಡೆಗಳಲ್ಲೂ ಗುಣತ್ರಯದ ಸಂಬಂಧವಿರುವುದರಿಂದ ಸತ್ತ್ವಗುಣದ ಅರ್ಧಭಾಗದಿಂದ ಅಂತಃಕರಣವೂ, ಉಳಿದ ಭಾಗದಿಂದ ಜ್ಞಾನೇಂದ್ರಿಯಗಳೂ ಹುಟ್ಟಿದಂತೆ, ರಜೋಗುಣದ ಅರ್ಧಭಾಗದಿಂದ ಪ್ರಾಣವೂ, ಉಳಿದ ಭಾಗದಿಂದ ಕರ್ಮೇಂದ್ರಿಯಗಳೂ ಹುಟ್ಟಿದವೆಂಬುದು ಸ್ವತಸ್ಸಿದ್ಧವಾಗುತ್ತದೆ; ಯಾಕೆಂದರೆ ಒಂದು ವಸ್ತುವಿನಲ್ಲಿ ಯಾವ ಗುಣವು ಹೆಚ್ಚಾಗಿರುವುದೋ ಅದರ ಮೂಲಕವೇ ಅದನ್ನು ಸಾತ್ತ್ವಿಕ, ರಾಜಸ ತಾಮಸವೆಂದು ಮುಂತಾಗಿ ಶಾಸ್ತ್ರದಲ್ಲಿ ವ್ಯವಹರಿಸಲಾಗಿದೆ. ಹಾಗೆಯೇ ಸ್ಥೂಲಶರೀರದಲ್ಲಿಯೂ ಪೃಥ್ವಿಯ ಭಾಗ ಹೆಚ್ಚಾಗಿರುವುದರಿಂದ ಅದನ್ನು ಪಾರ್ಥಿವವೆಂದು ಕರೆಯುವುದಕ್ಕೆ ವಿರೋಧವೇನಿಲ್ಲ. ಹಾಗಾದರೆ, ಅಂತಃಕರಣದ ಉತ್ಪತ್ತಿಯಲ್ಲಿ ಮೂರು ಗುಣಗಳೂ ಸೇರುವುದಿಲ್ಲವೆಂದು ಆಕ್ಷೇಪಿಸಿದರೆ ಅದು ಸರಿಯಲ್ಲ: ಯಾಕೆಂದರೆ ಮನಸ್ಸು ಮತ್ತು ಇಂದ್ರಿಯಗಳು ತ್ರಿಗುಣಾತ್ಮಕವೆಂಬುದನ್ನು ಕಾಲಭೇದದಿಂದ ಎಲ್ಲರೂ ತಿಳಿದಿದ್ದಾರೆ. " ಕಾರಣಗುಣಗಳೇ ಕಾರ್ಯದಲ್ಲಿ ಸಂಭವಿಸುತ್ತವೆ" ಎಂಬ ನ್ಯಾಯದಿಂದ ಮನಸ್ಸಿನಲ್ಲೂ ತ್ರಿಗುಣಗಳ ಸಂಪರ್ಕವಿದ್ದೇ ಇರುತ್ತದೆ. " ಈ ಜೀವನ ರೂಪದಲ್ಲಿ ಪ್ರವೇಶಿಸಿ" ಎಂಬಲ್ಲಿ ಜೀವನೇ ಒಳಗೆ ಪ್ರವೇಶಿಸಿದನೆಂದು ಹೇಳಿದ್ದರಿಂದ ಅಂತಃಪ್ರವೇಶಕ್ಕೆ ಜೀವನೇ ಕರ್ತನೆಂದೂ, ನಾಮರೂಪವಿಭಜನಕ್ಕೆ ಈಶ್ವರನು ಕರ್ತನೆಂದೂ ಕೆಲವರು ಹೇಳುತ್ತಾರೆ. ಈ ಮತದಲ್ಲಿ "ಅದನ್ನು ಸೃಷ್ಟಿಸಿ ಅದರಲ್ಲಿ ಪ್ರವೇಶಿಸಿದನು; ಅದರಲ್ಲಿ ಪ್ರವೇಶಿಸಿ ಅದೆಲ್ಲವೂ ಆದನು" ಎಂದು ಶ್ರುತಿಯಲ್ಲಿ ನಾಮರೂಪಗಳ ವ್ಯಾಕರಣದ ಜೊತೆಯಲ್ಲಿ ಅನುಪ್ರವೇಶವನ್ನೂ ಹೇಳಿ, ಅವೆರಡಕ್ಕೂ ಪರಶಿವನೇ ಕರ್ತನೆಂದು ಹೇಳಿರುವುದರಿಂದ ಶ್ರುತಿಯ ವಿರೋಧ ಬರುವುದು. ಜೀವನೂ ಸಹ ವಾಸ್ತವವಾಗಿ ಈಶ್ವರನಿಗಿಂತ ಬೇರೆಯಲ್ಲವಾದ್ದರಿಂದ ಅವನೊಳಗೆ ಪ್ರವೇಶಿಸಿದನೆಂದು ಹೇಳಿದ್ದು ಕೇವಲ ಔಪಚಾರಿಕವೆಂದು ಅದ್ವೈತಿಗಳು ಹೇಳುತ್ತಾರೆ. ಇದು ಸಮಂಜಸವಲ್ಲ; ಯಾಕೆಂದರೆ ಹೀಗೆ ಹೇಳಿದರೆ ಅನೇಕ ಶ್ರುತಿಸ್ಮೃತಿಗಳ ವಿರೋಧವುಂಟಾಗುತ್ತದೆ. ಕಲ್ಪಿತವಾದ ಆನೆ ಕುದುರೆಗಳಂತೆ ಜೀವೇಶ್ವರರನ್ನು ಕಲ್ಪಿತರೆಂದು ಭಾವಿಸಿದರೆ ಅವರು ಚೇತನರಲ್ಲವಾದ್ದರಿಂದ ಅವರಿಗೆ ಕರ್ತೃತ್ವವೂ ಬರದೇಹೋಗುವುದು. ಅವರ ಮತದಂತೆ ಬಿಂಬ ಪ್ರತಿಬಿಂಬಗಳೆರಡೂ ಒಂದೆಡೆ ಸೇರಲು

ಸಾಧ್ಯವಿಲ್ಲವಾದ್ದರಿಂದ ಜೀವ ಈಶ್ವರರಿಬ್ಬರೂ ಒಂದುಕಡೆಯಲ್ಲಿ ಸೇರಲು ಸಾಧ್ಯವಿಲ್ಲ. "ಯಾವನಿಂದ ಈ ಜೀವರು ಹುಟ್ಟಿರುವರೋ" ಎಂಬ ಶ್ರುತಿಯಲ್ಲಿ ಚೇತನ ಜೀವರ ಮತ್ತು ಅಚೇತನ ಶರೀರಗಳ ಉತ್ಪತ್ತಿ ಸ್ಥಿತಿ ಲಯಗಳಿಗೆ ಪರಮೇಶ್ವರನೇ ಕಾರಣನೆಂದು ಹೇಳಿದ್ದು ಅವರ ಮತದಲ್ಲಿ ಸಂಭವಿಸುವಂತಿಲ್ಲ. "ಪರಶಿವನು ಪ್ರಧಾನ ಜೀವರಿಗೆ ಪತಿಯೂ, ಗುಣಗಳಿಗಧಿಪತಿಯೂ, ಸಂಸಾರಮೋಕ್ಷಸ್ಥಿತಿಬಂಧಗಳ ಕಾರಣವೂ ಆಗಿರುವನು" ಎಂಬಲ್ಲಿ ಜೀವರೆಲ್ಲರನ್ನೂ ವಂಚಿಸಲಿಕ್ಕೂ ಅನುಗ್ರಹಿಸಲಿಕ್ಕೂ ಪರಮೇಶ್ವರನೇ ಕರ್ತನೆಂದು ತಿಳಿದುಬರುವುದರಿಂದ ಕರ್ಮಪಾಶವನ್ನು ಕಳೆದುಕೊಂಡು ಕೊನೆಯದಾಗಿ ಶರೀರವನ್ನೆತ್ತಿರುವ ಸದ್ಭಕ್ತರು ಎಲ್ಲಾ ಕಾಲಗಳಲ್ಲೂ ಮತ್ತು ಎಲ್ಲಾ ಅವಸ್ಥೆಗಳಲ್ಲೂ ಪುನರ್ಜನ್ಮಕ್ಕೆ ಕಾರಣವೆನಿಸಿದ ಶರೀರೇಂದ್ರಿಯಾಭಿಮಾನವನ್ನು ತೊರೆದು, ಇವೆಲ್ಲವೂ ಶಿವನಿಗಧೀನವೆಂಬ ಬುದ್ಧಿಯನ್ನು ಹೆಚ್ಚಿಸಿಕೊಂಡು, ನಿರ್ಲಿಪ್ತತೆಯಿಂದ ಬಾಳುತ್ತ ಭ್ರಮರಕೀಟನ್ಯಾಯದಂತೆ ಸಹಜವಾದ ಜೀವಭಾವವನ್ನು ಕಳೆದುಕೊಂಡು ಶಿವತ್ವವನ್ನು ಪಡೆಯಲೆಂಬುದೇ ದ್ವೈತಾದ್ವೈತಮತದ ಸಿದ್ಧಾಂತವೆನಿಸಿದೆ. ಇದೇ ಎಲ್ಲಾ ವೇದಾಂತಗಳತಾತ್ಪರ್ಯವೂ ಆಗಿದೆ.

---

## ತೃತೀಯೋಽಧ್ಯಾಯಃ

### ಅಥ ಶ್ರೀಕರಭಾಷ್ಯೇ ತೃತಿಯಾಧ್ಯಾಯಸ್ಯ ಪ್ರಥಮಃ ಪಾದಃ.

ಪೂರ್ವಾಧ್ಯಾಯೇ ಪರಬ್ರಹ್ಮಣಃ ಸಚ್ಚಿದಾನಂದಸ್ವರೂಪಸ್ಯ ಸರ್ವಶಕ್ತಿಮತಸ್ಸರ್ವವಿಲಕ್ಷಣಸ್ಯ ಚರಾಚರಪ್ರಪಂಚಕಾರಣಸ್ಯ ಲೀಲಾಮಂಗಳವಿಗ್ರಹಸ್ಯ ಶಿವಸ್ಯ ಜಗಜ್ಜನ್ಮಾದಿಕಾರಣವಿರೋಧೋ ನಿರಾಕೃತಃ. ತತ್ರ ಪ್ರಥಮಪಾದೇ ಸಾಂಖ್ಯಯೋಗತಾರ್ಕಿಕಾದ್ವೈತಾದಿವಾದೋ ನಿರಸ್ತಃ. ದ್ವಿತೀಯೇ ಪ್ರಧಾನಕಾರಣತ್ವಂ ನಿರಸ್ತಂ. ತೃತೀಯೇ ಭೂತಸೃಷ್ಟ್ಯಾಂತರವಿರೋಧಪರಿಹಾರಪೂರ್ವಕಂ ಜೀವನಿತ್ಯತ್ವಾದಿಧರ್ಮಃ ಪ್ರದರ್ಶಿತಃ. ಚತುರ್ಥೇ ಪ್ರಾಣೇಂದ್ರಿಯಾಣಾಂ ಸ್ವರೂಪಂ ಪರಮಶಿವಸಕಾಶಾತ್ತಜ್ಜನ್ಯತ್ವಂ ಚೋಪದಿಶ್ಯ ಸರ್ವೇಷಾಂ ನಾಮರೂಪವ್ಯಾಕರಣಂ ಪ್ರದರ್ಶಿತಂ. ಏತದಧ್ಯಾಯಪ್ರಥಮಪಾದೇ ಜೀವಸ್ಯ ಲೋಕಾಂತರಗಮನವಿಚಾರೋ ವ್ಯಾಚಕ್ಷ್ಯತೇ. ದ್ವಿತೀಯೇ ಪರಶಿವಸ್ವರೂಪಲಕ್ಷಣಾದಿಪ್ರಸಂಗಃ. ತೃತೀಯೇ ತದುಪಾಸನವಿಶೇಷಗುಣಾಃ ಉಪನ್ಯಸ್ಯಂತೇ. ಚತುರ್ಥೇ ಬ್ರಹ್ಮಚರ್ಯಾದ್ಯಾಶ್ರಮಚತುಷ್ಟಯಧರ್ಮಾಃ ನಿರೂಪ್ಯಂತೇ. ಪರಮಕಾರುಣಿಕಃ ಪರಮೇಶ್ವರಃ ಸರ್ವಜೀವವಾತ್ಸಲ್ಯತಯಾ ತದಾಧಾರಭೂತತ್ರಿವೃತ್ಕೃತಾಂಡೋತ್ಪತ್ತಿಂ ಜೀವಾನುಪ್ರವೇಶತಯಾ ನಾಮರೂಪವ್ಯಾಕರಣಂ ಚ ಕೃತವಾನಿತಿ ಪ್ರಸ್ತಾವೇ ಪ್ರಥಮಂ ಜೀವಸ್ಯ ಶರೀ

ರಾಭಾವಾದರೂಪತ್ವಾದೀಶ್ವರಾನುಪ್ರವಿಷ್ಟತ್ವಾದತೀಂದ್ರಿಯತ್ವಾದಗೋಚರತ್ವಾದಪ್ರಮೇಯತ್ವಾದ್ಬ್ರಹ್ಮಸ್ವರೂಪತ್ವಾತ್ ತಸ್ಯ ಲೋಕಾಂತರಗಮನಾಗಮನಂ ಕಥಮುಪಪನ್ನಮಿತ್ಯಾಶಂಕಾಯಾಮಾಹ. ತದಂತರಪ್ರತಿಪತ್ತ್ಯಧಿಕರಣಂ ॥ ೧ ॥ ತದಂತರಪ್ರತಿಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಂ ॥ ೧ ॥ ತದಂತರಪ್ರತಿಪತ್ತೌ ಲೋಕಾಂತರಪ್ರಾಪ್ತಿಕಾಲೇ ಲಿಂಗಶರೀರೇಣ ಸ್ಥಾಣುರೂಪತಯಾ ಜೀವೋಽಸ್ಮಿನ್ ಲೋಕೇ ಅಗ್ನೌ ಹುತೈರದೃಷ್ಟಶಬ್ದವಾಚ್ಯೈಃ ಸಮಿತ್ಪುರೋಡಾಶದಧಿಕ್ಷೀರಸೋಮರಸಚರುದರ್ಭಾಜ್ಯಪ್ರಭೃತಿಭಿರ್ದ್ರವ್ಯೈಃ ಸಂಪರಿಷ್ವಕ್ತಃ ಪರಿವೇಷ್ಟಿತಸ್ಸನ್ ಧೂಮಾದಿಮಾರ್ಗೇಣ ಸ್ವರ್ಗಲೋಕಂ ರಂಹತಿ ಗಚ್ಛತಿ, ಕುತಃ ಪ್ರಶ್ನನಿರೂಪಣಾಭ್ಯಾಂ. "ವೇತ್ಥ ಯಥಾ ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ" ಇತಿ ಪ್ರಶ್ನಃ. "ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ " ಇತಿಪ್ರತಿವಚನಂ. ಉಭಾಭ್ಯಾಂ ಪ್ರಶ್ನಪ್ರತಿವಚನಾಭ್ಯಾಂ ಸ್ವಾಭಿಮಾನಕಾರ್ಮಿಕಜೀವಾನಾಂ ಅನೇಕಶರೀರಪ್ರವೇಶನಿರ್ಗಮನವ್ಯಾಪಾರತ್ವಮುಪದಿಷ್ಟಂ. ಏತೇನ ದುಷ್ಕೃತೀನಾಮಪ್ಯುಪಲಕ್ಷಣಂ. " ಏಷ ಏವ ಸಾಧುಕರ್ಮ ಕಾರಯತಿ " ಇತ್ಯಾದಿಬಹುಶ್ರುತಿದರ್ಶನಾತ್ ಜೀವಕೃತಕರ್ಮಾನುಸಾರೇಣ ಪರಮೇಶ್ವರಸ್ಯ ಪುಣ್ಯಾಪುಣ್ಯಲೋಕಪ್ರಾಪಕತ್ವಮರ್ಥಾತ್ಸೂಚಿತಂ. ತಸ್ಮಾತ್ ಸ್ವಾಭಿಮಾನಪುಣ್ಯಾಪುಣ್ಯಕೃತಬದ್ಧಜೀವಾನಾಂ ಜನನಮರಣಾದ್ಯೈಹಿಕಾಮುಷ್ಮಿಕಮಹಾಕ್ಲೇಶಭಯಾತುರಾಣಾಂ ಅಪುನರಾವೃತ್ತಜೀವತ್ವನಿವೃತ್ತಿಪೂರ್ವಕಶಿವತ್ವಪ್ರಾಪ್ತಿರೂಪಕೈವಲ್ಯವಿಭೂತಿಃ ಸಂಪಾದನೀಯೇತಿ ಸೂತ್ರಸೂಚಿತಭಾವಾರ್ಥಃ. "ಅಯಮಾತ್ಮಾ ಬ್ರಹ್ಮ" ಇತ್ಯಾದಿಷು ಶಾರೀರಸ್ಯ ಬ್ರಹ್ಮತ್ವವ್ಯವಸ್ಥಾಪನಾತ್, " ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಇತ್ಯದೌ ತಸ್ಯ ಸ್ವರ್ಗಾದಿಗಮನಾಗಮನಪ್ರಾಪ್ತ್ಯುಪದೇಶಾತ್ ಪರಲೋಕಗಮನಾಗಮನಮಸ್ತಿ ನವಾ ಇತಿ ಚಿಂತ್ಯತೇ. ಜೀವಸ್ಯ ಪರಲೋಕಪ್ರಾಪ್ತಿರನುಪಪನ್ನಾ, ಕುತಃ, ಬ್ರಹ್ಮರೂಪತ್ವಾತ್, ಕರ್ಮಕರ್ತೃತ್ವಸ್ಯ ಅಂತಃಕರಣಸ್ಯೈವ ಸತ್ತ್ವಾತ್, ಸುಪ್ತಿಮೂರ್ಛಾದೌ ಮನೋರಹಿತತ್ವೇನ ತಸ್ಯ ನಿಷ್ಕಾಮತ್ವಾನುಭವಸ್ಯ ಸಿದ್ಧತ್ವಾತ್, "ನ ಜಾಯತೇ ಮ್ರಿಯತೇ ವಾ " ಇತಿ ಶ್ರುತೌ, " ಅಚ್ಛೇದ್ಯೋಽಯಮದಾಹ್ಯೋಽಯಂ " ಇತ್ಯಾದಿಸ್ಮೃತೌ ಚ ತಸ್ಯ ಜನ್ಮಮರಣದುಃಖಾದಿವಿಲಕ್ಷಣತ್ವಸ್ಯೋಪದೇಶಿತತ್ವಾತ್. ಕಿಂಚ ಶಬ್ದಬುದ್ಧಿಕರ್ಮಣಾಂ ತ್ರಿಕ್ಷಣಾವಸ್ಥಾಯಿತ್ವಮಿತಿ ನ್ಯಾಯೇನ ಅಂತಃಕೃತಕರ್ಮಣಾಮಪ್ಯದ್ಯೈವ ಕ್ಷಣತ್ರಯೇಣೈವ ನಷ್ಟತ್ವದರ್ಶನಾತ್ ಶರೀರಚರಮಶ್ವಾಸಕಾಲೇ ತದ್ವಿಶಿಷ್ಟ

ಪೃಥಿವ್ಯಾದಿಭೂತಾನಾಂ ಮಹಾಭೂತೇಷು ವಿಲಯದ್ಯೋತನಾಚ್ಚ ಜೀವಸ್ಯ ಸರ್ವಥಾ ಪರಲೋಕಗಮನಾಗಮನಶಾಸ್ತ್ರಮಯುಕ್ತಮಿತಿ ಪ್ರಾಪ್ತೇ ಪ್ರಚಕ್ಷ್ಮಹೇ. "ಅಯಮಾತ್ಮಾ ಬ್ರಹ್ಮ" ಇತ್ಯತ್ರ ಮಾಂಡೂಕ್ಯೇ ಪರಮಶಿವಪ್ರಕರಣೇ ಶಿವಾತ್ಮಕಪ್ರಣವಪರತ್ವೇನ ವ್ಯಪದೇಶಾತ್ ಜೀವಪರತ್ವಸಾಧನತ್ವೇಽಪಿ ನ ಜೀವಬ್ರಹ್ಮತ್ವವಾದೋ ಯುಕ್ತಃ. "ಸರ್ವೋ ವೈ ರುದ್ರಃ" "ಯಸ್ಯ ಪೃಥಿವೀ ಶರೀರಂ" "ಯಸ್ಯ ಆಪಃ ಶರೀರಂ" "ಯಸ್ಯ ಆತ್ಮಾ ಶರೀರಂ" ಇತ್ಯಾದಿಷ್ವಷ್ಟಮೂರ್ತಿನಿ ಶಿವೇ ಜೀವಸ್ಯೈಕಮೂರ್ತಿತ್ವೋಪದೇಶಾತ್, "ಅಸಾವಾದಿತ್ಯೋ ಬ್ರಹ್ಮ" "ಕಂ ಬ್ರಹ್ಮ, ಖಂ ಬ್ರಹ್ಮ" ಇತ್ಯಾದಿವತ್ತಸ್ಯ ಬ್ರಹ್ಮತ್ವಮವಿರೋಧಂ. "ಅಹಂ ಬ್ರಹ್ಮಾಸ್ಮಿ" "ತತ್ತ್ವಮಸಿ" ಇತ್ಯಾದಿಶ್ರುತಯಃ ಸರ್ವವೇದಾಂತಮುಖ್ಯಾರ್ಥಪ್ರಕಾಶವದ್ದ್ವೈತಾದ್ವೈತವಿಧಾಯಕತ್ವೇನೋಪಾಸಕಸ್ಯ ಜೀವಸ್ಯೋಪಾಸ್ಯಶಿವಪ್ರಾಪ್ತಿಂ ಪ್ರತಿಪಾದಯಂತಿ. ತಥಾನ್ಯತ್ರ ದೃಷ್ಟಾಂತಾನುಸಾರೇಣ "ಯಥಾ ನದ್ಯಃ" ಇತ್ಯಾದಿಷು ಜೀವಬ್ರಹ್ಮಣೋಃ ಪ್ರಾಪ್ಯಪ್ರಾಪಕತ್ವಂ ಸ್ಪಷ್ಟಮುಪದಿಷ್ಟಂ. "ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋಽಭಿಚಾಕಶೀತಿ" ಇತ್ಯತ್ರ ಜೀವೇಶ್ವರಯೋಃ ಸಂಸಾರಭೋಕ್ತೃತ್ವಾಭೋಕ್ತೃತ್ವಾವಗಮಾತ್, ಛಾತ್ರಾಭಾವೇನಾಚಾರ್ಯವಿದ್ಯಾಪ್ರಕಾಶಕತ್ವಾಭಾವೇಽಪಿ ನ ಯಥಾ ತಸ್ಯ ವಿದ್ವತ್ತ್ವಭಂಗಪ್ರಸಂಗಃ ತದ್ವತ್ಸುಷುಪ್ತಿಮೂರ್ಛಾದೌ ಜೀವಸ್ಯ ಮನೋರಹಿತತ್ವೇನ ಕರ್ಮಕರ್ತೃಕತ್ವಾದರ್ಶನೇಽಪ್ಯಕರ್ತೃತ್ವಂ ನೋಪಪದ್ಯತೇ. ಜೀವಸ್ಯ ಕರ್ತೃತ್ವೇನಾನಾದಿತ್ವೇಽಪೀಹಾಮುತ್ರ ಗಮನಾಗಮನಮವಿರೋಧಂ. ಕ್ಷಣತ್ರಯೇಣ ಕರ್ಮಣಾಂ ನಷ್ಟತ್ವೇಽಪ್ಯಪೂರ್ವಫಲೋತ್ಪಾದಕತ್ವಾದ್ಗಮನಾಗಮನಶಾಸ್ತ್ರಮವಿರೋಧಂ. ವೇದವೇದಾಂತೇಷು ಸೂಕ್ಷ್ಮಾವಸ್ಥಾಪನ್ನದಧಿಕ್ಷೀರಾದಿದ್ರವ್ಯಾಣಾಮೇವಾದೃಷ್ಟಶಬ್ದವಾಚ್ಯತ್ವೇನಾದೃಷ್ಟಾನಾಮಪಿ ದ್ರವ್ಯತ್ವಾದ್ದೇವಶರೀರಾಕಾರೇಣ ಪರಿಣಾಮಸ್ಸಂಭವತಿ. ತಸ್ಮಾತ್ಪಂಚಾಗ್ನಿಮಧ್ಯೇ ಏವಂ ಪ್ರಶ್ನಪ್ರತಿವಚನೇ ಆಮ್ನಾಯೇತ್. ಶ್ವೇತಕೇತುಂ ಕಿಲಾರುಣೇಯಂ ಪಾಂಚಾಲಃ ಪ್ರವಾಹಣಃ ಕರ್ಮಿಣಾಂ ಗಂತವ್ಯದೇಶಂ ಪುನರಾವೃತ್ತಿಪ್ರಕಾರಂ ಚ "ದೇವಯಾನಪಿತೃಯಾನಪಥವ್ಯಾವರ್ತನೇ ಅಮುಷ್ಯ ಲೋಕಸ್ಯ ಪ್ರಾಪ್ತಾರಂ ಚ ವೇತ್ಥ" ಇತಿ ಪೃಷ್ಟ್ವಾ, ಇದಮಪಿ ಪಪ್ರಚ್ಛ "ವೇತ್ಥ ಯಥಾ ಪಂಚಮ್ಯಾಮಾಹುತಾವಾಪಃ ಪುರುಷವಚಸೋ ಭವಂತಿ" ಇತಿ. ತತ ಇಮಂ ಪಶ್ಚಿಮಂ ಪ್ರಶ್ನಂ ಪ್ರತಿಬ್ರುವಂಶ್ಚ ದ್ಯುಲೋಕಮಗ್ನಿತ್ವೇನ ರೂಪಯಿತ್ವಾ "ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ." "ತಸ್ಯಾ ಆಹುತೇಃ

ಸೋಮೋ ರಾಜಾ ಸಂಭವತಿ ” ಇತ್ಯಾದಿನಾ “ ದೇವಾಖ್ಯಾಃ ಜೀವಸ್ಯ ಪ್ರಾಣಾಃ ಅಗ್ನಿತ್ವೇನ ರೂಪಿತೇ ದ್ಯುಲೋಕೇ ಶ್ರದ್ಧಾಖ್ಯಂ ವಸ್ತು ಪ್ರಕ್ಷಿಪಂತಿ. ಸಾ ಚ ಶ್ರದ್ಧಾ ಸೋಮರಾಜಾಖ್ಯಾಮೃತಮಯದೇಹರೂಪೇಣ ಪರಿಣಮತೇ. ತಂ ಚಾಮೃತಮಯಂ ದೇಹಂ ದೇಹಾಂತ ಏವ ಪ್ರಾಣಾಃ ಪರ್ಜನ್ಯೇಽಗ್ನಿತ್ವೇನ ರೂಪಿತೇ ಪ್ರಕ್ಷಿಪಂತಿ. ಸಚ ದೇಹಸ್ತತ್ರ ಪ್ರಕ್ಷಿಪ್ತೋ ವರ್ಷಂ ಭವತಿ. ತಚ್ಚ ವರ್ಷಂ ತ ಏವ ಪ್ರಾಣಾಃ ಪೃಥಿವ್ಯಾಮಗ್ನಿತ್ವರೂಪಿತಾಯಾಂ ಪ್ರಕ್ಷಿಪಂತಿ. ತತ್ರ ತಚ್ಚ ರೇತೋ ತ ಏವ ಯೋಷಾಯಾಮಗ್ನಿತ್ವರೂಪಿತಾಯಾಂ ಪ್ರಕ್ಷಿಪಂತಿ. ತಚ್ಚ ತತ್ರ ಪ್ರಕ್ಷಿಪ್ತಂ ಗರ್ಭೋ ಭವತಿ ” ಇತಿ ಪಂಚಮ್ಯಾಮಾಹುತಾವಾಪಃ ಪುರುಷಶಬ್ದಾಭಿಧಾಃ ಅಭಿಲಾಪ್ಯಾ ಭವಂತೀತ್ಯರ್ಥಃ. ಏವಮುಕ್ತೇ ಪೂರ್ವಾಸ್ವಾಹುತಿಷು ಅನುವರ್ತಮಾನಾನಾಮೇವಾಪಾಂ ಸೂಕ್ಷ್ಮರೂಪಾಣಾಮಿದಾನೀಂ ಪುರುಷಾಕಾರತ್ವಂ ಭವತೀತ್ಯುಕ್ತಂ ಭವತಿ. ಅತ ಏವ ಪ್ರಶ್ನಪ್ರತಿವಚನಾಭ್ಯಾಂ ದೇಹಹೇತುಭೂತೈರ್ಭೂತಸೂಕ್ಷ್ಮೈಸ್ಸಹ ಜೀವಃ ತತ್ರತತ್ರ ಯಾತೀತಿ ಗಮ್ಯತೇ. ಅತಃ “ ಯದೇವ ಜ್ಞಾನಫಲಂ ತದೇವ ಕರ್ಮಫಲಂ ” ಇತಿ ಶ್ರೌತವಿಧಿದರ್ಶನಾತ್ ಶಿವಾರ್ಪಣಕೃತಾನಾಂ ಜ್ಯೋತಿಷ್ಟೋಮಾದಿಕರ್ಮಣಾಂ ಚಿತ್ತಶುದ್ಧಿದ್ವಾರಾ ಶಿವಪ್ರಾಪ್ತಿಹೇತುತ್ವೇನ ಮುಮುಕ್ಷೂಣಾಂ ಫಲಾಭಿಲಾಷಾರಹಿತಂ ಕರ್ಮ ಕರ್ತವ್ಯಮಿತಿ ವೇದಾಂತೇಷು ವ್ಯಾಚಕ್ಷ್ಯತೇ.

ಶಕ್ತಿವಿಶಿಷ್ಟನೂ, ಸಚ್ಚಿದಾನಂದಸ್ವರೂಪನೂ, ಸರ್ವವಿಲಕ್ಷಣನೂ, ಲೀಲೆಗಾಗಿ ದಿವ್ಯಮಂಗಳವಿಗ್ರಹಧಾರಿಯೂ ಆದ ಪರಶಿವಬ್ರಹ್ಮವು ಜಗದ್ವ್ಯಾಪಾರಗಳಿಗೆ ಕಾರಣವಾಗುವ ಬಗ್ಗೆ ಇದ್ದ ವಿರೋಧವನ್ನು ಹಿಂದಿನ ಅಧ್ಯಾಯದಲ್ಲಿ ನಿರಾಕರಿಸಲಾಯಿತು. ಅದರಲ್ಲೂ ಪ್ರಥಮಪಾದದಲ್ಲಿ ಸಾಂಖ್ಯಯೋಗ ತಾರ್ಕಿಕ ಅದ್ವೈತ ಮೊದಲಾದ ಮತಗಳನ್ನೂ, ದ್ವಿತೀಯಪಾದದಲ್ಲಿ ಪ್ರಧಾನವೇ ಜಗತ್ಕಾರಣವೆಂಬ ಮತವನ್ನೂ ನಿರಾಕರಿಸಲಾಯಿತು; ತೃತೀಯಪಾದದಲ್ಲಿ ಭೂತಸೃಷ್ಟಿಯೊಳಗೆ ಸಂಭವಿಸುವ ವಿರೋಧವನ್ನು ಪರಿಹರಿಸಿ ಜೀವನು ನಿತ್ಯನೆಂಬುದನ್ನು ಸಾಧಿಸಲಾಯಿತು. ಚತುರ್ಥಪಾದದಲ್ಲಿ ಪ್ರಾಣಗಳ ಮತ್ತು ಇಂದ್ರಿಯಗಳ ಸ್ವರೂಪವನ್ನು ತಿಳಿಸಿ ಪರಮಶಿವನಿಂದಲೇ ಅವು ಹುಟ್ಟುವುವೆಂದೂ ಹೇಳಿ ಎಲ್ಲಾ ವಸ್ತುಗಳಲ್ಲೂ ನಾಮರೂಪಗಳ ವಿಭಜನಕ್ರಮವನ್ನು ತಿಳಿಸಲಾಯಿತು. ಈಗ ತೃತೀಯಾಧ್ಯಾಯದ ಪ್ರಥಮ ಪಾದದಲ್ಲಿ ಜೀವನು ಪರಲೋಕಗಳಿಗೆ ಹೋಗುವ ಮತ್ತು ಅಲ್ಲಿಂದ ಬರುವ ವಿಚಾರವನ್ನು ತಿಳಿಸಲಾಗುವುದು. ದ್ವಿತೀಯಪಾದದಲ್ಲಿ ಪರಶಿವನ ಸ್ವರೂಪಲಕ್ಷಣವನ್ನೂ, ತೃತೀಯಪಾದದಲ್ಲಿ ಅವನನ್ನು ಉಪಾಸನಮಾಡುವ ವಿಧಾನವನ್ನೂ, ಚತುರ್ಥಪಾದದಲ್ಲಿ ಬಹ್ಮಚರ್ಯ ಮೊದಲಾದ ಆಶ್ರಮಧರ್ಮಗಳನ್ನೂ ತಿಳಿಸಲಾಗುವುದು. ಪರಮದಯಾಳುವಾದ ಪರಮೇ

ಶ್ವರನು ಸರ್ವಜೀವರ ಮೇಲಿನ ವಾತ್ಸಲ್ಯದಿಂದ ವಿಶ್ವಕ್ಕಾಧಾರವಾದ ತ್ರಿವೃತ್ಕರಣ-ವನ್ನೂ, ಜೀವರೊಳಗೆ ಪ್ರವೇಶಿಸಿ ನಾಮರೂಪವಿಭಜನವನ್ನೂ ಮಾಡಿದನೆಂದು ಹಿಂದಿನ ಪ್ರಕರಣದಲ್ಲಿ ಹೇಳಿದೆ. ಆದರೆ ಜೀವನಿಗೆ ಶರೀರ ಮತ್ತು ಆಕಾರಗಳಿಲ್ಲದ್ದರಿಂದಲೂ, ಈಶ್ವರನೊಡನೆಕೂಡಿರುವುದರಿಂದಲೂ, ಅತೀಂದ್ರಿಯನೂ, ಅಗೋಚರನೂ, ಅಪ್ರಮೇಯನೂ, ಬ್ರಹ್ಮಸ್ವರೂಪನೂ ಆಗಿರುವುದರಿಂದಲೂ ಅವನು ಪರಲೊಕಕ್ಕೆ ಹೋಗಲಿಕ್ಕೂ ಬರಲಿಕ್ಕೂ ಹೇಗೆ ಸಾಧ್ಯವಾದೀತೆಂದಾಶಂಕಿಸಿ ನಿರಾಕರಿಸುತ್ತಾನೆ. ಜೀವನು ಲಿಂಗಶರೀರದೊಡನೆ ಪರಲೋಕಕ್ಕೆ ಹೋಗುವಾಗ ಈ ಲೋಕದಲ್ಲಿ ಸ್ಥೂಲ ಶರೀರದಿಂದ ಅವನು ಮೊದಲಿಗೆ ಅಗ್ನಿಯಲ್ಲಿ ಹೋಮಮಾಡಿದ್ದ ಸಮಿತ್ತು ಹವಿಸ್ಸು, ತುಪ್ಪ ಮೊಸರು ಹಾಲು ಸೋಮರಸ ಚರುದ್ರವ್ಯ ದರ್ಭೆ ಮೊದಲಾದ ದ್ರವ್ಯಗಳೊಡಗೂಡಿ ಧೂಮಾದಿಮಾರ್ಗದಿಂದ ಸ್ವರ್ಗಲೋಕಕ್ಕೆ ಹೋಗುತ್ತಾನೆಂದು ಶ್ರುತಿಯಲ್ಲಿ ಬರುವ ಪ್ರಶ್ನೋತ್ತರಗಳಿಂದ ತಿಳಿದುಬರುತ್ತದೆ. "ಐದನೆಯ ಆಹುತಿಕೊಟ್ಟವನು ಹೇಗೆ ಮಾನವಜನ್ಮವನ್ನು ಪಡೆಯುವನೆಂಬುದನ್ನು ನೀನು ಬಲ್ಲೆಯಾ ?" ಎಂಬುದು ಪ್ರಶ್ನೆ. "ಐದನೆಯ ಆಹುತಿಕೊಟ್ಟವರು ಪುರುಷಜನ್ಮವನ್ನು ಪಡೆಯುವರು" ಎಂಬುದು ಉತ್ತರ. ಹೀಗೆ ಪ್ರಶ್ನೋತ್ತರಗಳಿಂದ ಅಭಿಮಾನಿಸಿ ಕರ್ಮದಲ್ಲಿ ಪ್ರವರ್ತಿಸುವ ಜೀವರು ಅನೇಕಶರೀರಗಳಿಗೆ ಹೋಗುವುದನ್ನು ತಿಳಿಸಲಾಗಿದೆ. ಇದರಿಂದ ದುಷ್ಕರ್ಮಗಳನ್ನಾಚರಿಸಿದವರಿಗೂ ಹೀಗೆಯೇ ಆಗುವುದೆಂದು ತಿಳಿಯಬೇಕು. "ಇವನೇ ಒಳ್ಳೆಯ ಕೆಲಸಗಳನ್ನು ಮಾಡಿಸುತ್ತಾನೆ" ಇದೇ ಮೊದಲಾದ ಅನೇಕ ಶ್ರುತಿಗಳಲ್ಲಿ ಹೇಳಿರುವಂತೆ ಜೀವರ ಪುಣ್ಯ ಪಾಪ ಕರ್ಮಗಳಿಗನುಗುಣವಾಗಿ ಪರಮೇಶ್ವರನು ಅವರನ್ನು ಅಂತಹ ಲೋಕಗಳಿಗೆ ಕಳುಹಿಸುವನೆಂದು ಸ್ಪಷ್ಟಪಡುತ್ತದೆ. ಆದ್ದರಿಂದ ಪುಣ್ಯಪಾಪಕರ್ಮಗಳಲ್ಲಿ ಅಭಿಮಾನಿಸುತ್ತಲೇ ಜನನಮರಣ ಮೊದಲಾದ ಅನೇಕ ಕ್ಲೇಶಗಳಲ್ಲಿ ಸಿಲುಕಿರುವ ಜೀವರು ದೇಹವನ್ನು ಬಿಟ್ಟಮೇಲೆ ಮತ್ತೆ ಹಿಂತಿರುಗದಂತೆ ಜೀವಭಾವವನ್ನು ತೊಲಗಿಸಿಕೊಂಡು ಶಿವಭಾವವೆಂಬ ಕೈವಲ್ಯವಿಭೂತಿಯನ್ನು ಸಂಪಾದಿಸಲು ಯತ್ನಿಸಬೇಕು. "ಇವನು ಬ್ರಹ್ಮ" ಎಂಬಲ್ಲಿ ಜೀವನನ್ನೇ ಬ್ರಹ್ಮವೆಂದು ಹೇಳಿರುವುದರಿಂದಲೂ, "ಸ್ವರ್ಗವನ್ನು ಬಯಸುವವನು ಜ್ಯೋತಿಷ್ಟೋಮವನ್ನಾಚರಿಸಬೇಕು." "ಪುಣ್ಯದಿಂದ ಗಳಿಸಿದ ಲೋಕವು ನಶಿಸುತ್ತದೆ" ಎಂಬಲ್ಲಿ ಜೀವನು ಸ್ವರ್ಗಾದಿಲೋಕಗಳಿಗೆ ಹೋಗುವುದನ್ನೂ ಅಲ್ಲಿಂದ ಬರುವುದನ್ನು ಹೇಳಿರುವುದರಿಂದಲೂ ಅವನು ಹಾಗೆ ಪರಲೋಕಕ್ಕೆ ಹೋಗುವನೇ ಇಲ್ಲವೇ ಎಂಬುದನ್ನು ಇಲ್ಲಿ ಆಲೋಚಿಸಲಾಗಿದೆ. ಜೀವನು ಬ್ರಹ್ಮಸ್ವರೂಪನಾದ್ದರಿಂದಲೂ, ಸುಷುಪ್ತಿ ಮೂರ್ಛೆಗಳಲ್ಲಿ ಅವನಿಗೆ ಮನಸ್ಸಿನ ಸಂಪರ್ಕವಿಲ್ಲದ್ದರಿಂದ ಅವನಿಂದ ಯಾವಕೆಲಸವೂ ಆಗದಿರುವುದರಿಂದಲೂ, ಕರ್ಮಾನುಷ್ಠಾನವು ಅಂತಃಕರಣಕ್ಕೆ ಮಾತ್ರವೇ ಸಂಬಂಧಿಸಿದ್ದರಿಂಲೂ ಜೀವನು ಪರಲೋಕಕ್ಕೆ ಹೋಗುವನೆಂಬುದು ಹೊಂದುವುದಿಲ್ಲ. "ಆತ್ಮನಿಗೆ ಹುಟ್ಟುಸಾವುಗಳಿಲ್ಲ" ಎಂಬ ಶ್ರುತಿಯಲ್ಲೂ, "ಇವನನ್ನು ಛೇದಿಸಲಿಕ್ಕೂ ನೋಡ

ಲಿಕ್ಕೂ ಆಗುವುದಿಲ್ಲ." ಎಂಬ ಸ್ಮೃತಿಯಲ್ಲೂ ಅವನಿಗೆ ಜನನ ಮರಣ ದುಃಖಗಳಿಲ್ಲ ವೆಂದು ಹೇಳಲಾಗಿದೆ. ಇದೂ ಅಲ್ಲದೆ, " ಶಬ್ದಬುದ್ಧಿಕರ್ಮಗಳು ಹುಟ್ಟಿದಮೇಲೆ ಮೂರುಕ್ಷಣಗಳವರೆಗೆ ಮಾತ್ರವೇ ಇರುತ್ತವೆ"ಎಂಬ ನ್ಯಾಯದಂತೆ ಜೀವನು ಮಾಡಿದ ಕರ್ಮಗಳು ಇಲ್ಲಿಯೇ ಮೂರುಕ್ಷಣಗಳಲ್ಲಿಯೇ ನಷ್ಟವಾಗುತ್ತವೆ ಎಂದು ತಿಳಿದು ಬರುತ್ತದೆ. ಅವನು ಶರೀರವನ್ನು ತೊರೆಯುವ ಕೊನೆಗಾಲದಲ್ಲಿ ಶರೀರದ ಪಂಚ ಭೂತಗಳು ಮಹಾಭೂತಗಳಲ್ಲಿ ಬೆರೆಯುತ್ತವೆ. ಆದ್ದರಿಂದ ಜೀವನು ಪರ ಲೋಕಕ್ಕೆ ಹೋಗಿಬರುವನೆಂದು ತಿಳಿಸುವ ಶಾಸ್ತ್ರವು ಯುಕ್ತವಲ್ಲವೆಂದು ಆಕ್ಷೇಪ ಬರುತ್ತದೆ. ಇದಕ್ಕೆ ಸಮಾಧಾನವನ್ನು ಹೀಗೆ ಹೇಳಲಾಗಿದೆ. " ಈ ಆತ್ಮವೇ ಬ್ರಹ್ಮ" ಎಂಬ ಮಾಂಡೂಕ್ಯಶ್ರುತಿಯು ಪರಶಿವನು ಪ್ರಣವಸ್ವರೂಪಿ ಎಂಬುದನ್ನು ಹೇಳುವುದೇ ಹೊರತು ಜೀವನೇ ಬ್ರಹ್ಮನೆಂಬುದನ್ನು ತಿಳಿಸಲಿಕ್ಕೆ ಹೊರಟಿಲ್ಲ."ಎಲ್ಲವೂ ರುದ್ರನೇ" " ಯಾವನಿಗೆ ಪೃಥ್ವಿಯೇ ಶರೀರವೋ" " ಯಾವನಿಗೆ ಆತ್ಮವೇ ಶರೀರವೋ" ಈ ಶ್ರುತಿಗಳಲ್ಲಿ ಅಷ್ಟಮೂರ್ತಿ ಎನಿಸಿದ ಶಿವನಿಗೆ ಜೀವನೂ ಒಬ್ಬ ಮೂರ್ತಿ ಎನಿಸಿದ್ದಾನೆ. ಆದ್ದರಿಂದ " ಈ ಆದಿತ್ಯನು ಬ್ರಹ್ಮ" " ಆಕಾಶವು ಬ್ರಹ್ಮ" ಎಂಬಂತೆ ಜೀವನನ್ನು ಬ್ರಹ್ಮವೆಂದು ಹೇಳಿದರೂ ವಿರೋಧವಿಲ್ಲ. " ನಾನು ಬ್ರಹ್ಮ ನಿದ್ದೇನೆ. " " ನೀನು ಅದೇ ಆಗಿದ್ದೀಯೆ " ಈ ಬಗೆಯ ಶ್ರುತಿಗಳು ಎಲ್ಲಾ ವೇದಾಂತ ಗಳ ಸಾರವೆನಿಸಿದ ದ್ವೈತಾದ್ವೈತತತ್ತ್ವವನ್ನು ತಿಳಿಸುವಮೂಲಕ ಉಪಾಸಕಜೀವನೇ ಉಪಾಸ್ಯಶಿವನಾಗುವನೆಂದು ತಿಳಿಸುತ್ತವೆ. ಹಾಗೆಯೇ ಬೇರೆಕಡೆಯಲ್ಲೂ ನದೀ ಸಮುದ್ರದೃಷ್ಟಾಂತದಿಂದ ಜೀವಬ್ರಹ್ಮರಿಗೆ ಪ್ರಾಪ್ಯಪ್ರಾಪಕಭಾವವನ್ನು ಹೇಳಲಾಗಿದೆ. " ಅವರಿಬ್ಬರಲ್ಲಿ ಒಬ್ಬನು ಕರ್ಮಫಲವನ್ನು ಭೋಗಿಸುತ್ತಲೂ ಮತ್ತೊಬ್ಬನು ಉದಾಸೀನನನಾಗಿಯೂ ಇರುವರು" ಎಂಬಲ್ಲಿ ಜೀವನ ಭೋಗವೂ ಈಶ್ವರನ ಕೈವ ಲ್ಯವೂ ತಿಳಿದುಬರುತ್ತವೆ. ಶಿಷ್ಯರಿಲ್ಲದಮೇಲೆ ಆಚಾರ್ಯನಿಗೆ ತನ್ನ ವಿದ್ಯೆಯನ್ನು ಹೊರಗೆಡಹುವ ಆವಶ್ಯಕತೆ ಇಲ್ಲದಿದ್ದರೂ ಅವನ ವಿದ್ವತ್ತ್ವವು ನಷ್ಟವಾಗುವ ಪ್ರಸಂಗ ವಿರುವುದಿಲ್ಲ. ಹಾಗೆಯೇ ಸುಷುಪ್ತಿಮೂರ್ಛೆಗಳಲ್ಲಿ ಮನಸ್ಸಿನ ಸಂಗವಿಲ್ಲದ್ದರಿಂದ ಜೀವನು ಕರ್ಮವನ್ನು ಮಾಡದಿದ್ದರೂ ಅವನಿಗೆ ಕರ್ತೃತ್ವವೇ ಇಲ್ಲವೆಂದು ಹೇಳಲಾಗು ವುದಿಲ್ಲ.ಹೀಗೆ ಜೀವನು ಕರ್ತೃವಾದ್ದರಿಂದ ಅನಾದಿ ಎನಿಸಿದ್ದರೂ ಅವನು ಪರಲೋಕಗ ಳಿಗೆ ಹೋಗಲಿಕ್ಕೂ ಬರಲಿಕ್ಕೂ ಅಡ್ಡಿಯಿಲ್ಲ. ಮೂರು ಕ್ಷಣಗಳಲ್ಲಿ ಕರ್ಮ ನಷ್ಟವಾದರೂ ಅದು ಅಪೂರ್ವವೆಂಬ ವಿಶೇಷವನ್ನು ಹುಟ್ಟಿಸುವುದರಿಂದ, ಜೀವನ ಗಮನಾಗಮನ ಗಳನ್ನು ತಿಳಿಸುವ ಶಾಸ್ತ್ರಕ್ಕೆ ಯಾವ ವಿರೋಧವೂ ಇಲ್ಲ. ಸೂಕ್ಷ್ಮಾವಸ್ಥೆಯನ್ನು ಹೊಂದಿದ ಹಾಲು ಮೊಸರು ಮೊದಲಾದ ವಸ್ತುಗಳನ್ನೇ ವೇದ ವೇದಾಂತಗಳಲ್ಲಿ ಅದೃಷ್ಟವೆಂದು ಕರೆಯಲಾಗಿದೆ. ಹಾಗೆಯೇ ಈ ಸೂಕ್ಷ್ಮವಸ್ತುಗಳು ದ್ರವ್ಯವಾದ್ದ ರಿಂದಲೇ ಅವಕ್ಕೆ ಶರೀರಾಕಾರದಿಂದ ಪರಿಣಾಮವುಂಟಾಗುತ್ತದೆ. ಆದ್ದರಿಂದ ಪಂಚಾಗ್ನಿಪ್ರಕರಣದಲ್ಲಿ ಪ್ರಶ್ನೋತ್ತರಗಳನ್ನು ಹೀಗೆ ತಿಳಿಸಲಾಗಿದೆ. ಕರ್ಮಿಗಳು

ಹೋಗುವ ದೇಶ ಮತ್ತು ಹಿಂತಿರುಗುವ ಕ್ರಮವನ್ನು ಪಾಂಚಲನು ಶ್ವೇತಕೇತುವನ್ನು ಕೇಳುತ್ತಾನೆ. ದೇವಯಾನ ಪಿತೃಯಾನ ಮತ್ತು ಅಲ್ಲಿಂದ ಹಿಂತಿರುಗುವಿಕೆ, ಪರ ಲೋಕಕ್ಕೆ ಹೋಗುವವನು, ಇವೆಲ್ಲವನ್ನೂ ನೀನು ತಿಳಿದಿರುವೆಯಾ ? " ಹೀಗೆ ಕೇಳಿ ಮತ್ತೆ " ಐದನೆಯ ಆಹುತಿಯಲ್ಲಿ ನೀರು ಪುರುಷಜನ್ಮವನ್ನು ತಾಳುತ್ತದೆ ಎಂಬು ದನ್ನು ನೀನು ಬಲ್ಲೆಯಾ ? " ಎಂದೂ ಕೇಳಿದನು. ಎರಡನೆಯ ಪ್ರಶ್ನೆಗೆ ಉತ್ತರವನ್ನು " ದ್ಯುಲೋಕವೇ ಅಗ್ನಿ ಎಂದು ನಿರೂಪಿಸಿ " ಅದರಲ್ಲಿ ದೇವತೆಗಳು ಶ್ರದ್ಧೆಯನ್ನು ಅರ್ಪಿಸುವರು, ಅದಕ್ಕೆ ಸೋಮನೇ ರಾಜನು " ಎಂದು ತಿಳಿಸುವನು. ಇಲ್ಲಿ ದೇವತೆ ಯೆಂದರೆ ಜೀವರ ಪ್ರಾಣಗಳು. " ಆ ಶ್ರದ್ಧೆಯೇ ಅಮೃತಮಯವಾದ ದೇಹ ವಾಗಿ ಪರಿಣಮಿಸುತ್ತದೆ. ಆ ಅಮೃತಮಯವಾದ ದೇಹವನ್ನು ಪ್ರಾಣಗಳು ಮೇಘವೆಂಬ ಅಗ್ನಿಯಲ್ಲಿ ಅರ್ಪಿಸುತ್ತವೆ. ಆ ದೇಹವೇ ಅಲ್ಲಿ ಮಳೆಯಾಗಿ ಸುರಿಯು ತ್ತದೆ. ಆ ವೃಷ್ಟಿಯನ್ನು ಪ್ರಾಣಗಳು ಪೃಥ್ವಿ ಎಂಬ ಅಗ್ನಿಯಲ್ಲಿ ಅರ್ಪಿಸುತ್ತಾರೆ. ಆದೇ ರೇತಸ್ಸಾಗುವುದು. ಆ ರೇತಸ್ಸನ್ನೇ ಸ್ತ್ರೀ ಎಂಬ ಅಗ್ನಿಯಲ್ಲಿ ಮತ್ತೆ ಅರ್ಪಿಸ ಲಾಗುವುದು. ಆಗ ಅದು ಗರ್ಭವಾಗುವುದು. ಈ ರೀತಿ ಐದನೆಯ ಆಹುತಿ ಯಲ್ಲಿ ಜಲವೇ ಪುರುಷಜನ್ಮವನ್ನು ಪಡೆಯತ್ತದೆ " ಎಂದು ಅವನು ಪ್ರತ್ಯುತ್ತರ ವನ್ನು ಕೊಟ್ಟನು. ಹೀಗೆ ಹೇಳಿದ್ದರಿಂದ ಮುಂದಿನ ಆಹುತಿಗಳಲ್ಲೂ ಜಲವೇ ಸೂಕ್ಷ್ಮರೂಪದಿಂದ ಇದ್ದು ಕೊನೆಗೆ ಪುರುಷರೂಪವನ್ನು ತಾಳುತ್ತದೆ ಎಂದೂ, ಇಲ್ಲಿ ಈರೀತಿಯ ಪ್ರಶ್ನಪ್ರತಿವಚನಗಳಿಂದ ದೇಹಕ್ಕೆ ಕಾರಣವಾದ ಸೂಕ್ಷ್ಮಭೂತಗಳೊಂದಿಗೆ ಜೀವನು ಪರಲೋಕಗಳಿಗೆ ಹೋಗುವನೆಂದೂ ಗೊತ್ತಾಗುವುದು. ಜ್ಞಾನದ ಫಲವೇ ಕರ್ಮದ ಫಲವೆಂದು ಶ್ರೌತವಿಧಿ ಇರುವುದರಿಂದ ಶಿವಾರ್ಪಣಬುದ್ಧಿಯಿಂದ ಮಾಡಿದ ಜ್ಯೋತಿಷ್ಟೋಮಾದಿಕರ್ಮಗಳೂ ಸಹ ಚಿತ್ತಶುದ್ಧಿಯ ಮೂಲಕ ಶಿವಲೋಕವನ್ನು ದೊರಕಿಸಬಲ್ಲವಾದ್ದರಿಂದ ಮುಮುಕ್ಷುಗಳು ಫಲಾಪೇಕ್ಷೆಯಿಲ್ಲದೆ ಎಲ್ಲಾ ಕರ್ಮ ಗಳನ್ನೂ ಮಾಡಬೇಕೆಂದು ವೇದಾಂತದಲ್ಲಿ ಹೇಳಲಾಗಿದೆ.

ನನು " ಆಪಃ ಪುರುಷವಚಸಃ " ಇತ್ಯುಕ್ತೇ ಅಪಾಂ ಪುರುಷಾಕಾರ ಪರಿಣಾಮಪ್ರತೀತೇರ್ಗಚ್ಛತಾ ಜೀವೇನ ತಾಸಾಮೇವ ಪರಿಷ್ವಂಗಃ ಪ್ರತೀಯತೇ, ತಸ್ಮಾತ್ಕಥಂ ಸರ್ವೇಷಾಂ ಭೂತಸೂಕ್ಷ್ಮಾಣಾಂ ಪರಿ ಷ್ವಂಗ ಇತ್ಯಾಶಂಕಾಯಾಮಾಹ, ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ||೨|| ತುಶಬ್ದೋಽತ್ರ ಶಂಕಾನಿರಾಸಾರ್ಥಃ. " ತಾಸಾಂ ತ್ರಿವೃತಂ ತ್ರಿವೃತಮೇಕೈಕಾಮಕರೋತ್ " ಇತಿ ತ್ರಿವೃತ್ಕರಣೇನ ದೇಹಾರಂಭ ಕತ್ವವ್ಯವಸ್ಥಾಪನಾತ್ ಶರೀರಾರಂಭಕತ್ವಂ ನ ಕೇವಲಮಪಾಮಿತಿ ನಿರ್ಣೀಯತೇ. " ಸಮಿತ್ಪುರೋಡಾಶಾದೀನಾಂ ಪಾರ್ಥಿವತ್ವಂ, ದಧಿ ಕ್ಷೀರಾದೀನಾಮಾಪ್ಯತ್ವಂ, ಘೃತಸ್ಯ ತೈಜಸತ್ವಂ " ಇತ್ಯೇವಂ ರೂಪೇಣ ಹೋಮದ್ರವ್ಯಾಣಾಂ ತ್ರ್ಯಾತ್ಮಕತ್ವಾತ್ತ್ರಿವಿಧತ್ವಾತ್ ಆಪಃ ಪುರುಷ

ವಚಸೋ ಭವಂತೀತ್ಯೇತದನುಪಪನ್ನಮಿತಿ ಚೇತ್ ಭೂಯಸ್ತ್ವಾತ್ ಹೋಮದ್ರವ್ಯಾಣಾಂ ಮಧ್ಯೇ ಹ್ಯಪಾಂ ಬಾಹುಲ್ಯಮಾತ್ರೇಣಾತ್ರ ಅಪ್ ಶಬ್ದಪ್ರಯೋಗಃ. ತಥಾಚ ಅಪ್‌ಶಬ್ದಸ್ಯ ಪಾರ್ಥಿವಾಪ್ಯತೈಜಸದ್ರವ್ಯಾಣಾಮುಪಲಕ್ಷಣತ್ವಾನ್ನ ವಿರೋಧಃ. ದೇಹೇ ಚ ಲೋಹಿತಾದಿಭೂಯಸ್ತ್ವಂ ಗಮ್ಯತೇ. ಸ್ವೇನಾರಂಭಕೇಷ್ವಪಾಂ ಭೂಯಸ್ತ್ವಂ, ಕಸ್ಮಾತ್ "ವೇತ್ಥ ಯಥಾ ಪಂಚಮ್ಯಾಮಾಹುತಾ ಆಪಃ ಪುರುಷವಚಸೋ ಭವಂತಿ" ಇತಿ ಪ್ರಶ್ನಪ್ರತಿವಚನಾಭ್ಯಾಂ ಸ್ಪಷ್ಟಮುಪದಿಷ್ಟಂ. ಅಸ್ಯಾಃ ಶ್ರುತೇರಯಮರ್ಥಃ. ಪಂಚಮ್ಯಾಮಾಹುತೌ ಯೋಷಿದ್ರೂಪೇ ಪಂಚಮೇಽಗ್ನೌ ಹುತಾಃ ಆಪಃ ದಧಿಕ್ಷೀರಾಜ್ಯಪ್ರಭೃತಿಹೋಮದ್ರವ್ಯರೂಪಾಃ ಪುರುಷವಚಸಃ ಗರ್ಭಸ್ಥಪಿಂಡಾಕಾರೇಣ ಪರಿಣತಾ ಯಥಾ ಭವಂತಿ ತಥಾ ವೇತ್ಥ ಜಾನಾಸಿ ಕಿಮ್? ಇತಿ ಕೇನಚಿತ್ಪ್ರಶ್ನೇ ಕೃತೇ ಪಂಚಮ್ಯಾಮಾಹುತಾ ಆಪಃ ಪುರುಷವಚಸೋ ಭವಂತೀತಿ ಪ್ರತಿವಚನಂ. ಅಸ್ಯಾಯಮರ್ಥಃ. ಅಸ್ಮಿನ್ಲೋಕೇ ಯಜಮಾನೇನ ಅಗ್ನೌ ಹುತಾನಿ ಸಮಿತ್ಪುರೋಡಾಶಾಜ್ಯದಧಿಕ್ಷೀರಪ್ರಭೃತೀನಿ ದ್ರವ್ಯಾಣಿ ಸೂಕ್ಷ್ಮರೂಪಾಣಿ ಭೂತ್ವಾ ಲಿಂಗಶರೀರವಿಶಿಷ್ಟೇನ ಯಜಮಾನೇನ ಸಹ ಧೂಮಾದಿಮಾರ್ಗೇಣಾತಿವಾಹಿಕೈರ್ದೇವೈಃ ದ್ಯುಲೋಕಾಖ್ಯೇ ಅಗ್ನೌ ಹೂಯಂತೇ. ಹುತಾನಿ ತಾನಿ ದೇವಶರೀರರೂಪೇಣ ಪರಿಣಮಂತೇ. ತಚ್ಚ ದೇವಶರೀರಂ ಕಂಚಿತ್ಕಾಲಂ ಸ್ವರ್ಗಭೋಗಾನ್ ಭುಕ್ತ್ವಾ ಪುಣ್ಯಕ್ಷಯಾನಂತರಂ ನವನೀತವದ್ದ್ರವೀಭೂತಂ ಭವತಿ. ತಚ್ಚ ದ್ರವೀಭೂತಶರೀರಂ ಆತಿವಾಹಿಕೈರ್ದೇವೈಃ ಪರ್ಜನ್ಯಾಖ್ಯವಹ್ನೌ ಹೂಯತೇ. ತಚ್ಚ ಜಲಾತ್ಮಕತ್ವೇನ ಪರಿಣಮತೇ. ತಜ್ಜಲಂ ಪೃಥಿವ್ಯಾತ್ಮಕಾಗ್ನೌ ಆತಿವಾಹಿಕೈರ್ಹೂಯತೇ. ತದೋಷಧಿದ್ವಾರಾ ವ್ರೀಹಿಯವಾದಿಧಾನ್ಯರೂಪೇಣ ಪರಿಣಮತೇ. ತದ್ಧಾನ್ಯಮನ್ನಾತ್ಮಕೇನ ಪುರುಷರೂಪಾಗ್ನೌ ಹೂಯತೇ. ತದನ್ನಂ ರೇತೋರೂಪೇಣ ಪರಿಸಂಕ್ರಮತೇ. ತದ್ರೇತೋ ಯೋಷಿದ್ರೂಪಾಗ್ನೌ ಹೂಯತೇ. ತದ್ರೇತೋ ಗರ್ಭಸ್ಥಶರೀರಾಕಾರೇಣ ವ್ಯಾಪ್ರಿಯತ ಇತಿ ದ್ಯುಪರ್ಜನ್ಯಪೃಥಿವೀಪುರುಷಯೋಷಿದ್ರೂಪಪಂಚಾಗ್ನಿಕ್ರಮೇಣ ಗರ್ಭೋತ್ಪತ್ತಿರಭಿಧೀಯತೇ.

"ನೀರು ಪುರುಷಜನ್ಮವನ್ನು ತಾಳುವುದು" ಎಂಬ ಶ್ರುತಿಯಲ್ಲಿ ನೀರೇ ಆ ರೂಪವನ್ನು ತಾಳುವುದೆಂದು ತಿಳಿದುಬರುವುದರಿಂದ ದೇಹವನ್ನು ಬಿಟ್ಟುಹೋಗುವ ಜೀವನಿಗೆ ನೀರಿನ ಸಂಸರ್ಗ ಒಂದೇ ಉಂಟಾಗುವುದರಿಂದ ಉಳಿದ ಸೂಕ್ಷ್ಮಭೂತಗಳ ಸಂಪರ್ಕ ಅವನಿಗೆ ಹೇಗೆ ಆಗುತ್ತದೆ ಎಂದಾಕ್ಷೇಪಿಸಿ ಸಮಾಧಾನವನ್ನು ಹೇಳುತ್ತಾನೆ. ತು ಶಬ್ದವು ಆಕ್ಷೇಪವನ್ನು ಅಲ್ಲಗಳೆಯುತ್ತದೆ. "ಬೇರೆ ಬೇರೆಯಾಗಿದ್ದ ಪೃಥಿವಿ,

ಅಪ್, ತೇಜಸ್ಸುಗಳಲ್ಲಿ ಒಂದೊಂದರಲ್ಲೂ ಉಳಿದವೆರಡನ್ನು ಸೇರಿಸಿದನು" ಎಂಬಲ್ಲಿ ತ್ರಿವೃತ್ಕರಣದಿಂದಲೇ ದೇಹವಾಗಿದೆ ಎಂದು ವ್ಯವಸ್ಥೆಯಾಗಿರುವುದರಿಂದ ನೀರೊಂದರಿಂದಲೇ ದೇಹವಾಗಲಾರದೆಂದು ನಿರ್ಣಯಿಸಲಾಗಿದೆ. ಆದರೆ ಸಮಿತ್ತು ಪುರೋಡಾಶಗಳು ಪಾರ್ಥಿವವಸ್ತುಗಳು, ಹಾಲು ಮೊಸರು ಮೊಲಾದವು ನೀರಿನವಸ್ತುಗಳು. ತುಪ್ಪವು ತೇಜೋವಸ್ತು ಈ ರೀತಿಯಲ್ಲಿ ಹೋಮದ್ರವ್ಯಗಳೂ ಮೂರುಬಗೆಯಾಗಿರುವುದರಿಂದ ನೀರೇ ಪುರುಷರೂಪವನ್ನು ತಾಳುವುದೆಂದು ಹೇಳಿದ್ದು ಯುಕ್ತವಲ್ಲವೆಂದು ಆಕ್ಷೇಪಿಸಿದರೆ ಸಮಾಧಾನವನ್ನು ತಿಳಿಸಲಾಗಿದೆ. ಹೋಮದ್ರವ್ಯಗಳಲ್ಲಿ ನೀರಿನ ಭಾಗವೇ ಹೆಚ್ಚಾಗಿರುವುದರಿಂದ ಶ್ರುತಿಯಲ್ಲಿ ಅಪ್ ಶಬ್ದವನ್ನು ಪ್ರಯೋಗಿಸಲಾಗಿದೆ. ಆದರೂ ಅಪದದಿಂದ ಪಾರ್ಥಿವ ಮತ್ತು ತೇಜೋವಸ್ತುಗಳಿಗೂ ಗ್ರಹಣವಾಗುವುದರಿಂದ ಏನೂ ವಿರೋಧವಿಲ್ಲ. ದೇಹದಲ್ಲೂ ರಕ್ತ ಮೊದಲಾದದ್ದೇ ಹೆಚ್ಚಾಗಿರುತ್ತದೆ. ಆದ್ದರಿಂದಲೇ "ಐದನೆಯ ಆಹುತಿಯಲ್ಲಿ ನೀರು ಪುರುಷಾಕಾರದಿಂದ ಪರಿಣಮಿಸುತ್ತದೆ" ಎಂಬ ಪ್ರಶ್ನೋತ್ತರಗಳಿಂದ ಈ ಅಂಶ ಸ್ಪಷ್ಟಪಡುತ್ತದೆ. "ಸ್ತ್ರೀರೂಪವಾದ ಐದನೆಯ ಅಗ್ನಿಯಲ್ಲಿ ಹೋಮಮಾಡಿದ ಹಾಲು ಮೊಸರು ಮೊದಲಾದವು ಗರ್ಭದಲ್ಲಿ ಪಿಂಡಾಕಾರವಾಗಿ ಪರಿಣಮಿಸುತ್ತವೆ ಎಂಬುದನ್ನು ನೀನು ತಿಳಿದಿರುವೆಯಾ? ಎಂಬ ಪ್ರಶ್ನೆಗೆ ಹಾಗೆ ಅರ್ಪಿಸಿದ ವಸ್ತುಗಳು ಪಿಂಡಾಕಾರವನ್ನು ತಾಳುತ್ತವೆ ಎಂಬುದು ಪ್ರತ್ಯುತ್ತರವಾಗಿದೆ." ಹೀಗೆ ಈ ಶ್ರುತಿಗೆ ಅರ್ಥವಾಗುತ್ತದೆ. ಇಲ್ಲಿ ಇದರ ತತ್ವ್ತವಿಷ್ಟು. ಈ ಲೋಕದಲ್ಲಿ ಯಜಮಾನನು ಅಗ್ನಿಯಲ್ಲಿ ಅರ್ಪಿಸಿದ ಹಾಲು ತುಪ್ಪ ಮೊದಲಾದ ಹವಿರ್ದ್ರವ್ಯಗಳು ಸೂಕ್ಷ್ಮರೂಪಗಳಾಗಿದ್ದು ಲಿಂಗಶರೀರದೊಡಗೂಡಿದ ಆತ್ಮನೊಡನೆ ಧೂಮಾದಿಮಾರ್ಗದಲ್ಲಿ ಆತಿವಾಹಿಕರೆಂಬ ದೇವತೆಗಳಿಂದ ಹಿಂಬಾಲಿಸಲ್ಪಟ್ಟು ದ್ಯುಲೋಕಕ್ಕೆ ಹೋಗಿ ಅಲ್ಲಿ ದೇವಶರೀರಗಳಾಗಿ ಪರಿಣಮಿಸುತ್ತವೆ. ಆ ದೇವಶರೀರವು ಕೊಂಚಕಾಲ ಸ್ವರ್ಗದ ಭೋಗಗಳನ್ನು ಭೋಗಿಸಿ ಪುಣ್ಯಮುಗಿದೊಡನೆ ಬೆಣ್ಣೆಯಂತೆ ದ್ರವಿಸುತ್ತದೆ. ಹಾಗೆ ಕರಗಿದ ಶರೀರವನ್ನು ಆತಿವಾಹಿಕದೇವತೆಗಳು ಪರ್ಜನ್ಯವೆಂಬ ಬೆಂಕಿಯಲ್ಲಿ ಅರ್ಪಿಸುತ್ತಾರೆ. ಅದು ನೀರಾಗಿ ಪರಿಣಮಿಸುತ್ತದೆ. ಮತ್ತೆ ಆ ನೀರನ್ನು ಪೃಥಿವಿ ಎಂಬ ಅಗ್ನಿಯಲ್ಲಿ ಆ ದೇವತೆಗಳು ಅರ್ಪಿಸುತ್ತಾರೆ. ಅದು ಓಷಧಿಲತೆಯ ಮೂಲಕ ಭತ್ತ ಗೋಧಿ ಮೊದಲಾದ ಧಾನ್ಯವಾಗಿ ಪರಿಣಮಿಸುತ್ತದೆ. ಆ ಧಾನ್ಯವನ್ನು ಅನ್ನರೂಪದಿಂದ ಪುರುಷನೆಂಬ ಅಗ್ನಿಯಲ್ಲಿ ಅರ್ಪಿಸಲಾಗುವುದು. ಆ ಅನ್ನವೇ ರೇತಸ್ಸಾಗಿ ಪರಿಣಮಿಸುತ್ತದೆ. ಆ ರೇತಸ್ಸನ್ನು ಸ್ತ್ರೀ ಎಂಬ ಅಗ್ನಿಯಲ್ಲಿ ಅರ್ಪಿಸಲಾಗುವುದು. ಅದು ಗರ್ಭದಲ್ಲಿ ಶರೀರಾಕಾರದಿಂದ ವ್ಯಾಪಿಸುತ್ತದೆ. ಹೀಗೆ ದ್ಯುಲೋಕ ಪರ್ಜನ್ಯ ಪೃಥಿವೀ ಪುರುಷ ಸ್ತ್ರೀ ಎಂಬ ಐದು ಅಗ್ನಿಗಳಲ್ಲಿ ಪ್ರವೇಶಿಸಿಸುವ ಮೂಲಕ ಗರ್ಭೋತ್ಪತ್ತಿಯಾಗುತ್ತದೆ.

ಜೀವಸ್ಯ ಚೇತನತ್ವಾತ್ಪರಲೋಕಗಮನಾಗಮನಯೋಃ ಪ್ರಾಣೇಂದ್ರಿಯಾಣಾಂ ಪ್ರಯೋಜನಾಭಾವಾತ್ ಸ್ವಕರ್ತೃಕಪುಣ್ಯಾಪುಣ್ಯಕರ್ಮಣಾ

ಸ್ವಯಮೇವ ಯಾತೀತ್ಯಾಶಂಕ್ಯ ತತ್ರಾಹ. ಪ್ರಾಣಗತೇಶ್ಚ ॥ ೩ ॥ "ತಮುತ್ಕ್ರಾಂತಂ ಪ್ರಾಣೋಽನೂತ್ಕ್ರಾಮತಿ" ಇತ್ಯಾದಿಶ್ರುತೌ ಭೂತಸೂಕ್ಷ್ಮಪರಿಷ್ವಕ್ತೋತ್ಕ್ರಾಮಕಜೀವಸ್ಯ ಧೂಮಾದಿಮಾರ್ಗೇಣ ಪ್ರಾಣಾದಿಭಿಸ್ಸಹ ಸ್ವರ್ಗಲೋಕಗತಿರಾಮ್ನಾಯತೇ. ತಸ್ಮಾದ್ಧೋಮದ್ರವ್ಯಾಣಾಮಪಿ ಜೀವೇನ ಸಹ ಗಮನಮರ್ಥಾತ್ಸೂಚ್ಯತೇ. ಸ್ವರ್ಗಾದಿಷ್ವಪಿ ತಸ್ಯ ಪ್ರಾಣಾದಿಸಾಧನಾಭಾವೇ ಸಾಧ್ಯತತ್ತಲ್ಲೋಕಭೋಗಾಸಂಭವಾತ್ ಪೂರ್ವೋಕ್ತಮಬಾಧಿತಂ. ಲೋಕೇ ಕರ್ಮಣಾಂ ಕ್ಷಣತ್ರಯೇಣ ವಿನಷ್ಟತ್ವೇಽಪಿ ವಾಕ್ಯಶ್ರವಣಾದಿವದದೃಷ್ಟಫಲಜನಕತ್ವೇನ ಪರಲೋಕಭೋಗ ಉಪಪದ್ಯತೇ. ತಥಾ ಸ್ಮೃತಿರಪಿ "ತ್ರಿಕ್ಷಣೇನೈವ ಜೀವಸ್ಯ ಕೃತಕರ್ಮಕ್ಷಯೇ ಸತಿ। ಅನ್ನಾದಿವದದೃಷ್ಟಾಖ್ಯಂ ಫಲಮುತ್ಪದ್ಯತೇ ಸದಾ॥ ತೇನ ಪ್ರಾಣಾದಿಭಿರ್ಜೀವೋ ಗತ್ವಾ ಸ್ವರ್ಗಾದಿಕಂ ಫಲಂ। ಭುಕ್ತ್ವಾ ತತ್ಪಂಚದಶಕಾನ್ ಭಾಗಾನ್ ಭೋಗಾನ್ ಶುಭಾಶುಭಾನ್। ಷೋಡಶಾಂಶೇನ ಭಾಗೇನ ಪುನರ್ಭೂಲೋಕಮಶ್ನುತೇ॥" ಇತಿ. ಅನ್ಯತ್ರ "ಮನಷ್ಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ। ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ। ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್॥" ಇತಿ ನಿರಾಶ್ರಯಸ್ಯ ಗತ್ಯಸಂಭವಾತ್ ಸ್ವಾಶ್ರಯಮನಃಪ್ರಾಣೇಂದ್ರಿಯಾದಿಭಿಸ್ಸಹ ಭೂತಸೂಕ್ಷ್ಮವೈಶಿಷ್ಟ್ಯೇನ ಪರಲೋಕಗತಿರಭ್ಯುಪಗಂತವ್ಯೇತಿ ಸಿದ್ಧಂ.

ಜೀವನು ಚೇತನನಾದ್ದರಿಂದ ಪರಲೋಕಕ್ಕೆ ಹೋಗುವಾಗಲೂ ಬರುವಾಗಲೂ ಪ್ರಾಣದ ಮತ್ತು ಇಂದ್ರಿಯಗಳ ಸಹಾಯವಿಲ್ಲದೆಯೇ ತನ್ನ ಪುಣ್ಯಪಾಪಕರ್ಮಗಳೊಡನೆ ತಾನೇ ಹೋಗುತ್ತಾನೆಂದು ಆಕ್ಷೇಪಿಸಿ ನಿರಾಕರಿಸುತ್ತಾನೆ. "ಹೋಗುವ ಜೀವನನ್ನು ಪ್ರಾಣವು ಹಿಂಬಾಲಿಸುತ್ತದೆ. ಅದನ್ನು ಅನುಸರಿಸಿ ಎಲ್ಲಾ ಇಂದ್ರಿಯಗಳೂ ಹೊರಡುತ್ತವೆ." ಎಂಬ ಶ್ರುತಿಯಲ್ಲಿ ಸೂಕ್ಷ್ಮಭೂತಗಳೊಡನೆ ಹೊರಡುವ ಜೀವನು ಧೂಮಾದಿಮಾರ್ಗದಿಂದ ಪ್ರಾಣೇಂದ್ರಿಯಗಳೊಡನೆ ಸ್ವರ್ಗಲೋಕಕ್ಕೆ ಹೋಗುವನೆಂದು ಹೇಳಲಾಗಿದೆ. ಆದ್ದರಿಂದ ಹೋಮದ್ರವ್ಯಗಳೂ ಸಹ ಜೀವನೊಡನೆ ಹೊರಡುತ್ತವೆ ಎಂಬುದು ಸ್ಪಷ್ಟವಾಗುತ್ತದೆ. ಸ್ವರ್ಗದಲ್ಲೂ ಅವನಿಗೆ ಪ್ರಾಣವೇ ಮೊದಲಾದ ಸಾಧನಗಳಿಲ್ಲದಿದ್ದರೆ ಅಲ್ಲಿ ದೊರಕುವ ಭೋಗವನ್ನು ಅವನು ಅನುಭವಿಸಲಿಕ್ಕಾಗದೆಹೋದೀತು. ಆದ್ದರಿಂದ ಆಗಲೂ ಸೂಕ್ಷ್ಮ ಪ್ರಾಣೇಂದ್ರಿಯಗಳು ಅವನೊಡನೆ ಇರಲೇಬೇಕು. "ಲೋಕದಲ್ಲಿ ಮಾಡಿದ ಕರ್ಮಗಳು ಮೂರು ಕ್ಷಣಕಾಲದಲ್ಲಿ ನಷ್ಟವಾದರೂ ಅದೃಷ್ಟವೆಂಬ ಫಲವನ್ನು ಅವು ಹುಟ್ಟಿಸುವುದರಿಂದಲೇ ಪರಲೋಕದ ಭೋಗವನ್ನು ಜೀವನು ಅನುಭವಿಸಲಿಕ್ಕೆ ಸಾಧ್ಯವಾಗುತ್ತದೆ. ಮೂರು ಕ್ಷಣಗಳಲ್ಲಿಯೇ ಜೀವನ ಕರ್ಮ ನಾಶವಾಗುವುದಾದರೆ ಅನ್ನಾದಿಗಳಂತೆ ಅದೃಷ್ಟವೆಂಬ ಫಲವು

ಯಾವಾಗಲೂ ಹುಟ್ಟುತ್ತಲೇ ಇರುವುದು. ಆದ್ದರಿಂದ ಜೀವನು ಪ್ರಾಣಗಳೊಡನೆ ಹೋಗಿ ಸ್ವರ್ಗಾದಿಫಲವನ್ನು ಭೋಗಿಸಿ ಅಂದರೆ ೧೫ ಭಾಗಗಳಷ್ಟು ಶುಭಾಶುಭ ಫಲಗಳನ್ನು ಅನುಭವಿಸಿ ಹದಿನಾರನೆಯ ಒಂದು ಭಾಗದಿಂದ ಮತ್ತೆ ಭೂಮಿಗೆ ಬರುತ್ತಾನೆ" ಎಂದು ಸ್ಮೃತಿಯಲ್ಲಿ ಹೇಳಿದೆ. ಬೇರೆಕಡೆಯಲ್ಲೂ "ಈ ದೇಹದಿಂದ ಮನಸ್ಸು ಮತ್ತು ಇಂದ್ರಿಯಗಳನ್ನು ಸೆಳೆದುಕೊಂಡು ಜೀವನು ಹೊರಡುತ್ತಾನೆ. ವಾಯು ಗಂಧದನ್ನು ಪುಷ್ಪದಿಂದ ಒಯ್ಯುವಂತೆ ಜೀವನು ಒಂದು ಶರೀರವನ್ನು ಬಿಟ್ಟು ಮತ್ತೊಂದಕ್ಕೆ ಹೋಗುವಾಗ ಪ್ರಾಣೇಂದ್ರಿಯಗಳೊಡನೆ ಹೊರಡುತ್ತಾವೆ" ಎಂದು ಹೇಳಿದೆ. ನಿರಾಶ್ರಯನಾದ ಜೀವನಿಗೆ ಗಮನವು ಸಂಭವಿಸದಿರುವುದರಿಂದ ತನಗಾಶ್ರವಾದ ಮನಸ್ಸು ಪ್ರಾಣ ಇಂದ್ರಿಯಗಳೊಡನೆಯೂ ಮತ್ತು ಸೂಕ್ಷ್ಮಭೂತಗಳೊಡನೆಯೂ ಅವನು ಪರಲೊಕಕ್ಕೆ ಹೋಗುವನೆಂಬುದು ಸ್ಪಷ್ಟಪಡುತ್ತದೆ.

"ಅಗ್ನಿಂ ವಾಗಪ್ಯೇತಿ ಸೂರ್ಯಂ ಚಕ್ಷುರಪ್ಯೇತಿ ಮನಶ್ಚಂದ್ರಮಸಮಪ್ಯೇತಿ" ಇತಿಶ್ರುತೌ ಚರಮಕಾಲೇ ಪ್ರಾಣೇಂದ್ರಿಯಾಭಿಮಾನದೇವತಾಸು ಲಯಶ್ರವಣಾದಿಂದ್ರಿಯಾದೀನಾಂ ಜೀವೇನ ಸಹ ಪರಲೋಕಗಮನಮನುಪಪನ್ನಮಿತ್ಯಾಶಂಕ್ಯ ನಿರಾಕರೋತಿ. **ಅಗ್ನ್ಯಾದಿಗತಿಶ್ರುತೇರಿತಿಚೇನ್ನ ಭಾಕ್ತತ್ವಾತ್॥೪॥** "ಯತ್ರಾಸ್ಯ ಪುರುಷಸ್ಯಮೃತಸ್ಯಾಗ್ನಿಂ ವಾಗಪ್ಯೇತಿ, ವಾತಂ ಪ್ರಾಣಃ, ಚಕ್ಷುರಾದಿತ್ಯಂ, ಮನಶ್ಚಂದ್ರಂ" ಇತ್ಯಾದಿನಾ ಪ್ರಾಣಾದೀನಾಂ ಜೀವಸ್ಥೂಲಶರೀರವಿಯೋಗಸಮಯೇ ಅಗ್ನ್ಯಾದಿತದಭಿಮಾನದೇವತಾಸು ಲಯವ್ಯಪದೇಶಾನ್ನ ತೇಷಾಂ ಜೀವೇನ ಸಹ ಗಮನಮಿತಿ ಗತಿಶ್ರುತಿರನ್ಯಥಾ ನೇಯೇತಿ ಚೇನ್ನ ಭಾಕ್ತತ್ವಾತ್ಪೃಥಗ್ಬೋಧಕತ್ವಾತ್, "ಬ್ರಹ್ಮವೇದ ಬ್ರಹ್ಮೈವ ಭವತಿ." "ನ ತತ್ರ ಪ್ರಾಣಾ ಉತ್ಕ್ರಾಮಂತೇ, ತತ್ರೈವ ಸಮವಲೀಯಂತೇ." "ಅಗ್ನಿರ್ವಾಚಿ ಶ್ರಿತಃ, ವಾಕ್ ಹೃದಯೇ, ಹೃದಯಂ ಮಯಿ, ಅಹಮಮೃತೇ, ಅಮೃತಂ ಬ್ರಹ್ಮಣಿ" ಇತ್ಯಾದಿಶ್ರುತಿಸಿದ್ಧರಾಗದ್ವೇಷಾದಿವಿನಿರ್ಮುಕ್ತಶಿವಯೋಗಿವಿದೇಹಮುಕ್ತಿವಿಷಯತ್ವಾತ್. ಅನ್ಯಥಾ "ತಮುತ್ಕ್ರಾಂತಂ ಪ್ರಾಣೋऽನೂತ್ಕ್ರಾಮತಿ" ಇತ್ಯಾದಿಬಹುಶ್ರುತಿವಿರೋಧೋ ದುರ್ನಿವಾರಃ. "ಓಷಧೀರ್ಲೋಮಾನಿ ವನಸ್ಪತೀನ್ಕೇಶಾಃ" ಇತ್ಯನಪ್ಯಯದ್ಭಿರ್ಲೋಮಾದಿಭಿಸ್ಸಹ ವ್ಯಪದೇಶಾತ್ ಚಕ್ಷುರಾದ್ಯಪ್ಯಯಶ್ರುತಿರಧಿಷ್ಠಾತೃದೇವತಾವಿಲಯಕ್ರಮಪರೇತಿ ನಿರ್ಣೀಯತೇ.

"ಜೀವನು ದೇಹವನ್ನು ತೊರೆಯುವಾಗ ಅವನ ವಾಕ್ಕು ಬೆಂಕಿಯಲ್ಲೂ, ಕಣ್ಣು ಸೂರ್ಯನಲ್ಲೂ, ಮನಸ್ಸು ಚಂದ್ರನಲ್ಲೂ ಲಯವಾಗುತ್ತವೆ" ಎಂಬ ಶ್ರುತಿಯಲ್ಲಿ ಕೊನೆಗಾಲದಲ್ಲಿ ಪ್ರಾಣ ಇಂದ್ರಿಯ ಮೊದಲಾದ ಅಭಿಮಾನದೇವತೆಗಳಲ್ಲಿ ವಾಗಾದಿಗಳು ಲಯವಾಗುವುದಾಗಿ ಹೇಳಿರುವುದರಿಂದ ಇಂದ್ರಿಯಗಳು ಜೀವನೊಡನೆ

ಪರಲೋಕಕ್ಕೆ ಹೋಗುತ್ತವೆ ಎಂಬುದು ಯುಕ್ತವಲ್ಲವೆಂದು ಆಶಂಕಿಸಿ ನಿರಾಕರಿಸು ತ್ತಾನೆ. "ಜೀವನು ಸ್ಥೂಲದೇಹವನ್ನು ತೊರೆಯುವಾಗ ವಾಕ್ಕು ಅಗ್ನಿಯನ್ನೂ, ಕಣ್ಣು ಪ್ರಾಣವನ್ನೂ, ಮನಸ್ಸು ಚಂದ್ರನನ್ನೂ ಪ್ರವೇಶಿಸುತ್ತದೆ" ಎಂಬಲ್ಲಿ ಅಗ್ನ್ಯಾ ದ್ಯಭಿಮಾನದೇವತೆಗಳಲ್ಲಿ ಜೀವನ ವಾಕ್ ಮೊದಲಾದವು ಲಯವಾಗುತ್ತವೆ ಎಂದು ಹೇಳಿದ್ದರಿಂದ ಅವು ಜೀವನೊಡನೆ ಹೊರಡಲಿಕ್ಕಾಗುವುದಿಲ್ಲ. ಆದರೆ "ಅವು ಅವನೊಡನೆ ಹೊರಡುತ್ತವೆ" ಎಂಬ ಶ್ರುತಿಯು ಅಪ್ರಧಾನವಾದ್ದರಿಂದಲೂ, ಬೇರೆ ಅರ್ಥವನ್ನು ತಿಳಿಸುವುದರಿಂದಲೂ ಅದನ್ನು ಬೇರೆ ರೀತಿಯಲ್ಲಿ ಅನ್ವಯಿಸಿಕೊಳ್ಳಬೇಕು. "ಬ್ರಹ್ಮ ವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ. "ಅಲ್ಲಿಗೆ ಪ್ರಾಣಗಳು ಹೋಗುವುದಿಲ್ಲ, ಅಲ್ಲಿಯೇ ಲಯಿಸುತ್ತವೆ" "ಅಗ್ನಿ ನನ್ನ ಮಾತಿನಲ್ಲೂ, ಮಾತು ಹೃದಯದಲ್ಲೂ, ಹೃದಯ ನನ್ನಲ್ಲೂ, ನಾನು ಅಮೃತಸ್ವರೂಪವಾದ ಪ್ರಾಣಲಿಂಗದಲ್ಲೂ, ಆ ಪ್ರಾಣ ಭಾವಲಿಂಗದಲ್ಲೂ ಲಯಿಸುತ್ತವೆ" ಎಂಬ ಶ್ರುತಿಯು ರಾಗದ್ವೇಷಗಳಿಲ್ಲದ ಶಿವಯೋ ಗಿಯ ವಿದೇಹಮುಕ್ತಿಗೆ ಅನ್ವಯಿಸುತ್ತದೆ. ಇಲ್ಲವಾದರೆ "ಹೊರಡುವ ಜೀವನನ್ನು ಪ್ರಾಣವು ಹಿಂಬಾಲಿಸುತ್ತದೆ" ಎಂದು ಮುಂತಾಗಿ ಜೀವನೊಡನೆ ಗತಿಯನ್ನು ಹೇಳುವ ಅನೇಕ ಶ್ರುತಿಗಳು ವಿರುದ್ಧವಾದೀತು. ಲೋಮಕೇಶಗಳು ಓಷಧಿ ವನಸ್ಪತಿ ಗಳಲ್ಲಿ ಲಯಹೊಂದಲಿಕ್ಕಾಗದಿದ್ದರೂ "ದೇಹವನ್ನು ಬಿಡುವಾಗ ಕೂದಲು ಓಷಧಿ ಲತೆಗಳನ್ನೂ, ಕೇಶಗಳು ಇತರ ಮೂಲಿಕೆಗಳನ್ನೂ ಪ್ರವೇಶಿಸುತ್ತವೆ" ಎಂದು ಶ್ರುತಿ ಯಲ್ಲಿ ಹೇಳಿರುವಂತೆ "ಕಣ್ಣು ಸೂರ್ಯನಲ್ಲಿ ಲಯವಾಗುತ್ತದೆ" ಎಂದು ಹೇಳಿರುವುದೂ ಸಹ ಅಧಿಷ್ಠಾತೃವಾದ ದೇವತೆಗೆ ಅನ್ವಯಿಸುವುದೇ ಹೊರತು ಇಂದ್ರಿಯಕ್ಕೆ ಅನ್ವ ಯಿಸುವುದಿಲ್ಲವೆಂದು ತಿಳಿಯಬೇಕು.

"ಅಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ" ಇತಿ ಶ್ರುತೌ ದ್ಯುಲೋಕಾಖ್ಯಪ್ರಥಮಾಗ್ನೌ ಶ್ರದ್ಧಾಯಾ ಏವ ಹೂಯ ಮಾನತ್ವದರ್ಶನಾತ್ ದಧಿಕ್ಷೀರಾದೀನಾಂ ದ್ಯುಲೋಕಾಖ್ಯಾಗ್ನಿಹೂಯ ಮಾನತ್ವಮಸಮಂಜಸಮಿತ್ಯಾಶಂಕಾಯಮಾಹ. ಪ್ರಥಮೇ ಶ್ರವಣಾ ದಿತಿ ಚೇನ್ನ ತಾ ಏವ ಹ್ಯುಪಪತ್ತೇಃ ||೫|| ಯದುಕ್ತಮದ್ಭಿಸ್ಸೂಕ್ಷ್ಮಾಭಿ ರ್ಭೂತಾಂತರಸಂಸೃಷ್ಟಾಭಿಃ ಪರಿಷ್ವಕ್ತೋ ಜೀವೋ ಗಚ್ಛತೀತಿ ಪ್ರಶ್ನ ಪ್ರತಿವಚನಾಭ್ಯಾಂ ಗಮ್ಯತ ಇತಿ ತನ್ನೋಪಪದ್ಯತೇ. ದ್ಯುಲೋಕಾಗ್ನಿ ವಿಷಯೇ ಪ್ರಥಮೇ ಹೋಮೇ ಅಪಾಂ ಹೋಮದ್ರವ್ಯತ್ವಾಶ್ರವಣಾತ್ "ತಸ್ಮಿನ್ನೇತಸ್ಮಿನ್ನಗ್ನೌ ದೇವತಾಃ ಶ್ರದ್ಧಾಂ ಜುಹ್ವತಿ" ಇತಿ ಶ್ರದ್ಧಾಯಾ ಹೋಮದ್ರವ್ಯತ್ವೇನ ಶ್ರವಣಾತ್ ಶ್ರದ್ಧಾ ನಾಮ ಜೀವಸ್ಯ ಮನೋ ವೃತ್ತಿವಿಶೇಷತ್ವೇನ ಪ್ರಸಿದ್ಧಾ. ಅತೋ ನಾಪಸ್ತತ್ರ ಹೋತವ್ಯಾ ಇತಿ ಚೇನ್ನ ಯತಸ್ತಾ ಆಪ ಏವ ಶ್ರದ್ಧಾಶಬ್ದೇನ ತತ್ರಾಭಿಧೀಯಂತೇ, ಕುತಃ, ಪ್ರಶ್ನಪ್ರತಿವಚನೋಪಪತ್ತೇಃ. "ವೇತ್ಥ ಯಥಾ ಪಂಚಮ್ಯಾ

ಮಾಹುತೌ ಆಪಃ ಪುರುಷವಚಸೋ ಭವಂತಿ " ಇತಿ ಪ್ರಶ್ನಸ್ಯ ಪ್ರತಿವಚನೋಪಕ್ರಮೇ ಹಿ ಶ್ರದ್ಧಾ ದ್ಯುಲೋಕಾಗ್ನೌ ಹೋಮದ್ರವ್ಯತ್ವೇನ ಶ್ರುತಾ. ತತ್ರ ಯದಿ ಶ್ರದ್ಧಾಶಬ್ದೇನಾಪೋ ನೋಚ್ಯೇರನ್ ತತೋಽನ್ಯಥಾ ಪ್ರತಿವಚನಮಿತ್ಯಸಂಗತಂ ಸ್ಯಾತ್. " ಪಂಚಮ್ಯಾಮಾಹುತಾವಾಪಃ ಪುರುಷವಚಸಃ " ಇತಿಪ್ರತಿವಚನನಿಗಮನಂ ಚ ಶ್ರದ್ಧಾಯಾಃ ಅಪ್ತ್ವಮೇವ ಸೂಚಯತಿ. " ವೇತ್ಥ ಯಥಾ " ಇತಿವಾ ಪ್ರಶ್ನಗತಃ ಪ್ರಕಾರಃ. " ಇತಿ ತು ಪಂಚಮ್ಯಾಂ" ಇತ್ಯತ್ರ ಇತಿಶಬ್ದೇನ ಪರಿಹಾರೋ ನಿಗಮ್ಯತೇ. ಶ್ರದ್ಧಾಸೋಮರಾಜವರ್ಷಾನ್ನರೇತೋಗರ್ಭರೂಪೇಣಾಪಾಂ ಪರಿಣಾಮಂ ಉಕ್ತ್ವಾ ಹ್ಯೇವಂರೂಪಾಃ ಪುರುಷವಚನಃ ಇತಿ ನಿಗಮ್ಯತೇ. ಶ್ರದ್ಧಾಶಬ್ದಸ್ಯ ಚಾಪ್ಸು ವೈದಿಕಪ್ರಯೋಗೋ ದೃಶ್ಯತೇ. " ಅಪಃ ಪ್ರಣಯತಿ, ಶ್ರದ್ಧಾ ವಾ ಆಪಃ " ಇತಿ, " ಶ್ರದ್ಧಾಂ ಜುಹೋತಿ, ತಸ್ಯಾ ಆಹುತೇಸ್ಸೋಮೋ ರಾಜಾ ಸಂಭವತಿ " ಇತಿ ಸೋಮಾಕಾರೇಣ ಪರಿಣಾಮಶ್ಚ ಅಪಾಮೇವೋಪಪದ್ಯತೇ. ಅತೋ ಭೂತಾಂತರಸಂಸೃಷ್ಟಾಭಿರದ್ಭಿಸ್ಸಂಪರಿಷ್ವಕೋ ಜೀವೋ ರಂಹತೀತ್ಯುಪಪನ್ನಂ. ತಸ್ಮಾದಾಪ ಏವ ದಧಿಕ್ಷೀರಾದಿರೂಪೇಣ ಹೋತವ್ಯಾಸ್ಸಂತಃ ಶ್ರದ್ಧಾಶಬ್ದೇನ ಲಕ್ಷಣಯಾ ಪ್ರತಿಪಾದ್ಯಂತೇ.

" ಆ ಈ ಅಗ್ನಿಯಲ್ಲಿ ದೇವತೆಗಳು ಶ್ರದ್ಧೆಯಿಂದ ಹೋಮಮಾಡುತ್ತಾರೆ " ಎಂಬಲ್ಲಿ ದ್ಯುಲೋಕವೆಂಬ ಅಗ್ನಿಯಲ್ಲಿ ಶ್ರದ್ಧೆಯೊಂದನ್ನೇ ಸಮರ್ಪಿಸಬೇಕೆಂದು ಹೇಳಿರುವುದರಿಂದ ಹಾಲು ತುಪ್ಪ ಮೊದಲಾದವನ್ನು ಅಲ್ಲಿ ಅರ್ಪಿಸುವುದೇ ಸಮಂಜಸವಲ್ಲವೆಂದಾಶಂಕಿಸಿ ನಿರಾಕರಿಸುತ್ತಾನೆ. ಸೂಕ್ಷ್ಮಭೂತಗಳೊಡಗೂಡಿಯೇ ಜೀವನು ಹೋಗುತ್ತಾನೆಂಬುದು ಶ್ರುತಿಯಲ್ಲಿ ಪ್ರಶ್ನೋತ್ತರಗಳಿಂದ ತಿಳಿದುಬರುತ್ತದೆ ಎಂದು ಹಿಂದೆ ಹೇಳಿದ್ದು ಹೊಂದುವುದಿಲ್ಲ. ದ್ಯುಲೋಕಾಗ್ನಿಯಲ್ಲಿ ನೀರನ್ನು ಅರ್ಪಿಸಬೇಕೆಂದು ಹೇಳಿರುವುದರಿಂದ " ಆ ಈ ಅಗ್ನಿಯಲ್ಲಿ ದೇವತೆಗಳು ಶ್ರದ್ಧೆಯನ್ನು ಅರ್ಪಿಸುತ್ತಾರೆ " ಎಂದು ಶ್ರದ್ಧೆಯೆಂಬ ಹವಿಸ್ಸನ್ನು ತಿಳಿಸುವ ಶ್ರುತಿಯಲ್ಲಿ ಶ್ರದ್ಧೆ ಎಂದರೆ ಜೀವನ ಮನೋವೃತ್ತಿ ಎಂದೇ ತಿಳಿಯಬೇಕು. ಆದ್ದರಿಂದ ಅಲ್ಲಿ ನೀರು ಹೋಮದ್ರವ್ಯವಲ್ಲವೆಂದು ಆಕ್ಷೇಪಬಂದರೆ ಅದನ್ನು ಹೀಗೆ ಸಮಾಧಾನಮಾಡಲಾಗಿದೆ—ನೀರನ್ನೇ ಶ್ರುತಿಯಲ್ಲಿ ಶ್ರದ್ಧೆಎಂಬ ಶಬ್ದದಿಂದ ಕರೆಯಲಾಗಿದೆ; ಏಕೆಂದರೆ ಶ್ರುತಿಯಲ್ಲಿ ಬರುವ ಪ್ರಶ್ನೋತ್ತರಗಳು ದ್ಯುಲೋಕಾಗ್ನಿಯಲ್ಲಿ ಶ್ರದ್ಧೆಯನ್ನೇ ಹೋಮಮಾಡಬೇಕೆಂದು ತಿಳಿಸಿರುವಾಗ ಶ್ರದ್ಧೆ ಎಂದರೆ ನೀರೆಂದು ಹೇಳದಿದ್ದರೆ ಅದಕ್ಕಿಂತ ಬೇರೆರೀತಿಯಲ್ಲಿ ಪ್ರಶ್ನೋತ್ತರಗಳನ್ನು ಅನ್ವಯಿಸಲಿಕ್ಕೆ ಹೊಂದಿಕೆಇಲ್ಲದೆಹೋಗುವುದು. " ಐದನೆಯ ಹವಿಸ್ಸನ್ನು ಅರ್ಪಿಸಿದವನು, " ಎಂಬ ಕಡೆಯೂ ಶ್ರದ್ಧೆಯೆಂದರೆ ನೀರೆಂಬ ಅರ್ಥವೇ ಸೂಚಿತವಾಗುತ್ತದೆ. " ಇದು ಹೀಗೆ ಎಂಬುದನ್ನು ಬಲ್ಲೆಯಾ "

ಎಂಬುದು ಪ್ರಶ್ನೆಯ ಕ್ರಮ. "ಇದು ಹೀಗೆಯೇ ಸರಿ" ಎಂಬುದು ಉತ್ತರವನ್ನು ತಿಳಿಸುವ ಕ್ರಮ. ಶ್ರದ್ಧೆ–ಸೋಮರಸ–ವರ್ಷ–ಅನ್ನ–ರೇತಸ್ಸು–ಗರ್ಭ ಈ ರೂಪದಲ್ಲಿ ನೀರಿಗೆ ಪರಿಣಾಮವನ್ನು ಹೇಳಿ ಕೊನೆಗೆ ಪುರುಷರೂಪವನ್ನು ತಿಳಿಸಲಾಗಿದೆ. ಶ್ರದ್ಧಾಶಬ್ದವೂ ನೀರಿಗೆ ಅನ್ವಯಿಸುವುದೆಂಬುದಕ್ಕೆ ವೈದಿಕಪ್ರಯೊಗವೂ ಇದೆ. "ಶ್ರದ್ಧೆಯೇ ನೀರು," "ಶ್ರದ್ಧೆಯನ್ನು ಅರ್ಪಿಸುತ್ತಾನೆ" "ಈ ಆಹುತಿಗೆ ಸೋಮನೇ ರಾಜನಾಗಿದ್ದಾನೆ" ಎಂಬಲ್ಲಿ ನೀರೇ ಸೋಮನಾಗಿ ಪರಿಣಮಿಸುತ್ತದೆ ಎಂಬುದು ಹೊಂದುತ್ತದೆ. ಆದ್ದರಿಂದ ಬೇರೆ ಭೂತಗಳಿಂದೊಡಗೂಡಿದ ನೀರಿನೊಡನೆ ಜೀವನು ಹೋಗುತ್ತಾನೆಂಬುದು ಯುಕ್ತವಾಗುತ್ತದೆ. ಹೀಗೆ ನೀರೇ ಹಾಲು ಮೊಸರು ಈ ರೂಪದಿಂದ ಸಮರ್ಪಿತವಾಗುವುದರಿಂದ ಅದನ್ನೇ ಲಕ್ಷಣೆಯಿಂದ ಶ್ರದ್ಧೆಯೆಂದು ಕರೆಯಲಾಗಿದೆ.

**ನನು ಪ್ರಶ್ನಪ್ರತಿವಚನಯೋರಪಾಮೇವಾತ್ರ ವ್ಯಪದಿಷ್ಟತ್ವಾತ್ಕರ್ಮಣಾಮೇವ ಸ್ವರ್ಗಗಮನಮನುಶ್ರುತಂ. ತೈಸ್ಸಹ ಹೋಮದ್ರವ್ಯಾಣಾಂ ಗಮನಂ ಕಥಮುಪಪನ್ನಮಿತ್ಯತ್ರಾಹ. ಅಶ್ರುತತ್ವಾದಿತಿ ಚೇನ್ನೇಷ್ಟಾದಿಕಾರಿಣಾಂ ಪ್ರತೀತೇಃ ॥೬॥ ಯತ್ಪುನರುಕ್ತಮದ್ಭಿಸ್ಸಂಪರಿಷ್ವಕ್ತೋ ಜೀವೋ ಯಾತೀತ್ಯಯಮರ್ಥಃ ಏತಸ್ಮಾದ್ವಾಕ್ಯಾದವಗಮ್ಯತ ಇತಿ ತನ್ನೋಪಪದ್ಯತೇ, ಅಸ್ಮಿನ್ವಾಕ್ಯೇ ಜೀವಸ್ಯಾಶ್ರವಣಾತ್. ಅತ್ರ ವಾ ಶ್ರದ್ಧಾದಯಃ ಏವಮುಬವಸ್ಥಾವಿಶೇಷಾಃ ಹೋತವ್ಯತ್ವೇನ ಶ್ರುತಾಃ, ನತು ಜೀವಸ್ತತ್ಪರಿಷ್ವಕ್ತ ಇತಿ ಚೇತ್ತನ್ನ, ಇಷ್ಟಾದಿಕರ್ಮಣಾಂ ಪ್ರತೀತೇಃ. ಉತ್ತರತ್ರ "ಅಥ ಯ ಇಮೇ ಪ್ರಾಣಾ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವಂತಿ, ಧೂಮಾದ್ರಾತ್ರಿಂ, ರಾತ್ರೇರಪರಪಕ್ಷಂ, ಅಪರಪಕ್ಷಾದ್ದಕ್ಷಿಣಾಯನಂ, ದಕ್ಷಿಣಾಯನಾತ್ಸಂವತ್ಸರಮಪಿ ಸಂಪ್ರಾಪ್ನುವಂತಿ. ಮಾಸೇಭ್ಯಃ ಪಿತೃಲೋಕಂ ಪಿತೃಲೋಕಾದಾದಿತ್ಯಮಾದಿತ್ಯಾಚ್ಚಂದ್ರಮಸಂ, ಏಷ ಸೋಮೋ ರಾಜೋ ತದ್ದೇವಾನಾಮನ್ನಂ ತದೇವ ಭಕ್ಷಯಂತಿ", "ತಸ್ಮಿನ್ಯಾವತ್ಸಂಪಾತಮುಷಿತ್ವಾಥೈತಮೇವಾಧ್ವಾನಂ ಪುನರ್ನಿವರ್ತಂತೇ, ಯಥೈವಮಾಕಾಶಮಾಕಾಶದ್ವಾಯುಂ, ವಾಯುರ್ಭೂತ್ವಾಭ್ರಂ ಭವತಿ, ಅಭ್ರಂ ಭೂತ್ವಾ ಮೇಘೋ ಭವತಿ, ಮೇಘೋ ಭೂತ್ವಾ ವರ್ಷತಿ, ತತ ಇಹ ವ್ರೀಹಿಯವಾದ್ಯೋಷಧಿವನಸ್ಪತಯಸ್ತಿಲಮಾ ಆಪಃ ಇತಿ ಜಾಯಂತೇ, ಅತೋ ವೈ ಖಲು ದುರ್ನಿಷ್ಪ್ರತರಂ. "ಯೋ ಯೋ ಹ್ಯನ್ನಮತ್ತಿ ಯೋ ಯೋ ರೇತಸ್ಸಿಂಚತಿ ತದ್ಭೂಯ ಏವ ಭವತಿ" ಇತಿಶ್ರುತೌ ಬ್ರಹ್ಮಜ್ಞಾನಶೂನ್ಯಫಲಾಭಿಲಾಷೇಷ್ಟಾಪೂರ್ತಕರ್ಮಿಣೋ ದ್ಯುಲೋಕೇ ಸೋಮರಾಜಾನೋ ಭವಂತೀತ್ಯಮೃತಮಯಶರೀರೇಣ ಸುಕೃತಫಲಂ ಪ್ರಾಪ್ಯ**

**ತತ್ಫಲಭೋಗಾನಂತರಂ ಏಕಭಾಗಾಂತರವಶೇಷೇಣ ಮರ್ತ್ಯಲೋಕ ಮಾಗತ್ಯ ಗರ್ಭಂ ಪ್ರಾಪ್ನುವಂತಿ ಇತಿ, ಅತ್ರಾಪಿ ದ್ಯುಲೋಕಾಗ್ನೌ "ಶ್ರದ್ಧಾಂ ಜುಹ್ವತಿ", "ತಸ್ಯಾ ಆಹುತೇಸ್ಸೋಮೋ ರಾಜಾ ಸಂಭವತಿ" ಇತ್ಯತ್ರ ಸೋಮರಾಜಶಬ್ದೇನ ಪ್ರತ್ಯಭಿಜ್ಞಾನಾತ್ ತತ್ಪ್ರಶ್ನಪ್ರತಿವಚನ ಯೋರಪ್ಯದ್ಭಿಃ ಪರಿಷ್ವಕ್ತಃ ತದಾತ್ಮಕಾಂಶೋ ಜೀವ ಏವ ಆಪ ಇತ್ಯುಪ ದಿಶ್ಯತೇ. ದೇಹಸ್ಯ ಜೀವವಿಶೇಷಣತ್ವೈಕಸ್ವರೂಪಸ್ಯ ವಾಚಕಶ್ಶಬ್ದೋ ವಿಶೇಷ್ಯ ಜೀವಏವ ಪರ್ಯವಸ್ಯತಿ. ತಸ್ಮಾತ್ಸಂಪರಿಷ್ವಕ್ತೋ ಜೀವೋ ಯಾತೀತ್ಯುಪಪದ್ಯತೇ.**

ಪ್ರಶ್ನೋತ್ತರಗಳಲ್ಲಿ ನೀರನ್ನೇ ಹೇಳಿರುವುದರಿಂದ ಜೀವನ ಕರ್ಮಗಳು ಸ್ವರ್ಗಕ್ಕೆ ಹೋಗುವುವೆಂದು ಹೇಳಿದಂತಾಗಲಿಲ್ಲ. ಆದ್ದರಿಂದ ಹೋಮದ್ರವ್ಯಗಳು ಅವನೊಡನೆ ಹೊಗುತ್ತವೆ ಎಂಬುದು ಹೇಗೆ ಹೊಂದುತ್ತದೆ ಎಂದಾಶಂಕಿಸಿ ನಿರಾಕರಿಸುತ್ತಾನೆ. ನೀರಿನೊಡಗೂಡಿ ಆತ್ಮನು ಹೊರಡುತ್ತಾನೆ ಎಂಬ ಅಂಶ ಈ ವಾಕ್ಯದಿಂದ ತಿಳಿದುಬರುತ್ತದೆ ಎಂದು ಹೇಳುವುದು ಯುಕ್ತವಲ್ಲ; ಯಾಕೆಂದರೆ ಈ ವಾಕ್ಯದಲ್ಲಿ ಜೀವನನ್ನೇ ಹೇಳಿಲ್ಲ. "ಇಲ್ಲಿ ಶ್ರದ್ಧೆ ಮೊದಲಾದ ನೀರಿನ ಅವಸ್ಥಾವಿಶೇಷಗಳನ್ನು ಹೋಮದ್ರವ್ಯಗಳೆಂದು ಅಷ್ಟಮಾತ್ರವೇ ಹೇಳಲಾಗಿದೆ ; ಆದರೆ, ಜೀವನು ಅವುಗಳೊಡನೆ ಹೊರಡುತ್ತಾನೆಂದು ಹೇಳಿಲ್ಲ"ವೆಂದು ಹೇಳುವುದೂ ಸರಿಯಲ್ಲ ; ಏಕೆಂದರೆ ಪುಣ್ಯಪಾಪಗಳಿಂದ ಕೂಡಿದ ಕರ್ಮಿಗಳನ್ನು ಮಾತ್ರವೇ ಆ ಪ್ರಕರಣದಲ್ಲಿ ತಿಳಿಸಲಾಗಿದೆ. ಯಜ್ಞಯಾಗಾದಿಗಳನ್ನೂ ದಾನಧರ್ಮಗಳನ್ನೂ ಯಾರು ಮಾಡಿರುವರೋ ಅವರು ಧೂಮಮಾರ್ಗದಿಂದ ಹೊರಡುತ್ತಾರೆ. ಧೂಮಮಾರ್ಗದಿಂದ ರಾತ್ರಿಯನ್ನು, ಕೃಷಪಕ್ಷವನ್ನು ಆದರಿಂದ ದಕ್ಷಿಣಾಯನವನ್ನು, ಅದರಿಂದ ಸಂವತ್ಸರವನ್ನು ಹೊಂದುತ್ತಾನೆ. ಅನಂತರ ಮಾಸವನ್ನೂ ಅಲ್ಲಿಂದ ಪಿತೃಲೋಕವನ್ನು ಅಲ್ಲಿಂದ ಆದಿತ್ಯನನ್ನು ಅಲ್ಲಿಂದ ಚಂದ್ರನನ್ನು ಹೊಂದುತ್ತಾರೆ. ಅಲ್ಲಿ ಚಂದ್ರನೇ ಇವರಿಗೆ ಅಧಿಪತಿ. ಮತ್ತು ಇವರು ದೇವತೆಗಳಿಗೆ ಭೋಗ್ಯವಸ್ತುವಾಗುತ್ತಾರೆ. ಅಲ್ಲಿ ಸ್ವಲ್ಪಕಾಲ ವಾಸಮಾಡಿ ಮತ್ತೆ ಅಲ್ಲಿಂದ ಹಿಂತಿರುಗುತ್ತಾರೆ. ಬರುವಾಗ ಮೊದಲು ಆಕಾಶವನ್ನು ಹೊಕ್ಕು ಅಲ್ಲಿಂದ ವಾಯುವಾಗಿಯೂ, ಆಮೇಲೆ ಮೇಘವಾಗಿಯೂ, ಅನಂತರ ವರ್ಷವಾಗಿಯೂ, ಅದರಿಂದ ನೀರಾಗಿ ಸುರಿದು,ಅದರಿಂದ ಭತ್ತ ಗೋಧಿ ಮೊದಲಾದ ಧಾನ್ಯಗಳಾಗುತ್ತಾರೆ. ಆದ್ದರಿಂದ ಜೀವರ ಸ್ಥಿತಿ ಇಷ್ಟು ಅಸಹ್ಯವೆನಿಸಿದೆ. ಧಾನ್ಯವೇ ಅನ್ನವಾಗಿ ಅನ್ನವೇ ರೇತಸ್ಸಾಗಿ ಆ ರೇತಸ್ಸು ಸ್ತ್ರೀ ಗರ್ಭದಲ್ಲಿ ಮತ್ತೆ ಹುಟ್ಟುತ್ತದೆ. ಹೀಗೆ ಜೀವನ ಗಮನಾಗಮನಗಳು ನಡೆಯುತ್ತವೆ. ಬ್ರಹ್ಮಜ್ಞಾನವಿಲ್ಲದೆ ಫಲಾಭಿಲಾಷೆಯಿಂದ ಲೋಕೋಪಕಾರಕವಾದ ಕರ್ಮಗಳನ್ನಾಚರಿಸುವವರು ದ್ಯುಲೋಕದಲ್ಲಿ ಸೋಮರಾಜರಾಗುತ್ತಾರೆ. ಹೀಗೆ ಅಮೃತಮಯಶರೀರದಿಂದ ಸುಕೃತಫಲವನ್ನು ಹೊಂದಿ ಆ ಫಲವನ್ನು ಭೋಗಿಸಿದಮೇಲೆ ಭೂಮಿಗೆ ಬಂದು ಸ್ತ್ರೀ ಗರ್ಭವನ್ನು ಪ್ರವೇಶಿಸು

ತ್ತಾರೆ. "ದ್ಯುಲೋಕದ ಅಗ್ನಿಯಲ್ಲಿ ಶ್ರದ್ಧೆಯನ್ನರ್ಪಿಸುತ್ತಾರೆ. "ಆ ಆಹುತಿಯಿಂದಲೇ ಸೋಮರಾಜರಾಗುತ್ತಾರೆ." ಎಂಬ ಶ್ರುತಿಯಲ್ಲಿ ಸೋಮರಾಜಶಬ್ದದಿಂದ ಅದೇ ಜೀವರನ್ನು ಹೇಳಿರುವುದರಿಂದ ಪ್ರಶ್ನೋತ್ತರಗಳಲ್ಲಿಯೂ ನೀರಿನೊಡಗೂಡಿ ನೀರಿನ ರೂಪನಾದ ಜೀವನನ್ನೇ ನೀರೆಂದು ಕರೆಯಲಾಗಿದೆ. ಜೀವನಿಗೆ ವಿಶೇಷಣವೆನಿಸಿದ ನೀರನ್ನು ಬೋಧಿಸುವ ಶಬ್ದವು ವಿಶೇಷ್ಯನಾದ ಜೀವನಿಗೂ ಅನ್ವಯಿಸುವುದರಿಂದ ಅದರೊಡಗೂಡಿಯೇ ಜೀವನು ಹೋಗುತ್ತಾನೆ ಎಂಬುದೇ ಯುಕ್ತವಾಗುತ್ತದೆ.

ನನ್ವಸ್ತು ಕರ್ಮಿಣಾಂ ಸ್ವರ್ಗಲೋಕಗಮನಂ ತಥಾಪಿ ತಲ್ಲೋಕೇ ತೇಷಾಂ ತದ್ಭೋಗೋ ನ ವಿಧೀಯತೇ. "ತಂ ದೇವಾ ಭಕ್ಷಯಂತಿ" ಇತಿ ಶ್ರುತೌ ಅಮೃತಮಯದಿವ್ಯದೇಹಾವಚ್ಛಿನ್ನಕರ್ಮಿಣಾಂ ಸ್ವರ್ಗಗತಾನಾಂ ದೇವೈರ್ಭಕ್ಷ್ಯಮಾಣತ್ವವ್ಯವಸ್ಥಾಪನಾತ್ ವ್ಯಾಘ್ರಾದಿಭಿರಿವ ದೇವೈರ್ಭಕ್ಷಿತಾನಾಂ ಕರ್ಮಿಣಾಂ ಭೋಗಾಸಂಭವಾತ್ ಸೋಮೋ ರಾಜೇತಿ ನ ಜೀವ ಉಚ್ಯತೇ. ಜೀವಸ್ಯಾನಂದನೀಯತ್ವಾತ್ತನ್ನೋಪಪದ್ಯತ ಇತ್ಯಾಶಂಕಾಯಾಮಾಹ. ಭಾಕ್ತಂ ವಾ ನಾತ್ಮವಿತ್ತ್ವಾತ್ತಥಾ ವಾ ದರ್ಶಯತಿ || ೭ || ವಾಶಬ್ದಶ್ಚೋದ್ಯಂ ವ್ಯಾವರ್ತಯತಿ. "ಏಷ ಸೋಮೋ ರಾಜಾ ತದ್ದೇವಾನಾಮನ್ನಂ, ತಂ ದೇವಾ ಭಕ್ಷಯಂತಿ" ಇತಿ ಸೋಮರಾಜಾತ್ಮಕಸ್ಯ ದೇವಭೋಜ್ಯತ್ವದರ್ಶನಾತ್ ನಾಸೌ ಜೀವ ಇತಿ ಚೇದೇತದ್ಭಾಕ್ತಮೇವ ಭಕ್ಷ್ಯಮಾಣತ್ವಂ, ಅನಾತ್ಮವಿತ್ತ್ವೇನ ದೇವೋಪಕರಣಭಾವಿತ್ವಮುಪದಿಷ್ಟಂ. ಕಿಂಚೇಷ್ಟಾದಿಕಾರಿಣೋ ಹ್ಯನಾತ್ಮವಿತ್ತ್ವಾತ್ಸ ದೇವಾನಾಂ ಭೋಗೋಪಕರಣತ್ವೇನೇಹಾಮುತ್ರ ಚ ವರ್ತತೆ. ಇಹೇಷ್ಟಾದಿನಾ ತದಾರಾಧನಂ ಕುರ್ವನ್ನುಪಕರೋತ್ಯಾರಾಧನಪ್ರೀತ್ಯೈರ್ದೇವೈರ್ದತ್ತಮಮುಂ ಲೋಕಂ ಪ್ರಾಪ್ಯ ತತ್ರ ತತ್ಸಮಾನಭೋಗಸ್ತದುಪಕರಣಂ ಭವತಿ. "ಯಥಾ ಪಶುರೇವಂ ಸ ದೇವಾನಾಂ" ಇತ್ಯನಾತ್ಮವಿದೋ ದೇವಾನಾಮುಪಕರಣತ್ವಂ ದರ್ಶಯತಿ ಶ್ರುತಿಃ. ಸ್ಮೃತಿರಪ್ಯಾತ್ಮವಿದಾಂ ಬ್ರಹ್ಮಪ್ರಾಪ್ತಿಮನಾತ್ಮವಿದಾಂ ಚ ದೇವಭೋಗ್ಯತ್ವಂ ದರ್ಶಯತಿ. "ದೇವಾನ್ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ" ಇತ್ಯತೋ ಜೀವಸ್ಯ ದೇವಾನಾಂ ಭೋಗೋಪಕರಣತ್ವಾಭಿಪ್ರಾಯಮನ್ನತ್ವೇನ ಭಕ್ಷ್ಯತ್ವವಚನಂ. ಅತಸ್ತದ್ಭಾಕ್ತಂ. ತೇನ ತೃಪ್ತಿರೇವ ಚ ದೇವಾನಾಂ ಭಕ್ಷಣಮಿತಿ ಶ್ರೂಯತೇ. "ಸ ನ ಹ ವೈ ದೇವಾ ಅಶ್ನಂತಿ ನ ಪಿಬಂತಿ, ಏತದೇವಾಮೃತಂ ದೃಷ್ಟ್ವಾ ತೃಪ್ಯಂತಿ" ಇತಿ ವ್ಯಾಚಕ್ಷ್ಯತೇ. ತಸ್ಮಾಚ್ಛಿವತತ್ತ್ವಜ್ಞಾನಶೂನ್ಯಾನಾಂ ಸುಕರ್ಮಿಣಾಂ ದೇವಭೃತ್ಯತ್ವಂ "ಅಥ ಯೋಽನ್ಯಾಂ ದೇವತಾಮುಪಾಸ್ತೇಽನ್ಯೋಽಸೌ ಅನ್ಯೋಽಹಮಸ್ಮೀತಿ ನ ಸ ವೇದ ಯಥಾ ಪಶುರೇವಂ ಸ ದೇವಾನಾಂ"

ಇತಿ ಶ್ರುತೌ ವ್ಯಪದಿಶ್ಯತೇ. ಶ್ರುತ್ಯಂತರೇಽಪಿ, “ ಯೋ ವೈ ಸ್ವಾಂ
ದೇವತಾಮತಿಯಜತೇ ಪ್ರಸ್ವಾಯೈ ದೇವತಾಯೈ ಚ್ಯವತೇ ನ ಪರಾಂ
ಪ್ರಾಪ್ನೋತಿ ಪಾಪೀಯಾನ್ ಭವತಿ ” ಇತಿ ದರ್ಶನಾತ್, ಯಃ ಅನ್ಯಾಂ
ಶಿವಾತಿರಿಕ್ತೋಪೇಂದ್ರಾದಿದೇವತಾಂ ಯಜ್ಞಾದಿಕರ್ಮಭಿರುಪಾಸ್ತೇ
“ ಅಸಾವಿಂದ್ರಾದಿಮತೋಽನ್ಯಃ ಅಹಂ ಚೇಂದ್ರೋಪೇಂದ್ರಾದೇರನ್ಯಃ ”
ಇತಿ ಪೂಜಯತಿ, “ ತಸ್ಯಾವಯವಭೂತೋತ್ಥಂ ವ್ಯಾಪ್ತಂ ಸರ್ವಮಿದಂ
ಜಗತ್ ” ಇತಿ ಶ್ರುತಿಸಿದ್ಧಬ್ರಹ್ಮೋಪೇಂದ್ರಾದಿಜೀವಾನಾಂ ಶಿವಾಂಶ
ಬುದ್ಧಿಂ ವಿಹಾಯ ಯಃ ಭೇದಾಬುದ್ಧ್ಯಾ ಪೂಜಯತಿ ಸಃ ಶಿವತತ್ತ್ವಂ
ನ ವೇದ. ಯಥಾ ಪಶುರನಡ್ವಾನ್ ವರ್ಷಾದೀನ್ ಕೃಷ್ಯಾದೀನ್ ಉಪ
ಕರೋತ್ಯೇವಂ ಕರ್ಮಠೋಽಪಿ ಭೂಲೋಕೇ ಇಂದ್ರಾದೀನಾಂ ಹವಿಃ
ಪ್ರದಾನಂ ಕುರ್ವನ್ ಪರಲೋಕೇಽಪಿ ತತ್ಪರಿಚರ್ಯಾಂ ಕುರ್ವನ್ ಪಶು
ವದುಪಕರೋತಿ ತಥಾ ಚ ದೇವಪಶುತ್ವಮಾತ್ರೇಣ ಕರ್ಮಿಣಾಂ ದೇವ
ಭಕ್ಷ್ಯತ್ವಂ ನತು ವ್ಯಾಘ್ರಾದಿವತ್ಕರ್ಮಿಣಾಂ ಮಾಂಸರುಧಿರಾದಿಕಂ ದೇವಾ
ಭಕ್ಷಯಂತಿ. ಅತಸ್ತತ್ತಲ್ಲೋಕೇ ತೇಷಾಮಮೃತಭಕ್ಷಕತ್ವೇನ ಮಾಂಸ
ಭಕ್ಷಕತ್ವಾಭಾವಃ. ಪರಿಶಿಷ್ಟಾರ್ಥಸ್ತ್ವತ್ರ, ಫಲಾಸಕ್ತಕರ್ಮಿಣಾಂ ಪಾಪ
ಕ್ಷಯದ್ವಾರಾ ಚಿತ್ತಶುದ್ಧಿಂ ಲಬ್ಧ್ವಾ ಶ್ರದ್ಧಾಭಕ್ತಿವೈರಾಗ್ಯಾದಿಸಹಕೃತ
ಶ್ರವಣಮನನನಿದಿಧ್ಯಾಸಹೇತುತ್ವೇನ ಪಾಶವಿಚ್ಛೇದಲಕ್ಷಣಾವಚ್ಛಿನ್ನ
ಶಿವಜ್ಞಾನಾನುಸರಣೇನ ಶಿವತ್ವಪ್ರಾಪ್ತಿರಿತಿ ನಿಶ್ಚೀಯತೇ. “ ಶಿವ ಏಕೋ
ಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ:” ಇತ್ಯಾದಿಶ್ರುತಿಷು, “ ಅನ
ನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ । ತೇಷಾಂ
ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥ ” ಇತ್ಯಾದಿಸ್ಮೃ
ತಿಷ್ವನನ್ಯಭಕ್ತ್ಯಾಃ ಶಿವಾನುಗ್ರಹಹೇತುತ್ವೇನ ಶಿವಾಭಿನ್ನತ್ವಮುಪ
ದಿಷ್ಟಂ. ತಥಾಪಿ ಭಕ್ತಿರವಶ್ಯಾಚರಣೀಯಾ. ತಥಾ ಶೈವೇ ಶಿವಂ ಪ್ರತಿ
ವ್ಯಾಸವಚನಂ “ ಯದ್ಯಪಿ ಭೇದಾಪಗಮೇ ಸಾಂಬ ತವಾಹಂ ನ ಮಾಮ
ಕೀನಸ್ತ್ವಂ । ಸಾಮುದ್ರೋ ಹಿ ತರಂಗಃ ಕ್ವಚನ ಸಮುದ್ರೋ ನ
ತಾರಂಗಃ ॥ ” ಇತಿ ಸಮ್ಯಗುಪದಿಷ್ಟಂ. ಅತೋ ಭಕ್ತಾನಾಂ ಭಕ್ತಾದಿ
ಶರಣಾಂತಪಂಚಸ್ಥಲೇಷು ಜೀವಭಾವಸತ್ವೇನ ಶಿವಜೀವಯೋ
ರುಪಾಸ್ಯೋಪಾಸಕತ್ವೇನ ಸ್ವಾಮಿಭೃತ್ಯನ್ಯಾಯಾತ್ಮಕಸ್ವಭಾವದ್ವೈತ
ಸಿದ್ಧಿಃ. ಐಕ್ಯಸ್ಥಲೇ “ ಯಥಾ ನದ್ಯಃ ” ಇತ್ಯಾದಿಶ್ರುತಿಶತಸಿದ್ಧನದೀಸಮು
ದ್ರವಜ್ಜೀವಬ್ರಹ್ಮೈಕತ್ವೇನ ಅದ್ವೈತಸಿದ್ಧಿಶ್ಚೇತಿ ರಾದ್ಧಾಂತಃ. ತಥಾಪಿ
ಶಿವಜೀವಯೋಸ್ಸಮುದ್ರತರಂಗನ್ಯಾಯವದ್ಭೇದಾಭೇದಭಾವೋ ನಿಷ್ಪ್ರ
ತ್ಯೂಹಃ. ತಸ್ಮಾದಾತ್ಮವಿದಾಂ ಪರಮೇಶ್ವರೋಪಕರಣತ್ವಂ, ಅನಾತ್ಮ

**ವಿದಾಂ ದೇವೋಪಕರಣತ್ವಮಿತಿ ಫಲಿತಾರ್ಥೋ ದರ್ಶಿತಃ. ಅತಸ್ಸರ್ವಥಾ ಬದ್ಧಜೀವೋ ಭೂತಸೂಕ್ಷ್ಮೈಸ್ಸಂಪರಿಷ್ವಕ್ತಸ್ಸನ್ ಸ್ವರ್ಗಾದಿಕಂ ರಂಹತೀತಿ ಸಿದ್ಧಂ.**

ಕರ್ಮಿಗಳು ಸ್ವರ್ಗಲೊಕಕ್ಕೆ ಹೋದರೂ ಅಲ್ಲಿ ಅವರಿಗೆ ಅದರ ಭೋಗವನ್ನು ಶ್ರುತಿಯಲ್ಲಿ ಹೇಳಿಲ್ಲ. "ಅವನನ್ನು ದೇವತೆಗಳು ಭೋಗಿಸುತ್ತಾರೆ" ಎಂಬಲ್ಲಿ ಅಮೃತಮಯವಾದ ದಿವ್ಯದೇಹದಿಂಡ ಕೂಡಿದ ಕರ್ಮಿಗಳು ಸ್ವರ್ಗಲೋಕಕ್ಕೆ ಹೋದಾಗ ಅವನನ್ನು ದೇವತೆಗಳು ಭೋಗಿಸುವರೆಂದು ವ್ಯವಸ್ಥೆಮಾಡಲಾಗಿದೆ. ಆದ್ದರಿಂದ ವ್ಯಾಘ್ರಾದಿಗಳಂತೆ ಭೋಜ್ಯವೆನಿಸಿದ ಕರ್ಮಿಗಳಿಗೆ ಸ್ವರ್ಗದ ಭೋಗವೇ ಸಂಭವಿಸದಿರುವುದರಿಂದ ಜೀವನನ್ನು ಸೋಮರಾಜನೆಂದು ಹೇಳಲಾಗುವುದಿಲ್ಲ. ಜೀವನು ಆನಂದವನ್ನು ಅನುಭವಿಸುವುದಕ್ಕೆ ಬದಲಾಗಿ ದೇವತೆಗಳಿಗೆ ಭಕ್ಷ್ಯವಾಗುವ ಮೂಲಕ ಆನಂದದ ಅನುಭವವೇ ಇಲ್ಲದಂತಾಗುವನೆಂದಾಶಂಕಿಸಿ ನಿರಾಕರಿಸುತ್ತಾನೆ. ವಾ ಶಬ್ದವು ಚೋದ್ಯವನ್ನು ಪರಿಹರಿಸುತ್ತದೆ. "ಈ ಸೋಮನೆಂಬ ರಾಜನು ಆದೇ ದೇವತೆಗಳಿಗೆ ಆಹಾರವಾಗುವನು, ಅವನನ್ನು ದೇವತೆಗಳು ಭೋಗಿಸುತ್ತಾರೆ"ಎಂಬಲ್ಲಿ ಸೊಮರಾಜನೆನಿಸಿದ ಜೀವನು ದೇವತೆಗಳಿಗೆ ಭೋಜ್ಯನಾಗುವನೆಂದು ಹೇಳಿದೆ. "ಇವನು ಜೀವನಲ್ಲ" ವೆಂದು ಹೇಳಿದರೆ ಹೀಗೆ ಭಕ್ಷ್ಯನಾಗುವುದನ್ನು ಗೌಣವೆಂದು ಭಾವಿಸಿ ಆತ್ಮಜ್ಞಾನವಿಲ್ಲದ್ದರಿಂದ ಅವನು ದೇವತೆಗಳಿಗೆ ಭೋಗಸಾಮಗ್ರಿಯಾದನೆಂದು ಮಾತ್ರವೇ ಹೇಳಲಾಗಿದೆ. ಆದರೆ ಇಷ್ಟಾದಿಕರ್ಮಗಳನ್ನಾಚರಿಸಿದವರಿಗೆ ಆತ್ಮಜ್ಞಾನವಿಲ್ಲದ್ದರಿಂದ ಅಂತವರು ಇಲ್ಲಿಯೂ ಅಲ್ಲಿಯೂ ದೇವತೆಗಳ ಭೋಗಕ್ಕೆ ಸಾಧನರಾಗಿರುತ್ತಾರೆ. ಈ ಲೋಕದಲ್ಲಿ ಇಷ್ಟಕರ್ಮಗಳಿಂದ ದೇವತೆಗಳನ್ನು ಮೆಚ್ಚಿಸಿದವನಿಗೆ ಅವರು ಸಂತುಷ್ಟರಾಗಿ ಸ್ವರ್ಗದ ಭೋಗವನ್ನು ಕೊಟ್ಟರೂ ಅವನನ್ನು ಅಲ್ಲಿ ಭೋಗೋಪಕರಣವನ್ನಾಗಿಯೇ ಇಟ್ಟುಕೊಳ್ಳುತ್ತಾರೆ. "ಪಶುವಿನಂತೆ ಜೀವನು ದೇವತೆಗಳಿಗೆ ಭೋಜ್ಯನು" ಎಂಬ ಶ್ರುತಿ ಆತ್ಮಜ್ಞಾನವಿಲ್ಲದ ಜೀವನನ್ನು ದೇವತೆಗಳ ಭೋಗಸಾಧನವೆಂಬುದನ್ನು ತಿಳಿಸುತ್ತದೆ. ಶ್ರುತಿಸ್ಮೃತಿಗಳೂ ಆತ್ಮಜ್ಞಾನಿಗಳಿಗೆ ಬ್ರಹ್ಮಪ್ರಾಪ್ತಿಯನ್ನು ಹೇಳಿ, ಆತ್ಮಜ್ಞಾನವಿಲ್ಲದವರನ್ನು ದೇವತೆಗಳಿಗೆ ಭೋಗ್ಯರೆಂದು ತಿಳಿಸಿವೆ. "ದೇವತೆಗಳನ್ನು ಮೆಚ್ಚಿಸುವವರು ದೇವತೆಗಳಲ್ಲಿ ಹೋಗುತ್ತಾರೆ. ನನ್ನ ಭಕ್ತರು ನನ್ನಲ್ಲಿ ಬರುತ್ತಾರೆ" ಹೀಗೆ ಜೀವನು ದೇವತೆಗಳ ಭೋಗಸಾಧನವೆಂಬ ಅಭಿಪ್ರಾಯದಿಂದಲೇ ಅವನು ಅನ್ನದಂತೆ ಭಕ್ಷ್ಯನಾಗಿರುವನೆಂಬ ಮಾತು ಹೊರಟಿದೆ. ಆದ್ದರಿಂದ ಅದು ಗೌಣವೇ ಹೊರತು ಮುಖ್ಯವಲ್ಲ. ಇದರಿಂದ "ತೃಪ್ತಿಯೇ ದೇವತೆಗಳ ಭೋಗ" ವೆಂದು ಹೇಳಿದಂತಾಯಿತು. "ದೇವತೆಗಳು ತಿನ್ನುವುದಿಲ್ಲ ಮತ್ತು ಕುಡಿಯುವುದಿಲ್ಲ. ಅಮೃತಸ್ವರೂಪನಾದ ಜೀವನನ್ನು ನೋಡಿ ತೃಪ್ತಿಹೊಂದುತ್ತಾರೆ" ಎಂದು ಶ್ರುತಿಯಲ್ಲಿ ಹೇಳಿದೆ. ಆದ್ದರಿಂದ ಶಿವತತ್ತ್ವವನ್ನರಿಯದ ಕರ್ಮಿಗಳೇ ದೇವತೆಗಳಿಗೆ ಭೋಜ್ಯರಾಗುವರು. "ಯಾವನು ತಾನೇ ಬೇರೆ, ದೇವತೆಯೇ ಬೇರೆ

ಎಂದು ತಿಳಿದು ದೇವತೆಯೊಂದನ್ನು ಉಪಾಸನಮಾಡುವನೋ ಆವನು ತಿಳಿದವನಲ್ಲ; ವಾದ್ದರಿಂದ ಪಶುವಿನಂತೆ ದೇವತೆಗಳಿಗೆ ಭೋಗ್ಯನಾಗುವನು " ಎಂದು ಶ್ರುತಿಯಲ್ಲಿ ಹೇಳಿದೆ. ಬೇರೆ ಶ್ರುತಿಯಲ್ಲೂ " ಯಾವನು ತನ್ನ ದೇವತೆಯನ್ನು ತೊರೆದು ಬೇರೊಂದು ದೇವತೆಯನ್ನಾಶ್ರಯಿಸುವನೋ ಅವನು ಎಲ್ಲಿಯೂ ಸೇರದೆ ಪಾಪಿಯಾಗುತ್ತಾನೆ" ಎಂದೂ, " ಶಿವನನ್ನುಬಿಟ್ಟು ಇಂದ್ರಾದಿದೇವತೆಗಳನ್ನು ಯಾವನು ಯಜ್ಞಾದಿಕರ್ಮಗಳಿಂದ ಅರ್ಚಿಸುವನೋ ಅವನು ಇಂದ್ರಾದಿಗಳಿಗಿಂತಲೂ ಬೇರೆಯಾಗಿಯೇ ಉಳಿಯುವನು " ಎಂದೂ, " ಮಹೇಶ್ವರನ ಅಂಶವೆನಿಸಿದ ತ್ರಿಮೂರ್ತಿಗಳಿಂದ ಈ ಜಗತ್ತು ತುಂಬಿದೆ " ಎಂದೂ ಹೇಳಿರುವುದರಿಂದ ಬ್ರಹ್ಮವಿಷ್ಣ್ವಾದಿದೇವತೆಗಳೆಲ್ಲರೂ ಶಿವನ ಅಂಶರೆಂಬುದನ್ನು ತಿಳಿಯದೆ ಭೇದಬುದ್ಧಿಯಿಂದ ಯಾವನು ಪೂಜಿಸುತ್ತಾನೋ ಅವನು ಶಿವತತ್ತ್ವವನ್ನು. ತಿಳಿಯಲಾರನು. ಪಶುವು ಕೃಷಿ ಮೊದಲಾದ ಕೆಲಸಗಳಲ್ಲಿ ಜೀವನಿಗೆ ಸಹಾಯವಾಗುವಂತೆ ಕರ್ಮಿಯೂ ಸಹ ಇಂದ್ರಾದಿ ದೇವತೆಗಳಿಗೆ ಹವಿಸ್ಸನ್ನು ಕೊಡುತ್ತ ಪರಲೋಕದಲ್ಲೂ ಪಶುವಿನಂತೆ ಅವರ ಸೇವೆಯನ್ನೇ ಮಾಡುತ್ತಿರುವನು. ಹೀಗೆ ಕರ್ಮಿಗಳು ದೇವಪಶುವಾದ್ದರಿಂದಲೇ ದೇವತೆಗಳಿಗೆ ಭೋಜ್ಯರಾಗುತ್ತಾರೆ. ಆದರೆ ಹುಲಿ ಮೊದಲಾದವುಗಳಂತೆ ದೇವತೆಗಳು ಮಾಂಸ ರಕ್ತ ಮೊದಲಾದವನ್ನು ತಿನ್ನುವುದಿಲ್ಲ. ಆಯಾಲೋಕಗಳಲ್ಲಿ ಅವರು ಅಮೃತವನ್ನು ಭೋಗಿಸುತ್ತಿರುವುದರಿಂದ ಜೀವರಿಂದ ಅವರಿಗೆ ಮಾಂಸಭಕ್ಷಣಕ್ಕೆ ಅವಕಾಶವಿಲ್ಲ. ಆದರೆ ಇದರ ಅಭಿಪ್ರಾಯವಿಷ್ಟೆ. ಫಲಾಸಕ್ತಿಯಿಂದ ಕರ್ಮಮಾಡುವವರಿಗೆ ಆಯಾಲೋಕಗಳ ಭೋಗವೇ ದೊರಕುತ್ತದೆ. ಆದರೆ ಶಿವಾರ್ಪಣಬುದ್ಧಿಯಿಂದ ಕರ್ಮಮಾಡುವವರಿಗೆ ಪಾಪವೆಲ್ಲವೂ ನಷ್ಟವಾಗಿ ಚಿತ್ತಶುದ್ಧಿಯುಂಟಾಗುವುದು. ಆಗ ಅವರಿಗೆ ಶ್ರದ್ಧೆ ಭಕ್ತಿ ವೈರಾಗ್ಯಗಳು ಹುಟ್ಟಿ, ಅವುಗಳಿಂದ ಶಿವನನ್ನು ಭಾವಿಸಿ ತಿಳಿದು ಮಥಿಸಿ; ಅನುಭವಿಸಬೇಕೆಂಬ ಇಚ್ಛೆ ದೃಢವಾಗುವುದು. ಇದರಿಂದ ಜೀವನನ್ನಾವರಿಸಿದ ಮಾಯಾಪಾಶ ಅಂದರೆ ಆಣವ ಮಾಯೇಯ ಕಾರ್ಮಿಕಮಲಗಳು ತೊಲಗುತ್ತ ಬರುವುವು. ಇದರಿಂದ ಶಿವಜ್ಞಾನ ಬೆಳೆದು ಜೀವನು ಶಿವನಾಗುವನೆಂದು ನಿಶ್ಚಯಿಸಲಾಗಿದೆ. " ಬೇರೆ ಎಲ್ಲರನ್ನು ತೊರೆದು ಶಿವನೊಬ್ಬನನ್ನೇ ಧ್ಯಾನಿಸು " ಎಂದು ಶ್ರುತಿಯಲ್ಲೂ, " ಬೇರೆಯಾರೂ ಗತಿಯಿಲ್ಲವೆಂದು ನಂಬಿ ಯಾರು ನನ್ನನ್ನು ಆಶ್ರಯಿಸುತ್ತಾರೋ ಹಾಗೆ ನಿತ್ಯವೂ ನನ್ನನ್ನೇ ಒಳಗೂ ಹೊರಗೂ ಧರಿಸಿರುವ ಸದ್ಭಕ್ತರ ಯೋಗಕ್ಷೇಮಗಳನ್ನು ನಾನು ವಹಿಸಿಕೊಳ್ಳುತ್ತೇನೆ " ಎಂದು ಸ್ಮೃತಿಯಲ್ಲೂ ಅನನ್ಯಭಕ್ತಿಯೇ ಶಿವಾನುಗ್ರಹದ ಮೂಲವಾದ್ದರಿಂದ ಅದನ್ನು ಶಿವನಿಗಿಂತ ಬೇರೆಯಲ್ಲವೆಂದು ಹೇಳಲಾಗಿದೆ. ಆದರೂ ನಮಗೆ ಭಕ್ತಿ ಅನಿವಾರ್ಯವೆನಿಸಿದೆ. ಶೈವಪುರಾಣದಲ್ಲಿ ವ್ಯಾಸನು ಶಿವನಲ್ಲಿ ಮೊರೆಇಡುವಂತೆ " ಸ್ವಾಮಿ ನನಗೂ ನಿನಗೂ ಭೇದ ತೊಲಗಿದರೂ ನಾನು ನಿನ್ನವನಾಗುವೆನೇಹೊರತು ನೀನು ನನ್ನವನಾಗುವುದಿಲ್ಲ. ಸಮುದ್ರದಲ್ಲಿರುವ ತರಂಗವು ಸಮುದ್ರಮಯವಾಗುವುದೇ ಹೊರತು ಸಮುದ್ರವು

ತರಂಗಮಯವಾಗಲಾರದು." ಹೀಗೆ ಹೇಳಿರುವುದರಿಂದ ಭಕ್ತರಿಗೆ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣಸ್ಥಲಗಳಲ್ಲಿ ಜೀವಭಾವವೇ ಇರುವುದರಿಂದ ಶಿವನು ಉಪಸ್ಯನಾಗಿ ಜೀವನು ಉಪಾಸಕನೂ ಸೇವಕನೂ ಆಗಿ ಇಬ್ಬರಿಗೂ ದ್ವೈತವು ಸಹಜವಾಗಿರುವುದು. ಇದು ಕ್ರಮಕ್ರಮವಾಗಿ ತೊಲಗುತ್ತ ಬಂದು ಐಕ್ಯಸ್ಥಲವಲ್ಲಿ "ಯಥಾ ನದ್ಯಃ" ಈ ಬಗೆಯ ಶ್ರುತಿಗಳಲ್ಲಿ ಹೇಳಿದಂತೆ ನದೀಸಮುದ್ರಗಳಂತೆ ಶಿವ ಜೀವರ ಸಮರಸ್ಯವುಂಟಾಗುವುದರಿಂದ ಅದ್ವೈತವು ಸಿದ್ಧಿಸುತ್ತದೆ. ಆದರೂ ಇವರಿಗೆ ಪ್ರಾಪ್ಯಪ್ರಾಪಕಭಾವದಿಂದ ಭೇದಾಭೇದವೇ ಯುಕ್ತವೆನಿಸುವುದು. ಹೀಗೆ ಆತ್ಮಜ್ಞಾನಿಗಳು ಪರಮೇಶ್ವರಪ್ರೀತ್ಯರ್ಥವಾಗಿಯೂ, ಕರ್ಮಿಗಳು ದೇಹರಕ್ಷಣೆಗಾಗಿಯೂ ದುಡಿಯುತ್ತಿರುವುದರಿಂದ ಬದ್ಧಜೀವನು ಸೂಕ್ಷ್ಮಭೂತಗಳೊಡಗೂಡಿಯೇ ಧೂಮಮಾರ್ಗದಿಂದ ಸ್ವರ್ಗಲೋಕಕ್ಕೆ ಹೋಗುತ್ತಾನೆಂದು ಸಿದ್ಧವಾಯಿತು.

ನನ್ವೇವಂ ಸುಕೃತಿನಾಂ ಸ್ವರ್ಗಲೋಕಗಮನಮಸ್ತು, ತತ್ರ ತದ್ಭೋಗಾನಂತರಂ ತತ್ಪುನರಾಗಮನಂ ಕಥಮಿತ್ಯಾಶಂಕಾಯಾಂ ತತ್ಪ್ರಕಾರಮಧಿಕರಣಾಂತರೇಣ ದರ್ಶಯತಿ. ಕೃತಾತ್ಯಯಾಧಿಕರಣಂ ॥ ೨ ॥

ಕೃತಾತ್ಯಯೇಽನುಶಯವಾನ್ದೃಷ್ಟಸ್ಮೃತಿಭ್ಯಾಂ ಯಥೇತಮನೇವಂ ಚ ॥ ೮ ॥ ಕೃತಾತ್ಯಯೇ ಸ್ವರ್ಗೋದ್ದೇಶೇನ ಕೃತಸ್ಯ ಪುಣ್ಯಸ್ಯ ಅತ್ಯಯೇ ನಾಶೇ ಸತಿ ಯಥಾ ಯೇನ ಮಾರ್ಗೇಣ ಸ್ವರ್ಗಲೋಕಂ ಪ್ರತಿ ಇತೋ ಗತಃ ತೇನ ಮಾರ್ಗೇಣ ವಾ ಅನೇವಂ ಮಾರ್ಗಾಂತರೇಣ ವಾ. ಮಾರ್ಗಾಂತರೇಣೇತ್ಯೇತದನಾಸ್ಥಯೇತಿ ಪ್ರಾಪ್ತಂ. ತೇನೈವ ಮಾರ್ಗೇಣೇತಿ ರಾದ್ಧಾಂತಃ. ಅನುಶಯವಾನ್ ಭುಕ್ತಾವಶಿಷ್ಟಸಂಚಿತಕರ್ಮಣಾ ಶಿಷ್ಟಸ್ಸನ್ ಭೂಲೋಕಮಾಗಚ್ಛತಿ, ಕರ್ಮಾನುಸಾರೇಣ ತದನುಗುಣಯೋನಿಂ ಪ್ರಾಪ್ನೋತಿ. ಕುತಃ, ದೃಷ್ಟಸ್ಮೃತಿಭ್ಯಾಂ ಶ್ರುತಿಸ್ಮೃತಿಭ್ಯಾಮಿತ್ಯರ್ಥಃ. ಕೇವಲೇಷ್ಟಾಪೂರ್ತದತ್ತಕರ್ಮಿಣಾಂ ಧೂಮಾದಿಪಿತೃಯಾನಮಾರ್ಗೇಣ ಕರ್ಮಫಲಾನುಗುಣ್ಯೇನ ಸ್ವರ್ಗಭೋಗಮನುಭೂಯ ತತ್ ಕ್ಷಣೇ ಪುನರಾಗಮನಮಾಮ್ನಾತಂ. "ಯಾವತ್ಸಂಪಾತಮುಷಿತ್ವಾಥೈತಮೇವಾಧ್ವಾನಂ ಪುನರ್ನಿವರ್ತಂತೇ" ಇತ್ಯಾದಿಶ್ರುತಿಷು ಜೀವಸ್ಯ ಭೋಗಾವಸಾನೇ ಪುನರಾವರ್ತನವ್ಯಪದೇಶಾತ್ಸರ್ವಕರ್ಮಕ್ಷಯೇಣ ಕರ್ಮಾವಶೇಷೇಣ ವಾ ಪ್ರತ್ಯವರೋಹತೀತಿ ಸಂದಿಹ್ಯತೇ. ಸರ್ವಕರ್ಮಕ್ಷಯೇಣ ಪುನರಾಗಮನಂ ಯುಕ್ತಂ. ಉಪಭುಕ್ತಶಿಷ್ಟಂ ಕರ್ಮ ಅನುಶಯಃ. ಸಚ ಕೃತ್ಸ್ನಫಲಭೋಗೇ ಸತಿ ನಾವಶಿಷ್ಯತೇ. "ಯಥೈತಮಾಕಾಶಮಾಕಾಶಾದ್ವಾಯುಂ" ಇತ್ಯಾದಿಷ್ವಪಿ ಕರ್ಮಾವಶೇಷವಾರ್ತಾಽಶ್ರವಣಾತ್ "ಯಾವತ್ಸಂಪಾತಂ" ಇತಿ ಶ್ರುತೌ "ಸಂಪಾತಃ ಕರ್ಮಸಮಷ್ಟಿಃ, ಸಂಪಾತಮನತಿಕ್ರಮ್ಯ ಯಾವತ್ಸಂ

ಪಾತಂ"ಇತಿ ವ್ಯಾಚಕ್ಷ್ಯತೇ. ತತ್ರೋತ್ಪ್ರೇಕ್ಷಿತ್ವಾ ತದನುಭೂಯತ್ವನಿರ್ದೇಶಾಚ್ಚ ಸರ್ವಕರ್ಮಫಲಭೋಗಾವಸಾನೇಽನ್ಯೈವ ಜೀವೋಽವತರತೀತಿ ಪ್ರಾಪ್ತೇ ಪ್ರಚಕ್ಷ್ಮಹೇ, ಅನುಶಯವಾನ್ ಕರ್ಮಾವಶೇಷಸ್ಸನ್ ಜೀವೋ ಮರ್ತ್ಯಲೋಕಂ ಪ್ರತ್ಯವರೋಹತಿ, ಕುತಃ ಶ್ರುತಿಸ್ಮೃತಿಭ್ಯಾಂ. "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ", "ಕರ್ಮಾವಶೇಷೇ ಸುಕೃತೇ ಚ ಭೂಯೋ ಭೂಲೋಕಮಾಗತ್ಯ ಪುನಶ್ಚ ಕರ್ಮ । ಕರೋತಿ ಮೋಹಾತ್ಪುನರಂತ್ಯಕಾಲೇ ಸ್ವರ್ಗಾದಿಲೋಕಾನ್ ಭಜತೇ ಪುನಃ ಪುನಃ ॥" ಕಿಂಚ "ತದ್ಯ ಇಹ ರಮಣೀಯಚರಣಾ ಅಭ್ಯಾಶೋ ಹ ಯತ್ತೇ ರಮಣೀಯಾಂ ಯೋನಿಮಾಪದ್ಯೇರನ್ ಬ್ರಾಹ್ಮಣಯೋನಿಂ ಕ್ಷತ್ರಿಯಯೋನಿಂ ವಾ ವೈಶ್ಯಯೋನಿಂ ವಾ । ಅಥ ಯ ಇಹ ಕಪೂಯಚರಣಾ ಅಭ್ಯಾಶೋ ಹ ಯತ್ತೇ ಕಪೂಯಾಂ ಯೋನಿಮಾಪದ್ಯೇರನ್ ಶ್ವಯೋನಿಂ ವಾ ಸೂಕರಯೋನಿಂ ಚಂಡಾಲಯೋನಿಂ ವಾ ॥" ಇತಿ ಪ್ರಕೃತ್ಯವರೂಢಾನ್ ಪ್ರತಿ ಶ್ರೂಯತೇ. "ಅಮುಷ್ಮಾಲ್ಲೋಕಾತ್ಪ್ರತ್ಯವರೂಢೇಷು ರಮಣೀಯಕರ್ಮಾಣೋ ರಮಣೀಯಾಂ ಬ್ರಾಹ್ಮಣಾದಿಯೋನಿಂ ಪ್ರತಿಪದ್ಯಂತೇ, ಕಪೂಯಚರಣಾಃ ಕುತ್ಸಿತಕರ್ಮಾಣಃ ಕುತ್ಸಿತಾಂ ಶ್ವಸೂಕರಚಂಡಾಲಾದಿಯೋನಿಂ ಪ್ರತಿಪದ್ಯಂತೇ" ಇತಿ ಪ್ರತ್ಯವರೂಢಾನಾಂ ಪುಣ್ಯಪಾಪಕರ್ಮಯೋಗಂ ದರ್ಶಯತಿ ಸ್ಮೃತಿಃ. ತದ್ವತ್ಸೂತ್ರಮಪಿ ವರ್ಣಾಶ್ರಮಸ್ಥಾಃ ಸ್ವಕರ್ಮನಿಷ್ಠಾಃ ಜೀವಾಃ ಪ್ರತ್ಯೇಕಕರ್ಮಫಲಮನುಭೂಯ ತತಶ್ಶೇಷೇಣ ವಿಶಿಷ್ಟದೇಶಜಾತಿಕುಲರೂಪಾಯುಶ್ಶ್ರುತವಿತ್ತವೃತ್ತಸುಖಮೇಧಸೋ ಹಿ ಜನ್ಮ ಪ್ರತಿಪದ್ಯಂತೇ. ವಿಷ್ವಂಚೋ ವಿಪರೀತಾ ನಶ್ಯಂತೀತಿ, ತಥಾ ತತಃ ಪರಿವೃತ್ತೌ ಕರ್ಮಫಲಶೇಷೇಣ ಜಾತಿಂ ರೂಪಂ ವರ್ಣಂ ಬಲಂ ಮೇಧಾಂ ಪ್ರಜ್ಞಾಂ ಧರ್ಮಾನುಷ್ಠಾನಂ ಚ ಪ್ರತಿಪದ್ಯಂತೇ, ತಚ್ಚಕ್ರವದುಭಯೋರ್ಲೋಕಯೋಸ್ಸುಖಮೇವ ವರ್ತತ ಇತಿ ಚ ವದತಿ. "ಯಾವತ್ಸಂಪಾತಂ" ಇತಿ ಫಲದಾನಪ್ರವೃತ್ತಕರ್ಮವಿಶೇಷವಿಷಯಂ ಯತ್ಕಿಂಚೇಹ ಕರೋತ್ಯಯಮಿತೀದಮಪಿ ತದ್ವಿಷಯಮೇವ. ಅಭುಕ್ತಫಲಾನುಭವಾನ್ನಾಶೋಽಪ್ಯನುಪಪನ್ನಃ. "ಅತೋಽಮುಂ ಲೋಕಂ ಗತಾಸ್ಸಾನುಶಯಾ ಏವ ಯಥೇತಮನೇವಂ ಚ ಪುನರ್ನಿವರ್ತಂತೇ. ಆರೋಹಣಪ್ರಕಾರೇಣ ಪ್ರಕಾರಾಂತರೇಣ ಚ ಪುನರ್ನಿವರ್ತಂತ ಇತಿ ಭಾವಃ. ಆರೋಹಣಂ ವಾ ಧೂಮರಾತ್ರ್ಯಪರಪಕ್ಷದಕ್ಷಿಣಾಯನಷಣ್ಮಾಸಪಿತೃಲೋಕಾಕಾಶಚಂದ್ರಕ್ರಮೇಣ. ಅವರೋಹಣಂ ತು ಚಂದ್ರಮಸಸ್ಸ್ಥಾನಾದಾಕಾಶವಾಯುಧೂಮಾಭ್ರಮೇಘಕ್ರಮೇಣ. ತತ್ರಾಕಾಶಾವರೋಹಣಾ

**ದ್ಯಥೇತಂ ವಾಯ್ವಾದಿಪ್ರಾಪ್ತೇಃ ಪಿತೃಲೋಕಾದ್ಯಪ್ರಾಪ್ತೇಶ್ಚ. ಅನೇವಂ ನೋಚೇತ್ಸದ್ಯಸ್ಸಮುದ್ಭೂತಸ್ಯ ಸುಖದುಃಖಾನುಭವೋ ನ ಸಂಭವೇತ್. ಅತೋಽನುಶಯವಾನ್ನಿವರ್ತತ ಇತಿ ರಾದ್ಧಾಂತಃ.**

ಹಾಗಾದರೆ ಪುಣ್ಯಮಾಡಿದವರು ಸ್ವರ್ಗಕ್ಕೆಹೋದರೂ ಅಲ್ಲಿ ಭೋಗವನ್ನು ಅನುಭವಿಸಿದಮೇಲೆ ಅವರು ಮತ್ತೆ ಹೇಗೆ ಹಿಂತಿರುಗುತ್ತಾರೆ ಎಂದಾಶಂಕಿಸಿ ಅವರು ಹಿಂತಿರುಗುವ ರೀತಿಯನ್ನು ತಿಳಿಸುತ್ತಾನೆ. ಸ್ವರ್ಗವನ್ನು ಉದ್ದೇಶಿಸಿ ಮಾಡಿದ ಪುಣ್ಯವು ಮುಗಿದಮೇಲೆ ಯಾವಮಾರ್ಗದಲ್ಲಿ ಅವರು ಹಿಂದೆ ಸ್ವರ್ಗಕ್ಕೆ ಹೋಗಿದ್ದರೋ ಆ ಮಾರ್ಗದಿಂದಲೇ ಅವರು ಹಿಂತಿರುಗುವರೊ? ಅಥವಾ ಬೇರೆ ಮಾರ್ಗದಿಂದಲೋ? ಎಂದು ಕೇಳಿದರೆ ಅದೇ ಮಾರ್ಗದಿಂದಲೇ ಹಿಂತಿರುಗುವರೆಂದು ಹೇಳಬೇಕಾಗುತ್ತದೆ. ಆದರೆ ತಾನು ಭೋಗಿಸಿ ಉಳಿದಕರ್ಮದೊಡನೆ ಅವನು ಭೂಮಿಗೆ ಹಿಂತಿರುಗುತ್ತಾನೆ. ಆ ಕರ್ಮಕ್ಕನುಗುಣವಾದ ಜನ್ಮವನ್ನೇ ಪಡೆಯುತ್ತಾನೆ. ಹೀಗೆಂದು ಶ್ರುತಿಸ್ಮೃತಿಗಳು ಸ್ಪಷ್ಟವಾಗಿ ತಿಳಿಸಿವೆ. ಕೇವಲ ಇಷ್ಟಾಪೂರ್ತಕರ್ಮಗಳನ್ನೇ ಮಾಡಿದವರು ಧೂಮಾದಿಪಿತೃಯಾನಮಾರ್ಗದಿಂದ ಅವರವರ ಕರ್ಮಕ್ಕನಗುಣವಾಗಿ ಸ್ವರ್ಗಭೋಗವನ್ನು ಅನುಭವಿಸಿ ಅದು ಮುಗಿದೊಡನೆಯೇ ಭೂಮಿಗೆ ಹಿಂತಿರುಗುತ್ತಾರೆ. "ಪುಣ್ಯ ಮುಗಿದೊಡನೆ ಭೂಮಿಗೆ ಬರುತ್ತಾರೆ" "ಅಲ್ಲಿಯೇ ಇದ್ದು ಮತ್ತೆ ಅದೇಮಾರ್ಗದಲ್ಲಿಯೇ ಹಿಂತಿರುಗುತ್ತಾರೆ." ಹೀಗೆ ಶ್ರುತಿಗಳಲ್ಲಿ ಜೀವರು ಭೋಗಮುಗಿದೊಡನೆ ಹಿಂತಿರುಗುವರೆಂದು ಹೇಳಿರುವುದರಿಂದ ಎಲ್ಲ ಕರ್ಮವೂ ಕಳೆದಮೇಲೆಯೇ ಅವರು ಬರುತ್ತಾರೋ ಅಥವಾ ಕರ್ಮಶೇಷದೊಡನೆಯೋ ಎಂಬ ಸಂದೇಹ ಬರುತ್ತದೆ. ಎಲ್ಲಾ ಕರ್ಮವೂ ಕಳೆದಮೇಲೆಯೇ ಹಿಂತಿರುಗುವರೆಂಬುದೇ ಯುಕ್ತವಾಗಿದೆ. ಎಲ್ಲಾ ಫಲವನ್ನು ಭೋಗಿಸಿದಮೇಲೆ ಕರ್ಮಶೇಷಕ್ಕೆ ಅವಕಾಶವೇ ಇರುವುದಿಲ್ಲ. "ಪುಣ್ಯವೆಷ್ಟಿರುವುದೋ ಅಷ್ಟು ಮುಗಿಯುವವರೆಗೂ ಇದ್ದು ಹಿಂದಿನ ಮಾರ್ಗದಿಂದಲೇ ಮತ್ತೆ ಹಿಂತಿರುಗುತ್ತಾರೆ" ಎಂದು ಶ್ರುತಿಯಲ್ಲಿ ಹೇಳಿದೆ. "ಈ ಲೋಕದಲ್ಲಿ ಮಾಡಿದ್ದ ಕರ್ಮವನ್ನು ಪೂರ್ಣವಾಗಿ ಅನುಭವಿಸಲು ಆ ಲೋಕಕ್ಕೆ ಹೋಗಿ ಅದು ಮುಗಿದಮೇಲೆ ಮತ್ತೆ ಕರ್ಮಸಂಪಾದನೆಗಾಗಿ ಈ ಲೋಕಕ್ಕೆ ಬರುತ್ತಾನೆ"ಎಂದು ಸ್ಮೃತಿಯಲ್ಲೂ ಹೇಳಿರುವುದರಿಂದ ಎಲ್ಲಾಕರ್ಮಮುಗಿದ ಮೇಲೆಯೆ ಅವನು ಹಿಂತಿರುಗವನೆಂದು ಹೇಳಬೇಕು. ಅಲ್ಲದೆ ಅವನು ಹಿಂತಿರುಗುವಾಗ ಆಕಾಶವನ್ನು ಹೊಕ್ಕು ಅಲ್ಲಿಂದ ವಾಯುವಾಗಿ, ಆಮೇಲೆ ಹೊಗೆಯಾಗಿ ಮೇಘವಾಗಿ, ಅದರಿಂದ ನೀರಿನ ರೂಪದಿಂದ ಕೆಳಗೆ ಸುರಿಯುತ್ತಾನೆ.ಇಲ್ಲಿ ಅವನ ಕರ್ಮಶೇಷದ ಸಮಾಚಾರವೇ ಕೇಳಿಬರುವುದಿಲ್ಲ. ಶ್ರುತಿಯಲ್ಲಿ "ಯಾವತ್ಸಂಪಾತಂ"ಎಂದರೆ "ಕರ್ಮವೆಲ್ಲವೂ ಸಮಗ್ರವಾಗಿ ಮುಗಿಯುವವರೆಗೂ" ಎಂದು ಅರ್ಥವಾಗುತ್ತದೆ. ಇದರಿಂದ ಎಲ್ಲಾ ಕರ್ಮವನ್ನು ಮುಗಿಸಿಕೊಂಡೇ ಜೀವನು ಕೆಳಗೆಬರುತ್ತಾನೆ ಎಂದು ಆಕ್ಷೇಪಿಸಿ ಸಮಾಧಾನವನ್ನು ಹೇಳುತ್ತಾನೆ. ಜೀವನು ಭೋಗಿಸಿಬರುವಾಗ ಕರ್ಮಶೇಷ

ದೊಡನೆಯೇ ಭೂಮಿಗೆ ಬರುತ್ತಾನೆ. ಹೀಗೆಂದು ಶ್ರುತಿಸ್ಮೃತಿಗಳು ಸ್ಪಷ್ಟವಾಗಿ ತಿಳಿಸಿವೆ. "ಕರ್ಮಶೇಷದಿಂದಲೂ ಪುಣ್ಯದಿಂದಲೂ ಜೀವರು ಮತ್ತೆ ಭೂಮಿಗೆ ಬಂದು ಕರ್ಮವನ್ನಾರಂಭಿಸುತ್ತಾರೆ." "ಇಲ್ಲಿ ಅಭಿಮಾನಿಸಿ ಕರ್ಮಗಳನ್ನು ಮಾಡುತ್ತ ಕೊನೆಗೆ ಸ್ವರ್ಗಕ್ಕೆ ಹೋಗುತ್ತಲೂ ಬರುತ್ತಲೂ ಇರುತ್ತಾರೆ." ಇಲ್ಲಿ ಉತ್ತಮ ಕರ್ಮಗಳನ್ನು ಮಾಡಿದವರು ಉತ್ತಮವರ್ಣದಲ್ಲಿ ಜನ್ಮವನ್ನು ಪಡೆಯುವರು. ನೀಚಕೃತ್ಯಗಳನ್ನು ಮಾಡಿದವರು ನಾಯಿ, ಹಂದಿ, ಚಂಡಾಲ ಮೊದಲಾದ ಜನ್ಮವನ್ನು ಪಡೆಯುತ್ತಾರೆ" ಎಂದೂ ಶ್ರುತಿಗಳಲ್ಲಿ ಹೇಳಿದೆ. ಹಿಂತಿರುಗಿಬಂದವರಿಗೂ ಹೀಗೆಯೇ ಹೇಳಲಾಗಿದೆ. "ಈ ಲೋಕದಿಂದ ಹೊರಟವರಲ್ಲಿ ಸುಕೃತಿಗಳು ಉತ್ತಮ ಜನ್ಮವನ್ನು ಹೊಂದುತ್ತಾರೆ. ನೀಚಕರ್ಮಗಳನ್ನಾಚರಿಸಿದವರು ತುಚ್ಛವಾದ ಜನ್ಮವನ್ನು ಹೊಂದುತ್ತಾರೆ" ಹೀಗೆ ಅವರಿಗೂ ಹಿಂದಿನ ಪುಣ್ಯ ಪಾಪ ಕರ್ಮಗಳ ಸಂಪರ್ಕವನ್ನು ಶ್ರುತಿಯೇ ತಿಳಿಸಿದೆ. ಸೂತ್ರವೂ ಸಹ, "ವರ್ಣಾಶ್ರಮ ಧರ್ಮಗಳನ್ನಾಚರಿಸಿದವರು ಅವರವರ ಕರ್ಮಫಲವನ್ನು ಅನುಭವಿಸಿ ಉಳಿದಭಾಗದೊಡನೆ ಆಯಾ ದೇಶ ಜಾತಿ ವಂಶಗಳಲ್ಲಿ ಹಿಂದಿನ ರೂಪ, ಆಯುಸ್ಸು, ಜ್ಞಾನ, ಐಶ್ವರ್ಯ, ವರ್ತನೆ, ಸೌಖ್ಯ, ಬುದ್ಧಿಗಳೊಡನೆಯೇ ಅಂತಹ ಜನ್ಮವನ್ನೇ ಪಡೆಯುತ್ತಾರೆ. ಇದಕ್ಕೆ ವಿಪರೀತವಾದವರು ಅದಕ್ಕೆ ವಿರುದ್ಧವಾದ ಜನ್ಮವನ್ನು ಪಡೆದು ನಶಿಸುತ್ತಾರೆ. ಹಿಂತಿರುಗುವಾಗ ಅವರು ನಾಶವಾಗುವುದಿಲ್ಲ. ಆದರೆ ಕರ್ಮಶೇಷದೊಡನೆಯೇ ಅದಕ್ಕನುಗುಣವಾದ ಜಾತಿ-ರೂಪ-ವರ್ಣ-ಬಲ-ಬುದ್ಧಿ-ಪ್ರಜ್ಞೆ-ಸಾಧನ-ಧರ್ಮಾನುಷ್ಠಾನ ಇವನ್ನು ಹೊಂದುತ್ತಾರೆ. ಇಂತಹವನು ಚಕ್ರದಂತೆ ಎರಡು ಲೋಕಗಳಲ್ಲೂ ಸುಖವನ್ನು ಅನುಭವಿಸುತ್ತಲೇ ಇರುವನು"ಎಂದು ಹೇಳಿದೆ. ಕರ್ಮ ಮುಗಿದಮೇಲೆ ಇಲ್ಲಿಗೆ ಬರುವನೆಂದು ಹೇಳುವ ಶ್ರುತಿಗಳು ಫಲವನ್ನು ಕೊಡಲಾರಂಭಿಸಿವ ಆ ಕರ್ಮದ ಕೊನೆಯನ್ನು ಹೇಳುವುವೇ ಹೊರತು ಎಲ್ಲಾ ಕರ್ಮಗಳ ಕೊನೆಯನ್ನು ಹೇಳುವುದಿಲ್ಲ. ತಾನೂ ಭೋಗಿಸದೆ ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳದೇ ಇರುವ ಕರ್ಮಗಳಿಗೆ ಸ್ವರ್ಗವನ್ನು ದೊರಕಿಸುವ ಬೇರೊಂದು ಕರ್ಮದಿಂದ ಹೇಗೆ ನಾಶವುಂಟಾದೀತು? ಆದ್ದರಿಂದ ಈಲೋಕಕ್ಕೆ ಹಿಂತಿರುಗುವಾಗ ಕರ್ಮಶೇಷದೊಡನೆಯೇ ಜೀವರು ಬರುತ್ತಾರೆ. ಆದರೆ ಹಾಗೆ ಬರುವವರು ಹೋದದಾರಿಯಲ್ಲೋ ಅಥವಾ ಬೇರೆ ದಾರಿಯಲ್ಲೋ? ಅಂದರೆ ಧೂಮಮಾರ್ಗದಿಂದ ರಾತ್ರಿವೇಳೆ ಕೃಷ್ಣಪಕ್ಷದಲ್ಲಿ ದಕ್ಷಿಣಾಯನದ ಆರುತಿಂಗಳೊಳಗೆ ಪಿತೃಲೋಕದಿಂದ ಆಕಾಶಕ್ಕೂ ಅಲ್ಲಿಂದ ಚಂದ್ರಲೋಕಕ್ಕೂ ಜೀವರು ಹಾಯ್ದು ಹೋಗುವುದೇ ಆರೋಹಣ ಕ್ರಮವೆನಿಸಿದೆ. ಚಂದ್ರಲೇಕದಿಂದ ಆಕಾಶ-ವಾಯು-ಧೂಮ-ಅಭ್ರ-ಮೇಘಗಳ ಮೂಲಕ ಹಿಂತಿರುಗುವುದೇ ಅವರ ಅವರೋಹಣಕ್ರಮವೆನಿಸಿದೆ. ಇದೊಂದು ಕ್ರಮವಾದರೆ, ವಾಯು ಮೊದಲಾದ ಅವಸ್ಥೆಗಳನ್ನು ಹೊಂದಿ ಪಿತೃಲೋಕಕ್ಕೆ ಹೋಗದೆ ಹಿಂತಿರುಗುವರೆಂಬುದೇ ಮತ್ತೊಂದು ಕ್ರಮ. ಹೀಗೆ ಒಪ್ಪದಿದ್ದರೆ ಜೀವರಿಗೆ ಈ ಲೋಕದ ಸುಖದುಃಖಗಳ ಅನುಭವವೆ ಬರದೇಹೋದೀತು.

ಆದ್ದರಿಂದ ಕರ್ಮಶೇಷದೊಡನೆಯೇ ಅವರು ಹಿಂತಿರುಗುವರೆಂಬುದು ನಿಶ್ಚಿತ.

ನನು "ರಮಣೀಯಚರಣಾಃ" ಇತಿ ಶ್ರುತ್ಯನುಸಾರೇಣ ಶ್ರೌತಕರ್ಮಣಾಂ ಪುನರಾಗಮನಮಿತಿ ಯದುಕ್ತಂ ತದಸಮಂಜಸಂ. "ಯಜ್ಞೇನ ದಾನೇನ ತಪಸಾಽನಾಶಕೇನ" ಇತ್ಯಾದಿಶ್ರುತಿಷು ಜ್ಞಾನಕರ್ಮಸಮುಚ್ಚಯತ್ವೇನ ಅಪುನರಾವೃತ್ತಮೋಕ್ಷಸ್ಥಿತ್ಯುಪದೇಶಾದ್ರಮಣೀಯಚರಣಾ ಇತ್ಯತ್ರ ಸ್ಮೃತ್ಯುಕ್ತಶೌಚಾಚಮನಸ್ನಾನಸಂಧ್ಯಾದಿಪರತ್ವಮೇವೇತ್ಯಾಶಂಕ್ಯಾಹ. ಚರಣಾದಿತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾರ್ಜಿನಿಃ. ॥ ೯ ॥ "ರಮಣೀಯಚರಣಾಃ ಕಪೂಯಚರಣಾಃ" ಇತಿ ಚರಣಶಬ್ದೇನ ಪುಣ್ಯಪಾಪಾತ್ಮಕಸ್ಮಾರ್ತಕಾಮ್ಯಾದಿಲೌಕಿಕಕರ್ಮಪರತ್ವಮೇವೇತಿ ಚೇನ್ನ ತದುಪಲಕ್ಷಣಾರ್ಥೇತಿ ಕಾರ್ಷ್ಣಾರ್ಜಿನಿಃ. ಚರಣಶಬ್ದಸ್ಯ ಲೋಕವೇದಯೋಃ ಶ್ರೌತಸ್ಮಾರ್ತಾದಿಸತ್ಕರ್ಮಾಚಾರೇ ಪ್ರಸಿದ್ಧೇಃ, "ಶ್ರೌತಸ್ಮಾರ್ತಸದಾಚಾರಶ್ಚರಣ ಇತಿ ಗೀಯತೇ । ತೇನೈವ ಚಿತ್ತಶುದ್ಧಿಃ ಸ್ಯಾತ್ತತೋ ಯಾಂತಿ ಪರಂ ಪದಮಿತಿ ಶ್ರುತಿಃ॥ ವಕ್ಷ್ಯಾಮಿ ಧೃತಲಿಂಗಸ್ಯ ಚರಣಶ್ರುತಿಸಮ್ಮತಂ । ಸ್ಮೃತಿತಂತ್ರಪುರಾಣೇಷು ಪ್ರಸಿದ್ಧಂ ತೇ ಸಮಾಹಿತಃ । ಶ್ರುತಿಸ್ಮೃತ್ಯುದಿತಂ ಧರ್ಮಂ ನಿತ್ಯನೈಮಿತ್ತಿಕಾಶ್ರಯಂ । ಕುರ್ಯಾಲ್ಲಿಂಗಾಂಗಸಂಬಂಧೀ ದ್ವಿಜನ್ಮಾ ಕಾಮವರ್ಜಿತಃ । ವಿಧ್ಯುಕ್ತಕರ್ಮಾನುಷ್ಠಾನಾಚ್ಚಿತ್ತಶುದ್ಧಿರ್ಭವೇದ್ಧ್ರುವಂ।ಚಿತ್ತಶುದ್ಧ್ಯಾ ಭವೇದ್ಭಕ್ತಿರ್ಭಕ್ತಿರವ್ಯಭಿಚಾರಿಣೀ । ತಯಾ ಸಂಜಾಯತೇ ಜ್ಞಾನಂ ನಶ್ಯತ್ಯಜ್ಞಾನಮಾತ್ಮನಃ । ತಸ್ಮಾನ್ಮೋಕ್ಷಸ್ತತಃ ಕರ್ಮ ವಿಧ್ಯುಕ್ತಂ ಸಮ್ಯಗಾಚರೇತ್ ॥" ಇತ್ಯಾದಿನಾ ಶಂಕರಸಂಹಿತಾಯಾಮಪಿ ಚರಣಶಬ್ದಃ ಶ್ರೌತಸ್ಮಾರ್ತಸದಾಚಾರಪರ ಇತಿ ಸ್ಪಷ್ಟಮುದಿಷ್ಟಂ. ಲೌಕಿಕಾಃ ಖಲು "ಚರಣಮಾಚಾರಶ್ಶೀಲಂ ವೃತ್ತಂ" ಇತಿ ಪರ್ಯಾಯಾನಭಿಮನ್ಯಂತೇ. ವೇದೇ ಚ "ಯಾನ್ಯನವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ ನೋ ಇತರಾಣಿ, ಯಾನ್ಯಸ್ಮಾಕಂ ಸುಚರಿತಾನಿ ತಾನಿ ತ್ವಯೋಪಾಸ್ಯಾನಿ. ಸತ್ಯಂ ವದ, ಧರ್ಮಂ ಚರ, ನ ಸುರಾಂ ಪಿಬೇತ್, ನ ಕಳಂಜಂ ಭಕ್ಷಯೇತ್, ನ ಪರದಾರಾನ್ ಗಚ್ಛೇತ್, ನಾನೃತಂ ವದೇತ್, ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ. ತ್ರಿಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ. ಅಮೃತಸ್ಯ ದೇವಧಾರಣೋ ಭೂಯಾಸಂ. ಶರೀರಂ ಮೇ ವಿಚರ್ಷಣಂ" ಇತ್ಯಾದಿಶ್ರುತಿಷು ಚರಣಾತ್ಮಕಸತ್ಕರ್ಮಾಚರಣಂ ಪರಮಶಿವಭಕ್ತ್ಯಾಧಾರಭೂತಚಿತ್ತಶುದ್ಧ್ಯರ್ಥಂ ವ್ಯಪದಿಶ್ಯತೇ. ತಸ್ಮಾಚ್ಚರಣಾತ್ ಶ್ರೌತಸ್ಮಾರ್ತಶೀಲಾತ್ ಪುನರಾವೃತ್ತಿರಹಿತನಿತ್ಯಮಂಗಳಾಲಯನಿರತಿಶಯನಿರುಪಮಾನಪರಮಪದಾಭಿಧಾನ

**ಮಹಾಕೈಲಾಸಪ್ರಾಪ್ತಿರಿತಿ ಕಾರ್ಷ್ಣಾಜಿನಿರಾಚಾರ್ಯಶ್ಚರಣಂ ಶ್ರೌತಸ್ಮಾರ್ತಕರ್ಮೋಪಲಕ್ಷಣಾರ್ಥಂ ಮನ್ಯತೇ. ಸದಾಚಾರವಾಚಕ ಚರಣಶಬ್ದೇನ ಹ್ಯಜಹಲ್ಲಕ್ಷಣಾಯಾ ಶ್ರೌತಸ್ಮಾರ್ತಾಚಾರಾಂಗಕಂ ಕರ್ಮ ವಿಧೀಯತ ಇತಿ ರಾದ್ಧಾಂತಃ.**

"ಒಳ್ಳೆಯ ಕೆಲಸವನ್ನು ಮಾಡಿದವರು ಒಳ್ಳೆಯ ಜನ್ಮವನ್ನು ಪಡೆಯುತ್ತಾರೆ" ಎಂಬ ಶ್ರೌತವಿಧಿಯಂತೆ ಶ್ರುತ್ಯುಕ್ತಕರ್ಮಗಳನ್ನಾಚರಿಸುವವರು ಮತ್ತೆ ಹಿಂತಿರುಗುವರೆಂದು ಹೇಳಿದ್ದು ಯುಕ್ತವಲ್ಲ. ಯಾಕೆಂದರೆ ಜ್ಞಾನ, ಯಜ್ಞ, ದಾನ, ತಪಸ್ಸುಗಳ ಮೂಲಕ ಜ್ಞಾನಕರ್ಮಸಮುಚ್ಚಯಾತ್ಮಕವಾದ ಮೋಕ್ಷವನ್ನು ಹೊಂದಬೇಕೆಂದು ಶ್ರುತಿಯಲ್ಲಿಯೇ ಹೇಳಿರುವುದರಿಂದ "ರಮಣೀಯಚರಣಾಃ" ಎಂಬ ಪದವು ಸ್ಮೃತಿಯಲ್ಲಿ ಹೇಳಿರುವ ಶೌಚ, ಆಚಮನ, ಸ್ನಾನ, ನಿತ್ಯಾರ್ಚನೆಗಳಿಗೆ ಮಾತ್ರವೇ ಅನ್ವಯಿಸುವುದೇ ಹೊರತು ಪುಣ್ಯಪಾಪಾದಿಕರ್ಮಗಳಿಗನ್ವಯಿಸುವುದಿಲ್ಲವೆಂದು ಆಶಂಕಿಸಿ ನಿರಾಕರಿಸುತ್ತಾನೆ. ಶ್ರುತಿಯಲ್ಲಿ ಚರಣಶಬ್ದವು ಸ್ಮೃತ್ಯುಕ್ತವಾದ ಕಾಮ್ಯ ಮತ್ತು ಲೌಕಿಕ ಪುಣ್ಯಪಾಪಕರ್ಮಗಳಿಗೆ ಮಾತ್ರವೇ ಅನ್ವಯಿಸುವುದೆಂದು ಹೇಳಲಾಗುವುದಿಲ್ಲ; ಯಾಕೆಂದರೆ ಈ ಪದವು ಲೋಕದಲ್ಲೂ ವೇದದಲ್ಲೂ ಶ್ರೌತಸ್ಮಾರ್ತ ಮೊದಲಾದ ಸತ್ಕರ್ಮಾನುಷ್ಠಾನದಲ್ಲಿಯೇ ಪ್ರಸಿದ್ಧವಾಗಿದೆ. "ಶ್ರೌತಸ್ಮಾರ್ತಕರ್ಮಾನುಷ್ಠಾನವೇ ಚರಣವೆನಿಸಿದೆ. ಇದರಿಂದಲೇ ಚಿತ್ತಶುದ್ಧಿಯುಂಟಾಗಿ ಅದರಿಂದ ಉತ್ತಮಗತಿಯಾಗುತ್ತದೆ" ಹೀಗೆ ಶ್ರುತಿಯು ತಿಳಿಸುತ್ತದೆ. "ಲಿಂಗವನ್ನು ದೇಹದಲ್ಲಿ ಧರಿಸಿ ಅರ್ಚಿಸುವುದನ್ನು ಶ್ರುತಿಸಮ್ಮತವೆಂದು ಸ್ಮೃತ್ಯಾಗಮ ಪುರಾಣಗಳು ತಿಳಿಸುತ್ತವೆ. ಶ್ರುತಿಸ್ಮೃತಿಗಳಲ್ಲಿ ಹೇಳಿರುವ ನಿತ್ಯನೈಮಿತ್ತಿಕಧರ್ಮಗಳನ್ನು ಬ್ರಾಹ್ಮಣನು ಲಿಂಗಾಂಗಸಂಬಂಧದಿಂದ ನಿರ್ಮಲಚಿತ್ತನಾಗಿ ಆಚರಿಸಬೇಕು. ಶ್ರುತ್ಯುಕ್ತಕರ್ಮಗಳನ್ನಾಚರಿಸಿದರೆ ಚಿತ್ತಶುದ್ಧಿಯಾಗುತ್ತದೆ. ಅದರಿಂದ ಅವ್ಯಭಿಚರಿತವಾದ ಭಕ್ತಿಯೂ, ಅದರಿಂದ ಜ್ಞಾನವೂ ಹುಟ್ಟಿ ಅಜ್ಞಾನ ಹರಿಯುತ್ತದೆ. ಇದರಿಂದ ಮೋಕ್ಷವುಂಟಾಗುತ್ತದೆ. ಆದ್ದರಿಂದ ಶ್ರುತ್ಯುಕ್ತವಾದ ಕರ್ಮವನ್ನು ಮಾಡಲೇಬೇಕು" ಹೀಗೆ ಶಂಕರಸಹಿತೆಯಲ್ಲಿಯೂ ಚರಣಶಬ್ದವು ಶ್ರೌತಸ್ಮಾರ್ತಸದಾಚಾರಗಳಿಗೆ ಅನ್ವಯಿಸುವುದೆಂದು ಹೇಳಿದೆ. ಲೌಕಿಕರು ಚರಣ-ಆಚಾರ-ಶೀಲ-ವರ್ತನೆ ಇವನ್ನು ಸಮಾನಾರ್ಥಕಗಳೆಂದು ತಿಳಿಸಿದ್ದಾರೆ. "ವೇದದಲ್ಲಿ ಯಾವ ಕರ್ಮಗಳು ನಿರ್ದಿಷ್ಟವಾಗಿದೆಯೋ ಅವನ್ನೇ ಆಚರಿಸಬೇಕು. ಬೇರೆಯವನ್ನು ಆಚರಿಸಬಾರದು. ಯಾವುದು ನಮಗೆ ಸತ್ಕರ್ಮವೋ ಅಂತದನ್ನೇ ನೀನು ಆಚರಿಸಬೇಕು. ಸತ್ಯವನ್ನೇ ಹೇಳಬೇಕು, ಧರ್ಮವನ್ನು ಆಚರಿಸಬೇಕು, ಹೆಂಡವನ್ನು ಕುಡಿಯಬಾರದು, ಮಾಂಸವನ್ನು ತಿನ್ನಬಾರದು, ಪರಸ್ತ್ರೀಯನ್ನು ಭೋಗಿಸಬಾರದು, ಸುಳ್ಳನ್ನು ಹೇಳಬಾರದು, ದೇಹದ ಎಲ್ಲಾ ಅಂಗಗಳಲ್ಲೂ ಇಂದ್ರಿಯಗಳಲ್ಲೂ ಲಿಂಗಸಂಬಂಧವನ್ನೇರ್ಪಡಿಸಿ ಇಷ್ಟಲಿಂಗವನ್ನು ಹಸ್ತದಲ್ಲಿ ಇರಿಸಿ ಪೂಜಿಸಬೇಕು. ಶಕ್ತಿಪರ್ಧಕನಾದ ಈಶ್ವರನನ್ನು ಅರ್ಚಿ

ಸೋಣ. ಅಮೃತಕ್ಕಾಗಿ ಲಿಂಗದೇವನನ್ನು ದೇಹದಲ್ಲಿ ಧರಿಸುತ್ತೇನೆ. ನನ್ನ ಶರೀರವು ಲಿಂಗಸಂಬಂಧದಿಂದ ಸುಂದರವಾಗಲಿ" ಹೀಗೆ ಶ್ರುತಿಗಳಲ್ಲಿ ಸತ್ಕರ್ಮಾನುಷ್ಠಾನರೂಪ ವಾದ ಚರಣವು ಪರಮಶಿವನ ಬಗ್ಗೆ ಭಕ್ತಿಯನ್ನು ಹುಟ್ಟಿಸಲು ಆಶ್ರಯವಾದ ಚಿತ್ತ ಶುದ್ಧಿಯನ್ನು ದೊರಕಿಸುವುದೆಂದು ಹೇಳಿದೆ. ಹೀಗೆ ಶ್ರೌತ್ರಸ್ಮಾರ್ತಕರ್ಮಗಳ ಅನು ಷ್ಠಾನದಿಂದ ಮುಕ್ತನು ನಿತ್ಯಮಂಗಳಕ್ಕಾಶ್ರಯವೂ ನಿರತಿಶಯವೂ ಅಸದೃಶವೂ ಪರ ಮೋತ್ತಮವೂ ಆದ ಮಹಾಕೈಲಾಸದಲ್ಲಿ ಸಾಯುಜ್ಯವನ್ನು ಹೊಂದಿ ಅಲ್ಲಿಂದ ಮತ್ತೆ ಹಿಂತಿರುಗುವುದಿಲ್ಲವೆಂದು ಕಾಷ್ಣಾರ್ಜಿನಿ ಎಂಬ ಆಚಾರ್ಯನು ಚರಣಪದವನ್ನು ಶ್ರೌತ ಸ್ಮಾರ್ತಕರ್ಮಗಳಿಗೆ ಅನ್ವಯಿಸುವುದಾಗಿ ಹೇಳಿದ್ದಾನೆ. ಹೀಗೆ ಸದಾಚಾರವನ್ನು ತಿಳಿಸುವ ಚರಣಶಬ್ದವು ಅಜಹಲ್ಲಕ್ಷಣೆಯಿಂದ ಶ್ರೌತಸ್ಮಾರ್ತಾಚಾರಗಳ ಅಂಗವಾದ ಕರ್ಮವನ್ನು ವಿಧಿಸುತ್ತದೆ.

ನನು ಸುಖದುಃಖಹೇತುಭೂತಸ್ಮಾರ್ತಕಾಮ್ಯಾದಿಕರ್ಮಾಚರಣ ವತ್ಕೇವಲಶ್ರೌತಾಚರಣೇನ ಪುನರಾವೃತ್ತಿವ್ಯಪದೇಶೇ ಸರ್ವೇಷಾಂ ವೇದಾನಾಂ ಪೌರುಷೇಯಾದಿವದಾನರ್ಥಕ್ಯಂ ನಿಷ್ಪ್ರತ್ಯೂಹಮಿತ್ಯಾಶಂಕ್ಯ ತತ್ರಾಹ. ಆನರ್ಥಕ್ಯಮಿತಿ ಚೇನ್ನ ತದಪೇಕ್ಷತ್ವಾತ್ ॥ ೧೦ ॥ ಸ್ಮಾರ್ತ ಕಾಮ್ಯಕರ್ಮವತ್ ಶ್ರೌತಕರ್ಮಾಚರಣಸ್ಯಾಪಿ ಪುನರಾವೃತ್ತ್ಯಭ್ಯುದಯ ಫಲಹೇತುತ್ವೇ ತದುಭಯೋಸ್ಸಮಾಸತ್ವೇನ ಶ್ರೌತಕರ್ಮಣಾಮಾನ ರ್ಥಕ್ಯಮಿತಿ ಚೇನ್ನ ತದಪೇಕ್ಷತ್ವಾತ್. ರಾಜಾಜ್ಞಾನುಸಾರೇಣ ಅಮಾ ತ್ಯಾಜ್ಞಾಪ್ರಕಾಶವತ್ "ಶ್ರುತೇರಿವಾರ್ಥಂ ಸ್ಮೃತಿರನ್ವಗಚ್ಛತ್" ಇತಿ ನ್ಯಾಯೇನ ಸ್ಮೃತೇಸ್ತದಪೇಕ್ಷತ್ವಾತ್ ನ ವೇದಾಧಿಕ್ಯಭಂಗಃ. ತತ್ರಾಪಿ "ಸ್ವಯಂ ವೇದಾಂತವಿಜ್ಞಾನೇ ಪ್ರತ್ಯವಾಯೋ ಮಹಾನ್ಭವೇತ್ । ಸ್ಮೃತಿತಂತ್ರಪುರಾಣೇಭ್ಯೋ ವೇದಾರ್ಥಂ ಗ್ರಾಹಯೇದ್ಬುಧಃ ॥" ಇತಿ ಸ್ಮೃತಾವೇವ ವೇದಾರ್ಥವಿಜ್ಞಾನೇ ನಿಯಮವಿಧಿದರ್ಶನಾತ್, ಅಪಿ ಚ "ಆಚಾರಹೀನಃ ಪುರುಷೋ ಲೋಕೇ ಭವತಿ ನಿಂದಿತಃ । ತಸ್ಮಾದಾ ಚಾರವಾನ್ ಜ್ಞಾನೀ ಭವೇದಾದೇಹಪಾತನಾತ್ । ಆಚಾರಹೀನಂ ನ ಪುನಂತಿ ವೇದಾ ಹ್ಯಾಚಾರಹೀನಂ ನ ಪುನಂತಿ ದೇವಾಃ । ಆಚಾರಹೀನಂ ನಹಿ ಶ್ರೌತಕರ್ಮ ಹ್ಯಾಚಾರಹೀನಂ ನ ಗುರುಃ ಪುನಾತಿ ॥" ಇತ್ಯಾದಿ ವಚನೇಭ್ಯಃ ಸ್ಮಾರ್ತಾಧಿಕಾರಸ್ಯೈವ ಶ್ರೌತಕರ್ಮಾಧಿಕಾರತ್ವೋಪದೇ ಶಾತ್, "ಯತ್ಸತ್ತ್ವೇ ಯತ್ಸತ್ತ್ವಂ" ಇತಿ ನ್ಯಾಯೇನ ತಯೋರಂಗಾಂ ಗಿತ್ವಂ. ತಸ್ಮಾತ್ತಯೋರುತ್ತಮಮಧ್ಯಮಾದಿಭಾವಸತ್ತ್ವೇಽಪಿ ಪರಂಪ ರಯಾ ಮೋಕ್ಷಹೇತುತ್ವಮಿತಿ ಕಾಷ್ಣಾರ್ಜಿನ್ಯಾಚಾರ್ಯಾಭಿಪ್ರಾಯಃ. ತಸ್ಮಾಚ್ಚರಣಶ್ರುತಿಃ ಕರ್ಮೋಪಲಕ್ಷಣಾರ್ಥೇತಿ ವ್ಯವಹ್ರಿಯತೇ. ಕಿಂಚ ಶ್ರೌತಕರ್ಮಣ ಏವ ಸ್ಥೂಲಾರುಂಧತೀನ್ಯಾಯೇನ ಚಿತ್ತಶುದ್ಧಿವ

ದ್ವೇದಾಂತಜ್ಞಾನಕರಣತ್ವಂ. ತದ್ಜ್ಞಾನಸ್ಯಾಪುನರಾವೃತ್ತಿನಿರತಿಶಯ ನಿಶ್ರೇಯಸಫಲಕತ್ವಾನಂಗೀಕಾರೇ "ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ । ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ॥" "ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವಮಾನಶುಃ" "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ," "ಈಶಂ ಜ್ಞಾತ್ವಾ ಅಮೃತಾ ಭವಂತಿ", "ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ," "ತಮೇವ ವಿದಿತ್ವಾತಿಮೃತ್ಯುಮೇತಿ," "ನಾನ್ಯಃ ಪಂಥಾ ವಿದ್ಯತೇಽಯನಾಯ" ಇತ್ಯಾದ್ಯಪೌರುಷೇಯಶ್ರುತಿಶತವಿರೋಧೋ ದುರ್ನಿವಾರಃ.

ಸುಖ ದುಃಖಗಳ ಕಾರಣವೆನಿಸಿದ ಸ್ಮಾರ್ತ, ಕಾಮ್ಯ ಮೊದಲಾದ ಕರ್ಮಾನುಷ್ಠಾನದಂತೆ ಕೇವಲಶ್ರೌತಾಚರಣದಿಂದಲೇ ಜೀವನಿಗೆ ಮತ್ತೆ ಹಿಂತಿರುಗದಂತಾಗಿ ಸಾಯುಜ್ಯಮುಕ್ತಿ ದೊರಕುವುದಾದರೆ ವೇದಗಳೆಲ್ಲವೂ ಕವಿಕರ್ಮವೆನಿಸಿದ ನಾಟಕಗಳಂತೆ ನಿಷ್ಪ್ರಯೋಜನವೆಂದಾಶಂಕಿಸಿ ನಿರಾಕರಿಸುತ್ತಾನೆ. ಸ್ಮೃತ್ಯುಕ್ತವಾದ ಕಾಮ್ಯಕರ್ಮಗಳ ಆಚರಣವೂ ಶ್ರೇಯೋಽಭ್ಯುದಯಗಳನ್ನು ಸಮಾನವಾಗಿ ಸಾಧಿಸುವುದಾದರೂ ಶ್ರೌತಕರ್ಮಗಳನ್ನು ನಿಷ್ಪ್ರಯೋಜನವೆಂದು ಹೇಳುವುದು ಯುಕ್ತವಲ್ಲ. ರಾಜನ ಆಜ್ಞೆಯನ್ನು ಅನುಸರಿಸಿಯೇ ಮಂತ್ರಿಯ ಆಜ್ಞೆಯು ಹೊರಡುವಂತೆ ಶ್ರುತಿಯ ಅರ್ಥವನ್ನು ಅನುಸರಿಸಿಕೊಂಡೇ ಸ್ಮೃತಿ ಹೊರಡುವುದರಿಂದ ವೇದದ ಶ್ರೇಷ್ಠತೆಗೆ ಭಂಗಬರುವಂತಿಲ್ಲ. ಅದರಲ್ಲೂ ವೇದಾಂತವನ್ನು ತಿಳಿಯಲು ಬಹಳ ವಿಘ್ನಗಳು ಸಂಭವಿಸುತ್ತವೆ. "ಸ್ಮೃತಿತಂತ್ರಪುರಾಣಗಳ ಸಹಾಯದಿಂದಲೇ ವೇದಾರ್ಥವನ್ನು ಗ್ರಹಿಸಬೇಕು" ಎಂದು ಸ್ಮೃತಿಯಲ್ಲಿ ವೇದಾರ್ಥನಿರ್ಣಯಕ್ಕೆ ನಿಯಮವನ್ನು ವಿಧಿಸಲಾಗಿದೆ. "ಆಚಾರವಿಲ್ಲದವನು ಲೋಕದಲ್ಲಿ ನಿಂದ್ಯನೆನಿಸುತ್ತಾನೆ. ಆದ್ದರಿಂದ ಜ್ಞಾನಿಯು ದೇಹವಿಯೋಗವಾಗುವವರೆಗೂ ಕರ್ಮವನ್ನಾಚರಿಸಬೇಕು. ಆಚಾರಹೀನನನ್ನು ವೇದಗಳೂ ದೇವತೆಗಳೂ ದೂರಮಾಡುತ್ತವೆ. ಶೌತಸ್ಮಾರ್ತಕರ್ಮಗಳನ್ನು ತೊರೆದವನು ಗುರುವಿನಿಂದಲೂ ಉದ್ಧಾರವಾಗಲಾರನು," ಹೀಗೆ ಸ್ಮೃತಿಗಳಲ್ಲಿ ಹೇಳಿರುವುದರಿಂದ ಸ್ಮಾರ್ತಶ್ರೌತಕರ್ಮಗಳೆರಡಕ್ಕೂ ಅಂಗಾಂಗಿಭಾವದಿಂದ ಹೊಂದಿಕೆ ಇದೆ. ಅವುಗಳಲ್ಲಿ ಉತ್ತಮ ಮಧ್ಯಮ ಎಂಬ ಭಾವವಿದ್ದರೂ ಅವೆರಡು ಬಗೆಯ ಕರ್ಮಾನುಷ್ಠಾನವೂ ಪರಂಪರೆಯಿಂದ ಮೋಕ್ಷಕ್ಕೆ ಕಾರಣವೆಂದು ಕಾಷ್ಣಾರ್ಜಿಯ ಅಭಿಪ್ರಾಯವಾಗಿದೆ. ಆದ್ದರಿಂದ ಚರಣಶ್ರುತಿಯು ಕರ್ಮಾನುಷ್ಠಾನಕ್ಕೆ ಅನ್ವಯಿಸುವುದೆಂದು ತಿಳಿಯಬೇಕು. ಇದೂ ಅಲ್ಲದೆ, ಶ್ರೌತಕರ್ಮವೇ ಸ್ಥೂಲಾರುಂಧತೀನ್ಯಾಯದಿಂದ ಚಿತ್ತಶುದ್ಧಿಯನ್ನು ದೊರಕಿಸಿ ವೇದಾಂತಜ್ಞಾನಕ್ಕೆ ಸಾಧನವೆನಿಸಿದೆ. ಆ ಜ್ಞಾನಕ್ಕೆ ಪುನರಾವೃತ್ತಿರಹಿತ ನಿರತಿಶಯಾನಂದವೆಂಬ

ಶ್ರೇಯಸ್ಸೇ ಫಲವೆಂದು ಅಂಗೀಕರಿಸದಿದ್ದರೆ "ಕರ್ಮದಿಂದ ಗಳಿಸಿದ ಲೋಕಗಳ ಅಸ್ಥಿರತೆಯನ್ನು ಗ್ರಹಿಸಿ ಜ್ಞಾನಿಯು ವೈರಾಗ್ಯವನ್ನು ಹೊಂದಬೇಕು. ಅನಿತ್ಯ ಕರ್ಮಗಳಿಂದ ನಿತ್ಯಸುಖವೆನಿಸಿದ ಮುಕ್ತಿ ದೊರಕುವುದಿಲ್ಲ. ಇದನ್ನು ತಿಳಿಯು ಲಿಕ್ಕಾಗಿಯೇ ಶಿಷ್ಯನು ಸಮಿತ್ಪಾಣಿಯಾಗಿ ಬ್ರಹ್ಮನಿಷ್ಠನೂ ಶ್ರೋತ್ರಿಯನೂ ಆದ ಗುರುವನ್ನಾಶ್ರಯಿಸಬೇಕು" "ಅಮೃತವು ಕರ್ಮ, ಸಂತಾನ, ಐಶ್ವರ್ಯಗಳಿಂದ ದೊರಕುವುದಿಲ್ಲ; ಆದರೆ ತ್ಯಾಗ ಒಂದರಿಂದಲೇ ಸಾಧ್ಯ." "ಸ್ವರ್ಗಕಾಮನು ಜ್ಯೋತಿಷ್ಟೋಮವನ್ನಾಚರಿಸಬೇಕು" "ಈಶನನ್ನು ತಿಳಿದು ಅಮೃತರಾಗುತ್ತಾರೆ" "ಶಿವನ ನಿತ್ಯಚಿಂತನೆ, ಧಾರಣ, ತದೇಕಾಸಕ್ತಿಗಳಿಂದಲೇ ಜೀವನಿಗೆ ಮೋಹಪಾಶ ತೊಲಗುವುದು." "ಅವನನ್ನು ತಿಳಿದವನೇ ಮೃತ್ಯುವನ್ನು ದಾಟುತ್ತಾನೆ" "ಮುಕ್ತಿಗೆ ಬೇರೆ ದಾರಿ ಇಲ್ಲ" ಹೀಗೆ ತಿಳಿಸಿರುವ ಅನೇಕ ಶ್ರುತಿಗಳು ವಿರುದ್ಧವಾಗುತ್ತವೆ. ಆದ್ದರಿಂದ ಶ್ರೌತಕರ್ಮಾನುಷ್ಠಾನ ಅನಿವಾರ್ಯವೆನಿಸಿದೆ.

ಸ್ವೇಷ್ಟಾನುಸಾರೇಣಾಚಾರ್ಯಾಂತರಾಭಿಪ್ರಾಯಂ ಪ್ರದರ್ಶ್ಯ ಸ್ವಾಭಿಪ್ರಾಯಮಾಹ. **ಸುಕೃತದುಷ್ಕೃತೇ ಏವೇತಿ ತು ಬಾದರಿಃ ॥ ೧೧ ॥** "ರಮಣೀಯಚರಣಾಃ ಕಪೂಯಚರಣಾಃ." ಇತ್ಯತ್ರ ಚರಣಶಬ್ದೇನ ಸುಕೃತದುಷ್ಕೃತೇ ಏವ ಶಕ್ತ್ಯಾ ಪ್ರತಿಪಾದ್ಯೇತೇ. "ಪುಣ್ಯಂ ಕರ್ಮಾಚರತಿ. ಪಾಪಂ ಕರ್ಮಾಚರತಿ" ಇತಿ ಕರ್ಮಣಿ ಚರತೇಃ ಪ್ರಯೋಗಾತ್ ಪೃಥಙ್ನಿರ್ದೇಶಸ್ಯ ಚ ಪ್ರಾತ್ಯಕ್ಷಿಕಶ್ರುತಿಸಿದ್ಧಾಚಾರಾನುಮಿತಶ್ರುತಿವಿಷಯತ್ವೇನ ಗೋಬಲೀವರ್ದನ್ಯಾಯೇನೋಪಪತ್ತೇಃ. "ಮುಖ್ಯೇ ಸಂಭವತಿ ನ ಲಕ್ಷಣಾ ನ್ಯಾಯ್ಯಾ" ಇತಿ ಸುಕೃತದುಷ್ಕೃತೇ ಏವ ಚರಣಶಬ್ದಾಭಿಧೇಯೇ ಇತಿ ಬಾದರಿರಾಚಾರ್ಯೋ ಮನ್ಯತೇ. ಅತ್ರ ಬಾದರಿಮತಮೇವ ಸ್ವಮತಂ. ಆಚಾರ್ಯಾನುಮಿತಶ್ರುತಿವಿಹಿತಸಂಧ್ಯಾವಂದನಾದೇಃ ಕರ್ಮಾಂತರಾಧಿಕಾರಸಂಪಾದನಂ ಫಲಮಿತಿ ತು ಸ್ವೀಕೃತಂ. ಉತ ಅಂಗರಹಿತಸ್ಯಾಂಗಿನಃ ಫಲಜನಕತ್ವಾಭಾವಾದಾಚಾರಸಹಿತಮೇವ ವೈದಿಕಂ ಕರ್ಮ ಫಲಜನಕಂ. ಅತಶ್ಚರಣಶಬ್ದಸ್ಯಾಜಹಲ್ಲಕ್ಷಣೈವಾಂಗೀಕರ್ತವ್ಯೇತಿ ನಿಶ್ಚೀಯತೇ. ತಸ್ಮಾತ್ಸಾನುಶಯಾ ಏವ ಪ್ರತ್ಯವರೋಹಂತೀತಿ ಸಿದ್ಧಂ.

ಈ ಬಗ್ಗೆ ಬೇರೊಬ್ಬ ಆಚಾರ್ಯನ ಅಭಿಪ್ರಾಯವನ್ನು ಹೇಳಿ ವ್ಯಾಸರು ತನ್ನ ಅಭಿಪ್ರಾಯವನ್ನು ತಿಳಿಸುತ್ತಾರೆ. ಚರಣಶಬ್ದವು ಸುಕೃತದುಷ್ಕೃತಗಳನ್ನು ಅಭಿಧಾವೃತ್ತಿಯಿಂದಲೇ ತಿಳಿಸುತ್ತದೆ. "ಪುಣ್ಯಕರ್ಮವನ್ನಾಚರಿಸುತ್ತಾನ" "ಪಾಪಕರ್ಮವನ್ನಾಚರಿಸುತ್ತಾನೆ" ಎಂಬ ಪ್ರಯೋಗಗಳಲ್ಲಿ ಚರ್ ಧಾತುವನ್ನು ಪುಣ್ಯ ಪಾಪಕರ್ಮಗಳಲ್ಲಿಯೇ ಪ್ರಯೋಗಿಸಲಾಗಿದೆ. ಈ ಪ್ರಯೋಗದಲ್ಲಿ ಕರ್ಮವನ್ನೂ ಮತ್ತು ಆಚರಣವನ್ನೂ ಬೇರೆಬೇರೆಯಾಗಿ ನಿರ್ದೇಶಿಸಿದ್ದರೂ ಗೋವನ್ನೂ ಎತ್ತನ್ನೂ ತೆಗೆದುಕೊಂಡು

ಬರುವಂತೆ ಒಬ್ಬನು ಹೇಳಿದಾಗ ಎರಡು ಪದಗಳೂ ಒಂದೇ ವ್ಯಕ್ತಿಗೆ ಅನ್ವಯಿಸುವಂತೆ ಕರ್ಮ ಮತ್ತು ಚರಣ ಇವೆರಡು ಕರ್ಮಗಳೂ ಪುಣ್ಯಪಾಪಕರ್ಮಗಳನ್ನೇ ಬೋಧಿಸುತ್ತವೆ. ಇಲ್ಲಿ ಲಕ್ಷಣೆಯನ್ನಾಶ್ರಯಿಸುವುದು ನ್ಯಾಯವಲ್ಲವಾದ್ದರಿಂದ ಚರಣಶಬ್ದವು ಮುಖ್ಯವೃತ್ತಿಯಿಂದಲೇ ಸುಕೃತದುಷ್ಕೃತಗಳನ್ನು ತಿಳಿಸುತ್ತದೆ ಎಂದು ಬಾದರ್ಯಾಚಾರ್ಯನು ಹೇಳುತ್ತಾನೆ. ಬಾದರಿಮತವೇ ತನಗೂ ಸಮ್ಮತವೆಂದು ಬಾದರಾಯಣರು ತಿಳಿಸಿದ್ದಾರೆ. ಈ ಆಚಾರ್ಯರು ಹೇಳುವಂತೆ ಅನುಮಿತವಾದ ಶ್ರುತಿಯಿಂದ ವಿಹಿತವಾದ ಸಂಧ್ಯಾವಂದನಾದಿ ಕರ್ಮಗಳು ವೈದಿಕಕರ್ಮಗಳ ಆಚರಣಕ್ಕೆ ಅವಕಾಶವನ್ನು ನೀಡುತ್ತವೆ. ಹೀಗೆ ಅಂಗಕರ್ಮಗಳನ್ನಾಚರಿಸದಿದ್ದರೆ ವೈದಿಕಕರ್ಮಗಳು ಫಲವನ್ನು ಕೊಡುವುದಿಲ್ಲವಾದ್ದರಿಂದ ಅಜಹಲ್ಲಕ್ಷಣೆಯಿಂದ ಚರಣಶಬ್ದವು ಶ್ರೌತಸ್ಮಾರ್ತವೆಂಬ ಎರಡುವಿಧವಾದ ಕರ್ಮಗಳನ್ನೂ ಬೋಧಿಸುತ್ತವೆ. ಇದರಿಂದ ಜೀವನು ಕರ್ಮಶೇಷದೊಂದಿಗೆ ಈ ಲೋಕಕ್ಕೆ ಇಳಿದು ಬರುತ್ತಾನೆ ಎಂಬುದು ನಿಶ್ಚಿತವಾಯಿತು.

ಏವಮಿಷ್ಟಾಪೂರ್ತದತ್ತಕರ್ಮಿಣಾಂ ಸುಕೃತಿನಾಂ ಸ್ವರ್ಗಲೋಕಗಮನಪ್ರಸಾಧನೇ ದುಷ್ಕೃತಾನಾಂ ಕಾ ಗತಿರಿತ್ಯಾಶಂಕಾಯಾಮಾಹ. ಅನಿಷ್ಟಾದಿಕಾರ್ಯಾಧಿಕರಣಂ ‖ ೩ ‖ ಅನಿಷ್ಟಾದಿಕಾರಿಣಾಮಪಿ ಚ ಶ್ರುತಂ ‖ ೧೨ ‖ ಅನಿಷ್ಟಾದಿಕಾರಿಣಾಂ ದುಷ್ಕೃತಿನಾಂ ಶ್ರುತಮಪಿ ಚ, ಯಥಾ ಶಮನಕಿಂಕಾರಾನುಸಾರೇಣ ವೈವಸ್ವತದರ್ಶನಂ, ತಥಾ " ಯೇ ವೈಕೇ ಚಾಸ್ಮಾಲ್ಲೋಕಾತ್ಪ್ರಯಾಂತಿ ಚಂದ್ರಮಸಮೇವ ತೇ ಸರ್ವೇ ಗಚ್ಛಂತಿ " ಇತಿ ಶ್ರುತಿದರ್ಶನಾತ್ ತದುಭಯೋರಿಂದುಮಂಡಲದ್ವಾರಾ ಪುಣ್ಯಾಪುಣ್ಯಲೋಕಪ್ರಾಪ್ತಿಃ. ತಥಾಪಿ ದುಷ್ಕೃತಿನಾಂ ನಿರಯಾನುಭವೋ ನ ನಿವಾರ್ಯತೇ. ಶ್ರುತೌ ಇಷ್ಟಾನಿಷ್ಟಾದಿಕಾರಿಣಾಮಪಿ ಶಶಿಮಂಡಲಗತೇರುಪದೇಶಾತ್ಸುಕೃತಿನಾಮಿವ ದುಷ್ಕೃತಿನಾಂ ಸ್ವರ್ಗಾನುಭೂತಿರಸ್ತಿ ನವೇತಿ ಚಿಂತ್ಯತೇ. " ಯೇ ವೈಕೇ ಚಾಸ್ಮಾಲ್ಲೋಕಾತ್ಪ್ರಯಾಂತಿ ಚಂದ್ರಮಸಮೇವ ತೇ ಸರ್ವೇ ಗಚ್ಛಂತಿ " ಇತಿ ಶ್ರುತೌ ಪುಣ್ಯಾಪುಣ್ಯಕರ್ಮಿಣಾಂ ಸರ್ವೇಷಾಂ ಅವಿಶೇಷಗತಿನಿರೂಪಣಾತ್ತದುಭಯೋರಪಿ ಸ್ವರ್ಗಾನುಭೂತಿರಸ್ತೀತಿ ಪ್ರಾಪ್ತೇ ಪ್ರಚಕ್ಷ್ಮಹೇ. " ಚಂದ್ರಮಸಮೇವ ತೇ ಸರ್ವೇ ಗಚ್ಛಂತಿ " ಇತಿ ಶ್ರುತೌ ಅನಿಷ್ಟಾದಿಕಾರಿಣಾಂ ಚಂದ್ರಲೋಕಗಮನಂ ಶ್ರುತಮಪಿ ಚ ಸ್ವಕರ್ಮಾನುಸಾರೇಣ ಪಾಪಿನಾಂ ನರಕಪ್ರಾಪ್ತಿರೇವ ನಿರ್ಣೀಯತೇ. ಶ್ರುತ್ಯಂತರೇಽಪಿ " ಯಮಶಾಸನಾದ್ದುಷ್ಕೃತಿಫಲಮನುಭೂಯೈವ ತಚ್ಛೇಷೇಣ ಮರ್ತ್ಯಲೋಕಂ ಅಹರಹರ್ಗಚ್ಛತಿ " ಇತಿ. " ಸುಕರ್ಮಣಾ ಸುಧೀಶ್ಚಂದ್ರಂ ಪ್ರಾಪ್ಯ ವೈವಸ್ವತಂ ಭಟೈಃ । ದೃಷ್ಟ್ವಾ ವೈವಸ್ವತಂ ಪೂರ್ವಂ ತತಸ್ಸ್ವರ್ಗಂ ಪ್ರಯಾತಿ ಹಿ । ದುರ್ಮತಿಃ ಪಾಪಕರ್ಮಣಾ ಕ್ರೂರೈರ್ವೈವಸ್ವತಾಂತಕೈಃ । ಚಂದ್ರ

**ದ್ವಾರಾ ಯಮಂ ದೃಷ್ಟ್ವಾ ಸ್ವಸ್ಯ ಕರ್ಮಾನುಸಾರತಃ । ದುಃಖಾತ್ಮಕಂ ಮಹಾಘೋರನರಕಂ ಪ್ರತಿಪದ್ಯತೇ ॥" ಇತಿ ಸ್ಕಾಂದೇ ಶ್ರೂಯತೇ. ತಸ್ಮಾತ್ತದುಭಯೋರಪಿ ಚಂದ್ರಪ್ರಾಪ್ತಿಸತ್ತ್ವೇಽಪಿ ಸ್ವಕರ್ಮಾನುಸಾರೇಣ ದುಷ್ಕೃತೀ ಯಮಲೋಕೇ ತದಾಜ್ಞಯಾ ನರಕೇ ಮಹಾಘೋರ ದುಃಖಮನುಭೂಯ ತತ್ಕರ್ಮವಿಶೇಷೇಣ ಕುತ್ಸಿತಯೋನಿಂ ಲಭತೇ.**

ಹೀಗೆ ಲೋಕಕಲ್ಯಾಣಕ್ಕಾಗಿ ಸತ್ಕರ್ಮಗಳನ್ನಾಚರಿಸಿದವರಿಗೆ ಸ್ವರ್ಗಲೋಕ ದೊರಕುವುದೆಂದು ಹೇಳಿದ್ದರಿಂದ ದುಷ್ಕರ್ಮಿಗಳಿಗೆ ಗತಿ ಏನೆಂದು ಆಶಂಕಿಸಿ ಅದನ್ನು ಮುಂದೆ ತಿಳಿಸುತ್ತಾನೆ. ಅನಿಷ್ಟಕಾರ್ಯಗಳನ್ನಾಚರಿಸಿದವರು ಯಮನ ಸೇವಕರೊಡನೆ ಯಮಲೋಕಕ್ಕೆ ಹೋಗಿ ಯಮನನ್ನು ಕಾಣುತ್ತಾರೆಂದು ಶ್ರುತಿಯಲ್ಲಿ ಹೇಳಿದೆ. "ಇಲ್ಲಿಂದ ಹೊರಡುವವರೆಲ್ಲರೂ ಚಂದ್ರಲೋಕಕ್ಕೆ ಹೋಗುತ್ತಾರೆ" ಎಂಬ ಶ್ರುತಿಯಂತೆ ಸುಕೃತಿ ಮತ್ತು ದುಷ್ಕರ್ಮಿ ಇಬ್ಬರೂ ಚಂದ್ರಮಂಡಲದ ಮೂಲಕವೇ ಸ್ವರ್ಗ ನರಕಗಳನ್ನು ಹೊಂದುತ್ತಾರೆಯಾದ್ದರಿಂದ ದುಷ್ಕರ್ಮಿಗಳಿಗೆ ನರಕದ ಅನುಭವ ತಪ್ಪುವಂತೆಯೇ ಇಲ್ಲ. ಆದರೆ ಶ್ರುತಿಯಲ್ಲಿ ಎಲ್ಲರಿಗೂ ಸಮಾನವಾಗಿ ಚಂದ್ರಮಂಡಲದ ಮಾರ್ಗವನ್ನೇ ಹೇಳಿರುವುದರಿಂದ ಸುಕೃತಿಗಳಂತೆಯೇ ದುಷ್ಕರ್ಮಿಗಳಿಗೂ ಸ್ವರ್ಗದ ಭೋಗ ಇರುತ್ತೆಯೇ ಇಲ್ಲವೇ ಎಂಬುದನ್ನು ಇಲ್ಲಿ ವಿಮರ್ಶಿಸಲಾಗಿದೆ. ಶ್ರುತಿಯಲ್ಲಿ ಪುಣ್ಯಾತ್ಮರಿಗೂ ಪಾಪಿಗಳಿಗೂ ಚಂದ್ರಮಂಡಲದ ಮಾರ್ಗವನ್ನು ಸಮನಾಗಿ ಹೇಳಿರುವುದರಿಂದ ಇಬ್ಬರಿಗೂ ಸ್ವರ್ಗದ ಭೋಗವೂ ಸಮನವಾಗಿರಲೇಬೇಕು ಎಂದು ಆಕ್ಷೇಪ ಬಂದರೆ ಅದಕ್ಕೆ ಸೂತ್ರವು ಸಮಾಧಾನವನ್ನು ಹೇಳಿದೆ. "ಎಲ್ಲರೂ ಚಂದ್ರಲೋಕಕ್ಕೆ ಹೋಗುತ್ತಾರೆ" ಎಂಬ ಶ್ರುತಿಯಲ್ಲಿ ಸತ್ಕರ್ಮಿಗಳಂತೆ ದುಷ್ಕರ್ಮಿಗಳೂ ಚಂದ್ರಲೋಕಕ್ಕೆ ಹೋಗುತ್ತಾರೆ" ಎಂದು ದುಷ್ಕರ್ಮಿಗಳಿಗೂ ಚಂದ್ರಲೋಕಗಮನವನ್ನು ಹೇಳಿದ್ದರೂ, ಅವರವರಿಗೆ ಅವರವರ ಕರ್ಮದಂತೆ ನರಕವೇ ದೊರಕುವುದೆಂದು ನಿರ್ಣಯಿಸಲಾಗಿದೆ. ಬೇರೆ ಶ್ರುತಿಯಲ್ಲೂ "ಯಮನ ಆಜ್ಞೆಯಂತೆ ದುಷ್ಕರ್ಮಿಗಳು ಆ ಕರ್ಮದ ಫಲವನ್ನು ಅನುಭವಿಸಿ ಕೊಂಚ ಕರ್ಮದೊಡನೆ ಮರ್ತ್ಯಲೋಕಕ್ಕೆ ಮತ್ತೆ ಹಿಂತಿರುಗುತ್ತಾರೆ" ಎಂದೂ, "ಸತ್ಕರ್ಮಿಯು ಯಮನ ಭಟರೊಡನೆ ಯಮಲೋಕಕ್ಕೆ ಹೋಗಿ ಯಮನನ್ನು ಕಂಡು ಅವನ ಆಜ್ಞೆಯಂತೆ ಸ್ವರ್ಗಕ್ಕೆ ಹೋಗುತ್ತಾರೆ." ಎಂದೂ ಹೇಳಿರುವುದರಿಂದ ದುಷ್ಕರ್ಮಿಗಳಿಗೆ ನರಕ ತಪ್ಪುವಂತಿಲ್ಲ. "ಜ್ಞಾನಿಯು ಯಮನ ಬಳಿಗೆ ಹೋದರೂ ಸತ್ಕರ್ಮದ ಫಲನಾಗಿ ಮತ್ತೆ ಸ್ವರ್ಗವನ್ನು ಸೇರುತ್ತಾನೆ. ದುಷ್ಕರ್ಮಿಯು ತನ್ನ ದುಷ್ಕರ್ಮದ ಫಲವಾಗಿ ಚಂದ್ರಲೋಕದಿಂದ ಯಮನ ಬಳಿಗೆ ಹೋಗಿ ದುಃಖಮಯವಾದ ನರಕವನ್ನು ಹೊಂದುತ್ತಾನೆ." ಎಂದು ಸ್ಕಾಂದಪುರಾಣದಲ್ಲಿ ಹೇಳಿದೆ. ಆದ್ದರಿಂದ ಇಬ್ಬರೂ ಚಂದ್ರಲೋಕಕ್ಕೆ ಹೋದರೂ ಸಹ ದುಷ್ಕರ್ಮಿಗಳು ತಮ್ಮ ಕರ್ಮಕ್ಕೆ ತಕ್ಕಂತೆ ಯಮಲೋಕದಲ್ಲಿ ಯಮನ ಆಜ್ಞೆಯಂತೆ ನರಕದಲ್ಲಿ ಭಯಂಕರವಾದ ದುಃಖವನ್ನು ಅನುಭವಿಸಿ ಕರ್ಮಶೇಷದೊಡನೆ

ತುಚ್ಛವಾದ ಜನ್ಮವನ್ನು ಹೊಂದುತ್ತಾರೆ ಎಂದು ವ್ಯವಸ್ಥೆ ಮಾಡಲಾಗಿದೆ.

" ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ ", " ಅಹರಹಸ್ಸಂಧ್ಯಾಮುಪಾಸೀತ, ನೋ ಚೇನ್ನರಕಂ ವ್ರಜೇತ್ ", " ಪುಣ್ಯಾತ್ಸ್ವರ್ಗೋ ಪಾಪಾನ್ನರಕಃ" ಇತ್ಯಾದಿಷು ಕರ್ಮಣ ಏವ ಕರ್ತೃತ್ವದರ್ಶನಾದ್ಯಮಸ್ಯ ಜೀವಕೃತಪುಣ್ಯಾಪುಣ್ಯಾನುಭವಪ್ರದಾಯಕತ್ವಂ ಕಥಮುಪಪನ್ನಮಿತ್ಯಾಶಂಕ್ಯ ತತ್ರಾಹ. ಸಂಯಮನೇ ತ್ವನುಭೂಯ ಇತರೇಷಾಮಾರೋಹಾವರೋಹೌ ತದ್ಗತಿದರ್ಶನಾತ್ ||೧೩|| ಯಥಾ ಲೋಕೇ ದುಷ್ಕೃತಿನಾಂ ತತ್ಕರ್ಮಾನುಸಾರೇಣ ಪ್ರಭುದಂಡನಂ ತದ್ವತ್ಸುಕೃತೇತರಾಣಾಂ ಸಂಯಮನೇ ನರಕೇ ಸ್ವದುಷ್ಕೃತಕರ್ಮಾನುಸರಣೇನ ಯಮಶಾಸನಾತ್ತದನುಭೂಯ ಪುನರಾರೋಹಾವರೋಹೌ, ಪ್ರಥಮಂ ನರಕಂ ಪ್ರಾಪ್ಯ ತತ್ಕರ್ಮಾವಶೇಷೇಣ ಪುನರಾಗಮನಂ ಚೇತ್ಯೇವಂ ವಿಧಾರೋಹಾವರೋಹೌ ಅಂಗೀಕರ್ತವ್ಯೌ; ಕಸ್ಮಾತ್ತದ್ಗತಿದರ್ಶನಾತ್. " ವೈವಸ್ವತಂ ಸಂಯಮನಂ ಜನಾನಾಂ ಯಮಂ ರಾಜಾನಂ " ಇತ್ಯಾದಿಷು ಜೀವಾನಾಂ ಯಮಾಜ್ಞಾಧಾರಕತ್ವವ್ಯಪದೇಶಾತ್, ನ ಜಡಸ್ಯ ಕರ್ಮಣ ಏವ ಸ್ವತಂತ್ರತ್ವಂ. ತಸ್ಮಾತ್ಕರ್ಮೈಕಕಾರಣತ್ವಪ್ರಧಾನಪೂರ್ವಮೀಮಾಂಸಾವಾದಃ ಶ್ರುತಿಯುಕ್ತ್ಯನುಭವವಿರುದ್ಧ ಏವ.

" ಸ್ವರ್ಗಾಪೇಕ್ಷೆಯು ಜ್ಯೋತಿಷ್ಟೋಮವನ್ನಾಚರಿಸಬೇಕು " " ಪ್ರತಿದಿನವೂ ಸಂಧ್ಯಾವಂದನವನ್ನು ಮಾಡಬೇಕು, ಇಲ್ಲವಾದರೆ ನರಕವುಂಟಾಗುತ್ತದೆ." " ಪುಣ್ಯದಿಂದ ಸ್ವರ್ಗವೂ ಪಾಪದಿಂದ ನರಕವೂ ದೊರಕುತ್ತವೆ" ಈ ಬಗೆಯ ವಾಕ್ಯಗಳಲ್ಲಿ ಕರ್ಮವೇ ಫಲವನ್ನುಕೊಡುವುದಾಗಿ ಕಂಡುಬರುವುದರಿಂದ ಜೀವನ ಪುಣ್ಯಪಾಪಕರ್ಮಗಳಿಗೆ ಯಮನು ಫಲವನ್ನು ಕೊಡುವನೆಂಬುದು ಹೇಗೆ ಹೊಂದಿಕೆಯಾಗುತ್ತದೆ ? ಎಂದಾಶಂಕಿಸಿ ನಿರಾಕರಿಸುತ್ತಾನೆ. ಲೋಕದಲ್ಲಿ ತಪ್ಪುಮಾಡಿದವರಿಗೆ ಅವರವರ ಕರ್ಮದಂತೆ ರಾಜನಿಂದ ಶಿಕ್ಷೆಯುಂಟಾಗುವಂತೆ ಪಾಪಿಗಳು ತಮ್ಮ ದುಷ್ಕರ್ಮಕ್ಕನುಗುಣವಾಗಿ ಯಮನ ಆಜ್ಞೆಯಂತೆ ಮೊದಲು ನರಕಕ್ಕೆ ಹೋಗಿ ಆ ಕರ್ಮಶೇಷದೊಡನೆ ಮತ್ತೆ ಹಿಂತಿರುಗುತ್ತಾರೆ ಎಂದು ಹೇಳಿರುವುದರಿಂದ ಅವರಿಗೂ ಗಮನಾಗಮನಗಳನ್ನು ಅಂಗಿಕರಿಸಲೇಬೇಕು. ಶ್ರುತಿಯಲ್ಲಿ ಜೀವರೆಲ್ಲರೂ ಯಮಧರ್ಮರಾಜನ ಆಜ್ಞೆಯನ್ನು ಪಾಲಿಸಬೇಕೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಜಡವಾದ ಕರ್ಮಕ್ಕೆ ಫಲವನ್ನು ಕೊಡಲು ಸ್ವಾತಂತ್ರ್ಯವಿಲ್ಲ. ಆದ್ದರಿಂದ ಕರ್ಮವೊಂದನ್ನೇ ಪ್ರಧಾನ ಕಾರಣವೆಂದು ಹೇಳುವ ಪೂರ್ವಮೀಮಾಂಸಾವಾದವನ್ನು ಶ್ರುತಿ ಯುಕ್ತಿ ಮತ್ತು ಅನುಭವಗಳಿಗೆ ವಿರುದ್ಧವೆಂದೇ ತಿಳಿಯಬೇಕು.

ನನು ವೈವಸ್ವತಸ್ಯೈವ ಜೀವಕೃತಪುಣ್ಯಾಪುಣ್ಯನಿಯಾಮಕತ್ವೇನ ಪರಬ್ರಹ್ಮಣೋ ನಿಷ್ಪ್ರಯೋಜಕತ್ವಮಸ್ತೀತ್ಯಾಶಂಕ್ಯ ತತ್ರಾಹ. ಸ್ಮರಂತಿ

ಚ ॥ ೧೪ ॥ "ಈಶಾನಸ್ಸರ್ವವಿದ್ಯಾನಾಮೀಶ್ವರಸ್ಸರ್ವಭೂತಾನಾಂ", "ಏಷ ಏವ ಸಾಧುಕರ್ಮ ಕಾರಯತಿ" ಇತ್ಯಾದಿಶ್ರುತಿಷು ಬ್ರಹ್ಮಾದಿ ಸರ್ವಭೂತನಿಯಾಮಕತ್ವಂ ಶಿವಸ್ಯೈವ ಸ್ಮರಂತಿ. ತಸ್ಮಾತ್ತಜ್ಜೀವಾನು ಗುಣ್ಯಸ್ವಕರ್ತೃತ್ವಂ ನೇತರಸ್ಯೋಪಪನ್ನಂ. ಅತಃ "ಭೀಷಾಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ । ಭೀಷಾಸ್ಮಾದಗ್ನಿಶ್ಚೇಂದ್ರಶ್ಚ ಮೃತ್ಯು ರ್ಧಾವತಿ ಪಂಚಮಃ" ಇತ್ಯಾದಿಷು ಪವನಾದಿಸರ್ವದೇವಾನಾಂ ಭಯ ಹೇತುತ್ವಂ ಚ ದೃಷ್ಟಂ. ಯಥಾ ಲೋಕೇ ರಾಜಾಜ್ಞಾನುಸಾರೇಣ ಸಚಿವಾದೀನಾಂ ಲೋಕಕೃತಕರ್ಮಾನುಗುಣ್ಯವಿಚಾರಕತ್ವತತ್ಫಲಪ್ರಾಪ ಯಿತೃತ್ವಯೋಃ ಸಂಭವೇಽಪಿ ತತ್ಕರ್ತೃತ್ವಂ ರಾಜ್ಞಃ ಪ್ರತಿಪದ್ಯತೇ, ತದ್ವ ದ್ವೈವಸ್ವತಸ್ಯಾಪಿ ಶಿವಾಜ್ಞಯಾ ಸರ್ವಭೂತಪುಣ್ಯಾಪುಣ್ಯವಿಚಾರಕತ್ವ ತತ್ಫಲಪ್ರದಾಯಕತ್ವಯೋಶ್ಚ ಸತ್ತ್ವೇಽಪಿ ತತ್ಕರ್ತೃತ್ವಂ ಶಿವಸ್ಯೈವ ನಿರ್ದಿಶ್ಯತೇ. "ಸ ಏವ ವಿಷ್ಣುಸ್ಸ ಪ್ರಾಣಸ್ಸ ಕಾಲೋಽಗ್ನಿಸ್ಸ ಚಂದ್ರ ಮಾಃ । ಸ ಏವ ಸರ್ವಂ ಯದ್ಭೂತಂ ಯಚ್ಚ ಭವ್ಯಂ ಸನಾತನಂ ॥", "ಸೋಽಂತರಾದಂತರಂ ಪ್ರಾವಿಶತ್", "ಯೋ ರುದ್ರೋ ಅಗ್ನೌ" ಇತ್ಯಾದಿಶ್ರುತಿಶತೇಷು ಸರ್ವೋಪಾದಾನತ್ವಸರ್ವನಿಯಾಮಕತ್ವಸರ್ವಾಂ ತರ್ಯಾಮಿತ್ವಾದಿಧರ್ಮಾಣಾಂ ತಸ್ಯೈವೋಪದೇಶಾತ್ ಬ್ರಹ್ಮವಿಷ್ಣು ರುದ್ರೇಂದ್ರಚಂದ್ರದಿನೇಂದ್ರಮೃತ್ಯುಕಾಲಾದ್ಯಂತರ್ಯಾಮಿತಯಾ ತಸ್ಯೈವ ಸರ್ವಕರ್ತೃತ್ವಮುಪಪನ್ನಂ. ಸ್ಮೃತಾವಪಿ ತದ್ವದುಪದಿ ಶ್ಯತೇ. "ಶಿವಾಜ್ಞಯಾ ಹರಿಬ್ರಹ್ಮರುದ್ರಮೃತ್ಯುಯಮಾದೀನಾಂ । ಸ್ವಕಾರ್ಯೇಷು ಪ್ರವೃತ್ತಾವಪಿ ತತ್ಕರ್ತೃತ್ವಂ ಶಿವಸ್ಯ ಹಿ ॥ ರಾಜಾಜ್ಞಾ ಕೃತಭೃತ್ಯಸ್ಯ ಕರ್ಮ ತಸ್ಯ ನ ಯುಜ್ಯತೇ । ಶಿವಾಧೀನೈಕಚಿತ್ತಸ್ಯ ಕರ್ಮ ತಸ್ಯ ನ ಗಮ್ಯತೇ ॥" ಇತಿ ದರ್ಶನಾದ್ವೈವಸ್ವತಾದಿಕರ್ತೃತ್ವಂ ನಾನ್ಯಸ್ಯೇತಿ ಸಿದ್ಧಂ.

ಹೀಗೆ ಜೀವರ ಪುಣ್ಯ ಪಾಪಕರ್ಮಗಳಿಗೆ ಯಮನೇ ನಿಯಾಮಕನಾಗುವುದಾ ದರೆ ಪರಮಾತ್ಮನಿದ್ದು ಫಲವೇನು? ಎಂದು ಆಶಂಕಿಸಿ ನಿರಾಕರಿಸುತ್ತಾನೆ. "ವಿದ್ಯೆ ಗಳೆಲ್ಲಕ್ಕೂ ಅಧಿಪತಿ, ಮತ್ತು ಜೀವರೆಲ್ಲರಿಗೂ ಶಾಸಕನು" "ಇವನೇ ಒಳ್ಳೆಯದನ್ನು ಮಾಡಿಸುತ್ತಾನೆ" ಎಂದು ಶ್ರುತಿಗಳಲ್ಲಿ ಪರಶಿವನೇ ಬ್ರಹ್ಮ ಮೊದಲಾದ ಜೀವರೆಲ್ಲರಿಗೂ ನಿಯಾಮಕನೆಂದು ತಿಳಿಸಲಾಗಿದೆ. ಆದ್ದರಿಂದ ಜೀವರಿಗೆ ಅವರವರ ಕರ್ಮಕ್ಕೆ ತಕ್ಕಂತೆ ಫಲಕೊಡುವ ಅಧಿಕಾರ ಶಿವನಿಗಲ್ಲದೆ ಬೇರೆ ಯಾರಿಗೂ ಅನ್ವಯಿಸುವುದಿಲ್ಲ. "ಅವನ ಭಯದಿಂದಲೇ ಗಾಳಿ, ಬೆಂಕಿ, ಸೂರ್ಯ, ಇಂದ್ರ ಇವರೆಲ್ಲರೂ ತಮ್ಮ ಕಾರ್ಯಗಳಲ್ಲಿ ನಿರತರಾಗಿದ್ದಾರೆ. ಹಾಗೆಯೇ ಯಮನೂ ಮರಣವನ್ನು ವಿಧಿಸು ತ್ತಾನೆ." ಎಂದು ಶ್ರುತಿಯಲ್ಲಿ ದೇವತೆಗಳೆಲ್ಲರಿಗೂ ಶಿವನೇ ಭಯಂಕರನೆಂದು

ಹೇಳಿದೆ. ಲೋಕದಲ್ಲಿ ರಾಜನ ಆಜ್ಞೆಯಂತೆ ಮಂತ್ರಿ ಮೊದಲಾದ ಅಧಿಕಾರಿಗಳು ಆಯಾ ಜನರ ಕರ್ಮಗಳನ್ನು ವಿಚಾರಿಸಿ ಅವರಿಗೆ ಸಲ್ಲಬೇಕಾದ ಫಲವನ್ನು ಕೊಡುವ ರಾದರೂ ಆ ಅಧಿಕಾರಿಗಳ ಮೇಲಿನ ಅಧಿಕಾರವು ರಾಜನಿಗೇ ಸಲ್ಲುತ್ತದೆ. ಹಾಗೆಯೇ ಯಮನೂ ಸಹ ಶಿವನ ಆಜ್ಞೆಯಂತೆ ಜೀವರ ಪುಣ್ಯ ಪಾಪಕರ್ಮಗಳನ್ನು ವಿಚಾರಿಸಿ ಅವರವರಿಗೆ ಸಲ್ಲಬೇಕಾದ ಫಲವನ್ನು ಕೊಡುವನಾದರೂ ಆ ಯಮನನ್ನು ನಿಯಮಿ ಸುವ ಅಧಿಕಾರವು ಶಿವನಿಗೇ ಸಲ್ಲುತ್ತದೆ. "ಅವನೇ ವಿಷ್ಣು, ಪ್ರಾಣ, ಕಾಲ, ರುದ್ರ, ಅಗ್ನಿ ಮತ್ತು ಚಂದ್ರನೂ ಆಗಿದ್ದಾನೆ; ಹೀಗೆಯೇ ಹಿಂದಿನದು ಮುಂದಿನದು ಎಲ್ಲವೂ ಅವನೇ." "ಅವನು ಒಳಗಿಂದ ಒಳಗೇ ಪ್ರವೇಶಿಸಿದ್ದಾನೆ" "ಅಗ್ನಿ, ನೀರು, ಓಷಧಿಲತೆ ಮೊದಲಾದಕಡೆಗಳಲ್ಲೆಲ್ಲಾ ರುದ್ರನೇ ಇರುವನು" ಈ ಬಗೆಯ ಶ್ರುತಿಗಳಲ್ಲಿ ಶಿವನೇ ಎಲ್ಲಕ್ಕೂ ಉಪಾದಾನನೂ, ನಿಯಾಮಕನೂ ಆಗಿರುವಂತೆಯೇ ಎಲ್ಲರಲ್ಲೂ ಅಂತ ರ್ಯಾಮಿಯೂ ಆಗಿರುವನೆಂದು ಹೇಳಲಾಗಿದೆ. ಹೀಗೆ ಬ್ರಹ್ಮ, ವಿಷ್ಣು, ರುದ್ರ, ಚಂದ್ರ, ಇಂದ್ರ, ವಿಷ್ಣು, ಸೂರ್ಯ, ಯಮ, ಕಾಲರುದ್ರ ಇವರೆಲ್ಲರಲ್ಲೂ ಶಿವನೇ ಅಂತರ್ಯಾಮಿಯಾಗಿರುವುದರಿಂದ ಅವನೇ ಎಲ್ಲಕ್ಕೂ ಕರ್ತನೆಂಬುದೇ ಯುಕ್ತವಾಗು ತ್ತದೆ. ಸ್ಮೃತಿಯಲ್ಲೂ ಹೀಗೆಯೇ ಹೇಳಿದೆ. "ಶಿವನ ಆಜ್ಞೆಯಂತೆ ಹರಿ, ಬ್ರಹ್ಮ, ಕಾಲರುದ್ರ, ಯಮ ಮೊದಲಾದವರು ತಮ್ಮ ತಮ್ಮ ಕಾರ್ಯಗಳಲ್ಲಿ ಪ್ರವರ್ತಿಸಿದರೂ ಅವರೆಲ್ಲರಿಗೂ ಶಿವನೇ ಕರ್ತನಾಗಿದ್ದಾನೆ. ರಾಜನ ಆಜ್ಞೆಯಂತೆ ಕರ್ಮವನ್ನಾಚರಿ ಸುವ ಸೇವಕನಿಗೆ ಆ ಕರ್ಮದ ಸಂಬಂಧ ಹೇಗೆ ಇರುವುದಿಲ್ಲವೋ ಹಾಗೆ ಶಿವನಲ್ಲಿಯೇ ಮನಸ್ಸನ್ನಿಟ್ಟು ಕೆಲಸಮಾಡುವವನಿಗೆ ಆ ಕೆಲಸವೂ ಅಂಟುವುದಿಲ್ಲ." ಹೀಗೆ ಸ್ಮೃತಿ ಯಲ್ಲಿ ಹೇಳಿರುವುದರಿಂದ ಯಮನ ಕೆಲಸ ಶಿವನ ಆಜ್ಞೆಯ ಪರಿಪಾಲನವೇ ಹೊರತು ಬೇರೆಯಲ್ಲವೆಂದು ಸಿದ್ಧವಾಯಿತು.

ಅಸ್ಮಿನ್ನರ್ಥೇ ಹೇತ್ವಂತರಮಾಹ. ಅಪಿ ಸಪ್ತ ॥ ೧೫ ॥ ದುಷ್ಕೃ ತಿನಾಂ ಗಂತವ್ಯತ್ವೇನ ರೌರವಾದಿಸಪ್ತನರಕಾನಪಿ ಪರಮೇಶ್ವರಕೃತಾನಿತಿ ಶ್ರುತೌ ಸ್ಪಷ್ಟಮುಪದಿಷ್ಟಂ. ಅತೋ ಯಮಾಂತರ್ಯಾಮಿತಯಾ ಸುಕೃತಿದುಷ್ಕೃತಿನಾಂ ಸುಖದುಃಖಫಲಪ್ರದಾಯಕತ್ವಂ ತಸ್ಯೈವೋಪ ದಿಶ್ಯತೇ. ತಥಾಚ ಸ್ಮೃತಿಃ. "ಪಾಪಿನಾಂ ವಾಸಯೋಗ್ಯಾನಿ ನರ ಕಾಣಿ ಬಹೂನಿ ಚ । ಕಲ್ಪಯಿತ್ವಾ ಮಹಾದೇವಸ್ತೇಷು ಸಪ್ತ ಪ್ರಧಾ ನತಃ । ಕೃತವಾನ್ ರೌರವಾದೀನಿ ಮಹಾದುಃಖಪರಾಣಿ ಚ ॥" ಇತಿ ದರ್ಶನಾತ್ ನಾನ್ಯಾಧಿಕಾರತ್ವಂ ನಿಷ್ಪ್ರತ್ಯೂಹಂ.

ಈ ಬಗ್ಗೆ ಬೇರೊಂದು ಹೇತುವನ್ನು ಹೇಳುತ್ತಾನೆ. ದುಷ್ಕರ್ಮಿಗಳು ಹೊಂದುವಂತಹ ರೌರವಾದಿನರಕಗಳೂ ಸಹ ಪರಮೇಶ್ವರನಿಂದಲೇ ಆಗಿವೇ ಎಂದು ಶ್ರುತಿಯಲ್ಲಿ ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ ಸತ್ಕರ್ಮಿ ಮತ್ತು ದುಷ್ಕರ್ಮಿಗಳಿಬ್ಬ ರಿಗೂ ಸುಖದುಃಖಫಲಗಳನ್ನು ಕೊಡುವ ಅಧಿಕಾರವು ಯಮನೊಳಗೆ ಅಂತರ್ಯಾ

ಮಿಯಾಗಿರುವ ಶಿವನಿಗೇ ಅನ್ವಯಿಸುತ್ತದೆ. "ಮಹಾದೇವನು ಪಾಪಿಗಳ ಅನುಭವಕ್ಕಾಗಿ ಅನೇಕ ನರಕಗಳನ್ನು ಸೃಷ್ಟಿಸಿ ಅವುಗಳಲ್ಲಿ ರೌರವ ಮೊದಲಾದ ಏಳು ನರಕಗಳನ್ನು ಹೆಚ್ಚು ಭೀಕರವಾಗುವಂತೆ ಮಾಡಿದನು" ಎಂದು ಸ್ಮೃತಿಯಲ್ಲಿ ಹೇಳಿರುವುದರಿಂದ ಶಿವನಲ್ಲದೆ ಬೇರೆ ಯಾರೂ ಜೀವರಿಗೆ ಕರ್ಮಕ್ಕೆ ತಕ್ಕ ಫಲವನ್ನು ಕೊಡುವ ಅಧಿಕಾರವನ್ನು ಹೊಂದಿಲ್ಲವೆಂಬುದು ನಿರ್ವಿವಾದವೆನಿಸಿದೆ.

**ನನು "ವೈವಸ್ವತಂ ಸಂಯಮನಂ ಜನಾನಾಂ ಯಮಂ ರಾಜಾನಂ" ಇತ್ಯಾದಿಷು ಪರಮೇಶ್ವರನಿರಪೇಕ್ಷತಯಾ ಯಮಸ್ಯ ಸರ್ವಜೀವಶಿಕ್ಷಾಧಿಕಾರತ್ವೇನ ವ್ಯವಸ್ಥಾಪನಾತ್ ಶಿವಸ್ಯ ತತ್ಕರ್ತೃತ್ವೇ ತದ್ವನ್ನಿರ್ಘೃಣತ್ವಂ ದುರ್ನಿವಾರಮಿತ್ಯಾಶಂಕ್ಯ ತತ್ರಾಹ. ತತ್ರಾಪಿ ತದ್ವ್ಯಾಪಾರಾದವಿರೋಧಃ ॥ ೧೬ ॥ ತತ್ರಾಪಿ ಯಮಸ್ಯ ಸರ್ವಜೀವಪುಣ್ಯಾಪುಣ್ಯಕರ್ಮವಿಚಾರಾಧ್ಯಕ್ಷತ್ವೇಽಪಿ ತದ್ವ್ಯಾಪಾರಾತ್ಪರಮೇಶ್ವರನಿರ್ಣೀತವ್ಯಾಪಾರಾತ್ ಪರಮಶಿವಸ್ಯ ಬ್ರಹ್ಮಣಸ್ಸರ್ವಾಧಿಕಾರತ್ವವಿಧಾಯಕಪೂರ್ವೋಕ್ತಶ್ರುತಿಸ್ಮೃತ್ಯಾಗಮಾದೀನಾಮವಿರೋಧಃ. ಯಥಾ ದಯಾಶೀಲಸ್ಯ ಪ್ರಭೋರಪಿ ಸ್ವಾಜ್ಞಾಭಂಗಾತ್ಪುತ್ರಾದೀನಾಂ ದಂಡನಂ ವಿಹಿತಂ ತದ್ವತ್ಪರಮೇಶ್ವರಸ್ಯಾಪಿ ತದಾಜ್ಞಾಧಾರಕಶ್ರುತಿಸ್ಮೃತ್ಯಾಗಮಮಾರ್ಗಾದಿಕರ್ಮಿಣಾಂ ಅನಿಷ್ಟಾದಿಕಾರಿಣಾಂ ಯಮಲೋಕೇ ಸ್ವಕರ್ಮಾನುಗುಣ್ಯಯಾತನಾಪ್ರದಾಯಕತ್ವೇನ ನಹಿ ಪರಮದಯಾಲುತ್ವಹಾನಿಃ.**

"ಜೀವರಿಗೆ ಯಮನೇ ರಾಜನು, ಅವನಿಂದಲೇ ನರಕವುಂಟಾಗುತ್ತದೆ" ಎಂಬ ಶ್ರುತಿಯಲ್ಲಿ ಪರಮೇಶ್ವರನನ್ನು ಲಕ್ಷಿಸದೆ ಯಮನೇ ಎಲ್ಲರಿಗೂ ಶಿಕ್ಷಾಧಿಕಾರಿ ಎಂದು ಹೇಳಿರುವುದರಿಂದ ಅದೆಲ್ಲವನ್ನೂ ಶಿವನೇ ಮಾಡುವುದಾದರೆ ಯಮನಂತೆ ಶಿವನೂ ನಿರ್ದಯನೆನಿಸಬೇಕಾಗುತ್ತದೆ ಎಂದಾಶಂಕಿಸಿ ನಿರಾಕರಿಸುತ್ತಾನೆ. ಯಮನೇ ಜೀವರೆಲ್ಲರ ಪುಣ್ಯ ಪಾಪಕರ್ಮಗಳ ವಿಚಾರಣೆಗೆ ಅಧ್ಯಕ್ಷನಾಗಿದ್ದರೂ, ಅವನ ವ್ಯಾಪಾರವೆಲ್ಲವೂ ಪರಮೇಶ್ವರನಿಂದಲೇ ನೇಮಕವಾಗಿರುವುದರಿಂದ ಪರಮೇಶ್ವರನೇ ಎಲ್ಲಕ್ಕೂ ಮುಖ್ಯಾಧಿಕಾರಿ ಎಂದು ತಿಳಿಸುವ ಶ್ರುತಿ ಸ್ಮೃತ್ಯಾಗಮಗಳಿಗೆ ಯಾವ ವಿರೋಧವೂ ಸಂಭವಿಸುವುದಿಲ್ಲ. ಪ್ರಭು ಎಷ್ಟೇ ದಯಾಶೀಲನಾಗಿದ್ದರೂ ತನ್ನ ಆಜ್ಞೆಯನ್ನು ಮೀರಿದ ಪುತ್ರನಿಗೂ ಅವನು ಹೇಗೆ ಶಿಕ್ಷೆಮಾಡುತ್ತಾನೆಯೋ ಹಾಗೆ ಪರಮೇಶ್ವರನ ಆಜ್ಞೆಯನ್ನೇ ನಡೆಸುತ್ತಿರುವ ಶ್ರುತಿ ಸ್ಮೃತಿ ಆಗಮಗಳು ಅವನ್ನು ಉಲ್ಲಂಘಿಸುವವರಿಗೆ ಯಮಲೋಕದಲ್ಲಿ ಅವರವರ ಕರ್ಮಕ್ಕೆ ತಕ್ಕಂತೆ ಯಾತನೆಯನ್ನು ವಿಧಿಸಿದ್ದರೂ ಪರಮೇಶ್ವರನ ದಯಾಳುತನಕ್ಕೆ ಯಾವ ಹಾನಿಯೂ ಸಂಭವಿಸುವಂತಿಲ್ಲ.

**ನನ್ವಿಷ್ಟಾನಿಷ್ಟಾದಿಕಾರಿಣಾಂ ಸ್ವರ್ಗನರಕಾದಿಫಲಭೋಕ್ತೃತ್ವಮಸ್ತು ಶಿವಜ್ಞಾನಸಿದ್ಧಾನಾಂ ಭಕ್ತಾನಾಂ ಕಾ ಗತಿರಿತ್ಯಾಶಂಕಾಯಾಮಾಹ. ವಿದ್ಯಾಕರ್ಮಣೋರಿತಿ ಪ್ರಕೃತತ್ವಾತ್ ॥ ೧೭ ॥ "ಬ್ರಹ್ಮವಿದಾ**

ಪ್ನೋತಿ ಪರಂ ", " ತದೇಷಾಭ್ಯುಕ್ತಾ ", " ಸತ್ಯಂ ಜ್ಞಾನಮನಂತಂ ಬ್ರಹ್ಮ ", " ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ । ಸೋಽಶ್ನುತೇ ಸರ್ವಾನ್ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ ॥ " ಇತಿ, " ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ । ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರಸ್ತಾತ್ ॥ ", " ವೇದಾಂತವಿಜ್ಞಾನಸುನಿಶ್ಚಿತಾರ್ಥಾಸ್ಸನ್ಯಾಸಯೋಗಾದ್ಯತಯಶ್ಶುದ್ಧಸತ್ತ್ವಾಃ । ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ ॥ " ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ " ಧ್ಯಾನನಿರ್ಮಥನಾಭ್ಯಾಸಾತ್ಪಾಶಂ ದಹತಿ ಪಂಡಿತಃ ", " ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ " ಇತ್ಯಾದಿಶ್ರುತಿಶತೇಷು ಶಿವಜ್ಞಾನನಿಷ್ಠಸ್ಯ ಬಾಹ್ಯಾಭ್ಯಾಂತರಯೋಃ ತದ್ಧ್ಯಾನಧಾರಣಪೂಜಾನಮಸ್ಕಾರಸ್ಮರಣಾದ್ಯುಪಾಸನಾಕರ್ಮನಿಷ್ಠಸ್ಯ ಚ ತದುಭಯೋಃ ತದನುಗ್ರಹೇಣ ಬ್ರಹ್ಮನಾಡ್ಯಭಿಧಾನಸುಷುಮ್ನಾಮಾರ್ಗೇಣ ಪ್ರತಿಪಾದಿತತ್ವಾತ್ ಈಷಣತ್ರಯದೋಷಶೋಷಿತಶಮದಮಾದಿಸಹಕೃತಶಿವಜ್ಞಾನನಿಷ್ಠಾಗರಿಷ್ಠಾನಾಂ ಕೈವಲ್ಯವಿಭೂತ್ಯಾತ್ಮಕಶಿವಸಾಯುಜ್ಯಂ, ತದ್ಭಕ್ತಿವಿಶಿಷ್ಟಾನಾಂ ಸಾಲೋಕ್ಯಾದಿಮುಕ್ತಿತ್ರಯಂ ಚಾಧಿಕಾರಿಭೇದೇನ ವ್ಯಪದಿಶ್ಯತೇ. ಪರಮಶಿವಾಜ್ಞಾರೂಪಜ್ಯೋತಿಷ್ಟೋಮಾದಿಕರ್ಮಾವಲಂಬಿನಾಂ ದೇವಯಾನಮಾರ್ಗೇಣ ತತ್ಕರ್ಮಾನುಸಾರೇಣ ಯಮಲೋಕೇ ಘೋರದುಃಖಾನುಭೂತಿಶ್ಚ ನಿರ್ಣೀಯತೇ.

ಸತ್ಕರ್ಮಿಗಳಿಗೆ ಸ್ವರ್ಗವೂ ದುಷ್ಕರ್ಮಿಗಳಿಗೆ ನರಕವೂ ಸಂಭವಿಸಲಿ; ಆದರೆ ಶಿವಯೋಗದಿಂದ ಸಿದ್ಧರಾದ ಸದ್ಭಕ್ತರಿಗೆ ಏನು ಗತಿ ಎಂದು ಆಶಂಕಿಸಿ ಸಮಾಧಾನವನ್ನು ತಿಳಿಸುತ್ತಾನೆ. "ಬ್ರಹ್ಮವನ್ನು ತಿಳಿದವನು ಬ್ರಹ್ಮವನ್ನೇ ಹೊಂದುತ್ತಾನೆ." "ದಹರಾಕಾಶದಲ್ಲಿ ಗುಪ್ತವಾಗಿ ನೆಲಸಿರುವ ಪರಮಾತ್ಮನನ್ನು ಯಾವನು ತಿಳಿಯುತ್ತಾನೋ ಅವನು ಬ್ರಹ್ಮದೊಡನೆಯೇ ಎಲ್ಲ ಫಲವನ್ನೂ ಹೊಂದುತ್ತಾನೆ." "ಉಮಾಶಕ್ತಿಯೊಡಗೂಡಿ ಸರ್ವಲೋಕಪ್ರಭುವಾಗಿ ನೀಲಕಂಠ ಮತ್ತು ತ್ರಿಲೋಚನ ಎನಿಸಿ ಪ್ರಶಾಂತನಾಗಿ ಶೋಭಿಸುತ್ತಿರುವ ಪರಮೇಶ್ವರನನ್ನು ಧ್ಯಾನಿಸುತ್ತಲೇ ಸಾಧಕನು ಸರ್ವಕಾರಣನೂ ಸಮಸ್ತಸಾಕ್ಷಿಯೂ ಆದ ಪರಂಜ್ಯೋತಿಯಲ್ಲಿ ಸೇರುತ್ತಾನೆ." "ವೇದಾಂತವಿಚಾರದಿಂದ ಯಥಾರ್ಥವಾದ ವಿವೇಚನೆಯನ್ನು ಪಡೆದು ಸನ್ಯಾಸಯೋಗದಿಂದ ಶುದ್ಧಸಾತ್ತ್ವಿಕರಾದ ಯತಿಗಳೆಲ್ಲರೂ ದೇಹವನ್ನು ತೊರೆದಮೇಲೆ ಬ್ರಹ್ಮಲೋಕದಲ್ಲಿ ಮರಣಭಯದಿಂದ ಪಾರಾಗುತ್ತಾರೆ" "ದೇಹದ ಎಲ್ಲಾ ಅಂಗಗಳಲ್ಲೂ ನೆಲಸಿರುವ ಪರಶಿವನನ್ನು ನೇತ್ರಗಳ ನಿರೀಕ್ಷಣಕ್ಕಾಗಿ ಹಸ್ತಪೀಠದಲ್ಲಿ ಗುರುವು ನೆಲೆಗೊಳಿಸಿದ್ದಾನೆ." "ಧ್ಯಾನ

ಯೋಗದಿಂದ ಪಂಡಿತನು ಪಾಶವನ್ನು ಸುಡುತ್ತಾನೆ." "ಅವನ ನಿರಂತರಧ್ಯಾನದಿಂದಲೂ, ದೇಹದಲ್ಲಿ ಧಾರಣದಿಂದಲೂ, ಅವನೊಡನೆ ಸಮರಸವಾಗಿ ಬೇರೆಯುವುದರಿಂದಲೂ ಕೊನೆಗೆ ಮಾಯೆ ಪೂರ್ಣವಾಗಿ ತೊಲಗುವುದು." ಈಬಗೆಯ ಅನೇಕ ಶ್ರುತಿಗಳಲ್ಲಿ ಪರಶಿವಬ್ರಹ್ಮವನ್ನು ತಿಳಿದವನಿಗೂ, ಅವನನ್ನು ಒಳಗೂ ಹೊರಗೂ ಧರಿಸಿ ಧ್ಯಾನಿಸಿ ಸ್ಮರಿಸಿ ಅರ್ಚಿಸುತ್ತಿರುವವನಿಗೂ ಜ್ಞಾನ ಕರ್ಮಗಳೆರಡೂ ಆವಶ್ಯಕವಾದ್ದರಿಂದ ಇವರು ಶಿವಾನುಗ್ರಹದಿಂದ ಬ್ರಹ್ಮನಾಡಿ ಎನಿಸಿದ ಸುಷುಮ್ನೆಯ ಮೂಲಕ ಹೊರಟು ದಾರೇಷಣ, ವಿತ್ತೇಷಣ, ಪುತ್ರೇಷಣಗಳನ್ನು ಕಳೆದುಕೊಂಡು ಶಮದಮಗಳಿಂದೊಡಗೂಡಿ ಶಿವಜ್ಞಾನದಲ್ಲಿಯೇ ನಿರತರಾಗಿರುವುದರಿಂದ ಇವರಿಗೆ ಕೈವಲ್ಯ ವಿಭೂತಿ ಎನಿಸಿದ ಶಿವಸಾಯುಜ್ಯವು ದೊರಕುತ್ತದೆ. ಇತರರಿಗೆ ಅವರವರ ಯೊಗ್ಯತೆಗೆ ತಕ್ಕಂತೆ ಸಾಲೋಕ್ಯ ಸಾರೂಪ್ಯ ಸಾಮೀಪ್ಯವೆಂಬ ಮೂರುಬಗೆಯ ಮುಕ್ತಿಗಳು ದೊರಕುತ್ತವೆ. ಜ್ಯೋತಿಷ್ಟೋಮಾದಿಯಾಗಗಳನ್ನು ಪರಮಶಿವನ ಆಜ್ಞೆ ಎಂದು ನಡೆಸುತ್ತಿರುವವರು ದೇವಯಾನಮಾರ್ಗದಿಂದ ಹೊರಟು ಕರ್ಮಕ್ಕನುಗುಣವಾಗಿ ಅವರವರ ಲೋಕಗಳಲ್ಲಿ ಸುಖವನ್ನು ಅನುಭವಿಸುತ್ತಾರೆ. ಶ್ರುತಿಸ್ಮೃತ್ಯಾಗಮ ಮಾರ್ಗಗಳನ್ನು ಉಲ್ಲಂಘಿಸುವ ಇತರ ದುಷ್ಕರ್ಮಿಗಳು ಪಿತೃಯಾನಮಾರ್ಗದಿಂದ ಹೊರಟು ಅವರವರ ಕರ್ಮಕ್ಕೆ ತಕ್ಕಂತೆ ಯಮಲೋಕದಲ್ಲಿ ಭೀಕರವಾದ ದುಃಖವನ್ನು ಅನುಭವಿಸುತ್ತಾರೆ.

ನನು ಪರಮಶಿವಾಜ್ಞಾರೂಪಶ್ರೌತಸ್ಮಾರ್ತಾದಿಕರ್ಮಿಣಾಂ ತದ್ಧ್ಯಾನಧಾರಣಾದ್ಯುಪಾಸನಾಹೀನಾನಾಮಪಿ ಸಾಲೋಕ್ಯಾದಿಚತುರ್ವಿಧಮುಕ್ತಿಸ್ಸಂಭವತೀತ್ಯಾಶಂಕ್ಯ ತತ್ರಾಹ. ನ ತೃತೀಯೇ ತಥೋಪಲಬ್ಧೇಃ ॥ ೧೮ ॥ ತೃತೀಯೇ ಮೋಕ್ಷಮಾರ್ಗೇ ಗಚ್ಛತಾಂ ಶಿವೈಕನಿಷ್ಠಾನಾಂ ಪುಣ್ಯಾಪುಣ್ಯಲಬ್ಧಸ್ವರ್ಗನರಕಪ್ರಾಪ್ತಿರ್ನ ಸಂಭವತಿ. ಕುತಃ ತದುಪಲಬ್ಧೇಃ. "ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ । ತದಾ ವಿದ್ವಾನ್ಪುಣ್ಯಪಾಪೇ ವಿಧೂಯ ನಿರಂಜನಂ ಪರಮಂ ಸಾಮ್ಯಮುಪೈತಿ ॥" ಇತ್ಯಾದಿಶ್ರುತಿಶತೇಷು ಪುಣ್ಯಾಪುಣ್ಯವಿಲಕ್ಷಣಶಿವೈಕತ್ವಪ್ರಾಪ್ತೇರ್ಭಕ್ತಾನಾಮುಪದಿಷ್ಟತ್ವಾತ್, ಶ್ರುತ್ಯಂತರೇಷ್ವಪಿ "ವಿಷ್ಣುರಿತ್ಥಾ ಪರಮಸ್ಯ ವಿದ್ವಾನ್ ಜಾತೋ ಬೃಹನ್ನಪಿ ಪಾತಿ ತೃತೀಯಂ" ಇತ್ಯಾದಿಷು ಬೃಹಚ್ಛಬ್ದೇನಾದಿವಿಷ್ಣುಃ ತೃತೀಯಂ ಕೈಲಾಸಂ ರಕ್ಷತೀತ್ಯುಪದಿಶ್ಯತೇ. "ಪರಾತ್ಪರತರಂ ಬ್ರಹ್ಮ ತತ್ಪರಾತ್ಪರತೋ ಹರಿಃ । ಯತ್ಪರಾತ್ಪರತೋಽಧೀಶಸ್ತನ್ಮೇ ಮನಶ್ಶಿವಸಂಕಲ್ಪಮಸ್ತು ॥" ಇತ್ಯಾದಿಷು ಮಹೇಶ್ವರಸ್ಯ ಬ್ರಹ್ಮವಿಷ್ಣ್ವಪೇಕ್ಷಯಾ ತೃತೀಯಸ್ಯ ಸರ್ವಾತಿಶಯತ್ವಮುಪದಿಷ್ಟಂ. ತಥಾ ಸ್ಮೃತೌ ಚ "ಆದಿವಿಷ್ಣುರ್ಮಹಾವಿದ್ವಾನ್ ಮಹಾದೇವಾತ್ಸದಾಶಿವಾತ್ । ಜಾತ

ಸ್ಸನ್ ಪರಮಂ ಧಾಮ ತೃತೀಯಂ ನಿತ್ಯವೈಭವಂ । ಕೈಲಾಸಂ ಭಕ್ತ ಕಲ್ಯಾಣವಿಭೂತಿಫಲದಾಯಕಂ । ಶಿವಭಕ್ತ್ಯಾ ಸದಾ ಪಾತಿ ಗೌರೀ-ಶಕ್ತ್ಯಂಶಸಂಭವಃ ॥" ಇತಿ ದರ್ಶನಾತ್ ಸರ್ವಕಾಲಸರ್ವಾವಸ್ಥಾಸು ಶಿವಾಜ್ಞಾರೂಪಶ್ರೌತಸ್ಮಾರ್ತಕರ್ಮಾನುಷ್ಠಾನವಿಶಿಷ್ಟಸ್ಸನ್ನಹಂಮಮತ್ವಾಭಿಮಾನನಿರವಕಾಶಹೇತುಭೂತಶಾಂಭವದೇಶಿಕಶುಭೇಚ್ಛಾನಂದಾಮೃತಾನುಭವೇನ ಶರೀರೇಂದ್ರಿಯಮನಃಪ್ರಾಣಜೀವಾದಿಷ್ವಪಿ ಶಿವಭಾವಾರೂಢಸ್ಸನ್ ಶಿವಭಕ್ತಸ್ಸದಾ ಸ್ಥಾಪ್ಯ ಇತ್ಯುಪದಿಶ್ಯತೇ. ಕೇಚಿದತ್ರ "ಚಂದ್ರಮಸಮೇವ ತೇ ಸರ್ವೇ ಗಚ್ಛಂತಿ" ಇತಿ ವಾಕ್ಯೇ ಸರ್ವ ಇತ್ಯತ್ರ ಕೃತಸಂಕೋಚತ್ವಮಂಗೀಕೃತ್ಯ ಸುಕೃತಿಮಾತ್ರಪರತ್ವಂ ಪ್ರಸಾಧ್ಯ "ತದ್ಯ ಇತ್ಥಂ ವಿದುಃ ಯೇ ಚೇಮೇಽರಣ್ಯೇ ಶ್ರದ್ಧಾಂ ತಪಃ ಇತ್ಯುಪಾಸತೇ ತೇಽರ್ಚಿಷಮಭಿಸಂಭವಂತಿ. ಅಥ ಯ ಇಮೇ ಗ್ರಾಮ ಇಷ್ಟಾಪೂರ್ತೇ ದತ್ತಮಿತ್ಯುಪಾಸತೇ ತೇ ಧೂಮಮಭಿಸಂಭವಂತಿ" ಇತ್ಯಾದಿನಾ ದೇವಯಾನಸ್ಯ ವಿದ್ಯಾವಿಷಯತ್ವಂ ಪಿತೃಯಾನಸ್ಯ ಪುಣ್ಯಕರ್ಮಪರತ್ವಮಿತಿ ವದಂತಿ. ತಥಾಪಿ ನಾಸ್ಮನ್ಮತವಿರೋಧಃ. ತತ್ಪಕ್ಷೇ ಶ್ರುತೇಸ್ಸಂಕೋಚತ್ವಂ ಪೂರ್ವೋಕ್ತಸ್ಮೃತಿನಿರವಕಾಶತ್ವಾದಿದೋಷಪ್ರಸಂಗಶ್ಚ ದುರ್ನಿವಾರಃ.

ಶ್ರೌತಸ್ಮಾರ್ತಕರ್ಮಗಳನ್ನು ಪರಮಶಿವನ ಆಜ್ಞೆ ಎಂದು ಭಾವಿಸಿ ಆಚರಿಸುವವರಿಗೂ ಸಾಲೋಕ್ಯವೇ ಮೊದಲಾದ ನಾಲ್ಕುಬಗೆಯ ಮುಕ್ತಿಗಳುಂಟೆಂದು ಆಶಂಕಿಸಿ ನಿರಾಕರಿಸುತ್ತಾನೆ. ದೇವಯಾನ ಮತ್ತು ಪಿತೃಯಾನಗಳೆರಡನ್ನು ತೊರೆದು ಮೂರನೆಯ ಮೋಕ್ಷಮಾರ್ಗದಲ್ಲಿ ಹೊರಡುವ ಶಿವೈಕ್ಯನಿಷ್ಠರಾದ ಶಿವಯೋಗಿಗಳಿಗೆ ಪುಣ್ಯಪಾಪಗಳಿಂದ ಬರುವ ಸ್ವರ್ಗ ನರಕಗಳ ಅನುಭವವು ಸಂಭವಿಸುವುದಿಲ್ಲವೆಂದು ಶ್ರುತಿಯಿಂದಲೇ ತಿಳಿದುಬರುತ್ತದೆ. "ಚತುರ್ಮುಖನಿಗೂ ಕಾರಣನೆನಿಸಿ ವಿಶ್ವವೆಲ್ಲಕ್ಕೂ ಕರ್ತನೂ ನಿಯಾಮಕನೂ ಆಗಿ ಸುವರ್ಣಮಯವಾದ ತೇಜಸ್ಸಿನಿಂದ ಶೋಭಿಸುತ್ತಿರುವ ಪರಮೇಶ್ವರನನ್ನು ಯಾವ ಜೀವನು ಕಾಣುವನೋ ಆಗ ಅವನು ಜ್ಞಾನಮಾರ್ಗದಿಂದ ಪುಣ್ಯ ಪಾಪಗಳೆರಡನ್ನು ತೊರೆದು ನಿರಂಜನನಾಗಿ ಪರಮೇಶ್ವರನೊಡನೆ ಸಾಮರಸ್ಯವನ್ನು ಹೊಂದುತ್ತಾನೆ" ಹೀಗೆ ಶ್ರುತಿಗಳಲ್ಲಿ ಮುಕ್ತರಿಗೆ ಪುಣ್ಯ ಪಾಪಗಳ ಸಂಪರ್ಕವಿಲ್ಲದಂತೆ ಶಿವನೊಡನೆ ಐಕ್ಯವನ್ನು ಹೇಳಲಾಗಿದೆ. ಹೀಗೆಯೇ ಬೇರೆಕಡೆಗಳಲ್ಲೂ ಜೀವರೆಲ್ಲರಿಗೂ ಮೊದಲನೆಯವನಾದ ವಿಷ್ಣುವು ಪರಮಶಿವನ ದಿವ್ಯಾನುಭವವನ್ನು ಪಡೆದು ಮೂರನೆಯದಾದ ಕೈಲಾಸವನ್ನು ರಕ್ಷಿಸುತ್ತಿದ್ದಾನೆ" ಎಂದು ಹೇಳಲಾಗಿದೆ. "ಶ್ರೇಷ್ಠವಾದದ್ದೆಲ್ಲಕ್ಕೂ ಬ್ರಹ್ಮನೇ ಶ್ರೇಷ್ಠನು, ಅವನಿಗಿಂತಲೂ ವಿಷ್ಣು ಶ್ರೇಷ್ಠನು, ಅವನಿಗಿಂತಲೂ ಈಶ್ವರನು ಶ್ರೇಷ್ಠನು, ಅಂತವನಲ್ಲಿಯೇ ನನ್ನ ಮನಸ್ಸು ಸಂಕಲ್ಪಿಸಲಿ" ಎಂದು ಶ್ರುತಿಗಳಲ್ಲಿ ಬ್ರಹ್ಮವಿಷ್ಣುಗಳಿಗಿಂತಲೂ ಮೂರನೆಯವನಾದ

ಈಶ್ವರನನ್ನು ಎಲ್ಲಕ್ಕೂ ಹೆಚ್ಚಿನವನೆಂದು ಹೇಳಲಾಗಿದೆ "ಶಕ್ತ್ಯಂಶದಿಂದ ಜನಿಸಿ ಮಹಾಜ್ಞಾನಿ ಎನಿಸಿದ ಆದಿವಿಷ್ಣುವು ಮಹಾದೇವನಿಂದಲೇ ಹೊರಗೆಬಂದು ಭಕ್ತರಿಗೆ ಕಲ್ಯಾಣವಿಭೂತಿಯನ್ನು ದೊರಕಿಸುತ್ತ ನಿತ್ಯವೈಭವದಿಂದ ಸರ್ವಶ್ರೇಷ್ಠವೆನಿಸಿ ಶೋಭಿಸುತ್ತಿರುವ ಮಹಾಕೈಲಾಸವನ್ನು ಭಕ್ತಿಯಿಂದ ರಕ್ಷಿಸುತ್ತಿದ್ದಾನೆ" ಎಂದು ಸ್ಮೃತಿಯಲ್ಲೂ ಹೇಳಿದೆ. ಎಲ್ಲಾ ಕಾಲಗಳಲ್ಲೂ ಎಲ್ಲಾ ಅವಸ್ಥೆಗಳಲ್ಲೂ ಶ್ರೌತಸ್ಮಾರ್ತ ಕರ್ಮಗಳನ್ನು ಶಿವನ ಆಜ್ಞೆಎಂದು ನಡೆಸುತ್ತ, ನಾನು ನನ್ನದು ಎಂಬ ಅಭಿಮಾನ ವನ್ನು ತೊಲಗಿಸಲು ಕಾರಣನಾದ ಶಿವಾಚಾರ್ಯನ ಇಚ್ಛೆಯಂತೆ ದೊರಕುವ ಆನಂದಾ ಮೃತವನ್ನು ಅನುಭವಿಸುತ್ತ, ಶರೀರ, ಇಂದ್ರಿಯ, ಮನಸ್ಸು, ಪ್ರಾಣ, ಜೀವ ಇವೆ ಲ್ಲದರಲ್ಲಿಯೂ ಶಿವಭಾವನೆಯಿಂದ ಕೂಡಿರುವ ಶಿವಭಕ್ತನೇ ಆ ಕೈಲಾಸದಲ್ಲಿ ಯಾವಾಗಲೂ ನೆಲಸಲರ್ಹನಾಗಿರುವನೆಂದು ಶ್ರುತ್ಯಾಗಮಗಳಲ್ಲಿ ಉಪದೇಶಿಸಲಾಗಿದೆ. "ಅವರೆಲ್ಲರೂ ಚಂದ್ರಲೋಕಕ್ಕೆ ಹೋಗುತ್ತಾರೆ" ಎಂಬಲ್ಲಿ ಕೆಲವರು ಸರ್ವ ಶಬ್ದದ ಅರ್ಥವನ್ನು ಸತ್ಕರ್ಮಿಗಳಿಗೆ ಮಾತ್ರವೇ ಅನ್ವಯಿಸುವುದೆಂದು ಹೇಳಿ "ಯಾರು ಹೀಗೆ ತಿಳಿಯುತ್ತಾರೆಯೋ, ಯಾರು ಅರಣ್ಯದಲ್ಲಿ ತಪಸ್ಸನ್ನಾಚರಿಸುತ್ತಾ ರೆಯೋ ಅವರೆಲ್ಲರೂ ಅರ್ಚಿರಾದಿಮಾರ್ಗವನ್ನು ಹಿಡಿಯುತ್ತಾರೆ. ಯಾರು ಇಷ್ಟಾ ಪೂರ್ತಾದಿ ಕರ್ಮಗಳನ್ನು ಮಾತ್ರವೇ ಆಚರಿಸುತ್ತಾರೋ ಅವರು ಧೂಮಮಾರ್ಗ ವನ್ನಾಶ್ರಯಿಸುತ್ತಾರೆ" ಎಂಬ ಶ್ರುತಿಗಳಿಂದ ದೇವಯಾನವನ್ನು ಜ್ಞಾನಿಗಳ ಮಾರ್ಗವೆಂದೂ, ಪಿತೃಯಾನವನ್ನು ಸತ್ಕರ್ಮಿಗಳ ಮಾರ್ಗವೆಂದೂ ಹೇಳುತ್ತಾರೆ. ಹೀಗೆ ಹೇಳಿದರೂ ಇದರಿಂದ ನಮ್ಮ ಮತಕ್ಕೆ ವಿರೋಧವೇನೂ ಇಲ್ಲ; ಆದರೆ ಈ ಪಕ್ಷದಲ್ಲಿ ಶ್ರುತಿಗೆ ಅರ್ಥಸಂಕೋಚವನ್ನು ಕಲ್ಪಿಸಬೇಕಾಗುವುದಲ್ಲದೆ ಹಿಂದೆ ಹೇಳಿದ ಸ್ಮೃತಿಗೆ ಅವಕಾಶವೇ ಇಲ್ಲದಂತಾಗುವುದೆಂಬ ದೋಷವು ಮಾತ್ರ ಅನಿವಾರ್ಯ ವಾಗಿ ಸಂಭವಿಸುತ್ತದೆ.

ಅಸ್ಮಿನ್ನರ್ಥೇ ಹೇತ್ವಂತರಮಾಹ. ಸ್ಮರ್ಯತೇಽಪಿ ಚ ಲೋಕೇ ॥ ೧೯ ॥ ಲೋಕೇಽಪಿ ಚ ಭಕ್ತಾಃ ಪುಣ್ಯಪಾಪಕರ್ಮಫಲಮನುಭವಂತೀತಿ ಸ್ಮರ್ಯತೇ. ಪೂರ್ವಂ ಶಿವಾರ್ಪಿತಕರ್ಮಿಣಾಮುದ್ಯ ಶಿವಯೋಗ ಶಿವಜ್ಞಾನನಿರತಿಶಯಾನಂದಾನುಭವೇನ ಸದಾ ಸಂಸಾರದುಃಖತಾಪತ್ರಯದಾವಾನಲವಿಲಕ್ಷಣಸ್ವಭಾವೇನ ಚ "ಅಯಂ ಪ್ರಾಕ್ ಶಿವಸ್ಮರಣೇನ ಶಿವಾರ್ಪಿತಸುಕರ್ಮವಾನ್" ಇತಿ ಸ್ಮರ್ಯತೇ. ಪುಣ್ಯಕರ್ಮಿಣಾಂ ಗಜತುರಗರಾಜ್ಯಧನಧಾನ್ಯಪುತ್ರಪೌತ್ರಾನಂದೇನ "ಅಯಂ ಪೂರ್ವಂ ಸುಕೃತವಾನ್" ಇತಿ ಸ್ಮರ್ಯತೇ. ದುಷ್ಕೃತಿನಾಮಂಧತ್ವಬಧಿರತ್ವಮೂಕತ್ವದರಿದ್ರತ್ವಾದಿಮಹಾಶೋಕವ್ಯಾಕುಲಿತಮಾನಸತ್ವೇನ "ಅಯಂ ದುಷ್ಕೃತವಾನ್" ಇತಿ ಸ್ಮರ್ಯತೇ. ತಸ್ಮಾಲ್ಲೋಕವ್ಯವಹಾರಬಲಾದಪಿ ಪಾಮರೈರಪಿ ತ್ರಿವಿಧಾನುಭವೋ ನಿರ್ದಿಶ್ಯತೇ.

ಈ ಬಗ್ಗೆ ಬೇರೊಂದು ಹೇತುವನ್ನು ಹೇಳುತ್ತಾನೆ. ಭಕ್ತರೂ ಪುಣ್ಯ ಪಾಪ ಗಳನ್ನು ಅನುಭವಿಸುವರೆಂದು ಲೋಕದಲ್ಲಿ ಎಲ್ಲರಿಗೂ ತಿಳಿದಿದೆ. ಹಿಂದಿನ ಜನ್ಮ ದಲ್ಲಿ ಶಿವಪ್ರೀತ್ಯರ್ಥವಾಗಿ ಕರ್ಮಗಳನ್ನಾಚರಿಸಿದವರು ಶಿವಯೋಗದಿಂದ ಶಿವನ ಜ್ಞಾನವನ್ನು ಪಡೆದು ನಿರತಿಶಯಾನಂದವನ್ನು ಅನುಭವಿಸುತ್ತಲೇ ಸಂಸಾರದ ತಾಪ ತ್ರಯಗಳಿಗೆ ಎಂದಿಗೂ ಅಂಟಿಕೊಳ್ಳದಂತೆ ಇರುವುದರಿಂದ "ಇವನು ಹಿಂದೆ ಶಿವನನ್ನು ಸ್ಮರಿಸುತ್ತ ಎಲ್ಲಾ ಕರ್ಮಗಳನ್ನೂ ಶಿವಾರ್ಪಣಬುದ್ಧಿಯಿಂದಲೇ ಆಚರಿಸಿದವನು." ಎಂದು ಲೋಕದಲ್ಲಿ ಎಲ್ಲರೂ ಹೇಳುತ್ತಾರೆ. ಹಾಗೆಯೇ ಆನೆ ಕುದುರೆ ಮೊದಲಾದ ಸಕಲ ಭೋಗಭಾಗ್ಯಗಳನ್ನು ಅನುಭವಿಸುತ್ತಿರುವ ಸತ್ಕರ್ಮಿಯನ್ನು ನೋಡಿ " ಇವನು ಹಿಂದೆ ಪುಣ್ಯಮಾಡಿದವನು " ಎಂದು ಎಲ್ಲರೂ ಹೇಳುತ್ತಾರೆ. ಹಾಗೆಯೇ ದುಷ್ಕರ್ಮಿಗಳಲ್ಲೂ ಇಂದ್ರಿಯಪಾಟವವಿಲ್ಲದೆ ನರಳುತ್ತಿರುವವನನ್ನು ನೋಡಿ " ಇವನು ದುಷ್ಕರ್ಮಿ " ಎಂದು ಜನರು ಹೇಳುತ್ತಾರೆ. ಹೀಗೆ ಲೋಕದಲ್ಲಿ ವ್ಯವ ಹರಿಸುತ್ತಿರುವುದರಿಂದ ಮೂರುಬಗೆಯ ಅನುಭವವೂ ಸಮಂಜಸವಾಗಿದೆ.

ಅಸ್ಮಿನ್ನರ್ಥೇ ಪುನರ್ಹೇತ್ವಂತರಮಾಹ. ದರ್ಶನಾಚ್ಚ ॥ ೨೦ ॥ " ಸರ್ವೇಷಾಮಯಂ ಭಾಕ್ತಿಕಃ ಅಯಂ ಪುಣ್ಯವಾನ್ ಅಯಂ ಅಪುಣ್ಯವಾನ್ " ಇತಿ ತು " ಪೂರ್ವಾನುಭೂತಿಜ್ಞಾನಂ ಸ್ಮರಣಂ " ಇತಿ ನ್ಯಾಯೇನ ಸುಷುಪ್ತಿಸುಖಾನುಭವಸ್ಮರಣಾದಿವನ್ನ ಸ್ಮರಣಮಾತ್ರತ್ವಂ ಕಿಂತು ಶ್ರುತಿಯುಕ್ತ್ಯನುಭವದರ್ಶನಾಚ್ಚ ಭಾಕ್ತಿಕಾನಾಂ ಪುಣ್ಯಕರ್ಮಿ ಣಾಂ ಚ ನಿಶ್ರೇಯಸಾಭ್ಯುದಯಫಲಭೋಕ್ತೃತ್ವಂ. ಪಾಪಿನಾಂ ತು " ವೇತ್ಥ ಯಥಾ ಕೇನಾಸೌ ಲೋಕೋ ನ ಸಂಪೂರ್ಯತೇ " ಇತ್ಯಸ್ಯ ಪ್ರಶ್ನಸ್ಯ ಪ್ರತಿವಚನೇ " ಅಥೈತಯೋಃ ಪಥೋರ್ನ ಕತರೇಣ ಚ ತಾನೀ ಮಾನಿ ಕ್ಷುದ್ರಾಣ್ಯಸಕೃದಾವರ್ತೀನಿ ಭೂತಾನಿ ಭವಂತಿ ", " ಜಾಯಸ್ವ ಮ್ರಿಯಸ್ವೇತ್ಯೇತತ್ತೃತೀಯಂ ಸ್ಥಾನಂ ತೇನಾಸೌ ಲೋಕೋ ನ ಸಂಪೂ ರ್ಯತೇ " ಇತಿಶ್ರುತೌ ದುಷ್ಕೃತಿನಾಂ ಘೋರರೌರವಾದಿನರಕೇಷು ಮಹಾದುಃಖಮನುಭೂಯ ಪಂಚಮಾಹುತ್ಯಪೇಕ್ಷಯಾ ಪುನಶ್ಶರೀರಾ ರಂಭಕತ್ವಂ ಚ ದೃಶ್ಯತೇ. " ಯಶ್ಶಿವಂ ಸಾಂಬಮೀಶಾನಂ ಸರ್ವಲೋಕ ಗುರುಂ ಪರಂ । ಚಿಂತಾಂ ವಿಸೃಜ್ಯ ದಿವಸಾನೀಷಣತ್ರಯಮೋಹಿತಃ । ವೃಥಾ ಯಾಪಯತೇ ಲೋಕೇ ಸ ವೈ ಶಮನಕಿಂಕರೈಃ । ಸದಾ ಸಂತಾಡಿ ತೋರಸ್ಕಃ ಯಾತನಾಖ್ಯಶರೀರಕಂ। ಧೃತ್ವಾ ತನ್ಮಾರ್ಗಮಧ್ಯೇ ಚ ಘೋರ ದುಃಖಾಕುಲಾನ್ವಿತಃ । ಯಮದ್ವಾರಪುರೋಭಾಗಮಹಾವೈತರಣೀನದೌ। ವಹ್ನಿಜ್ವಾಲಾಕುಲೇ ಘೋರೇ ತಪ್ಯಮಾನಕಲೇಬರಃ । ಯಮಂ ಪ್ರಾಪ್ಯಾ ಜ್ಞಯಾ ತಸ್ಯ ಸ್ವಕರ್ಮವಿಧಿನಾ ತತಃ । ರೌರವಾದಿಷು ಸರ್ವೇಷು ನರ ಕೇಷು ಪುನಃಪುನಃ । ದುಃಖಂ ಪ್ರಾಪ್ಯ ಪುನಸ್ತದ್ವತ್ಕರ್ಮಶೇಷೇಣ

ಭೂತಲೇ । ಚಕ್ರನೇಮಿಕ್ರಮೇಣೈವ ಜಾಯತೇ ಮ್ರಿಯತೇ ಸದಾ ॥ ಜರಾಯುಜಾಂಡಜಾದೀನಿ ಪ್ರಾಪ್ಯತೇ ನಾತ್ರ ಸಂಶಯಃ ॥ " ಇತಿ ಪುರಾಣೇಷ್ವಪಿ ದುಷ್ಕೃತಿನಾಂ ಯಾತನಾಶರೀರಯಮಲೋಕಮಾರ್ಗಮಧ್ಯೇ ತತ್ಕಿಂಕರೈರ್ದಂಡ್ಯತ್ವಂ, ತತೋ ವೈವಸ್ವತಾಜ್ಞಯಾ ಮಹಾಘೋರನರಕಪ್ರಾಪ್ತಿಶ್ಚ, ತದನಂತರಂ ಸ್ವಕರ್ಮಾನುಸಾರೇಣಾಂಡಜಾದಿಚತುರ್ವಿಧಭೂತಗ್ರಾಮಪ್ರಾಪ್ತಿಶ್ಚೇತಿ ಪ್ರಸಿದ್ಧಂ. ಕೇಚಿತ್ " ಜಾಯಸ್ವ ಮ್ರಿಯಸ್ವ ಇತ್ಯೇತತ್ತೃತೀಯಂ ಸ್ಥಾನಂ " ಇತಿ ಶ್ರುತೌ ತೃತೀಯಸ್ಥಾನತ್ವೇನ ನರಕಸ್ಯ ಪ್ರಯೋಗದರ್ಶನಾತ್ " ನ ತೃತೀಯೇ ತಥೋಪಲಬ್ಧೇಃ " ಇತಿ ಸೂತ್ರಸ್ಥತೃತೀಯಶಬ್ದಸ್ಯ ನರಕವಿಷಯತ್ವಂ ಸಾಧಯಂತಿ. " ವಿಷ್ಣುರಿತ್ಥಾ ಪರಮಸ್ಯ ವಿದ್ವಾನ್ ಜಾತೋ ಬೃಹನ್ನಭಿಪಾತಿ ತೃತೀಯಂ ", " ತಥಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಂ ಪರಮಂ ಸಾಮ್ಯಮುಪೈತಿ " ಇತ್ಯಾದಿಶ್ರುತಿಷು, " ಅನೇಕಜನ್ಮಶುದ್ಧಾನಾಂ ಶ್ರೌತಸ್ಮಾರ್ತಾನುವರ್ತಿನಾಂ । ವಿರಕ್ತಾನಾಂ ಪ್ರಬುದ್ಧಾನಾಂ ಪ್ರಸೀದತಿ ಮಹೇಶ್ವರಃ । ಪ್ರಸನ್ನೇ ಸತಿ ಯುಕ್ತೋಽಭೂನ್ಮುಕ್ತಃ ಶಿವಸಮೋ ಭವೇತ್ । ಅಲ್ಪಭಾವೋಽಪಿ ಯೋ ಮರ್ತ್ಯಸ್ತಸ್ಯ ಜನ್ಮತ್ರಯಾತ್ಪರಂ ॥ " ಇತ್ಯಾದಿಸ್ಮೃತ್ಯಾಗಮಾದಿಷ್ವಪಿ ಪಾಪಪುಣ್ಯವಿಲಕ್ಷಣಸ್ಯ ಪರಮಪದಸ್ಯ ಮುಕ್ತಿರೂಪಶಿವಪದಸ್ಯ ತೃತೀಯತ್ವಂ ಸ್ಪಷ್ಟಮುಪದಿಷ್ಟಂ. ನರಕಪರತ್ವೇ ವಿದ್ಯಾಕರ್ಮಣೋರಿತಿ ಪೂರ್ವಸೂತ್ರೇ ವಿದ್ಯಾಕರ್ಮಪ್ರಸಂಗಪ್ರದರ್ಶನಾತ್ ಸ್ಥಾನಪ್ರಕರಣಲಿಂಗಾತ್ ಶ್ರುತಿಸೂತ್ರಾರ್ಥತಾತ್ಪರ್ಯೋರ್ಜ್ಞಾತವ್ಯ ಇತಿ ವಿಧಿವಿರೋಧಾತ್ ಪುರಾಣಾದಿಷ್ವಪುನರಾವೃತ್ತನಿರತಿಶಯಾನಂದಬ್ರಹ್ಮಪದಸ್ಯ ನರಕಸ್ವರ್ಗಲೋಕಾದೂರ್ಧ್ವವ್ಯವಸ್ಥಾದರ್ಶನಾಚ್ಚ ನರಕಸ್ಯ ತೃತೀಯತ್ವಶ್ರುತಿರ್ಗೌಣೀತಿ ನಿಶ್ಚೀಯತೇ.

ಈ ವಿಷಯದಲ್ಲಿ ಮತ್ತೊಂದು ಕಾರಣವನ್ನು ಹೇಳುತ್ತಾನೆ. ಹಿಂದೆ ಅನುಭವಿಸಿದ್ದುದನ್ನು ಜ್ಞಾಪಕಕ್ಕೆ ತಂದುಕೊಳ್ಳುವುದೇ ಸ್ಮರಣವೆನಿಸುವುದರಿಂದ ಸುಷುಪ್ತಿಯಲ್ಲಿ ಅನುಭವಿಸಿದ ಸುಖವನ್ನು ಜೀವನು ಎಚ್ಚರದಲ್ಲಿ ಸ್ಮರಿಸಿಕೊಳ್ಳುವಂತೆ ಒಬ್ಬನು ತನ್ನನ್ನೂ ಭಕ್ತನೆಂದೂ, ಮತ್ತೊಬ್ಬನು ತನ್ನನ್ನು ಸುಕೃತಿ ಎಂದೂ, ಹೀಗೆಯೇ ಬೇರೊಬ್ಬನು ತನ್ನನ್ನು ದುಷ್ಕರ್ಮಿ ಎಂದೂ ತಿಳಿದುಕೊಳ್ಳುವುದೂ ಸಹ ಕೇವಲ ಸ್ಮರಣವಷ್ಟೇ ಅಲ್ಲದೆ ಶ್ರುತಿ ಯುಕ್ತಿ ಅನುಭವಗಳಿಗೂ ಸಮ್ಮತವಾದ್ದರಿಂದ ಭಕ್ತನಿಗೆ ಮೋಕ್ಷವನ್ನೂ, ಸುಕೃತಿಗೆ ಅಭ್ಯುದಯವನ್ನೂ ಕೊಡಲು ಸಮರ್ಥವೆನಿಸುವುದು. ಪಾಪಿಗಳಿಗಂತೂ " ಧೂಮಾದಿಮಾರ್ಗದಿಂದ ಹೊರಡುವವರು ನರಕಾದಿಗಳನ್ನು ಅನುಭವಿಸಿ ಮತ್ತೆ ಮತ್ತೆ ಇಲ್ಲಿಗೇ ಬರುವವರಾದ್ದರಿಂದ ಈ ಲೋಕದಲ್ಲಿ ಅವರಿಗೆ ಪರಿಪೂರ್ಣತೆ ಬರುವುದಿಲ್ಲ" ಈ ಬಗೆಯ ಶ್ರುತಿಗಳಂತೆ ರೌರವನರಕದಲ್ಲಿ ಭಯಂಕರವಾದ

ದುಃಖವನ್ನು ಅನುಭವಿಸಿ ಐದನೆಯ ಆಹುತಿಯ ಪರಿಣಾಮವಾಗಿ ಮತ್ತೆ ಶರೀರ ವನ್ನು ಪಡೆಯುತ್ತಿರುವುದೇ ಅನಿವಾರ್ಯವೆನಿಸಿದೆ. "ಸರ್ವರಿಗೂ ಗುರುವೆನಿಸಿ ಅಂಬಾ ಶಕ್ತಿಯೊಡನೆ ಶೋಭಿಸುತ್ತಿರುವ ಪರಮೇಶ್ವರನನ್ನು ಸ್ಮರಿಸದೆ ಈಷಣತ್ರಯದೊಳಗೆ ಸಿಲುಕಿ ಯಾವನು ವ್ಯರ್ಥವಾಗಿ ಕಾಲವನ್ನು ಕಳೆಯುವನೋ ಅವನು ಯಮಕಿಂಕರರ ಹಿಂಸೆಗೆ ಸಿಲುಕಿ ಯಾತನಾಮಯಶರೀರದಲ್ಲಿ ಘೋರ ದುಃಖವನ್ನು ಅನುಭವಿಸುತ್ತ ಯಮಲೋಕದ ಅಸಹ್ಯವಾದ ವೈತರಣೀನದಿಯಲ್ಲಿ ಮುಳುಗಿ ಭಯಂಕರವಾದ ಬೆಂಕಿ ಯಲ್ಲಿ ಬೆಂದು ಯಮನ ಆಜ್ಞೆಯಂತೆ ತನ್ನ ಕರ್ಮಾನುಸಾರವಾಗಿ ನರಕಗಳೆಲ್ಲದರಲ್ಲೂ ದುಃಖಪಡುತ್ತ ಕೊನೆಗೆ ಸ್ವಲ್ಪ ಕರ್ಮದೊಡನೆ ಭೂಮಿಯಲ್ಲಿ ಚಕ್ರದ ಪಟ್ಟೆಯಂತೆ ಹುಟ್ಟುಸಾವುಗಳಿಗೆ ಸಿಲುಕಿ ನಾನಾವಿಧವಾದ ಯೋನಿಗಳನ್ನು ಪಡೆಯುತ್ತಿರುವನು." ಹೀಗೆಂದು ಪುರಾಣಗಳಲ್ಲಿಯೂ ದುಷ್ಕರ್ಮಿಗಳಿಗೆ ಯಾತನಾಶರೀರವನ್ನೂ, ದಾರಿ ಯಲ್ಲಿ ಯಮಕಿಂಕರರಿಂದಾಗುವ ಹಿಂಸೆಯನ್ನೂ, ಅಲ್ಲಿಂದ ಯಮಲೋಕದಲ್ಲಿ ಅನು ಭವಿಸಬೇಕಾದ ಘೋರನರಕವನ್ನೂ, ಆಮೇಲೆ ತಮ್ಮ ಕರ್ಮಕ್ಕೆ ತಕ್ಕಂತೆ ನಾಲ್ಕು ಬಗೆಯ ಪ್ರಾಣಿಗಳಾಗಿ ಹುಟ್ಟಬೇಕೆಂಬುದನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. "ಹುಟ್ಟುಸಾವುಗಳೆಂಬುದು ಮೂರನೆಯಸ್ಥಾನ" ವೆಂಬ ಶ್ರುತಿಯಲ್ಲಿ ನರಕವನ್ನು ಮೂರನೆಯಸ್ಥಾನವೆಂದು ಹೇಳಿರುವುದರಿಂದ "ನ ತೃತೀಯೇ ತಥೋಪಲಬ್ಧೇಃ" ಎಂಬ ಸೂತ್ರದಲ್ಲಿರುವ ತೃತೀಯಪದವೂ ನರಕವನ್ನೇ ಬೋಧಿಸುವುದೆಂದು ಕೆಲವರು ಹೇಳುತ್ತಾರೆ. "ಬೃಹನ್ನಪಿ ಪಾತಿ ತೃತೀಯಂ" ಎಂಬ ಶ್ರುತಿಯಲ್ಲೂ, "ಯಾವನು ತನ್ನನ್ನು ಕಿರಿಯವನೆಂದು ತಿಳಿಯುವನೋ ಅವನು ಮೂರು ಜನ್ಮಗಳನಂತರ ಮುಕ್ತಿ ಯನ್ನು ಹೊಂದುತ್ತಾನೆ" "ಅನೇಕ ಜನ್ಮಗಳಲ್ಲಿ ಶುದ್ಧರಾಗಿ ಶ್ರುತಿ ಸ್ಮೃತಿಗಳಲ್ಲಿ ಹೇಳಿರುವ ಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ಆಚರಿಸುತ್ತಲಿರುವ ಜ್ಞಾನಿಗಳಿಗೆ ಶಿವನು ಪ್ರಸನ್ನನಾಗುತ್ತಾನೆ. ಹೀಗೆ ಶಿವಪ್ರಸಾದದೊಡಗೂಡಿದ ಮುಕ್ತನು ಶಿವ ನೊಡನೆ ಸಮರಸವಾಗಿ ಬೆರೆಯುವನು." ಎಂದು ಸ್ಮೃತ್ಯಾಗಮಗಳಲ್ಲಿಯೂ ಪಾಪ ಪುಣ್ಯಗಳ ಸಂಪರ್ಕವಿಲ್ಲದೆ ಪರಮೋತ್ತಮವೆನಿಸಿದ ಮುಕ್ತಿ ಎಂಬ ಶಿವಪದವನ್ನು ತೃತೀಯಸ್ಥಾನವೆಂದು ಸ್ಪಷ್ಟವಾಗಿ ಹೇಳಲಾಗಿದೆ. ತೃತೀಯಪದವನ್ನು ನರಕ ವೆಂದು ಹೇಳುವುದಾದರೆ, "ವಿದ್ಯಾಕರ್ಮಣೋಃ ಪ್ರಕೃತತ್ವಾತ್" ಎಂಬ ಸೂತ್ರದಲ್ಲಿ ಜ್ಞಾನಕರ್ಮಗಳೆರಡರ ಆವಶ್ಯಕತೆಯನ್ನು ಹೇಳಿದ್ದರಿಂದ ಸ್ಥಾನ ಮತ್ತು ಪ್ರಕರಣಗಳ ಆಧಾರದಮೇಲೆಯೇ ಶ್ರುತಿಸೂತ್ರಗಳೆರಡರ ತಾತ್ಪರ್ಯವನ್ನು ತಿಳಿಯಬೇಕೆಂಬ ನಿಯಮಕ್ಕೆ ವಿರೋಧವುಂಟಾಗುತ್ತದೆ. ಇದೂ ಅಲ್ಲದೆ, ಪುರಾಣಗಳಲ್ಲಿ ಮುಕ್ತನಿಗೆ ಪುನರ್ಜನ್ಮವಿಲ್ಲದ ನಿರತಿಶಯಾನಂದವನ್ನು ದೊರಕಿಸುವ ಬ್ರಹ್ಮಪದವನ್ನು ಸ್ವರ್ಗ ನರಕಗಳಿಗಿಂತ ಆಚೆನದೆಂದು ವ್ಯವಸ್ಥೆಮಾಡಲಾಗಿದೆ. ಆದ್ದರಿಂದ ನರಕವನ್ನು ತೃತೀಯಸ್ಥಾನವೆಂದು ಹೇಳುವ ಶ್ರುತಿಯನ್ನು ಗೌಣವೆಂದೇ ಭಾವಿಸಬೇಕು.

ನನು ಪುರಾಣಾದಿಷು ಪಂಚಮಾಹುತಿಶಾಸ್ತ್ರಾತಿರಿಕ್ತತ್ವೇನ ಕುಂಭ ಸಂಭವದ್ರೌಪದ್ಯಾದ್ಯುತ್ಪತ್ತಿದರ್ಶನಾತ್ ತೇಷಾಂ ಖಲ್ವೇಷಾಂ ಭೂತಾನಾಂ ತ್ರೀಣ್ಯೇವ ಬೀಜಾನಿ ಭವಂತಿ. " ಅಂಡಜಂ ಜೀವಜಂ ಉದ್ಭಿಜ್ಜಂ " ಇತಿ ಶ್ರುತೌ ಅಂಡಜಾದಿತ್ರಿವಿಧವ್ಯವಸ್ಥೋಪದೇಶಾಚ್ಚ ಪಂಚಮಾಹುತಿವಿಧಾಯಕಸ್ಯ ಭೂತಗ್ರಾಮಚತುಷ್ಟಯನಿರ್ದೇಶಸ್ಯ ಚ ಶಾಸ್ತ್ರಸ್ಯ ಪರಸ್ಪರವಿರೋಧೋಽಸ್ತೀತ್ಯಾಶಂಕ್ಯ ತತ್ರಾಹ. ತೃತೀಯ ಶಬ್ದಾವರೋಧಸ್ಸಂಶೋಕಜಸ್ಯ॥ ೨೧ ॥ " ಪಂಚಮ್ಯಾಮಾಹುತೌ ಆಪಃ ಪುರುಷವಚಸೋ ಭವಂತಿ " ಇತಿ ಶ್ರುತಿನಿಷ್ಠಶರೀರಾರಂಭವಿಧಾಯಕ ಶಾಸ್ತ್ರಸ್ಯ ಕುಂಭಸಂಭವಾದ್ಯುತ್ಪತ್ತಿವಿಧಾಯಕಪುರಾಣಸ್ಯ " ನ ಹಿಂಸ್ಯಾತ್ಸರ್ವಭೂತಾನಿ " ಇತಿ ಶ್ರುತೇಸ್ಸರ್ವತ್ರೋಪಯೋಗಿತ್ವೇನ ಸಾಮಾನ್ಯತ್ವಂ. " ಅಗ್ನೀಷೋಮೀಯಂ ಪಶುಮಾಲಭೇತ " ಇತಿ ಶ್ರುತೇಸ್ತನ್ಮಾತ್ರಪರತ್ವೇನ ವಿಶೇಷತ್ವಂ, ತದ್ವತ್ " ಸತ್ಯಕಾಮಸ್ಸತ್ಯಸಂಕಲ್ಪಃ ", " ಚಂದ್ರಮಾ ಮನಸೋ ಜಾತಶ್ಚಕ್ಷೋಸ್ಸೂರ್ಯೋಽಜಾಯತ " ಇತ್ಯಾದೌ ಯಥಾ ಪರಮೇಶ್ವರಸ್ಯ ಸತ್ಯಸಂಕಲ್ಪತ್ವಂ, ಉಪಾಸ್ಯೋಪಾಸಕಯೋರಭೇದಇತಿ ನ್ಯಾಯೇನ ತದ್ಭಕ್ತಾನಾಂ ವಿಶ್ವಾಮಿತ್ರಾದಿಮಹಾ ಪುರುಷಾಣಾಂ ಸತ್ಯಸಂಕಲ್ಪತ್ವೇನ ಜಗದ್ವಿಚಿತ್ರಸೃಷ್ಟಿದರ್ಶನಾತ್ ಪಂಚ ಮಾಹುತಿವಿಧಾಯಕಶಾಸ್ತ್ರಸ್ಯ ಕಾರಣಪುರುಷಾತಿರಿಕ್ತ ಪುಣ್ಯಾಪುಣ್ಯಕ ರ್ಮಿಪರತ್ವಮಿತಿ ನಿಶ್ಚೀಯತೇ. ಕಿಂಚ ಪರಮೇಶ್ವರಸೃಷ್ಟಾವಪಿ ಭೂತ ಗ್ರಾಮಚತುಷ್ಟಯೇಷು ಅಂಡಜಜರಾಯುಜಾನಾಮೇವ ಪಂಚಮಾ ಹುತಿತ್ವಂ. ಸ್ವೇದಜೋದ್ಭಿಜ್ಜಾನಾಂ ತದ್ವಿಲಕ್ಷಣತ್ವಸ್ಯ ದ್ಯೋತನಾನ್ನ ಸಂದೇಹಕಲಂಕಃ. ಸಂಶೋಕಜಸ್ಯ ಸ್ವೇದಜಸ್ಯಾಪಿ ಉದ್ಭಿಜ್ಜೇಷ್ವಂತ ರ್ಭಾವಾತ್ ತ್ರೀಣ್ಯೇವ ಬೀಜಾನೀತಿ ಶ್ರುತಿನಿಷ್ಠತೃತೀಯವ್ಯವಸ್ಥಾಽ ವಿರೋಧಃ. ವೃಕ್ಷಲತಾಪರ್ವತಾದಿವಾಚಕತೃತೀಯೋದ್ಭಿಜ್ಜಶಬ್ದೇನ " ಮಂಚಾಃ ಕ್ರೋಶಂತಿ " ಇತ್ಯಜಹಲ್ಲಕ್ಷಣವತ್ತತ್ಸಂಗ್ರಹಃ ಅರ್ಥಾ ದ್ಗ್ರಾಹ್ಯಃ. ತಸ್ಮಾತ್ " ಚಂದ್ರಮಸಮೇವ ತೇ ಸರ್ವೇ ಗಚ್ಛಂತಿ " ಇತಿ ಶ್ರುತೇಸ್ಸಂಕೋಚಾಸಹಿಷ್ಣುತ್ವೇನ ಪುಣ್ಯಾಪುಣ್ಯಕರ್ಮಿಣಾಂ ಸರ್ವೇ ಷಾಂ ಅಂಡಜತ್ವಜರಾಯುಜತ್ವಪ್ರಾಪ್ತಾನಾಂ ಚಂದ್ರಪ್ರಾಪ್ತಿಪೂರ್ವಕ ಪಂಚಮಾಹುತ್ಯುಪದೇಶೋ ಹ್ಯವಿರೋಧಃ.

ಪುರಾಣಗಳಲ್ಲಿ " ಐದನೆಯ ಆಹುತಿಯನ್ನು ತಿಳಿಸುವ ಶಾಸ್ತ್ರಕ್ಕಿಂತಲೂ ವ್ಯತಿರಿಕ್ತವಾಗಿ ಕುಂಭದಿಂದ ಅಗಸ್ತ್ಯರಿಗೂ ಅಗ್ನಿಯಿಂದ ದ್ರೌಪದಿಗೂ ಉತ್ಪತ್ತಿಯು ಕಂಡುಬಂದಿರುವುದರಿಂದಲೂ, " ಮೊಟ್ಟೆಯಿಂದ ಹೊರಟಿದ್ದು, ಜೀವದಿಂದ ಹುಟ್ಟಿದ್ದು, ಭೂಮಿಯಿಂದ ಹೊರಬಿದ್ದದ್ದು " ಎಂದು ಶ್ರುತಿಯಲ್ಲಿ ಮೂರುಬಗೆಯ ಉತ್ಪತ್ತಿ

ಯನ್ನು ಹೇಳಿದ್ದರಿಂದಲೂ ಐದನೆಯ ಆಹುತಿಯನ್ನು ವಿಧಿಸುವ ಶಾಸ್ತ್ರಕ್ಕೂ ನಾಲ್ಕು ಬಗೆಯ ಪ್ರಾಣಿಗಳನ್ನು ತಿಳಿಸುವ ಶಾಸ್ತ್ರಕ್ಕೂ ಪರಸ್ಪರವಿರೋಧವನ್ನು ಆಶಂಕಿಸಿ ನಿರಾಕರಿಸುತ್ತಾನೆ. "ಐದನೆಯ ಆಹುತಿಯಲ್ಲಿ ನೀರು ಪುರುಷರೂಪವನ್ನು ತಾಳುತ್ತದೆ" ಎಂಬುದಾಗಿ ಸೃಷ್ಟಿಯನ್ನು ತಿಳಿಸುವ ಶಾಸ್ತ್ರವನ್ನು "ಯಾವ ಪ್ರಾಣಿಯನ್ನೂ ಹಿಂಸಿಸಬಾರದು" ಎಂದು ಎಲ್ಲಾಕಡೆಗೂ ಅನ್ವಯಿಸುವುದರಿಂದ ಸಾಮಾನ್ಯವಿಧಿ ಎಂದು ಭಾವಿಸಬೇಕು. ಕುಂಭದಿಂದ ಅಗಸ್ತ್ಯನು ಹುಟ್ಟಿದನೆಂದು ತಿಳಿಸುವ ಶಾಸ್ತ್ರವನ್ನು "ಅಗ್ನಿ ಮತ್ತು ಸೋಮರ ಪ್ರೀತ್ಯರ್ಥವಾಗಿ ಪಶುವನ್ನು ಅರ್ಪಿಸಬೇಕು" ಎಂಬ ಶ್ರುತಿಯಂತೆ ವೈಯಕ್ತಿಕವಿಷಯವಾದ್ದರಿಂದ ವಿಶೇಷವಿಧಿ ಎಂದು ತಿಳಿಯಬೇಕು. ಹಾಗೆಯೇ "ಅವನು ಸತ್ಯಕಾಮನು ಮತ್ತು ಸತ್ಯಸಂಕಲ್ಪನು", "ಮನಸ್ಸಿನಿಂದ ಚಂದ್ರನೂ, ಕಣ್ಣಿನಿಂದ ಸೂರ್ಯನೂ, ಮುಖದಿಂದ ಇಂದ್ರಾಗ್ನಿಗಳೂ ಹುಟ್ಟಿದರು" ಎಂಬಲ್ಲಿ ಪರಮೇಶ್ವರನನ್ನು ಸತ್ಯಸಂಕಲ್ಪನೆಂದು ಸಾಮನ್ಯವಾಗಿ ಹೇಳಲಾಗಿದೆ. ಹಾಗೆಯೇ ಉಪಾಸ್ಯನಿಗೂ ಉಪಾಸಕನಿಗೂ ಅಭೇದವುಂಟೆಂಬ ನ್ಯಾಯದಿಂದ ಶಿವಭಕ್ತರಾದ ವಿಶ್ವಾಮಿತ್ರ ಮೊದಲಾದವರೂ ಸಹ ಸತ್ಯಸಂಕಲ್ಪರಾದ್ದರಿಂದ ವಿಚಿತ್ರವಾದ ಸೃಷ್ಟಿಯನ್ನು ಮಾಡಬಲ್ಲರೆಂದು ವಿಶೇಷವಾಗಿಯೂ ಹೇಳಲಾಗಿದೆ. ಆದ್ದರಿಂದ ಐದನೆಯ ಆಹುತಿಯಿಂದ ಸೃಷ್ಟಿಯನ್ನು ತಿಳಿಸುವ ಶಾಸ್ತ್ರವು ಕಾರಣಪುರುಷರ ಅವತಾರಕ್ಕೆ ಅನ್ವಯಿಸದೆ ಪುಣ್ಯಪಾಪಕರ್ಮಗಳಿಗೆ ಮಾತ್ರವೇ ಅನ್ವಯಿಸುವುದೆಂದು ನಿಶ್ಚಯಿಸಲಾಗಿದೆ. ಇದೂಅಲ್ಲದೆ, ಈಶ್ವರಸೃಷ್ಟಿಯಲ್ಲೂ ನಾಲ್ಕುಬಗೆಯ ಪ್ರಾಣಿಗಳಲ್ಲಿ ಅಂಡಜ ಮತ್ತು ಜರಾಯುಜಪ್ರಾಣಿಗಳೇ ಐದನೆಯ ಆಹುತಿಗೆ ಸಂಬಂಧಿಸುತ್ತವೆ. ಆದರೆ ಸ್ವೇದಜ ಮತ್ತು ಉದ್ಭಿಜ್ಜ ಪ್ರಾಣಿಗಳು ಅದಕ್ಕೆ ಸಂಬಂಧಿಸುವುದಿಲ್ಲ. ಆದ್ದರಿಂದ ಈ ಬಗ್ಗೆ ಸಂದೇಹಕ್ಕೆ ಅವಕಾಶವೇ ಇಲ್ಲ. ಬೆವರಿನಿಂದ ಹುಟ್ಟಿದ ಪ್ರಾಣಿಗಳನ್ನೂ ಉದ್ಭಿಜ್ಜಗಳಲ್ಲಿಯೇ ಸೇರಿಸಬಹುದಾದ್ದರಿಂದ ಮೂರೇ ಬೀಜಗಳೆಂದು ಶ್ರುತಿಯಲ್ಲಿ ಹೇಳಿದ ತೃತೀಯವೆಂಬ ವ್ಯವಸ್ಥೆಯೂ ಹೊಂದುತ್ತದೆ. "ಮಂಚಗಳು ಅಳುತ್ತವೆ" ಎಂಬಲ್ಲಿ ಮಂಚದಲ್ಲಿರುವ ಜನರೆಂದು ಅಜಹಲ್ಲಕ್ಷಣೆಯಿಂದ ಹೇಳುವಂತೆ ಮರ, ಲತೆ, ಬೆಟ್ಟ ಮೊದಲಾದವನ್ನು ತಿಳಿಸುವ ಮೂರನೆಯ ಉದ್ಭಿಜ್ಜಶಬ್ದದಿಂದ ಅವುಗಳಷ್ಟನ್ನೇ ಅಲ್ಲದೆ ಅವುಗಳಿಂದ ಹುಟ್ಟುವ ಬೇರೆ ಪ್ರಾಣಿಗಳನ್ನೂ ಸೇರಿಸಿಕೊಳ್ಳಬೇಕು. ಆದ್ದರಿಂದ "ಅವರೆಲ್ಲರೂ ಚಂದ್ರಲೋಕಕ್ಕೆ ಹೋಗುತ್ತಾರೆ" ಎಂಬ ಶ್ರುತಿಯು ಅರ್ಥಸಂಕೋಚವನ್ನು ಸಹಿಸದಿರುವುದರಿಂದ ಕರ್ಮಗಳನ್ನಾಚರಿಸುವ ಅಂಡಜ ಮತ್ತು ಜರಾಯುಜಪ್ರಾಣಿಗಳೆಲ್ಲಕ್ಕೂ ಚಂದ್ರಲೋಕ ಪ್ರಾಪ್ತಿಯನ್ನು ಐದನೆಯ ಆಹುತಿಯ ಮೂಲಕ ಸೃಷ್ಟಿಯನ್ನು ಹೇಳುವುದಲ್ಲಿ ತಪ್ಪೇನಿಲ್ಲ

ಪೂರ್ವತ್ರ ದುಷ್ಕೃತಿನಾಂ ಶಮನಲೋಕೇ ನರಕಪ್ರಾಪ್ತಿಂ ಪಶ್ಚಾದಿಹ ಲೋಕೇ ಅಂಧತ್ವಮೂಕತ್ವಬಧಿರತ್ವದರಿದ್ರತ್ವಾದಿಪ್ರಾಪ್ತಿಂ ಅಂಡಜಾದಿರೂಪೇಣೋತ್ಪತ್ತಿಂ ಚ ಪ್ರದರ್ಶ್ಯ ತತ್ಪ್ರಸಂಗೇ ಪಾಪಿನಾಂ ವಿವೇ

ಕಾರ್ಥಂ ದೃಷ್ಟಾಂತಾನುಸಾರೇಣ ಪುನರಾವೃತ್ತಿರಹಿತಭಕ್ತಾನಾಂ ಪುಣ್ಯ ಕರ್ಮಿಣಾಂ ಚ ಪ್ರಸಂಗಃ ಕೃತಃ. ತತ್ರ ಪುಣ್ಯಕರ್ಮಿಣಾಂ ಸ್ವರ್ಗಾತ್ಪು ನರಾಗಮನಂ ಕಥಮಿತ್ಯಾಶಂಕಾಯಾಂ ತತ್ಪ್ರಪಂಚಾರ್ಥಂ ಅಧಿಕರ ಣಾಂತರಮಾಹ. ತತ್ಸ್ವಾಭಾವ್ಯಾಪತ್ತ್ಯಧಿಕರಣಂ ॥ ೪ ॥ ತತ್ಸ್ವಾಭಾ ವ್ಯಾಪತ್ತಿರುಪಪತ್ತೇಃ ॥ ೨೨ ॥ ಪೂರ್ವಂ ಸುಕೃತಾತ್ಮನಾಂ ಭೂತಸೂ ಕ್ಷ್ಮೋದ್ಭೂತಲಿಂಗಶರೀರೇಣ ಸಹ ಸ್ವಕರ್ಮವಿಶೇಷೇಣ ಸ್ವರ್ಗಾದವ ರೋಹಣಮಸ್ತೀತ್ಯುಕ್ತಂ. ತದವರೋಹಣಪ್ರಕಾರೋಽತ್ರ ಪ್ರದ ರ್ಶ್ಯತೇ. "ಅಥೈತಮೇವಾಧ್ವಾನಂ ಪುನರ್ನಿವರ್ತಂತೇ. ಯಥೇತ ಮಾಕಾಶಂ ಆಕಾಶಾದ್ವಾಯುಃ, ವಾಯುರ್ಭೂತ್ವಾ ಧೂಮೋ ಭವತಿ. ಧೂಮೋ ಭೂತ್ವಾ ಅಭ್ರಂ ಭವತಿ, ಅಭ್ರಂ ಭೂತ್ವಾ ಮೇಘೋ ಭವತಿ. ಮೇಘೋ ಭೂತ್ವಾ ಪ್ರವರ್ಷತಿ" ಇತಿ ಶ್ರುತಿಶ್ರವಣಾತ್ ಸ್ವರ್ಗಲೋಕಾತ್ಪುನರಾಗಚ್ಛತಾಮಿಷ್ಟಾದಿಕಾರಿಣಾಂ ಆಕಾಶವಾಯು ಧೂಮಾಭ್ರಮೇಘಾದಿಷು ಅವಸ್ಥಾನಮಾತ್ರಂ ಉತ ಭೋಗಪ್ರಾಪ್ತಿಃ, ಆಕಾಶಾದಿಪ್ರತಿಪತ್ತೌ ದೇವಮನುಷ್ಯಾದಿಭಾವವದಾಕಾಶಾದಿಭಾವಸ್ತ ತ್ಸಾದೃಶ್ಯಾಪತ್ತಿಮಾತ್ರಮೇವೇತಿ ಸಂದಿಹ್ಯತೇ. "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಇತ್ಯಾದೌ ಸುಕೃತಾತ್ಮನಾಂ ಸ್ವರ್ಗಲೋಕ ಭೋಗಾತ್ತನ್ಮಧ್ಯೇಽಪಿ ತದಾತ್ಮಕತ್ವೇನ ತದ್ಭೋಗೋಽಪ್ಯಸ್ತೀತಿ ಪ್ರಾಪ್ತೇ ಪ್ರಚಕ್ಷ್ಮಹೇ. ತತ್ಸ್ವಾಭಾವ್ಯಾಪತ್ತಿಸ್ತತ್ಸಾದೃಶ್ಯಾಪತ್ತಿಃ, ಕಸ್ಮಾದೇತತ್? ಉಪಪತ್ತೇಃ. ಸೋಮಭಾವಮನುಷ್ಯಭಾವಾದೌ ಹಿ ಸುಖದುಃಖ ಭೋಗಾಯ ತದ್ಭಾವಃ, ಅತ್ರ ತ್ವಾಕಾಶಾದೌ ಸುಖದುಃಖಭೋಗೋಪ ಭೋಗಾಭಾವಾತ್ತದ್ಭಾವಾನುಪಪತ್ತೇಸ್ತಥಾ ಪ್ರತಿವಚನಂ ತತ್ಸಂಸರ್ಗ ಕೃತತತ್ಸಾದೃಶ್ಯಾಪತ್ತ್ಯಭಿಪ್ರಾಯಂ. ಕ್ಷೀಣಸುಕೃತಾನಾಂ ತೇಷಾಂ ಸಂಬಂಧಮಾತ್ರಸ್ಯೈವೋಪಪನ್ನತ್ವಾದ್ಭೋಗಸ್ಯ ತೇಷು ನ ಚೋಪ ಪತ್ತಿಃ. ಇದಮುಪಲಕ್ಷಣಂ. ತೇಷಾಂ ಪುನರ್ಯೋನಿಪ್ರಾಪ್ತ್ಯಂತಂ ಸ್ಥೂಲಶರೀರಾಭಾವೇಽಪಿ ಲಿಂಗಶರೀರೇಣ ತೇಷಾಂ ತನ್ಮಧ್ಯೇ ಭೋಗ ಸಾಮರ್ಥ್ಯಾಭಾವಾದಿತಿ ನಿಶ್ಚೀಯತೇ.

ದುಷ್ಕರ್ಮಿಗಳು ಯಮಲೋಕದಲ್ಲಿ ನರಕವನ್ನು ಅನುಭವಿಸಿ ಅನಂತರ ಈ ಲೋಕದಲ್ಲಿ ಅಂಧತ್ವ ಮೊದಲಾದ ಇಂದ್ರಿಯಗಳ ವೈಕಲ್ಯದಿಂದ ಅಂಡಜ ಮೊದಲಾದ ಅವಸ್ಥೆಗಳನ್ನು ಪಡೆಯುವರೆಂದು ಹಿಂದೆಯೇ ಹೇಳಿದೆ. ಆ ಸಂದರ್ಭದಲ್ಲಿ ಪಾಪಿಗಳಿಗೆ ವಿವೇಕವುಂಟಾಗಲೆಂಬ ಆಶಯದಿಂದ ಪುನರ್ಜನ್ಮವನ್ನು ಕಳೆದುಕೊಂಡ ಸದ್ಭಕ್ತರ ಮತ್ತು ಪುಣ್ಯಾತ್ಮರ ವಿಷಯವನ್ನು ತಿಳಿಸಿಯಾಯಿತು. ಅದರಲ್ಲಿ ಪುಣ್ಯಾತ್ಮರು ಸ್ವರ್ಗ ದಿಂದ ಮತ್ತೆ ಹೇಗೆ ಹಿಂತಿರುಗಿಬರುವರೆಂಬುದನ್ನು ಆಶಂಕಿಸಿ ತಿಳಿಸುತ್ತಾನೆ. ಸತ್ಕರ್ಮಿ

ಗಳು ಸೂಕ್ಷ್ಮಭೂತಗಳಿಂದಾದ ಲಿಂಗಶರೀರದೊಡಗೂಡಿ ಕರ್ಮಶೇಷದೊಡನೆ ಸ್ವರ್ಗ ದಿಂದ ಹಿಂತಿರುಗುವರೆಂದು ಹಿಂದೆ ಹೇಳಿದೆ. ಅವರು ತಾವು ಹಿಂದೆಹೋಗಿದ್ದ ಮಾರ್ಗ ದಲ್ಲಿಯೇ ಆಕಾಶ, ವಾಯು, ಧೂಮ, ಅಭ್ರ, ಮೇಘ ಈ ರೂಪಗಳಿಂದ ಮಳೆಯಾಗಿ ಭೂಮಿಗೆ ಬರುತ್ತಾರೆ ಎಂದು ಶ್ರುತಿಯಲ್ಲಿ ಹೇಳಿದರೂ ಅವರು ಆಕಾಶ ವಾಯು ಮೊದಲಾದ ಅವಸ್ಥೆಗಳೊಂದೊಂದರಲ್ಲೂ ಸುಮ್ಮನೆ ಸೇರಿರುವರೋ?ಅಥವಾ ಭೋಗಿ ಸುತ್ತಿರುವರೋ ಅಥವಾ ದೇವಮನುಷ್ಯಾದಿಗಳಂತೆ ಕೇವಲ ಆಯಾ ಭಾವಗಳನ್ನು ಹೊಂದಿರುವರೋ ? ಅಥವಾ ಆಕಾಶದಿಭಾವಗಳಿಗೆ ಸದೃಶರಾಗಿರುವರೋ ? ಎಂಬ ಸಂದೇಹವುಂಟಾಗುತ್ತದೆ. "ಸ್ವರ್ಗಾಪೇಕ್ಷಿಯು ಜ್ಯೋತಿಷ್ಟೋಮವನ್ನಾಚರಿಸಬೇಕು" ಎಂಬ ಶ್ರುತಿಯ ಪ್ರಾಕಾರ ಪುಣ್ಯಶಾಲಿಗಳು ದೇವಭಾವವನ್ನು ಹೊಂದಿ ಸ್ವರ್ಗಸುಖ ವನ್ನು ಅನುಭವಿಸುವಂತೆ ಅಲ್ಲಿಂದ ಇಳಿಯುವಾಗಲೂ ಮಧ್ಯದಲ್ಲಿ ಆಕಾಶ ವಾಯು ಮೊದಲಾದ ಭಾವವನ್ನು ಹೊಂದಿ ಸುಖದುಃಖಗಳನ್ನು ಅನುಭವಿಸುತ್ತಿರುವರು ಎಂದು ಆಕ್ಷೇಪ ಬಂದರೆ ಸಿದ್ಧಾಂತವನ್ನು ಮುಂದೆ ಹೇಳಲಾಗಿದೆ. ಆಕಾಶಾದಿಭಾವಗಳೆಂದರೂ ಆಕಾಶಾದಿಗಳ ಸಾದೃಶ್ಯವೆಂದೇ ಭಾವಿಸಬೇಕೆಂದರೆ ದೇವಮನುಷ್ಯಭಾವಗಳಾದರೋ ಸುಖದುಃಖಗಳ ಅನುಭವಕ್ಕಾಗಿಯೇ ಬರುತ್ತವೆ. ಆಕಾಶಾದಿಭಾವಗಳಿಗಾದರೋ ಸುಖದುಃಖಗಳ ಭೋಗವಿಲ್ಲದ್ದರಿಂದ ಆಯಾ ಭಾವಗಳನ್ನು ಅವರು ಹೊಂದುವುದೇ ಅಯುಕ್ತವೆನಿಸುತ್ತದೆ. ಆದರೆ ಇಲ್ಲಿ ಅವರು ಆಯಾ ಅವಸ್ಥೆಗಳನ್ನು ಹೊಂದುವ ರೆಂದು ಹೇಳಿದ್ದರೂ ಅವುಗಳ ಸಂಪರ್ಕದಿಂದಲೇ ಆ ಬಗೆಯ ಸಾದೃಶ್ಯವನ್ನು ಅವರು ಹೊಂದುವರೆಂಬುದೇ ಅಭಿಪ್ರಾಯವಾಗಿದೆ. ಪುಣ್ಯವನ್ನು ಕಳೆದುಕೊಂಡವರಿಗೆ ಆಕಾಶಾದಿಗಳ ಸಂಬಂಧವಷ್ಟೇ ಇರುವುದರಿಂದ ಆಗ ಭೋಗದ ಪ್ರಸಕ್ತಿಯೇ ಇರು ವುದಿಲ್ಲ. ಅವರು ಮತ್ತೊಂದು ಜನ್ಮವನ್ನು ಪಡೆಯುವವರೆಗೂ ಸ್ಥೂಲಶರೀರವಿಲ್ಲ ದಿದ್ದರೂ ಕೇವಲ ಲಿಂಗಶರೀರದಿಂದ ಆಕಾಶ ವಾಯು ಮೊದಲಾದ ಅವಸ್ಥೆಗಳನ್ನು ಹೊಂದಿದ್ದರೂ ಅವರಿಗೆ ಭೋಗಪಡುವ ಯೋಗ್ಯತೆಯೇ ಇರುವುದಿಲ್ಲವೆಂದು ನಿಶ್ಚಯಿಸಲಾಗಿದೆ.

ನನ್ವಾಕಾಶಾದಿಷ್ವವಸ್ಥಾನಮಪಿ ತೇಷಾಮೇಕೈಕಸ್ಮಿನ್ನೇಕೈಕ ದಿನಮಾತ್ರಮೇವ ನ ಬಹುಸಂವತ್ಸರಕಾಲಮಿತ್ಯಾಶಂಕಾಯಾಮಧಿಕರ ಣಾಂತರೇಣಾಹ. ನಾತಿಚಿರಾಧಿಕರಣಂ ॥ ೫ ॥ ನಾತಿಚಿರೇಣ ವಿಶೇ ಷಾತ್ ॥ ೨೩ ॥ ಫಲಾಭಿಲಾಷಕೃತಾನಾಮಿಷ್ಟಾಪೂರ್ತಾದಿಕರ್ಮಿಣಾಂ ಸ್ವರ್ಗಾದವರೋಹಣೇ ವ್ಯೋಮಾದಿಷು ತತ್ರತತ್ರ ಬಹುಕಾಲಸ್ಥಿತಿ ನಿಯಮಃ ಸತ್ವರನಿಯಮೋ ವೇತಿ ಸಂಶಯಃ. "ಆಕಾಶಾದ್ವಾಯುಃ" ಇತ್ಯಾದಿನಾ ವ್ಯೋಮಾದಿಭೂತೇಷು ಬಹುಕಾಲಾವಸ್ಥಾನಂ ತತ್ತದಾಕಾರ ಪ್ರಾಪ್ತಿಶ್ಚಾವಗಮ್ಯತೇ. ಕಿಂಚ ಇಹ "ವ್ರೀಹಿಯವೌಷಧಿವನಸ್ಪತಯ ಸ್ತಿಲಮಾಷಾ ಇತಿ ಜಾಯಂತೇ" ಇತಿಶ್ರುತೌ ಪ್ರವರ್ಷಾನಂತರಂ ವ್ರೀಹಿ

ಯವಾದಿಭಾವೋ ದರ್ಶಿತಃ. ತಸ್ಮಾಜ್ಜೀವಸ್ಯ ತತ್ರತತ್ರ ಬಹುಕಾಲಸ್ಥಿತಿತ್ವಮೇವೇತಿ ಪ್ರಾಪ್ತೇ ಪ್ರೋಚ್ಯತೇ ನಾತಿಚಿರೇಣ ವಿಶೇಷಾದಿತಿ. ಅತ್ರ ನಾತಿಚಿರೇಣೇತಿ ಕುತಃ? ವಿಶೇಷಾದುತ್ತರತ್ರ ವ್ರೀಹಿಯವಾದಿಪ್ರಾಪ್ತೌ. "ಅತೋ ವೈ ಖಲು ದುರ್ನಿಷ್ಪ್ರತರಂ" ಇತಿ ವಿಶಿಷ್ಯ ಕೃಚ್ಛ್ರನಿಷ್ಕ್ರಮಣಂ ಗಮ್ಯತೇ. ಅತೋ ವೈ ದುನಿಷ್ಪ್ರತರಂ ಇತ್ಯಸ್ಯ ದುಃಖನಿಷ್ಕ್ರಮಣತರಮಿತ್ಯರ್ಥಃ. ಅತಃ ವ್ಯೋಮಾದಿಸಂಬಂಧಾನಂತರಂ ವ್ರೀಹಿಯವಾದ್ಯವಸ್ಥಾಯಾಂ ಕರ್ಮಿಣಾಂ ದುಃಖೇನ ನಿರ್ಗಮನಂ, ಕಾಲವಿಳಂಬೇನಾನ್ನದ್ವಾರಾ ಪುರುಷಸಂಬಂಧಃ, ಅಂಕುರಮಾರಭ್ಯ ಧಾನ್ಯನಿಷ್ಪತ್ತಿಪರ್ಯಂತಂ ವಿಳಂಬಃ. ಧಾನ್ಯನಿಷ್ಕ್ರಮಣಾನಂತರಮಪಿ ಕುಸೂಲಾದಿಪ್ರಕ್ಷೇಪೇಣ ಕಂಚಿತ್ಕಾಲವಿಳಂಬನಂ ಇತಿ ತಾತ್ಪರ್ಯಾರ್ಥೋಽವಗಮ್ಯತೇ. ತಸ್ಮಾದ್ವ್ಯೋಮಾದೌ ಸತ್ವರತ್ವಂ ವ್ರೀಹ್ಯಾದೌ ಕಂಚಿತ್ಕಾಲವಿಳಂಬನಮಿತಿ ನಿಶ್ಚೀಯತೇ.

ಆಕಾಶಾದಿಗಳಲ್ಲಿ ಜೀವರು ಇರುವುದಾದರೂ ಒಂದೊಂದರಲ್ಲಿ ಒಂದೊಂದು ದಿನ ಮಾತ್ರವೇ ಇರುವರೋ ಅಥವಾ ಬಹಳಕಾಲ ಇರುವರೋ ಎಂದು ಆಶಂಕಿಸಿ ಸಮಾಧಾನಮಾಡುತ್ತಾನೆ. ಫಲಾಪೇಕ್ಷೆಯಿಂಡ ಲೋಕಕಲ್ಯಾಣಕಾರ್ಯಗಳನ್ನು ನಡೆಸಿದವರು ಸ್ವರ್ಗದಿಂದ ಹಿಂತಿರುಗುವಾಗ ಆಕಾಶಾದಿಗಳೊಂದೊಂದರಲ್ಲೂ ಬಹಳ ಕಾಲ ಇರುವರೇ ಅಥವಾ ಕೊಂಚಕಾಲಮಾತ್ರವೇ ಇರುವರೇ ಎಂಬುದನ್ನು ಇಲ್ಲಿ ವಿಮರ್ಶಿಸಲಾಗಿದೆ. ಆಕಾಶಾದಿಭೂತಗಳಲ್ಲಿ ಅವರು ಬಹಳಕಾಲವಿರುವರೆಂದೂ, ಆಯಾ ಆಕಾರಗಳನ್ನು ಹೊಂದುವರೆಂದೂ ಶ್ರುತಿಯಿಂದಲೇ ತಿಳಿದುಬರುತ್ತದೆ. "ಅವರು ಇಲ್ಲಿ ಭತ್ತ, ಗೋಧಿ, ಓಷಧಿಲತೆಗಳು, ಮರಗಳು, ಉದ್ದು ಮೊದಲಾದ ರೀತಿಯಲ್ಲಿ ಹುಟ್ಟುತ್ತಾರೆ" ಎಂಬ ಶ್ರುತಿಯಲ್ಲಿ ಅವರಿಗೆ ಮಳೆಯ ರೂಪದಿಂದ ಕೆಳಗೆ ಸುರಿದಮೇಲೆ ಭತ್ತ ಗೋಧಿ ಮೊದಲಾದ ಅವಸ್ಥೆಯನ್ನು ಹೇಳಲಾಗಿದೆ. ಆದ್ದರಿಂದ ಜೀವನು ಆಯಾ ಅವಸ್ಥೆಯಲ್ಲಿ ಬಹಳಕಾಲ ಇರುವನೆಂದೇ ಆಕ್ಷೇಪಬಂದರೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಭತ್ತ ಗೋಧಿ ಮೊದಲಾದ ಧಾನ್ಯದ ಅವಸ್ಥೆಯನ್ನು ಜೀವರು ಹೊಂದಿದಾಗ ಆ ಸ್ಥಿತಿಯಲ್ಲಿ ಬಹಳ ಬೇಗನೆ ಅವರಿಗೆ ಬಿಡುಗಡೆಯಾಗುವುದಿಲ್ಲ. ಆದ್ದರಿಂದಲೇ ಅವರ ಅವಸ್ಥೆ ಬಹಳ ಅಸಹ್ಯವೆನಿಸಿದೆ. ಬಹಳ ಕ್ಲೇಶದಿಂದ ಹೊರಡಬೇಕಾಗುವುದೆಂದು ಕೆಲವುಕಡೆ ವಿಶೇಷವಾಗಿ ಹೇಳಿರುವುದರಿಂದ ಆಕಾಶ ವಾಯು ಮೊದಲಾದ ಅವಸ್ಥೆಗಳಲ್ಲಿ ಅವರಿಗೆ ಬೇಗನೆ ಬಿಡುಗಡೆಯಾಗುವುದೆಂದು ತಿಳಿದುಬರುತ್ತದೆ. ಆದ್ದರಿಂದ ಧಾನ್ಯಾವಸ್ಥೆಯಲ್ಲಿದ್ದಾಗ ಜೀವರು ಬಹಳ ಕಷ್ಟದಿಂದ ಹೊರಡಬೇಕಾಗುತ್ತದೆ; ಯಾಕೆಂದರೆ ಆಗ ಬಹಳ ಕಾಲಕಳೆದಮೇಲೆ ಅವರಿಗೆ ಅನ್ನದಮೂಲಕ ಪುರುಷರ ಸಂಬಂಧವುಂಟಾಗುತ್ತದೆ. ಅದಕ್ಕೆಮೊದಲು ಮೊಳಕೆಯಾದಮೇಲೆ ಧಾನ್ಯವಾಗುವವರೆಗೂ ತಡವಾಗುತ್ತದೆ ಧಾನ್ಯವಾದಮೇಲೆ

ಗುಡಾಣದಲ್ಲಿ ಬಂದು ಸೇರುವುದರಿಂದ ಅಲ್ಲಿಯೇ ಬಹಳಕಾಲವಿರಬೇಕಾಗುತ್ತದೆ. ಹೀಗೆ ಆಕಾಶ ವಾಯು ಮೊದಲಾದ ಸ್ಥಿತಿಯಲ್ಲಿ ಅವರು ಬೇಗನೆ ಹೊರಡುವರೆಂದೂ, ಧಾನ್ಯಾವಸ್ಥೆಯಲ್ಲಿ ಬಹಳಕಾಲದಮೇಲೆ ಹೊರಡಬೇಕಾಗುವುದೆಂದೂ ನಿಶ್ಚಯಿಸಲಾಗಿದೆ.

ಸುಕೃತಿನಾಂ ಸರ್ವತ್ರ ಸುಖಾನುಭವವಿಧಿದರ್ಶನಾತ್ತೇಷಾಂ ವ್ರೀಹಿಯವಾದಿಷ್ವಪಿ ಚಿರಕಾಲವ್ಯವಸ್ಥಾನವ್ಯಪದೇಶಾತ್ತತ್ರತತ್ರ ಸ್ವರ್ಗಾನಂದಾನುಭವವದಾನಂದಾನುಭೋಗಃ ಕಿಂ ನ ಸ್ಯಾದಿತ್ಯಾಶಂಕಾಯಾಮಾಹ. ಅನನ್ಯಾಧಿಷ್ಠಿತಾಧಿಕರಣಂ ‖ ೬ ‖ ಅನ್ಯಾಧಿಷ್ಠಿತೇ ಪೂರ್ವವದಭಿಲಾಪಾತ್ ‖ ೨೪ ‖ ಅನ್ಯಾಧಿಷ್ಠಿತೇ ಅನ್ಯೈಃ ವ್ರೀಹಿಯವಾದ್ಯೋಷಧ್ಯಭಿಮಾನಿಭಿಃ ಜೀವಾಂತರೈರಧಿಷ್ಠಿತೇ ಸಹಕೃತೇ ವ್ರೀಹಿಯವಾದಾ ಸುಕೃತಾತ್ಮನಾಂ ಚಿರಕಾಲಾವಸ್ಥಾನಮಾತ್ರಮೇವ ಭೋಗಃ. ಕಸ್ಮಾತ್ಪೂರ್ವವದಭಿಲಾಪಾತ್ ಪೂರ್ವವದಾಕಾಶಾದಿಷು ವ್ರೀಹಿಯವಾದಿಷ್ವಪಿ ಸಂಬಂಧಮಾತ್ರಸ್ಯೈವೇಹ ಶ್ರುತೌ ಕಥಿತತ್ವಾತ್, ತಥಾಚ ವ್ರೀಹಿಯವಾದಿಸ್ಥಾವರದೇಹಾಭಿಮಾನಜೀವಾನಾಮೇವ ವಾತಾತಪವರ್ಷಾದಿಜನ್ಮಸುಖದುಃಖಾನುಭೂತಿಃ, ನ ಪಾಂಥತುಲ್ಯತ್ವಾದಾಶ್ರಿತಸುಕೃತಾತ್ಮನಾಂ. "ಅವರೋಹಂತೋ ಜೀವಾಃ ವ್ರೀಹಿಯವಾದಿಭಾವೇನ ಜಾಯಂತೇ" ಇತಿ ಶ್ರೂಯತೇ. "ಮೇಘೋ ಭೂತ್ವಾ ಪ್ರವರ್ಷತಿ. ತ ಇಹ ವ್ರೀಹಿಯವಾ ಓಷಧಿವನಸ್ಪತಯಸ್ತಿಲಮಾಷಾ ಇತಿ ಜಾಯಂತೇ" ತೇ ಕಿಮನ್ಯೈರ್ಭೋಕ್ತೃಭಿಃ ವ್ರೀಹ್ಯಾದಿಶರೀರೈರಧಿಷ್ಠಿತಾನ್ ವ್ರೀಹ್ಯಾದೀನಾಶ್ಲಿಷಂತಿ. ಉತ ತೇ ಭೋಕ್ತಾರೋ ವ್ರೀಹ್ಯಾದಿಶರೀರಾ ಜಾಯಂತಇತಿ ಸಂದಿಹ್ಯತೇ, "ತ ಇಹ ವ್ರೀಹಿಯವಾ ಇತಿ ಜಾಯಂತೇ" ಇತಿಶ್ರುತಿದರ್ಶನಾತ್, "ಯತೋ ವಾ ಇಮಾನಿ ಭೂತಾನಿ ಜಾಯಂತೇ", "ಸೋಮಃ ಪವತೇ ಜನಿತಾ ಮತೀನಾಂ" ಇತ್ಯಾದೌ "ದೇವಾ ಜಾಯಂತೇ ಮನುಷ್ಯಾ ಜಾಯಂತೇ" ಇದಿವದ್ವ್ರೀಹ್ಯಾದಿಶರೀರಾ ಏವ ಸುಕೃತಿನೋ ಜಾಯಂತೇ ಇತಿಪ್ರಾಪ್ತೇ ಪ್ರಚಕ್ಷ್ಮಹೇ. ಜೀವಾಂತರೇಣಾಧಿಷ್ಠಿತೇ ವ್ರೀಹ್ಯಾದಿಶರೀರೇ ತೇಷಾಂ ಸಂಶ್ಲೇಷಮಾತ್ರಮೇವ, ಕುತಃ ಪೂರ್ವವದಭಿಲಾಪಾತ್ ಆಕಾಶಾದಿಮೇಘಪರ್ಯಂತತ್ವೇನ ತದ್ಭಾವಾಭಿಲಾಪಾತ್. ಯತ್ರ ಹಿ ಭೋಕ್ತೃತ್ವಮಭಿಪ್ರೇತಂ ತತ್ರ ತತ್ಸಾಧನಭೂತಂ ಕರ್ಮಾಭಿಲಪ್ಯತೇ "ರಮಣೀಯಚರಣಾ ಕಪೂಯಚರಣಾಃ" ಇತಿ. ಇಹಚಾಕಾಶಾದಿವನ್ನಾಭಿಲಪ್ಯತೇ ಕರ್ಮ, ಕರ್ಮಫಲಪ್ರದಾನೇ ಪ್ರವೃತ್ತಸ್ಯ ಸ್ವರ್ಗೋಪಭೋಗ್ಯಫಲಸ್ಯೇಷ್ಟಾದೇಃ ಕರ್ಮಣಃ ಸ್ವರ್ಗೋಪಭೋಗಾದೇವ ಸಮಾಪ್ತತ್ವಾತ್, ಅನಾರಬ್ಧಸ

**" ರಮಣೀಯಚರಣಾಃ ಕಪೂಯಚರಣಾಃ " ಇತಿ ವಕ್ಷ್ಯಮಾಣತ್ವಾತ್, ಮಧ್ಯೇ ಕರ್ಮಾಂತರಾಭಾವಾಚ್ಚ ಆಕಾಶಾದಿಭಾವವಚನವತ್ ವ್ರೀಹ್ಯಾದಿಭಾವೇನ ಜನ್ಮವಚನಮೌಪಚಾರಿಕಂ.**

ಪುಣ್ಯಶಾಲಿಗಳಿಗೆ ಎಲ್ಲೆಲ್ಲೂ ಸುಖದ ಅನುಭವವೇ ಇರುವುದರಿಂದ ಅವರು ಧಾನ್ಯಾವಸ್ಥೆಯನ್ನು ಹೊಂದಿ ಬಹಳಕಾಲದವರೆಗೆ ಹಾಗೆಯೇ ಇರುವರೆಂದು ಹೇಳಿದ್ದರಿಂದ ಆಯಾ ಅವಸ್ಥೆಗಳಲ್ಲೂ ಸ್ವರ್ಗದ ಆನಂದವನ್ನು ಅನುಭವಿಸುವಂತೆಯೇ ಅವರಿಗೆ ಆಗಲೂ ಆನಂದದ ಅನುಭವ ಏಕೆ ಇರಬಾರದು? ಎಂದಾಶಂಕಿಸಿ ನಿರಾಕರಿಸುತ್ತಾನೆ. ಭತ್ತ ಗೋಧಿ ಮೊದಲಾದ ಧಾನ್ಯಗಳಲ್ಲಿ ಆಯಾ ಧಾನ್ಯದ ಅಭಿಮಾನಿದೇವತೆಗಳೊಡನೆ ಪುಣ್ಯಜೀವಿಗಳು ಬಹಳಕಾಲ ಇರುವರೆಂಬುದಷ್ಟೇ ಅವರ ಭೋಗವೆನಿಸುತ್ತದೆ. " ಭತ್ತ, ಗೋಧಿ ಮೊದಲಾದಕಡೆಗಳಲ್ಲೂ ಜೀವರಿಗೆ ಇರುವಿಕೆಯೊಂದೇ ಹೊರತು ಭೋಗದ ಪ್ರಸಕ್ತಿಯೇ ಇಲ್ಲ" ವೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಈ ಬಗೆಯ ಧಾನ್ಯಗಳ ಸ್ಥಾವರದೇಹವನ್ನು ಅಭಿಮಾನಿಸಿಕೊಂಡಿರುವ ಜೀವರಿಗೆ ಮಾತ್ರವೇ ಗಾಳಿ ಬಿಸಿಲು ಮಳೆಗಳಿಂದ ಆಗುವ ಸುಖದುಃಖಗಳು ಅಂಟುತ್ತವೆ. ಆದರೆ ಆ ಧಾನ್ಯಗಳನ್ನಾಶ್ರಯಿಸಿಕೊಂಡಿರುವ ಪುಣ್ಯಜೀವರು ಮಾತ್ರ ಪಥಿಕರಂತೆ ಅಲ್ಲಿ ಕೆಲವುಕಾಲಮಾತ್ರವೇ ಇರುವುದರಿಂದ ಅವರಿಗೆ ಯಾವ ಅನುಭವವೂ ಆಗುವುದಿಲ್ಲ. " ಸ್ವರ್ಗದಿಂದ ಇಳಿದುಬರುವ ಜೀವರು ಧಾನ್ಯಗಳಾಗಿ ಹುಟ್ಟುತ್ತಾರೆ " ಎಂಬ ಶ್ರುತಿಯಲ್ಲಿ ಜೀವರು ಭತ್ತ ಮೊದಲಾದ ರೂಪಗಳನ್ನು ಹೊಂದಿದಾಗ, ಅವರು ಭತ್ತ ಮೊದಲಾದ ರೂಪವನ್ನೇ ಶರೀರವಾಗಿ ಪಡೆಯುವರೇ ಅಥವಾ ಭತ್ತವನ್ನೇ ಶರೀರವಾಗಿ ಹೊಂದಿದ್ದ ಚೇತನರೊಡನೆ ಅವರು ಸೇರುವರೇ ಎಂಬ ಸಂದೇಹವುಂಟಾಗುತ್ತದೆ. "ಅವರು ಇಲ್ಲಿ ಭತ್ತ ಗೋಧಿ ಮೊದಲಾದ ಧಾನ್ಯಗಳಾಗಿ ಹುಟ್ಟುತ್ತಾರೆ" ಎಂದು ಶ್ರುತಿಯಲ್ಲಿ ಹೇಳಿದ್ದರಿಂದ, " ಯಾವನಿಂದ ಈ ಜೀವರು ಹುಟ್ಟುವರೋ " " ಸೋಮನು ಹುಟ್ಟುತ್ತಾನೆ. ಬುದ್ಧಿಗೆ ಜನಕನು " ಎಂಬ ಶ್ರುತಿಗಳಲ್ಲಿ ಮನುಷ್ಯರು ಹುಟ್ಟುವರೆಂದೂ, ದೇವತೆಗಳು ಹುಟ್ಟುವರೆಂದೂ ಹೇಳಿರುವಂತೆಯೇ ಸತ್ಕರ್ಮಿಗಳು ಗೋಧಿಮೊದಲಾದ ಧಾನ್ಯಗಳನ್ನು ಶರೀರವಾಗಿ ಪಡೆದೇ ಹುಟ್ಟುತ್ತಾರೆ ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಧಾನ್ಯದಲ್ಲಿರುವ ಅಭಿಮಾನಿಜೀವರೊಂದಿಗೆ ಇವರಿಗೆ ಕೇವಲ ಸಂಪರ್ಕವಿರುವುದಷ್ಟೇ ಹೊರತು ಆ ಶರೀರ ದೊರಕುವುದಿಲ್ಲ. ಆಕಾಶದಿಂದ ಮೇಘದವರೆಗೂ ಜೀವರು ಆಯಾ ರೂಪಗಳಲ್ಲಿ ಮಾತ್ರವೇ ಇರುವರೆಂದು ಶ್ರುತಿಯಲ್ಲಿ ಹೇಳಿದೆ. ಎಲ್ಲಿ ಅವರಿಗೆ ಭೋಗದ ಪ್ರಸಕ್ತಿಉಂಟಾಗುವುದೋ ಅಲ್ಲಿ ಅವರಿಗೆ ಭೋಗಸಾಧನವಾದ ಕರ್ಮದ ಸಂಬಂಧವೂ ಪ್ರತಿಪಾದಿತವಾಗುತ್ತದೆ. ಹೀಗೆ ಧಾನ್ಯರೂಪದಿಂದ ಇರುವಾಗಲೂ ಜೀವರಿಗೆ ಆಕಾಶಾದಿಗಳಂತೆ ಕರ್ಮದ ಸಂಪರ್ಕವಿರುವುದಿಲ್ಲ. ಸ್ವರ್ಗರೂಪವಾದ ಫಲವನ್ನು ಕೊಡಲಾರಂಭಿಸಿದ ಇಷ್ಟಾದಿಕರ್ಮಗಳೂ ಸ್ವರ್ಗಫಲವನ್ನು ಕೊಡುವುದರಿಂದಲೇ ಮುಗಿದು

ಹೋಗುತ್ತವೆ. ಫಲವನ್ನು ಕೊಡಲು ಇನ್ನೂ ಆರಂಭಿಸದೆ ಇರುವ ಕರ್ಮಗಳು ಮುಂದೆ ಪ್ರವರ್ತಿಸುತ್ತವೆ. ಈ ಮಧ್ಯದಲ್ಲಿ ಬೇರೆ ಯಾವ ಕರ್ಮಕ್ಕೂ ಅವಕಾಶವೇ ಇಲ್ಲ. ಆದ್ದರಿಂದ ಆಕಾಶಾದಿಗಳಂತೆಯೇ ಧಾನ್ಯಾವಸ್ಥೆಯೂ ಸಹ ಕೇವಲ ಉಪಚಾರಕ್ಕಾಗಿಯೇ ಬಂದಿರುತ್ತದೆ ಎಂದು ತಿಳಿಯಬೇಕು.

ನನು ವೇದವಿಹಿತಜ್ಯೋತಿಷ್ಟೋಮಾದಿಸುಕೃತಕರ್ಮಸು ಪಶುವಿಶಸನಮಾಂಸಭಕ್ಷಣಾದಿಘೋರಪಾಪಧರ್ಮದರ್ಶನಾತ್ ಪುಣ್ಯಾಪುಣ್ಯೋಭಯಾತ್ಮಕತ್ವಂ ಪ್ರತೀಯತೇ. ತಸ್ಮಾತ್ಸುಖಾಲಯಸ್ವರ್ಗೇ ದುಷ್ಕೃತದುಃಖಾನುಭವಾಯೋಗಾತ್ ತೇಷಾಂ ಪುನರಾಗಮನೇ ವ್ರೀಹಿಯವಾದಿದುಷ್ಕೃತಲಬ್ಧಜಡಶರೀರೇಣ ತದ್ಭೋಗಮನುಭೂಯ ಪುನಃ ಪೂರ್ವೋಕ್ತಸ್ವಕೃತಸುಕೃತವಿಶೇಷೇಣ ಬ್ರಾಹ್ಮಣಾದಿಮಹದೈಶ್ವರ್ಯವಿಶೇಷಜನ್ಮಪರಿಗ್ರಹತ್ವಮೇವೇತ್ಯಾಶಂಕಾಯಾಮಾಹ. ಅಶುದ್ಧಮಿತಿ ಚೇನ್ನ ಶಬ್ದಾತ್ ‖ ೨೫ ‖ ನೈತದಸ್ತಿ ಯದನ್ಯಾಧಿಷ್ಠಿತೇ ವ್ರೀಹ್ಯಾದಿಶರೀರೇ ಸಂಶ್ಲೇಷಮಾತ್ರಂ ಭೋಕ್ತೃತ್ವಹೇತ್ವಭಾವಾದಿತಿ ವ್ರೀಹ್ಯಾದಿಭಾವೇನ ಜನ್ಮೇತಿ ಭೋಕ್ತೃತ್ವಹೇತುಸದ್ಭಾವಾತ್ ಸ್ವರ್ಗೋಪಭೋಗ್ಯಫಲಂ ಇಷ್ಟಾದಿಕರ್ಮೈವಾಶುದ್ಧಂ ಪಾಪಮಿಶ್ರಂ, ಅಗ್ನೀಷೋಮೀಯಾದಿಹಿಂಸಾಯುಕ್ತತ್ವಾತ್. ಹಿಂಸಾ ಚ "ನ ಹಿಂಸ್ಯಾತ್ಸರ್ವಾ ಭೂತಾನಿ" ಇತಿ ನಿಷಿದ್ಧತ್ವಾತ್ಪಾಪಮೇವ. ನಚಾತ್ರ ಪದಾಹವನೀಯಾದಿವದುತ್ಸರ್ಗಾಪವಾದಸ್ಸಂಭವತಿ ಭಿನ್ನವಿಷಯತ್ವಾತ್. ಅಗ್ನೀಷೋಮೀಯಹಿಂಸಾವಿಧಿರ್ಹಿಂಸಾಯಾಃ ಕ್ರತೂಪಕಾರಕತ್ವಂ ಬೋಧಯತಿ, "ನ ಹಿಂಸ್ಯಾತ್" ಇತಿ ತು ಹಿಂಸಾಯಾಃ ಪ್ರತ್ಯವಾಯಫಲತ್ವಂ ಅಭಿಧೀಯತೇ. ಅಗ್ನೀಷೋಮೀಯಾದಿಷು ವಿಧಿತಃ ಪ್ರವೃತ್ತೇರ್ನ ತದ್ವಿಷಯಂ ನಿಷೇಧವಿಧಿರಾಸ್ಕಂದತಿ, ರಾಗಪ್ರಾಪ್ತವಿಷಯತ್ವಾತ್ತಸ್ಯ ಇತಿ ಚೇದೇವಂ ಇಹಾಪಿ ರಾಗಪ್ರಾಪ್ತೇರವಿಶಿಷ್ಟತ್ವಾತ್, "ಸ್ವರ್ಗಕಾಮೋ ಯಜೇತ" ಇತ್ಯೇವಮಾದೌ ಹಿ ಸ್ವರ್ಗಕಾಮೀ ಕರ್ತವ್ಯತಯಾ ಯಾಗಾದ್ಯುಪದೇಶತಯಾ ಯಾಗಾದೇಃ ಸ್ವರ್ಗಾದಿಸಾಧನತ್ವಮವಗಮ್ಯ ಫಲರಾಗತ ಏವ ಯಾಗಾದೌ ಪ್ರವರ್ತತೇ. ಅಗ್ನೀಷೋಮೀಯಾದಿಷ್ವಪಿ ತೇಷಾಂ ಫಲಸಾಧನಭೂತಸ್ಯ ಯಾಗಾದೇಃ ಉಪಕಾರಕತ್ವಂ ಶಾಸ್ತ್ರಾದವಗಮ್ಯ ರಾಗಾದೇವ ಪ್ರವರ್ತತೇ. ಲೌಕಿಕ್ಯಾಮಪಿ ಹಿಂಸಾಯಾಂ ಕೇನಚಿತ್ಪ್ರಮಾಣೇನ ಹಿಂಸಾಯಾಃ ಸ್ವಸಮೀಹಿತಸಾಧನತ್ವಮವಗಮ್ಯ ರಾಗಾತ್ಪ್ರವರ್ತತ ಇತಿ ನ ಕಶ್ಚನ ವಿಶೇಷಃ. ತಥಾ ನಿತ್ಯೇಷ್ವಪಿ ಕರ್ಮಸು, ಸರ್ವಧರ್ಮಾಣಾಂ ಸ್ವಧರ್ಮಾನುಷ್ಠಾನೇ ಹ್ಯಪರಿಮಿತಂ ಸುಖಮಿತ್ಯಾದಿವಚನಾತ್ಫಲಸಾಧನತ್ವಮವಗಮ್ಯ ರಾಗಾದೇವ ಪ್ರವೃತ್ತಿರಿತಿ ತೇಷಾಮಪ್ಯ

ಶುದ್ಧಿಯುಕ್ತತ್ವಂ. ಅತಃ ಇಷ್ಟಾದೀನಾಂ ಪಾಪಮಿಶ್ರಣೇನಾಶುದ್ಧಿಯುಕ್ತಾನಾಂ ಸ್ವರ್ಗೇಽನುಭಾವ್ಯಂ ಫಲಂ ತತ್ರಾನುಭೂಯ ಹಿಂಸಾಂಶಸ್ಯ ಫಲಂ ವ್ರೀಹ್ಯಾದಿಸ್ಥಾವರಭಾವೇನಾನುಭೂಯತೇ. ಶರೀರಜೈಃ ಕರ್ಮದೋಷೈರ್ಯಾತಿ ಸ್ಥಾವರತಾಂ ನರಃ ಅತೋ ವ್ರೀಹ್ಯಾದಿಭಾವೇನ ಭೋಗಾಯಾನುಶಯಿನೋ ಭವಂತೀತಿ ಚೇನ್ನ, ಕುತಃ ಶಬ್ದಾತ್, ಅಗ್ನೀಷೋಮೀಯಾದೇಸ್ಸಂಜ್ಞಪನಸ್ಯ ಸ್ವರ್ಗಲೋಕಪ್ರಾಪ್ತಿಹೇತುತಯಾ ಹಿಂಸಾತ್ವಾಭಾವಶಬ್ದಾತ್ ಪಶೋರ್ಹಿಂಸಾಂ ಜ್ಞಪನನಿಮಿತ್ತಾಂ ಸ್ವರ್ಗಲೋಕಪ್ರಾಪ್ತಿಂ ವದಂತಂ ಶಬ್ದಮಾಮನಂತಿ. " ಹಿರಣ್ಯಶರೀರ ಊರ್ಧ್ವಃ ಸ್ವರ್ಗಂ ಲೋಕಮೇತಿ " ಇತ್ಯಾದಿಕಾತಿಶಯಿತಾಭ್ಯುದಯಸಾಧನಭೂತೋ ವ್ಯಾಪಾರೋಽಲ್ಪದುಃಖದೋಽಪಿ ನ ಹಿಂಸಾ ಪ್ರತ್ಯುತ ರಕ್ಷಣಮೇವ. ತಥಾಚ ಮಂತ್ರವರ್ಣಃ " ನವಾ ಉ ಏತನ್ಮ್ರಿಯಸೇ ನರಿಷ್ಯಸಿ ದೇವಾನ್ ಇದೇಭಿಃ ಪಥಿಭಿಸ್ಸುಗೇಭಿಃ ಯತ್ರ ಯಾತಿ ಸುಕೃತೀನಾಪಿ ದುಷ್ಕೃತೀ ತತ್ರ ತ್ವಾ ದೇವಸ್ಸವಿತಾ ದದಾತು " ಇತಿ. ವಿಚಿಕಿತ್ಸಕಂ ಚ ತಾದಾತ್ವಿಕಾಲ್ಪದುಃಖಕಾರಣಮಪಿ ರಕ್ಷಕಮೇವ ವದಂತಿ ಪೂಜಯಂತಿ ಚ ತದ್ಜ್ಞಾಃ. ಕಿಂಚ " ವಾಯವ್ಯಾಂ ಪಶುಮಾಲಭೇತ " ಇತ್ಯಾದಿಶ್ರುತಿಚೋದಿತತ್ವೇನ ಯಾಗೀಯಹಿಂಸಾಯಾಃ ನ ಪಾಪಜನಕತ್ವಂ. ತಸ್ಮಾಜ್ಜೀವಾಧಿಷ್ಠಿತವ್ರೀಹಿಯವಾದಿಷು ಸುಕೃತಾತ್ಮನಾಂ ಸಂಬಂಧಮಾತ್ರಮೇವ ನ ಭೋಗ ಇತಿ ನಿಶ್ಚೀಯತೇ.

ವೇದದಲ್ಲಿ ಹೇಳಿರುವ ಜ್ಯೋತಿಷ್ಟೋಮವೇ ಮೊದಲಾದ ಪುಣ್ಯಕರ್ಮಗಳಲ್ಲಿ ಪಶುಹಿಂಸೆ ಮಾಂಸಭಕ್ಷಣ ಮೊದಲಾದ ಪಾಪವೂ, ಆದರೂ ಅದು ಅವಶ್ಯಕರ್ತವ್ಯವಾದ್ದರಿಂದ ಪುಣ್ಯವೂ ಇರುವುದಾಗಿ ತಿಳಿದುಬಂದಿದೆ. ಆದರೆ ಸುಖದ ಬೀಡೆನಿಸಿದ ಸ್ವರ್ಗದಲ್ಲಿ ಪಾಪದ ಫಲವೆನಿಸಿದ ದುಃಖವನ್ನು ಅನುಭವಿಸಲಿಕ್ಕೆ ಅವಕಾಶವಿಲ್ಲದ್ದರಿಂದ ಜೀವರು ಹಿಂತಿರುಗುವಾಗ ದುಷ್ಕರ್ಮದಿಂದ ದೊರೆತ ಭತ್ತ ಗೋಧಿ ಮೊದಲಾದ ಜಡಶರೀರದಲ್ಲಿ ಆ ಭೋಗವನ್ನು ಅನುಭವಿಸಿ ಮತ್ತೆ ಹಿಂದಿನ ಪುಣ್ಯಶೇಷದಿಂದ ಬ್ರಾಹ್ಮಣ ಮೊದಲಾದ ಉತ್ತಮಜನ್ಮವನ್ನು ಪಡೆಯುವರೆಂದು ಆಶಂಕಿಸಿ ನಿರಾಕರಿಸುತ್ತಾನೆ. ಹಿಂದೆ ಮಾಡಿದ ಪಶುಹಿಂಸೆ ಎಂಬ ಪಾಪದ ಫಲವನ್ನು ಅನುಭವಿಸಲಿಕ್ಕಾಗಿ ಭತ್ತ ಮೊದಲಾದ ಅವಸ್ಥೆಯನ್ನು ಜೀವನು ಹೊಂದುತ್ತಾನೆ; ಯಾಕೆಂದರೆ ಸ್ವರ್ಗಫಲವನ್ನು ಕೊಡುವ ಯಜ್ಞಯಾಗಾದಿಕರ್ಮಗಳು ಪಾಪಮಿಶ್ರವೇ ಆಗಿವೆ. ಆದ್ದರಿಂದ ಯಜ್ಞಾದಿಗಳು ಅಶುದ್ಧವೆನಿಸಿವೆ. ಹಾಗೆಯೇ ಅಗ್ನೀಷೋಮೀಯ ಯಜ್ಞವೂ ಹಿಂಸೆಯಿಂದಲೇ ಕೂಡಿದೆ. ಆದರೆ " ಯಾವ ಪ್ರಾಣಿಯನ್ನೂ ಹಿಂಸಿಸಬಾರದು "ಎಂಬ ಶ್ರುತಿಯಂತೆ ಹಿಂಸೆಯೆಲ್ಲವೂ ನಿಷಿದ್ಧವಾದ್ದರಿಂದ ಪಾಪವೇ ಆಗಿದೆ. ಆದರೆ ಹಿಂಸೆಮಾಡಬಾರದೆಂಬ ಶಾಸ್ತ್ರವನ್ನು ಸಾಮಾನ್ಯವೆಂದೂ, ಅಗ್ನೀಷೋಮೀಯ

ಹಿಂಸೆಯನ್ನು ವಿಶೇಷವೆಂದೂ ಸಮರ್ಥಿಸಿ ಈ ಬಗೆಯ ವಿರೋಧವನ್ನು ಪರಿಹರಿಸ ಲಿಕ್ಕೂ ಸಾಧ್ಯವಿಲ್ಲ. ಅಗ್ನೀಷೋಮೀಯಯಾಗದಲ್ಲಿ ಪಶುವನ್ನು ಅರ್ಪಿಸಿದರೆ ಸ್ವರ್ಗ ದೊರಕುವುದೆಂದು ಮಾತ್ರವೇ ಆ ವಿಧಿಗೆ ಅರ್ಥವೇ ಹೊರತು ಪಶುಹಿಂಸೆ ಪಾಪವಲ್ಲ ವೆಂಬುದು ಅದಕ್ಕೆ ಅರ್ಥವಾಗುವುದಿಲ್ಲ. ಹೀಗೆಯೇ "ಪ್ರಾಣಿಗಳನ್ನು ಹಿಂಸಿಸಬಾರದು" ಎಂಬ ಶಾಸ್ತ್ರವೂ ಸಹ ಎಲ್ಲಾ ಹಿಂಸೆಗಳಿಗೂ ಪಾಪವೇ ಫಲವೆಂದು ತಿಳಿಸುತ್ತದೆ. ಆದರೆ ಅಗ್ನೀಷೋಮೀಯಯಾಗದಲ್ಲಿ ಒಬ್ಬನಿಗೆ ಶಾಸ್ತ್ರದಿಂದಲೇ ಪ್ರವೃತ್ತಿ ಉಂಟಾಗುವುದ ರಿಂದ ಆ ಹಿಂಸೆ ಪಾಪವಲ್ಲ; ಆದರೆ ತನ್ನ ಸ್ವೇಚ್ಛೆಯಿಂದ ಮಾಡುವ ಹಿಂಸೆಯೇ ಪಾಪ ವೆನಿಸುತ್ತದೆ ಎಂದು ಹೇಳುವುದೂ ಯುಕ್ತವಲ್ಲ; ಯಾಕೆಂದರೆ ಸ್ವರ್ಗದ ಇಚ್ಛೆಯಿಂದಲೇ ಈ ಯಜ್ಞವನ್ನು ಮಾಡುವುದರಿಂದ ಇಲ್ಲಿಯೂ ಅವನ ಇಚ್ಛೆಯೇ ಕಾರಣವಾಗಿದೆ. ಆದ್ದರಿಂದ ಲೌಕಿಕವಾದ ಹಿಂಸಾಪ್ರವೃತ್ತಿಗೂ ಶಾಸ್ತ್ರೀಯವಾದ ಹಿಂಸಾಪ್ರವೃ ತ್ತಿಗೂ ಹಿಂಸೆಯೇ ಕಾರಣವೆಂಬ ಅಂಶದಲ್ಲಿ ಯಾವ ವ್ಯತ್ಯಾಸವೂ ಇಲ್ಲ. ಹೀಗೆಯೇ ನಿತ್ಯಕರ್ಮಗಳಲ್ಲೂ ಅವುಗಳನ್ನು ಆಚರಿಸಿದರೆ ಅಪರಿಮಿತವಾದ ಸುಖ ದೊರೆಯುವುದೆಂಬ ಆಶೆಯಿಂದಲೇ ಪ್ರವೃತ್ತಿ ಹುಟ್ಟುವುದರಿಂದ ಅಲ್ಲಿಯೂ ಅಶುದ್ಧಿ ಎಂಬುದು ಅನಿವಾರ್ಯವಾಗಿ ಸಂಭವಿಸುತ್ತದೆ. ಆದ್ದರಿಂದ ಸ್ವರ್ಗದಲ್ಲಿ ಸುಖವನ್ನು ಅನುಭವಿಸಿದರೂ ಅವನಲ್ಲಿ ಪಾಪವೂ ಇರುವುದರಿಂದ ಆ ಪಾಪದ ಫಲವನ್ನು ಅನು ಭವಿಸಲಿಕ್ಕಾಗಿಯೇ ಅವನು ಭತ್ತದ ಅವಸ್ಥೆಯನ್ನು ಹೊಂದುತ್ತಾನೆ. ಶರೀರ ಸಂಬಂಧವಾದ ಪಾಪದಿಂದ ಜೀವನು ಸ್ಥಾವರವಸ್ತುವಾಗಿ ಹುಟ್ಟುವನೆಂದು ಶ್ರುತಿಯೂ ಹೇಳುತ್ತದೆ. ಆದ್ದರಿಂದ ಜೀವನು ಸ್ವರ್ಗದಿಂದ ಹಿಂತಿರುಗುವಾಗ ಭತ್ತ ಮೊದಲಾದ ಧಾನ್ಯವಾಗಿದ್ದು ಅಲ್ಲಿನ ಸುಖದುಃಖಗಳನ್ನು ಅನುಭವಿಸುತ್ತಾನೆ ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸೂತ್ರವು ಸಿದ್ಧಾಂತವನ್ನು ಹೇಳುತ್ತದೆ. ಯಾಗದಲ್ಲಿ ಮಾಡಿದ ಹಿಂಸೆಯಿಂದ ಆ ಪಶುವಿಗೆ ಸ್ವರ್ಗಲೋಕ ದೊರಕುವುದೆಂದು ಶಾಸ್ತ್ರವೇ ಹೇಳಿರುವುದ ರಿಂದ ಆ ಹಿಂಸೆ ಪಾಪಹೇತುವಲ್ಲ. " ಆ ಪಶುವು ಸ್ವರ್ಣಮಯಶರೀರವನ್ನು ತಾಳಿ ಸ್ವರ್ಗವನ್ನು ಸೇರುತ್ತದೆ" ಎಂದು ಶ್ರುತಿಯಲ್ಲಿ ಅದಕ್ಕೆ ಸ್ವರ್ಗವನ್ನು ಹೇಳಿರುವುದ ರಿಂದ ವೈದ್ಯನು ಮಾಡುವ ಶಸ್ತ್ರಚಿಕಿತ್ಸೆಯಂತೆ ತಾತ್ಕಾಲಿಕವಾಗಿ ಆ ಪಶುವಿಗೆ ದುಃಖ ವಾದರೂ ಅದು ಹಿಂಸೆಯಾಗಲಾರದು. " ನೀನು ಸಾಯುವುದಿಲ್ಲ, ನಶಿಸುವುದೂ ಇಲ್ಲ, ಎಲ್ಲಿ ಸುಕೃತವೊಂದೇ ಇದ್ದು ದುಷ್ಕೃತವಿರುವುದಿಲ್ಲವೋ ಅಲ್ಲಿಗೆ ನಿನ್ನನ್ನು ಸವಿತೃದೇವನು ಸೇರಿಸಲಿ" ಎಂಬ ಮಂತ್ರವು ಈ ಅರ್ಥವನ್ನು ಸ್ಪಷ್ಟವಾಗಿ ಹೇಳುತ್ತದೆ. ಶಸ್ತ್ರಚಿಕಿತ್ಸಕನನ್ನು ಯಾರೂ ಹಿಂಸಕನೆಂದು ಹೇಳದೆ ರಕ್ಷಕನೆಂದೇ ಗೌರವಿಸುತ್ತಾರೆ. " ವಾಯುವೇ ದೇವತೆಯಾಗಿರುವ ಯಜ್ಞದಲ್ಲಿ ಪಶುವನ್ನು ಅರ್ಪಿಸಬೇಕು " ಎಂದು ಶ್ರುತಿಯಲ್ಲಿ ವಿಧಿಸಿರುವುದರಿಂದ ಯಾಗದಲ್ಲಿ ಮಾಡುವ ಪಶುಹಿಂಸೆ ಪಾಪವೆನಿಸುವು ದಿಲ್ಲ. ಆದ್ದರಿಂದ ಜೀವಸಹಿತವಾದ ಗೋಧಿ ಭತ್ತಮೊದಲಾದ ಧಾನ್ಯಗಳಲ್ಲಿ ಪುಣ್ಯಾತ್ಮ ರಿಗೆ ಸಂಬಂಧಮಾತ್ರವೇ ಹೊರತು ಭೋಗಾನುಭವವಿಲ್ಲವೆಂದು ನಿಶ್ಚಯಿಸಲಾಗಿದೆ.

ನನು " ಅಗ್ನೀಷೋಮೀಯಂ ಪಶುಮಾಲಭೇತ " ಇತ್ಯಾದಿಶ್ರುಷು ಶ್ರೌತಕರ್ಮಸು ಪಶುವಿಶಸನಮುಕ್ತಂ. ತನ್ನರಮೇಧಾಶ್ವಮೇಧಾದಿವತ್ ಪ್ರಾತ್ಯಕ್ಷಿಕಪಶುವಿಶಸನಂ ಪಿತೃಮೇಧಾದಿವತ್ಪಿಷ್ಟಪಶ್ವಾದಿಗ್ರಹಣಂ ವಾ ಯುಕ್ತಂ. ಕಿಂಚ ತತ್ಸುಕೃತಾತ್ಮನಃ ತಪೋವಿದ್ಯಾಯಶೋಧನಾದ್ಯವಚ್ಛಿನ್ನಸತ್ಕುಲಪ್ರಸೂತತ್ವೇ ಕೇನ ಮಾರ್ಗೇಣ ತಸ್ಯ ತಜ್ಜನ್ಮ ಸಂಭವತೀತ್ಯಾಶಂಕಾಯಾಮಾಹ. ರೇತಸ್ಸಿಗ್ಯೋಗೋಽಥ ‖ ೨೬ ‖ " ನ ಹಿಂಸ್ಯಾತ್ಸರ್ವಾ ಭೂತಾನಿ ", " ಅಗ್ನೀಷೋಮೀಯಂ ಪಶುಮಾಲಭೇತ ", " ಛಾಗಸ್ಯ ವಪಾಯಾ ಮೇಧಸೋಽನುಬ್ರೂಹಿ " ಇತ್ಯಾದಿಶ್ರುತಿಷು ಹಿಂಸಾನಿಷೇಧಾನೀಷೇಧವ್ಯಪದೇಶಾತ್ ಪಿಷ್ಟಪಶುಪರಿಗ್ರಹತ್ವಮರ್ಥಾದುಪದಿಶ್ಯತೇ. " ಪುರುಷಂ ವೈ ದೇವಾಃ ಪಶುಮಾಲಭಂತ ತಸ್ಮಾದಾಲಬ್ಧಾನ್ಮೇದ ಉದಕ್ರಾಮತ್ ಸೋಽಶ್ವಂ ಪ್ರಾವಿಶತ್ ತಸ್ಮಾದಶ್ವೋ ಮೇಧ್ಯೋಽಭವದಥೈನಮುತ್ಕ್ರಾಂತಮೇಧಮತ್ಯಾಜ್ಯಂತ, ಸ ಕಿಂಪುರುಷೋಽಭವತ್. ತೇಽಶ್ವಮಾಲಭಂತ. ಸೋಽಶ್ವಾದಾಲಬ್ಧಾದುದಕ್ರಾಮತ್. ಸ ಗಾಂ ಪ್ರಾವಿಶತ್. ಅಥೈನಮುತ್ಕ್ರಾಂತಮೇಧಮತ್ಯಾಜ್ಯಂತ, ಸ ಶರಭೋಽಭವತ್. ತೇ ಗಾಮಾಲಭಂತ. ಸೋಽವಿಂ ಪ್ರಾವಿಶತ್. ತಸ್ಮಾದವಿರ್ಮೇಧ್ಯೋಽಭವತ್. ಅಥೈನಮುತ್ಕ್ರಾಂತಮೇಧಮತ್ಯಾಜ್ಯಂತ ಸ ಗವಯೋಽಭವತ್. ತೇಽವಿಮಾಲಭಂತ, ಸೋಽವೇರಾಲಬ್ಧಾದುದಕ್ರಾಮತ್. ಸೋಽಜಂ ಪ್ರಾವಿಶತ್. ತಸ್ಮಾದಜೋ ಮೇಧ್ಯೋಽಭವತ್. ಅಥೈನಮುತ್ಕ್ರಾಂತಮೇಧಮತ್ಯಾಜ್ಯಂತ, ಸ ವೃಷೋಽಭವತ್. ತೇಽಜಮಾಲಭಂತ. ಸೋಽಜಾದಾಲಬ್ಧಾದುದಕ್ರಾಮತ್. ಸ ಮಾಹಿಷಂ ಪ್ರಾವಿಶತ್ " ಇತಿ. ಋಗ್ವೇದೇಽಪಿ ವಪಾಯಾಃ ಪರಿಶೇಷಪ್ರಮಾಣೇನ ವ್ರೀಹ್ಯಾದ್ಯೋಷಧಿಪ್ರವೇಶಿತ್ವಕಥನಾತ್. ಮನುಸ್ಮೃತಾವಪಿ, " ಕುರ್ಯಾದ್ಧೃತಪಶುಂ ಸಂಗೇ ಕುರ್ಯಾತ್ಪಿಷ್ಟಪಶುಂಸ್ತಥಾ । ನತ್ವೇವ ತು ವೃಥಾ ಹಂತುಂ ಪಶುಮಿಚ್ಛೇತ್ಕದಾಚನ । ಯಾವಂತಿ ಪಶುರೋಮಾಣಿ ತಾವತ್ಕೃತ್ವೇಹ ಮಾರಣಂ। ವೃಥಾ ಪಶುಘ್ನಃ ಪ್ರಾಪ್ನೋತಿ ಪ್ರೇತ್ಯ ಜನ್ಮನಿ ಜನ್ಮನಿ । ಯೋ ಬಂಧನವಧಕ್ಲೇಶಾನ್ ಪ್ರಾಣಿನಾಂ ನ ಚಿಕೀರ್ಷತಿ । ಸ ಸರ್ವಸಹಿತಃ ಪ್ರೇಪ್ಸುಃ ಸುಖಮತ್ಯಂತಮಶ್ನುತೇ ‖ " ಇತಿ. ಶಾತಾತಪೇಽಪಿ " ಜ್ಯೋತಿಷ್ಟೋಮಾದಿಕೃತ್ಯೇಷು ತನ್ಮಾತ್ರೋಚ್ಚಾರಣೇನ ವೈ । ಪಶುಪ್ರಾಣಾನ್ ಹರೇದ್ವಿಪ್ರೋ ನ ಬಂಧನವಿಧೇಃ ಕ್ವಚಿತ್ । ಯೋ ಮಂತ್ರಸಿದ್ಧ್ಯಾ ಯಜ್ಞೇಷು ಪಶುಪ್ರಾಣಾನ್ನಿಹಂತಿ ವೈ । ಸ ತು ಪ್ರತ್ಯಕ್ಷಪಶುನಾ ಕುರ್ಯಾದ್ಯಜ್ಞಂ ಸುಶೋಭನಂ । ಮಂತ್ರಸಿದ್ಧಿವಿಹೀನಾನಾಂ ಪ್ರಾಕೃತಾನಾಂ ದ್ವಿಜನ್ಮನಾಂ। ಪಿಷ್ಟಾಕಾರೇಣ

ಛಾಗೇನ ಜ್ಯೋತಿಷ್ಟೋಮಾಧಿಕಂ ವಿಧಿಃ ॥" ಇತಿ ದರ್ಶನಾಚ್ಚ ಮಂತ್ರೋಚ್ಚಾರಣಮಾತ್ರೇಣ ಪಶುಪ್ರಾಣಾಕರ್ಷಣಸಮರ್ಥಾನಾಂ ವಾಕ್‌ಶುದ್ಧಿಯುತಾನಾಂ ಚೇತನಛಾಗಪಶುನಾ ಜ್ಯೋತಿಷ್ಟೋಮಾದಿಕಂ ನಿರ್ದಿಶ್ಯತೇ. ತದ್ವದಸಮರ್ಥಾನಾಂ ಪಿಷ್ಟಪಶುಯಾಗ ಏವ ಯುಕ್ತಃ. ಪಿಷ್ಟಪಶೋರ್ಮಂತ್ರೇಣ ಪ್ರಾಣಾವಾಹನಸ್ಯ ತದ್ವತ್ಪ್ರಾಣೋತ್ಕ್ರಮಣಸ್ಯ ಚ ಸಂಭವೇನ ವೈದಿಕಲೌಕಿಕವಿರೋಧೋ ನ ಭವತಿ. ಸೋಮಲತಾಪ್ರತಿನಿಧಿತ್ವೇನ ಯಥಾಮ್ಲಲತಾಪರಿಗ್ರಹಣಂ ತದ್ವತ್ ಛಾಗಪಶುಪ್ರತ್ಯಾಮ್ನಾಯೇನ ಪಿಷ್ಟಪಶುಗ್ರಹಣಮವಿರೋಧಂ. ನನು ಇಹ ಲೋಕೇ ಸೋಮಲತಾಽದರ್ಶನಾತ್, ತತ್ಪ್ರತಿನಿಧಿತ್ವೇನಾಮ್ಲಲತಾಪರಿಗ್ರಹಣಮುಪಪನ್ನಂ. ಛಾಗಸ್ಯೇಹ ಸಂಭವತ್ವೇನ ತದ್ವನ್ನ ವಿಧೀಯತ ಇತಿ ಚೇನ್ನ ಪಿತೃಮೇಧಕಾಮಾನಾಂ ಅಶ್ವಮೇಧಾದಿವತ್ಪಿತೃಮೇಧೇ ಪ್ರತ್ಯಕ್ಷಸ್ವಪಿತೃವಧಪ್ರಸಂಗಾತ್, ಪಿತ್ರಾತ್ಮಕಪಿಂಡಚ್ಛೇದನಪಿತೃಮೇಧಸ್ಯ ನಿಷ್ಫಲತ್ವದೋಷಾಚ್ಚ ಪ್ರೇತತ್ವನಿವೃತ್ತೌ ತಂಡುಲಗೋವೃಷಭಸಂಸ್ಕಾರಕರ್ಮಣಃ "ಚಾತುರ್ಮಾಸ್ಯಾ ವೈ ಪಶವಃ" ಇತ್ಯತ್ರ ಪಿಷ್ಟಪಶುಗ್ರಹಣವಿಧೇಶ್ಚ ದತ್ತಾಂಜಲಿಸಂಭವಾಚ್ಚ. ಕಿಂಚ ಮಂತ್ರಸಿದ್ಧಿಪ್ರಧಾನಭೂತವಿಧಿವಿಹಿತೋಪನಯನವಿವಾಹಾದಿಶುಭಾಶುಭಕರ್ಮಾರಂಭಶ್ರುತವಿಘ್ನೇಶ್ವರಾದಿಪೂಜಾವಿಧಾಯಕಶಾಸ್ತ್ರವಿರೋಧಃ ಪ್ರತೀಯತೇ. ತಥಾ ಚೇನ್ಮೃತ್ಪಾಷಾಣಾದಿಕೃತದೇವಪೂಜಾನಮಸ್ಕಾರಾಭಾವಸಂಭವಾತ್ ಶ್ರುತಿವಿರುದ್ಧಬುದ್ಧಮತಪ್ರವೇಶೋ ದುರ್ನಿವಾರಃ. ತಸ್ಮಾದ್ಯಾಗೀಯಕರ್ಮಸು ಪಿಷ್ಟಪಶುಪರಿಗ್ರಹಣಂ ಯುಕ್ತಂ. ಸುಕೃತಾತ್ಮನಾಂ ವ್ರೀಹ್ಯಾದಿಜನ್ಮವಚನಮೌಪಚಾರಿಕಂ. ವ್ರೀಹ್ಯಾದಿಪ್ರವೇಶಾನಂತರಮೇವೋಕ್ತಮಪುರುಷಶರೀರೇ ಪ್ರವಿಶ್ಯ ರೇತೋರೂಪೇಣ ಪರಿಣಮ್ಯತೇ. "ಯೋ ಯೋ ಹ್ಯನ್ನಮತ್ತಿ ಯೋ ಯೋ ರೇತಸ್ಸಿಂಚತಿ ತದ್ಭೂಯ ಏವ ಭವತಿ" ಇತಿರೇತಸ್ಸಿಗ್ಭಾವೋಽನುಶಾಯಿನಾಂ ಶ್ರೂಯಮಾಣೋ ಯಥಾ ತದ್ಯೋಗಮಾತ್ರಮುಪದಿಷ್ಟಂ. ತದ್ವದ್ವ್ರೀಹ್ಯಾದಿಭಾವೋಽಪಿ ನಿರ್ದಿಷ್ಟಃ.

"ಅಗ್ನಿ ಮತ್ತು ಸೋಮರೇ ದೇವತೆಗಳಾಗಿರುವ ಯಜ್ಞದಲ್ಲಿ ಪಶುವನ್ನು ಅರ್ಪಿಸಬೇಕು" ಮೊದಲಾದ ಶ್ರುತಿಯಪ್ರಕಾರ ಶ್ರೌತಕರ್ಮಗಳಲ್ಲಿ ಪಶುಹಿಂಸೆಯನ್ನು ವಿಧಿಸಲಾಗಿದೆ. ಆದ್ದರಿಂದ ನರಮೇಧ ಅಶ್ವಮೇಧಗಳಂತೆ ಯಜ್ಞದಲ್ಲಿ ಪ್ರತ್ಯಕ್ಷವಾಗಿ ಪಶುವನ್ನು ಕೊಲೆಮಾಡಬೇಕೆ? ಅಥವಾ ಪಿತೃಮೇಧದಂತೆ ಪಿಷ್ಟಪಶುವನ್ನು ಅರ್ಪಿಸಬೇಕೆ? ಹಾಗೆಯೇ ಸತ್ಕರ್ಮಿಯೊಬ್ಬನು ತಪಸ್ಸು ವಿದ್ಯೆ ಯಶಸ್ಸು ಮತ್ತು ಐಶ್ವರ್ಯಗಳಿಂದ ಕೂಡಿ ಸದ್ವಂಶದಲ್ಲಿ ಹುಟ್ಟಿದ್ದರೆ ಅವನಿಗೆ ಯಾವ ಮಾರ್ಗದಿಂದ

ಆ ಜನ್ಮ ಸಂಭವಿಸುತ್ತದೆ? ಎಂದಾಶಂಕಿಸಿ ನಿರಾಕರಿಸುತ್ತಾನೆ. "ಯಾವ ಪ್ರಾಣಿಯನ್ನೂ ಹಿಂಸಿಸಬಾರದು" "ಅಗ್ನೀಷೋಮದಲ್ಲಿ ಪಶುವನ್ನು ಕೊಲೆಮಾಡಬೇಕು." "ಕುರಿಯ ವಪೆಯಿಂದ ಹೋಮಮಾಡಬೇಕು" ಎಂಬ ಶ್ರುತಿಗಳಲ್ಲಿ ಹಿಂಸೆಯ ನಿಷೇಧ ಮತ್ತು ವಿಧಾನಗಳೆರಡನ್ನೂ ಹೇಳಲಾಗಿದೆ. ಇದರಿಂದ ಪಿಷ್ಟಪಶುವನ್ನೇ ಉಪಯೋಗಿಸಬೇಕೆಂದು ಹೇಳಿದಂತಾಗುತ್ತದೆ. "ದೇವತೆಗಳು ಜೀವನನ್ನು ಪಶುವೆಂದು ಹೋಮಮಾಡಿದರು. ಆ ಪಶುವಿನಿಂದ ಮೇದಸ್ಸು ಹೊರಟಿತು. ಅದು ಕುದುರೆಯನ್ನು ಪ್ರವೇಶಿಸಿತು. ಆದ್ದರಿಂದ ಅಶ್ವವು ಮೇಧ್ಯವೆನಿಸಿತು. ಮೇದಸ್ಸಿನಿಂದ ಕೂಡಿದ ಆ ಅಶ್ವದಿಂದ ಅವರು ಅದನ್ನು ಹೊರಪಡಿಸಿದರು. ಆಗ ಅದು ಕಿಂಪುರುಷನಾಯಿತು. ಆ ಅಶ್ವವನ್ನು ಅವರು ಮತ್ತೆ ಹೋಮಮಾಡಿದರು. ಅದು ಆ ಅಶ್ವದಿಂದ ಹೊರಟು ಗೋವನ್ನು ಪ್ರವೇಶಿಸಿತು. ಹೀಗೆ ಮೇದಸ್ಸಿನೊಡಗೂಡಿದ ಗೋವಿನಿಂದ ದೇವತೆಗಳು ಮೇದಸ್ಸನ್ನು ಹೊರಪಡಿಸಿದರು. ಆಗ ಅದು ಶರಭವಾಯಿತು. ಅವರು ಗೋವನ್ನು ಹೋಮಮಾಡಿದರು. ಆಗ ಮೇದಸ್ಸು ಕುರಿಯನ್ನು ಪ್ರವೇಶಿಸಿತು. ಆದ್ದರಿಂದ ಕುರಿಯು ಮೇಧ್ಯವೆನಿಸಿತು. ಆಗ ಮೇದಸ್ಸಿನಿಂದ ಕೂಡಿದ ಕುರಿಯಿಂದ ದೇವತೆಗಳು ಮೇದಸ್ಸನ್ನು ಹೊರಗೆಡಹಿದರು. ಆಗ ಅದು ಮೇಕೆಯನ್ನು ಪ್ರವೇಶಿಸಿತು. ಆದ್ದರಿಂದ ಮೇಕೆ ಮೇಧ್ಯವೆನಿಸಿತು. ಹೀಗೆ ಮೇದಸ್ಸಿನಿಂದ ಕೂಡಿದ ಮೇಕೆಯಿಂದ ಅವರು ಅದನ್ನು ಹೊರಗೆಡಹಿದರು. ಆಗ ಮೇಕೆ ಎತ್ತಾಯಿತು. ದೇವತೆಗಳು ಮೇಕೆಯನ್ನು ಹೋಮಮಾಡಿದರು. ಆಗ ಮೇದಸ್ಸು ಅದರಿಂದ ಹೊರಟಿತು" ಹೀಗೆ ಮೇದಸ್ಸು ಬೇರೆ ಪ್ರಾಣಿಗಳನ್ನು ಪ್ರವೇಶಿಸುವುದಾಗಿ ವೇದದಲ್ಲಿ ಹೇಳಿದೆ. ಇದರಂತೆಯೇ ಋಗ್ವೇದದಲ್ಲೂ ವಪೆಯು ವ್ರೀಹ್ಯಾದಿಗಳನ್ನು ಪ್ರವೇಶಿಸುವುದೆಂದು ಹೇಳಲಾಗಿದೆ. ಮನುಸ್ಮೃತಿಯಲ್ಲೂ "ಯಜ್ಞದಲ್ಲಿ ಜೀವಂತ ಪಶುವನ್ನು ಕೊಲ್ಲಬಾರದು. ಹಾಗೆ ಕೊಲ್ಲುವವನು ಆ ಪಶುವಿನ ಶರೀರದಲ್ಲಿರುವ ರೋಮಗಳಷ್ಟೇ ಜನ್ಮಗಳನ್ನು ಪಡೆಯುವನು." ಎಂದು ಹೇಳಿದೆ. ಶಾತಾತಪವಲ್ಲಿ "ಯಾವನು ಪ್ರಾಣಿಹಿಂಸೆಯನ್ನು ಮಾಡುವುದಿಲ್ಲವೋ ಅವನು ಶಾಶ್ವತವಾದ ಸುಖವನ್ನು ಅನುಭವಿಸುತ್ತಾನೆ. ಜ್ಯೋತಿಷ್ಟೋಮದಲ್ಲಿ ಮಂತ್ರೋಚ್ಚಾರಣದಿಂದಲೇ ಪಶುವನ್ನು ಕೊಲ್ಲಬೇಕೇ ಹೊರತು ಬಲಾತ್ಕಾರದಿಂದ ಕೊಲ್ಲಬಾರದು. ಹಾಗೆ ಮಂತ್ರದಿಂದ ಪ್ರಾಣಿಯನ್ನು ಕೊಲ್ಲುವವನೇ ಪ್ರತ್ಯಕ್ಷ ಪಶುವನ್ನು ಉಪಯೋಗಿಸಬೇಕು. ಆ ಶಕ್ತಿಯಿಲ್ಲದವನು ಪಿಷ್ಟಪಶುವನ್ನೇ ಉಪಯೋಗಿಸಬೇಕು" ಎಂದು ಹೇಳಿದೆ. ಆದರೆ ಪಿಷ್ಟಪಶುವಿನಲ್ಲೂ ಮಂತ್ರದಿಂದಲೇ ಪ್ರಾಣದ ಆವಾಹನವೂ ಪ್ರಾಣದ ಉತ್ಕ್ರಮಣವೂ ಸಂಭವಿಸುವುದರಿಂದ ವೇದಕ್ಕೂ ಲೋಕಕ್ಕೂ ಯಾವ ವಿರೋಧವೂ ಇಲ್ಲ. ಸೋಮಲತೆಗೆ ಪ್ರತಿಯಾಗಿ ಆಮ್ಲಲತೆಯನ್ನು ವಿಧಿಸಿರುವಂತೆ ಛಾಗಪಶುವಿಗೆ ಪ್ರತಿಯಾಗಿ ಪಿಷ್ಟಪಶುವನ್ನು ಉಪಯೋಗಿಸುವುದರಲ್ಲಿ ಯಾವ ವಿರೋಧವೂ ಇಲ್ಲ. ಈ ಲೋಕದಲ್ಲಿ ಸೋಮಲತೆ ಇಲ್ಲದ್ದರಿಂದ ಅದಕ್ಕೆ ಪ್ರತಿನಿಧಿಯಾಗಿ ಆಮ್ಲಲತೆ

ಯನ್ನು ಸ್ವೀಕರಿಸುವುದೇನೋ ಯುಕ್ತವಾಗಿದೆ. ಆದರೆ ಲೋಕದಲ್ಲಿ ಕುರಿಯು ಸುಲಭ ವಾಗಿ ಸಿಕ್ಕುವುದರಿಂದ ಅದಕ್ಕೆ ಪ್ರತಿನಿಧಿಯಾಗಿ ಪಿಷ್ಟಪಶುವನ್ನು ಯಾತಕ್ಕೆ ಉಪ ಯೋಗಿಸಬೇಕು ಎಂದು ಆಕ್ಷೇಪಿಸುವುದು ಯುಕ್ತವಲ್ಲ; ಯಾಕೆಂದರೆ ಪಿತೃಮೇಧ ಯಜ್ಞವನ್ನಾಚರಿಸುವವರು ಅಶ್ವಮೇಧದಂತೆ ಪಿತೃಮೇಧದಲ್ಲಿಯೂ ಪ್ರತ್ಯಕ್ಷವಾಗಿ ತಮ್ಮ ಪಿತೃವನ್ನೇ ವಧೆಮಾಡುವ ಪ್ರಸಂಗ ಒದಗೀತು. ಗೋಧಿಹಿಟ್ಟಿನಿಂದ ತಂದೆಯ ಆಕಾರವನ್ನು ಮಾಡಿ ಅದನ್ನು ಛೇದಿಸಿದರೆ ಪಿತೃಮೇಧಯಾಗವೇ ನಿಷ್ಫಲವಾಗಬೇಕಾ ದೀತು. ಹಾಗೆಯೇ ಪ್ರೇತಭಾವವನ್ನು ತೊಲಗಿಸಲಿಕ್ಕಾಗಿ ಅಕ್ಕಿಯಿಂದ ಗೋವನ್ನು ಮಾಡಿ ಸಂಸ್ಕರಿಸುವ ಕರ್ಮಕ್ಕೂ, ಚಾತುರ್ಮಾಸ್ಯಯಾಗದಲ್ಲಿ ಪಿಷ್ಟಪಶುವನ್ನು ಉಪಯೋಗಿಸಬಹುದೆಂಬ ವಿಧಿಗೂ ತಿಲಾಂಜಲಿ ಎರೆಯಬೇಕಾದೀತು. ಇದೂ ಅಲ್ಲದೆ, ಭಾವವೇ ಮಂತ್ರಸಿದ್ಧಿಗೆ ಪ್ರಧಾನವಾಗಿದ್ದರೂ ಶಾಸ್ತ್ರೋಕ್ತವಾಗಿ ದೀಕ್ಷೆ ವಿವಾಹ ಮೊದಲಾದ ಶುಭ ಅಶುಭಗಳಲ್ಲಿ ವಿಘ್ನೇಶ್ವರ ಮೊದಲಾದ ದೇವತೆಗಳ ಪೂಜೆ ಯನ್ನು ಆಚರಿಸಬೇಕೆಂದು ತಿಳಿಸುವ ಶಾಸ್ತ್ರಕ್ಕೆ ವಿರೋಧವುಂಟಾದೀತು. ಹಾಗೆ ಆಗುವುದಾದರೆ ಮಣ್ಣು ಕಲ್ಲುಗಳನ್ನು ದೇವರೆಂದು ಭಾವಿಸಿ ಅವಕ್ಕೆ ಮಾಡಿದ ಪೂಜೆ ನಮಸ್ಕಾರಗಳೆಲ್ಲವೂ ವ್ಯರ್ಥವಾಗುವುದರಿಂದ ಶ್ರುತಿಗೆ ವಿರುದ್ಧವಾದ ಬುದ್ಧ ಮತವನ್ನು ಪ್ರವೇಶಿಸಬೇಕಾದೀತು. ಆದ್ದರಿಂದ ಯಾಗದಲ್ಲಿ ಪಿಷ್ಟಪಶುವನ್ನು ಉಪಯೋಗಿಸುವುದು ಯುಕ್ತವೇ ಆಗಿದೆ.

ಪುರುಷಹೃದಯಪ್ರವಿಷ್ಟಾನಾಂ ಸುಕೃತಕರ್ಮಿಣಾಂ ಶುಕ್ಲಾವಚ್ಛಿ ನ್ನಾನಾಂ ಕಥಂ ಶರೀರೋತ್ಪತ್ತಿಸ್ಸಂಭವತೀತ್ಯಾಶಂಕಾಯಾಮಾಹ. ಯೋನೇಶ್ಶರೀರಂ ॥ ೨೭ ॥ ದ್ಯುಲೋಕೇ ದೇವತ್ವಪ್ರಾಪ್ತಾನಾಂ ಸುಕೃ ತಾತ್ಮನಾಂ ಯದಾ ರೇತೋರೂಪೇಣ ಯೋನಿಪ್ರವೇಶಸ್ತಸ್ಯ ತದೈವ ಶರೀರಮುತ್ಪದ್ಯತೇ. ತಥಾಪಿ ತೇಷಾಂ ಗರ್ಭವೇದನಾದಿದುಃಖಸದ್ಭಾ ವಾತ್ ಬಾಲ್ಯಾದ್ಯವಸ್ಥಾಸ್ವಪಿ ತತ್ಕತ್ಕ್ಲೇಶಾನುಭವದರ್ಶನಾಚ್ಚ ಜನ್ಮ ಮರಣದುಃಖದೂರೀಕೃತಾಚಾರ್ಯಕಟಾಕ್ಷಲಬ್ಧಶಕ್ತಿಪಾತಾದಿವಶೇನ ನಿರ್ಧೂತಪಾಶಪಟಲಸ್ಸನ್ ಪ್ರಾರಬ್ಧಪ್ರತಿಭಾಸನಾಶಪರ್ಯಂತಂ ಶಿವ ತತ್ತ್ವಜ್ಞಾನದೃಢಫಲಕಧ್ಯಾನಧಾರಣವೈರಾಗ್ಯಶಮದಮಜೀವಕರುಣಾ ಪರಮಭಕ್ತಿಶ್ರವಣಾದ್ಯುಪಾಸನಮೇವ ನಿರಂತರಮನನ್ಯಭಾವೇನ ಸಂಪಾ ದನೀಯಮಿತಿ ಭಾವಃ. ತಥಾ ಸಿದ್ಧಾಂತಶಿಖಾಮಣೌ "ಅಸ್ಥಿರೇ ಕ್ಷಣಿಕೇ ಸೌಖ್ಯೇ ಪುತ್ರದಾರಾದಿಸಂಭವೇ । ಕ್ಷಯಿತ್ವಾದಿಯುತೇ ಸ್ವರ್ಗೇ ಕಸ್ಯ ವಾಂಛಾ ವಿವೇಕಿನಃ । ಶಿವೇ ಪರಮಕಲ್ಯಾಣೇ ಭಕ್ತಾಭೀಷ್ಟಫಲಪ್ರದೇ । ಸಂಸ್ಥಾಪ್ಯ ಸರ್ವದಾ ಚಿತ್ತಂ ವಿಚರೇದ್ಭಕ್ತಿಮಾನ್ನರಃ ॥" ಇತಿ. ಶೈವೇ "ಪುತ್ರಮಿತ್ರಕಳತ್ರಾದೀನ್ ಬಾಂಧವಾಭಾಸಸಂಜ್ಞಿಕಾನ್ । ಮಹಾಮೋ ಹೈಕಜನಕಾನ್ ಶಿವಜ್ಞಾನನಿರೋಧಕಾನ್ । ವಿಹಾಯ ಶಂಕರೇ ಚಿತ್ತಂ

ಸ್ಥಾತವ್ಯಂ ಮೋಕ್ಷಕಾಂಕ್ಷಿಭಿಃ ||" ಇತಿ ಶ್ರವಣಾನ್ಮುಮುಕ್ಷೂಣಾಂ ಪರಲೋಕಗಮನಾಗಮನಸಾಧಕಪುಣ್ಯಪಾಪಕರ್ಮಕರ್ತೃತ್ವಂ ವಿಹಾಯ ನಿರಂತರಂ ಶಿವಜ್ಞಾನಾರ್ಥಂ ಶಿವೋಪಾಸನಮೇವ ಕರ್ತವ್ಯಮಿತಿ ವೇದಿತವ್ಯಂ. ತಸ್ಮಾತ್ಸುಕೃತಾತ್ಮನಾಂ ಪ್ರಾಣಾಕಾಶಾದಿಪ್ರಾಪ್ತಿಪ್ರಭೃತಿ ತದ್ಯೋಗಮಾತ್ರಮೇವೇತಿ ಸಿದ್ಧಂ.

ಇತಿ ಶ್ರೀಕರಭಾಷ್ಯೇ ತೃತೀಯಾಧ್ಯಾಯಸ್ಯ ಪ್ರಥಮಃ ಪಾದಃ

ಪುಣ್ಯಶಾಲಿಗಳು ಭತ್ತ ಮೊದಲಾದ ರೂಪದಿಂದ ಜನ್ಮವನ್ನು ತಾಳುವರೆಂಬುದು ಕೇವಲ ಉಪಚಾರದ ಮಾತೇ ಸರಿ. ಆದ್ದರಿಂದಲೇ ಭತ್ತ ಮೊದಲಾದ ರೂಪಗಳನ್ನು ಪ್ರವೇಶಿಸಿದಮೇಲೆ ಅವರು ಉತ್ತಮಪುರುಷರ ಶರೀರವನ್ನು ಹೊಕ್ಕು ರೇತಸ್ಸಾಗಿ ಪರಿಣಮಿಸುತ್ತಾರೆ. "ಯಾವ್ಯಾವನು ಅನ್ನವನ್ನು ತಿಂದು ರೇತಸ್ಸನ್ನು ಸ್ತ್ರೀಯರಲ್ಲಿ ಹೊರಗೆಡಹುತ್ತಾನೋ ಆಗ ಅದು ಮತ್ತೆ ಹುಟ್ಟುತ್ತದೆ." ಎಂಬಂತೆ ಕರ್ಮಿಗಳಿಗೆ ರೇತಸ್ಸನ್ನು ಹೊರಗೆಡಹುವಿಕೆ ಎಂಬುದು ಕೇವಲ ಸ್ತ್ರೀಸಂಪರ್ಕವನ್ನವಲಂಬಿಸಿರುತ್ತದೆ. ಅದರಂತೆಯೇ ಗೋಧಿ ಮೊದಲಾದ ಅವಸ್ಥೆಗಳಲ್ಲೂ ಜೀವರು ಕೇವಲ ಸಂಪರ್ಕವನ್ನು ಹೊಂದಿರುತ್ತಾರೆಂದೇ ಹೇಳಲಾಗಿದೆ. ಹೀಗೆ ಒಬ್ಬ ಪುರುಷನ ಹೃದಯವನ್ನು ಪ್ರವೇಶಿಸಿದ ಶುಕ್ಲರೂಪವಾದ ಪುಣ್ಯಶಾಲಿಗಳಿಗೆ ಶರೀರ ಹೇಗೆ ಹುಟ್ಟುತ್ತದೆ ಎಂದಾಶಂಕಿಸಿ ಸಮಾಧಾನವನ್ನು ಹೇಳುತ್ತಾನೆ. ದ್ಯುಲೋಕದಲ್ಲಿ ದೇವಭಾವವನ್ನು ಹೊಂದಿದ ಪುಣ್ಯಶಾಲಿಗಳು ರೇತಸ್ಸಿನ ರೂಪದಿಂದ ಯಾವಾಗ ಯೋನಿಯನ್ನು ಪ್ರವೇಶಿಸುವರೋ ಆಗಲೇ ಅವರಿಗೆ ಶರೀರ ಹುಟ್ಟುತ್ತದೆಯಾದರೂ ಅವರಿಗೆ ಗರ್ಭಸಂಬಂಧವಾದ ನೋವು ಇದ್ದೇ ಇರುತ್ತದೆ. ಬಾಲ್ಯ ಮೊದಲಾದ ಅವಸ್ಥೆಗಳಲ್ಲೂ ಆಯಾಕಾಲಕ್ಕೆ ಅನುಗುಣವಾದ ಕ್ಲೇಶಗಳನ್ನು ಅನುಭವಿಸಬೇಕಾಗುತ್ತದೆ. ಆದರೆ ಜನನಮರಣ ದುಃಖಗಳೊಂದಕ್ಕೂ ಅಂಟದಿರುವ ಆಚಾರ್ಯನ ದಿವ್ಯದೃಷ್ಟಿಯಿಂದ ದೊರಕುವ ಶಕ್ತಿಪಾತದಿಂದ ಸಮಸ್ತಪಾಶಗಳನ್ನು ಕಳೆದುಕೊಂಡವನೊಬ್ಬನೇ ಪ್ರಾರಬ್ಧರೂಪವಾದ ಈ ಶರೀರವು ಕೊನೆಯಾಗುವವರೆಗೂ ಶಿವತತ್ತ್ವಜ್ಞಾನವನ್ನು ದೃಢಪಡಿಸುವ ಶಿವಧ್ಯಾನ ಧಾರಣ ವೈರಾಗ್ಯ ಶಮ ದಮ ಜೀವಕರುಣೆ ಪರಾಭಕ್ತಿ ಶ್ರವಣ ಮನನಗಳಿಂದ ಕೂಡಿದ ಉಪಾಸನವನ್ನು ನಿರಂತರವೂ ತಾನು ಶಿವನಿಂದನ್ಯನಲ್ಲವೆಂಬ ಭಾವನೆಯಿಂದ ನಡೆಸುತ್ತಿರಬೇಕು. "ಹೆಂಡತಿ ಮಕ್ಕಳಿಂದ ಬರುವ ಸೌಖ್ಯ ಅಸ್ಥಿರವೂ ಕ್ಷಣಿಕವೂ ಆಗಿರುವಾಗ ಸ್ವರ್ಗದಲ್ಲಿ ಪಡೆಯುವ ಸುಖವೂ ನಾಶವಾಗುತ್ತಿರುವಾಗ ಅದರಲ್ಲಿ ಯಾವ ವಿವೇಕಿಗೆ ತಾನೇ ಇಚ್ಛೆ ಹುಟ್ಟೀತು? ಮಾನವನು ಭಕ್ತರ ಇಷ್ಟಾರ್ಥವನ್ನು ನೆರವೇರಿಸುತ್ತ ಪರಮಕಲ್ಯಾಣನೆನಿಸಿದ ಶಿವನಲ್ಲಿ "ಯಾವಾಗಲೂ ಮನಸ್ಸನ್ನಿಟ್ಟಿರಬೇಕು" ಎಂದು ಸಿದ್ಧಾಂತಶಿಖಾಮಣಿಯಲ್ಲಿ ಹೇಳಿದೆ. "ಬಂಧುಗಳೆಂದು ತೋರುವ ಹೆಂಡತಿ ಮಕ್ಕಳು ಸ್ನೇಹಿತರು ಹೆಚ್ಚಿನ ಮೋಹವನ್ನು ಹುಟ್ಟಿಸುತ್ತ ಶಿವಜ್ಞಾನವನ್ನು ಪಡೆಯುವರಾದ್ದರಿಂದ ಇವರೆಲ್ಲರನ್ನೂ ತೊರೆದು

ಮುಮುಕ್ಷುಗಳು ಶಂಕರನಲ್ಲಿಯೇ ಚಿತ್ತವನ್ನಿರಿಸಬೇಕು " ಹೀಗೆ ಶೈವಪುರಾಣದಲ್ಲಿ ಹೇಳಿದೆ. ಆದ್ದರಿಂದ ಮುಮುಕ್ಷುಗಳು ಪರಲೋಕಕ್ಕೆ ಹೋಗಲಿಕ್ಕೂ ಬರಲಿಕ್ಕೂ ಸಾಧಕವಾದ ಪುಣ್ಯಪಾಪಕರ್ಮಗಳಿಗೆ ತಾವೇ ಕರ್ತರೆಂಬ ಅಭಿಮಾನವನ್ನು ತೊರೆದು ನಿರಂತರವೂ ಶಿವಜ್ಞಾನಕ್ಕಾಗಿ ಶಿವೋಪಾಸನವನ್ನೇ ಮಾಡುತ್ತಿರಬೇಕು. ಹೀಗೆ ಪುಣ್ಯಾತ್ಮರಿಗೆ ಪ್ರಾಣ ಆಕಾಶ ಮೊದಲಾದವುಗಳಲ್ಲಿ ಪ್ರವೇಶವನ್ನು ಕೇವಲ ಸಂಪರ್ಕ ಮಾತ್ರವೆಂದೇ ತಿಳಿಯಬೇಕು.

---

## ಅಥ ಶ್ರೀಕರಭಾಷ್ಯೇ ತೃತೀಯಾಧ್ಯಾಯಸ್ಯ ದ್ವಿತೀಯಃ ಪಾದಃ

ಪರಮೇಶ್ವರಾಜ್ಞಾಭೂತವರ್ಣಾಶ್ರಮಾನುಕೂಲಶ್ರೌತಸ್ಮಾರ್ತೋಕ್ತಪುಣ್ಯಕರ್ಮಾನುಷ್ಠಾನಾದ್ದುರಿತಕ್ಷಯಃ. ದುರಿತಕ್ಷಯೇಣ ಶ್ರುತಿಸ್ಮೃತ್ಯಾಗಮಾದಿಸಚ್ಛಾಸ್ತ್ರವಿಶ್ವಾಸಃ. ತದ್ವಿಶ್ವಾಸವಿಚಾರೇಣ ನಿತ್ಯಾನಿತ್ಯವಸ್ತುವಿವೇಕಃ. ತದ್ವಿವೇಕಾದಿಹಾಮುತ್ರಫಲಭೋಗವಿರಾಗಃ. ತದ್ವಿರಾಗೇಣ ಶಮಾದಿಷಟ್ಕಸಂಪ್ರಾಪ್ತಿಃ. ತತ್ಫಲೇನ ಮೋಕ್ಷೈಕನಿಷ್ಠಯಾ ಶಿವಾಚಾರ್ಯಾನುಗ್ರಹಃ. ತತೋ ಮೋಕ್ಷಾನುಕೂಲಪತಿಪಶುಪಾಶಾತ್ಮಕತತ್ತ್ವತ್ರಯವಿಚಾರಃ. ಅತಶ್ಶಿವಸಾಕ್ಷಾತ್ಕಾರಚಿತ್ತೈಕತ್ವಕಾರಣ ಶಿವಯೋಗಾಭ್ಯಾಸಃ. ತದಭ್ಯಾಸೇನ ಅಹಂಮಮತ್ವಾದ್ಯಭಿಮಾನನಿವೃತ್ತಿಃ. ತನ್ನಿವೃತ್ತಿದ್ವಾರಾ ಶಿವೈಕತ್ವಸಿದ್ಧಿಸಂಭವಾತ್ ಪಾಪಬುದ್ಧಿನಿವೃತ್ತಿಪೂರ್ವಕಪುಣ್ಯಕರ್ಮಾನುಷ್ಠಾನಹೇತುತ್ವೇನ ವರ್ಣಾಶ್ರಮಾಚಾರನಿಷ್ಠಾನಾಂ ಸುಕೃತಿನಾಮಿಹಪರಲೋಕೇಷು ಸುಖಾನುಭೂತಿಃ. ತದತಿರಿಕ್ತಾನಾಂ ಪಾಪಿನಾಂ ಘೋರನರಕವೇದನಾ ಚ ದರ್ಶಿತಾ. ಇಹ ತು ಕೇಚಿತ್ ನಿಷ್ಪ್ರಪಂಚನಿರ್ಧರ್ಮಕನಿರ್ಗುಣನಿರವಯವನಿರ್ಭೇದನಿತ್ಯೇ ಬ್ರಹ್ಮಣಿ ಪ್ರಪಂಚಕಾರಣತ್ವಾಯೋಗಾತ್ ಸ್ವಪ್ನಪ್ರಪಂಚದೃಷ್ಟಾಂತೇನ ಜಾಗ್ರತ್ಸ್ವಪ್ನಸುಷುಪ್ತಿಮೂರ್ಛಾವಸ್ಥಾನಾಂ ಚತಸೃಣಾಮಪಿ ಮಿಥ್ಯಾತ್ವಂ ಸಾಧಯಂತಿ. ತಚ್ಛುದ್ಧಾದ್ವೈತಬುದ್ಧಾದ್ವೈತಶುಷ್ಕಾದ್ವೈತಶೂನ್ಯಾದ್ವೈತಾದಿದುರ್ಮತನಿರಾಕರಣಾರ್ಥಮೇತದಧಿಕರಣಪ್ರಾರಂಭಃ. ನನು " ಸ್ವಪ್ನೇಂದ್ರಜಾಲಸದೃಶಮಚಿಂತ್ಯರಚನಾತ್ಮಕಂ " ಇತ್ಯಾದಿಪುರಾಣಾಗಮಾದಿಷು ಸ್ವಪ್ನವತ್ಪ್ರಪಂಚಸ್ಯ ಮಿಥ್ಯಾತ್ವಕಥನಾತ್ಪೂರ್ವೋಕ್ತಪುಣ್ಯಾಪುಣ್ಯಕರ್ಮಿಣಾಂ ಸ್ವರ್ಗನರಕಾನುಭವಾನಾಂ ಅಸತ್ಯತ್ವಮರ್ಥಾತ್ಸಿದ್ಧಂ. ಅತಃ ಪರಮೇಶ್ವರಾರ್ಪಣಪೂರ್ವಕಸುಕೃತಕರ್ಮಾನುಷ್ಠಾನಸ್ಯ ನ ಕಿಂಚಿತ್ಪ್ರಯೋಜನಮಿತ್ಯಾಶಂಕಾಯಾಮಾಹ. ಸಂಧ್ಯಾಧಿಕರಣಂ ॥ ೧ ॥ ಸಂಧ್ಯೇ ಸೃಷ್ಟಿರಾಹ ಹಿ ॥ ೧ ॥ ಸಂಧ್ಯೇ ಸ್ವಪ್ನಾವಸ್ಥಾಯಾಂ ಸೃಷ್ಟಿಃ ಸಂಧ್ಯೇ ಸ್ವಪ್ನಾವಸ್ಥಾ

ನುಗತಚರಾಚರಪ್ರಪಂಚಸೃಷ್ಟಿಃ ಪಾರಮಾರ್ಥಿಕೀ. ಕುತಃ? ಆಹ ಹಿ. "ನ ತತ್ರ ರಥಾ ನ ರಥಯೋಗಾ ನ ಪಂಥಾನೋ ಭವಂತಿ" ಇತ್ಯಾದಿ ಶ್ರುತೌ ಸ್ವಪ್ನಪ್ರಪಂಚಸ್ಯ ಪ್ರತಿಪಾದಿತತ್ವಾತ್ ಸತ್ಯತ್ವಂ. ತಸ್ಮಾತ್ಸ್ವಪ್ನ ಪ್ರಪಂಚದೃಷ್ಟಾಂತೇನ ಜಾಗ್ರತ್ಪ್ರಪಂಚಸ್ಯ ಮಿಥ್ಯಾತ್ವಾನುಮಾನಪ್ರಧಾ ನಾದ್ವೈತಬುದ್ಧಮತಸಿದ್ಧಾಂತಃ ಅನುಪಪನ್ನ ಇತಿ ಸೂತ್ರಾರ್ಥಃ. "ನ ತತ್ರ ರಥಾ ನ ರಥಯೋಗಾ ನ ಪಂಥಾನೋ ಭವಂತಿ", "ಅಥ ರಥಾನ್ ರಥಯೋಗಾನ್ ಪಥಸ್ಸೃಜತೇ", "ನ ತತ್ರಾನಂದಮುದಃ ಪ್ರಮುದೋ ಭವಂತಿ", "ಅಥಾನಂದಾನ್ಮುದಃ ಪ್ರಮುದಃ ಸೃಜತೇ", "ನ ತತ್ರ ವೇಶಂತಾಃ ಪುಷ್ಕರಿಣ್ಯಸ್ಸ್ರವಂತ್ಯೋ ಭವಂತಿ", "ಅಥ ವೇಶಂತಾನ್ಪುಷ್ಕರಿಣ್ಯಸ್ಸ್ರವತಸ್ಸೃಜತೇ ಸ ಹಿ ಕರ್ತಾ" ಇತಿಶ್ರುತೌ ಸ್ವಪ್ನಮಧಿಕೃತ್ಯ ಶ್ರೂಯತೇ. ತಸ್ಮಾದತ್ರ ಜಾಗ್ರತ್ಪ್ರಪಂಚಸೃಷ್ಟಿವತ್ಸ್ವ ಪ್ನಪ್ರಪಂಚಸೃಷ್ಟಿಃ ಜೀವಕೃತಾ ಈಶ್ವರಕೃತಾ ವಾ? ತತ್ಸತ್ಯಮಸತ್ಯಂ ವಾ? ಇತಿ ಸಂದಿಹ್ಯತೇ. "ಈಕ್ಷಣಾದಿಪ್ರವೇಶಾಂತಸೃಷ್ಟಿರೀಶೇನ ಕಲ್ಪಿತಾ। ಜಾಗ್ರದಾದಿಸುಷುಪ್ತ್ಯಂತಸೃಷ್ಟಿರ್ಜೀವೇನ ಕಲ್ಪಿತಾ ॥" ಇತಿ ವಾಕ್ಯ ದರ್ಶನಾತ್ ಸಂಧ್ಯೇ ಸೃಷ್ಟಿರ್ಜೀವೇನೇತಿ. ಕುತಃ? ಸಂಧ್ಯಂ ಸ್ವಪ್ನಾವ ಸ್ಥಾನಮುಚ್ಯತೇ, "ಸಂಧ್ಯಂ ತೃತೀಯಂ ಸ್ವಪ್ನಾವಸ್ಥಾನಂ" ಇತಿವಚ ನಾತ್. ಸ ತು ಜೀವೇನೈವ ಸೃಜ್ಯತೇ. ಸ ಹಿ ಕರ್ತೇತ್ಯಾಹ ಹಿ. ಸ್ವಪ್ನ ದೃಗ್ಜೀವ ಏವಾತ್ರ ಪ್ರತೀಯತೇ. ಕಿಂಚ ಸ್ವಪ್ನಗತಗಜಸ್ಯಂದನಾದಿ ಪ್ರಪಂಚಸ್ಯ ಪ್ರಬೋಧೇ ಮಿಥ್ಯಾತ್ವದರ್ಶನಾತ್ ತದ್ವಜ್ಜಾಗ್ರತ್ಪ್ರಪಂಚ ಸ್ಯಾಪಿ ರಜ್ಜುಸರ್ಪಾದಿವನ್ಮಿಥ್ಯಾತ್ವಮುಪಪನ್ನಮಿತಿ ಪ್ರಾಪ್ತೇ ಪ್ರಚ ಕ್ಷ್ಮಹೇ. ಸಂಧ್ಯೇ ಸ್ವಪ್ನೇ ಸೃಷ್ಟಿಃ ಗಜತುರಗಾದಿನಾನಾವಿಧಚಿತ್ರಸೃಷ್ಟಿಃ ಆಹ ಹಿ ಜೀವಾಂತರ್ಯಾಮಿತಯಾ ವ್ಯಾಪಕಸ್ಯ ಪರಶಿವಬ್ರಹ್ಮಣಃ ಇತಿ ಶ್ರುತಿಃ ಪ್ರತಿಪಾದಯತಿ. "ಈಶ್ವರಸ್ಸರ್ವಭೂತಾನಾಂ", "ಪ್ರಧಾನ ಕ್ಷೇತ್ರಜ್ಞಪತಿಃ" ಇತ್ಯಾದಿಬಹುಶ್ರುತಿಷು ಸರ್ವಜೀವನಿಯಾಮಕತ್ವ ಸರ್ವಜೀವಬಂಧಮೋಕ್ಷಕರ್ತೃತ್ವಸರ್ವಜ್ಞತ್ವಾದಿಧರ್ಮಾಣಾಂ ಪರಮೇ ಶ್ವರಸ್ಯೈವ ದರ್ಶನಾದತ್ರ ಸ್ವಕೃತರಥರಥಯೋಗಸೃಷ್ಟಿರಪಿ ಪರಮೇಶ್ವ ರಾಯತ್ತ ಇತಿ ವೇದಿತವ್ಯಂ.

ಪರಮೇಶ್ವರನ ಆಜ್ಞೆ ಎನಿಸಿದ ಶ್ರುತಿಸ್ಮೃತಿಗಳಲ್ಲಿ ಹೇಳಿರುವಂತೆ ವರ್ಣಾಶ್ರಮ ಧರ್ಮಗಳ ಆಚರಣದಿಂದ ಪಾಪವು ತೊಲಗುತ್ತದೆ. ಅದರಿಂದ ನಮಗೆ ನಿಗಮಾ ಗಮಶಾಸ್ತ್ರಗಳಲ್ಲಿ ವಿಶ್ವಾಸ ಹುಟ್ಟುತ್ತದೆ. ಹಾಗೆ ವಿಶ್ವಾಸದಿಂದ ವಿಚಾರಮಾಡಿದರೆ ನಿತ್ಯಾನಿತ್ಯವಸ್ತುಗಳ ವಿವೇಚನ ಹುಟ್ಟುತ್ತದೆ. ಅದರಿಂದ ಮುಂದೆ ಇಹಪರಸುಖ ಗಳಲ್ಲಿ ಬೇಸರವುಂಟಾಗುತ್ತದೆ. ಈ ಬಗೆಯ ವೈರಾಗ್ಯದಿಂದ ಶಮದಮಾದಿಗುಣಗಳು

ವಿಕಾಸವಾಗುತ್ತವೆ. ಇವುಗಳ ಫಲವಾಗಿ ಮೋಕ್ಷದಲ್ಲಿ ಉತ್ಕಟವಾದ ಇಚ್ಛೆಯುಂಟಾಗಿ ಗುರುವಿನ ಅನುಗ್ರಹ ದೊರಕುತ್ತದೆ. ಆಗ ಮೋಕ್ಷಕ್ಕೆ ಬೇಕಾದ ಪಶು ಪತಿ ಪಾಶ ಎಂಬ ಮೂರುಬಗೆಯ ತತ್ತ್ವಗಳ ಪರಿಚಯವಾಗುತ್ತದೆ. ಇದರಿಂದ ಶಿವಸಾಕ್ಷಾತ್ಕಾರಕ್ಕೆ ಬೇಕಾದ ಚಿದೇಕತ್ವವನ್ನು ದೊರಕಿಸುವ ಶಿವಯೋಗದ ಅಭ್ಯಾಸವಾಗುತ್ತದೆ. ಈ ಬಗೆಯ ಅಭ್ಯಾಸದಿಂದ ನಾನು ನನ್ನದು ಎಂಬ ಅಭಿಮಾನ ತೊಲಗುತ್ತದೆ. ಇದು ತೊಲಗಿದರೆ ಎಲ್ಲರಲ್ಲೂ ಒಬ್ಬ ಶಿವನೇ ಇರುವನೆಂಬ ಭಾವನೆ ಉಂಟಾಗುತ್ತದೆ. ಹೀಗೆ ಪಾಪಬುದ್ಧಿಯನ್ನು ತೊಲಗಿಸಿ ಪುಣ್ಯಕರ್ಮಗಳನ್ನು ಆಚರಿಸಲು ಆವಶ್ಯಕವಾದ್ದರಿಂದ ವರ್ಣಾಶ್ರಮಧರ್ಮಗಳನ್ನರಿತ ಪುಣ್ಯಾತ್ಮರು ಇಲ್ಲಿಯೂ ಮುಂದೆಯೂ ಸುಖವನ್ನು ಅನುಭವಿಸುತ್ತಾರೆ. ಈ ಮಾರ್ಗವನ್ನು ಅನುಸರಿಸಿದ ಪಾಪಿಗಳು ಘೋರನರಕವನ್ನು ಅನುಭವಿಸುತ್ತಾರೆ. ಇಲ್ಲಿ ಕೆಲವರು "ಬ್ರಹ್ಮದಲ್ಲಿ ಯಾವ ವೈವಿಧ್ಯವೂ ಗುಣವಿಶೇಷಗಳೂ, ವಿಭಾಗಗಳೂ ಇಲ್ಲ. ಅದು ಅಭಿನ್ನವೂ ನಿತ್ಯವೂ ಆದ್ದರಿಂದ ಪ್ರಪಂಚಕ್ಕೆ ಕಾರಣವಾಗಲಾರದು. ಹೀಗೆಯೇ ಸ್ವಪ್ನಪ್ರಪಂಚದೃಷ್ಟಾಂತದಿಂದ ಜಾಗ್ರತ್ತು ಸ್ವಪ್ನ ಸುಷುಪ್ತಿ ಮೂರ್ಛೆ ಎಂಬ ನಾಲ್ಕು ಅವಸ್ಥೆಗಳೂ ಸುಳ್ಳು" ಎಂದು ಹೇಳುತ್ತಾರೆ. ಆದ್ದರಿಂದ ಶುದ್ಧಾದ್ವೈತ, ಬುದ್ಧಾದ್ವೈತ, ಶುಷ್ಕಾದ್ವೈತ, ಶೂನ್ಯಾದ್ವೈತವೇ ಮೊದಲಾದ ದುರ್ಮತಗಳನ್ನು ನಿರಾಕರಿಸಲಿಕ್ಕಾಗಿ ಈ ಅಧಿಕರಣವು ಆರಂಭವಾಗುತ್ತದೆ. "ಈ ಪ್ರಪಂಚದ ರಚನೆಯು ಸ್ವಪ್ನ ಮತ್ತು ಇಂದ್ರಜಾಲಗಳಂತೆ ನಿರಾಧಾರವಾದುದು" ಎಂದು ಪುರಾಣಾಗಮಗಳಲ್ಲಿ ಪ್ರಪಂಚವನ್ನು ಸ್ವಪ್ನದಂತೆ ಸುಳ್ಳೆಂದು ಹೇಳಿದ್ದರಿಂದ ಹಿಂದೆ ಹೇಳಿದ ಪುಣ್ಯ ಪಾಪಕರ್ಮಿಗಳು ಸ್ವರ್ಗ ನರಕಗಳನ್ನು ಅನುಭವಿಸುವರೆಂಬುದೂ ಸುಳ್ಳೆಂದು ತಾನಾಗಿಯೇ ಸಿದ್ಧವಾಯಿತು. ಆದ್ದರಿಂದ ಪರಮೇಶ್ವರನಿಗೆ ಅರ್ಪಿಸಲಿಕ್ಕೆಂದು ಪುಣ್ಯಕರ್ಮಗಳನ್ನಾಚರಿಸಿದ್ದರಿಂದ ಏನೇನೂ ಪ್ರಯೋಜನವಿಲ್ಲವೆಂದಾಶಂಕಿಸಿ ಸಮಾಧಾನವನ್ನು ಹೇಳುತ್ತಾನೆ. ಸ್ವಪ್ನದಲ್ಲಾಗುವ ಚರಾಚರಪ್ರಪಂಚದ ಸೃಷ್ಟಿಯೂ ಯಥಾರ್ಥವೇ ಆಗಿದೆ. ಶ್ರುತಿಯೂ ಹಾಗೆಯೇ ತಿಳಿಸಿದೆ. "ಅಲ್ಲಿ ರಥಗಳಾಗಲೀ ರಥಸಂಬಂಧಗಳಾಗಲೀ ಮಾರ್ಗಗಳಾಗಲೀ ಇರುವುದಿಲ್ಲ" ಎಂಬ ಶ್ರುತಿಯಲ್ಲಿ ಹೇಳಿದಂತೆ ಸ್ವಪ್ನಪ್ರಪಂಚವೂ ಸತ್ಯವೆನಿಸಿದೆ. ಆದ್ದರಿಂದ ಸ್ವಪ್ನಪ್ರಪಂಚದ ದೃಷ್ಟಾಂತದಿಂದ ಜಾಗ್ರತ್ಪ್ರಪಂಚವನ್ನು ಸುಳ್ಳೆಂದು ತಿಳಿಸುವ ಅನುಮಾನವನ್ನು ಅವಲಂಬಿಸಿದ ಅದ್ವೈತ ಬೌದ್ಧ ಮತಗಳ ಸಿದ್ಧಾಂತವು ಯುಕ್ತವಲ್ಲ. "ಅಲ್ಲಿ ರಥಗಳಾಗಲಿ, ರಥಯೋಗವಾಗಲಿ, ಮಾರ್ಗಗಳಾಗಲಿ ಇರುವುದಿಲ್ಲ. ಆಗ ರಥಗಳನ್ನೂ, ರಥಸಂಬಂಧಗಳನ್ನು ಸೃಷ್ಟಿಸುತ್ತಾನೆ. ಅಲ್ಲಿ ಆನಂದವೇ ಇರುವುದಿಲ್ಲ. ಆಗ ಆನಂದವನ್ನು ಸೃಷ್ಟಿಸುತ್ತಾನೆ. ಅಲ್ಲಿ ಕೊಳಗಳಾಗಲೀ ಪುಷ್ಪಗಳುಳ್ಳ ಸರೋವರಗಳಾಗಲಿ ಇರುವುದಿಲ್ಲ. ಆದರೂ ಕೊಳಗಳನ್ನೂ ಪುಷ್ಪಭರಿತವಾದ ಸರೋವರಗಳನ್ನೂ ನಿರ್ಮಿಸುತ್ತಾನೆ. ಇವೆಲ್ಲಕ್ಕೂ ಅವನೇ ಕರ್ತನು" ಎಂಬ ಶ್ರುತಿಯಲ್ಲಿ ಸ್ವಪ್ನವನ್ನು ಉದ್ದೇಶಿಸಿ ಹೇಳಲಾಗಿದೆ. ಆದ್ದರಿಂದ ಇಲ್ಲಿ ಜಾಗ್ರತ್ಪ್ರಪಂ

ಚದ ಸೃಷ್ಟಿಯಂತೆ ಸ್ವಪ್ನಪ್ರಪಂಚದ ಸೃಷ್ಟಿಯು ಜೀವಕೃತವೇ ಈಶ್ವರಕೃತವೇ? ಅದು ಸುಳ್ಳೇ ನಿಜವೇ? ಎಂದು ಸಂದೇಹ ಬರುತ್ತದೆ. "ಈಕ್ಷಣದಿಂದಾರಂಭಿಸಿ ಭೂತಗಳಲ್ಲಿ ಪ್ರವೇಶಿಸುವವರೆಗೂ ಆಗುವ ಸೃಷ್ಟಿ ಈಶ್ವರನಿಗೆ ಸೇರಿದ್ದು. ಜಾಗ್ರತ್ತಿನಿಂದ ಆರಂಭಿಸಿ ಸುಷುಪ್ತಿಯವರೆಗಿನ ಸೃಷ್ಟಿ ಜೀವನಿಗೆ ಸೇರಿದ್ದು" ಎಂದು ಆಗಮವಾಕ್ಯವೂ ಇರುವುದರಿಂದ ಸ್ವಪ್ನದಲ್ಲಿ ಆಗುವ ಸೃಷ್ಟಿ ಜೀವನಿಗೆ ನೇರವಾಗಿ ಸಂಬಂಧಿಸಿದೆ. ಸೂತ್ರದಲ್ಲಿ ಬಂದಿರುವ "ಸಂಧ್ಯಂ" ಎಂಬುವ ಪದವು ಸ್ವಪ್ನಾಪಸ್ಥೆ ಎಂಬ ಅರ್ಥವನ್ನು ತಿಳಿಸುತ್ತದೆ. ಅದನ್ನು ಜೀವನೇ ಸೃಷ್ಟಿಸುತ್ತಾನೆ. "ಅವನೇ ಕರ್ತನು" ಎಂಬ ಶ್ರುತಿಯಲ್ಲಿ ಸ್ವಪ್ನವನ್ನು ಕಾಣುವವನು ಜೀವನೆಂದೇ ತಿಳಿದುಬರುತ್ತದೆ. ಆದರೆ ಸ್ವಪ್ನದಲ್ಲಿ ಕಾಣುವ ಆನೆ ರಥ ಮೊದಲಾದ ಪ್ರಪಂಚದ ಜ್ಞಾನವು ಸುಳ್ಳಾಗಿ ಕಾಣುವುದರಿಂದ ಜಾಗ್ರತ್‌ಪ್ರಪಂಚದಲ್ಲಿ ಕಾಣುವ ವಸ್ತುಗಳೂ ಸಹ ಹಗ್ಗದಲ್ಲಿ ಸರ್ಪ ತೋರುವಂತೆ ಸುಳ್ಳಾಗಿ ತೋರುತ್ತಿವೆ ಎಂದು ಹೇಳುವುದೇ ಯುಕ್ತವೆಂದು ಆಕ್ಷೇಪ ಬರುತ್ತದೆ. ಅದಕ್ಕೆ ಸಮಾಧಾನವನ್ನು ಸೂತ್ರದಲ್ಲಿ ಹೇಳಲಾಗಿದೆ. ಸ್ವಪ್ನದಲ್ಲಿ ಕಾಣುವ ಆನೆ ಕುದುರೆ ಮೊದಲಾದ ಚಿತ್ರವಿಚಿತ್ರವಾದ ಸೃಷ್ಟಿಯೂ ಸಹ ಸರ್ವವ್ಯಾಪಕನಾದ ಪರಶಿವನಿಗೇ ಅನ್ವಯಿಸುವುದೆಂದು ಶ್ರುತಿ ತಿಳಿಸುತ್ತದೆ. "ಎಲ್ಲಾ ವಿದ್ಯೆಗಳಿಗೂ ಅಧಿಪತಿ" "ಪ್ರಧಾನಕ್ಕೂ ಜೀವರಿಗೂ ನಿಯಾಮಕ; ಸಂಸಾರ ಮೋಕ್ಷ ಸ್ಥಿತಿ ಬಂಧಗಳಿಗೆ ಕಾರಣನು" ಈ ಬಗೆಯ ಶ್ರುತಿಗಳಲ್ಲಿ ಜೀವರೆಲ್ಲರಿಗೂ ಪರಮೇಶ್ವರನೇ ನಿಯಾಮಕನೂ ಬಂಧಮೋಕ್ಷಗಳ ಅಧಿಕಾರಿಯೂ ಆಗಿರುವನೆಂದು ತಿಳಿಸಲಾಗಿದೆ. ಮೊದಲು ರಥಗಳಿಲ್ಲದಂತೆಯೂ ಆಮೇಲೆ ರಥಗಳಿದ್ದಂತೆಯೂ ತಾನು ಮಾಡಿಕೊಳ್ಳುವುದೇದರೆ ಪರಮೇಶ್ವರನ ಕೆಲಸವೆಂದೇ ತಿಳಿಯಬೇಕು.

ಕಿಂಚ ಸ್ವಪ್ನಾಧ್ಯಾಯಾನುಸಾರೇಣ ಸ್ವಪ್ನಸ್ಯ ಭವಿಷ್ಯಚ್ಛುಭಾಶುಭಫಲಸೂಚಕತ್ವದರ್ಶನಾತ್ ಸ್ವಪ್ನಸ್ಯಾಪಿ ಸತ್ಯತ್ವಂ. ನನು "ಯ ಏಷ ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ" ಇತಿಶ್ರುತೌ ಸ್ವಪ್ನೇ ಪುತ್ರಮಿತ್ರಕಲತ್ರಾದಿಸೃಷ್ಟೇಃ ಸ್ವತಂತ್ರತಯಾ ಜೀವಸ್ಯೈವ ವ್ಯಪದೇಶಾತ್ ಕಥಮೀಶ್ವರಸ್ಯ ಸ್ವಪ್ನಾದಿಸೃಷ್ಟಿಸ್ಸಂಭವತೀತ್ಯಾಶಂಕಾಯಾಮಾಹ. ನಿರ್ಮಾತಾರಂ ಚೈಕೇ ಪುತ್ರಾದಯಶ್ಚ ॥ ೨ ॥ "ಯ ಏಷ ಸುಪ್ತೇಷು ಜಾಗರ್ತಿ ಕಾಮಂ ಕಾಮಂ ಪುರುಷೋ ನಿರ್ಮಿಮಾಣಃ" ಇತ್ಯೇವಂ ಜೀವಸ್ಯ ಸ್ವಪ್ನೇ ಕಾಮಾನಾಂ ನಿರ್ಮಾತಾರಮೇಕೇ ಶಾಖಿನೋ ವದಂತಿ. "ಸರ್ವಾನ್ಕಾಮಾನ್ ಛಂದತಃ ಪ್ರಾರ್ಥಯಸ್ವ ಶತಾಯುಷಃ ಪುತ್ರಪೌತ್ರಾನ್ ವೃಣೀಷ್ವ" ಇತಿ. ಜೀವಸ್ಯ ಚ ಸತ್ಯಸಂಕಲ್ಪತ್ವಂ ಪ್ರಜಾಪತಿವಾಕ್ಯೇ ಶ್ರುತಂ. ತಸ್ಮಾಜ್ಜೀವಸ್ಯೈವ ಸ್ವಪ್ನಕರ್ತೃಕತ್ವಮಿತಿ ಚೇತ್ತದಯುಕ್ತಂ. ಪರಮೇಶ್ವರಸ್ಯಾಷ್ಟಮೂರ್ತಿಷು ಜೀವಸ್ಯೈಕಮೂರ್ತಿತ್ವಾತ್ ಸ್ವಪ್ನಸ್ರಷ್ಟೃತ್ವಾದಿಧರ್ಮಾಃ ಪರಮೇಶ್ವರ

ಸ್ತ್ಯೋಪಪನ್ನಾಃ. ಅತ ಏವ "ಖಂ ಬ್ರಹ್ಮ ಕಂ ಬ್ರಹ್ಮ", "ಅಸಾವಾದಿತ್ಯೋ ಬ್ರಹ್ಮ", "ಅಯಮಾದಿತ್ಯೋ ಬ್ರಹ್ಮ" ಇತ್ಯಾದಿಶ್ರುತಿಷು ಶಿವೈಕನಿಷ್ಠಬ್ರಹ್ಮಶಬ್ದಸ್ಯಾಕಾಶವಾಯುಜಲಸೂರ್ಯಜೀವಾದಿಷು ಪ್ರಯೋಗೋ ದೃಷ್ಟಃ. ಅತೋಽತ್ರ ಜೀವಂ ಸ್ವೇಚ್ಛಾನುಸಾರೇಣ ಸ್ವಪ್ನಪ್ರಪಂಚಸ್ಯ ನಿರ್ಮಾತಾರಂ ಸ್ರಷ್ಟಾರಂ ಶ್ರುತಿಃ ಪ್ರತಿಪಾದಯತಿ. ತಥಾಚ ಕರ್ತುರಿಚ್ಛಾನುಸಾರೇಣೋತ್ಪದ್ಯಮಾನತ್ವಾದಪಿ ಸ್ವಪ್ನಕಾಲಿಕಾಃ ಪುತ್ರಮಿತ್ರಕಲತ್ರಾದಯಃ ಪದಾರ್ಥಾಶ್ಚ ಸತ್ಯಾ ಏವಾಂಗೀಕರ್ತವ್ಯಾಃ. ಪುತ್ರಾದಯಶ್ಚ ತತ್ರ ಕಾಮ್ಯಮಾನತಯಾ ಕಾಮಶಬ್ದೇನ ನಿರ್ದಿಶ್ಯಂತೇ, ಮಿಥ್ಯಾತ್ವಪಕ್ಷೇ ಕರ್ತುರಿಚ್ಛಾಧೀನತ್ವಾನುಪಪತ್ತೇಃ. ನಹಿ ಮಿಥ್ಯಾಭೂತಸ್ಯ ಶುಕ್ತಿರಜತರಜ್ಜುಸರ್ಪಾದೇಃ ಕರ್ತುರಿಚ್ಛಾಧೀನತ್ವಂ ಲೋಕೇ ದೃಷ್ಟಂ. ತಥಾಚ ಜೀವಂತರ್ಯಾಮಿತಯಾ ಸ್ವಪ್ನಪ್ರಪಂಚಸ್ಯ ಕರ್ತೃತ್ವಮೀಶ್ವರಸ್ಯೇತಿ ಶ್ರುತೇಸ್ತಾತ್ಪರ್ಯಂ. ನಚ ಸ್ವಪ್ನಪ್ರಪಂಚಸ್ಯ ತಾತ್ಪರ್ಯೇಣ ಶ್ರುತಿಪ್ರತಿಪಾದ್ಯತ್ವಮಸ್ತಿ. "ನ ತತ್ರ ರಥಾ" ಇತಿ ಪೂರ್ವವಾಕ್ಯೇ ಪಾರಮಾರ್ಥಿಕರಥಾದೀನಾಂ ಪ್ರತಿಷಿದ್ಧತ್ವಾತ್ ಸ್ವಪ್ನಪ್ರಪಂಚಬ್ರಹ್ಮೈಕತ್ವವಾದೋಽಪ್ಯನುಪಪನ್ನ ಇತಿ ಸಿದ್ಧಂ.

ಸ್ವಪ್ನಾಧ್ಯಾಯದಂತೆ ಸ್ವಪ್ನವೂ ಮುಂದಿನ ಶುಭಾಶುಭಗಳನ್ನು ಸೂಚಿಸುವುದೆಂದು ಹೇಳಿದ್ದರಿಂದ ಸ್ವಪ್ನವೂ ಸತ್ಯವೆನಿಸಿದೆ. "ಎಲ್ಲರೂ ಮಲಗಿದ್ದರೂ ಈ ಜೀವನು ಎಚ್ಚರನಾಗಿದ್ದು ನಿರ್ಮಿಸುತ್ತಾನೆ" ಎಂಬ ಶ್ರುತಿಯಂತೆ ಸ್ವಪ್ನದಲ್ಲಿ ಪುತ್ರ ಮಿತ್ರ ಕಳತ್ರ ಮೊದಲಾದ ಸೃಷ್ಟಿಯನ್ನು ಸ್ವತಂತ್ರವಾಗಿ ಜೀವನಿಗೇ ಹೇಳಿರುವುದರಿಂದ ಪರಮೇಶ್ವರನಿಗೆ ಸ್ವಪ್ನದ ಸೃಷ್ಟಿ ಹೇಗೆ ಹೊಂದುತ್ತದೆ ಎಂದಾಶಂಕಿಸಿ ಸಮಾಧಾನ ಮಾಡುತ್ತಾನೆ. "ಎಲ್ಲರೂ ಮಲಗಿರುವಾಗ ಜೀವನು ಎಚ್ಚರದಿಂದಿದ್ದು ನಿರ್ಮಿಸುತ್ತಾನೆ" ಎಂಬಲ್ಲಿ ಜೀವನೇ ಸ್ವಪ್ನದಲ್ಲಿ ತನ್ನ ಇಷ್ಟಾರ್ಥಗಳನ್ನು ನಿರ್ಮಿಸಿಕೊಳ್ಳುವನೆಂದು ಕೆಲವು ಶಾಖೆಯವರು ಹೇಳುತ್ತಾರೆ. "ಎಲ್ಲಾ ಆಶೆಗಳನ್ನೂ ಸ್ಪಷ್ಟವಾಗಿ ತಿಳಿಸು; ನೂರುವರ್ಷ ಬಾಳುವ ಮಕ್ಕಳಿಗಾಗಿ ಕೇಳಿಕೋ" ಎಂಬ ಶ್ರುತಿಯಲ್ಲಿ ಕೇವಲ ಪ್ರಾರ್ಥನೆ ಸ್ಪಷ್ಟವಾಗಿ ಕಾಣುತ್ತದೆ. ಜೀವನು ಸತ್ಯಸಂಕಲ್ಪನೆಂದು ಪ್ರಜಾಪತಿವಾಕ್ಯದಲ್ಲಿ ಹೇಳಲಾಗಿದೆ. ಆದ್ದರಿಂದ ಜೀವನೇ ಸ್ವಪ್ನದ ಕರ್ತನೆಂದು ಹೇಳುವುದಾದರೆ ಇದು ಯುಕ್ತವಲ್ಲ. ಪರಮೇಶ್ವರನ ಎಂಟು ಆಕಾರಗಳಲ್ಲಿ ಜೀವನೂ ಒಂದು ಆಕಾರವಾಗಿದ್ದಾನೆ. ಆದ್ದರಿಂದ ಅವನಿಗೆ ಸ್ವಾತಂತ್ರ್ಯವಿಲ್ಲ. ನಿರ್ಮಾಣ ಮೊದಲಾದ ಧರ್ಮಗಳು ಈಶ್ವರನಿಗೇ ಹೊಂದುತ್ತವೆ. ಹೀಗೆಯೇ "ಆಕಾಶವೇ ಬ್ರಹ್ಮ" "ಈ ಆತ್ಮನು ಬ್ರಹ್ಮ" ಮೊದಲಾದ ಶ್ರುತಿಗಳಲ್ಲಿ ಶಿವನೊಬ್ಬನಲ್ಲಿಯೇ ಪ್ರಯೋಗಿಸಬಹುದಾದ ಬ್ರಹ್ಮಶಬ್ದವನ್ನು ಆಕಾಶ, ವಾಯು, ಜಲ, ಅಗ್ನಿ, ಸೂರ್ಯ ಜೀವ ಇವರಲ್ಲಿಯೂ ಉಪಯೋಗಿಸಿರುವುದನ್ನು ನಾವು ಕಾಣುತ್ತೇವೆ. ಆದ್ದರಿಂದ

ಜೀವನೇ ಸ್ವೇಚ್ಛೆಯಿಂದ ಸ್ವಪ್ನಪ್ರಪಂಚವನ್ನು ನಿರ್ಮಿಸುವನೆಂದು ಶ್ರುತಿ ಹೇಳಿದೆ. ಹೀಗೆ ಕರ್ತೃವಿನ ಇಚ್ಛೆಯಂತೆಯೇ ಹುಟ್ಟುವುದಾದ್ದರಿಂದ ಸ್ವಪ್ನಕಾಲದಲ್ಲಿ ಕಾಣುವ ಹೆಂಡತಿ ಮಿತ್ರ ಮಗ ಮೊದಲಾದ ಪದಾರ್ಥಗಳು ನಿತ್ಯಗಳೆಂದೇ ಅಂಗೀಕೃತವಾಗಿವೆ. ಪುತ್ರ ಮೊದಲಾದವರೆಲ್ಲರೂ ಇಷ್ಟವಾದ ವಸ್ತುಗಳಾದ್ದರಿಂದ ಅವರನ್ನು ಕಾಮಶಬ್ದ ದಿಂದಲೇ ತಿಳಿಸಲಾಗಿದೆ. ಅವೆಲ್ಲವನ್ನೂ ಸುಳ್ಳೆಂದು ಹೇಳುವುದಾದರೆ ಅವು ಕರ್ತೃ ವಿನ ಇಚ್ಛೆಗೊಳಪಟ್ಟದ್ದವೆಂದು ಹೇಳುವುದು ಹೊಂದದೇಹೊಗುತ್ತದೆ. ಸುಳ್ಳಾಗಿರುವ ಶುಕ್ತಿರಜತವಾಗಲೀ ಸರ್ಪವಾಗಲೀ ಕರ್ತೃವಿನ ಇಚ್ಛೆಗಧೀನವಾಗಿದೆ ಎಂಬುದು ಲೋಕದಲ್ಲಿ ಎಲ್ಲಿಯೂ ಕಂಡುಬಂದಿಲ್ಲ. ಆದ್ದರಿಂದ ಜೀವನೊಳಗೆ ಅಂತರ್ಯಾಮಿ ಯಾದ್ದರಿಂದ ಈಶ್ವರನೇ ಸ್ವಪ್ನಪ್ರಪಂಚಕ್ಕೆ ಕರ್ತನೆಂಬುದು ಶ್ರುತಿಯ ತಾತ್ಪರ್ಯ ವಾಗಿದೆ. ಆದರೆ ಸ್ವಪ್ನಪ್ರಪಂಚವೇ ಶ್ರುತಿಯ ತಾತ್ಪರ್ಯವೆಂದು ಎಲ್ಲಿಯೂ ಹೇಳಿಲ್ಲ. ಹಿಂದಿನ ವಾಕ್ಯದಲ್ಲಿ "ರಥಗಳಿಲ್ಲ" ವೆಂದು ಯಥಾರ್ಥವಾಗಿ ರಥಗಳನ್ನು ನಿಷೇಧಿಸಿ ರುವುದರಿಂದ ಸ್ವಪ್ನಪ್ರುಂಚದಂತೆ ಬ್ರಹ್ಮ ಒಂದೇ ಎಂಬ ವಾದವೂ ಯುಕ್ತವಲ್ಲವೆಂ ಬುದು ಇದರಿಂದ ಸಿದ್ಧವಾಯಿತು.

ನನು "ಅಜಾಮೇಕಾಂ ಲೋಹಿತಶುಕ್ಲಕೃಷ್ಣಾಂ" ಇತ್ಯಾದಿಶ್ರುತಿಷು ಜಡಸ್ಯ ಪ್ರಧಾನಸ್ಯ ಜಗತ್ಕಾರಣತ್ವನಿರ್ದೇಶಾಚ್ಚೇತನಸ್ಯ ಜೀವಸ್ಯ ಕಥಂ ಸ್ವಪ್ನಪ್ರಪಂಚಕರ್ತೃತ್ವಮಯುಕ್ತಮಿತ್ಯಾಶಂಕಾಯಾಮಾಹ.

ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾತ್ ॥ ೩ ॥

ತುಶಬ್ದಃ ಜೀವಕರ್ತೃತ್ವಂ ವ್ಯಾವರ್ತಯತಿ. ಸ್ವಪ್ನೇ ರಥಪುಷ್ಕರಿಣ್ಯಾದ್ಯರ್ಥಜಾತಂ ಮಾಯಾಮಾತ್ರಂ ಪರಮಪುರುಷಪರಶಿವಸೃಷ್ಟಮಿತ್ಯರ್ಥಃ. ಮಾಯಾಶಬ್ದೋ ಹ್ಯಾಶ್ಚರ್ಯವಾಚೀ. "ಜನಕಸ್ಯ ಕುಲೇ ಜಾತಾ ದೇವಮಾಯೇತಿ ನಿರ್ಮಿತಾ । ಹಿಮಾದ್ರಿತನಯಾ ಗೌರೀ ಮಾಯಾ ನಾಮ್ನಾ ಮಹೇಶ್ವರೀ । ಭಕ್ತಾಭೀಷ್ಟಪ್ರದಾ ನಿತ್ಯಾ ಶಿವಾಧೀನಾ ಚಿದಾತ್ಮಿಕಾ ।" ಇತ್ಯಾದಿಪುರಾಣೇಷು, "ಮಾಯಾಂ ತು ಪ್ರಕೃತಿಂ ವಿಂದ್ಯಾನ್ಮಾಯಿನಂ ತು ಮಹೇಶ್ವರಂ" ಇತ್ಯಾದಿಶ್ರುತಿಷ್ವಪಿ ದರ್ಶನಾತ್. ಅತ್ರಾಪಿ "ನ ತತ್ರ ರಥಾ ರಥಯೋಗಾ ನ ಪಂಥಾನಃ" ಇತ್ಯಸ್ಯ ಸಕಲೇತರಪುರುಷಾನುಭಾವ್ಯತಯಾ ನ ಭವಂತೀತ್ಯರ್ಥಃ. "ಅಥ ರಥಾನ್ರಥಯೋಗಾನ್ ಪಥಸ್ಸೃಜತೇ । ಸ್ವಪ್ನದೃಗನುಭಾವ್ಯತಯಾ ತತ್ಕಾಲಮಾತ್ರಾವಸಾನಾನ್ ಸೃಜತೇ ॥" ಇತ್ಯಾಶ್ಚರ್ಯರೂಪತ್ವಮೇವಾಹ. ಏವಂವಿಧಾಶ್ಚರ್ಯರೂಪಾ ಸೃಷ್ಟಿಸ್ಸತ್ಯಸಂಕಲ್ಪಸ್ಯ ಪರಮಪುರುಷಸ್ಯ ಶಿವಸ್ಯೋಪಪದ್ಯತೇ ನ ಜೀವಸ್ಯ. ತಸ್ಯ ಸತ್ಯಸಂಕಲ್ಪತ್ವಾದಿಯುಕ್ತಸ್ಯಾಪಿ ಸಂಸಾರದಶಾಯಾಂ ಕಾರ್ತ್ಸ್ನ್ಯೇನಾನಭಿವ್ಯಕ್ತಸ್ವರೂಪತ್ವಾನ್ನ ಜೀವಸ್ಯ ತಥಾವಿಧಾಶ್ಚರ್ಯಸೃಷ್ಟಿರುಪಪದ್ಯತೇ. "ಕಾಮಂ ಕಾಮಂ ಪುರುಷೋ

ನಿರ್ಮಿಮಾಣಃ" ಇತಿಚ ಶ್ರುತಿಃ ಪರಮಪುರುಷಮೇವ ನಿರ್ಮಾತಾರ ಮಾಹ, "ಯ ಏಷ ಸುಪ್ತೇಷು ಜಾಗರ್ತಿ ತದೇವ ಶುಕ್ಲಂ ತದ್ಬ್ರಹ್ಮ ತದೇವಾಮೃತಮುಚ್ಯತೇ। ತಸ್ಮಿನ್ಲೋಕಾಃ ಶ್ರಿತಾಸ್ಸರ್ವೇ ತದು ನಾತ್ಯೇತಿ ಕಶ್ಚನ॥" ಇತ್ಯುಪಕ್ರಮೋಪಸಂಹಾರಯೋಃ ಪರಮಶಿವಸಾಧಾರಣ ಸ್ವಭಾವಪ್ರತೀತೇಃ. "ಅಥ ವೇಶಂತಾನ್ ಪುಷ್ಕರಿಣ್ಯಸ್ಸ್ರವಂತ್ಯಃ ಸೃಜತೇ ಸಹಿ ಕರ್ತಾ" ಇತಿಚ ತಯಾ ಶ್ರುತ್ಯೈಕಾರ್ಥತ್ವಾತ್ಪರಮಪುರು ಷಮೇವ ಕರ್ತಾರಮಿತಿ ನಿರ್ದಿಶತಿ. ತಸ್ಮಾಜ್ಜಡಪ್ರಧಾನಸ್ಯ ಪರಮಶಿವ ಭಿನ್ನಶಕ್ತಿರೂಪಸ್ಯ ಗುಣತ್ರಯಾತ್ಮಕಸ್ಯ ತದ್ವಿಶಿಷ್ಟಸ್ಯ ಕಿಂಚಿದ್ಜ್ಞಸ್ಯ ಬದ್ಧಜೀವಸ್ಯ ಚ ಸ್ವಪ್ನಪ್ರಪಂಚನಿರ್ಮಾತೃತ್ವಮನುಪಪನ್ನಂ.

ಅಜಾಮಂತ್ರದಲ್ಲಿ ಜಡಪ್ರಧಾನವನ್ನು ಜಗತ್ಕಾರಣವೆಂದು ಹೇಳಿದ್ದರಿಂದ ಚೇತನಜೀವನು ಸ್ವಪ್ನಪ್ರಪಂಚದ ಕರ್ತನೆಂಬುದು ಹೇಗೆ ಹೊಂದಿಕೆಯಾಗುತ್ತದೆ ಎಂದಾಶಂಕಿಸಿ ಸಮಾಧಾನವನ್ನು ಹೇಳುತ್ತಾನೆ. ತು ಶಬ್ದವು ಜೀವನೇ ಕರ್ತನೆಂಬು ದನ್ನು ಅಲ್ಲಗಳೆಯುತ್ತದೆ. ಸ್ವಪ್ನದಲ್ಲಿ ಕಾಣುವ ರಥ ಪುಷ್ಕರಿಣಿ ಮೊದಲಾದ ವಸ್ತು ಗಳೆಲ್ಲವೂ "ಮಾಯಾಮಾತ್ರಂ" ಎಂಬ ಸೂತ್ರದಂತೆ ಪರಮಪುರುಷನಾದ ಪರಶಿವನಿಂ ದಲೇ ಸೃಷ್ಟವಾಗುತ್ತವೆ. ಇಲ್ಲಿ ಮಾಯೆ ಎಂದರೆ ಆಶ್ಚರ್ಯವೆಂದರ್ಥ. "ಜನಕನ ವಂಶದಲ್ಲಿ ಹುಟ್ಟಿದ ಸೀತೆ ದೇವಮಾಯೆ ಎನಿಸಿದಳು. "ಹಿಮಾಲಯನ ಮಗಳಾದ ಗೌರಿಯು ಮಾಯೆ ಎಂಬ ಹೆಸರಿನಿಂದ ಶಿವನಿಗೆ ಪ್ರಿಯಳೂ, ಅಧೀನಳೂ ಆಗಿ ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುತ್ತ ಚಿದ್ರೂಪದಿಂದ ನಿತ್ಯಳಾಗಿ ಶೋಭಿಸುತ್ತ ಮಹೇಶ್ವರಿ ಎನಿಸಿರುವಳು"ಎಂದು ಪುರಾಣಗಳಲ್ಲಿ ಹೇಳಿದೆ. "ಮಾಯೆಯನ್ನು ಪ್ರಕೃತಿ ಎಂದೂ, ಮಹೇಶ್ವರನನ್ನು ಮಾಯಾಪತಿ ಎಂದೂ ತಿಳಿ" ಎಂದು ಶ್ರುತಿಗಳಲ್ಲೂ ಹೇಳಿದೆ. "ಇಲ್ಲಿ ರಥಗಳಾಗಲೀ ರಥಸಂಬಂಧಗಳಾಗಲೀ ಮಾರ್ಗಗಳಾಗಲೀ ಇಲ್ಲ" ವೆಂದು ಮೊದಲು ಹೇಳಿದ್ದರಿಂದ ಬೇರೆ ಯಾವ ಪುರುಷನಿಗೂ ಅನುಭವಕ್ಕೆ ಗೋಚರವಾಗುವಂತಿಲ್ಲ ವೆಂಬುದು ಸ್ಪಷ್ಟವಾಗುತ್ತದೆ; ಇಂತಹ ಸ್ಥಿತಿಯಲ್ಲಿ "ಅಲ್ಲಿ ರಥಗಳನ್ನೂ ರಥಸಂಬಂಧ ಗಳನ್ನೂ ಮಾರ್ಗಗಳನ್ನೂ ಸೃಷ್ಟಿಸುತ್ತಾನೆ" ಎಂದು ಸ್ವಪ್ನಕಾಲದಲ್ಲಿ ಅವೆಲ್ಲವನ್ನೂ ಅನುಭವಗೋಚರವಾಗುವಂತೆ ಮಾಡಿಕೊಳ್ಳುವನೆಂದು ಹೇಳಿದ್ದರಿಂದ ಇದೆಲ್ಲವೂ ಆಶ್ಚರ್ಯವೆಂಬುದರಲ್ಲಿ ಸಂಶಯವಿಲ್ಲ. ಇಂತಹ ಆಶ್ಚರ್ಯವಾದ ಸೃಷ್ಟಿ ಸತ್ಯಸಂಕಲ್ಪ ನಾದ ಪರಶಿವನಿಗೆ ಹೊಂದುತ್ತದೆಯೇ ಹೊರತು ಜೀವನಿಗೆ ಹೊಂದಲಾರದು. ಜೀವನೂ ಸತ್ಯಸಂಕಲ್ಪನೇ ಆದರೂ ಸಂಸಾರದಶೆಯಲ್ಲಿ ಅವನ ಸ್ವರೂಪವು ಪೂರ್ಣ ವಾಗಿ ವಿಕಾಸವಾಗದಿರುವುದರಿಂದ ಅವನಿಗೆ ಇಂತಹ ಆಶ್ಚರ್ಯವಾದ ಸೃಷ್ಟಿ ಹೊಂದು ವುದಿಲ್ಲ. "ಪುರುಷನು ಇಷ್ಟಾರ್ಥಗಳನ್ನು ನಿರ್ಮಿಸಿಕೊಳ್ಳುವನು" ಎಂಬಲ್ಲಿ ಪರಮ ಪುರುಷನನ್ನೇ ನಿರ್ಮಾತೃವೆಂದು ಶ್ರುತಿಯು ಸ್ಪಷ್ಟವಾಗಿ ಹೇಳಿದೆ. "ಎಲ್ಲರೂ ಮಲಗಿ ರುವಾಗ ಯಾವನು ಎಚ್ಚರವಾಗಿರುವನೋ ಅವನೇ ಶುಕ್ಲ, ಬ್ರಹ್ಮ ಮತ್ತು ಅಮೃತ

ವೆನಿಸಿದ್ದಾನೆ." "ಅವನಲ್ಲಿಯೇ ಲೋಕಗಳೆಲ್ಲವೂ ಸಂಬಂಧಿಸಿವೆ. ಅವನನ್ನು ಯಾರೂ ಅತಿಕ್ರಮಿಸಲಾರರು" ಎಂದು ಮೊದಲಿಗೂ ಕೊನೆಗೂ ಪರಮಶಿವನ ಅಸಾಧಾರಣ ಸ್ವಭಾವವೇ ಸ್ಪಷ್ಟಪಡುತ್ತದೆ. "ಅಲ್ಲಿ ಕೊಳಗಳನ್ನೂ ಪುಷ್ಕರಿಣಿಗಳನ್ನು ಸೃಷ್ಟಿಸುತ್ತಾನೆ. ಅವನೇ ಕರ್ತನು" ಎಂಬ ಶ್ರುತಿಯೂ ಈ ಅರ್ಥವನ್ನೇ ತಿಳಿಸುವುದರಿಂದ ಪರಮೇಶ್ವರನೇ ಕರ್ತನೆಂಬುದು ಸ್ಪಷ್ಟವಾಗಿದೆ. ಆದ್ದರಿಂದ ಗುಣತ್ರಯಾತ್ಮಕವಾಗಿ ಪರಮಶಿವನ ಭಿನ್ನಶಕ್ತಿ ಎನಿಸಿದ ಜಡಪ್ರಧಾನವಾಗಲೀ, ಅದರಿಂದ ಕೂಡಿ ಕಿಂಚಿಜ್ಞನೂ, ಕಿಂಚಿತ್ಕರ್ತನೂ ಆದ ಜೀವನಾಗಲೀ ಸ್ವಪ್ನಪ್ರಪಂಚವನ್ನು ನಿರ್ಮಿಸುವರೆಂಬುದು ಯುಕ್ತವಲ್ಲ.

**ಕಿಂಚ, ನಹಿ ಲೋಕೇ ಜೀವೇಚ್ಛಾನುಸಾರೇಣ ಸ್ವಪ್ನಪ್ರಪಂಚೋತ್ಪತ್ತ್ಯದರ್ಶನಾತ್ ಅನಿಷ್ಟಾನಾಂ ದುಸ್ಸ್ವಪ್ನಾನಾಮಪಿ ದ್ಯೋತನಾಚ್ಚ ಜೀವೇಶ್ವರಯೋಃ ಚಿತ್ತ್ವೇನೈಕತ್ವಾನ್ನ ತಯೋರ್ವೈಲಕ್ಷಣ್ಯಮಿತ್ಯಾಶಂಕಾಯಾಮಾಹ. ಪರಾಭಿಧ್ಯಾನಾತ್ತು ತಿರೋಹಿತಂ ತತೋ ಹ್ಯಸ್ಯ ಬಂಧವಿಪರ್ಯಯೌ ॥ ೫ ॥ "ದ್ವಾವಜಾವೀಶಾನೀಶೌ" ಇತ್ಯಾದಿ ಶ್ರುತಿಯುಕ್ತ್ಯನುಭವಸಿದ್ಧದಿವ್ಯಮಣಿವ್ಯರ್ಥಪಾಷಾಣಾದಿವತ್ ಶಿವಜೀವಯೋರನ್ಯೋನ್ಯಭೇದಸಿದ್ಧತ್ವೇನ ಪರಾಭಿಧ್ಯಾನಾತ್ ಶಿವಾಭಿನ್ನಚಿಚ್ಛಕ್ತಿವ್ಯತಿರಿಕ್ತತ್ರಿಗುಣಾತ್ಮಕಪಾಶರೂಪಜಡಪರಾಪ್ರಕೃತ್ಯಭ್ಯಾಸಾತ್ ದೃಢಸ್ಪೃಷ್ಟತ್ವಾತ್ ಜೀವಸ್ಯ ಸ್ವಜ್ಞಾನಂ ತಿರೋಹಿತಂ ಆವೃತಂ. ಅತಃ ಆವೃತತ್ವಾದ್ಧೇತೋಃ ತಸ್ಯ ಬಂಧಮೋಕ್ಷವಿಪರ್ಯಯೌ. ಶರೀರೇಂದ್ರಿಯಮನಃಪ್ರಾಣಾದಿಷ್ವಹಂಮಮೇತ್ಯಭಿಮಾನೋ ಬಂಧಃ. ಬಹುಜನ್ಮಕೃತಪುಣ್ಯಪರಿಪಾಕೇನ ಸ್ವಜ್ಞಾನಶಿವಜ್ಞಾನಪೂರ್ವಕಪಾಶರೂಪಮಾಯಾಶಕ್ತಿನಿವೃತ್ತಿಫಲಕಶಿವತ್ವಪ್ರಾಪ್ತಿರೇವ ಮೋಕ್ಷಃ. ಉಭಾವೇತಾವುಪಪನ್ನೌ. ತಥಾ ಶೈವೇ ಶ್ರೂಯತೇ. "ಶಿವೇ ಸನಾತನೇ ಸಾಂಬೇ ನಿತ್ಯಕಲ್ಯಾಣವೈಭವೇ। ಪರಾಪರೇತಿ ಭೇದೇನ ತಸ್ಯ ಶಕ್ತಿಃ ಪ್ರಕಾಶಿತಾ। ಅಪರಾ ಸಚ್ಚಿದಾನಂದಲಕ್ಷಣಾ ಸರ್ವಮಂಗಳಾ। ಪರಾ ಪಾಶಾತ್ಮಿಕಾ ಶಕ್ತಿಸ್ಸರ್ವಜೀವವಿಮೋಹಿನೀ। ಗುಣತ್ರಯವಿಭೇದೇನ ಭಾಸತೇ ಸರ್ವಜಂತುಷು। ಶಿವಾರ್ಪಣಕೃತಾತ್ಪುಣ್ಯಾತ್ ಶಿವಾನುಗ್ರಾಹಕೋ ಭವೇತ್। ತಸ್ಮಾದ್ಗುಣಾತ್ಮಿಕಾ ಮಾಯಾ ಪಾಶರೂಪಾ ಪರಾಭಿಧಾ। ವಿನಶ್ಯತೇ ತಥಾ ಜೀವೋ ಶಿವೋ ಭವತಿ ನಾನ್ಯಥಾ॥" ಇತಿ. ಶ್ರುತಾವಪಿ "ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ। ಅಥ ಸೋಽಭಯಂ ಗತೋ ಭವತಿ। ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೇ ಅಥ ತಸ್ಯ ಭಯಂ ಭವತಿ॥" ಇತ್ಯಾದಿಶ್ರುತಿಷು ತಸ್ಯ ಬಂಧಮೋಕ್ಷಪ್ರಸಂಗೋ ಬಹುಧಾ**

ಪ್ರಪಂಚಿತಃ. ಕೇಚಿಜ್ಜೀವಸ್ಯ ಸತ್ಯಸಂಕಲ್ಪಾದಿಕಂ ಸ್ವಾಭಾವಿಕಮಪಿ ಪರಮೇಶ್ವರಮಾಯಯಾ ತಿರೋಹಿತಮಿತಿ ವದಂತಿ. ತದಯುಕ್ತಂ, ಸತ್ಯಸಂಕಲ್ಪಸ್ವಭಾವಸ್ಯ ಮಾಯಾತಿರೋಹಿತತ್ವಾಸಂಭವಾತ್, ಅಮುಕ್ತಸ್ಯ ಜೀವಸ್ಯ ಸ್ವತಃ ಸ್ವಾಭಾವಿಕಸತ್ಯಸಂಕಲ್ಪತ್ವೇ ಪರಮೇಶ್ವರನಿಷ್ಠಾದ್ವಿತೀಯಸತ್ಯಸಂಕಲ್ಪತ್ವಾದೇರತಿವ್ಯಾಪ್ತಿಪ್ರಸಂಗಾದಿದೋಷಾಚ್ಚ. ತಸ್ಮಾತ್ತಸ್ಯ ಪಾಶಮಾಯಾತಿರೋಹಿತತ್ವಪಾಶಮೋಕ್ಷಯೋಶ್ಚ ಪರಮೇಶ್ವರಾಯತ್ತತ್ವಾತ್ ಸ್ವಪ್ನಕರ್ತೃತ್ವಮಪಿ ನೇತರಸ್ಯ ಸಿದ್ಧಂ.

ಲೋಕದಲ್ಲಿ ಜೀವನ ಇಚ್ಛೆಯಂತೆಯೇ ಸ್ವಪ್ನಬೀಳುವುದೆಂದು ಕಂಡುಬಂದಿಲ್ಲವಾದ್ದರಿಂದಲೂ, ಅನಿಷ್ಟವಾದ ದುಸ್ಸ್ವಪ್ನಗಳೂ ಕಂಡುಬರುವುದರಿಂದಲೂ, ಜೀವೇಶ್ವರರಿಗೆ ಚಿದ್ರೂಪವಾದ ಐಶ್ವರ್ಯವಿರುವುದರಿಂದಲೂ ಅವರಿಗೆ ವೈಲಕ್ಷಣ್ಯವಿಲ್ಲವೆಂದಾಶಂಕಿಸಿ ನಿರಾಕರಿಸುತ್ತಾನೆ. ದಿವ್ಯಮಣಿ ಮತ್ತು ಸಾಮಾನ್ಯವಾದ ಶಿಲೆಗಳಂತೆ ಶಿವಜೀವರಿಗೆ ಪರಸ್ಪರವಾಗಿ ಭೇದವು "ಜ್ಞಾಜ್ಞೌ" ಎಂದು ಮುಂತಾದ ಶ್ರುತಿಗಳಿಗೂ ಯುಕ್ತಿಗೂ ಅನುಭವಕ್ಕೂ ಸಮ್ಮತವೆನಿಸಿದ್ದರಿಂದ, ಶಿವನ ಪ್ರಾಣಸ್ವರೂಪವಾದ ಚಿತ್‌ಶಕ್ತಿಗಿಂತ ಭಿನ್ನವಾಗಿ ತ್ರಿಗುಣಾತ್ಮಕವೂ ಪಾಶರೂಪವೂ ಆದ ಜಡಪ್ರಕೃತಿ ಎಂಬ ಶಕ್ತಿಯ ಹಿಡಿತಕ್ಕೆ ಬಿಗಿಯಾಗಿ ಸಿಕ್ಕಿರುವುದರಿಂದ ಜೀವನ ಜ್ಞಾನವು ತಿರೋಹಿತವಾಗಿದೆ. ಆದ್ದರಿಂದಲೇ ಅವನಿಗೆ ಶರೀರೇಂದ್ರಿಯಮನಸ್ಸುಪ್ರಾಣ ಇವುಗಳಲ್ಲಿ ನಾನು ನನ್ನದು ಎಂಬ ಅಭಿಮಾನದಿಂದ ಆಗಿರುವ ಬಂಧವೂ, ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯಪರಿಪಾಕದಿಂದ ತನ್ನೊಳಗೆ ಗುಪ್ತವಾಗಿ ನೆಲಸಿರುವ ಶಿವಜ್ಞಾನದಿಂದ ಪಾಶವೆಂಬ ಮಾಯಾಶಕ್ತಿಯನ್ನು ತೊಲಗಿಸಿ ಶಿವಭಾವವನ್ನು ಪಡೆಯಬೇಕೆಂಬ ಮೋಕ್ಷವೂ ಹೊಂದಿಕೆಯಾಗುತ್ತವೆ. "ನಿತ್ಯವೈಭವದಿಂದ ಶೋಭಿಸುತ್ತಿರುವ ಪರಮಶಿವನಲ್ಲಿ ಅವನ ಶಕ್ತಿಯು ಪರಾ, ಅಪರಾ ಎಂದು ಎರಡುಬಗೆಯಿಂದ ಶೋಭಿಸುತ್ತಲಿದೆ. ಸಚ್ಚಿದಾನಂದರೂಪವಾದ ಸರ್ವಮಂಗಳೆಯು ಅಪರಾಶಕ್ತಿ ಎನಿಸಿದರೆ ಪಾಶರೂಪವಾದ ಪರಾಶಕ್ತಿಯು ಜೀವರನ್ನು ಮೋಹಗೊಳಿಸುತ್ತ ಗುಣತ್ರಯಾತ್ಮಕವಾಗಿ ಜೀವರೆಲ್ಲರಲ್ಲೂ ನೆಲಸಿದೆ. ಶಿವಾರ್ಪಣಬುದ್ಧಿಯಿಂದ ಪುಣ್ಯಕರ್ಮಗಳನ್ನು ಮಾಡುತ್ತ ಜೀವನು ಶಿವಾನುಗ್ರಹವನ್ನು ಪಡೆಯುತ್ತಾನೆ. ಇದರಿಂದಲೇ ತ್ರಿಗುಣಾತ್ಮಕವೂ ಪಾಶರೂಪವೂ ಆದ ಪರಾಶಕ್ತಿಯು ನಷ್ಟವಾಗುತ್ತದೆ. ಆಗ ಜೀವನು ಶಿವನಾಗುತ್ತಾನೆ." ಎಂದು ಶೈವಪುರಾಣದಲ್ಲಿ ಹೇಳಿದೆ. ಶ್ರುತಿಯಲ್ಲೂ ಸಹ "ಈಶ್ವರನನ್ನು ತಿಳಿದು ಅಮೃತರಾಗುತ್ತಾರೆ." "ಪರಮಾತ್ಮನನ್ನು ತಿಳಿದವನು ದುಃಖವನ್ನು ದಾಟುತ್ತಾನೆ." "ಯಾವಾಗ ಇವನು ಅದೃಶ್ಯನೂ ನಿರಾಶ್ರಯನೂ ಪ್ರಮಾಣಾದ್ಯಗೋಚರನೂ ಆದ ಪರಮಾತ್ಮನಲ್ಲಿ ಪೂರ್ಣವಾಗಿ ನೆಲಸುವನೋ ಆಗ ನಿರ್ಭಯನಾಗುತ್ತಾನೆ. ಯಾವಾಗ ಇವನು ಅವನಲ್ಲಿ ಕೊಂಚವಾದರೂ ಭೇದವನ್ನು ಮಾಡುತ್ತಾನೋ ಆಗಲೇ ಇವನಿಗೆ ಭಯವುಂಟಾಗುತ್ತದೆ." "ಅವನೇ ಆನಂದಪಡಿಸುತ್ತಾನೆ"

ಈ ಬಗೆಯ ಶ್ರುತಿಗಳಲ್ಲಿ ಜೀವನಿಗೆ ಬಂಧಮೋಕ್ಷಗಳನ್ನು ವಿವರಿಸಲಾಗಿದೆ. ಕೆಲವರು ಜೀವನಲ್ಲಿ ಸತ್ಯಸಂಕಲ್ಪಾದಿಗಳು ಸ್ವಭಾವಿಕವಾದರೂ ಪರಮೇಶ್ವರನ ಮಾಯೆಯಿಂದ ಆಚ್ಛಾದಿತವಾಗಿವೆ ಎಂದು ತಿಳಿಯುತ್ತಾರೆ. ಇದು ಯುಕ್ತವಲ್ಲ. ಸತ್ಯಸಂಕಲ್ಪ ಸ್ವಭಾವವು ಮಾಯೆಯಿಂದ ತಿರೋಹಿತವಾಗುವಂತಿಲ್ಲ. ಮುಕ್ತನಾಗದಿರುವ ಜೀವನು ಸ್ವತಃ ಸ್ವಾಭಾವಿಕವಾಗಿ ಸತ್ಯಸಂಕಲ್ಪನಾದರೆ ಪರಮೇಶ್ವರನಲ್ಲಿರುವ ಅದ್ವಿತೀಯವಾದ ಸತ್ಯಸಂಕಲ್ಪವೇ ಮೊದಲಾದ ಗುಣಗಳಿಗೆ ಅತಿವ್ಯಾಪ್ತಿಯುಂಟಾಗುವುದು. ಆದ್ದರಿಂದ ಜೀವನು ಪಾಶರೂಪವಾದ ಮಾಯಾಶಕ್ತಿಯಿಂದ ತಿರೋಹಿತನಾಗಿದ್ದು ಪಾಶದಿಂದ ಬಿಡುಗಡೆಹೊಂದುವನೆಂಬುದು ಪರಮೇಶ್ವರನಿಗಧೀನವಾದ್ದರಿಂದ ಸ್ವಪ್ನಕ್ಕೂ ಅವನೇ ಕರ್ತನೆಂಬುದು ಸಿದ್ಧವಾಯಿತು.

ಶಾಂಭವಮಾಯಯಾ ಸ್ವಜ್ಞಾನತಿರೋಹಿತಸ್ಯ ಜೀವಸ್ಯ ಶಿವಜ್ಞಾನನಿರೋಧಕಂ ಅಹಂಮಮತ್ವಾದಿಕಂ ಕೇನೋತ್ಪದ್ಯತ ಇತ್ಯಾಶಂಕಾಯಾಮಾಹ. ದೇಹಯೋಗಾದ್ವಾ ಸೋಽಪಿ ॥೫॥ ಪ್ರಳಯಕಾಲೇ ಜೀವಸ್ಯ ಸುಷುಪ್ತಿವತ್ಪಾಶರೂಪಪರಾಭಿಧಾನಾಽಚಿಚ್ಛಕ್ತಿಯೋಗಾತ್ಸರ್ವಜ್ಞಾನಂ ತಿರೋಹಿತಂ. ಸೃಷ್ಟಿಕಾಲೇಽಪ್ಯಚಿಚ್ಛಕ್ತಿಯೋಗೇನ ಸ್ಥೂಲಸೂಕ್ಷ್ಮಶರೀರಸಂಯೋಗಾತ್ ಅಹಂಮಮತ್ವಾದಿಕಂ ಸಂಭವತಿ ವಿವೇಕಿನಾಂ. ಅತೋಽಹಂಮಮತ್ವಾದಿತೂಲಮೂಲಾಜ್ಞಾನನಿವರ್ತಕಃ ಸ್ವಜ್ಞಾನಶಿವಜ್ಞಾನಪ್ರವರ್ತಕಃ ಸಾಧನೋಪಾಯಃ ಅದ್ಯೈವ ಕರ್ತವ್ಯ ಇತಿ ವೇದವೇದಾಂತೇಷು ಗೀಯತೇ. "ಆಚಾರ್ಯವಾನ್ಪುರುಷೋ ವೇದ" ಇತಿ. "ಅತ್ಯಾಶ್ರಮಸ್ಥಸ್ಸಕಲೇಂದ್ರಿಯಾಣಿ ನಿರುಧ್ಯ ಭಕ್ತ್ಯಾ ಸ್ವಗುರುಂ ಪ್ರಣಮ್ಯ", "ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ" ಇತ್ಯಾದಿಶ್ರುತಿಷು ಶರೀರಸಂಯೋಗಾಜ್ಜೀವಸ್ಯ ಪರಮಶಿವಪ್ರತಿಬಿಂಬಭೂತಶಿವಾಚಾರ್ಯಕೃಪಾಲಬ್ಧಶಕ್ತಿಪಾತಾದಿವಶೇನ ಮೋಕ್ಷ ಆಮ್ನಾಯತೇ. ಶಕ್ತಿಪಾತವಿಧಾನಂ ತು ಶಿವಾಗಮೇಷು ದರ್ಶಿತಂ. "ಪರಿಪಕ್ವಮಹಾಪಾಶಮಲವಿಚ್ಛೇದಹೇತುಕಂ । ಶಕ್ತಿಪಾತಂ ಶಿವಾಚಾರ್ಯೋ ಕುರ್ಯಾಚ್ಛಿಷ್ಯಸ್ಯ ಸಾದರಾತ್ । ಶಕ್ತಿಪಾತೇನ ಜೀವೋ ಹಿ ಬ್ರಹ್ಮರೂಪತ್ವಮಶ್ನುತೇ । ಶಕ್ತಿಪಾತಂ ಚ ಸರ್ವೇಷಾಂ ಅಪರಿಚ್ಛಿನ್ನಮವ್ಯಯಂ । ಪರಮಾನಂದಜನಕಂ ಲಕ್ಷಣಂ ವಾ ಪ್ರಯೋಜನಂ । ತಚ್ಛಕ್ತಿಪಾತಂ ದೇವೇಶಿ ತೀವ್ರಮಂದಾದಿಭೇದತಃ । ಭಕ್ತ್ಯಾದ್ಯೈಕ್ಯಾಂತಭೇದೇನ ಷಡ್ವಿಧಂ ಪರಿಕೀರ್ತಿತಂ ॥" ಇತಿ. ತಸ್ಮಾತ್ ಶಕ್ತಿಪಾತಲಕ್ಷಣಮಾಮ್ನಾಯತೇ. ಪರಿಪಕ್ವಮಲೋತ್ಪಾಟನಹೇತುಃ ಶಕ್ತಿಪಾತಃ. ತೇನ ಜೀವಸ್ಯ ಪರಶಿವಬ್ರಹ್ಮರೂಪತಯಾ ನಿರತಿಶಯಪರಿಚ್ಛಿನ್ನಸುಖಾವಿರ್ಭೂತಲಕ್ಷಣಪ್ರಯೋಜನಮುಪದಿಷ್ಟಂ. ಶಕ್ತಿಪಾತಸ್ತು ತೀವ್ರ

ಮಂದಾದಿಭೇದೇನ ಭಕ್ತಾದ್ಯೈಕ್ಯಾಂತಸ್ಥಲೇಷು ಷಡ್ವಿಧೋಽಭೂತ್. ಪತಿಪಶುಪಾಶಾದಿಪರಮರಹಸ್ಯಪ್ರಕಾಶಕನಿಗಮಾಗಮೋಭಯವೇದಾಂತಶಾಸ್ತ್ರಶ್ರವಣಮನನನಿದಿಧ್ಯಾಸನಾನುಕ್ರಮೇಣ ಅಖಂಡಾಕಾರವಾಕ್ಯಜನ್ಯಬುದ್ಧಿವೃತ್ತೌ ನಿತ್ಯನಿರತಿಶಯಾನಂದಾತ್ಮಕಮಹೇಶ್ವರತತ್ತ್ವಾವಿರ್ಭಾವಃ ಪ್ರಥಮೋ ಭಕ್ತಸ್ಥಲೇ ನಿರ್ದಿಷ್ಟಃ. ತದ್ವದವಿದ್ಯಾಸಂಪುಟೋದ್ಘೂಲನಲಕ್ಷಣೋನ್ಮೇಷಣಪ್ರಕಟಾಮಲಸತ್ತ್ವಚಿದ್ಘನಸದಾಶಿವತತ್ತ್ವಸಾಕ್ಷಾತ್ಕಾರೋ ದ್ವಿತೀಯೋ ಮಾಹೇಶ್ವರಸ್ಥಲೇ ಪ್ರದರ್ಶಿತಃ. ಕುಂಡಲಿನ್ಯಾ ಸುಷುಮ್ನಾಮಾರ್ಗೇಣ ಚಕ್ರಷಟ್ಕಂ ಭಿತ್ತ್ವಾ ಬ್ರಹ್ಮರಂಧ್ರದೇಶೇ ಶಿವಯೋಗಾಭ್ಯಾಸವಶಾತ್ ಶಿವಶಕ್ತಿಸಂಯೋಗಲಕ್ಷಣಸ್ತೃತೀಯಃ ಪ್ರಸಾದಿಸ್ಥಲೇ ಪ್ರಪಂಚಿತಃ. ಶಿಷ್ಯಾನುಗ್ರಹಾತಿಶಯೇನ ದೇಶಿಕಃ ಸ್ವದೇಹಮುತ್ಸೃಜ್ಯ ಛಾತ್ರಶರೀರೇ ಪ್ರವಿಶ್ಯ ತದೀಯನಾಡೀಶೋಧನದ್ವಾರಾ ತತ್ಕುಂಡಲಿನ್ಯಾ ಸಪ್ತಚಕ್ರೇಷು ಸಂಚಾರಣೇನ ಶಿವವತ್ ಸರ್ವಭುವನಗಮನಪರೋಕ್ಷಪ್ರದರ್ಶನರೂಪಶ್ಚತುರ್ಥಃ ಪ್ರಾಣಲಿಂಗಿಸ್ಥಲೇ ನಿರೂಪಿತಃ. ಪ್ರಾಣಾಪಾನಪವನಸಂಯೋಗತಯಾ ಸುಷುಮ್ನಾನಾಡೀಮಧ್ಯಪ್ರಕಾಶಕಚಿತ್ಕಲಾಮಯಕಲ್ಯಾಣವಿಭೂತಿಂ ಲಬ್ಧ್ವಾ ಸದಾ ಅಣಿಮಾದ್ಯಷ್ಟೈಶ್ವರ್ಯಸಂಪನ್ನಃ ಪಂಚಮಃ ಶ್ಶರಣಸ್ಥಲೇ ಕಥಿತಃ. ವಿದ್ಯಾಽವಿದ್ಯಾವಿಲಕ್ಷಣನಿರತಿಶಯನಿರಂಜನನಿರ್ವಿಕಾರನಿರವಯವಪರಮಾಕಾಶರೂಪಪರಿಪೂರ್ಣಶಿವತತ್ತ್ವಸಾಕ್ಷಾತ್ಕಾರಾನುಭವೇನ ಪ್ರಚಂಡಾತಪಮಧ್ಯನಿಕ್ಷಿಪ್ತನಿರ್ವಾತನಿಶ್ಚಲಿತಕರ್ಪೂರದೀಪವತ್ಸ್ಥಿತಿಂ ವ್ಯಪೋಹ್ಯ ಶರೀರೇಂದ್ರಿಯಮನಃಪ್ರಾಣಾದಿಬಾಹ್ಯಾಭ್ಯಂತರವಸ್ತುಪರಿಜ್ಞಾನಶೂನ್ಯಮನೋವಿಲಯಾತ್ಮಕೋನ್ಮನ್ಯವಸ್ಥಾಪ್ರಾಪ್ತಿಃ ಷಷ್ಠ್ಯೋ ಹ್ಯೈಕ್ಯಸ್ಥಲೇಽಭಿಧೀಯತೇ. ಏವಂವಿಧಶಕ್ತಿಪಾತೇಷು ಪಿಪೀಲಿಕಾಮರ್ಕಟಪಕ್ಷಿಗೋಮತ್ಸ್ಯಕಚ್ಛಪನ್ಯಾಯೇನ ಸ್ವಾಭಾವಿಕಜೀವತ್ವನಿವೃತ್ತಿಪೂರ್ವಕಶಿವತ್ವಪ್ರಾಪ್ತಿರೇವ ಮೋಕ್ಷ ಇತ್ಯುಪದಿಶ್ಯತೇ. ತಸ್ಮಾಜ್ಜೀವೇಶ್ವರಾಧೀನತ್ವಮೀಶ್ವರಸ್ಯ ಜಾಗ್ರತ್ಸ್ವಪ್ನಸುಷುಪ್ತ್ಯವಸ್ಥಾಕಲ್ಪಕತ್ವಮನಿವಾರ್ಯಂ. “ತಸ್ಮಿನ್ಲೋಕಾಃ ಸ್ಥಿತಾಸ್ಸರ್ವೇ ತದು ನಾತ್ಯೇತಿ ಕಶ್ಚನ” ಇತಿ ಸ್ಮೃತೌ ಸರ್ವೇಶ್ವರಸ್ಯ ಸರ್ವೇಷು ಸುಪ್ತೇಷು ಜಾಗರಣಂ ಸರ್ವಲೋಕಾಶ್ರಯತ್ವಮಿತ್ಯಾದ್ಯನನ್ಯಸಾಧಾರಣಧರ್ಮಾ ಹ್ಯುಪದಿಷ್ಟಾಃ. ಜೀವಾನಾಮಲ್ಪಾಲ್ಪಕರ್ಮಾನುಗುಣಫಲಾನುಭವಾರ್ಥಂ ತಾವನ್ಮಾತ್ರಕಾಲಾವಸ್ಥಾನಾನ್ ತದೇಕಾನುಭಾವ್ಯಾನರ್ಥಾನುತ್ಪಾದಯತೀತಿ ರಾದ್ಧಾಂತಃ.

ಶಾಂಭವಮಾಯೆಯಿಂದ ಭ್ರಾಂತಿಗೊಂಡಿರುವ ಜೀವನಿಗೆ ಶಿವಜ್ಞಾನವನ್ನು

ತಡೆಯುವ ನಾನು ನನ್ನದು ಎಂಬ ದೃಷ್ಟಿ ಹೇಗೆ ಹುಟ್ಟುತ್ತದೆ ಎಂದಾಶಂಕಿಸಿ ಸಮಾಧಾನ ಮಾಡುತ್ತಾನೆ. ಸುಷುಪ್ತಿಯಂತೆ ಪ್ರಳಯಕಾಲದಲ್ಲಿ ಜೀವನಿಗೆ ಪಾಶರೂಪವಾದ ಅಚಿತ್‌ಶಕ್ತಿಯ ಸಂಪರ್ಕದಿಂದ ಜ್ಞಾನವೆಲ್ಲವೂ ತಿರೋಹಿತವಾಗುತ್ತದೆ. ಸೃಷ್ಟಿಕಾಲದಲ್ಲಿಯೂ ಅದೇ ಅಚಿತ್‌ಶಕ್ತಿಯ ಸಂಯೋಗವಿದ್ದರೂ ಸ್ಥೂಲಸೂಕ್ಷ್ಮ ಶರೀರಗಳ ಸಂಬಂಧದಿಂದ ನಾನು ನನ್ನದು ಎಂಬ ದೃಷ್ಟಿಯುಂಟಾಗುತ್ತದೆ. ಆದ್ದರಿಂದಲೇ ವಿವೇಕಿಗಳು ನಾನು ನನ್ನದು ಎಂಬ ದೃಷ್ಟಿಯನ್ನು ತೊಲಗಿಸಿ "ತಾನು ಯಾರು? ತನ್ನಲ್ಲಿ ಶಿವನು ಹೇಗೆ ನೆಲಸಿದ್ದಾನೆ" ಎಂಬ ಜ್ಞಾನವನ್ನು ದೊರಕಿಸುವಂತಹ ಸಾಧನಮಾರ್ಗವನ್ನು ಜೀವಿತಕಾಲದಲ್ಲಿ ಆಚರಿಸಬೇಕೆಂದು ವೇದವೇದಾಂತಗಳಲ್ಲಿ ತಿಳಿಸಲಾಗಿದೆ. "ಜೀವನು ಆಚಾರ್ಯನಿಂದಲೇ ತಿಳಿಯಬೇಕು" "ಅವನು ಆಶ್ರಮಗಳಿಂದಾಚೆಗೆ ನಿಂತು ಇಂದ್ರಿಯಗಳನ್ನು ನಿರೋಧಿಸಿ ಭಕ್ತಿಯಿಂದ ಗುರುವಿಗೆ ವಂದಿಸಬೇಕು" ಈ ಬಗೆಯ ಶ್ರುತಿಗಳಲ್ಲಿ ಶರೀರಸಂಬಂಧದಿಂದ ಜೀವನಿಗೆ ಪರಮಶಿವನ ಪ್ರತಿಬಿಂಬವೆನಿಸಿದ ಶಿವಾಚಾರ್ಯನ ಕೃಪೆಯಿಂದ ದೊರೆತ ಶಕ್ತಿಪಾತದಿಂದಲೇ ಮೋಕ್ಷವನ್ನು ಹೇಳಲಾಗಿದೆ. ಶಕ್ತಿಪಾತದ ಲಕ್ಷಣವನ್ನು ಶಿವಾಗಮಗಳು ಹೀಗೆ ತಿಳಿಸಿವೆ. "ಮಹಾಪಾಶರೂಪವಾದ ಮಲವನ್ನು ಪೂರ್ಣವಾಗಿ ನಾಶಪಡಿಸುವಂತಹ ಶಕ್ತಿಪಾತವನ್ನು ಆಚಾರ್ಯನು ಶಿಷ್ಯನಿಗೆ ಪ್ರೇಮದಿಂದ ಆಶೀರ್ವದಿಸಬೇಕು. ಶಕ್ತಿಪಾತದಿಂದ ಜೀವನು ಬ್ರಹ್ಮನಾಗುತ್ತಾನೆ. ಶಕ್ತಿಪಾತವು ಎಲ್ಲರಿಗೂ ನಾಶರಹಿತವೂ ಅಪರಿಮಿತವೂ ಆದ ಪರಮಾನಂದವನ್ನು ದೊರಕಿಸುತ್ತದೆ. ಇದೇ ಅದರ ಲಕ್ಷಣ ಮತ್ತು ಪ್ರಯೋಜನ. ತೀವ್ರ ಮಂದ ಮೊದಲಾದ ಭೇದದಿಂದ ಅದು ಭಕ್ತಾದಿ ಆರುಸ್ಥಲಗಳಲ್ಲೂ ಆರು ಬಗೆಯಾಗುತ್ತದೆ" ಎಂದು ಶಿವಾಗಮಗಳು ಹೇಳಿವೆ. ಆದ್ದರಿಂದ ಶಕ್ತಿಪಾತದ ಲಕ್ಷಣನ್ನು ಮುಂದೆ ವಿವರಿಸಲಾಗಿದೆ. ಮಲವನ್ನು ಪರಿಪಕ್ವಗೊಳಿಸುವ ಸಾಧನವೇ ಶಕ್ತಿಪಾತವೆನಿಸುತ್ತದೆ. ಇದರಿಂದ ಜೀವನು ಪರಶಿವಬ್ರಹ್ಮವೇ ಆಗಿ ನಿರತಿಶಯಾನಂದವನ್ನು ಅನುಭವಿಸುವನು. ಇದು ತೀವ್ರಾದಿಭೇದದಿಂದ ಆರು ಸ್ಥಲಗಳಲ್ಲೂ ಆರು ಬಗೆಯಾಗುತ್ತದೆ. ಪತಿ ಪಶು ಪಾಶಗಳ ತತ್ವವನ್ನು ತಿಳಿಸುವ ನಿಗಮಾಗಮಶಾಸ್ತ್ರಗಳನ್ನು ನಿರಂತರವೂ ಕೇಳಿ ತಿಳಿದು ಧ್ಯಾನಿಸುವುದರಿಂದ ಅಖಂಡತಾತ್ಪರ್ಯದ ಅರಿವಿನಿಂದ ಬುದ್ಧಿ ಸ್ವಚ್ಛವಾಗಲು ಜೀವನಿಗೆ ನಿರತಿಶಯಾನಂದರೂಪವಾದ ಮಹೇಶ್ವರಭಾವವುಂಟಾಗುವುದು. ಇದು ಶಿವಯೋಗದ ಮೊದಲನೆಯ ಹಂತ; ಇದು ಭಕ್ತಸ್ಥಲವೆನಿಸುತ್ತದೆ. ಆಗ ಅವಿದ್ಯೆಯ ಪೆಟ್ಟಿಗೆಯನ್ನು ಹೊಡೆಯುವಂತೆ ವಿವೇಕೋದಯದಿಂದ ಪೂರ್ಣಸತ್ತ್ವಪ್ರಧಾನವೂ ಚಿದ್ಘನವೂ ಆದ ಸದಾಶಿವಭಾವವುಂಟಾಗುವುದು. ಇದೇ ಎರಡನೆಯ ಹಂತ; ಇದು ಮಾಹೇಶ್ವರಸ್ಥಲವೆನಿಸಿದೆ. ಸುಷುಮ್ನಾಮಾರ್ಗದಿಂದ ಆರು ಚಕ್ರಗಳನ್ನು ಭೇದಿಸಿಕೊಂಡು ಶಿವಯೋಗದ ಅಭ್ಯಾಸದಿಂದ ಬ್ರಹ್ಮರಂಧ್ರದಲ್ಲಿ ಶಿವಶಕ್ತಿಗಳೊಡನೆ ಬೆರೆಯುವುದೇ ಮೂರನೆಯ ಹಂತ. ಇದು ಪ್ರಸಾದಿಸ್ಥಲವೆನಿಸುತ್ತದೆ. ಶಿವಾನುಗ್ರಹಾತಿಶಯದಿಂದ ಗುರುವು ತನ್ನ ದೇಹ

ವನ್ನು ತೊರೆದು ಶಿಷ್ಯನ ಶರೀರದಲ್ಲಿ ಪ್ರವೇಶಿಸಿ ಅವನ ನಾಡಿಗಳನ್ನು ಶೋಧಿಸಿ ಅವನ ಕುಂಡಲಿನಿಯ ಮೂಲಕ ಏಳುಚಕ್ರಗಳಲ್ಲೂ ಸಂಚರಿಸುವುದರಿಂದ ಏಳು ಲೋಕಗಳ ಪರಿಚಯವನ್ನು ಜೀವನಿಗೆ ಮಾಡಿಸಿಕೊಡುವುದೇ ನಾಲ್ಕನೆಯ ಹಂತ. ಇದೇ ಪ್ರಾಣಲಿಂಗಿಸ್ಥಲವೆನಿಸುತ್ತದೆ. ಆಗ ಜೀವನು ಪ್ರಾಣ ಅಪಾನಗಳ ಸಂಯೋಗದಿಂದ ಸುಷುಮ್ನೆಯ ಮಧ್ಯದಲ್ಲಿ ಪ್ರಕಾಶಿಸುವ ಚಿತ್ಕಲಾಮಯವಾದ ಕಲ್ಯಾಣವಿಭೂತಿಯನ್ನು ಹೊಂದಿ ಅಣಿಮಾದ್ಯಷ್ಟೈಶ್ವರ್ಯಸಂಪನ್ನನಾಗುವನು. ಇದು ಆಧ್ಯಾತ್ಮಸಾಧನೆಯ ಐದನೆಯ ಹಂತ. ಇದು ಶರಣಸ್ಥಲವೆನಿಸುತ್ತದೆ. ವಿದ್ಯೆ ಅವಿದ್ಯೆಗಳೆರಡಕ್ಕೂ ಬೇರೆಯಾಗಿ ನಿರ್ವಿಕಾರವೂ ನಿರವಯವವೂ ಆದ ಪರಮಾಕಾಶದಿಂದ ಶೋಭಿಸುವ ಶಿವಭಾವವನ್ನು ಸಾಕ್ಷಾತ್ಕಾರಮಾಡಿಕೊಂಡು ಶರಣನು ಪ್ರಚಂಡಸೂರ್ಯನ ಪ್ರಕಾಶದೊಳಗೆ ನಿಶ್ಚಲವಾಗಿ ಉರಿಯುವ ಕರ್ಪೂರದೀಪದಂತೆ ಇರುತ್ತ ಶರೀರ ಇಂದ್ರಿಯ ಮನಸ್ಸು ಪ್ರಾಣ ಮೊದಲಾದ ಒಳ ಹೊರವಸ್ತುಗಳ ಅರಿವಿಲ್ಲದಂತೆ ಮನೋವಿಲಯರೂಪವಾದ ಉನ್ಮನೀಅವಸ್ಥೆಯನ್ನು ಹೊಂದುವುದೇ ಅಧ್ಯಾತ್ಮ ಸಾಧನದ ಆರನೆಯ ಹಂತ. ಇದೇ ಜೀವನ ಕೊನೆಯ ಅವಸ್ಥೆ. ಇದು ಐಕ್ಯ ಸ್ಥಲವೆನಿಸುತ್ತದೆ. ಈ ಆರು ಬಗೆಯ ಶಕ್ತಿಪಾತಗಳಲ್ಲೂ ಇರುವೆ, ಕೋತಿ, ಪಕ್ಷಿ, ಗೋವು, ಮೀನು, ಆಮೆ ಈ ಆರು ಪ್ರಾಣಿಗಳ ವರ್ತನೆಯಂತೆ ಜೀವನ ಅವಸ್ಥೆ ಕ್ರಮಕ್ರಮವಾಗಿ ಅಂತರ್ಮುಖವಾಗತೊಡಗುವುದರಿಂದ ಅವನು ಸ್ವಾಭಾವಿಕವಾದ ಜೀವಭಾವವನ್ನು ಕಳೆದುಕೊಂಡು ವಾಸ್ತವವಾದ ಶಿವಭಾವವನ್ನು ಹೊಂದುವುದೇ ಮೋಕ್ಷವೆನಿಸುತ್ತದೆ. ಆದ್ದರಿಂದ ಜೀವನು ಶಿವನಿಗಧೀನನಾಗಿರುವನೆಂಬುದೂ, ಹಾಗೆಯೇ ಶಿವನಿಂದಲೇ ಜಾಗ್ರತ್ತು ಸ್ವಪ್ನ ಸುಷುಪ್ತಿ ಎಂಬ ಅವಸ್ಥೆಗಳು ಜೀವನಿಗೆ ಉಂಟಾಗುತ್ತವೆ ಎಂಬುದೂ ಅನಿವಾರ್ಯವೆನಿಸಿವೆ. " ಅವನಲ್ಲಿಯೇ ಲೋಕಗಳೆಲ್ಲವೂ ಆಶ್ರಯಿಸಿಕೊಂಡಿವೆ. ಅವನನ್ನು ಯಾರೂ ಅತಿಕ್ರಮಿಸುವುದಿಲ್ಲ" " ಸರ್ವೇಶ್ವರನು ಎಲ್ಲಾ ಜೀವರಲ್ಲೂ ಸಂಚರಿಸುತ್ತ ಎಲ್ಲರಿಗೂ ಆಶ್ರಯನಾಗಿರುವನು " ಎಂದು ಸ್ಮೃತಿಯಲ್ಲಿ ಶಿವನ ಅಸಾಧಾರಣಧರ್ಮಗಳನ್ನೇ ಹೇಳಲಾಗಿದೆ. ಜೀವನು ತಮ್ಮ ಅಲ್ಪ ಕರ್ಮಗಳಿಗನುಗುಣವಾದ ಫಲವನ್ನು ಅನುಭವಿಸಲಿಕ್ಕಾಗಿ ಆಯಾ ಕಾಲಕ್ಕನುಗುಣವಾದ ಸಂಘಟನೆಗಳನ್ನು ಶಿವನೇ ತಂದೊಡ್ಡುವನೆಂಬುದು ಇದರಿಂದ ಸಿದ್ಧವಾಗುತ್ತದೆ.

ನನು ನಿತ್ಯನಿರ್ವಿಕಾರಸ್ವಭಾವಸ್ಯ ಬ್ರಹ್ಮಣಃ ದುರ್ವಿಕಾರಮಿಥ್ಯಾಭೂತಪ್ರಪಂಚಕರ್ತೃತ್ವಾಯೋಗಾತ್ ಸ್ವಪ್ನಪ್ರಪಂಚಕಾರಣತ್ವಮನುಪಪನ್ನಂ. ತತ್ರ ಪುತ್ರಮಿತ್ರಕಲತ್ರಾದಿವಸ್ತುಜಾತಸ್ಯ ಜಾಗ್ರದವಸ್ಥಾಯಾಮವಿದ್ಯಮಾನತ್ವಾತ್ ಮಿಥ್ಯಾತ್ವಮನಿವಾರ್ಯಂ. ತದ್ವಜ್ಜಾಗ್ರತ್ಪ್ರಪಂಚಸ್ಯಾಪಿ ಗಂಧರ್ವನಗರಾದಿವದಸತ್ಯತ್ವಮೇವೇತ್ಯಾಶಂಕಾಯಾಮಾಹ. ಸೂಚಕಶ್ಚ ಹಿ ಶ್ರುತೇರಾಚಕ್ಷತೇ ಚ ತದ್ವಿದಃ ॥ ೬ ॥ " ಯದಾ ಕರ್ಮಸು ಕಾಮ್ಯೇಷು ಸ್ತ್ರಿಯಂ ಸ್ವಪ್ನೇಷು ಪಶ್ಯತಿ । ಸಮೃದ್ಧಿಂ ತತ್ರ

ಜಾನೀಯಾತ್ತಸ್ಮಿನ್ ಸ್ವಪ್ನನಿದರ್ಶನಂ ||" ಇತಿ. ಅಥ "ಸ್ವಪ್ನೇ ಪುರುಷಂ ಕೃಷ್ಣಂ ಕೃಷ್ಣದಂತಂ ಪಶ್ಯತಿ ಸ ಏನಂ ಹಂತಿ" ಇತಿ ಶ್ರುತೇಶ್ಚ. ತದ್ವಿದಃ ಸ್ವಪ್ನಾಧ್ಯಾಯವಿದಃ ಸ್ವಪ್ನಮಭ್ಯುದಯಾನಭ್ಯುದಯಫಲಸೂಚಕಮಿತ್ಯಾಚಕ್ಷತೇ. ಸೂಚಕತ್ವಂ ಚ ಸ್ವಸಂಕಲ್ಪಾಯತ್ತಸ್ಯ ನೋಪ್ಪದ್ಯತೇ. ತಥಾಚಾಶುಭಸ್ಯಾನಿಷ್ಟತ್ವಾತ್ ಶುಭಸ್ಯ ಸೂಚಕಮೇವ ಸೃಷ್ಟ್ವಾ ಪಶ್ಯೇತ್. ಅತಃ ಸ್ವಪ್ನಸೃಷ್ಟಿರೀಶ್ವರೇಣೈವ ಕೃತೇತಿ ನಿಶ್ಚೀಯತೇ. ಜೀವಸ್ಯ ಸ್ವಪ್ನಸೃಷ್ಟಿಮಾತ್ರೋಪಯೋಗಿಸತ್ಯಸಂಕಲ್ಪತ್ವಾದ್ಯಾವಿರ್ಭಾವಸ್ತದಾನೀಂ ಸ್ಯಾದಿತಿ ಶಂಕಾವ್ಯಾವೃತ್ತ್ಯರ್ಥಮಿದಂ ಸೂತ್ರಂ. ಸ್ವಪ್ನಾಧ್ಯಾಯವಿದಃ ಸ್ವಪ್ನವಾಚಿವೇದವಾಕ್ಯವಿದಃ. ಶುಭಾಶುಭಫಲಪ್ರಾಪ್ತಿವ್ಯಪದೇಶಾನ್ನ ಸ್ವಪ್ನಸ್ಯ ಮಿಥ್ಯಾತ್ವಂ. ಅತಏವ ಪ್ರಪಂಚಸ್ಯಾಪಿ ಸತ್ಯತ್ವಮರ್ಥಾತ್ಸಿದ್ಧಂ. ಅತ್ರ ಪರೇ ತು ಸ್ವಪ್ನಾರ್ಥಾನಾಮೀಶ್ವರಸೃಷ್ಟತಯಾ ವಿಯದಾದಿವತ್ಪಾರಮಾರ್ಥ್ಯಂ ಪೂರ್ವಪಕ್ಷೀಕೃತ್ಯ ದೇಶಕಾಲನಿಮಿತ್ತೈಃ ದುರ್ನಿರೂಪತಯಾ ಮಿಥ್ಯಾತ್ವಂ ಸಿದ್ಧಾಂತಯಂತಿ. ಏಷಾಂ ಚ ಮತೇ ಜೀವಕರ್ತೃಕಮೇವ"ಸೃಜತ"ಇತಿ ಯದುಚ್ಯತೇ ತದೌಪಚಾರಿಕಂ. ಸುಖದುಃಖದರ್ಶನನಿಮಿತ್ತಸುಕೃತದುಷ್ಕೃತಕರ್ತೃತ್ವನಿಬಂಧನಃ ಔಪಚಾರಿಕಃ ಸ್ವಪ್ನಾರ್ಥಕರ್ತೃತ್ವವ್ಯಪದೇಶಃ. "ಬಹಿಷ್ಕುಲಾಯಾದಮೃತಶ್ಚರಿತ್ವಾ" ಇತಿ ಸ್ವಪ್ನವಿಷಯಾ ಶ್ರುತಿಶ್ಚ ಬಹಿರಿವ ಚರಿತ್ವೇತ್ಯೇವಂಪರಾ ತಸ್ಮಿನ್ಪ್ರಕರಣೇ ತದೀಶ್ವರಪ್ರತಿಪಾದನಂ ಜೀವಸ್ಯ ತದನನ್ಯತ್ವೇನ ಸತ್ಯಸಂಕಲ್ಪತಯಾ ಸ್ರಷ್ಟೃತ್ವಶಂಕಾಂ ವ್ಯುದಸ್ಯತಿ. "ಕ್ಷರಂ ಪ್ರಧಾನಮಮೃತಾಕ್ಷರಂ ಹರಃ ಕ್ಷರಾತ್ಮಾನಾವೀಶತೇ ದೇವ ಏಕಃ | ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ ||" ಇತಿಶ್ರುತೌ ಜೀವಸ್ಯ ಜ್ಞಾನೈಶ್ವರ್ಯಶಕ್ತ್ಯಾದಿಸರ್ವಮಹಿಮಾತಿಶಯತ್ವಂ ಪಾಶತಿರೋಧಾನನಿವೃತ್ತಿಃ ಶಿವಧ್ಯಾನಾಭಿಧಾನಾತ್ತು ಉಪದಿಷ್ಟಂ. ಅತೋಽಸ್ಯ ಬಂಧಮೋಕ್ಷೌ ಶಿವಾಧೀನೌ. ಸಚ ತಿರೋಭಾವಃ ಸೂಕ್ಷ್ಮಸ್ಥೂಲದೇಹಯೋಗಾದಿತಿ ಯೋಜಯಂತಿ. ತತ್ರ ತಾವತ್ಪಾದಾನುಗತಾರ್ಥತತ್ಸಂಗತೀ ಅನುಪಪನ್ನೇ, ಜೀವತ್ವಾವಸ್ಥಾನಿರೂಪಣಂ ಚೇತ್ಪಾದಕೃತ್ಯಂ ಫಲಾಧಿಕರಣಾಸಂಗತಿಃ. ನ ಚೇಶ್ವರೋ ಜೀವಾವಸ್ಥಾ, ತಸ್ಯ ಬ್ರಹ್ಮಣಿ ಕಲ್ಪಿತಸ್ಯ ಜೀವಾಧ್ಯಸ್ತತ್ವಾತ್. ಪರಮಾತ್ಮನಿರೂಪಣಂ ಪಾದಕೃತ್ಯಂ ಚೇತ್ ಸ್ವಪ್ನಾರ್ಥಾನಾಂ ಜೀವಕರ್ತೃಕತಯಾ ಮಿಥ್ಯಾತ್ವೋಕ್ತಿರಿಹ ನ ಸಂಗಚ್ಛತೇ. ಪೂರ್ವಪಕ್ಷಸ್ಯಾಪ್ಯನುಪಪನ್ನಃ, ಮಿಥ್ಯಾತ್ವಸ್ಯ ಸಿದ್ಧಾಂತಕರಣಾಯೋಗಾತ್. ಮಿಥ್ಯಾತ್ವಂ ಹ್ಯಾರಂಭಣಾಧಿಕರಣೇ ಕೃತ್ಸ್ನಪ್ರಪಂಚಸ್ಯ ಸಮರ್ಥಿತಂ. ಯದಾ ವಿಯದಾದೇರಪಿ ಮಿಥ್ಯಾತ್ವಸಿದ್ಧಿಃ ತದಾ ಕೈಮು

ತ್ಯಸಿದ್ಧಂ ಸ್ವಪ್ನಾರ್ಥಮಿಥ್ಯಾತ್ವಮಿತ್ಯಧಿಕರಣವೈಯರ್ಥ್ಯಂ. ವಿಯದಾದೀನಾಂ ವ್ಯಾವಹಾರಿಕಸತ್ಯತ್ವಮಸ್ತಿ, ಸ್ವಪ್ನಾರ್ಥಾನಾಂ ತದಪಿ ನಾಸ್ತಿ ವ್ಯಾವಹಾರವಿಸಂವಾದಾತ್ ಇತಿ. ವಿಯದಾದಿವೈಲಕ್ಷಣ್ಯಪ್ರತಿಪಾದನಾರ್ಥೋಽಯಮಾರಂಭಣ ಇತಿ ಚೇನ್ನ ವ್ಯವಹಾರವಿಸಂವಾದಸ್ಯ ಪ್ರಬೋಧಸಮಯೇ ಸರ್ವಲೋಕಸಂಪ್ರತಿಪನ್ನತ್ವಾತ್. "ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್" ಇತ್ಯತ್ರ ತದ್ವೈಷಮ್ಯಸ್ಯೋಕ್ತತ್ವಾಚ್ಚ ಶ್ರುತಿವಾಕ್ಯಕೃತಸತ್ಯತ್ವಶಂಕಾವ್ಯುದಸನಾರ್ಥ ಆರಂಭ ಇತಿ ಚೇನ್ನ ಸೂತ್ರಶ್ರುತಿವಾಕ್ಯಾಸಾಮಂಜಸ್ಯಾತ್. ತಥಾಹಿ ಮಿಥ್ಯಾತ್ವಂ ಸಮರ್ಥನೀಯಂ ಚೇತ್ ಸರ್ವಲೋಕಾಶ್ರಯತ್ವಾದಿಭಿಃ ಸ್ವರಸಪ್ರತಿಪನ್ನಮೀಶ್ವರಸೃಷ್ಟತ್ವಂ ನ ಬಾಧಿತವ್ಯಂ. ಈಶ್ವರಸೃಷ್ಟತ್ವಸ್ಯ ವ್ಯಾವಹಾರಿಕಸತ್ಯತ್ವನಿವೃತ್ತ್ಯವಿರೋಧಾತ್ ಉಪಾದಾನವಿಶೇಷಪ್ರೀತಪರದೇವತಾಪ್ರಸಾದಲಬ್ಧಾನಾಂ ಸ್ವಪ್ನಾವಸ್ಥಾನಾಂ ಬ್ರಹ್ಮದತ್ತೋಪಾಧಿದೃಷ್ಟಾನಾಮಪಿ ವ್ಯಾವಹಾರಿಕಸತ್ಯತ್ವನಿವೃತ್ತೇಸ್ತದಿಷ್ಟತ್ವಾತ್. ವ್ಯಾವಹಾರಿಕಸತ್ಯತ್ವಾಭಾವಃ ಸಾಧ್ಯಶ್ಚೇತ್ ಜೀವಕರ್ತೃತ್ವಾಶ್ರಯಣಮಪಿ ವಿರುದ್ಧಂ, ಜೀವಕರ್ತೃಕಘಟಾದೀನಾಮಿವ ವ್ಯಾವಹಾರಿಕಾಸತ್ಯತ್ವಪ್ರಸಂಗಾತ್. ಜೀವಸ್ರಷ್ಟೃತ್ವಸ್ಯಾಂತಿಮಸೂತ್ರದ್ವಯವ್ಯುದಸ್ತತ್ವಾಚ್ಚ ಜೀವಸ್ಯ ಮುಖ್ಯಂ ಸ್ರಷ್ಟೃತ್ವಂ ವ್ಯುದಸ್ಯಂತಂ ಸುಖಾದ್ಯವಭಾಸಮೂಲಾದೃಷ್ಟಕರ್ತೃತ್ವಾದೌಪಚಾರಿಕಂ ಕರ್ತೃತ್ವಮಿತಿ ನ ವಿರೋಧ ಇತಿ ಚೇತ್ ಜೀವಾದೃಷ್ಟಮೂಲಾನಾಂ ದೇಹೇಂದ್ರಿಯಸರ್ಗಾದೀನಾಮಿವ ವ್ಯಾವಹಾರಿಕಸತ್ಯತ್ವಪ್ರಸಂಗಾತ್ ಜೀವಾದೃಷ್ಟಮೂಲತ್ವೇಽಪಿ ದೇಹಸ್ವರ್ಗಾದೀನಾಮೀಶ್ವರಾಧೀನತ್ವಮಸ್ತಿ ಇತಿ ಚೇತ್ ತಾದೃಶಮೀಶ್ವರಾಧೀನತ್ವಂ ಸ್ವಪ್ನಾರ್ಥಾನಾಮಪ್ಯಸ್ತಿ, ತದಧೀನತ್ವಸ್ಯ ಭವದನುಮತತ್ವಾಚ್ಚ. ಸರ್ವದೇಹಸರ್ವಕಾಲವರ್ತಿಸರ್ವಜಂತುದೃಷ್ಟಸ್ವಪ್ನಪ್ರಪಂಚಾನಾಂ ಜಾಗ್ರತ್ಪ್ರಪಂಚಾದಪಿ ಮಹತ್ತರತಯಾ ತೇಷಾಮನ್ಯಾಧೀನತ್ವೇ ಪಾರಮ್ಯೈಶ್ವರ್ಯಮೀಶ್ವರಸ್ಯ ನ ಸ್ಯಾತ್. ಉಭಯವಿಧಪ್ರಪಂಚಸ್ಯಾಪಿ ಪ್ರತೀತಿಸತ್ತ್ವಮವಿಶಿಷ್ಟಂ. ಬಾಧಸ್ಯಾಶುತರತ್ವವಿಳಂಬೌ ಹಿ ವೈಷಮ್ಯಂ. ಏವಂ ಜೀವಾನಾಂ ಸಾಕ್ಷಾತ್ ಸ್ವಪ್ನಾರ್ಥಕರ್ತೃತ್ವಭಾವಸ್ಯ ಮಿಥ್ಯಾತ್ವಾದುಪಯುಕ್ತಸ್ಯ ಸೂತ್ರಿತತ್ವಾದೇವ ಸೂತ್ರಕಾರೇಣ ಮಿಥ್ಯಾತ್ವಸ್ಯ ನಿಷೇದ್ಧೃತ್ವಮವಗಮ್ಯತೇ. ಸೂಚಕಶ್ಚೇತಿ ವಿರುದ್ಧಸೂತ್ರಪ್ರಣಯನಾಚ್ಚ ವಿರುದ್ಧತ್ವಂ ವಕ್ಷ್ಯಾಮಃ. ಅತೋ ಹ್ಯಸ್ಮಿನ್ಸಾಧ್ಯೇ ಮಾತ್ರಾಣ್ಯುಪಯುಕ್ತಾನಿ ಸ್ಯುಃ ನ ತ್ವನುಪಯುಕ್ತವಿರುದ್ಧಾನಿ. ತದೇವ ಸಾಧ್ಯಂ ಭವಿತುಮರ್ಹತಿ. ಈಶ್ವರಸ್ಯ ಸ್ರಷ್ಟೃತ್ವಂ ಪೂರ್ವಪಕ್ಷಯುಕ್ತಿಶ್ಚೇತ್, ಪುತ್ರಾದಯಶ್ಚೇತಿ

ಸೂತ್ರಾಂಶೋ ನಿಷ್ಫಲಃ. ಪುತ್ರಾದಿಸ್ರಷ್ಟೃತ್ವಸ್ಯ ಜೀವೇಷು ಸಂಭವತಃ ಈಶ್ವರಸಾಧಕತ್ವಾಯೋಗಾತ್. ಮಾಯಾಶಬ್ದಸ್ಯ ಮಿಥ್ಯಾವಾಚಿತ್ವಾಭಾವಾಚ್ಚ ಅಕ್ಷರಾನನುಗುಣತ್ವಂ ಸೂಚಕಶ್ಚೇತಿ ಸೂತ್ರಂ ವಿರುದ್ಧಂ. ಮಿಥ್ಯಾತ್ವವಿರೋಧಿತ್ವಾದರ್ಥಕ್ರಿಯಾಯಾಃ ಸೂಚ್ಯಸ್ಯೈವ ಪಾರಮಾರ್ಥ್ಯಂ ನ ಸೂಚಕಸ್ಯೇತ್ಯಭಿಪ್ರಾಯ ಇತಿ ಚೇನ್ನ ಅಶಬ್ದತ್ವಾತ್. ಉತ ಸೂತ್ರಾಭಿಪ್ರಾಯಕಲ್ಪನೇನ ಶ್ರುತಿವಿರುದ್ಧಕಲ್ಪನಾಯೋಗಾತ್ ಪರಾಭಿಧ್ಯಾನಾತ್ತಿರೋಧಾನನಿವೃತ್ತಿರಿತಿ ಯೋಜನಾಯಾಂ ಅಧ್ಯಾಹಾರವ್ಯುತ್ಕ್ರಮಾನ್ವಯ್ ಸ್ಫುಟತರೌ. ಸೋಽಪೀತಿ ತಿರೋಭಾವಪರಾಮರ್ಶೋ ಯುಕ್ತಃ, ತಿರೋಭಾವಶಬ್ದಸ್ಯಾಪ್ರಕೃತತ್ವಾತ್. ತಿರೋಹಿತಮಿತಿ ನಿರ್ದಿಷ್ಟೇ ತಿರೋಧಾನರೂಪಧಾತ್ವರ್ಥಮಾತ್ರಸ್ಯ ತದಿತಿಪರಾಮರ್ಶಾರ್ಹಸ್ಯ ಸ ಇತಿ ಪರಾಮರ್ಶಾಯೋಗ್ಯತ್ವಾಚ್ಚ ಪುಲ್ಲಿಂಗಪದೇಷು ಪ್ರಯುಕ್ತೇಷು ಕಸ್ಯಚಿದರ್ಥ ಉಚಿತಃ ಪರಾಮರ್ಶನೀಯಃ. ಶ್ರುತಿವಾಕ್ಯಂ ಚ ನಿರೂಪ್ಯಂ. " ನ ಭವಂತೀತಿ " ಶ್ರುತಿರ್ಮುಖ್ಯಾ. ತದನುರೋಧೇನ ಸೃಜತಿರ್ಭಾಕ್ತ ಇತಿ ವಾ ಭವತಾಂ ನಿರ್ವಾಹಃ. ಸೃಜತೇರ್ಭಾಕ್ತತ್ವಂ ಸ್ಥಿತಂ. ಪೂರ್ವವಾಕ್ಯಮಪಿ ವಿಫಲಂ ಲೋಕಪ್ರಸಿದ್ಧತ್ವಾತ್ ಸ್ವಪ್ನಮಿಥ್ಯಾತ್ವಸ್ಯ. ಅಪ್ರಾಪ್ತೇ ಹಿ ಶಾಸ್ತ್ರಮರ್ಥವತ್. ಅತೋ ವೈಯರ್ಥ್ಯಭಾಕ್ತತ್ವಾಭ್ಯಾಂ ವಾಕ್ಯಾತ್ ಇದಮಪಿ ದುಸ್ತರಂ ಮಿಥ್ಯಾಭೂತಂ ಸ್ವಪ್ನಜಾತಮನೂದ್ಯ ಭಾಕ್ತೇನ "ಸೃಜತಿ"ಇತಿ ಜೀವಾದೃಷ್ಟಮೂಲತ್ವಂ ಪ್ರತಿಪಾದ್ಯತ ಇತಿ ವಾಕ್ಯೈಕತ್ವಮಿತಿ ಚೇನ್ನ ಉದ್ದೇಶವಿಶೇಷಣಭೂತಮಿಥ್ಯಾತ್ವಾನುರೋಧೇನ ಉಪಾದೇಯವಚನಸ್ವಾರಸ್ಯಭಂಗಸ್ಯ ನ್ಯಾಯವಿದಾಮನಭಿಮತತ್ವಾತ್ ಉಭಯಮುಖ್ಯತ್ವಸಂಭವೇಽನ್ಯತರಾಮುಖ್ಯತ್ವಾಶ್ರಯಣಾನುಪಪತ್ತೇಶ್ಚ. ನ ಚ " ಭವಂತಿ " ಇತಿ ಜಾಗರಿತಾನುಭೂತಾರ್ಥಾಭಾವಪರಃ. ಪ್ರಬೋಧೇ ದೃಶ್ಯಾನಾಂ ರಥಾದೀನಾಂ ಸ್ವಪ್ನಸಮಯೇ ವಿದ್ಯಮಾನತ್ವಾತ್. ನಚ ಸ್ವಪ್ನಾರ್ಥಾನಾಂ ಪ್ರಾಕ್ಕಾಲೀನಾಭಾವಪರಃ. ಸ್ವಪ್ನಕಲ್ಪಿತಾನಾಂ ಪೂರ್ವಮಭಾವಸ್ಯ ಲೋಕಸಿದ್ಧತ್ವಾತ್. ನಚ ಭವನಂತೀತಿ ಸ್ವಪ್ನಜಾಗ್ರದ್ದೃಷ್ಟಾನಾಂ ಅನ್ಯೋನ್ಯಾಭಾವೋಕ್ತಿಃ, ಲೋಕಪ್ರಸಿದ್ಧತ್ವಾದೇವ. ಅತಃ ಸ್ವಪ್ನಾರ್ಥಾನಾಂ ಪ್ರಸಿದ್ಧರಥಾದಿಭಾವಪ್ರತಿಷೇಧೇನ ತದ್ವೈಜಾತ್ಯಂ ಪ್ರತಿಪಾದ್ಯತೇ. ತೇನ ಜೀವಾನುಭಾವ್ಯತ್ವತತ್ತತ್ಕಾಲಾವಸಾಯಿತ್ವರೂಪಂ ವೈಲಕ್ಷಣ್ಯಮುಕ್ತಂ ಸ್ಯಾತ್. ಅತೋ ವೈಲಕ್ಷಣ್ಯವಿಶಿಷ್ಟಂ ಈಶ್ವರಸೃಷ್ಟತ್ವಂ ಪ್ರತಿಪಾದಿತಮಿತಿ ವಾಕ್ಯೈಕತ್ವಮವೈಯರ್ಥ್ಯಂ ಅಭಾಕ್ತತ್ವಂ ನ್ಯಾಯಾವಿರೋಧಶ್ಚ ಭವತಿ. ತಸ್ಮಾನ್ಮಿಥ್ಯಾತ್ವಸಮರ್ಥನಪರತ್ವೇ ಶ್ರುತಿಸೂತ್ರವಿರೋಧೋ ದುರ್ನಿವಾರಃ.

ನಿತ್ಯನೂ ನಿರ್ವಿಕಾರನೂ ಆದ ಪರಮಶಿವನು ವಿಕಾರಗಳಿಂದ ಮಿಥ್ಯೆ ಎನಿಸಿದ ಪ್ರಪಂಚಕ್ಕೆ ಕರ್ತನೆಂಬುದೇ ಹೊಂದದಿರುವುದರಿಂದ ಸ್ವಪ್ನಪ್ರಪಂಚಕ್ಕೂ ಅವನೇ ಕಾರಣನೆಂಬುದೂ ಯುಕ್ತವಲ್ಲ. ಅಲ್ಲಿ ಕಾಣುವ ಹೆಂಡತಿ ಸ್ನೇಹಿತ ಮಕ್ಕಳು ಮೊದಲಾದವರೆಲ್ಲರೂ ಜಾಗ್ರದವಸ್ಥೆಯಲ್ಲಿ ಇಲ್ಲದೇ ಇರುವುದರಿಂದ ಸ್ವಪ್ನವನ್ನು ಸುಳ್ಳೆಂದೇ ಹೇಳಬೇಕು. ಹಾಗೆಯೇ ಜಾಗ್ರತ್ಪ್ರಪಂಚವೂ ಸಹ ಗಂಧರ್ವನಗರದಂತೆ ಅನಿತ್ಯವೇ ಆಗಿರುವುದೆಂದಾಶಂಕಿಸಿ ನಿರಾಕರಿಸುತ್ತಾನೆ. ಕಾಮ್ಯಕರ್ಮಗಳನ್ನು ಆಚರಿಸುವ ಕಾಲದಲ್ಲಿ ಸ್ವಪ್ನದಲ್ಲಿ ಸ್ತ್ರೀಯನ್ನು ನೋಡಿದವನು ಸಂಪತ್ತನ್ನು ಪಡೆಯುತ್ತಾನೆಂದು ಸ್ವಪ್ನಶಾಸ್ತ್ರವಲ್ಲಿ ಹೇಳಿದೆ. "ಕಪ್ಪುಮನುಷ್ಯನನ್ನು ಕಂಡವನು ಅವನನ್ನು ಕೊಲ್ಲುತ್ತಾನೆ" ಎಂದು ಸ್ವಪ್ನಶಾಸ್ತ್ರಜ್ಞರು ಸ್ವಪ್ನವನ್ನು ಶುಭಾಶುಭಕರ್ಮಗಳ ಸೂಚಕವೆಂದು ಹೇಳುತ್ತಾರೆ. ಹೀಗೆ ಸೂಚಿಸುವುದೂಸಹ ಜೀವನ ಸಂಕಲ್ಪದಂತೆ ನಡೆಯುವುದಿಲ್ಲ. ಹಾಗೆಯೇ ಅಶುಭಸ್ವಪ್ನವು ಅನಿಷ್ಟವಾದ್ದರಿಂದ ಶುಭಸ್ವಪ್ನವನ್ನು ಶುಭಸೂಚಕವೆಂದು ಜೀವನು ತಿಳಿಯುತ್ತಾನೆ. ಆದ್ದರಿಂದ ಸ್ವಪ್ನಸೃಷ್ಟಿಯು ಈಶ್ವರನಿಂದಲೇ ಆಗುವುದೆಂದು ನಿಶ್ಚಯಿಸಲಾಗಿದೆ. ಜೀವನಿಗೆ ಸ್ವಪ್ನಸೃಷ್ಟಿಗೆಮಾತ್ರವೇ ಬೇಕಾಗಿರುವ ಸತ್ಯಸಂಕಲ್ಪ ಮೊದಲಾದ ಗುಣಗಳು ಆ ಕಾಲದಲ್ಲೂ ಪ್ರಕಟವಾಗಲಿ ಎಂಬ ಶಂಕೆಯನ್ನು ತೊಲಗಿಸಲಿಕ್ಕಾಗಿ ಈ ಸೂತ್ರವು ಬಂದಿದೆ. ಸ್ವಪ್ನಶಾಸ್ತ್ರಜ್ಞರು ಶುಭಅಶುಭಫಲಗಳನ್ನು ದೊರಕಿಸುವುದರಿಂದ ಸ್ವಪ್ನವನ್ನು ಸುಳ್ಳಲ್ಲವೆಂದು ಹೇಳಿದ್ದಾರೆ. ಆದ್ದರಿಂದಲೇ ಪ್ರಪಂಚವು ಸತ್ಯವೆಂಬ ಅಂಶ ಅರ್ಥಸಿದ್ಧವಾಗಿದೆ. ಸ್ವಪ್ನದ ವಸ್ತುಗಳು ಈಶ್ವರನಿರ್ಮಿತವಾದ್ದರಿಂದ ಆಕಾಶಾದಿಗಳಂತೆ ಪರಮಾರ್ಥವೆಂಬುದನ್ನು ಕೆಲವರು ಆಕ್ಷೇಪಿಸಿ ಆ ವಸ್ತುಗಳನ್ನು ದೇಶ ಕಾಲ ನಿಮಿತ್ತಗಳಿಂದ ವಿವೇಚಿಸಲಿಕ್ಕಾಗದಿರುವುದರಿಂದ ಸುಳ್ಳೆಂದು ಹೇಳುತ್ತಾರೆ. "ಇವೆಲ್ಲವನ್ನು ಜೀವನೇ ಸೃಷ್ಟಿಸುತ್ತಾನೆ" ಎಂಬುದನ್ನು ಕೇವಲ ಉಪಚಾರಕ್ಕಾಗಿ ಹೇಳಿದೆ. ಹಾಗೆಯೇ ಸುಖದುಃಖಗಳಿಗೆ ಕಾರಣವಾದ ಸುಕೃತದುಷ್ಕೃತಗಳಿಗೆ ಜೀವನೇ ಕರ್ತನೆಂಬುದೂ ಕೇವಲ ಉಪಚಾರಕ್ಕಾಗಿ ಹೇಳಿದ ಮಾತು. ಜೀವನು ಸ್ವಪ್ನವಸ್ತುಗಳಿಗೆ ಕರ್ತನೆಂದೂ, ಮತ್ತು "ಜೀವನು ದೇಹದಿಂದ ಹೊರಗೆ ಸಂಚರಿಸುತ್ತಾನೆ" ಎಂದೂ ಸ್ವಪ್ನದ ಬಗ್ಗೆ ಹೇಳಿರುವ ಶ್ರುತಿಯು "ಜೀವನು ಹೊರಗಿರುವಂತೆ ಸಂಚರಿಸುತ್ತಾನೆ" ಎಂಬ ಅರ್ಥವನ್ನು ತಿಳಿಸುವುದೇಹೊರತು "ಹೊರಗೆ ಬರುವನು" ಎಂದು ತಿಳಿಸುವುದಿಲ್ಲ. ಜೀವನೂ ಪರಮಾತ್ಮನೂ ಒಬ್ಬನೇ ಆದ್ದರಿಂದ ಜೀವನೂ ಸತ್ಯ ಸಂಕಲ್ಪನಾದಕಾರಣ ಅವನೇ ಕರ್ತನಾಗಲಿ ಎಂಬ ಆಶಂಕೆಯನ್ನು ಪರಿಹರಿಸಲಿಕ್ಕಾಗಿ ಆ ಪ್ರಕರಣದಲ್ಲಿ ಈಶ್ವರನನ್ನು ಪ್ರತಿಪಾದಿಸಲಾಗಿದೆ. "ಜೀವಪ್ರಕೃತಿಗಳನ್ನು ದೇವನೊಬ್ಬನೇ ನಿಗ್ರಹಿಸುತ್ತಾನೆ" ಎಂಬ ಶ್ರುತಿಯಲ್ಲಿ ಜೀವನಿಗೆ ಜ್ಞಾನ, ಐಶ್ವರ್ಯ, ಪ್ರಕಾಶ ಮೊದಲಾದ ಮಹಿಮಾತಿಶಯಗಳು, ಪಾಶದ ಬಿಡುಗಡೆ ಇವೆಲ್ಲವೂ ಶಿವಧ್ಯಾನದಿಂದಲೇ ದೊರಕುತ್ತವೆ ಎಂದು ಹೇಳಲಾಗಿದೆ. ಆದ್ದರಿಂದ ಅವನ ಬಂಧಮೋಕ್ಷಗಳು ಶಿವನಿಗಧೀನವಾಗಿವೆ. ಅವನಿಗೆ ಪಾಶದಿಂದಾಗಿರುವ ತಿರೋಧಾನವು ಸ್ಥೂಲಸೂಕ್ಷ್ಮದೇಹಗಳ

ಸಂಪರ್ಕದಿಂದಾಗಿರುವುದೆಂದು ಕೆಲವರು ಹೇಳುತ್ತಾರೆ. ಇಲ್ಲಿ ಸ್ವಪ್ನದ ವಿಚಾರವಾಗಿ ಹೇಳಿರುವುದಕ್ಕೂ ಈ ಪಾದದಲ್ಲಿ ಹೇಳಬೇಕಾದ ವಿಷಯಕ್ಕೂ ಸಂಬಂಧವು ಹೊಂದುವುದಿಲ್ಲ. ಜೀವನ ಅವಸ್ಥೆಯನ್ನು ತಿಳಿಸುವುದೇ ಇಲ್ಲಿ ಸಂಬಂಧವೆಂದು ಹೇಳುವುದಾದರೆ ಫಲಾಧಿಕರಣವು ಅಸಂಗತವಾಗುತ್ತದೆ. "ಈಶ್ವರನು ಯಥಾರ್ಥವಲ್ಲ; ಆದರೆ ಬ್ರಹ್ಮದಲ್ಲಿ ಕಲ್ಪಿತನಿರುವನು. ಅವನಲ್ಲಿ ಜೀವನು ಅಧ್ಯಸ್ತನಾದ್ದರಿಂದ ಪರಮಾತ್ಮನ ನಿರೂಪಣವೇ ಈ ಪಾದದ ಉದ್ದೇಶ"ವೆಂದು ಹೇಳುವುದಾದರೆ ಸ್ವಪ್ನದಲ್ಲಿ ಕಾಣುವ ವಸ್ತುಗಳಿಗೆ ಜೀವನೇ ಕರ್ತನಾದ್ದರಿಂದ ಅವನ್ನು ಸುಳ್ಳೆಂದು ಹೇಳುವುದು ಹೊಂದುವುದಿಲ್ಲ. ಇದೂ ಅಲ್ಲದೆ, ಇಲ್ಲಿ ಬಂದಿರುವ ಆಕ್ಷೇಪವೂ ಯುಕ್ತವಲ್ಲ; ಏಕೆಂದರೆ ಸುಳ್ಳೆಂಬುದನ್ನು ನಿರ್ಣಯಿಸಲಿಕ್ಕೆ ಸಾಧ್ಯವಾಗುವುದಿಲ್ಲ. ಆ ಮತದ ಪ್ರಕಾರ ಆರಂಭಣಾಧಿಕಾರಣದಲ್ಲಿ ಸಮಸ್ತಪ್ರಪಂಚವನ್ನು ಮಿಥ್ಯೆ ಎಂದು ಸಮರ್ಥಿಸಲಾಗಿದೆ. ಆಕಾಶ ಮೊದಲಾದವುಗಳು ಮಿಥ್ಯೆ ಎಂದು ಸಿದ್ಧಿಸಿದರೆ ಸ್ವಪ್ನದಲ್ಲಿ ಕಾಣುವ ವಸ್ತುಗಳೂ ಮಿಥ್ಯೆ ಎಂಬುದು ಕೈಮುತಿಕನ್ಯಾಯದಿಂದ ತಾನಾಗಿಯೇ ಸಿದ್ಧಿಸುವುದು. ಆದ್ದರಿಂದ ಈ ಸಂಧ್ಯಾಧಿಕರಣವೇ ವ್ಯರ್ಥವಾಗಬೇಕಾಗುತ್ತದೆ. ಆಕಾಶ ಮೊದಲಾದವುಗಳೇನೋ ವ್ಯಾವಹಾರಿಕವಾಗಿ ಸತ್ಯವೆನಿಸಿವೆ. ಆದರೆ ಸ್ವಪ್ನದ ವಸ್ತುಗಳಿಗೆ ವ್ಯವಹಾರವೇ ಹೊಂದದಿರುವುದರಿಂದ ಅವು ವ್ಯಾವಹಾರಿಕವಾಗಿಯೂ ಸತ್ಯವಲ್ಲ. ಆದ್ದರಿಂದ ಆಕಾಶ ಮೊದಲಾದವಕ್ಕಿಂತ ವೈಲಕ್ಷಣ್ಯವನ್ನು ತಿಳಿಸಲಿಕ್ಕಾಗಿಯೇ ಸ್ವಪ್ನಪ್ರಕರಣವನ್ನು ಈಪಾದದಲ್ಲಿ ಆರಂಭಿಸಿದೆ ಎಂದು ಹೇಳಿದರೆ ಇದೂ ಸರಿಯಲ್ಲ; ಯಾಕೆಂದರೆ ಸ್ವಪ್ನದ ವ್ಯವಹಾರಗಳ ಬಗ್ಗೆ ಅನೌಚಿತ್ಯವು ಎಚ್ಚರಗೊಂಡಮೇಲೆ ಎಲ್ಲರಿಗೂ ತಿಳಿಯುತ್ತದೆ. "ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್" ಎಂಬ ಸೂತ್ರದಲ್ಲಿ ವ್ಯವಹಾರವನ್ನು ವಿಷಮವೆಂದು ಹೇಳಲಾಗಿದೆ. ಶ್ರುತಿವಾಕ್ಯದಲ್ಲಿ ಹೇಳಿರುವಂತೆ ಸ್ವಪ್ನ ಸತ್ಯವೆಂಬ ಆಕ್ಷೇಪವನ್ನು ನಿರಾಕರಿಸಲಿಕ್ಕಾಗಿ ಈ ಪ್ರಕರಣ ಆರಂಭವಾಯಿತೆಂದು ಹೇಳುವುದೂ ಯುಕ್ತವಲ್ಲ; ಯಾಕೆಂದರೆ ಇದರಿಂದ ಸೂತ್ರಕ್ಕೂ ಶ್ರುತಿವಾಕ್ಯಕ್ಕೂ ಸಾಮರಸ್ಯವೇ ತಪ್ಪಿಹೋಗುತ್ತದೆ. ಸ್ವಪ್ನವಸ್ತುಗಳನ್ನು ಸುಳ್ಳೆಂದು ಸಮರ್ಥಿಸಬೇಕಾದರೂ, ವ್ಯಾವಹಾರಿಕಪ್ರಪಂಚವನ್ನು ಈಶ್ವರನಿಂದ ಸೃಷ್ಟವಾದರೂ ಅನಿತ್ಯವೆಂದು ಹೇಳುವಂತೆ ಸ್ವಪ್ನದ ವಸ್ತುಗಳು ಈಶ್ವರಸೃಷ್ಟವಾದರೂ ಸುಳ್ಳಾಗಬಹುದಾದ್ದರಿಂದ ಅವನ್ನು ಈಶ್ವರಸೃಷ್ಟವಲ್ಲವೆಂದು ಸಾಧಿಸಬೇಕಾದ ಅಗತ್ಯವಿಲ್ಲ. ಉಪಾಸನೆಯ ಬಲದಿಂದ ಸಂತುಷ್ಟನಾದ ಪರಮಶಿವನ ಅನುಗ್ರಹದಿಂದ ದೊರೆತ ಸ್ವಪ್ನವಸ್ತುಗಳಂತೆ ಬ್ರಹ್ಮಸೃಷ್ಟವಾಗಿ ಅನುಭವಸಿದ್ಧವಾದ ವಸ್ತುಗಳೂ ಸಹ ಸತ್ಯವಲ್ಲವೆಂಬುದು ಅದ್ವೈತಿಗಳಿಗೂ ಸಮ್ಮತವೇ ಆಗಿದೆ. ಸ್ವಪ್ನದ ವಸ್ತುಗಳಿಗೆ ವ್ಯಾವಹರಿಕಸತ್ಯತ್ವವನ್ನು ನಿಷೇಧಿಸುವುದಾದರೆ ಅದಕ್ಕಾಗಿ ಜೀವಕರ್ತೃತ್ವವನ್ನು ಕಾರಣವೆಂದು ಹೇಳುವುದು ಯುಕ್ತವಲ್ಲ; ಯಾಕೆಂದರೆ ಹಾಗೆ ಹೇಳುವುದಾದರೆ ಜೀವಸೃಷ್ಟವಾದ ಘಟಾದಿಗಳಿಗೂ ವ್ಯಾಹಾರಿಕಸತ್ಯತ್ವವೂ ಇಲ್ಲದೇ ಹೋಗಬೇಕಾದೀತು. ಕೊನೆಯ ಎರಡು ಸೂತ್ರಗಳಲ್ಲಿ ಜೀವನು

ಸ್ವಪ್ನವನ್ನು ಸೃಷ್ಟಿಸುವನೆಂಬುದನ್ನು ನಿರಾಕರಿಸಲಾಗಿದೆ. ಜೀವನೇ ಸ್ವಪ್ನವನ್ನು ಸೃಷ್ಟಿಸಲು ಮುಖ್ಯನೆಂಬುದನ್ನು ನಿಷೇಧಿಸಿ, ಸುಖಾದ್ಯನುಭವಗಳಿಗೆ ಕಾರಣವಾದ ಪುಣ್ಯಪಾಪಕರ್ಮಗಳನ್ನು ಅವನು ಮಾಡುವುದರಿಂದ ಅವನಿಗೆ ಔಪಚಾರಿಕಕರ್ತೃತ್ವವನ್ನು ಹೇಳಬಹುದಲ್ಲವೆ ? ಅಂದರೆ ಜೀವನ ಕರ್ಮಗಳಿಂದಾಗಿರುವ ದೇಹೇಂದ್ರಿಯಾದಿಗಳ ಸೃಷ್ಟಿಯಂತೆ ಸ್ವಪ್ನಸೃಷ್ಟಿಯೂ ಸಹ ವ್ಯಾವಹಾರಿಕಸತ್ವವೇ ಆಗಬೇಕಾದೀತು. ದೇಹೇಂದ್ರಿಯಾದಿಗಳು ಜೀವನ ಪುಣ್ಯಪಾಪಕರ್ಮಗಳನ್ನು ಅವಲಂಬಿಸಿದ್ದರೂ ಅವು ಪರಮಶಿವನಿಗೆ ಅಧೀನವಾಗಿಯೇ ಇರುವುವು ಎಂದು ಹೇಳುವುದಾದರೆ ಸ್ವಪ್ನಪದಾರ್ಥಗಳೂ ಸಹ ಹಾಗೆಯೇ ಪರಶಿವುಶಿವನಿಗಧೀನವೇ ಆಗಿವೆ ಎಂಬುದು ಎರಡಕ್ಕೂ ಸಮಾನವೇ ಆಗಿದೆ. ಸ್ವಪ್ನವಾಗಲೀ ಜಾಗ್ರದ್ವಸ್ತುವಾಗಲೀ ಎಲ್ಲವೂ ಪರಬ್ರಹ್ಮಕ್ಕಧೀನವೆಂಬ ಅಂಶವನ್ನು ಅದ್ವೈತಿಗಳೂ ಒಪ್ಪಿದ್ದಾರೆ. ಎಲ್ಲರಿಗೂ ಎಲ್ಲಾ ರೀತಿಯಿಂದಲೂ ವಿಚಿತ್ರವೆಂದು ಅನುಭವಗೋಚರವಾದ ಸ್ವಪ್ನಪ್ರಪಂಚವು ಜಾಗ್ರತ್ಪ್ರಪಂಚಕ್ಕಿಂತಲೂ ವಿಲಕ್ಷಣವಾಗಿರುವುದರಿಂದ ಅದು ಪರಮಾತ್ಮನಿಗಧೀನವಲ್ಲವೆಂದು ಹೇಳುವುದಾದರೆ ಅವನಿಗೆ ಪಾರಮೈಶ್ವರ್ಯವೇ ತಪ್ಪಿಹೋದೀತು. ಜಾಗ್ರತ್ಪ್ರಪಂಚಕ್ಕೂ ಸ್ವಪ್ನಪ್ರಪಂಚಕ್ಕೂ ಹೆಚ್ಚು ಕಡಮೆ ಎಂದು ಕಾಲದಲ್ಲಿ ತಾರತಮ್ಯವಿರುವುದಾದರೂ ಎರಡೂ ಅದರದರ ಕಾಲದಲ್ಲಿ ಸಮಾನವಾಗಿಯೇ ತೋರುತ್ತವೆ. ಹೀಗೆಯೇ ಸ್ವಪ್ನವನ್ನು ಜೀವನು ಸೃಷ್ಟಿಸುವನೆಂಬುದು ಮಿಥ್ಯೆ ಎಂದು ಸಾಧಿಸಲಿಕ್ಕೆ ಹೇತುವಾಗದ್ದರಿಂದಲೇ ಸ್ವಪ್ನವು ಮಿಥ್ಯೆಯಲ್ಲವೆಂಬುದು ಸೂತ್ರಕಾರನಿಗೂ ಸಮ್ಮತವೆಂದು ಗೊತ್ತಾಗುತ್ತದೆ. " ಸೂಚಕಶ್ಚ " ಎಂಬ ಸೂತ್ರವೂ ಈ ಪಕ್ಷಕ್ಕೆ ವಿರುದ್ಧವಾಗಿರುವುದೆಂದು ಹೇಳಿಯಾಗಿದೆ. ಆದ್ದರಿಂದ ಅನುಪಯುಕ್ತವೂ ವಿರುದ್ಧವೂ ಆದ ಅರ್ಥವನ್ನು ಸೂತ್ರಕ್ಕೆ ಕಲ್ಪಿಸುವುದಕ್ಕಿಂತಲೂ ಉಪಯುಕ್ತವಾದ ಅರ್ಥವನ್ನು ಹೇಳುವುದೇ ಯುಕ್ತ. ಸ್ವಪ್ನವು ಈಶ್ವರಸೃಷ್ಟವಾದ್ದರಿಂದಲೇ ಮಿಥ್ಯೆ ಎಂದು ಹೇಳುವುದಾದರೆ " ಪುತ್ರಾದಯಶ್ಚ " ಎಂಬ ಸೂತ್ರವೂ ವ್ಯರ್ಥವಾಗುತ್ತದೆ. ಪುತ್ರಾದಿಸೃಷ್ಟಿಯು ಜೀವರಿಗೆ ಸಂಭವಿಸುವುದಾದ್ದರಿಂದ ಅದಕ್ಕೂ ಈಶ್ವರನೇ ಕರ್ತನೆಂದು ಹೇಳುವುದು ಹೊಂದಿಕೆಯಾಗಲಾರದು. ಹೀಗೆಯೇ ಮಾಯಾಶಬ್ದವೂ ಮಿಥ್ಯೆ ಎಂಬ ಅರ್ಥವನ್ನು ತಿಳಿಸಲಾರದು. ಅದ್ವೈತಿಗಳು ಹೇಳುವ ಮಿಥ್ಯೆ ಎಂಬ ಅರ್ಥವು ಸೂತ್ರಕ್ಕೆ ಅನುಗುಣವಾಗುವುದಿಲ್ಲ. ಅರ್ಥಕ್ರಿಯಾಕಾರಿತ್ವವು ಮಿಥ್ಯಾತ್ವಕ್ಕೆ ವಿರುದ್ಧವಾಗುವುದರಿಂದ " ಸೂಚಕಶ್ಚ " ಎಂಬ ಸೂತ್ರವೂ ಅವರ ಮತಕ್ಕೆ ವಿರುದ್ಧವಾಗುವುದು. ಸೂಚಿತವಾದ ಅರ್ಥವು ಸತ್ಯವಾಗುವುದೇ ಹೊರತು ಸ್ವಪ್ನವು ಸತ್ಯವಲ್ಲವೆಂದು ಹೇಳುವುದೂ ಯುಕ್ತವಲ್ಲ; ಯಾಕೆಂದರೆ ಈ ಬಗೆಯ ಅರ್ಥವನ್ನು ತಿಳಿಸುವ ಯಾವ ಶಬ್ದವೂ ಸೂತ್ರದಲ್ಲಿ ಕಾಣಬರುವುದಿಲ್ಲ. ಶ್ರುತಿವಿರುದ್ಧವಾದ ಅರ್ಥವನ್ನು ಸೂತ್ರಕ್ಕೆ ಕಲ್ಪಿಸುವುದೂ ಯುಕ್ತವಲ್ಲ. " ಪರಾಭಿಧ್ಯಾನಾತ್ " ಎಂಬ ಪದವನ್ನು ತಿರೋಧಾನದಲ್ಲಿ ಅನ್ವಯಿಸದೆ ತಿರೊಧಾನನಿವೃತ್ತಿಯಲ್ಲಿ ಅನ್ವಯಿಸಬೇಕೆಂದು ಹೇಳಿದರೆ ಅಧ್ಯಾಹಾರ ಮತ್ತು ದೂರಾನ್ವಯ ಎಂಬ

ಸಂಪರ್ಕದಿಂದಾಗಿರುವುದೆಂದು ಕೆಲವರು ಹೇಳುತ್ತಾರೆ. ಇಲ್ಲಿ ಸ್ವಪ್ನದ ವಿಚಾರವಾಗಿ ಹೇಳಿರುವುದಕ್ಕೂ ಈ ಪಾದದಲ್ಲಿ ಹೇಳಬೇಕಾದ ವಿಷಯಕ್ಕೂ ಸಂಬಂಧವು ಹೊಂದುವುದಿಲ್ಲ. ಜೀವನ ಅವಸ್ಥೆಯನ್ನು ತಿಳಿಸುವುದೇ ಇಲ್ಲಿ ಸಂಬಂಧವೆಂದು ಹೇಳುವುದಾದರೆ ಫಲಾಧಿಕರಣವು ಅಸಂಗತವಾಗುತ್ತದೆ. "ಈಶ್ವರನು ಯಥಾರ್ಥವಲ್ಲ; ಆದರೆ ಬ್ರಹ್ಮದಲ್ಲಿ ಕಲ್ಪಿತನಿರುವನು. ಅವನಲ್ಲಿ ಜೀವನು ಅಧ್ಯಸ್ತನಾದ್ದರಿಂದ ಪರಮಾತ್ಮನ ನಿರೂಪಣವೇ ಈ ಪಾದದ ಉದ್ದೇಶ"ವೆಂದು ಹೇಳುವುದಾದರೆ ಸ್ವಪ್ನದಲ್ಲಿ ಕಾಣುವ ವಸ್ತುಗಳಿಗೆ ಜೀವನೇ ಕರ್ತನಾದ್ದರಿಂದ ಅವನ್ನು ಸುಳ್ಳೆಂದು ಹೇಳುವುದು ಹೊಂದುವುದಿಲ್ಲ. ಇದೂ ಅಲ್ಲದೆ, ಇಲ್ಲಿ ಬಂದಿರುವ ಆಕ್ಷೇಪವೂ ಯುಕ್ತವಲ್ಲ; ಏಕೆಂದರೆ ಸುಳ್ಳೆಂಬುದನ್ನು ನಿರ್ಣಯಿಸಲಿಕ್ಕೆ ಸಾಧ್ಯವಾಗುವುದಿಲ್ಲ. ಆ ಮತದ ಪ್ರಕಾರ ಆರಂಭಣಾಧಿಕಾರಣದಲ್ಲಿ ಸಮಸ್ತಪ್ರಪಂಚವನ್ನು ಮಿಥ್ಯೆ ಎಂದು ಸಮರ್ಥಿಸಲಾಗಿದೆ. ಆಕಾಶ ಮೊದಲಾದವುಗಳು ಮಿಥ್ಯೆ ಎಂದು ಸಿದ್ಧಿಸಿದರೆ ಸ್ವಪ್ನದಲ್ಲಿ ಕಾಣುವ ವಸ್ತುಗಳೂ ಮಿಥ್ಯೆ ಎಂಬುದು ಕೈಮುತಿಕನ್ಯಾಯದಿಂದ ತಾನಾಗಿಯೇ ಸಿದ್ಧಿಸುವುದು. ಆದ್ದರಿಂದ ಈ ಸಂಧ್ಯಾಧಿಕರಣವೇ ವ್ಯರ್ಥವಾಗಬೇಕಾಗುತ್ತದೆ. ಆಕಾಶ ಮೊದಲಾದವುಗಳೇನೋ ವ್ಯಾವಹಾರಿಕವಾಗಿ ಸತ್ಯವೆನಿಸಿವೆ. ಆದರೆ ಸ್ವಪ್ನದ ವಸ್ತುಗಳಿಗೆ ವ್ಯವಹಾರವೇ ಹೊಂದದಿರುವುದರಿಂದ ಅವು ವ್ಯಾವಹಾರಿಕವಾಗಿಯೂ ಸತ್ಯವಲ್ಲ. ಆದ್ದರಿಂದ ಆಕಾಶ ಮೊದಲಾದವಕ್ಕಿಂತ ವೈಲಕ್ಷಣ್ಯವನ್ನು ತಿಳಿಸಲಿಕ್ಕಾಗಿಯೇ ಸ್ವಪ್ನಪ್ರಕರಣವನ್ನು ಈಪಾದದಲ್ಲಿ ಆರಂಭಿಸಿದೆ ಎಂದು ಹೇಳಿದರೆ ಇದೂ ಸರಿಯಲ್ಲ; ಯಾಕೆಂದರೆ ಸ್ವಪ್ನದ ವ್ಯವಹಾರಗಳ ಬಗ್ಗೆ ಅನೌಚಿತ್ಯವು ಎಚ್ಚರಗೊಂಡಮೇಲೆ ಎಲ್ಲರಿಗೂ ತಿಳಿಯುತ್ತದೆ. "ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್" ಎಂಬ ಸೂತ್ರದಲ್ಲಿ ವ್ಯವಹಾರವನ್ನು ವಿಷಮವೆಂದು ಹೇಳಲಾಗಿದೆ. ಶ್ರುತಿವಾಕ್ಯದಲ್ಲಿ ಹೇಳಿರುವಂತೆ ಸ್ವಪ್ನ ಸತ್ಯವೆಂಬ ಆಕ್ಷೇಪವನ್ನು ನಿರಾಕರಿಸಲಿಕ್ಕಾಗಿ ಈ ಪ್ರಕರಣ ಆರಂಭವಾಯಿತೆಂದು ಹೇಳುವುದೂ ಯುಕ್ತವಲ್ಲ; ಯಾಕೆಂದರೆ ಇದರಿಂದ ಸೂತ್ರಕ್ಕೂ ಶ್ರುತಿವಾಕ್ಯಕ್ಕೂ ಸಾಮರಸ್ಯವೇ ತಪ್ಪಿಹೋಗುತ್ತದೆ. ಸ್ವಪ್ನವಸ್ತುಗಳನ್ನು ಸುಳ್ಳೆಂದು ಸಮರ್ಥಿಸಬೇಕಾದರೂ, ವ್ಯಾವಹಾರಿಕಪ್ರಪಂಚವನ್ನು ಈಶ್ವರನಿಂದ ಸೃಷ್ಟವಾದರೂ ಅನಿತ್ಯವೆಂದು ಹೇಳುವಂತೆ ಸ್ವಪ್ನದ ವಸ್ತುಗಳು ಈಶ್ವರಸೃಷ್ಟವಾದರೂ ಸುಳ್ಳಾಗಬಹುದಾದ್ದರಿಂದ ಅವನ್ನು ಈಶ್ವರಸೃಷ್ಟವಲ್ಲವೆಂದು ಸಾಧಿಸಬೇಕಾದ ಅಗತ್ಯವಿಲ್ಲ. ಉಪಾಸನೆಯ ಬಲದಿಂದ ಸಂತುಷ್ಟನಾದ ಪರಮಶಿವನ ಅನುಗ್ರಹದಿಂದ ದೊರೆತ ಸ್ವಪ್ನವಸ್ತುಗಳಂತೆ ಬ್ರಹ್ಮಸೃಷ್ಟವಾಗಿ ಅನುಭವಸಿದ್ಧವಾದ ವಸ್ತುಗಳೂ ಸಹ ಸತ್ಯವಲ್ಲವೆಂಬುದು ಅದ್ವೈತಿಗಳಿಗೂ ಸಮ್ಮತವೇ ಆಗಿದೆ. ಸ್ವಪ್ನದ ವಸ್ತುಗಳಿಗೆ ವ್ಯಾವಹರಿಕಸತ್ಯತ್ವವನ್ನು ನಿಷೇಧಿಸುವುದಾದರೆ ಅದಕ್ಕಾಗಿ ಜೀವಕರ್ತೃತ್ವವನ್ನು ಕಾರಣವೆಂದು ಹೇಳುವುದು ಯುಕ್ತವಲ್ಲ; ಯಾಕೆಂದರೆ ಹಾಗೆ ಹೇಳುವುದಾದರೆ ಜೀವಸೃಷ್ಟವಾದ ಘಟಾದಿಗಳಿಗೂ ವ್ಯಾಹಾರಿಕಸತ್ಯತ್ವವೂ ಇಲ್ಲದೇ ಹೋಗಬೇಕಾದೀತು. ಕೊನೆಯ ಎರಡು ಸೂತ್ರಗಳಲ್ಲಿ ಜೀವನು

ಸ್ವಪ್ನವನ್ನು ಸೃಷ್ಟಿಸುವನೆಂಬುದನ್ನು ನಿರಾಕರಿಸಲಾಗಿದೆ. ಜೀವನೇ ಸ್ವಪ್ನವನ್ನು ಸೃಷ್ಟಿಸಲು ಮುಖ್ಯನೆಂಬುದನ್ನು ನಿಷೇಧಿಸಿ, ಸುಖಾದ್ಯನುಭವಗಳಿಗೆ ಕಾರಣವಾದ ಪುಣ್ಯಪಾಪಕರ್ಮಗಳನ್ನು ಅವನು ಮಾಡುವುದರಿಂದ ಅವನಿಗೆ ಔಪಚಾರಿಕಕರ್ತೃತ್ವವನ್ನು ಹೇಳಬಹುದಲ್ಲವೆ ? ಅಂದರೆ ಜೀವನ ಕರ್ಮಗಳಿಂದಾಗಿರುವ ದೇಹೇಂದ್ರಿಯಾದಿಗಳ ಸೃಷ್ಟಿಯಂತೆ ಸ್ವಪ್ನಸೃಷ್ಟಿಯೂ ಸಹ ವ್ಯಾವಹಾರಿಕಸತ್ವವೇ ಆಗಬೇಕಾದೀತು. ದೇಹೇಂದ್ರಿಯಾದಿಗಳು ಜೀವನ ಪುಣ್ಯಪಾಪಕರ್ಮಗಳನ್ನು ಅವಲಂಬಿಸಿದ್ದರೂ ಅವು ಪರಮಶಿವನಿಗೆ ಅಧೀನವಾಗಿಯೇ ಇರುವುವು ಎಂದು ಹೇಳುವುದಾದರೆ ಸ್ವಪ್ನಪದಾರ್ಥಗಳೂ ಸಹ ಹಾಗೆಯೇ ಪರಶಿಮಶಿವನಿಗಧೀನವೇ ಆಗಿವೆ ಎಂಬುದು ಎರಡಕ್ಕೂ ಸಮಾನವೇ ಆಗಿದೆ. ಸ್ವಪ್ನವಾಗಲೀ ಜಾಗ್ರದ್ವಸ್ತುವಾಗಲೀ ಎಲ್ಲವೂ ಪರಬ್ರಹ್ಮಕ್ಕಧೀನವೆಂಬ ಅಂಶವನ್ನು ಅದ್ವೈತಿಗಳೂ ಒಪ್ಪಿದ್ದಾರೆ. ಎಲ್ಲರಿಗೂ ಎಲ್ಲಾ ರೀತಿಯಿಂದಲೂ ವಿಚಿತ್ರವೆಂದು ಅನುಭವಗೋಚರವಾದ ಸ್ವಪ್ನಪ್ರಪಂಚವು ಜಾಗ್ರತ್ಪ್ರಪಂಚಕ್ಕಿಂತಲೂ ವಿಲಕ್ಷಣವಾಗಿರುವುದರಿಂದ ಅದು ಪರಮಾತ್ಮನಿಗಧೀನವಲ್ಲವೆಂದು ಹೇಳುವುದಾದರೆ ಅವನಿಗೆ ಪಾರಮೈಶ್ವರ್ಯವೇ ತಪ್ಪಿಹೋದೀತು. ಜಾಗ್ರತ್ಪ್ರಪಂಚಕ್ಕೂ ಸ್ವಪ್ನಪ್ರಪಂಚಕ್ಕೂ ಹೆಚ್ಚು ಕಡಮೆ ಎಂದು ಕಾಲದಲ್ಲಿ ತಾರತಮ್ಯವಿರುವುದಾದರೂ ಎರಡೂ ಅದರದರ ಕಾಲದಲ್ಲಿ ಸಮಾನವಾಗಿಯೇ ತೋರುತ್ತವೆ. ಹೀಗೆಯೇ ಸ್ವಪ್ನವನ್ನು ಜೀವನು ಸೃಷ್ಟಿಸುವನೆಂಬುದು ಮಿಥ್ಯೆ ಎಂದು ಸಾಧಿಸಲಿಕ್ಕೆ ಹೇತುವಾಗದ್ದರಿಂದಲೇ ಸ್ವಪ್ನವು ಮಿಥ್ಯೆಯಲ್ಲವೆಂಬುದು ಸೂತ್ರಕಾರನಿಗೂ ಸಮ್ಮತವೆಂದು ಗೊತ್ತಾಗುತ್ತದೆ. " ಸೂಚಕಶ್ಚ " ಎಂಬ ಸೂತ್ರವೂ ಈ ಪಕ್ಷಕ್ಕೆ ವಿರುದ್ಧವಾಗಿರುವುದೆಂದು ಹೇಳಿಯಾಗಿದೆ. ಆದ್ದರಿಂದ ಅನುಪಯುಕ್ತವೂ ವಿರುದ್ಧವೂ ಆದ ಅರ್ಥವನ್ನು ಸೂತ್ರಕ್ಕೆ ಕಲ್ಪಿಸುವುದಕ್ಕಿಂತಲೂ ಉಪಯುಕ್ತವಾದ ಅರ್ಥವನ್ನು ಹೇಳುವುದೇ ಯುಕ್ತ. ಸ್ವಪ್ನವು ಈಶ್ವರಸೃಷ್ಟವಾದ್ದರಿಂದಲೇ ಮಿಥ್ಯೆ ಎಂದು ಹೇಳುವುದಾದರೆ " ಪುತ್ರಾದಯಶ್ಚ " ಎಂಬ ಸೂತ್ರವೂ ವ್ಯರ್ಥವಾಗುತ್ತದೆ. ಪುತ್ರಾದಿಸೃಷ್ಟಿಯು ಜೀವರಿಗೆ ಸಂಭವಿಸುವುದಾದ್ದರಿಂದ ಅದಕ್ಕೂ ಈಶ್ವರನೇ ಕರ್ತನೆಂದು ಹೇಳುವುದು ಹೊಂದಿಕೆಯಾಗಲಾರದು. ಹೀಗೆಯೇ ಮಾಯಾಶಬ್ದವೂ ಮಿಥ್ಯೆ ಎಂಬ ಅರ್ಥವನ್ನು ತಿಳಿಸಲಾರದು. ಅದ್ವೈತಿಗಳು ಹೇಳುವ ಮಿಥ್ಯೆ ಎಂಬ ಅರ್ಥವು ಸೂತ್ರಕ್ಕೆ ಅನುಗುಣವಾಗುವುದಿಲ್ಲ. ಅರ್ಥಕ್ರಿಯಾಕಾರಿತ್ವವು ಮಿಥ್ಯಾತ್ವಕ್ಕೆ ವಿರುದ್ಧವಾಗುವುದರಿಂದ " ಸೂಚಕಶ್ಚ " ಎಂಬ ಸೂತ್ರವೂ ಅವರ ಮತಕ್ಕೆ ವಿರುದ್ಧವಾಗುವುದು. ಸೂಚಿತವಾದ ಅರ್ಥವು ಸತ್ಯವಾಗುವುದೇ ಹೊರತು ಸ್ವಪ್ನವು ಸತ್ಯವಲ್ಲವೆಂದು ಹೇಳುವುದೂ ಯುಕ್ತವಲ್ಲ; ಯಾಕೆಂದರೆ ಈ ಬಗೆಯ ಅರ್ಥವನ್ನು ತಿಳಿಸುವ ಯಾವ ಶಬ್ದವೂ ಸೂತ್ರದಲ್ಲಿ ಕಾಣಬರುವುದಿಲ್ಲ. ಶ್ರುತಿವಿರುದ್ಧವಾದ ಅರ್ಥವನ್ನು ಸೂತ್ರಕ್ಕೆ ಕಲ್ಪಿಸುವುದೂ ಯುಕ್ತವಲ್ಲ. " ಪರಾಭಿಧ್ಯಾನಾತ್ " ಎಂಬ ಪದವನ್ನು ತಿರೋಧಾನದಲ್ಲಿ ಅನ್ವಯಿಸದೆ ತಿರೊಧಾನನಿವೃತ್ತಿಯಲ್ಲಿ ಅನ್ವಯಿಸಬೇಕೆಂದು ಹೇಳಿದರೆ ಅಧ್ಯಾಹಾರ ಮತ್ತು ದೂರಾನ್ವಯ ಎಂಬ

ದೋಷಗಳು ಸಂಭವಿಸುತ್ತವೆ. "ಸೋಽಪಿ" ಎಂಬ ಸೂತ್ರದಲ್ಲಿ ತಿರೋಭಾವಕ್ಕೆ ಪ್ರಸಕ್ತಿಯೇ ಇಲ್ಲದ್ದರಿಂದ ಅದನ್ನು ಅಲ್ಲಿ ತಿಳಿಸುವುದೂ ಯುಕ್ತವಲ್ಲ. ಹಿಂದಿನ ಸೂತ್ರದಲ್ಲಿ ತಿರೋಹಿತಂ ಎಂದು ಹೇಳಿರುವಾಗ ಕೇವಲ ಧಾತ್ವರ್ಥವನ್ನೇ ಇಲ್ಲಿ ತಚ್ಛಬ್ದದಿಂದ ತಿಳಿಸುವುದು ಯುಕ್ತವಲ್ಲ. "ಸೋಽಪಿ" ಎಂಬುದು ಪುಲ್ಲಿಂಗದಲ್ಲಿರುವುದರಿಂದ ಅದಕ್ಕನುಗುಣವಾಗಿ ಅಚಿತ್‌ಶಕ್ತಿಯೋಗವೆಂಬುದನ್ನು ಹೇಳುವುದೇ ಉಚಿತವಾಗಿದೆ. ಶ್ರುತಿವಾಕ್ಯವನ್ನು ಮುಂದೆ ವಿಚಾರಿಸಲಾಗಿದೆ. "ನ ಭವಂತಿ" ಎಂಬ ಶ್ರುತಿ ಮುಖ್ಯವಾದ್ದರಿಂದ "ಸೃಜತೇ" ಎಂಬ ಶ್ರುತಿ ಗೌಣವೆಂಬುದು ನಿಮ್ಮ ಮತವೆಂದು ಹೇಳುವುದಾದರೆ ಸ್ವಪ್ನ ಮಿಥ್ಯೆ ಎಂಬುದು ಲೋಕದಲ್ಲಿ ಸಿದ್ಧವಾದ್ದರಿಂದ ಇಂತಹ ಅರ್ಥವನ್ನು ಶ್ರುತಿಯಲ್ಲಿ ಹೇಳಿದರೆ ಅದು ವಿಫಲವೆನಿಸುವುದು. ಲೋಕದಿಂದ ತಿಳಿಯದಿರುವ ಅರ್ಥವನ್ನೇ ಶಾಸ್ತ್ರವು ತಿಳಿಸಬೇಕಾಗಿದೆ. ಈ ರೀತಿ ವೈಫಲ್ಯ ಮತ್ತು ಗೌಣತ್ವ ಇವುಗಳಲ್ಲಿ ಯಾವುದು ಯುಕ್ತವೆಂದು ವಿಚಾರಿಸಿದರೆ ವೈಫಲ್ಯಕ್ಕಿಂತಲೂ ಗೌಣವೆಂದು ಹೇಳುವುದೇ ಉತ್ತಮವೆನಿಸುತ್ತದೆ. ಮಿಥ್ಯೆಯಾಗಿರುವ ಸ್ವಪ್ನವಸ್ತುಗಳು ಜೀವನ ಪುಣ್ಯ ಪಾಪಕರ್ಮಗಳನ್ನು ಅವಲಂಬಿಸಿವೆ ಎಂಬುದೇ ಸ್ವಪ್ನವಾಕ್ಯದ ಅರ್ಥವೆಂದು ಹೇಳುವುದಾದರೆ ಉದ್ದೇಶಕೋಟಿಯಲ್ಲಿ ವಿಶೇಷಣವಾಗಿ ತೋರುವ ಮಿಥ್ಯಾತ್ವಕ್ಕೆ ತಕ್ಕಂತೆ ವಿಧೇಯವಾದ ವಚನದಲ್ಲಿ ತೋರುವ ಸ್ವಾರಸ್ಯಕ್ಕೆ ಭಂಗವನ್ನುಂಟುಮಾಡುವುದು ಸಮಂಜಸವಲ್ಲ. ಎರಡನ್ನೂ ಮುಖ್ಯವೆಂದು ಹೇಳಲು ಸಾಧ್ಯವಿರುವಾಗ ಒಂದನ್ನು ಗೌಣವೆಂದು ಹೇಳುವುದು ಯುಕ್ತವಲ್ಲ. ಜಾಗ್ರತ್ಕಾಲದಲ್ಲಿರುವ ವಸ್ತುಗಳು ಸ್ವಪ್ನಕಾಲದಲ್ಲಿ ಇಲ್ಲವೆಂಬ ಅರ್ಥವನ್ನು ಆ ಶ್ರುತಿಗೆ ಹೇಳುವುದೂ ಸರಿಯಲ್ಲ; ಯಾಕೆಂದರೆ ಸ್ವಪ್ನಕಾಲದಲ್ಲೂ ಜಾಗ್ರತ್ಪ್ರಪಂಚವಿದ್ದೇ ಇರುತ್ತದೆ. ಸ್ವಪ್ನಪದಾರ್ಥಗಳು ಸ್ವಪ್ನಬೀಳುವುದಕ್ಕೆ ಮೊದಲು ಇರಲಿಲ್ಲವೆಂದು ಹೇಳುವುದು ಸಮಂಜಸವಲ್ಲ. ಈ ವಿಷಯವು ಲೋಕಸಿದ್ಧವೇ ಆದ್ದರಿಂದ ಇದನ್ನು ಶ್ರುತಿಯು ಹೇಳಬೇಕಾಗಿಲ್ಲ. ಹೀಗೆಯೇ ಸ್ವಪ್ನಪದಾರ್ಥಗಳಿಗೂ ಜಾಗ್ರದ್ವಸ್ತುಗಳಿಗೂ ಪರಸ್ಪರಭೇದವು ಲೋಕಸಿದ್ಧವೇ ಆಗಿರುವುದರಿಂದ ಅದಕ್ಕಾಗಿಯೂ ಈ ಶ್ರುತಿ ಬಂದಿರುವುದಿಲ್ಲ. ಆದ್ದರಿಂದ ಪ್ರಸಿದ್ಧವಾದ ರಥಾದಿಗಳಿಗೆ ಸಮಾನವೆಂಬುನ್ನು ನಿಷೇಧಿಸಿ ಸ್ವಪ್ನವಸ್ತುಗಳನ್ನು ವಿಲಕ್ಷಣವೆಂದು ಹೇಳಲಿಕ್ಕಾಗಿಯೇ ಈ ಸ್ವಪ್ನವಾಕ್ಯವು ಬಂದಿದೆ. ಇದರಿಂದ ಆಯಾ ಜೀವರಿಗೆ ಆಯಾ ಕಾಲದಲ್ಲಿ ಮಾತ್ರವೇ ಅನುಭವಗೋಚರವಾಗುವ ವೈಚಿತ್ರ್ಯವನ್ನು ಹೇಳಿ, ಇಂತಹ ವಿಚಿತ್ರಸ್ವಪ್ನವನ್ನು ಸೃಷ್ಟಿಸುವ ಮಹಿಮೆಯನ್ನು ಪರಶಿವನಿಗೆ ಹೇಳಲಿಕ್ಕಾಗಿಯೇ ಈ ವಾಕ್ಯ ಬಂದಿದೆ ಎಂದು ಹೇಳುವುದೇ ಯುಕ್ತವಾಗುತ್ತದೆ. ಹೀಗೆ ಹೇಳುವುದರಿಂದಲೇ ಶ್ರುತಿಯು ಸಫಲವೂ ಸಮನ್ವಿತವೂ ಅವಿರುದ್ಧವೂ ಆಗುತ್ತದೆ. ಆದ್ದರಿಂದ ಸ್ವಪ್ನವನ್ನು ಮಿಥ್ಯೆ ಎಂದು ಸಮರ್ಥಿಸಿದರೆ ಶ್ರುತಿಸೂತ್ರಗಳ ವಿರೋಧವು ಅನಿವಾರ್ಯವಾಗುವುದು.

ನನು ಸ್ವಪ್ನಕಾರಣತ್ವಮೀಶ್ವರಸ್ಯಾಸ್ತು. ಸುಪ್ತಿಹೇತುತ್ವಂ ಕಸ್ಯೋಪ

ಷದ್ಯತೇ ? ತತ್ಸುಪ್ತೌ ಸ್ಥೂಲಸೂಕ್ಷ್ಮಜಾಗ್ರತ್ಸ್ವಪ್ನಪ್ರಪಂಚಪರಿಜ್ಞಾನಂ ಕಸ್ಯ? ಶಾರೀರಃ ಶರೀರೇ ಕುತ್ರ ಶೇತೇ? ತಸ್ಯ ಪ್ರಪಂಚವಿಸ್ಮೃತಿಃ ಕೇನೋತ್ಪದ್ಯತೇ ? ಇತಿ ಶಂಕಾಯಾಮಧಿಕರಣಾಂತರಂ ದರ್ಶಯತಿ. ತದಭಾವಾಧಿಕರಣಂ ॥ ೨ ॥ ತದಭಾವೋ ನಾಡೀಷು ತಚ್ಛ್ರುತೇರಾತ್ಮನಿ ಚ ॥ ೭ ॥ ಪೂರ್ವಮತ್ರ ಸ್ವಪ್ನಾವಸ್ಥಾಂ ವಿಚಾರ್ಯ ತತ್ಕರ್ತೃತ್ವಂ ತತ್ಕೃತಕರ್ಮಾನುಸರಣೇನ ಪರಶಿವಸ್ಯ ಬ್ರಹ್ಮಣಃ ಪ್ರಸಾಧ್ಯ ಇದಾನೀಂ ಸುಷುಪ್ತ್ಯವಸ್ಥಾಂ ತತ್ಕರ್ತೃತ್ವಂ ತಜ್ಜೀವನಿಯಾಮಕತ್ವಂ ಚ ತಸ್ಯೈವೇತ್ಯಾಮ್ನಾಯತೇ. ಜಾಗ್ರತ್ಸ್ವಪ್ನೇಷ್ವಹಂಮಮೇತ್ಯಾದಿನಾ ಶರೀರೇಂದ್ರಿಯಾದ್ಯಭಿಮಾನವಾನ್ ಶಾರೀರಃ ಸುಷುಪ್ತ್ಯವಸ್ಥಾಯಾಂ ತದಭಾವಸ್ಸನ್ ತಸ್ಯ ಶರೀರೇಂದ್ರಿಯಾದ್ಯಭಿಮಾನಸ್ಯಾಭಾವೋ ಯಸ್ಯ ಸಃ ದೇಹಾಭಿಮಾನರಹಿತಸ್ಸನ್ ನಾಡೀಷು ಚಾತ್ಮನಿ ಚ, ಚಕಾರಾತ್ ಹೃತ್ಪುಂಡರೀಕೇ ಶೇತೇ. ನಾಡೀಹೃತ್ಪುಂಡರೀಕಾದಿಪ್ರಾಕಾರಪ್ರವೇಶದ್ವಾರಾ ತತ್ಪುಂಡರೀಕಾವಚ್ಛಿನ್ನಶಿವಚಿಚ್ಛಕ್ತ್ಯಂಶಭೂತಗುಣತ್ರಯಸಮಷ್ಟ್ಯಾತ್ಮಕತಮಃಪ್ರಧಾನಪ್ರಾಸಾದೇ ಜೀವಾಖ್ಯೋ ರಾಜಾ ಶೇತ ಇತ್ಯುಪದಿಶ್ಯತೇ. ಕುತಃ ತಚ್ಛ್ರುತೇಃ, ಆಸು ತಥಾ ನಾಡೀಷು ಸುಪ್ತೋ ಭವತಿ ನಾಡೀಭ್ಯಃ ಪ್ರತ್ಯವಸೃಪ್ಯ ಪುರೀತತಿ ಶೇತೇ. ಪುರೀತತಃ ಪ್ರತ್ಯವಸೃಪ್ಯ ಸತಿ ಶೇತೇ. "ಸತಿ ಸಂಪದ್ಯ ನ ವಿದುಸ್ಸತಿ ಸಂಪದ್ಯಾಮಹ ಇತಿ" ಶ್ರುತೌ ನಾಡೀಪುರೀತದ್ವಾರಾ ಶಾರೀರಸ್ಯ ಪುರೀತದವಚ್ಛಿನ್ನೇ ಸರ್ವಾಧಿಷ್ಠಾನ ಪರಶಿವಬ್ರಹ್ಮಘೋರತಮಸ್ಸ್ವರೂಪಪ್ರಧಾನೇ ಸುಷುಪ್ತ್ಯವಸ್ಥಾಯಾಂ ಶಯನಶ್ರವಣಾದಿತ್ಯಾಚಕ್ಷ್ಯತೇ. ತಚ್ಛ್ರುತ್ಯರ್ಥಸ್ತು. ಜೀವಾಖ್ಯೋ ರಾಜಾ ಜಾಗ್ರತ್ಸ್ವಪ್ನಪ್ರಪಂಚಯೋಃ ಸ್ವರಾಷ್ಟ್ರಯೋಸ್ಸಂಚರ್ಯ ಕಾರಣಶರೀರಾಖ್ಯಸ್ವಪುರಂ ಪ್ರವಿಶ್ಯ ತತೋ ನಾಡೀಃ ಪ್ರವಿಶತಿ, ನಾಡೀಭ್ಯೋ ನಿರ್ಗತ್ಯ ಹೃದಯಪುಂಡರೀಕಂ ಪ್ರವಿಶತಿ. ತತ್ಪುಂಡರೀಕಾನ್ನಿರ್ಗತ್ಯ ತದವಚ್ಛಿನ್ನಬ್ರಹ್ಮಸಾನ್ನಿಧ್ಯೇ ತದ್ಘೋರಶಕ್ತ್ಯಾತ್ಮಕತಮಃಪ್ರಧಾನ ಪ್ರಾಸಾದೇ ಶೇತೇ. ಅಥ ಯತ್ರೈತತ್ಸುಪ್ತಃ ಸಮಸ್ತಸಂಪ್ರಸನ್ನಃ ಸ್ವಪ್ನಂ ನ ವಿಜಾನಾತಿ. ತಾಸು ತದಾ ನಾಡೀಷು ಸುಪ್ತೋ ಭವತೀತಿ. ಅಥ ಯದಾ ಸುಷುಪ್ತೋ ಭವತಿ ತದಾ ನ ಕಸ್ಯಚನ ವೇದ ಹಿ ತಾ ನಾಮ ನಾಡ್ಯೋ ದ್ವಾಸಪ್ತತಿಸ್ಸಹಸ್ರಾಣಿ ಹೃದಯಾತ್ಪುರೀತತಮಭಿಪ್ರತಿಷ್ಠಂತೇ. ತಾಭಿಃ ಪ್ರತ್ಯವಸೃಪ್ಯ ಪುರೀತತಿ ಶೇತೇ ಇತಿ. "ಯತ್ರೈತತ್ಪುರುಷಃ ಸ್ವಪಿತಿ ನಾಮ ಸತಾ ಸೌಮ್ಯ ತದಾ ಸಂಪನ್ನೋ ಭವತಿ" ಇತಿ, "ಸುಷುಪ್ತಿಕಾಲೇ ಸಕಲೇ ವಿಲೀನೇ ತಮೋಽಭಿಭೂತಸ್ಸುಖರೂಪಮೇತಿ", "ಕರ್ಣಿಕಾಯಾಂ ಸ್ವಪ್ನಃ, ಲಿಂಗೇ ಸುಷುಪ್ತಿಃ, ಪದ್ಮತ್ಯಾಗೇ

ತುರೀಯಾ " " ಜಾಗ್ರತ್ಸ್ವಪ್ನೇಷು ಜೀವಸ್ತು ರಾಗದ್ವೇಷಾದಿಸಂಕುಲಃ। ಸುಷುಪ್ತೌ ತದಭಾವಾಚ್ಚ ಜೀವಶ್ಶಂಕರತಾಂ ಗತಃ॥" ಇತ್ಯಾದಿಶ್ರುತಿಸ್ಮೃತಿಷು ಜೀವಸ್ಯ ಸುಷುಪ್ತೌ ದ್ವಾಸಪ್ತತಿಸಹಸ್ರನಾಡೀಷು ತನ್ಮೂಲಭೂತಪುರೀತನ್ನಾಡ್ಯಾಂ ಹೃದಯಪುಂಡರೀಕೇ ಬ್ರಹ್ಮಣಿ ತಮಃಪ್ರಧಾನೇ ಚ ಶಯನೋಪದೇಶಾತ್, "ಉದಿತೇ ಜುಹೋತ್ಯನುದಿತೇ ಜುಹೋತಿ" ಇತಿ ವಿಕಲ್ಪೋ ವಾ "ಯಥಾವ್ರೀಹಿಭಿರ್ಯಜತೇ ಯವೈರ್ವಾ ಯಜತೇ" ಇತ್ಯಾದಿವತ್ಸಮುಚ್ಚಯೋ ವಾ ಇತಿ ಸಂದಿಹ್ಯತೇ. " ಅಥ ಯದಾ ಸುಷುಪ್ತೋ ಭವತಿ " ಇತಿ ಶ್ರುತಾವಸ್ಯ ಜೀವಸ್ಯ ಸ್ವಹೃದಯಪುಂಡರೀಕಪ್ರಾಸಾದಶಯತ್ವವ್ಯಪದೇಶಾತ್ತಸ್ಯೈವ ಸುಪ್ತಿಕರ್ತೃತ್ವಂ ಸೂಚಿತಂ. "ಲಿಂಗೇ ಸುಷುಪ್ತಿಃ" "ಸತಾ ಸೌಮ್ಯ ತದಾ ಸಂಪನ್ನೋ ಭವತಿ" ಇತ್ಯಾದಿಶ್ರುತಿಶತೇಷು ತಸ್ಯ ತತ್ರ ತದೀಶ್ವರಪ್ರಾಪ್ತಿತ್ವಮಿತಿ ಯತ್ತದಯುಕ್ತಂ. " ಬ್ರಹ್ಮವಿದಾಪ್ನೋತಿ ಪರಂ " " ಸ ಪುನರಾವರ್ತತೇ " ಇತ್ಯಾದಿಷು ಈಶ್ವರಪ್ರಾಪ್ತಾನಾಮಪುನರಾವೃತ್ತಿವ್ಯವಸ್ಥಾಪನಾತ್, ಸುಪ್ತೌ ಭೂಯೋ ಭೂಯೋಽಪಿ ಪುನರಾವೃತ್ತೇರಸ್ಯ ದರ್ಶನಾಚ್ಚ ತದೀಶ್ವರಾವಚ್ಛಿನ್ನತಮಶ್ಶಕ್ತಿವಿಲೀನತ್ವಮಿತಿ ಯತ್ತದನುಪಪನ್ನಂ. ತಮಃಪ್ರಕಾಶವತ್ಸ್ವಪ್ರಕಾಶಸ್ಯ ಜ್ಞಾನಾತ್ಮಕಸ್ಯ ಬ್ರಹ್ಮಣಸ್ತಮೋರೂಪಜ್ಞಾನಶಕ್ತೇಃ ಪರಸ್ಪರವಿರೋಧಸ್ವಭಾವತ್ವಾತ್, " ಏಕಮೇವಾದ್ವಿತೀಯಂ ಬ್ರಹ್ಮ " " ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ " ಇತ್ಯಾದಿಬಹುಶ್ರುತಿವಿರೋಧಾಚ್ಚ. ನನು ಆಗಮಸಪ್ರಯೋಜನತ್ವೇ ತುಲ್ಯಕಾರ್ಯತಯಾ ಯುಗಪದನೇಕಸ್ಥಾನವೃತ್ತ್ಯಯೋಗಾತ್ ಕಾರ್ಯಭೇದಾವಗಮಕತ್ವೇನ ಪ್ರಾಸಾದಖಟ್ವಾಪರ್ಯಂಕಾನಾಮಿವ ಕಾರ್ಯಭೇದಾತ್ಸಮುಚ್ಚಯತ್ವವಿಧಿಮಾಶ್ರಿತ್ಯ, " ವ್ರೀಹಿಭಿರ್ಯಜತೇ ಯವೈರ್ಯಜತೇ " ಇತ್ಯತ್ರ ಪುರೋಡಾಶನಿಷ್ಪಾದನಪ್ರಯೋಜನತ್ವವತ್ ಸುಪ್ತಿಪ್ರಯೋಜನೈಕತ್ವೇನ ಕದಾಚಿನ್ನಾಡೀಷು ಕದಾಚಿತ್ ಹೃದಯಪುಂಡರೀಕೇ ಪರಮಾತ್ಮನಿ ಚ ತಸ್ಯ ತತ್ರ ಶಯನಮಿತಿ ಚೇದಸಮಂಜಸಂ, ಮುಖ್ಯವಿಧ್ಯಭಾವಹೇತುತ್ವೇನ ಅನವಸ್ಥಾಪ್ರಸಂಗಾತ್. ಅತಃ ಸ್ವಹೃದಯಪುಂಡರೀಕ ಏವ ಸುಪ್ತೌಸ್ಥಿತಿರಿತಿ ಪ್ರಾಪ್ತೇ ಪ್ರಚಕ್ಷ್ಮಹೇ ತದಭಾವ ಇತಿ. " ಸುಷುಪ್ತಿಕಾಲೇ ಸಕಲೇ ವಿಲೀನೇ ತಮೋಽಭಿಭೂತಃ ಸುಖರೂಪಮೇತಿ " ಇತ್ಯಾದಿಶ್ರುತಿಶತಶ್ರವಣಾತ್ಸುಪ್ತೌ ಪರಮೇಶ್ವರಪಾಶಶಕ್ತ್ಯಾ ಜೀವಸ್ಯ ಜಾಗ್ರತ್ಸ್ವಪ್ನಾಭಾವಸ್ಸುಪ್ತಿಃ ನಾಡೀಷು ಪುರೀತತ್ಯಾತ್ಮನಿ ಚ ಭವತೀತ್ಯೇಷಾಂ ಸ್ಥಾನಾನಾಂ ಸಮುಚ್ಚಯೋ ನಿರ್ಣೀಯತೇ. ಕುತಃ ತಚ್ಛ್ರುತೇಃ ತಸ್ಯ ಸ್ಥಾನತ್ರಯವಿಧಾಯಕಶ್ರುತಿದರ್ಶನಾತ್. ತಸ್ಮಾತ್ತಸ್ಯ ಸುಪ್ತೌ ಹೃತ್ಪುಂಡರೀಕಾ

ವಚ್ಛಿನ್ನಶಿವತತ್ತ್ವಪ್ರಾಪ್ತಿಸಂಭವೇಽಪಿ ತಮೋರೂಪಪಾಶಶಕ್ತಿವಿಶಿಷ್ಟತಯಾ ತತ್ಪ್ರಾಪ್ತೇರನುಪಪನ್ನತ್ವಾತ್ ಪುನಃಪುನರಾಗಮನಮುಪಪದ್ಯತೇ. "ನ ಸ ಪುನರಾವರ್ತತೇ" ಇತಿ ಶ್ರುತೀನಾಂ ಪರಮೇಶ್ವರಧ್ಯಾನಧಾರಣಾದ್ಯುಪಾಸನಜ್ಞಾನದ್ವಾರಾ ಪಾಶವಿಚ್ಛೇದಲಕ್ಷಣಪೂರ್ವಕಮುಕ್ತಜೀವಪರತ್ವಾದವಿರೋಧಃ. ಜೀವಸ್ಯ ಗಮನಾಗಮನವೇಳಾಯಾಂ ತತ್ಪಾಶಶಕ್ತ್ಯಾ ಸ್ವಜ್ಞಾನತಿರೋಹಿತತ್ವಸಂಭವಾತ್ ಸುಪ್ತಿಗಮನಹೇತುತ್ವಮಪಿ ಶಿವಸ್ಯ ಸ್ಪಷ್ಟಮುಪದಿಷ್ಟಂ. ಅತಏವ "ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ ಸಂಸಾರಮೋಕ್ಷಸ್ಥಿತಿಬಂಧಹೇತುಃ" "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಇತ್ಯಾದೌ ಸೃಷ್ಟಿಸ್ಥಿತಿಲಯಾವಿರ್ಭಾವತಿರೋಭಾನಾತ್ಮಕಪ್ರಧಾನಜೀವವಿಷಯಕಪಂಚಕೃತ್ಯಪರಾಯಣತ್ವಂ ಪರಮಶಿವಾನ್ನೇತರಸ್ಯೈವೇತಿ ಗಮ್ಯತೇ. ತೇಜಸ್ತಿಮಿರವತ್ಪಾಶಶಕ್ತಿಪರಮೇಶ್ವರಯೋಃ ನ ಪರಸ್ಪರವಿರೋಧಃ ಶ್ರುತಿಯುಕ್ತ್ಯನುಭವಸಿದ್ಧತ್ವಾತ್, ಸ್ವಾಧೀನಶಕ್ತತ್ವಾತ್, ಸ್ವಜನ್ಯತ್ವಾಚ್ಚ. "ಸಮಸ್ತಸಾಕ್ಷಿಂ ತಮಸಃ ಪರಸ್ತಾತ್," "ವಿಜ್ಞಾನಂ ಚಾವಿಜ್ಞಾನಂ ಚ ಸತ್ಯಂಚಾನೃತಂ ಚ ಸತ್ಯಮಭವತ್" ಇತ್ಯಾದಿಶ್ರುತಿಷು ಅವಿರೋಧತಯಾ ತಮಃಪರತ್ವತಮೋಽಧಿಷ್ಠಾನತ್ವಸ್ವಾಧೀನಸರ್ವಶಕ್ತ್ಯವಚ್ಛಿನ್ನತ್ವಾನಾಂ ನಿರ್ದೇಶಾತ್ ಸಮುಚಿತಂ. ಸೋಪಾನಾರೋಹಣಸ್ಯ ಸೌಧಪ್ರವೇಶವಿರೋಧವನ್ನಾಡ್ಯಾದಿಪ್ರವೇಶಸ್ತು ಮೂಲಾಜ್ಞಾನತಮಶ್ಶಕ್ತಿವಿಶಿಷ್ಟತಯಾ ಪರಮೇಶ್ವರಸಾನ್ನಿಧ್ಯಪ್ರವೇಶಾಪ್ರತಿಯೋಗೀತಿ ಸಿದ್ಧಂ. ಅತಸ್ಸುಪ್ತಾತೂಲಾಜ್ಞಾನಾಪನ್ನಸ್ಯ ಜೀವಸ್ಯ ಮೂಲಾಜ್ಞಾನಾವಚ್ಛಿನ್ನಹೇತುದ್ವಾರಾ ನಾಡ್ಯಾದಿಮಾರ್ಗೇಣ ಜಾಗ್ರತ್ಸ್ವಪ್ನಾಯಾಸಶಮನಾಯ ಶಿವ ಏವ ಸ್ವಸಾನ್ನಿಧ್ಯೇ ನಿವೇಶ್ಯ ಸ್ವಾನಂದನಿವೇಶಂ ದದಾತೀತಿ ನಿಶ್ಚೀಯತೇ.

ಈಶ್ವರನೇ ಸ್ವಪ್ನಕ್ಕೆ ಕರ್ತೃವಾಗಲಿ; ಆದರೆ ಸುಷುಪ್ತಿಗೆ ಯಾರು ಕಾರಣವಾಗಬಲ್ಲರು? ಸ್ಥೂಲ ಸೂಕ್ಷ್ಮ ಜಾಗ್ರತ್ ಸ್ವಪ್ನಪ್ರಪಂಚಗಳನ್ನರಿತ ಜೀವನು ಸುಷುಪ್ತಿಯಲ್ಲಿ ಶರೀರದೊಳಗೆ ಎಲ್ಲಿ ಮಲಗುತ್ತಾನೆ? ಆಗ ಅವನು ಪ್ರಪಂಚವನ್ನು ಹೇಗೆ ಮರೆಯುತ್ತಾನೆ? ಎಂದು ಆಕ್ಷೇಪಿಸಿ ಸಮಾಧಾನವನ್ನು ಹೇಳುತ್ತಾನೆ. ಹಿಂದೆ ಸ್ವಪ್ನಾವಸ್ಥೆಯನ್ನು ವಿಚಾರಿಸಿ ಜೀವರ ಕರ್ಮಾನುಗುಣವಾಗಿ ಪರಶಿವನೇ ಅದಕ್ಕೆ ಕರ್ತನೆಂದು ಸಾಧಿಸಿ ಈಗ ಸುಷುಪ್ತಿಗೂ ಅವನೇ ಕರ್ತನೆಂದೂ, ಆಗಲೂ ಅವನೇ ಜೀವರನ್ನು ನಿಯಮಿಸುವನೆಂದೂ ಹೇಳಲಾಗುವುದು. ಜಾಗ್ರತ್ಸ್ವಪ್ನಗಳಲ್ಲಿ ಶರೀರೇಂದ್ರಿಯಗಳ ಜಗ್ಗೆ ನಾನು ನನ್ನದು ಎಂದು ಅಭಿಮಾನಿಸುವ ಜೀವನು ಸುಷುಪ್ತಿಯಲ್ಲಿ ಆ ಅಭಿಮಾನವಿಲ್ಲದವನಾಗಿ ನಾಡಿಗಳಲ್ಲೂ ಪರಮಶಿವನಲ್ಲೂ ಹೃದಯಕಮಲದಲ್ಲೂ ಮಲಗುತ್ತಾನೆ. "ನಾಡೀ ಮತ್ತು ಹೃದಯಕಮಲ ಮೊದ

ಲಾದ ಪ್ರಾಕಾರವನ್ನು ಪ್ರವೇಶಿಸಿ ಆ ಕಮಲದೊಳಗೆ ಶಿವನ ಚಿಚ್ಛಕ್ತ್ಯಂಶವೂ ಗುಣತ್ರಯಸಮಷ್ಟಿರೂಪವೂ ತಮಃಪ್ರಧಾನವೂ ಆದ ಪ್ರಾಸಾದದಲ್ಲಿ ಜೀವನೆಂಬ ರಾಜನು ಮಲಗುತ್ತಾನೆ" ಎಂದು ಶ್ರುತಿಯು ತಿಳಿಸುತ್ತದೆ. "ಈ ನಾಡಿಗಳಲ್ಲಿ ಅವನು ಮಲಗುತ್ತಾನೆ. ಆ ನಾಡಿಗಳಿಂದ ಹೊರಟು ಪುರೀತತ್ ಎಂಬ ನಾಡಿಯಲ್ಲಿ ಮಲಗುತ್ತಾನೆ. ಅಲ್ಲಿಂದ ಹೊರಟು ಪರಮಾತ್ಮನಲ್ಲಿ ಮಲಗುತ್ತಾನೆ. ಅಲ್ಲಿ ಮಲಗಿದ್ದರೂ ಹಾಗೆ ಪರಮಾತ್ಮನೊಡನೆ ಮಲಗಿರುವುದನ್ನು ಜೀವರು ತಿಳಿಯಲಾರರು" ಈ ಶ್ರುತಿಯಲ್ಲಿ ನಾಡೀ ಮತ್ತು ಪುರೀತತ್‌ಗಳ ಮೂಲಕ ಜೀವನು ಅಲ್ಲಿಯೇ ಇರುವ ಪರಶಿವಬ್ರಹ್ಮದ ಘೋರಾಂಧಕಾರವೇ ಪ್ರಧಾನವಾದ ಪಾಶಶಕ್ತಿಯಲ್ಲಿ ಸುಷುಪ್ತ್ಯವಸ್ಥೆಯಲ್ಲಿ ಮಲಗುವನೆಂದು ಹೇಳಲಾಗಿದೆ. ಜೀವನೆಂಬ ರಾಜನು ತನ್ನ ರಾಷ್ಟ್ರಗಳಾದ ಜಾಗ್ರತ್ಸ್ವಪ್ನಪ್ರಪಂಚಗಳಲ್ಲಿ ಸಂಚರಿಸುತ್ತ ಕಾರಣಶರೀರವೆಂಬ ತನ್ನ ನಗರವನ್ನು ಪ್ರವೇಶಿಸಿ ಅಲ್ಲಿಂದ ನಾಡಿಗಳನ್ನು ಪ್ರವೇಶಿಸುತ್ತಾನೆ. ಆ ನಾಡಿಗಳಿಂದ ಹೊರಟು ಹೃದಯ ಕಮಲವನ್ನು ಹೊಕ್ಕು ಅಲ್ಲಿಂದ ಹೊರಟು ಅಲ್ಲಿಯೇ ಬ್ರಹ್ಮದಬಳಿ ಇರುವ ಘೋರಶಕ್ತಿ ಎಂಬ ತಮಃಪ್ರಧಾನವಾದ ಪ್ರಾಸಾದದಲ್ಲಿ ಮಲಗುತ್ತಾನೆ ಎಂಬುದೇ ಶ್ರುತಿ ಸೂತ್ರಗಳ ಸೂಕ್ಷ್ಮಾರ್ಥ. "ಯಾವಾಗ ಇಲ್ಲಿ ಮಲಗಿದವನು ಯಾವುದನ್ನು ಅರಿಯುವುದಿಲ್ಲವೋ ಆಗ ಆ ನಾಡಿಗಳಲ್ಲಿ ಮಲಗುತ್ತಾನೆ. ಯಾವಾಗ ಹೀಗೆ ಮಲಗುತ್ತಾನೋ ಆಗ ಏನೊಂದನ್ನೂ ಅವನು ತಿಳಿಯುವುದಿಲ್ಲ. ಆ ನಾಡಿಗಳು 72 ಸಾವಿರ ಇವೆ. ಅವು ಹೃದಯದಿಂದ ಪುರೀತತ್ ಎಂಬ ನಾಡಿಯವರೆಗೂ ವ್ಯಾಪಿಸಿವೆ. ಅವುಗಳಿಂದ ಹೊರಟು ಪುರೀತನ್ನಾಡಿಯಲ್ಲಿ ಮಲಗುತ್ತಾನೆ. ಇಲ್ಲಿ ಪುರುಷನು ಮಲಗುತ್ತಾನೆ ಎಂದರೆ ಸದ್ವಸ್ತುವಿನೊಡನೆ ಬೆರೆಯುತ್ತಾನೆ ಎಂದು ಅರ್ಥವಾಗುತ್ತದೆ. ಸುಷುಪ್ತಿಯಲ್ಲಿ ಎಲ್ಲವೂ ಲಯಹೊಂದಿದರೆ ಜೀವನು ತಮಃಪಾಶದಿಂದ ತಿರೋಹಿತನಾಗಿ ಆನಂದರೂಪನಾಗುತ್ತಾನೆ. ಕರ್ಣಿಕೆಯಲ್ಲಿ ಇದ್ದಾಗ ಸ್ವಪ್ನವೂ, ಲಿಂಗದಲ್ಲಿದ್ದಾಗ ಸುಷುಪ್ತಿಯೂ, ಕಮಲವನ್ನು ತೊರೆದಾಗ ತುರೀಯಾವಸ್ಥೆಯೂ ಅವನಿಗೆ ಉಂಟಾಗುತ್ತವೆ. ಜಾಗ್ರತ್ಸ್ವಪ್ನಗಳಲ್ಲಿ ಜೀವನು ರಾಗದ್ವೇಷಗಳಿಂದ ಕೂಡಿರುವನು. ಸುಷುಪ್ತಿಯಲ್ಲಿ ಅವಿಲ್ಲದ್ದರಿಂದ ಜೀವನು ಶಂಕರನಾಗುತ್ತಾನೆ" ಈ ಬಗೆಯ ಶ್ರುತಿಸ್ಮೃತಿಗಳಲ್ಲಿ ಜೀವನು ಸುಷುಪ್ತಿಯಲ್ಲಿ 72 ಸಾವಿರ ನಾಡಿಗಳಲ್ಲಿ ಸಂಚರಿಸಿ ಅವೆಲ್ಲಕ್ಕೂ ಮೂಲವಾದ ಪುರೀತನ್ನಾಡಿಯಲ್ಲೂ ಹೃದಯಕಮಲದಲ್ಲೂ ಬ್ರಹ್ಮದಲ್ಲೂ ತಮೋರೂಪವಾದ ಪಾಶಶಕ್ತಿಯಲ್ಲಿ ಮಲಗುವನೆಂದು ಹೇಳಿರುವುದರಿಂದ "ಹೋಮ ಮಾಡಲಿಕ್ಕೆ ಸೂರ್ಯನು ಉದಯವಾದಮೇಲೆಯೋ ಅಥವಾ ಉದಯಕ್ಕೆ ಮೊದಲೋ" ಎಂಬಂತೆ ವಿಕಲ್ಪವೋ? ಅಥವಾ "ಭತ್ತದಿಂದಲೂ ಮತ್ತು ಗೋಧಿಯಿಂದಲೂ ಯಾಗಮಾಡುತ್ತಾನೆ" ಎಂಬಂತೆ ಸಮುಚ್ಚಯವೋ? ಎಂದು ಸಂದೇಹವುಂಟಾಗುತ್ತದೆ. ಸುಷುಪ್ತಿಯಲ್ಲಿ ಜೀವನು ತನ್ನ ಹೃದಯಕಮಲವೆಂಬ ಪ್ರಾಸಾದದಲ್ಲಿ ಮಲಗುವನೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಅವನೇ ಸುಷುಪ್ತಿಗೆ ಕರ್ತನೆಂಬುದು

ಸೂಚಿತವಾಗುತ್ತದೆ. ಜೀವನು ಪ್ರಾಣಲಿಂಗದೊಡನೆ ಬೆರೆತಾಗ ಸುಷುಪ್ತಿಯುಂಟಾಗುತ್ತದೆ. ಆಗ ಅವನಿಗೆ ಸತ್ವವಾಗಮವುಂಟಾಗುತ್ತದೆ. ಆದರೆ ಜೀವನು ಅಲ್ಲಿ ಈಶ್ವರನೊಡನೆ ಸೇರುವನೆಂಬುದು ಯುಕ್ತವಲ್ಲ; ಯಾಕೆಂದರೆ "ಬ್ರಹ್ಮವನ್ನು ತಿಳಿದವನು ಆ ಬ್ರಹ್ಮವನ್ನೇ ಹೊಂದುತ್ತಾನೆ," "ಅವನು ಮತ್ತೆ ಹಿಂತಿರುಗುವುದಿಲ್ಲ" ಈ ಬಗೆಯ ಶ್ರುತಿಗಳಲ್ಲಿ ಈಶ್ವರನಲ್ಲಿ ಬೆರೆತವರು ಮತ್ತೆ ಹಿಂತಿರುಗುವುದಿಲ್ಲವೆಂದು ವ್ಯವಸ್ಥೆಯಾಗಿದೆ. ಸುಷುಪ್ತಿಯಲ್ಲಿ ಅವನು ಮತ್ತೆ ಮತ್ತೆ ಹಿಂತಿರುಗಿಬರುವುದರಿಂದ ಆಗ ಅವನು ಈಶ್ವರನ ತಮಶ್ಶಕ್ತಿಯಲ್ಲಿ ಲಯವಾಗಿರುವನೆಂಬುದೂ ಯುಕ್ತವಲ್ಲ; ಯಾಕೆಂದರೆ ಬೆಳಕಿನಂತೆ ಸ್ವಪ್ರಕಾಶನೂ ಜ್ಞಾನರೂಪನೂ ಆದ ಪರಮಾತ್ಮನಿಗೂ ಕತ್ತಲೆಯಂತೆ ಅಜ್ಞಾನರೂಪವಾದ ಪಾಶಶಕ್ತಿಗೂ ಪರಸ್ಪರವಾಗಿ ವಿರೋಧವಿರುವುದರಿಂದ "ಒಬ್ಬನೇ ಬ್ರಹ್ಮ ಅದ್ವಿತೀಯವಾಗಿದ್ದಾನೆ" "ಒಬ್ಬ ರುದ್ರನೇ ಎರಡನೆಯವನಿಲ್ಲದಿರುವನು" ಈ ಬಗೆಯ ಅನೇಕ ಶ್ರುತಿಗಳ ವಿರೋಧವೂ ಸಂಭವಿಸುತ್ತದೆ. ಒಂದೇಸಮಯದಲ್ಲಿ ಅನೇಕ ಸ್ಥಾನಗಳಲ್ಲಿ ಒಬ್ಬನೇ ಇರುವುದಕ್ಕೆ ಸಾಧ್ಯವಿಲ್ಲವಾದ್ದರಿಂದ ಕಾರ್ಯಭೇದದಿಂದ ಪ್ರಾಸಾದ, ಮಂಚ, ಮತ್ತು ಹಾಸಿಗೆ ಮೂರರಲ್ಲೂ ಒಬ್ಬನೇ ಇರುವಂತೆ ಇಲ್ಲಿಯೂ ಸಮುಚ್ಚಯವನ್ನಾಶ್ರಯಿಸಿ "ಭತ್ತದಿಂದಲೂ ಗೋಧಿಯಿಂದಲೂ ಯಾಗಮಾಡುತ್ತಾನೆ" ಎಂಬಲ್ಲಿ ಹವಿಸ್ಸಂಪಾದನವೇ ಪ್ರಯೋಜನವಾಗಿರುವಂತೆ ಜೀವನಿಗೆ ಸುಷುಪ್ತಿಯನ್ನು ಅನುಭವಿಸುವುದೊಂದೇ ಪ್ರಯೋಜನವಾಗಿರುವುದರಿಂದ ಕೆಲವುವೇಳೆ ನಾಡಿಗಳಲ್ಲೂ, ಕೆಲವುವೇಳೆ ಹೃದಯಕಮಲದಲ್ಲೂ, ಕೆಲವುವೇಳೆ ಪರಮಾತ್ಮನಲ್ಲೂ, ಜೀವನು ಮಲಗುವನೆಂದು ಹೇಳಿದರೆ ಅದೂ ಸಮಂಜಸವಲ್ಲ; ಯಾಕೆಂದರೆ ಈ ಅರ್ಥವನ್ನು ಮುಖ್ಯವೆಂದು ಹೇಳುವ ವಿಧಿ ಯಾವುದೂ ಇಲ್ಲ. ಆದ್ದರಿಂದ "ತನ್ನ ಹೃದಯಕಮಲದಲ್ಲಿಯೇ ಅವನು ಸುಷುಪ್ತಿಯಲ್ಲಿ ನೆಲಸುವನೆಂದು ಆಕ್ಷೇಪಬಂದರೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. "ಸುಷುಪ್ತಿಯಲ್ಲಿ ಎಲ್ಲವೂ ವಿಲೀನವಾಗಲು ಕತ್ತಲೆಯಿಂದ ಆವೃತನಾಗಿ ಜೀವನು ಸುಖಸ್ವರೂಪನಾಗುತ್ತಾನೆ." ಎಂದು ಶ್ರುತಿಯಲ್ಲಿ ಹೇಳಿದಂತೆ ಸುಷುಪ್ತಿಯಲ್ಲಿ ಪರಮೇಶ್ವರನ ಪಾಶಶಕ್ತಿಯಿಂದ ಜೀವನಿಗೆ ಜಾಗ್ರತ್ಸ್ವಪ್ನಗಳ ತಡೆಯಾಗುವುದರಿಂದ ನಾಡಿಗಳಲ್ಲೂ ಪುರೀತನ್ನಾಡಿಯಲ್ಲೂ ಪರಮಶಿವನಲ್ಲೂ ಅವನು ಮಲಗುತ್ತಾನೆ. ಹೀಗೆ ಈ ಸ್ಥಾನಗಳ ಗುಂಪನ್ನು ನಿರ್ಣಯಿಸಲಾಗಿದೆ; ಯಾಕೆಂದರೆ ಅವನಿಗೆ ಮೂರೇ ಸ್ಥಾನಗಳೆಂದು ಶ್ರುತಿಯಲ್ಲಿ ವಿಧಿಸಲಾಗಿದೆ. ಆದ್ದರಿಂದ ಅವನಿಗೆ ಸುಷುಪ್ತಿಯಲ್ಲಿ ಹೃದಯಕಮಲದಲ್ಲಿರುವ ಶಿವನೊಡನೆ ಸೇರಿದ್ದರೂ ತಮೋರೂಪವಾದ ಪಾಶಶಕ್ತಿಯೊಡಗೂಡಿರುವುದರಿಂದ ಶಿವನಲ್ಲಿ ಸೇರಿದನೆಂಬುದು ಹೊಂದದೇ ಇರುವುದರಿಂದ ಮತ್ತೆ ಮತ್ತೆ ಹಿಂತಿರುಗುವನೆಂಬುದೇ ಯುಕ್ತವಾಗುತ್ತದೆ. "ಅವನು ಮತ್ತೆ ಹಿಂತಿರುಗುವುದಿಲ್ಲ" ಎಂಬ ಶ್ರುತಿಯು ಪರಮೇಶ್ವನ ಧ್ಯಾನ ಧಾರಣ ಮೊದಲಾದ ಉಪಾಸನದ ಮೂಲಕ

ಪಾಶವನ್ನು ತೊಲಗಿಸಿಕೊಂಡಿರುವ ಮುಕ್ತಜೀವನಿಗೆ ಅನ್ವಯಿಸುತ್ತದೆಯಾದ್ದರಿಂದ ವಿರೋಧವೇನೂ ಇಲ್ಲ. ಜೀವನು ಹೋಗುವಾಗಲೂ ಮತ್ತು ಬರುವಾಗಲೂ ಪಾಶಶಕ್ತಿಯಿಂದ ತನ್ನ ಜ್ಞಾನವು ತಿರೋಹಿತವಾಗುವುದರಿಂದ ಸುಷುಪ್ತಿಗಾಗಿ ಅವನು ಹೋಗಬೇಕಾದರೂ ಶಿವನೇ ಕಾರಣನೆಂಬುದು ಸ್ಪಷ್ಟಪಡುತ್ತದೆ. ಆದ್ದರಿಂದ "ಜೀವನ ಸಂಸಾರಮೋಕ್ಷಸ್ಥಿತಿಬಂಧಗಳೆಲ್ಲಕ್ಕೂ ಶಿವನೇ ಕಾರಣನು" "ಯಾವನಿಂದ ಈ ಭೂತಗಳು ಹುಟ್ಟುವುವೋ" ಎಂಬ ಶ್ರುತಿಗಳಲ್ಲಿ ಜೀವನ ಸೃಷ್ಟಿಸ್ಥಿತಿಲಯ ಆವಿರ್ಭಾವ ತಿರೋಧಾನಗಳೆಂಬ ಪಂಚಕೃತ್ಯಗಳ ನಿರ್ವಾಹವು ಶಿವನಲ್ಲದೆ ಬೇರೆ ಯಾರಿಗೂ ಸೇರಿದ್ದಲ್ಲವೆಂಬುದು ಸ್ಪಷ್ಟಪಡುತ್ತದೆ. ಕತ್ತಲೆ ಬೆಳಕುಗಳಂತೆ ಪಾಶಶಕ್ತಿಗೂ ಪರಮೇಶ್ವರನಿಗೂ ಪರಸ್ಪರವಿರೋಧವಿಲ್ಲವೆಂದು ಶ್ರುತಿ ಯುಕ್ತಿ ಅನುಭವಗಳಿಂದ ಸಿದ್ಧವಾಗಿದೆ. ಇದೂಅಲ್ಲದೆ ಪಾಶಶಕ್ತಿಯು ಶಿವನಿಂದಲೇ ಹುಟ್ಟಿ ಶಿವನಿಗಧೀನವಾಗಿದೆ. "ಶಿವನು ಎಲ್ಲಕ್ಕೂಸಾಕ್ಷಿಯಾಗಿ ಕತ್ತಲೆಯಿಂದಾಚೆಗೆ ಇರುವನು. ಅವನೇ ಜ್ಞಾನವೂ ಸತ್ಯವೂ ಅನೃತವೂ ಅಜ್ಞಾನವೂ ಆಗಿರುವನು" ಈ ಬಗೆಯ ಶ್ರುತಿಗಳಲ್ಲಿ ಶಿವನು ಕತ್ತಲೆಯಿಂದ ಆಚೆಗಿದ್ದು ಕತ್ತಲೆಗೆ ಆಶ್ರಯನೂ, ತನಗಧೀನವಾದ ಎಲ್ಲಾ ಶಕ್ತಿಗಳಿಂದ ಕೂಡಿರುವನೆಂದೂ ಹೇಳಿದ್ದು ಯುಕ್ತವೇ ಆಗಿದೆ. ಪ್ರಾಸಾದವನ್ನು ಪ್ರವೇಶಿಸಲು ಸೋಪಾನಾರೋಹಣವು ವಿರೋಧವಾಗುವಂತೆ ನಾಡ್ಯಾದಿಗಳಲ್ಲಿ ಜೀವನ ಪ್ರವೇಶವು ಮೂಲಾಜ್ಞಾನ ಮತ್ತು ತಮಶ್ಶಕ್ತಿಗಳಿಂದ ಕೂಡಿರುವುದರಿಂದ ಪರಮೇಶ್ವರನ ಸಾನ್ನಿಧ್ಯಕ್ಕೆ ವಿರೋಧಿಯಾಗುವುದು. ಆದ್ದರಿಂದ ಸುಷುಪ್ತಿಯಲ್ಲಿ ಮೂಲಾಜ್ಞಾನವಿಶಿಷ್ಟನಾದ ಜೀವನಿಗೆ ಜಾಗ್ರತ್ಕಾಲದಲ್ಲಿ ಆಗಿದ್ದ ಆಯಾಸದ ಪರಿಹಾರಾರ್ಥವಾಗಿ ಶಿವನೇ ತನ್ನ ಸಮೀಪಕ್ಕೆ ಅವನನ್ನು ಮೂಲಾಜ್ಞಾನದೊಂದಿಗೆ ಕೂಡಿದ ನಾಡೀಮಾರ್ಗದಿಂದ ಕರೆಸಿಕೊಂಡು ತನ್ನ ಆನಂದದ ಅನುಭವವನ್ನು ದೊರಕಿಸುತ್ತಾನೆ ಎಂದು ನಿಶ್ಚಿತವಾಗುತ್ತದೆ.

ನನು ಪರಮೇಶ್ವರೋ ಹಿ ಜೀವಸ್ಯ ಸ್ವಸಾನ್ನಿಧ್ಯೇ ಪರಮಾನಂದಪ್ರದಸ್ಸ್ಯಾತ್ತಥಾಪಿ ಪುನಃ ಪ್ರಬೋಧಕಾಲೇ ಪುಣ್ಯಾಪುಣ್ಯಫಲಭೋಗಾರ್ಥಂ ಶಾರೀರಸ್ಯೈವ ಸ್ವಾತಂತ್ರ್ಯೇಣ ಪುನರಾಗಮನಮಸ್ತು ಇತ್ಯಾಶಂಕಾಯಾಮಾಹ. ಅತಃ ಪ್ರಬೋಧೋಽಸ್ಮಾತ್ ॥ ೮ ॥ ಯತೋ ಬ್ರಹ್ಮೈವ ಸುಪ್ತ್ಯಧಿಷ್ಠಾನಂ ಅತಃ ಅಸ್ಮಾದ್ಬ್ರಹ್ಮಣಃ ಏಷಾಂ ಜೀವಾನಾಂ ಪ್ರಬೋಧೋ ನಿರ್ದಿಷ್ಟಃ. "ಸತ ಆಗಮ್ಯ ನ ವಿದುಸ್ಸತ ಆಗಚ್ಛಾಮಹ ಇತಿ"ಇತ್ಯಾದಿಶ್ರುತಿಶ್ರವಣಾತ್. ತಸ್ಮಾಜ್ಜೀವಸ್ಯ ನ ಸ್ವತಃ ಪ್ರಬೋಧಕರ್ತೃತ್ವಂ. ಸುಪ್ತ್ಯವಸ್ಥಾನಂತರಂ ಹೃದಯಪುಂಡರೀಕೇ ಪ್ರಭಾಸಮಾನಜ್ಯೋತಿರ್ಮಯಲಿಂಗೇ ಪರಬ್ರಹ್ಮಣಿ ಮಾಯಾಪಾಶಾವಚ್ಛಿನ್ನಶಯನೋ ಜೀವಃ ಪ್ರಬೋಧಸ್ಸನ್ ಪ್ರಕೃಷ್ಟೋ ಬೋಧೋ ಯಸ್ಯ ಸಃ ಶರೀರೇಂದ್ರಿಯಾದ್ಯಭಿಮಾನಶವಿಶಿಷ್ಟಸ್ಸನ್ ಪುನರುತ್ಥಾಯ ಜಾಗ್ರತ್ಪ್ರಪಂಚಾಖ್ಯರಾಷ್ಟ್ರಪ್ರದರ್ಶನಾಯ ಹೃದಯಪುಂಡರೀಕಪುರೀತನ್ನಾಡೀ

ಪ್ರಾಕಾರದ್ವಾರಾ ಶರೀರಾಖ್ಯಪುರಾದ್ಬಹಿರ್ಗಚ್ಛತಿ. “ಸ ಯದಾ ಪ್ರಬುಧ್ಯತೇ ಯಥಾಗ್ನೇರ್ಜ್ವಲತಸ್ಸರ್ವಾ ದಿಶೋ ವಿಸ್ಫುಲಿಂಗಾಃ ಪ್ರತಿಷ್ಠೇರ ಏವಮೇವ ತಸ್ಮಾದಾತ್ಮನಸ್ಸರ್ವೇ ಪ್ರಾಣಾ ಯಥಾಯತನಂ ಪ್ರತಿಷ್ಠಂತೇ ಪ್ರಾಣೇಭ್ಯೋ ದೇವಾಃ ದೇವೇಭ್ಯೋ ಲೋಕಾಃ” ಇತಿ ಶ್ರುತಿರೇವಾತ್ರ ಭಗವತಸ್ಸ್ಪಷ್ಟಮುಪದಿಷ್ಟಾ. “ಸತ ಆಗಮ್ಯ” ಇತಿ ಶ್ರುತ್ಯಾ ಸಮುಚ್ಚಯ ಏವಾಂಗೀಕರ್ತವ್ಯಃ. “ವಿಕಲ್ಪಪಕ್ಷೇ ಚ ಅಷ್ಟೌ ದೋಷಾಃ” ಇತಿ ಶ್ರೀಕಂಠಶಿವಾಚಾರ್ಯೈರುಕ್ತಂ. “ಯಥಾ ಜೀವೋ ನಾಡೀಷು ಶೇತೇ ತಥಾ ಪುರೀತದ್ಬ್ರಹ್ಮವಾಕ್ಯಯೋಃ ಪ್ರಾಪ್ತಂ ಪ್ರಾಮಾಣ್ಯಂ ಪರಿತ್ಯಜೇತ, ಅಪ್ರಾಪ್ತಂ ಚಾಪ್ರಾಮಾಣ್ಯಂ ಸ್ವೀಕ್ರಿಯೇತ. ಯದಾ ಪುನಃ ಪುರೀತದ್ಬ್ರಹ್ಮಣೋಃ ಶೇತೇ ತದಾ ಪುರೀತದ್ಬ್ರಹ್ಮವಾಕ್ಯಯೋಃ ಪೂರ್ವಂ ಪ್ರಾಮಾಣ್ಯಂ ಸ್ವೀಕ್ರಿಯೇತ, ಪೂರ್ವಸ್ವೀಕೃತಂ ಚಾಪ್ರಾಮಾಣ್ಯಂ ಪರಿತ್ಯಜ್ಯೇತ” ಏವಂ ಪ್ರಾಪ್ತೇ ಪರಿತ್ಯಾಗಃ ಅಪ್ರಾಪ್ತಸ್ವೀಕಾರಃ ಪರಿತ್ಯಕ್ತಸ್ವೀಕಾರಃ ಸ್ವೀಕೃತಪರಿತ್ಯಾಗಶ್ಚ ಇತಿ ದೋಷಚತುಷ್ಟಯಂ. ಪುರೀತದ್ಬ್ರಹ್ಮವಾಕ್ಯಕೋಟೌ ತಥಾ ನಾಡೀವಾಕ್ಯಕೋಟೌ ಚ ದೋಷಚತುಷ್ಟಯೇ ಯೋಜಿತೇ ಸತಿ ಅಷ್ಟೌ ದೋಷಾ ಭವಂತಿ. ಅತೋ ನ ವಿಕಲ್ಪ ಪಕ್ಷ ಇತಿ ಸಿದ್ಧಂ. ನಾಡ್ಯಾದೀನಾಮೇಕಾರ್ಥತ್ವಾತ್ ವ್ರೀಹಿಯವಾದೀನಾಮಿವ ವಿಕಲ್ಪ ಇತಿ ಪೂರ್ವಪಕ್ಷಯುಕ್ತಿಂ ಪರೇ ವದಂತಿ. ಪರಂಪರಯೈಕಪ್ರಯೋಜನತ್ವೇ ಸಮುಚ್ಚಯಸ್ಸ್ಯಾದಿತಿ ನಿರಪೇಕ್ಷತ್ವಪ್ರತೀತಿರೇವ ವಿವಕ್ಷಿತೇತಿ ತೈರಪಿ ವಕ್ತವ್ಯಂ. “ತಾಸು ತಥಾ ಭವತಿ. ಯಥಾ ಸುಪ್ತಃ ಸ್ವಪ್ನಂ ನ ಕಂಚನ ಪಶ್ಯತಿ ಅಥಾಸ್ಮಿನ್ಪ್ರಾಣ ಏವೈಕಧಾ ಭವತಿ ತಾಭಿಃ ಪ್ರತ್ಯವಸೃಪ್ಯ ಪುರೀತತಿ ಶೇತೇ” ಇತಿ ನಾಡ್ಯಾದಿಸಮುಚ್ಚಯಶ್ಚ ಶ್ರುತ್ಯಾ ಪ್ರದರ್ಶ್ಯತ ಇತಿ ಸಿದ್ಧಾಂತಯುಕ್ತಿರುಕ್ತಾ. ತತ್ರ ನಾಡೀನಾಂ ಪ್ರತ್ಯವಸರ್ಪಣಮಾರ್ಗತ್ವಮಾತ್ರಂ ಪ್ರತಿಪನ್ನಮಿತಿ ತಾಸಾಂ ಸುಷುಪ್ತಿಸ್ಥಾನತ್ವೇ ಸಮುಚ್ಚಯಾಪ್ರತೀತೇಃ ತದನಾದರಃ. ನಾಡೀಪುರೀತತೋರ್ಜೀವಾಧಾರತ್ವವ್ಯಪದೇಶಃ ತದುಪಾಧ್ಯಾಧಾರತಯಾ ಬ್ರಹ್ಮಾಧಾರತ್ವಂ ನಾಮ ಬ್ರಹ್ಮಾತ್ಮಕತ್ವಮಿತಿ ಚಾಯುಕ್ತಂ. “ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ” ಇತಿ ಸೂತ್ರಿತತ್ವಾತ್ ವೈಯಧಿಕರಣ್ಯಶ್ರುತೀನಾಮಸ್ವಾರಸ್ಯಾಚ್ಚ. ನನು ಯತ್ರೈಷ ಏತತ್ಸುಪ್ತೋ ಯ ಏಷ ವಿಜ್ಞಾನಮಯಃ ಪುರುಷಸ್ತದೈಷ ಪ್ರಾಣಾನಾಂ ವಿಜ್ಞಾನೇನ ವಿಜ್ಞಾನಮಾದಾಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ” ಇತಿ, “ಪುರೀತತಿ ಶೇತೇ” ಇತಿ ಚ ಶ್ರುತ್ಯೋಃ ಕಥಂ ನ ವಿರೋಧಃ? ಅತ್ರ ಆಕಾಶೇ ಪರಮಾತ್ಮನೀತಿ ಪರೇ ತಥಾಪಿ ಹೃದಯ ಇತಿ ವಚಃ ಪುರೀತಚ್ಛ

ಯುನೇನ ವಿರುದ್ಧಂ. ಅತಃ ಆಕಾಶಶಬ್ದವಾಚ್ಯಪುರೇ ತದಾಖ್ಯಧರ್ಮೈ ಕ್ಯಾದವಿರೋಧ ಇತಿ ವಾಚ್ಯಂ. ಹೃದಯವೇಷ್ಟನಮಾಸಂ ಪುರೀತತ್. ತಚ್ಚ ಹೃದಯಾಧಾರಃ. ಅತೋ ನ ವಿರೋಧ ಇತ್ಯನ್ಯೇ. ತಚ್ಚಾಯುಕ್ತಂ, ಹೃದಯಾನ್ನಾಡೀಭಿಃ ಪ್ರತ್ಯವಸೃಪ್ಯ ಪುರೀತತಿ ಶಯಾನಸ್ಯ ಹೃದಿ ಶಯಾನಸ್ಯ ಚ ವಿರೋಧಾತ್. ಅನ್ಯೇ ತು ಸ್ವಪ್ನೇ ಸಾಂತರ್ಯಾಮಿಕಃ ಪರಮಾತ್ಮಾನಂ ಉಪೈತಿ " ಇತಿ ವದಂತಿ ತಚ್ಚಾಯುಕ್ತಂ, ಅಂತರ್ಯಾಮಿಣ ಈಶ್ವರಾದ್ವ್ಯತಿರಿಕ್ತಸ್ಯೈವ ಪರಮಾತ್ಮನಃ ಪ್ರಾಮಾಣಿಕತ್ವಾತ್. " ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತ " ಇತಿ ಶ್ರುತಿವಿರೋಧಾಚ್ಚ. ತಸ್ಮಾತ್ಪೂರ್ವೋಕ್ತಂ ಸಮಂಜಸಂ.

ಪರಮೇಶ್ವರನೇ ಜೀವನಿಗೆ ಸುಷುಪ್ತಿಯಲ್ಲಿ ತನ್ನ ಸಾನ್ನಿಧ್ಯದಿಂದ ಆನಂದವನ್ನು ಕೊಡಲಿ. ಆದರೂ ಮತ್ತೆ ಎಚ್ಚರಗೊಂಡಾಗ ಪುಣ್ಯಪಾಪಗಳನ್ನು ಅನುಭವಿಸಲಿಕ್ಕಾಗಿ ಜೀವನೇ ಸ್ವತಂತ್ರನಾಗಿ ಮತ್ತೆ ಹಿಂತಿರುಗಿ ಬರಲಿ ಎಂದಾಶಂಕಿಸಿ ತಿಳಿಸುತ್ತಾನೆ. ಬ್ರಹ್ಮವೇ ಸುಷುಪ್ತಿಗೆ ಆಶ್ರಯವಾದ್ದರಿಂದ ಬ್ರಹ್ಮದಿಂದಲೇ ಜೀವರಿಗೆ ಎಚ್ಚರವೂ ಆಗಬೇಕಾಗಿದೆ. ಪರಶಿವನಿಂದ ಬಂದಿದ್ದರೂ ಜೀವರು ತಾವು ಪರಶಿವನಿಂದ ಬಂದೆವೆಂಬುದನ್ನು ಅರಿಯರು " ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಜೀವನು ತಾನಾಗಿಯೇ ಎಚ್ಚರಗೊಳ್ಳಲಾರನು. ಸುಷುಪ್ತಿಕಾಲದಲ್ಲಿ ಹೃದಯಕಮಲದಕಾಂತಿಗೆ ಸಮಾನವಾದ ಪರಶಿವಾತ್ಮಕವಾದ ಜ್ಯೋತಿರ್ಲಿಂಗದಲ್ಲಿ ಮಾಯಾಪಾಶದೊಡನೆ ಮಲಗಿದ್ದ ಜೀವನು ಪ್ರಕೃಷ್ಟವಾದ ಬೋಧವುಳ್ಳವನಾಗಿ ಶರೀರೇಂದ್ರಿಯಾದಿಗಳಲ್ಲಿ ಅಭಿಮಾನದಿಂದ ಕೂಡಿದ್ದು ಮತ್ತೆ ಮೇಲಕ್ಕೆ ಎದ್ದು ಜಾಗ್ರತ್ಪ್ರಪಂಚವನ್ನು ನೋಡಲಿಕ್ಕಾಗಿ ಹೃದಯಕಮಲದ ಪುರೀತನ್ನಾಡಿ ಎಂಬ ಬಾಗಿಲಿನ ಮೂಲಕ ಶರೀರವೆಂಬ ಪುರದಿಂದ ಹೊರಗೆ ಹೊರಡುತ್ತಾನೆ. " ಅವನು ಯಾವಾಗ ಎಚ್ಚರಗೊಳ್ಳುವನೋ ಆಗ ಉರಿಯುವ ಬೆಂಕಿಯಿಂದ ಕಿಡಿಗಳು ಎಲ್ಲಾ ದಿಕ್ಕುಗಳಲ್ಲೂ ವ್ಯಾಪಿಸುವಂತೆ ಆ ಆತ್ಮನಿಂದ ಪ್ರಾಣಗಳೆಲ್ಲವೂ ಆಯಾ ಸ್ಥಾನಗಳಲ್ಲಿ ನೆಲಸುತ್ತವೆ. ಪ್ರಾಣಗಳಿಂದ ಇಂದ್ರಿಯಗಳೂ, ಇಂದ್ರಿಯಗಳಿಂದ ಭೂತಗಳೂ ಹೊರಡುತ್ತವೆ " ಎಂಬ ಶ್ರುತಿಯೇ ಈ ಅಂಶವನ್ನು ಸ್ಪಷ್ಟಪಡಿಸುತ್ತದೆ. " ಪರಮಾತ್ಮನಿಂದ ಹೊರಟು " ಎಂಬ ಶ್ರುತಿಯಲ್ಲಿ ಸಮುಚ್ಚಯಪಕ್ಷವನ್ನೇ ಅಂಗೀಕರಿಸಬೇಕು. ವಿಕಲ್ಪಪಕ್ಷದಲ್ಲಿ ಎಂಟು ದೋಷಗಳುಂಟೆಂದು ಶ್ರೀಕಂಠಶಿವಾಚಾರ್ಯರು ಹೇಳುತ್ತಾರೆ. ಜೀವನು ನಾಡಿಯಲ್ಲಿ ಮಲಗುತ್ತಾನೆ" ಎಂದು ಹೇಳಿದರೆ ಪುರೀತತ್‌ನಲ್ಲೂ ಬ್ರಹ್ಮದಲ್ಲೂ ಮಲಗುವನೆಂದು ಹೇಳುವ ವಾಕ್ಯಗಳಿಗೆ ಹಿಂದೆ ಒದಗಿದ್ದ ಪ್ರಾಮಾಣ್ಯವೂ ತಪ್ಪಿಹೋದೀತು, ಹಾಗೆಯೇ ಹೊಸದಾದ ಅಪ್ರಾಮಾಣ್ಯವನ್ನು ಒಪ್ಪಬೇಕಾದೀತು. ಪುರೀತನ್ನಾಡಿಯಲ್ಲೂ ಬ್ರಹ್ಮದಲ್ಲೂ ಮಲಗುವನೆಂದು ಹೇಳಿದರೆ ಆಗ ಈ ಎರಡು ವಾಕ್ಯಗಳಿಗೂ ಮೊದಲೇ ಒಪ್ಪಿದ್ದ ಅಪ್ರಾಮಾಣ್ಯವನ್ನು ಕೈಬಿಟ್ಟು ಪ್ರಾಮಾಣ್ಯವನ್ನು ಒಪ್ಪಬೇಕಾಗುವುದು.

ಆದ್ದರಿಂದ ಸಂಭವಿಸದ್ದನ್ನು ತೋರಿಯುವುದು, ಸಂಭವಿಸದೇ ಇದ್ದುದನ್ನು ಸ್ವೀಕರಿಸುವುದು, ಬಿಟ್ಟದ್ದನ್ನು ಒಪ್ಪುವುದು, ಒಪ್ಪಿದ್ದನ್ನು ಬಿಡುವುದು ಎಂದು ನಾಲ್ಕು ದೋಷಗಳು ಸಂಭವಿಸುತ್ತವೆ. ಪುರೀತತ್ ಮತ್ತು ಬ್ರಹ್ಮವನ್ನು ಆಧಾರವೆಂದು ಹೇಳುವ ವಾಕ್ಯದಲ್ಲೂ, ನಾಡಿಗಳನ್ನು ಆಧಾರವೆಂದು ಹೇಳುವ ವಾಕ್ಯದಲ್ಲೂ ಈ ನಾಲ್ಕುನಾಲ್ಕು ದೋಷಗಳು ಸಂಭವಿಸುವುದರಿಂದ ಒಟ್ಟು ಎಂಟು ದೋಷಗಳಾಗುತ್ತವೆ. ಆದ್ದರಿಂದ ವಿಕಲ್ಪಪಕ್ಷ ಯುಕ್ತವಲ್ಲ. "ಯಾವಾಗ ಮಲಗಿದವನು ಏನನ್ನೂ ಕಾಣುವುದಿಲ್ಲವೋ ಆಗ ಅವನಲ್ಲಿ ಪ್ರಾಣವು ಒಂದೇ ಬಗೆಯಾಗುತ್ತದೆ. ಜೀವನು ಇವುಗಳಿಂದ ಹೊರಟು ಪುರೀತನ್ನಾಡಿಯಲ್ಲಿ ಮಲಗುತ್ತಾನೆ." ಹೀಗೆ ನಾಡಿ ಮೊದಲಾದ ಸಮುಚ್ಚಯವನ್ನು ಶ್ರುತಿಯೇ ತೋರಿಸುತ್ತದೆ" ಎಂದು ಸಿದ್ಧಾಂತದಲ್ಲಿ ಯುಕ್ತಿಯನ್ನು ಹೇಳಿಯಾಯಿತು. ಅದರಲ್ಲೂ ನಾಡಿಗಳಿಂದ ಹೊರಗೆ ಬರುವುದೊಂದನ್ನೇ ಮುಖ್ಯವಾಗಿ ಹೇಳಿದ್ದರಿಂದ ಅವೆಲ್ಲವೂ ಸುಷುಪ್ತಿಯ ಸ್ಥಾನಗಳಾಗುವುದಾದರೆ ಸಮುಚ್ಚಯವೇ ತೋರದಿರುವುದರಿಂದ ಆದರ ಬಗ್ಗೆ ತಿರಸ್ಕಾರವುಂಟಾಗುತ್ತದೆ. ನಾಡಿ ಮತ್ತು ಪುರೀತತ್ತುಗಳೆರಡನ್ನು ಜೀವನಿಗೆ ಆಧಾರವೆಂದು ಹೇಳಿದ್ದರಿಂದ, ಆ ಉಪಾಧಿಗಳಿಗೆ ಬ್ರಹ್ಮವನ್ನು ಆಧಾರವೆಂದು ಹೇಳಿದರೆ ಅವೆರಡು ಉಪಾಧಿಗಳೂ ಬ್ರಹ್ಮಾಕಾರವೇ ಆಗುವುವೆಂದು ಹೇಳುವುದು ಅಯುಕ್ತವೇ ಆಗುತ್ತದೆ. ಇದೂ ಅಲ್ಲದೆ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ" ಎಂಬ ಸೂತ್ರವೂ ವಿರುದ್ಧವಾಗುವುದು ; ಈ ಭೇದವನ್ನು ಹೇಳುವ ಶ್ರುತಿಗಳಿಗೂ ಅಸ್ವಾರಸ್ಯವುಂಟಾಗುವುದು. "ಈ ಸುಷುಪ್ತಿಯಲ್ಲಿ ಯಾವ ಈ ವಿಜ್ಞಾನಮಯ ಜೀವನಿರುವನೋ ಅವನು ಪ್ರಾಣಗಳೊಡನೆಯೂ ಬುದ್ಧಿಯೊಡನೆಯೂ ಸೇರಿ ಹೃದಯದೊಳಗಿನ ಆಕಾಶದಲ್ಲಿ ಮಲಗುತ್ತಾನೆ" ಎಂಬ ಶ್ರುತಿಗೂ "ಪುರೀತನ್ನಾಡಿಯಲ್ಲಿ ಮಲಗುತ್ತಾನೆ" ಎಂಬ ಶ್ರುತಿಗೂ ಹೇಗೆ ವಿರೋಧವಿಲ್ಲವೆಂದರೆ ಹಿಂದಿನ ಶ್ರುತಿಯಲ್ಲಿ ಆಕಾಶವೆಂದರೆ ಪರಮಾತ್ಮನೆಂದು ಅರ್ಥಮಾಡಿರುವುದರಿಂದ ವಿರೋಧಕ್ಕೆ ಅವಕಾಶವಿಲ್ಲವೆಂದು ಹೇಳಬಹುದು. ಆದರೆ ಮುಂದೆ ಪುರೀತನ್ನಾಡಿಯಲ್ಲಿ ಮಲಗುವನೆಂದು ಹೇಳಿದ್ದರಿಂದ ಹೃದಯವೆಂಬ ಮಾತು ವಿರುದ್ಧವೇ ಆಗುತ್ತದೆ. ಆದ್ದರಿಂದ ಆಕಾಶವೆನಿಸಿದ ಪುರೀತನ್ನಾಡಿಯನ್ನು ಪ್ರವೇಶಿಸುವನೆಂಬ ಧರ್ಮೈಕ್ಯದಿಂದ ವಿರೋಧಕ್ಕವಕಾಶವಿಲ್ಲವೆಂದು ಹೇಳಬೇಕು. "ಪುರೀತನ್ನಾಡಿಯು ಹೃದಯದಲ್ಲಿ ಸುತ್ತುವರೆದಿದೆ. ಅದೇ ಹೃದಯಕ್ಕಾಧಾರವಾಗಿದೆ. ಆದ್ದರಿಂದ ವಿರೋಧವಿಲ್ಲ"ವೆಂದು ಕೆಲವರು ಹೇಳುತ್ತಾರೆ. ಇದೂ ಯುಕ್ತವಲ್ಲ; ಯಾಕೆಂದರೆ ಹೃದಯದಿಂದ ನಾಡಿಗಳಲ್ಲಿ ಹೊರಟು ಪುರೀತನ್ನಾಡಿಯಲ್ಲಿ ಮಲಗುವುದಕ್ಕೂ ಹೃದಯದಲ್ಲಿ ಮಲಗುವುದಕ್ಕೂ ವಿರೋಧವಿದ್ದೇ ಇರುತ್ತದೆ. ಮತ್ತು ಕೆಲವರು "ಸುಷುಪ್ತಿಯಲ್ಲಿ ಜೀವನು ಅಂತರ್ಯಾಮಿಯೊಡನೆ ಪರಮಾತ್ಮನಲ್ಲಿ ಸೇರುತ್ತಾನೆ" ಎಂದು ಹೇಳುತ್ತಾರೆ. ಅದೂ ಯುಕ್ತವಲ್ಲ; ಯಾಕೆಂದರೆ ಅಂತರ್ಯಾಮಿಯಾದ ಈಶ್ವರನಿಗಿಂತಲೂ ಬೇರೆಯಾದ ಪರಮಾತ್ಮನೇ ಪ್ರಮಾಣವೆನಿಸಿದ್ದಾನೆ. "ಪ್ರಾಜ್ಞ,

ನಾದ ಆತ್ಮನಿಂದ ಕೂಡಿದ್ದಾನೆ" ಎಂಬ ಶ್ರುತಿಯು ವಿರುದ್ಧವಾಗುತ್ತದೆ. ಆದ್ದರಿಂದ ಹಿಂದೆ ಹೇಳಿದ್ದೇ ಸಮಂಜಸವಾಗುತ್ತದೆ.

ನನು ಪೂರ್ವದಿನೀಯಾ ಏವ ಜೀವಾಸ್ಸುಪ್ತಿದಶಾಯಾಂ ಸೂಕ್ಷ್ಮಾವಸ್ಥಾಪನ್ನಾಂತಃಕರಣವಿಶಿಷ್ಟತಯಾ ಹೃತ್ಪುಂಡರೀಕಾವಚ್ಛಿನ್ನೇ ಜ್ಯೋತಿರ್ಲಿಂಗೇ ಲೀನಾಸ್ಸಂತಃ ಉತ್ತರದಿನೇಷು ಸ್ಥೂಲಾವಸ್ಥಾಪನ್ನಾಂತಃಕರಣಾವಚ್ಛಿನ್ನತಯಾ ತದಭಿವ್ಯಕ್ತಾಃ ಭವಂತಿ ವಾ? ಉತ ಪೂರ್ವದಿನೀಯಾಂತಃಕರಣಾವಗತಜೀವಾನಾಂ ಸರ್ವಾತ್ಮನಾ ಸುಷುಪ್ತ್ಯವಸ್ಥಾಯಾಂ ಬ್ರಹ್ಮಣ್ಯಾತ್ಯಂತಿಕಲಯೇ ಸತ್ಯಭಿಮಾನಾಂತಃಕರಣಯೋಗಾಃ ತದಭಿಮಾನಜೀವಾಃ ಉತ್ಪದ್ಯಂತೇ ವಾ? ಇತ್ಯಾಶಂಕಾಯಾಮಧಿಕರಣಾಂತರೇಣ ನಿರ್ಣಯಮಾಹ. ಕರ್ಮಾನುಸ್ಮೃತಿಶಬ್ದವಿಧ್ಯಧಿಕರಣಂ ‖ ೩ ‖ ಸ ಏವ ತು ಕರ್ಮಾನುಸ್ಮೃತಿಶಬ್ದವಿಧಿಭ್ಯಃ ‖ ೯ ‖ ಯಸ್ತು ಪೂರ್ವದಿನೇ ಸುಪ್ತಿದಶಾಯಾಂ ಹೃದಯಪುಂಡರೀಕಾವಚ್ಛಿನ್ನ ಜ್ಯೋತಿರ್ಲಿಂಗಾತ್ಮಕಪರಶಿವೇ ಲೀನಃ ಸ ಏವೋತ್ತರದಿನೇ ಸ್ಥೂಲಾಂತಃಕರಣಾಪನ್ನತಯಾಭಿವ್ಯಕ್ತೋ ಭವತಿ. ಕುತಃ? ಕರ್ಮಾನುಸ್ಮೃತಿಶಬ್ದವಿಧಿಭ್ಯಃ. ಪೂರ್ವದಿನೇ ಕೃತಸ್ಯ ಶ್ರೋತ್ರಿಯಸ್ಯ ಚಾಶ್ರೋತ್ರಿಯಸ್ಯ ಕರ್ಮಣಃ ಅಸ್ಮಿನ್ ದಿನೇ ಸ್ಮರಣಾತ್, "ತ ಇಹ ವ್ಯಾಘ್ರೋ ವಾ ಸಿಂಹೊ ವಾ" ಇತಿ ಶ್ರುತಿಶ್ರವಣಾತ್, "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಇತ್ಯಾದಿವಿಧಿವಾಕ್ಯಾಚ್ಚೇತ್ಯೇತೇಭ್ಯೋ ಹೇತುಭ್ಯ ಇತ್ಯುಚ್ಯತೇ. ಪ್ರತಿದಿನಂ ಭಿನ್ನಭಿನ್ನಜೀವಾಂಗೀಕಾರೇ ಅನ್ಯಸ್ಯ ಜ್ಯೋತಿಷ್ಟೋಮಕರ್ತೃತ್ವಂ ಅನ್ಯಸ್ಯ ತದ್ಭೋಕ್ತೃತ್ವಮಿತಿ ಸ್ವರ್ಗಕಾಮಸ್ಯ ಜ್ಯೋತಿಷ್ಟೋಮವಿಧಾಯಕವಾಕ್ಯಂ ಅಪ್ರಮಾಣಂ ಸ್ಯಾತ್. "ತ ಇಹ ವ್ಯಾಘ್ರೋ ವಾ ಸಿಂಹೋ ವಾ" ಇತ್ಯಾರಭ್ಯ "ಯದ್ಯದ್ಭವಂತಿ ತತ್ತದಾ ಭವಂತಿ" ಇತಿ ವಾಕ್ಯಂ ಅಪ್ರಮಾಣಂ ಸ್ಯಾತ್. ತಸ್ಯ ವಾಕ್ಯಸ್ಯ ಪೂರ್ವದಿನೀಯಾನಾಮೇವ ಜೀವಾನಾಂ ಸುಪ್ತಿದಶಾಯಾಂ ಸೂಕ್ಷ್ಮರೂಪಾಂತಃಕರಣವಿಶಿಷ್ಟಾನಾಂ ಉತ್ತರದಿನೇಷು ಸ್ಥೂಲಾಂತಃಕರಣವಿಶಿಷ್ಟತಯಾ ಅಭಿವ್ಯಕ್ತಿರಿತಿ ನಿರ್ದಿಶ್ಯತೇ. ನೋಚೇತ್ಪೂರ್ವದಿನಾನುಭೂತಕರ್ಮಣೋಽಸ್ಮಿನ್ದಿನೇ ಸ್ಮರಣಂ ನ ಸ್ಯಾತ್. ಅನ್ಯೇನಾನುಭೂತಸ್ಯಾನ್ಯೇನ ಸ್ಮರಣಾಸಂಭವಾಚ್ಚ. "ಯತ್ರೈತತ್ಪುರುಷಸ್ಸ್ವಪಿತಿ ನಾಮ ಸತಾ ಸೌಮ್ಯ ತದಾ ಸಂಪನ್ನೋ ಭವತಿ" ಇತಿ ಶ್ರುತಿರೇವಾತ್ರ ವಿಷಯಃ. ಕಿಂ ಸುಪ್ತ ಏವ ಪ್ರಬೋಧಸಮಯೇ ಉತ್ತಿಷ್ಠತಿ ಉತಾನ್ಯಃ ಇತಿ ಸಂದಿಹ್ಯತೇ. "ಬ್ರಹ್ಮ ವೇದ ಬ್ರಹ್ಮೈವ ಭವತಿ" "ನ ಸ ಪುನರಾವರ್ತತೆ," "ಯಥಾ ನದ್ಯಃ" ಇತ್ಯಾದಿಶ್ರುತಿಶತೇಷು ಬ್ರಹ್ಮಭಾವಾಪನ್ನಸ್ಯ

ಪುನರಾವೃತ್ತಿಪ್ರತಿಯೋಗಿತ್ವವ್ಯಪದೇಶಾತ್. “ಸತಾ ಸೌಮ್ಯ ತದಾ ಸಂಪನ್ನೋ ಭವತಿ” ಇತ್ಯತ್ರ ಬ್ರಹ್ಮಪ್ರಾಪ್ತಾನಾಂ ಸುಪ್ತಾನಾಂ ಕಥಂ ಪುನರಾವೃತ್ತಿರುಪಪದ್ಯತೇ? ಸರ್ವೇಷಾಂ ಜೀವಾನಾಂ ಸುಪ್ತಿಪ್ರಬೋಧದರ್ಶನಾತ್ ಉತ್ಥಿತಃ ಅನ್ಯ ಏವ ಇತಿ ಪ್ರಾಪ್ತೇಽಭಿಧೀಯತೇ. “ಸ ಏವ ತ್ವಿತ್ಯತ್ರ ತುಶಬ್ದಃ ಪಕ್ಷಂ ವ್ಯಾವರ್ತಯತಿ. ಸ ಏವೋತ್ತಿಷ್ಠತಿ. ಕುತಃ ಕರ್ಮಾನುಸ್ಮೃತಿಶಬ್ದವಿಧಿಭ್ಯಃ. ಕರ್ಮ ತಾವತ್, ಸುಷುಪ್ತೇನ ಪೂರ್ವಕೃತ್ಯಂ ಪುಣ್ಯಪಾಪರೂಪಂ ತತ್ತ್ವಜ್ಞಾನಾತ್ಪ್ರಾಕ್ ಭೋಕ್ತವ್ಯಂ. ಅನುಸ್ಮೃತೇರಪಿ. “ಯ ಏವಾಹಂ ಸುಪ್ತಃ ಸ ಏವ ಪ್ರಬುದ್ಧೋಽಸ್ಮಿ” ಇತಿ ಶಬ್ದೋಽಪಿ ಸುಷುಪ್ತಪ್ರಬುದ್ಧಃ ಸ ಏವೇತಿ ದರ್ಶಯತಿ. “ತ ಇಹ ವ್ಯಾಘ್ರೋ ವಾ ಸಿಂಹೋ ವಾ ವೃಕೋ ವಾ ವರಾಹೋ ವಾ ಕೀಟೋ ವಾ ಪತಂಗೋ ವಾ ದಂಶೋ ವಾ ಮಶಕೋ ವಾ ಯದ್ಯದ್ಭವಂತಿ ತದಾ ಭವಂತಿ.” ಇತಿ ವಿಧಯಶ್ಚ ಮೋಕ್ಷಾರ್ಥಾಃ. ತೇ ಸುಪ್ತಸ್ಯ ಮುಕ್ತತ್ವೇ ಸಾರ್ಥಕಾಸ್ಸ್ಯುಃ. ನಚಾಸೌ ಸರ್ವೋಪಾಧಿನಿರ್ಮುಕ್ತಪರಶಿವತ್ವಂ ಪ್ರಾಪ್ತಃ, “ತದ್ಯತ್ರೈತತ್ಸುಪ್ತಃ” ಇತಿ, “ಸುಷುಪ್ತಃ ಪ್ರಕೃತ್ಯಾ ನಾಹಂ ಖಲ್ವಯಂ ಏವಂ ಸಂಪ್ರತ್ಯಾತ್ಮಾನಂ ಜಾನಾತ್ಯಹಮಸ್ಮೀತಿ ನೋ ಏವೇಮಾನಿ ಭೂತಾನಿ ವಿನಾಶಮೇವಾಪೀತೋ ಭವತಿ ನಾಹಮತ್ರ ಭೋಗ್ಯಂ ಪಶ್ಯಾಮಿ” ಇತಿ ಶ್ರುತಿಶ್ರವಣಾತ್. “ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ.” “ಸ ಏವ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ,” “ಸ ಸ್ವರಾಡ್ಭವತಿ ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ,” “ಸರ್ವಂ ಹ್ಯಪಶ್ಯಃ ಪಶ್ಯತಿ ಸರ್ವಮಾಪ್ನೋತಿ ಸರ್ವಶಃ” ಇತಿ ಕಲ್ಯಾಣವಿಭೂತಿಂ ಪ್ರಾಪ್ತಾನಾಂ ಕೈಲಾಸವಾಸಿನಾಂ ಸಾಲೋಕ್ಯಸಾಮೀಪ್ಯಸಾರೂಪ್ಯಸಿದ್ಧಾನಾಂ ಸರ್ವಜ್ಞತ್ವಾದಿಪರಮೇಶ್ವರಧರ್ಮಾಃ ಶ್ರೂಯಂತೇ. ಅತಸ್ಸುಷುಪ್ತಃ ಸಂಸರನ್ನೇವ ಆಯಸ್ತಸರ್ವಕರಣೋ ಜ್ಞಾನಭೋಗಾದ್ಯಶಕ್ತೋ ವಿಶ್ರಮಸ್ಥಾನಂ ಪರಶಿವಾಖ್ಯಂ ಜ್ಯೋತಿರ್ಲಿಂಗಂ ಉಪಸಂಪದ್ಯ ಸ್ವಸ್ಥಃ ಪುನರ್ಭೋಗಾಯೋತ್ತಿಷ್ಠತಿ.

ಹಿಂದಿನದಿವಸದ ಜೀವರೇ ಸುಷುಪ್ತ್ಯವಸ್ಥೆಯಲ್ಲಿ ಸೂಕ್ಷ್ಮಾವಸ್ಥೆಯಲ್ಲಿರುವ ಅಂತಃಕರಣದೊಡಗೂಡಿದ್ದರಿಂದ ಹೃದಯಕಮಲದಲ್ಲಿರುವ ಜ್ಯೋತಿರ್ಲಿಂಗದಲ್ಲಿ ಲೀನರಾಗಿ ಮುಂದಿನದಿನಗಳಲ್ಲಿ ಸ್ಥೂಲಾವಸ್ಥೆಯಲ್ಲಿರುವ ಅಂತಃಕರಣದೊಡನೆ ಪ್ರಕಟವಾಗುತ್ತಾರೆಯೋ? ಅಥವಾ ಹಿಂದಿನದಿನದ ಅಂತಃಕರಣದಿಂದ ಕೂಡಿದ ಜೀವರು ಪೂರ್ಣವಾಗಿ ಸುಷುಪ್ತಿಯಲ್ಲಿ ಬ್ರಹ್ಮದಲ್ಲಿ ಲಯವಾಗಿದ್ದುದರಿಂದ ಅಭಿಮಾನ ಅಂತಃಕರಣ ಮತ್ತು ಯೋಗಗಳೂ, ಹಾಗೆಯೇ ಅವುಗಳನ್ನು ಅಭಿಮಾನಿಸದ ಜೀವರೂ ಬೇರೆಯಾಗಿಹುಟ್ಟುವರೇ? ಎಂದು ಆಶಂಕಿಸಿ ನಿರ್ಣಯವನ್ನು ಹೇಳುತ್ತಾನೆ. ಹಿಂದಿನ

ದಿನದಲ್ಲಿ ಯಾವ ಜೀವನು ಸುಷುಪ್ತಿಯಲ್ಲಿ ಹೃದಯದೊಳಗಿನ ಜ್ಯೋತಿರ್ಲಿಂಗವೆಂಬ ಪರಶಿವನಲ್ಲಿ ಲೀನನಾಗಿದ್ದನೋ ಅವನೇ ಮುಂದಿನದಿನದಲ್ಲಿ ಸ್ಥೂಲಾಂತಃಕರಣದೊಡಗೂಡಿ ಪ್ರಕಟವಾಗುತ್ತಾನೆ; ಯಾಕೆಂದರೆ ಹಿಂದಿನದಿನದಲ್ಲಿ ಮಾಡಿದ ವೈದಿಕಕರ್ಮವನ್ನು ಈ ದಿನದಲ್ಲಿ ಸ್ಮರಿಸಿಕೊಳ್ಳುತ್ತೇವೆ. "ಅವರು ಇಲ್ಲಿ ಹುಲಿಯೋ ಸಿಂಹವೋ ಆಗಿದ್ದರು" ಎಂದು ಶ್ರುತಿಯಲ್ಲಿ ಹೇಳಿದೆ. "ಸ್ವರ್ಗಕಾಮನು ಜ್ಯೋತಿಷ್ಟೋಮವನ್ನಾಚರಿಸಬೇಕು" ಈ ಬಗೆಯ ವಿಧಿವಾಕ್ಯಗಳೂ ಇವೆ. ಈ ಬಗೆಯ ಹೇತುಗಳಿಂದ ಪ್ರತಿದಿನವೂ ಬೇರೆಬೇರೆ ಜೀವರನ್ನು ಅಂಗೀಕರಿಸಿದರೆ ಒಬ್ಬನು ಜ್ಯೋತಿಷ್ಟೋಮವನ್ನಾಚರಿಸುವನು, ಮತ್ತೊಬ್ಬನು ಅದನ್ನು ಭೋಗಿಸುವನು. ಹೀಗಾಗುವುದರಿಂದ ಜ್ಯೋತಿಷ್ಟೋಮವನ್ನು ವಿಧಿಸುವ ವಾಕ್ಯವು ಪ್ರಮಾಣವಾಗದೆಹೋದೀತು. "ಅವರು ಇಲ್ಲಿ ಹುಲಿಯೋ ಸಿಂಹವೋ ಆಗಿದ್ದರು" ಎಂದಾರಂಭಿಸಿ "ಏನೇನು ಸಾಧ್ಯವೋ ಅದೆಲ್ಲವೂ ಆಗುತ್ತಾರೆ" ಎಂದು ಕೊನೆಯಾಗಿರುವ ವಾಕ್ಯವು ಪ್ರಮಾಣವಾಗದೇಹೋಗುತ್ತದೆ. ಆ ವಾಕ್ಯಕ್ಕೆ ಹಿಂದಿನ ಜೀವರೇ ಸುಷುಪ್ತಿಯಲ್ಲಿ ಸೂಕ್ಷ್ಮರೂಪವನ್ನು ಹೊಂದಿದ್ದು ಮುಂದಿನದಿನದಲ್ಲಿ ಸ್ಥೂಲಾಂತಃಕರಣದಿಂದ ಹೊರಗೆಬರುವರೆಂಬ ಅರ್ಥವನ್ನು ಹೇಳಬೇಕು. ಇಲ್ಲವಾದರೆ ಹಿಂದಿನದಿನ ಮಾಡಿದ ಕರ್ಮಕ್ಕೆ ಈ ದಿನ ಸ್ಮರಣವೇ ಆಗದೇಹೋದೀತು; ಯಾಕೆಂದರೆ ಒಬ್ಬನು ಅನುಭವಿಸಿದ್ದನ್ನು ಬೇರೊಬ್ಬನು ಸ್ಮರಿಸಲಾರನು. ಇದು ಸೂತ್ರದ ಸೂಕ್ಷ್ಮಾರ್ಥ. "ಪುರುಷನು ಮಲಗಿದನೆಂದರೆ ಸದ್ವಸ್ತುವಿನೊಡನೆ ಬೆರೆಯುತ್ತಾನೆ" ಎಂದು ಹೇಳುವ ಶ್ರುತಿಯೇ ಇಲ್ಲಿ ವಿಷಯ. "ನಿನ್ನೆ ಮಲಗಿದ್ದವನೇ ಇಂದು ಎಚ್ಚರಗೊಂಡಾಗ ಎಳುತ್ತಾನೆಯೋ ಅಥವಾ ಬೇರೆಯವನೋ" ಎಂದು ಇಲ್ಲಿ ಸಂಶಯ ಬರುತ್ತದೆ. "ಬ್ರಹ್ಮಜ್ಞನು ಬ್ರಹ್ಮವೇ ಆಗುತ್ತಾನೆ" "ಮತ್ತೆ ಹಿಂತಿರುಗುವುದಿಲ್ಲ" ಎಂಬ ಶ್ರುತಿಗಳಲ್ಲಿ ಬ್ರಹ್ಮಭಾವವನ್ನು ಹೊಂದಿದವನು ಹಿಂತಿರುಗವುದಿಲ್ಲವೆಂದು ಹೇಳಿದ್ದರಿಂದ "ಸದ್ವಸ್ತುವಿನೊಡನೆ ಬೇರೆಯುತ್ತಾನೆ" ಎಂಬಲ್ಲಿ ಸುಷುಪ್ತಿಯಲ್ಲಿ ಬ್ರಹ್ಮವನ್ನು ಹೊಂದಿದ ಜೀವರಿಗೆ ಮತ್ತೆ ಹಿಂತಿರುಗುವುದು ಹೇಗೆ ಹೊಂದುತ್ತದೆ? ಆದ್ದರಿಂದ ಜೀವರೆಲ್ಲರಿಗೂ ಸುಷುಪ್ತಿಯೂ ಎಚ್ಚರಿಕೆಯೂ ಆಗುತ್ತಿರುವುದರಿಂದ ಮಲಗಿದವನಿಗಿಂತಲೂ ಎಚ್ಚರಗೊಂಡವನೇ ಬೇರೆ ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸೂತ್ರವು ಸಮಾಧಾನವನ್ನು ಹೇಳುತ್ತದೆ. ರಾತ್ರಿ ಮಲಗಿದ್ದವನೇ ಬೆಳಗ್ಗೆ ಮೇಲಕ್ಕೆ ಏಳುತ್ತಾನೆ. ಸೂತ್ರದಲ್ಲಿ ತು ಶಬ್ದವು ಆಕ್ಷೇಪವನ್ನು ನಿರಾಕರಿಸುತ್ತದೆ. ಹಿಂದೆ ಮಾಡಿದ್ದ ಕರ್ಮದಿಂದಲೂ, "ಯಾವ ನಾನು ಮೊದಲು ಮಲಗಿದ್ದೆನೋ ಅದೇ ನಾನು ಎಚ್ಚರಗೊಂಡಿದ್ದೇನೆ" ಎಂಬ ಸ್ಮರಣದಿಂದಲೂ, "ಮೊದಲು ಮಲಗಿದ್ದವನೇ ಮೇಲಕ್ಕೆ ಏಳುವನು" ಎಂದು ಶ್ರುತಿ ಇರುವುದರಿಂದಲೂ, "ಹುಲಿಯಾಗಲೀ ಸಿಂಹವಾಗಲೀ ತೋಳವಾಗಲೀ ಹಂದಿಯಾಗಲೀ ಸಣ್ಣ ಹುಳುವಾಗಲೀ ಸೊಳ್ಳೆಯಾಗಲೀ ನೊಣವಾಗಲೀ ಯಾವ್ಯಾವು ಕಾಣುತ್ತವೆಯೋ ಅವೆಲ್ಲವೂ ಇರುತ್ತವೆ" ಈ ಬಗೆಯ ವಿಧಿ ಇರುವುದರಿಂದಲೂ ಸುಪ್ತನು ಮುಕ್ತನಾಗದೆ

ಅವನೇ ಮತ್ತೆ ಏಳುವನು. ಸುಷುಪ್ತಿಯಲ್ಲಿ ಇವನು ನಿರುಪಾಧಿಕನಾದ ಪರಶಿವ ನಾಗುವುದಿಲ್ಲ. ಮಲಗಿದವನು ಸಹಜವಾಗಿ ತಾನೇ ಮಲಗಿದ್ದುದನ್ನು ತಾನು ತಿಳಿಯು ತ್ತೇನೆ ಎಂದು ತನ್ನನ್ನು ತಿಳಿಯುನು."ಈ ನಾನು ಇದ್ದೇನೆ.ಈ ಭೂತಗಳು ಇರುವುದಿಲ್ಲ. ಇವೆಲ್ಲವೂ ವಿನಾಶವಾಗುತ್ತವೆ" "ನಾನು ಇಲ್ಲಿ ಭೋಗ್ಯವಸ್ತುವನ್ನು ಕಾಣುವುದಿಲ್ಲ" ಹೀಗೆ ಸುಷುಪ್ತನ ಅನುಭವವನ್ನು ಶ್ರುತಿಯಲ್ಲಿ ಹೇಳಿದೆ.ಮುಕ್ತನಾದರೋ ಪರಂಜ್ಯೋ ತಿಯನ್ನು ಹೊಂದಿ ತನ್ನ ವಾಸ್ತವರೂಪದಿಂದ ಇರುತ್ತಾನೆ. "ಅವನೇ ತಿನ್ನುತ್ತ ಆಡುತ್ತ ರಮಿಸುತ್ತ ಎಲ್ಲೆಲ್ಲೂ ಸುತ್ತುತ್ತಾನೆ. ಅವನು ಸ್ವತಂತ್ರನಾಗುತ್ತಾನೆ. ಅವನಿಗೆ ಎಲ್ಲಾ ಲೋಕಗಳಲ್ಲಿಯೂ ಸ್ವೇಛ್ಛಾಪ್ರವೃತ್ತಿಯುಂಟಾಗುತ್ತದೆ", "ಏನನ್ನೂ ಕಾಣದಿರುವ ಮುಕ್ತನು ಎಲ್ಲವನ್ನೂ ಕಾಣುತ್ತಾನೆ. ಎಲ್ಲೆಲ್ಲೂ ಎಲ್ಲವನ್ನೂ ಪಡೆಯುತ್ತಾನೆ." ಹೀಗೆ ಕಲ್ಯಾಣವಿಭೂತಿಯನ್ನು ಪಡೆದು ಕೈಲಾಸದಲ್ಲಿ ನೆಲಸಿರುವ ಸಾಲೋಕ್ಯಸಾಮೀಪ್ಯ ಸಾರೂಪ್ಯಸಿದ್ಧರಿಗೂ ಸಾಯುಜ್ಯಮುಕ್ತರಂತೆಯೇ ಸರ್ವಜ್ಞತ್ವಾದಿಪರಮೇಶ್ವರ ಧರ್ಮಗಳೇ ಇರುತ್ತವೆ. ಆದ್ದರಿಂದ ಸುಷುಪ್ತನಿಗೆ ಹಿಂದೆ ಸಂಚರಿಸುವಾಗ ತನ್ನ ಎಲ್ಲಾ ಕರಣಗಳೂ ಆಯಾಸಗೊಂಡಿದ್ದುದರಿಂದ ಅವನು ತಿಳಿಯಲಿಕ್ಕೂ ಭೋಗಿಸ ಲಿಕ್ಕೂ ಅಶಕ್ತನಾಗಿ ಪರಶಿವನೆಂಬ ಜ್ಯೋತಿರ್ಲಿಂಗವನ್ನು ವಿಶ್ರಾಂತಿಸ್ಥಾನವನ್ನಾಗಿ ಪಡೆದು ಸ್ವಸ್ಥನಾಗಿ ಮತ್ತೆ ಭೋಗಕ್ಕೆ ಹೊರಡುತ್ತಾನೆ.

ಶರೀರತ್ರಯೇಷ್ವವಸ್ಥಾತ್ರಯಂ ಶ್ರುತಿಯುಕ್ತ್ಯನುಭವತಯಾ ರೂಢಮಪಿ ಸುಷುಪ್ತ್ಯನುಗುಣತಯಾ ಮೂರ್ಛಾವಸ್ಥಾ ಕಾಚಿ ದ್ದೃಷ್ಟಾ. ತಸ್ಮಾತ್ಸಾ ತದ್ವಿಲಕ್ಷಣಾ ತದಂತರ್ಭಾವಾ ವೇತಿ ಶಂಕಾಯಾಂ ಅಧಿಕರಣಾಂತರೇಣ ಸುಷುಪ್ತ್ಯವಸ್ಥಾಮೂರ್ಛಾವಸ್ಥಯೋಃ ಪರಸ್ಪರ ವೈಲಕ್ಷಣ್ಯಮಾಹ. ಮುಗ್ಧಾಧಿಕರಣಂ ॥ ೪ ॥ ಮುಗ್ಧೇಽರ್ಧಸಂಪತ್ತಿಃ ಪರಿಶೇಷಾತ್ ॥ ೧೦ ॥ ಮೂರ್ಛಾವಸ್ಥಾಯಾಂ ಹೃತ್ಪುಂಡರೀಕಾವಚ್ಛಿ ನ್ನಜ್ಯೋತಿರ್ಲಿಂಗೇ ಬ್ರಹ್ಮಣಿ ದೇಹಾದ್ಯಭಿಮಾನವಿಶಿಷ್ಟಸ್ಯ ಜೀವ ಸ್ಯಾರ್ಧಸಂಪತ್ತಿರರ್ಧಲಯ ಏವ. ನತು ಸುಷುಪ್ತಿದಶಾಯಾಮಿವ ಸರ್ವಾತ್ಮನಾ ತದಭಿಮಾನಲಯಃ, ಮೂರ್ಛಿತಸ್ಯ ಪುರುಷಸ್ಯ ಬಾಹ್ಯ ಪದಾರ್ಥಜ್ಞಾನಾಭಾವೇಽಪ್ಯಂತರದುಃಖಾನುಭವಸಂಧಾನಸ್ಯ ವಿದ್ಯಮಾ ನತ್ವೇನ ದೇಹಾದ್ಯಭಿಮಾನಸ್ಯಾಪಿ ವೇಶತೋ ಹ್ಯಂಗೀಕರ್ತವ್ಯತ್ವಾತ್. ತಥಾಚ ಪರಿಶೇಷಾದವಸ್ಥಾತ್ರಯವಿಲಕ್ಷಣತ್ವಾತ್ ಮೂರ್ಛಾವಸ್ಥಾ ಭಿನ್ನೈವ. ಪೂರ್ವತ್ರ ಸುಪ್ತಜೀವಪ್ರಕಾರತ್ವಮಭಿಧಾಯೇದಾನೀಂ ಮುಗ್ಧಮಧಿಕೃತ್ಯ ಚಿಂತ್ಯತೇ. ಮೂರ್ಛಿತಃ ಪುರುಷ ಇತಿ ಲೋಕೇ ಸರ್ವಾನುಭವದೃಷ್ಟತ್ವಾನ್ಮೂರ್ಛೇತಿ ಕಾಚಿದವಸ್ಥಾ ವಿದ್ಯತೇ. ತದ ವಸ್ಥಾ ಸುಷುಪ್ತ್ಯಾದಿಷ್ವನ್ಯತಮಾ ನವೇತಿ ವಿಶಯಃ. ಅವಸ್ಥಾಂತರ ಕಲ್ಪನೇ ಮಾನಾಭಾವಾತ್ ಸುಷುಪ್ತ್ಯಾದೀನಾಮನ್ಯತಮಾವಸ್ಥಾಯಾ

ಮೇವ ಮೂರ್ಛಾಪ್ರಸಿದ್ಧ್ಯುಪಪತ್ತೇರಿಯಮನ್ಯತಮಾವಸ್ಥಾ ಇತಿ ಪ್ರಾಪ್ತೇ ಪ್ರಚಕ್ಷ್ಮಹೇ. ಮುಗ್ಧೇ ಪುರುಷೇ ಯಾ ಅವಸ್ಥಾ ಸಾ ಮರಣಾ ಯಾರ್ಧಸಂಪತ್ತಿಃ. ಕುತಃ ಪರಿಶೇಷಾತ್, ನ ತಾವತ್ಸ್ವಪ್ನಜಾಗರೌ ಜ್ಞಾನಾಭಾವಾತ್. ನಿಮಿತ್ತವೈರೂಪ್ಯಾದಾಕಾರಾವೈರೂಪ್ಯಾಚ್ಚ ನ ಸುಪ್ತಿಮರಣೇ. ನಿಮಿತ್ತಂ ಹಿ ಮೂರ್ಛಾಯಾ ಅಭಿಘಾತಾದಿಃ. ಪಾರಿ ಶೇಷ್ಯಾನ್ಮರಣಾಯಾರ್ಧಸಂಪತ್ತಿರ್ಮೂರ್ಛಾ. ಮರಣಂ ಹಿ ಸರ್ವ ಪ್ರಾಣದೇಹಸಂಬಂಧೋಪರತಿಃ. ಕಿಂಚ ನಿಮಿತ್ತವೈರೂಪ್ಯಾತ್ಸುಷುಪ್ತಿ ವ್ಯಾವೃತ್ತಿಃ, ಆಕಾರವೈರೂಪ್ಯಾನ್ಮರಣವ್ಯಾವೃತ್ತಿಃ, ನ ಸುಷುಪ್ತಿಮರಣೇ ತ್ಯುಕ್ತೇರಾಸನ್ನತಯಾ ಸುಷುಪ್ತಿಮರಣಯೋರ್ಮಧ್ಯಸ್ಥತ್ವಾತ್ಪಾರಿಶೇಷ್ಯ ಮುಕ್ತಂ. ಪಶ್ಚಾನ್ಮರಣಾಂತರ್ಭಾವಶಂಕಾಯಾಮಾಕಾರವೈರೂಪ್ಯಂ ವಿವೃತಂ. ಸುಷುಪ್ತೌ ಪ್ರಾಣೋ ಭೂಯಿಷ್ಠಮುಪಪದ್ಯತೇ. ಮೂರ್ಛಾ ಯಾಮಲ್ಪಃ ಕಿಂಚಿದುಪಪದ್ಯತೇ. ಮೃತೌ ನ ಕಿಂಚಿದಪಿ. ಬಾಹ್ಯ ವಾಯುನಾ ಭೂಯಿಷ್ಠಮಾಪ್ಯಾಯಿತಸ್ಸುಷುಪ್ತೌ; ಮೂರ್ಛಾಯಾಂ ಕಿಂಚಿದಾಪ್ಯಾಯಿತಃ. ಅನಾಪ್ಯಾಯಿತಸ್ಯ ಪ್ರಾಣಸ್ಯೋಪಲಂಭಾನರ್ಹ ತ್ವಾದನ್ಯೇ ತು "ಮೂರ್ಛಿತಃ ಕಿಂ ಮರಣಾಯ ಪರಮಾತ್ಮಾನಮಭಿ ಸಂಪನ್ನಃ? ಉತ ಸ್ವಾಪ್ನೇ ತಸ್ಮಿನ್ವಿಲೀನಃ? ಉತ ಪ್ರಕಾರಾಂತರಗತಃ?" ಇತಿ ವಿಚಾರಮಾಚಕ್ಷತೇ. ಜಾಗ್ರದಾದಿಷ್ವನ್ಯತಮೇ ತ್ವೇಕವಿಚಾರಾಂತ ರ್ಭಾವಾತ್ ಪೃಥಕ್ಕರಣೇ ಫಲಾಭಾವಾತ್ ದ್ವೇಧಾ ವಿಚಾರ ಉಚಿತಃ. ವಿಚಾರಸ್ಯ ಪರಮಾತ್ಮಪರ್ಯಂತತ್ವಂ ಚ ವಿಹತಂ. ತಸ್ಮಾತ್ಸೂಕ್ಷ್ಮ ಪ್ರಾಣದೇಹಸಂಬಂಧಾವಸ್ಥಿತಿರ್ಮೂರ್ಛೇತಿ ನಿರ್ಣೀಯತೇ.

ಮೂರು ಶರೀರಗಳಲ್ಲಿ ಜಾಗ್ರತ್ತು ಸ್ವಪ್ನ ಸುಷುಪ್ತಿ ಎಂಬ ಮೂರು ಅವಸ್ಥೆಗಳು ಇರುವುದಾಗಿ ಶ್ರುತಿ ಯುಕ್ತಿ ಮತ್ತು ಅನುಭವಗಳಿಗೆ ಸಮ್ಮತವಾಗಿದ್ದರೂ ಸುಷುಪ್ತಿಗೆ ಅನುಗುಣವಾಗಿ ಮೂರ್ಛೆ ಎಂಬ ಅವಸ್ಥೆಯೊಂದು ಇರುವುದಾಗಿ ಕಂಡುಬಂದಿದೆ. ಇದು ಆ ಮೂರಕ್ಕಿಂತ ಬೇರೆಯೇ ಅಥವಾ ಅವುಗಳಲ್ಲಿಯೇ ಸೇರುವಂತಹದೆ? ಎಂದು ಆಶಂಕಿಸಿ ಸುಷುಪ್ತಿ ಮೂರ್ಛೆಗಳಿಗೆ ಪರಸ್ಪರಭೇದವನ್ನು ಹೇಳುತ್ತಾನೆ. ಮೂರ್ಛೆಯಲ್ಲಿ ಹೃದಯಕಮಲದೊಳಗಿನ ಜ್ಯೋತಿರ್ಮಯವಾದ ಪ್ರಾಣಲಿಂಗದಲ್ಲಿ ದೇಹಾದ್ಯಭಿಮಾನವುಳ್ಳ ಜೀವನಿಗೆ ಅರ್ಧಲಯವುಂಟಾಗುತ್ತದೆ. ಆದರೆ ಸುಷುಪ್ತಿ ಯಂತೆ ಪೂರ್ಣವಾಗಿ ಲಯವಾಗುವುದಿಲ್ಲ. ಮೂರ್ಛಿತನಿಗೆ ಹೊರಗಿನ ವಸ್ತುವಿನ ಜ್ಞಾನವಿಲ್ಲದಿದ್ದರೂ ಅವನು ಒಳಗಿನ ದುಃಖವನ್ನು ಅನುಭವಿಸುತ್ತಿರುವುದರಿಂದ ದೇಹಾದ್ಯಭಿಮಾನವೂ ಇರುವುದಾಗಿ ಅವನ ವರ್ತನದಿಂದಲೇ ಅಂಗೀಕರಿಸಬೇಕಾಗು ತ್ತದೆ. ಆದ್ದರಿಂದ ಮೂರು ಅವಸ್ಥೆಗಳಿಗಿಂತ ಭಿನ್ನವಾಗಿ ಉಳಿದದ್ದರಿಂದ ಮೂರ್ಛೆ ಎಂಬುದು ಭಿನ್ನಾವಸ್ಥೆಯೇ ಆಗಿದೆ. ಹಿಂದೆ ಸುಷುಪ್ತನ ಅವಸ್ಥೆಯನ್ನು ಹೇಳಿ ಈಗ

ಮುಗ್ಧನ ಸ್ಥಿತಿಯನ್ನು ತಿಳಿಸಲಾಗಿದೆ. "ಇವನು ಮೂರ್ಛೆಗೊಂಡನು" ಎಂದು ಲೋಕ ದಲ್ಲಿ ಎಲ್ಲರಿಗೂ ಅನುಭವಗೋಚರವಾದ್ದರಿಂದ ಮೂರ್ಛೆ ಎಂಬುದೊಂದು ಅವಸ್ಥೆ ಇದೆ. ಈ ಅವಸ್ಥೆ ಸುಷುಪ್ತಿಯಲ್ಲಿಯೇ ಸೇರುತ್ತದೆಯೋ ಅಥವಾ ಬೇರೆಯಾಗಿಯೇ ಇರುತ್ತೆಯೋ ಎಂದು ಸಂಶಯ ಬರುತ್ತದೆ. ಇದನ್ನು ಬೇರೊಂದು ಅವಸ್ಥೆ ಎಂದು ಹೇಳಲಿಕ್ಕೆ ಪ್ರಮಾಣವಿಲ್ಲದ್ದರಿಂದ ಪ್ರಸಿದ್ಧವಾದ ಮೂರು ಅವಸ್ಥೆಗಳೊಳಗೆ ಸೇರಿಸು ವುದೇ ಯುಕ್ತವಾಗುತ್ತದೆ. ಹೀಗೆ ಆಕ್ಷೇಪ ಬಂದರೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಮೂಗ್ಧ ಪುರುಷನ ಅವಸ್ಥೆ ಮರಣಕ್ಕೆ ಅರ್ಧಭಾಗ ಅಂಟಿಕೊಂಡಿರು ತ್ತದೆ; ಯಾಕೆಂದರೆ ಆಗ ಜ್ಞಾನವಿಲ್ಲದ್ದರಿಂದ ಸ್ವಪ್ನಕ್ಕೂ ಜಾಗ್ರದವಸ್ಥೆಗೂ ಅವ ಕಾಶವಿಲ್ಲ. ನಿಮಿತ್ತದಲ್ಲೂ ವಿರೂಪವಿರುವುದರಿಂದ ಸುಷುಪ್ತಿಯೂ ಮರಣವೂ ಆಗ ಸಂಭವಿಸುವಂತಿಲ್ಲ. ದೇಹಕ್ಕೆ ತಗಲುವ ಕಠಿಣವಾದ ಏಟಿನಿಂದ ಮೂರ್ಛೆ ಉಂಟಾಗು ತ್ತದೆ. ಮರಣಕ್ಕೆ ಹಿಂದಿನ ಅವಸ್ಥೆಯೇ ಮೂರ್ಛೆಎನಿಸುತ್ತದೆ. ಮರಣವಾದರೋ ಆತ್ಮನಿಗೂ ದೇಹಕ್ಕೂ ಸಂಬಂಧವನ್ನು ಪೂರ್ಣವಾಗಿ ತಪ್ಪಿಸುವಂತಹದು; ಇದಕ್ಕೆ ವಿರು ದ್ಧವಾದ ನಿಮಿತ್ತದಿಂದ ಮೂರ್ಛೆ ಹುಟ್ಟುವುದರಿಂದ ಇದು ಸುಷುಪ್ತಿಗಿಂತಲೂ ಬೇರೆ ಯಾಗುತ್ತದೆ. ವಿರುದ್ಧವಾದ ಆಕಾರದಿಂದ ಇದು ಮರಣಕ್ಕಿಂತ ಬೇರೆಯಾಗುತ್ತದೆ. ಇದರಿಂದ ಸುಷುಪ್ತಿಗೂ ಮರಣಕ್ಕೂ ಮಧ್ಯದ ಅವಸ್ಥೆಯೇ ಮುರ್ಛೆ ಎಂದು ಹೇಳಿ ದಂತಾಯಿತು. ಮುಂದೆ ಆಗುವ ಮರಣದಲ್ಲಿ ಮೂರ್ಛೆಯನ್ನು ಸೇರಿಸಬೇಕೆಂದು ಹೇಳಿದರೆ ಇದೂ ಸರಿಯಲ್ಲ; ಯಾಕೆಂದರೆ ಆಗ ಅದಕ್ಕೆ ಅನುಕೂಲವಾದ ಆಕಾರವಿರು ವುದಿಲ್ಲ. ಸುಷುಪ್ತಿಯಲ್ಲಿ ಪ್ರಾಣ ಪೂರ್ಣವಾಗಿ ಸಂಚರಿಸುತ್ತಲಿರುವುದು. ಮೂರ್ಛೆ ಯಲ್ಲಿ ಅದು ಕೊಂಚವೇ ಸಂಚರಿಸುತ್ತಿರುವುದು. ಮರಣದಲ್ಲಿ ಪ್ರಾಣದ ಸಂಚಾ ರವೇ ಇರುವುದಿಲ್ಲ. ಸುಷುಪ್ತಿಯಲ್ಲಿ ಹೊರಗಿನ ವಾಯುವಿನಿಂದ ಪ್ರಾಣವಾಯುವು ಪುಷ್ಟಿಯನ್ನುಹೊಂದುತ್ತದೆ. ಆದರೆ ಮೂರ್ಛೆಯಲ್ಲಿ ಅದು ಇರುವುದಿಲ್ಲ. ಹೊರಗಿನ ವಾಯುವಿನಿಂದ ಪೋಷಿತವಾಗದ ಪ್ರಾಣವಾಯುವಿನ ಸಂಚಾರ ಆಗ ಗೊತ್ತಾಗು ವಂತಿಲ್ಲ. "ಮೂರ್ಛಿತನು ಮರಣಕ್ಕಾಗಿ ಪರಮಾತ್ಮನೊಡನೆ ಬೆರೆತಿರುವನೇ? ಅಥವಾ ಸ್ವಪ್ನದಲ್ಲಿ ಜೀವನು ಶಿವನಲ್ಲಿ ಲಯವಾಗಿರುವನೆ? ಅಥವಾ ಬೇರೆ ರೀತಿಯಲ್ಲಿ ರುವನೆ?" ಎಂದು ಇಲ್ಲಿ ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ಜಾಗ್ರತ್ತು ಮೊದ ಲಾದ ಅವಸ್ಥೆಗಳಲ್ಲಿ ಮೂರ್ಛೆಯೂ ಒಂದು ಅವಸ್ಥೆ ಎನಿಸಿ ಅದರಲ್ಲಿಯೇ ಸೇರುತ್ತದೆ. ಇದನ್ನು ಬೇರ್ಪಡಿಸಿದರೆ ಏನೂ ಫಲವಿಲ್ಲದ್ದರಿಂದ ಎರಡೇ ಪಕ್ಷಗಳನ್ನು ಹೇಳುವುದು ನ್ಯಾಯವೇ ಹೊರತು ಮೂರುಪಕ್ಷಗಳ್ನು ಹೇಳುವುದು ಯುಕ್ತವಲ್ಲ. ವಿಚಾರದ ಫಲವನ್ನು ಪರಶಿವನಿಗೆ ಅನ್ವಯಿಸುವುದು ವಿರುದ್ಧವಾಗುತ್ತದೆ. ಆದ್ದರಿಂದ ಸೂಕ್ಷ್ಮ ವಾದರೀತಿಯಲ್ಲಿ ಪ್ರಾಣಕ್ಕೂ ದೇಹಕ್ಕೂ ಸಂಬಂಧಪಡುವ ಅವಸ್ಥೆಯನ್ನೇ ಮೂರ್ಛೆ ಎಂದು ನಿರ್ಣಯಿಸಲಾಗಿದೆ.

ಪೂರ್ವತ್ರ ತ್ವಂಪದಾರ್ಥವಾಚ್ಯಸ್ಯ ಜೀವಸ್ಯ ಪರಮಾತ್ಮಜ್ಞಾನನಿ

ರೋಧಕಮಹಾಘೋರಸಂಸಾರೋತ್ತಾರಣಹೇತುಭೂತವೈರಾಗ್ಯೋದಯಾರ್ಥಂ ಸೂತ್ರಕಾರೇಣ ತಸ್ಯ ಜಾಗ್ರತ್ಸ್ವಪ್ನಸುಷುಪ್ತಿಮುಗ್ಧೋತ್ಕ್ರಾಂತ್ಯವಸ್ಥಾಂ ನಿರೂಪ್ಯ ತತ್ಕರ್ಮಾನುಸರಣೇನೈವ ಈಶ್ವರಸ್ಯ ತತ್ಕರ್ತೃತ್ವನಿರೂಪಣಾತ್ ತತ್ಪದಾರ್ಥಃ ಪರಮಾತ್ಮಾ ಕೀದೃಶಃ? ಸಾವಯವೋ ವಾ ನಿರವಯವೋ ವಾ? ಇತ್ಯಾಂಶಂಕಾಯಾಂ ತಲ್ಲಕ್ಷಣಮಧಿಕರಣಾಂತರೇಣ ನಿರೂಪಯತಿ. ಉಭಯಲಿಂಗಾಧಿಕರಣಂ ॥ ೫ ॥ ನ ಸ್ಥಾನತೋಽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ॥ ೧೧ ॥ ಪರಸ್ಯ ಜಗತ್ಕಾರಣಸ್ಯ ಶಿವಸ್ಯೋಭಯಲಿಂಗಂ ಭಾವಪ್ರಧಾನೋ ನಿರ್ದೇಶಃ. ಉಭಯಲಿಂಗತ್ವಂ ನಾಮ ಅರ್ಚನೀಯಲಿಂಗರೂಪೇಣ ಶಿವಭಕ್ತಗಾತ್ರೇಷು, ಕಾಶೀಶ್ರೀಶೈಲಾದಿದಿವ್ಯಸ್ಥಲೇಷು ಚ ಪಂಡಿತಪಾಮರತಾರಣಾರ್ಥಂ ಸ್ಥಿತಿಃ. ಕಿಂಚ ದೇವಮನುಷ್ಯಾದಿಸರ್ವಶರೀರಾಂತರ್ಯಾಮಿತಯಾ ಮೂಲಾಧಾರಹೃದಯಭ್ರೂಮಧ್ಯಾದಿಪ್ರದೇಶೇಷು ಜ್ಯೋತಿರ್ಲಿಂಗಾತ್ಮಕತ್ವೇನ ಪ್ರಕಾಶಕತ್ವಂ. ಮಹಾಕೈಲಾಸಮೇರುಮಂದರಾದಿಸ್ಥಲೇಷು ಪರಂಬಿಕಾವಚ್ಛಿನ್ನತಯಾ ಭಕ್ತಾನಾಂ ಸಾಲೋಕ್ಯಾದಿತ್ರಿವಿಧಾಪವರ್ಗಾತ್ಮಕಕಲ್ಯಾಣವಿಭೂತ್ಯರ್ಥಂ ಧರ್ಮಾರ್ಥಕಾಮಫಲಸಿದ್ಧ್ಯರ್ಥಂ ಚ ದಿವ್ಯಲೀಲಾಮಂಗಳವಿಗ್ರಹವಿಶಿಷ್ಟತ್ವಂ, ಪರಾಕಾಶರೂಪೇಣ ನಿರವಯವಸ್ವಭಾವತಯಾ ನಿಖಿಲಜಗದ್ವ್ಯಾಪಕತ್ವಂ ಚ ನಿರ್ದಿಷ್ಟಂ. ಅತಸ್ತಸ್ಯ ತದುಭಯಂ ಸ್ವಾಭಾವಿಕಮೇವ. ಕೇಚಿತ್, " ಪರಸ್ಯ ನಿರವಯತ್ವಮಾತ್ರಂ ಸ್ವಾಭಾವಿಕಂ ಸತ್ಯಸಂಕಲ್ಪತ್ವಾದಿಸಗುಣತ್ವಮಾಗಂತುಕಂ ಉಭಯೋರೇಕತ್ರ ವಿರೋಧಾತ್, ಮಂದಬುದ್ಧೀನಾಮುಪಾಸನಾರ್ಥಂ ಮಿಥ್ಯಾಭೂತಸಗುಣತ್ವಮೌಪಾಧಿಕಭೇದೇನಾಂಗೀಕರ್ತವ್ಯಂ " ಇತಿ ವದಂತಿ. ತನ್ಮತಂ ನಿರಾಕರೋತಿ. ಸ್ಥಾನತಃ ಉಪಾಧಿತಃ ಸಗುಣತ್ವನಿರ್ಗುಣತ್ವಯೋರ್ಭೇದೋ ನ ಸಂಭವತಿ. ಕುತಃ? ಸರ್ವತ್ರ ಹಿ ವೇದವೇದಾಂತಾಗಮಾದಿಷ್ವಪಿ ಪರಸ್ಯ ಬ್ರಹ್ಮಣಃ ತದುಭಯಸ್ಯಾಸಂದಿಗ್ಧತಯಾ ಪ್ರತಿಪಾದನಾತ್ತಸ್ಯೋಭಯಲಿಂಗತ್ವಂ ಸ್ವಾಭಾವಿಕಮೇವೇತಿ ನಿರ್ದಿಶ್ಯತೇ. " ರುದ್ರೋ ವಾ ಏಷ ಯದಗ್ನಿಸ್ತಸ್ಯೈತೇ ತನುವೌ ಘೋರಾನ್ಯಾ ಶಿವಾನ್ಯಾ " ಇತಿ, " ಯಾ ತೇ ರುದ್ರ ಶಿವಾ ತನೂರಘೋರಾಪಾಪಕಾಶಿನೀ । ತಯಾ ನಸ್ತನುವಾ ಶಂತಮಯಾ ಗಿರಿಶಂತಾಭಿಚಾಕಶೀಹಿ ॥ ", " ಸೋಮಾರುದ್ರಾ ಯುವಮೇತಾನ್ಯಸ್ಮೇ ವಿಶ್ವಾ ತನೂಷು ಭೇಷಜಾನಿ ಧತ್ತಂ ಅವಸ್ಯತಂ ಮುಂಚತಂ " ಇತ್ಯಾದಿನಾ ವೇದೇಷು, " ಆಕಾಶಶರೀರಂ ಬ್ರಹ್ಮ ", " ಶಾಂತಿಸಮೃದ್ಧಮಮೃತಂ " ಇತ್ಯಾದಿನಾ ವೇದಾಂತೇಷು " ಅಧಾರೇ ಕನಕಪ್ರಖ್ಯಂ ಹೃದಯೇ ವಿದ್ರು

ಮಪ್ರಭಂ । ಭ್ರೂಮಧ್ಯೇ ಸ್ಫಟಿಕಚ್ಛಾಯಂ ಲಿಂಗಂ ಯೋಗೀ ವಿಭಾವಯೇತ್ ॥ ", " ಮುಖೇ ಮಂತ್ರಂ ಹೃದಿ ಧ್ಯಾನಂ ಮಸ್ತಕೇ ಲಿಂಗಧಾರಣಂ । ರುದ್ರಾಕ್ಷಂ ಚ ಶಿಖಾ ಭಸ್ಮ ತದ್ವೈ ಬ್ರಾಹ್ಮಣಲಕ್ಷಣಂ ॥ " ಇತ್ಯಾದಿನಾ ಸ್ಮೃತಿಷು, " ಅಂತರ್ಧಾರಣಶಕ್ತೋ ವಾ ಹ್ಯಶಕ್ತೋ ವಾ ದ್ವಿಜೋತ್ತಮಃ । ಸಂಸ್ಕೃತ್ಯ ಗುರುಣಾ ದತ್ತಂ ಶೈವಲಿಂಗಮುರಸ್ಸ್ಥಲೇ । ಧಾರ್ಯಂ ವಿಪ್ರೇಣ ಮುಕ್ತ್ಯರ್ಥಂ ಏವಂ ವೇದೇಷು ಗೀಯತೇ । ತಸ್ಮಾತ್ಸ್ಥೂಲೇ ಚ ಸೂಕ್ಷ್ಮೇ ಚ ಶಿವಲಿಂಗಂ ಚಿದಾತ್ಮಕಂ । ಧಾರ್ಯಮೇತ್ಸತತಂ ಭಕ್ತ್ಯಾ ಭವಬಂಧವಿಮುಕ್ತಯೇ ॥ " ಇತ್ಯಾದಿನಾ ಶಿವಾಗಮೇಷ್ವಪಿ ತದುಭಯಸ್ಯ ಸಮಾನತ್ವೇನ ಸ್ವಾಭಾವಿಕತಯಾ ಬಹುಧಾ ಪ್ರಪಂಚಿತತ್ವಾದರ್ಧಜರತಿನ್ಯಾಯವದಪ್ರಸಿದ್ಧತ್ವಾತ್ಪಕ್ಷೈಕತ್ವಮಯುಕ್ತಂ. ಅತಃ " ಉಭಯವಿಧಿಬಲಾದುಭಯಸಿದ್ಧಿಃ " ಇತಿ ನ್ಯಾಯೇನ ತಸ್ಯೋಭಯಲಿಂಗತ್ವಂ ನಿಷ್ಪ್ರತ್ಯೂಹಮೇವ. ತೈತ್ತಿರೀಯೇ " ದಹರಂ ವಿಪಾಪಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಂ । ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ಯದಂತಸ್ತದುಪಾಸಿತವ್ಯಂ ॥ " ಇತಿ ಪರಮೇಶ್ವರಸ್ಯ ದಹರೋಪಾಸ್ಯತ್ವಂ ವಿಧಾಯ, " ಸಃ ಕಃ " ಇತ್ಯಾಶಂಕಾಯಾಂ " ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ । ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸ ಮಹೇಶ್ವರಃ ॥ " ಇತಿ ತತ್ರೋಪಾಸ್ಯೋ ಮಹೇಶ್ವರ ಇತಿ ಸ್ಪಷ್ಟಮುಪದಿಶ್ಯ, ತದ್ಭಕ್ತವರಿಷ್ಠತ್ವೇನ ದೃಷ್ಟಾಂತತಯಾ " ಸಹಸ್ರಶೀರ್ಷಂ ದೇವಂ " ಇತ್ಯನುವಾಕೇ ನಾರಾಯಣಹೃದಯಾವಚ್ಛಿನ್ನಶಿವೋಪಾಸನಂ ಪ್ರದರ್ಶ್ಯ " ನಿಧನಪತಯೇ ನಮಃ " ಇತ್ಯಾದಿನಾ ತಸ್ಯ ಸರ್ವಾತ್ಮಕತ್ವಮಭಿಧಾಯ " ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಂ ಸ್ಥಾಪಯತಿ " ಇತಿ ಬಾಹ್ಯಾಭ್ಯಂತರಭೇದೇನ ತಸ್ಯ ಮೂರ್ತಾಮೂರ್ತತ್ವವ್ಯಪದೇಶಾತ್. ಕಿಂಚ ಕೈವಲ್ಯೇ " ಹೃತ್ಪುಂಡರೀಕಂ ವಿರಜಂ ವಿಶುದ್ಧಂ " ಇತ್ಯಾರಭ್ಯ " ಉಮಾಸಹಾಯಂ ಪರಮೇಶ್ವರಂ– ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ " ಇತಿ, " ವಾಲಾಗ್ರಮಾತ್ರಂ ಹೃದಯಸ್ಯ ಮಧ್ಯೇ ವಿಶ್ವೇ ದೇವಂ ಜಾತವೇದಸಂ ವರೇಣ್ಯಂ " ಇತ್ಯಥರ್ವಶಿರಸಿ, " ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ " ಇತಿ ಕಠವಲ್ಲ್ಯಾಂ, " ಅಥಾಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರ ಆಕಾಶಸ್ತಸ್ಮಿನ್ಯದಂತಸ್ತದನ್ವೇಷ್ಟವ್ಯಂ " ಇತಿ ಛಾಂದೋಗ್ಯೇ " ಏಷೋಽಸೌ ಪರಮೋ ಹಂಸೋ ಭಾನುಕೋಟಿಪ್ರಕಾಶೋ ಯೇನೇದಂ ವ್ಯಾಪ್ತಂ ತಸ್ಯಾಷ್ಟಧಾ ವೃತ್ತಿರ್ಭವತಿ " ಇತಿ ಹೃದಯಾಂತರ್ವರ್ತಿನಃ ಪರಬ್ರಹ್ಮ

ಣಶ್ಶಿವಸ್ಯ ಲಿಂಗರೂಪತ್ವಂ ಸ್ಪಷ್ಟಮುಪದಿಷ್ಟಂ. "ಜ್ಯೋತಿರ್ಲಿಂಗಂ ಭ್ರುವೋರ್ಮಧ್ಯೇ ನಿತ್ಯಂ ಧ್ಯಾಯೇತ್ಸದಾ ಯತಿಃ" ಇತಿ ಸಾಮಶಾಖಾಯಾಂ, "ಲಿಂಗಂ ಬ್ರಹ್ಮೈವ ಕೇವಲಂ" ಇತಿ ಸಾಮರುದ್ರಸೂಕ್ತೇ ದರ್ಶನಾತ್ ಪರಸ್ಯ ಸಾವಯವತ್ವಂ ನಿರವಯವತ್ವಂ ಉಭಯಾತ್ಮಕತ್ವಂ ವಾ? ಕಿಂಚ ಸರ್ವಜೀವಾಂತರ್ಯಾಮಿತ್ವೇನ ಜೀವಕೃತಪುಣ್ಯಾಪುಣ್ಯ ಫಲಭೋಕ್ತೃತ್ವಂ ಚ ಯುಕ್ತಂ ನವಾ? ಇತಿ ಸಂದಿಹ್ಯತೇ. "ಉಭಯವಿಧಿಬಲಾದುಭಯಸಿದ್ಧಿಃ" ಇತಿ ನ್ಯಾಯೇನ ಶಿವಸ್ಯ ಪರಬ್ರಹ್ಮಣಃ ಮೂರ್ತಾಮೂರ್ತತ್ವಮಶ್ರೌತಮಿತಿ ಚೇತ್ತದಯುಕ್ತಂ. "ಅಚಕ್ಷುಃ-ಶ್ರೋತಂ ತದಪಾಣಿಪಾದಂ," "ನಿತ್ಯಂ ಸರ್ವಗತಂ ಸುಸೂಕ್ಷ್ಮಂ," "ಅಪ್ರಾಣೋ ಹ್ಯಮನಾಶ್ಶುಭ್ರಃ", "ಆಕಾಶವತ್ಸರ್ವಗತೋ ನಿರಂಜನಃ," "ನಿಷ್ಕಲಂ ನಿರ್ಗುಣಂ ಶಾಂತಂ ನಿರವದ್ಯಂ ನಿರಂಜನಂ," "ಅಶಬ್ದಮಸ್ಪರ್ಶಮರೂಪಮವ್ಯಯಂ" ಇತ್ಯಾದಿಶ್ರುತಿಕದಂಬೇಷು ತಸ್ಯ ಮೂರ್ತತ್ವನಿಷೇಧಾತ್, ಮೂರ್ತತ್ವೇ ವ್ಯಾಪಕತ್ವಾಭಾವಾತ್, ಜೀವವದ್ರಾಗದ್ವೇಷಸುಖದುಃಖಾನುಭವಪ್ರಸಂಗಾತ್, "ಶೀರ್ಯತ ಇತಿ ಶರೀರಂ" ಇತಿ ವ್ಯವಸ್ಥಾದರ್ಶನಾತ್, ಸ್ವೇಚ್ಛಾಧೀನವಿಗ್ರಹತ್ವೇಽಪ್ಯ ಪುರುಷಾರ್ಥತ್ವಸಂಭವಾಚ್ಚ ಅರ್ಧಜರತಿನ್ಯಾಯಾಪದೇಶಸ್ಯ ಪರಸ್ಯೋಭಯಧರ್ಮತ್ವಂ ನ ಸಂಭವತಿ. "ಯಸ್ಯಾತ್ಮಾ ಶರೀರಂ", "ಯೋ ರುದ್ರೋ ಅಗ್ನೌ" ಇತ್ಯಾದಿಷು ಸರ್ವಾಂತರ್ಯಾಮಿತ್ವಂ ಸರ್ವಶರೀರತ್ವಂ ಚೋಪಪನ್ನಮಿತಿ ಚೇತ್ತದನುಪಪನ್ನಂ. ತದ್ಧರ್ಮಪ್ರಾಪ್ತಿ ಪ್ರಸಕ್ತೇಃ, ತತ್ರತತ್ರ ವ್ಯವಸ್ಥಿತಸ್ಯ ತತ್ತತ್ಸಂಬಂಧರೂಪಪುರುಷಾರ್ಥದ್ಯೋತನಾಚ್ಚ, "ನೇಹ ನಾನಾಸ್ತಿ" ಇತ್ಯಾದಿಶ್ರುತಿಷ್ವದ್ವಿತೀಯತ್ವಸ್ಯಾರ್ಥಾತ್ಸಿದ್ಧತ್ವಾತ್ ರಜ್ಜ್ವಾರೋಪಿತಸರ್ಪವತ್ಕಾಲತ್ರಯೇಽಪಿ ಪಾರಮಾರ್ಥಿಕತ್ವೇನ ಸಾವಯವತ್ವಸರ್ವಜ್ಞತ್ವಾದಿಧರ್ಮವಚ್ಛಿನ್ನೇಶ್ವರೋ ನಾಸ್ತೀತಿ ಪ್ರಾಪ್ತೇ ಪ್ರಚಕ್ಷ್ಮಹೇ ನ ಸ್ಥಾನತೋಽಪೀತಿ. ಹಿಕಾರೇಣ ಪೂರ್ವಪಕ್ಷಂ ನಿರಸ್ಯತಿ. ನ ಸ್ಥಾನತೋಽಪಿ ಪರಸ್ಯ ಮಾಹೇಶ್ವರಾದಿ ಪಂಚವಿಂಶತಿಲೀಲಾಮಂಗಲವಿಗ್ರಹಸ್ಥಾನತೋಽಪಿ ಪರಸ್ಯ ಬ್ರಹ್ಮಣಃ ಅಪುರುಷಾರ್ಥಾವೇಶಸ್ಸಂಭವತಿ. ಕುತಃ ಉಭಯಲಿಂಗಂ ಸರ್ವತ್ರ ಯತಸ್ಸರ್ವತ್ರ ಶ್ರುತಿಸ್ಮೃತ್ಯಾಗಮಪುರಾಣಾದಿಷು ತಸ್ಯೋಭಯಲಿಂಗತ್ವಂ ಮೂರ್ತಾಮೂರ್ತೋಭಯಾತ್ಮಕತ್ವಮುಪದಿಶ್ಯತೇ. ಅತಸ್ತಸ್ಯ ಬಾಹ್ಯೇ ಕಾಶೀಶ್ರೈಶೈಲಗೋಕರ್ಣಕೇದಾರಚಿದಂಬರಾದಿದಿವ್ಯಸ್ಥಲೇಷು ಸದ್ಭಕ್ತ ಗಾತ್ರೇಷು ಮೇರುಮಂದರಕೈಲಾಸಾದಿಪ್ರದೇಶೇಷು ಚ ಭಕ್ತತಾರಣಾರ್ಥ ಮರ್ಚಾವತಾರೇಣ ಮೂರ್ತತ್ವಂ, ಮೂಲಾಧಾರಹೃದಯಭ್ರೂಮಧ್ಯ

ಬ್ರಹ್ಮರಂಧ್ರಾದಿಸ್ಥಲೇಷು ಜಗದೇಕಕಾರಣಭೂತಚಿದಾಕಾಶರೂಪೇಣ ಅಮೂರ್ತತ್ವಂ ಚೋಪಪನ್ನಂ. ತೈತ್ತಿರೀಯಕೇ ಚ "ದಹರಂ ವಿಪಾಪಂ" ಇತ್ಯಾದಿನಾ ಜ್ಯೋತಿರ್ಲಿಂಗಾನುಸಂಧಾನರೂಪಾಂತರ್ಲಿಂಗ ಧಾರಣಂ, "ಏತತ್ಸೋಽಮಸ್ಯ ಸೂರ್ಯಸ್ಯ ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" ಇತ್ಯನೇನ ಬಾಹ್ಯಲಿಂಗಧಾರಣಂ ಚೋಪ ದಿಷ್ಟಂ. "ಯಶ್ಛಂದಸಾಂ ವೃಷಭೋ ವಿಶ್ವರೂಪಃ। ಛಂದೋಭ್ಯೋಽ ಧ್ಯಮೃತಾತ್ಸಂಬಭೂವ ಸ ಮೇಂದ್ರೋ ಮೇಧಯಾ ಸ್ಪೃಣೋತು॥", "ಅಮೃತಸ್ಯ ದೇವಧಾರಣೋ ಭೂಯಾಸಂ। ಶರೀರಂ ಮೇ ವಿಚ ರ್ಷಣಂ। ಜಿಹ್ವಾ ಮೇ ಮಧುಮತ್ತಮಾ। ಕರ್ಣಾಭ್ಯಾಂ ಭೂರಿ ವಿಶ್ರುವಂ। ಬ್ರಹ್ಮಣಃ ಕೋಶೋಽಸಿ। ಮೇಧಯಾ ಪಿಹಿತಃ. ಶ್ರುತಂ ಮೇ ಗೋಪಾಯ॥" ಇತಿ ಬಾಹ್ಯಲಿಂಗಧಾರಣಂ, "ಸತ್ಯಾತ್ಮ ಪ್ರಾಣಾ ರಾಮಂ ಮನಆನಂದಂ", "ಯ ಏಷೋಽಂತರ್ಹೃದಯ ಆಕಾಶಃ ತಸ್ಮಿನ್ನಯಂ ಪುರುಷೋ ಮನೋಮಯಃ। ಅಮೃತೋ ಹಿರಣ್ಮಯಃ। ಅಂತರೇಣ ತಾಲುಕೇ। ಯ ಏಷ ಸ್ತನ ಇವಾವಲಂಬತೇ। ಸೇಂದ್ರ ಯೋನಿಃ। ಯತ್ರಾಸೌ ಕೇಶಾಂತೋ ವಿವರ್ತತೇ। ವ್ಯಪೋಹ್ಯ ಶೀರ್ಷ ಕಪಾಲೇ॥" ಇತ್ಯಾದಿನಾ ಅಭ್ಯಂತರಲಿಂಗಧಾರಣಂ ಚ ದೃಶ್ಯತೇ. ಕಿಂಚ "ಸಚ್ಚ ತ್ಯಚ್ಚಾಭವತ್ ನಿರುಕ್ತಂ ಚಾನಿರುಕ್ತಂ ಚ, ವಿಜ್ಞಾನಂ ಚಾವಿ ಜ್ಞಾನಂ ಚ, ಸತ್ಯಂ ಚಾನೃತಂ ಚ ಸತ್ಯಮಭವತ್" ಇತಿ ಮೂರ್ತಾ ಮೂರ್ತತ್ವಮೇಕಸ್ಯ ತಸ್ಯೋಪದಿಷ್ಟಂ. "ತಸಾಭಿಧ್ಯಾನಾದ್ಯೋಜನಾ ತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ" ಇತಿ ಶ್ವೇತಾಶ್ವ ತರೇ ತಸ್ಯಾಭಿಧ್ಯಾನಾದಿತ್ಯನೇನಾಂತರ್ಲಿಂಗಾನುಸಂಧಾನಂ, ಯೋಜನಾ ದಿತ್ಯನೇನ ಬಾಹ್ಯಲಿಂಗಧಾರಣಂ ಚೋಪದಿಷ್ಟಂ. "ಸರ್ವಾನನಶಿರೋ ಗ್ರೀವಃ ಸರ್ವಭೂತಗುಹಾಶಯಃ। ಸರ್ವವ್ಯಾಪೀ ಚ ಭಗವಾನ್ ತಸ್ಮಾ ತ್ಸರ್ವಗತಃ ಶಿವಃ॥" ಇತ್ಯಥರ್ವಶಿರಸಿ "ಸರ್ವಾನನಶಿರೋಗ್ರೀವಃ" ಇತ್ಯನೇನ "ಮಸ್ತಕೇ ಕಂಧರೇ ಕಕ್ಷೇ ಕುಕ್ಷೌ ವಕ್ಷಸ್ಸ್ಥಲೇಽಪಿ ವಾ। ತಥಾ ಪಾಣಿತಲೇ ವಾಪಿ ಪ್ರಾಣಲಿಂಗಂ ಧರೇತ್ಸುಧೀಃ॥" ಇತಿ ವಚ ನಾತ್ ಬಾಹ್ಯಲಿಂಗಧಾರಣಂ. "ಸರ್ವಭೂತಗುಹಾಶಯಃ" ಇತ್ಯಾದಿನಾ ಅಭ್ಯಂತರೇಽಪ್ಯುಪದಿಷ್ಟಂ. "ತ್ರಿಪುಂಡ್ರಂ ಯೇ ವಿನಿಂದಂತಿ ನಿಂದಂತಿ ಶಿವಮೇವ ತೇ। ಧಾರಯಂತಿ ತು ಯೇ ಭಕ್ತ್ಯಾ ಧಾರಯಂತಿ ತಮೇವ ತೇ॥" ಇತಿ ಬೃಹಜ್ಜಾಬಾಲೇ ಲಿಂಗಧಾರಣಸ್ಯ ಸರ್ವಾತಿಶಯತ್ವಂ ಮನಸಿ ನಿಧಾಯ ತತ್ತುಲ್ಯತ್ವಂ ತ್ರಿಪುಂಡ್ರಧಾರಣಸ್ಯೋಪದಿಶ್ಯತೇ. ಕಿಂಚ ಕೈವಲ್ಯಶಾಖಾಯಾಂ "ಉಮಾಸಹಾಯಂ–ತಮಸಃ ಪರಸ್ತಾತ್"

ಇತ್ಯತ್ರ ಉಮಾಸಹಾಯಂ ಇತ್ಯಾದಿನಾ ಸಗುಣತ್ವಂ, "ಸಮಸ್ತಸಾಕ್ಷಿಂ- ತಮಸಃ ಪರಸ್ತಾತ್" ಇತ್ಯಾದಿನಾ ನಿರ್ಗುಣತ್ವಂ ಚೈಕಸ್ಯೋಪಪದ್ಯತೇ. "ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ" ಇತಿ ಶ್ರುತ್ಯಂತರಪ್ರತೀತೇಃ ಸಾಕ್ಷ್ಯಾತ್ಮಕಸ್ಯ ಪರಸ್ಯ ನಿರ್ಗುಣತ್ವಮುಪದಿಷ್ಟಂ. ತಥಾ ಸ್ಮೃತಾವಪಿ "ಶಿವಂ ಪ್ರಶಾಂತಮಮೃತಂ ಸರ್ವಜ್ಞಂ ಸರ್ವತೋಮುಖಂ । ಸತ್ಯ ಸಂಕಲ್ಪಸಂಯುಕ್ತಂ ಸತ್ಯಕಾಮಂ ಸನಾತನಂ । ಮೂರ್ತಾಮೂರ್ತಾ ತ್ಮಕಂ ಶುದ್ಧಂ ಭಕ್ತಾಭೀಷ್ಟಫಲಪ್ರದಂ । ಮಣಿಕಂಕಣಕೇಯೂರಮಕು ಟಾದಿವಿಭೂಷಿತಂ । ನೀಲಗ್ರೀವಂ ವಿರೂಪಾಕ್ಷಂ ಉಮಾವಾಮಾಂಗಭಾ ಸಿತಂ । ಕೋಟಿಸೂರ್ಯಪ್ರತೀಕಾಶಂ ಕೋಟಿಕಂದರ್ಪಸುಂದರಂ । ಪಶುಪಾಶವಿನಿರ್ಮುಕ್ತಂ ಪಂಚಕೃತ್ಯಾದಿವಿಶಾರದಂ॥" ಇತಿ ಪೌರಾಣಿಕೇ ಚ "ತೇಜೋಬಲೈಶ್ವರ್ಯಮಹಾವಬೋಧಸುವೀರ್ಯಶಕ್ತ್ಯಾದಿಗು ಣೈಕರಾಶಿಃ । ಪರಃ ಪರಾಣಾಂ ಪರಿಪೂರ್ಣಕಾಮಃ ನಿರಸ್ತಹೇಯೋ ನಿಖಿಲೇಶ್ವರಶ್ಶಿವಃ" ಇತ್ಯಾದಿಸಕಲಸದ್ಗುಣೋಪೇತಂ ಶಿವಾಖ್ಯಂ ಪರಮಂ ಪದಂ ಪರಬ್ರಹ್ಮೈವ ಶ್ರುತಿಸ್ಮೃತಿಭ್ಯಸ್ತದುಭಯಲಕ್ಷಣಮವಗತಂ. ಕಿಂಚ ಸದಾ ಸರ್ವಾಂತರ್ಯಾಮಿತಯಾ ವ್ಯವಸ್ಥಿತೇಽಪಿ ದಿವ್ಯಲೀಲಾಮಂಗ ಲವಿಗ್ರಹೇಽಪಿ ಪರಮಶಿವೇ ಸ್ವವಶೀಕೃತಮಾಯಿಕತ್ವಾಜ್ಜೀವವನ್ನ ಕಶ್ಚಿ ದ್ದೋಷಕಳಂಕಃ. "ಸಂಭೋಗಪ್ರಾಪ್ತಿರಿತಿ ಚೇನ್ನ ವೈಶೇಷ್ಯಾತ್," "ಸ್ಥಿತ್ಯದನಾಭ್ಯಾಂ ಚ" ಇತ್ಯಾದಿಷು ಪರಬ್ರಹ್ಮಣಶ್ಶಿವಸ್ಯ ಕರ್ಮವಶತ್ವೇನ ದೋಷಾಭಾವೋ ಹ್ಯುಪದಿಷ್ಟಃ. "ಏಷ ತ ಆತ್ಮಾಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸುಸ್ಸತ್ಯಕಾಮ ಸ್ಸತ್ಯಸಂಕಲ್ಪಸ್ಸೋಽನ್ವೇಷ್ಟವ್ಯಸ್ಸ ವಿಜಿಜ್ಞಾಸಿತವ್ಯಃ" ಇತ್ಯಾದಿಬಹು ಶ್ರುತಿಷು "ಅಸ್ತಿ ಕಶ್ಚಿನ್ಮಹಾದೇವೋ ರಮಣೀಯಗುಣಾಕರಃ । ಸರ್ವ ಲೋಕಸ್ಯ ನಿರ್ಮಾತಾ ಪಶುಪಾಶವಿಲಕ್ಷಣಃ । ಸಮಸ್ತಕಲ್ಯಾಣಗುಣಾ ತ್ಮಕೋಽಸೌ ಸ್ವಶಕ್ತಿಲೇಶಾದ್ಧೃತಭೂತಸರ್ಗಃ । ಸ್ವಭಾವಸಿದ್ಧೋಭಯ ಲಿಂಗಸಂಜ್ಞಃ ಪ್ರಧಾನಕ್ಷೇತ್ರಜ್ಞಪತಿರ್ಮಹೇಶಃ ॥" ಇತ್ಯಾದಿಷು ತಸ್ಯ ಸರ್ವಾಂತರ್ಯಾಮಿತ್ವಸರ್ವಮಂಗಳಗುಣಾಕರತ್ವಸರ್ವದೋಷವಿಲಕ್ಷಣ ತ್ವಾದಿಕಸ್ಯ ಚೋಪದೇಶಾತ್, ಶೀರ್ಯತ ಇತಿ ಶರೀರಂ ಇತಿ ವ್ಯವಸ್ಥಾ ಪ್ರಾಕೃತಜೀವವಿಷಯಿಣೀತಿ ವೇದಿತವ್ಯಂ.

ನೀನು ಎನ್ನಿಸಿಕೊಳ್ಳುವ ಜೀವನಿಗೆ ಪರಶಿವಜ್ಞಾನವನ್ನು ತಡೆಯುವಂತಹ ಸಂಸಾರದಿಂದ ಬಿಡುಗಡೆಗೆ ಕಾರಣವಾದ ವೈರಾಗ್ಯವನ್ನು ದೊರಕಿಸಲಿಕ್ಕಾಗಿ ಅವನ ಜಾಗ್ರತ್ತು ಸ್ವಪ್ನ ಸುಷುಪ್ತಿ ಮೂರ್ಛೆ ಎಂಬ ಅವಸ್ಥೆಗಳನ್ನು ಹಿಂದೆ ತಿಳಿಸಿ ಸೂತ್ರ ಕಾರನು ಜೀವನ ಕರ್ಮಕ್ಕನುಗುಣವಾಗಿಯೇ ಪರಶಿವನಿಗೆ ಕರ್ತೃತ್ವವನ್ನು ಹೇಳಿರು

ವುದರಿಂದ ಆ ಪರಶಿವನು ಎಂತವನು? ಸಾವಯವನೇ ನಿರವಯವನೇ? ಎಂದಾ ಶಂಕಿಸಿ ಅವನ ಸ್ವರೂಪವನ್ನು ಮುಂದೆ ವಿಚಾರಿಸುತ್ತಾನೆ. ಜಗತ್ಕಾರಣನಾದ ಪರಮ ಶಿವನು ಎರಡುಬಗೆಯೂ ಆಗಿದ್ದಾನೆ. ಅರ್ಚನೆಗಾಗಿ ಶಿವಭಕ್ತರ ದೇಹದಲ್ಲಿಯೂ, ಕಾಶಿ ಶ್ರೀಶೈಲ ಮೊದಲೂದ ದಿವ್ಯಸ್ಥಲಗಳಲ್ಲಿಯೂ ಪಂಡಿತಪಾಮರರೆಲ್ಲರ ಉದ್ಧಾರ ಕ್ಕಾಗಿ ಶಿವನು ನೆಲಸಿರುವುದರಿಂದ ಸಾವಯವನೂ ನಿರವಯವನೂ ಆಗಿ ಉಭಯ ಲಿಂಗನೆನಿಸಿದ್ದಾನೆ. ದೇವಮನುಷ್ಯರಾದಿಯಾಗಿ ಎಲ್ಲರ ಶರೀರಗಳಲ್ಲೂ ಅಂತರ್ಯಾ ಮಿಯಾಗಿರುವುದರಿಂದ ಶಿವನು ಮೂಲಾಧಾರ, ಹೃದಯ, ಭ್ರೂಮಧ್ಯ ಮೊದಲಾದ ಪ್ರದೇಶಗಳಲ್ಲಿ ಜ್ಯೋತಿಲಿಂಗವಾಗಿ ನೆಲಸಿದ್ದಾನೆ. ಹೀಗೆಯೇ ಮಹಾಕೈಲಾಸ,ಮೇರು, ಕೈಲಾಸ, ಮಂದರ ಮೊದಲಾದಕಡೆಗಳಲ್ಲಿಯೂ ಪರಾಶಕ್ತಿಯೊಡಗೂಡಿ ಭಕ್ತರಿಗೆ ಸಾಲೋಕ್ಯ ಮೊದಲಾದ ಮೂರುಬಗೆಯ ಮುಕ್ತಿಯೆಂಬ ಕಲ್ಯಾಣವಿಭೂತಿಯನ್ನೂ, ಧರ್ಮ ಅರ್ಥ ಕಾಮವೆಂಬ ಐಹಿಕಫಲಗಳನ್ನೂ ಅನುಗ್ರಹಿಸಲಿಕ್ಕಾಗಿ ದಿವ್ಯಮಂಗಳ ವಿಗ್ರಹದಿಂದೊಡಗೂಡಿ ನೆಲಸಿದ್ದರೂ ಪರಾಕಾಶಸ್ಥಿತಿಯಲ್ಲಿ ನಿರವಯವನೂ ಆಗಿ ಜಗತ್ತೆಲ್ಲವನ್ನು ವ್ಯಾಪಿಸಿರುವನು. ಆದ್ದರಿಂದ ಅವನಿಗೆ ಎರಡು ಸ್ಥಿತಿಗಳೂ ಸಹಜ ವಾಗಿವೆ. "ಪರಮಶಿವನಿಗೆ ನಿರ್ಗುಣನಿರವಯವಸ್ಥಿತಿ ಸ್ವಾಭಾವಿಕವಾದರೆ ಸತ್ಯಸಂಕಲ್ಪ ಮೊದಲಾದ ಸಗುಣಸ್ಥಿತಿ ಆಗಂತುಕವೆನಿಸಿದೆ ; ಯಾಕೆಂದರೆ ಒಬ್ಬನಲ್ಲಿಯೇ ಎರಡು ಸ್ಥಿತಿಗಳೂ ಇರಲಿಕ್ಕೆ ಸಂಭವವಿಲ್ಲ. ಮಂದಮತಿಯರ ಉಪಾಸನಕ್ಕಾಗಿ ಈಶ್ವರನನ್ನು ಸಗುಣನೆಂದು ಉಪಾಧಿಭೇದದಿಂದ ಅಂಗೀಕರಿಸಬೇಕು" ಎಂದು ಕೆಲವರು ಹೇಳು ತ್ತಾರೆ. ಆ ಮತವನ್ನು ಈ ಸೂತ್ರದಲ್ಲಿ ನಿರಾಕರಿಸಲಾಗಿದೆ. ಇಲ್ಲಿ ಸ್ಥಾನವೆಂದರೆ ಉಪಾಧಿ ಎಂದರ್ಥ. ಇದರಿಂದ ಪರಶಿವನಿಗೆ ಸಗುಣನಿರ್ಗುಣನೆಂಬ ಭೇದ ಸಂಭವಿಸವು ದಿಲ್ಲ. ನಿಗಮಾಗಮಗಳೆಲ್ಲದರಲ್ಲೂ ಪರಶಿವಬ್ರಹ್ಮವು ಎರಡೂ ಬಗೆಯಾಗಿರುವುದೆಂದು ನಿಸ್ಸಂಶಯವಾಗಿ ಹೇಳಿರುವುದರಿಂದ ಎರಡು ಸ್ಥಿತಿಗಳೂ ಅವನಲ್ಲಿ ಸ್ವಾಭಾವಿಕವೇ ಆಗಿವೆ. "ಈ ರುದ್ರನೇ ಅಗ್ನಿಯಾಗಿದ್ದಾನೆ. ಅನನಿಗೆ ಘೋರ ಶಿವ ಎಂಬ ಎರಡು ಬಗೆಯ ಶರೀರಗಳಿವೆ." "ರುದ್ರನೇ, ಯಾವ ನಿನ್ನ ಪಾವನವೂ ಪಾಪನಾಶಕವೂ ಆದ ಶರೀರವಿದೆಯೋ ಅಂತಹ ಪರಮಶಾಂತವಾದ ಶರೀರದಿಂದ ನಮ್ಮನ್ನು ಪ್ರಕಾಶಗೊಳಿಸು", "ಉಮಾಶಕ್ತಿಯೇ ಮತ್ತು ರುದ್ರನೇ, ನೀವು ಜೀವರ ಉದ್ಧಾರಕ್ಕಾಗಿ ಎಲ್ಲಾ ಕಡೆಗಳಲ್ಲೂ ಸಂಜೀವಿನಿಯನ್ನು ಹರಡಿರಿ. ಇವರ ಪಾಪಗಳನ್ನು ನಾಶಮಾಡಿರಿ. ಇವರನ್ನು ಮಲಗಳಿಂದ ಬಿಡಿಸಿರಿ" ಎಂದು ವೇದಗಳಲ್ಲೂ, "ಅಮೃತಕ್ಕಾಗಿ ದೇವ ನನ್ನು ಧರಿಸುತ್ತೇನೆ" "ಲಿಂಗದಿಂದ ಈ ಶರೀರ ಸುಂದರವಾಗಲಿ" ಎಂದು ವೇದಾಂತ ಗಳಲ್ಲೂ, "ಮೂಲಾಧಾರಸ್ಥಾನದಲ್ಲಿ ಸ್ವರ್ಣಮಯದ, ಹೃದಯದಲ್ಲಿ ಹವಳದ ಬಣ್ಣದ, ಭ್ರೂಮಧ್ಯದಲ್ಲಿ ಸ್ಫಟಿಕದ ಬಣ್ಣದ ಲಿಂಗವನ್ನು ಯೋಗಿಯು ಭಾವಿಸಬೇಕು". ಬಾಯಲ್ಲಿ ವೇದಮಂತ್ರವೂ, ಹೃದಯದಲ್ಲಿ ಮಂತ್ರಧ್ಯಾನವೂ, ಹಣೆಯಲ್ಲಿ ಲಿಂಗಧಾ ರಣ, ಶಿಖೆ, ಭಸ್ಮಗಳೂ ಯಾವನಿಗಿರುತ್ತವೆಯೋ ಅವನು ಬ್ರಾಹ್ಮಣನು" ಎಂದು

ಸ್ಮೃತಿಗಳಲ್ಲೂ "ಒಳಗಡೆ ಲಿಂಗವನ್ನು ಭಾವಿಸಲು ಸಾಧ್ಯವಾಗದಿದ್ದರೂ ಬ್ರಾಹ್ಮಣನು ಗುರುವಿನಿಂದ ಸಂಸ್ಕಾರಹೊಂದಿಬಂದ ಶಿವಲಿಂಗವನ್ನು ವಕ್ಷಸ್ಥಲದಲ್ಲಿ ಮುಕ್ತಿಗಾಗಿ ಧರಿಸಿರಬೇಕು. ಹಾಗೆಯೇ ಸ್ಥೂಲಸೂಕ್ಷ್ಮದೇಹಗಳೆರಡರಲ್ಲಿಯೂ ಚಿದ್ರೂಪವಾದ ಲಿಂಗವನ್ನು ಭವಪಾಶದ ವಿಮೋಚನಕ್ಕಾಗಿ ಸಾಧಕರೆಲ್ಲರೂ ಧರಿಸಬೇಕು" ಎಂದು ಶಿವಾಗಮಗಳಲ್ಲಿಯೂ ಶಿವನಿಗೆ ಸಾಕಾರ ನಿರಾಕಾರಸ್ಥಿತಿಗಳೆರಡೂ ಸ್ವಾಭಾವಿಕವೆಂದು ವಿಸ್ತಾರವಾಗಿ ತಿಳಿಸಲಾಗಿದೆ. ವಸ್ತುಸ್ಥಿತಿ ಹೀಗಿರುವಾಗ ಅರ್ಧಜರತೀನ್ಯಾಯದಂತೆ ಯಾವುದಾದರೊಂದು ಪಕ್ಷವನ್ನು ಹಿಡಿಯುವುದು ಅಪ್ರಸಿದ್ಧವೂ ಅಯುಕ್ತವೂ ಆಗುತ್ತದೆ. ಎರಡುವಿಧಿಗಳೂ ಪ್ರಬಲವಾದ್ದರಿಂದ ಎರಡನ್ನು ಒಪ್ಪಲೇಬೇಕೆಂಬ ನ್ಯಾಯದಿಂದ ಪರಶಿವನು ನಿರವಯುವನೂ ಸಾವಯುವನೂ ಆಗಿರುವನೆಂಬುದು ನಿರ್ವಿವಾದವೆನಿಸಿದೆ. ತೈತ್ತಿರೀಯದಲ್ಲಿ "ದೇಹಮಧ್ಯದಲ್ಲಿ ಪರಮೇಶ್ವರನಿಗೆ ವಾಸಯೋಗ್ಯವೂ ನಿರ್ಮಲವೂ ಆದ ಯಾವ ಕಮಲವಿದೆಯೋ ಅದರೊಳಗೆ ಆನಂದಮಯವಾದ ಸೂಕ್ಷ್ಮಾಕಾಶವೊಂದಿದೆ. ಅದರಲ್ಲಿ ಗೋಪ್ಯವಾಗಿ ನೆಲಸಿರುವ ದಿವ್ಯತೇಜಸ್ಸನ್ನು ಉಪಸನಮಾಡಬೇಕು" ಎಂದು ಪರಮೇಶ್ವರನೇ ದಹರಾಕಾಶದಲ್ಲಿ ಉಪಾಸ್ಯನು ಎಂದು ಹೇಳಿ, ಅವನು ಹೇಗಿದ್ದಾನೆ ಎಂದು ಆಶಂಕಿಸಿ "ವೇದಗಳ ಆದಿಯಲ್ಲಿ ಯಾವ ಪ್ರಣವಸ್ವರವಿದೆಯೋ ಅದೇ ವೇದಾಂತದಲ್ಲಿಯೂ ಸಂಭಾವಿತವಾಗಿದೆ. ಮೂಲಪ್ರಕೃತಿಸ್ವರೂಪವಾದ ಯಾವ ಈ ಪ್ರಣವಕ್ಕೂ ಆಚೆನವನೇ ಮಹೇಶ್ವರನೆನಿಸಿದ್ದಾನೆ" ಎಂಬುದರಿಂದ ಮಹೇಶ್ವರನೇ ದಹರಾಕಾಶದಲ್ಲಿ ಉಪಾಸ್ಯನೆಂದು ಸ್ಪಷ್ಟವಾಗಿ ತಿಳಿಸಿ ಅವನ ಉಪಾಸಕರಲ್ಲಿ ಯಾರು ಶ್ರೇಷ್ಠರೆಂಬುದಕ್ಕೆ ದೃಷ್ಟಾಂತವಾಗಿ "ಸಹಸ್ರಶೀರ್ಷಂ ದೇವಂ" ಎಂಬ ಅನುವಾಕದಲ್ಲಿ ನಾರಾಯಣನು ತನ್ನ ಹೃದಯದಲ್ಲಿ ಶಿವನನ್ನು ಉಪಾಸನಮಾಡಿದ ಬಗೆಯನ್ನು ವಿವರಿಸಿ, "ನಿಧನಪತಯೇ ನಮಃ" ಎಂದು ಮುಂತಾಗಿ ಶಿವನೇ ಸರ್ವಾತ್ಮಕನೆಂಬುದನ್ನು ಹೇಳಿ, "ಸರ್ವಲಿಂಗಂ ಸ್ಥಾಪಯತಿ" ಎಂಬಲ್ಲಿ ಒಳಗೆ ಹೊರಗೆ ಎರಡುಕಡೆಗಳಲ್ಲೂ ಶಿವನೇ ನೆಲಸಿರುವುದರಿಂದ ಅವನು ಮೂರ್ತನೂ ಅಮೂರ್ತನೂ ಆಗಿರುವನೆಂದು ಹೇಳಲಾಗಿದೆ. ಕೈವಲ್ಯದಲ್ಲಿ ಹೃದಯಕಮಲವನ್ನು ಶುದ್ಧವೆಂದು ಹೇಳಿ, ಸಾಕಾರದ ಅರ್ಚನದಿಂದ ನಿರಾಕಾರದಲ್ಲಿ ಉಪಾಸಕನು ಬೆರೆಯುವನೆಂದು ಹೇಳಲಾಗಿದೆ. "ಹೃದಯದ ಮಧ್ಯದಲ್ಲಿ ಬಾಲದ ತುದಿಯಷ್ಟೇ ಪ್ರಮಾಣದಲ್ಲಿ ದಿವ್ಯಜ್ಯೋತಿ ಹೊಳೆಯುತ್ತಿದೆ" ಎಂದು ಅಥರ್ವಶಿರಸ್ಸಿನಲ್ಲೂ, "ಅಂಗುಷ್ಠಪ್ರಮಾಣದ ಪರಂಜ್ಯೋತಿಯು ಹೊಗೆಯಿಲ್ಲದ ಕೆಂಡದಂತೆ ಶೋಭಿಸುತ್ತಿದೆ" ಎಂದು ಕಠಶ್ರುತಿಯಲ್ಲೂ, "ಈ ಬ್ರಹ್ಮಪುರವೆಂಬ ದೇಹದಲ್ಲಿ ಕಮಲವೆಂಬ ಗರ್ಭಗೃಹವಿದೆ. ಅದರೊಳಗಿನ ಆಕಾಶದಲ್ಲಿ ನೆಲಸಿರುವ ಜ್ಯೋತಿಯನ್ನು ಹುಡುಕಿ ತಿಳಿಯಬೇಕು" ಎಂದು ಛಾಂದೋಗ್ಯದಲ್ಲೂ", "ಕೋಟಿಸೂರ್ಯಪ್ರಕಾಶನಾದ ಈ ಪರಶಿವನಿಂದಲೇ ವಿಶ್ವವೆಲ್ಲವೂ ವ್ಯಾಪಿಸಿದೆ. ಇವನಿಗೆ ದೇಹದಲ್ಲಿ ಎಂಟುಬಗೆಯ ವರ್ತನೆ ಇದೆ. ಇವನು ಪೂರ್ವದಳದಲ್ಲಿದ್ದರೆ ಜೀವನಿಗೆ ಪುಣ್ಯದಲ್ಲಿ ಬುದ್ಧಿಯೂ, ಆಗ್ನೇಯದಳದಲ್ಲಿದ್ದಾಗ ಜೀವನಿಗೆ

ನಿದ್ರಾಲಸ್ಯಗಳೂ, ಯಮದಳದಲ್ಲಿದ್ದಾಗ ಜೀವನಿಗೆ ಕ್ರೂರದೃಷ್ಟಿಯೂ, ನೈರುತ್ಯದಳ ದಲ್ಲಿದ್ದಾಗ ಜೀವನಿಗೆ ಪಾಪಬುದ್ಧಿಯೂ, ವರುಣದಿಕ್ಕಿನಲ್ಲಿದ್ದಾಗ ಕ್ರೀಡಾಸಕ್ತಿಯೂ, ವಾಯುವ್ಯದಲ್ಲಿದ್ದಾಗ ಜೀವನಿಗೆ ಗಮನಬುದ್ಧಿಯೂ, ಉತ್ತರದಳದಲ್ಲಿದ್ದಾಗ ರತಿ ಪ್ರೇಮವೂ, ಈಶಾನ್ಯದಲ್ಲಿದ್ದಾಗ ದ್ರವ್ಯಸ್ವೀಕಾರವೂ, ಮಧ್ಯದಲ್ಲಿದ್ದಾಗ ವೈರಾಗ್ಯವೂ, ಕೇಸರದಲ್ಲಿದ್ದಾಗ ಜಾಗ್ರದವಸ್ಥೆಯೂ, ಕರ್ಣಿಕೆಯಲ್ಲಿದ್ದಾಗ ಸ್ವಪ್ನವೂ, ಮಧ್ಯದಲ್ಲಿ ನೆಲೆಸಿದ್ದಾಗ ಜೀವನಿಗೆ ಸುಷುಪ್ತಿಯೂ, ಪದ್ಮವನ್ನು ತೊರೆದಾಗ ತುರೀಯಸ್ಥಿತಿಯೂ ಉಂಟಾಗುತ್ತವೆ. ಇದೇ ತುರೀಯಾತೀತವೆನಿಸುತ್ತದೆ" ಎಂದು ಹಂಸೋಪನಿಷತ್ತಿ ನಲ್ಲೂ ಹೇಳಿದೆ. ಇಲ್ಲಿ "ಲಿಂಗೇ ಸುಷುಪ್ತಿಃ" ಎಂಬುದರಿಂದ ಹೃದಯದಲ್ಲಿರುವ ಪರಶಿವ ಬ್ರಹ್ಮವನ್ನು ಲಿಂಗರೂಪವೆಂದು ಸ್ಪಷ್ಟವಾಗಿ ಹೇಳಲಾಗಿದೆ. "ಸಾಧಕನು ಜ್ಯೋತಿ ರ್ಲಿಂಗವನ್ನು ಭ್ರೂಮಧ್ಯದಲ್ಲಿ ಯಾವಾಗಲೂ ಧ್ಯಾನಿಸುತ್ತಿರಬೇಕು" ಎಂದು ಸಾಮ ಶಾಖೆಯಲ್ಲಿ ಹೇಳಿದೆ. "ಲಿಂಗವೆಂದರೆ ಸಾಕ್ಷಾದ್ಬ್ರಹ್ಮವೇ" ಎಂದು ಸಾಮವೇದದ ರುದ್ರಸೂಕ್ತದಲ್ಲಿ ಹೇಳಿದೆ. ಇದರಿಂದ ಪರಮಾತ್ಮನು ಸಾಕಾರನೇ ನಿರಾಕಾರನೇ ಉಭಯರೂಪನೇ? ಎಲ್ಲರೊಳಗೂ ಅಂತರ್ಯಾಮಿಯಾದ್ದರಿಂದ ಶಿವನು ಜೀವರ ಪುಣ್ಯಪಾಪಕರ್ಮಗಳ ಫಲವನ್ನು ಭೋಗಿಸುವನೆಂಬುದು ಯುಕ್ತವೇ ಅಲ್ಲವೆ? ಎಂದು ಸಂದೇಹ ಬರುತ್ತದೆ. "ಕಣ್ಣು ಕಿವಿಗಳಾಗಲೀ ಹಸ್ತಪಾದಗಳಾಗಲೀ ಇಲ್ಲದಿರುವವನು" "ನಿತ್ಯನೂ ಸೂಕ್ಷ್ಮನೂ ಸರ್ವವ್ಯಾಪಿಯೂ," "ಪ್ರಾಣ ಮನಸ್ಸುಗಳಿಲ್ಲದೆ ಶುಭ್ರನು," "ಆಕಾಶದಂತೆ ಸರ್ವವ್ಯಾಪಿಯೂ ನಿರಂಜನನೂ," "ಸಂಕುಚಿತಶಕ್ತಿಕನೂ ಶಾಂತನೂ ನಿರ್ಮಲನೂ ಆಗಿರುವನು" "ರೂಪರಸ ಗಂಧ ಸ್ಪರ್ಶಗಳಿಲ್ಲದವನು" ಈ ಬಗೆಯ ಶ್ರುತಿಗಳಲ್ಲಿ ಪರಶಿವನಿಗೆ ಮೂರ್ತರೂಪವನ್ನು ನಿಷೇಧಿಸಲಾಗಿದೆ. ಅವನಿಗೆ ಮೂರ್ತರೂಪವನ್ನು ಒಪ್ಪಿದರೆ ಅವನ ವ್ಯಾಪಕತ್ವಕ್ಕೆ ಭಂಗಬರುವುದಲ್ಲದೆ ಜೀವನಂತೆ ಅವನೂ ಸುಖದುಃಖಗಳನ್ನು ಅನುಭವಿಸಬೇಕಾದೀತು. ನಾಶವಾಗತಕ್ಕದ್ದು ಶರೀರದ ಸ್ವಭಾವವಾದ್ದರಿಂದ ಶಿವನಿಗೆ ತನ್ನ ಇಚ್ಛೆಯಂತೆ ಶರೀರ ಬಂದಿದ್ದರೂ ಅದ ರಿಂದ ಯಾವ ಪುರುಷಾರ್ಥವೂ ಸಂಭವಿಸುವಂತಿಲ್ಲ. ಅರ್ಧಜರತೀನ್ಯಾಯದಂತೆ ಒಬ್ಬನಲ್ಲಿಯೇ ಎರಡು ಧರ್ಮಗಳು ಸಂಭವಿಸಲಾರವು. "ಯಾವನಿಗೆ ಜೀವನೇ ಶರೀ ರವೋ" ಎಂಬುದರಿಂದ ಶಿವನು ಸರ್ವಾಂತರ್ಯಾಮಿಯಾದ್ದರಿಂದ ಸರ್ವಶರೀರನಾಗಿ ರುವನೆಂಬುದು ಹೊಂದುತ್ತದೆ ಎಂದರೆ ಅದೂ ಸರಿಯಲ್ಲ; ಹಾಗೆ ಹೇಳಿದರೆ ಶರೀರ ಧರ್ಮವು ಪರಶಿವನಿಗೂ ಬರಬೇಕಾಗುತ್ತದೆ. ಇದರಿಂದ ಅಲ್ಲಲ್ಲಿ ನೆಲಸಿರುವ ಪರಶಿವನಿಗೆ ಅದರದರ ಸಂಬಂಧವಾದ ಸುಖದುಃಖಾನುಭವವು ಬರಬೇಕಾದೀತು. "ಇಲ್ಲಿ ಯಾವ ಭೇದವೂ ಇಲ್ಲ" ಎಂಬಲ್ಲಿ ಶಿವನನ್ನು ಅದ್ವಿತೀಯನೆಂದು ಹೇಳಿದ್ದರಿಂದ ಶಿವನಲ್ಲದೆ ಉಳಿದ ಜೀವೇಶ್ವರಾದಿಪ್ರಪಂಚವೆಲ್ಲವೂ ಸುಳ್ಳೆಂಬುದು ಸಹಜವಾಗಿ ತಿಳಿದುಬರುತ್ತದೆ. ಹಗ್ಗದಲ್ಲಿ ಆರೋಪಿಸಿದ ಸರ್ಪದಂತೆ ಮೂರು ಕಾಲಗಳಲ್ಲೂ ಪರಮಾರ್ಥವಾಗಿ ಸಾವ ಯವನೂ ಸರ್ವಜ್ಞನೂ ಆದ ಈಶ್ವರನಿಲ್ಲವೆಂದು ಆಕ್ಷೇಪಬರುತ್ತದೆ. ಇದಕ್ಕೆ ಸೂತ್ರ

ದಲ್ಲಿ ಸಮಾಧಾನವನ್ನು ಹೇಳಲಾಗಿದೆ. ನಿರಾಕಾರಪರಮಶಿವನು ಲೀಲೆಗಾಗಿ ಧರಿಸಿದ ಮಾಹೇಶ್ವರ ಮೊದಲಾದ ೨೫ ಬಗೆಯ ಆಕಾರಗಳಿಂದಲೂ ಆ ಪರಮಶಿವನಿಗೆ ಯಾವ ಆತಂಕವೂ ಸಂಭವಿಸುವುದಿಲ್ಲ. ಶ್ರುತ್ಯಾಗಮಪುರಾಣಗಳು ಅವನನ್ನು ಉಭಯಲಿಂಗ ನೆಂದು ಸ್ಪಷ್ಟವಾಗಿ ತಿಳಿಸಿವೆ. ಆದ್ದರಿಂದ ಹೊರಗಡೆ ಕಾಶಿ ಶ್ರೀಶೈಲ ಗೋಕರ್ಣ ಕೇದಾರ ಚಿದಂಬರ ಮೊದಲಾದ ದಿವ್ಯ ಕ್ಷೇತ್ರಗಳಲ್ಲೂ, ಸದ್ಭಕ್ತರ ದೇಹಗಳಲ್ಲೂ, ಮೇರು, ಮಂದರ, ಕೈಲಾಸ ಮೊದಲಾದ ಪ್ರದೇಶಗಳಲ್ಲೂ ಭಕ್ತರಕ್ಷಣೆಗಾಗಿ ಪರಮ ಶಿವನು ಅರ್ಚನೆಗಾಗಿ ಅವತರಿಸಿರುವುದರಿಂದ ಮೂರ್ತನೆನಿಸಿರುವಂತೆಯೇ ಮೂಲಾ ಧಾರ, ಹೃದಯ ಮತ್ತು ಶಿರಸ್ಸುಗಳಲ್ಲಿ ಚಿದಾಕಾಶರೂಪದಿಂದ ನೆಲಸಿ ಅಮೂರ್ತನೆನಿಸಿ ದ್ದಾನೆ. ತೈತ್ತಿರೀಯದಲ್ಲಿ "ದಹರಂ ವಿಪಾಪಂ"ಎಂಬುದರಿಂದ ಜ್ಯೋತಿರ್ಲಿಂಗದ ಅನು ಸಂಧಾನರೂಪವಾದ ಅಂತರ್ಲಿಂಗಧಾರಣವನ್ನೂ,"ಸರ್ವಲಿಂಗಂ ಸ್ಥಾಪಯತಿ"ಎಂಬಲ್ಲಿ ಬಾಹ್ಯಲಿಂಗಧಾರಣವನ್ನೂ ಹೇಳಲಾಗಿದೆ. ಸರ್ವ ವಿದ್ಯೆಗಳಿಗಧಿಪತಿಯೂ ಜಗದ್ರೂ ಪನೂ ಆದ ರುದ್ರನು ನಿಗಮಾಗಮಪ್ರತಿಪಾದ್ಯನಾಗಿರುವನು. ಅಂತಹ ಪರಮೈಶ್ವ ರ್ಯಶಾಲಿಯಾದ ಪರಶಿವನು ನನ್ನನ್ನು ಪ್ರಜ್ಞೆಯಿಂದ ಸಂತೋಷಪಡಿಸಲಿ. " ಮೋಕ್ಷ ಪ್ರಾಪ್ತಿಗಾಗಿ ದೇವನನ್ನು ಧರಿಸುತ್ತೇನೆ. ಲಿಂಗಸಂಪರ್ಕದಿಂದ ದೇಹ ಬಲಿಷ್ಠವಾಗಲಿ. ನಾಲಿಗೆ ರಸಾಸ್ವಾದನಪಟುವಾಗಲಿ. ಕರ್ಣಗಳು ವಿಶ್ವಾತ್ಮನ ಲೀಲೆಯನ್ನು ಕೇಳು ವಂತಾಗಲಿ. ಈ ಲಿಂಗವು ಪರಶಿವಬ್ರಹ್ಮದ ಅಧಿಷ್ಠಾನವಾಗಿದೆ. ನಾನು ಲೌಕಿಕ ಪ್ರಜ್ಞೆಯಿಂದ ಆವೃತನಾಗಿ ಲಿಂಗದ ಅಂತಸ್ಸತ್ತ್ವವನ್ನು ತಿಳಿಯದವನಾಗಿದ್ದೇನೆ. ಲಿಂಗದ ಶ್ರವಣಮನನಾದಿಗಳು ನನ್ನನ್ನು ರಕ್ಷಿಸಲಿ." ಎಂಬುದರಿಂದ ಬಾಹ್ಯಲಿಂಗ ಧಾರಣವನ್ನು ಹೇಳಲಾಗಿದೆ. " ಆಕಾಶವೇ ಬ್ರಹ್ಮದ ಶರೀರ; ಸತ್ಯವೇ ಆತ್ಮ; ಪ್ರಾಣವೇ ವಿನೋದಭೂಮಿ; ಮನಸ್ಸೇ ಆನಂದನಿಲಯ " " ಹೃದಯದೊಳಗೆ ಯಾವ ಈ ಆಕಾಶವಿದೆಯೋ ಅದರಲ್ಲಿ ಈ ಮನೋಮಯನಾದ ಪುರುಷನಿರುವನು. ಅವನೇ ಅಮೃತನೂ ಹಿರಣ್ಮಯನೂ ಆಗಿರುವನು " ಎಂಬ ಶ್ರುತಿಯಲ್ಲಿ ಅಂತರ್ಲಿಂಗ ಧಾರಣವನ್ನು ಹೇಳಲಾಗಿದೆ. " ಅವನು ಇದು ಅದು ಎಲ್ಲವೂ ಆಗಿದ್ದಾನೆ, ಹೇಳಿದ್ದು ಹೇಳದೇ ಇರುವುದು, ಇಲ್ಲದ್ದು, ತಿಳಿದದ್ದು, ತಿಳಿಯದೇ ಇದ್ದದ್ದು ಎಲ್ಲವೂ ಅವನೇ " ಎಂಬುದರಿಂದ ಅವನೊಬ್ಬನೇ ಮೂರ್ತನೂ ಅಮೂರ್ತನೂ ಆಗಿರುವನೆಂದು ಹೇಳ ಲಾಗಿದೆ. " ಅವನ ನಿರಂತರ ಅಭಿಧ್ಯಾನದಿಂದಲೂ, ಯೋಜನದಿಂದಲೂ, ತತ್ತ್ವ ಭಾವದಿಂದಲೂ ಕೊನೆಗೆ ಮಾಯೆ ತೊಲಗುತ್ತದೆ " ಎಂಬ ಶ್ವೇತಾಶ್ವತರಮಂತ್ರದಲ್ಲಿ ಅಭಿಧ್ಯಾನವೆಂದರೆ ಅಂತರ್ಲಿಂಗಾನುಸಂಧಾನವೆನಿಸುತ್ತದೆ. ಯೋಜನವೆಂದರೆ ಬಾಹ್ಯಲಿಂಗಧಾರಣವೆನಿಸುತ್ತದೆ. " ಎಲ್ಲರ ಮುಖ ಶಿರಸ್ಸು ಕುತ್ತಿಗೆಗಳಲ್ಲೂ ಹೃದ ಯದಲ್ಲೂ ಇದ್ದರೂ ಶಿವನು ಸರ್ವವ್ಯಾಪಿಯೂ ಸರ್ವಗತನೂ ಆಗಿರುವನು " ಎಂದು ಅಥರ್ವಶಿರಸ್ಸಿನಲ್ಲಿ ಹೇಳಿದೆ. " ಸರ್ವಾನನಶಿರೋಗ್ರೀವಃ " ಎಂಬಲ್ಲಿ ತಲೆ, ಕುತ್ತಿಗೆ, ಕಂಕಳು, ಕುಕ್ಷಿ, ವಕ್ಷಸ್ಸುಗಳಲ್ಲೊಂದುಕಡೆಯಲ್ಲೂ ಹಸ್ತದಲ್ಲೂ ಪ್ರಾಣಲಿಂಗ

ವನ್ನು ಧರಿಸಬೇಕು" ಎಂಬ ಮಾತಿನಿಂದ ಬಾಹ್ಯಲಿಂಗಧಾರಣವನ್ನು ಹೇಳಲಾಗಿದೆ. "ಗುಹಾಶಯಃ" ಎಂಬುದರಿಂದ ಅಂತರ್ಲಿಂಗಧಾರಣವನ್ನು ಹೇಳಲಾಗಿದೆ. "ತ್ರಿಪುಂಡ್ರವನ್ನು ನಿಂದಿಸುವವರು ಶಿವನನ್ನೇ ನಿಂದಿಸುತ್ತಾರೆ. ಭಕ್ತಿಯಿಂದ ಅದನ್ನು ಧರಿಸುವವರು ಶಿವನನ್ನೇ ಧರಿಸುತ್ತಾರೆ" ಎಂದು ಬೃಹಜ್ಜಾಬಾಲದಲ್ಲಿ ಲಿಂಗಧಾರಣವೇ ಸರ್ವಶ್ರೇಷ್ಠವೆಂದು ಮನದಲ್ಲಿ ಭಾವಿಸಿ ತ್ರಿಪುಂಡ್ರಧಾರಣವನ್ನು ಅದಕ್ಕೆ ಸಮನೆಂದು ತಿಳಿಸಲಾಗಿದೆ. ಕೈವಲ್ಯಶಾಖೆಯಲ್ಲಿ "ಉಮಾಸಹಾಯನಾದ ಪರಮೇಶ್ವರನನ್ನು ಧ್ಯಾನಿಸಿ ಸಾಧಕನು ಸಮಸ್ತಸಾಕ್ಷಿಯೂ ತಮಃಪರವೂ ಆದ ನಿರಾಕಾರಜ್ಯೋತಿಯಲ್ಲಿ ಬೆರೆಯುತ್ತಾನೆ" ಎಂಬ ಮಂತ್ರದಲ್ಲಿ ಒಬ್ಬನೇ ಸಾಕಾರನೂ ನಿರಾಕಾರನೂ ಆಗಿರುವನೆಂದು ಹೇಳಲಾಗಿದೆ. "ಅವನು ಸಾಕ್ಷಿಯೂ ಕೇವಲನೂ ನಿರ್ಗುಣನೂ ಆಗಿರುವನು" ಎಂಬ ಶ್ರುತಿಯಲ್ಲಿ ಸಾಕ್ಷಿರೂಪನಾದ ಪರಶಿವನನ್ನು ನಿರ್ಗುಣನೆಂದು ಹೇಳಿದೆ. ಹಾಗೆಯೇ ಸ್ಮೃತಿಯಲ್ಲೂ "ಸರ್ವಜ್ಞನೂ ಸರ್ವವ್ಯಾಪಕನೂ ಸತ್ಯಶುದ್ಧನೂ ಅಮೃತನೂ ಆದ ಶಿವನು ಮೂರ್ತಾಮೂರ್ತಸ್ವರೂಪನಾಗಿ ಭಕ್ತರ ಇಷ್ಟಾರ್ಥವನ್ನು ನೆರವೇರಿಸುತ್ತಿರುವನು. ಮಣಿ ಕಂಕಣ ಕಟಕ ಮಕುಟಗಳಿಂದ ಅಲಂಕೃತನಾದ ಶಿವನು ನೀಲಗ್ರೀವನೂ ವಿರೂಪಾಕ್ಷನೂ ಆಗಿ ಉಮೆಯನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಕೋಟಿಸೂರ್ಯರಂತೆಯೂ ಕೋಟಿಮನ್ಮಥರಂತೆಯೂ ಕಂಗೊಳಿಸುತ್ತ ನಿರ್ಮಲನಾಗಿದ್ದು ಜಗದ್ವ್ಯಾಪಾರಗಳನ್ನು ಲೀಲೆಯಿಂದ ನಡೆಸುತ್ತಿರುವನು" ಎಂದು ಹೇಳಿದೆ. ಪುರಾಣಗಳಲ್ಲಿ "ತೇಜಸ್ಸು, ಬಲ, ಐಶ್ವರ್ಯ, ಜ್ಞಾನ, ವೀರ್ಯ, ಶಕ್ತಿ, ಮೊದಲಾದ ಗುಣಗಳಿಗೆ ರಾಶಿಯಾಗಿ ಶ್ರೇಷ್ಠನೆನಿಸಿ, ವಿಶ್ವವೆಲ್ಲಕ್ಕೂ ಅಧಿಪತಿಯಾದ ಶಿವನು ಯಾವ ಹೇಯದೋಷವಿಲ್ಲದೆ ಪೂರ್ಣಕಾಮನಾಗಿ ಶೋಭಿಸುತ್ತಿರುವನು" ಎಂದು ಹೇಳಿರುವುದರಿಂದ ಸಮಸ್ತ ಸದ್ಗುಣಗಳಿಂದ ಕೂಡಿರುವ ಶಿವನೆಂಬ ಪರಮಪದವೇ ಪರಮಾತ್ಮನೆಂದೂ, ಅವನು ಎರಡುಬಗೆಯಾಗಿರುವನೆಂದೂ ಸ್ಪಷ್ಟವಾಗುತ್ತದೆ. ಅವನು ಸರ್ವಾಂತರ್ಯಾಮಿ ಎಂಬುದು ಸ್ಪಷ್ಟವಾದರೂ, ಅವನಿಗೆ ದಿವ್ಯ ಲೀಲಾಮಂಗಳ ವಿಗ್ರಹವಿದ್ದರೂ, ಅವನು ಮಾಯೆಯನ್ನು ವಶಪಡಿಸಿಕೊಂಡಿರುವುದರಿಂದ ಅವನಿಗೆ ಜೀವನಂತೆ ಯಾವದೋಷಕ್ಕೂ ಪ್ರಸಕ್ತಿ ಇಲ್ಲ. "ಸಂಭೋಗ ಪ್ರಾಪ್ತಿರಿತಿ" "ಸ್ಥಿತ್ಯದನಾಭ್ಯಾಂ" ಎಂಬ ಸೂತ್ರಗಳಲ್ಲಿ ಪರಶಿವನಿಗೆ ಕರ್ಮ ಆವಶ್ಯಕವಾದ್ದರಿಂದ ದೋಷವಿಲ್ಲವೆಂದು ತಿಳಿಸಲಾಗಿದೆ. "ಪರಮಾತ್ಮನಿಗೆ ಪಾಪವಿಲ್ಲ, ಜರಾಮೃತ್ಯುಗಳಿಲ್ಲ, ದುಃಖವಿಲ್ಲ, ಹಸಿವು ನೀರಡಿಕೆಗಳಿಲ್ಲ, ಸತ್ಯಕಾಮನೂ ಸತ್ಯಸಂಕಲ್ಪನೂ ಆದ ಈತನನ್ನು ಹುಡುಕಿ ತಿಳಿಯಬೇಕು" ಎಂದು ಅನೇಕ ಶ್ರುತಿಗಳಲ್ಲೂ, "ರಮಣೀಯಗುಣಗಳಿಗಾಕರನೂ ಕಲ್ಯಾಣಗುಣಾತ್ಮಕನೂ ಪಶು ಪಾಶ ವಿಲಕ್ಷಣನೂ ಆಗಿ ಸ್ವಶಕ್ತಿಯ ಒಂದಿಷ್ಟು ಅಂಶದಿಂದಲೇ ಸಮಸ್ತ ಪ್ರಪಂಚವನ್ನು ಧರಿಸಿ ರಕ್ಷಿಸುತ್ತಿರುವ ಮಹೇಶ್ವರನು ಸಹಜವಾಗಿ ನಿರಾಕಾರನೂ ಸಾಕಾರನೂ ಆಗಿರುವನು" ಎಂದು ಶಿವಾಗಮಗಳಲ್ಲೂ ಪರಮಶಿವನೇ ಸರ್ವಾಂತರ್ಯಾಮಿ ಎಂದೂ,

ಸರ್ವಮಂಗಳಗುಣಾಕರನೆಂದೂ, ಸರ್ವದೋಷವಿಲಕ್ಷಣನೆಂದೂ ಹೇಳಲಾಗಿದೆ. ಆದ್ದರಿಂದ" ಒಣಗಿಹೋಗುವುದೇ ಶರೀರ"ವೆಂಬ ಮಾತು ಮೂರು ಪ್ರಕೃತಿಗಳಿಂದಾಗಿರುವ ಜೀವಶರೀರಕ್ಕೆ ಅನ್ವಯಿಸುವುದೇ ಹೊರತು ಪರಶಿವನ ಕಲ್ಯಾಣಮಯವಾದ ದಿವ್ಯಮಂಗಳವಿಗ್ರಹಕ್ಕೆ ಅನ್ವಯಿಸುವುದಿಲ್ಲ.

ನನು ಶಿವಸ್ಯ ಪರಬ್ರಹ್ಮಣಃ ಸ್ವಾಭಾವಿಕಮೂರ್ತಾಮೂರ್ತತ್ವವ್ಯಪದೇಶೇ ಘಟಾಕಾಶಯೋರಿವ ತಯೋರನ್ಯೋಽನ್ಯಭೇದಸ್ಯ ಅರ್ಥಸಿದ್ಧತ್ವಾತ್ "ಏಕಮೇವಾದ್ವಿತೀಯಂ ಬ್ರಹ್ಮ", "ಏಕ ಏವ ರುದ್ರೋ" ಇತ್ಯಾದಿಬಹುಶ್ರುತಿವಿರೋಧಸ್ಸಂಭವತೀತ್ಯಾಶಂಕ್ಯ ನಿರಾಕರೋತಿ. ಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್ ॥ ೧೨ ॥ "ಬಿಂಬತ್ವಂ ಪ್ರತಿಬಿಂಬತ್ವಂ ಯಥಾ ಪೂಷಣಿ ಕಲ್ಪಿತಂ । ಜೀವತ್ವಮೀಶ್ವರತ್ವಂ ಚ ಬ್ರಹ್ಮಣ್ಯೇಕತ್ರ ಕಲ್ಪಿತಂ ॥" ಇತ್ಯಾದಿನಾ ಸ್ಮೃತಿಪುರಾಣೇಷು ಜೀವೇಶ್ವರಯೋರೌಪಾಧಿಕಭೇದತ್ವಾವಗಮಾತ್ ತಸ್ಯ ಮೂರ್ತಾಮೂರ್ತತ್ವವಿಧಾಯಕಶ್ರುತೀನಾಮೌಪಾಧಿಕಭೇದಮಾತ್ರಮೇವೋಪಪನ್ನಂ. ನೋ ಚೇನ್ಮೂರ್ತಾಮೂರ್ತಬ್ರಹ್ಮಣೋಃ ಪರಸ್ಪರಭೇದಾದಿತಿ ಚೇನ್ನ ಪ್ರತ್ಯೇಕಮತದ್ವಚನಾತ್. "ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚಾಮೂರ್ತಮೇವ ಚ", "ಅಚಿಂತ್ಯಮವ್ಯಕ್ತಮನಂತಬೋಧಂ ಶಿವಂ ಪ್ರಶಾಂತಮಮೃತಂ ಬ್ರಹ್ಮಯೋನಿಂ।ತಮಾದಿಮಧ್ಯಾಂತವಿಹೀನಮೇಕಂ ವಿಭುಂ ಚಿದಾನಂದಮರೂಪಮದ್ಭುತಂ ॥" ಇತ್ಯಾದಿಶ್ರುತಿಶತೇಷ್ವಭೇದತಯಾ ಸ್ವಾಭಾವಿಕತ್ವೇನ ತಸ್ಯ ಮೂರ್ತಾಮೂರ್ತೋಭಯಲಿಂಗತ್ವಂ ಯತೋ ವ್ಯಪದಿಶ್ಯತೇ ಅತಸ್ತದ್ವಿರುದ್ಧಸ್ಮೃತಿಪುರಾಣಸಿದ್ಧ ಔಪಾಧಿಕಭೇದೋ ನಾಂಗೀಕರ್ತವ್ಯಃ. ಕಿಂಚ "ಯಃ ಪೃಥಿವ್ಯಾಂ ತಿಷ್ಠನ್" ಇತ್ಯಾದಿಷು ಪ್ರತಿಪರ್ಯಾಯಂ "ಸ ತ ಆತ್ಮಾಂತರ್ಯಾಮ್ಯಮೃತಃ" ಇತ್ಯಂತರ್ಯಾಮಿಣಶ್ಶಿವಸ್ಯ ತದ್ಗತಧರ್ಮವತ್ತ್ವಮಿತಿ ಚೇತ್ತದಸತ್ ಪೃಥಿವ್ಯಾದ್ಯಷ್ಟಮೂರ್ತಿತ್ವೇಽಪಿ ತದ್ವಿಲಕ್ಷಣತ್ವಮೇವಾಭಿಧೀಯತೇ, "ಸಮಸ್ತಸಾಕ್ಷಿಂ ತಮಸಃ ಪರಸ್ತಾತ್," "ವಿಶ್ವಾಧಿಕೋ ರುದ್ರೋ ಮಹರ್ಷಿಃ" ಇತ್ಯಾದಿಶ್ರುತಿದರ್ಶನಾತ್.

ಶಿವನೇ ಸಹಜವಾಗಿ ಮೂರ್ತಾಮೂರ್ತನೆನಿಸಿದರೆ ಘಟಕಾಶಗಳಂತೆ ಅವೆರಡು ಅವಸ್ಥೆಗಳಿಗೂ ಪರಸ್ಪರ ಭೇದವು ಸಹಜವಾಗಿರುವುದರಿಂದ "ಒಬ್ಬನೇ ರುದ್ರನು ಎರಡನೆಯವನಿಲ್ಲದಿರುವನು" "ಒಂದೇ ಬ್ರಹ್ಮ" ಎಂಬ ಅನೇಕ ಶ್ರುತಿಗಳ ವಿರೋಧವುಂಟಾಗುವುದೆಂದಾಶಂಕಿಸಿ ನಿರಾಕರಿಸುತ್ತಾನೆ. "ಸೂರ್ಯನೊಬ್ಬನೇ ಬಿಂಬವೂ ಪ್ರತಿಬಿಂಬವೂ ಆಗುವಂತೆ ಬ್ರಹ್ಮವೊಂದೇ ಜೀವನೂ ಈಶ್ವರನೂ ಆಗಿರುವುದು" ಎಂದು ಸ್ಮೃತಿಪುರಾಣಗಳಲ್ಲಿ ಜೀವೇಶ್ವರರಿಗೆ ಉಪಾಧಿಯಿಂದ ಭೇದವನ್ನು ಹೇಳ

ಲಾಗಿದೆ. ಶಿವನು ಮೂರ್ತನೂ ಅಮೂರ್ತನೂ ಆಗಿರುವನೆಂದು ತಿಳಿಸುವ ಶ್ರುತಿಗಳು ಉಪಾಧಿಯಿಂದಾಗಿರುವ ಭೇದವನ್ನೇ ತಿಳಿಸುತ್ತವೆ ಎಂಬುದೇ ಹೊಂದುತ್ತದೆ. ಹಾಗಿಲ್ಲದಿದ್ದರೆ ಮೂರ್ತಾಮುರ್ತಸ್ಥಿತಿಗಳೆರಡಕ್ಕೂ ಪರಸ್ಪರ ಭೇದವೇ ಇರಬೇಕಾಗುತ್ತದೆ ಎಂದು ಹೇಳುವುದಾದರೆ ಇದೂ ಸರಿಯಲ್ಲ; ಯಾಕೆಂದರೆ ಶ್ರುತಿಯಲ್ಲಿ ಅವೆರಡೂ ಬೇರೆ ಬೇರೆಎಂಬ ಮಾತೇ ಇಲ್ಲ. ಒಬ್ಬ ಶಿವನಿಗೇ ಎರಡು ಅವಸ್ಥೆಗಳನ್ನು ಅಲ್ಲಿ ಹೇಳಲಾಗಿದೆ. "ಸುಲಭವಾಗಿ ತಿಳಿಯಲಿಕ್ಕಾಗದೆ ಅವ್ಯಕ್ತನೂ ಅನಂತ ಜ್ಞಾನಸ್ವರೂಪನೂ ಆದ ಪರಶಿವನು ಸರ್ವಕಾರಣನೂ ಪ್ರಶಾಂತನೂ ಅಮೃತನೂ ಆಗಿದ್ದಾನೆ. ಆದಿ ಮಧ್ಯ ಅಂತ್ಯಗಳಿಲ್ಲದೆ ಒಂದೇ ಬಗೆಯಾಗಿದ್ದು ಶಿವನು ಸರ್ವವ್ಯಾಪಕನೂ ಚಿದಾನಂದಸ್ವರೂನೂ, ನಿರಾಕಾರನೂ ಆಗಿರುವನು" ಹೀಗೆ ಅನೇಕ ಶ್ರುತಿಗಳಲ್ಲಿ ಸಹಜವಾಗಿ ಅವನಿಗೆ ಮೂರ್ತಾಮೂರ್ತಾವಸ್ಥೆಗಳನ್ನು ಹೇಳಿರುವುದರಿಂದ ಸ್ಮೃತಿ ಪುರಾಣಗಳಲ್ಲಿ ಹೇಳಿರುವಂತೆ ಔಪಾಧಿಕಭೇದವನ್ನು ಅಂಗೀಕರಿಸಲಾಗುವುದಿಲ್ಲ. "ಯಾವನು ಪೃಥ್ವಿಯಲ್ಲಿರುವನೋ, ಯಾವನು ಆತ್ಮನಲ್ಲಿರುವನೋ ಅವನೇ ನಿನ್ನೊಳಗಿನ ಅಂತರ್ನಿಯಾಮಕನು" ಎಂಬಲ್ಲಿ ಶಿವನೇ ಅಂತರ್ಯಾಮಿಯಾದ್ದರಿಂದ ಅವನಿಗೆ ದೇಹಧರ್ಮಗಳುಂಟೆಂದು ಹೇಳುವುದು ಯುಕ್ತವಲ್ಲ; ಯಾಕೆಂದರೆ ಶಿವನು ಅಷ್ಟಮೂರ್ತಿಯಾಗಿದ್ದರೂ ಮೂರ್ತ್ಯತೀತನೂ ಆಗಿರುವನೆಂದು ಶ್ರುತಿಯಲ್ಲಿಯೇ ಹೇಳಿದೆ. "ಅವನು ಎಲ್ಲಕ್ಕೂ ಸಾಕ್ಷಿ ಮತ್ತು ಕತ್ತಲೆಯಿಂದಾಚೆನವನು" "ವಿಶ್ವವೆಲ್ಲಕ್ಕೂ ರುದ್ರನೇ ಅಧಿಕನು" ಹೀಗೆ ಅನೇಕ ಶ್ರುತಿಗಳಲ್ಲಿ ಹೇಳಿದೆ.

ನನು "ಸರ್ವಕರ್ಮಾ ಸರ್ವಕಾಮಃ ಸರ್ವಗಂಧಸ್ಸರ್ವರಸಃ" ಇತ್ಯಾದಿಶ್ರುತ್ಯಾ ಬ್ರಹ್ಮಣಸ್ಸಾವಯವತ್ವಂ ಸಗುಣತ್ವಮೇವಮುಖ್ಯಮಿತಿ ಕೇಚಿತ್. "ಅಶಬ್ದಮಸ್ಪರ್ಶಮರೂಪಮವ್ಯಯಂ" ಇತ್ಯಾದಿನಾ ತಸ್ಯ ನಿರವಯವತ್ವಂ ನಿರ್ಗುಣತ್ವಮೇವ ಸ್ವಾಭಾವಿಕಮಿತಿ ಕೇಚಿತ್, ಕೇಚಿನ್ನಿರ್ಗುಣತ್ವಸಗುಣತ್ವಯೋರೇಕಪಕ್ಷೇ ಪರಸ್ಪರಶ್ರುತಿವಿರೋಧಪ್ರಸಂಗಾತ್ ತದುಭಯಂ ಗ್ರಾಹ್ಯಮಿತಿ ವದಂತಿ. ತಸ್ಮಾದವ್ಯವಸ್ಥಾ ದೃಶ್ಯತೇ, ವಿನಿಗಮಕಾಭಾವಾತ್. ಅತಸ್ತ್ರಯಾಣಾಂ ಮಧ್ಯೇ ಕಿಮುಪಪನ್ನಮಿತ್ಯಾಕಾಂಕ್ಷಾಯಾಮಾಹ. ಅಪಿ ಚೈವಮೇಕೇ ॥ ೧೩ ॥ ಅಪಿ ಚ "ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚಾಮೂರ್ತಮೇವ ಚ"ಇತಿ ಸರ್ವಸಂಶಯೋಚ್ಛೇದಕಮುಖ್ಯಸಿದ್ಧಾಂತವಿಧಾಯಕಶ್ರುತಿಮಾತ್ರಂ ಪ್ರಮಾಣಮಿತಿ ಯತ್ ತನ್ನ. ಕುತಃ? ಏವಮೇಕೇ ಏವಂ ಸರ್ವಶ್ರುತಿವಿರೋಧೇನ ಏಕೇ ಮುಖ್ಯವೈದಿಕಾಃ ವಾಮದೇವಾಗಸ್ತ್ಯಾದಯಃ ಪರಬ್ರಹ್ಮಣಶ್ಶಿವಸ್ಯೋಭಯಲಿಂಗತ್ವಂ ವದಂತಿ. ಅತಸ್ತದೇವ ಗ್ರಾಹ್ಯಂ. ಸಿದ್ಧಾಂತಶಿಖಾಮಣೌ "ಸಾಂಖ್ಯಂ ಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂ ತಥಾ । ಏತಾನಿ ಮಾನ

**ಭೂತಾನಿ ನೋಪಹಸ್ಯಾನಿ ಯುಕ್ತಿಭಿಃ ॥ ವೇದಾಃ ಪ್ರಮಾಣಂ ಸರ್ವೇಷಾಂ ಸಾಂಖ್ಯಾದೀನಾಂ ಮಹಾಮತೇ । ವೇದಾನುಸರಣಾದೇಷಾಂ ಪ್ರಾಧಾನ್ಯಮಿತಿ ನಿಶ್ಚಿತಂ । ಪಾಂಚರಾತ್ರಸ್ಯ ಯೋಗಸ್ಯ ಸಾಂಖ್ಯಸ್ಯ ಚ ಮಹಾಮುನೇ । ವೇದೈಕದೇಶವರ್ತಿತ್ವಂ ಶೈವಂ ವೇದಮಯಂ ಸ್ಮೃತಂ। ವೇದೈಕದೇಶವರ್ತಿಭ್ಯಸ್ಸಾಂಖ್ಯಾದಿಭ್ಯೋ ಮಹಾಮತೇ।ಸರ್ವವೇದಾನುಸಾರಿತ್ವಾತ್ ಶೈವತಂತ್ರಂ ವಿಶಿಷ್ಯತೇ ॥ " ಇತಿ. ವಾಮದೇವಸಂಹಿತಾಯಾಮಪಿ " ಸರ್ವಾತ್ಮಕಶ್ಶಿವೋಽನಂತಸ್ಸರ್ವವೇದಾಂತಸಮ್ಮತಃ । ಮೂರ್ತಾಮೂರ್ತಾತ್ಮಕೋ ನಿತ್ಯೋ ನಿರವದ್ಯೋ ನಿರಂಜನಃ " ಇತಿ ದರ್ಶನಾದುಭಯಲಿಂಗತ್ವಂ ತಸ್ಯ ಸ್ವಾಭಾವಿಕಮಿತಿ ಸಿದ್ಧಂ.**

" ಪರಮಶಿವನು ಎಲ್ಲಾ ಕರ್ಮಗಳನ್ನೂ ನಡೆಸುತ್ತ, ಎಲ್ಲಾ ಸಂಕಲ್ಪಗಳನ್ನೂ ಹೊಂದಿ ರೂಪ ರಸ ಗಂಧಗಳೆಲ್ಲಕ್ಕೂ ಆಶ್ರಯನಾಗಿರುವನು " ಎಂಬ ಶ್ರುತಿಯಂತೆ ಪರಮಶಿವನು ಸಾಕಾರನೂ ಸಗುಣನೂ ಆಗಿರುವನೆಂಬುದೇ ಮುಖ್ಯವೆಂದು ಕೆಲವರು ಹೇಳುತ್ತಾರೆ. " ಅವನಲ್ಲಿ ರೂಪ ರಸ ಗಂಧ ಸ್ಪರ್ಶಶಬ್ದಗಳಿಲ್ಲ " ಎಂಬಂತೆ ಅವನು ನಿರವಯವ, ನಿರ್ಗುಣ ಎಂಬುದೇ ಸ್ವಾಭಾವಿಕವೆಂದು ಕೆಲವರು ಹೇಳುತ್ತಾರೆ. ಮತ್ತೆ ಕೆಲವರು ನಿರ್ಗುಣ ಮತ್ತು ಸಗುಣನೆಂಬಲ್ಲಿ ಒಂದೇಪಕ್ಷವನ್ನು ಹಿಡಿದರೆ ಶ್ರುತಿಗಳಲ್ಲಿ ಪರಸ್ಪರ ವಿರೋಧವುಂಟಾಗುವುದರಿಂದ ಎರಡೂ ಗ್ರಾಹ್ಯವೆಂದು ಹೇಳುತ್ತಾರೆ. ಹೀಗೆ ಇಲ್ಲಿ ಅವ್ಯವಸ್ಥೆಯುಂಟಾಗಿ ನಿರ್ಧಾರವಿಲ್ಲದ್ದರಿಂದ ಈ ಮೂರು ಮತಗಳಲ್ಲಿ ಯಾವುದು ಯುಕ್ತವೆಂಬುದನ್ನು ಮುಂದೆ ತಿಳಿಸುತ್ತಾನೆ. " ಬ್ರಹ್ಮಕ್ಕೆ ಮೂರ್ತ ಅಮೂರ್ತವೆಂಬ ಎರಡು ರೂಪಗಳಿವೆ " ಎಂದು ಸಂಶಯಕ್ಕವಕಾಶವಿಲ್ಲದಂತೆ ಮುಖ್ಯಸಿದ್ಧಾಂತವನ್ನು ತಿಳಿಸುವ ಶ್ರುತಿಯೇ ಎಲ್ಲರಿಗೂ ಪರಮಪ್ರಮಾಣವೆನಿಸಿದೆ ಎಂದು ಹೇಳಿದರೆ ಇದೂ ಸರಿಯಲ್ಲ ; ಯಾಕೆಂದರೆ ಶ್ರುತಿಯಲ್ಲಿ ಎರಡುರೂಪಗಳನ್ನು ಬೇರೆಯಾಗಿ ಹೇಳಿದ್ದರೂ ವಾಮದೇವ ಅಗಸ್ತ್ಯ ಮೊದಲಾದ ಮುಖ್ಯವೈದಿಕರು ಪರಮಶಿವನಲ್ಲಿ ಎರಡು ಅವಸ್ಥೆಗಳನ್ನೂ ಸತ್ಯವೆಂದು ಹೇಳಿದ್ದಾರೆ. ಆದ್ದರಿಂದ ಇದೇ ಎಲ್ಲರಿಗೂ ಗ್ರಾಹ್ಯವೆನಿಸಿದೆ. ಸಿದ್ಧಾಂತಶಿಖಾಮಣಿಯಲ್ಲಿ " ಸಾಂಖ್ಯ, ಯೋಗ, ಪಾಂಚರಾತ್ರ, ವೇದಗಳು, ಪಾಶುಪತ ಇವಿಷ್ಟು ಪ್ರಮಾಣವೆನಿಸಿವೆ. ಇವನ್ನು ಯುಕ್ತಿಗಳಿಂದ ನಿರಾಕರಿಸಲಾಗುವುದಿಲ್ಲ. ಸಾಂಖ್ಯ ಮೊದಲಾದವೆಲ್ಲಕ್ಕೂ ವೇದಗಳೇ ಪ್ರಮಾಣವಾಗಿವೆ. ಆದರೆ ವೇದಕ್ಕೆ ಅನುಗುಣವಾಗಿದ್ದರೆಯೇ ಇವು ಪ್ರಮಾಣವೆನಿಸಿವೆ. ಪಾಂಚರಾತ್ರ, ಯೋಗ, ಸಾಂಖ್ಯಗಳು ವೇದದ ಒಂದೊಂದು ಭಾಗವನ್ನು ಅನುಸರಿಸಿಕೊಂಡು ಬಂದಿವೆ. ಆದರೆ ಇವೆಲ್ಲಕ್ಕಿಂತಲೂ ಸರ್ವವೇದಾನುಸಾರಿಯಾದ್ದರಿಂದ ಶೈವತಂತ್ರವು ವಿಲಕ್ಷಣವೆನಿಸಿದೆ" ಎಂದು ಹೇಳಿದೆ. ವಾಮದೇವಸಂಹಿತೆಯಲ್ಲಿ " ಶಿವನು ಸರ್ವಾತ್ಮಕನೂ ಅನಂತನೂ ಸರ್ವವೇದಾಂತಪ್ರತಿಪಾದ್ಯನೂ ಆಗಿರುವಂತೆಯೇ ಮೂರ್ತಾಮೂರ್ತೋಭಯರೂಪನೂ ನಿತ್ಯನಿರಂಜನನೂ ನಿರ್ದುಷ್ಟನೂ ಆಗಿರುವನು " ಎಂದು ಹೇಳಿರುವುದ

ರಿಂದ ಅವನಲ್ಲಿ ಎರಡು ಸ್ಥಿತಿಗಳೂ ಸ್ವಾಭಾವಿಕವಾಗಿವೆ ಎಂಬುದು ಸಿದ್ಧಿಸುತ್ತದೆ.

"ಅಶರೀರಂ ವಾವ ಸಂತಂ", "ಅಪ್ರಾಣೋ ಹ್ಯಮನಾಃ" ಇತ್ಯಾದಿಷು ಬ್ರಹ್ಮಣಃ ನಿರ್ಗುಣತ್ವನಿರವಯವತ್ವಯೋರೇವ ಪ್ರಾಧಾನ್ಯತಯಾ ಭೂಯಃ ಪ್ರಪಂಚಿತತ್ವಾತ್ಸಗುಣತ್ವಂ ಔಪಾಧಿಕತ್ವಾನ್ಮಿಥ್ಯಾಭೂತತ್ವಾಚ್ಚ ಅಪ್ರಧಾನಮಿತ್ಯಾಶಂಕ್ಯ ನಿರಾಕರೋತಿ. ಅರೂಪವದೇವ ಹಿ ತತ್ಪ್ರಧಾನತ್ವಾತ್ ॥ ೧೪ ॥ "ಅಚಿಂತ್ಯಮವ್ಯಕ್ತಮನಂತಬೋಧಂ ಶಿವಂ ಪ್ರಶಾಂತಮಮೃತಂ ಬ್ರಹ್ಮಯೋನಿಂ" ಇತ್ಯಾದಿಬಹುಶ್ರುತಿಷು ನಿರವಯವಶಿವತತ್ತ್ವಸ್ಯೈವ ಪ್ರಸಾಧಿತತ್ವಾದರೂಪಮೇವ ಹಿ ಶಿವತತ್ತ್ವಮಂಗೀಕರ್ತವ್ಯಂ ಇತಿ ಚೇತ್ತತ್ಪ್ರಧಾನತ್ವಾತ್, "ನಮೋ ಹಿರಣ್ಯಬಾಹವೇ ಹಿರಣ್ಯವರ್ಣಾಯ ಹಿರಣ್ಯರೂಪಾಯ ಹಿರಣ್ಯಪತಯೇಽಂಬಿಕಾಪತಯ ಉಮಾಪತಯೇ ಪಶುಪತಯೇ ನಮೋ ನಮಃ", "ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಳಂ । ಊರ್ಧ್ವರೇತಂ ವಿರೂಪಾಕ್ಷಂ ವಿಶ್ವರೂಪಾಯ ವೈ ನಮೋ ನಮಃ ॥", "ನಮಸ್ತೇ ರುದ್ರ ಮನ್ಯವ ಉತೋತ ಇಷವೇ ನಮಃ ನಮಸ್ತೇ ಅಸ್ತು ಧನ್ವನೇ ಬಾಹುಭ್ಯಾಮುತ ತೇ ನಮಃ" ಇತ್ಯಾದಿಶ್ರುತಿಶತೇಷು ತತ್ಸಗುಣತ್ವಸಾವಯವತ್ವಧ್ಯಾನಪೂಜಾನಮಸ್ಕಾರಾದೀನಾಂ ನಿರ್ಗುಣನಿರವಯವಶಿವತತ್ತ್ವಪ್ರಾಪ್ತಿಪ್ರಾಧಾನ್ಯೋಪದೇಶಾತ್ತಸ್ಯ ಮೂರ್ತಾಮೂರ್ತೋಭಯಧರ್ಮವತ್ತ್ವಂ. ಉಭಯಧರ್ಮಬಲಾದುಭಯಧರ್ಮಸಿದ್ಧಿರಿತಿ ನ್ಯಾಯಾತ್ತುಲ್ಯತ್ವೇನ ಸ್ವಾಭಾವಿಕತಯಾ ವೇದಿತವ್ಯಂ. ಆಕಾಶೋ ಹ ವೈ ನಾಮರೂಪಯೋರ್ನಿರ್ವಹಿತಾ, "ತೇ ಯದಂತರಾ ತದ್ಬ್ರಹ್ಮ" ಇತಿ ಸರ್ವಾನುಪ್ರವೇಶೇಽಪಿ ನಾಮರೂಪಕಾರ್ಯಾಸ್ಪರ್ಶೇನ ನಾಮರೂಪಯೋರ್ನಿರ್ವಾಹಸ್ಯೈವ ಪ್ರತಿಪಾದನಾತ್ತಸ್ಯ ತದುಭಯಲಿಂಗಮನಿವಾರ್ಯಂ.

"ಶರೀರವಿಲ್ಲದಿದ್ದರೂ ಇರುವವನು," "ಪ್ರಾಣ ಮನಸ್ಸುಗಳಿಲ್ಲದೆ ಶುಭ್ರನು" ಎಂದು ಅನೇಕಶ್ರುತಿಗಳಲ್ಲಿ ಪರಬ್ರಹ್ಮವನ್ನು ನಿರ್ಗುಣ ಮತ್ತು ನಿರವಯವೆಂದು ಹೇಳಿ ಇದನ್ನೇ ಮುಖ್ಯವಾಗಿ ವಿಸ್ತರಿಸಲಾಗಿದೆ. ಆದ್ದರಿಂದ ಬ್ರಹ್ಮ ಸಗುಣವೆಂಬ ವಾದವು ಕೇವಲ ಔಪಾಚಾರಿಕವೇ ಹೊರತು ಯಥಾರ್ಥವಲ್ಲವೆಂದು ಆಶಂಕಿಸಿ ನಿರಾಕರಿಸುತ್ತಾನೆ. ಅನೇಕಶ್ರುತಿಗಳು ನಿರವಯವಶಿವನನ್ನೇ ಪ್ರತಿಪಾದಿಸಿರುವುದರಿಂದ ಅವನನ್ನು ಅಮೂರ್ತನೆಂದೇ ಅಂಗೀಕರಿಸಬೇಕೆಂದು ಹೇಳಿದರೆ ಇದೂ ಸರಿಯಲ್ಲ. "ಪರಶಿವನ ಸಾಕಾರಮೂರ್ತಿಯನ್ನು ಧ್ಯಾನಿಸಿ ಸಾಧಕನು ನಿರಾಕಾರಶಿವನಲ್ಲಿ ಐಕ್ಯನಾಗುತ್ತಾನೆ" ಎಂದು ಅನೇಕ ಶ್ರುತಿಗಳಲ್ಲಿ ಪರಶಿವನ ಸಾಕಾರ ಸಗುಣ ಧ್ಯಾನ ಪೂಜಾನಮಸ್ಕಾರಗಳೆ

ಲ್ಲವನ್ನು ನಿರ್ಗುಣನಿರಾಕಾರಶಿವತ್ತ್ವಪ್ರಾಪ್ತಿಗೆ ಮುಖ್ಯಸಾಧನವೆಂದು ಹೇಳಿರುವುದರಿಂದ "ಎರಡು ಧರ್ಮಗಳ ಬಲದಿಂದ ಎರಡೂ ಸಿದ್ಧಿಸುತ್ತವೆ" ಎಂಬ ನ್ಯಾಯದಂತೆ ಪರಶಿವನಲ್ಲಿ ಎರಡು ಅವಸ್ಥೆಗಳನ್ನು ಸ್ವಾಭಾವಿಕವೆಂದೇ ತಿಳಿಯಬೇಕು. "ಆಕಾಶವೇ ನಾಮರೂಪಗಳಿಗಾಶ್ರಯವಾಗಿದೆ" "ಇವುಗಳಿಗೆ ಮಧ್ಯದಲ್ಲಿರುವುದೇ ಬ್ರಹ್ಮ" ಎಂಬಲ್ಲಿ ಎಲ್ಲರೊಳಗೂ ಪ್ರವೇಶಿಸಿದ್ದರೂ ಎಲ್ಲದರ ಕಾರ್ಯಕ್ಕೂ ಅಂಟದಂತೆ ಎಲ್ಲವನ್ನೂ ನಿರ್ವಹಿಸುತ್ತಿರುವುದಾಗಿ ತಿಳಿಸಿರುವುದರಿಂದ ಆಕಾಶಸ್ವರೂಪನಾದ ಪರಶಿವನಿಗೆ ಎರಡೂ ಸತ್ಯವೆಂಬುದು ಅನಿವಾರ್ಯವೆನಿಸಿದೆ.

ನನು "ಸತ್ಯಂ ಜ್ಞಾನಮನಂತಂ ಬ್ರಹ್ಮ" ಇತ್ಯಾದಿಭಿರ್ನಿರ್ವಿಶೇಷಪ್ರಕಾಶೈಕಸ್ವರೂಪಂ ಬ್ರಹ್ಮಾವಗಮ್ಯತೇ. ಅನ್ಯತ್ರ ಸರ್ವಜ್ಞತ್ವಸತ್ಯಸಂಕಲ್ಪತ್ವಸಾವಯವತ್ವಸತ್ಯಕಾಮತ್ವಾದೀನಾಂ "ನೇತಿ ನೇತಿ" ಇತ್ಯಾದಿಭಿಃ ಪ್ರತಿಷಿದ್ಧ್ಯಮಾನತ್ವೇನ ಮಿಥ್ಯಾಭೂತತ್ವಮಿತ್ಯವಗಂತವ್ಯಂ. ಅತಃ ಕಲ್ಯಾಣಗುಣಾಕರಸಾವಯವತ್ವಂ ಕಥಮುಪಪದ್ಯತ ಇತ್ಯಾಶಂಕ್ಯ ತತ್ರಾಹ. ಪ್ರಕಾಶವಚ್ಚಾವೈಯರ್ಥ್ಯಾತ್ ॥ ೧೫ ॥ ಯಥಾಗ್ನೇಯಕೋಣಾಧಿಪವೈಶ್ವಾನರಸ್ಯಾಹವನೀಯಾದಿಸರ್ವದೇಶವೈಶ್ವಾನರಸ್ಯ ಚ ಸ್ವಪ್ರಕಾಶತ್ವತಮೋನಿವಾರಕತ್ವಶೀತಾಪಹಾರಕತ್ವಾದಿಧರ್ಮೈಕತ್ವಾತ್ ಅವೈಯರ್ಥ್ಯಂ, ತಥಾ "ಸತ್ಯಂ ಜ್ಞಾನಮನಂತಂ ಬ್ರಹ್ಮ" ಇತ್ಯಾದಿಶ್ರುತಿಸಿದ್ಧಾಮೂರ್ತಸ್ಯ "ನಮೋ ಹಿರಣ್ಯಬಾಹವೇ ಹಿರಣ್ಯವರ್ಣಾಯ" ಇತ್ಯಾದಿವಾಕ್ಯಸಿದ್ಧಹಿರಣ್ಮಯತ್ವಸತ್ಯಸಂಕಲ್ಪತ್ವಸರ್ವಜ್ಞತ್ವಾದ್ಯನನ್ಯಸಾಧಾರಣಧರ್ಮಾವಚ್ಛಿನ್ನಸ್ಯ ಬ್ರಹ್ಮಣ ಅವೈಯರ್ಥ್ಯಾತ್ ಉಭಯೋರಪಿ ಸ್ವಪ್ರಕಾಶಸ್ವರೂಪತ್ವಮಭ್ಯುಪಗಮ್ಯತೇ. ತಸ್ಮಾದುಭಯಲಿಂಗತ್ವಮವಿರೋಧೇನೈಕಸ್ಯ ಬ್ರಹ್ಮಣಃ ಬಹುಧಾ ಪ್ರಪಂಚಿತಂ. "ನಿಷ್ಕಲಂ ನಿಷ್ಕ್ರಿಯಂ ಶಾಂತಂ ನಿರವದ್ಯಂ ನಿರಂಜನಂ", "ಅಥ ಕಸ್ಮಾದುಚ್ಯತೇ ಮಹಾದೇವಃ? ಯಸ್ಸರ್ವಾನ್ ಪರಿತ್ಯಜ್ಯ ಆತ್ಮಜ್ಞಾನಯೋಗೈಶ್ವರ್ಯೇಣ ಮಹತಿ ಮಹೀಯತೇ, ತಸ್ಮಾದುಚ್ಯತೇ ಮಹಾದೇವಃ" ಇತ್ಯಾದಿಶ್ರುತಿಶತೇಷು ಮೂರ್ತಾಮೂರ್ತಬ್ರಹ್ಮಣೋರವೈಯರ್ಥ್ಯವ್ಯಪದೇಶಾದುಭಯಲಿಂಗತ್ವಂ ತಸ್ಯ ಸ್ವಾಭಾವಿಕಮಿತ್ಯನವದ್ಯಂ. ಕಿಂಚ ಸರ್ವಜ್ಞತ್ವಸರ್ವೇಶ್ವರತ್ವಸರ್ವಕಾರಣತ್ವಸರ್ವಮಯತ್ವಸರ್ವಾಂತರ್ಯಾಮಿತ್ವಸರ್ವಫಲಪ್ರದಾತೃತ್ವಸತ್ಯಸಂಕಲ್ಪಾದಿಧರ್ಮವಿಶಿಷ್ಟಸಗುಣಬ್ರಹ್ಮಣೋ ಮಿಥ್ಯಾತ್ವವ್ಯವಸ್ಥಾಪನೇ "ತ್ರಿಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಂ", "ದಹರಂ ವಿಪಾಪಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಂ" ಇತ್ಯಾದಿಷು ಶಿವಲೋಕಫಲಪ್ರಾಪ್ತಿವಿಧಾಯಕಬಾಹ್ಯಾಂತರಂಗಪ್ರಸಿದ್ಧದಹರಶಾಂಡಿಲ್ಯೋಪಕೋ

ಸಲವೈಶ್ವಾನರಪ್ರತರ್ದನವಿದ್ಯಾನಾಂ ವೈಯರ್ಥ್ಯಂ ದುರ್ನಿವಾರಂ. "ಯಾದೃಶೋ ಯಕ್ಷಸ್ತಾದೃಶೋ ಬಲಿಃ" ಇತಿ ಸ್ವಕಲ್ಪಿತನ್ಯಾಯೇನ ಸಗುಣಮಿಥ್ಯಾಭೂತೇಶ್ವರಲೋಕಪ್ರಾಪ್ತ್ಯಾದಿಫಲಜನಕಶ್ರುತೀನಾಂ ಮಿಥ್ಯಾತ್ವಂ ಅವಿರೋಧಮಿತಿ ಚೇತ್ "ಯಾದೃಶೋ ಯಕ್ಷಸ್ತಾದೃಶೋ ಬಲಿಃ" ಇತಿ ಸ್ವಕೀಯನ್ಯಾಯೇನ ಅರ್ಧಜರತಿನ್ಯಾಯವತ್ ಪಕ್ಷೈಕದೇಶಾಂಗೀಕಾರಸ್ಯಾಯುಕ್ತತ್ವಾತ್ ಸಗುಣಮಿಥ್ಯಾಭೂತವೇದಪ್ರತಿಪಾದಿತನಿರ್ಗುಣಬ್ರಹ್ಮಣೋಽಪಿ ಮಿಥ್ಯಾತ್ವಸ್ಯಾರ್ಥಸಿದ್ಧತ್ವಾತ್ ಕೇವಲನಿರ್ಗುಣಸ್ಯ ವೇದಪ್ರತಿಪಾದಕತ್ವಾಸಂಭವಾಚ್ಚ ತದವೈದಿಕವಾದೋ ಹ್ಯವಿಚಾರಿತರಮಣೀಯಃ.

"ಸತ್ಯಂ ಜ್ಞಾನಂ ಅನಂತಂ ಬ್ರಹ್ಮ" ಎಂಬಲ್ಲಿ ಬ್ರಹ್ಮವನ್ನು ಸಚ್ಚಿದಾನಂದಸ್ವರೂಪವೆಂದೂ ನಿರ್ವಿಶೇಷವೆಂದೂ ಹೇಳಲಾಗಿದೆ. ಆದರೆ ಸರ್ವಜ್ಞತ್ವಾದಿಗುಣಗಳೆಲ್ಲವೂ ನಿಷಿದ್ಧವಾದ್ದರಿಂದ ಮಿಥ್ಯೆ ಎನಿಸಿವೆ. ಆದ್ದರಿಂದ ಅವನು ಸಾವಯವ ಮತ್ತು ಕಲ್ಯಾಣ ಗುಣಗಳಿಗಾಶ್ರಯನು ಎಂಬುದು ಹೇಗೆ ಹೊಂದುತ್ತದೆ? ಎಂದಾಶಂಕಿಸಿ ನಿರಾಕರಿಸುತ್ತಾನೆ. ಅಗ್ನಿದಿಕ್ಕಿಗಧಿಪತಿಯಾದ ಅಗ್ನಿಗೂ ಎಲ್ಲೆಲ್ಲೂ ಇರುವ ಆಹವಾನೀಯ ಮೊದಲಾದ ಅಗ್ನಿಗಳಿಗೂ ಸ್ವಪ್ರಕಾಶತ್ವ, ತಮೋನಿವಾರಕತ್ವ, ಶೀತಾಪಹರಣತ್ವವೆಂಬ ಧರ್ಮಗಳು ಹೇಗೆ ಸಮಾನವಾಗಿ ಅನ್ವಯಿಸುತ್ತವೆಯೋ ಹಾಗೆ "ಸತ್ಯಂ ಜ್ಞಾನಂ" ಎಂಬ ಶ್ರುತಿಯಲ್ಲಿ ತಿಳಿದುಬರುವ ಅಮೂರ್ತಶಿವನಿಗೂ "ನಮೋ ಹಿರಣ್ಯಬಾಹವೇ" ಎಂಬ ಶ್ರುತಿಯಲ್ಲಿ ಹೇಳಿರುವಂತೆ ಹಿರಣ್ಮಯತ್ವ ಮೊದಲಾದ ಕಲ್ಯಾಣಗುಣವಿಶಿಷ್ಟನಾದ ಮೂರ್ತಶಿವನಿಗೂ ಯಾವ ವೈಷಮ್ಯವೂ ಇಲ್ಲದ್ದರಿಂದ ಸ್ವಪ್ರಕಾಶಸ್ವರೂಪವು ಇಬ್ಬರಿಗೂ ಸಮಾನವೇ ಆಗಿದೆ. ಆದ್ದರಿಂದ ಅವನಲ್ಲಿ ಎರಡೂ ಸತ್ಯವೆಂಬ ಅಂಶವನ್ನು ಶ್ರುತಿಯು ವಿಸ್ತಾರವಾಗಿ ತಿಳಿಸಿದೆ. "ಅವನು ಆತ್ಮಜ್ಞಾನೈಶ್ವರ್ಯದಿಂದ ಎಲ್ಲವನ್ನೂ ತೊರೆದು ಎಲ್ಲಕ್ಕೂ ಹೆಚ್ಚಿನಸ್ಥಿತಿಯಲ್ಲಿ ಶೋಭಿಸುತ್ತಿರುವುದರಿಂದ ಮಹಾದೇವನೆನಿಸಿದ್ದಾನೆ." "ವಿದ್ಯೆಗಳೆಲ್ಲಕ್ಕೂ ಅಧಿಪತಿ" ಎಂದು ಮುಂತಾಗಿ ಅನೇಕ ಶ್ರುತಿಗಳಲ್ಲಿ ಮೂರ್ತ ಅಮೂರ್ತ ಸ್ಥಿತಿಗಳೆರಡನ್ನೂ ವ್ಯರ್ಥವಲ್ಲವೆಂದು ಹೇಳಿರುವುದರಿಂದ ಪರಶಿವನಲ್ಲಿ ಎರಡೂ ಸ್ವಾಭಾವಿಕವೆನಿಸಿವೆ. ಸರ್ವಜ್ಞನೂ ಸರ್ವಕಾರಣನೂ ಸರ್ವಮಯನೂ ಸರ್ವಾಂತರ್ಯಾಮಿಯೂ ಸರ್ವಫಲದಾಯಕನೂ ಸತ್ಯಸಂಕಲ್ಪನೂ ಆದ ಸಗುಣ ಬ್ರಹ್ಮವನ್ನು ಸುಳ್ಳೆಂದು ಹೇಳಿದರೆ ಶಿವಲೋಕಪ್ರಾಪ್ತಿಯನ್ನು ಬೋಧಿಸುವ ದಹರ ಶಾಂಡಿಲ್ಯ ಉಪಕೋಸಲ ವೈಶ್ವಾನರ ಪ್ರತರ್ದನ ವಿದ್ಯೆಗಳೆಲ್ಲವೂ ವ್ಯರ್ಥವಾಗಬೇಕಾದೀತು. "ಯಕ್ಷನು ಹೇಗಿರುವನೋ ಬಲಿಯನ್ನವೂ ಅಷ್ಟೇ ಇರಬೇಕು" ಎಂಬ ನ್ಯಾಯದಂತೆ ಸುಳ್ಳಾದ ಸಗುಣಬ್ರಹ್ಮದ ಉಪಾಸನದಿಂದ ಬ್ರಹ್ಮಲೋಕವು ದೊರಕುವುದೆಂದು ತಿಳಿಸುವ ಶ್ರುತಿಗಳನ್ನು ಸುಳ್ಳೆಂದು ಹೇಳುವುದಾದರೆ "ಯಕ್ಷ ಹೇಗಿರುವನೋ ಬಲಿಯೂ ಹಾಗೆಯೇ ಇರಬೇಕು" ಎಂಬ ನ್ಯಾಯದಿಂದ ಅರ್ಧಜರತಿನ್ಯಾ

ಯದಂತೆ ಒಂದು ಅಂಶವನ್ನು ಮಾತ್ರವೇ ಅಂಗೀಕರಿಸುವುದು ಅಯುಕ್ತವಾದ್ದರಿಂದ ಸುಳ್ಳಾದ ವೇದದಲ್ಲಿ ಹೇಳಿರುವ ನಿರ್ಗುಣಬ್ರಹ್ಮವೂ ಸುಳ್ಳೇ ಆಗುವುದೆಂಬುದು ಸ್ವತಸ್ಸಿದ್ಧವಾಗುತ್ತದೆ. ಬ್ರಹ್ಮವನ್ನು ಕೇವಲ ನಿರ್ಗುಣವೆಂದು ವೇದದಲ್ಲಿ ಪ್ರತಿಪಾದಿಸದೆ ಇರುವುದರಿಂದ ಈ ಬಗೆಯ ಅವೈದಿಕವಾದವು ಶೋಭಿಸುವುದಿಲ್ಲ.

"ಏವಂ ವಾ ಅರೇಽಯಮಾತ್ಮಾನಂತರೋ ಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನಃ" ಇತಿ ಶ್ರುತೌ ನಿರ್ಗುಣಶುದ್ಧಚೈತನ್ಯಮಾತ್ರಸ್ಯೋಪದೇಶಾತ್ಕಥಂ ಸಗುಣಬ್ರಹ್ಮಪ್ರಾಧಾನ್ಯಂ ಇತ್ಯಾಶಂಕ್ಯಾಹ. ಆಹ ಚ ತನ್ಮಾತ್ರಂ ॥ ೧೬ ॥ "ದ್ವೇ ವಾವ ಬ್ರಹ್ಮಣೋ ರೂಪೇ" ಇತ್ಯಾದಿಶ್ರುತಿಷು ಅಸಂದಿಗ್ಧತಯಾ ಬ್ರಹ್ಮಣಃ ಮೂರ್ತಾಮೂರ್ತತ್ವವ್ಯವಸ್ಥಾಪನಾತ್, ಶ್ರುತಿಸಂಕೋಚೇ ಮಾನಾಭಾವಾತ್, "ಅಥಾತ ಆದೇಶೋ ನೇತಿ ನೇತಿ" ಇತ್ಯಾದಿವಾಕ್ಯಾನಾಂ ಮೂರ್ತಾಮೂರ್ತಪ್ರಪಂಚನಿಷೇಧಪೂರ್ವಕಪ್ರತ್ಯಗ್ಬೋಧಮಾತ್ರಪರತ್ವಾತ್, "ಸ್ಥಿರೇಭಿರಂಗೈಃ ಪುರುರೂಪ ಉಗ್ರಃ" ಇತ್ಯಾದಿಜಗದೇಕಕಾರಣಭೂತಶಿವೈಕಸ್ವರೂಪನಿತ್ಯಮಂಗಳದಿವ್ಯವಿಗ್ರಹಾಣಾಂ ನಿತ್ಯತ್ವಾವಗಮಾಚ್ಚ "ಸತ್ಯಂ ಜ್ಞಾನಮನಂತಂ ಬ್ರಹ್ಮ" ಇತ್ಯಾದಿಶ್ರುತಯಃ ಪರಶಿವಸ್ಯ ಸ್ವಪ್ರಕಾಶಸ್ವರೂಪತಾಮಾತ್ರಪ್ರತಿಪಾದಕಾಃ, ನಾನ್ಯತ್ಸತ್ಯಸಂಕಲ್ಪತ್ವಾದಿಸಿದ್ಧಬ್ರಹ್ಮಶರೀರನಿಷೇಧಪರಾಃ. ಅತ ಏವ ತನ್ಮಾತ್ರಂ ತಯೋರ್ಮೂರ್ತಾಮೂರ್ತಬ್ರಹ್ಮಣೋಃ ಪ್ರತಿಪಾದಕತ್ವಮಾತ್ರಮೇವ ಶ್ರುತಯಃ ಆಹ ಚ ಪ್ರತಿಪಾದಯಂತೀತ್ಯರ್ಥಃ. ತೈತ್ತಿರೀಯೇ ಚ "ಸಚ್ಚ ತ್ಯಚ್ಚಾಭವತ್" ಇತ್ಯಾದಿನಾ ಮೂರ್ತಾಮೂರ್ತೋಭಯತ್ವಂ ದೃಶ್ಯತೇ. ಅತೋ ನ ಸಂದೇಹಃ.

"ಈ ಆತ್ಮನು ಒಳಗೆ ಹೊರಗೆ ಎಲ್ಲಾ ಕಡೆಯಲ್ಲೂ ಚಿನ್ಮಯನಾಗಿರುವನು" ಎಂಬ ಶ್ರುತಿಯಲ್ಲಿ ನಿರ್ಗುಣಶುದ್ಧಚೈತನ್ಯವನ್ನನ್ನೇ ಹೇಳಿರುವುದರಿಂದ ಅಲ್ಲಿ ಸಗುಣಬ್ರಹ್ಮಕ್ಕೆ ಹೇಗೆ ಪ್ರಾಧಾನ್ಯವುಂಟೆಂದಾಶಂಕಿಸಿ ಸಮಾಧಾನವನ್ನು ಹೇಳುತ್ತಾನೆ. "ಎರಡೂ ಬ್ರಹ್ಮದ ರೂಪಗಳು" ಎಂಬ ಮುಂತಾದ ಶ್ರುತಿಗಳಲ್ಲಿ ಸಂದೇಹಕ್ಕೆಡೆಯಿಲ್ಲದಂತೆ ಬ್ರಹ್ಮದ ಮೂರ್ತಾಮೂರ್ತಸ್ಥಿತಿಯನ್ನು ಹೇಳಲಾಗಿದೆ. ಶ್ರುತಿಯನ್ನು ಸಂಕೋಚಗೊಳಿಸಲು ಪ್ರಮಾಣವಿಲ್ಲ. "ನೇತಿ ನೇತಿ" ಎಂಬ ವಾಕ್ಯಗಳು ಮೂರ್ತಾಮೂರ್ತ ಪ್ರಪಂಚವನ್ನು ನಿಷೇಧಿಸಿ ಕೇವಲ ಜ್ಞಾನವೊಂದನ್ನು ಮಾತ್ರವೇ ತಿಳಿಸುತ್ತವೆ. "ಸ್ಥಿರೇಭಿರಂಗೈಃ" ಎಂಬ ಶ್ರುತಿಯಲ್ಲಿ ಜಗತ್ಕಾರಣನಾದ ಶಿವನ ನಿತ್ಯಮಂಗಳವಿಗ್ರಹವನ್ನು ನಿತ್ಯವೆಂದು ಹೇಳಲಾಗಿದೆ. ಆದ್ದರಿಂದ ಹಿಂದೆಹೇಳಿದ ಮತ್ತು "ಸತ್ಯಂ ಜ್ಞಾನಂ" ಎಂದು ಮುಂತಾದ ಶ್ರುತಿಗಳು ಪರಶಿವನ ಸ್ವಪ್ರಕಾಶಸ್ವರೂಪವನ್ನು ಮಾತ್ರವೇ ತಿಳಿಸುತ್ತದೆ ; ಆದರೆ ಸತ್ಯಸಂಕಲ್ಪ ಮೊದಲಾದ ಪರಶಿವನ ಸಗುಣರೂಪವನ್ನು ನಿಷೇಧಿಸುವುದಿಲ್ಲ. ಆದ್ದರಿಂದ ಪರಶಿವಬ್ರಹ್ಮದ ಮೂರ್ತಾ

ಮೂರ್ತ ಸ್ಥಿತಿಯನ್ನು ತಿಳಿಸುವುದಷ್ಟೇ ಶ್ರುತಿಗಳ ಕೆಲಸವೆನಿಸಿದೆ. ಅವನು ಸಾಕಾರನೂ ನಿರಾಕಾರನೂ ಆಗಿರುವನೆಂದು ತೈತ್ತಿರೀಯದಲ್ಲಿ ಹೇಳಿರುವುದರಿಂದ ಅವನು ಉಭಯರೂಪನೆಂಬುದರಲ್ಲಿ ಸಂದೇಹವಿಲ್ಲ.

ನನು ಬ್ರಹ್ಮಣಶ್ಶಿವಸ್ಯೋಭಯಲಿಂಗತ್ವಂ ಶ್ರುತಿಸಿದ್ಧತ್ವಾತ್ ಪ್ರಸಿದ್ಧಮಸ್ತು. ತಥಾಪಿ ಯಜ್ಞದತ್ತದೇವದತ್ತಾದಿವದುಭಯೋಃ ಪರಸ್ಪರಧರ್ಮವೈಲಕ್ಷಣ್ಯದ್ಯೋತನಾತ್ಕಥಮೇಕತ್ವಮಿತ್ಯಾಶಂಕ್ಯ ತತ್ರಾಹ. ದರ್ಶಯತಿ ಚಾಥೋ ಅಪಿ ಸ್ಮರ್ಯತೇ ॥ ೧೭ ॥ ಸರ್ವ ವೇದಾಂತಾಃ ಬ್ರಹ್ಮಣಃ ಕಲ್ಯಾಣಗುಣಾಕರತ್ವಂ ದಿವ್ಯಮಂಗಳವಿಗ್ರಹತ್ವಂ ನಿರಸ್ತನಿಖಿಲದೋಷಕಲಂಕತ್ವಂ. ಸರ್ವವ್ಯಾಪಕತ್ವಮಮೂರ್ತತ್ವಂ ಚ ದರ್ಶಯಂತಿ. ಚಾಥೋ ಅಪಿ ಚ ಸ್ಮರ್ಯತೇ. ತಥಾ ಸ್ಮೃತಾವಪಿ ಮೂರ್ತಾಮೂರ್ತತ್ವಂ ಸ್ವಾಭಾವಿಕತ್ವೇನ ಸ್ಮರ್ಯತೇ. ಸರ್ವಶಕ್ತ್ಯಾತ್ಮಕಸ್ಯ ಪವನಾದಿವದ್ವ್ಯಾಪಕಸ್ಯಾಮೂರ್ತಸ್ಯ ಸರ್ವಕಾಮಸರ್ವಗಂಧ ಸರ್ವರಸತತ್ತ್ವಾದಿಧರ್ಮಾವಚ್ಛಿನ್ನಸ್ಯ ಮೂರ್ತಸ್ಯ ಚ ಪರಸ್ಪರಸ್ವಾಭಾವಿಕಭೇದಸತ್ತ್ವೇಽಪ್ಯಭೇದ ಅನವದ್ಯ ಇತಿ ಸ್ಮರ್ಯತೇ. "ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವತಾನಾಂ ಪರಮಂ ಚ ದೈವತಂ । ಪತಿಂ ಪಶೂನಾಂ ಪ್ರಥಮಂ ಪುರಸ್ತಾತ್ ವಿಧಾಮ ದೇವಂ ಪರಮೇಶಮೀಢ್ಯಂ ॥", "ನ ಕಾರಣಂ ಕಾರಣಕಾರಣಾಧಿಪೋ ನ ಚಾಸ್ಯ ಕಶ್ಚಿಜ್ಜನಿತಾ ನ ಚಾಧಿಪಃ", "ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ", "ನಿಷ್ಕಲಂ ನಿಷ್ಕ್ರಿಯಂ ಶಾಂತಂ" ಇತ್ಯಾದಿಶ್ರುತಿಷು, "ಮಯಾಧ್ಯಕ್ಷೇಣ ಪ್ರಕೃತಿಸ್ಸೂಯತೇ ಸಚರಾಚರಂ", ಹೇತುನಾನೇನ ಕೌಂತೇಯ ಜಗದ್ಧಿ ಪರಿವರ್ತತೇ", "ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ । ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ಸರ್ವಜ್ಞಃ ಸರ್ವಕೃತ್ಸರ್ವಶಕ್ತಿಜ್ಞಾನಬಲಾದಿಮಾನ್ । ಅನ್ಯೂನಶ್ಚಾಪ್ಯವೃದ್ಧಿಶ್ಚ ಸ್ವಾಧೀನೋಽನಾದಿಮಾನ್ವಶೀ । ಕ್ಲಮತಂದ್ರಾಭಯಕ್ರೋಧಕಾಮಾದಿಭಿರಸಂಯುತಃ । ನಿರವದ್ಯಃ ಪರಃ ಪ್ರಾಪ್ತೇಃ ನಿರಧಿಷ್ಠೋಽಕ್ಷರಃ ಸಮಃ ॥" ಇತ್ಯಾದಿ ಸ್ಮೃತಿಷ್ವಪಿ ಬ್ರಹ್ಮಣಃ ಶಿವಸ್ಯೋಭಯಲಿಂಗಾತ್ಮಕತ್ವವ್ಯಪದೇಶಾನ್ಮೂರ್ತಾಮೂರ್ತಯೋರ್ಭೇದೇ ಸತಿ ಅಭೇದ ಉಪಪನ್ನಃ.

ಪರಶಿವಬ್ರಹ್ಮವನ್ನು ಉಭಯರೂಪನೆಂದು ಶ್ರುತಿಯಲ್ಲಿ ಹೇಳಿದ್ದರೂ ಯಜ್ಞದತ್ತ ದೇವದತ್ತರಂತೆ ಮೂರ್ತಬ್ರಹ್ಮಕ್ಕೂ ಅಮೂರ್ತಬ್ರಹ್ಮಕ್ಕೂ ಪರಸ್ಪರಭೇದವಿರುವುದರಿಂದ ಹೇಗೆ ಐಕ್ಯ ಸಂಭವಿಸುತ್ತದೆ? ಎಂದಾಶಂಕಿಸಿ ಸಮಾಧಾನವನ್ನು ಹೇಳುತ್ತಾನೆ. ಎಲ್ಲಾ ವೇದಾಂತಗಳೂ ಬ್ರಹ್ಮವನ್ನು ದಿವ್ಯಮಂಗಳವಿಗ್ರಹಧಾರಿ ಎಂದೂ

ಕಲ್ಯಾಣಗುಣಗಳಿಗಾಶ್ರಯವೆಂದೂ ದೋಷರಹಿತನೆಂದೂ ಸರ್ವವ್ಯಾಪಕನೆಂದೂ ಅಮೂರ್ತನೆಂದೂ ಸರ್ವಂತರ್ಯಾಮಿ ಎಂದೂ ಹೇಳಿವೆ. ಹಾಗೆಯೇ ಸ್ಮೃತಿಯಲ್ಲೂ ಪರಶಿವನಿಗೆ ಮೂರ್ತಾಮೂರ್ತಸ್ಥಿತಿಯನ್ನು ಸ್ವಾಭಾವಿಕವೆಂದು ಹೇಳಿದೆ. ಸರ್ವಶಕ್ತಿಮಂತನೂ ವಾಯುವಿನಂತೆ ವ್ಯಾಪಕನೂ ಆದ ಅಮೂರ್ತಶಿವನಿಗೂ ಪ್ರಪಂಚದ ಎಲ್ಲಾ ರಸಗಂಧಸ್ಪರ್ಶಗಳಿಗಾಶ್ರಯನೂ ಸರ್ವಕಾಮನೂ ಆದ ಮೂರ್ತಶಿವನಿಗೂ ಪರಸ್ಪರ ಭೇದವಿದ್ದರೂ ಅಭೇದವೂ ಇರುವುದಾಗಿ ಸ್ಮೃತಿಗಳೂ ತಿಳಿಸುತ್ತವೆ. " ಲೋಕರಕ್ಷಕರೆಲ್ಲರಿಗೂ ರಕ್ಷಕನೂ, ದೇವತೆಗಳಿಗೆ ಪರಮದೇವನೂ, ಪಶುಪತಿಯೂ, ಸರ್ವವಂದ್ಯನೂ ಆದ ಪರಶಿವನಿಗೆ ಮೊದಲು ನಮಸ್ಕರಿಸೋಣ. " " ಅವನಿಗೆ ಯಾವ ಕಾರಣವೂ ಇಲ್ಲ. ಅವನೇ ಜಗತ್ಕಾರಣರಾದ ತ್ರಿಮೂರ್ತಿಗಳಿಗೆ ಕಾರಣನು. ಅವನಿಗೆ ಜನಕನಾಗಲೀ ಪ್ರಭುವಾಗಲೀ ಇಲ್ಲ. ಅವನಿಗೆ ಯಾವ ಕಾರ್ಯಕಾರಣಭಾವವಾಗಲೀ, ಸಮಾನರಾಗಲೀ ಇಲ್ಲ " " ಯಾವನಿಂದಾಚೆಗೆ ಮಾತೇ ಹೊರಡುವುದಿಲ್ಲವೋ " " ಅವನು ನಿಷ್ಕಲನೂ ನಿಷ್ಕ್ರಿಯನೂ ಶಾಂತನೂ ಆಗಿದ್ದಾನೆ" ಎಂದು ಶ್ರುತಿಗಳಲ್ಲೂ " ಯಾವನು ನನ್ನನ್ನು ಸರ್ವಲೋಕಗಳ ನಿಯಾಮಕನೆಂದೂ, ಹುಟ್ಟುಸಾವುಗಳಿಲ್ಲದೆ ಅನಾದಿ ಎಂದೂ ತಿಳಿಯುವನೋ " "ನಾನು ಮಾಯಾಶಕ್ತಿಯ ಒಂದಂಶದಿಂದ ವಿಶ್ವವೆಲ್ಲವನ್ನು ವ್ಯಾಪಿಸಿದ್ದೇನೆ" " ನನ್ನ ಸಾನ್ನಿಧ್ಯದಿಂದ ಪ್ರಕೃತಿಯು ವಿಶ್ವವನ್ನು ಹೊರಗೆಡಹುತ್ತದೆ " " ಈ ಕಾರಣದಿಂದ ಜಗತ್ತು ಬದಲಾವಣೆಹೊಂದುತ್ತಲಿದೆ." " ಸರ್ವೋತ್ತಮನಾದ ಪುರುಷನನ್ನು ಪರಮಾತ್ಮನೆಂದು ಕರೆಯಲಾಗಿದೆ. " " ಯಾವ ಈಶ್ವರನು ಮೂರುಲೋಕಗಳನ್ನೂ ಆವರಿಸಿ ಹಿಡಿದಿದ್ದಾನೆಯೋ ಸರ್ವಜ್ಞನೂ ಸರ್ವಕರ್ತನೂ ಸರ್ವಶಕ್ತನೂ ಆದ ಆ ಪ್ರಭುವು ನ್ಯೂನಾತಿರೇಕಗಳಿಲ್ಲದೆಯೂ, ಭಯ ಕ್ರೋಧ ಮೋಹಗಳಿಲ್ಲದೆಯೂ, ಶ್ರಮ, ಆಕಳಿಕೆ, ಹೆದರಿಕೆ, ಕಾಮಕ್ರೋಧಗಳಿಲ್ಲದೆಯೂ, ನಿರ್ದುಷ್ಟನೂ ನಿರಾಶ್ರಯನೂ ನಾಶರಹಿತನೂ ಆಗಿರುವನು " ಈ ಬಗೆಯ ಸ್ಮೃತಿಗಳಲ್ಲೂ ಪರಶಿವಬ್ರಹ್ಮವನ್ನು ಎರಡು ಬಗೆಯಲ್ಲೂ ಹೇಳಿರುವುದರಿಂದ ಆ ಎರಡು ಬಗೆಗಳಿಗೂ ಭೇದವಿದ್ದರೂ ಅಭೇದವೂ ಹೊಂದುತ್ತದೆ.

ಅಸ್ಮಿನ್ನರ್ಥೇ ಹೇತ್ವಂತರಮಾಹ. ಅತ ಏವ ಚೋಪಮಾ ಸೂರ್ಯಕಾದಿವತ್ ॥ ೧೮ ॥ ನಿರವಯವಸ್ಯ ವ್ಯಾಪಕಸ್ಯ ಶಿವಸ್ಯೈವ ಸದಾಶಿವಮಹೇಶ್ವರಕಾಲರುದ್ರೇಶಾನಾದಿಸಾವಯವರೂಪೇಣ ಸ್ಥಿತಸ್ಯಾಪಿ ಘಟಪಟಾದಿವದನ್ಯೋನ್ಯಭೇದ ಅಸಂಗತಃ. ಅತ ಏವ ಜಲದರ್ಪಣಾದಿಪ್ರತಿಬಿಂಬಿತಸೂರ್ಯಾದಿವದ್ಭೇದೇ ಸತ್ಯಪ್ಯಭೇದಶ್ಚ ದೃಶ್ಯತೇ. ಅತ ಏವ ಚೋಪಮಾ. " ಆಕಾಶಮೇಕಂ ಹಿ ಯಥಾ ಘಟಾದಿಷು ಪೃಥಗ್ಭವೇತ್ । ತಥೈವೈಕೋ ಹ್ಯನೇಕಸ್ಥೋ ಜಲಾಧಾರೇಷ್ವಿವಾಂಶುಮಾನ್ । ಏಕ ಏವ ಹಿ ಭೂತಾತ್ಮಾ ಭೂತೇಭೂತೇ ವ್ಯವಸ್ಥಿತಃ ॥ ", " ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್ "

ಇತ್ಯಾದಿಶ್ರುತಿಷು ಮೂರ್ತಾಮೂರ್ತಬ್ರಹ್ಮಣೋರ್ಭೇದಾಭೇದತ್ವೇನೋಭಯಲಿಂಗತ್ವಸ್ಯ ಸ್ಪಷ್ಟಮುಪದಿಷ್ಟತ್ವಾನ್ನ ಸಂದೇಹಕಳಂಕಪ್ರಸಂಗಃ.

ಈ ಬಗ್ಗೆ ಬೇರೊಂದು ಹೇತುವನ್ನು ಹೇಳುತ್ತಾನೆ. ನಿರವಯುವನೂ ಸರ್ವವ್ಯಾಪಕನೂ ಆದ ಪರಮಶಿವನಿಗೆ ಸದಾಶಿವ, ಮಹೇಶ್ವರ, ಕಾಲರುದ್ರ, ಈಶಾನ ಎಂಬ ನಾಮರೂಪಗಳಿದ್ದರೂ ಆ ಎರಡು ಅವಸ್ಥೆಗಳಿಗೂ ಘಟಪಟಗಳಂತೆ ಪರಸ್ಪರ ಭೇದವಿಲ್ಲ. ಆದ್ದರಿಂದಲೇ ನೀರು ಮತ್ತು ಕನ್ನಡಿಗಳಲ್ಲಿ ಪ್ರತಿಬಿಂಬಿಸಿದ ಸೂರ್ಯನಂತೆ ಮೂರ್ತಾಮೂರ್ತರೂಪಗಳಿಗೆ ಭೇಧವಿದ್ದರೂ ಅಭೇದವಿರುವುದೆಂದು ಶಾಸ್ತ್ರದಲ್ಲಿ ಹೋಲಿಕೆಯನ್ನು ಕೊಡಲಾಗಿದೆ. ಆಕಾಶವು ಒಂದೇ ಆದರೂ ಗಡಿಗೆ ಮೊದಲಾದವುಗಳಲ್ಲಿ ಭಿನ್ನವಾಗುವಂತೆಯೂ,ಮಡುವಿನಲ್ಲಿ ಕಾಣುವ ಸೂರ್ಯನಂತೆಯೂ ಒಬ್ಬ ಶಿವನೇ ಅನೇಕ ರೂಪಗಳನ್ನು ತಾಳಿರುವನು. ಒಬ್ಬ ಚೇತನನೇ ಎಲ್ಲರಲ್ಲೂ ನೆಲಸಿದ್ದಾನೆ. ಜಲಚಂದ್ರನಂತೆ ಒಬ್ಬ ಪರಶಿವನೇ ಶಿವನೆಂದು ಒಂದೇ ಬಗೆಯಾಗಿಯೂ, ಜೀವರೆಂದು ಅನೇಕ ಬಗೆಯಾಗಿಯೂ ಇದ್ದಾನೆ" ಎಂದು ಶ್ರುತಿಗಳಲ್ಲಿ ಮೂರ್ತಾಮೂರ್ತಬ್ರಹ್ಮಗಳಿಗೆ ಭೇದ ಮತ್ತು ಅಭೇದಗಳೆರಡೂ ಇರುವುದರಿಂದ ಸಾವಯುವ ಮತ್ತು ನಿರವಯವಸ್ಥಿತಿಗಳೆರಡನ್ನೂ ಸ್ಪಷ್ಟವಾಗಿ ಹೇಳಿರುವುದರಿಂದ ಸಂಶಯಕ್ಕವಕಾಶವಿಲ್ಲ.

ನನು "ದೃಶ್ಯತೇ ಜಲಚಂದ್ರವತ್" ಇತ್ಯಾದಿಷು ಬಿಂಬಪ್ರತಿಬಿಂಬಭಾವೇನ ಮೂರ್ತಾಮೂರ್ತಬ್ರಹ್ಮಣೋರ್ಭೇದತ್ವಪ್ರಸಾಧನೇಽಪಿ ಭೇದಸ್ಯೌಪಾಧಿಕತ್ವೇನಾಪಾರಮಾರ್ಥಿಕತಯಾ ಮಿಥ್ಯಾತ್ವಾತ್ ತಯೋಸ್ಸರ್ವದಾ ಭೇದಮಾತ್ರಮೇವ ಶ್ರುತೇಸ್ತಾತ್ಪರ್ಯಮಿತ್ಯಾಶಂಕ್ಯ ನಿರಾಕರೋತಿ. ಅಂಬುವದಗ್ರಹಣಾತ್ತು ನ ತಥಾತ್ವಂ ‖ ೧೯ ‖ ತುಶಬ್ದಶ್ಶಂಕಾನಿರಾಸಾರ್ಥಃ. "ಏಕಧಾ ಬಹುಧಾ ಚೈವ ದೃಶ್ಯತೇ ಜಲಚಂದ್ರವತ್" ಇತಿ ಶ್ರುತೌ ಅಂಬುದರ್ಪಣಾದಿಷು ಔಪಾಧಿಕಭೇದೇನ ಯಥಾ ಸೂರ್ಯಮುಖಾದಯೋ ಗೃಹ್ಯಂತೇ ನ ತಥಾ ಸದಾಶಿವಾದಿಮೂರ್ತಿಸ್ಥಾನೇ ಮಹಾದೇವೋ ಗೃಹ್ಯತೇ. ಅಂಬ್ವಾದಿಷು ಹಿ ಸೂರ್ಯಾದಯೋ ಭ್ರಾಂತ್ಯಾ ತತ್ರಸ್ಥಾ ಇವ ಗೃಹ್ಯಂತೇ, ನ ಪರಮಾರ್ಥತಸ್ತತ್ರಸ್ಥಾಃ. ಇಹ ತು "ದ್ವೇ ವಾವ ಬ್ರಹ್ಮಣೋ ರೂಪೇ" ಇತ್ಯಾದಿಶ್ರುತಿಶತೇಷು ಉಭಯೋರಪಿ ಪಾರಮಾರ್ಥಿಕತ್ವೇನ ತುಲ್ಯತ್ವಮುಚ್ಯತೇ. ಅತೋ ದೃಶ್ಯತೇ ಜಲಚಂದ್ರವದಿತ್ಯಾದಿಷು ತಥಾತ್ವಮೇವ ಗಮ್ಯತೇ.

"ನೀರಿನಲ್ಲಿ ಕಾಣುವ ಚಂದ್ರನಂತೆ ಒಬ್ಬನೇ ಅನೇಕ ರೂಪಗಳಾಗಿ ಕಾಣುವನು" ಎಂಬಲ್ಲಿ ಬಿಂಬ ಪ್ರತಿಬಿಂಬಭಾವದಿಂದ ಮೂರ್ತಾಮೂರ್ತಬ್ರಹ್ಮಗಳೆರಡಕ್ಕೂ ಭೇದಾಭೇದಗಳನ್ನು ಸಾಧಿಸಿದರೂ ಭೇದವು ಕೇವಲ ಉಪಾಧಿಯಿಂದ ಬಂದು ಯಥಾರ್ಥವಲ್ಲದ್ದರಿಂದ ಮಿಥ್ಯೆಎನಿಸಿರುವುದು. ಆದ್ದರಿಂದ ಅವೆರಡಕ್ಕೆ ಅಭೇದವೇ ಇರುವುದೆಂಬ ಅಂಶವೇ ಶ್ರುತಿಯ ತಾತ್ಪರ್ಯವೆಂದು ಆಶಂಕಿಸಿ ನಿರಾಕರಿಸುತ್ತಾನೆ. ಜಲ

ಚಂದ್ರನಂತೆ ಒಬ್ಬನೇ ಅನೇಕಬಗೆಯಾಗಿದ್ದಾನೆ" ಎಂಬಲ್ಲಿ ನೀರು ಕನ್ನಡಿ ಮೊದಲಾದ ಉಪಾಧಿಗಳ ಭೇದದಿಂದ ಸೂರ್ಯ ಮುಖ ಮೊದಲಾದವುಗಳನ್ನು ಭಿನ್ನವಾಗಿ ತಿಳಿಯುವಂತೆ ಸದಾಶಿವ ಮೊದಲಾದ ಮೂರ್ತಿಗಳ ಸ್ಥಾನದಲ್ಲಿ ಮಹಾದೇವನನ್ನು ಭಿನ್ನನೆಂದು ತಿಳಿಯುವುದಿಲ್ಲ. ನೀರಿನಲ್ಲಾದರೋ ಸೂರ್ಯನು ಇರುವಂತೆ ಭ್ರಾಂತಿಯಿಂದ ಕಲ್ಪಿಸುತ್ತೇವೆ; ಆದರೆ ಸೂರ್ಯನು ಯಥಾರ್ಥವಾಗಿ ಅಲ್ಲಿ ಇರುವುದಿಲ್ಲ. ಇಲ್ಲಿಯಾದರೋ ಬ್ರಹ್ಮದ ಮೂರ್ತ ಮತ್ತು ಅಮೂರ್ತ ಸ್ಥಿತಿಗಳೆರಡೂ ಯಥಾರ್ಥವಾದ್ದರಿಂದ ಸಮಾನವೆನಿಸಿವೆ. ಇಲ್ಲಿ ಕಲ್ಪನೆಗೆ ಅವಕಾಶವೇ ಇಲ್ಲ. ಆದ್ದರಿಂದ ಜಲಚಂದ್ರದಂತೆ ಪರಮಾತ್ಮನ ಸ್ಥಿತಿಯಲ್ಲವೆಂಬುದು ಸ್ಪಷ್ಟವಾಗಿದೆ.

"ನನು "ಯಸ್ಯ ಪೃಥಿವೀ ಶರೀರಂ", "ಯಃ ಪೃಥಿವ್ಯಾಂ ತಿಷ್ಠನ್" ಇತ್ಯಾದಿಷು ಪರಮೇಶ್ವರಸ್ಯ ಪೃಥಿವ್ಯಾದ್ಯಷ್ಟಮೂರ್ತಿತ್ವ ತದಂತರ್ಯಾಮಿತ್ವಯೋರುಪದೇಶಾತ್ ಶಿವಾದಿಮೂರ್ತಾನಾಮೇವ ತನ್ಮೂರ್ತಿತ್ವಮಿತಿ ವ್ಯವಸ್ಥಾ ಕಥಮುಪಪದ್ಯತ ಇತ್ಯತ್ರಾಹ. ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯಸಾಮಂಜಸ್ಯಾದೇವಂ ದರ್ಶನಾಚ್ಚ ॥ ೨೦ ॥ ಅಂತರ್ಭಾವಾತ್ಸದಾಶಿವಾದೀನಾಮಪ್ರಾಕೃತಸ್ವಾಭಾವಿಕಾಭಿನ್ನಚಿಚ್ಛಕ್ತ್ಯಂಶತ್ವೇನ ಶಿವಾಂತರ್ಭೂತತ್ವಾತ್ ವೃದ್ಧಿಹ್ರಾಸಭಾಕ್ತ್ವಂ ತ್ರಿಗುಣಾತ್ಮಕಶಿವಭಿನ್ನಶಕ್ತ್ಯಂಶಭೂತಪೃಥಿವ್ಯಾದ್ಯಷ್ಟಮೂರ್ತೀನಾಮಿವ ಜನ್ಮನಾಶಾದಿದೋಷಾಶ್ರಯತ್ವಂ ನ ಸಂಭವತಿ. ಕಸ್ಮಾತ್? ಉಭಯಸಾಮಂಜಸ್ಯಾತ್ ಉಭಯೋರ್ಮೂರ್ತಾಮೂರ್ತಬ್ರಹ್ಮಣೋರ್ಭೇದಾಭೇದಸಾಮಂಜಸ್ಯಾತ್. ಕುತಃ ಏವಂ ದರ್ಶನಾಚ್ಚ. "ದ್ವೇ ವಾವ ಬ್ರಹ್ಮಣೋ ರೂಪೇ" ಇತ್ಯಾದಿಶ್ರುತಿಶತೇಷು ಮೂರ್ತಾಮೂರ್ತಬ್ರಹ್ಮಣೋರ್ಭೇದೇ ಸತ್ಯಪ್ಯಭೇದಸಾಮರಸ್ಯದ್ಯೋತನಾಚ್ಚ ಪಾಶಕೃತಜಡಪ್ರಕೃತ್ಯಾವೃತಪೃಥಿವ್ಯಾದ್ಯಷ್ಟಮೂರ್ತೀನಾಮಿವ ಸದಾಶಿವಾದೀನಾಂ ನ ತದ್ಭೇದೋ ನಿಶ್ಚೀಯತೇ. ಉತ "ಆಕಾಶಶರೀರಂ ಬ್ರಹ್ಮ ಸತ್ಯಾತ್ಮ ಪ್ರಾಣಾರಾಮಂ ಮನಆನಂದಂ" ಇತಿ ಆಕಾಶತ ಇತಿ ಆಕಾಶಂ. ಸತ್ಯಾತ್ಮ ಸತ್ಯಸ್ವರೂಪಂ. ಪ್ರಾಣಾರಾಮಂ ಪ್ರಾಣೇಷ್ವಾಸಮಂತಾದ್ರಮತ ಇತಿ ಪ್ರಾಣಾರಾಮಂ. ಮನಸಿ ಆನಂದೋ ಯಸ್ಯ ಮನಆನಂದಂ ಇತ್ಯನೇನ ವಾಕ್ಯೇನ ಮೂರ್ತಾಮೂರ್ತತ್ವಮುಪಲಕ್ಷಿತಂ. "ಆಕಾಶಶರೀರಂ ಬ್ರಹ್ಮ" ಇತ್ಯತ್ರ ಅಮೂರ್ತತ್ವಂ, "ಪ್ರಾಣಾರಾಮಂ" ಇತ್ಯಾದಿಷು ಮನಃಪ್ರಾಣಾತ್ಮಕಲಿಂಗಶರೀರೋಪದೇಶಾತ್, ತಲ್ಲಿಂಗಶರೀರವ್ಯಪದೇಶೇನ ಸ್ಥೂಲದೇಹಸ್ಯಾರ್ಥಸಿದ್ಧತ್ವಾತ್ ಸ್ಥೂಲಂ ವಿನಾ ಸೂಕ್ಷ್ಮಸ್ಯ ಪ್ರವೃತ್ತ್ಯಸಂಭವಾಚ್ಚ ಮೂರ್ತತ್ವಮುಪದಿಷ್ಟಂ. ಏತೇನ ಜಗದೇಕಕಾರಣಸ್ಯ ನಿತ್ಯನಿಷ್ಕಲಂಕಸ್ಯ ಸರ್ವಜ್ಞಸ್ಯ ಮೂರ್ತಾಮೂರ್ತಸ್ಯೈವ ಬ್ರಹ್ಮತ್ವಮವ

ಗಮ್ಯತೇ. ಸ್ಮೃತಾವಪಿ "ಮೂರ್ತಾಮೂರ್ತಾತ್ಮಕೋಽನಂತಃ ಪ್ರಪಂಚಾತೀತವೈಭವಃ । ನಿಷ್ಕಲಂಕೋ ನಿರಾಧಾರೋ ನಿರ್ಲಿಪ್ತಶ್ಶಿವ ಉಚ್ಯತೇ । ಅನಂತಾನಂತಕಲ್ಯಾಣಗುಣೈಕಘನ ಈಶ್ವರಃ । ಶಿವ ಇತ್ಯುಚ್ಯತೇ ಸದ್ಭಿಶ್ಶೈವತತ್ತ್ವಾರ್ಥವೇದಿಭಿಃ ॥" ಇತಿ ದರ್ಶನಾತ್ "ಶಿವಶಬ್ದವಾಚ್ಯಂ ಬ್ರಹ್ಮ ಉಭಯಲಿಂಗಂ" ಇತಿ ವ್ಯಾಚಕ್ಷ್ಯತೇ. "ತಸ್ಯ ಹ ವಾ ಏತಸ್ಯ ಪುರುಷಸ್ಯ ಯಥಾ ಮಹಾರಜನಂ ವಾ ಸ" ಇತ್ಯಾದಿನಾ ಆಕಾರವಿಶೇಷಂ ಚಾಭಿಧಾಯ, "ಅಥಾತ ಆದೇಶೋ ನೇತಿ ನೇತಿ", "ನ ಹ್ಯೇತಸ್ಮಾದಿತಿ, ನೇತ್ಯನ್ಯತ್ಪರಮಸ್ಥಿತಿಸ್ಸರ್ವಂ ಪ್ರಕೃತಂ ಬ್ರಹ್ಮಣಃ ಪ್ರಕಾರಂ" ಇತಿಶಬ್ದೇನ ಪರಾಮೃಶ್ಯ ತತ್ಸರ್ವಂ ಪ್ರತಿಷಿಧ್ಯ ಸರ್ವವಿಶೇಷಾಧಿಷ್ಠಾನಂ ಸನ್ಮಾತ್ರಮೇವ ಬ್ರಹ್ಮ, ವಿಶೇಷಾಸ್ತ್ವೇವಂವಿಧಂ ಸ್ವಸ್ವರೂಪಮಜಾನತಾ ಬ್ರಹ್ಮಣಾ ಕಲ್ಪಿತಾ ಇತಿ ದರ್ಶಯತಿ.

"ಯಾವನಿಗೆ ಪೃಥ್ವಿಯೇ ಶರೀರವೋ, ಆತ್ಮವೇ ಶರೀರವೋ, ಯಾವನು ಪೃಥ್ವಿಯಲ್ಲೂ ಇರುವನೋ" ಎಂಬಲ್ಲಿ ಪರಮೇಶ್ವರನನ್ನು ಪೃಥಿವ್ಯಾದ್ಯಷ್ಟಮೂರ್ತಿ ಎಂದೂ, ಅಂತರ್ಯಾಮಿ ಎಂದೂ ಹೇಳಿರುವುದರಿಂದ ಸದಾಶಿವನೇ ಮೊದಲಾದ ಮೂರ್ತರೂಪಗಳೇ ಪರಮೇಶ್ವರನ ಆಕಾರವೆಂಬುದು ಹೇಗೆ ಹೊಂದುತ್ತದೆ? ಎಂಬ ಆಶಂಕೆಯನ್ನು ಪರಿಹರಿಸುತ್ತಾನೆ. ಸದಾಶಿವ ಮೊದಲಾದ ರೂಪಗಳು ಪರಶಿವನ ಪ್ರಾಣರೂಪವಾದ ಚಿತ್‌ಶಕ್ತಿಯ ಅಂಶಗಳೇ ಆದ್ದರಿಂದ ಅವನಲ್ಲಿಯೇ ಅಡಗಿವೆ. ಆದ್ದರಿಂದ ಈ ದಿವ್ಯರೂಪಗಳಿಗೆ ತ್ರಿಗುಣಾತ್ಮಕವಾದ ಅಚಿತ್‌ಶಕ್ತಿಯ ಅಂಶಗಳೆನಿಸಿದ ಅಷ್ಟಮೂರ್ತಿಗಳಂತೆ ಹುಟ್ಟುಸಾವುಗಳು ಸಂಭವಿಸುವಂತಿಲ್ಲ. ಹೀಗೆ ಮೂರ್ತಾಮೂರ್ತಸ್ಥಿತಿಗಳೆರಡಕ್ಕೂ ಭೇದಾಭೇದಗಳೆರಡೂ ಸಮಂಜಸವಾದ್ದರಿಂದಲೂ, ಶ್ರುತಿಗಳಲ್ಲಿ ಹೀಗೆಯೇ ಹೇಳಿರುವುದರಿಂದಲೂ, ಪಾಶವೆಂಬ ಜಡಪ್ರಕೃತಿಯಿಂದ ಆಗಿರುವ ಪೃಥಿವ್ಯಾದ್ಯಷ್ಟಮೂರ್ತಿಗಳಿಗೂ, ಚಿತ್‌ಶಕ್ತಿಯಿಂದ ಆಗಿರುವ ಸದಾಶಿವಾದ್ಯವಸ್ಥೆಗಳಿಗೂ ಹೋಲಿಕೆ ಇಲ್ಲವೆಂದು ನಿಶ್ಚಯಿಸಲಾಗಿದೆ. ಇದೂ ಅಲ್ಲದೆ "ಆಕಾಶಶರೀರಂ ಬ್ರಹ್ಮ" ಎಂಬ ಶ್ರುತಿಯಲ್ಲಿ ಸುತ್ತಲೂ ಶೋಭಿಸುತ್ತಿರುವುದರಿಂದ ಪರಶಿವನಿಗೆ "ಆಕಾಶ"ನೆಂದೂ, ಸತ್ಯಸ್ವರೂಪನಾದ್ದರಿಂದ ಸತ್ಯಾತ್ಮ"ನೆಂದೂ, ಪ್ರಾಣಗಳಲ್ಲಿಯೇ ರಮಿಸುವನಾದ್ದರಿಂದ "ಪ್ರಾಣಾರಾಮ" ನೆಂದೂ, ಮನಸ್ಸಿನಲ್ಲಿಯೇ ಆನಂದಪಡುವನಾದ್ದರಿಂದ "ಮನಆನಂದ" ನೆಂದೂ ಹೇಳಲಾಗಿದೆ. ಈ ಶ್ರುತಿಯಲ್ಲಿ ಆಕಾಶವೆಂಬ ಅಮೂರ್ತರೂಪವನ್ನೂ, ಮನಸ್ಸು ಪ್ರಾಣಗಳೆಂಬ ಲಿಂಗಶರೀರವನ್ನೂ ಹೇಳಿರುವುದರಿಂದ ಸ್ಥೂಲದೇಹವಿರುವುದೆಂದು ಸ್ಪಷ್ಟವಾಗುತ್ತದೆ. ಸ್ಥೂಲವಿಲ್ಲದೆ ಸೂಕ್ಷ್ಮದೇಹವು ಇರುವ ಸಂಭವವಿಲ್ಲವಾದ್ದರಿಂದ ಪರಮಶಿವನಿಗೆ ಮೂರ್ತಸ್ಥಿತಿಯುಂಟೆಂದು ಹೇಳಲಾಗಿದೆ. ಇದರಿಂದ ಪರಶಿವಬ್ರಹ್ಮವು ಜಗದೇಕಕಾರಣನೂ ನಿತ್ಯ ನಿಷ್ಕಳಂಕನೂ ಸರ್ವಜ್ಞನೂ ಮೂರ್ತಾಮೂರ್ತನೂ ಆಗಿರುವನೆಂಬುದು ಸ್ಪಷ್ಟವಾಗುತ್ತದೆ. ಸ್ಮೃತಿ

ಯಲ್ಲೂ" ಶಿವನು ಮೂರ್ತಾಮೂರ್ತನೂ ಅನಂತನೂ ನಿಷ್ಕಳಂಕನೂ ನಿರಾಧಾರನೂ ನಿರ್ಲಿಪ್ತನೂ ಆಗಿರುವನು. ಆದ್ದರಿಂದಲೇ ಅವನ ಶಕ್ತಿವೈಭವವು ಜಗತ್ತನ್ನಾವರಿಸಿದ್ದರೂ ಅದಕ್ಕೆ ಮೀರಿದೆ. ಅನಂತಕಲ್ಯಾಣಗುಣಗಳಿಗಾಶ್ರಯನಾದ ಈಶ್ವರನೇ ಶಿವನೆನಿಸಿರುವನೆಂದು ಅನುಭವಿಗಳು ಹೇಳುತ್ತಾರೆ" ಎಂದು ಹೇಳಿದೆ. ಹೀಗೆ ಶಿವನೆನಿಸಿದ ಪರಬ್ರಹ್ಮವು ಎರಡುಬಗೆಯಾಗಿರುವನೆಂಬುದು ಸ್ಪಷ್ಟವಾಗಿದೆ.

ಅತಃ ಕಥಮುಭಯಲಿಂಗತ್ವಂ ಬ್ರಹ್ಮಣ ಇತ್ಯತ್ರಾಹ, **ಪ್ರಕೃತೈತಾವತ್ತ್ವಾಧಿಕರಣಂ ॥ ೬ ॥ ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ ತತೋ ಬ್ರವೀತಿ ಚ ಭೂಯಃ ॥ ೨೧ ॥** ನೈತದುಪಪದ್ಯತೇ ಯದ್ಬ್ರಹ್ಮಣಃ ಪ್ರಕೃತವಿಶೇಷವತ್ತ್ವಂ ನೇತಿನೇತಿ ಇತಿ ಪ್ರತಿಷಿದ್ಧ್ಯತ ಇತಿ. ತಥಾ ಸತಿ ಭ್ರಾಂತಜಲ್ಪಿತಾಯಮಾನತ್ವಾತ್. ನಹಿ ಬ್ರಹ್ಮಣೋ ವಿಶೇಷಣತಯಾ ಪ್ರಮಾಣಾಂತರಾಪ್ರಜ್ಞಾತಂ ಸರ್ವಂ ತದ್ವಿಶೇಷಣತ್ವೇನೋಪದಿಶ್ಯ ಪುನಸ್ತದೇವಾನುನ್ಮತ್ತಃ ಪ್ರತಿಷೇಧತಿ. ಯದ್ಯಪಿ ನಿರ್ದಿಶ್ಯಮಾನೇಷು ಕೇಚನ ಪದಾರ್ಥಾಃ ಪ್ರಮಾಣಾಂತರಪ್ರಸಿದ್ಧಾಸ್ತಥಾಪಿ ತೇಷಾಂ ಬ್ರಹ್ಮಣಃ ಪ್ರಕಾರತ್ವಂ ಅಪ್ರಜ್ಞಾತಮೇವ. ಇತರೇಷಾಂ ತು ಸ್ವರೂಪಂ ಬ್ರಹ್ಮಣಃ ಪ್ರಕಾರತ್ವಂ ಚ ಅಜ್ಞಾತಂ. ಅತಸ್ತೇಷಾಮನುವಾದಾಸಂಭವಾದ ತ್ರೈವೋಪದಿಶ್ಯಂತೇ. ತಸ್ಮಾತ್ತನ್ನಿಷೇಧೋ ನೋಪಪದ್ಯತೇ. ಯಸ್ಮಾದೇವಂ ತಸ್ಮಾತ್ಪ್ರಕೃತೈತಾವತ್ತ್ವಂ ಬ್ರಹ್ಮಣಃ ಪ್ರತಿಷೇಧತೀದಂ ವಾಕ್ಯಂ. "ಯೇ ಬ್ರಹ್ಮಣೋ ವಿಶೇಷಾಃ ಪ್ರಕೃತಾಃ ತದ್ವಿಶಿಷ್ಟತಯಾ ಬ್ರಹ್ಮಣಃ ಪ್ರತೀಯಮಾನೇಯತ್ತಾ ನೇತಿನೇತೀತಿ ಪ್ರತಿಷಿದ್ಧ್ಯತೇ. ನೇತಿ ನೇತಿ ನೈವಂ ನೈವಂ, ಉಕ್ತಪ್ರಕಾರಮಾತ್ರವಿಶಿಷ್ಟಂ ನ ಭವತಿ ಬ್ರಹ್ಮ. ಉಕ್ತಪ್ರಕಾರವಿಶಿಷ್ಟತಯಾ ಬ್ರಹ್ಮಣ ಇಯತ್ತಾ ಪ್ರಕೃತಾ. ಸಾಽತ್ರ ಇತಿಶಬ್ದೇನ ಪರಾಮೃಶ್ಯತೇ. ಯತಶ್ಚ ನಿಷೇಧಾನಂತರಂ ಬ್ರಹ್ಮಣೋ ಭೂಯೋ ಗುಣಜಾತಂ ಬ್ರವೀತಿ ಅತಶ್ಚ ಪ್ರಕೃತವಿಶೇಷಣಯೋಗಿತ್ವಮಾತ್ರಂ ಬ್ರಹ್ಮಣಃ ಪ್ರತಿಷೇಧತಿ. ಬ್ರವೀತಿ ಹಿ ಭೂಯೋ ಗುಣಜಾತಂ ನಹ್ಯೇತಸ್ಮಾದಿತಿ. ನೇತ್ಯನ್ಯತ್ಪರಮಸ್ತ್ಯಥ ನಾಮಧೇಯಂ ಸತ್ಯಸ್ಯ ಸತ್ಯಮಿತಿ, "ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಂ" ಇತಿ, ಅಯಮರ್ಥಃ. "ಇತಿ ನೇತಿ" ಯದ್ಬ್ರಹ್ಮ ಪ್ರತಿಪಾದಿತಂ ತಸ್ಮಾದೇತಸ್ಮಾದನ್ಯದ್ವಸ್ತು ಪರಂ ನ ಹ್ಯಸ್ತಿ. ಬ್ರಹ್ಮಣೋಽನ್ಯತ್ಸ್ವರೂಪತೋ ಗುಣತಶ್ಚೋತ್ಕೃಷ್ಟಂ ನಾಸ್ತೀತ್ಯರ್ಥಃ. ತಸ್ಯ ಚ ಬ್ರಹ್ಮಣಃ ಸತ್ಯಮಸತ್ಯಮಿತಿ ನಾಮಧೇಯಂ. ತಸ್ಯ ಚ ನಿರ್ವಚನಂ "ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಂ" ಇತಿ. ಪ್ರಾಣಶಬ್ದೇನ ಪ್ರಾಣಸಾಹಚರ್ಯಾಜ್ಜೀವಾಃ ಪರಾಮೃಶ್ಯಂತೇ. ತೇ ತಾವತ್ಸತ್ಯಂ ವಿಯದಾದಿವತ್ಸ್ವರೂಪಾನ್ಯಥಾಭಾವರೂಪ

ಪರಿಣಾಮಾಭಾವಾತ್ ತೇಷಾಮೇಷ ಸತ್ಯಂ. ತೇಭ್ಯೋಽಪ್ಯೇಷ ಪರಮ ಪುರುಷಸ್ಸತ್ಯಂ. ಜೀವಾನಾಂ ಕರ್ಮಾನುಗುಣ್ಯೇನ ಜ್ಞಾನಸಂಕೋಚ ವಿಕಾಸೌ ವಿದ್ಯೇತೇ. ಪರಮಪುರುಷಸ್ಯ ತು ಅಪಹತಪಾಪ್ಮನಸ್ತೌ ನ ವಿದ್ಯೇತೇ. ಅತಸ್ತೇಭ್ಯೋಽಪ್ಯೇಷ ಸತ್ಯಂ. ಅತಶ್ಚೈವಂ ವಾಕ್ಯವಿಶೇಷೋದಿತಗುಣಜಾತಯೋಗಾತ್ ನೇತಿನೇತಿ ಇತಿ ಬ್ರಹ್ಮಣಸ್ಸವಿಶೇಷತ್ವಂ ನ ಪ್ರತಿಷಿಧ್ಯತೇ, ಅಪಿ ತು ಪೂರ್ವಪ್ರಕೃತೇಯತ್ತಾಮಾತ್ರಂ. ಅತ ಉಭಯಲಿಂಗಮೇವ ಪರಬ್ರಹ್ಮ. ಬ್ರಹ್ಮಣಃ ಪ್ರಮಾಣಾಂತರಾಗೋಚರತ್ವೇನ ತತ್ಸಂಬಂಧಿತಯಾ ಮೂರ್ತಾಮೂರ್ತಾದಿರೂಪಾನುವಾದೇನ ತನ್ನಿಷೇಧಾಸಂಭವಾತ್ ಪ್ರಕೃತೇಯತ್ತಾಪ್ರತಿಷೇಧೇಶ್ರುತಿರುಕ್ತಾ.

"ಯಾವ ಈ ಪುರುಷನಿಗೆ ರೂಪವಿರುವಂತೆಯೇ ಅರೂಪವೂ ಇದೆಯೋ" ಎಂಬಲ್ಲಿ ಆಕಾರವಿಶೇಷವನ್ನು ಹೇಳಿದ್ದರೂ "ಇವನಿಗೆ ಯಾವ ರೂಪವೂ ಇಲ್ಲ"ವೆಂದು ಅದೆಲ್ಲವನ್ನು ನಿಷೇಧಿಸಿರುವುದರಿಂದ ಎಲ್ಲಾ ವಿಶೇಷಗಳಿಗೂ ಆಧಾರವಾದ ಸದ್ವಸ್ತುವನ್ನೇ ಬ್ರಹ್ಮವೆಂದೂ, ವಿಶೇಷಗಳೆಲ್ಲವೂ ಸ್ವರೂಪವನ್ನರಿಯದ ಬ್ರಹ್ಮದಿಂದ ಅಂದರೆ ಜೀವನಿಂದ ಕಲ್ಪಿತವೆಂದೂ ಶ್ರುತಿಯೇ ತಿಳಿಸುತ್ತದೆ. ಆದ್ದರಿಂದ ಬ್ರಹ್ಮ ಹೇಗೆ ಮೂರ್ತಾಮೂರ್ತವೆನಿಸೀತು? ಎಂದಾಶಂಕಿಸಿ ಪರಿಹರಿಸುತ್ತಾನೆ. ಬ್ರಹ್ಮವನ್ನು "ಹೀಗಿಲ್ಲ ಹಾಗಿಲ್ಲ"ವೆಂದು ನಿಷೇಧಿಸಿರುವುದರಿಂದ ಅದರಲ್ಲಿ ವಿಶೇಷಗಳು ಉಂಟೆಂದು ಹೇಳುವುದು ಯುಕ್ತವಲ್ಲ; ಹಾಗಾದರೆ ಇದು ಭ್ರಾಂತಿಗೊಂಡವರು ಹೇಳುವ ಮಾತಿನಂತಾಗುತ್ತದೆ. ಬ್ರಹ್ಮದಲ್ಲಿ ವಿಶೇಷಣವುಂಟೆಂದು ಬೇರೆ ಪ್ರಮಾಣದಿಂದ ಗೊತ್ತಾಗದಿರುವುದೆಲ್ಲವನ್ನು ಅದರ ವಿಶೇಷಣವೆಂದು ತಿಳಿಸಿ ಮತ್ತೆ ಅದನ್ನೇ ಯಾವ ಬುದ್ಧಿವಂತನೂ ನಿಷೇಧಿಸಲಾರನು. ಅಲ್ಲಿ ಹೇಳಿರುವ ಅಂಶಗಳಲ್ಲಿ ಕೆಲವು ಪ್ರಮಾಣಾಂತರದಿಂದ ಗೊತ್ತಾದರೂ ಅವು ಬ್ರಹ್ಮದಲ್ಲಿ ವಿಶೇಷಣವಾಗಿರುವುವೆಂದು ಆ ಪ್ರಮಾಣದಿಂದ ಗೊತ್ತಾಗುವಂತಿಲ್ಲ. ಮತ್ತೆ ಕೆಲವು ಅಂಶಗಳು ಸ್ವರೂಪದಿಂದಲೂ, ವಿಶೇಷಣವೆಂಬ ಆಕಾರದಿಂದಲೂ ಬೇರೆಪ್ರಮಾಣದಿಂದ ತಿಳಿದುಬರುವುದಿಲ್ಲ. ಅಂತಹವನ್ನು ಅನುವಾದಮಾಡಲಿಕ್ಕಾಗದಿರುವುದರಿಂದ ಅವನ್ನು ವಿಧಿಸಲೇಬೇಕಾಗುತ್ತದೆ. ಆದ್ದರಿಂದ ಅವುಗಳ ನಿಷೇಧವು ಸಂಭವಿಸುವಂತಿಲ್ಲ. ವಸ್ತುಸ್ಥಿತಿ ಹೀಗಿರುವುದರಿಂದ "ನೇತಿ ನೇತಿ" ಎಂಬ ವಾಕ್ಯವು ಪರಬ್ರಹ್ಮದಲ್ಲಿ ಪ್ರಕೃತವಿಶೇಷಣವಿಶಿಷ್ಟವೆಂಬ ಆಕಾರದಿಂದ ಅದರ ಅಂತಸ್ತು ಇಷ್ಟೇ ಎಂಬುದನ್ನು ನಿಷೇಧಿಸುತ್ತದೆಯೇ ಹೊರತು ವಿಶೇಷಣಗಳನ್ನು ನಿಷೇಧಿಸುವುದಿಲ್ಲ. ಬ್ರಹ್ಮವು ಹಿಂದೆಹೇಳಿದ ಎರಡುಪ್ರಕಾರಗಳಿಂದ ಕೂಡಿರುವುದೆಂದಷ್ಟೇ ಅದರ ಅರ್ಥವಲ್ಲ; ಆದರೆ ಇನ್ನೂ ಎಷ್ಟೋಪ್ರಕಾರಗಳಿರುತ್ತವೆ ಎಂಬುದನ್ನು ತಿಳಿಸುವುದೇ ಆ ವಾಕ್ಯದ ಉದ್ದೇಶ. ಹಿಂದೆ ಮೂರ್ತ ಅಮೂರ್ತವೆಂಬ ಎರಡುಪ್ರಕಾರಗಳನ್ನು ಮಾತ್ರವೇ ತಿಳಿಸಲಾಗಿದೆ. ಇದರಿಂದ ಬ್ರಹ್ಮ ಅಷ್ಟೇ ಪರಿಮಿತವೆಂಬ ಅರ್ಥ ತೋರಬಹುದು. ಅದನ್ನು ನಿಷೇಧಿಸಲಿಕ್ಕಾಗಿಯೇ "ನೇತಿ ನೇತಿ ಎಂಬ

ವಾಕ್ಯ ಬಂದಿದೆ. ಆದ್ದರಿಂದಲೇ ಹೀಗೆ ನಿಷೇಧಿಸಿದ ಅನಂತರವೂ ಬ್ರಹ್ಮದಲ್ಲಿ ಅನೇಕ ವಿಶೇಷಣಗಳನ್ನು ಶ್ರುತಿಯೇ ತಿಳಿಸಿದೆ. "ಹಿಂದೆ ಹೇಳಿದ್ದಕ್ಕಿಂತಲೂ ಉತ್ಕೃಷ್ಟವಾದುದು ಯಾವುದೂ ಇಲ್ಲ" "ಸತ್ಯಕ್ಕೂ ಅದು ಸತ್ಯವೆನಿಸಿದೆ. ಜೀವರೇ ಸತ್ಯ. ಅವರಿಗಿಂತಲೂ ಬ್ರಹ್ಮ ಸತ್ಯವಾದುದು" ಎಂಬ ಮುಂದಿನ ಶ್ರುತಿಯಲ್ಲಿ ಸ್ವರೂಪದಿಂದಲೂ ಗುಣದಿಂದಲೂ ಬ್ರಹ್ಮಕ್ಕಿಂತ ಉತ್ಕೃಷ್ಟವಾದ ವಸ್ತು ಬೇರೆ ಇಲ್ಲವೆಂದೂ, ಅದಕ್ಕೆ ಸತ್ಯವೆಂಬ ಹೆಸರು ಇರುವುದೆಂದೂ ಅನೇಕ ವಿಶೇಷಣಗಳಿಂದ ತಿಳಿಸಲಾಗಿದೆ. ಇಲ್ಲಿ "ಪ್ರಾಣಶಬ್ದವು ಆ ಪ್ರಾಣದೊಡನೆ ಇರುವ ಜೀವನನ್ನು ತಿಳಿಸುತ್ತದೆ. ಜೀವರು ಆಕಾಶಾದಿಗಳಂತೆ ಪರಿಣಮಿಸುವುದಿಲ್ಲವಾದ್ದರಿಂದ ಸತ್ಯರೆನಿಸಿದ್ದಾರೆ. ಆದರೆ ಅವರಿಗೂ ಕರ್ಮದಿಂದ ಜ್ಞಾನಸಂಕೋಚವಿಕಾಸರೂಪವಾದ ಪರಿಣಾಮವಿರುತ್ತದೆ. ಅಪಹತಪಾಪನೆನಿಸಿದ ಪರಶಿವನಿಗೆ ಅದೂ ಇಲ್ಲ. ಆದ್ದರಿಂದ ಜೀವರಿಗಿಂತಲೂ ಇವನು ಸತ್ಯನೆನಿಸುವನು." ಹೀಗೆ ಮುಂದಿನವಾಕ್ಯದಿಂದ ಬ್ರಹ್ಮದಲ್ಲಿ ಅನೇಕ ಗುಣಗಳನ್ನು ಹೇಳಿರುವುದರಿಂದ ನೇತಿನೇತಿ ಎಂಬ ವಾಕ್ಯವು ಬ್ರಹ್ಮದ ಸವಿಶೇಷತ್ವವನ್ನು ನಿಷೇಧಿಸದೆ, ಹಿಂದೆ ಸಂಭವಿಸಿದ್ದ ಪರಿಮಿತಿಯನ್ನು ಮಾತ್ರವೇ ನಿಷೇಧಿಸುತ್ತದೆ. ಇದರಿಂದ ಬ್ರಹ್ಮ ಸಾವಯವ ಮತ್ತು ನಿರವಯವೆಂಬುದು ಸ್ಪಷ್ಟವಾಗುತ್ತದೆ. ಯಾವ ಪ್ರಮಾಣಕ್ಕೂ ವಿಷಯವಾಗದಿರುವ ಬ್ರಹ್ಮವನ್ನು ಮೂರ್ತ ಅಮೂರ್ತವೆಂದು ಶ್ರುತಿಯು ತಿಳಿಸಿದ್ದರಿಂದಲೇ ಬ್ರಹ್ಮವನ್ನು ನಿಷೇಧಿಸಿದಂತಾಗಲಿಲ್ಲ. ಆದ್ದರಿಂದಲೇ "ನೇತಿ ನೇತಿ" ಎಂಬ ವಾಕ್ಯವು ಬ್ರಹ್ಮ ಇಷ್ಟೇ ಇರುವುದೆಂಬುದನ್ನು ನಿಷೇಧಿಸಿದೆ.

**ತದೇವ ಪ್ರಮಾಣಾಂತರಾಗೋಚರತ್ವಂ ದೃಢಯತೀತ್ಯಾಹ. ತದವ್ಯಕ್ತಮಾಹ ಹಿ ॥ ೨೨ ॥ ತದ್ಬ್ರಹ್ಮ ಪ್ರಮಾಣಾಂತರೇಣ ನ ವ್ಯಜ್ಯತೇ. ಆಹ ಹಿ ಶಾಸ್ತ್ರಂ. "ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಂ", "ನ ಚಕ್ಷುಷಾ ಗೃಹ್ಯತೇ ನಾಪಿ ವಾಚಾ", "ನಾವೇದವಿನ್ಮನುತೇ ತಂ ಬೃಹಂತಂ", "ನೈಷಾ ತರ್ಕೇಣ ಮತಿರಾಪನೇಯಾ" ಇತ್ಯಾದಿಶ್ರುತಿಷ್ವಭಕ್ತಾಗೋಚರತ್ವಂ ಸ್ಪಷ್ಟಮುಪದಿಷ್ಟಂ.**

ಇದೇ ಅಂಶವನ್ನು ಮತ್ತಷ್ಟು ದೃಢಪಡಿಸುತ್ತಾನೆ. ಬ್ರಹ್ಮವನ್ನು ಬೇರೆ ಯಾವ ಪ್ರಮಾಣದಿಂದಲೂ ತಿಳಿಯಲು ಸಾಧ್ಯವಿಲ್ಲವೆಂದು ಶಾಸ್ತ್ರವು ಹೇಳಿದೆ. "ಇವನ ಪಕ್ಕದಲ್ಲಿ ಯಾವ ರೂಪವೂ ನಿಲ್ಲುವಂತಿಲ್ಲ; ಯಾವನೂ ಇವನನ್ನು ಕಣ್ಣಿನಿಂದ ನೋಡಲಾರನು" "ಕಣ್ಣಿಂದಾಗಲೀ ಮಾತಿನಿಂದಾಗಲೀ ಇವನನ್ನು ತಿಳಿಯಲಾಗುವುದಿಲ್ಲ." "ವೇದವನ್ನರಿಯದವನು ಬ್ರಹ್ಮವನ್ನು ಅರಿಯಲಾರನು" "ಬ್ರಹ್ಮಜ್ಞಾನವು ತರ್ಕದಿಂದ ದೊರಕುವುದಿಲ್ಲ" ಹೀಗೆ ಶ್ರುತಿಗಳಲ್ಲಿ ಬ್ರಹ್ಮವು ಭಕ್ತರಲ್ಲದವರಿಗೆ ಗೋಚರವಾಗುವುದಿಲ್ಲವೆಂದು ಸ್ಪಷ್ಟವಾಗಿ ತಿಳಿಸಲಾಗಿದೆ.

**ಮೂರ್ತಾಮೂರ್ತಸ್ಯ ಶಿವಸ್ಯ ಪರಬ್ರಹ್ಮಣಸ್ಸ್ವರೂಪಮಪರಿಚ್ಛೇದ್ಯಂ ಸ್ವಪ್ರಕಾಶಂ ಚ ಕೇನ ವಿಜ್ಞಾಯತೇ? ಇತ್ಯಾಶಂಕಾಯಾಮಾಹ.**

ಅಪಿ ಚ ಸಂರಾಧನೇ ಪ್ರತ್ಯಕ್ಷಾನುಮಾನಾಭ್ಯಾಂ ॥ ೨೪ ॥ ಅಪಿಚ ಸಂರಾಧನೇ ಸಮ್ಯಗ್ಬಾಹ್ಯಾಭ್ಯಂತರಧ್ಯಾನಧಾರಣಪೂಜಾನಮಸ್ಕಾರಾದಿಧರ್ಮವಿಶಿಷ್ಟಶಿವಾರಾಧನೇ ಭಕ್ತಿರೂಪಾಪನ್ನೇ ಭಕ್ತ್ಯಧಿಕಾರತಾರತಮ್ಯೇನ ಕೇಷಾಂಚಿತ್ಸ್ವಪ್ನೇ ಕೇಷಾಂಚಿಜ್ಜಾಗ್ರದವಸ್ಥಾಯಾಂ ಚ ಮೂರ್ತಾಮೂರ್ತಾತ್ಮಕೋಭಯಲಿಂಗಸಾಕ್ಷಾತ್ಕಾರಃ, ನಾನ್ಯಥೇತಿ ಪ್ರತ್ಯಕ್ಷಾನುಮಾನಾಭ್ಯಾಂ ಶ್ರುತಿಸ್ಮೃತಿಭ್ಯಾಮವಗಮ್ಯತೇ. "ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ," "ಜ್ಞಾನಪ್ರಸಾದೇನ ವಿಶುದ್ಧಸತ್ತ್ವಸ್ತತಸ್ತು ತಂ ಪಶ್ಯತಿ ನಿಷ್ಕಲಂ ಧ್ಯಾಯಮಾನಃ" ಇತ್ಯಾದಿ ಶ್ರುತಿಷು, "ಭಕ್ತ್ಯಾ ಸಾಂಬಂ ಮಹಾದೇವಮಾರಾಧ್ಯಂ ವಿಶ್ವತೋಮುಖಂ। ಮೂರ್ತಾಮೂರ್ತಾತ್ಮಕಂ ನಿತ್ಯಂ ಧ್ಯಾನಪೂಜಾದಿಮಾರ್ಗತಃ॥ ಆರಾಧಕಸ್ಯ ಕರ್ತವ್ಯಂ ಆರಾಧನವಿಧಿಸ್ತದಾ। ಬಾಹ್ಯೇ ಚಾಭ್ಯಂತರೇ ಚೈವ ಶಿವಾನುಗ್ರಹಸಿದ್ಧಯೇ॥" ಇತಿ ಶಾತಾತಪೇ, "ಉಮಾಸಹಾಯಮಾರಾಧ್ಯಂ ಸರ್ವಜ್ಞಂ ಪ್ರಭುಮವ್ಯಯಂ। ಮೂರ್ತಾಮೂರ್ತಾತ್ಮಕಂ ದಿವ್ಯಂ ಕೋಟಿಸೂರ್ಯಸಮಪ್ರಭಂ। ಕೋಟಿಚಂದ್ರಪ್ರತೀಕಾಶಂ ಕೋಟಿವಿದ್ಯುಲ್ಲತಾಮಯಂ। ನಿತ್ಯಮಾರಾಧಯೇದ್ಧೀಮಾನ್ ಶ್ರದ್ಧಾಭಕ್ತ್ಯಾದಿಸಂಯುತಃ। ಅಭ್ಯಂತರೇ ತಥಾ ಬಾಹ್ಯೇ ಲಿಂಗರೂಪಂ ಮಹೇಶ್ವರಂ। ಯೋ ರಾಧಯತಿ ಶಾಸ್ತ್ರೇಣ ಸ ಆರಾಧ್ಯೋ ಮಹೀತಲೇ॥" ಇತಿ ಸ್ಮೃತ್ಯಂತರೇ, "ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ। ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ। ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ॥" ಇತಿ ಕೃಷ್ಣಗೀತಾಯಾಂ, "ಈಶ್ವರಂ ತಮಹಂ ವಂದೇ ಯಸ್ಯ ಲಿಂಗಮಹರ್ನಿಶಂ। ಯಜಂತೇ ಸಹ ಭಾರ್ಯಾಭಿಃ ಇಂದ್ರಜ್ಯೇಷ್ಠಾ ಮರುದ್ಗಣಾಃ॥" ಇತಿ ವೇದಪಾದಸ್ತವೇ ಚ ಬಹುಧಾ ಪ್ರಪಂಚಿತತ್ವಾತ್ ಭಕ್ತಿರೂಪಾಪನ್ನಧ್ಯಾನಧಾರಣಾದ್ಯುಪಾಸನಾರೂಪಮಾರಾಧನಂ ಮುಮುಕ್ಷೂಣಾಂ ಕರ್ತವ್ಯಂ. ನನು "ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ", "ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಂ। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ" ಇತ್ಯಾದಿಶ್ರುತಿಷು ಬ್ರಹ್ಮಣೋ ಮನೋವಾಕ್ಕಾಯವೇದ್ಯತ್ವಾದರ್ಶನಾತ್ ಕಥಂ ತಸ್ಯೋಪಾಸನವಿಧಿರಿತಿ ಚೇನ್ನ, "ಯತೋ ವಾಚೋ ನಿವರ್ತಂತೇ" ಇತ್ಯಾದಿಶ್ರುತಿಷು ಅವಿಶುದ್ಧಾಂತಃಕರಣಗ್ರಾಹ್ಯತ್ವಸ್ಯ ಪರಮೇಶ್ವರೇ ಉಪದೇಶಾತ್ ಅನಯೋಃ.

ಶ್ರುತ್ಯೋರ್ನ ವಿರೋಧಃ. ಸ್ಮೃತಿರಪಿ “ಯಂ ವಿನಿದ್ರಾ ಜಿತಶ್ವಾಸಾಃ ಸಂತುಷ್ಟಾನಿಯತೇಂದ್ರಿಯಾಃ। ಜ್ಯೋತಿಃ ಪಶ್ಯಂತಿ ಯುಂಜಾನಸ್ತಸ್ಮೈ ಯೋಗಾತ್ಮನೇ ನಮಃ॥”ಇತ್ಯವಿಶುದ್ಧಾಂತಃಕರಣಗ್ರಾಹ್ಯತ್ವಂ ಬ್ರಹ್ಮಣಃ ಪ್ರದರ್ಶಿತಂ. ಅತಃ “ಯನ್ಮನಸಾ ಮನುತೇ” ಇತ್ಯಾದಿವಾಕ್ಯಾನಾಂ ತತ್ಪರತ್ವಮೇವೇತಿ ನಿಶ್ಚೀಯತೇ.

ಹೀಗೆ ಮೂರ್ತಾಮೂರ್ತನೆನಿಸಿದ ಪರಮಶಿವನ ಸ್ವಪ್ರಕಾಶಸ್ವರೂಪವನ್ನು ಯಾರಿಗೂ ತಿಳಿಯಲಿಕ್ಕಾಗದಿದ್ದರೆ ಮತ್ತೆ ಅದನ್ನು ಹೇಗೆ ತಿಳಿಯಬಹುದು? ಎಂದಾ ಶಂಕಿಸಿ ಸಮಾಧಾನವನ್ನು ಹೇಳುತ್ತಾನೆ. ಪರಮಶಿವನು ಹೀಗೆ ಯಾವ ಪ್ರಮಾಣಕ್ಕೂ ಗೋಚರನಾಗದಿದ್ದರೂ ಸಂರಾಧನದಿಂದ ಭಕ್ತರಿಗೆ ದೊರಕುವನೆಂದು ಶ್ರುತಿ ಸ್ಮೃತಿಗಳಿಂದ ತಿಳಿದುಬರುತ್ತದೆ. ಸಂರಾಧನವೆಂದರೆ ದೇಹದ ಒಳಗೂ ಹೊರಗೂ ಪರಶಿವನನ್ನು ಧರಿಸಿ ಧ್ಯಾನಿಸುತ್ತ ಅವನಿಗೆ ಅರ್ಚನೆ ಮತ್ತು ನಮಸ್ಕಾರಗಳನ್ನು ಸಲ್ಲಿಸುತ್ತ ಭಕ್ತಿಯಿಂದ ಶರಣಾಗತನಾಗುವುದೆಂದರ್ಥ. ಇಂತಹ ಸಾಧಕರಿಗೆ ಅವರವರ ಯೋಗ್ಯತಾನುಸಾರವಾಗಿ ಕೆಲವರಿಗೆ ಸ್ವಪ್ನದಲ್ಲೂ, ಕೆಲವರಿಗೆ ಜಾಗ್ರದವಸ್ಥೆಯಲ್ಲೂ ಮೂರ್ತಾಮೂರ್ತರೂಪನಾದ ಪರಶಿವನ ದರ್ಶನವಾಗುತ್ತದೆ. ಇದಲ್ಲದೆ ಬೇರೆ ಮಾರ್ಗದಿಂದ ಅವನು ದೊರಕಲಾರನೆಂದು ಶ್ರುತಿಸ್ಮೃತಿಗಳು ತಿಳಿಸುತ್ತವೆ.“ಪರಮಾತ್ಮನು ಪ್ರವಚನದಿಂದಲೂ ಬುದ್ಧಿಯಿಂದಲೂ ಹೆಚ್ಚಿನ ಜ್ಞಾನದಿಂದಲೂ ದೊರಕಲಾರನು. ಯಾವನ ವರ್ತನೆಯನ್ನು ನೋಡಿ ಸಂತೋಷಪಟ್ಟು ಪರಮಾತ್ಮನು ತಾನಾಗಿಯೇ ಯಾವನನ್ನು ಆರಿಸುವನೋ ಅವನಿಗೆ ಮಾತ್ರವೇ ತನ್ನ ಸ್ವರೂಪದ ಪರಿಚಯವನ್ನು ಮಾಡಿಸುವನು,” “ಜ್ಞಾನಾಮೃತದಿಂದ ಶುದ್ಧನಾದವನೇ ಧ್ಯಾನಿಸುತ್ತ ನಿಷ್ಕಲಶಿವನನ್ನು ಕಾಣಬಲ್ಲನು” ಹೀಗೆ ಶ್ರುತಿಗಳು ತಿಳಿಸುತ್ತವೆ. “ವಿಶ್ವವ್ಯಾಪಕನೂ ಮೂರ್ತಾಮೂರ್ತಾಸ್ವರೂಪನೂ ಆದ ಮಹಾದೇವನನ್ನು ಧ್ಯಾನಪೂಜೆಗಳಿಂದ ಒಳಗೂ ಹೊರಗೂ ಆರಾಧಿಸುವುದು ಸಾಧಕನ ಕರ್ತವ್ಯವಾಗಿದೆ” ಎಂದು ಶಾತಾತಪಸ್ಮೃತಿಯಲ್ಲಿ ಹೇಳಲಾಗಿದೆ. ಕೋಟಿ ಸೂರ್ಯರಂತೆ ಪ್ರಕಾಶಮಾನನೂ ಕೋಟಿಚಂದ್ರರಂತೆ ಶಾಂತನೂ ಆಗಿ ಕೋಟಿ ಮಿಂಚುಗಳಂತೆ ಶೋಭಿಸುತ್ತಿರುವ ಪರಮಪೂಜ್ಯನಾದ ಪರಶಿವನನ್ನು ಸಾಧಕನು ಶ್ರದ್ಧಾಭಕ್ತಿಯಿಂದ ನಿತ್ಯವೂ ಅರ್ಚಿಸಬೇಕು”, “ಯಾವನು ಲಿಂಗರೂಪನಾದ ಈಶ್ವರನನ್ನು ಒಳಗೂ ಹೊರಗೂ ಅರ್ಚಿಸುವನೋ ಅವನು ಸರ್ವರಿಗೂ ಆರಾಧ್ಯನೆನಿಸುವನು” ಎಂದು ಬೇರೆ ಸ್ಮೃತಿಗಳಲ್ಲೂ ಹೇಳಿದೆ. ಗೀತೆಯಲ್ಲಿ “ವೇದ, ತಪಸ್ಸು, ಯಜ್ಞ, ದಾನಗಳಿಂದ ನಾನು ಯಾರಿಗೂ ದೊರಕುವುದಿಲ್ಲ. ಅನನ್ಯಭಕ್ತಿಯೊಂದರಿಂದಲೇ ನನ್ನನ್ನು ಯಥಾರ್ಥವಾಗಿ ನೋಡಲಿಕ್ಕೂ ತಿಳಿಯಲಿಕ್ಕೂ ಮತ್ತು ನನ್ನಲ್ಲಿ ಬೆರಯಲಿಕ್ಕೂ ಭಕ್ತರಿಗೆ ಮಾತ್ರ ಸಾಧ್ಯವಾದೀತು” ಎಂದು ಹೇಳಿದೆ. ಆದ್ದರಿಂದ ಭಕ್ತಿಯಿಂದ ಕೂಡಿದ ಧ್ಯಾನಧಾರಣ ಮತ್ತು ಅರ್ಚನವೆಂಬ ಸಂರಾಧನವೇ ಸಾಧಕರೆಲ್ಲರ ಮುಖ್ಯಕರ್ತವ್ಯವೆನಿಸಿದೆ. ಇದರಿಂದಲೇ ಪರಶಿವನ ಪರಿಚಯ ಮತ್ತು ಅನುಭವಗಳು

ಆಗಬೇಕಾಗಿವೆ. ಆದರೆ "ಯಾವನು ಮಾತಿಗೂ ಮನಸ್ಸಿಗೂ ಆಚೆಗಿರುವನೋ, ಯಾವನನ್ನು ಮನಸ್ಸು ತಿಳಿಯಲಾರದೋ, ಯಾವನ ಕೃಪೆಯಿಂದ ಮನಸ್ಸನ್ನು ತಿಳಿಯಬಹುದೋ ಅದನ್ನು ಬ್ರಹ್ಮವೆಂದು ತಿಳಿ. ನೀನು ಯಾವುವನ್ನು ಬ್ರಹ್ಮವೆಂದು ಉಪಾಸನಮಾಡುತ್ತಿದ್ದೀಯೋ ಅದು ಬ್ರಹ್ಮವಲ್ಲ" ಎಂದು ಶ್ರುತಿಯಲ್ಲಿ ಪರಮಾತ್ಮನನ್ನು ಮನೋವಾಕ್ಯುಗಳಿಗೆ ಆಗೋಚರನೆಂದು ಹೇಳಿದ್ದರಿಂದ ಅವನನ್ನು ಉಪಾಸನ ಮಾಡಬೇಕೆಂಬ ವಿಧಿಯೇ ಇಲ್ಲವಾಯಿತೆಂದರೆ ಈ ಶ್ರುತಿಗಳಲ್ಲಿ ನಿರ್ಮಲ ಹೃದಯರಲ್ಲದವರಿಗೆ ಬ್ರಹ್ಮ ಗೋಚರವಾಗುವುದಿಲ್ಲವೆಂದು ಹೇಳಿದೆಯೇ ಹೊರತು ಭಕ್ತರಿಗೆ ಬ್ರಹ್ಮಸಾಕ್ಷಾತ್ಕಾರವನ್ನು ನಿಷೇಧಿಸಿಲ್ಲ. "ಸಾಧಕರು ಸೂಕ್ಷ್ಮಬುದ್ಧಿಯಿಂದ ಬ್ರಹ್ಮವನ್ನು ತಿಳಿಯುತ್ತಾರೆ", "ಆನಂದಮಯನಾದ ಬ್ರಹ್ಮವನ್ನು ನಿರ್ಮಲನಾದವನು ಕಾಣುತ್ತಾನೆ" ಹೀಗೆ ಶ್ರುತಿಗಳಲ್ಲಿ ಪರಮೇಶ್ವರನು ಶುದ್ಧಾಂತಃಕರಣರಾದ ಸದ್ಭಕ್ತರಿಗೆ ಮಾತ್ರವೇ ಗ್ರಾಹ್ಯನೆಂದು ಹೇಳಿರುವುದರಿಂದ ಈ ಶ್ರುತಿಗಳಿಗೂ ಹಿಂದೆ ಹೇಳಿದ ಶ್ರುತಿಗೂ ಯಾವ ವಿರೋಧವೂ ಇಲ್ಲ. ಸ್ಮೃತಿಯೂ ಸಹ "ಜಿತೇಂದ್ರಿಯರಾದ ಯತಿಗಳು ನಿದ್ರಾಹಾರವಿಹಾರಗಳನ್ನು ತೊರೆದು ಪರಂಜ್ಯೋತಿಯನ್ನು ಕಂಡು ಆದರಲ್ಲಿ ಬೆರೆಯುತ್ತಾರೆ" ಎಂದು ಹೇಳಿದೆ. ಆದ್ದರಿಂದ ಶುದ್ಧಹೃದಯರಿಗೆ ಮಾತ್ರವೇ ಬ್ರಹ್ಮದರ್ಶನವಾಗುತ್ತದೆ. ಇದರಿಂದ "ಬ್ರಹ್ಮವು ಮನಸ್ಸಿಗೆ ಗೋಚರವಲ್ಲ" ಎಂಬ ಶ್ರುತಿಯು ನಿರ್ಮಲಹೃದಯರಲ್ಲದವರಿಗೆ ಮಾತ್ರವೇ ಅನ್ವಯಿಸುತ್ತದೆ ಎಂದು ನಿಶ್ಚಯಿಸಲಾಗಿದೆ.

**ತತ್ಪದಾರ್ಥಶಿವಾರಾಧನೇನ ತ್ವಂಪದಾರ್ಥಭೂತಸ್ಯ ಸಾಧಕಸ್ಯ ತತ್ಪದಾರ್ಥಸಾಕ್ಷಾತ್ಕಾರೇಽಪಿ ತ್ವಂಪದಾರ್ಥಭೂತಸ್ವಾಭಾವಿಕಜೀವತ್ವಂ ಕಥಂ ನಿವರ್ತತ ಇತ್ಯಾಶಂಕಾಯಾಮಾಹ. ಪ್ರಕಾಶಾದಿವಚ್ಚಾವೈಶೇಷ್ಯಂ ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್॥೨೫॥ ಇತಶ್ಚ ಪ್ರಕೃತೈತಾವತ್ತ್ವಮೇವ ಪ್ರತಿಷೇಧತಿ, ನ ಮೂರ್ತಾಮೂರ್ತಾದಿವಿಷಯತ್ವಂ. ಯತೋಽನವಚ್ಛಿನ್ನಬಾಹ್ಯಾಭ್ಯಂತರಧ್ಯಾನಧಾರಣಾದ್ಯುಪಾಸನೇನ ಸಾಕ್ಷಾತ್ಕೃತಪರಶಿವಬ್ರಹ್ಮಸ್ವರೂಪಾಣಾಂ ವಾಮದೇವಾಗಸ್ತ್ಯೋಪಮನ್ಯುದೂರ್ವಾಸದಧೀಚಿವಿಶ್ವಾಮಿತ್ರಗೌತಮರೇವಣಸಿದ್ಧಾದೀನಾಂ ದರ್ಶನೇ ಪ್ರಕಾಶಾದಿವತ್ ಜೀವನ್ಮುಕ್ತದಶಾಯಾಂ ಜ್ಞಾನಾನಂದಾದಿಸ್ವರೂಪವನ್ಮೂರ್ತಾಮೂರ್ತಾತ್ಮಕತಯಾಪಿ ಬ್ರಹ್ಮ ಪ್ರಕಾಶತೇ. ದ್ವಯೋರಪಿ ಬ್ರಹ್ಮಧರ್ಮಾದ್ವೈಶೇಷ್ಯಂ ಪ್ರತೀಯತೇ. "ತದ್ಧೈತತ್ಪಶ್ಯನ್ ಋಷಿರ್ವಾಮದೇವಃ ಪ್ರತಿಪೇದೇ "ಅಹಂ ಮನುರಭವಂ ಸೂರ್ಯಶ್ಚ ತಂ ಮಾಮಾಯುರಮೃತಮುಪಾಸ್ಸ್ವ" ಇತ್ಯಾದಿಬ್ರಹ್ಮಸ್ವರೂಪಭೂತಪ್ರಕಾಶಾನಂದಾದಿಶ್ಚ ತೇಷಾಂ ವಾಮದೇವಾದೀನಾಂ ಸಂರಾಧನಾತ್ಮಕೇ ಧ್ಯಾನಧಾರಣಪೂಜಾದ್ಯುಪಾಸನಕರ್ಮಣ್ಯಭ್ಯಾಸಾದುಪಲಭ್ಯತೇ. ತದ್ವದ್ಬಾಹ್ಯಾಭ್ಯಂತರ**

**ಶಿವಾರಾಧಕಾನಾಂ ತೇಷಾಮೇವ ಮೂರ್ತಾಮೂರ್ತಾದಿಬ್ರಹ್ಮಸಾಕ್ಷಾತ್ಕಾರೋಽಪ್ಯವಿಶೇಷೇಣ ತದಾತ್ಮಕತ್ವೇನ ಪ್ರತೀಯತೇ. " ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ," "ಸ ಉತ್ತಮಃ ಪುರುಷಃ" ಇತ್ಯಾದಿಶ್ರುತ್ಯಂತರೇಷು ಪರಶಿವಧ್ಯಾನಧಾರಣಪೂಜಾದ್ಯುಪಾಸಕಾನಾಮೇವ ತದನುಗ್ರಹಾತ್ಸ್ವಾಭಾವಿಕಜೀವತ್ವನಿವೃತ್ತಿಪೂರ್ವಕಶಿವತ್ವಪ್ರಾಪ್ತಿರ್ವಿದೇಹಮುಕ್ತೌ ದೃಶ್ಯತೇ.**

ತತ್ಪದಕ್ಕೆ ವಿಷಯನಾದ ಶಿವನ ಆರಾಧನದಿಂದ ತ್ವಂ ಪದಕ್ಕೆ ವಿಷಯನಾದ ಸಾಧಕನಿಗೆ ಶಿವನ ಸಾಕ್ಷಾತ್ಕಾರವುಂಟಾದರೂ ಸಾಧಕನಲ್ಲಿ ಸ್ವಭಾವವೆನಿಸಿರುವ ಜೀವಭಾವವು ಹೇಗೆ ತೊಲಗುತ್ತದೆ? ಎಂದಾಶಂಕಿಸಿ ಸಮಾಧಾನಮಾಡುತ್ತಾನೆ. ನಿರಂತರವೂ ಒಳಗೂ ಹೊರಗೂ ಪರಶಿವನನ್ನು ಧರಿಸಿ ಧ್ಯಾನಿಸಿ ಉಪಾಸನ ಮಾಡುತ್ತ ಅವನನ್ನು ಸಾಕ್ಷಾತ್ಕಾರಮಾಡಿಕೊಂಡಿದ್ದ ವಾಮದೇವ, ಅಗಸ್ತ್ಯ, ದಧೀಚಿ, ವಿಶ್ವಾಮಿತ್ರ, ಗೌತಮ, ರೇವಣಸಿದ್ಧ ಮೊದಲಾದ ಶಿವಯೋಗಿಗಳ ದರ್ಶನದಿಂದ ಸಾಧಕರಿಗೆ ಜೀವನ್ಮುಕ್ತಾವಸ್ಥೆಯಲ್ಲಿ ಪರಶಿವನ ಜ್ಞಾನಾನಂದಸ್ವರೂಪದಂತೆಯೇ ಮೂರ್ತಾಮೂರ್ತಸ್ವರೂಪವೂ ಗೋಚರವಾಗುತ್ತದೆ. ಆದ್ದರಿಂದ ಹಿಂದೆ ಹೇಳಿದ ಶ್ರುತಿಯು ಬ್ರಹ್ಮವನ್ನು ಅಶುದ್ಧವಾದ ಮನಸ್ಸಿಗೆ ಅಗೋಚರವೆಂದು ತಿಳಿಸುವುದೇ ಹೊರತು ಬ್ರಹ್ಮದ ಮೂರ್ತಾಮೂರ್ತಸ್ಥಿತಿಯನ್ನು ನಿಷೇಧಿಸುವುದಿಲ್ಲ. ಪ್ರಕಾಶಸ್ವರೂಪನಾದ ಪರಮಾತ್ಮನ ಜ್ಞಾನಾನಂದಸ್ಥಿತಿಗೂ ಮೂರ್ತಾಮೂರ್ತಸ್ಥಿತಿಗೂ ಯಾವ ವಿಶೇಷವೂ ಇಲ್ಲ. ವಾಮದೇವಮಹರ್ಷಿಯು ತಾನೇ ಮನುವೂ ಸೂರ್ಯನೂ ಆಗಿದ್ದನೆಂದು ತಿಳಿದಿದ್ದನು. " ಅಂತಹ ನನ್ನನ್ನು ಆಯುಸ್ಸೆಂದೂ ಅಮೃತವೆಂದೂ ಭಾವಿಸಿ ಉಪಾಸನ ಮಾಡು ಎಂದು ಹೇಳಿದನು " ಹೀಗೆ ಶ್ರುತಿಯಲ್ಲಿ ಹೇಳಿದೆ. ಬ್ರಹ್ಮಸ್ವರೂಪವೆನಿಸಿದ ಪ್ರಕಾಶ ಆನಂದ ಮೊದಲಾದವು ವಾಮದೇವ ಮೊದಲಾದವರಿಗೆ ಸಂರಾಧನರೂಪವಾದ ಧ್ಯಾನಧಾರಣೋಪಾಸನವೆಂಬ ಕರ್ಮದ ನಿರಂತರಾಚರಣೆಯಿಂದ ದೊರೆತಿದ್ದವು. ಹೀಗೆಯೇ ಶ್ರದ್ಧೆಯಿಂದ ಒಳಗೂ ಹೊರಗೂ ಶಿವನನ್ನು ಆರಾಧಿಸುವವರಿಗೆ ಮಾತ್ರವೇ ಮೂರ್ತಾಮೂರ್ತರೂಪವಾದ ಬ್ರಹ್ಮದ ಸಾಕ್ಷಾತ್ಕಾರವು ಲಭಿಸುವುದೆಂದು ತಿಳಿದುಬರುತ್ತದೆ. " ಸಂಪ್ರಸಾದನೆನಿಸಿದ ಮುಕ್ತಜೀವನು ಈ ಶರೀರದಿಂದ ಹೊರಟು ಪರಂಜ್ಯೋತಿಯಲ್ಲಿ ಸೇರಿ ತನ್ನ ವಾಸ್ತವಸ್ವರೂಪವನ್ನು ಪಡೆಯುತ್ತಾನೆ " " ಅವನು ಎಲ್ಲರಿಗೂ ಉತ್ತಮನಾದ್ದರಿಂದ ಪುರುಷೋತ್ತಮನೆನಿಸಿದ್ದಾನೆ " ಹೀಗೆ ಅನೇಕ ಶ್ರುತಿಗಳಲ್ಲಿ ಹೇಳಿದೆ. ಆದ್ದರಿಂದ ಪರಶಿವನ ಧ್ಯಾನಧಾರಣಪೂಜೆಗಳನ್ನು ನಡೆಸುವ ಸಾಧಕರಿಗೆ ಮಾತ್ರವೇ ವಿದೇಹಮುಕ್ತಿಯಲ್ಲಿ ಅವನ ಅನುಗ್ರಹದಿಂದ ಸ್ವಾಭಾವಿಕವಾದ ಜೀವಭಾವವು ತೊಲಗಿ ಶಿವಭಾವವು ದೊರಕುವುದೆಂಬ ಅಂಶ ಸ್ಪಷ್ಟವಾಗುತ್ತದೆ.

**ನನು " ಆತ್ಮಾ ವಾರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿ**

ಧ್ಯಾಸಿತವ್ಯಃ” ಇತ್ಯಾದಿಷು ಶ್ರವಣಾದಿನಾ ಬ್ರಹ್ಮಸಾಕ್ಷಾತ್ಕಾರಾವಗಮಾತ್ ಬಾಹ್ಯಾಭ್ಯಂತರಯೋಸ್ತದಾರಾಧಕಾನಾಮೇವ ತತ್ಸಾಕ್ಷಾತ್ಕಾರ ಇತಿ ವ್ಯವಸ್ಥಾ ಕಥಮುಪಪದ್ಯತ ಇತ್ಯಾಶಂಕಾಯಾಮಾಹ. ಅತೋಽನಂತೇನ ತಥಾಹಿ ಲಿಂಗಂ ॥ ೨೫ ॥ ಅತಃ ಶಿವಧ್ಯಾನಧಾರಣಾದ್ಯಾರಾಧನಾದೇವ ಅನಂತೇನ ಚರಾಚರಪ್ರಪಂಚಾತ್ಮಕೇನ ಲಿಂಗಂ ಪರಬ್ರಹ್ಮೈವ. ತಥಾಹಿ. ಯಥಾ ಧ್ಯಾನಧಾರಣಾದ್ಯುಪಾಸನಕಾಲೇ ತದುಪಾಸಕಾನಾಂ ಜ್ಞಾನದೃಷ್ಟ್ಯಾ ಮೂರ್ತಾಮೂರ್ತಾತ್ಮಕಪರಶಿವಬ್ರಹ್ಮಸಾಕ್ಷಾತ್ಕಾರೋ ಭವತಿ, ತದನವಚ್ಛಿನ್ನಾಭ್ಯಾಸಮಾಹಾತ್ಮ್ಯೇನ ತಥಾ ವ್ಯವಹಾರದಶಾಯಾಂ ಪ್ರಪಂಚದರ್ಶನೇನ ಸ ಪ್ರಪಂಚಸ್ಸರ್ವಃ ಬ್ರಹ್ಮರೂಪೇಣ ತಸ್ಯ ಭಾತಿ. ಅತ್ರ ಹಿಕಾರೋ ನಿಶ್ಚಯಾರ್ಥೋ ನಿರ್ಣೀಯತೇ. ಅತ ಏವ ಕೇವಲಶ್ರವಣಮನನಾದೀನಾಂ ಧ್ಯಾನಧಾರಣಾದೀನಾಮಿವ ನ ತತ್ಸಾಕ್ಷಾತ್ಕಾರಹೇತುತ್ವಂ. “ ಆತ್ಮಾ ವಾರೇ ದ್ರಷ್ಟವ್ಯಃ ” ಇತ್ಯಾದಿನಾ ತದುಪಾಸಕಾನಾಂ ತಚ್ಛ್ರವಣಮನನಾದಿಕಂ ಸೂಚ್ಯತೇ. ನೋ ಚೇತ್ ನ್ಯಾಯವೈಶೇಷಿಕವೈದ್ಯಶಾಸ್ತ್ರಶ್ರವಣಾದೀನಾಮಿವ ವೈಫಲ್ಯಪ್ರಸಂಗೋ ದುರ್ನಿವಾರಃ. ತಸ್ಮಾತ್ತದಾರಾಧನಪ್ರಯುಕ್ತತಚ್ಛ್ರವಣಮನನಾದೀನಾಮೇವ ತತ್ಸಾಕ್ಷಾತ್ಕಾರಫಲಮಿತಿ ನಿಶ್ಚೀಯತೇ. “ ಬ್ರಹ್ಮವಿದಾಪ್ನೋತಿ ಪರಂ ” ಇತ್ಯಾದಿಶ್ರುತೀನಾಮಪಿ ವೇದಶಬ್ದೇನೋಪಾಸನಾಜ್ಞಾನಮೇವಾಭಿಧೀಯತೇ ನ ಶಾಸ್ತ್ರಜ್ಞಾನಮಾತ್ರತ್ವಂ. ಕೇವಲಶಾಸ್ತ್ರಜ್ಞಾನಸ್ಯ ಜಲ್ಪವಿತಂಡಹೇತ್ವಾಭಾಸಾದಿವಾದೋಪಯೋಗಮಾತ್ರತ್ವಮಿತಿ ವೇದಿತವ್ಯಂ. “ ಅನುಭೂತಿಂ ವಿನಾ ಮೂಢೋ ವೃಥಾ ಬ್ರಹ್ಮಣಿ ಮೋದತೇ । ಪ್ರತಿಬಿಂಬಿತಶಾಖಾಗ್ರಫಲಾಸ್ವಾದನಮೋದವತ್ ॥ ” ಇತ್ಯಾದಿಶ್ರುತಿಷು ಸ್ವಾನುಭವಜ್ಞಾನಸ್ಯೈವ ಫಲಹೇತುತ್ವವ್ಯಪದೇಶಾತ್. ಕಿಂಚ ಶಿವಾರಾಧನಮಹಿಮಾವಿಶೇಷೇಣ ವಿಶ್ವಾಮಿತ್ರಾಗಸ್ತ್ಯಸಾನಂದಶತಾನಂದರೇವಣಸಿದ್ಧಾದೀನಾಂ ಸರ್ಗಾಂತರಕಲ್ಪನತ್ವಾದಿಸಾಮರ್ಥ್ಯಂ ಶಾಸ್ತ್ರೇಷು ದೃಶ್ಯತೇ. ಲೋಕೇ ಗರುಡಮಂತ್ರಾದ್ಯುಪಾಸಕಾನಾಂ ತತ್ಪ್ರತಿಯೋಗಿನಸ್ಸರ್ಪಾದಯಃ ಗರುಡಾದಿಭಾವನಯಾ ಸತ್ತ್ವವಿಷ್ವಾಸ್ಸಂತಃ ನಮ್ರೀಭಾವೇನ ತದಾಜ್ಞಾವಶವರ್ತಿನೋ ಭವಂತಿ. ತಸ್ಮಾದುಪಾಸನಸ್ಯ ಸರ್ವಾಧಿಕ್ಯಮನವದ್ಯಂ. “ ದ್ವೇ ವಾವ ಬ್ರಹ್ಮಣೋ ರೂಪೇ ” ಇತ್ಯಾದಿಶ್ರುತಿನಿಷ್ಠಬ್ರಹ್ಮೋಭಯಲಿಂಗೋಪಾಸನಂ ಮುಮುಕ್ಷೂಣಾಂ ಕರ್ತವ್ಯಂ.

“ ಆತ್ಮನನ್ನು ಕೇಳಿ ತಿಳಿದು ಮಥಿಸಿ ಸಾಕ್ಷಾತ್ಕರಿಸಬೇಕು ” ಎಂಬಲ್ಲಿ ಶ್ರವಣಾದಿಗಳಿಂದಲೇ ಭಕ್ತರಿಗೆ ಸಾಕ್ಷಾತ್ಕಾರವಾಗುವುದೆಂಬ ವ್ಯವಸ್ಥೆ ಹೇಗೆ ಹೊಂದು

ತ್ತದೆ? ಎಂದಾಶಂಕಿಸಿ ಸಮಾಧಾನಮಾಡುತ್ತಾನೆ. ಚರಾಚರಪ್ರಪಂಚರೂಪನಾಗಿದ್ದರೂ ಇದೆಲ್ಲಕ್ಕೂ ಆಶ್ರಯಸ್ಥಲವಾಗಿರುವ ಪರಬ್ರಹ್ಮಲಿಂಗವು ಅದರ ಧ್ಯಾನಧಾರಣರೂಪವಾದ ಆರಾಧನದಿಂದಲೇ ಉಪಾಸನಕಾಲದಲ್ಲಿ ಭಕ್ತರ ಜ್ಞಾನದೃಷ್ಟಿಗೆ ಗೋಚರವಾಗುತ್ತದೆ. ಆ ದೃಷ್ಟಿಯನ್ನು ನಿರಾಂತರವೂ ಮುಂದುವರಿಸುತ್ತ ಹಾಗೆಯೇ ವ್ಯವಹಾರಕಾಲದಲ್ಲೂ ಪ್ರಪಂಚವನ್ನು ಕಾಣುವುದರಿಂದ ಇದೆಲ್ಲವೂ ಬ್ರಹ್ಮರೂಪದಿಂದಲೇ ಅವನಿಗೆ ಹೊಳೆಯುತ್ತದೆ. ಸೂತ್ರದಲ್ಲಿ ಬಂದಿರುವ ಹಿಕಾರವು ಈ ಅಂಶವನ್ನು ನಿಶ್ಚಯವೆಂದು ತಿಳಿಸುತ್ತದೆ. ಆದ್ದರಿಂದ ಕೇವಲ ಶ್ರವಣಮನನಗಳಾಗಲೀ ಧ್ಯಾನಧಾರಣಗಳಾಗಲೀ ಬ್ರಹ್ಮಸಾಕ್ಷಾತ್ಕಾರಕ್ಕೆ ಕಾರಣವಲ್ಲ. "ಆತ್ಮನನ್ನು ಕಾಣಬೇಕು" ಎಂಬ ಶ್ರುತಿಯಲ್ಲಿ ಉಪಾಸಕರಿಗೆ ಶಾಸ್ತ್ರದ ಶ್ರವಣಮನನಗಳನ್ನು ಆವಶ್ಯಕವೆಂದು ತಿಳಿಸಲಾಗಿದೆ. ಇಲ್ಲವಾದರೆ ನ್ಯಾಯ, ವೈಶೇಷಿಕ, ವೈದ್ಯಶಾಸ್ತ್ರಗಳ ಶ್ರವಣದಂತೆ ಅಧ್ಯಾತ್ಮಶಾಸ್ತ್ರದ ಶ್ರವಣವೂ ವ್ಯರ್ಥವಾಗಬೇಕಾದೀತು. ಆದ್ದರಿಂದ ಪರಶಿವನ ಆರಾಧನಕ್ಕೆ ಬೇಕಾದ ಶಾಸ್ತ್ರದ ಶ್ರವಣಮನನಗಳಿಂದಲೇ ಅವನ ಸಾಕ್ಷಾತ್ಕಾರವಾಗುವುದೆಂದು ನಿಶ್ಚಯಿಸಲಾಗಿದೆ. "ಬ್ರಹ್ಮ ವೇದ ಬ್ರಹ್ಮೈವ ಭವತಿ" ಎಂಬ ಶ್ರುತಿಯಲ್ಲಿ ವೇದಶಬ್ದವು ಉಪಾಸನವನ್ನೇ ತಿಳಿಸುತ್ತದೆ; ಆದರೆ ಶಾಸ್ತ್ರಜ್ಞಾನವನ್ನನ್ನೇ ತಿಳಿಸುವುದಿಲ್ಲ. ಕೇವಲ ಶಾಸ್ತ್ರಜ್ಞಾನವು ಜಲ್ಪ ವಿತಂಡ ಹೇತ್ವಾಭಾಸಗಳಂತೆ ವಾದಕ್ಕೆ ಮಾತ್ರವೇ ಉಪಯೋಗವಾಗುತ್ತದೆ ಎಂದು ತಿಳಿಯಬೇಕು. ನೀರಿನಲ್ಲಿ ಪ್ರತಿಬಿಂಬಿಸಿದ ಕೊಂಬೆಯಲ್ಲಿ ಕಾಣುವ ಫಲವನ್ನು ಭೋಗಿಸಬೇಕೆಂದು ಬಯಸುವಂತೆ ಅನುಭವವಿಲ್ಲದೆ ಬ್ರಹ್ಮದಲ್ಲಿ ರಮಿಸುವೆನೆಂದು ಹೇಳುವವನು ಮೂಢನೆನಿಸುವನು. ಹೀಗೆ ಶ್ರುತಿಯಲ್ಲಿ ಸ್ವಾನುಭವಜ್ಞಾನವನ್ನೇ ಬ್ರಹ್ಮಸಾಕ್ಷಾತ್ಕಾರಕ್ಕೆ ಕಾರಣವೆಂದು ತಿಳಿಸಲಾಗಿದೆ. ಶಿವಪೂಜೆಯ ಮಹಿಮೆಯಿಂದಲೇ ವಿಶ್ವಾಮಿತ್ರ, ಅಗಸ್ತ್ಯ, ಸಾನಂದ, ಶತಾನಂದ, ರೇವಣಸಿದ್ಧ ಮೊದಲಾದ ಮಹಾತ್ಮರು ನೂತನಸೃಷ್ಟಿಯ ಸಾಮರ್ಥ್ಯವನ್ನು ಪಡೆದಿದ್ದರೆಂದು ಶಾಸ್ತ್ರದಲ್ಲಿ ಕಂಡುಬರುತ್ತದೆ. ಲೋಕದಲ್ಲಿ ಗರುಡಮಂತ್ರವನ್ನು ಜಪಿಸುವವರನ್ನು ಸರ್ಪಗಳು ಗರುಡನೆಂದೇ ಭಾವಿಸಿ ಭಯದಿಂದ ನಡುಗುತ್ತ ಅವರಿಗೆ ವಶವಾಗುತ್ತವೆ. ಇದರಿಂದ ಉಪಾಸನವೇ ಎಲ್ಲಕ್ಕೂ ಹೆಚ್ಚಿನದೆಂಬುದು ಸ್ಪಷ್ಟವಾಗುತ್ತದೆ. ಹೀಗೆ ಶ್ರುತಿಯು ತಿಳಿಸಿದಂತೆ ಬ್ರಹ್ಮದ ಮೂರ್ತಾಮೂರ್ತರೂಪಗಳೆರಡರ ಉಪಾಸನವೂ ಮುಮುಕ್ಷುಗಳ ಕರ್ತವ್ಯವೆನಿಸಿದೆ.

ಪ್ರಥಮಾಧ್ಯಾಯೇ "ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ" ಇತ್ಯಾರಭ್ಯ ಭೇದಾದಿಮತತ್ರಯಮುಕ್ತ್ವಾ ತತ್ತ್ರಯಾಣಾಂ ಮಧ್ಯೇ ಬೌದ್ಧಾದಿವತ್ ಶ್ರುತ್ಯೇಕದೇಶಪ್ರಾಮಾಣ್ಯಮತದ್ವಯಂ ನಿರಸ್ಯ ಸರ್ವಶ್ರುತಿಸಮನ್ವಯತ್ವೇನ ಭೇದಾಭೇದಮತಸ್ಯೈವ ಸರ್ವಾಧಿಕ್ಯಂ "ಅವಸ್ಥಿತೇರಿತಿ ಕಾಶಕೃತ್ಸ್ನಃ" ಇತಿ ಸೂತ್ರೇಣ ರಾದ್ಧಾಂತಿತಂ. ಸಚ ಭೇದಾಭೇದಃ ಪ್ರಪಂಚಬ್ರಹ್ಮಣೋಸ್ಸಂಭವತೀತಿ ದ್ವಿತೀಯಾಧ್ಯಾಯೇ,

" ಅಧಿಕಂ ತು ಭೇದನಿರ್ದೇಶಾತ್ " ಇತ್ಯಾದಿಸೂತ್ರೈಃ ಘಟಪಟವತ್ಪರಸ್ಪರಭೇದಂ " ತದನನ್ಯತ್ವಂ " ಇತ್ಯಾದಿನಾ ಮೃದ್ಘಟಯೋರಿವ ತದನನ್ಯತ್ವಂ ಚ ಪ್ರಸಾಧ್ಯ ತದ್ಧೇತುಭೂತಾಭಿನ್ನನಿಮಿತ್ತೋಪಾದಾನಕಾರಣಾನಂಗೀಕಾರಮತಾನಿ ವೇದಬಾಹ್ಯಾನಿ ನಿರಾಕೃತ್ಯ, ಏತದಧ್ಯಾಯೇನ " ಸ್ಥಾನತೋಽಪಿ ಪರಸ್ಯ " ಇತ್ಯುಭಯಲಿಂಗಾಧಿಕರಣೇನ ಭೇದಾಭೇದತಯಾ ಬ್ರಹ್ಮಣಶ್ಶಿವಸ್ಯೋಭಯಲಿಂಗತ್ವಪ್ರಸಾಧನೇ ತ್ವಂಪದತತ್ಪದಾರ್ಥಭೂತಾರಾಧಕಾರಾಧ್ಯಯೋರ್ಜೀವಬ್ರಹ್ಮಣೋರ್ಭೇದೋ ವಾ ಅಭೇದೋ ವಾ ಭೇದಾಭೇದೋ ವೇತಿ ಸಂಶಯೇ ತಯೋರ್ಮೋಕ್ಷಪರ್ಯಂತಂ ವಾಸ್ತವಭೇದಾಭೇದಸತ್ತ್ವೇಽಪಿ ಪರಿಶುದ್ಧಾಂತಃಕರಣಾನಾಂ ಮೋಕ್ಷದಶಾಯಾಂ ಬ್ರಹ್ಮಸಾಕ್ಷಾತ್ಕಾರೇ ತದ್ಭೇದವಿನಾಶಪೂರ್ವಕಾತ್ಯಂತಾಭೇದ ಏವೋಪಪನ್ನ ಇತ್ಯಧಿಕರಣಾಂತರೇಣಾಹ. ಅಹಿಕುಂಡಲಾಧಿಕರಣಂ ॥ ೭ ॥ ಉಭಯವ್ಯಪದೇಶಾತ್ತ್ವಹಿಕುಂಡಲವತ್ ॥ ೨೬ ॥ ಉಭಯವ್ಯಪದೇಶಾತ್ " ಜ್ಞಾಜ್ಞೌ ", " ದ್ವಾ ಸುಪರ್ಣಾ " ಇತ್ಯಾದಿಶ್ರುತಿಷು ಜೀವಬ್ರಹ್ಮಣೋರ್ಭೇದವ್ಯಪದೇಶಾತ್, " ಅಹಂ ಬ್ರಹ್ಮಾಸ್ಮಿ ", " ಅಯಮಾತ್ಮಾ ಬ್ರಹ್ಮ ", " ತತ್ತ್ವಮಸಿ " ಇತ್ಯಾದಿಶ್ರುತಿಷು ಅಭೇದಾವಗಮಾಚ್ಚ ತಯೋರ್ಭೇದಾಭೇದೌ ಅಂಗೀಕರ್ತವ್ಯೌ. ಅಹಿಕುಂಡಲವತ್ ಯಥಾ ಕುಂಡಲೀಭೂತಸರ್ಪಸ್ಯ ದೀರ್ಘೀಭೂತಸರ್ಪಸ್ಯ ಚ ಸರ್ಪತ್ವೇನೈಕತ್ವೇಽಪಿ ದ್ವೈತಪ್ರಧಾನ ಸಾಂಖ್ಯಮತಸ್ಯ ಅಭೇದಪ್ರಧಾನಯೋಗಮತಸ್ಯ ಚೈಕತ್ವೇನ ನಿರ್ದಿಷ್ಟತ್ವಾತ್, ಕೇಚಿತ್ ದ್ವೈತಮೇಕಮತಮಿತಿ ಅದ್ವೈತಮೇಕಮತಮಿತಿ ವದಂತಿ. ಭ್ರಾಂತ್ಯಾ ತನ್ನ ವಿಧೇಯಂ, " ತತ್ತು ಸಮನ್ವಯಾತ್ ", " ಗತಿಸಾಮಾನ್ಯಾತ್ " ಇತ್ಯಾದಿನಾ ಪ್ರಥಮಾಧ್ಯಾಯೇ ಭೇದಶ್ರುತೀನಾಮಭೇದಶ್ರುತೀನಾಂ ಚ ಬ್ರಹ್ಮಣ್ಯೇವ ಸಮನ್ವಯವ್ಯವಸ್ಥಾಪನಾತ್, " ಯಥಾ ನದ್ಯಃ " ಇತ್ಯಾದಿಶ್ರುತಿಷು ಭೇದಾಭೇದಸ್ಯ ಸ್ಪಷ್ಟಮುಪದಿಷ್ಟತ್ವಾತ್, " ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ " ಇತಿ ಕೃಷ್ಣಗೀತಾಯಾಂ ಕೃಷ್ಣೇನ, ಅತ್ರಭಗವತಾ ವ್ಯಾಸೇನಾಪಿ ತತ್ಪದತ್ವಂಪದಾರ್ಥಭೂತಜೀವಬ್ರಹ್ಮಣೋರ್ಭೇದಾಭೇದನಿರ್ದೇಶಾರ್ಥಮಿದಂ ಸೂತ್ರಂ ನಿರ್ದಿಷ್ಟಂ. ಯಥಾ ಹ್ರಸ್ವತ್ವದೀರ್ಘತ್ವಾತ್ಮಕವಿರುದ್ಧಪರಿಮಾಣವತ್ತ್ವಾತ್ ಭೇದಾಭೇದೌ ಅಂಗೀಕ್ರಿಯತೇ ಏವಂ ಜೀವಬ್ರಹ್ಮಣೋರಪಿ ಚಿತ್ತ್ವೇನೈಕತ್ವೇಽಪಿ ಅಣುತ್ವವಿಭುತ್ವಾತ್ಮಕವಿರುದ್ಧಪರಿಮಾಣವತ್ತ್ವಾತ್ ಭೇದಾಭೇದೌ ಅಂಗೀಕರ್ತವ್ಯೌ ಇತಿ ಸೂತ್ರಾರ್ಥಃ. " ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ ", " ಅಸ್ಮಾನ್ಮಾಯೀ

ಸೃಜತೇ ವಿಶ್ವಮೇತತ್ ” ಇತ್ಯಾದಿಶ್ರುತಿಷು ಆರಾಧ್ಯಾರಾಧಕಯೋ ರ್ಜೀವಬ್ರಹ್ಮಣೋರ್ಭೇದಾವಗಮಾತ್, “ ಸರ್ವಮಾತ್ಮೈವಾಭೂತ್ತತ್ಕೇನ ಕಂ ಪಶ್ಯೇತ್ಕೇನ ಕಂ ವದೇತ್ ” ಇತ್ಯಾದಿಶ್ರುತಿಷು ಬ್ರಹ್ಮೈಕತ್ವ ವ್ಯಪದೇಶೇನ ಸದಾಽದ್ವೈತನಿರ್ದೇಶಾತ್, “ ತತ್ತ್ವಮಸಿ ” ಇತ್ಯಾದಿ ಶ್ರುತಿಷು ತಯೋರ್ಭೇದಾಭೇದವ್ಯವಸ್ಥಾಪನಾಚ್ಚ ಜೀವಬ್ರಹ್ಮಣೋರಾರಾಧಕಾರಾಧ್ಯಯೋರ್ಭೇದೋ ವಾ, ಅಭೇದೋ ವಾ ಭೇದಾಭೇದೋ ವಾ ಇತಿ ಸಂದಿಹ್ಯತೇ. ವಸ್ತುವಿರೋಧಾನ್ನ ಭೇದಾಭೇದಃ. “ ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯನಶ್ನನ್ನನ್ಯೋಽಭಿಚಾಕಶೀತಿ ” ಇತ್ಯಾದಿ ಶ್ರುತಿಶತೇಷು ಘಟಪಟಯೋರಿವ ಜೀವಬ್ರಹ್ಮಣೋರನ್ಯೋನ್ಯಸ್ವಾಭಾವಿಕಭೇದವ್ಯಪದೇಶಾತ್, ಸ್ವಾಭಾವಿಕಸ್ಯ ಭೇದಸ್ಯ ನಿವೃತ್ತ್ಯಸಂಭವಾತ್ ತತ್ತ್ವಮಸ್ಯಾದಿವಾಕ್ಯಾನಾಂ ಔಪಚಾರಿಕತ್ವೇನ ಸ್ತುತಿಪರತ್ವಾತ್, ಅಭೇದೇ ಉಪಾಸ್ಯೋಪಾಸಕವಿರೋಧಾತ್, “ ಅಥಾತ ಆದೇಶೋ ನೇತಿ ನೇತಿ ” ಇತಿ ಶ್ರುತೌ ಮೂರ್ತಾಮೂರ್ತಚಿದಚಿದ್ವಸ್ತುರೂಪತಯಾ ಬ್ರಹ್ಮಣ ಇಯತ್ತಾಮಾತ್ರನಿಷೇಧಾಚ್ಚ ನ ಕದಾಚಿದಪ್ಯುಪಾಸ್ಯೋಪಾಸಕಯೋರಭೇದಸ್ಸಿದ್ಧ್ಯತೀತಿ ಪ್ರಾಪ್ತೇ ಪ್ರಚಕ್ಷ್ಮಹೇ ಉಭಯವ್ಯಪದೇಶಾದಿತಿ. “ ಏಷ ಸಂಪ್ರಸಾದಃ ಸ್ವೇನ ರೂಪೇಣಾಭಿನಿಷ್ಪದ್ಯತೇ ” ಇತ್ಯಾದಿಶ್ರುತಿಷು ಆರಾಧಕಾರಾಧ್ಯಜೀವಬ್ರಹ್ಮಣೋರ್ನದೀಸಮುದ್ರವತ್ಪರಸ್ಪರಸ್ವಾಭಾವಿಕಭೇದಸತ್ತ್ವೇಽಪಿ ಮೋಕ್ಷದಶಾಯಾಂ ಪ್ರಾಪ್ಯಪ್ರಾಪಕತ್ವೇನ ಭೇದಾಭೇದವ್ಯಪದೇಶಾತ್ತದೇವ ಯುಕ್ತಂ. ಅಹಿಕುಂಡಲವತ್, ಕುತಃ ಉಭಯವ್ಯಪದೇಶಾತ್. “ ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ”, “ ಬ್ರಹ್ಮೈವೇದಂ ಸರ್ವಂ, ಆತ್ಮೈವೇದಂ ಸರ್ವಂ ” ಇತ್ಯಾದಿಷು ತಾದಾತ್ಮ್ಯತ್ವೇನ ಅಭೇದವ್ಯಪದೇಶಾತ್ “ ಅನೇನ ಜೀವೇನಾತ್ಮನಾನುಪ್ರವಿಶ್ಯ ” ಇತಿ ಭೇದವ್ಯಪದೇಶಾಚ್ಚ ಅಹೇಃ ಕುಂಡಲಭಾವಋಜುಭಾವವತ್ ತಯೋರ್ಜ್ಞಾನಾತ್ಮಕತ್ವೇನೈಕತ್ವೇಽಪಿ ಪರಸ್ಪರವಿರುದ್ಧಸ್ವಭಾವಸರ್ವಜ್ಞತ್ವವಿಭುತ್ವಾಣುತ್ವನಿತ್ಯಮುಕ್ತತ್ವನಿತ್ಯಬದ್ಧತ್ವಾದಿಧರ್ಮಾಣಾಂ ದರ್ಶನಾತ್ ಭೇದಾಭೇದ ಏವ ನಿಶ್ಚೀಯತೇ. ಶ್ರುತಿಸಂಕೋಚೇ ಮಾನಾಭಾವಾತ್, ಉಭಯಶ್ರುತ್ಯೋಸ್ತುಲ್ಯಬಲತ್ವಾಚ್ಚ ಭೇದಶ್ರುತೀನಾಂ ಸರ್ವಾಸಾಂ ಸಂಸಾರದಶಾವಿಷಯತ್ವಂ, ಅಭೇದಶ್ರುತೀನಾಂ ಮೋಕ್ಷದಶಾಪರತ್ವಂ. “ ಸ್ಥಾನಪ್ರಕರಣ ಲಿಂಗಾತ್ಸಮನ್ವಯಃ ” ಇತಿನ್ಯಾಯೇನ ಪ್ರಕರಣಾನುಕೂಲಾರ್ಥೋ ಗ್ರಾಹ್ಯ ಇತಿ ನಿರ್ಣೀಯತೇ. ನೋ ಚೇದನ್ಯೋನ್ಯವಿರೋಧಾತ್ಸರ್ವಂ ಶಾಸ್ತ್ರಂ ಅಪ್ರಮಾಣಂ ಸ್ಯಾದಿತಿ ವೇದಿತವ್ಯಂ.

ಪ್ರಥಮಾಧ್ಯಾಯದಲ್ಲಿ ಭೇದ, ಅಭೇದ, ಮತ್ತು ಭೇದಾಭೇದವೆಂಬ ಮೂರು ಮತಗಳನ್ನು ಹೇಳಿ ಈ ಮೂರರಲ್ಲಿ ಬೌದ್ಧಮತದಂತೆ ಶ್ರುತಿಯ ಒಂದೊಂದು ಭಾಗವನ್ನು ಮಾತ್ರವೇ ಪ್ರಮಾಣವೆಂದು ಒಪ್ಪಿದ ಎರಡು ಮತಗಳನ್ನು ನಿರಾಕರಿಸಿ ಭೇಧಾಭೇದಮತದಲ್ಲಿಯೇ ಶ್ರುತಿಸಮನ್ವಯವುಂಟೆಂದು ಹೇಳಿಯಾಯಿತು. ಆ ಭೇದಾಭೇದವೇ ಪ್ರಪಂಚಕ್ಕೂ ಬ್ರಹ್ಮಕ್ಕೂ ಸಂಭವಿಸುವುದೆಂದು ದ್ವಿತೀಯಾಧ್ಯಾಯದಲ್ಲಿ ಸಾಧಿಸಲಾಗಿದೆ. "ಅಧಿಕಂ ತು ಭೇದನಿರ್ದೇಶಾತ್" ಎಂಬ ಸೂತ್ರದಲ್ಲಿ ಘಟಪಟಗಳಂತೆ ಪ್ರಪಂಚಬ್ರಹ್ಮಗಳ ಪರಸ್ಪರಭೇದವನ್ನೂ, "ತದನನ್ಯತ್ವಂ" ಎಂಬ ಸೂತ್ರದಲ್ಲಿ ಮೃದ್ಘಟಗಳಂತೆ ಅಭೇದವನ್ನೂ ಸಾಧಿಸಿ, ಭೇದಾಭೇದಗಳಿಗೆ ಕಾರಣವೆನಿಸುವಂತೆ ಪರಮಾತ್ಮನೇ ವಿಶ್ವಕ್ಕೆ ನಿಮಿತ್ತನೂ ಉಪಾದಾನನೂ ಆಗಿರವನೆಂಬುದನ್ನು ಅಂಗೀಕರಿಸದಿರುವ ವೇದಬಾಹ್ಯಮತಗಳನ್ನು ನಿರಾಕರಿಸಲಾಯಿತು. ಹಾಗೆಯೇ ಈ ಅಧ್ಯಾಯದ ಉಭಯಲಿಂಗಾಧಿಕರಣದಲ್ಲಿ ಪರಶಿವಬ್ರಹ್ಮವೇ ಭೇದಾಭೇದಸಂಬಂಧದಿಂದ ಜಗದ್ರೂಪವೂ ಜಗದತೀತವೂ ಆಗಿರುವುದೆಂದು ಹೇಳಿಯಾಯಿತು. ಆದರೆ ಇಲ್ಲಿ "ನೀನು" ಎನಿಸಿದ ಆರಾಧಕಜೀವನಿಗೂ "ಅದು" ಎನಿಸಿದ ಆರಾಧ್ಯಶಿವನಿಗೂ ಭೇದವೇ? ಅಭೇದವೇ? ಅಥವಾ ಭೇಧಾಭೇದವೆ? ಎಂಬ ಸಂಶಯ ಬರುತ್ತದೆ. ಅವರಿಬ್ಬರಿಗೂ ಮುಕ್ತಿಯವರೆಗೂ ವಾಸ್ತವವಾಗಿ ಭೇದಾಭೇದಸಂಬಂಧವೇ ಇದ್ದರೂ ಸಹ ನಿರ್ಮಲಜೀವರಿಗೆ ಮೋಕ್ಷದಶೆಯಲ್ಲಿ ಬ್ರಹ್ಮಸಾಕ್ಷಾತ್ಕಾರವಾಗುವುದರಿಂದ ಹಿಂದಿನ ಭೇದವು ಪೂರ್ಣವಾಗಿ ನಷ್ಟವಾಗುವುದರಿಂದ ಅಭೇದವೇ ದೊರಕುವುದೆಂದು ಇಲ್ಲಿ ತಿಳಿಸಲಾಗಿದೆ. ಶ್ರುತಿಯಲ್ಲಿ ಜೀವಬ್ರಹ್ಮರಿಗೆ ಭೇದವನ್ನೂ ಅಭೇದವನ್ನೂ ಸ್ಪಷ್ಟವಾಗಿ ಹೇಳಿರುವುದರಿಂದ ಇವೆರಡನ್ನೂ ಅವಶ್ಯವಾಗಿ ಒಪ್ಪಲೇಬೇಕು. ಕುಂಡಲಾಕಾರದ ಸರ್ಪಕ್ಕೂ ದೀರ್ಘಾಕಾರದ ಸರ್ಪಕ್ಕೂ ಸರ್ಪವಾದ್ದರಿಂದ ಐಕ್ಯವಿದ್ದರೂ ಆಕಾರದಿಂದ ಭೇದವೂ ಸಹಜವಾಗಿರುವಂತೆ ಜೀವಶಿವರಿಗೆ ಚಿದ್ರೂಪವಾದ ಐಕ್ಯವಿದ್ದರೂ ಜ್ಞಾನ ಪ್ರಕಾಶಗಳ ಸಂಕೋಚವಿಕಾಸಗಳಿಂದ ಭೇದವೂ ಸಹಜವಾಗಿದೆ. ದ್ವೈತಪ್ರಧಾನವಾದ ಸಾಂಖ್ಯಮತವನ್ನೂ ಅಭೇದಪ್ರಧಾನವಾದ ಯೋಗಮತವನ್ನೂ ಬೇರೆಯಾಗಿ ಹೇಳಿರುವುದರಿಂದ ಕೆಲವರು ದ್ವೈತವೇ ಒಂದು ಮತವೆಂದೂ, ಅದ್ವೈತವೇ ಒಂದು ಮತವೆಂದೂ ಹೇಳುತ್ತಾರೆ. ಇದು ಯುಕ್ತವಲ್ಲ. "ತತ್ತು ಸಮನ್ವಯಾತ್" "ಗತಿಸಾಮಾನ್ಯಾತ್" ಎಂಬ ಸೂತ್ರಗಳಲ್ಲಿ ಭೇದಶ್ರುತಿಗಳಿಗೂ ಅಭೇದಶ್ರುತಿಗಳಿಗೂ ಪರಶಿವಬ್ರಹ್ಮದಲ್ಲಿಯೇ ಸಮನ್ವಯವೆಂದು ವ್ಯವಸ್ಥೆಮಾಡಲಾಗಿದೆ. "ಯಥಾ ನದ್ಯಃ" ಎಂಬ ಶ್ರುತಿಯು ಶಿವಜೀವರಿಗೆ ಭೇದಾಭೇದಗಳೆರಡನ್ನೂ ಸ್ಪಷ್ಟವಾಗಿ ತಿಳಿಸಿದೆ. "ಸಾಂಖ್ಯಯೋಗಗಳನ್ನು ಬೇರೆ ಎಂದು ಅಜ್ಞರು ತಿಳಿಯುತ್ತಾರೆ ; ಆದರೆ ಪಂಡಿತರು ಅವೆರಡನ್ನು ಒಂದೇ ಎಂದು ತಿಳಿಯುತ್ತಾರೆ" ಎಂದು ಕೃಷ್ಣಗೀತೆಯಲ್ಲಿ ಹೇಳಿದೆ. ಇಲ್ಲಿ ಪೂಜ್ಯ ವ್ಯಾಸನೂ ಸಹ ಜೀವಬ್ರಹ್ಮರಿಗೆ ಭೇದಾಭೇದಗಳೆರಡೂ ಅನ್ವಯಿಸುತ್ತವೆ ಎಂದು ತಿಳಿಸಲಿಕ್ಕಾಗಿ ಈ ಸೂತ್ರವನ್ನು ರಚಿಸಿದ್ದಾನೆ. ಸರ್ಪಗಳಿಗೆ ಹ್ರಸ್ವ

ದೀರ್ಘಾಕಾರಗಳೆಂಬ ವಿರುದ್ಧಪರಿಮಾಣಗಳಿರುವುದರಿಂದ ಹೇಗೆ ಭೇದಾಭೇದಗಳೆರಡನ್ನೂ ಒಪ್ಪುತ್ತೇವೆಯೋ ಹಾಗೆ ಜೀವಬ್ರಹ್ಮರಿಗೆ ಚಿದ್ರೂಪವಾದ ಐಕ್ಯವಿದ್ದರೂ ಅಣುತ್ವ ವಿಭುತ್ವವೆಂಬ ವಿರುದ್ಧ ಪರಿಮಾಣಗಳಿರುವುದರಿಂದ ಭೇದ ಮತ್ತು ಅಭೇದಗಳೆರಡನ್ನೂ ಅಂಗೀಕರಿಸಬೇಕು. "ಈಶ್ವರನು ಜೀವರಿಗಿಂತ ಬೇರೆಯಾಗಿ ಪ್ರೇರಕನಾಗಿರುವನು" "ಅವನನ್ನಾಶ್ರಯಿಸಿ ಅವನಿಂದ ಇವನು ಅಮೃತವನ್ನು ಪಡೆಯುತ್ತಾನೆ." "ಮಾಯಾಪತಿಯಾದ ಈಶ್ವರನು ನಮ್ಮನ್ನೂ, ಇದೆಲ್ಲವನ್ನೂ ಸೃಷ್ಟಿಸುತ್ತಾನೆ" "ಅವನೊಳಗೆ ಬೇರೊಬ್ಬನು ಮಾಯೆಯಿಂದ ಬದ್ಧನಾಗಿದ್ದನೆ." ಈ ಶ್ರುತಿಗಳಲ್ಲಿ ಆರಾಧ್ಯಶಿವನಿಗೂ ಆರಾಧಕ ಜೀವನಿಗೂ ಭೇದವನ್ನು ಹೇಳಿದೆ. "ಎಲ್ಲವೂ ಆತ್ಮವೇ ಆದರೆ ಯಾರು ಯಾರನ್ನು ನೋಡುತ್ತಾರೆ ಮತ್ತು ಕೇಳುತ್ತಾರೆ." ಎಂಬ ಶ್ರುತಿಗಳಲ್ಲಿ ಆತ್ಮೈಕತ್ವವನ್ನು ಹೇಳಿರುವುದರಿಂದ ಅಭೇದವನ್ನು ತಿಳಿಸಲಾಗಿದೆ. "ತತ್ತ್ವಮಸಿ" "ಅಹಂ ಬ್ರಹ್ಮಾಸ್ಮಿ" ಎಂಬಲ್ಲಿ ನಾನು ಬ್ರಹ್ಮ ಎಂದು ಇಬ್ಬರಿಗೂ ಭೇದ ಮತ್ತು ಅಭೇದ ಇವೆರಡನ್ನೂ ತಿಳಿಸಲಾಗಿದೆ. ಆದ್ದರಿಂದ ಜೀವಬ್ರಹ್ಮರಿಗೆ ಭೇದವೇ ? ಅಭೇದವೇ ? ಅಥವಾ ಭೇಧಾಭೇದವೇ ? ಎಂದು ಸಂದೇಹಬರುತ್ತದೆ. ವಸ್ತುಗಳೆರಡೂ ಪರಸ್ಪರವಿರುದ್ಧವಾದ್ದರಿಂದ ಭೇಧಾಭೇದಸಂಬಂಧ ಹೊಂದುವುದಿಲ್ಲ. "ಇಬ್ಬರಲ್ಲಿ ಒಬ್ಬನು ಭೋಗಿಸುತ್ತಲೂ ಮತ್ತೊಬ್ಬನು ನಿರ್ಲಿಪ್ತನೂ ಆಗಿರುವನು" ಎಂದು ಮುಂತಾದ ಶ್ರುತಿಗಳಲ್ಲಿ ಘಟಪಟಗಳಂತೆ ಜೀವಬ್ರಹ್ಮರಿಗೆ ಸ್ವಾಭಾವಿಕವಾದ ಭೇದವನ್ನೇ ಹೇಳಿದೆ. ಆದರೆ ಸ್ವಾಭಾವಿಕವಾದ ಭೇದ ತೊಲಗುವಂತಿಲ್ಲ. ತತ್ತ್ವಮಸಿ ಮೊದಲಾದ ವಾಕ್ಯಗಳು ಕೇವಲ ಉಪಚಾರಕ್ಕಾಗಿ ಜೀವನನ್ನು ಶಿವನೆಂದು ಸ್ತುತಿಸುತ್ತವೆ. ಹಾಗೆ ಅಭೇದವನ್ನೇ ಹೇಳಿದರೆ ಉಪಾಸ್ಯನಿಗೂ ಉಪಾಸಕನಿಗೂ ಪರಸ್ಪರ ವಿರೋಧವಿರುವುದರಿಂದಲೂ, "ನೇತಿ ನೇತಿ" ಎಂಬ ಶ್ರುತಿಯಲ್ಲಿ ಬ್ರಹ್ಮವು ಕೇವಲ ಮೂರ್ತಾಮೂರ್ತರೂಪದಿಂದಲೂ ಚಿದಚಿದ್ರೂಪದಿಂದಲೂ ಇರುವುದೆಂಬ ಅಂಶವನ್ನು ಮಾತ್ರವೇ ನಿಷೇಧಿಸಿರುವುದರಿಂದಲೂ ಉಪಾಸ್ಯೋಪಾಸಕರಿಗೆ ಎಂದೆಂದಿಗೂ ಅಭೇದವು ಸಿದ್ಧಿಸಲಾರದು ಎಂದು ಆಕ್ಷೇಪಬರುತ್ತದೆ. ಇದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಶ್ರುತಿಯಲ್ಲಿ ಸಮುದ್ರದೃಷ್ಟಾಂತದಿಂದ ಜೀವಬ್ರಹ್ಮರಿಗೆ ಸ್ವಾಭಾವಿಕ ಭೇದವಿದ್ದರೂ ಮೋಕ್ಷದಶೆಯಲ್ಲಿ ಪ್ರಾಪ್ಯಪ್ರಾಪಕಭಾವದಿಂದ ಅಭೇದವೂ ಸಂಭವಿಸುವುದರಿಂದ ಭೇದಾಭೇದಗಳೆರಡೂ ಕಾಲಭೇದದಿಂದ ಹೊಂದಿಕೆಯಾಗುತ್ತವೆ. ಸರ್ಪಕ್ಕೆ ಪರಸ್ಪರವಿರುದ್ಧವಾದ ಕುಂಡಲಾಕಾರ ಮತ್ತು ರಜ್ಜ್ವಾಕಾರಗಳಿರುವಂತೆ ಶಿವಜೀವರಿಗೆ ಪರಸ್ಪರವಿರುದ್ಧಸ್ವಭಾವದ ಸರ್ವಜ್ಞತ್ವಕಿಂಚಿದ್ಜ್ಞತ್ವವಿಭುತ್ವ ಅಣುತ್ವ ನಿತ್ಯಮುಕ್ತತ್ವ ನಿತ್ಯಬದ್ಧತ್ವ ಮೊದಲಾದ ಧರ್ಮಗಳಿರುವುದರಿಂದ ಕೇವಲ ಭೇದವನ್ನೂ ಕೇವಲ ಅಭೇದವನ್ನೂ ತೊರೆದು ಭೇದಾಭೇದವನ್ನೇ ಒಪ್ಪಲಾಗಿದೆ. ಶ್ರುತಿಗಳ ಅರ್ಥವನ್ನು ಮೊಟಕುಮಾಡಲಿಕ್ಕೆ ಆಧಾರವಿಲ್ಲ. ಇದೂ ಅಲ್ಲದೆ ಎರಡು ಶ್ರುತಿಗಳೂ ಸಮಬಲವೆನಿಸಿವೆ. ಆದ್ದರಿಂದ ಭೇದಶ್ರುತಿಗಳನ್ನು ಸಂಸಾರದಶೆಗೂ

ಅಭೇದಶ್ರುತಿಗಳನ್ನೂ ಮೋಕ್ಷದಶೆಗೂ ಅನ್ವಯಿಸುತ್ತ ಎರಡನ್ನೂ ಪ್ರಮಾಣವೆಂದು ಒಪ್ಪಬೇಕಾಗಿದೆ. ಪರಸ್ಪರ ವಿರೋಧವುಂಟಾದಾಗ ಪ್ರಮಾಣವನ್ನು ಅನುಸರಿಸಿಯೇ ಸಮನ್ವಯಮಾಡಬೇಕೆಂಬ ನ್ಯಾಯದಿಂದ ಪ್ರಕರಣಕ್ಕೆ ಅನುಕೂಲವಾದ ಅರ್ಥವನ್ನೇ ಗ್ರಹಿಸಬೇಕೆಂದು ನಿರ್ಣಯಿಸಲಾಗಿದೆ. ಇಲ್ಲವಾದರೆ ಪರಸ್ಪರವಿರೋಧದಿಂದ ಶಾಸ್ತ್ರವೆಲ್ಲವೂ ಪ್ರಮಾಣವಾಗದೇಹೋಗುವುದೆಂದು ತಿಳಿಯಬೇಕು.

ನನು ಸುಷುಪ್ತಿಪ್ರಬೋಧಾದಿವತ್ಕಾಲಭೇದೇನ ಭೇದಾಭೇದೋಽಸ್ತು. ತಮಃಪ್ರಕಾಶವತ್ಪರಸ್ಪರವಿರೋಧಸ್ವಭಾವಾದೇಕಕಾಲೇ ತಯೋಸ್ತದಸಂಗತಮಿತ್ಯಾಶಂಕಾಯಾಮಾಹ. ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್ ॥ ೨೭ ॥ ವಾಶಬ್ದಃ ಪೂರ್ವಪಕ್ಷವ್ಯಾವೃತ್ತ್ಯರ್ಥಃ. ಯಥಾ ಪ್ರಭಾಕರಪ್ರಭಾಯಾಃ ಪ್ರಭಾಶ್ರಯಪ್ರಭಾಕರಮಂಡಲಸ್ಯ ತೇಜಸ್ತ್ವಾತ್ ತೇಜಸ್ತ್ವೇನೈಕತ್ವೇಽಪಿ ವ್ಯಾಪಕತ್ವಪರಿಚ್ಛಿನ್ನತ್ವರೂಪವಿರುದ್ಧಪರಿಮಾಣವತ್ತ್ವಾತ್ ಭೇದಾಭೇದೌ ಅಂಗೀಕೃತೌ, ಏವಂ ಜೀವಬ್ರಹ್ಮಣೋರನ್ಯೋಽನ್ಯವಿರುದ್ಧಧರ್ಮಬಾಹುಳ್ಯಾತ್ ಭೇದಾಭೇದೌ ಅಂಗೀಕರ್ತವ್ಯೌ ಇತಿ ವ್ಯಾಚಕ್ಷತೇ. ಸಂಕುಚಿತವಿಸ್ತೃತಪಟಾದಿಬಹುದೃಷ್ಟಾಂತಾನುರೋಧೇನಾಪಿ ಜೀವಬ್ರಹ್ಮಣೋರ್ಭೇದಾಭೇದೋ ನಿಶ್ಚೀಯತೇ. ಕಿಂಚ ಬ್ರಾಹ್ಮಣತ್ವಾದಿಜಾತಿಯೋಗೇನ ಸರ್ವೇಷಾಂ ಬ್ರಾಹ್ಮಣಾದೀನಾಂ ಜಾತ್ಯೇಕತ್ವಸ್ವಭಾವಸಿದ್ಧೇಽಪಿ ಉತ್ತಮಾಧಮಾದಿಭಾವೇನ ನೀಲಪೀತಾದಿರೂಪೇಣ ಚ ಪರಸ್ಪರಭೇದದರ್ಶನಾತ್ ತದ್ವಜ್ಜೀವಬ್ರಹ್ಮಣೋರಪಿ ಚಿಜ್ಜಾತ್ಯೇಕತ್ವೇಽಪಿ ಸರ್ವಜ್ಞತ್ವಕಿಂಚಿಜ್ಜ್ಞತ್ವಾದಿಪರಸ್ಪರಭೇದೋ ವಿದ್ಯತೇ. ತಸ್ಮಾತ್ತಯೋರ್ಭೇದಾಭೇದೋ ವಸ್ತುವಿರೋಧಾದಯುಕ್ತ ಇತಿ ದುರ್ವಾದೋ ನಿರಸ್ತಃ.

ಮಲಗಿದ್ದು ಎಚ್ಚರಗೊಂಡಂತೆ ಕಾಲಭೇದದಿಂದ ಜೀವಬ್ರಹ್ಮರಿಗೆ ಭೇದಾಭೇದಗಳು ಇರಲಿ ಆದರೆ ತಮಃಪ್ರಕಾಶಗಳಂತೆ ಅವರಿಬ್ಬರಿಗೂ ಪರಸ್ಪರವಿರೋಧವಿರುವುದರಿಂದ ಒಂದೇಕಾಲದಲ್ಲಿ ಎರಡೂ ಹೇಗೆ ಅನ್ವಯಿಸುತ್ತವೆ ಎಂದಾಶಂಕಿಸಿ ನಿರಾಕರಿಸುತ್ತಾನೆ. ಸೂತ್ರದಲ್ಲಿ ವಾ ಎಂಬ ಶಬ್ದವು ಪೂರ್ವಪಕ್ಷವನ್ನು ತೊಲಗಿಸುತ್ತದೆ. ಸೂರ್ಯಪ್ರಭೆಗೂ ಅದಕ್ಕೆ ಆಶ್ರಯನಾದ ಸೂರ್ಯಮಂಡಲಕ್ಕೂ ಪ್ರಕಾಶರೂಪದಿಂದ ಐಕ್ಯವಿದ್ದರೂ ಒಂದು ವ್ಯಾಪಕವಾಗಿ ಮತ್ತೊಂದು ಪರಿಮಿತವೆನಿಸಿ ಎರಡಕ್ಕೂ ಪರಸ್ಪರವಿರುದ್ಧವಾದ ಪರಿಮಾಣವಿರುವುದರಿಂದ ಭೇದಾಭೇದಗಳೆರಡನ್ನೂ ಅಂಗೀಕರಿಸಲಾಗಿದೆ. ಹಾಗೆಯೇ ಜೀವಬ್ರಹ್ಮರಿಗೆ ಪರಸ್ಪರ ವಿರುದ್ಧವಾದ ಧರ್ಮಗಳೇ ಬಹಳವಾಗಿರುವುದರಿಂದ ಭೇದಾಭೇದಗಳೆರಡನ್ನೂ ಅಂಗಿಕರಿಸಬೇಕು. ಡೇರೆಯುಬಟ್ಟೆ ಸಂಕುಚಿತವೂ ವಿಸ್ತೃತವೂ ಆಗಿರುವಂತೆ ಜೀವಬ್ರಹ್ಮರು ಅಣುವೂ ವಿಭುವೂ ಆಗಿರುವುದರಿಂದ ಅವರಿಗೆ ಭೇದಾಭೇದಗಳೆರಡೂ ಅನ್ವಯಿಸುವುವೆಂದು ನಿಶ್ಚಯಿಸಲಾಗಿದೆ. ಬ್ರಾಹ್ಮಣ

ಮೊದಲಾದ ಜಾತಿಗಳಲ್ಲಿ ಬ್ರಾಹ್ಮಣರೆಲ್ಲರೂ ಜಾತಿಯಲ್ಲಿ ಒಂದೇ ಸ್ವಭಾವದವರಾಗಿದ್ದರೂ ನೀಲಪೀತಾದಿ ರೂಪಗಳಿಂದಲೂ, ಉತ್ತಮ ಅಧಮ ಎಂಬ ಭಾವಗಳಿಂದಲೂ ಪರಸ್ಪರವಾಗಿ ಭಿನ್ನರಾಗಿದ್ದಾರೆ. ಹಾಗೆಯೇ ಜೀವಬ್ರಹ್ಮರು ಚಿಜ್ಜಾತಿಯಿಂದ ಏಕವಾದರೂ ಸರ್ವಜ್ಞತ್ವ ಕಿಂಚಿದ್ಜ್ಞತ್ವ ಮೊದಲಾದ ವಿರುದ್ಧ ಧರ್ಮಗಳಿಂದ ಭಿನ್ನರೂ ಆಗಿದ್ದಾರೆ. ಆದ್ದರಿಂದ ಅವರಿಗೆ ಭೇದಾಭೇದಗಳ ಸಮನ್ವಯಕ್ಕೆ ವಸ್ತುವಿರೋಧವುಂಟೆಂಬ ವಾದವು ತಿರಸ್ಕೃತವಾಯಿತು.

ನನು ಪ್ರಭಾತದಾಶ್ರಯಯೋರಿವ ಜೀವಬ್ರಹ್ಮಣೋರ್ಜಾತಿಯೋಗಮಾತ್ರೇಣ ಗಜಾಶ್ವಗವಾದಿವತ್, ಜಾತಿವ್ಯಕ್ತಿನ್ಯಾಯೇನ ಶ್ರುತಿಸ್ಮೃತಿಯುಕ್ತ್ಯನುಭವವ್ಯವಹಾರಬಲಾತ್ ದೇಶಕಾಲಭೇದಾಭೇದಸ್ಸಿದ್ಧ ಇತಿ ಯದುಕ್ತಂ ತದಸಂಗತಂ, ತಸ್ಯ ಸಂಸಾರದಶಾವಿಷಯತ್ವಾತ್. ಬ್ರಹ್ಮಸಾಕ್ಷಾತ್ಕಾರೇ "ಯಥಾ ಸದ್ಯಃ" ಇತ್ಯಾದಿಶ್ರುತಿಶತವಿಹಿತತಯಾ ಸ್ವರೂಪೈಕ್ಯಸ್ಯಾಪ್ಯಂಗೀಕಾರಾತ್, ಸ್ವಾಭಾವಿಕಸ್ಯ ಭೇದಸ್ಯ ನಿವೃತ್ತ್ಯಯೋಗಾಚ್ಚ ಘಟಾಕಾಶಾದಿವಜ್ಜೀವತ್ವಮೌಪಾಧಿಕಭೇದೇನಾಂಗೀಕರ್ತವ್ಯಮಿತ್ಯಾಶಂಕಾಯಾಮಾಹ. ಪೂರ್ವವದ್ವಾ ॥ ೨೯ ॥ ವಾಶಬ್ದೋಽತ್ರ ಪಕ್ಷೈಕತ್ವಸ್ವೀಕಾರಮತದ್ವಯನಿರಾಸಾರ್ಥಃ. ಪೂರ್ವವತ್ ಪೂರ್ವಾಧಿಕರಣೇ "ದ್ವೇ ವಾವ ಬ್ರಹ್ಮಣೋ ರೂಪೇ" ಇತ್ಯಾದಿಶ್ರುತಿಬಲಾತ್ ಮೂರ್ತಾಮೂರ್ತಬ್ರಹ್ಮಣೋರ್ಯಥಾ ಭೇದಾಭೇದೋ ನಿರ್ದಿಷ್ಟಃ ತಥಾತ್ರಾಪಿ ಸಂಸಾರದಶಾಯಾಂ ಜೀವಬ್ರಹ್ಮಣೋಸ್ಸ್ವಾಭಾವಿಕಭೇದಃ ಮೋಕ್ಷದಶಾಯಾಂ ತದ್ವತ್ಸ್ವಾಭಾವಿಕಾಭೇದೋ ನಿರ್ದಿಷ್ಟಃ. ಕಿಂಚ ಸಂಸಾರದಶಾಯಾಮಪಿ ಚಿತ್ತ್ವೈಕತ್ವೇನ ಪ್ರಭಾಕರಪ್ರಭಾದಿವತ್ ಭೇದಾಭೇದೋ ಹ್ಯಂಗೀಕರ್ತವ್ಯಃ. ಉತ "ಭೇದವ್ಯಪದೇಶಾಚ್ಚಾನ್ಯಃ," "ಅಧಿಕಂ ತು ಭೇದನಿರ್ದೇಶಾತ್" ಇತ್ಯಾದಿನಾ ಯಥಾ ಪ್ರಪಂಚಬ್ರಹ್ಮಣೋಃ ಕಾರ್ಯಕಾರಣಭಾವೇನ ಪರಸ್ಪರಸ್ವಭಾವಭೇದಂ ಪ್ರದರ್ಶ್ಯ, "ತದನನ್ಯತ್ವಂ" ಇತ್ಯಾದಿನಾ ಪ್ರತಿಜ್ಞಾದೃಷ್ಟಾಂತಶ್ರುತ್ಯನುಸಾರೇಣ ತದ್ವದಭೇದಂ ಪ್ರಸಾಧ್ಯ, ಸ್ವಾಭಾವಿಕಭೇದಸ್ಯ ನಿವೃತ್ತ್ಯಯೋಗಮಾಶಂಕ್ಯ, "ಉಪಸಂಹಾರದರ್ಶನಾತ್" ಇತ್ಯತ್ರ ತಕ್ರಾದಿಸಂಪರ್ಕವಶೇನ ಕ್ಷೀರಸ್ಯ ಸ್ವಾಭಾವಿಕಕ್ಷೀರತ್ವನಿವೃತ್ತಿಪೂರ್ವಕದಧಿತ್ವಪ್ರಾಪ್ತಿವಜ್ಜೀವಬ್ರಹ್ಮಣೋಃ ಪರಸ್ಪರಪಾರಮಾರ್ಥಿಕಭೇದಸತ್ವೇಽಪಿ ಮೋಕ್ಷದಶಾಯಾಮಭೇದಸ್ಸಿದ್ಧ ಇತಿ ಯಥಾ ಪೂರ್ವಾಧ್ಯಾಯೇ ಪ್ರಪಂಚಿತಂ ತದ್ವದತ್ರಾಪಿ ತಯೋಸ್ತದ್ವಿವಕ್ಷಿತಮಿತಿ ವೇದಿತವ್ಯಂ. ಅತ್ರ ಪೂರ್ವವದಿತಿ ಸೂತ್ರಾಭಿಪ್ರೇತಸ್ತು ಪೂರ್ವಸೂತ್ರಪೂರ್ವಾಧಿಕರಣಪೂರ್ವಾಧ್ಯಾಯನ್ಯಾಯೇನ ಪರಸ್ಪರವಿರುದ್ಧಭೇದಾಭೇದಶ್ರುತೀನಾಂ

ತಾತ್ಪರ್ಯಾರ್ಥೋ ಗ್ರಾಹ್ಯಃ. ಶ್ರುತ್ಯೇಕದೇಶಪ್ರಾಮಾಣ್ಯೇನ ಭೇದ ಏವ ಮುಖ್ಯ ಇತಿ ದುರ್ವಾದಸ್ಸುಗತಾದಿವದವೈದಿಕತ್ವಾದಗ್ರಾಹ್ಯ ಏವ.

ಪ್ರಭೆಗೂ ಅದಕ್ಕಾಶ್ರಯನಾದ ಸೂರ್ಯನಿಗೂ ಇರುವಂತೆ ಜೀವಬ್ರಹ್ಮರಿಗೆ ಜಾತಿಸಂಬಂಧದಿಂದಲೂ, ಆನೆ ಕುದುರೆ ಗೋವುಗಳಿಗೆ ಇರುವಂತೆ ಜಾತಿವ್ಯಕ್ತಿ ನ್ಯಾಯದಿಂದಲೂ, ಶ್ರುತಿ ಸ್ಮೃತಿ ಯುಕ್ತಿ ಅನುಭವ ಮತ್ತು ವ್ಯವಹಾರಗಳ ಬಲದಿಂದಲೂ ದೇಶಕಾಲಗಳನ್ನನುಸರಿಸಿ ಭೇದಾಭೇದಗಳೆರಡೂ ಸಂಭವಿಸುತ್ತವೆ ಎಂದು ಹೇಳಿದ್ದು ಯುಕ್ತವಲ್ಲ; ಯಾಕೆಂದರೆ ಇದು ಸಂಸಾರದಶೆಗೆ ಮಾತ್ರವೇ ಅನ್ವಯಿಸತಕ್ಕದ್ದು. ಬ್ರಹ್ಮಸಾಕ್ಷಾತ್ಕಾರವಾದಮೇಲೆ "ಯಥಾ ನದ್ಯಃ" ಮೊದಲಾದ ಅನೇಕ ಶ್ರುತಿಗಳಲ್ಲಿ ಹೇಳಿದಂತೆ ಸ್ವರೂಪೈಕ್ಯವನ್ನು ಅಂಗೀಕರಿಸುವುದರಿಂದಲೂ, ಸ್ವಾಭಾವಿಕ ಭೇದವು ತೊಲಗದಿರುವುದರಿಂದಲೂ ಘಟಾಕಾಶದಂತೆ ಜೀವಭಾವವನ್ನು ಔಪಾಧಿಕವೆಂದೇ ಅಂಗೀಕರಿಸಬೇಕೆಂದು ಆಕ್ಷೇಪಿಸಿ ನಿರಾಕರಿಸುತ್ತಾನೆ. ಹಿಂದಿನ ಅಧಿಕರಣದಲ್ಲಿ "ಬ್ರಹ್ಮವು ಮೂರ್ತ ಅಮೂರ್ತವೆಂದು ಎರಡುಬಗೆಯಾಗಿದೆ" ಎಂಬ ಶ್ರುತಿಯ ಬಲದಿಂದ ಮೂರ್ತಾಮೂರ್ತಬ್ರಹ್ಮಗಳಿಗೆ ಹೇಗೆ ಭೇದಾಭೇದಗಳೆರಡನ್ನೂ ಹೇಳಿದೆಯೋ ಹಾಗೆಯೇ ಅಲ್ಲಲ್ಲಿಯೂ ಸಂಸಾರದಶೆಯಲ್ಲಿ ಜೀವಬ್ರಹ್ಮರಿಗೆ ಸ್ವಾಭಾವಿಕಭೇದವನ್ನೂ ಮೋಕ್ಷದಶೆಯಲ್ಲಿ ವಾಸ್ತವಿಕಾಭೇದವನ್ನೂ ಹೇಳಲಾಗಿದೆ. ಸೂತ್ರದಲ್ಲಿ ಬಂದಿರುವಶಬ್ದವು ಒಂದೇಪಕ್ಷವನ್ನು ಒಪ್ಪುವ ಮತಗಳನ್ನು ನಿರಾಕರಿಸುತ್ತದೆ. ಸಂಸಾರದಶೆಯಲ್ಲೂ ಚಿದ್ರೂಪವಾದ ಐಕ್ಯವಿರುವುದರಿಂದ ಸೂರ್ಯಪ್ರಭೆಗಳಿಗೆ ಭೇದಾಭೇದವನ್ನೇ ಒಪ್ಪಬೇಕೆ? ಅಥವಾ "ಭೇದವ್ಯಪದೇಶಾಚ್ಚಾನ್ಯಃ" "ಅಧಿಕಂ ತು ಭೇದನಿರ್ದೇಶಾತ್" ಎಂಬಲ್ಲಿ ಜಗದ್ಬ್ರಹ್ಮರಿಗೆ ಕಾರ್ಯಕಾರಣಭಾವದಿಂದ ಪರಸ್ಪರವಾಗಿ ಸ್ವಾಭಾವಿಕಭೇದವನ್ನು ಹೇಳಿ "ತದನನ್ಯತ್ವಂ" ಎಂಬ ಸೂತ್ರದಲ್ಲಿ ಪ್ರತಿಜ್ಞಾದೃಷ್ಟಾಂತಶ್ರುತಿಗನುಗುಣವಾಗಿ ಅಭೇದವನ್ನು ಸಾಧಿಸಿ, ಸ್ವಾಭಾವಿಕಭೇದವು ತೊಲಗುವುದಿಲ್ಲವೆಂದಾಶಂಕಿಸಿ "ಉಪಸಂಹಾರದರ್ಶನಾನ್ನೇತಿ" ಎಂಬ ಸೂತ್ರದಲ್ಲಿ ಮಜ್ಜಿಗೆಯ ಸಂಪರ್ಕದಿಂದ ಹಾಲಿನಲ್ಲಿ ಸ್ವಾಭಾವಿಕವಾದ ರೂಪವು ಹೋಗಿ ಮೊಸರಿನ ರೂಪವು ಬರುವಂತೆ ಜೀವಬ್ರಹ್ಮರಿಗೆ ಯಥಾರ್ಥವಾಗಿ ಭೇದವಿದ್ದರೂ ಮೋಕ್ಷದಶೆಯಲ್ಲಿ ಅಭೇದವೂ ಸಿದ್ಧಿಸುವುದೆಂದು ನಿರೂಪಿಸಲಾಯಿತು. ಅದರಂತೆ ಇಲ್ಲಿಯೂ ಶಿವಜೀವರಿಗೆ ಭೇದಾಭೇದವೇ ಅನ್ವಯಿಸುವುದೆಂದು ತಿಳಿಯಬೇಕು. ಇಲ್ಲಿ ಪೂರ್ವವತ್ ಎಂಬ ಸೂತ್ರಕ್ಕೆ ಹಿಂದಿನ ಸೂತ್ರ, ಹಿಂದಿನ ಅಧಿಕರಣ ಮತ್ತು ಹಿಂದಿನ ಅಧ್ಯಾಯ ಇವನ್ನು ಅನುಸರಿಸಿ ಪರಸ್ಪರವಿರುದ್ಧವಾದ ಭೇದಾಭೇದ ಶ್ರುತಿಗಳಿಗೆ ತಾತ್ಪರ್ಯವನ್ನು ಗ್ರಹಿಸಬೇಕೆಂದು ಅರ್ಥವಾಗುತ್ತದೆ. ಶ್ರುತಿಯ ಒಂದು ಅಂಶಕ್ಕೆ ಮಾತ್ರವೇ ಪ್ರಾಮಾಣ್ಯವನ್ನಿತ್ತು ಭೇದವೇ ಮುಖ್ಯವೆಂದು ಹೇಳುವ ವಾದವು ಬೌದ್ಧಮತದಂತೆ ಅವೈದಿಕವಾದ್ದರಿಂದ ಗ್ರಾಹ್ಯವಲ್ಲವೆಂದು ನಿಶ್ಚಯಿಸಲಾಗಿದೆ.

ನನು ತತ್ತ್ವಮಸ್ಯಾದಿಭೇದಾಭೇದವಿಧಾಯಕಶ್ರುತಿವತ್ "ದ್ವಾ

ಸುಪರ್ಣಾ ” ಇತ್ಯಾದಿಶ್ರುತಿಷು ದ್ವೈತಸ್ಯ “ ನೇಹ ನಾನಾಸ್ತಿ ಕಿಂಚನ ” ಇತ್ಯಾದಿಷು ತದ್ವದದ್ವೈತಸ್ಯ ಚ ದ್ಯೋತನಾತ್ ಕಥಮುಭಯೋರ್ಬೌದ್ಧಾದಿವನ್ನ ವಿಧೇಯಮಿತ್ಯಾಶಂಕಾಯಾಮಾಹ. ಪ್ರತಿಷೇಧಾಚ್ಚ ॥ ೨೯ ॥ “ ದ್ವಾ ಸುಪರ್ಣಾ ” ಇತ್ಯಾದಿಭೇದಶ್ರುತಿಮಾತ್ರಪ್ರಾಧಾನ್ಯತ್ವೇ “ ತತ್ತ್ವಮಸಿ ” ಇತ್ಯಾದ್ಯೈಕ್ಯಶ್ರುತಿಪ್ರತಿಷೇಧಾತ್, ತತ್ತ್ವಮಸ್ಯಾದ್ಯೈಕ್ಯಶ್ರುತಿಮಾತ್ರಪ್ರಧಾನತ್ವೇ ದ್ವಾ ಸುಪರ್ಣೇತ್ಯಾದಿಭೇದವಿಧಾಯಕಶ್ರುತಿಪ್ರತಿಷೇಧಾಚ್ಚ “ ಯಥಾ ನದ್ಯಃ ” ಇತ್ಯಾದಿಶ್ರುತಿಷು ಅಸಂದಿಗ್ಧತಯಾ ದೃಷ್ಟಾಂತಾನುಸಾರೇಣ ಪ್ರಾಪ್ಯಪ್ರಾಪಕತ್ವೇನ ಜೀವಬ್ರಹ್ಮಣೋರ್ಭೇದಾಭೇದಾವಗಮಾತ್ ವೈದಿಕಾನಾಂ ತದೇವ ಗ್ರಾಹ್ಯಂ. ಪಕ್ಷೈಕಸ್ವೀಕಾರೇ ಪರಸ್ಪರಶ್ರುತಿವಿರೋಧಾತ್ ಬೌದ್ಧಾದಿವದವೈದಿಕತ್ವಮನಿವಾರ್ಯಂ. ಅತಃ ಪೂರ್ವಾಧಿಕರಣೇ ಮೂರ್ತಾಮೂರ್ತಬ್ರಹ್ಮಣೋಃ ಭೇದಾಭೇದತ್ವವದತ್ರ ತ್ವಂತತ್ಪದಾರ್ಥಭೂತಜೀವಬ್ರಹ್ಮಣೋರ್ದ್ವೈತಾದ್ವೈತೋಭಯವಿಧಾಯಕಶ್ರುತಿನಿರ್ವಾಹಾರ್ಥಂ ಬದ್ಧಮುಕ್ತದಶಯೋಃ ಪಾರಮಾರ್ಥಿಕಂ ದ್ವೈತಮದ್ವೈತಮಿತಿ ಕಾಲಭೇದೇನ ಭೇದಾಭೇದೋ ಹ್ಯಂಗೀಕರ್ತವ್ಯಃ. ಕಿಂಚ ಸಾಂಸಾರಿಕದಶಾಯಾಮಪಿ “ ಅಂಶೋ ನಾನಾವ್ಯಪದೇಶಾತ್ ”, “ ಪ್ರಕಾಶಾದಿವತ್ತು ನೈವಂ ಪರಃ” ಇತ್ಯಾದಿಷು ದ್ವೈತಾದ್ವೈತಸ್ಯೈವ ಸ್ಪಷ್ಟಮುಪದಿಷ್ಟತ್ವಾತ್ ಪ್ರಭಾಕರಮಣ್ಯಾದಿವತ್ ಅಂಶಾಂಶಿನ್ಯಾಯೇನ ತಯೋರ್ಭೇದಾಭೇದೋ ಯುಕ್ತಃ. ತಸ್ಮಾತ್ “ ಏಕೋ ಹಿ ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ ಸೌಮ್ಯೈಕೇನ ಮೃತ್ಪಿಂಡೇನ ಸರ್ವಂ ಮೃಣ್ಮಯಂ ವಿಜ್ಞಾತಂ ಸ್ಯಾದ್ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ ” ಇತ್ಯಾದಿಶ್ರುತಿಷು ಕಾರಣಭೂತಬ್ರಹ್ಮಜ್ಞಾನೇನ ಕಾರ್ಯಜಾತವಿಜ್ಞಾನಪ್ರತಿಜ್ಞಾವಿಧಾಯಕಂ ಸರ್ವಂ ಶಾಸ್ತ್ರಂ ಉಪಪನ್ನಂ. ಅತ್ರ ಸತ್ಯಪದಸ್ಯ ವಸ್ತುಮಾತ್ರಪರತ್ವಂ ಬೋಧ್ಯಂ.

ಭೇದಾಭೇದವನ್ನು ವಿಧಿಸುವ “ ತತ್ತ್ವಮಸಿ ” ಎಂಬ ವಾಕ್ಯದಂತೆ “ ದ್ವಾ ಸುಪರ್ಣಾ”ಮೊದಲಾದ ಶ್ರುತಿಗಳಲ್ಲಿ ದ್ವೈತವೂ, “ಇಲ್ಲಿ ಏನೊಂದಿಷ್ಟುಭೇದವೂ ಇಲ್ಲ” ಎಂಬಲ್ಲಿ ಅದ್ವೈತವೂ ನಿರ್ಣಯವಾಗಿರುವುದರಿಂದ ಇವೆರಡನ್ನೂ ಯಾಕೆ ಒಪ್ಪಬಾರದೆಂದು ಆಶಂಕಿಸಿ ನಿರಾಕರಿಸುತ್ತಾನೆ. “ ದ್ವಾ ಸುಪರ್ಣಾ ” ಎಂಬ ಭೇದಶ್ರುತಿಗೆ ಮಾತ್ರವೇ ಪ್ರಾಧಾನ್ಯವನ್ನಿತ್ತರೆ ಐಕ್ಯಶ್ರುತಿ ನಿಷಿದ್ಧವಾಗುತ್ತದೆ. ಐಕ್ಯಶ್ರುತಿಗೆ ಮಾತ್ರವೇ ಪ್ರಧಾನ್ಯವನ್ನಿತ್ತರೆ ಭೇದಶ್ರುತಿ ನಿಷಿದ್ಧವಾಗುತ್ತದೆ. “ ಯಥಾ ನದ್ಯಃ ” ಎಂಬ ಶ್ರುತಿಯಲ್ಲಿ ದೃಷ್ಟಾಂತಾನುಸಾರವಾಗಿ ಜೀವಬ್ರಹ್ಮರಿಗೆ ನಿಸ್ಸಂದೇಹವಾಗಿ ಪ್ರಾಪ್ಯಪ್ರಾಪಕಭಾವದಿಂದ ಭೇದಾಭೇದವನ್ನು ಹೇಳಲಾಗಿದೆ. ಆದ್ದರಿಂದ

ವೈದಿಕರಿಗೆ ಇದೇ ಗ್ರಾಹ್ಯವಾದುದು. ಒಂದೇಪಕ್ಷವನ್ನು ಸ್ವೀಕರಿಸಿದರೆ ಪರಸ್ಪರ ಶ್ರುತಿವಿರೋಧದಿಂದ ಬೌದ್ಧಮತದಂತೆ ಅವೈದಿಕವೆನಿಸಬೇಕಾಗುತ್ತದೆ. ಹಿಂದಿನ ಅಧಿಕರಣದಲ್ಲಿ ಮೂರ್ತಾಮೂರ್ತಬ್ರಹ್ಮಗಳಿಗೆ ಭೇದಾಭೇದಗಳನ್ನು ಸಾಧಿಸಿದಂತೆ ಇಲ್ಲಿ ಜೀವಬ್ರಹ್ಮರಿಗೆ ಭೇದಾಭೇದಗಳೆರಡನ್ನೂ ವಿಧಿಸುವ ಶ್ರುತಿಗಳ ನಿರ್ವಾಹಕ್ಕಾಗಿ ಬದ್ಧದಶೆಯಲ್ಲಿ ದ್ವೈತವೂ, ಮುಕ್ತದಶೆಯಲ್ಲಿ ಅದ್ವೈತವೂ ಪಾರಮಾರ್ಥಿಕವಾದ್ದರಿಂದ ಕಾಲಭೇದದಿಂದ ಭೇದಾಭೇದವನ್ನು ಅಂಗೀಕರಿಸಬೇಕು. ಸಾಂಸಾರಿಕದಶೆಯಲ್ಲಿ "ಅಂಶೋ ನಾನಾವ್ಯಾಪದೇಶಶಾತ್" "ಪ್ರಕಾಶಾದಿವತ್ತು ನೈವಂ ಪರಃ" ಎಂಬ ಸೂತ್ರಗಳಲ್ಲಿ ದ್ವೈತಾದ್ವೈತವನ್ನೇ ಸ್ಪಷ್ಟವಾಗಿ ಹೇಳಿರುವುದರಿಂದ ಸೂರ್ಯ ಮತ್ತು ಮಣಿಗಳಂತೆ ಅಂಶಾಂಶಿಭಾವದಿಂದ ಜೀವಬ್ರಹ್ಮರಿಗೆ ಭೇದಾಭೇದವೇ ಹೊಂದಿಕೆಯಾಗುತ್ತದೆ. "ಒಂದನ್ನು ತಿಳಿದರೆ ಎಲ್ಲವೂ ತಿಳಿಯುವುದು" "ಒಂದು ಮಣ್ಣುಮುದ್ದೆಯಿಂದ ಮಣ್ಣಿನ ವಸ್ತುಗಳೆಲ್ಲವನ್ನೂ ತಿಳಿಯಬಹುದು, ವಾಗ್ವ್ಯವಹಾರಗಳೆಲ್ಲವೂ ವಿಕಾರಗಳೆನಿಸಿವೆ, ಮಣ್ಣೆಂಬುದೊಂದೇ ಸತ್ಯವಾದುದು" ಎಂದು ಶ್ರುತಿಗಳಲ್ಲಿ ಕಾರಣವೆನಿಸಿದ ಬ್ರಹ್ಮದ ಜ್ಞಾನದಿಂದ ಕಾರ್ಯಗಳೆಲ್ಲವೂ ತಿಳಿಯುವುವೆಂಬ ಪ್ರತಿಜ್ಞೆಯನ್ನು ವಿಧಿಸುವ ಶಾಸ್ತ್ರಗಳೆಲ್ಲವೂ ಯುಕ್ತವೆನಿಸುತ್ತವೆ. ಇಲ್ಲಿ ಸತ್ಯಪದವು ವಸ್ತುಸ್ಥಿತಿಯನ್ನು ಮಾತ್ರವೇ ತಿಳಿಸುತ್ತದೆ.

"ನೇಹನಾನಾ," "ನಾನ್ಯೋಽತೋಽಸ್ತಿ ಮಂತಾ" ಇತ್ಯಾದಿಶ್ರುತಿಷು ಜೀವಬ್ರಹ್ಮಣೋರ್ಭೇದನಿರಾಸಾವಗಮಾತ್ಕಥಂ ಭೇದಾಭೇದಮತಮುಪಪನ್ನಮಿತ್ಯಾಶಂಕಾಯಾಮಾಹ. ಪರಮತಸ್ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯಃ ||೩೦|| ಬ್ರಹ್ಮ ಅತಃ ಜೀವಾತ್ ಪರಂ ಭಿನ್ನಂ ಕುತಃ? ಸೇತೂನ್ಮಾನಸಂಬಂಧಭೇದವ್ಯಪದೇಶೇಭ್ಯ ಹೇತುಭ್ಯಃ. "ಏಷ ಸೇತುರ್ವಿಧರಣ ಏಷ ಲೋಕಾನಾಮಸಂಭೇದಾಯ" ಇತ್ಯಾದಿಶ್ರುತಿಷು ಜೀವಬ್ರಹ್ಮಣೋರ್ನಿಯಮ್ಯನಿಯಾಮಕತ್ವಾತ್ಮಕಸೇತುತ್ವಸ್ಯ ವ್ಯಪದೇಶಾತ್. ಉನ್ಮಾನವ್ಯಪದೇಶಾತ್, "ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ ಜೀವೋ ಭಾಗಸ್ಸ ವಿಜ್ಞೇಯಃ","ಆಕಾಶವತ್ಸರ್ವಗತಶ್ಚ ನಿತ್ಯಃ"ಇತ್ಯಾದಿಶ್ರುತಿಷು ಜೀವಬ್ರಹ್ಮಣೋರಣುತ್ವವಿಭುತ್ವಾತ್ಮಕಾನ್ಯೋನ್ಯಭೇದಪರಿಮಾಣಶ್ರವಣಾತ್. "ಅಧಿಕಂ ತು ಭೇದನಿರ್ದೇಶಾತ್","ಜ್ಞಾಽಜ್ಞೌ" ಇತ್ಯಾದಿಶ್ರುತಿಷು ಭೇದವ್ಯವಸ್ಥಾಪನಾತ್ "ನಾನ್ಯೋಽತೋಽಸ್ತಿ ದ್ರಷ್ಟಾ" ಇತ್ಯಾದಿವಾಕ್ಯಾನಾಂ ತತ್ಸರ್ವಜ್ಞತ್ವಾದ್ಯದ್ವಿತೀಯಮಹಿಮಾತಿಶಯವಿಷಯತ್ವಾಚ್ಚ ಸದಾ ಜೀವಬ್ರಹ್ಮಣೋರಭೇದ ಇತಿ ವಾದೋಽಪ್ಯನಂಗೀಕರಣೀಯಃ ಇತಿ ಸೂತ್ರಸೂಚಿತ ಸೂಕ್ಷ್ಮಾರ್ಥಃ. "ಅಥ ಯ ಆತ್ಮಾ ಸ ಸೇತುರ್ವಿಧೃತಿಃ ಏತಂ ಸೇತುಂ ತೀರ್ತ್ವಾಽಥ ಸನ್ನದ್ಧೋ ಭವತಿ," "ಅಮೃತಸ್ಯ ಪರಂ ಸೇತುಂ" ಇತ್ಯಾದಿಶ್ರುತಿರೇವಾಸ್ಯ ವಿಷಯಃ."ಅಯಮಾತ್ಮಾ

ಬ್ರಹ್ಮ", "ಪ್ರಜ್ಞಾನಂ ಬ್ರಹ್ಮ", "ತತ್ತ್ವಮಸಿ" ಇತ್ಯಾದಿಶ್ರುತಿಷು ಜೀವಬ್ರಹ್ಮಣೋರೇಕತ್ವೋಪದೇಶಾತ್ "ದ್ವಾ ಸುಪರ್ಣಾ", "ಏಷಾ ಮಿಶೇ ಪಶುಪತಿರ್ದ್ವಿಪದಾಂ ಚತುಷ್ಪದಾಂ" ಇತ್ಯಾದಿಶ್ರುತಿಷು ತಯೋರನ್ಯೋಽನ್ಯಭೇದವ್ಯವಸ್ಥಾಪನಾದಭೇದೋ ವೇತಿ ವಿಶಯಃ. "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ" ಇತ್ಯಾದಿಶ್ರುತಿಷು ಭೇದನಿರಾಕರಣದರ್ಶನಾತ್, "ಏಷ ಸೇತುರ್ವಿಧರಣಃ" ಇತಿ ಶ್ರುತೌ ತಯೋರ್ಭೇದೋ ವ್ಯವಹ್ರಿಯತ ಇತಿ ಚೇತ್ತದಸತ್, ಯಥಾ ಲೋಕೇ ಸೇತೂನಾಂ ವಾರಿಮರ್ಯಾದಾವ್ಯವಸ್ಥಾಪಕತ್ವಂ ಏವಂ ಬ್ರಹ್ಮಣೋಽಪಿ ವರ್ಣಾಶ್ರಮಮರ್ಯಾದಾವ್ಯವಸ್ಥಾಪಕತ್ವಂ. ಅತೋ ಬ್ರಹ್ಮಣಸ್ಸೇತುಸಾದೃಶ್ಯತ್ವಂ. ತಥಾಚ ಬ್ರಹ್ಮಸಾಕ್ಷಾತ್ಕಾರಪರ್ಯಂತಂ ಜೀವಬ್ರಹ್ಮಣೋಃ ಔಪಾಧಿಕಮಿಥ್ಯಾಭೂತಭೇದ ಏವಾಂಗೀಕರ್ತವ್ಯಃ. ಜೀವಬ್ರಹ್ಮಣೋರಣುತ್ವವಿಭುತ್ವವ್ಯಪದೇಶೇನ ಭೇದ ಇತಿಚೇತ್ತದಪ್ಯಯುಕ್ತಂ. "ಪಾದೋಽಸ್ಯ ವಿಶ್ವಾಭೂತಾನಿ ತ್ರಿಪಾದಸ್ಯಾಮೃತಂ ದಿವಿ" ಇತಿಶ್ರುತೌ ಬ್ರಹ್ಮಾಂಡಾಂತರ್ವರ್ತಿನೋ ಜೀವಚೈತನ್ಯಸ್ಯೈಕಪಾದತ್ವಂ ಬ್ರಹ್ಮಾಂಡಾದ್ಬಹಿರ್ವಿದ್ಯಮಾನಸ್ಯ ಬ್ರಹ್ಮಚೈತನ್ಯಸ್ಯ ತ್ರಿಪಾದತ್ವಂ ಚ ತ್ವಂತತ್ಪದಾರ್ಥವಿವೇಕಾರ್ಥಮುಕ್ತಂ. ತ್ವಂತತ್ಪದಾರ್ಥಯೋರಭೇದಜ್ಞಾನಸ್ಯ ತ್ವಂತತ್ಪದಾರ್ಥಜ್ಞಾನಂ ವಿನಾಽಸಂಭವಾತ್, ತ್ವಂತತ್ಪದಾರ್ಥಜ್ಞಾನಾಯ ಸ್ಥೂಲಾರುಂಧತೀನ್ಯಾಯೇನಾಂತಃಕರಣವಿಶಿಷ್ಟಸ್ಯ ಜೀವಸ್ಯಾಣುತ್ವಂ ಮಾಯಾವಿಶಿಷ್ಟಬ್ರಹ್ಮಣೋ ವಿಭುತ್ವಂ ಚೋಕ್ತಂ. ತಸ್ಮಾತ್ತಚ್ಛ್ರುತೇರ್ನ ಭೇದತಾತ್ಪರ್ಯಂ ಅಣುಪರಿಮಾಣವಿಭುಪರಿಮಾಣಯೋರ್ಮಾಯಾಕಲ್ಪಿತತ್ವೇನ ಮಿಥ್ಯಾಭೂತತ್ವಾತ್ಸರ್ವಥಾಽಭೇದ ಏವ ವಾಸ್ತವ ಇತಿ ಪ್ರಾಪ್ತೇ ಪ್ರಚಕ್ಷ್ಮಹೇ. ಅಥ "ಯ ಆತ್ಮಾ ಸ ಸೇತುರ್ವಿಧೃತಿಃ" ಇತ್ಯಸ್ಯ ಪರಸ್ಯ ಸೇತುತ್ವವ್ಯಪದೇಶಾತ್, ಸೇತುಶಬ್ದಸ್ಯ ಚ ಲೋಕೇ ಕೂಲಾಂತರಪ್ರಾಪ್ತಿಹೇತೌ ಪ್ರಸಿದ್ಧೇಃ ಇತೋಽನ್ಯದನೇನ ಪ್ರಾಪ್ಯಮಸ್ತೀತಿ ಗಮ್ಯತೇ. ತಥಾ "ಏಷ ಸೇತುಂ ತೀರ್ತ್ವಾಽಥ ಸನ್ನದ್ಧೋ ಭವತಿ" ಇತಿ ತರಿತವ್ಯಂ ಚಾಸ್ಯಾಭಿಧೀಯತೇ. "ಅತಶ್ಚಾನ್ಯತ್ಪ್ರಾಪ್ಯಮಸ್ತಿ", "ಉನ್ಮಿತಂ ಪರಿಮಿತಮಿದ ಪರಂ ಬ್ರಹ್ಮ", "ಚತುಷ್ಪಾದ್ಬ್ರಹ್ಮ ಷೋಡಶಕಲಮಿತ್ಯುನ್ಮಾನವ್ಯಪದೇಶಾತ್". ಸ ಚಾಯಮುನ್ಮಾನವ್ಯಪದೇಶಸ್ತೇನ ಸೇತುನಾ ಪ್ರಾಪ್ಯಾಮನುನ್ಮಿತಸ್ಯ ಸ್ಥಿತಿಂ ದ್ಯೋತಯತಿ. ತಥಾ ಸಂಬಂಧವ್ಯಪದೇಶಶ್ಚ ಸೇತುಸೇತುಮತೋಃ ಪ್ರಾಪಕತ್ವಪ್ರಾಪ್ಯತ್ವಲಕ್ಷಣೋ ದೃಶ್ಯತೇ. "ಅಮೃತಸ್ಯ ಪರಂ ಸೇತುಂ ದಗ್ಧೇಂಧನಮಿವಾನಲಂ", "ಅಮೃತಸ್ಯೈಷ ಸೇತುಃ" ಇತಿ. ಅತಶ್ಚ

ಪರಾತ್ಪರಮಸ್ತಿ ಭೇದೇನ ಚ ಪರಾತ್ಪರಂ ವ್ಯಪದಿಶ್ಯತೇ, "ಪರಾತ್ಪರಂ ಪುರುಷಮುಪೈತಿ ದಿವ್ಯಂ", "ಪರಾತ್ಪರಂ ಯನ್ಮಹತೋ ಮಹಾಂತಂ" ಇತಿಚ. ತಥಾ "ತೇನೇದಂ ಪೂರ್ಣಂ ಪುರುಷೇಣ ಸರ್ವಂ", "ತತೋ ಯದುತ್ತರತರಂ ತದರೂಪಮನಾಮಯಂ" ಇತ್ಯಾದಿಶ್ರುತಿಷು ಜೀವ ಬ್ರಹ್ಮಣೋರ್ಘಟಪಟವದನ್ಯೋನ್ಯವೈಲಕ್ಷಣ್ಯವ್ಯಪದೇಶಾತ್ ಜೀವ ಏವ ಬ್ರಹ್ಮೇತಿ ವಾದೋ ಹ್ಯಸಂಗತಃ. ಬಿಂಬಪ್ರತಿಬಿಂಬಭಾವ ವಜ್ಜೀವಸ್ಯ ದರ್ಶಿತತ್ವಾದೌಪಾಧಿಕಭೇದ ಏವೇತಿ ಯತ್ತದಯುಕ್ತಂ. "ಜ್ಞಾಜ್ಞೌ", "ಅಜೋ ಹ್ಯೇಕೋ ಜುಷಮಾಣೋಽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ", "ಉತ್ಪತ್ತೇರಸಂಭವಾತ್", "ಅಧಿಕಂ ತು ಭೇದನಿರ್ದೇಶಾತ್" ಇತ್ಯಾದಿಶ್ರುತಿಸೂತ್ರ ವಿರೋಧಪ್ರಸಂಗಾತ್ ಜೀವಬ್ರಹ್ಮಣೋರಾದೌ ಭ್ರಮರಕೀಟವತ್, ರಸಲೋಹವತ್ಪರಸ್ಪರಂ ಸ್ವಾಭಾವಿಕಭೇದಸತ್ತ್ವೇಽಪಿ ಶಿವಾಚಾರ್ಯ ಕಟಾಕ್ಷಾಜ್ಜೀವಶ್ಶಿವೋ ಭವತೀತಿ ನಿಶ್ಚೀಯತೇ.

"ಇಲ್ಲಿ ಏನೊಂದು ಭೇದವೂ ಇಲ್ಲ" "ಇವನಿಗಿಂತ ಬೇರೆ ನೋಡುವವನೂ ಇಲ್ಲ; ತಿಳಿಯುವವನೂ ಇಲ್ಲ" ಎಂಬ ಶ್ರುತಿಗಳಲ್ಲಿ ಜೀವಪರಮರಿಗೆ ಭೇದವನ್ನು ನಿಷೇಧಿಸಿರುವುದರಿಂದ ಭೇದಾಭೇದಮತವು ಹೇಗೆ ಹೊಂದುತ್ತದೆ ? ಎಂದು ಆಶಂಕಿಸಿ ಸಮಾಧಾನಮಾಡುತ್ತಾನೆ. ಸೇತು, ಉನ್ಮಾನ, ಸಂಬಂಧ ಮತ್ತು ಭೇದಗಳ ವ್ಯವಹಾರವಿರುವುದರಿಂದ ಪರಮಾತ್ಮನು ಜೀವಾತ್ಮನಿಗಿಂತಲೂ ಭಿನ್ನನಾಗಿದ್ದಾನೆ. "ಇವನು ಈ ಲೋಕಗಳ ಸುವ್ಯವಸ್ಥೆಗಾಗಿಯೂ ಧರ್ಮರಕ್ಷಣೆಗಾಗಿಯೂ ಸೇತುವೆನಿಸಿದ್ದಾನೆ" ಎಂಬ ಶ್ರುತಿಯಲ್ಲಿ ಜೀವನಿಗೆ ಪರಮಾತ್ಮನು ನಿಯಾಮಕನಾದ್ದರಿಂದ ಅವನನ್ನು ಸೇತುವೆಂದು ವ್ಯವಹರಿಸಲಾಗಿದೆ. "ಬಾಲದ ತುದಿಯ ನೂರನೇ ಒಂದು ಭಾಗದಲ್ಲಿ ನೂರನೇ ಒಂದುಭಾಗವನ್ನು ಜೀವನ ಪ್ರಮಾಣವೆಂದು ತಿಳಿಯಬೇಕು." "ಆಕಾಶದಂತೆ ಪರಮಾತ್ಮನು ಸರ್ವಗತನು ಮತ್ತು ನಿತ್ಯನು" ಹೀಗೆ ಶ್ರುತಿಗಳಲ್ಲಿ ಜೀವ ಪರಮಾತ್ಮರಿಗೆ ಅಣು ಮತ್ತು ವಿಭುವೆಂದು ಪರಸ್ಪರಭಿನ್ನವಾದ ಪರಿಮಾಣಗಳನ್ನು ಹೇಳಲಾಗಿದೆ. "ಅಧಿಕಂ ತು ಭೇದನಿರ್ದೇಶಾತ್" "ಜ್ಞಾಜ್ಞೌ" ಈ ಬಗೆಯ ಸೂತ್ರ ಮತ್ತು ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಭೇದವನ್ನು ಹೇಳಿರುವುದರಿಂದಲೂ, "ಇವನಿಗಿಂತ ಬೇರೆ ನೋಡುವವನಿಲ್ಲ" ಎಂಬ ವಾಕ್ಯಗಳು ಪರಮಾತ್ಮನ ಸರ್ವಜ್ಞತ್ವ ಮೊದಲಾದ ಅದ್ಭುತಮಹಿಮಾತಿಶಯವನ್ನು ತಿಳಿಸುವುದರಿಂದಲೂ ಯಾವಾಗಲೂ ಜೀವಪರಮರಿಗೆ ಅಭೇದವನ್ನೇ ಪ್ರತಿಪಾದಿಸುವ ವಾದವನ್ನು ಅಂಗೀಕರಿಸಲಾಗುವುದಿಲ್ಲವೆಂಬುದು ಸೂತ್ರದ ಅರ್ಥ. "ಯಾವನು ಸರ್ವವ್ಯಾಪಕನೋ ಅವನೇ ಎಲ್ಲ ವಸ್ತುಗಳನ್ನೂ ಧರಿಸಿರುವ ಸೇತುವೆನಿಸಿದ್ದಾನೆ. ಈ ಸೇತುವನ್ನು ದಾಟಿದವನು ಸಿದ್ಧನಾಗುತ್ತಾನೆ." "ಬ್ರಹ್ಮಕ್ಕೆ ನಾಲ್ಕುಪಾದಗಳವೆ" "ಇವನು ಅಮೃತದ ಆಚೆಯ ಸೇತುವಾಗಿ,

ದ್ದಾನೆ.” ಈ ಬಗೆಯ ಶ್ರುತಿಗಳೇ ಈ ಸೂತ್ರದ ವಿಷಯ. “ಈ ಆತ್ಮವೇ ಬ್ರಹ್ಮ” “ನಾನು ಬ್ರಹ್ಮನಿದ್ದೇನೆ” “ಪ್ರಜ್ಞಾನವೇ ಬ್ರಹ್ಮ” “ನೀನು ಅದೇ ಆಗಿದ್ದೀಯೆ” ಈ ಬಗೆಯ ಶ್ರುತಿಗಳಲ್ಲಿ ಜೀವಪರಮರಿಗೆ ಐಕ್ಯವನ್ನು ಹೇಳಿದೆ. “ಇಬ್ಬರು ಒಂದೇ ಬಗೆಯ ದೇಹವೃಕ್ಷದಲ್ಲಿ ನೆಲಸಿದ್ದಾರೆ” “ನಾಶವಾಗತಕ್ಕದ್ದು ದೇಹ ; ನಾಶವಿಲ್ಲ ದವನು ಜೀವ, ಇವರಿಬ್ಬಗೂ ಒಬ್ಬ ಮಹಾದೇವನೇ ಪ್ರಭುವಾಗಿದ್ದಾನೆ” “ಎರಡು ಕಾಲಿನ ಮತ್ತು ನಾಲ್ಕುಕಾಲಿನ ಪಶುಗಳಿಗೆ ನಾನು ಪ್ರಭುವಾಗಿದ್ದೇನೆ” ಈ ಬಗೆಯ ಶ್ರುತಿಗಳಲ್ಲಿ ಅವರಿಗೆ ಪರಸ್ಪರವಾಗಿ ಭೇದವನ್ನು ಹೇಳಿರುವುದರಿಂದ ಅಭೇದವುಂಟೇ ಇಲ್ಲವೆ? ಎಂದು ಸಂಶಯವುಂಟಾಗುತ್ತದೆ. “ಮೊದಲಿಗೆ ಇದೊಂದೇ ಸದ್ವಸ್ತು ಇತ್ತು.” “ಆತ್ಮ ಒಂದೇ ಇತ್ತು”. “ಒಬ್ಬನೇ ರುದ್ರನು ಎರಡನೆಯವನಿಲ್ಲದಿದ್ದನು.” ಈ ಬಗೆಯ ಶ್ರುತಿಗಳಲ್ಲಿ ಭೇದವನ್ನು ನಿರಾಕರಿಸಲಾಗಿದೆ. “ಇವನು ಲೋಕಗಳನ್ನು ಹಿಡಿದಿರುವ ಸೇತು” ಎಂಬಲ್ಲಿ ಲೋಕಗಳಿಗೂ ಅವನಿಗೂ ಭೇದವನ್ನೇ ತಿಳಿಸಲಾಗಿದೆ ಎಂದು ಆಕ್ಷೇಪಿಸಿದರೆ ಇದು ಯುಕ್ತವಲ್ಲ. ಲೋಕದಲ್ಲಿ ಸೇತುವೆಯು ಹೇಗೆ ನೀರನ್ನು ಮುಂದೆ ನುಗ್ಗದಂತೆ ತಡೆಮಾಡುವುದೋ ಹಾಗೆ ಪರಮಾತ್ಮನೂ ವರ್ಣಾಶ್ರಮಗಳ ಎಲ್ಲೆಯನ್ನು ಏರ್ಪಡಿಸಿರುವುದರಿಂದ ಅವನನ್ನು ಸೇತುವೆಗೆ ಹೋಲಿಸಲಾಗಿದೆ. ಆದ್ದರಿಂದ ಬ್ರಹ್ಮದರ್ಶನವಾಗುವವರೆಗೂ ಜೀವಬ್ರಹ್ಮರಿಗೆ ಉಪಾಧಿಯಿಂದ ಮಿಥ್ಯೆ ಎನಿಸಿದ ಭೇದವನ್ನೇ ಅಂಗೀಕರಿಸಬೇಕು. ಜೀವಬ್ರಹ್ಮರನ್ನು ಅಣು ಮತ್ತು ವಿಭುವೆಂದು ಹೇಳಿದ್ದರಿಂದ ಅವರಿಗೆ ಭೇದ ಸಹಜವೆಂದು ಹೇಳಿದರೆ ಅದು ಯುಕ್ತವಲ್ಲ. “ಸಮಸ್ತಪ್ರಾಣಿಗಳೂ ಅವನ ಒಂದು ಪಾದವಾಗಿದ್ದರೆ ಉಳಿದ ಮೂರು ಪಾದಗಳು ದ್ಯುಲೋಕದಲ್ಲಿ ಅಮೃತಮಯವಾಗಿವೆ” ಎಂಬಲ್ಲಿ ಬ್ರಹ್ಮಾಂಡದಲ್ಲಿರುವ ಜೀವರನ್ನು ಒಂದು ಪಾದವೆಂದೂ, ಬ್ರಹ್ಮಾಂಡದಿಂದಾಚೆಗೆ ಇರುವ ಬ್ರಹ್ಮಚೈತನ್ಯವನ್ನು ಮೂರುಪಾದಗಳೆಂದೂ ತ್ವಂ, ತತ್ ಎಂಬ ಪದಗಳ ಅರ್ಥವನ್ನು ವಿವರಿಸಲಿಕ್ಕಾಗಿ ಶ್ರುತಿಯಲ್ಲಿ ಹೇಳಲಾಗಿದೆ. ನೀನು, ಅದು ಎಂಬ ಪದಗಳಿಂದ ಬೋಧಿತರಾದ ಜೀವಪರಮರಿಗೆ ಪದಾರ್ಥಜ್ಞಾನವಿಲ್ಲದೆ ಅಭೇದಜ್ಞಾನ ಸಂಭವಿಸುವಂತಿಲ್ಲ. ಆ ಬಗೆಯ ಜ್ಞಾನಕ್ಕಾಗಿಯೇ ಸ್ಥೂಲಾರುಂಧತೀನ್ಯಾಯದಿಂದ ಅಂತಃಕರಣವಿಶಿಷ್ಟನಾದ ಜೀವನನ್ನು ಅಣುವೆಂದೂ, ಮಾಯಾಶಕ್ತಿವಿಶಿಷ್ಟನಾದ ಬ್ರಹ್ಮವನ್ನು ವಿಭುವೆಂದೂ ಹೇಳಲಾಗಿದೆ. ಆದ್ದರಿಂದ ಆ ಶ್ರುತಿಗೆ ಭೇದವನ್ನು ತಿಳಿಸುವ ಅಭಿಪ್ರಾಯವೇ ಇಲ್ಲ. ಆದರೆ ಅಣುಪರಿಮಾಣ ವಿಭುಪರಿಮಾಣಗಳೆರಡೂ ಮಾಯೆಯಿಂದ ಕಲ್ಪಿತವಾದ್ದರಿಂದ ಸುಳ್ಳೆನಿಸಿವೆ. ಇದರಿಂದ ಜೀವಬ್ರಹ್ಮರಿಗೆ ಯಾವಾಗಲೂ ಅಭೇದವೇ ವಾಸ್ತವವಾಗಿರುತ್ತದೆ ಎಂದು ಆಕ್ಷೇಪ ಬಂದರೆ ಅದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. “ಯಾವನು ಆತ್ಮನೋ ಅವನೇ ಸೇತುವಾಗಿದ್ದಾನೆ.” ಎಂಬಲ್ಲಿ ಬ್ರಹ್ಮವನ್ನು ಸೇತುವೆಂದು ತಿಳಿಸಲಾಗಿದೆ. ಸೇತುಶಬ್ದವು ಲೋಕದಲ್ಲಿ ಮತ್ತೊಂದು ದಡವನ್ನು ಮುಟ್ಟಿಸುವ ಸಾಧನವೆಂದು ಪ್ರಸಿದ್ಧವಾಗಿದೆಯಾದ್ದರಿಂದ

ಇದಕ್ಕಿಂತ ಬೇರೊಂದು ಪ್ರಾಪ್ಯವಸ್ತುವಿದೆ ಎಂದು ತಿಳಿದುಬರುತ್ತದೆ. "ಈ ಸೇತುವನ್ನು ದಾಟಿ ಅವನು ಸಿದ್ಧನಾಗುತ್ತಾನೆ" ಎಂಬಲ್ಲಿ ಇದನ್ನು ದಾಟಬೇಕೆಂದು ಹೇಳಲಾಗಿದೆ. "ಇದನ್ನು ಬಿಟ್ಟುಹೋಗಿ ಸೇರತಕ್ಕ ಬೇರೊಂದು ಸ್ಥಲವಿದೆ" ಎಂದು ಮುಂತಾಗಿ ಶ್ರುತಿಯಲ್ಲಿ ಸೇತುವ್ಯಪದೇಶಗಳು ಬಂದಿವೆ. ಹಾಗೆಯೇ ಉನ್ಮಾನವ್ಯಪದೇಶಗಳೂ ಬಂದಿವೆ. "ಈ ಪರಬ್ರಹ್ಮವು ಮಿತಿಮೀರಿಯೂ ಮಿತಿಗೊಳಪಟ್ಟೂ ಇದೆ" "ಬ್ರಹ್ಮಕ್ಕೆ ನಾಲ್ಕುಪಾದಗಳೂ ಹದಿನಾರು ಕಲೆಗಳೂ ಇವೆ." ಈ ಬಗೆಯ ಉನ್ಮಾನವ್ಯಪದೇಶವು ಸೇತುವಿನಿಂದ ಹೊಂದಬಹುದಾದ ಸೀಮಾತೀತನಾದ ಪರಮಾತ್ಮನಿಗೇ ಅನ್ವಯಿಸುತ್ತದೆ. ಹಾಗೆಯೇ ಸೇತುವೆನಿಸಿದ ಪರಮಾತ್ಮನಿಗೂ ಅವನನ್ನು ಪಡೆಯಬೇಕಾಗಿರುವ ಜೀವನಿಗೂ ಪ್ರಾಪ್ಯಪ್ರಾಪಕವೆಂಬ ಸಂಬಂಧವಿದೆ. "ಸೌದೆಯನ್ನು ಸುಡುವ ಬೆಂಕಿಯಂತೆ ಅಮೃತಪ್ರಾಪ್ತಿಗೆ ಉತ್ಕೃಷ್ಟವಾದ ಸೇತುವಾಗಿದ್ದಾನೆ" "ಅಮೃತಕ್ಕೆ ಇವನೇ ಸೇತುವಾಗಿದ್ದಾನೆ" ಎಂದು ಶ್ರುತಿಗಳಲ್ಲಿ ಆಚೆನದಕ್ಕಿಂತ ಪರಮಾತ್ಮನು ಆಚೆಗಿದ್ದಾನೆ ಎಂದು ಭೇದದಿಂದ ಹೇಳಲಾಗಿದೆ. "ಶ್ರೇಷ್ಠವಸ್ತುವಿಗಿಂತ ಶ್ರೇಷ್ಠವೆನಿಸಿದ ದಿವ್ಯಪುರುಷನಲ್ಲಿ ಮುಕ್ತನು ಸೇರುತ್ತಾನೆ" "ದೊಡ್ಡದಕ್ಕಿಂತಲೂ ದೊಡ್ಡದು." "ಆ ಪುರುಷನಿಂದಲೇ ಇದೆಲ್ಲವೂ ತುಂಬಿದೆ" "ಅದಕ್ಕಿಂತಲೂ ಆಚೆಗೆ ಇರುವ ವಸ್ತುವು ರೂಪವಿಲ್ಲದೆ ನಿರಾಮಯವೆನಿಸಿದೆ." "ರುದ್ರನೇ ವಿಶ್ವಕ್ಕೆ ಅಧಿಕನು ಮತ್ತು ಜ್ಞಾನಿಯು" ಹೀಗೆ ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಘಟಪಟಗಳಂತೆ ಪರಸ್ಪರ ಭೇದವನ್ನು ಹೇಳಿರುವುದರಿಂದ ಜೀವನೇ ಬ್ರಹ್ಮವೆಂಬ ವಾದವು ಯುಕ್ತವಲ್ಲ. ಬಿಂಬಪ್ರತಿಬಿಂಬಭಾವದಂತೆ ಜೀವಬ್ರಹ್ಮರಿಗೆ ಔಪಾಧಿಕಭೇದವನ್ನು ಹೇಳಿದ್ದೂ ಯುಕ್ತವಲ್ಲ; ಹೀಗೆ ಹೇಳುವುದರಿಂದ "ಇಬ್ಬರಲ್ಲಿ ಒಬ್ಬನು ಈಶ, ಮತ್ತೊಬ್ಬನು ದಾಸ," "ಒಬ್ಬ ಜೀವನು ಪ್ರಕೃತಿಯನ್ನು ಭೋಗಿಸುತ್ತಾನೆ. ಮತ್ತೊಬ್ಬನು ಅದನ್ನು ಭೋಗಿಸಿ ತೊರೆಯುತ್ತಾನೆ." "ಉತ್ಪತ್ತೇರಸಂಭವಾತ್" "ಅಧಿಕಂ ತು ಭೇದನಿರ್ದೇಶಾತ್" ಈ ಬಗೆಯ ಶ್ರುತಿಸೂತ್ರಗಳ ವಿರೋಧವುಂಟಾದೀತು. ಆದ್ದರಿಂದ ಜೀವಬ್ರಹ್ಮರಿಗೆ ಆದಿಯಲ್ಲಿ ರಸಲೋಹಗಳಂತೆಯೂ, ಭ್ರಮರಕೀಟಗಳಂತೆಯೂ ಪರಸ್ಪರವಾಗಿ ಸ್ವಾಭಾವಿಕಭೇದವಿದ್ದರೂ ಶಿವಾಚಾರ್ಯನ ಕೃಪಾಕಟಾಕ್ಷದಿಂದ ಜೀವನು ಶಿವನಾಗುತ್ತಾನೆಂದು ನಿಶ್ಚಯಿಸಲಾಗಿದೆ.

**ನನು "ಅಯಮಾತ್ಮಾ ಬ್ರಹ್ಮ" ಇತ್ಯಾದಿಷು ಜೀವಸ್ಯೈವ ಬ್ರಹ್ಮತ್ವೋಪದೇಶಾತ್ ಸ್ವಾಭಾವಿಕಭೇದಸ್ಯ ನಿವೃತ್ತ್ಯಯೋಗಾತ್, "ಜೀವತ್ವಮೀಶ್ವರತ್ವಂ ಚ ಬ್ರಹ್ಮಣ್ಯೇಕತ್ರ ಕಲ್ಪಿತಂ" ಇತ್ಯಾದಿಷು ತಸ್ಯ ಕಲ್ಪಿತತ್ವವ್ಯವಸ್ಥಾಪನಾಚ್ಚ ರಜ್ಜುಸರ್ಪವದ್ಭೇದ ಔಪಾಧಿಕತ್ವೇನ ಭ್ರಮಾತ್ಮಕ ಏವೇತ್ಯಾಶಂಕ್ಯ ತತ್ರಾಹ. ಸಾಮಾನ್ಯಾತ್ತು ॥ ೩೧ ॥ ತುಶಬ್ದಃ ಪಕ್ಷಂ ವ್ಯಾವರ್ತಯತಿ. ಸಾಮಾನ್ಯಾತ್ ಸಮಾನಸ್ಯ ಭಾವಃ ಸಾಮಾನ್ಯಂ. ತಸ್ಮಾತ್ಸಾಮಾನ್ಯಾತ್ ದ್ವಾ ಸುಪರ್ಣೇತ್ಯಾದಿಭೇದಶ್ರುತಿಭ್ಯಃ ಜೀವಬ್ರಹ್ಮ**

ಜೋರ್ಭೇದಸ್ಯ ತತ್ತ್ವಮಸ್ಯಾದಿಶ್ರುತಿಭ್ಯಃ ತಯೋರಭೇದಸ್ಯ ಚ ತುಲ್ಯತ್ವೇನ ವ್ಯಪದೇಶಾತ್ ತದುಭಯವಿಧಾಯಕಶ್ರುತ್ಯೋಃ ಕಾಲಭೇದೇನ ಸಮನ್ವಯಾತ್ ತದುಭಯಶ್ರುತ್ಯೋರ್ಗೌಣತ್ವಮುಖ್ಯತ್ವವ್ಯವಸ್ಥಾನಾಂಗೀಕರ್ತವ್ಯಾ. ಭ್ರಮರಕ್ರಿಮಿನ್ಯಾಯೇನ ಸ್ವಾಭಾವಿಕತ್ವನಿವೃತ್ತಿದರ್ಶನಾತ್ ಆರೋಪಿತಭೇದ ಔಪಚಾರಿಕ ಆಗುಂತುಕ ಇತ್ಯಾದಿವಾದೋ ಹ್ಯವಿಚಾರಿತರಮಣೀಯಃ. ಕಿಂಚ " ವಿಶ್ವಾಧಿಕೋ ರುದ್ರಃ " ಇತ್ಯಾದಿಷು ಶಿವಸ್ಯ ಚಿದಚಿತ್ಪ್ರಪಂಚಾಧಿಕತ್ವವ್ಯಪದೇಶಾತ್ ಅಹಂ ಬ್ರಹ್ಮೇತಿ ಜೀವಬ್ರಹ್ಮವಾದೋ ನ ಯುಕ್ತಃ. ಅಥ " ಯ ಆತ್ಮಾ ಸ ಸೇತುರ್ವಿಧೃತಿಃ " ಇತ್ಯಾದಿನಾ ಸೇತುತ್ವತರಿತವ್ಯತ್ವಪರಿಮಿತತ್ವಪ್ರಾಪಕತ್ವಾದಿಭೇದೇನ ತಯೋರ್ಭೇದವ್ಯಪದೇಶಾತ್ ತದೇವಾವಶ್ಯಕಮಿತಿ ಚೇತ್ತದಸಂಗತಂ, " ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ " ಇತ್ಯತ್ರ ತಸ್ಯ ಅಭಿನ್ನನಿಮಿತ್ತೋಪಾದಾನಕಾರಣತ್ವೋಪದೇಶಾತ್. " ಏತಮಿತಃ ಪ್ರೇತ್ಯ ಅಭಿಸಂಭವಿತಾಸ್ಮಿ " ಇತಿ ಪ್ರಾಪ್ಯತ್ವಮುಚ್ಯತೇ ಶ್ರುತ್ಯಂತರೇ. " ಸಮಸ್ತಸಾಕ್ಷಿಂ ತಮಸಃ ಪರಸ್ತಾತ್ " ಇತ್ಯನೇನ ತಮಃಪರಸ್ಯ ಶಿವಸ್ಯ ಮುಕ್ತಜೀವಪ್ರಾಪ್ಯತ್ವಂ ದರ್ಶಿತಂ. " ಯಥಾ ನದ್ಯಃ " ಇತ್ಯಾದಿಶ್ರುತಿಷು ನದೀಸಮುದ್ರದೃಷ್ಟಾಂತೇನ ಜೀವಭಾವನಿವೃತ್ತಿಪೂರ್ವಕಶಿವತ್ವಪ್ರಾಪ್ತೇರೇವ ಸ್ಪಷ್ಟಮುಪದಿಷ್ಟತ್ವಾತ್ ಉಭಯಶ್ರುತ್ಯೋಸ್ಸಾಮಾನ್ಯತ್ವೇನ ಪ್ರಾಮಾಣ್ಯಂ ನಿಶ್ಚೀಯತೇ.

" ಈ ಆತ್ಮನೇ ಬ್ರಹ್ಮ " ಎಂಬಲ್ಲಿ ಜೀವನನ್ನೇ ಬ್ರಹ್ಮವೆಂದು ಹೇಳಿದೆ. ಆದರೆ ಸ್ವಾಭಾವಿಕವಾದ ಭೇದ ತೊಲಗುವ ಸಂಭವವಿಲ್ಲ. " ಒಂದೇ ವಸ್ತುವಿನಲ್ಲಿ ಜೀವಭಾವವನ್ನೂ ಈಶ್ವರಭಾವವನ್ನೂ ಕಲ್ಪಿಸಲಾಗಿದೆ " ಎಂಬಲ್ಲಿ ಜೀವೇಶ್ವರರನ್ನು ಕಲ್ಪಿತರೆಂದು ಹೇಳಿದೆ. ಆದ್ದರಿಂದ ರಜ್ಜುಸರ್ಪಗಳಂತೆ ಜೀವಬ್ರಹ್ಮಭೇದವು ಉಪಾಧಿಯಿಂದ ಬಂದಪ್ರಯುಕ್ತ ಭ್ರಮಾತ್ಮಕವೆಂದು ಆಶಂಕಿಸಿ ಅದನ್ನು ನಿರಾಕರಿಸುತ್ತಾನೆ. ಭೇದಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಭೇದವನ್ನೂ, ಅಭೇದಶ್ರುತಿಗಳಲ್ಲಿ ಅಭೇದವನ್ನೂ ಸಮಾನವಾಗಿ ಹೇಳಿರುವುದರಿಂದ ಎರಡುಬಗೆಯ ಶ್ರುತಿಗಳನ್ನೂ ಕಾಲಭೇದದಿಂದ ಸಮನ್ವಯಮಾಡಬೇಕಾಗಿದೆ. ಆದ್ದರಿಂದ ಈ ಎರಡು ಶ್ರುತಿಗಳಲ್ಲಿ ಒಂದು ಗೌಣ, ಒಂದು ಮುಖ್ಯ ಎಂದು ಹೇಳುವಂತಿಲ್ಲ. ಭ್ರಮರಕೀಟನ್ಯಾಯದಿಂದ ಸ್ವಾಭಾವಿಕಸ್ಥಿತಿಯೂ ಬದಲಾವಣೆಹೊಂದುವುದಾಗಿ ಕಂಡುಬಂದಿದೆ. ಆದ್ದರಿಂದ ಆರೋಪಿತಭೇದವನ್ನಾಗಲೀ, ಔಪಚಾರಿಕಭೇದವನ್ನಾಗಲೀ ಅಥವಾ ಆಗಂತುಕಭೇದವನ್ನಾಗಲೀ ಜೀವಬ್ರಹ್ಮರಿಗೆ ಹೇಳಲಾಗುವುದಿಲ್ಲ. " ವಿಶ್ವವೆಲ್ಲಕ್ಕೂ ರುದ್ರನು ಅಧಿಕನು " ಎಂಬಲ್ಲಿ ಶಿವನನ್ನೇ ಚಿದಚಿತ್ಪ್ರಪಂಚವೆಲ್ಲಕ್ಕೂ ಅಧಿಕನೆಂದು ಹೇಳಿದ್ದರಿಂದ ನಾನೇ ಬ್ರಹ್ಮನೆಂಬವಾದವು ಯುಕ್ತವಲ್ಲ. " ಯಾವನು ಆತ್ಮನೋ ಅವನೇ ಸೇತುವಾಗಿದ್ದಾನೆ." ಎಂಬಲ್ಲಿ

ಅವನನ್ನೇ ಸೇತುವೆಂದೂ, ದಾಟಿಸುವ ಸಾಧನವೆಂದೂ, ಪರಿಮಿತನೆಂದೂ, ದಡವನ್ನು ಮುಟ್ಟಿಸುವ ವಸ್ತುವೆಂದೂ ಆತ್ಮಸೇತುಗಳನ್ನು ಭೇದದಿಂದ ತಿಳಿಸಲಾಗಿದೆ. ಯಾದ್ದರಿಂದ ಭೇದವೇ ಯಾವಾಗಲೂ ಇರುವುದೆಂದು ಹೇಳಿದರೆ ಅದು ಯುಕ್ತವಲ್ಲ. "ಇದೆಲ್ಲ ಬ್ರಹ್ಮದಿಂದಲೇ ಹುಟ್ಟಿ ಅವನಲ್ಲಿಯೇ ಲಯವಾಗುತ್ತಲೇ ಅವನೊಡನೆಯೇ ಬಾಳುತ್ತಿರುವುದರಿಂದ ಬ್ರಹ್ಮವೆಂದು ಭಾವಿಸು" ಎಂಬಲ್ಲಿ ಅವನನ್ನೇ ಜಗತ್ತಿಗೆ ಅಭಿನ್ನನಿಮಿತ್ತೋಪಾದಾನಕಾರಣನೆಂದು ಹೇಳಲಾಗಿದೆ. "ಇಲ್ಲಿಂದ ಹೊರಟು ಅವನನ್ನು ಸೇರುತ್ತಾನೆ" ಎಂಬಲ್ಲಿ ಶಿವನೇ ಜೀವನಿಗೆ ಪ್ರಾಪ್ಯವೆಂದು ಹೇಳಲಾಗಿದೆ. "ಉಮಾಶಕ್ತಿಯೊಡಗೂಡಿದ ಪರಮೇಶ್ವರನನ್ನು ಧ್ಯಾನಿಸಿ ಸಾಧಕನು ಸರ್ವಕಾರಣವೂ ಸಮಸ್ತಸಾಕ್ಷಿಯೂ ಆದ ಪರಂಜ್ಯೋತಿಯನ್ನು ಸೇರುತ್ತಾನೆ" ಎಂಬಲ್ಲಿ ಶಿವನನ್ನು ಕತ್ತಲೆಯಿಂದಾಚೆಯವನೆಂದೂ, ಮುಕ್ತಜೀವರಿಗೆ ಗಮ್ಯಸ್ಥಲವೆಂದೂ ಹೇಳಲಾಗಿದೆ. "ಯಥಾ ನದ್ಯಃ" ಎಂಬ ಶ್ರುತಿಯಲ್ಲಿ ನದೀಸಮುದ್ರದೃಷ್ಟಾಂತದಿಂದ ಜೀವಭಾವವನ್ನು ಕಳೆದುಕೊಂಡು ಶಿವತ್ವವನ್ನು ಹೊಂದುವುದೇ ಮುಕ್ತಿ ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ಎರಡುಬಗೆಯ ಶ್ರುತಿಗಳೂ ಸಮಾನವಾಗಿ ಪ್ರಮಾಣವೆನಿಸಿವೆ.

**ನನು ಭೇದಾಭೇದಶ್ರುತ್ಯೋಃ ಕಾಲವಿಷಯತ್ವೇಽಪಿ ತಯೋರ್ಬದ್ಧಮುಕ್ತದಶಾಭೇದೇನ ವೈಶೇಷ್ಯಾತ್ಕಥಂ ಸಾಮಾನ್ಯತ್ವಮಿತ್ಯಾಶಂಕ್ಯಾಹ.**

**ಬುದ್ಧ್ಯರ್ಥಃ ಪಾದವತ್ ॥ ೩೨ ॥** "ಯೋಽಯಂ ಚತುಷ್ಪಾದ್ಬ್ರಹ್ಮ ಷೋಡಶಕಲಂ" "ತ್ರಿಪಾದಸ್ಯಾಮೃತಂ ದಿವಿ" ಇತಿ ಯಥೈಕಸ್ಯೈವ ಬ್ರಹ್ಮಣೋ ಬ್ರಹ್ಮಾಂಡಾತೀತತ್ರಿಪಾದ್ವಿಭೂತ್ಯಧಿಷ್ಠಾನತ್ವೇನ ತ್ರಿಪಾದವತ್ತ್ವಂ, ಚಿದಚಿತ್ಪ್ರಪಂಚಾತ್ಮಕಬ್ರಹ್ಮಾಂಡರೂಪೈಕಪಾದ್ವಿಭೂತ್ಯಧಿಷ್ಠಾನತ್ವೇನೈಕಪಾದವತ್ತ್ವಂ ಚ ಸಮುಚಿತಂ. ತದ್ವದಭೇದಶ್ರುತೀನಾಂ ಭೇದಶ್ರುತೀನಾಂ ಚ ಪರಮೇಶ್ವರಪ್ರಣೀತತ್ವಾತ್ ತುಲ್ಯಪ್ರಮಾಣತ್ವಂ ಬುದ್ಧ್ಯರ್ಥನಿಶ್ಚಯಾರ್ಥಃ. "ಬ್ರಹ್ಮವಿದಾಪ್ನೋತಿ ಪರಂ" ಇತ್ಯತ್ರ ಬ್ರಹ್ಮಾಂಡಾತೀತತ್ರಿಪಾದ್ವಿಭೂತ್ಯಾತ್ಮಕಶಿವೋಪಾಸನಜ್ಞಾನೇನ ಶಿವತ್ವಪ್ರಾಪ್ತಿಃ "ಸತ್ಯಂ ಜ್ಞಾನಮನಂತಂ ಬ್ರಹ್ಮ" "ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ ಸೋಽಶ್ನುತೇ ಸರ್ವಾನ್ಕಾಮಾನ್ ಸಹ" ಇತ್ಯನೇನ ಬ್ರಹ್ಮಾಂಡಾಂತರ್ವರ್ತಿನೋ ಮಹೇಶ್ವರಸ್ಯ ಉಪಾಸನಜ್ಞಾನೇನೈಕಪಾದವಿಭೂತ್ಯಾತ್ಮಕಮಹೇಶ್ವರೇಣ ಸಹ ಸರ್ವಕಾಮಫಲಭೋಕ್ತೃತ್ವಂ ಚ ಶ್ರೂಯತೇ. ಕಿಂಚ ಬ್ರಹ್ಮಾಂಡಾಂತರ್ವರ್ತಿನೋ ಮಹೇಶ್ವರಸ್ಯ "ವಾಕ್ಪಾದಃ, ಪ್ರಾಣಃ ಪಾದಃ, ಚಕ್ಷುಃ ಪಾದೋ, ಮನಃ ಪಾದಃ" ಇತ್ಯಾದಿನಾ ವಾಗಾದಿಪಾದವ್ಯಪದೇಶೋ ದೃಶ್ಯತೇ. ಕೇಚಿದ್ಬ್ರಹ್ಮಣಃ ಪಾದವ್ಯಪದೇಶಂ ಉಪಾಸನಾರ್ಥಮಿತ್ಯಾಹುಃ. ತದಸಂಗತಂ. ಮೂರ್ತಾಮೂರ್ತಬ್ರಹ್ಮಣೋರೇಕತ್ವೋಪದೇಶಾರ್ಥಂ ತಸ್ಯ

**ಸರ್ವಾಧಿಷ್ಠಾನತ್ವಸರ್ವವಿಲಕ್ಷಣತ್ವಾದಿಮಹಿಮಾ ಪ್ರಪಂಚಿತ ಇತಿ ನಿಶ್ಚೀಯತೇ.**

ಭೇದಾಭೇದಶ್ರುತಿಗಳು ಕಾಲಭೇದದಿಂದ ಅನ್ವಯಿಸುವುದಾದರೂ ಬದ್ಧರಿಗೂ ಮುಕ್ತರಿಗೂ ಸಂಬಂಧಿಸುವುದರಿಂದ ಅವೆರಡು ಶ್ರುತಿಗಳಿಗೂ ಪರಸ್ಪರ ಭೇದವಿದ್ದೇ ಇರುತ್ತದೆ. ಆದ್ದರಿಂದ ಅವೆರಡನ್ನು ಸಮಾನವಾಗಿ ಹೇಗೆ ಭಾವಿಸಲಾಗುತ್ತೆಂದು ಆಶಂಕಿಸಿ ಪರಿಹರಿಸುತ್ತಾನೆ. " ನಾಲ್ಕುಪಾದಗಳಿರುವ ಬ್ರಹ್ಮಕ್ಕೆ ಹದಿನಾರು ಕಲೆಗಳಿವೆ." "ಅವನ ಒಂದು ಪಾದವೇ ಸರ್ವಜೀವರೂ ಆಗಿದ್ದಾರೆ. ಉಳಿದ ಮೂರುಪಾದಗಳು ದ್ಯುಲೋಕದಲ್ಲಿ ಅಮೃತವಾಗಿವೆ " ಎಂಬ ಶ್ರುತಿಯಂತೆ ಒಬ್ಬ ಪರಮಾತ್ಮನೇ ಬ್ರಹ್ಮಾಂಡದ ಏಕಪಾದ್ವಿಭೂತಿಗೆ ಆಶ್ರಯನಾದ್ದರಿಂದ ಅವನಿಗೆ ಹಾಗ ಒಂದು ಪಾದವಿದೆ ಎಂಬುದೇ ಯುಕ್ತವಾಗಿದೆ. ಹಾಗೆಯೇ ಅಭೇದಶ್ರುತಿಗಳೂ ಭೇದಶ್ರುತಿಗಳೂ ಪರಮೇಶ್ವರನಿಂದಲೇ ಹೊರಬಂದವಾದ್ದರಿಂದ ಅವಕ್ಕೆ ಪ್ರಾಮಾಣ್ಯವು ಸಮಾನವಾಗಿದೆ ಎಂದು ನಿಶ್ಚಯಿಸಲಾಗಿದೆ. "ಬ್ರಹ್ಮವನ್ನರಿತವನು ಆ ಬ್ರಹ್ಮವನ್ನೇ ಹೊಂದುತ್ತಾನೆ" ಎಂಬಲ್ಲಿ ಬ್ರಹ್ಮಾಂಡವನ್ನು ಮೀರಿ ತ್ರಿಪಾದ್ವಿಭೂತಿರೂಪವಾದ ಶಿವಭಾವವನ್ನು ಸಾಧಕನು ಶಿವೋಪಾಸನದಿಂದ ಹೊಂದುವನೆಂಬ ಅಂಶ ಸ್ಪಷ್ಟವಾಗಿದೆ. " ಬ್ರಹ್ಮವು ಸತ್ಯಜ್ಞಾನರೂಪವೂ ಅನಂತವೂ ಆಗಿದೆ." " ಪರಮಾಕಾಶವೆನಿಸಿದ ಎದೆಗುಹೆಯಲ್ಲಿ ನೆಲಸಿರುವ ಶಿವನನ್ನು ತಿಳಿದವನು ಆ ಶಿವನೊಡನೆ ಸಮಸ್ತಭೋಗಗಳನ್ನು ಅನುಭವಿಸುತ್ತಾನೆ " ಎಂಬಲ್ಲಿ ಬ್ರಹ್ಮಾಂಡದೊಳಗೆ ವ್ಯಾಪಿಸಿರುವ ಮಹೇಶ್ವರನ ಉಪಾಸನದಿಂದ ತ್ರಿಪಾದ್ವಿಭೂತಿ ಎನಿಸಿದ ಮಹೇಶ್ವರನೊಡನೆಯೇ ಮುಕ್ತನು ತನ್ನ ಇಷ್ಟಸಿದ್ಧಿಯನ್ನು ಪಡೆಯುವನೆಂದು ಹೇಳಲಾಗಿದೆ. ಬ್ರಹ್ಮಾಂಡದೊಳಗೆ ಇರುವ ಮಹೇಶ್ವರನಿಗೆ ವಾಕ್ಕು, ಚಕ್ಷು, ಮನಸ್ಸೆಂಬ ಮೂರು ಪಾದಗಳನ್ನು ಶ್ರುತಿಯಲ್ಲಿ ಹೇಳಲಾಗಿದೆ. ಈ ಬಗೆಯಲ್ಲಿ ಪಾದಗಳನ್ನು ಉಪಾಸನೆಗಾಗಿ ಹೇಳಿದೆ ಎಂದು ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ಇದು ಯುಕ್ತವಲ್ಲ. ಮೂರ್ತ ಅಮೂರ್ತ ಬ್ರಹ್ಮಗಳೆರಡೂ ಒಂದೇ ಎಂಬುದನ್ನು ತಿಳಿಸಲಿಕ್ಕಾಗಿಯೂ, ಅವನೊಬ್ಬನೇ ಎಲ್ಲಕ್ಕೂ ಆಶ್ರಯನಾಗಿದ್ದು ಎಲ್ಲಕ್ಕೂ ವಿಲಕ್ಷಣನೂ ಆಗಿರುವನೆಂದು ಅವನ ಮಹಿಮಾತಿಶಯವನ್ನು ವಿಸ್ತರಿಸಲಿಕ್ಕಾಗಿಯೂ ಹಾಗೆ ಪಾದಗಳನ್ನು ಹೇಳಿದೆ ಎಂಬುದೇ ಯುಕ್ತವಾದದ್ದು.

**ನನು ಮೂರ್ತಾಮೂರ್ತಬ್ರಹ್ಮಣೋಃ ಬ್ರಹ್ಮಾಂಡಾಂತರ್ಯಾಮಿತ್ವೇನ ತದ್ವಿಲಕ್ಷಣತ್ವೇನ ಚ ಘಟಪಟಾದಿವದನ್ಯೋನ್ಯವೈಲಕ್ಷಣ್ಯಾಭಾವದರ್ಶನಾತ್ ತಥಾ ಭೇದಾಭೇದವಿಧಾಯಕೋಭಯಶ್ರುತೀನಾಂ ಪರಸ್ಪರಭೇದಾರ್ಥಬೋಧಕತ್ವಾತ್ ಏಕಸ್ಯ ಪರಬ್ರಹ್ಮಣಃ ಸಮನ್ವಯತ್ವಂ ಕಥಮುಪಪದ್ಯತ ಇತ್ಯಾಶಂಕಾಯಾಮಾಹ. ಸ್ಥಾನವಿಶೇಷಾತ್ ಪ್ರಕಾಶಾದಿವತ್ ‖ ೩೩ ‖ ಸ್ಥಾನವಿಶೇಷಾತ್ " ಪಾದೋಽಸ್ಯ ವಿಶ್ವಾ ಭೂತಾನಿ " ಇತ್ಯನೇನ ಚಿದಚಿತ್ಪ್ರಪಂಚಹೃದಯಪ್ರವಿಷ್ಟತ್ವೇನ ಏಕಪಾದವಿಭೂತಿ**

ಸ್ಥಾನಂ, "ತ್ರಿಪಾದಸ್ಯಾಮೃತಂ ದಿವಿ " ಇತ್ಯನೇನ ಪ್ರಪಂಚಾತೀತತ್ವೇನ ಶಿವಸ್ಯ ತ್ರಿಪಾದ್ವಿಭೂತಿಸ್ಥಾನಂ ಚ ವಿಶೇಷಾತ್ ತಯೋರ್ಭೇದವ್ಯಪದೇಶಾತ್ ಪ್ರಕಾಶಾದಿವತ್ ಯಥಾ ಸೂರ್ಯಸ್ಯ ತತ್ಪ್ರಕಾಶಸ್ಯ ಚ ಪರಸ್ಪರವಿಶೇಶಾದಪ್ಯೇಕತ್ವಂ ತಥಾ ಮಾಯಾವಿಶಿಷ್ಟಸ್ಯ ತದ್ವಿಲಕ್ಷಣಸ್ಯ ಚ, ಭೇದವ್ಯಪದೇಶಕಗುಣಪ್ರಾಧಾನ್ಯವಾಚಕಶ್ರುತೀನಾಂ ನಿರ್ಗುಣಪ್ರತಿಪಾದಕಾಭೇದಶ್ರುತೀನಾಂ ಚ ಸಾಧಕಸಾಧ್ಯೋಪಾಯಬೋಧಕತ್ವೇನೈಕತ್ವೇ ಅವಿರೋಧಃ. ಭೇದರೂಪಧ್ಯಾನಧಾರಣಾದಿಕರ್ಮಾನುಸಂಧಾನಪೂರ್ವಕತ್ವೇನ ನಿರಂತರಾನುಸಂಧಾನಾವಚ್ಛಿನ್ನಾದ್ವೈತಾನುಭವಸಿದ್ಧ್ಯುಪದೇಶಾತ್ ಪೂರ್ವೋತ್ತರಸೌಧವದುಭಯಶ್ರುತ್ಯೋಃ ಸ್ಥಾನವಿಶೇಷಾದಪಿ ಮಣಿಪ್ರಕಾಶಾದಿವದವಿರೋಧತ್ವಂ ಸಿದ್ಧಂ.

ಮೂರ್ತಾಮೂರ್ತಬ್ರಹ್ಮವು ಬ್ರಹ್ಮಾಂಡದೊಳಗೆ ಸೇರಿರುವುದರಿಂದಲೂ ಅದಕ್ಕೆ ವಿಲಕ್ಷಣವಾಗಿರುವುದರಿಂದಲೂ ಆ ಎರಡುರೂಪಗಳಿಗೂ ಘಟಪಟಗಳಂತೆ ಪರಸ್ಪರ ವೈಲಕ್ಷಣ್ಯವಿದೆ. ಹಾಗೆಯೇ ಭೇದಶ್ರುತಿಗಳೂ ಮತ್ತು ಅಭೇದಶ್ರುತಿಗಳೂ ಪರಸ್ಪರ ಭೇದವನ್ನೇ ತಿಳಿಸುವುದರಿಂದ ಒಬ್ಬ ಪರಮಾತ್ಮನಿಗೆ ಅವನ್ನು ಹೇಗೆ ಸಮನ್ವಯ ಮಾಡಲಿಕ್ಕಾಗುತ್ತದೆ? ಎಂದಾಶಂಕಿಸಿ ಸಮಾಧಾನವನ್ನು ಹೇಳುತ್ತಾನೆ. "ಪಾದೋಽಸ್ಯ ವಿಶ್ವಾ ಭೂತಾನಿ"ಎಂಬಲ್ಲಿ ಚಿದಚಿತ್ಪ್ರಪಂಚದೊಳಗೆ ವ್ಯಾಪಿಸಿರುವ ಶಿವನ ಏಕಪಾದ್ವಿಭೂತಿ ಎಂಬ ಸ್ಥಾನವನ್ನೂ, " ತ್ರಿಪಾದಸ್ಯಾಮೃತಂ " ಎಂಬಲ್ಲಿ ಪ್ರಪಂಚಾತೀತನಾದ ಶಿವನ ತ್ರಿಪಾದ್ವಿಭೂತಿಸ್ಥಾನವನ್ನೂ ಹೇಳಲಾಗಿದೆ. ಇವೆರಡಕ್ಕೂ ಸೂರ್ಯಪ್ರಕಾಶಗಳಂತೆ ಭೇದವುಂಟೆಂದು ಆ ಶ್ರುತಿಯೇ ತಿಳಿಸಿದೆ. ಮಣಿಗೂ ಪ್ರಕಾಶಕ್ಕೂ ಪರಸ್ಪರಭೇದವಿರುವಂತೆ ಮಾಯಾವಿಶಿಷ್ಟಶಿವನಿಗೂ ಅದರ ಸಂಪರ್ಕವಿಲ್ಲದ ಪರಮಶಿವನಿಗೂ ಭೇದವಿದೆ. ಆದರೆ ಇದನ್ನು ತಿಳಿಸುವ ಸಗುಣಶ್ರುತಿಗಳು ಸಾಧನೋಪಾಯವನ್ನೂ, ನಿರ್ಗುಣಶ್ರುತಿಗಳು ಸಾಧ್ಯವೆನಿಸಿದ ಪರಮಶಿವನ ಪ್ರಾಪ್ತಿಯನ್ನೂ ಬೋಧಿಸುತ್ತಿರುವುದರಿಂದ ಅವೆರಡುಬಗೆಯ ಶ್ರುತಿಗಳನ್ನು ಏಕರೂಪವೆಂದು ಭಾವಿಸಲಿಕ್ಕೆ ಅಡ್ಡಿ ಇಲ್ಲ. ಭೇದರೂಪವಾದ ಪರಶಿವಧ್ಯಾನಧಾರಣ ಮೊದಲಾದ ಕರ್ಮಗಳನ್ನು ನಿರಂತರವೂ ಸಾಧನಮಾಡುತ್ತಲೇ ಅದ್ವೈತದ ಅನುಭವವು ಸಿದ್ಧಿಸುವುದೆಂದು ಶ್ರುತಿಯು ತಿಳಿಸಿರುವುದರಿಂದ ಕೆಳಗಿನ ಮೆಟ್ಟಲಿನಿಂದಲೇ ಮೇಲಕ್ಕೆ ಹೋಗುವಂತೆ ಭೇದರೂಪವಾದ ಕರ್ಮಾನುಷ್ಠಾನದಿಂದಲೇ ಅಭೇದಜ್ಞಾನವನ್ನು ಪಡೆದು ಅನುಭವಿಸಬೇಕಾದ್ದರಿಂದ ಎರಡುಬಗೆಯ ಶ್ರುತಿಗಳಿಗೆ ಸ್ಥಾನವಿಶೇಷದಿಂದಲೂ ಮಣಿಪ್ರಕಾಶಗಳಂತೆ ಯಾವ ವಿರೋಧವೂ ಇಲ್ಲವೆಂಬುದು ಸಿದ್ಧವಾಯಿತು.

ನನು ದ್ವೈತಾದ್ವೈತೋಭಯವಿಧಾಯಕಶ್ರುತೀನಾಂ ಅಂಗಾಂಗಿನ್ಯಾಯೇನ ಪರಸ್ಪರಸಾಪೇಕ್ಷತ್ವಮಸ್ತು. ತಥಾಪ್ಯುಭಯಶ್ರುತ್ಯೋಃ ಪರಸ್ಪರಫಲಭೇದವ್ಯಪದೇಶಾತ್ಕಥಮೇಕತ್ರೋಪಪತ್ತಿರಿತ್ಯಾಶಂಕ್ಯಾಹ.

ಉಪಪತ್ತೇಶ್ಚ ॥ ೩೪ ॥ "ಅಮೃತಸ್ಯೈಷ ಸೇತುಃ" ಇತ್ಯಾದಿನಾ ಶಿವ ಜೀವಯೋಃ ಪ್ರಾಪ್ಯಪ್ರಾಪಕಸಂಬಂಧವ್ಯಪದೇಶಾದನ್ಯತ್ರ ಚ "ಬ್ರಹ್ಮ ವೇದ ಬ್ರಹ್ಮೈವ ಭವತಿ", "ಹಿರಣ್ಮಯೋಽಹಂ ಶಿವರೂಪಮಸ್ಮಿ", "ಅಹಂ ಬ್ರಹ್ಮಾಸ್ಮಿ" ಇತ್ಯಾದಿಷು ತಥಾ ನಿರ್ದೇಶಾತ್ ಭೇದಶ್ರುತೀನಾಮಭೇದಶ್ರುತೀನಾಂ ಚ ಬ್ರಹ್ಮಣ್ಯುಪಪತ್ತೇಶ್ಚ ಪರಸ್ಪರವಿರೋಧೋ ನಿಷಿದ್ಧ್ಯತೇ, ಸ್ವಸ್ಯೈವ ದಶಮವಿವೇಕಸಂಧಾನಾದಿವತ್ ಸ್ವಪ್ರಾಪ್ತಿರಿತಿ ಚೇನ್ನ ಪ್ರಾಪ್ಯಸ್ಯ ಪರಮಪುರುಷಸ್ಯ ಸ್ವಪ್ರಾಪ್ತೌ ನ ಸ್ವಸ್ಯೋಪಾಯೋಪಪತ್ತಿಃ. "ನಾಯಮಾತ್ಮಾ ಪ್ರವಚನೇನ ಲಭ್ಯಃ ನ ಮೇಧಯಾ ನ ಬಹುನಾ ಶ್ರುತೇನ । ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ವಿವೃಣುತೇ ತನೂಂ ಸ್ವಾಂ ॥" ಇತ್ಯಾದಿಶ್ರುತಿಶತೇಷು ಜೀವಸ್ಯ ನಿರಂತರಾನವಚ್ಛಿನ್ನಧ್ಯಾನಧಾರಣಾದ್ಯುಪಾಸನೇನ ಪರಮಶಿವಪ್ರಾಪ್ತಿವ್ಯಪದೇಶಾತ್, "ಯಜ್ಞೇನ ದಾನೇನ ತಪಸಾನಾಶಕೇನ" ಇತ್ಯಾದಿಶ್ರುತಿಷು ಜ್ಞಾನಕರ್ಮಸಮುಚ್ಚಯೋಪಪತ್ತೇಶ್ಚ ನಿರ್ದೇಶಾತ್ ಭೇದಾಭೇದಶ್ರುತೀನಾಂ ಸರ್ವಾಸಾಮವಿರೋಧೇನ ಬ್ರಹ್ಮಣ್ಯುಪಪತ್ತಿರ್ಯುಕ್ತಾ.

ಭೇದಾಭೇದಶ್ರುತಿಗಳು ಅಂಗಾಂಗಿಭಾವದಿಂದ ಒಂದನ್ನೊಂದು ಅಪೇಕ್ಷಿಸಬಹುದಾದರೂ ಎರಡಕ್ಕೂ ಪರಸ್ಪರವಾಗಿ ಫಲಭೇದವನ್ನು ಹೇಳುವುದರಿಂದ ಒಂದೇ ಕಡೆ ಅವು ಹೇಗೆ ಹೊಂದಿಕೆಯಾಗುತ್ತವೆ? ಎಂದಾಕ್ಷೇಪಿಸಿ ಸಮಾಧಾನಮಾಡುತ್ತಾನೆ. "ಇವನು ಅಮೃತದ ಸೇತು" ಎಂಬಲ್ಲಿ ಶಿವಜೀವರಿಗೆ ಪ್ರಾಪ್ಯಪ್ರಾಪಕವೆಂಬ ಸಂಬಂಧವನ್ನು ಹೇಳಲಾಗಿದೆ. "ಬ್ರಹ್ಮಜ್ಞನು ಬ್ರಹ್ಮವೇ ಆಗುತ್ತಾನೆ." "ನಾನು ಹಿರಣ್ಮನಾದ ಶಿವನಾಗಿದ್ದೇನೆ." ನಾನು ಬ್ರಹ್ಮವಾಗಿದ್ದೇನೆ" "ನೀನು ಅದೇ ಆಗಿದ್ದೀಯೆ" ಈ ಬಗೆಯ ಶ್ರುತಿಗಳಲ್ಲೂ ಹಾಗೆಯೇ ತಿಳಿಸಿದೆ. ಆದ್ದರಿಂದ ಭೇದಶ್ರುತಿಗಳಿಗೂ ಅಭೇದಶ್ರುತಿಗಳಿಗೂ ಬ್ರಹ್ಮದಲ್ಲಿಯೇ ಹೊಂದಿಕೆಯಾಗುವುದರಿಂದ ಪರಸ್ಪರ ವಿರೋಧಕ್ಕವಕಾಶವಿಲ್ಲ. ಈ ರೀತಿಯಲ್ಲಿ ತಾನೇ ಹತ್ತನೆಯವನೆಂಬ ವಿವೇಕದ ಅನುಸಂಧಾನದಿಂದ ತನ್ನನ್ನೇ ತಾನು ತಿಳಿಯಬೇಕಾಗಿದೆ ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸಿದೆ. ಪರಮಪುರುಷನೇ ಮುಕ್ತನಿಗೆ ಪ್ರಾಪ್ಯಸ್ಥಲವಾದ್ದರಿಂದ ತನ್ನನ್ನು ಹೊಂದಲು ತಾನೇ ಉಪಾಯನೆಂಬುದು ಯುಕ್ತವಲ್ಲ. "ಈ ಆತ್ಮನು ಪ್ರವಚನದಿಂದಾಗಲೀ ಬುದ್ಧಿಯಿಂದಾಗಲೀ ಪಾಂಡಿತ್ಯದಿಂದಾಗಲೀ ದೊರೆಯುವುದಿಲ್ಲ. ಯಾವನನ್ನು ಈ ಆತ್ಮನು ಆರಿಸಿಕೊಳ್ಳುವನೋ ಅವನಿಗೆ ಮಾತ್ರವೇ ಈ ಆತ್ಮನು ಸ್ವಸ್ವರೂಪವನ್ನು ತೋರಿಸುತ್ತಾನೆ." ಈ ಬಗೆಯ ಅನೇಕ ಶ್ರುತಿಗಳಲ್ಲಿ ಜೀವನಿಗೆ ನಿರಂತರಧ್ಯಾನ ಧಾರಣ ಮೊದಲಾದ ಉಪಾಸನದಿಂದಲೇ ಪರಶಿವನು ದೊರಕುವನೆಂದು ಹೇಳಲಾಗಿದೆ." ಯಜ್ಞ, ದಾನ ಮತ್ತು ತಪಸ್ಸುಗಳಿಂದ ಬ್ರಹ್ಮವನ್ನು ಕಾಣಬೇಕು" ಎಂಬಲ್ಲಿ ಜ್ಞಾನಕರ್ಮಸಮುಚ್ಚಯವನ್ನು ಯುಕ್ತವಾದ

ಮಾರ್ಗವೆಂದು ಹೇಳಲಾಗಿದೆ. ಆದ್ದರಿಂದ ಭೇದಾಭೇದಶ್ರುತಿಗಳೆಲ್ಲವೂ ವಿರೋಧವಿಲ್ಲದೆ ಪರಬ್ರಹ್ಮದಲ್ಲಿಯೇ ಅನ್ವಯಿಸುತ್ತವೆ ಎಂಬುದೇ ಯುಕ್ತವಾಗಿದೆ.

ನನು ದ್ವೈತಾದ್ವೈತವಿಧಾಯಕಶ್ರುತೀನಾಂ ಬದ್ಧಮುಕ್ತದಶಾಭೇದೇನ ಸಾಧ್ಯಸಾಧಕತ್ವೇನ ಪ್ರಾಪ್ಯಪ್ರಾಪಕತ್ವೇನ ಚ ಪರಸ್ಪರವಿರೋಧಪರಿಹಾರೋಽಸ್ತು. ತಥಾಪಿ "ಸಮಾನೇ ವೃಕ್ಷೇ ಪುರುಷೋ ನಿಮಗ್ನಃ" "ದ್ವಾ ಸುಪರ್ಣಾ ಸಯುಜಾ ಸಖಾಯಾ" ಇತ್ಯಾದಿಶ್ರುತಿಷು ಜೀವಬ್ರಹ್ಮಣೋಸ್ತುಲ್ಯತ್ವೋಪದೇಶಾತ್, "ಅಜೋ ಹ್ಯೇಕೋ ಜುಷಮಾಣೋಽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ" ಇತ್ಯಾದಿಷು ತಯೋರ್ಜ್ಞಾನಾತ್ಮಕತ್ವೇನ ಜನ್ಯತ್ವನಿರ್ದೇಶಾತ್, "ಯಸ್ಮಾತ್ಪರಂ ನ್ನಾಪರಮಸ್ತಿ ಕಿಂಚಿತ್" ಇತ್ಯಾದಿಷು ಶಿವಾಧಿಕತ್ವಮಾತ್ರನಿರಾಸದರ್ಶನಾಚ್ಚ ತಯೋಸ್ಸಮಾನತ್ವೇನ ಪ್ರಾಪ್ಯಪ್ರಾಪಕತ್ವಾದಿಕಂ ಕಥಮುಪಪನ್ನಮಿತ್ಯಾಶಂಕಾಯಾಮಾಹ. ತಥಾನ್ಯಪ್ರತಿಷೇಧಾಧಿಕರಣಂ ॥೮॥ ತಥಾನ್ಯಪ್ರತಿಷೇಧಾತ್ ॥೩೫॥ ಪೂರ್ವಾಧಿಕರಣೇ ಶ್ರುತ್ಯೇಕದೇಶವಿಧಾಯಕದ್ವೈತಾದ್ವೈತಮತದ್ವಯಂ ನಿರಸ್ಯ ಸರ್ವಶ್ರುತಿಪೂರ್ವಾಪರಮಧ್ಯಪರಾಮರ್ಶಹೇತುತ್ವೇನ ದ್ವೈತಾದ್ವೈತಮತೇ ಮುಖ್ಯವೈದಿಕಸಿದ್ಧಾಂತೇ ಸರ್ವಶ್ರುತಿಸಮನ್ವಯಂ ಪ್ರಸಾಧ್ಯ ಜೀವಬ್ರಹ್ಮಣೋಃ ಶ್ರುತಿಸ್ಮೃತಿಪುರಾಣೇಷು ಸಮಾನತ್ವಪ್ರತೀತಿಮಾತ್ರೇಣ ಸಮಾನತ್ವಮಸ್ತೀತ್ಯಾಶಂಕಾಯಾಮತ್ರ ಜೀವರೂಪನಾರಾಯಣಾದೀನಾಂ ಶಿವತುಲ್ಯತ್ವಂ ಸರ್ವಥಾ ನ ಸಂಭವತೀತಿ "ತಥಾನ್ಯಪ್ರತಿಷೇಧಾತ್" ಇತ್ಯಾದಿನಾ ದರ್ಶಿತಂ. "ಸಮಾನೇ ವೃಕ್ಷೇ ಪುರುಷೋ ನಿಮಗ್ನಃ", ಏಕ ಏವ ರುದ್ರಃ" ಇತ್ಯಾದ್ಯುಭಯವಿಧಿವಿಧಾಯಕಶ್ರುತಿದರ್ಶನಾತ್ ಶಿವಸಮೋಽನ್ಯೋ ಜೀವೋಽಸ್ತಿ ನವಾ? ಇತಿ ಚಿಂತ್ಯತೇ. "ಯಸ್ಮಾತ್ಪರಂ ನಾಪರಮಸ್ತಿ ಕಿಂಚಿತ್" ಇತ್ಯಾದಿಶ್ರುತಿಷು ಶಿವಾದಧಿಕವಸ್ತ್ವಭಾವೇಽಪಿ ತತ್ತುಲ್ಯೋ ನಾರಾಯಣೋಽಸ್ತೀತ್ಯವಗಮ್ಯತೇ, "ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್" ಇತ್ಯತ್ರ ಕಸ್ಯಚಿತ್ಪುರುಷಸ್ಯ ಅನಂತಮುಖಪಾದವಿಶಿಷ್ಟತ್ವಂ, "ಪಾದೋಽಸ್ಯ ವಿಶ್ವಾ ಭೂತಾನಿ" ಇತಿ ಚೇತನಾಚೇತನಪ್ರಪಂಚಾಂಶಾವಚ್ಛಿನ್ನತ್ವಂ, "ತ್ರಿಪಾದಸ್ಯಾಮೃತಂ ದಿವಿ" ಇತಿ ಪರಮವ್ಯೋಮಾರೂಢತ್ವಂ, "ತಸ್ಮಾದ್ವಿರಾಡಜಾಯತ ವಿರಾಜೋ ಅಧಿಪುರುಷಃ" ಇತಿ ಅವ್ಯಕ್ತಹಿರಣ್ಯಗರ್ಭೋಪಾದಾನಹೇತುತ್ವಂ, "ಆದಿತ್ಯವರ್ಣಂ ತಮಸಸ್ತು ಪಾರೇ" ಇತಿ ತಮಃಪರತ್ವಂ, "ತಮೇವಂ ವಿದ್ವಾನಮೃತ ಇಹ ಭವತಿ" ಇತಿ ತದುಪಾಸಕಾನಾಂ ಪುನರಾವೃತ್ತಿರಹಿತಹೇತುತ್ವಂ ಚೋಪದಿಶ್ಯತೇ. ಪುನಸ್ತಸ್ಯ "ಸಹಸ್ರಶೀರ್ಷಂ

ದೇವಂ" ಇತ್ಯಾರಭ್ಯ "ಪತಿಂ ವಿಶ್ವಸ್ಯ" ಇತಿ ವಿಶ್ವಪತಿತ್ವಂ. "ನಾರಾಯಣಪರಂ ಬ್ರಹ್ಮ" ಇತಿ ನಾರಾಯಣಶಬ್ದವಾಚ್ಯಸ್ಯೈವ ಪರಬ್ರಹ್ಮತ್ವಂ. "ಪರಮಾತ್ಮಾ ವ್ಯವಸ್ಥಿತಃ" ಇತಿ ದಹರಾಕಾಶೋಪಾಸ್ಯತ್ವಂ ಚಾಸ್ಯ ಪ್ರತೀಯತೇ. ಏತೇ ಧರ್ಮಾಃ ಶಿವಸ್ಯಾವಗಮ್ಯಂತೇ. "ಸರ್ವಾನನಶಿರೋಗ್ರೀವಃ" ಇತಿ ಮಂತ್ರೋಪನಿಷದಿ "ವಿಶ್ವತಶ್ಚಕ್ಷುರುತ ವಿಶ್ವತೋಮುಖಃ" ಇತಿ ಮಹೋಪನಿಷದಿ ಶಿವಸಂಕಲ್ಪೇ ಚ, "ಸರ್ವತಶ್ಚಕ್ಷುರುತ ಸರ್ವತೋಮುಖಃ"ಇತ್ಯಥರ್ವಶಿರಸಿ ಬಹುಮುಖಪಾದಾದಿಮತ್ತ್ವಂ ಪರಮೇಶ್ವರಸ್ಯೋಪದಿಶ್ಯತೇ. "ತಸ್ಯಾವಯವಭೂತೋತ್ಥಂ ವ್ಯಾಪ್ತಂ ಸರ್ವಮಿದಂ ಜಗತ್" ಇತಿ ಜಗದಂಶಪ್ರವಿಷ್ಟತ್ವಂ, "ಹಿರಣ್ಯಗರ್ಭಂ ಪಶ್ಯತ ಜಾಯಮಾನಂ" ಇತಿ ಹಿರಣ್ಯಗರ್ಭಜನಕತ್ವಂ, "ಸಮಸ್ತಸಾಕ್ಷಿಂ ತಮಸಃ ಪರಸ್ತಾತ್" ಇತಿ ವಿಶ್ವಸಾಕ್ಷಿತ್ವಂ, ತಮಃಪರತ್ವಂ ಚೋಪದಿಶ್ಯತೇ. ಏವಂ ವಿಶ್ವರೂಪತ್ವಾದಿಧರ್ಮಸಾಮ್ಯಂ ಅನಯೋರ್ನಾರಾಯಣಮಹೇಶ್ವರಯೋಃ. ಶ್ರುತಿಸ್ಮೃತಿಪುರಾಣಾದಿಷು ತತ್ಪೂಜಾವಿಧಿಃ ಸಮಾನತಯಾ ಶ್ರೂಯತೇ. ಲೋಕೇ ಚ ಅಷ್ಟಾಕ್ಷರಪಂಚಾಕ್ಷರಮಂತ್ರೋಭಯಸ್ಯ ಸಾಲಗ್ರಾಮಶಿವಲಿಂಗೋಭಯಸ್ಯ ಪೂಜಾತೀರ್ಥಪ್ರಸಾದವಿಧೇಶ್ಚ ತುಲಸೀಬಿಲ್ವಕಮಲಾಕ್ಷರುದ್ರಾಕ್ಷೋರ್ಧ್ವಪುಂಡ್ರತಿರ್ಯಕ್ಪುಂಡ್ರವಿಷ್ಣುಕ್ಷೇತ್ರಶಿವಕ್ಷೇತ್ರಾದಿಕಸ್ಯೋಭಯೋಸ್ಸಮಾನತ್ವೇನಾವಗಮಾತ್ ಪರಮೇಶ್ವರಸಮೋ ನಾರಾಯಣೋಽಸ್ತೀತಿ ಪ್ರಾಪ್ತೇ ಪ್ರಚಕ್ಷ್ಮಹೇ. ತಥಾನ್ಯಪ್ರತಿಷೇಧಾದಿತಿ. "ಯಸ್ಮಾತ್ಪರಂ ನಾಪರಮಸ್ತಿ ಕಿಂಚಿತ್" ಇತ್ಯಾದಿಶ್ರುತಿಷು ಯಥಾ ಪರಶಿವಾದಧಿಕೋ ನಾಸ್ತಿ ತಥಾ ಜಗತ್ಕಾರಣಮಹೇಶ್ವರಸ್ಯ ಸಮೋಽಪಿ ನಾಸ್ತಿ. "ನ ತತ್ಸಮಶ್ಚಾಭ್ಯಧಿಕಶ್ಚ ದೃಶ್ಯತೇ "ಇತ್ಯದೌ ತಥಾನ್ಯಪ್ರತಿಷೇಧಾತ್. ಉತ "ಏಕ ಎವ ರುದ್ರೋ ನ ದ್ವಿತೀಯಾಯ ತಸ್ಥೇ" "ಶಿವ ಏಕೋ ಧ್ಯೇಯಃ ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ" ಇತ್ಯಾದಿಭಿಃ ಜಗತ್ಕಾರಣಮಹೇಶ್ವರಾದನ್ಯಪುರುಷನಿರಾಸಾ ಅವಗಮ್ಯತೇ. ತಸ್ಮಾತ್ ಶಿವಸಾದೃಶ್ಯಂ ನ ವಿದ್ಯತೇ. ಉತ "ಏಕೈವ ಶಕ್ತಿಸ್ತು ಮಹೇಶ್ವರಸ್ಯ ಭಿನ್ನಾ ಚತುರ್ಧಾ ವಿನಿಯೋಗಕಾಲೇ। ಭೋಗೇ ಭವಾನೀ ಪುರುಷೇಷು ವಿಷ್ಣುಃ ಕ್ರೋಧೇ ಚ ಕಾಳೀ ಸಮರೇ ಚ ದುರ್ಗಾ॥" ಇತಿ ಸಾಮಶಾಖಾಯಾಂ ವಿಷ್ಣೋಃ ಶಿವಶಕ್ತ್ಯಂಶವ್ಯವಸ್ಥಾಪನಾತ್, ಶಕ್ತಿಶಕ್ತಿಮತೋರ್ಭೇದಾಭೇದಾತ್ ನಿಮಿತ್ತಕಾರಣಭೂತಶಿವಸ್ಯ ಉಪಾದಾನಕಾರಣಭೂತನಾರಾಯಣಸ್ಯ ಚ ನಾಮರೂಪಾದಿಭೇದೇದ ಭೇದವ್ಯಪದೇಶೇಽಪಿ ತಯೋರಭೇದಾತ್ ಸ್ವಾಶ್ರಯಾತಿರಿಕ್ತಾಭಾವಾತ್ ಸರ್ವಧರ್ಮೋಪ

ಪತ್ತಿಃ. ಅತ ಏವ "ತಸ್ಮಾದ್ವಿರಾಡಜಾಯತ" ಇತ್ಯನೇನ ಹಿ ಪುರುಷಸ್ಯೋಪಾದಾನತ್ವಂ, "ಹಿರಣ್ಯಗರ್ಭಂ ಪಶ್ಯತ ಜಾಯಮಾನಂ," "ದ್ಯಾವಾಪೃಥಿವೀ ಜನಯನ್ದೇವ ಏಕಃ" ಇತಿ ಪರಮೇಶ್ವರಸ್ಯ ನಿಮಿತ್ತತ್ವಂ ಚೋಪದಿಶ್ಯತೇ. ಅತ ಏವ ಸ್ಕಾಂದೇ "ಸರ್ವಶಕ್ತಿಮತಸ್ಸಾಂಬಾತ್ ಶಿವಾತ್ಪರಮಕಾರಣಾತ್ । ಪ್ರಾದುರ್ಭವತಿ ಸೃಷ್ಟ್ಯಾದೌ ಪರಾಶಕ್ತಿರ್ಮಹೇಶ್ವರೀ॥ ಸಾದಿಭೋಕ್ತೃತ್ವಕಾಲೇ ಹಿ ಪುರುಷಾಖ್ಯೇನ ವರ್ತತೇ। ಸಹಸ್ರಶೀರ್ಷಾ ಪುರುಷಸ್ಸಹಸ್ರಾಕ್ಷಸ್ಸಹಸ್ರಪಾತ್ । ಇತಿ ಸಾ ಶ್ರೂಯತೇ ಯಸ್ಮಾತ್ ತಸ್ಮಾಚ್ಛಿವಮಯಂ ಜಗತ್ ॥" ಇತ್ಯನೇನ ಶಿವಶಕ್ತ್ಯಾತ್ಮನಾ ಚಿದಚಿತ್ಪ್ರಪಂಚಪರಿಣಾಮತ್ವಾತ್ ಭೇದಾಭೇದೋಭಯವಿಧಾಯಕಶ್ರುತೀನಾಂ ಸಮನ್ವಯ ಉಪದಿಶ್ಯತೇ. ಅತ ಏವ "ಸರ್ವೋ ವೈ ರುದ್ರಃ" ಇತಿ ಶಿವಸ್ಯ ಸರ್ವಾತ್ಮಕತ್ವಮುಪಕ್ರಮ್ಯ ಪುರುಷಸ್ಯ ನಾರಾಯಣಸ್ಯ ಉಪಾದಾನತ್ವಾತ್ಕಥಂ ಸರ್ವಾತ್ಮಕತ್ವಮುಪಪದ್ಯತೇ ಇತ್ಯಾಶಂಕಾಯಾಂ "ಪುರುಷೋ ವೈ ರುದ್ರಃ" ಇತಿ "ಪುರುಷಾಯ ವಿದ್ಮಹೇ ಸಹಸ್ರಾಕ್ಷಾಯ ಮಹಾದೇವಾಯ ಧೀಮಹೇ" ಇತ್ಯನೇನ ಪುರುಷೋಽಪಿ ಪರಮೇಶ್ವರಮಹಾವಿಭೂತ್ಯಾ ಜಗದಾಕಾರ ಇತಿ ದರ್ಶಿತಂ. ಸರ್ವಜ್ಞ ಸರ್ವಶಕ್ತ ಸರ್ವಸ್ವತಂತ್ರಸರ್ವಾಧಿಕನಿತ್ಯತೃಪ್ತನಿರತಿಶಯಾನಂದಾತ್ಮಕ ಪರಬ್ರಹ್ಮಾಭಿಧಾನಶಿವಸ್ಯೈವ ವಿಶ್ವನಿಮಿತ್ತೋಪಾದಾನಕಾರಣಭೂತತ್ವಾತ್ ಸರ್ವೇಷಾಂ ವಾಕ್ಯಾನಾಂ ಸಮನ್ವಯ ಅವಿರುದ್ಧಃ. "ಸೋಽಕಾಮಯತ ಬಹುಸ್ಯಾಂ" ಇತಿ ಶ್ರುತೌ ಸ ಏವ ಸ್ವಸಂಕಲ್ಪೇನ ಸ್ವಾತ್ಮನಃ ಪುರುಷಮುತ್ಪಾದ್ಯ ಸ್ವವಿಭಕ್ತಸ್ವಾಂಶಭೂತೇನ ಸಕಲಜಗದ್ಭವತೀತ್ಯುಪದಿಶ್ಯತೇ. "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಇತ್ಯಾದಿನಾ ತಥಾ ಶ್ರೂಯತೇ. ತಸ್ಮಾದುಪಾದಾನಧರ್ಮಾಃ ನಿಮಿತ್ತೇ ಹ್ಯುಪದಿಶ್ಯಂತೇ. ತಥಾಪ್ಯುಪಾದಾನಾನ್ನಿಮಿತ್ತಸ್ಯಾಧಿಕತ್ವಾತ್ ವಿಷ್ಣ್ವಾದ್ಯಧಿಕತ್ವಂ ಶಿವಸ್ಯ ಸಿದ್ಧಂ. "ವಾಸುದೇವಃ ಪರಾಪ್ರಕೃತಿಃ" "ಪ್ರಕೃತಿಸ್ತ್ವಂ ಪುಮಾನ್ರುದ್ರಃ" ಇತ್ಯಾದಿಸ್ಮೃತಿಪುರಾಣೇಷು ವಿಷ್ಣೋಃ ಪ್ರಕೃತಿತ್ವಂ ಶಿವಸ್ಯ ಪುರುಷತ್ವಂ ಉಪದಿಷ್ಟಂ. ಅತಶ್ಶಿವಸ್ಯಾದ್ವಿತೀಯತ್ವಂ ನಿಷ್ಪ್ರತ್ಯೂಹಂ.

ಭೇದಶ್ರುತಿಗಳು ಸಂಸಾರದಶೆಗೂ ಸಾಧನಾವಸ್ಥೆಗೂ, ಅಭೇದಶ್ರುತಿಗಳು ಮುಕ್ತದಶೆಗೂ ಸಾಧ್ಯಸ್ಥಿತಿಗೂ ಅನ್ವಯಿಸುವುದರಿಂದ ಅವೆರಡಕ್ಕೂ ಪರಸ್ಪರ ವಿರೋಧವು ಪರಿಹಾರವಾಗುವುದೇನೋ ಸರಿ. ಆದರೆ "ಸಮಾನಾಕಾರದ ದೇಹದಲ್ಲಿ ಚೇತನರಿಬ್ಬರು ನೆಲಸಿದ್ದಾರೆ" "ಇಬ್ಬರೂ ಸಮಾನರು ಮತ್ತು ಸ್ನೇಹಿತರು" ಎಂಬ ಶ್ರುತಿಗಳಲ್ಲಿ ಜೀವಬ್ರಹ್ಮರಿಬ್ಬರನ್ನೂ ಸಮಾನರೆಂದು ಹೇಳಿದೆ. ಹೀಗೆ ಶ್ರುತಿಯಲ್ಲಿ ಇವರಿಬ್ಬರನ್ನೂ ಜ್ಞಾನಾತ್ಮಕರಾದ್ದರಿಂದ ಅಜರೆಂದು ಹೇಳಲಾಗಿದೆ. "ಯಾವನಿಗಿಂತ ಉತ್ಕೃಷ್ಟ

ಅಥವಾ ಕನಿಷ್ಠವಾದದ್ದು ಏನೂ ಇಲ್ಲವೋ" ಎಂಬಲ್ಲಿ ಪರಬ್ರಹ್ಮಕ್ಕಿಂತ ಉತ್ಕೃಷ್ಟ ವಾದದ್ದನ್ನು ನಿರಾಕರಿಸಲಾಗಿದೆ. ಹೀಗೆ ಜೀವಬ್ರಹ್ಮರು ಸಮಾನರಾದ್ದರಿಂದ ಒಬ್ಬನು ಒಬ್ಬನನ್ನು ಹೊಂದಬೇಕೆಂಬುದು ಹೇಗೆ ಹೊಂದಿಕೆಯಾಗುತ್ತದೆ ಎಂದು ಆಶಂಕಿಸಿ ಸಮಾಧಾನಮಾಡುತ್ತಾನೆ. ಹಿಂದಿನ ಅಧಿಕರಣದಲ್ಲಿ ಶ್ರುತಿಯ ಒಂದೊಂದುಭಾಗವನ್ನು ತಿಳಿಸುವ ದ್ವೈತಾದ್ವೈತಮತಗಳೆರಡನ್ನೂ ನಿರಾಕರಿಸಿ ಎಲ್ಲಾ ಶ್ರುತಿಗಳ ಹಿಂದಿನ ಮುಂದಿನ ಮತ್ತು ಮಧ್ಯದ ಸನ್ನಿವೇಶಗಳನ್ನು ಪರಾಮರ್ಶಿಸಿ ದ್ವೈತಾದ್ವೈತವೆಂಬ ಮುಖ್ಯ ವೈದಿಕಸಿದ್ಧಾಂತದಲ್ಲಿಯೇ ಎಲ್ಲಾ ಶ್ರುತಿಗಳಿಗೂ ಸಮನ್ವಯವುಂಟೆಂದು ಸಾಧಿಸಿ ಜೀವಬ್ರಹ್ಮರನ್ನು ಶ್ರುತಿಸ್ಮೃತಿಪುರಾಣಗಳಲ್ಲಿ ಸಮಾನರೆಂದು ಹೇಳಿದಮಾತ್ರದಿಂದಲೇ ಅವರು ಸಮಾನರಾಗುತ್ತಾರೆಂಬುದನ್ನು ಆಕ್ಷೇಪಿಸಿ ಜೀವರೆನಿಸಿದ ನಾರಾಯಣ ಮೊದಲಾದವರು ಶಿವನಿಗೆ ಸಮಾನರೆಂಬುದು ಎಂದಿಗೂ ಸಂಭವಿಸುವುದಿಲ್ಲವೆಂಬುದನ್ನು ಈ ಸೂತ್ರದಲ್ಲಿ ತಿಳಿಸಲಾಗಿದೆ. "ಸಮಾನವಾದ ವೃಕ್ಷದಲ್ಲಿ ಜೀವನು ನೆಲಸಿದ್ದಾನೆ. ಒಬ್ಬ ರುದ್ರನೇ ಅದ್ವಿತೀಯನಾಗಿದ್ದಾನೆ" ಹೀಗೆ ಜೀವಬ್ರಹ್ಮರಿಬ್ಬರನ್ನೂ ಶ್ರುತಿಯಲ್ಲಿ ವಿಧಿಸಿರುವುದರಿಂದ ಶಿವನಿಗೆ ಸಮನಾದ ಬೇರೊಬ್ಬ ಜೀವನು ಇದ್ದಾನೆಯೇ ಇಲ್ಲವೇ? ಎಂದು ವಿಚಾರಿಸಲಾಗಿದೆ. "ಯಾವನಿಗಿಂತ ಬೇರೆ ಏನೂ ಇಲ್ಲವೋ" ಎಂಬಲ್ಲಿ ಶಿವನಿಗಿಂತ ಉತ್ಕೃಷ್ಟವಾದ ವಸ್ತುವಿಲ್ಲದಿದ್ದರೂ ಅವನಿಗೆ ಸಮನಾಗಿ ನಾರಾಯಣನೊಬ್ಬನಿದ್ದಾನೆಂದು ತಿಳಿದುಬರುತ್ತದೆ. ಪುರುಷಸೂಕ್ತದಲ್ಲಿ ಅನೇಕ ಮುಖಪಾದಗಳಿರುವ ಪುರುಷನೊಬ್ಬನನ್ನು ಹೇಳಲಾಗಿದೆ. ಅವನ ಒಂದು ಪಾದವೇ ಈ ಸಕಲ ಪ್ರಪಂಚವೆಂದೂ, ಉಳಿದ ಮೂರು ಪಾದಗಳು ಪರಮಾಕಾಶವನ್ನು ವ್ಯಾಪಿಸಿವೆ ಎಂದೂ ಹೇಳಿದೆ. ಅವನೇ ವಿರಾಡ್ರೂಪನಾದ ಹಿರಣ್ಯಗರ್ಭನಿಗೆ ಉಪಾದಾನನೆಂದು ಹೇಳಿದೆ. "ತಮಸಸ್ತು ಪಾರೇ" ಎಂಬಲ್ಲಿ ಅವನನ್ನು ಕತ್ತಲೆಯಿಂದಾಚೆಗಿರುವ ಪರಂಜ್ಯೋತಿ ಎಂದು ಹೇಳಿದೆ. "ಅವನು ಇಲ್ಲಿಯೇ ಅಮೃತನಾಗುತ್ತಾನೆ" ಎಂಬಲ್ಲಿ ಅವನ ಉಪಾಸಕರು ಮತ್ತೆ ಹುಟ್ಟುವುದಿಲ್ಲವೆಂದು ಹೇಳಿದೆ. ಮತ್ತೆ ಅವನನ್ನು "ಸಹಸ್ರಶೀರ್ಷಂ ದೇವಂ" ಎಂಬಲ್ಲಿ ವಿಶ್ವಕ್ಕೊಪತಿ ಎಂದು ಹೇಳಿ, "ನಾರಾಯಣಪರಂ ಬ್ರಹ್ಮ" ಎಂಬಲ್ಲಿ ನಾರಾಯಣನೆಂದರೆ ಪರಬ್ರಹ್ಮನೆಂದು ತಿಳಿಸಿ, "ಪರಮಾತ್ಮಾ ವ್ಯವಸ್ಥಿತಃ" ಎಂಬುದರಿಂದ ಅವನೇ ದಹರಾಕಾಶದಲ್ಲಿ ಉಪಾಸ್ಯನೆಂದು ಹೇಳಿದಂತಾಗಿದೆ. ಆದರೆ ಈ ಧರ್ಮಗಳು ಶಿವನಿಗೂ ಅನ್ವಯಿಸುತ್ತವೆ. ಶಿವನು ಸರ್ವವ್ಯಾಪಿಯಾದಗೂ ಎಲ್ಲರ ತಲೆ ಕುತ್ತಿಗೆ ಎದೆಗಳಲ್ಲೂ ನೆಲಸಿರುವನೆಂದು ಮಂತ್ರೋಪನಿಷತ್ತಿನಲ್ಲೂ, "ಸುತ್ತಲೂ ಕಣ್ಣುಗಳು ಮತ್ತು ಸುತ್ತಲೂ ಮುಖಗಳಿವೆ" ಎಂದು ಮಹೋಪನಿಷತ್ತಿನಲ್ಲೂ, ಶಿವಸಂಕಲ್ಪದಲ್ಲೂ, ಅಥರ್ವಶಿರಸ್ಸಿನಲ್ಲೂ ಶಿವನಿಗೆ ಅನೇಕಮುಖಪಾದಗಳಿವೆ ಎಂದೂ ಹೇಳಲಾಗಿದೆ. "ಮಾಯೆ ಪ್ರಕೃತಿ ಎನಿಸಿದರೆ ಶಿವನು ಮಾಯಾಪತಿ ಎನಿಸಿದ್ದಾನೆ. ಅವನ ಅಂಶರೆನಿಸಿದ ಹರಿ, ಬ್ರಹ್ಮ, ರುದ್ರರಿಂದ ಈ ಜಗತ್ತು ತುಂಬಿದೆ" ಎಂಬಲ್ಲಿ ಶಿವನೇ ತ್ರಿಮೂರ್ತ್ಯಂತರ್ಭೂತನೆಂದು

ಹೇಳಿದೆ. ಹಾಗೆಯೇ ಶ್ರುತಿಯಲ್ಲಿ ವಿಶ್ವವೆಲ್ಲಕ್ಕೂ ಶಿವನೇ ಅಧಿಕನೆಂದೂ, ಹಿರಣ್ಯ ಗರ್ಭನಿಗೂ ಜನಕನೆಂದೂ, ಸರ್ವಕ್ಕೂಸಾಕ್ಷಿಎಂದೂ,ತಮಃಪರನೆಂದೂ ಹೇಳಲಾಗಿದೆ. ಹೀಗೆ ವಿಶ್ವರೂಪ ಮೊದಲಾದ ಧರ್ಮಗಳೂ ಸಮಾನವಾದ್ದರಿಂದ ನಾರಾಯಣನಿಗೂ ಮಹೇಶ್ವರನಿಗೂ ಪೂಜಾವಿಧಾನವೂ ಸಮಾನವಾಗಿಯೇ ಇದೆ. ಲೋಕದಲ್ಲಿ ಅಷ್ಟಾ ಕ್ಷರ ಪಂಚಾಕ್ಷರ ಮಂತ್ರಗಳೂ, ಸಾಲಿಗ್ರಾಮ ಶಿವಲಿಂಗಗಳ ಪೂಜೆ ಮತ್ತು ತೀರ್ಥ ಪ್ರಸಾದಗಳ ವಿಧಾನವೂ, ತುಲಸೀ ಬಿಲ್ವಗಳಿಂದ ಅರ್ಚನೆಯೂ, ಕಮಲಾಕ್ಷರುದ್ರಾಕ್ಷ ಗಳ ಧಾರಣವೂ, ಊರ್ಧ್ವಪುಂಡ್ರ ಮತ್ತು ತಿರ್ಯಕ್ಪುಂಡ್ರಗಳ ಧಾರಣವೂ, ವಿಷ್ಣು ಕ್ಷೇತ್ರಗಳು ಇವೆಲ್ಲವೂ ಸಮಾನವೇ ಆಗಿರುವುದರಿಂದ ನಾರಾಯಣನು ಪರಮೇಶ್ವರನಿಗೆ ಸಮಾನನಿರುವನೆಂದು ಆಕ್ಷೇಪ ಬರುತ್ತದೆ. ಇದಕ್ಕೆ ಸೂತ್ರವು ಸೂಕ್ತವಾಗಿ ಸಮಾಧಾನವನ್ನು ತಿಳಿಸುತ್ತದೆ. "ಯಾವನಿಗಿಂತ ಬೇರೆಯಾದದ್ದು ಏನೂ ಇಲ್ಲ" ವೆಂಬ ಶ್ರುತಿಯಲ್ಲಿ ಪರಮಶಿವನಿಗಿಂತ ಹೆಚ್ಚಿನವನಿಲ್ಲವೆಂದು ಹೇಳಿರುವುದರಿಂದ ಜಗತ್ಕಾರಣನಾದ ಮಹೇಶ್ವರನಿಗೆ ಸಮಾನನೇ ಇಲ್ಲವೆಂದು ತಿಳಿದುಬರುತ್ತದೆ. ಅವನಿಗೆ ಸಮನಾಗಲೀ ಅಧಿಕನಾಗಲೀ ಯಾರೂ ಇಲ್ಲ" ವೆಂಬ ಶ್ರುತಿಯಲ್ಲಿ ಶಿವನಿಗಿಂತ ಬೇರೊಬ್ಬನನ್ನು ಸ್ಪಷ್ಟವಾಗಿ ನಿಷೇಧಿಸಿದೆ. "ಒಬ್ಬನೇ ರುದ್ರನು ಅದ್ವಿ ತೀಯನಾಗಿದ್ದಾನೆ" "ದ್ಯಾವಾಭೂಮಿಗಳನ್ನು ಸೃಷ್ಟಿಸುವವನು ಒಬ್ಬನೇ ರುದ್ರನೆನಿಸಿ ದ್ದಾನೆ," "ಪ್ರಕೃತಿಜೀವರಿಗೆ ದೇವನೊಬ್ಬನೇ ನಿಯಾಮಕನಿದ್ದಾನೆ" "ಮಾನವರಿಗೆ ತಮ್ಮ ಚರ್ಮದಂತೆ ಆಕಾಶವೇ ಹೊದಿಕೆಯಾದರೆ ಆಗ ಶಿವನನ್ನು ತಿಳಿಯದಿದ್ದರೂ ಅವರ ದುಃಖ ಕೊನೆಯಾಗುತ್ತದೆ." "ಎಲ್ಲವನ್ನೂ ತೊರೆದು ಶಿವಶಂಕರನಾದ ಶಿವ ನೊಬ್ಬನನ್ನೇ ಧ್ಯಾನಿಸಿರಿ" "ಪ್ರಳಯದಲ್ಲಿ ಏನೊಂದು ವೈವಿಧ್ಯವೂ ಇಲ್ಲದೆ ಶಿವನೊ ಬ್ಬನೇ ಇದ್ದನು" "ಪರಮಾತ್ಮನು ಋತವೂ ಸತ್ಯವೂ ಆಗಿದ್ದರೂ ಕೃಷ್ಣಪಿಂಗಳ ವರ್ಣದವನೂ ಆಗಿದ್ದಾನೆ" ಈ ಬಗೆಯ ಶ್ರುತಿಗಳಲ್ಲಿ ಜಗತ್ಕಾರಣವಾದ ಮಹೇಶ್ವರ ನಿಗಿಂತ ಬೇರೊಬ್ಬಪುರುಷನನ್ನು ನಿರಾಕರಿಸಲಾಗಿದೆ. ಆದ್ದರಿಂದ ನಾರಾಯಣನಿಗೆ ಶಿವನ ಸಾದೃಶ್ಯವಿಲ್ಲ. ಪರಮೇಶ್ವರನ ಚಿತ್‌ಶಕ್ತಿಯೊಂದೇ ಭೋಗಕ್ಕಾಗಿ ಭವಾನಿ ಎಂದೂ, ಪುರುಷರೂಪದಿಂದ ವಿಷ್ಣುವೆಂದೂ,ಕ್ರೋಧದಲ್ಲಿ ಕಾಳಿಎಂದೂ,ಯುದ್ಧದಲ್ಲಿ ದುರ್ಗಿಎಂದೂ ವಿನಿಯೋಗಕಾಲದಲ್ಲಿ ನಾಲ್ಕುಬಗೆಯಾಗಿದೆ" ಎಂದು ಸಾಮಶಾಖೆ ಯಲ್ಲಿ ವಿಷ್ಣು ಶಿವನ ಶಕ್ತಿಯು ಅಂಶನೆಂದು ಹೇಳಿದೆ. ಶಕ್ತಿಗೂ ಶಕ್ತನಿಗೂ ಭೇದಾ ಭೇದವೇ ಹೊಂದುವುದರಿಂದ ನಿಮಿತ್ತಕಾರಣನೆನಿಸಿದ ಶಿವನಿಗೂ ಉಪಾದಾನನೆನಿಸಿದ ನಾರಾಯಣನಿಗೂ ನಾಮರೂಪಗಳ ವೈವಿಧ್ಯದಿಂದ ಭೇದವಿದ್ದರೂ ಅಭೇದವನ್ನು ಶ್ರುತಿಯು ತಿಳಿಸಿದೆ. ಹೀಗೆ ನಾರಾಯಣನು ತನಗಾಶ್ರಯವಾದ ಶಿವನಿಗಿಂತ ಬೇರೆ ಯಲ್ಲವಾದ್ದರಿಂದ ಅವನಲ್ಲಿಯೂ ಎಲ್ಲಾ ಧರ್ಮಗಳೂ ಇರುವುವೆಂಬುದು ಹೊಂದು ತ್ತದೆ. ಆದ್ದರಿಂದಲೇ "ಆವನಿಂದ ವಿರಾಡ್ರೂಪನಾದ ಬ್ರಹ್ಮನು ಹುಟ್ಟಿದನು" ಎಂಬಲ್ಲಿ ಪರಶಿವನೇ ಉಪಾದಾನನೆನಿಸಿದ್ದಾನೆ. "ದ್ಯಾವಾಭೂಮಿಗಳನ್ನು ಒಬ್ಬದೇವನೇ

ಹೊರಗೆಡಹಿದನು " ಎಂಬಲ್ಲಿ ಪರಶಿವನನ್ನೇ ನಿಮಿತ್ತನೆಂದು ಹೇಳಿದೆ. ಆದ್ದರಿಂದಲೇ ಸ್ಕಾಂದದಲ್ಲಿ " ಸರ್ವಶಕ್ತನೂ, ಪರಮಕಾರಣನೂ ಆದ ಸಾಂಬಶಿವನಿಂದ ಸೃಷ್ಟ್ಯಾದಿಯಲ್ಲಿ ಪರಾಶಕ್ತಿಯು ಆವಿರ್ಭವಿಸಿ ಮೊದಲಿಗೆ ಅವಳೇ ಭೋಕ್ತ್ರುವೆನಿಸಿ ಪುರುಷನೆನಿಸಿದಳು. ಅವಳನ್ನೇ " ಸಹಸ್ರಶೀರ್ಷಾ ಪುರುಷಃ " ಎಂಬಲ್ಲಿ ಪ್ರಶಂಸೆ ಮಾಡಲಾಗಿದೆ. ಆದ್ದರಿಂದಲೇ ಜಗತ್ತು ಶಿವಶಕ್ತ್ಯಾತ್ಮಕವಾಗಿದೆ " ಎಂದು ಹೇಳಿದೆ. ಹೀಗೆ ಶಕ್ತಿವಿಶಿಷ್ಟ ಶಿವನೇ ಜಗದ್ರೂಪವಾಗಿ ಪರಿಣಮಿಸಿರುವುದರಿಂದ ಭೇದಾಭೇದ ಶ್ರುತಿಗಳು ಸಮನ್ವಿತವಾಗುತ್ತವೆ. ಆದ್ದರಿಂದಲೇ " ಎಲ್ಲವೂ ರುದ್ರನು " ಎಂಬಲ್ಲಿ ಶಿವನೇ ಸರ್ವಾತ್ಮಕನೆಂದು ಆರಂಭಿಸಿ, ಪುರುಷನೆನಿಸಿದ ನಾರಾಯಣನನ್ನು ಸರ್ವಾತ್ಮಕನೆಂದೂ ಉಪಾದಾನನೆಂದೂ ಹೇಳಿರುವುದು ಹೇಗೆ ಹೊಂದಿಕೆಯಾಗುತ್ತದೆ ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸಮಾಧಾನ ಹೀಗಿದೆ. " ರುದ್ರನೇ ಪುರುಷನು " " ಸಹಸ್ರಾಕ್ಷನೆನಿಸಿದ ಮಹಾದೇವನೇ ಪುರುಷನು " ಎಂಬಲ್ಲಿ ಅವನು ಪುರುಷನಾದರೂ ತನ್ನ ಶಕ್ತಿವೈಭವದಿಂದ ಜಗದಾಕಾರನಾಗಿದ್ದಾನೆ ಎಂದು ಹೇಳಿದೆ. ಹೀಗೆ ಸರ್ವಜ್ಞನೂ ಸರ್ವಶಕ್ತನೂ, ಸ್ವತಂತ್ರನೂ, ಸರ್ವಾಧಿಕನೂ, ನಿತ್ಯತೃಪ್ತನೂ, ನಿರತಿಶಯಾನಂದರೂಪನೂ ಆದ ಪರಶಿವಬ್ರಹ್ಮವೇ ವಿಶ್ವದ ನಿಮಿತ್ತೋಪಾದಾನನೆನಿಸಿದ್ದರಿಂದ ಎಲ್ಲಾ ವಾಕ್ಯಗಳಿಗೂ ವಿರೋಧವಿಲ್ಲದೆ ಸಮನ್ವಯವಾಗುತ್ತದೆ. " ಅವನೇ ವಿಸ್ತಾರವಾಗಲು ಇಚ್ಛಿಸಿದನು " ಎಂಬಲ್ಲಿ ನಿಷ್ಕಲಪರಮಶಿವನೇ ತನ್ನ ಸಂಕಲ್ಪದಿಂದ ತನ್ನನ್ನು ತಾನೇ ಸಾಕಾರಮೂರ್ತಿಯನ್ನಾಗಿ ಹೊರಪಡಿಸಿ ತನ್ನ ಉಳಿದ ಅತ್ಯಲ್ಪಾಂಶದಿಂದ ಸಕಲ ಜಗತ್ತಾಗಿ ಪರಿಣಮಿಸಿರುವನೆಂದು ಹೇಳಲಾಗಿದೆ. " ಅದನ್ನು ಸೃಷ್ಟಿಸಿ ತಾನೇ ಅದರಲ್ಲಿ ಪ್ರವೇಶಿಸಿದನು " ಎಂಬುದರಿಂದ ಇದು ತಿಳಿಯುತ್ತದೆ. ಉಪಾದಾನದ ಧರ್ಮಗಳು ನಿಮಿತ್ತದಲ್ಲಿಯೂ ಇರುತ್ತವೆ ಎಂದು ಹೇಳಿದ್ದರೂ ಸಹ ಉಪಾದಾನಕ್ಕಿಂಲೂ ನಿಮಿತ್ತವು ಹೆಚ್ಚಿನದಾದ್ದರಿಂದ ನಿಮಿತ್ತನೆನಿಸಿದ ಶಿವನೇ ಉಪಾದಾನನೆನಿಸಿದ ವಿಷ್ಣುವಿಗಿಂತಲೂ ಅಧಿಕನೆಂದು ಸಿದ್ಧವಾಯಿತು. "ವಾಸುದೇವನೇ ಪರಾಪ್ರಕೃತಿ." "ನೀನು ಪ್ರಕೃತಿಯಾದರೆ ರುದ್ರನು ಪುರುಷನು " ಹೀಗೆ ಸ್ಮೃತಿಪುರಾಣಗಳಲ್ಲಿ ವಿಷ್ಣುವೇ ಪ್ರಕೃತಿ ಎಂದೂ, ಶಿವನೇ ಪುರುಷನೆಂದೂ ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ ಶಿವನು ಅದ್ವಿತೀಯನೆಂಬುದು ನಿರ್ವಿವಾದವೆನಿಸಿದೆ.

ನನ್ವೇಕಸ್ಯ ಶಿವಸ್ಯ ಸರ್ವಾತ್ಮಕತ್ವಂ ಸರ್ವನಿಯಾಮಕತ್ವಂ ಸರ್ವಾಂತರ್ಯಾಮಿತ್ವಂ ಸರ್ವವಿಲಕ್ಷಣತ್ವಂ ಚ ಕಥಮುಪಪದ್ಯತ ಇತ್ಯಾಶಂಕಾಯಾಮಾಹ. **ಅನೇನ ಸರ್ವಗತತ್ವಮಾಯಾಮಶಬ್ದಾದಿಭ್ಯಃ ॥ ೩೭ ॥** ಅನೇನ ಬ್ರಹ್ಮಣಾ ಸರ್ವಗತತ್ವಂ ಸರ್ವಜಗತೋ ವ್ಯಾಪ್ಯತ್ವಂ ಆಯಾಮಶಬ್ದಾದಿಭ್ಯಃ ಸರ್ವವ್ಯಾಪ್ತಿವಾಚಿಶಬ್ದೇಭ್ಯೋಽವಗಮ್ಯಮಾನಂ ಅಸ್ಮಾತ್ಪರಂ ನಾಸ್ತೀತ್ಯವಗಮಯತ್ಯಾಯಾಮಶಬ್ದಸ್ತಾವತ್. " ವಿಶ್ವತಶ್ಚಕ್ಷುರುತ ವಿಶ್ವತೋಮುಖಃ " " ಅಣೋರಣೀಯಾನ್ಮಹತೋ

ಮಹೀಯಾತ್ಮಾ ಗುಹಾಯಾಂ ನಿಹಿತೋsಸ್ಯ ಜಂತೋಃ." "ತೇನೇದಂ ಪೂರ್ಣಂ ಪುರುಷೇಣ ಸರ್ವಂ" "ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ಯದ್ಭೂತಯೋನಿಂ ಪರಿಪಶ್ಯಂತಿ ಧೀರಾಃ." "ಸರ್ವಂ ಖಲ್ವಿದಂ ಬ್ರಹ್ಮ" ಇತ್ಯಾದಯಃ ಶ್ರುತಯಃ ಆದಿಶಬ್ದಾದ್ಗೃಹ್ಯಂತೇ. ತಸ್ಮಾದ್ಯಥಾಕಾಶಸ್ಯ ಸರ್ವಾಂತರತ್ವಂ ಸರ್ವವ್ಯಾಪಕತ್ವಂ ಪವನಾದಿಕಾರಣತ್ವಂ ಸರ್ವಾಧಿಷ್ಠಾನತ್ವಂ ಚೋಪಪನ್ನಂ ತಥೈಕಸ್ಯೈವ ಬ್ರಹ್ಮಣಸ್ಸರ್ವಗತತ್ವಸರ್ವಮಯತ್ವಸರ್ವವಿಲಕ್ಷಣತ್ವಾದಿಕಮುದೀರ್ಯತೇ. ತಸ್ಮಾದದ್ವಿತೀಯಂ ಶಿವತ್ವಮೇವೇತಿ ನಿಶ್ಚೀಯತೇ.

ಒಬ್ಬ ಶಿವನೇ ಸರ್ವಾತ್ಮಕನೂ ಸರ್ವನಿಯಾಮಕನೂ ಸರ್ವಾಂತರ್ಯಾಮಿಯೂ ಸರ್ವವಿಲಕ್ಷಣನೂ ಆಗಿರುವನೆಂಬುದು ಹೇಗೆ ಹೊಂದುತ್ತದೆ ಎಂದಾಶಂಕಿಸಿ ಪರಿಹರಿಸುತ್ತಾನೆ. ಬ್ರಹ್ಮವು ಸರ್ವಜಗತ್ತನ್ನೂ ವ್ಯಾಪಿಸಿರುವನೆಂಬುದು ಇವನಿಗಿಂತ ಬೇರೆ ಯಾರೂ ಇಲ್ಲವೆಂದು ಅವನ ಸರ್ವವ್ಯಾಪ್ತಿಯನ್ನು ತಿಳಿಸುವ ಶಬ್ದಗಳಿಂದ ತಿಳಿದುಬರುತ್ತದೆ. "ಅವನು ವಿಶ್ವಚಕ್ಷುವೆನಿಸಿ ವಿಶ್ವವನ್ನು ಏಕಕಾಲದಲ್ಲಿ ನೋಡುತ್ತಿರುವನು" "ಸಣ್ಣದಕ್ಕಿಂತ ಸಣ್ಣದಾಗಿ ದೊಡ್ಡದಕ್ಕಿಂತ ದೊಡ್ಡದಾಗಿ ಆತ್ಮವು ಈ ಜೀವನ ಎದೆಗುಹೆಯಲ್ಲಿ ನೆಲಸಿದೆ" "ದುಃಖವಿಲ್ಲದವನು ಈಶ್ವರನ ಅನುಗ್ರಹದಿಂದ ತನ್ನೊಳಗೆ ನೆಲಸಿರುವ ಆತ್ಮವನ್ನು ಕಾಣುತ್ತಾನೆ." "ನಿತ್ಯನೂ ವಿಭುವೂ ಸರ್ವಗತನೂ ಸರ್ವಕಾರಣನೂ ಆದ ಶಿವನನ್ನು ಧೀರರು ಕಾಣುತ್ತಾರೆ" "ಇದೆಲ್ಲವೂ ಬ್ರಹ್ಮವೇ. ಇದೆಲ್ಲವೂ ಆತ್ಮವೇ." ಈ ಬಗೆಯ ಶ್ರುತಿಗಳು ಬ್ರಹ್ಮದ ವಿಸ್ತಾರವನ್ನು ತಿಳಿಸುತ್ತವೆ. ಆಕಾಶವು ಎಲ್ಲದರೊಳಗೆ ವ್ಯಾಪಿಸಿದ್ದರೂ ಎಲ್ಲಕ್ಕೂ ವಿಲಕ್ಷಣವೆನಿಸಿ ವಾಯು ಮೊದಲಾದುವಕ್ಕೆ ಕಾರಣವೂ ಸರ್ವಾಶ್ರಯವೂ ಆಗಿರುವುದೆಂಬುದು ಯುಕ್ತವಾಗುತ್ತದೆ. ಹಾಗೆಯೇ ಬ್ರಹ್ಮವು ಸರ್ವವ್ಯಾಪಕವೂ ಸರ್ವಮಯವೂ ಸರ್ವವಿಲಕ್ಷಣವೂ ಆಗಿದೆ. ಆದ್ದರಿಂದ ಶಿವನನ್ನು ಅದ್ವಿತೀಯನೆಂದು ನಿಶ್ಚಯಿಸಲಾಗಿದೆ.

ನನು "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಇತ್ಯಾದಿಶ್ರುತಿಷು ಕರ್ಮಣ ಏವ ಸರ್ವಫಲದಾತೃತ್ವವ್ಯಪದೇಶಾದೀಶ್ವರಸ್ಯ ನ ಕಿಂಚಿತ್ಪ್ರಯೋಜನಂ. ತಸ್ಮಾಚ್ಚತುರ್ಥ್ಯಂತದೇವತಾಪ್ರಧಾನಪೂರ್ವಮೀಮಾಂಸಾನ್ಯಾಯೇನ ಕರ್ಮಣ ಏವ ಸರ್ವಭೂತೋತ್ಪತ್ತಿಸ್ಥಿತಿಲಯಹೇತುತ್ವೇನ ಸರ್ವಾತಿಶಯತ್ವಮನಿವಾರ್ಯಮಿತ್ಯಾಶಂಕಾಯಾಂ ಕರ್ಮಮಾತ್ರಪ್ರಧಾನನಿರೀಶ್ವರಮತಾಂತರ್ಭೂತಂ ಜೈಮಿನಿಮತಂ ನಿರಾಕರೋತಿ. ಫಲಾಧಿಕರಣಂ ॥ ೯ ॥ ಫಲಮತ ಉಪಪತ್ತೇಃ ॥೩೭॥ ಅತಃ ಕರ್ಮಭಿರ್ಜ್ಯೋತಿಷ್ಟೋಮಾದಿಸರ್ವಕರ್ಮಭಿರಾರಾಧಿತಾದೀಶ್ವರಾದೇವ ಜೀವಾನಾಂ ತತ್ಫಲಸ್ಯ ಉಪಪತ್ತೇಃ ಸಂಭವಾತ್ ನ ಕೇವಲಕರ್ಮಣಃ ಫಲದಾತೃತ್ವಂ. ಕುತಃ? ಉಪಪತ್ತೇಃ. ಚೇತನ

ಸ್ಯೇಶ್ವರಸ್ಯೈವ ಫಲಜನಕತ್ವಸ್ಯೋಪಪನ್ನತ್ವಾತ್ ಜಡಸ್ಯ ಕರ್ಮಣಃ ಸ್ವಾತಂತ್ರ್ಯೇಣ ಫಲಜನಕತ್ವಾನುಪಪತ್ತೇಃ ಪರಮೇಶ್ವರಾತಿರಿಕ್ತಸ್ಯ ಕರ್ಮಫಲದಾತೃತ್ವಂ ಸರ್ವಥಾ ನ ಸಂಭವತಿ. ಪೂರ್ವತ್ರ ಭೇದಾಭೇದ ವಿಧಾಯಕಶ್ರುತೀನಾಂ ಸರ್ವಾಸಾಂ ಅಸಂಕೋಚೇನ ಬ್ರಹ್ಮಸಮನ್ವಯಂ ಪ್ರಸಾಧ್ಯ, ಜೀವಾನಾಮೈಹಿಕಾಮುಷ್ಮಿಕಫಲಭೋಗಾರ್ಥಂ ಪರಮೇಶ್ವರೋಪಾಸನಂ ವಿಧಾಯ, ತತ್ರ ನಿಷ್ಕಾಮೋಪಾಸಕಾನಾಂ ಮಲಿನವಾಸನಾತಿರಸ್ಕೃತಾನಾಂ ಯಜ್ಞದಾನತಪಸ್ಸತ್ಯಬ್ರಹ್ಮಚರ್ಯಧ್ಯಾನಧಾರಣಪೂಜಾನಮಸ್ಕಾರಸಂಕೀರ್ತನಶ್ರವಣಮನನಾದಿಶುದ್ಧವಾಸನಾದಿಯುಕ್ತಭಕ್ತಾನಾಂ ಸ್ವಾಭಾವಿಕಜೀವಭಾವನಿವೃತ್ತಿಪೂರ್ವಕಶಿವತ್ವಪ್ರಾಪ್ತಿಫಲತ್ವಮಭಿಧಾಯ, ಇಹ ತು ಕರ್ಮಣ ಏವ ಸರ್ವಫಲದಾತೃತ್ವಂ, ಕ್ಷಣಧ್ವಂಸಿತ್ವಾಜ್ಜತತ್ವಂ ಚಾಭಿಧಾಯ, ಜಡತ್ವಾಚ್ಚ ತನ್ನ ಸಂಭವತೀತಿ ದರ್ಶಿತಂ. "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ", "ಏಷ ಏವ ಸಾಧುಕರ್ಮ ಕಾರಯತಿ" ಇತ್ಯಾದಿಶ್ರುತಿಷು ಕರ್ಮಬ್ರಹ್ಮಣೋರುಭಯೋರಪಿ ಸ್ವಾತಂತ್ರ್ಯಾವಗಮಾತ್ ಕರ್ಮಫಲದಾತೃತ್ವಂ ಕರ್ಮಣಃ ಪರಮೇಶ್ವರಸ್ಯ ವಾ ಯುಕ್ತಮಿತಿ ಸಂದಿಹ್ಯತೇ. ಶಬ್ದಬುದ್ಧಿಕರ್ಮಣಾಂ ತ್ರಿಕ್ಷಣಾವಸ್ಥಾಯಿತ್ವಮಿತಿ ನ್ಯಾಯೇನ ಕರ್ಮಣಃ ಕ್ಷಣಧ್ವಂಸಸ್ವಭಾವತ್ವೇಽಪಿ ತಜ್ಜನ್ಯಾಪೂರ್ವಫಲೇನ ತದುತ್ತರಕಾಲೇ ಫಲದಾತೃತ್ವಂ ಸಂಭವತಿ. "ಸ್ವಕರ್ಮಸೂತ್ರಗ್ರಥಿತೋ ಹಿ ಲೋಕಃ", "ಕರ್ಮಣಾ ಜಾಯತೇ ಜಂತುಃ ಕರ್ಮಣ್ಯೈವ ಪ್ರವರ್ತತೇ । ಕರ್ಮಣಾ ಮ್ರಿಯತೇ ಯಸ್ಮಾತ್ತಸ್ಮಾತ್ಕರ್ಮೈವ ದೇವತಾ ॥" ಇತ್ಯಾದಿಶ್ರುತಿಸ್ಮೃತಿಷು ಕರ್ಮಕರ್ತೃತ್ವದರ್ಶನಾತ್. ಯಾನಶಕಟಮೇಘಾದಿಚಲನಸ್ಯ ತದ್ಭಿನ್ನಗಿರಿವೃಕ್ಷಚಂದ್ರಾದಿಷ್ವಾರೋಪವತ್ ಕರ್ಮಫಲದಾತೃತ್ವಸ್ಯ ಪರಮೇಶ್ವರೇ ಭ್ರಾಂತಿಪ್ರಸಕ್ತತ್ವಾತ್ ತಸ್ಯೈವ ತತ್ಸಮುಚಿತಮಿತಿ ಪ್ರಾಪ್ತೇ ಪ್ರಚಕ್ಷ್ಮಹೇ, ಜಡತ್ವಾತ್ ತ್ರಿಕ್ಷಣವಿನಷ್ಟತ್ವಾತ್ ಜನ್ಯತ್ವಾಚ್ಚ ಯಜ್ಞದಾನಹೋಮಧ್ಯಾನಧಾರಣಪೂಜಾದಿಜೀವಕೃತಕರ್ಮಣಾಂ ತತ್ತತ್ಕರ್ಮಫಲದಾತೃತ್ವಂ ನ ಸಂಭವತಿ. "ಏಷ ಹ್ಯೇವ ಸಾಧುಕರ್ಮ ಕಾರಯತಿ ತಂ ಯಮೇಭ್ಯೋ ಲೋಕೇಭ್ಯ ಉನ್ನಿನೀಷತೇ" ಇತ್ಯಾದಿಶ್ರುತಿಷು, "ಯಥಾ ಲೋಕೇ ಸದಾ ರಾಜಾ ಪುಣ್ಯಾಪುಣ್ಯಕೃತೋ ಜನಾನ್ । ತತ್ತತ್ಕರ್ಮಾನುಸಾರೇಣ ಫಲಂ ದಾಸ್ಯತಿ ತಾದೃಶಂ । ತಥಾ ಮಹೇಶ್ವರೋ ನಿತ್ಯಂ ಜೀವಕರ್ಮಾನುಸಾರತಃ । ಪರಾಪರೇಷು ಲೋಕೇಷು ಫಲಭೋಗಾನ್ ಪ್ರದಾಸ್ಯತಿ ॥ ಜನಕಚ್ಛೇದಕೋ ದಂಡಃ ಶಿವಲೋಕೇ ಮಹೀಯತೇ । ಕ್ರತುಕರ್ಮಕರೋ ದಕ್ಷಃ

**ಸ್ವಶಿರಶ್ಛೇದನಾತ್ಮಕಂ । ಲಬ್ಧವಾನ್ ಫಲವೈರುಧ್ಯಂ ಕರ್ಮಕರ್ತೃತ್ವಬುದ್ಧಿತಃ ॥" ಇತ್ಯಾದಿಸ್ಮೃತಿಪುರಾಣೇಷು ಚ ಸರ್ವಕರ್ಮಫಲದಾತೃತ್ವಸ್ಯ ಮಹಾದೇವ ಏವ ವ್ಯವಸ್ಥಾಪನಾತ್ ತದಾರಾಧನಬುದ್ಧ್ಯೈವಿವೇಕಿಭಿಃ ಯಜ್ಞದಾನತಪಃಪೂಜಾದಿ ತದಾಜ್ಞಾರೂಪಂ ಕರ್ಮ ತದನುಗ್ರಹಾರ್ಥಮಾಚರಿತವ್ಯಂ.**

"ಸ್ವರ್ಗಾಪೇಕ್ಷೆಯು ಜ್ಯೋತಿಷ್ಟೋಮವನ್ನಾಚರಿಸಬೇಕು" ಎಂಬ ಶ್ರುತಿಯಲ್ಲಿ ಕರ್ಮವೇ ಎಲ್ಲಾ ಫಲಗಳನ್ನು ಕೊಡುವುದೆಂದು ಹೇಳಿರುವುದರಿಂದ ಈಶ್ವರನಿಂದ ಏನೂ ಪ್ರಯೋಜನವೇ ಇಲ್ಲ. ಆದ್ದರಿಂದ ಚತುರ್ಥೀವಿಭಕ್ತ್ಯಂತವಾದ ವೈದಿಕಪದವು ದೇವತೆಯನ್ನು ಪ್ರಧಾನವಾಗಿ ತಿಳಿಸುವುದೆಂದು ವಾದಿಸುವ ಪೂರ್ವಮೀಮಾಂಸನ್ಯಾಯದಿಂದ ಕರ್ಮವೇ ಜೀವರ ಉತ್ಪತ್ತಿ ಸ್ಥಿತಿ ಲಯಗಳಿಗೆ ಕಾರಣವಾದ್ದರಿಂದ ವಲ್ಲಕ್ಕೂ ಹೆಚ್ಚಿನದೆಂದಾಶಂಕಿಸಿ ಕರ್ಮವೊಂದನ್ನೇ ಪ್ರಧಾನವೆಂದೆಣಿಸುವ ನಿರೀಶ್ವರಮತದೊಳಗೆ ಸೇರಿದ ಜೈಮಿನಿಮತವನ್ನು ನಿರಾಕರಿಸುತ್ತಾನೆ. ಜ್ಯೋತಿಷ್ಟೋಮವೇ ಮೊದಲಾದ ಎಲ್ಲಾ ಕರ್ಮಗಳಿಂದಲೂ ಆರಾಧಿತನಾಗಿ ಈಶ್ವರನೇ ಜೀವರಿಗೆ ಫಲವನ್ನು ಕೊಡುವನಾದ್ದರಿಂದ ಕರ್ಮವು ಫಲವನ್ನು ಕೊಡಲಾರದು; ಯಾಕೆಂದರೆ ಚೇತನನಾದ ಈಶ್ವರನೇ ಫಲವನ್ನು ಕೊಡಬಲ್ಲನೆಂಬುದೇ ಯುಕ್ತವಾಗಿದೆ. ಜಡವಾದ ಕರ್ಮವು ಸ್ವತಂತ್ರವಾಗಿ ಫಲವನ್ನು ಕೊಡಬಲ್ಲದೆಂಬುದು ಯುಕ್ತವಲ್ಲ. ಆದ್ದರಿಂದ ಪರಮೇಶ್ವರನಲ್ಲದೆ ಬೇರೆ ಯಾರೂ ಕರ್ಮಕ್ಕೆ ತಕ್ಕ ಫಲವನ್ನು ಕೊಡಲರ್ಹರಾಗಲಾರರು. ಹಿಂದೆ ಭೇದಾಭೇದಶ್ರುತಿಗಳೆಲ್ಲಕ್ಕೂ ಸಂಕೋಚವಿಲ್ಲದಂತೆ ಬ್ರಹ್ಮದಲ್ಲಿಯೇ ಸಮನ್ವಯವನ್ನು ಸಾಧಿಸಿ, ಜೀವರಿಗೆ ಐಹಿಕಾಮುಷ್ಮಿಕಫಲದ ಭೋಗಕ್ಕಾಗಿ ಪರಮೇಶ್ವರನ ಉಪಾಸನವನ್ನು ಹೇಳಿ, ಅದರಲ್ಲಿ ನಿರ್ಮಲರಾದ ನಿಷ್ಕಾಮಭಕ್ತರು ಯಜ್ಞ, ದಾನ, ತಪಸ್ಸು, ಸತ್ಯ, ಬ್ರಹ್ಮಚರ್ಯ, ಧ್ಯಾನ, ಧಾರಣ, ಪೂಜೆ, ನಮಸ್ಕಾರ, ನಾಮಕೀರ್ತನ, ಶ್ರವಣ, ಮನನ ಮೊದಲಾದ ಸತ್ಕರ್ಮಾಚರಣೆಯಿಂದ ಸ್ವಾಭಾವಿಕವಾದ ಜೀವಭಾವವನ್ನು ಕಳೆದುಕೊಂಡು ಶಿವಭಾವವನ್ನು ಹೊಂದುವರೆಂದು ತಿಳಿಸಿಯಾಗಿದೆ. ಆದರೆ ಜೀವನು ಮಾಡುವ ಕರ್ಮವೆಲ್ಲವೂ ಒಂದೇ ಕ್ಷಣದಲ್ಲಿ ನಾಶವಾಗುವುದರಿಂದಲೂ, ಜಡವಾದ್ದರಿಂದಲೂ ಫಲವನ್ನು ಕೊಡಲಾರದೆಂದು ಇಲ್ಲಿ ತಿಳಿಸಲಾಗಿದೆ. "ಸ್ವರ್ಗಕಾಮನು ಜ್ಯೋತಿಷ್ಟೋಮವನ್ನಾಚರಿಸಬೇಕು", "ಇವನೇ ಒಳ್ಳೆಯದನ್ನು ಮಾಡಿಸುತ್ತಾನೆ" ಈ ಬಗೆಯ ಶ್ರುತಿಗಳಲ್ಲಿ ಕರ್ಮ ಬ್ರಹ್ಮಗಳೆರಡಕ್ಕೂ ಸ್ವಾತಂತ್ರ್ಯವಿರುವುದಾಗಿ ತಿಳಿದುಬರುವುದರಿಂದ ಆ ಕರ್ಮದ ಫಲವನ್ನು ಕೊಡುವ ಅರ್ಹತೆ ಕರ್ಮಕ್ಕೋ? ಪರಮೇಶ್ವರನಿಗೋ? ಎಂದು ಸಂದೇಹ ಬರುತ್ತದೆ. "ಶಬ್ದ, ಬುದ್ಧಿ, ಕರ್ಮ, ಇವು ಮೂರು ಕ್ಷಣಕಾಲಮಾತ್ರವೇ ಇರುತ್ತವೆ" ಎಂಬ ನ್ಯಾಯದಿಂದ ಕರ್ಮವು ಕ್ಷಣಕಾಲದಲ್ಲಿಯೇ ನಾಶವಾಗುವುದಾದರೂ ಅದರಿಂದ ಹುಟ್ಟಿದ ಅಪೂರ್ವವು ಜೀವರಿಗೆ ಮುಂದೆ ಫಲವನ್ನು ಕೊಡಲು ಸಮರ್ಥವೆ.

ನಿಸುತ್ತದೆ. "ಕರ್ಮದಿಂದಲೇ ಜನಕಾದಿಗಳು ಐಹಿಕ ಸಿದ್ಧಿಯನ್ನು ಪಡೆದರು. ಒಂದು ಪ್ರಾಣಿ ಕರ್ಮದಿಂದಲೇ ಹುಟ್ಟಿ ಬೆಳೆದು ಸಾಯುತ್ತಿರುವುದರಿಂದ ಕರ್ಮವೇ ದೇವತೆ ಎನಿಸುತ್ತದೆ." ಹೀಗೆ ಶ್ರುತಿಸ್ಮೃತಿಗಳಲ್ಲಿ ಕರ್ಮವನ್ನೇ ಕರ್ತೃವೆಂದು ತಿಳಿಸಲಾಗಿದೆ. ದೋಣಿಯಲ್ಲಿ ಹೋಗುವಾಗ ಅಥವಾ ಮೇಘವು ಚಲಿಸುವಾಗ ಬೆಟ್ಟ, ಮರ, ಚಂದ್ರ ಮೊದಲಾದವು ಚಲಿಸುವಂತೆ ಕಾಣುತ್ತವೆ. ಹೀಗೆ ಪರಮೇಶ್ವರನು ನಮ್ಮ ಕರ್ಮಗಳಿಗೆ ಫಲವನ್ನು ಕೊಡುವನೆಂದು ಹೇಳುವುದು ಕೇವಲ ಭ್ರಾಂತಿ ಎನಿಸಿದೆ. ಆದ್ದರಿಂದ ಕರ್ಮವೇ ಫಲವನ್ನು ಕೊಡುವುದೆಂದು ಆಕ್ಷೇಪಬಂದರೆ ಸಿದ್ಧಾಂತವನ್ನು ಹೇಳಲಾಗುವುದು. ಕರ್ಮವು ಜಡವಾದ್ದರಿಂದಲೂ, ಮೂರುಕ್ಷಣಗಳಲ್ಲಿ ನಷ್ಟವಾಗುವುದರಿಂದಲೂ, ಚೇತನನಿಂದಲೇ ಹುಟ್ಟುವುದಾದ್ದರಿಂದಲೂ ಜೀವನು ಮಾಡುವ ಯಜ್ಞ, ದಾನ, ಹೋಮ, ಧ್ಯಾನ, ಧಾರಣ, ಪೂಜೆ ಮೊದಲಾದ ಕರ್ಮಗಳೇ ಆಯಾ ಫಲಗಳನ್ನು ಕೊಡಬಲ್ಲವೆಂಬುದನ್ನು ಒಪ್ಪಲಾಗುವುದಿಲ್ಲ. "ಇವನನ್ನು ಈ ಲೋಕದಿಂದ ಮೇಲಕ್ಕೆ ಎತ್ತಲು ಯಾವನು ಇಚ್ಛಿಸುವನೋ ಅವನೇ ಇವನಿಂದ ಒಳ್ಳೆಯದನ್ನು ಮಾಡಿಸುತ್ತಾನೆ. ಇವನನ್ನು ಇಲ್ಲಿಂದ ಕೆಳಕ್ಕೆ ಇಳಿಸಲು ಯಾವನು ಇಚ್ಛಿಸುವನೋ ಅವನೇ ಇವನಿಂದ ಕೆಟ್ಟದನ್ನು ಮಾಡಿಸುತ್ತಾನೆ", ಎಂದು ಶ್ರುತಿಗಳಲ್ಲೂ, "ಲೋಕದಲ್ಲಿ ಪುಣ್ಯ ಪಾಪಗಳನ್ನಾಚರಿಸುವ ಜನರಿಗೆ ಅವರವರ ಕರ್ಮಾನುಗುಣವಾಗಿ ರಾಜನು ಫಲವನ್ನು ಕೊಡುವಂತೆ ಈಶ್ವರನು ಜೀವರ ಕರ್ಮಾನುಸಾರವಾಗಿ ಅವರಿಗೆ ಮುಂದಿನ ಲೋಕಗಳಲ್ಲಿ ಫಲಗಳನ್ನು ಕೊಡುತ್ತಾನೆ." "ಪಿತೃವಧವನ್ನು ಮಾಡಿದವನೂ ಸಹ ಶಿವನಿಗೆ ಪ್ರಿಯನಾಗುತ್ತಾನೆ. ಹಾಗಿಲ್ಲದೆ ಕೇವಲ ಯಜ್ಞಯಾಗಗಳನ್ನು ಮಾಡಿದ್ದರಿಂದ ದಕ್ಷನು ಶಿರಶ್ಛೇದವನ್ನು ಅನುಭವಿಸಿದನು" ಹೀಗೆ ಸ್ಮೃತಿ ಪುರಾಣಗಳಲ್ಲಿಯೂ ಮಹಾದೇವನೇ ಕರ್ಮಗಳೆಲ್ಲಕ್ಕೂ ಫಲವನ್ನು ಕೊಡುವನೆಂದು ವ್ಯವಸ್ಥೆ ಮಾಡಲಾಗಿದೆ. ಆದ್ದರಿಂದ ಅವನ ಆರಾಧನವೆಂಬ ಪವಿತ್ರಭಾವನೆಯಿಂದ ವಿವೇಕಿಗಳು ಯಜ್ಞಯಾಗಾದಿಕರ್ಮಗಳನ್ನು ಅವನ ಅನುಗ್ರಹಕ್ಕಾಗಿ ಆಚರಿಸಬೇಕೆಂಬುದೇ ವಿಹಿತವಾದ ಮಾರ್ಗವಾಗಿದೆ.

**ಅಸ್ಮಿನ್ನರ್ಥೇ ಹೇತ್ವಂತರಮಾಹ. ಶ್ರುತತ್ವಾಚ್ಚ ॥ ೩೮ ॥ "ಸ ವಾ ಏಷಮಹಾನಜ ಆತ್ಮಾನ್ನಾದಃ" "ಆ ವೋ ರಾಜಾನಮಧ್ವರಸ್ಯ ರುದ್ರಂ ಹೋತಾರಂ ಸತ್ಯಯಜಂ ರೋದಸ್ಯೋಃ." "ಗಾಥಪತಿಂ ಮೇಧಪತಿಂ." "ವಾಜಶ್ಚ ಮೇ ಪ್ರಸವಶ್ಚ ಮೇ," "ಧಾತಾ ಚ ಮೇ ವಿಷ್ಣುಶ್ಚ ಮೇ" ಇತ್ಯಾದಿಶ್ರುತಿಷು "ಸರ್ವಕರ್ಮೇಶ್ವರಸ್ಸಾಂಬಃ ಸರ್ವಕರ್ಮಫಲಪ್ರದಃ। ತಸ್ಮಾತ್ತಂ ಪೂಜಯೇನ್ನಿತ್ಯಂ ಸರ್ವಕರ್ಮಾರ್ಥಸಿದ್ಧಯೇ" ಇತ್ಯಾದಿಸ್ಮೃತಿಷು "ನಾಶ್ವಮೇಧಾತ್ಪರೋ ಯಜ್ಞಃ ರುದ್ರಸ್ಯಾರಾಧನಂ ಪ್ರತಿ" ಇತಿ ರಾಮಾಯಣಾದಿಷು ಸರ್ವಕರ್ಮಾರಾಧ್ಯತ್ವಸರ್ವಫಲದಾತೃತ್ವಯೋಶ್ಚ ಶ್ರುತತ್ವಾಚ್ಚಶಿವಸ್ಯೈವ ಪ್ರವ**

ಣಾಚ್ಚ ನ ಜಡಸ್ಯ ಕರ್ಮಣಸ್ಸ್ವಾತಂತ್ರ್ಯಂ. ತಸ್ಮಾತ್ಸರ್ವಕಾಲಸರ್ವಾವಸ್ಥಾಸ್ವಪ್ಯನನ್ಯಬುದ್ಧ್ಯಾ ಮುಮುಕ್ಷುಭಿಃ ಶಿವಾರಾಧನಂ ಕರ್ತವ್ಯಂ.

ಈ ಬಗ್ಗೆ ಬೇರೊಂದು ಹೇತುವನ್ನು ಹೇಳುತ್ತಾನೆ. "ಆ ಈ ಪರಮಾತ್ಮನು ಅನ್ನವನ್ನು ಸಮಗ್ರವಾಗಿ ಕೊಡುವನು. ಹಾಗೆಯೇ ಐಶ್ವರ್ಯವನ್ನೂ ಕೊಡುವನು" "ಇವನೇ ಎಲ್ಲರನ್ನೂ ಆನಂದಪಡಿಸುತ್ತಾನೆ" "ಯಜ್ಞಕ್ಕೆ ಅಧಿಪತಿಯೂ, ಹೋತೃಸ್ವರೂಪನೂ, ವಿಶ್ವವೆಲ್ಲಕ್ಕೂ ಸನ್ಮಾರ್ಗಪ್ರದರ್ಶಕನೂ ಆದ ರುದ್ರನನ್ನು ಅರ್ಚಿಸೋಣ" "ನನಗೂ ನೀವೇ ಐಹಿಕ ಭೋಗಭಾಗ್ಯಗಳಾಗಿರುವಿರಿ. ಬ್ರಹ್ಮವಿಷ್ಣುಗಳೂ ನೀವೇ" ಎಂದು ಶ್ರುತಿಗಳಲ್ಲೂ, "ಪರಶಿವನೇ ಎಲ್ಲಾ ಕರ್ಮಗಳಿಗೂ ನಿಯಾಮಕನಾಗಿದ್ದು ಅವುಗಳ ಫಲವನ್ನು ಕೊಡುವನಾದ್ದರಿಂದ ಅವನನ್ನು ನಿತ್ಯವೂ ಇಷ್ಟಾರ್ಥಸಿದ್ಧಿಗಾಗಿ ಅರ್ಚಿಸಬೇಕು." ಎಂದು ಸ್ಮೃತಿಗಳಲ್ಲೂ "ರುದ್ರನನ್ನು ಮೆಚ್ಚಿಸಲು ಅಶ್ವಮೇಧಕ್ಕಿಂತಲೂ ಬೇರೆ ಯಜ್ಞವಿಲ್ಲ" ವೆಂದು ರಾಮಾಯಾಣದಲ್ಲೂ ಶಿವನೇ ಎಲ್ಲಾ ಕರ್ಮಗಳಲ್ಲೂ ಆರಾಧ್ಯದೇವನೆಂದೂ, ಅವನೇ ಕರ್ಮಗಳೆಲ್ಲಕ್ಕೂ ಫಲವನ್ನುಕೊಡುವವನೆಂದೂ ಹೇಳಲಾಗಿದೆ. ಆದ್ದರಿಂದ ಜಡವಾದ ಕರ್ಮಕ್ಕೆ ಫಲವನ್ನು ಕೊಡುವ ಸ್ವಾತಂತ್ರ್ಯವಿಲ್ಲ. ಹೀಗೆ ಎಲ್ಲಾಕಾಲದಲ್ಲೂ ಎಲ್ಲಾ ಅವಸ್ಥೆಗಳಲ್ಲೂ ಮುಮುಕ್ಷುಗಳು ಅನನ್ಯಭಾವದಿಂದ ಶಿವನ ಆರಾಧನವನ್ನೇ ಮಾಡಬೇಕು.

ನನು ಜೈಮಿನೀಯಾಚಾರ್ಯಕೃತಶಾಸ್ತ್ರೇಷು ಯತ್ರ ಕುತ್ರಾಪಿ ಪರಮೇಶ್ವರಾರಾಧನಪ್ರಸಾಧನಾಭಾವಾತ್ ತದಾರಾಧನಂ ವೈದಿಕಾನಾಂ ನ ವಿಧೇಯಮಿತ್ಯಾಶಂಕಾಯಾಮಾಹ. ಧರ್ಮಂ ಜೈಮಿನಿರತ ಏವ ॥ ೪೯ ॥ ಯತಃ ವೇದವೇದಾಂತಾಗಮೇಷು ಶಿವಸ್ಯ ಪರಬ್ರಹ್ಮಣಸ್ಸರ್ವಕರ್ಮಫಲದಾತೃತ್ವೇನ ಸರ್ವಾಧಿಕತ್ವಂ ತದಾರಾಧನಸ್ಯ ಸರ್ವಕಾಮಫಲಹೇತುತ್ವಂ ಚ ಸಾಧಿತಂ, ಅತ ಏವ ಜೈಮಿನ್ಯಾಚಾರ್ಯೋಽಪಿ "ಈಶ್ವರಂ ತಮಹಂ ವಂದೇ ಯಸ್ಯ ಲಿಂಗಮಹರ್ನಿಶಂ । ಯಜಂತೇ ಸಹ ಭಾರ್ಯಾಭಿಃ ಇಂದ್ರಜ್ಯೇಷ್ಠಾ ಮರುದ್ಗಣಾಃ ॥" ಇತ್ಯಾದಿನಾ ಸ್ವಕೃತವೇದಪಾದಸ್ತವೇ ಶಿವಲಿಂಗಾರಾಧನಸ್ಯ ಪರಮಪುರುಷಾರ್ಥಹೇತುತ್ವೇನ ತದ್ಧರ್ಮಾನುಪದಿಶತಿ. ಅತಃ "ಯಜೇತ ಸ್ವರ್ಗಕಾಮಃ" ಇತ್ಯಾದಿಕರ್ಮಪ್ರಾಧಾನ್ಯಶ್ರುತೀನಾಮಪಿ ಕರ್ಮಫಲದಾತೃತ್ವಂ ಶಿವಸ್ಯೈವೇತಿ ತಾತ್ಪರ್ಯಂ. ಅತ ಏವ "ಸರ್ವೇ ವೇದಾ ಯತ್ಪದಮಾನಂತಿ" ಇತಿಶ್ರುತೌ ಸ್ವಾಭಿಪ್ರಾಯಃ ಸ್ಪಷ್ಟಮುಪದಿಷ್ಟಃ. ತಸ್ಮಾತ್ಕರ್ಮಣಃ ತತ್ಫಲದಾತೃತ್ವಂ ಸರ್ವಥಾ ನ ಸಂಭವತೀತಿ ಸಿದ್ಧಂ.

ಜೈಮಿನ್ಯಾಚಾರ್ಯರ ಶಾಸ್ತ್ರದಲ್ಲಿ ಎಲ್ಲಿಯೂ ಪರಮೇಶ್ವರನ ಆರಾಧನವನ್ನೇ ಹೇಳಿಲ್ಲವಾದ್ದರಿಂದ ಅದನ್ನು ವೈದಿಕರು ಹೇಗೆ ಆಚರಿಸಬಹುದೆಂದಾಶಂಕಿಸಿ ನಿರಾಕರಿಸುತ್ತಾನೆ. ವೇದವೇದಾಂತಾಗಮಗಳಲ್ಲಿ ಪರಶಿವನೇ ಎಲ್ಲಕ್ಕೂ ಅಧಿಕನೆಂದೂ

ಕರ್ಮಗಳಿಗೆ ಫಲವನ್ನು ಕೊಡಬಲ್ಲನೆಂದೂ ಹೇಳಿರುವುದರಿಂದ ಅವನ ಆರಾಧನವೇ ಜೀವರೆಲ್ಲರಿಗೂ ಸಕಲ ಇಷ್ಟಾರ್ಥಗಳನ್ನು ನೆರವೇರಿಸುವುದೆಂಬುದು ಸ್ಪಷ್ಟವಾಗಿದೆ. ಆದ್ದರಿಂದಲೇ ಜೈಮಿನ್ಯಾಚಾರ್ಯರೂ ಸಹ "ಇಂದ್ರಾದಿದೇವತೆಗಳು ಸಪತ್ನೀಕರಾಗಿ ಯಾವ ಮಹೇಶ್ವರನ ಚಿಲ್ಲಿಂಗವನ್ನು ನಿರಂತರವೂ ಅರ್ಚಿಸುತ್ತಾರೆಯೋ ಅಂತಹ ಪ್ರಭುವನ್ನು ನಾನು ವಂದಿಸುತ್ತೇನೆ." ಎಂದು ತಮ್ಮ ವೇದಪಾದಸ್ತವದಲ್ಲಿ ಶಿವಲಿಂಗದ ಆರಾಧನವನ್ನು ಪರಮಪುರುಷಾರ್ಥದ ಸಾಧನವೆಂದು ಭಾವಿಸಿ ಅದರ ಧರ್ಮಗಳನ್ನು ತಿಳಿಸಿದ್ದಾರೆ. "ಸ್ವರ್ಗಾಪೇಕ್ಷೆಯು ಯಾಗಮಾಡಬೇಕು" ಈ ಬಗೆಯ ಶ್ರುತಿಗಳಲ್ಲಿ ಕರ್ಮಕ್ಕೆ ಪ್ರಾಧಾನ್ಯವಿದ್ದರೂ ಶಿವನೇ ಕರ್ಮಗಳ ಫಲವನ್ನು ಕೊಡುವನೆಂಬುದೇ ಅವುಗಳ ತಾತ್ಪರ್ಯ. ಆದ್ದರಿಂದ "ವೇದಗಳೆಲ್ಲವೂ ಯಾವ ಓಂಕಾರವನ್ನು ಪ್ರಶಂಸಿಸಿವೆಯೋ" ಎಂಬ ಶ್ರುತಿಯು ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸಿದೆ. ಹೀಗೆ ಕರ್ಮವೇ ಫಲವನ್ನು ಕೊಡಲಾರದೆಂಬುದು ಸ್ಪಷ್ಟ.

ನನು ಸ್ವಾತಂತ್ರ್ಯೇಣ ಕರ್ಮಣಸ್ತತ್ಫಲದಾತೃತ್ವಸ್ಯ ಶ್ರುತಿತಾತ್ಪರ್ಯಾಭಾವೇ ಸರ್ವಶ್ರುತ್ಯರ್ಥವಿಜ್ಞಾನೀ ಬಾದರಾಯಣೋಽಪಿ ಕಂಠೋಕ್ತ್ಯಾ ಯತ್ರಕುತ್ರಾಪಿ ಪರಮೇಶ್ವರಸ್ಯ ಕರ್ಮಫಲದಾತೃತ್ವವ್ಯವಸ್ಥಾಽದರ್ಶನಾತ್ ಕಥಂ ತಸ್ಯ ಫಲದಾತೃತ್ವಮುಪಪನ್ನಮಿತ್ಯಾಶಂಕಾಯಾಮಾಹ.

**ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾತ್ ॥ ೪೦ ॥**

ತುಶಬ್ದೋ ನಿಶ್ಚಯಾರ್ಥೋ ನಿರ್ದಿಶ್ಯತೇ. ಪೂರ್ವೋಕ್ತಪರಬ್ರಹ್ಮಣಶ್ಶಿವಸ್ಯೈವ ಫಲದಾತೃತ್ವಂ ಭಗವಾನ್ ಬಾದರಾಯಣೋ ಮನ್ಯತೇ. ಕುತಃ ಹೇತುವ್ಯಪದೇಶಾತ್. "ಯಜ್ ದೇವಪೂಜಾಸಂಗತಿಕರಣದಾನೇಷು" ಇತಿ ದೇವತಾರಾಧನಭೂತಯಾಗಾದ್ಯಾರಾಧ್ಯಾಗ್ನಿವಾಯ್ವಾದಿದೇವತಾನಾಮೇವ ತತ್ತತ್ಫಲಹೇತುತಯಾ ತಸ್ಮಿಂಸ್ತಸ್ಮಿನ್ನಪಿ ವಾಕ್ಯೇ ವ್ಯಪದೇಶಾತ್. "ವಾಯವ್ಯಂ ಶ್ವೇತಮಾಲಭೇತ ಭೂತಿಕಾಮೋ ವಾಯುರ್ವೈ ಕ್ಷೇಪಿಷ್ಠಾ ದೇವತಾ ವಾಯುಮೇವ ಸ್ವೇನ ಭಾಗಧೇಯೇನೋಪಧಾವತಿ" "ಸ ಏವೈನಂ ಭೂತಿಂ ಗಮಯತಿ" ಇತ್ಯಾದಿಷು ಕಾಮಿನಸ್ಸಿಷಾಧಯಿಷಿತಫಲಸಾಧನತ್ವಪ್ರಕಾರೋಪದೇಶೋಽಪಿ ವಿಧ್ಯಪೇಕ್ಷಿತ ಏವೇತಿ ನ ಅತತ್ಪರತ್ವಶಂಕಾ ಯುಕ್ತಾ. ಏವಮಪೇಕ್ಷಿತೇಽಪಿ ಫಲಸಾಧನಪ್ರಕಾರೇ ಶಬ್ದಾದೇವಾವಗತೇ ಸತಿ ತತ್ಪರಿತ್ಯಾಗಂ ಅಶ್ರುತಾಪೂರ್ವಪರಿಕಲ್ಪನಂ ಚ ಪ್ರಾಮಾಣಿಕಾ ನ ಸಹಂತೇ. ಲಿಂಗಾದಯೋಽಪಿ ದೇವತಾರಾಧನಭೂತಯಾಗಾದೇಃ ಪ್ರಕೃತ್ಯರ್ಥಸ್ಯ ಕರ್ತೃವ್ಯಾಪಾರಸಾಧ್ಯತಾಂ ವ್ಯುತ್ಪತ್ತಿಸಿದ್ಧಾಂ ಶಬ್ದಾನುಶಾಸನಾನುಮತಾಂ ಅಭಿದಧತಿ, ನಾನ್ಯದಲೌಕಿಕಮಿತಿ ಪ್ರಾಗೇವೋಕ್ತಂ. ತದೇವಂ "ವಾಯುರ್ವೈ ಕ್ಷೇಪಿಷ್ಠಾ ದೇವತಾ" ಇತ್ಯಾದಿಶಬ್ದಾದ್ವಾಯ್ವಾದೀನಾಂ ಫಲಪ್ರದತ್ವಮವ

ಗಮ್ಯತೇ. ವಾಯ್ವಾದ್ಯಾತ್ಮನಾ ಚ ಶಿವ ಏವಾರಾಧ್ಯತಯಾ ಫಲಪ್ರದಾಯಿತ್ವೇನ ಚಾವತಿಷ್ಠತ ಇತಿ ಶ್ರೂಯತೇ. "ಇಷ್ಟಾಪೂರ್ತಂ ಬಹುಧಾ ಜಾತಂ ಜಾಯಮಾನಂ ವಿಶ್ವಂ ಬಿಭರ್ತಿ ಭುವನಸ್ಯ ನಾಭಿಃ" "ತದೇವಾಗ್ನಿಸ್ತದ್ವಾಯುಸ್ತತ್ಸೂರ್ಯಸ್ತದು ಚಂದ್ರಮಾಃ । ತದೇವ ಶುಕ್ಲಮಮೃತಂ ತದ್ಬ್ರಹ್ಮ ಸ ಆಪಸ್ಸ ಪ್ರಜಾಪತಿಃ॥" "ಯೋ ರುದ್ರೋ ಅಗ್ನೌ ಯೋ ಅಪ್ಸು ಯ ಓಷಧೀಷು ಯೋ ರುದ್ರೋ ವಿಶ್ವಾ ಭುವನಾ ವಿವೇಶ" ಇತ್ಯಾದಿಷು ಸರ್ವಾಂತರ್ಯಾಮಿತ್ವಂ ಶಿವಸ್ಯೋಪದಿಷ್ಟಂ. ಅತಸ್ಸರ್ವಕರ್ಮಾರಾಧ್ಯಃ ಸರ್ವಕರ್ಮಫಲಪ್ರದಾತಾ ನಾನ್ಯ ಇತ್ಯುಚ್ಯತೇ. ನನು ಕ್ಷಣಿಕಸ್ಯ ಕರ್ಮಣಃ ಫಲಸಾಧನತ್ವವ್ಯವಸ್ಥಾಪನಾರ್ಥಂ ಅಪೂರ್ವಂ ಪ್ರಕಲ್ಪ್ಯ ತದ್ವಾಕ್ಯಶೇಷಾದನ್ಯಪರತ್ವಮಿತಿ ಚೇನ್ನ "ಯೋ ವೈ ರುದ್ರಸ್ಸ ಭಗವಾನ್" ಇತ್ಯಾದಿನಾ ವಾಯ್ವಾದಿಸರ್ವದೇವತಾತ್ಮಕತ್ವಂ ಶಿವಸ್ಯೈವಾಥರ್ವಶಿರಸಿ ಶ್ರೂಯತೇ. "ಯೋ ಮಾಂ ವೇದ ಸ ಸರ್ವಾನ್ ದೇವಾನ್ ವೇದ" ಇತಿ ಸ್ವಜ್ಞಾನಾತ್ ಸ್ವಾತ್ಮಕಸಕಲದೇವತಾಜ್ಞಾನಂ ತತ್ರೈವ ಶಿವೇನೋಪಪಾದಿತಂ. ಅತಸ್ಸರ್ವಫಲದಾತಾ ಸರ್ವದೇವತಾರೂಪಃ ಸರ್ವಕರ್ಮಾರಾಧ್ಯಃ ಪರಬ್ರಹ್ಮ ಶಿವ ಏವ. ತಥಾ ಸ್ಮೃತೌ "ಯಸ್ಸರ್ವಾ ದೇವತಾ ಭಕ್ತ್ಯಾ ಯಜತೇ ಶಾಸ್ತ್ರಮಾರ್ಗತಃ । ತದಂತರ್ಯಾಮಿರೂಪೇಣ ಫಲಂ ಸಾಂಬಃ ಪ್ರಸೀದತಿ॥" ಇತಿ. ಕೃಷ್ಣಗೀತಾಯಾಂ "ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ । ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧ್ಯಾಮ್ಯಹಂ॥ ಸ ತಯಾ ಶ್ರದ್ಧಯಾ ಯುಕ್ತಃ ತಸ್ಯಾರಾಧನಮೀಹತೇ । ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್॥", "ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ", "ದೇವಾನ್ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ", ಇತ್ಯಾದಿನಾ ಕೃಷ್ಣೋಽಪಿ ವಾಮದೇವಾದಿವತ್ ಶಿವಭಕ್ತತ್ವೇನ ಸ್ವಾಂತರ್ಯಾಮಿತ್ವೇನಾಹಂಪ್ರತ್ಯಯಸ್ಫುರಣರೂಪಪ್ರತ್ಯಗಾತ್ಮಾಕಾರಶಿವಭಾವನಯಾ ಸರ್ವಮಹಮೇವೇತ್ಯುಪಾದಿಶತ್. ಲೋಕೇ ರಾಜಭೃತ್ಯೋಽಪಿ ಸರ್ವಜನದತ್ತಧನಾದಿಕಂ ಸ್ವದ್ರವ್ಯವತ್ಪರಿಗೃಹ್ಯ ತದಂತರ್ಯಾಮಿರಾಜಸಮರ್ಪಣಂ ಕರೋತೀತಿ ದೃಷ್ಟಂ. ತಥಾ ವಿಷ್ಣ್ವಾದಿನಾನಾದೇವತಾರಾಧನಮಪಿ ತದಂತರ್ಯಾಮಿತ್ವೇನ ಶಿವಃ ಪರಿಗೃಹ್ಯ ತತ್ತತ್ಫಲಂ ಪ್ರದಾಸ್ಯತೀತಿ ಸಿದ್ಧಂ.

ಕರ್ಮವು ಸ್ವತಂತ್ರವಾಗಿ ಫಲವನ್ನು ಕೊಡಬಲ್ಲದೆಂಬುದು ಶ್ರುತಿಯ ಅಭಿಪ್ರಾಯವಲ್ಲದಿದ್ದರೂ ಎಲ್ಲಾ ಶ್ರುತಿಗಳ ತಾತ್ಪರ್ಯವನ್ನರಿತ ಬಾದರಾಯಣರೂ ಸಹ ಪರಮೇ

ಶ್ವರನೇ ಜೀವರಿಗೆ ಕರ್ಮಗಳ ಫಲವನ್ನು ಕೊಡುವನೆಂದು ಶ್ರುತಿಯಲ್ಲಿ ಎಲ್ಲಿಯೂ ಸ್ಪಷ್ಟವಾಗಿ ಹೇಳಿಲ್ಲವಾದ್ದರಿಂದ ಈಶ್ವರನೇ ಫಲವನ್ನು ಕೊಡುವನೆಂಬುದು ಹೇಗೆ ಹೊಂದುತ್ತದೆ? ಎಂದಾಶಂಕಿಸಿ ಸಮಾಧಾನಮಾಡುತ್ತಾರೆ. ಹಿಂದೆಹೇಳಿದಂತೆ ಪರಶಿವನೇ ಫಲಗಳನ್ನು ಕೊಡುವನೆಂದು ಪೂಜ್ಯ ಬಾದರಾಯಣರು ನಿಶ್ಚಯಿಸಿದ್ದಾರೆ. "ಯಜ್ ದೇವಪೂಜಾಸಂಗತಿಕರಣದಾನೇಷು" ಎಂಬ ಧಾತುವಿನ ಪ್ರಕಾರ ದೇವತಾರಾಧನ ರೂಪವಾದ ಯಾಗಾದಿಕರ್ಮಗಳಲ್ಲಿ ಆರಾಧ್ಯರಾದ ವಾಯ್ವಾದಿ ದೇವತೆಗಳೇ ಆಯಾ ಫಲಗಳನ್ನು ಕೊಡುವರೆಂದು ಆಯಾಯವಾಕ್ಯದಲ್ಲಿ ತಿಳಿಸಲಾಗಿದೆ. "ಐಶ್ವರ್ಯವನ್ನು ಅಪೇಕ್ಷಿಸುವನು ವಾಯುದೇವತೆಯ ಪ್ರೀತಿಗಾಗಿ ಬಿಳಿ ಕುರಿಯನ್ನು ಯಜ್ಞದಲ್ಲಿ ಅರ್ಪಿಸಬೇಕು. ವಾಯು ಶೀಘ್ರವಾಗಿ ಓಡಾಡುವ ದೇವತೆಯಾದ್ದರಿಂದ ಫಲವನ್ನು ಬೇಗನೆ ಕೊಡುತ್ತಾನೆ" ಎಂಬಲ್ಲಿ ಆ ಫಲವನ್ನು ಅಪೇಕ್ಷಿಸುವವನಿಗೆ ದೇವತೆಯೇ ಫಲವನ್ನು ಕೊಡುವುದೆಂಬ ಅರ್ಥವು ಸ್ಪಷ್ಟವಾಗಿ ತೋರುವುದರಿಂದ ಇದಕ್ಕೆ ಬೇರೆ ಅರ್ಥವನ್ನು ಕಲ್ಪಿಸುವುದು ಯುಕ್ತವಲ್ಲ. ಶಬ್ದದಿಂದ ಸ್ಪಷ್ಟವಾಗಿ ತೋರುವ ಅರ್ಥವನ್ನು ಬಿಟ್ಟು ತೋರದಿರುವ ಅರ್ಥವನ್ನು ಕಲ್ಪಿಸಲು ಪ್ರಾಮಾಣಿಕರು ಬಯಸುವುದಿಲ್ಲ. ಹೀಗೆ ಆ ಮಂತ್ರದಿಂದ ತೋರುವ ಅರ್ಥದಿಂದ ಯಜ್ಞಾದಿಗಳು ದೇವತಾರಾಧನರೂಪವೆಂದು ತಿಳಿದುಬರುತ್ತವೆ. ಹೀಗೆ ಲೋಕನ್ಯಾಯದಿಂದಲೇ ಆ ಫಲವು ದೇವತಾನುಗ್ರಹದಿಂದ ದೊರೆಯುವುದೆಂದು ಸಿದ್ಧಿಸುತ್ತದೆ. ಇಲ್ಲಿ ಲೋಕವಿರುದ್ಧವಾದ ಅರ್ಥವನ್ನು ಕಲ್ಪಿಸಲು ಅವಕಾಶವಿಲ್ಲವೆಂದು ಹಿಂದೆಯೇ ಹೇಳಲಾಗಿದೆ. ಆದ್ದರಿಂದ ವಾಯ್ವಾದಿ ದೇವತೆಗಳೇ ಫಲವನ್ನು ಕೊಡುವುವೆಂದು ತಿಳಿದುಬರುತ್ತದೆ. ಹೀಗೆಯೇ ವಾಯ್ವಾದಿ ರೂಪದಿಂದ ಶಿವನೇ ಆರಾಧ್ಯನು ಮತ್ತು ಫಲಪ್ರದನು ಎಂದು ಶ್ರುತಿಯಲ್ಲಿ ಹೇಳಲಾಗಿದೆ. "ಪ್ರಪಂಚದೊಳಗೆ ಅಡಗಿರುವ ಶಿವನೇ ಜೀವರ ಯಜ್ಞಯಾಗಾದಿ ಕರ್ಮಗಳನ್ನೂ, ಸಮಾಜಕಲ್ಯಾಣದ ಕಾರ್ಯಗಳನ್ನೂ, ಅನೇಕಬಗೆಯ ವಿಸ್ತಾರವಾದ ಬ್ರಹ್ಮಾಂಡವನ್ನೂ ಧರಿಸಿದ್ದಾನೆ" "ಪರಮಾತ್ಮನೇ ಅಗ್ನಿ, ವಾಯು, ಸೂರ್ಯ, ಚಂದ್ರ ಎಲ್ಲವೂ ಆಗಿದ್ದಾನೆ. ಅವನೇ ಶುಕ್ಲವೂ ಮತ್ತು ಅಮೃತನೂ ಆಗಿದ್ದಾನೆ." "ಅಗ್ನಿ, ನೀರು, ಓಷಧಿಲತೆಗಳಲ್ಲಿ ಯಾವ ರುದ್ರನಿರುವನೋ, ಯಾವನು ವಿಶ್ವವೆಲ್ಲವನ್ನು ಆವರಿಸಿರುವನೋ ಅಂತಹ ರುದ್ರನಿಗೆ ನಮಸ್ಕರಿಸುತ್ತೇನೆ" ಎಂಬಲ್ಲಿ ಶಿವನೇ ಸರ್ವಾಂತರ್ಯಾಮಿ ಎಂಬುದು ಹೇಳಲಾಗಿದೆ. ಆದ್ದರಿಂದ ಶಿವನೇ ಎಲ್ಲಾ ಕರ್ಮಗಳಿಂದಲೂ ಆರಾಧ್ಯನು ಮತ್ತು ಕರ್ಮಗಳೆಲ್ಲಕ್ಕೂ ಫಲವನ್ನು ಕೊಡುವವನು ಎಂಬುದು ನಿರ್ವಿವಾದವಾಗಿದೆ. ಕ್ಷಣಿಕವಾದ ಕರ್ಮವೂ ಫಲವನ್ನು ಕೊಡುವುದೆಂದು ಹೇಳಲಿಕ್ಕಾಗಿ ಮೊದಲು ಅಪೂರ್ವವನ್ನು ಕಲ್ಪಿಸಿ ವಾಕ್ಯಶೇಷದಿಂದ ಅದು ಚೇತನನನ್ನು ಆಶ್ರಯಿಸಿದೆ ಎಂದು ಹೇಳುವುದೂ ಸಹ ಯುಕ್ತವಲ್ಲ; ಯಾಕೆಂದರೆ "ಯಾವ ಈ ರುದ್ರನೇ ಪರಮಾತ್ಮನು" ಎಂಬಲ್ಲಿ ಶಿವನೇ ವಾಯ್ವಾದಿಸರ್ವ ದೇವತೆಗಳ ಸ್ವರೂಪನೆಂದು ಅಥರ್ವಶಿರಸ್ಸಿನಲ್ಲಿ ಹೇಳಲಾಗಿದೆ. "ಯಾವನು ನನ್ನನ್ನು

ತಿಳಿಯುವನೋ ಅವನು ಎಲ್ಲಾ ದೇವತೆಗಳನ್ನೂ ತಿಳಿಯುತ್ತಾನೆ" ಎಂಬಲ್ಲಿ ತನ್ನ ಜ್ಞಾನದಿಂದ ಅದೇಬಗೆಯಾದ ದೇವತೆಗಳೆಲ್ಲರ ಜ್ಞಾನವೂ ಆಗುವುದೆಂದು ಶಿವನೇ ಅಲ್ಲಿ ಹೇಳಿದ್ದಾನೆ. ಆದ್ದರಿಂದ ಪರಶಿವನೇ ಸರ್ವದೇವತಾರೂಪನಾಗಿ ಸರ್ವ ಕರ್ಮಗಳಿಂದಲೂ ಆರಾಧ್ಯನೂ, ಸರ್ವಫಲಧಾತನೂ ಆಗಿರುವನೆಂಬುದು ಸ್ಪಷ್ಟ ವಾಗಿದೆ. ಯಾವನು ಭಕ್ತಿಯಿಂದ ಎಲ್ಲಾದೇವತೆಗಳನ್ನು ಶಾಸ್ತ್ರಕ್ರಮದಲ್ಲಿ ಅರ್ಚಿಸು ವನೋ ಅವರೆಲ್ಲರಲ್ಲೂ ಶಿವನೇ ಅಂತರ್ಯಾಮಿಯಾಗಿದ್ದು ಫಲವನ್ನು ಅನುಗ್ರಹಿ ಸುತ್ತಾನೆ" ಎಂದು ಸ್ಮೃತಿಯಲ್ಲಿ ಹೇಳಿದೆ. "ಯಾವನು ಭಗವಂತನ ಯಾವ ಆಕಾರ ವನ್ನು ಶ್ರದ್ಧೆಯಿಂದ ಅರ್ಚಿಸಲಿಚ್ಛಿಸುತ್ತಾನೋ ಅವನಿಗೆ ಅವರಲ್ಲಿಯೇ ನಿಷ್ಠೆಯನ್ನು ದೊರಕಿಸುತ್ತೇನೆ. ಆ ನಿಷ್ಠೆಯಿಂದೊಡಗೂಡಿ ಅವನು ಆ ರೂಪವನ್ನೇ ಆರಾಧಿಸು ತ್ತಾನೆ. ಹಾಗಾದರೂ ಅವನಿಗೆ ಆ ಮೂಲಕವಾಗಿ ನಾನೇ ಫಲಗಳನ್ನು ಅನುಗ್ರಹಿ ಸುವೆನು" "ನಾನು ಎಲ್ಲಾ ಯಜ್ಞಗಳ ಫಲವನ್ನು ಕೊಡುವೆನು ಮತ್ತು ಭೋಗಿ ಸುವೆನು" "ದೇವಭಕ್ತರು ದೇವರನ್ನು ಸೇರಿದರೆ ನನ್ನಭಕ್ತರು ನನ್ನಲ್ಲಿ ಸೇರು ತ್ತಾರೆ. ನನ್ನನ್ನೇ ನಂಬಿದವರು ನನ್ನಲ್ಲಿಯೇ ಸೇರುತ್ತಾರೆ" ಹೀಗೆಂದು ಕೃಷ್ಣಗೀತೆ ಯಲ್ಲಿ ಕಷ್ಣನು ವಾಸುದೇವನಂತೆ ಶಿವನಭಕ್ತನಾದ್ದರಿಂದಲೂ, ಶಿವನೇ ತನ್ನಲ್ಲಿ ಅಂತ ರ್ಯಾಮಿಯಾಗಿದ್ದುದರಿಂದಲೂ, ತಾನೇ ಶಿವನೆಂದು ಪರಾಹಂತಾಸ್ಥಿತಿಯಲ್ಲಿ ಶಿವ ಭಾವನೆಯಿಂದ ಉಪದೇಶಿಸಿದ್ದಾನೆ. ಲೋಕದಲ್ಲಿ ಸೇವಕನೂ ಸಹ ಜನರು ಕೊಡುವ ಕಾಣಿಕೆಯನ್ನು ತನ್ನ ದ್ರವ್ಯವೆಂದೇ ಪರಿಗ್ರಹಿಸಿ ತನ್ನ ನಿಯಾಮಕನಾದ ರಾಜನಿಗೆ ಅದನ್ನು ಸಮರ್ಪಿಸುತ್ತಾನೆ. ಹಾಗೆಯೇ ವಿಷ್ಣು ಮೊದಲಾದ ದೇವತೆಗಳೆಲ್ಲರಿಗೂ ಮಾಡುವ ಪೂಜೆಯನ್ನು ತದಂತರ್ಯಾಮಿಯಾದ ಶಿವನೇ ಪರಿಗ್ರಹಿಸಿ ಆಯಾ ಕಾಲ ಗಳಲ್ಲಿ ಆಯಾ ಫಲಗಳನ್ನು ಅನುಗ್ರಹಿಸುತ್ತಾನೆಂಮ ಸಿದ್ಧವಾಯಿತು.

---

### ಅಥ ಶ್ರೀಕರಭಾಷ್ಯೇ ತೃತೀಯಾಧ್ಯಾಯಸ್ಯ ತೃತೀಯಃ ಪಾದಃ

ಪೂರ್ವಪಾದೇ ತತ್ಪದಾರ್ಥಭೂತಪರಶಿವಬ್ರಹ್ಮೋಪಾಸನೇನ ತ್ವಂಪದಾರ್ಥಭೂತಪಶುರೂಪಜೀವಸ್ಯ ಪಾಶನಿವೃತ್ತಿಪೂರ್ವಕಪಶುಪತಿ ಪ್ರಾಪ್ತಿರೂಪಪರಮಪುರುಷಾರ್ಥಫಲಪ್ರಪಂಚನೇ ತದುಪಾಸನಂ ಕಥ ಮಿತ್ಯಾಕಾಂಕ್ಷಾಯಾಂ ತೃತೀಯಪಾದ ಆರಭ್ಯತೇ. ಕೇಚಿದತ್ರ ಸಗು ಣೇಶ್ವರಸ್ಯ ಮಿಥ್ಯಾಭೂತತ್ವಾತ್ ತದುಪಾಸನೇನ ನಿತ್ಯನಿರ್ಗುಣನಿರವ ಯವಪರಿಪೂರ್ಣಪರಬ್ರಹ್ಮಸಾಕ್ಷಾತ್ಕಾರಯೋಗಾತ್ "ನ ಕುರ್ಯಾನ್ನಿ ಷ್ಫಲಂ ಕರ್ಮ" ಇತಿ ನ್ಯಾಯಾಚ್ಚ ಸರ್ವಪರಿಪೂರ್ಣನಿರ್ಗುಣಬ್ರಹ್ಮ ಸಾಕ್ಷಾತ್ಕಾರಹೇತುಭೂತತದ್ವಿಧಾಯಕವೇದಾಂತಶ್ರವಣಮನನಾದಿಕ ಮೇವ ಯುಕ್ತಮಿತ್ಯಾಕಾಂಕ್ಷಾಯಾಂ ಪಾಕಸ್ಯ ವಹ್ನಿವತ್ಸಗುಣಬ್ರ ಹ್ಮೋಪಾಸನಾಯೋಗೇ ನಿರ್ಗುಣಬ್ರಹ್ಮಸಾಕ್ಷಾತ್ಕಾರಾಯೋಗಾತ್

ಕೇವಲವೇದಾಂತಶ್ರವಣಾದೇರ್ವೈದ್ಯಶಾಸ್ತ್ರಾದಿಶ್ರವಣವದಪುರುಷಾರ್ಥತ್ವಾತ್ ಶ್ರುತಿನಿಷ್ಠಸಗುಣಬ್ರಹ್ಮೋಪಾಸನವಿಧಾಯಕದಹರಾದ್ಯುಪಾಸನಾದೇವ ನಿರವಯವನಿರ್ಗುಣಷಟ್ಸ್ಥಲಪರಶಿವಬ್ರಹ್ಮಸಾಕ್ಷಾತ್ಕಾರ ಇತ್ಯುಪದೇಶಾರ್ಥಂ ಏತದಧಿಕರಣಮಾಹ. ಸರ್ವವೇದಾಂತಪ್ರತ್ಯಯಾಧಿಕರಣಂ ॥ ೧ ॥ ಸರ್ವವೇದಾಂತಪ್ರತ್ಯಯಂ ಚೋದನಾದ್ಯವಿಶೇಷಾತ್ ॥ ೧ ॥ ಸರ್ವವೇದಾಂತಪ್ರತ್ಯಯಂ ಸರ್ವಶಾಖಾಗತಸರ್ವೋಪನಿಷತ್ಪ್ರತಿಪಾದ್ಯಂ ದಹರೋಪಾಸನಮೇಕಮೇವ. ಏವಂ ಸರ್ವಶಾಖಾಪ್ರಸಿದ್ಧಂ ವೈಶ್ವಾನರೋಪಾಸನಮಪ್ಯೇಕಮೇವ. ಏವಂ ಶಾಂಡಿಲ್ಯೋಪಾಸನಮಪ್ಯೇಕಮೇವ. ಏವಮುಪಕೋಸಲೋಪಾಸನಮೇಕಮೇವ. ಕುತಃ? ಚೋದನಾದ್ಯವಿಶೇಷಾತ್. ಚೋದ್ಯಂತೇ ವಿಧೀಯಂತ ಇತಿ ವ್ಯುತ್ಪತ್ತ್ಯಾ ಚೋದನಾಶಬ್ದೇನ ಅಗ್ನಿಹೋತ್ರಾದಿಕರ್ಮಾಣ್ಯುಚ್ಯಂತೇ. ತಥಾಚ ಚೋದನಾದ್ಯವಿಶೇಶಾತ್ ಸಗುಣಬ್ರಹ್ಮೋಪಾಸನಾನಾಮಪಿ ಚೋದನಾದಿಭಿರಗ್ನಿಹೋತ್ರಾದಿಕರ್ಮಭಿಸ್ಸಹ ಅವಿಶೇಷಾತ್ತುಲ್ಯತ್ವಾತ್. ತಥಾಪಿ ಸರ್ವಶಾಖಾಪ್ರಸಿದ್ಧಾಗ್ನಿಹೋತ್ರಾಖ್ಯಂ ಕರ್ಮ ಯಥೈಕಮೇವ, ಯಥಾ ಜ್ಯೋತಿಷ್ಟೋಮಾಖ್ಯಂ ಕರ್ಮೈಕಂ, ಯಥಾ ವಾಜಪೇಯಾಖ್ಯಂ ಕರ್ಮ ಸರ್ವಶಾಖಾಪ್ರತಿಪಾದ್ಯಮೇಕಮೇವ, ಏವಂ ಸರ್ವಶಾಖಾಪ್ರತಿಪಾದ್ಯಂ ಸಜಾತೀಯಶಿವಪ್ರಧಾನದಹರಾದ್ಯುಪಾಸನಮೇಕಮೇವೇತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಇದಾನೀಂ ಬ್ರಹ್ಮೋಪಾಸನಾನಾಂ ಗುಣೋಪಸಂಹಾರವಿಕಲ್ಪನಿರ್ಣಯಾಯ ವಿದ್ಯಾಭೇದಾಭೇದಚಿಂತಾ ಪ್ರಸ್ತೂಯತೇ. ಪ್ರಥಮಂ ತಾವದೇಕಸ್ಯಾಃ ವೈಶ್ವಾನರವಿದ್ಯಾದಿಕಾಯಾಃ ಅನೇಕಶಾಖಾಸು ಶ್ರೂಯಮಾಣಾಯಾಃ ಕಿಮೇಕವಿದ್ಯಾತ್ವಂ? ಉತ ವಿದ್ಯಾಭೇದಃ? ಇತಿ ಸಂದಿಹ್ಯತೇ. ಶಾಖಾಭೇದತಯಾ ಪ್ರಕರಣಭೇದಾತ್ ಸರ್ವಶಾಖಾಸು ಪರಬ್ರಹ್ಮಣಶ್ಶಿವಸ್ಯ ಉಪಾಸನಾಯಾಂ ಭೇದ ಏವ. ತೈತ್ತಿರೀಯಕೇ " ದಹರಂ ವಿಪಾಪಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಂ । ತತ್ರಾಪಿ ದಹರಂ ಗಗನಂ ವಿಶೋಕಸ್ತಸ್ಮಿನ್ಯದಂತಸ್ತದುಪಾಸಿತವ್ಯಂ ॥ " ಇತ್ಯತ್ರ ದಹರಾಕಾಶೇ ಶಿವೋಪಾಸನಮುಪದಿಶ್ಯತೇ. ಛಾಂದೋಗ್ಯೇ " ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ ದಹರೋಽಸ್ಮಿನ್ನಂತರ ಆಕಾಶಸ್ತಸ್ಮಿನ್ಯದಂತಸ್ತದನ್ವೇಷ್ಟವ್ಯಂ ತದ್ವಾವ ವಿಜಿಜ್ಞಾಸಿತವ್ಯಂ " ಇತ್ಯಾದಿನಾ ದಹರಾಕಾಶಸ್ಯೈವ ಉಪಾಸಿತವ್ಯತ್ವೇನ ವ್ಯಪದೇಶಾದನ್ಯೋನ್ಯವಿರೋಧೋ ದೃಶ್ಯತೇ. ಕಿಂಚ ತೈತ್ತಿರೀಯಕೇ " ಋತಂ ಸತ್ಯಂ ಪರಂ ಬ್ರಹ್ಮ ಪುರುಷಂ ಕೃಷ್ಣಪಿಂಗಳಂ " ಇತ್ಯಾದಿನಾ ದಹರೋ-

ಪಾಸ್ಯಪರಬ್ರಹ್ಮಣಃ ಕೃಷ್ಣಪಿಂಗಳತ್ವಾದಯೋ ಧರ್ಮಾಃ, ಛಾಂದೋಗ್ಯೇ "ಏಷ ತ ಆತ್ಮಾಪಹತಪಾಪ್ಮಾ" ಇತ್ಯಾದಿನಾ ಅಪಹತಪಾಪ್ಮತ್ವಾದಯೋ ಗುಣಾಸ್ತಸ್ಯ ಶ್ರೂಯಂತೇ. ತಸ್ಮಾತ್ತತ್ರ ತತ್ರ ಗುಣಭೇದದರ್ಶನಾದುಪಾಸನಭೇದೋ ಹ್ಯರ್ಥಾದುಪದಿಶ್ಯತೇ. ತಥಾ ಛಾಂದೋಗ್ಯೇ ಪಂಚಾಗ್ನಿವಿದ್ಯಾಯಾಂ, ಬೃಹದಾರಣ್ಯಕವಾಜಸನೇಯಕೈವಲ್ಯಾದಿಷು ಪಂಚಾಗ್ನಿಶಾಂಡಿಲ್ಯೋಪಕೋಸಲೋದ್ಗೀತಪ್ರತರ್ದನಾದಿವಿದ್ಯಾಸು ತತ್ರತತ್ರ ಭೇದೋ ಬಹುಧಾ ಪ್ರಪಂಚಿತಃ. ಮುಂಡಕಶಾಖಾಯಾಂ ಶಿರೋವ್ರತಾಖ್ಯೋ ಧರ್ಮಃ ಶ್ರೂಯತೇ. "ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಂ" ಇತಿ. ಶಿರೋವ್ರತವತಾಂ ಆಥರ್ವಣಿಕಾನಾಮೇವ ವಿದ್ಯೋಪದೇಶನಿಯಮ ಉಪಪದ್ಯತೇ. ತಸ್ಮಾದ್ಧರ್ಮಭೇದಾದುಪಾಸನಭೇದಃ. ತತಃ ಶಾಖಾದಿಭೇದಾದುಪಾಸನಾನಾಂ ಭೇದ ಇತಿ ಪ್ರಾಪ್ತೇ ಪ್ರಚಕ್ಷ್ಮಹೇ. ಸರ್ವವೇದಾಂತಪ್ರತ್ಯಯಂ ದಹರಾದಿವಿದ್ಯೋಪಾಸನಮೇಕಮೇವ. ಕುತಃ? ಚೋದನಾದ್ಯವಿಶೇಷಾತ್. ಚೋದನಾ ತಾವತ್ "ಉಪಾಸೀತ," "ವಿದ್ಯಾತ್" ಇತ್ಯೇವಂ ಜಾತೀಯಕೋ ಧಾತ್ವರ್ಥವಿಶೇಷವಿಧಿಃ. ಆದಿಶಬ್ದೇನ "ಏಕಂ ಹಿ ಸಂಯೋಗರೂಪಚೋದನಾಖ್ಯಾವಿಶೇಷಾತ್" ಇತಿ ಕರ್ಮಕಾಂಡಶಾಖಾಂತರಾಧಿಕರಣಸೂತ್ರೋಕ್ತಾಸ್ಸಂಯೋಗರೂಪಾಖ್ಯಾಃ ಗೃಹ್ಯಂತೇ. ಏಷಾಂ ಚೋದನಾದೀನಾಮವಿಶೇಷಾತ್ ಸೈವೇಯಂ ವಿದ್ಯೇತಿ ಶಾಖಾಂತರೇ ಪ್ರತ್ಯಭಿಜ್ಞಾಯತೇ. ತಥಾಹಿ ಛಾಂದೋಗ್ಯವಾಜಸನೇಯಯೋಃ "ವೈಶ್ವಾನರ ಉಪಾಸ್ಯಃ" ಇತಿ ಚೋದನಾ ತಾವದೇಕರೂಪಾ. "ತಥಾ ತಸ್ಮಿನ್ಯದಂತಸ್ತದನ್ವೇಷ್ಟವ್ಯಂ" ಇತಿ ಛಾಂದೋಗ್ಯೇ ದಹರವಿದ್ಯಾವಿಧಿಃ. "ತಸ್ಮಿನ್ಯದಂತಸ್ತದುಪಾಸಿತವ್ಯಂ" ಇತಿ ತೈತ್ತರೀಯಕೇ. ತತ್ರ ಸ್ಥಾನಾದ್ಯಭೇದಾತ್ ಉಪಾಸ್ಯಬ್ರಹ್ಮಣೋಽಪ್ಯಭೇದಾತ್ ಉಭಯತ್ರೋಕ್ತಾನಾಂ ಧರ್ಮಾಣಾಮವಿರೋಧಾದ್ವಿದ್ಯೈಕ್ಯಮೇವ. ಛಾಂದೋಗ್ಯಬೃಹದಾರಣ್ಯಶಾಖಯೋಃ, ದ್ಯುಪರ್ಜನ್ಯಪೃಥವೀಪುರುಷಯೋಷಿದಾಖ್ಯಸ್ಯಾಗ್ನಿಪಂಚಕಸ್ಯ ವೇದ್ಯತಯಾ ಯಾವತ್ಸ್ವರೂಪಮಾಮ್ನಾತಂ ತದುಭಯತ್ರಾಪಿ ಸಮಾನಂ. ತಸ್ಮಾನ್ನ ವಿದ್ಯಾಭೇದ ಇತಿ ಸಿದ್ಧಂ.

ತತ್ಪದದ ಅರ್ಥವೆನಿಸಿದ ಪರಶಿವಬ್ರಹ್ಮದ ಉಪಾಸನದಿಂದ ತ್ವಂಪದದ ಅರ್ಥವೆನಿಸಿದ ಪಶುಜೀವನು ತನ್ನ ಪಾಶವನ್ನು ಕಳೆದುಕೊಂಡು ಪಶುಪತಿಯೆನಿಸಿದ ಪರಮಾತ್ಮನೊಡನೆ ಸಮರಸವಾಗಿ ಬೆರೆಯುವನೆಂದು ಹಿಂದಿನಪಾದದಲ್ಲಿ ವಿಸ್ತರಿಸಿಯಾಯಿತು. ಆದರೆ ಅವನ ಉಪಾಸನವನ್ನು ಹೇಗೆ ಮಾಡಬೇಕು ಎಂಬ ಆಕಾಂಕ್ಷೆಯಿಂದ ತೃತೀಯ

ಪಾದವು ಆರಂಭವಾಗುತ್ತದೆ. ಸಗುಣೇಶ್ವರನು ಸುಳ್ಳಾದುದರಿಂದ ಅವನ ಉಪಾಸನವು ನಿರ್ಗುಣಬ್ರಹ್ಮವನ್ನು ದೊರಕಿಸಲಾರದೆಂದು ಕೆಲವರು ಹೇಳುತ್ತಾರೆ. ನಿಷ್ಫಲವಾದ ಕರ್ಮವನ್ನು ಮಾಡಬಾರದೆಂಬ ನ್ಯಾಯವೂ ಇದೆ. ಆದ್ದರಿಂದ ನಿತ್ಯವೂ ಪರಿಪೂರ್ಣವೂ ಆದ ನಿರ್ಗುಣಬ್ರಹ್ಮದ ಸಾಕ್ಷಾತ್ಕಾರಕ್ಕೆ ಕಾರಣವೆಂದು ಹೇಳಲಾಗಿರುವ ವೇದಾಂತಶ್ರವಣಮನನಾದಿಗಳೇ ಯುಕ್ತವೆಂದು ಆಶಂಕಿಸಿ ಅಡಿಗೆಗೆ ಬೆಂಕಿ ಹೇಗೆ ಆವಶ್ಯಕವೋ ಹಾಗೆ ಸಗುಣಬ್ರಹ್ಮದ ಉಪಾಸನವಿಲ್ಲದೆ ನಿರ್ಗುಣಬ್ರಹ್ಮದ ದರ್ಶನವೇ ಆಗುವ ಸಂಭವವಿಲ್ಲದ್ದರಿಂದಲೂ, ಕೇವಲ ವೇದಾಂತಶ್ರವಣವೂ ಸಹ ವೈದ್ಯಶಾಸ್ತ್ರಶ್ರವಣದಂತೆ ನಿರರ್ಥಕವಾದುದರಿಂದಲೂ ಶ್ರುತಿಯಲ್ಲಿ ಹೇಳಿರುವಂತೆ ಸಗುಣಬ್ರಹ್ಮಕ್ಕೆ ಅನ್ವಯಿಸುವ ದಹರಾದ್ಯುಪಾಸನದಿಂದಲೇ ನಿರವಯವವೂ ನಿರ್ಗುಣವೂ ಆದ ಷಟ್ಸ್ಥಲಬ್ರಹ್ಮದ ಸಾಕ್ಷಾತ್ಕಾರವಾಗುವುದೆಂದು ತಿಳಿಸಲಿಕ್ಕಾಗಿ ಮುಂದಿನ ಅಧಿಕರಣವು ಹೊರಟಿದೆ. ಎಲ್ಲಾ ಶಾಖೆಗಳಿಗೆ ಸಂಬಂಧಿಸಿದ ಎಲ್ಲಾ ಉಪನಿಷತ್ತುಗಳಲ್ಲೂ ಹೇಳಿರುವ ದಹರೋಪಾಸನವು ಒಂದೇಬಗೆಯಾಗಿದೆ. ಹಾಗೆಯೇ ವೈಶ್ವಾನರೋಪಾಸನವೂ ಒಂದೇ ಬಗೆಯಾಗಿದೆ. ಅದರಂತೆಯೇ ಶಾಂಡಿಲ್ಯ ಮತ್ತು ಉಪಕೋಸಲೋಪಾಸನಗಳೂ ಒಂದೇ ವಿಧವಾಗಿವೆ; ಯಾಕೆಂದರೆ ಚೋದನಾರೂಪವಾದ ವಿಧಿಯು ಅಗ್ನಿಹೋತ್ರ ಮೊದಲಾದ ಕರ್ಮಗಳಲ್ಲೂ ಸಮಾನವೇ ಆಗಿವೆ. ಎಲ್ಲಾ ಶಾಖೆಗಳಲ್ಲೂ ಹೇಳಿರುವ ಅಗ್ನಿಹೊತ್ರ ಜ್ಯೋತಿಷ್ಟೋಮ ವಾಜಪೇಯ ಮೊದಲಾದ ಕರ್ಮಗಳೂ ಒಂದೇಬಗೆಯಾಗಿವೆ. ಹಾಗೆಯೇ ಎಲ್ಲಾ ಶಾಖೆಗಳಲ್ಲಿ ಹೇಳಿರುವ ಅಂತರ್ಲಿಂಗೋಪಾಸನರೂಪವಾದ ದಹರವಿದ್ಯೆಯೂ ಒಂದೇಬಗೆಯಾಗಿದೆ. ಆದರೆ ಬ್ರಹ್ಮೋಪಾಸನಗಳಲ್ಲಿ ಯಾವ ಗುಣಗಳನ್ನು ಆದರಿಸಬೇಕು, ಯಾವುದನ್ನು ಬಿಡಬೇಕೆಂದು ನಿರ್ಣಯಿಸಲಿಕ್ಕಾಗಿ ಆ ಉಪಾಸನಗಳೆಲ್ಲವೂ ಬೇರೆಯೇ ಅಥವಾ ಒಂದೇವಿಧವೇ ಎಂಬುದನ್ನು ಇಲ್ಲಿ ವಿಚಾರಿಸಲಾಗುವುದು. ಅನೇಕ ಶಾಖೆಗಳಲ್ಲಿ ಹೇಳಿರುವ ವೈಶ್ವಾನರ ಮೊದಲಾದ ವಿದ್ಯೆಗಳೆಲ್ಲವೂ ಒಂದೇಬಗೆಯೇ ಅಥವಾ ಒಂದೊಂದೂ ಬೇರೆಯೇ? ಎಂಬ ಸಂದೇಹ ಬರುತ್ತದೆ. ಶಾಖೆ ಬೇರೆಯಾದರೆ ಪ್ರಕರಣವೂ ಬೇರೆಯಾಗುತ್ತದೆಯಾದ್ದರಿಂದ ಪರಶಿವಬ್ರಹ್ಮದ ಉಪಾಸನವೂ ಬೇರೆಯಾಗುತ್ತದೆ. ತೈತ್ತಿರೀಯದಲ್ಲಿ ದಹರಾಕಾಶದಲ್ಲಿ ಶಿವನ ಉಪಾಸನವನ್ನು ಹೇಳಲಾಗಿದೆ. ಛಾಂದೋಗ್ಯದಲ್ಲಿ ಈ ದೇಹವೆಂಬ ಬ್ರಹ್ಮಪುರದಲ್ಲಿ ದಹರವೆಂಬ ಕಮಲಗೃಹವಿದೆ ಎಂದು ಹೇಳಿ, ಅದರೊಳಗೆ ಯಾವ ದಹರಾಕಾಶವಿದೆಯೋ ಅದರಲ್ಲಿ ಇರುವುದನ್ನು ಹುಡುಕಿ ತಿಳಿಯಬೇಕೆಂದು ಹೇಳಿದ್ದರಿಂದ ಮುಖ್ಯವಾಗಿ ದಹರಾಕಾಶವನ್ನೇ ಉಪಾಸನಮಾಡಬೇಕೆಂದು ಹೇಳಲಾಗಿದೆ. ಇದರಿಂದ ಪರಸ್ಪರ ವಿರೋಧವು ಕಂಡುಬರುತ್ತದೆ. ತೈತ್ತಿರೀಯದಲ್ಲಿ ದಹರೋಪಾಸ್ಯನಾದ ಪರಶಿವಬ್ರಹ್ಮದ ಕೃಷ್ಣಪಿಂಗಳ ಮೊದಲಾದ ಗುಣಗಳನ್ನು ಹೇಳಿದೆ. ಛಾಂದೋಗ್ಯದಲ್ಲಿ ಪಾಪವಿಲ್ಲದಿರುವಿಕೆ ಮೊದಲಾದ ಗುಣಗಳನ್ನು ಹೇಳಿದೆ. ಆದ್ದರಿಂದ ಅಲ್ಲಲ್ಲಿ ಗುಣ

ಭೇದವಿರುವುದರಿಂದ ಬೇರೆಬೇರೆ ಉಪಾಸನಗಳನ್ನು ತಿಳಿಸಲಾಗಿದೆ. ಛಾಂದೋಗ್ಯದ ಪಂಚಾಗ್ನಿವಿದ್ಯೆಯಲ್ಲಿ ಮತ್ತು ಬೃಹದಾರಣ್ಯಕ ವಾಜಸನೇಯ ಕೈವಲ್ಯಮೊದಲಾದ ಶ್ರುತಿಗಳಲ್ಲಿ ಹೇಳಿರುವ ಪಂಚಾಗ್ನಿ, ಶಾಂಡಿಲ್ಯ, ಉಪಕೋಸಲ, ಉದ್ಗೀಥ, ಪ್ರತರ್ದನ ಮೊದಲಾದ ವಿದ್ಯೆಗಳಲ್ಲೂ ಅನೇಕ ಬಗೆಯಾದ ಭೇದವನ್ನು ಹೇಳಲಾಗಿದೆ. ಮುಂಡಕಶಾಖೆಯು ಶಿರೋವ್ರತವೆಂಬ ಧರ್ಮವನ್ನು ತಿಳಿಸಿದೆ. "ಯಾರು ಶಿರೋವ್ರತವನ್ನು ಆಚರಿಸಿರುವರೋ ಅವರಿಗೇ ಈ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕು" ಎಂಬಂತೆ ಶಿರೋವ್ರತವುಳ್ಳ ಆಥರ್ವಣಿಕರಿಗೆ ಮಾತ್ರವೇ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕೆಂಬ ನಿಯಮವು ಯುಕ್ತವಾಗಿದೆ. ಆದ್ದರಿಂದ ಧರ್ಮಭೇದದಿಂದಲೂ ಶಾಖಾಭೇದದಿಂದಲೂ ಉಪಾಸನಭೇದವುಂಟಾಗುವುದೆಂದು ಆಕ್ಷೇಪ ಬರುತ್ತದೆ. ಇದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಬೇರೆ ಬೇರೆ ಶಾಖೆಗಳಲ್ಲಿ ಹೇಳಿರುವ ದಹರಾದ್ಯುಪಾಸನಗಳೆಲ್ಲವೂ ಒಂದೇ ಬಗೆಯಾಗಿವೆ; ಯಾಕೆಂದರೆ "ಉಪಾಸೀತ" "ವಿದ್ಯಾತ್" "ಉಪಾಸನಮಾಡು", "ತಿಳಿ" ಎಂಬ ಪದಗಳಿಂದ ವಿಧಿಸಿರುವ ಕರ್ಮಗಳೆಲ್ಲವೂ ಸಾಮಾನ್ಯವಾಗಿ ಒಂದೇ ಬಗೆಯಾಗಿವೆ. ಇಲ್ಲಿ ಆದಿ ಶಬ್ದದಿಂದ ಪೂರ್ವಕಾಂಡದ ಸೂತ್ರದಲ್ಲಿ ಹೇಳಿದಂತೆ ಸಂಯೋಗ ಮತ್ತು ರೂಪಗಳನ್ನು ಗ್ರಹಿಸಬೇಕು. ಈ ಚೋದನಗಳೆಲ್ಲವೂ ಒಂದೇ ಬಗೆಯಾದ್ದರಿಂದ ಒಂದು ಶಾಖೆಯಲ್ಲಿ ಹೇಳಿರುವ ಉಪಾಸನವನ್ನೇ ಬೇರೆ ಶಾಖೆಯಲ್ಲಿ ಹೇಳಿದ್ದರೂ ಅದೇ ಇದು ಎಂದು ಗುರ್ತಿಸಬಹುದಾಗಿದೆ. ಛಾಂದೋಗ್ಯವಾಜಸನೇಯಗಳಲ್ಲಿ "ವೈಶ್ವಾನರನನ್ನು ಉಪಾಸನಮಾಡಬೇಕು" ಎಂಬ ವಿಧಿ ಒಂದೇ ಬಗೆಯಾಗಿದೆ. "ಅದರೊಳಗೆ ಇರುವುದನ್ನು ಹುಡಕಬೇಕು" ಎಂದು ಛಾಂದೋಗ್ಯದಲ್ಲೂ, "ಒಳಗೆ ಇರುವುದನ್ನು ಉಪಾಸನಮಾಡಬೇಕು" ಎಂದು ತೈತ್ತಿರೀಯದಲ್ಲೂ ದಹರೋಪಾಸನವನ್ನು ವಿಧಿಸಲಾಗಿದೆ. ಅಲ್ಲಿ ಸ್ಥಾನಗಳೆರಡೂ ಒಂದೇ ಆದ್ದರಿಂದಲೂ, ಉಪಾಸ್ಯ ಬ್ರಹ್ಮವೂ ಒಂದೇ ಆದ್ದರಿಂದಲೂ, ಎರಡು ಕಡೆಗಳಲ್ಲಿ ಹೇಳಿದ ಧರ್ಮಗಳಲ್ಲೂ ವಿರೋಧವಿಲ್ಲದ್ದರಿಂದಲೂ ಉಪಾಸನಗಳು ಒಂದೇ ಬಗೆಯಾಗಿವೆ. ಛಾಂದೋಗ್ಯ ಬೃಹದಾರಣ್ಯಕ ಶಾಖೆಗಳಲ್ಲಿ ದ್ಯುಲೋಕ ಪರ್ಜನ್ಯ ಪೃಥಿವೀ ಪುರುಷ ಸ್ತ್ರೀ ಈ ಐದನ್ನು ಅಗ್ನಿಪಂಚಕವೆಂದು ಹೇಳಿ ಅವುಗಳ ಸ್ವರೂಪವನ್ನು ತಿಳಿಸಲಾಗಿದೆ. ಹೀಗೆ ಇಲ್ಲಿ ಎರಡು ಕಡೆ ಹೇಳಿದ್ದೂ ಸಮಾನವಾಗಿರುವುದರಿಂದ ಉಪಾಸನದಲ್ಲಿ ಯಾವ ಭೇದವೂ ಇಲ್ಲವೆಂದು ಸಿದ್ಧವಾಯಿತು.

**ಶಾಖಾಭೇದೇನ ಗುಣಭೇದಸ್ಯ ಶ್ರೂಯಮಾಣತ್ವಾತ್ ನಾನಾಶಾಖಾಗತಾನಾಂ ಸಜಾತೀಯೋಪಾಸನಾನಾಂ ಐಕ್ಯಮನುಪಪನ್ನಮಿತ್ಯಾಶಂಕಾಯಾಮಾಹ. ಭೇದಾನ್ನೇತಿ ಚೇದೇಕಸ್ಯಾಮಪಿ ॥ ೨ ॥ ಅವಿಶೇಷಾತ್ಪುನಃ ಶ್ರುತ್ಯಾ ಪ್ರಕರಣಾಂತರಾಚ್ಚ ವಿಧೇಯಭೇದಾನ್ನ ವಿದ್ಯೈಕ್ಯಂ ಇತಿ ಚೇದೇಕಸ್ಯಾಮಪಿ ವಿದ್ಯಾಯಾಂ ಪ್ರತಿಪತ್ತ್ಯಭೇದಾತ್ ಪುನಃ**

**ಶ್ರುತಿಃ ಪ್ರಕರಣಾಂತರಂ ಚೋಪಪದ್ಯತೇ. ಯತ್ರ ಹ್ಯೇಕಸ್ಮಿನ್ ಪ್ರತಿಪತ್ತರಿ ಪುನಃ ಶ್ರುತಿಃ ಪ್ರಕರಣಾಂತರಂ ಚ ವಿದ್ಯತೇ ತತ್ರಾನ್ಯಥಾನುಪಪತ್ತ್ಯಾ ಪುನಃ ಶ್ರುತ್ಯಾದ್ಯುಪಪತ್ತೇಸ್ತತ್ರ ನ ವಿಧೇಯಾಂತರಸಂಭವಃ. ತಸ್ಮಾದೇವಂ ನಾನಾಶಾಖಾಗತಾನಾಂ ಸಜಾತಿಯೋಪಾಸನಾನಾಂ ಪರಮಶಿವವಿಷಯಾಣಾಂ ಏಕತ್ವಮೇವೋಪದಿಶ್ಯತ ಇತಿ ನಿರ್ಣೀಯತೇ.**

ಶಾಖಾಭೇದದಿಂದ ಗುಣಭೇದವು ಸಂಭವಿಸುವುದರಿಂದ ಅನೇಕ ಶಾಖೆಗಳಲ್ಲಿ ಹೇಳಿರುವ ಒಂದೇ ಬಗೆಯ ಉಪಾಸನಗಳಲ್ಲೂ ಐಕ್ಯವು ಸಂಭವಿಸಲಾರದೆಂದು ಆಶಂಕಿಸಿ ಸಮಾಧಾನಮಾಡುತ್ತಾನೆ. ಬೇರೆ ಬೇರೆ ಶಾಖೆಗಳಲ್ಲಿ ಹೇಳಿರುವ ಉಪಾಸನಗಳು ಒಂದೇ ಬಗೆಯಾಗಿದ್ದರೂ ಮತ್ತೆ ಶ್ರುತಿಯಲ್ಲಿ ಬೇರೆ ಪ್ರಕರಣದಲ್ಲಿ ಅವನ್ನು ವಿಧಿಸಿರುವುದರಿಂದ ಆ ವಿಧಾನದಲ್ಲಿ ಭೇದವಿದ್ದೇ ಇರುತ್ತದೆ ಎಂದು ಆಕ್ಷೇಪಿಸುವುದು ಸರಿಯಲ್ಲ; ಯಾಕೆಂದರೆ ಒಂದೇ ಉಪಾಸನದಲ್ಲೂ ಆ ಉಪಾಸನ ಮಾಡುವವರಲ್ಲಿ ಇರುವ ಐಕ್ಯತೆಯನ್ನು ಗಮನಿಸಿ ಶ್ರುತಿ ಮತ್ತು ಪ್ರಕರಣಗಳು ಬೇರೆಯಾದರೂ ಹೊಂದಿಕೆ ಇರುತ್ತದೆ. ಎಲ್ಲಿ ಒಬ್ಬನೇ ಉಪಾಸನ ಮಾಡುವವನಿದ್ದು ಶ್ರುತಿ ಮತ್ತು ಪ್ರಕರಣಗಳು ಬೇರೆಯಾಗಿರುತ್ತವೆಯೋ ಅಲ್ಲಿ ಬೇರೆ ಮಾರ್ಗವೇ ಇಲ್ಲದ್ದರಿಂದ ವಿಧೇಯಾಂಶದ ಭೇದವನ್ನನುಸರಿಸಿ ಉಪಾಸನದಲ್ಲೂ ಭೇದವನ್ನು ಒಪ್ಪಲೇಬೇಕಾಗುತ್ತದೆ. ಎಲ್ಲಿ ಉಪಾಸನಗಳಲ್ಲಿ ಅಭೇದವಿರುತ್ತದೆಯೋ ಅಲ್ಲಿ ಆ ಉಪಾಸನಗಳಿಗಾಗಿ ಹೇಳಿರುವ ವಿಧಿಗಳು ಪರಸ್ಪರವಾಗಿ ಹೊಂದಿರುವುದರಿಂದ ಬೇರೆ ಶ್ರುತಿ ಮತ್ತು ಪ್ರಕರಣಗಳಾದರೂ ವಿದ್ಯೆಯಲ್ಲಿ ಭೇದವು ಸಂಭವಿಸುವುದಿಲ್ಲ. ಆದ್ದರಿಂದ ಬೇರೆ ಬೇರೆ ಶಾಖೆಗಳಲ್ಲಿ ಹೇಳಿರುವ ಪರಶಿವವಿಷಯಕವಾದ ಉಪಾಸನಗಳೆಲ್ಲವೂ ಒಂದೇ ಬಗೆಯಾಗಿವೆ ಎಂದೇ ನಿರ್ಣಯಿಸಲಾಗಿದೆ.

**ಯಚ್ಚೋಕ್ತಂ ಶಿರೋವ್ರತವತಾಂ ಆಥರ್ವಣಿಕಾನಾಮೇವ ವಿದ್ಯೋಪದೇಶನಿಯಮದರ್ಶನಾದ್ವಿದ್ಯಾಭೇದಃ ಪ್ರತೀಯತ ಇತ್ಯಾಶಂಕ್ಯ ತತ್ರಾಹ. ಸ್ವಾಧ್ಯಾಯಸ್ಯ ತಥಾತ್ವೇ ಹಿ ಸಮಾಚಾರಾಧಿಕಾರಾಚ್ಚ ಸವವಚ್ಚ ತನ್ನಿಯಮಃ ॥ ೩ ॥ ನೈತದಸ್ತಿ ಶಿರೋವ್ರತೋಪದೇಶನಿಯಮದರ್ಶನಂ ವಿದ್ಯಾಭೇದಂ ದರ್ಶಯತೀತಿ, ಶಿರೋವ್ರತಸ್ಯ ವಿದ್ಯಾಂಗತ್ವಾಭಾವಾತ್. ಸ್ವಾಧ್ಯಾಯಸ್ಯ ತಥಾತ್ವೇ ಹಿ ತನ್ನಿಯಮಃ, ಸ್ವಾಧ್ಯಾಯಸ್ಯ ತಥಾತ್ವಸಿದ್ಧ್ಯರ್ಥಂ ತದನ್ಯಸಂಸ್ಕಾರಭಾಕ್ತ್ವಸಿದ್ಧ್ಯರ್ಥಂ ಹಿ ಶಿರೋವ್ರತೋಪದೇಶನಿಯಮಃ ನ ವಿದ್ಯಾಯಾಃ. ಕುತ ಏತತ್? "ನೈತದಚೀರ್ಣವ್ರತೋಽಧೀಯೀತ" ಇತಿ ತಸ್ಯಾಧ್ಯಯನಸಂಯೋಗಾತ್, ಸಮಾಚಾರೇ ಅಧಿಕಾರಾಚ್ಚ. ಸಮಾಚಾರಾಖ್ಯೇ ಗ್ರಂಥೇ ಇದಮಪಿ ವೇದವ್ರತೇನ ವ್ಯಾಖ್ಯಾತಮಿತ್ಯತಿದೇಶಾತ್. "ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ" ಇತ್ಯತ್ರ ವೇದವಿದ್ಯಾಮಿತ್ಯರ್ಥಃ. ಸವ**

ವಚ್ಚ ತನ್ನಿಯಮಃ. ಯಥಾಹಿ ಸವಹೋಮಾಸ್ಸಪ್ತ ಸೂರ್ಯಾದಯಃ ಶತೋದನಪರ್ಯಂತಂ ಹ್ಯಾರ್ಥರ್ವಣಿಕೈಕಾಗ್ನಿಸಂಬಂಧಿನಸ್ತತ್ರೈವ ಭವಂತಿ ನ ತ್ರೇತಾಗ್ನಿಷು. "ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ" ಇತ್ಯಾಥರ್ವಣಿಕಶಿರೋವ್ರತಸ್ಯಾಪಿ ತತ್ಪರತ್ವನಿರ್ದೇಶಾನ್ನ ವಿದ್ಯಾಭೇದೋ ವ್ಯಪದಿಶ್ಯತೇ. ನನು ಯದಿ ಸಕಲಶಾಖಾಗತಾನಾಂ ಪರಶಿವಬ್ರಹ್ಮಸಜಾತಿಯೋಪಾಸನಾನಾಮೈಕ್ಯಮಂಗೀಕ್ರಿಯತೇ ತರ್ಹಿ "ಉಪಸಂಹಾರೋಽರ್ಥಭೇದಾತ್" ಇತಿ ವಕ್ಷ್ಯಮಾಣಸೂತ್ರನ್ಯಾಯೇನ ಸಕಲಸಜಾತಿಯೋಪಾಸನಪ್ರಕರಣಪ್ರತಿಪಾದ್ಯಾನಾಂ ಸತ್ಯಸಂಕಲ್ಪತ್ವ ಸರ್ವಜ್ಞತ್ವಸರ್ವೇಶ್ವರತ್ವತ್ರಿಲೋಚನತ್ವನೀಲಕಂಠತ್ವೋಮಾಪತಿತ್ವ ಕೃಷ್ಣಪಿಂಗಳತ್ವಾದಿಗುಣಾನಾಂ ಮೇಳನರೂಪ ಉಪಸಂಹಾರಃ ಉಪಾಸನಾನಾಂ ನಿರ್ಣೇತವ್ಯಃ. ಏವಂ ಸ್ಥಿತೇ ಸತ್ಯೇಕೈಕಸ್ಯ ಪುರುಷಸ್ಯ ಸಕಲ ಶಾಖಾಧ್ಯಯನಾಶಕ್ಯತ್ವಾತ್ ಕಥಂ ಸಕಲಶಾಖಾಪ್ರತಿಪಾದ್ಯಗುಣಮೇಳನನಿರ್ಣಯ ಇತಿ ಚೇನ್ನ "ಸ್ವಾಧ್ಯಾಯೋಽಧ್ಯೇತವ್ಯಃ" ಇತಿ ಶ್ರುತೌ ಸ್ವಸ್ಯ ಅಧ್ಯಾಯಃ ಸ್ವಾಧ್ಯಾಯ ಇತಿ ವ್ಯುತ್ಪತ್ತ್ಯಾ ಸ್ವಾಧ್ಯಾಯಶಬ್ದೇನ ಸ್ವಶಾಖಾ ಉಚ್ಯತೇ. ತಥಾಚ ಸ್ವಾಧ್ಯಾಯಸ್ಯ ತಥಾತ್ವೇನ ಹಿ ಅಧ್ಯಯನವಿಧಿಪ್ರಕರಣೇ ಸ್ವಾಧಿಕಾರೋಪದೇಶಾದೇಕಸ್ಯ ಪುರುಷಸ್ಯ ಸಕಲ ಶಾಖಾಧ್ಯಯನಾಭಾವೇಽಪಿ ಸಕಲಶಾಖಾಧ್ಯೇತೃಭಿಃ ಭರದ್ವಾಜಾತ್ರಿ ಗೌತಮೋಪಮನ್ಯುದಧೀಚಿವಾಮದೇವಾಗಸ್ತ್ಯಶ್ವೇತಾದಿಮಹರ್ಷಿಕೃತ ಗ್ರಂಥಾತ್ ನಾನಾಶಾಖಾಗತಾನಾಂ ಅಗ್ನಿಹೋತ್ರಾದಿಕರ್ಮಾಂಗಾನಾಂ ಮೇಳನನಿಶ್ಚಯಃ. ತದ್ವದುಪಾಸಕಾನಾಂ ಸಕಲಶಾಖಾಧ್ಯಯನಸಾಮರ್ಥ್ಯಾಸಂಭವೇಽಪಿ ಸಕಲಶಾಖಾಧ್ಯೇತೃಭಿಃ ವೇಮಾರಾಧ್ಯೋದ್ಭಟಾರಾಧ್ಯಮರುಳಸಿದ್ಧರೇವಣಸಿದ್ಧಾರಾಧ್ಯಾದಿಭಿರ್ಮಹಾತ್ಮಭಿಃ ಕೃತಾದ್ವೇದಾಂತಭಾಷ್ಯಾದಿಗ್ರಂಥಾತ್ ಸಕಲಶಾಖಾಗತಾನಾಂ ಸತ್ಯಸಂಕಲ್ಪತ್ವಕೃಷ್ಣಪಿಂಗಳತ್ವಾದಿಗುಣಾನಾಂ ಏಕತ್ವನಿಶ್ಚಯೋ ಯುಕ್ತ ಇತ್ಯುಪದಿಶ್ಯತೇ.

ಶಿರೋವ್ರತವನ್ನಾಚರಿಸಿದ ಆಥರ್ವಣಿಕರಿಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕೆಂಬ ನಿಯಮದಿಂದ ವಿದ್ಯಾಭೇದವುಂಟೆಂದು ಆಶಂಕಿಸಿ ಸಮಾಧಾನವನ್ನು ತಿಳಿಸುತ್ತಾನೆ. ಶಿರೋವ್ರತವು ಉಪಾಸನದ ಅಂಗವೇ ಅಲ್ಲದ್ದರಿಂದ ಶಿರೋವ್ರತವುಳ್ಳವರೇ ಉಪಾಸನಮಾಡಬೇಕೆಂಬ ನಿಯಮದಿಂದ ಉಪಾಸನದಲ್ಲಿ ಯಾವ ಭೇದವೂ ಸಂಭವಿಸುವುದಿಲ್ಲ. ವೇದದಲ್ಲಿ ಹಾಗೆ ಭೇದವಿದ್ದರೆಯೇ ಆ ಬಗೆಯ ನಿಯಮಕ್ಕೆ ಪ್ರಸಕ್ತಿ ಇದ್ದೀತು. ವೇದದಲ್ಲಿ ಹಾಗೆ ಭೇದವನ್ನು ತಿಳಿಸಲಿಕ್ಕೂ, ಬೇರೆ ಬಗೆಯ ಸಂಸ್ಕಾರಗಳನ್ನು ಹೊಂದಿರಬೇಕೆಂದು ತಿಳಿಸಲಿಕ್ಕೂ ಶಿರೋವ್ರತನಿಯಮ

ಶ್ರುತಿಃ ಪ್ರಕರಣಾಂತರಂ ಚೋಪಪದ್ಯತೇ. ಯತ್ರ ಹ್ಯೇಕಸ್ಮಿನ್ ಪ್ರತಿಪತ್ತರಿ ಪುನಃ ಶ್ರುತಿಃ ಪ್ರಕರಣಾಂತರಂ ಚ ವಿದ್ಯತೇ ತತ್ರಾನ್ಯಥಾನುಪಪತ್ತ್ಯಾ ಪುನಃ ಶ್ರುತ್ಯಾದ್ಯುಪಪತ್ತೇಸ್ತತ್ರ ನ ವಿಧೇಯಾಂತರಸಂಭವಃ. ತಸ್ಮಾದೇವಂ ನಾನಾಶಾಖಾಗತಾನಾಂ ಸಜಾತಿಯೋಪಾಸನಾನಾಂ ಪರಮಶಿವವಿಷಯಾಣಾಂ ಏಕತ್ವಮೇವೋಪದಿಶ್ಯತ ಇತಿ ನಿರ್ಣೀಯತೇ.

ಶಾಖಾಭೇದದಿಂದ ಗುಣಭೇದವು ಸಂಭವಿಸುವುದರಿಂದ ಅನೇಕ ಶಾಖೆಗಳಲ್ಲಿ ಹೇಳಿರುವ ಒಂದೇ ಬಗೆಯ ಉಪಾಸನಗಳಲ್ಲೂ ಐಕ್ಯವು ಸಂಭವಿಸಲಾರದೆಂದು ಆಶಂಕಿಸಿ ಸಮಾಧಾನಮಾಡುತ್ತಾನೆ. ಬೇರೆ ಬೇರೆ ಶಾಖೆಗಳಲ್ಲಿ ಹೇಳಿರುವ ಉಪಾಸನಗಳು ಒಂದೇ ಬಗೆಯಾಗಿದ್ದರೂ ಮತ್ತೆ ಶ್ರುತಿಯಲ್ಲಿ ಬೇರೆ ಪ್ರಕರಣದಲ್ಲಿ ಅವನ್ನು ವಿಧಿಸಿರುವುದರಿಂದ ಆ ವಿಧಾನದಲ್ಲಿ ಭೇದವಿದ್ದೇ ಇರುತ್ತದೆ ಎಂದು ಆಕ್ಷೇಪಿಸುವುದು ಸರಿಯಲ್ಲ; ಯಾಕೆಂದರೆ ಒಂದೇ ಉಪಾಸನದಲ್ಲೂ ಆ ಉಪಾಸನ ಮಾಡುವವರಲ್ಲಿ ಇರುವ ಐಕ್ಯತೆಯನ್ನು ಗಮನಿಸಿ ಶ್ರುತಿ ಮತ್ತು ಪ್ರಕರಣಗಳು ಬೇರೆಯಾದರೂ ಹೊಂದಿಕೆ ಇರುತ್ತವೆ. ಎಲ್ಲಿ ಒಬ್ಬನೇ ಉಪಾಸನ ಮಾಡುವವನಿದ್ದು ಶ್ರುತಿ ಮತ್ತು ಪ್ರಕರಣಗಳು ಬೇರೆಯಾಗಿರುತ್ತವೆಯೋ ಅಲ್ಲಿ ಬೇರೆ ಮಾರ್ಗವೇ ಇಲ್ಲದ್ದರಿಂದ ವಿಧೇಯಾಂಶದ ಭೇದವನ್ನನುಸರಿಸಿ ಉಪಾಸನದಲ್ಲೂ ಭೇದವನ್ನು ಒಪ್ಪಲೇಬೇಕಾಗುತ್ತದೆ. ಎಲ್ಲಿ ಉಪಾಸನಗಳಲ್ಲಿ ಅಭೇದವಿರುತ್ತದೆಯೋ ಅಲ್ಲಿ ಆ ಉಪಾಸನಗಳಿಗಾಗಿ ಹೇಳಿರುವ ವಿಧಿಗಳು ಪರಸ್ಪರವಾಗಿ ಹೊಂದಿರುವುದರಿಂದ ಬೇರೆ ಶ್ರುತಿ ಮತ್ತು ಪ್ರಕರಣಗಳಾದರೂ ವಿದ್ಯೆಯಲ್ಲಿ ಭೇದವು ಸಂಭವಿಸುವುದಿಲ್ಲ. ಆದ್ದರಿಂದ ಬೇರೆ ಬೇರೆ ಶಾಖೆಗಳಲ್ಲಿ ಹೇಳಿರುವ ಪರಶಿವವಿಷಯಕವಾದ ಉಪಾಸನಗಳೆಲ್ಲವೂ ಒಂದೇ ಬಗೆಯಾಗಿವೆ ಎಂದೇ ನಿರ್ಣಯಿಸಲಾಗಿದೆ.

ಯಚ್ಚೋಕ್ತಂ ಶಿರೋವ್ರತವತಾಂ ಆಥರ್ವಣಿಕಾನಾಮೇವ ವಿದ್ಯೋಪದೇಶನಿಯಮದರ್ಶನಾದ್ವಿದ್ಯಾಭೇದಃ ಪ್ರತೀಯತ ಇತ್ಯಾಶಂಕ್ಯ ತತ್ರಾಹ. ಸ್ವಾಧ್ಯಾಯಸ್ಯ ತಥಾತ್ವೇ ಹಿ ಸಮಾಚಾರಾಧಿಕಾರಾಚ್ಚ ಸವವಚ್ಚ ತನ್ನಿಯಮಃ ॥ ೩ ॥ ನೈತದಸ್ತಿ ಶಿರೋವ್ರತೋಪದೇಶನಿಯಮದರ್ಶನಂ ವಿದ್ಯಾಭೇದಂ ದರ್ಶಯತೀತಿ, ಶಿರೋವ್ರತಸ್ಯ ವಿದ್ಯಾಂಗತ್ವಾಭಾವಾತ್. ಸ್ವಾಧ್ಯಾಯಸ್ಯ ತಥಾತ್ವೇ ಹಿ ತನ್ನಿಯಮಃ, ಸ್ವಾಧ್ಯಾಯಸ್ಯ ತಥಾತ್ವಸಿದ್ಧ್ಯರ್ಥಂ ತದನ್ಯಸಂಸ್ಕಾರಭಾಕ್ತ್ವಸಿದ್ಧ್ಯರ್ಥಂ ಹಿ ಶಿರೋವ್ರತೋಪದೇಶನಿಯಮಃ ನ ವಿದ್ಯಾಯಾಃ. ಕುತ ಏತತ್? "ನೈತದಚೀರ್ಣವ್ರತೋಽಧೀಯೀತ" ಇತಿ ತಸ್ಯಾಧ್ಯಯನಸಂಯೋಗಾತ್, ಸಮಾಚಾರೇ ಅಧಿಕಾರಾಚ್ಚ. ಸಮಾಚಾರಾಖ್ಯೇ ಗ್ರಂಥೇ ಇದಮಪಿ ವೇದವ್ರತೇನ ವ್ಯಾಖ್ಯಾತಮಿತ್ಯತಿದೇಶಾತ್. "ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ" ಇತ್ಯತ್ರ ವೇದವಿದ್ಯಾಮಿತ್ಯರ್ಥಃ. ಸವ

ವಚ್ಚ ತನ್ನಿಯಮಃ. ಯಥಾಹಿ ಸಪಹೋಮಾಸ್ಸಪ್ತ ಸೂರ್ಯಾದಯಃ ಶತೋದನಪರ್ಯಂತಂ ಹ್ಯಾಥರ್ವಣಿಕೈಕಾಗ್ನಿಸಂಬಂಧಿನಸ್ತತ್ರೈವ ಭವಂತಿ ನ ತ್ರೇತಾಗ್ನಿಷು. "ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ" ಇತ್ಯಾಥರ್ವಣಿಕಶಿರೋವ್ರತಸ್ಯಾಪಿ ತತ್ಪರತ್ವನಿರ್ದೇಶಾನ್ನ ವಿದ್ಯಾಭೇದೋ ವ್ಯಪದಿಶ್ಯತೇ. ನನು ಯದಿ ಸಕಲಶಾಖಾಗತಾನಾಂ ಪರಶಿವಬ್ರಹ್ಮಸಜಾತಿಯೋಪಾಸನಾನಾಮೈಕ್ಯಮಂಗೀಕ್ರಿಯತೇ ತರ್ಹಿ "ಉಪಸಂಹಾರೋಽರ್ಥಭೇದಾತ್" ಇತಿ ವಕ್ಷ್ಯಮಾಣಸೂತ್ರನ್ಯಾಯೇನ ಸಕಲಸಜಾತಿಯೋಪಾಸನಪ್ರಕರಣಪ್ರತಿಪಾದ್ಯಾನಾಂ ಸತ್ಯಸಂಕಲ್ಪತ್ವ ಸರ್ವಜ್ಞತ್ವಸರ್ವೇಶ್ವರತ್ವತ್ರಿಲೋಚನತ್ವನೀಲಕಂಠತ್ವೋಮಾಪತಿತ್ವ ಕೃಷ್ಣಪಿಂಗಳತ್ವಾದಿಗುಣಾನಾಂ ಮೇಳನರೂಪ ಉಪಸಂಹಾರಃ ಉಪಾಸನಾನಾಂ ನಿರ್ಣೇತವ್ಯಃ. ಏವಂ ಸ್ಥಿತೇ ಸತ್ಯೇಕೈಕಸ್ಯ ಪುರುಷಸ್ಯ ಸಕಲ ಶಾಖಾಧ್ಯಯನಾಶಕ್ಯತ್ವಾತ್ ಕಥಂ ಸಕಲಶಾಖಾಪ್ರತಿಪಾದ್ಯಗುಣಮೇಳನನಿರ್ಣಯ ಇತಿ ಚೇನ್ನ "ಸ್ವಾಧ್ಯಾಯೋಽಧ್ಯೇತವ್ಯಃ" ಇತಿ ಶ್ರುತೌ ಸ್ವಸ್ಯ ಅಧ್ಯಾಯಃ ಸ್ವಾಧ್ಯಾಯ ಇತಿ ವ್ಯುತ್ಪತ್ತ್ಯಾ ಸ್ವಾಧ್ಯಾಯಶಬ್ದೇನ ಸ್ವಶಾಖಾ ಉಚ್ಯತೇ. ತಥಾಚ ಸ್ವಾಧ್ಯಾಯಸ್ಯ ತಥಾತ್ವೇನ ಹಿ ಅಧ್ಯಯನವಿಧಿಪ್ರಕರಣೇ ಸ್ವಾಧಿಕಾರೋಪದೇಶಾದೇಕಸ್ಯ ಪುರುಷಸ್ಯ ಸಕಲ ಶಾಖಾಧ್ಯಯನಾಭಾವೇಽಪಿ ಸಕಲಶಾಖಾಧ್ಯೇತೃಭಿಃ ಭರದ್ವಾಜಾತ್ರಿಗೌತಮೋಪಮನ್ಯುದಧೀಚಿವಾಮದೇವಾಗಸ್ತ್ಯಶ್ವೇತಾದಿಮಹರ್ಷಿಕೃತ ಗ್ರಂಥಾತ್ ನಾನಾಶಾಖಾಗತಾನಾಂ ಅಗ್ನಿಹೋತ್ರಾದಿಕರ್ಮಾಂಗಾನಾಂ ಮೇಳನನಿಶ್ಚಯಃ. ತದ್ವದುಪಾಸಕಾನಾಂ ಸಕಲಶಾಖಾಧ್ಯಯನಸಾಮರ್ಥ್ಯಾಸಂಭವೇಽಪಿ ಸಕಲಶಾಖಾಧ್ಯೇತೃಭಿಃ ವೇಮಾರಾಧ್ಯೋದ್ಭಟಾರಾಧ್ಯಮರುಳಸಿದ್ಧರೇವಣಸಿದ್ಧಾರಾಧ್ಯಾದ್ಭಿರ್ಮಹಾತ್ಮಭಿಃ ಕೃತಾದ್ವೇದಾಂತಭಾಷ್ಯಾದಿಗ್ರಂಥಾತ್ ಸಕಲಶಾಖಾಗತಾನಾಂ ಸತ್ಯಸಂಕಲ್ಪತ್ವಕೃಷ್ಣಪಿಂಗಳತ್ವಾದಿಗುಣಾನಾಂ ಏಕತ್ವನಿಶ್ಚಯೋ ಯುಕ್ತ ಇತ್ಯುಪದಿಶ್ಯತೇ.

ಶಿರೋವ್ರತವನ್ನಾಚರಿಸಿದ ಆಥರ್ವಣಿಕರಿಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಬೇಕೆಂಬ ನಿಯಮದಿಂದ ವಿದ್ಯಾಭೇದವುಂಟೆಂದು ಆಶಂಕಿಸಿ ಸಮಾಧಾನವನ್ನು ತಿಳಿಸುತ್ತಾನೆ. ಶಿರೋವ್ರತವು ಉಪಾಸನದ ಅಂಗವೇ ಅಲ್ಲದ್ದರಿಂದ ಶಿರೋವ್ರತವುಳ್ಳವರೇ ಉಪಾಸನಮಾಡಬೇಕೆಂಬ ನಿಯಮದಿಂದ ಉಪಾಸನದಲ್ಲಿ ಯಾವ ಭೇದವೂ ಸಂಭವಿಸುವುದಿಲ್ಲ. ವೇದದಲ್ಲಿ ಹಾಗೆ ಭೇದವಿದ್ದರೆಯೇ ಆ ಬಗೆಯ ನಿಯಮಕ್ಕೆ ಪ್ರಸಕ್ತಿ ಇದ್ದೀತು. ವೇದದಲ್ಲಿ ಹಾಗೆ ಭೇದವನ್ನು ತಿಳಿಸಲಿಕ್ಕೂ, ಬೇರೆ ಬಗೆಯ ಸಂಸ್ಕಾರಗಳನ್ನು ಹೊಂದಿರಬೇಕೆಂದು ತಿಳಿಸಲಿಕ್ಕೂ ಶಿರೋವ್ರತನಿಯಮ

ಬಂದಿದೆಯೇ ಹೊರತು ಉಪಾಸನಕ್ಕಾಗಿ ಬಂದಿಲ್ಲ. ಶಿರೋವ್ರತವನ್ನಾಚರಿಸದವನು ಅಧ್ಯಯನವನ್ನು ಮಾಡಬಾರದೆಂದು ಸಮಾಚಾರವೆಂಬ ಗ್ರಂಥದಲ್ಲಿ ಅಧ್ಯಯನಕ್ಕೆ ಅಂಗವಾಗಿ ಶಿರೋವ್ರತವನ್ನು ಹೇಳಿರುವುದರಿಂದ ಬ್ರಹ್ಮವಿದ್ಯೆಗೂ ಇದು ಅಂಗವಲ್ಲ. "ಅವರಿಗೇ ಬ್ರಹ್ಮವಿದ್ಯೆಯನ್ನು ಹೇಳಬೇಕು" ಎಂಬಲ್ಲಿ ವೇದವಿದ್ಯೆ ಎಂದರ್ಥ. ನವಹೋಮಗಳನ್ನೂ, ಸೂರ್ಯಾದಿಗಳಿಂದ ಶತೌದನದವರೆಗೂ ಇರುವ ಹೋಮಗಳನ್ನೂ ಆಥರ್ವಣಿಕರು ಮಾತ್ರವೇ ಆಚರಿಸಬೇಕೆಂದು ಹೇಳಿರುವುದರಿಂದ ಇವು ಅವರಿಗೆ ಮಾತ್ರವೇ ಅನ್ವಯಿಸಿ ತ್ರೇತಾಗ್ನಿಸಂಬಂಧವುಳ್ಳವರಿಗೆ ಹೇಗೆ ಅನ್ವಯಿಸುವುದಿಲ್ಲವೋ ಹಾಗೆ ಶಿರೋವ್ರತವೂ ಸಹ ಆಥರ್ವಣಿಕರಿಗೆ ಮಾತ್ರವೇ ಅನ್ವಯಿಸುವುದಾಗಿ ಹೇಳಿರುವುದರಿಂದ ಉಪಾಸನದಲ್ಲಿ ಭೇದವಿಲ್ಲವೆಂದು ಸಿದ್ಧವಾಗುತ್ತದೆ. ಹೀಗೆ ಎಲ್ಲಾ ಶಾಖೆಗಳಲ್ಲಿ ಹೇಳಿರುವ ಶಿವೋಪಾಸನಗಳನ್ನೂ ಒಂದೇಬಗೆ ಎಂದು ಒಪ್ಪಿದರೆ "ಉಪಸಂಹಾರೋಽರ್ಥಾಭೇದಾತ್" ಎಂಬ ಸೂತ್ರದಂತೆ ಈ ಒಂದೇಬಗೆಯ ಎಲ್ಲಾ ಉಪಾಸನಗಳಲ್ಲೂ ಬೇರೆಬೇರೆ ಪ್ರಕರಣಗಳಲ್ಲಿ ಪರಮೇಶ್ವರನಿಗೆ ಹೇಳಿರುವ ಸತ್ಯಸಂಕಲ್ಪ ಸರ್ವಜ್ಞ ಸರ್ವೇಶ್ವರ ತ್ರಿಲೋಚನ ನೀಲಕಂಠ ಉಮಾಪತಿ ಕೃಷ್ಣಪಿಂಗಳ ಎಂದು ಮುಂತಾದ ಗುಣಗಳೆಲ್ಲವನ್ನೂ ಉಪಾಸಕರ ದೃಷ್ಟಿಯಿಂದ ಒಂದೇಕಡೆ ಒಟ್ಟುಗೂಡಿಸಬೇಕಾಗುತ್ತದೆ. ಹೀಗಾದರೆ ಒಬ್ಬೊಬ್ಬ ಉಪಾಸಕನಿಗೂ ಎಲ್ಲಾ ಶಾಖೆಗಳನ್ನು ಓದಲಿಕ್ಕೆ ಸಾಧ್ಯವಿಲ್ಲದ್ದರಿಂದ ಎಲ್ಲಾ ಶಾಖೆಗಳಲ್ಲೂ ಹೇಳಿರುವ ಗುಣಗಳನ್ನು ಒಂದುಕಡೆ ಕೂಡಿಸಲಿಕ್ಕೆ ಹೇಗೆ ಸಾಧ್ಯವಾದೀತೆಂದು ಕೇಳುವುದು ಸರಿಯಲ್ಲ; ಯಾಕೆಂದರೆ "ಸ್ವಾಧ್ಯಾಯವನ್ನು ಓದಬೇಕು" ಎಂಬ ಶ್ರುತಿಯಲ್ಲಿ ಸ್ವಾಧ್ಯಾಯಪದವು ತನ್ನ ಶಾಖೆಯನ್ನೇ ತಿಳಿಸುತ್ತದೆ. ಇಲ್ಲಿ ತನ್ನ ಶಾಖೆಯನ್ನು ತಾನು ಓದಬೇಕೆಂದು ವಿಧಿಸಿದಂತಾಯಿತು. ಹೀಗೆ ವಿಧಿಸುವುದರಿಂದ ತನ್ನ ಅಧಿಕಾರಕ್ಕೊಳಪಟ್ಟ ಶಾಖೆಯನ್ನು ಮಾತ್ರವೇ ಓದಿದ ಒಬ್ಬ ಪುರುಷನು ಎಲ್ಲಾ ಶಾಖೆಗಳನ್ನು ಓದದೇ ಇದ್ದರೂ ಅವೆಲ್ಲವನ್ನೂ ಓದಿದ ಭರದ್ವಾಜ ಗೌತಮ ಉಪಮನ್ಯು ದಧೀಚಿ ವಾಮದೇವ ಅಗಸ್ತ್ಯ ಶ್ವೇತ ಮೊದಲಾದ ಮಹರ್ಷಿಗಳ ಗ್ರಂಥಗಳಿಂದ ಬೇರೆ ಬೇರೆ ಶಾಖೆಗಳಲ್ಲಿ ಹೇಳಿರುವ ಅಗ್ನಿಹೋತ್ರ ಮೊದಲಾದ ಕರ್ಮಗಳನ್ನು ಒಟ್ಟುಗೂಡಿಸುವಂತೆ ಉಪಾಸಕರು ಎಲ್ಲಾ ಶಾಖೆಗಳನ್ನೂ ಓದಿದ್ದ ರೇಮಾರಾಧ್ಯ ಉದ್ಭಟಾರಾಧ್ಯ ಮರುಳಸಿದ್ಧ ರೇವಣಸಿದ್ಧಾರಾಧ್ಯ ಮೊದಲಾದ ಮಹಾತ್ಮರು ಬರೆದ ವೇದಾಂತಭಾಷ್ಯ ಗ್ರಂಥಗಳಿಂದ ಎಲ್ಲಾ ಶಾಖೆಗಳಲ್ಲೂ ಪರಮೇಶ್ವರನ ಬಗ್ಗೆ ಹೇಳಿರುವ ಸತ್ಯಸಂಕಲ್ಪ ಕೃಷ್ಣಪಿಂಗಳ ಮೊದಲಾದ ಗುಣಗಳನ್ನು ಒಂದೇ ಬಗೆ ಒಂದು ನಿಶ್ಚಯಿಸಬೇಕೆಂಬುದು ಯುಕ್ತವಾಗಿದೆ.

ತೈತ್ತಿರೀಯಕೈವಲ್ಯಾದಿನಾನಾಶಾಖಾಗತಾನಾಂ ಉಪಾಸನಾನಾಂ ಸರ್ವಜ್ಞೈರಗಸ್ತ್ಯಾದಿಮಹರ್ಷಿಭಿರೇಕತ್ವೋಪದೇಶಾದಪಿ ಪರಸ್ಪರಭೇದದರ್ಶನಾತ್ ಕಥಮೇಕತ್ವಮುಪಪನ್ನಮಿತ್ಯಾಶಂಕಾಯಾಮಾಹ. ದರ್ಶ-

ಯತಿ ಚ || ೪ || ಸರ್ವವೇದಾಂತೇಷು ಪರಶಿವೋಪಾಸನಸ್ಯ ಫಲೈಕ್ಯಾತ್ತಾ ದ್ವಿದ್ಯೈಕ್ಯಂ ದರ್ಶಯತಿ ಚ. ಕೈವಲ್ಯೇ " ಹೃತ್ಪುಂಡರೀಕಂ ವಿರಜಂ ವಿಶುದ್ಧಂ ವಿಚಿಂತ್ಯ ಮಧ್ಯೇ ವಿಶದಂ ವಿಶೋಕಂ " ಇತ್ಯಾರಭ್ಯ " ಉಮಾ ಸಹಾಯಂ ಪರಮೇಶ್ವರಂ ಪ್ರಭುಂ ಧ್ಯಾತ್ವಾ ಮುನಿರ್ಗಚ್ಛತಿ ಭೂತ ಯೋನಿಂ ಸಮಸ್ತಸಾಕ್ಷಿಂ " ಇತಿ, ತೈತ್ತಿರೀಯಕೇ " ಋತಂ ಸತ್ಯಂ ಪರಂ ಬ್ರಹ್ಮ " ಇತಿ ಚ ದಹರೋಪಾಸ್ಯಪರಮಪುರುಷಸ್ಯ ಶಿವಸ್ಯ ಮೂರ್ತತ್ವ ಮುಪದಿಷ್ಟಂ. " ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ " ಇತ್ಯಾರಭ್ಯ " ತಸ್ಮಿನ್ಯದಂತಸ್ತದನ್ವೇಷ್ಟವ್ಯಂ " ಇತ್ಯುಕ್ತ್ವಾ ಕಿಂ ತತ್ರ ವಿದ್ಯತೇ ಯದನ್ವೇಷ್ಟಿತವ್ಯಮಿತಿ ಪ್ರಶ್ನಪೂರ್ವಕಂ ಅಪಹತಪಾಪ್ಮತ್ವಾದಿಗುಣಾಷ್ಟಕವಿಶಿಷ್ಟಃ ಪರಬ್ರಹ್ಮ ಶಿವಸ್ತಸ್ಮಿನ್ನುಪಾಸ್ಯ ಇತ್ಯುಕ್ತಂ. ಕಿಂಚ ತೈತ್ತಿರೀಯಕೇ ಚ ಛಾಂದೋಗ್ಯಸ್ಥಂ ಪ್ರತಿನಿರ್ದೇಶ ಮುಪಜೀವ್ಯ " ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ಯದಂತಸ್ತದು ಪಾಸಿತವ್ಯಂ " ಇತಿ ಗುಣಾಷ್ಟಕವಿಶಿಷ್ಟಸ್ಯ ಪರಬ್ರಹ್ಮಣಶ್ಶಿವಸ್ಯೋಪಾಸನ ಮುಚ್ಯತೇ. ತಸ್ಮಾತ್ಸರ್ವತ್ರ ವಿದ್ಯೈಕ್ಯಂ ಗುಣೋಪಸಂಹಾರಾದೇವ ಉಪಪದ್ಯತೇ.

ತೈತ್ತಿರೀಯ ಕೈವಲ್ಯ ಮೊದಲಾದ ಅನೇಕ ಶಾಖೆಗಳಲ್ಲಿ ಹೇಳಿರುವ ಉಪಾಸನ ಗಳನ್ನು ಅಗಸ್ತ್ಯ ಮೊದಲಾದ ಮಹರ್ಷಿಗಳು ಒಂದೇಬಗೆ ಎಂದು ಹೇಳಿರುವು ದಾದರೂ ಅವುಗಳಲ್ಲಿ ಪರಸ್ಪರಭೇದವಿರುವುದರಿಂದ ಒಂದೇಬಗೆ ಎಂಬುದು ಹೇಗೆ ಹೊಂದುತ್ತದೆ ಎಂದಾಶಂಕಿಸಿ ಸಮಾಧಾನಮಾಡುತ್ತಾನೆ. ಎಲ್ಲಾ ವೇದಾಂತಗಳೂ ಪರಶಿವೋಪಾಸನದ ಫಲ ಒಂದೇ ಆದ್ದರಿಂದ ವಿದ್ಯೆಗಳಲ್ಲೂ ಏಕರೂಪತೆಯನ್ನು ಸ್ಪಷ್ಟವಾಗಿ ತಿಳಿಸಿವೆ. ಕೈವಲ್ಯದಲ್ಲಿ ಹೃದಯಕಮಲವನ್ನು ಶುದ್ಧವೆಂದು ತಿಳಿಸಿ ಅಲ್ಲಿ ರುವ ಶಕ್ತಿವಿಶಿಷ್ಟಪರಮೇಶ್ವರನನ್ನು ಸಾಧಕನು ಧ್ಯಾನಿಸುತ್ತಲೇ ನಿಷ್ಕಲಪರಶಿವನನ್ನು ಹೊಂದುತ್ತಾನೆಂದು ಹೇಳಿದೆ. ತೈತ್ತಿರೀಯದಲ್ಲಿ ವಿರೂಪಾಕ್ಷನೂ, ವಿಶ್ವರೂಪನೂ, ಕೃಷ್ಣಪಿಂಗಳನೂ ಆದ ಪರಮೇಶ್ವರನನ್ನು ನಮಸ್ಕರಿಸಬೇಕೆಂದು ಹೇಳಿದ್ದರಿಂದ ಪರಮೇಶ್ವರನು ದಿವ್ಯಮಂಗಳವಿಗ್ರಹನೆಂಬುದು ಸ್ಪಷ್ಟವಾಗಿದೆ. ಛಾಂದೋಗ್ಯದಲ್ಲಿ " ದಹರಾಕಾಶದಲ್ಲಿ ಇರುವುದನ್ನು ಹುಡುಕಬೇಕು " ಎಂದು ಹೇಳಿ, ಅಲ್ಲಿ ಏನಿದೆ? ಎಂಬ ಪ್ರಶ್ನೆಗೆ ಪಾಪರಹಿತನೂ ಸರ್ವಜ್ಞನೂ ಸರ್ವಶಕ್ತನೂ ಆದ ಪರಶಿವಬ್ರಹ್ಮವೇ ಅಲ್ಲಿರುವುದೆಂದು ಉತ್ತರಿಸಲಾಗಿದೆ. ಛಾಂದೋಗ್ಯದಲ್ಲಿ ಹೇಳಿದ್ದನ್ನೇ ಅನುಸರಿಸಿ ತೈತ್ತಿರೀಯದಲ್ಲಿ " ದಹರಾಕಾಶದೊಳಗೆ ಇರುವುದನ್ನು ಉಪಾಸನಮಾಡಬೇಕು " ಎಂದು ಹಿಂದೆ ಹೇಳಿದ ಎಂಟು ಬಗೆಯ ಗುಣಗಳುಳ್ಳ ಪರಶಿವಬ್ರಹ್ಮದ ಉಪಾಸನ ವನ್ನೇ ಹೇಳಲಾಗಿದೆ. ಹೀಗೆ ಎಲ್ಲಾ ಕಡೆಗಳಲ್ಲೂ ಗುಣಗಳನ್ನು ಒಟ್ಟುಗೂಡಿಸುವುದ ರಿಂದಲೇ ವಿದ್ಯೆಗಳ ಏಕರೂಪತೆಯನ್ನು ಸಾಧಿಸಬೇಕಾಗಿದೆ.

ತದೇವಂ ಶಾಖಾಂತರಾಧಿಕರಣನ್ಯಾಯಸಿದ್ಧಂ ವಿದ್ಯೈಕ್ಯಂ ಸ್ಥಿರೀಕೃತ್ಯ ತತ್ಪ್ರಯೋಜನಂ ಕಿಮಿತ್ಯಾಕಾಂಕ್ಷಾಯಾಂ ತತ್ರಾಹ. "ಉಪಸಂಹಾರೋಽರ್ಥಾಭೇದಾದ್ವಿಧಿಶೇಷವತ್ಸಮಾನೇ ಚ ॥ ೫ ॥ ಏವಂ ಸರ್ವವೇದಾಂತೇಷು ಸಮಾನೇ ಸತ್ಯುಪಾಸನೇ ವೇದಾಂತಾಂತರಾಮ್ನಾತಾನಾಂ ಗುಣಾನಾಂ ವೇದಾಂತಾಂತರೇ ಉಪಸಂಹಾರಃ ಕರ್ತವ್ಯಃ. ಕುತಃ? ವಿಧಿಶೇಷವದರ್ಥಾಭೇದಾತ್. ಯಥೈಕಸ್ಮಿನ್ವೇದಾಂತೇ ಸ್ವತೋ ವೈಶ್ವಾನರದಹರಾದಿವಿಧಿಶೇಷೋ ಗುಣಸ್ತದ್ವಿದ್ಯಾಸಂಬಂಧಾತ್ ತದುಪಕಾರರೂಪಪ್ರಯೋಜನಸಿದ್ಧ್ಯರ್ಥಮುಪಸಂಹ್ರಿಯತೇ ತಥಾ ವೇದಾಂತಾಂತರೋದಿತೋಽಪಿ ತದ್ವಿದ್ಯಾಸಂಬಂಧಿತ್ವೇನ ತದುಪಕಾರಾವಿಶೇಷಾತ್ ಉಪಸಂಹರ್ತವ್ಯ ಇತ್ಯುಪದಿಶ್ಯತೇ. ಚಶಬ್ದೋಽವಧಾರಣೇ ನಿರ್ದಿಷ್ಟಃ. ನನು ಛಾಂದೋಗ್ಯೇ ದಹರವಿದ್ಯಾಯಾಂ ಅಪಹತಪಾಪ್ಮತ್ವಾದಯೋ ಧರ್ಮಾಃ ಶ್ರೂಯಂತೇ. ತದ್ವತ್ತೈತ್ತಿರೀಯಶಾಖಾಯಾಮದರ್ಶನಾತ್ ತೈತ್ತಿರೀಯನಿಷ್ಠಕೃಷ್ಣಪಿಂಗಳತ್ವಾದಿಗುಣಾನಾಂ ಛಾಂದೋಗ್ಯೇ ಯತ್ರಕುತ್ರಾಪ್ಯದರ್ಶನಾತ್ ಗುಣೋಪಸಂಹಾರನ್ಯಾಯೇನ ಸರ್ವೇಷಾಂ ವೇದಾಂತಾನಾಂ ಸಮನ್ವಯಃ ಕಥಮುಪಪದ್ಯತ ಇತಿ ಚೇನ್ನ, ಸರ್ವತ್ರ ತೈತ್ತಿರೀಯಛಾಂದೋಗ್ಯಾದಿಶ್ರುತಿನಿಷ್ಠಾನಾಂ ದಹರಾದ್ಯುಪಾಸನಧರ್ಮಾಣಾಂ ಅಪಹತಪಾಪ್ಮತ್ವಾದೀನಾಂ ತುಲ್ಯತ್ವೇನ ವ್ಯಪದೇಶಾದುಪಸಂಹಾರನ್ಯಾಯೋ ಯುಕ್ತಃ. ವಿದ್ಯೋಪಕಾರರೂಪಸಾಮರ್ಥ್ಯಾದ್ಯೈಕ್ಯತ್ವಾತ್ ಯಥೈಕವಿಧಿವಿಶೇಷತಯಾ ವಿಹಿತಾನಾಮಂಗಾನಾಮಗ್ನಿಹೋತ್ರಾದಿಷು ತಥೈವ ಚೋದನಾದಿಭಿಸ್ಸಮಾನೇ ದಹರಾದ್ಯುಪಾಸನಗುಣಾನಾಂ ಸತ್ತ್ವಾತ್ಸಮಂಜಸಂ. ಕಿಂಚ ನಾನಾಶಾಖಾಗತಪರಮೇಶ್ವರೋಪಾಸನಪ್ರಕರಣಪ್ರತಿಪಾದ್ಯಾನಾಂ ಸತ್ಯಸಂಕಲ್ಪತ್ವಾದಿಗುಣಾನಾಂ ಸರ್ವತ್ರ ದ್ಯೋತನಾತ್ ಉಪಸಂಹಾರೋ ನ ವಿರುಧ್ಯತೇ. ಅರ್ಥಭೇದಾನ್ನಾನಾಶಾಖಾಗತಗುಣವಿಶಿಷ್ಟಸಜಾತೀಯೋಪಾಸನಾಯಾಃ ಪರಶಿವಬ್ರಹ್ಮಲೋಕಪ್ರಾಪ್ತಿಲಕ್ಷಣಫಲಸ್ಯ ಅಭೇದಾತ್ ಏಕತ್ವಮರ್ಥಾತ್ಸಿದ್ಧಂ. ತಥಾಚ ಪರಶಿವಬ್ರಹ್ಮಲೋಕಪ್ರಾಪ್ತಿಲಕ್ಷಣೈಕಫಲಸಾಧನಭೂತಾನಾಂ ನಾನಾಶಾಖಾಗತಸಜಾತೀಯೋಪಾಸನಸಂಬಂಧಿನಾಂ ಸತ್ಯಸಂಕಲ್ಪತ್ವಾದಿಗುಣಾನಾಂ ಮೇಳನರೂಪೋಪಸಂಹಾರಃ ಕರ್ತವ್ಯಃ. ಯದ್ಯಪ್ಯಸ್ಮಿನ್ ಸೂತ್ರೇ ಗುಣೋಪಸಂಹಾರಕಥನಾತ್ ಏಕಸ್ಯ ಪುರುಷಸ್ಯ ಸರ್ವಶಾಖಾಧ್ಯಯನಾಸಂಭವಾತ್ಕಥಂ ನಾನಾಶಾಖಾಗತಗುಣೋಪಸಂಹಾರಶಂಕಾ ಪಶ್ಚಾತ್ಪರಿಹರ್ತವ್ಯಾ. ತಥಾಪ್ಯುತ್ತರಸೂತ್ರೇ ವಕ್ಷ್ಯಮಾಣಂ ಗುಣೋಪಸಂಹಾರಂ ಸಿದ್ಧವತ್ಕೃತ್ಯ ಸಕಲಶಾಖಾಧ್ಯಯನಾ

**ಯೋಗಾತ್ ಗುಣೋಪಸಂಹಾರೋ ನೋಪಪದ್ಯತ ಇತಿ ಶಂಕಾ ಪೂರ್ವಂ ನಿರಸ್ತಾ.**

ಹೀಗೆ ಬೇರೆ ಶಾಖೆಗಳಲ್ಲಿ ಹೇಳಿರುವ ವಿದ್ಯೆಗಳೆಲ್ಲವನ್ನೂ ಒಂದೇಬಗೆಯೆಂದು ಭಾವಿಸಿದರೆ ಅದರಿಂದಾಗುವ ಪ್ರಯೋಜನವೇನೆಂದು ಆಶಂಕಿಸಿ ಸಮಾಧಾನ ಮಾಡುತ್ತಾನೆ. ಹೀಗೆ ಎಲ್ಲಾ ವೇದಾಂತಗಳಲ್ಲೂ ಉಪಾಸನವು ಸಮಾನವಾಗಿದ್ದರೆ ಒಂದು ವೇದಾಂತಗಳಲ್ಲಿ ಹೇಳಿರುವ ಗುಣಗಳನ್ನು ಮತ್ತೊಂದು ವೇದಾಂತದಲ್ಲಿ ಉಪಸಂಹಾರ ಮಾಡಬೇಕಾಗುತ್ತದೆ. ಯಾಕೆಂದರೆ ಒಂದೇ ವೇದಾಂತದಲ್ಲಿ ಹೇಳಿರುವ ವೈಶ್ವಾನರ ದಹರಾದಿವಿದ್ಯೆಗಳೆಲ್ಲದರಲ್ಲೂ ಪರಸ್ಪರಗುಣಸಂಬಂಧಗಳು ಪರಸ್ಪರಸಮನ್ವಯದಿಂದ ಹೇಗೆ ಸಿದ್ಧಿಸುತ್ತವೆಯೋ ಹಾಗೆ ಬೇರೆ ವೇದಾಂತಗಳಲ್ಲಿ ಹೇಳಿರುವ ಗುಣಗಳ ಸಂಬಂಧ ಮತ್ತು ಸಹಕಾರಗಳು ಸಮಾನವಾಗಿರುವುದರಿಂದ ಅವನ್ನು ಮತ್ತೊಂದರಲ್ಲಿ ಉಪಸಂಹಾರಮಾಡುವುದು ಯುಕ್ತವೇ ಆಗುತ್ತದೆ. ಛಾಂದೋಗ್ಯದಲ್ಲಿ ದಹರೋಪಾಸನದಲ್ಲಿ ಅಪಹತಪಾಪ್ಮತ್ವ ಮೊದಲಾದ ಧರ್ಮಗಳನ್ನು ಹೇಳಲಾಗಿದೆ. ಆದರೆ ಅವು ತೈತ್ತಿರೀಯಶಾಖೆಯಲ್ಲಿ ಕಂಡುಬಂದಿಲ್ಲ. ಹಾಗೆಯೇ ತೈತ್ತಿರೀಯದಲ್ಲಿ ಹೇಳಿರುವ ಕೃಷ್ಣಪಿಂಗಳತ್ವ ಮೊದಲಾದ ಧರ್ಮಗಳು ಛಾಂದೋಗ್ಯದಲ್ಲಿ ಎಲ್ಲಿಯೂ ಕಂಡುಬಂದಿಲ್ಲ. ಆದ್ದರಿಂದ ಗುಣಗಳನ್ನು ಒಂದುಗೂಡಿಸಬೇಕೆಂಬ ನ್ಯಾಯ ಎಲ್ಲಾ ವೇದಾಂತಗಳಿಗೂ ಹೇಗೆ ಅನ್ವಯಿಸುತ್ತದೆ. ಎಂದು ಆಕ್ಷೇಪ ಬರುತ್ತದೆ? ಅದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ತೈತ್ತಿರೀಯ ಛಾಂದೋಗ್ಯ ಮೊದಲಾದ ಶ್ರುತಿಗಳಲ್ಲಿ ಹೇಳಿರುವ ಅಪಹತಪಾಪ್ಮತ್ವ ಮೊದಲಾದ ಧರ್ಮಗಳನ್ನು ಎಲ್ಲಾ ಕಡೆಗಳಲ್ಲೂ ಸಮಾನವೆಂದು ಹೇಳಿದ್ದರಿಂದ ಬೇರೆ ಕಡೆಗಳಲ್ಲೂ ಅನ್ವಯಿಸಬಹುದಾದ್ದರಿಂದ ಉಪಸಂಹಾರನ್ಯಾಯವು ಯುಕ್ತವಾಗುತ್ತದೆ. ಒಂದೇ ವಿಧಿಗೆ ಅಂಗವಾಗಿ ವಿಧಿಸಲಾಗಿರುವ ಕರ್ಮಗಳು ಬೇರೆಕಡೆಗಳಲ್ಲಿ ವಿಹಿತವಾಗಿದ್ದರೂ ಅಗ್ನಿಹೋತ್ರ ಮೊದಲಾದ ಪ್ರಧಾನಕರ್ಮಕ್ಕೆ ಅನ್ವಯಿಸುವಂತೆ ದಹರಾದ್ಯುಪಾಸನೆಗೆ ವಿಹಿತವಾಗಿರುವ ಗುಣಗಳು ಬೇರೆ ಶಾಖೆಗಳಲ್ಲಿ ಹೇಳಿರುವ ದಹರಾದಿವಿದ್ಯೆಗಳೆಲ್ಲಕ್ಕೂ ಅನ್ವಯಿಸುತ್ತವೆ. ಬೇರೆ ಬೇರೆ ಶಾಖೆಗಳಲ್ಲಿ ಶಿವೋಪಾಸನಪ್ರಕರಣದಲ್ಲಿ ಹೇಳಿರುವ ಸತ್ಯಸಂಕಲ್ಪ ಮೊದಲಾದ ಗುಣಗಳೇ ಎಲ್ಲಾ ಕಡೆಯಲ್ಲೂ ತೋರುವುದರಿಂದ ಗುಣಗಳನ್ನು ಒಂದು ಕಡೆಗೆ ಉಪಸಂಹಾರಮಾಡುವುದರಲ್ಲಿ ಏನೂ ವಿರೋಧವಿಲ್ಲ. ಅರ್ಥಭೇದದಿಂದ ನಾನಾಶಾಖೆಗಳಲ್ಲಿ ಹೇಳಿರುವ ಸಗುಣೋಪಾಸನಗಳೆಲ್ಲಕ್ಕೂ ಸಾಲೋಕ್ಯವೆಂಬ ಸಮಾನವಾದ ಫಲವನ್ನು ಹೇಳಿರುವುದರಿಂದ ಅವೂ ಸಹ ಒಂದೇಬಗೆ ಎನಿಸಿವೆ. ಸಾಲೋಕ್ಯವೆಂಬ ಫಲವನ್ನು ದೊರಕಿಸಲಿಕ್ಕಾಗಿ ಅನೇಕ ಶಾಖೆಗಳಲ್ಲಿ ಹೇಳಿರುವ ಒಂದೇಬಗೆಯ ಉಪಾಸನಗಳಲ್ಲಿಯೂ ಸತ್ಯಸಂಕಲ್ಪ ಮೊದಲಾದ ಗುಣಗಳನ್ನು ಒಟ್ಟುಗೂಡಿಸಬೇಕು. ಈ ಸೂತ್ರದಲ್ಲಿ ಹೀಗೆ ಗುಣಗಳನ್ನು ಒಟ್ಟುಗೂಡಿಸಲೇಬೇಕೆಂದು ಹೇಳಿದರೆ ಒಬ್ಬ ಉಪಾಸಕನೇ ಎಲ್ಲಾ ಶಾಖೆಗಳನ್ನೂ ಓದಲಿಕ್ಕಾಗದ್ದರಿಂದ ಅನೇಕ ಶಾಖೆಗಳಲ್ಲಿ ಹೇಳಿರುವ ಗುಣಗ

ಳನ್ನು ಒಂದೆಡೆಗೆ ಹೇಗೆ ಸೇರಿಸಲಾಗುತ್ತೆ? ಎಂಬ ಆಶಂಕೆ ಬರುತ್ತದೆ. ಆದರೂ ಗುಣೋಪಸಂಹಾರದ ಆವಶ್ಯಕತೆಯನ್ನು ಒಪ್ಪಿ ಈ ಶಂಕೆಯನ್ನು ಹಿಂದೆಯೇ ಪರಿಹರಿಸಲಾಯಿತು.

"ಭೇದಾನ್ನೇತಿ ಚೇದೇಕಸ್ಯಾಂ" ಇತಿ ಸೂತ್ರೇಣ ಭೇದಾತ್ಸಜಾತೀಯೋಪಾಸನಾನಾಂ ಭಿನ್ನಶಾಖಾಗತಾನಾಂ ಭಿನ್ನಾರ್ಥಮಾಶಂಕ್ಯ ನಿರಾಕೃತಂ, ತಥಾಪೀದಾನೀಂ "ಉಪಾಸೀತ" ಇತ್ಯಾದಿಶಬ್ದಾನಾಂ ತತ್ರ ಭಿನ್ನತ್ವೋಪದೇಶಾತ್ ಕಥಮಭೇದಸ್ಸಂಭವತೀತ್ಯಾಶಂಕಾಯಾಮಧಿಕರಣಾಂತರೇಣಾಹ. ಅನ್ಯಥಾತ್ವಾಧಿಕರಣಂ ‖ ೨ ‖ ಅನ್ಯಥಾತ್ವಂ ಶಬ್ದಾದಿತಿ ಚೇನ್ನಾವಿಶೇಷಾತ್ ‖ ೬ ‖ ಶಬ್ದಾತ್ 'ಉಪಾಸೀತ' ಇತಿಶಬ್ದಾನಾಂ ನಾನಾಶಾಖಾಸು ಭಿನ್ನತ್ವಾವಗಮಾತ್ ಅನ್ಯಥಾತ್ವಂ ಪರಸ್ಪರಶಾಖಾಗತಾನಾಂ ಪರಶಿವಬ್ರಹ್ಮೋಪಾಸನವಾಕ್ಯಾನಾಂ ಪರಸ್ಪರಭಿನ್ನತ್ವಮೇವೋಪಲಕ್ಷ್ಯತೇ. "ಸಮಿಧೋಯಜತಿ" "ಇಡೋಯಜತಿ" ಇತ್ಯಾದಿಷು ಯಜತಿಶಬ್ದಾನಾಂ ಭಿನ್ನತ್ವೇನ ಯಾಗಭೇದಾಂಗೀಕಾರಾದಿತಿ ಚೇನ್ನ ಅವಿಶೇಷಾತ್ ಶಬ್ದಭೇದಸ್ಯಾವಗಮೇಽಪಿ ಗುಣವಿಶೇಷಾಭಾವಾತ್ 'ಸಮಿಧೋ ಯಜತಿ' ಇತ್ಯಾದಿವಾಕ್ಯೇಷ್ವಪಿ ಸಮಿಧಾದಿದೇವತಾಭೇದಾದೇವ ಯಾಗಭೇದಃ ನತು ಯಜತಿಶಬ್ದಾನಾಂ ಭಿನ್ನತ್ವಮಾತ್ರೇಣ. ತಥಾಚ ಸಜಾತೀಯೋಪಾಸನಾನುಪೂರ್ವ್ಯುಕ್ತರೀತ್ಯಾ ಗುಣಭೇದಾಭಾವಾತ್ ಭಿನ್ನಶಾಖಾಗತಾನಾಂ ಸಜಾತೀಯೋಪಾಸನಾನಾಂ ನ ಭೇದ ಇತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಪೂರ್ವಾಧಿಕರಣೇ ಜೀವಾನಾಂ ಪಾಶನಿವೃತ್ತಿಪೂರ್ವಕಪರಶಿವಬ್ರಹ್ಮಪ್ರಾಪ್ತಿಲಕ್ಷಣಾತ್ಮಕತೈತ್ತಿರೀಯಛಾಂದೋಗ್ಯಕೈವಲ್ಯಾದಿಶಾಖಾಪಠಿತದಹರವಿದ್ಯಾಮುಪದಿಶ್ಯ ತತ್ರ ನಾನಾಶಾಖಾಗತನಾನಾತ್ವಾವಭಾಸಕಶ್ರುತೀನಾಂ ಕಥಮೇಕತ್ವಮಿತ್ಯಾಕ್ಷಿಪ್ಯ ಫಲೈಕತ್ವಾದೇಕತ್ವಪ್ರಸಾಧನೇ ಉದ್ಗೀಥವಿದ್ಯಾಯಾಂ ಛಾಂದೋಗ್ಯೇ ಪರಸ್ಪರಭೇದಾವಗಮಾತ್ ಕಥಮೇಕತ್ವಮಿತಿ ಪೂರ್ವಪಕ್ಷೇ ಫಲೈಕತ್ವಾದತ್ರಾಪಿ ವಿದ್ಯೈಕ್ಯಂ ದರ್ಶಯತಿ. ಕಿಂಚ ಪ್ರತ್ಯಭಿಜ್ಞಾಹೇತುಭೂತಚೋದನಾದ್ಯವಿಶೇಷೋಽಸ್ತಿ ನವೇತಿ ನಿರೂಪ್ಯ ನಿರ್ಣೀಯತೇ. ಅಸ್ತ್ಯುದ್ಗೀಥವಿದ್ಯಾ ವಾಜಿನಾಂ ಛಂದೋಗಾನಾಂ ಚ. ವಾಜಿನಾಂ ತಾವತ್ "ದ್ವಯೋರ್ಹ ಪ್ರಾಜಾಪತ್ಯಾ ದೇವಾಶ್ಚಾಸುರಾಶ್ಚ" ಇತ್ಯಾರಭ್ಯ "ತೇ ಹ ದೇವಾ ಊಚುಃ ಹಂತಾಸುರಾನ್ಯಜ್ಞ ಉದ್ಗೀಥೇಽತ್ಯಯಾಮ" ಇತ್ಯುದ್ಗೀಥೇನಾಸುರವಿಧ್ವಂಸನಂ ಪ್ರತಿಜ್ಞಾಯ ಉದ್ಗೀಥೇ ವಾಗಾದಿಮನಃಪರ್ಯಂತದೃಷ್ಟ್ಯಾ ಅಸುರೈರಭಿಭವಮುಕ್ತ್ವಾ "ಅಥ ಹ ಇಮಮಾಸನ್ಯಂ ಪ್ರಾಣಮೂಚುಃ" ಇತ್ಯಾದಿನಾ ಉದ್ಗೀಥೇ ಪ್ರಾಣ

ದೃಷ್ಟ್ವಾ ಅಸುರಪರಾಭವಮುಕ್ತ್ವಾ "ಭವತ್ಯಾತ್ಮನಾ ಪರೋಽಸ್ಯ ದ್ವಿಷನ್ ಭ್ರಾತೃವ್ಯೋ ಭವತಿ ಯ ಏವಂ ವೇದ" ಇತಿ ಶತ್ರುಪರಾಜಯಫಲಾಯ ಉದ್ಗೀಥೇ ಪ್ರಾಣದೃಷ್ಟಿರ್ವಿಹಿತಾ. ಏವಂ ಛಂದೋಗಾನಾಮಪಿ "ದೇವಾಸುರಾ ವೈ ಯತ್ರ ಸಂಯೇತಿರೇ" ಇತ್ಯಾರಭ್ಯ "ತದ್ಧ ದೇವಾ ಉದ್ಗೀಥಮಾಜಹ್ರುರನೇನೈನಾನಭಿಭವಿಷ್ಯಾಮಃ" ಇತ್ಯುದ್ಗೀಥೇನಾಸುರಪರಾಭವಂ ಪ್ರತಿಜ್ಞಾಯ ತದ್ವದೇವೋದ್ಗೀಥೇ ವಾಗಾದಿದೃಷ್ಟೌ ದೋಷಮಭಿಧಾಯ "ಅಥ ಹ ಯ ಏವಾಯಂ ಮುಖ್ಯಃ ಪ್ರಾಣಸ್ತಮುದ್ಗೀಥಮುಪಾಸಾಂಚಕ್ರಿರೇ" ಇತ್ಯಾದಿನಾ ಉದ್ಗೀಥೇ ಪ್ರಾಣದೃಷ್ಟ್ಯಾ ಅಸುರಪರಾಭವಮುಕ್ತ್ವಾ "ಯಥಾಶ್ಮಾನಮಾಖಣಮೃತ್ವಾ ವಿಧ್ವಂಸತೇ ಏವಂ ಹೈವ ಸ ವಿಧ್ವಂಸತೇ, ಯ ಏವಂವಿದಿ ಪಾಪಂ ಕಾಮಯತೇ" ಇತಿ ಶತ್ರುಪರಾಭವಾಯ ಉದ್ಗೀಥೇ ಪ್ರಾಣದೃಷ್ಟಿರ್ವಿಹಿತಾ. ವೇದನವಿಷಯವಿಧಿಪ್ರತ್ಯಯಾಶ್ರವಣೇಽಪಿ ಫಲಸಾಧನತ್ವಶ್ರವಣಾದ್ವೇದನವಿಷಯೋ ವಿಧಿಃ ಕಲ್ಪ್ಯತೇ. ಉದ್ಗೀಥವಿದ್ಯಾಯಾಃ ಕ್ರತ್ವರ್ಥತ್ವೇನ ಕ್ರತುಸಾದ್ಗುಣ್ಯಫಲತ್ವೇಽಪಿ ಆರ್ಥವಾದಿಕಮಪಿ ಫಲಂ ತದವಿರುದ್ಧಂ ಗ್ರಾಹ್ಯಮೇವೇತಿ ಪ್ರತಿಪಾದಿತಂ. ತತ್ರ ಸಂಶಯ್ಯತೇ ಕಿಮತ್ರ ವಿದ್ಯೈಕ್ಯಂ ಉತ ನೇತಿ. "ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ", "ಹಿರಣ್ಯಶ್ಮಶ್ರುರ್ಹಿರಣ್ಯಕೇಶ ಆಪ್ರಣಖಾತ್ಸರ್ವ ಏವ ಸುವರ್ಣಸ್ತಸ್ಯ," "ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ, ತಸ್ಯೋದಿತಿ ನಾಮ, ಸ ಏಷ ಸರ್ವೇಭ್ಯಃ ಪಾಪ್ಮಭ್ಯಃ ಉದಿತ ಉದೇತಿ ಹ ವೈ ಸರ್ವೇಭ್ಯಃ ಪಾಪ್ಮಭ್ಯೋ ಯ ಏವಂ ವೇದ। ತಸ್ಯ ಕ್ಸಾಮ ಚ ಗೇಷ್ಣೌ। ಅಥ ಏಷೋಽಂತರಕ್ಷಿಣಿ ಪುರುಷೋ ದೃಶ್ಯತೇ ಸೈವರ್ಕ್ಸಾಮ ತದುಕ್ಥ್ಯಂ ತದ್ಯಜುಸ್ತದ್ಬ್ರಹ್ಮ। ತಸ್ಯೈತದೇವ ರೂಪಂ। ಯದಮುಷ್ಯ ರೂಪಂ। ಯಾವಮುಷ್ಯ ಗೇಷ್ಣೌ ತೌ ಗೇಷ್ಣೌ। ಯನ್ನಾಮ ತನ್ನಾಮ॥" ಇತಿ ಉದ್ಗೀಥವಿದ್ಯಾಯಾಂ ಸೂರ್ಯಮಂಡಲಾಂತರ್ವರ್ತಿನಃ ಪುರುಷಸ್ಯ ಹಿರಣ್ಮಯತ್ವಾದಿಕಂ ಪ್ರದರ್ಶ್ಯ "ಕಪ್ಯಾಸಂ ಪುಂಡರೀಕಮಿವಾಕ್ಷಿಣೀ ತಸ್ಯೋದಿತಿ ನಾಮ" ಇತಿ ವಾಕ್ಯೇ ತಸ್ಯಾಕ್ಷಿದ್ವಯತ್ವವ್ಯಪದೇಶಾತ್, "ಧ್ಯೇಯಸ್ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ" ಇತೀ ಸ್ಮೃತಿಷು ತಥೋಪದೇಶಾನ್ನಾರಾಯಣ ಇತಿ ಸ್ಪಷ್ಟಮುಪದಿಷ್ಟಂ. "ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ" ಇತ್ಯಾರಭ್ಯ "ನಮೋ ಹಿರಣ್ಯಬಾಹವೇ ಹಿರಣ್ಯವರ್ಣಾಯ" ಇತಿ ತೈತ್ತಿರೀಯಕೇ ಭಾನುಮಂಡಲಾಂತರ್ವರ್ತಿನಃ ಪುರುಷಸ್ಯ ಹಿರಣ್ಮಯತ್ವಾಂಬಿಕಾಪತಿತ್ವಾದಿಪರಮಶಿವಾಸಾಧಾರಣಧರ್ಮವ್ಯವಸ್ಥಾಪನಾತ್

" ಸೌರಮಂಡಲಮಧ್ಯಸ್ಥಂ ಸಾಂಬಂ ಸಂಸಾರಭೇಷಜಂ । ನೀಲಗ್ರೀವಂ ವಿರೂಪಾಕ್ಷಂ ವಿಷ್ಣುವಲ್ಲಭಮವ್ಯಯಂ ॥ " ಇತಿ ಸ್ಮೃತೌ ತಸ್ಯ ಸದಾಶಿವ ಪರತ್ವಂ ನಿರ್ದಿಷ್ಟಂ. ತಸ್ಮಾದ್ವಿದ್ಯೈಕ್ಯಂ ಕದಾಚಿನ್ನೋಪಪದ್ಯತ ಇತಿ ಪ್ರಾಪ್ತೇ ಅತ್ರೋಚ್ಯತೇ. ಪ್ರಥಮಾಧ್ಯಾಯಸ್ಯ ಪ್ರಥಮಪಾದೇ ಅಂತಸ್ತದ್ಧರ್ಮೋಪದೇಶಾಧಿಕರಣೇ ಛಾಂದೋಗ್ಯತೈತ್ತಿರೀಯವಾಕ್ಯಯೋರನ್ಯೋನ್ಯವೈರುದ್ಧ್ಯಂ ನಿರಸ್ತಂ. ಕಿಂಚ ಉಭಯತ್ರೋದ್ಗೀಥಸ್ಯೈವಾಧ್ಯಸ್ತಪ್ರಾಣಭಾವಸ್ಯೋಪಾಸ್ಯತ್ವಶ್ರವಣಾತ್ ಚೋದನಾದ್ಯವಿಶೇಷಾತ್ ಫಲಸಂಯೋಗಸ್ತಾವತ್ ಶತ್ರುಪರಿಭವರೂಪೋ ನ ವಿಶಿಷ್ಯತೇ. ರೂಪಮಪ್ಯಧ್ಯಸ್ತಪ್ರಾಣಭಾವೋದ್ಗೀಥಾಖ್ಯೋಪಾಸ್ಯೈಕತ್ವಾದವಿಶಿಷ್ಟಂ. ಚೋದನಾ ಚ ವಿವಿಧಾ ತ್ವರ್ಥಗತಾಽವಿಶಿಷ್ಟಾ. ಆಖ್ಯಾ ಚೋದ್ಗೀಥವಿದ್ಯೇತ್ಯವಿಶಿಷ್ಟಾ. ಅತ್ರ ರಾದ್ಧಾಂತಿಕಚ್ಛಾಯಯಾ ಪರಿಚೋದ್ಯ ಪರಿಹರತಿ ಅನ್ಯಥಾತ್ವಮಿತ್ಯಾದಿನಾ. ಯದುಕ್ತಂ ವಿದ್ಯೈಕ್ಯಮಿತಿ ತನ್ನೋಪಪದ್ಯತೇ, ರೂಪಭೇದಾತ್. ರೂಪಾನ್ಯಥಾತ್ವಂ ಹಿ ಶಬ್ದಾದೇವ ಪ್ರತೀಯತೇ. ವಾಜಸನೇಯಕೇ ಹಿ " ಅಥ ಹ ಇಮಮಾಸನ್ಯಂ ಪ್ರಾಣಮೂಚುಸ್ತ್ವಂ ನ ಉದ್ಗಾಯೇತಿ, ತಥೇತಿ ತೇಭ್ಯ ಏವ ಪ್ರಾಣ ಉದಗಾಯನ್ " ಇತ್ಯುತ್ಥಾನಸ್ಯ ಕರ್ತರಿ ಪ್ರಾಣದೃಷ್ಟ್ಯಾ ಅಸುರಪರಾಭವಮುಕ್ತ್ವಾ " ಯ ಏವಂ ವೇದೇತಿ. " ಕರ್ತರ್ಯೇವ ಪ್ರಾಣದೃಷ್ಟಿರೇವಂ ಶಬ್ದಾದವಗಮ್ಯತೇ. ಛಾಂದೋಗ್ಯೇ " ಅಥ ಹ ಯ ಏವಾಯಂ ಮುಖ್ಯಪ್ರಾಣಸ್ತಮುದ್ಗೀಥಮುಪಾಸಾಂಚಕ್ರಿರೇ " ಇತ್ಯುದ್ಗಾನಸ್ಯ ಕರ್ಮಣ್ಯುದ್ಗೀಥೇ ಪ್ರಾಣದೃಷ್ಟ್ಯಾ ಅಸುರಪರಾಭವಮುಕ್ತ್ವಾ । " ಯ ಏವಂವಿದ ಪಾಪಂ ಕಾಮಯತೇ " ಇತ್ಯೇವಂಶಬ್ದಾತ್ ಕರ್ಮಣ್ಯೇವೋದ್ಗೀಥೇ ಪ್ರಾಣದೃಷ್ಟಿರ್ವಿಹಿತಾ. ಅತ ಏಕತ್ರ ಕರ್ತರಿ ಪ್ರಾಣದೃಷ್ಟಿಶಬ್ದಾತ್, ಅನ್ಯತ್ರ ಕರ್ಮಣಿ ಪ್ರಾಣದೃಷ್ಟಿಶಬ್ದಾಚ್ಚ ರೂಪಾನ್ಯಥಾತ್ವಂ ಸ್ಪಷ್ಟಂ. ರೂಪಾನ್ಯಥಾತ್ವೇ ಚ ವಿಧೇಯಭೇದೇ; ಸತಿ ಕೇವಲಚೋದನಾದ್ಯವಿಶೇಷೋ ಕಿಂಚಿತ್ಕರ ಇತಿ ವಿದ್ಯಾಭೇದ ಇತಿ ಚೇತ್ತನ್ನ ಅವಿಶೇಷಾತ್. ಅವಿಶೇಷೇಣ ಹ್ಯುಭಯತ್ರ ಉದ್ಗೀಥಸಾಧನಕಪರಪರಭವ ಉಪಕ್ರಮಃ ಪ್ರತೀಯತೇ. ವಾಜಸನೇಯಕೇ " ತೇ ಹ ದೇವಾ ಊಚುರ್ಹಂತಾಽಸುರಾನ್ಯಜ್ಞ ಉದ್ಗೀಥೇನಾತ್ಯಯಾಮ " ಇತ್ಯುಪಕ್ರಮಃ ಶ್ರೂಯತೇ. ಛಾಂದೋಗ್ಯೇಽಪಿ " ತದ್ಧ ದೇವಾ ಉದ್ಗೀಥಮಾಜಹ್ರುರನೇನೈನಾನಭಿಹನಿಷ್ಯಾಮ " ಇತಿ. ಅತ ಉಪಕ್ರಮಾವಿರೋಧಾಯ " ತೇಭ್ಯ ಏಷ ಪ್ರಾಣ ಉದಗಾಯತ್ " ಇತ್ಯಧ್ಯಸ್ತಪ್ರಾಣಭಾವೋದ್ಗೀಥೋದ್ಗಾನಕರ್ಮಭೂತಪಾಕಾದಿಷ್ವೋದನಾದಿವತ್ ಸೌಕರ್ಯಾತಿಶಯವಿವಕ್ಷಯಾ ಕರ್ತೃತ್ವೇನೋಚ್ಯತೇ.

ಅನ್ಯಥೋಪಕ್ರಮಗತ ಉದ್ಗೀಥಶಬ್ದಃ ಕರ್ತರಿ ಲಾಕ್ಷಣಿಕಃ ಸ್ಯಾತ್. ಅತೋ ವಿದ್ಯೈಕ್ಯಂ. ನನು ತರ್ಹ್ಯೇಕಶಾಖಾಗತಾನಾಂ ಭಿನ್ನಶಾಖಾಗತಾನಾಮಪಿ ಪರಶಿವಬ್ರಹ್ಮಲೋಕಪ್ರಾಪ್ತಿರೂಪೈಕಫಲಸಾಧ್ಯಾನಾಂ ದಹರಶಾಂಡಿಲ್ಯೋಪಕೋಸಲಪ್ರಭೃತೀನಾಂ ಮನಃಪ್ರಧಾನಭೂತಾಂತರಂಗೋಪಾಸನಾತ್ಮಕಕರ್ಮಣಾಮಪ್ಯಭೇದಾಂಗೀಕಾರೇ ಬಾಹ್ಯಕರ್ಮಣಾಮಪಿ ಸರ್ವೇಷಾಂ ಮನಃಸಾಧಾನ್ಯಾತ್ "ಅಹರಹಃ ಸಂಧ್ಯಾಮುಪಾಸೀತ" "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಇತ್ಯಾದಿಕರ್ಮಕಾಂಡಪ್ರಕರಣಪಠಿತಜ್ಯೋತಿಷ್ಟೋಮಾದಿಕರ್ಮಣಾಮಪಿ ಪರಶಿವಬ್ರಹ್ಮಲೋಕಪ್ರಾಪ್ತಿಫಲಮುಪಪದ್ಯೇತ. ತಥಾಚೇತ್ತತ್ತತ್ಕರ್ಮಫಲವಿಧಾಯಕಶಾಸ್ತ್ರವೈಯರ್ಥ್ಯಂ ದುರ್ವಾರಮಿತ್ಯಾಶಂಕಾಯಾಮಾಹ. ನವಾ ಪ್ರಕರಣಭೇದಾತ್ಪರೋವರೀಯಸ್ತ್ವಾದಿವತ್ ॥ ೭ ॥ ಕರ್ಮಕಾಂಡಪ್ರಕರಣಪಠಿತವಿಜಾತೀಯೋಪಾಸನಾನಾಂ ಐಕ್ಯಂ ನಾಸ್ತ್ಯೇವ. ಕುತಃ? ಪ್ರಕರಣಭೇದಾತ್, ಕರ್ಮಬ್ರಹ್ಮಕಾಂಡಯೋಃ ಪ್ರಕರಣಯೋಃ ಪರಸ್ಪರಭಿನ್ನತ್ವಾತ್. "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಇತ್ಯಾದಿಶ್ರುತೀನಾಂ ಅಭ್ಯುದಯಫಲಪ್ರಾಪ್ತ್ಯುಪದೇಶಾತ್ "ಬ್ರಹ್ಮ ವೇದ ಬ್ರಹ್ಮೈವ ಭವತಿ" ಇತ್ಯಾದಿಶ್ರುತಿಷು ಬ್ರಹ್ಮೋಪಾಸನಾನಾಂ ಅಪುನರಾವೃತ್ತಿನಿಃಶ್ರೇಯಸಫಲವ್ಯವಸ್ಥಾಪನಾತ್ ದಹರಶಾಂಡಿಲ್ಯೋಪಕೋಸಲಾದಿವಿದ್ಯಾನಾಮಿವ ವಿದ್ಯೈಕ್ಯಸ್ಯಾಸಂಭವಾತ್ ಭೇದ ಏವೋಪದಿಶ್ಯತೇ. ತತ್ರ ದೃಷ್ಟಾಂತಮಾಹ ಪರೋವರೀಯಸ್ತ್ವಾದಿವತ್ ಯಥಾ ಅಗ್ನಿಹೋತ್ರದರ್ಶಪೂರ್ಣಮಾಸಜ್ಯೋತಿಷ್ಟೋಮವಾಜಪೇಯಾನಾಂ ಧರ್ಮಪ್ರಕರಣಪಠಿತಾನಾಂ ಪೂರ್ವಪೂರ್ವಾಪೇಕ್ಷಯಾ ತದುತ್ತರೋತ್ತರಮುತ್ಕೃಷ್ಟಾನಾಂ ಭೇದಾವಗಮಾತ್ ಧರ್ಮಪ್ರಕರಣಪಠಿತಬ್ರಹ್ಮಪ್ರಕರಣಪಠಿತಮಲಿನವಾಸನಾಶುದ್ಧವಾಸನಾಕೃತಕರ್ಮಣಾಂ ಭಿನ್ನತ್ವೇ ಕಿಂ ವಕ್ತವ್ಯಂ. "ಅಥ ಯದತಃ ಪರೋ ದಿವ್ಯೋ ಜ್ಯೋತಿರ್ದೀಪ್ಯತೇ", "ಅಥ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ", "ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಪುಂಡರೀಕಂ ವೇಶ್ಮ" ಇತ್ಯಾದಿಷು ಬ್ರಹ್ಮಪ್ರಕರಣಭೇದದ್ಯೋತಕೈಃ ಅಥಶಬ್ದಾದಿಭಿಃ ಪರಶಿವಬ್ರಹ್ಮೋಪಾಸನಾನಾಂ ಅನ್ಯೋನ್ಯನಿರಪೇಕ್ಷತಯಾ ಪ್ರತ್ಯೇಕಂ ಬ್ರಹ್ಮಪ್ರಾಪ್ತಿಸಾಧನತ್ವಾವಗಮೇಽಪಿ ತದ್ವದ್ಭಿನ್ನತ್ವಂ ನೋಪಪದ್ಯತೇ ಫಲೈಕ್ಯಾತ್. ಯಥಾ ದರ್ಶಪೂರ್ಣಮಾಸಜ್ಯೋತಿಷ್ಟೋಮವಾಜಪೇಯಪೌಂಡರೀಕಾದಿಕರ್ಮಣಾಂ ಸ್ವಾತಂತ್ರ್ಯೇಽಪಿ ಸ್ವರ್ಗಲೋಕಪ್ರಾಪ್ತಿಫಲೈಕತ್ವಾದಭೇದಸಿದ್ಧಿಃ ತದ್ವತ್ಸರ್ವದಾ

ಬ್ರಹ್ಮಪ್ರಕರಣಪಠಿತಾನಾಮೇವ ಸಾಕ್ಷಾದ್ಬ್ರಹ್ಮಪ್ರಾಪ್ತಿಹೇತುತ್ವಂ. "ಸರ್ವೇ ವೇದಾ ಯತ್ಪದಮಾಮನಂತಿ" ಇತಿ ಶ್ರುತಿಸತ್ತ್ವೇऽಪಿ ನಿಷ್ಕಾಮಾನಯಾ ಪರಮೇಶ್ವರಾರ್ಪಿತಜ್ಯೋತಿಷ್ಟೋಮಾದಿಕರ್ಮಣಾಂ ಚಿತ್ತಶುದ್ಧಿದ್ವಾರಾ ಪರಂಪರಯಾ ಬ್ರಹ್ಮಪ್ರಾಪ್ತಿಹೇತುತ್ವಂ ನಿಶ್ಚೀಯತೇ. ಕಿಂಚ "ಓಮಿತ್ಯೇತದಕ್ಷರಮುದ್ಗೀಥಮುಪಾಸೀತ" ಇತಿ ಪ್ರಕೃತಮುದ್ಗೀಥಾವಯವಂ ಪ್ರಣವಂ ಪ್ರಸ್ತುತ್ಯ "ಏತಸ್ಯ ವಾ ಅಕ್ಷರಸ್ಯೋಪವ್ಯಾಖ್ಯಾನಂ ಭವತಿ. ದೇವಾಸುರಾ ಹ ವೈ ಯತ್ರ ಸಂಯೇತಿರೇ" ಇತ್ಯಾರಭ್ಯ "ಅಥ ಹ ಯ ಏವಾಯಂ ಮುಖ್ಯಪ್ರಾಣಸ್ತಮುದ್ಗೀಥಮುಪಾಸಾಂ ಚಕ್ರಿರೇ" ಇತ್ಯುದ್ಗೀಥಾವಯವಭೂತಪ್ರಣವವಿಷಯಮುಪಾಸನಂ ಛಂದೋಗಾ ಅಧೀಯತೇ. ವಾಜಿನಸ್ತು ತಾದೃಶಪ್ರಾಚೀನಪ್ರಕರಣಾಭಾವಾತ್ "ಹಂತಾಸುರಾನ್ಯಜ್ಞ ಉದ್ಗೀಥೇನಾತ್ಯಯಾಮ" ಇತಿ ಕೃತ್ಸ್ನಮುದ್ಗೀಥಂ ಪ್ರಸ್ತುತ್ಯ "ಅಥ ಹ ಇಮಮಾಸನ್ಯಂ ಪ್ರಾಣಮೂಚುಸ್ತ್ವಂ ನ ಉದ್ಗಾಯ" ಇತ್ಯಾದಿಕೃತ್ಸ್ನೋದ್ಗೀಥವಿಷಯಮಧೀಯತೇ. ಅತಃ ಪ್ರಕರಣಭೇದೇನ ವಿಧೇಯಭೇದಃ ವಿಧೇಯಭೇದೇ ಚ ರೂಪಭೇದ ಇತಿ ನ ವಿದ್ಯೈಕ್ಯಂ. "ಅಥ ಹ ಯ ಏವಾಯಂ ಮುಖ್ಯಃ ಪ್ರಾಣಸ್ತಮುದ್ಗೀಥಮುಪಾಸಾಂಚಕ್ರಿರೇ" ಇತಿ ಪೂರ್ವಪ್ರಕೃತ ಉದ್ಗೀಥಾವಯವಭೂತಃ ಪ್ರಣವ ಏವಾಧ್ಯಸ್ತಪ್ರಾಣಭಾವಶ್ಛಂದೋಗಾನಾಮುಪಾಸ್ಯಃ. ವಾಜಿನಾಂ ತು "ಕೃತ್ಸ್ನಸ್ಯೋದ್ಗೀಥಸ್ಯ ಕರ್ತೋದ್ಗಾತಾ ಪ್ರಾಣದೃಷ್ಟ್ಯೋಪಾಸ್ಯಃ" ಇತಿ. "ಅಥ ಹೇಮಮಾಸನ್ಯಂ ಪ್ರಾಣಮೂಚುಸ್ತ್ವಂ ನ ಉದ್ಗಾಯೇತಿ ತಥಾ ತೇಭ್ಯ ಏಷ ಪ್ರಾಣ ಉದಗಾಯತ್" ಇತ್ಯುದ್ಗಾತರಿ ಪ್ರಾಣಾಧ್ಯಾಸಂ ನಿರ್ದಿಶ್ಯ "ಯ ಏವಂ ವೇದ" ಇತ್ಯುದ್ಗಾತ್ರೈವಾಧ್ಯಸ್ತಪ್ರಾಣಭಾವ ಉಪಾಸ್ಯೋ ವಿಧೀಯತೇ. "ಅತಶ್ಚ ರೂಪಭೇದಃ. ನ ಚೋದ್ಗಾತರ್ಯುಪಾಸ್ಯೇ ವಿಹಿತೇ "ಉದ್ಗೀಥೇನ ಅತ್ಯಯಾಮ" ಇತ್ಯಾಶ್ಯಾಯಿ ಕೋಪಕ್ರಮವಿರೋಧಶ್ಶಂಕನೀಯಃ, ಉದ್ಗಾತುರುಪಾಸನೇ ಉದ್ಗೀಥಸ್ಯೋದ್ಗಾನಕರ್ಮಭೂತಸ್ಯ ಅವಶ್ಯಾಪೇಕ್ಷಿತತ್ವಾತ್ ತಸ್ಯಾಪಿ ಪರಪರಿಭವಾಖ್ಯಫಲಪ್ರಾಪ್ತಿಹೇತುತ್ವಾತ್. ಅತೋ ರೂಪಭೇದಾದ್ವಿದ್ಯಾಭೇದ ಇತಿ ಚೋದನಾದ್ಯವಿಶೇಷೇऽಪಿ ನ ವಿದ್ಯೈಕ್ಯಂ. ಯದೇಕಸ್ಯಾಮಪಿ ಶಾಖಾಯಾಂ ಉದ್ಗೀಥಾವಯವಭೂತೇ ಪ್ರಣವೇ ಪರಾತ್ಮದೃಷ್ಟಿವಿಧಾನಸಾಮ್ಯೇऽಪಿ ಹಿರಣ್ಮಯಪುರುಷದೃಷ್ಟಿವಿಧಾನಾತ್ ಪರೋವರೀಯಸ್ತ್ವಾದಿಗುಣವಿಶಿಷ್ಟದೃಷ್ಟಿವಿಧಾನಮರ್ಥಾಂತರಭೂತಂ. ತಸ್ಮಾದ್ವಿದ್ಯೈಕ್ಯಮನುಪಪನ್ನಮಿತಿ ಚೇದುಚ್ಯತೇ. "ಸರ್ವೇ ವೇದಾ ಯತ್ಪದಮಾಮನಂತಿ", "ವೇದೈ

ರನೇಕೈರಹಮೇವ ವೇದ್ಯಃ ವೇದಾಂತಕೃದ್ವೇದವಿದೇವ ಚಾಹಂ", "ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ" ಇತ್ಯಾದಿಸರ್ವೇಷು ವೇದಾಂತೇಷು ಉಪಾಸ್ಯೋಪಾಸಕಾದಿಭೇದೇನ ಸಂಸಾರದಶಾಯಾಂ ಭೇದಸಾಧನತ್ವೇಽಪಿ ಷಡ್ವಿಧತಾತ್ಪರ್ಯಲಿಂಗೈಃ ಷಟ್ಸ್ಥಲಪರಶಿವ ಬ್ರಹ್ಮಣ್ಯೇವ ಸಮನ್ವಯಸಂಭವಾತ್ ದಹರಶಾಂಡಿಲ್ಯಾದಿವಿದ್ಯಾನಾಂ ಜೀವಭಾವನಿವೃತ್ತಿಪೂರ್ವಕಶಿವತ್ವಪ್ರಾಪ್ತಿರೂಪಪರಮಪುರುಷಾರ್ಥಫಲೈಕ್ಯಾತ್ ವಿದ್ಯೈಕ್ಯಮನಿವಾರ್ಯಂ.

"ಭೇದಾನ್ನೇತಿ ಚೇದೇಕಸ್ಯಾಮಪಿ" ಎಂಬ ಸೂತ್ರದಲ್ಲಿ ಬೇರೆಬೇರೆ ಶಾಖೆಗಳಲ್ಲಿ ಹೇಳಿರುವ ಒಂದೇ ಬಗೆಯ ಉಪಾಸನಗಳಿಗೂ ಭೇದವಿರುವುದರಿಂದ ಅರ್ಥಭೇದವನ್ನು ಆಶಂಕಿಸಿ ನಿರಾಕರಿಸಿಯಾಯಿತು. ಆದರೂ "ಉಪಾಸೀತ" ಎಂದು ಬೇರೆ ಬೇರೆ ಶಬ್ದಗಳಿಂದ ಉಪಾಸನವನ್ನು ಹೇಳಿರುವುದರಿಂದ ಈ ಉಪಾಸನಗಳಲ್ಲಿ ಏಕರೂಪತೆ ಹೇಗೆ ಸಂಭವಿಸುತ್ತದೆ ? ಎಂದಾಶಂಕಿಸಿ ಸಮಾಧಾನ ಮಾಡುತ್ತಾನೆ. "ಉಪಾಸೀತ" ಮೊದಲಾದ ಶಬ್ದಗಳೂ ಅನೇಕ ಶಾಖೆಗಳಲ್ಲಿ ಬೇರೆ ಬೇರೆಯಾಗಿರುವುದರಿಂದ ಉಪಾಸನವಾಕ್ಯಗಳನ್ನು ಪರಸ್ಪರ ಭಿನ್ನವೆಂದೇ ಹೇಳಬೇಕು. "ಸಮಿಧೋ ಯಜತಿ" "ಇಡೋ ಯಜತಿ" ಮೊದಲಾದ ಕಡೆಗಳಲ್ಲಿ ಯಜತಿ ಎಂಬ ಶಬ್ದ ಬೇರೆಯಾದ್ದರಿಂದ ಯಾಗಗಳನ್ನು ಬೇರೆ ಎಂದು ಅಂಗೀಕರಿಸಬೇಕಾಗುತ್ತದೆ ಎಂದರೆ ಇದು ಸರಿಯಲ್ಲ. ಇಲ್ಲಿ ಶಬ್ದ ಬೇರೆಯಾದರೂ ಗುಣದಲ್ಲಿ ಭೇದವಿಲ್ಲ. "ಸಮಿಧೋ ಯಜತಿ" ಎಂಬ ವಾಕ್ಯದಲ್ಲಿಯೂ ಸಮಿತ್ ಮೊದಲಾದ ದೇವತೆಗಳು ಬೇರೆಯಾದ್ದರಿಂದ ಯಾಗಗಳಲ್ಲಿ ಭೇದವಿದೆಯೇ ಹೊರತು ಯಜತಿ ಎಂಬ ಶಬ್ದ ಬೇರೆಯಾದ್ದರಿಂದಿಲ್ಲ. ಆದ್ದರಿಂದ ಒಂದೇ ಬಗೆಯ ಉಪಾಸನವನ್ನು ಅನುಸರಿಸಿ ಗುಣದಲ್ಲಿಯೂ ಭೇದವಿಲ್ಲದ್ದರಿಂದ ಬೇರೆ ಶಾಖೆಯಲ್ಲಿ ಬರುವ ಒಂದೇ ಬಗೆಯ ಉಪಾಸನಗಳಿಗೂ ಭೇದವಿಲ್ಲವೆಂದು ಸೂತ್ರದ ಸೂಕ್ಷ್ಮಾರ್ಥ. ತೈತ್ತಿರೀಯ ಛಾಂದೋಗ್ಯ ಕೈವಲ್ಯ ಮೊದಲಾದ ಶಾಖೆಗಳಲ್ಲಿ ಜೀವರಿಗೆ ಪಾಶವನ್ನು ತೊಲಗಿಸಿ ಪರಶಿವಬ್ರಹ್ಮವನ್ನು ದೊರಕಿಸುವಂತಹ ದಹರವಿದ್ಯೆಯನ್ನು ಉಪದೇಶಿಸಿ, ಹೀಗೆಯೇ ಅನೇಕ ಶಾಖೆಗಳಲ್ಲಿ ಅನೇಕ ಬಗೆಯಲ್ಲಿ ತೋರುತ್ತಿರುವ ಶ್ರುತಿಗಳಿಗೆ ಹೇಗೆ ಏಕರೂಪತೆ ಬರುವುದೆಂದು ಹಿಂದಿನ ಅಧಿಕರಣದಲ್ಲಿ ಆಕ್ಷೇಪಿಸಿ, ಒಂದೇ ಬಗೆಯ ಫಲವನ್ನು ಸಾಧಿಸುವುದರಿಂದ ಈ ಉಪಾಸನೆಗಳೆಲ್ಲವೂ ಒಂದೇ ಬಗೆಯಾಗಿವೆ ಎಂದು ಸಮಾಧಾನ ಮಾಡಿಯಾಯಿತು. ಆದರೆ ಛಾಂದೋಗ್ಯದ ಉದ್ಗೀಥವಿದ್ಯೆಯಲ್ಲಿ ಪರಸ್ಪರಭೇದವಿರುವುದರಿಂದ ಹೇಗೆ ಏಕರೂಪತೆ ಬರುತ್ತದೆ ? ಎಂದು ಆಕ್ಷೇಪಿಸಿ ಅಲ್ಲಿಯೂ ಫಲೈಕ್ಯದಿಂದ ವಿದ್ಯೈಕ್ಯವುಂಟು ಎಂದು ತಿಳಿಸುತ್ತಾನೆ. ಇಲ್ಲಿ ಎಲ್ಲಾ ವಿದ್ಯೆಗಳೂ ಒಂದೇ ಬಗೆ ಎಂಬುದನ್ನು ಗುರ್ತಿಸಲು ಕಾರಣವಾದ "ಚೋದನೈಕ್ಯ"ವು ಇದೆಯೋ ಇಲ್ಲವೋ ಎಂಬುದನ್ನು ಈಗ ನಿರೂಪಿಸಿ ನಿರ್ಣಯಿಸಬೇಕಾಗಿದೆ. ವಾಜಸನೇಯ ಮತ್ತು ಛಾಂದೋಗ್ಯಶಾಖೆಯ

ವರಿಗೆ ಉದ್ಗೀಥವಿದ್ಯೆಯನ್ನು ಹೇಳಲಾಗಿದೆ. ಪ್ರಾಜಾಪತ್ಯದೇವತೆಗಳು ಉದ್ಗೀಥವಿದ್ಯೆಯಿಂದ ಅಸುರರನ್ನು ಜಯಿಸುವೆವೆಂದು ಅಸುರರ ನಾಶವನ್ನು ಪ್ರತಿಜ್ಞೆಮಾಡಿ, ಉದ್ಗೀಥದಲ್ಲಿ ವಾಕ್ ಮನಸ್ಸುಗಳ ಉಪಾಸನದಿಂದ ಅಸುರರಿಂದ ತಮಗೆ ಆದ ಪರಾಭವವನ್ನು ತಿಳಿಸಿ, ಅನಂತರ ಅದೇ ಉದ್ಗೀಥದಲ್ಲಿ ಪ್ರಾಣದ ಉಪಾಸನೆಯಿಂದ ಅಸುರರ ಪರಾಭವವನ್ನು ಹೇಳಿ, ಶತ್ರುಪರಾಭವಕ್ಕಾಗಿ ಉದ್ಗೀಥದಲ್ಲಿ ಹೀಗೆ ಪ್ರಾಣೋಪಾಸನವನ್ನು ವಾಜಸನೇಯದಲ್ಲಿ ವಿಧಿಸಲಾಗಿದೆ. ಹೀಗೆಯೇ ಛಾಂದೋಗ್ಯದಲ್ಲೂ ಉದ್ಗೀಥವಿದ್ಯೆಯಿಂದಲೇ ಅಸುರರ ಪರಾಭವವನ್ನು ಪ್ರತಿಜ್ಞೆಮಾಡಿ ವಾಗಾದ್ಯುಪಾಸನದಿಂದ ಅಸುರರಿಂದ ತಮಗಾದ ಪರಾಭವವನ್ನೂ, ಪ್ರಾಣೋಪಾಸನದಿಂದ ಅಸುರರ ಪರಾಭವವನ್ನೂ ಹೇಳಲಾಗಿದೆ. ಹೀಗೆ ಶತ್ರುಪರಾಜಯಕ್ಕಾಗಿ ಉದ್ಗೀಥದಲ್ಲಿ ಪ್ರಾಣೋಪಾಸನವು ವಿಹಿತವಾಗಿದೆ. ಇಲ್ಲಿ ಉಪಾಸನವನ್ನು ವಿಧಿಸುವ ಪ್ರತ್ಯಯವಿಲ್ಲದಿದ್ದರೂ ಆ ಉಪಾಸನವು ಒಂದು ಫಲವನ್ನು ದೊರಕಿಸುವ ಸಾಧನವೆಂದು ಹೇಳಿದ್ದರಿಂದ ಉಪಾಸನದ ಬಗ್ಗೆ ವಿಧಿಯನ್ನು ಕಲ್ಪಿಸಲಾಗುವುದು. ಉದ್ಗೀಥವಿದ್ಯೆಯು ಯಾಗಕ್ಕಾಗಿಯೇ ಬಂದಿರುವುದರಿಂದ ಯಾಗಕ್ಕೆ ಸಮಾನವಾದ ಫಲವನ್ನು ದೊರಕಿಸಿದರೂ, ಆ ವಿದ್ಯೆಯನ್ನು ಪ್ರಶಂಸೆಮಾಡುವ ವಾಕ್ಯಗಳಿಂದ ದೊರಕುವ ಫಲವನ್ನು ವಿರುದ್ಧವಲ್ಲವೆಂದೇ ಗ್ರಹಿಸಬೇಕೆಂದು ಪ್ರತಿಪಾದಿಸಲಾಗಿದೆ. ಈಗ ಇವೆರಡು ಶಾಖೆಗಳಲ್ಲಿ ಬಂದಿರುವ ಉದ್ಗೀಥವಿದ್ಯೆಗಳೂ ಒಂದೇ ಬಗೆಯೇ ಅಥವಾ ಬೇರೆಯೇ? ಎಂಬ ಸಂಶಯು ಬರುತ್ತದೆ. "ಸೂರ್ಯನಲ್ಲಿ ಹಿರಣ್ಮಯಪುರುಷನು ಕಾಣುತ್ತಾನೆ" "ಅವನ ಉಗುರು ಕೂದಲು ಗಡ್ಡ ಎಲ್ಲವೂ ಸುವರ್ಣವಾಗಿವೆ" "ಅವನ ಕಣ್ಣುಗಳೆರಡೂ ಸೂರ್ಯನಿಂದ ವಿಕಾಸಗೊಂಡ ಕಮಲವೇ ಆಗಿವೆ. ಅವನಿಗೆ ಉದಿತಿ ಎಂದು ಹೆಸರಿದೆ. ಅವನೇ ಎಲ್ಲಾ ಪಾಪಗಳನ್ನೂ ಕೆಳಕ್ಕೆ ಒದರಿ ಮೇಲೆ ಎದ್ದಿದ್ದಾನೆ. ಹೀಗೆ ಯಾವನು ತಿಳಿಯುವನೋ ಅವನು ಈ ಪಾಪಗಳೆಲ್ಲವನ್ನೂ ದಾಟುತ್ತಾನೆ. ಅವನಿಗೆ ಋಕ್ಸಾಮಗಳೇ ಸ್ತೋತ್ರಗಳು." "ಕಣ್ಣಿನೊಳಗೆ ಕಾಣುವ ಪುರುಷನೇ ಋಕ್ ಸಾಮಗಳೂ, ಗಾನವಿಶೇಷವೂ, ಯಜುರ್ವೇದವೂ, ಬ್ರಹ್ಮವೂ ಆಗಿದ್ದಾನೆ. ಇವನಿಗೆ ಯಾವ ರೂಪವಿದೆಯೋ ಇವನನ್ನು ತಿಳಿದವನಿಗೂ ಅದೇ ರೂಪವೇ ಬರುತ್ತದೆ. ಇವನಿಗೆ ಯಾವುದು ಗಾನವಿಶೇಷವೋ ಅದೇ ಅವನಿಗೂ ಇರುತ್ತದೆ. ಇವನಿಗೆ ಯಾವ ಹೆಸರೋ ಅವನಿಗೂ ಅದೇ ಹೆಸರು". ಹೀಗೆ ಉದ್ಗೀಥವಿದ್ಯೆಯಲ್ಲಿ ಸೂರ್ಯಮಂಡಲದೊಳಗೆ ನೆಲಸಿರುವ ಪುರುಷನನ್ನು ಹಿರಣ್ಮಯನೆಂದು ತಿಳಿಸಿ ಅವನಿಗೆ ಕಮಲಸದೃಶವಾದ ಎರಡು ಕಣ್ಣುಗಳಿರುವುವೆಂದು ಹೇಳಿದ್ದರಿಂದ ಸೂರ್ಯಮಂಡಲದಲ್ಲಿ ನಾರಾಯಣನಿರುವನೆಂದೂ, ಅವನಿಗೂ ಸುವರ್ಣದ ಬಣ್ಣವಿದೆಯೆಂದೂ ಸ್ಮೃತಿಗಳಲ್ಲಿ ಹೇಳಿರುವುದರಿಂದ ಇಲ್ಲಿ ಹಿರಣ್ಮಯಪುರುಷನೆಂದರೆ ನಾರಾಯಣನೆಂದು ಸ್ಪಷ್ಟವಾಗುತ್ತದೆ. ಆದರೆ ತೈತ್ತಿರೀಯಶ್ರುತಿಯು ಆದಿತ್ಯನೊಳಗೆ ಇರುವ ಹಿರಣ್ಮಯಪುರುಷನ ಬಗ್ಗೆ ತಿಳಿಸಿ ಅವನನ್ನು ಹಿರಣ್ಯಬಾಹುವೆಂದೂ, ಅಂಬಿಕಾಪತಿ

ಎಂದೂ, ಪಶುಪತಿ ಎಂದೂ ಹೇಳಿ ಪರಶಿವನ ಅಸಾಧಾರಣಧರ್ಮಗಳನ್ನೇ ನಿರ್ದೇಶಿಸಿರುವುದರಿಂದಲೂ, "ಸೂರ್ಯಮಂಡಲದಲ್ಲಿ ನೀಲಗ್ರೀವನೂ, ವಿರೂಪಾಕ್ಷನೂ, ವಿಷ್ಣುವಲ್ಲಭನೂ ಆದ ಸಾಂಬಶಿವನಿರುವನು". ಎಂದು ಸ್ಮೃತಿಯಲ್ಲಿ ಸ್ಪಷ್ಟವಾಗಿ ಹೇಳಿರುವುದರಿಂದಲೂ ಅವನು ಸದಾಶಿವನೆಂಬುದು ಸ್ಪಷ್ಟವಾಗುತ್ತದೆ. ಒಂದೇ ಉಪಾಸನವು ಒಂದುಕಡೆ ನಾರಾಯಾಣನಿಗೂ ಮತ್ತೊಂದುಕಡೆ ಶಿವನಿಗೂ ಅನ್ವಯಿಸುವುದರಿಂದ ಉಪಾಸನಗಳಲ್ಲಿ ಎಂದಿಗೂ ಏಕರೂಪತೆ ಸಂಭವಿಸುವುದಿಲ್ಲವೆಂದು ಆಕ್ಷೇಪಬರುತ್ತದೆ. ಇದಕ್ಕೆ ಸಮಾಧಾನವನ್ನು ಪ್ರಥಮಾಧ್ಯಾಯದ ಪ್ರಥಮಪಾದದಲ್ಲಿ ಅಂತಸ್ತದ್ಧರ್ಮೋಪದೇಶಾಧಿಕರಣದಲ್ಲಿ ತಿಳಿಸಿ ಛಾಂದೋಗ್ಯತೈತ್ತಿರೀಯವಾಕ್ಯಗಳಿಗೆ ಪರಸ್ಪರವಿರೋಧವನ್ನು ಪರಿಹರಿಸಲಾಗಿದೆ. ಮತ್ತೆ ಉದ್ಗೀಥದಲ್ಲಿ ಪ್ರಾಣಭಾವವನ್ನು ಆರೋಪಿಸಿ ಉಪಾಸನಮಾಡಬೇಕೆಂದು ಹೇಳಿರುವುದು ಎರಡು ಕಡೆಗಳಲ್ಲೂ ಸಮಾನವೇ ಆಗಿದೆ. ಶತ್ರುಪರಾಜಯುವೆಂಬ ಫಲವೂ ಒಂದೇವಿಧವಾಗಿದೆ. ಉಪಾಸನಸ್ವರೂಪವೂ ಎರಡುಕಡೆಗಳಲ್ಲೂ ಒಂದೇ ಆಗಿದೆ. ವಿಧಿಯನ್ನು ಹೇಳುವ ಶಬ್ದಗಳು ಅನೇಕಬಗೆಯಾಗಿದ್ದರೂ ಅರ್ಥದಲ್ಲಿ ಯಾವವ್ಯತ್ಯಾಸವೂ ಬರುವುದಿಲ್ಲ. ಉದ್ಗೀಥವಿದ್ಯೆ ಎಂಬ ಹೆಸರೂ ಎರಡಕ್ಕೂ ಸಮಾನವೇ ಆಗಿದೆ. ಆದ್ದರಿಂದ ಎರಡು ಶಾಖೆಗಳಲ್ಲಿ ಹೇಳಿರುವ ಉಧ್ಗೀಥವಿದ್ಯೆಯು ಒಂದೇಬಗೆಯಾಗಿದೆ. ಇಲ್ಲಿ ಸಿದ್ಧಾಂತಿಯ ದೃಷ್ಟಿಯಿಂದ ಆಕ್ಷೇಪಿಸಿ ಪರಿಹಾರವನ್ನು ಈ ಸೂತ್ರದಲ್ಲಿ ತಿಳಿಸಲಾಗಿದೆ. ಹೀಗೆ ಈ ಸೂತ್ರಕ್ಕೆ ಅರ್ಥವನ್ನು ಹೇಳಲಾಗಿದೆ. ಎರಡು ವಿದ್ಯೆಗಳೂ ಒಂದೇ ಎಂದು ಹೇಳಿದ್ದು ಸರಿಯಲ್ಲ. ಎರಡರ ಸ್ವರೂಪದಲ್ಲೂ ಪರಸ್ಪರ ವೈಷಮ್ಯವು ಕಂಡುಬರುತ್ತದೆ. ಇದೂ ಸಹ ಶಬ್ದದಿಂದಲೇ ಸ್ಪಷ್ಟವಾಗಿ ತೋರುತ್ತದೆ. ವಾಜಸನೇಯದಲ್ಲಿ ಗಾನಮಾಡುವವನಲ್ಲಿ ಪ್ರಾಣೋಪಾಸನದಿಂದ ಅಸುರರ ಪರಾಜಯವನ್ನು ತಿಳಿಸಿ "ಯಾವನು ಹೀಗೆ ತಿಳಿಯುತ್ತಾನೆಯೋ'' ಎಂದು ಉಧ್ಗೀಥದ ಉಪಾಸನೆ ಮಾಡುವವನನ್ನೇ ಹೇಳಿರುವುದರಿಂದ ಅವನಲ್ಲಿಯೇ ಪ್ರಾಣದ ಉಪಾಸನವು ಅನ್ವಯಿಸುತ್ತದೆ ಎಂದು ಶಬ್ದದಿಂದಲೇ ಸ್ಪಷ್ಟವಾಗಿ ಕಾಣುತ್ತದೆ. ಛಾಂದೋಗ್ಯದಲ್ಲಂತೂ ಉದ್ಗಾನಕ್ಕೆ ವಿಷಯವಾದ ಉಧ್ಗೀಥದಲ್ಲಿ ಪ್ರಾಣೋಪಾಸನದಿಂದ ಅಸುರರ ಪರಾಜಯವನ್ನು ಹೇಳಿದೆ. "ಈ ರೀತಿಯಲ್ಲಿ ಅರಿತವನು" ಎಂದು ಗಾನಕ್ಕೆ ಕರ್ಮವಾದ ಉಧ್ಗೀಥದ ಪ್ರಸಕ್ತಿಇರುವುದರಿಂದ ಅದರಲ್ಲಿಯೇ ಪ್ರಾಣದ ಉಪಾಸನವು ವಿಹಿತವೆಂದು ಶಬ್ದದಿಂದಲೇ ತಿಳಿದುಬರುತ್ತದೆ. ಹೀಗೆ ಒಂದುಕಡೆ ಗಾನಮಾಡುವವನಲ್ಲೂ, ಮತ್ತೊಂದುಕಡೆ ಗಾನದ ಕರ್ಮವಾದ ಉಧ್ಗೀಥದಲ್ಲೂ ಪ್ರಾಣದ ಉಪಾಸನವನ್ನು ಹೇಳಿರುವುದರಿಂದ ಎರಡು ಉಪಾಸನಗಳೂ ಸ್ವರೂಪದಿಂದ ಭಿನ್ನವೇ ಆಗಿವೆ ಎಂಬುದು ಸ್ಪಷ್ಟವಾಗಿದೆ. ಉಪಾಸನಸ್ವರೂಪವೇ ಭಿನ್ನವಾದ ಮೇಲೆ ವಿಧಿಯನ್ನು ಹೇಳುವ ಶಬ್ದವು ಒಂದಾದಮಾತ್ರಕ್ಕೆ ಐಕ್ಯಬರುವಂತೆಯೇ ಇಲ್ಲ. ಹೀಗೆ ಎರಡು ವಿದ್ಯೆಗಳಿಗೂ ಭೇದವಿದ್ದೇಇರುತ್ತದೆ. ಎಂದು ಆಕ್ಷೇಪಿಸಿದರೆ ಅದಕ್ಕೆ

ಒಂದೇ ಆದರೂ ರೂಪವು ಬೇರೆಯಾದ್ದರಿಂದ ವಿದ್ಯೆಯೂ ಬೇರೆಯೇ ಆಗುತ್ತದೆ. ಒಂದೇ ಶಾಖೆಯಲ್ಲಿ ಉದ್ಗೀಥದ ಅವಯವವಾದ ಪ್ರಣವದಲ್ಲಿ ಪರಮಾತ್ಮನ ಉಪಾಸನವನ್ನು ವಿಧಿಸಿರುವುದು ಸಮಾನವಾದರೂ ಒಂದುಕಡೆಯಲ್ಲಿ ಹಿರಣ್ಮಯನಾದ ಪುರುಷನ ಉಪಾಸನವನ್ನು ಹೇಳಿರುವುದರಿಂದಲೂ, ಮತ್ತೊಂದುಕಡೆಯಲ್ಲಿ ಪರೋವರೀಯಸ್ತ್ವ ಅಂದರೆ ಸರ್ವೋತ್ಕೃಷ್ಟತ್ವವೆಂಬ ಗುಣವನ್ನು ಉಪಾಸನಮಾಡಬೇಕೆಂದು ವಿಧಿಸಿರುವುದರಿಂದಲೂ ಎರಡು ವಿದ್ಯೆಗಳಿಗೂ ಐಕ್ಯವು ಬರುವುದಿಲ್ಲವೆಂದು ಆಕ್ಷೇಪ ಬರುತ್ತದೆ. ಅದಕ್ಕೆ ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. "ವೇದಗಳೆಲ್ಲವೂ ಯಾವ ಓಂಕಾರವನ್ನು ತಿಳಿಸುತ್ತವೆಯೋ" "ಎಲ್ಲ ವೇದಗಳಿಂದಲೂ ನಾನೇ ವೇದ್ಯನು. ವೇದಗಳನ್ನೂ ವೇದಾಂತಗಳನ್ನೂ ರಚಿಸಿದವನು ನಾನೇ" "ಉಪನಿಷತ್ಪ್ರತಿಪಾದ್ಯನಾದ ಪುರುಷನ ಸ್ವರೂಪವೇನೆಂದು ಕೇಳುತ್ತೇನೆ" ಹೀಗೆ ಎಲ್ಲಾ ವೇದಾಂತಗಳೂ ಜೀವಬ್ರಹ್ಮರಿಗೆ ಸಂಸಾರದಶೆಯಲ್ಲಿ ಭೇದವನ್ನು ಹೇಳಿದ್ದರೂ ಷಡ್ವಿಧತತ್ತ್ವರ್ಯಲಿಂಗಗಳಿಂದ ಪರಶಿವಬ್ರಹ್ಮದಲ್ಲಿಯೇ ಸಮನ್ವಯವಾಗುತ್ತವೆ. ಆದ್ದರಿಂದ ದಹರಾದಿವಿದ್ಯೆಗಳೆಲ್ಲವೂ ಜೀವನಿಗೆ ಜೀವಭಾವವನ್ನು ತೊಲಗಿಸಿ ಶಿವಭಾವವನ್ನು ದೊರಕಿಸುವುದೊಂದನ್ನೇ ಪರಮಪುರುಷಾರ್ಥವೆಂದು ಸಾಧಿಸುತ್ತ ಒಂದೇ ಬಗೆಯಾಗಿವೆ.

ನನು ಧರ್ಮಪ್ರಕರಣಪಠಿತಪುರುಷನಿಷ್ಠಾಕಮುಕ್ತಜ್ಯೋತಿಷ್ಟೋಮಾದಿಪುಣ್ಯಕರ್ಮಣಾಂ ಚಿತ್ತಶುದ್ಧಿದ್ವಾರಾ ಶ್ರುತಿಸ್ಮೃತ್ಯಾದಿಷು ಪರಂಪರಯಾ ಮೋಕ್ಷಹೇತುತ್ವವ್ಯಪದೇಶಾತ್ ದಹರಾದ್ಯುಪಾಸನಾನಾಂ ಜ್ಯೋತಿಷ್ಟೋಮಾದ್ಯುಪಾಸನಾನಾಂ ಚ ಮೋಕ್ಷಫಲೈಕತ್ವಾದಭಿನ್ನತ್ವಂ ಕಥಮನುಪಪನ್ನಮಿತ್ಯಾಶಂಕಾಯಾಮಾಹ. ಸಂಜ್ಞಾತಶ್ಚೇತ್ತದುಕ್ತಮಸ್ತಿ ತು ತದಪಿ ‖ ೮ ‖ ಸಂಜ್ಞಾತಃ ಭಿನ್ನಭಿನ್ನಸಂಜ್ಞಾಬಲಾತ್ "ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಃ", "ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ" ಇತ್ಯಾದಿಶ್ರುತಿಷು, "ವರ್ಣಾಶ್ರಮೋಚಿತೋ ಧರ್ಮಃ ಅವಿದ್ಯೇತಿ ನಿರೂಪ್ಯತೇ । ತಯಾ ಪ್ರಾಚೀನಕರ್ಮಾಣಿ ಹಿತ್ವಾ ಜ್ಞಾನಂ ಸಮಶ್ನುತೇ ‖ ಜ್ಞಾನೇನ ಮುಕ್ತಿಮಾಪ್ನೋತಿ ತಸ್ಮಾತ್ಕರ್ಮ ಸಮಭ್ಯಸೇತ್ । ಇಯಾಜ ಸೋಽಪಿ ಸುಬಹೂನ್ ಯಜ್ಞಾನ್ ಜ್ಞಾನವ್ಯಪಾಶ್ರಯಃ ‖ ಬ್ರಹ್ಮವಿದ್ಯಾಮಧಿಷ್ಠಾಯ ತರ್ತುಂ ಮೃತ್ಯುಮವಿದ್ಯಯಾ । ಸ್ವಜಾತಿವಿಹಿತಂ ಧರ್ಮಂ ಕುರ್ಯಾದ್ವೇದೋದಿತಂ ನರಃ ‖ ಸ್ವಜಾತಿವಿಹಿತಾದ್ಧರ್ಮಾದ್ವೇದಸ್ಮೃತ್ಯುದಿತಾತ್ಕೃತಾತ್ । ಪುಂಸಃ ಪಾಪನಿವೃತ್ತಿಃ ಸ್ಯಾತ್ತಯಾ ಶುದ್ಧಿಸ್ತು ಚೇತಸಃ ‖ ಚಿತ್ತಶುದ್ಧ್ಯಾ ತು ವಿಶ್ವಾಸಃ ಶ್ರುತಿಸ್ಮೃತಿಷು ಜಾಯತೇ । ತಸ್ಮಾದ್ಭಕ್ತಿರ್ಭವೇತ್ಪುಂಸಾಂ ಶಿವೇ ಪರಮಕಾರಣೇ । ಭಕ್ತ್ಯಾ ಜಾಯೇತ ಸತತಂ ಸಂಸೃತೇ

ದೋಷದರ್ಶನಂ । ತಸ್ಮಾದಿಹ ಪರಾತ್ರಾಪಿ ಭೋಗೇಷು ವಿರತಿರ್ಭವೇತ್॥ ತಯಾ ವೇದಾಂತವಾಕ್ಯಾರ್ಥೇ ಶಿವರೂಪಪ್ರಕಾಶನಂ। ಸಮ್ಯಕ್ ಜ್ಞಾನಂ ಭವೇತ್ತೇನ ಮುಕ್ತಿಃ ಪುಂಸು ಭವೇದ್ಧ್ರುವಂ ॥ ತಸ್ಮಾನ್ಮಾಹೇಶ್ವರೋ ವಿಪ್ರಃ ಶ್ರುತಿಸ್ಮೃತ್ಯಾಗಮೋದಿತಂ । ವರ್ಣಾಶ್ರಮೋಚಿತಂ ಧರ್ಮಂ ಪ್ರಾಣತ್ಯಾಗೇಽಪಿ ನ ತ್ಯಜೇತ್ ॥ " ಇತ್ಯಾದಿಸ್ಮೃತಿಪುರಾಣಾದಿಷ್ವಪಿ ಧರ್ಮಸ್ಯ ಬ್ರಹ್ಮಜ್ಞಾನಪೂರ್ವವೃತ್ತತ್ವೋಪದೇಶಾತ್ ದಹರಶಾಂಡಿಲ್ಯಾದ್ಯುಪಾಸನಾದಿವತ್ ಜ್ಯೋತಿಷ್ಟೋಮಾದ್ಯುಪಾಸನಾನಾಮಪಿ ತದುಕ್ತಂ ವಿದ್ಯೈಕ್ಯಮುಕ್ತಮಿತಿ ಚೇತ್ತದಪ್ಯಸ್ತಿ ತು. " ಸತ್ಯಂ ಜ್ಞಾನಮನಂತಂ ಬ್ರಹ್ಮ ", " ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ । ಸೋಽಶ್ನುತೇ ಸರ್ವಾನ್ಕಾಮಾನ್ ಸಹ । " " ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವಮಾನುಶುಃ । ಪರೇಣ ನಾಕಂ ನಿಹಿತಂ ಗುಹಾಯಾಂ ವಿಭ್ರಾಜತೇ ತದ್ಯತಯೋ ವಿಶಂತಿ । ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸಂನ್ಯಾಸಯೋಗಾದ್ಯತಯಃ ಶುದ್ಧಸತ್ತ್ವಾಃ । ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ ॥ " ಇತ್ಯಾದಿಶ್ರುತಿಷು ದಹರಶಾಂಡಿಲ್ಯಾದಿವಿದ್ಯಾನಾಮಿವ ಜ್ಯೋತಿಷ್ಟೋಮಾದೀನಾಂ ಸಾಕ್ಷಾದ್ಬ್ರಹ್ಮಪ್ರಾಪ್ತಿವ್ಯಪದೇಶಾದರ್ಶನಾತ್ ಬಹುಜನ್ಮಕೃತಪುಣ್ಯಫಲೇನ ಚಿತ್ತಶುದ್ಧಿದ್ವಾರಾ ಭಕ್ತಿವೈರಾಗ್ಯಶಮದಮಾದಿಪರಂಪರಯಾ ದಹರಾದ್ಯುಪಾಸನಾಹೇತುಭೂತತ್ವೇಽಪಿ ದಹರಾದ್ಯುಪಾಸನಾನಾಮಿವ ಸಾಕ್ಷಾದ್ಬ್ರಹ್ಮಪ್ರಾಪ್ತಿಹೇತುತ್ವಾಸಂಭವಾತ್ " ವಿದ್ಯಾಂ ಚಾವಿದ್ಯಾಂ ಚ " ಇತಿ ಶ್ರುತೌ ನಾಮಮಾತ್ರೇಣ ಘಟಪಟವತ್ಪರಸ್ಪರವೈಲಕ್ಷಣ್ಯೋಪದೇಶಾತ್ಸರ್ವದಾ ವಿದ್ಯಾರೂಪದಹರಾದ್ಯುಪಾಸನಾನಾಂ ಅವಿದ್ಯಾರೂಪಜ್ಯೋತಿಷ್ಟೋಮಾದಿಕರ್ಮಣಾಂ ಚಾಭೇದಃ ಸರ್ವಥಾ ಅನುಪಪನ್ನಃ.

ಕರ್ಮಪ್ರಕರಣದಲ್ಲಿ ಹೇಳಿದಂತೆ ಜ್ಯೋತಿಷ್ಟೋಮಾದಿಕರ್ಮಗಳನ್ನು ನಿಷ್ಕಾಮಭಾವದಿಂದ ಆಚರಿಸಿದರೆ ಅವುಗಳಿಂದಲೂ ಚಿತ್ತಶುದ್ಧಿಯುಂಟಾಗಿ ಕೊನೆಗೆ ಮೋಕ್ಷವುಂಟಾಗುವುದೆಂದು ಶ್ರುತಿಸ್ಮೃತಿಗಳಲ್ಲಿ ಹೇಳಿದೆ. ಅದ್ದರಿಂದ ದಹರಾದಿವಿದ್ಯೆಗಳೂ ಜ್ಯೋತಿಷ್ಟೋಮಾದ್ಯುಪಾಸನಗಳೂ ಒಂದೇಬಗೆಯ ಫಲವನ್ನು ಕೊಡುವುದರಿಂದ ಹೇಗೆ ಒಂದೇಜಾತಿಯವಾಗಲಾರವು? ಎಂದಾಶಂಕಿಸಿ ಸಮಾಧಾನಮಾಡುತ್ತಾನೆ. ಶ್ರುತಿಯಲ್ಲಿ ಬ್ರಹ್ಮಧರ್ಮಗಳಿಗೆ ವಿದ್ಯೆ ಅವಿದ್ಯೆ ಎಂದು ಬೇರೆ ಬೇರೆ ಸಂಜ್ಞೆಗಳನ್ನು ಹೇಳಿರುವುದರಿಂದ ವರ್ಣಾಶ್ರಮೋಚಿತಕರ್ಮಗಳು ವಿದ್ಯೆ ಎನಿಸುತ್ತವೆ. " ಇದರ ಆಚರಣದಿಂದಲೇ ಹಿಂದಿನ ಕರ್ಮಗಳ ವಾಸನೆಯನ್ನು ಜೀವನು ಕಳೆದುಕೊಂಡು ಜ್ಞಾನವನ್ನು ಹೊಂದುತ್ತಾನೆ. ಜ್ಞಾನದಿಂದ ಮುಕ್ತಿಯನ್ನು ಹೊಂದು

ತ್ತಾನೆ. ಆದ್ದರಿಂದ ಕರ್ಮವನ್ನು ಆಚರಿಸಲೇಬೇಕು. ಆ ರಾಜನು ಜ್ಞಾನವನ್ನು ಆಶ್ರಯಿಸಿದ್ದರೂ ಅವಿದ್ಯೆಯಿಂದ ಮೃತ್ಯುವನ್ನು ದಾಟಲಿಕ್ಕಾಗಿ ಅನೇಕ ಯಜ್ಞಗಳನ್ನು ಆಚರಿಸಿವನು. ಸ್ವಜಾತಿಗೆ ವಿಹಿತವಾದ ಧರ್ಮವನ್ನು ಮಾನವನು ಆಚರಿಸಲೇಬೇಕು. ಇದರಿಂದ ಅವನಿಗೆ ಪಾಪವು ತೊಲಗಿ ಮನಸ್ಸು ಶುದ್ಧವಾಗುತ್ತದೆ. ಅಲ್ಲಿಂದ ಮುಂದೆ ಶ್ರುತ್ಯಾಗಮಗಳಲ್ಲಿ ಅವನಿಗೆ ವಿಶ್ವಾಸ ಹುಟ್ಟುತ್ತದೆ. ಇದರಿಂದಲೇ ಪರಮಕಾರಣನಾದ ಶಿವನ ಬಗ್ಗೆ ಭಕ್ತಿಹುಟ್ಟುತ್ತದೆ. ಭಕ್ತಿಯಿಂದ ಸಂಸಾರದ ಅಸಾರತೆಯು ತಿಳಿದು ಅದರಿಂದ ವೈರಾಗ್ಯವು ಹುಟ್ಟುತ್ತದೆ. ಆಗಲೇ ವೇದಾಂತವಾಕ್ಯಗಳು ಅವನಿಗೆ ಪರಮಶಿವನನ್ನು ಪ್ರಕಾಶಗೊಳಿಸುತ್ತವೆ. ಇದರಿಂದ ಅವನಿಗೆ ಯಥಾರ್ಥಜ್ಞಾನವುಂಟಾಗಿ ನಿತ್ಯಸುಖವು ಲಭಿಸುತ್ತದೆ. ಆದ್ದರಿಂದ ವೀರಶೈವ ಬ್ರಾಹ್ಮಣನು ಪ್ರಾಣವಿರುವವಗೂ ಶ್ರುತ್ಯಾಗಮಗಳಲ್ಲಿ ಹೇಳಿರುವ ವರ್ಣಾಶ್ರಮಧರ್ಮಗಳನ್ನು ಆಚರಿಸಲೇಬೇಕು" ಹೀಗೆ ಸ್ಮೃತಿಪುರಾಣಗಳಲ್ಲಿಯೂ ಧರ್ಮಾಚರಣವೇ ಬ್ರಹ್ಮಜ್ಞಾನಕ್ಕೆ ಪೂರ್ವವೃತ್ತವೆಂದು ಹೇಳಲಾಗಿದೆ. ಆದ್ದರಿಂದ ದಹರಾದಿ ವಿದ್ಯೆಗಳಂತೆಯೂ ಜ್ಯೋತಿಷ್ಟೋಮಾದಿಕರ್ಮಗಳಿಗೂ ವಿದ್ಯೈಕ್ಯವನ್ನು ಏಕೆ ಹೇಳಬಾರದು? ಎಂದು ಕೇಳಿದರೆ "ಪರಮಾಕಾಶದಲ್ಲಿ ಇರುವ ತೇಜಸ್ಸನ್ನು ತಿಳಿದವನು ಅದರೊಡನೆಯೇ ಎಲ್ಲಾ ಕಾಮಗಳನ್ನೂ ಪಡೆಯುತ್ತಾನೆ," "ಅಮೃತವು ಕರ್ಮದಿಂದಲೂ, ಸಂತಾನದಿಂದಲೂ, ಐಶ್ವರ್ಯದಿಂದಲೂ ದೊರಕದೆ ಸ್ವಾರ್ಥತ್ಯಾಗ ಒಂದರಿಂದಲೇ ದೊರಕಬಲ್ಲದು. ಸ್ವರ್ಗದಿಂದಾಚೆಗೆ ಹೃದಯಾಕಾಶದಲ್ಲಿ ಶೋಭಿಸುತ್ತಿರುವ ಪರಂಜ್ಯೋತಿಯಲ್ಲಿ ಪ್ರವೇಶಿಸಿ ಸನ್ಯಾಸಯೋಗದಿಂದಲೂ ವೇದಾಂತ ವಿಜ್ಞಾನದಿಂದಲೂ ಕೃತಕೃತ್ಯರಾದ ಯತಿಗಳು ದೇಹವನ್ನು ತೊರೆದು ಬ್ರಹ್ಮಲೋಕದಲ್ಲಿ ಎಲ್ಲಾ ದುಃಖಗಳಿಂದಲೂ ಪಾರಾಗಿ ನಿತ್ಯಸುಖಿಗಳಾಗುತ್ತಾರೆ" ಈ ಬಗೆಯ ಶ್ರುತಿಗಳಲ್ಲಿ ಹೇಳಿರುವ ದಹರ ಶಾಂಡಿಲ್ಯ ಮೊದಲಾದ ವಿದ್ಯೆಗಳಂತೆ ಜ್ಯೋತಿಷ್ಟೋಮ ಮೊದಲಾದ ಕರ್ಮಗಳು ನೇರವಾಗಿ ಬ್ರಹ್ಮವನ್ನು ದೊರಕಿಸಲಾರವು. ಆದರೆ ಕರ್ಮಾಚರಣೆಯು ಚಿತ್ತಶುದ್ಧಿಯ ಮೂಲಕ ಭಕ್ತಿ ವೈರಾಗ್ಯ ಶಮ ದಮಗಳನ್ನು ದೊರಕಿಸಿ ದಹರಾದ್ಯುಪಾಸನೆಗೆ ಹೇತುವಾದರೂ ದಹರಾದ್ಯುಪಾಸನದಂತೆ ನೇರವಾಗಿ ಬ್ರಹ್ಮಪ್ರಾಪ್ತಿಗೆ ಕಾರಣವಾಗುವಂತಿಲ್ಲ. ಶ್ರುತಿಯಲ್ಲಿ ಬ್ರಹ್ಮೋಪಾಸನವನ್ನು ವಿದ್ಯೆ ಎಂದೂ, ಕರ್ಮಾಚರಣೆಯನ್ನು ಅವಿದ್ಯೆ ಎಂದೂ ಘಟಪಟಗಳಂತೆ ಅವೆರಡಕ್ಕೂ ಪರಸ್ಪರವೈಲಕ್ಷಣ್ಯವನ್ನು ಹೇಳಿರುವುದರಿಂದ ವಿದ್ಯಾರೂಪವಾದ ದಹರಾದ್ಯುಪಾಸನಾದಿಗಳಿಗೂ ಅವಿದ್ಯಾರೂಪವಾದ ಜ್ಯೋತಿಷ್ಟೋಮಾದಿಕರ್ಮಗಳಿಗೂ ಏಕರೂಪತೆ ಎಂದಿಗೂ ಬರುವಂತಿಲ್ಲ.

**ನನು ಸಂಧ್ಯಾವಂದನಜ್ಯೋತಿಷ್ಟೋಮಾದಿಕರ್ಮಣಾಂ ಬ್ರಹ್ಮಪ್ರಾಪ್ತಿರೂಪಫಲಾಯೋಗಾತ್, ದಹರಾದಿವಿದ್ಯಾನಾಂ ತತ್ಫಲಹೇತುತ್ವದರ್ಶನಾತ್ ವಿದುಷಾಮವಿದುಷಾಮಪಿ ಸಂಧ್ಯಾವಂದನಾದಿಕರ್ಮಣಾ**

ಮುಪ್ರಸಕ್ತಿರ್ದೋಷಪ್ರಸಕ್ತಿಶ್ಚ ಪ್ರಸಜ್ಯೇತೇತ್ಯಾಶಂಕ್ಯ ತತ್ರಾಹ. ವ್ಯಾಪ್ತೇಶ್ಚ ಸಮಂಜಸಂ ॥ ೯ ॥ ವ್ಯಾಪ್ತೇಶ್ಚೇತಿ “ಧರ್ಮೇಣ ಪಾಪಮಪನುದತಿ” ಇತ್ಯಾದಿಶ್ರುತಿಸ್ಮೃತ್ಯಾದಿಷು ನಿಷ್ಕಾಮನಯಾ ಶಿವಾರ್ಪಣಕೃತಸಂಧ್ಯಾವಂದನಾದಿಪುಣ್ಯಕರ್ಮಣಾಂ ಪಾಪನಿವೃತ್ತಿದ್ವಾರಾ ಪರಂಪರಯಾ ಸ್ವಾಭಾವಿಕಜೀವತ್ವನಿವೃತ್ತಿಪೂರ್ವಕಶಿವತ್ವಪ್ರಾಪ್ತಿರೂಪಮೋಕ್ಷಫಲೇ ವ್ಯಾಪಕತ್ವಾಚ್ಚ ಸಮಂಜಸಂ. ಅವಿದುಷಾಂ ಚಿತ್ತಶುದ್ಧಿದ್ವಾರಾ ಮಾಯಾಪಾಶನಿವೃತ್ತಿಪೂರ್ವಕನಿತ್ಯಾನಂದಾತ್ಮಕಸಾಲೋಕ್ಯಾದಿಮೋಕ್ಷಸಿದ್ಧ್ಯರ್ಥಂ ವಿದುಷಾಂ ಲೋಕದೂಷಣನಿವೃತ್ತಿಪೂರ್ವಕಮೂಢತಾರಣಾರ್ಥಂ ಚ ಸಂಧ್ಯಾವಂದನಾದಿನಿತ್ಯನೈಮಿತ್ತಿಕಾದಿಪುಣ್ಯಕರ್ಮಾಚರಣಂ ಶ್ರುತಿಸ್ಮೃತಿಪುರಾಣಾಗಮೇಷು ಸಂಸ್ಥಾಪನಾತ್ ಸಮಂಜಸಂ. “ಏವಂ ವಿದ್ವಾನಗ್ನಿಹೋತ್ರಂ ಜುಹುಯಾತ್” ಇತ್ಯಾದಿಶ್ರುತಿಷು “ನಿತ್ಯನೈಮಿತ್ತಿಕಾನ್ಯೇವ ಕುರ್ವತೋ ದುರಿತಕ್ಷಯಃ”, “ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ। ಕುರ್ಯಾದ್ವಿದ್ವಾಂಸ್ತಥಾಽಸಕ್ತಃ ಚಿಕೀರ್ಷುರ್ಲೋಕಸಂಗ್ರಹಂ ॥”, “ಆಚಾರಹೀನಃ ಪುರುಷೋ ಲೋಕೇ ಭವತಿ ನಿಂದಿತಃ। ತಸ್ಮಾದಾಚಾರವಾನ್ ಜ್ಞಾನೀ ಭವೇದಾದೇಹಪಾತನಾತ್ ॥” ಇತಿ ಶ್ರುತಿಸ್ಮೃತಿಪುರಾಣಾಗಮಾದಿಷು ಬಹುಧಾ ಪ್ರಪಂಚಿತತ್ವಾತ್ ಸರ್ವೇಷಾಂ ಸಂಧ್ಯಾವಂದನಾದಿಪುಣ್ಯಕರ್ಮಣಾಂ ಆವಶ್ಯಕತ್ವಂ ಸಿದ್ಧಂ.

ಸಂಧ್ಯಾವಂದನ ಜ್ಯೋತಿಷ್ಟೋಮ ಮೊದಲಾದ ಕರ್ಮಗಳು ಬ್ರಹ್ಮವನ್ನು ದೊರಕಿಸುವ ಸಂಭವವಿಲ್ಲದ್ದರಿಂದಲೂ ದಹರಾದಿವಿದ್ಯೆಗಳೇ ಈ ಫಲವನ್ನು ದೊರಕಿಸುತ್ತವೆ ಎಂದು ಕಂಡುಬರುವುದರಿಂದಲೂ, ವಿದ್ವಾಂಸರಿಗೆ ಸಂಧ್ಯಾವಂದನಾದಿಕರ್ಮಗಳಲ್ಲಿ ಔದಾಸೀನ್ಯವೂ, ಸಾಮಾನ್ಯರಿಗೆ ಅವುಗಳಲ್ಲಿ ದೋಷಭಾವನೆಯೂ ಉಂಟಾಗುತ್ತವೆ ಎಂದಾಶಂಕಿಸಿ ತಿಳಿಸುತ್ತಾನೆ. “ಧರ್ಮದಿಂದ ಪಾಪವನ್ನು ಕಳೆದುಕೊಳ್ಳುತ್ತಾನೆ” ಎಂದು ಶ್ರುತಿಸ್ಮೃತಿಗಳಲ್ಲಿ ಫಲಾಪೇಕ್ಷೆಯಿಲ್ಲದೆ ಶಿವಾರ್ಪಣಭಾವನೆಯಿಂದ ಮಾಡಿದ ಸಂಧ್ಯಾವಂದನ ಮೊದಲಾದ ಪುಣ್ಯಕರ್ಮಗಳು ಜೀವನಿಗೆ ಪಾಪವನ್ನು ಪರಿಹರಿಸುವಮೂಲಕ ಜೀವಭಾವವನ್ನು ತೊಲಗಿಸಿ ಶಿವಭಾವವನ್ನು ದೊರಕಿಸಲು ಸಾಧಕವಾಗುತ್ತವೆ ಎಂದು ತಿಳಿಸಲಾಗಿದೆ. ಪಾಮರರಿಗೆ ಚಿತ್ತಶುದ್ಧಿಯ ಮೂಲಕ ಮಾಯಾಪಾಶವನ್ನು ತೊಲಗಿಸಿ ನಿತ್ಯಾನಂದರೂಪವಾದ ಸಾಲೋಕ್ಯ ಮುಕ್ತಿಯನ್ನು ದೊರಕಿಸಲಿಕ್ಕಾಗಿಯೂ, ವಿದ್ವಾಂಸರಿಗೆ ಲೋಕದೂಷಣವನ್ನು ತೊಲಗಿಸಿ ಮೂಢರನ್ನು ವಂಚಿಸಲಿಕ್ಕಾಗಿಯೂ ಸಂಧ್ಯಾವಂದನವೇ ಮೊದಲಾದ ನಿತ್ಯನೈಮಿತ್ತಿಕ ಪುಣ್ಯಕರ್ಮಾಚರಣವನ್ನು ಶ್ರುತಿಸ್ಮೃತಿಪುರಾಣಾಗಮಗಳು ಏರ್ಪಡಿಸಿವೆ. “ಹೀಗೆಯೇ ವಿದ್ವಾಂಸನು ಅಗ್ನಿಹೋತ್ರವನ್ನಾಚರಿಸಬೇಕು” “ನಿತ್ಯನೈಮಿತ್ತಿಕಕರ್ಮಗಳ

ಆಚಾರಣದಿಂದಲೇ ಪಾಪವು ನಶಿಸುವುದು." "ಪಾಮರರು ಅಭಿಮಾನಿಸಿ ಕರ್ಮಗಳನ್ನಾಚರಿಸಿದರೆ ವಿದ್ವಾಂಸನು ಲೋಕಹಿತಕ್ಕಾಗಿ ಅನಾಸಕ್ತನಾಗಿ ಕರ್ಮವನ್ನಾಚರಿಬೇಕು" "ಆಚಾರವಿಲ್ಲದವನು ಲೋಕದಲ್ಲಿ ನಿಂದ್ಯನೆನಿಸುವನು. ಆದ್ದರಿಂದ ಜ್ಞಾನಿಯೂ ಸಹ ದೇಹ ಬಿಡುವವರೆಗೂ ಆಚಾರಶೀಲನಾಗಿಯೇ ಇರಬೇಕು" ಎಂದು ಶ್ರುತಿಸ್ಮೃತ್ಯಾಗಮಗಳಲ್ಲಿ ವಿಸ್ತಾರವಾಗಿ ಹೇಳಿರುವುದರಿಂದ ಸತ್ಕರ್ಮಗಳನ್ನು ಅವಶ್ಯವಾಗಿ ಎಲ್ಲರೂ ಆಚರಿಸಲೇಬೇಕು.

ಪೂರ್ವೇ ಮುಮುಕ್ಷೂಣಾಂ ನಿರುಪಮಪುರುಷಾರ್ಥಫಲಸಿದ್ಧ್ಯರ್ಥಂ ಉಮಾಪತೇಃ ಪರಬ್ರಹ್ಮಣಶ್ಶಿವಸ್ಯ ದಹರೋಪಾಸನಂ ಪ್ರಣವಾರ್ಥಾನುಸಂಧಾನಸಾಮರಸ್ಯೋದ್ಗೀಥಾದ್ಯುಪಾಸನಂ ಚ ಪ್ರಸಾಧ್ಯ ತತ್ರ ಸರ್ವೇಷಾಂ ದಹರಾದ್ಯುಪಾಸನಾನಾಂ ಗುಣಧರ್ಮಪ್ರಕರಣಭೇದಾತ್ ಭಿನ್ನತ್ವೇನ ಪ್ರತೀಯಮಾನತ್ವೇಽಪಿ ತತ್ಪ್ರಾಪ್ತಿರೂಪಫಲೈಕ್ಯಾದೇಕತ್ವಸ್ಯ ಧರ್ಮಪ್ರಕರಣಪಠಿತಸಂಧ್ಯಾವಂದನಾದಿಸರ್ವೇಷಾಂ ಧರ್ಮಾಣಾಂ ಪರಂಪರಯಾ ತತ್ಪ್ರಾಪ್ತಿಹೇತುತ್ವಸ್ಯ ಚ ವ್ಯವಸ್ಥಾಪನೇ ಪ್ರಾಣೋಪಾಸನಸ್ಯ ಸರ್ವಾಧಿಕ್ಯತಯಾ ಪ್ರತೀಯಮಾನತ್ವಾತ್ತಸ್ಯ ನಾನಾಶಾಖಾಸು ಭಿನ್ನಭಿನ್ನತ್ವೇನ ದ್ಯೋತನಾಚ್ಚ ಕಥಂ ಬ್ರಹ್ಮಣಿ ಸಮನ್ವಯ ಇತ್ಯಾಶಂಕಾಯಾಂ ಅಧಿಕರಣಾಂತರಮಾಹ. ಸರ್ವಭೇದಾಧಿಕರಣಂ ॥ ೩ ॥ ಸರ್ವಾಭೇದಾದನ್ಯತ್ರೇಮೇ ॥ ೧೦ ॥ ಛಾಂದೋಗ್ಯವಾಜಸನೇಯಯೋಃ ಪ್ರಾಣವಿದ್ಯಾ ಪ್ರಸ್ತೂಯತೇ. "ಯೋ ಹ ವೈ ಜ್ಯೇಷ್ಠಂಚ ಶ್ರೇಷ್ಠಂಚ ವೇದ। ಜ್ಯೇಷ್ಠಶ್ಚ ಹ ವೈ ಶ್ರೇಷ್ಠಶ್ಚ ಭವತಿ। ಪ್ರಾಣೋ ಹ ವಾ ಜ್ಯೇಷ್ಠಶ್ಚ ಶ್ರೇಷ್ಠಶ್ಚ ॥" ಇತ್ಯಾದಿ ತತ್ರ ಜ್ಯೈಷ್ಠ್ಯಶ್ರೈಷ್ಠ್ಯಗುಣಕಂ ಪ್ರಾಣಮುಪಾಸ್ಯಂ ಪ್ರತಿಪಾದ್ಯ, ವಾಕ್ಚಕ್ಷುಃಶ್ರೋತ್ರಮನಸ್ಸು ವಸಿಷ್ಠತ್ವಪ್ರತಿಷ್ಠಾತ್ವಸಂಪತ್ತ್ವಾಯತನತ್ವಾಖ್ಯಾನ್ ಗುಣಾನ್ ಪ್ರತಿಪಾದ್ಯ ವಾಗಾದೀನಾಂ ದೇಹಸ್ಯ ಚ ಪ್ರಾಣಾಯತ್ತಸ್ಥಿತಿತ್ವೇನ ತದಾಯತ್ತತತ್ತತ್ಕಾರ್ಯತ್ವೇನ ಚ ಪ್ರಾಣಸ್ಯ ಶ್ರೈಷ್ಠ್ಯಂ ಪ್ರತಿಪಾದ್ಯ, ವಾಗಾದಿಸಂಬಂಧಿತಯಾ ಶ್ರುತಾನ್ ವಸಿಷ್ಠತ್ವಾದೀನ್ ಗುಣಾಂಶ್ಚ ಪ್ರಾಣಸಂಬಂಧಿತಯಾ ಪ್ರತಿಪಾದಯತಿ. ಏವಂ ಛಾಂದೋಗ್ಯವಾಜಸನೇಯಯೋಃ ಜ್ಯೈಷ್ಠ್ಯಶ್ರೈಷ್ಠ್ಯಗುಣಕೋ ವಸಿಷ್ಠತ್ವಾದಿಗುಣಕಶ್ಚ ಪ್ರಾಣ ಉಪಾಸ್ಯಃ ಪ್ರತೀಯತೇ. ಕೌಷೀತಕಿನಾಂ ತು ಪ್ರಾಣವಿದ್ಯಾಯಾಂ ತಥೈವ ಜ್ಯೈಷ್ಠ್ಯಶ್ರೈಷ್ಠ್ಯಗುಣಕಃ ಪ್ರಾಣ ಉಪಾಸ್ಯಃ ಪ್ರತಿಪಾದಿತಃ, ನ ಪುನರ್ವಸಿಷ್ಠತ್ವಾದಯೋ ವಾಗಾದಿಸಂಬಂಧಿನೋ ಗುಣಾಃ ಪ್ರಾಣಸಂಬಂಧಿತಯಾ ಪ್ರತಿಪಾದಿತಾಃ. ತತ್ರ ಸಂಶಯಃ ಕಿಮತ್ರೈಕಾ ವಿದ್ಯಾಽಭಿಧೀಯತೇ ಉತ ನೇತಿ. ಕಿಂ ಯುಕ್ತಂ, ಭಿದ್ಯತ ಇತಿ. ಕುತಃ? ರೂಪ

ಭೇದಾತ್. ಯದ್ಯಪ್ಯುಭಯತ್ರ ಪ್ರಾಣ ಏವ ಜ್ಯೈಷ್ಠ್ಯಶ್ರೈಷ್ಠ್ಯಗುಣಕ ಉಪಾಸ್ಯಃ. ತಥಾಪ್ಯೇಕತ್ರ ವಸಿಷ್ಠತ್ವಾದಿಭಿರಪಿ ಗುಣೈರ್ಯುಕ್ತಃ ಪ್ರಾಣ ಉಪಾಸ್ಯಃ ಪ್ರತೀಯತೇ. ಇತರತ್ರ ತು ತದ್ವಿಧುರ ಇತ್ಯುಪಾಸ್ಯ ರೂಪಭೇದಾತ್ ವಿದ್ಯಾಭೇದ ಇತಿ ಪ್ರಾಪ್ತೇ ಪ್ರಚಕ್ಷ್ಮಹೇ. ನಾತ್ರ ವಿದ್ಯಾಭೇದಃ. ಅನ್ಯತ್ರ ಕೌಷೀತಕಿನಾಂ ಪ್ರಾಣವಿದ್ಯಾಯಾಮಪಿ ಇಮೇ ವಸಿಷ್ಠತ್ವಾದಯೋ ಗುಣಾಃ ಉಪಾಸ್ಯಾಸ್ಸಂತಿ. ಕುತಃ ಸರ್ವಾ ಭೇದಾತ್. ಪ್ರತಿಜ್ಞಾತಪ್ರಾಣಜ್ಯೈಷ್ಠ್ಯಶ್ರೈಷ್ಠ್ಯೋತ್ಪಾದನಪ್ರಕಾರಸ್ಯ ಸರ್ವಸ್ಯ ತತ್ರಾಪ್ಯಭೇದಾತ್. ತಥಾಹಿ ಛಾಂದೋಗ್ಯವಾಜಸನೇಯಿನಾಂ ಪ್ರಾಣವಿದ್ಯಾಯಾಂ "ಏತಾ ಹ ವೈ ದೇವತಾ ಅಹಂಶ್ರೇಯಸೇ ವಿವದಮಾನಾಃ" ಇತಿ ಚೋಪಕ್ರಮ್ಯ ವಾಗಾದ್ಯೇಕೈಕಾವಕ್ರಮಣೇ ಸರ್ವೇಷಾಂ ಸಪ್ರಾಣಾನಾಂ ಇಂದ್ರಿಯಾಣಾಂ ಶರೀರಸ್ಯ ಚ ಸ್ಥಿತಿಂ ತತ್ಕಾರ್ಯಂ ಚಾವಿಕಲಂ ಪ್ರತಿಪಾದ್ಯ, ಪ್ರಾಣೋತ್ಕ್ರಮಣೇ ಸರ್ವೇಷಾಂ ವಿಶರಣಮಕಾರ್ಯಕರಣತ್ವಂ ಚಾಭಿಧಾಯ ಸರ್ವೇಷಾಂ ಪ್ರಾಣಾಧೀನ ಸ್ಥಿತಿತ್ವತದಧೀನಕಾರ್ಯತ್ವಾಭ್ಯಾಂ ಚ ಪ್ರಾಣಸ್ಯ ಜ್ಯೈಷ್ಠ್ಯಮುಪಪಾದಿತಂ. ಏವಮುಪಪಾದಿತಂ ವಾಗಾದಿಕಾರ್ಯಸ್ಯ ಪ್ರಾಣಾಧೀನತ್ವಂ. ಅಥ ಹೈನಂ ವಾಗುವಾಚ "ಯದಹಂ ವಸಿಷ್ಠಾಸ್ಮಿ ತ್ವಂ ತದ್ವಸಿಷ್ಠೋಽಸಿ" ಇತ್ಯಾದಿನಾ ವಾಗಾದಿಭಿರನೂದ್ಯತೇ, ಕೌಷೀತಕಿನಾಂ ಪ್ರಾಣವಿದ್ಯಾಯಾಮಪಿ ಪ್ರಾಣಸ್ಯ ಜ್ಯೈಷ್ಠ್ಯಶ್ರೈಷ್ಠ್ಯಪ್ರತಿಪಾದನಾಯ ವಾಗಾದಿಷು ವಸಿಷ್ಠತ್ವಾದಯಃ ಪ್ರತಿಪಾದಿತಾಃ. "ಅಥ ಹೇಮಾ ದೇವತಾಃ ಪ್ರಜಾಪತಿಂ ಪಿತರಮೇತ್ಯಾಬ್ರುವನ್ ಕೋ ವೈ ನಃ ಶ್ರೇಷ್ಠಃ" ಇತ್ಯಾದಿನಾ "ವಾಗಾದಿಗತಗುಣಾಃ ವಾಗಾದಯಶ್ಚ ದೇಹಸ್ಯ ಪ್ರಾಣಾಧೀನಾಃ" ಇತಿ ಪ್ರಾಣಸ್ಯ ಶ್ರೈಷ್ಠ್ಯಮುಪಪಾದಿತಂ. ವಾಗಾದಿಭಿಃ ಸ್ವಸ್ವಗುಣಾನಾಂ ವಸಿಷ್ಠಾತ್ವಾದೀನಾಂ ಪ್ರಾಣಾಧೀನತ್ವಾನುವಾದಮಾತ್ರಂ ನ ಕೃತಂ. ನೈತಾವತಾ ರೂಪಭೇದಃ. ವಾಗಾದೀನಾಂ ವಸಿಷ್ಠತ್ವಾದಿ ಗುಣಾನ್ವಿತಾನಾಂ ಪ್ರಾಣಾಧೀನಕಾರ್ಯತ್ವೋಪಪಾದನೇನೈವ ಪ್ರಾಣಸ್ಯ ವಾಗಾದಿವಸಿಷ್ಠತ್ವಾದಿಗುಣಹೇತುತ್ವಸ್ಯ ಸಿದ್ಧತ್ವಾತ್ ತದೇವ ಹಿ ಪ್ರಾಣಸ್ಯ ವಸಿಷ್ಠತ್ವಾದಿಗುಣಯೋಗಿತ್ವಂ. ಯದ್ವಾಗಾದಿವಸಿಷ್ಠತ್ವಾದಿಹೇತುತ್ವಂ ಅತೋಽತ್ರಾಪಿ ವಸಿಷ್ಠಾತ್ವಾದಿಗುಣಯೋಗಾತ್ ಪ್ರಾಣೋ ಜ್ಯೇಷ್ಠಃ ಪ್ರತಿಪನ್ನ ಇತಿ ನಾಸ್ತಿ ವಿದ್ಯಾಭೇದಃ.

ಮುಮುಕ್ಷುಗಳಿಗೆ ಅಸದೃಶವೂ, ನಿತ್ಯಕಲ್ಯಾಣಮಯವೂ, ನಿರತಿಶಯಾನಂದ ಸ್ವರೂಪವೂ ಆದ ನಿರ್ವಾಣವೆಂಬ ಪರಮಪುರುಷಾರ್ಥದ ಸಿದ್ಧಿಗಾಗಿ ಉಮಾಪತಿ ಎನಿಸಿದ ಪರಶಿವಬ್ರಹ್ಮವನ್ನು ದಹರಾಕಾಶದಲ್ಲಿ ಭಾವಿಸಿ ಅರ್ಚಿಸುವ ಕ್ರಮವನ್ನೂ,

ಪ್ರಣವದ ಅರ್ಥವನ್ನು ಅನುಸಂಧಾನಮಾಡುತ್ತಲೇ ಅದರಲ್ಲಿ ಸಮರಸವಾಗಿ ಬೆರೆಸು ವಂತಹ ಉದ್ಗೀಥೋಪಾಸನವನ್ನೂ ಹಿಂದೆ ಪ್ರತಿಪಾದಿಸಿಯಾಯಿತು. ಅದರಲ್ಲೂ ದಹರಾದ್ಯುಪಾಸನಗಳೆಲ್ಲವೂ ಗುಣಗಳ, ಧರ್ಮಗಳ ಮತ್ತು ಪ್ರಕರಣಗಳ ಭೇದದಿಂದ ಬೇರೆಬೇರೆಯಾಗಿ ತೋರಿದರೂ ಅವುಗಳಿಂದ ಹೊಂದುವ ಬ್ರಹ್ಮಪ್ರಾಪ್ತಿ ಎಂಬ ಫಲವು ಒಂದೇಬಗೆಯಾದ್ದರಿಂದ ಅವೆಲ್ಲವೂ ಒಂದೇಬಗೆ ಎಂದೂ ತಿಳಿಸಿಯಾಯಿತು. ಧರ್ಮ ಪ್ರಕರಣದಲ್ಲಿ ಹೇಳಿರುವ ಸಂಧ್ಯಾವಂದನವೇ ಮೊದಲಾದ ಕರ್ಮಗಳೆಲ್ಲವೂ ಪರಂ ಪರೆಯಿಂದ ಬ್ರಹ್ಮಪ್ರಾಪ್ತಿಗೆ ಕಾರಣವೆಂದು ವ್ಯವಸ್ಥೆ ಮಾಡಲಾಯಿತು. ಪ್ರಾಣದ ಉಪಾಸನವು ಎಲ್ಲಕ್ಕೂ ಹೆಚ್ಚಿನದೆಂದು ಶ್ರುತಿಯಲ್ಲಿ ಹೇಳಿದ್ದರೂ ಅನೇಕ ಶಾಖೆಗಳಲ್ಲಿ ಅದನ್ನು ಬೇರೆಬೇರೆ ರೀತಿಯಲ್ಲಿ ಹೇಳಿರುವುದರಿಂದ ಆ ಪ್ರಾಣವನ್ನು ಪರಬ್ರಹ್ಮನಲ್ಲಿ ಹೇಗೆ ಸಮನ್ವಯಮಾಡಲಿಕ್ಕಾಗುತ್ತೆ ? ಎಂದಾಶಂಕಿಸಿ ಸಮಾಧಾನವನ್ನು ಇಲ್ಲಿ ಹೇಳು ತ್ತಾನೆ. ಛಾಂದೋಗ್ಯ ಮತ್ತು ವಾಜಸನೇಯಗಳಲ್ಲಿ "ಪ್ರಾಣವೇ ಜ್ಯೇಷ್ಠವೂ ಶ್ರೇಷ್ಠವೂ ಆಗಿದೆ" ಎಂದು ಪ್ರಾಣವಿದ್ಯೆಯನ್ನು ಹೇಳಿದೆ. ಅಲ್ಲಿ ಜ್ಯೇಷ್ಠವೂ ಶ್ರೇಷ್ಠವೂ ಆದ ಪ್ರಾಣವನ್ನು ಉಪಾಸ್ಯವೆಂದು ಹೇಳಿ ವಾಕ್ಕು, ನೇತ್ರ, ಕಿವಿ, ಮನಸ್ಸುಗಳಲ್ಲಿ ವಸಿಷ್ಠತ್ವ, ಪ್ರತಿಷ್ಠಾತ್ವ, ಸಂಪತ್ತಿ, ಆಯತನತ್ವ ಎಂಬ ಗುಣಗಳನ್ನು ಪ್ರತಿಪಾದಿಸಿ ಈ ವಾಗಾದಿಗಳೂ ದೇಹವೂ ಪ್ರಾಣವನ್ನಾಶ್ರಯಿಸಿಕೊಂಡಿರುವುದ ರಿಂದ ಪ್ರಾಣವನ್ನೇ ಶ್ರೇಷ್ಠವೆಂದು ತಿಳಿಸಿ ವಾಗಾದಿಗಳಿಗೆ ಸಂಬಂಧಿಸಿದ ವಸಿಷ್ಠತ್ವ ಮೊದಲಾದ ಗುಣಗಳನ್ನು ಪ್ರಾಣಕ್ಕೆ ಸಂಬಂಧಿಸಿದವೆಂದು ತಿಳಿಸಲಾಗಿದೆ. ಹೀಗೆ ಛಾಂದೋಗ್ಯ ಮತ್ತು ವಾಜಸನೇಯಗಳಲ್ಲಿ ಜ್ಯೇಷ್ಠವೂ ಶ್ರೇಷ್ಠವೂ ಆಗಿ ವಸಿಷ್ಠತ್ವ ಮೊದಲಾದ ಗುಣಗಳುಳ್ಳ ಪ್ರಾಣವನ್ನು ಉಪಾಸ್ಯವೆಂದು ತಿಳಿಸಲಾಗಿದೆ. ಕೌಷೀ ತಕದ ಪ್ರಾಣವಿದ್ಯೆಯಲ್ಲಿಯೂ ಹಾಗೆಯೇ ಜ್ಯೇಷ್ಠವೂ ಶ್ರೇಷ್ಠವೂ ಆದ ಪ್ರಾಣವನ್ನೇ ಉಪಾಸ್ಯವೆಂದು ಹೇಳಿದೆ. ಆದರೆ ವಾಗಾದಿಗಳಿಗೆ ಸಂಬಂಧಿಸಿದ ವಸಿಷ್ಠತ್ವಾದಿ ಗುಣಗಳು ಪ್ರಾಣಕ್ಕೆ ಸಂಬಂಧಿಸಿವೆ ಎಂದು ಮಾತ್ರ ಅಲ್ಲಿ ಹೇಳಿಲ್ಲ. ಆದ್ದರಿಂದಲೇ ಈ ಎರಡು ಬಗೆಯ ಶ್ರುತಿಗಳಲ್ಲಿ ಹೇಳಿರುವ ಉಪಾಸನಗಳು ಒಂದೇಬಗೆಯೋ ಅಥವಾ ಬೇರೆಯೆ ? ಎಂದು ಸಂಶಯ ಬರುತ್ತದೆ. ಎರಡರಲ್ಲೂ ಜ್ಯೇಷ್ಠವೂ ಶ್ರೇಷ್ಠವೂ ಆದ ಪ್ರಾಣವೇ ಉಪಾಸ್ಯವಾಗಿದ್ದರೂ ಒಂದುಕಡೆ ವಸಿಷ್ಠಾತ್ವಾದಿಗುಣಗಳಿಂದ ಕೂಡಿದ ಪ್ರಾಣವು ಉಪಾಸ್ಯವಾಗಿದೆ. ಬೇರೆಕಡೆ ಅವಿಲ್ಲದ ಪ್ರಾಣವು ಉಪಾಸ್ಯವಾಗಿದೆ. ಹೀಗೆ ರೂಪಭೇದವಿರುವುದರಿಂದ ವಿದ್ಯೆಗಳೇ ಬೇರೆಯಾಗಿರಬೇಕೆಂದು ಆಕ್ಷೇಪ ಬರು ತ್ತದೆ. ಇದಕ್ಕೆ ಸೂತ್ರದಲ್ಲಿ ಸಮಾಧಾನವನ್ನು ಹೀಗೆ ತಿಳಿಸಲಾಗಿದೆ. ಇಲ್ಲಿ ವಿದ್ಯಾ ಭೇದವೇನೂ ಇಲ್ಲ. ಪ್ರಾಣದಲ್ಲಿ ಜ್ಯೈಷ್ಠ್ಯಶ್ರೈಷ್ಠ್ಯವೆಂಬ ಗುಣಗಳನ್ನು ತಿಳಿಸುವ ರೀತಿ ಎರಡುಕಡೆಗಳಲ್ಲೂ ಒಂದೇಬಗೆಯಾದ್ದರಿಂದ ಕೌಷಿತಕದ ಪ್ರಾಣವಿದ್ಯೆ ಯಲ್ಲಿಯೂ ವಸಿಷ್ಠತ್ವಾದಿಗುಣಗಳೇ ಉಪಾಸ್ಯಗಳಾಗಿವೆ. ಛಾಂದೋಗ್ಯದಲ್ಲೂ ವಾಜಸ ನೇಯದಲ್ಲೂ ಹೇಳಿರುವ ಪ್ರಾಣವಿದ್ಯೆಯಲ್ಲಿ "ಈ ದೇವತೆಗಳು ತಮ್ಮತಮ್ಮಲ್ಲಿಯೇ

ಶ್ರೇಯಸ್ಸಿಗಾಗಿ ಸ್ಪರ್ಧೆಮಾಡಿದರು" ಎಂದು ಆರಂಭಿಸಿ ವಾಗಾದಿಗಳಲ್ಲಿ ಒಂದೊಂದು ತೊಲಗಿದರೂ ಪ್ರಾಣಗಳ ಇಂದ್ರಿಯಗಳ ಮತ್ತು ಶರೀರದ ಸ್ಥಿತಿ ಹೇಗಾಗುವುದೆಂದು ಅವರದರ ಕಾರ್ಯವನ್ನು ಸಮಗ್ರವಾಗಿ ತಿಳಿಸಿ, ಪ್ರಾಣವೇ ತೊಲಗಿದಮೇಲೆ ವಾಗಾಗಳೆಲ್ಲವೂ ನಿರ್ಗತಿಕವಾಗಿ ಯಾವ ಕಾರ್ಯವನ್ನೂ ಮಾಡಲಾರವೆಂದು ಹೇಳಿ ಎಲ್ಲವೂ ಪ್ರಾಣಕ್ಕೆ ಅಧೀನವಾಗಿರುವುದರಿಂದ ಪ್ರಾಣವೇ ಜ್ಯೇಷ್ಠವೆಂದು ತಿಳಿಸಲಾಗಿದೆ. ಹೀಗೆಯೇ ವಾಗಾದಿಕಾರ್ಯಗಳೆಲ್ಲವೂ ಪ್ರಾಣಕ್ಕೆ ಅಧೀನವಾಗಿವೆ ಎಂದು ಅಲ್ಲಿ ವಾಗಾದಿಗಳಿಗೂ ಪ್ರಾಣಕ್ಕೂ ನಡೆಯುವ ಸಂಭಾಷಣೆಯಿಂದ ತಿಳಿದುಬರುತ್ತದೆ. ಕೌಷೀತಕದ ಪ್ರಾಣವಿದ್ಯೆಯಲ್ಲಿ ಪ್ರಾಣವೇ ಜ್ಯೇಷ್ಠ ಮತ್ತು ಶ್ರೇಷ್ಠವೆಂದು ತಿಳಿಸಲಿಕ್ಕಾಗಿ ವಾಗಾದಿಗಳಲ್ಲಿ ವಸಿಷ್ಠತ್ವಾದಿಗುಣಗಳನ್ನು ಪ್ರತಿಪಾದಿಸಲಾಗಿದೆ. ಇಂದ್ರಿಯಗಳು ಒಮ್ಮೆ ಪರಬ್ರಹ್ಮನಲ್ಲಿ ಹೋಗಿ "ನಮ್ಮಲ್ಲಿ ಯಾರು ಶ್ರೇಷ್ಠರು ಎಂದು ಕೇಳಿದವು" ಎಂದಾರಂಭಿಸಿ "ವಾಗಾದಿಇಂದ್ರಿಯಗಳೂ, ಅವುಗಳ ಗುಣಗಳೂ ಮತ್ತು ದೇಹವೂ ಪ್ರಾಣಕ್ಕೆ ಅಧೀನವಾಗಿವೆ" ಎಂದು ಅಲ್ಲಿ ಉತ್ತರವನ್ನು ಹೇಳಿದ್ದರಿಂದ ಪ್ರಾಣವೇ ಜ್ಯೇಷ್ಠವೆಂದು ತಿಳಿದುಬರುತ್ತದೆ. ಆದರೆ ಅಲ್ಲಿ ವಾಗಾದೀಂದ್ರಿಯಗಳು ವಸಿಷ್ಟತ್ವ ಮೊದಲಾದ ತಮ್ಮ ಗುಣಗಳನ್ನು ಪ್ರಾಣಕ್ಕೆ ವಶಪಡಿಸಿವೆ ಎಂದಷ್ಟನ್ನು ಮಾತ್ರ ಅನುವಾದಮಾಡಿಲ್ಲ. ಇಷ್ಟರಿಂದಲೇ ಉಪಾಸನೆಗಳಿಗೆ ಸ್ವರೂಪಭೇದ ಬರುವುದಿಲ್ಲ. ವಸಿಷ್ಠತ್ವ ಮೊದಲಾದ ಗುಣಗಳುಳ್ಳ ವಾಗಾದಿ ಇಂದ್ರಿಯಗಳ ಕಾರ್ಯಗಳನ್ನು ಪ್ರಾಣಕ್ಕೆ ಅಧೀನವೆಂದು ಹೇಳಿದ್ದರಿಂದಲೇ ಪ್ರಾಣವು ವಸಿಷ್ಠತ್ವ ಮೊದಲಾದ ಗುಣಗಳಿಗೂ ಹೇತುವೆಂಬುದು ಸಿದ್ಧಿಸುತ್ತದೆ. ಇದರಿಂದಲೇ ಪ್ರಾಣಕ್ಕೆ ವಸಿಷ್ಠತ್ವ ಮೊದಲಾದ ಗುಣಗಳ ಸಂಬಂಧವೂ ಏರ್ಪಡುತ್ತದೆ. ಹೀಗೆ ಪ್ರಾಣವು ಜ್ಯೇಷ್ಠವೆಂದು ಅಂಗೀಕೃತವಾಗುವುದರಿಂದ ವಿದ್ಯೆಯಲ್ಲಿ ಭೇದವಿಲ್ಲ.

"ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾ ವಿಶಾಂತಕಃ", "ಏಷ ವಿಷ್ಣುಸ್ಸ ಪ್ರಾಣಃ ಸ ಕಾಲೋಽಗ್ನಿಸ್ಸ ಚಂದ್ರಮಾಃ", "ತತ್ಪ್ರಾಣೇಷ್ವಂತರ್ಮನಸೋ ಲಿಂಗಮಾಹುಃ", "ಪ್ರಾಣೋ ಬ್ರಹ್ಮ ಪ್ರಾಣ ಏವ ಪ್ರಜ್ಞಾತ್ಮ" ಇತ್ಯಾದಿಶ್ರುತಿಷು "ಅಸಾವಾದಿತ್ಯೋ ಬ್ರಹ್ಮ" ಇತಿವತ್ ಶಿವಾಧಿಷ್ಠಾನತ್ವೇನ ಶಿವಾತ್ಮಕತ್ವೇನ ಪ್ರಾಣೋಪಾಸನೋಪನ್ಯಾಸಾತ್ ಪ್ರಾಣಾತ್ಮಕತ್ವೇನ ತದುಪಾಸನಾ ವಿಧೀಯತಾಂ. ತಥಾಪಿ ಪ್ರಾಣಾತ್ಮಕತ್ವೇನ ವ್ಯಪದೇಶಸ್ಯ ಸರ್ವದೇವತಾಪ್ರಧಾನಸ್ಯ ಶಿವಸ್ಯ ಪರಬ್ರಹ್ಮಣಃ ಗುಣಾಯೋಗೇ ತದುಪಾಸನಾಯೋಗಾತ್ ಕಿಮನನ್ಯಸಾಧಾರಣಗುಣಾಸ್ಸಂತೀತ್ಯಾಶಂಕಾಯಾಂ ಅಧಿಕರಣಾಂತರೇಣ ತಸ್ಯಾನಂತಕಲ್ಯಾಣಗುಣಗಣಪ್ರಪಂಚಂ ದರ್ಶಯತಿ. ಆನಂದಾಧಿಕರಣಂ ‖ ೪ ‖ ಆನಂದಾದಯಃ ಪ್ರಧಾನಸ್ಯ ‖ ೧೧ ‖ ಪೂರ್ವೇ ಪ್ರಾಣವಿದ್ಯಾಂಗವಿಷಯಂ ಅನ್ಯದಪಿ ನಿರೂಪಣಂ ಅನಂತರಮೇವ ಕರಿಷ್ಯತೇ. ಯಥಾ ಪ್ರಾಣಸ್ಯ

ವಸಿಷ್ಠತ್ವಾದ್ಯನುಸಂಧಾನೇನ ವಿನಾ ಜ್ಯೈಷ್ಠ್ಯಶ್ರೈಷ್ಠ್ಯಾನುಸಂಧಾನಾನುಪಪತ್ತೇರನುಕ್ತಾನಾಮಪಿ ವಸಿಷ್ಠತ್ವಾದೀನಾಂ ಕೌಷೀತಕೇ ಪ್ರಾಣವಿದ್ಯಾಯಾಂ ಪ್ರಾಪ್ತಿಃ, ತಥಾ ಪರಶಿವಬ್ರಹ್ಮಸ್ವರೂಪಾನುಸಂಧಾನಂ ಯೈರ್ಗುಣೈರ್ವಿನಾ ನೋಪಪದ್ಯತೇ ತೇ ಬ್ರಹ್ಮವಿದ್ಯಾಸು ಸರ್ವಾಸ್ವಪ್ಯನುಸಂಧೇಯಾ ಇತ್ಯಯಮರ್ಥಃ ಪ್ರತಿಪಾದ್ಯತೇ. "ಆನಂದೋ ಬ್ರಹ್ಮೇತಿ ವ್ಯಜಾನಾತ್", "ಋತಂ ಸತ್ಯಂ ಪರಂ ಬ್ರಹ್ಮ" ಇತ್ಯಾದ್ಯೇಕೈಕಶಾಖಾಯಾಂ ಶ್ರೂಯಮಾಣಾ ಗುಣಾಃ ಆನಂದಾದಯಃ ಸತ್ಯತ್ವಕೃಷ್ಣಪಿಂಗಳತ್ವನಿತ್ಯಮುಕ್ತತ್ವಶುದ್ಧತ್ವಬುದ್ಧತ್ವಾದಯಃ ಸರ್ವಾಸು ಶಾಖಾಸು ಮೂರ್ತಾಮೂರ್ತಾತ್ಮಕೈಕಬ್ರಹ್ಮವಿದ್ಯಾಯಾಂ ಉಪಸಂಹರ್ತವ್ಯಾಃ. ಕುತಃ? ಪ್ರಧಾನಸ್ಯ "ಯೋ ದೇವಾನಾಂ ಪ್ರಥಮಂ ಪುರಸ್ತಾದ್ವಿಶ್ವಾಧಿಕೋ ರುದ್ರೋ ಮಹರ್ಷಿಃ" ಇತ್ಯಾದಿಶ್ರುತಿಸಿದ್ಧಸರ್ವದೇವತಾಪ್ರಧಾನಸ್ಯ ಶಿವಸ್ಯ ಪರಬ್ರಹ್ಮಣಃ ಸರ್ವಾಸ್ವಪಿ ಶಾಖಾಸು ಮೂರ್ತಾಮೂರ್ತಾತ್ಮಕತ್ವೇನ ಭೇದವ್ಯಪದೇಶೇಽಪಿ ತದ್ವದಭೇದೋಪದೇಶಾತ್ ಗುಣ್ಯೈಕತ್ವಂ ನ ವಿರುಧ್ಯತೇ. "ದ್ವೇ ವಾವ ಬ್ರಹ್ಮಣೋ ರೂಪೇ" ಇತ್ಯಾದಿಶ್ರುತಿಷು ಮೂರ್ತಾಮೂರ್ತಗತಧರ್ಮಾಣಾಮೇವ ಅಸ್ಯೈವ ಶಿವಸ್ಯ ನಿರ್ದಿಷ್ಟತ್ವಾತ್ ಸರ್ವಶಾಖಾಗತಾನಾಂ ಮೂರ್ತಾಮೂರ್ತಬ್ರಹ್ಮವಿಷಯಾಣಾಂ ಗುಣಾನಾಂ ತಸ್ಮಿನ್ನೇಕಸ್ಮಿನ್ನೇವ ಸಮನ್ವಯೋ ದ್ರಷ್ಟವ್ಯ ಇತಿ ಸೂತ್ರಸೂಚಿತಸೂಕ್ತ್ಯರ್ಥಃ. ಅಭೇದಾದಿತಿ ಶೇಷಃ. "ಆನಂದೋ ಹ್ಯಜರೋ ಹ್ಯಮೃತ್ಯುಃ", "ಆನಂದಮಯೋ ಹ್ಯಾನಂದಭುಕ್" ಇತ್ಯಾದಿಶ್ರುತಿಷು ಆನಂದಾದಯೋ ಗುಣಾಃ ಪರವಿದ್ಯಾಸು ಪ್ರಧಾನಸ್ಯ ಬ್ರಹ್ಮಣಃ ಶ್ರೂಯಂತೇ. ತಸ್ಮಾದತ್ರ ಬ್ರಹ್ಮಸ್ವರೂಪಗುಣಾನಾಂ ಸರ್ವಾಸು ಪರವಿದ್ಯಾಸೂಪಸಂಹಾರೋಽಸ್ತಿ ನವಾ? ಇತಿ ವಿಚಾರ್ಯತೇ. ಅಪ್ರಕರಣಾಧೀತಾನಾಂ ಉಪಸಂಹಾರೇ ಪ್ರಮಾಣಾಭಾವಾತ್ ಪ್ರಕರಣಶ್ರುತಾನಾಮೇವೋಪಸಂಹಾರಃ ಕರ್ತವ್ಯಃ. ಬ್ರಹ್ಮಣಃ ಶಿವಸ್ಯೈಕಸ್ಯ ಆನಂದಾದ್ಯನೇಕಗುಣವೈಶಿಷ್ಟ್ಯೇ ನಾನಾತ್ವಪ್ರಸಂಗಾತ್, ವಿಶೇಷಣಾನಾಂ ವಿಶೇಷ್ಯಬೋಧಕತ್ವಾತ್ ಅಥವಾ ತತ್ರ ತತ್ರೋಕ್ತಗುಣಮಾತ್ರೇಣ ತದುಪಾಸನಸಂಭವಾತ್ ಇತಿ ಪ್ರಾಪ್ತೇಽಭಿಧೀಯತೇ. ಆನಂದಾದಯಃ ಪ್ರಧಾನಸ್ಯ ಅಭೇದಾತ್ ಪ್ರಧಾನಸ್ಯ ಗುಣಿನೋ ಬ್ರಹ್ಮಣಃ ಸರ್ವೇಷೂಪಾಸನೇಷು ಅಭೇದಾತ್ ಗುಣಪೃಥಗ್ಭಾವಾತ್ ಗುಣಾನಾಂ ಸರ್ವತ್ರಾನಂದಯಸ್ತದ್ಗುಣಾ ಉಪಸಂಹರ್ತವ್ಯಾಃ.

"ರುದ್ರನೇ ನೀನು ಪ್ರಾಣಗಳನ್ನು ಹಿಡಿದಿರುವೆ, ನೀನು ನನ್ನಲ್ಲಿ ಪ್ರವೇಶಿಸಿ

ಮಲಕರ್ಮಗಳನ್ನು ನಾಶಗೊಳಿಸು." "ಅವನೇ ವಿಷ್ಣು, ಪ್ರಾಣ, ಕಾಲ, ಅಗ್ನಿ, ಚಂದ್ರ ಎಲ್ಲವೂ ಆಗಿದ್ದಾನೆ." "ಪ್ರಾಣಗಳಲ್ಲಿ ಸೇರಿರುವ ಮನಸ್ಸನ್ನೇ ಲಿಂಗವೆಂದು ಹೇಳು ತ್ತಾರೆ." "ಪ್ರಾಣವೇ ಬ್ರಹ್ಮ ಪ್ರಾಣವೇ ಪ್ರಜ್ಞಾತ್ಮ" ಎಂಬ ಶ್ರುತಿಗಳಲ್ಲಿ "ಈ ಆದಿ ತ್ಯನೇ ಬ್ರಹ್ಮ"ಎಂಬಂತೆ ಶಿವನನ್ನಾಶ್ರಯಿಸಿರುವುದರಿಂದಲೂ ಶಿವಾತ್ಮಕವಾದ್ದರಿಂದಲೂ ಪ್ರಾಣದ ಉಪಾಸನವನ್ನು ಹೇಳಿದೆ. ಹೀಗೆ ಪ್ರಾಣರೂಪದಿಂದ ಶಿವನ ಉಪಾಸನ ವನ್ನು ಅಲ್ಲಿ ವಿಧಿಸಲಾಗಿದೆ. ಆದರೂ ಸರ್ವದೇವಮಯನಾದ ಪರಶಿವಬ್ರಹ್ಮವನ್ನು ಪ್ರಾಣವೆಂದು ಕರೆಯಲಿಕ್ಕೆ ಅವನಲ್ಲಿ ಪ್ರಾಣದ ಗುಣಗಳ ಸಂಬಂಧವೇ ಇಲ್ಲದ್ದರಿಂದ ಹಾಗೆ ಉಪಾಸನವು ಹೊಂದುವುದಿಲ್ಲ. ಆದ್ದರಿಂದ ಅವನಲ್ಲಿ ಅಂತಹ ಅಸಾಧಾರಣಗುಣ ಗಳಿವೆಯೇ? ಎಂದಾಶಂಕಿಸಿ ಇಲ್ಲಿ ಅವನ್ನು ವಿಸ್ತಾರವಾಗಿ ತಿಳಿಸುತ್ತಾನೆ. ಹಿಂದೆ ಹೇಳಿದ ಪ್ರಾಣವಿದ್ಯೆಗೆ ಸಂಬಂಧಿಸಿದ ಬೇರೊಂದು ವಿಷಯವನ್ನು ಇಲ್ಲಿ ತಿಳಿಸಲಾಗಿದೆ. ಪ್ರಾಣಕ್ಕೆ ವಸಿಷ್ಠತ್ವಾದಿಗುಣಗಳನ್ನು ಹೇಳದೆಯೇ ಜ್ಯೇಷ್ಠತ್ವ ಶ್ರೇಷ್ಠತ್ವ ಎಂಬ ಗುಣಗಳನ್ನು ಹೇಳಿದ್ದು ಅಯುಕ್ತವಾಗುವುದರಿಂದ ಹೇಳದೇಇರುವ ವಸಿಷ್ಠತ್ವ ಮೊದಲಾದ ಗುಣಗಳನ್ನು ಕೌಷೀತಕದ ಪ್ರಾಣವಿದ್ಯೆಯಲ್ಲಿ ಹೇಗೆ ಹೊಂದಿಸಲಾಗು ವುದೋ ಹಾಗೆ ಯಾವ ಗುಣಗಳಿಲ್ಲದಿದ್ದರೆ ಪರಶಿವಬ್ರಹ್ಮದ ಸ್ವರೂಪವನ್ನು ಅನು ಸಂಧಾನಮಾಡಲಾಗುವುದಿಲ್ಲವೋ ಅಂತಹ ಗುಣಗಳನ್ನು ಬ್ರಹ್ಮವಿದ್ಯೆಗಳೆಲ್ಲದರಲ್ಲೂ ಸೇರಿಸಿಕೊಳ್ಳಲೇಬೇಕು. ಇದೇ ಇಲ್ಲಿ ತಿಳಿಯಬೇಕಾದ ಅಂಶ. "ಆನಂದವೇ ಬ್ರಹ್ಮವೆಂದು ತಿಳಿದನು" "ಪರಬ್ರಹ್ಮವು ಋತವು ಸತ್ಯವೂ ಆಗಿದೆ" ಹೀಗೆ ಒಂದೊಂದು ಶಾಖೆಯಲ್ಲೂ ಪರಶಿವನ ಬಗ್ಗೆ ಹೇಳಿರುವ ಆನಂದ, ಸತ್ಯ, ಕೃಷ್ಣಪಿಂಗಳ, ನಿತ್ಯಮುಕ್ತ, ಶುದ್ಧ, ಬುದ್ಧ, ಮೊದಲಾದ ಗುಣಗಳನ್ನು ಎಲ್ಲಾ ಶಾಖೆಗಳಲ್ಲೂ ಮೂರ್ತಾಮೂರ್ತರೂಪವಾದ ಬ್ರಹ್ಮವಿದ್ಯೆಯಲ್ಲಿ ಸೇರಿಸಿಕೊಳ್ಳಬೇಕು. "ರುದ್ರನು ದೇವತೆಗಳೆಲ್ಲರಿಗೂ ಮೊದಲಿನವನು ಮತ್ತು ವಿಶ್ವಕ್ಕೂ ಅಧಿಕನು." ಈ ಬಗೆಯ ಶ್ರುತಿ ಗಳಲ್ಲಿ ದೇವತೆಗಳೆಲ್ಲರಿಗೂ ಪ್ರಧಾನನೆನಿಸಿದ ಪರಶಿವಬ್ರಹ್ಮಕ್ಕೆ ಎಲ್ಲಾ ಶಾಖೆಗಳಲ್ಲೂ ಮೂರ್ತ ಅಮೂರ್ತವೆಂದು ಎರಡುಬಗೆಗಳನ್ನು ಹೇಳಿದ್ದರೂ ಹಾಗೆಯೇ ಅಭೇದ ವನ್ನೂ ಹೇಳಿರುವುದರಿಂದ ಗುಣಗಳ ಏಕರೂಪತೆಯಲ್ಲಿ ಏನೂ ವಿರೋಧವಿಲ್ಲ. "ಬ್ರಹ್ಮಕ್ಕೆ ಮೂರ್ತ ಅಮೂರ್ತವೆಂದು ಎರಡು ರೂಪಗಳಿವೆ" ಎಂಬಲ್ಲಿ ಒಬ್ಬ ಶಿವನ ಲ್ಲಿಯೇ ಮೂರ್ತ ಅಮೂರ್ತ ಧರ್ಮಗಳನ್ನು ಹೇಳಿದ್ದರಿಂದ ಎಲ್ಲಾ ಶಾಖೆಗಳಲ್ಲಿ ಹೇಳಿ ರುವ ಮೂರ್ತಾಮೂರ್ತಬ್ರಹ್ಮದ ಗುಣಗಳನ್ನು ಒಬ್ಬ ಶಿವನಲ್ಲಿಯೇ ಸಮನ್ವಯ ಮಾಡಿಕೊಳ್ಳಬೇಕೆಂದು ಸೂತ್ರವು ತಿಳಿಸುತ್ತದೆ. ಆನಂದಾದಿಗುಣಗಳು ಸರ್ವಪ್ರಧಾನ ನಾದ ಪರಶಿವನಿಗೆ ಮೂರ್ತ ಮತ್ತು ಅಮೂರ್ತಸ್ಥಿತಿಗಳೆರಡರಲ್ಲೂ ಸಮಾನವಾಗಿವೆ ಎಂದು ಸೂತ್ರದ ಅರ್ಥ. "ಆನಂದವೇ ಬ್ರಹ್ಮ" "ಆನಂದಮಯನೇ ಆನಂದವನ್ನು ಭೋಗಿಸುತ್ತಾನೆ" "ಆನಂದನು ಜರಾಮರಣಗಳಿಲ್ಲದವನು" ಈ ಶ್ರುತಿಗಳು ಬ್ರಹ್ಮದಲ್ಲಿ ಆನಂದಾದಿಗುಣಗಳನ್ನು ತಿಳಿಸಿವೆ. ಆದ್ದರಿಂದ ಬ್ರಹ್ಮದ ಸ್ವರೂಪಗುಣಗಳು ಬ್ರಹ್ಮ

ವಿದ್ಯೆಗಳೆಲ್ಲದರಲ್ಲೂ ಸೇರಿರುತ್ತವೆಯೇ ಇಲ್ಲವೇ ಎಂಬುದನ್ನು ಇಲ್ಲಿ ವಿಚಾರಮಾಡಲಾಗಿದೆ. ಆಯಾ ಪ್ರಕರಣದಲ್ಲಿ ಹೇಳದಿರುವ ಗುಣಗಳನ್ನು ಉಪಾಸಂಹಾರದಲ್ಲಿ ಸೇರಿಸಲಿಕ್ಕೆ ಪ್ರಮಾಣವಿಲ್ಲದ್ದರಿಂದ ಆಯಾ ಪ್ರಕರಣದಲ್ಲಿ ಹೇಳಿದ ಗುಣಗಳನ್ನು ಮಾತ್ರವೇ ಉಪಸಂಹಾರದಲ್ಲಿ ಸೇರಿಸಬೇಕು. ಪರಶಿವಬ್ರಹ್ಮ ಒಂದರಲ್ಲಿಯೇ ಆನಂದ ಮೊದಲಾದ ಅನೇಕ ಗುಣಗಳನ್ನು ಒಪ್ಪಿದ್ದರೂ ವಿಶೇಷಣಭೇದದಿಂದ ವಿಶೇಷ್ಯವೂ ಬೇರೆಯಾಗಬೇಕಾಗುವುದರಿಂದ ಬ್ರಹ್ಮವೇ ಬೇರೆಬೇರೆಯಾಗಬೇಕಾಗುತ್ತದೆ. ಆದ್ದರಿಂದ ಅಲ್ಲಲ್ಲಿ ಹೇಳಿರುವ ಗುಣಗಳನ್ನು ಮಾತ್ರವೇ ಅಲ್ಲಿ ಉಪಸಂಹಾರ ಮಾಡಬೇಕೇ ಹೊರತು ಎಲ್ಲವನ್ನೂ ಎಲ್ಲಾಕಡೆಯೂ ಉಪಸಂಹಾರಮಾಡಬಾರದು. ಹೀಗೆ ಆಕ್ಷೇಪ ಬಂದರೆ ಇದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಸರ್ವಪ್ರಧಾನನಾದ ಪರಮಾತ್ಮನಿಗೆ ಎಲ್ಲಾಬಗೆಯ ಉಪಾಸನಗಳಲ್ಲಿಯೂ ಆನಂದಾದಿಗುಣಗಳು ಬೇರ್ಪಡಲಿಕ್ಕಾಗದಂತೆ ಅಭಿನ್ನವಾಗಿರುವುದರಿಂದ ಅವನ ರೂಪದಿಂದ ಅವನಲ್ಲಿಯೇ ಅವು ಉಪಸಂಹಾರವಾಗುತ್ತವೆ.

**ಏವಂ ತರ್ಹಿ ಗುಣ್ಯಪೃಥಗ್ಭಾವಾದೇವಾನಂದಾದಿವತ್ ಪ್ರಿಯಶಿರಸ್ತ್ವಾದಯೋಽಪಿ " ತಸ್ಯ ಪ್ರಿಯಮೇವ ಶಿರಃ " ಇತ್ಯಾದೌ ಬ್ರಹ್ಮಗುಣತ್ವೇನ ಶ್ರುತಾಸ್ಸರ್ವತ್ರ ಪ್ರಸಜ್ಯೇರನ್ ಇತ್ಯಾಹ. ಪ್ರಿಯಶಿರಸ್ತ್ವಾದ್ಯಪ್ರಾಪ್ತಿರುಪಚಯಾಪಚಯೌ ಹಿ ಭೇದೇ||೧೨|| ಪರಶಿವಬ್ರಹ್ಮಸ್ವರೂಪಗುಣಾನಾಂ ಪ್ರಾಪ್ತೌ ಉಚ್ಯಮಾನಾಯಾಂ ಪ್ರಿಯಶಿರಸ್ತ್ವಾದೀನಾಮಪ್ರಾಪ್ತಿಃ, ತೇಷಾಂ ಅಬ್ರಹ್ಮಗುಣತ್ವಾತ್. ಬ್ರಹ್ಮಣಃ ಪುರುಷವಿಧತ್ವನಿರೂಪಣಮಾತ್ರಾಂತರ್ಗತತ್ವಾತ್ ಪ್ರಿಯಶಿರಸ್ತ್ವಾದೀನಾಂ ಅನ್ಯಥಾ ಶಿರಃಪಕ್ಷಪುಚ್ಛಾದ್ಯವಯವಭೇದೇ ಸತಿ ಬ್ರಹ್ಮಣೋಽಪ್ಯುಪಚಯಾಪಚಯೌ ಪ್ರಸಜ್ಯೇಯಾತಾಂ. ತಥಾಚ ಸತಿ " ಸತ್ಯಂ ಜ್ಞಾನಮನಂತಂ ಬ್ರಹ್ಮ " ಇತ್ಯುಪಕ್ರಮವಾಕ್ಯಂ ವಿರುಧ್ಯೇತ. " ತಸ್ಯ ಪ್ರಿಯಮೇವ ಶಿರಃ, ಮೋದೋ ದಕ್ಷಿಣಃ ಪಕ್ಷಃ. ಪ್ರಮೋದ ಉತ್ತರಃ ಪಕ್ಷಃ, ಆನಂದ ಆತ್ಮಾ, ಬ್ರಹ್ಮಪುಚ್ಛಂ ಪ್ರತಿಷ್ಠಾ " ಇತಿ ತೈತ್ತಿರೀಯಶಾಖಾಯಾಂ ಪ್ರಿಯಶಿರಸ್ತ್ವಾದಿಗುಣಾನಾಂ ಅಸಂದಿಗ್ಧತಯಾ ವ್ಯಪದೇಶಾತ್ ಗುಣಾನಾಮುಪಚಯೋ ಬಾಹುಲ್ಯಂ, ಗುಣಾನಾಮಪಚಯೋ ಹ್ಯಲ್ಪತ್ವಂ. ಏವಂವಿಧೌ ಗುಣೋಪಚಯಾಪಚಯೌ ಹಿ ಭೇದೇ ಹ್ಯುಪಾಸ್ಯೇ ಸಗುಣೇ ಬ್ರಹ್ಮಣ್ಯೇವ ಸಂಭವತಃ. ನಿರ್ಗುಣೇ ನಿರ್ವಿಶೇಷೇ ಬ್ರಹ್ಮಣಿ ಗುಣಬಾಹುಲ್ಯಸ್ಯ ಸುತರಾಮಸಂಭವಾತ್ ಸಗುಣಬ್ರಹ್ಮಣ್ಯೇವೋಪಾಸ್ಯೋಪಾಸಕತ್ವಸ್ಯ ಪ್ರತಿಪಾದ್ಯಪ್ರತಿಪಾದಕತ್ವಸ್ಯ ಚ ಸಂಭವಾತ್ ಸವಿಶೇಷಬ್ರಹ್ಮವಾದೋ ಯುಕ್ತಃ.**

ಹಾಗಾದರೆ ಬ್ರಹ್ಮಕ್ಕೆ ಪ್ರಿಯವೇ ಶಿರಸ್ಸು ಎಂಬಲ್ಲಿ ಬ್ರಹ್ಮಗುಣವೆಂದು ಪ್ರಸಿದ್ಧ

ವಾದ ಪ್ರಿಯಶಿರಸ್ತ್ವ ಮೊದಲಾದ ಗುಣಗಳನ್ನು ಎಲ್ಲಾ ಕಡೆಯೂ ಸೇರಿಸಬೇಕಾಗುವುದು ಎಂದಾಕ್ಷೇಪಿಸಿ ಸಮಾಧಾನವನ್ನು ಹೇಳುತ್ತಾನೆ. ಪರಶಿವಬ್ರಹ್ಮದ ಸ್ವರೂಪ ಗುಣಗಳನ್ನು ಹೇಳುವಾಗ ಅವನಿಗೆ ಪ್ರಿಯಶಿರಸ್ತ್ವ ಎಂದು ಮುಂತಾಗಿ ಹೇಳಿರುವುದೆಲ್ಲವೂ ಬ್ರಹ್ಮದ ಗುಣಗಳಲ್ಲದ್ದರಿಂದ ಬ್ರಹ್ಮಕ್ಕೆ ಸಂಬಂಧಿಸಿಲ್ಲ. ಬ್ರಹ್ಮವು ಇಂತಹದು ಎಂದು ಹೇಳಲಿಕ್ಕಾಗಿಯೇ "ಪ್ರಿಯವೇ ಶಿರಸ್ಸು" ಎಂದು ಮುಂತಾಗಿ ತಿಳಿಸಲಾಗಿದೆ. ಇಲ್ಲವಾದರೆ ಬ್ರಹ್ಮಕ್ಕೆ ಶಿರಸ್ಸು ವಕ್ಷ ಪುಚ್ಛ ಮೊದಲಾದ ಅವಯವಗಳ ಭೇದವಿದ್ದಲ್ಲಿ ಆ ಬ್ರಹ್ಮಕ್ಕೂ ವೃದ್ಧಿ ಕ್ಷಯಗಳು ಸಂಭವಿಸಬೇಕಾದೀತು. ಹಾಗಾದರೆ "ಬ್ರಹ್ಮವು ಸತ್ಯಜ್ಞಾನರೂಪವೂ ಅನಂತವೂ ಆದುದು" ಎಂಬ ಆರಂಭದ ವಾಕ್ಯವೇ ವಿರುದ್ಧವಾಗುವುದು. "ಅವನಿಗೆ ಪ್ರಿಯವೇ ಶಿರಸ್ಸು, ಮೋದವೇ ಬಲರೆಕ್ಕೆ, ಪ್ರಮೋದವೇ ಎಡರೆಕ್ಕೆ, ಆನಂದವೇ ಆತ್ಮ, ಬ್ರಹ್ಮವೇ ಆಧಾರವಾದ ಪುಚ್ಛ" ಎಂದು ತೈತ್ತಿರೀಯದಲ್ಲಿ ಪ್ರಿಯಶಿರಸ್ತ್ವ ಮೊದಲಾದ ಗುಣಗಳನ್ನು ಸ್ಪಷ್ಟವಾಗಿ ಹೇಳಲಾಗಿದೆ. ಇದರಿಂದ ಬ್ರಹ್ಮದಲ್ಲಿ ಗುಣಗಳು ಹೆಚ್ಚುವುದಾಗಿಯೂ ಕಡಮೆಯಾಗುವುದಾಗಿಯೂ ಕಂಡು ಬರುತ್ತದೆ. ಹೀಗೆ ಗುಣಭೇದಗಳು ಸಗುಣಬ್ರಹ್ಮದಲ್ಲಿ ಮಾತ್ರವೇ ಸಂಭವಿಸುತ್ತವೆ. ನಿರ್ಗುಣನಿರ್ವಿಶೇಷಬ್ರಹ್ಮದಲ್ಲಂತೂ ಗುಣಬಾಹುಲ್ಯವು ಎಂದಿಗೂ ಸಂಭವಿಸುವಂತೆಯೇ ಇಲ್ಲ. ಇದೂ‌ಅಲ್ಲದೆ ಸಗುಣಬ್ರಹ್ಮದಲ್ಲಿಯೇ ಉಪಾಸ್ಯೋಪಾಸಕ ಭಾವವೂ ಪ್ರತಿಪಾದ್ಯಪ್ರತಿಪಾದಕಭಾವವೂ ಸಂಭವಿಸುತ್ತವೆ. ಈ ದೋಷಗಳನ್ನು ಪರಿಹರಿಸಲಿಕ್ಕಾಗಿಯೇ ಬ್ರಹ್ಮವನ್ನು ಸವಿಶೇಷವೆಂದು ಒಪ್ಪುವುದೇ ಯುಕ್ತವಾಗಿದೆ.

ನನ್ವೇವಮೇವ ಬ್ರಹ್ಮಸಂಬಂಧಿನಾಂ ಐಶ್ವರ್ಯಗಾಂಭೀರ್ಯೌದಾರ್ಯಕಾರುಣ್ಯಾದೀನಾಂ ಗುಣನಾಮನಂತಾನಾಂ ಗುಣ್ಯಪೃಥಕ್ಸ್ಥಿತತ್ವಮಾತ್ರೇಣ ತತ್ರ ಶ್ರುತಿನಾಮುಪ್ಯುಪಸಂಹಾರೇ ಸರ್ವೇ ಸರ್ವತ್ರ ಪ್ರಸಜ್ಯೇರನ್. ಆನಂತ್ಯಾದುಪಸಂಹಾರಾಶಕ್ತಿಶ್ಚ ಸ್ಯಾತ್. ತತ್ರಾಹ. ಇತರೇತ್ವರ್ಥಸಾಮಾನ್ಯಾತ್ ||೧೩|| ತುಶಬ್ದಶ್ಚೋದ್ಯಂ ವ್ಯಾವರ್ತಯತಿ. ಇತರೇ ತು ಆನಂದಾದಯಃ ಅರ್ಥಸಾಮಾನ್ಯಾತ್ ಸರ್ವತ್ರ ಅನುವರ್ತಂತೇ. ಯೇ ತ್ವರ್ಥಸಮಾನಾಃ ಅರ್ಥಸ್ವರೂಪನಿರೂಪಣಧರ್ಮತ್ವೇನ ಅರ್ಥಪ್ರತೀತ್ಯನುಬಂಧಿನಃ ತೇಽರ್ಥಸ್ವರೂಪವತ್ ಸರ್ವತ್ರಾನುವರ್ತಂತೇ. ತೇ ಚ ಗುಣಾಸ್ಸತ್ಯಜ್ಞಾನಾನಂದಾಮಲತ್ವಾನಂತತ್ವಾನಿ. "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಇತ್ಯಾದಿನಾ ಜಗತ್ಕಾರಣತಯೋಪಲಕ್ಷಿತಂ ಬ್ರಹ್ಮ "ಸತ್ಯಂ ಜ್ಞಾನಂ", "ಆನಂದೋ ಬ್ರಹ್ಮ" ಇತ್ಯಾನಂದಾದಭಿರ್ಹಿ ಸ್ವರೂಪತೋ ನಿರೂಪ್ಯತೇ. ಅತಃ ಉಪಾಸ್ಯಬ್ರಹ್ಮಣಶ್ಚೈವಸ್ಯ ಸ್ವರೂಪಾವಗಮಾಯ ಸರ್ವಾಸು ವಿದ್ಯಾಸು ಆನಂದಾದಯೋಽನುವರ್ತಂತೇ. ಯೇ ತು ನಿರೂಪಿತಸ್ವರೂಪಸ್ಯ ಬ್ರಹ್ಮಣಃ ಕರುಣಾದಯೋ ಗುಣಾಃ ಪ್ರತಿಪನ್ನಾಃ ತೇಷಾಂ ಗುಣ್ಯಪೃಥ

ಕ್ಸ್ವಥತತ್ವೇಽಪಿ ಪ್ರತೀತ್ಯನುಪಲಬ್ಧಿತ್ವಾಭಾವಾತ್ ಯೇ ಯತ್ರ ಶ್ರುತಾಃ ತೇ ತತ್ರೈವೋಪಸಂಹರ್ತವ್ಯಾ ಇತಿ ನಿರವದ್ಯಂ.

ಹೀಗೆ ಸಗುಣಬ್ರಹ್ಮಕ್ಕೆ ಸಂಬಂಧಿಸಿದ ಗಾಂಭೀರ್ಯ, ಔದಾರ್ಯ, ಕಾರುಣ್ಯ ಮೊದಲಾದ ಅನಂತಗುಣಗಳು ಆ ಬ್ರಹ್ಮದಿಂದ ಬೇರ್ಪಡದೆ ಇರುವುದರಿಂದ ಅವನ್ನೂ ಎಲ್ಲಾ ವಿದ್ಯೆಗಳಲ್ಲೂ ಉಪಸಂಹಾರಮಾಡುವುದಾದರೆ ಬ್ರಹ್ಮದ ಗುಣಗಳು ಅನಂತವಾದ್ದರಿಂದ ಇವೆಲ್ಲವನ್ನೂ ಉಪಾಸನಮಾಡಲು ಸಾಧಕನಿಗೆ ಹೇಗೆ ಸಾಧ್ಯವಾದೀತು? ಎಂದಾಶಂಕಿಸಿ ಸಮಾಧಾನಮಾಡುತ್ತಾನೆ. ಆನಂದಾದಿಗುಣಗಳಾದರೋ ಬ್ರಹ್ಮದ ಸ್ವರೂಪವನ್ನೇ ಅನುಸರಿಸುವುದರಿಂದ ಎಲ್ಲಾ ಕಡೆಗಳಲ್ಲೂ ಅನ್ವಯಿಸುತ್ತವೆ. ಸತ್ಯ, ಜ್ಞಾನ, ಆನಂದ, ಅಮಲ, ಅನಂತ ಇವೇ ಬ್ರಹ್ಮವನ್ನನುಸರಿಸಿ ಬರುವ ಗುಣಗಳು. "ಯಾವನಿಂದ ಈ ಪ್ರಾಣಿಗಳು ಹುಟ್ಟಿವೆಯೋ" ಎಂಬಲ್ಲಿ ಜಗತ್ಕಾರಣವೆನಿಸಿದ ಬ್ರಹ್ಮಕ್ಕೆ "ಸತ್ಯವೂ ಜ್ಞಾನವೂ ಅನಂತವೂ ಆದದ್ದು ಬ್ರಹ್ಮ", "ಆನಂದವೇ ಬ್ರಹ್ಮ" ಎಂಬ ಶ್ರುತಿಗಳಲ್ಲಿ ಆನಂದಾದಿಗಳೇ ಸ್ವರೂಪವೆಂದು ತಿಳಿಸಲಾಗಿದೆ. ಆದ್ದರಿಂದ ಉಪಾಸ್ಯನಾದ ಪರಶಿವಬ್ರಹ್ಮದ ಸ್ವರೂಪವನ್ನು ತಿಳಿಸಲಿಕ್ಕಾಗಿ ಎಲ್ಲಾ ವಿದ್ಯೆಗಳಲ್ಲೂ ಆನಂದಾದಿಗಳನ್ನು ಸೇರಿಸಲಾಗಿದೆ. ಹೀಗೆ ಬ್ರಹ್ಮಸ್ವರೂಪವನ್ನು ತಿಳಿಸಿದಮೇಲೆ ಕರುಣಾದಿಗುಣಗಳು ಸಂಭವಿಸುತ್ತವೆ. ಅವು ಗುಣಾಶ್ರಯನಾದ ಪರಶಿವನನ್ನು ಬಿಟ್ಟು ಬೇರೆ ಇರುವುದಿಲ್ಲವಾದರೂ ಅವನ್ನು ಬಿಟ್ಟು ಹಿಂದೆಹೇಳಿದ ಆನಂದಾದಿಗುಣಗಳಿಂದಲೇ ಬ್ರಹ್ಮವನ್ನು ತಿಳಿಯಬೇಕಾಗಿರುವುದರಿಂದ ಅವನ್ನುಮಾತ್ರವೇ ಎಲ್ಲಾ ಉಪಾಸನಗಳಲ್ಲೂ ಸೇರಿಸಿಕೊಳ್ಳಬೇಕು. ಉಳಿದವನ್ನು ಎಲ್ಲಿ ಹೇಳಲಾಗಿದೆಯೋ ಅಲ್ಲಿಮಾತ್ರವೇ ಸೇರಿಸಿಕೊಳ್ಳಬೇಕೆಂಬುದು ನಿರ್ವಿವಾದವಾಗಿದೆ.

ಯದ್ಯುಪಚಯಾಪಚಯಪ್ರಸಂಗಾತ್ ಪ್ರಿಯಶಿರಸ್ತ್ವಾದಯೋ ಬ್ರಹ್ಮಣಶ್ಶಿವಸ್ಯ ಪುರುಷವಿಧತ್ವನಿರೂಪಣಮಾತ್ರಾರ್ಥಾಃ, ನತು ಬ್ರಹ್ಮಗುಣಾಃ. ತರ್ಹ್ಯತಥಾರೂಪಸ್ಯ ಬ್ರಹ್ಮಣಶ್ಶಿವಸ್ಯ ತಥಾತ್ವೇನ ನಿರೂಪಣಂ ಕಿಮರ್ಥಂ ಕ್ರಿಯತೇ? ಅತಥಾಭೂತಸ್ಯ ಹಿ ತಥಾತ್ವನಿರೂಪಣೇ ಕೇನಚಿತ್ಪ್ರಯೋಜನೇನ ಭವಿತವ್ಯಂ. ಯಥಾ "ಆತ್ಮಾನಂ ರಥಿನಂ ವಿದ್ಧಿ" ಇತ್ಯಾದಿನೋಪಾಸಕಸ್ಯ ತದುಪಕರಣಾನಾಂ ಚ ರಥಿರಥಾದಿತ್ವನಿರೂಪಣಂ ಉಪಾಸನೋಪಕರಣಭೂತಶರೀರೇಂದ್ರಿಯಾದಿವಶೀಕರಣಾರ್ಥಂ ಕ್ರಿಯತ ಇತ್ಯುಕ್ತಂ. ನಚೇಹ ತಥಾವಿಧಂ ಕಿಂಚಿತ್ಪ್ರಯೋಜನಂ ದೃಶ್ಯತ ಇತಿ ಬಲಾದ್ಬ್ರಹ್ಮಗುಣತ್ವಂ ಪ್ರಿಯಶಿರಸ್ತ್ವಾದೀನಾಮಭ್ಯುಪೇತಂ. ತತ್ರಾಹ. ಆಧ್ಯಾನಾಯ ಪ್ರಯೋಜನಾಭಾವಾತ್ ॥ ೧೪ ॥ ಪ್ರಯೋನಾಂತರಾಭಾವಾತ್ ಆಧ್ಯಾನಾಯ ಅಯಂ ರೂಪಗುಣೋಪದೇಶಃ ಕ್ರಿಯತೇ. ಆಧ್ಯಾನಮನುಚಿಂತನಂ ಉಪಾಸನಮುಚ್ಯತೇ. "ಧ್ಯಾನನಿರ್ಮಥನಾಭ್ಯಾಸಾತ್ಪಾಶಂ ದಹತಿ ಪಂಡಿತಃ", "ಶ್ರದ್ಧಾಭಕ್ತಿ

ಧ್ಯಾನಯೋಗಾದವೇಹಿ” ಇತ್ಯತ್ರೋಪದಿಷ್ಟಧ್ಯಾನರೂಪವೇದನ
ಸಿದ್ಧಯೇ ಹ್ಯಾನಂದಮಯಬ್ರಹ್ಮಪ್ರತಿಪತ್ತ್ಯರ್ಥಮಾನಂದಮಯಂ
ಬ್ರಹ್ಮ ಪ್ರಿಯಮೋದಾದಿರೂಪೇಣ ವಿಭಜ್ಯ ಶಿರಃಪಕ್ಷಾದಿತ್ವೇನ
ನಿರೂಪಯಿತುಮುಪದಿಶ್ಯತೇ. ಯಥಾ “ಅನ್ನಮಯಃ ಪುರುಷಃ”
“ಅಯಂ ದೇಹಃ,” “ತಸ್ಯೇದಮೇವ ಶಿರಃ” ಇತ್ಯಾದಿನಾ ಶಿರಃಪಕ್ಷಾ
ದಿಭಿಃ ಬುದ್ಧ್ಯಾ ಆರೋಪ್ಯತೇ, ಯಥಾ ಚ ಪ್ರಾಣಮಯಮನೋಮಯ
ವಿಜ್ಞಾನಮಯಾಃ “ತಸ್ಯ ಪ್ರಾಣ ಏವ ಶಿರಃ” ಇತ್ಯಾದಿನಾ ಪ್ರಾಣಾ
ದ್ಯವಯವೈಃ ಬುದ್ಧ್ಯಾ ಆರೋಪ್ಯಂತೇ, ಏವಮೇವೇಭ್ಯೋಽರ್ಥಾಂತರ
ಭೂತಸ್ತದಂತರಾತ್ಮಾ ಆನಂದಮಯೋಽಪಿ ಪ್ರಿಯಮೋದಾದಿಭಿರೇಕ
ದೇಶೈಃ ಶಿರಃಪ್ರಭೃತಿತ್ವೇನ ರೂಪಿತೈಃ ಆಧ್ಯಾನಾಯ ಬುದ್ಧ್ಯಾ ಆರೋ
ಪ್ಯಂತೇ, ಏವಮಾನಂದಮಯೋಪಲಕ್ಷಣತ್ವಾತ್ ಪ್ರಿಯಶಿರಸ್ತ್ವಾ
ದೀನಾಂ ನ ಸರ್ವದಾ ಆನಂದಮಯಪ್ರತೀತೌ ಅನುವರ್ತಂತೇ.

ವೃದ್ಧಿಕ್ಷಯಗಳುಂಟಾಗುವ ಪ್ರಸಂಗದಿಂದ ಪ್ರಿಯಶಿರಸ್ತ್ವ ಮೊದಲಾದವು
ಪರಶಿವಬ್ರಹ್ಮದ ಒಂದುಬಗೆಯನ್ನು ತಿಳಿಸಲಿಕ್ಕಾಗಿಯೇ ಬಂದಿವೆ; ಅವು ಬ್ರಹ್ಮದ
ಗುಣಗಳೇ ಅಲ್ಲ. ಹಾಗಾದರೆ ಆ ರೀತಿಯಲ್ಲಿ ಇಲ್ಲದಿರುವ ಬ್ರಹ್ಮವನ್ನು ಆ ರೀತಿ
ಯಲ್ಲಿ ಏಕೆ ನಿರೂಪಿಸಬೇಕು? ಆ ರೀತಿಯಲ್ಲಿಲ್ಲದ ವಸ್ತುವನ್ನು ಆ ರೀತಿಯಲ್ಲಿ
ನಿರೂಪಿಸಲಿಕ್ಕೆ ಏನಾದರೂ ಪ್ರಯೋಜನವಿರಬೇಕಲ್ಲವೇ? “ಆತನನ್ನು ರಥಿ ಎಂದು
ತಿಳಿ” ಎಂಬಲ್ಲಿ ಉಪಾಸಕನನ್ನೂ ಅವನ ಉಪಕರಣಗಳನ್ನೂ ರಥಿ ಎಂದೂ, ರಥ
ವೆಂದೂ ನಿರೂಪಿಸಲಾಗಿದೆ. ಉಪಾಸನದ ಸಲಕರಣೆಗಳಾದ ಶರೀರ ಮತ್ತು
ಇಂದ್ರಿಯಗಳನ್ನು ಆತ್ಮನು ವಶಪಡಿಸಿಕೊಳ್ಳಲೆಂಬ ಉದ್ದೇಶದಿಂದ ಶ್ರುತಿಯಲ್ಲಿ
ಹಾಗೆ ನಿರೂಪಿಸಲಾಗಿದೆ. ಆದರೆ ಬ್ರಹ್ಮವನ್ನು ಒಂದು ವಿಧವೆಂದು ತಿಳಿಸಲಿಕ್ಕೆ
ಇಂತಹ ಯಾವೊಂದು ಉದ್ದೇಶವೂ ಕಾಣುವುದಿಲ್ಲ. ಆದ್ದರಿಂದ ಪ್ರಿಯಶಿರಸ್ತ್ವ ಮೊದ
ಲಾದವನ್ನು ಕಡ್ಡಾಯದಿಂದ ಬ್ರಹ್ಮಗುಣಗಳೆಂದು ಒಪ್ಪಬೇಕು ಎಂದಾಶಂಕಿಸಿ ಸಮಾ
ಧಾನಮಾಡುತ್ತಾನೆ. ಯಾವೊಂದು ಪ್ರಯೋಜನವೂ ಇಲ್ಲದೆ ಇದ್ದರೂ ಉಪಾಸಕ
ನಿಗೆ ಧ್ಯಾನದ ಸೌಕರ್ಯಕ್ಕಾಗಿ ಬ್ರಹ್ಮದಲ್ಲಿ ಹೀಗೆ ರೂಪಗುಣಗಳನ್ನು ಶ್ರುತಿಯು ಕಲ್ಪಿ
ಸಿದೆ. “ಪರಶಿವನ ಧ್ಯಾನದಿಂದ ಆತ್ಮನನ್ನು ಮತ್ತೆಮತ್ತೆ ಶೋಧಿಸುತ್ತ ಪಂಡಿತನು
ಪಾಶವನ್ನು ಸುಡುತ್ತಾನೆ”, “ಶ್ರದ್ಧಾಭಕ್ತಿಗಳಿಂದೊಡಗೂಡಿದ ಧ್ಯಾನಯೋಗದಿಂದ
ತಿಳಿ” ಎಂಬಲ್ಲಿ ಹೇಳಿರುವಂತೆ ಧ್ಯಾನರೂಪವಾದ ಉಪಾಸನವು ಸಿದ್ಧಿಸಲೆಂದು ಬ್ರಹ್ಮ
ವನ್ನು ಆನಂದಮಯವೆಂದು ತಿಳಿಯಲಿಕ್ಕಾಗಿ ಪ್ರಿಯ, ಮೋದ, ಪ್ರಮೋದ ಎಂಬ
ರೂಪಗಳಿಂದ ಶಿರಸ್ಸು, ಪಕ್ಷ, ಪುಚ್ಛ ಮೊದಲಾದ ಅವಯವಗಳನ್ನು ನಿರೂಪಿಸಲಾ
ಗಿದೆ. “ಪುರುಷನು ಅನ್ನಮಯನು” ಎಂಬಲ್ಲಿ ಈ ದೇಹದಲ್ಲಿ ಇದು ಶಿರಸ್ಸು, ಇದು
ಪಕ್ಷ ಎಂದು ಮುಂತಾಗಿ ಬುದ್ಧಿಯಲ್ಲಿ ಆರೋಪಿಸಲಾಗಿದೆ. ಹಾಗೆಯೇ ಪ್ರಾಣಮಯ,

ಮನೋಮಯ, ವಿಜ್ಞಾನಮಯ ಎಂಬಲ್ಲೂ ಅವನಿಗೆ ಪ್ರಾಣವೇ ಶಿರಸ್ಸು ಎಂದು ಮುಂತಾಗಿ ಪ್ರಾಣಾದ್ಯವಯವಗಳನ್ನು ಬುದ್ಧಿಯಲ್ಲಿ ಆರೋಪಿಸಲಾಗಿದೆ. ಹೀಗೆಯೇ ದೇಹದೊಳಗೆ ಇರುವ ಅಂತರಾತ್ಮವೂ ದೇಹವಲ್ಲದೆ ಆನಂದಮಯವೇ ಆಗಿದ್ದರೂ ಆ ಆನಂದದ ಏಕದೇಶಗಳಾದ ಪ್ರಿಯ, ಮೋದ ಮೊದಲಾದವನ್ನು ಉಪಾಸನಕ್ಕಾಗಿ ಶಿರಸ್ಸು ಮೊದಲಾದ ಅವಯವಗಳೆಂದು ನಿರೂಪಿಸಲಾಗಿದೆ. ಹೀಗೆ ಆನಂದಮಯವನ್ನು ಗುರ್ತಿಸುವುದರಿಂದ ಪ್ರಿಯಶಿರಸ್ತ್ವ ಮೊದಲಾದವು ಬ್ರಹ್ಮದ ಸ್ವರೂಪವನ್ನು ಅನುಸರಿಸಿಕೊಂಡೇ ಎಲ್ಲಾ ಕಡೆಗಳಲ್ಲೂ ಬರುತ್ತವೆ.

**" ಅನ್ನಂ ಬ್ರಹ್ಮ" ಇತ್ಯಾದಿವದಾನಂದಸ್ಯ ಬ್ರಹ್ಮೋಪದೇಶಾದೇಕ ಪ್ರಕರಣಪಠಿತಸ್ಯಾನಂದಮಯಸ್ಯೈವ ಕಥಂ ಪರಬ್ರಹ್ಮತ್ವಮುಪಪನ್ನ ಮಿತ್ಯಾಶಂಕಾಯಾಮಾಹ. ಆತ್ಮಶಬ್ದಾಚ್ಚ ||೧೫|| ತೈತ್ತಿರೀಯೇ " ತಸ್ಮಾ ದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ " ಇತ್ಯಾದೌ ಆತ್ಮನಃ ಜಗದೇಕ ಕಾರಣತ್ವೋಪದೇಶಾತ್, ಮಾಂಡೂಕ್ಯೇ " ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ " ಇತ್ಯತ್ರ ಶಿವಸ್ಯ ಪರಬ್ರಹ್ಮಣಃ ಪ್ರಪಂಚಹೇತುಭೂತಸ್ಯಾತ್ಮಶಬ್ದಪ್ರಯೋಗಾತ್. ಅಥರ್ವಶಿಖಾಯಾಂ " ಧ್ಯಾಯಿತೀಶಾನಂ ಪ್ರಧ್ಯಾಯಿತವ್ಯಂ ಸರ್ವ ಮಿದಂ ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ " ಇತ್ಯಾರಭ್ಯ "ಶಿವ ಏಕೋ ಧ್ಯೇಯಶ್ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ" ಇತ್ಯಂತೇನ ಚರಮಶರೀರಿಣಾಂ ಮುಮುಕ್ಷೂಣಾಂ ಪರಶಿವಬ್ರಹ್ಮೇತರಧ್ಯಾನನಿಷೇ ಧಾವಗಮಾಚ್ಚ. ತಸ್ಮಾತ್ ನಿತ್ಯನಿರುಪದ್ರವನಿಖಿಲಮಂಗಳಾಲಯಪರ ಮಾನಂದಸ್ವಭಾವಃ ಜಗದುಭಯಕಾರಣಂ ಪರಬ್ರಹ್ಮೈವ ಶಿವಶಬ್ದೇನ ನಿರ್ಣೀಯತೇ. ಅತಃ " ಋತಂ ಸತ್ಯಂ " ಇತ್ಯತ್ರ ಕೃಷ್ಣಪಿಂಗಳ ವಿರೂ ಪಾಕ್ಷ ಇತ್ಯಾದಿನಾ ಬ್ರಹ್ಮತತ್ತ್ವಾನುಸಂಧಾನೋಪಾಸ್ತಿರುಪದಿಷ್ಟಾ. ತಥಾಚ ಸ್ಮೃತಿಃ. " ಶಿವಂ ಭಜಂತಿ ಯೇ ನರಾಶ್ಶಿವಂ ವ್ರಜಂತಿ ತೇ ನರಾಃ | ಶಿವೇತರಂ ಭಜಂತಿ ಯೇ ಶಿವೇತರಂ ವ್ರಜಂತಿ ತೇ ||" ಇತಿ ಶ್ರವ ಣಾತ್ ಶಿವೇತರನಿಷ್ಠಾನುಷ್ಠಾನಶೀಲಾನಾಂ ಅಶಿವತ್ವಫಲಂ. ಅತ ಏವಾ ನಂದಮಯೋ ನೇತರಃ. " ಅನ್ಯೋಽಂತರ ಆತ್ಮಾನಂದಮಯಃ " ಇತಿ ನಿರತಿಶಯಶಿರಸ್ಕತ್ವೇನಾನ್ನಮಯಾದಿಭ್ಯೋ ಭಿನ್ನತ್ವೋಪದೇಶಾದಾ ನಂದಮಯಶ್ಶಿವ ಏಕ ಏವಾನುಸಂಧೇಯ ಇತಿ ಸ್ಪಷ್ಟಮುಪದಿಷ್ಟಂ.**

ಅನ್ನವೇ ಬ್ರಹ್ಮ ಎಂಬಂತೆ ಆನಂದವೇ ಬ್ರಹ್ಮವೆಂದು ಹೇಳಿದ್ದರೂ ಒಂದೇ ಪ್ರಕರಣದಲ್ಲಿ ಹೇಳಿರುವ ಆನಂದಮಯವನ್ನು ಮಾತ್ರ ಪರಬ್ರಹ್ಮವೆಂದು ಹೇಗೆ ಹೇಳಬಹುದು? ಎಂದಾಶಂಕಿಸಿ ಸಮಾಧಾನಮಾಡುತ್ತಾನೆ. ತೈತ್ತಿರೀಯದಲ್ಲಿ "ಆ ಈ ಆತ್ಮದಿಂದ ಆಕಾಶ ಹುಟ್ಟಿತು " ಎಂದು ಆತ್ಮನನ್ನು ಜಗತ್ತಿನ ಏಕಕಾರಣ

ವೆಂದು ಹೇಳಲಾಗಿದೆ. ಮಾಂಡೂಕ್ಯದಲ್ಲಿ "ಪ್ರಪಂಚಕ್ಕೆ ವಿಶ್ರಾಂತಿಸ್ಥಲವೆನಿಸಿದ ಶಿವನು ತ್ರಿಮೂರ್ತ್ಯತೀತನು ಮತ್ತು ಅವನೇ ಆತ್ಮನು" ಎಂದು ಹೇಳಿದ್ದರಿಂದ ಪರಶಿವಬ್ರಹ್ಮವೇ ಪ್ರಪಂಚದ ಕಾರಣವೆಂದು ಅಲ್ಲಿಯೇ ಆತ್ಮಶಬ್ದವನ್ನು ಪ್ರಯೋಗಿಸಲಾಗಿದೆ. ಅಥರ್ವಶಿಖೆಯಲ್ಲಿ "ಧ್ಯೇಯನಾದ ಪ್ರಭುವನ್ನು ಧ್ಯಾನಿಸಿರಿ. ಅವನಿಂದಲೇ ಬ್ರಹ್ಮ, ವಿಷ್ಣು, ರುದ್ರ, ಇಂದ್ರರು ಹುಟ್ಟಿದ್ದಾರೆ" ಎಂದು ಆರಂಭಿಸಿ "ಶಿವಂಕರನಾದ ಶಿವನೊಬ್ಬನೇ ಧ್ಯೇಯನು" ಎಂದು ಕೊನೆಯದಾಗಿ ಶರೀರವನ್ನು ಪಡೆದಿರುವ ಮುಮುಕ್ಷುಗಳು ಪರಶಿವಬ್ರಹ್ಮವನ್ನಲ್ಲದೆ ಬೇರೆ ಯಾರನ್ನೂ ಧ್ಯಾನಿಸಬಾರದೆಂದು ಹೇಳಿದ್ದರಿಂದ ನಿತ್ಯವೂ ನಿರಾಮಯವೂ ನಿಖಿಲಮಂಗಲಾಶ್ರಯವೂ ಪರಮಾನಂದವೂ ಜಗದುಭಯಕಾರಣವೂ ಆದ ಪರಬ್ರಹ್ಮವನ್ನು ಶಿವನೆಂದು ನಿರ್ಣಯಿಸಲಾಗಿದೆ. ಆದ್ದರಿಂದಲೇ "ಋತಂ ಸತ್ಯಂ" ಎಂಬಲ್ಲಿ ಅವನನ್ನೇ ಕೃಷ್ಣಪಿಂಗಳ ಮತ್ತು ವಿರೂಪಾಕ್ಷ ಎಂದು ಮುಂತಾಗಿಯೂ ಹೇಳಲಾಗಿದೆ. "ಶಿವನನ್ನು ಭಜಿಸಿದವರು ಶಿವನಲ್ಲಿಯೇ ಸೇರುತ್ತಾರೆ. ಶಿವನಲ್ಲದೆ ಬೇರೆ ದೇವರನ್ನು ಭಜಿಸಿದವರು ಅಲ್ಲಿಗೇ ಹೋಗುತ್ತಾರೆ'' ಎಂದು ಸ್ಮೃತಿಯಲ್ಲಿ ಹೇಳಿದೆ. ಬೇರೆ ದೇವನನ್ನು ಭಜಿಸಿದವರಿಗೆ ಶಿವನು ಫಲವಾಗಿ ದೊರಕುವುದಿಲ್ಲ. ಆದ್ದರಿಂದ ಶಿವನಲ್ಲದೆ ಬೇರೆ ಯಾರೂ ಆನಂದಮಯನಲ್ಲ. "ಬೇರೊಬ್ಬ ಆತ್ಮನೇ ಆನಂದಮಯನಿರುವನು" ಎಂಬಲ್ಲಿ ಬ್ರಹ್ಮವನ್ನು ಅನ್ನಮಯಾದಿಗಳಿಂದ ಬೇರೆ ಎಂದು ಹೇಳಿದ್ದರಿಂದ ಆನಂದಮಯನೆಂದರೆ ಶಿವನೊಬ್ಬನೇ ಎಂದು ಭಾವಿಸಬೇಕೆಂಬುದು ಸ್ಪಷ್ಟವಾಗಿದೆ.

ಕಿಂಚ "ಅನ್ಯೋಽಂತರ ಆತ್ಮಾನಂದಮಯಃ" ಇತ್ಯಾತ್ಮಶಬ್ದೇನ ನಿರ್ದಿಷ್ಟಸ್ಯ ಪರಮಾತ್ಮನಃ ಶಿವಸ್ಯ ಶಿರಃಪಕ್ಷಪುಚ್ಛಸದ್ಭಾವಾತ್ ಪ್ರಿಯಶಿರಸ್ತ್ವಾದಯಸ್ತಸ್ಯ ಸುಖಪ್ರತಿಪತ್ತ್ಯರ್ಥಂ ನಿರೂಪಣಮಾತ್ರಮಿತ್ಯುಪದಿಶ್ಯತೇ. "ಇಂದ್ರಿಯೇಭ್ಯಃ ಪರಾ ಹ್ಯರ್ಥಾಃ ಅರ್ಥೇಭ್ಯಶ್ಚ ಪರಂ ಮನಃ । ಮನಸಸ್ತು ಪರಾ ಬುದ್ಧಿಃ ಬುದ್ಧೇರಾತ್ಮಾ ಮಹಾನ್ಪರಃ । ಮಹತಃ ಪರಮವ್ಯಕ್ತಂ ಅವ್ಯಕ್ತಾತ್ಪುರುಷಃ ಪರಃ । ಪುರುಷಾನ್ನ ಪರಂ ಕಿಂಚಿತ್ ಸಾ ಕಾಷ್ಠಾ ಸಾ ಪರಾ ಗತಿಃ ॥" ಇತಿ ಶ್ರುತೌ ಅರ್ಥಮನೋಬುದ್ಧ್ಯಾತ್ಮಾದಿಭ್ಯಃ ಪುರುಷಸ್ಯ ಸರ್ವಾಧಿಕತ್ವೋಪದೇಶಾತ್, "ಅನ್ಯೋಽಂತರ ಆತ್ಮಾ ಪ್ರಾಣಮಯಃ । ಅನ್ಯೋಽಂತರ ಆತ್ಮಾ ಮನೋಮಯಃ । ಅನ್ಯೋಽಂತರ ಆತ್ಮಾ ವಿಜ್ಞಾನಮಯಃ ॥" ಇತ್ಯಾತ್ಮಶಬ್ದಸ್ಯ ಅನಾತ್ಮಸ್ವಪಿ ಪೂರ್ವಪ್ರಯುಕ್ತತ್ವಾತ್ "ಅನ್ಯೋಽಂತರ ಆತ್ಮಾನಂದಮಯಃ" ಇತ್ಯಾತ್ಮಶಬ್ದಸ್ಯಾತ್ಮವಿಷಯತ್ವಂ ಕಥಂ ನಿಶ್ಚೀಯತೇ? ತತ್ರಾಹ. ಆತ್ಮಗೃಹೀತಿರಿತರವದುತ್ತರಾತ್ ॥ ೧೬ ॥ "ಅನ್ಯೋಽಂತರ ಆತ್ಮಾನಂದಮಯಃ" ಇತ್ಯತ್ರಾತ್ಮಶಬ್ದೇನ ಪರಮಾತ್ಮನ ಏವ ಗ್ರಹಣಂ. ಇತರವತ್ ಯಥೇತರತ್ರ "ಆತ್ಮಾ ವಾ ಇದಮೇಕ ಏವಾಗ್ರ ಆಸೀತ್",

"ಸ ಈಕ್ಷತ ಲೋಕಾನ್ನು ಸೃಜೈ" ಇತ್ಯಾದಿಷು ಆತ್ಮಶಬ್ದೇನ ಪರಮಾತ್ಮನ ಏವ ಗ್ರಹಣಂ. ತತ್ಕುತ ಏತತ್? ಉತ್ತರಾತ್ "ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯ" ಇತ್ಯಾನಂದಮಯವಿಷಯಾದುತ್ತರವಾಕ್ಯಾತ್.

ಬೇರೊಬ್ಬ ಆತ್ಮನು ಆನಂದಮಯನು" ಎಂಬಲ್ಲಿ ಆತ್ಮನೆನಿಸಿದ ಪರಶಿವ ಬ್ರಹ್ಮವು ಪ್ರಿಯ ಮತ್ತು ಮೋದಸ್ವರೂಪನೆಂಬುದನ್ನು ಚೆನ್ನಾಗಿ ತಿಳಿಯಲಿಕ್ಕಾಗಿ ಶಿರಸ್ಸು ವಕ್ಷಸ್ಸು ಪುಚ್ಛ ಮೊದಲಾದ ಅವಯವಗಳನ್ನು ನಿರೂಪಿಸಲಾಗಿದೆ. "ಇಂದ್ರಿಯಗಳಿಗಿಂತಲೂ ವಿಷಯಗಳು, ವಿಷಯಗಳಿಗಿಂತಲೂ ಮನಸ್ಸು, ಮನಸ್ಸಿಗಿಂತಲೂ ಬುದ್ಧಿ, ಬುದ್ಧಿಗಿಂತಲೂ ಮಹತ್ತು, ಮಹತ್ತಿಗಿಂತಲೂ ಅವ್ಯಕ್ತ, ಅವ್ಯಕ್ತಕ್ಕಿಂತಲೂ ಪರಮಪುರುಷನು ಶ್ರೇಷ್ಠವೆನಿಸಿದ್ದಾರೆ. ಪುರುಷನಿಗಿಂತಲೂ ಹೆಚ್ಚಿನದಿಲ್ಲ. ಅವನೇ ಕೊನೆಯ ಸ್ಥಿತಿ" ಎಂಬ ಶ್ರುತಿಯಲ್ಲಿ ವಿಷಯ ಮನಸ್ಸು ಬುದ್ಧಿ ಮೊದಲಾದವೆಲ್ಲಕ್ಕೂ ಪುರುಷನನ್ನು ಅಧಿಕನೆಂದು ಹೇಳಿದೆ. "ಬೇರೊಬ್ಬ ಆತ್ಮನು ಪ್ರಾಣಮಯನು, ಬೇರೊಬ್ಬ ಆತ್ಮನು ಮನೋಮಯನು, ಬೇರೊಬ್ಬ ಆತ್ಮನು ವಿಜ್ಞಾನಮಯನು" ಎಂಬಲ್ಲಿ ಆತ್ಮವಲ್ಲದ ಪ್ರಾಣಾದಿಗಳಲ್ಲಿ ಆತ್ಮಶಬ್ದವನ್ನು ಪ್ರಯೋಗಿಸಲಾಗಿದೆ. ಅದರಂತೆಯೇ "ಬೇರೊಬ್ಬ ಆತ್ಮನು ಆನಂದಮಯನು" ಎಂಬಲ್ಲಿ ಆತ್ಮಪದವು ಚೇತನನಿಗೇ ಅನ್ವಯಿಸುವುದೆಂದು ಹೇಗೆ ನಿಶ್ಚಯಿಸಬಹುದು? ಎಂದಾಕ್ಷೇಪಿಸಿ ತಿಳಿಸುತ್ತಾನೆ. "ಬೇರೊಬ್ಬ ಆತ್ಮನು ಆನಂದಮಯನು" ಎಂಬಲ್ಲಿ ಆತ್ಮಶಬ್ದವು ಪರಮಾತ್ಮನಿಗೇ ಅನ್ವಯಿಸುತ್ತದೆ. "ಆತ್ಮ ಒಂದೇ ಮೊದಲಿಗೆ ಇತ್ತು" ಎಂದು ಮುಂತಾದಕಡೆಗಳಲ್ಲಿ ಆತ್ಮಶಬ್ದವು ಪರಮಾತ್ಮನಿಗೇ ಅನ್ವಯಿಸುತ್ತದೆ. ಇದೂ ಅಲ್ಲದೆ "ಅವನು ವಿಸ್ತಾರವಾಗುವೆನೆಂದು ಇಚ್ಛಿಸಿದನು" ಎಂದು ಮುಂದಿನ ವಾಕ್ಯದಲ್ಲಿ ಆನಂದಮಯನಾದ ಪರಮಾತ್ಮನ ಇಚ್ಛೆಯನ್ನೇ ತಿಳಿಸಲಾಗಿದೆ. ಆದ್ದರಿಂದ ಆನಂದಮಯನೆಂದರೆ ಪರಮಾತ್ಮನೆಂದೇ ತಿಳಿಯಬೇಕು.

ಅಸ್ಮಿನ್ನರ್ಥೇ ಹೇತ್ವಂತರಮಾಹ. ಅನ್ವಯಾದಿತಿ ಚೇತ್ಸ್ಯಾದವಧಾರಣಾತ್ ॥ ೧೭ ॥ ಪೂರ್ವತ್ರ ಪ್ರಾಣಮಯಾದಿಷ್ವನಾತ್ಮಸು ಆತ್ಮಾಶಬ್ದಾನ್ವಯದರ್ಶನಾತ್ ನೋತ್ತರಾದುತ್ತರವಾಕ್ಯಾನ್ನಿಶ್ಚೇತುಂ ಶಕ್ಯತ ಇತಿ ಚೇತ್ಸ್ಯಾದವಧಾರಣಾತ್ ಸ್ಯಾದೇವ ನಿಶ್ಚಯಃ. ಕುತಃ? ಅವಧಾರಣಾತ್. ಪೂರ್ವತ್ರಾಪಿ "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ" ಇತಿ ಪರಮಾತ್ಮನ ಏವ ಬುದ್ಧ್ಯಾ ಅವಧಾರಿತತ್ವಾತ್ ಅನ್ನಮಯಾದಂತರೇ ಪ್ರಾಣಮಯೇ ಪ್ರಥಮಂ ಪರಮಾತ್ಮಬುದ್ಧಿರವತೀರ್ಣಾ. ತದನಂತರಂ ಚ ಪ್ರಾಣಮಯಾದಂತರೇ ಮನೋಮಯೇ, ತತೋ ವಿಜ್ಞಾನಮಯೇ, ತತ ಆನಂದಮಯೇ ಪ್ರಕ್ರಾಂತಾ ಪರಮಾತ್ಮಬುದ್ಧಿಃ ತದಂತರಾಭಾವಾದುತ್ತರಾಚ್ಚ "ಸೋಽಕಾಮಯತ"

ಇತಿ ವಾಕ್ಯಾತ್ ಪ್ರತಿಷ್ಠಿತೇತ್ಯುಪಕ್ರಮೇಽಪ್ಯಪರಮಾತ್ಮನಿ ಪರಮಾತ್ಮ ಬುದ್ಧ್ಯಾ ಅತ್ಮಶಬ್ದಾದನ್ವಯ ಇತಿ ನಿರವದ್ಯಂ. ಕಿಂಚ ತದುಪಕ್ರಮೇ "ಬ್ರಹ್ಮವಿದಾಪ್ನೋತಿ ಪರಂ" ಇತಿ, ಅನ್ಯತ್ರ ಚ "ಸರ್ವಭೂತಸ್ಥ ಮಾತ್ಮಾನಂ ಸರ್ವಭೂತಾನಿ ಚಾತ್ಮನಿ। ಸಂಪಶ್ಯನ್ ಬ್ರಹ್ಮ ಪರಮಂ ಯಾತಿ ನಾನ್ಯೇನ ಹೇತುನಾ॥" ಇತಿ ಶಿವಧ್ಯಾನಜ್ಞಾನಾವಲಂಬಿನಾ ಮೇವ ಪುನರಾವೃತ್ತಿರಹಿತನಿಃಶ್ರೇಯಸಫಲಪ್ರಾಪ್ತ್ಯುಪದೇಶಾತ್ ಸರ್ವಥಾ ಮುಮುಕ್ಷೂಣಾಂ ಶಿವೋಪಾಸನಂ ಕರ್ತವ್ಯಮಿತಿ ಫಲಿ ತಾರ್ಥೋ ನಿಶ್ಚೀಯತೇ. "ಋತಂ ಸತ್ಯಂ ಪರಂ ಬ್ರಹ್ಮ" ಇತಿ ಸತ್ಯಾದಿ ಲಕ್ಷಣಲಕ್ಷಿತಪರಶಿವೋಪಾಸನೇನ ಭ್ರಮರಕೀಟನ್ಯಾಯವತ್ ಶಿವತಾ ದಾತ್ಮ್ಯಸಿದ್ಧೇಃ ಸ್ವಶಾಖಾನ್ಯಶಾಖಾಸ್ವಪಿ ಸ್ಪಷ್ಟಮುಪದಿಷ್ಟತ್ವಾತ್ ಪರಮಪುರುಷಾರ್ಥಸಿದ್ಧ್ಯರ್ಥಂ ಶ್ರವಣಮನನಾದಿನಾ ತದ್ವಿಚಾರೋ ನಿರಂತರಂ ಕರ್ತವ್ಯ ಇತ್ಯುಪದಿಶ್ಯತೇ.

ಈ ಬಗ್ಗೆ ಬೇರೊಂದು ಕಾರಣವನ್ನು ಹೇಳುತ್ತಾನೆ. ಹಿಂದಿನ ವಾಕ್ಯದಲ್ಲಿ ಆತ್ಮ ವಲ್ಲದ ಪ್ರಾಣಾದಿಗಳಲ್ಲಿ ಆತ್ಮಶಬ್ದವನ್ನು ಪ್ರಯೋಗಿಸಿರುವುದರಿಂದ ಮುಂದಿನ ವಾಕ್ಯ ದಿಂದಲೂ ಆತ್ಮದಲ್ಲಿಯೇ ಆತ್ಮಶಬ್ದವನ್ನು ಪ್ರಯೋಗಿಸಿರುವುದಾಗಿ ಹೇಗೆ ನಿಶ್ಚಯಿಸು ತ್ತೀರಿ? ಎಂದು ಹೇಳಿದರೆ ಇದು ಸರಿಯಲ್ಲ; ಯಾಕೆಂದರೆ ಹಿಂದೆಯೂ ಸಹ "ಆ ಈ ಆತ್ಮನಿಂದ ಆಕಾಶ ಹುಟ್ಟಿತು" ಎಂಬಲ್ಲಿ ಆತ್ಮನೆಂದರೆ ಪರಮಾತ್ಮನೇ ಎಂದು ಬುದ್ಧಿ ಯಲ್ಲಿ ನಿಶ್ಚಯಿಸಿದ್ದುದರಿಂದ ಅನ್ನಮಯಕ್ಕಿಂತ ಬೇರೆಯಾದ ಪ್ರಾಣಮಯದಲ್ಲಿ ಮೊದಲು ಪರಮಾತ್ಮನೆಂಬ ಬುದ್ಧಿ ಹುಟ್ಟಿ, ಆಮೇಲೆ ಪ್ರಾಣಮಯಕ್ಕಿಂತ ಬೇರೆಯಾದ ಮನೋಮಯದಲ್ಲೂ, ಆಮೇಲೆ ವಿಜ್ಞಾನಮಯದಲ್ಲೂ, ಆಮೇಲೆ ಆನಂದಮಯ ದಲ್ಲೂ, ಪರಮಾತ್ಮನೆಂಬ ಬುದ್ಧಿ ಪ್ರಸರಿಸಿದೆ. ಅಲ್ಲಿಂದ ಮುಂದೆ ಬುದ್ಧಿಗೆ ಮುಂದೆ ಹೊರಡಲಿಕ್ಕೆ ಸಾಧ್ಯವಿಲ್ಲದ್ದರಿಂದಲೂ, "ಅವನು ಇಚ್ಛಿಸಿದನು" ಎಂಬಲ್ಲಿ ಪರಮಾತ್ಮ ನೆಂಬ ಬುದ್ಧಿಯಿಂದ ಆತ್ಮಶಬ್ದವನ್ನು ಪ್ರಯೋಗಿಸಿರುವುದರಿಂದಲೂ ಆತ್ಮನ್ ಶಬ್ದವು ಪರಮಾತ್ಮನಲ್ಲಿ ಸಮನ್ವಯವಾಗುವುದೇ ಯುಕ್ತವಾಗಿದೆ. ಇದೂ ಅಲ್ಲದೆ ಆರಂಭ ದಲ್ಲಿ "ಬ್ರಹ್ಮವನ್ನು ತಿಳಿದವನು ಬ್ರಹ್ಮವನ್ನೇ ಹೊಂದುತ್ತಾನೆ" ಎಂದೂ, ಬೇರೆಕಡೆ ಗಳಲ್ಲಿ "ಆತ್ಮನು ಎಲ್ಲರಲ್ಲೂ ಇರುವನೆಂದೂ, ಎಲ್ಲರೂ ಆತ್ಮನಲ್ಲಿ ಇರುವರೆಂದೂ ತಿಳಿದವನು ಪರಬ್ರಹ್ಮದಲ್ಲಿಯೇ ಸೇರುತ್ತಾನೆ" ಎಂದು ಮುಂತಾಗಿಯೂ ಹೇಳಿರುವುದ ರಿಂದ ಶಿವಧ್ಯಾನ ಮತ್ತು ಶಿವಜ್ಞಾನಗಳಿಂದಲೇ ಮತ್ತೆ ಹುಟ್ಟದಂತಾಗಿ ಮೋಕ್ಷ ವನ್ನು ಹೊಂದುತ್ತಾನೆಂಬುದು ಸಿದ್ಧವಾಗುತ್ತದೆ. ಆದ್ದರಿಂದ ಮುಮುಕ್ಷುಗಳು ಶಿವ ಧ್ಯಾನವನ್ನೇ ಮಾಡಬೇಕೆಂದು ನಿಶ್ಚಯಿಸಲಾಗಿದೆ. "ಋತಂ ಸತ್ಯಂ ಪರಂ ಬ್ರಹ್ಮ" "ಇದೆಲ್ಲವೂ ಆತ್ಮವೇ. ಅದೇ ನೀನು" ಎಂಬಲ್ಲಿ ಸತ್ಯಸ್ವರೂಪನಾದ ಪರಶಿವನ ಉಪಾಸನದಿಂದಲೇ ಭ್ರಮರಕೀಟನ್ಯಾಯದಂತೆ ತಾನೇ ಶಿವನೆಂಬ ಭಾವನೆ ಸಿದ್ಧಿಸು

ತ್ತದೆ ಎಂದು ಸ್ಪಷ್ಟಪಡುತ್ತದೆ. ಹೀಗೆಯೇ ತನ್ನ ಶಾಖೆಯಲ್ಲೂ ಬೇರೆ ಶಾಖೆಗಳಲ್ಲೂ ಹೇಳಿರುವುದರಿಂದ ಇಂತಹ ಪರಮಪುರುಷಾರ್ಥವನ್ನು ಪಡೆಯಲಿಕ್ಕಾಗಿ ಪರಮಾತ್ಮನ ಬಗ್ಗೆ ಕೇಳುತ್ತಲೂ ತಿಳಿಯುತ್ತಲೂ ಅವನನ್ನೇ ನಿರಂತರವೂ ವಿಚಾರಿಸುತ್ತಲೂ ಇರಬೇಕೆಂಬುದು ಸ್ಪಷ್ಟವಾಗುತ್ತದೆ.

**ಉಪಕೋಸಲವಿದ್ಯಾಪ್ರಕರಣೇ ವಿದ್ಯಮಾನಮಾಹವನೀಯಗಾರ್ಹಪತ್ಯದಕ್ಷಿಣಾಗ್ನಿವಿಷಯಕಮುಪಾಸನತ್ರಯಂ, ಹಿರಣ್ಯಗರ್ಭೋಪಾಸನಮಿತ್ಯುಪಾಸನಚತುಷ್ಟಯಂ ಚ, ಏವಂ ಪ್ರತರ್ದನವಿದ್ಯಾಪ್ರಕರಣೇ ವಿದ್ಯಮಾನಂ ಜೀವಮುಖ್ಯಪ್ರಾಣಲಿಂಗವಿಷಯಮುಪಾಸನದ್ವಯಂ, ಏವಂ ಸರ್ವಾಸ್ವಪ್ಯುಪನಿಷತ್ಸು ಸಗುಣಬ್ರಹ್ಮೋಪಾಸನಸನ್ನಿಧೌ ವಿದ್ಯಮಾನಾನಿ ಬ್ರಹ್ಮವ್ಯತಿರಿಕ್ತಪದಾರ್ಥವಿಷಯಕಾಣಿ ಪ್ರಾಣಾದ್ಯುಪಾಸನಾನಿ, ಏವಂ ಭೂಮವಿದ್ಯಾಪ್ರಕರಣೇ ಪ್ರದರ್ಶಿತಾನಿ ಭೂಮಾದ್ಯುಪಾಸನಾನಿ, ಏವಂ ವೈಶ್ವಾನರವಿದ್ಯಾಪ್ರಕರಣೇ ವಿದ್ಯಮಾನಾನಿ ವೈಶ್ವಾನರಸ್ಯೈಕೈಕಸ್ಯಾವಯವವಿಶೇಷೋಪಾಸನಾನಿ ವೈಶ್ವಾನರೋಪಾಸನಾಂಗಾನಿ ವಾ ನವಾ? ಏವಂ ತತ್ತದುಪಾಸನಾಪ್ರಕರಣೇಷು ವಿದ್ಯಮಾನಾನಿ ಬ್ರಹ್ಮವ್ಯತಿರಿಕ್ತಪದಾರ್ಥವಿಷಯಕಾಣ್ಯುಪಾಸನಾನಿ ಚಿತ್ತಶುದ್ಧಿದ್ವಾರಾ ಮೂರ್ತಬ್ರಹ್ಮೋಪಾಸನಾಂಗಾನಿ ವಾ? ಸ್ವಾತಂತ್ರ್ಯೇಣ ಫಲಾಂತರಸಾಧನಾನಿ ವಾ ಸ್ಯುಃ? "ಯದುದ್ದಿಶ್ಯ ಯದ್ವಿಧೀಯತೇ ತಸ್ಯ ತದೇವ ಫಲಂ" ಇತಿ ನ್ಯಾಯೇನ "ನಾಸ್ತ್ಯಕೃತಃ ಕೃತೇನ" ಇತಿ ಶ್ರುತೌ ಕೃತಕರ್ಮಣಿ ಅಕೃತಮೋಕ್ಷಫಲನಿಷೇಧಾತ್ ಸರ್ವೇಷಾಂ ಕರ್ಮರೂಪೋಪಾಸನಾನಾಂ ನಿರ್ಗುಣಬ್ರಹ್ಮಾತ್ಮಕತ್ವಹೇತುತ್ವಾಯೋಗಾತ್, "ಪುಣ್ಯಚಿತೋ ಲೋಕಃ ಕ್ಷೀಯತೇ" ಇತಿವತ್ಸಕಾಮಜ್ಯೋತಿಷ್ಟೋಮಾದಿವತ್ ಅನಿತ್ಯಫಲತ್ವಮೇವೇತ್ಯಾಶಂಕಾಯಾಂ ಅಧಿಕರಣಾಂತರೇಣಾಹ. ಕಾರ್ಯಾಖ್ಯಾನಾಧಿಕರಣಂ ‖ ೫ ‖ ಕಾರ್ಯಾಖ್ಯಾನಾದಪೂರ್ವಂ ‖ ೧೮ ‖** ಪೂರ್ವಪ್ರಸ್ತುತಪ್ರಾಣವಿದ್ಯಾಶೇಷಭೂತಮಿದಾನೀಂ ಚಿಂತ್ಯತೇ. ತತ್ತತ್ಸಗುಣಮೂರ್ತಬ್ರಹ್ಮೋಪಾಸನಸನ್ನಿಧೌ ವಿಹಿತಾನಿ ಅಗ್ನಿತ್ರಯಜೀವಮುಖ್ಯಪ್ರಾಣನಾಮಾದಿವಿಷಯಕಾಣ್ಯುಪಾಸನಾನಿ ಪ್ರಕರಣಬಲಾತ್ತತ್ತತ್ಸಗುಣಮೂರ್ತಬ್ರಹ್ಮೋಪಾಸನಾಂಗಾನ್ಯೇವ, ನತು ಸ್ವಾತಂತ್ರ್ಯೇಣ ಫಲಸಾಧನಾನಿ. ತಥಾಚ ಕಾರ್ಯಾಖ್ಯಾನಾತ್ ಕಾರ್ಯಾಣಾಂ ಕರ್ತವ್ಯಾನಾಂ ಜೀವಮುಖ್ಯಪ್ರಾಣಲಿಂಗಾದಿವಿಷಯಕಾಣಾಂ ಅಂಗೋಪಾಸನಾನಾಂ ಆಖ್ಯಾನಾತ್ ಅನುಷ್ಠಾನಾದೇವ ಸಾಂಗಾತ್ಸಗುಣಮೂರ್ತಬ್ರಹ್ಮೋಪಾಸನಾತ್ ಅಪೂರ್ವಮದೃಷ್ಟಂ ಉತ್ಪದ್ಯತೇ. ತೇನ ನಿರವಯವನಿರತಿಶಯಾನಂದಪರಿಪೂರ್ಣಾಪರಿ

ಚ್ಛಿನ್ನಪರಶಿವಬ್ರಹ್ಮಪ್ರಾಪ್ತಿಸ್ಸಂಭವತಿ, ನತು ಸ್ವಾತಂತ್ರ್ಯೇಣ ಫಲಾಂತರ ಮನುಪಪನ್ನಂ. ತಸ್ಮಾತ್ಸಾಂಗೋಪಾಸನಾದೇವ ಸಗುಣಬ್ರಹ್ಮೋಪಾಸನಂ. ಸಗುಣಮೂರ್ತಬ್ರಹ್ಮೋಪಾಸನಾಂಗತ್ವೇನ ಅನುಷ್ಠಿತ ಪ್ರಾಣಾದ್ಯುಪಾಸನಾತ್ ಕ್ಷುದ್ರಫಲಮಪ್ಯರ್ಥಾದುತ್ಪದ್ಯತೇ. "ಯದೇವ ಜ್ಞಾನಫಲಂ ತದೇವ ಕರ್ಮಫಲಂ" ಇತ್ಯಾದಿಶ್ರುತಿಷು "ಯಾದೃಶೀ ಭಾವನಾ ಯತ್ರ ಸಿದ್ಧಿರ್ಭವತಿ ತಾದೃಶೀ" ಇತಿ ಸ್ಮೃತಿಷ್ವಪಿ ದರ್ಶನಾಚ್ಚ. "ಬ್ರಹ್ಮಣಸ್ಸಾಯುಜ್ಯಂ ಸಲೋಕತಾಮಾಪ್ನೋತಿ" ಇತ್ಯಾದಿ ಶ್ರುತಿಷು ಅಂಗೋಪಾಸನಾಸನ್ನಿಧಿವಿದ್ಯಮಾನಾನಾಂ ಫಲಶ್ರುತೀನಾಂ ಪರಶಿವಬ್ರಹ್ಮಲೋಕಪ್ರಾಪ್ತಾವೇವ ತಾತ್ಪರ್ಯಾವಗಮಾತ್ ಕ್ಷುದ್ರಫಲೇಷ್ವವಾಂತರತಾತ್ಪರ್ಯಮಿತ್ಯುಪದಿಶ್ಯತೇ. "ಉಮಾಸಹಾಯಂ ಪರಮೇಶ್ವರಂ ಪ್ರಭುಂ ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ" "ಇತ್ಯಾದಿ ಶ್ರುತಿಷು ಸಗುಣಮೂರ್ತಬ್ರಹ್ಮೋಪಾಸನಾದೇವ ನಿರವಯವಸಾಕ್ಷಿರೂಪಪರಶಿವಪ್ರಾಪ್ತೇರ್ವ್ಯವಸ್ಥಾಪನಾತ್ ಸಗುಣೋಪಾಸನಾನಿ ಸರ್ವಾಣಿ ನಿರ್ಗುಣಬ್ರಹ್ಮಪ್ರಾಪ್ತ್ಯುಪಾಯಸಾಧನಾನೀತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಛಾಂದೋಗ್ಯವಾಜಸನೇಯಯೋಃ "ಜ್ಯೇಷ್ಠಂ ಚ ಶ್ರೇಷ್ಠಂ ಚ ಪ್ರಾಣಂ" ಇತ್ಯಾದಿನಾ ಪ್ರಾಣಾದ್ಯುಪಾಸನಾನಾಂ ಸರ್ವೇಷಾಂ ಬ್ರಹ್ಮಪ್ರಾಪ್ತಿಸಾಧನತ್ವೇನೋಪದೇಶಾತ್ ಸರ್ವೇಷಾಂ ತೇಷಾಂ ಸ್ವಾತಂತ್ರ್ಯೇಣ ಅಭ್ಯುದಯಫಲಹೇತುತ್ವಂ? ಉತ ಸಗುಣಮೂರ್ತ ಬ್ರಹ್ಮೋಪಾಸನಾಂಗತ್ವೇನ ತಲ್ಲೋಕಪ್ರಾಚುರ್ಯಕಲ್ಯಾಣವಿಭೂತಿ ಸಾಧನತ್ವಂ? ಅಪಿಚ ಸಗುಣಮೂರ್ತಸದಾಶಿವಬ್ರಹ್ಮೋಪಾಸನಾಂಗತ್ವೇನ ಅಮೂರ್ತಂ ಸ್ವಯಂಪ್ರಕಾಶಪರಂಜ್ಯೋತಿಸ್ಸ್ವರೂಪನಿಖಿಲಸಾಕ್ಷಿಕ ನಿರವಯವನಿತ್ಯಾನಂದಸ್ವಭಾವಕೈವಲ್ಯವಿಭೂತ್ಯಾತ್ಮಕಶಿವತತ್ತ್ವಪ್ರಾಪ್ತಿ ಕಾರಣಂ ವೇತಿ ಸಂದಿಹ್ಯತೇ. "ಸರ್ವ ಏತೇ ಪುಣ್ಯಲೋಕಾ ಭವಂತಿ" ಇತಿ ಶ್ರುತೌ ಸ್ವೇಚ್ಛಾನುಸಾರೇಣ ಸರ್ವೇಷಾಮುಪಾಸಕಾನಾಂ ತತ್ತಲ್ಲೋಕ ಪ್ರಾಪ್ತ್ಯುಪದೇಶಾತ್, "ಕರ್ಮಚಿತೋ ಲೋಕಃ ಕ್ಷೀಯತೇ" ಇತ್ಯಾದಿ ಶ್ರುತಿಷು ಕರ್ಮಫಲಾನಾಮನಿತ್ಯಫಲತ್ವವ್ಯಪದೇಶಾತ್ ಬಾಹ್ಯಾಭ್ಯಂತರಭೇದೇಽಪಿ ಪ್ರಾಣಾದ್ಯುಪಾಸನಾನಾಂ ಅಂತರಂಗತ್ವೇಽಪಿ ಜ್ಯೋತಿಷ್ಟೋಮಾದಿಪುಣ್ಯಕರ್ಮಣಾಮಿವ ಗುಣತ್ರಯಪ್ರಕೃತಿಕತ್ವೇನ ನಿಃಶ್ರೇಯಸಫಲಕತ್ವಮನುಪಪನ್ನಂ. "ಯದೇವ ಜ್ಞಾನಫಲಂ ತದೇವ ಕರ್ಮಫಲಂ" "ಯಸ್ಯೈತೇಽಷ್ಟಾಚತ್ವಾರಿಂಶತ್ಸಂಸ್ಕಾರಾಃ" ಇತ್ಯಾರಭ್ಯ "ಬ್ರಹ್ಮಣಸ್ಸಾಯುಜ್ಯಂ ಸಾಲೋಕ್ಯಂ ಚ ಗಚ್ಛತಿ" ಇತ್ಯಂತೇನ ನಿಷ್ಕಾಮಕೃತಪರಮೇಶ್ವರಾರ್ಪಿತಗರ್ಭಾಧಾನಾದಿಕರ್ಮಣಾಂ ತದನು-

ತ್ತದೆ ಎಂದು ಸ್ಪಷ್ಟಪಡುತ್ತದೆ. ಹೀಗೆಯೇ ತನ್ನ ಶಾಖೆಯಲ್ಲೂ ಬೇರೆ ಶಾಖೆಗಳಲ್ಲೂ ಹೇಳಿರುವುದರಿಂದ ಇಂತಹ ಪರಮಪುರುಷಾರ್ಥವನ್ನು ಪಡೆಯಲಿಕ್ಕಾಗಿ ಪರಮಾತ್ಮನ ಬಗ್ಗೆ ಕೇಳುತ್ತಲೂ ತಿಳಿಯುತ್ತಲೂ ಅವನನ್ನೇ ನಿರಂತರವೂ ವಿಚಾರಿಸುತ್ತಲೂ ಇರಬೇಕೆಂಬುದು ಸ್ಪಷ್ಟವಾಗುತ್ತದೆ.

ಉಪಕೋಸಲವಿದ್ಯಾಪ್ರಕರಣೇ ವಿದ್ಯಮಾನಮಾಹವನೀಯಗಾರ್ಹಪತ್ಯದಕ್ಷಿಣಾಗ್ನಿವಿಷಯಕಮುಪಾಸನತ್ರಯಂ, ಹಿರಣ್ಯಗರ್ಭೋಪಾಸನಮಿತ್ಯುಪಾಸನಚತುಷ್ಟಯಂ ಚ, ಏವಂ ಪ್ರತರ್ದನವಿದ್ಯಾಪ್ರಕರಣೇ ವಿದ್ಯಮಾನಂ ಜೀವಮುಖ್ಯಪ್ರಾಣಲಿಂಗವಿಷಯಮುಪಾಸನದ್ವಯಂ, ಏವಂ ಸರ್ವಾಸ್ವಪ್ಯುಪನಿಷತ್ಸು ಸಗುಣಬ್ರಹ್ಮೋಪಾಸನಸನ್ನಿಧೌ ವಿದ್ಯಮಾನಾನಿ ಬ್ರಹ್ಮವ್ಯತಿರಿಕ್ತಪದಾರ್ಥವಿಷಯಕಾಣಿ ಪ್ರಾಣಾದ್ಯುಪಾಸನಾನಿ, ಏವಂ ಭೂಮವಿದ್ಯಾಪ್ರಕರಣೇ ಪ್ರದರ್ಶಿತಾನಿ ಭೂಮಾದ್ಯುಪಾಸನಾನಿ, ಏವಂ ವೈಶ್ವಾನರವಿದ್ಯಾಪ್ರಕರಣೇ ವಿದ್ಯಮಾನಾನಿ ವೈಶ್ವಾನರಸ್ಯೈಕೈಕಸ್ಯಾವಯವವಿಶೇಷೋಪಾಸನಾನಿ ವೈಶ್ವಾನರೋಪಾಸನಾಂಗಾನಿ ವಾ ನವಾ? ಏವಂ ತತ್ತದುಪಾಸನಾಪ್ರಕರಣೇಷು ವಿದ್ಯಮಾನಾನಿ ಬ್ರಹ್ಮವ್ಯತಿರಿಕ್ತಪದಾರ್ಥವಿಷಯಕಾಣ್ಯುಪಾಸನಾನಿ ಚಿತ್ತಶುದ್ಧಿದ್ವಾರಾ ಮೂರ್ತಬ್ರಹ್ಮೋಪಾಸನಾಂಗಾನಿ ವಾ? ಸ್ವಾತಂತ್ರ್ಯೇಣ ಫಲಾಂತರಸಾಧನಾನಿ ವಾ ಸ್ಯುಃ? "ಯದುದ್ದಿಶ್ಯ ಯದ್ವಿಧೀಯತೇ ತಸ್ಯ ತದೇವ ಫಲಂ" ಇತಿ ನ್ಯಾಯೇನ "ನಾಸ್ತ್ಯಕೃತಃ ಕೃತೇನ" ಇತಿ ಶ್ರುತೌ ಕೃತಕರ್ಮಣಿ ಅಕೃತಮೋಕ್ಷಫಲನಿಷೇಧಾತ್ ಸರ್ವೇಷಾಂ ಕರ್ಮರೂಪೋಪಾಸನಾನಾಂ ನಿರ್ಗುಣಬ್ರಹ್ಮಾತ್ಮಕತ್ವಹೇತುತ್ವಾಯೋಗಾತ್, "ಪುಣ್ಯಚಿತೋ ಲೋಕಃ ಕ್ಷೀಯತೇ" ಇತಿವತ್ಸಕಾಮಜ್ಯೋತಿಷ್ಟೋಮಾದಿವತ್ ಅನಿತ್ಯಫಲತ್ವಮೇವೇತ್ಯಾಶಂಕಾಯಾಂ ಅಧಿಕರಣಾಂತರೇಣಾಹ. ಕಾರ್ಯಾಖ್ಯಾನಾಧಿಕರಣಂ ‖ ೫ ‖ ಕಾರ್ಯಾಖ್ಯಾನಾದಪೂರ್ವಂ ‖ ೧೮ ‖ ಪೂರ್ವಪ್ರಸ್ತುತಪ್ರಾಣವಿದ್ಯಾಶೇಷಭೂತಮಿದಾನೀಂ ಚಿಂತ್ಯತೇ. ತತ್ತತ್ಸಗುಣಮೂರ್ತಬ್ರಹ್ಮೋಪಾಸನಸನ್ನಿಧೌ ವಿಹಿತಾನಿ ಅಗ್ನಿತ್ರಯಜೀವಮುಖ್ಯಪ್ರಾಣನಾಮಾದಿವಿಷಯಕಾಣ್ಯುಪಾಸನಾನಿ ಪ್ರಕರಣಬಲಾತ್ತತ್ತತ್ಸಗುಣಮೂರ್ತಬ್ರಹ್ಮೋಪಾಸನಾಂಗಾನ್ಯೇವ, ನತು ಸ್ವಾತಂತ್ರ್ಯೇಣ ಫಲಸಾಧನಾನಿ. ತಥಾಚ ಕಾರ್ಯಾಖ್ಯಾನಾತ್ ಕಾರ್ಯಾಣಾಂ ಕರ್ತವ್ಯಾನಾಂ ಜೀವಮುಖ್ಯಪ್ರಾಣಲಿಂಗಾದಿವಿಷಯಕಾಣಾಂ ಅಂಗೋಪಾಸನಾನಾಂ ಆಖ್ಯಾನಾತ್ ಅನುಷ್ಠಾನಾದೇವ ಸಾಂಗಾತ್ಸಗುಣಮೂರ್ತಬ್ರಹ್ಮೋಪಾಸನಾತ್ ಅಪೂರ್ವಮದೃಷ್ಟಂ ಉತ್ಪದ್ಯತೇ. ತೇನ ನಿರವಯವನಿರತಿಶಯಾನಂದಪರಿಪೂರ್ಣಾಪರಿ

ಚ್ಛಿನ್ನಪರಶಿವಬ್ರಹ್ಮಪ್ರಾಪ್ತಿಸ್ಸಂಭವತಿ, ನತು ಸ್ವಾತಂತ್ರ್ಯೇಣ ಫಲಾಂತರಮನುಪಪನ್ನಂ. ತಸ್ಮಾತ್ಸಾಂಗೋಪಾಸನಾದೇವ ಸಗುಣಬ್ರಹ್ಮೋಪಾಸನಂ. ಸಗುಣಮೂರ್ತಬ್ರಹ್ಮೋಪಾಸನಾಂಗತ್ವೇನ ಅನುಷ್ಠಿತಪ್ರಾಣಾದ್ಯುಪಾಸನಾತ್ ಕ್ಷುದ್ರಫಲಮುಪ್ಯರ್ಥಾದುತ್ಪದ್ಯತೇ. "ಯದೇವ ಜ್ಞಾನಫಲಂ ತದೇವ ಕರ್ಮಫಲಂ" ಇತ್ಯಾದಿಶ್ರುತಿಷು "ಯಾದೃಶೀ ಭಾವನಾ ಯತ್ರ ಸಿದ್ಧಿರ್ಭವತಿ ತಾದೃಶೀ" ಇತಿ ಸ್ಮೃತಿಷ್ವಪಿ ದರ್ಶನಾಚ್ಚ. "ಬ್ರಹ್ಮಣಸ್ಸಾಯುಜ್ಯಂ ಸಲೋಕತಾಮಾಪ್ನೋತಿ" ಇತ್ಯಾದಿಶ್ರುತಿಷು ಅಂಗೋಪಾಸನಾಸನ್ನಿಧಿವಿದ್ಯಮಾನಾನಾಂ ಫಲಶ್ರುತೀನಾಂ ಪರಶಿವಬ್ರಹ್ಮಲೋಕಪ್ರಾಪ್ತಾವೇವ ತಾತ್ಪರ್ಯಾವಗಮಾತ್ ಕ್ಷುದ್ರಫಲೇಷ್ವವಾಂತರತಾತ್ಪರ್ಯಮಿತ್ಯುಪದಿಶ್ಯತೇ. "ಉಮಾಸಹಾಯಂ ಪರಮೇಶ್ವರಂ ಪ್ರಭುಂ ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ" "ಇತ್ಯಾದಿಶ್ರುತಿಷು ಸಗುಣಮೂರ್ತಬ್ರಹ್ಮೋಪಾಸನಾದೇವ ನಿರವಯವಸಾಕ್ಷಿರೂಪಪರಶಿವಪ್ರಾಪ್ತೇರ್ವ್ಯವಸ್ಥಾಪನಾತ್ ಸಗುಣೋಪಾಸನಾನಿ ಸರ್ವಾಣಿ ನಿರ್ಗುಣಬ್ರಹ್ಮಪ್ರಾಪ್ತ್ಯುಪಾಯಸಾಧನಾನೀತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಛಾಂದೋಗ್ಯವಾಜಸನೇಯಯೋಃ "ಜ್ಯೇಷ್ಠಂ ಚ ಶ್ರೇಷ್ಠಂ ಚ ಪ್ರಾಣಂ" ಇತ್ಯಾದಿನಾ ಪ್ರಾಣಾದ್ಯುಪಾಸನಾನಾಂ ಸರ್ವೇಷಾಂ ಬ್ರಹ್ಮಪ್ರಾಪ್ತಿಸಾಧನತ್ವೇನೋಪದೇಶಾತ್ ಸರ್ವೇಷಾಂ ತೇಷಾಂ ಸ್ವಾತಂತ್ರ್ಯೇಣ ಅಭ್ಯುದಯಫಲಹೇತುತ್ವಂ? ಉತ ಸಗುಣಮೂರ್ತಬ್ರಹ್ಮೋಪಾಸನಾಂಗತ್ವೇನ ತಲ್ಲೋಕಪ್ರಾಚುರ್ಯಕಲ್ಯಾಣವಿಭೂತಿಸಾಧನತ್ವಂ? ಅಪಿಚ ಸಗುಣಮೂರ್ತಸದಾಶಿವಬ್ರಹ್ಮೋಪಾಸನಾಂಗತ್ವೇನ ಅಮೂರ್ತಂ ಸ್ವಯಂಪ್ರಕಾಶಪರಂಜ್ಯೋತಿಸ್ಸ್ವರೂಪನಿಖಿಲಸಾಕ್ಷಿಕನಿರವಯವನಿತ್ಯಾನಂದಸ್ವಭಾವಕೈವಲ್ಯವಿಭೂತ್ಯಾತ್ಮಕಶಿವತತ್ತ್ವಪ್ರಾಪ್ತಿಕಾರಣಂ ವೇತಿ ಸಂದಿಹ್ಯತೇ. "ಸರ್ವ ಏತೇ ಪುಣ್ಯಲೋಕಾ ಭವಂತಿ" ಇತಿ ಶ್ರುತೌ ಸ್ವೇಚ್ಛಾನುಸಾರೇಣ ಸರ್ವೇಷಾಮುಪಾಸಕಾನಾಂ ತತ್ತಲ್ಲೋಕಪ್ರಾಪ್ತ್ಯುಪದೇಶಾತ್, "ಕರ್ಮಚಿತೋ ಲೋಕಃ ಕ್ಷೀಯತೇ" ಇತ್ಯಾದಿಶ್ರುತಿಷು ಕರ್ಮಫಲಾನಾಮನಿತ್ಯಫಲತ್ವವ್ಯಪದೇಶಾತ್ ಬಾಹ್ಯಾಭ್ಯಂತರಭೇದೇಽಪಿ ಪ್ರಾಣಾದ್ಯುಪಾಸನಾನಾಂ ಅಂತರಂಗತ್ವೇಽಪಿ ಜ್ಯೋತಿಷ್ಟೋಮಾದಿಪುಣ್ಯಕರ್ಮಣಾಮಿವ ಗುಣತ್ರಯಪ್ರಕೃತಿಕತ್ವೇನ ನಿಃಶ್ರೇಯಸಫಲಕತ್ವಮನುಪಪನ್ನಂ. "ಯದೇವ ಜ್ಞಾನಫಲಂ ತದೇವ ಕರ್ಮಫಲಂ" "ಯಸ್ಯೈತೇಽಷ್ಟಾಚತ್ವಾರಿಂಶತ್ಸಂಸ್ಕಾರಾಃ" ಇತ್ಯಾರಭ್ಯ "ಬ್ರಹ್ಮಣಸ್ಸಾಯುಜ್ಯಂ ಸಾಲೋಕ್ಯಂ ಚ ಗಚ್ಛತಿ" ಇತ್ಯಂತೇನ ನಿಷ್ಕಾಮಕೃತಪರಮೇಶ್ವರಾರ್ಪಿತಗರ್ಭಾಧಾನಾದಿಕರ್ಮಣಾಂ ತದನು

ಗ್ರಹತ್ವೇನ ನಿಶ್ರೇಯಸಫಲಪ್ರಾಪ್ತ್ಯವಗಮಾತ್ ಪುಣ್ಯಲೋಕಾಭಿಸಂಧಿಪೂರ್ವಕಕರ್ಮಣಾಂ ಸ್ವಾತಂತ್ರ್ಯೇಣ ತತ್ತಲ್ಲೋಕವಿಧಾಯಕತ್ವಮಿತಿ ಚೇತ್ ತಥಾಪ್ಯುಪಾಸನಾಯಾಃ ಗುಣವಿಷಯತ್ವಾತ್ ಕರ್ಮಣಾಮನಿತ್ಯತ್ವಭಾವಾಚ್ಚ ಸಗುಣಸಾವಯವನಿತ್ಯಸದಾಶಿವಬ್ರಹ್ಮಲೋಕಪ್ರಾಪ್ತಿಮಾತ್ರಮೇವೇತಿ ಪ್ರಾಪ್ತೇ ಪ್ರಚಕ್ಷ್ಮಹೇ. "ಕರ್ಮಚಿತೋ ಲೋಕಃ ಕ್ಷೀಯತೇ" ಇತ್ಯಾದಿಶ್ರುತಿಷು ಪ್ರಾಕೃತಕರ್ಮಜನ್ಯಪುಣ್ಯಾಪುಣ್ಯಲೋಕವಿಷಯತ್ವಂ. "ಸ್ಥಿರೇಭಿರಂಗೈಃ ಪುರುರೂಪ ಉಗ್ರಃ" ಇತ್ಯಾದಿಷು ಸಾವಯವಸದಾಶಿವಬ್ರಹ್ಮಾಂಗಸ್ಯ ನಿತ್ಯತ್ವವ್ಯವಸ್ಥಾಪನಾತ್ ತಲ್ಲೋಕಸ್ಯಾಪಿ ಪ್ರಾಕೃತಗುಣಧರ್ಮವೈಲಕ್ಷಣ್ಯತ್ವಾತ್ "ಪಾದೋಽಸ್ಯ ವಿಶ್ವಭೂತಾನಿ ತ್ರಿಪಾದಸ್ಯಾಮೃತಂ ದಿವಿ" ಇತಿ ಸತ್ಯಚಿತ್ಸುಖಾತ್ಮಕತ್ರಿಪಾದ್ವಿಭೂತಿನಾಮಕಸದಾಶಿವಲೋಕಸ್ಯ ನಿತ್ಯತ್ವಾವಗಮಾತ್ ತಸ್ಯ ತಲ್ಲೋಕಸ್ಯ ಚ ನಿತ್ಯತ್ವಮನಿವಾರ್ಯಂ. "ಏಷ ಸಂಪ್ರಸಾದೋಽಸ್ಮಾತ್ ಶರೀರಾತ್ ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" "ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ" ಇತಿ ತೈತ್ತಿರೀಯಕೈವಲ್ಯಯೋಶ್ಚ ಸರ್ವೇಷಾಂ ಸಾವಯವಸದಾಶಿವಬ್ರಹ್ಮೋಪಾಸಕಾನಾಂ ನಿಷ್ಕಾಮಭಕ್ತಾನಾಂ ತದನುಗ್ರಹದ್ವಾರಾ ತತ್ರ ಕಲ್ಯಾಣವಿಭೂತ್ಯಾತ್ಮಕನಿತ್ಯೈಶ್ವರ್ಯವಿಧಾಯಕಸಾಲೋಕ್ಯಸಾಮೀಪ್ಯಸಾರೂಪ್ಯಾತ್ಮಕಪರಮಾನಂದಕರತಲ್ಲೋಕಭೋಗಮನುಭೂಯ ಪುನಸ್ತದನುಗ್ರಹೇಣ ನಿರತಿಶಯನಿರಾವರಣನಿರಂಜನನಿರುಪಮಾನನಿರ್ದೇಹಶಿವತತ್ತ್ವಕೈವಲ್ಯವಿಭೂತಿಪ್ರಾಪ್ತಿಂ ತಲ್ಲೋಕಾದೇವ ಪ್ರಾಪ್ನೋತೀತಿ ನಿಶ್ಚೀಯತೇ. ತಸ್ಮಾದ್ಗತಿಸಾಮಾನ್ಯನ್ಯಾಯೇನ ಸರ್ವೇಷಾಮುಪಾಸನಾನಾಂ ಬ್ರಹ್ಮಪ್ರಾಪ್ತಿಫಲಮರ್ಥಾತ್ಸಿದ್ಧಂ. ಕಿಂಚ "ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ ।
ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥" ಇತ್ಯಾದಿಶ್ರುತಿಷು ಸರ್ವಕಾಮವಿನಿರ್ಮುಕ್ತಾನಾಂ ದಹರಾದಿವಿದ್ಯೋಪಾಸಕಾನಾಂ ಅಯಸ್ಕಾಂತಸೂಚೀನ್ಯಾಯೇನ ನಿರಂತರಾನವಚ್ಛಿನ್ನಜ್ಞಾನನಿಷ್ಠಾಗರಿಷ್ಠಾನುಷ್ಠಾನವಿಶಿಷ್ಟಾನಾಂ ಚರಮಶರೀರಿಣಾಂ ಸರ್ವದಾ ಸರ್ವಶಿವೈಕಭಾವಾಸನ್ನಾನಾಂ ಇಹಲೋಕೇ ತು ನಿರುಪಮಾನನಿರಂಜನನಿರ್ವಿಕಾರಪರಶಿವಜ್ಯೋತಿರ್ಲಿಂಗೈಕ್ಯಮುಪದಿಷ್ಟಂ. ಮುಕ್ತದಶಾಯಾಮಪಿ ತದ್ಭಿನ್ನತ್ವೇನ ವ್ಯವಸ್ಥಿತ ಇತಿ ಚೇತ್ "ತದನನ್ಯತ್ವಮಾರಂಭಣಶಬ್ದಾದಿಭ್ಯಃ," "ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ" "ಇತ್ಯಾದಿದ್ವೈತಾದ್ವೈತವಿಧಾಯಕವೈಯಾಸಿಕಸೂತ್ರಶ್ರುತಿ

ವಿರೂಢೋ ದುರ್ನಿವಾರಃ ". "ವಾಚಾರಂಭಣಂ ವಿಕಾರೋ ನಾಮ ಧೇಯಂ" ಇತ್ಯತ್ರ ವಿಕಾರೋ ನಾಮಧೇಯಂ ಚ ವಾಚಾರಂಭಣಂ ವಾಚಾಯಾಃ ಅಭಿಲಷಿತಾರ್ಥಕ್ರಿಯಾರೂಪವ್ಯವಹಾರಸುನಿಷ್ಪಾದಕೋ ಭವತಿ. ಮೃದ್ದ್ರವ್ಯಸ್ಯೈವ ಘಟಾವಸ್ಥಾ. ಘಟಾದಿ ನಾಮಧೇಯಂ ಚ ವಿಕಾರಃ. ಘಟೋ ವಾಚಾರಂಭಣಂ ಘಟೋಽಯಮಿತಿ ವಾಗಾರಂಭಣವಿಷಯಮಾತ್ರಂ. ಮೃದಸ್ಯ ಏವ ವ್ಯವಹಾರಸಿದ್ಧ್ಯರ್ಥಂ ಜಾಯಮಾನಮವಸ್ಥಾಂತರಂ ನ ತು ಮೃದೋದ್ರ್ರವ್ಯಾಂತರಂ. ಮೃತ್ತಿಕೇತ್ಯೇವ ನಾಮಧೇಯಂ ಸತ್ಯಂ. ಘಟಾದಿಕಂ ಮೃತ್ತಿಕೇತಿ ಕೃತ್ವೈವ ತತ್ರ ಸರ್ವಮೃದ್ಘಟಾದಿನಾಮಧೇಯಂ ಸತ್ಯಂ. ಸತಿ ಪ್ರಾಮಾಣಿಕಾರ್ಥೇ ಸಾಧನಂ ತು ದ್ರವ್ಯಾಂತರಮಿತಿ ಕೃತ್ವಾ ಯತೋ ಘಟೋ ಮೃದೇವೇತ್ಯತಃ ಕಾರಣಾದನನ್ಯದೇವ ಕಾರ್ಯಂ. ಅರ್ಥಕ್ರಿಯಾದಿವ್ಯವಹಾರಭೇದಸ್ತು ಮೃದ್ಘಟಯೋರ್ವ್ಯವಸ್ಥಾಭೇದಾದ್ಭವತ್ಯೇವ. ತತೋ ಮೃದ್ಘಟಯೋರಿವ ಬ್ರಹ್ಮಪ್ರಪಂಚಯೋರಪಿ ವ್ಯಾಪ್ಯವ್ಯಾಪಕಭಾವಾದನನ್ಯತ್ವಂ. ತಥಾಚ ಸ್ಮೃತಿಃ. "ಶಕ್ತ್ಯಾದಿ ಚ ಪೃಥಿವ್ಯಂತಂ ಶಿವತತ್ತ್ವಸಮುದ್ಭವಂ।ತೇನೈಕೇನ ಚ ತದ್ವ್ಯಾಪ್ತಂ ಮೃದಾ ಘಟಾದಿಕಂ ಯಥಾ॥" ಇತಿ ದರ್ಶನಾತ್ ಜೀವಪಪ್ರಂಚಬ್ರಹ್ಮಣಾಂ ಸದಾ ಭೇದ ಇತಿ ನೈಯಾಯಿಕಾದಿದುರ್ವಾದೋ ನಿರಸ್ತಃ. ಯದಾ ಮೃದಯಂ ಘಟಃ ಇತ್ಯತ್ರ ಮೃದ್ವ್ಯಾಪ್ತಿರ್ಘಟೇ ದೃಶ್ಯತೇ ತಥಾ "ಬ್ರಹ್ಮೇದಂ ಜಗತ್" ಇತಿ ಬ್ರಹ್ಮವ್ಯಾಪ್ತಿರ್ನ ದೃಶ್ಯತ ಇತಿ ಚೇತ್ "ಘಟಸ್ಸ್ಫುರ್ತಿ ಪಟಸ್ಸ್ಫುರ್ತಿ" ಇತಿ ಸರ್ವತ್ರ ದೃಶ್ಯತ ಏವ. ಸದ್ರೂಪೇಣ ಬ್ರಹ್ಮಣೋ ವ್ಯಾಪ್ತಿಃ ಸದ್ರೂಪೇಣ ಶಿವೇನ ಯದಿ ನ ವ್ಯಾಪ್ತಂ ಜಗತ್ ತದಾ ಸತ್ತಾಸ್ಫೂರ್ತಿಭ್ಯಾಂ ವಿನಾಕೃತಂ ಕಥಂ ವಾ ಅಸ್ತಿ ಸ್ಫುರತಿ ಇತಿ ದೃಶ್ಯತೇ. ಅತಶ್ಚೇತನಾಚೇತನಪ್ರಪಂಚಬ್ರಹ್ಮಣೋರ್ಭೇದ ಏವ ಘಂಟಾಘೋಷಃ.

ಉಪಕೋಸಲವಿದ್ಯಾಪ್ರಕರಣದಲ್ಲಿ ಆಹವನೀಯ ಗಾರ್ಹಪತ್ಯ ದಕ್ಷಿಣಾಗ್ನಿಗಳ ಉಪಾಸನವನ್ನೂ, ಹಾಗೆಯೇ ಹಿರಣ್ಯಗರ್ಭನ ಉಪಾಸನವನ್ನೂ ಹೇಳಿದೆ. ಪ್ರತರ್ದನವಿದ್ಯಾಪ್ರಕರಣದಲ್ಲಿ ಜೀವನಿಗೆ ಮುಖ್ಯವೆನಿಸಿದ ಭಾವಲಿಂಗದ ಮತ್ತು ಪ್ರಾಣಲಿಂಗದ ಉಪಾಸನಗಳೆರಡನ್ನು ಹೇಳಿದೆ. ಇದರಂತೆ ಎಲ್ಲಾ ಉಪನಿಷತ್ತುಗಳಲ್ಲೂ ಸಗುಣಬ್ರಹ್ಮದ ಉಪಾಸನದೊಡನೆಯೇ ಬ್ರಹ್ಮಕ್ಕಿಂತ ಬೇರೆಯಾದ ಪ್ರಾಣಾದಿಗಳ ಉಪಾಸನವನ್ನೂ, ಭೂಮವಿದ್ಯಾಪ್ರಕರಣದಲ್ಲಿ ಭೂಮೋಪಾಸನವನ್ನೂ ಹೇಳಲಾಗಿದೆ. ಹೀಗೆಯೇ ವೈಶ್ವಾನರವಿದ್ಯಾಪ್ರಕರಣದಲ್ಲಿ ವೈಶ್ವಾನರೋಪಾಸನದ ಅಂಗವಾಗಿ ಅನೇಕ ಉಪಾಸನಗಳನ್ನು ಹೇಳಲಾಗಿದೆ. ಇದರಂತೆ ಎಲ್ಲಾ ಉಪಾಸನಪ್ರಕರಣವಲ್ಲೂ ಹೇಳಿರುವ ಬ್ರಹ್ಮವಲ್ಲದೆ ಬೇರೆ ವಸ್ತುಗಳ ಉಪಾಸನಗಳು

ಚಿತ್ತಶುದ್ಧಿಯ ಮೂಲಕ ಮೂರ್ತಬ್ರಹ್ಮದ ಉಪಾಸನಕ್ಕೆ ಅಂಗವಾಗಿಯೋ, ಅಥವಾ ಸ್ವತಂತ್ರವಾಗಿ ಬೇರೆ ಫಲಗಳನ್ನು ಕೊಡಲಿಕ್ಕಾಗಿಯೋ ಬಂದಿವೆ. ಯಾವುದನ್ನು ಉದ್ದೇಶಿಸಿ ಯಾವುದನ್ನು ಮಾಡುತ್ತೇವೆಯೋ ಅದಕ್ಕೆ ಅದೇ ಫಲವಾಗುವುದೆಂಬ ನ್ಯಾಯದಿಂದ " ನಾಸ್ತ್ಯಕೃತಃ ಕೃತೇನ " ಎಂಬಲ್ಲಿ ಮಾಡಿದ ಕರ್ಮದಿಂದ ಸ್ವತಸ್ಸಿದ್ಧವಾದ ಮೋಕ್ಷವು ಲಭಿಸಲಾರದೆಂದು ಹೇಳಿದ್ದರಿಂದಲೂ, ಕರ್ಮರೂಪವಾದ ಉಪಾಸನಗಳೆಲ್ಲಕ್ಕೂ ನಿರ್ಗುಣಬ್ರಹ್ಮವನ್ನು ದೊರಕಿಸಲು ಸಾಧ್ಯವಾಗದಿರುವುದರಿಂದಲೂ "ಪುಣ್ಯದಿಂದ ಗಳಿಸಿದ ಲೋಕವು ನಶಿಸುತ್ತದೆ " ಎಂಬಂತೆಯೂ ಫಲಾಪೇಕ್ಷೆಯಿಂದ ಮಾಡಿದ ಜ್ಯೋತಿಷ್ಟೋಮದಂತೆಯೂ ಸಗುಣೋಪಾಸನಗಳು ಅನಿತ್ಯಫಲವನ್ನೇ ಕೊಡುತ್ತವೆ ಎಂದಾಶಂಕಿಸಿ ಸಮಾಧಾನಮಾಡುತ್ತಾನೆ. ಹಿಂದೆ ಹೇಳಿದ ಪ್ರಾಣವಿದ್ಯೆಯಲ್ಲಿ ಉಳಿದಿದ್ದ ಅಂಶವನ್ನು ಇಲ್ಲಿ ತಿಳಿಸಲಾಗಿದೆ. ಆಯಾ ಸಗುಣೋಪಾಸನದೊಳಗೆ ಹೇಳಿರುವ ಅಗ್ನಿತ್ರಯದ, ಜೀವಮುಖ್ಯಪ್ರಾಣದ ಮತ್ತು ನಾಮಾದಿಗಳ ಉಪಾಸನಗಳು ಪ್ರಕರಣಬಲದಿಂದ ಆಯಾಯ ಸಗುಣೋಪಾಸನಕ್ಕೆ ಅಂಗವಾಗುತ್ತವೆಯೇ ಹೊರತು ಸ್ವತಂತ್ರವಾಗಿ ಫಲವನ್ನು ದೊರಕಿಸುವುದಿಲ್ಲ. ಹೇಗೆಂದರೆ ಅಲ್ಲಲ್ಲಿ ಮಾಡಬೇಕಾದ ಜೀವಮುಖ್ಯಪ್ರಾಣಲಿಂಗ ಮೊದಲಾದ ಅಂಗೋಪಾಸನಗಳನ್ನು ಆಚರಿಸುವುದರಿಂದ ಸಗುಣೋಪಾಸನವು ಅಂಗಸಹಿತವಾಗುವುದು. ಇದರಿಂದ ಅಪೂರ್ವವೆಂಬ ಅದೃಷ್ಟವು ಹುಟ್ಟುತ್ತದೆ. ಆದರಿಂದ ಸಾಧಕನು ನಿರವಯುವವೂ ನಿರತಿಶಯವೂ ಆದ ಆನಂದದಿಂದ ಕೂಡಿದ ಪರಶಿವಬ್ರಹ್ಮವನ್ನು ಹೊಂದುತ್ತಾನೆ. ಹೀಗೆ ಕರ್ಮವು ಸ್ವತಂತ್ರವಾಗಿ ಫಲವನ್ನು ಕೊಡುವುದೆಂಬುದು ಯುಕ್ತವಲ್ಲವಾದ್ದರಿಂದ ಅಂಗಸಹಿತವಾದ ಉಪಾಸನದಿಂದಲೇ ಸಗುಣಬ್ರಹ್ಮದ ಉಪಾಸನವು ನಡೆಯಬೇಕಾಗಿದೆ ಇಂತಹ ಉಪಾಸನದ ಅಂಗವಾಗಿ ಆಚರಿಸಿದ ಪ್ರಾಣೋಪಾಸನದಿಂದ ಅಲ್ಪವಾದ ಐಹಿಕಫಲವೂ ದೊರಕುತ್ತದೆ. " ಜ್ಞಾನದ ಫಲವೇ ಕರ್ಮಕ್ಕೂ ಫಲವಾಗುತ್ತದೆ " ಎಂದು ಶ್ರುತಿಯಲ್ಲೂ, " ಭಾವನೆಗೆ ತಕ್ಕಂತೆ ಸಿದ್ಧಿಯಾಗುವುದು " ಎಂದು ಸ್ಮೃತಿಗಳಲ್ಲೂ ಹೇಳಲಾಗಿದೆ. " ಬ್ರಹ್ಮಸಾಯುಜ್ಯವನ್ನೂ ಸಾಲೋಕ್ಯವನ್ನೂ ಹೊಂದುತ್ತಾನೆ " ಎಂಬ ಶ್ರುತಿಗಳಲ್ಲಿ ಅಂಗೋಪಾಸನದ ಪಕ್ಷದಲ್ಲಿಯೇ ಹೇಳಿರುವ ಶ್ರುತಿಗಳಿಗೂ ಸಾಲೋಕ್ಯದಲ್ಲಿಯೇ ತಾತ್ಪರ್ಯವಿರುವುದರಿಂದ ಅಲ್ಪಫಲಗಳನ್ನು ಅವಾಂತರ ಫಲಗಳೆಂದೇ ಭಾವಿಸಲಾಗಿದೆ. " ದಿವ್ಯಮಂಗಳವಿಗ್ರಹನಾದ ಸಾಂಬಶಿವನನ್ನು ಧ್ಯಾನಿಸಿ ಮುನಿಯು ನಿಷ್ಕಲಪರಶಿವನಲ್ಲಿ ಸೇರುತ್ತಾನೆ " ಎಂಬ ಶ್ರುತಿಯಲ್ಲಿ ಸಗುಣೋಪಾಸನದಿಂದಲೇ ನಿರವಯುವವೂ ಸರ್ವಸಾಕ್ಷಿಯೂ ಆದ ಪರಮಶಿವನಲ್ಲಿ ಸಾಮರಸ್ಯವನ್ನು ಹೇಳಿರುವುದರಿಂದ ಸಗುಣೋಪಾಸನಗಳೆಲ್ಲವೂ ನಿರ್ಗುಣಬ್ರಹ್ಮಪ್ರಾಪ್ತಿಗೆ ಸಾಧನಗಳೆನಿಸಿವೆ ಎಂಬುದು ಸೂತ್ರದ ಸೂಕ್ಷ್ಮಾರ್ಥ. ಛಾಂದೋಗ್ಯ ಮತ್ತು ವಾಜಸನೇಯಗಳಲ್ಲಿ ಪ್ರಾಣಾದ್ಯುಪಾಸನಗಳೆಲ್ಲವನ್ನೂ ಪರಶಿವಬ್ರಹ್ಮಪ್ರಾಪ್ತಿಗೆ ಸಾಧನವೆಂದು ಹೇಳಿದ್ದರಿಂದಲೂ ಅವೆಲ್ಲವೂ ಸ್ವತಂತ್ರವಾಗಿ ಅಭ್ಯುದಯವನ್ನು ದೊರಕಿಸುತ್ತವೆಯೆ ?

ಅಥವಾ ಸಗುಣೋಪಾಸನದ ಅಂಗವೆನಿಸಿ ಬ್ರಹ್ಮಲೋಕದಲ್ಲಿ ಕಲ್ಯಾಣವಿಭೂತಿಯನ್ನು ದೊರಕಿಸುತ್ತವೆಯೆ? ಅಥವಾ ಸಗುಣಮೂರ್ತಿಯಾದ ಸದಾಶಿವನ ಉಪಾಸನಕ್ಕೆ ಅಂಗ ವೆನಿಸಿ ಅಮೂರ್ತವೂ ಸ್ವಯಂಪ್ರಕಾಶವೂ ಪರಂಜ್ಯೋತಿಸ್ವರೂಪವೂ ಸರ್ವಸಾಕ್ಷಿಯೂ ನಿರವಯವನಿತ್ಯಾನಂದರೂಪವೂ ಆದ ಕೈವಲ್ಯವಿಭೂತಿಯನ್ನು ದೊರಕಿಸುತ್ತವೆಯೆ? ಎಂದು ಸಂದೇಹ ಬರುತ್ತದೆ. "ಇವರೆಲ್ಲರೂ ಪುಣ್ಯಾತ್ಮರು" ಎಂಬಲ್ಲಿ ಉಪಾಸಕ ರೆಲ್ಲರೂ ಸ್ವೇಚ್ಛೆಯಿಂದ ಅವರವರ ಲೋಕಗಳನ್ನು ಹೊಂದುವರೆಂದು ಹೇಳಿದೆ. "ಕರ್ಮದಿಂದ ಗಳಿಸಿದ ಲೋಕವು ನಶಿಸುತ್ತದೆ" ಎಂಬ ಶ್ರುತಿಯಲ್ಲಿ ಕರ್ಮಫಲಗಳನ್ನು ಅನಿತ್ಯವೆಂದು ಹೇಳಿದೆ. ಆದ್ದರಿಂದ ಉಪಾಸನಗಳಲ್ಲಿ ಒಳಗಿನವು ಮತ್ತು ಹೊರಗಿ ನವು ಎಂದು ಭೇದವಿದ್ದರೂ ಪ್ರಾಣೋಪಾಸನಗಳು ಒಳಗಿನವೇ ಆದರೂ ಜ್ಯೋತಿ ಷ್ಟೋಮ ಮೊದಲಾದ ಪುಣ್ಯಕರ್ಮಗಳಂತೆ ತ್ರಿಗುಣಾತ್ಮಕವೇ ಆದ್ದರಿಂದ ಮೋಕ್ಷ ವನ್ನು ದೊರಕಿಸುತ್ತವೆ ಎಂಬುದನ್ನು ನಂಬಲಾಗುವುದಿಲ್ಲ. "ಜ್ಞಾನಕ್ಕೆ ಯಾವುದೂ ಫಲವೋ ಅದೇ ಕರ್ಮಕ್ಕೂ ಫಲವಾಗುತ್ತದೆ." "ಯಾವನಿಗೆ ನಲ್ವತ್ತೆಂಟು ಸಂಸ್ಕಾರ ಗಳಾಗಿರುವುವೋ ಅವನು ಬ್ರಹ್ಮಸಾಯುಜ್ಯವನ್ನೂ ಸಾಲೋಕ್ಯವನ್ನೂ ಹೊಂದು ತ್ತಾನೆ" ಎಂಬಲ್ಲಿ ನಿಷ್ಕಾಮಭಾವದಿಂದ ಈಶ್ವರಪ್ರೀತಿಗಾಗಿ ಮಾಡಿದ ಗರ್ಭಾಧಾ ನಾದಿಕರ್ಮಗಳೆಲ್ಲವೂ ಈಶ್ವರಾನುಗ್ರಹದಿಂದ ಮೋಕ್ಷವನ್ನು ದೊರಕಿಸುತ್ತವೆ ಎಂದು ತಿಳಿದುಬಂದಿರುವುದರಿಂದ ಪುಣ್ಯಲೋಕವನ್ನು ಹೊಂದುವ ದೃಷ್ಟಿಯಿಂದ ಮಾಡಿದ ಕರ್ಮಗಳು ಸ್ವತಂತ್ರವಾಗಿಯೇ ಆಯಾ ಲೋಕವನ್ನು ದೊರಕಿಸುತ್ತವೆ ಎಂದು ಹೇಳುವುದಾದರೆ, ಹಾಗಾದರೂ ಉಪಾಸನೆಯು ಸಗುಣವೇ ಆದ್ದರಿಂದಲೂ, ಕರ್ಮ ಗಳು ಅನಿತ್ಯವಾದ್ದರಿಂದಲೂ, ಸಗುಣನೂ ಸಾವಯವನೂ ನಿತ್ಯನೂ ಆದ ಸದಾಶಿವನ ಲೋಕವನ್ನು ಸೇರುವುದೇ ಮುಕ್ತಿ ಎನಿಸುತ್ತದೆ ಎಂದು ಆಕ್ಷೇಪ ಬಂದರೆ ಸಮಾಧಾನ ವನ್ನು ಮುಂದೆ ತಿಳಿಸಲಾಗುವುದು. "ಕರ್ಮದಿಂದ ಗಳಿಸಿದ ಲೋಕವು ನಶಿಸುತ್ತದೆ." ಈ ಬಗೆಯ ಶ್ರುತಿಗಳು ಪ್ರಾಕೃತಕರ್ಮದಿಂದ ದೊರಕುವ ಪುಣ್ಯಪಾಪಲೋಕಗಳಿಗೆ ಅನ್ವಯಿಸುತ್ತವೆ. "ಸ್ಥಿರವಾದ ಅವಯುವಗಳಿಂದ ರುದ್ರನು ವಿಸ್ತಾರವೂ ಉಗ್ರವೂ ಆಗಿದ್ದಾನೆ" ಎಂಬಲ್ಲಿ ಸಾವಯವನಾದ ಸದಾಶಿವನ ಅವಯುವಗಳನ್ನು ನಿತ್ಯವೆಂದು ವ್ಯವಸ್ಥೆಗೊಳಿಸಿರುವುದರಿಂದಲೂ, ಆ ಲೋಕವೂ ಸಹ ತ್ರಿಗುಣಾತೀತವಾಗಿರುವುದ ರಿಂದಲೂ, "ಅವನ ತ್ರಿಪಾದಗಳು ಪರಾಕಾಶದಲ್ಲಿ ಅಮೃತಮಯವಾಗಿವೆ" ಎಂಬಲ್ಲಿ ಸಚ್ಚಿದಾನಂದರೂಪವಾದ ತ್ರಿಪಾದ್ವಿಭೂತಿ ಎಂಬ ಸದಾಶಿವಲೋಕವು ನಿತ್ಯವೆಂದು ತಿಳಿದುಬರುವುದರಿಂದಲೂ, ಅವನೂ ಮತ್ತು ಅವನ ಲೋಕವೂ ನಿತ್ಯವೆಂಬುದು ಸಿದ್ಧವಾಗುತ್ತದೆ. "ಮುಕ್ತನು ಈ ದೇಹದಿಂದ ಹೊರಟು ಪರಂಜ್ಯೋತಿಯನ್ನು ಸೇರಿ ತನ್ನ ವಾಸ್ತವಸ್ಥಿತಿಯನ್ನು ಪಡೆಯುತ್ತಾನೆ. ಅವನೇ ಉತ್ತಮಪುರುಷನು" ಎಂದು ಛಾಂದೋಗ್ಯದಲ್ಲಿ ಹೇಳಿದೆ. "ವೇದಾಂತವಿಜ್ಞಾನದಿಂದ ವಸ್ತುಸ್ಥಿತಿಯನ್ನು ತಿಳಿದು ಸನ್ಯಾಸಯೋಗದಿಂದ ಶುದ್ಧರಾದ ಯತಿಗಳು ದೇಹಾಭಿಮಾನವನ್ನು ತೊರೆದು

ಚಿತ್ತಶುದ್ಧಿಯ ಮೂಲಕ ಮೂರ್ತಬ್ರಹ್ಮದ ಉಪಾಸನಕ್ಕೆ ಅಂಗವಾಗಿಯೋ, ಅಥವಾ ಸ್ವತಂತ್ರವಾಗಿ ಬೇರೆ ಫಲಗಳನ್ನು ಕೊಡಲಿಕ್ಕಾಗಿಯೋ ಬಂದಿವೆ. ಯಾವುದನ್ನು ಉದ್ದೇಶಿಸಿ ಯಾವುದನ್ನು ಮಾಡುತ್ತೇವೆಯೋ ಅದಕ್ಕೆ ಅದೇ ಫಲವಾಗುವುದೆಂಬ ನ್ಯಾಯದಿಂದ " ನಾಸ್ತ್ಯಕೃತಃ ಕೃತೇನ " ಎಂಬಲ್ಲಿ ಮಾಡಿದ ಕರ್ಮದಿಂದ ಸ್ವತಸ್ಸಿದ್ಧವಾದ ಮೋಕ್ಷವು ಲಭಿಸಲಾರದೆಂದು ಹೇಳಿದ್ದರಿಂದಲೂ, ಕರ್ಮರೂಪವಾದ ಉಪಾಸನಗಳೆಲ್ಲಕ್ಕೂ ನಿರ್ಗುಣಬ್ರಹ್ಮವನ್ನು ದೊರಕಿಸಲು ಸಾಧ್ಯವಾಗದಿರುವುದರಿಂದಲೂ "ಪುಣ್ಯದಿಂದ ಗಳಿಸಿದ ಲೋಕವು ನಶಿಸುತ್ತದೆ " ಎಂಬಂತೆಯೂ ಫಲಾಪೇಕ್ಷೆಯಿಂದ ಮಾಡಿದ ಜ್ಯೋತಿಷ್ಟೋಮದಂತೆಯೂ ಸಗುಣೋಪಾಸನಗಳು ಅನಿತ್ಯಫಲವನ್ನೇ ಕೊಡುತ್ತವೆ ಎಂದಾಶಂಕಿಸಿ ಸಮಾಧಾನಮಾಡುತ್ತಾನೆ. ಹಿಂದೆ ಹೇಳಿದ ಪ್ರಾಣವಿದ್ಯೆಯಲ್ಲಿ ಉಳಿದಿದ್ದ ಅಂಶವನ್ನು ಇಲ್ಲಿ ತಿಳಿಸಲಾಗಿದೆ. ಆಯಾ ಸಗುಣೋಪಾಸನದೊಳಗೆ ಹೇಳಿರುವ ಅಗ್ನಿತ್ರಯದ, ಜೀವಮುಖ್ಯಪ್ರಾಣದ ಮತ್ತು ನಾಮಾದಿಗಳ ಉಪಾಸನಗಳು ಪ್ರಕರಣಬಲದಿಂದ ಆಯಾಯ ಸಗುಣೋಪಾಸನಕ್ಕೆ ಅಂಗವಾಗುತ್ತವೆಯೇ ಹೊರತು ಸ್ವತಂತ್ರವಾಗಿ ಫಲವನ್ನು ದೊರಕಿಸುವುದಿಲ್ಲ. ಹೇಗೆಂದರೆ ಅಲ್ಲಲ್ಲಿ ಮಾಡಬೇಕಾದ ಜೀವಮುಖ್ಯಪ್ರಾಣಲಿಂಗ ಮೊದಲಾದ ಅಂಗೋಪಾಸನಗಳನ್ನು ಆಚರಿಸುವುದರಿಂದ ಸಗುಣೋಪಾಸನವು ಅಂಗಸಹಿತವಾಗುವುದು. ಇದರಿಂದ ಅಪೂರ್ವವೆಂಬ ಅದೃಷ್ಟವು ಹುಟ್ಟುತ್ತದೆ. ಅದರಿಂದ ಸಾಧಕನು ನಿರವಯವವೂ ನಿರತಿಶಯವೂ ಆದ ಆನಂದದಿಂದ ಕೂಡಿದ ಪರಶಿವಬ್ರಹ್ಮವನ್ನು ಹೊಂದುತ್ತಾನೆ. ಹೀಗೆ ಕರ್ಮವು ಸ್ವತಂತ್ರವಾಗಿ ಫಲವನ್ನು ಕೊಡುವುದೆಂಬುದು ಯುಕ್ತವಲ್ಲವಾದ್ದರಿಂದ ಅಂಗಸಹಿತವಾದ ಉಪಾಸನದಿಂದಲೇ ಸಗುಣಬ್ರಹ್ಮದ ಉಪಾಸನವು ನಡೆಯಬೇಕಾಗಿದೆ ಇಂತಹ ಉಪಾಸನದ ಅಂಗವಾಗಿ ಆಚರಿಸಿದ ಪ್ರಾಣೋಪಾಸನದಿಂದ ಅಲ್ಪವಾದ ಐಹಿಕಫಲವೂ ದೊರಕುತ್ತದೆ. " ಜ್ಞಾನದ ಫಲವೇ ಕರ್ಮಕ್ಕೂ ಫಲವಾಗುತ್ತದೆ " ಎಂದು ಶ್ರುತಿಯಲ್ಲೂ, " ಭಾವನೆಗೆ ತಕ್ಕಂತೆ ಸಿದ್ಧಿಯಾಗುವುದು " ಎಂದು ಸ್ಮೃತಿಗಳಲ್ಲೂ ಹೇಳಲಾಗಿದೆ. " ಬ್ರಹ್ಮಸಾಯುಜ್ಯವನ್ನೂ ಸಾಲೋಕ್ಯವನ್ನೂ ಹೊಂದುತ್ತಾನೆ " ಎಂಬ ಶ್ರುತಿಗಳಲ್ಲಿ ಅಂಗೋಪಾಸನದ ಪಕ್ಷದಲ್ಲಿಯೇ ಹೇಳಿರುವ ಶ್ರುತಿಗಳಿಗೂ ಸಾಲೋಕ್ಯದಲ್ಲಿಯೇ ತಾತ್ಪರ್ಯವಿರುವುದರಿಂದ ಅಲ್ಪಫಲಗಳನ್ನು ಅವಾಂತರ ಫಲಗಳೆಂದೇ ಭಾವಿಸಲಾಗಿದೆ. " ದಿವ್ಯಮಂಗಳವಿಗ್ರಹನಾದ ಸಾಂಬಶಿವನನ್ನು ಧ್ಯಾನಿಸಿ ಮುನಿಯು ನಿಷ್ಕಲಪರಶಿವನಲ್ಲಿ ಸೇರುತ್ತಾನೆ " ಎಂಬ ಶ್ರುತಿಯಲ್ಲಿ ಸಗುಣೋಪಾಸನದಿಂದಲೇ ನಿರವಯವವೂ ಸರ್ವಸಾಕ್ಷಿಯೂ ಆದ ಪರಮಶಿವನಲ್ಲಿ ಸಾಮರಸ್ಯವನ್ನು ಹೇಳಿರುವುದರಿಂದ ಸಗುಣೋಪಾಸನಗಳೆಲ್ಲವೂ ನಿರ್ಗುಣಬ್ರಹ್ಮಪ್ರಾಪ್ತಿಗೆ ಸಾಧನಗಳೆನಿಸಿವೆ ಎಂಬುದು ಸೂತ್ರದ ಸೂಕ್ಷ್ಮಾರ್ಥ. ಛಾಂದೋಗ್ಯ ಮತ್ತು ವಾಜಸನೇಯಗಳಲ್ಲಿ ಪ್ರಾಣಾದ್ಯುಪಾಸನಗಳೆಲ್ಲವನ್ನೂ ಪರಶಿವಬ್ರಹ್ಮಪ್ರಾಪ್ತಿಗೆ ಸಾಧನವೆಂದು ಹೇಳಿದ್ದರಿಂದಲೂ ಅವೆಲ್ಲವೂ ಸ್ವತಂತ್ರವಾಗಿ ಅಭ್ಯುದಯವನ್ನು ದೊರಕಿಸುತ್ತವೆಯೆ ?

ಅಥವಾ ಸಗುಣೋಪಾಸನದ ಅಂಗವೆನಿಸಿ ಬ್ರಹ್ಮಲೋಕದಲ್ಲಿ ಕಲ್ಯಾಣವಿಭೂತಿಯನ್ನು ದೊರಕಿಸುತ್ತವೆಯೆ? ಅಥವಾ ಸಗುಣಮೂರ್ತಿಯಾದ ಸದಾಶಿವನ ಉಪಾಸನಕ್ಕೆ ಅಂಗವೆನಿಸಿ ಅಮೂರ್ತವೂ ಸ್ವಯಂಪ್ರಕಾಶವೂ ಪರಂಜ್ಯೋತಿಸ್ವರೂಪವೂ ಸರ್ವಸಾಕ್ಷಿಯೂ ನಿರವಯವನಿತ್ಯಾನಂದರೂಪವೂ ಆದ ಕೈವಲ್ಯವಿಭೂತಿಯನ್ನು ದೊರಕಿಸುತ್ತವೆಯೆ? ಎಂದು ಸಂದೇಹ ಬರುತ್ತದೆ. "ಇವರೆಲ್ಲರೂ ಪುಣ್ಯಾತ್ಮರು" ಎಂಬಲ್ಲಿ ಉಪಾಸಕರೆಲ್ಲರೂ ಸ್ವೇಚ್ಛೆಯಿಂದ ಅವರವರ ಲೋಕಗಳನ್ನು ಹೊಂದುವರೆಂದು ಹೇಳಿದೆ. "ಕರ್ಮದಿಂದ ಗಳಿಸಿದ ಲೋಕವು ನಶಿಸುತ್ತದೆ" ಎಂಬ ಶ್ರುತಿಯಲ್ಲಿ ಕರ್ಮಫಲಗಳನ್ನು ಅನಿತ್ಯವೆಂದು ಹೇಳಿದೆ. ಆದ್ದರಿಂದ ಉಪಾಸನಗಳಲ್ಲಿ ಒಳಗಿನವು ಮತ್ತು ಹೊರಗಿನವು ಎಂದು ಭೇದವಿದ್ದರೂ ಪ್ರಾಣೋಪಾಸನಗಳು ಒಳಗಿನವೇ ಆದರೂ ಜ್ಯೋತಿಷ್ಟೋಮ ಮೊದಲಾದ ಪುಣ್ಯಕರ್ಮಗಳಂತೆ ತ್ರಿಗುಣಾತ್ಮಕವೇ ಆದ್ದರಿಂದ ಮೋಕ್ಷವನ್ನು ದೊರಕಿಸುತ್ತವೆ ಎಂಬುದನ್ನು ನಂಬಲಾಗುವುದಿಲ್ಲ. "ಜ್ಞಾನಕ್ಕೆ ಯಾವುದು ಫಲವೋ ಅದೇ ಕರ್ಮಕ್ಕೂ ಫಲವಾಗುತ್ತದೆ." "ಯಾವನಿಗೆ ನಲ್ವತ್ತೆಂಟು ಸಂಸ್ಕಾರಗಳಾಗಿರುವುವೋ ಅವನು ಬ್ರಹ್ಮಸಾಯುಜ್ಯವನ್ನೂ ಸಾಲೋಕ್ಯವನ್ನೂ ಹೊಂದುತ್ತಾನೆ" ಎಂಬಲ್ಲಿ ನಿಷ್ಕಾಮಭಾವದಿಂದ ಈಶ್ವರಪ್ರೀತಿಗಾಗಿ ಮಾಡಿದ ಗರ್ಭಾಧಾನಾದಿಕರ್ಮಗಳೆಲ್ಲವೂ ಈಶ್ವರಾನುಗ್ರಹದಿಂದ ಮೋಕ್ಷವನ್ನು ದೊರಕಿಸುತ್ತವೆ ಎಂದು ತಿಳಿದುಬಂದಿರುವುದರಿಂದ ಪುಣ್ಯಲೋಕವನ್ನು ಹೊಂದುವ ದೃಷ್ಟಿಯಿಂದ ಮಾಡಿದ ಕರ್ಮಗಳು ಸ್ವತಂತ್ರವಾಗಿಯೇ ಆಯಾ ಲೋಕವನ್ನು ದೊರಕಿಸುತ್ತವೆ ಎಂದು ಹೇಳುವುದಾದರೆ, ಹಾಗಾದರೂ ಉಪಾಸನೆಯು ಸಗುಣವೇ ಆದ್ದರಿಂದಲೂ, ಕರ್ಮಗಳು ಅನಿತ್ಯವಾದ್ದರಿಂದಲೂ, ಸಗುಣನೂ ಸಾವಯವನೂ ನಿತ್ಯನೂ ಆದ ಸದಾಶಿವನ ಲೋಕವನ್ನು ಸೇರುವುದೇ ಮುಕ್ತಿ ಎನಿಸುತ್ತದೆ ಎಂದು ಆಕ್ಷೇಪ ಬಂದರೆ ಸಮಾಧಾನವನ್ನು ಮುಂದೆ ತಿಳಿಸಲಾಗುವುದು. "ಕರ್ಮದಿಂದ ಗಳಿಸಿದ ಲೋಕವು ನಶಿಸುತ್ತದೆ." ಈ ಬಗೆಯ ಶ್ರುತಿಗಳು ಪ್ರಾಕೃತಕರ್ಮದಿಂದ ದೊರಕುವ ಪುಣ್ಯಪಾಪಲೋಕಗಳಿಗೆ ಅನ್ವಯಿಸುತ್ತವೆ. "ಸ್ಥಿರವಾದ ಅವಯವಗಳಿಂದ ರುದ್ರನು ವಿಸ್ತಾರವೂ ಉಗ್ರವೂ ಆಗಿದ್ದಾನೆ" ಎಂಬಲ್ಲಿ ಸಾವಯವನಾದ ಸದಾಶಿವನ ಅವಯವಗಳನ್ನು ನಿತ್ಯವೆಂದು ವ್ಯವಸ್ಥೆಗೊಳಿಸಿರುವುದರಿಂದಲೂ, ಆ ಲೋಕವೂ ಸಹ ತ್ರಿಗುಣಾತೀತವಾಗಿರುವುದರಿಂದಲೂ, "ಅವನ ತ್ರಿಪಾದಗಳು ಪರಾಕಾಶದಲ್ಲಿ ಅಮೃತಮಯವಾಗಿವೆ" ಎಂಬಲ್ಲಿ ಸಚ್ಚಿದಾನಂದರೂಪವಾದ ತ್ರಿಪಾದ್ವಿಭೂತಿ ಎಂಬ ಸದಾಶಿವಲೋಕವು ನಿತ್ಯವೆಂದು ತಿಳಿದುಬರುವುದರಿಂದಲೂ, ಅವನೂ ಮತ್ತು ಅವನ ಲೋಕವೂ ನಿತ್ಯವೆಂಬುದು ಸಿದ್ಧವಾಗುತ್ತದೆ. "ಮುಕ್ತನು ಈ ದೇಹದಿಂದ ಹೊರಟು ಪರಂಜ್ಯೋತಿಯನ್ನು ಸೇರಿ ತನ್ನ ವಾಸ್ತವಸ್ಥಿತಿಯನ್ನು ಪಡೆಯುತ್ತಾನೆ. ಅವನೇ ಉತ್ತಮಪುರುಷನು" ಎಂದು ಛಾಂದೋಗ್ಯದಲ್ಲಿ ಹೇಳಿದೆ. "ವೇದಾಂತವಿಜ್ಞಾನದಿಂದ ವಸ್ತುಸ್ಥಿತಿಯನ್ನು ತಿಳಿದು ಸನ್ಯಾಸಯೋಗದಿಂದ ಶುದ್ಧರಾದ ಯತಿಗಳು ದೇಹಾಭಿಮಾನವನ್ನು ತೊರೆದು

ಶಿವಮಯವಾದ ಈ ದೇಹದಲ್ಲಿಯೇ ನಿರ್ಮಲರಾಗುತ್ತಾರೆ” ಎಂದು ತೈತ್ತಿರೀಯ ಕೈವಲ್ಯಗಳಲ್ಲೂ ಸಾವಯವನೂ ದಿವ್ಯಮೂರ್ತನೂ ಆದ ಸದಾಶಿವನ ಉಪಾಸಕರಾದ ನಿಷ್ಕಾಮಭಕ್ತರು ಅವನ ಅನುಗ್ರಹದಿಂದ ದೇಹವನ್ನು ತೊರೆದಮೇಲೆ ನಿತ್ಯೈಶ್ವರ್ಯವನ್ನೂ ಪರಮಾನಂದವನ್ನೂ ದೊರಕಿಸುವ ಸಾಲೋಕ್ಯ ಸಾಮೀಪ್ಯ ಸಾರೂಪ್ಯವೆಂಬ ಕಲ್ಯಾಣವಿಭೂತಿಯನ್ನು ಅನುಭವಿಸುತ್ತಲೇ ಮತ್ತೆ ಅವನ ಅನುಗ್ರಹದಿಂದ ನಿರತಿಶಯವೂ ನಿರಾವರಣವೂ ನಿರಂಜನವೂ ಆದ ಸಾಯುಜ್ಯವೆಂಬ ಕೈವಲ್ಯವಿಭೂತಿಯನ್ನು ಆ ಲೋಕದಿಂದಲೇ ಹೊಂದುತ್ತಾರೆ ಎಂದು ನಿಶ್ಚಯಿಸಲಾಗಿದೆ. ಆದ್ದರಿಂದ ಸಮನ್ವಯದೃಷ್ಟಿಯಿಂದ ಉಪಾಸನಗಳೆಲ್ಲಕ್ಕೂ ಬ್ರಹ್ಮಪ್ರಾಪ್ತಿಯೇ ಫಲವೆಂದು ಸಿದ್ಧವಾಯಿತು. “ಹೃದಯದಲ್ಲಿರುವ ಕಾಮಗಳೆಲ್ಲವೂ ತೊಲಗಿದಮೇಲೆ ಮಾನವನು ಅಮರನಾಗುತ್ತಾನೆ. ಆಗ ಇಲ್ಲಿಯೇ ಶಿವನಲ್ಲಿ ಸೇರುತ್ತಾನೆ” ಈ ಬಗೆಯ ಶ್ರುತಿಗಳಲ್ಲಿ ಎಲ್ಲಾ ಆಶೆಗಳನ್ನು ತೊರೆದು ದಹರಾದಿವಿದ್ಯೆಗಳನ್ನಾಶ್ರಯಿಸಿ ನಿರಂತರವಾಗಿರುವ ಜ್ಞಾನದಲ್ಲಿ ನಿಷ್ಠೆಯಿಂದಿದ್ದು ಅದನ್ನು ಆಚರಿಸುತ್ತಲೇ ಯಾವಾಗಲೂ ಶಿವೈಕ್ಯಭಾವದಿಂದ ಕೂಡಿ, ಕೊನೆಯದಾಗಿ ಶರೀರವನ್ನು ಪಡೆದಿರುವವರು ಈ ದೇಹದಲ್ಲಿಯೇ ನಿರಂಜನವೂ ನಿರ್ವಿಕಾರವೂ ಆದ ಪರಶಿವನೆಂಬ ಜ್ಯೋತಿರ್ಲಿಂಗದಲ್ಲಿ ಐಕ್ಯರಾಗುವರೆಂದು ತಿಳಿಸಲಾಗಿದೆ. ಮುಕ್ತದಶೆಯಲ್ಲಿಯೂ ಅವರು ಭಿನ್ನರಾಗಿಯೇ ಇರುವರೆಂದು ಹೇಳುವುದಾದರೆ ದ್ವೈತಾದ್ವೈತ ಸಿದ್ಧಾಂತವನ್ನು ವಿಧಿಸುವ “ತದನನ್ಯತ್ವಂ,” ಎಂಬ ಸೂತ್ರವೂ, ವಾಚಾರಂಭಣಶ್ರುತಿಯೂ ವಿರುದ್ಧವಾಗುತ್ತವೆ. ವಾಚಾರಂಭಣಶ್ರುತಿಯಲ್ಲಿ ನಾಮರೂಪಗಳನ್ನು ವಾಚಾರಂಭಣವೆಂದು ಹೇಳಲಾಗಿದೆ. ವಾಕ್ಕಿನಿಂದ ಆಗಬೇಕಾದ ಅರ್ಥಕ್ರಿಯಾವ್ಯವಹಾರಗಳನ್ನು ನಿರ್ವಹಿಸುವುದೇ ವಾಚಾರಂಭಣವೆನಿಸುತ್ತದೆ. ಮಣ್ಣಿಗೆ ಗಡಿಗೆಯ ಅವಸ್ಥೆ, ಗಡಿಗೆ ಎಂಬ ಹೆಸರು, ಮತ್ತು ವಿಕಾರ ಇವು ಮೂರೂ ಸಂಭವಿಸುತ್ತವೆ. ಇದು ಘಟವೆಂಬ ವಾಗ್ವ್ಯವಹಾರಕ್ಕೆ ವಿಷಯವಾದದ್ದೇ ಘಟವೆನಿಸುತ್ತದೆ. ಮಣ್ಣೆಂಬುದು ವ್ಯವಹಾರಸಿದ್ಧಿಗಾಗಿ ಪಡೆಯುವ ಒಂದು ಅವಸ್ಥೆಯೇ ಹೊರತು ಬೇರೊಂದು ದ್ರವ್ಯವಲ್ಲ. ಮಣ್ಣೆಂಬ ಹೆಸರೇ ಸತ್ಯವಾದುದು. ಹೀಗೆ ಗಡಿಗೆ ಮೊದಲಾದವನ್ನು ಮಣ್ಣೆಂದು ತಿಳಿದರೆ ಮಣ್ಣಿನಿಂದ ಆದ ಗಡಿಗೆ ಮೊದಲಾದವೆಲ್ಲವೂ ಸತ್ಯವೇ ಆಗುತ್ತವೆ. ಪ್ರಾಮಾಣಿಕವಾದ ವಸ್ತುಒಂದಿದ್ದರೆ ಬೇರೊಂದು ದ್ರವ್ಯವು ಸಾಧನವೆನಿಸುತ್ತದೆ ಎಂದು ಭಾವಿಸುವುದರಿಂದಲೇ ಗಡಿಗೆಯು ಮಣ್ಣೇ ಆದ್ದರಿಂದ ಕಾರ್ಯವು ಕಾರಣದಿಂದ ಬೇರೆಯಾಗಲಾರದು. ಮಣ್ಣು ಮತ್ತು ಗಡಿಗೆಗಳ ಅವಸ್ಥಾಭೇದದಿಂದ ಅರ್ಥಕ್ರಿಯಾದಿವ್ಯವಹಾರಭೇದವುಂಟಾಗುತ್ತದೆ. ಹೀಗೆಯೇ ಮೃದ್ಘಟಗಳಂತೆ ಬ್ರಹ್ಮಪ್ರಪಂಚಗಳಿಗೆ ವ್ಯಾಪ್ಯವ್ಯಾಪಕಭಾವವಿರುವುದರಿಂದ ಅವು ಬೇರೆಯಲ್ಲ. “ಶಕ್ತಿಯಿಂದ ಆರಂಭಿಸಿ ಪೃಥ್ವಿಯವರೆಗಿರುವ ತತ್ತ್ವಗಳೆಲ್ಲವೂ ಶಿವತತ್ತ್ವದಿಂದ ಹುಟ್ಟುತ್ತವೆ. ಮಣ್ಣಿನಿಂದ ಗಡಿಗೆ ಮೊದಲಾದವು ವ್ಯಾಪಿಸಿರುವಂತೆ ಶಿವನೊಬ್ಬನಿಂದ ಎಲ್ಲಾ ತತ್ತ್ವಗಳೂ ವ್ಯಾಪಿ

ಸಿವೆ." ಎಂದು ಸ್ಮೃತಿಯಲ್ಲಿ ಹೇಳಲಾಗಿದೆ. ಇದರಿಂದ ಜೀವ ಪ್ರಪಂಚ ಬ್ರಹ್ಮಗಳಿಗೆ ಯಾವಾಗಲೂ ಭೇದವುಂಟೆಂದು ಹೇಳುವ ನೈಯಾಮಿಕಮತವು ನಿರಾಕೃತವಾಯಿತು. ಆದರೆ " ಈ ಗಡಿಗೆ ಮಣ್ಣು " ಎಂಬಲ್ಲಿ ಗಡಿಗೆಯಲ್ಲಿ ಮಣ್ಣು ವ್ಯಾಪಿಸಿರುವುದನ್ನು ನಾವು ಕಾಣುತ್ತೇವೆ. ಹಾಗೆ " ಈ ಜಗತ್ತು ಬ್ರಹ್ಮ" ವೆಂಬಲ್ಲಿ ಬ್ರಹ್ಮದ ವ್ಯಾಪ್ತಿ ಕಾಣುವುದಿಲ್ಲವೆಂದರೆ "ಘಟವಿದೆ ಪಟವಿದೆ" ಎಂಬಲ್ಲಿ ಎಲ್ಲಾಕಡೆಯೂ ಶಿವನು ಸದ್ರೂಪದಿಂದ ಇರುವುದಾಗಿ ಕಂಡುಬರುತ್ತದೆ. ಹಾಗೆ ಶಿವನು ಎಲ್ಲೆಲ್ಲೂ ಇಲ್ಲದೇ ಹೋಗಿದ್ದರೆ ಆಗ ಸತ್ತಾಸ್ಫೂರ್ತಿಗಳಿಲ್ಲದ ಈ ಜಗತ್ತು ಹೇಗೆ ಪ್ರಕಾಶಿಸುತ್ತಿತ್ತು ? ಆದ್ದರಿಂದ ಜಗದ್ಬ್ರಹ್ಮಗಳಿಗೆ ಭೇದಾಭೇದವೇ ಸಮ್ಮತವಾಗಿದೆ.

ಅಗ್ನಿರಹಸ್ಯೇ ಬೃಹದಾರಣ್ಯಕೇ ಚ ಶಾಂಡಿಲ್ಯವಿದ್ಯಾಮ್ನಾಯತೇ. ಏಕತ್ರ " ಆತ್ಮಾನಮುಪಾಸೀತ, " " ಮನೋಮಯಂ ಪ್ರಾಣಶರೀರಂ ಭಾರೂಪಂ ಸತ್ಯಸಂಕಲ್ಪಮಾಕಾಶಮಾತ್ಮಾನಂ" ಇತಿ, ಇತರತ್ರ "ಮನೋಮಯೋಽಯಂ ಪುರುಷೋ ಭಾಸ್ತ್ಯಸ್ಮಿನ್ನಂತರ್ಹೃದಯೇ " " ವ್ರೀಹಿರ್ವಾ ಯವೋ ವಾ " " ಸ ಏಷ ಸರ್ವಸ್ಯೇಶಾನಸ್ಸರ್ವಸ್ಯಾಧಿಪತಿಸ್ಸರ್ವಮಿದಂ ಪ್ರಶಾಸ್ತಿ" ಇತ್ಯಾದಿಶಾಂಡಿಲ್ಯಾದಿಸರ್ವೇಷಾಂ ವಿದ್ಯಾನಾಂ ಸ್ವಾತಂತ್ರ್ಯೇಣ ಬ್ರಹ್ಮಪ್ರಾಪ್ತಿಃ, ಉತ ವಿದ್ಯಾನಾಂ ಸರ್ವಸಾಂ ನಿಶ್ರೇಣಿನ್ಯಾಯೇನ ಪರಂಪರಯಾ ಮೋಕ್ಷಹೇತುತ್ವಂ ವೇತಿ ಶಂಕಾಯಾಂ ಅಧಿಕರಣಾಂತರೇಣಾಹ. ಸಮಾನಾಧಿಕರಣಂ ||೬|| ಸಮಾನ ಏವಂ ಚಾಭೇದಾತ್ ||೧೯||

ವಾಜಸನೇಯೇ ಅಗ್ನಿರಹಸ್ಯೇ ಶಾಂಡಿಲ್ಯವಿದ್ಯಾ ಆಮ್ನಾತಾ. " ಸತ್ಯಂ ಬ್ರಹ್ಮೇತ್ಯುಪಾಸೀತ " ಅಥ ಖಲು " ಕ್ರತುಮಯಃ ಪುರುಷಃ " ಇತ್ಯಾರಭ್ಯ " ಆತ್ಮಾನಮುಪಾಸೀತ ", " ಮನೋಮಯಂ ಪ್ರಾಣಶರೀರಂ ಭಾರೂಪಂ ಸತ್ಯಸಂಕಲ್ಪಮಾಕಾಶಮಾತ್ಮಾನಂ " ಇತ್ಯಾದಿಷು ಶಾಂಡಿಲ್ಯದಹರೋಪಕೋಸಲಭೂಮಾದಿವಿದ್ಯಾನಾಂ ಪರಸ್ಪರಧರ್ಮವೈಲಕ್ಷಣ್ಯವಿಧ್ಯವಗಮಾತ್ ಪರಸ್ಪರಭಿನ್ನತ್ವಮುಭಿನ್ನತ್ವಂ ವೇತಿ ಸಂದಿಹ್ಯತೇ, ಸರ್ವೇಷಾಂ ವಿದ್ಯಾನಾಂ ಅನ್ಯೋನ್ಯಭೇದದರ್ಶನಾತ್. ಬೃಹದಾರಣ್ಯಕೇ ಪುನರಪಿ ಶಾಂಡಿಲ್ಯವಿದ್ಯಾ ಆಮ್ನಾಯತೇ " ಮನೋಮಯೋಽಯಂ ಪುರುಷೋ ಭಾಸ್ಸತ್ಯಃ । ತಸ್ಮಿನ್ನಂತರ್ಹೃದಯೇ ಯಥಾ ವ್ರೀಹಿರ್ವಾ ಯವೋ ವಾ ಸ ಏಷ ಸರ್ವಸ್ಯ ವಶೀ ಸರ್ವಸ್ಯೇಶಾನಸ್ಸರ್ವಸ್ಯಾಧಿಪತಿಸ್ಸರ್ವಮಿದಂ ಪ್ರಶಾಸ್ತಿ"ಇತಿ, ಅನ್ಯತ್ರ ಚ "ಏಷೋಽಸ್ಮಿ ದೇವಃ ಪ್ರದಿಶೋಽನುಸರ್ವಾಃ ಪೂರ್ವೋಽನುಜಾತೋಽಸ್ಮ್ಯಹಮೇವ ಗರ್ಭೇ", "ಅಯಂ ಹಿ ಜಾತಶ್ಚ ಜನಿಷ್ಯಮಾಣಃ ಪ್ರತ್ಯಙ್ಮುಖಾಸ್ತಿಷ್ಠತಿ ವಿಶ್ವತೋಮುಖಃ । ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಹಸ್ತ ಉತ ವಿಶ್ವತಃ ಪಾತ್ । ಸಂಬಾಹುಭ್ಯಾಂ ಧಮತಿ ಸಂಪತತ್ರೈರ್ದ್ಯಾವಾಭೂಮೀ ಜನ

ಯನ್ ದೇವ ಏಕಃ ॥ ", " ವಾಲಾಗ್ರಮಾತ್ರಂ ಹೃದಯಸ್ಯ ಮಧ್ಯೇ ವಿಶ್ವಂ ದೇವಂ ಜಾತವೇದಸಂ ವರೇಣ್ಯಂ । ತಮಾತ್ಮಾನಂ ಯೇಽನು ಪಶ್ಯಂತಿ ಧೀರಾಸ್ತೇಷಾಂ ಶಾಂತಿಶ್ಶಾಶ್ವತೀ ನೇತರೇಷಾಂ ॥ ", " ಅಹಂ ಯೋನಿಂ ಯೋನಿಮಭಿತಿಷ್ಠಾಮ್ಯೇಕೋ ಮಯೇದಂ ಪೂರ್ಣಂ ಪಂಚ ವಿಧಂ ಚ ಸರ್ವಂ ", " ಮಾಮೀಶಾನಂ ಪುರುಷಂ ದೇವಮೀಡ್ಯಂ ನಿಚಾಯ್ಯ ಮಾಂ ಶಾಂತಿಮತ್ಯಂತಮೇತಿ ", " ಪ್ರಾಣೇಷ್ವಂತರ್ಮನಸೋ ಲಿಂಗಮಾಹುರ್ಯಸ್ಮಿನ್ ಕ್ರೋಧೋ, ಯಾ ಚ ತೃಷ್ಣಾ ಕ್ಷಮಾ ಚ । ತೃಷ್ಣಾಂ ಛಿತ್ವಾ ಹೇತುಜಾಲಸ್ಯ ಮೂಲಂ ಬುದ್ಧ್ಯಾ ಚಿತ್ತಂ ಸ್ಥಾಪಯಿತ್ವಾಥ ರುದ್ರೇ ॥ ಏವಂ ಯೇ ಮಾಂ ಧ್ಯಾಯಮಾನಾ ಭಜಂತೇ ತೇಷಾಂ ಶಾಂತಿಃ ಶಾಶ್ವತೀ ನೇತರೇಷಾಂ ", " ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ", " ಆನಂದಂ ಬ್ರಹ್ಮಣೋ ವಿದ್ವಾನ್ನ ಬಿಭೇತಿ ಕುತಶ್ಚನ ", " ಅಣೋರಣೀಯಾನ್ಮಹತೋ ಮಹೀಯಾನಾತ್ಮಾ ಗುಹಾಯಾಂ ನಿಹಿತೋಽಸ್ಯ ಜಂತೋಃ । ತಮಕ್ರತುಂ ಪಶ್ಯತಿ ವೀತಶೋಕೋ ಧಾತುಃ ಪ್ರಸಾದಾನ್ಮಹಿಮಾನಮೀಶಂ ॥ ", " ಆಧಾರೇ ದಹರೇ ವಾಪಿ ಭ್ರೂಮಧ್ಯೇ ವಾ ನಿರಂತರಂ । ಜ್ಯೋತಿರ್ಲಿಂಗಾನುಸಂಧಾನಂ ತದಂತರ್ಧಾರಣಂ ವಿದುಃ ॥ ", " ಆಧಾರೇ ಕನಕ ಪ್ರಖ್ಯಂ ಹೃದಯೇ ವಿದ್ರುಮಪ್ರಭಂ । ಭ್ರೂಮಧ್ಯೇ ಸ್ಫಟಿಕಚ್ಛಾಯಂ ಲಿಂಗಂ ಯೋಗೀ ವಿಭಾವಯೇತ್ ॥ ", " ಜ್ಯೋತಿರ್ಲಿಂಗಂ ಭ್ರುವೋರ್ಮಧ್ಯೇ ನಿತ್ಯಂ ಧ್ಯಾಯೇತ್ಸದಾ ಯತಿಃ ", " ಆತ್ಮಾನಮಾತ್ಮನಾ ಸಾಕ್ಷಾತ್ ಬ್ರಹ್ಮಬುದ್ಧ್ಯಾ ಸುನಿಶ್ಚಿತಂ । ದೇಹಜಾತ್ಯಾದಿಸಂಬಂಧಾನ್ ವರ್ಣಾಶ್ರಮಸಮನ್ವಿತಾನ್ । ವೇದಶಾಸ್ತ್ರಪುರಾಣಾನಿ ಪದಪಾಂಸುಮಿವ ತ್ಯಜೇತ್ ॥ ", " ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ । ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥ ", " ದ್ರಷ್ಟೃದರ್ಶನದೃಶ್ಯಾನಾಂ ವಿರಾಮೋ ಯತ್ರ ವಾ ಭವೇತ್ । ದೃಷ್ಟಿಸ್ತತ್ರೈವ ಕರ್ತವ್ಯಾ ನ ನಾಸಾಗ್ರಾವಲೋಕನೇ ॥ " ಇತ್ಯಾದಿಶ್ರುತಿಶತೇಷು ನಾನಾಧರ್ಮತ್ವೋಪದೇಶಾತ್ ದಹರಶಾಂಡಿಲ್ಯಾದಿಸರ್ವವಿದ್ಯಾನಾಂ ಊರ್ಧ್ವಾಧಸ್ತ್ವೋಪಾನಭೇದೇನ ಬ್ರಹ್ಮಣಿ ಸಮನ್ವಯೋ ಯುಕ್ತ ಇತಿ ಪ್ರಾಪ್ತೇ ಪ್ರಚಕ್ಷ್ಮಹೇ. ಯಥಾಗ್ನಿರಹಸ್ಯೇ ಮನೋಮಯಪ್ರಾಣಶರೀರಭಾರೂಪಸತ್ಯಸಂಕಲ್ಪಗುಣಗಣಃ ಶ್ರುತಃ ಏವಂ ಬೃಹದಾರಣ್ಯಕೇ ಮನೋಮಯತ್ವಾದಿಕೇ ಸಮಾನೇ ಸತ್ಯಾದಿಕಸ್ಯ ವಶಿತ್ವಾದೇಶ್ಚ ಸತ್ಯಸಂಕಲ್ಪತ್ವಗುಣಭೇದಾನ್ನ ರೂಪಭೇದಃ. ತಸ್ಮಾದ್ವಿದ್ಯೈಕ್ಯಂ. ಅನ್ಯತ್ರಾಪಿ ಸ್ಥಾನಭೇದಗುಣಭೇದತ್ವೇನ ಭೇದದರ್ಶನೇಽಪಿ

**ಚಿತ್ತೈಕಾಗ್ರತಯಾ ಬ್ರಹ್ಮಸಾಕ್ಷಾತ್ಕಾರಫಲಸ್ಯೈಕತ್ವೇನ ವಿದ್ಯೈಕ್ಯಂ ನ ವಿರುಧ್ಯತೇ.**

ಅಗ್ನಿರಹಸ್ಯ ಮತ್ತು ಬ್ರಹದಾರಣ್ಯಕಗಳಲ್ಲಿ ಶಾಂಡಿಲ್ಯವಿದ್ಯೆಯನ್ನು ಹೇಳಿದೆ. ಒಂದುಕಡೆ "ಮನೋಮಯನೂ ಪ್ರಾಣವೇ ಶರೀರವಾಗುಳ್ಳವನೂ, ಭಾವರೂಪನೂ ಸತ್ಯಸಂಕಲ್ಪನೂ ಆಕಾಶದಂತೆ ನಿರ್ಲಿಪ್ತನೂ ಆಗಿರುವ ಆತ್ಮನನ್ನು ಉಪಾಸನ ಮಾಡು" ಎಂದೂ, ಬೇರೆಕಡೆಗಳಲ್ಲಿ "ಮನೋಮಯನಾದ ಈ ಜೀವನು ಹೃದಯದೊಳಗೆ ಪ್ರಕಾಶಿಸುತ್ತಾನೆ" "ಅವನು ಭತ್ತ ಅಥವಾ ಗೋಧಿಯಕಾಳಿನಷ್ಟು ಸೂಕ್ಷ್ಮನು" "ಅವನೇ ಎಲ್ಲಕ್ಕೂ ಪ್ರಭುವು ಮತ್ತು ನಿಯಾಮಕನು. ಅವನೇ ಇದೆಲ್ಲವನ್ನು ಶಾಸನ ಮಾಡುತ್ತಾನೆ" ಎಂದು ಮುಂತಾಗಿಯೂ ಹೇಳಿರುವ ಶಾಂಡಿಲ್ಯಾದಿವಿದ್ಯೆಗಳು ಸ್ವತಂತ್ರವಾಗಿ ಬ್ರಹ್ಮವನ್ನು ದೊರಕಿಸುತ್ತವೆಯೋ ಅಥವಾ ಅವೆಲ್ಲವೂ ಏಣಿಯ ಮೆಟ್ಟಲುಗಳಂತೆ ಕ್ರಮವಾಗಿ ಮೋಕ್ಷವನ್ನು ದೊರಕಿಸುತ್ತವೆಯೇ? ಎಂದು ಆಶಂಕಿಸಿ ಸಮಾಧಾನ ಮಾಡುತ್ತಾನೆ. ವಾಜಸನೇಯದ ಅಗ್ನಿರಹಸ್ಯದಲ್ಲೂ ಶಾಂಡಿಲ್ಯವಿದ್ಯೆಯನ್ನು "ಸತ್ಯವನ್ನು ಬ್ರಹ್ಮವೆಂದು ಉಪಾಸನಮಾಡು" ಎಂದು ಹೇಳಲಾಗಿದೆ. "ಉಪಾಸಕನಾದ ಜೀವನು" ಎಂದು ಆರಂಭಿಸಿ, "ಅಂತವನು ಆತ್ಮನನ್ನು ಉಪಾಸನಮಾಡಬೇಕು" ಹೇಗೆ ಶಾಂಡಿಲ್ಯ, ದಹರ, ಉಪಕೋಸಲ, ಭೂಮ ಮೊದಲಾದ ವಿದ್ಯೆಗಳ ಪರಸ್ಪರ ಧರ್ಮಗಳಲ್ಲಿ ವೈಲಕ್ಷಣ್ಯವನ್ನು ವಿಧಿಸಿರುವುದರಿಂದಲೂ, ಎಲ್ಲಾ ವಿದ್ಯೆಗಳಿಗೂ ಪರಸ್ಪರ ಭೇದವಿರುವುದಾಗಿ ಕಂಡುಬಂದಿರುವುದರಿಂದಲೂ ಈ ವಾಕ್ಯಗಳು ಪರಸ್ಪರ ಭಿನ್ನವೇ ಅಥವಾ ಏಕವೆ? ಎಂದು ಸಂದೇಹ ಬರುತ್ತದೆ. ಬೃಹದಾರಣ್ಯಕದಲ್ಲೂ ಶಾಂಡಿಲ್ಯ ವಿದ್ಯೆಯನ್ನು "ಮನೋಮಯನಾದ ಈ ಆತ್ಮನು ಸತ್ಯನೂ ಪ್ರಕಾಶನೂ ಆಗಿರುವನು. ಅವನು ಹೃದಯದ ಒಳಗಡೆ ಗೋಧಿ ಅಥವಾ ಭತ್ತದಕಾಳಿನಷ್ಟು ಪ್ರಮಾಣದಲ್ಲಿ ನೆಲಸಿದ್ದಾನೆ. ಅವನೇ ಎಲ್ಲಕ್ಕೂ ನಿಯಾಮಕನು" ಎಂದು ಮುಂತಾಗಿ ಹೇಳಲಾಗಿದೆ. ಬೇರೆಕಡೆ "ಎಲ್ಲರೊಳಗೂ ಪ್ರವೇಶಿಸಿರುವ ಈ ನಾನು ದೇವನಾಗಿದ್ದೇನೆ. ನಾನೇ ಮೊದಲು ಗರ್ಭದಲ್ಲಿ ಹುಟ್ಟಿದೆನು. ಹಿಂದೆ ಹುಟ್ಟಿದ್ದವನು ಮತ್ತೆ ಹುಟ್ಟುವವನೂ ನಾನೆಯೇ. ಹಿಂದಕ್ಕೆ ಮುಖವನ್ನು ತಿರುಗಿಸಿದವನು ಮತ್ತೆ ವಿಶ್ವತೋಮುಖನೂ ನಾನೇಯೇ" "ವಿಶ್ವತಶ್ಚಕ್ಷುವೂ, ವಿಶ್ವತೋಮುಖನೂ, ವಿಶ್ವತೋಹಸ್ತನೂ, ಆಗಿ ಅವನು ವಿಶ್ವವನ್ನು ವ್ಯಾಪಿಸಿದ್ದಾನೆ" "ಬಾಲದತುದಿಯಷ್ಟೇ ಸೂಕ್ಷ್ಮಪ್ರಮಾಣದಲ್ಲಿ ವಿಶ್ವಾತ್ಮನು ಹೃದಯದಲ್ಲಿ ಪ್ರಕಾಶಿಸುತ್ತಿದ್ದಾನೆ. ಅವನನ್ನು ಯಾವ ಧೀರರು ನೋಡುತ್ತಾರೋ ಅವರಿಗೆ ಮಾತ್ರವೇ ಶಾಶ್ವತವಾದ ಶಾಂತಿ ದೊರಕುತ್ತದೆ" "ನಾನೊಬ್ಬನೇ ಪ್ರತಿಯೊಂದು ಯೋನಿಯಲ್ಲೂ ನೆಲಸಿದ್ದೇನೆ. ಪಂಚಭೂತಾತ್ಮಕವಾದ ಈ ಪ್ರಪಂಚವು ನನ್ನಿಂದಲೇ ಪೂರ್ಣವಾಗಿದೆ" "ಸರ್ವವಂದ್ಯನೂ ಮಹಾಪ್ರಕಾಶನೂ ಸಮರ್ಥನೂ ಆದ ನನ್ನನ್ನು ಧ್ಯಾನಿಸಿ ಭಕ್ತನು ಹೆಚ್ಚಿನ ಶಾಂತಿಯನ್ನು ಹೊಂದುತ್ತಾನೆ" "ಪ್ರಾಣಗಳೊಳಗಿನ ಮನಸ್ಸೇ ಲಿಂಗವೆನಿಸಿದೆ ಆಶೆ, ಸಹನೆ ಕೋಪ ಇವೆಲ್ಲವೂ ಅದನ್ನು

ಆಶ್ರಯಿಸಿವೆ. ಸರ್ವವ್ಯವಹಾರಕ್ಕೂ ಮೂಲವಾದ ಆಶೆಯನ್ನು ವಿಚಾರದಿಂದ ತೊರೆದು ರುದ್ರನಲ್ಲಿ ಚಿತ್ತವನ್ನಿರಿಸಬೇಕು. ಹೀಗೆ ಯಾರು ನನ್ನನ್ನು ಆಶ್ರಯಿಸುವರೋ ಅವರಿಗೆ ಮಾತ್ರವೇ ಶಾಶ್ವತವಾದ ಶಾಂತಿ ಲಭಿಸುತ್ತದೆ. ಬೇರೆಯವರಿಗಿಲ್ಲ." ವಾಙ್ಮನಗಳು ಯಾವನನ್ನು ಮುಟ್ಟದೆ ಹಿಂತಿರುಗಿದವೋ" "ಬ್ರಹ್ಮದ ಆನಂದವನ್ನು ಅರಿತವನು ಯಾವುದಕ್ಕೂ ಹೆದರುವುದಿಲ್ಲ" "ಆಧಾರದಲ್ಲೂ ಹೃದಯದಲ್ಲೂ ಭ್ರೂಮಧ್ಯದಲ್ಲೂ ಜ್ಯೋತಿರ್ಲಿಂಗವನ್ನು ಧ್ಯಾನಿಸುವುದೇ ಅಂತರ್ಲಿಂಗಧಾರಣವೆನಿಸುತ್ತದೆ" "ಆಧಾರದಲ್ಲಿ ಸುವರ್ಣಲಿಂಗವನ್ನು, ಹೃದಯದಲ್ಲಿ ಹವಳದಬಣ್ಣದ ಲಿಂಗವನ್ನು, ಭ್ರೂಮಧ್ಯದಲ್ಲಿ ಜ್ಯೋತಿರ್ಲಿಂಗವನ್ನು ಸಾಧಕನು ಯಾವಾಗಲೂ ಧ್ಯಾನಿಸುತ್ತಿರಬೇಕು." "ತನ್ನಲ್ಲಿ ಬ್ರಹ್ಮವಿರುವುದರಿಂದ ತನ್ನನ್ನು ತಾನೇ ಸಾಕ್ಷಾದ್ಬ್ರಹ್ಮವೆಂದು ನಿಶ್ಚಯಿಸಿ ದೇಹ ಜಾತಿಗಳ ಮತ್ತು ವರ್ಣಾಶ್ರಮಗಳ ಧರ್ಮಗಳನ್ನೂ ವೇದಶಾಸ್ತ್ರಪುರಾಣಗಳನ್ನೂ ಹೆಜ್ಜೆಯ ಧೂಳನ್ನು ಒದರುವಂತೆ ತೊರೆಯಬೇಕು" "ಪರಂಜ್ಯೋತಿಯನ್ನು ಕಂಡರೆ ಹೃದಯದ ಗಂಟು ಒಡೆದು ಸಂಶಯಗಳೆಲ್ಲವೂ ಸರಿದು ಕರ್ಮಗಳು ಅಳಿಯುತ್ತವೆ" "ಕೇವಲ ಮೂಗಿನ ತುದಿಯಲ್ಲಿ ದೃಷ್ಟಿ ಇಡದೆ, ನೋಡುವವನು, ನೋಟ, ದೃಶ್ಯವಸ್ತು, ಇವು ಮೂರು ಎಲ್ಲ ಕೊನೆಯಾಗುತ್ತವೆಯೋ ಅಲ್ಲಿಯೇ ದೃಷ್ಟಿ ಇಡು." ಈ ಬಗೆಯ ಶ್ರುತಿಗಳಲ್ಲಿ ಅನೇಕ ಧರ್ಮಗಳನ್ನು ಹೇಳಿರುವುದರಿಂದ ದಹರ ಶಾಂಡಿಲ್ಯ ಮೊದಲಾದ ವಿದ್ಯೆಗಳೆಲ್ಲಕ್ಕೂ ಮೇಲೆ ಕೆಳಗೆ ಎಂಬ ಸೋಪಾನಭೇದದಿಂದ ಬ್ರಹ್ಮದಲ್ಲಿ ಸಮನ್ವಯ ಮಾಡಬೇಕು ಎಂದು ಆಕ್ಷೇಪಬಂದರೆ ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. ಅಗ್ನಿರಹಸ್ಯದಲ್ಲಿ ಮನೋಮಯ ಪ್ರಾಣಶರೀರ ಮೊದಲಾದ ಗುಣಗಳನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. ಬೃಹದಾರಣ್ಯಕದಲ್ಲಿ ಮನೋಮಯ ಮೊದಲಾದ ಗುಣಗಳು ಸಮಾನವಾಗಿರುವುದರಿಂದ ಸತ್ಯ ಜ್ಞಾನ ಮೊದಲಾದ ಸ್ವರೂಪದ ಧರ್ಮಗಳಲ್ಲೂ ಮತ್ತು ವಶಿತ್ವ ಸತ್ಯಸಂಕಲ್ಪ ಮೊದಲಾದ ಗುಣಗಳಲ್ಲೂ ಭೇದವಿದ್ದರೂ ವಿದ್ಯಾಸ್ವರೂಪದಲ್ಲಿ ಭೇದವಿಲ್ಲದ್ದರಿಂದ ವಿದ್ಯೆಗಳಲ್ಲಿ ಐಕ್ಯವಿದ್ದೇ ಇದೆ. ಬೇರೆಕಡೆಗಳಲ್ಲೂ ಸ್ಥಾನಬೇಧದಿಂದಲೂ ಮತ್ತು ಗುಣಭೇದದಿಂದಲೂ ಭೇದವಿದ್ದರೂ ಚಿತ್ತೈಕಾಗ್ರತೆಯಿಂದ ದೊರಕುವ ಬ್ರಹ್ಮಸಾಕ್ಷಾತ್ಕಾರ ಒಂದೇ ಫಲವಾದ್ದರಿಂದ ವಿದ್ಯೆಗಳು ಒಂದೇ ಬಗೆಯಾಗಿವೆ.

ಶಾಂಡಿಲ್ಯಾದಿವಿದ್ಯಾಸು ವಿದ್ಯೈಕ್ಯಸಿದ್ಧೇಽಪಿ ವೈಶ್ವಾನರವಿದ್ಯಾಯಾಂ ಅನ್ಯೋನ್ಯವೈಲಕ್ಷಣ್ಯಾವಗಮಾತ್ ಕಥಂ ವಿದ್ಯೈಕ್ಯಮಿತ್ಯಾಶಂಕಾಯಾಂ ಅಧಿಕರಣಾಂತರೇಣಾಹ. ಸಂಬಂಧಾಧಿಕರಣಂ || ೭ || ಸಂಬಂಧಾದೇವಮನ್ಯತ್ರಾಪಿ || ೨೦ || ಅನ್ಯತ್ರ ಪ್ರತರ್ದನವೈಶ್ವಾನರಭೂಮವಿದ್ಯಾದಿಷ್ವಪ್ಯೇವಂ ಜೀವಮುಖ್ಯಪ್ರಾಣಲಿಂಗವೈಶ್ವಾನರೈಕಾವಯವನಾಮಾದಿ ವಿಷಯಕಾಂಗೋಪಾಸನಸಹಕೃತಾತ್ ಸಗುಣಪರಶಿವೋಪಾಸನಾತ್ ಅದೃಷ್ಟೋತ್ಪತ್ತಿರ್ನ ತು ಕೇವಲಸಗುಣಪರಶಿವೋಪಾಸನಾತ್. ಕುತಃ? ಸಂಬಂಧಾತ್ ಸಗುಣನಿರ್ಗುಣಯೋರುಪಾಸನಯೋರಂಗಾಂಗಿತ್ವೇನ

ಪರಸ್ಪರಸಂಬಂಧಾದಿತಿ ವಿದ್ಯೈಕ್ಯಂ ಸಂಭವತೀತಿ ಸೂತ್ರಸೂಚಿತಾರ್ಥಃ. ಬೃಹದಾರಣ್ಯಕೇ ಶ್ರೂಯತೇ. " ತದ್ಯತ್ಸತ್ಯಮಸೌ ಸ ಆದಿತ್ಯೋ ಯ ಏಷ ಏತಸ್ಮಿನ್ಮಂಡಲೇ ಪುರುಷೋ ಯಶ್ಚಾಯಂ ದಕ್ಷಿಣೇಽಕ್ಷಿಣಿ ಸ್ಯಾತ್ " ಇತ್ಯುಪಕ್ರಮ್ಯ ಆದಿತ್ಯಮಂಡಲೇಽಕ್ಷಿಣಿ ಚ ಸತ್ಯಸ್ಯ ಬ್ರಹ್ಮಣಃ ವ್ಯಾಹೃತಿ ಶರೀರತ್ವೇನೋಪಾಸ್ಯತ್ವಮುಕ್ತ್ವಾ ದ್ವೇ ಉಪನಿಷದೌ ರಹಸ್ಯನಾಮ್ನೀ ಉಪಾಸನವಿಶೇಷತಯಾ ಆಮ್ನಾಯೇತೇ. ತೇ ಕಿಂ ಯಥಾಶ್ರುತ ಸ್ಥಾನವಿಶೇಷನಿಯಮತ್ವೇನ ವ್ಯವಸ್ಥಿತೇ? ಉತ ಉಭಯತ್ರ ಉಭೇ ಅನಿಯಮೇನ? ಇತಿ ಸಂಶಯೇ ಸತ್ಯಸ್ಯ ವ್ಯಾಹೃತಿಶರೀರಸ್ಯೈವೋ ಪಾಸ್ಯಸ್ಯ ಬ್ರಹ್ಮಣೋ ದ್ವಯೋಃ ಸ್ಥಾನಯೋಃ ಸಂಬಂಧಾದುಪಾಸ್ಯೈ ಕ್ಯೇನ ರೂಪಾಭೇದಾತ್ ಸಂಯೋಗಾದ್ಯಭೇದಾಚ್ಚ ವಿದ್ಯೈಕ್ಯಾದನಿಯ ಮೇನೇತಿ ಪ್ರಾಪ್ತಂ. ತತ್ರೋಚ್ಯತೇ ಸಂಬಂಧಾದೇವಮನ್ಯಾತ್ರಾ ಪೀತಿ. ಯಥಾ ಮನೋಮಯತ್ವಾದಿಗುಣವೈಶಿಷ್ಟ್ಯೈಕತ್ವಂ ತದುಪಾ ಸ್ಯೈಕ್ಯೇನ ರೂಪಾಭೇದಾದ್ವಿದ್ಯೈಕ್ಯಾದ್ಗುಣೋಪಸಂಹಾರಃ ಏವಂ ಅನ್ಯತ್ರಾಕ್ಷ್ಯಾದಿತ್ಯಸಂಬಂಧಿನಃ ಪರಶಿವಬ್ರಹ್ಮಣಸ್ಸತ್ಯಸ್ಯೈಕ್ಯತ್ವೇನ ವಿದ್ಯೈಕ್ಯಾದುಭಯೋರುಭಯತ್ರೋಪಸಂಹಾರಃ.

ಶಾಂಡಿಲ್ಯಾದಿವಿದ್ಯೆಗಳಲ್ಲಿ ಐಕ್ಯವಿದ್ದರೂ ವೈಶ್ವಾನರವಿದ್ಯೆಯಲ್ಲಿ ವೈಲಕ್ಷಣ್ಯ ವಿರುವುದರಿಂದ ವಿದ್ಯೆಗಳಲ್ಲಿ ಹೇಗೆ ಐಕ್ಯವುಂಟಾದೀತೆಂದು ಆಶಂಕಿಸಿ ಪರಿಹರಿಸುತ್ತಾನೆ. ಪ್ರತರ್ದನ ವೈಶ್ವಾನರ ಮತ್ತು ಭೂಮ ವಿದ್ಯೆಗಳಲ್ಲಿ ಜೀವಮುಖ್ಯಪ್ರಾಣದ ಮತ್ತು ವೈಶ್ವಾನರೈಕದೇಶದ ಮತ್ತು ನಾಮಾದಿಗಳ ಉಪಾಸನಗಳೊಡಗೂಡಿದ ಸಗುಣ ಪರಶಿವನ ಉಪಾಸನದಿಂದ ಅದೃಷ್ಟವೆಂಬುದು ಹುಟ್ಟುತ್ತದೆ. ಆದರೆ ಕೇವಲ ಸಗುಣ ಪರಶಿವನ ಉಪಾಸನದಿಂದಲೇ ಅದು ಹುಟ್ಟುವುದಿಲ್ಲ. ಹೀಗೆ ಸಗುಣ ಮತ್ತು ನಿರ್ಗು ಣೋಪಾಸನಗಳೆರಡಕ್ಕೂ ಅಂಗಾಗಿಭಾವದಪ್ರಯುಕ್ತವಾಗಿ ಪರಸ್ಪರಸಂಬಂಧವಿರುವು ದರಿಂದ ವಿದ್ಯೆಗಳಲ್ಲಿ ಐಕ್ಯವು ಸಂಭವಿಸುತ್ತದೆ. ಬೃಹದಾರಣ್ಯಕದಲ್ಲಿ "ಸತ್ಯಂ ಬ್ರಹ್ಮ" ಎಂದಾರಂಭಿಸಿ "ಸತ್ಯವೇ ಆದಿತ್ಯ. ಅವನೇ ಈ ಮಂಡಲದಲ್ಲಿರುವ ಪುರುಷನು. ಅವನೇ ಬಲಗಣ್ಣು ಆಗಿದ್ದಾನೆ" ಎಂದು ಆದಿತ್ಯಮಂಡಲದಲ್ಲೂ ಕಣ್ಣಿನಲ್ಲೂ ಸತ್ಯಬ್ರಹ್ಮವನ್ನು ಮಂತ್ರಮೂರ್ತಿಯಾದ್ದರಿಂದ ಉಪಾಸ್ಯನೆಂದು ತಿಳಿಸಿ ಅವನಿಗೆ ಎರಡು ರಹಸ್ಯನಾಮಗ ಳನ್ನು ಉಪಾಸನವಿಶೇಷವೆಂದು ಹೇಳಲಾಗಿದೆ. ಅವೆರಡು ಅದರದರ ಸ್ಥಾನದಲ್ಲಿಯೇ ವ್ಯವಸ್ಥಿತವಾಗಿರುತ್ತವೆಯೆ? ಅಥವಾ ಎರಡುಕಡೆಗಳಲ್ಲೂ ವ್ಯವಸ್ಥೆ ಇಲ್ಲದೆ ಇರುತ್ತವೆ ಯೇ ಎಂದು ಸಂಶಯಬಂದರೆ ಸತ್ಯವೇ ಮಂತ್ರಮೂರ್ತಿ ಎನಿಸಿರುವ ಬ್ರಹ್ಮವೇ ಎರಡು ಕಡೆಯೂ ಉಪಾಸ್ಯವಾಗಿರುವುದರಿಂದಲೂ, ಫಲವು ಒಂದೇ ಆಗಿರುವುದರಿಂದಲೂ, ಎರಡು ವಿದ್ಯೆಗಳೂ ಒಂದೇ ಆದ್ದರಿಂದಲೂ ಇವಕ್ಕೆ ನಿಯಮವಿಲ್ಲವೆಂದು ಆಕ್ಷೇಪ ಬಂದರೆ ಸಿದ್ಧಾಂತವನ್ನು ಮುಂದೆ ಹೇಳಲಾಗಿದೆ. ಮನೋಮಯತ್ವ ಮೊದಲಾದ

ಗುಣಗಳಿಂದ ಕೂಡಿರುವ ಉಪಾಸನೆಯಲ್ಲಿ ಉಪಾಸ್ಯವಾದ ವಸ್ತುವು ಒಂದೇ ಆದ್ದರಿಂದ ವಿದ್ಯೆಯೂ ಒಂದೇ ಆಗಿ ಎರಡು ಕರ್ಮಗಳಲ್ಲೂ ಇರುವ ಗುಣಗಳನ್ನು ಒಟ್ಟಿಗೆ ಒಂದೇಕಡೆ ಸೇರಿಸಿಕೊಳ್ಳುವಂತೆ ಬೇರೆಕಡೆಯೂ ಕಣ್ಣು ಸೂರ್ಯ ಇವರಲ್ಲೂ ಸತ್ಯ ಸ್ವರೂಪನಾದ ಪರಮಶಿವನು ಒಬ್ಬನೇ ಆಗಿರುವುದರಿಂದಲೂ, ವಿದ್ಯೆಗಳು ಒಂದೇ ಆದ್ದರಿಂದಲೂ ಎರಡನ್ನೂ ಎರಡುಕಡೆಯೂ ಸೇರಿಸಿಕೊಳ್ಳಬೇಕು.

ಕಿಂಚ ಅಕ್ಷಿಸೂರ್ಯಮಂಡಲಾದಿಸ್ಥಾನಭೇದೇನೋಪಾಸನಭೇದ ವ್ಯಪದೇಶೇಽಪಿ ಉಪಾಸ್ಯಸ್ಯ ಶಿವಸ್ಯೈಕತ್ವೇನ ವಿದ್ಯೈಕ್ಯಮುಪಪದ್ಯತೇ. ಆದಿತ್ಯಾಕ್ಷಿಸ್ಥಾನಾದ್ಯುಪಾಸನೇಷು ಸ್ಥಾನಭೇದಾದುಪಾಸನಭೇದಾದ್ವಿದ್ಯಾಸು ವಿಶೇಷಭೇದೋ ದೃಶ್ಯತೇ. ತಸ್ಮಾತ್ಕಥಂ ವಿದ್ಯೈಕ್ಯಮಿತ್ಯಾಶಂಕಾಯಾಮಾಹ. ನ ವಾ ವಿಶೇಷಾತ್ ॥ ೨೧ ॥ ನವೈತದಸ್ತಿ ವಿದ್ಯಾಭೇದಃ, ಕುತಃ? ರೂಪವಿಶೇಷಾತ್. ಪರಶಿವಬ್ರಹ್ಮಣ ಏಕತ್ವೇಽಪ್ಯೇಕತ್ರಾದಿತ್ಯಮಂಡಲಸ್ಥತಯಾ ಉಪಾಸ್ಯತ್ವಂ, ಇತರತ್ರಾಕ್ಷ್ಯಾಧಾರತಯೋಪಾಸ್ಯತ್ವಂ ಇತಿ ಸ್ಥಾನಸಂಬಂಧಿತ್ವಭೇದೇನ ರೂಪಭೇದಾತ್ ವಿದ್ಯಾಭೇದಃ. ತಥಾಪಿ ಮೋಕ್ಷಫಲೈಕವಿಶೇಷಾತ್ ವಿದ್ಯೈಕ್ಯಮಭಿಹಿತಂ. ಶಾಂಡಿಲ್ಯವಿದ್ಯಾಯಾಂ ಉಪಾಸ್ಯಸ್ಥಾನಭೇದದರ್ಶನೇಽಪ್ಯುಭಯತ್ರ ಹೃದಯಾಧಾರತ್ವೇನೋಪಾಸ್ಯತ್ವಾದುಪಾಸನೈಕ್ಯಂ. ತದ್ವದತ್ರಾಪಿ.

ಕಣ್ಣು ಮತ್ತು ಸೂರ್ಯಮಂಡಲ ಎಂಬ ಸ್ಥಾನಭೇದದಿಂದ ಉಪಾಸನಭೇದವಿದ್ದರೂ ಉಪಾಸ್ಯನಾದ ಶಿವನು ಒಬ್ಬನೇಆದ್ದರಿಂದ ವಿದ್ಯೆಗಳಲ್ಲಿ ಐಕ್ಯತೆ ಏನೋ ಹೊಂದುತ್ತದೆ. ಆದರೆ ಸ್ಥಾನಭೇದದಿಂದಲೂ ಉಪಾಸನಭೇದದಿಂದಲೂ ವಿದ್ಯೆಗಳಲ್ಲಿ ವಿಶೇಷಭೇದವೇ ಇರುವುದರಿಂದ ಹೇಗೆ ಐಕ್ಯವುಂಟಾಗುತ್ತದೆ ಎಂದಾಶಂಕಿಸಿ ಸಮಾಧಾನಮಾಡುತ್ತಾನೆ. ಆದರೆ ಒಂದುಕಡೆ ಪರಶಿವನು ಆದಿತ್ಯಮಂಡಲದಲ್ಲಿದ್ದು ಉಪಾಸ್ಯನಾಗಿದ್ದಾನೆ; ಮತ್ತೊಂದು ಕಡೆ ಕಣ್ಣಿನಲ್ಲಿದ್ದು ಉಪಾಸ್ಯನಾಗಿದ್ದಾನೆ. ಹೀಗೆ ಸ್ಥಾನಭೇದದಿಂದ ವಿದ್ಯಾಸ್ವರೂಪದಲ್ಲೂ ಭೇದವಿದೆ ಎಂದು ಆಕ್ಷೇಪಬಂದರೆ ಮೋಕ್ಷವೆಂಬ ಫಲವು ಒಂದೇಯಾದ್ದರಿಂದ ವಿದ್ಯೆಗಳಲ್ಲಿ ಐಕ್ಯವನ್ನೇ ಹೇಳಲಾಗಿದೆ. ಶಾಂಡಿಲ್ಯವಿದ್ಯೆಯಲ್ಲಿ ಉಪಾಸ್ಯವಸ್ತುವಿಗೆ ಸ್ಥಾನಭೇದವಿದ್ದರೂ ಹೇಗೆ ಎರಡುಕಡೆಗಳಲ್ಲೂ ಹೃದಯವೇ ಆಧಾರವಾದ್ದರಿಂದ ಉಪಾಸನೆಯ ಐಕ್ಯವನ್ನು ಹೇಳುತ್ತೇವೆಯೋ ಹಾಗೆ ಇಲ್ಲಿಯೂ ಐಕ್ಯವನ್ನೇ ತಿಳಿಯಬೇಕು.

ಅಸ್ಮಿನ್ನರ್ಥೇ ಪುನರ್ಹೇತ್ವಂತರಮಾಹ. ದರ್ಶಯತಿ ಚ ॥ ೨೨ ॥ ತೈತ್ತಿರೀಯೇ "ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ಯದಂತಸ್ತದುಪಾಸಿತವ್ಯಂ" ಇತಿ ಪರಮೇಶ್ವರಸ್ಯೋಪಾಸನಸ್ಥಾನಂ ದಹರಪುಂಡರೀಕಮಿತ್ಯುಪದಿಶ್ಯ ತತ್ರೋಪಾಸ್ಯಃ ಪರಮಾತ್ಮಾ ಕಃ? ಇತ್ಯಾಶಂಕಾಯಾಂ "ಯೋ ವೇದಾದೌ ಸ್ವರಃ ಪ್ರೋಕ್ತಃ ವೇದಾಂತೇ ಚ ಪ್ರತಿಷ್ಠಿತಃ। ತಸ್ಯ

ಪ್ರಕೃತಿಲೀನಸ್ಯ ಯಃ ಪರಸ್ಸ ಮಹೇಶ್ವರಃ ॥" ಇತಿ ಮಹೇಶ್ವರಸ್ಯೈವ ತತ್ರೋಪಾಸ್ಯತ್ವಂ ಪ್ರದರ್ಶಿತಂ. ಕೈವಲ್ಯೇ "ಹೃತ್ಪುಂಡರೀಕಂ ವಿರಜಂ ವಿಶುದ್ಧಂ" ಇತ್ಯಾದಿನಾ ಪರಮೇಶ್ವರಸ್ಯೋಪಾಸನಸ್ಥಾನಂ ಹೃದಯ ಕಮಲಂ ಪ್ರದರ್ಶ್ಯ ತತ್ರ ಪರಮಾತ್ಮಾ ಕೇನ ರೂಪೇಣೋಪಾಸ್ಯ ಇತ್ಯಾ ಕಾಂಕ್ಷಾಯಾಂ "ಉಮಾಸಹಾಯಂ ಪರಮೇಶ್ವರಂ ಪ್ರಭುಂ" ಇತ್ಯಾದಿನೋಮಾಸಹಾಯತ್ವಾದಿಧರ್ಮಾವಚ್ಛಿನ್ನಮೂರ್ತಬ್ರಹ್ಮಣಶ್ಶಿ ವಸ್ಯೋಪಾಸ್ಯತ್ವಂ ನಿರ್ದಿಷ್ಟಂ. ಏವಂ ತೈತ್ತಿರೀಯಕೈವಲ್ಯಯೋಃ ಏಕತ್ರ ದಹರಶಬ್ದೋ ಮಹೇಶ್ವರಶಬ್ದಶ್ಚ. ಏಕತ್ರ ಹೃದಯಶಬ್ದ ಉಮಾಸಹಾಯಶಬ್ದಶ್ಚೇತಿ ಪರಸ್ಪರಭಿನ್ನತ್ವವ್ಯಪದೇಶೇಽಪಿ ಯದಾ ವಸ್ತ್ವೈಕ್ಯಾವಗಮಾತ್ ಉಪಾಸನೈಕತ್ವಂ ತದ್ವದಕ್ಷಿಭಾನುಮಂಡಲಯೋಃ ಸ್ಥಾನಾದಿಧರ್ಮಾವೈಲಕ್ಷಣ್ಯೇಽಪಿ ಉಪಾಸ್ಯಫಲಯೋರೇಕತ್ವೇನ ವಿದ್ಯೈ ಕ್ಯಮನಿವಾರ್ಯಮಿತಿ ದರ್ಶಯತಿ. ಚಕಾರೋ ನಿಶ್ಚಯಾರ್ಥಃ. ನನು ತೈತ್ತಿರೀಯಛಾಂದೋಗ್ಯಕೈವಲ್ಯಾದಿಷು ಏಕತ್ರ "ಏಷೋಽಂತ ರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ ಹಿರಣ್ಯಶ್ಮಶ್ರುಃ ಹಿರಣ್ಯಕೇಶ ಆಪ್ರಣಖಾತ್ಸರ್ವ ಏವ ಸುವರ್ಣಃ" ಇತ್ಯಾದಿ ಶ್ರೂಯತೇ. ಅನ್ಯತ್ರ "ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ" ಇತಿ ಮಂಡ ಲಾಂತರ್ವರ್ತಿತಯಾ ಹಿರಣ್ಮಯಂ ಪುರುಷಂ ಪ್ರಸ್ತುತ್ಯ ತತ್ರೋಪ ಸಂಹಾರೇ "ಸರ್ವೋ ವೈ ರುದ್ರಃ" ಇತ್ಯಾರಭ್ಯ "ನಮೋ ಹಿರಣ್ಯ ಬಾಹವೇ ಹಿರಣ್ಯವರ್ಣಾಯ ಹಿರಣ್ಯರೂಪಾಯ ಹಿರಣ್ಯಪತಯೇಽಂಬಿ ಕಾಪತಯ ಉಮಾಪತಯೇ ಪಶುಪತಯೇ ನಮೋ ನಮಃ" ಇತ್ಯಂ ತೇನ ಸರ್ವಾತ್ಮಕತ್ವಂ ಹಿರಣ್ಯಬಾಹುತ್ವಂ ಉಮಾಪತಿತ್ವಂ ಚಾಮ್ನಾ ಯತೇ. ತತ್ರೈಕತ್ರ ಸರ್ವಾಂಗಸುವರ್ಣತ್ವಂ, ಅನ್ಯತ್ರ ಬಾಹುಸುವ ರ್ಣತ್ವಂ ಇತಿ ರೂಪಭೇದಃ. ಏಕತ್ರ "ಸರ್ವೋ ವೈ ರುದ್ರಃ" ಇತಿ ಸರ್ವಾತ್ಮಕತ್ವಂ, ಅನ್ಯತ್ರ "ಸರ್ವೇಷಾಂ ಲೋಕಾನಾಂ ಈಷ್ಟೇ" ಇತಿ ಸರ್ವಾಧಿಪತ್ಯಮಿತಿ ಧರ್ಮಭೇದಃ. ತಸ್ಮಾನ್ನ ವಿದ್ಯೈಕ್ಯಮಿತಿ ಚೇನ್ನ "ಅಂತರಾದಿತ್ಯ" ಇತಿ ಸ್ಥಾನೈಕ್ಯಮೇವ ವಿದ್ಯೈಕ್ಯಂ ದರ್ಶಯತಿ. ತೈತ್ತಿರೀಯೇ "ಹಿರಣ್ಮಯಃ ಪುರುಷಃ" ಇತ್ಯುಪಕ್ರಮೇಣ ಬಾಹುಗ್ರಹ ಣಸ್ಯೋಪಲಕ್ಷಣತ್ವಾದುಪಸಂಹಾರೇಽಪಿ ಸರ್ವಾಂಗಸುವರ್ಣತ್ವಮೇವ ವಿವಕ್ಷಿತಂ. ವಿಶ್ವಾಧಿಕಸ್ಯ ಪರಶಿವಸ್ಯ ಶಕ್ತ್ಯಾ ಜಗದುಭಯಕಾರಣ ತ್ವಾತ್ ತದನುಪ್ರವೇಶಾಚ್ಚ ತಾದಾತ್ಮ್ಯಂ ಯುಕ್ತಂ. ಅತಸ್ತದುಭಯ ತ್ರೈಕಸ್ಯ ಪ್ರತಿಪಾದಿತತ್ವಾದ್ವಿದ್ಯೈಕ್ಯಮಪ್ರತಿಹತಂ.

ಈ ಬಗ್ಗೆ ಬೇರೊಂದು ಹೇತುವನ್ನು ಹೇಳುತ್ತಾನೆ. ತೈತ್ತಿರೀಯದಲ್ಲಿ ದಹರ

ಕಮಲವನ್ನು ಪರಮೇಶ್ವರನ ಉಪಾಸನಸ್ಥಾನವೆಂದು ಹೇಳಿ ಅಲ್ಲಿ ಉಪಾಸ್ಯನಾದ ಪರಮಾತ್ಮನು ಯಾರು ? ಎಂದು ಆಶಂಕಿಸಿ "ವೇದವೇದಾಂತಗಳಲ್ಲಿ ಸುಪ್ರತಿಷ್ಠಿತವಾದ ಯಾವ ಸ್ವರವಿದೆಯೋ ಅದಕ್ಕಿಂತಲೂ ಆಚಿನವನೇ ಮಹೇಶ್ವರನು" ಎಂದು ಹೇಳಿ ಮಹೇಶ್ವರನನ್ನು ಉಪಾಸ್ಯನೆಂದು ತಿಳಿಸಲಾಗಿದೆ. ಕೈವಲ್ಯದಲ್ಲಿ ಹೃದಯ ಕಮಲವನ್ನು ಪರಮೇಶ್ವರನ ಉಪಾಸನಸ್ಥಾನವೆಂದು ಹೇಳಿ ಅಲ್ಲಿ ಪರಮಾತ್ಮನನ್ನು ಹೇಗೆ ಉಪಾಸನಮಾಡಬೇಕು ಎಂಬ ಪ್ರಶ್ನೆಗೆ ಉಮಾಸಹಾಯನೆನಿಸಿದ ಮೂರ್ತಶಿವನೇ ಉಪಾಸ್ಯನೆಂದು ಉತ್ತರಿಸಲಾಗಿದೆ. ಹೀಗೆ ತೈತ್ತಿರೀಯದಲ್ಲಿ ದಹರ ಮತ್ತು ಮಹೇಶ್ವರಶಬ್ದಗಳನ್ನೂ ಕೈವಲ್ಯದಲ್ಲಿ ಹೃದಯ ಮತ್ತು ಉಮಾಸಹಾಯವೆಂಬ ಪದಗಳನ್ನೂ ಒಂದಕ್ಕೊಂದು ಬೇರೆಯಾಗಿ ಹೇಳಿದ್ದರೂ, ಉಪಾಸ್ಯವಸ್ತು ಒಂದೇ ಆದ್ದರಿಂದ ಉಪಾಸನೆಗಳನ್ನು ಒಂದೇಬಗೆ ಎಂದು ಭಾವಿಸುವಂತೆ, ಕಣ್ಣು ಮತ್ತು ಸೂರ್ಯಮಂಡಲಗಳಲ್ಲೂ ಸ್ಥಾನಭೇದಗಳಿದ್ದರೂ ಉಪಾಸ್ಯವಸ್ತು ಒಂದೇ ಆದ್ದರಿಂದ ವಿದ್ಯೆಗಳೂ ಒಂದೇ ಆಗಿವೆ ಎಂಬ ಅಂಶವನ್ನು ಶ್ರುತಿಯೇ ತೋರಿಸಿಕೊಟ್ಟಿದೆ. ಇದು ನಿಶ್ಚಯವೆಂದು ಚಕಾರವು ತಿಳಿಸುತ್ತದೆ. ತೈತ್ತಿರೀಯ ಛಾಂದೋಗ್ಯ ಕೈವಲ್ಯಗಳಲ್ಲಿ ಪರಮಶಿವನು ಸೂರ್ಯಮಂಡಲವನ್ನು ಪ್ರವೇಶಿಸಿದ್ದರೂ, ಒಂದುಕಡೆ "ಸೂರ್ಯನೊಳಗೆ ಯಾವ ಹಿರಣ್ಮಯ ಪುರುಷನಿರುವನೋ ಅವನ ಗಡ್ಡ, ಮೀಸೆ, ಕೂದಲು, ಉಗುರು ಎಲ್ಲವೂ ಸುವರ್ಣವಾಗಿವೆ" ಎಂದೂ, ಬೇರೆಕಡೆ "ಆದಿತ್ಯನೊಳಗೆ ಹಿರಣ್ಮಯಪುರುಷನಿದ್ದಾನೆ" ಎಂದೂ ಮಂಡಲದೊಳಗಿನ ಪುರುಷನನ್ನು ಪ್ರಶಂಸಿಸಿ, ಉಪಸಂಹಾರದಲ್ಲಿ "ಎಲ್ಲವೂ ರುದ್ರನೇ" ಎಂದು ಆರಂಭಿಸಿ "ಹಿರಣ್ಯಬಾಹುವೂ, ಹಿರಣ್ಯವರ್ಣನೂ, ಹಿರಣ್ಯರೂಪನೂ, ಹಿರಣ್ಯಪತಿಯೂ ಆದ ಉಮಾಪತಿಗೆ ನಮಸ್ಕಾರ"ವೆಂದು ಹೇಳಿ ಶಿವನೇ ಸರ್ವಾತ್ಮಕನೂ, ಹಿರಣ್ಯಬಾಹುವೂ, ಉಮಾಪತಿಯೂ ಆಗಿರುವನೆಂದು ತಿಳಿಸಲಾಗಿದೆ. ಒಂದುಕಡೆ ಸರ್ವಾಂಗಗಳೂ ಸುವರ್ಣವೆಂದೂ, ಮತ್ತೊಂದುಕಡೆ ಬಾಹುಮಾತ್ರವೇ ಸುವರ್ಣವೆಂದೂ ಹೇಳಿದ್ದರಿಂದ ಸ್ವರೂಪಭೇದವೂ, ಒಂದುಕಡೆ ರುದ್ರನು ಸರ್ವಾತ್ಮಕನೆಂದೂ, ಮತ್ತೊಂದುಕಡೆ ಅವನು ಸರ್ವಾಧಿಪತಿ ಎಂದೂ ಹೇಳಿದ್ದರಿಂದ ಧರ್ಮಭೇದವೂ ಬಂದಿವೆ. ಆದ್ದರಿಂದ ವಿದ್ಯೆಗಳು ಬೇರೆಬೇರೆ ಎಂದು ಆಕ್ಷೇಪಬಂದರೆ, "ಆದಿತ್ಯನೊಳಗೆ" ಎಂದು ಎರಡುಕಡೆಗಳಲ್ಲೂ ಒಂದೇ ಸ್ಥಾನವನ್ನು ಹೇಳಿರುವುದರಿಂದ ವಿದ್ಯೆಗಳೆರಡೂ ಒಂದೇ ಎಂದು ಶ್ರುತಿಯೇ ತೋರಿಸಿಕೊಟ್ಟಿದೆ. ತೈತ್ತಿರೀಯದಲ್ಲಿ "ಹಿರಣ್ಮಯಪುರುಷನು" ಎಂದು ಆರಂಭಿಸಿ ಬಾಹು ಒಂದನ್ನೇ ಅಲ್ಲ ತಿಳಿಸಿದ್ದರೂ ಅದರಿಂದ ಉಳಿದ ಅವಯವಗಳೂ ಸೂಚಿತವಾಗುತ್ತವೆಯಾದ್ದರಿಂದ ಉಪಸಂಹಾರದಲ್ಲಿ ಸರ್ವಾಂಗಸುವರ್ಣನೆಂಬ ಅಂಶವನ್ನು ಹೇಳಲೇಬೇಕಾಗುತ್ತದೆ. ವಿಶ್ವಾಧಿಕನಾದರೂ ಪರಶಿವನು ಸ್ವಶಕ್ತಿಯಿಂದ ಜಗತ್ತಿಗೆ ಉಭಯಕಾರಣನೆನಿಸಿ ಎಲ್ಲದರೊಳಗೂ ಪ್ರವೇಶಿಸಿರುವುದರಿಂದ ಅವನಿಗೂ ಜಗತ್ತಿಗೂ ತಾದಾತ್ಮ್ಯವು ಹೊಂದುತ್ತದೆ. ಆದ್ದರಿಂದ ಎರಡುಕಡೆಗಳಲ್ಲೂ ಒಬ್ಬ

ನನ್ನೇ ಉಪಾಸ್ಯನೆಂದು ಹೇಳಿರುವುದರಿಂದ ವಿದ್ಯೆಗಳೂ ಒಂದೇ ಆಗಿವೆ.

"ಬ್ರಹ್ಮಜ್ಯೇಷ್ಠಾ ವೀರ್ಯಾಸಂಭೃತಾನಿ" ಇತಿ ಶ್ರುತೌ ಭಿನ್ನಪ್ರಕರಣಸ್ಥತ್ವಾತ್ ವ್ಯವಹಿತತ್ವಾಚ್ಚ ಸಂಭೃತಿದ್ಯುವ್ಯಾಪ್ತ್ಯಾದಿಗುಣವಿಶಿಷ್ಟ ಪರಶಿವಬ್ರಹ್ಮೋಪಾಸನಮಪಿ ಸ್ವಾತಂತ್ರ್ಯೇಣ ತಲ್ಲೋಕಪ್ರಾಪ್ತಿಸಾಧನಂ ಕಥಮಿತ್ಯಾಶಂಕಾಯಾಮಧಿಕರಣಾಂತರಮಾಹ. ಸಂಭೃತ್ಯಧಿಕರಣಂ ॥ ೮ ॥ ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ ॥ ೨೩ ॥ ತೈತ್ತಿರೀಯಕೇ ನಾರಾಯಣೀಯಾನಾಂ ಖಿಲೇಷು ಚ "ಬ್ರಹ್ಮಜ್ಯೇಷ್ಠಾ ವೀರ್ಯಾ ಸಂಭೃತಾನಿ ಬ್ರಹ್ಮಾಗ್ರೇ ಜ್ಯೇಷ್ಠೋ ದಿವಮಾತತಾನ", "ಬ್ರಹ್ಮಾ ಭೂತಾನಾಂ ಪ್ರಥಮೋಽಥ ಜಜ್ಞೇ ತೇನಾರ್ಹತಿ ಬ್ರಹ್ಮಣಾ ಸ್ಪರ್ಧಿತುಂ ಕಃ" ಇತಿ ಬ್ರಹ್ಮಣಿ ಜ್ಯೇಷ್ಠಾನಾಂ ವೀರ್ಯಾಣಾಂ ಸಂಭೃತಿಃ. ಯಾನಿ ಲೋಕೇ ತ್ರಿಪುರಸಂಹಾರಕಾಲಕೂಟಭಕ್ಷಣಮನ್ಮಥಯಮಾಂತಕಾದಿ ನಿರತಿಶಯಾನಿ ಜ್ಯೇಷ್ಠಾನಿ. ಚಂದ್ರಧಾರಣತ್ವಬ್ರಹ್ಮಕಪಾಲಮಾಲಿಕಾ ಭೃತತ್ವವಿಷ್ಣುವಲ್ಲಭತ್ವಶೇಷಾಂಗುಲೀಯತ್ವಾದೀನಿ ಚಾನನ್ಯಧರ್ಮ ಸಂಭೃತಾನಿ ಪರಂಬ್ರಹ್ಮ ಆತತಾನ ಸಂಪಾದಿತವತ್. ಜ್ಯೇಷ್ಠಂ ಹರಿಹರ ಹಿರಣ್ಯಗರ್ಭಾದಿಭ್ಯೋಽಪ್ಯುತ್ಕೃಷ್ಟಂ. "ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ" ಇತ್ಯಾದಿಶ್ರುತಿಸಿದ್ಧಂ ಬ್ರಹ್ಮೇತ್ಯಗ್ರೇ ತೇಷಾಮಪಿ ಸ್ರಷ್ಟಃ. "ಧ್ಯಾಯೀತೇಶಾನಂ ಪ್ರಧ್ಯಾಯಿತವ್ಯಂ ಸರ್ವಮಿದಂ ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ" ಇತ್ಯಾದಿಶ್ರುತಿಷು ಸ್ಪಷ್ಟಮುಪದಿಷ್ಟಂ. "ಪ್ರಾಗ್ದಿವಂ ಪರಮಾಕಾಶಪದಮಾತತಾನ ವ್ಯಾಪ್ತ್ಯ ಅಧ್ಯಾಸ್ತೇತಿ ತೇಷಾಂ ಮಹತಾಂ ವೀರ್ಯಾಣಾಂ ಆಸಮತಾತ್ ಸಂಭೃತಿದ್ಯುವ್ಯಾಪ್ತಿಶ್ಚ ಸರ್ವಾಸು ಪರವಿದ್ಯಾಸು ಉಪಸಂಹಾರೋ ನವೇತಿ ಸಂದಿಹ್ಯತೇ. "ಅಥ ಯ ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷೋ ದೃಶ್ಯತೇ", "ಅಥ ಯತಃ ಪರೋ ದಿವೋ ಜ್ಯೋತಿರ್ದೀಪ್ಯತೇ", "ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಪುಂಡರೀಕಂ ವೇಶ್ಮ" ಇತ್ಯಾದಿಶ್ರುತಿಷು ಅಥಶಬ್ದಸ್ಯ ಪ್ರಕರಣಭೇದಂ ಸೂಚಯತಿ. ತಥಾಚ ತತ್ತದುಪಾಸನ ಪ್ರಕರಣೇ ಭೇದವಿಹಿತಾನ್ಯಂಗೋಪಾಸನಾನಿ ಸನ್ನಿಹಿತಸಗುಣಬ್ರಹ್ಮೋಪಾಸನಪ್ರತ್ಯಂಗಾನಿ ತಲ್ಲೋಕಪ್ರಾಪ್ತಿವಿಧಾಯಕಮಾತ್ರಾಣಿ. "ಬ್ರಹ್ಮಜ್ಯೇಷ್ಠಾ ವಿದ್ಯಾಸಂಭೃತಾನಿ ಬ್ರಹ್ಮಾಗ್ರೇ ಜ್ಯೇಷ್ಠಂ ದಿವಮಾತತಾನ" ಇತ್ಯಸಾಂ ಖಿಲಸಂಹಿತಾಯಾಂ ವೀರ್ಯಸಂಭೃತಿದ್ಯುಲೋಕವ್ಯಾಪಕ ಸರ್ವಭೂತಕಾರಣತ್ವಾದಯೋ ಬಹವೋ ಗುಣಾಃ ಪ್ರತಿಪಾದಿತಾಃ. ತಥಾಪಿ "ಉಪಾಸೀತ" ಇತಿ ವಿಧಿವಾಕ್ಯಂ ಫಲಂ ಚ ನ ಶ್ರುತಂ.

ತಸ್ಮಾತ್ ಖಿಲಸಂಹಿತಾಪ್ರತಿಪಾದಿತಾನಾಂ ಸರ್ವೇಷಾಂ ಗುಣಾನಾಂ ದಹರಶಾಂಡಿಲ್ಯಾದಿವಿದ್ಯಾವಿಧಾಯಕಸಗುಣಪರಶಿವಬ್ರಹ್ಮೋಪಾಸನೇಷೂಪಸಂಹಾರೋ ನಾಂಗೀಕರ್ತವ್ಯ ಇತಿ ಪ್ರಾಪ್ತೇ ವದಾಮಃ. ಸಂಭೃತಿದ್ಯುವ್ಯಾಪ್ತೀತಿ ಸಮಾಹಾರದ್ವಂದ್ವತ್ವಾದೇಕವದ್ಭಾವಃ. ಸಂಭೃತ್ಯಾದಿಕಮನಾರಭ್ಯಾಧೀತಮಪಿ ಅತ ಏವ ಸ್ಥಾನಭೇದಾದ್ವ್ಯವಸ್ಥಾಪ್ಯಂ ನ ಸರ್ವತ್ರೋಪಸಂಹರ್ತವ್ಯಂ. ಕಥಮನಾರಭ್ಯಾಧೀತಾನಾಂ ಸ್ಥಾನವಿಶೇಷನಿಯತತ್ವಂ? ಸ್ವಸಾಮರ್ಥ್ಯಾದಿತಿ ಬ್ರೂಮಃ. ದ್ಯುವ್ಯಾಪ್ತಿಸ್ತಾವತ್ ಹೃದಯಾದ್ಯಲ್ಪಸ್ಥಾನಗೋಚರಾಸು ವಿದ್ಯಾಸು ನೋಪಹರ್ತುಂ ಶಕ್ಯಾ. ಸಂಭೃತತ್ವಾದಯೋಽಪಿ ತತ್ಸಹಚಾರಿಣಸ್ತತ್ತುಲ್ಯದೇಶಾ ಇತ್ಯಲ್ಪಸ್ಥಾನವಿಷಯಾಸು ವಿದ್ಯಾಸು ಅನುಪಸಂಹಾರ್ಯಾಃ. ಶಾಂಡಿಲ್ಯದಹರಾದಿವಿದ್ಯಾಸ್ವಲ್ಪಸ್ಥಾನವಿಷಯಾಸು "ಜ್ಯಾಯಾನ್ಪೃಥಿವ್ಯಾಃ ಯಾವಾನ್ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶಃ" ಇತ್ಯಾದಯಸ್ತತ್ರ ತತ್ರ ಶಕ್ಯೋಪಸಂಹಾರಾಃ ಮನೋಮಯತ್ವಾಪಹತಪಾಪ್ಮತ್ವಾದಿವಿಶಿಷ್ಟಸ್ಯೋಪಾಸ್ಯಸ್ಯ ಮಾಹಾತ್ಮ್ಯಪ್ರತಿಪಾದನಪರಾಃ. ಕಿಂಚ "ದೇವಾ ಹ ವೈ ಸ್ವರ್ಗಂ ಲೋಕಮಗಮನ್ ತೇ ದೇವಾ ರುದ್ರಮಪೃಚ್ಛನ್ ಕೋ ಭವಾನಿತಿ? ಪರಮಾನಂದಸ್ವಭಾವತಯಾ ಸ್ವರ್ಗಶಬ್ದವಾಚ್ಯಂ ಹಿರಣ್ಯಗರ್ಭಾದಿಪದೇಭ್ಯೋ ಮಹತ್ತರಂ ಮಹಾಸ್ಥಾನಂ ಹಿ ಶ್ರೂಯತೇ. ತತಃ ಸ್ವಲ್ಪಸ್ಥಾನವ್ಯತಿರೇಕೇಷು ವೈಶ್ವಾನರಾದ್ಯುಪಾಸನೇಷು ದ್ಯುವ್ಯಾಪ್ತಿರುಪಸಂಹಾರ್ಯೇತಿ ತತ್ಸಹಚಾರಾತ್ ಮಹಾವೀರ್ಯಸಂಭೃತಿರಪಿ ತತ್ರೈವೋಪಸಂಹರ್ತವ್ಯಾ. ಉತ ಖಿಲಸಂಹಿತಾಯಾಂ ವಿಧಿಫಲಯೋರದರ್ಶನೇಽಪಿ "ಉಪಾಸೀತ" ಇತಿ ವಿಧಿಂ ಪರಶಿವಬ್ರಹ್ಮಲೋಕಪ್ರಾಪ್ತಿರೂಪಂ ಫಲಂ ಚಾಧ್ಯಾಹೃತ್ಯ ದಹರಾದ್ಯುಪಾಸನಾದಿವತ್ ಖಿಲಸಂಹಿತಾಸು ಗತಸಕಲಗುಣವಿಶಿಷ್ಟಬ್ರಹ್ಮೋಪಾಸನಸ್ಯ ಪರಶಿವಬ್ರಹ್ಮಲೋಕಪ್ರಾಪ್ತಿಸಾಧನತ್ವಾಂಗೀಕಾರೇಽಪ್ಯದೋಷಃ.

"ಬ್ರಹ್ಮವೇ ಎಲ್ಲಕ್ಕೂ ದೊಡ್ಡದು. ಅದರ ಶಕ್ತಿಯಿಂದಲೇ ಎಲ್ಲವೂ ನಿಂತಿದೆ" ಎಂಬ ಶ್ರುತಿಯಲ್ಲಿ ಸಗುಣೋಪಾಸನವು ಬೇರೆ ಪ್ರಕರಣದಲ್ಲಿ ಬಂದಿದ್ದು ಇಲ್ಲಿ ಹೇಳದಿರುವುದರಿಂದ ಅದು ಸ್ವತಂತ್ರವಾಗಿ ಬ್ರಹ್ಮಲೋಕವನ್ನು ಹೇಗೆ ದೊರಕಿಸುತ್ತದೆ ಎಂದಾಶಂಕಿಸಿ ಸಮಾಧಾನವನ್ನು ತಿಳಿಸುತ್ತಾನೆ. ತೈತ್ತಿರೀಯದ ಖಿಲಶ್ರುತಿಗಳಲ್ಲಿ "ಬ್ರಹ್ಮವೇ ಎಲ್ಲಕ್ಕೂ ದೊಡ್ಡದು. ಅದರ ಶಕ್ತಿಯಿಂದಲೇ ವಿಶ್ವವೆಲ್ಲವೂ ನಿಂತಿದೆ. ಅದು ದ್ಯುಲೋಕವನ್ನು ವ್ಯಾಪಿಸಿತು. ಅದೇ ಭೂತಗಳೆಲ್ಲಕ್ಕೂ ಮೊದಲಿಗೆ ಇತ್ತು. ಆ ಬ್ರಹ್ಮದೊಡನೆ ಯಾರುತಾನೆ ಸ್ಪರ್ಧಿಸಿಯಾರು?" ಎಂಬ ಶ್ರುತಿಯಲ್ಲಿ ಪರಬ್ರಹ್ಮವನ್ನೇ ಹೆಚ್ಚಿನ ಶಕ್ತಿಗಳು ಅವಲಂಭಿಸಿರುವುವೆಂದು ತಿಳಿಸಲಾಗಿದೆ. ಹೀಗೆಯೇ ತ್ರಿಪುರ

ಸಂಹಾರ, ವಿಷಭಕ್ಷಣ, ೮ ಮನಿರೋಧ, ಕಾಮದಹನ ಮೊದಲಾದ ಅಸದೃಶ ಕಾರ್ಯಗಳು ಹೆಚ್ಚಿನವೆನಿಸಿವೆ. ಚಂದ್ರಧಾರಣ, ಬ್ರಹ್ಮಕಪಾಲಮಾಲಿಕೆಯ ಧಾರಣ, ವಿಷ್ಣುವಲ್ಲಭ, ಶೇಷನನ್ನು ಉಂಗುರವಾಗಿ ಧರಿಸಿರುವಿಕೆ ಇವೇ ಅಸಾಧಾರಣ ಧರ್ಮಗಳೆನಿಸಿವೆ. ಇವೆಲ್ಲವನ್ನು ಪರಶಿವನು ಲೀಲೆಯಿಂದ ಪಡೆದಿರುವನು. ಆದ್ದರಿಂದಲೇ ಪರಶಿವನು ಹರಿ ಹರ ಬ್ರಹ್ಮ ಮೊದಲಾದವರೆಲ್ಲರಿಗೂ ಜ್ಯೇಷ್ಠನು. "ಪ್ರಪಂಚಕ್ಕೆ ವಿಶ್ರಾಂತಿಸ್ಥಲವೆನಿಸಿದ ಶಿವನು ತ್ರಿಮೂರ್ತ್ಯತೀತನೆನಿಸಿದ್ದಾನೆ. ಅವನನ್ನೇ ಆತ್ಮನೆಂದು ತಿಳಿಯಬೇಕು" ಎಂದು ಈ ಬಗೆಯ ಶ್ರುತಿಯಲ್ಲಿ ಹೇಳಿರುವ ವಸ್ತುವೇ ಪರಶಿವಬ್ರಹ್ಮವೆನಿಸಿದೆ. "ಬ್ರಹ್ಮ, ವಿಷ್ಣು, ರುದ್ರೇಂದ್ರರಿಗೆ ಉತ್ಪತ್ತಿಕಾರಣನೂ, ಸರ್ವಾತ್ಮಕನೂ ಆದ ಈಶ್ವರನೇ ಎಲ್ಲರಿಗೂ ಧ್ಯೇಯನು" ಎಂದು ಮುಂತಾದ ಶ್ರುತಿಗಳಲ್ಲೂ ಈ ಅಂಶ ಸ್ಪಷ್ಟವಾಗಿದೆ. "ದ್ಯುಲೋಕದಿಂದಾಚೆಗೆ ಪರಮಾಕಾಶವನ್ನು ಶಿವನು ವ್ಯಾಪಿಸಿದ್ದಾನೆ" ಎಂಬಲ್ಲಿ ಅಂತಹ ಮಹತ್ಕಾರ್ಯಗಳ ಧಾರಣವನ್ನೂ, ದ್ಯುವ್ಯಾಪ್ತಿಯನ್ನೂ ಎಲ್ಲಾ ಬ್ರಹ್ಮವಿದ್ಯೆಗಳಲ್ಲೂ ಸೇರಿಸಿಕೊಳ್ಳಬೇಕೇ ಬೇಡವೇ? ಎಂದು ಸಂದೇಹ ಬರುತ್ತದೆ. "ಆದಿತ್ಯನೊಳಗೆ ಹಿರಣ್ಮಯಪುರುಷನು ಕಾಣುತ್ತಾನೆ", "ಈ ದ್ಯುಲೋಕದಿಂದ ಮೇಲೆ ಪರಂಜ್ಯೋತಿ ಬೆಳಗುತ್ತಿದೆ", "ಈ ಬ್ರಹ್ಮಪುರದಲ್ಲಿ ದಹರಕಮಲವೆಂಬ ಗೃಹವಿದೆ" ಈ ಬಗೆಯ ಶ್ರುತಿಗಳಲ್ಲಿ ಅಥಶಬ್ದದಿಂದಲೇ ಪ್ರಕರಣ ಬೇರೆ ಎಂಬುದು ತಿಳಿದುಬರುತ್ತದೆ. ಆದ್ದರಿಂದ ಆಯಾಯ ಉಪಾಸನಪ್ರಕರಣದಲ್ಲಿ ಬೇರೆಬೇರೆಯಾಗಿ ಹೇಳಿರುವ ಉಪಾಸನಗಳು ಪಕ್ಕದಲ್ಲಿರುವ ಸಗುಣೋಪಾಸನಕ್ಕೆ ಅಂಗಗಳೆನಿಸಿ ಆಯಾ ಲೋಕಪ್ರಾಪ್ತಿಯನ್ನು ಮಾತ್ರವೇ ವಿಧಿಸುತ್ತವೆ. "ಪರಶಿವನೇ ಎಲ್ಲಕ್ಕೂ ದೊಡ್ಡವನು. ಅವನೊಡನೆ ಯಾರೂ ಸ್ಪರ್ಧೆಮಾಡಲಾರರು" ಎಂಬ ಖಿಲ ಸಂಹಿತೆಯಲ್ಲಿ ಅದ್ಭುತಕಾರ್ಯಾಚರಣ, ದ್ಯುಲೋಕವ್ಯಾಪ್ತಿ, ಸರ್ವಕ್ಕೂ ಕಾರಣವಾಗಿರುವಿಕೆ ಮೊದಲಾದ ಗುಣಗಳನ್ನು ತಿಳಿಸಲಾಗಿದೆ. ಆದರೂ "ಆ ಬ್ರಹ್ಮವನ್ನು ಉಪಾಸನಮಾಡಬೇಕು" ಎಂಬ ವಿಧಿವಾಕ್ಯವನ್ನೂ ಫಲವನ್ನೂ ಅಲ್ಲಿ ಹೇಳಿಲ್ಲ. ಆದ್ದರಿಂದ ಖಿಲಸಂಹಿತೆಯಲ್ಲಿ ಹೇಳಿರುವ ಗುಣಗಳೆಲ್ಲವನ್ನೂ ದಹರಶಾಂಡಿಲ್ಯ ಮೊದಲಾದ ವಿದ್ಯೆಗಳಲ್ಲಿ ವಿಧಿಸಿರುವ ಸಗುಣೋಪಾಸನೆಗಳಲ್ಲಿ ಉಪಸಂಹಾರ ಮಾಡಬೇಕೆಂಬುದನ್ನು ಒಪ್ಪಲಾಗುವುದಿಲ್ಲ ಎಂದು ಆಕ್ಷೇಪಬರುತ್ತದೆ. ಇದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಸಂಭೃತಿ ಮೊದಲಾದ ಧರ್ಮಗಳನ್ನು ಸಾಮಾನ್ಯವಾಗಿ ಹೇಳಿದ್ದರೂ ಆಸ್ಥಾನದ ವೈಶಿಷ್ಟ್ಯದಿಂದ ಅವನ್ನು ಅಲ್ಲಿಯೇ ಸೇರಿಸಿಕೊಳ್ಳಬೇಕೇ ಹೊರತು ಎಲ್ಲಾ ವಿದ್ಯೆಗಳಿಗೂ ಸೇರಿಸಿಕೊಳ್ಳಬಾರದು. ಅವನು ಸಾಮಾನ್ಯವೆಂದು ಹೇಳಿದ್ದರೂ ಆ ಗುಣಗಳ ಸ್ವರೂಪವನ್ನು ತಿಳಿಯುವುದರಿಂದ ಈ ಅಂಶವು ಸ್ಪಷ್ಟವಾಗುತ್ತದೆ. ದ್ಯುಲೋಕವ್ಯಾಪ್ತಿಯನ್ನಂತೂ ಹೃದಯವೇ ಮೊದಲಾದ ಅಲ್ಪಸ್ಥಾನಗಳಿಗೆ ಅನ್ವಯಿಸುವ ವಿದ್ಯೆಗಳಲ್ಲಿ ಸೇರಿಸಲಿಕ್ಕೆ ಸಾಧ್ಯವಿಲ್ಲ. ಸಂಭರಣ ಮೊದಲಾದ ಧರ್ಮಗಳೂ ಸಹ ಅದಕ್ಕೆ ಸಮಾನವೆನಿಸಿ ಅಂತಹ ಸ್ಥಳಗಳಿಗೆ ಮಾತ್ರವೇ ಅನ್ವ

ಯಿಸುವಂತವಾದ್ದರಿಂದ ಅಲ್ಪಸ್ಥಾನಕ್ಕೆ ಅನ್ವಯಿಸುವ ವಿದ್ಯೆಗಳಲ್ಲಿ ಅವನ್ನು ಸೇರಿಸಲಿಕ್ಕೂ ಆಗುವುದಿಲ್ಲ. ಶಾಂಡಿಲ್ಯದಹರಾದಿ ವಿದ್ಯೆಗಳನ್ನು ಅಲ್ಪಸ್ಥಾನದಲ್ಲಿಯೇ ಆಚರಿಸಬಹುದಾದರೂ ಅವುಗಳಲ್ಲಿ "ಪೃಥಿವಿಗಿಂತಲೂ ದೊಡ್ಡದು," "ಈ ಆಕಾಶ ಎಷ್ಟು ವಿಶಾಲವಾದುದೋ ಒಳಗಿನ ಹೃದಯಾಕಾಶವೂ ಅಷ್ಟೇ ವಿಶಾಲವಾಗಿದೆ" ಎಂದು ಮುಂತಾದ ಗುಣಗಳನ್ನು ಸೇರಿಸಬಹುದಾದರೂ ಅವು ಮನೋಮಯನೂ ಮತ್ತು ಪಾಪರಹಿತನೂ ಆಗಿರುವ ಪರಶಿವಬ್ರಹ್ಮದ ಮಹಿಮೆಯನ್ನು ತಿಳಿಸಲಿಕ್ಕೆ ಮಾತ್ರವೇ ಬಂದಿವೆ. ಇದೂ ಅಲ್ಲದೆ, "ದೇವತೆಗಳು ಸ್ವರ್ಗಕ್ಕೆ ಹೋಗಿ ರುದ್ರನ ಸ್ವರೂಪವನ್ನು ವಿಚಾರಿಸಿದರು" ಎಂಬಲ್ಲಿ ಸ್ವರ್ಗವು ಪರಮಾನಂದಸ್ವರೂಪವಾದ್ದರಿಂದ ಹಿರಣ್ಯಗರ್ಭನ ಸ್ಥಾನಕ್ಕಿಂತಲೂ ಹೆಚ್ಚಿನದೆಂದು ಹೇಳಲಾಗಿದೆ. ಆದ್ದರಿಂದ ಅದರೊಂದಿಗೆಯೇ ಹೇಳಿರುವುದರಿಂದ ವೈಶ್ವಾನರೋಪಾಸನಲ್ಲಿ ಹೆಚ್ಚಿನ ಸ್ಥಾನಗಳಲ್ಲಿ ವ್ಯಾಪಿಸಿರುವ ದ್ಯುಲೋಕವ್ಯಾಪ್ತಿಯನ್ನು ಸೇರಿಸಬೇಕು. ಅದರ ಸಾಹಚರ್ಯದಿಂದಲೇ ಹಾಗೆಯೇ ಅದ್ಭುತ ಕಾರ್ಯಚರಣಸಾಮರ್ಥ್ಯವನ್ನೂ ಅಲ್ಲಿಯೇ ಸೇರಿಸಬೇಕು. ಆದರೆ ಖಿಲ ಸಂಹಿತೆಯಲ್ಲಿ ವಿಧಿಯಾಗಲೀ ಫಲವಾಗಲೀ ಇಲ್ಲದೇಹೋದರೂ "ಉಪಾಸೀತ" ಎಂಬ ವಿಧಿಯನ್ನೂ, ಪರಶಿವಲೋಕಪ್ರಾಪ್ತಿ ಎಂಬ ಫಲವನ್ನೂ ಅಧ್ಯಾಹಾರ ಮಾಡಿಕೊಂಡು ದಹರಾದ್ಯುಪಾಸನಗಳಂತೆ ಸಗುಣೋಪಾಸನವನ್ನು ಸಾಲೋಕ್ಯಮುಕ್ತಿಗೆ ಸಾಧನವೆಂದು ಅಂಗೀಕರಿಸುವುದರಲ್ಲಿ ತಪ್ಪೇನಿಲ್ಲ.

"ತಸ್ಯೈವಂ ವಿದುಷೋ ಯಜ್ಞಸ್ಯಾತ್ಮಾ ಯಜಮಾನಃ ಶ್ರದ್ಧಾ ಪತ್ನೀ" ಇತ್ಯಾದಿಶ್ರುತೌ ಉಪಾಸಕಸ್ಯ ಕರಚರಣಾದ್ಯವಯವೇಷು ಪ್ರಸಿದ್ಧಜ್ಯೋತಿಷ್ಟೋಮಾಂಗದೃಷ್ಟಿರೂಪೋ ಮಾನಸೋ ಜ್ಯೋತಿಷ್ಟೋಮೋ ವಿಹಿತಃ. ಕಿಂ ಮಾನಸಜ್ಯೋತಿಷ್ಟೋಮಸ್ಯ ಕರ್ಮಕಾಂಡಸ್ಥ ಜ್ಯೋತಿಷ್ಟೋಮಾಂಗತ್ವಂ? ಉತ ಸ್ವಾತಂತ್ರ್ಯೇಣ ಪರಶಿವಬ್ರಹ್ಮಲೋಕ ಪ್ರಾಪ್ತಿಸಾಧನತ್ವಂ ವೇತ್ಯಾಶಂಕಾಯಾಂ ಅಧಿಕರಣಾಂತರೇಣ ತತ್ರಾಹ. ಪುರುಷವಿದ್ಯಾಧಿಕರಣಂ ॥ ೯ ॥ ಪುರುಷವಿದ್ಯಾಯಾಮಪಿ ಚೇತರೇಷಾಮನಾಮ್ನಾನಾತ್ ॥ ೨೪ ॥ ಇತರೇಷಾಮುಪಾಸಕಸ್ಯ ಕರಚರಣಾವಯವೇಷು ಕಲ್ಪಿತಾನಾಂ ಸಮಿತ್ಕುಶಪುರೋಡಾಶಾದೀನಾಂ ಮಾನಸಾನಾಮಂಗನಾಂ ಪುರುಷವಿದ್ಯಾಯಾಮಿವ ಮಾನಸಜ್ಯೋತಿಷ್ಟೋಮ ಇವ ಕರ್ಮಕಾಂಡಸ್ಥಕ್ರಿಯಾಮಯೇ ಜ್ಯೋತಿಷ್ಟೋಮೇ ತದನಾಮ್ನಾನಾತ್ ಅವಹೇತುತ್ವಾದಿತ್ಯರ್ಥಃ. ತಥಾಚ ಮಾನಸಜ್ಯೋತಿಷ್ಟೋಮ ಕ್ರಿಯಾಮಯಜ್ಯೋತಿಷ್ಟೋಮಯೋಃ ಪರಸ್ಪರವಿಲಕ್ಷಣಾಂಗವಿಶಿಷ್ಟತ್ವಾತ್ ಮನಃಕಲ್ಪಿತಾಂಗವಿಶಿಷ್ಟಮಾನಸಜ್ಯೋತಿಷ್ಟೋಮಸ್ಯ ವಾಸ್ತವಾಂಗವಿಶಿಷ್ಟಕ್ರಿಯಾಮಯಜ್ಯೋತಿಷ್ಟೋಮಾಂಗತ್ವಮನುಪಪನ್ನಂ. ಕಿಂತು ಸ್ವಾತಂತ್ರ್ಯೇಣ ಪರಶಿವಬ್ರಹ್ಮಲೋಕಸಾಧನತ್ವಮಿತಿ ಸೂತ್ರ

ಸೂಚಿತಸೂಕ್ತಾರ್ಥಃ. ತೈತ್ತಿರೀಯಕೇ ಪುರುಷವಿದ್ಯಾ ಆಮ್ನಾಯತೇ "ತಸ್ಯೈವಂ ವಿದುಷೋ ಯಜ್ಞಸ್ಯಾತ್ಮಾ ಯಜಮಾನಃ ಶ್ರದ್ಧಾ ಪತ್ನೀ ಶರೀರಮಿಧ್ಮಮುರೋ ವೇದಿರ್ಲೋಮಾನಿ ಬರ್ಹಿಃ" ಇತ್ಯಾದಿಕಾ. ಛಾಂದೋಗ್ಯೇ ಪುರುಷವಿದ್ಯಾ ಆಮ್ನಾಯತೇ "ಪುರುಷೋ ವಾವ ಯಜ್ಞಸ್ತಸ್ಯ ಯಾನಿ ಚತುರ್ವಿಂಶತಿವರ್ಷಾಣಿ" ಇತ್ಯಾದಿಕಾ. ತತ್ರ ಸಂಶಯಃ ಕಿಮತ್ರ ವಿದ್ಯಾ ಭಿದ್ಯತೇ ಉತ ನೇತಿ. ಪುರುಷವಿದ್ಯೇತಿ ನಾಮ್ನೈಕ್ಯಾತ್ ಪುರುಷಾವಯವೇಷು ಯಜ್ಞಾವಯವಕಲ್ಪನಸಾಮ್ಯೇನ ರೂಪೈಕ್ಯಾತ್ತೈತ್ತಿರೀಯಕೇ ಫಲಸಂಯೋಗಾಶ್ರವಣಾತ್ "ಷೋಡಶವರ್ಷಶತಂ ಜೀವತಿ" ಇತಿ ಛಾಂದೋಗ್ಯೇ ಶ್ರುತಸ್ಯೈವ ಪುರುಷವಿದ್ಯಾಫಲತ್ವಾತ್ ಫಲಸಂಯೋಗಸ್ಯಾಪ್ಯವಿಶೇಷಾದ್ವಿದ್ಯೈಕ್ಯಮಿತಿ ಪ್ರಾಪ್ತೇ ಉಚ್ಯತೇ. ಉಭಯತ್ರ ಆಮ್ನಾತಯೋರ್ವಿದ್ಯಯೋಃ ಪುರುಷವಿದ್ಯಾತ್ವೇಽಪಿ ವಿದ್ಯಾಭೇದೋಽಸ್ತ್ಯೇವ, ಕುತಃ ಇತರೇಷಾಮನಾಮ್ನಾನಾತ್, ಏಕಸ್ಯಾಂ ಶಾಖಾಯಾಂ ಅನಾಮ್ನಾತಾನಾಂ ಗುಣಾನಾಂ ಅನ್ಯತ್ರ ಅನಾಮ್ನಾನಾತ್. ತಥಾಹಿ "ಯತ್ಸಾಯಂ ಪ್ರಾತರ್ಮಧ್ಯಂದಿನಂ ಚ ತಾನಿ ಸವನಾನಿ" ಇತ್ಯಾದಯಸ್ತೈತ್ತಿರೀಯಕೇ ಆಮ್ನಾತಾಃ. ಛಾಂದೋಗ್ಯೇ ಸವನತ್ವೇನ ನಾಮ್ನಾಯಂತೇ. ತ್ರೇಧಾ ವಿಭಕ್ತಂ ಪುರುಷಾಯುಷಂ ಛಾಂದೋಗ್ಯೇ ಸವನತ್ವೇನ ಕಲ್ಪ್ಯತೇ. ಛಾಂದೋಗ್ಯೇ ಶ್ರುತಾನಾಂ ಆಶಿಷಾದೀನಾಂ ದೀಕ್ಷಾದಿತ್ವಕಲ್ಪನಂ ತೈತ್ತಿರೀಯಕೇ ನ ಕೃತಂ. ಯಜಮಾನಪತ್ನೀತ್ಯಾದಿಪರಿಕಲ್ಪನಂ ಚಾನ್ಯಥಾ. ಅತೋ ರೂಪಮುಭಯತ್ರ ಭಿದ್ಯತೇ, ತಥಾ ಫಲಸಂಯೋಗೋಽಪಿ ಭಿದ್ಯತೇ. ತೈತ್ತಿರೀಯಕೇ ಹಿ ಪೂರ್ವಾನುವಾಕ್ಯೇ "ಬ್ರಹ್ಮಣೇ ತ್ವಾಮಹಂ ಸಮಿತ್ಯಾತ್ಮಾನಂ ಯುಂಜೀತ" ಇತಿ ಬ್ರಹ್ಮವಿದ್ಯಾಮಭಿಧಾಯ ತತ್ಫಲತ್ವೇನ ಬ್ರಹ್ಮಣೋ ಮಹಿಮಾನಮಾಪ್ನೋತೀತ್ಯುಕ್ತಂ. "ತಸ್ಯೈವಂ ವಿದುಷಃ" ಇತ್ಯಾದಿನಾ ಆಮ್ನಾತಾ ಪುರುಷವಿದ್ಯಾ. ಅಸ್ಯೈವ ಬ್ರಹ್ಮವಿದುಷೋ ಯಜ್ಞತ್ವಕಲ್ಪನಮಿತಿ ಗಮ್ಯತೇ. ಅತೋ ಬ್ರಹ್ಮವಿದ್ಯಾಂಗತ್ವಾತ್ ಬ್ರಹ್ಮಪ್ರಾಪ್ತಿರೇವಾತ್ರ ಫಲಂ ಫಲವತ್ಸನ್ನಿಧಾವಫಲಂ ತದಂಗಮಿತಿ ನ್ಯಾಯಾತ್ ತೈತ್ತಿರೀಯಕಾಮ್ನಾತಾ ಪುರುಷವಿದ್ಯಾ ಬ್ರಹ್ಮವಿದ್ಯಾಂಗಮಿತಿ ಗಮ್ಯತೇ. ಛಾಂದೋಗ್ಯೇ ತ್ವಾಯುಃಪ್ರಾಪ್ತಿಫಲಾ ಪುರುಷವಿದ್ಯೇತ್ಯುಕ್ತಾ. ಅತೋ ರೂಪಸಂಯೋಗಯೋರ್ಭೇದಾತ್ ವಿದ್ಯಾಭೇದ ಇತ್ಯೇಕತ್ರಾಮ್ನಾತಾನಾಂ ಗುಣಾನಾಮಿತರತ್ರಾನುಪಸಂಹಾರಃ. ತಥಾಪಿ ನಿಷ್ಕಾಮುನಯಾ ಪರಮೇಶ್ವರಾರ್ಪಿತಬಾಹ್ಯಜ್ಯೋತಿಷ್ಟೋಮಾದಿವತ್ ಛಾಂದೋಗ್ಯಪುರುಷವಿದ್ಯಾಯಾಃ ನಿಷ್ಕಾ-

ಮಸ್ಯ ಚಿತ್ತಶುದ್ಧಿದ್ವಾರಾ ಪರಂಪರಾಮೋಕ್ಷಹೇತುತ್ವಂ ಸಿದ್ಧ್ಯತಿ.

"ವಿದ್ವಾಂಸನು ಮಾಡುವ ಯಜ್ಞದಲ್ಲಿ ಆತ್ಮನೇ ಯಜಮಾನನು ಶ್ರದ್ಧೆಯೇ ಪತ್ನಿ" ಎಂಬ ಈ ಶ್ರುತಿಯಲ್ಲಿ ಉಪಾಸಕನ ಕರಚರಣಾದ್ಯವಯವಗಳಲ್ಲಿ ಜ್ಯೋತಿಷ್ಟೋಮದ ಅಂಗಗಳನ್ನು ಭಾವಿಸುವಂತೆ ತಿಳಿಸಿ ಮಾನಸಿಕವಾದ ಜ್ಯೋತಿಷ್ಟೋಮದ ಕಲ್ಪನೆಯನ್ನು ತಿಳಿಸಲಾಗಿದೆ. ಈ ಮಾನಸಿಕಜ್ಯೋತಿಷ್ಟೋಮವು ಕರ್ಮಕಾಂಡದಲ್ಲಿ ಹೇಳಿರುವ ಜ್ಯೋತಿಷ್ಟೋಮಕ್ಕೆ ಅಂಗವೇ ಅಥವಾ ಸ್ವತಂತ್ರವಾಗಿ ಸಾಲೋಕ್ಯಮುಕ್ತಿಗೆ ಸಾಧನವೇ ಎಂದು ಆಶಂಕಿಸಿ ಇಲ್ಲಿ ಸಮಾಧಾನಮಾಡುತ್ತಾನೆ. ಉಪಾಸಕನ ಕರಚರಣಾದ್ಯವಯವಗಳಲ್ಲಿ ಕಲ್ಪಿತವಾದ ಸಮಿತ್ತು ಕುಶ ಪುರೋಡಾಶ ಮೊದಲಾದ ಮಾನಸಿಕಾಂಗಗಳನ್ನು ಪುರುಷವಿದ್ಯೆಯಲ್ಲೂ ಮಾನಸಜ್ಯೋತಿಷ್ಟೋಮದಲ್ಲೂ ಹೇಳಿರುವಂತೆ ಕರ್ಮಕಾಂಡದ ಕ್ರಿಯಾರೂಪವಾದ ಜ್ಯೋತಿಷ್ಟೋಮದಲ್ಲಿಯೂ ಹೇಳಿರುವುದರಿಂದಲೂ, ಮಾನಸಜ್ಯೋತಿಷ್ಟೋಮಕ್ಕೂ ಕ್ರಿಯಾರೂಪವಾದ ಜ್ಯೋತಿಷ್ಟೋಮಕ್ಕೂ ಪರಸ್ಪರವಿಲಕ್ಷಣವಾದ ಅಂಗಗಳಿರುವುದರಿಂದಲೂ, ಮನಸ್ಸಿನಲ್ಲಿ ಕಲ್ಪಿಸಿದ ಜ್ಯೋತಿಷ್ಟೋಮವು ವಾಸ್ತವವಾಗಿ ನಡೆಸಬಹುದಾದ ಜ್ಯೋತಿಷ್ಟೋಮಕ್ಕೆ ಅಂಗವೆಂಬುದು ಹೊಂದುವುದಿಲ್ಲ; ಆದರೆ ಅದು ಸ್ವತಂತ್ರವಾಗಿ ಸಾಲೋಕ್ಯಮುಕ್ತಿಯನ್ನು ದೊರಕಿಸಲು ಸಾಧನವಾಗಬಹುದು. ಇದು ಸೂತ್ರದ ಸೂಕ್ಷ್ಮಾರ್ಥ. ತೈತ್ತಿರೀಯದಲ್ಲಿ "ಜ್ಞಾನಯಜ್ಞದಲ್ಲಿ ಆತ್ಮನೇ ಯಜಮಾನನು, ಶ್ರದ್ಧೆಯೇ ಪತ್ನಿ, ಶರೀರವೇ ಕಟ್ಟಿಗೆ, ಹೊಟ್ಟೆಯೇ ವೇದಿಕೆ, ಕೂದಲುಗಳೇ ದರ್ಭೆ" ಎಂದು ಮುಂತಾಗಿ ಪುರುಷವಿದ್ಯೆಯನ್ನು ಹೇಳಲಾಗಿದೆ. ಛಾಂದೋಗ್ಯದಲ್ಲಿ "ಪುರುಷನೇ ಯಜ್ಞವು. ಅವನಿಗೆ ೨೪ ವರ್ಷಗಳು ಆಯುಸ್ಸು" ಎಂದು ಮುಂತಾಗಿ ಪುರುಷವಿದ್ಯೆಯನ್ನು ಹೇಳಿದೆ. ಇವೆರಡು ವಿದ್ಯೆಗಳೂ ಬೇರೆಯೋ ಅಲ್ಲವೇ? ಎಂದು ಸಂಶಯ ಬರುತ್ತದೆ. ಎರಡನ್ನೂ ಪುರುಷವಿದ್ಯೆ ಎಂದೇ ಕರೆದಿರುವುದರಿಂದಲೂ, ಪುರುಷನ ಅವಯವಗಳಲ್ಲಿ ಯಜ್ಞದ ಅವಯವಗಳ ಸಾಮ್ಯವನ್ನು ಹೇಳಿರುವುದರಿಂದಲೂ ಸ್ವರೂಪೈಕ್ಯವೇನೋ ಇದೆ. ಆದರೆ ತೈತ್ತಿರೀಯದಲ್ಲಿ ಫಲಸಂಯೋಗವನ್ನು ಹೇಳದಿರುವುದರಿಂದ "೧೧೬ ವರ್ಷಗಳಕಾಲ ಜೀವಿಸುತ್ತಾನೆ" ಎಂದು ಛಾಂದೋಗ್ಯದಲ್ಲಿ ಹೇಳಿರುವುದನ್ನೇ ಪುರುಷವಿದ್ಯೆಯ ಫಲವೆಂದು ತೈತ್ತಿರೀಯದಲ್ಲಿಯೂ ಅನ್ವಯಿಸುವುದರಿಂದ ವಿದ್ಯೆಗಳಲ್ಲಿ ಐಕ್ಯವಿದೆ ಎಂದು ಆಕ್ಷೇಪಬಂದರೆ ಅದಕ್ಕೆ ಸಮಾಧಾನವನ್ನು ತಿಳಿಸಲಾಗುವುದು. ಎರಡು ಶ್ರುತಿಗಳಲ್ಲಿ ಹೇಳಿರುವ ವಿದ್ಯೆಗಳೂ ಪುರುಷವಿದ್ಯೆಯೇ ಆದರೂ ಅವುಗಳಲ್ಲಿ ಭೇದವಿದ್ದೇ ಇದೆ; ಯಾಕೆಂದರೆ ಒಂದು ಶಾಖೆಯಲ್ಲಿ ಹೇಳಿರುವ ಗುಣಗಳನ್ನು ಮತ್ತೊಂದರಲ್ಲಿ ಹೇಳಿಲ್ಲ. ಉದಾಹರಣೆಗೆ ಸಂಜೆ ಬೆಳಗ್ಗೆ ಮತ್ತು ಮಧ್ಯಾಹ್ನ ಕಾಲಗಳಲ್ಲಿ ಮಾಡುವ ಯಜ್ಞಗಳನ್ನು ತೈತ್ತಿರೀಯದಲ್ಲಿ ಹೇಳಲಾಗಿದೆ. ಆದರೆ ಛಾಂದೋಗ್ಯದಲ್ಲಿ ಅವನ್ನು ಯಜ್ಞಗಳೆಂದು ಹೇಳಿಲ್ಲ. ಮೂರುಬಗೆಯಾಗಿ ವಿಂಗಡಿಸಿರುವ ಪುರುಷನ ಆಯುಷ್ಯವನ್ನೇ ಛಾಂದೋಗ್ಯದಲ್ಲಿ ಯಜ್ಞವೆಂದು ಕಲ್ಪಿಸ

ಲಾಗಿದೆ. ಛಾಂದೋಗ್ಯದಲ್ಲಿ ಹೇಳಿರುವ ಆಯುಷ್ಯ ಮೊದಲಾದವುಗಳಿಗೆ ದೀಕ್ಷೆ ಎಂದು ಕಲ್ಪಿಸಲಾಗಿದೆ ; ಆದರೆ ಅವನ್ನು ತೈತ್ತಿರೀಯದಲ್ಲಿ ಹೇಳಿಲ್ಲ. ಯಜಮಾನ, ಪತ್ನಿ ಮೊದಲಾದವರ ಕಲ್ಪನೆಯೇ ಅಲ್ಲಿ ಬಂದಿದೆ. ಆದ್ದರಿಂದ ಎರಡು ಕಡೆಗಳಲ್ಲೂ ಸ್ವರೂಪಭೇದವೇ ಇದೆ. ಇದರಿಂದ ಫಲಸಂಬಂಧವೂ ಬೇರೆಯಾಗುತ್ತದೆ. ತೈತ್ತಿರೀಯದಲ್ಲಿ ಹಿಂದಿನ ವಾಕ್ಯದಲ್ಲಿ "ನಾನು ಬ್ರಹ್ಮಕ್ಕೆ ಸೇರಿರುವೆನು" ಎಂದೂ, ಪ್ರಣವ ಪೂರ್ವಕವಾಗಿ ಆತ್ಮನನ್ನು ಅರ್ಪಿಸಬೇಕು" ಎಂದು ಬ್ರಹ್ಮವಿದ್ಯೆಯನ್ನು ಹೇಳಿ ಅದರ ಫಲವಾಗಿ ಪರಶಿವನ ಮಹಿಮೆಯನ್ನು ಹೊಂದುತ್ತಾನೆಂದು ತಿಳಿಸಲಾಗಿದೆ. "ತಸ್ಯೈವಂ ವಿದುಷಃ" ಎಂಬ ಮಂತ್ರದಲ್ಲಿ ಹೇಳಿದ ಪುರುಷವಿದ್ಯೆಯು ಈ ಬ್ರಹ್ಮ ಜ್ಞಾನಿಗೆ ಅಂಗವಾಗಿ ಯಜ್ಞಭಾವನೆಯನ್ನು ಹುಟ್ಟಿಸುತ್ತದೆ. ಈ ರೀತಿಯಲ್ಲಿ ಬ್ರಹ್ಮ ವಿದ್ಯೆಗೆ ಇದು ಅಂಗವಾದ್ದರಿಂದ ಬ್ರಹ್ಮಪ್ರಾಪ್ತಿಯೇ ಇದರ ಫಲವೆನಿಸಿದೆ." "ಫಲ ವತ್ತಾದ ಅಂಗಿಯ ಪಕ್ಕದಲ್ಲಿರುವ ಅಂಗಕ್ಕೂ ಅಂಗಿಯಫಲವೇ ಸಂಬಂಧಿಸುತ್ತದೆ ಎಂಬ ನ್ಯಾಯದಂತೆ ತೈತ್ತಿರೀಯದಲ್ಲಿ ಹೇಳಿದ ಪುರುಷವಿದ್ಯೆಯನ್ನೇ ಬ್ರಹ್ಮವಿದ್ಯೆಯ ಅಂಗವೆಂದು ತಿಳಿಯಬೇಕು. ಛಾಂದೋಗ್ಯದಲ್ಲಾದರೋ ಆಯುಷ್ಯಪ್ರಾಪ್ತಿಯೇ ಪುರುಷವಿದ್ಯೆಯ ಫಲವೆಂದು ಹೇಳಿದೆ. ಆದ್ದರಿಂದ ಸ್ವರೂಪದಲ್ಲೂ ಫಲಸಂಬಂಧ ದಲ್ಲೂ ಭೇದವಿರುವುದರಿಂದ ವಿದ್ಯೆಗಳಲ್ಲಿ ಭೇದವಿದ್ದೇ ಇದೆ. ಇದರಿಂದ ಒಂದು ಕಡೆ ಹೇಳಿದ ಗುಣಗಳನ್ನು ಬೇರೆಕಡೆ ಸೇರಿಸಿಕೊಳ್ಳಲಾಗುವುದಿಲ್ಲ. ಅದರಲ್ಲೂ ನಿಷ್ಕಾಮಭಾವದಿಂದ ಪರಮೇಶ್ವರನ ಪ್ರೀತಿಗಾಗಿ ಆಚರಿಸುವ ಜ್ಯೋತಿಷ್ಟೋಮಾದಿ ಯಜ್ಞಗಳಂತೆ ಛಾಂದೋಗ್ಯದ ಪುರುಷವಿದ್ಯೆಯೂ ನಿಷ್ಕಾಮಭಕ್ತನಿಗೆ ಚಿತ್ತಶುದ್ಧಿಯ ಮೂಲಕ ಪರಂಪರೆಯಿಂದ ಮೋಕ್ಷಕ್ಕೆ ಕಾರಣವೆನಿಸುತ್ತದೆ.

ನನು ಛಾಂದೋಗ್ಯತೈತ್ತಿರೀಯಬೃಹದಾರಣ್ಯಕಾದಿಶಾಖಾದಿಪಠಿತ ವಿದ್ಯಾನಾಂ ಜ್ಯೋತಿಷ್ಟೋಮಾದೀನಾಂ ಚ ಕಾಸಾಂಚಿತ್ಸಾಕಾಂಕ್ಷ ತ್ವಾತ್ ಕಾಸಾಂಚಿತ್ಪರಂಪರಯಾ ಪರಶಿವಬ್ರಹ್ಮಲೋಕಪ್ರಾಪ್ತಿಹೇತುತ್ವ ಮುಕ್ತಂ. ತಥಾಹಿ ತೈತ್ತಿರೀಯಕಾನಾಂ ಉಪನಿಷದಾರಂಭೇ "ಶನ್ನೋ ಮಿತ್ರಶ್ಶಂ ವರುಣಃ ಸಹ ನಾವವತು" ಇತ್ಯಾದಿಮಂತ್ರಾಣಾಂ ಪಠಿತತ್ವೇನ ತೇಷಾಮಪಿ ಬ್ರಹ್ಮವಿದ್ಯಾಂಗತ್ವಂ ಸ್ಯಾತ್," ಶುಕ್ಲಂ ಪ್ರವಿಧ್ಯ ಹೃದಯಂ ಪ್ರವಿಧ್ಯ ಮನಃ ಪ್ರವಿಧ್ಯ ಶಿರೋಭಿಃ ಪ್ರವೃಜ್ಯ ತ್ರೇಧಾ ವಿವೃತ್ತಂ" ಇತ್ಯಾದೀನಾಂ ಆಥರ್ವಣಿಕಾನಾಂ ಉಪನಿಷಾತ್ಪ್ರಾರಂಭಪಠಿತಹೃದಯ ವೇಧಾದಿಪ್ರಕಾಶನರೂಪಲಿಂಗಾಭಿಚಾರಕರ್ಮಶೇಷಾಂಗಮಂತ್ರಾಣಾಮಪಿ ವಿದ್ಯಾಂಗತ್ವೇನ ಪರಶಿವಬ್ರಹ್ಮಲೋಕಪ್ರಾಪ್ತಿಸಾಧನತ್ವಂ ಕಿಂ ನ ಸ್ಯಾದಿತ್ಯಾಶಂಕಾಯಾಂ ಅಧಿಕರಣಾಂತರೇಣಾಹ. ವೇಧಾದ್ಯಧಿಕರಣಂ ॥ ೧೦ ॥ ವೇಧಾದ್ಯರ್ಥಭೇದಾತ್ ॥ ೨೫ ॥ ವೇಧಾದೀನಾಂ ಶತ್ರುಪೀಡಾ ದೀನಾಂ ಅರ್ಥಾನಾಂ ಫಲಾನಾಂ ಭೇದಾತ್ ಸಗುಣಸಾವಯವಪರಶಿವ

ಬ್ರಹ್ಮೋಪಾಸನಾಽಸಂಬಂಧಾರ್ಥೇತೇಷಾಂ ಮಂತ್ರಾಣಾಂ ತದ್ಬ್ರಹ್ಮೋಪಾಸನಪ್ರಾಂಗತ್ವಮಸ್ತೀತ್ಯರ್ಥಃ. "ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ" ಇತಿಶ್ರುತೌ ಶಾಂತಸ್ಯೈವ ಪರಶಿವಬ್ರಹ್ಮೋಪಾಸನಾಯಾಂ ಅಧಿಕಾರಸ್ಯ ಪ್ರತಿಪಾದಿತತ್ವೇನ ಶತ್ರುಮರಣಕಾಮಸ್ಯ ಬ್ರಹ್ಮವಿದ್ಯಾಯಾಮಧಿಕಾರಸಂಭವಾತ್ ಶತ್ರುಮರಣಫಲಕಸ್ಯಾಸ್ಯ ಮಂತ್ರಸ್ಯ ಬ್ರಹ್ಮೋಪಾಸನಾಂಗತ್ವಾಸಂಭವಾತ್ ಕರ್ಮಕಾಂಡಸ್ಥತ್ವೇನ ಯಾಗಾಂಗವತ್ಕಾಮ್ಯಫಲಮೇವೇತಿ ಸೂತ್ರಸೂಚಿತಸೂಕ್ತ್ಮಾರ್ಥಃ. ಆಥರ್ವಣಿಕಾ ಉಪನಿಷದಾರಂಭೇ "ಶುಕ್ಲಂ ಪ್ರವಿಧ್ಯ ಹೃದಯಂ ಪ್ರವಿಧ್ಯ" ಇತ್ಯಾದೀನ್ ಮಂತ್ರಾನಧೀಯತೇ. ಸಾಮಗಾಶ್ಚ ರಹಸ್ಯಬ್ರಾಹ್ಮಣಾರಂಭೇ "ದೇವಸವಿತುಃ ಪ್ರಸುವ", "ಯಜ್ಞಂ ಪ್ರಸುವ" ಇತ್ಯಾದ್ಯಾಮನಂತಿ. ಕಾಠಕಾಸ್ತೈತ್ತಿರೀಯಾಶ್ಚ "ಶಂ ನೋ ಮಿತ್ರಃ ಶಂ ವರುಣಃ । ಸಹ ನಾವವತು" ಇತ್ಯಾದಿಕಂ. ಶಾಠ್ಯಾಯನಶ್ಚ "ಶ್ವೇತೋಽಶ್ವೋ ಹರಿನಿಲೋಽಸಿ" ಇತ್ಯಾದಿಕಂ. ಐತರೇಯಿಣಸ್ತು ಮಹಾವ್ರತಬ್ರಾಹ್ಮಣಮಧೀಯತೇ. "ಇಂದ್ರೋ ಹ ವೈ ವೃತ್ರಂ ಹತ್ವಾ ಮಹಾನಭವತ್" ಇತ್ಯಾದಿಕೌಷೀತಕಿನೋಽಪಿ ಮಹಾವ್ರತಬ್ರಾಹ್ಮಣಮೇವ. "ಪ್ರಜಾಪತಿರ್ವೈ ಸಂವತ್ಸರಸ್ತಸ್ಯೈಷ ಆತ್ಮಾ ಯನ್ಮಹಾವ್ರತಂ" ಇತಿ. ವಾಜಸನೇಯಿನಸ್ತು ಪ್ರವರ್ಗ್ಯಬ್ರಾಹ್ಮಣಂ "ದೇವಾ ಹ ವೈ ಸತ್ರಂ ನಿಷೇದುಃ" ಇತ್ಯಾದಿ. ತತ್ರ ಸಂಶಯಃ ಕಿಮುಪನಿಷದಾರಂಭೇಷ್ವಧೀತಾ, "ಶುಕ್ಲಂ ಪ್ರವಿಧ್ಯ" ಇತ್ಯಾದಯೋ ಮಂತ್ರಾಃ ಪ್ರವರ್ಗ್ಯಾದೀನಿ ಚ ಕರ್ಮಾಣಿ ವಿದ್ಯಾಂಗತ್ವಮುತ ನೇತಿ? ಕಿಂ ಯುಕ್ತಂ? ವಿದ್ಯಾಂಗಮಿತಿ, ಕುತಃ? ಸನ್ನಿಧಿಸಮಾಮ್ನಾನಾತ್ ವಿದ್ಯಾಂಗತ್ವಪ್ರತೀತೇಃ. ಯದ್ಯಪಿ "ಶುಕ್ಲಂ ಪ್ರವಿಧ್ಯ" ಇತ್ಯಾದೀನಾಂ ಮಂತ್ರಾಣಾಂ ಪ್ರವರ್ಗ್ಯಾದೇಶ್ಚ ಕರ್ಮಣಃ ಶ್ರುತಿಲಿಂಗವಾಕ್ಯೈರ್ಬಲವದ್ಭಿರ್ಯಥಾಯಥಂ ಕರ್ಮಸು ವಿನಿಯೋಗೋಽವಗಮ್ಯತೇ. ತಥಾಪಿ "ಶನ್ನೋ ಮಿತ್ರಶ್ಶಂ ವರುಣಃ" ಇತ್ಯಾದೇರ್ಮಂತ್ರಸ್ಯಾನ್ಯತ್ರ ವಿನಿಯೋಗಾಭಾವಾತ್ ವಿದ್ಯಾಧಿಕಾರಾಚ್ಚ ವಿದ್ಯಾಂಗತ್ವಮವರ್ಜನೀಯಮಿತಿ ಸರ್ವಾಸು ವಿದ್ಯಾಸು ಇಮೇ ಮಂತ್ರಾಃ ಉಪಸಂಹರ್ತವ್ಯಾ ಇತ್ಯೇವಂ ಪ್ರಾಪ್ತೇ ಬ್ರೂಮಃ ವೇಧಾದ್ಯರ್ಥಭೇದಾತ್. "ಶುಕ್ಲಂ ಪ್ರವಿಧ್ಯ ಹೃದಯಂ ಪ್ರವಿಧ್ಯ", "ಋತಂ ವದಿಷ್ಯಾಮಿ ಸತ್ಯಂ ವದಿಷ್ಯಾಮಿ", "ಋತಮವಾದಿಷಂ ಸತ್ಯಮವಾದಿಷಂ", "ತೇಜಸ್ವಿನಾವಧೀತಮಸ್ತು ಮಾ ವಿದ್ವಿಷಾವಹೈ" ಇತ್ಯಾದಿಭಿರ್ಲಿಂಗೈಃ ಅಭಿಚಾರಾದ್ಯನಾದಿಷು ಏಷಾಂ ವಿನಿಯೋಗಾವಗಮಾತ್ ನ ವಿದ್ಯಾಂಗತ್ವಂ. ಏತದುಕ್ತಂ ಭವತಿ.

ಯಥಾ " ಹೃದಯಂ ಪ್ರವಿಧ್ಯ " ಇತ್ಯಾದಿಮಂತ್ರಸಾಮರ್ಥ್ಯಾತ್ " ಶುಕ್ಲಂ ಪ್ರವಿಧ್ಯ " ಇತ್ಯಾದೀನಾಂ ಅಭಿಚಾರಾದಿಶೇಷತ್ವಮವಗಮ್ಯತೇ, ಏವಮೇವ " ಋತಂ ವದಿಷ್ಯಾಮಿ ", " ತೇಜಸ್ವಿನಾವಧೀತಮಸ್ತು " ಇತ್ಯಾದಿಮಂತ್ರಸಾಮರ್ಥ್ಯಾದೇವ ಸ್ವಾಧ್ಯಾಯಶೇಷತ್ವಂ " ಶನ್ನೋ ಮಿತ್ರಶ್ಯಂ " ಇತ್ಯಾದಿಮಂತ್ರಾಣಾಮವಗಮ್ಯತೇ. ಅತೋ ನ ತೇಷಾಂ ವಿದ್ಯಾಂಗತ್ವಂ. " ಶುಕ್ಲಂ ಪ್ರವಿಧ್ಯ " ಇತ್ಯಾದಿಪ್ರವರ್ಗ್ಯಾದಿ ಬ್ರಾಹ್ಮಣಾನಾಂ ಚೇಹ ಪಾಠೋ ದಿವಾಕೀರ್ತ್ಯತ್ವಾರಣ್ಯೇಽನುವಾಕ್ಯತ್ವಕೃತಃ. ತಸ್ಮಾತ್ " ಶನ್ನೋ ಮಿತ್ರಃ " ಇತ್ಯಾದಿಮಂತ್ರಪಾಠಕಾನಾಂ ಸಂಧ್ಯಾವಂದನಕಾರಿಣಾಮಿವ ಚಿತ್ತಶುದ್ಧಿದ್ವಾರಾ ಪರಂಪರಯಾ ಶಿವಲೋಕಸಾಧನತ್ವಂ. " ಶುಕ್ಲಂ ಪ್ರವಿಧ್ಯ " ಇತ್ಯಾದಿಮಂತ್ರಪಾಠಕಾನಾಂ ತು ಕಾಮ್ಯಫಲತ್ವಂ ಹ್ಯುಪದಿಷ್ಟಂ.

ಛಾಂದೋಗ್ಯ ತೈತ್ತಿರೀಯ ಬೃಹದಾರಣ್ಯಕ ಮೊದಲಾದ ಶಾಖೆಗಳಲ್ಲಿ ಹೇಳಿದ ವಿದ್ಯೆಗಳಲ್ಲೂ ಜ್ಯೋತಿಷ್ಟೋಮಾದಿಕರ್ಮಗಳಲ್ಲೂ ಕೆಲವು ನೇರವಾಗಿಯೂ, ಕೆಲವು ಪರಂಪರೆಯಿಂದಲೂ ಪರಶಿವಬ್ರಹ್ಮಲೋಕಪ್ರಾಪ್ತಿಗೆ ಕಾರಣವೆನಿಸಿವೆ ಎಂದು ಹೇಳಿಯಾಯಿತು. ಅದರಂತೆಯೇ ತೈತ್ತಿರೀಯದ ಆರಂಭದಲ್ಲಿ " ಮಿತ್ರಾವರುಣರು ನಮಗೆ ಸುಖವನ್ನು ಕೊಡಲಿ. ನಮ್ಮಿಬ್ಬರನ್ನು ಶಿವನು ರಕ್ಷಿಸಲಿ " ಈ ಮಂತ್ರಗಳನ್ನು ಹೇಳಿರುವುದರಿಂದ ಅವೂ ಸಹ ಬ್ರಹ್ಮವಿದ್ಯೆಗೆ ಅಂಗವಾಗಲಿ. " ಸತ್ತ್ವಗುಣವನ್ನು ಹೃದಯದಲ್ಲೂ ಮನಸ್ಸಿನಲ್ಲೂ ಧ್ವಂಸಮಾಡಿ ಶತ್ರುವಿನ ಪ್ರಾಣವನ್ನು ಅಪಹರಿಸಿ " ಎಂದು ಮುಂತಾಗಿ ಆಥರ್ವಣಿಕರು ಉಪನಿಷತ್ತಿನ ಆರಂಭದಲ್ಲಿ ಆಭಿಚಾರಕರ್ಮಕ್ಕೆ ಅಂಗವಾಗಿ ಹೇಳಿದ್ದು ಮನೋವ್ಯಥೆಯ ಗುರುತುಗಳನ್ನು ತಿಳಿಸುವ ಮಂತ್ರಗಳೂ ವಿದ್ಯೆಗೆ ಅಂಗವಾದ್ದರಿಂದ ಸಾಲೋಕ್ಯಮುಕ್ತಿಯನ್ನು ದೊರಕಿಸಲಿ ಎಂದಾಶಂಕಿಸಿ ಸಮಾಧಾನ ಮಾಡುತ್ತಾನೆ. ಶತ್ರುಪೀಡೆಯೇ ಮೊದಲಾದ ಫಲಗಳಲ್ಲಿ ಭೇದವಿರುವುದರಿಂದಲೂ, ಸಗುಣೋಪಾಸನಕ್ಕೆ ಸಂಬಂಧಿಸದೇ ಇರುವುದರಿಂದಲೂ ಈ ಮಂತ್ರಗಳು ಬ್ರಹ್ಮೋಪಾಸನಕ್ಕೆ ಅಂಗವಾಗಲಾರವು." ಇದೆಲ್ಲವೂ ಬ್ರಹ್ಮದಿಂದಲೇ ಹುಟ್ಟಿ ಬೆಳೆದು ಅಲ್ಲಿಯೇ ಲಯವಾಗುವುದರಿಂದ ಇದನ್ನು ಬ್ರಹ್ಮವೆಂದು ತಿಳಿದೆ ಶಾಂತನಾಗಿ ಉಪಾಸನಮಾಡು" ಎಂಬ ಶ್ರುತಿಯಲ್ಲಿ ಶಾಂತನಿಗೆ ಮಾತ್ರವೇ ಪರಶಿವಬ್ರಹ್ಮದ ಉಪಾಸನನೆಯಲ್ಲಿ ಅಧಿಕಾರವಿದೆ ಎಂದು ಹೇಳಿದೆ. ಶತ್ರುವಿನ ಮರಣವನ್ನು ಬಯಸುವವನಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರ ಸಂಭವಿಸಲಾರದು. ಹೀಗೆ ಶತ್ರುಮರಣವನ್ನು ತಿಳಿಸುವ ಈ ಮಂತ್ರವು ಬ್ರಹ್ಮೋಪಾಸನಗಳ ಅಂಗವಾಗಲಾರದು. ಆದ್ದರಿಂದ ಇದು ಕರ್ಮಕಾಂಡದ ಶ್ಯೇನಯಾಗದಂತೆ ಕಾಮ್ಯಫಲವನ್ನೇ ಕೊಡುತ್ತದೆ. ಎಂದು ಸೂತ್ರದ ಸೂಕ್ಷ್ಮಾರ್ಥ. ಆಥರ್ವಣಿಕರು ಉಪನಿಷತ್ತಿನ ಆರಂಭದಲ್ಲಿ " ಶುಕ್ಲಂ ಪ್ರವಿಧ್ಯ ಹೃದಯಂ ಪ್ರವಿಧ್ಯ." ಎಂದು ಮುಂತಾಗಿ ಹೇಳುತ್ತಾರೆ. ಸಾಮವೇದದ ರಹಸ್ಯಬ್ರಾಹ್ಮಣದ ಆರಂಭದಲ್ಲೂ

" ಸವಿತೃದೇವನನ್ನು ಸೃಷ್ಟಿಸು. ಯಜ್ಞವನ್ನು ಸೃಷ್ಟಿಸು " ಎಂದು ಮುಂತಾಗಿ ಹೇಳಲಾಗಿದೆ. ಕಾಠಕರು ತೈತ್ತಿರೀಯರು " ಶಂ ನೋ ಮಿತ್ರಃ " ಎಂದು ಹೇಳಿದ್ದಾರೆ. ಕಾಠ್ಯಾಯನರು " ನೀನು ಬಿಳಿಯಕುದುರೆಯಾಗಿದ್ದೀಯೆ. ನೀನು ಇಂದ್ರ ನೀಲವರ್ಣದವನೂ ಆಗಿದ್ದೀಯೇ " ಎಂದು ಹೇಳುತ್ತಾರೆ. ಐತರೇಯಿಗಳು " ಇಂದ್ರನು ವೃತ್ರನನ್ನು ಕೊಂದು ದೊಡ್ಡವನಾದನು " ಎಂದು ಮಹಾವ್ರತವನ್ನು ಹೇಳುತ್ತಾರೆ. ಕೌಷೀತಕದಲ್ಲೂ ಸಹ " ಪ್ರಜಾಪತಿಯೇ ಸಂವತ್ಸರವು. ಅವನ ಈ ಆತ್ಮವೇ ಮಹಾವ್ರತವು " ಎಂದು ಮಹಾವ್ರತವನ್ನೇ ಹೇಳಲಾಗಿದೆ. ವಾಜಸನೇಯಿಗಳು " ದೇವತೆಗಳು ಯಜ್ಞಕ್ಕೆ ಕುಳಿತರು " ಎಂದು ಪ್ರವರ್ಗವೆಂಬ ಕರ್ಮವನ್ನು ಹೇಳಿದ್ದಾರೆ. ಹೀಗೆ ಉಪನಿಷತ್ತಿನ ಆರಂಭದಲ್ಲಿ ಹೇಳಿರುವ "ಶುಕ್ಲಂ ಪ್ರವಿಧ್ಯ" ಎಂಬ ಮಂತ್ರಗಳು, ಪ್ರವರ್ಗಾದಿಕರ್ಮಗಳು ವಿದ್ಯೆಗೆ ಅಂಗವೇ ಅಲ್ಲವೇ ? ಎಂದು ಸಂಶಯಬರುತ್ತದೆ. ಇಲ್ಲಿ ಯಾವುದು ಯುಕ್ತವಾದುದು ? ಇವನ್ನು ಹೇಗೆ ವಿದ್ಯಾಂಗವೆಂದು ಹೇಳಬಹುದು? ಯಾಕೆಂದರೆ ಇವೆಲ್ಲವೂ ವಿದ್ಯೆಗೆ ಅಂಗವೆಂದೇ ತಿಳಿದುಬರುವುದಾದರೂ " ಶುಕ್ಲಂ ಪ್ರವಿಧ್ಯ " ಈ ಬಗೆಯ ಮಂತ್ರಗಳಿಗೂ ಪ್ರವರ್ಗಾದಿಕರ್ಮಗಳಿಗೂ ಬಲವತ್ತರವಾದ ಶ್ರುತಿವಾಕ್ಯಗಳಿಂದ ಕರ್ಮಗಳಲ್ಲಿ ವಿನಿಯೋಗವನ್ನು ತಿಳಿಸಲಾಗಿದೆ. ಅದರೂ " ಶನ್ನೋ ಮಿತ್ರಃ " ಈ ಬಗೆಯ ಮಂತ್ರಗಳಿಗೆ ಬೇರೆಕಡೆ ವಿನಿಯೋಗವೇ ಇಲ್ಲದ್ದರಿಂದಲೂ, ವಿದ್ಯೆಯ ಪ್ರಕರಣದಲ್ಲಿಯೇ ಬಂದಿರುವುದರಿಂದಲೂ ಇವನ್ನು ವಿದ್ಯೆಗೆ ಅಂಗವೆಂದು ಭಾವಿಸಲೇಬೇಕು. ಆದ್ದರಿಂದ ಎಲ್ಲಾ ವಿದ್ಯೆಗಳಲ್ಲೂ ಈ ಮಂತ್ರಗಳನ್ನು ಸೇರಿಸಲೇಬೇಕು ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸಮಾಧಾನವನ್ನು ಇಲ್ಲಿ ಹೇಳಲಾಗಿದೆ. " ಶುಕ್ಲಂ ಪ್ರವಿಧ್ಯಃ " " ಋತಂ ವದಿಷ್ಯಾಮಿ " ಈ ಬಗೆಯ ಮಂತ್ರಗಳಿಗೆ ಆಭಿಚಾರಿಕಕರ್ಮಗಳಲ್ಲಿ ವಿನಿಯೋಗವಿಲ್ಲದ್ದರಿಂದ ಅವು ವಿದ್ಯೆಗೆ ಅಂಗವಾಗಲಾರವು. ಇದರಿಂದ ಇಷ್ಟು ಅಂಶ ಸ್ಪಷ್ಟವಾಗುತ್ತದೆ. "ಹೃದಯಂ ಪ್ರವಿಧ್ಯ" ಎಂಬ ಮಂತ್ರಸಾಮರ್ಥ್ಯದಿಂದ" " ಶುಕ್ಲಂ ಪ್ರವಿಧ್ಯ" ಎಂಬ ಮಂತ್ರಗಳನ್ನು ಆಭಿಚಾರಿಕಕರ್ಮಗಳ ಅಂಗವೆಂದು ತಿಳಿಯಲಾಗಿದೆ. ಹೀಗೆಯೇ " ಋತಂ ವದಿಷ್ಯಾಮಿ " ಈ ಬಗೆಯ ಮಂತ್ರಸಾಮರ್ಥ್ಯದಿಂದ " ಶನ್ನೋ ಮಿತ್ರಃ" ಎಂಬ ಮಂತ್ರಗಳನ್ನು ವೇದಾಧ್ಯಯನದ ಅಂಗವೆಂದು ಭಾವಿಸಲಾಗಿದೆ. ಆದ್ದರಿಂದ ಅವು ವಿದ್ಯೆಗೆ ಅಂಗವಾಗಲಾರವು. " ಶುಕ್ಲಂ ಪ್ರವಿಧ್ಯ " ಎಂಬ ಮಂತ್ರಗಳನ್ನು ಹಗಲಿನಲ್ಲಿ ಹೇಳಬೇಕಾದ್ದರಿಂದಲೂ, ಪ್ರವರ್ಗ ಮೊದಲಾದ ಕರ್ಮಗಳನ್ನು ಅರಣ್ಯದಲ್ಲಿ ಸಾಧಿಸಬೇಕಾದ್ದರಿಂದಲೂ ಅವನ್ನು ಒಟ್ಟಿಗೆ ಹೇಳಲಾಗಿದೆ. ಅಷ್ಟೇ ಹೊರತು ಅವು ಬ್ರಹ್ಮವಿದ್ಯೆಗೆ ಅಂಗವಲ್ಲ. ಆದ್ದರಿಂದ "ಶಂ ನೋ ಮಿತ್ರಃ" ಈ ಬಗೆಯ ಮಂತ್ರಗಳನ್ನು ಹೇಳುವವರಿಗೆ ಸಂಧ್ಯಾವಂದನಾದಿಕರ್ಮಗಳನ್ನು ಆಚರಿಸುವವರಂತೆಯೇ ಚಿತ್ತಶುದ್ಧಿಯ ಮೂಲಕ ಪರಂಪರೆಯಿಂದ ಶಿವಲೋಕವು ದೊರಕುತ್ತದೆ. " ಶುಕ್ಲಂ ಪ್ರವಿಧ್ಯ " ಎಂದು ಮುಂತಾದ ಮಂತ್ರಗಳನ್ನು ಪಠಿಸುವವರಿಗಂತೂ

ಕಾಮ್ಯಫಲವೇ ದೊರಕುವುದೆಂದು ತಿಳಿಸಲಾಗಿದೆ.

ಶಮದಮಾದಿಯುಕ್ತಗಾಢವಿರಾಗಿಣಾಂ ಶಿವೈಕನಿಷ್ಠಾನಾಂ ಶಿವತ್ವಪ್ರಾಪ್ತಿಃ ಫಲಮಸ್ತು, ಮಂದವಿರಾಗಿಣಾಂ ತದುಪಾಸಕಾನಾಂ ತು ಕಾ ಗತಿರಿತ್ಯಾಶಂಕಾಯಾಂ ಅವಾಂತರಫಲೋಪಸಂಹಾರವಿಧಿರಸ್ತೀತ್ಯಧಿಕರಣಾಂತರೇಣಾಹ. ಹಾನ್ಯಧಿಕರಣಂ ‖ ೧೧ ‖ ಹಾನೌ ತೂಪಾಯನಶಬ್ದಶೇಷತ್ವಾತ್ಕುಶಾಚ್ಛಂದಸ್ತುತ್ಯುಪಗಾನವತ್ತದುಕ್ತಂ ‖ ೨೬ ‖ "ಅಶ್ವ ಇವ ರೋಮಾಣಿ ವಿಧೂಯ ಪಾಪಂ ಚಂದ್ರ ಇವ ರಾಹೋರ್ಮುಖಾತ್ಪ್ರಮುಚ್ಯ ಧೂತ್ವಾ ಶರೀರಮಕೃತಂ ಕೃತಾತ್ಮಾ ಬ್ರಹ್ಮಲೋಕಮಭಿಸಂಭವಾಮಿ" ಇತಿ ಸಾಮಶ್ರುತೌ ಸಗುಣಪರಶಿವಬ್ರಹ್ಮೋಪಾಸಕಾನಾಂ ಮರಣಾನಂತರಂ ಸುಕೃತದುಷ್ಕೃತತ್ಯಾಗಮಾತ್ರಮುಕ್ತಂ. "ತತ್ಸುಕೃತೇ ದುಷ್ಕೃತೇ ವಿಧೂನುತೇ ತಸ್ಯ ಪುತ್ರಾ ದಾಯಮುಪಯಂತಿ", "ಸುಹೃದಸ್ಸಾಧುಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ" ಇತಿ. ಶಾಖಾಂತರೀಯಶ್ರುತೌ ತು ಉಪಾಸಕಾನಾಂ ಸುಕೃತದುಷ್ಕೃತತ್ಯಾಗಾನಂತರಂ ಉಪಾಸಕಮಿತ್ರಾಣಾಂ ಉಪಾಸಕದ್ವೇಷಿಣಾಂ ಚ ಸುಕೃತದುಷ್ಕೃತಸ್ವೀಕಾರ ಉಕ್ತಃ. ಏವಂ ಸ್ಥಿತೇ ಸತಿ ಹಾನೌ ಸುಕೃತದುಷ್ಕೃತತ್ಯಾಗಾತ್ಮಕಹನನಮಾತ್ರಪ್ರತಿಪಾದಕಶ್ರುತೌ ಉಪಾಸಕಸುಹೃದಾಂ ಉಪಾಸಕದ್ವೇಷಿಣಾಂ ಚ ಸುಕೃತದುಷ್ಕೃತಸ್ವೀಕಾರಾತ್ಮಕಮುಪಾಸನಂ ಉಪಸಂಹರ್ತವ್ಯಂ. ಕುತಃ? ಉಪಾಯನಶಬ್ದಶೇಷತ್ವಾತ್. "ತತ್ಸುಕೃತದುಷ್ಕೃತೇ ವಿಧೂನುತೇ" ಇತಿ ಶ್ರುತೌ ಹನನಪ್ರತಿಪಾದಕಸ್ಯ ವಿಧೂನನಶಬ್ದಸ್ಯ ಉಪಾಯನಪ್ರತಿಪಾದಕಶಬ್ದಸಾಹಚರ್ಯಾದಿತ್ಯರ್ಥಃ. ತತ್ರ ದೃಷ್ಟಾಂತಮಾಹ. ಕುಶಾಚ್ಛಂದಸ್ತುತ್ಯುಪಗಾನವತ್. ಯಥೈಕಸ್ಯಾಂ ಶಾಖಾಯಾಂ ಸಹ ಪಠಿತಾನಾಂ ಕರ್ಮಾಂಗಾನಾಂ ಕುಶಾಚ್ಛಂದಸ್ತುತ್ಯುಪಗಾನಾನಾಂ ಮಧ್ಯೇ ಅನ್ಯಸ್ಯಾಂ ಶಾಖಾಯಾಂ ಏಕೈಕಸ್ಯಾಂಗಸ್ಯ ಶ್ರವಣೇ ಸತ್ಯನ್ಯೇಷಾಮಂಗಾನಾಮುಪಸಂಹಾರಃ ತದ್ವದಿತ್ಯರ್ಥಃ. ತದುಕ್ತಂ. ಏಕೈಕಾಂಗಶ್ರವಣೇ ಸತ್ಯನ್ಯೇಷಾಂ ಅಂಗಾನಾಮುಪಸಂಹರಣಂ ಪೂರ್ವಮೀಮಾಂಸಾನ್ಯಾಯೇನಾತ್ರ ಯುಕ್ತಮಿತಿ ಸೂತ್ರಸೂಚಿತಸೂಕ್ತ್ಯರ್ಥಃ. ಛಾಂದೋಗ್ಯಾ ಆಮನಂತಿ "ಅಶ್ವ ಇವ ರೋಮಾಣಿ" ಇತಿ. ಅಥರ್ವಣಿಕಾಶ್ಚ "ತಥಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಂ ಪರಮಂ ಸಾಮ್ಯಮುಪೈತಿ" ಇತಿ. ಕಾತ್ಯಾಯನಸ್ತು "ತಸ್ಯ ಪುತ್ರಾ ದಾಯಮುಪಯಂತಿ ಸುಹೃದಸ್ಸಾಧುಕೃತ್ಯಂ ದ್ವಿಷಂತಃ ಪಾಪಕೃತ್ಯಂ" ಇತ್ಯಾದಿ. ಕೌಷೀತಕಿನಸ್ತು "ತತ್ಸುಕೃತದುಷ್ಕೃತೇ ವಿಧೂನುತೇ ತಸ್ಯ ಪ್ರಿಯಾ ಜ್ಞಾತಯಸ್ಸುಕೃತಮುಪಯಂತಿ ಅಪ್ರಿಯಾ

ದುಷ್ಕೃತಂ ” ಇತಿ. ಏವಂ ಕ್ವಚಿತ್ಪುಣ್ಯಪಾಪಯೋರ್ಹಾನಿಃ. ಕ್ವಚಿತ್ಪ್ರಿಯಾಪ್ರಿಯೇಷು ತತ್ಪ್ರಾಪ್ತಿಃ. ಕ್ವಚಿದುಭಯಂ ಚ ಶ್ರುತಂ. ತದುಭಯಮೇಕೈಕವಿದ್ಯಾಯಾಂ ಶ್ರುತಮಪಿ ಸರ್ವವಿದ್ಯಾಂಗಮಾಸ್ಥೇಯಂ. ಸರ್ವಬ್ರಹ್ಮವಿದ್ಯಾನಿಷ್ಠಸ್ಯಾಪಿ ಬ್ರಹ್ಮ ಪ್ರಾಪ್ನುವತಃ ಪುಣ್ಯಪಾಪಪ್ರಹಾಣಸ್ಯಾವಶ್ಯಂಭಾವಿತ್ವಾತ್ ಪ್ರಹಾಣವಿಷಯತ್ವಾಚ್ಚೋಪಾಸನಸ್ಯ, ತಚ್ಚಿಂತನಂ ಚ ವಿಧೀಯಮಾನಂ ಸರ್ವವಿದ್ಯಾಂಗಂ ಭವಿತುಮರ್ಹತಿ. ತತ್ರೇದಂ ವಿಚಾರ್ಯತೇ. ಹಾನಿಶ್ಚಿಂತನಮುಪಾಯನಚಿಂತನಮುಭಯಚಿಂತನಂ ಚೇತಿ ವಿಕಲ್ಪೇರನ್ ಉಪಸಂಹ್ರಿಯೇರನ್ ವಾ? ಕಿಂ ಯುಕ್ತಂ? ವಿಕಲ್ಪೇರನ್ನಿತಿ. ಕುತಃ? ಪೃಥಗಾಮ್ನಾನಸಾಮರ್ಥ್ಯಾತ್, ಸಮುಚ್ಚಯೋ ಹಿ ಸರ್ವತ್ರೋಭಯಾನುಸಂಧಾನಂ ಸ್ಯಾತ್. ತಚ್ಚ ಕೌಷೀತಕಿವಾಕ್ಯೇ ನೈವ ಸಿದ್ಧಮಿತ್ಯನ್ಯತ್ರಾಮ್ನಾನಮನರ್ಥಕಮೇವ ಸ್ಯಾತ್. ಅತೋ ನೈಕತ್ರಾಮ್ನಾನಸ್ಯ ವಿಕಲ್ಪ ಏವ ಪ್ರಯೋಜನಂ. ನ ಬಾಧ್ಯೇ ತ್ವಭೇದೇನ ಪರಿಹರ್ತುಂ ಶಕ್ಯಂ. ಅನೇಕತ್ರಾಮ್ನಾನಮವಿಶೇಷತಃ ಪುನಃ ಶ್ರವಣಂ ಹ್ಯಧ್ಯೇತೃಭೇದಪರಿಹಾರ್ಯಂ. ಅತ್ರ ತು ಹಾನಿರೇವ ದ್ವಯೋಶ್ಶಾಖಯೋಃ. ಉಪಾಯನಮೇವ ಚೈಕಸ್ಯಾಂ. ನಚ ವಿದ್ಯಾಭೇದೇನೈವಂ ವ್ಯವಸ್ಥಾಪಯಿತುಂ ಶಕ್ಯಂ, ಸರ್ವಶೇಷಭೂತಮಿದಂ ಅನುಸಂಧಾನಂ ಇತ್ಯುಕ್ತತ್ವಾತ್. ತತ್ರೇದಮುಚ್ಯತೇ, ಹಾನೌ ತೂಪಾದಾನಶಬ್ದವಿಶೇಷತ್ವಾದಿತಿ. ತುಶಬ್ದಃ ಪಕ್ಷಂ ವ್ಯಾವರ್ತಯತಿ. ಹಾನಾವಿತಿ ಪ್ರದರ್ಶನಾರ್ಥಂ ಕೇವಲಾಯಾಂ ಹಾನೌ ಕೇವಲೇ ಚೋಪಾಯನೇ ಶ್ರೂಯಮಾಣೇ ತಯೋರಿತರೇತರಸಮುಚ್ಚಯೋಽವಶ್ಯಂಭಾವೀ. ಕುತಃ? ಉಪಾಯನಶಬ್ದಶೇಷತ್ವಾತ್ ಉಪಾಯನಶಬ್ದಸ್ಯ ಹಾನಿವಾಕ್ಯಶೇಷತ್ವಾತ್. ಉಪಾಯನವಾಕ್ಯಸ್ಯ ಹಾನಿವಾಕ್ಯಶೇಷತ್ವಮೇವೋಚಿತಂ. ವಿದುಷಾ ವ್ಯಕ್ತಯೋಃ ಪುಣ್ಯಪಾಪಯೋಃ ಪ್ರವೇಶಸ್ಥಾನವಾಚಿತ್ವಾದುಪಾಯನವಾಕ್ಯಸ್ಯ ಪ್ರವೇಶಾಂತರಾಮ್ನಾನವಾಕ್ಯಶೇಷತ್ವೇ ದೃಷ್ಟಾಂತ ಉಪನ್ಯಸ್ಯತೇ ಕುಶಾಚ್ಛಂದಸ್ತುತ್ಯುಪಗಾನವದಿತಿ. ಕಾಲಾಪಿನಃ “ಕುಶಾ ವಾನಸ್ಪತ್ಯಾ” ಇತ್ಯಾಮನಂತಿ. ಕಾಠ್ಯಾಯನೀಯಾನಾಂ ತು “ ಔದುಂಬರ್ಯಃ ಕುಶಾ ” ಇತಿ ವಾಕ್ಯಂ. ಸಾಮಾನ್ಯೇನ ವಾನಸ್ಪತ್ಯತ್ವೇನಾವಗತಾಃ ಕುಶಾಃ ಔದುಂಬರ್ಯ ಇತಿ ವಿಶಿಷ್ಯ ತದ್ವಾಕ್ಯಶೇಷತಾಮಾಪದ್ಯತೇ. ತಥಾ“ ದೇವಾಸುರಾಣಾಂ ಛಂದೋಭಿಃ”ಇತ್ಯಾದಿನಾ ಅವಿಶೇಷೇಣ ದೇವಾಸುರಾಣಾಂ ಛಂದಸಾಂ ಪ್ರಸಂಗೇ “ ದೇವಚ್ಛಂದಾಂಸಿ ಪೂರ್ವಂ ” ಇತಿ ವಚನಂ ಕ್ರಮವಿಶೇಷಂ ಪ್ರತಿಪಾದಯತ್ ತದ್ವಾಕ್ಯಶೇಷತಾಂ ಗಚ್ಛತಿ. ತಥಾಹಿ “ ಹಿರಣ್ಯೇನ ಷೋಡಶಿನಃ ಸ್ತೋತ್ರ

ಮುಪಾಕರೋತಿ ” ಇತ್ಯವಿಶೇಷೇಣ ಪ್ರಾಪ್ತೇ ಸಮಯಾವಿಶೇಷಿತೇ
ಸೂರ್ಯೇ ಷೋಡಶಿನಃ ಸ್ತೋತ್ರಮುಪಾಕರೋತಿ ಇತಿ ವಿಶೇಷ
ವಿಷಯಂ ವಾಕ್ಯಂ ತದ್ವಾಕ್ಯಾಶೇಷತಾಂ ಭಜತೇ, ತಥಾ ಋತ್ವಿಜ ಉಪ
ಗಾಯಂತೀತ್ಯವಿಶೇಷಪ್ರಾಪ್ತಸ್ಯ “ ನಾಧ್ವರ್ಯುರುಪಗಾಯೇತ್ ” ಇತಿ
ವಾಕ್ಯಮನಧ್ವರ್ಯುವಿಷಯತಾಮವಗಮಯತ್ ತದ್ವಾಕ್ಯಶೇಷತ್ವಂ
ಋಚ್ಛತಿ. ಏವಂ ಸಾಮಾನ್ಯೇನಾವಗತಮರ್ಥಂ ವಿಶೇಷೇ ವ್ಯವಸ್ಥಾಪ
ಯಿತುಂ ಕ್ಷಮಸ್ಯ ವಾಕ್ಯಸ್ಯ ತಚ್ಛೇಷತ್ವಮನಭ್ಯುಪಗಚ್ಛದ್ಭಿಸ್ತಯೋರ
ರ್ಥಯೋಃ ವಿಕಲ್ಪಸ್ಸಮಾಶ್ರಯಿತವ್ಯಃ. ಸ ಚ ಸಂಭವತ್ಯಾಂ ಗತೌ ನ
ಯುಜ್ಯತೇ. ತದುಕ್ತಂ ಪೂರ್ವಸ್ಮಿನ್ ಕಾಂಡೇ “ ಅಪಿ ತು ವಾಕ್ಯಶೇಷ
ತ್ವಾತ್ ಅನ್ಯಾಯ್ಯತ್ವಾದ್ವಿಕಲ್ಪಸ್ಯ ವಿಧಿನಾಂ ಏಕದೇಶಸ್ಸ್ಯಾತ್ ” ಇತಿ.
ತದೇವಂ ಕೇವಲಹಾನೋಪಾಯನವಾಕ್ಯಯೋರೇಕವಾಕ್ಯತ್ವಾತ್ ಕೇವ
ಲಸ್ಯ ಹಾನಸ್ಯ ಕೇವಲಸ್ಯ ಚೋಪಾಯನಸ್ಯಾಭಾವಾದ್ವಿಕಲ್ಪೋ ನೋಪ
ಪದ್ಯತೇ. ಕೌಷೀತಕಿನಾಂ ಉಭಯಾಮ್ನಾನಮವಿಶೇಷತಃ ಪುನಃ
ಶ್ರವಣತ್ವೇನ ಪ್ರತಿಪತ್ತ್ಯಭೇದಾತ್ ಅವಿರುದ್ಧಃ. ನನು ಕಥಮರ್ಥ
ವಾದಃ. ಪ್ರದೇಶಾಂತರಸ್ಯಾರ್ಥವಾದಸಾಪೇಕ್ಷೇತಿ ಚೇತ್ “ ನಾಮೋ
ಪಾಸ್ತಿಸ್ತಾವಕತ್ವೇನ ಶ್ರುತಸ್ಯೈಕವಿಂಶಾ ವಾ ಇತೋ ಹ ವಾ ” ಇತ್ಯ
ರ್ಥವಾದಸ್ಯೈಕವಿಂಶತ್ವನಿರ್ಣಯಾಯ ತೈತ್ತಿರೀಯಗತಸತ್ತ್ವಪ್ರಕರಣ
ಸ್ಥಾನಾರ್ಥವಾದಸಾಪೇಕ್ಷತ್ವದರ್ಶನಾತ್ “ ದ್ವಾದಶಮಾಸಃ ಪಂಚರ್ತವ
ಸ್ತ್ರಯ ಇಮೇ ಲೋಕಾ ಅಸಾವಾದಿತ್ಯೋ ಏಕವಿಂಶಃ ” ಇತಿ ತತ್ರ
ಸಂಖ್ಯಾನಿರ್ವಾಹಮುಕ್ತ್ವಾ ತತೋಽರ್ಥವಾದತ್ವೇಽಪ್ಯುಪಾಯನಮುಪ
ಸಂಹಾರ್ಯಂ. ಹಾನೋಪಾಯನಯೋರೇಕತ್ರಾಪ್ಯವಗತಿರಸ್ತಿ. ಕೌಷೀ
ತಕಶ್ರುತೌ “ ತತ್ಸುಕೃತದುಷ್ಕೃತೇ ವಿಧೂನುತೇ ತಸ್ಯ ಪ್ರಿಯಾ ಜ್ಞಾತ
ಯಸ್ಸುಕೃತಮುಪಯಂತಿ ಅಪ್ರಿಯಾ ದುಷ್ಕೃತಂ ” ಇತಿ ವ್ಯಪದೇಶಾತ್ತ
ಯೋಸ್ಸಮಂಜಸಂ.

ಶಮದಮವೈರಾಗ್ಯ ಮೊದಲಾದ ಗುಣಗಳಿಂದ ಕೂಡಿ, ಶಿವಯೋಗಿಗಳಿಗೆ
ಶಿವಸಾಮರಸ್ಯವೇ ಫಲವಾಗಲಿ. ಆದರೆ ಶಿವನ ಉಪಾಸನಮಾಡುವ ಮಂದಾಧಿಕಾರಿ
ಗಳಿಗೆ ಏನು ಗತಿ ಎಂದಾಶಂಕಿಸಿ ಅವರಿಗೂ ಬೇರೊಂದು ಫಲವನ್ನು ವಿಧಿಸಲಾಗಿದೆ
ಎಂದು ತಿಳಿಸುತ್ತಾನೆ “ಕುದುರೆಯು ಕೂದಲನ್ನು ಮೈನಿಂದ ಒದರುವಂತೆ ಪಾಪವನ್ನು
ಕಳೆದುಕೊಂಡು ರಾಹುವಿನ ಬಾಯಿಂದ ಹೊರಗೆ ಬಂದ ಚಂದ್ರನಂತೆ ಶಿವಯೋಗಿಯು
ಶರೀರವನ್ನು ತೊರೆದು ಪವಿತ್ರವಾದ ಬ್ರಹ್ಮಲೋಕವನ್ನು ಹೊಂದುತ್ತಾನೆ”ಎಂದು ಸಾಮ
ಶ್ರುತಿಯಲ್ಲಿ ಸಗುಣೋಪಾಸಕರಿಗೆ ಮರಣವಾದಮೇಲೆ ಸುಕೃತದುಷ್ಕೃತಗಳು ತೊಲಗು
ತ್ತವೆ ಎಂದು ಹೇಳಿದೆ. “ ಜ್ಞಾನಿಯು ತೊರೆದ ಸುಕೃತದುಷ್ಕೃತಗಳನ್ನು ಅವನ

ಮಕ್ಕಳು ಪಡೆಯುತ್ತಾರೆ" "ಸ್ನೇಹಿತರಿಗೆ ಅವನ ಸುಕೃತವೂ ಶತ್ರುಗಳಿಗೆ ದುಷ್ಕೃತವೂ ಸೇರುತ್ತವೆ" ಎಂದು ಬೇರೆಶ್ರುತಿಯಲ್ಲಿ ಹೇಳಿದೆ. ಹೀಗೆ ಸುಕೃತದುಷ್ಕೃತಗಳನ್ನು ತೊರೆದಮೇಲೆ ಮಿತ್ರರು ಸುಕೃತವನ್ನೂ ಶತ್ರುಗಳು ದುಷ್ಕೃತವನ್ನೂ ಸ್ವೀಕರಿಸುವ ರೆಂದು ಬೇರೆಕಡೆಯೂ ಹೇಳಿದೆ. ವಸ್ತುಸ್ಥಿತಿ ಹೀಗಿರುವಾದ ಸುಕೃತದುಷ್ಕೃಗಳ ತ್ಯಾಗರೂಪವಾದ ನಾಶವನ್ನು ತಿಳಿಸುವ ಶ್ರುತಿಯಲ್ಲಿ ಉಪಾಸಕನ ಮಿತ್ರರಿಗೂ ಶತ್ರು ಗಳಿಗೂ ಸುಕೃತದುಷ್ಕೃತಗಳ ಸ್ವೀಕಾರರೂಪವಾದ ಉಪಾದಾನವನ್ನು ಹೇಳಲೇ ಬೇಕು. ಯಾಕೆಂದರೆ "ಸುಕೃತದುಷ್ಕೃತಗಳನ್ನು ಒದರುತ್ತಾನೆ" ಎಂಬ ಶ್ರುತಿ ಯಲ್ಲಿ ಅವುಗಳ ನಾಶವನ್ನು ತಿಳಿಸುವ ವಿಧೂತಶಬ್ದವು "ಸ್ವೀಕರಿಸುತ್ತಾನೆ" ಎಂಬ ಅರ್ಥವನ್ನು ತಿಳಿಸುವ ಶಬ್ದವೂ ಜೊತೆಯಲ್ಲೇ ಇವೆ. ಈ ಬಗ್ಗೆ ದೃಷ್ಟಾಂತವನ್ನು ತಿಳಿಸುತ್ತಾನೆ. ಒಂದೆಶಾಖೆಯಲ್ಲಿ ಒಟ್ಟಿಗೆ ಕೂಡಿಸಿ ಹೇಳಿರುವ ಕುಶ, ಛಂದಸ್ಸು, ಶ್ರುತಿ, ಉಪಗಾನ ಎಂಬ ಕರ್ಮಾಂಗಗಳ ಪೈಕಿ ಒಂದೊಂದು ಅಂಗವನ್ನು ಮಾತ್ರವೇ ಬೇರೊಂದು ಶಾಖೆಯಲ್ಲಿ ಹೇಳಿದ್ದರೆ ಉಳಿದ ಅಂಗಗಳನ್ನೂ ಅಲ್ಲಿ ಸೇರಿಸಿಕೊಳ್ಳಬೇಕು. ಅದರಂತೆಯೇ ಇಲ್ಲಿಯೂ ಸಹ ಕರ್ಮಗಳ ಬಿಡುಗಡೆಯನ್ನು ತಿಳಿಸಿದ್ದರಿಂದ ಸ್ವೀಕಾರ ರೂಪವಾದ ಉಪಾದಾನವನ್ನು ಸೇರಿಸಿಕೊಳ್ಳಬೇಕು. "ಒಂದೊಂದು ಅಂಗವನ್ನು ಕೇಳಿದಮೇಲೆ ಉಳಿದ ಅಂಗಗಳನ್ನು ಅಲ್ಲಿಯೇ ಸೇರಿಸಿಕೊಳ್ಳಬೇಕು" ಎಂಬ ಪೂರ್ವ ಮೀಸಾಂಸಾನ್ಯಾಯದಂತೆ ಇಲ್ಲಿ ಸಮನ್ವಯಮಾಡಿಕೊಳ್ಳಬೇಕು ಎಂದು ಸೂತ್ರದ ಸೂಕ್ಷ್ಮಾರ್ಥ. "ಕುದುರೆಯು ಕೂದಲನ್ನು ಕೆಳಗೆ ಉದುರಿಸುವಂತೆ ಶಿವಯೋಗಿಯು ಬ್ರಹ್ಮಲೋಕವನ್ನು ಸೇರುತ್ತಾನೆ," ಎಂದು ಛಾಂದೋಗ್ಯರು ಹೇಳುತ್ತಾರೆ. ಅಥರ್ವಣಿ ಕರು "ಜ್ಞಾನಿಯು ಪುಣ್ಯಪಾಪಗಳನ್ನು ಒದರಿ ನಿರಂಜನನಾಗಿ ಪರಮಾತ್ಮನಲ್ಲಿ ಸೇರುತ್ತಾನೆ" ಎಂದು ಹೇಳುತ್ತಾರೆ. ಕಾತ್ಯಾಯನರಾದರೋ "ಜ್ಞಾನಿಯ ಮಕ್ಕಳು ಅವನಲ್ಲಿ ಭಾಗವನ್ನು ಪಡೆಯುತ್ತಾರೆ" ಎಂದು ಮುಂತಾಗಿ ಹೇಳುತ್ತಾರೆ. ಕೌಷೀತಕಿಗಳಾದರೋ "ಅವನ ಪ್ರಿಯಬಂಧುಗಳು ಸುಕೃತವನ್ನೂ ವಿರೋಧಿಗಳು ದುಷ್ಕೃತವನ್ನೂ ಒಯ್ಯುತ್ತಾರೆ" ಎಂದು ಹೇಳುತ್ತಾರೆ. ಹೀಗೆ ಕೆಲವುಕಡೆಗಳಲ್ಲಿ ಪುಣ್ಯಪಾಪಗಳ ನಾಶವನ್ನೂ, ಕೆಲವುಕಡೆಗಳಲ್ಲಿ ಪ್ರಿಯರಲ್ಲೂ ಅಪ್ರಿಯರಲ್ಲೂ ಅವು ಹೋಗಿ ಸೇರುವುದನ್ನೂ, ಕೆಲವುಕಡೆ ಅವೆರಡನ್ನೂ ಹೇಳಲಾಗಿದೆ. ಇವೆರ ಡನ್ನೂ ಒಂದೊಂದು ವಿದ್ಯೆಯಲ್ಲಿ ಹೇಳಿದ್ದರೂ ಎಲ್ಲಾ ವಿದ್ಯೆಗಳಲ್ಲೂ ಅವನ್ನು ಅಂಗ ವಾಗಿ ಸೇರಿಸಿಕೊಳ್ಳಲೇಬೇಕು. ಹೀಗೆ ಬ್ರಹ್ಮವಿದ್ಯೆಯಲ್ಲಿ ನಿರತನಾದವನು ಬ್ರಹ್ಮವನ್ನು ಹೊಂದಿದಮೇಲೆ ಪುಣ್ಯಪಾಪಗಳೆಲ್ಲವೂ ಅವಶ್ಯವಾಗಿ ತೊಲಗುವುದರಿಂದಲೂ, ಸ್ವೀಕಾರವು ತೊಲಗುವಿಕೆಯನ್ನೇ ಅವಲಂಬಿಸಿರುವುದರಿಂದಲೂ ಅದರ ವಿಧಾನವೂ ಸಹ ಎಲ್ಲಾ ವಿದ್ಯೆಗಳಿಗೂ ಅಂಗವಾಗಬಲ್ಲದು. ಇಲ್ಲಿ ಆ ಬಗ್ಗೆ ವಿಚಾರಮಾಡಲಾಗಿದೆ. ಇಲ್ಲಿ ವಿಚಾರಾರ್ಹವಾದದ್ದು ಪುಣ್ಯಪಾಪಗಳ ತೊಲಗುವಿಕೆಯೆ? ಅಥವಾ ಅವುಗಳ ಸ್ವೀಕಾರವೇ ಅಥವಾ ಎರಡೂವೆ? ಇವುಗಳಲ್ಲಿ ಒಂದೊಂದನ್ನೇ ಒಪ್ಪಬೇಕೆ?

ಅಥವಾ ಎಲ್ಲವನ್ನು ಒಪ್ಪಬೇಕೆ? ಯಾವುದು ಯುಕ್ತ? ಆದರೆ ಇವೆಲ್ಲವನ್ನು ಬೇರೆ ಬೇರೆಯಾಗಿ ಹೇಳಿರುವುದರಿಂದ ವಿಕಲ್ಪಪಕ್ಷವನ್ನೇ ಒಪ್ಪಬಹುದು. ಒಂದೊಂದು ಕಡೆ ಯಲ್ಲೂ ಎರಡುಪಕ್ಷಗಳನ್ನೂ ಒಟ್ಟಿಗೆ ಒಪ್ಪುವುದೇ ಸಮುಚ್ಚಯವೆನಿಸುತ್ತದೆ. ಇದು ಕೌಷೀತಕಶ್ರುತಿಗೆ ಅನ್ವಯಿಸುವುದಿಲ್ಲವಾದ್ದರಿಂದ ಬೇರೆಕಡೆಗಳಲ್ಲಿ ಹೇಳಿದ್ದು ಅನರ್ಥಕವೇ ಆದೀತು. ಹೀಗೆಯೇ ಅನೇಕಕಡೆಗಳಲ್ಲಿ ಹೇಳಿದ್ದರಿಂದ ವಿಕಲ್ಪವೇ ಸಿದ್ಧಿಸುತ್ತದೆ. ಬಾಧಕವಿಲ್ಲದಿದ್ದರೆ ಮಾತ್ರವೇ ಅಭೇದದಿಂದ ಪರಿಹರಿಸಲು ಸಾಧ್ಯ ವಾಗುತ್ತದೆ. ಒಂದೇವಿಷಯವನ್ನು ಅನೇಕಕಡೆಗಳಲ್ಲಿ ಸಾಮನ್ಯವಾಗಿ ಹೇಳಿದ್ದರೂ ಓದುವವರು ಬೇರೆಬೇರೆಯಾದ್ದರಿಂದ ಹಾಗೆ ಹೇಳುವುದರಲ್ಲಿ ತಪ್ಪೇನಿಲ್ಲ. ಇಲ್ಲಿಯಾ ದರೋ ಎರಡುಶಾಖೆಗಳಲ್ಲೂ ಪುಣ್ಯಪಾಪಕರ್ಮಗಳ ತೊಲಗುವುಕೆಯನ್ನೇ ಹೇಳಿದೆ. ಆದರೆ ಒಂದರಲ್ಲಿ ಮಾತ್ರವೇ ಸ್ವೀಕಾರವನ್ನು ತಿಳಿಸಲಾಗಿದೆ. ಇದನ್ನು ವಿದ್ಯಾಭೇದ ದಿಂದ ಸರಿಪಡಿಸಲು ಸಾಧ್ಯವಿಲ್ಲ. ಈ ರೀತಿಯ ಅನುಸಂಧಾನವು ಎಲ್ಲಕ್ಕೂ ಸೇರಿ ದ್ದೆಂದು ಹೇಳಲಾಗಿದೆ. ಹೀಗೆ ಪೂರ್ವಪಕ್ಷಬಂದರೆ ಅದಕ್ಕೆ ಸಮಾಧಾನವನ್ನು ಮುಂದೆ ಹೇಳಲಾಗಿದೆ. ಸೂತ್ರದಲ್ಲಿ "ಹಾನೌ ತು" ಎಂಬಕಡೆ ತುಶಬ್ದವು ಆಕ್ಷೇಪ ವನ್ನು ಅಲ್ಲಗಳೆಯುತ್ತದೆ. ಕೇವಲ ಹಾನವನ್ನೋ ಅಥವಾ ಕೇವಲ ಸ್ವೀಕಾರವನ್ನೋ ಶ್ರುತಿಯಲ್ಲಿ ಹೇಳಿದ್ದರೂ ಒಂದರಜೊತೆಗೆ ಮತ್ತೊಂದನ್ನೂ ಅವಶ್ಯವಾಗಿ ಒಪ್ಪಲೇ ಬೇಕು. ಯಾಕೆಂದರೆ ಹಾನವನ್ನು ತಿಳಿಸುವ ವಾಕ್ಯಕ್ಕೆ ಅಂಗವಾಗಿಯೇ ಸ್ವೀಕಾರ ವನ್ನು ತಿಳಿಸುವ ಶಬ್ದವೂ ಒಂದಿರುತ್ತದೆ. ಆದರೆ ಸ್ವೀಕಾರವನ್ನು ತಿಳಿಸುವ ವಾಕ್ಯವೇ ಹಾನವನ್ನು ತಿಳಿಸುವ ವಾಕ್ಯಕ್ಕೆ ಅಂಗವೆಂದು ಹೇಳುವುದೇ ಯುಕ್ತವಾ ಗಿದೆ. ಬ್ರಹ್ಮಜ್ಞಾನಿಯು ತೊರೆಯುವ ಪುಣ್ಯಪಾಪಗಳು ಹೋಗಿಸೇರುವ ಸ್ಥಾನವನ್ನು ಸ್ವೀಕಾರವಾಕ್ಯವು ತಿಳಿಸುತ್ತದೆ. ಒಂದುಕಡೆ ಹೇಳಿರುವ ವಾಕ್ಯವು ಬೇರೆಕಡೆಯಲ್ಲಿ ಹೇಳಿರುವ ವಾಕ್ಯಕ್ಕೆ ಹೇಗೆ ಅಂಗವಾಗುತ್ತದೆ? ಎಂದು ಹೇಳಿದರೆ ಅದಕ್ಕೆ ದೃಷ್ಟಾಂತ ವನ್ನು ಸೂತ್ರದಲ್ಲಿ ತಿಳಿಸಲಾಗಿದೆ. ಕಾಲಾಪಶಾಖೆಯವರು ಹೇಳುವ "ಕುಶಾ ವಾನ ಸ್ಪತ್ಯಾಃ" ಎಂಬ ವಾಕ್ಯಕ್ಕೆ ಕಾಟ್ಯಾಯನೀಯ ಶಾಖೆಯವರು ಹೇಳುವ "ಔದುಂ ಬರ್ಯಃ ಕುಶಾಃ" ಎಂಬ ವಾಕ್ಯವು ಅಂಗವಾಗುತ್ತದೆ. ಇದರಿಂದ ಸಾಮಾನ್ಯವಾಗಿ ವನಸ್ಪತಿಸಂಬಂಧವೆಂದು ಹೇಳುವ ಕುಶಗಳನ್ನು ಹತ್ತಿಯಮರಕ್ಕೆ ಸಂಬಂಧಿಸಿದ ವೆಂದು ತಿಳಿಯಲು ಸಾಧ್ಯವಾಗುತ್ತದೆ. ಹೀಗೆ "ದೇವಾಸುರಾಣಾಂ ಛಂದೋಭಿಃ" ಎಂದು ದೇವಾಸುರರಿಗೆ ಸಾಮಾನ್ಯವಾಗಿ ಸಂಬಂಧಿಸಿದ ಛಂದಸ್ಸನ್ನು ಕುರಿತು "ದೇವ ಚ್ಛಂದಾಂಸಿ ಪೂರ್ವಂ" ಎಂಬ ವಚನವು ಕ್ರಮವನ್ನು ಹೇಳುವುದರಿಂದ ಹಿಂದಿನ ವಾಕ್ಯಕ್ಕೆ ಅಂಗವಾಗುತ್ತದೆ. ಹೀಗೆಯೇ "ಹಿರಣ್ಯೇನ ಷೋಡಶಿನಃ ಸ್ತೋತ್ರ ಮುಪಾಕರೋತಿ" ಎಂಬ ವಾಕ್ಯದಿಂದ ಕಾಲವಿಶೇಷವು ತೋರದಿದ್ದರೂ "ಸಮಯಾ ವಿಷಿತೇ ಸೂರ್ಯೇ" ಎಂದು ಸೂರ್ಯನು ಮುಳುಗಿದಮೇಲಿನ ಕಾಲವನ್ನು ತಿಳಿ ಸುವ ವಾಕ್ಯವು ಅಂಗವಾಗುತ್ತದೆ. ಇದರಂತೆಯೇ "ಋತ್ವಿಜಃ ಉಪಗಾಯಂತಿ"

ಎಂದು ಸಾಮಾನ್ಯವಾಗಿ ಎಲ್ಲಾ ಋತ್ವಿಜರಿಗೂ ಅನ್ವಯಿಸುವ ವಾಕ್ಯಕ್ಕೆ "ಅಧ್ವರ್ಯುವು ಗಾನಮಾಡಬಾರದು" ಎಂಬ ವಾಕ್ಯವು ಅಂಗವಾಗುತ್ತದೆ. ಈ ರೀತಿಯಲ್ಲಿ ಸಾಮಾನ್ಯವಾಗಿ ತೋರುವ ಅರ್ಥವನ್ನು ಒಂದು ವಿಶೇಷದಲ್ಲಿ ಕೊನೆಗಾಣಿಸುವುದಕ್ಕಾಗಿ ಬೇರೆಬೇರೆಪ್ರಕರಣದಲ್ಲಿದ್ದ ವಾಕ್ಯಗಳಿಗೂ ಅಂಗಾಗಿಭಾವವನ್ನು ಒಪ್ಪಲಾಗಿದೆ. ಇಲ್ಲದಿದ್ದರೆ ವಿಕಲ್ಪವನ್ನು ಒಪ್ಪಬೇಕಾಗುತ್ತದೆ. ಆದರೆ ವಿಕಲ್ಪವಿಲ್ಲದೆಯೇ ನಿರ್ವಾಹವಾಗುವಾಗ ವಿಕಲ್ಪವನ್ನು ಒಪ್ಪುವುದು ಯುಕ್ತವಲ್ಲ. ಇದನ್ನು ಪೂರ್ವಮೀಮಾಂಸಶಾಸ್ತ್ರದಲ್ಲಿಯೂ ಒಪ್ಪಲಾಗಿದೆ. ಆದ್ದರಿಂದ ಕೇವಲ ಹಾನವನ್ನಾಗಲೀ ಕೇವಲ ಸ್ವೀಕಾರವನ್ನಾಗಲೀ ಒಂದುಕಡೆ ಹೇಳಿದ್ದರೂ ಎರಡುಕಡೆಗಳಲ್ಲೂ ಮತ್ತೊಂದನ್ನೂ ಸೇರಿಸಿಕೊಳ್ಳಲೇಬೇಕು. ಕೌಷೀತಕಿಯಲ್ಲಿ ಈ ರೀತಿಯಲ್ಲಿ ಎರಡನ್ನೂ ಹೇಳಿರುವುದಾಗಿ ಕಾಣಬಹುದಾಗಿದೆ. ಒಂದು ಪ್ರಕರಣದಲ್ಲಿರುವ ಅರ್ಥವಾದಕ್ಕೆ ಮತ್ತೊಂದು ಪ್ರಕರಣದಲ್ಲಿರುವ ಅರ್ಥವಾದವು ಹೇಗೆ ಅಂಗವಾಗವುದೆಂದು ಕೇಳಿದರೆ ನಾಮೋಪಾಸನೆಯನ್ನು ಪ್ರಶಂಸಿಸುವ ಸ್ತೋತ್ರಗಳು ಇಪ್ಪತ್ತೊಂದು ಇವೆ ಎಂಬಲ್ಲಿ ಹೇಳಿರುವ ಸಂಖ್ಯೆಯನ್ನು ನಿರ್ಣಯಿಸಲಿಕ್ಕಾಗಿ ತೈತ್ತಿರೀಯದಲ್ಲಿರುವ "ಹನ್ನೆರಡುಮಾಸಗಳು, ಐದು ಋತುಗಳು, ಮೂರುಲೋಕಗಳು ಮತ್ತು ಸೂರ್ಯನು" ಎಂದು ಇಪ್ಪತ್ತೊಂದು ವಸ್ತುಗಳನ್ನು ಹೇಳುವ ವಾಕ್ಯವು ಅಂಗವಾಗುವುದೆಂಬುದು ಸರ್ವಸಮ್ಮತವಾಗಿದೆ. ಆದ್ದರಿಂದ ಬೇರೆ ಪ್ರಕರಣದಲ್ಲಿದ್ದರೂ ಪರಸ್ಪರವಾಗಿ ಅಂಗಾಂಗಿಭಾವವು ಹೊಂದುವುದರಿಂದ ಹಾನವನ್ನೋ ಅಥವಾ ಸ್ವೀಕಾರವನ್ನೋ ಹೇಳುವ ಪ್ರಸಂಗದಲ್ಲಿ ಮತ್ತೊಂದನ್ನು ಸೇರಿಸಿಕೊಳ್ಳಲೇಬೇಕು. "ಕೌಷೀತಕಿಯಲ್ಲಂತೂ "ಸುಕೃತದುಷ್ಕೃತಗಳನ್ನು ಬಿಡುತ್ತಾನೆ" "ಅವನ ಗೆಳೆಯರು ಸುಕೃತವನ್ನೂ ಶತ್ರುಗಳು ದುಷ್ಕೃತವನ್ನೂ ಸ್ವೀಕರಿಸುತ್ತಾರೆ" ಎಂದು ಎರಡನ್ನೂ ಸ್ಪಷ್ಟವಾಗಿ ಹೇಳಿದೆ.

ನನು ಮುಂದವಿರಾಗಿಣಾಮಪಿ ಸರ್ವವಿದ್ಯಾಸು ಪರಶಿವೋಪಾಸನಾತ್ ಪುಣ್ಯಾಪುಣ್ಯವಿಯೋಗಪೂರ್ವಕಂ ತತ್ತಲ್ಲೋಕಾನುಭೂತಿರೂಪದಿಷ್ಟಾ. ತಥಾಪಿ ತತ್ ಜೀವಿತಕಾಲೇ ವಿಯೋಗಕಾಲೇ ವಾ ಸಂಭವತೀತ್ಯಾಶಂಕಾಯಾಂ ಅಧಿಕಾರಣಾಂತರೇಣ ಕಾಲನಿರ್ಣಯಂ ದರ್ಶಯತಿ. ಸಾಂಪರಾಯಾಧಿಕರಣಂ ॥ ೧೨ ॥ ಸಾಂಪರಾಯೇ ತರ್ತವ್ಯಾಭಾವಾತ್ತಥೋ ಹ್ಯನ್ಯೇ ॥ ೨೭ ॥ ಸಾಂಪರಾಯೇ ಪರಶಿವಬ್ರಹ್ಮಲೋಕಪ್ರಾಪ್ತಿಹೇತುಭೂತದೇವಯಾನಮಾರ್ಗೇ ವಿರಜಾನದ್ಯತಿಕ್ರಮಣಾನಂತರಂ ಶೈವದೀಕ್ಷಾವಚ್ಛಿನ್ನದಿವ್ಯೋಪಾಸಕಾನಾಂ ಸುಕೃತದುಷ್ಕೃತಕ್ಷಯೋ ಭವತಿ. ಕುತಃ? ತರ್ತವ್ಯಸ್ಯ ನದ್ಯಂತರಸ್ಯಾಭಾವಾದಿತ್ಯರ್ಥಃ. ವಿರಜಾನದೀತರಣಾನಂತರಂ ಸುಕೃತದುಷ್ಕೃತಕ್ಷಯಂ ಪ್ರತಿಪಾದಯಂತಿ ಶ್ರುತಯ ಇತ್ಯತ್ರ ಪ್ರಮಾಣಮಾಹ. ತಥಾಹ್ಯನ್ಯೇ ಶಾಖಿನಃ "ಸ ಆಗಚ್ಛತಿ ವಿರಜಾಂ ನದೀಂ ತಾಂ ಮನಸೈವಾತ್ಯೇತಿ ತತ್ಸುಕೃತದುಷ್ಕೃತೇ ವಿಧೂನುತೇ" ಇತಿ

ಶ್ರುತೌ ವಿರಜಾನದೀತರಣಾನಂತರಂ ಸುಕೃತದುಷ್ಕೃತಕ್ಷಯಂ ಪ್ರತಿಪಾದಯಂತಿ. ತಥಾಪಿ ವಿರಜಾನದೀತರಣಾನುಗತಶೈವದೀಕ್ಷಾಕಾಲೇ ತತ್ಪೂರ್ವಭಾವಿಕೃತಪುಣ್ಯಾಪುಣ್ಯಕರ್ಮವಿಯೋಗಾತ್ ದೀಕ್ಷಾನಂತರಕೃತ ದುಷ್ಕೃತಕದಂಬಂ ಉಪಾಸಕಾನಾಂ ಪ್ರಾಣೋತ್ಕ್ರಮಣಕಾಲೇ ವಿನಶ್ಯತೀತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಸುಕೃತದುಷ್ಕ್ರತಯೋರ್ಹಾನಮುಪಾಯನಂ ಚ ದಹರಶಾಂಡಿಲ್ಯಾದಿಸರ್ವಾಸು ವಿದ್ಯಾಸು ಚಿಂತನೀಯಮಿತ್ಯುಕ್ತಂ. ತಚ್ಚ ಹಾನಂ ಕಿಂ ದೇಹವಿಯೋಗಕಾಲೇ ದೇಹಾದ್ಯುತ್ಕ್ರಾಂತಸ್ಯಾಧ್ವನಿ ಉತ ದೇಹವಿಯೋಗಕಾಲ ಏವೇತಿ ವಿಶಯೇ ಉಭಯತ್ರೇತಿ ಯುಕ್ತಂ, ಉಭಯಥಾ ಚ ಶ್ರುತತ್ವಾತ್. ಏವಂ ಹಿ ಕೌಷೀತಕಿನಸ್ಸಮಾಮನಂತಿ. "ಸ ಏತಂ ದೇವಯಾನಂ ಪಂಥಾನಮಾಪದ್ಯಾಗ್ನಿಲೋಕಂ ಗಚ್ಛತಿ" ಇತ್ಯುಪಕ್ರಮ್ಯ "ಸ ಆಗಚ್ಛತಿ ವಿರಜಾಂ ನದೀಂ ತಾಂ ಮನಸಾತ್ಯೇತಿ" "ತತ್ಸುಕೃತದುಷ್ಕೃತೇ ವಿಧೂನುತ" ಇತಿ. ಅತ್ರ ವಾಕ್ಯೇ ಅಧ್ವನಿ ಸುಕೃತದುಷ್ಕೃತಹಾನಿಃ ಪ್ರತೀಯತೇ. ತಾಂಡಿನಸ್ತು "ಅಶ್ವ ಇವ ರೋಮಾಣಿ ವಿಧೂಯ" ಇತಿ. ಅತ್ರ ದೇಹವಿಯೋಗಕಾಲ ಇತಿ ಪ್ರತೀಯತೇ ಶಾಟ್ಯಾಯನಕೇಽಪಿ "ತಸ್ಯ ಪುತ್ರಾ ದಾಯಮುಪಯಂತಿ, ಸುಹೃದಸ್ಸಾಧುಕೃತ್ಯಾಂ ದ್ವಿಷಂತಃ ಪಾಪಕೃತ್ಯಾಂ" ಇತಿ. "ಪುತ್ರೇಷು ವಾಯುಸಂಕ್ರಾಂತಿಸಮಕಾಲಂ ಸುಕೃತದುಷ್ಕೃತ ಸಂಕ್ರಮಣಂ ಶ್ರೂಯಮಾಣಂ ದೇಹವಿಯೋಗಕಾಲ" ಇತಿ ಗಮ್ಯತೇ. ಅತಸ್ಸುಕೃತದುಷ್ಕೃತಯೋರೇಕದೇಶೋ ವಿಯೋಗಕಾಲೇ ಹೀಯತೇ. ಶೇಷಸ್ತ್ವಧ್ವನೀತಿ ಪ್ರಾಪ್ತಾವುಚ್ಯತೇ, ಸಾಂಪರಾಯೇ ದೇಹೋತ್ಕ್ರಮಣ ಕಾಲ ಏವ ವಿದುಷಃ ಸುಕೃತದುಷ್ಕೃತೇ ವಿರಜಾನದೀದೀಕ್ಷಯಾ ಹೀಯೇತೇ. "ಅನ್ನಮಯಪ್ರಾಣಮಯಮನೋಮಯವಿಜ್ಞಾನಮಯಾನಂದಮಯಾ ಮೇ ಶುದ್ಧ್ಯಂತಾಂ ವಿರಜಾ ವಿಪಾಪ್ಮಾ" ಇತಿ ಶ್ರುತೌ ಶೈವದೀಕ್ಷಾಂಗವಿರಜಾಮಾರ್ಗೇಣ ಭಕ್ತಾನಾಂ ಸರ್ವಪಾಪ ಕ್ಷಯೋ ನಿರ್ದಿಷ್ಟಃ. ಕುತಃ? ತರ್ತವ್ಯಾಭಾವಾತ್. ವಿದುಷೋ ದೇಹ ವಿಯೋಗಾತ್ ಪಶ್ಚಾತ್ಸುಕೃತದುಷ್ಕೃತಾಭ್ಯಾಂ ತರಿತವ್ಯಭೋಗಾಭಾವಾತ್ ವಿದ್ಯಾಫಲಭೂತಬ್ರಹ್ಮಪ್ರಾಪ್ತಿವ್ಯತಿರೇಕೇಣ ಹಿ ಸುಕೃತದುಷ್ಕೃತಾಭ್ಯಾಂ ಭೋಕ್ತವ್ಯೇ ಸುಖದುಃಖೇ ನ ವಿದ್ಯೇತೇ. ತಥಾಹ್ಯನ್ಯೇ ದೇಹ ವಿಯೋಗಾದೂರ್ಧ್ವಂ ಬ್ರಹ್ಮಪ್ರಾಪ್ತಿವ್ಯತಿರಿಕ್ತಸುಖದುಃಖಭೋಗೋಪ ಭೋಗಾಭಾವಂ ಅಧೀಯತೇ. "ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ" "ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ ಅಥ ಸಂಪತ್ಸ್ಯೇ" ಇತ್ಯಾದಿಶ್ರುತಿಷು ಜೀವಸ್ಯ ಲೋಕಾಂತರಪ್ರಾಪ್ತಿಂ

**ವಿನ್ಯೈವ ಸಾಕ್ಷಾದ್ಬ್ರಹ್ಮಪ್ರಾಪ್ತಿದರ್ಶನಾತ್ಸರ್ವಂ ಶಾಸ್ತ್ರಂ ಸಮಂಜಸಂ.**

ಕಡಮೆವೈರಾಗ್ಯವುಳ್ಳವರಿಗೂ ಎಲ್ಲಾ ವಿದ್ಯೆಗಳಲ್ಲೂ ಪರಶಿವನ ಉಪಾಸನದಿಂದ ಪುಣ್ಯಪಾಪಗಳು ತೊಲಗಿ ಆಯಾಲೋಕಗಳ ಅನುಭವವನ್ನು ಹೇಳಿಯಾಯಿತು. ಹಾಗಾದರೂ ಇದೆಲ್ಲವೂ ಶರೀರವಿರುವಾಗಲೇ ಆಗುತ್ತದೆಯೋ ಅಥವಾ ಶರೀರವನ್ನು ತೊರೆಯುವಾಗಲೋ ? ಎಂದಾಶಂಕಿಸಿ ಅದರ ಕಾಲನಿರ್ಣಯವನ್ನು ತಿಳಿಸುತ್ತಾನೆ. ದೇವಯಾನಮಾರ್ಗದಲ್ಲಿ ವಿರಜಾನದಿಯನ್ನು ಅತಿಕ್ರಮಿಸಿದಮೇಲೆ ಸಾಲೋಕ್ಯಮುಕ್ತಿಗೆ ಕಾರಣವಾದ ಶೈವದೀಕ್ಷೆಯ ಪ್ರಕಾರ ಶಿವನನ್ನು ಉಪಾಸನಮಾಡಿದವರಿಗೆ ಪುಣ್ಯಪಾಪಗಳು ನಾಶವಾಗುತ್ತವೆ, ಯಾಕೆಂದರೆ ಅವರಿಗೆ ಮುಂದೆದಾಟಲು ಬೇರೆ ನದಿಯೇ ಇರುವುದಿಲ್ಲ. ಹೀಗೆ ವಿರಜಾನದಿಯನ್ನು ದಾಟಿದಮೇಲೆ ಪುಣ್ಯಪಾಪಗಳ ನಾಶವನ್ನು ಶ್ರುತಿಯಲ್ಲಿ ಹೇಳಿರುವುದಕ್ಕೆ ಪ್ರಮಾಣವನ್ನು ತಿಳಿಸುತ್ತಾನೆ. ಉಳಿದಶಾಖೆಯವರು "ಅವನು ವಿರಜಾನದಿಯಲ್ಲಿ ಹೋಗುತ್ತಾನೆ. ಆ ನದಿಯನ್ನು ಮನಸ್ಸಿನಿಂದಲೇ ದಾಟಿ ಪುಣ್ಯಪಾಪಗಳನ್ನು ಒದರುತ್ತಾನೆ" ಎಂಬ ಶ್ರುತಿಯಂತೆ ವಿರಾಜಾನದಿಯನ್ನು ದಾಟಿದ ಮೇಲೆ ಪುಣ್ಯಪಾಪಗಳ ನಾಶವನ್ನು ತಿಳಿಸುತ್ತಾರೆ. ಆದರೂ ವಿರಾಜಾನದಿಯನ್ನು ದಾಟುವಾಗಲೇ ಶೈವದೀಕ್ಷೆಯಿಂದ ಹಿಂದೆಮಾಡಿದ್ದ ಪುಣ್ಯಪಾಪಕರ್ಮಗಳೆಲ್ಲವೂ ತೊಲಗುವುದರಿಂದ ದೀಕ್ಷೆಯ ಅನಂತರಮಾಡಿದ ಕರ್ಮಗಳೆಲ್ಲವೂ ಪ್ರಾಣಬಿಡುವಕಾಲದಲ್ಲಿ ನಷ್ಟವಾಗುತ್ತವೆ ಎಂಬುದು ಸೂತ್ರದ ಸೂಕ್ಷ್ಮಾರ್ಥ. ಸುಕೃತದುಷ್ಕೃತಗಳ ತ್ಯಾಗ ಸ್ವೀಕಾರಗಳನ್ನು ದಹರ ಶಾಂಡಿಲ್ಯ ಮೊದಲಾದ ಎಲ್ಲಾ ವಿದ್ಯೆಗಳಲ್ಲೂ ಸೇರಿಸಿಕೊಳ್ಳಬೇಕು. ಅವುಗಳನ್ನು ತೊರೆಯುವುದಾದರೂ ದೇಹವನ್ನು ಬಿಟ್ಟು ಈ ದೇಹದಿಂದ ಹೊರಟಮೇಲೆ ಮಾರ್ಗದಲ್ಲೋ ಅಥವಾ ದೇಹವನ್ನು ಬಿಡುವಕಾಲದಲ್ಲೋ ? ಎಂದು ಸಂಶಯ ಬಂದರೆ ಎರಡುವಿಧದಿಂದಲೂ ಅವನ್ನು ತೊರೆಯಬೇಕೆಂಬುದೇ ಯುಕ್ತವಾಗುತ್ತದೆ; ಹಾಗೆಯೇ ಶುತಿಯಲ್ಲೂ ತಿಳಿಸಲಾಗಿದೆ. ಹೀಗೆ ಕೌಷೀತಕಿಗಳು ಹೇಳುತ್ತಾರೆ. " ದೇವಯಾನಮಾರ್ಗದ ಮೂಲಕ ಅಗ್ನಿಲೋಕಕ್ಕೆಹೋಗುತ್ತಾನೆ" ಎಂದಾರಂಭಿಸಿ " ಅವನು ವಿರಜಾನದಿಗೆ ಹೋಗಿ ಅದನ್ನು ಮನಸ್ಸಿನಿಂದಲೇ ದಾಟುತ್ತಾನೆ" " ಹೀಗೆ ಸುಕೃತದುಷ್ಕೃತಗಳನ್ನು ತೊರೆಯುತ್ತಾನೆ" ಎಂಬ ವಾಕ್ಯದಲ್ಲಿ ಮಾರ್ಗದಲ್ಲಿ ಪುಣ್ಯಪಾಪಗಳನ್ನು ತೊರೆಯುವುದಾಗಿ ತಿಳಿದುಬರುತ್ತದೆ. ತಾಂಡಿಗಳಾದರೋ ದೇಹವಿಯೋಗಕಾಲದಲ್ಲಿಯೇ ಪುಣ್ಯಪಾಪಗಳ ನಾಶವನ್ನು ಹೇಳುತ್ತಾರೆ. ಶಾಠ್ಯಾಯನರು " ಅವನ ಮಕ್ಕಳು ಭಾಗವನ್ನು ಪಡೆಯುತ್ತಾರೆ. ಒಳ್ಳೆಯದನ್ನು ಮಿತ್ರರೂ ಕೆಟ್ಟದ್ದನ್ನು ಶತ್ರುಗಳೂ ಪಡೆಯುವರು" ಎಂದೂ, "ಮಕ್ಕಳಿಗೆ ಒಂದುಭಾಗ ಸೇರುವ ಕಾಲದಲ್ಲಿಯೇ ಜ್ಞಾನಿಯ ಪುಣ್ಯಪಾಪಗಳು ತೊಲಗುತ್ತವೆ" ಎಂದೂ ಹೇಳಿದ್ದರಿಂದ ದೇಹಬಿಡುವಕಾಲದಲ್ಲಿಯೇ ಪುಣ್ಯಪಾಪಗಳನಾಶವೆಂದು ತಿಳಿದುಬರುತ್ತದೆ. ಆದ್ದರಿಂದ ಪುಣ್ಯಪಾಪಗಳ ಒಂದುಭಾಗವು ದೇಹವಿಯೋಗಕಾಲದಲ್ಲಿ ತೊಲಗಿ ಉಳಿದಭಾಗವು ಮಾರ್ಗದಲ್ಲಿ ತೊಲಗುತ್ತದೆ ಎಂದು ಆಕ್ಷೇಪ ಬಂದರೆ ಸಮಾಧಾನವನ್ನು ತಿಳಿಸಲಾಗು

ವುದು. ದೇಹವನ್ನು ಬಿಡುವಾಗಲೇ ವಿದ್ವಾಂಸನಿಗೆ ಪುಣ್ಯಪಾಪಗಳು ವಿರಜಾದೀಕ್ಷೆ ಯಿಂದ ತೊಲಗುತ್ತವೆ. "ನನ್ನ ದೇಹ ಪ್ರಾಣ ಮನಸ್ಸು ಬುದ್ಧಿ ಆತ್ಮಗಳು ಶುದ್ಧವಾಗಲಿ. ನಾನು ಪಾಶರಹಿತನೂ ನಿರ್ಮಲನೂ ಆಗಿದ್ದೇನೆ" ಎಂಬ ಶ್ರುತಿಯಲ್ಲಿ ಶೈವದೀಕ್ಷೆಯ ಅಂಗವಾದ ವಿರಜಾದೀಕ್ಷೆಯಿಂದ ಭಕ್ತರಿಗೆ ಪಾಪಗಳೆಲ್ಲವೂ ತೊಲಗುತ್ತವೆ ಎಂದು ಹೇಳಲಾಗಿದೆ; ಯಾಕೆಂದರೆ ಅವನಿಗೆ ಮುಂದೆ ಹೊಂದಬೇಕಾದ ದೀಕ್ಷೆಯೂ ಇರುವುದಿಲ್ಲ. ವಿದ್ವಾಂಸರು ದೇಹವನ್ನು ಬಿಡಲಿಕ್ಕೆ ಮೊದಲುಮಾಡಿದ್ದ ಪುಣ್ಯಪಾಪಗಳಿಂದ ಅವರು ಹೊಂದಬೇಕಾಗಿದ್ದ ಭೋಗವೇ ಇಲ್ಲದ್ದರಿಂದ ವಿದ್ಯೆಯ ಫಲವೆನಿಸಿದ ಶಿವಸಾಯುಜ್ಯಕ್ಕಿಂತಲೂ ಬೇರೆಯಾಗಿ ಪುಣ್ಯಪಾಪಗಳಿಂದ ಹೊಂದಬೇಕಾದ ಸುಖದುಃಖಗಳೂ ಅವರಿಗೆ ಇರುವುದಿಲ್ಲ. ಆದರೂ ಕೆಲವರು ದೇಹವನ್ನು ತೊರೆದಮೇಲೆ ಶಿವಸಾಯುಜ್ಯಕ್ಕಿಂತ ಬೇರೆಯಾಗಿ ಸುಖದುಃಖಗಳ ಭೋಗವೇ ಇಲ್ಲವೆಂದು ಹೇಳುತ್ತಾರೆ. "ಶರೀರವಿಲ್ಲದಿದ್ದರೂ ಯಾವನು ಇರುವನೋ ಅವನಿಗೆ ಪ್ರಿಯಾಪ್ರಿಯಗಳು ಮುಟ್ಟುವುದಿಲ್ಲ" "ಅವನಿಗೆ ಅಷ್ಟೇ ವಿಳಂಬ; ಯಾವವೇಳೆಗೆ ದೇಹದ ಬಿಡುಗಡೆ ಆಗುವುದೋ ಆ ಕೂಡಲೇ ಅವನು ಶಿವನೊಳಗಾಗುವನು" ಈ ಬಗೆಯ ಶ್ರುತಿಗಳಲ್ಲಿ ಜೀವನಿಗೆ ಬೇರೆಲೋಕಗಳಿಗೆ ಹೋಗದೆಯೇ ಶಿವನಲ್ಲಿ ನೇರವಾಗಿ ಸೇರುವುದನ್ನು ಹೇಳಿರುವುದರಿಂದ ಶಾಸ್ತ್ರವೆಲ್ಲವೂ ಸಮಂಜಸವಾಗುತ್ತದೆ.

"ಅಶ್ವ ಇವ ರೋಮಾಣಿ ವಿಧೂಯ ಪಾಪಂ" ಇತಿ ಶ್ರುತೌ, "ವಿರಜಾ ವಿಪಾಪ್ಮಾ" ಇತಿ ಶ್ರುತೌ ಚ ಪಾಪಕ್ಷಯಸ್ಯೈವ ಉಪದೇಶಾತ್ ನತು ಪುಣ್ಯಸ್ಯೇತ್ಯಾಶಂಕಾಯಾಮಾಹ. ಛಂದತ ಉಭಯಾವಿರೋಧಾತ್ ‖ ೨೮ ‖ ಛಂದತ ಇಚ್ಛಾತಃ ವಿಪಕ್ಷಬಲಾದಿತ್ಯರ್ಥಃ. ಅಜಹಲ್ಲಕ್ಷಣಯಾ ಪಾಪಶಬ್ದೇನ ಪುಣ್ಯಮಪಿ ಪ್ರತಿಪಾದ್ಯತೇ. ಕುತಃ? ಉಭಯಾವಿರೋಧಾತ್. "ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ । ತದಾ ವಿದ್ವಾನ್ಪುಣ್ಯಪಾಪೇ ವಿಧೂಯ ನಿರಂಜನಂ ಪರಮಂ ಸಾಮ್ಯಮುಪೈತಿ" ಇತ್ಯಾದಿಪುಣ್ಯಪಾಪೋಭಯವಿನಾಶವಿಧಾಯಕಶ್ರುತ್ಯಂತರದರ್ಶನಾತ್. ಕಿಂಚ ವಿರಜಾನದೀತಾರಣತ್ವೇನ ಶಿವಲೋಕಪ್ರಾಪ್ತಿವಿಧಾಯಕಶ್ರುತಿಸ್ಮೃತಿಪುರಾಣಾನಾಂ ಇಹೈವ ದೇಹಾವಸಾನೇ ಪರಂಜ್ಯೋತಿರ್ಮಯಪರಶಿವಲಿಂಗಪ್ರಾಪ್ತಿಪ್ರಾತಿಪಾದಕನಾಂ ಚ ಪರಸ್ಪರವಿರೋಧೋ ದೃಶ್ಯತ ಇತಿ ಚೇದ್ವಿರಕ್ತಾವಿರಕ್ತಪರಮೇಶ್ವರೈಕನಿಷ್ಠಫಲವಿಧಾಯಕಮಿತಿ ವೇದಿತವ್ಯಂ. ಛಂದಸೋ ಯಥೇಷ್ಟಂ ಪದಾನಾಮನ್ವಯೋ ವರ್ಣನೀಯ ಇತಿ ನ್ಯಾಯಾತ್ ಶ್ರುತೇರರ್ಥಸ್ಯ ಸಮನ್ವಯದೃಷ್ಟ್ಯಾ ವಿಚಾರೋ ಯುಕ್ತಃ. ಶರೀರತ್ಯಾಗಕಾಲೇ ಪುಣ್ಯಾಪುಣ್ಯಮೋಚನಶ್ರುತೇಃ ತದೂರ್ಧ್ವಂ ಪರಶಿವಬ್ರಹ್ಮಲೋಕಪ್ರಾಪ್ತಿಶ್ರುತೇರುಭಯಶ್ರುತ್ಯವಿರೋಧಾಯ

**ಕೌಷೀತಕವಾಕ್ಯೇ "ತತ್ಸುಕೃತದುಷ್ಕೃತೇ ವಿಧೂನುತ" ಇತಿ ಶ್ರುತಿಖಂಡಃ ಛಂದತೋ ನೇತವ್ಯಃ. "ತದ್ದೇವಯಾನಂ ಪಂಥಾನಮಾಪದ್ಯ" ಇತಿ ವಾಕ್ಯಖಂಡಾತ್ ಪ್ರಾಗುಪನೇತವ್ಯ ಇತಿ ಸಿದ್ಧಂ.**

"ಕುದುರೆ ಮೈನಿಂದ ಕೂದಲನ್ನು ಒದರುವಂತೆ ಜ್ಞಾನಿಯು ಪಾಪವನ್ನು ಒದರುತ್ತಾನೆ" ಎಂಬ ಶ್ರುತಿಯಲ್ಲೂ, "ನನ್ನ ದೇಹ ಮನ ಪ್ರಾಣ ಬುದ್ಧಿ ಆತ್ಮಗಳು ಶುದ್ಧವಾಗಿ ನಾನು ನಿರ್ಮಲನಾದೆನು" ಎಂಬ ಶ್ರುತಿಯಲ್ಲೂ ಪಾಪಕ್ಷಯ ಒಂದನ್ನು ಮಾತ್ರವೇ ಹೇಳಿದೆ; ಆದರೆ ಪುಣ್ಯದ ಕ್ಷಯವನ್ನು ಹೇಳಿಲ್ಲವೆಂದಾಕ್ಷೇಪಿಸಿ ಸಮಾಧಾನವನ್ನು ತಿಳಿಸುತ್ತಾನೆ. ಈ ಶ್ರುತಿಯಲ್ಲಿ ಪಾಪವೆಂಬ ಪದವನ್ನು ಹೇಳಿದ್ದರೂ, ಬೇರೆಕಡೆ "ಪುಣ್ಯ ಪಾಪಗಳೆರಡನ್ನೂ ತೊರೆದು ಸಾಕ್ಷಾತ್ಕಾರಿಯು ಪರಂಜ್ಯೋತಿಯಲ್ಲಿ ಸಮರಸವಾಗಿ ಬೆರೆಯುತ್ತಾನೆ" ಎಂದು ಪುಣ್ಯ ಪಾಪಗಳೆರಡರ ವಿನಾಶವನ್ನು ಹೇಳಿರುವುದರಿಂದ ಅಜಹಲಕ್ಷಣೆಯಿಂದ ಪಾಪಶಬ್ದದಿಂದ ಪುಣ್ಯವನ್ನೂ ಗ್ರಹಿಸಬೇಕಾಗುತ್ತದೆ. ವಿರಜಾನದಿಯನ್ನು ದಾಟಿದಮೇಲೆ ಸಾಲೋಕ್ಯವನ್ನು ವಿಧಿಸುವ ಶ್ರುತಿಸ್ಮೃತಿ ಪುರಾಣಗಳಿಗೂ ಇಲ್ಲಿಯೇ ಮುಕ್ತನು ದೇಹವನ್ನು ತೊರೆಯುವಾಗ ಪರಂಜ್ಯೋತಿ ಎಂಬ ಪರಶಿವಲಿಂಗದಲ್ಲಿ ಬೆರೆಯುವನೆಂದು ತಿಳಿಸುವ ವಾಕ್ಯಗಳಿಗೂ ಪರಸ್ಪರ ವಿರೋಧವಿದೆ ಎಂದು ಹೇಳಿದರೆ ಪೂರ್ಣವಿರಕ್ತರು ಶರೀರಾನಂತರದಲ್ಲಿ ಅನುಭವಿಸುವ ಫಲವನ್ನು ಮೊದಲನೆಯ ಶ್ರುತಿಯೂ, ವಿರಕ್ತರಲ್ಲದವರು ಈ ಶರೀರದಲ್ಲಿಯೇ ಅನುಭವಿಸುವ ಫಲವನ್ನು ಎರಡನೆಯ ಶ್ರುತಿಯೂ ತಿಳಿಸುವುದರಿಂದ ಇಲ್ಲಿ ವಿರೋಧಕ್ಕವಕಾಶವಿಲ್ಲವೆಂದು ಹೇಳಬೇಕು. "ವೇದದಲ್ಲಿ ಸಂದರ್ಭಕ್ಕೆ ತಕ್ಕಂತೆ ಪದಗಳ ಅನ್ವಯವನ್ನು ಹೇಳಬೇಕು" ಎಂಬ ನ್ಯಾಯವಿರುವುದರಿಂದ ಶ್ರುತಿಯ ಅರ್ಥವನ್ನು ವಿಚಾರ ಮಾಡಿ ಅನ್ವಯಿಸುವುದೇ ಯುಕ್ತವಾಗುತ್ತದೆ. ಶರೀರವನ್ನು ಬಿಡುವ ಕಾಲದಲ್ಲಿ ಪುಣ್ಯ ಪಾಪಗಳು ತೊಲಗುತ್ತವೆ ಎಂದು ತಿಳಿಸುವ ಶ್ರುತಿಗೂ ಅದಕ್ಕೆ ಮೊದಲೇ ಮುಕ್ತನು ಪರಶಿವಲೋಕವನ್ನು ಹೊಂದುವನೆಂದು ತಿಳಿಸುವ ಶ್ರುತಿಗೂ ಪರಸ್ಪರ ವಿರೋಧಪರಿಹಾರಕ್ಕಾಗಿ ಕೌಷೀತಕವಾಕ್ಯದಲ್ಲಿ "ಪುಣ್ಯಪಾಪಗಳನ್ನು ತೊರೆಯುತ್ತಾನೆ" ಎಂಬ ಭಾಗವನ್ನು "ದೇವಯಾನಮಾರ್ಗದ ಮೂಲಕ" ಎಂಬ ವಾಕ್ಯಭಾಗಕ್ಕಿಂತ ಮೊದಲು ಸೇರಿಸಬೇಕೆಂದು ಸಿದ್ಧವಾಯಿತು.

**ನನು ಇಹೈವ ಪರಂಜ್ಯೋತಿರ್ಮಯಲಿಂಗವಿಲೀನಾನಾಂ ಪುಣ್ಯಪಾಪಕ್ಷಯವಿಧಿರ್ಯುಕ್ತಾ. ತದ್ಭಿನ್ನಾನಾಂ ಮಂದವಿರಾಗಿಣಾಂ ದೇಹಾವಸಾನವಿರಜಾನದೀತರಣಾನಂತರಮೇವ ಪುಣ್ಯಪಾಪಕ್ಷಯಾಂಗೀಕಾರೇ ಹೇತೋರಭಾವಾತ್ ಪರಶಿವಲೋಕಸಕಲೈಶ್ವರ್ಯಭೋಗಾನುಭವವಿರೋಧೋ ದುರ್ನಿವಾರ ಇತ್ಯಾಶಂಕಾಯಾಮಾಹ. ಗತೇರರ್ಥವತ್ತ್ವಮುಭಯಥಾನ್ಯಥಾ ಹಿ ವಿರೋಧಃ ॥೨೯॥ ಉಭಯಥಾ ಉಭಯೋಃ ಪುಣ್ಯಪಾಪಯೋಃ ವಿನಾಶಾಂಗೀಕಾರೇ ಸತಿ ಗತೇರರ್ಚಿರಾದಿಮಾರ್ಗೇಣ**

ಬ್ರಹ್ಮಲೋಕಗಮನಸ್ಯಾರ್ಥವತ್ತ್ವಂ ಸಫಲತ್ವಂ ಭವತಿ. ಅನ್ಯಥಾ ಪುಣ್ಯಕರ್ಮಕ್ಷಯಾನಂಗೀಕಾರೇ ಪರಶಿವಬ್ರಹ್ಮಲೋಕೇ ಕಂಚಿತ್ಕಾಲಂ ಉಪಾಸನಫಲಭೋಗಾನಂತರಂ ಪುಣ್ಯಫಲಭೋಗಾರ್ಥಂ ಸ್ವರ್ಗಲೋಕಂ ಪ್ರತಿ ಪುನರಾವೃತ್ತೇರವಶ್ಯಮಂಗೀಕರ್ತವ್ಯತ್ವಾತ್ ವಿರೋಧಃ ಸ್ಯಾತ್. " ನ ಸ ಪುನರಾವರ್ತತೇ " ಇತಿ ಶ್ರುತಿವಿರೋಧಶ್ಚ ಸ್ಯಾತ್. ಏತೇನ ಪ್ರತಿಪಾದ್ಯಮಾನಾಯಾಃ " ಇಮಂ ಮಾನವಮಾವರ್ತಂ ನಾವರ್ತಂತ " ಇತಿ ಶ್ರುತೇರಪ್ರಾಮಾಣ್ಯಂ ಸ್ಯಾತ್. ಕಿಂಚ ಶ್ರುತಿಸ್ಮೃತ್ಯಾಗಮೇಷು ನಿತ್ಯನೈಮಿತ್ತಿಕಕಾಮ್ಯಕರ್ಮಣಾಮೇವ ಕರ್ಮೇತಿವ್ಯವಹಾರವ್ಯವಸ್ಥಾಪನಾತ್ ಬಹುಜನ್ಮಕೃತನಿಷ್ಕಾಮಕೃತಶಿವಾರ್ಪಿತನಿತ್ಯನೈಮಿತ್ತಿಕಾದಿಕರ್ಮದ್ವಾರಾ ತತ್ಪ್ರಸಾದೋದ್ಭೂತಭಕ್ತೇಃ ಕರಣತ್ವವ್ಯವಹಾರಾಯೋಗಾತ್. ತದ್ಭಕ್ತ್ಯಾ ತಲ್ಲೋಕೇ ಸರ್ವೈಶ್ವರ್ಯಸಂಪನ್ನನಿರತಿಶಯಾನಂದಕಂದಕಲ್ಯಾಣವಿಭೂತಿರ್ನಿರುದ್ಧಾ ಸ್ಯಾತ್. ತಥಾ ಶಿವಗೀತಾಸು ಚ ಸ್ಪಷ್ಟಮುಪದಿಷ್ಟಂ. " ಕೋಟಿಜನ್ಮಾರ್ಜಿತೈಃ ಪುಣ್ಯೈಃ ಶಿವೇ ಭಕ್ತಿಃ ಪ್ರಜಾಯತೇ " " ಇಷ್ಟಾಪೂರ್ತಾದಿಕರ್ಮಾಣಿ ಯೇನಾಚರತಿ ಮಾನವಃ। ಶಿವಾರ್ಪಣಧಿಯಾ ಕಾಮಾನ್ ಪರಿತ್ಯಜ್ಯ ಯಥಾವಿಧಿ ॥ " ಇತ್ಯಾದಿನಾ ಭಕ್ತಿಮಹಿಮಾಪ್ರಪಂಚಂ ಪ್ರಸಾಧ್ಯ ತತ್ರೈವ " ಧರ್ಮಾರ್ಥಕಾಮಮೋಕ್ಷಾಣಾಂ ಪಾರಂ ಯಾಸ್ಯಥ ಯೇನ ವೈ। ಮುನಯಸ್ತತ್ಪ್ರವಕ್ಷ್ಯಾಮಿ ವ್ರತಂ ಪಾಶುಪತಾಭಿಧಂ । ಕೃತ್ವಾ ತು ವಿರಜಾದೀಕ್ಷಾಂ ಭೂತಿರುದ್ರಾಕ್ಷಧಾರಿಣಃ। ಜಪಂತೋ ವೇದಸಾರಾಖ್ಯಂ ಶಿವನಾಮಸಹಸ್ರಕಂ। ಸಂತ್ಯಜ್ಯ ತೇನ ಮರ್ತ್ಯತ್ವಂ ಶೈವಂ ತನುಮವಾಪ್ಸ್ಯಥ । ತತಃ ಪ್ರಸನ್ನೋ ಭಗವಾನ್ ಶಂಕರೋ ಲೋಕಶಂಕರಃ। ಭವತಾಂ ದೃಶ್ಯತಾಮೇತ್ಯ ಕೈವಲ್ಯಂ ವಃ ಪ್ರದಾಸ್ಯತಿ ॥ ರಾಮಾಯ ದಂಡಕಾರಣ್ಯೇ ಯತ್ಪ್ರಾಹ ಕುಂಭಸಂಭವಃ।ತತ್ಸರ್ವಂ ವಃ ಪ್ರವಕ್ಷ್ಯಾಮಿ ಶ್ರೃಣುಧ್ವಂ ಭಕ್ತಿಯೋಗಿನಃ ॥ ಅತಸ್ತ್ವಾಂ ದೀಕ್ಷಯಿಷ್ಯಾಮಿ ವಿರಜಾಮಾರ್ಗಮಾಶ್ರಿತಃ। ತೇನ ಮಾರ್ಗೇಣ ಮರ್ತ್ಯತ್ವಂ ಹಿತ್ವಾ ತೇಜೋಮಯೋ ಭವೇತ್॥ಇದಂ ವ್ರತಂ ಪಾಶುಪತಂ ಕರಿಷ್ಯಾಮಿ ಸಮಾಸತಃ। ಅಥ ರಾಮಗಿರೌ ರಾಮಃ ಪುಣ್ಯೇ ಗೋದಾವರೀತಟೇ । ಶಿವಲಿಂಗಂ ಪ್ರತಿಷ್ಠಾಪ್ಯ ಕೃತ್ವಾ ದೀಕ್ಷಾಂ ಯಥಾವಿಧಿ। ಭೂತಿಭೂಷಿತಸರ್ವಾಂಗೋ ರುದ್ರಾಕ್ಷಾಭರಣೈರ್ಯುತಃ ॥ " ಇತ್ಯಾದಿನಾ ಕುಂಭಸಂಭವೇನ ಶ್ರೀರಾಮಸ್ಯ ವಿರಜಾಪರಪರ್ಯಾಯವಾಚಕಶಿವದೀಕ್ಷಾವಿಧ್ಯುಪದೇಶಾತ್. ನನು ದೇಹತ್ಯಾಗವತಾಂ ಭಕ್ತಾನಾಂ ವಿರಜಾನದೀತರಣಕಾಲೇ ಕರ್ಮಕ್ಷಯೋ ಸತ್ಯೇವ ದೇವಯಾನಗತೇಃ ಪ್ರಯೋಜಕತ್ವಂ ಅನ್ಯಥಾ

ದೇಹವಿಯೋಗಕಾಲ ಏವ ಸರ್ವಕರ್ಮಕ್ಷಯೇ ತದನಂತರಮೇವಾಸೌ ಮುಕ್ತ ಇತಿ ಚೇನ್ನ ದೇವಯಾನಗತೇಃ ನಿಷ್ಪ್ರಯೋಜನತ್ವಾತ್. "ಪರಂ ಜ್ಯೋತಿರೂಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" ಇತಿ ದೇವಯಾನೇನ ಬ್ರಹ್ಮಪ್ರಾಪ್ತ್ಯನಂತರಮೇವ ತದಾಕಾರಿತತ್ವಶ್ರವಣಸ್ಯ ವಿರೋಧಃ ಸ್ಯಾತ್. ಏವಂಚ ಯದ್ಯಪಿ ವಿದ್ಯಾಸಾಮರ್ಥ್ಯಾದೇವ ದೇವಯಾನಗತಿತತ್ತದ್ದೇಶವಿಹಾರಚಂದ್ರಸಂವಾದಾದಿಕಂ ಅಗ್ರಿಮವಿಹಾರಾತ್ ಏವಮುಪಪದ್ಯತೇ. ತಥಾಪಿ ಯಾವದ್ಬ್ರಹ್ಮಪ್ರಾಪ್ತಿ ಧೀಸಂಕೋಚರೂಪಸಂಸಾರಾನುವೃತ್ತಿಃ ವಿದ್ಯಾಸಾಮರ್ಥ್ಯಾದುಪಪದ್ಯತ ಇತಿ ತನ್ಮೂಲಭೂತಕರ್ಮಲೇಶಾನುವೃತ್ತಿರವಶ್ಯಮೇಷ್ಟವ್ಯಾ. ನಚ ಪರಮೇಶ್ವರಸಂಕಲ್ಪವಿಶೇಷಾದೇವ ತದನುವೃತ್ತಿಃ ಸ್ಯಾದಿತಿ ವಾಚ್ಯಂ. ತಸ್ಯೈವಾಸ್ಮಾಭಿಃ ಕರ್ಮಮೂಲತಯೋಚ್ಯಮಾನತ್ವಾತ್. ನಹ್ಯಸ್ಮಿನ್ಮತೇ ವಿಹಿತನಿಷಿದ್ಧಾಚರಣಪ್ರಯುಕ್ತಃ ಪರಮೇಶ್ವರಸಂಕಲ್ಪಃ ಕಶ್ಚಿದಸ್ತಿ. ತತ್ಸಂಕಲ್ಪಮನಪೇಕ್ಷ್ಯೈವ ಪುಣ್ಯಪಾಪೇ ಸ್ತಃ. ನನು ಬ್ರಹ್ಮಪ್ರಾಪ್ತ್ಯನಂತರಂ ವಿಕಾಸಾದಿವೃತ್ತಿರಹಿತತತ್ಸ್ವರೂಪಪ್ರಾಪ್ತಿಃ ಶಿವಲೋಕಗಮನೇಚ್ಛಾ ಪುರುಷಾಣಾಂ ಧೀವಿಕಾಸಾದಿದಿವ್ಯಮಂಗಳವಿಗ್ರಹಾವಿರ್ಭಾವಶ್ಚ ಯುಕ್ತ ಇತಿ ಚೇತ್ತಾವತ್ಪರ್ಯಂತಂ ತದ್ಧೀಸಂಕೋಚಹೇತುಕರ್ಮವೃತ್ತ್ಯಾಭಾವ್ಯಂ. ತಥಾ ವಿರಜಾನದೀತರಣಾನಂತರಮೇವ ಕರ್ಮಕ್ಷಯ ಉಚ್ಯತೇ. ಪ್ರಾಕೃತಪ್ರಪಂಚಸೀಮಾವಧ್ಯತಿಕ್ರಮಣಮೇವ ಪರಮಾಕಾಶರೂಪಪರಮಶಿವಪದಪ್ರಾಪ್ತಿರಿತಿ. ಸೈವ ಪರಜ್ಯೋತಿರೂಪಸಂಪದ್ಯೇತ್ಯನೇನ ಬ್ರಹ್ಮಪ್ರಾಪ್ತಿರ್ವಿವಕ್ಷಿತಾ. ವಿಷ್ಣುಪದಸಂಬಂಧೀ ನ ವಿರಜಾನದೀ. ಪ್ರಾಕೃತಪ್ರಪಂಚಸೀಮಾವಧಿಸ್ತದನುಪ್ರವೇಶಃ. ಪ್ರಕ್ಷೀಣಸರ್ವಕರ್ಮಲೇಶಯೋಗಿನೋ ವಿಷ್ಣುಪದಾದೂರ್ಧ್ವಮಪ್ರಾಕೃತಂ ಶಿವಪದಂ ಪರಮಾನಂದಮಯಂ ಅನುಪ್ರವಿಶಂತಿ. ತಥಾಹಿ ಶ್ರುತಿಃ "ಸೋಽಧ್ವನಃ ಪರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ" ಇತಿ. ಸ್ಮೃತಿಶ್ಚ "ಪರಾತ್ಪರಂ ಬ್ರಹ್ಮಾ ತತ್ಪರಾತ್ಪರತೋ ಹರಿಃ । ತತ್ಪರಾತ್ಪರತೋಽಧೀಶಃ ಇತಿ ವೇದಾಂತಚೋದನಾತ್ । ಯಶ್ಶಿವಂ ಪರಮಾತ್ಮಾನಂ ಉಮಾಪತಿಮಹರ್ನಿಶಂ । ಧ್ಯಾಯತೇ ವಿಶ್ವಕರ್ತಾರಂ ಪುಣ್ಯಾಪುಣ್ಯನಿರಾಕೃತಾತ್ । ವಿರಜಾಖ್ಯಾಂ ನದೀಂ ತೀರ್ತ್ವಾ ವಿಷ್ಣುಲೋಕಾತ್ಪರಂ ಪದಂ । ನಿತ್ಯೈಶ್ವರ್ಯಸಮಾಯುಕ್ತಂ ಮನೋವಾಚಾಮಗೋಚರಂ । ಸ ತು ಕೈಲಾಸಮಾಪ್ನೋತಿ ಶಿವಾನುಗ್ರಹವೈಭವಾತ್ ॥" ಇತಿ ದರ್ಶನಾತ್ ಶಿವೈಕನಿಷ್ಠಾನಾಂ ಪುಣ್ಯಾಪುಣ್ಯನಿರಾಕರಣಪೂರ್ವಕಶಿವಲೋಕಪ್ರಾಪ್ತಿಃ ಶಿವತತ್ತ್ವಪ್ರಾಪ್ತಿಶ್ಚ ವಜ್ರಲೇಪಾಯತೇ.

ಇಲ್ಲಿಯೇ ಪರಂಜ್ಯೋತಿರೂಪವಾದ ಲಿಂಗದಲ್ಲಿ ಐಕ್ಯರಾದವರಿಗೆ ಪುಣ್ಯ ಪಾಪಗಳ ನಾಶವನ್ನು ವಿಧಿಸಿದ್ದು ಯುಕ್ತವೇ ಆಗಿವೆ. ಆದರೆ ಇವರಿಗಿಂತ ವೈರಾಗ್ಯ ಕಡಮೆಯಾಗಿರುವವರಿಗೆ ದೇಹವನ್ನು ತೊರೆದು ವಿರಜಾನದಿಯನ್ನು ದಾಟಿದ ಮೇಲೆಯೇ ಪುಣ್ಯ ಪಾಪಗಳು ನಾಶವಾಗುತ್ತವೆ ಎಂದು ಒಪ್ಪಲಿಕ್ಕೆ ಕಾರಣವಿಲ್ಲದ್ದರಿಂದ ಅವರು ಶಿವಲೋಕದಲ್ಲಿ ಸಕಲೈಶ್ವರ್ಯಭೋಗಗಳನ್ನು ಅನುಭವಿಸುವರೆಂಬುದು ವಿರುದ್ಧವಾಗುತ್ತದೆ ಎಂದಾಶಂಕಿಸಿ ಸಮಾಧಾನ ಮಾಡುತ್ತಾನೆ. ಪುಣ್ಯ ಪಾಪಗಳೆರಡೂ ನಷ್ಟವಾದವೆಂದು ಅಂಗೀಕರಿಸಿದರೆ ಮಾತ್ರವೇ ಅರ್ಚಿರಾದಿಮಾರ್ಗದಿಂದ ಬ್ರಹ್ಮಲೋಕಕ್ಕೆ ಹೋಗಬೇಕೆಂಬ ಮಾತು ಸಾರ್ಥಕವಾಗುತ್ತದೆ. ಹಾಗೆ ಪುಣ್ಯ ಪಾಪಗಳ ನಾಶವನ್ನು ಅಂಗೀಕರಿಸದಿದ್ದರೆ ಶಿವಲೋಕದಲ್ಲಿ ಕೆಲವುಕಾಲ ಉಪಾಸನದ ಫಲವನ್ನು ಅನುಭವಿಸಿದಮೇಲೆ ಪುಣ್ಯದ ಫಲವನ್ನು ಅನುಭವಿಸಲಿಕ್ಕಾಗಿ ಮತ್ತೆ ಸ್ವರ್ಗಕ್ಕೆ ಹೋಗಬೇಕೆಂದು ಅಂಗೀಕರಿಸಲೇಬೇಕಾಗುವುದರಿಂದ "ಅವನು ಮತ್ತೆ ಹಿಂತಿರುಗುವುದಿಲ್ಲ" ಎಂಬ ಶ್ರುತಿಗೆ ವಿರೋಧವುಂಟಾಗುವುದು. ಇದರಿಂದ "ಮತ್ತೆ ಈ ಮಾನವ ಜನ್ಮಕ್ಕೆ ಬರುವುದಿಲ್ಲ" ಎಂಬ ಶ್ರುತಿಯು ಪ್ರಮಾಣವಾಗದೇಹೋದೀತು. ಇದೂ ಅಲ್ಲದೆ, ಶ್ರುತಿಸ್ಮೃತ್ಯಾಗಮಗಳಲ್ಲಿ ನಿತ್ಯನೈಮಿತ್ತಿಕಕಾಮ್ಯಕರ್ಮಗಳಿಗೆ ಮಾತ್ರವೇ ಕರ್ಮವೆಂದು ವ್ಯವಹರಿಸಲಾಗಿದೆ. ಹಿಂದೆ ಅನೇಕ ಜನ್ಮಗಳಲ್ಲಿ ಫಲಾಪೇಕ್ಷೆಯಿಲ್ಲದೆ ದುಡಿದು ಶಿವನಿಗೆ ಅರ್ಪಿಸಿದ್ದ ನಿತ್ಯನೈಮಿತ್ತಿಕಾದಿ ಕರ್ಮಗಳ ಮೂಲಕ ಶಿವನ ಪ್ರಸಾದರೂಪವಾಗಿ ದೊರಕಿದ ಭಕ್ತಿಯೇ ಮುಕ್ತಿಗೆ ಕಾರಣವೆಂಬುದು ತಪ್ಪಿಹೋಗಬೇಕಾದೀತು. ಆ ಭಕ್ತಿಯಿಂದಲೇ ಶಿವಲೋಕವಲ್ಲಿ ಸಕಲೈಶ್ವರ್ಯದಿಂದ ಕೂಡಿ ನಿರತಿಶಯಾನಂದವೆನಿಸಿದ ಕಲ್ಯಾಣವಿಭೂತಿ ದೊರಕುವುದೆಂಬುದಕ್ಕೆ ವಿರೋಧವುಂಟಾದೀತು? ಈ ಅಂಶವನ್ನು ಶಿವಗೀತೆಯು ಸ್ಪಷ್ಟವಾಗಿ ತಿಳಿಸಿದೆ. "ಕೋಟಿಜನ್ಮಗಳಲ್ಲಿ ಗಳಿಸಿದ ಪುಣ್ಯದಿಂದ ಶಿವನ ಬಗ್ಗೆ ಭಕ್ತಿ ಹುಟ್ಟುತ್ತದೆ", "ಮಾನವನು ಭಕ್ತಿಯ ಪ್ರಭಾವದಿಂದಲೇ ಲೋಕಕಲ್ಯಾಣಕಾರ್ಯಗಳನ್ನೂ, ಯಜ್ಞಯಾಗಗಳನ್ನೂ ಫಲಾಪೇಕ್ಷೆಯಿಲ್ಲದೆ ಶಿವಾರ್ಪಣಬುದ್ಧಿಯಿಂದ ಶಾಸ್ತ್ರೋಕ್ತವಾಗಿ ನಡೆಸಬೇಕು" ಎಂಬಲ್ಲಿ ಭಕ್ತಿಯ ಮಹಿಮೆಯನ್ನು ವಿಸ್ತರಿಸಿ ಅಲ್ಲಿಯೇ "ಋಷಿಗಳಿಗೆ ಧರ್ಮ ಅರ್ಥ ಕಾಮ ಮೋಕ್ಷಗಳನ್ನು ದೊರಕಿಸಿದಂತಹ ಪಾಶುಪತವ್ರತವನ್ನು ಹೇಳುತ್ತೇನೆ. ವಿಭೂತಿ ರುದ್ರಾಕ್ಷಗಳನ್ನು ಧರಿಸಿ ವಿರಜಾದೀಕ್ಷೆಯನ್ನು ಹೊಂದಿ ವೇದಸಾರವೆನಿಸಿದ ಶಿವಸಹಸ್ರನಾಮಗಳನ್ನು ಜಪಿಸುತ್ತ ನೀವು ಈ ಪ್ರಾಕೃತದೇಹವನ್ನು ತೊರೆದು ದಿವ್ಯಶರೀರವನ್ನು ಪಡೆಯಿರಿ. ಆಗ ಶಂಕರನು ಪ್ರಸನ್ನನಾಗಿ ನಿಮಗೆ ದರ್ಶನಕೊಟ್ಟು ಕೈವಲ್ಯವನ್ನು ಅನುಗ್ರಹಿಸುತ್ತಾನೆ. ಎಲೈ ಯೋಗಿಗಳೇ, ರಾಮನಿಗೆ ದಂಡಕಾರಣ್ಯದಲ್ಲಿ ಅಗಸ್ತ್ಯನು ಹೇಳಿದ್ದನ್ನೇ ಈಗ ನಿಮಗೆ ಹೇಳುತ್ತೇನೆ, ಕೇಳಿರಿ. ನಿಮಗೆ ವಿರಜಾದೀಕ್ಷೆಯನ್ನು ಅನುಗ್ರಹಿಸುವೆನು. ಆ ಮಾರ್ಗದಿಂದ ನಿಮ್ಮ ದೇಹವು ಪ್ರಕೃತಿಸಂಬಂಧವನ್ನು ತೊರೆದು ತೇಜೋಮಯವಾಗುವುದು. ಇದು

ಸಂಕ್ಷೇಪವಾಗಿ ಪಾಶುಪತ ವ್ರತವೆನಿಸಿದೆ. ಇದನ್ನು ಕೇಳಿ ರಾಮನು ರಾಮಗಿರಿಯಲ್ಲಿ ಗೋದಾವರೀತೀರದಲ್ಲಿ ಶಿವಲಿಂಗವನ್ನು ಸ್ಥಾಪಿಸಿ ಶಾಸ್ತ್ರೋಕ್ತವಾಗಿ ದೀಕ್ಷೆಯನ್ನು ಮಾಡಿ ತಾನೂ ಎಲ್ಲಾ ಅಂಗಗಳನ್ನೂ ಭಸ್ಮರುದ್ರಾಕ್ಷಗಳಿಂದ ಅಲಂಕರಿಸಿಕೊಂಡನು" ಎಂದು ತಿಳಿಸಿ ಅಗಸ್ತ್ಯನು ಶ್ರೀರಾಮನಿಗೆ ವಿರಜೆ ಎಂಬ ಶಿವದೀಕ್ಷೆಯನ್ನು ಉಪದೇಶಿಸಿದನು. ಹೀಗೆ ದೇಹವನ್ನು ತೊರೆದ ಭಕ್ತರಿಗೆ ವಿರಜಾನದಿಯನ್ನು ದಾಟುವ ಕಾಲದಲ್ಲಿ ಕರ್ಮವೆಲ್ಲವೂ ನಷ್ಟವಾಗಿದ್ದರೆ ಮಾತ್ರವೇ ದೇವಯಾನಮಾರ್ಗವನ್ನು ಹೇಳಿದ್ದು ಸಫಲವಾದೀತು. ಇಲ್ಲವಾದರೆ ದೇಹವನ್ನು ಬಿಡುವಕಾಲದಲ್ಲಿಯೇ ಎಲ್ಲಾ ಕರ್ಮಗಳೂ ಕಳೆದಿದ್ದರೆ ಆಗಲೇ ಅವನು ಮುಕ್ತನಾಗಬೇಕಾದೀತು ಎಂದು ಕೇಳುವುದು ಯುಕ್ತವಲ್ಲ; ಯಾಕೆಂದರೆ ಇದರಿಂದ ದೇವಯಾನವನ್ನು ಹೇಳಿದ್ದೇ ನಿಷ್ಪ್ರಯೋಜನವಾಗಬೇಕಾದೀತು. ಮುಕ್ತನು ಪರಂಜ್ಯೋತಿಯಲ್ಲಿ ಸೇರಿ ತನ್ನ ವಾಸ್ತವ ಸ್ಥಿತಿಯನ್ನು ಪಡೆಯುವುದೇ ದೇವಯಾನಗತಿಗೆ ಫಲವೆನಿಸಿದೆಯಾದ್ದರಿಂದ ದೇವಯಾನದಿಂದ ಬ್ರಹ್ಮವನ್ನು ಸೇರಿದಮೇಲೆಯೇ ಮುಕ್ತನು ಆ ಆಕಾರವನ್ನು ಹೊಂದುವನೆಂದು ಹೇಳಿದ್ದಕ್ಕೆ ವಿರೋಧವುಂಟಾದೀತು. ಉಪಾಸನೆಯ ಪ್ರಭಾವದಿಂದಲೇ ದೇವಯಾನ, ಕೈಲಾಸದಲ್ಲಿ ವಿಹಾರ, ಚಂದ್ರನೊಡನೆ ಸಂವಾದ ಮೊದಲಾದವು ಹೊಂದಿಕೆಯಾಗುತ್ತವೆ. ಆದರೂ ಬ್ರಹ್ಮವನ್ನು ಸೇರುವವರೆಗೂ ಶಕ್ತಿಸಂಕೋಚರೂಪವಾದ ಸಂಸಾರವು ಇದ್ದೇಇರುವುದೆಂಬುದು ಉಪಾಸನಸಾಮರ್ಥ್ಯದಿಂದ ಹೋದರೆ ಹೋದೀತು. ಇದರಿಂದ ಆ ಶಕ್ತಿಸಂಕೋಚಕ್ಕೆ ಆಶ್ರಯವಾದ ಕರ್ಮಸಂಬಂಧವನ್ನು ಅವಶ್ಯವಾಗಿ ಒಪ್ಪಲೇಬೇಕಾಗುತ್ತದೆ. ಪರಮೇಶ್ವರನ ಸಂಕಲ್ಪದಿಂದಲೇ ಕರ್ಮದಸಂಬಂಧವುಂಟಾಗುತ್ತದೆ ಎಂದೂ ಹೇಳಲಾಗುವುದಿಲ್ಲ. ಆದರೆ ಅವನನ್ನೇ ಎಲ್ಲಾ ಕರ್ಮಗಳಿಗೂ ಮೂಲವೆಂದು ನಾವು ಹೇಳುತ್ತಬಂದಿದ್ದೇವೆ. ವಿಹಿತವಾದ್ದನ್ನೂ ಮತ್ತು ನಿಷಿದ್ಧವಾದ್ದನ್ನೂ ಆಚರಿಸುವುದರಿಂದಲೇ ಪರಮೇಶ್ವರನ ಸಂಕಲ್ಪವೆಂಬುದೊಂದು ಉಂಟಾಗುತ್ತದೆ ಎಂದು ಈ ಮತದಲ್ಲಿ ಹೇಳಿಲ್ಲ. ಯಾಕೆಂದರೆ ಅವನ ಸಂಕಲ್ಪವನ್ನು ಅಪೇಕ್ಷಿಸದೆಯೇ ಜೀವರಿಗೆ ಪುಣ್ಯ ಪಾಪಗಳು ವಿಹಿತನಿಷಿದ್ಧಾಚರಣೆಗಳಿಂದಲೇ ಸಂಭವಿಸುತ್ತವೆ. ಶಿವನನ್ನು ಸೇರದಮೇಲೆ ವರ್ತನೆಯಲ್ಲಿ ವೈವಿಧ್ಯವಿಲ್ಲದೆ ಮುಕ್ತನು ಶಿವಸ್ವರೂಪವನ್ನು ಹೊಂದುವನೆಂಬುದು, ಅವನಿಗೆ ಶಿವಲೋಕಕ್ಕೆ ಹೋಗುವ ಇಚ್ಛೆ, ಶಕ್ತಿವಿಕಾಸದಿಂದ ಅವನು ದಿವ್ಯಮಂಗಳವಿಗ್ರಹವನ್ನು ಪಡೆಯುವನೆಂಬುದು, ಇದೆಲ್ಲವೂ ಯುಕ್ತವೇ ಆದರೂ ಅಲ್ಲಿಯವರೆಗೂ ಅವನಿಗೆ ಶಕ್ತಿಸಂಕೋಚಕ್ಕೆ ಕಾರಣವಾದ ಕರ್ಮಗಳ ಆಚರಣೆ ಮಾತ್ರ ಇದ್ದೇಇರುತ್ತದೆ. ಹಾಗಾದರೆ ವಿರಜಾನದಿಯನ್ನು ದಾಟಿದಕೂಡಲೇ ಕರ್ಮ ನಾಶವಾಗುವುದೆಂದು ಹೇಗೆ ಹೇಳಬಹುದು? ಪಂಚಭೂತಮಯವಾದ ಪ್ರಪಂಚದ ಎಲ್ಲೆಯನ್ನು ದಾಟುವುದೇ ಪರಮಾಕಾಶರೂಪವಾದ ಪರಮಶಿವಪದದ ಪ್ರಾಪ್ತಿ ಎನಿಸುತ್ತದೆ. ಇದನ್ನೇ ಪರಂಜ್ಯೋತಿಯನ್ನು ಸೇರಿದ ಮುಕ್ತನು ಪಡೆಯುತ್ತಾನೆಂದು ಶ್ರುತಿಯಲ್ಲಿ ಹೇಳಲಾಗಿದೆ. ವಿರಜಾನದಿಯು ಆಕಾ-

ಶಕ್ಕೆ ಸಂಬಂಧಿಸಿದ್ದಲ್ಲ; ಆದರೆ ಪ್ರಾಕೃತಪ್ರಪಂಚದ ಕೊನೆಯ ಹಂತವೇ ವಿರಜಾನದಿಯ ಪ್ರವೇಶವೆನಿಸುತ್ತದೆ. ಎಲ್ಲಾ ಕರ್ಮಗಳನ್ನೂ ಕಳೆದುಕೊಂಡವನೇ ಪ್ರಾಕೃತಾಕಾಶದ ಮೇಲೆ ಅಪ್ರಾಕೃತವೂ ಪರಮಾನಂದಮಯವೂ ಆದ ಶಿವಪದವನ್ನು ಸೇರುತ್ತಾನೆ. "ಅವನು ಮಾರ್ಗದ ಕೊನೆಯನ್ನು ಮುಟ್ಟುತ್ತಾನೆ. ಅದೇ ವಿಷ್ಣುಲೋಕಕ್ಕಿಂತಲೂ ಉತ್ಕೃಷ್ಟವಾದ ಸ್ಥಾನವೆನಿಸಿದೆ" ಎಂದು ಶ್ರುತಿಯಲ್ಲಿ ಹೇಳಿದೆ. "ದೊಡ್ಡದಕ್ಕಿಂತಲೂ ದೊಡ್ಡವನು ಚತುರ್ಮುಖ. ಅವನಿಗಿಂತಲೂ ದೊಡ್ಡವನು ಹರಿ. ಅವನಿಗಿಂತಲೂ ದೊಡ್ಡವನು ಈಶ್ವರನು" ಎಂದು ವೇದಾಂತದಲ್ಲಿ ಹೇಳಿರುವುದರಿಂದ ಯಾವನು ವಿಶ್ವಕರ್ತನೂ ಉಮಾಪತಿಯೂ ಆದ ಶಿವನನ್ನು ಪರಮಾತ್ಮನೆಂದು ತಿಳಿದು ಅಹೋರಾತ್ರಿಗಳಲ್ಲಿ ಧ್ಯಾನಿಸುವನೋ ಅವನು ಪುಣ್ಯ ಪಾಪಗಳನ್ನು ನೀಗಿಕೊಂಡು ವಿರಜಾನದಿಯನ್ನು ದಾಟಿ ವಿಷ್ಣುಲೋಕಕ್ಕಿಂತಲೂ ಉತ್ಕೃಷ್ಟವೆನಿಸಿ ಮನೋವಾಗಗೋಚರವಾದರೂ ನಿತ್ಯೈಶ್ವರ್ಯದಿಂದ ಶೋಭಿಸುತ್ತಿರುವ ಮಹಾಕೈಲಾಸವನ್ನು ಆ ಶಿವನ ಅನುಗ್ರಹದಿಂದಲೇ ಪಡೆಯುತ್ತಾನೆ" ಎಂದು ಸ್ಮೃತಿಯಲ್ಲೂ ಹೇಳಿದೆ. ಆದ್ದರಿಂದ ಶಿವಯೋಗಿಗಳು ಪುಣ್ಯಪಾಪಗಳನ್ನು ಕಳೆದುಕೊಂಡು ಶಿವಲೋಕವನ್ನು ಸೇರುವರೆಂಬುದೂ, ಶಿವಭಾವವನ್ನು ಹೊಂದುವರೆಂಬುದೂ ಸಹಜವೇ ಆಗಿದೆ.

ನನು ದೇಹವಿಯೋಗಕಾಲೇ ವಿರಜಾನದೀತರಣಾನಂತರೇ ವಾ ಸರ್ವಕರ್ಮಕ್ಷಯತ್ವಾಂಗೀಕಾರೇ ಸೂಕ್ಷ್ಮಶರೀರನಷ್ಟಪ್ರಸಂಗಃ ಸ್ಯಾತ್. ತಥಾ ಸತಿ ಕೇವಲಸ್ಯಾತ್ಮನೋ ಗಮನಂ ನೋಪಪದ್ಯತೇ. ತಸ್ಮಾದುತ್ಕ್ರಾಂತಿಸಮಯೇ ವಿದುಷೋ ನಿಶ್ಶೇಷಕರ್ಮಕ್ಷಯೋ ನೋಪಪನ್ನ ಇತ್ಯಾಶಂಕಾಯಾಮಾಹ. **ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇರ್ಲೋಕವತ್ ॥ ೩೦ ॥** ಉಪಪನ್ನ ಏವೋತ್ಕ್ರಾಂತಿಕಾಲೇ ಸರ್ವಕರ್ಮಕ್ಷಯಃ. ಕಥಂ? ತಲ್ಲಕ್ಷಣಾರ್ಥೋಪಲಬ್ಧೇಃ. ಕ್ಷೀಣಕರ್ಮಣಃ ಪ್ರಾವಿರ್ಭೂತಸ್ವರೂಪಸ್ಯ ದೇಹಸಂಬಂಧಲಕ್ಷಣಾರ್ಥೋಪಲಬ್ಧೇಃ. "ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ", "ಸ ಏವ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಸ್ವರಾಡ್ಭವತಿ। ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ। ಸ ಏಕಧಾ ಭವತಿ ತ್ರಿಧಾ ಭವತಿ" ಇತ್ಯಾದಿಷು ದೇಹಸಂಬಂಧಾಖ್ಯೋಽರ್ಥೋ ಹ್ಯುಪಲಭ್ಯತೇ. ಅತಃ ಕ್ಷೀಣಕರ್ಮಣೋಽಪಿ ಸೂಕ್ಷ್ಮಶರೀರಯುಕ್ತಸ್ಯ ದೇವಯಾನೇನ ಗಮನಮುಪಪದ್ಯತೇ. ಸೂಕ್ಷ್ಮಶರೀರಮಪ್ಯಾರಂಭಕಕರ್ಮವಿನಾಶೇ ನ ತಿಷ್ಠತೀತಿ ಚೇತ್ ವಿದ್ಯಾಮಾಹಾತ್ಮ್ಯಾದಿತಿ ಬ್ರೂಮಃ. ವಿದ್ಯಾ ಹಿ ಸ್ವಯಂ ಸೂಕ್ಷ್ಮಶರೀರಸ್ಯಾನಾರಂಭಿಕಾಪಿ ಪ್ರಾಕೃತಸುಖದುಃಖೋಪಭೋಗಸಾಧನಸ್ಥೂಲಶರೀರಸ್ಯ ಸರ್ವಕರ್ಮಣಾಂ ಚ ನಿರ್ವಿಶೇಷಕ್ಷಯೇಽಪಿ ಸ್ವಫಲಭೂತಪರಶಿವಬ್ರಹ್ಮಪ್ರಾಪ್ತಿಪ್ರದಾನಾಯ ದೇವ

**ಯಾನೇನ ಪಥೈನಂ ಗಮಯಂತೀ ಸೂಕ್ಷ್ಮಶರೀರಂ ಅವಶೇಷಯತಿ ಲೋಕವತ್. ಯಥಾ ಲೋಕೇ ಜನಾಃ ಸಸ್ಯಾದಿಸಮುತ್ಪತ್ತ್ಯರ್ಥಮಾರಬ್ಧೇ ತಟಾಕಾದಿಕೇ ತದ್ಧೇತುಷು ತದಿಚ್ಛಾದಿಷು ವಿನಷ್ಟೇಷ್ವಪಿ ತದೇವ ತಟಾಕಾದಿಕರ್ಮ ಶಿಥಿಲಮಕುರ್ವಂತಸ್ತತ್ರ ಪಾನೀಯಪಾನಾದಿ ಕುರ್ವತೇ ತದ್ವದಿತಿ ಸಿದ್ಧಂ.**

ದೇಹವನ್ನು ತೊರೆಯುವಾಗಲೋ ಅಥವಾ ವಿರಜಾನದಿಯನ್ನು ದಾಟಿದ ಮೇಲೋ ಎಲ್ಲಾ ಕರ್ಮಗಳೂ ನಶಿಸುತ್ತವೆ ಎಂದು ಒಪ್ಪಿದರೆ ಸೂಕ್ಷ್ಮಶರೀರವೇ ನಷ್ಟವಾಗುವ ಪ್ರಸಂಗ ಒದಗೀತು. ಹಾಗಾದರೆ ಆತ್ಮನು ಸೂಕ್ಷ್ಮಶರೀರವಿಲ್ಲದೆ ಹೋಗುವನೆಂಬುದು ಹೊಂದುವುದಿಲ್ಲ. ಇದರಿಂದ ಜ್ಞಾನಿಗೆ ಇಲ್ಲಿಂದ ಹೊರಡುವ ಕಾಲದಲ್ಲಿ ಕರ್ಮ ಪೂರ್ತಿಯಾಗಿ ನಾಶವಾಯಿತೆಂಬುವನ್ನು ಒಪ್ಪಲಾಗುವುದಿಲ್ಲವೆಂದು ಆಶಂಕಿಸಿ ಸಮಾಧಾನ ಮಾಡುತ್ತಾನೆ. ಜ್ಞಾನಿಗೆ ಉತ್ಕ್ರಮಣಕಾಲದಲ್ಲಿ ಎಲ್ಲ ಕರ್ಮಗಳೂ ನಷ್ಟವಾದವೆಂಬುದೇನೋ ಹೊಂದುತ್ತದೆ. ಹಾಗೆ ಕರ್ಮಗಳೆಲ್ಲವೂ ಸವೆದಿದ್ದರೆ ಮಾತ್ರವೇ ಮುಕ್ತನು ತನ್ನ ವಾಸ್ತವವಾದ ಶಿವಭಾವದಲ್ಲಿ ಇರಬಲ್ಲನು. ಇಂತವನಿಗೆ ಮಾತ್ರವೇ ದಿವ್ಯಲೋಕದ ಫಲಪ್ರಾಪ್ತಿಯನ್ನು ಶ್ರುತಿಯು ತಿಳಿಸಿದೆ. " ಯಾವನು ಪರಂಜ್ಯೋತಿಯನ್ನು ಸೇರಿ ತನ್ನ ವಾಸ್ತವಸ್ವರೂಪದಲ್ಲಿರುವನೋ ಅವನು ಎಲ್ಲಾ ಲೋಕಗಳಲ್ಲೂ ಸ್ವತಂತ್ರವಾಗಿ ಸಂಚರಿಸುತ್ತ ಅನೇಕ ಬಗೆಯಾಗಿರುತ್ತಾನೆ. ಅವನು ಎಲ್ಲೆಲ್ಲೂ ವಿಹರಿಸುತ್ತಲೂ ಓಡಾಡುತ್ತಲೂ ಸ್ವತಂತ್ರನಾಗುತ್ತಾನೆ" ಈ ಶ್ರುತಿಗಳಲ್ಲಿ ಮುಕ್ತನಿಗೆ ದಿವ್ಯದೇಹದ ವ್ಯವಹಾರಗಳನ್ನು ತಿಳಿಸಲಾಗಿದೆ. ಆದ್ದರಿಂದ ಮುಕ್ತನು ಕರ್ಮಗಳನ್ನು ಕಳೆದುಕೊಂಡಿದ್ದರೂ ಅವನಿಗೆ ಸೂಕ್ಷ್ಮಶರೀರವಿರುವುದರಿಂದಲೇ ದೇವಯಾನದಿಂದ ಹೋಗಲಿಕ್ಕೆ ಸಾಧ್ಯವಾಗುತ್ತದೆ. ಆದರೆ ಪ್ರಾರಬ್ಧಕರ್ಮವೆಲ್ಲವೂ ನಷ್ಟವಾದಮೇಲೆ ಸೂಕ್ಷ್ಮಶರೀರವೂ ಇರುವುದಿಲ್ಲವೆಂದು ಆಕ್ಷೇಪಿಸಿದರೆ ಉಪಾಸನದ ಮಹಿಮೆಯಿಂದ ಅದು ಇರಲೇಬೇಕೆಂದು ಹೇಳಬೇಕಾಗುತ್ತದೆ. ಉಪಾಸನವಾದರೋ ತಾನಾಗಿಯೇ ಸೂಕ್ಷ್ಮಶರೀರವನ್ನು ದೊರಕಿಸದೇ ಇದ್ದರೂ ಪ್ರಕೃತಿಮಯವಾದ ಸುಖದುಃಖಗಳನ್ನು ಭೋಗಿಸಲು ಸಾಧನವಾದ ಸ್ಥೂಲಶರೀರವನ್ನೂ ಮತ್ತು ಎಲ್ಲಾಕರ್ಮಗಳನ್ನೂ ಪೂರ್ತಿಯಾಗಿ ತೊಲಗಿಸಿ ದೇವಯಾನದಲ್ಲಿ ಹೊರಡುವ ಮುಕ್ತನಿಗೆ ಶಿವಸಾಯುಜ್ಯವೆಂಬ ಫಲವನ್ನು ದೊರಕಿಸಲಿಕ್ಕಾಗಿ ಸೂಕ್ಷ್ಮಶರೀರವನ್ನು ಮಾತ್ರವೇ ಉಳಿಸಿರುತ್ತದೆ. ಲೋಕದಲ್ಲಿ ಜನರು ಸೊಪ್ಪು ಮೊದಲಾದವನ್ನು ಬೆಳೆಸಲಿಕ್ಕಾಗಿ ಕೆರೆ ಕುಂಟೆ ಮೊದಲಾದವನ್ನು ಮಾಡಿಕೊಂಡಿದ್ದರೂ ತರಕಾರಿಗಳನ್ನು ಬೆಳೆದಾದಮೇಲೆಯೂ ಕೆರೆ ಮೊದಲಾದ ಜಲಾಶಯಗಳನ್ನು ನಾಶಮಾಡದೆ ನೀರು ಕುಡಿಯಲಿಕ್ಕೆ ಹೇಗೆ ಉಪಯೋಗಿಸುತ್ತಾರೋ ಹಾಗೆ ಸೂಕ್ಷ್ಮಶರೀರದಿಂದಲೇ ಶಿವಸಾಯುಜ್ಯಪ್ರಾಪ್ತಿಗೆ ಅವಕಾಶಮಾಡಿಕೊಟ್ಟ ಉಪಾಸನವೇ ಮುಕ್ತನಿಗೆ ಶಿವಲೋಕಕ್ಕೆ ಹೋಗಲು ಅನುಕೂಲವಾಗುವಂತೆ ಆ ಸೂಕ್ಷ್ಮಶರೀರವನ್ನು ಉಳಿಸುತ್ತದೆ.

ಅಥ ಸ್ಯಾತ್ ಜ್ಞಾನಿನಾಂ ಸಾಕ್ಷಾತ್ಕೃತಪರಶಿವತತ್ತ್ವಾನಾಂ ದೇಹಪಾತಸಮಯೇ ಕರ್ಮಣೋ ನಿರವಶೇಷಕ್ಷಯಾತ್ ದೇಹಪಾತಾಧೂರ್ಧ್ವಂ ಸೂಕ್ಷ್ಮಶರೀರಮಾತ್ರಂ ಗತ್ಯರ್ಥಮನುವರ್ತತೇ. ತಥಾಪಿ "ಸುಖದುಃಖಾನುಭವೋ ನ ವಿದ್ಯತೇ" ಇತಿ ಯದುಕ್ತಂ ತನ್ನೋಪಪದ್ಯತೇ. ವಸಿಷ್ಠವಾಮದೇವಾಗಸ್ತ್ಯದಧೀಚಿಮಾರ್ಕಂಡೇಯೋಪಮನ್ಯುಪ್ರಭೃತೀನಾಂ ಸಾಕ್ಷಾತ್ಕೃತಶಿವತತ್ತ್ವಾನಾಂ ದೇಹಪಾತಾದೂರ್ಧ್ವಂ ದೇಹಾಂತರಸಂಗಮಃ ಪುತ್ರಜನ್ಮವಿಪತ್ತ್ಯಾದಿನಿಮಿತ್ತಸುಖದುಃಖಾನುಭವಶ್ಚ ದೃಶ್ಯತ ಇತ್ಯಾಶಂಕಾಯಾಮಾಹ. ಯಾವದಧಿಕಾರಮವಸ್ಥಿತಿರಧಿಕಾರಿಣಾಂ ॥ ೩೧ ॥ ನಾಸ್ಮಾಭಿಸ್ಸರ್ವೇಷಾಂ ಜ್ಞಾನಿನಾಂ ದೇಹಪಾತಸಮಯೇ ಸುಕೃತದುಷ್ಕೃತಯೋರ್ವಿನಾಶ ಉಕ್ತಃ, ಅಪಿತು ಯೇಷಾಂ ಜ್ಞಾನಿನಾಂ ದೇಹಪಾತಾನಂತರಂ ಅರ್ಚಿರಾದಿಕಾ ಗತಿಃ ಪ್ರಾಪ್ತಾ. ತೇಷಾಂ ದೇಹಪಾತಸಮಯೇ ಸುಕೃತದುಷ್ಕೃತಹಾನಿರ್ಯುಕ್ತಾ. ವಸಿಷ್ಠಾದೀನಾಂ ತು ಅಧಿಕಾರಿಣಾಂ ನ ದೇಹಪಾತಾನಂತರಂ ಅರ್ಚಿರಾದಿಗತಿಪ್ರಾಪ್ತಿಃ, ಪ್ರಾರಬ್ಧಸ್ಯಾಧಿಕಾರಸ್ಯಾಸಮಾಪ್ತತ್ವಾತ್. ತೇಷಾಂ ಕರ್ಮಶೇಷೇಣಾಧಿಕಾರಶೇಷಃ. ಏವಂಪ್ರಾಪ್ತಾನಾಂ ಯಾವದಧಿಕಾರಸಮಾಪ್ತಿ ತದಾರಂಭಕಂ ಕರ್ಮ ನ ಕ್ಷೀಯತೇ. ಪ್ರಾರಬ್ಧಸ್ಯ ಕರ್ಮಣೋ ಭೋಗಾದೇವ ಕ್ಷಯಃ. ಅತಃ ಅಧಿಕಾರಿಣಾಂ ತದಾರಂಭಕಂ ಕರ್ಮ ಯಾವದಧಿಕಾರಮವತಿಷ್ಠತೇ. ಅತಸ್ತೇಷಾಂ ನ ದೇಹಪಾತಾದನಂತರಂ ಅರ್ಚಿರಾದಿಗತಿಪ್ರಾಪ್ತಿಃ.

ಈ ದೇಹದಲ್ಲಿಯೇ ಪರಶಿವತತ್ತ್ವವನ್ನು ಸಾಕ್ಷಾತ್ಕಾರಮಾಡಿಕೊಂಡ ಜ್ಞಾನಿಗೆ ದೇಹವನ್ನು ತೊರೆಯುವಾಗಲೇ ಕರ್ಮವೆಲ್ಲವೂ ಪೂರ್ತಿ ನಷ್ಟವಾಗಿರುವುದರಿಂದ ದೇಹವನ್ನು ಬಿಟ್ಟಮೇಲೆ ಸೂಕ್ಷ್ಮಶರೀರವೊಂದೇ ಗಮನಕ್ಕಾಗಿ ಅವನನ್ನು ಹಿಂಬಾಲಿಸುತ್ತದೆ. ಆದರೆ ಆಗ ಅವನು ಸುಖದುಃಖಗಳನ್ನು ಅನುಭವಿಸುವುದಿಲ್ಲವೆಂಬುದು ಹೊಂದುವುದಿಲ್ಲ. ವಸಿಷ್ಠ ವಾಮದೇವ ಅಗಸ್ತ್ಯ ದಧೀಚಿ ಮಾರ್ಕಂಡೇಯ ಉಪಮನ್ಯು ಮೊದಲಾದ ಸಾಕ್ಷಾತ್ಕಾರಿಗಳು ದೇಹವನ್ನು ತೊರೆದಮೆಲೆಯೂ ಬೇರೆ ದೇಹಕ್ಕೆ ಹೋಗಿ ಮಕ್ಕಳನ್ನು ಪಡೆದು ಸುಖದುಃಖಗಳನ್ನು ಅನುಭವಿಸಿದರೆಂಬುದು ಕಾಣಬರುತ್ತದೆ ಎಂದಾಶಂಕಿಸಿ ಸಮಾಧಾನಮಾಡುತ್ತಾನೆ. ಜ್ಞಾನಿಗಳೆಲ್ಲರಿಗೂ ದೇಹ ಬಿಡುವಕಾಲದಲ್ಲಿ ಪುಣ್ಯಪಾಪಗಳು ನಶಿಸುತ್ತವೆ ಎಂದು ನಾವು ಹೇಳುವುದಿಲ್ಲ; ಆದರೆ ಯಾವ ಜ್ಞಾನಿಗಳಿಗೆ ದೇಹವನ್ನು ತೊರೆದಮೇಲೆ ಅರ್ಚಿರಾದಿಗತಿ ದೊರಕುತ್ತದೆಯೋ ಅವರಿಗೆ ಮಾತ್ರವೇ ದೇಹವನ್ನು ತೊರೆಯುವಾಗ ಪುಣ್ಯಪಾಪಗಳು ತೊಲಗುತ್ತವೆ ಎಂದು ಹೇಳುವುದೇ ಹೊಂದುತ್ತದೆ. ವಸಿಷ್ಠ ಮೊದಲಾದವರಿಗೆ ಪ್ರಾರಬ್ಧವು ಮುಗಿಯದೇ ಇದ್ದುದರಿಂದ ದೇಹವನ್ನು ತೊರೆದಮೇಲೆ ಅರ್ಚಿರಾದಿಗತಿಯು ದೊರಕಲಿಲ್ಲ.

ಕರ್ಮಶೇಷವಿದ್ದುದರಿಂದ ಅವರು ಮತ್ತೆ ಜನ್ಮವನ್ನೆತ್ತಬೇಕಾಯಿತು. ಜನ್ಮವನ್ನೆತ್ತು ವಂತೆ ಮಾಡುವ ಕರ್ಮವೆಲ್ಲವೂ ನಷ್ಟವಾಗದವರೆಗೂ ಅದನ್ನು ಅನುಭವಿಸಿಯೇ ತೀರಬೇಕು. ಆದ್ದರಿಂದ ಅಧಿಕಾರಿಗಳು ಪ್ರಾರಬ್ಧಕರ್ಮವೆಲ್ಲಿಯವರೆಗೆ ಇರುತ್ತದೆಯೋ ಅಲ್ಲಿಯವರೆಗೂ ಜನ್ಮವೆತ್ತಲೇಬೇಕು. ಆದರೆ ಅಂತವರಿಗೆ ದೇಹವನ್ನು ತೊರೆದಮೇಲೆ ಅರ್ಚಿರಾದಿಮಾರ್ಗವು ದೊರಕುವುದಿಲ್ಲ.

ನನು ಉಪಕೋಸಲಾದಿವಿದ್ಯೋಪಾಸಕಾನಾಂ ಬ್ರಹ್ಮಪ್ರಾಪ್ತಿರುತ ತದ್ಭಿನ್ನಾನಾಂ ಸರ್ವೇಷಾಂ ಬ್ರಹ್ಮೋಪಾಸಕಾನಾಮೇವ ಬ್ರಹ್ಮಪ್ರಾಪ್ತಿ ಸ್ಸಂಭವತೀತ್ಯಾಶಂಕಾಯಾಮಧಿಕರಣಾಂತರೇಣಾಹ. ಅನಿಯಮಾಧಿ ಕರಣಂ ॥ ೧೩ ॥ ಅನಿಯಮಸ್ಸರ್ವೇಷಾಮವಿರೋಧಃ ಶಬ್ದಾನುಮಾ ನಾಭ್ಯಾಂ ॥ ೩೨ ॥ ಉಪಕೋಸಲಾದಿಷೂಪಾಸನೇಷು ಅರ್ಚಿರಾದಿಗತಿಃ ಶ್ರೂಯತೇ. ಕಿಂ ತನ್ನಿಷ್ಠಾನಾಮೇವ ತಯಾ ಬ್ರಹ್ಮಪ್ರಾಪ್ತಿಃ? ಉತ ಸರ್ವೇಷಾಂ ದಹರಶಾಂಡಿಲ್ಯಪಾಶುಪತಾದಿವಿದ್ಯಾಸಿದ್ಧಬ್ರಹ್ಮೋಪಾಸ ಕಾನಾಂ? ಇತಿ ಸಂಶಯೇ, ಇತರೇಷ್ವಾಮ್ನಾನಾತ್ "ಯೇಚೇಮೇಽ ರಣ್ಯೇ ಶ್ರದ್ಧಾಂ ತಪ ಇತ್ಯುಪಾಸತೇ ಶ್ರದ್ಧಾಂ ಸತ್ಯಮುಪಾಸತೇ" ಇತೀ ತರಸಕಲಬ್ರಹ್ಮವಿದ್ಯೋಪಾಸಕತ್ವೇ ಪ್ರಮಾಣಾಭಾವಾಚ್ಚ ತನ್ನಿಷ್ಠಾನಾ ಮೇವೇತಿ ಪ್ರಾಪ್ತೇಽಭಿಧೀಯತೇ ಅನಿಯಮ ಇತಿ. ಸರ್ವೇಷಾಂ ಸರ್ವೋಪಾಸನನಿಷ್ಠಾನಾಂ ತಯೈವ ಗಂತವ್ಯತ್ವಾತ್ ತನ್ನಿಷ್ಠಾನಾಮೇ ವೇತಿ ನಿಯಮೋ ನಾಸ್ತಿ. ಸರ್ವೇಷಾಂ ತಯೈವ ಗಮನೇ ಹಿ ಶಬ್ದಾನು ಮಾನಾಭ್ಯಾಂ ಶ್ರುತಿಸ್ಮೃತಿಭ್ಯಾಂ ಅವಿರೋಧಃ. ಅನ್ಯಥಾ ವಿರೋಧ ಏವೇತ್ಯರ್ಥಃ. ಶ್ರುತಿಸ್ತಾವತ್. ತೈತ್ತಿರೀಯಛಾಂದೋಗ್ಯವಾಜಸನೇ ಯಾಥರ್ವಣಶಿಖಾಶ್ವೇತಾಶ್ವತರಬೃಹಜ್ಜಾಬಾಲಾದಿಷು "ಶಿಕ್ಷಾಂ ವ್ಯಾಖ್ಯಾಸ್ಯಾಮಃ" ಇತ್ಯುಪಕ್ರಮ್ಯ "ಯಶ್ಛಂದಸಾಮೃಷಭೋ ವಿಶ್ವರೂಪಃ ಛಂದೇಭ್ಯೋಽಧ್ಯಮೃತಾತ್ಸಂಬಭೂವ ಸ ಮೇಂದ್ರೋ ಮೇಧಯಾ ಸ್ಪೃಣೋತು", "ಅಮೃತಸ್ಯ ದೇವಧಾರಣೋ ಭೂಯಾ ಸಂ", "ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" ಇತಿ ತೈತ್ತಿರೀಯಕೇ ಪಾಶುಪತವಿದ್ಯಾಂಗ ಶಿವಲಿಂಗಬಾಹ್ಯಾಭ್ಯಂತರಧ್ಯಾನಧಾರಣಾದ್ಯುಪಾಸಕಾನಾಂ ಅಮೃತತ್ವ ಮಭಿಧೀಯತೇ. "ಯ ಏವಮೇತದ್ವಿದುರ್ಯೇ ಚೇಮೇ ಅರಣ್ಯೇ ಶ್ರದ್ಧಾಂ ಸತ್ಯಮುಪಾಸತೇ ತೇಽರ್ಚಿಷಮಭಿಸಂಭವಂತಿ" ಇತಿ ಛಾಂದೋಗ್ಯೇ ಪಂಚಾಗ್ನಿವಿದ್ಯಾಯಾಮರ್ಚಿರಾದಿಮಾರ್ಗೇಣ ದಹರ ಪಾಶುಪತಾದಿಸರ್ವಬ್ರಹ್ಮವಿದ್ಯಾಂಗಧ್ಯಾನಧಾರಣಾದ್ಯುಪಾಸನನಿಷ್ಠಾ ನಾಂ ಗಮನಮುಪದಿಶ್ಯತೇ. ವಾಜಸನೇಯಕೇ "ತದ್ಯ ಇತ್ಥಂ

ವಿದುರ್ಯೇ ಚೇಮೇಽರಣ್ಯೇ ಶ್ರದ್ಧಾಂ ತಪ ಇತ್ಯುಪಾಸತೇ" ಇತಿ, "ಯ ಇತ್ಥಂ ವಿದುಃ" ಇತಿ ಪಂಚಾಗ್ನಿವಿದ್ಯಾನಿಷ್ಠಾನಾಂ "ಯೇ ಚೇಮೇ" ಇತ್ಯಾದಿನಾ ಶ್ರದ್ಧಾಪೂರ್ವಕಂ ಬ್ರಹ್ಮೋಪಾಸಿನಾಂ ಚ ಉದ್ದಿಶ್ಯ ಅರ್ಚಿರಾದಿಕಾ ಗತಿರುಪದಿಶ್ಯತೇ. "ಋತಂ ಸತ್ಯಂ ಪರಂ ಬ್ರಹ್ಮ", "ಸತ್ಯಂ ಜ್ಞಾನಮನಂತಂ ಬ್ರಹ್ಮ", "ಸತ್ಯಂ ತ್ವೇವ ವಿಜಿಜ್ಞಾಸಿತವ್ಯಂ" ಇತಿ ಸತ್ಯಶಬ್ದಸ್ಯ ಪರಶಿವಬ್ರಹ್ಮಣಿ ಪ್ರಸಿದ್ಧೇಃ. ತಪಶ್ಶಬ್ದಸ್ಯಾಪಿ ತೇನೈಕಾರ್ಥ್ಯಾತ್ ಸತ್ಯತಪಶ್ಶಬ್ದಾಭ್ಯಾಂ ಬ್ರಹ್ಮೈವಾಭಿಧೀಯತೇ. ಶ್ರದ್ಧಾಪೂರ್ವಕಂ ಬ್ರಹ್ಮೋಪಾಸನಂ ಅನ್ಯತ್ರ ಶ್ರುತಂ "ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ" ಇತಿ. "ಸತ್ಯಂ ತ್ವೇವ ವಿಜಿಜ್ಞಾಸಿತವ್ಯಂ" ಇತ್ಯುಪಕ್ರಮ್ಯ "ಶ್ರದ್ಧಾ ತ್ವೇವ ವಿಜಿಜ್ಞಾಸಿತವ್ಯಾ" ಇತಿ. "ವ್ರತಮೇತತ್ಪಾಶುಪತಂ ತತ್ಸಮಾಚರೇನ್ಮುಮುಕ್ಷುರ್ನ ಪುನರ್ಭವಾಯ" ಇತ್ಯಾದಿನಾ ಅಥರ್ವಣಶಿಖಾಶ್ವೇತಾಶ್ವತರಬೃಹಜ್ಜಾಬಾಲಾದಿಷು ಪಾಶುಪತವಿದ್ಯಾನಿಷ್ಠಾನಾಂ ಪುನರಾವೃತ್ತಿರಹಿತಪರಶಿವಬ್ರಹ್ಮಪ್ರಾಪ್ತಿರುಪದಿಶ್ಯತೇ. ಸ್ಮೃತಿರಪಿ "ಅಗ್ನಿರ್ಜ್ಯೋತಿರಹಶ್ಶುಕ್ಲಃ ಷಣ್ಮಾಸಾ ಉತ್ತರಾಯಣಂ । ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥" ಇತಿ. "ಲಿಂಗಾಂಗಸಂಗಿನಾಂ ವತ್ಸ ಪುನರ್ಜನ್ಮ ನ ವಿದ್ಯತೇ । ಯುಗಪದ್ ಜ್ಞಾನಸಿದ್ಧಿಃ ಸ್ಯಾತ್ ತತೋ ಮೋಕ್ಷಮವಾಪ್ನುಯಾತ್ ॥" ಇತಿ ದರ್ಶನಾಚ್ಚ ಸರ್ವೇಷಾಂ ಬ್ರಹ್ಮವಿದ್ಯೋಪಾಸಕಾನಾಂ ಅರ್ಚಿರಾದಿಮಾರ್ಗೇಣೈವೇತಿ ನಿಯಮೋ ದೃಶ್ಯತೇ. ಏವಂಜಾತೀಯಕಾಃ ಶ್ರುತಿಸ್ಮೃತಯೋ ಬಹವಸ್ಸಂತಿ. ಏವಂ ಸರ್ವವಿದ್ಯಾಸಾಧಾರಣೀಯಂ ಗತಿಃ ಪ್ರಾಪ್ತ್ಯೈ ಮೋಪಕೋಸಲವಿದ್ಯಾದೌ ಅನೂದ್ಯತೇ. ನನು ಆದಿತ್ಯಚಂದ್ರಾದಿಗ್ರಹಾಣಾಂ ಅಶ್ವಿನ್ಯಾದಿನಕ್ಷತ್ರಾಣಾಂ ಇಂದ್ರಾದಿದಿಕ್ಪಾಲಕಪ್ರಭೃತಿದೇವಾನಾಂ ಚ ಅನೇನೈವ ಶರೀರೇಣ ಮುಕ್ತಿರುಪಪದ್ಯತೇ. ತಥಾಪಿ ಮನುಷ್ಯಾಣಾಮಿವ ಸ್ಥೂಲಸೂಕ್ಷ್ಮಶರೀರವಿಯೋಗಪೂರ್ವಕಶಿವತತ್ತ್ವಪ್ರಾಪ್ತಿರ್ನ ಸಂಭವತೀತಿ ಚೇನ್ನ "ಗತಾಃ ಕಲಾಃ ಪಂಚದಶ ಪ್ರತಿಷ್ಠಾಃ ದೇವಾಶ್ಚ ಸರ್ವೇ ಪ್ರತಿದೇವತಾಸು । ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ ॥" ಇತಿ ಶ್ರುತಿದರ್ಶನಾತ್ ಭಕ್ತಾನಾಂ ಜೀವನ್ಮುಕ್ತಾನಾಂ ಸೂರ್ಯಚಂದ್ರನಕ್ಷತ್ರಾದೀನಾಂ ಇಂದ್ರಾದಿದೇವತಾನಾಂ ಚ ಸ್ವಾಧಿಕಾರದಶಾವಿಯೋಗಾನಂತರಂ ಸ್ಥೂಲಸೂಕ್ಷ್ಮಶರೀರಪರಿತ್ಯಾಗಪೂರ್ವಕಂ ಪರಶಿವಬ್ರಹ್ಮಣ್ಯೇಕೀಭಾವರೂಪಂ ವಿದೇಹಕೈವಲ್ಯಮೇವ ವ್ಯಪದಿಶ್ಯತೇ.

ಉಪಕೋಸಲ ಮೊದಲಾದ ವಿದ್ಯೆಯಿಂದ ಉಪಾಸನಮಾಡುವವರಿಗೆ ಮಾತ್ರವೇ

ಬ್ರಹ್ಮಪ್ರಾಪ್ತಿಯೋ ? ಬೇರೆವಿದ್ಯೆಗಳನ್ನಾಶ್ರಯಿಸಿದವರಿಗೂ ಆ ಫಲವು ದೊರಕು ವುದೋ? ಎಂದಾಶಂಕಿಸಿ ಸಮಾಧಾನಮಾಡುತ್ತಾನೆ.ಉಪಕೋಸಲಾದ್ಯುಪಾಸನಗಳಲ್ಲಿ ಅರ್ಚಿರಾದಿಮಾರ್ಗವನ್ನು ಹೇಳಲಾಗಿದೆ. ಅಂತಹ ಉಪಾಸಕರಿಗೆ ಅದರಿಂದಲೇ ಬ್ರಹ್ಮ ಸಾಯುಜ್ಯವು ದೊರಕುತ್ತದೆಯೇ ? ಅಥವಾ ಉಳಿದ ದಹರ ಶಾಂಡಿಲ್ಯ ಪಾಶುಪತ ವಿದ್ಯೆಗಳಿಂದ ಉಪಾಸನಮಾಡುವವರಿಗೂ ಆ ಫಲವು ದೊರಕುತ್ತವೆಯೋ ? ಎಂದು ಸಂಶಯಬಂದರೆ " ಯಾರು ಅರಣ್ಯದಲ್ಲಿ ತಪಸ್ಸನ್ನಾಚರಿಸುತ್ತ, ಶ್ರದ್ಧೆಯನ್ನು ಸತ್ಯ ವೆಂದು ಉಪಾಸನಮಾಡುತ್ತಾರೋ ? ಎಂದು ಮುಂತಾಗಿ ಶ್ರುತಿಯಲ್ಲಿ ಬೇರೆ ಉಪಾ ಸಕರೆಲ್ಲರಿಗೂ ಅದೇಫಲವು ದೊರಕುವುದೆಂದು ಹೇಳಿದ್ದರೂ, ಅದಕ್ಕೆ ಪ್ರಮಾಣವಿಲ್ಲದ್ದ ರಿಂದ ಉಪಕೊಸಲ ಮೊದಲಾದ ವಿದ್ಯೆಗಳಲ್ಲಿ ನಿರತರಾದವರಿಗೆ ಮಾತ್ರವೇ ಪರಶಿವ ಬ್ರಹ್ಮವು ದೊರಕುವುದೆಂದು ಆಕ್ಷೇಪ ಬರುತ್ತದೆ. ಇದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಎಲ್ಲಾ ಉಪಾಸನಗಳಲ್ಲಿ ನಿರತರಾದವರೂ ಅರ್ಚಿರಾದಿಮಾರ್ಗದಿಂದಲೇ ಹೋಗಬೇಕಾಗಿರುವುದರಿಂದ ಒಂದೇಬಗೆಯ ಉಪಾಸಕರಿಗೆ ಮಾತ್ರವೇ ಅದು ಅನ್ವ ಯಿಸುವುದೆಂಬ ನಿಯಮವಿಲ್ಲ. ಎಲ್ಲಾ ಉಪಾಸಕರೂ ಆ ಮಾರ್ಗದಿಂದಲೇ ಹೋಗಬೇಕೆಂದು ಶ್ರುತಿಸ್ಮೃತಿಗಳಿಂದಲೇ ತಿಳಿದುಬರುತ್ತದೆ. ಇಲ್ಲವಾದರೆ ಶ್ರುತಿ ವಿರೋಧವುಂಟಾದೀತು. ತೈತ್ತಿರೀಯ ಛಾಂದೋಗ್ಯ ವಾಜಸನೇಯ ಅಥರ್ವಶಿಖೆ ಶ್ವೇತಾಶ್ವತರ ಬೃಹಜ್ಜಾಬಾಲ ಮೊದಲಾದ ಶ್ರುತಿಗಳಲ್ಲಿ ಈ ಅಂಶವನ್ನು ತಿಳಿಸಲಾಗಿದೆ. "ಶಿಕ್ಷೆಯನ್ನು ತಿಳಿಸುತ್ತೇವೆ" ಎಂದಾರಂಭಿಸಿ " ಸರ್ವ ವಿದ್ಯೆಗಳಿಗೂ ಪ್ರಭುವಾದ ಶಿವನು ನಿಗಮಾಗಮಪ್ರತಿಪಾದ್ಯನಾಗಿ ಪರಮೈಶ್ವರ್ಯದಿಂದ ಶೋಭಿಸುತ್ತ ನನಗೆ ಪ್ರಜ್ಞಾಬಲವನ್ನು ಅನುಗ್ರಹಿಸಲಿ. ಅಮೃತಕ್ಕಾಗಿ ಲಿಂಗವನ್ನು ಧರಿಸುತ್ತೇನೆ. ಇದರ ಸಂಪರ್ಕದಿಂದ ನನ್ನ ದೇಹೇಂದ್ರಿಯಮನಬುದ್ಧಿಗಳು ಪ್ರಶಾಂತವಾಗಲಿ. ಉಮಾ ಸಹಿತನೂ ಸರ್ವ ಪ್ರಕಾಶಕನೂ ಆದ ಶಿವನ ಸರ್ವಾತ್ಮಕವಾದ ಈ ಲಿಂಗವನ್ನು ಪಾಣಿ ಯಲ್ಲಿ ಅರ್ಚನೆಗಾಗಿ ಧರಿಸುತ್ತೇನೆ " ಎಂದು ತೈತ್ತಿರೀಯದಲ್ಲಿ ಪಾಶುಪತವಿದ್ಯೆಗೆ ಅಂಗವಾದ ಶಿವಲಿಂಗವನ್ನು ಒಳಗೂ ಹೊರಗೂ ಧ್ಯಾನಿಸುತ್ತ ಧರಿಸಿರುವವರಿಗೆ ಅಮೃತಸ್ಥಿತಿ ದೊರಕುವುದೆಂದು ಹೇಳಲಾಗಿದೆ. " ಯಾರು ಹೀಗೆ ತಿಳಿಯುತ್ತಾರೊ, ಯಾರು ಅರಣ್ಯದಲ್ಲಿ ಶ್ರದ್ಧೆಯನ್ನು ಸತ್ಯವೆಂದು ಅರ್ಚಿಸುತ್ತಾರೋ ಅವರು ಅರ್ಚಿರಾದಿ ಮಾರ್ಗವನ್ನು ಆಶ್ರಯಿಸುತ್ತಾರೆ" ಎಂದು ಛಾಂದೋಗ್ಯದ ಪಂಚಾಗ್ನಿವಿದ್ಯೆಯಲ್ಲಿ ಹೇಳಲಾಗಿದೆ. ಹೀಗೆಯೇ ದಹರ ಪಾಶುಪತ ಮೊದಲಾದ ಎಲ್ಲಾ ಬ್ರಹ್ಮವಿದ್ಯೆಗಳಿಗೂ ಅಂಗವಾಗಿ ಧ್ಯಾನಧಾರಣಗಳನ್ನಾಚರಿಸುವವರಿಗೆ ಅರ್ಚಿರಾದಿಮಾರ್ಗದಿಂದಲೇ ಗಮ ನವನ್ನು ಹೇಳಲಾಗಿದೆ. ವಾಜಸನೇಯದಲ್ಲಿ"ಯಾರು ಹೀಗೆ ತಿಳಿಯುತ್ತಾರೋ ಅವರು ಅರಣ್ಯದಲ್ಲಿ ಶ್ರದ್ಧೆಯನ್ನೇ ತಪಸ್ಸೆಂದು ಉಪಾಸಿಸುತ್ತಾರೆ" ಎಂದೂ, ಛಾಂದೋಗ್ಯ ದಲ್ಲಿ " ಅವರು ಅರ್ಚಿಮಾರ್ಗದಲ್ಲಿ ಹೊರಡುತ್ತಾರೆ " ಎಂದೂ, " ಯಾರು ಹೀಗೆ ತಿಳಿಯುವರೋ" ಎಂಬಲ್ಲಿ ಪಂಚಾಗ್ನಿವಿದ್ಯೆಯನ್ನಾಶ್ರಯಿಸಿದವರಿಗೂ " ಯಾವ

ಇವರು" ಎಂಬಲ್ಲಿ ಶ್ರದ್ಧೆಯಿಂದ ಬ್ರಹ್ಮವನ್ನು ಉಪಾಸನಮಾಡುವವರಿಗೂ ಅರ್ಚಿರಾದಿಮಾರ್ಗವನ್ನು ಹೇಳಲಾಗಿದೆ. "ಋತಂ ಸತ್ಯಂ ಪರಂ ಬ್ರಹ್ಮ" "ಸತ್ಯಂ ಜ್ಞಾನಂ" "ಅದನ್ನು ಸತ್ಯವೆಂದೇ ತಿಳಿಯಬೇಕು" ಎಂಬಲ್ಲಿ ಸತ್ಯಶಬ್ದವು ಪರಶಿವಬ್ರಹ್ಮದಲ್ಲಿಯೇ ಪ್ರಸಿದ್ಧವಾದ್ದರಿಂದಲೂ, ತಪಶ್ಶಬ್ದಕ್ಕೂ ಅದೇ ಅರ್ಥವಿರುವುದರಿಂದಲೂ ಸತ್ಯ ತಪಸ್ಸು ಈ ಎರಡು ಶಬ್ದಗಳೂ ಬ್ರಹ್ಮವನ್ನೇ ತಿಳಿಸುತ್ತವೆ. ಬೇರೆಕಡೆ "ಶ್ರದ್ಧಾಭಕ್ತಿಗಳಿಂದ ಕೂಡಿದ ಧ್ಯಾನಯೋಗದಿಂದ ತಿಳಿ" ಎಂದು ಶ್ರದ್ಧೆಯಿಂದ ಬ್ರಹ್ಮವನ್ನು ಉಪಾಸನ ಮಾಡಬೇಕೆಂದು ಹೇಳಿದೆ. "ಅದನ್ನು ಸತ್ಯವೆಂದು ತಿಳಿದು ಹುಡುಕಬೇಕು" ಎಂದಾರಂಭಿಸಿ "ಶ್ರದ್ಧೆಯನ್ನೇ ಹುಡುಕಬೇಕು" ಎಂಬಲ್ಲಿ ಹೇಳಿರುವುದೇ ಪಾಶುಪತವ್ರತ. ಮುಮುಕ್ಷುವು ಮತ್ತೆ ಹುಟ್ಟದಂತಾಗಲಿಕ್ಕೆ ಈ ಶಾಂಭವವ್ರತವನ್ನಾಚರಿಸಬೇಕು" "ಎಂದು ಅಥರ್ವಶಿಖೆ, ಶ್ವೇತಾಶ್ವತರ, ಬೃಹಜ್ಜಾಬಾಲ ಮೊದಲಾದಕಡೆಗಳಲ್ಲಿ ಪಾಶುಪತವಿದ್ಯೆಯಲ್ಲಿ ನಿರತರಾದವರಿಗೆ ಮತ್ತೆ ಹುಟ್ಟದಂತಾಗಿ ಪರಶಿವನಲ್ಲಿ ಐಕ್ಯವುಂಟಾಗುವುದೆಂದು ಹೇಳಲಾಗಿದೆ. ಸ್ಮೃತಿಯೂ ಸಹ " ಅಗ್ನಿ, ಜ್ಯೋತಿ, ಹಗಲು, ಶುಕ್ಲಪಕ್ಷ, ಉತ್ತರಾಯಣ ಈ ಕಾಲಗಳಲ್ಲಿ ಹೊರಟವರು ಬ್ರಹ್ಮವನ್ನೇ ಸೇರುತ್ತಾರೆ" ಎಂದೂ "ಲಿಂಗವನ್ನು ಅಂಗದಲ್ಲಿ ಅಳವಡಿಸಿಕೊಂಡವರು ಮತ್ತೆ ಹುಟ್ಟುವುದಿಲ್ಲ. ಅವರಿಗೆ ಬೇಗನೆ ಜ್ಞಾನ ದೊರೆತು ಅದರಿಂದ ಮೋಕ್ಷ ಲಭಿಸುತ್ತದೆ." ಎಂದೂ ಹೇಳಿದೆ. ಆದ್ದರಿಂದ ಎಲ್ಲಾ ಬಗೆಯ ಉಪಾಸಕರೂ ಅರ್ಚಿರಾದಿಮಾರ್ಗದಿಂದಲೇ ಹೊರಡಬೇಕೆಂಬ ನಿಯಮವು ಸ್ಪಷ್ಟವಾಗಿದೆ. ಹೀಗೆಯೇ ಬೇರೆಬೇರೆಶ್ರುತಿಸ್ಮೃತಿವಾಕ್ಯಗಳು ಬಹಳವಾಗಿವೆ. ಎಲ್ಲಾವಿದ್ಯೆಗಳಿಗೂ ಅನ್ವಯಿಸುವ ಈ ಗತಿಯೇ ಉಪಕೋಸಲವಿದ್ಯೆಗೂ ಅನ್ವಯಿಸುತ್ತದೆ. ಆದಿತ್ಯ ಚಂದ್ರ ಮೊದಲಾದ ಗ್ರಹಗಳಿಗೂ, ಅಶ್ವಿನಿ ಮೊದಲಾದ ನಕ್ಷತ್ರಗಳಿಗೂ, ಇಂದ್ರ ಮೊದಲಾದ ದಿಕ್ಪಾಲಕರಿಗೂ ಆಯಾ ಶರೀರದಿಂದಲೇ ಮುಕ್ತಿ ಹೊಂದುತ್ತದೆ. ಆದರೆ ಅವರಿಗೆ ಮನುಷ್ಯರಂತೆ ಸ್ಥೂಲಸೂಕ್ಷ್ಮಶರೀರಗಳ ವಿಯೋಗದ ಮೂಲಕ ಶಿವಭಾವವು ಸಂಭವಿಸುವುದಿಲ್ಲವೆಂದು ಹೇಳುವುದು ಯುಕ್ತವಲ್ಲ; ಯಾಕೆಂದರೆ "ಹದಿನೈದು ಕಲೆಗಳು, ಎಲ್ಲಾ ಇಂದ್ರಿಯಗಳು, ಕರ್ಮಗಳು, ವಿಜ್ಞಾನಮಯನಾದ ಜೀವ ಇವರೆಲ್ಲರೂ ಪರಶಿವನಲ್ಲಿ ಏಕೀಭವಿಸುತ್ತವೆ" ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಜೀವನ್ಮುಕ್ತರೂ, ಸೂರ್ಯ ಚಂದ್ರ ನಕ್ಷತ್ರ ಮೊದಲಾದ ದೇವತೆಗಳೂ ತಮ್ಮ ಅಧಿಕಾರ ಮುಗಿಯುವವರೆಗೂ ಅವರವರ ಸ್ಥಾನಗಳಲ್ಲಿರುವುದೇ ಅವರಿಗೆ ದೇಹಧಾರಣವೆನಿಸುತ್ತದೆ. ಈ ಅಧಿಕಾರದ ಅವಧಿ ಮುಗಿದಮೇಲೆ ಸ್ಥೂಲಸೂಕ್ಷ್ಮಶರೀರಗಳನ್ನು ತೊರೆಯುವಮೂಲಕ ಪರಶಿವಬ್ರಹ್ಮದಲ್ಲಿ ಐಕ್ಯವಾಗುವುದರಿಂದ ಅವರಿಗೂ ವಿದೇಹಕೈವಲ್ಯವು ದೊರಕುತ್ತದೆ.

**ನನು ಮೂರ್ತಬ್ರಹ್ಮೋಪಾಸಕಾನಾಂ ದಹರಾದಿವಿದ್ಯಾನಿಷ್ಠಾನಾಂ ಅಪ್ರಾಕೃತದಿವ್ಯಮಂಗಳವಿಗ್ರಹವಿಶಿಷ್ಟತ್ವೇನ ಸರ್ವೈಶ್ವರ್ಯಸಂಪನ್ನ ಮಹಾಕೈಲಾಸೇ ಸಾಲೋಕ್ಯಾದಿನಿತ್ಯಮಂಗಳವೈಭವಚಿದ್ವಿಲಾಸಾನಂದಾ**

ನುಭವೋಽಸ್ತು. "ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚಾಮೂರ್ತಮೇವ ಚ" ಇತಿ ಶ್ರುತೌ ಪರಶಿವಬ್ರಹ್ಮಣಃ ರೂಪದ್ವಯಾವಗಮಾತ್ ಅಮೂರ್ತಬ್ರಹ್ಮೋಪಾಸಕಾನಾಂ ಕಾ ಗತಿರಿತ್ಯಾಶಂಕಾಯಾಂ ಅಧಿಕರಣಾಂತರೇಣಾಹ. ಅಕ್ಷರಾದ್ಯಧಿಕರಣಂ || ೧೪ ||

ಅಕ್ಷರಧಿಯಾಂ ತ್ವವರೋಧಸ್ಸಾಮಾನ್ಯತದ್ಭಾವಾಭ್ಯಾಮೌಪಸದವತ್ತದುಕ್ತಂ || ೩೩ || ಅನಿಯಮಸ್ಸರ್ವೇಷಾಮಿತಿ ಸೂತ್ರೇ ಮೂರ್ತಪರಶಿವಬ್ರಹ್ಮೋಪಾಸಕಾನಾಂ ಸರ್ವೇಷಾಮಪಿ ಪರಶಿವಬ್ರಹ್ಮಲೋಕಪ್ರಾಪ್ತಿರಿತ್ಯುಕ್ತಂ. ಅಕ್ಷರಧಿಯಾಂ ನಿರವಯಪರಶಿವಬ್ರಹ್ಮಸಾಕ್ಷಾತ್ಕಾರವತಾಂ ತು ಅವರೋಧಃ ಪರಲೋಕಗಮನಪ್ರತಿಬಂಧಃ ಪರಲೋಕಗಮನಾಭಾವ ಏವಾಂಗೀಕರ್ತವ್ಯಃ. ಕುತಃ? ಸಾಮಾನ್ಯತದ್ಭಾವಾಭ್ಯಾಂ. ಅಮೂರ್ತಬ್ರಹ್ಮಸಾಕ್ಷಾತ್ಕಾರವತಾಂ ಸರ್ವೇಷಾಮಪಿ ಲಿಂಗಶರೀರನಾಶಸ್ಯ ಸಮಾನತ್ವಾತ್ ತದ್ಭಾವಾತ್ ಬ್ರಹ್ಮಣ್ಯೇಕಭಾವಾತ್ ತಾದಾತ್ಮ್ಯಾತ್ ಔಪಸದವದ್ಯಥಾ ಔಪಸದಾನಾಂ ಯಜ್ಞಾದಿಕರ್ಮಕರ್ತೄಣಾಂ ಸರ್ವೇಷಾಂ ಸ್ವರ್ಗಲೋಕಪ್ರಾಪ್ತಿಸ್ತದ್ವತ್. ಪೂರ್ವೋಕ್ತಸೌಧನ್ಯಾಯೇನ ಮೂರ್ತಾಮೂರ್ತಪರಶಿವಬ್ರಹ್ಮಸಾಕ್ಷಾತ್ಕಾರವತಾಂ ಸರ್ವೇಷಾಮಪಿ ಲಿಂಗಶರೀರೇಣ ಸಹ ಬ್ರಹ್ಮಣ್ಯೇಕೀಭಾವಸ್ಯ ಚ ತುಲ್ಯತ್ವಾತ್. ತತ್ರ ಪ್ರಮಾಣಮಾಹ. ತದುಕ್ತಂ "ನ ತಸ್ಯ ಪ್ರಾಣಾ ಉತ್ಕ್ರಾಮಂತೇ ತತ್ರೈವ ಸಮಲೀಯಂತೇ," "ಪರೇಽವ್ಯಯೇ ಸರ್ವ ಏಕೀಭವಂತಿ" ಇತ್ಯಾದಿಶ್ರುತಿಷು ಪರಶಿವಬ್ರಹ್ಮಸಾಕ್ಷಾತ್ಕಾರವತಾಂ ಭಕ್ತಾನಾಂ ಲಿಂಗಶರೀರೇಣ ಸಹ ಪರಶಿವಬ್ರಹ್ಮೈಕ್ಯಂ ಪ್ರತಿಪಾದಿತಮಿತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಏತೇನ ಮುಕ್ತಾನಾಮಪಿ ಲಿಂಗಶರೀರಪ್ರಧಾನಸಾಧಕದ್ವೈತವಿಶಿಷ್ಟಾದ್ವೈತಮತದ್ವಯಂ ಜಡಾಜಡಯೋರೇಕತ್ವಾಸಂಭವಾತ್, ರಜ್ಜುಸರ್ಪವಜ್ಜೀವಸ್ಯ ಮಿಥ್ಯಾತ್ವವ್ಯವಸ್ಥಾಪಕಶೂನ್ಯಾದ್ವೈತಮಿಥ್ಯಾದ್ವೈತಮತದ್ವಯಂ ಚ ಸರ್ವಶ್ರುತಿಪ್ರಾಮಾಣ್ಯದ್ವೈತಾದ್ವೈತಾಭಿಧಾನಮುಖ್ಯವೈದಿಕಮತೇನ ಬೌದ್ಧಾದಿವತ್ ಶ್ರುತ್ಯೇಕದೇಶಪ್ರಾಮಾಣ್ಯಾನ್ನಿರಸ್ತಂ. ಗಾರ್ಗಿಬ್ರಾಹ್ಮಣೇ ಬೃಹದಾರಣ್ಯಕೇ ಶ್ರೂಯತೇ. "ಏತದ್ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿವದಂತ್ಯಸ್ಥೂಲಮನಣ್ವಹ್ರಸ್ವಮದೀರ್ಘಮಲೋಹಿತಮಸ್ನೇಹಮಚ್ಛಾಯಮತಮೋಽವಾಯ್ವನಾಕಾಶಮಸಂಗಮರಸಮಗಂಧಮಚಕ್ಷುಷ್ಕಮಶ್ರೋತ್ರಮವಾಗಮನೋಽತೇಜಸ್ಕಮಪ್ರಾಣಮಸುಖಮಮಾತ್ರಮನಂತರಮಬಾಹ್ಯಂ ನ ತದಶ್ನಾತಿ ಕಿಂಚನ । ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ ||" ಇತಿ. ತಥಾ

ಅಥರ್ವಣೇ " ಅಥ ಪರಾ ಯಯಾ ತದಕ್ಷರಮಧಿಗಮ್ಯತೇ," " ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃಶ್ರೋತ್ರಂ ತದಪಾಣಿಪಾದಂ", " ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ ಭೂತಯೋನಿಂ ಪರಿಪಶ್ಯಂತಿ ಧೀರಾಃ", " ಯಥೋರ್ಣನಾಭಿಃ ಸೃಜತೇ ಗೃಹ್ಯತೇ ಚ ಯಥಾ ಪೃಥಿವ್ಯಾಂ ಓಷಧಯಃ ಸಂಭವಂತಿ। ಯಥಾ ಸತಃ ಪುರುಷಾತ್ಕೇಶಲೋಮಾನಿ ತಥಾಕ್ಷರಾತ್ಸಂಭವತೀಹ ವಿಶ್ವಂ॥ " ಇತಿ. ತತ್ರ ಸಂಶಯಃ ಕಿಮಿಮೇ ಅಕ್ಷರಶಬ್ದನಿರ್ದಿಷ್ಟಬ್ರಹ್ಮಸಂಬಂಧಿತಯಾ ಶ್ರುತಾಃ ಅಸ್ಥೂಲತ್ವಾದಯಃ ಪ್ರಪಂಚಪ್ರತ್ಯನೀಕತಾಸ್ವರೂಪಾಃ ಸರ್ವಾಸು ಬ್ರಹ್ಮವಿದ್ಯಾಸ್ವನುಸಂಧೇಯಾಃ? ಉತ ಯತ್ರ ಶ್ರೂಯತೇ ತತ್ರೈವೇತಿ. ಕಿಂ ಯುಕ್ತಂ? ಯತ್ರ ಶ್ರುತಾಸ್ತತ್ರೈವೇತಿ. ಕುತಃ? ವಿದ್ಯಾಂತರಸ್ವರೂಪಭೂತಾನಾಂ ಗುಣಾನಾಂ ವಿದ್ಯಾಂತರಸ್ವರೂಪತ್ವೇ ಪ್ರಮಾಣಾಭಾವಾತ್ ಪ್ರತಿಷೇಧರೂಪಾಣಾಮೇಷಾಂ ಆನಂದಾದಿವತ್ಸ್ವರೂಪಾವಗಮೋಪಾಯತ್ವಾಭಾವಾಚ್ಚ ಆನಂದಾದಿಭಿರವಗತಸ್ವರೂಪೇ ಹಿ ಬ್ರಹ್ಮಣಿ ಸ್ಥೂಲತ್ವಾದಯಃ ಪ್ರಪಂಚಧರ್ಮಾಃ ಪ್ರತಿಷಿಧ್ಯಂತೇ, ನಿರಾಲಂಬಸ್ಯ ಪ್ರತಿಷೇಧಾಯೋಗಾತ್. ಏವಂ ಪ್ರಾಪ್ತೇ ಪ್ರಚಕ್ಷ್ಮಹೇ. ಅಕ್ಷರಧಿಯಾಂ ತ್ವವರೋಧಃ ಇತ್ಯಾದಿನಾ. ಅಕ್ಷರಬ್ರಹ್ಮಸಂಬಂಧಿನಾಂ ಅಸ್ಥೂಲತ್ವಾದಿಗುಣಾನಾಂ ಸರ್ವಬ್ರಹ್ಮವಿದ್ಯಾಸ್ವವಿರೋಧಃ ಸಂಗತಮಿತ್ಯರ್ಥಃ. ಉತ ಅಕ್ಷರಬ್ರಹ್ಮಸಾಕ್ಷಾತ್ಕಾರಧಿಯಾಂ ಭಕ್ತಾನಾಂ ಲೋಕಾಂತರಪ್ರಾಪ್ತಿವಿರೋಧೋ ವಾ ಸ್ಯಾತ್. ಕುತಃ? ಸಾಮಾನ್ಯತದ್ಭಾವಾಭ್ಯಾಂ. ಸರ್ವೇಷೂಪಾಸನೇಷು ಉಪಾಸ್ಯಾಕ್ಷರಸ್ಯ ಪರಶಿವಬ್ರಹ್ಮಣಸ್ಸಮಾನತ್ವಾದೇಕತ್ವಾತ್, ತದ್ಭಾವಾತ್ " ನಾಶಃ ಕಾರಣಲಯಃ " ಇತಿ ನ್ಯಾಯೇನ ಲಿಂಗಶರೀರವಿಲಯಪೂರ್ವಕಶಿವತ್ವಪ್ರಾಪ್ತಿಸದ್ಭಾವಾಚ್ಚ. ಅಸಾಧಾರಣಾಕಾರೇಣ ಗ್ರಹಣಂ ಹಿ ವಸ್ತುನೋ ಗ್ರಹಣಂ. ನಚ ಕೇವಲಾನಂದಾದಿ ಬ್ರಹ್ಮಣಸ್ಸಾಧಾರಣಮಾಕಾರಮುಪಸ್ಥಾಪಯತಿ, ಪ್ರತ್ಯಗಾತ್ಮನ್ಯಪ್ಯಾನಂದಾದೇರ್ವಿದ್ಯಮಾನತ್ವಾತ್. ಹೇಯಪ್ರತ್ಯನೀಕೋ ಹ್ಯಾನಂದಾದಿ ಬ್ರಹ್ಮಣಸ್ಸಾಧಾರಣಂ ರೂಪಂ. ಪ್ರತ್ಯಗಾತ್ಮನಸ್ತು ಸ್ವತೋ ಹೇಯವಿರಹಿಣೋಽಪಿ ಹೇಯಸಂಬಂಧಯೋಗ್ಯತಾಸ್ತಿ. ಹೇಯಪ್ರತ್ಯನೀಕತ್ವಂ ಚ ಚಿದಾತ್ಮಕಪ್ರಪಂಚಧರ್ಮಭೂತಸ್ಥೂಲತ್ವಾದಿವಿಪರೀತರೂಪಂ. ಅತೋಽಸಾಧಾರಣಾಕಾರೇಣ ಬ್ರಹ್ಮಾನುಸಂಧೇಯಂ. ಸ್ಥೂಲತ್ವಾದಿವಿಶೇಷಿತಜ್ಞಾನಾನಂದಾದ್ಯಾಕಾರಂ ಬ್ರಹ್ಮ ಅನುಸಂಧೇಯಂ. ಅಸ್ಥೂಲತ್ವಾದೀನಾಂ ಆನಂದಾದಿಬ್ರಹ್ಮಸ್ವರೂಪಪ್ರತೀತ್ಯಂತರ್ಭಾವಾತ್ ಸರ್ವಾಸು ಬ್ರಹ್ಮ

ವಿದ್ಯಾಸು ತದ್ವೈವ ಬ್ರಹ್ಮಾನುಸಂಧೇಯಂ. ಗುಣಾನಾಂ ಪ್ರಧಾನಾನುವರ್ತಿತ್ವೇ ದೃಷ್ಟಾಂತಮಾಹ ಔಪಸದವದಿತಿ. ಯಥಾ ಜಾಮದಗ್ನ್ಯ ಚತುರಾತ್ರಪುರೋಡಾಶಾದ್ಯುಪಾಸದ್ಗುಣಭೂತಃ ಸಾಮವೇದಪಠಿತಃ "ಅಗ್ನಿರ್ವೈ ಹೋತ್ರಂ" ಇತ್ಯಾದಿಮಂತ್ರಪ್ರಧಾನಾನುವರ್ತಿತಯಾ ಯಾಜುರ್ವೇದಿಕೇನೋಪಾಂಶುತ್ವೇನ ಪ್ರಯುಜ್ಯತೇ. ತದುಕ್ತಂ ಪ್ರಥಮಕಾಂಡೇ "ಗುಣಮುಖ್ಯವ್ಯತಿಕ್ರಮೇ ತದರ್ಥತ್ವಾನ್ಮುಖ್ಯೇನ ವೇದಸಂಯೋಗಃ" ಇತ್ಯುಚ್ಯತೇ. ಅಕ್ಷರಪದವಾಚ್ಯಸ್ಯ ಬ್ರಹ್ಮಣಃ ಕೇವಲನಿರ್ಗುಣತ್ವನಿರ್ವಿಶೇಷತ್ವಾಂಗೀಕಾರೇ ತದುಪಾಸನವಿರೋಧಃ. ಕಿಂಚ "ಅಥ ಪರಾ ಯಯಾ ತದಕ್ಷರಮಧಿಗಮ್ಯತೇ" ಇತ್ಯಾದಿನಾ ಬ್ರಹ್ಮಣೋ ವರ್ಣಗಾತ್ರಶ್ರೋತ್ರಾದಿನಿರಾಕರಣಪೂರ್ವಕತ್ವೇನ ನಿರವಯವತ್ವಂ ಪ್ರಸಾಧ್ಯ "ಅಕ್ಷರಾತ್ಸಂಭವತೀಹ ವಿಶ್ವಂ" ಇತ್ಯುಪಸಂಹಾರೇ ಊತವತ್ ಜಗದುಭಯಕಾರಣತ್ವಸ್ಯ ಅಕ್ಷರಪುರುಷ ಏವ ವ್ಯವಸ್ಥಾಪನಾತ್ ಸವಿಶೇಷತ್ವಂ ಸಗುಣತ್ವಂ ಚ ಬಾಲಾನಾಮಪಿ ವಿಜ್ಞಾಯತೇ. ಬೃಹದಾರಣ್ಯಕೇಽಪಿ "ಏತದ್ವೈ ತದಕ್ಷರಂ ಗಾರ್ಗಿ" ಇತ್ಯಾದಿನಾ ತದಕ್ಷರಪುರುಷಸ್ಯ ಪ್ರಾಕೃತಸರ್ವಧರ್ಮನಿಷೇಧಪೂರ್ವಕನಿರವಯವತ್ವಂ ಪ್ರಸಾಧ್ಯ ತದುಪಸಂಹಾರೇ "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ" ಇತಿ ತಸ್ಯೈವ ಪ್ರಶಾಸಕತ್ವಾದಿಧರ್ಮವ್ಯಪದೇಶಾತ್ಸಗುಣತ್ವಂ ಸವಿಶೇಷತ್ವಂಚಾರ್ಥಾತ್ಸಿದ್ಧಂ.

ದಿವ್ಯಮೂರ್ತರೂಪವನ್ನು ಉಪಾಸನಮಾಡುತ್ತಲೇ ದಹರಾದಿವಿದ್ಯೆಯಲ್ಲಿ ನಿರತರಾದವರು ಅಪ್ರಾಕೃತದಿವ್ಯಮಂಗಳವಿಗ್ರಹದಿಂದ ಸರ್ವೈಶ್ವರ್ಯಭರಿತವಾದ ಮಹಾಕೈಲಾಸದಲ್ಲಿ ಸಾಲೋಕ್ಯ ಮೊದಲಾದ ಚಿದಾನಂದವನ್ನು ಅನುಭವಿಸಲಿ. ಆದರೆ ಪರಶಿವನಿಗೆ ಮೂರ್ತಅಮೂರ್ತವೆಂದು ಎರಡುರೂಪಗಳಿರುವುದರಿಂದ ಕೇವಲ ಅಮೂರ್ತರೂಪವನ್ನೇ ಉಪಾಸನಮಾಡುವವರಿಗೆ ಏನು ಗತಿ ? ಎಂದಾಶಂಕಿಸಿ ಸಮಾಧಾನವನ್ನು ತಿಳಿಸುತ್ತಾನೆ. ಮೂರ್ತರೂಪವನ್ನು ಉಪಾಸನಮಾಡುವವರೆಲ್ಲರಿಗೂ ಶಿವಲೋಕವು ದೊರಕುತ್ತದೆ ಎಂದು ಹಿಂದೆ ಹೇಳಿಯಾಯಿತು. ಆದರೆ ಅಮೂರ್ತಪರಶಿವಬ್ರಹ್ಮವನ್ನು ಸಾಕ್ಷಾತ್ಕಾರಮಾಡಿಕೊಂಡವರಿಗಾದರೋ ಮುಕ್ತಿಗಾಗಿ ಪರಲೋಕಕ್ಕೆ ಹೋಗಬೇಕೆಂಬ ನಿರ್ಬಂಧವೇ ಇಲ್ಲ; ಯಾಕೆಂದರೆ ಅಮೂರ್ತಬ್ರಹ್ಮವನ್ನು ಸಾಕ್ಷಾತ್ಕಾರಮಾಡಿಕೊಂಡವರೆಲ್ಲರಿಗೂ ಲಿಂಗಶರೀರದ ನಾಶವು ಸಮಾನವೇ ಆಗಿದೆ. ಹಾಗೆಯೇ ಅಮೂರ್ತಬ್ರಹ್ಮೋಪಾಸಕರೆಲ್ಲರಿಗೂ ಬ್ರಹ್ಮದಲ್ಲಿ ಐಕ್ಯವು ಸಮಾನವೇ ಆಗಿದೆ. ಯಜ್ಞಾದಿಕರ್ಮಗಳನ್ನಾಚರಿಸಿದವರೆಲ್ಲರಿಗೂ ಸ್ವರ್ಗವು ಸಮಾನವಾಗಿ ದೊರಕುವಂತೆ ಉಪ್ಪರಿಗೆಯಮೇಲಕ್ಕೆ ಮೆಟ್ಟಲನ್ನು ಹತ್ತಿಹೋಗುವಂತೆ ಮೂರ್ತೋಪಾಸನದ ಮೂಲಕ ಅಮೂರ್ತರೂಪವನ್ನು ಸಾಕ್ಷಾತ್ಕರಿಸಿದವರೆಲ್ಲರೂ ಲಿಂಗಶರೀರದೊಡನೆ

ಬ್ರಹ್ಮದಲ್ಲಿ ಐಕ್ಯವನ್ನು ಹೊಂದುವರೆಂಬುದು ಸಮಾನವಾಗಿದೆ. "ಎಲ್ಲಾ ಕಲೆಗಳು ಇಂದ್ರಿಯಗಳು ಕರ್ಮಗಳು ಜೀವನು ಪರಮಾತ್ಮನಲ್ಲಿ ಏಕೀಭವಿಸುತ್ತಾರೆ" "ಅವನ ಪ್ರಾಣಗಳು ಹೊರಡುವುದಿಲ್ಲ; ಆದರೆ ಅಲ್ಲಿಯೇ ಲೀನವಾಗುತ್ತವೆ" ಎಂಬ ಶ್ರುತಿ ಗಳಲ್ಲಿ ಪರಶಿವಬ್ರಹ್ಮವನ್ನು ಸಾಕ್ಷಾತ್ಕಾರಮಾಡಿದವರಿಗೆ ಲಿಂಗಶರೀರದೊಡನೆ ಆ ಪರಶಿವಬ್ರಹ್ಮದಲ್ಲಿ ಐಕ್ಯವನ್ನು ಹೇಳಲಾಗಿದೆ. ಇದರಿಂದ ಮುಕ್ತರಿಗೂ ಲಿಂಗ ಶರೀರವಿರುವುದೆಂದು ತಿಳಿಸುವ ದ್ವೈತ ವಿಶಿಷ್ಟಾದ್ವೈತ ಮತಗಳೆರಡೂ ನಿರಾಕೃತ ವಾಗಿವೆ. ಹಾಗೆಯೇ ಜಡವಾದ ಶರೀರಕ್ಕೂ ಅಜಡವಾದ ಚೇತನಕ್ಕೂ ಐಕ್ಯವು ಸಂಭ ವಿಸದಿರುವುದರಿಂದ ರಜ್ಜು ಸರ್ಪದಂತೆ ಜೀವನನ್ನು ಮಿಥ್ಯೆ ಎಂದು ತಿಳಿಸುವ ಶೂನ್ಯಾ ದ್ವೈತ ಮತ್ತು ಮಿಥ್ಯಾದ್ವೈತಮತಗಳೆರಡೂ ಬೌದ್ಧಾದಿಮತಗಳಂತೆ ಶ್ರುತಿಯ ಒಂದೊಂದುಭಾಗವನ್ನು ಮಾತ್ರವೇ ಪ್ರಮಾಣವೆಂದು ಒಪ್ಪಿದ್ದರಿಂದ ಎಲ್ಲಾ ಶ್ರುತಿ ಗಳಿಗೂ ಸಮಪ್ರಾಮಾಣ್ಯವನ್ನು ಒಪ್ಪುವ ಈ ದ್ವೈತಾದ್ವೈತಮತದಿಂದ ನಿರಾಕೃತ ವಾಗಿವೆ. ಬೃಹದಾರಣ್ಯಕದಲ್ಲಿ "ಎಲೈ ಗಾರ್ಗಿಯೇ, ಜ್ಞಾನಿಗಳು ಇದನ್ನು ಅಕ್ಷರವೆಂದು ಹೇಳುತ್ತಾರೆ. ದಪ್ಪದೂ ಅಲ್ಲದೆ, ಸಣ್ಣದೂ ಅಲ್ಲದೆ, ಹ್ರಸ್ವದೀರ್ಘಗಳಲ್ಲದೆ, ಕೆಂಪು ಬಣ್ಣವಿಲ್ಲದೆ, ಅಂಟುಗುಣವಿಲ್ಲದೆ, ನೆರಳೂ ಅಲ್ಲದೆ, ವಾಯು ಆಕಾಶಗಳ ಸಂಬಂಧ ವಿಲ್ಲದೆ, ರೂಪರಸಗಂಧಸ್ಪರ್ಶಗಳಿಲ್ಲದೆ, ಕಣ್ಣು ಕಿವಿಗಳಿಲ್ಲದೆ, ವಾಙ್ಮನೋಽಗೋಚರ ವಾಗಿ, ತೇಜಸ್ಸೂ ಅಲ್ಲದೆ, ಪ್ರಾಣವೂ ಅಲ್ಲದೆ, ಸುಖವೂ ಅಲ್ಲದೆ ಪರಿಮಿತವಲ್ಲದೆ, ಒಳಹೊರಗೆಂಬುದಿಲ್ಲದೆ, ಏನನ್ನೂ ತಿನ್ನದೆ ಯಾವುದಿದೆಯೋ ಇದೇ ಅಕ್ಷರವೆನಿಸಿದೆ. ಇದರ ಆಜ್ಞೆಯಿಂದಲೇ ಸೂರ್ಯಚಂದ್ರರು ನೆಲೆಯಾಗಿ ನಿಂತಿದ್ದಾರೆ" ಎಂದು ಹೇಳಿದೆ. ಅಥರ್ವಣದಲ್ಲಿ "ಯಾವ ಪರಾಶಕ್ತಿಯಿದೆಯೋ ಅದರಿಂದಲೇ ಅಕ್ಷರವು ನಿಂತಿದೆ. "ಕಣ್ಣಿಗೆ ಕಾಣದೆ, ಮನಸ್ಸಿಗೆ ಗೋಚರವಾಗದೆ, ಗೋತ್ರವರ್ಣಗಳಿಲ್ಲದೆ, ಚಕ್ಷುಃ ಶ್ರೋತ್ರಗಳಿಲ್ಲದೆ, ಪಾಣಿಪಾದಗಳಿಲ್ಲದೆ ನಿತ್ಯವೂ ವಿಭುವೂ ಸರ್ವಗತವೂ ಸೂಕ್ಷ್ಮವೂ ನಾಶರಹಿತವೂ ಸರ್ವಕಾರಣವೂ ಆದ ವಸ್ತುವನ್ನು ಧೀರರು ಕಾಣುತ್ತಾರೆ" "ಜೇಡರ ಹುಳವು ತನ್ನಿಂದಲೇ ನೂಲನ್ನು ಹೊರಪಡಿಸಿ ತನ್ನೊಳಗೇ ಸೇರಿಸಿಕೊಳ್ಳುವಂತೆ, ಪೃಥ್ವಿಯಲ್ಲಿ ಓಷಧಿಗಳು ಹುಟ್ಟುವಂತೆ, ಬದುಕಿರುವ ಪುರುಷನ ಶರೀರದಿಂದ ಕೇಶ ಲೋಮಗಳು ಹೊರಬರುವಂತೆ ಅಕ್ಷರದಿಂದ ವಿಶ್ವವೆಲ್ಲವೂ ಹೊರಬಿದ್ದಿವೆ" ಎಂದೂ ಹೇಳಿದೆ. ಇಲ್ಲಿ ಅಕ್ಷರನೆನಿಸಿದ ಬ್ರಹ್ಮದಲ್ಲಿ ನೆಲಸಿರುವುದಾಗಿ ಹೇಳಿರುವ ಪ್ರಪಂಚಕ್ಕೆ ವಿರುದ್ಧವಾದ ಅಸ್ಥೂಲತ್ವ ಮೊದಲಾದ ಗುಣಗಳನ್ನು ಎಲ್ಲಾ ಬ್ರಹ್ಮವಿದ್ಯೆಗಳಲ್ಲೂ ಸೇರಿಸಿಕೊಳ್ಳಬೇಕೇ? ಅಥವಾ ಅವನ್ನು ಎಲ್ಲಿಹೇಳಿದೆಯೋ ಅಲ್ಲಿಗೆ ಮಾತ್ರವೇ ಸೇರಿಸಿ ಕೊಳ್ಳಬೇಕೆ? ಎಂದು ಸಂಶಯಬರುತ್ತದೆ. ಒಂದು ವಿದ್ಯೆಯ ಸ್ವರೂಪವೆನಿಸಿದ ಗುಣಗಳು ಬೇರೆ ವಿದ್ಯೆಯ ರೂಪವಾಗಲು ಪ್ರಮಾಣವಿಲ್ಲದ್ದರಿಂದ "ಸ್ಥೂಲವಲ್ಲ" ಎಂದು ಮುಂತಾಗಿ ನಿಷೇಧರೂಪವಾದ ಗುಣಗಳು ಆನಂದಾದಿಗಳಂತೆ ಸ್ವರೂಪವನ್ನು ತಿಳಿಸದಿರುವುದರಿಂದ ಆನಂದಾದಿಗಳಿಂದ ಬ್ರಹ್ಮದ ಸ್ವರೂಪವನ್ನು ತಿಳಿದಮೇಲೆಯೇ

ಅದರಲ್ಲಿ ಸ್ಥೂಲತ್ವ ಮೊದಲಾದ ಪ್ರಪಂಚಧರ್ಮಗಳನ್ನು ನಿಷೇಧಿಸುತ್ತವೆ. ನಿರಾಶ್ರಯವಾದ್ದಕ್ಕೆ ನಿಷೇಧವು ಹೊಂದವುದಿಲ್ಲವಾದ್ದರಿಂದ ಬ್ರಹ್ಮವನ್ನು ಸಾಧಿಸಿಕೊಂಡು ಅನಂತರವೇ ಅದರಲ್ಲಿ ಪ್ರಪಂಚಧರ್ಮಗಳನ್ನು ನಿಷೇಧಿಸುವುದು ಯುಕ್ತವಾಗುತ್ತದೆ. ಹೀಗೆ ಆಕ್ಷೇಪಬಂದರೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಅಕ್ಷರರೂಪವಾದ ಬ್ರಹ್ಮಕ್ಕೆ ಸಂಬಂಧಿಸಿದ ಅಸ್ಥೂಲತ್ವ ಮೊದಲಾದ ಧರ್ಮಗಳು ಎಲ್ಲಾ ಬ್ರಹ್ಮವಿದ್ಯೆಗಳಲ್ಲೂ ಅನ್ವಯಿಸುತ್ತವೆ. ಆದರೆ ಈ ಅಕ್ಷರರೂಪವಾದ ಬ್ರಹ್ಮವನ್ನು ಸಾಕ್ಷಾತ್ಕಾರ ಮಾಡಿಕೊಂಡ ಭಕ್ತರು ಬೇರೆ ಲೋಕಕ್ಕೆ ಹೋಗುವರೆಂಬುದು ವಿರುದ್ಧವಾಗುವುದು ; ಯಾಕೆಂದರೆ ಎಲ್ಲಾ ಉಪಾಸನಗಳಲ್ಲೂ ಉಪಾಸ್ಯವಾದ ಅಕ್ಷರಬ್ರಹ್ಮವು ಒಂದೇ ಬಗೆಯಾಗಿದ್ದು ಉಪಾಸಕನು ಆ ಬ್ರಹ್ಮಭಾವವನ್ನೇ ಹೊಂದುತ್ತಾನೆ. "ಕಾರ್ಯವು ಕಾರಣದಲ್ಲಿ ಲೀನವಾಗುವುದೇ ನಾಶವೆನಿಸುತ್ತದೆ" ಯಾದ್ದರಿಂದ ಲಿಂಗಶರೀರವನ್ನು ಕಳೆದುಕೊಂಡ ಮುಕ್ತನು ಶಿವನೇ ಆಗುವನೆಂಬುದು ಎಲ್ಲಾ ವಿದ್ಯೆಗಳ ಅಕ್ಷರೋಪಾಸನೆಗೂ ಸಮಾನವೇ ಆಗಿದೆ. ಅಸಾಧರಣವಾದ ಆಕಾರವನ್ನು ಗ್ರಹಿಸುವುದೇ ಒಂದು ವಸ್ತುವಿನ ಗ್ರಹಣವೆನಿಸುತ್ತದೆ. ಆದರೆ ಕೇವಲ ಆನಂದ ಮೊದಲಾದ ಧರ್ಮಗಳನ್ನು ತಿಳಿದದ್ದರಿಂದಲೇ ವಸ್ತುವಿನ ಅಸಾಧಾರಣವಾದ ಆಕಾರ ತಿಳಿಯುವುದಿಲ್ಲ. ಜೀವನಲ್ಲಿಯೂ ಆನಂದಾದಿಗುಣಗಳು ಇರುವುದರಿಂದ ಹೇಯವಾದ ತ್ರಿಗುಣಗಳಿಲ್ಲದಿರುವಿಕೆಯೇ ಅನಂದವೆನಿಸಿ ಬ್ರಹ್ಮದ ಅಸಾಧಾರಣಧರ್ಮವಾಗುತ್ತದೆ. ಜೀವನಲ್ಲಿ ಸ್ವತಃ ಹೇಯಗುಣವಿಲ್ಲದಿದ್ದರೂ ಅವನಿಗೆ ಹೇಯಗುಣದ ಸಂಪರ್ಕವುಂಟಾಗಬಹುದು. ಆದರೆ ಹೇಯಸಂಬಂಧವೇ ಇಲ್ಲದೆ ಚಿದ್ರೂಪವೆನಿಸಿ ಪ್ರಪಂಚದ ಸ್ಥೂಲತ್ವ ಮೊದಲಾದ ಗುಣಗಳಿಗೆ ವಿರುದ್ಧವಾಗಿರುವುದೇ ಬ್ರಹ್ಮದ ಅಸಾಧಾರಣವಾದ ಆಕಾರವೆನಿಸಿದೆ. ಸ್ಥೂಲತ್ವ ಮೊದಲಾದ ಧರ್ಮಗಳಿಂದೊಡಗೂಡಿ ಜ್ಞಾನ ಆನಂದಗಳೇ ಸ್ವರೂಪವೆನಿಸಿರುವ ಪರಶಿವಬ್ರಹ್ಮವೇ ನಮಗೆ ಧ್ಯೇಯವೆನಿಸಿದೆ. ಅಸ್ಥೂಲತ್ವ ಮೊದಲಾದವೂ ಸಹ ಆನಂದ ಮೊದಲಾದ ಬ್ರಹ್ಮಸ್ವರೂಪದಲ್ಲಿಯೇ ಸೇರುವುದರಿಂದ ಎಲ್ಲಾ ಬ್ರಹ್ಮವಿದ್ಯೆಗಳಲ್ಲೂ ಅವಷ್ಟನ್ನೇ ಸೇರಿಸಿಕೊಳ್ಳಬೇಕು. ಗುಣಗಳು ಪ್ರಧಾನವಾದ ಬ್ರಹ್ಮವನ್ನೇ ಅನುಸರಿಸಿಕೊಂಡಿರುತ್ತವೆ ಎಂಬುದಕ್ಕೆ ಇಲ್ಲಿದೃಷ್ಟಾಂತವನ್ನು ತಿಳಿಸುತ್ತಾನೆ. ನಾಲ್ಕುದಿನಗಳಲ್ಲಿ ನಡೆಸಬಹುದಾದ ಜಮದಗ್ನಿಸಂಬಂಧವಾದ ಯಜ್ಞದಲ್ಲಿ ವಿಹಿತವಾದ ಉಪಸತ್ ಎಂಬ ಕರ್ಮದ ಅಂಗವಾಗಿ ಉದ್ಗಾತೃವಿಗೆ ಸೇರಿದ ಮಂತ್ರವು ವಿಹಿತವಾಗಿದ್ದರೂ, ಮಂತ್ರವು ಅಂಗಿಯನ್ನು ಅನುಸರಿಸಿಯೇ ಬರುವುದರಿಂದ ಅಧ್ವರ್ಯುವಿಗೂ ಅದರಲ್ಲಿ ಸಂಬಂಧವುಂಟೆಂದು ಪೂರ್ವಕಾಂಡದಲ್ಲಿ ಹೇಳಲಾಗಿದೆ. ಹಾಗೆ ಇಲ್ಲಿಯೂ ಪ್ರಧಾನವಾದ ಬ್ರಹ್ಮಕ್ಕೆ ಸಂಬಂಧಿಸಿದಕಡೆಗಳಲ್ಲೂ ಅದರ ಅಂಗವಾದ ಅಸ್ಥೂಲತ್ವ ಮೊದಲಾದ ಗುಣಗಳಿಗೂ ಸಂಬಂಧವಿದ್ದೇಇರುತ್ತದೆ. ಅಕ್ಷರವೆನಿಸಿದ ಬ್ರಹ್ಮವು ನಿರ್ಗುಣ ಮತ್ತು ನಿರ್ವಿಶೇಷವಾದರೂ ಅದನ್ನು ಉಪಾಸನಮಾಡುವುದರಲ್ಲಿ ಯಾವ ವಿರೋಧವೂ ಇಲ್ಲ. "ಪರವಿದ್ಯೆಯಿಂದ ಅಕ್ಷರವನ್ನು ತಿಳಿಯಬಹುದು" ಎಂಬಲ್ಲಿ

ಬ್ರಹ್ಮಕ್ಕೆ ವರ್ಣಗಾತ್ರಗಳೂ ಇಂದ್ರಿಯಗಳು ಇಲ್ಲವಾದ್ದರಿಂದ ಅದನ್ನು ನಿರವಯವ ನೆಂದು ಸಾಧಿಸಿ "ಅಕ್ಷರದಿಂದಲೇ ವಿಶ್ವವು ಹುಟ್ಟುತ್ತದೆ" ಎಂದು ಕೊನೆಯಲ್ಲಿ ಜೇಡರಹುಳದಂತೆ ಅಕ್ಷರಪುರುಷನೇ ಜಗತ್ತಿನ ಉಭಯಕಾರಣನೆಂದು ನಿರ್ಣಯಿಸಿರು. ವುದರಿಂದ ಬ್ರಹ್ಮ ಸವಿಶೇಷವೆಂದೂ ಸಗುಣವೆಂದೂ ಬಾಲಕರಿಗೂ ತಿಳಿದುಬರುತ್ತದೆ. ಬೃಹದಾರಣ್ಯಕದಲ್ಲಿ ಅಕ್ಷರಪುರುಷನಿಗೆ ಎಲ್ಲಾ ಧರ್ಮಗಳನ್ನು ನಿಷೇಧಿಸಿ ಅವನನ್ನು ನಿರವಯವನೆಂದು ಹೇಳಿ ಕೊನೆಯಲ್ಲಿ ಇವನ "ಶಾಸನದಿಂದಲೇ ಸೂರ್ಯಚಂದ್ರರು. ನಿಂತಿದ್ದಾರೆ" ಎಂಬಲ್ಲಿ ಆವನಲ್ಲಿಯೇ ಶಾಸಕತ್ವಾದಿ ಗುಣಗಳನ್ನು ಹೇಳಿದ್ದರಿಂದ ಅವನು ಸವಿಶೇಷನೆಂಬುದು ಸಿದ್ಧವಾಯಿತು.

ನನ್ವೇವಂ ಸರ್ವಾಸು ಬ್ರಹ್ಮವಿದ್ಯಾಸು ಬ್ರಹ್ಮಣ ಏವ ಗುಣಿತ್ವಾತ್ ಗುಣಾನಾಂ ಚ ಪ್ರಧಾನಾನುವರ್ತಿತ್ವಾತ್ "ಸರ್ವಕರ್ಮಸರ್ವಗಂಧ. ಸರ್ವರಸ" ಇತ್ಯಾದೇರ್ಗುಣಜಾತಸ್ಯ ಅಪ್ರತಿಬಂಧಂ ವ್ಯವಸ್ಥಿತಸ್ಯಾಪ್ಯ ವ್ಯವಸ್ಥಾ ಸ್ಯಾತ್ ಇತ್ಯಾಶಂಕ್ಯ ತತ್ರಾಹ. ಇಯದಾಮನನಾತ್ ॥ ೩೪ ॥ ಆಮನನಂ ಆಭಿಮುಖ್ಯೇನ ಮನನಮನುಚಿಂತನಂ. ಆಮನನಾದ್ಧೇ. ತೋರಿಯದೇವ ಗುಣಜಾತಂ ಸರ್ವತ್ರಾನುಸಂಧೇಯತ್ವೇನ ಪ್ರಾಪ್ತಂ. ಯದಸ್ಥೂಲತ್ವಾದಿವಿಶೇಷಿತಮಾನಂದಾದಿಕಂ ಯೇನ ಗುಣಜಾತೇನ. ವಿನಾ ಬ್ರಹ್ಮಸ್ವರೂಪಸ್ಯೇತರವ್ಯಾವೃತ್ತಸ್ಯಾನುಸಂಧಾನಂ ನ ಸಂಭವತಿ ತದೇವ ಸರ್ವತ್ರಾನುವರ್ತನೀಯಂ. ತಚ್ಚ ಇಯದೇವ. ಇತರೇ ತು. ಸರ್ವಕರ್ಮೇತ್ಯಾದಯಃ ಪ್ರಥಮಾನುವರ್ತಿನೋಽಪಿ ಚಿಂತನೀಯತ್ವೇನ. ವ್ಯವಸ್ಥಿತಾಃ. ಪರೇ ತು ಸಾಮಾನ್ಯತದ್ಭಾವಾಭ್ಯಾಂ ಪ್ರತಿಷೇಧಮುಖೇನ. ಪ್ರತಿಪಾದನಪರಸ್ಯ ಸಮಾನತ್ವಾದಕ್ಷರಸ್ಯ ಬ್ರಹ್ಮಾಭಿನ್ನತಯಾ ಪ್ರತ್ಯಭಿ ಜ್ಞಾನಾಚ್ಚೇತಿ ಯೋಜಯಂತಿ. ತತೋಽಪಿ ವರಂ ಉಕ್ತಾರ್ಥಪರತ್ವಂ. ನಿದರ್ಶಾನುಗುಣ್ಯಾದಂಗಾಂಗಿನಾಂ ಪ್ರಧಾನಾನುವರ್ತಿತ್ವೇ ಹಿ ತಾದೃ. ಶೋಪನ್ಯಾಸಃ. ಭಾವಾಭಾವರೂಪಧರ್ಮವಿಶೇಷಾದಾನಂದಾದಯ. ಇತ್ಯನೇನ ಪೌನರುಕ್ತ್ಯಮಿತ್ಯಾಹುಃ. ತದುಕ್ತಂ ಸತ್ಯಾದಿವಾಕ್ಯಾನಾಂ ಅತದ್ವ್ಯಾವೃತ್ತಿಪರತ್ವಾಭ್ಯುಪಗಮಾತ್ ತತ್ರಾಪಿ ಸ್ವರೂಪಾತಿರಿಕ್ತವ್ಯಾ. ವೃತ್ತಿರೂಪಧರ್ಮಾನಭ್ಯುಪಗಮಾತ್ ಸಕಲೇತರವ್ಯಾವೃತ್ತಸ್ವರೂಪಸ್ಯ ಸತ್ಯಾದಿವಾಕ್ಯಪ್ರತಿಪನ್ನಸ್ಯ ವ್ಯವಚ್ಛೇದ್ಯವಿಶೇಷವ್ಯಾವೃತ್ತಿಪ್ರತಿಪತ್ತೌ. ಪ್ರಯೋಜನಾಭಾವಾಚ್ಚ. ನಹಿ ಪಾಂಸುರಾಶೇರ್ವಿವಿಕ್ತಸ್ಯ ರತ್ನಸ್ಯ ಪುನಃ ಪುನಃ ಪ್ರತ್ಯೇಕಪಾಂಸುವ್ಯತಿರೇಚನೇ ಕಿಂಚಿತ್ಪ್ರಯೋಜನಂ. "ಋತಂ ಪಿಬಂತೌ" "ದ್ವಾ ಸುಪರ್ಣಾ" ಇತಿ ವಾಕ್ಯಯೋರ್ವಿದ್ಯಾಭೇದಾಭೇದ. ವಿಷಯಂ ಇಯದಾಮನನಾದಿತಿ ಸೂತ್ರಂ ಅಧಿಕರಣಾಂತರಮಾಹುಃ. ಉಭಯೋರ್ಭೋಕ್ತೃತ್ವಂ ಏಕತ್ರ, ಏಕಸ್ಯ ಭೋಕ್ತೃತ್ವಮನ್ಯಸ್ಯ.

ಚಾಭೋಕ್ತೃತ್ವಮನ್ಯತ್ರ ಇತಿ ವಿದ್ಯಾಭೇದಮುಕ್ತ್ವಾ ಛತ್ರಿನ್ಯಾಯೇನಾ ವಿರೋಧಾಜ್ಜೀವೋಪಾದಾನಸ್ಯ ತಾದಾತ್ಮ್ಯಪ್ರತಿಪಾದನಾರ್ಥತ್ವಾಚ್ಚ ರೂಪಭೇದಾದ್ವಿದ್ಯೈಕ್ಯಮಿತಿಯುಕ್ತಂ. ತದಯುಕ್ತಂ, ಛತ್ರಿನ್ಯಾಯಾದಿಭಿ ರರ್ಥೈಕತ್ವಸ್ಯ "ಗುಹಾಂ ಪ್ರವಿಷ್ಟಾವಾತ್ಮಾನೌ ಹಿ ತದ್ದರ್ಶನಾತ್" ಇತ್ಯತ್ರ ಸಿದ್ಧತ್ವಾತ್, ಸೂತ್ರಾಕ್ಷರಾಣಾಂ ತದಸಾಧಾರಣತ್ವಾಭಾವಾಚ್ಚ. ಇಯ ಚ್ಛಬ್ದೋ ಹಿ ದೇಶಕಾಲಸ್ವರೂಪಸಂಜ್ಞೇಯತ್ತಾಸಾಧಾರಣಃ. ಕಿಂಚ ಯದಾ ಪೈಂಗೀಶ್ರುತ್ಯನುಸಾರೇಣ ಸತ್ತ್ವದ್ವಿತೀಯಪ್ರತ್ಯಗಾತ್ಮ ಪರತ್ವಂ " ದ್ವಾ ಸುವರ್ಣಾ " ಇತಿ ವಾಕ್ಯಸ್ಯಾಭಿಮತಂ ತದಾ ದ್ವಯೋ ರಪಿ ಜೀವಸದ್ವಿತೀಯಪರಮಾತ್ಮಪರತ್ವಂ ವ್ಯಾಹೃತಂ. ಜೀವಸದ್ವಿತೀ ಯಪರಮಾತ್ಮಪರತ್ವೇಽಪಿ ಪೌನರಕ್ತ್ಯಮುಕ್ತಂ. ನನು ಪೌನರುಕ್ತ್ಯಂ ತತ್ಪ್ರಪಂಚನಾರ್ಥೋ ಹ್ಯಯಮಾರಂಭ ಇತಿ ಚೇನ್ನ ಅಧಿಕರಣಾಂತರ ನಿರೂಪ್ಯಾರ್ಥಾನಾಮಿಹ ಪ್ರಪಂಚನಾತ್ ಅಸ್ಯ ತೇಭ್ಯೋ ವೈಷಮ್ಯಾ ಭಾವಾಚ್ಚ. ಕಿಂಚ ಇಯದಿತಿ ಸೂತ್ರಪದಂ ನ ದ್ವಿತ್ವಸಂಖ್ಯಾವ್ಯವ ಚ್ಛೇದಮೇಕಾಂತತೋಽವಗಮಯತಿ. ತತಶ್ಚ " ವಿಶ್ವಮೇವೇದಂ ಪುರುಷಃ " " ಮಹಾನ್ ಪ್ರಭುರ್ವೈ ಪುರುಷಃ " ಇತ್ಯಾದಿಷು ಜಗದಾ ಕಾರವ್ಯವಚ್ಛೇದೇನ ವಿದ್ಯೈಕ್ಯಪರಂ ಸೂತ್ರಂ ಕಿಂ ನ ಸ್ಯಾತ್. ಯದಿ ಸಂಖ್ಯಾವ್ಯವಚ್ಛೇದಕತ್ವಮೇವಾಭಿಹಿತಂ ತರ್ಹಿ "ತ್ರಿವಿಧಂ ಬ್ರಹ್ಮೈತತ್ ಚತುಷ್ಪಾದ್ಬ್ರಹ್ಮ" ಇತಿಸಂಖ್ಯಾಂತರಾವಚ್ಛಿನ್ನಬ್ರಹ್ಮಪರವಾಕ್ಯವಿಷಯಂ ಕಿಂ ನ ಸ್ಯಾತ್, ಸರ್ವತ್ರ ಭೇದಾಭೇದಹೇತವಶ್ಚ ಉತ್ಪ್ರೇಕ್ಷಿತುಂ ಶಕ್ಯಾಃ, ಅತೋ ಯಥಾಕಥಂಚಿನ್ನಿರ್ವಹಣಾದಪೇಕ್ಷಿತಾರ್ಥಃ ಸಿದ್ಧತಿ.

ಹೀಗೆ ಎಲಾ ಬ್ರಹ್ಮವಿದ್ಯೆಗಳಲ್ಲೂ ಬ್ರಹ್ಮವೇ ಗುಣಿ ಎನಿಸಿದ್ದರಿಂದಲೂ, ಗುಣ ಗಳು ಪ್ರಧಾನವಾದ್ದನ್ನೇ ಅನುಸರಿಸುವುದರಿಂದಲೂ "ಅವನಲ್ಲಿಯೇ ಎಲ್ಲಕರ್ಮಗಳೂ ಎಲ್ಲಾಗಂಧಗಳೂ ಎಲ್ಲಾರಸಗಳೂ ನೆಲಸಿವೆ" ಎಂಬಲ್ಲಿ ಅವನಲ್ಲಿಯೇ ಗುಣಗಳೆಲ್ಲವೂ ನಿರಾತಂಕವಾಗಿ ನೆಲೆಗೊಂಡಿದ್ದರಿಂದ ಎಲ್ಲವನ್ನೂ ಎಲ್ಲಾಕಡೆಯೂ ಅನ್ವಯಿಸ ಬೇಕೆಂಬ ಅವ್ಯವಸ್ಥೆಯುಂಟಾದೀತೆಂದಾಶಂಕಿಸಿ ನಿರಾಕರಿಸುತ್ತಾನೆ. ಏಕಾಗ್ರತೆ ಯಿಂದ ಅವನನ್ನು ಧ್ಯಾನಿಸಲಿಕ್ಕಾಗಿಯೇ ಅವನಲ್ಲಿ ಗುಣಗಳನ್ನು ಹೇಳಲಾಗಿದೆ. ಆದ್ದರಿಂದ ಯಾವಗುಣವಿಲ್ಲದಿದ್ದರೆ ಬ್ರಹ್ಮಸ್ವರೂಪವನ್ನು ಸ್ಪಷ್ಟವಾಗಿ ತಿಳಿಯಲಿಕ್ಕಾ ಗುವುದಿಲ್ಲವೋ ಅಂತಹ ಸ್ಥೂಲತ್ವ ಮೊದಲಾದ ವಿಶೇಷಗಳಿಂದ ಕೂಡಿದ ಆನಂದಾದಿ ಗುಣಗಳನ್ನೇ ಎಲ್ಲಾಕಡೆಯಲ್ಲೂ ಅನುಸಂಧಾನಮಾಡಬೇಕು. " ಸರ್ವಕರ್ಮ ಸರ್ವ ಗಂಧ" ಮೊದಲಾದ ಗುಣಗಳಾದರೋ ಪ್ರಧಾನವಾದ ಬ್ರಹ್ಮವನ್ನೇ ಅನುಸರಿಸಿ ಕೊಂಡುಬಂದಿದ್ದರು ಸಹ ಆಯಾ ವಿದ್ಯೆಗಳಲ್ಲಿಯೇ ವ್ಯವಸ್ಥಿತವಾಗಿ ಸೇರುತ್ತವೆ. ಇಲ್ಲಿ ಕೆಲವರು " ಸಾಮಾನ್ಯತದ್ಭಾವಾತ್ " ಎಂಬ ಸೂತ್ರದಲ್ಲಿ ನಿಷೇಧವನ್ನು

ಪ್ರತಿಪಾದಿಸುವ ಕ್ರಮವು ಎರಡುಕಡೆಗಳಲ್ಲೂ ಸಮಾನವಾಗಿದೆ ಎಂದು "ಸಾಮಾನ್ಯ" ಪದಕ್ಕೂ, ಬ್ರಹ್ಮವನ್ನು ಎಲ್ಲಾಕಡೆಗಳಲ್ಲೂ ಒಂದೇಬಗೆ ಎಂದು ಸ್ಮರಿಸಬೇಕೆಂದು "ತದ್ಭಾವ" ಎಂಬ ಪದಕ್ಕೂ ಅರ್ಥವನ್ನು ಹೇಳುತ್ತಾರೆ. ಇದಕ್ಕಿಂತಲೂ ನಾವು ಹಿಂದೆಹೇಳಿದ ಅರ್ಥವೇ ಯುಕ್ತವಾಗಿ ಹೊಂದುತ್ತದೆ. ಈ ಅಧಿಕರಣದಲ್ಲಿ ಅಕ್ಷರತ್ವಾದಿಧರ್ಮಗಳು ಪರಮಾತ್ಮನ ಸ್ವರೂಪಕ್ಕೆ ಸೇರಿದವಾದ್ದರಿಂದ ಆನಂದಾದ್ಯಧಿಕರಣದಿಂದಲೇ ಈ ಗುಣಗಳಿಗೂ ಅನ್ವಯಬರಬಹುದಾದ್ದರಿಂದ ಇಲ್ಲಿ ಪ್ರತ್ಯೇಕವಾದ ಅಧಿಕರಣವನ್ನು ಆರಂಭಿಸಿದ್ದು ಪುನರುಕ್ತವಾಗುತ್ತದೆ ಎಂದು ಕೆಲವರು ಹೇಳುತ್ತಾರೆ. ಇದು ಸರಿಯಲ್ಲ. ಸತ್ಯ ಮೊದಲಾದ ವಾಕ್ಯಗಳು ಧರ್ಮವನ್ನು ಪ್ರತಿಪಾದಿಸದೆ ಅಸತ್ಯದ ವ್ಯಾವೃತ್ತಿಯನ್ನು ಮಾತ್ರವೇ ತಿಳಿಸುತ್ತವೆ. ಆದರೆ ಅದು ಸ್ವರೂಪಕ್ಕಿಂತ ಬೇರೆಯಾದ ಧರ್ಮವಾಗುವುದಿಲ್ಲ. ಹೀಗೆ ಸಕಲವಿಲಕ್ಷಣನೆಂದು ಸತ್ಯಾದಿ ವಾಕ್ಯಗಳಿಂದ ತಿಳಿದು ಬರುವ ಬ್ರಹ್ಮದಲ್ಲಿ ಮತ್ತೆ ವ್ಯಾವೃತ್ತಿರೂಪವಾದ ಆಕಾರವನ್ನೇ ಹೇಳುವುದು ನಿಷ್ಪ್ರಯೋಜನವಾಗುತ್ತದೆ. ಧೂಳಿನ ಸಮುದಾಯದಿಂದ ಬೇರೆಯಾದ ರತ್ನವನ್ನು ಧೂಳಿನಿಂದ ಬೇರೆಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ ಆದ್ದರಿಂದ ಆನಂದಾಧಿಕರಣದಲ್ಲಿ ಹೇಳಿರುವ ಬ್ರಹ್ಮಸ್ವರೂಪಕ್ಕಿಂತಲೂ ಈ ಅಧಿಕರಣದಲ್ಲಿ ಹೇಳಿರುವ ಆಕಾರಗಳು ಬೇರೆಯಾದ್ದರಿಂದ ಪುನರುಕ್ತಿದೋಷಕ್ಕೆ ಪ್ರಸಕ್ತಿ ಇಲ್ಲ. "ಋತಂ ಪಿಬಂತೌ" ಎಂಬ ವಾಕ್ಯದಿಂದಲೂ "ದ್ವಾ ಸುಪರ್ಣಾ" ಎಂಬ ವಾಕ್ಯದಿಂದಲೂ ತಿಳಿದುಬರುವ ವಿದ್ಯೆಗಳಿಗೆ ಭೇದವೇ ಅಭೇದವೇ ಎಂಬುದನ್ನು ವಿಚಾರಿಸಲಿಕ್ಕಾಗಿ ಈ ಸೂತ್ರವು ಬಂದಿರುವುದಾಗಿ ಕೆಲವರು ಹೇಳುತ್ತಾರೆ. ಒಂದುಕಡೆಯಲ್ಲಿ ಇಬ್ಬರನ್ನು ಭೋಕ್ತೃವೆಂದು ಹೇಳಿ ಮತ್ತೊಂದುಕಡೆ ಒಬ್ಬನನನ್ನು ಮಾತ್ರವೇ ಭೋಕ್ತೃವೆಂದು ಹೇಳಿರುವುದರಿಂದ ವಿದ್ಯೆಗಳು ಬೇರೆಯೇ? ಅಲ್ಲವೆ? ಎಂದು ಆಕ್ಷೇಪಮಾಡಿ "ಛತ್ರಧಾರಿಗಳು ಹೋಗುತ್ತಾರೆ" ಎಂಬಲ್ಲಿ ಛತ್ರಧಾರಿ ಮತ್ತು ಛತ್ರವಿಲ್ಲದವನು ಇಬ್ಬರನ್ನೂ ಗ್ರಹಿಸುವಂತೆ, ಒಬ್ಬನನ್ನು ಹೇಳಿದರೂ ಮತ್ತೊಬ್ಬನನ್ನು ಇಲ್ಲಿಯೂ ಗ್ರಹಿಸಬಹುದಾದ್ದರಿಂದ ಎರಡು ವಿದ್ಯೆಗಳೂ ಒಂದೇ ಎಂದು ಸಿದ್ಧಾಂತವನ್ನು ಅವರು ಇಲ್ಲಿ ಹೇಳುತ್ತಾರೆ. ಆದರೆ ಹಿಂದಿನ ಗುಹಾಧಿಕರಣದಲ್ಲಿಯೇ ಈ ಅಂಶವು ಸಿದ್ಧವಾಗಿರುವುದರಿಂದ ಇಲ್ಲಿ ಪುನರುಕ್ತಿದೋಷ ಸಂಭವಿಸುತ್ತದೆ. ಸೂತ್ರಾಕ್ಷರಗಳೂ ಸಹ ಹೊಂದಿಕೆಯಾಗುವುದಿಲ್ಲ. ಈ ಸೂತ್ರದಲ್ಲಿ ಬಂದಿರುವ "ಇಯಾನ್" ಎಂಬ ಶಬ್ದವು ದೇಶಕಾಲಸ್ವರೂಪಸಂಜ್ಞೆಗಳ ಪರಿಮಿತಿಯನ್ನು ತಿಳಿಸುವುದಾಗಿದೆ. ಇದೂ ಅಲ್ಲದೆ, ಪೈಂಗೀಶ್ರುತಿಯ ಪ್ರಕಾರ "ದ್ವಾ ಸುಪರ್ಣಾ" ಎಂಬ ಮಂತ್ರವು ಸದ್ರೂಪನಾದ ಪರಮಾತ್ಮನಿಗಿಂತಲೂ ಭಿನ್ನನಾದ ಜೀವನಿಗೆ ಅನ್ವಯಿಸುವುದೆಂದು ಹೇಳಿದರೆ ಆಗ ಒಬ್ಬನನ್ನು ಜೀವನೆಂದೂ ಮತ್ತೊಬ್ಬನನ್ನು ಅವನಿಗಿಂತ ಬೇರೆಯಾದ ಪರಮಾತ್ಮನೆಂದೂ ಹೇಳಿದಂತಾಯಿತು. ಹೀಗೆ ಆ ವಾಕ್ಯವು ಜೀವನಿಗಿಂತ ಬೇರೆಯಾದ ಪರಮಾತ್ಮನಿಗೆ ಅನ್ವಯಿಸುವುದೆಂದು ಹೇಳಿದರೆ ಪುನರುಕ್ತಿದೋಷ ಬರುತ್ತದೆ. ಜೀವಬ್ರಹ್ಮರ ವಿವೇಚನೆಯನ್ನು ತಿಳಿಸ

ಲಿಕ್ಕಾಗಿ ಹೀಗೆ ಹೇಳಿದ್ದರಿಂದ ಪುನರುಕ್ತಿಗೆ ಅವಕಾಶವಿಲ್ಲವೆಂದರೆ ಅದೂ ಸರಿಯಲ್ಲ; ಯಾಕೆಂದರೆ ಬೇರೆ ಅಧಿಕರಣದಲ್ಲಿ ಹೇಳಬೇಕಾದ ವಿಷಯಗಳನ್ನು ಇಲ್ಲಿಯೂ ಹೇಳಿದಂತಾಗುತ್ತದೆ. ಇದೂ ಅಲ್ಲದೆ ಇದಕ್ಕೂ ಆ ವಿಷಯಗಳಿಗೂ ಯಾವಬಗೆಯ ವ್ಯತ್ಯಾಸವೂ ಕಾಣುವುದಿಲ್ಲ. ಸೂತ್ರದಲ್ಲಿ ಬಂದಿರುವ ಇಯತ್ವಪದವು ಎರಡನೆಯ ವಸ್ತುವೊಂದಿಲ್ಲವೆಂಬುದನ್ನು ಸ್ಪಷ್ಟವಾಗಿ ತಿಳಿಸುವುದಿಲ್ಲ. ಹೀಗೆ " ವಿಶ್ವವೆಲ್ಲವೂ ಪುರುಷನೇ " ಪುರುಷನು ಮಹಾಪ್ರಭುವು " ಈ ವಾಕ್ಯಗಳಲ್ಲಿ ಪರಮಾತ್ಮನನ್ನು ಜಗದ್ವಿಲಕ್ಷಣನೆಂದು ತಿಳಿಸಿದ್ದರಿಂದ ಈ ಸೂತ್ರವು ವಿದ್ಯೆಗಳ ಏಕರೂಪತೆಯನ್ನು ತಿಳಿಸುತ್ತದೆ. ಎಂದು ಏಕೆ ಹೇಳಬಾರದು. ಎರಡನೆಯ ವಸ್ತುವಿಲ್ಲವೆಂಬುದನ್ನು ಮಾತ್ರವೇ ಈ ಪದವು ತಿಳಿಸುವುದಾದರೆ, ಆಗ " ಬ್ರಹ್ಮ ಮೂರುಬಗೆಯಾಗಿದೆ, ನಾಲ್ಕುಬಗೆಯಾಗಿದೆ. ಅದಕ್ಕೆ ನಾಲ್ಕು ಪಾದಗಳಿವೆ" ಈ ಬಗೆಯ ಸಂಖ್ಯೆಗಳುಳ್ಳ ಬ್ರಹ್ಮವನ್ನು ತಿಳಿಸುವ ವಾಕ್ಯಗಳಿಗೂ ಈ ಪದವು ಏಕೆ ಅನ್ವಯಿಸಬಾರದು? ಆದ್ದರಿಂದ ಎಲ್ಲಾ ಕಡೆಯಲ್ಲೂ ಭೇದಾಭೇಧವನ್ನೇ ಊಹಿಸಲಿಕ್ಕೆ ಸಾಧ್ಯವಿದೆ. ಹೀಗೆಯೇ ಸಾಧ್ಯವಾದ ಮಟ್ಟಿಗೆ ನಿರ್ವಹಿಸುವುದರಿಂದಲೇ ಇಷ್ಟಾರ್ಥವು ಸಿದ್ಧಿಸುತ್ತದೆ.

" ಅಯಮಾತ್ಮಾ ಬ್ರಹ್ಮ" ಇತ್ಯಾದಿಶ್ರುತಿಷು, " ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ " ಇತ್ಯಾದಿಸ್ಮೃತಿಷು ಚ ಬ್ರಹ್ಮತ್ವಸ್ಯಾಕ್ಷರಶಬ್ದವಾಚ್ಯತ್ವಸ್ಯ ಚ ಜೀವೇ ದ್ಯೋತನಾತ್ ತಸ್ಯೈವ ಸ್ವಜ್ಞಾನಾಯ ಸ್ವಸ್ಯೋಪಾಸನಮೇವ ಯುಕ್ತಮಿತ್ಯಾಶಂಕಾಯಾಮಧಿಕರಣಾಂತರೇಣಾಹ. ಅಂತರತ್ವಾಧಿಕರಣಂ ॥ ೧೫ ॥ ಅಂತರಾ ಭೂತಗ್ರಾಮವತ್ಸ್ವಾತ್ಮನೋಽನ್ಯಥಾ ಭೇದಾನುಪಪತ್ತಿರಿತಿ ಚೇನ್ನೋಪದೇಶವತ್ ॥ ೩೫ ॥ ಸ್ವಾತ್ಮನೋ ಜೀವಸ್ಯ ಅಂತರಾ ಹೃದಯಕಮಲಮಧ್ಯೇ ಅವಸ್ಥಿತಃ ಪರಮಾತ್ಮಾ ಶಿವೋ ವ್ಯವಸ್ಥಿತಃ. ಕುತಃ? ಭೂತಗ್ರಾಮವತ್ ಭೂತಗ್ರಾಮವಾಕ್ಯವದಿತ್ಯರ್ಥಃ. " ಏಕೋ ದೇವಸ್ಸರ್ವಭೂತೇಷು ಗೂಢಸ್ಸರ್ವವ್ಯಾಪೀ ಸರ್ವಭೂತಾಂತರಾತ್ಮಾ । " ಇತ್ಯಾದಿಶ್ರುತಿಷು, " ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ಭ್ರಾಮಯನ್ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ॥" ಇತ್ಯಾದಿಸ್ಮೃತಿಷು ಚ ಸಕಲಭೂತಹೃದಯಾಂತರ್ವರ್ತಿತ್ವಸ್ಯ ಶಿವೇ ಪರಬ್ರಹ್ಮಣಿ ವ್ಯಪದೇಶಾತ್ ತದನುಸಾರೇಣ ಯತ್ಸಾಕ್ಷಾದಪರೋಕ್ಷಾದ್ಬ್ರಹ್ಮೇತಿ ಪ್ರಶ್ನದ್ವಯೇಽಪಿ ಉಪಾಸ್ಯೋಪಾಸಕಯೋರಂತ್ಯೇ ಐಕ್ಯನ್ಯಾಯಾತ್ ಜೀವಾತ್ಮಪರಮಾತ್ಮಾನೋರಂಶಾಂಶಿಭಾವೇನ ಪರಮಾತ್ಮನಸ್ಸಕಲಭೂತಾಂತರ್ಯಾಮಿತ್ವಮುಚ್ಯತೇ. ನನು ಜೀವಹೃದಯಾಂತರ್ವರ್ತಿತ್ವಂ ಜೀವಸ್ಯೈವ ಸಮುಚಿತಂ. " ಅಯಮಾತ್ಮಾ ಬ್ರಹ್ಮ" ಇತ್ಯಾದಿಷು ಜೀವಾಭಿನ್ನತ್ವೇನ ಬ್ರಹ್ಮೋಪದಿಶ್ಯತ ಇತಿ ಚೇನ್ನ ಸ್ವಾಂತರ್ಯಾಮಿತ್ವಸ್ಯ ಸ್ವಸ್ಮಿನ್ನಸಂಭವಾತ್.

ತಥಾ ಚೇತ್ "ಏಕೋ ದೇವಸ್ಸರ್ವಭೂತೇಷು ಗೂಢಃ" ಇತ್ಯಾದಿ ಶ್ರುತಿಸ್ಮೃತಿಷು ಸರ್ವಜೀವಾಂತರ್ಯಾಮಿತ್ವವ್ಯಪದೇಶಕಪರಮಾತ್ಮ ವಿಷಯಕವಾಕ್ಯಾನಾಂ ಅಪ್ರಮಾಣಪ್ರಸಂಗೋ ದುರ್ನಿವಾರಃ. ಬ್ರಹ್ಮ ಸಾಕ್ಷಾತ್ಕಾರವತಾಂ ಉಷಸ್ತಕಹೋಳಾದೀನಾಮೃಷೀಣಾಂ ಸರ್ವಲೋ ಕೋಪಕಾರಾರ್ಥಂ ಖಲು ಪ್ರಶ್ನಃ. ತಥಾಚೈಕೇನ ಪ್ರಶ್ನೇನ ಸರ್ವ ಲೋಕೋಪಕಾರಸ್ಯ ಸಿದ್ಧತ್ವಾತ್ ಪ್ರಶ್ನದ್ವಯಂ ವ್ಯರ್ಥಮಿತಿ ಪ್ರಾಸಂಗಿಕ ಶಂಕಾಯಾಮಾಹ ಅನ್ಯಥಾಭೇದಾನುಪಪತ್ತಿರಿತಿ. ಅನ್ಯಥಾ ದ್ರಷ್ಟ್ರವ್ಯ ಭೇದಂ ವಿನಾ ಭೇದಾನುಪಪತ್ತಿಃ ಪ್ರಶ್ನಭೇದಾನುಪಪತ್ತಿರ್ಲೋಕೇ ದೃಷ್ಟಾ. ತಥಾಚ ಪ್ರಕೃತೇಽಪ್ಯುಪಾಸಕಸ್ಯ ದ್ರಷ್ಟುಃ ಜೀವಸ್ಯ ದ್ರಷ್ಟವ್ಯ ಸ್ಯೋಪಾಸ್ಯಸ್ಯ ಶಿವಸ್ಯ ಜೀವಭೇದಸ್ಯ ಚ ಪ್ರಶ್ನದ್ವಯೋಽಪಿ ಭೇದಾಭೇದ ತ್ವವ್ಯವಸ್ಥಾಪನಾತ್ ಪ್ರಶ್ನದ್ವಯಂ ವ್ಯರ್ಥಮಿತಿ ಚೇತ್ ಉಪದೇಶವದು ಪಪತ್ತಿಃ. ಯಥಾ ಶ್ವೇತಕೇತುನಾ "ಭೂಯ ಏವ ಮಾ ಭಗವಾನ್ವಿಜ್ಞಾ ಪಯತು" ಇತಿ ನವವಾರಂ ಪ್ರಶ್ನೇ ಕೃತೇ, ಶ್ವೇತಕೇತುಂ ಪ್ರತ್ಯುದ್ದಾಲ ಕೇನ ತತ್ತ್ವಮಸೀತಿ ನವವಾರಂ ಭೇದಾಭೇದಾತ್ಮಕಸಿದ್ಧಾಂತದೃಢೀಕರ ಣಾರ್ಥಮುತ್ತರಂ ದತ್ತಂ. ಏವಮುತ್ರಾಪ್ಯುಷಸ್ತಕಹೋಳಾಭ್ಯಾಂ ಪ್ರಶ್ನದ್ವಯೇ ಕೃತೇ ಶಾಕಲ್ಯೇನೋತ್ತರದ್ವಯಂ ದತ್ತಮಿತ್ಯತೋ ನ ವಿರೋಧಃ. "ದ್ವಾ ಸುಪರ್ಣಾ" ಇತ್ಯಾದಿಮಂತ್ರೇಷು ಶಿವಜೀವಯೋ ರ್ಘಟಪಟವತ್ಪರಸ್ಪರವೈಲಕ್ಷಣ್ಯಾವಗಮಾತ್. "ಅಯಮಾತ್ಮಾ ಬ್ರಹ್ಮ" ಇತ್ಯಾದಿಶ್ರುತಿಷು ಜೀವಾಭಿನ್ನತ್ವೇನ ಬ್ರಹ್ಮವ್ಯಪದೇಶಾತ್ ಸರ್ವವೇದಾಂತ ವಿಚಾರೇ ಪರಸ್ಪರಾಪ್ರಾಮಾಣ್ಯಶಂಕಾದ್ಯೋತನಾತ್ ಉಪಾಸ್ಯೋಪಾ ಸಕಯೋರ್ಭೇದಾಭೇದಸ್ಸಂಭವೇದಿತಿ ನ್ಯಾಯೇನ ಸರ್ವವೇದಾಂತ ಸಿದ್ಧದ್ವೈತಾದ್ವೈತಸಿದ್ಧಾಂತಸಂಧಾನಸಾಮರಸ್ಯವಿಜ್ಞಾನಸ್ಯ ದುರ್ವಿಜ್ಞೇ ಯತ್ವಾಚ್ಚ ತದ್ಜ್ಞಾನದಾರ್ಢ್ಯಾರ್ಥಂ ಬಹುಪ್ರಶ್ನಾನಾಂ ಬಹುಪ್ರತಿವಚ ನಾನಾಂ ಚ ಸಫಲತ್ವಮಿತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಬೃಹದಾರ ಣ್ಯಕೇ ಉಷಸ್ತಪ್ರಶ್ನೇ ಏವಮಾಮ್ನಾಯತೇ "ಯತ್ಸಾಕ್ಷಾದಪರೋಕ್ಷಂ ಬ್ರಹ್ಮ", "ಯ ಆತ್ಮಾ ಸರ್ವಾಂತರಃ ತನ್ಮೇ ವ್ಯಾಚಕ್ಷ್ವ" ಇತಿ. ತಸ್ಯ ಪ್ರತಿವಚನಂ "ಯಃ ಪ್ರಾಣೇನ ಪ್ರಾಣಿತಿ ಸ ತ ಆತ್ಮಾ ಸರ್ವಾಂತರೋ ಯೋಽಪಾನೇನ ಅಪಾನಿತಿ ಸ ತ ಆತ್ಮಾ" ಇತ್ಯಾದಿ. ಅತುಷ್ಟೇನ ತೇನ ಪುನಃ ಪೃಷ್ಟ ಆಹ "ನ ದೃಷ್ಟೇರ್ದ್ರಷ್ಟಾರಂ ಪಶ್ಯೇಃ, ನ ಶ್ರುತೇಃ ಶ್ರೋತಾರಂ ಶೃಣುಯಾಃ, ನ ಮತೇರ್ಮಂತಾರಂ ಮನ್ವೀಥಾಃ, ನ ವಿಜ್ಞಾತೇರ್ವಿಜ್ಞಾತಾರಂ ವಿಜಾನೀಥಾಃ. ಏಷ ತ ಆತ್ಮಾ ಸರ್ವಾಂತರೋಽ ತೋಽನ್ಯದಾರ್ತಂ" ಇತಿ. ತದನಂತರಂ ಕಹೋಳಪ್ರಶ್ನೇ ಚೈವಮಾ

ಮ್ನಾಯತೇ. "ಯದೇವ ಸಾಕ್ಷಾದಪರೋಕ್ಷಾದ್ಬ್ರಹ್ಮ । ಯ ಆತ್ಮಾ ಸರ್ವಾಂತರಸ್ತನ್ಮೇ ವ್ಯಾಚಕ್ಷ್ವ" ಇತಿ. ಪ್ರತಿವಚನಂ ಚ "ಯೋಽಶನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ ಏವಂ ಹೈತಮಾತ್ಮಾನಂ ವಿದಿತ್ವಾ ಬ್ರಹ್ಮಣಃ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ" ಇತ್ಯಾದಿ. ಅತೋಽನ್ಯದಾರ್ತಮಿತ್ಯಂತಂ. ತತ್ರ ಸಂಶಯ್ಯತೇ ಕಿಮನಯೋರ್ವಿದ್ಯಾಭೇದೋಽಸ್ತಿ ನೇತಿ. ಕಿಂ ಯುಕ್ತಂ. ಭೇದ ಇತಿ. ಕುತಃ ರೂಪಭೇದಾತ್. ಪ್ರತಿವಚನಭೇದಾದ್ರೂಪಂ ಭಿದ್ಯತೇ. ಪ್ರತಿವಚನಪ್ರಕಾರೋ ಹಿ ಭೇದೇನೋಪಲಭ್ಯತೇ. ಪೂರ್ವತ್ರ ಪ್ರಾಣಾದೀನಾಂ ಕರ್ತಾ ಸರ್ವಾಂತರಾತ್ಮತ್ವೇನೋಚ್ಯತೇ, ಪರತ್ರ ಅಶನಾಯಾಪಿಪಾಸಾದಿರಹಿತಃ. ಅತಃ ಪೂರ್ವತ್ರ ಪ್ರಾಣಿತದೇಹೇಂದ್ರಿಯಮನಃಪ್ರಾಣವ್ಯತಿರಿಕ್ತಃ ಪ್ರತ್ಯಗಾತ್ಮೋಚ್ಯತೇ. ಪರತ್ರ ತದತಿರಿಕ್ತೋಽಶನಾಯಾಪಿಪಾಸಾದಿರಹಿತಃ ಪರಮಾತ್ಮಾ. ಅತೋ ರೂಪಂ ಭಿದ್ಯತೇ. ಭೂತಗ್ರಾಮವತಶ್ಚ ಪ್ರತ್ಯಗಾತ್ಮನಸ್ತಸ್ಯ ಭೂತಗ್ರಾಮಸ್ಯ ಸರ್ವಸ್ಯಾಂತರಾತ್ಮತ್ವೇನ ಸರ್ವಾಂತರತ್ವಮುಪ್ಯುಪಪನ್ನಂ. ಯದ್ಯಪಿ ಪ್ರತ್ಯಗಾತ್ಮನಃ ಸರ್ವಾಂತರತ್ವಂ ಭೂತಗ್ರಾಮಮಾತ್ರಾಪೇಕ್ಷತ್ವೇನಾಪೇಕ್ಷಿತಂ. ತಥಾಪಿ ತದೇವ ಗ್ರಾಹ್ಯಂ. ಅನ್ಯಥಾ ಮುಖ್ಯಾಂತರಾತ್ಮಾಪರಿಗ್ರಹಲೋಭಾತ್ ಪರಮಾತ್ಮಸ್ವೀಕಾರೇ ಪ್ರತಿವಚನಭೇದೋ ನೋಪಪದ್ಯತೇ. ಪ್ರತಿವಚನಂ ಹಿ ಸರ್ವತ್ರ ಪ್ರತ್ಯಗಾತ್ಮವಿಷಯಂ, ಪರಮಾತ್ಮನಃ ಪ್ರಾಣಿತ್ವಾಪ್ರಾಣಿತ್ವಾದ್ಯಸಂಭವಾತ್. ಪರಂಚ ಪರಮಾತ್ಮವಿಷಯಂ, ಅಶಾನಾಯಾದ್ಯತೀತತ್ವಾತ್. ತದಿದಮಾಶಂಕ್ಯತೇ ಅಂತರಾ ಭೂತಗ್ರಾಮವದಿತಿ. ಅಂತರಾ ಸರ್ವಾಂತರತ್ವೇನ ಪ್ರಥಮಪ್ರತಿವಚನಂ ಭೂತಗ್ರಾಮವತ್ಸ್ವಾತ್ಮನಃ ಭೂತಗ್ರಾಮವಾನ್ ತದಂತರಃ ಸ್ವಾತ್ಮಾ ಪ್ರತ್ಯಗಾತ್ಮಾ ಸರ್ವಾಂತರ ಇತ್ಯುಚ್ಯತೇ. ಅನ್ಯಥಾ "ಯಃ ಪ್ರಾಣೇನ ಪ್ರಾಣಿತಿ", "ಯೋಽಶನಾಯಾಪಿಪಾಸಾದ್ಯತೀತಃ" ಇತಿ ಪ್ರತಿವಚನಭೇದಾನುಪಪತ್ತಿರಿತಿ ಚೇದತ್ರೋತ್ತರಂ ನೇತಿ ನ ವಿದ್ಯಾಭೇದ ಇತ್ಯರ್ಥಃ. ಉಭಯತ್ರ ಪರವಿಷಯತ್ವಾತ್ ಪ್ರಶ್ನಪ್ರತಿವಚನಯೋಸ್ತಥಾಹಿ "ಯತ್ಸಾಕ್ಷಾದಾಪರೋಕ್ಷಾದ್ಬ್ರಹ್ಮ", "ಯ ಆತ್ಮಾ ಸರ್ವಾಂತರಃ" ಇತಿ ಪ್ರಶ್ನಸ್ತಾವತ್ಪರಮಾತ್ಮವಿಷಯ ಏವ. ಬ್ರಹ್ಮಶಬ್ದಸ್ಯ ಪರಮಾತ್ಮಸಾಧಾರಣತ್ವೇಽಪಿ ಪ್ರತ್ಯಗಾತ್ಮನ್ಯಪಿ ಕದಾಚಿದುಪಚರಿತಪ್ರಯೋಗದರ್ಶನಾತ್ ತದ್ವ್ಯಾವೃತ್ತ್ಯೈ ಪರಮಾತ್ಮಪ್ರತಿಪತ್ತ್ಯರ್ಥಂ ಯತ್ಸಾಕ್ಷಾದ್ಬ್ರಹ್ಮೇತಿ ವಿಶೇಷಣಂ ಕ್ರಿಯತೇ. ಅಪರೋಕ್ಷತ್ವಮಪಿ ಸರ್ವದೇಹಸರ್ವಕಾಲಸಂಬಂಧಿತ್ವಂ. "ಸತ್ಯಂ ಜ್ಞಾನಮನಂತಂ ಬ್ರಹ್ಮ" ಇತ್ಯ

ನ್ತರತ್ವೇನಾವಗತಸ್ಯ ಪರಮಾತ್ಮನ ಏವೋಪಪದ್ಯತೇ. ಸರ್ವಾಂತರತ್ವ ಮಪಿ "ಯೋ ರುದ್ರೋ ಅಗ್ನೌ ಯೋ ಅಪ್ಸು ಯ ಓಷಧೀಷು ಯೋ ರುದ್ರೋ" ಇತಿ ತೈತ್ತಿರೀಯೇ. ತಥಾ ಅಥರ್ವಶಿರಸಿ "ಅಹಮೇಕಃ ಪ್ರಥಮಮಾಸಂ ವರ್ತಾಮಿ ಚ ಭವಿಷ್ಯಾಮಿ ಚ ನಾನ್ಯಃ ಕಶ್ಚಿನ್ಮತ್ತೋ ವ್ಯತಿರಿಕ್ತಃ ಸೋಽಂತರಾದಂತರಂ ಪ್ರಾವಿಶತ್" ಇತಿ, ಕಣ್ವಶಾಖಾಯಾಂ "ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅಂತರಃ" ಇತ್ಯಾರಭ್ಯ "ಯ ಆತ್ಮನಿ ತಿಷ್ಠನ್ ಆತ್ಮನೋಽಂತರಃ" ಇತಿ ಸರ್ವಾಂತರ್ಯಾಮಿಣಃ ಪರಶಿವಸ್ಯೈವ ಸಂಭವತಿ. ಪ್ರತಿವಚನಮಪಿ ತಥೈವ ಪರಮಾತ್ಮವಿಷಯಂ. "ಯಃ ಪ್ರಾಣೇನ ಪ್ರಾಣಿತಿ" ಇತಿ ನಿರುಪಾಧಿಕಂ ಪ್ರಾಣನಸ್ಯ ಕರ್ತೃತ್ವಂ ಪರಮಾತ್ಮನ ಏವ, ಪ್ರತ್ಯಗಾತ್ಮನಃ ಸುಷುಪ್ತೌ ಪ್ರಾಣನಂ ಪ್ರತಿ ಕರ್ತೃತ್ವಾಭಾವಾತ್. ಏವಮಜಾನತೋಷಸ್ತೇನ ಪ್ರಧಾನಕರ್ತೃತ್ವಮಾತ್ರಮುಕ್ತಂ ಮನ್ವಾನೇನ ಪ್ರತ್ಯಗಾತ್ಮನೋ ವ್ಯಾವೃತ್ತಂ ನಿರುಪಾಧಿಕತ್ವೇನ ಪ್ರಾಣನಸ್ಯ ಕರ್ತಾರಂ ಪರಮಾತ್ಮಾನಮಾಹ "ನ ದೃಷ್ಟೇರ್ದ್ರಷ್ಟಾರಂ ಪಶ್ಯೇಃ" ಇತ್ಯಾದಿನಾ. ಇಂದ್ರಿಯಾಧೀನಾನಾಂ ದರ್ಶನಶ್ರವಣಮನನವಿಜ್ಞಾನಾನಾಂ ಕರ್ತಾರಂ ಪ್ರತ್ಯಗಾತ್ಮಾನಂ ಪ್ರಾಣಸ್ಯ ಕರ್ತೃತ್ವೇನೋಕ್ತಮಿತಿ ನ ಮನ್ವೀಥಾಃ, ತಸ್ಯ ಸುಷುಪ್ತಿಮೂರ್ಛಾದೌ ಪ್ರಾಣನಾದೇರಕರ್ತೃತ್ವಾತ್. "ಕೋ ಹ್ಯೇವಾನ್ಯಾತ್ಕಃ ಪ್ರಾಣ್ಯಾತ್ ಯ ಏಷ ಆಕಾಶ ಆನಂದೋ ನ ಸ್ಯಾತ್" ಇತಿ ಸರ್ವಪ್ರಾಣನಹೇತುತ್ವಂ ಪರಮಾತ್ಮನ ಏವ ಅನ್ಯತ್ರ ಶ್ರುತಂ. ಅತಃ ಪೂರ್ವಪ್ರಶ್ನಪ್ರತಿವಚನೇ ಪರಮಾತ್ಮವಿಷಯೇ ಏವಮುತ್ತರೇ ಅಪಿ. ಅಶನಾಯಾದ್ಯತೀತತ್ವಸ್ಯ ಪರಮಾತ್ಮಾಸಾಧಾರಣತ್ವಾತ್. ಉಭಯತ್ರ ಅತೋಽನ್ಯದಾರ್ತಮಿತ್ಯುಪಸಂಹಾರಶ್ಚೈಕರೂಪಃ. ಪ್ರಶ್ನಪ್ರತಿವಚನಾವೃತ್ತಿಸ್ತು ಕೃತ್ಸ್ನಪ್ರಾಣಿಪ್ರಾಣನಹೇತೋಶ್ಶಿವಸ್ಯ ಪರಬ್ರಹ್ಮಣಃ ಅಶನಾಯಾದ್ಯತೀತತ್ವಪ್ರತಿಪಾದನಾಯ ತತ್ರ ದೃಷ್ಟಾಂತಮಾಹ ಉಪದೇಶವದಿತಿ. ಯಥಾ ಸದ್ವಿದ್ಯಾಯಾಂ "ಉತ ತಮಾದೇಶಮಪ್ರಾಕ್ಷ್ಯಃ" ಇತಿ ಪ್ರಕ್ರಾಂತೇ ಸದುಪದೇಶೇ "ಭಗವಾಂಸ್ತ್ವೇವ ಮೇ ತದ್ಬ್ರವೀತು" ಇತಿ, "ಭೂಯ ಏವ ಮಾ ಭಗವಾನ್ವಿಜ್ಞಾಪಯತು" ಇತಿ ಪ್ರಶ್ನಸ್ಯ, "ಸ ಏಷೋಽಣಿಮೈತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ" ಇತಿ ಪ್ರತಿವಚನಸ್ಯ ಚ ಭೂಯೋಭೂಯ ಆವೃತ್ತಿಸ್ಸತೋ ಬ್ರಹ್ಮಣಸ್ತತ್ತನ್ಮಾಹಾತ್ಮ್ಯವಿಶೇಷಪ್ರತಿಪಾದನಾಯ ಶಿಷ್ಯಸ್ಯ ಸರ್ವವೇದಾಂತಸಿದ್ಧದ್ವೈತಾದ್ವೈತವಿಜ್ಞಾನದೃಢೀಕರಣಾಯ ಚ ಶ್ರೂಯತೇ. ತದ್ವದತ್ರ ಏಕಸ್ಯೈವ ಸರ್ವಭೂತಾಂತರಸ್ಯ ಶಿವಸ್ಯ

**ಪರಬ್ರಹ್ಮಣಃ ಸರ್ವಪ್ರಾಣಿಪ್ರಾಣನಹೇತುತ್ವಾಶನಾಯಾದ್ಯತೀತತ್ವ ವ್ಯವಸ್ಥಾಪನೇನ ಸ್ವರೂಪೈಕ್ಯಾದ್ವಿದ್ಯೈಕ್ಯಂ.**

"ಈ ಆತ್ಮನೇ ಬ್ರಹ್ಮ" ಎಂಬ ಶ್ರುತಿಗಳಲ್ಲೂ "ಸಕಲಭೂತಗಳೂ ಕ್ಷರವೆನಿಸಿದರೆ ಜೀವನು ಅಕ್ಷರನೆನಿಸಿದ್ದಾನೆ." ಎಂಬ ಸ್ಮೃತಿಗಳಲ್ಲೂ ಜೀವನನ್ನು ಬ್ರಹ್ಮನೆಂದು ಹೇಳಿದಂತಾಯಿತು. ಆದ್ದರಿಂದ ಅವನಿಗೆ ಅವನ ಜ್ಞಾನವಾಗಲಿಕ್ಕಾಗಿ ಅವನ ಉಪಾಸನವೇ ಸಾಕೆಂದು ಆಶಂಕಿಸಿ ನಿರಾಕರಿಸುತ್ತಾನೆ. ಜೀವನೊಳಗೆ ಹೃದಯಕಮಲದಲ್ಲಿ ಶಿವನು ನೆಲಸಿದ್ದಾನೆ ಎಂಬ ಅಂಶವು ಪಂಚಭೂತಗಳನ್ನು ತಿಳಿಸುವ ಶ್ರುತಿವಾಕ್ಯದಿಂದ ತಿಳಿದುಬಂದಿರುತ್ತದೆ. "ಎಲ್ಲಾ ಭೂತಗಳಲ್ಲೂ ಅಂತರಾತ್ಮನಾಗಿ ಒಬ್ಬ ದೇವನೇ ಗೂಢವಾಗಿ ಎಲ್ಲವನ್ನೂ ವ್ಯಾಪಿಸಿದ್ದಾನೆ" ಎಂದು ಶ್ರುತಿಗಳಲ್ಲೂ "ಈಶ್ವರನು ಎಲ್ಲರ ಹೃದಯದಲ್ಲೂ ನೆಲಸಿ ಸಂಸಾರಯಂತ್ರದಲ್ಲಿ ಸಿಲುಕಿರುವ ಜೀವರನ್ನು ಅವರವರ ಕರ್ಮಾನುಸಾರವಾಗಿ ಭ್ರಮೆಗೊಳಿಸುತ್ತಿದ್ದಾನೆ" ಎಂದು ಸ್ಮೃತಿಯಲ್ಲೂ ಶಿವನೇ ಎಲ್ಲರ ಹೃದಯಾದೊಳಗೂ ನೆಲಸಿರುವನೆಂದು ಹೇಳಲಾಗಿದೆ. ಇದರಂತೆ ಸಾಕ್ಷಾದ್ಬ್ರಹ್ಮವೇ ಪ್ರತ್ಯಕ್ಷವಾಗಿ ಹೃದಯದಲ್ಲಿ ನೆಲಸಿರುವನೆಂದು ಹೇಳಿದರೆ ಉಪಾಸ್ಯೋಪಾಸಕರಿಗೂ ಕೊನೆಯಲ್ಲಿ ಐಕ್ಯವು ಸಂಭವಿಸುವುದರಿಂದಲೂ, ಜೀವಪರಮರಿಗೆ ಅಂಶಾಂಶಿಭಾವವಿರವುದರಿಂದಲೂ ಪರಮಾತ್ಮನನ್ನು ಸಮಸ್ತ ಪ್ರಾಣಿಗಳೊಳಗೆ ಅಂತರ್ಯಾಮಿ ಎಂದು ಹೇಳಿದಂತಾಯಿತು. "ಈ ಆತ್ಮನೇ ಬ್ರಹ್ಮ" ಎಂಬಲ್ಲಿ ಜೀವನಿಗಿಂತ ಬೇರೆಯಲ್ಲದ ಬ್ರಹ್ಮವನ್ನೇ ತಿಳಿಸಲಾಗಿದೆ. ಆದ್ದರಿಂದ ಜೀವನ ಹೃದಯದೊಳಗೆ ಜೀವನೇ ಅಂತರ್ಯಾಮಿಯಾಗಿರುವನೆಂದು ಹೇಳುವುದೇ ಯುಕ್ತವಲ್ಲವೇ? ಅಂದರೆ ಹೀಗೆ ಹೇಳುವುದು ಸರಿಯಲ್ಲ; ಯಾಕೆಂದರೆ ತನಗೆ ತಾನೇ ಅಂತರ್ಯಾಮಿಯಾಗಿರಲು ಸಾಧ್ಯವಿಲ್ಲ. ಹಾಗೆ ಇರುವುದಾದರೆ "ಎಲ್ಲಾ ಭೂತಗಳಲ್ಲೂ ಒಬ್ಬ ದೇವನೇ ನೆಲಸಿದ್ದಾನೆ" ಎಂದು ತಿಳಿಸುವ ಶ್ರುತಿಸ್ಮೃತಿಗಳಲ್ಲಿ ಎಲ್ಲ ಜೀವರಲ್ಲೂ ಅಂತರ್ಯಾಮಿಯಾಗಿ ನೆಲಸಿರುವ ಪರಮಾತ್ಮನನ್ನು ತಿಳಿಸುವ ವಾಕ್ಯಗಳು ಪ್ರಾಮಾಣವಾಗದೇಹೋಗುವ ಪ್ರಸಂಗ ಒದಗಬೇಕಾದೀತು. ಬ್ರಹ್ಮಸಾಕ್ಷಾತ್ಕರವನ್ನು ಪಡೆದಿದ್ದ ಉಷಸ್ತ ಕಹೋಳ ಮೊದಲಾದ ಋಷಿಗಳು ಲೋಕೋಪಕಾರಕ್ಕಾಗಿ ಹೀಗೆ ಪ್ರಶ್ನೆ ಮಾಡುತ್ತಾರೆ. ಆದರೆ ಒಂದು ಪ್ರಶ್ನೆಯಿಂದಲೇ ಲೋಕಪಕಾರವಾಗುವಾಗ ಎರಡು ಪ್ರಶ್ನೆಗಳನ್ನು ಮಾಡಿದ್ದು ವ್ಯರ್ಥವಲ್ಲವೇ? ಎಂದು ಆಶಂಕಿಸಿ ಅದಕ್ಕೆ ಸಮಾಧಾನವನ್ನು ಈ ಸೂತ್ರದಲ್ಲಿ ತಿಳಿಸಲಾಗಿದೆ. ಸಾಕ್ಷಾತ್ಕಾರಕ್ಕೆ ಯೋಗ್ಯವಾದ ವಸ್ತುವಿನಲ್ಲಿ ಭೇದವಿಲ್ಲದಿದ್ದರೆ ಭಿನ್ನವಸ್ತುವಿನ ಜ್ಞಾನವೇ ಆಗಬಾರದು. ಹೀಗೆಯೇ ಪ್ರಶ್ನೆಗಳೆರಡು ಸಂಭವಿಸುತ್ತವೆ ಎಂಬ ಜ್ಞಾನವೂ ಆಗಲಾರದೆಂದು ಲೋಕದಲ್ಲಿ ಕಂಡುಬರುತ್ತದೆ. ಹಾಗೆಯೇ ಇಲ್ಲಿ ಉಪಾಸಕನೂ ದ್ರಷ್ಟೃವೂ ಆದ ಜೀವನಿಗೂ, ಉಪಾಸ್ಯವೂ ದ್ರಷ್ಟವ್ಯವೂ ಆದ ಶಿವನಿಗೂ ಭೇದವಿರುವುದರಿಂದ ಪ್ರಶ್ನೆಗಳೆರಡರಲ್ಲಿ ಭೇದಾಭೇದ ಸಂಬಂಧವೇ ಅನ್ವಯಿಸುವ ಪ್ರಯುಕ್ತ ಪ್ರಶ್ನೆಗಳೆರಡನ್ನು ಕೇಳಿದ್ದು ವ್ಯರ್ಥವೇ.

ಆಗುವುದೆಂದು ಹೇಳಿದರೆ ಶ್ರುತಿಯಲ್ಲಿ ಬರುವ ಗುರುಶಿಷ್ಯರ ಉಪದೇಶದಂತೆ ಪ್ರಶ್ನೆಗಳೆರ ಡನ್ನು ಕೇಳಿದ್ದು ಯುಕ್ತವೆಂದೇ ತಿಳಿಯಬೇಕು. ಹೇಗೆಂದರೆ ಶ್ವೇತಕೇತುವು "ಸ್ವಾಮಿ ನುತ್ತೊಮ್ಮೆ ಇದನ್ನು ನನಗೆ ತಿಳಿಸಿ" ಎಂದು ಒಂಭತ್ತುಸಾರಿ ಪ್ರಶ್ನೆಮಾಡಿದನು. ಆಗ ಉದ್ದಾಲಕನು ಭೇದಾಭೇದರೂಪವಾದ ಸಿದ್ಧಾಂತವನ್ನು ದೃಢಪಡಿಸಲು ಅವನಿಗೆ ಒಂಭತ್ತುಸಾರಿ ಉತ್ತರಕೊಡುವನು. ಹೀಗೆಯೇ ಇಲ್ಲಿಯೂ ಸಹ ಉಷಸ್ತಕಹೋಳ ರಿಂದ ಎರಡು ಪ್ರಶ್ನೆಗಳು ಹೊರಟಮೇಲೆ ಶಾಕಲ್ಯನು ಎರಡು ಉತ್ತರಗಳನ್ನು ಕೊಟ್ಟಿ ರುವುದರಲ್ಲಿ ವಿರೋಧವೇನೂ ಇಲ್ಲ. "ದ್ವಾ ಸುಪರ್ಣ" ಎಂಬ ಮಂತ್ರದಲ್ಲಿ ಶಿವಜೀವ ರಿಗೆ ಘಟಪಟಗಳಂತೆ ಭೇದವಿರುವುದಾಗಿ ತಿಳಿದುಬರುವುದರಿಂದಲೂ, ಈ ಆತ್ಮವೇ ಬ್ರಹ್ಮವೆಂಬಲ್ಲಿ ಜೀವನೂ ಬ್ರಹ್ಮವೂ ಒಂದೇ ಎಂದು ಹೇಳಿರುವುದರಿಂದಲೂ ವೇದಾಂ ತವಿಚಾರಗಳೆಲ್ಲವೂ ಪರಸ್ಪರವಾಗಿ ಅಯುಕ್ತಗಳೆಂದು ತೋರುತ್ತವೆ. ಆದರೂ ಉಪಾ ಸ್ಯೋಪಾಸಕರಿಗೆ ಭೇಧಾಭೇದಸಂಬಂಧವು ಅನ್ವಯಿಸಬಹುದೆಂಬ ನ್ಯಾಯದಿಂದ ಎಲ್ಲಾ ವೇದಂತಗಳ ಸಾರವೆನಿಸಿದ ದ್ವೈತಾದ್ವೈತತತ್ತ್ವವನ್ನು ತಿಳಿಯಲಿಕ್ಕೂ ಆಚರಿಸಲಿಕ್ಕೂ ಬಹಳ ಕ್ಲೇಶವಾಗುವ ಪ್ರಯುಕ್ತ ಅದರ ವಿವೇಚನೆಯನ್ನು ದೃಢ ಪಡಿಸಲಿಕ್ಕಾಗಿ ಅನೇಕ ಪ್ರಶ್ನೆಗಳನ್ನು ಕೇಳಿದ್ದು ಮತ್ತು ಅನೇಕಬಗೆಯಾಗಿ ಉತ್ತರಗಳ ನ್ನು ಹೇಳಿದ್ದು ಯುಕ್ತವೇ ಆಗಿದೆ ಎಂದು ಸೂತ್ರವು ತಿಳಿಸುತ್ತದೆ. ಬ್ರಹದಾರಣ್ಯಕದಲ್ಲಿ ಉಷಸ್ತನ ಪ್ರಶ್ನೆ ಹೀಗೆ ಬಂದಿದೆ. "ಯಾವ ಸಾಕ್ಷಾದ್ಬ್ರಹ್ಮವಿದೆಯೋ ಅದೇ ಎಲ್ಲ ರಲ್ಲೂ ವ್ಯಾಪಿಸಿ ಆತ್ಮವೆನಿಸಿದೆ ಅದನ್ನು ನನಗೆ ತಿಳಿಸು" ಎಂಬ ಪ್ರಶ್ನೆಗೆ "ಯಾವನು ಪ್ರಾಣವಾಯುವಿನೊಡನೇ ಜೀವಿಸುತ್ತಾನೋ ಅವನೇ ನಿನ್ನ ಆತ್ಮವು. ಯಾವನು ಅಪಾನವಾಯುವಿನೊಡನೆ ಹೊರಗಡೆಯೂ ನೋಡುತ್ತಾನೋ ಅವನೇ ನಿನ್ನ ಆತ್ಮವು" ಹೀಗೆ ಉತ್ತರಬಂದಿದೆ. ಇದರಿಂದ ಸಮಾಧಾನಹೊಂದದ ಶಿಷ್ಯನು ಮತ್ತೆ ಕೇಳಿ ದ್ದಕ್ಕೆ "ನೋಟಕ್ಕಿಂತ ಬೇರೆಯಾಗಿ ನೋಡುವವನಿಲ್ಲ. ಕೇಳುವುದಕ್ಕಿಂತ ಬೇರೆಯಾಗಿ ಕೇಳುವವನಿಲ್ಲ. ತಿಳಿಯುವುದಕ್ಕಿಂತ ಬೇರೆಯಾಗಿ ತಿಳಿಯುವವನಿಲ್ಲ. ನಿಶ್ಚಯಿಸು ವುದಕ್ಕಿಂತ ಬೇರೆಯಾಗಿ ನಿಶ್ಚಯಿಸುವವನಿಲ್ಲ. ಇವನೇ ಸರ್ವಾಂತರ್ಯಾಮಿಯಾಗಿ ನಿನ್ನಲ್ಲಿ ಆತ್ಮನಾಗಿದ್ದಾನೆ. ಇದಕ್ಕಿಂತಲೂ ಬೇರೆಯಾದದ್ದೆಲ್ಲವೂ ಬ್ರಹ್ಮವಿಕಾರವೇ ಆಗಿದೆ" ಹೀಗೆ ಗುರು ಹೇಳುತ್ತಾನೆ. ಆಮೇಲೆ ಕಹೋಳನ ಪ್ರಶ್ನೆಯೂ ಹೀಗೆಯೇ ಬರುತ್ತದೆ. "ಸಾಕ್ಷಾದ್ಬ್ರಹ್ಮವೇ ಸರ್ವರಲ್ಲೂ ಅಂತರಾತ್ಮನೆನಿಸಿದ್ದಾನೆ. ಇವನ ಸ್ವರೂಪವನ್ನು ನನಗೆ ತಿಳಿಸು" ಎಂಬ ಪ್ರಶ್ನೆಗೆ "ಯಾವನಿಗೆ ಹಸಿವು ನೀರಡಿಕೆಗಳೂ ಶೋಕಮೋಹಗಳೂ ಜರಾಮರಣಗಳೂ ಸಂಬಂಧಿಸಿಲ್ಲವೋ ಅಂತವನನ್ನು ಆತ್ಮವೆಂದು ತಿಳಿದು ಬ್ರಾಹ್ಮಣನು ಪುತ್ರೇಷಣ ದಾರೇಷಣ ವಿತ್ತೇಷಣಗಳನ್ನು ತೊರೆಯಬೇಕು" ಎಂಬಲ್ಲಿ ಇವೆರಡು ವಿದ್ಯೆಗಳಿಗೆ ಭೇದವಿದೆಯೇ ಇಲ್ಲವೆ? ಎಂದು ಸಂಶಯ ಬರುತ್ತದೆ. ಎರಡಕ್ಕೂ ಸ್ವರೂಪದಲ್ಲಿಯೇ ಭೇದವಿರುವುದರಿಂದ ವಿದ್ಯೆಗಳು ಭಿನ್ನವೆಂಬುದೇ ಯುಕ್ತವಾಗಿದೆ. ಉತ್ತರವೂ ಬೇರೆಯಾದ್ದರಿಂದ ಸ್ವರೂಪಭೇದವುಂಟಾಯಿತು. ಪ್ರಶ್ನೆ

ಒಂದೇಆಗಿದ್ದರೂ ಉತ್ತರ ಬೇರೆಬೇರೆಯಾಗಿದೆ. ಮೊದಲಿನದರಲ್ಲಿ ಪ್ರಾಣಾದಿಗಳೊಡನೆ ಜೀವಿಸುವವನನ್ನು ಸರ್ವಾಂತರ್ಯಾಮಿ ಎಂದು ಹೇಳಲಾಗಿದೆ. ಎರಡನೆಯದರಲ್ಲಿ ಹಸಿವು ನೀರಾಡಿಕೆ ಮೊದಲಾದವಿಲ್ಲದಿರುವವನನ್ನು ಅಂತರಾತ್ಮನೆಂದು ಹೇಳಿದೆ. ಆದ್ದರಿಂದ ಮೊದಲು ದೇಹೇಂದ್ರಿಯಮನಃಪ್ರಾಣಗಳಿಗಿಂತಲೂ ಬೇರೆಯಾದ್ದನ್ನು ಆತ್ಮವೆಂದು ತಿಳಿಸಲಾಗಿದೆ. ಮುಂದಿನವಾಕ್ಯದಲ್ಲಿ ಹಸಿವು ನೀರಾಡಿಕೆ ಮೊದಲಾದ ವಿಲ್ಲದಿರುವ ಪರಮಾತ್ಮನನ್ನು ತಿಳಿಸಲಾಗಿದೆ. ಆದ್ದರಿಂದ ಎರಡಕ್ಕೂ ಸ್ವರೂಪ ದಲ್ಲಿಯೇ ಭೇದವಿದೆ. ಹೀಗೆ ಪಂಚಭೂತಗಳಿಂದೊಡಗೂಡಿದ ಜೀವನು ಪಂಚ ಭೂತಗಳಲ್ಲಿ ಅಂತರ್ಯಾಮಿಯಾಗಿ ತಾನೇ ನೆಲಸುವನೆಂಬುದು ಯುಕ್ತವಲ್ಲ. ಜೀವನೇ ಸರ್ವಾಂತರ್ಯಾಮಿ ಎಂಬುದು ಪಂಚಭೂತಗಳಷ್ಟಕ್ಕೆ ಮಾತ್ರವೇ ಅನ್ವಯಿ ಸುತ್ತದೆ ಎಂದು ಹೇಳುವುದೂ ಸರಿಯಲ್ಲ; ಬೇರೊಂದು ಮುಖ್ಯ ಆತ್ಮನನ್ನು ಒಪ್ಪ ಬೇಕೆಂಬ ಇಚ್ಛೆಯಿಂದ ಪರಮಾತ್ಮನನ್ನೇ ಒಪ್ಪಿದರೆ ಪ್ರತ್ಯುತ್ತರದಲ್ಲಿ ಭೇದವಿರು ವುದು ಹೊಂದದೇಹೋದೀತು. ಪ್ರತ್ಯುತ್ತರವಾದರೋ ಮೊದಲನೇ ವಾಕ್ಯದಲ್ಲಿ ಜೀವನಿಗೆ ಸಂಬಂಧಿಸಿದೆ; ಯಾಕೆಂದರೆ ಪರಮಾತ್ಮನಿಗೆ ಪ್ರಾಣದೊಡನೆ ಜೀವಿಸುವುದು ಮತ್ತು ಜೀವಿಸದಿರುವುದು ಹೀಗೆಲ್ಲಾ ಸಂಭವಿಸುವಂತಿಲ್ಲ. ಎರಡನೆ ವಾಕ್ಯದಲ್ಲಿ ಪ್ರತ್ಯು ತ್ತರವು ಪರಮಾತ್ಮನಿಗೆ ಸಂಬಂಧಿಸಿದೆ; ಯಾಕೆಂದರೆ ಅವನಿಗೆ ಹಸಿವು ಮೊದಲಾದವು ಅಂಟುವಂತಿಲ್ಲ. ಅದ್ದರಿಂದ ಎರಡುವಿದ್ಯೆಗಳಿಗೂ ಭೇದವುಂಟೆಂದು ಆಕ್ಷೇಪಿಸಲಾಗಿದೆ. "ಎಲ್ಲರೊಳಗೂ ಅವನು ಅಂತರ್ಯಾಮಿಯಾಗಿರುವನು" ಎಂದು ಹೇಳಿದ ಮೊದಲ ನೆಯ ಉತ್ತರವು ಪಂಚಭೂತಗಳಲ್ಲಿ ಸೇರಿಕೊಂಡಿರುವ ಆತ್ಮವನ್ನೇ ಪ್ರತ್ಯಗಾತ್ಮ ವೆಂದೂ ಸರ್ವಾಂತರ್ಯಾಮಿ ಎಂದೂ ತಿಳಿಸುತ್ತದೆ. ಇಲ್ಲದೇಹೋದರೆ "ಯಾವನು ಪ್ರಾಣದೊಡನೆ ಜೀವಿಸುತ್ತಾನೋ" ಎಂದು ಪ್ರತ್ಯುತ್ತರದಲ್ಲಿ ಭೇದವನ್ನು ತಿಳಿಸಿದ್ದು ಹೊಂದದೇಹೊದೀತು ಎಂದು ಹೇಳಿದರೆ ಇದಕ್ಕೆ ಉತ್ತರವಾಗಿ ವಿದ್ಯೆಗಳಲ್ಲಿ ಭೇದ ವಿಲ್ಲವೆಂದೇ ಹೇಳಬೇಕಾಗುತ್ತದೆ. ಎರಡುಕಡೆಗಳಲ್ಲೂ ಪ್ರಶ್ನೋತ್ತರಗಳಲ್ಲಿ ಪರ ಮಾತ್ಮನ ವಿಷಯವೇ ಬಂದಿರುವುದರಿಂದ "ಸಾಕ್ಷಾದ್ಬ್ರಹ್ಮವೇ ಸರ್ವಾಂತರ್ಯಾಮಿ" ಎಂಬ ಪ್ರಶ್ನವು ಪರಮಾತ್ಮನಿಗೇ ಅನ್ವಯಿಸುತ್ತದೆ. ಇಲ್ಲಿ ಬ್ರಹ್ಮಶಬ್ದವನ್ನು ಪರ ಮಾತ್ಮನಲ್ಲಿಯೇ ಮುಖ್ಯವಾಗಿ ಪ್ರಯೋಗಿಸಲಾಗಿದೆ. ಆದರೆ ಜೀವನಲ್ಲಿ ಅದನ್ನು ಉಪಚಾರಕ್ಕಾಗಿ ಪ್ರಯೋಗಿಸಿರುವುದಾಗಿಯೂ ಕಂಡುಬಂದಿದೆ. ಹಾಗೆ ಪ್ರಯೋಗ ವನ್ನು ತೊಲಗಿಸಿ ಅದು ಪರಮಾತ್ಮನಿಗೇ ಅನ್ವಯಿಸುವುದೆಂದು ತಿಳಿಸಲಿಕ್ಕಾಗಿ ಸಾಕ್ಷಾದ್ಬ್ರಹ್ಮವೆಂಬ ವಿಶೇಷಣವನ್ನು ಪ್ರಶ್ನೆಯಲ್ಲಿ ಕೊಡಲಾಗಿದೆ. ಅಪರೋಕ್ಷ ವಾದವೂ ಬ್ರಹ್ಮವನ್ನು ಎಲ್ಲಾ ದೇಹಗಳಲ್ಲೂ ಎಲ್ಲ ಕಾಲಕ್ಕೂ ಸಂಬಂಧಿಸಿದ್ದೆಂದು ತಿಳಿಸುತ್ತದೆ. "ಸತ್ಯಂ ಜ್ಞಾನಮನಂತಂ ಬ್ರಹ್ಮ" ಎಂಬಲ್ಲಿ ಅನಂತಪದವು ಪರಮಾತ್ಮನಿಗೇ ಹೊಂದುತ್ತದೆ. ಬ್ರಹ್ಮವೇ ಸರ್ವಾಂತರ್ಯಾಮಿ ಎನಿಸಿರುವುದಾಗಿ ತೈತ್ತಿರೀಯದಲ್ಲೂ ಅಥರ್ವಶಿರಸ್ಸಿನಲ್ಲೂ ಸ್ಪಷ್ಟವಾಗಿದೆ. ಕಣ್ವಶಾಖೆಯಲ್ಲಿ "ಪೃಥಿವಿಯೊಳಗೆ ಇದ್ದರೂ

ಪೃಥಿವಿಯಿಂದಾಚೆಗೆ ಇರುವವನು " ಎಂದು ಆರಂಭಿಸಿ " ಆತ್ಮನೊಳಗೆ ಇದ್ದರೂ ಆತ್ಮ ನಿಂದಾಚೆನವನು " ಎಂದು ಹೇಳಿದ್ದರಿಂದ ಪರಶಿವನೇ ಸರ್ವಾಂತರ್ಯಾಮಿ ಎಂಬುದು ಸಿದ್ಧವಾಯಿತು. ಪ್ರತ್ಯುತ್ತರದಲ್ಲೂ ಶಿವನೇ ಸರ್ವಂತರ್ಯಾಮಿ ಎಂದು ತಿಳಿಸಲಾಗಿದೆ. ಪರಮಶಿವನೇ ಪ್ರಾಣಾದಿಗಳಿಗೆ ಸಹಜವಾಗಿ ಕರ್ತನೆನಿಸಿದ್ದಾನೆ. ಜೀವನಿಗಾದರೋ ಸುಷುಪ್ತಿಯಲ್ಲಿ ಪ್ರಾಣಾದಿಗಳಮೇಲೆ ಯಾಜಮನ್ಯವಿರುವುದಿಲ್ಲ. ಹೀಗೆ ವಸ್ತುಸ್ಥಿತಿ ಯನ್ನು ತಿಳಿಯದ ಉಷಸ್ತನು ಪ್ರಾಣಕ್ಕೆ ಪರಮಾತ್ಮನೇ ಕರ್ತನೆಂದು ಗುರು ಹೇಳಿ ದ್ದನ್ನು ಕೇಳಿ ಜೀವನಿಗೂ ಇದು ಏಕೆ ಅನ್ವಯಿಸಬಾರದು ? ಎಂದು ಸಂಶಯಪಟ್ಟಿದ್ದ ರಿಂದ ಮತ್ತೆ ಗುರುವು ಪರಮಾತ್ಮನೇ ಜೀವನಿಗಿಂತ ಬೇರೆಯಾಗಿ ಪ್ರಾಣಾದಿಗಳಿಗೆ ಸಹಜವಾಗಿ ಕರ್ತನೆನಿಸಿರುವನೆಂದು "ನೋಟಕ್ಕಿಂತ ಬೇರೆ ನೋಡುವವನಿಲ್ಲ" ವೆಂದು ಮುಂತಾಗಿ ತಿಳಿಸುತ್ತಾನೆ. " ಇಂದ್ರಿಯಗಳಿಗೆ ಅಧೀನವಾದ ದರ್ಶನ ಶ್ರವಣ ಮನನ ವಿಜ್ಞಾನಗಳಿಗೆ ಕರ್ತೃವಾದ ಜೀವನನ್ನೇ ಪ್ರಾಣಕ್ಕೆ ಕರ್ತೃವೆಂದು ಶ್ರುತಿಯಲ್ಲಿ ಹೇಳಿದೆ ಎಂದು ತಿಳಿಯಬೇಡ; ಯಾಕೆಂದರೆ ಅವನು ಸುಷುಪ್ತಿಯಲ್ಲೂ ಮೂರ್ಛೆಯಲ್ಲೂ ಪ್ರಾಣಾದಿಗಳಿಗೆ ಕರ್ತನಾಗಿರುವುದಿಲ್ಲ. " ಎಂಬ ಗುರುವಿನ ಉತ್ತರದಿಂದ ಇದು ಸ್ಪಷ್ಟ ವಾಗುತ್ತದೆ. " ಈ ಆಕಾಶಸ್ವರೂಪನಾದ ಪರಶಿವನು ಆನಂದವಾಗಿಲ್ಲದಿದ್ದರೆ ಯಾರು ಜೀವಿಸುತ್ತಿದ್ದರು ? " ಎಂಬಲ್ಲಿ ಪರಮಾತ್ಮನೇ ಎಲ್ಲಾ ಪ್ರಾಣಗಳಿಗೂ ಕರ್ತನೆಂದು ಹೇಳಿದೆ. ಆದ್ದರಿಂದ ಇಲ್ಲಿ ನಡೆದಿರುವ ಪ್ರಶ್ನೋತ್ತರಗಳೆರಡೂ ನೇರವಾಗಿ ಪರಮಾತ್ಮ ನಿಗೇ ಅನ್ವಯಿಸುತ್ತವೆ. "ಇದಕ್ಕಿಂತ ಬೇರೆಯಾದದ್ದೆಲ್ಲವೂ ಬ್ರಹ್ಮಪರಿಣಾಮವೇ ಆಗಿದೆ" ಎಂಬ ಉಪಸಂಹಾರವಾಕ್ಯವು ಎರಡರಲ್ಲೂ ಒಂದೇಬಗೆಯಾಗಿದೆ. ಪ್ರಶ್ನೋ ತ್ತರಗಳ ಆವೃತ್ತಿಯೂ ಒಂದೆಬಗೆಯಾಗಿದೆ. ಸಮಸ್ತಪ್ರಾಣಿಗಳ ಜೀವಿಕೆಗೆ ಆಧಾರ ನಾದ ಶಿವನನ್ನು ಹಸಿವು ಬಾಯಾರಿಕೆ ಮೊದಲಾದ ದ್ವಂದ್ವಗಳಿಲ್ಲದವನೆಂದು ತಿಳಿಸ ಲಿಕ್ಕಾಗಿ ಸದ್ವಿದ್ಯೆಯಲ್ಲಿರುವ ಉಪದೇಶ ಒಂದನ್ನು ದೃಷ್ಟಾಂತವಾಗಿ ತಿಳಿಸಲಾಗಿದೆ. " ಎಲ್ಲಕ್ಕೂ ಆದರ್ಶವಾದ ಆ ವಸ್ತುವನ್ನು ನನಗೆ ತಿಳಿಸು. ಅದನ್ನು ಮತ್ತೆಮತ್ತೆ ತಿಳಿಸು " ಎಂಬ ಪ್ರಶ್ನೆಗೆ " ಅದೇ ಅಣುವಾದದ್ದು. ಅದೇ ಎಲ್ಲರಲ್ಲೂ ಇದೆ. ಹಾಗೆಯೇ, ನೀನೂ ಅದೇ ಆಗಿದ್ದೀಯೇ" ಎಂಬುದು ಉತ್ತರವಾಗಿ ಮತ್ತೆಮತ್ತೆ ಆವೃತ್ತಿ ಯುಂಟಾಗಿದೆ. ಸದ್ರೂಪನಾದ ಬ್ರಹ್ಮದ ಮಹಿಮಾತಿಶಯವನ್ನು ತಿಳಿಸಲಿಕ್ಕಾಗಿಯೂ ಎಲ್ಲಾ ವೇದಂತಗಳ ಸಾರಭೂತವಾದ ದ್ವೈತಾದ್ವೈತತತ್ತ್ವವನ್ನು ದೃಢಪಡಿಸಲಿ ಕಾಗಿಯೂ ಗುರುವು ಶಿಷ್ಯನಿಗೆ ತಿಳಿಸುತ್ತಾನೆ. ಅದರಂತೆ ಇಲ್ಲಿಯೂ ಸರ್ವಂತರ್ಯಾಮಿ ಯಾದ ಶಿವನೇ ಎಲ್ಲ ಪ್ರಾಣಗಳಿಗೂ ಕರ್ತನಾಗಿ ಹಸಿವು ನೀರಾಡಿಕೆ ಮೊದಲಾದ ದ್ವಂದ್ವಗಳ ಸಂಬಂಧವಿಲ್ಲವೆಂದು ತಿಳಿಸಿದ್ದರಿಂದ ಸ್ವರೂಪಗಳಲ್ಲಿ ಐಕ್ಯವುಂಟಾಗಿ ವಿದ್ಯೆಗಳೂ ಒಂದೆಬಗೆ ಎನಿಸಿವೆ.

**ಅಥ ಸ್ಯಾದ್ಯದ್ಯಪ್ಯುಭೇ ಪ್ರಶ್ನಪ್ರತಿವಚನೇ ಪರಶಿವಬ್ರಹ್ಮವಿಷಯೇ ತಥಾಪಿ ವಿದ್ಯಾಭೇದೋ ಯುಕ್ತಃ, ಏಕತ್ರ ಸರ್ವಪ್ರಾಣಿಪ್ರಾಣನಹೇತುತ್ವೇ**

ನೋಪಾಸ್ಯತ್ವಮಿತರತ್ರ ಅಶಾನಾಯಾದ್ಯತೀತತ್ವೇನೇತ್ಯೇವಂ ಉಪಾಸ್ಯ
ಗುಣಭೇದೇನ ರೂಪಭೇದಾತ್ ಪ್ರಷ್ಟೃಭೇದಾಚ್ಚ. ಪೂರ್ವತ್ರಹ್ಯುಷಸ್ತಿಃ
ಪ್ರಷ್ಟಾ, ಉತ್ತರತ್ರ ಕಹೋಳ ಇತ್ಯಾಶಂಕ್ಯ ತತ್ರಾಹ. ವ್ಯತಿಹಾರೋ
ವಿಶೀಂಷಂತಿ ಹೀತರವತ್ ॥ ೩೬ ॥ ನಾತ್ರ ವಿದ್ಯಾಭೇದಃ. ಪ್ರಶ್ನಪ್ರತಿ
ವಚನಾಭ್ಯಾಂ ಏಕರೂಪಾರ್ಥವಿಷಯಾಭ್ಯಾಂ ಏಕೇನ ವಿಧಿಪದೇನ
ಏಕವಾಕ್ಯತ್ವಪ್ರತೀತೇಃ ಪ್ರಶ್ನದ್ವಯಂ ತಾವತ್ ಸರ್ವಾಂತರಾತ್ಮತ್ವ
ವಿಶಿಷ್ಟಪರಶಿವಬ್ರಹ್ಮವಿಷಯಂ. ದ್ವಿತೀಯಪ್ರಶ್ನೇ "ಯದೇವ
ಸಾಕ್ಷಾದಪರೋಕ್ಷಂ ಬ್ರಹ್ಮ ಸ ಆತ್ಮಾ ಸರ್ವಾಂತರಃ" ಇತ್ಯೇವಕಾರಶ್ಚ
ಪೂರ್ವತ್ರೋಷಸ್ತೇನ ಪೃಷ್ಟಗುಣವಿಶಿಷ್ಟಬ್ರಹ್ಮವಿಷಯತ್ವಂ ಕಹೋಳ
ಪ್ರಶ್ನಸ್ಯಾವಧಾರಯತಿ. ಪ್ರತಿವಚನಂ ಚ ಉಭಯತ್ರ "ಸ ತ ಆತ್ಮಾ
ಸರ್ವಾಂತರಃ" ಇತಿ ಸರ್ವಾಂತರಾತ್ಮವಿಶಿಷ್ಟಪರಶಿವಬ್ರಹ್ಮವಿಷಯ
ಮೇಕರೂಪಮೇವ. "ವಿಧಿಪ್ರತ್ಯಯಶ್ಚೋತ್ತರತ್ರೈವ ದೃಶ್ಯತೇ. ತಸ್ಮಾ
ದ್ಬ್ರಾಹ್ಮಣಃ ಪಾಂಡಿತ್ಯನಿರ್ವಿಣ್ಣಃ ಬಾಲ್ಯೇನ ತಿಷ್ಠಾಸ್ಯೇತ್" ಇತಿ. ಏವಂ
ಸರ್ವಾಂತರಾತ್ಮ ವಿಶಿಷ್ಟಪರಶಿವಬ್ರಹ್ಮೈಕವಿಷಯತ್ವೇ ದ್ವಯೋರ
ವಧೃತೇ ಸತ್ಯೇಕಸ್ಮಿನ್ನೇವ ಸರ್ವಾಂತರಾತ್ಮತ್ವವಿಶಿಷ್ಟಪರಶಿವಬ್ರಹ್ಮ
ಣ್ಯುಪಾಸ್ಯೇ ಉಷಸ್ತಕಹೋಳಯೋಃ ಇತರೇತರಬುದ್ಧಿವ್ಯವಹಾರಃ
ಕರ್ತವ್ಯಃ. ಉಷಸ್ತಸ್ಯ ಯಾ ಸರ್ವಾಂತರಾತ್ಮನೋ ಬ್ರಹ್ಮಣಃ ಸರ್ವ
ಪ್ರಾಣಿಪ್ರಾಣನಹೇತುತ್ವವಿಷಯಾ ಬುದ್ಧಿಃ ಸಾ ಕಹೋಳೇನಾಪಿ ಪೃಷ್ಟಾ
ಕಾರ್ಯಾ. ಯಾ ಚ ಕಹೋಳಸ್ಯ ತಸ್ಯೈವ ಬ್ರಹ್ಮಣೋಽಶನಾಯಾದ್ಯ
ತೀತ್ವವಿಷಯಾ ಬುದ್ಧಿಃ ಸಾ ಉಷಸ್ತೇನಾಪಿ ಕಾರ್ಯಾ. ಏವಂ ವ್ಯತಿ
ಹಾರೇ ಕೃತೇ ಉಭಾಭ್ಯಾಂ ಸರ್ವಾಂತರಸ್ಯ ಪರಶಿವಬ್ರಹ್ಮಣೋ ಜೀವ
ವ್ಯಾವೃತ್ತಿರವಧೃತಾ ಭವತಿ. ಏವಂ ಸರ್ವಾಂತರಾತ್ಮಾನಂ ಪ್ರತ್ಯಗಾ
ತ್ಮನೋ ವ್ಯಾವೃತ್ತಮವಗಮಯತಃ ಸರ್ವಪ್ರಾಣಿಪ್ರಾಣನಹೇತುತ್ವಾಽ
ಶನಾಯಾದ್ಯತೀತ್ವಪ್ರತಿಪಾದನೇನ ವಿಶಿಂಷಂತಿ ಹಿ ಯಾಜ್ಞವಲ್ಕ್ಯಸ್ಯ
ಪ್ರತಿವಚನಾನಿ. ಅತಃ ಪರಶಿವಬ್ರಹ್ಮಣಸ್ಸರ್ವಾಂತರಾತ್ಮತ್ವಮೇವೋ
ಪಾಸ್ಯಗುಣಃ. ಪ್ರಾಣನಹೇತುತ್ವಾದಯಸ್ತು ತಸ್ಯೋಪಪಾದಕಾಃ,
ನೋಪಾಸ್ಯಾಃ. ನನು ಉಪಾಸ್ಯಗುಣಃ ಸರ್ವಾಂತರಾತ್ಮತ್ವಮೇವ
ಚೇತ್ ಪ್ರಾಣನಹೇತುತ್ವಸ್ಯ ಅಶನಾಯಾದ್ಯತೀತತ್ವಸ್ಯ ಚ ಪ್ರಷ್ಟುಃ
ವ್ಯಾಹೃತ್ಯನುಸಂಧಾನಂ ಕಿಮರ್ಥಂ ತದುಚ್ಯತೇ. "ಸರ್ವಪ್ರಾಣಿಪ್ರಾಣ
ನಹೇತುತ್ವೇನ ಸರ್ವಾಂತರಾತ್ಮನಿ ಜೀವವ್ಯಾವೃತ್ತೇ ಬ್ರಹ್ಮಣ್ಯುಷಸ್ತೇನ
ಅವಧೃತೇ ಸತಿ ಕಹೋಳೇನ ಜೀವಸ್ಯ ಸರ್ವಾಂತರಾತ್ಮನಾ ಅಸಂಭಾ
ವಿತೇನ ಸ್ವಭಾವವಿಶೇಷೇಣ ಸರ್ವಾಂತರಾತ್ಮಾ ಜೀವವ್ಯಾವೃತ್ತೋಽನು

ಸಂಧೇಯಃ ” ಇತಿ ಕೃತ್ವಾ ಪುನಃ ಪ್ರಶ್ನಃ ಕೃತಃ. ಯಾಜ್ಞವಲ್ಕ್ಯೋಽಪಿ ತದಭಿಪ್ರಾಯಮವಿಜ್ಞಾಯ ಪ್ರತ್ಯಗಾತ್ಮನಃ ಸಂಭಾವಿತಂ ಅಶನಾಯಾದಿ ಪ್ರತ್ಯನೀಕತ್ವಂ ಉಕ್ತವಾನ್. ಅತಶ್ಚೋಽಪಾಸ್ಯಸ್ಯ ವ್ಯಾವೃತ್ತಿಪ್ರತೀತಿ ಸಿದ್ಧ್ಯರ್ಥಂ ಉಭಾಭ್ಯಾಂ ಪರಸ್ಪರಬುದ್ಧಿವ್ಯತಿಹಾರಃ ಕರ್ತವ್ಯಃ. ಇತರವತ್ ಯಥೇತರತ್ರ ಸದ್ವಿದ್ಯಾಯಾಂ ಭೂಯೋಭೂಯಃ ಪ್ರಶ್ನೈಃ ಪ್ರತಿವಚನೈಶ್ಚ ತದೇವ ಸದ್ಬ್ರಹ್ಮ ವ್ಯವಚ್ಛಿದ್ಯತೇ, ನ ಪುನಃ ಪೂರ್ವ ಪ್ರತಿಪನ್ನಾದ್ಗುಣಾದ್ಗುಣಾಂತರವಿಶಿಷ್ಟತಯೋಽಪಾಸ್ಯಂ ಪ್ರತಿಪಾದ್ಯತೇ ತದ್ವತ್.

ಪ್ರಶ್ನೋತ್ತರಗಳೆರಡೂ ಪರಮಾತ್ಮನಿಗೇ ಅನ್ವಯಿಸುವುದಾದರೂ ವಿದ್ಯೆಗಳು ಬೇರೆ ಎಂಬುದೇ ಯುಕ್ತವಾಗಿದೆ; ಯಾಕೆಂದರೆ ಒಂದುಕಡೆ ಬ್ರಹ್ಮವನ್ನು ಎಲ್ಲಾ ಪ್ರಾಣಗಳಿಗೂ ಜೀವನಾಧಾರವಾದ್ದರಿಂದ ಉಪಾಸ್ಯನೆಂದು ಹೇಳಿದೆ. ಮತ್ತೊಂದುಕಡೆ ಅವನನ್ನು ಹಸಿವು ನೀರಡಿಕೆಗಳಿಲ್ಲದಿರುವನೆಂದು ಹೇಳಿದೆ. ಹೀಗೆ ಉಪಾಸ್ಯವಸ್ತುವಿನ ಗುಣದಲ್ಲಿ ಭೇದವಿರುವುದರಿಂದ ಸ್ವರೂಪದಲ್ಲೂ ಭೇದವುಂಟಾಯಿತು. ಇದೂಅಲ್ಲದೆ ಮೊದಲು ಕೇಳಿದವನು ಉಷಸ್ತ. ಅಮೇಲೆ ಕೇಳಿದವನು ಕಹೋಳ. ಹೀಗೆ ಪ್ರಶ್ನೆ ಕೇಳುವವರಲ್ಲೂ ಭೇದವಿದೆ. ಆದ್ದರಿಂದ ವಿದ್ಯೆಗಳು ಬೇರೆ ಎಂದು ಆಕ್ಷೇಪಿಸಿ ಸಮಾಧಾನ ಮಾಡುತ್ತಾನೆ. ಪ್ರಶ್ನೋತ್ತರಗಳೂ ಒಂದೇವಸ್ತುವಿಗೇ ಅನ್ವಯಿಸುವುದರಿಂದ ಇಲ್ಲಿ ವಿದ್ಯಾಭೇದವಿಲ್ಲ. ಇಲ್ಲಿ ಎರಡರಲ್ಲೂ ವಸ್ತುವನ್ನು ವಿಧಿಸುವ ಪದವು ಒಂದೇಯಾಗಿರುವುದರಿಂದ ಎರಡುಪ್ರಶ್ನೆಗಳೂ ಸರ್ವಾಂತರ್ಯಾಮಿಯಾದ ಒಬ್ಬ ಪರಮಾತ್ಮನಿಗೇ ಅನ್ವಯಿಸುತ್ತವೆ.ಎರಡನೆಯ ಪ್ರಶ್ನೆಯಲ್ಲಿ “ಯದೇವ ಸಾಕ್ಷಾದಪರೋಕ್ಷಾದ್ಬ್ರಹ್ಮ” ಎಂಬಲ್ಲಿ ಇರುವ ಏವಕಾರವು ಮೊದಲೇ ಉಷಸ್ತನು ಕೇಳಿದ್ದ ಸಗುಣಬ್ರಹ್ಮವೇ ಕಹೋಳನ ಪ್ರಶ್ನೆಗೂ ಅನ್ವಯಿಸುವುದಾಗಿ ತಿಳಿಸುತ್ತದೆ. ಇಲ್ಲಿ ಪರಮಾತ್ಮನೇ ಸರ್ವಾಂತರ್ಯಾಮಿ ಎಂದು ಹೇಳಿರುವ ಉತ್ತರವು ಎರಡುಕಡೆಗಳಲ್ಲೂ ಒಂದೇಬಗೆಯಾಗಿದೆ. ವಿಧಿಯನ್ನು ತಿಳಿಸುವ ವಾಕ್ಯವು ಎರಡನೇ ಪ್ರಶ್ನೆಯಲ್ಲಿದೆಯೇ ಹೊರತು ಮೊದಲನೆಯ ಪ್ರಶ್ನೆಯಲ್ಲಿ ಬಂದಿಲ್ಲ. ಹೀಗೆ ಸರ್ವಾಂತರ್ಯಾಮಿಯಾದ ಪರಮಾತ್ಮನೊಬ್ಬನೇ ಎರಡುಕಡೆಗಳಲ್ಲೂ ವಿಷಯನೆಂಬುದನ್ನು ತಿಳಿದಮೇಲೆ ಸರ್ವಾಂತರ್ಯಾಮಿಯಾದ ಆ ಒಬ್ಬ ಪರಮಾತ್ಮನೇ ಉಪಾಸ್ಯನೆಂದು ಉಷಸ್ತ ಮತ್ತು ಕಹೋಳ ಇಬ್ಬರಿಗೂ ಪರಸ್ಪರವಾಗಿ ಬುದ್ಧಿಗೋಚರವಾಗಿದೆ.ಉಷಸ್ತನಿಗೆ ಸರ್ವಾಂತರ್ಯಾಮಿಯಾದ ಬ್ರಹ್ಮವೇ ಪ್ರಾಣಿಗಳೆಲ್ಲರ ಜೀವಕ್ಕೂ ಮೂಲಾಧಾರವೆಂಬ ಬುದ್ಧಿಯಿದೆ. ಅದನ್ನೇ ಕಹೋಳನೂ ಸಹ ಕೇಳಿದ್ದಾನೆ. ಕಹೋಳನಿಗೆ ಅದೇ ಬ್ರಹ್ಮವೇ ಹಸಿವೆ ನೀರಡಿಕೆ ಮೊದಲಾದ ದ್ವಂದ್ವಗಳಿಗತೀತವಾಗಿರುವುಂಬ ಬುದ್ಧಿ ಇದೆ. ಇದು ಉಷಸ್ತನಿಗೂ ಸಮ್ಮತವೇ ಆಗಿದೆ. ಹೀಗೆ ಇವರಿಬ್ಬರ ಪ್ರಶ್ನೆಗಳಿಗೂ ಸಂಬಂಧವಿರುವುದರಿಂದ ಇವರಿಬ್ಬರೂ ಪರಶಿವನನ್ನೇ ಸರ್ವಾಂತರ್ಯಾಮಿಯಾದ್ದರಿಂದ ಜೀವರಿಗಿಂತಲೂ ಭಿನ್ನನೆಂದು ತಿಳಿದಿದ್ದಾರೆ. ಹೀಗೆ ಸರ್ವಂತರ್ಯಾಮಿಯಾದ ಪರಮಾತ್ಮನನ್ನು ಜೀವನಿಂದ

ಬೇರೆ ಎಂದು ತಿಳಿಸಲಿಕ್ಕಾಗಿ ಅವನನ್ನು ಸರ್ವಪ್ರಾಣಿಗಳ ಜೀವನಾಧಾರನೆಂದೂ, ವಿಕಾರಗಳಿಲ್ಲದವನೆಂದೂ ಹೇಳುವ ಮೂಲಕ ಯಾಜ್ಞವಲ್ಕ್ಯನ ಪ್ರತ್ಯುತ್ತರಗಳು ಪರಮಾತ್ಮನ ವೈಶಿಷ್ಟ್ಯವನ್ನು ತಿಳಿಸುತ್ತವೆ. ಆದ್ದರಿಂದ ಪರಶಿವನು ಸರ್ವಾಂತರ್ಯಾಮಿ ಎಂಬುದೇ ಅವನ ಉಪಾಸ್ಯ ಗುಣವೆನಿಸಿದೆ. ಆದರೆ ಪ್ರಾಣಾಧಾರನೆಂಬುದು ಉಪಾಸ್ಯಗುಣವೆನಿಸದೆ ಬ್ರಹ್ಮವನ್ನು ಉಪಪಾದನಮಾಡುತ್ತದೆ. ಹೀಗೆ ಸರ್ವಾಂತರ್ಯಾಮಿ ಎಂಬುದು ಉಪಾಸ್ಯಗುಣವಾಗುವುದಾದರೆ, ಪ್ರಾಣಾಧಾರನೆಂಬುದನ್ನೂ, ಹಸಿವು ನೀರಡಿಕೆ ಮೊದಲಾದ ವಿಕಾರಗಳಿಲ್ಲದಿರುವಿಕೆ ಎಂಬುದನ್ನೂ ಪ್ರಶ್ನೆಯಲ್ಲಿ ಏಕೆ ಸೇರಿಸಬೇಕು? ಎಂದು ಕೇಳಿದರೆ ಅದಕ್ಕೆ ಸಮಾಧಾನವನ್ನು ತಿಳಿಸಲಾಗಿದೆ. "ಎಲ್ಲಾ ಪ್ರಾಣಿಗಳ ಜೀವನಾಧಾರವಾದ್ದರಿಂದ ಪರಮಾತ್ಮನು ಸರ್ವಾಂತರ್ಯಾಮಿ ಎನಿಸಿ ಜೀವನಿಂದ ಬೇರ್ಪಟ್ಟಿರುವನೆಂದು ಉಷಸ್ತನು ತಿಳಿದಮೇಲೆ ಕಹೋಳನು ಜೀವನೇ ಸರ್ವಾಂತರ್ಯಾಮಿ ಎಂಬುದು ಸಂಭವಿಸದೇಇರುವುದರಿಂದ ಸಹಜವಾಗಿ ಸರ್ವಾಂತರ್ಯಾಮಿಯಾದ ಪರಮಾತ್ಮನೇ ಜೀವನಿಗಿಂತ ಬೇರೆಎಂದು ತಿಳಿದು ಅನುಸಂಧಾನ ಮಾಡಬೇಕೆಂದು ಭಾವಿಸಿ ಮತ್ತೆ ಪ್ರಶ್ನೆಮಾಡಿದನು. ಯಾಜ್ಞವಲ್ಕ್ಯನು ಸಹ ಅವನ ಅಭಿಪ್ರಾಯವನ್ನು ತಿಳಿಯದೆ ಹಸಿವು ನೀರಡಿಕೆ ಮೊದಲಾದ ವಿಕಾರಗಳಿಗಂಟದಿರುವ ಬ್ರಹ್ಮದ ಸ್ವಭಾವವು ಜೀವನಿಗೆ ಅನ್ವಯಿಸುವುದಿಲ್ಲವೆಂದು ಉತ್ತರವಾಗಿ ತಿಳಿಸಿದ್ದಾನೆ. ಆದ್ದರಿಂದ ಉಪಾಸ್ಯವಸ್ತುವನ್ನು ಪ್ರತ್ಯೇಕಿಸಲಿಕ್ಕಾಗಿ ಇಬ್ಬರು ಋಷಿಗಳಿಗೂ ಪರಸ್ಪರವಾಗಿ ಬೌದ್ಧಿಕವ್ಯವಹಾರ ನಡೆಯಿತು. ಸದ್ವಿದ್ಯೆಯಲ್ಲಿ ಉದ್ದಾಲಕನಿಗೂ ಶ್ವೇತಕೇತುವಿಗೂ ಪ್ರಶ್ನೋತ್ತರಗಳು ನಡೆದಿರುವುದಷ್ಟರಲ್ಲಿ ಮಾತ್ರವೇ ತಾತ್ಪರ್ಯವೇ ಹೊರತು ಮೊದಲು ಹೇಳಿದ ಗುಣಕ್ಕಿಂತಲೂ ಬೇರೊಂದು ಗುಣದಿಂದ ಕೂಡಿದ ಬ್ರಹ್ಮವು ಅಲ್ಲಿ ಹೇಗೆ ವಿವಕ್ಷಿತವಲ್ಲವೋ ಆದರಂತೆ ಇಲ್ಲಿಯೂ ಪ್ರಶ್ನೋತ್ತರಗಳಿಂದ ಬ್ರಹ್ಮವನ್ನು ಜೀವನಿಂದ ಪ್ರತ್ಯೇಕಿಸುವುದೇ ವಿವಕ್ಷಿತವಾಗಿದೆ. ಆದರೆ ಉಪಾಸನೆಯಲ್ಲಿ ಗುಣಭೇದವುಂಟೆಂದೂ ಅದೇ ಒಂದು ವಿಶೇಷವೆಂದೂ ಒಪ್ಪಬೇಕಾಗಿಲ್ಲ.

ತತ್ರಾಪಿ ಪ್ರಶ್ನಪ್ರತಿವಚನಭೇದೇ ಸತಿ ಕಥಮೈಕ್ಯಂ ಅವಗಮ್ಯತ ಇತಿ ಚೇತ್ತತ್ರಾಹ. **ಸೈವ ಹಿ ಸತ್ಯಾದಯಃ ॥ ೩೭ ॥** ಸೈವ ಹಿ ಸ್ವಚ್ಛಬ್ದಾಭಿಹಿತಾ ಪರಮಕಾರಣಭೂತಾ ಪರಾ ದೈವತೈವ "ಸೇಯಂ ದೇವತೈಕ್ಷತ", "ತೇಜಃಪರಸ್ಯಾಂ ದೇವತಾಯಾಂ" ಇತಿ ಪ್ರಕೃತಾ, "ಯಥಾ ಸೌಮ್ಯ ಮಧು ಮಧುಕೃತೋ ನಿಸ್ತಿಷ್ಠಂತಿ" ಇತ್ಯಾದಿಷು ಪರ್ಯಾಯೇಷು ಸರ್ವೇಷೂಪಪದ್ಯತೇ. ಯತಃ "ಐತದಾತ್ಮ್ಯಮಿದಂ ಸರ್ವಂ ತತ್ಸತ್ಯಂ ಸ ಆತ್ಮಾ" ಇತಿ ಪ್ರಥಮಪರ್ಯಾಯೋದಿತಾಃ ಸತ್ಯಾದಯಸ್ಸರ್ವೇಷು ಉಪಪಾದ್ಯೋಪಸಂಹ್ರಿಯಂತೇ. ಕೇಚಿತ್ತು "ವ್ಯತೀಹಾರೋ ವಿಶಿಷಂತಿ ಹೀತರವತ್," "ಸೈವ ಹಿ ಸತ್ಯಾದಯಃ" ಇತಿ ಸೂತ್ರದ್ವಯಂ ಅಧಿಕರಣದ್ವಯಮಿತಿ ವರ್ಣಯಂತಿ. ತತ್ರ

ಪೂರ್ವೇಣ "ತ್ವಂ ವಾಽಹಮಸ್ಮಿ ಭಗವೋ ದೇವತೇ । ಅಹಂ ವೈ ತ್ವಮಸಿ ಭಗವೋ ದೇವತೇ ತದ್ಯೋಽಹಂ ಸೋಽಹಂ ಯೋಽಸೌ ಸೋಽಹಮಿತಿ ವಾಕ್ಯೇ ಜೀವಪರಮಯೋರ್ವ್ಯತೀಹಾರಾನುಸಂಧಾನಂ ಪ್ರತಿಪಾದ್ಯತ ಇತ್ಯುಚ್ಯತೇ" ಇತ್ಯಾಹುಃ. ತಚ್ಚ "ಸರ್ವಂ ಖಲ್ವಿದಂ ಬ್ರಹ್ಮ", "ಐತದಾತ್ಮ್ಯಮಿದಂ ಸರ್ವಂ", "ತತ್ತ್ವಮಸಿ" ಇತ್ಯವಗತ ಸರ್ವಾತ್ಮಭಾವವಿಷಯತ್ವಾದಸ್ಯ ವಾಕ್ಯಸ್ಯ ನಾತ್ರ ಪ್ರತಿಪಾದನೀಯಮಪೂರ್ವಮಸ್ತೀತ್ಯನಾದರಣೀಯಂ. ತತ್ತು ವಕ್ಷ್ಯತೇ "ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ" ಇತಿ. ನ ಚ ಸರ್ವಾತ್ಮತ್ವಾನುಸಂಧಾನಾತಿರೇಕೇಣ ಪರಸ್ಮಿನ್ ಬ್ರಹ್ಮಣಿ ಜೀವತ್ವಾನುಸಂಧಾನಂ ಜೀವೇ ಚ ಪರಬ್ರಹ್ಮತ್ವಾನುಸಂಧಾನಂ ತಥ್ಯಂ ಸಂಭವತಿ. ಉತ್ತರೇಣ ಚ ಸೂತ್ರೇಣ "ಸ ಯೋ ಹ ವೈ ತನ್ಮಹದ್ಯಕ್ಷಂ ಪ್ರಥಮಜಂ ವೇದ ಸತ್ಯಂ ಬ್ರಹ್ಮ" ಇತ್ಯಾದಿವಾಕ್ಯಪ್ರತಿಪಾದಿತಸ್ಯ ಸತ್ಯೋಪಾಸನಸ್ಯ, "ಯದ್ಯತ್ಸತ್ಯಮಸೌ ಸ ಆದಿತ್ಯೋ ಯ ಏಷ ಏತಸ್ಮಿನ್ಮಂಡಲೇ ಪುರುಷೋ ಯಶ್ಚಾಯಂ ದಕ್ಷಿಣೇಽಕ್ಷಿಣಿ" ಇತ್ಯಾದಿವಾಕ್ಯಪ್ರತಿಪಾದಿತೋಪಾಸನಸ್ಯ ಚೈಕ್ಯಂ ಪ್ರತಿಪಾದ್ಯತ ಇತಿ ತದಪ್ಯಯುಕ್ತಂ. ಉತ್ತರವಾಕ್ಯೇ ಅಕ್ಷ್ಯಾದಿತ್ಯಸ್ಥಾನಭೇದೇನ ವಿದ್ಯಾಭೇದಸ್ಯ ಪೂರ್ವಮೇವೋಕ್ತಂ "ನವಾ ವಿಶೇಷಾತ್" ಇತ್ಯನೇನ ಪ್ರತಿಪಾದಿತತ್ವಾತ್. ನಚ ದ್ವಯೋರನಯೋರ್ವ್ಯಾಹೃತ್ಯಾದಿಶರೀರಕತ್ವೇನ ರೂಪವತೋಃ "ಹಂತಿ ಪಾಪ್ಮಾನಂ ಜಹಾತಿ ಚ ಯ ಏವಂ ವೇದ" ಇತಿ ಪೃಥಕ್ಸಂಯೋಗಚೋದನಾವತೋರ್ದ್ವಯೋರುಪಾಸನಯೋಃ "ಸ ಯೋ ಹ ವೈ ತಂ ಮಹದ್ಯಕ್ಷಂ ಪ್ರಥಮಜಂ ವೇದ ಸತ್ಯಂ ಬ್ರಹ್ಮ" ಇತಿ, "ಯಜಿತೀಮಾನ್ಲೋಕಾನ್" ಇತಿ ಸಂಯೋಗರೂಪಾದಿಮತ್ತಯಾ ನಿರಪೇಕ್ಷೇಣ ಪೂರ್ವೇಣೈಕೇನೋಪಾಸನೇನ ಅಭೇದಸ್ಸಂಭವತಿ. "ನ ಚ ಹಂತಿ ಪಾಪ್ಮಾನಂ ಜಹಾತಿ" ಇತಿ ಗುಣಫಲಾಧಿಕಾರತ್ವಂ ಪ್ರಮಾಣಾಭಾವಾತ್ ಪೂರ್ವೇಣೈಕೇನ ವಿದ್ಯಾತ್ವಂ ಪ್ರಮಾಣಮಿತಿ ಚೇನ್ನ ಇತರೇತರಾಶ್ರಯತ್ವಾತ್. ಏಕವಿದ್ಯಾತ್ವೇ ನಿಶ್ಚಿತೇ ಪೂರ್ವಫಲಸ್ಯೈವ ಪ್ರಧಾನತ್ವೇನ ಉತ್ತರಯೋಃ ಫಲಯೋರ್ಗುಣಫಲತ್ವಂ. ತಯೋರ್ಗುಣಫಲತ್ವೇ ನಿಶ್ಚಿತೇ ಸತಿ ಸಂಯೋಗಭೇದಾಭಾವಾತ್ ಪೂರ್ವೇಣ ವಿದ್ಯೈಕ್ಯಮಿತಿ ಇತರಾಶ್ರಯತ್ವಮಿತ್ಯೇವಮಾದಿಭಿರ್ಯಥೋಕ್ತಪ್ರಕಾರಮೇವ ಸೂತ್ರದ್ವಯಮಿತಿ ನಿಶ್ಚೀಯತೇ.

ಅಲ್ಲಿಯೂ ಸಹ ಪ್ರಶ್ನೋತ್ತರಗಳಿಗೆ ಭೇದವಿದ್ದರೆ ಐಕ್ಯವನ್ನು ಹೇಗೆ ತಿಳಿಯಲು ಸಾಧ್ಯವಾದೀತೆಂದು ಆಕ್ಷೇಪಿಸಿ ಸಮಾಧಾನ ಮಾಡುತ್ತಾನೆ. ಸಚ್ಛಬ್ದದಿಂದ ತಿಳಿದುಬರುವ ಪರಮಕಾರಣವೆನಿಸಿದ ಪರಮಾತ್ಮನೇ "ಆ ಈ ದೇವತೆ ನೋಡಿತು"

" ತೇಜಸ್ಸು ಪರಮಾತ್ಮನಲ್ಲಿ ಲೀನವಾಯಿತು " " ದುಂಬಿಗಳು ಗೂಡಿನಿಂದ ಹೊರಗೆ ಬರುವಂತೆ ಜೀವರು ಪರಮನಿಂದ ಹೊರಗೆಬರುತ್ತಾರೆ " ಎಂಬ ಪ್ರಕರಣಗಳಲ್ಲಿ ಆ ಪರಮಾತ್ಮನೇ ಪ್ರತಿಪಾದಿತನಾಗಿದ್ದಾನೆ. ಯಾಕೆಂದರೆ " ಇದೆಲ್ಲವೂ ಅದೇ ಆಗಿದೆ. ಅದೇ ಸತ್ಯ ಅದೇ ಆತ್ಮ " ಎಂಬಲ್ಲಿ ಮೊದಲಿಗೆ ಹೇಳಿರುವ ಸತ್ಯ ಮೊದಲಾದ ಧರ್ಮ ಗಳನ್ನು ಎಲ್ಲಾ ಕಡೆಗಳಲ್ಲೂ ಹೇಳಿ ಉಪಸಂಹಾರಮಾಡಲಾಗಿದೆ. ಕೆಲವರು ಇವೆ ರಡು ಸೂತ್ರಗಳನ್ನು ಪ್ರತ್ಯೇಕವಾದ ಅಧಿಕರಣಗಳೆಂದು ಭಾವಿಸುತ್ತಾರೆ. ಇವು ಗಳಲ್ಲಿ ಮೊದಲನೆಯ ಸೂತ್ರವು "ಎಲೈ ದೇವತೆಯೇ ನಾನಾದರೂ ನೀನೇ ಆಗಿರುವೆನು. ನೀನಾದರೋ ನಾನೇ ಆಗಿದ್ದೀಯೇ " " ಯಾವ ನಾನೇ ಇವನು, ಯಾವ ಇವನೇ ನಾನು " ಎಂಬ ವಾಕ್ಯಗಳಲ್ಲಿ ಜೀವಪರಮರಿಗೆ ಸಂಬಂಧ ಹೇಗಿರುವುದೆಂಬುದನ್ನು ತಿಳಿಸಲಾಗಿದೆ " ಎಂದು ಅವರು ಹೇಳುತ್ತಾರೆ. ಆದರೆ " ಇದೆಲ್ಲವೂ ಬ್ರಹ್ಮ " ಎಂಬಲ್ಲಿ ತಿಳಿದುಬರುವ ಸರ್ವಾತ್ಮಭಾವದಲ್ಲಿಯೇ ಈ ವಿಷಯ ಅಡಗಿರುವುದರಿಂದ ಇಲ್ಲಿ ಹೊಸ ದಾಗಿ ಹೇಳಬೇಕಾದ್ದೇನೂ ಇಲ್ಲವೆಂಬ ಅಂಶ ಸ್ಪಷ್ಟವಾಗಿದೆ. " ಆತ್ಮೇತಿ ತೂಪ ಗಚ್ಛಂತಿ " ಎಂಬ ಸೂತ್ರದಲ್ಲಿ ಪರಮಾತ್ಮನನ್ನು ಸರ್ವಾತ್ಮನೆಂದು ಅನುಸಂಧಾನ ಮಾಡದೆ ಅವನನ್ನೇ ಜೀವನೆಂದು ಅನುಸಂಧಾನಮಾಡುವುದಾಗಲೀ, ಜೀವನನ್ನು ಪರಮಾತ್ಮನೆಂದು ಅನುಸಂಧಾನಮಾಡುವುದಾಗಲೀ ಹಿತವಾಗುವುದಿಲ್ಲವೆಂದು ಹೇಳ ಲಾಗಿದೆ. " ಯಾವನು ಮೊದಲಿಗೆ ಹುಟ್ಟಿದ್ದ ಆ ಮಹಾಯಕ್ಷವನ್ನು ತಿಳಿಯು ವನೋ ಅವನೇ ಸತ್ಯವೂ ಬ್ರಹ್ಮವೂ ಆಗುವನು " ಎಂಬ ವಾಕ್ಯದಲ್ಲಿ ಹೇಳಿದ ಸತ್ಯೋ ಪಾಸನಕ್ಕೂ " ಯಾವುದು ಸತ್ಯವೋ ಅವನೇ ಆದಿತ್ಯನು, ಅವನೇ ಈ ಮಂಡಲದಲ್ಲಿ ಇರುವ ಪುರುಷನು, ಈ ಬಲಗಣ್ಣಿನಲ್ಲಿ ಇರುವವನೂ ಅವನೇ " ಎಂಬ ವಾಕ್ಯದಲ್ಲಿ ಹೇಳಿರುವ ಉಪಾಸನಕ್ಕೂ ಐಕ್ಯವನ್ನು ತಿಳಿಸಲಾಗಿದೆ ಎಂದು ಮುಂದಿನ ಸೂತ್ರದಲ್ಲಿ ಹೇಳಿದ್ದೂ ಅಯುಕ್ತವೇ ಸರಿ ; ಯಾಕೆಂದರೆ ಇಲ್ಲಿ ಅಕ್ಷಿ ಆದಿತ್ಯವೆಂಬ ಸ್ಥಾನಭೇದ ದಿಂದ ಉಪಾಸನದಲ್ಲೂ ಭೇದವಿದೆ ಎಂದು ಹಿಂದೆಯೇ " ನವಾ ವಿಶೇಷಾತ್ " ಎಂಬ ಸೂತ್ರದಲ್ಲಿ ತಿಳಿಸಲಾಗಿದೆ. ಆ ಎರಡು ವಿದ್ಯೆಗಳಲ್ಲೂ ಮಂತ್ರರೂಪಿಯಾದ ಪರ ಮಾತ್ಮನೇ ಉಪಾಸ್ಯನೆಂದು ಹೇಳಿದ್ದರೂ " ಇದನ್ನು ಅರಿತವನು ಪಾಪವನ್ನು ತೊಲಗಿಸು ತ್ತಾನೆ " ಎಂದು ಮುಂತಾಗಿ ಬೇರೆ ಫಲವನ್ನೂ ಮತ್ತು ವಿಧಿಯನ್ನೂ ಹೇಳಿರುವುದ ರಿಂದಲೂ ಈ ಎರಡು ವಿದ್ಯೆಗಳಿಗೂ ಪರಸ್ಪರ ಹೊಂದಿಕೆ ಇಲ್ಲದ್ದರಿಂದಲೂ, ಎರಡು ವಿದ್ಯೆಗಳೂ ಹೇಗೆ ಒಂದೇಬಗೆಯಾಗುತ್ತವೆ ? ಆದ್ದರಿಂದ ಇವೆರಡುವಿದ್ಯೆಗಳನ್ನು ಬೇರೆ ಎಂದೇ ಹೇಳಬೇಕು. " ಪಾಪವನ್ನು ತೊಲಗಿಸುತ್ತಾನೆ " ಎಂಬಲ್ಲಿ ಹೇಳಿದ ಫಲವು ಬ್ರಹ್ಮವಿದ್ಯೆಯ ಫಲವಾಗದೆ ಗುಣಗಳ ಉಪಾಸನೆಯ ಫಲವಾದ್ದರಿಂದ ವಿದ್ಯೆಗಳೆರ ಡನ್ನು ಒಂದೇ ಬಗೆ ಎಂದು ತಿಳಿಯಬಹುದಲ್ಲವೇ ? ಎಂದು ಕೇಳಿದರೆ ಇದಕ್ಕೆ ಸಮಾ ಧಾನವನ್ನು ಇಲ್ಲಿ ತಿಳಿಸಲಾಗಿದೆ. ಎರಡು ವಿದ್ಯೆಗಳೂ ಒಂದೇ ಎಂದು ನಿಶ್ಚಯವಾದ ಮೇಲೆಯೇ " ಪಾಪವನ್ನು ತೊಲಗಿಸುವನು " ಎಂಬ ಫಲವನ್ನು ಗುಣೋಪಾಸನದ

ಫಲವೆಂದು ಹೇಳಬೇಕಾಗುತ್ತದೆ. ಅದು ಗುಣೋಪಾಸನದ ಫಲವೆಂದು ತೀರ್ಮಾನವಾಗದೇ ವಿದ್ಯೆಗಳು ಒಂದೇಬಗೆ ಎಂಬುದನ್ನು ತೀರ್ಮಾನಿಸಲಾಗುವುದಿಲ್ಲ. ಈ ರೀತಿಯಲ್ಲಿ ಅನ್ಯೋನ್ಯಾಶ್ರಯದೋಷವು ಸಂಭವಿಸುತ್ತದೆಯಾದ್ದರಿಂದ ನಾವು ಹಿಂದೆ ಹೇಳಿದ ರೀತಿಯಲ್ಲಿ ಎರಡುಸೂತ್ರಗಳಿಗೆ ಅರ್ಥವನ್ನು ಹೇಳುವುದೇ ಸೂಕ್ತವಾಗಿದೆ.

ನನು "ಓಮಿತ್ಯೇತದಕ್ಷರಮಿದಂ ಸರ್ವಂ" ಇತ್ಯಾದಿನಾ ಮಾಂಡೂಕ್ಯೇ ಪ್ರಣವಸ್ಯೈವಾಕ್ಷರತ್ವಂ ಸರ್ವಾತ್ಮಕತ್ವಂ ಸರ್ವಾತೀತತ್ವಂ. ತಥಾ ತೈತ್ತಿರೀಯೇ "ದಹರಂ ವಿಪಾಪಂ" ಇತ್ಯಾರಭ್ಯ ದಹರವಿದ್ಯಾಂ ಪ್ರಪಂಚಯಿತ್ವಾ "ಯೋ ವೇದಾದೌ ಸ್ವರಃ ಪ್ರೋಕ್ತಃ" ಇತ್ಯಾದಿನಾ ಪ್ರಣವೋಪಾಸ್ಯತ್ವಂ. ಪ್ರದೇಶಾಂತರೇಽಪಿ "ಓಮಿತ್ಯೇಕಾಕ್ಷರಂ ಬ್ರಹ್ಮ", "ಓಂ ತದ್ಬ್ರಹ್ಮ", "ಓಂ ತದ್ವಾಯುಃ" ಇತ್ಯಾದಿನಾ ಪ್ರಣವಸ್ಯೈವ ಪರತ್ವವ್ಯವಸ್ಥಾಪನಾತ್ ವೇದವೇದಾಂತೋಪಸಂಹಾರೇ "ಹರಿಃ ಓಂ" ಇತಿ ಪ್ರಯೋಗದರ್ಶನಾಚ್ಚ ನಾರಾಯಣಸ್ಯೈವ ಪ್ರಣವಾತ್ಮಕತ್ವಂ ಅರ್ಥಾತ್ಸಿದ್ಧಂ. ಅತೋ ದಹರಶಾಂಡಿಲ್ಯಾದಿಸರ್ವವಿದ್ಯೋಪಾಸ್ಯತ್ವಂ ತಸ್ಯೈವ ಸಮುಚಿತಮಿತ್ಯಾಶಂಕಾಯಾಂ ಅಧಿಕರಣಾಂತರೇಣಾಹ. ಕಾಮ್ಯಾಧಿಕರಣಂ ॥ ೧೬ ॥ ಕಾಮಾದೀತರತ್ರ ತತ್ರ ಚಾಯತನಾದಿಭ್ಯಃ ॥ ೩೮ ॥ ಮಾಂಡೂಕ್ಯೇ ಶ್ರೂಯತೇ. "ಓಮಿತ್ಯೇಕಾಕ್ಷರಂ ಬ್ರಹ್ಮ". ತಸ್ಯೋಪವ್ಯಾಖ್ಯಾನಂ. "ಭೂತಂ ಭವ್ಯಂ ಭವಿಷ್ಯದಿತಿ ಸರ್ವಮೋಂಕಾರ ಏವ. ಯಚ್ಚಾನ್ಯತ್ತ್ರಿಕಾಲಾತೀತಂ ತದಪ್ಯೋಂಕಾರ ಏವ", "ಸರ್ವಂ ಹ್ಯೇತದ್ಬ್ರಹ್ಮ", "ಅಯಮಾತ್ಮಾ ಬ್ರಹ್ಮ", "ಸೋಽಯಮಾತ್ಮಾ", "ಚತುಷ್ಪಾಜ್ಜಾಗರಿತಸ್ಥಾನೋ ಬಹಿಃಪ್ರಜ್ಞಃ ಸಪ್ತಾಂಗ ಏಕೋನವಿಂಶತಿಮುಖಃ ಸ್ಥೂಲಭುಗ್ವೈಶ್ವಾನರಃ ಪ್ರಥಮಃ ಪಾದಃ. ಸ್ವಪ್ನಾವಸ್ಥಾನೋಽಂತಃಪ್ರಜ್ಞಃ ಪ್ರವಿವಿಕ್ತಭುಕ್ತೈಜಸೋ ದ್ವಿತೀಯಃ ಪಾದಃ. ಸುಷುಪ್ತಿಸ್ಥಾನ ಏಕೀಭೂತಃ ಪ್ರಜ್ಞಾನಘನ ಏವಾನಂದಮಯೋ ಹ್ಯಾನಂದಭುಕ್ ಚೇತೋಮುಖಃ ಪ್ರಾಜ್ಞಸ್ತೃತೀಯಃ ಪಾದಃ. "ಏಷ ಸರ್ವೇಶ್ವರ ಏಷ ಸರ್ವಜ್ಞಃ ಏಷೋಽಂತರ್ಯಾಮ್ಯೇಷ ಯೋನಿಃ, ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಂ" "ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ" "ಓಂ ತದ್ಬ್ರಹ್ಮ" ಇತ್ಯಾದಿತೈತ್ತಿರೀಯಕೇ ಚ ಶ್ರೂಯತೇ. ತತ್ರ ಸಂಶಯಃ ಕಿಮೋಂಕಾರವಿದ್ಯಾಯಾಮುಪಾಸ್ಯಃ ಓಂಕಾರೋ ವಾ ತದಧಿಷ್ಠಾನಪರಶಿವೋ ವಾ ತದಾತ್ಮಕನಾರಾಯಣೋ ವೇತಿ. ಕಿಂ ಯುಕ್ತಂ? ವಿದ್ಯಾಭೇದ ಇತಿ. ಕುತಃ? ರೂಪಭೇದಾತ್ "ಓಮಿತ್ಯೇತದಕ್ಷರಮಿದಂ ಸರ್ವಂ" ಇತ್ಯುಪಕ್ರಮ್ಯ ಪ್ರಣವಸ್ಯೈವ "ಅಯಮಾತ್ಮಾ ಬ್ರಹ್ಮ",

"ಸೋಽಯಮಾತ್ಮಾ" ಇತ್ಯಾದಿನಾ ಸರ್ವಾತ್ಮಕತ್ವಸ್ಯ ಅಪರೋಕ್ಷ ಬ್ರಹ್ಮತ್ವಸ್ಯ ಚ ವ್ಯವಸ್ಥಾಪನಾತ್. ಅನ್ಯತ್ರ ಚ "ಓಮಿತ್ಯೇಕಾಕ್ಷರಂ ಬ್ರಹ್ಮ", "ಓಂ ತದ್ಬ್ರಹ್ಮ ಓಂ ತದ್ವಾಯುಃ ಓಂ ತದಾತ್ಮಾ ಓಂ ತತ್ಸತ್ಯಂ ಓ ತತ್ಸರ್ವಂ" ಇತ್ಯಾದಿನಾ ತೈತ್ತಿರೀಯೇ ತಸ್ಯೈತದ್ದರ್ಶನಾತ್, "ಓಂ ಬ್ರಹ್ಮ ದೇವಾನಾಂ ಪ್ರಥಮಂ ಸಂಬಭೂವ ವಿಶ್ವಸ್ಯ ಕರ್ತಾ ಭುವನಸ್ಯ ಗೋಪ್ತಾ ಸ ಬ್ರಹ್ಮವಿದ್ಯಾಂ ಸರ್ವವಿದ್ಯಾಪ್ರತಿಷ್ಠಾಮಥರ್ವಾಯ ಜ್ಯೇಷ್ಠಪುತ್ರಾಯ ಪ್ರಾಹ" ಇತಿ ಮುಂಡಕೇ, "ಓಂ ಅಥ ಹೈನಂ ಪಿಪ್ಪಲಾದಾಂಗೀರಸಃ ಸನತ್ಕುಮಾರಶ್ಚಾಥರ್ವಣಮುವಾಚ "ಭಗರ್ವ ಕಿಮಾದೌ ಪ್ರಯುಕ್ತಂ ಧ್ಯಾನಂ ಧ್ಯಾಯೇತ್? ಚತ್ವಾರೋ ವೇದಾಶ್ಚ? ತಪ್ಯಂ ಕಿಂ? ತದ್ಧ್ಯಾನಂ? ಕೋ ವಾ ಧ್ಯಾತಾ? ಕಶ್ಚ ಧ್ಯೇಯಃ?" ಇತಿ. ಸ ಏಭ್ಯೋಽಥರ್ವಣಃ ಪ್ರತ್ಯುವಾಚ "ಓಮಿತ್ಯೇತದಕ್ಷರಮಾದೌ ಪ್ರಯುಕ್ತಂ. ಧ್ಯಾನಂ ಧ್ಯಾತವ್ಯಮಿತ್ಯೇತದಕ್ಷರಂ ಪರಂ ಬ್ರಹ್ಮ. ಅಸ್ಯ ಪಾದಾಶ್ಚತುಷ್ಪಾದಿಕಮಕ್ಷರಂ." ಇತಿ. ಅಥರ್ವಣಶಿಖೋಪನಿಷದಿ ಚ ತಥಾ ತಸ್ಯೈವ ಸರ್ವಾಧಿಕತ್ವನಿರ್ದೇಶಾಚ್ಚ ನಾದಸ್ಯ ಪ್ರಣವ ಧ್ಯಾನಧಾರಣಾದ್ಯುಪಾಸನಂ? ಉತ, "ಹರಿಃ ಓಂ" ಇತಿದರ್ಶನಾತ್ ಪ್ರಣವಾತ್ಮಕವಿಷ್ಣುಧ್ಯಾನಂ ವಾ ಮುಮುಕ್ಷೂಣಾಂ ವಿಧೇಯಂ? ಇತಿ ಪ್ರಾಪ್ತೇ ಪ್ರಚಕ್ಷ್ಮಹೇ ಕಾಮಾದಿತರತ್ರೇತಿ. ಇತರತ್ರ ತೈತ್ತಿರೀಯಾದಿಷು ಶ್ರೂಯಮಾಣಾನಾಂ ದಹರಾದಿವಿದ್ಯಾವಿಧಾಯಕಾನಾಂ ಪರಮೇಶ್ವರಧರ್ಮಾಣಾಂ ಏಕತ್ವೇನ ವಿದ್ಯೈಕ್ಯಮುಪಪನ್ನಂ. ಕುತ? ಆಯತನಾದಿಭ್ಯಃ. ಪ್ರಣವಾಯತನಸ್ಯ ಉಪಾಸ್ಯಸ್ಯ ಪರಮಶಿವಸ್ಯ ಸರ್ವಮಯತ್ವಹೃತ್ಪುಂಡರೀಕಸ್ಥಾನತ್ವಾದ್ಯನನ್ಯಸಾಧಾರಣಲಿಂಗಾನಾಂ ಸರ್ವಾಸು ಶಾಖಾಸು ತುಲ್ಯತ್ವಾದಿತ್ಯರ್ಥಃ. ತಥಾಚ "ಸತ್ಯಕಾಮಸ್ಸತ್ಯಸಂಕಲ್ಪಸ್ಸೋಽನ್ವೇಷ್ಟಿತವ್ಯಸ್ಸ ವಿಜಿಜ್ಞಾಸಿತವ್ಯಃ" ಇತ್ಯಾದ್ಯೇಕೈಕಶಾಖಾಯಾಂ ಶ್ರೂಯಮಾಣಾಯಾಂ ಗುಣಾನಾಂ ಸತ್ಯಕಾಮತ್ವಾದೀನಾಂ ಸರ್ವಾಸು ಶಾಖಾಸ್ವಪ್ಯುಪಸಂಹಾರಃ ಕರ್ತವ್ಯಃ. ತತ್ರೈವ ಮಾಂಡೂಕ್ಯೇ "ನಾಂತಃಪ್ರಜ್ಞಂ ನ ಬಹಿಃಪ್ರಜ್ಞಂ ನೋಭಯತಃಪ್ರಜ್ಞಂ ನ ಪ್ರಜ್ಞಂ ನಾಪ್ರಜ್ಞಂ ಪ್ರಜ್ಞಾನಘನಂ", "ಅದೃಶ್ಯಮವ್ಯವಹಾರ್ಯಮಗ್ರಾಹ್ಯಮಲಕ್ಷಣಮಚಿಂತ್ಯಮವ್ಯಪದೇಶ್ಯಮೇಕಾತ್ಮಪ್ರತ್ಯಯಸಾರಂ ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ। ಸ ಆತ್ಮಾ ಸ ವಿಜ್ಞೇಯಃ", "ಸೋಽಯಮಾತ್ಮಾಧ್ಯಕ್ಷರಮೋಂಕಾರಾಧಿಮಾತ್ರಂ", "ಪಾದಾ ಮಾತ್ರಾಃ ಮಾತ್ರಾಶ್ಚ ಪಾದಾಃ ಅಕಾರಉಕಾರಮಕಾರಶ್ಚೇತಿ ಜಾಗರಿತಸ್ಥಾನೋ ವೈಶ್ವಾನರೋಂಕಾರಃ ಪ್ರಥಮಾ

ಮಾತ್ರಾ. ಆಪ್ತೇರಾದಿಮತ್ತ್ವಾದ್ವಾಪ್ನೋತೀಹ ವೈ ಸರ್ವಾನ್ ಕಾಮಾನ್ ಆದಿಶ್ಚ ಭವತಿ। ಯ ಏವಂ ವೇದ", "ಸ್ವಪ್ನಸ್ಥಾನಸ್ತೈಜಸ ಉಕಾರೋ ದ್ವಿತೀಯಾ ಮಾತ್ರಾ. ಉತ್ಕರ್ಷಾದುಭಯತ್ವಾತ್. ಯಾ ಉತ್ಕರ್ಷತೀಹ ವೈ ಜ್ಞಾನಸಂತತಿಂ ಸಮಾನಾ ಚ ಭವತಿ ನಾಸಾವ ಬ್ರಹ್ಮವಿತ್ಕುಲೇ ಭವತಿ ಯ ಏವಂ ವೇದ", "ಸುಷುಪ್ತಸ್ಥಾನಃ ಪ್ರಾಜ್ಞೋ ಮಕಾರಸ್ತೃತೀಯಾ ಮಾತ್ರಾ, ಮಿತೇರಪೀತೇರ್ವಾ ಮಿನೋತೀಹ ವಾ ಇದಂ ಸರ್ವಮಪೀತಿಶ್ಚ ಭವತಿ. ಯ ಏವಂ ವೇದ," "ಅಮಾತ್ರಶ್ಚತುರ್ಥೋ ವ್ಯವಹಾರ್ಯಃ ಪ್ರಪಂಚೋಪಶಮಶ್ಶಿವೋಽದ್ವೈತಮೇವಮೋಂಕಾರಃ ಸಂವಿಶತ್ಯಾತ್ಮನಾತ್ಮಾನಂ ಯ ಏವಂ ವೇದ" ಇತ್ಯಂತೇನ ಪ್ರಣವಾತ್ಮಕತ್ವಸ್ಯ ಶಿವ ಏವ ನಿರ್ದೇಶಾತ್ ಸರ್ವಾತ್ಮಕತ್ವಾದಿಸರ್ವೇಷಾಂ ಧರ್ಮಾಣಾಂ ನೇತರಸ್ಯೋಪಪತ್ತಿಃ. ತಥೇತರತ್ರ ಚ. ತೈತ್ತಿರೀಯೇ "ಈಶಾನಸ್ಸರ್ವವಿದ್ಯಾನಾಮೀಶ್ವರಸ್ಸರ್ವಭೂತಾನಾಂ ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿರ್ಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಂ" ಇತ್ಯನೇನ ಪ್ರಣವಾತ್ಮಕತ್ವಂ ಶಿವಸ್ಯೈವ ಪ್ರದರ್ಶಿತಂ. "ದಹರಂ ವಿಪಾಪಂ ಪರವೇಶ್ಮಭೂತಂ ಯತ್ಪುಂಡರೀಕಂ ಪುರಮಧ್ಯಸಂಸ್ಥಂ। ತತ್ರಾಪಿ ದಹ್ರಂ ಗಗನಂ ವಿಶೋಕಸ್ತಸ್ಮಿನ್ಯದಂತಸ್ತದುಪಾಸಿತವ್ಯಂ" ಇತಿ ದಹರವಿದ್ಯಾಂ ನಿರೂಪ್ಯ ತತ್ರೋಪಾಸ್ಯಃ ಕಃ? ಇತ್ಯಾಕಾಂಕ್ಷಾಯಾಂ, "ಯೋ ವೇದಾದೌ ಸ್ವರಃ ಪ್ರೋಕ್ತೋ ವೇದಾಂತೇ ಚ ಪ್ರತಿಷ್ಠಿತಃ। ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸ ಮಹೇಶ್ವರಃ॥" ಇತ್ಯಾದಿನಾ ಪ್ರಣವಪ್ರಕೃತಿಕಮೂರ್ತಿತ್ರಯಾತೀತಮಹೇಶ್ವರಶಬ್ದವಾಚ್ಯ ಕೃಷ್ಣಪಿಂಗಳತ್ವವಿರೂಪಾಕ್ಷತ್ವಾದಿಧರ್ಮಾವಚ್ಛಿನ್ನಶಿವತತ್ತ್ವೋಪಾಸನಮೇವೋಪದಿಷ್ಟಂ. ಆಥರ್ವಣಶಿಖೋಪಸಂಹಾರೇ "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ। ಸರ್ವಾಣಿ ಚೇಂದ್ರಿಯಾಣಿ ಸಹ ಭೂತೈರ್ನ ಕಾರಣಂ ಕಾರಣಾನಾಂ ತು ಧ್ಯಾತಾ, ಕಾರಣಂ ತು ಧ್ಯೇಯಃ", "ಸರ್ವೈಶ್ವರ್ಯಸಂಪನ್ನಸ್ಸರ್ವೇಶ್ವರಶ್ಶಂಭುರಾಕಾಶಮಧ್ಯೇ ಧ್ರುವಂ ತತ್ತ್ವಾದಿಕಂ ಕ್ಷಣಮೇಕಕ್ರತುಶತಸ್ಯಾಪಿ ಚತುಸ್ಸಪ್ತತ್ಯಾ ಯತ್ಫಲಂ ತದಾಪ್ನೋತಿ ಕೃತ್ಯಮೋಂಕಾರಗತಿಂ ಚ ಸರ್ವಜ್ಞಾನಯೋಗಜ್ಞಾನಾನಾಂ ಯತ್ಫಲಮೋಂಕಾರೋ ವೇದ", "ಪರ ಈಶೋ ವಾ", "ಶಿವ ಏಕೋ ಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ" ಇತ್ಯಂತೇನ ಪ್ರಣವಾತ್ಮಕತ್ವಂ ಶಿವಸ್ಯೈವ ನಿರ್ದಿಶ್ಯ ಮುಮುಕ್ಷೂಣಾಂ ಶಿವೇತರಧ್ಯಾನನಿರಾಕರಣಮುಕ್ತಂ. "ಹರಿಃ ಓಂ" ಇತ್ಯತ್ರ ವಿಷ್ಣೋಃ ಪ್ರಣವಾತ್ಮಕತ್ವಮಿತಿ ಯತ್ ತನ್ನ, ತದ್ವಿಧಾಯಕಪ್ರಾತ್ಯಕ್ಷಿಕಶ್ರುತ್ಯ

ದರ್ಶನಾತ್. ಕಿಂಚ "ಪುರುಷೋ ವೈ ರುದ್ರಃ", "ತತ್ಪುರುಷಾಯ ವಿದ್ಮಹೇ ಮಹಾದೇವಾಯ ಧೀಮಹಿ" ಇತ್ಯಾದಿಶ್ರುತಿಷು ಶಿವಸ್ಯ ಪುರುಷತ್ವಂ. "ವಾಸುದೇವಃ ಪರಾಪ್ರಕೃತಿಃ" ಇತಿ ಕೃಷ್ಣಗೀತಾಯಾಂ ವಿಷ್ಣೋಃ ಪ್ರಕೃತಿತ್ವಂ ಪ್ರಸಿದ್ಧಂ. "ಪ್ರಕೃತಿಸ್ತ್ವಂ ಪುಮಾನ್ರುದ್ರಃ" ಇತಿ ಈಶ್ವರಗೀತಾಯಾಂ ತಥಾ ಸ್ಪಷ್ಟಮುಪದಿಷ್ಟಂ. "ಶಂಕರಶ್ಶೂಲಪಾಣಿಶ್ಚ ಖಟ್ವಾಂಗೀ ವಿಷ್ಣುವಲ್ಲಭಃ" ಇತಿ, "ಶಿವಕೇಶವಸಂಭೂತಂ ಕಲಯೇ ಕಾಲಭೈರವಂ" ಇತಿ ಸ್ಕಾಂದಲೈಂಗ್ಯಕೂರ್ಮಾದಿಪುರಾಣೇಷು ತಥಾ ನಿರ್ದಿಷ್ಟಂ. "ಶಿವಸ್ಯ ಶಕ್ತಿರ್ವಿನಿಯೋಗಕಾಲೇ ಚತುರ್ವಿಧಾ ಭೂಚ್ಛಿವಸತ್ಪ್ರಸಾದಾತ್ । ಭೋಗೇ ಭವಾನೀ ಪುರುಷೇಷು ವಿಷ್ಣುಃ ಕ್ರೋಧೇ ಚ ಕಾಳೀ ಸಮರೇ ಚ ದುರ್ಗಾ ॥" ಇದಿ ಸಾಮಶಾಖಾಯಾಮಪಿ ದರ್ಶಿತಂ. ತಸ್ಮಾತ್ "ಹರಿಃ ಓಂ" ಇತ್ಯತ್ರ ಹರಿರೂಪಮಾಯಾಶಕ್ತಿವಿಶಿಷ್ಟತ್ವನೋಂಕಾರಾತ್ಮಕಶಿವಸ್ಯ ವ್ಯಪದಿಶತಿ. "ಶಕ್ತಿಶಕ್ತಯೋರ್ಭೇದೇ ಸತ್ಯಭೇದ" ಇತಿ ನ್ಯಾಯೇನ ಶಕ್ತಿಶಕ್ತಯೋರ್ವಿಷ್ಣ್ವೀಶ್ವರಯೋಃ "ಹರಿಃಓಂ" ಇತಿ ತಾದಾತ್ಮ್ಯಸಾಮರಸ್ಯಮುಕ್ತಂ. ಅತಃ "ನಮೋ ರುದ್ರಾಯ ವಿಷ್ಣವೇ ಮೃತ್ಯುರ್ಮೇ ಪಾಹಿ" ಇತ್ಯಾದಿ ಶ್ರುತಿಷು, "ಶಿವಾಯ ವಿಷ್ಣುರೂಪಾಯ ಶಿವರೂಪಾಯ ವಿಷ್ಣವೇ" ಇತ್ಯಾದಿಸ್ಮೃತಿಷು ಚ ಚಂದ್ರಚಂದ್ರಿಕಾವದವಿನಾಭವಿತ್ವಮವಗಮ್ಯತೇ. ಉತ ಛಾಂದೋಗ್ಯೇ "ಅಥ ಯದಿದಮಸ್ಮಿನ್ ಬ್ರಹ್ಮಪುರೇ ದಹರಂ ಪುಂಡರೀಕಂ ವೇಶ್ಮ । ದಹರೋಽಸ್ಮಿನ್ನಂತರ ಆಕಾಶಸ್ತಸ್ಮಿನ್ಯದಂತಸ್ತದನ್ವೇಷ್ಟವ್ಯಂ" ಇತ್ಯಾದಿನಾ, ವಾಜಸನೇಯಕೇ ಚ "ಸ ವಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ । ಪ್ರಾಣೇಷು ಯ ಏಷೋಽಂತರ್ಹೃದಯ ಆಕಾಶಸ್ತಸ್ಮಿನ್ ಶೇತೇ ಸರ್ವಸ್ಯ ವಶೀ ಸರ್ವಸ್ಯೇಶಾನಃ" ಇತ್ಯಾದಿನಾ, ಕೈವಲ್ಯೇ "ಹೃತ್ಪುಂಡರೀಕಂ ವಿರಜಂ ವಿಶುದ್ಧಂ ವಿಚಿಂತ್ಯ ಮಧ್ಯೇ ವಿಶದಂ ವಿಶೋಕಂ । ಅಚಿಂತ್ಯಮವ್ಯಕ್ತಮನಂತಬೋಧಂ ಶಿವಂ ಪ್ರಶಾಂತಮಮೃತಂ ಬ್ರಹ್ಮಯೋನಿಂ । ತಮಾದಿಮಧ್ಯಾಂತವಿಹೀನಮೇಕಂ ವಿಭುಂ ಚಿದಾನಂದಮರೂಪಮದ್ಭುತಂ । ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ ॥" ಇತ್ಯಾದಿನಾ ಸತ್ಯಕಾಮತ್ವಾದೀನಾಂ ಆತ್ಮಧರ್ಮತ್ವೇನ, ನೀಲಕಂಠತ್ವಾದೀನಾಂ ದೇಹಧರ್ಮತ್ವೇನ ಚ ಭೇದಾವಗಮೇಽಪಿ ಉಪಾಸ್ಯವಸ್ತ್ವೇಕತ್ವೇನ ವಿದ್ಯೈಕ್ಯಂ. ಛಾಂದೋಗ್ಯಗತಾಃ ಅಪಹತಪಾಪ್ಮತ್ವಾದಯಃ ವಾಜಸನೇಯಶಿಖಾಗತಾಃ ವಶಿತ್ವಾದಯಃ ಕೈವಲ್ಯಗತಾಸ್ಸಚ್ಚಿದಾನಂದಾದಯಶ್ಚ ಸರ್ವೇ ಗುಣಾಃ ಪರಶಿವಬ್ರಹ್ಮಣ್ಯೇವಾವ

**ಗನ್ಯೇಂತೇ. ಅತಸ್ತದುಪಾಸಕಾನಾಂ “ ಅಭಯಂ ವೈ ಬ್ರಹ್ಮ ಭವತಿ ” ಇತಿ “ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ ” ಇತ್ಯಾದಿಶ್ರುತಿಷು ಪರಶಿವಬ್ರಹ್ಮಪ್ರಾಪ್ತಿರೂಪಫಲೈಕ್ಯತ್ವೇನ ಚ ವಿದ್ಯೈಕ್ಯ ಮನಿವಾರ್ಯಂ.**

“ ಓಂ ಎಂಬ ಅಕ್ಷರವೇ ಇದೆಲ್ಲವೂ ಆಗಿದೆ ” ಎಂದು ಮಾಂಡೂಕ್ಯಶ್ರುತಿಯಲ್ಲಿ ಪ್ರಾಣವನ್ನೇ ಅಕ್ಷರವೆಂದೂ ಸರ್ವಾತ್ಮಕವೆಂದೂ ಸರ್ವಾತೀತವೆಂದೂ ಹೇಳಲಾಗಿದೆ. ಹಾಗೆಯೇ ತೈತ್ತಿರೀಯದಲ್ಲಿ “ ದಹರಂ ವಿಪಾಪ್ಮಂ ” ಎಂದಾರಂಭಿಸಿ ದಹರವಿದ್ಯೆ ಯನ್ನು ವಿಸ್ತಾರವಾಗಿ ತಿಳಿಸಿ “ ವೇದಗಳ ಆದಿಯಲ್ಲಿ ಯಾವ ಸ್ವರವಿದೆಯೋ ” ಎಂದು ಪ್ರಣವವನ್ನೇ ಉಪಾಸ್ಯವೆಂದು ಹೇಳಿದೆ. ಹಾಗೆಯೇ ಬೇರೆಕಡೆಯಲ್ಲೂ “ ಓಂ ಎಂಬುದು ಏಕಾಕ್ಷರ ಬ್ರಹ್ಮವೆನಿಸಿದೆ. ಓಂಕಾರವೇ ಬ್ರಹ್ಮ. ಅದೇ ವಾಯು ” ಎಂದು ಪ್ರಣವವನ್ನೇ ಉತ್ಕೃಷ್ಟವೆಂದು ತಿಳಿಸಲಾಗಿದೆ. ವೇದವೇದಾಂತಗಳ ಆರಂಭದಲ್ಲೂ ಕೊನೆಯಲ್ಲೂ “ ಹರಿಃ ಓಂ ” ಎಂಬ ಪ್ರಯೋಗವು ಕಂಡುಬಂದಿದೆ. ಆದ್ದರಿಂದ ನಾರಾಯಣನೇ ಪ್ರಣವಸ್ವರೂಪನೆಂದು ಸಿದ್ಧವಾಯಿತು. ಇದರಿಂದ ದಹರ ಶಾಂಡಿಲ್ಯಾದಿ ವಿದ್ಯೆಗಳಲ್ಲಿ ನಾರಾಯಣನನ್ನೇ ಉಪಾಸ್ಯನೆಂದು ಹೇಳುವುದು ಯುಕ್ತವೆಂದಾಶಂಕಿಸಿ ನಿರಾಕರಿಸುತ್ತಾನೆ. ಮಾಂಡೂಕ್ಯದಲ್ಲಿ ಓಂ ಎಂಬುದೇ ಬ್ರಹ್ಮವೆಂದು ಹೇಳಿ ” “ ಹಿಂದಿನದು ಈಗಿನದು ಮುಂದಿನದು ಎಲ್ಲವೂ ಓಂಕಾರವೇ.” “ ಮೂರುಕಾಲಗಳಿಗೂ ಮೀರಿದ್ದು ಯಾವುದಿದೆಯೋ ಅದೆಲ್ಲವೂ ಓಂಕಾರವೇ ” “ ಇದೆಲ್ಲವೂ ಬ್ರಹ್ಮವೇ ” “ ಬ್ರಹ್ಮಕ್ಕೆ ನಾಲ್ಕುಪಾದಗಳೂ ಜಾಗ್ರದವಸ್ಥೆಯೂ ಬಾಹ್ಯ ಪ್ರಜ್ಞೆಯೂ, ಏಳು ಅಂಗಗಳೂ ಹತ್ತೊಂಬತ್ತು ಮುಖಗಳೂ ಇವೆ ” “ ಜಾಗ್ರದವಸ್ಥೆ ಯಲ್ಲಿ ಪದಾರ್ಥಗಳ ಸ್ಥೂಲರೂಪವನ್ನು ಭುಂಜಿಸುವ ವೈಶ್ವಾನರವೇ ಮೊದಲನೆಯ ಪಾದ.” “ ಸ್ವಪ್ನದಲ್ಲಿ ಅಂತಃಪ್ರಜ್ಞನಾಗಿ ರಹಸ್ಯವಾಗಿ ಭುಂಜಿಸುವ ತೇಜಸ್ಸೇ ಎರಡನೆಯಪಾದ.” “ಸುಷುಪ್ತಿಯಲ್ಲಿ ಜ್ಞಾನಘನನಾದ ಪ್ರಾಜ್ಞನೇ ತೃತೀಯಪಾದ.” “ ಇವನೇ ಸರ್ವೇಶ್ವರನು ಮತ್ತು ಸರ್ವಜ್ಞನು ” “ಇವನೇ ಅಂತರ್ಯಾಮಿ ಮತ್ತು ಕಾರಣನು. ಎಲ್ಲಾ ಭೂತಗಳ ಸೃಷ್ಟಿಪ್ರಳಯಗಳಿಗೂ ಕಾರಣನು. “ ವೇದಗಳ ಆದಿಯಲ್ಲಿ ಸ್ವರವೆನಿಸಿ ವೇದಾಂತದಲ್ಲಿ ಸನ್ಮಾನ್ಯವೆನಿಸಿದ ಓಂಕಾರವೇ ಬ್ರಹ್ಮ” ಎಂದು ಮುಂತಾಗಿ ತೈತ್ತಿರೀಯದಲ್ಲಿ ಹೇಳಲಾಗಿದ. ಹೀಗೆ ಓಂಕಾರವಿದ್ಯೆಯಲ್ಲಿ ಉಪಾ ಸ್ಯನು ಓಂಕಾರವೇ ಅಥವಾ ಅದಕ್ಕಾಶ್ರಯನಾದ ಪರಶಿವನೇ ಅಥವಾ ಓಂಕಾರರೂಪ ನಾದ ನಾರಾಯಣನೇ ಎಂದು ಸಂಶಯಬರುತ್ತದೆ. ಇಲ್ಲಿ ಹೀಗೆ ಸ್ವರೂಪಭೇದವಿರು ವುದರಿಂದ ವಿದ್ಯೆಗಳನ್ನು ಬೇರೆ ಎಂದೇ ಹೇಳಬೇಕು. “ಓಂಕಾರವೇ ಸರ್ವವೂ ಆಗಿದೆ” ಎಂದಾರಂಭಿಸಿ ಪ್ರಣವವನ್ನೇ “ ಇದೆಲ್ಲವೂ ಆತ್ಮ ಮತ್ತು ಬ್ರಹ್ಮವೆಂದು ವ್ಯವಸ್ಥೆ ಮಾಡಿರುವುದರಿಂದಲೂ, ತೈತ್ತಿರೀಯದಲ್ಲಿ ಓಂಕಾರವೇ ವಾಯುವೆಂದೂ, ಆತ್ಮ ವೆಂದೂ ಹೇಳಿರುವುದರಿಂದಲೂ, ಮುಂಡಕದಲ್ಲಿ “ ಓಂಕಾರವೇ ಬ್ರಹ್ಮ, ಇದೇ

ದೇವತೆಗಳಿಗೆ ಮೊದಲು ಹುಟ್ಟಿತು. ಇದೇ ವಿಶ್ವಕ್ಕೆ ಕರ್ತೃವೂ ರಕ್ಷಕವೂ ಆಗಿದೆ." "ಅವನು ಬ್ರಹ್ಮವಿದ್ಯೆಯನ್ನು ಎಲ್ಲಾ ವಿದ್ಯೆಗಳಲ್ಲೂ ನಿಪುಣನಾದ ಅಥರ್ವಣನೆಂಬ ಜ್ಯೇಷ್ಠಪುತ್ರನಿಗೆ ಹೇಳಿದನು" ಎಂದೂ, ಅಥರ್ವಶಿಖೋಪನಿಷತ್ತಿನಲ್ಲಿ "ಸನತ್ಕು ಮಾರನು ಆಥರ್ವಣನಿಗೆ "ಸ್ವಾಮಿ, ಧ್ಯಾನಕ್ಕೆ ಮೊದಲು ಏನು ಮಾಡಬೇಕು? ನಾಲ್ಕು ವೇದಗಳು ಏನನ್ನು ತಿಳಿಸುತ್ತವೆ? ತಪಸ್ಸೆಂದರೇನು? ಧ್ಯಾನವೆಂದರೇನು? ಧ್ಯಾನಮಾಡುವವನು ಯಾರು? ಧ್ಯೇಯವಸ್ತುವ್ಯಾವುದು?" ಎಂದು ಪ್ರಶ್ನೆಮಾಡಲು ಆಥರ್ವಣನು "ಓಂ ಎಂಬುದನ್ನು ಮೊದಲು ಪ್ರಯೋಗಿಸಬೇಕು. ಈ ಒಂದು ಅಕ್ಷರ ವನ್ನೇ ಬ್ರಹ್ಮವೆಂದು ಭಾವಿಸಿ ಧ್ಯಾನಿಸಬೇಕು. ನಾಲ್ಕು ಪದಗಳುಳ್ಳ ಈ ಅಕ್ಷರವೇ ಪರಬ್ರಹ್ಮವೆನಿಸಿದೆ" ಎಂದು ಉತ್ತರಿಸಿದನು" ಹೀಗೆಂದು ಹೇಳಿದೆ. ಈ ರೀತಿಯಲ್ಲಿ ಓಂಕಾರವನ್ನೇ ಎಲ್ಲಕ್ಕೂ ಹೆಚ್ಚಿನದೆಂದು ಹೇಳಿರುವುದರಿಂದ ನಾದರೂಪವಾದ ಈ ಪ್ರಣವವನ್ನೇ ಧ್ಯಾನಿಸಿ ಭಾವಿಸಿ ಉಪಾಸನಮಾಡಬೇಕು? ಅಥವಾ "ಹರಿಃ ಓಂ" ಎಂಬಲ್ಲಿ ಹೇಳಿರುವಂತೆ ಪ್ರಣವಸ್ವರೂಪವಾದ ವಿಷ್ಣುವಿನ ಧ್ಯಾನವನ್ನೇ ಮುಮುಕ್ಷ ಗಳು ಆಚರಿಸಬೇಕೆ? ಹೀಗೆ ಪೂರ್ವಪಕ್ಷ ಬರುತ್ತದೆ. ಇದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ತೈತ್ತಿರಿಯ, ಮುಂಡಕ, ಅಥರ್ವಣ, ಛಾಂದೋಗ್ಯ, ಬೃಹದಾರಣ್ಯಕ, ಮಾಂಡೂಕ್ಯ, ಕಠವಲ್ಲಿ, ಶ್ವೇತಾಶ್ವತರ, ಕೈವಲ್ಯ ಮೊದಲಾದ ಶ್ರುತಿಗಳಲ್ಲಿ ಹೇಳಿರುವ ದಹರಾದಿ ವಿದ್ಯೆಗಳಿಂದ ತಿಳಿದುಬರುವ ಪರಮೇಶ್ವರನ ಧರ್ಮಗಳೆಲ್ಲವೂ ಒಂದೇ ಬಗೆಯಾದ್ದರಿಂದ ವಿದ್ಯೆಗಳೆಲ್ಲವೂ ಒಂದೇ ವಿಧವೆನ್ನುವುದೇ ಯುಕ್ತವಾಗಿದೆ; ಯಾಕೆಂದರೆ ಪ್ರಣವಕ್ಕಾಶ್ರಯವೂ ಉಪಾಸ್ಯವೂ ಆದ ಪರಮ ಶಿವನು ಸರ್ವಮಯನಾಗಿದ್ದರೂ ಹೃದಯಕಮಲದಲ್ಲಿ ನೆಲಸಿರುವನೆಂಬುದು ಎಲ್ಲಾ ಶಾಖೆಗಳಿಗೂ ಸಮಾನವೇ ಆಗಿದೆ. ಆದ್ದರಿಂದ ಸತ್ಯಕಾಮನೂ ಸತ್ಯಸಂಕಲ್ಪನೂ ಆದ ಶಿವನನ್ನು ಹುಡುಕಬೇಕು ಮತ್ತು ತಿಳಿಯಬೇಕು" ಹೀಗೆಂದು ಒಂದೊಂದ ಶಾಖೆ ಯಲ್ಲೂ ಹೇಳಿರುವ ಈ ಗುಣಗಳನ್ನು ಎಲ್ಲಾ ಶಾಖೆಗಳಲ್ಲೂ ಸೇರಿಸಿಕೊಳ್ಳಬೇಕು. ಅಲ್ಲಿಯೇ ಮಾಂಡುಕ್ಯದಲ್ಲಿ "ಒಳಗೂ ಪ್ರಜ್ಞೆ ಇಲ್ಲದೆ, ಹೊರಗೂ ಪ್ರಜ್ಞೆ ಇಲ್ಲದೆ, ಎರಡು ಕಡೆಗಳಲ್ಲೂ ಪ್ರಜ್ಞೆಯಿಲ್ಲದೆ, ಪ್ರಾಜ್ಞನೂ ಅಲ್ಲದೆ, ಅಪ್ರಾಜ್ಞನೂ ಅಲ್ಲದೆ, ಪ್ರಜ್ಞಾನವೇ ಸ್ವರೂಪವಾಗಿರುವವನು" "ನೋಡಲಿಕ್ಕೂ ವ್ಯವಹರಿಸಲಿಕ್ಕೂ ಗ್ರಹಿಸ ಲಿಕ್ಕೂ ಆಗದೆ ಆತ್ಮನೆಂದು ಒಂದೇ ರೀತಿಯಲ್ಲಿ ತಿಳಿದುಬರುವವನೂ, ಪ್ರಪಂಚಕ್ಕೆ ವಿಶ್ರಾಂತಿ ಸ್ಥಲವೂ ಶಾಂತವೂ ಅದ್ವಿತೀಯನೂ ಆದ ಶಿವನೇ ತ್ರಿಮೂರ್ತ್ಯತೀತನೂ ಆತ್ಮನಾಗಿದ್ದಾನೆ. ಈ ಆತ್ಮನೇ ಅಕ್ಷರವೂ ಓಂಕಾರನೂ ಆಗಿದ್ದಾನೆ. ಅಕಾರ ಉಕಾರ ಗಳೇ ಅದರ ಮಾತ್ರೆಗಳು" "ಜಾಗ್ರದವಸ್ಥೆಯ ವೈಶ್ವಾನರವೇ ಅದರ ಮೊದಲನೆಯ ಮಾತ್ರೆ." "ಇದೇ ಮೊದಲನೆಯದಾದ್ದರಿಂದ ಇದನ್ನು ತಿಳಿದವನು ಎಲ್ಲ ಕಾಮ ಗಳನ್ನು ಪಡೆದು ಎಲ್ಲಕ್ಕೂ ಆದಿ ಎನಿಸುತ್ತಾನೆ. ಸ್ವಪ್ನಾವಸ್ಥೆಯಲ್ಲಿರುವ ತೇಜಸ್ಸೆಂಬ ಉಕಾರವೇ ಇದರ ಎರಡನೆಯ ಮಾತ್ರೆ. ಅದೇ ಎಲ್ಲಕ್ಕೂ ಉತ್ಕೃಷ್ಟವೆನಿಸಿ ಜ್ಞಾನ

ಸಂತತಿಯನ್ನು ಹೆಚ್ಚಿಸುವುದರಿಂದ ಸಮಾನವೆನಿಸಿದೆ. ಇದನ್ನು ಅರಿತವನ ವಂಶದಲ್ಲಿ ಬ್ರಹ್ಮಜ್ಞಾನಿಯಲ್ಲದವನು ಹುಟ್ಟುವುದಿಲ್ಲ. ಸುಷುಪ್ತ್ಯವಸ್ಥೆಯಲ್ಲಿರುವ ಪ್ರಾಜ್ಞನೆಂಬ ಮಕಾರವೇ ಮೂರನೆಯ ಮಾತ್ರೆ ಎನಿಸಿದೆ. "ಅವನು ಎಲ್ಲವನ್ನು ಅಳೆಯುತ್ತಾನೆ; ಎಲ್ಲಕ್ಕೂ ವಿಶ್ರಾಂತಿಸ್ಥಲವೂ ಆಗಿದ್ದಾನೆ. ಇದನ್ನು ಅರಿತವನು ಹೀಗೆಯೇ ಆಗುತ್ತಾನೆ." ಏನೊಂದು ಮಾತ್ರೆಯೂ ಇಲ್ಲದ ಸ್ಥಿತಿಯೇ ನಾಲ್ಕನೆ ಮಾತ್ರೆ ಎನಿಸಿದೆ. "ಪ್ರಪಂಚಕ್ಕೆ ವಿಶ್ರಾಂತಿಸ್ಥಲವೆನಿಸಿ ಅದ್ವೈತನಾಗಿರುವ ಶಿವನೇ ಓಂಕಾರನು. ಹೀಗೆ ತಿಳಿದವನು ತನ್ನಿಂದ ತನ್ನೊಳಗೆ ಪ್ರವೇಶಿಸುತ್ತಾನೆ" ಎಂಬಲ್ಲಿ ಶಿವನನ್ನೇ ಪ್ರಣವಾತ್ಮಕನೆಂದು ಹೇಳಲಾಗಿದೆ. ಆದ್ದರಿಂದ ಸರ್ವಾತ್ಮಕತ್ವ ಮೊದಲಾದ ಧರ್ಮಗಳು ಬೇರೆ ಯಾರಿಗೂ ಅನ್ವಯಿಸುವುದಿಲ್ಲ. ಹಾಗೆಯೇ ಬೇರೆಕಡೆಯಲ್ಲೂ "ಎಲ್ಲಾ ವಿದ್ಯೆಗಳಿಗೆ ಉಪದೇಶಕನೂ, ಎಲ್ಲಾ ಜೀವರಿಗೆ ನಿಯಾಮಕನೂ, ಬ್ರಹ್ಮನಿಗೂ ಅಧಿಪತಿಯೂ ಆದ ಪರಶಿವಬ್ರಹ್ಮವೇ ನನಗೆ ಓಂಕಾರರೂಪನಾದ ಸದಾಶಿವನೆನಿಸಲಿ" ಎಂಬಲ್ಲಿ ಶಿವನನ್ನೇ ಪ್ರಣವಾತ್ಮಕನೆಂದು ಹೇಳಲಾಗಿದೆ. "ದಹರಂ ವಿಪಾಪಂ" ಎಂಬಲ್ಲಿ ದಹರ ವಿದ್ಯೆಯನ್ನು ತಿಳಿಸಿ ಅಲ್ಲಿ ಉಪಾಸ್ಯನಾರು? ಎಂದು ಆಕಾಂಕ್ಷಿಸಿ ವೇದವೇದಾಂತಗಳಲ್ಲಿ ಸುಪ್ರತಿಷ್ಠಿತವಾಗಿ ಮೂಲಪ್ರಕೃತಿಯಲ್ಲಿ ನೆಲಸಿರುವ ಓಂಕಾರಕ್ಕಿಂತಲೂ ಆಚೆಗಿರುವ ಮಹೇಶ್ವರನನ್ನು ತಿಳಿಸಿರುವುದರಿಂದ ಪ್ರಣವಸ್ವರೂಪಿಗಳಾದ ತ್ರಿಮೂರ್ತಿಗಳಿಗೂ ಬೇರೆಯಾಗಿ ಮಹೇಶ್ವರನೆನಿಸಿದ ಕೃಷ್ಣಪಿಂಗಳ ವಿರೂಪಾಕ್ಷ ಮೊದಲಾದ ಧರ್ಮಗಳಿಂದ ಶೋಭಿಸುವ ಶಿವತತ್ತ್ವವೇ ದಹರಕಮಲದಲ್ಲಿ ಉಪಾಸ್ಯವೆಂದು ಸ್ಪಷ್ಟಪಡುತ್ತದೆ. ಅಥರ್ವಶಿಖೆಯ ಉಪಸಂಹಾರದಲ್ಲಿ ತ್ರಿಮೂರ್ತಿಗಳು ಪಂಚಭೂತಗಳೊಡನೆಯೂ ಪಂಚೇಂದ್ರಿಯಗಳೊಡನೆಯೂ ಸರ್ವಕಾರಣನಾದ ಪರಶಿವನಿಂದಲೇ ಬಂದಿರುವರೆಂದೂ, ಇಂತಹ ಈಶ್ವರನನ್ನೇ ಆಕಾಶಮಧ್ಯದಲ್ಲಿ ಧ್ಯಾನಿಸಬೇಕೆಂದೂ, ಒಂದು ಕ್ಷಣ ಕಾಲ ಹೀಗೆ ಯಾವನು ಧ್ಯಾನಮಾಡುವನೋ ಅವನಿಗೆ 74,000 ಯಜ್ಞಗಳನ್ನು ಮಾಡಿದವನ ಫಲವು ದೊರಕುವುದೆಂದೂ, "ಓಂಕಾರದ ಗತಿಯನ್ನು ಅರಿತವನು ಎಲ್ಲಾ ಜ್ಞಾನಗಳ ಮತ್ತು ಯೋಗಗಳ ಫಲವನ್ನು ಹೊಂದುತ್ತಾನೆ" "ಈಶ್ವರನೇ ಪರಮಾತ್ಮನು" "ಎಲ್ಲವನ್ನು ಬಿಟ್ಟು ಶಿವಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು" ಎಂದೂ ಶಿವನನ್ನೇ ಪ್ರಣವಸ್ವರೂಪನೆಂದೂ ತಿಳಿಸಿ ಮುಮುಕ್ಷುಗಳಿಗೆ ಶಿವನಲ್ಲದೆ ಬೇರೆಯಾರೂ ಧ್ಯೇಯನಲ್ಲವೆಂದು ಹೇಳಲಾಗಿದೆ. ವಿಷ್ಣುವೇ ಪ್ರಣವಸ್ವರೂಪವೆಂದು ವಿಧಿಸುವ ಶ್ರುತಿಯಿಲ್ಲದ್ದರಿಂದ "ಹರಿಃ ಓಂ" ಎಂಬಲ್ಲಿ ವಿಷ್ಣುವನ್ನು ಪ್ರಣವಾತ್ಮಕನೆಂದು ಹೇಳಲಾಗುವುದಿಲ್ಲ. "ಪುರುಷನೇ ರುದ್ರನು. ಅವನೇ ಮಹತ್ತೆನಿಸಿದಾನೆ. "ತತ್ಪುರುಷನೂ ಮಹಾದೇವನೂ ಎನಿಸಿದ ಶಿವನಿಗೆ ನಮಸ್ಕರಿಸೋಣ" ಎಂಬಲ್ಲಿ ಶಿವನನ್ನು ಪುರುಷನೆಂದು ಹೇಳಿದೆ. "ವಾಸುದೇವನೇ ಪರಾಪ್ರಕೃತಿ" ಎಂದು ಕೃಷ್ಣಗೀತೆಯಲ್ಲಿ ವಿಷ್ಣುವನ್ನು ಪ್ರಕೃತಿ ಎಂದು ಹೇಳಿದೆ. "ನೀನು ಪ್ರಕೃತಿಯಾದರೆ ರುದ್ರನು ಪುರುಷನು" ಎಂದು ಈಶ್ವರಗೀತೆಯಲ್ಲಿ ಸ್ಪಷ್ಟವಾಗಿ ತಿಳಿಸಿದೆ. "ಶಂಕರ, ಶೂಲಪಾಣಿ,

ಖಟ್ವಾಂಗಿ, ವಿಷ್ಣುವಲ್ಲಭ" ಎಂದು ನಿಘಂಟಿನಲ್ಲೂ "ಶಿವಕೇಶವರಿಂದ ಕಾಲಭೈರವನ್ನು ಹುಟ್ಟಿದನೆಂದು" ಸ್ಕಾಂದ, ಲೈಂಗ್ಯ, ಕೂರ್ಮ ಮೊದಲಾದ ಪುರಾಣಗಳಲ್ಲೂ ಹೇಳಿದೆ. "ಶಿವನ ಶಕ್ತಿಯೇ ಭೋಗಕಾಲದ ಭವಾನಿ ಎನಿಸಿ ಪುರುಷರೂಪದಿಂದ ಜಗದ್ರಕ್ಷಣೆಗೆ ವಿಷ್ಣುವೆನಿಸಿದೆ" ಎಂದು ಸಾಮಶಾಖೆಯಲ್ಲಿ ಹೇಳಿದೆ. ಆದ್ದರಿಂದ ಹರಿಃ ಓಂ ಎಂಬಲ್ಲಿ ಓಂಕಾರರೂಪನಾದ ಪರಶಿವನು ಹರಿ ಎಂಬ ಮಾಯಾಶಕ್ತಿವಿಶಿಷ್ಟನಾಗಿರುವನೆಂಬುದು ಸ್ಪಷ್ಟವಾಗುತ್ತದೆ. ಶಕ್ತಿಗೂ ಶಕ್ತನಿಗೂ ಭೇದವಿದ್ದರೂ ಅಭೇದವಿರುವುದೆಂಬ ನ್ಯಾಯದಂತೆ ವಿಷ್ಣುವೆಂಬ ಶಕ್ತಿಗೂ ಶಿವನೆಂದು ಶಕ್ತನಿಗೂ ಹರಿಃ ಓಂ ಎಂಬಲ್ಲಿ ತಾದಾತ್ಮ್ಯರೂಪವಾದ ಸಾಮರಸ್ಯವನ್ನು ಹೇಳಲಾಗಿದೆ. ಆದ್ದರಿಂದ ವಿಷ್ಣುರೂಪನಾದ ರುದ್ರನಿಗೆ ನಮಸ್ಕಾರಮಾಡಿ ಮೃತ್ಯುವಿನಿಂದ ತಮ್ಮನ್ನು ಪಾರುಗಾಣಿಸುವಂತೆ ವೇದಪುರುಷರು ಪ್ರಾರ್ಥಿಸಿದ್ದಾರೆ. ವಿಷ್ಣುರೂಪನಾದ ಶಿವನಿಗೂ ಶಿವರೂಪನಾದ ವಿಷ್ಣುವಿಗೂ ನಮಸ್ಕರಿಸುತ್ತ ಸ್ಮೃತಿಗಳು ಚಂದ್ರಚಂದ್ರಿಕೆಗಳಂತೆ ಶಿವಕೇಶವರಿಗೆ ಅವಿನಾಭಾವವನ್ನು ತಿಳಿಸಿವೆ. ಛಾಂದೋಗ್ಯದಲ್ಲಿ ದಹರಾಕಾಶದೊಳಗೆ ಇರುವುದನ್ನು ಹುಡುಕಬೇಕೆಂದೂ, ವಾಜಸನೇಯದಲ್ಲಿ "ಆ ಈ ವಿಜ್ಞಾನಮಯನಾದ ಆತ್ಮನು ಪ್ರಾಣದೊಳಗಿನ ಹೃದಾಯಾಕಾಶದಲ್ಲಿ ಮಲಗಿದ್ದಾನೆ. ಅವನೇ ಎಲ್ಲವನ್ನೂ ತನ್ನ ವಶದಲ್ಲಿಟ್ಟುಕೊಂಡು ಎಲ್ಲಕ್ಕೂ ಅಧಿಪತಿಯಾಗಿದ್ದಾನೆ" ಎಂದೂ, ಕೈವಲ್ಯದಲ್ಲಿ "ಹೃದಯಕಮಲವು ಶುದ್ಧವೂ ನಿರ್ಮಲವೂ ವಿಶದವೂ ಶೋಕರಹಿತವೂ ಆಗಿದೆ. ಅದರೊಳಗೆ ಪ್ರಶಾಂತನೂ ಅಮೃತನೂ ಬ್ರಹ್ಮಯೋನಿಯೂ ಆದ ಶಿವನು ಜ್ಞಾನಸ್ವರೂಪನಾಗಿ ನೆಲಸಿದ್ದಾನೆ. ಆದಿಮಧ್ಯಅಂತ್ಯಗಳಿಲ್ಲದೆ ಚಿದಾನಂದಸ್ವರೂಪನೂ, ರೂಪವಿಲ್ಲದಿದ್ದರೂ ಅದ್ಭುತನೂ ನೀಲಕಂಠನೂ ಆದ ಪರಮೇಶ್ವರನನ್ನು ಧ್ಯಾನಿಸಬೇಕು" ಎಂದೂ ಹೇಳಿದ್ದರಿಂದ ಸತ್ಯಕಾಮ ಮೊದಲಾದ ಆತ್ಮಧರ್ಮಗಳಿಗೂ, ನೀಲಕಂಠ ಮೊದಲಾದ ದೇಹಧರ್ಮಗಳಿಗೂ ಭೇದವಿದ್ದರೂ ಉಪಾಸ್ಯವಸ್ತು ಒಬ್ಬನೇ ಆದ್ದರಿಂದ ವಿದ್ಯೆಗಳೆಲ್ಲವೂ ಒಂದೆ ಬಗೆ ಎನಿಸುತ್ತವೆ. ಛಾಂದೋಗ್ಯದಲ್ಲಿ ಹೇಳಿರುವ "ಪಾಪವಿಲ್ಲರುವಿಕೆ" ಮೊದಲಾದ ಗುಣಗಳು ವಾಜಸನೇಯದಲ್ಲಿ ಹೇಳಿರುವ "ಸರ್ವವನ್ನೂ ವಶಪಡಿಸಿಕೊಳ್ಳುವಿಕೆ" ಮೊದಲಾದವು, ಕೈವಲ್ಯಶ್ರುತಿಯಲ್ಲಿ ಹೇಳಿರುವ ಸಚ್ಚಿದಾನಂದ ಮೊದಲಾದವು ಪರಶಿವಬ್ರಹ್ಮಕ್ಕೇ ಅನ್ವಯಿಸುತ್ತವೆ. ಆದ್ದರಿಂದ ಉಪಾಸಕರಿಗೆ "ಅವನು ಅಭಯನಾಗುತ್ತಾನೆ" "ಪರಂಜ್ಯೋತಿಯನ್ನು ಹೊಂದಿ ತನ್ನ ವಾಸ್ತವಸ್ಥಿತಿಯನ್ನು ಪಡೆಯುತ್ತಾನೆ" ಎಂಬ ಶ್ರುತಿಗಳಲ್ಲಿ ಪರಶಿವಬ್ರಹ್ಮಪ್ರಾಪ್ತಿ ಎಂಬ ಫಲವು ಒಂದೇ ಬಗೆಯಾಗಿ ಸಂಭವಿಸುವುದರಿಂದ ವಿದ್ಯೆಗಳನ್ನು ಒಂದೇ ಬಗೆ ಎಂದು ಒಪ್ಪಲೇಬೇಕು.

ಅಥ ಸ್ಯಾತ್. ಯದುಕ್ತಂ ವಾಜಸನೇಯಕೇ ವಶಿತ್ವಾದಿಭಿಸ್ಸಹ ಸತ್ಯಕಾಮತ್ವಾದಿಸದ್ಭಾವೋಽವಗಮ್ಯತ ಇತಿ ತನ್ನೋಪಪದ್ಯತೇ, ವಶಿತ್ವಾದೀನಾಮೇವ ಪರಮಾರ್ಥತಸ್ತತ್ರ ಸದ್ಭಾವಾಭಾವಾತ್. ತದಭಾವಾಚ್ಚ "ಮನಸೈವಾನುದ್ರಷ್ಟವ್ಯಂ", "ನೇಹ ನಾನಾಸ್ತಿ ಕಿಂಚನ",

"ಮೃತ್ಯೋಸ್ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ । ಏಕಧೈವಾನುದ್ರಷ್ಟವ್ಯಮೇತದಪ್ರಮೇಯಂ ಧ್ರುವಂ ॥" ಇತಿ. ಪ್ರಕೃತೇನ ವಾಕ್ಯೇನ "ಸ ವಾ ಏಷ ನೇತಿ ನೇತ್ಯಾತ್ಮಾ" ಇತ್ಯುತ್ತರೇಣ ಚೋಪಾಸ್ಯಸ್ಯ ಬ್ರಹ್ಮಣೋ ನಿರ್ವಿಶೇಷತ್ವಪ್ರತೀತೇರವಗಮ್ಯತೇ. ಅತೋ ವಶಿತ್ವಾದಯೋಽಪಿ ಸ್ಥೂಲತ್ವಾಣುತ್ವವತ್ ನಿಷೇಧ್ಯಾ ಇತಿ ಪ್ರತೀಯಂತೇ. ಅತ ಏವ ಛಾಂದೋಗ್ಯೇಽಪಿ ಸತ್ಯಕಾಮತ್ವಾದಯೋ ನ ಬ್ರಹ್ಮಣಃ ಪಾರಮಾರ್ಥಿಕಗುಣಾ ಉಚ್ಯಂತೇ. ಅತೋಽಪಾರಮಾರ್ಥಿಕತ್ವಾದೇವಂಜಾತೀಯಕಾನಾಂ ಗುಣಾನಾಂ ಮೋಕ್ಷಾರ್ಥೇಷೂಪಾಸನೇಷು ಲೋಪ ಇತ್ಯಾಶಂಕ್ಯ ತತ್ರಾಹ. ಆದರಾದಲೋಪಃ ॥ ೩೯ ॥

ಬ್ರಹ್ಮಗುಣತ್ವೇನ ಪ್ರಮಾಣಾಂತರಾಪ್ರಾಪ್ತಾನಾಂ ಗುಣಾನಾಮೇಷಾಂ ಸತ್ಯಕಾಮತ್ವಾದೀನಾಂ "ಏಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂಪಾಲ ಏಷ ಸೇತುರ್ವಿಧರಣಃ", "ಶಾಂತಂ ಶಿವಮದ್ವೈತಂ", "ತ್ರಿಲೋಚನಂ ನೀಲಕಂಠಂ ಪ್ರಶಾಂತಂ" ಇತ್ಯಾದಿಭಿಃ, "ನಮೋ ಹಿರಣ್ಯಬಾಹವೇ ಹಿರಣ್ಯವರ್ಣಾಯ", "ನಮೋ ನೀಲಗ್ರೀವಾಯ ಚ ಶಿತಿಕಂಠಾಯ ಚ" ಇತಿ ತೈತ್ತಿರೀಯೇ ಚ ಪರಬ್ರಹ್ಮಣಶ್ಶಿವಸ್ಯ ಪರಮಸತ್ತ್ವಪ್ರಧಾನತ್ವೋಮಾಪತಿತ್ವನೀಲಕಂಠತ್ವಾದೀನಾಂ ವೇದವೇದಾಂತೇಷ್ವಭ್ಯಾಸಾದಲೋಪ ಏವ. ತಸ್ಮಾತ್ "ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ" ಇತ್ಯಾದಿನಾ ಸ್ವಾಭಾವಿಕತ್ವೇನ ಅಲುಪ್ತಶಕ್ತಿತ್ವಮಭಿಹಿತಂ. ಛಾಂದೋಗ್ಯೇ ತಾವತ್ "ತದ್ಯ ಇಹಾತ್ಮಾನಮನುವಿದ್ಯ ವ್ರಜಂತ್ಯೇತಾಂಶ್ಚ ಸತ್ಯಾನ್ ಕಾಮಾನ್, ತೇಷಾಂ ಸರ್ವೇಷು ಲೋಕೇಷು ಕಾಮಚಾರೋ ಭವತಿ" ಇತಿ ಸತ್ಯಕಾಮತ್ವಾದಿಗುಣವಿಶಿಷ್ಟಸ್ಯ ಬ್ರಹ್ಮಣೋ ವೇದನಮಭಿಧಾಯ, "ಅಥ ಯ ಇಹ ಆತ್ಮಾನಮನನುವಿದ್ಯಾ ವ್ರಜಂತ್ಯೇತಾಂಶ್ಚ ಸತ್ಯಾನ್ ಕಾಮಾನ್ ತೇಷಾಂ ಸರ್ವೇಷು ಲೋಕೇಷ್ವಕಾಮಚಾರೋ ಭವತಿ" ಇತ್ಯವೇದನನಿಂದಾ ಕ್ರಿಯಮಾಣಾ ಗುಣವಿಶಿಷ್ಟವೇದನಸ್ಯ ಆದರಂ ದರ್ಶಯತಿ. ತಥಾ ವಾಜಸನೇಯಕೇ "ಸರ್ವಸ್ಯ ವಶೀ ಸರ್ವಸ್ಯೇಶಾನಃ ಏಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲಃ" ಇತಿ ಭೂಯೋಭೂಯಶ್ಶಿವಸ್ಯ ಪರಬ್ರಹ್ಮಣ ಐಶ್ವರ್ಯೋಪದೇಶಾತ್ ಗುಣೇಷ್ವಾದರಃ ಪ್ರತೀಯತೇ. ಏವಮನ್ಯತ್ರಾಪಿ. ನಚ ಮಾತಾಪಿತೃಸಹಸ್ರೇಭ್ಯೋಽಪಿ ವತ್ಸಲತರಂ ಶಾಸ್ತ್ರಂ ಪ್ರತಾರಕವದಪಾರಮಾರ್ಥಿಕಾನ್ನಿರಸನೀಯಾನ್ ಗುಣಾನ್ ಪ್ರಮಾಣಾಂತರಾಪ್ರತಿಪನ್ನಾನ್ ಆದರೇಣೋಪದಿಶ್ಯ ಸಂಸಾರಚಕ್ರಪರಿವರ್ತನೇನ ಪೂರ್ವಮೇವ ಬಂಭ್ರಮ್ಯಮಾಣಾನ್ ಮುಮು

ಕ್ಷೂನ್ ಭೂಯೋಽಪಿ ಭ್ರಮಯಿತುಮಲಂ. "ನೇಹ ನಾನಾಸ್ತಿ ಕಿಂಚನ", "ಏಕಧೈವಾನುದ್ರಷ್ಟವ್ಯಂ" ಇತಿ ತು ಸರ್ವಸ್ಯ ಬ್ರಹ್ಮಕಾರ್ಯತ್ವೇನ ತದಾತ್ಮಕತ್ವಾದೇವ ತಥಾನುಸಂದರ್ಶನಂ ವಿಧಾಯ ಅಬ್ರಹ್ಮಕತ್ವೇನ ಪೂರ್ವಸಿದ್ಧನಾನಾತ್ವದರ್ಶನಂ ನಿಷೇಧತಿ. ಅಯಮರ್ಥಃ ಪ್ರಾಗೇವ ಪ್ರಪಂಚಿತಃ. "ಸ ವಾ ಏಷ ನೇತಿ ನೇತ್ಯಾತ್ಮಾ" ಇತ್ಯತ್ರ ಚ ಇತಿಶಬ್ದೇನ ಪ್ರಮಾಣಾಂತರಪ್ರತಿಪನ್ನಂ ಪ್ರಪಂಚಾಕಾರಂ ಪರಾಮೃಶ್ಯ ನ ತಥಾವಿಧಂ ಬ್ರಹ್ಮ ಇತಿ ಸರ್ವಾತ್ಮಭೂತಸ್ಯ ಪರಬ್ರಹ್ಮಣಃ ಶಿವಸ್ಯ ಪ್ರಪಂಚವಿಲಕ್ಷಣತ್ವಂ ಪ್ರತಿಪಾದ್ಯತೇ. "ಯೋ ದೇವಾನಾಂ ಪ್ರಥಮಶ್ಚೋದ್ಭವಶ್ಚ ವಿಶ್ವಾಧಿಕೋ ರುದ್ರೋ ಮಹರ್ಷಿಃ । ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ ಸ ನೋ ಬುದ್ಧ್ಯಾ ಶುಭಯಾ ಸಂಯುನತ್ತು" ಇತಿ ಶ್ವೇತಾಶ್ವತರೇ, "ವಿಶ್ವಾಧಿಕೋ ಯೋ ರುದ್ರೋ ಮಹರ್ಷಿಃ" ಇತಿ ತೈತ್ತಿರೀಯಕೇ ಚ ವಿಶ್ವಾಧಿಕತ್ವಂ ಶಿವಸ್ಯಾಸಾಧಾರಣಂ ಲಕ್ಷಣಂ ತದೇವಾ ಚಾನಂತರಮುಪಪಾದಯತಿ. "ಅಗ್ರಾಹ್ಯೋ ನ ಗೃಹ್ಯತೇ, ಅಶೀರ್ಯೋ ನಹಿ ಶೀರ್ಯತೇ, ಅಸಂಗೋ ನಹಿ ಸಜ್ಜತೇ, ಅವ್ಯಥಿತೋ ನ ವ್ಯಥತೇ ನರಿಷ್ಯತಿ" ಇತಿ ಪ್ರಮಾಣಾಂತರಗ್ರಾಹ್ಯವಿಸಾಜಾತೀಯತ್ವಾತ್ ಪ್ರಮಾಣಾಂತರತ್ವೇನ ನ ಗೃಹ್ಯತೇ. ವಿಶರಣೀಯವಿಸಜಾತೀಯತ್ವಾನ್ನ ವಿಶೀರ್ಯತೇ. ಏವಮುತ್ತರತ್ರ ಅನುಸಂಧೇಯಂ. ಛಾಂದೋಗ್ಯೇಽಪಿ "ನಾಸ್ಯ ಜರಯೈತಜ್ಜೀರ್ಯತೇ, ನ ವಧೇನಾಸ್ಯ ಹನ್ಯತೇ, ಏತತ್ಸತ್ಯಂ ಬ್ರಹ್ಮಪುರಮಸ್ಮಿನ್ ಕಾಮಾಸ್ಸಮಾಹಿತಾಃ" ಇತಿ ಸರ್ವಂ ವಿಜಾತೀಯತ್ವಂ ಬ್ರಹ್ಮಣಃ ಪ್ರತಿಪಾದ್ಯ ತಸ್ಮಿನ್ ಸತ್ಯಕಾಮತ್ವಾದಯೋ ವಿಧೀಯಂತೇ.

ವಾಜಸನೇಯದಲ್ಲಿ ವಶಿತ್ವಾದಿ ಗುಣಗಳೊಡನೆ ಸತ್ಯಕಾಮತ್ವ ಮೊದಲಾದವೂ ಇರುವುದಾಗಿ ಕಂಡುಬಂದಿದೆ ಎಂದು ಹೇಳುವುದು ಯುಕ್ತವಲ್ಲ; ಯಾಕೆಂದರೆ ವಶಿತ್ವಾದಿಗುಣಗಳೇ ಅಲ್ಲಿ ಯಥಾರ್ಥವಾಗಿ ಇರುವುದಿಲ್ಲ. ಅವೇ ಇಲ್ಲದ್ದರಿಂದ "ಪರಮಾತ್ಮನನ್ನು ಮನಸ್ಸಿನಿಂದಲೇ ಭಾವಿಸಬೇಕು." "ಇಲ್ಲಿ ಏನೊಂದು ಭೇದವೂ ಇಲ್ಲ." "ಯಾವನು ಭೇದವನ್ನು ಕಾಣುವನೋ ಅವನು ದುಃಖದಿಂದ ದುಃಖಕ್ಕೇ ಹೋಗುತ್ತಾನೆ." "ತಿಳಿಯಲಿಕ್ಕಾಗದಿರುವ ಈ ಪರವಸ್ತುವನ್ನು ಏಕಾಗ್ರತೆಯಿಂದ ಭಾವಿಸಬೇಕು" ಎಂಬ ವಾಕ್ಯಗಳಿಂದಲೂ "ಆ ಇವನು ಹೀಗಲ್ಲ ಹಾಗಲ್ಲ" ಎಂಬ ಮುಂದಿನವಾಕ್ಯದಿಂದಲೂ ಉಪಾಸ್ಯನಾದ ಬ್ರಹ್ಮವು ನಿರ್ವಿಶೇಷನೆಂದೇ ತಿಳಿದುಬರುತ್ತದೆ. ಆದ್ದರಿಂದಲೇ ವಶಿತ್ವಾದಿಗುಣಗಳನ್ನು ಸ್ಥೂಲತ್ವಗಳಂತೆಯೇ ನಿಷೇಧಿಸಬೇಕೆಂದೇ ತೋರುತ್ತದೆ. ಹೀಗೆಯೇ ಛಾಂದೋಗ್ಯದಲ್ಲಿ ಸತ್ಯಕಾಮ ಮೊದಲಾದವು ಪರಬ್ರಹ್ಮದ ಯಥಾರ್ಥಗುಣಗಳೆನಿಸಿಲ್ಲ. ಹೀಗೆ ಪಾರಮಾರ್ಥಿಕವಲ್ಲದ್ದರಿಂದಲೇ

ಇಂತಹ ಗುಣಗಳನ್ನು ಮೋಕ್ಷಕ್ಕಾಗಿ ಆಚರಿಸುವ ಉಪಾಸನಗಳಲ್ಲಿ ಸೇರಿಸಿಲ್ಲವೆಂದಾ ಶಂಕಿಸಿ ಪರಿಹರಿಸುತ್ತಾನೆ. ಬ್ರಹ್ಮಗುಣವೆಂದು ಬೇರೆ ಯಾವ ಪ್ರಮಾಣಕ್ಕೂ ಸಿಲುಕದಿರುವ ಸತ್ಯಕಾಮು ಮೊದಲಾದ ಗುಣಗಳನ್ನು ಶ್ರುತಿಯಲ್ಲಿ ಅನೇಕವೇಳೆ ಹೇಳಿರುವುದರಿಂದ " ಅದರೊಳಗೆ ಇರುವುದನ್ನು ಹುಡುಕಬೇಕು " " ಜರಾಮೃತ್ಯಗಳಿಲ್ಲದೆ ಶೋಕಮೊಹಗಳಿಲ್ಲದೆ ಹಸಿವುತೃಷೆಗಳಿಲ್ಲದೆ ಪಾಪವಿಲ್ಲದೆ ಸತ್ಯಕಾಮನೂ ಸತ್ಯಸಂಕಲ್ಪನೂ ಆಗಿರುವವನನ್ನು ತಿಳಿದು ಹುಡುಕಬೇಕು" "ಇವನೇ ಎಲ್ಲಕ್ಕೂ ನಿಯಾಮಕನು ಪಾಲಕನು ಮತ್ತು ಅಧಿಪತಿಯು. ಇವನೇ ಲೋಕಗಳೆಲ್ಲವನ್ನೂ ಹದಗೆಡದಂತೆ ಹಿಡಿದಿದ್ದಾನೆ " " ನೀಲಗ್ರೀವನೂ ಶಿತಿಕಂಠನೂ ಆದ ಶಿವನಿಗೆ ನಮಸ್ಕಾರಮಾಡುತ್ತೇನೆ" ಎಂದು ತೈತ್ತಿರೀಯದಲ್ಲೂ, "ಪರಮಶಾಂತನಾದ ಶಿವನನ್ನು ತ್ರಿಮೂರ್ತ್ಯತೀತನೆಂದು ಹೇಳುತ್ತಾರೆ " " ಪ್ರಶಾಂತನೂ ನೀಲಕಂಠನೂ ಆದ ಉಮಾಪತಿಯನ್ನು ಧ್ಯಾನಿಸಿ ಸಾಧಕನು ಸರ್ವಸಾಕ್ಷಿಯಾದ ಪರಂಜ್ಯೋತಿಯಲ್ಲಿ ಸೇರುತ್ತಾನೆ " ಎಂದು ಕೈವಲ್ಯದಲ್ಲೂ, ಹಾಗೆಯೇ ಪರಶಿವಬ್ರಹ್ಮವನ್ನು ಪರಮಸಾತ್ತ್ವಿಕನೆಂದೂ, ಉಮಾಪತಿ ಎಂದೂ, ನೀಲಕಂಠನೆಂದೂ ಇತರ ವೇದಾಂತಗಳಲ್ಲೂ ಅನೇಕವೇಳೆ ಹೇಳಿರುವುದರಿಂದಲೂ ಈ ಗುಣಗಳು ಲೋಪವಾಗುವಂತೆಯೇ ಇಲ್ಲ. " ಅವನಲ್ಲಿ ಸಹಜವಾಗಿ ಪರಾಶಕ್ತಿಯು ಜ್ಞಾನಕ್ರಿಯಾರೂಪದಿಂದ ಅನೇಕ ಬಗೆಯಾಗಿ ನೆಲಸಿದೆ " ಎಂಬಲ್ಲಿ ಸ್ವಾಭಾವಿಕವಾದ್ದರಿಂದ ಅವನ ಶಕ್ತಿಯು ಎಂದಿಗೂ ನಷ್ಟವಾಗುವುದಿಲ್ಲವೆಂದು ಸ್ಪಷ್ಟವಾಗುತ್ತದೆ. " ಆತ್ಮನನ್ನೇ ಅನುಸರಿಸಿಕೊಂಡು ಹೋಗುವವರು ಎಲ್ಲಾ ಕಾಮಗಳನ್ನೂ ಪಡೆದು ಎಲ್ಲಾ ಕಡೆಯೂ ಸ್ವತಂತ್ರವಾಗಿ ಸಂಚರಿಸುತ್ತಾರೆ " ಎಂದು ಛಾಂದೋಗ್ಯದಲ್ಲಿ ಸತ್ಯಕಾಮು ಮೊದಲಾದ ಗುಣಗಳಿರುವ ಬ್ರಹ್ಮವನ್ನೇ ತಿಳಿಯಬೇಕೆಂದು ಹೇಳಿ " ಯಾರು ಆತ್ಮನನ್ನು ತಿಳಿಯುವುದಿಲ್ಲವೊ ಅವರು ಯಾವ ಕಾಮಗಳನ್ನೂ ಹೊಂದದೆ ಎಲ್ಲಾ ಲೋಕಗಳಲ್ಲಿಯೂ ಅಲೆಯುತ್ತಾರೆ" ಎಂಬಲ್ಲಿ ಹೇಳಿರುವ ಅಜ್ಞಾನಿಯ ನಿಂದೆ ಗುಣವಿಶಿಷ್ಟಪರಮಾತ್ಮನ ಜ್ಞಾನದಲ್ಲಿ ಆಸಕ್ತಿಯನ್ನು ಹುಟ್ಟಿಸುತ್ತದೆ. ವಾಜಸನೇಯದಲ್ಲಿ ಪರಮಶಿವನ ಐಶ್ವರ್ಯವನ್ನೇ ಮತ್ತೆ ಮತ್ತೆ ಹೇಳಿರುವುದರಿಂದ ಗುಣಗಳಲ್ಲಿ ಆದರವುಂಟಾಗುತ್ತದೆ. ಹೀಗೆಯೆ ಬೇರೆಕಡೆಯೂ ತಿಳಿಯಬೇಕು. ಸಾವಿರಾರು ತಾಯ್ತಂದೆಗಳಿಗಿಂತಲೂ ಹಿತವೆನಿಸಿದ ಶಾಸ್ತ್ರವು ವಂಚಕನಂತೆ ಪ್ರಮಾಣಕ್ಕೆ ಸಿಲುಕದೆ ವ್ಯರ್ಥವೆನಿಸಿದ ಕ್ಷುದ್ರಗುಣಗಳನ್ನು ಬೋಧಿಸಿ ಸಂಸಾರಚಕ್ರದಲ್ಲಿ ಸಿಲುಕಿ ಮೊದಲೇ ಅಲೆಯುತ್ತಿದ್ದ ಮುಮುಕ್ಷುಗಳನ್ನು ಮತ್ತೆ ಭ್ರಮೆಗೊಳಿಸಲಾರದು. " ಇಲ್ಲಿ ಏನೂ ಭೇದವಿಲ್ಲ " " ಒಂದೇರೀತಿಯಲ್ಲಿ ಧ್ಯಾನಿಸಬೇಕು " ಎಂಬ ಶ್ರುತಿಯು ಎಲ್ಲವೂ ಬ್ರಹ್ಮಕಾರ್ಯವಾದ್ದರಿಂದ ಬ್ರಹ್ಮಾತ್ಮಕವೆಂದು ತೋರಿಸಿ ಬ್ರಹ್ಮವಲ್ಲವೆಂದು ಹಿಂದೆ ತಿಳಿದುಬಂದಿದ್ದ ಭೇದದೃಷ್ಟಿಯನ್ನು ಜೀವನಿಗೆ ಪರಿಹರಿಸುತ್ತದೆ ಎಂಬ ವಿಷಯವನ್ನು ಹಿಂದೆಯೇ ವಿಸ್ತರಿಸಲಾಗಿದೆ. " ಆ ಇವನು ಹೀಗಲ್ಲ ಹಾಗಲ್ಲ " ಎಂಬಲ್ಲಿ ಇತಿ ಶಬ್ದವು ಬೇರೆ ಪ್ರಮಾಣದಿಂದ ತಿಳಿವ ಬರುವ ಪ್ರಸ .ಚಾ ಕಾರವನ್ನು ತಿಳಿಸಿ " ಬ್ರಹ್ಮ

ಈ ಬಗೆಯಲ್ಲ" ಎಂದು ಸರ್ವಾತ್ಮಕವಾದ ಆ ಪರಶಿವಬ್ರಹ್ಮವನ್ನು ಪ್ರಪಂಚವಿಲಕ್ಷಣನೆಂದು ತಿಳಿಸುತ್ತದೆ. "ದೇವತೆಗಳೆಲ್ಲರಿಗೂ ಮೊದಲಿಗೆ ಇದ್ದ ಜ್ಞಾನಿಯಾದ ರುದ್ರನು ಎಲ್ಲಕ್ಕೂ ಹೆಚ್ಚಿನವನು" "ಯಾವನು ಮೊದಲೇ ಹಿರಣ್ಯಗರ್ಭನನ್ನು ಸೃಷ್ಟಿಸಿದನೋ ಅವನು ನಮಗೆ ಒಳ್ಳೆಯ ಬುದ್ಧಿಯನ್ನು ಕೊಡಲಿ" ಎಂದು ಶ್ವೇತಾಶ್ವತರದಲ್ಲೂ "ದೇವತೆಗಳೆಲ್ಲರಿಗೂ ಮೊದಲಿದ್ದ ರುದ್ರನು ಪೂರ್ಣಜ್ಞಾನಿಯು" ಎಂದು ತೈತ್ತಿರೀಯದಲ್ಲೂ ಹೇಳಿರುವುದರಿಂದ ವಿಶ್ವಾಧಿಕತ್ವವೆಂಬುದು ಶಿವನ ಅಸಾಧಾರಣಲಕ್ಷಣವೆಂದು ತಿಳಿದುಬರುತ್ತದೆ. "ಅವನು ಯಾವ ಪ್ರಮಾಣಕ್ಕೂ ಸಿಕ್ಕದಿರುವುದರಿಂದ ಅವನನ್ನು ತಿಳಿಯಲಾಗುವುದಿಲ್ಲ. ಅವನು ನಶಿಸದಿರುವುದರಿಂದ ನಾಶಕ್ಕೊಳಗಾಗುವುದಿಲ್ಲ. ಅಸಂಗನಾದ್ದರಿಂದ ಅಂಟುವುದಿಲ್ಲ. ಮತ್ತೆ ಯಾವುದರಿಂದಲೂ ವ್ಯಥೆಪಡುವುದೂ ಇಲ್ಲ." ಹೀಗೆ ಅವನು ಪ್ರಮಾಣಾಂತರದಿಂದ ತಿಳಿದುಬರುವ ವಸ್ತುವಿಗಿಂತಲೂ ವಿಲಕ್ಷಣನಾದ್ದರಿಂದ ಯಾವ ಪ್ರಮಾಣಕ್ಕೂ ಸಿಕ್ಕುವುದಿಲ್ಲ. ನಾಶವಾಗುವ ವಸ್ತುವಿಗಿಂತಲೂ ಭಿನ್ನನಾದ್ದರಿಂದ ಅವನು ನಾಶವಾಗುವುದಿಲ್ಲ. ಹೀಗೆಯೇ ಮುಂದೆಯೂ ಹೊಂದಿಸಿಕೊಳ್ಳಬೇಕು. ಛಾಂದೋಗ್ಯದಲ್ಲಿಯೂ "ಮುಪ್ಪಿನಿಂದ ಇವನು ನಾಶವಾಗುವುದಿಲ್ಲ. ಕೊಲೆಯಿಂದ ಇವನಿಗೆ ಹಿಂಸೆಯಾಗುವುದಿಲ್ಲ. ಈ ಬ್ರಹ್ಮಪದದಲ್ಲಿಯೇ ಎಲ್ಲಾ ಕಾಮಗಳೂ ನೆಲಸಿವೆ" ಎಂಬುದರಿಂದ ಇವನನ್ನು ಎಲ್ಲಕ್ಕೂ ವಿಲಕ್ಷಣನೆಂದು ತಿಳಿಸಿ ಅವನಲ್ಲಿ ಸತ್ಯಕಾಮ ಮೊದಲಾದ ಗುಣಗಳನ್ನು ವಿಧಿಸಲಾಗಿದೆ.

ನನ್ವೇವಮಪಿ "ತದ್ಯ ಇಹಾತ್ಮಾನಮನುವಿದ್ಯ ವ್ರಜಂತ್ಯೇತಾಂಶ್ಚ ಸತ್ಯಾನ್ ಕಾಮಾನ್", "ಸ ಯದಿ ಪಿತೃಲೋಕಕಾಮೋ ಭವತಿ" ಇತ್ಯಾದಿನಾ ಸತ್ಯಕಾಮಾದಿಗುಣವಿಶಿಷ್ಟವೇದನಸ್ಯ ಸಾಂಸಾರಿಕಫಲಸಂಬಂಧಶ್ರವಣಾನ್ಮುಮುಕ್ಷೋರ್ಬ್ರಹ್ಮಪ್ರೇಪ್ಸೋರ್ನ ಸಗುಣಂ ಬ್ರಹ್ಮೋಪಾಸ್ಯಂ. ಪರವಿದ್ಯಾಫಲಂ ಚ "ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" ಇತೀದಮೇವ. ಅತಸ್ಸತ್ಯಕಾಮಾದಯೋ ಬ್ರಹ್ಮಪ್ರೇಪ್ಸೋರ್ನೋಪಸಂಹಾರ್ಯಾ ಇತ್ಯಾಶಂಕ್ಯ ತತ್ರಾಹ.

ಉಪಸ್ಥಿತೇಽತಸ್ತದ್ವಚನಾತ್ ‖ ೪೦ ‖ ಉಪಸ್ಥಿತಿರುಪಸ್ಥಾನಂ ಬ್ರಹ್ಮೋಪಸಂಪತ್ತಿಃ. ಉಪಸ್ಥಿತೇ ಬ್ರಹ್ಮೋಪಸಂಪನ್ನೇ ಸರ್ವಬಂಧವಿನಿರ್ಮುಕ್ತಃ ಸ್ವೇನ ರೂಪೇಣಾಭಿನಿಷ್ಪನ್ನೇ ಪ್ರತ್ಯಗಾತ್ಮನ್ಯತ ಏವ ಉಪಸಂಪತ್ತೇರೇವ ಹೇತೋಸ್ಸಾಯುಜ್ಯಮುಕ್ತೌ ತದಾತ್ಮಕತ್ವಂ, ಸಾರೂಪ್ಯಮುಕ್ತೌ ಶಿವವತ್ಸರ್ವೇಷು ಲೋಕೇಷು ಕಾಮಚಾರ ಉಚ್ಯತೇ. "ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಜ್ಞಾತಿಭಿರ್ವಾ ನೋಪಜನಂ ಸ್ಮರನ್ನಿದಂ ಶರೀರಂ ಸ ಸ್ವರಾಡ್ಭವತಿ, ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ" ಇತಿ. ತದೇತಚ್ಚತುರ್ಥೇ ನಿಪುಣತರಮುಪಪಾದಯಿಷ್ಯತೇ. ಅತಸ್ಸಾಲೋಕ್ಯಾದಿಮುಕ್ತಿಷು

ಸರ್ವೇಷು ಲೋಕೇಷು ಕಾಮಚಾರಸ್ಯ ಮುಕ್ತೋಪಭೋಗ್ಯಫಲತ್ವಾತ್ ಮುಮುಕ್ಷೋಸ್ಸತ್ಯಕಾಮತ್ವಾದಯೋ ಗುಣಾ ಉಪಸಂಹಾರ್ಯಾಃ. "ಯಸ್ಸರ್ವಜ್ಞಸ್ಸರ್ವವಿತ್" ಇತ್ಯಾದಿಬಹುಶ್ರುತಿದರ್ಶನಾತ್. "ನಿಷ್ಕಲಂ ನಿಷ್ಕ್ರಿಯಂ ಶಾಂತಂ" ಇತ್ಯಾದಿಶ್ರುತೀನಾಂ ಸತ್ಯಜ್ಞಾನಾನಂದಾದಿಸ್ವರೂಪಗುಣಧರ್ಮನಿಷೇಧೋ ನ ವ್ಯವಹ್ರಿಯತೇ, ಕಿಂತು ಜೀವವತ್‌ಪ್ರಾಕೃತಧರ್ಮವಿಲಕ್ಷಣಗುಣಸಂಪತ್ತಿರುಪಪಾದ್ಯತೇ. ಕಿಂಚ ಕೇಚಿತ್ ಶ್ರುತೀನಾಂ ಸ್ವಷ್ಟಿತಾಲಪರತ್ವಂ, ಕೇಚಿತ್ ಸ್ಥಿತಿವಿಧಾಯಕತ್ವಂ, ಕೇಚಿನ್ಮಹಿಮಪ್ರಕಾಶಕತ್ವಂ, ಕೇಚಿತ್ಸಂಹಾರಪರತ್ವಂ, ಕೇಚಿತ್ಪರಿಶೇಷಪರತ್ವಂ ಚ ವರ್ಣಯಂತಿ. ಪರಿಶೇಷೋ ನಾಮ ಬ್ರಹ್ಮಣಸ್ಸಂಹಾರಾನಂತರಂ ಪುನಸ್ಸೃಷ್ಟಿಪರ್ಯಂತಂ ಸ್ವಶಕ್ತಿಸಂಕೋಚತ್ವೇನ ಸ್ಥಿತತ್ವಾತ್ ತದವಸ್ಥಾ ಪರಿಶೇಷ ಇತ್ಯುಚ್ಯತೇ. ತಸ್ಮಾನ್ನಿರ್ಗುಣಶ್ರುತೀನಾಂ ಸರ್ವಾಸಾಂ ತತ್ಕಾಲಪರತ್ವಮಿತಿ ವೇದಿತವ್ಯಂ. ಅತ ಏವ "ಲೋಕವತ್ತು ಲೀಲಾಕೈವಲ್ಯಂ" ಇತಿ ಸೂತ್ರೇ ಪರಬ್ರಹ್ಮಣಶ್ಶಿವಸ್ಯ ಸ್ವಶಕ್ತಿಪಾಚುರ್ಯತಯಾ ಸೃಷ್ಟ್ಯುನ್ಮುಖೇ ಲೀಲಾಶ್ರಯತ್ವಂ, ಸಂಹಾರಾನಂತರಂ ಪುನಸ್ಸೃಷ್ಟಿಪರ್ಯಂತಂ ಸ್ವೇಚ್ಛಯಾ ಶಕ್ತಿಸಂಕೋಚತ್ವೇನ ಕೇವಲತ್ವಮುಪದಿಷ್ಟಂ. ಅತಸ್ಸರ್ವವೇದಾಂತಮುಖ್ಯಾರ್ಥವೇದಿಭಿಃ ರೇವಣಸಿದ್ಧಮರುಳಸಿದ್ಧೋದ್ಭಟಾರಾಧ್ಯವೇಮಾರಾಧ್ಯಾದಿಭಿಃ ಸಗುಣಶ್ರುತೀನಾಂ ಸರ್ವಾಸಾಂ ಶಕ್ತಿವಿಕಾಸಪರತ್ವಂ, ನಿರ್ಗುಣಶ್ರುತೀನಾಂ ಶಕ್ತಿಸಂಕೋಚವಿಷಯತ್ವಮಿತಿ ವ್ಯವಸ್ಥಾ ನಿರ್ಣೀತಾ. "ಹೃದಯಂ ಗಾರ್ಹಪತ್ಯೋ ಮನೋಽನ್ವಾಹಾರ್ಯಪಚನೋ" ಇತ್ಯಾದಿಶ್ರುತೌ ಪ್ರಾಣಾಗ್ನಿಹೋತ್ರಾತ್ಮಕವೈಶ್ವಾನರೋಪಾಸನಮಭಿಧಾಯ "ತದ್ಯದ್ಭಕ್ತಂ ಪ್ರಥಮಮಾಗಚ್ಛೇತ್ತದ್ಧೋಮೀಯಂ" ಇತಿ ಭೋಜನಾರ್ಥಪಕ್ವಾನ್ನಸ್ಯ ಪ್ರಾಣಾಗ್ನಿಹೋತ್ರಮಾತ್ರಸಾಧಕವಿಧ್ಯುಪದೇಶಾತ್, ಅತೋ ವಿದ್ಯಾಯಾಃ ಪರಶಿವಪ್ರಾಪ್ತಿಸಾಧಕತ್ವಂ ನ ಸಂಭವತೀತಿ ಚೇನ್ನ "ಅಂಗುಷ್ಠಮಾತ್ರಃ ಪುರುಷೋ ಅಂಗುಷ್ಠಂ ಚ ಸಮಾಶ್ರಿತಃ", "ಈಶಸ್ಸರ್ವಸ್ಯ ಜಗತಃ ಪ್ರಭುಃ ಪ್ರೀಣಾತಿ ವಿಶ್ವಭುಕ್", "ಅಹಮನ್ನಮಹಮನ್ನಮಹಮನ್ನಂ । ಅಹಮನ್ನಾದೋಽಹಮನ್ನಾದೋಽಹಮನ್ನಾದಃ ॥" "ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾ ವಿಶಾಂತಕಃ" ಇತ್ಯಾದಿಶ್ರುತಿಷು ಪ್ರಾಣಜಾತರಾಗ್ನ್ಯವಚ್ಛಿನತಯಾಶಿವಸ್ಯೇಹಾನ್ನಭೋಕ್ತೃತ್ವನಿರ್ದೇಶಾತ್ ಏತದ್ಧರ್ಮಮಭಿಧಾಯ ಜಠರಾವಚ್ಛಿನ್ನಪ್ರಾಣಲಿಂಗಸ್ಯ ವಿಧ್ಯುಕ್ತೇನ ಮಾರ್ಗೇಣ ತತ್ಕ್ರಿಯಾವತಾಂ ಪುಂಸಾಂ ಪರಂಪರಯಾ ಶಿವಪ್ರಾಪ್ತಿಸಾಧನಮುಪದಿಶ್ಯತೇ. ತಸ್ಮಾದ್ವಿದ್ಯೈಕ್ಯಂ ಯುಕ್ತಂ.

ಹೀಗಾದರೂ ಸಹ "ಆತ್ಮನನ್ನು ತಿಳಿದವರು ಎಲ್ಲಾ ಬಗೆಯ ಇಷ್ಟಾರ್ಥಗಳನ್ನೂ ಪಡೆದು ಸ್ವತಂತ್ರವಾಗುತ್ತಾರೆ" "ಅವನು ಪಿತೃಲೋಕವನ್ನು ಬಯಸಿದರೆ ಅಲ್ಲಿಗೂ ಹೋಗುತ್ತಾನೆ" ಎಂಬ ಶ್ರುತಿಗಳಲ್ಲಿ ಸತ್ಯಕಾಮ ಮೊದಲಾದ ಗುಣಗಳುಳ್ಳ ಪರಮಾತ್ಮನ ಉಪಾಸನವು ಐಹಿಕಫಲಗಳನ್ನೇ ದೊರಕಿಸುವುದೆಂದು ಹೇಳಿರುವುದರಿಂದ ಬ್ರಹ್ಮವನ್ನು ಹೊಂದಲಿಚ್ಛಿಸುವ ಮುಮುಕ್ಷುವಿಗೆ ಸಗುಣಬ್ರಹ್ಮವು ಉಪಾಸ್ಯವಾಗಲಾರದು. ಬ್ರಹ್ಮವಿದ್ಯೆಯ ಫಲವಾದರೂ ಜೀವನಿಗೆ ವಾಸ್ತವಸ್ವರೂಪವನ್ನು ದೊರಕಿಸುವುದೇ ಆಗಿದೆ. ಆದ್ದರಿಂದ ಮುಮುಕ್ಷುವಿಗೆ ಸತ್ಯಕಾಮ ಮೊದಲಾದ ಗುಣಗಳನ್ನು ಉಪಾಸನೆಗಾಗಿ ಸೇರಿಸಬೇಕಾಗಿಲ್ಲವೆಂದು ಆಶಂಕಿಸಿ ನಿರಾಕರಿಸುತ್ತಾನೆ. ಮುಕ್ತನು ಬ್ರಹ್ಮದಲ್ಲಿ ಸೇರಿದನೆಂದಮೇಲೆ ಎಲ್ಲಾ ಬಂಧನಗಳಿಂದಲೂ ಬಿಡುಗಡೆಹೊಂದಿ ತನ್ನ ವಾಸ್ತವಸ್ವರೂಪವನ್ನು ಪಡೆಯುತ್ತಾನೆ. ಆದ್ದರಿಂದಲೇ ಸಾಯುಜ್ಯಮುಕ್ತಿಯಲ್ಲಿ ಮುಕ್ತನು ಶಿವಾತ್ಮಕನಾದರೆ ಸಾರೂಪ್ಯಮುಕ್ತಿಯಲ್ಲಿ ಶಿವನಂತೆ ಎಲ್ಲ ಲೋಕಗಳಲ್ಲೂ ಸಂಚರಿಸತೊಡಗುವನು. "ನದಿಗಳು ನಾಮರೂಪಗಳನ್ನು ತೊರೆದು ಸಮುದ್ರದಲ್ಲಿ ಏಕೀಭವಿಸುವಂತೆ ಮುಕ್ತನು ನಾಮರೂಪಗಳಿಂದ ಮುಕ್ತನಾಗಿ ಪರಂಜ್ಯೋತಿಯಲ್ಲಿ ಸೇರುತ್ತಾನೆ" "ಈ ಸಂಪ್ರಸಾದನೆನಿಸಿದ ಜೀವನು ಈ ಶರೀರದಿಂದ ಹೊರಟು ಪರಂಜ್ಯೋತಿಯಲ್ಲಿ ಸೇರಿ ತನ್ನ ರೂಪವನ್ನು ಪಡೆಯುತ್ತಾನೆ" "ಆಗ ಅವನು ಭೋಗಿಸುತ್ತಲೂ ಸ್ತ್ರೀಯರೊಡನೆ ಆಡುತ್ತಲೂ ವಾಹನಗಳೊಡನೆಯೂ ಮತ್ತು ಜ್ಞಾನಿಗಳೊಡನೆಯೂ ಆಡುತ್ತಲೂ ಹಿಂದಿನ ಪ್ರಾಕೃತಶರೀರವನ್ನು ಸ್ಮರಿಸದೆಯೇ ಸ್ವತಂತ್ರವಾಗಿ ವಿಹರಿಸುತ್ತಾನೆ" "ಅವನು ಎಲ್ಲಾ ಲೋಕಗಳಲ್ಲೂ ಸಂಚರಿಸುವನು" ಹೀಗೆ ಶ್ರುತಿಗಳಲ್ಲಿ ಹೇಳಿದೆ. ಇದನ್ನು ನಾಲ್ಕನೆಯ ಅಧ್ಯಾಯದಲ್ಲಿ ಬಹಳ ಸೊಗಸಾಗಿ ತಿಳಿಸಲಾಗುವುದು. ಒಟ್ಟಿನಲ್ಲಿ ಸಾಲೋಕ್ಯಾದಿ ಮುಕ್ತಿಗಳಲ್ಲಿ ಮುಕ್ತನು ಎಲ್ಲಾ ಲೋಕಗಳಲ್ಲೂ ಸಂಚರಿಸುತ್ತಲೇ ಭೋಗಿಸುವನಾದ್ದರಿಂದ ಮುಮುಕ್ಷುಗಳಿಗೆ ಸತ್ಯಕಾಮ ಮೊದಲಾದ ಪರಶಿವನ ಧರ್ಮಗಳು ಉಪಾಸನೆಗೆ ಆವಶ್ಯಕವೆನಿಸಿವೆ. "ಯಾವನು ಸರ್ವಜ್ಞನೋ" ಎಂದು ಮುಂತಾಗಿ ಅನೇಕ ಶ್ರುತಿಗಳಿರುವುದರಿಂದ "ನಿಷ್ಕಲಂ ನಿಷ್ಕ್ರಿಯಂ ಶಾಂತಂ" ಎಂಬ ಶ್ರುತಿಗಳು ಸತ್ಯಜ್ಞಾನ ಆನಂದ ಮೊದಲಾದ ಸ್ವರೂಪಗುಣಗಳನ್ನು ನಿಷೇಧಿಸದೆ ಪರಮಾತ್ಮನಲ್ಲಿ ಪ್ರಕೃತಿಸಂಬಂಧವಾದ ಧರ್ಮಗಳಿಗಿಂತಲೂ ವಿಲಕ್ಷಣವಾದ ಗುಣಗಳಿರುವುವೆಂಬುದನ್ನು ಮಾತ್ರವೇ ತಿಳಿಸುತ್ತವೆ. ಕೆಲವರಿಗೆ ಶ್ರುತಿಗಳು ಸೃಷ್ಟಿಕಾಲಕ್ಕೂ, ಕೆಲವರಿಗೆ ರಕ್ಷಣಕಾಲಕ್ಕೂ, ಕೆಲವರಿಗೆ ಪ್ರಳಯಕಾಲಕ್ಕೂ, ಕೆಲವರಿಗೆ ಬ್ರಹ್ಮದ ಮಹಿಮೆಯನ್ನು ತೋರಿಸಲಿಕ್ಕೂ, ಕೆಲವರಿಗೆ ಬ್ರಹ್ಮದ ಶಕ್ತಿಸಂಕೋಚಾವಸ್ಥೆಯನ್ನು ತಿಳಿಸಲಿಕ್ಕೂ ಅನ್ವಯಿಸುತ್ತವೆ. ಹೀಗೆ ನಿರ್ಗುಣಶ್ರುತಿಗಳೆಲ್ಲವೂ ಪ್ರಳಯಕಾಲಕ್ಕೆ ಅನ್ವಯಿಸುತ್ತವೆ ಎಂದು ತಿಳಿಯಬೇಕು. ಆದ್ದರಿಂದಲೇ "ಲೋಕವತ್ತು ಲೀಲಾಕೈವಲ್ಯಂ" ಎಂಬಲ್ಲಿ ಪರಶಿವಬ್ರಹ್ಮವು ಶಕ್ತಿವಿಕಾಸದಿಂದ ಸೃಷ್ಟ್ಯುನ್ಮುಖನಾದಾಗ ಲೀಲೆಯನ್ನು

ಆಚರಿಸುತ್ತಲೂ, ಸಂಹಾರವಾದಮೇಲೆ ಮತ್ತೆ ಸೃಷ್ಟಿಯಾಗುವವರೆಗೂ ಸ್ವೇಚ್ಛೆಯಿಂದ ಶಕ್ತಿಯನ್ನು ತನ್ನಲ್ಲಿಯೇ ಅಡಗಿಸಿಕೊಂಡು ಕೈವಲ್ಯವನ್ನು ಅನುಭವಿಸುತ್ತಲೂ ಇರುವುದಾಗಿ ತಿಳಿಸಲಾಗಿದೆ. ಆದ್ದರಿಂದ ಎಲ್ಲಾ ವೇದಾಂತಗಳ ಮುಖ್ಯಾರ್ಥವನ್ನು ತಿಳಿದ ರೇವಣಸಿದ್ಧ ಮರುಳಸಿದ್ಧ ಉದ್ಭಟಾರಾಧ್ಯ ವೇಮಾರಾಧ್ಯ ಮೊದಲಾದವರು ಸಗುಣಶ್ರುತಿಗಳೆಲ್ಲವನ್ನು ಶಕ್ತಿ ವಿಕಾಸಕಾಲಕ್ಕೂ ನಿರ್ಗುಣಶ್ರುತಿಗಳನ್ನು ಶಕ್ತಿಸಂಕೋಚ ಕಾಲಕ್ಕೂ ಅನ್ವಯಿಸಬೇಕೆಂದು ವ್ಯವಸ್ಥೆ ಮಾಡಿದ್ದಾರೆ."ಹೃದಯವೇ ಗಾರ್ಹಪತ್ಯಾಗ್ನಿ, ಮನಸ್ಸೇ ಅನ್ವಾಹಾರ್ಯಾಗ್ನಿ" ಎಂಬ ಶ್ರುತಿಯಲ್ಲಿ ಪ್ರಾಣಾಗ್ನಿ ಹೋತ್ರವೆಂಬ ವೈಶ್ವಾನರೋಪಾಸನವನ್ನು ಹೇಳಿ "ಯಾವುದು ಮೊದಲನೆಯ ಕವಳವೋ ಅದೇ ಮೊದಲನೆಯ ಹೋಮದ್ರವ್ಯ"ವೆಂದು ಭೋಜನಕ್ಕಾಗಿ ಮಾಡಿರುವ ಅನ್ನವನ್ನು ಪ್ರಾಣಾಗ್ನಿ ಹೋಮದ ದ್ರವ್ಯವನ್ನಾಗಿ ವಿಧಿಸಿರುವುದರಿಂದ ಈ ವೈಶ್ವನರೋಪಾಸನವು ಪರಶಿವ ಪ್ರಾಪ್ತಿಗೆ ಸಾಧನವಾಗಲಾರದು ಎಂದು ಹೇಳುವುದು ಯುಕ್ತವಲ್ಲ; ಯಾಕೆಂದರೆ "ಪುರುಷನು ಅಂಗುಷ್ಠಪ್ರಮಾಣದಲ್ಲಿದ್ದು ಅಂಗುಷ್ಠಪ್ರಮಾಣದ ಸ್ಥಾನವನ್ನು ಆಶ್ರಯಿಸಿದ್ದರೂ ವಿಶ್ವಕ್ಕೂ ಪ್ರಭುವಾಗಿ ವಿಶ್ವವನ್ನು ಭೋಗಿಸುತ್ತಲೇ ಪ್ರೀತಿಸುತ್ತಾನೆ" "ನಾನೇ ಅನ್ನವಾಗಿಯೂ ಅನ್ನವನ್ನು ಎಲ್ಲಾ ಕಡೆಯೂ ತಿನ್ನುತ್ತಲೂ ಇದ್ದೇನೆ" "ಎಲೈ ರುದ್ರನೇ ನೀನು ಪ್ರಾಣಗಳನ್ನು ಹಿಡಿದಿದ್ದೀಯೇ. ನೀನು ನನ್ನೊಳಗೆ ಪ್ರವೇಶಿಸು." ಈ ಶ್ರುತಿಗಳಲ್ಲಿ ಪ್ರಾಣದೊಳಗೂ, ಜಠರಾಗ್ನಿಯಲ್ಲಿಯೂ ಇರುವುದರಿಂದಲೇ ಶಿವನು ಅನ್ನವನ್ನು ತಿನ್ನುವನೆಂದು ತಿಳಿಸಲಾಗಿದೆ. ಆದ್ದರಿಂದಲೇ ಜಠರದೊಳಗೆ ಇರುವ ಪ್ರಾಣಲಿಂಗಕ್ಕೆ ಶಾಸ್ತ್ರೋಕ್ತಕ್ರಮದಿಂದ ಉಪಾಸನಮಾಡುವ ಸಾಧಕರಿಗೆ ಪರಂಪರೆಯಿಂದ ಶಿವನು ದೊರಕುವನೆಂದು ಹೇಳಲಾಗಿದೆ. ಆದ್ದರಿಂದ ವಿದ್ಯೆಗಳೆಲ್ಲವೂ ಒಂದೇಬಗೆ ಎಂಬುದು ಯುಕ್ತವೇ ಆಗಿದೆ.

ನನು "ಸೋಽಶ್ನುತೇ ಸರ್ವಾನ್ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ" ಇತ್ಯತ್ರ ವಿಪಶ್ಚಿತಾ ಸರ್ವಜ್ಞೇನ ಬ್ರಹ್ಮಣಾ ಸಹ ಸರ್ವಾನಪಿ ಕಾಮಾನ್ ಮುಕ್ತಃ ಪ್ರಾಪ್ನೋತಿ. ಸಹಶಬ್ದೋ ಬ್ರಹ್ಮಾನಂದಭೋಗಸ್ಯ ಚ ಯೌಗಪದಾಭಿಪ್ರಾಯಃ. ತಸ್ಮಾತ್ ಮುಕ್ತಾನಾಂ ಸಾರೂಪ್ಯ ಮುಕ್ತಿರೇವ ಫಲಮಿತಿ ನಿಶ್ಚೀಯತೇ, "ಬ್ರಹ್ಮಣಸ್ಸಾಯುಜ್ಯಂ ಸಲೋಕತಾಮಾಪ್ನೋತಿ" ಇತ್ಯುತ್ತರತ್ರ ದರ್ಶನಾತ್. ಏವಂ ಶಿವಜೀವೈಕ್ಯವಿಧಾಯಕತತ್ತ್ವಮಸ್ಯಾದಿಶ್ರುತೀನಾಂ ಸರ್ವಾಸಾಂ ತಾತ್ಪರ್ಯಂ. ಅತೋ ಲಿಂಗಶರೀರವಿಲಯಪೂರ್ವಕನಿರವಯವಶಿವತ್ವಪ್ರಾಪ್ತಿರ್ನ ಘಟೇತ ಇತ್ಯಾಶಂಕಾಯಾಮಧಿಕರಣಾಂತರೇಣಾಹ. ತನ್ನಿರ್ಧಾರಣನಿಯಮಾಧಿಕರಣಂ ॥ ೧೭ ॥ ತನ್ನಿರ್ಧಾರಣಾನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬಂಧಃ ಫಲಂ ॥ ೪೧ ॥ ತನ್ನಿರ್ಧಾರಣಾನಿಯಮಃ, ತನ್ನಿರ್ಧಾರಣಾ ದಹರಶಾಂಡಿಲ್ಯಾದಿವಿದ್ಯೋಪಾಸಕಾನಾಂ ಭಕ್ತಾನಾಂ ಸಾಲೋಕ್ಯಾದಿ

ತ್ರಿವಿಧಮುಕ್ತಿರೇವೇತಿ ವ್ಯವಸ್ಥಾ, ತದನಿಯಮಃ ಶ್ರುತಿಸ್ಮೃತ್ಯಾದಿಷು ತನ್ನಿಯಮಾಭಾವೋ ದೃಶ್ಯತೇ. ಕುತಃ? ತದ್ದೃಷ್ಟೇಃ "ಗತಾಃ ಕಲಾ ಪಂಚದಶ ಪ್ರತಿಷ್ಠಾ ದೇವಾಶ್ಚ ಸರ್ವೇ ಪ್ರತಿದೇವತಾಸು | ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ ||" ಇತ್ಯಾದಿಶ್ರುತಿನಿಷ್ಠಲಿಂಗಶರೀರವಿಲಯಪೂರ್ವಕಶಿವತತ್ತ್ವಪ್ರಾಪ್ತಿವಿಧಾಯಕದೃಷ್ಟೇಃ ಪೃಥಗ್ಭ್ಯಪ್ರತಿಬಂಧಃ ಫಲಂ, ಪೃಥಕ್ ಸೂಕ್ಷ್ಮಶರೀರಾವಚ್ಛಿನ್ನಸಾಲೋಕ್ಯಸಾಮೀಪ್ಯಸಾರೂಪ್ಯಾತ್ಮಕಮುಕ್ತಿತ್ರಯಭಾಗಾತ್ಪೃಥಗ್ಭಿನ್ನತ್ವೇನ ಹ್ಯಪ್ರತಿಬಂಧಃ, ರಾಜಾಜ್ಞಾವತ್ ಭಯಪ್ರತಿಬಂಧಾಭಾವಃ ಶಿವಾಜ್ಞಾಭಯರಾಹಿತ್ಯಂ ಫಲಂ, ಜೀವಭಾವನಿವೃತ್ತಿಪೂರ್ವಕ ಶಿವತತ್ತ್ವಪ್ರಾಪ್ತಿರೂಪನಿರತಿಶಯಾನಂದಾಕ್ಕೈವಲ್ಯಮುಕ್ತಿಫಲಂ ಶಿವೈಕನಿಷ್ಠಾನಾಂ ಜೀವನ್ಮುಕ್ತಾನಾಂ ಸಿದ್ಧ್ಯತಿ. ತ್ರಿವಿಧಮುಕ್ತಿವಿಶಿಷ್ಟಾನಾಂ ರೇಣುಕದಾರುಕನಂದೀಶ್ವರಾದೀನಾಂ ಜಯವಿಜಯಶಿವಶರ್ಮಾದೀನಾಂ ಚ ಶೈವವೈಷ್ಣವಪುರಾಣೇಷು ಕದಾಚಿದ್ಧೇತುತಯಾ ಮರ್ತ್ಯಲೋಕಭವತ್ವಮಭಿಧೀಯತೇ. "ಅಭಯಂ ವೈ ಜನಕ ಪ್ರಾಪ್ತೋಽಸಿ", "ನ ಬಿಭೇತಿ ಕುತಶ್ಚನ" ಇತ್ಯಾದಿಶ್ರುತಿಷು ಪರಮಭಕ್ತಿಚರಮಜ್ಞಾನವಿಶಿಷ್ಟಾನಾಂ ಕೈವಲ್ಯಪದಕಾಂಕ್ಷಿಜೀವನ್ಮುಕ್ತಾನಾಂ ನಿರ್ಭಯತ್ವಮಾಚಕ್ಷ್ಯತೇ. ತಸ್ಮಾದ್ಭಯಯುಕ್ತಮುಕ್ತಿತ್ರಯವಿಲಕ್ಷಣಸಾಯುಜ್ಯಮುಕ್ತಿರೇವ ಶಿವಂ ಪ್ರತಿ ಪ್ರಾರ್ಥನೀಯೇತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ತೈತ್ತಿರೀಯಕೇ ಶ್ರೂಯತೇ "ಬ್ರಹ್ಮವಿದಾಪ್ನೋತಿ ಪರಂ" ಇತ್ಯಾದಿನಾ. ತತ್ರ "ಬ್ರಹ್ಮವಿದಾಪ್ನೋತಿ" ಇತ್ಯುಪಕ್ರಮೇ ಬ್ರಹ್ಮಣೋ ವೇದ್ಯತ್ವಸ್ಯ ಪ್ರಾಪ್ಯತ್ವಸ್ಯ ಚ, ಜೀವಸ್ಯ ವೇದಿತೃತ್ವಸ್ಯ ಪ್ರಾಪ್ತೃತ್ವಸ್ಯ ಚ ಉಕ್ತತ್ವೇನ ಜೀವಬ್ರಹ್ಮಣೋರತ್ರ ಭೇದೋ ಹ್ಯಭೇದೋ ಭೇದಾಭೇದ ಇತಿ ಸಂದಿಹ್ಯತೇ. "ಸೋಽಶ್ನುತೇ ಸರ್ವಾನ್ಕಾಮಾನ್ ಸಹ ಬ್ರಹ್ಮಣಾ" ಇತ್ಯತ್ರ ಸಹಪದಂ ಅಭೇದಂ ನ ಸಹತೇ. ನ ಹಿ ದೇವದತ್ತೋ ಯಜ್ಞದತ್ತೇನ ಸಹ ಭುಂಕ್ತೇ ಇತ್ಯತ್ರ ಅದ್ವೈತಂ ಪ್ರತೀಯತ ಇತಿ. ನಚ ಬ್ರಹ್ಮಣಾ ಬ್ರಹ್ಮಸ್ವರೂಪೇಣ ಸಹ ಯುಗಪದಿತ್ಯರ್ಥ ಇತಿ ವಾಚ್ಯಂ, ಸಹೇತಿ ಯುಗಪದಿತ್ಯರ್ಥ ಇತ್ಯಸ್ಯ ಕುತ್ರಾಪ್ಯಪ್ರಸಿದ್ಧತ್ವಾತ್, ಸ್ಕಾಂದಲೈಂಗ್ಯಾದಿಷು ಜೀವಬ್ರಹ್ಮಣೋಸ್ಸ್ವಾಭಾವಿಕಭೇದನಿವೃತ್ತಿಪೂರ್ವಕಶಿವತತ್ತ್ವಪ್ರಾಪ್ತೇಃ ಪ್ರಸಿದ್ಧತ್ವಾದಿತಿ ಚೇನ್ನ ತದ್ವಚನಾನಾಂ ಪ್ರಕ್ಷಿಪ್ತತ್ವಾತ್ ಸರ್ವವಾದಿಭಿಃ ಪ್ರಮಾಣತ್ವೇನಾಭ್ಯುಪಗತತ್ವಾಚ್ಚ. "ತಸ್ಮಾದ್ವಾ ಏತಸ್ಮಾದ್ವಿಜ್ಞಾನಮಯಾತ್ ಅನ್ಯೋಽಂತರ ಆತ್ಮಾನಂದಮಯಃ" ಇತ್ಯತ್ರಾಪಿ ದ್ವೈತಮೇವ ದ್ಯೋತಿತಂ.

" ಯೋಽಯಂ ವಿಜ್ಞಾನಮಯಃ ಪ್ರಾಣೇಷ್ವಂತರ್ಜ್ಯೋತಿಃ ಪುರುಷಃ " ಇತ್ಯಾದಿಶ್ರುತಿಷು ವಿಜ್ಞಾನಮಯೋ ಜೀವಃ ಇತ್ಯದ್ವೈತವಾದಿಭಿರಪಿ ವ್ಯಾಖ್ಯಾತತ್ವಾತ್ "ಆನಂದಮಯೋಽಭ್ಯಾಸಾತ್" ಇತಿ ಸೂತ್ರೇಣಾನಂದಮಯೋ ಬ್ರಹ್ಮೇತಿ ವ್ಯವಸ್ಥಾದರ್ಶನಾಚ್ಚ " ರಸಂ ಹ್ಯೇವಾಯಂ ಲಬ್ಧ್ವಾಽನಂದೀ ಭವತಿ " ಇತ್ಯಾದಿಷು ಘಂಟಾಘೋಷೋ ಭೇದವಾದಃ. " ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೇ ಅಥ ತಸ್ಯ ಭಯಂ ಭವತಿ " ಇತ್ಯತ್ರ ನುಶಬ್ದೋ ವಾಕ್ಯಾಲಂಕಾರೇ. " ಕಿಮಿವ ಹಿ ಮಧುರಾಣಾಂ ಮಂಡನಂ ನಾಕೃತೀನಾಂ " ಇತ್ಯಾದಿಕಾವ್ಯೇಷ್ವವ್ಯಯಾನಾಂ ವಾಕ್ಯಾಲಂಕಾರತ್ವದರ್ಶನಾತ್ " ದರಮಲ್ಪಂ " ಇತ್ಯಾದಿ ಪ್ರಯೋಗೇಷು ದರಶಬ್ದಸ್ಯಾಲ್ಪಾರ್ಥಕತ್ವಾತ್. ಏಷ ಜೀವ ಅಸ್ಮಿನ್ ಬ್ರಹ್ಮಣಿ ವಿಷಯೇ ಯದಾ ದರಮಲ್ಪಂ ಅಂತರಂ ಭೇದಂ ಪರಮಾತ್ಮನೋ ಜೀವಸ್ಯ ಚ ಅಲ್ಪಭೇದಂ ಕಿಂಚಿದ್ಭೇದಂ ಯದಿ ಕುರುತೇ ತದಾ ತಸ್ಯ ಭಯಂ ಭವತಿ. ಪರಮಾತ್ಮಾ ಸ್ವಾಮೀ, ಜೀವಸ್ತು ಭೃತ್ಯ ಇತಿ ಸದಾ ಮಹಾಭೇದಂ ಯಃ ಕುರುತೇ ತಸ್ಯ ನ ಭಯಂ ಭವತೀತಿ ದರ್ಶಿತಂ. " ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ " ಇತ್ಯುಪಸಂಹಾರೇಽಪಿ ಬ್ರಹ್ಮಜೀವಯೋಃ ಪ್ರಾಪ್ಯಪ್ರಾಪಕತ್ವೇನ ಭಿದಾ ನಿರ್ದಿಷ್ಟಾ. " ಪ್ರಜ್ಞಾನಂ ಬ್ರಹ್ಮ ಏತೇನ ಪ್ರಜ್ಞಾನಾತ್ಮನಾ ಅಸ್ಮಾತ್ ಲೋಕಾದುತ್ಕ್ರಮ್ಯ ಅಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ಕಾಮಾನಾಪ್ತ್ವಾ ಅಮೃತಸ್ಸಮಭವತ್ " ಇತ್ಯಾದಿ ನಿಗಮಾಂತಗಿರಾಪಿ, " ಸೋಽಶ್ನುತೇ ಸರ್ವಾನ್ " ಇತ್ಯಾದಿವಾಕ್ಯೇನ ಚ ಭೇದ ಏವ ಪ್ರಚಕ್ಷ್ಯತೇ. " ತತ್ಸತ್ಯಂ ಸ ಆತ್ಮಾ ತತ್ತ್ವಮಸಿ ಶ್ವೇತಕೇತೋ " ಇತಿ ಸಾಮವೇದಾಂತೇ ಭೇದಃ ಘೋಷ್ಯತೇ. ಜಹಲ್ಲಕ್ಷಣಯಾ ಜೀವಬ್ರಹ್ಮಣೋಃ " ಭೋ ಮಂತ್ರಿನ್ ರಾಜಾ ತ್ವಂ " ಇತ್ಯತ್ರ ರಾಜಪದೇನ ರಾಜಪ್ರಿಯತ್ವಮಿವ ತತ್ತ್ವಮಸೀತ್ಯತ್ರ ತತ್ಪದೇನ ಪರಮಶಿವಪ್ರಿಯತ್ವಂ ಸೂಚ್ಯತ ಇತ್ಯಸ್ಯೈವ ನ್ಯಾಯ್ಯತ್ವಾತ್ " ದ್ವಾ ಸುಪರ್ಣಾ " ಇತ್ಯಾದಿತುರ್ಯವೇದಶಿರೋಗಿರಾಪಿ ಭೇದಃ ಸ್ಪಷ್ಟಂ ಪ್ರತಿಪಾದಿತಃ. ನನು " ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತಿ " ಇತಿ ಸತ್ಯಂ. " ಅನಶ್ನನ್ನನ್ಯೋ ಅಭಿಚಾಕಶೀತಿ " " ಜ್ಞಸ್ತದೇತತ್ಸತ್ಯಂ ಯೇನ ಸ್ವಪ್ನಾನ್ ಪಶ್ಯತಿ ಯೋಽಯಂ ಶಾರೀರ ಉಪದ್ರಷ್ಟಾ ಸ ಕ್ಷೇತ್ರಜ್ಞಸ್ಸ ಹ ವಾ ಏವಂವಿದಿ ಕಿಂಚನ ರಜ ಆಧ್ವಂಸತ " ಇತಿ. ಪೈಂಗಿರಹಸ್ಯಬ್ರಾಹ್ಮಣವಾಕ್ಯೇನ " ಅಂತಃಕರಣಾದಾತ್ಮಾ ಭಿನ್ನ " ಇತಿ ಶ್ರುತ್ಯಾ ಪ್ರತ್ಯಾಯ್ಯತೇ. ಕಿಂಚ ಜೀವಬ್ರಹ್ಮಣೋಃ ಪಾರಮಾರ್ಥಿಕಭೇದಮಂಗೀಕೃತ್ಯ ತದ್ವದಭೇದಸ್ವೀಕಾರೇ ಸತಿ ಅಭೇದಸ್ಯ ನಿವೃತ್ತ್ಯಸಂಭ

ವಾತ್ ಭೇದ ಏವ ಸರ್ವವೇದಾಂತತಾತ್ಪರ್ಯಮಿತಿ ಪ್ರಾಪ್ತೇ ಪ್ರಚಕ್ಷ್ಮಹೇ. "ದ್ವಾ ಸುಪರ್ಣಾ" ಇತಿ ಭೇದಶ್ರುತಿಪ್ರಾಧಾನ್ಯೇನ ತತ್ತ್ವಮಸ್ಯಾದಿಭೇದಾಭೇದಪ್ರತಿಪಾದಕಶ್ರುತೀನಾಂ ಜಹಲ್ಲಕ್ಷಣಾನುಸಾರೇಣ ಪ್ರಭುಮಂತ್ರಿನ್ಯಾಯವತ್ ತತ್ತುಲ್ಯತ್ವಮಾತ್ರಸ್ವೀಕಾರೇ ಶ್ರುತೇಃ ಕ್ಲಿಷ್ಟಾರ್ಥಾಸಹಿಷ್ಣುತ್ವಾತ್ ಮುಖ್ಯಾರ್ಥವ್ಯತಿರೇಕೇ ಮಾನಾಭಾವಾತ್, "ಬ್ರಹ್ಮ ವೇದ ಬ್ರಹ್ಮೈವ ಭವತಿ" ಇತ್ಯಾದಿಶ್ರುತಿಶತೇಷು ಲಿಂಗಶರೀರ ಪರಿತ್ಯಾಗತಯಾ ನದೀಸಮುದ್ರವತ್ ಜೀವಬ್ರಹ್ಮಣೋರೇಕತ್ವಸ್ಯೈವ ಸ್ಪಷ್ಟಮುಪದಿಷ್ಟತ್ವಾತ್, ಶ್ರುತ್ಯೇಕದೇಶಮುಖ್ಯಪ್ರಾಮಾಣ್ಯೈದಿಕೇತರಪ್ರಸಂಗಾಚ್ಚ, ಅತ್ರ "ಬ್ರಹ್ಮವಿದಾಪ್ನೋತಿ" ಇತ್ಯುಪಕ್ರಮೇ ಬ್ರಹ್ಮಪ್ರಾಪ್ತ್ಯುಪದೇಶಾತ್, ನದೀಸಮುದ್ರವಜ್ಜೀವಬ್ರಹ್ಮಣೋರೇಕತ್ವಮಂತೇ ನಿಷ್ಪ್ರತ್ಯೂಹಂ. "ಸೋಽಶ್ನುತೇ ಸರ್ವಾನ್ಕಾಮಾನ್ ಸಹ ಬ್ರಹ್ಮಣಾ" ಇತಿ ವಾಕ್ಯಂ ಜೀವನ್ಮುಕ್ತವಿಷಯಂ. ಸತ್ಯಜ್ಞಾನಾನಂದಾತ್ಮಕಂ ಬ್ರಹ್ಮ ಯಃ ಭಕ್ತಃ ಶಿವಯೋಗಮಾರ್ಗೇಣ ಗುಹಾಯಾಂ ದಹರಪುಂಡರೀಕೇ ನಿಹಿತಂ ವೇದ ಸಃ ಪರಮೇ ವ್ಯೋಮನ್ ದಹರಪುಂಡರೀಕಾವಚ್ಛಿನ್ನಚಿದಾಕಾಶೇ ಬ್ರಹ್ಮಣಾ ಸಹ ಪರಂಜ್ಯೋತಿರ್ಮಯಶಿವೇನ ಸಹ ಪ್ರಾರಬ್ಧಪ್ರತಿಭಾಸನಾಶಪರ್ಯಂತಂ ಇಹೈವ ಸರ್ವಾನ್ಕಾಮಾನ್ ಅಶ್ನುತೇ ಅನಂತರಂ ವಿದೇಹಮುಕ್ತೌ ಲಿಂಗಶರೀರೇಣ ಸಹ ತಸ್ಮಿನ್ ಪರಶಿವೇ ವಿಲೀನೋ ಭವತೀತಿ ನಿಶ್ಚಿತಾರ್ಥಃ. ನೋ ಚೇತ್ "ಯಾವನ್ನ ವಿಮೋಕ್ಷ್ಯೇ ಅಥ ಸಂಪತ್ಸ್ಯೇ" "ನ ತಸ್ಯ ಪ್ರಾಣಾ ನೋತ್ಕ್ರಾಮಂತೇ ತತ್ರೈವ ಸಮವಲೀಯಂತೇ. "ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ । ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥" ಇತ್ಯಾದಿವಿದೇಹಮುಕ್ತಿವಿಧಾಯಕಸರ್ವಶ್ರುತಿವಿರೋಧೋ ದುರ್ನಿವಾರಃ. ವಿಶಿಷ್ಟಾದ್ವೈತಮತಂ ತು "ಮುಕ್ತೋಪಸೃಪ್ಯವ್ಯಪದೇಶಾತ್", "ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ" ಇತ್ಯಾದಿಷು ಬಹುಧಾ ನಿರಸ್ತತ್ವಾದತ್ರ ಸಂಕ್ಷಿಪ್ತಂ. ಅತೋ ವಿದ್ಯೈಕ್ಯಮವಿರೋಧಂ.

"ಪರಮಾಕಾಶರೂಪವಾದ ಗುಹೆಯಲ್ಲಿ ಅಡಗಿರುವವನನ್ನು ತಿಳಿದವನು ಸರ್ವಜ್ಞನಾದ ಆ ಬ್ರಹ್ಮದೊಡನೆಯೇ ಎಲ್ಲಾ ಇಷ್ಟಾರ್ಥಗಳನ್ನೂ ಪಡೆಯುತ್ತಾನೆ" ಎಂಬಲ್ಲಿ ಬ್ರಹ್ಮದೊಡನೆ ಮುಕ್ತನು ಎಲ್ಲಾ ಫಲಗಳನ್ನು ಪಡೆಯುವನೆಂದು ಹೇಳಿದೆ. ಸಹಶಬ್ದವು ಬ್ರಹ್ಮಾನಂದಾನುಭವದ ಸಂಬಂಧವನ್ನು ತಿಳಿಸುತ್ತದೆ. ಆದ್ದರಿಂದ ಮುಕ್ತರಿಗೆ ಸಾರೂಪ್ಯಮುಕ್ತಿಯೇ ಫಲವೆಂದು ನಿಶ್ಚಯಿಸಲಾಗಿದೆ. "ಬ್ರಹ್ಮಸಾಯುಜ್ಯವನ್ನೂ ಸಾಲೋಕ್ಯವನ್ನೂ ಹೊಂದುತ್ತಾನೆ" ಎಂಬಲ್ಲಿ ಹೇಳಿದಂತೆ ಶಿವಜೀವರಿಗೆ

ಐಕ್ಯವನ್ನು ತಿಳಿಸುವುದೇ "ತತ್ತ್ವಮಸಿ" ಮೊದಲಾದ ಶ್ರುತಿಗಳೆಲ್ಲಕ್ಕೂ ತಾತ್ಪರ್ಯವಾಗಿದೆ. ಆದ್ದರಿಂದ ಮುಕ್ತನು ಲಿಂಗಶರೀರವನ್ನು ಕಳೆದುಕೊಂಡು ನಿರವಯವ ಶಿವಭಾವವನ್ನು ಹೊಂದುವನೆಂಬುದು ಸಾಧ್ಯವಾಗುವುದಿಲ್ಲವೆಂದು ಆಶಂಕಿಸಿ ಸಮಾಧಾನಮಾಡುತ್ತಾನೆ. ದಹರ ಶಾಂಡಿಲ್ಯ ಮೊದಲಾದ ವಿದ್ಯೆಗಳನ್ನು ಆಶ್ರಯಿಸಿದ ಭಕ್ತರಿಗೆ ಸಾಲೋಕ್ಯ ಮೊದಲಾದ ಮೂರುಬಗೆಯ ಮುಕ್ತಿಮಾತ್ರವೇ ದೊರಕುವುದು ಎಂಬ ನಿಯಮವಿಲ್ಲವೆಂದು ಶ್ರುತಿಸ್ಮೃತಿಗಳಲ್ಲಿ ಕಂಡುಬಂದಿದೆ. ಯಾಕೆಂದರೆ ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ. "ಜೀವನೂ, ಅವನ ಕರ್ಮಗಳು ಇಂದ್ರಿಯಗಳು ಎಲ್ಲವೂ ಪರಮಾತ್ಮನಲ್ಲಿ ಏಕೀಭವಿಸುವರು" ಎಂದು ಶ್ರುತಿಯಲ್ಲಿ ಮುಕ್ತನು ಲಿಂಗಶರೀರವನ್ನು ಕಳೆದುಕೊಂಡು ಶಿವನೇ ಆಗುವನೆಂದು ಸ್ಪಷ್ಟವಾಗಿ ವಿಧಿಸಲಾಗಿದೆ. ಸಾಲೋಕ್ಯ ಸಾಮಿಪ್ಯ ಸಾರೂಪ್ಯವೆಂಬ ಮೂರುಬಗೆಯ ಮುಕ್ತಿಗಳಲ್ಲಿ ಮುಕ್ತನಿಗೆ ಸೂಕ್ಷ್ಮಶರೀರವಿದ್ದರೂ ಅದರಿಂದ ಯಾವ ಭಯದ ಪ್ರತಿಬಂಧಕವೂ ಸಂಭವಿಸುವುದಿಲ್ಲ. ರಾಜಾಜ್ಞೆಯಿಂದ ಭಯಹುಟ್ಟುವಂತೆ ಮುಕ್ತರಿಗೆ ಶಿವಾಜ್ಞೆಯ ಭಯವೇನೂ ಇರುವುದಿಲ್ಲ. ಆದರೆ ಜೀವಭಾವವನ್ನು ಪೂರ್ಣವಾಗಿ ಕಳೆದುಕೊಂಡು ಶಿವಭಾವವನ್ನು ಹೊಂದಿ ಶಿವೈಕನಿಷ್ಠರಾದ ಜೀವನ್ಮುಕ್ತರಿಗೆ ನಿರತಿಶಯಾನಂದ ರೂಪವಾದ ಕೈವಲ್ಯಮುಕ್ತಿಯು ಇಲ್ಲಿಯೇ ದೊರಕುತ್ತದೆ. ತ್ರಿವಿಧಮುಕ್ತಿಯನ್ನು ಹೊಂದಿದ್ದ ರೇಣುಕ ದಾರುಕ ನಂದೀಶ್ವರ ಮೊದಲಾದವರು, ಜಯ ವಿಜಯ ಶಿವಶರ್ಮ ಮೊದಲಾದವರು ಕೆಲವುವೇಳೆ ಯಾವುದಾದರೂ ಕಾರಣದಿಂದ ಮರ್ತ್ಯಲೋಕದಲ್ಲಿ ಅವತರಿಸಿದ್ದರೆಂದು ಶೈವ ವೈಷ್ಣವಪುರಾಣಗಳಲ್ಲಿ ಹೇಳಲಾಗಿದೆ. "ಜನಕನೇ, ನೀನು ಅಭಯವನ್ನು ಹೊಂದಿರುವೆ" "ಅವನು ಯಾತರಿಂದಲೂ ಹೆದರುವುದಿಲ್ಲ" ಎಂಬ ಶ್ರುತಿಗಳಲ್ಲಿ ಪರಾಭಕ್ತಿಯಿಂದಲೂ ಶಿವಜ್ಞಾನದಿಂದಲೂ ಕೂಡಿ ಕೈವಲ್ಯವನ್ನೇ ಅಪೇಕ್ಷಿಸುವ ಜೀವನ್ಮುಕ್ತರಿಗೆ ನಿರ್ಭಯಸ್ಥಿತಿಯನ್ನು ಹೇಳಲಾಗಿದೆ. ಆದ್ದರಿಂದ ಭಯದಿಂದ ಕೂಡಿದ ಸಾಲೋಕ್ಯ ಸಾಮೀಪ್ಯ ಸಾರೂಪ್ಯಮುಕ್ತಿಗಳಿಗಿಂತಲೂ • ವಿಲಕ್ಷಣವಾದ ಸಾಯುಜ್ಯಮುಕ್ತಿಯನ್ನೇ ಸಾಧಕರು ಶಿವನಲ್ಲಿ ಪ್ರಾರ್ಥಿಸಬೇಕು ಎಂಬುದು ಸೂತ್ರದ ಸೂಕ್ಷ್ಮಾರ್ಥ. ತೈತ್ತಿರೀಯದಲ್ಲಿ "ಪರಮಾಕಾಶದಲ್ಲಿ ಗುಪ್ತವಾಗಿ ನೆಲಸಿರುವ ಪರಂಜ್ಯೋತಿಯನ್ನು ತಿಳಿದವನು ಅದರೊಡನೆ ಬೆರೆತು ಎಲ್ಲಾ ಇಷ್ಟಗಳನ್ನೂ ಅನುಭವಿಸುತ್ತಾನೆ" ಎಂದೂ, "ಬ್ರಹ್ಮವನ್ನು ತಿಳಿದವನು ಬ್ರಹ್ಮವನ್ನೇ ಹೊಂದುತ್ತಾನೆ" ಎಂದೂ, ಬ್ರಹ್ಮವೇ ತಿಳಿಯಲಿಕ್ಕೂ ಹೊಂದಲಿಕ್ಕೂ ಅರ್ಹವಾದ ವಸ್ತುವೆಂದೂ, ಜೀವನೇ ತಿಳಿಯುವನು ಮತ್ತು ಹೊಂದುವನು ಎಂದೂ ಹೇಳಿದ್ದರಿಂದ ಜೀವಬ್ರಹ್ಮರಿಗೆ ಭೇದವೆ? ಅಭೇದವೆ? ಅಥವಾ ಭೇದಾಭೇದವೇ? ಎಂದು ಸಂದೇಹವುಂಟಾಗುತ್ತದೆ. "ಮುಕ್ತನೂ ಬ್ರಹ್ಮದೊಡನೆ ಎಲ್ಲಾ ಕಾಮುಗಳನ್ನು ಹೊಂದುತ್ತಾನೆ" ಎಂಬಲ್ಲಿ ಸಹಪದವು ಇಬ್ಬರಿಗೂ ಅಭೇದವನ್ನು ಬೋಧಿಸುವುದಿಲ್ಲ. "ದೇವದತ್ತನು ಯಜ್ಞದತ್ತನೊಡನೆ ಭೋಗಿಸುತ್ತಾನೆ" ಎಂಬಲ್ಲಿ ಅದ್ವೈತವು ತೋರು

ವುದಿಲ್ಲ. ಸಹಪದಕ್ಕೆ " ಒಂದೇಕಾಲದಲ್ಲಿ " ಎಂಬ ಅರ್ಥವನ್ನು ಇಟ್ಟುಕೊಂಡು ಬ್ರಹ್ಮ ಸ್ವರೂಪದಿಂದ ಮುಕ್ತನು ಎಲ್ಲಾ ಭೋಗಗಳನ್ನು ಒಂದೇಸಮಯದಲ್ಲಿ ಅನುಭವಿಸುವ ನೆಂದು ಅರ್ಥವನ್ನು ಹೇಳುವುದು ಯುಕ್ತವಲ್ಲ. ಸಹ ಎಂಬ ಪದಕ್ಕೆ ಒಟ್ಟಿಗೆ ಕೂಡು ವುದು ಎಂಬ ಅರ್ಥವು ಎಲ್ಲಿಯೂ ಪ್ರಸಿದ್ಧವಾಗಿಲ್ಲ. ಸ್ಕಾಂದ ಲೈಂಗ್ಯಪುರಾಣಗಳಲ್ಲಿ ಹೇಳಿದಂತೆ ಜೀವನಲ್ಲಿ ಸಹಜವಾಗಿರುವ ಜೀವಭಾವವು ಪೂರ್ಣವಾಗಿ ತೊಲಗಿ ಶಿವ ಭಾವ ಬರುವುದೆಂಬುದೇ ಪ್ರಸಿದ್ಧವಾಗಿದೆ ಎಂದು ಹೇಳಿದರೆ ಆ ಬಗೆಯ ವಚನಗಳ ನ್ನು ಈಚೆಗೆ ಯಾರೋ ಸೇರಿಸಿರಬಹುದಾದ್ದರಿಂದ ಅವನ್ನು ಎಲ್ಲರೂ ಪ್ರಮಾಣವೆಂದು ಒಪ್ಪಲಾರರು. " ಈ ವಿಜ್ಞಾನಮಯನಿಗಿಂತಲೂ ಆನಂದಮಯನು ಬೇರೆಯಾಗಿರು ವನು " ಎಂಬಲ್ಲಿಯೂ ಸಹ ದ್ವೈತವೇ ಸ್ಪಷ್ಟವಾಗಿದೆ. " ಈ ವಿಜ್ಞಾನಮಯನೇ ಪ್ರಾಣಗಳೊಳಗೆ ಪ್ರಕಾಶಿಸುವ ಪುರುಷನು " ಎಂಬ ಶ್ರುತಿಗಳಲ್ಲಿ ವಿಜ್ಞಾನಮಯನೇ ಜೀವನೆಂದು ಅದ್ವೈತಿಗಳೂ ಹೇಳಿದ್ದಾರೆ. ಆದ್ದರಿಂದಲೇ " ಆನಂದಮಯೋಽಭ್ಯಾ ಸಾತ್ " ಎಂಬ ಸೂತ್ರದಲ್ಲಿ ಆನಂದಮಯನೆಂದರೆ ಪರಬ್ರಹ್ಮವೆಂದು ವ್ಯವಸ್ಥೆಮಾಡ ಲಾಗಿದೆ. " ಚಿದ್ಘನಸ್ವರೂಪನಾದ ಪರಮಾತ್ಮನಲ್ಲಿ ಸೇರಿ ಜೀವನು ಆನಂದನಾಗು ತ್ತಾನೆ " ಎಂಬ ಶ್ರುತಿಯಲ್ಲೂ ಶಿವಜೀವರ ಭೇದವು ಸ್ಪಷ್ಟವಾಗಿದೆ. " ಯಾವಾಗ ಇವನು ಅವನಲ್ಲಿ ಕೊಂಚ ಭೇದವನ್ನೆಣಿಸುವನೋ ಆಗಲೇ ಅವನಿಗೆ ಭಯವುಂಟಾ ಗುತ್ತದೆ " ಎಂಬ ಶ್ರುತಿಯಲ್ಲಿ " ಏತಸ್ಮಿನ್ ನು ದರಂ " ಎಂದು ಪದಚ್ಛೇದವಾಗುತ್ತದೆ. ಇಲ್ಲಿ " ನು " ಎಂಬ ಅವ್ಯಯವನ್ನು ವಾಕ್ಯಕ್ಕೆ ಅಲಂಕಾರವಾಗಿ ಉಪಯೋಗಿಸಲಾಗಿದೆ. " ಸುಂದರವಾದ ಆಕೃತಿಗಳಿಗೆ ಯಾವುದು ತಾನೆ ಅಲಂಕಾರವಾಗುವುದಿಲ್ಲ ? " ಎಂಬ ಕಾಳಿದಾಸನ ವಾಕ್ಯದಲ್ಲಿ ಕಿಮಿವ ಹಿ ಎಂಬ ಅವ್ಯಯಗಳು ವಾಕ್ಯಾಲಂಕಾರಕ್ಕಾಗಿ ಬಂದಿವೆ. ದರ ಎಂಬ ಪದವನ್ನು ಅಲ್ಪ ಎಂಬ ಅರ್ಥದಲ್ಲಿ ಪ್ರಯೋಗಿಸಲಾಗಿದೆ. " ಈ ಜೀವನು ಬ್ರಹ್ಮದ ವಿಷಯದಲ್ಲಿ ಕೊಂಚ ಭೇದವನ್ನೆಣಿಸಿದರೂ ಅವನಿಗೆ ಭಯ ವಾಗುತ್ತದೆ. ಹಾಗೆಯೇ ಜೀವನು ಪರಮಾತ್ಮನನ್ನು ಸ್ವಾಮಿಗೆ ಎಂದೂ, ತನ್ನನ್ನು ಭೃತ್ಯನೆಂದೂ ಭಾವಿಸದೆ ಯಾವಾಗಲೂ ಅಭೇದವನ್ನೇ ತಿಳಿಯುತ್ತಾನೋ ಅವನಿಗೆ ಭಯವುಂಟಾಗುವುದಿಲ್ಲವೆಂದು ಆ ಶ್ರುತಿಯಲ್ಲಿ ತಿಳಿಸಲಾಗಿದೆ. " ಈ ಆನಂದವು ಆನಂದಮಯನಾದ ಆತ್ಮನಿಗೆ ದೊರಕುತ್ತದೆ " ಎಂದು ಕೊನೆಯಲ್ಲೂ ಜೀವಬ್ರಹ್ಮ ರಿಗೆ ಪ್ರಾಪ್ಯಪ್ರಾಪಕಭಾವದಿಂದ ಭೇದವನ್ನೇ ಹೇಳಲಾಗಿದೆ. " ಪ್ರಜ್ಞಾನರೂಪ ದಿಂದ ಇವನು ಈ ಲೋಕದಿಂದ ಹೊರಟು ಸ್ವರ್ಗದಲ್ಲಿ ಎಲ್ಲಾ ಕಾಮಗಳನ್ನು ಹೊಂದಿ ಅಮೃತನಾದನು " ಎಂಬ ವೇದಾಂತವೂ " ಅವನು ಎಲ್ಲಾ ಇಚ್ಛೆಗಳನ್ನು ಹೊಂದು ತ್ತಾನೆ " ಎಂಬಂತೆ ಭೇದವನ್ನೇ ತಿಳಿಸುತ್ತದೆ." "ಸದ್ವಸ್ತುವೇ ಆತ್ಮ. ಶ್ವೇತಕೇತುವೇ, ನೀನೂ ಅದೇ ಆಗಿರುವೆ. " ಎಂಬಲ್ಲಿಯೂ ಭೇದವನ್ನೇ ಸ್ಪಷ್ಟವಾಗಿ ಹೇಳಲಾಗಿದೆ. "ಮಂತ್ರಿಯೇ, ನೀನೇ ರಾಜನಾಗಿದ್ದೀಯೆ " ಎಂಬಲ್ಲಿ ರಾಜಪದವು "ರಾಜನಿಗೆ ಪ್ರಿಯ ನಾಗಿರುವಿಕೆ" ಎಂಬ ಅರ್ಥವನ್ನು ತಿಳಿಸುವಂತೆ ತತ್ಪದವು ಜೀವನನ್ನು ಪರಮಾತ್ಮನಿಗೆ

ಪ್ರಿಯನಾಗಿರುವನೆಂಬ ಅಂಶವನ್ನು ತಿಳಿಸುತ್ತದೆ ಎಂದು ಹೇಳುವುದೇ ಯುಕ್ತವಾಗಿದೆ. ದ್ವಾ ಸುಪರ್ಣಾ" ಎಂಬ ಅಥರ್ವಶ್ರುತಿಯು ಭೇದವನ್ನೇ ಸ್ಪಷ್ಟವಾಗಿ ತಿಳಿಸಿದೆ. "ಇಬ್ಬರಲ್ಲಿ ಒಬ್ಬನು ಸಿಹಿಕಹಿಗಳನ್ನು ತಿನ್ನುವನೆಂದೂ, ಮತ್ತೊಬ್ಬನೂ ಏನನ್ನೂ ತಿನ್ನದೆ ಪ್ರಕಾಶಿಸುತ್ತಿರುವನೆಂದೂ, ಇವನೇ ಸರ್ವಜ್ಞನೆಂದೂ ಸತ್ಯನೆಂದೂ, ಯಾವನು ಈ ಶರೀರದಲ್ಲಿ ಸ್ವಪ್ನಾದಿಗಳನ್ನು ನೋಡುತ್ತಾನೆಯೋ ಅವನೇ ಜೀವನೆಂದೂ, ಇದನ್ನು ಅರಿತವನ ಪಾಪವು ನಾಶವಾಗುವುದೆಂದೂ ತಿಳಿಸುವ ಪೈಂಗಿರಹಸ್ಯಬ್ರಾಹ್ಮಣದ ವಾಕ್ಯದಿಂದ ಅಂತಃಕರಣದ ಸಂಪರ್ಕದಿಂದ ಆತ್ಮನು ಭಿನ್ನನೇ ಹೊರತು ವಾಸ್ತವವಾಗಿ ಭಿನ್ನನಲ್ಲವೆಂದು ತಿಳಿದುಬರುತ್ತದೆ. ಹೀಗೆ ಜೀವಬ್ರಹ್ಮರಿಗೆ ಪಾರಮಾರ್ಥಿಕವಾದ ಭೇದವನ್ನು ಒಪ್ಪಿ ಅದರಂತೆಯೇ ಅಭೇದವನ್ನೂ ಒಪ್ಪಿದರೆ ಆ ಅಭೇದವು ತೊಲಗುವ ಸಂಭವವೇ ಇಲ್ಲದ್ದರಿಂದ ಭೇದವೇ ಎಲ್ಲವೇದಾಂತಗಳಿಗೂ ಸಮ್ಮತವೆನಿಸಿದೆ ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. "ದ್ವಾ ಸುಪರ್ಣಾ" ಎಂಬ ಭೇದಶ್ರುತಿಯೇ ಪ್ರಧಾನವಾದ್ದರಿಂದ "ತತ್ತ್ವಮಸಿ" ಮೊದಲಾದ ಭೇದಾಭೇದಶ್ರುತಿಗಳಿಗೆ ಮಂತ್ರಿಯನ್ನು ಪ್ರಭುವೆಂದು ಕರೆಯುವಂತೆ ಜಹಲ್ಲಕ್ಷಣೆಯಿಂದ ಜೀವನನ್ನು ಬ್ರಹ್ಮಸದೃಶನೆಂದು ಕರೆಯುವುದೇ ತಾತ್ಪರ್ಯವೆಂದು ಹೇಳಿದರೆ ಶ್ರುತಿಯು ಕ್ಲಿಷ್ಟಾರ್ಥವನ್ನು ಸಹಿಸದೇ ಇರುವುದರಿಂದಲೂ, ಮುಖ್ಯಾರ್ಥವನ್ನು ತೊರೆಯಲಿಕ್ಕೆ ಪ್ರಮಾಣವಿಲ್ಲದ್ದರಿಂದಲೂ, ನದೀಸಮುದ್ರದೃಷ್ಟಾಂತದಿಂದಲೂ, "ಬ್ರಹ್ಮವನ್ನು ಅರಿತವನು ಬ್ರಹ್ಮವೇ ಆಗುವನು" ಎಂದು ಮುಂತಾಗಿ ಅನೇಕಶ್ರುತಿಗಳಲ್ಲಿ ಮುಕ್ತನು ಲಿಂಗಶರೀರವನ್ನು ಕಳೆದುಕೊಂಡು ಬ್ರಹ್ಮದಲ್ಲಿ ಏಕೀಭವಿಸುವನೆಂದು ಸ್ಪಷ್ಟವಾಗಿ ಹೇಳಿರುವುದರಿಂದಲೂ, ಶ್ರುತಿಯ ಒಂದು ಭಾಗವನ್ನು ಮಾತ್ರವೇ ಒಪ್ಪಿದರೆ ಅವೈದಿಕಮತವೆನಿಸುವ ಪ್ರಸಂಗ ಒದಗುವುದರಿಂದಲೂ, "ಬ್ರಹ್ಮವಿದಾಪ್ನೋತಿ" ಎಂಬಲ್ಲಿ ಬ್ರಹ್ಮಜ್ಞಾನಿಗೆ ಬ್ರಹ್ಮಪ್ರಾಪ್ತಿಯನ್ನು ಹೇಳಿರುವುದರಿಂದಲೂ ನದೀಸಮುದ್ರಗಳಂತೆ ಜೀವಬ್ರಹ್ಮರಿಗೆ ಕೊನೆಯಲ್ಲಿ ಐಕ್ಯವು ಸಂಭವಿಸಲಿಕ್ಕೆ ಅಡ್ಡಿ ಇಲ್ಲ. "ಪರಮಾಕಾಶದಲ್ಲಿ ನೆಲಸಿರುವ ಪರಂಜ್ಯೋತಿಯನ್ನು ತಿಳಿದವನು ಅದರೊನೆಯೇ ಎಲ್ಲಾ ಕರ್ಮಗಳನ್ನು ಭೋಗಿಸುವನು" ಎಂಬ ವಾಕ್ಯವಾದರೋ ಜೀವನ್ಮುಕ್ತನಿಗೆ ಅನ್ವಯಿಸುತ್ತದೆ. ಯಾವ ಭಕ್ತನು ಶಿವಯೋಗಮಾರ್ಗದಿಂದ ದಹರಕಮಲವೆಂಬ ಗವಿಯಲ್ಲಿ ನೆಲಸಿರುವ ಪ್ರಕಾಶವನ್ನು ತಿಳಿಯುವನೋ ಅವನು ಅಲ್ಲಿನ ಚಿದಾಕಾಶದಲ್ಲಿಯೇ ಪರಂಜ್ಯೋತಿಸ್ವರೂಪನಾದ ಶಿವನೊಡನೆಯೇ ನೆಲಸಿದ್ದು ಪ್ರಾರಬ್ಧದಿಂದ ಬಂದಿರುವ ಈ ದೇಹವು ಅಳಿಯುವವರೆಗೂ ಇಲ್ಲಿಯೇ ಈ ಪ್ರಸಾದಕಾಯದಲ್ಲಿ ಎಲ್ಲ ಕಾಮಗಳನ್ನೂ ಹೊಂದುತ್ತಾನೆ. ಆಮೇಲೆ ವಿದೇಹಮುಕ್ತಿಯಲ್ಲಿ ಲಿಂಗಶರೀರದೊಡನೆ ಆ ಪರಶಿವನಲ್ಲಿ ಬೆರೆಯುತ್ತಾನೆ ಎಂಬುದೇ ಆ ಶ್ರುತಿಯ ಅರ್ಥವಾಗುತ್ತದೆ. ಹೀಗೆ ಹೇಳದಿದ್ದರೆ "ಎಷ್ಟುಹೊತ್ತಿಗೆ ಈ ಶರೀರದ ಬಿಡುಗಡೆಯಾಗುವುದೋ ಮುಕ್ತನು ಸದ್ವಸ್ತುವಿನಲ್ಲಿ ಸೇರಲಿಕ್ಕೆ ಅಷ್ಟೇ ತಡವಾಗುವುದು" "ಆಗ ಪ್ರಾಣಗಳು ತೊಲಗು

ವುದಿಲ್ಲ, ಆದರೆ ಅಲ್ಲಿಯೇ ಲಯವಾಗುತ್ತವೆ." "ಹೃದಯದ ಆಶೆಗಳೆಲ್ಲವೂ ತೊಲಗಿದೊಡನೆ ಜೀವನು ಅಮೃತನಾಗಿ ಇಲ್ಲಿಯೆ: ಬ್ರಹ್ಮವನ್ನು ಹೊಂದುತ್ತಾನೆ" ಎಂದು ಮುಂತಾಗಿ ವಿದೇಹ ಮುಕ್ತಿಯನ್ನು ತಿಳಿಸುವ ಎಲ್ಲಾ ಶ್ರುತಿಗಳ ವಿರೋಧವೂ ಸಂಭವಿಸೀತು. ವಿಶಿಷ್ಟಾದ್ವೈತಮತವನ್ನಾದರೋ "ಮುಕ್ತೋಽಪಸೃಪ್ಯವ್ಯಪದೇಶಾತ್" "ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ" ಎಂಬಲ್ಲಿ ವಿಸ್ತಾರವಾಗಿ ನಿರಾಕರಿಸಲಾಗಿದೆ. ಆದ್ದರಿಂದ ವಿದ್ಯೆಗಳು ಒಂದೇ ಬಗೆ ಎಂಬಲ್ಲಿ ಯಾವ ವಿರೋಧವೂ ಇಲ್ಲ.

"ಬ್ರಹ್ಮವಿದಾಪ್ನೋತಿ ಪರಂ" ಇತಿ ವಾಕ್ಯಸ್ಯ ಸಾಯುಜ್ಯಮುಕ್ತಿ ವಿಷಯತ್ವಂ. "ಸೋಽಶ್ನುತೇ ಸರ್ವಾನ್ಕಾಮಾನ್ ಸಹ" ಇತಿ ವಾಕ್ಯಸ್ಯ ಜೀವನ್ಮುಕ್ತಿವಿಧಾಯತ್ವಂ ತ್ರಿವಿಧಮುಕ್ತಿಪರತ್ವಂ ವಾ ಸ್ಯಾತ್. ತಥಾಪಿ ಕೇಷಾಂ ಸಾಯುಜ್ಯಂ? ಕೇಷಾಂ ಸಾಲೋಕ್ಯಾದಿತ್ರಿವಿಧಮುಕ್ತಿಃ? ಇತ್ಯಾಶಂಕ್ಯ ತತ್ರ ಅಧಿಕರಣಾಂತರಮಾಹ. ಪ್ರದಾನಾಧಿಕರಣಂ ॥ ೧೮ ॥

ಪ್ರದಾನವದೇವ ತದುಕ್ತಂ ॥ ೪೨ ॥ "ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವಮಾನಶುಃ । ಪರೇಣ ನಾಕಂ ನಿಹಿತಂ ಗುಹಾಯಾಂ ವಿಭ್ರಾಜತೇ ತದ್ಯತಯೋ ವಿಶಂತಿ ॥ ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸನ್ಯಾಸಯೋಗಾದ್ಯತಯಃ ಶುದ್ಧಸತ್ತ್ವಾಃ । ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ ॥" ಇತಿ ತೈತ್ತಿರೀಯಶಾಖಾಯಾಂ ಶ್ರೂಯತೇ. ಕಾಮಾಸಕ್ತಬ್ರಹ್ಮವಿದ್ಯೋಪಾಸಕಾನಾಂ ಜೀವಭಾವನಿವೃತ್ತಿಪೂರ್ವಕಶಿವಸಾಯುಜ್ಯಫಲಂ? ಉತ ನಿಷ್ಕಾಮಾನಾಮೇವೇತ್ಯತ್ರ ವಿಶಯಃ. ದಹರವಿದ್ಯಾಯಾಂ "ತದ್ಯ ಇಹಾತ್ಮಾನಮನುವಿದ್ಯ ವ್ರಜಂತ್ಯೇತಾಂಶ್ಚ ಸರ್ವಾನ್ ಕಾಮಾನ್" ಇತ್ಯಾದಿಷು ಬ್ರಹ್ಮಜ್ಞಾನಿನಾಮಪಿ ಕಾಮವ್ಯಪದೇಶಾತ್, ಕಾಮಾಭಾವೇ ಬ್ರಹ್ಮವಿದ್ಯಾಯಾಃ ಪ್ರಯೋಜನಾಭಾವಾತ್, ಇಹಲೋಕಭೋಗೇಽಪಿ ಕಾಮಸ್ಯೈವ ಪ್ರಧಾನತ್ವಾತ್, "ಯದೇವ ಜ್ಞಾನಫಲಂ ತದೇವ ಕರ್ಮಫಲಂ" ಇತ್ಯಾದಿಶ್ರುತಿಷು, "ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಇತ್ಯಾದಿಸ್ಮೃತಿಷು ಚ ಬುದ್ಧೇರೇವ ಸರ್ವಫಲಮೂಲತ್ವಾವಗಮಾತ್, ಉದಾಸೀನಸ್ಯ ಅಭ್ಯುದಯಶ್ರೇಯಃಫಲಾದರ್ಶನಾಚ್ಚ ಕಾಮಯುಕ್ತಾನಾಮೇವ ಚತುರ್ವಿಧಮುಕ್ತಿಃ ಸಂಭವತೀತಿ ಪ್ರಾಪ್ತೇಽಭಿಧೀಯತೇ ಪ್ರದಾನವದಿತಿ. ಪ್ರಕರ್ಷೇಣ ದಾನಂ ತ್ಯಾಗಃ ಪ್ರದಾನಂ ತದ್ವತ್ ಶರೀರೇಂದ್ರಿಯಾದಿವಿಶಿಷ್ಟಸ್ಸನ್ ತದಭಿಮಾನತ್ಯಾಗವತ್ ಶರೀರೇಂದ್ರಿಯಾದಿಕಂ ತದಂಗಭೂತದಾರಾದೀಷಣತ್ರಯಂ ಚ ಪರಿಹೃತ್ಯ ಸ್ವಾಭಿಮಾನನಿವರ್ತಕತ್ವೇನ ಶಿವೋತ್ಪನ್ನಮೇತತ್ಸರ್ವಂ ಶಿವೇ ಸಮರ್ಪ್ಯ ನಿರಾಭಾರಭಾವೇನ ಪಾರತಂತ್ರ್ಯಬುದ್ಧ್ಯಾ

ಶರೀರೇಂದ್ರಿಯುಗತಪ್ರಾರಬ್ಧಾನುಭವೋ ಭೋಕ್ತೃತ್ವಃ. ಏವಂ ತದುಕ್ತಂ. " ಯದ್ಯತ್ಪಶ್ಯತಿ ಚಕ್ಷುರ್ಭ್ಯಾಂ ತತ್ತದಾತ್ಮೇತಿ ಭಾವಯೇತ್ । ಜಿಹ್ವಯಾ ಯದ್ರಸಂ ಹ್ಯತ್ತಿ ತತ್ತದಾತ್ಮೇತಿ ಭಾವಯೇತ್ । ಲಭತೇ ನಾಸಯಾ ಯದ್ಯತ್ ತತ್ತದಾತ್ಮೇತಿ ಭಾವಯೇತ್ । ತ್ವಚಾ ಯದ್ಯತ್ ಸ್ಪೃಶೇದ್ಯೋಗೀ ತತ್ತದಾತ್ಮೇತಿ ಭಾವಯೇತ್ ಯದ್ಯತ್ ಶೃಣೋತಿ ಶ್ರೋತ್ರಾಭ್ಯಾಂ ತತ್ತದಾತ್ಮೇತಿ ಭಾವಯೇತ್ । ದೃಷ್ಟಿಂ ಜ್ಞಾನಮಯೀಂ ಕೃತ್ವಾ ಪಶ್ಯೇದ್ಬ್ರಹ್ಮಮಯಂ ಜಗತ್ । ದ್ರಷ್ಟೃದರ್ಶನದೃಶ್ಯಾನಾಂ ವಿರಾಮೋ ಯತ್ರ ವಾ ಭವೇತ್ । ದೃಷ್ಟಿಸ್ತತ್ರೈವ ಕರ್ತವ್ಯಾ ನ ನಾಸಾಗ್ರಾವಲೋಕನೇ । ಯಸ್ಯ ಸ್ತ್ರೀ ತಸ್ಯ ಭೋಗೇಚ್ಛಾ ನಿಸ್ತ್ರೀಕಸ್ಯ ಕ್ವ ಭೋಗಭೂಃ । ಸ್ತ್ರಿಯಂ ತ್ಯಕ್ತ್ವಾ ಜಗತ್ತ್ಯಕ್ತಂ ಜಗತ್ತ್ಯಕ್ತ್ವಾ ಸುಖೀಭವೇತ್ । ಚಿತ್ತಂ ಕರಣಮರ್ಥಾನಾಂ ತಸ್ಮಿನ್ನಸ್ತಿ ಜಗತ್ತ್ರಯಂ । ತಸ್ಮಿನ್ ಕ್ಷೀಣೇ ಜಗತ್ ಕ್ಷೀಣಂ ತಚ್ಚಿಕಿತ್ಸ್ಯಂ ಪ್ರಯತ್ನತಃ । ಸುಪ್ತೋತ್ಥಾಯ ಸುಪ್ತ್ಯಂತಂ ಬ್ರಹ್ಮೈಕ್ಯಂ ಪ್ರತಿಚಿಂತ್ಯತಾಂ । ಗಚ್ಛಂಸ್ತಿಷ್ಠನ್ನುಪವಿಶನ್ ಶಯನೇಽಪ್ಯನ್ಯಥಾಪಿ ವಾ । ಯಥೇಚ್ಛಯಾ ವಸೇದ್ವಿದ್ವಾನ್ ಸ್ವಾತ್ಮಾರಾಮೋ ಮಹಾಮುನಿಃ ॥ ", " ಏಕಾಕೀ ನಿಸ್ಪೃಹಸ್ತಿಷ್ಠೇನ್ನ ಹಿ ಕೇನ ಸಹಾಲಪೇತ್ । ಯತೋ ನಿರ್ವಿಷಯಸ್ಯಾಸ್ಯ ಮನಸೋ ಮುಕ್ತಿರಿಷ್ಯತೇ । ಅತೋ ನಿರ್ವಿಷಯಂ ನಿತ್ಯಂ ಮನಃ ಕಾರ್ಯಂ ಮುಮುಕ್ಷುಭಿಃ । ಚಿತ್ತಮೇವ ಹಿ ಸಂಸಾರಃ ತತ್ಪ್ರಯತ್ನೇನ ಶೋಧಯೇತ್ । ದೃಶ್ಯಂ ಹ್ಯದೃಶ್ಯತಾಂ ನೀತ್ವಾ ಬ್ರಹ್ಮಾಕಾರೇಣ ಚಿಂತಯೇತ್ ॥ " ಇತ್ಯಾದಿಶ್ರುತಿಭಿಃ, " ದೇಹೇಂದ್ರಿಯಾದಿಕಂ ಸರ್ವಂ ಶಿವಾಯ ಪರಮಾತ್ಮನೇ । ದತ್ತ್ವಾ ನಿರಭಿಮಾನೇನ ತತ್ಪ್ರಸಾದೈಕಚೇತನಃ । ವಿಷಯಾಣಿ ಚ ಸರ್ವಾಣಿ ಭೋಕ್ತವ್ಯಂ ಶಿವಯೋಗಿನಾ ॥ ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ । ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥ ತ್ಯಜೇದ್ಧರ್ಮಮಧರ್ಮಂ ಚ ಸ್ತುತಿನಿಂದಾಸಮುಸ್ಥಿತಿಃ । ಉಭೇ ಸತ್ಯಾನೃತೇ ತ್ಯಕ್ತ್ವಾ ಯೇನ ತ್ಯಜಸಿ ತತ್ತ್ಯಜ ॥ " ಇತ್ಯಾದಿಸ್ಮೃತಿಭಿಶ್ಚ ದೇಹೇಂದ್ರಿಯಾಭಿಮಾನನಿರಾಕರಣಪೂರ್ವಕೇಷಣತ್ರಯಪರಿತ್ಯಾಗಲಕ್ಷಣಲಕ್ಷಿತಶಿವಜ್ಞಾನನಿಷ್ಠಾಗರಿಷ್ಠಾ ಏವ ಇಹ ಶರೀರ ಏವ ಜ್ಯೋತಿರ್ಮಯಪರಶಿವಭಾವಂ ವ್ರಜಂತಿ. ಕಿಂಚ " ಶಿವ ಏಕೋ ಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ ", " ನ ಕರ್ಮಣಾ ನ ಪ್ರಜಯಾ " ಇತ್ಯತ್ರ ಶಿವೈಕಧ್ಯಾನನಿಷ್ಠಾಯಾಂ ಈಷಣತ್ರಯಸ್ಯ ಪ್ರತಿಬಂಧಕತ್ವಾತ್ " ಶಿವ ಏಕೋ ಧ್ಯೇಯಃ " ಇತಿ ಶಿವಧ್ಯಾನಮುಕ್ತ್ವಾ ತದನ್ಯಂ ಸರ್ವಂ ಧನಧಾನ್ಯಪುತ್ರ

ಗೇಹಾರಾಮಾದಿಕಂ ಪರಿತ್ಯಜೇತಿ ವಿಧಿರುಪದಿಶ್ಯತೇ. “ ನ ಕರ್ಮಣಾ ” ಇತ್ಯತ್ರ ಕರ್ಮಶಬ್ದೇನಾಹೋರಾತ್ರಾದಿಕಂ. ತನ್ನಿರಾಕರಣೇನ ಭಾರ್ಯಾತ್ಯಾಗಃ ಸಮುಪಾದಿಷ್ಟಃ. “ ನ ಪ್ರಜಯಾ ” ಇತ್ಯತ್ರ ಸಂತಾನಾಸಕ್ತಭ್ರಮೋ ನಿರಸ್ತಃ. “ ಧನೇನ ” ಇತ್ಯನೇನ ವಿತ್ತಭ್ರಮೋ ನಿರಾಕೃತಃ. ಏತೇನ ದಾರೇಷಣಪುತ್ರೇಷಣಧನೇಷಣತ್ಯಾಗಪೂರ್ವಕಂ ಶರೀರೇಂದ್ರಿಯಾದಿಕಂ ಸರ್ವಂ ಶಿವನಿವೇದನಂ ಕರ್ತವ್ಯಮಿತಿ ತಾತ್ಪರ್ಯಾರ್ಥೋ ನಿಶ್ಚೀಯತೇ. ಏವಮೀಷಣತ್ರಯಂ ನಿರಸ್ಯ ಏಕೇನ ತ್ಯಾಗೇನ ಶರೀರೇಂದ್ರಿಯಾದಿಷು ಸರ್ವೇಷು ಮಮತ್ವಭ್ರಾಂತಿತ್ಯಾಗೇನ ಅಮೃತತ್ವಂ ಶಿವಸಾಯುಜ್ಯಂ ಆನಶುಃ ಭಕ್ತಾಃ ಪ್ರಾಪ್ನುವಂತೀತ್ಯರ್ಥಃ. ಏತದುಪದೇಶೇನ ಅಹಂಮಮತ್ವಭ್ರಾಂತಿಲಕ್ಷಣವಿಚ್ಛೇದಃ ಅರ್ಥಾದುಪದಿಶ್ಯತೇ. ಈಷಣತ್ರಯನಿರ್ಮುಕ್ತಾಃ ಕುತ್ರ ಪರಶಿವಂ ಪ್ರಾಪ್ನುವಂತೀತ್ಯಾಕಾಂಕ್ಷಾಯಾಮಾಹ. ಪರೇಣ ಶಿವಜ್ಞಾನೇನ ಗುಹಾಯಾಂ ದಹರಪುಂಡರೀಕೇ ವಿಭ್ರಾಜತ್ ಸ್ವಪ್ರಕಾಶಮಾನಂ ನಾಕಂ ಪರಮಾನಂದಸ್ವರೂಪಂ ಏತತ್ ಸ್ಥಿತಂ ಶಿವಂ ಯತಯಃ ಶಿವತತ್ತ್ವಪ್ರಾಪ್ತಿಪ್ರಯತ್ನಶೀಲಾಃ ಪ್ರಾಪ್ನುವಂತೀತಿ ಭಾವಃ. ಏವಂ ತತ್ರ ಪ್ರಜ್ಞಾಧಿಕಾರಿಲಕ್ಷಣಮುಕ್ತ್ವಾ ತದ್ವನ್ಮಂದಪ್ರಜ್ಞಾಧಿಕಾರಿಲಕ್ಷಣಮಾಹ. “ ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ”, “ ಆತ್ಮಾ ವಾರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯಃ ನಿದಿಧ್ಯಾಸಿತವ್ಯಃ ” ಇತ್ಯಾದಿಶ್ರುತಿವಿಹಿತಯಾವದ್ವೇದಾಂತಷಡ್ವಿಧತಾತ್ಪರ್ಯಲಿಂಗೈಃ ಶ್ರವಣಮನನನಿದಿಧ್ಯಾಸನೇನ ಸುನಿಶ್ಚಿತಾರ್ಥಾಃ ಪತಿಪಶುಪಾಶಾತ್ಮಕತತ್ತ್ವತ್ರಯಾರ್ಥಜ್ಞಾನನಿಷ್ಠಾಸ್ಸಂತಃ ಸಂನ್ಯಾಸಯೋಗಾತ್ ಸಮ್ಯಕ್‌ನ್ಯಾಸಃ ಸಂನ್ಯಾಸಃ ದಹರಾಕ್ಷಿಪುರುಷವಿದ್ಯಾವಿಧಾಯಕತ್ವೇನ ತೈಲಧಾರಾವದನವಚ್ಛಿನ್ನತಯಾ ಚಿತ್ತಂ ಶಿವೈಕಸಂಧಾನಾತ್ಮನಾ ಯೋಗಾತ್ ತದಭ್ಯಾಸಯೋಗಾತ್ ಯತಯಃ ಮೋಕ್ಷಪ್ರಯತ್ನಶೀಲಾಃ ಶುದ್ಧಸತ್ತ್ವಾಃ ರಾಗದ್ವೇಷಾದಿಮಲತ್ರಯನಿರ್ಮುಕ್ತನಿರ್ಮಲಾಂತಃಕರಣಾಃ ತೇ ಭಕ್ತಾಃ ಬ್ರಹ್ಮಲೋಕೇ ಬ್ರಹ್ಮಪರಪರ್ಯಾಯಶಿವಲೋಕೇ ಸ್ಥಿತ್ವಾ ತತ್ರ ಸ್ವೇಷ್ಟಾನುಸಾರೇಣ ಸರ್ವೈಶ್ವರ್ಯಯೋಗಮನುಭೂಯ ತತಃ ಪರಾಂತಕಾಲೇ ತಚ್ಛಿವಲೋಕಭೋಗವಾಸನಾಕ್ಷಯಾವಸಾನೇ ಪರಾಮೃತಾತ್ ಕೈಲಾಸಾತ್ ಸರ್ವೇ ಮುಚ್ಯಂತಿ. ಲಿಂಗಶರೀರಂ ವಿಹಾಯ ಪರಿಪೂರ್ಣಪರಶಿವಸಾಯುಜ್ಯಂ ತತ್ರೈವ ಪ್ರಾಪ್ನುವಂತೀತ್ಯರ್ಥಃ. ತಥಾನ್ಯತ್ರ ದಹರವಿದ್ಯಾಯಾಂ ಶ್ರೂಯತೇ. “ ತದ್ಯ ಇಹಾತ್ಮಾನಮನುವಿದ್ಯ ವ್ರಜಂತ್ಯೇತಾಂಶ್ಚ ಸರ್ವಾನ್ ಕಾಮಾನ್ ” ಇತಿ ಜಗದ್ವಾಸನಾಸಕ್ತಪರಶಿವೋಪಾಸಕಾನಾಂ ಸರ್ವ

ಕಾಮಾವಾಪ್ತಿರ್ದರ್ಶಿತಃ. ತಸ್ಮಾನ್ನಿಷ್ಕಾಮಶಿವೋಪಾಸಕಾನಾಂ ಇಹೈವ ಶಿವತತ್ತ್ವಪ್ರಾಪ್ತಿಃ. ಜಗದ್ವಾಸನಾಯುಕ್ತಭಕ್ತಾಸ್ತಾವತ್ ಕಾಮವಾಸನಯಾ ಶಿವಲೋಕಮನುಪ್ರವಿಶ್ಯ ತತ್ರ ಸರ್ವಾನ್ ಕಾಮಾನನುಭೂಯ ತಲ್ಲೋಕಾದೇವ ಶಿವಸಾಯುಜ್ಯಂ ಪ್ರಾಪ್ನುವಂತೀತಿ ನಿಶ್ಚೀಯತೇ. ಅತಃ ಸಕಾಮನಿಷ್ಕಾಮಾನಾಂ ಭಕ್ತಾನಾಂ ಫಲಭೇದವ್ಯಪದೇಶೇಽಪಿ ಚರಮಸಾಯುಜ್ಯಫಲಸ್ಯೈಕತ್ವಾತ್ ವಿದ್ಯೈಕ್ಯಮುಪದಿಶ್ಯತೇ. ನನು "ಓಮಿತ್ಯೇತದಕ್ಷರಮುದ್ಗೀಥಮುಪಾಸೀತ" ಇತ್ಯಾದೀನಿ ಕರ್ಮಾಶ್ರಯಾಣ್ಯುಪಾಸನಾನಿ ಕರ್ಮಾಂಗತ್ವೇನ ಪ್ರತೀಯಂತೇ. ಕಿಂಚ ಯಥಾ "ಯಸ್ಯ ಪರ್ಣಮಯೀ ಜುಹೂರ್ಭವತೀತಿ ಕರ್ಮಾಂಗಭೂತೋದ್ಗೀಥಾದಿಮುಖೇನ ಜುಹ್ವಾದಿಮುಖೇನ ಪರ್ಣಾದಿತತ್ಕರ್ಮಾಂಗತ್ವೇನ ನಿರೂಢಾನುಷ್ಠಾನಾದುದ್ಗೀಥಾದ್ಯುಪಾಸನಸಂಬಂಧೋ ನಿರ್ದಿಷ್ಟಃ ತಥಾ "ಯ ಏವಂ ವಿದ್ವಾನುದ್ಗಾಯತಿ ಯ ಏವಂ ವಿದ್ವಾನ್ ಸಾಮ ಗಾಯತಿ" ಇತ್ಯಾದಿನಾ ತದುಪಾಸನಾಯ ಕ್ರತುಸಂಬಂಧಿತ್ವಮವಗಮ್ಯತೇ. "ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ" ಇತಿ ವರ್ತಮಾನನಿರ್ದೇಶವರ್ಣಾದಿ ಸಂಬಂಧ್ಯಪಾಪಶ್ಲೋಕಶ್ರವಣವತ್ ಪೃಥಕ್ಫಲತ್ವಕಲ್ಪನಾಯೋಗಾತ್ ಕ್ರತುಷು ನಿಯಮೇನೋಪಸಂಹಾರ್ಯಾಣಿ. ಕರ್ಮಪ್ರಕರಣಪಠಿತತ್ವೇನ ಬ್ರಹ್ಮಪ್ರಾಪ್ತ್ಯಭಾವವ್ಯವಸ್ಥಾಪನೇ "ಸರ್ವೇ ವೇದಾ ಯತ್ಪದಮಾಮನಂತಿ" ಇತ್ಯಾದಿಶ್ರುತಿವಿರೋಧೋ ದುರ್ನಿವಾರ ಇತಿ ಚೇದುಚ್ಯತೇ "ತೇನೋಭೌ ಕುರುತೋ ಯಶ್ಚೈತದೇವಂ ವೇದ ಯಶ್ಚ ನ ವೇದ" ಇತ್ಯವಿದುಷೋಽಪ್ಯನುಷ್ಠಾನವಚನಾತ್ ನಚಾಂಗತ್ವೇ ಸತ್ಯುಪಾಸನಸ್ಯ ಅನುಷ್ಠಾನನಿಯಮ ಉಪಪದ್ಯತೇ. ಏವಮುಪಾಸನಸ್ಯಾಂಗತ್ವೇ ನಿಶ್ಚಿತೇ ಸತಿ ಉಪಾಸನವಿಧೇಃ ಫಲಾಕಾಂಕ್ಷಾಯಾಂ ರಾತ್ರಿಸತ್ರನ್ಯಾಯೇನ ವೀರ್ಯವತ್ತರತ್ವಂ ಕರ್ಮಫಲಾತ್ಪೃಥಗ್ಭೂತಮೇವ ಫಲಮಿತ್ಯವಗಮ್ಯತೇ. ಕಿಮಿದಂ ವೀರ್ಯವತ್ತರತ್ವಂ? ಕರ್ಮಫಲಸ್ಯೈವಾಪ್ರತಿಬಂಧಃ. ಬಧ್ಯತೇ ಹಿ ಕರ್ಮಫಲಂ ಪ್ರಬಲಕರ್ಮಾಂತರಫಲೇನ. ತಾವಂತಂ ಕಾಲಂ ತದಭಾವಃ ಪ್ರತಿಬಂಧಃ. ಕರ್ಮಫಲಾತ್ ಸ್ವರ್ಗಾದಿ ಲಕ್ಷಣಾತ್ ಪೃಥಗ್ಭೂತಮೇವ ಫಲಂ ತದಿದಮುಚ್ಯತೇ. ಪರಮೇಶ್ವರಾರ್ಪಿತಫಲಸ್ಯ ಚಿತ್ತಶುದ್ಧಿದ್ವಾರಾ ಮೋಕ್ಷೈಕಫಲತ್ವಮವಗಮ್ಯತೇ. "ಯದೇವ ಜ್ಞಾನಫಲಂ ತದೇವ ಕರ್ಮಫಲಂ" ಇತಿ ಶ್ರುತೇಃ. ತಸ್ಮಾತ್ ಶುದ್ಧಾಂತಃಕರಣಸ್ಯ ಕಾಮ್ಯವಾಸನಾನಿರ್ಮುಕ್ತಸ್ಯ ಶಿವೈಕ ನಿಷ್ಠಸ್ಯ ಕರ್ಮಾಣಿ ಶಿವಾನುಗ್ರಹದ್ವಾರಾ ಶಿವಪ್ರಾಪ್ತಿಕರಾಣಿ. ಮಲಿ

**ನಾಂತಃಕರಣಪ್ರಕೃತಪರಮೇಶ್ವರಾರ್ಪಿತಕರ್ಮಣಾಂ ದುರಿತನಿವೃತ್ತಿ ದ್ವಾರಾ ಪರಂಪರಯಾ ಬ್ರಹ್ಮಪ್ರಾಪ್ತಿಕರತ್ವಂ ಇತಿ ನಿಶ್ಚೀಯತೇ. ಅತಃ ಋಜುಕುಟಿಲಮಾರ್ಗೇಣ ಸರ್ವಾಸಾಂ ವಿದ್ಯಾನಾಂ ಬ್ರಹ್ಮಪ್ರಾಪ್ತಿಪರತ್ವ ಮವಿರೋಧಂ.**

"ಬ್ರಹ್ಮವನ್ನು ತಿಳಿದವನು ಆ ಬ್ರಹ್ಮವನ್ನೇ ಹೊಂದುತ್ತಾನೆ" ಎಂಬ ವಾಕ್ಯವು ಸಾಯುಜ್ಯಮುಕ್ತಿಯನ್ನು ತಿಳಿಸುತ್ತದೆ. "ಅವನು ಬ್ರಹ್ಮದೊಡನೆ ಎಲ್ಲಾ ಕಾಮ ಗಳನ್ನು ಹೊಂದುತ್ತಾನೆ" ಎಂಬ ವಾಕ್ಯವು ಜೀವನ್ಮುಕ್ತಿಯನ್ನೋ ಅಥವಾ ತ್ರಿವಿಧ ಮುಕ್ತಿಯನ್ನೋ ತಿಳಿಸುತ್ತದೆ. ಆದ್ದರಿಂದ ಯಾರಿಗೆ ಸಾಯುಜ್ಯಮುಕ್ತಿ ದೊರಕುತ್ತದೆ? ಯಾರಿಗೆ ಸಾಲೋಕ್ಯ ಮೊದಲಾದ ಮೂರುಬಗೆಯ ಮುಕ್ತಿಗಳು ದೊರಕುತ್ತವೆ ಎಂದಾ ಶಂಕಿಸಿ ವಿವೇಚನೆ ಮಾಡುತ್ತಾನೆ. "ಕರ್ಮದಿಂದಲೂ ಸಂತಾನದಿಂದಲೂ ಹಣ ಅಮೃತದೊರಕುವುದಿಲ್ಲ; ಆದರೆ ತ್ಯಾಗ ಒಂದರಿಂದಲೇ ಅದು ದೊರೆಯುತ್ತದೆ. ಸ್ವರ್ಗದಿಂದಾಚೆಗೆ ವ್ಯಾಪಿಸಿರುವ ತೇಜಸ್ಸು ಈ ಎದೆ ಗುಹೆಯಲ್ಲಿಯೇ ಶೋಭಿಸುತ್ತಿದೆ. ಇದರಲ್ಲಿ ಯತಿಗಳು ಪ್ರವೇಶಿಸುತ್ತಾರೆ. ವೇದಾಂತವಿಜ್ಞಾನದಿಂದ ಯಥಾರ್ಥಸ್ಥಿತಿ ಯನ್ನು ತಿಳಿದು ಶುದ್ಧರಾದ ಯತಿಗಳು ಬ್ರಹ್ಮಲೋಕದಲ್ಲಿ ಎಲ್ಲಾ ಬಗೆಯ ದುಃಖ ದಿಂದಲೂ ಪಾರಾಗುತ್ತಾರೆ" ಎಂದು ತೈತ್ತಿರೀಯದಲ್ಲಿ ಹೇಳಿದೆ. ಕಾಮಾಸಕ್ತರಾಗಿದ್ದು ಬ್ರಹ್ಮವಿದ್ಯೆಯನ್ನು ಉಪಾಸನಮಾಡುವವರಿಗೆ ಸ್ವಾಭಾವಿಕವಾದ ಜೀವಭಾವ ತೊಲಗಿ ಶಿವಸಾಯುಜ್ಯ ದೊರಕುತ್ತದೆಯೆ? ಅಥವಾ ನಿಷ್ಕಾಮಭಕ್ತರಿಗೆ ಮಾತ್ರವೇ ದೊರಕು ವುದೆ? ಎಂಬ ಸಂಶಯ ಇಲ್ಲಿ ತೋರುತ್ತದೆ. ಶ್ರುತಿಯಲ್ಲಿ ಬ್ರಹ್ಮಜ್ಞಾನಿಗಳಿಗೂ ಆಶೆಯುಂಟೆಂದು ಹೇಳಿದೆ. ಆಶೆ ಇಲ್ಲದಿದ್ದರೆ ಬ್ರಹ್ಮವಿದ್ಯೆಯೇ ನಿಷ್ಫಲವಾದೀತು. ಐಹಿಕಭೋಗಕ್ಕೂ ಸಹ ಕಾಮವೇ ಪ್ರಧಾನವೆನಿಸಿದೆ. ಜ್ಞಾನಕ್ಕೆ ಯಾವುದು ಫಲವೋ ಕರ್ಮಕ್ಕೂ ಅದೇ ಫಲವೆಂದು ಶ್ರುತಿಯಲ್ಲೂ, ಮನಸ್ಸೇ ಬಂಧಮೋಕ್ಷಗಳೆರಡಕ್ಕೂ ಕಾರ ಣವೆಂದು ಸ್ಮೃತಿಗಳಲ್ಲೂ ಹೇಳಿರುವುದರಿಂದ ಬುದ್ಧಿಯೇ ಎಲ್ಲಾ ಫಲಗಳಿಗೂ ಮೂಲ ವೆಂದು ತಿಳಿದುಬರುತ್ತದೆ. ಉದಾಸೀನನಿಗೆ ಶ್ರೇಯೋಽಭ್ಯುದಯಗಳೆಂಬ ಫಲವೇ ದೊರಕುವುದಿಲ್ಲ. ಆದ್ದರಿಂದ ಕಾಮವುಳ್ಳವರಿಗೇ ನಾಲ್ಕು ಬಗೆಯ ಮುಕ್ತಿಗಳೂ ಸಂಭ ವಿಸುತ್ತವೆ ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸೂತ್ರದಲ್ಲಿ ಸಮಾಧಾನವನ್ನು ತಿಳಿಸ ಲಾಗಿದೆ. ಶರೀರೇಂದ್ರಿಯಗಳಮೇಲಿನ ಅಭಿಮಾನವನ್ನು ತೊರೆಯುವುದೇ ಸರ್ವೋ ತ್ಕೃಷ್ಟವಾದ ತ್ಯಾಗವೆನಿಸುತ್ತದೆ. ಹೀಗೆಯೇ ಹೆಂಡತಿಮಕ್ಕಳ ಮೇಲಿನ ಆಶೆಯನ್ನು ತೊರೆದು ತನ್ನ ಮೇಲಿನ ಅಭಿಮಾನವನ್ನು ತೊರೆದು ಭಕ್ತನು ಶಿವನಿಂದ ಬಂದಿದ್ದು ಅವನೊಡವೆ ಎನಿಸಿದ ಈ ಭೋಗವೆಲ್ಲವನ್ನೂ ಶಿವನಿಗೆ ಭಕ್ತಿಯಿಂದ ಸಲ್ಲಿಸುತ್ತ ತನಗೆ ಯಾವ ಹೊರೆಯೂ ಇಲ್ಲವೆಂದು ಭಾವಿಸಿ ತನ್ನನ್ನು ಪರಮಾತ್ಮನಿಗೆ ಪೂರ್ಣವಾಗಿ ವಶಪಡಿಸಿ ಶರೀರೇಂದ್ರಿಯಗಳಿಂದ ಆಗಾಗ್ಗೆ ಬರುವ ಸುಖದುಃಖಗಳನ್ನು ಮೌನ ದಿಂದ ಅನುಭವಿಸುತ್ತಿರಬೇಕು. "ಕಣ್ಣಿನಿಂದ ನೋಡಿದ್ದೆಲ್ಲವನ್ನು ಯೋಗಿಯು ಶಿವ

ನೆಂದೇ ಭಾವಿಸಬೇಕು. ಹಾಗೆಯೇ ನಾಲಿಗೆಯಿಂದ ರುಚಿಸಿದ್ದೆಲ್ಲವನ್ನು, ಮೂಗಿನಿಂದ ಮೂಸಿಸಿದ್ದೆಲ್ಲವನ್ನು, ಚರ್ಮದಿಂದ ಮುಟ್ಟಿದ್ದೆಲ್ಲವನ್ನು, ಕಿವಿಯಿಂದ ಕೇಳಿದ್ದೆಲ್ಲವನ್ನು ಶಿವನೆಂದೇ ಭಾವಿಸಬೇಕು. ನೋಡುವ ನೋಟವನ್ನು ಜ್ಞಾನಮಯವೆಂದು ಮಾರ್ಪಡಿಸಿ ಜಗತ್ತನ್ನು ಶಿವಮಯವೆಂದೇ ಕಾಣಬೇಕು. ನೋಡುವವನು, ನೋಟ, ದೃಶ್ಯವಸ್ತು ಈ ಮೂರು ಒಂದಾಗುವುದನ್ನೇ ಸಾಧಾಕನು ಗಮನಿಸಬೇಕು. ಯಾವನಿಗೆ ಸ್ತ್ರೀ ಇರುವಳೋ ಅವನಿಗೆ ಮಾತ್ರವೇ ಭೋಗದ ಇಚ್ಛೆ ಇರುತ್ತದೆ. ಸ್ತ್ರೀಯೇ ಇಲ್ಲದವನಿಗೆ ಭೋಗಾಸಕ್ತಿ ಹೇಗೆ ಬೆಳೆದೀತು? ಸ್ತ್ರೀ ಎಂಬ ಅಭಿಮಾನವನ್ನು ಬಿಟ್ಟವನು ಜಗದಭಿಮಾನವನ್ನು ತೊರೆದು ಸುಖಿಯಾಗುವನು. ಚಿತ್ತವೇ ಎಲ್ಲಕ್ಕೂ ಕಾರಣವೆನಿಸಿದೆ. ಅದರಲ್ಲಿಯೇ ಮೂರುಲೋಕಗಳು ನೆಲಸಿವೆ. ಅದು ನಿಶ್ಚಲವಾದರೆ ಎಲ್ಲವೂ ಶಾಂತವಾಗುತ್ತದೆ. ಅದಕ್ಕಾಗಿ ಪ್ರಯತ್ನಪಡಬೇಕು. ಎದ್ದಮೇಲೆ ಮತ್ತೆ ಮಲಗುವವರೆಗೂ ಬ್ರಹ್ಮಒಂದನ್ನೇ ಚಿಂತಿಸಬೇಕು. ತಿರುಗಾಡುವಾಗ ನಿಂತಾಗ ಕುಳಿತಾಗ ಮಲಗಿದ್ದಾಗ ಮತ್ತೆ ಬೇರೆ ಕಾಲಗಳಲ್ಲೂ ಶಿವಯೋಗಿಯು ಆತ್ಮರಾಮನೂ ಸ್ವತಂತ್ರನೂ ಆಗಿ ನೆಲಸುವನು. ಸಾಧಕನು ಭ್ರೂಮಧ್ಯದಲ್ಲಿ ಯಾವಾಗಲೂ ಜ್ಯೋತಿರ್ಲಿಂಗವನ್ನು ಭಾವಿಸುತ್ತ ನಿಸ್ಪೃಹನಾಗಿ ಯಾರೊಡನೆಯೂ ಮಾತನಾಡದೆ ಏಕಾಂಗಿಯಾಗಿರಬೇಕು. ಮನಸ್ಸಿನಲ್ಲಿ ಏನೊಂದುವಿಷಯವೂ ಇಲ್ಲದಿರುವುದೇ ಮುಕ್ತಿ ಎನಿಸುತ್ತದೆ. ಆದ್ದರಿಂದ ಮನಸ್ಸು ಮೊದಲು ನಿರ್ವಿಷಯವಾಗಬೇಕು. ಚಿತ್ತವೇ ಸಂಸಾರವೆನಿಸಿದೆ. ಅದನ್ನು ಅಭ್ಯಾಸದಿಂದ ಶೋಧಿಸಬೇಕು. ಎದುರಿಗಿರುವ ದೃಶ್ಯವಸ್ತುಗಳನ್ನು ಅದೃಶ್ಯಗಳೆಂದು ಭಾವಿಸಿ ಬ್ರಹ್ಮಭಾವದಿಂದ ನೋಡಬೇಕು" ಎಂದು ಶ್ರುತಿಗಳಲ್ಲಿ ದೇಹೇಂದ್ರಿಯಗಳೆಲ್ಲವನ್ನು ಪರಶಿವನಿಗರ್ಪಿಸಿ ನಿರಭಿಮಾನದಿಂದ ಎಲ್ಲಾ ವಿಷಯಗಳನ್ನು ಶಿವಪ್ರಸಾದವೆಂದು ಶಿವಯೋಗಿಯು ಭೋಗಿಸಬೇಕೆಂದು ಹೇಳಿದೆ. "ಎಲ್ಲವನ್ನು ತೊರೆದು ಈಶ್ವರನೊಬ್ಬನಿಗೆ ಶರಣಾಗು ; ಅವನೇ ನಿನ್ನನ್ನು ಎಲ್ಲಾ ದುಃಖಗಳಿಂದಲೂ ಬಿಡಿಸುವನು. ಸಮದೃಷ್ಟಿಯಿಂದ ಧರ್ಮ ಅಧರ್ಮ, ಸತ್ಯ ಅನೃತಗಳೆರಡನ್ನೂ ಕ್ರಮವಾಗಿ ತೊರೆಯಬೇಕು. ಹಾಗೆಯೇ ಯಾವ ಜ್ಞಾನದಿಂದ ಈ ದ್ವಂದ್ವಗಳನ್ನು ತೊರೆಯುವೆಯೋ ಕೊನೆಗೆ ಅದನ್ನೂ ತೊರೆಯಬೇಕು"ಎಂದು ಸ್ಮೃತಿಗಳಲ್ಲೂ ದೇಹೇಂದ್ರಿಯಾಭಿಮಾನವನ್ನೂ ಮೂರಬಗೆಯ ಆಶೆಗಳನ್ನೂ ತೊರೆದು ಶಿವಜ್ಞಾನದಲ್ಲಿ ನಿಷ್ಠೆಯಿಂದ ನಿರತರಾದವರು ಇಲ್ಲಿಯೇ ಈ ಶರೀರದಲ್ಲಿಯೇ ಜ್ಯೋತಿರ್ಮಯವಾದ ಪರಶಿವನನ್ನು ಹೊಂದುತ್ತಾರೆ ಎಂಬುದು ಸ್ಪಷ್ಟವಾಗಿದೆ. "ಶಿವನೊಬ್ಬನನ್ನೇ ಧ್ಯಾನಿಸಬೇಕು" ಎಂಬ ಮಂತ್ರದಲ್ಲಿ ಶಿವೈಕಧ್ಯಾನದಲ್ಲಿ ಆಸಕ್ತಿ ಬೆಳೆದಂತೆಲ್ಲಾ ಪುತ್ರದಾರವಿತ್ತೇಷಣಗಳು ತೊಲಗುತ್ತಬರುವುದರಿಂದ ಸಾಧಕನು ಶಿವನಿಗಿಂತ ಬೇರೆಯಾದ ಧನಧಾನ್ಯ ಪಶುಗೃಹಾರಾಮಗಳಲ್ಲಿ ಅಭಿಮಾನಿಸದೆ ಶಿವನೊಬ್ಬನನ್ನೇ ಧ್ಯಾನಿಸುತ್ತಿರಬೇಕೆಂದು ವಿಧಿಸಲಾಗಿದೆ. "ನ ಕರ್ಮಣಾ" ಎಂಬ ಮಂತ್ರದಲ್ಲ ಕರ್ಮವೆಂದರೆ ಅಗ್ನಿಹೋತ್ರ ಮೊದಲಾದ ಕರ್ಮಗಳೆಂದು ತಿಳಿಯಬೇಕು. ಅವುಗಳನ್ನು ತೊರೆಯಬೇಕೆಂದು ಅಲ್ಲಿ ಹೇಳಿದ್ದ

ಳಿಂದ ಭಾರ್ಯಾತ್ಯಾಗವನ್ನು ಹೇಳಿದಂತಾಯಿತು. "ನ ಪ್ರಜಯಾ" ಎಂಬಲ್ಲಿ ಸಂತಾನಾಸಕ್ತಿಯೂ, "ನ ಧನೇನ" ಎಂಬಲ್ಲಿ ಧನಾಭಿಮಾನವೂ ತೊಲಗುತ್ತವೆ. ಇದರಿಂದ ದಾರೇಷಣ, ಪುತ್ರೇಷಣ ಮತ್ತು ಧನೇಷಣಗಳನ್ನು ತೊರೆದು ಶರೀರೇಂದ್ರಿಯಗಳೆಲ್ಲವನ್ನೂ ಶಿವನಿಗೇ ಒಪ್ಪಿಸಬೇಕೆಂಬುದು ಪ್ರತಿಯೊಬ್ಬನ ಕರ್ತವ್ಯವೆಂದು ಸಿದ್ಧವಾಯಿತು. ಹೀಗೆ ಈಷಣತ್ರಯವನ್ನು ತೊರೆಯುವುದರಿಂದ ಶರೀರೇಂದ್ರಿಯಗಳಲ್ಲಿ ನನ್ನದೆಂಬ ಅಭಿಮಾನವು ತೊಲಗುವುದು. ಇದರಿಂದಲೇ ಶಿವಸಾಯುಜ್ಯವೆಂಬ ಅಮೃತಸ್ಥಿತಿಯನ್ನು ಭಕ್ತರು ಪಡೆಯುತ್ತಾರೆ. ಹೀಗೆ ಹೇಳಿದ್ದರಿಂದ ನಾನು ನನ್ನದು ಎಂಬ ಭ್ರಾಂತಿ ತೊಲಗುವುದೆಂಬುದು ಸ್ಪಷ್ಟವಾಯಿತು. ಹೀಗೆ ಈಷಣತ್ರಯವನ್ನು ತೊರೆದವರು ಎಲ್ಲಿ ಪರಶಿವನನ್ನು ಹೊಂದುತ್ತಾರೆ? ಎಂದು ಆಕ್ಷೇಪಬಂದರೆ ಸಮಾಧಾನವನ್ನು ಅಲ್ಲಿಯೇ ಹೇಳಿದೆ. ಪರೇಣ=ಶಿವಜ್ಞಾನದಿಂದ, ಗುಹಾಯಾಂ=ದಹರಕಮಲದಲ್ಲಿ, ವಿಭ್ರಾಜತ್=ಶೋಭಿಸುತ್ತಿರುವ ಸಾಕಾರಪರಮಾನಂದಸ್ವರೂಪನಾದ ತತ್=ಆ ಶಿವನನ್ನು ಅದಕ್ಕಾಗಿಯೇ ಶ್ರದ್ಧೆಯಿಂದ ಯತ್ನಿಸುವ ಸಾಧಕರೆಲ್ಲರೂ ಪಡೆಯುತ್ತಾರೆ. ಹೀಗೆ ಉತ್ತಮಾಧಿಕಾರಿಗಳ ಸ್ವರೂಪವನ್ನು ತಿಳಿಸಿ ಮಂದಾಧಿಕಾರಿಗಳ ಸ್ವರೂಪವನ್ನು "ವೇದಾಂತವಿಜ್ಞಾನ ಸುನಿಶ್ಚಿತಾರ್ಥಾಃ" ಎಂಬಲ್ಲಿ ತಿಳಿಸಲಾಗಿದೆ. "ಆತ್ಮನನ್ನು ಕೇಳಿ ತಿಳಿದು ಭಾವಿಸುತ್ತ ಕಾಣಬೇಕು" ಎಂದು ಮುಂತಾದ ಶ್ರುತಿಗಳಲ್ಲಿ ಹೇಳಿರುವ ಆರುಬಗೆಯ ತಾತ್ಪರ್ಯಗಳಿಂದ ಶ್ರವಣ ಮನನ ನಿದಿಧ್ಯಾಸಗಳಿಂದ ಪಶು ಪತಿ ಪಾಶ ಎಂಬ ಮೂರುತತ್ತ್ವಗಳ ಸ್ವರೂಪವನ್ನು ನಿಶ್ಚಯಿಸಿದ ಸಾಧಕರು ಸನ್ಯಾಸಯೋಗದಿಂದ ದಹರ ಅಕ್ಷಿಪುರುಷ ವಿದ್ಯೆಗಳಲ್ಲಿ ಹೇಳಿದರೀತಿಯಲ್ಲಿ ತೈಲಧಾರೆಯಂತೆ ನಿರಾತಂಕವಾಗಿ ಚಿತ್ತವನ್ನು ಶಿವನೊಬ್ಬನ ಅನುಸಂಧಾನದಲ್ಲಿಯೇ ನೆಲೆಸುತ್ತ ಶುದ್ಧಸತ್ತ್ವಾಃ=ರಾಗದ್ವೇಷಗಳಿಂದಲೂ ಮಲತ್ರಯದಿಂದಲೂದೂರವಾಗಿ ನಿರ್ಮಲವಾದ ಅಂತಃಕರಣದಿಂದ ಕೂಡಿದವರು, ಬ್ರಹ್ಮಲೋಕೇ=ಪರಬ್ರಹ್ಮವೆನಿಸಿದ ಕೈಲಾಸದಲ್ಲಿ ತಮ್ಮ ಇಚ್ಛಾನುಸಾರವಾಗಿ ಸಕಲೈಶ್ವರ್ಯವನ್ನು ಅನುಭವಿಸಿ ಆ ಶಿವಲೋಕದ ಭೋಗವಾಸನೆ ಮುಗಿದ ಮೇಲೆ ಆ ಕೈಲಾಸದಿಂದಲೇ ಪರಿಮುಚ್ಯಂತಿ=ಲಿಂಗಶರೀರವನ್ನು ತೊರೆದು ಪರಿಪೂರ್ಣವಾದ ಶಿವಸಾಯುಜ್ಯವನ್ನು ಅಲ್ಲಿಯೇ ಹೊಂದುತ್ತಾರೆ. ಹೀಗೆಯೇ ಮಂದಾಧಿಕಾರಿಗಳು ಶಿವನ ಅನುಸಂಧಾನದಿಂದ ನಿರ್ಮಲರಾಗಿ ಕೈಲಾಸದಲ್ಲಿ ಲಿಂಗಶರೀರದೊಡನೆ ಕಲ್ಯಾಣವಿಭೂತಿಯನ್ನು ಅನುಭವಿಸಿ ಕೊನೆಗೆ ಆ ಶರೀರವನ್ನು ಕಳೆದುಕೊಂಡು ಕೈವಲ್ಯವಿಭೂತಿ ಎಂಬ ಸಾಯುಜ್ಯಮುಕ್ತಿಯನ್ನು ಪಡೆಯುವರೆಂದು ಬೇರೆಕಡೆಯಲ್ಲೂ ದಹರವಿದ್ಯೆಯಲ್ಲಿ ಹೇಳಲಾಗಿದೆ. "ಆತ್ಮನನ್ನು ಇಲ್ಲಿಯೆ ತಿಳಿದು ಹೋಗುವವರು ಎಲ್ಲಾ ಕಾಮಗಳನ್ನು ಪಡೆಯುತ್ತಾರೆ" ಎಂಬ ಶ್ರುತಿಯಲ್ಲಿ ಜಗದ್ವಾಸನೆಯಿಂದ ಕೂಡಿದ ಶಿವೋಪಾಸಕರು ಎಲ್ಲಾ ಇಷ್ಟಾರ್ಥಗಳನ್ನು ಇಲ್ಲಿಯೇ ಪಡೆಯುವರೆಂದು ಹೇಳಲಾಗಿದೆ. ಆದ್ದರಿಂದ ನಿಷ್ಕಾಮಭಾವದಿಂದ ಶಿವನನ್ನು ಉಪಾಸನಮಾಡುವ

ವರಿಗೆ ಇಲ್ಲಿಯೇ ಶಿವಭಾವ ಬರುತ್ತದೆ ಎಂದು ಸಿದ್ಧವಾಯಿತು. ಆದರೆ ಜಗದ್ವಾಸನೆಯುಳ್ಳವರು ಕಾಮವಾಸನೆಯಿಂದ ಶಿವಲೋಕವನ್ನು ಪ್ರವೇಶಿಸಿ ಅಲ್ಲಿ ಎಲ್ಲಾ ಕಾಮಗಳನ್ನೂ ಅನುಭವಿಸಿ ಆ ಲೋಕದಿಂದಲೇ ಶಿವಾಸಾಯುಜ್ಯವನ್ನು ಹೊಂದುವರೆಂದು ನಿಶ್ಚಯಿಸಲಾಗಿದೆ. ಹೀಗೆ ಸಕಾಮ ಮತ್ತು ನಿಷ್ಕಾಮಭಕ್ತರಿಗೆ ಫಲಭೇದವನ್ನು ಹೇಳಿದ್ದರೂ ಕೊನೆಗೆ ಬರುವ ಸಾಯುಜ್ಯವೆಂಬ ಫಲವು ಒಂದೇ ಆದ್ದರಿಂದ ವಿದ್ಯೆಗಳಲ್ಲಿ ಐಕ್ಯವು ಸಂಭವಿಸುತ್ತದೆ. "ಉದ್ಗೀಥವಿದ್ಯೆಯಲ್ಲಿ ಬರುವ ಓಂ ಎಂಬ ಅಕ್ಷರವನ್ನು ಉಪಾಸನಮಾಡು" ಎಂಬಲ್ಲಿ ಕರ್ಮಕ್ಕಾಶ್ರಯವಾದ ಉಪಾಸನಗಳು ಕರ್ಮಕ್ಕೆ ಅಂಗವೆಂದು ತಿಳಿದುಬರುತ್ತವೆ. "ಯಾವನ ಹೋಮಪಾತ್ರೆಯು ಎಲೆಯಿಂದ ಮಾಡಿದ್ದಾಗಿರುವುದೋ" ಎಂಬುದನ್ನು ಒಂದುಕರ್ಮದ ಅಂಗವಾಗಿ ಹೇಳಿರುವಂತೆ ಇಲ್ಲಿಯೂ ಬ್ರಹ್ಮೋಪಾಸನದ ಅಂಗವಾದ ಉದ್ಗೀಥಾದಿಗಳಲ್ಲಿ ಹೋಮದ್ರವ್ಯದ ಸಂಬಂಧವಿರುವುದರಿಂದ ಈ ಉದ್ಗೀಥೋಪಾಸನವೂ ಕರ್ಮದ ಅಂಗವೇ ಆಗಿದೆ. "ಇದನ್ನು ಈ ರೀತಿಯಲ್ಲಿ ತಿಳಿದು ಸಾಮವನ್ನು ಗಾನಮಾಡುತ್ತಾನೆ" ಈ ಬಗೆಯ ವಾಕ್ಯಗಳಿಂದಲೂ ಈ ಉಪಾಸನವು ಯಜ್ಞಕ್ಕೆ ಸಂಬಂಧಿಸಿರುವುದಾಗಿ ತಿಳಿದುಬರುತ್ತದೆ. "ಯಸ್ಯ ಪರ್ಣಮಯೀ ಜುಹೂಃ" ಎಂಬಲ್ಲಿ ಪರ್ಣಮಯವಾದ ಹೋಮಪಾತ್ರೆಯನ್ನು ಇಟ್ಟುಕೊಂಡಿದ್ದಕ್ಕೆ "ಕೆಟ್ಟಮಾತನ್ನು ಕೇಳದಿರುವಿಕೆಯೇ" ಫಲವೆಂದು ಪ್ರತ್ಯೇಕವಾಗಿ ಹೇಳಿರುವಂತೆ, ಉದ್ಗೀಥೋಪಾಸನಕ್ಕೆ ಪ್ರತ್ಯೇಕವಾಗಿ ಫಲವನ್ನು ಹೇಳದೆ "ಕರ್ಮವು ಈ ಉಪಾಸನೆಯಿಂದ ವೀರ್ಯವತ್ತರವಾಗುವುದು" ಎಂದು ಕರ್ಮಫಲವನ್ನೇ ಉದ್ಗೀಥೋಪಾಸನದ ಫಲವೆಂದು ಹೇಳಿರುವುದರಿಂದ ಇದು ಕರ್ಮಾಂಗವೇ ಆಗುತ್ತದೆ. ಹೀಗೆ ಕರ್ಮಪ್ರಕರಣದಲ್ಲಿ ಹೇಳಿರುವುದರಿಂದ ಈ ಉದ್ಗೀಥೋಪಾಸನದಿಂದ ಮುಕ್ತನಿಗೆ ಬ್ರಹ್ಮಪ್ರಾಪ್ತಿ ಎಂಬ ಫಲ ದೊರಕುವುದಿಲ್ಲವೆಂದು ಹೇಳುವುದಾದರೆ "ಎಲ್ಲಾ ವೇದಗಳು ಯಾವ ಸ್ಥಾನವನ್ನು ತಿಳಿಸುತ್ತವೆಯೋ" ಎಂಬ ಶ್ರುತಿಯ ವಿರೋಧವು ಅನಿವಾರ್ಯವಾಗಿ ಸಂಭವಿಸುತ್ತದೆ. ಹೀಗೆ ಪೂರ್ವಪಕ್ಷ ಬಂದರೆ ಅದಕ್ಕೆ ಸಮಾಧಾನವನ್ನು ತಿಳಿಸಲಾಗಿದೆ. "ಹೀಗೆ ತಿಳಿದವನು ಮತ್ತು ತಿಳಿಯದವನು ಇಬ್ಬರೂ ಇದನ್ನು ಮಾಡುತ್ತಾರೆ" ಎಂದು ವಿದ್ವಾಂಸ ಮತ್ತು ಅವಿದ್ವಾಂಸ ಇಬ್ಬರಿಗೂ ಇದನ್ನು ವಿಧಿಸಿರುವುದರಿಂದ ಈ ಉದ್ಗೀಥೋಪಾಸನವು ಕರ್ಮಾಂಗವೇ ಆಗಿದೆ ಎಂಬುದು ನಿಯತವಲ್ಲ. ಒಬ್ಬನಿಗೆ ಇದು ಕರ್ಮವೆನಿಸಿದರೂ ಇದಕ್ಕೆ ಫಲವೇನೆಂಬ ಸಂಶಯ ಬಂದರೆ ಅರ್ಥವಾದದ ವಾಕ್ಯದಲ್ಲಿ ಹೇಳಿರುವ ಫಲವೇ ಕರ್ಮಕ್ಕೂ ಫಲವಾಗುವುದು ಎಂದು ತಿಳಿಸುವ ರಾತ್ರಿಸತ್ರನ್ಯಾಯದಂತೆ ಕರ್ಮವನ್ನು ವೀರ್ಯವತ್ತರವನ್ನಾಗಿ ಮಾಡುವುದೇ ಈ ವಿದ್ಯೆಯ ಫಲವಾಗಿರುವುದರಿಂದ ಕರ್ಮದ ಫಲವೇ ಇದರ ಫಲವೆನಿಸುವುದಿಲ್ಲ. ಉಪಾಸನದಿಂದ ಕರ್ಮ ವೀರ್ಯವತ್ತರವಾಗುವುದೆಂದು ಹೇಳಿದರೆ ಅರ್ಥವೇನು? ಎಂದು ಕೇಳಿದರೆ ಕರ್ಮದ ಫಲಕ್ಕೆ ಯಾವ ತಡೆಯೂ ಇಲ್ಲವೆಂಬುದೇ ಅದರ ಅರ್ಥವಾ

ಗುತ್ತದೆ. ಒಂದು ಕರ್ಮದ ಫಲವನ್ನು ಅನುಭವಿಸುವುದಕ್ಕೆ ಮೊದಲು ಪ್ರಬಲವಾದ ಮತ್ತೊಂದು ಕರ್ಮವು ದೊರೆತಾಗ ಮೊದಲನೆಯ ಕರ್ಮಕ್ಕೆ ತಡೆಯುಂಟಾಗುವುದು ಸಹಜ. ಇಲ್ಲಿ ಆ ರೀತಿಯಲ್ಲಿ ಯಾವ ತಡೆಯೂ ಉಂಟಾಗುವ ಸಂಭವವಿಲ್ಲವೆಂದು ತಿಳಿಸುವುದೇ "ವೀರ್ಯವತ್ತರ" ವೆಂದು ಹೇಳಿದುದರ ಅರ್ಥವಾಗುವುದು. ಹೀಗೆ ಕರ್ಮದ ಫಲವಾದ ಸ್ವರ್ಗಕಿಂತಲೂ ಈ ಉದ್ಗೀಥವಿದ್ಯೆಗೆ ಬೇರೆ ಫಲವಿರುವುದರಿಂದ ಇದು ಕರ್ಮಾಂಗವಲ್ಲ. ಈಶ್ವರಾರ್ಪಣದೃಷ್ಟಿಯಿಂದ ಮಾಡಿದ ಕರ್ಮವೆಲ್ಲಕ್ಕೂ ಚಿತ್ತ ಶುದ್ಧಿಯ ಮೂಲಕ ಮೋಕ್ಷವೇ ಫಲವೆಂಬುದು ತಿಳಿದುಬರುತ್ತದೆ. ಜ್ಞಾನಕ್ಕೆ ಯಾವುದು ಫಲವೋ ಅದೇ ಕರ್ಮಕ್ಕೂ ಫಲವಾಗುವುದೆಂದು ಶ್ರುತಿಯೂ ಹೇಳಿದೆ. ಆದ್ದರಿಂದ ಶುದ್ಧವಾದ ಅಂತಃಕರಣದಿಂದಲೂ ಕಾಮವಾಸನೆಯಿಲ್ಲದೆಯೂ ಶಿವೈಕನಿಷ್ಠೆ ಯಿಂದ ಮಾಡುವ ಕರ್ಮಗಳಿಗೆ ಶಿವಾನುಗ್ರಹದ ಮೂಲಕ ಶಿವಪ್ರಾಪ್ತಿಯೇ ಫಲವೆ ನಿಸುತ್ತದೆ. ಹಾಗೆಯೇ ಚಿತ್ತಶುದ್ಧಿ ಇಲ್ಲದವನು ಈಶ್ವರಾರ್ಪಣಬುದ್ಧಿಯಿಂದ ಮಾಡಿದ ಕರ್ಮಗಳಿಗೆ ಪಾಪನಿವೃತ್ತಿಯ ಮೂಲಕ ಪರಂಪರೆಯಿಂದ ಬ್ರಹ್ಮಪ್ರಾಪ್ತಿ ಯೇ ಫಲವಾಗುವುದೆಂದು ನಿಶ್ಚಿತವಾಗುತ್ತದೆ. ಆದ್ದರಿಂದ ಎಲ್ಲಾ ವಿದ್ಯೆಗಳೂ ನೇರವಾಗಿಯೋ ಅಥವಾ ಬಳಸುದಾರಿಯಿಂದಲೋ ಶಿವನನ್ನೇ ದೊರಕಿಸುತ್ತವೆ.

ನನು ಸರ್ವೇಷಾಮುಪಾಸನಾನಾಂ ಘಟಪಟವದನ್ಯೋನ್ಯಭೇದಾವ ಗಮಾತ್ ಫಲಭೇದೋಪದೇಶಾಚ್ಚ ಪರಸ್ಮಿನ್ ಬ್ರಹ್ಮಣಿ ಸಮುಚ್ಚಯತ್ವಂ ಕಥಮುಪಪನ್ನಮಿತ್ಯಾಶಂಕಾಯಾಮಧಿಕರಣಾಂತರೇಣಾಹ. ಲಿಂಗ ಭೂಯಸ್ತ್ವಾಧಿಕರಣಂ ॥ ೧೯ ॥ ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತ ದಪಿ ॥ ೪೩ ॥ ತೈತ್ತಿರೀಯೇ ಶ್ರೂಯತೇ. "ನಿಧನಪತಯೇ ನಮಃ ನಿಧನಪತಾಂತಿಕಾಯ ನಮಃ । ಊರ್ಧ್ವಾಯ ನಮಃ ಊರ್ಧ್ವ ಲಿಂಗಾಯ ನಮಃ । ಹಿರಣ್ಯಾಯ ನಮಃ ಹಿರಣ್ಯಲಿಂಗಾಯ ನಮಃ । ದಿವ್ಯಾಯ ನಮಃ ದಿವ್ಯಲಿಂಗಾಯ ನಮಃ । ಭವಾಯ ನಮಃ ಭವ ಲಿಂಗಾಯ ನಮಃ । ಶರ್ವಾಯ ನಮಃ ಶರ್ವಲಿಂಗಾಯ ನಮಃ । ಜ್ವಲಾ ಯ ನಮಃ ಜ್ವಲಲಿಂಗಾಯ ನಮಃ । ಆತ್ಮಾಯ ನಮಃ ಆತ್ಮಲಿಂಗಾಯ ನಮಃ । ಪರಮಾಯ ನಮಃ ಪರಮಲಿಂಗಾಯ ನಮಃ । ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರ ಪವಿತ್ರಂ ॥" ಇತ್ಯಾ ದಿನಾ ಪರಬ್ರಹ್ಮಣಃ ಶಿವಸ್ಯ ಲಿಂಗಾತ್ಮಕತ್ವಂ. ತಲ್ಲಿಂಗಸ್ಯ ಸರ್ವಾತ್ಮ ಕತ್ವಂ ಚೋಪದಿಷ್ಟಂ. ತತ್ರೈವ ದಹರವಿದ್ಯಾನಂತರಂ "ಸಹಸ್ರ ಶೀರ್ಷಂ ದೇವಂ ವಿಶ್ವೇಶಂ ವಿಶ್ವಶಂಭುವಂ । ವಿಶ್ವಂ ನಾರಾಯಣಂ ದೇವಮಕ್ಷರಂ ಪರಮಂ ಪದಂ ॥" ಇತ್ಯಾರಭ್ಯ "ಸೋಽಕ್ಷರಃ ಪರಮ ಸ್ಸ್ವರಾಟ್" ಇತ್ಯಂತಂ ಶಿವವತ್ಕೇಶವಸ್ಯಾಪಿ ಪರಮಾತ್ಮತ್ವೋಪದೇಶಾತ್. ಶಿವಕೇಶವಯೋರುಭಯೋರಪಿ ಪರತ್ವಾಂಗೀಕಾರೇ ವ್ಯವಸ್ಥೋಚ್ಛೇದ

ಪ್ರಸಂಗಾತ್ ಅತ್ರ ದಹರಾದಿಸರ್ವವಿದ್ಯೋಪಾಸ್ಯತ್ವಂ ಶಿವಸ್ಯ ಉತ ತದನ್ಯಸ್ಯೈವ? ಇತಿ ಸಂದಿಹ್ಯತೇ. ದಹರಾದಿಸರ್ವವಿದ್ಯೋಪಾಸ್ಯತ್ವಂ ನಾರಾಯಣಸ್ಯೈವೋಪಪಾದ್ಯತೇ ತತ್ಪ್ರಕರಣತ್ವಾತ್. ಅಸ್ಮಿಂಶ್ಚಾನುವಾಕೇ "ಪದ್ಮಕೋಶಪ್ರತೀಕಾಶಂ ಹೃದಯಂ ಚಾಪ್ಯಧೋಮುಖಂ" ಇತ್ಯಾದಿನಾ ಹೃದಯಪುಂಡರೀಕಾಭಿಧಾನಸ್ಯ ನಾರಾಯಣಾನುವಾಕಸ್ಯ ದಹರವಿದ್ಯೋಪಾಸ್ಯನಿರ್ಧಾರಣತ್ವಮುಪೋದ್ಬಲಯತಿ. ಕಿಂಚ "ನಾರಾಯಣಂ ಪರಬ್ರಹ್ಮ ತತ್ತ್ವಂ ನಾರಾಯಣಃ ಪರಃ । ನಾರಾಯಣಪರೋ ಧ್ಯಾತಾ ಧ್ಯಾನಂ ನಾರಾಯಣಃ ಪರಃ ॥", "ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ । ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥" ಇತ್ಯಾದೌ ನಾರಾಯಣಸ್ಯೈವ ಸರ್ವಾತ್ಮಕತ್ವಸರ್ವವ್ಯಾಪಕತ್ವಸರ್ವಪ್ರಕಾಶಕತ್ವಸರ್ವೋಪಾಸ್ಯತ್ವಾದಿಪರಬ್ರಹ್ಮಧರ್ಮಾಣಾಂ ಅಸಂಕುಚಿತತ್ವೇನ ದ್ಯೋತನಾನ್ ಅಸ್ಖಲಮನಣ್ವಾದಿಸರ್ವಾಸಾಂ ಶ್ರುತೀನಾಂ ತತ್ರೈವ ತಾತ್ಪರ್ಯಂ. ಅತಸ್ಸರ್ವಸ್ಮಾತ್ಪರೋ ನಾರಾಯಣ ಏವ ಸರ್ವವಿದ್ಯಾಸೂಪಾಸ್ಯ ಇತಿ ಪ್ರಾಪ್ತೇ ಪ್ರಚಕ್ಷ್ಮಹೇ. "ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಂ । ನಾರಾಯಣಪರಂಜ್ಯೋತಿರಾತ್ಮಾ ನಾರಾಯಣಃ ಪರಃ" ಇತ್ಯಾದಿನಾ ಶಕ್ತಿಶಕ್ತ್ಯೋರುಪಾಸ್ಯೋಪಾಸಕಯೋಃ ಶಿವನಾರಾಯಣಯೋಃ "ತತ್ತ್ವಮಸಿ" ಇತ್ಯಾದಾವಿವ ಅಭೇದತ್ವೇನ ಪರಮಶಿವಾಸಾಧಾರಣಧರ್ಮೇಷು ನಾರಾಯಣೇ ಪ್ರತಿಪಾದಿತೇಷ್ವಪಿ ಪರಮಶಿವೇ ಲಿಂಗಭೂಯಸ್ತ್ವಾತ್ "ಊರ್ಧ್ವಾಯ ನಮಃ ಊರ್ಧ್ವಲಿಂಗಾಯ ನಮಃ" ಇತ್ಯಾದಿ ಲಿಂಗಧರ್ಮಪ್ರಾಚುರ್ಯಾದೇತದೇವ ಬಲೀಯಃ. ಅತಃ ಶಿವ ಏವ ತತ್ರಾನ್ಯತ್ರ ಪ್ರತಿಪಾದಿತದಹರಾದಿಸರ್ವವಿದ್ಯಾಸೂಪಾಸ್ಯ ಇತಿ ರಾದ್ಧಾಂತಃ. ಸರ್ವತ್ರ ಪ್ರಸಿದ್ಧೋಪದೇಶಾಧಿಕರಣೇ ಷಡ್ವಿಧತಾತ್ಪರ್ಯಲಿಂಗೈಃ ಏತನ್ನಾರಾಯಣಾನುವಾಕತಾತ್ಪರ್ಯಸ್ಯ ಸ್ಪಷ್ಟಮುಪದಿಷ್ಟತ್ವಾತ್ ಅತ್ರ ಸಂಕ್ಷೇಪತಃ ಉಕ್ತಂ. "ಸರ್ವೋ ವೈ ರುದ್ರಃ", "ಪುರುಷೋ ವೈ ರುದ್ರಃ", "ಕದ್ರುದ್ರಾಯ ಪ್ರಚೇತಸೇ ಮೀಢುಷ್ಟಮಾಯ ತವ್ಯಸೇ ವೋಚೇಮ ಶಂತಮಂ ಹೃದೇ ಸರ್ವೋ ಹ್ಯೇಷ ರುದ್ರಃ" ಇತ್ಯಾದಿನಾ ಪರಮಶಿವಲಿಂಗಭೂಯಸ್ತ್ವಾತ್ ಸರ್ವವಿದ್ಯೋಪಾಸ್ಯತ್ವಂ ತಸ್ಯೈವೋಪಪನ್ನಂ. ತದ್ಯಥಾ "ಸರ್ವೋ ವೈ ರುದ್ರಃ" ಇತಿ ವಾಕ್ಯೇ "ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ" ಇತಿ ಛಾಂದೋಗ್ಯಶಾಂಡಿಲ್ಯವಿದ್ಯೋಪಾಸ್ಯಲಿಂಗಂ, "ಪುರುಷೋ ವೈ ರುದ್ರಃ" ಇತಿ ವಾಕ್ಯೇ ಪುರುಷಸೂಕ್ತೋಪಕೋಸಲವಿದ್ಯೋಪಾಸ್ಯಲಿಂಗಂ. "ಸನ್ಮಹೋ ನಮೋ

ನಮಃ " ಇತ್ಯತ್ರ " ಸದೇವ ಸೌಮ್ಯ " ಇತಿ ಸದ್ವಿದ್ಯೋಪಾಸ್ಯಲಿಂಗಂ. " ಮಹ " ಇತ್ಯತ್ರ " ಮಹ ಇತಿ ತದ್ಬ್ರಹ್ಮ ಸ ಆತ್ಮಾ ಅಂಗಾನ್ಯನ್ಯಾ ದೇವತಾ" ಇತಿ ಮಹದ್ವಿದ್ಯೋಪಾಸ್ಯಲಿಂಗಂ. " ಶಂತಮಗ್‌ಂ ಹೃದಿ" ಇತಿ ಹೃದಯದ್ಯೋತನಾತ್ ದಹರವಿದ್ಯೋಪಾಸ್ಯಲಿಂಗಂ. " ನಮೋ ಹಿರಣ್ಯ ಬಾಹವೇ ಹಿರಣ್ಯವರ್ಣಾಯ " ಇತ್ಯಾದಿನಾ ತಸ್ಯ ಹಿರಣ್ಮಯತ್ವಪ್ರದರ್ಶ ನೇನ ಸವಿತೃಮಂಡಲೋಪಾಸ್ಯಲಿಂಗಂ. ತತ್ರ " ಉಮಾಪತಯೇ " ಇತಿ ಸರ್ವಪರವಿದ್ಯೋಪಾಸ್ಯಲಿಂಗಂ. ಸಂಸಾರದ್ರಾವಕತ್ವಾದ್ರುದ್ರ ಇತ್ಯುಚ್ಯತೇ ಪರಮಾತ್ಮಾ ಶಿವ ಏವ. ಉಮಾಪತೇಃ ಪರಶಿವಬ್ರಹ್ಮಣಃ ಪರವಿದ್ಯೋಪಾಸ್ಯತ್ವಂ ವಾಕ್ಯೈರವಗಮ್ಯತೇ. ತದಪಿ ಲಿಂಗಂ ಬಲೀಯಃ, ಪ್ರಕರಣಾಪೇಕ್ಷಯಾ ಬಲವತ್ತರಂ ಖಲು. " ಲಿಂಗವಾಕ್ಯಪ್ರಕರಣ ಸ್ಥಾನಸಮಾಖ್ಯಾನಾಂ ಸಮವಾಯೇ ಪಾರದೌರ್ಬಲ್ಯಂ ಅರ್ಥವಿಪ್ರಕ ರ್ಷಾತ್ " ಇತಿ ಪೂರ್ವಮೀಮಾಂಸಾನ್ಯಾಯೇನ ವಾಕ್ಯಂ ಹಿ ಪ್ರಕರ ಣಾದ್ಬಲೀಯ ಇತಿ ದರ್ಶನಾತ್ ಉಮಾಸಹಿತಂ ಸಂಸಾರದುಃಖದ್ರಾ ವಕಂ ಶಿವಾಭಿಧಂ ಪರಬ್ರಹ್ಮ ಸರ್ವವಿದ್ಯೋಪಾಸ್ಯಮಿತಿ ನಿಶ್ಚೀಯತೇ.

ಎಲ್ಲಾ ಉಪಾಸನಗಳಿಗೂ ಘಟಪಟಗಳಂತೆ ಪರಸ್ಪರವಾಗಿ ಭೇದವಿರುವುದ ರಿಂದ ಫಲದಲ್ಲೂ ಭೇದವಿದ್ದರೆ ಇವೆಲ್ಲವೂ ಪರಮಾತ್ಮನಲ್ಲಿಯೇ ಹೇಗೆ ಸಮನ್ವಯ ವಾಗುತ್ತವೆ? ಎಂದಾಶಂಕಿಸಿ ಸಮಾಧಾನಮಾಡುತ್ತಾನೆ. ತೈತ್ತಿರೀಯದಲ್ಲಿ "ಊರ್ಧ್ವಾಯನಮಃ ಊರ್ಧ್ವಲಿಂಗಾಯನಮಃ"ಎಂದು ಮುಂತಾಗಿ ಹಿರಣ್ಯ, ಸುವರ್ಣ, ದಿವ್ಯ, ಭವ, ಶರ್ವ, ಶಿವ, ಜ್ವಲ, ಆತ್ಮ ಪರಮ ಈ ಪದಗಳೆಲ್ಲಕ್ಕೂ ಲಿಂಗಪದವನ್ನು ಸೇರಿಸಿ ಕೊನೆಯಲ್ಲಿ ಉಮಾಸಹಿತನೂ ಪ್ರಕಾಶಮಾನನೂ ಆದ ಪರಶಿವನನ್ನು ಸರ್ವಾ ತ್ಮಕನೆಂದೂ ಲಿಂಗಸ್ವರೂಪನೆಂದೂ ಹೇಳಲಾಗಿದೆ. ಅಲ್ಲಿಯೇ ದಹರವಿದ್ಯೆಯನ್ನು ಹೇಳಿದಮೇಲೆ " ಸಹಸ್ರಶೀರ್ಷಂ ದೇವಂ ವಿಶ್ವಂ ನಾರಾಯಣಂ " ಎಂಬಲ್ಲಿ ಶಿವನಂತೆ ನಾರಾಯಣನನ್ನು ಅಕ್ಷರನೆಂದೂ ಸ್ವತಂತ್ರನೆಂದೂ ಹೇಳಿ ಅವನನ್ನೇ ಪರಮಾತ್ಮ ನೆಂದು ತಿಳಿಸಲಾಗಿದೆ. ಹೀಗೆ ಶಿವ ಕೇಶವರಿಬ್ಬರನ್ನೂ ಪರಮಾತ್ಮನೆಂದು ಒಪ್ಪಿದರೆ ಅವ್ಯವಸ್ಥೆಯುಂಟಾಗುವುದರಿಂದ ದಹರಾದಿ ಸರ್ವವಿದ್ಯೆಗಳಲ್ಲೂ ಉಪಾಸ್ಯನಾದವನು ಶಿವನೇ ಅಥವಾ ನಾರಾಯಣನೇ ಎಂದು ಸಂದೇಹ ಬರುತ್ತದೆ. ಇದು ನಾರಾಯಣ ನನ್ನೇ ತಿಳಿಸುವ ಪ್ರಕರಣವಾದ್ದರಿಂದ ದಹರದಲ್ಲಿ ನಾರಾಯಣನೇ ಉಪಾಸ್ಯನೆಂದು ಹೇಳುವುದೇ ಯುಕ್ತವಾಗಿದೆ. ಇದೇ ಅನುವಾಕದಲ್ಲಿ ಕೊನೆಯಲ್ಲಿ " ಮೊಗ್ಗಿನಂತೆ ಶೋಭಿಸುವ ಹೃದಯವನ್ನು ಕೆಳಮುಖವಾಗಿ ಮಾಡಿ " ಎಂದು ಹೇಳಿರುವುದರಿಂದ ಈ ಮಾತು ದಹರವಿದ್ಯೆಯಲ್ಲಿ ಉಪಾಸ್ಯನಾರೆಂಬುದನ್ನು ನಿರ್ಧರಿಸಲು ಸಹಾಯವಾಗು ತ್ತದೆ. ಇದೂ ಅಲ್ಲದೆ " ನಾರಾಯಣನೇ ಪರಂಜ್ಯೋತಿ, ಅವನೇ ಪರಬ್ರಹ್ಮ, ಪರತತ್ತ್ವಂ, ಅವನೇ ಧ್ಯೇಯವಸ್ತು. ಇಲ್ಲಿ ಕಾಣುವ ಕೇಳುವ ಪ್ರತಿಯೊಂದು

ವಸ್ತುವಿನ ಒಳಗೂ ಹೊರಗೂ ಇರುವುದೆಲ್ಲವನ್ನೂ ವ್ಯಾಪಿಸಿಕೊಂಡು ನಾರಾಯಣ ನಿದ್ದಾನೆ" ಎಂಬಲ್ಲಿ ನಾರಾಯಣನೇ ಸರ್ವಾತ್ಮಕನೆಂದೂ ಸರ್ವವ್ಯಾಪಕನೆಂದೂ ಸರ್ವಪ್ರಕಾಶಕನೆಂದೂ ಸರ್ವೋಪಾಸ್ಯನೆಂದೂ ಹೇಳಿ ಪರಮಾತ್ಮಧರ್ಮಗಳನ್ನು ಅವನಲ್ಲಿಯೇ ನಿಸ್ಸಂಕೋಚವಾಗಿ ಅನ್ವಯಿಸಲಾಗಿದೆ. "ಅಸ್ಥೂಲಂ ಅನಣು" ಎಂಬ ಶ್ರುತಿಗಳೂ ನಾರಾಯಣನಲ್ಲಿಯೇ ಅನ್ವಯಿಸುತ್ತವೆ. ಆದ್ದರಿಂದ ನಾರಾಯಣನೇ ಎಲ್ಲಾ ವಿದ್ಯೆಗಳಲ್ಲೂ ಉಪಾಸ್ಯನಾಗಿದ್ದಾನೆ ಎಂದು ಆಕ್ಷೇಪ ಬಂದರೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ನಾರಾಯಣನೇ ವಿಶ್ವಾತ್ಮಕನೆಂಬಲ್ಲಿ ಉಪಾಸ್ಯನೂ ಶಕ್ತಿಸ್ವರೂಪನೂ ಆದ ನಾರಾಯಣನಿಗೂ ಉಪಾಸಕನೂ ಪುರುಷರೂಪನೂ ಆದ ಶಿವನಿಗೂ "ತತ್ತ್ವಮಸಿ" ಎಂಬಂತೆ ಅಭೇಧವಿರುವುದರಿಂದ ಶಿವನ ಕೆಲವು ಸಾಧಾರಣ ಧರ್ಮಗಳು ನಾರಾಯಣನಲ್ಲೂ ಇರುವುದಾಗಿ ಪ್ರತಿಪಾದಿಸಿದ್ದರೂ "ಊರ್ಧ್ವಲಿಂಗಾಯನಮಃ" ಎಂದು ಮುಂತಾಗಿ ಪರಶಿವನಲ್ಲಿಯೇ ಲಿಂಗಪದವನ್ನು ಹೆಚ್ಚಾಗಿ ಪ್ರಯೋಗಿಸಿರುವುದರಿಂದ, ಲಿಂಗಭೂಯಸ್ತ್ವವೇ ಇಲ್ಲಿ ಪ್ರಬಲಪ್ರಮಾಣವೆನಿಸುತ್ತದೆ. ಇದರಿಂದ ದಹರಾದಿವಿದ್ಯೆಗಳೆಲ್ಲದರಲ್ಲೂ ಶಿವನೇ ಉಪಾಸ್ಯನೆಂದು ನಿರ್ಣಯಿಸಲಾಗಿದೆ. ಸರ್ವತ್ರಪ್ರಸಿದ್ಧೋಪದೇಶಾಧಿಕರಣದಲ್ಲಿ ಆರುಬಗೆಯ ತಾತ್ಪರ್ಯಲಿಂಗಗಳಿಂದ ನಾರಾಯಣಾನುವಾಕದ ತಾತ್ಪರ್ಯವನ್ನು ಸ್ಪಷ್ಟವಾಗಿ ತಿಳಿಸಿರುವುದರಿಂದ ಇಲ್ಲಿ ಸಂಕ್ಷೇಪವಾಗಿ ಹೇಳಲಾಗಿದೆ. "ಎಲ್ಲವೂ ರುದ್ರನೇ", "ರುದ್ರನೇ ಪುರುಷನು", "ವಿಶ್ವದಲ್ಲಿ ಹಿಂದಿನದು ಮುಂದಿನದು ಚಿತ್ರವಿಚಿತ್ರವಾದುದು ಇದೆಲ್ಲವೂ ರುದ್ರನೇ. ಇಂತಹ ರುದ್ರನಿಗೆ ನಮಸ್ಕಾರ ಮಾಡುತ್ತೇನೆ" "ಭವರೋಗವೈದ್ಯನೂ ಪ್ರಜ್ಞಾಶಾಲಿಯೂ ಅತ್ಯಂತವಂದ್ಯನೂ ಸ್ತುತ್ಯನೂ ಆಗಿ ಸರ್ವರಿಗೂ ಸುಖವನ್ನು ಕೊಡುವಂತಹ ಈ ರುದ್ರನನ್ನು ಹೃದಯದಲ್ಲಿ ಸ್ಮರಿಸೋಣ. ಸದ್ಯೋಜಾತನೆನಿಸಿದ ರುದ್ರನಿಗೆ ಶರಣಾಗುತ್ತೇನೆ." ಹೀಗೆ ಎಲ್ಲಾ ಕಡೆಗಳಲ್ಲೂ ಪರಶಿವನ ಧರ್ಮಗಳೇ ವಿಶೇಷವಾಗಿರುವುದರಿಂದ ಎಲ್ಲಾ ವಿದ್ಯೆಗಳಲ್ಲೂ ಅವನೇ ಉಪಾಸ್ಯನೆಂಬುದು ಯುಕ್ತವಾಗಿದೆ. ಹೇಗೆಂದರೆ "ಎಲ್ಲವೂ ರುದ್ರನೇ" ಎಂದು ಹೇಳಿದ್ದರಿಂದ "ಇದೆಲ್ಲ ಅವನಿಂದಲೇ ಹುಟ್ಟಿ ಬೆಳೆದು ಅವನಲ್ಲಿಯೇ ಸೇರುವುದರಿಂದ ಬ್ರಹ್ಮವೇ ಆಗಿದೆ" ಎಂದು ಹೇಳುವ ಛಾಂದೋಗ್ಯದ ಶಾಂಡಿಲ್ಯ ವಿದ್ಯೆಯಲ್ಲೂ ಅವನೇ ಉಪಾಸ್ಯನೆನಿಸುತ್ತಾನೆ. "ರುದ್ರನೇ ಪುರುಷನು" ಎಂದು ಹೇಳಿದ್ದರಿಂದ ಪುರುಷಸೂಕ್ತದ ಉಪಕೋಸಲ ವಿದ್ಯೆಯಲ್ಲೂ, "ಸದ್ರೂಪನೂ ಹಿರಿಯನೂ ಆದ ರುದ್ರನಿಗೆ ನಮಸ್ಕರಿಸುತ್ತೇನೆ" ಎಂದು ಹೇಳಿದ್ದರಿಂದ "ಇದೆಲ್ಲವೂ ಮೊದಲಿಗೆ ಸದ್ರೂಪವೇ ಆಗಿತ್ತು" ಎಂದು ಹೇಳುವ ಸದ್ವಿದ್ಯೆಯಲ್ಲೂ, "ಮಹಃ" ಎಂದು ಹೇಳಿದ್ದರಿಂದ "ಬ್ರಹ್ಮವೇ ಆತ್ಮವು, ಉಳಿದ ದೇವತೆಗಳು ಅಂಗಗಳು" ಎಂಬ ಪರವಿದ್ಯೆಯಲ್ಲೂ, "ಹೃದಯದಲ್ಲಿ ಪ್ರಶಾಂತನಾದ ರುದ್ರನನ್ನು ಸ್ಮರಿಸುತ್ತೇನೆ" ಎಂಬಲ್ಲಿ ಹೃದಯವನ್ನು ಹೇಳಿದ್ದರಿಂದ ದಹರವಿದ್ಯೆಯಲ್ಲೂ, "ನಮೋ ಹಿರಣ್ಯಬಾಹವೇ ಹಿರಣ್ಯವರ್ಣಾಯ" ಎಂಬಲ್ಲಿ ಅವನನ್ನು ಹಿರಣ್ಮಯ

ನೆಂದು ಹೇಳಿದ್ದರಿಂದ ಸೂರ್ಯಮಂಡಲದಲ್ಲಿಯೂ, ಅವನನ್ನು ಉಮಾಪತಿ ಎಂದು ಹೇಳಿದ್ದರಿಂದ ಎಲ್ಲಾ ವಿದ್ಯೆಗಳಲ್ಲೂ ರುದ್ರನೇ ಉಪಾಸ್ಯನೆಂಬುದು ಸಿದ್ಧವಾಗುತ್ತದೆ. ಸಂಸಾರವನ್ನು ತೊಲಗಿಸುವುನಾದ್ದರಿಂದ ಪರಮಾತ್ಮನಿಗೆ ರುದ್ರನೆಂಬ ಹೆಸರು ಅನ್ವರ್ಥವಾಗಿದೆ. ಪ್ರಕರಣಕ್ಕಿಂತಲೂ ಲಿಂಗವೇ ಪ್ರಬಲವಾಗಿದೆ. “ಲಿಂಗ, ವಾಕ್ಯ, ಪ್ರಕರಣ, ಸ್ಥಾನ, ಸಮಾಖ್ಯೆಗಳೆಲ್ಲವೂ ಒಟ್ಟಿಗೆ ಸೇರಿಸಿದರೆ ಮುಂದಿನದಕ್ಕಿಂತಲೂ ಹಿಂದಿನದು ಪ್ರಬಲವೆನಿಸುತ್ತದೆ” ಎಂಬ ಈ ಪೂರ್ವಮೀಮಾಂಸಾನ್ಯಾಯದಿಂದ ವಾಕ್ಯವೇ ಪ್ರಕರಣಕ್ಕಿಂತಲೂ ಬಲಿಷ್ಠವಾದುದೆಂದು ತಿಳಿದುಬರುತ್ತದೆ. ಹೀಗೆ ಶ್ರುತಿ ವಾಕ್ಯವೇ ಪ್ರಬಲವಾಗಿರುವುದರಿಂದ ಸಂಸಾರ ದುಃಖವನ್ನು ತೊಲಗಿಸುವ ಪರಮಾತ್ಮನು ಉಮಾಶಕ್ತಿಯೊಡಗೂಡಿ ಶಿವನೆನಿಸಿದ್ದಾನೆ. ಇದರಿಂದ ಎಲ್ಲಾ ವಿದ್ಯೆಗಳೂ ಪರಬ್ರಹ್ಮದ ಉಪಾಸನಕ್ಕಾಗಿಯೇ ಬಂದಿವೆ ಎಂದು ನಿಶ್ಚಯಿಸಲಾಗಿದೆ.

ನನು ಪೂರ್ವತ್ರ ಪರಶಿವಬ್ರಹ್ಮಮೂರ್ತಾಮೂರ್ತೋಪಾಸಕೇಷು ಪ್ರಾಜ್ಞಾನಾಂ “ನ ಕರ್ಮಣಾ ನ ಪ್ರಜಯಾ” ಇತ್ಯಾದಿನಾ ವೈರಾಗ್ಯ ಭಾಗ್ಯಾನ್ವಿತಾನಾಂ ನಿರ್ಜಗದ್ವಾಸನಾಯುಕ್ತಾನಾಂ ಲೋಕಾಂತರನಿರಪೇಕ್ಷಿತತ್ವೇನ ಇಹೈವ ಶರೀರೇ ಶಿವತತ್ತ್ವಪ್ರಾಪ್ತಿಃ, ತದ್ಭಿನ್ನಾನಾಂ ಮಂದ ಪ್ರಜ್ಞಾನಾಂ ಕ್ರಮಮುಕ್ತೇರುಪದಿಷ್ಟತ್ವೇನ ಬ್ರಹ್ಮವಿದ್ಯಾಯಾಃ ವಿಕಲ್ಪತ್ವಂ. ತನ್ಮಹಿಮಭಂಗಪ್ರಸಂಗಸ್ಯ ಸಿದ್ಧತ್ವಾತ್ ಸರ್ವೇಷಾಮುಪಾಸಕಾನಾಂ ಏಕಾ ಗತಿರುಪಪನ್ನೇತ್ಯಾಶಂಕಾಯಾಮಧಿಕರಣಾಂತರಮಾಹ. ಪೂರ್ವವಿಕಲ್ಪಾಧಿಕರಣಂ ॥ ೨೦ ॥ ಪೂರ್ವವಿಕಲ್ಪಃ ಪ್ರಕರಣಾತ್ಸ್ಯಾತ್ ಕ್ರಿಯಾಮಾನಸವತ್ ॥ ೪೪ ॥ ಕ್ರಿಯಾಜ್ಯೋತಿಷ್ಟೋಮಮಾನಸ ಜ್ಯೋತಿಷ್ಟೋಮವತ್ ಪ್ರಕರಣಾತ್ ವಿರಾಗಸರಾಗಪ್ರಕರಣಾತ್ ಪೂರ್ವವಿಕಲ್ಪಃ ಪೂರ್ವೇ ಲೋಕಾಲೋಕವಾಸನಾಯುಕ್ತಾನಾಂ ವಿಕಲ್ಪಃ ಕ್ರಮಮುಕ್ತಿಸದ್ಯೋಮುಕ್ತಿವಿಕಲ್ಪಸ್ಸಮುಚಿತಃ. ತಥಾ ತಯೋರ್ವಿರಾಗಸರಾಗಯೋಃ ಮುಕ್ತಿವಿಕಲ್ಪಃ ಸ್ಯಾದಿತಿ ಸೂತ್ರಸೂಚಿತಾರ್ಥಃ. ತೈತ್ತಿರೀಯೇ ಶ್ರೂಯತೇ. “ಕಃ ಕಂ ತತ್ಸತ್ಯಮನ್ನಮಮೃತೋ ಜೀವೋ ವಿಶ್ವಃ ಕತಮಃ ಸ್ವಯಂಭೂಃ ಬ್ರಹ್ಮೈತದಮೃತ ಏಷ ಪುರುಷ ಏಷ ಭೂತಾನಾಮಧಿಪತಿರ್ಬ್ರಹ್ಮಣಸ್ಸಾಯುಜ್ಯಂ ಸಲೋಕತಾಮಾಪ್ನೋತೀತ್ಯೇತಾಸಾಮೇವ ದೇವತಾನಾಂ ಸಾಯುಜ್ಯಂ ಸಾರೂಪ್ಯತಾಂ ಸಾಲೋಕ್ಯತಾಮಾಪ್ನೋತಿ” ಇತ್ಯಾದಿನಾ ಪರಮೇಶ್ವರೋಪಾಸಕಾನಾಂ ಸರ್ವೇಷಾಮೇಕಕಾಲೇ ತದುಪಾಸನಾಮಾಹಾತ್ಮ್ಯೇನ ಸಾಲೋಕ್ಯಾದಿಪದಪ್ರಾಪ್ತಿಃ? ಉತ ಭಿನ್ನಕಾಲೇ? ಕಿಂಚ ಅಧಿಕಾರತಾರತಮ್ಯೇನ ವಾ? ಇತಿ ಸಂದಿಹ್ಯತೇ. ಪರಮೇಶ್ವರೋಪಾಸನಮಹಿಮ್ನಾ ದೇವಾದಿವದೇಕಕಾಲೇ ಸಾಲೋಕ್ಯಾದಿಸರ್ವಪದಪ್ರಾಪ್ತಿಃ. “ಸರ್ವತ್ರ

ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ । ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ " ಇತಿ ಶ್ರುತ್ಯಂತರೇ ಮುಕ್ತ ಜೀವಾನಾಂ ಕಾಮಚಾರತ್ವಶ್ರವಣಾತ್ " ಸೋಽಶ್ನುತೇ ಸರ್ವಾನ್ಕಾಮಾನ್ ಸಹ ಬ್ರಹ್ಮಣಾಂ " ಇತ್ಯತ್ರಾಪಿ ವಿದುಷಾಂ ಬ್ರಹ್ಮಣಾ ಸಹ ಸರ್ವ ಕಾಮಾವಾಪ್ತಿದರ್ಶನಾಚ್ಚ ವಿದುಷಾಮೇಕಕಾಲೇ ಸಾಲೋಕ್ಯಾದಿಸರ್ವ ಪದಪ್ರಾಪ್ತಿಸ್ಸಂಭವತೀತಿ ಪ್ರಾಪ್ತೇ ವದಾಮಃ. " ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ ", " ಭೂತಿಕಾಮೋ ವಾಯವ್ಯಂ ಶ್ವೇತ ಮಾಲಭೇತ " ಇತ್ಯಾದಿಶ್ರುತಿನಿರ್ದಿಷ್ಟಕ್ರಿಯಾಮಯಜ್ಯೋತಿಷ್ಟೋಮ ವಾಜಪೇಯಪೌಂಡರೀಕಾತಿರಾತ್ರಾಶ್ವಮೇಧಾದೀನಾಮಭ್ಯುದಯಸಾಧ ಕಾನಾಂ ತತ್ಕೃತ್ಯಕರ್ಮತಾರತಮ್ಯೇನ ಪೃಥಕ್ಪೃಥಕ್ಫಲಾನಿ ನಿರ್ದಿಶ್ಯಂತೇ. " ತಸ್ಯೈವಂ ವಿದುಷೋ ಯಜ್ಞಸ್ಯಾತ್ಮಾ ಯಜಮಾನಃ ಶ್ರದ್ಧಾ ಪತ್ನೀ ಶರೀರಮಿಧ್ಮಮುರೋ ವೇದಿರ್ಲೋಮಾನಿ ಬರ್ಹಿರ್ವೇದಃ ಶಿಖಾ ಹೃದಯಂ ಯೂಪಃ ಕಾಮ ಆಜ್ಯಂ ಮನ್ಯುಃ ಪಶುಸ್ತಪೋಽಗ್ನಿರ್ದಮ ಶ್ಶಮಯಿತಾ ದಕ್ಷಿಣಾವಾಕ್ ಹೋತಾ ಪ್ರಾಣ ಉದ್ಗಾತಾ ಚಕ್ಷುರಧ್ವ ರ್ಯುರ್ಮನೋಬ್ರಹ್ಮ ಶ್ರೋತ್ರಮಗ್ನಿದ್ಯಾವಾ, ಧ್ರಿಯತೇ ಸಾ ದೀಕ್ಷಾ ಯದಶ್ನಾತಿ ತದ್ಧವಿರ್ಯತ್ಪಿಬತಿ ತದಸ್ಯ ಸೋಮಪಾನಂ ಯದ್ರ ಮತೇ ತದುಪಸದೋ ಯತ್ಸಂಚರತ್ಯುಪವಿಶ್ಯುತಿಷ್ಠತೇ ಚ ಪ್ರವರ್ಗ್ಯೋ ಯನ್ಮುಖಂ ತದಾಹವನೀಯೋ ಯಾ ವ್ಯಾಹೃತಿರಾಹುತಿರ್ಯದಸ್ಯ ಸೋಮಂ ತಜ್ಜುಹೋತಿ ಯತ್ಸಾಯಂ ಪ್ರಾತರತ್ತಿ ತಧ್ಧ್ರತಮಿದಂ ಯತ್ಪ್ರಾತರ್ಮಾಧ್ಯಂದಿನಂ ಸಾಯಂ ಚ ತಾನಿ ಸವನಾನಿ ಯೇ ಅಹೋ ರಾತ್ರೇ ತೇ ದರ್ಶಪೂರ್ಣಮಾಸೌ ಯೇಽರ್ಧಮಾಸಾಶ್ಚ ಮಾಸಾಶ್ಚ ತೇ ಚಾತುರ್ಮಾಸ್ಯಾನಿ ಯಜುಷಸ್ತೇ ಪಶುಬಂಧಾ ಯೇ ಸಂವತ್ಸರಾಶ್ಚ ತೇಽಹರ್ಗಣಾಸ್ಸರ್ವವೇದಸಂ ವಾ ಏತತ್ಸತ್ರಂ ಯನ್ಮರಣಂ ತದವ ಭೃಥ ಏತದ್ವೈ ಜರಾಮರ್ಯಮಗ್ನಿಹೋತ್ರಂ ಸತ್ರಂ ಯ ಏವಂ ವಿದ್ವಾ ನುದಗಯನೇ ಪ್ರಮೀಯತೇ ತೇ. ದೇವಾನಾಮೇವ ಮಹಿಮಾನಂ ಗತ್ವಾದಿತ್ಯಾದಯೋ, ದಕ್ಷಿಣೇ ಪ್ರಮೀಯತೇ ತೇ ಪಿತ್ಯಾಣಾಮೇವ ಮಹಿಮಾನಂ ಗತ್ವಾ ಚಂದ್ರಮಸಸ್ಸಾಯುಜ್ಯಂ ಸಲೋಕತಾಮಾಪ್ನೋ ತ್ಯೇತೌ ವೈ ಸೂರ್ಯಾಚಂದ್ರಮಸೋರ್ಮಹಿಮಾನೌ ಬ್ರಾಹ್ಮಣೋ ವಿದ್ವಾನಭಿಜಯತಿ. ತಸ್ಮಾದ್ಬ್ರಹ್ಮಣೋ ಮಹಿಮಾನಮಾಪ್ನೋತಿ " ಇತಿ. ತತ್ರೈವ ಪ್ರದೇಶಾಂತರೇ " ಚಿತ್ತಿಃ ಸ್ರುಕ್. ಚಿತ್ತಮಾಜ್ಯಂ. ವಾಗ್ವೇದಿಃ. ಅಧೀತಂ ಬರ್ಹಿಃ. ಚೇತೋ ಅಗ್ನಿಃ " ಇತಿ. ವಾಜಸನೇ ಯಕೇ ಅಗ್ನಿರಹಸ್ಯಬ್ರಾಹ್ಮಣೇ " ಮನಶ್ಚಿತೋ ವಾಕ್ಚಿತಃ ಪ್ರಾಣಶ್ಚಿತಃ

ಚಕ್ಷುಶ್ಚಿತಃ ಶ್ರೋತ್ರಶ್ಚಿತಃ ಕರ್ಮಚಿತೋಽಗ್ನಿಶ್ಚಿತಃ" ಇತಿ. ಇತ್ಯಾದಿ ಶ್ರುತಿಷು ಮಾನಸಯಾಗೀಯೇ ತತ್ಕತ್ಕರ್ಮಾನುಸಾರೇಣ ಪೃಥಕ್ಫಲತ್ವಂ ಪ್ರಚಕ್ಷ್ಯತೇ. ತದ್ವತ್ "ನ ಕರ್ಮಣಾ" ಇತಿ ವಿರಕ್ತಪ್ರಕರಣ ಪಠಿತಬ್ರಹ್ಮವಿದ್ಯಾಯಾಃ ಕ್ರಮಮುಕ್ತಿಹೇತುತ್ವಂ. ಪೂರ್ವವಿಕಲ್ಪಃ ತೀವ್ರಮಂದಭೇದೇನ ಪೂರ್ವಂ ವಿಕಲ್ಪೋ ನಿರ್ದಿಷ್ಟಃ. ತದ್ವತ್ಪ್ರಕರಣಾತ್. "ಪರಂ ಮೃತ್ಯೋ ಅನು ಪರೇ ಹಿ ಪಂಥಾಂ ಯಸ್ತೇ ಸ್ವ ಇತರೋ ದೇವಯಾನಾತ್" ಇತಿ ಪ್ರಕರಣಭೇದೇನ ಸ್ವಾಧಿಕಾರತಾರತಮ್ಯೇನ ಪರಮೇಶ್ವರೋಪಾಸಕಾನಾಂ ಫಲಭೇದಃ ಸ್ಯಾತ್. ಅತೋ ನಾನಾದೇಶವಾಸಿನಾಂ ಉಪಾಸಕಾನಾಂ ಏಕಕಾಲೇ ದೇವಾಗಮನವತ್ ಪರಶಿವೋಪಾಸಕಾನಾಂ ಏಕಕಾಲೇ ಸಾಲೋಕ್ಯಾದಿಚತುರ್ವಿಧಮುಕ್ತಿರ್ನ ಸಂಭವತೀತಿ ನಿಶ್ಚೀಯತೇ.

ಪರಶಿವಬ್ರಹ್ಮದ ಮೂರ್ತರೂಪವನ್ನೂ ಅಮೂರ್ತಸ್ಥಿತಿಯನ್ನೂ ಉಪಾಸನ ಮಾಡುವವರಲ್ಲಿ ವೈರಾಗ್ಯದಿಂದಲೂ ವಿಷಯವಾಸನೆಇಲ್ಲದೆಯೂ, ಲೋಕಾಂತರವನ್ನು ಅಪೇಕ್ಷಿಸದೆಯೂ ಉಪಾಸಮಾಡುವ ಉತ್ತಮಾಧಿಕಾರಿಗಳಿಗೆ ಈ ಶರೀರದಲ್ಲಿಯೇ ಶಿವತತ್ತ್ವ ದೊರಕುವುದೆಂದೂ, ಇತರ ಮಂದಾಧಿಕಾರಿಗಳಿಗೆ ಸಾಲೋಕ್ಯಾದಿ ಮುಕ್ತಿಗಳು ಕ್ರಮವಾಗಿ ದೊರಕುವುವೆಂದೂ ಹಿಂದೆ ಹೇಳಿದ್ದರಿಂದ ಬ್ರಹ್ಮವಿದ್ಯೆಯಲ್ಲಿ ವಿಕಲ್ಪಗಳು ಸಂಭವಿಸಿ ಅದರ ಮಹತ್ತ್ವಕ್ಕೇ ಭಂಗವುಂಟಾಗುತ್ತದೆ. ಆದರೆ ಉಪಾಸಕರೆಲ್ಲರಿಗೂ ಒಂದೇಗತಿ ದೊರಕಬೇಕಾದ್ದು ಯುಕ್ತವಲ್ಲವೇ ? ಎಂದು ಆಶಂಕಿಸಿ ಸಮಾಧಾನವನ್ನು ತಿಳಿಸುತ್ತಾನೆ. ಕ್ರಿಯಾರೂಪವಾದ ಜ್ಯೋತಿಷ್ಟೋಮ ಯಾಗವನ್ನೂ ಮಾನಸಿಕಯಾಗವನ್ನೂ, ಅವರವರ ಅಂತಸ್ತಿಗೆ ತಕ್ಕಹಾಗೆ ಆಚರಿಸುವಂತೆ ವಿರಕ್ತರಾದವರಿಗೂ ವಿರಕ್ತರಲ್ಲದವರಿಗೂ ಮುಕ್ತಿಯ ಬಗ್ಗೆ ವಿಕಲ್ಪವಿರುವುದು ನ್ಯಾಯವೇ ಆಗಿದೆ. ವಿಷಯವಾಸನೆಯುಳ್ಳವರು ಮತ್ತು ಅದಿಲ್ಲದವರು ಎಂದು ಅಧಿಕಾರಿಗಳಲ್ಲಿ ವೈವಿಧ್ಯವಿರುವುದರಿಂದ ಕ್ರಮಮುಕ್ತಿ ಮತ್ತು ಸದ್ಯೋಮುಕ್ತಿ ಎಂಬ ವಿಕಲ್ಪವಿರುವುದು ಯುಕ್ತವೇ ಆಗಿದೆ. ಹೀಗೆ ಅವರ ಅನಾಸಕ್ತಿ ಮತ್ತು ಆಸಕ್ತಿಗಳನ್ನು ಅನುಸರಿಸಿ ಮುಕ್ತಿಯಲ್ಲಿ ವಿಕಲ್ಪವುಂಟಾಗುತ್ತದೆ. ತೈತ್ತಿರೀಯದಲ್ಲಿ "ಯಾವುದು ಸತ್ಯ ? ಯಾವುದು ಭೋಗ್ಯವಸ್ತು ? ಅಮೃತ ಯಾವುದು ? ಸ್ವಯಂಭು ಯಾವುದು ? ಇದೆಲ್ಲವೂ ಬ್ರಹ್ಮವೆ ? ಇವನೇ ಭೂತಗಳ ಅಧಿಪತಿ. ಇವನನ್ನು ಉಪಾಸನ ಮಾಡುವವರೇ ಸಾಲೋಕ್ಯಸಾಯುಜ್ಯಗಳನ್ನು ಹೊಂದುತ್ತಾರೆ. ಹೀಗೆಯೇ ದೇವತೆಗಳಿಗೂ ಸಾಲೋಕ್ಯಾದಿಗಳು ದೊರಕುತ್ತವೆ" ಎಂಬ ವಾಕ್ಯದಿಂದ ಪರಮೇಶ್ವರನ ಉಪಾಸಕರಿಗೆ ಏಕಕಾಲದಲ್ಲಿ ಉಪಾಸನದ ಮಹಿಮೆಯಿಂದ ಸಾಲೋಕ್ಯ ಮೊದಲಾದ ಸ್ಥಾನಗಳು ದೊರಕುತ್ತವೆಯೇ ಅಥವಾ ಅಧಿಕಾರಿಭೇದದಿಂದ ಬೇರೆ ಬೇರೆ ಕಾಲಗಳಲ್ಲಿ ಅವು ದೊರಕುತ್ತವೆಯೆ ? ಎಂದು ಸಂದೇಹವುಂಟಾಗುತ್ತದೆ.

ಶಿವನ ಉಪಾಸನ ಮಹಿಮೆಯಿಂದ ಭಕ್ತರಿಗೆ ದೇವತೆಗಳಂತೆ ಏಕಕಾಲದಲ್ಲಿಯೇ ಸಾಲೋಕ್ಯ ಮೊದಲಾದ ಎಲ್ಲಾ ಸ್ಥಾನಗಳೂ ದೊರಕುತ್ತವೆ. "ಮುಕ್ತನು ಎಲ್ಲಾ ಕಡೆಯಲ್ಲೂ ರಮಿಸುತ್ತ ಸಂತೋಷದಿಂದ ಸ್ವತಂತ್ರನಾಗಿ ಸಂಚರಿಸುವನು" ಎಂದು ಬೇರೆ ಶ್ರುತಿಯಲ್ಲೂ ಮುಕ್ತರಿಗೆ ಸ್ವೇಚ್ಛಾವಿಹಾರವನ್ನು ಹೇಳಲಾಗಿದೆ. "ಅವನು ಬ್ರಹ್ಮದೊಡನೆ ಎಲ್ಲಾ ಕಾಮಗಳನ್ನೂ ಪಡೆಯುತ್ತಾನೆ" ಎಂಬಲ್ಲಿ ವಿದ್ವಾಂಸರಿಗೆ ಬ್ರಹ್ಮದೊಡನೆ ಎಲ್ಲಾ ಫಲಪ್ರಾಪ್ತಿಯನ್ನು ಹೇಳಿದೆ. ಆದ್ದರಿಂದ ಸಾಲೋಕ್ಯ ಮೊದಲಾದ ಸ್ಥಾನಗಳೆಲ್ಲವೂ ಮುಕ್ತರಿಗೆ ಏಕಕಾಲದಲ್ಲಿಯೇ ಸಂಭವಿಸುತ್ತವೆ ಎಂದು ಆಕ್ಷೇಪ ಬರುತ್ತದೆ. ಇದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. "ಸ್ವರ್ಗಾಪೇಕ್ಷೆಯು ಜ್ಯೋತಿಷ್ಟೋಮವನ್ನಾಚರಿಸಬೇಕು" "ವರ್ಧಿಷ್ಣುವು ವಾಯುಪ್ರೀತಿಗಾಗಿ ಬಿಳಿಬಣ್ಣದ ಪಶುವನ್ನು ಹೋಮಮಾಡಬೇಕು" ಈ ಬಗೆಯ ಶ್ರುತಿಗಳಲ್ಲಿ ಐಹಿಕಾಭ್ಯುದಯ ವನ್ನು ದೊರಕಿಸುವ ಜ್ಯೋತಿಷ್ಟೋಮಾದಿಕರ್ಮಗಳಿಗೆ ಅವುಗಳ ಅಂತಸ್ತಿಗೆ ತಕ್ಕ ಹಾಗೆ ಬೇರೆ ಬೇರೆ ಫಲಗಳನ್ನು ತಿಳಿಸಲಾಗಿದೆ. ಜ್ಞಾನಿಯು ಆಚರಿಸುವ ಯಜ್ಞದಲ್ಲಿ ಆತ್ಮನೇ ಯಜಮಾನನು, ಶ್ರದ್ಧೆಯೆ ಪತ್ನಿ, ಶರೀರವೇ ಕಟ್ಟಿಗೆ, ವಕ್ಷಸ್ಸೇ ವೇದಿಕೆ, ಹೋಮವೇ ದರ್ಭೆಹುಲ್ಲು, ವೇದವೇ ಶಿಖ, ಹೃದಯವೇ ಯೂಪಸ್ತಂಭ, ಕಾಮವೇ ತುಪ್ಪ, ಕ್ರೋಧವೇ ಯಜ್ಞಪಶು, ತಪಸ್ಸೇ ಅಗ್ನಿ, ಇಂದ್ರಿಯನಿಗ್ರಹವೇ ಅಗ್ನಿಯನ್ನು ಶಮನಮಾಡುವ ಸಾಧನ, ವಾಕ್ಕೇ ದಕ್ಷಿಣೆ, ಪ್ರಾಣವೇ ಹೋತೃವೆಂಬ ಋತ್ವಿಕ್, ನೇತ್ರವೇ ಉದ್ಗಾತೃ, ಮನಸ್ಸೇ ಅಧ್ವರ್ಯು, ಕಿವಿಗಳೇ ಬ್ರಹ್ಮನೆಂಬ ಋತ್ವಿಕ್, ಅಗ್ನಿಯೇ ದ್ಯುಲೋಕಸ್ಥಾನದಲ್ಲಿರುವಂತಹುದು. ಈ ಬಗೆಯ ಯಜ್ಞಾಚರಣೆಯೇ ದೀಕ್ಷೆ ಎನಿಸುತ್ತದೆ. ಈ ಕಾಲದಲ್ಲಿ ಅನನು ಭೋಗಿಸುವುದೆಲ್ಲವೂ ಹವಿರ್ದ್ರವ್ಯವೇ. ಕುಡಿಯುವುದೆಲ್ಲವೂ ಸೋಮರಸವೇ. ರಮಿಸುವುದೆಲ್ಲವೂ ಉಪಸತ್ ಎಂಬ ಕರ್ಮ ವೆನಿಸುತ್ತದೆ. ಅವನು ಸಂಚರಿಸುವುದು ಕುಳಿತುಕೊಳ್ಳುವುದು ಎದ್ದುನಿಲ್ಲುವುದು ಇದೆಲ್ಲವೂ ಪ್ರವರ್ಗ್ಯಕರ್ಮವೆನಿಸುವುದು. ಅವನ ಬಾಯಿಯೇ ಆಹವನೀಯಾಗ್ನಿ ಎನಿಸುತ್ತವೆ. ಬಾಯಿಂದ ಹೇಳುವುದೆಲ್ಲವೂ ಆಹುತಿ ಎನಿಸುತ್ತದೆ. ಇವನು ಬೆಳಗ್ಗೆ ಮತ್ತು ಸಂಜೆ ಭೋಗಿಸುವುದೆಲ್ಲವೂ ಸೋಮರಸವನ್ನು ಬೆಂಕಿಯಲ್ಲಿ ಹೋಮಮಾಡಿದಂತಾಗುತ್ತದೆ. ಇವನ ಆಚರಣೆಗಳೆಲ್ಲವೂ ತ್ರಿಕಾಲಗಳಲ್ಲೂ ಮಾಡುವ ಯಾಗಗಳೆನಿಸುತ್ತವೆ. ಇವನಿಗೆ ಹಗಲು ರಾತ್ರಿಗಳೇ ದರ್ಶಪೂರ್ಣಮಾಸಗಳು. ಪಕ್ಷದ ಮತ್ತು ಮಾಸದ ಆಚರಣೆಗಳೆಲ್ಲವೂ ಚಾತುರ್ಮಾಸ್ಯಗಳಾಗುವುವು. ಯಜುರ್ವೇದದ ರುದ್ರಾಧ್ಯಾಯಪಠನವೇ ಸರ್ವಪಾಶಗಳನ್ನು ತೊಲಗಿಸುವ ಮೂಲಕ ಪಶುಬಂಧವೆನಿಸುತ್ತದೆ. ಸಂವತ್ಸರಗಳೆಲ್ಲವೂ ಪ್ರಮಥಗಣಗಳು. ಎಲ್ಲರನ್ನು ಶಿವರೂಪವೆಂದು ತಿಳಿಯುವುದೇ ಈ ಬಗೆಯ ಯಜ್ಞವೆನಿಸುತ್ತದೆ. ಮರಣವೇ ಅವಭೃತಸ್ನಾನವಾಗುತ್ತದೆ. ಇದೆಯೇ ಜರಾಮರಣಗಳನ್ನು ತಪ್ಪಿಸುವಂತಹ ಅಗ್ನಿಹೋತ್ರವೆಂಬ ಯಜ್ಞ. ಇದನ್ನು ಯಾರು ತಿಳಿದು ಉತ್ತರಾಯಣದಲ್ಲ ದೇಹವನ್ನು ಬಿಡುವರೋ ಅವರು ದೇವತೆಗಳ ಮಹಿಮೆ

ಯನ್ನು ಪಡೆದು ಆದಿತ್ಯರೇ ಆಗಿ ಶೋಭಿಸುತ್ತಾರೆ. ದಕ್ಷಿಣಾಯನದಲ್ಲಿ ದೇಹವನ್ನು ತೊರೆದವರು ಪಿತೃಗಳ ಮಹಿಮೆಯನ್ನು ಪಡೆದು ಚಂದ್ರಲೋಕಕ್ಕೆ ಹೋಗಿ ಅವನೊಡನೆ ಬೆರೆಯುತ್ತಾರೆ. ಹೀಗೆ ಬ್ರಹ್ಮಜ್ಞಾನಿಗಳು ಸೂರ್ಯಚಂದ್ರರ ಮಹತ್ತ್ವವನ್ನು ಪಡೆದು ಪ್ರಕಾಶಿಸುತ್ತಾರೆ. ಈ ಮೂಲಕ ಅವರು ಬ್ರಹ್ಮದ ಮಹಿಮೆಯನ್ನು ತಿಳಿಯುತ್ತಾರೆ" ಎಂದು ಶ್ರುತಿಯು ತಿಳಿಸುತ್ತದೆ. ಅಲ್ಲಿಯೇ ಬೇರೆಕಡೆ "ಚೈತನ್ಯವೇ ಹೋಮದ ಪಾತ್ರೆ, ಚಿತ್ತವೇ ತುಪ್ಪ, ವಾಕ್ಕೇ ವೇದಿಕೆ, ಅಧ್ಯಯನವೇ ದರ್ಭೆ, ಮನಸ್ಸೇ ಅಗ್ನಿ" ಎಂದು ಹೇಳಲಾಗಿದೆ. ವಾಜಸನೇಯದ ಅಗ್ನಿರಹಸ್ಯಬ್ರಾಹ್ಮಣದಲ್ಲಿ ಮನಸ್ಸು, ವಾಕ್ಕು, ಪ್ರಾಣ, ನೇತ್ರಗಳು, ಕಿವಿಗಳು, ಕರ್ಮ, ಅಗ್ನಿ ಇವೆಲ್ಲವೂ ಈಶ್ವರ ಪ್ರೀತ್ಯರ್ಥವಾಗಿ ಅರ್ಪಣಾರ್ಹವಾದ ವಸ್ತುಗಳೆನಿಸಿವೆ. ಹೀಗೆ ಶ್ರುತಿಯು ಮಾನಸ ಯಾಗದಲ್ಲಿ ಆಯಾಯ ಕರ್ಮಕ್ಕೆ ತಕ್ಕಂತೆ ಬೇರೆ ಬೇರೆ ಫಲಗಳನ್ನು ಸ್ಪಷ್ಟವಾಗಿ ತಿಳಿಸಿದೆ. ಆದರಂತೆಯೇ "ಕರ್ಮದಿಂದಲೂ, ಸಂತಾನದಿಂದಲೂ, ಧನದಿಂದಲೂ ಅಮೃತ ದೊರಕುವುದಿಲ್ಲ" ಎಂಬ ವಿರಕ್ತಪ್ರಕರಣದಲ್ಲಿ ಹೇಳಿರುವ ಬ್ರಹ್ಮವಿದ್ಯೆಯು ಕ್ರಮ ಮುಕ್ತಿಯನ್ನು ದೊರಕಿಸುತ್ತದೆ. ಆದರಿಂದಲೇ ಅಧಿಕಾರಿಗಳಲ್ಲಿ ತೀವ್ರ, ಮಂದ ಎಂಬ ಭೇದದಿಂದ ಸದ್ಯೋಮುಕ್ತಿ ಕ್ರಮಮುಕ್ತಿ ಎಂಬ ವಿಕಲ್ಪವನ್ನು ಹೇಳಲಾಗಿದೆ. ಹಾಗೆ ಇಲ್ಲಿ ಪ್ರಕರಣಭೇದದಿಂದಲೂ ಅಧಿಕಾರಿತಾರತಮ್ಯದಿಂದಲೂ ಉಪಾಸಕರಿಗೆ ಫಲಭೇದವುಂಟಾಗುತ್ತದೆ. ಆದ್ದರಿಂದ ಬೇರ ಬೇರೆ ಕಡೆಗಳಲ್ಲಿ ವಾಸವಾಗಿರುವ ಸದ್ಭಕ್ತರ ಬಳಿಗೆ ಏಕಕಾಲದಲ್ಲಿ ದೇವನು ಪ್ರತ್ಯಕ್ಷನಾಗುವಂತೆ ಬ್ರಹ್ಮೋಪಾಸಕರಿಗೆ ಸಾಲೋಕ್ಯ ಮೊದಲಾದ ನಾಲ್ಕುಬಗೆಯ ಮುಕ್ತಿಗಳು ಏಕಕಾಲದಲ್ಲಿ ಸಂಭವಿಸದೆ ಕ್ರಮವಾಗಿ ದೊರಕುತ್ತವೆ ಎಂದು ನಿಶ್ಚಯಿಸಲಾಗಿದೆ.

ನನು ನರಾಣಾಮಲ್ಪಜ್ಞಾನತ್ವಾತ್ ಅಲ್ಪಾಯುಷ್ಯತ್ವಾಚ್ಚ ಚಿರಕಾಲೋಪಾಸನಾಭಾವೇನ ಏಕಕಾಲೇ ಚತುರ್ವಿಧಮುಕ್ತಿರ್ನ ಭವೇತ್. ಹಿರಣ್ಯಗರ್ಭಾದಿದೇವಾನಾಂ ದಿವ್ಯಶರೀರತ್ವೇನ ಮಹಿಮಾತಿಶಯತ್ವೇನ ಚಿರಕಾಲೋಪಾಸನಯಾ ಜ್ಞಾನದಾರ್ಢ್ಯೇನ ಚ ಏಕಕಾಲೇ ತತ್ಸಂಭವ ತೀತ್ಯಾಶಂಕಾಯಾಮಾಹ. ಅತಿದೇಶಾಚ್ಚ ॥ ೪೬ ॥ "ಪರೀತ್ಯ ಲೋಕಾನ್ ಪರೀತ್ಯ ಭೂತಾನಿ। ಪರೀತ್ಯ ಸರ್ವಾಃ ಪ್ರದಿಶೋ ದಿಶಶ್ಚ॥" "ಪ್ರಜಾಪತಿಃ ಪ್ರಥಮಜಾ ಋತಸ್ಯ", "ಆತ್ಮನಾತ್ಮಾನಮಭಿಸಂಬಭೂವ" ಇತಿ ಶ್ರುತೌ ಚತುರ್ಮುಖಸ್ಯಾಪಿ "ನ ಕರ್ಮಣಾ" ಇತ್ಯಾದಿ ಶ್ರುತಿನಿರ್ದಿಷ್ಟವಿರಕ್ತಪುರುಷವತ್ ಸರ್ವೋಪಾಸನಾತ್ಯಾಗೇನ ಪರಶಿವ ಬ್ರಹ್ಮಪ್ರಾಪ್ತೇರತಿದೇಶಾದುಪದಿಷ್ಟತ್ವಾಚ್ಚ ದೇವಮನುಷ್ಯಾಣಾಮಪಿ ಶರೀರಭೇದಲೋಕಭೇದಮಹಿಮಾಭೇದದರ್ಶನೇಽಪಿ ಭಕ್ತಿಪ್ರಾಧಾನ್ಯೇ ಸರ್ವೇಷಾಂ ಮುಕ್ತಿಸ್ಸಮಾನ ಏವೇತಿ ಸಿದ್ಧಂ.

ಮನುಷ್ಯರು ಅಲ್ಪಜ್ಞರೂ ಅಲ್ಪಾಯುಗಳೂ ಆದ್ದರಿಂದ ಬಹಳಕಾಲ ಉಪಾಸನ

ಮಾಡಲಾರರು. ಇದರಿಂದ ಅವರಿಗೆ ಏಕಕಾಲದಲ್ಲಿ ನಾಲ್ಕುಬಗೆಯ ಮುಕ್ತಿ ದೊರಕಲಾರದು. ಆದರೆ ಹಿರಣಗರ್ಭ ಮೊದಲಾದ ದೇವತೆಗಳಿಗೆ ದಿವ್ಯಶರೀರವಿರುವುದರಿಂದಲೂ ಹೆಚ್ಚಿನ ಮಹಿಮೆ ಇರುವುದರಿಂದಲೂ ಬಹಳಕಾಲದ ಉಪಾಸನೆಯಿಂದಲೂ ಜ್ಞಾನವು ದೃಢವಾಗುತ್ತದೆ. ಆದ್ದರಿಂದ ಅವರಿಗೆ ಏಕಕಾಲದಲ್ಲಿ ನಾಲ್ಕುಬಗೆಯ ಮುಕ್ತಿಗಳು ಸಂಭವಿಸಬಹುದೆಂದಾಶಂಕಿಸಿ ನಿರಾಕರಿಸುತ್ತಾನೆ. "ಎಲ್ಲಾ ಲೋಕಗಳನ್ನೂ ಪಂಚಭೂತಗಳನ್ನೂ ವ್ಯಾಪಿಸಿ ಸತ್ಯನೆನಿಸಿದ ಪರಮಾತ್ಮನಿಂದ ಮೊದಲಿಗೆ ಹುಟ್ಟಿದ ಬ್ರಹ್ಮನು ತನ್ನನ್ನು ತನ್ನಿಂದಲೇ ತಿಳಿದನು" ಎಂಬ ಶ್ರುತಿಯಲ್ಲಿ ಚತುರ್ಮುಖನಿಗೂ "ನ ಕರ್ಮಣಾ" ಎಂಬ ಶ್ರುತಿಯಲ್ಲಿ ಹೇಳಿರುವ ವಿರಕ್ತ ಪುರುಷನಂತೆ ಎಲ್ಲಾ ವಾಸನೆಗಳ ತ್ಯಾಗದಿಂದ ಪರಶಿವಪ್ರಾಪ್ತಿಯನ್ನು ಹೇಳಲಾಗಿದೆ. ಆದ್ದರಿಂದ ದೇವತೆಗಳಿಗೂ ಮತ್ತು ಮನುಷ್ಯರಿಗೂ ಶರೀರದಲ್ಲಿ ಭೇದವಿದ್ದರೂ, ವರ್ತನೆ ಮತ್ತು ಮಹತ್ತ್ವಗಳಲ್ಲಿ ಭೇದವಿದ್ದರೂ ಭಕ್ತಿಯ ಬೆಳವಣಿಗೆಯಿಂದ ಮುಕ್ತಿಯಲ್ಲಿ ಮಾತ್ರ ಎಲ್ಲರೂ ಸಮಾನರಾಗಿಯೇ ಇರುವರೆಂದು ಸಿದ್ಧವಾಯಿತು.

ನನು ವಾಜಸನೇಯಾಗ್ನಿರಹಸ್ಯಬ್ರಾಹ್ಮಣೇ "ಮನಶ್ಚಿತೋ ವಾಕ್ಚಿತಃ ಪ್ರಾಣಶ್ಚಿತಃ" ಇತ್ಯಾದಿನಾ ಬ್ರಹ್ಮವಿದ್ಯಾಂಗಮಾಸಯಾಗಪ್ರಕರಣಪ್ರದರ್ಶನತ್ವೇಽಪಿ "ಅಸದ್ವಾ ಇದಮಗ್ರ ಆಸೀತ್" ಇತ್ಯಾದಿನಾ ಪೂರ್ವತ್ರ ಪ್ರಕೃತೇಷ್ಟಕಚಿತಾಗ್ನಿಶೇಷೀಭೂತಕ್ರಿಯಾಮಯಕ್ರತ್ವನುಪ್ರವೇಶಃ ಸ್ಯಾತ್. ತತಶ್ಚ ತೇಷಾಂ ಅಗ್ನೀನಾಂ ಇಷ್ಟಕಚಿತಾಗ್ನಿವಿಕಲ್ಪಭಾವೋ ಯುಕ್ತಃ. ಯಥಾ ದ್ವಾದಶಾಹದಶಮೇಽಹನ್ಯವಿವಾಕ್ಯೇ "ಅನಯಾ ಕಾಚಪಾತ್ರೇಣ ಸಮುದ್ರಂ ಸೋಮರಸಂ ಗೃಹ್ಣಾಮಿ" ಇತಿ ವ್ಯಪದೇಶಾತ್ ವಿದ್ಯಾರೂಪಾಣಾಮಪಿ ಕ್ರಿಯಾಮಯಕ್ರತ್ವನುಪ್ರವೇಶೇನ ಕ್ರಿಯಾರೂಪತ್ವಂ ಯುಜ್ಯತೇ. ಕಿಂಚ ತೇಷಾಮೇಕೈಕ ಏವ ತರ್ಹಿ ಯಾವಾನಸೌ ಪೂರ್ವ ಇತ್ಯತ್ರ ಪೂರ್ವಸ್ಯೇಷ್ಟಕಚಿತಸ್ಯಾಗ್ನೇರ್ವೀರ್ಯಂ ಮನಶ್ಚಿತಾದಿಷ್ವಪಿ ದಿಶ್ಯತೇ. ತೇನ ತುಲ್ಯಕಾರ್ಯತ್ವಾತ್ ವಿಕಲ್ಪಸ್ತತಶ್ಚೇಷ್ಟಕಚಿತವತ್ ಕ್ರತುನಿರ್ವರ್ತನೇನ ತದಂಗಭೂತಾ ಮನಶ್ಚಿತಾದಯಃ ಕ್ರಿಯಾಮಯಕ್ರತ್ವನುಪ್ರವೇಶೇನ ನೇತರಫಲತ್ವಮೇವೇತ್ಯಾಶಂಕಾಯಾಮಾಹ. ವಿದ್ಯೈವ ತು ನಿರ್ಧಾರಣಾದ್ದರ್ಶನಾಚ್ಚ ॥ ೪೬ ॥ ತುಶಬ್ದೋಽತ್ರ ನಿಶ್ಚಯಾರ್ಥಃ. ಯದುಕ್ತಂ ಮನಶ್ಚಿತಾದಯಃ ಕ್ರಿಯಾಮಯಕ್ರತ್ವನುಪ್ರವೇಶೇನ ಕ್ರಿಯಾರೂಪಾ ಏವೇತಿ ನೈತದಸ್ತಿ, ವಿದ್ಯಾರೂಪಾ ಏವೈತ ಇತ್ಯಸ್ಯ ವಿದ್ಯಾರೂಪಕ್ರತ್ವನುಯಾಯಿನಃ ಇತ್ಯರ್ಥಃ. ಕುತಃ ನಿರ್ಧಾರಣಾದರ್ಶನಾಚ್ಚ. ನಿರ್ಧಾರಣಂ ತಾವತ್, "ತೇ ಹೈತೇ ವಿದ್ಯಾಚಿತ ಏವಾಽವಿದ್ಯಯಾ ಹೈವೈತ ಏವಂ ವಿಪಶ್ಚಿತೋ ಭವಂತಿ ವಾಙ್ಮನಶ್ಚಕ್ಷುರಾದಿವ್ಯಾಪಾರಾಣಾಂ ಇಷ್ಟಕಾದಿವಚ್ಚಯನಾನು

ಪಪತ್ತೇರ್ಮನಸಾ ಸಂಪಾದಿತಾಗ್ನಿತ್ವೇನ ವಿದ್ಯಾರೂಪತ್ವೇ ಸಿದ್ಧೇಽಪಿ ", " ವಿದ್ಯಾಚಿತ ಏವ ವಿದ್ಯಾಯಾ ಹೈವೈತೇ " ಇತಿ ಚಾವಧಾರಣಂ ವಿದ್ಯಾಮಯಕ್ರತ್ವನ್ವಯೇನ ವಿದ್ಯಾರೂಪತ್ವಜ್ಞಾಪನಾರ್ಥಮಿತಿ ನಿಶ್ಚೀಯತೇ. " ದೃಶ್ಯತೇ ಚಾತ್ರೈವೈಷಾಂ ಶೇಷೀ ವಿದ್ಯಾರೂಪಃ ಕ್ರತುಃ ", " ತೇ ಮನಸೈವಾಧೀಯತೇ ಮನಸೈವಾವಚಿಂತಯಂತ ಮನಸೈವ ಗ್ರಹಾ ಅಗೃಹ್ಯಂತ ಮನಸಾಸ್ತುವಂತ ಮನಸಾಶಂಸನ್," " ಯತ್ಕಿಂಚ ಯಜ್ಞೇ ಕರ್ಮ ಕ್ರಿಯತೇ ಯತ್ಕಿಂಚ ಯಜ್ಞೀಯಂ ಕರ್ಮ ಮನಸೈವ ತೇಷು ಮನೋಮಯೇಷು ಮನಶ್ಚಿತ್ಸು ಮನೋಮಯಃ ಕ್ರಿಯತೇ " ಇತಿ, " ಇಷ್ಟಕಚಿತೇಷ್ವಗ್ನಿಷು ಯತ್ಕ್ರಿಯಾಮಯಂ ಯಜ್ಞೀಯಂ ಕರ್ಮ ಕ್ರಿಯತೇ ತನ್ಮನೋನಿವರ್ತ್ಯೇಷು ಮನಶ್ಚಿತಾದ್ಯಗ್ನಿಷು ಮನೋಮಯಮೇವಾಕ್ರಿಯತ " ಇತಿ ವಚನಾತ್ ಕ್ರತುರಪಿ ವಿದ್ಯಾಮಯ ಏವ.

ವಾಜಸನೇಯದ ಅಗ್ನಿರಹಸ್ಯಬ್ರಾಹ್ಮಣದಲ್ಲಿ ಬ್ರಹ್ಮವಿದ್ಯೆಗೆ ಅಂಗವಾಗಿ ಮಾನಸ ಯಜ್ಞದ ಪ್ರಕರಣವು ಬಂದಿದ್ದರೂ " ಇದೆಲ್ಲವೂ ಮೊದಲಿಗೆ ಅಸದ್ರೂಪವಾಗಿತ್ತು" ಎಂಬ ಕಡೆಯಲ್ಲಿ ಹೇಳಿರುವ ಬಾಹ್ಯಾಗ್ನಿಗೆ ಇದನ್ನು ಅಂಗವೆಂದೇ ಹೇಳಬೇಕು. ಆದ್ದರಿಂದ ಬಾಹ್ಯಾಗ್ನಿಯಂತೆಯೇ ಮನಸ್ಸು ಮೊದಲಾದವುಗಳನ್ನು ಅರ್ಪಣಮಾಡುವ ಅಗ್ನಿಗಳಿಗೂ ವಿಕಲ್ಪವನ್ನು ತಿಳಿಸುವುದೇ ಯುಕ್ತವಾಗುತ್ತದೆ. ದ್ವಾದಶಾಹಯಜ್ಞದ ಹತ್ತನೆಯದಿನದ ಕರ್ಮದಲ್ಲಿ " ಈ ಪಾತ್ರೆಯಿಂದ ಪರಿಶುದ್ಧವಾದ ಸೋಮರಸವನ್ನು ತೆಗೆದುಕೊಳ್ಳುತ್ತೇನೆ" ಎಂದು ವಿದ್ಯೆಯನ್ನೂ ಸಹ ಕ್ರಿಯಾರೂಪವಾದ ಯಜ್ಞಕ್ಕೆ ಅಂಗವೆಂದೇ ಹೇಳಿರುವುದರಿಂದ ಬ್ರಹ್ಮವಿದ್ಯೆಯು ಒಂದು ಕ್ರಿಯಾರೂಪವೇ ಹೊರತು ಸ್ವತಂತ್ರೋಪಾಸನವಲ್ಲ. " ಬಾಹ್ಯಾಗ್ನಿಯಂತೆಯೇ ಮನಸ್ಸು ಮೊದಲಾದವುಗಳನ್ನು ಅರ್ಪಿಸಿಕೊಳ್ಳುವ ಅಗ್ನಿಯೂ ಇರುವುದು" ಎಂಬ ಕಡೆಗಳಲ್ಲಿ ಬಾಹ್ಯಾಗ್ನಿಯ ಗುಣವನ್ನೇ ಒಳಗಿನ ಅಗ್ನಿಗಳಲ್ಲಿಯೂ ಹೇಳಲಾಗಿದೆ. ಇದರಿಂದ ಇವೆರಡಕ್ಕೂ ವಿಕಲ್ಪವೇ ಸಿದ್ಧಿಸುವುದು. ಆದ್ದರಿಂದ ಒಳಗಿನ ಬ್ರಹ್ಮವಿದ್ಯೆಗಳೂ ಸಹ ಕ್ರಿಯಾಮಯವಾದ ಯಜ್ಞಕ್ಕೆ ಅಂಗವೇ ಹೊರತು ಸ್ವತಂತ್ರವಾದ ಫಲವನ್ನು ಕೊಡಲಾರವು. ಹೀಗೆ ಆಕ್ಷೇಪಿಸಿ ಸಮಾಧಾನಮಾಡುತ್ತಾನೆ. ತು ಶಬ್ದವು ನಿಶ್ಚಯವನ್ನು ತಿಳಿಸುತ್ತದೆ. ಮಾನಸಿಕ ಯಜ್ಞವು ಕ್ರಿಯಾರೂಪವಾದ ಯಜ್ಞದಲ್ಲಿಯೇ ಸೇರಿಕೊಳ್ಳುವುದರಿಂದ ಅದೂ ಸಹ ಕ್ರಿಯಾರೂಪವೇ ಆಗಿದೆ ಎಂದು ಹೇಳಿದ್ದು ಯುಕ್ತವಲ್ಲ. ಜ್ಞಾನರೂಪವಾದ ಪ್ರತಿಯೊಂದು ಕ್ರಿಯೆಯೂ ಕ್ರಿಯಾಯಜ್ಞಕ್ಕೆ ಅನ್ವಯಿಸದೆ ಜ್ಞಾನಯಜ್ಞವನ್ನೇ ಅವಲಂಬಿಸಿರುತ್ತದೆ. ವಾಕ್ಕು ಮನಸ್ಸು ಕಣ್ಣು ಮೊದಲಾದ ಇಂದ್ರಿಯಗಳ ವ್ಯಾಪಾರಗಳು ಬಾಹ್ಯಾಗ್ನಿರೂಪವನ್ನು ತಾಳಲಸಾಧ್ಯವಾದ್ದರಿಂದ ಅವನ್ನು ಜ್ಞಾನರೂಪವೆಂದೇ ಒಪ್ಪಬೇಕು. " ಇವುಗಳು ಭಾವನೆಯಿಂದ ದೊರೆತು ಅಗ್ನಿಗಳೇ ಆಗಿವೆ " ಎಂದು ಶ್ರುತಿಯೂ ಇದನ್ನು ನಿರ್ಧಾರಮಾಡುತ್ತದೆ.

ಆದ್ದರಿಂದ ಇವು ಜ್ಞಾನರೂಪವಾದ ಯಜ್ಞಕ್ಕೆ ಸೇರಿರುವುವೇ ಹೊರತು ಕ್ರಿಯಾರೂಪವಾದ ಯಜ್ಞಕ್ಕೆ ಸೇರಿಲ್ಲ. ಈ ಪ್ರಕರಣದಲ್ಲಿಯೇ ಈ ಅಗ್ನಿಗಳಿಗೆ ವಿದ್ಯೆಯನ್ನೇ ಅಂಗಿ ಎಂದು ಹೇಳಿರುವುದಾಗಿ ಕಂಡುಬರುತ್ತದೆ. "ಮನಸ್ಸಿನಿಂದಲೇ ಅಗ್ನಿಯನ್ನು ಸ್ಥಾಪಿಸಿದರೂ ಚಿಂತಿಸಿದರೂ ಗ್ರಹಿಸಿದರೂ ಸ್ತುತಿಸಿದರೂ ಯಜ್ಞದಲ್ಲಿ ಯಾವ ಕರ್ಮಗಳನ್ನು ಮಾಡಿದರೂ ಅವನ್ನು ಮನೋಮಯವಾದ ಯಜ್ಞದಲ್ಲಿ ಮನಸ್ಸಿನಿಂದಲೇ ಭಾವಿಸುತ್ತಾರೆ." ಎಂದು ಬಾಹ್ಯಾಗ್ನಿಯಲ್ಲಿ ಮಾಡುವ ಕ್ರಿಯೆಗಳನ್ನು ಜ್ಞಾನಾಗ್ನಿಯಲ್ಲಿ ಮನಸ್ಸಿನಿಂದಲೇ ನಿರ್ವಹಿಸಬೇಕೆಂದು ಹೇಳಿರುವುದರಿಂದ ಮನಶ್ಚಿತ್ತಾದಿಗಳ ಅರ್ಪಣವು ಜ್ಞಾನಯಜ್ಞದ ಅಂಗವೇ ಹೊರತು ಕ್ರಿಯಾಯಜ್ಞದ ಅಂಗವಲ್ಲ.

**ನನ್ವತ್ರ ವಿಧಿಪದಶ್ರವಣಾತ್ ಫಲಸಂಬಂಧಾತ್ ಪ್ರತೀತೇಶ್ಚೇಷ್ಟಕಚಿತಾಗ್ನ್ಯುಪಸ್ಥಾಪಿತಕ್ರಿಯಾಮಯಕ್ರತುಪ್ರಕರಣಾದ್ವಿದ್ಯಾಮಯಕ್ರತ್ವನ್ವಯೇನ ವಿದ್ಯಾರೂಪತ್ವೈಷಾಂ ಬಾಧ್ಯೇತ, ನೇತ್ಯಾಹ. ಶ್ರುತ್ಯಾದಿಬಲೀಯಸ್ತ್ವಾಚ್ಚ ನ ಬಾಧಃ ॥ ೪೭ ॥ ಶ್ರುತಿಲಿಂಗವಾಕ್ಯಾನಾಂ ಪ್ರಕರಣಾದ್ಬಲೀಯಸ್ತ್ವೇನ ಶ್ರುತ್ಯಾದ್ಯುಪಗತಃ ಕ್ರತುರೇಷಾಂ ತದನ್ವಯಶ್ಚ ದುರ್ಬಲೇನ ಪ್ರಕರಣೇನ ಬಾಧಿತುಂ ನ ಶಕ್ಯತೇ. ಶ್ರುತಿಸ್ತಾವತ್ "ತೇ ಹೈತೇ ವಿದ್ಯಾಚಿತ ಏವೇತಿ। ತಾಂ ವಿವೃಣೋತಿ। ವಿದ್ಯಯಾ ಹೈವೈತೇ ಏವಂ ವಿಪಶ್ಚಿತೋ ಭವಂತಿ ॥" ಇತಿ. ವಿದ್ಯಯಾ ವಿದ್ಯಾಮಯೇನ ಕ್ರತುನಾ ಸಂಬಂಧಾನ್ಮನಶ್ಚಿತಾದಯಶ್ಚಿತಾ ಭವಂತೀತ್ಯರ್ಥಃ. "ತಾನ್ ಹೈವೈವಂವಿದೇ ಸರ್ವದಾ ಸರ್ವಾಣಿ ಭೂತಾನಿ ಚಿನ್ವಂತ್ಯಪಿ ಸ್ವಪತೇ" ಇತಿ ಲಿಂಗಂ. ವಾಕ್ಯಂ ಚ "ಏವಂ ವಿದೇ ಚಿನ್ವಂತಿ" ಇತಿ. ಸಮಭಿವ್ಯಾಹಾರೋ ವಾಕ್ಯಂ. ಏವಂವಿದೇ ವಿದ್ಯಾಮಯಕ್ರತುಮತೇ ಸರ್ವದಾ ಸರ್ವಾಣಿ ಭೂತಾನಿ ಚಿನ್ವಂತೀತ್ಯರ್ಥಃ. ಸರ್ವಭೂತಕರ್ತೃಕಂ ಸರ್ವಕಾಲವ್ಯಾಪಿ ಚ. ಯದೇವ ಮನಸಾ ಸಂಪಾದಿತಂ ಪರಿಮಿತಕರ್ತೃಕಾಲಕ್ರಿಯಾಮಯೇಷ್ಟಕಚಿತಕಾರ್ಯದ್ವಾರೇಣ ಕ್ರತ್ವನುಪ್ರವೇಶಸಂಭವಮಲಭಮಾನಂ ವಿದ್ಯಾಮಯಕ್ರತ್ವನುಪ್ರವೇಶೇ ಲಿಂಗಂ ಭವತಿ.**

ಇಲ್ಲಿ ಮಾನಸಿಕ ಯಜ್ಞವನ್ನು ಪ್ರತ್ಯೇಕವಾಗಿ ವಿಧಿಸುವ ಪದವಿರುವುದರಿಂದಲೂ, ಎರಡರ ಫಲವೂ ಬೇರೆಬೇರೆಯಾಗಿ ತೋರುವುದರಿಂದಲೂ, ಇಟ್ಟಿಗೆಯಿಂದ ಕುಂಡವನ್ನು ರಚಿಸಿ ಅದರಲ್ಲಿ ಅಗ್ನಿಯನ್ನು ಸ್ಥಾಪಿಸಿ ಅದರಿಂದ ಸೂಕ್ತವಾದ ಕ್ರಿಯೆಯನ್ನು ಆಚರಿಸುವ ಪ್ರಕರಣದಲ್ಲಿಯೇ ಇವನ್ನೂ ಹೇಳಿರುವುದರಿಂದಲೂ ಇವನ್ನು ಜ್ಞಾನಯಜ್ಞದಲ್ಲಿ ಅನ್ವಯಿಸಲಾಗುವುದಿಲ್ಲ. ಆದ್ದರಿಂದ ಇವನ್ನು ಉಪಾಸನವೆಂದು ಹೇಗೆ ಒಪ್ಪಬಹುದು? ಎಂದಾಶಂಕಿಸಿ ಸಮಾಧಾನ ಮಾಡುತ್ತಾನೆ. ಶ್ರುತಿ, ಲಿಂಗ ಮತ್ತು ವಾಕ್ಯಗಳು ಪ್ರಕರಣಕ್ಕಿಂತಲೂ ಬಲಿಷ್ಠವಾದ್ದರಿಂದ ಇವುಗಳಿಗೆ ಸಮ್ಮತವಾದ ಯಜ್ಞವನ್ನೂ ಅದರ ಆಚರಣವನ್ನೂ ದುರ್ಬಲವಾದ ಪ್ರಕರಣದಿಂದ ಬಾಧಿಸಲು

ಸಾಧ್ಯವಾಗುವುದಿಲ್ಲ.ಶ್ರುತಿಯಾದರೋ ಜ್ಞಾನಮಯವಾದ ಯಜ್ಞದಲ್ಲಿಯೇ ಮನಸ್ಸು ಮೊದಲಾದವುಗಳ ಅರ್ಪಣವೂ ಸಂಬಂಧಪಟ್ಟಿದೆ ಎಂದು ಸ್ಪಷ್ಟವಾಗಿ ತಿಳಿಸುತ್ತದೆ. "ಈ ರೀತಿಯಲ್ಲಿ ತಿಳಿದವನೇ ಮನಸ್ಸು ಮೊದಲಾದವುಗಳ ಅರ್ಪಣವನ್ನು ಮಾಡುತ್ತಾನೆ" ಎಂಬಲ್ಲಿ ಲಿಂಗ ಮತ್ತು ವಾಕ್ಯ ಇವೆರಡೂ ಮನೋಽರ್ಪಣವನ್ನು ಜ್ಞಾನಯಜ್ಞವೆಂದು ತಿಳಿಸುತ್ತವೆ. ಹೀಗೆ ಜ್ಞಾನಮಯವಾದ ಯಜ್ಞವನ್ನಾಚರಿಸುವವನಿಗೆ ಯಾವಾಗಲೂ ಎಲ್ಲಾ ಭೂತಗಳೂ ವಶವಾಗುತ್ತವೆ. ಇವನು ಸರ್ವ ಭೂತಗಳಲ್ಲೂ ಸರ್ವಕಾಲಗಳಲ್ಲೂ ವ್ಯಾಪಿಸುವಷ್ಟು ವೈಶಾಲ್ಯವನ್ನು ಪಡೆಯುತ್ತಾನೆ. ಕ್ರಿಯಾರೂಪವಾದ ಯಜ್ಞವನ್ನಾಚರಿಸುವುದರಿಂದ ಪರಿಮಿತವಾದ ಫಲವನ್ನೇ ಅವನು ಪಡೆಯುತ್ತಾನೆ. ಆದ್ದರಿಂದ ಮನೋಽರ್ಪಣ ಮೊದಲದವು ಕ್ರಿಯಾರೂಪವಾದ ಯಜ್ಞಕ್ಕೆ ಅಂಗವಾಗದೆ ಜ್ಞಾನರೂಪವಾದ ಯಜ್ಞಕ್ಕೇ ಅಂಗವಾಗುತ್ತವೆ ಎಂದು ಶ್ರುತಿ ಲಿಂಗ ವಾಕ್ಯಗಳು ತಿಳಿಸುತ್ತವೆ.

ಯಚ್ಚೋದಮುಕ್ತಂ ವಿಧಿಪ್ರತ್ಯಯಾಶ್ರವಣಾತ್ಫಲಸಂಬಂಧಪ್ರತೀತೇಶ್ಚ ಕ್ರಿಯಾಮಯಾತ್ಕ್ರತೋರನ್ಯತ್ರ ವಿದ್ಯಾಮಯಃ ಕ್ರತುರ್ನ ಸಂಭವತೀತಿ ತತ್ರಾಹ. **ಅನುಬಂಧಾದಿಭ್ಯಃ ಪ್ರಜ್ಞಾಂತರಪೃಥಕ್ತ್ವವದ್ದೃಷ್ಟಶ್ಚ ತದುಕ್ತಂ ॥ ೪೮ ॥** ಇಷ್ಟಕಚಿತಾನ್ಮಯಿನಃ ಕ್ರಿಯಾಮಯಾತ್ಕ್ರತೋಃ ವಿದ್ಯಾಮಯೋಽಯಂ ಕ್ರತುಪೃಥಕ್ತ್ವೇನ ಅನುಬಂಧಾದಿಭ್ಯಃ ಪೃಥಕ್ತ್ವಹೇತುಭ್ಯೋಽವಗಮ್ಯತೇ. ಅನುಬಂಧಾಃ ಯಜ್ಞಾನುಬಂಧಿನೋ ಗ್ರಹಸ್ತೋತ್ರಶಸ್ತ್ರಾದಯಃ "ಮನಸೈವ ಗ್ರಹಾ ಅಗೃಹ್ಯಂತ ಮನಸಾ ಸ್ತುವಂತ ಮನಸಾ ಶಂಸನ್" ಇತ್ಯಾದಿನಾ ಪ್ರತಿಪಾದಿತಾಃ. ಆದಿಶಬ್ದೇನ ಶ್ರುತ್ಯಾದಯಃ ಪೂರ್ವೋಕ್ತಾ ಗೃಹ್ಯಂತೇ. ಶ್ರುತ್ಯಾದಿಭಿಸ್ಸಾನುಬಂಧೈಃ ವಿದ್ಯಾಮಯಕ್ರತುಃ ಪೃಥಗವಗಮ್ಯತ ಇತ್ಯರ್ಥಃ. ಪ್ರಜ್ಞಾಂತರಪೃಥಕ್ತ್ವವತ್ ಯಥಾ ಪ್ರಜ್ಞಾಂತರಂ ದಹರವಿದ್ಯಾದಿ ಕ್ರಿಯಾಮಯಾತ್ ಕ್ರತೋಃ ಪೃಥಗ್ಭೂತಂ ಶ್ರುತ್ಯಾದಿಭಿರವಗಮ್ಯತೇ. ಏವಮಯಮಪಿ. ಏವಂಚಾನುಬಂಧಾದಿಭಿಃ ಪೃಥಗ್ಭೂತೇ ವಿದ್ಯಾಮಯೇ ಯಜ್ಞೇಽವಗತೇ ಸತಿ ವಿಧಿಃ ಪರಿಕಲ್ಪ್ಯತೇ. "ದೃಷ್ಟಶ್ಚಾನುವಾದಸ್ವರೂಪೇಷು ಕಲ್ಪ್ಯಮಾನೋ ವಿಧಿಸ್ತದುಕ್ತವಚನಾನಿ ತ್ವಪೂರ್ವತ್ವಾತ್ ಇತಿ ಫಲಂ ಚ ತೇಷಾಮೇಕೈಕ ಏವ ತಾವಾನ್ ಯಾವಾನಸೌ ಪೂರ್ವ" ಇತ್ಯತಿದೇಶಾತ್ ಸ್ವಕ್ರತುದ್ವಾರೇಣ ಇಷ್ಟಕಚಿತಸ್ಯಾಗ್ನೇರ್ಯತ್ಫಲಂ ತದೇವ ಮನಶ್ಚಿತಾದೀನಾಮಪಿ ಸ್ವಕ್ರತುದ್ವಾರೇಣ ಫಲಮಿತ್ಯವಗಮ್ಯತೇ.

ವಿಧಿಪ್ರತ್ಯಯವಿಲ್ಲದ್ದರಿಂದಲೂ,ಫಲಸಂಬಂಧವು ತೋರದಿರುವುದರಿಂದಲೂ ಕ್ರಿಯಾರೂಪವಾದ ಯಜ್ಞಕ್ಕಿಂತ ಬೇರೆಯಾಗಿ ಉಪಾಸನರೂಪವಾದ ಯಜ್ಞವೇ ಸಂಭವಿ

ಸುವುದಿಲ್ಲವೆಂಬ ಬಗ್ಗೆ ಈಗ ತಿಳಿಸುತ್ತಾನೆ. ಇಟ್ಟಿಗೆಯಿಂದ ಅಗ್ನಿಕುಂಡವನ್ನು ರಚಿಸಿ ನೆರವೇರಿಸುವ ಯಜ್ಞಕ್ಕಿಂತಲೂ ಜ್ಞಾನಯಜ್ಞವು ಬೇರೆ ಎಂದು ಅನುಬಂಧಾದಿಗಳಿಂದ ತಿಳಿದುಬರುತ್ತದೆ. ಯಜ್ಞಕ್ಕೆ ಸಂಬಂಧಿಸಿದ ಗ್ರಹಸ್ತೋತ್ರಗಳೇ ಅನುಬಂಧವೆನಿಸುತ್ತವೆ. "ಗ್ರಹಗಳನ್ನು ಮನಸ್ಸಿನಿಂದಲೇ ತಿಳಿಯಬೇಕು, ಸ್ತುತಿಸಬೇಕು ಮತ್ತು ಪ್ರಶಂಕಿಸಬೇಕು" ಎಂಬ ಪ್ರಮಾಣದಂತೆ "ಅನುಬಂದಾದಿ" ಎಂಬಲ್ಲಿ ಆದಿಪದದಿಂದ ಶ್ರುತ್ಯಾದಿಗಳನ್ನೇ ಗ್ರಹಿಸಬೇಕು. ಅನುಬಂಧಸಹಿತವಾದ ಶ್ರುತಿಗಳು ಜ್ಞಾನಯಜ್ಞವನ್ನು ಕ್ರಿಯಾಯಜ್ಞಕ್ಕಿಂತಲೂ ಬೇರೆ ಎಂದು ತಿಳಿಸುತ್ತವೆ. ಅವೇ ಶ್ರುತಿಗಳು ಹೇಗೆ ದಹರವಿದ್ಯೆ ಮೊದಲಾದ ಉಪಾಸನವನ್ನು ಕ್ರಿಯಾರೂಪವಾದ ಯಜ್ಞಕ್ಕಿಂತಲೂ ಬೇರೆ ಎಂದು ತಿಳಿಸಿವೆಯೋ ಹಾಗೆಯೇ ಇಲ್ಲಿಯೂ ಅನುಬಂಧಾದಿಗಳಿಂದ ಕ್ರಿಯಾಯಜ್ಞಕ್ಕಿಂತಲೂ ಬೇರೆಯಾದ ಉಪಾಸನರೂಪವಾದ ಯಜ್ಞವನ್ನು ತಿಳಿದಮೇಲೆ ವಿಧಿಯನ್ನು ಕಲ್ಪಿಸಬೇಕು. ವಿಧಿಇಲ್ಲದಕಡೆಯಲ್ಲಿ ವಿಧಿಯನ್ನು ಕಲ್ಪಿಸುವುದು ಪೂರ್ವಮೀಮಾಂಸಾನ್ಯಾಯದಿಂದ ಸಿದ್ಧವಾಗುತ್ತದೆ. ಕ್ರಿಯಾರೂಪವಾದ ಯಜ್ಞಗಳೆಲ್ಲವೂ ಕೊಡುವ ಫಲವನ್ನು ಈ ಜ್ಞಾನಯಜ್ಞ ಒಂದೇ ಕೊಡಬಲ್ಲದು" ಎಂದು ಶ್ರುತಿಯೇ ಈ ಜ್ಞಾನಯಜ್ಞದ ಫಲವನ್ನು ತಿಳಿಸುತ್ತದೆ.

ಯತ್ಪುನರತಿದೇಶೇನ ತುಲ್ಯಕಾರ್ಯತ್ವಾವಗಮಾತ್ ಕ್ರಿಯಾಮಯಕ್ರತ್ವನುಪ್ರವೇಶೋಽವಗಮ್ಯತ ಇತ್ಯುಕ್ತಂ ತತ್ರಾಹ. ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಹಿ ಲೋಕಾಪತ್ತಿಃ ॥ ೪೯ ॥ ನಾವಶ್ಯಮಿತಿ ದೇಶಾದವಾಂತರವ್ಯಾಪಾರಸ್ಯಾಪಿ ತುಲ್ಯತಯಾ ಭವಿತವ್ಯಂ ಯೇನ ಕ್ರಿಯಮಯಕ್ರತ್ವನುಪ್ರವೇಶ ಏಷಾಂ ಸ್ಯಾತ್. ಯಸ್ಮಾತ್ತಸ್ಮಾಚ್ಚಿತ್ಸಾಮಾನ್ಯಮಾತ್ರಾದತಿದೇಶೋಪಲಬ್ಧೇಃ. ಉಪಲಭ್ಯತೇ ಹಿ "ಸ ವಾ ಏಷ ಏವ ಮೃತ್ಯುರ್ಯ ಏಷ ಏತಸ್ಮಿನ್ಮಂಡಲೇ ಪುರುಷಃ" ಇತ್ಯಾದಿಷು ಸಂಹರ್ತೃತ್ವಾದಿಸಾಮಾನ್ಯಮಾತ್ರಾದತಿದೇಶಃ. ನಹಿ ತತ್ರ ಮಂಡಲಪುರುಷಸ್ಯ ಮೃತ್ಯುವತ್ತಲ್ಲೋಕಾಪತ್ತಿಃ ತದ್ದೇಶಪ್ರಾಪ್ತಿರಪಿ ಭವತಿ. ಏವಮಿಹಾಪಿ ಮನಶ್ಚಿತಾದೀನಾಂ ಇಷ್ಟಕಚಿತಾಗ್ನಿವದ್ಭಾವಾತ್ ದೇಶಮಾತ್ರೇಣೇಷ್ಟಕಚಿತಾಗ್ನಿದೇಶರೂಪಕ್ರಿಯಾಮಯಕ್ರತ್ವನುಪ್ರವೇಶೇನಾಪಿ ನ ಭವಿತವ್ಯಂ. ಅತ ಇಷ್ಟಕಚಿತಾಗ್ನೇಃ ಸ್ವಕ್ರತುದ್ವಾರೇಣ ಯತ್ಫಲಂ ತದೇವ ಮನಶ್ಚಿತಾದೀನಾಮಪಿ ವಿದ್ಯಾಮಯಕ್ರತುದ್ವಾರೇಣ ಫಲಮಿತ್ಯತಿದೇಶಾದವಗಮ್ಯತೇ.

ಜ್ಞಾನಾಗ್ನಿ ಮತ್ತು ಬಾಹ್ಯಾಗ್ನಿಗಳೆರಡಕ್ಕೂ ವಿಕಲ್ಪವು ಬರುವುದರಿಂದ ಜ್ಞಾನಾಗ್ನಿಯು ಕ್ರಿಯಾಯಜ್ಞಕ್ಕೆ ಅಂಗವೇ ಆಗುವುದೆಂದು ಹೇಳಿದ ಆಕ್ಷೇಪಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಒಂದುಕಡೆಯಲ್ಲಿ ಎರಡನ್ನೂ ಸಾಮಾನ್ಯವಾಗಿ ಹೇಳಿದಮಾತ್ರಕ್ಕೆ ಎರಡಕ್ಕೂ ವಿಕಲ್ಪವು ಬರುತಿವಂತಿಲ್ಲ. ಹಾಗಾದರೆ ಜ್ಞಾನಾಗ್ನಿಯು ಕ್ರಿಯಾ

ರೂಪವಾದ ಯಜ್ಞಕ್ಕೆ ಅಂಗವಾಗುತ್ತಿತ್ತು. ಆದರೆ "ಆ ಇವನೇ ಮೃತ್ಯು, ಇವನೇ ಸೂರ್ಯಮಂಡಲದಲ್ಲಿರುವ ಪುರುಷನು" ಎಂಬಲ್ಲಿ ಮೃತ್ಯುವನ್ನೂ ಆ ಪುರುಷನನ್ನೂ ಸಾಮಾನ್ಯವಾಗಿ ಒಂದೇ ಕಡೆಯಲ್ಲಿ ಹೇಳಿದ್ದರೂ ಮಂಡಲದಲ್ಲಿರುವ ಪುರುಷನು ಮೃತ್ಯುವಲ್ಲ. ಮೃತ್ಯುವಿನಲ್ಲಿರುವ ಸಂಹಾರರೂಪವಾದ ಕ್ರಿಯೆಯನ್ನು ಮುಂದಿಟ್ಟು ಕೊಂಡು ಆ ವಾಕ್ಯವು ಮಂಡಲದಲ್ಲಿರುವ ಪರಮಾತ್ಮನನ್ನೇ ಹೇಳುತ್ತದೆ. ಹೀಗೆ ಒಂದುಕಡೆಯಲ್ಲಿ ಹೇಳಿದ ಮಾತ್ರದಿಂದಲೇ ಮಂಡಲದಲ್ಲಿರುವ ಪುರುಷನು ಹೇಗೆ ಯಮನಾಗುವುದಿಲ್ಲವೋ ಹಾಗೆ ಇಲ್ಲಿಯೂ ಬಾಹ್ಯಾಗ್ನಿಯ ಒಂದು ಸಾದೃಶ್ಯದಿಂದ ಜ್ಞಾನಾಗ್ನಿಯನ್ನು ಹೇಳಿದ್ದರೂ ಈ ಜ್ಞಾನಾಗ್ನಿಯು ಕ್ರಿಯಾರೂಪವಾದ ಯಜ್ಞಕ್ಕೆ ಅಂಗವಾಗಲಾದು; ಆದರೆ ಅದು ಬ್ರಹ್ಮವಿದ್ಯೆಗೆ ಸೇರಿದುದು. ಆದ್ದರಿಂದ ಬಾಹ್ಯಾಗ್ನಿಯು ಹೇಗೆ ಕ್ರಿಯಾಯಜ್ಞಕ್ಕೆ ಅಂಗವಾಗುವುದೋ ಹಾಗೆ ಜ್ಞಾನಾಗ್ನಿಯು ಜ್ಞಾನ ಯಜ್ಞಕ್ಕೇ ಅನ್ವಯಿಸುವುದೆಂದು ಸ್ಪಷ್ಟವಾಗುತ್ತದೆ.

ಯದಿ ಮನಸಾಗ್ನಿಚಯನಂ ಸ್ವಾತಂತ್ರ್ಯೇಣ ಬ್ರಹ್ಮಲೋಕಪ್ರಾಪ್ತಿ ಸಾಧನಂ ಸ್ವತಂತ್ರೋಪಾಸನಭೂತಂ ಮಾನಸಾಗ್ನಿಚಯನಂ ಮಾನಸ ಜ್ಯೋತಿಷ್ಟೋಮವತ್ ಉಪನಿಷತ್ಸ್ವೇವ ಪಠಿತವ್ಯಂ. ತಥಾಚ ಕರ್ಮ ಕಾಂಡೇ ಇಷ್ಟಕಾಗ್ನಿಚಯನಸನ್ನಿಧೌ ಪಠಿತತ್ವಮಸಂಗತಮಿತ್ಯಾ ಶಂಕ್ಯಾಹ. ಪರೇಣ ಚ ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾತ್ತ್ವನುಬಂಧಃ ॥ ೫೦ ॥ ಪರೇಣ ಚ ಬ್ರಾಹ್ಮಣೇನ ಅಸ್ಯಾಪಿ ಮನಶ್ಚಿತಾದ್ಯಭಿಧಾಯಿನ ಶ್ಶಬ್ದಸ್ಯ ತಾದ್ವಿಧ್ಯಂ ತದ್ವಿಧತ್ವಂ ವಿದ್ಯಾಮಯೇ ಕ್ರತೌ ಪ್ರತಿಪಾದಿತತ್ವ ಮವಗಮ್ಯತೇ. ಪರೇಣ ಹಿ ಬ್ರಾಹ್ಮಣೇನ "ಅಯಂ ವಾವ ಲೋಕಃ ಏಷೋಽಗ್ನಿಚಿತಸ್ತಸ್ಯಾಪ ಏವ ಪರಿಶ್ರಿತಾಃ" ಇತ್ಯಾದಿನಾ, "ಸ ಯೋ ಹೈತದೇವಂ ವೇದ ಲೋಕಂ ಪೃಣಾನಮೇನಂ ಭೂತಮೇತತ್ಸರ್ವಮಭಿ ಸಂಪದ್ಯತ" ಇತಿ ಪೃಥಕ್ಫಲಾ ವಿದ್ಯೈವ ವಿಧೀಯತೇ. ಅತೋಽಗ್ನಿ ರಹಸ್ಯಸ್ಯ ಕ್ರಿಯೈಕವಿಷಯತ್ವಂ ನಾಸ್ತಿ. ಏವಂ ತರ್ಹಿ ವಿದ್ಯಾಮಯಾ ಮನಶ್ಚಿತಾದಯೋ ಬೃಹದಾರಣ್ಯಕೇಽನುಬಂಧವ್ಯಾಃ ಕಿಮರ್ಥಮಿಹಾ ನುಬಧ್ಯಂತೇ. ತತ್ರೋಚ್ಯತೇ ಭೂಯಸ್ತ್ವಾನುಭಂಧ ಇತಿ. ಮನಶ್ಚಿ ತಾದಿಷು ಸಂಪಾದನೀಯಾನಾಮಪ್ಯಂಗನಾಂ ಭೂಯಸ್ತ್ವಾತ್ ತತ್ಸಂನಿ ಧಾವಿಹಾನುಬಂಧಃ ಕೃತಃ. ತಸ್ಮಾತ್ "ತಸ್ಯೈವಂ ವಿದುಷೋ ಯಜ್ಞ ಸ್ಯಾತ್ಮಾ ಯಜಮಾನಃ ಶ್ರದ್ಧಾ ಪತ್ನೀ" ಇತ್ಯಾದಿಶ್ರುತಿಪ್ರತಿಪಾದಿತಸ್ಯ ಸಾಂಗಸ್ಯ ಮಾನಸಜ್ಯೋತಿಷ್ಟೋಮಸ್ಯ ಯಥಾ ಪೃಥಕ್ತ್ವಂ ಸ್ವಾತಂ ತ್ರ್ಯೇಣ ಪರಶಿವಬ್ರಹ್ಮಲೋಕಪ್ರಾಪ್ತಿಸಾಧನತ್ವಂ ತದ್ವನ್ಮಾನಸಸ್ಯಾಗ್ನಿ ಚಯನಸ್ಯಾಪಿ ಸ್ವಾತಂತ್ರ್ಯೇಣ ಪರಶಿವಬ್ರಹ್ಮಲೋಕಪ್ರಾಪ್ತಿಸಾಧನತ್ವಂ ಉಪಪನ್ನಮಿತ್ಯರ್ಥಃ.

ಜ್ಞಾನಾಗ್ನಿಯು ಪರಂಪರೆಯಾಗಿ ಬ್ರಹ್ಮಲೋಕವನ್ನು ದೊರಕಿಸುವ ಸಾಧನವಾದರೆ ಅದನ್ನು ಮಾನಸ ಜ್ಯೋತಿಷ್ಟೋಮದಂತೆ ಉಪನಿಷತ್ತಿನಲ್ಲಿಯೇ ಹೇಳಬೇಕಾಗಿತ್ತೇ ಹೊರತು ಕರ್ಮಕಾಂಡದಲ್ಲಿ ಬಾಹ್ಯಾಗ್ನಿಪ್ರಕರಣದಲ್ಲಿ ಹೇಳಿದ್ದು ಅಸಂಗತವಾಗುತ್ತದೆ ಎಂದು ಆಕ್ಷೇಪಿಸಿ ಸಮಾಧಾನವನ್ನು ತಿಳಿಸುತ್ತಾನೆ. ಈ ಪ್ರಕರಣದ ಮುಂದಿನ ಬ್ರಾಹ್ಮಣವೂ ಸಹ ಈ ಜ್ಞಾನಾಗ್ನಿಯನ್ನು ಜ್ಞಾನಯಜ್ಞಕ್ಕೆ ಅಂಗವೆಂದೇ ತಿಳಿಸುತ್ತದೆ. "ಜ್ಞಾನಾಗ್ನಿಯನ್ನು ಸಂಪಾದಿಸಿಕೊಂಡವನಿಗೆ ಈ ಲೋಕಪ್ರಾಪ್ತಿಯೇ ಫಲವಾಗುತ್ತದೆ. ಇದನ್ನು ಅರಿತವನು ಈ ಎಲ್ಲಾ ಲೋಕಗಳನ್ನೂ ಪಂಚಭೂತಗಳನ್ನೂ ವ್ಯಾಪಿಸುತ್ತಾನೆ" ಎಂದು ಈ ಜ್ಞಾನಾಗ್ನಿಯನ್ನು ಪ್ರತ್ಯೇಕವಾದ ಫಲವುಳ್ಳ ವಿದ್ಯೆಎಂದೇ ಶ್ರುತಿಯು ವಿಧಿಸಿದೆ. ವೈಶ್ವಾನರ ವಿದ್ಯೆಯಲ್ಲೂ ಸಹ ಇದೇ ರೀತಿ ಕಂಡುಬರುತ್ತದೆ. ಆದ್ದರಿಂದ ಈ ಜ್ಞಾನಯಜ್ಞವು ಕ್ರಿಯಾಮಯವಾದ ಯಜ್ಞಕ್ಕೆ ಸೇರಿದ್ದಲ್ಲ. ಇದನ್ನು ಉಪನಿಷತ್ತಿನಲ್ಲಿ ಹೇಳದೆ ಈ ಕರ್ಮಪ್ರಕರಣದಲ್ಲಿ ಏಕೆ ಹೇಳಿದೆ? ಎಂದರೆ ಬಾಹ್ಯಾಗ್ನಿಯೊಂದಿಗೆ ಈ ಜ್ಞಾನಾಗ್ನಿಗೆ ಹೆಚ್ಚಿನ ಸಾದೃಶ್ಯವಿರುವುದರಿಂದ ಆ ಪ್ರಕರಣದಲ್ಲಿಯೇ ಇದನ್ನು ಹೇಳಲಾಗಿದೆ. ಆದ್ದರಿಂದ "ಜ್ಞಾನಯಜ್ಞಕ್ಕೆ ಆತ್ಮನೇ ಯಜಮಾನನು, ಶ್ರದ್ಧೆಯೇ ಪತ್ನಿ" ಎಂದು ಮುಂತಾಗಿ ಶ್ರುತಿಯಲ್ಲಿ ಹೇಳಿರುವ ಸಾಂಗವಾದ ಮಾನಸ ಜ್ಯೋತಿಷ್ಟೋಮವು ಸ್ವತಂತ್ರವಾಗಿ ಪರಶಿವ ಬ್ರಹ್ಮಲೋಕವನ್ನು ದೊರಕಿಸುವಂತೆ ಜ್ಞಾನಾಗ್ನಿಸಾಧನಗಳೂ ಸಹ ಸ್ವತಂತ್ರವಾಗಿ ಪರಶಿವಬ್ರಹ್ಮಲೋಕವನ್ನು ದೊರಕಿಸುತ್ತವೆ ಎಂಬುದು ಯುಕ್ತವೇ ಆಗಿದೆ.

ನನು ಉಪಾಸ್ಯೋಪಾಸಕತ್ವೇನ ಜೀವಬ್ರಹ್ಮಣೋಃ ಪೂರ್ವಾವಸ್ಥಾಯಾಂ ಪರಸ್ಪರಂ ಪಾರಮಾರ್ಥಿಕಭೇದಃ, ಪರಶಿವೋಪಾಸನಾಪ್ರಭಾವೇಣ ತದ್ವತ್ ಪಾರಮಾರ್ಥಿಕಾಭೇದಶ್ಚ ಸಿದ್ಧ್ಯತಿ ಇತಿ ಯದುಕ್ತಂ ತನ್ನ "ಐತದಾತ್ಮ್ಯಮಿದಂ ಸರ್ವಂ", "ಅಯಮಾತ್ಮಾ ಬ್ರಹ್ಮ" ಇತ್ಯಾದಿಷು ಜೀವಾತಿರಿಕ್ತೇಶ್ವರಸದ್ಭಾವಾದರ್ಶನಾನ್, "ಸ್ವಯಂ ಸ್ವಮೇವ ಧ್ಯಾಯತೇ ಮಹ್ಯಮೇವ ನಮೋ ನಮಃ" ಇತ್ಯಾದಿಪೂರ್ವಾಚಾರ್ಯವಚನೇಷು ಚ ಸ್ವಸ್ಯ ಸ್ವೋಪಾಸನಮೇವ ವ್ಯವಸ್ಥಾಪನಾತ್ತದೇವ ಯುಕ್ತಮಿತ್ಯಾಶಂಕಾಯಾಮಧಿಕರಣಾಂತರೇಣ ನಿರಾಕರೋತಿ. ಏಕ ಆತ್ಮಾಧಿಕರಣಂ ॥ ೨೧ ॥ ಏಕ ಆತ್ಮನಶ್ಶರೀರೇ ಭಾವಾತ್ ॥ ೫೧ ॥ ಆತ್ಮನಃ ಜೀವಾತ್ ಏಕಧಾ ಪರಮಾತ್ಮಾ ಶಿವಃ ಶರೀರೇ ಶರೀರಸ್ಥಿತದಹರಾಕಾಶೇ ಭಾವಾತ್ ಜೀವನಿಯಾಮಕತ್ವೇನ ಸದ್ಭಾವಾತ್ "ಗುಹಾಪ್ರತಿಷ್ಠೇ ಪರಮೇ ಪರಾರ್ಧೇ" ಇತ್ಯಾದಿಶ್ರುತಿಷು ಜೀವಾತಿರಿಕ್ತತ್ವೇನ ಬ್ರಹ್ಮತ್ವೋಪದೇಶಾತ್ ಜೀವಸ್ಯೈವ ಸ್ವಸ್ಯೋಪಾಸನಂ ಅಯುಕ್ತಂ. ಸರ್ವಾಸು ಪರವಿದ್ಯಾಸು ಉಪಾಸ್ಯೋಪಾಸನಸ್ವರೂಪವತ್ ಉಪಾಸಕಸ್ವರೂಪಸ್ಯಾಪಿ ಜ್ಞಾತವ್ಯತ್ವಮುಪದಿಷ್ಟಂ. "ತ್ರಯಾಣಾಮೇವ

ಚೋಪನ್ಯಾಸಃ ಪ್ರಶ್ನಶ್ಚೇತಿ ”, “ ಭೃಗುರ್ವೈ ವಾರುಣಿಃ ಪಿತರಮುಪಸ
ಸಾರ “ ಅಧೀಹಿ ಭಗವೋ ಬ್ರಹ್ಮೇತಿ ”, “ ತಸ್ಮಾ ಏತತ್ಪ್ರೋವಾಚ ।
ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಮಿತಿ ತಂ
ಹೋವಾಚ ॥ ”, “ ಯತೋ ವಾ ಇಮಾನಿ ಭೂತಾನಿ ಜಾಯಂತೇ ”
ಇತ್ಯಾರಭ್ಯ “ ಸೈಷಾ ಭಾರ್ಗವೀ ವಾರುಣೀ ವಿದ್ಯಾ ಪರಮೇ ವ್ಯೋಮನ್
ಪ್ರತಿಷ್ಠಿತಾ ” ಇತ್ಯಾದಿನಾ ತೈತ್ತಿರೀಯೇ ಶ್ರೂಯತೇ. ಅತ್ರಾನಂದ
ಮಯತ್ವೇನೋಪಾಸ್ಯಃ ಪರಮಾತ್ಮಾ ಉತ ಜೀವೋ ವೇತಿ ಸಂದಿಹ್ಯತೇ.
“ ಅಯಮಾತ್ಮಾ ಬ್ರಹ್ಮ ” ಇತ್ಯಾದಿಶ್ರುತಿಷು ಜೀವಸ್ಯೈವ ಬ್ರಹ್ಮತ್ವೋಪ
ದೇಶಾತ್ “ ಯೋಽನ್ಯಾಂ ದೇವತಾಮುಪಾಸ್ತೇಽನ್ಯೋಽಸಾವನ್ಯೋಽಹ
ಮಸ್ಮಿ ಇತಿ, ನ ಸ ವೇದ ಯಥಾ ಪಶುಃ ಮೃತ್ಯೋಸ್ಸ ಮೃತ್ಯುಮಾ
ಪ್ನೋತಿ ” ಇತ್ಯಾದಿಷು ಸ್ವಾತಿರಿಕ್ತದೇವತೋಪಾಸನಾಽದರ್ಶನಾತ್, “ ಅಹ
ಮಸ್ಮಿ ಬ್ರಹ್ಮಾಹಮಸ್ಮಿ ಅವಮೇವಾಹಂ ” ಇತ್ಯಾದಿಷು ತಥಾವಗಮಾಚ್ಚ
ಸ್ವಸ್ಯ ಸ್ವೋಪಾಸನಮೇವ ಸರ್ವವೇದಾಂತಸಿದ್ಧಮಿತಿ ಪ್ರಾಪ್ತೇ ಪ್ರಚ
ಕ್ಷ್ಮಹೇ. ಏಕಃ ಪರಮಾತ್ಮಾ ಪ್ರಧಾನಕ್ಷೇತ್ರಜ್ಞಪತಿರ್ಮಹೇಶ್ವರಃ
ಆತ್ಮನಃ ಸ್ಥಾವರಜಂಗಮಾತ್ಮಕಜೀವಾತ್ ಭಿನ್ನಃ ಶರೀರೇ “ ಋತಂ
ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ ಪರಮೇ ಪರಾರ್ಧೇ ”
ಇತ್ಯಾದಿಶ್ರುತಿಷು ಶರೀರಾಂತಸ್ಸ್ಥಿತದಹರಪುಂಡರೀಕೇ ಜೀವೇಶ್ವ
ರಯೋಃ ಸ್ಥಿತೇರ್ಭಾವಾತ್ ಸರ್ವವೇದಾಂತೇಷು ಸದ್ಭಾವಾತ್
“ ಭೃಗುರ್ವೈ ವಾರುಣಿಃ ” ಇತ್ಯಾರಭ್ಯ ಪ್ರಶ್ನಪ್ರತಿವಚನಾಭ್ಯಾಂ ಬ್ರಹ್ಮ
ಧರ್ಮೋಪದೇಶಾತ್ ವಿಜ್ಞಾನಮಯಾಜ್ಜೀವಾತ್ ಆನಂದಮಯಸ್ಯ
ಭೇದವ್ಯಪದೇಶಾತ್ ಜೀವಬ್ರಹ್ಮಣೋರ್ವೈಲಕ್ಷಣ್ಯಮನಿವಾರ್ಯಂ.
ಕಿಂಚ ಉಪಸಂಹಾರೇ “ ಸ ಯಶ್ಚಾಯಂ ಪುರುಷೇ ಯಶ್ಚಾಸಾವಾದಿತ್ಯೇ
ಸ ಏಕಃ ಸ ಯ ಏವಂವಿತ್ ” ಇತ್ಯಾರಭ್ಯ “ ಅಹಮನ್ನಮಹಮನ್ನಮ
ದಂತಮದ್ಮಿ ”, “ ಅಹಂ ವಿಶ್ವಂ ಭುವನಮಭ್ಯಭವಂ ”, “ ಸುವರ್ಣ
ಜ್ಯೋತೀಃ ಯ ಏವಂ ವೇದ ” ಇತ್ಯಂತೇನ “ ಸರ್ವೋ ವೈ ರುದ್ರಃ ”,
“ ಸರ್ವಂ ಖಲ್ವಿದಂ ಬ್ರಹ್ಮ ”, “ ಊರ್ಧ್ವರೇತಂ ವಿರೂಪಾಕ್ಷಂ ವಿಶ್ವ
ರೂಪಾಯ ವೈ ನಮೋ ನಮಃ ”, “ ಹಿರಣ್ಮಯೋಽಹಂ ಶಿವರೂಪ
ಮಸ್ಮಿ ”, “ ನಮೋ ಹಿರಣ್ಯಬಾಹವೇ ” ಇತ್ಯಾದಿಶ್ರುತಿಸಿದ್ಧಸರ್ವಾತ್ಮ
ಕತ್ವಹಿರಣ್ಮಯತ್ವಾದಿಪರಶಿವಧರ್ಮಬಾಹುಳ್ಯಾತ್ ನೇತರಪರತ್ವಂ.
“ ಯೋ ವಿಜ್ಞಾನೇ ತಿಷ್ಠನ್ ಯಸ್ಯ ವಿಜ್ಞಾನಂ ಶರೀರಂ ”, “ ಯ
ಆತ್ಮನಿ ತಿಷ್ಠನ್ ಯಸ್ಯಾತ್ಮಾ ಶರೀರಂ,” “ ಹಿರಣ್ಮಯೇ ಪರಾಕೋಶೇ
ವಿರಜಂ ಬ್ರಹ್ಮ ನಿಷ್ಕಲಂ,” “ ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತತ್

ದಾತ್ಮವಿದೋ ವಿದುಃ ", " ಆತ್ಮಾ ವಾರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ ", " ಬ್ರಹ್ಮ ವೇದ ಬ್ರಹ್ಮೈವ ಭವತಿ " ಇತ್ಯಾದಿಸ್ವಪರಶಾಖಾಸು ಸರ್ವಾಸು ವಿದ್ಯಾಸು ಶಿವಸ್ಯ ಪರಬ್ರಹ್ಮಣಃ ಉಪಾಸ್ಯತ್ವಂ ಜೀವಸ್ಯೋಪಾಸಕತ್ವಂ, ತಸ್ಯ ಬ್ರಹ್ಮೋಪಾಸಕತ್ವೇನೈವ ಬ್ರಹ್ಮಾತ್ಮಕತ್ವಸ್ಯ ಸ್ಪಷ್ಟಮುಪದಿಷ್ಟತ್ವಾತ್ " ಅನ್ನಂ ಬ್ರಹ್ಮ " ಇತ್ಯು ಪಾಸನಾದಿವತ್ ವಿಜ್ಞಾನಾತ್ಮಕಜೀವಬ್ರಹ್ಮೋಪಾಸನಾಯಾಮಪಿ ಪರಮೇಶ್ವರಸ್ಯ ಸರ್ವಾಂತರತ್ವವ್ಯಪದೇಶಾರ್ಥಂ ತದನುಕ್ರಮಸೋಪಾನಮಾರ್ಗಸೂಚನಾರ್ಥಂ ಚೋಪದಿಷ್ಟಂ. ಕೇವಲಜೀವಸ್ಯ ಬ್ರಹ್ಮತ್ವೇ " ಅನೀಶಯಾ ಶೋಚತಿ ಮುಹ್ಯಮಾನಃ ", " ತರತಿ ಶೋಕಮಾತ್ಮವಿತ್ " ಇತ್ಯಾದಿಬಹುಶ್ರುತಿವಿರೋಧಾತ್. ತದ್ಭೃಗುವಲ್ಲ್ಯುಪಕ್ರಮೋಪಸಂಹಾರತಾತ್ಪರ್ಯಭಂಗಪ್ರಸಂಗಾತ್ " ಅಹಂ ಬ್ರಹ್ಮಾಸಿ " ಇತ್ಯಾದೀನಾಂ " ತತ್ತ್ವಮಸಿ " ಇತ್ಯಾದಿವತ್ ಉಪಾಸ್ಯೋಪಾಸಕಯೋರೇಕತ್ವಫಲಸೂಚನಾರ್ಥಾಚ್ಚ ಅನಾದಿಮಲಸಂಸಾರಬದ್ಧಬಹುಶರೀರಪ್ರವೇಶನಿರ್ಗಮನವ್ಯಾಪಾರತಾಪತ್ರಯಾನಲದಂದಹ್ಯಮಾನಸ್ವಭಾವಸ್ಯ ನ ಸ್ವತೋ ಬ್ರಹ್ಮತ್ವಂ ಸಂಭವತೀತಿ ಸಿದ್ಧಂ.

ಶಿವಜೀವರು ಉಪಾಸ್ಯೋಪಾಸಕರಾದ್ದರಿಂದ ಅವರಿಗೆ ಪೂರ್ವಾವಸ್ಥೆಯಲ್ಲಿ ಪರಸ್ಪರವಾಗಿ ಪಾರಮಾರ್ಥಿಕ ಭೇದವಿರುತ್ತದೆ ಎಂದೂ, ಶಿವೋಪಾಸನದ ದಿವ್ಯ ಪ್ರಭಾವದಿಂದ ಕೊನೆಗೆ ಪಾರಮಾರ್ಥಿಕ ಅಭೇದವು ಸಂಭವಿಸುತ್ತದೆ ಎಂದೂ ಹೇಳಿದ್ದು ಹೊಂದುವುದಿಲ್ಲ; " ಇದೆಲ್ಲವೂ ಆತ್ಮವೇ ಆಗಿದೆ. " " ಈ ಆತ್ಮವೂ ಬ್ರಹ್ಮವೇ " ಎಂಬ ಶ್ರುತಿಗಳಲ್ಲಿ ಜೀವನಿಗಿಂತ ಬೇರೊಬ್ಬ ಈಶ್ವರನಿರುವುದಾಗಿಯೇ ಹೇಳಿಲ್ಲ. ಆದ್ದರಿಂದ ತಾನು ತನ್ನನ್ನೇ ಧ್ಯಾನಿಸುವಂತ ತನ್ನನ್ನು ತಾನೇ ಉಪಾಸನಮಾಡಬೇಕೆಂದು ಹೇಳುವುದು ಯುಕ್ತವಲ್ಲವೆ? ಹೀಗೆಂದು ಆಶಂಕಿಸಿ ನಿರಾಕರಿಸುತ್ತಾನೆ. ಜೀವರೆಲ್ಲರಲ್ಲೂ ಪರಮಾತ್ಮನು ಒಂದೇಬಗೆಯಾಗಿ ಶರೀರದೊಳಗಿನ ದಹರಾಕಾಶವಲ್ಲಿ ಜೀವರಿಗೆ ನಿಯಾಮಕನಾಗಿ ನೆಲಸಿದ್ದಾನೆ." " ದೇಹದೊಳಗೆ ಅಡಗಿರುವ ಪರಾಕಾಶದಲ್ಲಿ ಸರ್ವ ಜೀವರಿಗೂ ಸರ್ವ ವಿದ್ಯೆಗಳಿಗೂ ನಿಯಾಮಕನಾದ ಈಶ್ವರನು ಸಂಸಾರಮೋಕ್ಷ ಸ್ಥಿತಿ ಬಂಧಗಳೆಲ್ಲಕ್ಕೂ ಕಾರಣನಾಗಿ ನೆಲಸಿದ್ದಾನೆ" ಈ ಬಗೆಯ ಶ್ರುತಿಗಳಲ್ಲಿ ಜೀವನಿಗಿಂತ ಬೇರೊಬ್ಬ ಈಶ್ವರನು ಹೃದಯದಲ್ಲಿರುವುದಾಗಿ ಹೇಳಿದೆಯಾದ್ದರಿಂದ ಜೀವನು ತನ್ನನ್ನೇ ಉಪಾಸನಮಾಡಲಾರನು. ಎಲ್ಲಾ ಬ್ರಹ್ಮವಿದ್ಯೆಗಳಲ್ಲೂ ಉಪಾಸ್ಯವಸ್ತುವನ್ನು ಹೇಗೆ ಉಪಾಸನಮಾಡಬೇಕೆಂಬುದನ್ನು ತಿಳಿಯುವಂತೆಯೇ ಉಪಾಸಕನು ತನ್ನ ಸ್ವರೂಪವನ್ನೂ ತಿಳಿದಿರಬೇಕು. ಯಮ ನಚಿಕೇತ ಇವರ ಸಂಭಾಷಣೆಯಲ್ಲಿ ಮೂರು ಅಂಶಗಳಮೇಲೆ ಉಪನ್ಯಾಸ ನಡೆದಿದೆ. ಆ ಮೂರರಲ್ಲಿ ಜೀವಸ್ವರೂಪದ ಬಗ್ಗೆ ಒಂದು ಪ್ರಶ್ನೆಯಿದೆ. ಹಾಗೆಯೇ ವರುಣನ ಮಗ ಭೃಗು ತಂದೆಯಬಳಿಗೆ ಹೋಗಿ

ಬ್ರಹ್ಮಸ್ವರೂಪವನ್ನು ತಿಳಿಸುವಂತೆ ಕೇಳಿದಾಗ ವಿಶ್ವದ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವಾದ ಮೂಲವಸ್ತುವೇ ಬ್ರಹ್ಮವೆಂದು ತಂದೆ ತಿಳಿಸಿದನು. “ಈ ಭಾರ್ಗವವಿದ್ಯೆಯು ಪರಮಾಕಾಶದ ಪರಶಿವನಿಗೆ ಅನ್ವಯಿಸುತ್ತದೆ” ಎಂದು ತೈತ್ತಿರೀಯದಲ್ಲಿ ಹೇಳಿದೆ. ಇಲ್ಲಿ ಉಪಾಸ್ಯನೆನಿಸಿದ್ದ ಆನಂದಮಯನು ಪರಮಾತ್ಮನೇ ಅಥವಾ ಜೀವನೇ ಎಂದು ಸಂದೇಹ ಬರುತ್ತದೆ. “ಈ ಆತ್ಮನೇ ಬ್ರಹ್ಮ”ವೆಂದು ಶ್ರುತಿಯಲ್ಲಿ ಜೀವನನ್ನೇ ಬ್ರಹ್ಮವೆಂದು ಹೇಳಿದೆ. “ಯಾವನು ಅನ್ಯದೇವತೆಯನ್ನು ತಾನೇ ಬೇರೆ, ಅದೇ ಬೇರೆ ಎಂದು ಉಪಾಸನಮಾಡುವನೋ ಅವನು ಯಥಾರ್ಥಜ್ಞಾನವಿಲ್ಲದೆ ಪಶುವೆನಿಸಿ ವಿನಾಶವನ್ನು ಹೊಂದುವನು.” ಎಂದು ಶ್ರುತಿಯಲ್ಲಿ ತನಗಿಂತ ಬೇರೆ ದೇವತೆಯನ್ನು ಉಪಾಸನಮಾಡಬೇಕೆಂದು ಹೇಳಿಲ್ಲ. “ನಾನು ಬ್ರಹ್ಮನಿದ್ದೇನೆ; ನಾನು ನಾನೇ ಆಗಿದ್ದೇನೆ” ಎಂಬ ಶ್ರುತಿಗಳಲ್ಲಿಯೂ ಹಾಗೆಯೇ ತಿಳಿದುಬರುತ್ತದೆ. ಆದ್ದರಿಂದ ತನ್ನನ್ನು ತಾನೇ ಅರ್ಚಿಸುವುದೇ ಎಲ್ಲಾ ವೇದಾಂತಗಳ ನಿರ್ಣಯವೆಂದು ಪೂರ್ವಪಕ್ಷ ಬರುತ್ತದೆ. ಇದಕ್ಕೆ ಸಮಾಧಾನ ಹೀಗಿದೆ. ಒಬ್ಬ ಪರಮಾತ್ಮನೇ ಜೀವನಿಗೂ ಪ್ರಕೃತಿಗೂ ವ್ಯವಸ್ಥಾಪಕನಾಗಿ ಸ್ಥಾವರಜಂಗಮಾತ್ಮಕವಾದ ಜಗತ್ತಿಗಿಂತಲೂ ಭಿನ್ನನಾಗಿ ಪ್ರತಿಶರೀರದಲ್ಲೂ ನೆಲಸಿದ್ದಾನೆ. ಹೀಗೆ ಶರೀರದೊಳಗಿನ ದಹರಕಮಲದಲ್ಲಿ ಜೀವೇಶ್ವರರಿಬ್ಬರೂ ಇರುವುದರಿಂದ ತೈತ್ತಿರೀಯದ ಆರಂಭದಲ್ಲಿ ಆ ಈಶ್ವರನ ಧರ್ಮಗಳನ್ನೇ ಹೇಳಲಾಗಿದೆ. ಈ ರೀತಿಯಲ್ಲಿ ಜ್ಞಾನಮಯನಾದ ಜೀವನಿಗಿಂತಲೂ ಆನಂದಮಯನಿಗೆ ಭೇದವನ್ನು ಹೇಳಿರುವುದರಿಂದ ಜೀವಬ್ರಹ್ಮರಿಗೆ ಭೇದವು ಸ್ಪಷ್ಟವಾಗಿದೆ. ಕೊನೆಗೆ ಉಪಸಂಹಾರದಲ್ಲಿ “ಆ ಯಾವ ಶಿವನೇ ಜೀವನಲ್ಲೂ ಆದಿತ್ಯನಲ್ಲೂ ಒಂದೆಬಗೆಯಾಗಿದ್ದಾನೆ. ಇದನ್ನು ಜೀವನು ತಿಳಿಯಬೇಕು.” ಎಂದು ಮುಂದುವರಿಸಿ “ನಾನೇ ಭೋಜ್ಯವಸ್ತುವೂ ಮತ್ತು ಅದನ್ನು ತಿನ್ನುವವನೂ ಆಗಿದ್ದೇನೆ. ನಾನೇ ವಿಶ್ವವನ್ನು ವ್ಯಾಪಿಸಿದ್ದೇನೆ. ಸುವರ್ಣಮಯನಾಗಿ ಶೋಭಿಸುತ್ತಲೂ ಇರುವೆನು. ಹೀಗೆ ಯಾವನು ತಿಳಿಯುವನೋ ಅವನೂ ಅದೇ ಆಗುತ್ತಾನೆ” ಎಂದು ತಿಳಿಸಿ ಕೋನೆಗೆ “ಎಲ್ಲವೂ ರುದ್ರನೇ” “ಎಲ್ಲವೂ ಬ್ರಹ್ಮವೇ” “ಇಂತಹ ಊರ್ಧ್ವರೇತಸ್ಕನೂ ವಿರೂಪಾಕ್ಷನೂ ವಿಶ್ವರೂಪನೂ ಆದ ದೇವನಿಗೆ ನಮಸ್ಕರಿಸುತ್ತೇನೆ” “ನಾನು ಹಿರಣ್ಮಯನೂ ಶಿವರೂಪನೂ ಆಗಿದ್ದೇನೆ” ಎಂಬಲ್ಲಿ ಜೀವನು ಶಿವೋಪಾಸನದಿಂದ ತನ್ನನ್ನು ಶಿವಸ್ವರೂಪನೆಂದು ತಿಳಿಯುವನು. ಶಿವನನ್ನೇ ಸರ್ವಾತ್ಮಕನೆಂದೂ ಹಿರಣ್ಮಯನೆಂದೂ ತಿಳಿಸಿರುವುದರಿಂದ ಈ ಧರ್ಮಗಳು ಶಿವನಲ್ಲದೆ ಬೇರೆಯಾರಿಗೂ ಅನ್ವಯಿಸುವುದಿಲ್ಲ. “ಹಿರಣ್ಮಯವಾದ ಪರಾಕಾಶದಲ್ಲಿ ನಿಷ್ಕಲಶಿವನು ಶೋಭಿಸುತ್ತಿರುವನು” “ವಿಜ್ಞಾನಮಯನಾದ ಆತ್ಮನಲ್ಲಿ ನೆಲಸಿರುವವನು” “ಜ್ಯೋತಿಗಳೆಲ್ಲಕ್ಕೂ ಜ್ಯೋತಿ ಎನಿಸಿ ಹೊಳೆಯುತಿದ್ದಾನೆ” ಹೀಗೆ ಶ್ರುತಿಯು ಎಲ್ಲಾ ವಿದ್ಯೆಗಳಲ್ಲೂ ಶಿವನೇ ಉಪಾಸ್ಯನೆಂದೂ, ಜೀವನು ಉಪಾಸಕನೆಂದೂ, ಶಿವನ ಉಪಾಸಕನಾದ್ದರಿಂದ ಜೀವನು ಶಿವರೂಪನೆಂದೂ ಸ್ಪಷ್ಟವಾಗಿ ತಿಳಿಸಿದೆ. ಆದ್ದರಿಂದ “ಅನ್ನಂ ಬ್ರಹ್ಮ” ಎಂಬಲ್ಲಿ ಅನ್ನವನ್ನು ಬ್ರಹ್ಮವೆಂದು

ಗೌರವಿಸುವಂತೆ ವಿಜ್ಞಾನರೂಪನಾದ ಜೀವನಲ್ಲಿ ಶಿವಭಾವವನ್ನು ದೃಢಪಡಿಸಲು ಪರಮೇಶ್ವರನು ಸರ್ವಾಂತರ್ಯಾಮಿಯಾಗಿರುವನೆಂದು ತಿಳಿಸಿ ಜೀವನು ಶಿವನಾಗುವ ಸೋಪಾನಮಾರ್ಗವನ್ನು ಶ್ರುತಿಯಲ್ಲಿ ಸೂಚಿಸಲಾಗಿದೆ. ಕೇವಲ ಜೀವನನ್ನು ಬ್ರಹ್ಮ ವೆಂದು ಕರೆದರೆ "ಅಶಕ್ತತೆಯಿಂದ ಮೋಹಗೊಂಡು ಅಳುತ್ತಾನೆ. ಈಶನನ್ನು ತಿಳಿದು ಅಮೃತವನ್ನು ಹೊಂದುತ್ತಾನೆ" "ಅವನನ್ನು ತಿಳಿದೇ ಮೃತ್ಯುವನ್ನು ದಾಟುತ್ತಾನೆ. ಮುಕ್ತಿಗೆ ಬೇರೆ ದಾರಿಯಿಲ್ಲ." ತನ್ನನ್ನು ಅರಣಿಯನ್ನಾಗಿಯೂ ಪ್ರಣವವನ್ನು ಉತ್ತ ರಾರಣಿಯನ್ನಾಗಿಯೂ ಭಾವಿಸುತ್ತ ಧ್ಯಾನಾಗ್ನಿಯಿಂದ ಪಂಡಿತನು ಪಾಶವನ್ನು ಸುಡುತ್ತಾನೆ" ಈ ಬಗೆಯಲ್ಲಿ ಅನೇಕ ಶ್ರುತಿಗಳು ವಿರುದ್ಧವಾಗುತ್ತವೆ. ಇದೂ ಅಲ್ಲದೆ ತೈತ್ತಿರೀಯದ ಭೃಗುವಲ್ಲಿಯ ಉಪಕ್ರಮ ಉಪಸಂಹಾರಗಳ ತಾತ್ಪರ್ಯವೇ ಭಂಗವಾಗಬೇಕಾದೀತು. "ನಾನೆ ಬ್ರಹ್ಮ" "ನೀನು ಅದೇ ಆಗಿದ್ದೀಯೆ" ಎಂಬಲ್ಲಿ ಉಪಾಸ್ಯೋಪಸಕರಿಬ್ಬರೂ ಒಂದೇ ಜಾತಿಗೆ ಸೇರಿದವರೆಂಬ ಫಲವನ್ನು ತಿಳಿಸಲಿ ಕ್ಕಾಗಿ ಹಾಗೆ ಹೇಳಿದ್ದರೂ ಅನಾದಿಕಾಲದಿಂದಲೂ ಮಲಗಳಿಗೆ ಅಂಟಿ ಸಂಸಾರ ಚಕ್ರದಲ್ಲಿ ಸಿಲುಕಿ ಹುಟ್ಟು ಸಾವುಗಳ ಗೊಂದಲದಲ್ಲಿ ನರಳುತ್ತ ಪಾಪಾಗ್ನಿಯಲ್ಲಿ ಬೇಯುತ್ತಿರುವ ಜೀವನು ತಾನಾಗಿಯೇ ಬ್ರಹ್ಮವಾಗಲಾರನು.

ಅಸ್ಮಿನ್ನರ್ಥೇ ಹೇತ್ವಂತರಮಾಹ. **ವ್ಯತಿರೇಕಸ್ತದ್ಭಾವಭಾವಿತ್ವಾನ್ನ ತೂಪಲಬ್ಧಿವತ್ ॥ ೫೨ ॥** "ಸರ್ವಮಿತ್ಯಾಕಾಶೇ ತತ್ಪ್ರತಿಷ್ಠೇತ್ಯುಪಾ ಸೀತ" ಇತ್ಯಾರಭ್ಯ "ತದ್ಬ್ರಹ್ಮೇತ್ಯುಪಾಸೀತ ಬ್ರಹ್ಮವಾನ್ಭವತಿ" ಇತ್ಯತ್ರ ಬ್ರಹ್ಮೋಪಾಸಕಾನಾಂ ಫಲಸ್ಯ ಬ್ರಹ್ಮಾತ್ಮಕತ್ವೋಪದೇಶಾತ್, ನತ್ವೇತದಸ್ತಿ ಜ್ಞಾತೃತ್ವಾದ್ಯಾಕಾರ ಏವಾನುಸಂಧೇಯ ಇತಿ. ಆಸ್ಯಾ ತ್ಮನಃ ಸಂಸಾರದಶಾಯಾಂ ಮೋಕ್ಷದಶಾಯಾಂ ಯೋ ವ್ಯತಿರೇಕಃ ಸಂಸಾರದಶಾಯಾಂ ಸ್ವಕೃತಕರ್ಮಫಲೇನ ದೇವತಿರ್ಯಙ್ಮನುಷ್ಯಾದಿ ನಾನಾವಿಧಪ್ರವೇಶನಿರ್ಗಮನಂ, ಮೋಕ್ಷದಶಾಯಾಂ ಸಾಲೋಕ್ಯಾದಿ ತ್ರಿವಿಧಮುಕ್ತೌ ಪರಮಾನಂದಪ್ರಾಚುರ್ಯಕಲ್ಯಾಣವಿಭೂತಿಃ, ಸಾಯು ಜ್ಯಮುಕ್ತ್ಯಭಿಧಾನಕೈವಲ್ಯವಿಭೂತೌ ಅಹಂಮಮತ್ವಾದಿವಿಕಲ್ಪಶೂನ್ಯ ತ್ವೇನ ಪರಮಶಿವಾಕಾರಾಕಾರಿತನಿಃಶ್ರೇಯಸಫಲಂ ಚ ನಿರ್ದಿಶ್ಯತೇ. ಕಿಂಚ ಅಸ್ಯ ಮೋಕ್ಷದಶಾಯಾಂ ಯಾದೃಶಂ ರೂಪಮುಪಾಸ್ಯಂ ತಾದೃ ಗ್ರೂಪಂ ಪ್ರಾಪ್ನೋತೀತ್ಯರ್ಥಃ. ಕುತಃ? ತದ್ಭಾವಭಾವಿತ್ವಾತ್. ತದ ವ್ಯಾಪ್ತ್ಯಾಪತ್ತೇಃ. "ಯಥಾಕ್ರತುರಸ್ಮಿನ್ ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ", "ತಂ ಯಥಾ ಯಥೋಪಾಸ್ತೇ ತಥೈವ ಭವತಿ" ಇತಿ. ಯಥೋಪಾಸನಮೇವ ಹಿ ಪ್ರಾಪ್ತಿಃ ಶ್ರೂಯತೇ. ನಚ ಪರಸ್ವರೂಪಮಾತ್ರವಿಷಯಮೇವೇದಮಿತಿ ವಕ್ತುಂ ಶಕ್ಯತೇ, ಪ್ರತ್ಯಗಾ ತ್ಮನೋಽಪ್ಯುಪಾಸ್ಯಭೂತಪರಬ್ರಹ್ಮವೈಲಕ್ಷಣ್ಯೋಪದೇಶಾತ್. ಅತಃ

ಶ್ರುತ್ಯಂತರೇ " ಗತಾಃ ಕಲಾಃ ಪಂಚದಶ ಪ್ರತಿಷ್ಠಾಃ ದೇವಾಶ್ಚ ಸರ್ವೇ ಪ್ರತಿದೇವತಾಸು । ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ॥ " ಇತ್ಯಾದಿಷು ಪ್ರಾಣೇಂದ್ರಿಯಪ್ರತ್ಯಗಾತ್ಮದೀನಾಂ ಪರಮೇಶ್ವರಪ್ರಾಪ್ತ್ಯತ್ವವ್ಯಪದೇಶಾತ್ ಸದಾ ಪರಮಾತ್ಮಾನುಸಂಧಾನಂ ಮುಮುಕ್ಷೂಣಾಂ ಕರ್ತವ್ಯಮಿತ್ಯುಪದಿಶ್ಯತೇ. ಉಪಲಬ್ಧಿವತ್ " ಯಥಾ ನದ್ಯಃ " ಇತ್ಯತ್ರ ನದೀಸಮುದ್ರೋಪಲಬ್ಧಿವತ್ ಜೀವಬ್ರಹ್ಮಣೋರೇಕತ್ವೋಪದೇಶೋ ವಿಧೀಯತೇ. ತಸ್ಮಾತ್ ಮುಮುಕ್ಷೂಣಾಂ ನಿರಂತರಮನನ್ಯಭಾವೇನ ನಿತ್ಯನಿರುಪಮಪರಶಿವಬ್ರಹ್ಮೋಪಾಸನಂ ಸರ್ವವಿದ್ಯಾಭಿಪ್ರೇತಮಿತಿ ವೇದಿತವ್ಯಂ.

ಈ ಬಗ್ಗೆ ಬೇರೊಂದು ಕಾರಣವನ್ನು ತಿಳಿಸುತ್ತಾನೆ. " ಎಲ್ಲವೂ ಪರಾಕಾಶ ಸ್ವರೂಪನಾದ ಪರಮಶಿವನಲ್ಲಿಯೇ ನೆಲಸಿರುವುದೆಂದು ಭಾವಿಸಿ ಶ್ರದ್ಧೆಯಿಂದ ಉಪಾಸನಮಾಡಬೇಕು. ಹಾಗೆ ಯಾವನು ಉಪಾಸನ ಮಾಡುವನೋ ಅವನು ಬ್ರಹ್ಮನಾಗುತ್ತಾನೆ" ಎಂಬಲ್ಲಿ ಬ್ರಹ್ಮೋಪಾಸಕರಿಗೆ ಬ್ರಹ್ಮಾತ್ಮಕವನ್ನೇ ಫಲವಾಗಿ ಹೇಳಿದೆ. ಆದರೆ ಜೀವನು ಜ್ಞಾತೃವಾಗಿರುವುದರಿಂದ ಸಂಸಾರದಶೆಯಲ್ಲಿ ಬ್ರಹ್ಮಾತ್ಮಕತ್ವವು ಹೊಂದುವುದಿಲ್ಲ. ಆದ್ದರಿಂದ ಅವನಿಗೆ ಸಂಸಾರದಶೆಯಲ್ಲೂ ಮೋಕ್ಷದಶೆಯಲ್ಲೂ ಭೇದವಿದೆ ಎಂಬುದು ಅವನು ತನ್ನ ಕರ್ಮದ ಫಲವಾಗಿ ಅನೇಕ ಯೋನಿಗಳಲ್ಲಿ ಹುಟ್ಟುತ್ತಲೂ ಅಲ್ಲಿಂದ ಬರುತ್ತಲೂ ಇರುವುದರಿಂದ ತಿಳಿದುಬರುತ್ತದೆ. ಮೋಕ್ಷದಶೆಯಲ್ಲೂ ಅವನು ಸಾಲೋಕ್ಯ ಸಾರೂಪ್ಯ ಸಾಮೀಪ್ಯಗಳಲ್ಲಿ ಪರಮಾನಂದಮಯವಾದ ಕಲ್ಯಾಣಭೂತಿಯನ್ನು ಪಡೆಯುವನು. ಸಾಯುಜ್ಯಮುಕ್ತಿ ಎಂಬ ಕೈವಲ್ಯವಿಭೂತಿಯಲ್ಲಂತೂ 'ನಾನು ನನ್ನದು' ಎಂಬ ವಿಕಲ್ಪವೇ ಇಲ್ಲದಿರುವುದರಿಂದ ಅವನು ಪರಶಿವನೇ ಆಗುವನು. ಈ ಮೋಕ್ಷದಶೆಯಲ್ಲಿ ಜೀವನು ತನ್ನ ಉಪಾಸ್ಯವಸ್ತುವಿನ ಸ್ವರೂಪವನ್ನು ಪಡೆಯುತ್ತಾನೆ; ಅವನು ಯಾವಾಗಲೂ ಅದೇ ಭಾವವನ್ನು ಮನದಲ್ಲಿ ಆಲೋಚಿಸುತ್ತಿರುವನು. " ಮನುಷ್ಯನು ಹೇಗೆ ಅರ್ಚನೆ ಮಾಡುವನೋ ಹಾಗೆಯೇ ಫಲವನ್ನು ಪಡೆಯುವನು " ಎಂದು ಶ್ರುತಿಯು ತಿಳಿಸಿದೆ. ಈ ಶ್ರುತಿಯು ಪರಮಾತ್ಮಸ್ವರೂಪಕ್ಕೆ ಮಾತ್ರವೇ ಅನ್ವಯಿಸುತ್ತದೆ ಎಂದು ಹೇಳಲಿಕ್ಕಾಗುವುದಿಲ್ಲ; ಯಾಕೆಂದರೆ ಉಪಾಸ್ಯನಾದ ಪರಶಿವಬ್ರಹ್ಮಕಿಂತಲೂ ಜೀವನನ್ನು ಬೇರೆಯಾಗಿ ಹೇಳಿರುವುದರಿಂದ ಜೀವಸ್ವರೂಪಕ್ಕೂ ಇದು ಅನ್ವಯಿಸತ್ತದೆ. ಹೀಗೆಯೇ " ಎಲ್ಲಾ ಇಂದ್ರಿಯಗಳು ಕರ್ಮಗಳು ಮತ್ತು ಜೀವ ಇವರೆಲ್ಲರೂ ಪರಮಾತ್ಮನಲ್ಲಿ ಏಕೀಭವಿಸುತ್ತಾರೆ" ಎಂಬ ಶ್ರುತಿಯಲ್ಲಿ ಪ್ರಾಣ ಇಂದ್ರಿಯ ಜೀವ ಇವರೆಲ್ಲರೂ ಪರಮೇಶ್ವರನಲ್ಲಿಯೇ ಸೇರುವರೆಂದು ಹೇಳಿದೆ. ಆದ್ದರಿಂದ ಮುಮುಕ್ಷುಗಳು ಯಾವಾಗಲೂ ಪರಮಾತ್ಮನನ್ನು ಅನುಸಂಧಾನ ಮಾಡುತ್ತಲೇ ಇರಬೇಕೆಂದು ಹೇಳಿದೆ. ನದಿಯು ಸಮುದ್ರದಿಂದಲೇ ಹುಟ್ಟಿ ಪ್ರತ್ಯೇಕವಾದ ವ್ಯೈಯಕ್ತಿಕತೆಯಿಂದ ಬಾಳಿ ಸಮುದ್ರದಲ್ಲಿ ಸೇರಿ ಕೊನೆಗೆ ತನ್ನ

ವ್ಯಕ್ತಿತ್ವವನ್ನು ಕಳೆದುಕೊಳ್ಳುವಂತೆ ಜೀವನು ಪ್ರತ್ಯೇಕನಾಗಿ ಬಾಳುತ್ತಲಿದ್ದರೂ ತನ್ನ ಮೂಲವಸ್ತುವನ್ನು ನೆನೆಯುತ್ತಲೇ ಅದರಲ್ಲಿ ಬೆರೆಯುವನಾದ್ದರಿಂದ ಶ್ರುತಿ ಜೀವ ಬ್ರಹ್ಮರ ಐಕ್ಯವನ್ನು ತಿಳಿಸಿದೆ. ಆದ್ದರಿಂದ ಮುಮುಕ್ಷುಗಳು ನಿತ್ಯನಿರಂಜನನೆನಿಸಿದ ಪರಶಿವನನ್ನು ದೃಢವಾಗಿ ನಂಬಿ ನಿರಂತರವೂ ಅನನ್ಯಭಾವದಿಂದ ಉಪಾಸನಮಾಡ ಬೇಕೆಂಬುದೇ ಎಲ್ಲಾ ವಿದ್ಯೆಗಳಿಗೂ ಸಮ್ಮತವೆಂದು ತಿಳಿಯಬೇಕು.

ನನು "ಸ್ವಾಧ್ಯಾಯೋ ಅಧ್ಯೇತವ್ಯಃ" ಇತ್ಯತ್ರಸ್ವಶಾಖಾಧ್ಯಯನವಿದ್ಯಾ ವಶ್ಯಕತ್ವವತ್ ಬ್ರಹ್ಮವಿದ್ಯಾಯಾಮಪಿ ಸ್ವಶಾಖಾವಿಹಿತಬ್ರಹ್ಮವಿದ್ಯೋ ಪಾಸನಮೇವ ಮುಖ್ಯಮಿತ್ಯಾಶಂಕಾಯಾಮಧಿಕರಣಾಂತರೇಣಾಹ. ಅಂಗಾವಬದ್ಧಾಧಿಕರಣಂ॥೨೨॥ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿ ವೇದಂ ॥೫೩॥ ಪೂರ್ವತ್ರ ಅಹಂ ಬ್ರಹ್ಮೋಪಾಸನನಿರಾಕರಣಪೂರ್ವಕಪರ ಶಿವಬ್ರಹ್ಮೋಪಾಸನಂ ಪ್ರಸಾಧ್ಯ ಅತ್ರ ಸರ್ವಶಾಖಾಗತಬ್ರಹ್ಮೋಪಾಸನಂ ಸರ್ವೇಷಾಂ ಮುಮುಕ್ಷೂಣಾಂ ಆವಶ್ಯಕಂ ದರ್ಶಯತಿ "ಓಮಿತ್ಯೇತದಕ್ಷರ ಮುದ್ಗೀಥ ಮುಪಾಸೀತ" "ಲೋಕೇಷು ಪಂಚವಿಧಂ ಸಾಮೋಪಾಸೀತ. "ಸರ್ವಂ ಖಲ್ವಿದಂ ಬ್ರಹ್ಮ" "ಅರ್ಚತ ಪ್ರಾರ್ಚತ ಪ್ರಿಯಮೇಧಾಸೋ ಅರ್ಚತ ಅರ್ಚಂತ ಪುತ್ರಕಾಃ," "ಅಗ್ನಿರಿತ್ಯಾದಿನಾ ಭಸ್ಮ ಗೃಹೀತ್ವಾ ವಿಮೃಜ್ಯಾಂಗಾನಿ ಸಂಸ್ಪೃಶೇತ್ । ತಸ್ಮಾದ್ವ್ರತಂ ಪಾಶುಪತಂ ಪಶುಪಾಶ ವಿಮೋಕ್ಷಾಯೇತಿ ತಿಸ್ರೋ ರೇಖಾಃ ಪ್ರಕುರ್ವೀತ ॥" ಇತಿ ಛಾಂದೋ ಗ್ಯಾದೀಷು ಸರ್ವಶಾಖಾಸು ಸರ್ವವಿದ್ಯೋಪಾಸನಾನಾಂ ಮೋಕ್ಷಫಲತ್ವ ಶ್ರವಣಾತ್ ಮೋಕ್ಷಾಂಗವಿಧಾಯಕಸರ್ವಶಾಖಾಗತದಹರಶಾಂಡಿಲ್ಯಾ ದಿಸರ್ವಾಸು ವಿದ್ಯಾಸು ಮುಮುಕ್ಷೂಣಾಂ ಸ್ವಶಾಖಾವಿದ್ಯೋಪಾಸನಂ ಪ್ರಧಾನಂ, ಉತ ಸರ್ವಾಶಾಖಾವಿದ್ಯೋಪಾಸನಂ ವೇತಿ ಸಂದಿಹ್ಯತೇ. ಸರ್ವವೇದಾಂತಪ್ರತ್ಯಯತ್ವೇ ಸ್ಥಿತೇಽಪಿ ಪ್ರತಿವೇದಂ ಸ್ವರಭೇದಾತ್ ಉದ್ಗೀಥಾದಯೋ ಭಿದ್ಯಂತ ಇತಿ ತತ್ರ ವ್ಯವತಿಷ್ಠೇರನ್ನಿತಿ ಶಂಕಾ. ಕಿಂ ಯುಕ್ತಂ? ವ್ಯವತಿಷ್ಠೇರನ್ನಿತಿ. ಕುತಃ? "ಉದ್ಗೀಥಮುಪಾಸೀತ" ಇತಿ ಸಾಮಾನ್ಯೇನ ಉದ್ಗೀಥಸಂಬಂಧಿತಯಾ ಶ್ರುತಾಯಾಂಸ್ತಸ್ಯಾಮೇವ ಶಾಖಾಯಾಂ ಸ್ವರವಿಶೇಷಯುಕ್ತಸ್ಯ ಉದ್ಗೀಥವಿಶೇಷಸ್ಯ ಸನ್ನಿಧಾನಾ ತ್ತಸ್ಮಿನ್ನೇವ ವಿಶೇಷಪರ್ಯವಸಾನಂ ಯುಕ್ತಮಿತಿ. ಏವಮಾದ್ಯಾಸ್ತಾ ಸ್ವೇವ ಶಾಖಾಸು ವ್ಯವತಿಷ್ಠೇರನ್ನಿತ್ಯೇವಂ ಪ್ರಾಪ್ತೇ ಪ್ರಚಕ್ಷ್ಮಹೇ. ಅಂಗಾವಬದ್ಧಾಸ್ತ್ವಿತಿ. ತುಶಬ್ದಃ ಪಕ್ಷಂ ವ್ಯಾವರ್ತಯತಿ. ನಹ್ಯು ದ್ಗೀಥಾದ್ಯಂಗಾವಬದ್ಧಾ ಉಪಾಸನಾಸ್ತಾಸ್ವೇವ ಶಾಖಾಸು ವ್ಯವತಿಷ್ಠೇ ರನ್, ಅಪಿತು ಪ್ರತಿವೇದಂ ಸರ್ವಾಸು ಶಾಖಾಸು ಸಂಬಧ್ಯೇರನ್. ಹಿಶಬ್ದೋ ಹೇತೌ. ಯಸ್ಮಾತ್ ಶ್ರುತ್ಯೈವ ಉದ್ಗೀಥಾದ್ಯಂಗಮಾತ್ರಾವ

ಬದ್ಧಾಃ ತಸ್ಮಾದ್ಯತ್ರೋದ್ಗೀಥಾದಯಃ ತತ್ರ ಸರ್ವತ್ರ ಸಂಬಧ್ಯೇರನ್. ಯದ್ಯಪಿ ಸ್ವರಭೇದೇನ ಉದ್ಗೀಥವ್ಯಕ್ತಯೋ ಭಿದ್ಯಂತೇ ತಥಾಪಿ ಸಾಮಾನ್ಯೇನ ಉದ್ಗೀಥಶ್ರುತ್ಯಾ "ಸರ್ವಾ ವ್ಯಕ್ತಯಸ್ಸನ್ನಿಹಿತಾ" ಇತಿ, ನ ಕ್ವಚಿದ್ವ್ಯವಸ್ಥಾಯಾಂ ಪ್ರಮಾಣಮಸ್ತಿ. ಸರ್ವಶಾಖಾಪ್ರತ್ಯಯನ್ಯಾಯೇನ ಚ ಸರ್ವಾಸು ಶಾಖಾಸು ಕ್ರತುರೇಕಃ. ಅತಸ್ಸರ್ವಾಸು ಶಾಖಾಸ್ವೇಕಸ್ಯ ಕ್ರತೋಸ್ಸನ್ನಿಧಾನಾತ್ ಕ್ರತ್ವಂಗಭೂತೋದ್ಗೀಥಾದಯೋऽಪಿ ಸನ್ನಿಹಿತಾ ಇತಿ ನೈಕಸ್ಯ ಸನ್ನಿಧಿವಿಶೇಷೋऽಸ್ತೀತಿ ನಾವ್ಯವಸ್ಥಾ. ತಸ್ಮಾತ್ ಸರ್ವೇಷಾಂ ಉಪಾಸನಾನಾಂ ಸರ್ವವಿದ್ಯಾಸ್ವಧಿಕಾರೋ ಯುಕ್ತಃ.

"ತನ್ನ ಶಾಖೆಯ ವೇದವನ್ನು ತಾನು ಓದಬೇಕು" ಎಂಬಲ್ಲಿ ತನ್ನ ಶಾಖೆಯ ಅಧ್ಯಯನ ತನಗೆ ಹೇಗೆ ಆವಶ್ಯಕವೋ ಹಾಗೆ ತನ್ನ ಶಾಖೆಯಲ್ಲಿ ಹೇಳಿದ ಬ್ರಹ್ಮವಿದ್ಯೆಯಿಂದ ಬ್ರಹ್ಮವನ್ನು ಉಪಾಸನಮಾಡುವುದೇ ತನಗೆ ಮುಖ್ಯವೆಂದು ಆಶಂಕಿಸಿ ಸಮಾಧಾನಮಾಡುತ್ತಾನೆ. ತಾನೇ ಬ್ರಹ್ಮವೆಂದು ಭಾವಿಸಿ ತನ್ನನ್ನು ಉಪಾಸನ ಮಾಡಬಾರದೆಂದೂ, ತನ್ನೊಳಗೆ ನೆಲಸಿರುವ ಪರಶಿವಬ್ರಹ್ಮವನ್ನೇ ಸಾಧಕರು ಉಪಾಸನಮಾಡಬೇಕೆಂದೂ ಹಿಂದೆ ತಿಳಿಸಿ ಎಲ್ಲಾ ಶಾಖೆಗಳಲ್ಲಿ ಹೇಳಿರುವ ಬ್ರಹ್ಮೋಪಾಸನವೂ ಎಲ್ಲಾ ಮುಮುಕ್ಷುಗಳಿಗೂ ಆವಶ್ಯಕವೆಂಬುದನ್ನು ಈಗ ತಿಳಿಸುತ್ತಾನೆ. "ಉದ್ಗೀಥವಿದ್ಯೆಯಲ್ಲಿ ಬರುವ ಓಂ ಎಂಬುದನ್ನು ಬ್ರಹ್ಮವೆಂದು ಉಪಾಸನಮಾಡು" "ಐದು ಬಗೆಯ ಸಾಮವನ್ನು ಉಪಾಸನಮಾಡು" "ಎಲ್ಲವನ್ನೂ ಬ್ರಹ್ಮವೆಂದು ತಿಳಿದು ಗೌರವಿಸು" "ದಹರಾಕಾಶದಲ್ಲಿರುವ ಜ್ಯೋತಿಯನ್ನು ಉಪಾಸನಮಾಡು" "ಆತ್ಮನನ್ನು ಕೇಳಿ ತಿಳಿದು ಧ್ಯಾನಿಸಿ ಕಾಣಬೇಕು." "ಸದ್ಬುದ್ಧಿಯುಳ್ಳ ಪುತ್ರರೇ ಶಿವನನ್ನು ಅರ್ಚಿಸಿರಿ, ಶ್ರದ್ಧೆಯಿಂದ ಅರ್ಚಿಸಿರಿ," "ಅಗ್ನಿರಿತಿ ಭಸ್ಮ" ಎಂಬ ಮಂತ್ರವನ್ನು ಉಚ್ಚರಿಸುತ್ತ ದೇಹದ ಎಲ್ಲಾ ಅವಯವಗಳಲ್ಲೂ ಮೂರು ಗೆರೆಗಳಾಗಿ ಭಸ್ಮವನ್ನು ಧರಿಸಬೇಕು. ಇದು ಪಾಶುಪತವ್ರತ. ಇದರಿಂದ ಮೋಕ್ಷವು ಸಿದ್ಧಿಸುತ್ತದೆ" ಹೀಗೆ ಛಾಂದೋಗ್ಯ ಮೊದಲಾದ ಎಲ್ಲಾ ಶಾಖೆಗಳಲ್ಲೂ ಎಲ್ಲಾ ಉಪಾಸಕರಿಗೂ ಮೋಕ್ಷವನ್ನೇ ಫಲವೆಂದು ಹೇಳಲಾಗಿದೆ. ಆದ್ದರಿಂದ ಮೋಕ್ಷದ ಮಾರ್ಗಗಳನ್ನು ತಿಳಿಸುವ ಎಲ್ಲಾ ವಿದ್ಯೆಗಳಲ್ಲೂ ಮುಮುಕ್ಷುಗಳಿಗೆ ತಮ್ಮ ಶಾಖೆಯಲ್ಲಿ ಹೇಳಿರುವ ವಿದ್ಯೆಯಿಂದಲೇ ಶಿವನ ಉಪಾಸನವನ್ನು ಮುಖ್ಯವಾಗಿ ನಡೆಸಬೇಕೆ? ಅಥವಾ ಎಲ್ಲಾ ಶಾಖೆಗಳಲ್ಲೂ ಹೇಳಿರುವ ವಿದ್ಯೆಗಳಿಂದಲೂ ಉಪಾಸನ ಮಾಡಬೇಕೆ? ಎಂದು ಸಂದೇಹವುಂಟಾಗುತ್ತದೆ. ಎಲ್ಲಾ ವೇದಾಂತಗಳೂ ವಿಶ್ವಾಸಾರ್ಹವೇ ಆಗಿದ್ದರೂ ಒಂದೊಂದು ವೇದದಲ್ಲೂ ಸ್ವರಭೇದದಿಂದ ವಿದ್ಯೆಗಳೂ ಬೇರೆಯಾಗುತ್ತವೆ. ಆದ್ದರಿಂದ ವಿದ್ಯೆಗಳು ಆಯಾ ಶಾಖೆಗಳಲ್ಲಿ ವ್ಯವಸ್ಥಿತವಾಗಿರುವುವೆಂಬುದು ಯುಕ್ತವೆ? ಎಂಬ ಪ್ರಶ್ನೆಗೆ "ವ್ಯವಸ್ಥಿವಾಗಿರುತ್ತವೆ" ಎಂದು ಪೂರ್ವಪಕ್ಷಿಯು ಹೇಳುತ್ತಾನೆ;

ಯಾಕೆಂದರೆ "ಉದ್ಗೀಥವನ್ನು ಉಪಾಸನ ಮಾಡು" ಎಂದು ಸಾಮಾನ್ಯವಾಗಿ ಹೇಳಿದ್ದರೂ ಆಯಾ ಶಾಖೆಯಲ್ಲಿ ಬೇರೆಬೇರೆ ಸ್ವರದೊಂದಿಗೆ ಅದನ್ನು ವಿಧಿಸಿರುವುದರಿಂದ ಆ ವಿಧಿಯು ವಿಶೇಷದಲ್ಲಿ ಕೊನೆಗಾಣುವುದೆಂದು ಹೇಳಬೇಕು. ಆದ್ದರಿಂದ ಆಯಾ ವಿದ್ಯೆಗಳು ಆಯಾ ಶಾಖೆಗಳಲ್ಲಿಯೇ ವ್ಯವಸ್ಥಿತವಾಗಿರುವುವೆಂದು ಆಕ್ಷೇಪವು ಬಂದರೆ ಸಿದ್ಧಾಂತವನ್ನು ಮುಂದೆ ತಿಳಿಸಲಾಗುವುದು. ಸೂತ್ರದಲ್ಲಿ ಬಂದಿರುವ ತು ಶಬ್ದವು ಪೂರ್ವಪಕ್ಷವನ್ನು ಅಲ್ಲಗಳೆಯುತ್ತದೆ. ಉದ್ಗೀಥಾದಿ ವಿದ್ಯೆಗಳನ್ನು ಅಂಗವಾಗಿ ಪಡೆದ ಉಪಾಸನಗಳು ಎಲ್ಲಾ ಶಾಖೆಗಳಿಗೂ ಒಂದೇ ಬಗೆಯಾಗಿರುವುವೇ ಹೊರತು ಆಯಾ ಶಾಖೆಗಳಿಗೆ ವ್ಯವಸ್ಥಿತವಾಗಿರುವುದಿಲ್ಲ; ಏಕೆಂದರೆ ಅವು ಎಲ್ಲಾ ಶಾಖೆಗಳಲ್ಲೂ ಪಠಿತವಾಗಿವೆ. ಒಂದೊಂದು ಶಾಖೆಯಲ್ಲೂ ಸ್ವರಬೇದವಿದ್ದರೂ ಅದರ ಸ್ವರೂಪವು ಮಾತ್ರ ಭಿನ್ನವಾಗುವುದಿಲ್ಲ. ಉದ್ಗೀಥವೆಂಬ ಸಾಮಾನ್ಯಾಕಾರವು ಎಲ್ಲಾ ಕಡೆಗಳಲ್ಲೂ ಒಂದೇ ಆಗಿದೆ. ಒಂದೊಂದು ಶಾಖೆಯಲ್ಲೂ ಹೇಳಿರುವ ಯಜ್ಞಗಳೆಲ್ಲವೂ ಹೇಗೆ ಒಂದೇ ಬಗೆಯಾಗಿರುವುವೋ ಹಾಗೆ ಆ ಕ್ರತುಗಳಿಗೆ ಅಂಗವಾಗಿ ವಿಹಿತವಾಗಿರುವ ಉದ್ಗೀಥವೂ ಒಂದೇ ವಿಧವಾಗಿರುತ್ತದೆ. ಹೀಗೆ ಎಲ್ಲಾ ಉದ್ಗೀಥಾದಿವಿದ್ಯೆಗಳೂ ಬೇರೆಯಲ್ಲವಾದ್ದರಿಂದ ಎಲ್ಲ ವಿದ್ಯೆಗಳಲ್ಲೂ ಎಲ್ಲರಿಗೂ ಅಧಿಕಾರವಿರುತ್ತದೆ.

ನನು ಧರ್ಮಕಾಂಡೇ ಸರ್ವೇಷಾಂ ಸ್ವಶಾಖಾನುಷ್ಠಾನಧರ್ಮಾವಶ್ಯಕತ್ವವ್ಯಪದೇಶಾತ್ ಬ್ರಹ್ಮಕಾಂಡೇ ಸಮಾನಭಾವೇನ ಸರ್ವೇಷಾಂ ಸರ್ವಾಸು ವಿದ್ಯಾಸೂಪಾಸನಾಧಿಕಾರಃ ಕಥಮುಪಪದ್ಯತೇ? ಇತ್ಯತ್ರಾಹ. ಮಂತ್ರಾದಿವದ್ವಾ ವಿರೋಧಾತ್ ॥ ೫೪ ॥ ವಾಶಬ್ದಶ್ಚಾರ್ಥೇ. ಆದಿಶಬ್ದೇನ ಜಾತಿಗುಣಸಂಖ್ಯಾಸಾದೃಶ್ಯಕ್ರಮದ್ರವ್ಯಕರ್ಮಾಣಿ ಗೃಹ್ಯಂತೇ. ಯಥಾ ಮಂತ್ರಾದೀನಾಂ ಏಕೈಕಶಾಖಾಸು ಆಮ್ನಾತಾನಾಮಪಿ ಶೇಷಿಣಃ ಕ್ರತೋಃ ಸರ್ವಶಾಖಾಸ್ವೇಕತ್ವೇನ ಯಥಾಯಥಂ ಶ್ರುತ್ಯಾದಿಭಿಃ ಸರ್ವಾಸು ಶಾಖಾಸು ವಿನಿಯೋಗೋ ನ ವಿರುಧ್ಯತೇ, ಕಿಂಚ ಸ್ಮಾರ್ತಕರ್ಮಸ್ವಪಿ ಋಗ್ವೇದಗತಪುಣ್ಯಾಹವಾಚನಮಂತ್ರಾಣಿ ಯಜುಸ್ಸಾಮಶಾಖಿಭಿರಾದೃತಾನಿ, ತದ್ವದ್ಯಜುಶ್ಶಾಖಾಗತಶತರುದ್ರೀಯಾದಿಮಂತ್ರಾಣಿ ಋಕ್ಸಾಮಗೈರಂಗೀಕೃತಾನಿ, ಯಥಾ ಶಾಖಾಂತರಗತಸಮಿತ್ಸುಕ್ತಪ್ರಭೃತಿ ಮಂತ್ರಾಣಿ ಸರ್ವಶಾಖಾಗತೈಃ ಸ್ವೀಕೃತಾನಿ, ತದ್ವತ್ಸರ್ವಶಾಖಾಗತ ಬ್ರಹ್ಮವಿದ್ಯಾಸು "ಸರ್ವೇ ವೇದಾ ಯತ್ಪದಮಾಮನಂತಿ" ಇತಿ ವೇದಾಂತವಿದ್ಯಾವಗಮಾತ್ ಸರ್ವೇಷಾಂ ಬ್ರಹ್ಮೋಪಾಸನಾನಾಂ ಸರ್ವಶಾಖಾಗತಬ್ರಹ್ಮವಿದ್ಯೋಪಾಸನಾಧಿಕಾರಸ್ಸಮುಚಿತ ಇತಿ ನಿಶ್ಚೀಯತೇ.

ಧರ್ಮಕಾಂಡದಲ್ಲಿ ಎಲ್ಲರಿಗೂ ಅವರವರ ಶಾಖೆಗೆ ಅನುಗುಣವಾಗಿ ಧರ್ಮವನ್ನು ಆಚರಿಸಬೇಕೆಂದು ಹೇಳಿರುವುದರಿಂದ ಬ್ರಹ್ಮಕಾಂಡದಲ್ಲಿ ಎಲ್ಲರಿಗೂ ಎಲ್ಲಾ ವಿದ್ಯೆಗಳ ಪ್ರಕಾರ ಸಮಾನವಾಗಿ ಉಪಾಸನಮಾಡುವ ಅಧಿಕಾರ ಹೇಗೆ

ಬರುತ್ತದೆ ? ಎಂದಾಶಂಕಿಸಿ ಸಮಾಧಾನಮಾಡುತ್ತಾನೆ. ಸೂತ್ರದಲ್ಲಿ ವಾ ಶಬ್ದವು ಚಕಾರದ ಅರ್ಥವನ್ನು ತಿಳಿಸುತ್ತದೆ. ಆದಿಪದದಿಂದ ಜಾತಿ, ಗುಣ, ಸಂಖ್ಯೆ, ಸಾದೃಶ್ಯ, ಕ್ರಮ, ದ್ರವ್ಯ, ಮತ್ತು ಕರ್ಮಗಳನ್ನು ಗ್ರಹಿಸಬೇಕು. ಮಂತ್ರ ಮತ್ತು ದೇವತೆ ಮೊದಲಾದವನ್ನು ಒಂದೊಂದು ಶಾಖೆಯಲ್ಲಿಯೇ ಹೇಳಿದ್ದರೂ ಒಂದು ಯಜ್ಞದ ಎಲ್ಲಾ ಶಾಖೆಗಳಲ್ಲೂ ಒಂದೇ ಬಗೆಯಾಗಿ ಉಪಯೋಗಿಸುವುದರಲ್ಲಿ ಶ್ರುತಿಯ ವಿರೋಧವೇನೂ ಇಲ್ಲ. ಸ್ಮಾರ್ತಕರ್ಮಗಳಲ್ಲೂ ಸಹ ಋಗ್ವೇದದ ಪುಣ್ಯಾಹಮಂತ್ರಗಳನ್ನು ಯಜುಸ್ಸಾಮ ಶಾಖೆಯವರೂ ಆದರಿಸಿದ್ದಾರೆ. ಅದರಂತೆ ಯಜುಶ್ಶಾಖೆಯ ಶತರುದ್ರೀಯ ಮೊದಲಾದ ಮಂತ್ರಗಳನ್ನು ಋಕ್ಸಾಮಶಾಖೆಯವರೂ ಅಂಗೀಕರಿಸಿದ್ದಾರೆ. ಬೇರೆ ಶಾಖೆಯಲ್ಲಿ ಹೇಳಿರುವ ಸಮಿತ್ತು ಮತ್ತು ಕುಶಗಳಿಗೆ ಅನ್ವಯಿಸುವ ಮಂತ್ರಗಳನ್ನು ಎಲ್ಲಾ ಶಾಖೆಯವರೂ ಒಪ್ಪಿಕೊಂಡಿದ್ದಾರೆ. ಹಾಗೆಯೇ ಎಲ್ಲಾ ಶಾಖೆಗಳಲ್ಲಿರುವ ಬ್ರಹ್ಮವಿದ್ಯೆಗಳಲ್ಲೂ "ಎಲ್ಲಾ ವೇದಗಳೂ ಯಾವ ಪದವನ್ನು ತಿಳಿಸುತ್ತವೆಯೋ" ಎಂಬ ವೇದಾಂತವಿಧಿಗನುಗುಣವಾಗಿ ಎಲ್ಲಾ ಉಪಾಸಕರಿಗೂ ಅಧಿಕಾರವಿದೆ ಎಂದು ನಿಶ್ಚಯಿಸಲಾಗಿದೆ.

ಛಾಂದೋಗ್ಯೇ "ನಾಮ ಬ್ರಹ್ಮೇತ್ಯುಪಾಸೀತ", "ವಾಚಂ ಬ್ರಹ್ಮೇತ್ಯುಪಾಸೀತ", ಮನೋ ಬ್ರಹ್ಮೇತ್ಯುಪಾಸೀತ" ಇತ್ಯಾದಿ ಬಹೂನಿ ಪ್ರತೀಕೋಪಾಸನಾನಿ ವಿಧಾಯ ತದನಂತರಂ "ಭೂಮಾತ್ವೇವ ವಿಜಿಜ್ಞಾಸಿತವ್ಯಃ", "ಯತ್ರ ನಾನ್ಯತ್ಪಶ್ಯತಿ ನಾನ್ಯತ್ ಶೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ । ಅಥ ಯತ್ರಾನ್ಯತ್ಪಶ್ಯತಿ ಅನ್ಯತ್ ಶೃಣೋತಿ ಅನ್ಯದ್ವಿಜಾನಾತಿ ತದಲ್ಪಂ" ಇತಿ ಶ್ರುತೌ ಭೂಮಾಖ್ಯ ಬ್ರಹ್ಮೋಪಾಸನಸ್ಯ ಹಿ ಸರ್ವೋಪಾಸನಾಧಿಕ್ಯವ್ಯವಸ್ಥಾಪನಾತ್ ತದೇವ ಮುಮುಕ್ಷೂಣಾಂ ಆವಶ್ಯಕಮಿತ್ಯಾಶಂಕಾಯಾಮಧಿಕರಣಾಂತರಮಾಹ. ಭೂಮ್ನಃ ಕ್ರತುವಜ್ಜ್ಯಾಯಸ್ತ್ವಾಧಿಕರಣಂ ॥ ೨೩ ॥ ಭೂಮ್ನಃ ಕ್ರತುವಜ್ಜ್ಯಾಯಸ್ತ್ವಂ ತದಾ ಹಿ ದರ್ಶಯತಿ ॥ ೫೫ ॥ "ಪ್ರಾಚೀನಶಾಲಜೌಪಮನ್ಯವಃ" ಇತ್ಯಾರಭ್ಯ ವೈಶ್ವಾನರವಿದ್ಯಾ ಆಮ್ನಾತಾ. ತತ್ರ ವೈಶ್ವಾನರಃ ಪರಮಾತ್ಮಾ ತ್ರೈಲೋಕ್ಯಶರೀರ ಉಪಾಸ್ಯಃ ಶ್ರುತಃ ಸ್ವರ್ಲೋಕಾದಿತ್ಯವಾಯ್ವಾಕಾಶಾಪ್‌ಪೃಥಿವ್ಯವಯವಃ. ತತ್ರ ಚ "ದ್ಯೌರ್ಮೂರ್ಧಾ, ಆದಿತ್ಯಶ್ಚಕ್ಷುಃ, ವಾಯುಃ ಪ್ರಾಣಃ, ಆಕಾಶಸ್ಸಂದೋಹಃ (ಮಧ್ಯಕಾಯಃ) ಆಪೋ ವಸ್ತಿಃ, ಪೃಥಿವೀ ಪಾದೌ ಇತ್ಯವಯವವಿಶೇಷಾಃ." ತತ್ರ ಸಂಶಯಃ, ಕಿಮಸ್ಯ ತ್ರೈಲೋಕ್ಯಶರೀರಸ್ಯ ವ್ಯಸ್ತಸ್ಯೋಪಾಸನಂ ಕರ್ತವ್ಯಂ ಉತ ಸಮಸ್ತಸ್ಯ ಚೇತಿ. ಅಥ ಸಮಸ್ತಸ್ಯೈವೇತಿ. ಕಿಂ ಯುಕ್ತಂ ವ್ಯಸ್ತಸ್ಯೇತಿ. ಕುತಃ? ಉಪಕ್ರಮೇ ವಸ್ತ್ವುಪಾಸನೋಪದೇಶಾತ್. ತಥಾ ಹ್ಯುಪದಿಶ್ಯತೇ. ಔಪಮನ್ಯವಾದಯಃ ಕಿಲೋದ್ದಾಲಕಪೃಷ್ಟಾಃ ಕೈಕ

ಯಮಶ್ವಪತಿಮುಪಸದ್ಯ ಆತ್ಮಾನಮೇವೇಮಂ ವೈಶ್ವಾನರಂ ಸಂಪ್ರತ್ಯ್ಯೇಷಿತಮೇವ ನೋ ಬ್ರೂಹೀತಿ ಪಪ್ರಚ್ಛುಃ. ನ ಚ ತೇಭ್ಯಃ ಪ್ರತ್ಯೇಕಂ ಸ್ವೋಪಾಸ್ಯಾನ್ ದ್ಯುಃಪ್ರಭೃತೀನುಕ್ತ್ವಾ ದ್ಯೋಮೂರ್ಧಾದಿಷು ವ್ಯಸ್ತೇಷೂಪಾಸನಂ ತತ್ರ ತತ್ರ ಫಲಂ ಚೋಕ್ತವಾನ್ "ಅತ್ಯನ್ನಂ ಪಶ್ಯತಿ ಪ್ರಿಯಂ ಭವತ್ಯಸ್ಯ ಬ್ರಹ್ಮವರ್ಚಸಂ ಕುಲೇ ಯ ಏತಮೇವಾತ್ಮಾನಂ ವೈಶ್ವಾನರಮುಪಾಸ್ತೇ", ಮೂರ್ಧಾ ತ್ವೇಷ ಆತ್ಮನಃ" ಇತಿ, "ಏಷ ವೈ ಸುತೇಜಾ ಆತ್ಮಾ ವೈ ವೈಶ್ವಾನರಃ" ಇತ್ಯಾದಿನಾ ತೇಷುತೇಷೂಪಾಸನೇಷು ಉಪಾಸ್ಯಸ್ಯ ವೈಶ್ವಾನರತ್ವಂ ಚಾಹ. ಅತೋ ವ್ಯಸ್ತಸ್ಯೋಪಾಸನಂ ಕರ್ತವ್ಯಂ. ಪರತ್ರ "ಯಸ್ತ್ವೇತಮೇವ ಪ್ರಾದೇಶಮಾತ್ರಮಭಿವಿಮಾನಮಾತ್ಮಾನಂ ವೈಶ್ವಾನರಮುಪಾಸ್ತೇ" ಇತಿ, "ದ್ಯುಪ್ರಭೃತಿ ಪ್ರದೇಶಾವಚ್ಛಿನ್ನಮಾತ್ರೇ ವೈಶ್ವಾನರೇ ಉಕ್ತಸ್ಯ ಮೂರ್ಧಾದ್ಯುಪಾಸನಸ್ಯ ಸಮಾನೇನೋಪಸಂಹಾರಃ" ಇತ್ಯವಗಂತವ್ಯಂ. ಅಪರ ಆಹ. ಏವಮೇವ ಸಮಸ್ತಸ್ಯಾಪ್ಯುಪಾಸನಂ ಕರ್ತವ್ಯಮಿತಿ ಪೃಥಕ್ಫಲನಿರ್ದೇಶಾತ್ "ಯಸ್ತ್ವೇತಮೇವಂ ವೈಶ್ವಾನರಮುಪಾಸ್ತೇ ಸ ಸರ್ವೇಷು ಲೋಕೇಷು ಸರ್ವೇಷು ಭೂತೇಷು ಸರ್ವೇಷ್ವಾತ್ಮಸ್ವನ್ನಮತ್ತಿ" ಇತಿ. ನ ಚೈತಾವತಾ ವಾಕ್ಯಭೇದಃ. ಯಥಾ ಭೂಮವಿದ್ಯೋಪಕ್ರಮೇ ನಾಮಾದ್ಯುಪಾಸನಂ ತತ್ಫಲಂ ಚಾಭಿಧಾಯ "ಏಷ ತು ವಾ ಅತಿವದತಿ ಯಸ್ಯ ತ್ವೇವಾತಿವದತಿ" ಇತ್ಯಾದಿನಾ ಭೂಮವಿದ್ಯಾಮುಪದಿಶ್ಯ "ಸ ಸ್ವರಾಡ್ಭವತಿ ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ" ಇತಿ ತತ್ಫಲಂ ಚ ವ್ಯಪದಿಶತಿ. ತತ್ರ ಭೂಮವಿದ್ಯಾಪರತ್ವೇ ವಾಕ್ಯಸ್ಯ ನಾಮಾದ್ಯವಾಂತರೋಪಾಸನಂ ತತ್ತತ್ಫಲಂ ಚಾಂಗೀಕ್ರಿಯತೇ. ತಥಾ ಇಹಾಪೀತಿ. ಏವಂ ಪ್ರಾಪ್ತೇ ಅಭಿಧೀಯತೇ ಭೂಮ್ನಃ ವಿಪುಲಸ್ಯ ಸಮಸ್ತಸ್ಯೈವ ಜ್ಯಾಯಸ್ತ್ವಂ ಪ್ರಾಮಾಣಿಕತ್ವಂ ಏಕವಾಕ್ಯತ್ವಾವಗತೇಃ. ತಥಾಹಿ "ಪ್ರಾಚೀನಶಾಲಜೌಪಮನ್ಯವಃ" ಇತ್ಯುಪಕ್ರಮ್ಯ "ಉದ್ದಾಲಕೋ ಹ ವೈ ಭಗವನ್ತಯಮಾರುಣಿಃ ಸಂಪ್ರತೀಮಮಾತ್ಮಾನಂ ವೈಶ್ವಾನರಮಧ್ಯೇಶಿ, ತಂ ಹಂತಾಭ್ಯಾಗಚ್ಛಾಮ" ಇತಿ ವೈಶ್ವಾನರಾತ್ಮಬುಭುತ್ಸಯಾ ಔಪಮನ್ಯವಾದಯಃ ಪಂಚಮಹರ್ಷಯಃ ತಮುದ್ದಾಲಕಮುಪೇತ್ಯ ತತ್ರ ವೈಶ್ವಾನರಾತ್ಮವೇದಿನಂ ಅಲಭಮಾನಾಃ ತೇನ ಚ ಸಹಾಶ್ವಪತಿಂ ಕೈಕಯಂ ವೈಶ್ವಾನರಾತ್ಮವೇದಿನಂ ಉಪಸಂಗಮ್ಯ "ಆತ್ಮಾನಮೇವೇಮಂ ವೈಶ್ವಾನರಂ ಸಂಪ್ರತ್ಯಧ್ಯೇಷಿತಮೇವ ನೋ ಬ್ರೂಹಿ" ಇತಿ ಪೃಷ್ಟ್ವಾ ತತ್ಸಕಾಶಾತ್ ಪರಮಾತ್ಮಾನಂ ವೈಶ್ವಾನರಂ ಸ್ವರ್ಲೋಕಾದಿ ಪೃಥಿವ್ಯಂತಶರೀರಮುಪಾಸ್ಯಮವಗಮ್ಯ ತತ್ಫಲಂ ಚ "ಸರ್ವಲೋಕ

ಸರ್ವಭೂತಸರ್ವಾತ್ಮಾನುಭೂತಬ್ರಹ್ಮಾತ್ಮಾನುಭವಮುವಗತವಂತಃ" ಇತ್ಯುಪಸಂಹರತೋ ವಾಕ್ಯಸ್ಯೈಕತ್ವಮುವಗಮ್ಯತೇ. ಏವಮೇಕವಾಕ್ಯತ್ವೇಽವಗತೇ ಸತ್ಯವಯವವಿಶೇಷೋಪಾಸ್ತಿವಚನಂ ಫಲನಿರ್ದೇಶಶ್ಚ ಸಮಸ್ತೋಪಾಸನೈಕದೇಶಾನುವಾದಮಾತ್ರಮಿತಿ ನಿಶ್ಚೀಯತೇ. ಕ್ರತುವತ್ ಯಥಾ "ವೈಶ್ವಾನರಂ ದ್ವಾದಶಕಪಾಲಂ ನಿರ್ವಪೇತ್ ಪುತ್ರೇ ಜಾಯೇತ" ಇತಿ ವಿಹಿತಸ್ಯೈವ ಕ್ರತೋರೇಕದೇಶಾಃ "ಯದಷ್ಟಾಕಪಾಲೋ ಭವತಿ" ಇತ್ಯಾದಿಭಿರನೂದ್ಯಂತೇ. ತಥಾ ಸಮಸ್ತೋಪಾಸನಮೇವ ನ್ಯಾಯ್ಯಂ, ನ ವ್ಯಸ್ತೋಪಾಸನಂ. ತಥಾಹಿ ದರ್ಶಯತಿ ಯಂ ಶ್ರುತಿಃ ವ್ಯಸ್ತೋಪಾಸನೇ ಅನರ್ಥಂ ಬ್ರವೀತಿ "ಮೂರ್ಧಾ ತೇ ವ್ಯಪತಿಷ್ಯತ್ ಯನ್ಮಾಂ ನಾಗಮಿಷ್ಯಃ" ಇತಿ, "ಅಂಧೋ ಭವಿಷ್ಯಸಿ ಯನ್ಮಾಂ ನಾಗಮಿಷ್ಯಃ" ಇತ್ಯಾದಿನಾ. ಅತ ಇದಮುಪ್ಯಪಾಸ್ತಂ ಯನ್ನಾಮಾದ್ಯುಪಾಸನಸಾಮ್ಯಮುಕ್ತಂ ತತ್ರ ಹಿ ನಾಮಾದ್ಯುಪಾಸನೇಷ್ವನರ್ಥೋ ನ ಶ್ರುತಃ. ನಾಮಾದ್ಯುಪಾಸನೇಭ್ಯೋ ಭೂಮಾದ್ಯುಪಾಸನಸ್ಯಾತಿಶಯಿತಫಲತ್ವಂ ಶ್ರುತಂ "ಏಷ ತು ವಾ ಅತಿವದತಿ ಯಸ್ಸತ್ಯೇನಾತಿವದತಿ" ಇತಿ. ತತ ಏವ ತತ್ರ ಭೂಮವಿದ್ಯಾಪರತ್ವೇಽಪಿ ವಾಕ್ಯಸ್ಯ ನಾಮಾದ್ಯುಪಾಸನಾನಾಂ ಸಫಲಿನಾಂ ವಿವಕ್ಷಿತತ್ವಂ ಅನ್ಯಥಾತಿಶಯಿತಫಲತ್ವನಿಮಿತ್ತಾತಿವಾದೇನ ಭೂಮವಿದ್ಯಾಸ್ತುತ್ಯನುಪಪತ್ತೇಃ. ಅತಃ ಸಮಸ್ತೋಪಾಸನಮೇವ ನ್ಯಾಯ್ಯಂ.

ಛಾಂದೋಗ್ಯದಲ್ಲಿ "ನಾಮವನ್ನು ಬ್ರಹ್ಮವೆಂದು ಉಪಾಸನಮಾಡು. ವಾಕ್ ಮತ್ತು ಮನಸ್ಸನ್ನು ಬ್ರಹ್ಮವೆಂದು ಉಪಾಸನಮಾಡು" ಹೀಗೆಂದು ಅನೇಕ ಪ್ರತೀಕೋಪಾಸನಗಳನ್ನು ಹೇಳಿ ಆ ಮೇಲೆ "ಭೂಮವನ್ನೇ ತಿಳಿಯಬೇಕು. ಎಲ್ಲಿ ಏನೊಂದೂ ಕಾಣುವುದಿಲ್ಲವೋ ಕೇಳುವುದಿಲ್ಲವೋ ತಿಳಿಯುವುದಿಲ್ಲವೋ ಅದೇ ಭೂಮ. ಎಲ್ಲಿ ಬೇರೊಂದನ್ನು ಕಾಣುತ್ತೇವೆಯೋ ಕೇಳುತ್ತೇವೆಯೋ ಮತ್ತು ತಿಳಿಯುತ್ತೇವೆಯೋ ಅದು ಅಲ್ಪ" ಎಂದು ಶ್ರುತಿಯಲ್ಲಿ ಭೂಮವೆಂಬ ಬ್ರಹ್ಮೋಪಾಸನವನ್ನು ಎಲ್ಲಾ ಉಪಾಸನಗಳಿಗೂ ಅಧಿಕವೆಂದು ವ್ಯವಸ್ಥೆಮಾಡಿರುವುದರಿಂದ ಅದೇ ಮುಮುಕ್ಷುಗಳಿಗೆ ಆವಶ್ಯಕವೆಂದು ಆಶಂಕಿಸಿ ಸಮಾಧಾನಮಾಡುತ್ತಾನೆ. "ಪ್ರಾಚೀನಶಾಲದೇಶದ ಔಪಮನ್ಯನು" ಎಂದು ಆರಂಭಿಸಿ ವೈಶ್ವಾನರ ವಿದ್ಯೆಯನ್ನು ಹೇಳಿದೆ. ಅಲ್ಲಿ ವೈಶ್ವಾನರನೇ ಪರಮಾತ್ಮನು. ಮೂರುಲೋಕಗಳೂ ಅವನ ಶರೀರಗಳು. ಅವನೇ ಉಪಾಸ್ಯನು. ಸ್ವರ್ಗ ಆದಿತ್ಯ ವಾಯು ಆಕಾಶ ಪೃಥಿವಿಗಳೇ ಅವನ ಅವಯವಗಳು. ಅದರಲ್ಲೂ ಅವನಿಗೆ ಸ್ವರ್ಗವೇ ಶಿರಸ್ಸು, ಆದಿತ್ಯನೇ ಕಣ್ಣುಗಳು, ವಾಯುವೇ ಪ್ರಾಣ, ಆಕಾಶವೇ ಮಧ್ಯದ ಶರೀರ, ನೀರೇ ದೇಹದ ಕೆಳಭಾಗ, ಪೃಥಿವಿಯೇ ಪಾದಗಳು" ಹೀಗೆ ಅವನ ಅವಯವವಿಶೇಷಗಳನ್ನು ಅಲ್ಲಿ ಹೇಳಿದೆ. ಆದರೆ

ತ್ರೈಲೋಕ್ಯವೆಂಬ ಈ ಶರೀರವನ್ನು ಒಟ್ಟಿಗೆ ಒಂದೇ ಆಕಾರದಿಂದ ಉಪಾಸನಮಾಡಬೇಕೋ ಅಥವಾ ಬಿಡಿಬಿಡಿಯಾಗಿ ಉಪಾಸನಮಾಡಬೇಕೋ ? ಎಂದು ಇಲ್ಲಿ ಸಂಶಯ ಬರುತ್ತದೆ. ಶ್ರುತಿಯು ಆರಂಭದಲ್ಲಿ ಬೇರೆಬೇರೆ ವಸ್ತುಗಳ ಉಪಾಸನವನ್ನು ಹೇಳಿರುವುರಿಂದ ತ್ರೈಲೋಕ್ಯಶರೀರವನ್ನು ಬಿಡಿಬಿಡಿಯಾಗಿಯೇ ಉಪಾಸನಮಾಡಬೇಕೆಂದು ಆಕ್ಷೇಪ ಬರುತ್ತದೆ. ಅಲ್ಲಿ ಹೀಗೆ ಹೇಳಿದೆ. ಉದ್ದಾಲಕನ ಇಚ್ಛೆಯಂತೆ ಔಪಮನ್ಯರು ಕೇಕಯದೇಶದ ರಾಜನಾದ ಅಶ್ವಪತಿಯ ಬಳಿಗೆ ಹೋಗಿ ಆತ್ಮನೆನಿಸಿದ ವೈಶ್ವಾನರನನ್ನು ನೀನು ತಿಳಿದಂತೆ ನಮಗೆ ತಿಳಿಸು " ಎಂದು ಕೇಳಿದರು. ಅವನು ಅವರಿಗೆ ಪ್ರತ್ಯೇಕವಾಗಿ ಉಪಾಸ್ಯವೆನಿಸಿದ ದ್ಯುಲೋಕ ಮೊದಲಾದವನ್ನು ತಿಳಿಸಿ ಅಲ್ಲಲ್ಲಿ ಅವುಗಳ ಫಲಗಳನ್ನು ಹೇಳಿದನು. ಯಾವನು ವೈಶ್ವಾನರನನ್ನು ಆತ್ಮನೆಂದು ಉಪಾಸನ ಮಾಡುವನೋ ಅವನಿಗೆ ಐಹಿಕಸುಖವೂ ಲೋಕದ ಪ್ರೇಮವೂ ಬ್ರಹ್ಮವರ್ಚಸ್ಸೂ ಲಭಿಸುತ್ತವೆ " " ಇದೇ ಆತ್ಮನ ಶಿರಸ್ಸು " " ವೈಶ್ವಾನರನೆಂಬ ಆತ್ಮವೇ ಮಹಾ ಪ್ರಕಾಶವಾಗಿದೆ " ಎಂಬಲ್ಲಿ ಆಯಾಯ ಉಪಾಸನಗಳಲ್ಲಿ ವೈಶ್ವನರನನ್ನೇ ಉಪಾಸ್ಯನೆಂದು ಹೇಳಿದೆ. ಆದ್ದರಿಂದ ವಿಶ್ವವನ್ನು ಬಿಡಿಬಿಡಿಯಾಗಿ ಉಪಾಸನಮಾಡಬೇಕೆಂದು ತಿಳಿದುಬರುತ್ತದೆ. ಬೇರೆಕಡೆ " ಒಂದು ಜೋಟುಪ್ರಮಾಣದ ವೈಶ್ವಾನರನನ್ನು ಯಾವನು ನೋಡುತ್ತಾನೋ" ಎಂದು ದ್ಯುಲೋಕವೇ ಮೊದಲಾದ ಪ್ರದೇಶಗಳಲ್ಲಿ ತುಂಬಿಕೊಂಡಿರುವ ವೈಶ್ವಾನರನಲ್ಲಿ ಹೇಳಿರುವ ಶಿರಸ್ಸು ಮೊದಲಾದ ಅವಯವಗಳ ಉಪಾಸನದಂತೆಯೇ ಇಲ್ಲಿಯೂ ಉಪಾಸನವನ್ನು ಹೇಳಲಾಗಿದೆ. ಬೇರೆಬೇರೆ ಫಲಗಳನ್ನು ಹೇಳಿರುವುದರಿಂದ ತ್ರಿಲೋಕಶರೀರವನ್ನು ಪೂರ್ತಿಯಾಗಿ ಉಪಾಸನ ಮಾಡಬೇಕೆಂದು ಬೇರೊಬ್ಬರು ಹೇಳುತ್ತಾರೆ. " ಜೋಟು ಪ್ರಮಾಣದಲ್ಲಿದ್ದರೂ ದೇಹದ ಎಲ್ಲಾ ಭಾಗಗಳನ್ನೂ ವ್ಯಾಪಿಸಿರುವ ವೈಶ್ವಾನರನನ್ನು ಯಾವನು ಉಪಾಸನ ಮಾಡುತ್ತಾನೋ ಅವನು ಎಲ್ಲಾ ಲೋಕಗಳಲ್ಲೂ ಎಲ್ಲಾ ಭೂತಗಳಲ್ಲೂ ಮತ್ತು ಎಲ್ಲಾ ಆತ್ಮರಲ್ಲಿಯೂ ನೆಲಸಿ ಭೋಗಿಸುತ್ತಾನೆ " ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ವಾಕ್ಯಭೇದವೇನೂ ತೋರುವುದಿಲ್ಲ. ಭೂಮವಿದ್ಯೆಯ ಆರಂಭದಲ್ಲಿ ನಾಮಾದಿಗಳ ಉಪಾಸನವನ್ನೂ ಅವುಗಳ ಫಲವನ್ನೂ ತಿಳಿಸಿ " ಇವನ್ನು ಉಪಾಸನಮಾಡಿದವನು ಎಲ್ಲರಿಗೂ ಶ್ರೇಷ್ಠನಾಗುತ್ತಾನೆ." ಎಂದು ಭೂಮವಿದ್ಯೆಯನ್ನು ಹೇಳಿ " ಅವನು ಸ್ವತಂತ್ರನಾಗುತ್ತಾನೆ. ಅವನು ಎಲ್ಲಾ ಲೋಕಗಳಲ್ಲೂ ತಡೆಇಲ್ಲದೆ ಸಂಚರಿಸುತ್ತಾನೆ" ಎಂದು ಫಲವನ್ನು ಹೇಳಲಾಗಿದೆ. ಅಲ್ಲಿ ಆ ವಾಕ್ಯವು ಭೂಮವಿದ್ಯೆಯನ್ನು ಹೇಳಲಿಕ್ಕಾಗಿ ಬಂದಿದ್ದರೂ ನಾಮ ಮೊದಲಾದ ಅವಾಂತರ ಉಪಾಸನವನ್ನೂ ಅದರದರ ಫಲವನ್ನೂ ಅಂಗಿಕರಿಸಲಾಗಿದೆ. ಅದರಂತೆ ಇಲ್ಲಿಯೂ ಭಾವಿಸಬೇಕು. ಹೀಗೆ ಪೂರ್ವಪಕ್ಷ ಬಂದರೆ ಅದಕ್ಕೆ ಸಮಾಧಾನವನ್ನು ಹೇಳಲಾಗಿದೆ. ಭೂಮವನ್ನೂ ಅವಾಂತರವಸ್ತುಗಳನ್ನೂ ಒಂದೇ ವಾಕ್ಯದಲ್ಲಿ ಹೇಳಿರುವುದರಿಂದ ವಿಸ್ತಾರವಾದ ಭೂಮದ ಉಪಾಸನವು ಪ್ರಾಮಾಣಿಕವೆನಿಸುತ್ತದೆ. "ಉದ್ದಾಲಕನು

ಈ ಆತ್ಮನನ್ನು ವೈಶ್ವಾನರನೆಂದು ತಿಳಿಯುತ್ತಾನೆ. ಅವನನ್ನು ನಾವು ಅನುಸರಿಸೋಣ" ವೆಂದು ವೈಶ್ವಾನರಾತ್ಮನನ್ನು ತಿಳಿಯುವ ಇಚ್ಛೆಯಿಂದ ಔಪಮನ್ಯವ ಮೊದಲಾದ ಐದು ಮಹರ್ಷಿಗಳು ಆ ಉದ್ದಾಲಕನ ಬಳಿಗೆಹೋಗಿ ಅಲ್ಲಿ ವೈಶ್ವಾನರ ವಿಜ್ಞಾನಿಯನ್ನು ಕಾಣದೆ ಅವನೊಡನೆ ಅಶ್ವಪತಿಯ ಬಳಿಗೆ ಹೋಗಿ ಅವನನ್ನು ವೈಶ್ವಾನರವಿಜ್ಞಾನಿ ಎಂದು ತಿಳಿದು "ನೀನು ಆತ್ಮನೆಂದು ತಿಳಿದಿರುವ ಈ ವೈಶ್ವಾನರನನ್ನು ನಮಗೆ ತಿಳಿಸು"ಎಂದುಕೇಳಿ ಅವನಿಂದ ವೈಶ್ವಾನರನೆಂದರೆ ಪರಮಾತ್ಮನೆಂದೂ,ಅವನಿಗೆ ಸ್ವರ್ಗಾದಿ ಪೃಥಿವ್ಯಂತವಾದ ವಿಶ್ವವೆಲ್ಲವೂ ಶರೀರವಾಗಿರುವುದೆಂದೂ, ಅವನೇ ಉಪಾಸ್ಯನೆಂದೂ, ವಿಶ್ವವೆಲ್ಲವನ್ನು ಬ್ರಹ್ಮಭಾವದಿಂದ ಕಾಣುವುದೇ ಆ ವೈಶ್ವನರೋಪಾಸನದ ಫಲವೆಂದೂ ತಿಳಿದರು ಎಂದು ಕೊನೆಗೊಂಡಿರುವುದರಿಂದ ವಾಕ್ಯವೆಲ್ಲವೂ ಒಂದೇಬಗೆ ಎಂದು ತಿಳಿದುಬರುತ್ತದೆ. ಹೀಗೆ ಏಕವಾಕ್ಯತೆಯನ್ನು ತಿಳಿದಮೇಲೆ ಅವಯವವಿಶೇಷಗಳ ಉಪಾಸನವನ್ನೂ ಫಲವನ್ನೂ ಹೇಳಿದ್ದು ಸಮಸ್ತೋಪಾಸನದ ಒಂದು ಭಾಗದ ಅನುವಾದ ಮಾತ್ರವೇ ಆಗಿರುವುದೆಂದು ನಿಶ್ಚಯಿಸಲಾಗಿದೆ. "ಹನ್ನೆರಡು ಕಪಾಲಗಳಿಂದ ನೆರವೇರಿಸುವ ವೈಶ್ವಾನರಕರ್ಮವನ್ನಾಚರಿಸಬೇಕು. ಅದರಿಂದ ಮಗನು ಹುಟ್ಟುತ್ತಾನೆ" ಎಂಬಲ್ಲಿ ಹೇಳಿರುವ ಯಜ್ಞದ ಏಕದೇಶವನ್ನು "ಅಷ್ಟಾಕಪಾಲೋ ಭವತಿ" ಎಂಬಲ್ಲಿ ತಿಳಿಸಲಾಗಿದೆ. ಆದ್ದರಿಂದ ಸಮಸ್ತೋಪಾಸನವೇ ಶ್ರುತಿಯಲ್ಲಿ ವಿಹಿತವಾಗಿದೆ. ಆದರೆ ಶ್ರುತಿಯು ವ್ಯಸ್ತೋಪಾಸನದ ಅನರ್ಥವನ್ನು "ನನ್ನನ್ನು ಆಶ್ರಯಿಸದಿದ್ದರೆ ನಿನ್ನ ತಲೆ ಹೋಳಾದೀತು. ನೀನು ಅಂಧನಾಗುವೆ" ಈ ರೀತಿಯಾಗಿ ಶ್ರುತಿಯು ತಿಳಿಸಿದೆ. ಶ್ರುತಿಯು ನಾಮಾದ್ಯುಪಾಸನಗಳನ್ನು ಹೋಲಿಕೆಗಾಗಿ ಹೇಳಿದ್ದರೂ ಆ ಉಪಾಸನಗಳಲ್ಲಿ ಅನರ್ಥವನ್ನು ತಿಳಿಸಿಲ್ಲ. ಆದರೆ ನಾಮಾದ್ಯುಪಾಸನಗಳಿಗಿಂತ ಭೂಮೋಪಾಸನಕ್ಕೆ ಹೆಚ್ಚಿನ ಫಲವನ್ನು "ಯಾವನು ಸತ್ಯವನ್ನೇ ಹೇಳುತ್ತಾನೋ, ಅವನು ವಾಗ್ಮಿಯಾಗುತ್ತಾನೆ" ಎಂಬ ಶ್ರುತಿಯು ತಿಳಿಸಿದೆ. ಆದ್ದರಿಂದಲೇ ಆ ವಾಕ್ಯವು ಭೂಮವಿದ್ಯೆಗೆ ಅನ್ವಯಿಸಿದರೂ ನಾಮಾದ್ಯುಪಾಸನಗಳೂ ಸಫಲವಾದ್ದರಿಂದ ಅಲ್ಲಿಯೂ ವಿವಕ್ಷಿತವೇ ಆಗಿದೆ. ಇಲ್ಲವಾದರೆ ಹೆಚ್ಚಿನ ಫಲವಿದೆ ಎಂದು ಹೇಳಿ ಭೂಮವಿದ್ಯೆಯನ್ನು ಪ್ರಶಂಸೆಮಾಡಿದ್ದು ವ್ಯರ್ಥವಾಗುತ್ತಿತ್ತು. ಆದ್ದರಿಂದ ಸಮಸ್ತೋಪಾಸನವೇ ನ್ಯಾಯವೆನಿಸಿದೆ.

**ನನು ನಾಮಾದ್ಯುಪಾಸನವಾಕ್ಯಾನಾಂ ನ ಚಾವಾಂತರತಾತ್ಪರ್ಯಂ "ನಾಮ ಬ್ರಹ್ಮೇತ್ಯುಪಾಸೀತ" ಇತ್ಯಾದಿವಾಕ್ಯಾನಾಂ ಸ್ಥೂಲಾರುಂಧತೀನ್ಯಾಯೇನ ಬ್ರಹ್ಮೋಪಾಸನೇ ತಾತ್ಪರ್ಯಾವಗಮಾತ್. ತಥಾಚ ನಾಮಾದ್ಯುಪಾಸನಾನಾಂ ಸರ್ವೇಷಾಂ ಸ್ವಾತಂತ್ರ್ಯೇಣ ಪರಶಿವ ಬ್ರಹ್ಮೋಪಾಸನಂ ಕಥಂ ಭವತೀತ್ಯಾಶಂಕಾಯಾಮಧಿಕರಣಾಂತರೇಣ ಪ್ರತಿಪಾದಯತಿ. ನಾನಾಶಬ್ದಾದಿಭೇದಾಧಿಕರಣಂ ॥ ೨೪ ॥ ನಾನಾಶಬ್ದಾದಿಭೇದಾತ್ ॥ ೫೬ ॥ ನಾನಾವಿಧಾನ್ಯನೇಕಾನಿ ಶಿವನಾರಾಯಣ**

ಬ್ರಹ್ಮೇಂದ್ರಾದಿತ್ಯಾದಿನಾಮಾದ್ಯುಪಾಸನಾನ್ಯಪಿ ಅಂಗೀಕರ್ತವ್ಯಾನಿ. ಕುತಃ? ಶಬ್ದಾದಿಭೇದಾತ್. "ನಾಮ ಬ್ರಹ್ಮೇತ್ಯುಪಾಸೀತ", "ವಾಚಂ ಬ್ರಹ್ಮೇತ್ಯುಪಾಸೀತ", "ನಾರಾಯಣಪರಂ ಬ್ರಹ್ಮ", "ಅಸಾವಾದಿತ್ಯೋ ಬ್ರಹ್ಮ" ಇತ್ಯಾದಿಶ್ರುತಿಶತೇಷು ಉಪಾಸ್ತಿಶಬ್ದಾನಾಂ ಬಹೂನಾಂ ಅಧಿಕಾರಿಭೇದೇನ ಸಮುಕ್ಷಪ್ರವಾಹನ್ಯಾಯೇನ ಶ್ರೂಯಮಾಣತ್ವಾತ್ ಪರಸ್ಪರಭಿನ್ನತ್ವಂ ಸಿದ್ಧಂ. ತಥಾಪಿ ಕ್ರಮುಕ್ರಮಾನುಸಾರೇಣ ಸೋಪಾನಾರೋಹಣತ್ವಾತ್, "ಬಹೂನಾಂ ಜನ್ಮನಾಮಂತೇ ಜ್ಞಾನವಾನ್ ಮಾಂ ಪ್ರಪದ್ಯತೇ" ಇತಿ ವಾಕ್ಯದರ್ಶನಾತ್, "ಸರ್ವೇಷಾಮುಪಾಸನಾನಾಂ ಮೋಕ್ಷೈಕಫಲಶ್ರವಣಾತ್ ಸರ್ವವಿದ್ಯಾಸಮುಸ್ಚಯತ್ವಂ ಸಮಂಜಸಮಿತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಇಹ ಬ್ರಹ್ಮವಿದ್ಯಾಸ್ಸರ್ವಾಃ ಬ್ರಹ್ಮಪ್ರಾಪ್ತಿರೂಪಮೋಕ್ಷೈಕಫಲಾಃ. ಸದ್ವಿದ್ಯಾ, ಭೂಮವಿದ್ಯಾ, ದಹರವಿದ್ಯಾ, ಉಪಕೋಸಲವಿದ್ಯಾ, ಶಾಂಡಿಲ್ಯವಿದ್ಯಾ, ವೈಶ್ವಾನರವಿದ್ಯಾ, ಆನಂದಮಯವಿದ್ಯಾ, ಅಕ್ಷರವಿದ್ಯಾ, ಪ್ರತರ್ದನವಿದ್ಯಾ, ಉದ್ಗೀಥವಿದ್ಯಾ, ಅಕ್ಷಿಪುರುಷವಿದ್ಯಾ, ಪಾಶುಪತವಿದ್ಯಾ ಇತ್ಯಾದ್ಯಾಃ ಅನ್ಯಾಶ್ಚ ಪ್ರಾಣಾದ್ಯೇಕವಿಷಯಫಲಾಶ್ಚ. ಕಿಮತ್ರ ವಿದ್ಯೈಕ್ಯಂ ಉತ ವಿದ್ಯಾಭೇದ ಇತಿ ಸಂಶಯ್ಯತೇ. ಅತ್ರೈವ ಆಸಾಂ ಪರಸ್ಪರಭೇದೇ ಸಮರ್ಥಿತೇ ಸತ್ಯೇಕಸ್ಯಾಃ ದಹರವಿದ್ಯಾದಿಕಾಯಾಃ ಸರ್ವವೇದಾಂತಪ್ರತ್ಯಯನ್ಯಾಯಃ. ಕಿಂ ಯುಕ್ತಂ ವಿದ್ಯೈಕ್ಯಮಿತಿ. ಕುತಃ? ವೇದ್ಯಸ್ಯ ಬ್ರಹ್ಮಣ ಏಕತ್ವಾತ್. ವೇದ್ಯಂ ಹಿ ವಿದ್ಯಾಯೋ ರೂಪಂ. ಅತೋ ರೂಪೈಕ್ಯಾತ್ ವಿದ್ಯೈಕ್ಯಮಿತಿ. ಏವಂ ಪ್ರಾಪ್ತೇಽಭಿಧೀಯತೇ. ನಾನ್ಯೇತಿ ನಾನಾಭೂತಾ ವಿದ್ಯಾಃ. ಕುತಃ? ಶಬ್ದಾದಿಭೇದಾತ್. ಆದಿಶಬ್ದೇನ ಅಭ್ಯಾಸಸಂಖ್ಯಾಗುಣಪ್ರಕ್ರಿಯಾನಾಮಧೇಯಾನಿ ಗೃಹ್ಯಂತೇ. ಶಬ್ದಾಂತರಾದಿಭಿರತ್ರ ವಿಧೇಯಭೇದಹೇತವೋಽನುಬದ್ಧಭೇದಾ ದೃಶ್ಯಂತೇ. ಯದ್ಯಪಿ, "ವೇದ," "ಉಪಾಸೀತ" ಇತ್ಯಾದಯಃ ಶಾಬ್ದಾಃ ಪ್ರತ್ಯಯಾ ವೃತ್ತ್ಯಭಿಧಾಯಿನಃ. ಪ್ರತ್ಯಯಾಶ್ಚ ಬ್ರಹ್ಮೈಕವಿಷಯಾಃ. ತಥಾಪಿ ತತ್ಪ್ರಕರಣೋದಿತಜಗದೇಕಕಾರಣತ್ವಾಪಹತಪಾಪ್ಮತ್ವಾದಿವಿಶೇಷಣವಿಶಿಷ್ಟಬ್ರಹ್ಮವಿಷಯಪ್ರತ್ಯಯಾ ವೃತ್ತ್ಯವಬೋಧಿನಃ. ಪ್ರತ್ಯಯಾ ವೃತ್ತಿರೂಪಾಃ. ವಿದ್ಯಾಃ ಭಿಂದಂತಿ. ಬ್ರಹ್ಮಪ್ರಾಪ್ತಿರೂಪಫಲಸಂಬಂಧ್ಯುಪಾಸನವಿಶೇಷಾಭಿಧಾಯೀನಿ ಚ ನಿರಾಕಾಂಕ್ಷಾಣಿ ವಾಕ್ಯಾಣಿ ಪ್ರತಿಪ್ರಕರಣಂ ವಿಲಕ್ಷಣವಿದ್ಯಾಭಿಧಾಯೀನೀತಿ ನಿಶ್ಚೀಯತೇ. ಅಸ್ಮಿನ್ನರ್ಥೇ ಶಬ್ದಾಂತರೇ ಕರ್ಮಭೇದ ಇತ್ಯಾದಿಭಿಃ ಪೂರ್ವಮೀಮಾಂಸಾದಿಕೈಃ ಸೂತ್ರೈಃ ಸಿದ್ಧೇಽಪಿ ಪುನರಿಹ ಪ್ರತಿಪಾದನಂ ವೇದಾಂತವಾಕ್ಯಾನಿ ಅವಿ

**ಥೇಯಜ್ಞಾನಪರಾಣೀತಿ ಕುದೃಷ್ಟಿನಿರಾಸಾಯ. ಅತೋ ವಿದ್ಯಾಭೇದ ಇತಿ ಶುದ್ಧಂ. ಫಲಭೇದೇನ ವಿದ್ಯಾನಾಂ ಪರಶಿವಬ್ರಹ್ಮಪ್ರಾಪ್ತ್ಯಾತ್ಮಕ ಮೋಕ್ಷೈಕಫಲವ್ಯಪದೇಶಾತ್ ನ ವಿದ್ಯಾವಿರೋಧ ಇತಿ ನಿಶ್ಚೀಯತೇ.**

ನಾಮಾದ್ಯುಪಾಸನವನ್ನು ಹೇಳುವ ವಾಕ್ಯಗಳು ಅವಾಂತರೋಪಾಸನೆಗೆ ಅನ್ವಯಿಸುವುದಿಲ್ಲ. "ನಾಮವನ್ನು ಬ್ರಹ್ಮವೆಂದು ಉಪಾಸನಮಾಡು" ಎಂದು ಮುಂತಾದ ವಾಕ್ಯಗಳಿಗೆ ಸ್ಥೂಲಾರುಂಧತೀನ್ಯಾಯದಿಂದ ಬ್ರಹ್ಮೋಪಾಸನದಲ್ಲಿಯೇ ತಾತ್ಪರ್ಯವೆಂದು ತಿಳಿಯುವುದರಿಂದ ನಾಮಾದ್ಯುಪಾಸನೆಗಳೆಲ್ಲವೂ ಸ್ವತಂತ್ರವಾಗಿ ಪರಶಿವನ ಉಪಾಸನಕ್ಕೆ ಹೇಗೆ ಅನ್ವಯಿಸುತ್ತವೆ ಎಂದು ಆಶಂಕಿಸುತ್ತಾನೆ. ಆದ್ದರಿಂದ ಶಿವ ನಾರಾಯಣ ಬ್ರಹ್ಮ ಇಂದ್ರ ಮೊದಲಾದ ಹೆಸರಿನ ಉಪಾಸನಗಳು ಅನೇಕ ಬಗೆಯಾಗಿವೆ ಎಂದು ಅಂಗೀಕರಿಸಲೇಬೇಕು. "ನಾಮವನ್ನು ಬ್ರಹ್ಮವೆಂದು ಅರ್ಚಿಸು. ವಾಕ್ಕನ್ನು ಬ್ರಹ್ಮವೆಂದು ಅರ್ಚಿಸು. ಮನಸ್ಸನ್ನು ಬ್ರಹ್ಮವೆಂದು ಉಪಾಸನಮಾಡು" ಎಲ್ಲವನ್ನೂ ಬ್ರಹ್ಮವೆಂದು ತಿಳಿದು ಅರ್ಚಿಸು." "ನಾರಾಯಣನೇ ಪರಬ್ರಹ್ಮವೂ ಪರತತ್ತ್ವವೂ ಆಗಿದ್ದಾನೆ." "ಪರಮೇಶ್ವರನ ಸಾಕಾರಮೂರ್ತಿಯನ್ನು ಧ್ಯಾನಿಸಿ ಸಾಧಕನು ನಿಷ್ಕಲಪರಂಜ್ಯೋತಿಯಲ್ಲಿ ಬೆರೆಯುತ್ತಾನೆ." "ಈ ಆದಿತ್ಯನೇ ಬ್ರಹ್ಮನು" ಹೀಗೆ ನೂರಾರು ಶ್ರುತಿಗಳಲ್ಲಿ ಉಪಾಸನಾದಿಶಬ್ದಗಳನ್ನು ಅಧಿಕಾರಿಭೇದದಿಂದ ಉಪಯೋಗಿಸಿರುವುದರಿಂದ ಉಪಾಸನಗಳು ಪರಸ್ಪರ ಭಿನ್ನವೆಂಬುದೇ ಸಿದ್ಧವಾಗುತ್ತದೆ. "ಒಂದರಿಂದೊಂದು ಕ್ರಮವಾಗಿ ಮೆಟ್ಟಲುಗಳನ್ನು ಹತ್ತುವಂತೆ ಅನೇಕ ಜನ್ಮಗಳನ್ನು ಮುಗಿಸಿಕೊಂಡು ಕೊನೆಗೆ ಜ್ಞಾನಿಯು ಶಿವನಲ್ಲಿ ಸೇರುತ್ತಾನೆ." ಎಂದು ಎಲ್ಲಾ ಉಪಾಸನಗಳಿಗೂ ಮೋಕ್ಷ ಒಂದನ್ನೇ ಫಲವೆಂದು ಶ್ರುತಿಯಲ್ಲಿ ತಿಳಿಸಿರುವುದರಿಂದ ಎಲ್ಲಾ ವಿದ್ಯೆಗಳನ್ನು ಹೊಂದಿಸಿಕೊಳ್ಳುವುದೇ ಸಮಂಜಸವೆನಿಸುತ್ತದೆ. ಎಲ್ಲಾ ಬ್ರಹ್ಮವಿದ್ಯೆಗಳೂ ಬ್ರಹ್ಮಪ್ರಾಪ್ತಿ ಎಂಬ ಮೋಕ್ಷವೊಂದನ್ನೇ ಫಲವೆಂದು ತಿಳಿಸುತ್ತವೆ. ಸದ್ವಿದ್ಯೆ, ದಹರವಿದ್ಯೆ, ಉಪಕೋಸಲವಿದ್ಯೆ, ಶಾಂಡಿಲ್ಯವಿದ್ಯೆ, ವೈಶ್ವಾನರವಿದ್ಯೆ, ಆನಂದಮಯವಿದ್ಯೆ, ಅಕ್ಷರವಿದ್ಯೆ, ಪ್ರತರ್ದನವಿದ್ಯೆ, ಉದ್ಗೀಥವಿದ್ಯೆ, ಅಕ್ಷಿಪುರುಷವಿದ್ಯೆ, ಪಾಶುಪತವಿದ್ಯೆ ಮೊದಲಾದವುಗಳಷ್ಟೇ ಅಲ್ಲದೆ ಪ್ರಾಣವೇ ಮೊದಲಾದ ಒಂದೇ ವಿಷಯವನ್ನೂ ಫಲವನ್ನೂ ತಿಳಿಸುವ ವಿದ್ಯೆಗಳು ಅನೇಕವಾಗಿವೆ. ಆದ್ದರಿಂದ ವಿದ್ಯೆಗಳೆಲ್ಲವೂ ಒಂದೇ ಬಗೆಯೋ ಅಥವಾ ಭಿನ್ನವೇ ಎಂದು ಸಂಶಯ ಬರುತ್ತದೆ. ಇವುಗಳಿಗೆ ಪರಸ್ಪರ ಭೇದವು ಸಿದ್ಧವಾದಮೇಲೆ ದಹರವೇ ಮೊದಲಾದ ಪ್ರತಿಯೊಂದು ವಿದ್ಯೆಗೂ ಸರ್ವವೇದಾಂತಪ್ರತ್ಯಯವೆಂಬ ನ್ಯಾಯವನ್ನೇ ಹೊಂದಿಸಬೇಕು. ತಿಳಿಯಬೇಕಾದ ಬ್ರಹ್ಮವಸ್ತುವು ಎಲ್ಲದರಲ್ಲೂ ಒಂದೇ ಆದ್ದರಿಂದ ವಿದ್ಯೆಗಳೆಲ್ಲವೂ ಒಂದೇ ವಿಧವೆಂದು ತಿಳಿಯಬೇಕು. ವಿದ್ಯೆಯ ಸ್ವರೂಪವು ಅದರ ವಿಷಯವನ್ನು ಅವಲಂಬಿಸಿದೆ. ಹೀಗೆ ಸ್ವರೂಪೈಕ್ಯದಿಂದ ವಿದ್ಯೆಗಳೆಲ್ಲವೂ ಒಂದೇಬಗೆ ಎನಿಸಿವೆ ಎಂದು ಆಕ್ಷೇಪ ಬಂದರೆ ಸೂತ್ರವು ಸಮಾಧಾನವನ್ನು ತಿಳಿಸಿದೆ. ಶಬ್ದ

ಮೊದಲಾದವುಗಳ ಭೇದದಿಂದ ವಿದ್ಯೆಗಳನ್ನು ಅನೇಕವೆಂದೇ ತಿಳಿಯಬೇಕು. ಆದಿ ಪದದಿಂದ ಅಭ್ಯಾಸ, ಸಂಖ್ಯೆ, ಗುಣ, ಪ್ರಕ್ರಿಯೆ ಮತ್ತು ನಾಮಧೇಯಗಳನ್ನು ಗ್ರಹಿಸ ಬೇಕು. ಶ್ರುತಿಯಲ್ಲಿ ವೇದ, ಉಪಾಸತೇ ಎಂದು ಬೇರೆ ಬೇರೆ ಶಬ್ದಗಳನ್ನು ಹೇಳಿರು ವುದರಿಂದ ವಿಧೇಯಾಂಶದಲ್ಲಿ ಭೇದವುಂಟಾಗಿ ಉಪಾಸನಗಳಲ್ಲೂ ಭೇದಗಳು ಕಂಡು ಬರುತ್ತವೆ. ಪ್ರತ್ಯಯಗಳೂ ಸಹ ಬ್ರಹ್ಮೈಕ್ಯೇನೇ ಅನ್ವಯಿಸುವುದಾದರೂ ಆಯಾ ಯಪ್ರಕರಣಗಳಲ್ಲಿ ಹೇಳಿರುವ ಜಗತ್ಕಾರಣತ್ವ, ಅಪಹತಪಾಪ್ಮತ್ವ ಮೊದಲಾದ ವಿಶೇಷಣಗಳಿಂದ ಕೂಡಿರುವ ಬ್ರಹ್ಮವೇ ವಿಷಯವಾಗಿ ಆ ಪ್ರತ್ಯಯಗಳಲ್ಲಿ ತೋರು ವುದರಿಂದ ವಿದ್ಯೆಗಳು ಭಿನ್ನವೇ ಆಗುತ್ತವೆ. ಬ್ರಹ್ಮಪ್ರಾಪ್ತಿ ಎಂಬ ಫಲವು ಎಲ್ಲಾ ಕಡೆಗಳಲ್ಲೂ ಇದ್ದರೂ ವಿದ್ಯೆಗಳೆಲ್ಲವೂ ಒಂದನ್ನೊಂದು ಅಪೇಕ್ಷಿಸದೆ ಸ್ವತಂತ್ರವಾಗಿರು ವುದರಿಂದ ಪ್ರತಿಯೊಂದು ಪ್ರಕರಣದಲ್ಲಿ ಹೇಳಿರುವ ವಿದ್ಯೆಯೂ ಭಿನ್ನವೇ ಆಗುತ್ತದೆ. ಶಬ್ದಭೇದವಿದ್ದರೆ ಕರ್ಮಭೇದವುಂಟು ಎಂಬ ನ್ಯಾಯವನ್ನು ಪೂರ್ವಮೀಮಾಂಸೆ ಯಲ್ಲೇ ಹೇಳಿದ್ದರೂ ಕರ್ಮಕ್ಕಿಂತಲೂ ಬ್ರಹ್ಮವು ಬೇರೆಯಾಗಿರುವುದರಿಂದ ಇಲ್ಲಿ ಆ ನ್ಯಾಯವು ಅನ್ವಯಿಸಲಾರದು ಎಂಬ ಕುದೃಷ್ಟಿಯನ್ನು ನಿರಾಕರಿಸಲಿಕ್ಕಾಗಿ ಈ ಅಧಿಕರಣವು ಬಂದಿದೆ. ಆದ್ದರಿಂದ ವಿದ್ಯೆಗಳು ಬೇರೆ ಬೇರೆ ಎಂಬುದೇ ಸಿದ್ಧವಾಗು ತ್ತದೆ. ವಿದ್ಯೆಗಳಿಗೆ ಫಲಭೇದವಿದ್ದರೂ ಬ್ರಹ್ಮಪ್ರಾಪ್ತಿ ಎಂಬ ಮೋಕ್ಷವೇ ಎಲ್ಲಾ ಕಡೆ ಗಳಲ್ಲೂ ಸಮಾನವಾಗಿರುವುದರಿಂದ ಈ ವಿದ್ಯೆಗಳಿಗೆ ಪರಸ್ಪರ ವಿರೋಧವಿಲ್ಲ.

ನನು "ವಾಚಂ ಬ್ರಹ್ಮೇತ್ಯುಪಾಸೀತ" ಇತ್ಯಾದ್ಯುಪಾಸನಾನಾಂ ಸರ್ವಾಸಾಂ ದಹರಾದ್ಯುತ್ತಮವಿದ್ಯಾವೈಶಿಷ್ಟ್ಯೇನ ಪರಶಿವಪ್ರಾಪ್ತಿಫಲ ಕತ್ವಂ ಉತ ಸ್ವಾತಂತ್ರ್ಯೇಣೇತ್ಯಾಶಂಕಾಯಾಂ ಅಧಿಕರಣಾಂತರೇಣ ನಿರೂಪಯತಿ. ವಿಕಲ್ಪಾಧಿಕರಣಂ ॥ ೨೫ ॥ ವಿಕಲ್ಪೋಽವಿಶಿಷ್ಟಫಲ ತ್ವಾತ್ ॥ ೫೭ ॥ ದಹರಾದೀನಾಂ ಪರಶಿವಬ್ರಹ್ಮಲೋಕಪ್ರಾಪ್ತಿಫಲ ಕಾನಾಂ ಅಹಂಗ್ರಹೋಪಾಸನಾನಾಂ ವಿಕಲ್ಪಃ ಅನುಷ್ಠಾನವಿಕಲ್ಪಃ ಏಕೈಕಸ್ಯ ಪುರುಷಸ್ಯ ಬಹುವಿದ್ಯಾಭ್ಯಾಸೇ ಸ್ವಾರ್ತಾನಾಮಿವ ಚಿತ್ತ ವಿಕಲ್ಪಃ ಸಂಭವತಿ. ಅತಸ್ಸಮುಚ್ಚಯೋ ನಾಂಗೀಕರ್ತವ್ಯಃ. ಕುತಃ? ಅವಿಶಿಷ್ಟಫಲತ್ವಾತ್. ದಹರಾಕ್ಷಿಪುರುಷಾದ್ಯಹಂಗ್ರಹೋಪಾಸನಾನಾಂ ಸರ್ವಾಸು ವಿದ್ಯಾಸ್ವಪಿ ಪರಶಿವಬ್ರಹ್ಮಸಾಲೋಕ್ಯಾದಿಕ್ರಮೇಣ ಪರಶಿವ ಪ್ರಾಪ್ತಿಫಲಕತ್ವಾತ್ ಏತಾಸೂಪಾಸನಾಸು ಮಧ್ಯೇ ಸ್ವೇಷ್ಟಾನುಸಾರೇಣ ಏಕೈಕಪುರುಷಸ್ಯ ಏಕೈಕೋಪಾಸನಮನವಚ್ಛಿನ್ನೇನ ಮರಣಪರ್ಯಂತಂ ಭಯಭಕ್ತಿಶ್ರದ್ಧಾವೈರಾಗ್ಯಭೂತದಯಾಶಮದಮಸದಾಚಾರಾದಿವೈಶಿ ಷ್ಟ್ಯೇನ ಕರ್ತವ್ಯಮಿತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಬ್ರಹ್ಮಪ್ರಾಪ್ತಿ ಫಲಾನಾಂ ಸದ್ವಿದ್ಯಾದಹರವಿದ್ಯಾದೀನಾಂ ನಾನಾತ್ವಮುಕ್ತಂ, ಇದಾನೀ ಮಾಸಾಂ ವಿದ್ಯಾನಾಂ ಏಕೈಕಸ್ಮಿನ್ ಪುರುಷೇ ಪ್ರಯೋಜನತ್ವೇನ ಸಮು

ಚ್ಚಯೋಽಪಿ ಸಂಭವತಿ ಉತ ಪ್ರಯೋಜನಾಭಾವಾತ್ ವಿಕಲ್ಪೋ ವೇತಿ ಸಂಶಯೇ ಕಿಂ ಯುಕ್ತಂ? ಸಮುಚ್ಚಯೋಽಪಿ ಸಂಭವತೀತಿ. ಕುತಃ? ಏಕಫಲಾನಾಂ ಭಿನ್ನಶಾಸ್ತ್ರಾರ್ಥಾನಾಮಪಿ ಸಮುಚ್ಚಯದರ್ಶನಾತ್ ದೃಶ್ಯತೇ ಹ್ಯೇಕಸ್ಯೈವ ಸ್ವರ್ಗಾದೇಸ್ಸಾಧನಾನಾಂ ಅಗ್ನಿಹೋತ್ರದರ್ಶ ಪೂರ್ಣಮಾಸಾದೀನಾಂ ತಸ್ಯೈವ ಸ್ವರ್ಗಭೂಯಸ್ತ್ವಾಪೇಕ್ಷಯೈಕತ್ರ ಪುರುಷೇಣ ಸಮುಚ್ಚಯಃ. ಏವಂ ಹಿ ಇಹಾಪಿ ಬ್ರಹ್ಮಾನುಭವಭೂಯ ಸ್ತ್ವಾಪೇಕ್ಷಯಾ ಸಮುಚ್ಚಯೋಽಪಿ ಸಂಭವತೀತಿ. ಕುತಃ? ಅವಿಶಿಷ್ಟ ಫಲತ್ವಾತ್. ಸರ್ವಾಸಾಂ ವಿದ್ಯಾಸಾಂ ಅನವಧಿಕಾತಿಶಯಾನಂದಬ್ರಹ್ಮಾ ನುಭವಃ ಫಲಮವಿಶಿಷ್ಟಂ ಶ್ರೂಯತೇ. “ಬ್ರಹ್ಮ ವೇದ ಬ್ರಹ್ಮೈವ ಭವತಿ” ಇತ್ಯಾದಿಶ್ರುತಿಭ್ಯಃ ನಿರತಿಶಯಾನಂದಪರಶಿವಬ್ರಹ್ಮಣಃ ಸಾಲೋಕ್ಯಾದಿಚತುರ್ವಿಧಮುಕ್ತಿಸ್ಸಂಭವತಿ. ಸ್ವರ್ಗಾದೇರ್ಹಿ ದೇಶತಃ ಕಾಲತಃ ಸ್ವರೂಪತಶ್ಚ ಪರಿಮಿತತ್ವೇನ ತತ್ರ ದೇಶಾದ್ಯಪೇಕ್ಷಯಾ ಭೂಯಸ್ತ್ವಸಂಭವಾತ್ ತದರ್ಥಿನಃ ಸಮುಚ್ಚಯಸ್ಸಂಭವತಿ. ಇಹ ತು ತದ್ವಿಪರೀತಸ್ವರೂಪೇ ಬ್ರಹ್ಮಣಿ ತನ್ನ ಸಂಭವತೀತಿ ಸರ್ವಾಶ್ಚ ವಿದ್ಯಾಃ ಬ್ರಹ್ಮಾನುಭವವಿರೋಧ್ಯನಾದಿಕರ್ಮವಿದ್ಯಾನಿರಸನಮುಖೇನ ಬ್ರಹ್ಮ ಪ್ರಾಪ್ತಿಫಲಾಃ ಇತ್ಯವಿಶಿಷ್ಟಫಲತ್ವಾತ್ ಸರ್ವಾಸಾಂ ವಿಕಲ್ಪ ಏವ.

“ವಾಕ್ಕನ್ನು ಬ್ರಹ್ಮವೆಂದು ಉಪಾಸನಮಾಡು” ಎಂದು ಮುಂತಾದ ವಾಕ್ಯಗಳಲ್ಲಿ ಹೇಳಿರುವ ಉಪಾಸನಗಳೆಲ್ಲವೂ ದಹರಾದಿವಿದ್ಯೆಗಳ ಸಂಪರ್ಕದಿಂದ ಸಾಧಕರಿಗೆ ಪರಶಿವನನ್ನು ದೊರಕಿಸುತ್ತವೆಯೋ ಅಥವಾ ನೇರವಾಗಿಯೇ ದೊರಕಿ ಸುತ್ತವೆಯೇ ಎಂದಾಶಂಕಿಸಿ ಪರಿಹರಿಸುತ್ತಾನೆ. ದಹರ, ಅಕ್ಷಿಪುರುಷ, ಶಾಂಡಿಲ್ಯ, ಉಪಕೋಸಲ, ಪ್ರತರ್ದನ, ಉದ್ಗೀಥ, ವೈಶ್ವಾನರ ಮೊದಲಾದ ವಿದ್ಯೆಗಳಲ್ಲಿ ಸಾಧಕನು ತನ್ನನ್ನು ಶಿವನೆಂದು ಭಾವಿಸಿ ಉಪಾಸನಮಾಡುವುದರಿಂದ ಅವು ಅಹಂಗ್ರ ಹೋಪಾಸನವನ್ನು ಬೋಧಿಸುತ್ತವೆ. ಇದೂ ಅಲ್ಲದೆ, ಅವು ಸಾಲೋಕ್ಯವೆಂಬ ಫಲ ವನ್ನು ಕೊಡುತ್ತವೆ. ಆದರೂ ಅವುಗಳ ಆಚರಣಕ್ರಮದಲ್ಲಿ ವಿಕಲ್ಪವುಂಟಾಗು ತ್ತದೆ. ಒಬ್ಬೊಬ್ಬ ಸಾಧಕನು ಅನೇಕ ವಿದ್ಯೆಗಳನ್ನು ಅಭ್ಯಾಸಮಾಡಿದರೆ ಸ್ವಾರ್ತ ರಂತೆ ಚಿತ್ತವಿಕಲ್ಪವುಂಟಾಗುತ್ತದೆ. ಆದ್ದರಿಂದ ವಿದ್ಯೆಗಳ ಫಲದಲ್ಲಿ ವ್ಯತ್ಯಾಸವಿಲ್ಲ ದಿದ್ದರೂ ಅವೆಲ್ಲವನ್ನೂ ಒಟ್ಟಿಗೆ ಕೂಡಿಸಿ ಮಾಡಬೇಕೆಂಬುದನ್ನು ಒಪ್ಪಲಿಕ್ಕಾಗುವು ದಿಲ್ಲ, ದಹರ ಅಕ್ಷಿಪುರುಷ ಮೊದಲಾದ ಅಹಂಗ್ರಹೋಪಾಸನಗಳಿಗೂ ಎಲ್ಲಾ ವಿದ್ಯೆ ಗಳಲ್ಲೂ ಸಾಲೋಕ್ಯ ಮೊದಲಾದ ಕ್ರಮದಿಂದ ಪರಶಿವಪ್ರಾಪ್ತಿಯೇ ಫಲವಾಗಿರುವುದ ರಿಂದ ಈ ಉಪಾಸನೆಗಳಲ್ಲಿ ಒಂದೊಂದು ಉಪಾಸನವನ್ನು ಒಬ್ಬೊಬ್ಬನು ಅವನವನ ಇಚ್ಛೆಯಂತೆ ದೇಹಬಿಡುವವರೆಗೂ ಭಯ ಭಕ್ತಿ ಶ್ರದ್ಧೆ ವೈರಾಗ್ಯ ಭೂತದಯೆ ಶಮ ದಮ ಸದಾಚಾರಗಳಿಂದ ಕೂಡಿ ನಡೆಸುತ್ತಿರಬೇಕು. ಶಿವಸಾಯುಜ್ಯವೇ ಫಲವಾ

ಗುಳ್ಳ ದಹರಾದಿವಿದ್ಯೆಗಳೆಲ್ಲವೂ ಬೇರೆ ಬೇರೆ ಎಂದು ಹಿಂದೆ ಹೇಳಲಾಗಿತ್ತು. ಈಗ ಈ ವಿದ್ಯೆಗಳೆಲ್ಲದರಿಂದಲೂ ಒಬ್ಬೊಬ್ಬನಿಗೂ ಪ್ರಯೋಜನವಿರುವುದರಿಂದ ಅವನ್ನು ಒಟ್ಟಿಗೆ ಕೂಡಿಸಬೇಕೋ ಅಥವಾ ಪ್ರಯೋಜನವಿಲ್ಲದ್ದರಿಂದ ಬೇರೆಬೇರೆಯಾಗಿ ಆಚರಿಸಬೇಕೆ? ಎಂದು ಸಂಶಯಬಂದರೆ ಎಲ್ಲವನ್ನೂ ಸೇರಿಸಿ ಒಟ್ಟಿಗೆ ಸೇರಿಸಿ ಯಾದರೂ ಮಾಡಬಹುದೆಂದು ಪೂರ್ವಪಕ್ಷಿಯು ಹೇಳುತ್ತಾನೆ. ಬೇರೆ ಬೇರೆ ಶಾಸ್ತ್ರಾರ್ಥಗಳನ್ನು ಫಲ ಒಂದೇ ಆಗಿರುವುದರಿಂದ ಒಟ್ಟಿಗೆ ಕೂಡಿಸಿರುವುದಾಗಿ ನಾವು ಕಾಣುತ್ತೇವೆ. ಒಂದೇ ಸ್ವರ್ಗವನ್ನು ದೊರಕಿಸುವ ಅಗ್ನಿಹೋತ್ರ ದರ್ಶಪೂರ್ಣ ಮಾಸ ಮೊದಲಾದ ಕರ್ಮಗಳೆಲ್ಲವನ್ನೂ ಉತ್ತಮಸ್ವರ್ಗವನ್ನು ಪಡೆಯುವ ಉದ್ದೇಶ ದಿಂದ ಒಬ್ಬನೇ ಮಾಡಬಹುದು. ಹಾಗೆಯೇ ಇಲ್ಲಿಯೂ ಬ್ರಹ್ಮಾನುಭವವನ್ನು ಹೆಚ್ಚಾಗಿ ಪಡೆಯುವ ದೃಷ್ಟಿಯಿಂದ ಸಮುಚ್ಚಯವೂ ಸಂಭವಿಸುತ್ತದೆ; ಯಾಕೆಂದರೆ ವಿದ್ಯೆಗಳೆಲ್ಲಕ್ಕೂ ಅಖಂಡಾನಂದಾನುಭವನೆಂಬ ಫಲವು ಸಾಮಾನ್ಯವಾಗಿ ಅನ್ವಯಿ ಸುತ್ತದೆ. "ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ". "ನಿಷ್ಕಾಮನಾದ ಶ್ರೋತ್ರಿಯನಿಗೆ ಬ್ರಹ್ಮದ ಆನಂದ ಒಂದೇ ಇರುತ್ತದೆ" ಹೀಗೆ ಶ್ರುತಿಗಳಲ್ಲಿ ಮುಕ್ತನಿಗೆ ನಿರತಿಶಯಾನಂದಾನುಭವವೆನಿಸಿದ ನಾಲ್ಕುಬಗೆಯ ಮುಕ್ತಿಗಳನ್ನು ಹೇಳಲಾಗಿದೆ. ಅಷ್ಟೆಲ್ಲಾ ಅನುಭವವು ಒಂದೇ ವಿದ್ಯೆಯಿಂದಲೇ ಬರುವುದಾದರೆ ಎಲ್ಲಾ ವಿದ್ಯೆಗಳನ್ನೂ ಒಟ್ಟಿಗೆ ಏಕೆ ಸೇರಿಸಬೇಕು? ಆದ್ದರಿಂದ ಸಮುಚ್ಚಯ ಸಂಭವಿಸುವುದಿಲ್ಲ. ಸ್ವರ್ಗವು ದೇಶದಿಂದಲೂ ಕಾಲದಿಂದಲೂ ಸ್ವರೂಪದಿಂದಲೂ ಪರಿಮಿತವಾಗಿರುವುದರಿಂದ ಹೆಚ್ಚಿನ ಸ್ವರ್ಗಸುಖವನ್ನು ಪಡೆಯುವ ಉದ್ದೇಶದಿಂದ ಇಲ್ಲಿ ಸಮುಚ್ಚಯವು ಸಂಭವಿಸಬಹುದು. ಆದರೆ ಸ್ವರ್ಗಕ್ಕೆ ವಿರುದ್ಧವೆನಿಸಿರುವ ಬ್ರಹ್ಮದಲ್ಲಿ ಅದು ಸಂಭ ವಿಸುವುದಿಲ್ಲ. ಎಲ್ಲಾ ವಿದ್ಯೆಗಳೂ ಬ್ರಹ್ಮಾನುಭವಕ್ಕೆ ವಿರೋಧಿಗಳಾದ ಅನಾದಿ ಕರ್ಮ ಮತ್ತು ಅವಿದ್ಯೆಗಳನ್ನು ತೊಲಗಿಸುತ್ತ ಬ್ರಹ್ಮಪ್ರಾಪ್ತಿ ಎಂಬ ಫಲವನ್ನು ಸಾಮಾನ್ಯವಾಗಿ ದೊರಕಿಸುತ್ತವೆ. ಆದ್ದರಿಂದ ಎಲ್ಲಕ್ಕೂ ವಿಕಲ್ಪವೇ ಹೊರತು ಸಮುಚ್ಚಯವು ಸಂಭವಿಸುವುದಿಲ್ಲ.

ಬ್ರಹ್ಮಪ್ರಾಪ್ತಿವ್ಯತಿರಿಕ್ತಫಲಾಸ್ತು ವಿದ್ಯಾಃ ಸ್ವರ್ಗಾದಿಫಲಕರ್ಮ ವದ್ಯಥೇಷ್ಟಂ ವಿಕಲ್ಪೇರನ್ ಸಮುಚ್ಚೀಯೇರನ್ ತಾಸಾಂ ಪರಿಮಿತಫಲ ತ್ವೇನ ಭೂಯಸ್ತ್ವಾಪೇಕ್ಷಾಸಂಭವಾತ್ ತತ್ರಾಹ. ಕಾಮ್ಯಾಸ್ತು ಯಥಾ ಕಾಮಂ ಸಮುಚ್ಚೀಯೇರನ್ನಥವಾ ಪೂರ್ವಹೇತ್ವಭಾವಾತ್ ॥ ೫೮ ॥ ಪರಶಿವಬ್ರಹ್ಮಸಾಕ್ಷಾತ್ಕಾರಾನುಭವವ್ಯತಿರಿಕ್ತಕಾಮ್ಯಾಃ ಆದಿತ್ಯಮಂಡ ಲಾದಿಪ್ರಕೃತಿಷು ಜಡಪದಾರ್ಥೇಷು ಪರಶಿವಬ್ರಹ್ಮದೃಷ್ಟಿರೂಪಾಃ ಐಶ್ವರ್ಯಾದಿಭಿನ್ನಭಿನ್ನಸಾಧನಭೂತಾಃ ಪ್ರತೀಕೋಪಾಸನಾಃ ಯಥಾ ಕಾಲಂ ಯಥೇಚ್ಛಂ ಸಮುಚ್ಚೀಯೇರೇನ್ ಹಿ. ಏತಾಸಾಂ ಪ್ರತೀ ಕೋಪಾಸನಾನಾಂ ಸಮುಚ್ಚಯೋ ವಾ ವಿಕಲ್ಪೋ ವೇತ್ಯನಿಯಮಃ

ಏವಾಂಗೀಕರ್ತವ್ಯಃ. ಕುತಃ ? ಪೂರ್ವೋಕ್ತಹೇತ್ವಭಾವಾತ್. ಪೂರ್ವೋಕ್ತಸ್ಯ ತುಲ್ಯಫಲಕತ್ವರೂಪಸ್ಯ ಹೇತೋರತ್ರಾಭಾವಾತ್ ಇತ್ಯುಪದಿಶ್ಯತೇ. “ದೇವೋ ಭೂತ್ವಾ ದೇವಾನಪ್ಯೇತಿ” ಅತೋ ಜೀವತ ಏವ ಭಾವನಾಪ್ರಕರ್ಷವಶಾದ್ದೇವಭಾವಸಾಕ್ಷಾತ್ಪ್ರಾಪ್ತಿರವಗಮ್ಯತೇ. ಪರವಿದ್ಯಾಸು ಅಹಂಗ್ರಹೋಪಾಸನೇಷು ನ ತಥಾ ನಾಮಬ್ರಹ್ಮಾದ್ಯುಪಾಸನಾಸು ಕಾಮ್ಯಾಸು ಸಾಕ್ಷಾತ್ಕಾರಫಲತ್ವೇ ಕಿಂಚಿನ್ಮಾನಮಸ್ತಿ. ತತ್ಫಲತ್ವಾಭಾವೇ ಚ ತತ್ರತತ್ರ ಭೋಗಭೂಯಸ್ತ್ವಾಪೇಕ್ಷಯಾ ಸಮುಚ್ಚಯ ಏವ ಯುಕ್ತಃ. ಬ್ರಹ್ಮವದೇಕತ್ವಾಭಾವಾತ್ “ತತ ಏಕಂ ವಾ ಬ್ರಹ್ಮ ವಾ ಸಮಾಶ್ರಿತ್ಯ ಅನುಷ್ಠೇಯಂ” ಇತಿ ನಿರ್ಣಯಃ. ತಸ್ಮಾದಪರಿಮಿತ ಫಲತ್ವಾಭಾವಾದಿತಿ ಸಿದ್ಧಂ.

ಬ್ರಹ್ಮಪ್ರಾಪ್ತಿಗಿಂತ ಬೇರೆ ಫಲವನ್ನು ಕೊಡುವ ವಿದ್ಯೆಗಳಿಗಾದರೋ ಸ್ವರ್ಗದ ಫಲವನ್ನು ಕೊಡುವ ಯಜ್ಞದಂತೆ ವಿಕಲ್ಪ ಮತ್ತು ಸಮುಚ್ಚಯ ಇವೆರಡೂ ಹೊಂದುತ್ತವೆ. ಅವುಗಳು ಪರಿಮಿತವಾದ ಫಲವನ್ನು ಕೊಡುವುದರಿಂದ ಸಾಧಕರಿಗೆ ಹೆಚ್ಚು ಫಲದ ಅಪೇಕ್ಷೆಯುಂಟಾಗುತ್ತದೆ ಎಂದು ತಿಳಿಸುತ್ತಾನೆ. ಪರಶಿವಬ್ರಹ್ಮ ಸಾಕ್ಷಾತ್ಕಾರದ ಅನುಭವವನ್ನುಳಿದು ಆದಿತ್ಯಮಂಡಲವೇ ಮೊದಲಾದ ಇತರ ಜಡ ಪದಾರ್ಥಗಳನ್ನು ಪರಬ್ರಹ್ಮವೆಂದು ತಿಳಿದು ಮಾಡುವ ಕಾಮ್ಯಕರ್ಮಗಳೆಲ್ಲವೂ ಐಶ್ವರ್ಯ ಮೊದಲಾದ ಭಿನ್ನಭಿನ್ನ ಫಲಗಳನ್ನು ದೊರಕಿಸುತ್ತ ಪ್ರತೀಕೋಪಾಸನಗಳೆನಿಸುತ್ತವೆ. ಅವನ್ನು ಕಾಲಕ್ಕೆತಕ್ಕಂತೆ ಯಥೇಚ್ಛವಾಗಿ ಕೂಡಿಸಿ ಆಚರಿಸಬಹುದು. ಈ ಪ್ರತೀಕೋಪಾಸನಗಳು ಒಂದೇವಿಧವಾದ ಫಲವನ್ನು ಕೊಡುತ್ತಿಲ್ಲವಾದ್ದರಿಂದ ಇವನ್ನು ಒಟ್ಟಿಗೆ ಆಚರಿಸಬೇಕೇ ಅಥವಾ ಬೇರೆಬೇರೆ ಆಚರಿಸಬೇಕೇ ಎಂಬ ನಿಯಮವಿಲ್ಲ. “ದೇವನಾಗಿ ದೇವನಲ್ಲಿ ಸೇರುತ್ತಾನೆ” ಎಂಬಲ್ಲಿ ಬದುಕಿರುವಾಗಲೇ ದೇವ ಭಾವನೆಯನ್ನು ಹೆಚ್ಚಿಸಿಕೊಂಡು ದೇವನಾಗುತ್ತಾನೆ ಎಂಬ ಅಂಶ ತಿಳಿದುಬರುತ್ತದೆ. ಬ್ರಹ್ಮವಿದ್ಯೆಗಳಲ್ಲಿ ಬಂದಿರುವ ಅಹಂಗ್ರಹೋಪಾಸನೆಯಲ್ಲಿ ಹಾಗೆ ಹೇಳುವಂತಿಲ್ಲ. ನಾಮಾದ್ಯುಪಾಸಗಳಲ್ಲೇ ಅವು ಕಾಮ್ಯವಾಗಿರುವುದರಿಂದ ಅವಕ್ಕೆ ಬ್ರಹ್ಮಸಾಕ್ಷಾತ್ಕಾರವು ಫಲವಾಗುವುದಿಲ್ಲ. ಪರಿಮಿತವಾದ ಭೋಗವೇ ಅವಕ್ಕೆ ಫಲವಾಗಿರುವುದರಿಂದಲೂ, ಆ ಫಲವು ಬ್ರಹ್ಮಪ್ರಾಪ್ತಿಯಂತೆ ಒಂದೇಬಗೆಯಾಗಿಲ್ಲದ್ದರಿಂದಲೂ ಸಮುಚ್ಚಯವು ಯುಕ್ತವೇ ಆಗುತ್ತದೆ ಎಂದು ನಿರ್ಣಯಿಸಲಾಗಿದೆ.

ನನು ದಹರಶಾಂಡಿಲ್ಯಾಕ್ಷಿಪುರುಷೋಪಕೋಸಲೋದ್ಗೀಥಾದ್ಯುಪಾಸನಾನಾಮಿವ “ಅನ್ನಂ ಬ್ರಹ್ಮ”, “ಪ್ರಾಣೋ ಬ್ರಹ್ಮ”, “ಮನೋ ಬ್ರಹ್ಮ”, “ವಿಜ್ಞಾನಂ ಬ್ರಹ್ಮ” ಇತ್ಯಾದ್ಯಂಗಾವಬದ್ಧೋಪಾಸನಾನಾಂ ಸಾಕ್ಷಾನ್ಮೋಕ್ಷಹೇತುತ್ವಂ ಕಿಂ ನ ಸ್ಯಾದಿತ್ಯಾಶಂಕಾಯಾಂ ಅಧಿಕರಣಾಂತರೇಣಾಹ. ಅಂಗೇಷು ಯಥಾಽಽಶ್ರಯಭಾವಾಧಿಕರಣಂ ॥ ೨೬ ॥

ಅಂಗೇಷು ಯಥಾಶ್ರಯಭಾವಃ ॥ ೫೫ ॥ ಅಂಗೇಷು “ ಅನ್ನಂ ಬ್ರಹ್ಮ, ಪ್ರಾಣೋ ಬ್ರಹ್ಮ, ಮನೋ ಬ್ರಹ್ಮ, ನಾಮ ಬ್ರಹ್ಮ ” ಇತ್ಯಾದಿಪ್ರೋಕ್ತೋಪಾಸನಾಂಗೇಷೂಪಾಸನೇಷು ಯಥಾಶ್ರಯಭಾವಃ. “ ಆನಂದೋ ಬ್ರಹ್ಮೇತಿ ವ್ಯಜಾನಾತ್ ” ಇತ್ಯಾದಿಸರ್ವಾತಿಶಯಪರಮಾನಂದಾತ್ಮಕಸ್ಯ ಪರಶಿವಬ್ರಹ್ಮಣಃ ಪ್ರಾಪ್ತಿಸಾಧನೋಪಾಸನರೂಪಭಾವಸ್ತಥಾ ದಹರಭೂಮಾದ್ಯುಪಾಸನಾನಾಮಿವ ಸಾಕ್ಷಾನ್ಮೋಕ್ಷಹೇತುತ್ವಮುಸಂಗತಂ. “ ಬ್ರಹ್ಮವಿದಾಪ್ನೋತಿ ಪರಂ ”, “ ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ” ಇತ್ಯಾದಿವಾಕ್ಯಾನಾಂ ಪರಸ್ಪರಭೇದಾವಗಮಾತ್. ತೈತ್ತಿರೀಯೇ ಶ್ರೂಯತೇ. ತತ್ರ “ ಅನ್ನಂ ಬ್ರಹ್ಮೇತಿ ವ್ಯಜಾನಾತ್,” “ ಪ್ರಾಣೋ ಬ್ರಹ್ಮೇತಿ ವ್ಯಜಾನಾತ್,” “ ಮನೋ ಬ್ರಹ್ಮೇತಿ ವ್ಯಜಾನಾತ್ ”, “ ಸತ್ಯ ಜ್ಞಾನಮನಂತಂ ಬ್ರಹ್ಮ ” ಇತಿ ವಾಕ್ಯಾನಾಂ ಪರಸ್ಪರಭೇದಾವಗಮಾತ್ ಅನ್ನಮಯಾದೀನಾಮಪಿ ಜಗಜ್ಜನ್ಮಾದಿಕಾರಣತ್ವೇನ ಬ್ರಹ್ಮತ್ವವ್ಯವಸ್ಥಾಪನಾತ್ ಅನ್ನಮಯಾದೀನಾಂ ವಾ ಉತ ಆನಂದಮಯಸ್ಯ ವಾ ಬ್ರಹ್ಮತ್ವಂ ? ದಹರಾದ್ಯುಪಾಸನಾನಾಂ ವಾ ಉತ ಅನ್ನಮಯಾದೀನಾಮಂಗೋಪಾಸನಾನಾಂ ವಾ ಸಾಕ್ಷಾನ್ಮೋಕ್ಷಹೇತುತ್ವಂ ? ಇತಿ ಸಂದಿಹ್ಯತೇ. “ ಆನಂದೋ ಬ್ರಹ್ಮೇತಿ ವ್ಯಜಾನಾತ್ ” ಇತಿವತ್ ಜಗಜ್ಜನ್ಮಾದಿಕಾರಣತ್ವೇನ ಅನ್ನಂ ಬ್ರಹ್ಮೇತಿ ವ್ಯಜಾನಾತ್ ” ಇತ್ಯಾದೀನಾಂ ತುಲ್ಯತ್ವೋಪದೇಶಾತ್ ಸಮಾನಪ್ರಕರಣಪಠಿತತ್ವಾಚ್ಚ ನ ವೈಷಮ್ಯಸಿದ್ಧಿಃ. ಶಾಖಾಂತರೇಷ್ವಪಿ, “ ಮನೋ ಬ್ರಹ್ಮೇತ್ಯುಪಾಸೀತ ”, “ ವಾಚಂ ಬ್ರಹ್ಮೇತ್ಯುಪಾಸೀತ ”, “ ನಾಮ ಬ್ರಹ್ಮೇತ್ಯುಪಾಸೀತ ” ಇತ್ಯಾದಿವಾಕ್ಯೈಃ ಸರ್ವೇಷಾಂ ಸಮಾನತ್ವೇನ ಬ್ರಹ್ಮತ್ವವ್ಯಪದೇಶಾತ್ ದಹರಶಾಂಡಿಲ್ಯಾಕ್ಷಿಪುರುಷಾದಿವಿದ್ಯಾನಾಂ ನ ವೈಶೇಷ್ಯಂ. ಅತಸ್ಸರ್ವೇಷಾಮುಪಾಸನಾನಾಂ ಸಮಾನತ್ವೇನ ಸಾಕ್ಷಾನ್ಮೋಕ್ಷಹೇತುತ್ವಂ ಸಂಭವತೀತಿ ಪ್ರಾಪ್ತೇ ವದಾಮಃ. “ ಅನ್ಯೋಽಂತರ ಆತ್ಮಾನಂದಮಯಃ ” ಇತ್ಯತ್ರ ನಿರತಿಶಯಶಿರಸ್ಕತ್ವೇನ ಆನಂದಮಯಸ್ಯ ಬ್ರಹ್ಮತ್ವವ್ಯವಸ್ಥಾಪನಾತ್, “ ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ ” ಇತ್ಯತ್ರ ಗುಹಾತ್ಮಕದಹರಾಕಾಶೇ ಪರಮಾತ್ಮೋಪಾಸನಾನಾಂ ಸಾಕ್ಷಾನ್ಮೋಕ್ಷಹೇತುತ್ವಕಥನಾತ್, “ ಹೃತ್ಪುಂಡರೀಕಂ ವಿರಜಂ ವಿಶುದ್ಧಂ ” ಇತ್ಯಾರಭ್ಯ “ ಉಮಾಸಹಾಯಂ ಪರಮೇಶ್ವರಂ ಪ್ರಭುಂ ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ” ಇತಿ ಶಾಖಾಂತರೇಷ್ವಪಿ ದಹರಪುಂಡರೀಕೇ ಪರಮೇಶ್ವರೋಪಾಸನಾನಾಂ ಅವಿಲಂಬತ್ವೇನ ಶಿವಸಾಯುಜ್ಯಮುಕ್ತ್ಯುಪದೇಶಾತ್, ತಥಾ ಸ್ವಶಾಖಾಪರಶಾಖಾಸ್ವಪಿ.

**ಅನ್ನಮಯಾದೀನಾಂ ಆತ್ಮೋಪಾಸನಾನಾಮಪಿ ಸಾಕ್ಷಾನ್ಮುಕ್ತ್ಯದರ್ಶನಾತ್ ಬ್ರಹ್ಮಪ್ರಾಪ್ತ್ಯಂಗಭೂತಾನ್ನಮಯಾದ್ಯುಪಾಸನೇಷು ಪುರುಷಾಣಾಂ ಪರಮೇಶ್ವರಾರ್ಪಿತಜ್ಯೋತಿಷ್ಟೋಮಾದಿವತ್ ಪರಂಪರಯಾ ಮುಕ್ತಿಹೇತುತ್ವಮಿತಿ ನಿಶ್ಚೀಯತೇ.**

ದಹರ, ಶಾಂಡಿಲ್ಯ, ಅಕ್ಷಿಪುರುಷ, ಉಪಕೋಸಲ, ಉದ್ಗೀಥ ಮೊದಲಾದ ವಿದ್ಯೆಗಳಂತೆ "ಪ್ರಾಣವೇ ಬ್ರಹ್ಮ" "ಅನ್ನವೇ ಬ್ರಹ್ಮ," "ಮನಸ್ಸೇ ಬ್ರಹ್ಮ" ಎಂದು ಮುಂತಾಗಿ ತಿಳಿಸುವ ಉಪಾಸನಗಳು ಮೋಕ್ಷೋಪಾಸನದ ಅಂಗವಾದ್ದರಿಂದ ನೇರವಾಗಿ ಮೋಕ್ಷಕ್ಕೆ ಕಾರಣವಾಗುವುದಿಲ್ಲವೇ ಎಂದಾಶಂಕಿಸಿ ಸಮಾಧಾನವನ್ನು ತಿಳಿಸುತ್ತಾನೆ. "ಅನ್ನಂ ಬ್ರಹ್ಮ" "ಪ್ರಾಣೋ ಬ್ರಹ್ಮ" "ವಿಜ್ಞಾನಂ ಬ್ರಹ್ಮ" "ನಾಮ ಬ್ರಹ್ಮ" ಇವೇ ಮೊದಲಾದ ಅಂಗೋಪಾಸನಗಳು "ಆನಂದವನ್ನು ಬ್ರಹ್ಮವೆಂದು ತಿಳಿಯಬೇಕು" ಎಂಬಲ್ಲಿ ಹೇಳಿರುವ ಪರಮಾನಂದಸ್ವರೂಪನಾದ ಪರಶಿವ ಬ್ರಹ್ಮದ ಪ್ರಾಪ್ತಿಗೆ ಸಾಧನವೆನಿಸುವುದರಿಂದ ದಹರಾದ್ಯುಪಾಸನಗಳಂತೆ ನೇರವಾಗಿ ಮೋಕ್ಷಸಾಧನಗಳೆಂಬುದು ಹೊಂದುವುದಿಲ್ಲ. "ಬ್ರಹ್ಮವನ್ನು ಅರಿತವನು ಬ್ರಹ್ಮವನ್ನೇ ಹೊಂದುತ್ತಾನೆ." "ಪರಮಾಕಾಶದಲ್ಲಿ ನೆಲೆಸಿರುವ ಪರಂಜ್ಯೋತಿಯನ್ನು ತಿಳಿದವನು ಅದರೊಡನೆ ಎಲ್ಲಾ ಕಾಮಗಳನ್ನೂ ಪಡೆಯುತ್ತಾನೆ" ಈ ವಾಕ್ಯಗಳಲ್ಲಿ ಪರಸ್ಪರ ಭೇದವಿರುವುದರಿಂದಲೂ, ಇದೂ ಅಲ್ಲದೆ, ತೈತ್ತಿರೀಯದಲ್ಲಿ ಹೇಳಿರುವ "ಅನ್ನ ಪ್ರಾಣ ಮನಸ್ಸುಗಳನ್ನು ಬ್ರಹ್ಮವೆಂದು ತಿಳಿಯಬೇಕು ಎಂಬ ವಾಕ್ಯಕ್ಕೂ "ಬ್ರಹ್ಮವು ಸತ್ಯಜ್ಞಾನರೂಪವೂ ಅನಂತವೂ ಆದುದು" ಎಂಬ ವಾಕ್ಯಕ್ಕೂ ಪರಸ್ಪರ ಭೇದವಿರುವುದರಿಂದಲೂ, ಅನ್ನಮಯಾದಿಗಳಿಗೂ ಜಗತ್ಕಾರಣವಾದ್ದರಿಂದ ಬ್ರಹ್ಮವೆಂದು ವ್ಯವಸ್ಥೆ ಮಾಡಿರುವುದರಿಂದಲೂ ಅನ್ನಮಯಾದಿಗಳು ಬ್ರಹ್ಮವೆ? ಅಥವಾ ಆನಂದಮಯವು ಬ್ರಹ್ಮವೆ? ಮೋಕ್ಷಕ್ಕೆ ಕಾರಣವಾದದ್ದು ದಹರಾದ್ಯುಪಾಸನಗಳೇ? ಅನ್ನಮಯಾದಿಗಳೇ? ಅಥವಾ ಅಂಗೋಪಾಸನಗಳೇ? ಎಂದು ಸಂದೇಹ ಬರುತ್ತದೆ. "ಆನಂದವನ್ನು ಬ್ರಹ್ಮವೆಂದು ತಿಳಿಯಬೇಕು" ಎಂಬಂತೆ "ಅನ್ನವನ್ನು ಬ್ರಹ್ಮವೆಂದು ತಿಳಿಯಬೇಕು" ಎಂದು ಮುಂತಾದವನ್ನೂ ಸಹ ಜಗತ್ಕಾರಣವೆಂದು ಸಮಾನವಾಗಿ ಹೇಳಿದೆ. ಇದೂ ಅಲ್ಲದೆ, ಇವೆಲ್ಲವನ್ನೂ ಒಂದೇ ಪ್ರಕರಣದಲ್ಲಿ ಹೇಳಲಾಗಿದೆ. ಆದ್ದರಿಂದ ಇದರಲ್ಲಿ ಏನೂ ವಿರೋಧವಿಲ್ಲ. ಬೇರೆ ಶಾಖೆಗಳಲ್ಲೂ ಸಹ "ಮನಸ್ಸನ್ನು ಬ್ರಹ್ಮವೆಂದು ಉಪಾಸನಮಾಡಬೇಕು. ವಾಕ್ಕನ್ನೂ ಹಾಗೆಯೇ ನಾಮವನ್ನೂ ಬ್ರಹ್ಮವೆಂದು ಉಪಾಸನಮಾಡಬೇಕು" ಈ ವಾಕ್ಯಗಳಲ್ಲಿ ಎಲ್ಲವನ್ನೂ ಸಮಾನವಾಗಿ ಬ್ರಹ್ಮವೆಂದು ಹೇಳಲಾಗಿದೆ. ದಹರ ಶಾಂಡಿಲ್ಯ ಅಕ್ಷಿಪುರುಷ ಮೊದಲಾದ ವಿದ್ಯೆಗಳಲ್ಲಿ ವಿಶೇಷವೇನೂ ಇಲ್ಲ. ಆದ್ದರಿಂದ ಉಪಾಸನಗಳೆಲ್ಲವೂ ಸಮಾನವಾದ್ದರಿಂದ ನೇರವಾಗಿ ಮೋಕ್ಷಕ್ಕೆ ಕಾರಣವಾಗಿವೆ ಎಂದು ಆಕ್ಷೇಪ ಬಂದರೆ ಸಮಾಧಾನವನ್ನು ಈಗ ತಿಳಿಸಲಾಗುವುದು. "ಬೇರೊಂದು ಆತ್ಮವು ಆನಂದಮಯನು" ಎಂಬಲ್ಲಿ ನಿರತಿಶಯವಾದ್ದ

ರಿಂದ ಆನಂದಮಯನೆಂದರೆ ಬ್ರಹ್ಮವೆಂದು ವ್ಯವಸ್ಥೆ ಮಾಡಲಾಗಿದೆ. ಗುಹೆಯೆಂಬ ದಹರಾಕಾಶದಲ್ಲಿ ಪರಮಾತ್ಮನನ್ನು ಉಪಾಸನಮಾಡುವುದನ್ನೇ ನೇರವಾಗಿ ಮೋಕ್ಷದ ಹೇತುವೆಂದು ಶ್ರುತಿಯಲ್ಲಿ ಹೇಳಲಾಗಿದೆ. ಹೀಗೆಯೇ ಬೇರೆಕಡೆಗಳಲ್ಲಿ ದಹರ ಕಮಲದಲ್ಲಿ ಪರಮೇಶ್ವರನನ್ನು ಉಪಾಸನಮಾಡುವವನಿಗೆ ಶಿವಸಾಯುಜ್ಯವೆಂಬ ಮುಕ್ತಿಯು ಬೇಗನೆ ಆಗುವುದೆಂದು ಹೇಳಿದೆ. ಹೀಗೆ ಎಲ್ಲಾ ಶಾಖೆಗಳಲ್ಲೂ ಅನ್ನ ಮಯಾದ್ಯುಪಾಸನಗಳು ನೇರವಾಗಿ ಮುಕ್ತಿಯನ್ನು ದೊರಕಿಸುವುದಾಗಿ ಕಂಡುಬರುವು ದಿಲ್ಲವಾದ್ದರಿಂದ ಬ್ರಹ್ಮಪ್ರಾಪ್ತಿಗೆ ಅಂಗವೆನಿಸಿದ ಅನ್ನಮಯಾದ್ಯುಪಾಸನಗಳು ಈಶ್ವರ ಪ್ರೀತ್ಯರ್ಥವಾಗಿ ಮಾಡುವ ಜ್ಯೋತಿಷ್ಟೋಮದಂತೆ ಸಾಧಕರಿಗೆ ಪರಂಪರೆಯಿಂದ ಮುಕ್ತಿಯನ್ನು ದೊರಕಿಸುತ್ತವೆ ಎಂದು ನಿಶ್ಚಯಿಸಲಾಗಿದೆ.

ನನ್ವಾನಂದಮಯಸ್ಯ ಸರ್ವಾಧಿಕಪರಬ್ರಹ್ಮತ್ವೇ ಕಿಂ ಮಾನಮಿತ್ಯಾ ಶಂಕಾಯಾಮಾಹ. ಶಿಷ್ಟೇಶ್ಚ ॥ ೬೦ ॥ ಶಿಷ್ಟಿಶ್ಶಾಸನಂ ವಿಧಾನ ಮಿತ್ಯರ್ಥಃ. " ಭೀಷಾಸ್ಮಾದ್ವಾತಃ ಪವತೇ ಭೀಷೋದೇತಿ ಸೂರ್ಯಃ । ಭೀಷಾಸ್ಮಾದಗ್ನಿಶ್ಚೇಂದ್ರಶ್ಚ ಮೃತ್ಯುರ್ಧಾವತಿ ಪಂಚಮಃ ॥ " ಇತ್ಯತ್ರ ಸರ್ವಶಾಸನತ್ವೇನ ಸರ್ವಭಯಹೇತುತ್ವಂ. ಸರ್ವಾಧಿಕಸ್ಯಾನಂದಮ ಯಸ್ಯ ಶಿವಸ್ಯೈವ ವ್ಯಪದೇಶಾತ್ ಅನ್ನಮಯಾದಿತುಲ್ಯತ್ವಮೇಕಪ್ರಕ ರಣಪಠಿತತ್ವೇಽಪಿ ತಸ್ಯ ನ ಸಂಭವತೀತಿ ನಿರ್ಣೀಯತೇ. ತತ್ರೈವ ಪ್ರದೇಶಾಂತರೇ " ಅಂತಃಪ್ರವಿಷ್ಟಶ್ಶಾಸ್ತಾ ಜನಾನಾಂ ಸರ್ವಾತ್ಮಾ " ಇತಿ ಶ್ರುತೌ ತಥಾ ಶ್ರೂಯತೇ.

ಆನಂದಮಯನೇ ಎಲ್ಲಕ್ಕೂ ಹೆಚ್ಚಿನ ಪರಬ್ರಹ್ಮವೆನಿಸಲಿಕ್ಕೆ ಪ್ರಮಾಣವೇ ನೆಂದಾಶಂಕಿಸಿ ಸಮಾಧಾನಮಾಡುತ್ತಾನೆ. ಯಾವನ ಭಯದಿಂದ ವಾಯು ಸೂರ್ಯ ಅಗ್ನಿ ಇಂದ್ರ ಯಮ ಮೊದಲಾದ ದೇವತೆಗಳು ತಮ್ಮ ಕಾರ್ಯಗಳಲ್ಲಿ ನಿರತರಾಗಿರು ವರೋ" ಎಂಬ ಶ್ರುತಿಯಲ್ಲಿ ಪರಮಾತ್ಮನೇ ಎಲ್ಲರಿಗೂ ಶಾಸನಮಾಡುತ್ತಲೇ ಭಯ ಗೊಳಿಸುತ್ತಿರುವನಾದ್ದರಿಂದ ಎಲ್ಲರಿಗೂ ಅಧಿಕನೆನಿಸಿ ತನಗೆ ಯಾವ ಭಯವೂ ಇಲ್ಲದೆ ಆನಂದಮಯನೆನಿಸಿರುವುದು ಅನ್ವರ್ಥವಾಗಿದೆ. ಒಂದೇ ಪ್ರಕರಣದಲ್ಲಿ ಅನ್ನಮಯ ಮೊದಲಾದವನ್ನು ಹೇಳಿದ್ದರೂ ಪರಮಾತ್ಮನು ಅವುಗಳಿಗೆ ಸಮನಾಗ ಲಾರನೆಂದು ನಿರ್ಣಯಿಸಲಾಗಿದೆ. ಅಲ್ಲಿಯೇ ಬೇರೆಕಡೆಯಲ್ಲಿ " ಪರಶಿವನೇ ಸರ್ವಾ ತ್ಮನೆನಿಸಿ ಜನರೆಲ್ಲರೊಳಗೂ ಪ್ರವೇಶಿಸಿ ಶಾಸನಮಾಡುತ್ತಾನೆ" ಎಂದು ಹೇಳಿದೆ.

ನನು ಚಿತ್ತಸ್ಯ ಬಹುಸಂಕಲ್ಪಯುಕ್ತತ್ವಾತ್ ಚಿತ್ತನಿರೋಧಾಭಾವೇ ದಹರಾದಿಸರ್ವವಿದ್ಯೋಪಾಸನಸಿದ್ಧ್ಯಸಂಭವಾತ್ ಕೇನ ಮಾರ್ಗೇಣ ಶಿವಸಾಕ್ಷಾತ್ಕಾರಾನುಭವಹೇತುಭೂತಚಿತ್ತಸ್ಥೈರ್ಯಂ ಸಂಭವೇದಿತ್ಯಾ ಶಂಕಾಯಾಮಧಿಕರಣಾಂತರಂ ದರ್ಶಯತಿ. ಸಮಾಹಾರಾಧಿಕರಣಂ ॥ ೨೭ ॥ ಸಮಾಹಾರಾತ್ ॥ ೬೧ ॥ ಶ್ವೇತಾಶ್ವತರಾದಿವೇದಾಂತೇಷು

ಶಿವಸಾಕ್ಷಾತ್ಕಾರಾನುಭವಸ್ಯ ಶಿವಯೋಗಾಖ್ಯಾನೇನ ಜೀವನ್ಮುಖ್ಯಾಂಗಭೂತದೃಙ್ಮನಃಪ್ರಾಣಸಂಧಾನರೂಪಸಮಾಹಾರಾತ್ ಮೇಳನಾತ್ ಮುಮುಕ್ಷೂಣಾಂ ಚಿತ್ತಚಲನನಿವೃತ್ತಿಪೂರ್ವಕಶಿವಸಾಕ್ಷಾತ್ಕಾರಾನುಭವಸಿದ್ಧಿಸ್ಸಂಭವತಿ. "ಓಂ ಬ್ರಹ್ಮ ವಾದಿನೋ ವದಂತಿ. ಕಿಂ ಕಾರಣಂ ಬ್ರಹ್ಮ, ಕುತ ಸ್ಮ ಜಾತಾಃ, ಜೀವಾಮ ಕೇನ. ಕ್ವ ಚ ಸಂಪ್ರತಿಷ್ಠಾ ಅಧಿಷ್ಠಿತಾಃ, ಕೇನ ಸುಖೇತರೇಣ ವರ್ತಾಮಹೇ ಬ್ರಹ್ಮವಿದೋ ವ್ಯವಸ್ಥಾ॥" ಇತ್ಯಾರಭ್ಯ "ತೇ ಧ್ಯಾನಯೋಗಾನುಗತಾ ಅಪಶ್ಯನ್ ದೇಹಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ" "ಸರ್ವಜೀವೇ ಸರ್ವಸಂಸ್ಥೇ ಬೃಹಂತೇ ತಸ್ಮಿನ್ ಹಂಸೋ ಭ್ರಾಮ್ಯತೇ ಬ್ರಹ್ಮಚಕ್ರೇ ॥" "ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ ಜುಷ್ಟಸ್ತತಸ್ತೇನಾಮೃತತ್ವಮೇತಿ." ಇತಿ ವೇದಾಂತರತ್ನ ಶ್ವೇತಾಶ್ವತರೋಪನಿಷತ್ಸು ಶ್ರೂಯತೇ. ಪಾಶುಪತವಿದ್ಯಾಂಗಭೂತಯೋಗೇನ ದಹರಾದ್ಯುಪಾಸನಾನಾಂ ಶಿವಸಾಕ್ಷಾತ್ಕಾರಾನುಭೂತಿಃ ಉತ ತದ್ವಿನಾ ಸಂಭವತಿ ಇತಿ ಸಂದಿಹ್ಯತೇ. "ಬ್ರಹ್ಮವಿದ್ಬ್ರಹ್ಮೈವ ಭವತಿ" ಇತ್ಯಾದಿಷು ಜ್ಞಾನೇನೈವ ಬ್ರಹ್ಮಸಾಕ್ಷಾತ್ಕಾರತ್ವವ್ಯಪದೇಶಾತ್ ಯೋಗವಿದ್ಯಾಯಾಂ ನ ಕಿಂಚಿತ್ಪ್ರಯೋಜನಮಿತಿ ಪ್ರಾಪ್ತೇ ವದಾಮಃ. "ತಸ್ಯಾಭಿಧ್ಯಾನಾತ್ತೃತೀಯಂ ದೇಹಭೇದೇ ವಿಶ್ವೈಶ್ವರ್ಯಂ ಕೇವಲ ಆಪ್ತಕಾಮಃ" ಇತ್ಯಾರಭ್ಯ "ಅಗ್ನಿರ್ಯತ್ರಾಭಿಮಥ್ಯತೇ ವಾಯುರ್ಯತ್ರಾಭಿಮಥ್ಯತೇ ಸೋಮೋ ಯತ್ರಾತಿರಿಚ್ಯತೇ ತತ್ರ ಸಂಜಾಯತೇ ಮನಃ," "ತ್ರಿರುನ್ನತಂ ಸ್ಥಾಪ್ಯ ಸಮಂ ಶರೀರಂ ಹೃದೀಂದ್ರಿಯಾಣಿ ಮನಸಾ ಸನ್ನಿವೇಶ್ಯ । ಬ್ರಹ್ಮೋಡುಪೇನ ಪ್ರತರೇತ ವಿದ್ವಾನ್ ಸ್ರೋತಾಂಸಿ ಸರ್ವಾಣಿ ಭಯಾವಹಾನಿ ॥" ಪ್ರಾಣಾನ್ ಪ್ರಪೀಡ್ಯೇಹ ಸಯುಕ್ತಚೇಷ್ಟಃ ಕ್ಷೀಣೇ ಪ್ರಾಣೇ ನಾಸಿಕಯೋಚ್ಛ್ವಸೀತ । ದುಷ್ಟಾಶ್ವಯುಕ್ತಮಿವ ವಾಹನಮೇವ ವಿದ್ವಾನ್ ಮನೋ ಧಾರಯೇತಿ ಪ್ರಮತ್ತಃ । " ಇತ್ಯರಭ್ಯ "ಪೃಥಿವ್ಯಪ್ತೇಜೋಽನಿಲಜೀವೇ ಸಮುತ್ಥಿತೇ ಪಂಚಾತ್ಮಕೇ ಪಂಚಗುಣೇ ಪ್ರವೃತ್ತೇ । ನ ತಸ್ಯ ರೋಗೋ ನ ಜರಾ ನ ಮೃತ್ಯುಃ ಪ್ರಾಪ್ತಸ್ಯ ಯೋಗಾಗ್ನಿಮಯಂ ಶರೀರಂ ॥ ಲಘುತ್ವಮಾರೋಗ್ಯಮಲೋಲುಪತ್ವಂ ವರ್ಣಪ್ರಸಾದಂ ಸ್ವರಸೌಷ್ಟವಂ ಚ । ಗಂಧಶ್ಶುಭೋ ಮೂತ್ರಪುರೀಷಮಲ್ಪಂ ಯೋಗಪ್ರವೃತ್ತಿಂ ಪ್ರಥಮಾಂ ವದಂತಿ ॥ ಯಥೈವ ಬಿಂಬಂ ಹೃದಯೋಪಲಿಪ್ತಂ ತೇಜೋಮಯಂ ಭ್ರಾಜತೇ ತತ್ಸುಧೌತಂ। ತಥಾತ್ಮತತ್ತ್ವಂ ಪ್ರಸಮೀಕ್ಷ್ಯ ದೇಹೀ ಏಕಃ ಕೃತಾರ್ಥೋ ಭವತೀಹ ತೃಪ್ತಃ ॥" ಇತಿ ಶ್ವೇತಾಶ್ವತರೇ ಯೋಗಯುಕ್ತಸ್ಯೈವ ಪರಶಿವಬ್ರಹ್ಮಸಾಕ್ಷಾತ್ಕಾರಾವಗಮಾತ್. ಅನ್ಯತ್ರ "ವೇದಾಂತಶ್ರವಣಂ ಕುರ್ವನ್ ಯೋಗಂ ಸಮಾರಭೇತ್ ।

ಆಕುಂಚನೇನ ಕುಂಡಲಿನ್ಯಾ ಕವಾಟಮುದ್ಘಾಟ್ಯ ಮೋಕ್ಷದ್ವಾರಂ ವಿಭೇದಯೇತ್. ಯಚ್ಛೇದ್ವಾಙ್ಮನಸಿ ಪ್ರಾಜ್ಞಃ ತದ್ಯಚ್ಛೇದ್ಜ್ಞಾನ ಆತ್ಮನಿ। ಜ್ಞಾನಮಾತ್ಮನಿ ಯಚ್ಛೇತ್ ತದ್ಯಚ್ಛೇಚ್ಛಾಂತ ಆತ್ಮನಿ॥ ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪೂರುಷಃ। ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂಜ್ವರೇತ್॥ ತಮೇವಂ ಧರ್ಮಂ ವಿಜ್ಞಾಯ ಪ್ರಜ್ಞಾಂ ಕುರ್ವೀತ ಬ್ರಾಹ್ಮಣಃ। ನಾನುಧ್ಯಾಯನ್ ಬಹೂನ್ ಶಬ್ದಾನ್ ವಾಚೋ ವಿಗ್ಲಪನಂ ಹಿ ತತ್॥ ಯಮೈಶ್ಚ ನಿಯಮೈಶ್ಚೈವ ಹ್ಯಾಸನೈಶ್ಚ ಸುಸಂಯುತಃ। ನಾಡೀಶುದ್ಧಿಂ ಚ ಕೃತ್ವಾ ದ್ವೌ ಪ್ರಾಣಾಯಾಮಮ್ ಸಮಾಚರೇತ್॥ ಸರ್ವಚಿಂತಾಂ ಪರಿತ್ಯಜ್ಯ ಸಾವಧಾನೇನ ಚೇತಸಾ। ನಿರ್ವಿಕಲ್ಪಃ ಪ್ರಸನ್ನಾತ್ಮಾ ಪ್ರಾಣಾಯಾಮಂ ಸಮಭ್ಯಸೇತ್॥ ಮರುದಭ್ಯಸನಂ ನಿತ್ಯಂ ಮನೋಯುಕ್ತಂ ಸಮಭ್ಯಸೇತ್। ಇತರತ್ರ ನ ಕರ್ತವ್ಯಾ ಮನೋಯುಕ್ತಿರ್ಮನೀಷಿಣಾ॥" ಇತ್ಯಾದಿನಾ ಬಾಹ್ಯಾಭ್ಯಂತರರೂಪಸರ್ವೋಪಾಸನೇಷು ಯೋಗವಿದ್ಯಾಪ್ರಾಧಾನ್ಯಕಥನಾಚ್ಚ. ತೈತ್ತಿರೀಯೇ "ದಹರಂ ವಿಪಾಪಂ" ಇತ್ಯಾರಭ್ಯ "ತಸ್ಮಿನ್ನದಂತಸ್ತದುಪಾಸಿತವ್ಯಂ" ಇತ್ಯಾದಿನಾ ಯತ್ರೋಪಾಸನವಿಧಿರುಪದಿಷ್ಟಾ ತತ್ರತತ್ರ ಯೋಗಾನುಗುಣ್ಯತ್ವಮರ್ಥಾತ್ಸಿದ್ಧಂ, ಸಾಧನಂ ವಿನಾ ಸಾಧ್ಯಾನಿಷ್ಪತ್ತೇರಿತಿ ನ್ಯಾಯೇನ ಯೋಗಂ ವಿನಾ ಚಿತ್ತಸ್ಥೈರ್ಯಾಭಾವಾತ್, ತದಭಾವೇ ಬ್ರಹ್ಮಸಾಕ್ಷಾತ್ಕಾರಾಭಾವಾಚ್ಚ. ತಸ್ಮಾನ್ಮುಮುಕ್ಷೂಣಾಂ ದೃಙ್ಮನಃಪ್ರಾಣಸಂಧಾನಾತ್ಮಕಶಿವಯೋಗವಿದ್ಯಾವಶ್ಯಕತ್ವಂ ನಿರ್ದಿಶ್ಯತೇ. ತಥಾ ಕೈವಲ್ಯೇ ದಹರೋಪಾಸನಾಯಾಮಪಿ "ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ" ಇತಿ ಧ್ಯಾನಯೋಗಯುಕ್ತಸ್ಯೈವ ಪರಶಿವಬ್ರಹ್ಮಾವಗತಿತ್ವದರ್ಶನಾತ್. "ಬ್ರಹ್ಮ ವೇದ ಬ್ರಹ್ಮೈವ ಭವತಿ" ಇತ್ಯಾದಿಶ್ರುತೀನಾಂ ವೇದಶಬ್ದೇನ ಧ್ಯಾನಧಾರಣಯೋಗಾನುಗುಣ್ಯಜ್ಞಾನಮುಪದಿಶ್ಯತೇ ನ ವೈದ್ಯಶಾಸ್ತ್ರಾದಿವದ್ವಾಕ್ಯಾರ್ಥಜ್ಞಾನಂ. ತಸ್ಮಾತ್ಸರ್ವಶಾಸ್ತ್ರಸಮನ್ವಯ ಏವ ಯುಕ್ತಃ.

ಚಿತ್ತವು ಅನೇಕ ಸಂಕಲ್ಪಗಳಿಂದ ಕೂಡಿರುವುದು. ಅದನ್ನು ತಡೆಯದೇ ಇದ್ದರೆ ದಹರಾದಿವಿದ್ಯೆಗಳ್ಯಾವುವೂ ಸಿದ್ಧಿಸುವುದೇ ಇಲ್ಲ. ಆದ್ದರಿಂದ ಶಿವಾನುಭವಕ್ಕೆ ಆವಶ್ಯಕವಾದ ಚಿತ್ತಸ್ಥೈರ್ಯವು ಯಾತರಿಂದ ಸಂಭವಿಸುತ್ತದೆ? ಎಂದಾಶಂಕಿಸಿ ಸಮಾಧಾನ ಮಾಡುತ್ತಾನೆ. ಶ್ವೇತಾಶ್ವತರಾದಿ ವೇದಾಂತಗಳಲ್ಲಿ ಶಿವಾನುಭವಕ್ಕೆ ಸಾಧನವಾಗಿ ಶಿವಯೋಗವನ್ನು ಹೇಳಿರುವುದರಿಂದ ಜೀವನ ಮುಖ್ಯಾವಯವಗಳೆನಿಸಿದ ಕಣ್ಣು ಮನಸ್ಸು ಪ್ರಾಣಗಳ ಸಮ್ಮೇಳನದಿಂದ ಚಿತ್ತದ ಚಾಂಚಲ್ಯವು ತೊಲಗಿ ಶಿವಾನುಭವವು ಸಿದ್ಧಿಸುತ್ತದೆ. "ಬ್ರಹ್ಮವಾದಿಗಳು ಹೇಳುತ್ತಾರೆ.

ಬ್ರಹ್ಮಕ್ಕೆ ಬೇರೆ ಯಾವ ಕಾರಣವಿದೆ? ನಾವು ಹೇಗೆ ಹುಟ್ಟಿಬಂದಿದ್ದೇವೆ? ನಾವು ಯಾರ ಆಶ್ರಯದಲ್ಲಿ ಬಾಳುತ್ತಿದ್ದೇವೆ? ನಾವು ಬ್ರಹ್ಮವನ್ನು ಅರಿಯುವುದು ಹೇಗೆ?" ಎಂದಾರಂಭಿಸಿ "ಅವರು ಧ್ಯಾನಯೋಗದಿಂದ ಕೂಡಿದವರಾಗಿ ಎಲ್ಲ ಜೀವರ ಎಲ್ಲಾ ದೇಹದೊಳಗೂ ಪರಮಾತ್ಮಶಕ್ತಿಯು ಸತ್ತ್ವರಜಸ್ತಮೋಗುಣಗಳಿಂದ ಆಚ್ಛಾದಿತ ವಾಗಿರುವುದೆಂದೂ, ಆ ಬೃಹದಾಕಾರವಾದ ಬ್ರಹ್ಮಚಕ್ರದಲ್ಲಿ ಹಂಸರೂಪನಾದ ಜೀವನು ಅಲೆಯುತ್ತಿರುವನೆಂದೂ ಕಂಡುಕೊಂಡರು," "ದೇಹದಲ್ಲಿ ಬೇರೊಬ್ಬ ಆತ್ಮನು ತನ್ನನ್ನು ಪ್ರೇರಿಸುತ್ತಿರುವನೆಂದು ತಿಳಿದು ಜೀವನು ಅವನೊಡನೆ ಬೆರೆತು ಅಮೃತವನ್ನು ಪಡೆಯುತ್ತಾನೆ" ಹೀಗೆ ವೇದಾಂತರತ್ನದಲ್ಲೂ ಶ್ವೇತಾಶ್ವತರೋಪ ನಿಷತ್ತಿನಲ್ಲೂ ಹೇಳಲಾಗಿದೆ. ಆದರೆ ಪಾಶುಪತವಿದ್ಯೆಗೆ ಅಂಗವೆನಿಸಿದ ಯೋಗಮಾರ್ಗ ದಿಂದ ದಹರಾದ್ಯುಪಾಸಕರಿಗೆ ಶಿವಾನುಭವವು ದೊರಕುತ್ತದೆಯೋ ಅಥವಾ ಅದಿಲ್ಲ ದೆಯೇ ದೊರಕುವುದೋ ಎಂದು ಸಂದೇಹವುಂಟಾಗುತ್ತದೆ. ಶ್ರುತಿಗಳಲ್ಲಿ ಜ್ಞಾನ ದಿಂದಲೇ ಬ್ರಹ್ಮಸಾಕ್ಷಾತ್ಕಾರವನ್ನು ಹೇಳಿರುವುದರಿಂದ ಯೋಗವಿದ್ಯೆಯಿಂದ ಏನೂ ಫಲವಿಲ್ಲವೆಂದು ಆಕ್ಷೇಪವು ಬಂದರೆ ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. "ಅವನನ್ನು ನಿರಂತರವೂ ಧ್ಯಾನಿಸುವುದರಿಂದ ಜೀವನು ಪ್ರಸಾದಕಾಯನಾಗಿ ಸಕಲೈಶ್ವರ್ಯಗಳನ್ನೂ ಪಡೆಯುವನು" ಎಂದಾರಂಭಿಸಿ, "ಅಗ್ನಿ ವಾಯುಗಳೆಂಬ ಭೂತಗಳನ್ನೂ ಸೋಮಾದಿದೇವತೆಯನ್ನೂ ಅತಿಕ್ರಮಿಸಿ ಮನಸ್ಸನ್ನು ಆತ್ಮನಲ್ಲಿ ಬೆರೆಸುತ್ತಾನೆ" "ಶರೀರವನ್ನು ಸಮವಾಗಿ ನೆಲೆಗೊಳಿಸಿ ಇಂದ್ರಿಯಗಳನ್ನು ಮನಸ್ಸಿ ನೊಡನೆ ಹೃದಯದಲ್ಲಿ ಸೇರಿಸಿ ಜ್ಞಾನಿಯು ಭಯಂಕರವಾದ ಸಂಸಾರಸಾಗರಗಳನ್ನು ಬ್ರಹ್ಮವೆಂಬ ದೋಣಿಯಿಂದ ದಾಟಬೇಕು" "ಪ್ರಾಣಗಳನ್ನು ನಿರೋಧಿಸಿ ವ್ಯವಸ್ಥಿತ ಕ್ರಮದಲ್ಲಿ ವ್ಯವಹಾರಗಳನ್ನು ನಡೆಸುತ್ತಲೇ ಆ ಪ್ರಾಣದ ಶಕ್ತಿ ಕುಗ್ಗಿದ ಮೇಲೆ ಅದನ್ನು ಮೂಗಿನಿಂದ ಹೊರಗೆ ಬಿಡಬೇಕು" "ತುಂಟುಕುದುರೆಗಳೊಡಗೂಡಿದ ವಾಹನದಂತೆ ಮನಸ್ಸನ್ನು ಎಚ್ಚರಿಕೆಯಿಂದ ಹಿಡಿದು ನಿಲ್ಲಿಸಬೇಕು" ಎಂದಾರಂಭಿಸಿ "ಪಂಚಭೂತಾತ್ಮಕವಾದೀ ಶರೀರವು ಯೋಗಾಗ್ನಿಯಿಂದೊಡಗೂಡಿದ್ದರೆ ಅದಕ್ಕೆ ರೋಗವಾಗಲೀ ಜರಾಮರಣಗಳಾಗಲೀ ಸಂಭವಿಸುವುದಿಲ್ಲ." "ಯೋಗನಿಷ್ಠವಾದ ಶರೀರವು ಚಟುವಟಿಕೆಯಿಂದಲೂ, ರೋಗಚಾಂಚಲ್ಯಗಳಿಲ್ಲದೆಯೂ, ಶಬ್ದಮಾಧುರ್ಯ ದಿಂದಲೂ, ಅವಯವಗಳ ಸೌಷ್ಠವದಿಂದಲೂ, ಸೌಗಂಧ್ಯದಿಂದಲೂ, ವ್ಯವಸ್ಥಿತವಾದ ಜಲಮಲವಿಸರ್ಜನೆಗಳಿಂದಲೂ ಶೋಭಿಸುತ್ತಿರುವುದು." "ಹೃದಯಶುದ್ಧಿಯಿಂದ ಒಡಗೂಡಿದ ದೇಹವು ನಿರ್ಮಲವೂ, ತೇಜೋಮಯವೂ ಆಗಿ ಶೋಭಿಸುವುದಲ್ಲದೆ ಜೀವನು ತನ್ನೊಳಗೆ ನೆಲಸಿರುವ ಪರಮಾತ್ಮಸ್ವರೂಪವನ್ನು ಕಂಡು ಕೃತಾರ್ಥನಾಗಿ ತೃಪ್ತಿಯಿಂದ ಬಾಳುವನು" ಎಂದು ಶ್ವೇತಾಶ್ವಕಶ್ರುತಿಯಲ್ಲಿ ಯೋಗಯುಕ್ತನಾದವ ನಿಗೆ ಮಾತ್ರವೇ ಪರಶಿವಬ್ರಹ್ಮದ ಸಾಕ್ಷಾತ್ಕಾರವಾಗುವುದೆಂದು ತಿಳಿದುಬರುತ್ತದೆ. ಬೇರೆ ಕಡೆಯಲ್ಲೂ "ವೇದಾಂತವನ್ನು ಕೇಳುತ್ತಲೇ ಯೋಗಸಾಧನವನ್ನೂ ಆಚರಿಸ

ಬೇಕು. ಕುಂಡಲಿನೀಶಕ್ತಿಯನ್ನು ಮೆಟ್ಟಿ ಮೋಕ್ಷದ ಬಾಗಿಲನ್ನು ತೆಗೆಯಬೇಕು." "ಜ್ಞಾನಿಯು ವಾಕ್ಕನ್ನು ಮನಸ್ಸಿನಲ್ಲೂ, ಮನಸ್ಸನ್ನು ಜ್ಞಾನದಲ್ಲೂ, ಜ್ಞಾನವನ್ನು ಬುದ್ಧಿಯಲ್ಲೂ, ಬುದ್ಧಿಯನ್ನು ಆತ್ಮದಲ್ಲೂ ತಡೆದು ನಿಲ್ಲಿಸಬೇಕು." "ಮಾನವನು ತನ್ನನ್ನು ಆತ್ಮನೆಂದು ತಿಳಿದರೆ ಮತ್ತೆ ಬೇರೆ ಯಾವಫಲಕ್ಕಾಗಿ ಈ ಶರೀರವನ್ನು ಒಣಗಿಸಿಯಾನು?" "ಸಾಧಕನು ಧರ್ಮಸ್ವರೂಪನಾದ ಆತ್ಮನನ್ನು ತಿಳಿದು ಹೆಚ್ಚು ಶಬ್ದಗಳನ್ನು ಪ್ರಯೋಗಿಸದೆ ಪ್ರಜ್ಞೆಯಿಂದ ವ್ಯವಹರಿಸಬೇಕು. ಹೆಚ್ಚು ಮಾತಾಡುವುದರಿಂದ ಆಯಾಸವೇ ಹೊರತು ಬೇರೆ ಯಾವ ಫಲವೂ ಇಲ್ಲ" "ಯಮನಿಯಮಾಸನಗಳಿಂದ ನಾಡಿಯನ್ನು ಶುದ್ಧಮಾಡಿಕೊಂಡು ಸಾಧಕನು ಎರಡು ವೇಳೆ ಪ್ರಾಣಾಯಾಮವನ್ನಾಚರಿಸಬೇಕು" "ಸಾವಧಾನಚಿತ್ತನಾಗಿ ಎಲ್ಲಾ ಚಿಂತೆಗಳನ್ನೂ ತೊರೆದು ಸಾಧಕನು ಪ್ರಸನ್ನತೆಯಿಂದ ನಿರ್ವಿಕಲ್ಪನಾಗಿ ಪ್ರಾಣಾಯಾಮವನ್ನು ಅಭ್ಯಾಸಮಾಡಬೇಕು." "ವಾಯುವನ್ನು ನಿರೋಧಮಾಡುವುದೇ ಮನಸ್ಸಿಗೆ ಯೋಗವೆನಿಸುತ್ತದೆ." ಹೀಗೆ ಒಳಗಿನ ಮತ್ತು ಹೊರಗಿನ ಎಲ್ಲಾ ಉಪಾಸನಗಳಿಗೂ ಯೋಗವಿದ್ಯೆಯೇ ಪ್ರಧಾನವೆನಿಸಿದೆ. ತೈತ್ತಿರೀಯದಲ್ಲಿ ದಹರಾಕಾಶದಲ್ಲಿ ನೆಲಸಿರುವ ತತ್ತ್ವವನ್ನು ಉಪಾಸನಮಾಡಬೇಕೆಂದು ಹೇಳಿರುವುದರಿಂದ ಉಪಾಸನವೆಲ್ಲದರಲ್ಲೂ ಯೋಗವು ಆವಶ್ಯಕವೆಂದು ಸ್ಪಷ್ಟವಾಗುತ್ತದೆ. ಸಾಧನವಿಲ್ಲದೆ ಸಾಧ್ಯವು ಹುಟ್ಟಲಾರದೆಂಬ ನ್ಯಾಯದಿಂದ ಯೋಗವಿಲ್ಲದೆ ಚಿತ್ತಸ್ಥೈರ್ಯವು ದೊರಕಲಾರದು. ಅದಿಲ್ಲದೇ ಇದ್ದರೆ ಬ್ರಹ್ಮಸಾಕ್ಷಾತ್ಕಾರವೇ ಆಗಲಾರದು. ಆದ್ದರಿಂದ ಮುಮುಕ್ಷುಗಳಿಗೆ ಕಣ್ಣು ಮನಸ್ಸು ಪ್ರಾಣಗಳ ಸಮ್ಮೇಳನರೂಪವಾದ ಯೋಗವಿದ್ಯೆಯು ಅನಿವಾರ್ಯವೆನಿಸಿದೆ.ಕೈವಲ್ಯಶ್ರುತಿಯಲ್ಲಿ ಹೇಳಿರುವ ದಹರೋಪಾಸನೆಯೂ ಸಹ ಧ್ಯಾನಯೋಗವುಳ್ಳವನಿಗೆ ಮಾತ್ರವೇ ಪರಶಿವಬ್ರಹ್ಮಸಾಕ್ಷಾತ್ಕಾರವಾಗುವುದೆಂದು ಹೇಳಿದೆ. "ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ" ಎಂದು ಮುಂತಾದ ಶ್ರುತಿಗಳಲ್ಲಿ ವೇದಶಬ್ದವು ಧ್ಯಾನಧಾರಣಯೋಗಡೊಡಗೂಡಿದ ಜ್ಞಾನವನ್ನು ಬೋಧಿಸುತ್ತದೆ; ಆದರೆ ವೈದ್ಯಶಾಸ್ತ್ರ ಮೊದಲಾದವುಗಳಂತೆ ಕೇವಲ ವಾಕ್ಯಾರ್ಥವನ್ನು ಬೋಧಿಸುವುದಿಲ್ಲ. ಆದ್ದರಿಂದ ಎಲ್ಲಾ ಶಾಸ್ತ್ರಗಳಲ್ಲೂ ಸಮನ್ವಯದೃಷ್ಟಿಯೇ ಯುಕ್ತವೆನಿಸಿದೆ.

**ಅಸ್ಮಿನ್ನರ್ಥೇ ಹೇತ್ವಂತರಮಾಹ. ಗುಹಾಸಾಧಾರಣ್ಯಶ್ರುತೇಶ್ಚ ||೬೨|| "ತತಃ ಪರಂ ಬ್ರಹ್ಮ ಪರಂ ಬೃಹಂತಂ ಯಥಾನಿಕಾಯಂ ಸರ್ವಭೂತೇಷು ಗೂಢಂ, ವಿಶ್ವಸ್ಯೈಕಂ ವೇಷ್ಟಿತಾರಂ ತಮೀಶಂ ಜ್ಞಾತಾ ಅಮೃತಾ ಭವಂತಿ ||" "ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಂ । ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ || ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ।ಸರ್ವಸ್ಯ ಪ್ರಭುಮವ್ಯಕ್ತಂ ಸರ್ವಸ್ಯ ಶರಣಂ ಸುಹೃತ್ || ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಂ । ಹೃದಾ ಹೃದಿಸ್ಥಂ ಮನಸಾ ಯ ಏನ**

ಏವಂ ವಿದುರಾಮೃತಾಸ್ತೇ ಭವಂತಿ ॥ ತತ್ಕರ್ಮ ಕೃತ್ವಾ ವಿನಿವರ್ತ್ಯ ಭೂಯಃ ತತ್ತ್ವಸ್ಯ ತತ್ತ್ವೇನ ಸಮೇತ್ಯ ಯೋಗಂ ॥ ಏಕೇನ ದ್ವಾಭ್ಯಾಂ ತ್ರಿಭಿರಷ್ಟಭಿರ್ವಾ ಭಾವೇನ ಚೈವಾತ್ಮಗುಣೈಶ್ಚ ಸೂಕ್ಷ್ಮೈಃ ॥ ಆರುಹ್ಯ ಕರ್ಮಾಣಿ ಗುಣಾನ್ವಿತಾನಿ ಭಾವಾಂಶ್ಚ ಸರ್ವಾನ್ವಿನಿಯೋಜಯೇದ್ಯಃ । ತೇಷಾಮಭಾವೇ ಕೃತಕರ್ಮನಾಶಃ ಕರ್ಮಕ್ಷಯೇ ಯಾತಿ ಸ ತತ್ತ್ವತೋಽನ್ಯಃ ॥ ತಮೀಶ್ವರಾಣಾಂ ಪರಮಂ ಮಹೇಶ್ವರಂ ತಂ ದೇವತಾನಾಂ ಪರಮಂ ಚ ದೈವತಂ । ಪತಿಂ ಪತೀನಾಂ ಪ್ರಥಮಂ ಪುರಸ್ತಾದ್ವಿದಾಮ ದೇವಂ ಭುವನೇಶಮೀಡ್ಯಂ ॥ ನ ತಸ್ಯ ಕಾರ್ಯಂ ಕರಣಂ ಚ ವಿದ್ಯತೇ ನ ತತ್ಸಮಶ್ಚಾಪ್ಯಧಿಕಶ್ಚ ದೃಶ್ಯತೇ ॥" ಇತ್ಯಾದಿಷು ಶಿವಸ್ಯ ಪರಬ್ರಹ್ಮಣಃ ಗುಣಾಸಾಧಾರಣ್ಯಶ್ರುತೇಶ್ಚ ಅನನ್ಯಸಾಧಾರಣಗುಣಶ್ರವಣಾತ್ ತತ್ಸಾಕ್ಷಾತ್ಕಾರಾನುಭವಕಾಂಕ್ಷಿಣಾಂ ಯೋಗಯುಕ್ತಮೇವೋಪಾಸನಂ ವಿಧೀಯತೇ.

ಈ ಬಗ್ಗೆ ಬೇರೊಂದು ಕಾರಣವನ್ನು ಹೇಳುತ್ತಾನೆ. "ಎಲ್ಲಾ ದೇಹಗಳಲ್ಲೂ ಎಲ್ಲಾ ಜೀವರೊಳಗೂ ಗುಪ್ತವಾಗಿ ನೆಲಸಿರುವ ಪರಶಿವಬ್ರಹ್ಮವನ್ನು ತಿಳಿದವರು ಅಮೃತರಾಗುತ್ತಾರೆ" "ಪರಮಾತ್ಮನು ಎಲ್ಲಾ ಕಡೆಗಳಲ್ಲೂ ಹಸ್ತಪಾದಾದ್ಯವಯವಗಳನ್ನೂ ಶಿರಸ್ಸು ಮುಖ ಕಣ್ಣುಗಳನ್ನೂ ವ್ಯಾಪಿಸಿಕೊಂಡು ಎಲ್ಲವನ್ನೂ ಕೇಳುತ್ತ ಎಲ್ಲೆಲ್ಲೂ ನೆಲಸಿದ್ದಾನೆ" "ಎಲ್ಲಾ ಇಂದ್ರಿಯಗಳಿಂದಲೂ ಮತ್ತು ತ್ರಿಗುಣಗಳಿಂದಲೂ ಶೋಭಿಸುತ್ತಿದ್ದರೂ ಅವನು ಇಂದ್ರಿಯವ್ಯಾಪಾರಶೂನ್ಯನಾಗಿದ್ದಾನೆ. ಎಲ್ಲಕ್ಕೂ ಪ್ರಭುವಾಗಿದ್ದರೂ ಅವ್ಯಕ್ತನಾಗಿದ್ದಾನೆ. ಹಾಗೆಯೇ ಎಲ್ಲರಿಗೂ ರಕ್ಷಕನೂ ಆಪ್ತನೂ ಆಗಿದ್ದಾನೆ. ಅವನ ಎದುರಿಗೆ ಯಾವ ಆಕಾರವೂ ಸಮಾನವಾಗಿ ನಿಲ್ಲಲಾರದು. ಕಣ್ಣಿಂದ ಯಾರೂ ಅವನನ್ನು ಕಾಣಲಾರರು. ಹೃದಯದಲ್ಲಿ ನೆಲಸಿರುವ ಇವನನ್ನು ನಿರ್ಮಲಮನಸ್ಸಿನಿಂದ ಯಾರು ತಿಳಿಯುವರೋ ಅವರು ಅಮೃತರಾಗುತ್ತಾರೆ" "ಕರ್ಮವನ್ನಾಚರಿಸುತ್ತಲೇ ಜೀವನನ್ನು ಪರಮಾತ್ಮನೊಂದಿಗೆ ಬೆರೆಸಿ ಆತ್ಮಗುಣಗಳ ವಿಕಾಸದಿಂದ ತ್ರಿಗುಣಾತ್ಮಕವಾದ ಕರ್ಮಗಳ ಸಂಕೋಲೆಯನ್ನು ದಾಟಿ, ಅವುಗಳ ಹಿನ್ನೆಲೆಯನ್ನು ತೊಲಗಿಸಿದಮೇಲೆ ಕರ್ಮವೆಲ್ಲವೂ ಪೂರ್ಣವಾಗಿ ನಾಶವಾಗುವುದು. ಆಮೇಲೆ ಜೀವನು ತನ್ನ ವಾಸ್ತವವಾದ ರೂಪವನ್ನು ಪಡೆಯುವನು." "ಈಶ್ವರರೆಲ್ಲರಿಗೆ ಪರಮೇಶ್ವರನೂ, ದೇವತೆಗಳಿಗೆ ಪರಮದೇವತೆಯೂ, ಜಗತ್ಪತಿಯೂ, ಸರ್ವವಂದ್ಯನೂ ಆದ ಮಹಾದೇವನನ್ನು ತಿಳಿಯೋಣ" "ಅವನಿಗೆ ಯಾವ ಕಾರ್ಯಕಾರಣಭಾವವೂ ಇಲ್ಲ; ಸಮಾನರಾಗಲೀ ಅಧಿಕರಾಗಲೀ ಯಾರೂ ಇಲ್ಲ" ಈ ಶ್ರುತಿಯಲ್ಲಿ ಪರಶಿವಬ್ರಹ್ಮದ ಅಸಾಧಾರಣಗುಣಗಳನ್ನು ತಿಳಿಸಲಾಗಿದೆ. ಆದ್ದರಿಂದ ಮುಮುಕ್ಷುಗಳು ಶಿವಯೋಗನಿಷ್ಠೆಯಿಂದ ಶಿವನನ್ನು ಉಪಾಸನಮಾಡಬೇಕು.

ನನು ಶ್ವೇತಾಶ್ವತರೇ "ಉದ್ಗೀಥಮೇತತ್ಪರಮಂ ತು ಬ್ರಹ್ಮ ತಸ್ಮಿಂ

ಸ್ತ್ರಯಂ ಸ್ವಪ್ರತಿಷ್ಠಾಕ್ಷರಂ ಚ ", "ಅತ್ರಾಂತರಂ ವೇದವಿದೋ ವಿದಿತ್ವಾ ಲೀನಾ ಬ್ರಹ್ಮಣಿ ತತ್ಪರಾ ಯೋನಿಮುಕ್ತಾಃ ||" ಇತಿ, ಛಾಂದೋಗ್ಯೇ "ಓಮಿತ್ಯೇತದಕ್ಷರಮುದ್ಗೀಥಮುಪಾಸೀತ" ಇತ್ಯಾರಭ್ಯ "ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವ ಇತ್ಯಾದಿನಾ ಪ್ರಣವಸ್ಯೈವ ಪರಮಾತ್ಮತ್ವಪ್ರಸಾಧನಾದುದ್ಗೀಥವಿದ್ಯಾಯಾಃ ಕ್ರತ್ವರ್ಥತಯಾ ಕ್ರತುಷು ನಿಯಮೇನೋಪಾಧೇಯತ್ವಾತ್ ಪರಶಿವಬ್ರಹ್ಮಪರತ್ವಮಸಂಗತಂ. ತಸ್ಮಾದುದ್ಗೀಥಾದ್ಯಂಗಾವಬದ್ಧೋಪಾಸನಾನಾಂ ದಹರಾದಿವಿದ್ಯಾಭಿಸ್ಸಹ ಸಮುಚ್ಚಯತ್ವಮನುಪಪನ್ನಮಿತ್ಯಾಶಂಕಾಯಾಮಧಿಕರಣಾಂತರಮಾಹ. ನವಾ ತತ್ ಸಹಭಾವಾಧಿಕರಣಂ || ೨೮ || ನವಾ ತತ್ಸಹಭಾವಾಶ್ರುತೇಃ || ೬೩ || ನವಾ ಉದ್ಗೀಥಾದ್ಯಂಗಾವಬದ್ಧೋಪಾಸನಾನಾಮಪಿ ಸಮುಚ್ಚಯನಿಯಮೋಽಸ್ತಿ. ಕುತಃ ತತ್ಸಹಭಾವಾಶ್ರುತೇಃ. ತಾಸಾಮಂಗಾವಬದ್ಧೋಪಾಸನಾನಾಂ ಉದ್ಗೀಥಾದೀನಾಂ ದಹರಾದಿವಿದ್ಯಾಭಿಸ್ಸಹಭಾವಸ್ಯ ಸಮುಚ್ಚಯಸ್ಯ ಅಶ್ರುತೇಃ ಅಶ್ರವಣಾತ್. "ಯದೇವ ವಿದ್ಯಯಾ ಕರೋತಿ" ಇತ್ಯಂಗಾವಬದ್ಧೋಪಾಸನಾನಾಂ ಕರ್ಮಾಂಗತ್ವಂ ಪ್ರತಿಪಾದ್ಯತೇ. "ತನ್ನಿರ್ಧಾರಣಾನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬಂಧಃ ಫಲಂ" ಇತಿಸೂತ್ರೇ ಕರ್ಮಾಂಗತ್ವಸ್ಯನಿರಸ್ತತ್ವಾತ್, ಕಿಂತ್ವಂಗಾವಬದ್ಧೋಪಾಸನಾಪೂರ್ವಕಕರ್ಮಾನುಷ್ಠಾನೇ ಕೃತೇ ಸತಿ ಸ್ವರ್ಗಾದಿಲೋಕೋತ್ಪತ್ತಿಬಂಧಕಪಾಪಾನಾಂ ನಿವೃತ್ತ್ಯಾ ಶೀಘ್ರಮೇವ ಫಲೋತ್ಪತ್ತಿರ್ಭವತೀತ್ಯೇತಾವನ್ಮಾತ್ರಮೇವ "ಯದೇವ ವಿದ್ಯಯಾ ಕರೋತಿ" ಇತಿ ಶ್ರುತ್ಯಾ ಪ್ರತಿಪಾದ್ಯತೇ. ತಥಾಚ ಅಂಗಾವಬದ್ಧೋಪಾಸನಾನಾಮಪಿ ದಹರಾದಿಪ್ರತೀಕೋಪಾಸನಾನಾಮಿವ ಸಮುಚ್ಚಯತ್ವಮನುಪಪನ್ನಂ. "ಓಮಿತ್ಯೇತದಕ್ಷರಮುದ್ಗೀಥಮುಪಾಸೀತ" ಇತ್ಯಾದಿಕಾ ವಿದ್ಯಾಃ ಕಿಮುದ್ಗೀಥಾದಿವತ್ ಕ್ರತ್ವರ್ಥತಯಾ ಕ್ರತುಷು ನಿಯಮೇನೋಪಾದೇಯಾಃ ಉತ ಗೋದೋಹನಾದಿವತ್ಪುರುಷಾರ್ಥತಯಾ ಯಥಾಕಾಮಮಿತಿ ಸಂದಿಹ್ಯತೇ. ನಿಯಮೇನೋಪಾದೇಯಮಿತ್ಯುಕ್ತಂ. ನನು ಚಾಸಾಂ ಪುರುಷಾರ್ಥತ್ವೇನ ಅನಿಯಮಃ ಪ್ರತಿಪಾದಿತಃ. ತನ್ನಿರ್ಧಾರಣನಿಯಮಸ್ತದ್ದೃಷ್ಟೇಃ ಪೃಥಗ್ಘ್ಯಪ್ರತಿಬಂಧಃ ಫಲಂ ಇತ್ಯತ್ರ ಸತ್ಯಂ ತದೇವ ದೃಢಯಿತುಂ ಕೈಶ್ಚಿಲ್ಲಿಂಗದರ್ಶನೈರ್ಯುಕ್ತ್ಯಾ ಆಕ್ಷಿಪ್ಯತೇ. ತತ್ರ ಹಿ ತೇನೋಭೌ ಕುರುತ ಇತ್ಯನಿಯಮದರ್ಶನಾತ್ ಪೃಥಕ್ಫಲತ್ವಮುಕ್ತಂ. ಉಪಾಸನಾಶ್ರಯಭೂತೋದ್ಗೀಥಾದಿವದುಪಾಸನಾನಾಮಪ್ಯಂಗತಯಾ ಉಪಾದಾನಾನಿಯಮೋ ಬಹವೋ ಹೇತವ ಉಪಲಭ್ಯಂತೇ. "ಉದ್ಗೀಥ

ಮುಪಾಸೀತ ” ಇತ್ಯುದ್ಗೀಥಾದಿಸಂಬಂಧಿತಯೈವೋಪಾಸನಂ ಪ್ರತಿಪಾದ್ಯತೇ. “ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ” ಇತಿ ವರ್ತಮಾನೋಪದೇಶರೂಪವಾಕ್ಯಾಂತರಾದ್ಧಿ ಫಲಸಂಬಂಧೋ ಜಾಯತೇ. ಸ್ವವಾಕ್ಯೇನೈವ ಅವ್ಯಭಿಚರಿತಕ್ರತುಸಂಬಂಧ್ಯುದ್ಗೀಥಾದಿಸಂಬಂಧೇನ ನಿಜ್ಞಾತಕ್ರತ್ವಂಗಭಾವಸ್ಯ ವಾಕ್ಯಾಂತರಸ್ಥವರ್ತಮಾನಫಲಸಂಬಂಧನಿರ್ದೇಶೋಽರ್ಥವಾದಮಾತ್ರಂ ಸ್ಯಾತ್. ತತೋ ಯದೋದ್ಗೀಥಾದಯ ಉಪಾಸನಾಶ್ರಯಾಃ ಕ್ರತ್ವಂಗತಯಾ ಪ್ರಯೋಗವಿಧಿನಾ ನಿಯಮೇನೋಪಾದೀಯಂತೇ ” “ ಉದ್ಗೀಥಮುಪಾಸೀತ ” ಇತ್ಯುದ್ಗೀಥಾಂಗತಯೋಪಾಸನ ವಿಧಾನಾಚ್ಚೋಪಾದಾನನಿಯಮಃ. “ಗೋದೋಹನೇನ ಪಶುಕಾಮಃ ಪ್ರಣಯೇತ್ ” ಇತ್ಯಾದಿವತ್ ವಿಧಿವಾಕ್ಯೇ ಅಧಿಕಾರಾಂತರಾ ಶ್ರವಣಾತ್ ಉದ್ಗೀಥಾದ್ಯಂಗಭಾವ ಏವ ಹಿ ವಿಧೇಯ ಇತಿ ಗಮ್ಯತೇ. ಹೋತೃವಸತಿ ಗೃಹಾದೇವ ದುರುದ್ಗೀಥಮನುಪಸಮಾಹರೇದಿತ್ಯುಪಾಸನಸ್ಯ ಸಮುಚ್ಚಯನಿಯಮೋ ದೃಶ್ಯತೇ. ಕಿಂಚೋಪಾಸನಗುಣಸ್ಯೋಪಾಸನಾಶ್ರಯಸ್ಯ ಪ್ರಣವಸ್ಯೋಪಾಸನಸ್ಯ ತೇನೇಯಂ ತ್ರಯೀ ವಿದ್ಯಾ ವರ್ತತೇ. “ಓಮಿತ್ಯಾಶ್ರಾವಯತಿ, ಓಮಿತಿ ಶಂಸತಿ, ಓಮಿತ್ಯುದ್ಗೀಥಯತಿ ” ಇತಿ ಶ್ರುತೇಶ್ಚ ಉಪಾಸನಾಸಮುಚ್ಚಯೋ ಗಮ್ಯತೇ. ತೇನೇತಿ ಪ್ರಕೃತಪರಾಮರ್ಶಾತ್ಸೋಪಾಸನ ಏವ ಪ್ರಣವಸ್ಸರ್ವತ್ರ ಸಂಚರತಿ. ಅತ ಉಪಾಸನಸ್ಯ ಪ್ರಣವಸಹಭಾವನಿಯಮಾದರ್ಶನಾಚ್ಚ ಉದ್ಗೀಥಾದ್ಯುಪಾಸನಾನಾಂ ಉದ್ಗೀಥಾದಿವನ್ನಿಯಮೇನೋಪಾದಾನಮಿತಿ ಪ್ರಾಪ್ತೇ ಬ್ರೂಮಃ, ನವಾ ತತ್ಸಹಭಾವಾಶ್ರುತೇಃ. ಪೂರ್ವಮೇವ ಪ್ರಣವಾತ್ಮಕತ್ವಂ ಪ್ರಣವಾತೀತತ್ವಂ ಶಿವಸ್ಯ ಪರಬ್ರಹ್ಮಣ ಏವ ಸ್ಪಷ್ಟಮುಪದಿಷ್ಟಂ. ನ ಚೈತದಸ್ತಿ ಯದುದ್ಗೀಥಾದ್ಯುಪಾಸನಾನಾಂ ಕ್ರತುಷೂದ್ಗೀಥಾದಿವದುಪಾಸನನಿಯಮ ಇತಿ. ಕುತಃ? ತತ್ಸಹಭಾವಾಶ್ರುತೇಃ ಉದ್ಗೀಥಾಂಗಭಾವಾಶ್ರುತೇರಿತ್ಯರ್ಥಃ. ಅಂಗಭಾವೇ ಹಿ ಸಹಭಾವನಿಯಮೋ ಭವತಿ. ಯದ್ಯಪಿ “ಉದ್ಗೀಥಮುಪಾಸೀತ ” ಇತ್ಯಸ್ಮಿನ್ ಪದಸಮುದಾಯೇ ಅಧಿಕಾರಾಂತರಂ ನ ಪ್ರತೀಯತೇ. ತಥಾಪಿ ತದನಂತರಮೇವ “ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ ಭವತಿ ” ಇತಿ ವಿದ್ಯಾಯಾಃ ಕ್ರತುವೀರ್ಯವತ್ತರತ್ವಂ ಪ್ರತಿ ಸಾಧನಭಾವಃ ಪ್ರತಿಪಾದ್ಯತೇ. ತೇನ ಕ್ರತುಫಲಾತ್ ಪೃಥಗ್ಭೂತಫಲಸಾಧನತಯಾವಗತಸ್ಯೋಪಾಸನಸ್ಯ ಕ್ರತ್ವಂಗಭೂತೋದ್ಗೀಥಾಂಗತಯಾ ವಿನಿಯೋಗೋಽನುಪಪದ್ಯತೇ. ಅತಃ ಉಪಾಸನಸ್ಯಾಶ್ರಯಾಪೇಕ್ಷಾಯಾಂ

ಸನ್ನಿಹಿತ ಉದ್ಗೀಥ ಆಶ್ರಯಮಾತ್ರಂ ಭವತಿ. ಉದ್ಗೀಥಶ್ಚ ಕ್ರತ್ವಂಗ ಭೂತ ಇತಿ ಕ್ರತುಪ್ರತ್ಯುಕ್ತ್ಯೋದ್ಗೀಥಾದ್ಯಾಶ್ರಯೋ ಉಪಾಸನೇ ಕ್ರತ್ವಧಿಕಾರಿಣ ಏವ ಕ್ರತೋರ್ವೀರ್ಯವತ್ತರತ್ವೇಚ್ಛಾನಿಮಿತ್ತಮಿದಂ ಅಧಿಕಾರಾಂತರಮಿತಿ ನ ಕ್ರತುಷು ತದುಪಾಸನನಿಯಮಃ. ವೀರ್ಯವತ್ತರತ್ವಂ ಚ ಕ್ರತುಫಲಸ್ಯ ಪ್ರಬಲಕರ್ಮಾಂತರಫಲೇನ ಅಪ್ರತಿಬಂಧಃ ಇತ್ಯುಕ್ತಂ. ಕ್ರತೋರವಿಲಂಬಿತಫಲತ್ವಮಿತ್ಯರ್ಥಃ. ಪರ್ಣತಾದೀನಾಂ ತು "ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ ಭವತಿ" ಇತಿ ವಿದ್ಯಾಯಾಃ ಫಲಸಾಧನತ್ವವದಪಾಪಶ್ಲೋಕಶ್ರವಣಾದಿಫಲಂ ಪ್ರತಿ ಸಾಕ್ಷಾತ್ಕಾರಸಾಧನಭಾವೋ ನ ಶ್ರುತ ಇತಿ ಪ್ರತ್ಯಂಗಭೂತಜುಹ್ವಾದ್ಯಂಗತಯಾ ವಿನಿಯೋಗಾತ್ ತದಂಗಭೂತಾನಾಂ ಫಲಾಂತರಸಾಧನಭಾವಕಲ್ಪನಾನುಪಪತ್ತೇಸ್ತತ್ರ ಫಲಶ್ರುತಿರರ್ಥವಾದಮಾತ್ರಂ ಸ್ಯಾದಿತಿ ನಿಶ್ಚೀಯತೇ.

ಶ್ವೇತಾಶ್ವತರದಲ್ಲಿ "ಈ ಉದ್ಗೀಥವೇ ಪರಬ್ರಹ್ಮವು. ಅದರಲ್ಲಿ ಮೂರು ಭಾಗಗಳಿವೆ. ಅದರ ಪರಸ್ಪರಭೇದವನ್ನು ಜ್ಞಾನಿಗಳು ತಿಳಿದು ಬ್ರಹ್ಮದಲ್ಲಿ ಲೀನರಾಗಿ ಸಂಸಾರದಿಂದ ಬಿಡುಗಡೆಯಾಗುತ್ತಾರೆ." ಎಂದೂ, ಛಾಂದೋಗ್ಯದಲ್ಲಿ "ಓಂಕಾರವೆಂಬ ಉದ್ಗೀಥವನ್ನು ಉಪಾಸನಮಾಡಬೇಕು." ಎಂದಾರಂಭಿಸಿ "ಶ್ರದ್ಧೆಯಿಂದಲೂ ನಿಷ್ಠೆಯಿಂದಲೂ ತಿಳಿದು ಮಾಡಿದ್ದೆಲ್ಲವೂ ವೀರ್ಯವತ್ತರವಾಗುವುದು" ಎಂದು ಪ್ರಣವವನ್ನೇ ಪರಮಾತ್ಮನೆಂದು ಸಾಧಿಸಿದ್ದರಿಂದ ಉದ್ಗೀಥವಿದ್ಯೆಯನ್ನು ಯಜ್ಞಕ್ಕೆ ಅಂಗವಾಗಿ ಯಜ್ಞದಲ್ಲಿಯೇ ನಿಯತವಾಗಿ ಉಪಯೋಗಿಸಬೇಕೆಂದು ತಿಳಿದುಬರುತ್ತದೆ. ಆದ್ದರಿಂದ ಉದ್ಗೀಥವಿದ್ಯೆಯು ಬ್ರಹ್ಮೋಪಾಸನೆಗೆ ಅನ್ವಯಿಸಲಾರದು. ಹೀಗೆ ಉದ್ಗೀಥವೇ ಮೊದಲಾದ ಅಂಗಗಳಿಂದೊಡಗೂಡಿದ ಉಪಾಸನಗಳನ್ನು ದಹರಾದಿ ವಿದ್ಯೆಗಳೊಡನೆ ಸೇರಿಸುವುದೇ ಯುಕ್ತವೆಂದಾಶಂಕಿಸಿ ಸಮಾಧಾನಮಾಡುತ್ತಾನೆ. ಉದ್ಗೀಥಾದ್ಯುಪಾಸನಗಳನ್ನು ದಹರಾದಿವಿದ್ಯೆಗಳಲ್ಲಿ ಸೇರಿಸಬೇಕೆಂದು ಶ್ರುತಿಯಲ್ಲಿ ಹೇಳಿಲ್ಲವಾದ್ದರಿಂದ ಅವು ಬ್ರಹ್ಮವಿದ್ಯೆಗಳೆನಿಸಲಾರವು. ಆದರೆ "ಶ್ರದ್ಧೆಯಿಂದ ಮಾಡಿದ್ದೆಲ್ಲವೂ ವೀರ್ಯವತ್ತರವಾಗುವುದು" ಎಂಬಲ್ಲಿ ಹೇಳಿರುವ ಅಂಗಾವಬದ್ಧೋಪಾಸನಗಳು ಯಜ್ಞಾದಿಕರ್ಮಗಳಿಗೆ ಅಂಗವಾಗುತ್ತವೆ ಎಂಬುದೇ ಯುಕ್ತವಾಗಿದೆ. ಆದರೆ "ತನ್ನಿರ್ಧಾರಣಾನಿಯಮಃ" ಎಂಬ ಸೂತ್ರದಲ್ಲಿ ಇವು ಕರ್ಮಕ್ಕೆ ಅಂಗವಾಗುವುವೆಂಬುದನ್ನು ನಿರಾಕರಿಸಿರುವುದರಿಂದ ಇವುಗಳಿಗಿಂತಲೂ ಮೊದಲುಮಾಡಬೇಕಾದ ಕರ್ಮಗಳನ್ನು ಆಚರಿಸಿದಮೇಲೆ ಸ್ವರ್ಗಾದಿಲೋಕಗಳನ್ನು ದೊರಕಿಸಲು ಪ್ರತಿಬಂಧಕವಾದ ಪಾಪವು ತೊಲಗಿ ಬೇಗನೆ ಫಲವು ಲಭಿಸುವುದು ಎಂಬ ಅರ್ಥವಷ್ಟೇ "ಯದೇವ ವಿದ್ಯಯಾ ಕರೋತಿ" ಎಂಬ ಶ್ರುತಿಯಿಂದ ತಿಳಿದುಬರುತ್ತದೆ. ಆದ್ದರಿಂದ ಅಂಗಾವಬದ್ಧೋಪಾಸನಗಳನ್ನೂ ಸಹ ದಹರಾದ್ಯುಪಾಸನಗಳಂತೆ ಒಟ್ಟಿಗೆ

ಸೇರಿಸುವುದು ಯುಕ್ತವಲ್ಲ. "ಓಂಕಾರವನ್ನು ಉಪಾಸನಮಾಡಬೇಕು" ಎಂದು ಮುಂತಾಗಿ ಹೇಳಿರುವ ಉಪಾಸನೆಗಳನ್ನು ಉದ್ಗೀಥಾದ್ಯುಪಾಸನೆಗಳಂತೆ ಯಜ್ಞಕ್ಕಾಗಿ ಯಜ್ಞಗಳಲ್ಲಿಯೇ ನಿಯತವಾಗಿ ಉಪಯೋಗಿಸಬೇಕೆ? ಅಥವಾ ಯಜ್ಞದಲ್ಲಿ ಅರ್ಪಿಸಲಿಕ್ಕಾಗಿ ಹಸುವಿನ ಹಾಲನ್ನು ಹಿಂಡುವಂತೆ ಯಜಮಾನನ ಅಧಿಕಾರ ಸಿದ್ಧಿಗಾಗಿ ಉಪಯೋಗಿಸಬೇಕೆ? ಎಂದು ಸಂದೇಹ ಬರುತ್ತದೆ. ಯಜ್ಞದ ಅಂಗವಾಗಿ ಯಜ್ಞದಲ್ಲಿಯೇ ನಿಯತವಾಗಿ ಅವನ್ನು ಉಪಯೋಗಿಸಬೇಕೆಂದು ಆಕ್ಷೇಪ ಬರುತ್ತದೆ. ಈ ಉಪಾಸನಗಳನ್ನು ಯಜಮಾನನ ಅಧಿಕಾರಸಿದ್ಧಿಗಾಗಿ ಉಪಯೋಗಿಸಬೇಕೆಂಬ ನಿಯಮವಿಲ್ಲವೆಂಬುದನ್ನು "ತನ್ನಿರ್ಧಾರಣಾನಿಯಮಃ" ಎಂಬ ಕಡೆಯಲ್ಲಿ ಸಿದ್ಧಾಂತ ಮಾಡಿದ್ದರೂ ಮತ್ತೆ ಕೆಲವು ಯುಕ್ತಿಗಳಿಂದ ಅದನ್ನೇ ಆಕ್ಷೇಪಿಸಿ ಸಿದ್ಧಾಂತಮಾಡಲಿಕ್ಕಾಗಿ ಈ ಅಧಿಕರಣವು ಹೊರಟಿದೆ. ಹಿಂದಿನ ಸೂತ್ರದಲ್ಲಿ ಉಪಾಸನೆಗೆ ನಿಯಮವಿಲ್ಲವೆಂದು ಹೇಳಿ ಫಲಭೇದವನ್ನು ತಿಳಿಸಿಯಾಯಿತು. ಆದರೆ ಉಪಾಸನೆಗೆ ವಿಷಯವಾದ ಉದ್ಗೀಥಾದಿಗಳಂತೆ ಉಪಾಸನೆಗಳನ್ನೂ ಸಹ ಯಜ್ಞದ ಅಂಗವಾಗಿ ನಿಯತವಾಗಿ ಉಪಯೋಗಿಸಬೇಕೆಂದು ಹೇಳಿರುವುದರಲ್ಲಿ ಅನೇಕ ಯುಕ್ತಿಗಳು ಕಂಡುಬರುತ್ತವೆ. "ಉದ್ಗೀಥವನ್ನು ಉಪಾಸನಮಾಡಬೇಕು" ಎಂಬಕಡೆ ಉದ್ಗೀಥದ ಸಂಬಂಧವೇ ಉಪಾಸನದಲ್ಲಿ ತೋರುವುದೇ ಹೊರತು ಕರ್ಮದ ಸಂಬಂಧವು ತೋರುವುದಿಲ್ಲ. ವಸ್ತುಸ್ಥಿತಿ ಹೀಗಿರುವಾಗ "ಯದೇವ ವಿದ್ಯಯಾ ಕರೋತಿ" ಎಂಬ ವಾಕ್ಯವನ್ನು ಕೇವಲ ಅರ್ಥವಾದವೆಂದೇ ಹೇಳಬೇಕು. ಆದ್ದರಿಂದ ಈ ಉದ್ಗೀಥಾದ್ಯುಪಾಸನೆಗಳನ್ನು ಯಜ್ಞಾಂಗವೆಂದು ನಿಯಮದಿಂದ ಸ್ವೀಕರಿಸಬೇಕು. "ಉದ್ಗೀಥವನ್ನು ಉಪಾಸನಮಾಡಬೇಕು" ಎಂಬ ಕಡೆಯಲ್ಲಿ ವಿಧಿ ಇರುವುದರಿಂದ ಉಪಾಸನದ ನಿಯಮವು ತೋರುತ್ತದೆ. ಗೋದೋಹನವನ್ನು ವಿಧಿಸುವ ವಾಕ್ಯದಲ್ಲಂತೂ ಪಶುಕಾಮನೆಂಬ ಶಬ್ದವಿರುವುದರಿಂದ ಅಧಿಕಾರಿವಿಶೇಷನೊಬ್ಬನು ತೋರುತ್ತಾನೆ. ಆದ್ದರಿಂದ ಅಲ್ಲಿ ಪಶುವಿನ ಬಯಕೆ ಇದ್ದರೆ ಗೋದೋಹನವನ್ನು ನಡೆಸಬೇಕು, ಇಲ್ಲವಾದರೆ ಅದನ್ನು ಬಿಡಬಹುದು ಎಂಬ ಅನಿಯಮವು ಅಲ್ಲಿ ಯುಕ್ತವಾಗುತ್ತದೆ. "ಹೋತೃವಿನ ವಸತಿಗೃಹದಿಂದಲೇ ಉದ್ಗೀಥಮಂತ್ರಕ್ಕೆ ವ್ಯತಿರಿಕ್ತವಾದದ್ದನ್ನು ಹೇಳಬಾರದು" ಎಂದು ನಿಷೇಧಿಸಿರುವುದರಿಂದ ಈ ಉದ್ಗೀಥೋಪಾಸನಕ್ಕೆ ಸಮುಚ್ಚಯನಿಯಮವಿರುವುದಾಗಿ ಕಂಡುಬರುತ್ತದೆ. ಇದೂಅಲ್ಲದೆ, ಉಪಾಸನದಲ್ಲಿ ವಿಷಯವಾಗಿರುವ ಗುಣ, ಅದಕ್ಕಾಶ್ರಯವಾದ ಪ್ರಣವ, ಉಪಾಸನ ಈ ಮೂರನ್ನೂ ಸೇರಿಸಿ "ಇಯಂ ತ್ರಯೀ ವಿದ್ಯಾ" ಎಂಬ ಶ್ರುತಿಯು ಸಮುಚ್ಚಯವನ್ನು ಹೇಳುತ್ತದೆ. ಅಲ್ಲಿ "ತೇನ" ಎಂಬ ಶಬ್ದವು ಪ್ರಕೃತವಾದ ಉಪಾಸನಾದಿಗಳನ್ನು ತಿಳಿಸುತ್ತದೆ. ಉಪಾಸನಕ್ಕೆ ಪ್ರಣವದ ಸಂಬಂಧವು ನಿಯತವಾಗಿರುತ್ತದೆ. ಆದ್ದರಿಂದ ಈ ಉದ್ಗೀಥಾದ್ಯುಪಾಸನಗಳನ್ನು ಒಂದು ನಿಯಮದಿಂದ ಸ್ವೀಕರಿಸುವುದೇ ಯುಕ್ತವೆಂದು ಆಕ್ಷೇಪ ಬಂದರೆ ಸೂತ್ರದಲ್ಲಿ ಸಿದ್ಧಾಂತಮಾಡಲಾಗಿದೆ. ಪರಮಶಿವನು ಪ್ರಣವಾತ್ಮಕನೂ ಪ್ರಣವಾ

ತೀತನೂ ಆಗಿರುವನೆಂಬ ಅಂಶವನ್ನು ಹಿಂದೆಯೇ ಹೇಳಿದೆ. ಆದ್ದರಿಂದ ಪ್ರಣವದಂತೆ ಪ್ರಣವೋಪಾಸನೆಗಳಿಗೆ ನಿಯಮವನ್ನು ಒಪ್ಪಬೇಕಾಗಿಲ್ಲ. ಉಪಾಸನೆಯ ಜೊತೆಯಲ್ಲಿ ಉದ್ಗೀಥೋಪಾಸನವು ನಿಯತವಾಗಿ ಎಲ್ಲಾಕಡೆಯಲ್ಲೂ ವಿಹಿತವಾಗಿಲ್ಲ. ಅದು ಅಂಗವಾಗಿದ್ದಿದ್ದರೆ ಅದನ್ನು ಎಲ್ಲಾಕಡೆಯೂ ವಿಧಿಸಬೇಕಾಗಿತ್ತು. "ಉದ್ಗೀಥವನ್ನು ಉಪಾಸನಮಾಡು" ಎಂದು ಸಾಮಾನ್ಯವಾಗಿ ವಿಧಿಸಿದ್ದರೂ ಅನಂತರದಲ್ಲಿಯೇ ಯಜ್ಞವು ಬೇಗನೆ ಫಲಿಸಲೆಂದು "ಯದೇವ ವಿದ್ಯಯಾ" ಎಂಬ ಶ್ರುತಿಯಲ್ಲಿ ತಿಳಿಸಿರುವುದರಿಂದ ಇದು ಯಜ್ಞದ ಅಂಗವೇ ಹೊರತು ಉಪಾಸನದ ಅಂಗವಲ್ಲ. ಕ್ರತುವಿನ ಫಲವೂ ಉಪಾಸನದ ಫಲವೂ ಬೇರೆಯಾದ್ದರಿಂದ ಉದ್ಗೀಥವು ಉಪಾಸನದ ಅಂಗವಾಗಲಾರದು. ಆದ್ದರಿಂದ ಉದ್ಗೀಥೋಪಾಸನೆಯು ಯಜ್ಞದ ಅಂಗವೇ ಆಗಿದೆ. ಯಜ್ಞದ ಕರ್ತನೇ ಇದಕ್ಕೂ ಅಧಿಕಾರಿಯಾಗಿರುವನು. ಇದರಿಂದ ಅವನ ಕರ್ಮವು ಶೀಘ್ರವಾಗಿ ಫಲಿಸುವುದೆಂದು ಅಪೇಕ್ಷಿಸುವವನು ಅದನ್ನು ಮಾಡಬಹುದು, ಇಲ್ಲವಾದರೆ ಬಿಡಬಹುದು. ಆದ್ದರಿಂದ ಇಲ್ಲಿ ಅದನ್ನು ನಡೆಸಲೇಬೇಕೆಂಬ ನಿಯಮವಿಲ್ಲ. ವೀರ್ಯವತ್ತರವೆಂದರೆ ಕರ್ಮದ ಫಲಕ್ಕೆ ಬೇರೆ ಪ್ರಬಲ ಕರ್ಮದಿಂದ ತಡೆಯಾಗದಿರಲೆಂಬುದೇ ಅರ್ಥವೆಂದು ಹಿಂದೆಯೇ ಹೇಳಿದೆ. ಕೆಟ್ಟಮಾತನ್ನು ಕೇಳಬಾರದೆಂದು ಇಚ್ಛಿಸುವವನು ಪರ್ಣಮಯವಾದ ಯಜ್ಞಪಾತ್ರೆಯನ್ನು ಉಪಯೋಗಿಸುವಂತೆ ಕರ್ಮವು ಬಲವತ್ತರವಾಗಲೆಂದು ಇಚ್ಛಿಸುವವನು ಈ ಉದ್ಗೀಥೋಪಾಸನೆಯನ್ನು ಮಾಡಬೇಕೆಂದು ಕ್ರತುವಿನ ಫಲವೇ ಈ ಉದ್ಗೀಥೋಪಾಸನೆಗೂ ಫಲವಾಗುವುದರಿಂದ ಇದಕ್ಕೆ ಬೇರೆ ಫಲವುಂಟೆಂದು ಹೇಳಿದರೆ ಅದು ಅರ್ಥವಾದವೆಂಬಷ್ಟರಲ್ಲಿಯೇ ವಿಶ್ರಾಂತವಾಗುವುದು. ಆದ್ದರಿಂದ ಈ ಉಪಾಸನೆಗೆ ನಿಯಮವಿಲ್ಲ.

ಅಸ್ಮಿನ್ನರ್ಥೇ ಹೇತ್ವಂತರಮಾಹ. ದರ್ಶನಾಚ್ಚ ‖ ೬೪ ‖ ದರ್ಶಯತಿ ಚ ಶ್ರುತಿರುಪಾಸನೋಪಾದಾನಾನಿಯಮಂ. "ಏವಂವಿದಿ ವೈ ಬ್ರಹ್ಮಯಜ್ಞಂ ಯಜಮಾನಂ ಸರ್ವಾಂಶ್ಚರ್ತ್ವಿಜೋಽಭಿರಕ್ಷತಿ ‖" ಇತಿ ಬ್ರಹ್ಮಣೋ ವೇದನೇನ ಸರ್ವೇಷಾಂ ರಕ್ಷಣಂ ಬ್ರವೀತಿ. ಉದ್ಗೀಥತ್ವಪ್ರಭೃತೀನಾಂ ವೇದನಸ್ಯಾನಿಯಮೋ ಸತ್ಯೇತದುಪಪದ್ಯತೇ. ಅನೇನ ಲಿಂಗೇನ ಪೂರ್ವೋಕ್ತಾನಾಂ ಸಮುಚ್ಚಯಾದಿಧರ್ಮಾಣಾಂ ಪ್ರಾಯಿಕತ್ವಮೇವ ಗಮ್ಯತೇ. ತಸ್ಮಾದನಿಯಮ ಏವೇತಿ ಸ್ಥಿತಂ. ಕಿಂಚ ಪೂರ್ವಸೂತ್ರೇ ಪೂರ್ವಪಕ್ಷಯುಕ್ತಿರ್ನಿರಾಕೃತಾ. ಅತ್ರ ಲಿಂಗಾನಿ ಪ್ರತಿವಕ್ಷ್ಯಂತೇ. ಅನಿಯಮಸ್ಯ ಪ್ರದರ್ಶನತ್ವಂ ಉದ್ಗೀಥೇ ದೃಷ್ಟಂ. ಯಜಮಾನಂ ಸರ್ವಾಂಶ್ಚರ್ತ್ವಿಜೋ ರಕ್ಷತೀತ್ಯತ್ರ ಯಜಮಾನಸಂರಕ್ಷಣಂ ಕ್ರತುಫಲಾಪ್ರತಿಬಂಧಕಾರಣಾದಿಭಿರಿತಿ ಮಂತವ್ಯಂ. ಉದ್ಗಾತೃಪ್ರಭೃತಿವೇದನಫಲಂ ಹಿ ಕ್ರತುಫಲಾಪ್ರತಿಬಂಧಾದಿ. ತಸ್ಯ ಬ್ರಹ್ಮಾಖ್ಯಋತ್ವಿಗ್ವೇದನೇನ ಸಿದ್ಧೌ ಸತ್ಯಾಂ ಹಿ ಉದ್ಗಾತೃಪ್ರಭೃತಿವೇದ

ನಾನಿಯಮಸಿದ್ಧಿರರ್ಥಾದವಗಮ್ಯತೇ. ನಚ ಅಂಗಾವಬದ್ಧೋಪಾಸನಾನಾಂ ಕರ್ಮಾಂಗತ್ವಾಭಾವೇ ಫಲಪ್ರತಿಬಂಧಕಂ ಪಾಪರಹಿತಾನಾಂ ಪುರುಷಾಣಾಂ ಅಂಗಾವಬದ್ಧೋಪಾಸನಾನುಷ್ಠಾನವೈಯರ್ಥ್ಯಂ ಸ್ಯಾದಿತಿ ವಾಚ್ಯಂ. ಅಂಗಾವಬದ್ಧೋಪಾಸನಾಸಹಕೃತಕರ್ಮಾನುಷ್ಠಾನವತಾಂ ಬಹುಕಾಲಸ್ವರ್ಗಭೋಗಸ್ಯ ಪ್ರಧಾನವದೇವ ತದುಕ್ತಮಿತಿ ರಾದ್ಧಾಂತಃ.

ಇತಿ ಶ್ರೀಪತಿಪಂಡಿತಭಗವತ್ಪಾದಾಚಾರ್ಯಸ್ವಾಮಿಕೃತೇ
ಬ್ರಹ್ಮಮೀಮಾಂಸಾಸೂತ್ರಾರ್ಥಪ್ರಕಾಶಕೇ ಶ್ರೀಕರಭಾಷ್ಯೇ ಸಾಧನಾ
ಧ್ಯಾಯಸಂಜ್ಞಿಕ ತೃತೀಯಾಧ್ಯಾಯೇ ತೃತೀಯಃ ಪಾದಃ ಪರಿಸಮಾಪ್ತಃ

---

ಈ ಬಗ್ಗೆ ಬೇರೊಂದು ಹೇತುವನ್ನು ಹೇಳುತ್ತಾನೆ. ಈಬಗೆಯ ನಿಯಮವಿಲ್ಲವೆಂದು ಶ್ರುತಿಯೇ ತಿಳಿಸುತ್ತದೆ. “ಈ ರೀತಿಯಲ್ಲಿ ಅರಿತ ಯಜಮಾನನನ್ನೂ ಯಜ್ಞವನ್ನೂ ಎಲ್ಲಾ ಋತ್ವಿಜರನ್ನೂ ಬ್ರಹ್ಮವು ಕಾಪಾಡುತ್ತದೆ” ಎಂದು ಬ್ರಹ್ಮಜ್ಞಾನದಿಂದ ಎಲ್ಲರ ರಕ್ಷಣವನ್ನು ಶ್ರುತಿಯಲ್ಲಿ ಹೇಳಲಾಗಿದೆ. ಇದರಿಂದ ಉದ್ಗೀಥಾದ್ಯುಪಾಸನೆಗೆ ಪ್ರತಿಯೊಂದು ಉಪಾಸನದಲ್ಲೂ ಅನ್ವಯವುಂಟೆಂದು ಹೇಳಲಿಕ್ಕಾಗುವುದಿಲ್ಲ. ಆದ್ದರಿಂದ ಉದ್ಗೀಥೋಪಾಸನಕ್ಕೆ ಯಾವ ನಿಯಮವೂ ಇಲ್ಲವೆಂಬುದನ್ನು ನಿರ್ಣಯಿಸಲಾಗಿದೆ. ಪೂರ್ವಪಕ್ಷದ ಯುಕ್ತಿಯನ್ನು ಹಿಂದಿನ ಸೂತ್ರದಲ್ಲಿ ನಿರಾಕರಿಸಲಾಗಿತ್ತು. ಈಗ ಅದರ ಅಂಗವನ್ನು ಇಲ್ಲಿ ನಿರಾಕರಿಸಲಾಗುವುದು. ಈ ಉಪಾಸನೆಗೆ ನಿಯಮವಿಲ್ಲವೆಂಬುದಕ್ಕೆ ಉಧ್ಗೀಥವೇ ದೃಷ್ಟಾಂತವಾಗಿದೆ. “ಯಜಮಾನನನ್ನೂ ಋತ್ವಿಜರನ್ನೂ ಬ್ರಹ್ಮವು ರಕ್ಷಿಸುತ್ತದೆ” ಎಂದು ಹೇಳುವಕಡೆಯಲ್ಲೂ ಯಜಮಾನನ ರಕ್ಷಣೆ ಎಂದರೆ ಆ ಬಗೆಯ ರಕ್ಷಣೆಗೆ ಬರುವ ಪ್ರತಿಬಂಧಕಗಳನ್ನು ಪರಿಹರಿಸಬೇಕೆಂಬುದೇ ಆಗಿದೆ. ಉದ್ಗಾತೃ ಅಧ್ವರ್ಯು ಮೊದಲಾದವರಿಗೆ ಆ ಜ್ಞಾನದ ಫಲವು ಯಜ್ಞದ ಫಲದಲ್ಲಿ ಯಾವತಡೆಯೂ ಇಲ್ಲದಿರುವುದೇ ಆಗಿದೆ. ಈ ಫಲವು ಬ್ರಹ್ಮನೆನಿಸಿದ ಋತ್ವಿಕ್ಕಿನ ಜ್ಞಾನದಿಂದಲೇ ಸಿದ್ಧಿಸುವುದಾದರೆ ಉದ್ಗಾತೃ ಮೊದಲಾದವರ ಜ್ಞಾನಕ್ಕೆ ನಿಯಮವಿಲ್ಲವೆಂಬುದು ಸಿದ್ಧವಾಗುತ್ತದೆ. ಈ ಅಂಗಾವಬದ್ಧವಾದ ಉದ್ಗೀಥಾದ್ಯುಪಾಸನಗಳು ನಿಯತವಾಗಿ ಕರ್ಮದ ಅಂಗವಲ್ಲವೆಂದು ಹೇಳುವುದಾದರೆ ಯಾರಿಗೆ ಸ್ವತಃ ಫಲಕ್ಕೆ ಪ್ರತಿಬಂಧಕವಾದ ಪಾಪವಿಲ್ಲವೋ ಅವರು ಮಾಡಿದ ಈ ಉಪಾಸನಗಳು ವ್ಯರ್ಥವಾಗುವುದಿಲ್ಲವೇ ? ಎಂದು ಕೇಳಿದರೆ ಅವರಿಗೂ ಸಹ ಅದಕ್ಕೆ ತಕ್ಕಹಾಗೆ ಬಹುಕಾಲ ಸ್ವರ್ಗವನ್ನು ಫಲವಾಗಿ ಅನುಭವಿಸಬೇಕೆಂದು “ಪ್ರಧಾನವದೇವ ತದುಕ್ತಂ” ಎಂಬ ಸೂತ್ರದಲ್ಲಿ ತಿಳಿಸಲಾಗಿದೆ. ಆದ್ದರಿಂದ ಉಧ್ಗೀಥಾದ್ಯುಪಾಸನಗಳಿಗೆ ನಿಯತವಾಗಿ ಅನುಷ್ಠಾನವಿಲ್ಲವೆಂಬುದೇ ಸಿದ್ಧಾಂತವೆನಿಸಿದೆ.

# ತೃತೀಯಾಧ್ಯಾಯಸ್ಯ ಚತುರ್ಥಃ ಪಾದಃ

ಪೂರ್ವತ್ರ ಕಾಸಾಂಚಿದುಪಾಸನಾನಾಂ ಪರಂಪರಯಾ ಮುಕ್ತಿಹೇತುತ್ವಂ. ಕಾಸಾಂಚಿತ್ ಸಾಕ್ಷಾನ್ಮುಕ್ತಿಹೇತುತ್ವಮುಕ್ತಂ. ಇಹ ತು ಕಾಲಾಂತರಭಾವಿಪಾರಲೌಕಿಕಸ್ವರ್ಗಾದಿಫಲಭೋಗಯೋಗ್ಯಸ್ಯ ಶರೀರೇಂದ್ರಿಯಾದಿವಿಶಿಷ್ಟಸ್ಯ ಜೀವಸ್ಯ ತನ್ನಿಯಾಮಕಶಿವಜ್ಞಾನಂ ವಿನೈವ ಲೋಕಾಂತರಕಾಲಾಂತರಭಾವಿಸ್ವರ್ಗಾದಿಫಲಭೋಗಸಾಧನೇಷು ಬಹುವಿತ್ತವ್ಯವಸಾಯಸಾಧ್ಯೇಷು ಕರ್ಮಸು ಪ್ರೇಕ್ಷಾವತಾಂ ಪ್ರವೃತ್ತ್ಯಸಂಭವಾತ್ ಶಿವಜ್ಞಾನಸ್ಯ ಜ್ಯೋತಿಷ್ಟೋಮಾದಿಸರ್ವಕರ್ಮಾನುಷ್ಠಾನಾಂಗತ್ವಂ ವಕ್ತವ್ಯಂ. ತಥಾಚ ಅಂಗಾಂಗಿನೋರೇಕಫಲಸಾಧನತ್ವಾತ್ ಅಂಗಾನಾಂ ಕರ್ಮಣಾಂ ಯತ್ಫಲಂ ಸ್ವರ್ಗಾದಿಕಂ ತದೇವಾಂಗಿನಃ ಚಿದಚಿತ್ಪ್ರಪಂಚವಿಲಕ್ಷಣಶಿವಜ್ಞಾನಸ್ಯೇತಿ ಸ್ವಾತಂತ್ರ್ಯೇಣ ಮೋಕ್ಷೈಕಲಕ್ಷಣಫಲಾಂತರಸಾಧನತ್ವಾಸಂಭವಾತ್ ಸರ್ವವೇದಾಂತವಿದ್ಯಾರಂಭೋ ವ್ಯರ್ಥ ಇತಿ ಪೂರ್ವಮೀಮಾಂಸಾಶಂಕಾಮಾಶಂಕ್ಯ ತನ್ನಿರಾಕರಣಾರ್ಥಮಿದಮಧಿಕರಣಮಾಹ. ಪುರುಷಾರ್ಥಾಧಿಕರಣಂ ||೧|| ಪುರುಷಾರ್ಥೋಽತಶ್ಶಬ್ದಾದಿತಿ ಬಾದರಾಯಣಃ ||೧|| ಅತಃ ಯಾಗಾನುಗುಣ್ಯಾದಹರಾದ್ಯುಪಾಸನಾಪೂರ್ವಕಸದಾಶಿವಬ್ರಹ್ಮಸಾಕ್ಷಾತ್ಕಾರಾತ್ ಪುರುಷಾರ್ಥಃ ಪುನರಾವೃತ್ತಿರಹಿತನಿತ್ಯನಿರತಿಶಯಸ್ವಾಭಾವಿಕಜೀವತ್ವನಿವೃತ್ತಿಪೂರ್ವಕಶಿವತ್ವಪ್ರಾಪ್ತಿಲಕ್ಷಣಲಕ್ಷಿತಮುಕ್ತಿರಸ್ತಿ ಇತಿ ಬಾದರಾಯಣೋ ಮನ್ಯತೇ. ಕುತಃ ಶಬ್ದಾತ್. "ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ" ಇತ್ಯಾದಿಶ್ರುತಿದರ್ಶನಾತ್ ಮುಮುಕ್ಷೂಣಾಂ ನಿಖಿಲಕರ್ಮೋಪಾಸನಾಪಂಕಕಳಂಕಶೂನ್ಯತಯಾ ನಿರಂತರಂ ಪರಶಿವಬ್ರಹ್ಮಾನುಸಂಧಾನಂ ಕರ್ತವ್ಯಮಿತಿ ಸೂತ್ರಸೂಚಿತಸೂಕ್ಷ್ಮಾರ್ಥಃ. "ಶಿಕ್ಷಾಂ ವ್ಯಾಖ್ಯಾಸ್ಯಾಮಃ, ವರ್ಣಃ ಸ್ವರಃ, ಮಾತ್ರಾ ಬಲಂ, ಸಾಮ ಸಂತಾನಃ. ಇತ್ಯುಕ್ತಶ್ಶಿಕ್ಷಾಧ್ಯಾಯಃ. ಸಹ ನೌ ಯಶಃ. ಸಹ ನೌ ಬ್ರಹ್ಮವರ್ಚಸಂ. ಅಥಾತಸ್ಸಂಹಿತಾಯಾಮುಪನಿಷದಂ ವ್ಯಾಖ್ಯಾಸ್ಯಾಮಃ" ಇತ್ಯಾದಿನಾ ತೈತ್ತಿರೀಯೇ ಶ್ರೂಯತೇ. "ಯಜ್ಞೇನ ದಾನೇನ ತಪಸಾಽನಾಶಕೇನ" ಇತ್ಯಾದಿಶ್ರುತಿಷು ಯಜ್ಞಾದಿಕರ್ಮಣಾಂ ಮೋಕ್ಷಾಂಗತ್ವಶ್ರವಣಾತ್ "ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್ ನಾಸ್ತ್ಯಕೃತಃ ಕೃತೇನ । ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ" ಇತ್ಯಾದೌ ಕರ್ಮಣೋ ಮೋಕ್ಷಾಂಗತ್ವನಿಷೇಧಾತ್, ತೈತ್ತಿರೀಯೇ ಕರ್ಮಜ್ಞಾನೋಭಯತುಲ್ಯಪ್ರಾಚುರ್ಯಾವಗಮಾತ್

ನಾನಿಯಮಸಿದ್ಧಿರರ್ಥಾದವಗಮ್ಯತೇ. ನಚ ಅಂಗಾವಬದ್ಧೋಪಾಸನಾನಾಂ ಕರ್ಮಾಂಗತ್ವಾಭಾವೇ ಫಲಪ್ರತಿಬಂಧಕಂ ಪಾಪರಹಿತಾನಾಂ ಪುರುಷಾಣಾಂ ಅಂಗಾವಬದ್ಧೋಪಾಸನಾನುಷ್ಠಾನವೈಯರ್ಥ್ಯಂ ಸ್ಯಾದಿತಿ ವಾಚ್ಯಂ. ಅಂಗಾವಬದ್ಧೋಪಾಸನಾಸಹಕೃತಕರ್ಮಾನುಷ್ಠಾನವತಾಂ ಬಹುಕಾಲಸ್ವರ್ಗಭೋಗಸ್ಯ ಪ್ರಧಾನವದೇವ ತದುಕ್ತಮಿತಿ ರಾದ್ಧಾಂತಃ.

ಇತಿ ಶ್ರೀಪತಿಪಂಡಿತಭಗವತ್ಪಾದಾಚಾರ್ಯಸ್ವಾಮಿಕೃತೇ ಬ್ರಹ್ಮಮೀಮಾಂಸಾಸೂತ್ರಾರ್ಥಪ್ರಕಾಶಕೇ ಶ್ರೀಕರಭಾಷ್ಯೇ ಸಾಧನಾಧ್ಯಾಯಸಂಜ್ಞಿಕ ತೃತೀಯಾಧ್ಯಾಯೇ ತೃತೀಯಃ ಪಾದಃ ಪರಿಸಮಾಪ್ತಃ

---

ಈ ಬಗ್ಗೆ ಬೇರೊಂದು ಹೇತುವನ್ನು ಹೇಳುತ್ತಾನೆ. ಈಬಗೆಯ ನಿಯಮವಿಲ್ಲವೆಂದು ಶ್ರುತಿಯೇ ತಿಳಿಸುತ್ತದೆ. “ಈ ರೀತಿಯಲ್ಲಿ ಅರಿತ ಯಜಮಾನನನ್ನೂ ಯಜ್ಞವನ್ನೂ ಎಲ್ಲಾ ಋತ್ವಿಜರನ್ನೂ ಬ್ರಹ್ಮವು ಕಾಪಾಡುತ್ತದೆ” ಎಂದು ಬ್ರಹ್ಮಜ್ಞಾನದಿಂದ ಎಲ್ಲರ ರಕ್ಷಣವನ್ನು ಶ್ರುತಿಯಲ್ಲಿ ಹೇಳಲಾಗಿದೆ. ಇದರಿಂದ ಉದ್ಗೀಥಾದ್ಯುಪಾಸನೆಗೆ ಪ್ರತಿಯೊಂದು ಉಪಾಸನದಲ್ಲೂ ಅನ್ವಯವುಂಟೆಂದು ಹೇಳಲಿಕ್ಕಾಗುವುದಿಲ್ಲ. ಆದ್ದರಿಂದ ಉದ್ಗೀಥೋಪಾಸನಕ್ಕೆ ಯಾವ ನಿಯಮವೂ ಇಲ್ಲವೆಂಬುದನ್ನು ನಿರ್ಣಯಿಸಲಾಗಿದೆ. ಪೂರ್ವಪಕ್ಷದ ಯುಕ್ತಿಯನ್ನು ಹಿಂದಿನ ಸೂತ್ರದಲ್ಲಿ ನಿರಾಕರಿಸಲಾಗಿತ್ತು. ಈಗ ಅದರ ಅಂಗವನ್ನು ಇಲ್ಲಿ ನಿರಾಕರಿಸಲಾಗುವುದು. ಈ ಉಪಾಸನೆಗೆ ನಿಯಮವಿಲ್ಲವೆಂಬುದಕ್ಕೆ ಉಧ್ಗೀಥವೇ ದೃಷ್ಟಾಂತವಾಗಿದೆ. “ಯಜಮಾನನನ್ನೂ ಋತ್ವಿಜರನ್ನೂ ಬ್ರಹ್ಮವು ರಕ್ಷಿಸುತ್ತದೆ” ಎಂದು ಹೇಳುವಕಡೆಯಲ್ಲೂ ಯಜಮಾನನ ರಕ್ಷಣೆ ಎಂದರೆ ಆ ಬಗೆಯ ರಕ್ಷಣೆಗೆ ಬರುವ ಪ್ರತಿಬಂಧಕಗಳನ್ನು ಪರಿಹರಿಸಬೇಕೆಂಬುದೇ ಆಗಿದೆ. ಉದ್ಗಾತೃ ಅಧ್ವರ್ಯು ಮೊದಲಾದವರಿಗೆ ಆ ಜ್ಞಾನದ ಫಲವು ಯಜ್ಞದ ಫಲದಲ್ಲಿ ಯಾವತಡೆಯೂ ಇಲ್ಲದಿರುವುದೇ ಆಗಿದೆ. ಈ ಫಲವು ಬ್ರಹ್ಮನೆನಿಸಿದ ಋತ್ವಿಕ್ಕಿನ ಜ್ಞಾನದಿಂದಲೇ ಸಿದ್ಧಿಸುವುದಾದರೆ ಉದ್ಗಾತೃ ಮೊದಲಾದವರ ಜ್ಞಾನಕ್ಕೆ ನಿಯಮವಿಲ್ಲವೆಂಬುದು ಸಿದ್ಧವಾಗುತ್ತದೆ. ಈ ಅಂಗಾವಬದ್ಧವಾದ ಉದ್ಗೀಥಾದ್ಯುಪಾಸನಗಳು ನಿಯತವಾಗಿ ಕರ್ಮದ ಅಂಗವಲ್ಲವೆಂದು ಹೇಳುವುದಾದರೆ ಯಾರಿಗೆ ಸ್ವತಃ ಫಲಕ್ಕೆ ಪ್ರತಿಬಂಧಕವಾದ ಪಾಪವಿಲ್ಲವೋ ಅವರು ಮಾಡಿದ ಈ ಉಪಾಸನಗಳು ವ್ಯರ್ಥವಾಗುವುದಿಲ್ಲವೇ? ಎಂದು ಕೇಳಿದರೆ ಅವರಿಗೂ ಸಹ ಅದಕ್ಕೆ ತಕ್ಕಹಾಗೆ ಬಹುಕಾಲ ಸ್ವರ್ಗವನ್ನು ಫಲವಾಗಿ ಅನುಭವಿಸಬೇಕೆಂದು “ಪ್ರಧಾನವದೇವ ತದುಕ್ತಂ” ಎಂಬ ಸೂತ್ರದಲ್ಲಿ ತಿಳಿಸಲಾಗಿದೆ. ಆದ್ದರಿಂದ ಉಧ್ಗೀಥಾದ್ಯುಪಾಸನಗಳಿಗೆ ನಿಯತವಾಗಿ ಅನುಷ್ಠಾನವಿಲ್ಲವೆಂಬುದೇ ಸಿದ್ಧಾಂತವೆನಿಸಿದೆ.

# ತೃತೀಯಾಧ್ಯಾಯಸ್ಯ ಚತುರ್ಥಃ ಪಾದಃ

ಪೂರ್ವತ್ರ ಕಾಸಾಂಚಿದುಪಾಸನಾನಾಂ ಪರಂಪರಯಾ ಮುಕ್ತಿಹೇತುತ್ವಂ. ಕಾಸಾಂಚಿತ್ ಸಾಕ್ಷಾನ್ಮುಕ್ತಿಹೇತುತ್ವಮುಕ್ತಂ. ಇಹ ತು ಕಾಲಾಂತರಭಾವಿಪಾರಲೌಕಿಕಸ್ವರ್ಗಾದಿಫಲಭೋಗಯೋಗ್ಯಸ್ಯ ಶರೀರೇಂದ್ರಿಯಾದಿವಿಶಿಷ್ಟಸ್ಯ ಜೀವಸ್ಯ ತನ್ನಿಯಾಮಕಶಿವಜ್ಞಾನಂ ವಿನೈವ ಲೋಕಾಂತರಕಾಲಾಂತರಭಾವಿಸ್ವರ್ಗಾದಿಫಲಭೋಗಸಾಧನೇಷು ಬಹುವಿತ್ತವ್ಯವಸಾಯಸಾಧ್ಯೇಷು ಕರ್ಮಸು ಪ್ರೇಕ್ಷಾವತಾಂ ಪ್ರವೃತ್ತ್ಯಸಂಭವಾತ್ ಶಿವಜ್ಞಾನಸ್ಯ ಜ್ಯೋತಿಷ್ಟೋಮಾದಿಸರ್ವಕರ್ಮಾನುಷ್ಠಾನಾಂಗತ್ವಂ ವಕ್ತವ್ಯಂ. ತಥಾಚ ಅಂಗಾಂಗಿನೋರೇಕಫಲಸಾಧನತ್ವಾತ್ ಅಂಗಾನಾಂ ಕರ್ಮಣಾಂ ಯತ್ಫಲಂ ಸ್ವರ್ಗಾದಿಕಂ ತದೇವಾಂಗಿನಃ ಚಿದಚಿತ್ಪ್ರಪಂಚವಿಲಕ್ಷಣಶಿವಜ್ಞಾನಸ್ಯೇತಿ ಸ್ವಾತಂತ್ರ್ಯೇಣ ಮೋಕ್ಷೈಕಲಕ್ಷಣಫಲಾಂತರಸಾಧನತ್ವಾಸಂಭವಾತ್ ಸರ್ವವೇದಾಂತವಿದ್ಯಾರಂಭೋ ವ್ಯರ್ಥ ಇತಿ ಪೂರ್ವಮೀಮಾಂಸಾಶಂಕಾಮುಶಂಕ್ಯ ತನ್ನಿರಾಕರಣಾರ್ಥಮಿದಮಧಿಕರಣಮಾಹ. ಪುರುಷಾರ್ಥಾಧಿಕರಣಂ ||೧|| ಪುರುಷಾರ್ಥೋಽತಶ್ಶಬ್ದಾದಿತಿ ಬಾದರಾಯಣಃ ||೧|| ಅತಃ ಯಾಗಾನುಗುಣ್ಯದಹರಾದ್ಯುಪಾಸನಾಪೂರ್ವಕಸದಾಶಿವಬ್ರಹ್ಮಸಾಕ್ಷಾತ್ಕಾರಾತ್ ಪುರುಷಾರ್ಥಃ ಪುನರಾವೃತ್ತಿರಹಿತನಿತ್ಯನಿರತಿಶಯಸ್ವಾಭಾವಿಕಜೀವತ್ವನಿವೃತ್ತಿಪೂರ್ವಕಶಿವತ್ವಪ್ರಾಪ್ತಿಲಕ್ಷಣಲಕ್ಷಿತಮುಕ್ತಿರಸ್ತಿ ಇತಿ ಬಾದರಾಯಣೋ ಮನ್ಯತೇ. ಕುತಃ ಶಬ್ದಾತ್. "ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ" ಇತ್ಯಾದಿಶ್ರುತಿದರ್ಶನಾತ್ ಮುಮುಕ್ಷೂಣಾಂ ನಿಖಿಲಕರ್ಮೋಪಾಸನಾಪಂಕಕಳಂಕಶೂನ್ಯತಯಾ ನಿರಂತರಂ ಪರಶಿವಬ್ರಹ್ಮಾನುಸಂಧಾನಂ ಕರ್ತವ್ಯಮಿತಿ ಸೂತ್ರಸೂಚಿತಸೂಕ್ಷ್ಮಾರ್ಥಃ. "ಶಿಕ್ಷಾಂ ವ್ಯಾಖ್ಯಾಸ್ಯಾಮಃ, ವರ್ಣಃ ಸ್ವರಃ, ಮಾತ್ರಾ ಬಲಂ, ಸಾಮ ಸಂತಾನಃ. ಇತ್ಯುಕ್ತಶ್ಶಿಕ್ಷಾಧ್ಯಾಯಃ. ಸಹ ನೌ ಯಶಃ. ಸಹ ನೌ ಬ್ರಹ್ಮವರ್ಚಸಂ. ಅಥಾತಸ್ಸಂಹಿತಾಯಾಮುಪನಿಷದಂ ವ್ಯಾಖ್ಯಾಸ್ಯಾಮಃ" ಇತ್ಯಾದಿನಾ ತೈತ್ತಿರೀಯೇ ಶ್ರೂಯತೇ. "ಯಜ್ಞೇನ ದಾನೇನ ತಪಸಾಽನಾಶಕೇನ" ಇತ್ಯಾದಿಶ್ರುತಿಷು ಯಜ್ಞಾದಿಕರ್ಮಣಾಂ ಮೋಕ್ಷಾಂಗತ್ವಶ್ರವಣಾತ್ "ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್ ನಾಸ್ತ್ಯಕೃತಃ ಕೃತೇನ । ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ" ಇತ್ಯಾದೌ ಕರ್ಮಣೋ ಮೋಕ್ಷಾಂಗತ್ವನಿಷೇಧಾತ್, ತೈತ್ತಿರೀಯೇ ಕರ್ಮಜ್ಞಾನೋಭಯತುಲ್ಯಪ್ರಾಚುರ್ಯಾವಗಮಾತ್

ನಾನಿಯಮಸಿದ್ಧಿರರ್ಥಾದವಗಮ್ಯತೇ. ನಚ ಅಂಗಾವಬದ್ಧೋಪಾಸನಾನಾಂ ಕರ್ಮಾಂಗತ್ವಾಭಾವೇ ಫಲಪ್ರತಿಬಂಧಕಂ ಪಾಪರಹಿತಾನಾಂ ಪುರುಷಾಣಾಂ ಅಂಗಾವಬದ್ಧೋಪಾಸನಾನುಷ್ಠಾನವೈಯರ್ಥ್ಯಂ ಸ್ಯಾದಿತಿ ವಾಚ್ಯಂ. ಅಂಗಾವಬದ್ಧೋಪಾಸನಾಸಹಕೃತಕರ್ಮಾನುಷ್ಠಾನವತಾಂ ಬಹುಕಾಲಸ್ವರ್ಗಭೋಗಸ್ಯ ಪ್ರಧಾನವದೇವ ತದುಕ್ತಮಿತಿ ರಾದ್ಧಾಂತಃ.

ಇತಿ ಶ್ರೀಪತಿಪಂಡಿತಭಗವತ್ಪಾದಾಚಾರ್ಯಸ್ವಾಮಿಕೃತೇ
ಬ್ರಹ್ಮಮೀಮಾಂಸಾಸೂತ್ರಾರ್ಥಪ್ರಕಾಶಕೇ ಶ್ರೀಕರಭಾಷ್ಯೇ ಸಾಧನಾ
ಧ್ಯಾಯಸಂಜ್ಞಿಕ ತೃತೀಯಾಧ್ಯಾಯೇ ತೃತೀಯಃ ಪಾದಃ ಪರಿಸಮಾಪ್ತಃ

---

ಈ ಬಗ್ಗೆ ಬೇರೊಂದು ಹೇತುವನ್ನು ಹೇಳುತ್ತಾನೆ. ಈಬಗೆಯ ನಿಯಮವಿಲ್ಲವೆಂದು ಶ್ರುತಿಯೇ ತಿಳಿಸುತ್ತದೆ. "ಈ ರೀತಿಯಲ್ಲಿ ಅರಿತ ಯಜಮಾನನನ್ನೂ ಯಜ್ಞವನ್ನೂ ಎಲ್ಲಾ ಋತ್ವಿಜರನ್ನೂ ಬ್ರಹ್ಮವು ಕಾಪಾಡುತ್ತದೆ" ಎಂದು ಬ್ರಹ್ಮಜ್ಞಾನದಿಂದ ಎಲ್ಲರ ರಕ್ಷಣವನ್ನು ಶ್ರುತಿಯಲ್ಲಿ ಹೇಳಲಾಗಿದೆ. ಇದರಿಂದ ಉದ್ಗೀಥಾದ್ಯುಪಾಸನೆಗೆ ಪ್ರತಿಯೊಂದು ಉಪಾಸನದಲ್ಲೂ ಅನ್ವಯವುಂಟೆಂದು ಹೇಳಲಿಕ್ಕಾಗುವುದಿಲ್ಲ. ಆದ್ದರಿಂದ ಉದ್ಗೀಥೋಪಾಸನಕ್ಕೆ ಯಾವ ನಿಯಮವೂ ಇಲ್ಲವೆಂಬುದನ್ನು ನಿರ್ಣಯಿಸಲಾಗಿದೆ. ಪೂರ್ವಪಕ್ಷದ ಯುಕ್ತಿಯನ್ನು ಹಿಂದಿನ ಸೂತ್ರದಲ್ಲಿ ನಿರಾಕರಿಸಲಾಗಿತ್ತು. ಈಗ ಅದರ ಅಂಗವನ್ನು ಇಲ್ಲಿ ನಿರಾಕರಿಸಲಾಗುವುದು. ಈ ಉಪಾಸನೆಗೆ ನಿಯಮವಿಲ್ಲವೆಂಬುದಕ್ಕೆ ಉದ್ಗೀಥವೇ ದೃಷ್ಟಾಂತವಾಗಿದೆ. "ಯಜಮಾನನನ್ನೂ ಋತ್ವಿಜರನ್ನೂ ಬ್ರಹ್ಮವು ರಕ್ಷಿಸುತ್ತದೆ" ಎಂದು ಹೇಳುವಕಡೆಯಲ್ಲೂ ಯಜಮಾನನ ರಕ್ಷಣೆ ಎಂದರೆ ಆ ಬಗೆಯ ರಕ್ಷಣೆಗೆ ಬರುವ ಪ್ರತಿಬಂಧಕಗಳನ್ನು ಪರಿಹರಿಸಬೇಕೆಂಬುದೇ ಆಗಿದೆ. ಉದ್ಗಾತೃ ಅಧ್ವರ್ಯು ಮೊದಲಾದವರಿಗೆ ಆ ಜ್ಞಾನದ ಫಲವು ಯಜ್ಞದ ಫಲದಲ್ಲಿ ಯಾವತಡೆಯೂ ಇಲ್ಲದಿರುವುದೇ ಆಗಿದೆ. ಈ ಫಲವು ಬ್ರಹ್ಮನೆನಿಸಿದ ಋತ್ವಿಕ್ಕಿನ ಜ್ಞಾನದಿಂದಲೇ ಸಿದ್ಧಿಸುವುದಾದರೆ ಉದ್ಗಾತೃ ಮೊದಲಾದವರ ಜ್ಞಾನಕ್ಕೆ ನಿಯಮವಿಲ್ಲವೆಂಬುದು ಸಿದ್ಧವಾಗುತ್ತದೆ. ಈ ಅಂಗಾವಬದ್ಧವಾದ ಉದ್ಗೀಥಾದ್ಯುಪಾಸನಗಳು ನಿಯತವಾಗಿ ಕರ್ಮದ ಅಂಗವಲ್ಲವೆಂದು ಹೇಳುವುದಾದರೆ ಯಾರಿಗೆ ಸ್ವತಃ ಫಲಕ್ಕೆ ಪ್ರತಿಬಂಧಕವಾದ ಪಾಪವಿಲ್ಲವೋ ಅವರು ಮಾಡಿದ ಈ ಉಪಾಸನಗಳು ವ್ಯರ್ಥವಾಗುವುದಿಲ್ಲವೇ ? ಎಂದು ಕೇಳಿದರೆ ಅವರಿಗೂ ಸಹ ಅದಕ್ಕೆ ತಕ್ಕಹಾಗೆ ಬಹುಕಾಲ ಸ್ವರ್ಗವನ್ನು ಫಲವಾಗಿ ಅನುಭವಿಸಬೇಕೆಂದು "ಪ್ರಧಾನವದೇವ ತದುಕ್ತಂ" ಎಂಬ ಸೂತ್ರದಲ್ಲಿ ತಿಳಿಸಲಾಗಿದೆ. ಆದ್ದರಿಂದ ಉದ್ಗೀಥಾದ್ಯುಪಾಸನಗಳಿಗೆ ನಿಯತವಾಗಿ ಅನುಷ್ಠಾನವಿಲ್ಲವೆಂಬುದೇ ಸಿದ್ಧಾಂತವೆನಿಸಿದೆ.

# ತೃತೀಯಾಧ್ಯಾಯಸ್ಯ ಚತುರ್ಥಃ ಪಾದಃ

ಪೂರ್ವತ್ರ ಕಾಸಾಂಚಿದುಪಾಸನಾನಾಂ ಪರಂಪರಯಾ ಮುಕ್ತಿ
ಹೇತುತ್ವಂ. ಕಾಸಾಂಚಿತ್ ಸಾಕ್ಷಾನ್ಮುಕ್ತಿಹೇತುತ್ವಮುಕ್ತಂ. ಇಹ ತು
ಕಾಲಾಂತರಭಾವಿಪಾರಲೌಕಿಕಸ್ವರ್ಗಾದಿಫಲಭೋಗಯೋಗ್ಯಸ್ಯ ಶರೀ
ರೇಂದ್ರಿಯಾದಿವಿಶಿಷ್ಟಸ್ಯ ಜೀವಸ್ಯ ತನ್ನಿಯಾಮಕಶಿವಜ್ಞಾನಂ ವಿನೈವ
ಲೋಕಾಂತರಕಾಲಾಂತರಭಾವಿಸ್ವರ್ಗಾದಿಫಲಭೋಗಸಾಧನೇಷು ಬಹು
ವಿತ್ತವ್ಯವಸಾಯಸಾಧ್ಯೇಷು ಕರ್ಮಸು ಪ್ರೇಕ್ಷಾವತಾಂ ಪ್ರವೃತ್ತ್ಯಸಂಭ
ವಾತ್ ಶಿವಜ್ಞಾನಸ್ಯ ಜ್ಯೋತಿಷ್ಟೋಮಾದಿಸರ್ವಕರ್ಮಾನುಷ್ಠಾನಾಂ
ಗತ್ವಂ ವಕ್ತವ್ಯಂ. ತಥಾಚ ಅಂಗಾಂಗಿನೋರೇಕಫಲಸಾಧನತ್ವಾತ್
ಅಂಗಾನಾಂ ಕರ್ಮಣಾಂ ಯತ್ಫಲಂ ಸ್ವರ್ಗಾದಿಕಂ ತದೇವಾಂಗಿನಃ ಚಿದ
ಚಿತ್ಪ್ರಪಂಚವಿಲಕ್ಷಣಶಿವಜ್ಞಾನಸ್ಯೇತಿ ಸ್ವಾತಂತ್ರ್ಯೇಣ ಮೋಕ್ಷೈಕಲಕ್ಷಣ
ಫಲಾಂತರಸಾಧನತ್ವಾಸಂಭವಾತ್ ಸರ್ವವೇದಾಂತವಿದ್ಯಾರಂಭೋ ವ್ಯರ್ಥ
ಇತಿ ಪೂರ್ವಮೀಮಾಂಸಾಶಂಕಾಮುಶಂಕ್ಯ ತನ್ನಿರಾಕರಣಾರ್ಥಮಿದ
ಮಧಿಕರಣಮಾಹ. ಪುರುಷಾರ್ಥಾಧಿಕರಣಂ ॥೧॥ ಪುರುಷಾರ್ಥೋಽತ
ಶ್ಶಬ್ದಾದಿತಿ ಬಾದರಾಯಣಃ ॥೧॥ ಅತಃ ಯೋಗಾನುಗುಣ್ಯದಹರಾದ್ಯು
ಪಾಸನಾಪೂರ್ವಕಸದಾಶಿವಬ್ರಹ್ಮಸಾಕ್ಷಾತ್ಕಾರಾತ್ ಪುರುಷಾರ್ಥಃ ಪುನ
ರಾವೃತ್ತಿರಹಿತನಿತ್ಯನಿರತಿಶಯಸ್ವಾಭಾವಿಕಜೀವತ್ವನಿವೃತ್ತಿಪೂರ್ವಕಶಿವತ್ವ
ಪ್ರಾಪ್ತಿಲಕ್ಷಣಲಕ್ಷಿತಮುಕ್ತಿರಸ್ತಿ ಇತಿ ಬಾದರಾಯಣೋ ಮನ್ಯತೇ. ಕುತಃ
ಶಬ್ದಾತ್. "ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ" ಇತ್ಯಾದಿಶ್ರುತಿದರ್ಶ
ನಾತ್ ಮುಮುಕ್ಷೂಣಾಂ ನಿಖಿಲಕರ್ಮೋಪಾಸನಾಪಂಕಕಳಂಕಶೂನ್ಯ
ತಯಾ ನಿರಂತರಂ ಪರಶಿವಬ್ರಹ್ಮಾನುಸಂಧಾನಂ ಕರ್ತವ್ಯಮಿತಿ ಸೂತ್ರ
ಸೂಚಿತಸೂಕ್ಷ್ಮಾರ್ಥಃ. "ಶಿಕ್ಷಾಂ ವ್ಯಾಖ್ಯಾಸ್ಯಾಮಃ, ವರ್ಣಃ ಸ್ವರಃ,
ಮಾತ್ರಾ ಬಲಂ, ಸಾಮ ಸಂತಾನಃ. ಇತ್ಯುಕ್ತಶ್ಶಿಕ್ಷಾಧ್ಯಾಯಃ. ಸಹ ನೌ
ಯಶಃ. ಸಹ ನೌ ಬ್ರಹ್ಮವರ್ಚಸಂ. ಅಥಾತಸ್ಸಂಹಿತಾಯಾ ಉಪನಿಷದಂ
ವ್ಯಾಖ್ಯಾಸ್ಯಾಮಃ" ಇತ್ಯಾದಿನಾ ತೈತ್ತಿರೀಯೇ ಶ್ರೂಯತೇ. "ಯಜ್ಞೇನ
ದಾನೇನ ತಪಸಾಽನಾಶಕೇನ" ಇತ್ಯಾದಿಶ್ರುತಿಷು ಯಜ್ಞಾದಿಕರ್ಮಣಾಂ
ಮೋಕ್ಷಾಂಗತ್ವಶ್ರವಣಾತ್ "ಪರೀಕ್ಷ್ಯ ಲೋಕಾನ್ ಕರ್ಮಚಿತಾನ್
ಬ್ರಾಹ್ಮಣೋ ನಿರ್ವೇದಮಾಯಾತ್ ನಾಸ್ತ್ಯಕೃತಃ ಕೃತೇನ । ತದ್ವಿಜ್ಞಾ
ನಾರ್ಥಂ ಸ ಗುರುಮೇವಾಭಿಗಚ್ಛೇತ್ ಸಮಿತ್ಪಾಣಿಃ ಶ್ರೋತ್ರಿಯಂ
ಬ್ರಹ್ಮನಿಷ್ಠಂ" ಇತ್ಯಾದೌ ಕರ್ಮಣೋ ಮೋಕ್ಷಾಂಗತ್ವನಿಷೇಧಾತ್,
ತೈತ್ತಿರೀಯೇ ಕರ್ಮಜ್ಞಾನೋಭಯತುಲ್ಯಪ್ರಾಚುರ್ಯಾವಗಮಾತ್

ಕರ್ಮಣಃ ಸ್ವಾತಂತ್ರ್ಯೇಣ ಪುನರಾವೃತ್ತಿರಹಿತಪರಮಪುರುಷಾರ್ಥಫಲಸಾಧನತ್ವಂ ಉತ ಜ್ಞಾನಾಂಗತ್ವೇನೇತಿ ಸಂಶಯಃ. ಜೀವಾತಿರಿಕ್ತೇಶ್ವರಸದ್ಭಾವೇ ಮಾನಾಭಾವಾತ್. "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" "ಅಹರಹಸ್ಸಂಧ್ಯಾಮುಪಾಸೀತ" ಇತ್ಯತ್ರ ಶಾರೀರಸ್ಯೈವ ಕರ್ತೃಕತ್ವಾವಗಮಾತ್ "ಯಸ್ಯ ಪರ್ಣಮಯೀ ಜಹೂರ್ಭವತಿ" "ವಾಯುರ್ವೈ ಕ್ಷೇಪಿಷ್ಠಾ ದೇವತಾ ಯತ್ಪ್ರಯಾಜಾನೂಯಾಜೌ ಯುಜ್ಯೇತೇ" ಇತ್ಯಾದಿವತ್ "ಪ್ರಜ್ಞಾನಂ ಬ್ರಹ್ಮ" "ಅಹಂ ಬ್ರಹ್ಮಾಸ್ಮಿ" "ತತ್ತ್ವಮಸಿ" ಇತ್ಯಾದಿವೇದಾಂತಾನಾಂ ಸ್ತುತಿಪರತ್ವಂ. ಕಿಂಚ "ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ ಭವತಿ" ಇತ್ಯಾದಿವೇದಾಂತೇಷ್ವಪಿ ವಿದ್ಯಾಯಾಃ ಕರ್ಮಸು ವಿನಿಯೋಗದರ್ಶನಾತ್ ಕರ್ಮಾಂಗತ್ವಮನಿವಾರ್ಯಂ. "ತಂ ವಿದ್ಯಾಕರ್ಮಣೀ ಸಮಾರಭೇತೇ" ಇತಿ ವಿದ್ಯಾಕರ್ಮಣೋರೇಕಸ್ಮಿನ್ ಪುರುಷೇ ಸಾಹಿತ್ಯಂ ದೃಶ್ಯತೇ. "ಆಚಾರ್ಯಕುಲಾದ್ವೇದಮಧೀತ್ಯ ಯಥಾವಿಧಾನಂ ಗುರೋಃ ಕರ್ಮಾತಿಶೇಷೇಣಾಭಿಸಮಾವೃತ್ತ್ಯ ಕುಟುಂಬೇ ಶುಚೌ ದೇಶೇ ಸ್ವಾಧ್ಯಾಯಮಧೀಯಾನೋ ಧಾರ್ಮಿಕಾನ್ ವಿದಧತ್" ಇತ್ಯಾದೌ ಅರ್ಥಜ್ಞಾನಪರ್ಯಂತಾಧ್ಯಯನವತಃ ಸ್ವಾಧ್ಯಾಯೋಽಧ್ಯೇತವ್ಯಃ. ಕರ್ಮಾಣಿ ವಿದಧತ್ ಅರ್ಥಾವಬೋಧಪರ್ಯಂತಾಧ್ಯಯನವತ ಏವ ವಿದಧಾತಿ. ಅರ್ಥಾವಬೋಧಪರ್ಯಂತಮಧ್ಯಯನವಿಧಿಶೇವೇತಿ ಸ್ಥಾಪಿತಂ. ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್ ಶತಗ್ಂ ಸಮಾಃ" ಇತ್ಯಾತ್ಮವಿದಃ ಪುರುಷಾಯುಷಸ್ಸರ್ವಸ್ಯ ಕರ್ಮಸು ನಿಯಮವಿಧಿತ್ವೇನ ವಿನಿಯೋಗಾತ್ ಕರಣ ಏವ ಫಲಮಿತ್ಯವಗಮ್ಯತೇ. ತಸ್ಮಾದ್ಬ್ರಹ್ಮವಿದ್ಯಾಯಾಃ ಕರ್ಮಾಂಗತ್ವಮಪ್ರತಿಹತಮಿತಿ ಪ್ರಾಪ್ತೇ ಪ್ರಚಕ್ಷ್ಮಹೇ. "ಅಮೃತಸ್ಯ ದೇವಧಾರಣೋ ಭೂಯಾಸಂ," "ತಮೇವಂ ವಿದ್ವಾನಮೃತ ಇಹ ಭವತಿ" ಇತ್ಯಾದಿಶ್ರುತಿಶತೇಷು ಪರಶಿವಬ್ರಹ್ಮಣಃ ಧ್ಯಾನಧಾರಣಜ್ಞಾನವಿಧಾನಾದೇವ ಮೋಕ್ಷೋಪದೇಶಾತ್ ಕರ್ಮಣಃ ಯತ್ರ ಕುತ್ರಾಪಿ ಸ್ವಾತಂತ್ರ್ಯೇಣ ಮುಕ್ತ್ಯದರ್ಶನಾತ್ "ಏಷ ಏವ ಸಾಧುಕರ್ಮ ಕಾರಯತಿ" ಇತ್ಯಾದಿಶ್ರುತಿಷು, "ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ" ಇತ್ಯಾದಿಸ್ಮೃತಿಷು ಚ ಕರ್ಮಕರ್ತೃಜೀವಸ್ಯಾಪಿ ಶಿವಾಧೀನತ್ವಂ, ಶಿವಸ್ಯೈವ ಜೀವಕೃತಸರ್ವಪಾಪಮೋಚಕತ್ವಂ ಚೋಕ್ತಂ. ಕಿಂಚ "ನ ಕರ್ಮಣಾ" "ಯಾವದುತ್ಪದ್ಯತೇ ಜ್ಞಾನಂ ತಾವದನುಷ್ಠೇಯಾನಿ ಕರ್ಮಾಣಿ" ಇತ್ಯಾದಿ ಶ್ರುತಿಷು ಬ್ರಹ್ಮಜ್ಞಾನೇಚ್ಛಾವತಾಂ ಕರ್ಮನಿಷೇಧಾವಗ

**ಮಾತ್ ಬ್ರಹ್ಮವಿದ್ಯಾಯಾಃ ಕರ್ಮಾಂಗತ್ವಮನುಪಪನ್ನಮತಶ್ಚತುರ್ಥ್ಯಂತ ದೇವತಾಪ್ರಾಧಾನ್ಯಜೈಮಿನಿಮತಮವಿಚಾರಿತರಮಣೀಯಮಿತಿ ಸಿದ್ಧಂ.**

ಕೆಲವು ಉಪಾಸನನೆಗಳು ಪರಂಪರೆಯಿಂದ ಮುಕ್ತಿಯನ್ನು ದೊರಕಿಸುತ್ತವೆ ಎಂದೂ, ಕೆಲವು ನೇರವಾಗಿ ದೊರಕಿಸುತ್ತವೆ ಎಂದೂ ಹಿಂದೆ ಹೇಳಿಯಾಯಿತು. ಪರಲೋಕವಲ್ಲಿ ಮುಂದೆ ದೊರೆಯುಬಹುದಾದ ಸ್ವರ್ಗಾದಿ ಫಲಗಳನ್ನು ಅನುಭವಿಸಲಿಕ್ಕೆ ಸಿದ್ಧನಾಗಿ ಶರೀರೇಂದ್ರಿಯಗಳೊಡನೆ ಬಾಳುತ್ತಿರುವ ಜೀವನಿಗೆ ಆ ಫಲಗಳನ್ನು ದೊರಕಿಸುವಂತಹ ಕರ್ಮಗಳಲ್ಲಿ ಸರ್ವನಿಯಾಮಕನಾದ ಶಿವನ ಜ್ಞಾನವಿಲ್ಲದೆ ಪ್ರವೃತ್ತಿಯೇ ಹುಟ್ಟುವುದಿಲ್ಲವಾದ್ಧರಿಂದ ಜ್ಯೋತಿಷ್ಟೋಮಾದಿಕರ್ಮಾನುಷ್ಠಾನವನ್ನು ಶಿವಜ್ಞಾನದ ಅಂಗವೆಂದು ಇಲ್ಲಿ ತಿಳಿಸಲಾಗುವುದು. ಅಂಗಾಂಗಿಗಳೆರಡೂ ಒಂದೇ ಫಲವನ್ನು ಸಾಧಿಸುತ್ತವೆಯಾದ್ದರಿಂದ ಅಂಗವೆನಿಸಿದ ಕರ್ಮಗಳ ಫಲವೇ ಅಂಗಿ ಎನಿಸಿದ ಶಿವಜ್ಞಾನಕ್ಕೂ ಫಲವೆನಿಸುತ್ತದೆ. ಶಿವಜ್ಞಾನವು ಸ್ವತಂತ್ರವಾಗಿ ಮೋಕ್ಷವೆಂಬ ಫಲವನ್ನು ಸಾಧಿಸುವ ಸಂಭವವಿಲ್ಲ. ಆದ್ದರಿಂದ ಎಲ್ಲಾ ವೇದಾಂತಗಳನ್ನು ಆರಂಭಿಸಿದ್ದು ವ್ಯರ್ಥವೇ ಆಗುವುದೆಂಬ ಪೂರ್ವಮೀಮಾಂಸಾಶಾಸ್ತ್ರದ ಶಂಕೆಯನ್ನು ನಿರಾಕರಿಸಲಿಕ್ಕಾಗಿ ಈ ಅಧಿಕರಣ ಹೊರಟಿದೆ. ಯೋಗಕ್ಕನುಗುಣವಾದ ದಹರಾದ್ಯುಪಾಸನದಿಂದಲೇ ಸದಾಶಿವಬ್ರಹ್ಮದ ಸಾಕ್ಷಾತ್ಕಾರವಾಗಿ ಜೀವನು ಮತ್ತೆ ಹುಟ್ಟದೆ ತನ್ನಲ್ಲಿ ಸ್ವಾಭಾವಿಕವಾದ ಜೀವಭಾವವನ್ನು ಕಳೆದುಕೊಂಡು ನಿತ್ಯ ನಿರತಿಶಯವಾದ ಶಿವಭಾವವನ್ನು ಪಡೆಯುವನೆಂದು ಬಾದರಾಯಣರು ಹೇಳುತ್ತಾರೆ. ಈ ಅಂಶವನ್ನು ಶ್ರುತಿಯೂ ಸ್ಪಷ್ಟವಾಗಿ ತಿಳಿಸಿದೆ. ಆದ್ದರಿಂದ ಮುಮುಕ್ಷುಗಳು ಸಮಸ್ತ ಕರ್ಮವಾಸನೆಗಳೆಂಬ ಕೆಸರನ್ನು ತೊಳೆದುಕೊಂಡು ನಿರಂತರವೂ ಪರಶಿವಬ್ರಹ್ಮವನ್ನು ಧ್ಯಾನಿಸುತ್ತಿರಬೇಕು. ತೈತ್ತಿರೀಯದ ಶಿಕ್ಷಾವಲ್ಲಿಯಲ್ಲೂ ಮತ್ತು ಇತರ ಶ್ರುತಿಗಳಲ್ಲೂ ಯಜ್ಞಾದಿಕರ್ಮಗಳನ್ನು ಮೋಕ್ಷಕ್ಕೆ ಅಂಗವೆಂದು ಹೇಳಿದೆ. "ಜ್ಞಾನಿಯು ಕರ್ಮಪ್ರಪಂಚವನ್ನು ವಿವೇಚನೆಯಿಂದ ಪರಿಶೀಲಿಸಿ ಮನಸ್ಸಿನಲ್ಲಿ ವೈರಾಗ್ಯವನ್ನು ಹೊಂದಬೇಕು. ಮಾಡುವ ಕರ್ಮಗಳಿಂದ ಸಹಜವಾದ ಮುಕ್ತಿಸುಖವು ದೊರಕುವುದಿಲ್ಲವಾದರಿಂದ ಅದನ್ನು ಪಡೆಯಲಿಕ್ಕಾಗಿ ಅವನು ಕೈನಲ್ಲಿ ಸಮಿತ್ತನ್ನು ಹಿಡಿದು ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಆದ ಗುರುವಿನ ಬಳಿ ಹೊರಡಬೇಕು" ಎಂಬಲ್ಲಿ ಕರ್ಮವು ಮೋಕ್ಷಕ್ಕೆ ಅಂಗವೆಂಬುದನ್ನು ನಿಷೇಧಿಸಲಾಗಿದೆ. ತೈತ್ತಿರೀಯದಲ್ಲಿ ಕರ್ಮ ಜ್ಞಾನಗಳೆರಡಕ್ಕೂ ಸಮಪ್ರಾಧಾನ್ಯವನ್ನು ಕೊಟ್ಟಿರುವುದಾಗಿ ತಿಳಿದುಬಂದಿದೆ. ಆದ್ದರಿಂದ ಕರ್ಮವೂ ಮೋಕ್ಷವೆಂಬ ಪರಮಪುರುಷಾರ್ಥವನ್ನು ಸ್ವತಂತ್ರವಾಗಿ ದೊರಕಿಸುತ್ತದೆಯೇ ಅಥವಾ ಜ್ಞಾನಕ್ಕೆ ಅಂಗವಾಗಿದ್ದು ದೊರಕಿಸುವುದೇ? ಎಂದು ಸಂಶಯ ಬರುತ್ತದೆ. ಜೀವನಿಗಿಂತ ಬೇರೆಯಾಗಿ ಈಶ್ವರನೊಬ್ಬನಿರುವ ಬಗ್ಗೆ ಪ್ರಮಾಣವಿಲ್ಲದ್ದರಿಂದ "ಸ್ವರ್ಗಾಪೇಕ್ಷಿಯು ಜ್ಯೋತಿಷ್ಟೋಮವನ್ನಾಚರಿಸಬೇಕು" "ಪ್ರತಿದಿನವೂ ಸಂಧ್ಯಾವಂದನೆ ಮಾಡಬೇಕು" ಎಂಬಲ್ಲಿ ಜೀವನೇ ಕರ್ಮಗಳನ್ನಾಚರಿಸುವನೆಂದು ತಿಳಿದುಬರುತ್ತದೆ.

" ಯಾವನಿಗೆ ಎಲೆಯೇ ಪಾತ್ರೆಯಾಗುತ್ತದೆಯೋ " " ವಾಯುವೇ ಶೀಘ್ರವಾಗಿ ಫಲಕೊಡುವ ದೇವತೆಯಾದ್ದರಿಂದ ಅವನಿಗೆ ಹವಿಸ್ಸನ್ನು ಅರ್ಪಿಸಬೇಕು" ಎಂಬಂತೆ " ಪ್ರಜ್ಞಾನವೇ ಬ್ರಹ್ಮ" " ನಾನೇ ಬ್ರಹ್ಮ" " ನೀನು ಅದೇ ಆಗಿದ್ದೀಯೆ" ಎಂದು ಮುಂತಾದ ವೇದಾಂತಗಳೆಲ್ಲವೂ ಸ್ತೋತ್ರರೂಪವೇ ಆಗಿವೆ. " ಚೆನ್ನಾಗಿ ತಿಳಿದು ಶ್ರದ್ಧೆಯಿಂದಲೂ ನಿಷ್ಠೆಯಿಂದಲೂ ಮಾಡಿದ ಕಾರ್ಯವು ಬಲಿಷ್ಠವಾಗುತ್ತದೆ" ಎಂಬಲ್ಲಿ ಜ್ಞಾನವನ್ನು ಕರ್ಮದಲ್ಲೂ ಉಪಯೋಗಿಸುವುದಾಗಿ ಕಂಡುಬಂದಿರುವುದ ರಿಂದ ಜ್ಞಾನವು ಕರ್ಮಕ್ಕೆ ಅಂಗವೆನಿಸಿದೆ " ಅವನಲ್ಲಿ ಜ್ಞಾನಕರ್ಮಗಳು ಕೂಡಿ ಕೊಂಡಿರುತ್ತವೆ" ಎಂಬಲ್ಲಿ ಒಬ್ಬನಲ್ಲಿಯೇ ಜ್ಞಾನಕರ್ಮಗಳೆರಡೂ ಸೇರಿರುವುದಾಗಿ ಕಂಡುಬಂದಿದೆ. " ಸದ್ವಂಶಸ್ಥನಾದ ಗುರುವಿನಿಂದ ನಿಯಮಬದ್ಧವಾಗಿ ವೇದವನ್ನು ಅಧ್ಯಯನಮಾಡಿ ಆ ಗುರುವಿಗೆ ದಕ್ಷಿಣೆಯನ್ನು ಸಮರ್ಪಿಸಿ ಮನೆಯಲ್ಲಿ ನಿರ್ಮಲವಾ ದೆಡೆಯಲ್ಲಿ ಕುಳಿತು ಸತ್ಕರ್ಮಗಳನ್ನು ಆಚರಿಸಬೇಕು" ಎಂಬ ಮಂತ್ರದಲ್ಲಿ ಅರ್ಥ ಜ್ಞಾನವಾಗುವವರೆಗೂ ಅಧ್ಯಯನಮಾಡಿರುವವನಿಂದಲೇ ವೇದವನ್ನು ಕಲಿಯ ಬೇಕೆಂದು ವಿಧಿಸಲಾಗಿದೆ. " ಕರ್ಮಗಳನ್ನು ಮಾಡುತ್ತಲೇ ನೂರುವರ್ಷಗಳಕಾಲ ಜೀವಿಸಬೇಕು " ಎಂಬಲ್ಲಿ ಪುರುಷನು ಆಯುಷ್ಯಪರ್ಯಂತವೂ ಕರ್ಮವನ್ನಾಚರಿಸು ತ್ತಿರಬೇಕೆಂಬ ನಿಯಮವನ್ನು ವಿಧಿಸಿರುವುದರಿಂದ ಕರ್ಮವನ್ನಾಚರಿಸುವುದೇ ಫಲವೆಂದು ತಿಳಿದುಬರುತ್ತವೆ. ಆದ್ದರಿಂದ ಬ್ರಹ್ಮವಿದ್ಯೆಯು ಕರ್ಮಕ್ಕೆ ಅಂಗ ವೆಂಬುದು ಅನಿವಾರ್ಯವೆನಿಸಿದೆ, ಎಂದು ಆಕ್ಷೇಪವು ಬಂದರೆ ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. " ಅಮೃತಪ್ರಾಪ್ತಿಗಾಗಿ ದೇವನನ್ನು ಧರಿಸುತ್ತೇನೆ" " ಅವನನ್ನು ತಿಳಿದವನು ಅಮೃತನಾಗುತ್ತಾನೆ" ಎಂದು ಮುಂತಾದ ಶ್ರುತಿಗಳಲ್ಲಿ ಪರಶಿವಬ್ರಹ್ಮದ ಧ್ಯಾನ ಧರಣ ಮತ್ತು ಜ್ಞಾನಗಳಿಂದಲೇ ಮೋಕ್ಷವನ್ನು ಹೇಳ ಲಾಗಿದೆ. ಇಲ್ಲಿ ಎಲ್ಲಿಯೂ ಕರ್ಮವನ್ನು ಸ್ವತಂತ್ರವಾಗಿ ಮೋಕ್ಷಸಾಧನವೆಂದು ಹೇಳಿಲ್ಲ. "ಇವನೇ ಎಲ್ಲಾ ಕರ್ಮಗಳನ್ನೂ ಮಾಡಿಸುತ್ತಾನೆ" ಎಂದು ಶ್ರುತಿಯಲ್ಲೂ " ಈಶ್ವರನು ಎಲ್ಲರ ಹೃದಯದಲ್ಲೂ ಕುಳಿತು ಜೀವರನ್ನು ಕರ್ಮಗಳಲ್ಲಿ ಪ್ರೇರಿಸು ತ್ತಾನೆ" ಎಂದು ಸ್ಮೃತಿಗಳಲ್ಲಿ ಕರ್ಮಗಳನ್ನಾಚರಿಸುವ ಜೀವನನ್ನು ಶಿವನಿಗಧೀನ ನೆಂದೂ, ಶಿವನಿಂದಲೇ ಜೀವರ ಸರ್ವಪಾಪಗಳ ವಿಮೋಚನೆಯೆಂದೂ ಹೇಳಿದೆ. "ಕರ್ಮದಿಂದಲೂ ಧನಸಂತಾನಗಳಿಂದಲೂ ಅಮೃತವು ದೊರಕುವುದಿಲ್ಲ.ಆದರೆ ತ್ಯಾಗ ಒಂದರಿಂದಲೇ ಅದು ದೊರಕಬಲ್ಲದು." " ಜ್ಞಾನ ಹುಟ್ಟುವವರೆಗೂ ಕರ್ಮಗಳ ನ್ನಾಚರಿಸಬೇಕು" ಈಬಗೆಯ ಶ್ರುತಿಗಳಲ್ಲಿ ಬ್ರಹ್ಮಜ್ಞಾನವನ್ನು ಇಚ್ಛಿಸುವವರಿಗೆ ಕರ್ಮತ್ಯಾಗವನ್ನು ಹೇಳಿರುವುದರಿಂದ ಜ್ಞಾನವು ಕರ್ಮಕ್ಕೆ ಅಂಗವೆಂಬುದು ಹೊಂದುವುದಿಲ್ಲ. ಆದ್ದರಿಂದ ಪ್ರತಿಯೊಂದು ಪದದಲ್ಲಿಯೂ ಚತುರ್ಥಿವಿಭಕ್ತಿಯು ದಾನಾರ್ಹವಾದ ದೇವತೆಯನ್ನೇ ಬೋಧಿಸುತ್ತದೆ ಎಂದು ಹೇಳುವ ಜೈಮಿನಿಮತವು ವಿಶ್ವಾಸಾರ್ಹವಲ್ಲವೆಂದು ಸಿದ್ಧವಾಯಿತು.

ನನು ವೇದಚತುಷ್ಟಯವಿಜ್ಞಾನನಿದಾನಭೂತಜೈಮಿನ್ಯಾಚಾರ್ಯೇಣಾಪಿ ಕರ್ಮಣಃ ಪ್ರಾಧಾನ್ಯತ್ವಸ್ಯ ಜ್ಞಾನಸ್ಯೋಪಸರ್ಜನತ್ವಸ್ಯ ಚ ವ್ಯವಸ್ಥಾಪನಾತ್ ಕಥಂ ಬ್ರಹ್ಮವಿದ್ಯಾಯಾ ವರಿಷ್ಠತ್ವಮಿತ್ಯಾಶಂಕಾಯಾಮಾಹ. ಶೇಷತ್ವಾತ್ಪುರುಷಾರ್ಥವಾದೋ ಯಥಾನ್ಯೇಷ್ವಿತಿ ಜೈಮಿನಿಃ ॥ ೨ ॥ "ಯದ್ಧಿ ಮನಸಾ ಮನುತೇ ತದ್ವಾಚಾ ವದತಿ ತತ್ಕರ್ಮಣಾ ಕರೋತಿ," "ಯದೇವ ಜ್ಞಾನಫಲಂ ತದೇವ ಕರ್ಮಫಲಂ" ಇತ್ಯಾದಿಶ್ರುತಿಷು ಜೀವಸ್ಯ ಶೇಷಿತ್ವಸ್ಯ ಕರ್ಮಣಃ ಶೇಷತ್ವಸ್ಯ ಚಾವಗಮಾತ್ ಪುರುಷಾರ್ಥವಾದಃ ಪುರುಷಸ್ಯ ಜೀವಸ್ಯ ಅರ್ಥಸ್ಯ ಪ್ರಯೋಜನಸ್ಯ ವಾದಃ ವಾಕ್ಯೋಪನ್ಯಾಸಾದಿಕಂ ಕರ್ಮಶೇಷತ್ವಾತ್ ಜೀವಜನ್ಯತ್ವೇನ ತದಂಶಾತ್. ಯಥಾನ್ಯೇಷ್ವಿತಿ. ಜೈಮಿನಿಃ "ತತ್ಸವಿತುರ್ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್" ಇತ್ಯಾದಿಶ್ರುತಿಷು ಶಿವಸ್ಯ ಪರಬ್ರಹ್ಮಣೋ ಬುದ್ಧಿಪ್ರೇರಕತ್ವಂ ಯಥಾ ದರ್ಶಿತಂ ತಥಾ ಜೀವಸ್ಯಾಪಿ ಕರ್ಮಪ್ರೇರಕತ್ವಮಿತಿ ಕರ್ಮಕಾಂಡೇ ಜೈಮಿನಿರ್ಮನ್ಯತೇ. ತಸ್ಮಾತ್ತನ್ಮತೇಽಪಿ ಜ್ಞಾನಪ್ರಾಧಾನ್ಯಸ್ಯಾರ್ಥಾತ್ಸಿದ್ಧತ್ವಾತ್ ಬ್ರಹ್ಮಕಾಂಡೇ ಮೋಕ್ಷಫಲಂ ಪ್ರತಿ ಜ್ಞಾನಪ್ರಾಧಾನ್ಯಂ ಕಿಂ ವಕ್ತವ್ಯಮಿತಿ ಬಾದರಾಯಣಾಚಾರ್ಯೋ ಮನ್ಯತೇ. ಕಿಂಚ "ಸತ್ಯಂ ವದ ಧರ್ಮಂ ಚರ" ಇತ್ಯಾದಿವೇದಾಂತಸಿದ್ಧಧರ್ಮಾಣಾಮಪಿ ಮೋಕ್ಷಹೇತುತ್ವೇನ ಜೈಮಿನ್ಯಾಚಾರ್ಯೈರಪಿ ಸ್ವೀಕೃತತ್ವಾತ್ "ಕರ್ಮಚಿತೋ ಲೋಕಃ ಕ್ಷೀಯತೇ" ಇತ್ಯಾದಿಶ್ರುತಿಷು ಕರ್ಮಫಲಾನಾಮನಿತ್ಯತ್ವಂ. "ಬ್ರಹ್ಮ ವೇದ ಬ್ರಹ್ಮೈವ ಭವತಿ," "ನ ಸ ಪುನರಾವರ್ತತೇ" ಇತ್ಯಾದಿಷು ಬ್ರಹ್ಮಜ್ಞಾನಫಲಸ್ಯ ನಿತ್ಯತ್ವಾವಗಮಾತ್ "ಅಹರಹಸ್ಸಂಧ್ಯಾಮುಪಾಸೀತ" ಇತ್ಯಾದಿವತ್ "ಆತ್ಮಾ ವಾರೇ ದ್ರಷ್ಟವ್ಯಃ" "ವೇದಾಂತಶ್ರವಣಂ ಕುರ್ವನ್ ಯೋಗಂ ಸಮಾರಭೇತ್" ಇತ್ಯಾದಿಷು ವಿಧಿದರ್ಶನಾಚ್ಚ ತತ್ತ್ವಮಸ್ಯಾದಿವೇದಾಂತಾನಾಂ ಅರ್ಥವಾದತ್ವಮಯುಕ್ತಂ ವಸಿಷ್ಠಾಗಸ್ತ್ಯಭರದ್ವಾಜಾದಿವೇದವಿದ್ಭಿರಪಿ ಮೋಕ್ಷಾಂಗತ್ವೇನ ಕರ್ಮಾಂಗೀಕಾರಾತ್ "ಯಕ್ಷ್ಯಮಾಣೋ ಹ ವೈ ಭಗವನ್ತೋಹಮಸ್ಮಿ" ಇತಿ ಶ್ರುತೌ ಕೇಕಯಂ ಪ್ರತಿ ಕರ್ಮನಿಷ್ಠಬ್ರಾಹ್ಮಣಾನಾಂ ಮೋಕ್ಷಾರ್ಥಂ ವೇದಾಂತವಿದ್ಯಾಪ್ರಾರ್ಥನತ್ವಾವಗಮಾತ್ ಪುರಾಣೇಷ್ವಪಿ ಕ್ಷತ್ರಿಯಂ ಜನಕಂ ಪ್ರತಿ ಶುಕಾತ್ರೇಯಾದಿಬ್ರಾಹ್ಮಣವರಿಷ್ಠಾನಾಂ ಬ್ರಹ್ಮಜ್ಞಾನಪ್ರಾರ್ಥನತ್ವದ್ಯೋತನಾಚ್ಚ ಬ್ರಹ್ಮವಿದ್ಯಾಯಾಃ ಸರ್ವಾಧಿಕತ್ವಂ ಗಮ್ಯತೇ.

ವೇದಾಧ್ಯಯನ ಸಂಪನ್ನನಾದ ಜೈಮಿನ್ಯಾಚಾರ್ಯರೂ ಸಹ ಕರ್ಮವನ್ನೇ

ಪ್ರಧಾನವೆಂದೂ ಜ್ಞಾನವು ಅದರ ಅಂಗವೆಂದೂ ಹೇಳಿರುವುದರಿಂದ ಬ್ರಹ್ಮವಿದ್ಯೆ ಹೇಗೆ ಶ್ರೇಷ್ಠವೆನಿಸೀತೆಂದಾಶಂಕಿಸಿ ತಿಳಿಸುತ್ತಾನೆ. "ಮನಸ್ಸಿನಲ್ಲಿ ನೆನೆದದ್ದನ್ನೇ ಬಾಯಿಂದ ಹೇಳಿ ಕೈನಿಂದ ಮಾಡುತ್ತಾನೆ" ಎಂಬ ಶ್ರುತಿಯಲ್ಲಿ ಜೀವನೇ ಯಜಮಾನನೆಂದೂ, ಕರ್ಮವೇ ಅವನಿಗೆ ಅಂಗವೆಂದು ತಿಳಿದುಬರುವುದರಿಂದ ಅವನಿಗೇ ಪ್ರಾಧಾನ್ಯವಿರುವುದು. ಇಲ್ಲಿ ಜೀವನಿಗೆ ಒದಗುವ ಪ್ರಯೋಜನವನ್ನೇ ತಿಳಿಸಿರುವುದರಿಂದ ವಾಕ್ಯೋಪನ್ಯಾಸಾದಿಗಳು ಅವನಿಗೇ ಅನ್ವಯಿಸುತ್ತವೆ. "ಪ್ರಳಯದಲ್ಲಿ ಸೂರ್ಯನಿಗೂ ಪ್ರಕಾಶವನ್ನು ದೊರಕಿಸುವಂತೆ ಬೆಳಗುತ್ತಿದ್ದ ಮಹಾದೇವನ ದಿವ್ಯ ತೇಜಸ್ಸು ನಮ್ಮ ಬುದ್ಧಿಗೆ ಸ್ಫೂರ್ತಿಯನ್ನು ನೀಡಲಿ" ಎಂಬ ಶ್ರುತಿಯಲ್ಲಿ ಶಿವನೇ ಬುದ್ಧಿಗೆ ಪ್ರೇರಕನೆಂದು ಹೇಳಿರುವಂತೆಯೇ ಜೀವನೂ ಕರ್ಮಕ್ಕೆ ಪ್ರೇರಕನೆಂದು ಕರ್ಮಕಾಂಡದಲ್ಲಿ ಜೈಮಿನಿ ಮಹರ್ಷಿಗಳು ಹೇಳಿದ್ದಾರೆ. ಆದ್ದರಿಂದ ಅವರ ಮತದಲ್ಲಿಯೇ ಜ್ಞಾನಕ್ಕೆ ಪ್ರಾಧಾನ್ಯವು ಸಹಜವಾಗಿರುವಾಗ ಬ್ರಹ್ಮಕಾಂಡದಲ್ಲಿ ಮೋಕ್ಷಕ್ಕೆ ಜ್ಞಾನ ಎಷ್ಟು ಪ್ರಧಾನವೆಂಬ ಅಂಶವನ್ನು ಬಾಯಿಂದ ಹೇಳಬೇಕಾಗಿಯೇ ಇಲ್ಲವೆಂದು ಬಾದರಾಯಣರು ಹೇಳುತ್ತಾರೆ. ಇದೂ ಅಲ್ಲದೆ "ಸತ್ಯವನ್ನು ಹೇಳು, ಧರ್ಮವನ್ನಾಚರಿಸು" ಎಂದು ಮುಂತಾದ ವೇದೋಕ್ತಧರ್ಮಗಳನ್ನು ಮೋಕ್ಷಕ್ಕೆ ಹೇತುವೆಂದು ಜೈಮಿನ್ಯಾಚಾರ್ಯರು ಒಪ್ಪಿದ್ದಾರೆ. "ಕರ್ಮದಿಂದ ಗಳಿಸಿದ ಲೋಕವು ನಶಿಸುತ್ತದೆ" ಎಂಬ ಶ್ರುತಿಯಲ್ಲಿ ಕರ್ಮದ ಫಲಗಳು ಅನಿತ್ಯವೆಂದೂ, "ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ" "ಅವನು ಮತ್ತೆ ಹಿಂತಿರುಗುವುದಿಲ್ಲ" ಎಂಬ ಶ್ರುತಿಗಳಲ್ಲಿ ಜ್ಞಾನದ ಫಲವು ನಿತ್ಯವೆಂದೇ ತಿಳಿದುಬರುತ್ತದೆ. ಆದ್ದರಿಂದ "ಪ್ರತಿದಿನವೂ ಸಂಧ್ಯಾವಂದನ ಮಾಡಬೇಕು" ಎಂಬಂತೆ "ಆತ್ಮನನ್ನು ಕೇಳಿ ತಿಳಿದು ಧ್ಯಾನಿಸುತ್ತ ಸಂದರ್ಶಿಸಬೇಕು" "ವೇದಾಂತವನ್ನು ಕೇಳುತ್ತಲೇ ಯೋಗವನ್ನಾರಂಭಿಸಬೇಕು" ಎಂಬಲ್ಲಿ ವಿಧಿ ಇರುವುದರಿಂದಲೂ "ತತ್ತ್ವಮಸಿ" ಮೊದಲಾದ ವಾಕ್ಯಗಳನ್ನು ಸ್ತೋತ್ರರೂಪವೆಂದು ಹೇಳುವುದು ಯುಕ್ತವಲ್ಲ. ಇದೂ ಅಲ್ಲದೆ, ವಸಿಷ್ಠ ಅಗಸ್ತ್ಯ ಭರದ್ವಾಜ ಮೊದಲಾದ ವೈದಿಕರೂ ಸಹ ಕರ್ಮವನ್ನು ಮೋಕ್ಷಕ್ಕೆ ಅಂಗವೆಂದು ಒಪ್ಪಿದ್ದಾರೆ. "ಸ್ವಾಮಿ, ನಾನು ಯಜ್ಞವನ್ನಾಚರಿಸುತ್ತಲೇ ಇರುವೆನು" ಎಂಬ ಶ್ರುತಿಯಲ್ಲಿ ಕೇಕಯರಾಜನಲ್ಲಿ ಕರ್ಮನಿಷ್ಠರಾದ ಬ್ರಾಹ್ಮಣರು ಮೋಕ್ಷಕ್ಕಾಗಿ ವೇದಾಂತ ವಿದ್ಯೆಯನ್ನು ತಿಳಿಸುವಂತೆ ಪ್ರಾರ್ಥಿಸಿದ್ದರೆಂದು ತಿಳಿದುಬರುತ್ತದೆ. ಕ್ಷತ್ರಿಯನಾದ ಜನಕನನ್ನು ಶುಕ ಆತ್ರೇಯ ಮೊದಲಾದ ಬ್ರಾಹ್ಮಣಶ್ರೇಷ್ಠರು ಬ್ರಹ್ಮಜ್ಞಾನಕ್ಕಾಗಿ ಕೇಳಿಕೊಂಡಿದ್ದರೆಂದು ಪುರಾಣಗಳಲ್ಲೂ ಹೇಳಿದೆ. ಆದ್ದರಿಂದ ಬ್ರಹ್ಮವಿದ್ಯೆಯೇ ಎಲ್ಲಕ್ಕೂ ಹೆಚ್ಚಿನದೆಂದು ತಿಳಿದುಬರುತ್ತದೆ.

ಅಸ್ಮಿನ್ನರ್ಥೇ ಹೇತ್ವಂತರಮಾಹ. **ಆಚಾರದರ್ಶನಾತ್ ॥ ೩ ॥**

"ಆಕಾಶಶರೀರಂ ಬ್ರಹ್ಮ. ಸತ್ಯಾತ್ಮ ಪ್ರಾಣಾರಾಮಂ ಮನ ಆನಂದಂ. "ಶಾಂತಿಸಮೃದ್ಧಮಮೃತಂ ಇತಿ. ಪ್ರಾಚೀನಯೋಗ್ಯೋಪಾಸ್ಯ"

ಇತ್ಯತ್ರ ಕರ್ಮನಿರಪೇಕ್ಷತಯಾ ಮುಮುಕ್ಷೂಣಾಂ ಬ್ರಹ್ಮವಿದ್ಯಾಯಾಃ ವ್ಯವಸ್ಥಾಪನಾತ್ ತಸ್ಯಾಃ ಕರ್ಮಾಂಗತ್ವಮಯುಕ್ತಂ. ಕಿಂಚ ಕರ್ಮಸು ಕರ್ತೃಜೀವಾದನ್ಯೋ ಮುಮುಕ್ಷುಭಿಃ ಪ್ರಾಪ್ಯತಯಾ ವೇದಾಂತೇಷು ವೇದ್ಯತಯಾ ಚೋಪದಿಶ್ಯತ ಇತಿ ಪ್ರಾಗೇವೋಪಪಾದಿತಂ. "ನೇತರೋಽನುಪಪತ್ತೇಃ." "ಭೇದವ್ಯಪದೇಶಾಚ್ಚ" "ಅನುಪಪತ್ತೇಸ್ತು ನ ಶಾರೀರಃ" "ಇತರಪರಾಮರ್ಶಾತ್ಸ ಇತಿ ಚೇನ್ನಾಸಂಭವಾತ್" ಇತ್ಯೇವಮಾದಿಭಿಸ್ಸೂತ್ರೈಃ "ತದೇವ ಬ್ರಹ್ಮ ತತ್ತ್ವಮಸಿ" ಇತಿ ಮಹಾವಾಕ್ಯೇಷು ಜೀವಪ್ರಾಪ್ಯತ್ವೇನ ಶಿವಸ್ಯ ಜೀವಾತಿರಿಕ್ತತ್ವಮುಪದಿಷ್ಟಂ. "ಅಧಿಕಂ ತು ಭೇದನಿರ್ದೇಶಾತ್" ಇತ್ಯೇವಮಾದಿಭಿಃ ಜೀವಬ್ರಹ್ಮವಾದೋ ನಿರಸ್ತಃ. "ಐತದಾತ್ಮ್ಯಮಿದಂ ಸರ್ವಂ" "ಸರ್ವೋ ವೈ ರುದ್ರಃ" "ವಿಶ್ವರೂಪಾಯ ವೈ ನಮೋ ನಮಃ" ಇತ್ಯಾದಿಭಿಃ ಶಿವೋಪಾದಾನತ್ವೇನ ಪ್ರಪಂಚಸ್ಯ ಶಿವಾತ್ಮಕತ್ವಮುಕ್ತಂ. "ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ" "ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡುಲೋಮಿಃ" ಇತಿ ಸೂತ್ರದ್ವಯೇನ ಶ್ರುತ್ಯೇಕದೇಶಭೇದಮತಮಭೇದಮತಂ ಚ ನಿರಾಕೃತ್ಯ "ಅವಸ್ಥಿತೇರಿತಿ ಕಾಶಕೃತ್ಸ್ನಃ" ಇತ್ಯನೇನ ಸರ್ವವೇದಾಂತಸಿದ್ಧದ್ವೈತಾದ್ವೈತಮತಮೇವ ಮುಮುಕ್ಷುಭಿಃ ಪ್ರಾರ್ಥನೀಯಮಿತ್ಯುಪಪಾದಿತಂ. ತಸ್ಮಾತ್ತದರ್ಥಂ ಕರ್ಮಸು ಕರ್ತುರಾತ್ಮನೋ ಯಾಥಾರ್ಥ್ಯೋಪದೇಶಪರಾಃ ವೇದಾಂತಶಬ್ದಾಃ ಸಂಪದ್ಯಂತ ಇತಿ ವಿದ್ಯಾಯಾಃ ಕರ್ಮಾಂಗತ್ವಂ ಪ್ರತಿಪಾದ್ಯತೇ.

ಈ ಬಗ್ಗೆ ಬೇರೊಂದು ಹೇತುವನ್ನು ತಿಳಿಸುತ್ತಾನೆ. "ಬ್ರಹ್ಮಕ್ಕೆ ಆಕಾಶವೇ ಶರೀರ, ಸತ್ಯವೇ ಆತ್ಮ, ಪ್ರಾಣವೇ ವಿನೋದಸ್ಥಾನ, ಮನಸ್ಸೇ ಆನಂದನಿಲಯ" "ಬ್ರಹ್ಮವು ಶಾಂತಿಯಿಂದ ಕೂಡಿ ಅಮೃತವೆನಿಸಿದೆ" ಎಂಬಲ್ಲಿ ಮುಮುಕ್ಷುಗಳು ಕರ್ಮವನ್ನಪೇಕ್ಷಿಸದೆ ಬ್ರಹ್ಮವಿದ್ಯೆಯನ್ನೇ ಆಶ್ರಯಿಸಬೇಕೆಂದು ಹೇಳಿರುವುದರಿಂದ ಅದು ಕರ್ಮಕ್ಕೆ ಅಂಗವೆಂಬುದು ಯುಕ್ತವಲ್ಲ. ಎಲ್ಲಾ ಕರ್ಮಗಳನ್ನಾಚರಿಸುವಾಗಲೂ ಜೀವನಿಗಿಂತ ಬೇರೊಬ್ಬನು ಮುಮುಕ್ಷುಗಳಿಗೆ ಗಮ್ಯನಾಗಿಯೂ ವೇದಾಂತಗಳಲ್ಲಿ ವೇದ್ಯನಾಗಿಯೂ ನೆಲಸಿರುವನೆಂದು ಹಿಂದೆಯೇ ತಿಳಿಸಲಾಗಿದೆ. "ನೇತರೋಽನುಪಪತ್ತೇಃ" "ಭೇದವ್ಯಪದೇಶಾಚ್ಚ" "ಅನುಪಪತ್ತೇಸ್ತು ನ ಶಾರೀರಃ" "ಇತರಪರಾಮರ್ಶಾತ್ಸ ಇತಿ ಚೇನ್ನಾಸಂಭವಾತ್" ಈ ಬಗೆಯ ಸೂತ್ರಗಳಲ್ಲಿಯೂ, "ಅದೇ ಬ್ರಹ್ಮ ಅದೇ ನೀನು" ಎಂಬ ವಾಕ್ಯಗಳಲ್ಲಿಯೂ ಜೀವನಿಗೆ ಗಮ್ಯನಾಗಿ ಅವನಿಗಿಂತ ಬೇರೊಬ್ಬನು ಇರುವನೆಂದು ತಿಳಿಸಲಾಗಿದೆ. "ಅಧಿಕಂ ತು ಭೇದನಿರ್ದೇಶಾತ್" ಎಂಬ ಸೂತ್ರದಲ್ಲಿ ಜೀವನೇ ಬ್ರಹ್ಮನೆಂಬ ವಾದವನ್ನು ಖಂಡಿಸಲಾಗಿದೆ. "ಇದೆಲ್ಲವೂ ಶಿವಾತ್ಮಕವಾಗಿದೆ" "ಎಲ್ಲವೂ ರುದ್ರನೇ" ಎಂಬಲ್ಲಿ ಪ್ರಪಂ

ಚಕ್ಕೆ ಶಿವನೇ ಉಪಾದಾನವಾದ್ದರಿಂದ ಇದನ್ನು ಶಿವಾತ್ಮಕವೆಂದು ಹೇಳಲಾಗಿದೆ. "ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ" "ಉತ್ಕ್ರಮಿಷ್ಯತ ಏವಂಭಾವಾದಿತ್ಯೌಡು ಲೋಮಿಃ" ಎಂಬ ಸೂತ್ರಗಳಲ್ಲಿ ಶ್ರುತಿಯ ಒಂದೊಂದು ಭಾಗಕ್ಕೆ ಅನ್ವಯಿಸುವ ಭೇದಮತವನ್ನೂ ಅಭೇದಮತವನ್ನೂ ನಿರಾಕರಿಸಿ "ಅವಸ್ಥಿತೇರಿತಿ ಕಾಶಕೃತ್ಸ್ನಃ" ಎಂಬ ಸೂತ್ರದಲ್ಲಿ ಸರ್ವವೇದಾಂತಸಮ್ಮತವಾದ ಭೇದಾಭೇದಮತವನ್ನೇ ಮುಮು ಕ್ಷುಗಳು ಆಶ್ರಯಿಸಬೇಕೆಂದು ತಿಳಿಸಲಾಗಿದೆ. ಆದ್ದರಿಂದ ಕರ್ಮವನ್ನಾಚರಿಸುವ ಜೀವನಿಗೆ ವಸ್ತುಸ್ಥಿತಿಯನ್ನು ತಿಳಿಸಲಿಕ್ಕಾಗಿಯೇ ವೇದಾಂತಗಳು ಹೊರಟಿರುವುದ ರಿಂದ ಬ್ರಹ್ಮವಿದ್ಯೆಯನ್ನು ಕರ್ಮಕ್ಕೆ ಅಂಗವೆಂದು ತಿಳಿಸಲಾಗಿದೆ.

ಪುನರ್ಹೇತ್ವಂತರಮಾಹ. ತಚ್ಛ್ರುತೇಃ ॥ ೪ ॥ ಶ್ರುತಿರೇವ ಹಿ ಬ್ರಹ್ಮಣ ಉಪಾಸನಾಮೇವ ಮುಮುಕ್ಷೂಣಾಂ ಮೋಕ್ಷಾಂಗತ್ವಮಾಹ. "ಯ ಏಷೋಽಂತರ್ಹೃದಯ ಆಕಾಶಃ ತಸ್ಮಿನ್ನಯಂ ಪುರುಷೋ ಮನೋಮಯಃ. ಅಮೃತೋ ಹಿರಣ್ಮಯಃ । ಅಂತರೇಣ ತಾಲುಕೇ । ಯ ಏಷ ಸ್ತನ ಇವಾವಲಂಬತೇ । ಸೇಂದ್ರಯೋನಿಃ । ಯತ್ರಾಸೌ ಕೇಶಾಂತೋ ವಿವರ್ತತೇ । ವ್ಯಪೋಹ್ಯ ಶೀರ್ಷಕಪಾಲೇ । ಭೂರಿತ್ಯಗ್ನೌ ಪ್ರತಿತಿಷ್ಠತಿ । ಭುವ ಇತಿ ವಾಯೌ । ಸುವರಿತ್ಯಾದಿತ್ಯೇ । ಮಹ ಇತಿ ಬ್ರಹ್ಮಣಿ ॥" ಇತಿ. ಕಿಂಚ ಬ್ರಹ್ಮೋಪಾಸನಯಾ ಸರ್ವಕಾಮಾವಾಪ್ತಿಃ ಶ್ರುತ್ಯೋಪದಿಷ್ಟಾ "ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ । ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ॥" ಇತಿ. ಪ್ರದೇಶಾಂತರೇಽಪಿ ಬ್ರಹ್ಮವಿದ್ಯಾಯಾಃ ಸರ್ವಕಾಮಾವಾಪ್ತಿಫಲ ಮುಪದಿಶ್ಯತೇ. "ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋ ಹಿ ಜಾಯತೇ। ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಂ॥" ಇತಿ ಸ್ಮೃತೌ ಬ್ರಹ್ಮೋಪಾಸನರೂಪಯೋಗಭ್ರಷ್ಟಾನಾಂ ಕಾಮವಾಸ ನಯಾ ಜನ್ಮಾಂತರೇಽಪಿ ಮರ್ತ್ಯಲೋಕೇ ಸದಾಚಾರಾವಚ್ಛಿನ್ನಧನಿಕ ಗೇಹೇ ಜನನತ್ವಂ ಅಕಾಮುಕಾನಾಂ ಪುನರ್ಬ್ರಹ್ಮೋಪಾಸನಾತ್ಮಕ ಯೋಗಿನಾಂ ಗೃಹೇ ಭವತ್ವಂ ಚ ದೃಶ್ಯತೇ. ಅತೋ ಬ್ರಹ್ಮವಿದ್ಯಾಯಾಃ ಸರ್ವಾಧಿಕತ್ವಮನವದ್ಯಂ.

ಮತ್ತೆ ಬೇರೆ ಹೇತುವನ್ನು ತಿಳಿಸುತ್ತಾನೆ. ಮುಮುಕ್ಷುಗಳಿಗೆ ಬ್ರಹ್ಮೋಪಾ ಸನವನ್ನೇ ಮೋಕ್ಷಕ್ಕೆ ಅಂಗವೆಂದು ಶ್ರುತಿಯೇ ತಿಳಿಸಿದೆ. "ಹೃದಯದೊಳಗೆ ಇರುವ ಆಕಾಶದಲ್ಲಿ ಯಾವ ಮನೋಮಯನಾದ ಪುರುಷನಿರುವನೋ ಅವನೊಳಗೆ ಸುವರ್ಣಮಯನಾದ ಪರಶಿವನಿರುವನು. ದವಡೆಗಳ ಮಧ್ಯದಲ್ಲಿ ಸ್ತನದಂತೆ ಜೋತಾಡುತ್ತಿರುವ ಇವನಿಗೆ ಇಂದ್ರಯೋನಿ ಎಂಬ ಹೆಸರಿದೆ. ಇವನು ಈ ದೇಹದಲ್ಲಿ ಕಪಾಲಭಾಗವನ್ನು ಬಿಟ್ಟು ಉಳಿದಕಡೆಗಳಲ್ಲಿ ಕೂದಲಿನವರೆಗೂ ವ್ಯಾಪಿಸಿದ್ದಾನೆ.

ಓಂ ಭೂಃ ಎಂದು ಹೇಳಿ ಇವನನ್ನು ಅಗ್ನಿಯಲ್ಲೂ, ಓಂ ಭುವಃ ಎಂದು ಹೇಳಿ ವಾಯುವಿನಲ್ಲೂ, ಓಂ ಸುವಃ ಎಂದು ಹೇಳಿ ಆದಿತ್ಯನಲ್ಲೂ, ಓಂ ಮಹಃ ಎಂದು ಹೇಳಿ ಬ್ರಹ್ಮದಲ್ಲೂ ಸಮಾವೇಶಗೊಳಿಸಬೇಕು. ಇದೂ ಅಲ್ಲದೆ, ಬ್ರಹ್ಮೋಪಾಸನದಿಂದ ಎಲ್ಲಾ ಫಲಗಳನ್ನೂ ಮುಕ್ತನು ಪಡೆಯುವನೆಂದು ಶ್ರುತಿಯಲ್ಲಿ ತಿಳಿಸಿದೆ. "ಪರಮಾಕಾಶದಲ್ಲಿ ನೆಲಸಿರುವವನನ್ನು ತಿಳಿದವನು ಬ್ರಹ್ಮದೊಡನೆ ಎಲ್ಲಾ ಫಲಗಳನ್ನು ಪಡೆಯುತ್ತಾನೆ" ಎಂದು ಮುಂತಾದ ಶ್ರುತಿಗಳಲ್ಲಿ ಬ್ರಹ್ಮವಿದ್ಯೆಯಿಂದ ಎಲ್ಲಾ ಫಲಗಳ ಪ್ರಾಪ್ತಿಯನ್ನು ತಿಳಿಸಲಾಗಿದೆ. "ಯೋಗಭ್ರಷ್ಟನು ಶುದ್ಧರಾದ ಶ್ರೀಮಂತರ ಮನೆಯಲ್ಲೋ ಅಥವಾ ಪ್ರಜ್ಞಾಶಾಲಿಗಳಾದ ಯೋಗಿಗಳ ವಂಶದಲ್ಲೋ ಹುಟ್ಟುತ್ತಾನೆ" ಎಂದು ಸ್ಮೃತಿಯಲ್ಲಿ ಬ್ರಹ್ಮೋಪಾಸನವೆಂಬ ಯೋಗವನ್ನು ತೊರೆದವರು ಕಾಮವಾಸನೆಯಿಂದ ಮತ್ತೊಂದು ಜನ್ಮದಲ್ಲಿ ಮರ್ತ್ಯಲೋಕದಲ್ಲಿ ಸದಾಚಾರಸಂಪನ್ನರಾದ ಧನಿಕರ ಮನೆಯಲ್ಲೂ, ಕಾಮವಿಲ್ಲದವರು ಮತ್ತೆ ಬ್ರಹ್ಮೋಪಾಸನವನ್ನು ಮುಂದುವರಿಸಲಿಕ್ಕಾಗಿ ಯೋಗಿಗಳ ಮನೆಯಲ್ಲಿಯೇ ಹುಟ್ಟುವರೆಂದೂ ಹೇಳಲಾಗಿದೆ. ಆದ್ದರಿಂದ ಬ್ರಹ್ಮವಿದ್ಯೆಯೇ ಎಲ್ಲಕ್ಕೂ ಹೆಚ್ಚಿನದೆನಿಸಿದೆ.

**ಅಸ್ಮಿನ್ನರ್ಥೇ ಪುನರ್ಹೇತ್ವಂತರಮಾಹ. ಸಮನ್ವಾರಂಭಣಾತ್॥೫॥**

ಬ್ರಹ್ಮವಿದ್ಯಾಂಗತ್ವೇನ ಸತ್ಕರ್ಮಾರಂಭಕತ್ವಸ್ಯ ಶ್ರುತಿಷು ವ್ಯವಸ್ಥಾಪನಾತ್ ವಿದ್ಯಾಯಾಃ ಕರ್ಮಾಂಗತ್ವಮಯುಕ್ತಂ. "ವೇದಮನೂಚ್ಯಾಚಾರ್ಯೋಽಂತೇವಾಸಿನಮನುಶಾಸ್ತಿ। ಸತ್ಯಂ ವದ। ಧರ್ಮಂ ಚರ। ಸ್ವಾಧ್ಯಾಯಾನ್ಮಾ ಪ್ರಮದಃ। ಆಚಾರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾ ವ್ಯವಚ್ಛೇತ್ಸೀಃ। ಸತ್ಯಾನ್ನ ಪ್ರಮದಿತವ್ಯಂ। ಧರ್ಮಾನ್ನ ಪ್ರಮದಿತವ್ಯಂ। ಕುಶಲಾನ್ನ ಪ್ರಮದಿತವ್ಯಂ। ಭೂತ್ಯೈ ನ ಪ್ರಮದಿತವ್ಯಂ। ಸ್ವಾಧ್ಯಾಯಪ್ರವಚನಾಭ್ಯಾಂ ನ ಪ್ರಮದಿತವ್ಯಂ। ದೇವಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಂ।" ಇತ್ಯತ್ರ ತಥೋಪದಿಷ್ಟಂ.

ಈ ಬಗ್ಗೆ ಬೇರೊಂದು ಕಾರಣವನ್ನು ತಿಳಿಸುತ್ತಾನೆ. ಬ್ರಹ್ಮವಿದ್ಯೆಗೆ ಅಂಗವಾಗಿ ಸತ್ಕರ್ಮವನ್ನಾರಂಭಿಸಬೇಕೆಂದು ಶ್ರುತಿಯಲ್ಲಿ ವ್ಯವಸ್ಥೆಮಾಡಿರುವುದರಿಂದ ಬ್ರಹ್ಮವಿದ್ಯೆ ಕರ್ಮಕ್ಕೆ ಅಂಗವೆಂಬುದು ಯುಕ್ತವಲ್ಲ. "ವೇದವನ್ನು ಅನುಸರಿಸಿ ಆಚಾರ್ಯನು ಶಿಷ್ಯನಿಗೆ ಉಪದೇಶಿಸುತ್ತಾನೆ. "ಸತ್ಯವನ್ನೇ ಹೇಳು, ಧರ್ಮವನ್ನೇ ಆಚರಿಸು, ವೇದಾಧ್ಯಯನದಲ್ಲಿ ಎಚ್ಚರಗೆಡಬೇಡ, ಆಚಾರ್ಯನಿಗೆ ಮೆಚ್ಚುವಂತೆ ಹಣವನ್ನು ಕೊಟ್ಟು ಸಂತಾನಾಸುಖವನ್ನು ನಿರಾತಂಕವಾಗಿ ಅನುಭವಿಸು. ಸತ್ಯದಿಂದ ಎಚ್ಚರತಪ್ಪಬೇಡ, ಧರ್ಮದಿಂದ ಎಚ್ಚರಗೆಡಬೇಡ, ಲೋಕಹಿತವನ್ನಾಚರಿಸವುದರಲ್ಲಿ ಎಚ್ಚರಗೆಡಬೇಡ, ಶ್ರೇಯೋಽಭ್ಯುದಯಗಳಿಗಾಗಿ ಎಚ್ಚರಗೆಡಬೇಡ, ಅಧ್ಯಯನದಲ್ಲೂ ಅಧ್ಯಾಪನದಲ್ಲೂ ಎಚ್ಚರಗೆಡಬೇಡ, ದೇವನ ಮತ್ತು ಪಿತೃಗಳ ಸೇವೆಯಲ್ಲಿ ಬೇಸರಪಡಬೇಡ." ಇಲ್ಲಿ ಕರ್ಮವನ್ನು ಬ್ರಹ್ಮವಿದ್ಯೆಗೆ ಅಂಗವಾಗಿ ವಿಧಿಸಲಾಗಿದೆ.

ಪುನರ್ಹೇತ್ವಂತರಮಾಹ. ತತ್ತ್ವತೋ ವಿಧಾನಾತ್ ॥ ೬ ॥ "ಮಾತೃದೇವೋ ಭವ। ಪಿತೃದೇವೋ ಭವ। ಆಚಾರ್ಯದೇವೋ ಭವ। ಅತಿಥಿದೇವೋ ಭವ।ಯಾನ್ಯನವದ್ಯಾನಿ ಕರ್ಮಾಣಿ ತಾನಿ ಸೇವಿತವ್ಯಾನಿ। ನೋ ಇತರಾಣಿ। ಯಾನ್ಯಸ್ಮಾಕಂ ಸುಚರಿತಾನಿ ತಾನಿ ತ್ವಯೋಪಾಸ್ಯಾನಿ। ನೋ ಇತರಾಣಿ"॥ ಇತ್ಯಾದಿನಾ ತತ್ತ್ವತಃ ಬ್ರಹ್ಮವಿದ್ಯಾಂಗತ್ವೇನ ಮಾತಾಪಿತ್ರಾದಿಭಕ್ತಿವಿಧಾನಾವಗಮಾತ್ ನ ಬ್ರಹ್ಮವಿದ್ಯಾಯಾಃ ಕರ್ಮಾಂಗತ್ವಂ.

ಮತ್ತೊಂದು ಕಾರಣವನ್ನು ತಿಳಿಸುತ್ತಾನೆ. ತಾಯಿ, ತಂದೆ, ಆಚಾರ್ಯ, ಅತಿಥಿ ಇವರನ್ನು ದೇವರೆಂದು ಭಾವಿಸು. ನಿರ್ದುಷ್ಟವಾದ ಕರ್ಮಗಳನ್ನೇ ಆಚರಿಸಬೇಕು. ಇದಕ್ಕಿಂತ ಬೇರೆ ಯಾವ ಕರ್ಮಗಳನ್ನೂ ಮಾಡಬಾರದು. ನಮ್ಮ ಯಾವ ಸತ್ಕರ್ಮಗಳಿವೆಯೋ ಅವನ್ನೇ ನೀನು ಆಚರಿಸಬೇಕು" ಇಲ್ಲಿ ಯಥಾರ್ಥವಾಗಿ ಬ್ರಹ್ಮವಿದ್ಯೆಗೆ ಅಂಗವಾಗಿ ಮಾತಾಪಿತ್ರಾದಿ ಸೇವೆಯನ್ನು ಆಚರಿಸಬೇಕೆಂದು ಹೇಳಿರುವುದರಿಂದ ಬ್ರಹ್ಮವಿದ್ಯೆ ಕರ್ಮಕ್ಕೆ ಅಂಗವೆನಿಸಿಲ್ಲ.

ಪುನರ್ಹೇತ್ವಂತರಮಾಹ. ನಿಯಮಾತ್॥ ೭ ॥ "ಯೇ ಕೇ ಚಾಸ್ಮಚ್ಛ್ರೇಯಾಗ್ಂಸೋ ಬ್ರಾಹ್ಮಣಾಃ। ತೇಷಾಂ ತ್ವಯಾಸನೇನ ಪ್ರಶ್ವಸಿತವ್ಯಂ। ಶ್ರದ್ಧಯಾ ದೇಯಂ। ಅಶ್ರದ್ಧಯಾ ಅದೇಯಂ। ಹ್ರಿಯಾ ದೇಯಂ। ಭಿಯಾ ದೇಯಂ। ಸಂವಿದಾ ದೇಯಂ।" ಇತ್ಯಾದಿನಾ ತಥಾ ನಿಯಮವಿಧಿತ್ವೇನ ಸರ್ವೇಷಾಂ ಕರ್ಮಣಾಂ ಬ್ರಹ್ಮವಿದ್ಯಾಂಗತ್ವಪ್ರತಿಪಾದನಾತ್ ನಾನ್ಯಾರ್ಥೋ ಯುಕ್ತಃ.

ಮತ್ತೆ ಬೇರೆ ಕಾರಣವನ್ನು ತಿಳಿಸುತ್ತಾನೆ. "ನಮ್ಮ ಹಿತಚಿಂತಕರು ಯಾರು ಇರುವರೋ ಅವರೊಡನೆ ನೀನು ಸಮಾಲೋಚನೆಮಾಡಬೇಕು. ಶ್ರದ್ಧೆಯಿಂದ ದಾನಮಾಡಬೇಕು. ಅಶ್ರದ್ಧೆಯಿಂದ ಏನನ್ನು ಕೊಡಬಾರದು. ಲಜ್ಜೆಯಿಂದಲೂ ಭಯದಿಂದಲೂ ವಿವೇಕದಿಂದಲೂ ದಾನಮಾಡಬೇಕು." ಈ ಶ್ರುತಿಯಲ್ಲಿ ಕರ್ಮಕ್ಕೆ ಒಂದು ನಿಯಮವನ್ನು ವಿಧಿಸಿರುವುದರಿಂದ ಅದನ್ನು ಬ್ರಹ್ಮವಿದ್ಯೆಗೆ ಅಂಗವೆಂದು ತಿಳಿಸಲಾಗಿದೆ. ಆದ್ದರಿಂದ ವಿದ್ಯೆಯೇ ಎಲ್ಲಕ್ಕೂ ಹೆಚ್ಚಿನದೆಂಬುದೇ ಯುಕ್ತವಾಗಿದೆ.

ಏವಂ ತೈತ್ತಿರೀಯಶ್ರುತ್ಯಾ ಕರ್ಮಣಃ ವಿದ್ಯಾಂಗತ್ವಂ ಪ್ರಸಾಧ್ಯ ತದೇವ ಸತ್ಯಮಿತಿ ಸ್ವಮತಂ ದರ್ಶಯತಿ. ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್ ॥ ೮ ॥ ತುಶಬ್ದೋಽತ್ರ ನಿಶ್ಚಯಾರ್ಥಃ. ವಿದ್ಯಾ ಅತ ಏವ ಪುರುಷಾರ್ಥಃ, ಅಧಿಕೋಪದೇಶಾತ್. ಕರ್ಮಸು ಕರ್ತೃಜೀವವತ್ ಹೇಯಪ್ರತ್ಯನೀಕಾನವಧಿಕಾತಿಶಯಸಂಖ್ಯೇಯಕಲ್ಯಾಣಗುಣಾಕರತ್ವೇನ ಅಧಿಕಸ್ಯಾರ್ಥಾಂತರಭೂತಸ್ಯ ಶಿವಸ್ಯ ಪರಬ್ರಹ್ಮಣೋ ವೇದ್ಯತಯೋಪದೇಶಾತ್ ಭಗವತೋ ಬಾದರಾಯಣಸ್ಯ ವಿದ್ಯಾ ತಪಃಫಲಮಿತ್ಯೇವಮೇವ ಮತಂ. ಲಿಂಗಾನಿ ತಿಷ್ಠಂತು. ವೇದ್ಯ

ತಯೋಪದೇಶಸ್ತು ತಾವತ್ಕರ್ತುಃ ಪ್ರತ್ಯಗಾತ್ಮನೋಽಧಿಕಸ್ಯೈವ. ಕಥಂ? ತದ್ದರ್ಶನಾತ್. ಪ್ರತ್ಯಗಾತನ್ಯಶುದ್ಧೇ ಶುದ್ಧೇಽಪ್ಯಸಂಭಾವನೀಯಾನಂತ ಗುಣಾಕರಸ್ಯ ಮಹನೀಯಸ್ಯ ವೇದ್ಯಸ್ಯ ನಿರಸ್ತನಿಖಿಲಹೇಯಗಂಧಸ್ಯ ಸ್ವಸಂಕಲ್ಪಕೃತಜಗದುದಯವಿಭವಲಯಲೀಲಸ್ಯ ಸರ್ವಜ್ಞಸ್ಯ ಸರ್ವಶಕ್ತೇ ರ್ವಾಙ್ಮನಸಾಽಪರಿಚ್ಛೇದ್ಯಾನಂದಸ್ಯ ಜೀವಾಧಿಪಸ್ಯ ಕೃತ್ಸ್ನಪ್ರಶಾಸಿತು ಶ್ಶಿವಸ್ಯ ಬ್ರಹ್ಮಣೋ ವೇದನೋಪದೇಶವಾಕ್ಯೇಷು ದರ್ಶನಾತ್. "ಅಪ ಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಃ ಸತ್ಯಕಾಮಸ್ಸತ್ಯಸಂಕಲ್ಪಃ" "ತದೈಕ್ಷತ ಬಹು ಸ್ಯಾಂ ಪ್ರಜಾಯೇಯ" "ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ" ಇತ್ಯಾದಿಷು ವೇದನೋಪದೇಶಶಬ್ದೇಷು ಕರ್ತುಃ ಪ್ರತ್ಯಗಾತ್ಮನಃ ಖದ್ಯೋತಕಲ್ಪ ಸ್ಯ ಅವಿದ್ಯಾದಿಹೇಯಸಂಬಂಧಯೋಗ್ಯಸ್ಯ ಗಂಧೋ ನಾಸ್ತೀತಿ ಪರಮ ಪುರುಷಶಿವವಿಷಯಾಯಾಃ ವಿದ್ಯಾಯಾಃ ತತ್ಪ್ರಾಪ್ತಿರೂಪಮಮೃತತ್ವಂ ತತ್ರತತ್ರ ಶ್ರೂಯಮಾಣಂ ಫಲಮಿತಿ ವಿದ್ಯಾತಃ ಪುರುಷಾರ್ಥ ಇತ್ಯುಕ್ತಂ.

ತೈತ್ತಿರೀಯಶ್ರುತಿಯಲ್ಲಿ ಕರ್ಮವನ್ನು ಬ್ರಹ್ಮವಿದ್ಯೆಗೆ ಅಂಗವೆಂದು ತಿಳಿಸಿ ಅದೇ ತಮಗೂ ಸಮ್ಮತವೆಂದು ಬಾದರಾಯಣರು ಇಲ್ಲಿ ತಿಳಿಸುತ್ತಾರೆ. ಕರ್ಮಗಳನ್ನಾ ಚರಿಸುವ ಜೀವನಿಗಿಂತಲೂ ಅನಂತ ಕಲ್ಯಾಣಗುಣಕರನೂ ನಿರ್ಗುಣನೂ ಆದ್ದರಿಂದ ಅಧಿಕನೆನಿಸಿದ ಪರಶಿವಬ್ರಹ್ಮವೇ ಮುಮುಕ್ಷುಗಳೆಲ್ಲರಿಗೂ ತಿಳಿಯಲರ್ಹವಾದವನೆಂದು ವೇದಾಂತದಲ್ಲಿ ಉಪದೇಶಿಸಿರುವುದರಿಂದ ಜ್ಞಾನವೇ ತಪಸ್ಸೆಂಬ ಕರ್ಮದ ಫಲವೆಂದು ಪೂಜ್ಯಬಾದರಾಯಣರು ಅಭಿಪ್ರಾಯಪಡುತ್ತಾರೆ. ಪರಶಿವಬ್ರಹ್ಮವೇ ಅಧಿಕ ವೆಂಬುದಕ್ಕೆ ಲಿಂಗಗಳು ಹಾಗಿರಲಿ, ಅವನೇ ಮುಮುಕ್ಷುಗಳಿಗೆ ವೇದ್ಯನೆಂದು ಇಲ್ಲಿ ಹೇಳಿರುವ ಉಪದೇಶವು ಅವನನ್ನು ಜೀವನಿಗಿಂತಲೂ ಅಧಿಕನೆಂಬುದನ್ನು ಹೇಗೆ ತಿಳಿಸುತ್ತದೆ? ಅಶುದ್ಧನಾದ (ಸಂಸಾರಿ) ಜೀವನಲ್ಲೂ, ಶುದ್ಧವಾದ ಮುಕ್ತಜೀವನಲ್ಲೂ ಸಂಭವಿಸದಿರುವಷ್ಟು ಹೆಚ್ಚುಕಲ್ಯಾಣಗುಣಗಳಿದ್ದು ದೋಷಲೇಶವೂ ಇಲ್ಲದೆ ಸಂಕಲ್ಪ ಮಾತ್ರದಿಂದಲೇ ಜಗದ್ವ್ಯಾಪಾರಗಳನ್ನು ಲೀಲೆಯಿಂದ ನಡೆಸುತ್ತ ಮಹನೀಯನೂ ಸರ್ವಜ್ಞನೂ ಸರ್ವಶಕ್ತನೂ ವಾಙ್ಮನಸ್ಸುಗಳಿಗೆ ಅಗೋಚರನೂ ಆನಂದಮಯನೂ ಸರ್ವಶಾಸಕನೂ ಜೀವಸಿಗಧಿಪತಿಯೂ ಆದ ಪರಶಿವಬ್ರಹ್ಮದ ಜ್ಞಾನವನ್ನೇ ಶ್ರುತಿ ವಾಕ್ಯಗಳಲ್ಲಿ ಉಪದೇಶಿಸಿರುವುದಾಗಿ ಕಂಡುಬಂದಿದೆ. "ಪಾಪವಿಲ್ಲದೆ, ಜರಾಮರಣ ಗಳಿಲ್ಲದೆ, ಶೋಕಮೋಹಗಳಿಲ್ಲದೆ, ಕ್ಷುತ್ತೃಷೆಗಳಿಲ್ಲದೆ, ಸತ್ಯಕಾಮನೂ ಸತ್ಯಸಂಕ ಲ್ಪನೂ, ಆಗಿದ್ದಾನೆ" "ಬ್ರಹ್ಮದ ಆನಂದವನ್ನು ತಿಳಿದವನು ಯಾವುದಕ್ಕೂ ಹೆದರುವು ದಿಲ್ಲ" "ಇವನ ಆಜ್ಞೆಯಿಂದಲೇ ದೇವತೆಗಳೆಲ್ಲರೂ ತಮ್ಮ ಕಾರ್ಯಗಳಲ್ಲಿ ನಿರತರಾಗಿ ದ್ದಾರೆ" ಬ್ರಹ್ಮಜ್ಞಾನವನ್ನು ತಿಳಿಸುವ ಶ್ರುತಿವಾಕ್ಯಗಳಲ್ಲಿ ಮಿಂಚಿನಹುಳದಂತೆ ಅಲ್ಪಪ್ರಕಾಶನಾದ ಕರ್ತೃಜೀವನಿಗೆ ಸಂಪರ್ಕವೇ ಇಲ್ಲವಾದ್ದರಿಂದ ಈ ವಾಕ್ಯಗ

ಳೆಲ್ಲವೂ ಪರಮಪುರುಷನಾದ ಪರಶಿವನನ್ನೇ ಪ್ರತಿಪಾದಿಸುತ್ತವೆ.

ಅಸ್ಮಿನ್ನರ್ಥೇ ಪುನರ್ಹೇತ್ವಂತರಮಾಹ. ತುಲ್ಯಂ ತು ದರ್ಶನಂ ॥ ೯ ॥ ಯದುಕ್ತಂ ಬ್ರಹ್ಮವಿದಾಂ ಕರ್ಮಾನುಷ್ಠಾನದರ್ಶನಾತ್ ವಿದ್ಯಾಯಾಃ ಕರ್ಮಾಂಗತ್ವಮಿತಿ, ತನ್ನ ವಿದ್ಯಾಯಾಃ ಅಸಂಗತ್ವೇಽಪಿ ತುಲ್ಯದರ್ಶನಂ ಬ್ರಹ್ಮವಿದಾಂ ಕರ್ಮಾನುಷ್ಠಾನದರ್ಶನಂ ಅನೈಕಾಂತಿಕ ಮಿತ್ಯರ್ಥಃ, ಅನುಷ್ಠಾನಸ್ಯಾಪಿ ದರ್ಶನಾತ್. ದೃಶ್ಯತೇ ಹಿ ಬ್ರಹ್ಮ ವಿದಾಂ ಕರ್ಮತ್ಯಾಗಃ "ಋಷಯಃ ಕಾವಷೇಯಾಃ, ಕಿಮರ್ಥಂ ವಯ ಮಧ್ಯೇಷ್ಯಾಮಹೇ? ಕಿಮರ್ಥಂ ವಯಂ ಯಕ್ಷ್ಯಾಮಹೇ? ಕಿಂ ಪ್ರಜಯಾ ಕರಿಷ್ಯಾಮಃ?" ಇತ್ಯಾದೌ. ಅತೋ ಬ್ರಹ್ಮವಿದಾಂ ಕರ್ಮ ತ್ಯಾಗದರ್ಶನಾತ್ ನ ವಿದ್ಯಾ ಕರ್ಮಾಂಗಂ. ಕಥಮಿದಮುಪಪದ್ಯತೆ? ಬ್ರಹ್ಮವಿದಾಂ ಕರ್ಮಾನುಷ್ಠಾನಮನನುಷ್ಠಾನಂ ಚ ಫಲಾಭಿಸಂಧಿರಹಿ ತಸ್ಯ ಯಜ್ಞಾದಿಕರ್ಮಣೋ ಬ್ರಹ್ಮವಿದ್ಯಾಂಗತ್ವಾತ್ ತಥಾವಿಧಸ್ಯ ಕರ್ಮಣೋ ಮೋಕ್ಷೈಕಫಲಬ್ರಹ್ಮವಿದ್ಯಾವಿರೋಧಿತ್ವಾತ್ ತಸ್ಯಾನು ಷ್ಠಾನದರ್ಶನಂ ಉಪಪನ್ನತರಂ.

ಈಬಗ್ಗೆ ಬೇರೊಂದು ಕಾರಣವನ್ನು ಹೇಳುತ್ತಾನೆ. ಬ್ರಹ್ಮಜ್ಞಾನಿಗಳೂ ಕರ್ಮವನ್ನಾಚರಿಸುವುದಾಗಿ ಕಂಡುಬಂದಿರುವುದರಿಂದ ಜ್ಞಾನವು ಕರ್ಮಕ್ಕೆ ಅಂಗವೆಂದು ಹೇಳಿದ್ದು ಸಮಂಜಸವಲ್ಲ; ಯಾಕೆಂದರೆ ಜ್ಞಾನವು ಕರ್ಮಕ್ಕೆ ಅಂಗವಲ್ಲದಿದ್ದರೂ ಜ್ಞಾನಿಗಳು ಕರ್ಮವನ್ನಾಚರಿಸುತ್ತಿರುವುದಾಗಿಯೇ ಕಂಡು ಬಂದಿದೆ. ಆದರೆ ಬ್ರಹ್ಮಜ್ಞಾನಿಗಳು ಕರ್ಮವನ್ನು ತೊರೆಯುವುದಾಗಿಯೂ ಕೆಲವು ಕಡೆ ಹೇಳಿದೆ. "ನಾವು ಯಾತಕ್ಕಾಗಿ ಅಧ್ಯಯನಮಾಡಬೇಕು? ಯಾತಕ್ಕಾಗಿ ಯಾಗಮಾಡಬೇಕು? ಸಂತಾನದಿಂದ ನಮಗೇನು ಫಲ? ಹೀಗೆ ಋಷಿಗಳು ಕರ್ಮವನ್ನು ತೊರೆದಿದ್ದರೆಂದು ಕಂಡುಬಂದಿರುವುದರಿಂದ ವಿದ್ಯೆ ಕರ್ಮಕ್ಕೆ ಅಂಗವಾ ಗಲಾರದು. ಹಾಗಾದರೆ ಇವೆರಡು ಮತಗಳು ಹೇಗೆ ಹೊಂದಿಕೆಯಾಗುತ್ತವೆ? ಅಂದರೆ ಇದಕ್ಕೆ ಸಮಾಧಾನವನ್ನು ಹೀಗೆ ಹೇಳಬಹುದು. ಬ್ರಹ್ಮಜ್ಞಾನಿಗಳು ಯಜ್ಞಾದಿಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆಯೇ ಮಾಡುತ್ತಾರೆಯಾದ್ದರಿಂದ ಅವರ ಕರ್ಮವು ಜ್ಞಾನಕ್ಕೆ ಅಂಗವಾಗುತ್ತದೆ. ಆಬಗೆಯ ಕರ್ಮವು ಮೋಕ್ಷಸಾಧನವಾದ ಬ್ರಹ್ಮವಿದ್ಯೆಗೆ ಎಂದಿಗೂ ವಿರೋಧವಾಗಲಾರದು. ಆದ್ದರಿಂದ ಅವರು ಕರ್ಮಮಾಡು ವುದು ಯುಕ್ತವೇ ಆಗಿದೆ.

ವಿದ್ಯಾಯಾಃ ಕರ್ಮಾಂಗತ್ವೇ ಕರ್ಮತ್ಯಾಗಃ ಕಥಮಪಿ ನೋಪಪ ದ್ಯತೇ. "ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ ಭವತಿ" ಇತಿ ಶ್ರುತಿಃ ವಿದ್ಯಾಯಾಃ ಕರ್ಮಾಂಗತ್ವಮವಗಮಯತೀತ್ಯಾಶಂಕಾಯಾ ಮಾಹ. ಅಸಾರ್ವತ್ರಿಕೀ ॥ ೧೦ ॥ ನ ದಹರಶಾಂಡಿಲ್ಯವೈಶ್ವಾನರೋಪ

ಕೋಸಲಭೂಮಾದಿಸರ್ವವಿಷಯೇಯಂ ಶ್ರುತಿಃ ಅಪಿತು ಉದ್ಗೀಥ ವಿದ್ಯಾವಿಷಯ್ಯೇವ. "ಯದೇವ ವಿದ್ಯಯಾ ಕರೋತಿ" ಇತಿ ಯಚ್ಛಬ್ದಸ್ಯ ಅನಿರ್ಧಾರಿತವಿಶೇಷಸ್ಯ "ಉದ್ಗೀಥಮುಪಾಸೀತ" ಇತಿ ಪ್ರಸ್ತುತೋ ದ್ಗೀಥವಿಶೇಷನಿಷ್ಠತ್ವಾತ್. ನಹಿ ಯತ್ಕರೋತಿ ಯದ್ವಿದ್ಯಯೇತಿ ಸಂಬ ಧ್ಯತೇ, ವಿದ್ಯಯಾ ಕ್ರಿಯಮಾಣಂ ಯಚ್ಛಬ್ದೇನ ನಿರ್ದಿಶ್ಯ ತಸ್ಯ ಹಿ ವೀರ್ಯವತ್ತರತ್ವಮುಚ್ಯತೇ.

ಜ್ಞಾನವು ಕರ್ಮಕ್ಕೆ ಅಂಗವಾಗುವುದಾದರೆ ಕರ್ಮವೇ ಪ್ರಧಾನವೆನಿಸುವುದರಿಂದ ಅದನ್ನು ಎಂದಿಗೂ ತೊರೆಯಲಾಗುವುದೇ ಇಲ್ಲ. "ಅರಿತು ಮಾಡುವ ಕ್ರಿಯೆ ಬಲಿಷ್ಠ ವಾಗುತ್ತದೆ" ಎಂಬ ಶ್ರುತಿಯಲ್ಲಿ ಜ್ಞಾನವು ಕರ್ಮಕ್ಕೆ ಅಂಗವಾಗಿರುವುದಾಗಿಯೇ ತಿಳಿದುಬರುತ್ತದೆ ಎಂದಾಶಂಕಿಸಿ ಸಮಾಧಾನಮಾಡುತ್ತಾನೆ. ಈ ಶ್ರುತಿಯು ದಹರ ಮೊದಲಾದ ಎಲ್ಲಾ ಉಪಾಸನೆಗಳಿಗೂ ಅನ್ವಯಿಸದೆ ಉದ್ಗೀಥವಿದ್ಯೆಯೊಂದಕ್ಕೇ ಅನ್ವಯಿಸುತ್ತದೆ. "ಯಾವುದನ್ನು ತಿಳಿದುಮಾಡುತ್ತಾನೆಯೋ" ಎಂಬಲ್ಲಿ ಯತ್ಪದವು ವಸ್ತುವನ್ನು ತಿಳಿಸದೆಇದ್ದರೂ ಪ್ರಕರಣಕ್ಕೆ ಅನ್ವಯಿಸುವಂತೆ ಉದ್ಗೀಥವಿಶೇಷವನ್ನೇ ತಿಳಿಸುತ್ತದೆ. "ಯಾವುದನ್ನು ತಿಳಿದು ಯಾವುದನ್ನು ಮಾಡುತ್ತಾನೆಯೋ" ಎಂದು ಅಲ್ಲಿ ಅರ್ಥವನ್ನು ಹೇಳಿದರೆ ಜ್ಞಾನ ಕ್ರಿಯೆಗಳಿಗೆ ಪರಸ್ಪರ ಸಂಬಂಧವೇ ತಪ್ಪಿ ಹೋಗುತ್ತದೆ. "ತಿಳಿದುಮಾಡುವುದೇ ಬಲಿಷ್ಠವಾಗುತ್ತದೆ" ಎಂಬಲ್ಲಿ ಒಂದೇ ವಸ್ತು ವಿನಲ್ಲಿಯೇ ಜ್ಞಾನ ಕ್ರಿಯೆಗಳೆರಡೂ ಇರುವುವೆಂಬ ಅಂಶ ಸ್ಪಷ್ಟವಾಗಿದೆ. ಯತ್ಪ ದವು ತಿಳಿಸಿದ್ದನ್ನೇ ತತ್ಪದವೂ ತಿಳಿಸಿ ಅದನ್ನೇ ವೀರ್ಯವತ್ತರವೆಂದು ಶ್ರುತಿಯಲ್ಲಿ ಉಪದೇಶಿಸಲಾಗಿದೆ.

ಯಚ್ಚೋಕ್ತಂ "ತಂ ವಿದ್ಯಾಕರ್ಮಣೀ ಸಮನ್ವಾರಭೇತೇ ಪೂರ್ವಪ್ರಜ್ಞಾ ಚ" ಇತಿ ಶ್ರುತೌ ಆತ್ಮಜ್ಞಾನಕರ್ಮಣೋಃ ಅಂಗಾಂಗಿ ಭಾವೇನ ಮಿಳಿತಯೋಃ ಸ್ವರ್ಗಲೋಕಪ್ರಾಪ್ತಿಸಾಧನತ್ವಕಥನಾತ್ ಬ್ರಹ್ಮ ಜ್ಞಾನಸ್ಯ ಸ್ವಾತಂತ್ರ್ಯೇಣ ಮೋಕ್ಷಸಾಧನತ್ವಮಯುಕ್ತ ಮಿತ್ಯಾಶಂಕ್ಯಾಹ.

ವಿಭಾಗಶ್ಶತವತ್ ॥ ೧೧ ॥ "ತಂ ವಿದ್ಯಾಕರ್ಮಣೀ ಸಮನ್ವಾರಭೇತೇ" ಇತ್ಯತ್ರೋಕ್ತೇನ ನ್ಯಾಯೇನ ವಿದ್ಯಾಕರ್ಮಣೋರ್ಭಿನ್ನಫಲತ್ವಾತ್ ವಿದ್ಯಾ ಸ್ವಸ್ಮೈಫಲಾಯ ಸಮನ್ವಾರಭತೇ ಕರ್ಮ ಚ ಪರಸ್ಮೈ ಫಲಾ ಯೇತಿ ವಿಭಾಗೋ ದ್ರಷ್ಟವ್ಯಃ. ಕಿಂಚ ವಿದ್ಯಾಶಬ್ದೇನಾಮೂರ್ತಪರಶಿವ ಜ್ಞಾನಂ ಮೂರ್ತಪರಶಿವಜ್ಞಾನಂ ಚ ಪ್ರೋಚ್ಯತೇ. ನಿರವಯವತತ್ತ್ವ ಜ್ಞಾನಿನಾಂ "ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ" ಇತಿ ಇಹೈವ ಸೂಕ್ಷ್ಮಶರೀರವಿಲಯಪೂರ್ವಕಂ ಅತ್ರೈವ ಪರಶಿವಬ್ರಹ್ಮೈಕತ್ವಪ್ರತಿಪಾದಿತತ್ವಾತ್ ಪರಲೋಕಗಮನ ಪ್ರಸಕ್ತ್ಯಸಂಭವೇನ ವಿದ್ಯಾಶಬ್ದೇನ ಮೂರ್ತಪರಶಿವಬ್ರಹ್ಮೋಪಾಸನೈವ

ಗೀಯತೇ. ಏವಂಸ್ಥಿತೇ ಸತಿ "ತಂ ವಿದ್ಯಾಕರ್ಮಣೀ ಸಮನ್ವಾರಭೇತೇ" ಇತಿ ಶ್ರುತೌ ವಿಭಾಗೋ ನಿಶ್ಚೀಯತೇ. ತಂ ದೇವಯಾನಮಾರ್ಗೇಣ ಪರಶಿವಬ್ರಹ್ಮಲೋಕಂ ಗಚ್ಛಂತಂ ಮೂರ್ತಬ್ರಹ್ಮೋಪಾಸಕಂ ವಿದ್ಯಾ ಮೂರ್ತಶಿವೋಪಾಸನಾ ಸಮನ್ವಾರಭತೇ, ಅನುಸೃತ್ಯ ಗಚ್ಛತಿ. ತಂ ಧೂಮಾದಿಮಾರ್ಗೇಣ ಸ್ವರ್ಗಲೋಕಂ ಗಚ್ಛಂತಂ ಕರ್ಮಿಣಂ ಜ್ಯೋತಿಷ್ಟೋಮಾದಿ ರೂಪಂ ಕರ್ಮ ಚ ಸಮನ್ವಾರಭತೇ" ಇತ್ಯೇವಂ ಕಥಂ ವಿಭಾಗೋಽವಗಮ್ಯತೇ? ಶತವತ್. ಯಥಾ ಕ್ಷೇತ್ರರತ್ನವಿಕ್ರಯಿಣಂ ಶತದ್ವಯಮಸ್ಮೈ ತ್ಯಕ್ತೇ ಕ್ಷೇತ್ರಾರ್ಥಂ ಶತಂ, ರತ್ನಾರ್ಥಂ ಶತಂ ಇತಿ ವಿಭಾಗಃ ಪ್ರತೀಯತೇ. ತದ್ವದಿಹಾಪಿ ವೇದಿತವ್ಯಂ. ಉತ ಶತವದಿತ್ಯತ್ರ ದ್ವಯೋರ್ಬ್ರಾಹ್ಮಣಯೋಃ ಶತಂ ಪರ್ಣಾ ಇತಿ ವಾಕ್ಯೇ ಏಕಸ್ಯ ಬ್ರಾಹ್ಮಣಸ್ಯ ಪಂಚಾಶತ್ಪರ್ಣಾ ದಾತವ್ಯಾಃ, ಅನ್ಯಸ್ಯ ಬ್ರಾಹ್ಮಣಸ್ಯ ಪಂಚಾಶತ್ಪರ್ಣಾ ದಾತವ್ಯಾ ಇತಿ ವಿಭಾಗೋ ಯಥಾ ನಿಶ್ಚೀಯತೇ ತದ್ವನ್ಮೂರ್ತಪರಶಿವಬ್ರಹ್ಮೋಪಾಸನಾ ಕರ್ಮಣೋಃ ಸ್ವಾತಂತ್ರ್ಯೇಣ ಪ್ರತ್ಯೇಕಂ ಮೂರ್ತಪರಶಿವಬ್ರಹ್ಮಲೋಕ ಸ್ವರ್ಗಲೋಕಪ್ರಾಪ್ತಿ ಸಾಧನಸ್ಯೋಕ್ತತ್ವಾತ್ ಉಭಯೋರ್ಮಿಳಿತ್ವಾ ಪರಶಿವಬ್ರಹ್ಮಲೋಕಪ್ರಾಪ್ತಿಂ ಪ್ರತಿ ವಾ ಸಾಧನತ್ವಮಿತಿ ಸಂಶಯೋ ಜ್ಯೋತಿಷ್ಟೋಮಾದಿಕರ್ಮೋಪಾಸಕಾನಾಂ ಸ್ವರ್ಗಲೋಕಾನುಭವಃ, ಮೂರ್ತಪರಶಿವಬ್ರಹ್ಮೋಪಾಸಕಾನಾಂ ನಿರತಿಶಯಾನಂದಸ್ವಭಾವನಿತ್ಯನಿರುಪಮಾದ್ವಿತೀಯಪರಶಿವ ಲೋಕಕಲ್ಯಾಣವಿಭೂತ್ಯಾತ್ಮಕಸಾಲೋಕ್ಯಾದಿ ಮುಕ್ತಿತ್ರಯವೈಭವಾನಂದಸಾಮರಸ್ಯಪ್ರಾಪ್ತಿಶ್ಚೇತಿ ವಿಭಾಗೋಽಪ್ಯುಪದಿಶ್ಯತೇ. ನನು "ತಂ ವಿದ್ಯಾಕರ್ಮಣೀ ಸಮನ್ವಾರಭೇತೇ" "ತಂ ಸ್ವರ್ಗಲೋಕಂ ಗಚ್ಛಂತಂ ಕರ್ಮಿಣಂ ವಿದ್ಯಾಕರ್ಮಣೀ" ಇತಿ ವಾಕ್ಯೇ ವಿದ್ಯಾಶಬ್ದೇನ ಕರ್ಮಾಂಗಭೂತಶರೀರೇಂದ್ರಿಯಮನಃ ಪ್ರಾಣಾದ್ಯತಿರಿಕ್ತಂ ಜೀವಜ್ಞಾನಂ ಪಶುಪಾಶನಿಯಾಮಕಶಿವಜ್ಞಾನಂ ಚೋಚ್ಯತೇ. ಕರ್ಮಶಬ್ದೇನ ತದಂಗಮಗ್ನಿಹೋತ್ರಾದಿಕಮುಚ್ಯತೇ. ಅನುಸೃತ್ಯಗಚ್ಛತೀತಿ ವಾಕ್ಯೇ ಕರ್ಮಜ್ಞಾನಯೋರುಭಯೋರೇಕತ್ವಾವಗಮಾತ್ ನ ವೈಲಕ್ಷಣ್ಯಮಿತಿ ಚೇದುಚ್ಯತೇ ಶರೀರೇಂದ್ರಿಯಾದ್ಯತಿರಿಕ್ತಜೀವಜ್ಞಾನಸ್ಯ ಶಿವೋಪಾಸನಾಂಗಭೂತತ್ವಾತ್ ಜೀವಬ್ರಹ್ಮಭೇದೋಪಾಸನಜ್ಞಾನಸ್ಯ ಶಿವತ್ವಪ್ರಾಪ್ತಿಹೇತುತ್ವಾಚ್ಚ ತದುಭಯಂ ವಿಧೇಯಂ. ದೇಹೇಂದ್ರಿಯಮನಃಪ್ರಾಣಜೀವೈಕ್ಯಜ್ಞಾನಾನುಸರಣಜ್ಯೋತಿಷ್ಟೋಮಾದಿಕರ್ಮಾಚರಣಸ್ಯ ಸ್ವರ್ಗಲೋಕಪ್ರಾಪ್ತಿಫಲಮುಚ್ಯತೇ. ತಸ್ಮಾತ್ ಶರೀರೇಂದ್ರಿಯಾದ್ಯಭಿಮಾನಜೀವಜ್ಞಾನಸ್ಯೈವ ಕರ್ಮಾಂಗತ್ವಮಿತಿ ನಿಶ್ಚೀಯತೇ.

"ಜ್ಞಾನಕರ್ಮಗಳೆರಡೂ ಅವನಲ್ಲಿ ಬೆರೆತಿವೆ. ಹೀಗೆಯೇ ಹಿಂದಿನ ಜ್ಞಾನವೂ

ಇರುತ್ತದೆ. ” ಎಂಬ ಶ್ರುತಿಯಲ್ಲಿ ಜ್ಞಾನಕರ್ಮಗಳೆರಡೂ ಅಂಗಾಂಗಿಭಾವದಿಂದ ಕೂಡಿಕೊಂಡು ಸ್ವರ್ಗಲೋಕವನ್ನು ದೊರಕಿಸುತ್ತವೆ ಎಂದು ಹೇಳಿರುವುದರಿಂದ ಬ್ರಹ್ಮಜ್ಞಾನವು ಸ್ವತಂತ್ರವಾಗಿ ಮೋಕ್ಷವನ್ನು ಸಾಧಿಸಲಾರದೆಂದು ಆಶಂಕಿಸಿ ಸಮಾಧಾನಮಾಡುತ್ತಾನೆ.“ಅವನಲ್ಲಿ ಜ್ಞಾನಕರ್ಮಗಳು ಸೇರಿಕೊಂಡಿವೆ.”ಎಂಬಲ್ಲಿ ಹೇಳಿದ ನ್ಯಾಯದಿಂದ ಅವೆರಡೂ ಬೇರೆಬೇರೆ ಫಲಗಳನ್ನು ಕೊಡುತ್ತವೆಂದೇ ತಿಳಿಯಬೇಕು. ಜ್ಞಾನವು ಅದರ ಫಲಕ್ಕಾಗಿಯೂ ಅಂದರೆ ಮೋಕ್ಷಕ್ಕೂ, ಕರ್ಮವು ಅದರ ಫಲಕ್ಕಾಗಿಯೂ ಅಂದರೆ ಸ್ವರ್ಗಾದಿಗಳಿಗಾಗಿಯೂ ವಿಹಿತವಾಗಿವೆ. ಹೀಗೆ ಎರಡೂ ಬೇರೆಬೇರೆ ಫಲಗಳನ್ನು ಕೊಡುವುದರಿಂದ ಅವಕ್ಕೆ ಅಂಗಾಂಗಿಭಾವವಿಲ್ಲ. ಇಲ್ಲಿ ಜ್ಞಾನವೆಂದರೆ ಅಮೂರ್ತಪರಶಿವನ ಜ್ಞಾನವೋ ಅಥವಾ ಮೂರ್ತಪರಶಿವನ ಜ್ಞಾನವೋ ಆಗುತ್ತದೆ. ಅಮೂರ್ತಶಿವನ ಜ್ಞಾನವನ್ನು ಪಡೆದವರಿಗೆ ಸೂಕ್ಷ್ಮಶರೀರವು ನಷ್ಟವಾಗುವುದರಿಂದ ಇಲ್ಲಿಯೇ ಶಿವೈಕ್ಯವುಂಟಾಗುವುದೆಂದು ಶ್ರುತಿಯಲ್ಲಿ ತಿಳಿಸಲಾಗಿದೆ. ಅವರಿಗೆ ಅದಕ್ಕಾಗಿ ಪರಲೋಕಕ್ಕೆ ಹೋಗುವ ಪ್ರಸಂಗವೇ ಇಲ್ಲವಾದ್ದರಿಂದ ಜ್ಞಾನಶಬ್ದವು ಮೂರ್ತಪರಶಿವನ ಜ್ಞಾನಕ್ಕೆ ಅನ್ವಯಿಸುತ್ತದೆ. ಹೀಗೆ ಇರುವುದರಿಂದಲೇ “ ಅವನಲ್ಲಿ ಜ್ಞಾನಕರ್ಮಗಳು ಹೊಂದಿಕೊಂಡಿವೆ” ಎಂಬ ಶ್ರುತಿಯಲ್ಲಿ ಜ್ಞಾನಕರ್ಮಗಳ ವಿಭಾಗವನ್ನು ನಿಶ್ಚಯಿಸಲಾಗಿದೆ. ದೇವಯಾನಮಾರ್ಗದಿಂದ ಕೈಲಾಸಕ್ಕೆ ಹೋಗುವ ಮೂರ್ತೋಪಾಸಕನನ್ನು ಅವನು ಮಾಡಿದ ಮೂರ್ತೋಪಾಸವು ಅನುಸರಿಸುತ್ತದೆ ಎಂದೂ, ಧೂಮಾದಿಮಾರ್ಗದಿಂದ ಸ್ವರ್ಗಕ್ಕೆ ಹೋಗುವ ಕರ್ಮಿಯನ್ನು ಜ್ಯೋತಿಷ್ಟೋಮಾದಿ ಕರ್ಮವು ಅನುಸರಿಸುತ್ತದೆ ಎಂದೂ ವಿಭಾಗವನ್ನು ಹೇಗೆ ತಿಳಿಯಲಿಕ್ಕಾಗುತ್ತದೆ ? ಅಂದರೆ ಶತವತ್ ಎಂಬ ಪದವು ಈ ಬಗೆಯ ವಿಭಾಗದಲ್ಲಿ ಯುಕ್ತಿಯನ್ನು ತಿಳಿಸುತ್ತದೆ. ಭೂಮಿ ಮತ್ತು ರತ್ನಗಳೆರಡನ್ನು ಮಾರಾಟಮಾಡುತ್ತಿರುವವನು ಇವೆರಡಕ್ಕೂ ಇನ್ನೂರು ರೂಪಾಯಿಗಳ ಬೆಲೆಯನ್ನು ಹೇಳಿದರೂ ಭೂಮಿಗೆ ನೂರುರೂಪಾಯಿಗಳೆಂದೂ, ರತ್ನಕ್ಕೆ ನೂರುರೂಪಾಯಿಗಳೆಂದೂ ಬೆಲೆಯಲ್ಲಿ ವಿಭಾಗವು ತಿಳಿದುಬರುತ್ತದೆ. ಅದರಂತೆಯೇ ಇಲ್ಲಿಯೂ ತಿಳಿಯಬೇಕು. ಅಥವಾ ಇಬ್ಬರು ಬ್ರಾಹ್ಮಣರಿಗೆ ನೂರು ನಾಣ್ಯಗಳನ್ನು ಕೊಡಬೇಕು ಎಂಬ ವಾಕ್ಯದಲ್ಲಿ ಒಬ್ಬನಿಗೆ ಐವತ್ತನ್ನೂ ಮತ್ತೊಬ್ಬನಿಗೆ ಐವತ್ತನ್ನೂ ಕೊಡಬೇಕೆಂಬ ವಿಭಾಗವನ್ನು ನಿಶ್ಚಯಿಸಲಾಗಿದೆ. ಅದರಂತೆ ಮೂರ್ತ ಪರಶಿವನ ಜ್ಞಾನ ಮತ್ತು ಜ್ಯೋತಿಷ್ಟೋಮಾದಿ ಕರ್ಮ ಇವೆರಡನ್ನು ಸ್ವತಂತ್ರವಾಗಿ ಕೈಲಾಸಕ್ಕೂ ಸ್ವರ್ಗಕ್ಕೂ ಸಾಧನಗಳೆಂದು ಹೇಳಿದ್ದರಿಂದ ಇವೆರಡೂ ಒಟ್ಟಿಗೆ ಸೇರಿ ಕೈಲಾಸವನ್ನು ದೊರಕಿಸುತ್ತವೆಯೋ ಅಥವಾ ಬೇರೆ ಬೇರೆಯಾಗಿಯೋ ಎಂಬ ಸಂಶಯವು ಬಂದರೆ ಜ್ಯೋತಿಷ್ಟೋಮಾದಿ ಕರ್ಮಗಳನ್ನಾಚರಿಸುವವರು ಸ್ವರ್ಗಸುಖವನ್ನು ಅನುಭವಿಸುವರೆಂದೂ, ಮೂರ್ತೋಪಾಸಕರು ನಿತ್ಯನಿರತಿಶಯಾನಂದವೆನಿಸಿದ ಪರಶಿವನ ಕಲ್ಯಾಣವಿಭೂತಿ ಎಂಬ ಸಾಲೋಕ್ಯ ಸಾಮಿಪ್ಯ ಸಾರೂಪ್ಯಮುಕ್ತಿಗಳ ದಿವ್ಯವೈಭವವನ್ನು ಕೈಲಾಸದಲ್ಲಿ ಅನುಭವಿಸು

ವರೆಂದೂ ವಿಭಾಗವನ್ನು ಶ್ರುತಿಯಲ್ಲಿ ತಿಳಿಸಲಾಗಿದೆ. "ಅವನಲ್ಲಿ ವಿದ್ಯಾ ಕರ್ಮಗಳು ಸೇರಿಕೊಂಡಿವೆ" ಎಂಬ ಶ್ರುತಿಯಲ್ಲಿ ವಿದ್ಯಾಶಬ್ದವು ಕರ್ಮಕ್ಕೆ ಅಂಗವಾದ ಶರೀರ ಇಂದ್ರಿಯ ಮನಸ್ಸು ಪ್ರಾಣಗಳಿಗಿಂತ ಬೇರೆಯಾದ ಜೀವನ ಜ್ಞಾನವನ್ನೂ ಹಾಗೆಯೇ ಜೀವಪ್ರಕೃತಿಗಳಿಗೆ ನಿಯಾಮಕನಾದ ಶಿವನ ಜ್ಞಾನವನ್ನೂ ಬೋಧಿಸುತ್ತದೆ. ಕರ್ಮಶಬ್ದವು ಅಗ್ನಿಹೋತ್ರಾದಿಗಳನ್ನು ತಿಳಿಸುತ್ತದೆ. "ಎರಡೂ ಸೇರಿಕೊಂಡಿವೆ" ಎಂಬಲ್ಲಿ ಅವೆರಡೂ ಒಂದೇ ಆಗಿವೆ ಎಂದು ತಿಳಿದುಬರುವುದರಿಂದ ಅವಕ್ಕೆ ವೈಲಕ್ಷಣ್ಯವೇ ಇಲ್ಲವಾಯಿತೆಂದು ಹೇಳುವುದಾದರೆ ಜೀವನ ಜ್ಞಾನವು ಶಿವೋಪಾಸನೆಗೆ ಅಂಗವಾದ್ದರಿಂದಲೂ ಶಿವಜೀವರು ಭಿನ್ನವೆಂಬ ಜ್ಞಾನವು ಜೀವನಿಗೆ ಶಿವಭಾವವನ್ನು ದೊರಕಿಸಲು ಕಾರಣವಾಗುವುದರಿಂದಲೂ ಅವೆರಡಕ್ಕೂ ವೈಲಕ್ಷಣ್ಯವಿದ್ದೇ ಇದೆ. ದೇಹ ಇಂದ್ರಿಯ ಮನಸ್ಸು ಪ್ರಾಣಗಳೊಡಗೂಡಿದ ಜೀವನು ಜ್ಯೋತಿಷ್ಟೋಮಾದಿಕರ್ಮಗಳನ್ನಾಚರಿಸಿದರೆ ಸ್ವರ್ಗವೇ ಅವನಿಗೆ ಫಲವೆನಿಸುತ್ತದೆ. ಆದ್ದರಿಂದ ಶರೀರ ಇಂದ್ರಿಯ ಮನಸ್ಸುಗಳಲ್ಲಿ ಅಭಿಮಾನಿಸಿದ ಜೀವನ ಜ್ಞಾನವೇ ಕರ್ಮಕ್ಕೆ ಅಂಗವೆಂದು ನಿಶ್ಚಯಿಸಲಾಗಿದೆ.

ಯಚ್ಚೋಕ್ತಂ "ಯ ಏವಂ ವಿದ್ವಾನ್ ಯಜತೇ" ಇತಿ ಶ್ರುತೌ ಶಿವಜ್ಞಾನಿನಾಮಪಿ ಕರ್ಮಾಧಿಕಾರತ್ವಶ್ರವಣಾತ್ ಶಿವಜ್ಞಾನಮಪಿ ಕರ್ಮಾನುಷ್ಠಾನಾಂಗಮೇವೇತಿ ಪುನಃ ಶಂಕಾಯಾಂ ಪರಿಹರಣಾರ್ಥಮಾಹ. **ಅಧ್ಯಯನಮಾತ್ರವತಃ ॥ ೧೨ ॥** ಯದುಕ್ತಂ ವಿದ್ಯಾಕರ್ಮವತಃ ಕರ್ಮವಿಧಾನಾದ್ವಿದ್ಯಾ ಕರ್ಮಾಂಗಮಿತಿ ನೈತದ್ಯುಕ್ತಂ, "ವೇದಮಧೀತ್ಯ" ಇತ್ಯಧ್ಯಯನಮಾತ್ರವತೋ ವಿಧಾನಾನ್ನ ಚಾಧ್ಯಯನವಿಧಿರೇವಾರ್ಥಬೋಧೇ ಪ್ರವರ್ತಯತಿ. ಆಧಾನವದಧ್ಯಯನಸ್ಯಾಕ್ಷರರಾಶಿಗ್ರಹಣಮಾತ್ರೇ ಪರ್ಯವಸಾನಾತ್ ಗೃಹೀತಸ್ಯ ಚ ಸ್ವಾಧ್ಯಾಯಸ್ಯ ಫಲಕರ್ಮಾವಬೋಧಿತ್ವದರ್ಶನಾತ್ ತನ್ನಿರ್ಣಯಫಲೇ ತದರ್ಥವಿಚಾರೇ ಪುರುಷಃ ಸ್ವಯಮೇವ ಪ್ರವರ್ತತೇ. ತತಃ ಕರ್ಮಾರ್ಥೀ ಕರ್ಮಜ್ಞಾನೇ ಪ್ರವರ್ತತೇ. ಮೋಕ್ಷಾರ್ಥೀ ಚ ಬ್ರಹ್ಮಜ್ಞಾನೇ ಇತಿ ನ ವಿದ್ಯಾ ಕರ್ಮಾಂಗಂ. ಯದ್ಯಪ್ಯಧ್ಯಯನವಿಧಿರೇವಾರ್ಥಬೋಧೇ ಪ್ರವರ್ತಯತಿ, ತಥಾಪಿ ನ ವಿದ್ಯಾ ಕರ್ಮಾಂಗಂ, ಅರ್ಥಜ್ಞಾನಾದರ್ಥಾಂತರತ್ವಾದ್ವಿದ್ಯಾಯಾಃ. ಯಥಾ ಜ್ಯೋತಿಷ್ಟೋಮಾದಿಕರ್ಮಸ್ವರೂಪವಿಜ್ಞಾನಾತ್ಫಲಸಾಧನಭೂತಂ ತತ್ಕರ್ಮಾನುಷ್ಠಾನಮರ್ಥಾಂತರಂ ತದರ್ಥಜ್ಞಾನರೂಪಾದ್ಬ್ರಹ್ಮಸ್ವರೂಪವಿಜ್ಞಾನಾದರ್ಥಾಂತರಮೇವ ಧ್ಯಾನಧಾರಣೋಪಾಸನಾದಿಶಬ್ದವಾಚ್ಯಪುರುಷಾರ್ಥಸಾಧನಭೂತಾ ವಿದ್ಯೇತಿ ನ ತ್ವಸ್ಯಾಃ ಕರ್ಮಸಂಬಂಧಗಂಧೋ ವಿದ್ಯತೇ. "ಯ ಏವಂ ವಿದ್ವಾನ್ ಯಜತೇ" "ವಿದ್ವಾನಗ್ನಿಹೋತ್ರಂ ಜುಹುಯಾತ್" ಇತ್ಯಾದಿ ಶ್ರುತಿ

ನಿಷ್ಠವಿದ್ವಚ್ಛಬ್ದೇನ ಕರ್ಮಕಾಂಡಪ್ರಕಾರಣಪಠಿತವೇದಾರ್ಥಜ್ಞಾನ ಪುರುಷವಿಷಯತ್ವಂ ನತು ಬ್ರಹ್ಮಜ್ಞಾನಪುರುಷವಿಷಯತ್ವಂ. ತಸ್ಮಾದ್ವೇದಾಧ್ಯಯನವತಃ ಪಾಣಿನೇಯಕಾಣಾದಧರ್ಮಶಾಸ್ತ್ರವಿಜ್ಞಾನವತಶ್ಚ ಕರ್ಮಾನುಷ್ಠಾನಮಾತ್ರೇ ಅಧಿಕಾರಃ. ಪರಮೇಶ್ವರಾರ್ಪಿತ ಬಹುಜನ್ಮಕೃತಕರ್ಮಾನುಷ್ಠಾನಂ ತು ಪರಂಪರಯಾ ಮೋಕ್ಷಹೇತುರಿತಿ ವಿಧೀಯತೇ.

"ಹೀಗೆ ತಿಳಿದು ಯಾವನು ಅರ್ಚಿಸುತ್ತಾನೆಯೋ" ಎಂಬ ಶ್ರುತಿಯಲ್ಲಿ ಶಿವಜ್ಞಾನಿಗಳಿಗೂ ಕರ್ಮಕ್ಕೆ ಅಧಿಕಾರವಿದೆ ಎಂದು ಹೇಳಿದ್ದರಿಂದ ಶಿವಜ್ಞಾನವೂ ಸಹ ಕರ್ಮಾನುಷ್ಠಾನಕ್ಕೆ ಅಂಗವೇ ಆಯಿತೆಂದಾಶಂಕಿಸಿ ಪರಿಹರಿಸುತ್ತಾನೆ. ತಿಳಿದು ಆಚರಿಸುವವನಿಗೂ ಕರ್ಮವನ್ನು ವಿಧಿಸಿರುವುದರಿಂದ ಜ್ಞಾನವು ಕರ್ಮಕ್ಕೆ ಅಂಗವಾಯಿತೆಂದು ಹೇಳಿದ್ದು ಯುಕ್ತವಲ್ಲ. "ವೇದವನ್ನು ಓದಿ" ಎಂಬಲ್ಲಿ ಅಧ್ಯಯನವನ್ನು ವಿಧಿಸಿದ್ದರೂ ಅದು ಅರ್ಥಜ್ಞಾನಕ್ಕೆ ಅನ್ವಯಿಸುವುದಿಲ್ಲ. ವಸ್ತುಗಳನ್ನು ಸಂಗ್ರಹಿಸಿಡುವಂತೆ ಅಧ್ಯಯನವು ಅಕ್ಷರರಾಶಿಗಳನ್ನು ಶೇಖರಿಸುವುದರಲ್ಲಿಯೇ ಕೊನೆಗೊಳ್ಳುತ್ತದೆ. ಆದರೆ ಕಲಿತ ಅಧ್ಯಯನವು ಫಲವನ್ನೂ ಆಚರಣೆಯನ್ನೂ ತಿಳಿಸುವುದರಿಂದ ಇವೆರಡನ್ನೂ ತಿಳಿಸುವ ಅರ್ಥವಿಚಾರದಲ್ಲಿ ವ್ಯಕ್ತಿಯು ತಾನಾಗಿಯೇ ಪ್ರವರ್ತಿಸುತ್ತಾನೆ. ಆದ್ದರಿಂದ ಕರ್ಮಿಯು ಕರ್ಮಜ್ಞಾನದಲ್ಲಿಯೂ ಮುಮುಕ್ಷುವು ಬ್ರಹ್ಮಜ್ಞಾನದಲ್ಲಿಯೂ ಪ್ರವರ್ತಿಸುತ್ತಾನೆ. ಇದರಿಂದ ಜ್ಞಾನವು ಕರ್ಮಕ್ಕೆ ಅಂಗವಲ್ಲವೆಂದು ತಿಳಿದುಬರುತ್ತದೆ. ಅಧ್ಯಯನವಿಧಿಯೇ ಅರ್ಥಜ್ಞಾನದಲ್ಲಿಯೂ ವ್ಯಕ್ತಿಯನ್ನು ಪ್ರೇರಿಸುತ್ತದೆಯಾದರೂ ಜ್ಞಾನವು ಕರ್ಮಕ್ಕೆ ಅಂಗವಾಗಲಾರದು. ಅರ್ಥಜ್ಞಾನಕ್ಕಿಂತಲೂ ಉಪಾಸನರೂಪವಾದ ಜ್ಞಾನವು ಬೇರೆಯೇ ಆಗಿದೆ. ಜ್ಯೋತಿಷ್ಟೋಮ ಮೊದಲಾದ ಕರ್ಮಗಳ ಸ್ವರೂಪಜ್ಞಾನಕ್ಕಿಂತಲೂ ಅವುಗಳ ಅನುಷ್ಠಾನವು ಬೇರೆ ಬಗೆಯೇ ಆಗಿದೆ. ಅರ್ಥಜ್ಞಾನರೂಪವಾದ ಬ್ರಹ್ಮದ ಸ್ವರೂಪ ಜ್ಞಾನಕ್ಕಿಂತಲೂ ಬ್ರಹ್ಮದ ಧ್ಯಾನಧಾರಣಾದ್ಯುಪಾಸನವೇ ಬೇರೆಯಾಗಿದೆ. ಈ ಉಪಾಸನೆಗೆ ಕರ್ಮದ ಸಂಪರ್ಕವೇ ಇಲ್ಲ. "ಯ ಏವಂ ವಿದ್ವಾನ್ ಯಜತೇ" "ವಿದ್ವಾನಗ್ನಿಹೋತ್ರಂ ಜುಹುಯಾತ್" ಎಂಬ ಶ್ರುತಿಗಳಲ್ಲಿ ಬಂದಿರುವ ವಿದ್ವತ್ಪದವು ಕರ್ಮಕಾಂಡಪ್ರಕರಣದಲ್ಲಿ ಹೇಳಿರುವ ಜ್ಯೋತಿಷ್ಟೋಮಾದಿಕರ್ಮಗಳ ಸ್ವರೂಪ ವನ್ನರಿತವನಿಗೆ ಅನ್ವಯಿಸುತ್ತದೆಯೇ ಹೊರತು ಬ್ರಹ್ಮಜ್ಞಾನಿಗೆ ಅನ್ವಯಿಸುವುದಿಲ್ಲ. ಆದ್ದರಿಂದ ವೇದಾಧ್ಯಯನ ಮಾಡಿ ವ್ಯಾಕರಣ ತರ್ಕ ಧರ್ಮಶಾಸ್ತ್ರಗಳನ್ನು ಓದಿದವನಿಗೆ ಕರ್ಮಾಚರಣೆಯಲ್ಲಿ ಮಾತ್ರವೇ ಅಧಿಕಾರವಿರುತ್ತದೆ. ಅಂತವರು ಪರಮೇಶ್ವರನಿಗರ್ಪಿಸಲಿಕ್ಕಾಗಿ ಬಹುಜನ್ಮಗಳಲ್ಲಿ ಮಾಡಿದ್ದ ಕರ್ಮವು ಪರಂಪರೆಯಿಂದ ಮೋಕ್ಷವನ್ನು ದೊರಕಿಸುತ್ತದೆ ಎಂದು ವಿಧಿಸಲಾಗಿದೆ.

"ಕುರ್ವನ್ನೇವೇಹ ಕರ್ಮಾಣಿ" ಇತಿ ಶ್ರುತೌ ಶಿವಜ್ಞಾನಾಜ್ಞಾನ

ಪುರುಷಾಣಾಂ ಸರ್ವೇಷಾಂ ಶರೀರಪಾತಪರ್ಯಂತಂ ಕರ್ಮಾನುಷ್ಠಾನಸ್ಯಾವಶ್ಯಕತ್ವಕಥನಾತ್ ನ ಪರಶಿವಬ್ರಹ್ಮಜ್ಞಾನಸ್ಯ ಸ್ವಾತಂತ್ರ್ಯೇಣ ಮೋಕ್ಷಹೇತುತ್ವಮಿತ್ಯಾಶಂಕ್ಯ ತತ್ಪರಿಹಾರಮಾಹ. ನಾವಿಶೇಷಾತ್ ॥ ೧೩ ॥ ಯಚ್ಚೋಕ್ತಂ " ಕುರ್ವನ್ನೇವೇಹ ಕರ್ಮಾಣಿ " ಇತ್ಯಾತ್ಮವಿದಂ ಜ್ಞಾನಾತ್ವ್ಯಾವರ್ತ್ಯ ಯಾವಜ್ಜೀವಂ ಕರ್ಮಾನುಷ್ಠಾನೇ ನಿಯಮಯತಿ ಇತಿ ತನ್ನೋಪಪದ್ಯತೇ. ಅವಿಶೇಷಾತ್ ನಹ್ಯಯಂ ನಿಯಮಃ ಫಲಸಾಧನಭೂತಸ್ವತಂತ್ರಕರ್ಮವಿಷಯ ಇತಿ. ವಿಶೇಷಹೇತುರಸ್ತಿ, ವಿದ್ಯಾಂಗಭೂತಕರ್ಮವಿಷಯತಯಾಪ್ಯುಪಪತ್ತೇಃ. " ಕರ್ಮಣೈವ ಹಿ ಸಂಸಿದ್ಧಿಂ ಆಸ್ಥಿತಾ ಜನಕಾದಯಃ " ಇತ್ಯತ್ರ ಕರ್ಮಣಾ ಜನಕಾದೀನಾಂ ಮೋಕ್ಷಪ್ರಥಮಾಂಗಭೂತಾಂ ಚಿತ್ತಶುದ್ಧಿಂ ವಿಂದಂತೀತ್ಯವಗಮ್ಯತೇ. " ಶ್ರುತಿಸ್ಮೃತ್ಯುದಿಕಂ ಧರ್ಮಂ ನಿತ್ಯನೈಮಿತ್ತಿಕಾಶ್ರಯಂ । ಕುರ್ಯಾಲ್ಲಿಂಗಾಂಗಸಂಬಂಧೀ ದ್ವಿಜನ್ಮಾ ಕಾಮವರ್ಜಿತಃ ॥ ವಿಧ್ಯುಕ್ತಕರ್ಮಾನುಷ್ಠಾನಾತ್ ಚಿತ್ತಶುದ್ಧಿರ್ಭವೇದ್ಧ್ರುವಂ । ಚಿತ್ತಶುದ್ಧ್ಯಾ ಭವೇದ್ಭಕ್ತಿಃ ಸಾಪಿ ಚಾವ್ಯಭಿಚಾರಿಣೀ । ತಯಾ ಸಂಜಾಯತೇ ಜ್ಞಾನಂ ನ ಚಾಸ್ಯ ಜ್ಞಾನಮಾತ್ಮನಃ । ತಸ್ಮಾನ್ಮೋಕ್ಷಸ್ತತಃ ಕರ್ಮ ವಿಧ್ಯುಕ್ತಂ ಸಮ್ಯಗಾಚರೇತ್ ॥ " ಇತಿ ಶಂಕರಸಂಹಿತಾಯಾಂ ಕರ್ಮಣಾಂ ಮೋಕ್ಷಸ್ಯ ಪ್ರಥಮಾಂಗತ್ವಂ ನಿರೂಪಿತಂ.

" ಕರ್ಮಗಳನ್ನು ಮಾಡುತ್ತಲೇ ನೂರುವರ್ಷ ಬದುಕಬೇಕು " ಎಂಬಲ್ಲಿ ಜ್ಞಾನಿ ಮತ್ತು ಕರ್ಮಿಗಳೆಲ್ಲರೂ ಶರೀರವನ್ನು ಬಿಡುವವರೆಗೂ ಅವಶ್ಯವಾಗಿ ಕರ್ಮವನ್ನು ಆಚರಿಸಲೇಬೇಕೆಂದು ಹೇಳಿರುವುದರಿಂದ ಪರಶಿವಬ್ರಹ್ಮಜ್ಞಾನವು ಸ್ವತಂತ್ರವಾಗಿ ಮೋಕ್ಷಕ್ಕೆ ಕಾರಣವಾಗಲಾರದೆಂದು ಆಶಂಕಿಸಿ ಪರಿಹರಿಸುತ್ತಾನೆ. " ಕೆಲಸಗಳನ್ನು ಮಾಡುತ್ತಲೇ ಜೀವಿಸಬೇಕು " ಎಂಬ ಶ್ರುತಿಯು ಆತ್ಮಜ್ಞಾನಿಯನ್ನು ಜ್ಞಾನದಿಂದ ಕರ್ಮಾಚರಣದ ಕಡೆಗೆ ತಿರುಗಿಸುವುದು ಎಂದು ಹೇಳಿದ್ದು ಹೊಂದುವುದಿಲ್ಲ; ಯಾಕೆಂದರೆ ಈ ಬಗೆಯ ನಿಯಮವು ಫಲಕ್ಕೆ ಸಾಧನವೆನಿಸಿದ ಸ್ವತಂತ್ರವಾದ ಕರ್ಮಕ್ಕೆ ಅನ್ವಯಿಸುವುದಿಲ್ಲ. ಇದೂಅಲ್ಲದೆ ಈ ಶ್ರುತಿಯು ಜ್ಞಾನಕ್ಕೆ ಅಂಗವೆನಿಸಿದ ಕರ್ಮಕ್ಕೂ ಅನ್ವಯಿಸಬಹುದೆಂಬ ವಿಶೇಷ ಕಾರಣವೂ ಇದೆ. " ಕರ್ಮದಿಂದಲೇ ಜನಕಾದಿಗಳು ಸಿದ್ಧಿಯನ್ನು ಪಡೆದರು " ಎಂಬಲ್ಲಿ ಮೋಕ್ಷಕ್ಕೆ ಅತ್ಯಾವಶ್ಯಕವಾದ ಚಿತ್ತಶುದ್ಧಿಯನ್ನು ಜನಕಾದಿಗಳು ಕರ್ಮದಿಂದಲೇ ಪಡೆದರೆಂದು ತಿಳಿದುಬರುತ್ತದೆ. " ಶ್ರುತಿಸ್ಮೃತಿಗಳಲ್ಲಿ ಹೇಳಿರುವ ನಿತ್ಯನೈಮಿತ್ತಿಕ ಕರ್ಮಗಳನ್ನು ಲಿಂಗಧಾರಿ ಬ್ರಾಹ್ಮಣನು ಫಲಾಪೇಕ್ಷೆ ಇಲ್ಲದೆ ನಡೆಸಬೇಕು. ವಿಧ್ಯುಕ್ತವಾದ ಕರ್ಮಗಳನ್ನು ಆಚರಿಸುವುದರಿಂದ ಚಿತ್ತಶುದ್ಧಿಯುಂಟಾಗಿ ಅದರಿಂದ ನಿಷ್ಕಲ್ಮಷವಾದ ಭಕ್ತಿ ಹುಟ್ಟುತ್ತದೆ. ಅದರಿಂದ ಅಜ್ಞಾನವು ತೊಲಗಿ ಶಿವನ ಜ್ಞಾನವು ದೊರಕುತ್ತದೆ. ಅದರಿಂದ ಮೋಕ್ಷವು ಲಭಿಸುತ್ತದೆ.

ಆದ್ದರಿಂದ ಕರ್ಮವನ್ನು ನಿಯತವಾಗಿ ಆಚರಿಸಬೇಕು" ಎಂದು ಶಂಕರಸಂಹಿತೆಯಲ್ಲಿ ಕರ್ಮವನ್ನು ಮೋಕ್ಷದ ಮೊದಲನೆಯ ಅಂಗವೆಂದು ತಿಳಿಸಲಾಗಿದೆ.

ಏವಮರ್ಥಸ್ವಭಾವೇನ ಚೋದ್ಯಂ ಪರಿಹೃತ್ಯ "ಕುರ್ವನ್ನೇವೇಹ ಕರ್ಮಾಣಿ" ಇತಿ ವಾಕ್ಯಸ್ಯ ಅರ್ಥಮಾಹ. ಸ್ತುತಯೇಽನುಮತಿರ್ವಾ ॥ ೧೪ ॥ ವಾಶಬ್ದೋಽವಧಾರಣಾರ್ಥಃ. "ಈಶಾವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ । ತೇನ ತ್ಯಕ್ತೇನ ಭುಂಜೀಥಾಃ ಮಾ ಗೃಧಃ ಕಸ್ಯಸ್ವಿದ್ಧನಂ ॥" ಇತಿ ವಿದ್ಯಾಪ್ರಕರಣಾತ್ ವಿದ್ಯಾಸ್ತುತಯೇ ಸರ್ವದಾ ಕರ್ಮಾನುಷ್ಠಾನಾನುಮತಿರಿಯಂ. ವಿದ್ಯಾಮಾಹಾತ್ಮ್ಯಾತ್ ಸರ್ವದಾ ಕರ್ಮ ಕುರ್ವನ್ನಪಿ ನ ಲಿಪ್ಯತೇ ಕರ್ಮಭಿರಿತಿ ಹಿ ವಿದ್ಯಾ ಸ್ತುತಾ ಭವತಿ. ವಾಕ್ಯಶೇಷಶ್ಚೈವಮೇವ ದರ್ಶಯತಿ. "ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮಣಾ ಲಿಪ್ಯತೇ ನರಃ" ಇತಿ, "ಶಿವಭಾವನಯಾ ಸರ್ವಂ ನಿತ್ಯನೈಮಿತ್ತಿಕಾದಿಕಂ । ಕುರ್ವನ್ನಪಿ ಮಹಾಯೋಗೀ ಗುಣದೋಷೈರ್ನ ಬಧ್ಯತೇ ॥" ಇತಿ ಸಿದ್ಧಾಂತಾಗಮೇ ಶ್ರೂಯತೇ. ಅತೋ ನ ಕರ್ಮಾಂಗಂ ವಿದ್ಯಾ.

ಹೀಗೆ ಅರ್ಥದೃಷ್ಟಿಯಿಂದ "ಕುರ್ವನ್ನೇವೇಹ" ಎಂಬ ಮಂತ್ರಕ್ಕೆ ಆಕ್ಷೇಪವನ್ನು ಪರಿಹರಿಸಲಿಕ್ಕಾಗಿ ಅದರ ಅರ್ಥವನ್ನು ಹೇಳುತ್ತಾನೆ. ವಾ ಶಬ್ದವು ನಿಶ್ಚಯವನ್ನು ತಿಳಿಸುತ್ತದೆ. "ಜಗತ್ತಿನಲ್ಲಿ ಇರುವ ಪ್ರತಿಯೊಂದು ವಸ್ತುವೂ ಈಶ್ವರನಿಗೆ ಆವಾಸಯೋಗ್ಯವಾಗಿದೆ. ಅವನು ಭೋಗಿಸಿ ಉಳಿದದ್ದನ್ನು ಜೀವನು ಭೋಗಿಸಬೇಕು. ಇದಲ್ಲದೆ ಬೇರೊಬ್ಬರ ಧನವನ್ನು ಆಶಿಸಬಾರದು" ಎಂಬ ಜ್ಞಾನಪ್ರಕರಣದಲ್ಲಿ ಜ್ಞಾನದ ಪ್ರಶಂಸೆಗಾಗಿ "ಕುರ್ವನ್ನೇವೇಹ" ಎಂಬ ಮಂತ್ರವು ಬಂದಿದೆ. ಮಾನವನು ಯಾವಾಗಲೂ ಕರ್ಮವನ್ನಾಚರಿಸುತ್ತಲೇ ಇರಬೇಕೆಂದು ಈ ಮಂತ್ರವು ತಿಳಿಸಿ ಹಾಗೆ ಕರ್ಮವನ್ನಾಚರಿಸಿದರೂ ಜ್ಞಾನದ ಮಹತ್ತ್ವದಿಂದ ಅವನಿಗೆ ಕರ್ಮದ ಲೇಪನವಾಗುವುದಿಲ್ಲವೆಂದು ಜ್ಞಾನವನ್ನೇ ಪ್ರಶಂಸಿಸುತ್ತದೆ. ವಾಕ್ಯಶೇಷವೂ ಇದೇ ಅರ್ಥವನ್ನು ತೋರಿಸುತ್ತದೆ. "ನಿನಗೆ ಇದಕಿಂತ ಬೇರೆ ದಾರಿಯಿಲ್ಲ. ಹೀಗೆ ಮಾಡಿದರೆ ನಿನಗೆ ಕರ್ಮವು ಅಂಟುವುದಿಲ್ಲ" ಎಂಬ ವಾಕ್ಯವೂ ಇದೇ ಅರ್ಥವನ್ನು ವಿಶದಪಡಿಸಿದೆ. "ನಿತ್ಯನೈಮಿತ್ತಿಕ ಕರ್ಮಗಳೆಲ್ಲವನ್ನು ಶಿವಭಾವನೆಯಿಂದ ಮಾಡುತ್ತಲೇ ಯೋಗಿಯು ಗುಣದೋಷಗಳಿಂದ ದೂರವಾಗುತ್ತಾನೆ" ಎಂದು ಸಿದ್ಧಾಂತಾಗಮದಲ್ಲಿ ಹೇಳಿದೆ. ಆದ್ದರಿಂದ ಜ್ಞಾನವು ಕರ್ಮಕ್ಕೆ ಅಂಗವಲ್ಲ.

ನನು "ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ । ಕುರ್ಯಾದ್ವಿದ್ವಾಂಸ್ತಥಾ ಸಕ್ತಃ ಚಿಕೀರ್ಷುರ್ಲೋಕಸಂಗ್ರಹಂ॥ ಜ್ಞಾನೇ ಸಿದ್ಧೇಽಪಿ ವಿದುಷಾಂ ಕರ್ಮಾಪಿ ವಿನಿಯುಜ್ಯತೇ । ಫಲಾಭಿಸಂಧಿರಹಿತಂ ತಸ್ಮಾತ್ಕರ್ಮ ನ ಸಂತ್ಯಜೇತ್ ॥" ಇತ್ಯಾದಿಬಹುಸ್ಮೃತಿಷು

ವಿದುಷಾಮಪಿ ನಿತ್ಯನೈಮಿತ್ತಿಕಾದಿನಿಖಿಲಕರ್ಮಾನುಷ್ಠಾನಾವಶ್ಯಕತ್ವ ಕಥನಾತ್ ಕರ್ಮಾನುಷ್ಠಾನಸ್ಯ ವಿದ್ಯಾಸ್ತುತಿಪರತ್ವಂ ಕಥಮಿತ್ಯಾಶಂಕಾಯಾಮಾಹ. ಕಾಮಚಾರೇಣ ಚೈಕೇ ॥ ೧೫ ॥ ಅಪಿ ಚೈವಮೇಕೇ ಶಾಖಿನಃ ಕಾಮಚಾರೇಣ ಬ್ರಹ್ಮವಿದ್ಯಾನಿಷ್ಠಸ್ಯ ಗಾರ್ಹಸ್ಥ್ಯತ್ಯಾಗಮಧೀಯತೇ. "ಕಿಂ ಪ್ರಜಯಾ ಕರಿಷ್ಯಾಮಃ ಯೇಷಾಂ ನೋಽಯಮಾತ್ಮಾಯಂ ಲೋಕಃ" ಇತಿ, ವಿದುಷೋ ವಿರಕ್ತಸ್ಯ ಕಾಮಕಾರೇಣ ಗಾರ್ಹಸ್ಥ್ಯಕರ್ಮತ್ಯಾಗಂ ಬ್ರುವದಿದಂ ವಚನಂ ಬ್ರಹ್ಮವಿದ್ಯಾಯಾಃ ಕರ್ಮಾಂಗತ್ವಂ ದರ್ಶಯತಿ. "ನ ಕರ್ಮಣಾ" ಇತ್ಯದಿಶ್ರುತಿಷು, "ಅನೇಕಜನ್ಮಶುದ್ಧನಾಂ ಶ್ರೌತಸ್ಮಾರ್ತಾನುವರ್ತಿನಾಂ । ವಿರಕ್ತಾನಾಂ ಪ್ರಸೀದತಿ ಮಹೇಶ್ವರಃ । ಪ್ರಸನ್ನೇ ಸತಿ ಮುಕ್ತೋಽಭೂನ್ಮುಕ್ತಶ್ಶಿವಸಮೋಭವೇತ್। ಅಲ್ಪಭಾವೋಽಪಿ ಯೋ ಮರ್ತ್ಯಃ ತಸ್ಯ ಜನ್ಮತ್ರಯಾತ್ಪರಂ ॥" ಇತ್ಯಾದಿಷ್ವಪಿ ಯಜ್ಞಾದಿಕರ್ಮಾಂಗತ್ವೇ ಹಿ ವಿದ್ಯಾನಿಷ್ಠಸ್ಯ ಕಾಮಚಾರೇಣಗಾರ್ಹಸ್ಥ್ಯತ್ಯಾಗೋ ನ ಸಂಭವತಿ. ಅತೋ ನ ವಿದ್ಯಾಯಾಃ ಕರ್ಮಾಂಗತ್ವಂ.

"ಅವಿವೇಕಿಗಳು ಫಲಕ್ಕೆ ಅಂಟಿಕೊಂಡು ಕರ್ಮಗಳನ್ನಾಚರಿಸಿದರೆ ವಿದ್ವಾಂಸನು ಫಲದಲ್ಲಿ ಆಸಕ್ತನಾಗದೆ ಲೋಕಹಿತಕ್ಕಾಗಿ ಕರ್ಮವನ್ನಾಚರಿಸುವನು" "ಜ್ಞಾನವು ಸಿದ್ಧಿಸಿದರೂ ವಿದ್ವಾಂಸರು ಕರ್ಮದಲ್ಲಿ ತೊಡಗುತ್ತಾರೆ. ಆದ್ದರಿಂದ ಫಲಾಪೇಕ್ಷೆಯಲ್ಲಿ ಕರ್ಮವನ್ನಾಚರಿಸಬೇಕು" ಹೀಗೆಂದು ಅನೇಕ ಸ್ಮೃತಿಗಳಲ್ಲಿ ಜ್ಞಾನಿಗಳೂ ಎಲ್ಲಾ ಕರ್ಮಗಳನ್ನು ಅವಶ್ಯವಾಗಿ ಆಚರಿಸಲೇಬೇಕೆಂದು ಹೇಳಿರುವುದರಿಂದ ಕರ್ಮಾನುಷ್ಠಾನವು ಜ್ಞಾನದ ಪ್ರಶಂಸೆಗಾಗಿಯೇ ಬಂದಿದೆ ಎಂದು ಹೇಳಲಿಕ್ಕಾಗುತ್ತದೆ ಎಂದಾಶಂಕಿಸಿ ಸಮಾಧಾನಮಾಡುತ್ತಾನೆ. ಬ್ರಹ್ಮಜ್ಞಾನಿಯು ಗೃಹಸ್ಥಧರ್ಮವನ್ನು ತೊರೆಯಬೇಕೆಂದು ಕೆಲವರು ಹೇಳುತ್ತಾರೆ. "ನಮಗೆ ಈ ಆತ್ಮವೂ ಲೋಕವೂ ಇಲ್ಲದಿರುವಾಗ ಸಂತಾನದಿಂದ ಏನಾಗುತ್ತದೆ?" ಹೀಗೆ ಜ್ಞಾನಿಯು ವಿರಕ್ತನಾಗಿ ಸ್ವೇಚ್ಛೆಯಿಂದ ಗೃಹಸ್ಥಧರ್ಮವನ್ನು ತೊರೆಯುವ ಈ ಮಾತು ಬ್ರಹ್ಮವಿದ್ಯೆಯನ್ನು ಕರ್ಮಕ್ಕೆ ಅಂಗವೆಂದು ತಿಳಿಸುತ್ತದೆ. "ಕರ್ಮದಿಂದಲೂ ಸಂತಾನದಿಂದಲೂ ಐಶ್ವರ್ಯದಿಂದಲೂ ಅಮೃತವು ದೊರಕುವುದಿಲ್ಲ; ಆದರೆ ತ್ಯಾಗ ಒಂದರಿಂದಲೇ ಅದು ದೊರಕಬಲ್ಲದು" ಎಂದು ಶ್ರುತಿಯಲ್ಲೂ, "ಅನೇಕ ಜನ್ಮಗಳಲ್ಲಿ ಶ್ರೌತಸ್ಮಾರ್ತಕರ್ಮಗಳನ್ನು ಆಚರಿಸುತ್ತಲೇ ಶುದ್ಧರೂ ವಿರಕ್ತರೂ ಆದ ಜ್ಞಾನಿಗಳಿಗೆ ಈಶ್ವರನು ಪ್ರಸನ್ನನಾಗುತ್ತಾನೆ. ಜೀವನು ಎಷ್ಟೇ ಅಲ್ಪನಾದರೂ ಮೂರುಜನ್ಮಗಳಲ್ಲಿ ಶಿವನಪ್ರಸಾದದಿಂದ ಮುಕ್ತನಾಗಿ ಶಿವನಿಗೆ ಸಮನಾಗುವನು" ಎಂದು ಸ್ಮೃತಿಗಳಲ್ಲೂ ಜ್ಞಾನವು ಯಜ್ಞಾದಿಕರ್ಮಗಳ ಅಂಗವಾದರೂ ಜ್ಞಾನಿಯು ಸ್ವೇಚ್ಛೆಯಿಂದ ಅವನ್ನು ತೊರೆಯಬಾರದೆಂದು ಹೇಳಿದೆ. ಆದ್ದರಿಂದ ಜ್ಞಾನವು ಕರ್ಮಕ್ಕೆ ಅಂಗವಲ್ಲ.

ಜೀವಬ್ರಹ್ಮಭೇದಜ್ಞಾನಸ್ಯ ಕರ್ಮಾನುಷ್ಠಾನಾಂಗಾಭವಾತ್ ಚತುರ್ವಿಧಮೋಕ್ಷಾಂಗತ್ವಂ ಸಾಧಿತಂ. ಇದಾನೀಂ ಜೀವಬ್ರಹ್ಮಜ್ಞಾನವಿಷಯಕಸಾಕ್ಷಾತ್ಕಾರಸ್ಯ ಸರ್ವಕರ್ಮನಾಶಕತ್ವಾದಪಿ ಜೀವಬ್ರಹ್ಮಭೇದವಿಷಯಕಂ ಪರೋಕ್ಷಜ್ಞಾನಂ ಕಥಂ ನ ಕರ್ಮಾಂಗಮಿತ್ಯಾಶಂಕಾಯಾಮಾಹ. ಉಪಮರ್ದಂಚ ‖ ೧೬ ‖ ಬಹುಶರೀರಪ್ರವೇಶ ನಿರ್ಗಮನವ್ಯಾಪಾರಸಂಸಾರಿಕದುಃಖಮೂಲಪುಣ್ಯಪಾಪಕರ್ಮಣೋಃ ಬ್ರಹ್ಮವಿದ್ಯಯೋಪಮರ್ದಂ ಚ ಪ್ರತಿವೇದಾಂತಮಧೀಯತೇ, "ಭಿದ್ಯತೇ ಹೃದಯಗ್ರಂಥಿಃ ಛಿದ್ಯಂತೇ ಸರ್ವಸಂಶಯಾಃ । ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಂಪರೇ ‖" "ಚಿತ್ತಾಕಾಶಂ ಚಿದಾಕಾಶಂ ಆಕಾಶಂ ಚ ತೃತೀಯಕಂ । ದ್ವಾಭ್ಯಾಂ ಶೂನ್ಯತರಂ ವಿದ್ಧಿ ಚಿದಾಕಾಶಂ ಮಹಾಮುನೇ‖ ಧ್ಯಾಯತೋ ಹೃದಯಾಕಾಶೇ ಚಿತಿಚಿಚ್ಚಕ್ರಧಾರಯಾ। ಮನೋ ಮಾರಯ ನಿಶ್ಶಂಕಂ ತ್ವಾಂ ಪ್ರಬಧ್ನಂತಿ ನಾರಯಃ" ಭೋಗ್ಯೈಕವಾಸನಾಂ ತ್ಯಕ್ತ್ವಾ ತ್ಯಜ ತ್ವಂ ಭೇದವಾಸನಾಂ । ಭಾವಾಽಭಾವೌ ತತಸ್ತ್ಯಕ್ತ್ವಾ ನಿರ್ವಿಕಲ್ಪಃ ಸ್ಥಿರೋ ಭವ ‖ ಆತ್ಮನ್ಯಸೀತೇ ಸರ್ವಸ್ಯಾತ್ಮಸ್ವರೂಪೇಽಥವಾ ತತೇಃ । ಕೋ ಬಂಧಃ ಕಶ್ಚ ವಾ ಮೋಕ್ಷಃ ನಿರ್ಮೂಲಂ ಮನಸಂ ಕುರು ‖ ನಿದ್ರಯಾ ಲೋಕವಾರ್ತಯಾ ಶಬ್ದಾದೇಕಾತ್ಮ ವಿಸ್ಮೃತಃ । ಕ್ವಚಿನ್ನಾವಸರಂ ದತ್ವಾ ಚಿಂತಯಾತ್ಮಾನಮಾತ್ಮನಿ ‖ ಆಸುಪ್ತೇರಾಮೃತೇಃ ಕಾಲಂ ನಯೇದ್ವೇದಾಂತಚಿಂತಯಾ । ದದ್ಯಾನ್ನಾವಸರಂ ಕಿಂಚಿತ್ ಕಾಮಾದೀನಾಂ ಮನಾಗಪಿ ‖ ಅಂಧವಜ್ಜಡವಚ್ಚಾಪಿ ಮೂಕವಚ್ಚ ಮಹೀಂ ಚರೇತ್" "ಇತ್ಯಾದಿಶ್ರುತಿಷು "ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇಽರ್ಜುನ ।" ಇತ್ಯಾದಿಸ್ಮೃತಿಷು ಚ ವಿದ್ಯಾಯಾಃ ಕರ್ಮಾಂಗತ್ವೇನ ಸರ್ವೋತ್ಕೃಷ್ಟತ್ವಸರ್ವಕರ್ಮಲಯಹೇತುತ್ವಾವಗಮಾತ್ ತದೇವ ಯುಕ್ತಂ. ನಚ ಪರಶಿವಬ್ರಹ್ಮಸಾಕ್ಷಾತ್ಕಾರಸ್ಯ ಸಕಲಕರ್ಮಾನುಷ್ಠಾನಾಂಗತ್ವಭಾವೇಽಪಿ ಶ್ರವಣೋತ್ತರಕಾಲೀನಸ್ಯ ಜೀವಬ್ರಹ್ಮಭೇದಸ್ಯ ಪರೋಕ್ಷಜ್ಞಾನಸ್ಯ ಚ ಕರ್ಮಾನುಷ್ಠಾನಾಂಗತ್ವಂ ಭವತೀತಿ ವಾಚ್ಯಂ. "ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸಂನ್ಯಾಸಯೋಗಾದ್ಯತಯಃ ಶುದ್ಧಸತ್ತ್ವಾಃ । ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ ‖" ಇತ್ಯಾದಿಶ್ರುತಿಷು ತದ್ಜ್ಞಾನಸ್ಯಾಪಿ ಕ್ರಮಮುಕ್ತಿಹೇತುತ್ವಾವಗಮಾತ್ ನ ಕರ್ಮಾಂಗತ್ವಂ ಸಿದ್ಧಂ.

ಶಿವಜೀವರ ಭೇದಜ್ಞಾನವು ಕರ್ಮಾನುಷ್ಠಾನಕ್ಕೆ ಅಂಗವಲ್ಲದ್ದರಿಂದ ನಾಲ್ಕು ಬಗೆಯ ಮೋಕ್ಷವನ್ನು ದೊರಕಿಸಬಲ್ಲದೆಂದು ಹಿಂದೆ ಹೇಳಿಯಾಯಿತು. ಸಾಕ್ಷಾ

ತ್ಕಾರರೂಪವಾದ ಜೀವಬ್ರಹ್ಮರ ಜ್ಞಾನವು ಎಲ್ಲಾ ಕರ್ಮಗಳನ್ನು ನಾಶಮಾಡಿ ಮೋಕ್ಷವನ್ನು ಕೊಡುವುದಾದರೂ ಸಾಕ್ಷಾತ್ಕಾರವಾಗದ ಜ್ಞಾನವು ಹೇಗೆ ಕರ್ಮಕ್ಕೆ ಅಂಗವಾಗಲಾರದೆಂದಾಶಂಕಿಸಿ ಸಮಾಧಾನಮಾಡುತ್ತಾನೆ. ಜೀವನು ಅನೇಕ ಶರೀರಗಳಿಗೆ ಹೋಗುತ್ತಲೂ ಬರುತ್ತಲೂ ಅನುಭವಿಸುತ್ತಿರುವ ದುಃಖಕ್ಕೆ ಮೂಲವೆನಿಸಿದ ಪುಣ್ಯ ಪಾಪ ಕರ್ಮಗಳು ಬ್ರಹ್ಮವಿದ್ಯೆಯಿಂದ ಕೊನೆಗೊಳ್ಳುತ್ತವೆ ಎಂದು ಶ್ರುತಿ ತಿಳಿಸಿದೆ. "ಪರಮೇಶ್ವರನನ್ನು ಕಂಡರೆ ಹೃದಯದ ಕ್ಲೇಶಗಳು, ಸಂಶಯಗಳು, ಮತ್ತು ಮಲಕರ್ಮಗಳೂ ತೊಲಗುತ್ತವೆ" "ಚಿತ್ತಾಕಾಶ, ಚಿದಾಕಾಶ, ಪ್ರಾಕೃತಿಕ ಆಕಾಶವೆಂಬ ಮೂರರಲ್ಲಿ ಚಿದಾಕಾಶವು ಉಳಿದೆರಡಕ್ಕಿಂತಲೂ ಶೂನ್ಯವಾದುದು" "ಹೃದಯಾಕಾಶದಲ್ಲಿ ಚಿದಾಕಾಶವನ್ನೇ ಧ್ಯಾನಿಸುತ್ತ ಮನಸ್ಸನ್ನು ಲಯಗೊಳಿಸು. ಇಲ್ಲವಾದರೆ ನಾರಿಯರು ನಿನ್ನನ್ನು ಬಂಧಿಸಿಯಾರು." "ಭೋಗದಲ್ಲಿಯೇ ಅಂಟಿಕೊಳ್ಳದಂತೆ ಅದರ ವಾಸನೆಯನ್ನು ತೊರೆದು ಆಮೇಲೆ ಭೇದಭಾವನೆಯನ್ನೂ ಹಾಗೆಯೇ ಭಾವ ಅಭಾವಗಳ ವಿವೇಚನೆಯನ್ನೂ ತೊರೆದು ಸಂಶಯ ವಿಕಲ್ಪಗಳಿಲ್ಲದೆ ಸ್ಥಿರವಾಗಿರು" "ಎಲ್ಲರಲ್ಲೂ ವ್ಯಾಪಿಸಿರುವ ಆತ್ಮನ ಸ್ವರೂಪವು ಒಂದೇ ಬಗೆಯಾಗಿರುವುದರಿಂದ ಬಂಧವಾಗಲೀ ಮೋಕ್ಷವಾಗಲೀ ಹೇಗೆ ಸಂಭವಿಸೀತು? ಆದ್ದರಿಂದ ಮನಸ್ಸಿನ ಮಲದೋಷಗಳನ್ನು ತೊರೆದುಹಾಕು." "ಮೊದಲು ಕೊನೆಗಳಲ್ಲೂ ಮಧ್ಯದಲ್ಲೂ ಎಲ್ಲವೂ ದುಃಖವೇ ಆಗಿರುವುದರಿಂದ ಇದೆಲ್ಲವನ್ನು ತೊರೆದು ತತ್ತ್ವದಲ್ಲಿ ಅಂಟಿಕೋ." "ನಿದ್ರೆಗೂ ಲೋಕವಾರ್ತೆಗೂ ಶಬ್ದಾದಿವಿಷಯಗಳಿಗೂ ಕೊಂಚವೂ ಅವಕಾಶವನ್ನು ಕೊಡದೆ ಆತ್ಮಚಿಂತನೆಯಲ್ಲಿಯೇ ಇರು" "ಎದ್ದಾಗಿನಿಂದ ಮಲಗುವವರೆಗೂ ವೇದಾಂತಚಿಂತೆಯಿಂದಲೇ ಕಾಲವನ್ನು ಕಳೆ, ಆದರೆ ಕಾಮಾದಿಗಳಿಗೆ ಕೊಂಚವೂ ಅವಕಾಶಕೊಡಬೇಡ." "ಕುರುಡನಂತೆಯೂ ಜಡನಂತೆಯೂ ಮೂಕನಂತೆಯೂ ಭೂಮಿಯಲ್ಲಿ ಸಂಚರಿಸಬೇಕು" ಎಂದು ಶ್ರುತಿಗಳಲ್ಲಿಯೂ "ಜ್ಞಾನಾಗ್ನಿಯು ಕರ್ಮಗಳೆಲ್ಲವನ್ನು ಸುಡುತ್ತದೆ" ಎಂದು ಸ್ಮೃತಿಗಳಲ್ಲೂ ಜ್ಞಾನವು ಕರ್ಮದ ಅಂಗವಾಗಿದ್ದರೂ ಎಲ್ಲಕ್ಕೂ ಹೆಚ್ಚಿನದೆಂದೂ ಎಲ್ಲಾ ಕರ್ಮಗಳನ್ನು ನಾಶಗೊಳಿಸುವ ಸಾಧನವೆಂದೂ ಹೇಳಿರುವುದರಿಂದ ಇದೇ ಯುಕ್ತವಾಗಿದೆ. ಪರಶಿವಬ್ರಹ್ಮದ ಸಾಕ್ಷಾತ್ಕಾರವು ಎಲ್ಲಾ ಬಗೆಯ ಕರ್ಮಾಚರಣಕ್ಕೆ ಅಂಗವಲ್ಲದಿದ್ದರೂ, ವೇದಾಂತಶ್ರವಣವಾದಮೇಲೆ ಆಗುವ ಅದರ ಜ್ಞಾನವೂ, ಜೀವಬ್ರಹ್ಮರಿಗೆ ಇರುವ ಭೇದಜ್ಞಾನವೂ ಕರ್ಮಾಚರಣದ ಅಂಗವಾಗಲಿ ಎಂದು ಹೇಳುವುದೂ ಸಹ ಸರಿಯಲ್ಲ; ಯಾಕೆಂದರೆ "ವೇದಾಂತವಿಜ್ಞಾನದಿಂದ ವಸ್ತುತತ್ತ್ವವನ್ನು ತಿಳಿದು ಸಂನ್ಯಾಸಯೋಗದಿಂದ ಯತಿಗಳು ನಿರ್ಮಲರಾಗಿ ದೇಹವನ್ನು ತೊರೆದಮೇಲೆ ಬ್ರಹ್ಮಲೋಕದಲ್ಲಿ ಎಲ್ಲಾಬಗೆಯ ದುಃಖದಿಂದ ಪಾರಾಗುತ್ತಾರೆ" ಎಂದು ಮುಂತಾದ ಶ್ರುತಿಗಳಲ್ಲಿ ವೇದಾಂತ ಜ್ಞಾನವನ್ನು ಕ್ರಮಮುಕ್ತಿಗೆ ಸಾಧನವೆಂದು ಹೇಳಿದೆಯಾದ್ದ ಜ್ಞಾನವು ಕರ್ಮದ ಅಂಗವಲ್ಲವೆಂದು ಸಿದ್ಧವಾಯಿತು.

ನನು "ವೀರಹಾ ವಾ ಏಷ ದೇವಾನಾಂ ಯೋಽಗ್ನಿಮುದ್ವಾಸಯತೇ" ಇತ್ಯಾದಿಶ್ರುತಿಷ್ವಗ್ನಿಹೋತ್ರಾದಿಕರ್ಮಣಾಂ ಅಕರಣೇ ಪ್ರತ್ಯವಾಯಾವಗಮಾತ್ ವಸಿಷ್ಠಜನಕಾದಿಬ್ರಹ್ಮನಿಷ್ಠಾನಾಮಪಿ ಕರ್ಮಾನುಷ್ಠಾನದರ್ಶನಾಚ್ಚ ಬ್ರಹ್ಮವಿದ್ಯಾಯಾಃ ಕರ್ಮಾಂಗತ್ವಂ ಕಥಮನುಪಪನ್ನಮಿತ್ಯಾಕಾಂಕ್ಷಾಯಾಂ ತನ್ನಿಕರಾಣಾರ್ಥಂ ಅಧಿಕರಣಾಂತರಮಾಹ.

ಊರ್ಧ್ವರೇತಸ್ತ್ವಾಧಿಕರಣಂ ‖ ೨ ‖ ಊರ್ಧ್ವರೇತಸ್ಸು ಚ ಶಬ್ದೇ ಹಿ ‖ ೧೭ ‖ ನ್ಯಾಸ ಇತಿ ಬ್ರಹ್ಮಣಃ ಪರಃ "ಪರೋ ಹಿ ಬ್ರಹ್ಮಾ[illegible]ತಾನಿ ವಾ ಏತಾನ್ಯಾಪರಾಣಿ ಪರಾಗ್ಂಸಿ ನ್ಯಾಸ ಏವಾತ್ಯರೇಚಯದ್ಯ [illegible] ವೇದೇತ್ಯುಪನಿಷತ್" ಇತಿ ತೈತ್ತಿರೀಯೇ "ನ್ಯಾಸ ಇತ್ಯಾಹುರ್ಮನೀಷಿಣೋ ಬ್ರಹ್ಮಾಣಂ ಬ್ರಹ್ಮ" ಇತ್ಯಾದಿಷು. ಬಹುಜನ್ಮಕೃತಪುಣ್ಯಪುಂಜಪರಿಪಕ್ವಶುದ್ಧಾಂತಃಕರಣಾನಾಂ ಜ್ಯೋತಿಷ್ಟೋಮಾದಿಕರ್ಮನಿರಾಕರಣಪೂರ್ವಕಸಂನ್ಯಾಸಾಶ್ರಮೋಪದೇಶಾತ್ "ಯಾವಜ್ಜೀವಮಗ್ನಿಹೋತ್ರಂ ಜುಹೋತಿ" "ವೀರಹಾ ವಾ ಏಷ ದೇವಾನಾಂ ಯೋಽಗ್ನಿಮುದ್ವಾಸಯತೇ" ಇತ್ಯಾದಾವಕರಣೇ ಪ್ರತ್ಯವಾಯಪೂರ್ವಕತ್ವೇನ ಅಗ್ನಿಹೋತ್ರದರ್ಶಪೂರ್ಣಮಾಸಾದೀನಾಂ ಯಾವಜ್ಜೀವಾಧಿಕಾರವ್ಯವಸ್ಥಾಪನಾತ್ ವಾಮದೇವೋಪಮನ್ಯುದಧೀಚಿದೂರ್ವಾಸಪ್ರಭೃತೀನಾಂ ಅಗ್ನಿಹೋತ್ರಾದಿಕರ್ಮನಿರಾಕರಣಪೂರ್ವಕನಿರಾಭಾರಸಂಜ್ಞಿಕಯತ್ಯಾಶ್ರಮವಿಶಿಷ್ಟತ್ವದ್ಯೋತನಾಚ್ಚ, ಲೋಕೇ ಸರ್ವೇಷಾಂ ಬ್ರಾಹ್ಮಣಾನಾಂ ಚ ಚತುರ್ಥಾಶ್ರಮಸಂಜ್ಞಿಕಸಂನ್ಯಾಸಃ ಕರ್ತವ್ಯೋಽಕರ್ತವ್ಯೋ ವೇತಿ ಸಂದಿಹ್ಯತೇ. ಊರ್ಧ್ವರೇತಸಾಮಪಿ ಸಂನ್ಯಾಸಃ ಅಕರ್ತವ್ಯ ಏವೇತಿ. "ಯಾವಜ್ಜೀವಮಗ್ನಿಹೋತ್ರಂ ಜುಹೋತಿ" ಇತ್ಯಾದಿನಾ ಅಗ್ನಿಹೋತ್ರದರ್ಶಪೂರ್ಣಮಾಸಾದೀನಾಂ ಯಾವಜ್ಜೀವಕರ್ತವ್ಯದರ್ಶನಾತ್, "ತ್ರಯೋ ಧರ್ಮಸ್ಕಂಧಾಃ" ಇತ್ಯಾದೌ ಆಶ್ರಯತ್ರಯಸ್ಯೈವೋಪದೇಶಾತ್ "ಬ್ರಹ್ಮಸಂಸ್ಥೋಽಮೃತತ್ವಮೇತಿ" "ನ್ಯಾಸ ಇತ್ಯಾಹುರ್ಮನೀಷಿಣೋ ಬ್ರಹ್ಮಾಣಂ ಬ್ರಹ್ಮ" ಇತ್ಯಾದಿತುರ್ಯಾಶ್ರಮವಿಧಾಯಕವಾಕ್ಯಾನಾಂ ಅರ್ಥವಾದಮಾತ್ರಂ ಅತ್ರ ಕ್ರಿಯತೇ. "ಯೇ ಚೇಮೇಽರಣ್ಯೇ ಶ್ರದ್ಧಾಂ ತಪ ಇತ್ಯುಪಾಸತೇ" ಇತಿ ಚ ದೇವಯಾನವಿಧಿಪರತ್ವಾತ್ ತತ್ರಾಪಿ ನಾಶ್ರಮಾಂತರವಿಧಿಃ ಸಂಭವತಿ. ಕಿಂಚ "ಅಶ್ವಾಲಂಬಂ ಗವಾಲಂಬಂ ಸಂನ್ಯಾಸಂ ಪಲಪೈತೃಕಂ। ದೇವರಾಚ್ಚ ಸುತೋತ್ಪತ್ತಿಃ ಕಲೌ ಪಂಚ ವಿವರ್ಜಯೇತ್" ಇತಿ ಪರಾಶರಸ್ಮೃತೌ ಸಂನ್ಯಾಸನಿಷೇಧಾವಗಮಾತ್, "ಕೃತೇ ತು ಮಾನವೋ ಧರ್ಮಃ ತ್ರೇತಾಯಾಂ ಗೌತಮಸ್ಮೃತಿಃ। ದ್ವಾಪರೇ ಶಂಖಲಿಖಿತಂ ಕಲೌ ಪರಾಶರಸ್ಮೃತಿಃ"

**ಇತಿ ಪ್ರಮಾಣೇನ ತತ್ರೈವ ಸರ್ವಸ್ಮೃತ್ಯಪೇಕ್ಷಯಾ ಪರಾಶರಸ್ಮೃತಿಬಲೀಯಸ್ತ್ವೋಪದೇಶಾತ್ " ಪ್ರಾಯಶ್ಚಿತ್ತಂ ಚೋಪವಾಸಂ ಚ ಸಂನ್ಯಾಸಂ ಯತಿವಂದನಂ । ತೀರ್ಥಯಾತ್ರಾಭಿಗಮನಂ ಶೈವಃ ಪಂಚ ವಿವರ್ಜಯೇತ್॥ "ಇತಿ ಶೈವಾಗಮೇ ತದ್ವದುಪದೇಶಾಚ್ಚ ಸರ್ವಥಾ ವೈದಿಕಾನಾಂ ಚತುರ್ಥಾಶ್ರಮೋ ನ ಕರ್ತವ್ಯ ಏವೇತಿ ಪ್ರಾಪ್ತೇ ಪ್ರಚಕ್ಷ್ಮಹೇ. ಊರ್ಧ್ವರೇತಸ್ಸು ಆಶ್ರಮೇಷು ಬ್ರಹ್ಮವಿದ್ಯಾದರ್ಶನಾತ್ ತೇಷ್ವಗ್ನಿಹೋತ್ರದರ್ಶಪೂರ್ಣಮಾಸಾದಿಕರ್ಮಾಭಾವಾಚ್ಚ ನ ವಿದ್ಯಾ ಕರ್ಮಾಂಗಂ. ಕುತಃ? ಶಬ್ದೇ[illegible]ತಿ. ವೈದಿಕ ಏವ ಹಿ ಶಬ್ದೇ ದೃಶ್ಯಂತೇ ತ್ರಯೋ ಧರ್ಮಸ್ಕಂ[illegible]. " ಯೇ ಚೇಮೇಽರಣ್ಯೇ ಶ್ರದ್ಧಾಂ ತಪ ಇತ್ಯುಪಾಸತೇ " " ಏವಮೇವ ಪ್ರವ್ರಾಜಿನೋ ಲೋಕಮಿಚ್ಛಂತಃ ಪ್ರವ್ರಜಂತಿ ವೇದಾನಮುಂ ಲೋಕಂ, ಅಮುಂ ಲೋಕಂ ಪರಿತ್ಯಜ್ಯಾತ್ಮಾನಮನ್ವಿಚ್ಛೇತ್." " ತ್ರಯ ಏತೇ ಪುಣ್ಯಶ್ಲೋಕಾ ಭವಂತಿ." " ಬ್ರಹ್ಮಸಂಸ್ಥೋ ಅಮೃತತ್ವಮೇತಿ " " ಸಂನ್ಯಸ್ಯ ಶ್ರವಣಂ ಕುರ್ಯಾತ್ " ಇತ್ಯಾದೌ ಯತ್ಯಾಶ್ರಮಸ್ಥಾನಾಮಗ್ನಿಹೋತ್ರಾದಿಕರ್ಮಾನುಷ್ಠಾನವಿಧ್ಯಭಾವಾತ್ " ಯಾವಜ್ಜೀವಮಗ್ನಿಹೋತ್ರಂ ಜುಹೋತಿ " ಇತ್ಯಾದಿಶ್ರುತಿಸಿದ್ಧಯಾವಜ್ಜೀವಾಗ್ನಿಹೋತ್ರವಿಧಿಸ್ತ್ವವಿರಕ್ತವಿಷಯ ಏವೇತಿ ಸಿದ್ಧಂ.**

" ಅಗ್ನಿಯನ್ನು ಉಪಾಸನಮಾಡದವನು ಒಬ್ಬ ವೀರನನ್ನು ಕೊಲೆಮಾಡಿದ ಪಾಪಕ್ಕೆ ಗುರಿಯಾಗುವನು " ಎಂಬ ಶ್ರುತಿಯಲ್ಲಿ ಅಗ್ನಿಹೋತ್ರ ಮೊದಲಾದ ಕರ್ಮಗಳನ್ನು ಮಾಡದೇಇದ್ದರೆ ದೋಷವನ್ನು ಹೇಳಿರುವುದರಿಂದಲೂ, ವಸಿಷ್ಠ ಜನಕ ಮೊದಲಾದ ಬ್ರಹ್ಮನಿಷ್ಠರೂ ಸಹ ಕರ್ಮವನ್ನಾಚರಿಸುತ್ತಿದ್ದುದಾಗಿ ಕಂಡುಬಂದಿರುವುದರಿಂದಲೂ ಬ್ರಹ್ಮವಿದ್ಯೆಯು ಹೇಗೆ ಕರ್ಮದ ಅಂಗವಾಗಲಾರದೆಂದಾಶಂಕಿಸಿ ನಿರಾಕರಿಸುತ್ತಾನೆ. " ನ್ಯಾಸವೆಂಬುದು ಬ್ರಹ್ಮಪ್ರಾಪ್ತಿಗೆ ಸಾಧನವಾದ್ದರಿಂದ ಬ್ರಹ್ಮಕ್ಕಿಂತಲೂ ಉತ್ಕೃಷ್ಟ. ಅದಕ್ಕಿಂತಲೂ ನ್ಯಾಸವು ಉತ್ಕೃಷ್ಟ. ಉಳಿದದ್ದೆಲ್ಲವೂ ಇದಕ್ಕಿಂತಲೂ ಕೆಳಗಿನದು" ಹೀಗೆ ಅನೇಕ ಜನ್ಮಗಳಲ್ಲಿ ಮಾಡಿದ ಪುಣ್ಯದ ರಾಶಿಯಿಂದ ಪಕ್ವವೂ ಶುದ್ಧವೂ ಆದ ಅಂತಃಕರಣವುಳ್ಳವರಿಗೆ ಜ್ಯೋತಿಷ್ಟೋಮಾದಿಕರ್ಮಗಳನ್ನು ನಿರಾಕರಿಸಿ ಸಂನ್ಯಾಸಾಶ್ರಮವನ್ನು ಉಪದೇಶಿಸಲಾಗಿದೆ. "ಪ್ರಾಣವಿರುವವರೆಗೂ ಅಗ್ನಿಹೋತ್ರವನ್ನು ಆಚರಿಸಬೇಕು." "ಅಗ್ನಿಯನ್ನು ತೊರೆದವನು ವೀರಹತ್ಯದೋಷಕ್ಕೆ ಗುರಿಯಾಗುವನು" ಈ ಬಗೆಯ ಶ್ರುತಿಗಳಲ್ಲಿ ಅಗ್ನಿಹೋತ್ರದರ್ಶಪೂರ್ಣಮಾಸ ಮೊದಲಾದ ಕರ್ಮಗಳನ್ನು ಮಾಡದೇ ಬಿಟ್ಟರೆ ದೋಷಬರುವುದರಿಂದ ಪ್ರಾಣವಿರುವತನಕ ಅವನ್ನು ಮಾಡಲೇಬೇಕೆಂದು ವ್ಯವಸ್ಥೆಮಾಡಲಾಗಿದೆ. ವಾಮದೇವ ಉಪಮನ್ಯು ದಧೀಚಿ ದೂರ್ವಾಸ ಮೊದಲಾದವರಿಗೆ ಅಗ್ನಿಹೋತ್ರಾದಿಕರ್ಮಗಳನ್ನು ನಿರಾಕರಿಸಿ ನಿರಾಭಾರವೆನಿಸಿದ ಯತ್ಯಾಶ್ರಮ ಧರ್ಮವನ್ನು ವಿಧಿಸಲಾಗಿದೆ. ಆದ್ದರಿಂದ ಲೋಕದಲ್ಲಿ ಬ್ರಾಹ್ಮಣರು

ನಾಲ್ಕನೆಯ ಆಶ್ರಮವೆನಿಸಿದ ಸಂನ್ಯಾಸಧರ್ಮವನ್ನು ಆಚರಿಸಬೇಕೇ ಬೇಡವೇ ? ಎಂಬ ಸಂದೇಹವುಂಟಾಗುತ್ತದೆ. ಊರ್ಧ್ವರೇತಸ್ಕರು ಸಂನ್ಯಾಸಧರ್ಮವನ್ನಾಚರಿಸಬೇಕಾಗಿಲ್ಲ ವೆಂದೂ, "ಪ್ರಾಣವಿರುವವರೆಗೂ ಅಗ್ನಿಹೋತ್ರವನ್ನಾಚರಿಸಬೇಕು" ಎಂದೂ ಹೇಳಿರುವುದರಿಂದ ಅಗ್ನಿಹೋತ್ರಾದಿಕರ್ಮಗಳನ್ನು ಅವರು ಮಾಡಲೇಬೇಕಾಗಿದೆ. "ಶ್ರುತಿಯಲ್ಲಿ ಹೇಳಿರುವ ಮೂರು ಧರ್ಮಸ್ಕಂಧಗಳು ಮೂರು ಆಶ್ರಮಗಳನ್ನು ಮಾತ್ರವೇ ತಿಳಿಸುತ್ತವೆ." "ಬ್ರಹ್ಮನಿಷ್ಠನು ಅಮೃತವನ್ನು ಹೊಂದುತ್ತಾನೆ" "ಪರ ಬ್ರಹ್ಮವನ್ನು ಬ್ರಹ್ಮವೆಂದು ಕರೆಯುವಂತೆ ವಿದ್ವಾಂಸರು ಸಂನ್ಯಾಸವೆಂದು ಕರೆಯು ತ್ತಾರೆ." "ಇವರು ಅರಣ್ಯದಲ್ಲಿ ಶ್ರದ್ಧೆಯನ್ನು ತಪಸ್ಸೆಂದು ಉಪಾಸನಮಾಡುತ್ತಾರೆ" ಎಂಬ ಶ್ರುತಿಗಳಲ್ಲೂ ದೇವಯಾನವನ್ನು ವಿಧಿಸಿದೆಯೇ ಹೊರತು ಆಶ್ರಮಧರ್ಮ ವನ್ನು ವಿಧಿಸಿಲ್ಲ. ಯಜ್ಞದಲ್ಲಿ ಮಾಡುವ ಅಶ್ವ ಮತ್ತು ಗೋವುಗಳ ಹಿಂಸೆ, ಸಂನ್ಯಾಸ, ಮಾಂಸವನ್ನರ್ಪಿಸುವ ಶ್ರಾದ್ಧ, ಬಾಮೈದನಿಂದ ಮಗನನ್ನು ಪಡೆಯು ವಿಕೆ, ಈ ಐದನ್ನು ಕಲಿಯುಗದಲ್ಲಿ ತೊರೆಯಬೇಕು" ಎಂದು ಪರಾಶರಸ್ಮೃತಿ ಯಲ್ಲಿಯೂ ಸಂನ್ಯಾಸವನ್ನು ನಿಷೇಧಿಸಲಾಗಿದೆ. "ಕೃತಯುಗದಲ್ಲಿ ಮನುಸ್ಮೃ ತಿಯೂ, ತ್ರೇತಾಯುಗದಲ್ಲಿ ಗೌತಮಸ್ಮೃತಿಯೂ, ದ್ವಾಪರಯುಗದಲ್ಲಿ ಶಂಖಸ್ಮೃ ತಿಯೂ, ಕಲಿಯುಗದಲ್ಲಿ ಪರಾಶರಸ್ಮೃತಿಯೂ ಪ್ರಭಾವಶಾಲಿಗಳಾಗಿರುತ್ತವೆ" ಎಂಬ ಪ್ರಮಾಣದಂತೆ ಪರಾಶರಸ್ಮೃತಿಯೇ ಬಲಿಷ್ಠವೆನಿಸಿದೆ. "ಪ್ರಾಯಶ್ಚಿತ್ತ, ಉಪವಾಸ, ಸಂನ್ಯಾಸ, ಯತಿವಂದನ, ತೀರ್ಥಯಾತ್ರೆ ಇವು ಐದನ್ನೂ ಶೈವನು ತೊರೆಯಬೇಕು" ಎಂದು ಶೈವಾಗಮದಲ್ಲಿ ಹೇಳಿದೆ. ಆದ್ದರಿಂದ ವೈದಿಕರು ಎಂದಿಗೂ ಸಂನ್ಯಾಸಾಶ್ರಮ ವನ್ನಾಚರಿಸಕೂಡದು ಎಂದು ಆಕ್ಷೇಪ ಬಂದರೆ ಸಮಾಧಾನವನ್ನು ತಿಳಿಸಲಾಗಿದೆ. ಊರ್ಧ್ವರೇತಸ್ಕರಿಗೆ ಬ್ರಹ್ಮವಿದ್ಯೆಯನ್ನು ವಿಧಿಸಿರುವುದರಿಂದಲೂ, ಅಗ್ನಿಹೋತ್ರಾದಿ ಕರ್ಮಗಳಿಲ್ಲದಿರುವುದರಿಂದಲೂ ವಿದ್ಯೆ ಕರ್ಮಕ್ಕೆ ಅಂಗವಾಗಲಾರದು; ಯಾಕೆಂದರೆ ಶಬ್ದ ರೂಪವಾದ ವೇದದಲ್ಲಿಯೇ ಮೂರು ಧರ್ಮಸ್ಕಂಧಗಳನ್ನು ಹೇಳಲಾಗಿದೆ. "ಇವರು ಅರಣ್ಯದಲ್ಲಿ ಶ್ರದ್ಧೆಯನ್ನೇ ತಪಸ್ಸೆಂದು ಉಪಾಸನಮಾಡುತ್ತಾರೆ" "ಈ ಲೋಕವನ್ನು ಇಚ್ಛಿಸದವರು ಎಲ್ಲವನ್ನೂ ತೊರೆದು ಆತ್ಮನನ್ನು ಹುಡುಕಲಿಕ್ಕಾಗಿ ಸಂನ್ಯಾಸವನ್ನು ತೆಗೆದುಕೊಳ್ಳುತ್ತಾರೆ" "ಈ ಮೂರು ಪುಣ್ಯಲೋಕಗಳೆನಿಸಿವೆ" "ಬ್ರಹ್ಮನಿಷ್ಠನು ಅಮೃತಸ್ಥಿತಿಯನ್ನು ಹೊಂದುತ್ತಾನೆ." "ದೇಹಾಭಿಮಾನವನ್ನು ತೊರೆದು ವೇದಾಂತ ವನ್ನು ಕೇಳಬೇಕು" ಈ ಶ್ರುತಿಗಳಲ್ಲಿ ಯತ್ಯಾಶ್ರಮದಲ್ಲಿರುವವರು ಅಗ್ನಿಹೋತ್ರಾದಿ ಕರ್ಮಗಳನ್ನು ಆಚರಿಸಬೇಕೆಂಬ ವಿಧಿಯನ್ನು ಹೇಳಿಲ್ಲ. ಆದರೆ ಪ್ರಾಣವಿರುವವರೆಗೂ ಅಗ್ನಿಹೋತ್ರವನ್ನಾಚರಿಸಬೇಕು" ಎಂಬ ಶ್ರುತಿಯು ವಿರಕ್ತರಲ್ಲದವರಿಗೆ ಮಾತ್ರವೇ ಅಗ್ನಿಹೋತ್ರವನ್ನು ವಿಧಿಸುತ್ತದೆ.

ನನು ಕುಟೀಚಕಾದಿಚತುರ್ವಿಧಸಂನ್ಯಾಸಿಷು ವೈದಿಕಾನಾಂ ಕಲೌ ಕಸ್ಯ ವಿಧೇಯಂ ಕಸ್ಯ ನಿಷೇಧ ಇತ್ಯಾಕಾಂಕ್ಷಾಯಾಂ ಆಚಾರ್ಯಾಂತರಂ

ದರ್ಶಯತಿ: ಪರಾಮರ್ಶಂ ಜೈಮಿನಿರಚೋದನಾಚ್ಚಾಪವದತಿ ಹಿ ॥ ೧೮ ॥ "ನ ಕರ್ಮಣಾ" ಇತಿ ತೈತ್ತಿರೀಯೇ, "ಬ್ರಹ್ಮಚರ್ಯಂ ಸಮಾಪ್ಯ ಗೃಹೀ ಭವೇತ್, ವನೀ ಭೂತ್ವಾ ಪ್ರವ್ರಜೇತ್, ಯದಿ ವೇತರಥಾ ಬ್ರಹ್ಮಚರ್ಯಾದೇವ ಪ್ರವ್ರಜೇತ್ ಗೃಹಾದ್ವಾ ವನಾದ್ವಾ ಪ್ರವ್ರಜೇತ್. ಯಾವದಹರೇವ ವಿರಜೇತ್ತದಹರೇವ ಪ್ರವ್ರಜೇತ್" ಇತ್ಯಾದಿನಾ ಜಾಬಾಲೇ, "ಲುಪ್ತಕೇಶನಖಶ್ಮಶ್ರುಃ ಪಾತ್ರದಂಡಸುಕುಂಭವಾನ್ । ವಿಚರೇನ್ನಿಯತೋ ನಿತ್ಯಂ ಸರ್ವಭೂತಾನ್ಯಪೀಡಯನ್ । ಋಣಾನಿ ತ್ರೀಣ್ಯಪಾಕೃತ್ಯ ಮನೋ ಮೋಕ್ಷೇ ನಿವೇಶಯೇತ್ ॥" ಇತಿ ಮನುಸ್ಮೃತೌ, "ಸರ್ವಭೂತಹಿತಶ್ಶಾಂತಃ ತ್ರಿದಂಡಸ್ಸಕಮಂಡಲುಃ । ಏಕೋರಾಮಃ ಪರಿವ್ರಜ್ಯ ಭಿಕ್ಷಾರ್ಥಂ ಗ್ರಾಮಮಾಶ್ರಯೇತ್" ಇತಿ ವಿಜ್ಞಾನೇಶ್ವರೇ, "ಏಕದಂಡಂ ತ್ರಿದಂಡಂ ವಾ ಶಿಖಾಸೂತ್ರಂ ಕಮಂಡಲುಂ । ಕಾಷಾಯಂ ಚ ಶಿಖಾಂ ಕಂಥಾಬ್ರಹ್ಮಸೂತ್ರೇ ಕಮಂಡಲುಂ । ಧಾರಯೇಚ್ಚೈವ ಸಂನ್ಯಾಸೀ ತತ್ತನ್ಮಂತ್ರವಿಧಾನತಃ ।" ಇತಿ ಗೌತಮಸ್ಮೃತೌ, "ಶ್ಲಕ್ಷ್ಣಕಾಷಾಯಸಂವೀತಃ ಶುಚೀ ಛತ್ರ ಉಪಾಸಹೀ । ವಾಮೇ ಚಾಂಸೇಽವಸಜ್ಯಾಥ ಕರೇ ಯಷ್ಟಿಕಮಂಡಲುಃ । ಪರಿವ್ರಾಜಕರೂಪೇಣ ವೈದೇಹೀಮುಪಪದ್ಯತ ॥" ಇತಿ ರಾಮಾಯಣೇ ಚ ಊರ್ಧ್ವರೇತಸಾಂ ಆಶ್ರಮಧರ್ಮಾ ದೃಶ್ಯಂತೇ. ತಥಾಪಿ ಪ್ರಾತ್ಯಕ್ಷಿಕಶ್ರುತಿಸ್ಮೃತಿಸೂತ್ರಪುರಾಣಾದಿಷು ಶಿಖಾಗಾಯತ್ರೀಬ್ರಹ್ಮಸೂತ್ರಪರಿತ್ಯಾಗಸಂನ್ಯಾಸವಚನಾನಾಮಚೋದನಾತ್ ವಿಧ್ಯಭಾವಾತ್ ಗಾಯತ್ರೀಶಿಖಾಯಜ್ಞೋಪವೀತತ್ಯಾಗಾನುಸರಣಹಂಸಪರಮಹಂಸಸಂನ್ಯಾಸಪರಾಮರ್ಶಂ ಹಿ ಅಂಧಪರಂಪರಾನ್ಯಾಸಭ್ರಮಸಿದ್ಧಮೇವ ಹೀತಿ ಅಪವದತಿ ಜೈಮಿನಿಃ ಪ್ರತಿಪಾದಯತಿ. ತಸ್ಮಾತ್ ಶ್ರುತಿಸ್ಮೃತ್ಯನುಸಾರೇಣ ಯತೀನಾಂ ಊರ್ಧ್ವರೇತಸಾಂ . ಬ್ರಹ್ಮಧರ್ಮಪ್ರಧಾನಸಾವಿತ್ರೀಶಿಖಾಸೂತ್ರಸಂಧಾನಾವಿರೋಧಸಂನ್ಯಾಸಗ್ರಹಣಂ ಯುಕ್ತಂ.

ಕುಟೀಚಕ, ಬಹೂದರ, ಹಂಸ, ಪರಮಹಂಸ ಎಂಬ ನಾಲ್ಕುಬಗೆಯ ಸನ್ಯಾಸಗಳಲ್ಲಿ ವೈದಿಕರಿಗೆ ಕಲಿಯುಗದಲ್ಲಿ ಯಾವುದು ವಿಧೇಯ ? ಯಾವುದು ನಿಷಿದ್ಧ? ಎಂಬುದನ್ನು ಇಲ್ಲಿ ತಿಳಿಸುತ್ತಾನೆ. "ನ ಕರ್ಮಣಾ" ಎಂದು ತೈತ್ತಿರೀಯ ಶ್ರುತಿಯಲ್ಲೂ, "ಬ್ರಹ್ಮಚರ್ಯವನ್ನು ಮುಗಿಸಿಯೇ ಗೃಹಸ್ಥನಾಗಬೇಕು. ವನದಲ್ಲಿ ನೆಲಸಿದ ಮೇಲೆಯೇ ಸಂನ್ಯಾಸಿಯಾಗಬೇಕು. ಹಾಗಿಲ್ಲದೆ ಇದ್ದರೆ ಬ್ರಹ್ಮಚರ್ಯವನ್ನು ಮುಗಿಸಿದೊಡನೆಯೂ ಸಂನ್ಯಾಸಿಯಾಗಬಹುದು ಅಥವಾ ಮನೆಯಿಂದಲೂ ವನದಿಂದಲೂ ಹೊರಟು ಸಂನ್ಯಾಸವನ್ನು ಪಡೆಯಬಹುದು" "ಯಾವ ಗಳಿಗೆಯಲ್ಲಿ ವೈರಾಗ ಬರುವುದೋ ಆಗಲೇ ಸಂನ್ಯಾಸವನ್ನು ಸ್ವೀಕರಿಸಬಹುದು" "ಕೂದಲು ಉಗುರು ಗಡ್ಡ

ಗಳನ್ನು ಬೋಳಿಸಿ ಕೈನಲ್ಲಿ ದಂಡ ಕುಂಭಗಳನ್ನು ಹಿಡಿದು ಯಾವೊಂದು ಪ್ರಾಣಿಗೂ ನೋವನ್ನು ಕೊಡದೆ ಲೋಕದಲ್ಲಿ ಸಂಚರಿಸಬೇಕು. ಮೂರುಬಗೆಯ ಋಣಗಳನ್ನು ತೀರಿಸಿ ಮನಸ್ಸನ್ನು ಮೋಕ್ಷದಲ್ಲಿ ನೆಲೆಗೊಳಿಸಬೇಕು " ಎಂದು ಮನುಸ್ಮೃತಿಯಲ್ಲೂ, " ಸರ್ವ ಪ್ರಾಣಿಗಳ ಹಿತವನ್ನಾಚರಿಸುತ್ತ ಶಾಂತನಾಗಿ ಯತಿಯು ಕೈಯಲ್ಲಿ ತ್ರಿಶೂಲ ವನ್ನೂ ಕಮಂಡಲುವನ್ನೂ ಹಿಡಿದು ಪರಮಾತ್ಮನೊಬ್ಬನಲ್ಲಿಯೇ ರಮಿಸುತ್ತ ಭಿಕ್ಷೆ ಗಾಗಿ ಗ್ರಾಮಕ್ಕೆ ಹೋಗಬೇಕು. " ಎಂದು ವಿಜ್ಞಾನೇಶ್ವರದಲ್ಲಿಯೂ, " ಸನ್ಯಾಸಿಯು ಏಕದಂಡವನ್ನಾಗಲೀ ತ್ರಿಶೂಲವನ್ನಾಗಲೀ ಹಿಡಿದು ಶಿಖಾಸೂತ್ರಗಳನ್ನೂ ಕಮಂಡಲು ವನ್ನೂ ಕಾವಿಬಟ್ಟೆಯನ್ನೂ ಧರಿಸಬೇಕು " ಎಂದು ಗೌತಮಸ್ಮೃತಿಯಲ್ಲೂ, " ಕಾವಿಬಟ್ಟೆಯನ್ನುಟ್ಟು ಶಿಖೆಯನ್ನು ಬಿಟ್ಟು ಛತ್ರಿಯನ್ನು ಹಿಡಿದು ಪಾದುಕೆಗಳನ್ನು ಧರಿಸಿ ಎಡತೋಳಿನಲ್ಲಿ ದಂಡವನ್ನು ಇಟ್ಟು ಕೈನಲ್ಲಿ ಕಮಂಡಲವನ್ನು ಹಿಡಿದು ಸನ್ಯಾ ಸಿಯ ರೂಪದಿಂದ ರಾವಣನು ಸೀತೆಯ ಬಳಿಗೆ ಬಂದನು " ಎಂದು ರಾಮಾಯಣ ದಲ್ಲೂ ಸನ್ಯಾಸಾಶ್ರಮವನ್ನು ಹೇಳಲಾಗಿದೆ. ಆದರೂ ಪ್ರತ್ಯಕ್ಷವಾದ ಶ್ರುತಿಸ್ಮೃತಿ ಪುರಾಣಾದಿಗಳಲ್ಲಿ ಶಿಖೆ, ಗಾಯತ್ರಿ, ಯಜ್ಞೋಪವೀತಗಳನ್ನು ತೊರೆಯುವ ಸಂನ್ಯಾಸ ವನ್ನು ವಿಧಿಸದಿರುವುದರಿಂದ ಇದನ್ನು ಆಚರಿಸುವ ಹಂಸ ಮತ್ತು ಪರಮಹಂಸ ಸನ್ಯಾಸವು ಅಂಧಪರಂಪರೆಯಂತೆ ವ್ಯರ್ಥವಾಗುವುದೆಂದು ಜೈಮಿನಿಯು ಹೇಳು ತ್ತಾನೆ. ಆದ್ದರಿಂದ ಸಂನ್ಯಾಸಿಗಳು ಶ್ರುತಿಯಂತೆ ಗಾಯತ್ರಿ ಶಿಖಾಸೂತ್ರಗಳಿಗೆ ವಿರೋಧವಾಗದಂತೆ ಸಂನ್ಯಾಸವನ್ನು ಸ್ವೀಕರಿಸುವುದೇ ಯುಕ್ತವಾಗುತ್ತದೆ.

ಏವಂ ಸ್ವಸಿದ್ಧಾಂತಾನುಸಾರೇಣ ಆಚಾರ್ಯಾಂತರಂ ದರ್ಶಯಿತ್ವಾ ತದ್ವತ್ ಸ್ವಸಿದ್ಧಾಂತಮಾಹ. ಅನುಷ್ಠೇಯಂ ಬಾದರಾಯಣಃ ಸಾಮ್ಯ ಶ್ರುತೇಃ ॥ ೧೯ ॥ ಬ್ರಹ್ಮಚರ್ಯಾದ್ಯಾಶ್ರಮವತ್ ಊರ್ಧ್ವರೇತಸಾಂ ಸಂನ್ಯಾಸಾಶ್ರಮೋಽನುಷ್ಠೇಯ ಇತಿ ಭಗವಾನ್ ಬಾದರಾಯಣೋ ಮನ್ಯತೇ. ಕುತಃ? ಸಾಮ್ಯಶ್ರುತೇಃ. " ತ್ರಯೋಃ ಧರ್ಮಸ್ಕಂಧಾ " " ಏತಮೇವ ಪ್ರವ್ರಾಜಿನೋ ಲೋಕಮಿಚ್ಛಂತಃ ಪ್ರವ್ರಜಂತಿ " ಇತಿ ಶ್ರುತೇಃ ಊರ್ಧ್ವರೇತಸಾಂ ಬ್ರಹ್ಮಚರ್ಯಾಶ್ರಮವತ್ ಯತ್ಯಾಶ್ರಮಸ್ಯಾಪಿ ಸರ್ವಾ ಧಿಕಪರಬ್ರಹ್ಮಪ್ರಾಪಕತ್ವೇ ಹಿ ಮುಖ್ಯಹೇತುತ್ವಶ್ರವಣಾತ್. ಕಿಂಚ " ಪ್ರಾಜಾಪತ್ಯಂ ಬ್ರಾಹ್ಮಣಾನಾಂ " ಇತ್ಯಾರಭ್ಯ " ಬ್ರಾಹ್ಮಂ ಸಂನ್ಯಾಸಿನಾಂ ಸ್ಮೃತಂ " ಇತ್ಯಂತೇನ ವರ್ಣಾನಾಂ ಆಶ್ರಮಾಣಾಂ ಚ ಕೇವಲಾನಾಂ ಬ್ರಹ್ಮಲೋಕಪ್ರಾಪ್ತ್ಯಂತಂ ಫಲಮಭಿಧಾಯ " ಏಕಾಂತಿನಃ ಸದಾ ಬ್ರಹ್ಮ ಧ್ಯಾಯಿನೋ ಯೋಗಿನೋ ಹಿ ಯೇ । ತೇಷಾಂ ತತ್ಪರಮಂ ಸ್ಥಾನಂ ಯದ್ವೈ ಪಶ್ಯಂತಿ ಸೂರಯಃ ॥ " ಇತಿ ತೇಷ್ವೇವ ಬ್ರಹ್ಮನಿಷ್ಠಾನಾಂ ಬ್ರಹ್ಮಪ್ರಾಪ್ತಿಮಭಿದಧತಾ ಭಗವತಾ ಪಾರಾಶರ್ಯೇಣ ಸ್ಪಷ್ಟಮುಕ್ತಂ. ತತ್ರೈವ " ಏಕೈಕಮುಪವೀತಂ ತು ಯತೇಶ್ಚ ಬ್ರಹ್ಮಚಾರಿಣಃ " " ಇತಿ

ಯತೀನಾಂ ಬ್ರಹ್ಮಚಾರಿವದೇಕಯಜ್ಞೋಪವೀತಕಥನಾತ್, ಮನ್ವಾದಿ ಸ್ಮೃತಿಷು ಭಾರತಭಾಗವತರಾಮಾಯಣಾದಿಗ್ರಂಥೇಷು ಶಿಖಾಸೂತ್ರ ತ್ಯಾಗಲಕ್ಷಣಲಕ್ಷಿತತ್ರೈವರ್ಣಿಕ ಸಂನ್ಯಾಸೋಪನ್ಯಾಸಾದರ್ಶನಾತ್ ದಂಡಕಾಷಾಯಾದಿವತ್ ಶಿಖಾಬ್ರಹ್ಮಸೂತ್ರಧಾರಣಮಪಿ ಯತೀನಾಂ ವಿಹಿತಂ. ನನು ರಾವಣಧರ್ಮರಾಜಾರ್ಜುನಾದಿಸಂನ್ಯಾಸಸ್ಯ ಕೃತ್ರಿಮ ತ್ವೇನ ಶಿಖಾಸೂತ್ರಧಾರಣಮುಚಿತಂ ಅಕೃತ್ರಿಮಸಂನ್ಯಾಸಿನಾಂ ತನ್ನಾಂಗೀ ಕರ್ತವ್ಯಮಿತಿ ಚೇನ್ನ ಲೋಕೇ ರಾಮಕೃಷ್ಣಾದಿಪ್ರತಿಮಾಸು ತದ್ವೇಷಾವ ಲಂಬನಪುರುಷೇಷು ಚ ತನ್ನಿಷ್ಠಮುಖ್ಯಲಾಂಛನಾದಿಕಸ್ಯೈವ ದೃಷ್ಟ ತ್ವಾತ್ ಶಿಖೋಪವೀತತ್ಯಾಗವಿಶಿಷ್ಟತ್ವಸ್ಯ ಸಂನ್ಯಾಸಲಕ್ಷಣತ್ವೇ ತಾದೃಶ ಧರ್ಮಪರಿತ್ಯಾಗಃ ಕಥಮುಪದಿಶ್ಯತೇ ? ದಶಮುಖಾದರ್ಶನಪೂರ್ವಕ ಯತೀಶ್ವರವೇಷಾವಚ್ಛಿನ್ನೈಕಮುಖರಾವಣೇ ಧರ್ಮದೇವತಾವರಪ್ರಾ ಪ್ತಯುಧಿಷ್ಠಿರಾದಿಷು ಶಿಖಾಸೂತ್ರಾದರ್ಶನಮಹಿಮಾ ಕಿಂ ನ ಸ್ಯಾತ್? ಕಿಂಚ ಪೂರ್ವೋದಾಹೃತಮನುಪಾರಾಶರಯಾಜ್ಞವಲ್ಕ್ಯಾದಿಸ್ಮೃತೀನಾಂ ದತ್ತಾಂಜಲಿಃ ಸ್ಯಾತ್. ತಥಾ ವೃದ್ಧಶಾತಾತಪೇ " ರುದ್ರಶ್ಶಿಖಾ ಪೃಥಿವೀ ಯೋನಿಃ ಇತಿ ತೈತ್ತಿರೀಯದರ್ಶನಾತ್ । ಶಿಖೋತ್ಪಾಟನಯಾ ಲೋಕೇ ಶಿವದ್ರೋಹೀ ಭವೇದ್ಧ್ರುವಂ ॥ ಶಿಖಾಯಜ್ಞೋಪವೀತಾಭ್ಯಾಂ ವಿಪ್ರತ್ವಂ ಪರಿಚಕ್ಷ್ಯತೇ । ತಯೋರಭಾವೇ ಶೂದ್ರತ್ವಂ ಅತ ಏವ ನ ಸಂಶಯಃ । ತಸ್ಮಾಚ್ಛಿಖಾ ಬ್ರಹ್ಮಸೂತ್ರಂ ಚತುರಾಶ್ರಮಿಣಾಂಸ್ತಥಾ । ಧಾರಯಿತವ್ಯಂ ಪ್ರಯತ್ನೇನ ವೇದಮಾರ್ಗಾವಲಂಬಿನಾಂ ॥ " ಇತಿ ಶಂಕರಸಂಹಿತಾಯಾಂ " ಅತ್ಯಾಶ್ರಮೀ ಪ್ರಾಣಲಿಂಗಸಂಬಂಧಂ ಭಸ್ಮ ಗುಟ್ಟಿಕಾಂ । ಕಂಥಂ ಕಮಂಡಲುಂ ಭಿಕ್ಷಾಪಾತ್ರಂ ದಂಡಂ ಚ ಧಾರ ಯೇತ್। ಏತಾಃ ಪಂಚಮಹಾಮುದ್ರಾ ಯಸ್ಮಿನ್ ಯಸ್ಮಿನ್ ವಸಂತಿ ಹಿ। ತಂ ತಂ ಶರಣಮಭ್ಯೇತ್ಯ ಸರ್ವಭಾವೇನ ಪೂಜಯೇತ್ । ಪಂಚ ಮುದ್ರಾ ನ್ವಿತೋ ಧರ್ಮಃ ಯಸ್ಮಿನ್ಸ್ವತ್ಸ ಪ್ರವರ್ತತೇ। ಸಂಪದ್ಯ ಸರ್ವದಾ ಪೂಜ್ಯಃ ಪ್ರಾಣಲಿಂಗಸಮನ್ವಿತೈಃ ॥" ಇತಿ ತತ್ರೈವ ಲಿಂಗಧಾರಿಸಂನ್ಯಾಸಿನಾಂ ಪಂಚ ಮುದ್ರಧಾರಕತ್ವೋಪದೇಶಾತ್, ಮಕುಟಾಗಮೇ " ದಂಡಂ ಕಮಂಡ ಲುಂ ಕಂಥಾಂ ಬ್ರಹ್ಮಸೂತ್ರಂ ಶಿಖಾಂ ತಥಾ । ಪ್ರಾಣಲಿಂಗಂ ಚ ಕಾಷಾ ಯಂ ಭಿಕ್ಷಾಪಾತ್ರಮುಪಾನಹೀ । ಭಸ್ಮಘುಟ್ಟೀಂ ತಥಾ ಛತ್ರಂ ಅತ್ಯಾ ಶ್ರಮಪರಸ್ಸದಾ । ಧೃತ್ವಾ ಜಿತೇಂದ್ರಿಯೋ ಭೂತ್ವಾ ಶಿವಯೋಗಂ ಸಮ ಭ್ಯಸೇತ್ ॥ ಶಿವಯೋಗಿಸಮೀಪೇ ವಾ ಶಿವಲಿಂಗಸ್ಯ ಸನ್ನಿಧೌ । ಶಿವಾಗಮ ಸಮೀಪೇ ವಾ ನಿರಾಭಾರಂ ಸಮಾಶ್ರಯೇತ್ ॥ " ಇತ್ಯೇವಂ ಬ್ರಹ್ಮಸೂತ್ರ ಸ್ಮೃತಿಪುರಾಣಾಗಮೇಷು ಶಿಖಾಬ್ರಹ್ಮಸೂತ್ರವೈಶಿಷ್ಟ್ಯಸ್ಯ ಸಂನ್ಯಾಸ ಏವ

**ಬಹುಧಾ ದರ್ಶನಾತ್ ತಥೈವ ವೈಯಾಸಿಕಮುಖ್ಯಾಭಿಪ್ರೇತತ್ವಾಚ್ಚ ವಿದುಷಾಂ ಸ ಏವಾವಶ್ಯಕಃ.**

ಹೀಗೆ ತನ್ನ ಸಿದ್ಧಾಂತಕ್ಕನುಗುಣವಾದ ಆಚಾರ್ಯರ ಮತವನ್ನು ತಿಳಿಸಿ ಈಗ ತನ್ನ ಸಿದ್ಧಾಂತವನ್ನು ತಿಳಿಸುತ್ತಾನೆ. ಊರ್ಧ್ವರೇತಸ್ಕರು ಬ್ರಹ್ಮಚರ್ಯಾದ್ಯಾಶ್ರಮಗಳಂತೆಯೇ ಸಂನ್ಯಾಸಾಶ್ರಮವನ್ನು ಆಚರಿಸಬೇಕೆಂದು ಬಾದರಾಯಣರು ಹೇಳುತ್ತಾರೆ. "ಮೂರು ಬಗೆಯ ವರ್ಣದವರು ಈ ಲೋಕವನ್ನು ಇಚ್ಛಿಸದೆ ಸಂನ್ಯಾಸವನ್ನು ಸ್ವೀಕರಿಸುತ್ತಾರೆ" ಎಂಬ ಶ್ರುತಿಯಲ್ಲಿ ಊರ್ಧ್ವರೇತಸ್ಕರಿಗೆ ಬ್ರಹ್ಮಚರ್ಯಾಶ್ರಮದಂತೆಯೇ ಸಂನ್ಯಾಸಾಶ್ರಮವೂ ಸರ್ವಶ್ರೇಷ್ಠವಾದ ಪರಬ್ರಹ್ಮವನ್ನು ದೊರಕಿಸಲು ಮುಖ್ಯ ಕಾರಣವೆಂದು ಹೇಳಲಾಗಿದೆ. ಪರಾಶರಸ್ಮೃತಿಯಲ್ಲಿ ಬ್ರಾಹ್ಮಣರಿಗೆ ಪ್ರಜಾಪತಿ ವ್ರತವನ್ನೂ ಸಂನ್ಯಾಸಿಗಳಿಗೆ ಬ್ರಾಹ್ಮವ್ರತವನ್ನೂ ಹೇಳಿ ಎಲ್ಲಾ ವರ್ಣಗಳಿಗೂ ಮತ್ತು ಆಶ್ರಮಗಳಿಗೂ ಸಾಲೋಕ್ಯಮುಕ್ತಿಯವರೆಗೂ ಫಲವನ್ನು ತಿಳಿಸಿ "ಯೋಗಿಗಳು ಯಾವಾಗಲೂ ಏಕಾಂತದಲ್ಲಿ ಕುಳಿತು ಬ್ರಹ್ಮವನ್ನೇ ಧ್ಯಾನಿಸುತ್ತಾರೆ. ಅವರಿಗೆ ಅದೇ ಉತ್ತಮಸ್ಥಾನ. ಅದನ್ನೇ ವಿದ್ವಾಂಸರು ಜ್ಞಾನನೇತ್ರದಿಂದ ಕಾಣುತ್ತಾರೆ" ಹೀಗೆ ಹೇಳಿ ಅವರಲ್ಲಿ ಬ್ರಹ್ಮನಿಷ್ಠರಾದವರಿಗೆ ಮಾತ್ರವೇ ಬ್ರಹ್ಮಪ್ರಾಪ್ತಿಯನ್ನು ತಿಳಿಸಲಾಗಿದೆ. ಅಲ್ಲಿಯೇ ಯತಿಗಳಿಗೂ ಬ್ರಹ್ಮಚಾರಿಗಳಂತೆ ಒಂದೇ ಯಜ್ಞೋಪವೀತವನ್ನು ಹೇಳಿದೆ. ಹೀಗೆ ಮನ್ವಾದಿಸ್ಮೃತಿಗಳಲ್ಲೂ, ಭಾರತ ಭಾಗವತ ರಾಮಯಣ ಮೊದಲಾದ ಗ್ರಂಥಗಳಲ್ಲೂ ಶಿಖಾಸೂತ್ರಗಳನ್ನು ತೊರೆಯಬೇಕೆಂಬ ಸಂನ್ಯಾಸಧರ್ಮವನ್ನು ಮೂರು ವರ್ಣದವರಿಗೂ ತಿಳಿಸಲಾಗಿದೆ. ದಂಡಕಾಷಾಯಗಳಂತೆ ಶಿಖಾಸೂತ್ರಗಳ ಧಾರಣವನ್ನು ಯತಿಗಳಿಗೆ ವಿಧಿಸಲಾಗಿದೆ. ರಾವಣ ಧರ್ಮರಾಜ ಅರ್ಜುನ ಇವರ ಸಂನ್ಯಾಸವು ಕೃತ್ರಿಮವಾದ್ದರಿಂದ ಇವರಿಗೆ ಶಿಖಾಸೂತ್ರಗಳ ಧಾರಣವೇನೋ ಯುಕ್ತವಾಗಿದೆ. ಆದರೆ ಸಹಜವಾದ ಸಂನ್ಯಾಸಕ್ಕೆ ಅದನ್ನು ಅಂಗೀಕರಿಸಲಾಗುವುದಿಲ್ಲವೆಂದು ಹೇಳುವುದು ಯುಕ್ತವಲ್ಲ. ಲೋಕದಲ್ಲಿ ರಾಮ ಕೃಷ್ಣ ಮೊದಲಾದವರ ಪ್ರತಿಮೆಗಳಲ್ಲೂ ಆ ವೇಷವನ್ನು ಧರಿಸಿದ ಪುರುಷರಲ್ಲೂ ಆಯಾಯ ವ್ಯಕ್ತಿಗಳ ಮುಖ್ಯ ಲಾಂಛನಗಳೇ ಕಂಡುಬರುತ್ತವೆ. ಶಿಖಾಸೂತ್ರಗಳ ತ್ಯಾಗವೇ ಸಂನ್ಯಾಸದ ಲಕ್ಷಣವಾದರೆ ರಾವಣಾದಿಗಳು ಈ ಲಕ್ಷಣವನ್ನು ತೊರೆದದ್ದು ಹೇಗೆ ಹೊಂದುತ್ತದೆ? ಹತ್ತುಮುಖಗಳಿಲ್ಲದೆ ಯತಿಯ ವೇಷದಲ್ಲಿ ಏಕಮುಖದಿಂದ ಬಂದ ರಾವಣನಿಗೂ, ಧರ್ಮರಾಜನ ವರದಿಂದ ಜನಿಸಿದ ಯುಧಿಷ್ಠಿರನಿಗೂ ಶಿಖಾಸೂತ್ರಗಳಿಲ್ಲದಿರುವಿಕೆ ಒಂದು ಮಹಿಮಾವಿಶೇಷವಾಗಬಾರದೇನು? ಹಾಗೆ ಈ ಲಕ್ಷಣವನ್ನು ಒಪ್ಪದೆಹೋದರೆ ಹಿಂದೆಹೇಳಿದ ಮನು ಪಾರಾಶರ ಯಜ್ಞವಲ್ಕ್ಯ ಸ್ಮೃತಿಗಳಿಗೆ ತಿಲಾಂಜಲಿಯನ್ನು ಎರೆಯಬೇಕಾದೀತು. ಹಾಗೆಯೇ ವೃದ್ಧಶಾತಾತಪದಲ್ಲಿ "ರುದ್ರನೇ ಶಿಖೆ, ಪೃಥಿವಿಯೇ ಯೋನಿ ಎಂದು ತೈತ್ತಿರೀಯಶ್ರುತಿಯಲ್ಲಿ ಹೇಳಿರುವುದರಿಂದ ಶಿಖೆಯನ್ನು ಬೋಳಿಸಿದರೆ ರುದ್ರನಿಗೆ ದ್ರೋಹವುಂಟಾಗುವುದು. ಶಿಖಾಯಜ್ಞೋಪವೀತಗಳಿಂದ ಒಬ್ಬನು ಬ್ರಾಹ್ಮಣನೆನಿ

ಸುತ್ತಾನೆ. ಅವೆರಡೂ ಇಲ್ಲದಿದ್ದರೆ ಅವನು ಶೂದ್ರನಾಗಬೇಕಾಗುತ್ತದೆ. ಆದ್ದರಿಂದ ಶಿಖಾಸೂತ್ರಗಳನ್ನು ವೈದಿಕರು ನಾಲ್ಕು ಆಶ್ರಮಗಳಲ್ಲೂ ಧರಿಸಬೇಕು" ಎಂದು ಹೇಳಿದೆ. ಶಂಕರಸಂಹಿತೆಯಲ್ಲಿ "ಆಶ್ರಮಧರ್ಮವನ್ನು ಮೀರಿದವನು ಪ್ರಾಣಲಿಂಗದ ಸಂಬಂಧವನ್ನು ಪಡೆದು ಭಸ್ಮದಪೆಟ್ಟಿಗೆ, ಬಟ್ಟೆಯಗಂಟು, ಕಮಂಡಲು, ಭಿಕ್ಷಾಪಾತ್ರೆ, ದಂಡಗಳನ್ನು ಕೈನಲ್ಲಿ ಹಿಡಿದಿರಬೇಕು. ಈ ಐದು ಮಹಾ ಮುದ್ರೆಗಳು ಯಾವನಲ್ಲಿರುತ್ತವೆಯೋ ಅವನನ್ನು ಭಕ್ತಿಯಿಂದ ಪೂಜೆಮಾಡಬೇಕು. ಈ ಪಂಚಮುದ್ರೆಗಳಿರುವವನು ಪ್ರಾಣಲಿಂಗದ ಅನುಭವವನ್ನು ಪಡೆದಿದ್ದರೆ ಎಲ್ಲರಿಗೂ ಎಲ್ಲಾ ಕಾಲದಲ್ಲೂ ಅವನು ಪೂಜ್ಯನಾಗುವನು" ಎಂದು ಹೇಳಿದೆ. ಅಲ್ಲಿಯೇ ಲಿಂಗಧಾರಿ ಸಂನ್ಯಾಸಿಗಳಿಗೂ ಪಂಚಮುದ್ರೆಗಳ ಧಾರಣವನ್ನು ಹೇಳಿದೆ. ಮಕುಟಾಗಮದಲ್ಲಿ "ದಂಡ, ಕಮಂಡಲು, ಕಂಥೆ, ಬ್ರಹ್ಮಸೂತ್ರ, ಶಿಖೆ, ಪ್ರಾಣಲಿಂಗ, ಕಾವಿಬಟ್ಟೆ, ಬಿಕ್ಷಾಪಾತ್ರೆ, ಪಾದುಕೆಗಳು, ಭಸ್ಮದ ಪೆಟ್ಟಿಗೆ, ಛತ್ರ ಇವಿಷ್ಟನ್ನು ಧರಿಸಿ ಸನ್ಯಾಸಿಯು ಜಿತೇಂದ್ರಿಯನಾಗಿ ಶಿವಯೋಗವನ್ನು ಅಭ್ಯಾಸಮಾಡಬೇಕು. ಶಿವಯೋಗಿಯ ಸಮೀಪದಲ್ಲೂ, ಶಿವಲಿಂಗದ ಸನ್ನಿಧಿಯಲ್ಲೂ, ಶಿವಾಗಮದ ಸಮೀಪದಲ್ಲೂ ನಿರ್ಲಿಪ್ತತೆಯಿಂದ ವರ್ತಿಸಬೇಕು" ಹೀಗೆ ಅನೇಕ ಸ್ಮೃತಿ ಪುರಾಣಾಗಮಗಳಲ್ಲಿ ಸಂನ್ಯಾಸವು ಶಿಖೆ ಬ್ರಹ್ಮಸೂತ್ರಗಳೊಡಗೂಡಿರುವುದಾಗಿಯೇ ಕಂಡುಬಂದಿದೆ. ಇದೇ ಅಭಿಪ್ರಾಯವು ವ್ಯಾಸಸೂತ್ರಗಳಿಗೂ ಸಮ್ಮತವಾಗಿರುವುದರಿಂದ ವಿದ್ವಾಂಸರಿಗೂ ಆದರಣೀಯವಾಗಿದೆ.

ನನು ಕೇಷುಚಿತ್ ಸ್ಮೃತಿಪುರಾಣಾದಿಷು "ಬಹೂದಕಃ ಪರೋ ಹಂಸಃ ತ್ರಿದಂಡಾನಿ ತು ಧಾರಾಯೇತ್" ಇತ್ಯಾದಿನಾ ಬಹೂದಕಪರಮಹಂಸಾನಾಂ ಅದಂಡವಿಧೇಃ, ಕೇಷಾಂಚಿದೇಕದಂಡತ್ವಸ್ಯ ಚ ಅವಧಾರಣಾತ್ ಬ್ರಾಹ್ಮಣಾನಾಂ ಕೋ ವಿಧಿರಾಶ್ರೀಯತೇ ಇತ್ಯಾಶಂಕಾಯಾಮಾಹ. ವಿಧಿರ್ವಾ ಧಾರಣವತ್ ‖ ೨೦ ‖ ವಾಶಬ್ದೋsತ್ರಾವಧಾರಣಾರ್ಥಃ. ಧಾರಣವತ್ "ಅಮೃತಸ್ಯ ದೇವಧಾರಣೋ ಭೂಯಾಸಂ. ಶರೀರಂ ಮೇ ವಿಚರ್ಷಣಂ" ನಮೋ ಬ್ರಹ್ಮಣೇ. ಧಾರಣಂ ಮೇ ಅಸ್ತ್ವನಿರಾಕರಣಂ. ಧಾರಯಿತಾ ಭೂಯಾಸಂ. ಕರ್ಣಯೋಃ ಶ್ರುತಂ. ಮಾಂಚೋಧ್ವಂ ಮಾಮುಷ್ಯ ಓಂ" ಇತ್ಯಾದಿಷು ಮುಮುಕ್ಷೂಣಾಂ ಪರಶಿವಲಿಂಗಧಾರಣಂ ಯಥಾವಿಧಿ ತದ್ವತ್ ತದ್ವಿಧಾನೇ "ಸಖಾ ಮಾ ಗೋಪಾಯ" ಇತಿ ಮಂತ್ರೇಣ ಬ್ರಹ್ಮದಂಡಂ ಧಾರಯೇತ್ ಇತಿ ಶ್ರವಣಾತ್ ಊರ್ಧ್ವರೇತಸಾಂ ಬ್ರಾಹ್ಮಣಾನಾಂ ಕುಟೀಚಕಾದಿಚತುರ್ವಿಧಯತ್ಯಾಶ್ರಮಿಣಾಂ ಏಕದಂಡ ಏವ ವಿಧಿರಿತಿ ನಿಶ್ಚೀಯತೇ. "ವಾಗ್ದಂಡೋ ಹಿ ಮನೋದಂಡಃ ಕರ್ಮದಂಡಸ್ತು ತೇ ತ್ರಯಃ । ಇತ್ಯೇತೇ ನಿಹಿತಾ ದಂಡಾ ಯಸ್ಯ ತೇ ಸ ಯತಿಃ ಸ್ಮೃತಃ ।" ಇತಿ ಬೋಧಾಯನಸ್ಮೃತೌ ದಂಡತ್ರಯವಿಶಿಷ್ಟತ್ವಸ್ಯ ಯತೀನಾಂ ಮುಖ್ಯತ್ವೇನ ದ್ಯೋತನಾತ್,

ಭಾರತರಾಮಯಣಾದಿಗ್ರಂಥೇಷ್ವಪಿ ಅರ್ಜುನರಘುಮಹಾರಾಜಾದೀನಾಂ ದಂಡತ್ರಯಪರಿಗ್ರಹಣವಚನಾಚಾರದರ್ಶನಾತ್ ತದೇವ ಯುಕ್ತಮಿತಿ ಚೇತ್ತದಯುಕ್ತಂ. ತತ್ರೈವ "ದಂಡಮೇಕಂ ತು ವಿಪ್ರಾಣಾಂ ಕ್ಷತ್ರಿಯಾಣಾಂ ತ್ರಿದಂಡಕಂ।ವೈಶ್ಯಾನಾಂ ಚ ತಥಾ ಪ್ರೋಕ್ತಂ ಸಮಾನಗ್ರಂಥಿಸಂಯುತಂ । ಸತ್ಯಮಧ್ಯಾತ್ಮವಿಜ್ಞಾನಂ ವಾಗ್ದಂಡಸ್ತು ಪ್ರಚಕ್ಷ್ಯತೇ । ಸ್ವಕೀಯಾಶ್ರಮಕರ್ಮಾಣಿ ಕರ್ಮದಂಡ ಇತೀರ್ಯತೇ । ಶಮಾದಿಕಂ ಶಿವಧ್ಯಾನಂ ಮನೋದಂಡಃ ಪ್ರಕೀರ್ತಿತಃ। ನೈಣವಂ ಬ್ರಹ್ಮ ದಂಡಾಖ್ಯಂ ಏಕಂ ಧೃತ್ವಾ ಚರೇದ್ಯತಿಃ ॥" ಇತಿ. ಶಾತಾತಪೇ "ಶಿಖೀ ಜಟೀ ವಾ ಮುಂಡೀ ವಾ ಬ್ರಾಹ್ಮಣೋ ವೇದವಿತ್ತಮಃ।ಧಾರಯೇದ್ಬ್ರಹ್ಮ ದಂಡೈಕಂ ಯತಯೋ ನೈಕಚೇತಸಃ । ಕುಟೀಚಕಾದಿಯತಯೋ ವಸಿಷ್ಠಾದ್ಯಾಶ್ಚ ಸಂಸ್ಮೃತಾಃ । ಬಹೂದಕಾದಿಯತಯೋ ವ್ಯಾಸಃ ಶ್ವೇತೋಪಮನ್ಯವಃ । ತೇಷಾಮಪ್ಯೇಕದಂಡತ್ವಂ ಶಿಖಾಯಜ್ಞೋಪವೀತಕಂ । ದರ್ಶನಾದ್ಬ್ರಾಹ್ಮಣೋ ಲೋಕೇ ದಂಡಮೇಕಂ ತು ಧಾರಯೇತ್"ಇತಿ. "ಬಹೂದಕಸ್ತು ಸನ್ಯಾಸೀ ದಂಡಮೇಕಂ ಕಮಂಡಲುಂ । ಶಿಖಾಸೂತ್ರಂ ಚ ಕಾಷಾಯಂ ಧಾರಯೇದಜಿನಾದಿಕಂ ॥" ಇತಿ ವೃದ್ಧಶಾತಾತಪೇ ದರ್ಶನಾಚ್ಚ. ವಾಗ್ದಂಡೋ ವಾಙ್ನಿಯಮಃ, ಮನೋದಂಡೋ ಮನೋನಿಗ್ರಹಃ, ಕರ್ಮದಂಡಃ ಸ್ವಾಶ್ರಮವಿಹಿತಕರ್ಮನಿಷ್ಠೇತ್ಯುಪದೇಶಾತ್ ವಾಗ್ದಂಡಾದಿಕಂ ವೇಣುರೂಪೇಣ ಪರಿತ್ಯಜ್ಯ ಬ್ರಹ್ಮದಂಡಮೇಕಂ ವಿಧಿವಿಹಿತತ್ವಾತ್ ಬ್ರಾಹ್ಮಣಾನಾಂ ಊರ್ಧ್ವರೇತಸಾಂ ಶರೀರಪಾತಪರ್ಯಂತಂ ಧಾರ್ಯಮಿತಿ ನಿಶ್ಚೀಯತೇ. ಕಿಂಚ "ಸಂನ್ಯಸ್ಯ ವೇದಾಂತಶ್ರವಣಂ ಕುರ್ಯಾತ್" ಇತ್ಯಾದಿವಿಧಿದರ್ಶನಾತ್ ಯತೀನಾಮೇವ ವೇದಾಂತಶ್ರವಣಾಧಿಕಾರ ಇತಿ ಚೇದುಚ್ಯತೇ. "ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾತ್ । ನಾಸ್ತ್ಯಕೃತಃ ಕೃತೇನ ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ ॥" ಇತ್ಯತ್ರ ಶಿಷ್ಯಸ್ಯ ಸಮಿತ್ಪಾಣಿತ್ವಪ್ರದರ್ಶನೇನ ಗುರೋರಪಿ ಗೃಹಸ್ಥಾಶ್ರಮತ್ವಮುಪದಿಷ್ಟಂ. ಶ್ರೋತ್ರಿಯತ್ವೋಪದೇಶೇನ ಗುರೋರ್ನಿಷಿದ್ಧಕರ್ಮನಿರಾಕರಣತ್ವಂ. ಬ್ರಹ್ಮನಿಷ್ಠಮಿತ್ಯನೇನ ವಾಗದ್ವೈತಮಾರ್ದವನಿರಾಕರಣಪೂರ್ವಕಶಿವೈಕನಿಷ್ಠಾಗರಿಷ್ಠತ್ವಮುಕ್ತಂ. ಅತಏವ ಬ್ರಹ್ಮಚರ್ಯಾದ್ಯಾಶ್ರಮಾಣಾಮಪಿ ವೇದಾಂತಶ್ರವಣಮನನಾದಿಕಮವಿರೋಧಂ. ತಸ್ಮಾದವಿದ್ಯಾತ್ಮಕಕರ್ಮಣಃ ಬ್ರಹ್ಮವಿದ್ಯಾಂಗತ್ವಮಯುಕ್ತಂ.

ಕೆಲವು ಸ್ಮೃತಿಪುರಾಣಗಳಲ್ಲಿ "ಬಹೂದಕನೂ ಪರಮಹಂಸನೂ ತ್ರಿಶೂಲ

ವನ್ನು ಹಿಡಿಯಬೇಕು" ಎಂದು ಹೇಳಿರುವುದರಿಂದ ಈ ಎರಡುಬಗೆಯ ಸಂನ್ಯಾಸಿಗಳಿಗೂ ದಂಡವೇ ಇಲ್ಲವೆಂದೂ ಅಥವಾ ಏಕದಂಡವಿರಬಹುದೆಂದೂ ತಿಳಿದುಬರುತ್ತದೆ. ಆದ್ದರಿಂದ ಬ್ರಾಹ್ಮಣರು ಯಾವ ವಿಧಿಯನ್ನು ಆಶ್ರಯಿಸಬೇಕು ಎಂದಾಶಂಕಿಸಿ ತಿಳಿಸುತ್ತಾನೆ. "ಅಮೃತರೂಪವಾದ ಮೋಕ್ಷಕ್ಕಾಗಿ ಲಿಂಗವನ್ನು ಧರಿಸುತ್ತಾನೆ," ಲಿಂಗಧಾರಣಕ್ಕೆ ಯಾವ ಅಡಚಣೆಯೂ ಬಾರದಿರಲಿ. ನಾನು ಲಿಂಗವನ್ನು ಧರಿಸುವೆನು." ಈ ಬಗೆಯ ಶ್ರುತಿಗಳಲ್ಲಿ ಮುಮುಕ್ಷುಗಳಿಗೆ ಪರಶಿವಲಿಂಗದ ಧಾರಣವನ್ನು ಹೇಗೆ ವಿಧಿಸಲಾಗಿದೆಯೋ ಅದರಹಾಗೆಯೇ ಬ್ರಹ್ಮದಂಡವನ್ನೂ ಧರಿಸಬೇಕೆಂದು ಮಂತ್ರದಲ್ಲಿ ಹೇಳಲಾಗಿದೆ. ಊರ್ಧ್ವರೇತಸ್ಕರಾದ ಬ್ರಾಹ್ಮಣರಲ್ಲಿ ನಾಲ್ಕುಬಗೆಯ ಸಂನ್ಯಾಸಿಗಳಿಗೂ ಏಕದಂಡವನ್ನೇ ವಿಧಿಸಿರುವುದಾಗಿ ನಿಶ್ಚಯಿಸಲಾಗಿದೆ. "ವಾಗ್ದಂಡ, ಮನೋದಂಡ, ಕರ್ಮದಂಡ ಈ ಮೂರು ದಂಡಗಳಿರುವವನೇ ಯತಿ ಎನಿಸುವನು" ಎಂದು ಬೋಧಾಯನಸ್ಮೃತಿಯಲ್ಲಿ ಯತಿಗಳಿಗೆ ಮೂರುಬಗೆಯ ದಂಡಗಳನ್ನು ಮುಖ್ಯವೆಂದು ಹೇಳಿದೆ. ಭಾರತ ರಾಮಾಯಣಗ್ರಂಥಗಳಲ್ಲೂ, ಅರ್ಜುನ ರಘು ಮೊದಲಾದವರಿಗೂ ಮೂರುಬಗೆಯ ದಂಡಗಳನ್ನು ಬೇರೆರೀತಿಯಲ್ಲಿ ಹೇಳಿರುವುದರಿಂದ ಇದೇ ಯುಕ್ತವೆಂದು ಹೇಳುವುದು ಸರಿಯಲ್ಲ. ಬ್ರಾಹ್ಮಣರಿಗೆ ಏಕದಂಡವೂ, ವೈಶ್ಯರಿಗೂ ಕ್ಷತ್ರಿಯರಿಗೂ ತ್ರಿದಂಡವೂ ವಿಹಿತವಾಗಿವೆ. ಸತ್ಯನಿಷ್ಠೆ ಮತ್ತು ಅಧ್ಯಾತ್ಮವಿಜ್ಞಾನ ಇವೇ ವಾಗ್ದಂಡವೆನಿಸುತ್ತವೆ. ತನ್ನ ಆಶ್ರಮಕರ್ಮಗಳ ಅನುಷ್ಠಾನವೇ ಕರ್ಮದಂಡವೆನಿಸುತ್ತದೆ. ಶಾಂತಿಯಿಂದ ಶಿವನನ್ನು ಧ್ಯಾನಿಸುವುದೇ ಮನೋದಂಡವೆನಿಸುತ್ತದೆ. "ಬಿದುರಿನ ದಂಡವೊಂದನ್ನು ಮಾತ್ರವೇ ಹಿಡಿದು ಯತಿಯು ಸಂಚರಿಸಬೇಕು" ಎಂದು ಶಾತಾತಪದಲ್ಲಿ ಹೇಳಲಾಗಿದೆ. ವೈದಿಕನಾದ ಬ್ರಾಹ್ಮಣನು ಶಿಖಾಜಟಾಮುಂಡಗಳೊಡಗೂಡಿ ಬ್ರಹ್ಮದಂಡವೊಂದನ್ನೇ ಹಿಡಿದಿರಬೇಕು. ವಸಿಷ್ಠಾದಿಗಳು ಕುಟೀಚಕಯತಿಗಳೆನಿಸಿದ್ದಾರೆ. ವ್ಯಾಸ ಉಪಮನ್ಯು ಮೊದಲಾದವರು ಬಹೂದರಯತಿಗಳೆನಿಸಿದ್ದಾರೆ. ಅವರಿಗೂ ಶಿಖಾಯಜ್ಞೋಪವೀತಗಳ ಜೊತೆಗೆ ಒಂದೇ ದಂಡವಿರುವುದರಿಂದ ಬ್ರಾಹ್ಮಣನು ಒಂದೇ ದಂಡವನ್ನು ಹಿಡಿಯಬೇಕು" "ಬಹೂದರಸನ್ಯಾಸಿಯು ಏಕದಂಡವನ್ನೂ ಕಮಂಡಲುವನ್ನೂ ಶಿಖಾಸೂತ್ರವನ್ನೂ ಕಾವಿಬಟ್ಟೆ ಮತ್ತು ಜಿಂಕೆಚರ್ಮಗಳನ್ನೂ ಧರಿಸಬೇಕು" ಎಂದು ವೃದ್ಧ ಶಾತಾಪದಲ್ಲಿ ಹೇಳಿದೆ. ಸುವ್ಯವಸ್ಥಿತವಾದ ವ್ಯವಹಾರವೇ ವಾಗ್ದದಂಡವೆನಿಸುತ್ತದೆ. ಮನೋನಿಗ್ರಹವೇ ಮನೋದಂಡವೆನಿಸುತ್ತದೆ. ಆಯಾ ಆಶ್ರಮಕ್ಕೆ ವಿಹಿತವಾದ ಕರ್ಮಗಳನ್ನಾಚರಿಸುವುದೇ ಕರ್ಮದಂಡವೆನಿಸುತ್ತದೆ. ಬಿದುರಿನಿಂದಾದ ಮೂರು ದಂಡಗಳನ್ನು ತೊರೆದು ಬ್ರಹ್ಮದಂಡ ಒಂದನ್ನೇ ಶಾಸ್ತ್ರಸಮ್ಮತವಾದ್ದರಿಂದ ಊರ್ಧ್ವರೇತಸ್ಕರಾದ ಬ್ರಾಹ್ಮಣರು ಶರೀರವಿರುವವರೆಗೂ ಧರಿಸಬೇಕು ಎಂದು ನಿಶ್ಚಯಿಸಲಾಗಿದೆ. "ಎಲ್ಲವನ್ನೂ ತೊರೆದು ವೇದಾಂತವನ್ನು ಕೇಳಬೇಕು" ಎಂಬಲ್ಲಿ ವಿಧಿ ಇರುವುದರಿಂದ ಯತಿಗಳಿಗೆ ಮಾತ್ರವೇ ವೇದಾಂತವನ್ನು ಕೇಳಲಿಕ್ಕೆ ಅಧಿಕಾರವಿದೆ ಎಂದು ಹೇಳಿದರೆ ಅದಕ್ಕೆ

ಸಮಾಧಾನವನ್ನು ಶ್ರುತಿಯೇ ತಿಳಿಸುತ್ತದೆ. "ಬ್ರಾಹ್ಮಣನು ಕರ್ಮದಿಂದ ಗಳಿಸಿದ ಲೋಕಗಳ ಅಸ್ಥಿರತೆಯನ್ನು ಪರೀಕ್ಷಿಸಿ ವೈರಾಗ್ಯವನ್ನು ಹೊಂದಬೇಕು. ಕೃತ್ರಿಮವಾದ ಕರ್ಮಗಳಿಂದ ಸಹಜಮುಕ್ತಿ ದೊರಕಲಾರದು. ಅದಕ್ಕಾಗಿಯೇ ಅವನು ಸಮಿತ್ಪಾಣಿಯಾಗಿ ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಆದ ಗುರುವಿಗೆ ಶರಣಾಗಬೇಕು" ಎಂಬಲ್ಲಿ ಶಿಷ್ಯನು ಸಮಿತ್ಪಾಣಿಯಾಗಬೇಕೆಂದು ಹೇಳಿದ್ದರಿಂದ ಗುರುವಿಗೂ ಗೃಹಸ್ಥಾಶ್ರಮವನ್ನೇ ಹೇಳಿದಂತಾಯಿತು. ಗುರುವನ್ನು ಶ್ರೋತ್ರಿಯನೆಂದು ಹೇಳಿದ್ದರಿಂದ ಅವನು ವಿಹಿತಕರ್ಮಗಳನ್ನಾಚರಿಸುತ್ತ ನಿಷಿದ್ಧಕರ್ಮಗಳನ್ನು ತೊರೆದವನೆಂದು ಹೇಳಿದಂತಾಯಿತು. ಅವನನ್ನು ಬ್ರಹ್ಮನಿಷ್ಠನೆಂದು ಹೇಳಿದ್ದರಿಂದ ವಾಗದ್ವೈತವನ್ನು ನಿರಾಕರಿಸಿ ಅವನು ಶಿವನೊಬ್ಬನಲ್ಲಿಯೇ ಅತ್ಯಂತ ನಿಷ್ಠೆಯಿಂದ ಅಂಟಿಕೊಂಡವನೆಂದು ಹೇಳಿದಂತಾಯಿತು. ಆದ್ದರಿಂದಲೇ ನಾಲ್ಕು ಆಶ್ರಮಗಳಲ್ಲೂ ವೇದಾಂತಶ್ರವಣ ಮನನಾದಿಗಳು ಆವಶ್ಯಕವೆನಿಸಿವೆ. ಹೀಗೆ ಅವಿದ್ಯೆ ಎನಿಸಿದ ಕರ್ಮವನ್ನು ಬ್ರಹ್ಮವಿದ್ಯೆಗೆ ಅಂಗವೆಂದು ಹೇಳುವುದು ಯುಕ್ತವಲ್ಲ.

ನನು "ಬ್ರಹ್ಮಸಂಸ್ಥೋಽಮೃತತ್ವಮೇತಿ" ಇತ್ಯಾದಿವೇದಾಂತವಾಕ್ಯಾನಾಂ ಸ್ತಾವಕತ್ವೇನ ಮಾನಾಭಾವಾತ್ ವಿರಕ್ತಾನಾಮಪಿ ಧರ್ಮಪ್ರಕರಣಪಠಿತಧರ್ಮಾಣಾಮೇವಾವಶ್ಯಕತ್ವಮಿತ್ಯಶಂಕಾಯಾಂ ಅಧಿಕರಣಾಂತರಂ ತನ್ನಿರಾಕರಣಾರ್ಥಂ ದರ್ಶಯತಿ. ಸ್ಮೃತಿಮಾತ್ರಾಧಿಕರಣಂ ॥ ೩ ॥ ಸ್ಮೃತಿಮಾತ್ರಮುಪಾದಾನಾದಿತಿ ಚೇನ್ನ ಪೂರ್ವತ್ವಾತ್ ॥ ೨೧ ॥ "ನ ಕರ್ಮಣಾ" ಇತಿ ತೈತ್ತಿರೀಯೇ ಶ್ರೂಯತೇ. ಅತ್ರ ಕರ್ಮನಿಷೇಧವಾಕ್ಯಾನಿ ಬ್ರಹ್ಮವಿದ್ಯಾಸ್ತುತಿಮಾತ್ರಪರಾಣಿ ಆಹೋಸ್ವಿದ್ವಿಧಿಪರಾಣೀತಿ ಸಂದಿಹ್ಯತೇ. "ಯಾವಜ್ಜೀವಮಗ್ನಿಹೋತ್ರಂ ಜುಹೋತಿ" ಇತ್ಯಾದಿವಿಧೇರ್ಬಲತ್ವಾತ್ ಸಂನ್ಯಾಸವಿಧಾಯಕವಾಕ್ಯಾನಾಂ ತತ್ತದ್ವಿಧ್ಯದರ್ಶನಾತ್ ಜನಕಾದಿವಿದುಷಾಮಪ್ಯಗ್ನಿಹೋತ್ರಾದಿಕರ್ಮಾವಶ್ಯಕತ್ವದ್ಯೋತನಾತ್ ಊರ್ಧ್ವರೇತಸ್ಕಾನಾಂ ಸಂನ್ಯಾಸವಿಧಿಃ ಸ್ತುತಿಮಾತ್ರಮೇವೇತಿ ಪ್ರಾಪ್ತೇ ಪ್ರಚಕ್ಷ್ಮಹೇ. ಊರ್ಧ್ವರೇತಸ್ಕಾನಾಂ ಸಂನ್ಯಾಸವಿಧಾಯಕಶ್ರುತಿಸ್ಮೃತ್ಯಾಗಮಾದೀನಾಂ ಸ್ತುತಿಮಾತ್ರಮುಪಾದಾನಮಿತಿ ಚೇನ್ನ ಪೂರ್ವತ್ವಾತ್ ಪೂರ್ವತ್ರ ಜಾಬಾಲಾದಿಶ್ರುತಿಸ್ಮೃತಿಷು ಅಸಂದಿಗ್ಧತಯಾ ವಿಧಿರೂಪೇಣ ಪ್ರಪಂಚಿತತ್ವಾತ್. "ಬ್ರಹ್ಮಚರ್ಯಂ ಸಮಾಪ್ಯ ಗೃಹೀ ಭವೇತ್. ಗೃಹಾದ್ವನೀ ಭೂತ್ವಾ ಪ್ರವ್ರಜೇತ್. ಯದಿ ವೇತರಬ್ರಹ್ಮಚರ್ಯಾದೇವ ಪ್ರವ್ರಜೇತ್। ಗೃಹಾದ್ವಾ ವನಾದ್ವಾ ಯದಹರೇವ ವಿರಜೇತ್ತದಹರೇವ ಪ್ರವ್ರಜೇತ್" ಇತಿ ಜಾಬಾಲೇ, "ಆಸನ್ನೇ ಸಂಕಟೇ ಘೋರೇ ಚೋರವ್ಯಾಘ್ರಾದಿಗೋಚರೇ । ಭಯಂ ಪ್ರಾಪ್ತಸ್ಯ ಸಂನ್ಯಾಸಃ ಕರ್ತವ್ಯೋ ಮನುರ.

ಬ್ರವೀತ್ ॥ ಆತುರಾಣಾಂ ಚ ಸಂನ್ಯಾಸೇ ನ ವಿಧಿರ್ನೈವ ಚ ಕ್ರಿಯಾ । ವೇಷಮಾತ್ರಂ ಸಮುಚ್ಚಾರ್ಯ ಸಂನ್ಯಾಸಂ ತತ್ರ ಪೂರಯೇತ್ ॥ ಅಹ ನ್ಯೇಕಾದಶೇ ಪ್ರಾಪ್ತೇ ಪಾರ್ವಣಂ ತು ವಿಧೀಯತೇ । ಸ ಕುರ್ಯಾತ್ಪಾರ್ವಣಾದನ್ಯದ್ಬ್ರಹ್ಮೀಭೂತಾಯ ಭಿಕ್ಷವೇ ॥ ರೋಗವಾನ್ ಜ್ಞಾನ ನಿಷ್ಠೋ ವಾ ಯೋಗೀ ವಾ ದುರ್ಬಲೋಽಪಿ ವಾ । ಪುತ್ರಮಿತ್ರಕಳತ್ರೇಭ್ಯಃ ಸ ಭೈಕ್ಷ್ಯಂ ಭೋಕ್ತುಮರ್ಹತಿ ॥ ” ಇತಿ ಶೌನಕವೃದ್ಧಶಾತಾತಪಾದಿಸ್ಮೃತಿಷ್ವಪಿ ತದ್ವಿಧಾನಸ್ಯಾಸಂದಿಗ್ಧತಯಾ ಪ್ರಪಂಚಿತತ್ವಾತ್ ಕರ್ಮಾಂಗಬ್ರಹ್ಮಚರ್ಯಾದಿವತ್ ಸಂನ್ಯಾಸಾಶ್ರಮಃ ವಿಧಿಬಲಾದ್ವಿಧೇಯ ಇತಿ ಸಿದ್ಧಂ.

“ ಬ್ರಹ್ಮನಿಷ್ಠನೇ ಅಮೃತನಾಗುತ್ತಾನೆ ” ಇವೇಮೊದಲಾದ ವೇದಾಂತ ವಾಕ್ಯಗಳು ಸ್ತೋತ್ರರೂಪವಾದ್ದರಿಂದ ಪ್ರಮಾಣವಾಗಲಾರವು. ಆದರೆ ವಿರಕ್ತರಿಗೂ ಧರ್ಮ ಪ್ರಕರಣದಲ್ಲಿ ಹೇಳಿದ ಧರ್ಮಗಳೇ ಆವಶ್ಯಕವೆಂದು ಆಶಂಕಿಸಿ ನಿರಾಕರಿಸುತ್ತಾನೆ. “ ನ ಕರ್ಮಣಾ ” ಎಂಬ ಶ್ರುತಿಯಲ್ಲಿ ಕರ್ಮದ ನಿಷೇಧವು ಬ್ರಹ್ಮವಿದ್ಯೆಯ ಸ್ತುತಿಗಾಗಿ ಬಂದಿದೆಯೋ ಅಥವಾ ಅದನ್ನೇ ವಿಧಿಸಲಾಗಿದೆಯೋ ಎಂದು ಇಲ್ಲಿ ಸಂದೇಹವುಂಟಾಗುತ್ತದೆ. “ ಪ್ರಾಣವಿರುವವರೆಗೂ ಅಗ್ನಿಹೋತ್ರವನ್ನಾಚರಿಸಬೇಕು ” ಎಂಬ ವಿಧಿ ಇರುವಂತೆ ಸಂನ್ಯಾಸವನ್ನು ತಿಳಿಸುವ ವಾಕ್ಯಕ್ಕೆ ಅಂತಹ ವಿಧಿಇಲ್ಲದ್ದರಿಂದಲೂ, ಜನಕ ಮೊದಲಾದ ವಿದ್ವಾಂಸರಿಗೂ ಅಗ್ನಿಹೋತ್ರಾದಿಕರ್ಮಗಳು ಆವಶ್ಯಕವಾದ್ದರಿಂದಲೂ ಊರ್ಧ್ವರೇತಸ್ಕರಿಗೂ ಸನ್ಯಾಸವನ್ನು ಹೇಳಿದ್ದರೂ ಅದು ಕೇವಲ ಪ್ರಶಂಸಾರೂಪವೇ ಹೊರತು ವಿಧಿಯಲ್ಲವೆಂದು ಆಕ್ಷೇಪಬರುತ್ತದೆ. ಊರ್ಧ್ವರೇತಸ್ಕರಿಗೆ ಸಂನ್ಯಾಸವನ್ನು ವಿಧಿಸುವ ಶ್ರುತಿ ಸ್ಮೃತಿ ಆಗಮಗಳನ್ನು ಸ್ತುತಿರೂಪನೆಂದೇ ಗ್ರಹಿಸಬೇಕೆಂದು ಹೇಳುವುದು ಯುಕ್ತವಲ್ಲ; ಯಾಕೆಂದರೆ ಜಾಬಾಲಾದಿ ಶ್ರುತಿ ಸ್ಮೃತಿಗಳಲ್ಲಿ ಸಂನ್ಯಾಸವನ್ನು ಊರ್ಧ್ವರೇತಸ್ಕರಿಗೂ ವಿಧಿಸಿರುವುಗಿ ಹಿಂದೆ ವಿಸ್ತಾರವಾಗಿ ಹೇಳಿಯಾಗಿದೆ. “ ಬ್ರಹ್ಮಚರ್ಯವನ್ನು ಮುಗಿಸಿ ಒಬ್ಬನು ಗೃಹಸ್ಥನಾಗಬಹುದು, ಮನೆಯಿಂದ ವನಕ್ಕೆ ಹೊರಟು ಆಮೇಲೆ ಸನ್ಯಾಸಿಯಾಗಬಹುದು ” ಹೀಗೆ ಜಾಬಾಲದಲ್ಲೂ, “ ವಿಷಮಸಂಕಟದಲ್ಲೂ ಚೋರ ವ್ಯಾಘ್ರಾದಿಗಳ ಭಯದಲ್ಲೂ ಸಿಕ್ಕಿದವನು ಸಂನ್ಯಾಸವನ್ನು ತೆಗೆದುಕೊಳ್ಳಬಹುದು. ಆತುರದಿಂದ ಸಂನ್ಯಾಸವನ್ನು ಪಡೆಯುವವನಿಗೆ ವಿಧಿಯ ಅಥವಾ ಕ್ರಿಯೆಯ ನಿರ್ಬಂಧವಿಲ್ಲ. ಹಗಲಿನ ಒಂದು ಭಾಗದಲ್ಲಿ ಪಾರ್ವಣವನ್ನಾಚರಿಸಬೇಕು. ಬ್ರಹ್ಮಭಾವವನ್ನು ಹೊಂದಿರುವ ಭಿಕ್ಷುವಿಗೆ ಪಾರ್ವಣವನ್ನು ಬಿಟ್ಟು ಬೇರೆ ಏನನ್ನೂ ಮಾಡಬಾರದು. ರೋಗಿಯಾಗಲೀ ಜ್ಞಾನಿಯಾಗಲೀ ಯೋಗಿಯಾಗಲೀ ದುರ್ಬಲನಾಗಲೀ ಪುತ್ರಮಿತ್ರಕಳತ್ರರೆಲ್ಲರೊಡನೆ ಭಿಕ್ಷಾನ್ನವನ್ನು ತಿನ್ನಬಹುದು ” ಎಂದು ಶೌನಕ ವೃದ್ಧಶಾತಾತಪ ಸ್ಮೃತಿಗಳಲ್ಲಿ ಸಂನ್ಯಾಸವನ್ನು ನಿಸ್ಸಂಶಯವಾಗಿ ವಿಧಿಸಿರುವುದರಿಂದ ಸಂನ್ಯಾಸಾಶ್ರಮವು ವಿಹಿತವೆಂದು ಸಿದ್ಧವಾಗುತ್ತದೆ.

ಅತ್ರ “ ಹೇತ್ವಂತರಮಾಹ. ಭಾವಶಬ್ದಾಚ್ಚ ॥ ೨೨ ॥ ಏತಮೇವ ಪ್ರವ್ರಾಜಿನೋ ಲೋಕಮಿಚ್ಛಂತಃ ಪ್ರವ್ರಜಂತಿ” ಇತ್ಯಾದಿಶ್ರುತಿಷು, ಹರಿತಸ್ಮೃತೌ “ ಕಶ್ಯಪೋಽತ್ರಿರ್ಭರದ್ವಾಜವಸಿಷ್ಠ ಭೃಗುಗೌತಮಾಃ । ಕಪಿಲೋ ಮುಂಡಪಾಲಶ್ಚ ಕುಟೀಚಕಪಥಾಃ ಸ್ಮೃತಾಃ। ಶ್ವೇತೋಪಮನ್ಯುದುರ್ವಾಸವ್ಯಾಸನಾರದಶೌನಕಾಃ। ಮಾರ್ಕಂಡೇಯೋ ದಧೀಚಿಶ್ಚ ಬಹೂದಕಪಥಾಃ ಸ್ಮೃತಾಃ ॥ ಶಾಂಡಿಲ್ಯಃ ಪುಲಿಹೋಽನಂತಃ ಗರ್ಗೇಯೋ ಮುಂಡಕಸ್ತಥಾ । ಹಂಸಸಂನ್ಯಾಸಿನಃ ಪ್ರೋಕ್ತಾ ಯೋಗಧ್ಯಾನಪರಾಯಣಾಃ । ಯಾಜ್ಞ್ಯವಲ್ಕ್ಯಶ್ಚ ಜಾಬಾಲ ಕಣ್ವಮೈತ್ರೇಯಸಂಜ್ಞಿಕಾಃ । ಪರಹಂಸಾ ಇತಿ ಪ್ರೋಕ್ತಾಃ ಜಟಾವಲ್ಕಲ ಧಾರಿಣಃ ॥ ” ಇತ್ಯಾದಿನಾ ಕುಟೀಚಕಾದಿಚತುರ್ವಿಧಸಂನ್ಯಾಸಭಾವ ಶಬ್ದಾಚಾರದರ್ಶನಾಚ್ಚ ಕಲಾವಪ್ಯೂರ್ಧ್ವರೇತಸ್ಕಾನಾಂ ಸಂನ್ಯಾಸೋ ವಿಧೇಯಃ. ತಥಾಪಿ “ ಉಪವೀತಂ ವಟೋರೇಕಂ ದ್ವೇ ತಥೇತರಯೋ ರ್ಮತೇ । ಏಕಮೇವ ಯತೀನಾಂ ಸ್ಯಾದಿತಿ ಶಾಸ್ತ್ರವಿನಿಶ್ಚಯಃ ॥ ಬ್ರಹ್ಮ ಸೂತ್ರಂ ವಿನಾ ಭುಂಕ್ತೇ ವಿಣ್ಮೂತ್ರಂ ಕುರುತೇಽಥವಾ । ಸ ಪಾಷಂಡ ಇತಿ ಜ್ಞೇಯಃ ಸರ್ವಕರ್ಮಬಹಿಷ್ಕೃತಃ । ಬ್ರಹ್ಮಕ್ಷತ್ರಿಯವೈಶ್ಯಾನಾಂ ಶ್ರೌತಸಂನ್ಯಾಸ ಇಷ್ಯತೇ । ಶೂದ್ರಸ್ತ್ರೀಸಂಕರಾಣಾಂ ಚ ನ್ಯಾಸಮಶ್ರೌತ ಸಂಜ್ಞಕಂ । ಶಿಖಾಸೂತ್ರೈಕಸಂಯುಕ್ತಂ ದಂಡಕಾಷಾಯಲಾಂಛನಂ । ಶ್ರೌತಸಂನ್ಯಾಸ ಇತ್ಯುಕ್ತಂ ವ್ಯಾಸಸ್ಯ ವಚನಂ ಯಥಾ । ಶ್ರೌತಾಶ್ರೌತ ವಿಭೇದೇನ ಸಂನ್ಯಾಸೋ ದ್ವಿವಿಧಃ ಸ್ಮೃತಃ । ಕಂಥಾಕಾಷಾಯದಂಡೈಕ ಶಿಖಾಸೂತ್ರಾದಿಸಂಯುತಃ । ಶ್ರೌತಸಂನ್ಯಾಸ ಇತ್ಯುಕ್ತಃ ಸಾಕ್ಷಾನ್ಮೋಕ್ಷೈಕಸಾಧನಂ । ವಿಪ್ರಾಣಾಂ ಶ್ರೌತಸಂನ್ಯಾಸಃ ಕಲೌ ವ್ಯಾಸೇನ ಗೀಯತೇ । ತಸ್ಮಾದ್ವೈರಾಗ್ಯವಾನ್ವಿಪ್ರಃ ಶ್ರೌತಸನ್ಯಾಸಮಾಶ್ರಯೇತ್ । ತೇಷಾಂ ತದ್ವೇದವೇದಾಂತಪಠನಂ ಪರಿಗೀಯತೇ । ಬ್ರಹ್ಮಸೂತ್ರೈಕ ಸಂಸಿದ್ಧಾತ್ ಗಾಯತ್ರೀಸಮುಪಾಸನಾತ್ ॥” ಇತ್ಯಾದಿನಾ ಹರಿತಶಾತಾತಪಶೌನಕಗೌತಮಪಾರಾಶರದಕ್ಷಾದಿಸ್ಮೃತಿಷು ಶ್ರೌತಸಂನ್ಯಾಸಾಧಿಕ್ಯ ಶ್ರವಣಾತ್ ತದೇವ ಕಲೌ ವೈದಿಕಪರಿಗ್ರಾಹ್ಯಮಿತಿ ನಿಶ್ಚೀಯತೇ. ಅತ್ರ ಸಂನ್ಯಾಸಂ ಸ್ತುತಿಮಾತ್ರಪರತ್ವಂ. “ ಯಾವಜ್ಜೀವಮಗ್ನಿಹೋತ್ರಂ ಜುಹುಯಾತ್” ಇತಿ ವಚನಾನಾಮತಿರಿಕ್ತವಿಷಯಮಿತಿ ವೇದಿತವ್ಯಂ.

ಇಲ್ಲಿ ಬೇರೊಂದು ಹೇತುವನ್ನು ತಿಳಿಸುತ್ತಾನೆ. ‘‘ ಆತ್ಮನನ್ನು ಹುಡುಕಲಿಕ್ಕಾಗಿ ಆ ಈ ಲೋಕಗಳನ್ನು ತೊರೆದು ಶ್ರುತಿಗಳಲ್ಲಿ ಓಡಾಡುತ್ತಾನೆ” ಎಂದು ಶ್ರುತಿಗಳಲ್ಲಿ “ ಕಶ್ಯಪ, ಅತ್ರಿ, ಭರದ್ವಾಜ, ವಸಿಷ್ಠ, ಭೃಗು, ಗೌತಮ, ಕಪಿಲ, ಮುಂಡಪಾಲ ಇವರು ಕುಟೀಚಕ ಯತಿಗಳೆನಿಸಿದ್ದಾರೆ. ಶ್ವೇತ, ಉಪಮನ್ಯು, ದುರ್ವಾಸ,

ವ್ಯಾಸ, ನಾರದ, ಶೌನಕ, ಮಾರ್ಕಂಡೇಯ, ದಧೀಚಿ ಇವರು ಬಹೂದಕರು. ಶಾಂಡಿಲ್ಯ, ಪುಲಿಹ, ಅನಂತ ಗರ್ಗೇಯ, ಮುಂಡಕ ಇವರು ಹಂಸಸಂನ್ಯಾಸಿಗಳು. ಯಾಜ್ಞವಲ್ಕ್ಯ, ಜಾಬಾಲ, ಕಣ್ವ, ಮೈತ್ರೇಯ ಇವರು ಪರಮಹಂಸರು. ಹೀಗೆ ನಾಲ್ಕುಬಗೆಯ ಸಂನ್ಯಾಸಗಳೂ ಅವುಗಳ ಆಚರಣೆಯೂಇರುವುದಾಗಿ ಕಂಡುಬಂದಿದೆ. ಊರ್ಧ್ವರೇತಸ್ಕರಿಗೆ ಕಲಿಯುಗದಲ್ಲೂ ಸಂನ್ಯಾಸವು ವಿಹಿತವಾಗಿದೆ. ಆದರೂ ಬ್ರಹ್ಮ ಚಾರಿಗೆ ಒಂದೇ ಹೊದಿಕೆಯ ಬಟ್ಟೆಯನ್ನೂ, ಬೇರೆ ಇಬ್ಬರಿಗೆ ಎರಡು ಬಟ್ಟೆಗಳನ್ನೂ, ಯತಿಗಳಿಗೆ ಒಂದೇ ಬಟ್ಟೆಯನ್ನೂ ಶಾಸ್ತ್ರದಲ್ಲಿ ವಿಧಿಸಲಾಗಿದೆ. ಬ್ರಹ್ಮಸೂತ್ರವಿಲ್ಲದೆ ಭೋಗಿಸಿದವನು ಎಲ್ಲಾ ಕರ್ಮಗಳಲ್ಲೂ ಬಹಿಷ್ಕೃತನಾಗಿ ಪಾಷಂಡನೆನಿಸುತ್ತಾನೆ. ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆ ಶ್ರೌತಸಂನ್ಯಾಸವನ್ನು ಹೇಳಿದೆ. ಶೂದ್ರರಿಗೂ ಸ್ತ್ರೀ ಯರಿಗೂ ಸಂಕರಜಾತಿಯವರಿಗೂ, ಅಶ್ರೌತವಾದ ನ್ಯಾಸವನ್ನು ಹೇಳಿದೆ. ಶಿಖಾ ಸೂತ್ರಗಳೊಡನೆ ದಂಡವನ್ನು ಹಿಡಿದು ಕಾವಿಬಟ್ಟೆಯನ್ನು ಧರಿಸುವುದೇ ಶ್ರೌತಸನ್ಯಾಸ ವೆನಿಸುತ್ತದೆ. ಶ್ರೌತ ಅಶ್ರೌತವೆಂದು ಸನ್ಯಾಸ ಎರಡುಬಗೆಯಾಗಿದೆ, ಬ್ರಾಹ್ಮಣರಿಗೆ ಶ್ರೌತಸಂನ್ಯಾಸವೇ ವಿಹಿತವಾಗಿದೆ. ಆದ್ದರಿಂದ ವೈರಾಗ್ಯಶೀಲನಾದ ಬ್ರಾಹ್ಮಣನು ಶ್ರೌತಸಂನ್ಯಾಸವನ್ನಾಚರಿಸಬೇಕು. ಆದರೂ ಅವರು ವೇದವೇದಾಂತಗಳನ್ನು ಓದಬಹುದು ಮತ್ತು ಗಾಯಿತ್ರಿಯನ್ನು ಉಪಾಸನಮಾಡಬಹುದು. ಹೀಗೆ ಅನೇಕ ಸ್ಮೃತಿಗಳು ಶ್ರೌತಸಂನ್ಯಾಸದ ಆಧಿಕ್ಯವನ್ನು ತಿಳಿಸಿವೆ. ಆದ್ದರಿಂದ ಅದೇ ಕಲಿಯುಗ ದಲ್ಲಿ ವೈದಿಕರಿಗೆ ಗ್ರಾಹ್ಯವಾಗಿದೆ.

ಇಯತಾ ಸೂತ್ರಸಂದರ್ಭೇಣ ಸಂನ್ಯಾಸಸ್ಯ ಬ್ರಹ್ಮವಿದ್ಯಾನು ಕೂಲತ್ವಂ ಪ್ರಸಾಧ್ಯ ಇದಾನೀಂ ಉಪನಿಷತ್ಸ್ಥ್ಯಾನಾಂ ಯಾಜ್ಞವಲ್ಕ್ಯ ಮೈತ್ರೇಯೀಸಂವಾದಪ್ರತರ್ದನೇಂದ್ರಸಂವಾದರೂಪಾಣಾಂ ಉಪಾ ಖ್ಯಾನಾನಾಮಪಿ ಬ್ರಹ್ಮವಿದ್ಯಾನುಕೂಲತ್ವಂ ವಕ್ತುಂ ಪೂರ್ವಪಕ್ಷಮಾ ಶಂಕ್ಯ ಅಧಿಕರಣಾಂತರೇಣ ನಿರಾಕರೋತಿ. ಪಾರಿಪ್ಲವಾಧಿಕರಣಂ|| ೪ || ಪಾರಿಪ್ಲವಾರ್ಥಾ ಇತಿ ಚೇನ್ನ ವಿಶೇಷಿತತ್ವಾತ್ ||೨೩|| ಪಾರಿಪ್ಲವೋ ನಾಮ ಅಶ್ವಮೇಧಾಂಗಭೂತಕರ್ಮವಿಶೇಷಃ. ತಸ್ಮಿನ್ ಕರ್ಮಣಿ ಜ್ಯೋತಿಷ್ಟೋಮಾದಿಸಕಲಕರ್ಮಾಂಗಭೂತಮಂತ್ರಾಃ ಪಠನೀಯಾಃ. ಏವಂ ಸ್ಥಿತೇ ಸತಿ ಯಾಜ್ಞವಲ್ಕ್ಯಮೈತ್ರೇಯೀಸಂವಾದಾದಿರೂಪಾಃ ಕಥಾಪ್ರಬಂಧಾ ಅಪಿ ಪಾರಿಪ್ಲವಾರ್ಥಾಃ ಕರ್ಮಕಾಂಡಸ್ಥಪಾರಿ ಪ್ಲವಾಖ್ಯಕರ್ಮಾಂಗಭೂತಾ ಇತಿ ಚೇನ್ನ ವಿಶೇಷಿತತ್ವಾತ್ ಕರ್ಮ ಕಾಂಡಸ್ಥಸಕಲಕರ್ಮಾಂಗಭೂತಾ ಮಂತ್ರಾಃ ಪಾರಿಪ್ಲವೇ ಪಠಿ ತವ್ಯಾಃ ಇತಿ ವಿಶಿಷ್ಯೋಕ್ತತ್ವಾತ್. ತಥಾಚ ಜ್ಞಾನಕಾಂಡಸ್ಥಾನಾಮುಪಾ ಖ್ಯಾನಾಂ ಕರ್ಮಕಾಂಡಸ್ಥಪಾರಿಪ್ಲವಕರ್ಮಾಂಗತ್ವಪ್ರಸಕ್ತಿರ್ನಾಸ್ತೀತಿ ಸೂತ್ರಾರ್ಥಃ. " ಪ್ರತರ್ದನೋ ಹ ವೈ ದೈವೋದಾಸಿರಿಂದ್ರಸ್ಯ ಪ್ರಿಯಂ

ಧಾಮೋಪಜಗಾಮ," "ಶ್ವೇತಕೇತುರ್ಹಾರುಣೇಯ ಆಸ" ಇತ್ಯೇವಮಾದೀನ್ಯಾಖ್ಯಾನ್ಯಾನಿ ವೇದಾಂತೇಷು ಕಿಂ ಪಾರಿಪ್ಲವಪ್ರಯೋಗಾರ್ಥಾನಿ ಉತ ವಿದ್ಯಾವಿಶೇಷಪ್ರತಿಪಾದನಾರ್ಥಾನೀತಿ ಸಂಶಯಃ. ಕಿಂ ತಾವತ್ಪ್ರಾಪ್ತಂ. ಆಖ್ಯಾನಾನಿ ಶಂಸತೀತ್ಯಾಖ್ಯಾನಾನಾಂ ಪಾರಿಪ್ಲವಾರ್ಥಾ ಇತಿ. ಅಶ್ವಮೇಧಯಾಗೇ ರಾಜಾನಂ ಸಕುಟುಂಬಮುಪವೇಶ್ಯ ತತ್ಪರತಃ ವೈದಿಕಾಖ್ಯಾನಾನಿ ಅಧ್ವರ್ಯುಣಾ ವಕ್ತವ್ಯಾನಿ. "ತದಿದಂ ಪಾರಿಪ್ಲವಾಖ್ಯಂ ಕರ್ಮ ಪಾರಿಪ್ಲವಮಾಚಕ್ಷ್ಯತೇ" ಇತಿ ವಾಕ್ಯೇನ ವಿಹಿತಂ. ತತಸ್ಸರ್ವಾಖ್ಯಾನಾನಿ ಪಾರಿಪ್ಲವೇ ಶಂಸಂತೀತಿ ವಿನಿಯೋಗಾತ್ ಉಪನಿಷದಾರಂಭಗತಾ ಆಖ್ಯಾಯಿಕಾಸ್ತದರ್ಥಾ ಇತಿ ನ ವಿದ್ಯಾಪ್ರಾಧಾನ್ಯಂ ನ್ಯಾಯ್ಯಮಿತಿ ಚೇದುಚ್ಯತೇ. ನ ವಿಶೇಷಿತತ್ವಾದಿತಿ ನ ಪಾರಿಪ್ಲವಾಖ್ಯಾಃ ತಾಃ. ತಾಃ "ಪ್ರಥಮೇಽಹನಿ ಮನುರ್ವೈವಸ್ವತೋ ರಾಜಾ ದ್ವಿತೀಯೇಽಹನಿ ಯಮೋ ವೈವಸ್ವತೋ ರಾಜಾ" ಇತ್ಯಾದಿನಾ ಪಾರಿಪ್ಲವಾರ್ಥಾನಾಂ ಆಖ್ಯಾಯಿಕಾನಾಂ ವಿಶೇಷಿತತ್ವಾತ್ ಉಪನಿಷದಾಖ್ಯಾನಾನಾಂ ಕರ್ಮಭಿರೇಕವಾಕ್ಯತಾ. ತದಾ ವಿದ್ಯಾದಿಭಿರೇಕವಾಕ್ಯತಾ. ತಸ್ಮಾನ್ನ ಸರ್ವವೇದಾಂತೇಷ್ವಾಖ್ಯಾನಶ್ರುತಯಃ ಪಾರಿಪ್ಲವಯೋಗಾರ್ಥಾಃ ಅಪಿತು ವಿದ್ಯಾರ್ಥಾ ಇತಿ ನಿಶ್ಚೀಯತೇ.

ಹೀಗೆ ಸಂನ್ಯಾಸವನ್ನು ಬ್ರಹ್ಮವಿದ್ಯೆಗೆ ಅನುಕೂಲವೆಂದು ಸಾಧಿಸಿ ಈಗ ಉಪನಿಷತ್ತಿನಲ್ಲಿ ಬರುವ ಯಜ್ಞವಲ್ಕ್ಯ, ಮೈತ್ರೇಯಿ ಇವರ ಸಂವಾದ ಮತ್ತು ಇಂದ್ರ ಪ್ರತರ್ದನರ ಸಂವಾದ ಮೊದಲಾದ ಉಪಾಖ್ಯಾನಗಳೂ ಬ್ರಹ್ಮವಿದ್ಯೆಗೆ ಅನುಕೂಲವಾಗಿವೆ ಎಂದು ಏಕೆ ಹೇಳಬಾರದೆಂದಾಶಂಕಿಸಿ ನಿರಾಕರಿಸುತ್ತಾನೆ. ಪಾರಿಪ್ಲವವು ಅಶ್ವಮೇಧದ ಅಂಗವೆನಿಸಿದ ಒಂದು ಕರ್ಮವಿಶೇಷ. ಅದರಲ್ಲಿ ಜ್ಯೋತಿಷ್ಟೋಮ ಮೊದಲಾದ ಎಲ್ಲಾ ಕರ್ಮಗಳಿಗೂ ಅಂಗವೆನಿಸಿದ ಮಂತ್ರಗಳನ್ನು ಹೇಳಲಾಗಿದೆ. ವಸ್ತುಸ್ಥಿತಿ ಹೀಗಿರುವಾಗ ಯಜ್ಞವಲ್ಕ್ಯಮೈತ್ರೇಯಿ ಇವರ ಸಂವಾದರೂಪವಾದ ಕಥಾಪ್ರಬಂಧಗಳೂ ಸಹ ಕರ್ಮಕಾಂಡದ ಪಾರಿಪ್ಲವವೆಂಬ ಕರ್ಮಕ್ಕೆ ಅಂಗಗಳೇ ಆಗಲಿ ಎಂದು ಆಕ್ಷೇಪಿಸಿದರೆ ಕರ್ಮಕಾಂಡದಲ್ಲಿ ಹೇಳಿರುವ ಎಲ್ಲಾ ಕರ್ಮಗಳ ಮಂತ್ರಗಳನ್ನು ಪಾರಿಪ್ಲವ ಕರ್ಮದಲ್ಲಿಯೇ ಹೇಳಬೇಕು ಎಂದು ವಿಶೇಷವಾಗಿ ಒತ್ತಿಹೇಳಿರುವುದರಿಂದ ಜ್ಞಾನಕಾಂಡದ ಉಪಾಖ್ಯಾನಗಳು ಕರ್ಮಕಾಂಡದ ಪಾರಿಪ್ಲವ ಕರ್ಮಗಳಿಗೆ ಅಂಗವಾಗುವ ಪ್ರಸಕ್ತಿಯೇ ಇಲ್ಲ. "ದೇವಲೋಕದ ಸೇವಕನಾದ ಪ್ರತರ್ದನನು ಇಂದ್ರನ ಮನೆಗೆ ಹೋದನು." "ವರುಣನ ಮಗನಾದ ಶ್ವೇತಕೇತುವಿದ್ದನು" ಎಂದು ಮುಂತಾಗಿ ವೇದಾಂತದಲ್ಲಿ ಬಂದಿರುವ ಆಖ್ಯಾನಗಳು ಕೇವಲ ಪಾರಿಪ್ಲವಕರ್ಮಗಳೇ ಅಥವಾ ವಿದ್ಯಾವಿಶೇಷವನ್ನು ಪ್ರತಿಪಾದಿಸುತ್ತವೆಯೆ? ಎಂದು ಸಂಶಯ ಬರುತ್ತದೆ. "ಆಖ್ಯಾನಗಳನ್ನು ಹೇಳುತ್ತಾನೆ" ಎಂಬ ಪ್ರಯೋಗದಿಂದ ಇವನ್ನು ಪಾರಿಪ್ಲವ

ಕರ್ಮಗಳೆಂದೇ ಹೇಳಬೇಕು. "ಇದನ್ನು ಪಾರಿಪ್ಲವವೆಂದು ಭಾವಿಸಬೇಕು" ಎಂಬ ವಾಕ್ಯದಲ್ಲಿ ಹೀಗೆಯೇ ವಿಧಿಸಲಾಗಿದೆ. ಹೀಗೆ ಎಲ್ಲಾ ಆಖ್ಯಾನಗಳನ್ನೂ ಪಾರಿಪ್ಲವ ಕರ್ಮದಲ್ಲಿಯೇ ವಿನಿಯೋಗಿಸಿರುವುದರಿಂದ ಉಪನಿಷತ್ತಿನ ಆರಂಭದಲ್ಲಿರುವ ಆಖ್ಯಾಯಿಕೆಗಳನ್ನೂ ಸಹ ಹಾಗೆಯೇ ಭಾವಿಸಲಾಗಿದೆ. ಇದರಿಂದ ವಿದ್ಯೆಯನ್ನು ಪ್ರಧಾನವೆಂದು ಹೇಳುವುದು ನ್ಯಾಯವಲ್ಲವೆಂದು ಆಕ್ಷೇಪ ಬರುತ್ತದೆ. ಇದಕ್ಕೆ ಸಮಾಧಾನವು "ನ ವಿಶೇಷಿತತ್ವಾತ್"ಎಂಬ ಸೂತ್ರಭಾಗದಲ್ಲಿ ಬಂದಿದೆ. ಈ ಆಖ್ಯಾನಗಳು ಪಾರಿಪ್ಲವಗಳೆನಿಸಲಾರವು. "ಹಗಲಿನ ಮೊದಲನೆಯ ಭಾಗದಲ್ಲಿ ಮನುವೇ ರಾಜನು, ಎರಡನೆ ಭಾಗದಲ್ಲಿ ಯಮನೇ ರಾಜನು" ಎಂಬಲ್ಲಿ ಪಾರಿಪ್ಲವರೂಪವಾದ ಆಖ್ಯಾಯಿಕೆಗಳನ್ನು ವಿಶೇಷವಾಗಿ ತಿಳಿಸಿರುವುದರಿಂದ ಉಪನಿಷತ್ತಿನ ಆಖ್ಯಾನಗಳು ಕರ್ಮಗಳೊಂದಿಗೆ ಸೇರುವುದಕ್ಕಿಂತಲೂ ವಿದ್ಯೆಗಳೊಳಗೆ ಸೇರುವುದೇ ಉಚಿತವೆನಿಸುತ್ತದೆ. ಆದ್ದರಿಂದ ಎಲ್ಲಾ ವೇದಾಂತಗಳಲ್ಲೂ ಆಖ್ಯಾನಶ್ರುತಿಗಳನ್ನು ಪಾರಿಪ್ಲವಕರ್ಮದೊಡನೆ ಸೇರಿಸದೆ ಬ್ರಹ್ಮವಿದ್ಯೆಯಲ್ಲಿ ಉಪಯೋಗಿಸಬೇಕೆಂದು ನಿಶ್ಚಯಿಸಲಾಗಿದೆ.

**ಏತಸ್ಮಿನ್ನರ್ಥೇ ಹೇತ್ವಂತರಮಾಹ ತಥಾ ಚೈಕವಾಕ್ಯೋಪಬಂಧಾತ್ ॥ ೨೪ ॥ "ಆತ್ಮಾ ವಾರೇ ದ್ರಷ್ಟವ್ಯಃ" ಇತ್ಯಾದಿವಿಧಿನಾ ಏಕವಾಕ್ಯತಯೋಪಬಂಧಾಚ್ಚ ಆಖ್ಯಾನಾನಾಂ "ವಿದ್ಯಾವಿಧ್ಯರ್ಥಾನ್ಯೇವ ತಾನಿ" ಇತಿ ಗಮ್ಯತೇ. "ಸೋಽರೋದೀತ್" ಇತ್ಯೇವಮಾದೇಃ ಕರ್ಮವಿಧ್ಯರ್ಥತ್ವಂ. ತಥಾ ಸತಿ ಉಪಾಖ್ಯಾನಾನಾಂ ಪಾರಿಪ್ಲವಾಂಗತ್ವಾಭಾವೇ ಸತಿ ಏಕವಾಕ್ಯತ್ವೋಪಬಂಧಾತ್ ಬ್ರಹ್ಮವಿದ್ಯಾಪ್ರಕರಣಪಠಿತಾನಾಂ ಉಪಾಖ್ಯಾನಾನಾಂ ಬ್ರಹ್ಮಪ್ರತಿಪಾದಕೈರ್ವಾಕ್ಯೈಃ ಸಹ ಏಕವಾಕ್ಯತಯೋಪಬಂಧಾತ್ ಸಂಬಂಧಾದ್ಬ್ರಹ್ಮವಿದ್ಯಾಂಗತ್ವಮುಕ್ತಂ. ಉಪಾಖ್ಯಾಪೂರ್ವಕಂ ಬ್ರಹ್ಮಪ್ರತಿಪಾದನೇ ಕೃತ್ಸ್ನೇ ಸತಿ ಮಂದಬುದ್ಧೀನಾಮಪಿ ಸುಲಭತಯಾ ಬ್ರಹ್ಮಜ್ಞಾನಮುತ್ಪದ್ಯತ ಇತ್ಯುಚ್ಯತೇ.**

ಈ ಬಗ್ಗೆ ಬೇರೊಂದು ಕಾರಣವನ್ನು ತಿಳಿಸುತ್ತಾನೆ. "ಆತ್ಮನನ್ನು ನೋಡಬೇಕು" ಎಂಬ ವಿಧಿಯೊಂದಿಗೆ ಸೇರಿಸಿ ಈ ಆಖ್ಯಾನಗಳನ್ನು ಹೇಳಿರುವುದರಿಂದ ಇವು ವಿದ್ಯೆಗೆ ಅಂಗವೆಂದೇ ಗೊತ್ತಾಗುತ್ತದೆ. "ಅವನು ಅತ್ತನು" ಎಂದು ಮುಂತಾದ ವಾಕ್ಯಗಳೆಲ್ಲವೂ ಕರ್ಮವಿಧಿಗೆ ಅಂಗವಾಗಿ ಸೇರುತ್ತವೆ. ಹೀಗೆ ಹೇಳುವುದರಿಂದ ಈ ಆಖ್ಯಾನಗಳು ಪಾರಿಪ್ಲವ ಕರ್ಮಗಳಿಗೆ ಅಂಗವಾಗದೆ ಬ್ರಹ್ಮವಿದ್ಯೆಯ ಪ್ರಕರಣದಲ್ಲಿ ಪಠಿತವಾಗಿರುವುದರಿಂದ ಬ್ರಹ್ಮವಿದ್ಯೆಯನ್ನು ಹೇಳುವ ವಾಕ್ಯಗಳೊಂದಿಗೆ ಇವನ್ನು ಸೇರಿಸಿ ಬ್ರಹ್ಮವಿದ್ಯೆಗೆ ಅಂಗವೆಂದೇ ತಿಳಿಯಬೇಕು. ಹೀಗೆ ಕಥೆಯ ಮೂಲಕ ಬ್ರಹ್ಮವಿದ್ಯೆಯನ್ನು ತಿಳಿಸಿರುವುದರಿಂದ ಮಂದಮತಿಗಳಿಗೂ ಅದು ಸುಲಭವಾಗಿ ತಿಳಿಯುತ್ತದೆ ಎಂಬುದೇ ಇದರ ಅಭಿಪ್ರಾಯ.

**"ಋಣಾನಿ ತ್ರೀಣ್ಯಪಾಕೃತ್ಯ ಮನೋ ಮೋಕ್ಷೇ ನಿವೇಶಯೇತ್"**

ಇತ್ಯಾದಿನಾ ಮನುಸ್ಮೃತೌ ವಿರಾಗಿಣಾಮಪ್ಯಾಧಾನಾದಿಕರ್ಮಾವಶ್ಯಕತ್ವದ್ಯೋತನಾತ್, "ನ ಕರ್ಮಣಾ" ಇತ್ಯಾದಿಶ್ರುತಾವಪಿ ಪೂರ್ವತ್ರ ಕರ್ಮರೂಪಾದಾನಾದಿಕರ್ಮಸಾಪೇಕ್ಷತ್ವಸ್ಯಾರ್ಥಸಿದ್ಧತ್ವಾಚ್ಚ ವಿರಾಗಿಣಾಮಪ್ಯಾಧಾನಾದಿಸಾಪೇಕ್ಷಾ ಕಥಂ ವಾರ್ಯತ ಇತ್ಯಾಶಂಕಾಯಾಮಧಿಕರಣಾಂತರಂ ದರ್ಶಯತಿ. ಅಗ್ನೀಂಧನಾಧಿಕರಣಂ ॥ ೫ ॥

ಅತ ಏವ ಚಾಗ್ನೀಂಧನಾದ್ಯನಪೇಕ್ಷಾ ॥ ೨೫ ॥ ದಾರೇಷಣ ಪುತ್ರೇಷಣ ಧನೇಷಣಾದಿವಾಸನಾನಿರ್ಮುಕ್ತೋರ್ಧ್ವರೇತಸ್ಕಾನಾಮೇವ ಮುಖ್ಯತ್ವೇನ ಧ್ಯಾನಧಾರಣಾದ್ಯನುಗತಶ್ರವಣಮನನಾದ್ಯಂಗಭೂತಬ್ರಹ್ಮವಿದ್ಯಾಧಿಕಾರತ್ವಂ ಯತಃ ಪೂರ್ವತ್ರ ನಿರ್ದಿಷ್ಟಂ ಅತ ಏವಾಗ್ನೀಂಧನಾದ್ಯನಪೇಕ್ಷಾ ಆಧಾನಾದ್ಯಗ್ನಿಹೋತ್ರಕರ್ಮಣಾಮನಪೇಕ್ಷಾ. ತಸ್ಮಾತ್ ಆಧಾನಾದಿಕರ್ಮಣಾಂ ಬ್ರಹ್ಮಸಾಕ್ಷಾತ್ಕಾರಾಯ ಮುಖ್ಯಹೇತುತ್ವಮಸಂಗತಮಿತಿ ಸೂತ್ರಸೂಕ್ಷ್ಮಾರ್ಥಃ. ಪೂರ್ವತ್ರ ಬ್ರಹ್ಮವಿದ್ಯಾಯಾಂ ಕರ್ಮಾಂಗತ್ವದ್ಯೋತನೇಽಪಿ ಬ್ರಹ್ಮಪರತ್ವಂ ಸಾಧಿತಂ ಅತ್ರ ಯತ್ಯಾಶ್ರಮಿಣಾಮೂರ್ಧ್ವರೇತಸ್ಕಾನಾಂ ಬ್ರಹ್ಮವಿದ್ಯಾಂಗಭೂತತ್ವೇನ ಆಧಾನಾದಿಕರ್ಮಸಾಪೇಕ್ಷಾ ಯುಕ್ತಾ ಅಯುಕ್ತಾ ವೇತಿ ಸಂದಿಹ್ಯತೇ. "ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಃ । ಅವಿದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾಮೃತಮಶ್ನುತೇ ॥" ಇತಿ ಶ್ರುತೌ, "ಇಯಾಜ ಸೋಽಪಿ ಸುಬಹೂನ್ ಯಜ್ಞಾನ್ ಜ್ಞಾನವ್ಯಪಾಶ್ರಯಃ, ಬ್ರಹ್ಮವಿದ್ಯಾಮಧಿಷ್ಠಾಯ ತರ್ತುಂ ಮೃತ್ಯುಮವಿದ್ಯಯಾ" ಇತಿ ಸ್ಮೃತೌ ಚ ಕರ್ಮಣೋ ಬ್ರಹ್ಮವಿದ್ಯಾಂಗತ್ವೋಪದೇಶಾತ್ ವಿದ್ಯಾವತಾಮೂರ್ಧ್ವರೇತಸಾಮಪಿ ಬ್ರಹ್ಮವಿದ್ಯಾಂಗತ್ವೇನಾಧಾನಾದಿಕರ್ಮ ಕರ್ತವ್ಯಮೇವೇತಿ ಪ್ರಾಪ್ತೇ ಬ್ರೂಮಃ. ಯತಃ ಊರ್ಧ್ವರೇತಸ ಆಶ್ರಮಿಣೋ ವಿದ್ಯಾಸಂಬಂಧಿತ್ವೇನ ಶ್ರುತ್ಯಾ ಪರಿಗೃಹ್ಯಂತೇ, "ಬ್ರಹ್ಮಸಂಸ್ಥೋಽಮೃತತ್ವಮೇತಿ," "ಯೇ ಚೇಮೇಽರಣ್ಯೇ ಶ್ರದ್ಧಾಂ ತಪ ಇತ್ಯುಪಾಸತೇ" "ಏತಮೇವ ಪ್ರವ್ರಾಜಿನೋ ಲೋಕಮಿಚ್ಛಂತಃ ಪ್ರವ್ರಜಂತಿ ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ" ಇತ್ಯಾದಿಕಯಾ. ಅತ ಏವೋರ್ಧ್ವರೇತಸ್ಸು ವಿದ್ಯಾ ಅಗ್ನೀಂಧನಾದ್ಯನಪೇಕ್ಷಾ. ಅಗ್ನಿಂಧನಂ ಅಗ್ನ್ಯಾಧಾನಂ. ಆಧಾನಪೂರ್ವಕಾಗ್ನಿಹೋತ್ರದರ್ಶಪೂರ್ಣಮಾಸಾದಿಕರ್ಮಾನಪೇಕ್ಷಾ. ತೇಷು ವಿದ್ಯಾ ಕೇವಲಸ್ವಾಶ್ರಮವಿಹಿತಕರ್ಮಾಪೇಕ್ಷೇತ್ಯುಚ್ಯತೇ. "ವಿದ್ಯಾಂ ಚಾವಿದ್ಯಾಂ ಚ" ಇತಿ ಶ್ರುತಿರವಿರಕ್ತವಿಷಯಾ.

"ಮೂರು ಋಣಗಳನ್ನು ತೀರಿಸಿ ಮನಸ್ಸನ್ನು ಮೋಕ್ಷದಲ್ಲಿ ಅಂಟಿಸು" ಎಂದು ಮನುಸ್ಮೃತಿಯಲ್ಲಿ ವಿರಕ್ತರಿಗೂ ಅನುಷ್ಠಾನರೂಪವಾದ ಕರ್ಮವನ್ನು ಆವಶ್ಯಕ

ವೆಂದು ಹೇಳಿರುವುದರಿಂದಲೂ, "ನ ಕರ್ಮಣಾ" ಎಂಬ ಶ್ರುತಿಯಲ್ಲೂ ತ್ಯಾಗಕ್ಕೆ ಮೊದಲಿಗೂ ಸ್ವೀಕಾರರೂಪವಾದ ಕರ್ಮವಿದ್ದುದಾಗಿ ತಿಳಿದುಬರುವುದರಿಂದಲೂ ವಿರಕ್ತರಿಗೂ ಸಹ ಅನುಷ್ಠಾನರೂಪವಾದ ಕರ್ಮವನ್ನು ಹೇಗೆ ತಡೆಯಲು ಸಾಧ್ಯವೆಂದಾ ಶಂಕಿಸಿ ನಿರಾಕರಿಸುತ್ತಾನೆ. ದಾರೇಷಣ ಪುತ್ರೇಷಣ ಮತ್ತು ಧನೇಷಣಗಳ ವಾಸನೆಯಿಲ್ಲದ ಊರ್ಧ್ವರೇತಸ್ಕರಿಗೆ ಮಾತ್ರವೇ ಧ್ಯಾನಧಾರಣಶ್ರವಣಮನನಗಳೊಡಗೂಡಿದ ಬ್ರಹ್ಮವಿದ್ಯೆಗೆ ಅಧಿಕಾರವಿರುವುದೆಂದು ಹಿಂದೆ ತಿಳಿಸಿಯಾಗಿದೆ. ಆದ್ದರಿಂದಲೇ ಜ್ಞಾನಿಗಳಿಗೆ ಮಾತ್ರ ಅಗ್ನಿಹೋತ್ರ ಮೊದಲಾದ ಕರ್ಮಗಳ ಅಪೇಕ್ಷೆ ಇರುವುದಿಲ್ಲ. ಇದರಿಂದ ಈ ಬಗೆಯ ಕರ್ಮಗಳು ಬ್ರಹ್ಮಸಾಕ್ಷಾತ್ಕಾರಕ್ಕೆ ಮುಖ್ಯ ಹೇತುವೆಂಬುದು ಯುಕ್ತವಲ್ಲ. ಬ್ರಹ್ಮವಿದ್ಯೆಯಲ್ಲಿ ಕರ್ಮ ಅಂಗವಾಗಿದ್ದರೂ ಅದನ್ನು ಬ್ರಹ್ಮಪರವೆಂದೇ ಹಿಂದೆ ಸಾಧಿಸಲಾಗಿತ್ತು. ಆದರೆ ಯತ್ಯಾಶ್ರಮದ ಊರ್ಧ್ವರೇತಸ್ಕರಿಗೂ ಬ್ರಹ್ಮವಿದ್ಯೆಗೆ ಅಂಗವಾದ್ದರಿಂದ ಆಧಾನಾದಿಕರ್ಮಗಳ ಆವಶ್ಯಕತೆ ಉಂಟೇ ಇಲ್ಲವೇ ? ಎಂಬ ಸಂದೇಹ ಬರುತ್ತದೆ. "ಯಾವನು ಜ್ಞಾನಕರ್ಮಗಳೆರಡನ್ನೂ ತಿಳಿದು ಕರ್ಮದಿಂದ ಮೃತ್ಯುವನ್ನು ದಾಟಿ ಜ್ಞಾನದಿಂದ ಅಮೃತವನ್ನು ಹೊಂದುತ್ತಾನೆಯೋ" ಎಂಬ ಶ್ರುತಿಯಲ್ಲೂ "ಅವನು ಬ್ರಹ್ಮವಿದ್ಯೆಯನ್ನಾಶ್ರಯಿಸಿ ಕರ್ಮದಿಂದ ಮೃತ್ಯುವನ್ನು ದಾಟಲಿಕ್ಕಾಗಿ ಜ್ಞಾನದ ಬೆಂಬಲದಿಂದ ಅನೇಕ ಯಜ್ಞಗಳನ್ನಾಚರಿಸಿದನು" ಎಂಬ ಸ್ಮೃತಿಯಲ್ಲೂ ಕರ್ಮವನ್ನು ಬ್ರಹ್ಮವಿದ್ಯೆಗೆ ಅಂಗವೆಂದು ಹೇಳಿರುರುವುದರಿಂದ ಜ್ಞಾನಿಗಳಾದ ಊರ್ಧ್ವರೇತಸ್ಕರೂ ಸಹ ಬ್ರಹ್ಮವಿದ್ಯೆಗೆ ಅಂಗವಾಗಿ ಆಧಾನಾದಿ ಕರ್ಮಗಳನ್ನಾಚರಿಸಲೇ ಬೇಕು ಎಂದು ಆಕ್ಷೇಪಬಂದರೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಶ್ರುತಿಯು ಊರ್ಧ್ವರೇತಸ್ಕರಾದ ಸಂನ್ಯಾಸಿಗಳನ್ನು ಜ್ಞಾನಿಗಳೆಂದೇ ಭಾವಿಸುತ್ತದೆ. "ಬ್ರಹ್ಮನಿಷ್ಠನೇ ಅಮೃತನಾಗುತ್ತಾನೆ." "ಅರಣ್ಯದಲ್ಲಿ ಶ್ರದ್ಧೆಯನ್ನೇ ತಪಸ್ಸೆಂದು ಉಪಾಸನಮಾಡುತ್ತಾರೆ." "ಬ್ರಹ್ಮಪ್ರಾಪ್ತಿಗಾಗಿಯೇ ಈ ಲೋಕವನ್ನು ತೊರೆಯುತ್ತಾರೆ ಮತ್ತು ಬ್ರಹ್ಮಚರ್ಯವನ್ನಾಚರಿಸುತ್ತಾರೆ" ಈ ಶ್ರುತಿಗಳಿಂದ ಊರ್ಧ್ವರೇತಸ್ಕರಿಗೆ ಅಗ್ನಿಹೋತ್ರದರ್ಶಪೂರ್ಣಮಾಸಾದಿ ಕರ್ಮಗಳಲ್ಲಿ ಅಗ್ನ್ಯಾಧಾನಕರ್ಮದ ಆವಶ್ಯಕತೆ ಇಲ್ಲದಿರುವಂತೆ ಬ್ರಹ್ಮವಿದ್ಯೆಯು ಆಶ್ರಮವಿಹಿತವಾದ ಕರ್ಮಗಳನ್ನು ಅಪೇಕ್ಷಿಸುವುದಿಲ್ಲ. "ಜ್ಞಾನಕರ್ಮಗಳನ್ನು ತಿಳಿದು" ಎಂಬ ಶ್ರುತಿಯು ವಿರಕ್ತರಲ್ಲದವರಿಗೆ ಮಾತ್ರವೇ ಅನ್ವಯಿಸುತ್ತದೆ.

"ಯಜ್ಞೇನ ದಾನೇನ" ಇತ್ಯಾದಿಶ್ರುತೌ ಯಜ್ಞಾದೀನಾಂ ಬ್ರಹ್ಮಸಾಕ್ಷಾತ್ಕಾರತ್ವಾವಗಮಾತ್ ಕಥಂ ಜ್ಯೋತಿಷ್ಟೋಮಾದಿಕರ್ಮಣಾಂ ಬ್ರಹ್ಮವಿದ್ಯಾಂಗತ್ವಮನುಪಪನ್ನಮಿತ್ಯಾಶಂಕಾಯಾಮಧಿಕರಣಾಂತರಮಾಹ- ಸರ್ವಾಪೇಕ್ಷಾಧಿಕರಣಂ ||೬|| ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್||೨೬||"ಯಜ್ಞೇನ ದಾನೇನ" ಇತಿ ಶ್ರುತಿಬಲಾತ್ ಸರ್ವಾಪೇಕ್ಷಾ ಸರ್ವೇಷಾಂ ಪರಮೇಶ್ವರಾರ್ಪಿತನಿತ್ಯನೈಮಿತ್ತಿಕಕಾಮ್ಯಕರ್ಮಣಾಂ

ಸ್ಥೂಲಾರುಂಧತೀನ್ಯಾಯೇನ ಪರಶಿವಬ್ರಹ್ಮಸಾಕ್ಷಾತ್ಕಾರಂ ಪ್ರತ್ಯ ಪೇಕ್ಷಯಾ ಪರಂಪರಾಸಾಧನತ್ವಂ ಗಮ್ಯತೇ. ಯಥಾ ಅಶ್ವವತ್ ಅಶ್ವಸ್ಯ ಗಮನಕ್ರಿಯಾಪರಂಪರಯಾ ಗ್ರಾಮಪ್ರಾಪ್ತಿಹೇತುತ್ವಂ ತದ್ವದುಪದಿಶ್ಯತೇ. ತಥಾಚ "ತಮೇವಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ" ಇತಿ ಶ್ರುತೇಃ ಚಿತ್ತಶುದ್ಧಿವೈರಾಗ್ಯಭಕ್ತಿಜೀವ ಕರುಣಾಶ್ರವಣಮನನನಿದಿಧ್ಯಾಸನಾದಿಪರಂಪರಯಾ ಯಜ್ಞಾದಿಕರ್ಮ ಣಾಂ ಪರಶಿವಬ್ರಹ್ಮಸಾಕ್ಷಾತ್ಕಾರಹೇತುತ್ವಾದಪ್ರಾಮಾಣ್ಯಂ ನಾಸ್ತೀತಿ ಸೂತ್ರಾರ್ಥಃ. ಪೂರ್ವಾಧಿಕರಣೇ ಜಿತೇಂದ್ರಿಯಾಣಾಂ ಪರಿಶುದ್ಧಾಂತಃ ಕರಣಾನಾಂ ಆಧಾನಾದಿಕರ್ಮಾಪೇಕ್ಷಾ ನ ಸಂಭವತೀತಿ ರಾದ್ಧಾಂತಿತಂ. ಅತ್ರ ಗೃಹಿಣಾಂ ಬ್ರಹ್ಮವಿದ್ಯಾಧಿಕಾರತ್ವಂ ವಿಹಿತಂ ವೇತಿ ಚಿಂತ್ಯತೇ, "ಸಂನ್ಯಸ್ಯ ವೇದಾಂತಶ್ರವಣಂ ಕುರ್ಯಾತ್" "ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ" ಇತ್ಯಾದೌ ತದುಭಯವಿಧಿದ್ಯೋತ ನಾತ್, "ನ ಕುರ್ಯಾನ್ನಿಷ್ಫಲಂ ಕರ್ಮ" ಇತಿ ನ್ಯಾಯಾಚ್ಚ ಗೃಹಸ್ಥಾ ನಾಮಪಿ ಬ್ರಹ್ಮವಿದ್ಯಾಗ್ನೀಂಧನಾದಿಕರ್ಮಾಪೇಕ್ಷಾ ಯುಕ್ತೇತಿ ಚೇತ್ತಸ್ಯಾವ್ಯಭಿಚಾರೇಣ ವಿದ್ಯಾಂಗತ್ವಾನುಪಪತ್ತೇಃ. ಯತ್ತು ವಿಮತಂ ವಿದ್ಯಾಂಗಭೂತಂ ಕರ್ಮಾಪೇಕ್ಷಾಂಗೀಕಾರಾತ್ ಪ್ರಯಾ ಜಾದ್ಯಪೇಕ್ಷಕದರ್ಶಪೂರ್ಣಮಾಸವದಿತ್ಯನುಮಾನಂ ತತ್ರ ಆಧಾನಾದೇಃ ಕೀದೃಶಮಂಗತ್ವಂ ಸಾಧ್ಯಂ? ಪ್ರಯಾಜಾದಿವತ್ಫಲೋಪಕಾರಿತ್ವಂ? ಅವ ಘಾತಾದಿವತ್ ಸ್ವರೂಪೋಪಕಾರಿತ್ವಂ ವಾ? ನಾದ್ಯಃ, ತಜ್ಜನ್ಯತ್ವೇ ಮುಕ್ತೇ ರನಿತ್ಯತ್ವಂ ಸ್ಯಾತ್, ದ್ವಿತೀಯೇ ಸಾಧ್ಯವಿಕಲೋ ದೃಷ್ಟಾಂತಃ ಸ್ಯಾತ್. ಅತೋ ನ ವಿದ್ಯಾಂಗತ್ವಂ ಕರ್ಮಣಃ, ತಸ್ಮಾದ್ಗೃಹಿಣಾಮಪಿ ವಿದ್ಯಾ ಕರ್ಮಾನಪೇಕ್ಷೇತಿ ಪ್ರಾಪ್ತೇ ಪ್ರಚಕ್ಷ್ಮಹೇ. "ಯಜ್ಞೇನ ದಾನೇನ" ಇತ್ಯಾ ದಿನಾ ಯಜ್ಞಾದಯೋ ಹಿ ವಿದ್ಯಾಂಗತ್ವೇನ ಶ್ರೂಯಂತೇ, ಯಜ್ಞಾ ದಿನಾ ವಿವಿದಿಷಂತಿ ವೇದಿತುಮಿಚ್ಛಂತಿ ಯಜ್ಞಾದಿಭಿರ್ವೇದನಂ ಪ್ರಾಪ್ತು ಮಿಚ್ಛಂತೀತ್ಯರ್ಥಃ. ಯಜ್ಞಾನಾಂ ಜ್ಞಾನಸಾಧನತ್ವೇ ತದೈವ ಯಜ್ಞಾ ದಿಭಿರ್ಜ್ಞಾನಂ ಪ್ರಾಪ್ತುಮಿಚ್ಛಂತೀತಿ ವ್ಯಪದೇಶ ಉಪಪದ್ಯತೇ. ಯಥಾ ಅಸೇರ್ಹನನಸಾಧನತ್ವೇ ಸತ್ಯಸಿನಾ ಜಿಘಾಂಸಂತೀತಿ ವ್ಯಪದೇಶಃ. ಅತೋ ಯಜ್ಞಾದೀನಾಂ ಜ್ಞಾನಸಾಧನತ್ವಮವಗಮ್ಯತೇ. ಜ್ಞಾನಂ ಚ ವಾಕ್ಯಾರ್ಥಜ್ಞಾನಾತ್ ಅರ್ಥಾಂತರಭೂತಂ ಜ್ಞಾನೋಪಾಸನಾದಿ ಶಬ್ದವಾಚ್ಯಂ, ವಿಶದತಮಪ್ರತ್ಯಕ್ಷತಾಪನ್ನಸ್ಮೃತಿರೂಪಂ ನಿರತಿಶಯ ಪ್ರಿಯಂ ಅಹರಹರಭ್ಯಾಸಾತಿಶಯಾದನುವರ್ತಮಾನಂ ಮೋಕ್ಷಸಾಧನ ಮಿತ್ಯುಕ್ತಮಸ್ಮಾಭಿಃ ಪೂರ್ವಮೇವ. ವಕ್ಷ್ಯತಿ ಚ "ಆವೃತ್ತಿರಸಕೃದುಪ

ದೇಶಾತ್ ” ಇತ್ಯಾದಿನಾ. ಏವಂ ರೂಪಂ ಚ ಧ್ಯಾನಮಹರಹರನುಷ್ಠೀಯಮಾನೈರ್ನಿತ್ಯನೈಮಿತ್ತಿಕಕರ್ಮಭಿಃ ಶಿವಾರಾಧನರೂಪೈಃ ಶಿವಪ್ರಸಾದದ್ವಾರೇಣ ಜಾಯತ ಇತಿ ಯಜ್ಞಾದಿನಾ ವಿವಿದಿಷಂತೀತಿ ಶಾಸ್ತ್ರೇಣ ಪ್ರತಿಪಾದ್ಯತೇ. ಅಂತಃಕರ್ಮವತ್ಸು ಗೃಹಸ್ಥೇಷು ಯಜ್ಞಾದಿನಿತ್ಯನೈಮಿತ್ತಿಕಸರ್ವಕರ್ಮಾಪೇಕ್ಷಾ ವಿದ್ಯಾ ಭವತಿ. ಯಥಾ ಗಮನಸಾಧನಭೂತೋಽಶ್ವಃ ಸ್ವಪರಿಕರಬಂಧಕರ್ಮಾಪೇಕ್ಷಃ ಏವಂ ಮೋಕ್ಷಸಾಧನೀಭೂತಾಪಿ ವಿದ್ಯಾ ನಿತ್ಯನೈಮಿತ್ತಿಕಕರ್ಮಪರಿಕರಾಪೇಕ್ಷಾ. ತದಿದಮಾಹ ಕೃಷ್ಣಃ ಸ್ವಯಮೇವ. “ಯಜ್ಞೋ ದಾನಂ ತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ । ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ । ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಂ । ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ಮಿದಂತಿ ಮಾನವಃ ॥ ” ಇತಿ ದರ್ಶನಾತ್ ಗೃಹಸ್ಥಾನಾಂ ಯಜ್ಞಾದಿಸಾಪೇಕ್ಷಾ ವಿದ್ಯಾ ಸರ್ವೇಷಾಮಾಶ್ರಮಿಣಾಂ ಚ ಸ್ವಾಶ್ರಮವಿಹಿತಕರ್ಮಾಪೇಕ್ಷಾ.

“ ನಾಶವಾಗದಿರುವ ಯಜ್ಞದಿಂದಲೂ ದಾನದಿಂದಲೂ ತಪಸ್ಸಿನಿಂದಲೂ ಬ್ರಹ್ಮವನ್ನರಿಯಬೇಕು ” ಎಂಬ ಶ್ರುತಿಯ ಬಲದಿಂದ ಪರಮೇಶ್ವರನಿಗರ್ಪಿಸಿದ ನಿತ್ಯನೈಮಿತ್ತಿಕ ಮೊದಲಾದ ಸಮಸ್ತಕಾಮ್ಯಕರ್ಮಗಳೂ ಸ್ಥೂಲಾರೂಂಧತೀ ನ್ಯಾಯದಿಂದ ಪರಶಿವಬ್ರಹ್ಮ ಸಾಕ್ಷಾತ್ಕಾರಕ್ಕೆ ಆವಶ್ಯಕವೆನಿಸಿದ್ದರಿಂದ ಅವು ಪರಂಪರೆಯಿಂದ ಸಾಧನವೆನಿಸುತ್ತವೆ. ಒಬ್ಬನು ಒಂದು ಗ್ರಾಮಕ್ಕೆ ಸೇರಲು ಕುದುರೆಯು ಗಮನಕ್ರಿಯೆಯ ಮೂಲಕ ಸಧನವೆನಿಸುವಂತೆ ಮುಕ್ತಿಗೆ ಕರ್ಮವು ಪರಂಪರೆಯಿಂದ ಸಾಧನವಾಗುತ್ತದೆ. “ಅವನನ್ನು ಹೀಗೆ ವೇದಪ್ರವಚನದಿಂದ ಬ್ರಾಹ್ಮಣನು ತಿಳಿಯಲಿಚ್ಛಿಸುತ್ತಾನೆ ” ಈ ಶ್ರುತಿಯಲ್ಲಿ ಚಿತ್ತಶುದ್ಧಿ ವೈರಾಗ್ಯ ಭಕ್ತಿ ಜೀವಕರುಣೆ ಶ್ರವಣ ಮನನಗಳ ಮೂಲಕ ಯಜ್ಞಾದಿಕರ್ಮಗಳೂ ಬ್ರಹ್ಮಸಾಕ್ಷಾತ್ಕಾರಕ್ಕೆ ಕಾರಣವಾಗುವುದರಿಂದ ಅವನ್ನು ಅಲ್ಲಗಳೆಯಲಾಗುವುದಿಲ್ಲ. ಜಿತೇಂದ್ರಿಯರೂ ಶುದ್ಧಹೃದಯರೂ ಆದವರಿಗೆ ಆಧಾನ ಮೊದಲಾದ ಕರ್ಮಗಳು ಅನಾವಾಶ್ಯಕವೆಂದು ಹಿಂದೆ ನಿರ್ಣಯಿಸಲಾಗಿತ್ತು. ಇಲ್ಲಿ ಗೃಹಸ್ಥರಿಗೆ ಬ್ರಹ್ಮವಿದ್ಯೆಗೆ ಅಧಿಕಾರವಿದೆಯೋ ಇಲ್ಲವೇ ಎಂಬುದನ್ನು ವಿಚಾರಿಸಲಾಗಿದೆ. “ ಕರ್ಮಗಳನ್ನು ತೊರೆದು ವೇದಾಂತವನ್ನು ಕೇಳಬೇಕು” “ ಕರ್ಮದಿಂದ ಮೋಕ್ಷವಿಲ್ಲ. ಅದಕ್ಕಾಗಿ ಶಿಷ್ಯನು ಸಮಿತಾಣಿಯಾಗಿ ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಆದ ಗುರುವಿನ ಬಳಿಸಾರಬೇಕು ” ಎಂಬಲ್ಲಿ ಜ್ಞಾನಕ್ರಿಯೆಗಳೆರಡನ್ನು ವಿಧಿಸಲಾಗಿದೆ. “ ನಿಷ್ಫಲವಾದ ಕರ್ಮವನ್ನು ಮಾಡಬಾರದು ” ಎಂಬ ನ್ಯಾಯದಿಂದ ಗೃಹಸ್ಥರೂ ಸಹ ಬ್ರಹ್ಮವಿದ್ಯೆ, ಅಗ್ನ್ಯಾಧಾನ ಮೊದಲಾದ ಕರ್ಮಗಳನ್ನು ಆಚರಿಸುವುದು ಯುಕ್ತವೇ ಆಗಿದೆ ಎಂದು ಆಕ್ಷೇಪ ಬಂದರೆ ಕರ್ಮಗಳನ್ನು ನಿಯತವಾಗಿ ವಿದ್ಯೆಯ ಅಂಗವೆಂದೇ ಒಪ್ಪಲಾಗುವುದಿಲ್ಲ. ಪ್ರಯಾಜವನ್ನು ಅಂಗವಾಗಿ

ಪಡೆದಿರುವ ದರ್ಶಪೂರ್ಣಮಾಸದಂತೆ ಕರ್ಮವನ್ನು ಅಂಗವಾಗಿ ಪಡೆದಿರುವುದರಿಂದ ಕರ್ಮವು ವಿದ್ಯೆಗೆ ಅಂಗವೇ ಆಗಿದೆ ಎಂಬ ಅನುಮಾನವನ್ನು ಹೇಳಿದರೆ ಅದೂ ಯುಕ್ತವಲ್ಲ. ಕರ್ಮವು ಪ್ರಯಾಜಾದಿಗಳಂತೆ ಮುಕ್ತಿಫಲವನ್ನು ಕೊಡಲು ಕಾರಣವಾಗಬಹುದೇ? ಅಥವಾ ಕುಟ್ಟುವಿಕೆ ಮೊದಲಾದ ಕ್ರಿಯೆಯಂತೆ ಮುಕ್ತಿಸ್ವರೂಪವನ್ನು ಹುಟ್ಟಿಸಲು ಕಾರಣವಾಗಬಹುದೇ? ಎಂದು ಕೇಳಿದರೆ ಮೊದಲನೆಯ ವಿಕಲ್ಪದಲ್ಲಿ ಮುಕ್ತಿ ಅನಿತ್ಯವಾಗಬೇಕಾಗುವುದು. ಎರಡನೆಯ ವಿಕಲ್ಪದಲ್ಲಿ ದರ್ಶಪೂರ್ಣಮಾಸದಲ್ಲಿ ಪ್ರಯಾಜಾದಿಗಳು ಫಲವನ್ನು ಹುಟ್ಟಿಸದೇ ಇರುವುದರಿಂದ ದೃಷ್ಟಾಂತವೇ ಹೊಂದುವುದಿಲ್ಲ. ಆದ್ದರಿಂದ ಕರ್ಮವು ವಿದ್ಯೆಗೆ ಅಂಗವಲ್ಲ. ಗೃಹಸ್ಥರಿಗೂ ಸಹ ಬ್ರಹ್ಮವಿದ್ಯೆಗೆ ಕರ್ಮದ ಆವಶ್ಯಕತೆ ಇಲ್ಲವೆಂದು ಆಕ್ಷೇಪಬಂದರೆ ಸಮಾಧಾನವನ್ನು ಹೇಳಲಾಗಿದೆ. "ಬ್ರಾಹ್ಮಣರು ಶ್ರುತ್ಯುಕ್ತಕ್ರಮದಲ್ಲಿ ಅವನನ್ನು ತಿಳಿಯಲು ಇಚ್ಛಿಸುತ್ತಾರೆ" "ವೃಥವಾದ ಯಜ್ಞ ದಾನ ತಪಸ್ಸುಗಳಿಂದ ಅವನನ್ನು ತಿಳಿಯುತ್ತಾರೆ" ಎಂಬಲ್ಲಿ ಯಜ್ಞಾದಿಗಳನ್ನು ವಿದ್ಯೆಗೆ ಅಂಗವೆಂದು ಹೇಳಲಾಗಿದೆ. ಯಜ್ಞಾದಿಕರ್ಮಗಳ ಆಚರಣೆಯಿಂದಲೇ ಅವನನ್ನು ತಿಳಿಯಲಿಚ್ಛಿಸುತ್ತಾರೆ. ಇದರಿಂದ ಯಜ್ಞದ ಅನುಷ್ಠಾನವು ಜ್ಞಾನಕ್ಕೆ ಸಾಧನವೆಂಬುದು ಸ್ಪಷ್ಟವಾಗುತ್ತದೆ. ಹೀಗೆ ಹೇಳಿದರೆಯೇ ಅವುಗಳಿಂದ ಜ್ಞಾನವನ್ನು ಹೊಂದಲಿಚ್ಛಿಸುವರೆಂದು ಹೇಳಿದ್ದು ಹೊಂದುತ್ತದೆ. ಕತ್ತಿಯು ಕೊಲೆಗೆ ಸಾಧನವಾಗಿದ್ದರೆಯೇ ಅದರಿಂದ ಒಬ್ಬನು ಶತ್ರುವನ್ನು ಕೊಲ್ಲಲಿಚ್ಛಿಸುತ್ತಾನೆಂದು ಹೇಳಬಹುದು. ಆದ್ದರಿಂದ ಯಜ್ಞಾದಿಕರ್ಮಗಳು ಜ್ಞಾನಕ್ಕೆ ಸಾಧನವೆಂಬುದು ಸ್ಪಷ್ಟಪಡುತ್ತದೆ. ಜ್ಞಾನವಾದರೂ ವಾಕ್ಯಾರ್ಥಜ್ಞಾನಕ್ಕಿಂತಲೂ ಬೇರೆ ಎನಿಸಿ "ವೇದ, ಉಪಾಸೀತ" ಎಂಬ ಶಬ್ದಗಳಿಂದ ತಿಳಿದುಬರುವಂತಹದು. ನಿರ್ಮಷ್ಟವೂ ಸ್ವಚ್ಛವೂ ಪ್ರಿಯತಮವೂ ಆದ ಶ್ರುತಿಯೇ ಜ್ಞಾನವೆನಿಸಿದೆ. ಇದು ಪ್ರತಿನಿಮಿಷದ ಅಭ್ಯಾಸದಿಂದಲೇ ವಶವಾಗುವಂತಹದು. ಜೀವನು ದೇಹವನ್ನು ಬಿಟ್ಟು ಹೊರಟಕೂಡಲೆ ಇದು ಅವನನ್ನು ಹಿಂಬಾಲಿಸುವಂತಹ ಮೋಕ್ಷಸಾಧನವೆನಿಸಿದೆ. ಎಂದು "ಆವೃತ್ತಿರಸಕೃದುಪದೇಶಾತ್" ಎಂಬ ಸೂತ್ರದಲ್ಲಿ ಮುಂದೆಯೂ ತಿಳಿಸಲಾಗುವುದು. ಇದು ಒಂದುಬಗೆಯ ಧ್ಯಾನವೇ ಆಗಿದೆ. ಪ್ರತಿನಿಮಿಷವೂ ಆಚರಿಸುವ ಶಿವಾರಾಧನರೂಪವಾದ ನಿತ್ಯನೈಮಿತ್ತಿಕಕರ್ಮಗಳಿಂದ ಶಿವಪ್ರಸಾದದ ಮೂಲಕ ಜೀವನಿಗೆ ಇದು ಲಭಿಸುತ್ತದೆ ಎಂದು "ಯಜ್ಞಾದಿನಾ ವಿವಿದಿಷಂತಿ" ಎಂಬ ಮಂತ್ರವು ತಿಳಿಸುತ್ತದೆ. ಗೃಹಸ್ಥರಿಗೂ ಸಹ ಬ್ರಹ್ಮವಿದ್ಯೆಯು ನಿತ್ಯನೈಮಿಕ್ತಿಕಕರ್ಮಗಳನ್ನವಲಂಬಿಸಿರುತ್ತದೆ. ಗಮನಕ್ಕೆ ಮುಖ್ಯಸಾಧನವೆನಿಸಿದ ಕುದುರೆಯು ಗಮನ ಸಾಮಗ್ರಿಗಳನ್ನು ಅಪೇಕ್ಷಿಸುವಂತೆ ಮೋಕ್ಷಸಾಧನವಾದ ವಿದ್ಯೆಯೂ ಸಹ ನಿತ್ಯನೈಮಿಕ್ತಿಕಕರ್ಮಗಳನ್ನು ಅಪೇಕ್ಷಿಸುತ್ತದೆ. ಇದನ್ನು ಕೃಷ್ಣನು "ಯಜ್ಞ, ದಾನ, ತಪಸ್ಸುಗಳೆಂಬ ಕರ್ಮಗಳನ್ನು ಆಚರಿಸಲೇಬೇಕು. ಅವನ್ನು ತೊರೆಯಬಾರದು ಇವು ನಿರ್ಮಲಹೃದಯರನ್ನು ಪಾವನಗೊಳಿಸುತ್ತವೆ." ಕರ್ಮದಿಂದಲೇ "ಎಲ್ಲ

ರಿಗೂ ಪ್ರವೃತ್ತಿಯುಂಟಾಗುತ್ತದೆ. ಅದರಿಂದಲೇ ಎಲ್ಲವೂ ವ್ಯಾಪಿಸಿದೆ. ಅದರಿಂದಲೇ ಮಾನವನು ಈಶ್ವರನನ್ನು ಅರ್ಚಿಸಿ ಸಿದ್ಧಿಯನ್ನು ಹೊಂದುತ್ತಾನೆ" ಎಂದು ಸ್ಪಷ್ಟವಾಗಿ ತಿಳಿಸಿದ್ದಾನೆ. ಗೃಹಸ್ಥರಿಗೆ ಬ್ರಹ್ಮವಿದ್ಯೆಯು ಗುರು ಲಿಂಗ ಜಂಗಮರ ಅರ್ಚನೆಯನ್ನು ಅಪೇಕ್ಷಿಸುವಂತೆಯೇ ಇತರ ಆಶ್ರಮದವರಿಗೂ ಬ್ರಹ್ಮವಿದ್ಯೆಯು ಅವರವರ ಕರ್ಮಗಳನ್ನು ಅವಲಂಬಿಸಿದೆ ಎಂಬುದು ಯುಕ್ತವೇ ಆಗಿದೆ.

"ತಮೇತಂ ವೇದಾನುವಚನೇನ" ಇತ್ಯಾದಿಶ್ರುತಿದರ್ಶನಾತ್ ಗೃಹಿಣಾಂ ವಿದ್ಯಾಂಗತ್ವೇನ ಯಜ್ಞಾದಿಕರ್ಮಾವಶ್ಯಕತ್ವಂ ಯುಕ್ತಂ. "ಶಾಂತೋ ದಾಂತಃ ಉಪರತಃ ತಿತಿಕ್ಷುಸ್ಸಮಾಹಿತೋ ಭೂತ್ವಾ । ಆತ್ಮನ್ಯೇವಾತ್ಮಾನಂ ಪಶ್ಯೇತ್" ಇತಿ ಶ್ರುತೌ ಶಾಂತ್ಯಾದೀನಾಮೇವ ಬ್ರಹ್ಮಸಾಕ್ಷಾತ್ಕಾರತ್ವೇ ಮುಖ್ಯಹೇತುತ್ವಾವಗಮಾತ್ ಸರ್ವೇಷಾಮಾಶ್ರಮಿಣಾಂ ವಿದ್ಯಾಪ್ರಾಧಾನ್ಯಂ ಕಥಂವೇತ್ಯಾಶಂಕಾಯಾಮಧಿಕರಣಾಂತರಮಾಹ. ಶಮಾದ್ಯಧಿಕರಣಂ ॥ ೭ ॥ ಶಮಾದ್ಯುಪೇತಃ ಸ್ಯಾತ್ತಥಾಪಿ ತು ತದ್ವಿಧೇಸ್ತದಂಗತಯಾ ತೇಷಾಮವಶ್ಯಾನುಷ್ಠೇಯತ್ವಾತ್ ॥ ೨೭ ॥ ಸರ್ವೇಷಾಮಾಶ್ರಮಿಣಾಂ ಪರಶಿವಬ್ರಹ್ಮಸಾಕ್ಷಾತ್ಕಾರವತಾಂ ಅಂತರಂಗಸಾಧನತ್ವೇನ ಶಮಾದ್ಯುಪೇತತ್ವಂ ಸ್ಯಾತ್ ಶಮಾದಿವಿಶಿಷ್ಟೋ ಭವೇತ್, ಕುತಃ ಅಂತರಂಗತಯಾ ಸದಾಶಿವಬ್ರಹ್ಮಸಾಕ್ಷಾತ್ಕಾರಂ ಪ್ರತಿ ಸಾಕ್ಷಾತ್ಸಾಧನತಯಾ ತದ್ವಿಧೇಃ ತೇಷಾಂ ಶಮದಮಾದೀನಾಂ "ಶಾಂತೋ ದಾಂತಃ" ಇತಿ ವಾಕ್ಯೇನ ವಿಹಿತತ್ವಾದ್ಧೇತೋಃ ತೇಷಾಂ ಶಮದಮಾದೀನಾಂ ಪರಶಿವಸಾಕಾತ್ಕಾರಂ ಪ್ರತ್ಯಂತರಂಗಸಾಧನಾನಾಂ ಅವಶ್ಯಾನುಷ್ಠೇಯತ್ವಾತ್ ಸರ್ವೈಃ ಬ್ರಹ್ಮವಿದ್ಯಾವದ್ಭಿಃ ಅವಶ್ಯಂ ಶಮಾದಿಕಂ ಸಂಪಾದನೀಯಂ ಇತಿ ಸೂತ್ರಾರ್ಥಃ. "ಶಾಂತೋ ದಾಂತಃ" ಇತಿ ಶ್ರುತಿದರ್ಶನಾತ್ ಶಮಾದಿಕಂ ಸರ್ವಾಶ್ರಮವಿಧೇಯಂ, ಉತ ಯತ್ಯಾಶ್ರಮವಿಷಯಂ ವೇತಿ ಸಂಚಿಂತ್ಯತೇ. ಶಮಾದಿಕಂ ನ ಬ್ರಹ್ಮಚರ್ಯಾದಿವಿಷಯಂ, ಬ್ರಹ್ಮಚರ್ಯೇ ವೇದಾಧ್ಯಯನಾದಿವ್ಯಾಪಾರಾತ್ಮಕಮನೋವೈಕಲ್ಯಾತ್, ಗೃಹಿಣಾಂ ಶ್ರೌತಸ್ಮಾರ್ತೋಕ್ತಕರ್ಮಾಯಾಸತಯಾ ಶಮಾದಿಕಸ್ಯ ನಿರವಕಾಶತ್ವಾತ್, ವನಿನಾಂ ಕೃಚ್ಛ್ರಚಾಂದ್ರಾಯಣಾದಿಬಹುಕ್ಲೇಶಭೂಯಿಷ್ಠಾವಗಮಾಚ್ಚ ಪರಿಶೇಷಪ್ರಮಾಣೇನ ನಿರಾಭಾರಾಣಾಂ ಯತೀನಾಮೇವ ಶಮಾದಿಕಂ ಯುಕ್ತಂ. "ಶಾಂತೋ ದಾಂತಃ" ಇತ್ಯಾದಿನಾ ತತ್ಪರತ್ವಮೇವೇತ್ಯುಪದಿಷ್ಟಂ. ಅಂತರರಾಗದ್ವೇಷಪ್ರಶಮನಂ ಶಮಃ. ಸರ್ವೇಂದ್ರಿಯವ್ಯಾಪಾರನಿವರ್ತನಂ ದಮಃ. ನಿಷಿದ್ಧಕಾಮ್ಯಕರ್ಮವ್ಯಾಪಾರೋಪರಮಃ ಉಪರತಿಃ. ಸುಖದುಃಖಶತ್ರುಮಿತ್ರಶೀತೋಷ್ಣಾದಿದ್ವಂದ್ವಸಹಿಷ್ಣುತ್ವಂ ತಿತಿಕ್ಷಾ. ಗುರುವಾಕ್ಯ

ವೇದಾಂತನಿಷ್ಠಾನುಷ್ಠಾನತಯಾ ಚಿತ್ತೈಕಾಗ್ರತ್ವಂ ಸಮಾಧಾನಂ. ನಿರತಿಶಯಾನಂದಕಂದನಿಗಮಾಗಮನಿಷ್ಠಾಪೂರ್ವಕದುಶ್ಶಾಸ್ತ್ರದುರ್ವ್ಯಾಪಾರಪರಾಙ್ಮುಖತ್ವಂ ಶ್ರದ್ಧಾ. ಸಕಲೇತರದೇವತಾಪರಾಙ್ಮುಖಪೂರ್ವಕಮನೋವಾಕ್ಕಾಯಕರ್ಮಭಿಃ ಶ್ರವಣಕೀರ್ತನಮನನಾದಿಸಾಧನತ್ವೇನ ನಿರಂತರಾಯಸ್ಕಾಂತಸೂಚಿನ್ಯಾಯವತ್ ವೈದಿಕಶಿವಪರಿಚರ್ಯಾಮಯಸದಾಚಾರೋ ಭಕ್ತಿಃ. ನಿತ್ಯನಿರತಿಶಯಾನಂದಮೋಕ್ಷಲಕ್ಷ್ಮೀಕಟಾಕ್ಷವೀಕ್ಷಣಾಧಾರನಿತ್ಯಾನಿತ್ಯವಸ್ತುವಿವೇಕಜನಿತವೈರಾಗ್ಯಾದಿಸಹಕೃತಶಿವಜ್ಞಾನಸದೃಢಾಪೇಕ್ಷತ್ವಂ ಮುಮುಕ್ಷುತ್ವಂ. ಏತಾದೃಶಧರ್ಮಾಃ ನೇತರವಿಷಯತ್ವಾದ್ಯತಿನಾಮೇವ ಸಮಂಜಸಾಃ ಇತಿ ಪ್ರಾಪ್ತೇ ವದಾಮಃ. ಶಮಾದಿಕಂ ಸರ್ವಾಶ್ರಮಿಣಾಂ ಬ್ರಹ್ಮವಿದ್ಯಾಂಗತ್ವೇನ ಪರಿಗ್ರಾಹ್ಯಂ ವಿದ್ಯಾಂಗತಯಾ ತೇಷಾಂ ವಿಧೇಃ. “ತಸ್ಮಾದೇವಂವಿತ್ ಶಾಂತೋದಾಂತ ಉಪರತಸ್ತಿತಿಕ್ಷುಸ್ಸಮಾಹಿತೋ ಭೂತ್ವಾತ್ಮನ್ಯೇವಾತ್ಮಾನಂ ಪಶ್ಯೇತ್” ಇತಿ ವಿದ್ಯೋತ್ಪತ್ತೇಃ ಚಿತ್ತಸಮಾಧಾನರೂಪತ್ವೇನ ದೃಷ್ಟಪರಿಕರತ್ವಾತ್ ಶಮಾದೀನಾಮವಿದ್ಯಾನಿವೃತ್ತಯೇ ತೇಷಾಮವಶ್ಯಾನುಷ್ಠೇಯಂ. ನಚ ಕರಣವ್ಯಾಪಾರತದ್ವಿಪರ್ಯಯರೂಪತ್ವೇನ ಕರ್ಮಣಾಂ ಶಮದಮಾದೀನಾಂ ಚ ಪರಸ್ಪರವಿರೋಧಃ ಭಿನ್ನವಿಷಯತ್ವಾತ್. ವಿಹಿತೇಷು ಕರಣವ್ಯಾಪಾರಃ, ಅವಿಹಿತೇಷು ಪ್ರಯೋಜನಶೂನ್ಯೇಷು ಚ ತದುಪಶಮ ಇತಿ. ನಚ ಕರಣವ್ಯಾಪಾರರೂಪಕರ್ಮಸು ವರ್ತಮಾನಸ್ಯ ವಾಸನಾವಶಾತ್ ಶಮಾದೀನಾಮುಪಾದೇಯತ್ವಾಸಂಭವಃ. ವಿಹಿತಾನಾಂ ಕರ್ಮಣಾಂ ಶಿವಾರಾಧನತಯಾ ತತ್ಪ್ರಸಾದದ್ವಾರೇಣ ನಿಖಿಲವಿಪರೀತವಾಸನೋಚ್ಛೇದಹೇತುತ್ವಾತ್. ಅತಸ್ಸರ್ವಾಶ್ರಮಿಣಾಂ ಬ್ರಹ್ಮವಿದ್ಯಾಂಗತ್ವೇನ ಶಮದಮಾದಯೋಽಪ್ಯನುಷ್ಠೇಯಾಃ.

“ವೇದಾನುಗುಣವಾಗಿ ಬ್ರಹ್ಮವನ್ನು ತಿಳಿಯಲಿಚ್ಛಿಸುತ್ತಾನೆ” ಎಂಬ ಶ್ರುತಿಯಂತೆ ಗೃಹಸ್ಥರಿಗೆ ಬ್ರಹ್ಮವಿದ್ಯೆಗೆ ಅಂಗವಾಗಿ ಯಜ್ಞಾದಿಕರ್ಮಗಳು ಆವಶ್ಯಕವೆಂಬುದು ಯುಕ್ತವಾಗಿದೆ. “ಶಮ ದಮ ಉಪರತಿ ತಿತಿಕ್ಷಾ ಸಮಾಧಾನಗಳಿಂದ ಕೂಡಿ ತನ್ನಲ್ಲಿ ತಾನೇ ತಿಳಿಯಬೇಕು” ಎಂಬ ಶ್ರುತಿಯಲ್ಲಿ ಶಾಂತ್ಯಾದಿಗಳೇ ಬ್ರಹ್ಮಸಾಕ್ಷಾತ್ಕಾರಕ್ಕೆ ಮುಖ್ಯ ಕಾರಣವೆಂದು ತಿಳಿದುಬರುವುದರಿಂದ ಎಲ್ಲಾ ಆಶ್ರಮಗಳಿಗೂ ವಿದ್ಯೆಯೇ ಹೇಗೆ ಪ್ರಧಾನವಾಗಬಲ್ಲದು? ಎಂದು ಆಶಂಕಿಸಿ ಸಮಾಧಾನಮಾಡುತ್ತಾನೆ. ಪರಶಿವಬ್ರಹ್ಮಸಾಕ್ಷಾತ್ಕಾರಕ್ಕೆ ಶಮಾದಿಸಂಪತ್ತಿಯನ್ನು ನೇರವಾದ ಸಾಧನವೆಂದು ವಿಧಿಸಿರುವುದರಿಂದ ಹಾಗೆ ಸಾಕ್ಷಾತ್ಕರಿಸಿದ ಎಲ್ಲಾ ಆಶ್ರಮಗಳಲ್ಲೂ ಶಮಾದಿ ಸಂಪತ್ತಿಯು ಇದ್ದೇಇರುತ್ತದೆ. “ಒಳ ಹೊರ ಇಂದ್ರಿಯಗಳನ್ನು ನಿಗ್ರಹಿಸಿ ವೈರಾಗ್ಯಶೀಲನಾಗಿ ಸಹನೆಯಿಂದ ಸಮಾಧಾನಗೊಂಡು ತನ್ನಲ್ಲಿ ತಾನು ನೋಡ

ರಿಗೂ ಪ್ರವೃತ್ತಿಯುಂಟಾಗುತ್ತದೆ. ಅದರಿಂದಲೇ ಎಲ್ಲವೂ ವ್ಯಾಪಿಸಿದೆ. ಅದರಿಂದಲೇ
ಮಾನವನು ಈಶ್ವರನನ್ನು ಅರ್ಚಿಸಿ ಸಿದ್ಧಿಯನ್ನು ಹೊಂದುತ್ತಾನೆ” ಎಂದು ಸ್ಪಷ್ಟ
ವಾಗಿ ತಿಳಿಸಿದ್ದಾನೆ. ಗೃಹಸ್ಥರಿಗೆ ಬ್ರಹ್ಮವಿದ್ಯೆಯು ಗುರು ಲಿಂಗ ಜಂಗಮರ ಅರ್ಚನೆ
ಯನ್ನು ಅಪೇಕ್ಷಿಸುವಂತೆಯೇ ಇತರ ಆಶ್ರಮದವರಿಗೂ ಬ್ರಹ್ಮವಿದ್ಯೆಯು ಅವರ
ವರ ಕರ್ಮಗಳನ್ನು ಅವಲಂಬಿಸಿದೆ ಎಂಬುದು ಯುಕ್ತವೇ ಆಗಿದೆ.

“ ತಮೇತಂ ವೇದಾನುವಚನೇನ ” ಇತ್ಯಾದಿಶ್ರುತಿದರ್ಶನಾತ್
ಗೃಹಿಣಾಂ ವಿದ್ಯಾಂಗತ್ವೇನ ಯಜ್ಞಾದಿಕರ್ಮಾವಶ್ಯಕತ್ವಂ ಯುಕ್ತಂ.
“ ಶಾಂತೋ ದಂತಃ ಉಪರತಃ ತಿತಿಕ್ಷುಸ್ಸಮಾಹಿತೋ ಭೂತ್ವಾ । ಆತ್ಮ
ನ್ಯೇವಾತ್ಮಾನಂ ಪಶ್ಯೇತ್ ” ಇತಿ ಶ್ರುತೌ ಶಾಂತ್ಯಾದೀನಾಮೇವ ಬ್ರಹ್ಮ
ಸಾಕ್ಷಾತ್ಕಾರತ್ವೇ ಮುಖ್ಯಹೇತುತ್ವಾವಗಮಾತ್ ಸರ್ವೇಷಾಮಾ
ಶ್ರಮಿಣಾಂ ವಿದ್ಯಾಪ್ರಾಧಾನ್ಯಂ ಕಥಂವೇತ್ಯಾಶಂಕಾಯಾಮಧಿಕರ
ಣಾಂತರಮಾಹ. ಶಮಾದ್ಯಧಿಕರಣಂ ॥ ೭ ॥ ಶಮಾದ್ಯುಪೇತಃ ಸ್ಯಾತ್ತ
ಥಾಪಿ ತು ತದ್ವಿಧೇಸ್ತದಂಗತಯಾ ತೇಷಾಮಪ್ಯವಶ್ಯಾನುಷ್ಠೇಯತ್ವಾತ್
॥ ೨೭ ॥ ಸರ್ವೇಷಾಮಾಶ್ರಮಿಣಾಂ ಪರಶಿವಬ್ರಹ್ಮಸಾಕ್ಷಾತ್ಕಾರವತಾಂ
ಅಂತರಂಗಸಾಧನತ್ವೇನ ಶಮಾದ್ಯುಪೇತತ್ವಂ ಸ್ಯಾತ್ ಶಮಾದಿವಿಶಿಷ್ಟೋ
ಭವೇತ್, ಕುತಃ ಅಂತರಂಗತಯಾ ಸದಾಶಿವಬ್ರಹ್ಮಸಾಕ್ಷಾತ್ಕಾರಂ ಪ್ರತಿ
ಸಾಕ್ಷಾತ್ಸಾಧನತಯಾ ತದ್ವಿಧೇಃ ತೇಷಾಂ ಶಮದಮಾದೀನಾಂ
“ಶಾಂತೋ ದಾಂತಃ ” ಇತಿ ವಾಕ್ಯೇನ ವಿಹಿತತ್ವಾದ್ಧೇತೋಃ ತೇಷಾಂ
ಶಮದಮಾದೀನಾಂ ಪರಶಿವಸಾಕಾತ್ಕಾರಂ ಪ್ರತ್ಯಂತರಂಗಸಾಧನಾನಾಂ
ಅವಶ್ಯಾನುಷ್ಠೇಯತ್ವಾತ್ ಸರ್ವೈಃ ಬ್ರಹ್ಮವಿದ್ಯಾವದ್ಭಿಃ ಅವಶ್ಯಂ
ಶಮಾದಿಕಂ ಸಂಪಾದನೀಯಂ ಇತಿ ಸೂತ್ರಾರ್ಥಃ. “ಶಾಂತೋ ದಾಂತಃ”
ಇತಿ ಶ್ರುತಿದರ್ಶನಾತ್ ಶಮಾದಿಕಂ ಸರ್ವಾಶ್ರಮವಿಧೇಯಂ, ಉತ
ಯತ್ಯಾಶ್ರಮವಿಷಯಂ ವೇತಿ ಸಂಚಿಂತ್ಯತೇ. ಶಮಾದಿಕಂ ನ ಬ್ರಹ್ಮ
ಚರ್ಯಾದಿವಿಷಯಂ, ಬ್ರಹ್ಮಚರ್ಯೇ ವೇದಾಧ್ಯಯನಾದಿವ್ಯಾಪಾ
ರಾತ್ಮಕಮನೋವೈಕಲ್ಯಾತ್, ಗೃಹಿಣಾಂ ಶ್ರೌತಸ್ಮಾರ್ತೋಕ್ತಕರ್ಮಾ
ಯಾಸತಯಾ ಶಮಾದಿಕಸ್ಯ ನಿರವಕಾಶತ್ವಾತ್, ವನಿನಾಂ ಕೃಚ್ಛ್ರಚಾಂ
ದ್ರಾಯಣಾದಿಬಹುಕ್ಲೇಶಭೂಯಿಷ್ಠಾವಗಮಾಚ್ಚ ಪರಿಶೇಷಪ್ರಮಾಣೇನ
ನಿರಾಭಾರಾಣಾಂ ಯತೀನಾಮೇವ ಶಮಾದಿಕಂ ಯುಕ್ತಂ. “ ಶಾಂತೋ
ದಾಂತಃ ” ಇತ್ಯಾದಿನಾ ತತ್ಪರತ್ವಮೇವೇತ್ಯುಪದಿಷ್ಟಂ. ಆಂತರರಾಗ
ದ್ವೇಷಪ್ರಶಮನಂ ಶಮಃ. ಸರ್ವೇಂದ್ರಿಯವ್ಯಾಪಾರನಿವರ್ತನಂ ದಮಃ.
ನಿಷಿದ್ಧಕಾಮ್ಯಕರ್ಮವ್ಯಾಪಾರೋಪರಮಃ ಉಪರತಿಃ. ಸುಖದುಃಖ
ಶತ್ರುಮಿತ್ರಶೀತೋಷ್ಣಾದಿದ್ವಂದ್ವಸಹಿಷ್ಣುತ್ವಂ ತಿತಿಕ್ಷಾ. ಗುರುವಾಕ್ಯ

ವೇದಾಂತನಿಷ್ಠಾನುಷ್ಠಾನತಯಾ ಚಿತ್ತೈಕಾಗ್ರತ್ವಂ ಸಮಾಧಾನಂ. ನಿರತಿಶಯಾನಂದಕಂದನಿಗಮಾಗಮನಿಷ್ಠಾಪೂರ್ವಕದುಶ್ಶಾಸ್ತ್ರದುರ್ವ್ಯಾಪಾರಪರಾಙ್ಮುಖತ್ವಂ ಶ್ರದ್ಧಾ. ಸಕಲೇತರದೇವತಾಪರಾಙ್ಮುಖಪೂರ್ವಕಮನೋವಾಕ್ಕಾಯಕರ್ಮಭಿಃ ಶ್ರವಣಕೀರ್ತನಮನನಾದಿಸಾಧನತ್ವೇನ ನಿರಂತರಾಯಸ್ವಾಂತಸೂಚಿನ್ಯಾಯವತ್ ವೈದಿಕಶಿವಪರಿಚರ್ಯಾಮಯಸದಾಚಾರೋ ಭಕ್ತಿಃ. ನಿತ್ಯನಿರತಿಶಯಾನಂದಮೋಕ್ಷಲಕ್ಷ್ಮೀಕಟಾಕ್ಷವೀಕ್ಷಣಾಧಾರನಿತ್ಯಾನಿತ್ಯವಸ್ತುವಿವೇಕಜನಿತವೈರಾಗ್ಯಾದಿಸಹಕೃತಶಿವಜ್ಞಾನಸಪೃಥಾಪೇಕ್ಷತ್ವಂ ಮುಮುಕ್ಷುತ್ವಂ. ಏತಾದೃಶಧರ್ಮಾಃ ನೇತರವಿಷಯತ್ವಾದ್ವ್ಯತಿನಾಮೇವ ಸಮಂಜಸಾಃ ಇತಿ ಪ್ರಾಪ್ತೇ ವದಾಮಃ. ಶಮಾದಿಕಂ ಸರ್ವಾಶ್ರಮಿಣಾಂ ಬ್ರಹ್ಮವಿದ್ಯಾಂಗತ್ವೇನ ಪರಿಗ್ರಾಹ್ಯಂ ವಿದ್ಯಾಂಗತಯಾ ತೇಷಾಂ ವಿಧೇಃ. "ತಸ್ಮಾದೇವಂವಿತ್ ಶಾಂತೋದಾಂತ ಉಪರತಸ್ತಿತಿಕ್ಷುಸ್ಸಮಾಹಿತೋ ಭೂತ್ವಾತ್ಮನ್ಯೇವಾತ್ಮಾನಂ ಪಶ್ಯೇತ್" ಇತಿ ವಿದ್ಯೋತ್ಪತ್ತೇಃ ಚಿತ್ತಸಮಾಧಾನರೂಪತ್ವೇನ ದೃಷ್ಟಪರಿಕರತ್ವಾತ್ ಶಮಾದೀನಾಮವಿದ್ಯಾನಿವೃತ್ತಯೇ ತೇಷಾಮವಶ್ಯಾನುಷ್ಠೇಯಂ. ನಚ ಕರಣವ್ಯಾಪಾರತದ್ವಿಪರ್ಯಯರೂಪತ್ವೇನ ಕರ್ಮಣಾಂ ಶಮದಮಾದೀನಾಂ ಚ ಪರಸ್ಪರವಿರೋಧಃ ಭಿನ್ನವಿಷಯತ್ವಾತ್. ವಿಹಿತೇಷು ಕರಣವ್ಯಾಪಾರಃ, ಅವಿಹಿತೇಷು ಪ್ರಯೋಜನಶೂನ್ಯೇಷು ಚ ತದುಪಶಮ ಇತಿ. ನಚ ಕರಣವ್ಯಾಪಾರರೂಪಕರ್ಮಸು ವರ್ತಮಾನಸ್ಯ ವಾಸನಾವಶಾತ್ ಶಮಾದೀನಾಮುಪಾದೇಯತ್ವಾಸಂಭವಃ. ವಿಹಿತಾನಾಂ ಕರ್ಮಣಾಂ ಶಿವಾರಾಧನತಯಾ ತತ್ಪ್ರಸಾದದ್ವಾರೇಣ ನಿಖಿಲವಿಪರೀತವಾಸನೋಚ್ಛೇದಹೇತುತ್ವಾತ್. ಅತಸ್ಸರ್ವಾಶ್ರಮಿಣಾಂ ಬ್ರಹ್ಮವಿದ್ಯಾಂಗತ್ವೇನ ಶಮದಮಾದಯೋಽಪ್ಯನುಷ್ಠೇಯಾಃ.

"ವೇದಾನುಗುಣವಾಗಿ ಬ್ರಹ್ಮವನ್ನು ತಿಳಿಯಲಿಚ್ಛಿಸುತ್ತಾನೆ" ಎಂಬ ಶ್ರುತಿಯಂತೆ ಗೃಹಸ್ಥರಿಗೆ ಬ್ರಹ್ಮವಿದ್ಯೆಗೆ ಅಂಗವಾಗಿ ಯಜ್ಞಾದಿಕರ್ಮಗಳು ಆವಶ್ಯಕವೆಂಬುದು ಯುಕ್ತವಾಗಿದೆ. "ಶಮ ದಮ ಉಪರತಿ ತಿತಿಕ್ಷಾ ಸಮಾಧಾನಗಳಿಂದ ಕೂಡಿ ತನ್ನಲ್ಲಿ ತಾನೇ ತಿಳಿಯಬೇಕು" ಎಂಬ ಶ್ರುತಿಯಲ್ಲಿ ಶಾಂತ್ಯಾದಿಗಳೇ ಬ್ರಹ್ಮಸಾಕ್ಷಾತ್ಕಾರಕ್ಕೆ ಮುಖ್ಯ ಕಾರಣವೆಂದು ತಿಳಿದುಬರುವುದರಿಂದ ಎಲ್ಲಾ ಆಶ್ರಮಗಳಿಗೂ ವಿದ್ಯೆಯೇ ಹೇಗೆ ಪ್ರಧಾನವಾಗಬಲ್ಲದು? ಎಂದು ಆಶಂಕಿಸಿ ಸಮಾಧಾನ ಮಾಡುತ್ತಾನೆ. ಪರಶಿವಬ್ರಹ್ಮಸಾಕ್ಷಾತ್ಕಾರಕ್ಕೆ ಶಮಾದಿಸಂಪತ್ತಿಯನ್ನು ನೇರವಾದ ಸಾಧನವೆಂದು ವಿಧಿಸಿರುವುದರಿಂದ ಹಾಗೆ ಸಾಕ್ಷಾತ್ಕರಿಸಿದ ಎಲ್ಲಾ ಆಶ್ರಮಗಳಲ್ಲೂ ಶಮಾದಿ ಸಂಪತ್ತಿಯು ಇದ್ದೇಇರುತ್ತದೆ. "ಒಳ ಹೊರ ಇಂದ್ರಿಯಗಳನ್ನು ನಿಗ್ರಹಿಸಿ ವೈರಾಗ್ಯಶೀಲನಾಗಿ ಸಹನೆಯಿಂದ ಸಮಾಧಾನಗೊಂಡು ತನ್ನಲ್ಲಿ ತಾನು ನೋಡ

ಬೇಕು " ಎಂಬ ಶ್ರುತಿಯಲ್ಲಿ ಶಮಾದಿಸಂಪತ್ತಿಯನ್ನು ವಿಧಿಸಿರುವುದರಿಂದ ಪರಶಿವ ಬ್ರಹ್ಮಸಾಕ್ಷಾತ್ಕಾರಕ್ಕೆ ಇವು ಅಂತರಂಗಸಾಧನಗಳೆನಿಸಿವೆ. ಇವನ್ನು ಅವಶ್ಯವಾಗಿ ಆಚರಿಸಲೇಬೇಕು. ಹೀಗೆ ಎಲ್ಲಾ ಬಗೆಯ ಮುಮುಕ್ಷುಗಳಿಗೂ ಶಮಾದಿಗಳು ಆವಶ್ಯಕವೇ ? ಅಥವಾ ಸಂನ್ಯಾಸಿಗಳಿಗೆ ಮಾತ್ರವೇ ಇರಬೇಕೆ ? ಎಂಬ ವಿಷಯವನ್ನು ಈಗ ಪರಿಶೀಲಿಸಲಾಗುವುದು. ಬ್ರಹ್ಮಚರ್ಯಾಶ್ರಮದಲ್ಲಿ ವೇದಾಧ್ಯಯನದಿಂದ ಮನಸ್ಸಿಗೆ ವೈಕಲ್ಯವುಂಟಾಗುವುದರಿಂದಲೂ, ಗೃಹಸ್ಥರಿಗೆ ಶ್ರೌತಸ್ಮಾರ್ತ ಕರ್ಮಗಳ ಅನುಷ್ಠಾನದಿಂದ ಆಯಾಸವುಂಟಾಗುವುದರಿಂದಲೂ, ಸಂನ್ಯಾಸಿಗಳಿಗೂ ವಾನಪ್ರಸ್ಥರಿಗೂ ಕೃಚ್ಛ್ರಚಾಂದ್ರಾಯಣಾದಿವ್ರತಗಳಿಂದ ಬಹಳ ಕ್ಲೇಶವುಂಟಾಗುವುದರಿಂದಲೂ ಶಮದಮಾದಿಗುಣಗಳನ್ನು ಸಂಗ್ರಹಿಸಲು ಅವಕಾಶವಿರುವುದೇ ಇಲ್ಲ. ಆದ್ದರಿಂದ ನಿರ್ಲಿಪ್ತರಾದ ಸಂನ್ಯಾಸಿಗಳಲ್ಲಿಯೂ ಈ ಗುಣಗಳು ಶೋಭಿಸುತ್ತವೆ. " ಶಾಂತೋ ದಾಂತಃ " ಎಂಬ ಶ್ರುತಿಯು ಸಂನ್ಯಾಸಿಗಳಿಗೆ ಮಾತ್ರವೇ ಅನ್ವಯಿಸುತ್ತದೆ. ದೇಹದೊಳಗಿನ ರಾಗದ್ವೇಷಗಳ ನಿರೋಧವೇ ಶಮವೆನಿಸುತ್ತದೆ. ಇಂದ್ರಿಯವ್ಯಾಪಾರಗಳನ್ನು ತಡೆಯುವುದೇ ದಮವೆನಿಸುತ್ತದೆ. ನಿಷಿದ್ಧಕರ್ಮಗಳನ್ನು ತೊರೆಯುವುದೇ ಉಪರತಿ. ಸುಖದುಃಖ ಶತ್ರುಮಿತ್ರ ಶೀತೋಷ್ಣ ಮೊದಲಾದ ದ್ವಂದ್ವಗಳನ್ನು ಸಹಿಸುವುದೇ ತಿತಿಕ್ಷೆ. ಗುರುವಾಕ್ಯವನ್ನೂ ವೇದಾಂತವನ್ನೂ ನಿಷ್ಠೆಯಿಂದ ಆಚರಿಸುತ್ತ ಪಡೆಯುವ ಚಿತ್ತೈಕಾಗ್ರತೆಯು ಸಮಾಧಾನವೆನಿಸುತ್ತದೆ. ನಿರತಿಶಯಾನಂದಕ್ಕೆ ಮೂಲವೆನಿಸಿದ ನಿಗಮಾಗಮಗಳಲ್ಲಿ ದೃಢವಾಗಿ ಅಂಟಿಕೊಂಡು ದುಶ್ಶಾಸ್ತ್ರ ದುರ್ವ್ಯಾಪಾರಗಳಿಂದ ದೂರ ಸರಿಯುವುದರಿಂದ ಸಮಾಧಾನ ಭದ್ರವಾಗುತ್ತದೆ. ಬೇರೆ ಎಲ್ಲಾ ದೇವತೆಗಳನ್ನೂ ತೊರೆದು ಮನೋವಾಕ್ಕಾಯ ಕರ್ಮಗಳಿಂದ ಶ್ರವಣ ಮನನ ಕೀರ್ತನಗಳ ಮೂಲಕ ನಿರಂತರವೂ ಶಿವನ ಸೇವೆಮಾಡುವುದೇ ಸದಾಚಾರ ಅಥವಾ ಭಕ್ತಿ ಎನಿಸುತ್ತದೆ. ನಿತ್ಯನಿರತಿಶಯಾನಂದರೂಪವಾದ ಮೋಕ್ಷಲಕ್ಷ್ಮಿಯ ಕಟಾಕ್ಷವನ್ನು ದೊರಕಿಸುವಂತಹ ವೈರಾಗ್ಯದಿಂದಲೂ ನಿತ್ಯಾನಿತ್ಯಾವಸ್ತುವಿವೇಕದಿಂದಲೂ ಶಿವಜ್ಞಾನವನ್ನು ದೃಢವಾಗಿ ಬಯಸುವುದೇ ಮುಮುಕ್ಷುವಿನ ಧರ್ಮವೆನಿಸಿದೆ. ಈ ಬಗೆಯ ಧರ್ಮಗಳು ಸನ್ಯಾಸಿಗಳಿಗೆ ಮಾತ್ರವೇ ಹೊಂದುತ್ತವೆಯಾದ್ದರಿಂದ ಬೇರೆ ಆಶ್ರಮಿಗಳಿಗೆ ಇವು ಅನ್ವಯಿಸುವುದಿಲ್ಲವೆಂದು ಆಕ್ಷೇಪ ಬರುತ್ತದೆ. ಇದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಶಮಾದಿಗಳು ಎಲ್ಲಾ ಆಶ್ರಮದವರಿಗೂ ಬ್ರಹ್ಮವಿದ್ಯೆಗೆ ಅಂಗವೆಂದು ಒಪ್ಪುವುದೇ ಯುಕ್ತವಾಗಿದೆ. ಅವನ್ನೇ ಬ್ರಹ್ಮವಿದ್ಯೆಗೆ ಅಂಗವೆಂದು ಶ್ರುತಿಯಲ್ಲಿ ವಿಧಿಸಲಾಗಿದೆ. ಬ್ರಹ್ಮವಿದ್ಯೆಯಿಂದ ಒಬ್ಬನಲ್ಲಿ ಸಮಾಧಾನವುಂಟಾಗಲಿಕ್ಕೂ ಅವಿದ್ಯೆಯನ್ನು ತೊಲಗಿಸಲಿಕ್ಕೂ ಶಮಾದಿಗಳೇ ದೃಢವಾದ ಸಾಮಗ್ರಿಗಳೆನಿಸಿವೆ. ಆದ್ದರಿಂದ ಅವನ್ನು ಅವಶ್ಯವಾಗಿ ಎಲ್ಲರೂ ಸಂಗ್ರಹಿಸಲೇಬೇಕು. ಇಂದ್ರಿಯಪ್ರವೃತ್ತಿರೂಪವಾದ ಕರ್ಮಗಳಿಗೂ ಅವಕ್ಕೆ ವಿರುದ್ಧವಾದ ಶಮಾದಿಗಳಿಗೂ ಭಿನ್ನವಿಷಯವಾದ್ದರಿಂದ ಪರಸ್ಪರ ವಿರೋಧವಿದೆ; ಯಾಕೆಂದರೆ ವಿಹಿತಕರ್ಮಗಳಲ್ಲಿಯೇ ಇಂದ್ರಿಯಗಳು ಪ್ರವರ್ತಿಸುತ್ತವೆ.

ವಿಹಿತವಲ್ಲದ ಮತ್ತು ಪ್ರಯೋಜನವಿಲ್ಲದ ಕರ್ಮಗಳಿಂದ ನಿವೃತ್ತಿಯಾಗುವುದೇ ಶಮವೆನಿಸುತ್ತದೆ. ಆದ್ದರಿಂದ ಪ್ರವೃತ್ತಿರೂಪವಾದ ಕರ್ಮಗಳಲ್ಲಿಯೇ ತೊಡಗಿದವನಿಗೆ ವಿಷಯವಾಸನೆಯಿಂದ ಶಮಾದಿಗಳು ದೊರಕುವ ಸಂಭವವೇ ಇಲ್ಲ; ಆದರೆ ವಿಹಿತಕರ್ಮಗಳನ್ನು ಶಿವನ ಆರಾಧನವೆಂದು ಮಾಡುತ್ತಬಂದರೆ ಅವನ ಪ್ರಸಾದದ ಬಲದಿಂದ ವಿಪರೀತವಾಸನೆಗಳೆಲ್ಲವೂ ತಾವಾಗಿಯೇ ತೊಲಗುತ್ತವೆ. ಇದರಿಂದ ಎಲ್ಲಾ ಆಶ್ರಮದವರಿಗೂ ಬ್ರಹ್ಮವಿದ್ಯೆಗೆ ಅಂಗವಾಗಿ ಶಮದಮಾದಿಗುಣಗಳನ್ನು ವಿಧಿಸಲೇಬೇಕೆಂಬುದು ಸ್ಪಷ್ಟ.

**ನನು ಸರ್ವೇಷಾಮಾಶ್ರಮಿಣಾಂ ಶಿವಜ್ಞಾನೇನ ಶಮಾದ್ಯನುಷ್ಠಾನವಿಧಿರಸ್ತು. ತೇಷಾಂ ವರ್ಣಾಶ್ರಮಧರ್ಮವರ್ತನಂ ವಿಹಿತಮುತ ತದ್ಜ್ಞಾನಮಹಿಮ್ನಾ ಶಿವತುಲ್ಯತ್ವಾತ್ ಸ್ವೇಚ್ಛಾಧೀನವರ್ತನಂ ವಾ ಯುಕ್ತಮಿತ್ಯಾಶಂಕಾಯಾಂ ಅಧಿಕರಣಾಂತರಂ ದರ್ಶಯತಿ. ಸರ್ವಾನ್ನಾನುಮತ್ಯಧಿಕರಣಂ ॥ ೮ ॥ ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ ತದ್ದರ್ಶನಾತ್ ॥ ೨೮ ॥ ವಾಜಿನಾಂ ಛಂದೋಗಾನಾಂ ಚ ಪ್ರಾಣವಿದ್ಯಾಯಾಂ "ನ ಹ ವಾ ಅಸ್ಯಾನನ್ನಂ ಜಗ್ಧಂ ಭವತಿ, ನಾನನ್ನಂ ಪರಿಗೃಹೀತಂ ಭವತಿ. ನ ಹ ವಾ ಏವಂವಿದಿ ಕಿಂಚನಾನನ್ನಂ ಭವತಿ" ಇತಿ ಪ್ರಾಣವಿದಃ ಸರ್ವಾನ್ನಾನುಮತಿಸ್ಸಂಕೀರ್ತ್ಯತೇ. ಕಿಮಿಯಂ ಸರ್ವಾನ್ನಾನುಮತಿಃ ಪ್ರಾಣವಿದ್ಯಾನಿಷ್ಠಸ್ಯ ಸರ್ವದಾ? ಉತ ಪ್ರಾಣವ್ಯಯಾಪತ್ತೌ ವಾ? ಇತಿ ಸಂಶಯಃ. "ಪ್ರಾಣ ಏವ ಪ್ರಜ್ಞಾತ್ಮಾ ಇದಂ ಶರೀರಂ ಪರಿಗೃಹ್ಯೋತ್ಥಾಪಯತಿ" ಇತಿ ಶ್ರುತೌ ಪ್ರಾಣಸ್ಯೈವ ಪ್ರಜ್ಞಾತ್ಮಕತ್ವಕಥನಾತ್ ಸ್ಮೃತಿಪುರಾಣೇಷ್ವಪಿ ಪ್ರಾಣರಕ್ಷಣೇ ಶ್ರೇಯಸ್ಕರತ್ವಸ್ಯ, ಪ್ರಾಣಶೋಷಣೇ ಪ್ರತ್ಯವಾಯಸ್ಯ ಚ ಶ್ರವಣಾತ್ ಸರ್ವಥಾ ಸರ್ವಾಶ್ರಮಿಣಾಂ ಶಿವಜ್ಞಾನಿನಾಂ ಮಹಾತ್ಮನಾಂ ವಿಧಿನಿಷೇಧಾಭಾವತಯಾ ಪ್ರಾಣರಕ್ಷಣಾರ್ಥಂ ಸರ್ವಾನ್ನಭಕ್ಷಣಂ ಸರ್ವಪ್ರಯತ್ನೈರ್ಯುಕ್ತಮಿತಿ ಪ್ರಾಪ್ತೇ ತತ್ರೋಚ್ಯತೇ. ಪ್ರಾಣಾತ್ಯಯೇ ಚ ಇತಿ ಚಶಬ್ದೋಽವಧಾರಣೇ ಪ್ರಾಣಾತ್ಯಯಾಪತ್ತಾವೇವೇತ್ಯರ್ಥಃ. ಕುತಃ? ತದ್ದರ್ಶನಾತ್. ದೃಶ್ಯತೇ ಹ್ಯನ್ಯತ್ರ ಬ್ರಹ್ಮವಿದಾಮಪಿ ಪ್ರಾಣಾತ್ಯಯಾಪತ್ತಾವೇವ ಸರ್ವಾನ್ನಾಭ್ಯನುಜ್ಞಾ. ಕಿಂ ಪುನಃ ಪ್ರಾಣವಿದಃ? ಉಷಸ್ತಿಃ ಕಿಲ ಚಾಕ್ರಾಯಣೋ ಬ್ರಹ್ಮವಿದಗ್ರೇಸರಃ ಮಟಚೀಹತೇಷು ಕುರುಷು ತದ್ಭಿಕ್ಷದೂಷಿತೇ ಇಭ್ಯಗ್ರಾಮೇ ವಸನ್ ಅನಶನೇನ ಪ್ರಾಣಸಂಶಯಮಾಪನ್ನಃ ಬ್ರಹ್ಮವಿದ್ಯಾನಿಷ್ಪತ್ತಯೇ ಪ್ರಾಣಾನಾಮನವಸಾದಮಾಕಾಂಕ್ಷಮಾಣಃ ಇಭ್ಯಂ ಕುಲ್ಮಾಷಾನ್ ಖಾದಯಂತಂ ಭಿಕ್ಷಮಾಣಃ ತೇನ ಚೋಚ್ಛಿಷ್ಟೇಭ್ಯೋಽನ್ಯೇ ನ ವಿದ್ಯಂತೇ ಇತಿ ಪ್ರತ್ಯುಕ್ತಃ ಪುನರಪ್ಯೇತಾನ್ಯೇವ ಮೇ ದೇಹೀತ್ಯುಕ್ತ್ವಾ ತೇನ ದೇಭ್ಯೇನ ಉಚ್ಛಿಷ್ಟೇಭ್ಯ ಆದಾಯ ದತ್ತಾನ್**

ಕುಲ್ಮಾಷಾನ್ ಪ್ರತಿಗೃಹ್ಯ ಅನುಪಾನಪ್ರತಿಗ್ರಹಂ ಇಭ್ಯೇನಾರ್ಥಿತಃ "ಉಚ್ಛಿಷ್ಟಂ ಮೇ ಪೀತಂ ಸ್ಯಾತ್" ಇತಿ ವದಂಶ್ಚಾಕ್ರಾಯಣಃ "ಕಿಮೇತೇ ಕುಲ್ಮಾಷಾ ಅನುಚ್ಛಿಷ್ಟಾ" ಇತಿ ಇಭ್ಯೇನ ಪರ್ಯನು ಯುಕ್ತಃ, "ನವಾ ಅಜೀವಿಷ್ಯಮಿಮಾನಖಾದನ್, ಕಾಮೋ ಮಾ ಉದ ಪಾನಂ" ಇತಿ ಕುಲ್ಮಾಷಾಖಾದನೇ ಸ್ವಸ್ಯ ಪ್ರಾಣಸಂಶಯಾಪತ್ತೇಸ್ತಾವ ನ್ಮಾತ್ರಖಾದನೇನ ಧೃತಪ್ರಾಣಸ್ಯ ಸ್ವಸ್ಯೋಚ್ಛಿಷ್ಟೋದಕಪಾನಂ ಕಾಮ ಕಾರಿತಂ ನಿಷಿದ್ಧಂ ಸ್ಯಾತ್ ಇತ್ಯುಕ್ತ್ವಾ ಸ್ವಖಾದಿತಂ ಶೇಷಂ ಜಾಯಾ ಯೈ ದತ್ವಾ ತಯಾ ಚ ರಕ್ಷಿತಾನಪರೇದ್ಯುರ್ಜ್ಞಾನಾರ್ಜನೇಚ್ಛಯಾ ಜಿಗಮಿಷುಃ ಪುನರಪಿ ಪ್ರಾಣಸಂಶಯಮಾಪನ್ನಸ್ತಾನೇ ಇಭ್ಯೋ ಚ್ಛಿಷ್ಟಭೂತಾನ್ನಾನ್ ಸ್ವೋಚ್ಛಿಷ್ಟಭೂತಾನ್ ಪರ್ಯುಷಿತಾಂಶ್ಚ ಖಾದ. ಅತೋ ಬ್ರಹ್ಮವಿದಾಮಪಿ ಪ್ರಾಣಸಂಶಯ ಏವ ಸರ್ವಾನ್ನಾನುಮತಿ ದರ್ಶನಾತ್ ಅತ್ರ ವಿಶೇಷೇಣ ಕೀರ್ತಿತಮಪಿ ಪ್ರಾಣವಿದಸ್ಸರ್ವಾ ನ್ನಾನ್ತ್ವಂ ಪ್ರಾಣಾತ್ಯಯಾಪತ್ತಾವೇವೇತಿ ನಿಶ್ಚೀಯತೇ.

ಎಲ್ಲಾ ಆಶ್ರಮದವರಿಗೂ ಶಿವಜ್ಞಾನದೊಂದಿಗೆ ಶಮಾದಿಸಾಮಗ್ರಿಗಳನ್ನು ವಿಧಿಸಲಿ. ಆದರೂ ಅವರೆಲ್ಲರೂ ಆಗಲೂ ತಮ್ಮ ವರ್ಣಾಶ್ರಮಧರ್ಮಗಳನ್ನು ಆಚರಿಸ ಬೇಕೇ ಅಥವಾ ಜ್ಞಾನದ ಬಲದಿಂದಲೇ ಅವರು ಶಿವನಿಗೆ ಸದೃಶರಾಗಿ ಸ್ವೇಚ್ಛಾನು ಸಾರವಾಗಿ ವರ್ತಿಸಬಹುದೆ? ಎಂದು ಆಶಂಕಿಸಿ ನಿರಾಕರಿಸುತ್ತಾನೆ. ವಾಜಸನೇಯಿ ಗಳು ಮತ್ತು ಛಾಂದೋಗರು ಪ್ರಾಣವಿದ್ಯೆಯಲ್ಲಿ "ಅವನು ತಿನ್ನಬಾರದ ಅನ್ನವನ್ನು ತಿಂದಂತಾಗುವುದಿಲ್ಲ. ತಿನ್ನಬಾರದ್ದನ್ನು ಸ್ವೀಕರಿಸಿದಂತಾಗುವುದಿಲ್ಲ. ಈ ರೀತಿ ಯಲ್ಲಿ ಅರಿತವನೂ ಸಹ ತಿನ್ನಬಾರದುದನ್ನು ತಿಂದಂತಾಗುವುದಿಲ್ಲ" ಎಂದು ಎಲ್ಲಾ ವಿಧವಾದ ಅನ್ನವನ್ನು ಎಲ್ಲಿಯಾದರೂ ತಿನ್ನಬಹುದೆಂದು ಹೇಳಿದ್ದಾರೆ. ಹೀಗೆ ಹೇಳಿರು ವುದು ಎಲ್ಲಾ ಕಾಲಗಳಿಗೂ ಅನ್ವಯಿಸುವುದೋ ಅಥವಾ ವಿಷಮಕಾಲಕ್ಕೆ ಮಾತ್ರವೇ ಅನ್ವಯಿಸುತ್ತದೆಯೋ? ಎಂಬ ಸಂಶಯಬರುತ್ತದೆ. "ಪ್ರಾಣವೇ ಪ್ರಜ್ಞಾತ್ಮ. ಇದು ಸೂಕ್ಷ್ಮಶರೀರವನ್ನು ಎತ್ತಿಕೊಂಡು ಹೊರಡುತ್ತದೆ" ಎಂಬ ಶ್ರುತಿಯಲ್ಲಿ ಪ್ರಾಣ ವನ್ನೇ ಪ್ರಜ್ಞಾತ್ಮನೆಂದು ಹೇಳಿರುವುದರಿಂದ ಸ್ಮೃತಿಪುರಾಣಗಳಲ್ಲೂ ಸಹ ಪ್ರಾಣದ ರಕ್ಷಣವನ್ನು ಶ್ರೇಯಸ್ಕರವೆಂದು ತಿಳಿಸಿ ಅದನ್ನು ಒಣಗಿಸಿದರೆ ದೋಷವನ್ನು ಹೇಳಿರು ವುದರಿಂದಲೂ, ಎಲ್ಲಾ ಆಶ್ರಮಗಳಲ್ಲೂ ಶಿವಜ್ಞಾನಿಗಳಿಗೆ ವಿಧಿನಿಷೇಧಗಳೇ ಇಲ್ಲದಿರು ವುದರಿಂದಲೂ ಪ್ರಾಣರಕ್ಷಣೆಗಾಗಿ ಎಲ್ಲಾದರೂ ಹೇಗಾದರೂ ಮಾಡಿ ಅನ್ನವನ್ನು ಉಪಯೋಗಿಸಬಹುದೆಂದು ಆಕ್ಷೇಪ ಬಂದರೆ ಸಮಾಧಾನವನ್ನು ಇಲ್ಲಿ ತಿಳಿಸಲಾಗಿದೆ. ಬ್ರಹ್ಮಜ್ಞಾನಿಗಳಿಗೂ ಸಹ ಅಪಾಯಬಂದಾಗ ಮಾತ್ರವೇ ಎಲ್ಲಿಯಾದರೂ ಅನ್ನವನ್ನು ತಿನ್ನಬಹುದೆಂದು ಶ್ರುತಿಯಲ್ಲಿ ಕಂಡುಬಂದಿದೆ. ಬೇರೆಕಡೆಯಲ್ಲೂ ಸಹ ಜ್ಞಾನಿ ಗಳಿಗೂ ಅಂತಹ ಪ್ರಾಣಾಪಾಯಕಾಲದಲ್ಲಿಯೇ ಎಲ್ಲಾ ವಿಧವಾದ ಅನ್ನವನ್ನೂ

ತಿನ್ನಲು ಅನುಮತಿಯನ್ನು ಕೊಡಲಾಗಿದೆ. ಉಷಸ್ತನೆಂಬ ಬ್ರಹ್ಮಜ್ಞಾನಿಯು ದುರ್ಭಿಕ್ಷಕ್ಕೊಳಗಾದ ಕುರುದೇಶದಲ್ಲಿ ವಾಸಮಾಡುತ್ತಿದ್ದನು. ಅವನಿಗೆ ಊಟಕ್ಕೆ ಇಲ್ಲದೆ ಪ್ರಾಣಕ್ಕೆ ಸಂಶಯಒದಗಿದಾಗ ತನ್ನ ಬ್ರಹ್ಮಜ್ಞಾನವು ಪರಿಪೂರ್ಣವಾಗಬೇಕಾದರೆ ಪ್ರಾಣವನ್ನು ರಕ್ಷಿಸಬೇಕೆಂದು ತಿಳಿದು ಹುರುಳಿಯನ್ನು ತಿನ್ನುತ್ತಿದ್ದ ಒಬ್ಬ ಕೀಳು ಜಾತಿಯವನ ಬಳಿಗೆ ಹೋಗಿ ಅದನ್ನು ಬೇಡಿದನು. ಅವನಲ್ಲಿ ಉಚ್ಛಿಷ್ಟವಲ್ಲದ ಹುರುಳಿ ಇಲ್ಲವೆಂದು ಅವನು ಹೇಳಿದರೂ ಅದನ್ನೇ ಕೊಡುವಂತೆ ಇವನು ಕೇಳಿದನು. ಅದರಂತೆಅವನು ತಾನು ತಿನ್ನುತ್ತಿದ್ದ ಹುರುಳಿಯನ್ನುಕೊಟ್ಟು ನೀರನ್ನುಕೊಡುವಾಗ ನೀರು ಉಚ್ಛಿಷ್ಟವಾದ್ದರಿಂದ ಅದನ್ನು ಕುಡಿಯಲಾರೆನೆಂದು ಹೇಳಿದನು. ಅದಕ್ಕೆ ಅವನು ಹುರುಳಿಮಾತ್ರ ಹೇಗೆ ಉಚ್ಛಿಷ್ಟವಾಗಲಿಲ್ಲ? ಎಂದು ಕೇಳಿದಾಗ ಇದನ್ನು ತಿನ್ನದಿದ್ದರೆ ನನ್ನ ಪ್ರಾಣ ಹೋಗುತ್ತಿತ್ತು. ನೀರುಕುಡಿಯುವುದಾದರೂ ನನಗೆ ಐಚ್ಛಿಕವಾದದ್ದು" ಎಂದು ಉತ್ತರವನ್ನು ಹೇಳಿದನು. ಹೀಗೆ ಹುರುಳಿಯನ್ನು ತಿನ್ನದಿದ್ದರೆ ಅವನ ಪ್ರಾಣಕ್ಕೇ ಸಂಶಯಬಂದಿದ್ದರಿಂದ ಅವನು ಹುರುಳಿಯನ್ನು ತಿಂದನು; ಆದರೆ ನೀರನ್ನು ಕುಡಿಯಲಿಲ್ಲ. ತಾನು ತಿಂದು ಉಳಿದಿದ್ದನ್ನು ತನ್ನ ಹೆಂಡತಿಯಲ್ಲಿ ಕೊಟ್ಟಿದ್ದು ಮಾರನೆಯದಿವಸವೂ ಹಾಗೆಯೇ ಪ್ರಾಣಸಂಕಟ ಒದಗಿದಾಗ ಅದನ್ನು ತಿಂದನು. ಆದ್ದರಿಂದ ಬ್ರಹ್ಮಜ್ಞಾನಿಗಳಿಗೂ ಸಹ ಪ್ರಾಣಕ್ಕೆ ಸಂಶಯವುಂಟಾದಾಗಲೇ ಎಲ್ಲಿಬೇಕಾದರೂ ಅನ್ನವನ್ನು ತಿನ್ನಬಹುದಾದ್ದರಿಂದ ಇಲ್ಲಿ "ಪ್ರಾಣವನ್ನರಿತವನು ಎಲ್ಲಿಯಾದರೂ ಅನ್ನವನ್ನು ತಿನ್ನಬಹುದು" ಎಂದು ಸಾಮಾನ್ಯವಾಗಿ ಹೇಳಿದ್ದು ಪ್ರಾಣಕ್ಕೆ ಅಪಾಯಬಂದಕಾಲಕ್ಕೆ ಮಾತ್ರವೇ ಅನ್ವಯಿಸುವುದೆಂದು ನಿಶ್ಚಯಿಸಲಾಗಿದೆ.

ಅಸ್ಮಿನ್ನರ್ಥೇ ಹೇತ್ವಂತರಮಾಹ. ಅಬಾಧಾಚ್ಚ ॥ ೨೯ ॥ "ಶ್ರುತಿಸ್ಮೃತೀ ಮಮೈವಾಜ್ಞೇ ತಸ್ಮಾತ್ತನ್ಮಾರ್ಗಮಾಚರೇತ್ । ಆಜ್ಞಾಚ್ಛೇದೀ ಮಮ ದ್ರೋಹೀ ಯಸ್ತಾಸುಲ್ಲಂಘ್ಯ ವರ್ತತೇ ॥ ಮನೀಷೀ ವೈದಿಕಾಚಾರಂ ಮನಸಾಪಿ ನ ಲಂಘಯೇತ್ ।" "ಆಹಾರಶುದ್ಧೌ ಸತ್ತ್ವಶುದ್ಧಿಃ ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ, ಸ್ಮೃತಿಲಂಭೇನ ಸರ್ವೇಷಾಂ ಹೃದಯ ಗ್ರಂಥಿರ್ವಿಮುಚ್ಯತೇ" ಇತಿ ವಚನೇಷು ಶ್ರುತಿಸ್ಮೃತೀನಾಂ ಪರಮೇಶ್ವರಾಜ್ಞೋಪದೇಶೇನ ಸರ್ವೇಷಾಮಾಶ್ರಮಿಣಾಂ ಸ್ವಾಶ್ರಮಧರ್ಮಾನುಷ್ಠಾನಮರ್ಥಾತ್ಸಿದ್ಧಂ. "ಆಹಾರಶುದ್ಧೌ" ಇತ್ಯಾದಿನಾ ತದ್ವತ್ ಶಿವಜ್ಞಾನಿನಾಂ ಆಹಾರಶುದ್ಧಿವಿಧಾನತ್ವೋಪದೇಶೇಽಪಿ ಶಿವಯೋಗಶಿವಜ್ಞಾನನಿಷ್ಠಾಗರಿಷ್ಠಾನಾಂ ಆಪದ್ವಿಷಯ ಏವ ಸರ್ವಾನ್ನಾನ್ನತ್ವಂ ಗಮ್ಯತೇ ನ ಕಾಮಾಚಾರೇಣೈಕಾಂತೇ.

ಈ ಬಗ್ಗೆ ಬೇರೊಂದು ಕಾರಣವನ್ನು ತಿಳಿಸುತ್ತಾನೆ "ಶ್ರುತಿಸ್ಮೃತಿಗಳು ನನ್ನ ಆಜ್ಞೆಯೇ ಆಗಿದೆಯಾದ್ದರಿಂದ ಅಲ್ಲಿ ಹೇಳಿರುವ ಮಾರ್ಗವನ್ನೇ ಆಚರಿಸಬೇಕು. ಅದನ್ನು ಅತಿಕ್ರಮಿಸುವವನು ದ್ರೋಹಿ ಎನಿಸುವನು. ವಿದ್ವಾಂಗವಾದ ವೈದಿಕಾಚಾರ

ವನ್ನು ಮನಸ್ಸಿನಿಂದಲೂ ಅತಿಕ್ರಮಿಸಬಾರದು. ಆಹಾರಶುದ್ಧಿಯಿಂದ ಸತ್ತ್ವಶುದ್ಧಿಯೂ, ಸತ್ತ್ವಶುದ್ಧಿಯಿಂದ ಸ್ಮೃತಿವಿಕಾಸವೂ, ಅದರಿಂದ ಹೃದಯಶುದ್ಧಿಯೂ ಉಂಟಾಗುತ್ತವೆ." ಹೀಗೆ ಪರಮೇಶ್ವರನ ಆಜ್ಞಾರೂಪವಾದ ಶ್ರುತಿಸ್ಮೃತಿಗಳು ಉಪದೇಶಿಸಿರುವುದರಿಂದ ಎಲ್ಲಾ ಆಶ್ರಮದವರೂ ಅವರವರ ಆಶ್ರಮಧರ್ಮಗಳನ್ನು ಆಚರಿಸಲೇಬೇಕೆಂಬುದು ಸಿದ್ಧವಾಗುತ್ತದೆ. ಆದ್ದರಿಂದ ಶಿವಜ್ಞಾನನಿಷ್ಠೆಯುಳ್ಳ ಶಿವಯೋಗಿಗಳಿಗೂ ಆಹಾರಶುದ್ಧಿಯನ್ನು ಹೇಳಲಾಗಿದೆ. ಅವರೂ ಸಹ ಆಪತ್ಕಾಲದಲ್ಲಿ ಮಾತ್ರವೇ ಸಾರ್ವಜನಿಕಸ್ಥಳಗಳಲ್ಲಿ ಅನ್ನವನ್ನು ತಿನ್ನಬಹುದೇ ಹೊರತು ಸ್ವಚ್ಛಂದವಾಗಿ ಯಾವಾಗಲೂ ಎಲ್ಲಿಯಾದರೂ ಏನನ್ನೂ ತಿನ್ನಬಾರದು.

ಅಸ್ಮಿನ್ನರ್ಥೇ ಹೇತ್ವಂತರಮಾಹ. **ಅಪಿ ಸ್ಮರ್ಯತೇ ॥ ೩೦ ॥**

**" ವರ್ಣಾಶ್ರಮಸದಾಚಾರಾಃ ಶಿವೇನ ಕಥಿತಾಃ ಪುರಾ । ಏತಾನುಲ್ಲಂಘ್ಯ ವರ್ತಂತೇ ಶಿವಸ್ಯಾಜ್ಞಾಪಲಾಪಿನಃ । ರಾಜಾಜ್ಞಾಭಂಗಕೃನ್ನೃಣಾಂ ದಂಡೋ ಹಿ ನರಕಸ್ತಥಾ ॥ ಸಾಂಬೇಸ ಶಂಭುನಾಜ್ಞಪ್ತಂ ಧರ್ಮಂ ತ್ಯಕ್ತ್ವಾರ್ಚಯೇಚ್ಛಿವಂ । ಸ ತಸ್ಮೈ ಕುಪ್ಯತೇ ಶಂಭುಃ ಸ್ವಾಜ್ಞಾಭಂಗನಿಮಿತ್ತತಃ । ಚೋದನಾಲಕ್ಷಣಂ ಧರ್ಮಂ ಶಿವೇನಾಜ್ಞಪ್ತಮರ್ಚಯನ್। ಶಂಕರಂ ಪೂಜಯೇದ್ಯಸ್ತು ತಸ್ಮೈ ಸಾಂಬಃ ಪ್ರಸೀದತಿ ॥ " ಇತ್ಯಾದಿಷು ಪರಮೇಶ್ವರಾಜ್ಞಾಪೂರ್ವಕಸ್ವವರ್ಣಾಶ್ರಮೋಚಿತಕರ್ಮಮುಖ್ಯತ್ವೋಪದೇಶೇಽಪಿ "ಪ್ರಾಣಸಂಶಯಮಾಪನ್ನೋ ಯೋಽನ್ನಮತ್ತಿ ಯತಸ್ತತಃ। ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥" ಇತಿ ವಿಶೇಷವಿಧಿದರ್ಶನಾತ್ ಶಿವಜ್ಞಾನಿನಾಂ ಸರ್ವಾಶ್ರಮಿಣಾಂ ಆಪದ್ವಿಷಯಮೇವ ಸರ್ವಾನ್ನಾದನವಿಧಿರುಪಪದ್ಯತೇ, ನೇತರಕಾಲ ಇತಿ ಸಿದ್ಧಂ.**

ಈಬಗ್ಗೆ ಬೇರೊಂದು ಕಾರಣವನ್ನು ತಿಳಿಸುತ್ತಾನೆ. " ವರ್ಣಾಶ್ರಮಸದಾಚಾರಗಳನ್ನು ಶಿವನೇ ತಿಳಿಸಿದ್ದಾನೆ. ಅವನ್ನು ಅತಿಕ್ರಮಿಸಿದವರಿಗೆ ಶಿಕ್ಷೆಯಾಗುತ್ತದೆ. ರಾಜನ ಆಜ್ಞೆಯನ್ನು ಉಲ್ಲಂಘಿಸಿದವರು ಶಿಕ್ಷೆಗೆ ಗುರಿಯಾಗುವಂತೆ ಶಿವನ ಆಜ್ಞೆಯನ್ನು ಮೀರಿದವರು ನರಕಯಾತನೆಯನ್ನು ಅನುಭವಿಸುವರು. ಶಿವನ ಆಜ್ಞೆಯನ್ನು ಮೀರಿ ಶಿವನನ್ನು ಅರ್ಚಿಸಿದವನಿಗೆ ಆಜ್ಞಾಭಂಗಕ್ಕಾಗಿ ಶಿವನು ಕೋಪಿಸುತ್ತಾನೆ. ವಿಧಿರೂಪವಾದ ಶಿವನ ಆಜ್ಞೆಯನ್ನು ಪಾಲಿಸುವವನಿಗೆ ಶಿವನು ಪ್ರಸನ್ನನಾಗುತ್ತಾನೆ." ಹೀಗೆ ಸ್ಮೃತಿಗಳಲ್ಲಿ ವರ್ಣಾಶ್ರಮಧರ್ಮಗಳನ್ನು ಅವಶ್ಯವಾಗಿ ಆಚರಿಸಲೇಬೇಕೆಂದು ಹೇಳಿದ್ದರೂ, " ಪ್ರಾಣಕ್ಕೆ ಅಪಾಯವುಂಟಾದಾಗ ಸಾರ್ವಜನಿಕಸ್ಥಳದಲ್ಲಿ ಅನ್ನವನ್ನು ತಿಂದವನಿಗೆ ಪಾಪವು ಅಂಟುವುದಿಲ್ಲ "ವೆಂಬ ವಿಶೇಷವಿಧಿಯೂ ಇರುವುದರಿಂದ ಶಿವಯೋಗಿಗಳು ಎಲ್ಲಾ ಆಶ್ರಮಗಳಲ್ಲಿಯೂ ಆಪತ್ಕಾಲದಲ್ಲಿ ಮಾತ್ರವೇ ಎಲ್ಲಾದರೂ ಅನ್ನವನ್ನು ತಿನ್ನಬಹುದೆಂಬ ವಿಧಿ ಯುಕ್ತವಾಗುತ್ತದೆ.

ಅಸ್ಮಿನ್ನರ್ಥೇ ಪುನರ್ಹೇತ್ವಂತರಮಾಹ, ಶಬ್ದಶ್ಚಾತೋಽಕಾಮಕಾರೇ ॥ ೩೧ ॥ ಯತೋ ಬ್ರಹ್ಮವಿದಾಮನ್ಯೇಷಾಂ ಚ ಸರ್ವಾನ್ನಾದನಂ ಆಪದ್ವಿಷಯಮೇವ ಅತ ಏವ ಸರ್ವೇಷಾಂ ಅಕಾಮಕಾರೇ ಶಬ್ದಃ ಕಾಮಕಾರಸ್ಯ ಪ್ರತಿಷೇಧಕಃ ಶಬ್ದೋ ವರ್ತತೇ. ಅಸ್ತಿ ಹಿ ಕಠಸಂಹಿತಯಾಂ ಕಾಮಕಾರಸ್ಯ ಪ್ರತಿಷೇಧಕಃ ಶಬ್ದಃ. "ತಸ್ಮಾದ್ಬ್ರಾಹ್ಮಣಃ ಸುರಾಂ ನ ಪಿಬೇತ್" "ಪಾಪ್ಮನಾ ನೋತ್ಸೃಜ್ಯೈ" ಇತಸ್ಯ ವಾಕ್ಯಸ್ಯ ಪಾಪ್ಮನಾಸಂಸೃಷ್ಟೋ ನ ಭವತ್ವಿತಿ ಮತ್ವಾ ಬ್ರಾಹ್ಮಣಃ ಸುರಾಂ ನ ಪಿಬತೀತ್ಯರ್ಥಃ. ಪ್ರಾಣತ್ಯಾಗೇಽಪಿ ವರ್ಣಚತುಷ್ಟಯೇಷು ಭಿಕ್ಷಾಮಾತ್ರಂ ವಿಧೇಯಂ. ಅನ್ಯಥಾ ನಿಷಿದ್ಧಾಚರಣೇನ ಪರಮೇಶ್ವರಾಜ್ಞಾದ್ರೋಹೀ ಸ್ಯಾದಿತಿ ನಿಶ್ಚೀಯತೇ.

ಈಬಗ್ಗೆ ಬೇರೊಂದು ಕಾರಣವಿದೆ. ಬ್ರಹ್ಮಜ್ಞಾನಿಗಳೂ ಮತ್ತೆ ಇತರರೂ ಆಪತ್ಕಾಲದಲ್ಲಿ ಮಾತ್ರವೇ ಎಲ್ಲಾದರೂ ಅನ್ನವನ್ನು ತಿನ್ನಬಹುದು. ಆದರೆ ಯಾರೂ ಮನಬಂದಂತೆ ಎಲ್ಲಾ ಕಾಲದಲ್ಲೂ ಎಲ್ಲಿಯಾದರೂ ತಿನ್ನಬಾರದು. ಹೀಗೆ ಸ್ವೇಚ್ಛಾಭೋಜನವನ್ನು ಕಠಸಂಹಿತೆಯಲ್ಲಿ ನಿಷೇಧಿಸಲಾಗಿದೆ. "ಆದ್ದರಿಂದ ಬ್ರಾಹ್ಮಣನು ಹೆಂಡವನ್ನು ಕುಡಿಯುವುದಿಲ್ಲ" ಎಂಬ ಮಾತಿಗೆ ಪಾಪದ ಸ್ಪರ್ಶವಾಗದಿರಲೆಂದು ತಿಳಿದು ಬ್ರಾಹ್ಮಣನು ಹೆಂಡವನ್ನು ಕುಡಿಯುವುದಿಲ್ಲವೆಂದು ಅರ್ಥವಾಗುತ್ತದೆ. ಪ್ರಾಣಕ್ಕೆ ಅಪಾಯ ಒದಗಿದಾಗ ಮಾತ್ರವೇ ನಾಲ್ಕು ವರ್ಣದವರೂ ಭಿಕ್ಷೆಯನ್ನು ಮಾಡಬಹುದು ಎಂದು ಅನುಮತಿಯನ್ನು ಕೊಡಲಾಗಿದೆ; ಇಲ್ಲವಾದರೆ ನಿಷಿದ್ಧವಾದ ಆಚರಣದಿಂದ ಪರಮೇಶ್ವರನ ಆಜ್ಞೆಗೆ ದ್ರೋಹಮಾಡಿದಂತಾಗುವುದು.

ಸರ್ವೇಷಾಮಾಶ್ರಮಿಣಾಂ ಪರಶಿವಬ್ರಹ್ಮಸಾಕ್ಷಾತ್ಕಾರಂ ಪ್ರತ್ಯಂತರಂಗಸಾಧನಸ್ಯ ಶಮದಮಪೂಜಾಧ್ಯಾನಧಾರಣಾದಿಕಸ್ಯ ವಿಹಿತತ್ವೇಽಪಿ ತದ್ವದ್ಬಾಹ್ಯಾಂಗಾನಿ ಕಾನಿ ಸಂತೀತ್ಯಾಶಂಕಾಯಾಮಧಿಕರಣಾಂತರೇಣ ನಿರೂಪಯತಿ. ವಿಹಿತತ್ವಾಧಿಕಣಂ ॥ ೯ ॥ ವಿಹಿತತ್ವಾಚ್ಚಾಶ್ರಮಕರ್ಮಾಪಿ ॥ ೩೨ ॥ ಯಜ್ಞಾದಿಕರ್ಮಾಂಗಕಾ ಬ್ರಹ್ಮವಿದ್ಯೇತ್ಯುಕ್ತಂ. ತಾನಿ ಚ ಯಜ್ಞಾದೀನಿ ಕರ್ಮಾಣಿ ಮುಮುಕ್ಷೂಣಾಂ ಕೇವಲಾಶ್ರಮಿಣಾಮಪ್ಯನುಷ್ಠೇಯಾನಿ ಉತ ನೇತಿ ಸಂದಿಹ್ಯತೇ. "ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ" ಇತಿ ಶ್ರುತೌ ಕರ್ಮಫಲಾನಾಮನಿತ್ಯತ್ವಸ್ಯ, ಕರ್ಮಣಾಂ ಮೋಕ್ಷಾಭಾವತ್ವಸ್ಯ ಚೋಕ್ತತ್ವಾತ್ ನಿತ್ಯಾನಿತ್ಯವಸ್ತುವಿವೇಕಃ ದೃಷ್ಟಃ. ತಸ್ಮಾತ್ ಜ್ಯೋತಿಷ್ಟೋಮಾದಿಕರ್ಮಣಾಂ ಅವಿದ್ವದ್ವಿಷಯತ್ವಂ ಯುಜ್ಯತೇ. "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಇತ್ಯಾದೌ ಜ್ಯೋತಿಷ್ಟೋಮಾದೀನಾಂ ಕಾಮಕಾರವಿಷಯತ್ವಾವಗಮಾತ್. ಕೇವಲಾಶ್ರಮ

ಧರ್ಮತ್ವಂ ನ ಸಂಭವತೀತಿ ಪ್ರಾಪ್ತೇ ಪ್ರಚಕ್ಷ್ಮಹೇ. ಆಶ್ರಮಕರ್ಮಾಪಿ "ಯಾವಜ್ಜೀವಮಗ್ನಿಹೋತ್ರಂ ಜುಹೋತಿ" ಇತ್ಯಾದಿನಾ ವಿಧ್ಯವಗಮಾತ್ ಆಶ್ರಮಸ್ಯ ಕರ್ಮಾಪಿ ಭವತಿ. ಕೇವಲಾಶ್ರಮಿಣಾಂ ಆಶ್ರಮಮಾತ್ರಮನುಷ್ಠೇಯಂ, ಬ್ರಹ್ಮವಿದ್ಯಾಂಗತ್ವೇನ ಪರಮೇಶ್ವರಾರ್ಪಣಬುದ್ಧ್ಯಾ ವಿಹಿತತ್ವಾಚ್ಚ, ಜನಕಾದಿಬ್ರಹ್ಮವಿದಾಮಪಿ ವಿಹಿತತ್ವಾಚ್ಚ ಶ್ರುತಿಸ್ಮೃತಿವಿಹಿತಾನಿ ಆಶ್ರಮಕರ್ಮಾಣಿ ವಿದುಷಾಮವಿದುಷಾಂ ಚ ಕರ್ತವ್ಯಾನೀತಿ ನಿರ್ಣೀಯತೇ. ಏತೇನ ಬ್ರಹ್ಮಚರ್ಯಾದಿಚತುರ್ವಿಧಾಶ್ರಮಿಣಾಂ ಸ್ವಾಶ್ರಮಕರ್ಮವಿಹಿತತ್ವಮರ್ಥಾತ್ಸಿದ್ಧಂ.

ಎಲ್ಲಾ ಆಶ್ರಮದವರಿಗೂ ಪರಶಿವಬ್ರಹ್ಮಸಾಕ್ಷಾತ್ಕಾರಕ್ಕಾಗಿ ಶಮದಮ ಪೂಜೆ ಧ್ಯಾನಧಾರಣಗಳೆಂಬ ಅಂತರಂಗಸಾಧನವನ್ನು ವಿಧಿಸಿರುವಂತೆಯೇ ಬಹಿರಂಗ ಸಾಧನಗಳನ್ನು ಈಗ ತಿಳಿಸುತ್ತಾನೆ. ಬ್ರಹ್ಮವಿದ್ಯೆಗೆ ಯಜ್ಞಾದಿಕರ್ಮಗಳು ಅಂಗವೆನಿಸಿವೆ. ಆದರೆ ಆ ಯಜ್ಞಾದಿಕರ್ಮಗಳನ್ನು ಮುಮುಕ್ಷುಗಳೆಲ್ಲರೂ ಆಚರಿಸಬೇಕೇ ಬೇಡವೇ ಎಂಬ ಸಂದೇಹವುಂಟಾಗುತ್ತದೆ. "ಕರ್ಮದಿಂದ ಗಳಿಸಿದ ಲೋಕವನ್ನು ಅನಿತ್ಯವೆಂದು ಪರೀಕ್ಷಿಸಿ ಜ್ಞಾನಿಯು ವೈರಾಗ್ಯವನ್ನು ಹೊಂದಬೇಕು. ಕೃತ್ರಿಮಕರ್ಮದಿಂದ ಅಕೃತ್ರಿಮವಾದ ಮುಕ್ತಿ ದೊರಕಲಾರದು" ಈ ಶ್ರುತಿಯಲ್ಲಿ ಕರ್ಮಫಲಗಳನ್ನು ಅನಿತ್ಯವೆಂದೂ, ಕರ್ಮದಿಂದ ಮೋಕ್ಷವಿಲ್ಲವೆಂದೂ ಹೇಳಿದ್ದರಿಂದ ನಿತ್ಯಾನಿತ್ಯವಸ್ತುವಿವೇಕವುಂಟಾಗುತ್ತದೆ. ಆದ್ದರಿಂದ ಜ್ಯೋತಿಷ್ಟೋಮಾದಿ ಕರ್ಮಗಳು ಅಜ್ಞಾನಿಗಳಿಗೆ ಸಂಬಂಧಿಸಿರುವುವೆಂದು ತಿಳಿಯಬೇಕು. "ಸ್ವರ್ಗಾಪೇಕ್ಷಿಯು ಜ್ಯೋತಿಷ್ಟೋಮವನ್ನಾಚರಿಸಬೇಕು" ಎಂಬಲ್ಲಿ ಜ್ಯೋತಿಷ್ಟೋಮಾದಿಗಳು ಇಚ್ಛಾವಿಷಯವೆನಿಸಿದ್ದರಿಂದ ಅವು ಆಶ್ರಮಧರ್ಮಗಳಷ್ಟೇ ಆಗಲಾರವು. "ಜೀವವಿರುವವರೆಗೂ ಅಗ್ನಿಹೋತ್ರವನ್ನಾಚರಿಸಬೇಕು" ಎಂಬಲ್ಲಿ ವಿಧಿಯಿರುವುದರಿಂದಲೂ, ಬ್ರಹ್ಮವಿದ್ಯೆಗೆ ಅಂಗವಾದ್ದರಿಂದಲೂ, ಈಶ್ವರನಿಗೆ ಅರ್ಪಿಸುವ ದೃಷ್ಟಿಯಿಂದಲೂ, ಜನಕನೇ ಮೊದಲಾದ ಬ್ರಹ್ಮಜ್ಞಾನಿಗಳು ಆಚರಿಸುತ್ತಿದ್ದುದರಿಂದಲೂ ಆಶ್ರಮಕರ್ಮಗಳನ್ನು ವಿದ್ವಾಂಸರು ಕರ್ಮಿಗಳು ಎಲ್ಲರೂ ಆಚರಿಸಲೇಬೇಕೆಂದು ನಿರ್ಣಯಿಸಲಾಗಿದೆ. ಇದರಿಂದ ಬ್ರಹ್ಮಚರ್ಯ ಮೊದಲಾದ ನಾಲ್ಕುಬಗೆಯ ಆಶ್ರಮಗಳೂ ಅವರವರ ಧರ್ಮಗಳನ್ನು ಆಚರಿಸಲೇಬೇಕೆಂಬುದು ಸ್ವತಸ್ಸಿದ್ಧವಾಗುತ್ತದೆ.

ತಥಾಚ ವಿದ್ಯಾಂಗತಯಾ "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ" "ಯಜ್ಞೇನ ದಾನೇನ" ಇತ್ಯಾದಿನಾ ವಿಹಿತತ್ವಾತ್ ವಿದ್ಯಾಶೇಷತಯಾಪಿ ಅನುಷ್ಠೇಯಾನಿ ಇತ್ಯಾಹ. ಸಹಕಾರಿತ್ವೇನ ಚ ॥ ೩೩ ॥ "ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಹ" ಇತಿ ಬ್ರಹ್ಮವಿತ್ ಪುಣ್ಯಕೃಚ್ಚ "ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ ಸಮ್ಯಗ್ ಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಂ" ಇತ್ಯಾದಿಷು

ಧರ್ಮಬ್ರಹ್ಮೋಭಯಸಹಕಾರಿತ್ವೇನ ಚ ಮೋಕ್ಷಾವಗಮಾತ್ ಜ್ಞಾನ ಕರ್ಮಸಮುಚ್ಚಯಾನುಷ್ಠಾನಂ ಸರ್ವೇಷಾಮಾಶ್ರಮಿಣಾಂ ವಿಧೇಯಂ. ತಸ್ಮಾದಗ್ನಿಹೋತ್ರಾದೀನಾಮಿವ ಜೀವನಾಧಿಕಾರಸ್ವರ್ಗಾಧಿಕಾರವದ್ವಿನಿಯೋಗಪೃಥಕ್ತ್ವೇನ ಉಭಯಾರ್ಥತ್ವಂ ನ ವಿರುದ್ಧ್ಯತೇ.

"ವಿದ್ಯೆಗೆ ಅಂಗವಾದ್ದರಿಂದಲೂ, ವೇದದಲ್ಲಿ ಹೇಳಿರುವುದರಿಂದಲೂ ಬ್ರಾಹ್ಮಣರು ಬ್ರಹ್ಮಸ್ವರೂಪವನ್ನು ತಿಳಿಯಲಿಚ್ಛಿಸುತ್ತಾರೆ." "ದೃಢವಾದ ಯಜ್ಞದಿಂದಲೂ ದಾನದಿಂದಲೂ ತಪಸ್ಸಿನಿಂದಲೂ ಬ್ರಹ್ಮವನ್ನು ತಿಳಿಯುತ್ತಾರೆ" ಹೀಗೆ ಶ್ರುತಿಯಲ್ಲಿ ವಿಹಿತವಾದ್ದರಿಂದಲೂ ವಿದ್ಯೆಗೆ ಅಂಗವಾದ್ದರಿಂದ ಕರ್ಮವನ್ನು ಆಚರಿಸಬೇಕೆಂದು ತಿಳಿಸುತ್ತಾನೆ. "ವಿದ್ಯೆಯನ್ನು ತಿಳಿದವನೇ ಕರ್ಮವನ್ನರಿತವನು" "ಈ ಆತ್ಮವು ಸತ್ಯದಿಂದಲೂ ತಪಸ್ಸಿನಿಂದಲೂ ಯಥಾರ್ಥಜ್ಞಾನದಿಂದಲೂ ನಿರಂತರವೂ ಬ್ರಹ್ಮಚರ್ಯದ ಆಚರಣದಿಂದಲೂ ದೊರಕಬಲ್ಲದು" ಎಂಬ ಶ್ರುತಿಗಳಲ್ಲಿ ಧರ್ಮ ಬ್ರಹ್ಮಗಳೆರಡೂ ಮೋಕ್ಷಕ್ಕೆ ಸಹಾಕಾರಿಸಾಧನಗಳೆಂದು ತಿಳಿದುಬರುವುದರಿಂದ ಎಲ್ಲಾ ಆಶ್ರಮದವರೂ ಜ್ಞಾನಕರ್ಮಗಳೆರಡನ್ನೂ ಒಟ್ಟಿಗೆ ಅಚರಿಸಬೇಕೆಂದು ವಿಧಿಸಲಾಗಿದೆ. ಆದ್ದರಿಂದ ಅಗ್ನಿಹೋತ್ರಾದಿಗಳು ಸ್ವರ್ಗಕ್ಕಾಗಿ ನಿತ್ಯಾನುಷ್ಠಾನಕ್ಕೆ ಹೊಂದುವಂತೆ ಕರ್ಮಗಳು ಜ್ಞಾನಕ್ಕೆ ಅಂಗವಾಗುವುದರಲ್ಲಿ ವಿರೋಧವಿಲ್ಲ.

ನನು ವಿದುಷಾಮವಿದುಷಾಮಪಿ ಸ್ವಾಶ್ರಮವಿಹಿತಧರ್ಮಾನುಷ್ಠಾನಂ ಮೋಕ್ಷಾಂಗಮಸ್ತು. ಮೋಕ್ಷಾಂಗತ್ವೇನ ಬಾಹ್ಯಾಂತರ್ಲಿಂಗಧಾರಣಂ ವಿದುಷಾಮಾವಶ್ಯಕಮೇವೇತ್ಯಾಶಂಕಾಯಾಮಾಹ. ಸರ್ವಥಾಪಿ ತ ಏವೋಭಯಲಿಂಗಾತ್ ‖ ೩೪ ‖ ಸರ್ವಥಾಪಿ ಸರ್ವಶ್ರುತಿಪರ್ಯಾಲೋಚನಯಾಪಿ ತ ಏವ "ಧರ್ಮೇಣ ಪಾಪಮಪನುದತಿ" ಇತ್ಯಾದಿನಾ ಶ್ರೌತಸ್ಮಾರ್ತೋಕ್ತಕರ್ಮಾನುಷ್ಠಾನೇನ ಚಿತ್ತಶುದ್ಧಿಂ ಪ್ರಾಪ್ತಸ್ಯ ಮುಮುಕ್ಷೋಃ ಭಕ್ತಸ್ಯ ಉಭಯಲಿಂಗಾತ್ "ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" "ಅಮೃತಸ್ಯ ದೇವಧಾರಣೋ ಭೂಯಾಸಂ" "ತತ್ಪ್ರಾಣೇಷ್ವಂತರ್ಮನಸೋ ಲಿಂಗಮಾಹುಃ" "ಕೇಸರೇ ಜಾಗ್ರದವಸ್ಥಾ, ಕರ್ಣಿಕಾಯಾಂ ಸ್ವಪ್ನಃ, ಲಿಂಗೇ ಸುಷುಪ್ತಿಃ, ಪದ್ಮತ್ಯಾಗೇ ತುರೀಯಾ," ಇತ್ಯಾದಿ ಶ್ರುತಿಶತೇಷು ಶಿವಸ್ಯ ಪರಬ್ರಹ್ಮಣಃ ಸ್ವೇಚ್ಛಯಾ ಭಕ್ತತಾರಣಾರ್ಥಂ ಬಾಹ್ಯಾಭ್ಯಂತರೇಷು ಇಷ್ಟಪ್ರಾಣರೂಪೇಣೋಭಯಲಿಂಗತ್ವಾವಗಮಾತ್ ಭಕ್ತಾನಾಂ ಸ್ವಾಶ್ರಮವಿಹಿತಕರ್ಮವತ್ಸರ್ವೇಷಾಮಾಶ್ರಮಿಣಾಂ ತದುಭಯಲಿಂಗಧ್ಯಾನಧಾರಣಪೂಜಾದಿಕಮವಶ್ಯಂ ಕರ್ತವ್ಯಂ. ತದುಕ್ತಂ ಶಂಕರಸಂಹಿತಾಯಾಮಪಿ "ಶ್ರುತಿಸ್ಮೃತ್ಯುದಿತಂ ಕರ್ಮ ನಿತ್ಯನೈಮಿತ್ತಿಕಾಶ್ರಯಂ । ಕುರ್ಯಾಲ್ಲಿಂಗಾಂಗಸಂಬಂಧೀ ದ್ವಿಜನ್ಮಾ ಕಾಮವರ್ಜಿತಃ। ವಿಧ್ಯುಕ್ತಕರ್ಮಾನು

**ಷ್ಠಾನಾತ್ ಚಿತ್ತಶುದ್ಧಿರ್ಭವೇದ್ಧ್ರುವಂ । ಚಿತ್ತಶುದ್ಧ್ಯಾ ಭವೇದ್ಭಕ್ತಿಃ ಭಕ್ತಿರವ್ಯಭಿಚಾರಿಣೀ ॥ ತಯಾ ಸಂಜಾಯತೇ ಜ್ಞಾನಂ ನಶ್ಯತ್ಯಜ್ಞಾನಮಾತ್ಮನಃ । ತಸ್ಮಾನ್ಮೋಕ್ಷಸ್ತತಃ ಕರ್ಮ ವಿಧ್ಯುಕ್ತಂ ಸಮ್ಯಗಾಚರೇತ್ । ತಸ್ಮಾತ್ಸದಾಚಾರಯುತೋ ಭಕ್ತ್ಯಾ ಮಹೇಶ್ವರಂ ಜನಃ । ಪೂಜಯೇದ್ಗುರುಣಾ ದತ್ತಂ ಇಷ್ಟಲಿಂಗಮತಂದ್ರಿತಃ । ಪಾಣಿಪದ್ಮಾಸನೇ ನಿತ್ಯಂ ತ್ರಿಕಾಲಂ ಶುದ್ಧಮಾನಸಃ ॥ " ಇತ್ಯಾದಿನಾ ತದ್ವದುಪದೇಶಾತ್ ಆಚಾರನಿಷ್ಠಾನಾಂ ಸರ್ವಾಶ್ರಮಿಣಾಂ ತದುಭಯಲಿಂಗಧ್ಯಾನಧಾರಣಪೂಜಾದಿಕಮನವದ್ಯಂ.**

ವಿದ್ವಾಂಸರಿಗೂ ಕರ್ಮಿಗಳಿಗೂ ಅವರವರ ಆಶ್ರಮಧರ್ಮಗಳ ಅನುಷ್ಠಾನವು ಮೋಕ್ಷಕ್ಕೆ ಅಂಗವಾಗಲಿ, ಆದರೆ ಒಳಗೂ ಹೊರಗೂ ಅಂತರ್ಲಿಂಗಧಾರಣವು ವಿದ್ವಾಂಸರಿಗೆ ಆವಶ್ಯಕವೇ ಅಲ್ಲವೇ ಎಂದು ಆಶಂಕಿಸಿ ಇಲ್ಲಿ ಸಮಾಧಾನಮಾಡುತ್ತಾನೆ. ಎಲ್ಲಾ ಶ್ರುತಿಗಳ ಪರ್ಯಾಲೋಚನದಿಂದ "ಧರ್ಮಾನುಷ್ಠಾನದಿಂದ ಪಾಪವನ್ನು ತೊಳೆಯುತ್ತಾನೆ" ಎಂಬಲ್ಲಿ ಹೇಳಿದ ಕರ್ಮಾಚರಣದಿಂದ ಶುದ್ಧನಾದ ಮುಮುಕ್ಷುವಿಗೆ ಒಳಗೂ ಹೊರಗೂ ಲಿಂಗದ ಸಂಪರ್ಕವೇ ಉಂಟಾಗುವುದು. "ಸರ್ವಾವಯವಗಳಲ್ಲೂ ಲಿಂಗನಾಗಿ ನೆಲಸಿ ಪವಿತ್ರನೆನಿಸಿರುವ ಬ್ರಹ್ಮವನ್ನು ಹಸ್ತದಲ್ಲಿ ಧ್ಯಾನಕ್ಕಾಗಿ ನೆಲೆಗೊಳಿಸುತ್ತಾನೆ" "ಹುಬ್ಬುಗಳ ನಡುವೆ ಜ್ಯೋತಿರ್ಲಿಂಗವನ್ನು ನೆನೆಯಬೇಕು" "ಜೀವನು ಕೇಸರಗಳಲ್ಲಿದ್ದಾಗ ಜಾಗ್ರದವಸ್ಥೆಯೂ, ಮೊಗ್ಗಿನಲ್ಲಿದ್ದಾಗ ಸ್ವಪ್ನವೂ, ಲಿಂಗದಲ್ಲಿ ನೆಲಸಿದ್ದಾಗ ಸುಷುಪ್ತಿಯೂ, ಕಮಲವನ್ನು ತೊರೆದಾಗ ತುರೀಯಸ್ಥಿತಿಯೂ ಉಂಟಾಗುತ್ತವೆ" ಹೀಗೆ ನೂರಾರು ಶ್ರುತಿಗಳಲ್ಲಿ ಪರಶಿವಬ್ರಹ್ಮವು ಸ್ವೇಚ್ಛೆಯಿಂದ ಭಕ್ತರನ್ನುದ್ಧಾರಮಾಡಲಿಕ್ಕಾಗಿ ಒಳಗೂ ಹೊರಗೂ ಇಷ್ಟ ಪ್ರಾಣರೂಪದಿಂದ ಎರಡು ಬಗೆಯ ಲಿಂಗಗಳಾಗಿ ನೆಲಸಿರುವುದೆಂದು ತಿಳಿದುಬರುತ್ತದೆ. ಭಕ್ತರು ತಮ್ಮ ಆಶ್ರಮಧರ್ಮಗಳನ್ನಾಚರಿಸುವಂತೆ ಎಲ್ಲಾ ಆಶ್ರಮದವರಿಗೂ ಎರಡುಬಗೆಯ ಲಿಂಗಗಳನ್ನು ಧ್ಯಾನಿಸಿ ಧರಿಸಿ ಅರ್ಚಿಸುವುದು ಆವಶ್ಯವೆನಿಸಿದೆ. ಶಂಕರಸಂಹಿತೆಯಲ್ಲೂ ಸಹ "ಶ್ರುತಿಸ್ಮೃತಿಗಳಲ್ಲಿ ಹೇಳಿರುವ ನಿತ್ಯನೈಮಿತ್ತಿಕಧರ್ಮಗಳನ್ನು ಲಿಂಗಾಂಗಿಯು ಫಲಾಪೇಕ್ಷೆಯಿಲ್ಲದೆ ಆಚರಿಸಬೇಕು. ವಿಧ್ಯುಕ್ತಕರ್ಮವನ್ನು ಆಚರಿಸುವುದರಿಂದ ಚಿತ್ತಶುದ್ಧಿಯುಂಟಾಗಿ ಅದರಿಂದ ಅವ್ಯಭಿಚರಿತ ಭಕ್ತಿಯೂ, ಅದರಿಂದ ಜ್ಞಾನವೂ ದೊರೆತು ಅಜ್ಞಾನವು ತೊಲಗಿ ಮೋಕ್ಷವುಂಟಾಗುವುದು. ಆದ್ದರಿಂದ ವಿಧ್ಯುಕ್ತವಾದ ಕರ್ಮವನ್ನಾಚರಿಸಲೇಬೇಕು. ಹೀಗೆ ಭಕ್ತನು ಸದಾಚಾರದಿಂದ ಕೂಡಿ ಗುರುವಿನಿಂದ ಅನುಗೃಹೀತವಾದ ಇಷ್ಟಲಿಂಗವನ್ನು ತ್ರಿಕಾಲಗಳಲ್ಲೂ ಎಚ್ಚರಿಕೆಯಿಂದ ಹಸ್ತಪೀಠದಲ್ಲಿ ಅರ್ಚಿಸಬೇಕು" ಹೀಗೆ ಉಪದೇಶವಿರುವುದರಿಂದ ಸದಾಚಾರನಿಷ್ಠರಾದ ಆಶ್ರಮಿಗಳೆಲ್ಲರಿಗೂ ಇಷ್ಟಪ್ರಾಣಲಿಂಗಗಳೆರಡರ ಧ್ಯಾನಧಾರಣಪೂಜೆಗಳು ಅವಶ್ಯಕ.

**ಅಸ್ಮಿನ್ನರ್ಥೇ ಹೇತ್ವಂತರಮಾಹ. ಅನಭಿಭವಂ ಚ ದರ್ಶಯತಿ**

॥೩೫॥ " ಯಾ ತೇ ರುದ್ರ ಶಿವಾ ತನೂರಘೋರಾಽಪಾಪಕಾಶಿನೀ।ತಯಾ ನಸ್ತನುವಾ ಶಂತಮಯಾ ಗಿರಿಶಂತಾಭಿಚಾಕಶೀಹಿ " " ಅಮೃತಸ್ಯ ದೇವಧಾರಣೋ ಭೂಯಾಸಂ " " ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವ ಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ " ಇತ್ಯಾದಿಶ್ರುತಯಃ ಪಾಪರಹಿತಶರೀರೇಷು ಶಿವಪ್ರಕಾಶಕತ್ವಂ ಶಿವಧಾರಣೇನ ಅಮೃತತ್ವಂ ಮಾಯಾಪಾಶನಿವೃತ್ತಿಂ ಚ ದರ್ಶಯಂತಿ. ತಸ್ಮಾನ್ಮುಮುಕ್ಷೂಣಾಂ ಸ್ವಾಶ್ರಮವಿಹಿತಕರ್ಮಾನುಷ್ಠಾನಂ ಬಾಹ್ಯಾಭ್ಯಂತರಯೋಃ ಪರ ಬ್ರಹ್ಮಣಃ ಶಿವಸ್ಯ ಧ್ಯಾನಧಾರಣಪೂಜಾನಮಸ್ಕಾರಶ್ರವಣಕೀರ್ತನಾದಿ ಭಕ್ತಿಶ್ಚ ಯಾವಜ್ಜೀವಂ ಕರ್ತವ್ಯಮೇವ. " ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತು ವಾ। ಯಸ್ತು ಲಿಂಗಾಂಗಸಂಯುಕ್ತಃ ಸ ಏವಾತ್ಯಾಶ್ರಮೀ ಭವೇತ್ ॥ ತಥಾಪಿ ಸ್ವಾಶ್ರಮಂ ಧರ್ಮಂ ಕೃತ್ವಾ ಶಾಸ್ತ್ರವಿಧಾನತಃ। ಶಿವಪೂಜಾದಿಕಂ ಸರ್ವಂ ಯಾವಜ್ಜೀವಂ ಸಮಾ ಚರೇತ್ ॥ " ಇತಿ ಸ್ಮೃತಾವಪಿ ದರ್ಶನಾತ್.

ಈಬಗ್ಗೆ ಬೇರೊಂದು ಕಾರಣವನ್ನು ಹೇಳುತ್ತಾನೆ. " ಎಲೈ ರುದ್ರನೇ, ಪಾಪ ನಾಶಕವೂ ಪ್ರಶಾಂತವೂ ಆದ ಯಾವ ನಿನ್ನ ಶರೀರವಿದೆಯೋ ಅದರಿಂದ ನಮ್ಮನ್ನು ಪ್ರಕಾಶಗೊಳಿಸು " " ಅವನನ್ನು ನಿರಂತರವೂ ಧ್ಯಾನಿಸುವುದರಿಂದಲೂ, ದೇಹದಲ್ಲಿ ಧರಿಸುವುದರಿಂದಲೂ, ಮತ್ತೆಮತ್ತೆ ಶಿವಭಾವದಲ್ಲಿ ಬೆರೆಯುವುದರಿಂದಲೂ ಕೊನೆಗೆ ಮಾಯೆ ಪೂರ್ಣವಾಗಿ ಅಳಿಯುತ್ತದೆ" ಎಂದು ಶ್ರುತಿಗಳು ಪಾಪವಿಲ್ಲದ ಶರೀರದಲ್ಲಿ ಶಿವನು ಪ್ರಕಾಶಿಸುವನೆಂದೂ,ಶಿವನ ಧಾರಣದಿಂದ ಜೀವನು ಅಮೃತನಾಗುವನೆಂದೂ, ಆಗ ಅವನ ಮಾಯಾಪಾಶ ತೊಲಗುವುದೆಂದೂ ತಿಳಿಸುತ್ತವೆ. ಆದ್ದರಿಂದ ಮುಮುಕ್ಷು ಗಳು ತಮ್ಮ ಆಶ್ರಮಕರ್ಮಗಳನ್ನು ಆಚರಿಸುವಂತೆಯೇ ದೇಹದ ಒಳಗೂ ಹೊರಗೂ ಪರಶಿವಬ್ರಹ್ಮದ ಧ್ಯಾನ ಧಾರಣ ಅರ್ಚನೆ ನಮಸ್ಕಾರ ಶ್ರವಣ ಕೀರ್ತನರೂಪವಾದ ಭಕ್ತಿಯನ್ನು ದೇಹವಿರುವವರೆಗೂ ಮಾಡಲೇಬೇಕು. " ಬ್ರಹ್ಮಚಾರಿಯಾಗಲೀ ಗೃಹ ಸ್ಥನಾಗಲೀ ವಾನಪ್ರಸ್ಥನಾಗಲೀ ಯತಿಯಾಗಲೀ ಎಲ್ಲಾ ಅಂಗಗಳಲ್ಲೂ ಲಿಂಗದ ಸಂಪ ರ್ಕವನ್ನು ಏರ್ಪಡಿಸಿಕೊಂಡರೆ ಅವನು ಅತ್ಯಾಶ್ರಮಿಯಾಗುವನು. ಆದರೂ ಆಶ್ರಮ ಧರ್ಮವನ್ನು ನಡೆಸುತ್ತಲೇ ಶಿವಪೂಜಾದಿಗಳನ್ನು ದೇಹವಿರುವತನಕ ಮಾಡಲೇ ಬೇಕು " ಹೀಗೆ ಸ್ಮೃತಿಗಳಲ್ಲೂ ಹೇಳಲಾಗಿದೆ.

ನನು ಶ್ರುತ್ಯುಕ್ತಚತುರ್ವಿಧಾಶ್ರಮಧರ್ಮಾನುಷ್ಠಾನೇನ ತೇಷಾಂ ಬ್ರಹ್ಮವಿದ್ಯಾಧಿಕಾರೋಽಸ್ತು. ವಿಧುರಾಣಾಮಾಶ್ರಮಾಭಾವಾತ್ ಬ್ರಹ್ಮ ವಿದ್ಯಾಧಿಕಾರಃ .ಕುತಸ್ಸಂಭವತೀತ್ಯಾಶಂಕಾಯಾಮಧಿಕರಣಾಂತರೇ ಣಾಹ. ವಿಧುರಾಧಿಕರಣಂ ॥ ೧೦ ॥ ಅಂತರಾ ಚಾಪಿ ತು ತದ್ದೃಷ್ಟೇಃ ॥೩೬॥ ದೈವಾತ್ಪುರಾಕೃತಪ್ರಾರಬ್ಧವಶೇನ ಪತ್ನೀವಿಯೋಗೇ ಸತಿ ಅಂತರಾ

ಬ್ರಹ್ಮಚರ್ಯಯತ್ಯಾಶ್ರಮಯೋರ್ಮಧ್ಯೇ ವಿದ್ಯಮಾನಾನಾಂ ಅನಾಶ್ರಮಿಣಾಂ ಸ್ನಾತಕವಿಧುರಾಣಾಮಪಿ ಪರಶಿವಬ್ರಹ್ಮಣಃ ಧ್ಯಾನ ಧಾರಣಪೂಜಾನಮಸ್ಕಾರಶ್ರವಣಮನನಾತ್ಮಕಬ್ರಹ್ಮವಿದ್ಯಾಯಾಮಧಿ ಕಾರಃ ಸಂಭವತಿ. ಕುತಃ? ತದ್ದೃಷ್ಟೇಃ. ಮನುಶೌನಕಾದಿಸ್ಮೃತಿಪುರಾಣೇ ಷ್ವಪಿ ಅನಾಶ್ರಮಿಣಾಂ ಸ್ನಾತಕವಿಧುರಾಣಾಮಪಿ ಬಹೂನಾಂ ಲೋಕೇ ಪರಶಿವಬ್ರಹ್ಮಸಾಕ್ಷಾತ್ಕಾರತ್ವಾವಗಮಾತ್ ತೇಷಾಂ ತದಧಿಕಾರೋಽ ಸ್ತೀತಿ ಸೂತ್ರಾರ್ಥಃ. ಸರ್ವೇಷಾಮಾಶ್ರಮಿಣಾಂ ಬ್ರಹ್ಮವಿದ್ಯಾಯಾಮಧಿ ಕಾರೋಽಸ್ತಿ ಉತ ನೇತಿ ಸಂದಿಹ್ಯತೇ. ಅನಾಶ್ರಮಿಣಾಂ ವಿಧುರಸ್ನಾತಕಾ ದೀನಾಂ ಬ್ರಹ್ಮವಿದ್ಯಾಧಿಕಾರೋ ನಾಸ್ತ್ಯೇವ, ಶ್ರುತಿಸ್ಮೃತಿಪುರಾಣಾದಿಷು ನಿರಾಶ್ರಮಿಣಾಂ ಬ್ರಹ್ಮವಿದ್ಯಾಧಿಕಾರತ್ವದರ್ಶನಾತ್. "ನಿರಾಶ್ರಮೇ ನ ತಿಷ್ಠೇತ ಕ್ಷಣಕಾಲಮಪಿ ದ್ವಿಜಃ" ಇತ್ಯಾದಿಷು ಸ್ಮೃತಿಷು ನಿರಾಶ್ರಮ ನಿರಾಕಾರಣಾವಗಮಾತ್ ಸರ್ವೇಷಾಮಾಶ್ರಮಿಣಾಂ ವಿದ್ಯಾಂಗತ್ವೇನ ಚೋದನಾಚ್ಚ ಚತುರ್ಣಾಮಾಶ್ರಮಾಣಾಮೇವ ಬ್ರಹ್ಮವಿದ್ಯಾಯಾಮಧಿ ಕಾರ ಇತಿ ಪ್ರಾಪ್ತೇ ಪ್ರಚಕ್ಷ್ಮಹೇ. ಅಂತರಾ ಚಾಪಿ ತು ತದ್ದೃಷ್ಟೇಃ ಇತಿ. ಅತ್ರ ತುಶಬ್ದಃ ಪಕ್ಷವ್ಯಾವೃತ್ತ್ಯರ್ಥಃ. ಚಶಬ್ದೋಽವಧಾರಣೇ. ಅಂತರಾ ವರ್ತಮಾನಾನಾಂ ಅನಾಶ್ರಮಿಣಾಮಪಿ ಬ್ರಹ್ಮವಿದ್ಯಾಧಿ ಕಾರೋ ಯುಕ್ತಃ. ಕುತಃ? ತದ್ದೃಷ್ಟೇಃ. ದೃಶ್ಯತೇ ಹಿ ರೈಕ್ವಭೀಷ್ಮಸಂವ ರ್ತಾದೀನಾಂ ಅನಾಶ್ರಮಿಣಾಮಪಿ ಬ್ರಹ್ಮವಿದ್ಯಾನಿಷ್ಠತ್ವಂ. ನಚ ಆಶ್ರಮ ಧರ್ಮೈರೇವ ವಿದ್ಯಾನುಗ್ರಹ ಇತಿ ವಕ್ತುಂ ಶಕ್ಯಂ. "ಯಜ್ಞೇನ ದಾನೇನ ತಪಸಾಽನಾಶಕೇನ" ಇತಿ ದಾನಾದೀನಾಂ ಆಶ್ರಮೇಷು ಅನೈ ಕಾಂತಿಕಾನಾಮಪ್ಯನುಗ್ರಾಹಕತ್ವಶ್ರವಣಾತ್ ಯಥೋರ್ಧ್ವರೇತಸ್ಸು ವಿದ್ಯಾನಿಷ್ಠತ್ವದರ್ಶನಾದಗ್ನಿಹೋತ್ರಾದಿವ್ಯತಿರಿಕ್ತೈರೇವ ವಿದ್ಯಾನು ಗ್ರಹಃ ಕ್ರಿಯತೇ. ತಥಾ ಅನಾಶ್ರಮಿಣಾಮಪಿ ಬ್ರಹ್ಮವಿದ್ಯಾದರ್ಶನಾತ್ ಆಶ್ರಮನಿಯತೈರ್ಜಪೋಪವಾಸದೇವತಾರಾಧನಾದಿಭಿರ್ವಿದ್ಯಾನುಗ್ರಹ ಶ್ಶಕ್ಯತೇ ಕರ್ತುಂ.

ಶ್ರುತಿಯಲ್ಲಿ ಹೇಳಿದಂತೆ ನಾಲ್ಕುಬಗೆಯ ಆಶ್ರಮದವರಿಗೂ ಅವರವರ ಧರ್ಮ ಗಳನ್ನು ಆಚರಿಸುವುದರಿಂದ ಬ್ರಹ್ಮವಿದ್ಯೆಯಲ್ಲಿ ಅಧಿಕಾರಬರಲಿ; ಆದರೆ ಹೆಂಡತಿ ಯಿಲ್ಲದವರಿಗೆ ಗೃಹಸ್ಥಾಶ್ರಮವೇ ಸಲ್ಲದಿರುವುದರಿಂದ ಬ್ರಹ್ಮವಿದ್ಯೆಯಲ್ಲಿ ಹೇಗೆ ಅಧಿ ಕಾರವಿರುತ್ತದೆ ಎಂದಾಶಂಕಿಸಿ ತಿಳಿಸುತ್ತಾನೆ. ಪ್ರಾರಬ್ಧಕರ್ಮದಿಂದ ಪತ್ನಿಯು ತೊಲಗಿ ಬ್ರಹ್ಮಚರ್ಯ ಮತ್ತು ಸನ್ಯಾಸಾಶ್ರಮಗಳ ಮಧ್ಯದಲ್ಲಿ ಇದ್ದು ಯಾವ ಆಶ್ರ ಮಕ್ಕೂ ಸಿಲುಕದೆ ಇರುವ ಸ್ನಾತಕರಿಗೂ ಮತ್ತು ವಿಧುರರಿಗೂ ಸಹ ಪರಶಿವಬ್ರಹ್ಮದ ಧ್ಯಾನ ಧಾರಣ ಪೂಜೆ ನಮಸ್ಕಾರ ಶ್ರವಣ ಮನನಗಳಿಂದ ಕೂಡಿದ ಬ್ರಹ್ಮವಿದ್ಯೆಗಳಲ್ಲಿ

ಅಧಿಕಾರವು ಸಂಭವಿಸುತ್ತದೆ. ಯಾವ ಆಶ್ರಮಕ್ಕೂ ಸಿಲುಕದೆ ಹೆಂಡತಿಯಿಲ್ಲದ ಸ್ನಾತಕರನೇಕರಿಗೆ ಬ್ರಹ್ಮಸಾಕ್ಷಾತ್ಕಾರವಾಗಿರುವುದೆಂದು ಮನು ಶೌನಕ ಮೊದಲಾದವರ ಸ್ಮೃತಿಗಳಲ್ಲಿ ಕಂಡುಬಂದಿರುವುದರಿಂದ ಅವರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುವುದರಲ್ಲಿ ತಪ್ಪೇನಿಲ್ಲ. ಆದರೆ ಇಲ್ಲಿ ಆಶ್ರಮಿಗಳೆಲ್ಲರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವುಂಟೇ ಇಲ್ಲವೆ? ಎಂದು ಸಂದೇಹ ಬರುತ್ತದೆ. ಹೆಂಡತಿ ಸತ್ತವನಿಗೆ ಬ್ರಹ್ಮವಿದ್ಯೆಗೆ ಅಧಿಕಾರವಿಲ್ಲ. ಶ್ರುತಿಸ್ಮೃತಿಗಳಲ್ಲಿ ಆಶ್ರಮಧರ್ಮವಿಲ್ಲದವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲವೆಂದು ಕಂಡುಬಂದಿದೆ. "ಬ್ರಾಹ್ಮಣರು ಒಂದು ಕ್ಷಣಕಾಲವೂ ಆಶ್ರಮಕ್ಕೆ ಸಿಲುಕದೆ ಇರಬಾರದು" ಎಂದು ಸ್ಮೃತಿಯಲ್ಲಿ ಆಶ್ರಮವಿಲ್ಲದ ಸ್ಥಿತಿಯನ್ನು ನಿರಕಾರಿಸಿರುವುದಾಗಿ ತಿಳಿದುಬಂದಿದೆ. ಹೀಗೆ ಎಲ್ಲ ಆಶ್ರಮಧರ್ಮಗಳು ವಿದ್ಯೆಗೆ ಅಂಗವಾದ್ದರಿಂದಲೂ, ವಿಧಿರೂಪವಾದ್ದರಿಂದಲೂ ನಾಲ್ಕು ಆಶ್ರಮದವರಿಗೆ ಮಾತ್ರವೇ ಬ್ರಹ್ಮವಿದ್ಯೆಗೆ ಅಧಿಕಾರವಿದೆ ಎಂದು ಪೂರ್ವಪಕ್ಷಿಯು ತಿಳಿಸುತ್ತಾನೆ. ಅದಕ್ಕೆ ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. ಸೂತ್ರದಲ್ಲಿ ತು ಶಬ್ದವು ಪೂರ್ವಪಕ್ಷವನ್ನು ಆಕ್ಷೇಪಿಸುತ್ತದೆ. ಚ ಶಬ್ದವು ನಿಶ್ಚಯವನ್ನು ತಿಳಿಸುತ್ತದೆ. ಎರಡು ಆಶ್ರಮಗಳ ಮಧ್ಯದಲ್ಲಿ ಇದ್ದು ಯಾವ ಆಶ್ರಮಕ್ಕೂ ಸೇರದಿರುವ ಜನರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದ್ದೇ ಇರುವುದು. ರೈಕ್ವ ಭೀಷ್ಮ ಸಂವರ್ತ ಮೊದಲಾದ ಅನಾಶ್ರಮಿಗಳಿಗೂ ಸಹ ಬ್ರಹ್ಮವಿದ್ಯೆಯಲ್ಲಿ ಆಸಕ್ತಿ ಇದ್ದುದಾಗಿ ಕಂಡುಬಂದಿದೆ. ಆದರೆ ಆಶ್ರಮಧರ್ಮಗಳಿಂದಲೇ ಬ್ರಹ್ಮವಿದ್ಯೆಗೆ ಪುರಸ್ಕಾರವುಂಟೆಂದು ಹೇಳಲಿಕ್ಕೂ ಸಾಧ್ಯವಿಲ್ಲ; ಯಾಕೆಂದರೆ "ಯಜ್ಞ ದಾನ ತಪಸ್ಸುಗಳಿಂದ ಬ್ರಹ್ಮವನ್ನರಿಯಬೇಕು" ಎಂಬ ಶ್ರುತಿಯಲ್ಲಿ ಆಶ್ರಮಗಳೆಲ್ಲಕ್ಕೂ ಅನ್ವಯಿಸುವ ದಾನಾದಿಗಳು ಬ್ರಹ್ಮವಿದ್ಯೆಗೆ ಅನುಕೂಲವಾಗಿರುವುದಾಗಿ ಕಂಡುಬಂದಿದೆ. ಊರ್ಧ್ವರೇತಸ್ಕರಲ್ಲಿ ವಿದ್ಯಾನಿಷ್ಠೆ ಇರುವುದಾಗಿ ಕಂಡುಬಂದಿದ್ದರೂ ಅಗ್ನಿಹೋತ್ರಕ್ಕಿಂತ ಬೇರೆಯಾದ ಕರ್ಮಗಳಿಂದಲೇ ವಿದ್ಯೆಗೆ ಸಹಕಾರವುಂಟಾಗುತ್ತದೆ. ಹಾಗೆಯೇ ಯಾವ ಆಶ್ರಮಕ್ಕೂ ಸೇರದಿರುವವರಿಗೂ ಸಹ ಬ್ರಹ್ಮವಿದ್ಯೆಯಲ್ಲಿ ಪ್ರವೇಶವಿರುವುದಾಗಿ ಕಂಡುಬಂದಿರುವುದರಿಂದ ಆಶ್ರಮಕ್ಕೆ ಸಿಲುಕದಿರುವ ಜಪ ಉಪವಾಸ ದೇವತಾರಾಧನಗಳಿಂದಲೂ ಬ್ರಹ್ಮವಿದ್ಯೆಗೆ ಸಹಾಯವಾಗಬಹುದು.

**ಅಸ್ಮಿನ್ನರ್ಥೇ ಹೇತ್ವಂತರಮಾಹ. ಅಪಿ ಸ್ಮರ್ಯತೇ ॥ ೩೭ ॥**

**ಅಪಿಚ ಅನಾಶ್ರಮಿಣಾಮಪಿ ಜಪಾದಿಭಿರೇವ ವಿದ್ಯಾನುಗ್ರಹಃ ಸ್ಮರ್ಯತೇ. "ಜಪೇನಾಪಿ ಚ ಸಂಸಿದ್ಧ್ಯೇತ್ ಬ್ರಾಹ್ಮಣೋ ನಾತ್ರ ನಾಶಯಃ" ಕುರ್ಯಾದನ್ಯಂ ನವಾ ಕುರ್ಯಾನ್ಮೈತ್ರೋ ಬ್ರಾಹ್ಮಣ ಉಚ್ಯತೇ । ವಿಧುರಾವಿಧವಾನಾಂ ಚ ಸ್ನಾತಕಾನಾಂ ತಥೈವ ಚ । ಜಪೋಪವಾಸ ಪೂಜಾದಿವಿಧಾನಾದ್ಜ್ಞಾನಮುಚ್ಯತೇ ॥" ಇತಿ ಸ್ಮೃತಿದರ್ಶನಾತ್ ಸರ್ವದಾ ವಿಧುರಾದಿಭಿರಪಿ ಅನನ್ಯಮನಸಾ ಸದಾಚಾರಸಂಪತ್ತ್ಯಾ ಚ ಜಪೋಪವಾಸತೀರ್ಥಯಾತ್ರಾದಾನತಪಃಪೂಜಾದಿಭಿಃ ಶುದ್ಧಾಂತಃಕರಣ**

**ವಿಶಿಷ್ಟತಯಾ ಶ್ರವಣಮನನಾದಿನಾ ಪರಶಿವಬ್ರಹ್ಮವಿಚಾರಃ ಕರ್ತವ್ಯಃ.**

ಈಬಗ್ಗೆ ಬೇರೊಂದು ಕಾರಣವನ್ನು ತಿಳಿಸುತ್ತಾನೆ. ಆಶ್ರಮಕ್ಕೆ ಸಿಲುಕದಿರುವವರಿಗೂ ಜಪಾದಿಗಳಿಂದಲೇ ಬ್ರಹ್ಮವಿದ್ಯೆಗೆ ಸಹಾಯವುಂಟಾಗುವುದೆಂದು ಸ್ಮೃತಿಯಲ್ಲಿ ಹೇಳಿದೆ. "ಬ್ರಾಹ್ಮಣನು ಜಪದಿಂದಲೂ ಸಿದ್ಧಿಯನ್ನು ಹೊಂದಬಹುದು; ಉಳಿದದ್ದನ್ನು ಮಾಡದೆ ಬಿಟ್ಟರೂ ಜಪದಿಂದಲೇ ಆವನು ಬ್ರಾಹ್ಮಣನೆನಿಸುತ್ತಾನೆ." "ಪತ್ನಿ ಇಲ್ಲದವನು, ಪತಿಇಲ್ಲದವಳು, ಸ್ನಾತರರು ಇವರಿಗೆ ಜಪ ಮತ್ತು ಉಪಾಸನಗಳನ್ನು ಆಚರಿಸುವುದರಿಂದ ಜ್ಞಾನವುಂಟಾಗುತ್ತದೆ" ಹೀಗೆ ಸ್ಮೃತಿಯಲ್ಲಿ ಹೇಳಿರುವುದರಿಂದ ವಿಧುರರೂ ಸಹ ನಿರ್ಮಲವಾದ ಮನದಿಂದಲೂ, ಸದಾಚಾರನಿಷ್ಠೆಯಿಂದಲೂ ಜಪ ಉಪಸಾನ ತೀರ್ಥಯಾತ್ರೆ ದಾನ ತಪಸ್ಸು ಮತ್ತು ಪೂಜೆಗಳಿಂದ ಶುದ್ಧಹೃದಯರಾಗಿ ಶ್ರವಣ ಮನನಾದಿಗಳಿಂದ ಪರಶಿವಬ್ರಹ್ಮವನ್ನು ಕಂಡು ಅನುಭವಿಸಬಹುದು ಎಂದು ನಿರ್ಣಯಿಸಲಾಗಿದೆ.

**ಅನಾಶ್ರಮಿಣಾಂ ವಿಧುರಾದೀನಾಂ ಜ್ಞಾನಸಾಧನೀಭೂತಕರ್ಮಾನುಷ್ಠಾನಾಭಾವಾತ್ ಕಥಂ ಜ್ಞಾನೋತ್ಪತ್ತಿರಿತ್ಯಾಶಂಕ್ಯಾಹ. ವಿಶೇಷಾನುಗ್ರಹಾಚ್ಚ ॥ ೩೮ ॥ "ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯಯಾ ಚಾತ್ಮಾನಮನ್ವಿಷ್ಯೇತ್" ಇತಿ ಶ್ರುತೌ ಅನಾಶ್ರಮನಿಯತೈರ್ಧರ್ಮವಿಶೇಷೈಃ ವಿದ್ಯಾನುಗ್ರಹಶ್ರವಣಾತ್ ವಿಧುರಾದೀನಾಮಪಿ ಬ್ರಹ್ಮವಿದ್ಯಾಧಿಕಾರತ್ವಮನಿವಾರ್ಯಮಿತಿ ನಿರ್ಣೀಯತೇ.**

ಯಾವ ಆಶ್ರಮಕ್ಕೂ ಸೇರದಿರುವ ವಿಧುರರು ಜ್ಞಾನಸಾಧನವಾದ ಕರ್ಮಗಳನ್ನೇ ಆಚರಿಸಲಾರರಾದ್ದರಿಂದ ಅವರಿಗೆ ಹೇಗೆ ಜ್ಞಾನ ಹುಟ್ಟುತ್ತದೆ? ಎಂದಾಶಂಕಿಸಿ ತಿಳಿಸುತ್ತಾನೆ. "ತಪಸ್ಸಿನಿಂದಲೂ ಬ್ರಹ್ಮಚರ್ಯದಿಂದಲೂ ಶ್ರದ್ಧೆಯಿಂದಲೂ ಜ್ಞಾನದಿಂದಲೂ ತನ್ನನ್ನು ಹುಡುಕಬೇಕು" ಎಂಬ ಶ್ರುತಿಯಲ್ಲಿ ಯಾವ ಆಶ್ರಮಕ್ಕೂ ಸೇರದಿರುವ ಧರ್ಮವಿಶೇಷಗಳಿಂದಲೇ ಬ್ರಹ್ಮವಿದ್ಯೆಗೆ ಸಹಾಯವಾಗುವುದೆಂದು ಹೇಳಿರುವುದರಿಂದ ವಿಧುರಾದಿಗಳಿಗೂ ಬ್ರಹ್ಮವಿದ್ಯೆಗೆ ಅಧಿಕಾರವುಂಟೆಂಬುದು ಅನಿವಾರ್ಯವೆನಿಸುತ್ತದೆ.

**ಅಸ್ಮಿನ್ನರ್ಥೇ ಪುನರ್ಹೇತ್ವಂತರಮಾಹ. ಅಂತಸ್ತ್ವಿತರಜ್ಜ್ಯಾಯೋ ಲಿಂಗಾಚ್ಚ ॥ ೩೯ ॥ ಯತಃ "ಅಮೃತಸ್ಯ ದೇವಧಾರಣೋ ಭೂಯಾಸಂ" ಶರೀರಂ ಮೇ ವಿಚರ್ಷಣಂ" ಇತ್ಯಾದಿನಾ ಇತರವತ್ ಚತುರಾಶ್ರಮಧರ್ಮಾತಿರಿಕ್ತಾಶ್ರಮಾನಾಶ್ರಮಸಾಧಾರಣಲಿಂಗಧಾರಣವತ್ ಅತಃ ಆಶ್ರಮಸಾಧಾರಣ್ಯೇನ ಸರ್ವೇಷಾಂ ಮುಮುಕ್ಷೂಣಾಂ ಬ್ರಹ್ಮವಿದ್ಯಾಧಿಕಾರಃ ಜ್ಯಾಯಃ ಶ್ರೇಷ್ಠಃ. ತಸ್ಮಾತ್ ಲಿಂಗಾತ್ "ಉಥ್ಥಾಯ ನಮಃ" ಇತ್ಯಾರಭ್ಯ ಲಿಂಗಸ್ಯ ಸರ್ವಾತ್ಮಕತ್ವಮುಕ್ತ್ವಾ "ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" ಇತಿ**

ಶ್ರುತೌ ಲಿಂಗರೂಪಸ್ಯ ಪರಬ್ರಹ್ಮಣಃ ಪವಿತ್ರತ್ವಕಥನಾತ್ ಆಶ್ರಮಿಣಾಮನಾಶ್ರಮಿಣಾಮಪಿ ಬ್ರಹ್ಮವಿದ್ಯಾಧಿಕಾರ ಅನವದ್ಯಃ. "ಅನಾಶ್ರಮೀ ನ ತಿಷ್ಠೇತ ದಿನಮೇಕಮಪಿ ದ್ವಿಜಃ। ಯದಿ ವಾ ತಿಷ್ಠತೇ ಮೋಹಾತ್ ನ ಸ ಪುಣ್ಯೇನ ಲಿಪ್ಯತೇ ॥" ಇತಿ ವಚನಂ ತ್ವವಿರಾಗವಿಷಯಮಿತಿ ವೇದಿತವ್ಯಂ. "ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ" ಇತ್ಯಾದಿಶ್ರುತಿಷು ಶಿವಪ್ರಾಪ್ತೇರ್ಮುಖ್ಯೋಪಾಯತ್ವೇನ ಶ್ರದ್ಧಾಭಕ್ತ್ಯಾದಿಕಸ್ಯೋಪದಿಷ್ಟತ್ವಾತ್. ಸರ್ವೇಷು ಶಾಸ್ತ್ರೇಷು ವಿಶೇಷವಿದ್ಯಾಸಾಮಾನ್ಯಶಾಸ್ತ್ರಬಾಧಾವಗಮಾಚ್ಚ "ಆಶ್ರಮಾದಾಶ್ರಮಂ ಗಚ್ಛೇನ್ನಾನ್ಯಥಾ ಮೋಕ್ಷಮಾಪ್ನುಯಾತ್" ಇತ್ಯಸ್ಯ ಸಾಮಾನ್ಯತ್ವಾದ್ದುರ್ಬಲತ್ವಂ ಸಮಂಜಸಂ.

ಈ ಬಗ್ಗೆ ಬೇರೊಂದು ಕಾರಣವನ್ನು ಹೇಳುತ್ತಾನೆ "ಅಮೃತಕ್ಕಾಗಿ ದೇವನನ್ನು ಧರಿಸುತ್ತೇನೆ. ಇವನ ಸಂಪರ್ಕದಿಂದ ಶರೀರ ಸುಂದರವಾಗಲಿ" ಎಂಬ ಮಂತ್ರದಲ್ಲಿ ಎಲ್ಲಾ ಆಶ್ರಮಿಗಳಿಗೂ ಅನ್ವಯಿಸುವಂತೆ ಸಾಮಾನ್ಯವಾಗಿ ಲಿಂಗಧಾರಣವನ್ನು ಹೇಳಿರುವುದರಿಂದ ಎಲ್ಲರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುವುದೆಂಬುದೇ ಯುಕ್ತವಾಗಿದೆ. ಇದಕ್ಕೆ ಹೇತುವೇನು ? ಅಂದರೆ, "ಊರ್ಧ್ವಾಯ ನಮಃ" ಎಂದು ಆರಂಭಿಸಿ ಎಲ್ಲಾ ಕಡೆಯಲ್ಲೂ ಲಿಂಗಪದವನ್ನೇ ಉಪಯೋಗಿಸಿರುವುದರಿಂದ ಲಿಂಗವನ್ನು ಸರ್ವಾತ್ಮಕವೆಂದು ತಿಳಿಸಿ, "ಪಾಣಿಮಂತಂ ಪವಿತ್ರಂ" ಎಂಬಲ್ಲಿ ಲಿಂಗರೂಪನಾದ ಪರಶಿವನನ್ನು ಪವಿತ್ರವೆಂದು ಹೇಳಿದ್ದರಿಂದ ಆಶ್ರಮಿಗಳು ಮತ್ತು ಅನಾಶ್ರಮಿಗಳು ಇವರೆಲ್ಲರಿಗೂ ಬ್ರಹವಿದ್ಯೆಯಲ್ಲಿ ಅಧಿಕಾರವಿರುವುದು ಯುಕ್ತವೇ ಆಗಿದೆ. "ಬ್ರಾಹ್ಮಣನು ತನ್ನ ಆಶ್ರಮ ಧರ್ಮವನ್ನು ತೊರೆದು ಒಂದುದಿನವೂ ಇರಕೂಡದು. ಹಾಗೆ ಮೋಹದಿಂದ ತೊರೆದರೆ ಅವನಿಗೆ ಪುಣ್ಯದ ಸಂಬಂಧವಿರುವುದಿಲ್ಲ" ಎಂಬ ಮಾತು ವಿರಕ್ತರಲ್ಲದವರಿಗೆ ಸಂಬಂಧಿಸಿದೆಂದು ತಿಳಿಯಬೇಕು. "ಶ್ರದ್ಧಾಭಕ್ತಿ ಧ್ಯಾನಗಳಿಂದ ಕೂಡಿದ ಯೋಗದಿಂದ ತಿಳಿ" ಎಂಬ ಶ್ರುತಿಯಲ್ಲಿ ಶ್ರದ್ಧಾಭಕ್ತಿಗಳನ್ನೇ ಶಿವಪ್ರಾಪ್ತಿಗೆ ಮುಖ್ಯೋಪಾಯಗಳೆಂದು ಹೇಳಲಾಗಿದೆ. ಎಲ್ಲಾ ಶಾಸ್ತ್ರಗಳಲ್ಲೂ ವಿಶೇಷವಿದ್ಯೆಯಿಂದ ಸಾಮಾನ್ಯಶಾಸ್ತ್ರವು ಬಾಧಿತವಾಗುವುದಾಗಿ ಕಂಡುಬಂದಿರುವುದರಿಂದ "ಆಶ್ರಮದಿಂದ ಆಶ್ರಮಕ್ಕೆ ಹೋಗಬೇಕು ; ಇಲ್ಲವಾದರೆ ಮೋಕ್ಷವು ದೊರಕುವುದಿಲ್ಲ" ಎಂಬ ವಾಕ್ಯಗಳು ಸಾಮಾನ್ಯವಾದ್ದರಿಂದ ದುರ್ಬಲವೆನಿಸಿವೆ.

ನನ್ವಥಾಶ್ರಮಿಣಾಂ ಸ್ನಾತಕವಿಧುರಾದೀನಾಂ ಜಿತೇಂದ್ರಿಯತ್ವದಾನತಪಃಪೂಜಾದಿನಾ ಶುದ್ಧಾಂತಃಕರಣಾನಾಂ ಬ್ರಹ್ಮವಿದ್ಯಾಧಿಕಾರೋಽಸ್ತು. ಸ್ವಾಶ್ರಮಭ್ರಷ್ಟಾನಾಮೂರ್ಧ್ವರೇತಸಾಂ ಬ್ರಹ್ಮವಿದ್ಯಾಧಿಕಾರೋ ಯುಕ್ತ ಅಯುಕ್ತೋ ವೇತಿ ವಿಷಯೇ ತಚ್ಛಂಕಾಶೋಕಮೋಚನಾರ್ಥಮಧಿಕರಣಾಂತರಂ ದರ್ಶಯತಿ. ತದ್ಭೂತಾಧಿಕರಣಂ ॥ ೧೧ ॥ ತದ್ಭೂತಸ್ಯ ತು ನಾತದ್ಭಾವೋ ಜೈಮಿನೇರಪಿ ನಿಯಮಾತದ್ರೂಪಾಭಾವೇಭ್ಯಃ ॥ ೪೦ ॥

ತದ್ಭೂತಸ್ಯ ಸಂನ್ಯಾಸಾಶ್ರಮಂ ಪ್ರಾಪ್ತಸ್ಯ ಪುರುಷಸ್ಯ ಅತದ್ಭಾವಃ ಸಂನ್ಯಾಸಾಶ್ರಮಾದ್ಭ್ರಂಶಃ ಶಾಸ್ತ್ರವಿಹಿತೋ ನ ಭವತಿ, ಪ್ರತ್ಯುತ ಶಾಸ್ತ್ರಪ್ರತಿಷಿದ್ಧ ಏವ. ಕುತಃ? ನಿಯಮಾತದ್ರೂಪಾಭಾವೇಭ್ಯಃ. ಅತದ್ರೂಪಾಣಾಂ ನಿಯಮಪ್ರತಿಪಾದಕಾನಾಂ ವಚನಾನಾಂ ಅಭಾವೇಭ್ಯೋ ಹೇತುಭ್ಯಶ್ಚ ಆಶ್ರಮಭ್ರಂಶಃ ಶಾಸ್ತ್ರಪ್ರತಿಷಿದ್ಧ ಇತ್ಯುಚ್ಯತೇ. ತಸ್ಮಾತ್ ತದಧಿಕಾಶ್ರಮಾಂತರಾಭಾವೇನ ತತ್ರೈವ ಯಾವಜ್ಜೀವಂ ಸ್ಥಾತವ್ಯಂ ಇತಿ ಸೂತ್ರಾರ್ಥಃ. "ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸಂನ್ಯಾಸಯೋಗಾದ್ಯತಯಃ ಶುದ್ಧಸತ್ತ್ವಾಃ । ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ ॥" "ಸಂನ್ಯಸ್ಯ ವೇದಾಂತಶ್ರವಣಂ ಕುರ್ಯಾತ್" ಇತ್ಯಾದಿಷು ಸರ್ವೇಷಾಮಾಶ್ರಮಿಣಾಂ ಮಧ್ಯೇ ಮುಖ್ಯತ್ವೇನ ನಿರಂತರಬ್ರಹ್ಮವಿಚಾರಾಧಿಕಾರಃ ಯತೀನಾಮೇವ ಶ್ರೂಯತೇ. ತಥಾಪಿ ವಿಧುರಾದಿವದಾಶ್ರಮಭ್ರಷ್ಟಾನಾಂ ಸ್ವಾಶ್ರಮನಿಷ್ಠಾನಾಂ ವಾ ಬ್ರಹ್ಮವಿದ್ಯಾಧಿಕಾರ ಇತಿ ವಿಶಯಃ. "ಸಂನ್ಯಾಸ್ಯ ವೇದಾಂತಶ್ರವಣಂ ಕುರ್ಯಾತ್" ಇತ್ಯಾದಿಷು ಸಂನ್ಯಾಸಭ್ರಷ್ಟಾನಾಂ ನಾಧಿಕಾರತ್ವಾವಗಮಾತ್ "ಬ್ರಹ್ಮಚರ್ಯಂ ಸಮಾಪ್ಯ ಗೃಹೀ ಭವೇತ್. ಗೃಹೀ ಭೂತ್ವಾ ವನೀ ಭವೇತ್. ವನೀ ಭೂತ್ವಾ ಪ್ರವ್ರಜೇತ್" ಇತ್ಯಾಶ್ರಮಾರೋಹೇ ಯಥಾ ಸ್ವೇಚ್ಛಾದಿನಾ ವಿಧಿರ್ದರ್ಶಿತಃ ತದ್ವದವರೋಹಣೇ ಸ್ವೇಚ್ಛಾಧೀನತ್ವೇನ ಆನುಮಾನಿಕಂ ಸಾಧ್ಯಂ. ತಸ್ಮಾದ್ವಿಧುರಾದಿವದ್ಯಾತ್ಯಾಶ್ರಮಭ್ರಷ್ಟಾನಾಂ ಬ್ರಹ್ಮವಿದ್ಯಾಧಿಕಾರೋ ಯುಕ್ತ ಇತಿ ಪ್ರಾಪ್ತೇ ತತ್ರೋತ್ತರಂ ವದಾಮಃ. ತದ್ಭೂತಸ್ಯ ತು ನಾತದ್ಭಾವ ಇತಿ. ತುಶಬ್ದಃ ಪಕ್ಷವ್ಯಾವೃತ್ತ್ಯರ್ಥಃ. ತದ್ಭೂತಸ್ಯ ನೈಷ್ಠಿಕಾದ್ಯಾಶ್ರಮನಿಷ್ಠಸ್ಯ ನಾತದ್ಭಾವಃ. ಅತಥಾಭಾವಃ ಅನಾಶ್ರಮಿತ್ವೇನಾವಸ್ಥಾನಂ ನ ಸಂಭವತಿ. ಕುತಃ ತದ್ರೂಪಾಭಾವೇಭ್ಯಃ. ನಿಯಮಾತ್ ತದ್ರೂಪಾಣಿ ತೇಷಾಂ ನೈಷ್ಠಿಕಾದೀನಾಂ ರೂಪಾಣಿ ತೇಷಾಂ ಧರ್ಮಾಃ ತೇಷಾಂ ಅಭಾವಾಃ ತದ್ರೂಪಾಭಾವಾಃ ತೇಭ್ಯಃ ಶಾಸ್ತ್ರೇ ನಿಯಮಾತ್. ನೈಷ್ಠಿಕಾದ್ಯಾಶ್ರಮಪ್ರತಿಷ್ಠಾನ್ ಸ್ವಾಶ್ರಮಧರ್ಮನಿವೃತ್ತಿಭ್ಯೋ ನಿಯಚ್ಛಂತಿ ಹಿ ಶಾಸ್ತ್ರಾಣಿ. "ಬ್ರಹ್ಮಚರ್ಯಾಚಾರ್ಯಕುಲವಾಸೀ ತೃತೀಯೋಽತ್ಯಂತಮಾತ್ಮಾನಮಾಚಾರ್ಯಕುಲೇಽವಸಾದಯನ್" ಇತಿ "ಅರಣ್ಯಮಿಯಾತ್ತತೋ ನ ಪುನರಾಯಾತ್" ಇತಿ. "ಸಂನ್ಯಸ್ಯಾಗ್ನಿಂ ನ ಪುನರಾವರ್ತಯೇತ್" ಇತಿ ಚ. ಅತೋ ವಿಧುರಾದಿವತ್ ನೈಷ್ಠಿಕಾದೀನಾಂ ಅನಾಶ್ರಮಿತ್ವೇನ ಅವಸ್ಥಾನಾಸಂಭವಾತ್ ನೈತಾನಧಿಕರೋತಿ ಬ್ರಹ್ಮವಿದ್ಯಾ. ಜೈಮಿನೇರಪೀತ್ಯವಿಗಾನಂ ದರ್ಶಯನ್ನುಕ್ತಂ ಸ್ವಾಭಿಮತಂ ದೃಢಯತಿ.

ಆಶ್ರಮಗಳಿಗೆ ಸಿಲುಕದಿರುವ ಸ್ನಾತಕ ವಿಧುರ ಮೊದಲಾದವರು ಜಿತೇಂದ್ರಿಯತ್ವ, ದಾನ, ತಪಸ್ಸು, ಪೂಜೆಗಳಿಂದ ಶುದ್ಧ ಹೃದಯರಾಗಿ ಬ್ರಹ್ಮವಿದ್ಯೆಯಲ್ಲಿ ಅಧಿಕಾರವನ್ನು ಪಡೆಯಲಿ. ಆದರೆ ಆಶ್ರಮಭ್ರಷ್ಟರಾದ ಊರ್ಧ್ವರೇತಸ್ಕರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುತ್ತೆಯೇ ಇಲ್ಲವೇ? ಎಂಬ ವಿಷಯದಲ್ಲಿ ಸಂಶಯವನ್ನು ಪರಿಹರಿಸಲಿಕ್ಕಾಗಿ ಈಗ ತಿಳಿಸುತ್ತಾನೆ. ಸಂನ್ಯಾಸಾಶ್ರಮವನ್ನು ಹೊಂದಿದವನಿಗೆ ಅದರಿಂದ ಬಿಡುಗಡೆಯು ಶಾಸ್ತ್ರದಲ್ಲಿ ವಿಹಿತವಾಗಿಲ್ಲ; ಆದರೆ ಶಾಸ್ತ್ರದಲ್ಲಿ ಅದನ್ನು ನಿಷೇಧಿಸಲಾಗಿದೆ. ಸಂನ್ಯಾಸಾಶ್ರಮವನ್ನು ತೆಗೆದುಕೊಂಡಮೇಲೆ ಕೊನೆಯತನಕ ಅದರಲ್ಲಿಯೇ ಇರಬೇಕೆಂದೂ ಮತ್ತು ಹಿಂದಿನ ಆಶ್ರಮಕ್ಕೆ ಹೋಗಬಾರದೆಂದೂ ನಿಯಮವನ್ನು ತಿಳಿಸುವ ಮನ್ವಾದಿವಚನಗಳಿರುವುದರಿಂದ ಆಶ್ರಮಪರಿತ್ಯಾಗವು ಶಾಸ್ತ್ರದಲ್ಲಿ ನಿಷಿದ್ಧವೆನಿಸಿದೆ. ಅದಕ್ಕಿಂತಲೂ ಹೆಚ್ಚಿನ ಬೇರೊಂದು ಆಶ್ರಮವಿಲ್ಲದ್ದರಿಂದ ಅದರಲ್ಲಿಯೇ ಕೊನೆಯತನಕ ಇರಬೇಕೆಂದು ಸೂತ್ರವು ತಿಳಿಸುತ್ತದೆ."ವೇದಾಂತವಿಜ್ಞಾನದಿಂದ ನಿಶ್ಚಯಜ್ಞಾನವನ್ನು ಪಡೆದು ಸಂನ್ಯಾಸಯೋಗದಿಂದ ಶುದ್ಧರಾಗಿ ಜ್ಞಾನಿಗಳೆಲ್ಲರೂ ದೇಹಭಿಮಾನವನ್ನು ತೊರೆದು ಈ ಪ್ರಸಾದಕಾಯದಲ್ಲಿ ಎಲ್ಲಾ ಬಗೆಯ ದುಃಖದಿಂದಲೂ ಪಾರಾಗುತ್ತಾರೆ." "ಎಲ್ಲಾ ಕರ್ಮಗಳನ್ನು ತೊರೆದು ವೇದಾಂತವನ್ನು ಶ್ರವಣಮಾಡಬೇಕು." ಈ ಬಗೆಯ ಶ್ರುತಿಗಳಲ್ಲಿ ಎಲ್ಲಾ ಆಶ್ರಮಗಳಿಗಿಂತಲೂ ಯತ್ಯಾಶ್ರಮದವರಿಗೆ ಮುಖ್ಯವಾಗಿ ಬ್ರಹ್ಮವಿಚಾರದ ಅಧಿಕಾರವಿರುವುದಾಗಿ ಹೇಳಿದೆ. ಆದರೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಹೆಂಡತಿಸತ್ತವನಂತೆಯೇ ಆಶ್ರಮಭ್ರಷ್ಠರಿಗೋ ಅಥವಾ ಆಶ್ರಮನಿಷ್ಠರಿಗೋ ? ಎಂಬ ಸಂಶಯ ಬರುತ್ತದೆ. "ಕರ್ಮಸಂನ್ಯಾಸಮಾಡಿ ವೇದಾಂತವನ್ನು ಕೇಳಬೇಕು" ಎಂಬಲ್ಲಿ ಸಂನ್ಯಾಸಿಗಳಿಗೆ ಬ್ರಹ್ಮವಿದ್ಯೆಗೆ ಅಧಿಕಾರವಿಲ್ಲವೆಂದು ತಿಳಿದುಬರುತ್ತದೆ. "ಬ್ರಹ್ಮಚರ್ಯವನ್ನು ಮುಗಿಸಿ ಗೃಹಸ್ಥನಾಗಬೇಕು. ಗೃಹಸ್ಥನಾದಮೇಲೆ ವನವನ್ನು ಪ್ರವೇಶಿಸಬೇಕು. ವಾನಪ್ರಸ್ಥವನ್ನು ಮುಗಿಸಿದಮೇಲೆ ಸಂನ್ಯಾಸಿಯಾಗಬೇಕು" ಹೀಗೆ ಸನ್ಯಾಸಾಶ್ರಮವನ್ನು ಪ್ರವೇಶಿಸಲು ಒಂದು ನಿಯಮವನ್ನು ಹೇಳಿರುವಂತೆ ಅದರಿಂದ ಬಿಡುಗಡೆಹೊಂದಲಿಕ್ಕೆ ಒಂದು ಕ್ರಮವನ್ನು ಹೇಳದಿರುವುದರಿಂದ ತನ್ನ ಇಷ್ಟದಂತೆ ವರ್ತಿಸಬಹುದೆಂದು ಊಹಿಸಲವಕಾಶವಿದೆ. ಆದ್ದರಿಂದ ಹೆಂಡತಿಯಿಲ್ಲದವನಂತೆ ಆಶ್ರಮಭ್ರಷ್ಟರಾದವರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವು ಯುಕ್ತವೇ ಆಗಿದೆ ಎಂದು ಪೂರ್ವಪಕ್ಷಿಯು ಹೇಳುತ್ತಾನೆ. ಇದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಸೂತ್ರದಲ್ಲಿ ತು ಶಬ್ದವು ಪೂರ್ವಪಕ್ಷವನ್ನು ತೊಲಗಿಸುತ್ತದೆ. ನಿಷ್ಠೆಯಿಂದ ಸನ್ಯಾಸಾಶ್ರಮಕ್ಕೆ ಅಂಟಿಕೊಂಡವನಿಗೆ ಎಂದೆಂದಿಗೂ ಅದರಿಂದ ಬಿಡುಗಡೆಯೇ ಸಾಧ್ಯವಿಲ್ಲ; ಯಾಕೆಂದರೆ ಆರೀತಿಯಲ್ಲಿ ಅವನು ತನ್ನ ನಿಷ್ಠೆಯನ್ನು ಕಳೆದುಕೊಳ್ಳಲು ಅವಕಾಶವಿಲ್ಲವೆಂದು ಶಾಸ್ತ್ರವು ವಿಧಿಸುತ್ತದೆ. ಬ್ರಹ್ಮಚಾರಿಯಾಗಿ ಆಚಾರ್ಯಕುಲದಲ್ಲಿ ವಾಸಿಸುವವನು ತನ್ನನ್ನು ಸಂಪೂರ್ಣವಾಗಿ ಆಚಾರ್ಯರ ಸೇವೆಯಲ್ಲಿಯೇ ಅರ್ಪಿಸಿಕೊಳ್ಳಬೇಕೆಂದೂ, ಅವನನ್ನು ಸೇರಿದವನು ಮತ್ತೆ ತಾನಾಗಿಯೇ ಗುರುವಿನ ಅನುಮತಿ

ದಿಂದ ಸ್ಥೂಲಶರೀರದಲ್ಲಿ ಮಾಡಿದ ಪಾಪಗಳಿಗೆ ಮಾತ್ರ ಪ್ರಾಯಶ್ಚಿತ್ತ ಎಂದಿಗೂ ಸಂಭವಿಸಲಾರದು. "ಯಾವಾಗಲೂ ಶಿವನಲ್ಲಿ ನಿಷ್ಠೆಯಿಂದ ಅಂಟಿಕೊಂಡ ಯತಿಗಳಿಗೆ ಹಿಂದಿನ ಜನ್ಮದ ಪಾಪದಿಂದ ಸ್ತ್ರೀಯರಲ್ಲೂ ಧನದಲ್ಲೂ ಮಿತ್ರಾದಿಗಳಲ್ಲೂ ಮನಸ್ಸು ಅಂಟಿಕೊಂಡರೆ ಆ ದೋಷವನ್ನು ತೊಲಗಿಸಲಿಕ್ಕಾಗಿ ಅವರು ಚಾಂದ್ರಯಣವನ್ನಾಚರಿಸಬೇಕು. ಸ್ವಪ್ನದಲ್ಲಿ ಯತಿಗೆ ಸ್ತ್ರೀಸಂಭೋಗವುಂಟಾದರೆ ಆ ದೋಷದ ಶಾಂತಿಗಾಗಿ ನೂರುವೇಳೆ ಮಣ್ಣಿನಿಂದ ಸ್ನಾನಮಾಡಬೇಕು. ಯತಿಯು ಸ್ವೇಚ್ಛೆಯಿಂದ ಸ್ತ್ರೀಧನಗಳಲ್ಲಿ ಲೋಲನಾದರೆ ಭ್ರಷ್ಟನಾಗುತ್ತಾನೆ. ಅವನಿಗೆ ಪ್ರಾಯಶ್ಚಿತ್ತವೇ ಇಲ್ಲ." ಹೀಗೆ ಶಾತಾತಪದಲ್ಲಿ ವಿಸ್ತಾರವಾಗಿ ತಿಳಿಸಲಾಗಿದೆ.

ಅಸ್ಮಿನ್ನರ್ಥೇ ಪುನರ್ಹೇತ್ವಂತರಮಾಹ. ಬಹಿಸ್ತೂಭಯಥಾಪಿ ಸ್ಮೃತೇರಾಚಾರಾಚ್ಚ ॥ ೪೩ ॥ ತುಶಬ್ದೋಽತ್ರ ನಿಶ್ಚಯಾರ್ಥಕಃ. ಉಪಪಾತಕತ್ವೇ ಮಹಾಪಾತಕತ್ವೇಽಪ್ಯೇತೇ ಬಹಿರ್ಭೂತಾ ಏವ, ಬ್ರಹ್ಮವಿದ್ಯಾಧಿಕಾರಿಭ್ಯಃ ಬ್ರಹ್ಮವಿದ್ಯಾಯಾಮನಧಿಕೃತಾ ಇತ್ಯರ್ಥಃ. ಕುತಃ? ಸ್ಮೃತೇಃ ಪೂರ್ವೋಕ್ತಾತ್. ಪತನಸ್ಮರಣಾದ್ಯದ್ಯಪಿ ಕಲ್ಮಷನಿರ್ಹರಣಾಯ ಕೈಶ್ಚಿದ್ವಚನೈಃ ಪ್ರಾಯಶ್ಚಿತ್ತಾಧಿಕಾರೋ ವಿದ್ಯತೇ. ತಥಾಪಿ ಕರ್ಮಾಧಿಕಾರಾನುಗುಣಶುದ್ಧಿಹೇತುಪ್ರಾಯಶ್ಚಿತ್ತಂ ನ ಸಂಭವತಿ । "ಪ್ರಾಯಶ್ಚಿತ್ತಂ ನ ಪಶ್ಯಾಮಿ ಯೇನ ಶುದ್ಧ್ಯೇತ್ಸ ಆತ್ಮಹಾ ॥" ಇತಿ ಸ್ಮೃತೇಃ. ಆಚಾರಾಚ್ಚ. ಶಿಷ್ಟಾ ಹಿ ನೈಷ್ಠಿಕಾದೀನ್ ಭ್ರಷ್ಟಾನ್ ಕೃತಪ್ರಾಯಶ್ಚಿತ್ತಾನಪಿ ವರ್ಜಯಂತಿ, ತೇಭ್ಯೋ ಬ್ರಹ್ಮವಿದ್ಯಾದಿಕಂ ನೋಪಾದಿಶಂತಿ. ತಸ್ಮಾತ್ತೇಷಾಂ ನಾಸ್ತಿ ಬ್ರಹ್ಮವಿದ್ಯಾಯಾಮಧಿಕಾರಃ.

ಈಬಗ್ಗೆ ಬೇರೊಂದು ಕಾರಣವನ್ನು ತಿಳಿಸುತ್ತಾನೆ. ತು ಶಬ್ದವು ನಿಶ್ಚಯವನ್ನು ತಿಳಿಸುತ್ತದೆ. ಉಪಪಾತಕಿಯೇ ಆಗಲಿ ಮಹಾಪಾತಕಿಯೇ ಆಗಲಿ ಬ್ರಹ್ಮವಿದ್ಯೆಗೆ ಅಧಿಕಾರಿಯಾಗಲಾರನು. ಹೀಗೆಂದು ಸ್ಮೃತಿಯಿಂದಲೂ ಆಚರಣದಿಂದಲೂ ತಿಳಿದುಬರುತ್ತದೆ. ಪಾತಕಿಗೂ ಪಾಪಪರಿಹಾರಕ್ಕಾಗಿ ಕೆಲವುಕಡೆ ಪ್ರಾಯಶ್ಚಿತ್ತಕ್ಕೆ ಅವಕಾಶವನ್ನು ತಿಳಿಸಲಾಗಿದೆ. ಆದರೂ ಕರ್ಮಾನುಗುಣವಾಗಿ ಶುದ್ಧಿಯನುಂಟುಮಾಡುವ ಪ್ರಾಯಶ್ಚಿತ್ತವು ಸಂಭವಿಸುವುದಿಲ್ಲ. "ಆತ್ಮಹನನಮಾಡಿಕೊಳ್ಳುವವನು ಶುದ್ಧನಾಗಲಿಕ್ಕೆ ಪ್ರಾಯಶ್ಚಿತ್ತವೇ ಇಲ್ಲ" ಎಂದು ಸ್ಮೃತಿ ತಿಳಿಸಿದೆ. ನೈಷ್ಠಿಕ ಮೊದಲಾದವರು ಭ್ರಷ್ಟರಾದರೆ ಪ್ರಾಯಶ್ಚಿತ್ತವನ್ನು ಮಾಡಿಕೊಂಡರೂ ಪತಿತರೇ ಆಗುತ್ತಾರೆ. ಅವರಿಗೆ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿಲ್ಲ.

ನನು "ರಾಜಾಜ್ಞಾಭಂಗಕೃನ್ಮರ್ತ್ಯಾನಾಂ ಯಥಾ ದಂಡೋ ಭವೇದ್ಧ್ರುವಂ । ಶಿವಾಜ್ಞಾಭಂಗಕೃನ್ಮರ್ತ್ಯಾನಾಂ ದಂಡೋ ಹಿ ನರಕಸ್ತಥಾ ॥" ಇತ್ಯಾದಿಸ್ಮೃತಿಷು ಶಿವಾಜ್ಞಾರೂಪಸ್ವಾಶ್ರಮಭ್ರಷ್ಟಾನಾಂ ಸರ್ವೇಷಾಮಾಶ್ರಮಿಣಾಮಪಿ ಯಮಶಾಸನಂ ಸೂಚಿತಂ. ತಥಾಪಿ "ಸರ್ವಾ-

ಪೇಕ್ಷಾ ಚ" ಇತ್ಯಾದಿಸೂತ್ರೇ ಸ್ವಾತಂತ್ರ್ಯೇಣ ಯಜ್ಞಾದೀನಾಂ ಸ್ವಾಮಂ ಪ್ರತ್ಯಕ್ಷವತ್ ಮೋಕ್ಷಾಂಗತ್ವವ್ಯಪದೇಶಾತ್ ಅತ್ರ ಸ್ವಾಶ್ರಮಭ್ರಂಶ ದಂಡಃ ಶಿವಸ್ಯ ಪರಬ್ರಹ್ಮಣಃ ಕಥಮುಪಪನ್ನ ಇತ್ಯಾಶಂಕಾಯಾಂ ಯಜ್ಞೇಶ್ವರತ್ವಮಪಿ ಶಿವಸ್ಯೈವಾಧಿಕರಣಾಂತರೇಣ ದರ್ಶಯತಿ.

ಸ್ವಾಮ್ಯಧಿಕರಣಂ ॥೧೨॥ ಸ್ವಾಮಿನಃ ಫಲಶ್ರುತೇರಿತ್ಯಾತ್ರೇಯಃ ॥೪೪॥

"ಯಜ್ಞೋ ವೈ ವಿಷ್ಣುಃ" "ಆ ವೋ ರಾಜಾನಮಧ್ವರಸ್ಯ ರುದ್ರಗ್ಂ ಹೋತಾರಗ್ಂ ಸತ್ಯಯಜಗ್ಂ ರೋದಸ್ಯೋಃ" "ಪಶುಪತಿಃ ಪಶೂನಾಂ ಚತುಷ್ಪದಾಮುತ ಚ ದ್ವಿಪದಾಂ" ಇತ್ಯಾದಿನಾ ತೈತ್ತಿರೀಯೇ ಶ್ರೂಯತೇ. ಅತ್ರ ಯಜ್ಞಾಧಿಪತಿರ್ನಾರಾಯಣೋ ವಾ ಪರಬ್ರಹ್ಮರೂಪಶ್ಶಿವೋ ವೇತಿ ವಿಶಯಃ. "ಯಜ್ಞೋ ವೈ ವಿಷ್ಣುಃ" ಇತ್ಯಾದಿನಾ ನಾರಾಯಣಸ್ಯೈವ ಯಜ್ಞಾತ್ಮಕತ್ವೋಪದೇಶಾತ್ "ತದ್ವಿಷ್ಣೋರೇಕ ಉತ್ತಮಃ" "ಏಕ ಏವ ನಾರಾಯಣ ಆಸೀತ್ ನ ಬ್ರಹ್ಮಾ ನೇಶಾನಃ" ಇತ್ಯಾದಿಷು ನಾರಾಯಣಸ್ಯೈವ ಸರ್ವಾಧಿಕತ್ವಕಥನಾತ್, ಸ್ಮಾರ್ತಕರ್ಮಸು ಸರ್ವತ್ರ ಸಂಕಲ್ಪಾದಿಷು ವಿಷ್ಣುನಾಮಸ್ಮರಣಪೂರ್ವಕತ್ವೇನ ಕರ್ಮಾರಾಧ್ಯತ್ವಮರ್ಥಾತ್ತಸ್ಯೈವೋಪಪನ್ನಂ. ಅತಏವ ಯಜ್ಞಾತ್ಮಕತ್ವಂ ಯಜ್ಞೇಶ್ವರತ್ವಂ ಯಜ್ಞಫಲದಾತೃತ್ವಂ ಚ ತಸ್ಯೈವ ಸಮಂಜಸಮಿತಿ ಪ್ರಾಪ್ತೇ ಪ್ರಚಕ್ಷ್ಮಹೇ. ಫಲಶ್ರುತೇಃ "ಆ ವೋ ರಾಜಾನಂ" ಇತ್ಯತ್ರ ಆಧ್ವರಸ್ಯ ಯಜ್ಞಸ್ಯ ರಾಜಾನಂ ಪ್ರಭುಂ ರುದ್ರಮಿತಿ ಫಲಶ್ರವಣಾತ್ ಸ್ವಾಮಿನಶ್ಶಿವಸ್ಯ ಪರಬ್ರಹ್ಮಣಃ ಸರ್ವವಿದ್ಯೋಪಾಸ್ಯತ್ವಮಿತಿ ಆತ್ರೇಯೋ ಮನ್ಯತೇ. ಕಿಂಚ "ತ್ರಿಯಂಬಕಂ ಯಜಾಮಹೇ" ಇತ್ಯಾದಿನಾ ಯಜ್ಞೇಶ್ವರತ್ವಂ ತಸ್ಯೈವೋಪದಿಷ್ಟಂ. "ಯೋ ವೈ ಸ್ವಾಂ ದೇವತಾಮತಿಯಜತೇ ಪ್ರಸ್ವಾಯೈ ದೇವತಾಯೈ ಚ್ಯವತೇ ನ ಪರಾಂ ಪ್ರಾಪ್ನೋತಿ ಸ ಪಾಪೀಯನ್ ಭವತಿ" ಇತಿ ಸ್ವದೇವತಾತಿರಿಕ್ತದೇವತಾಂತರಯಜನೇನ ಪ್ರತ್ಯವಾಯಶ್ರವಣಾತ್. "ತದಕ್ಷರಂ ತತ್ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ಪ್ರಸೃತಾ ಪುರಾಣೀ" ಇತ್ಯಾದಿಶ್ರುತೌ ಸರ್ವವೈದಿಕಕರ್ಮಾಧಾರಗಾಯತ್ರೀಮಂತ್ರಾರ್ಥವಾಚ್ಯತ್ವಸ್ಯ ಶಿವ ಏವ ದರ್ಶನಾತ್ ನೇತರಸ್ಯ ಯಜ್ಞಾದಿಕರ್ಮಾರಾಧ್ಯತ್ವಂ ಸಂಭವತಿ. "ಏಕೋ ದೇವಸ್ಸರ್ವಭೂತೇಷು ಗೂಢಃ ಸರ್ವವ್ಯಾಪೀ ಸರ್ವಭೂತಾಂತರಾತ್ಮಾ । ಕರ್ಮಾಧ್ಯಕ್ಷಸ್ಸರ್ವಭೂತಾಧಿವಾಸಸ್ಸಾಕ್ಷೀ ಚೇತಾ ಕೇವಲೋ ನಿರ್ಗುಣಶ್ಚ," "ಯೋ ದೇವಾನಾಂ ಪ್ರಥಮೋದ್ಭವಶ್ಚ ವಿಶ್ವಾಧಿಕೋ ರುದ್ರೋ ಮಹರ್ಷಿಃ" "ಸ ನೋ ದೇವಶ್ಶುಭಯಾ ಬುದ್ಧ್ಯಾ ಸಂಯುನಕ್ತು," "ಯೋ ದೇವಾನಾಮಧಿಪೋ ಯಸ್ಮಿನ್

**ಲೋಕಾ ಅಧಿಶ್ರಿತಾಃ । ಯ ಈಶೇ ಅಸ್ಯ ದ್ವಿಪದಶ್ಚತುಷ್ಪದಸ್ತಸ್ಮೈ ದೇವಾಯ ಹವಿಷಾ ವಿಧೇಮ ॥" ಇತ್ಯಾದಿನಾ ಶ್ವೇತಾಶ್ವತರೇ ಕರ್ಮಾಧ್ಯಕ್ಷತ್ವಂ ವಿಶ್ವಾಧಿಕತ್ವಂ ಚ ತಸ್ಯೈವೋಪದೇಶಾತ್ ಸರ್ವ ಕರ್ಮಾಧಿಕತ್ವೇನ ಸರ್ವಕರ್ಮಾರಾಧಿತತ್ವೇನ ಸರ್ವಕರ್ಮಫಲಪ್ರದಾಯಕತ್ವಂ ಶಿವಸ್ಯೈವ ನಿಶ್ಚೀಯತೇ.**

"ರಾಜನ ಆಜ್ಞೆಗೆ ವಿರುದ್ಧರಾದವರಿಗೆ ಶಿಕ್ಷೆಯಾಗುವಂತೆ ಶಿವನ ಆಜ್ಞೆಯನ್ನು ಉಲ್ಲಂಘಿಸುವವರಿಗೆ ನರಕಯಾತನೆಯುಂಟಾಗುವುದು" ಎಂಬ ಸ್ಮೃತಿಯಲ್ಲಿ ಶಿವಾಜ್ಞೆ ಎನಿಸಿದ ಆಶ್ರಮಧರ್ಮಗಳನ್ನು ತೊರೆದವರೆಲ್ಲರಿಗೂ ಯಮದಂಡವನ್ನು ವಿಧಿಸಲಾಗಿದೆ. ಆದರೂ "ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್" ಎಂಬ ಸೂತ್ರದಲ್ಲಿ ಗ್ರಾಮಕ್ಕೆ ಅಶ್ವವು ನಮ್ಮನ್ನು ಒಯ್ಯುವಂತೆ ನಮಗೆ ಯಜ್ಞಾದಿಕರ್ಮಗಳು ಮೋಕ್ಷವನ್ನು ದೊರಕಿಸುತ್ತವೆ ಎಂದು ಹೇಳಿರುವುದರಿಂದ ಇಲ್ಲಿ ಆಶ್ರಮಧರ್ಮವನ್ನು ತೊರೆದಿದ್ದಕ್ಕೆ ಶಿಕ್ಷೆಯನ್ನು ವಿಧಿಸುವುದು ಶಿವನಿಗೆ ಹೇಗೆ ಹೊಂದುತ್ತದೆ? ಎಂದಾಶಂಕಿಸಿ ಶಿವನೇ ಯಜ್ಞೇಶ್ವರನೆಂದು ಇಲ್ಲಿ ತಿಳಿಸುತ್ತಾನೆ. "ಯಜ್ಞವೇ ವಿಷ್ಣುವು" "ಯಜ್ಞಕ್ಕೆ ಅಧಿಪತಿಯೂ ಸ್ವರ್ಗಭೂಮಿಗಳೆರಡಕ್ಕೂ ಹೋತೃವೂ ಸತ್ಯನಿಷ್ಠೆಯುಳ್ಳವನೂ ಆದ ರುದ್ರನನ್ನು ತಿಳಿಯೋಣ" "ನಾಲ್ಕು ಪಾದಗಳ ಮತ್ತು ಎರಡುಪಾದಗಳ ಪಶುಗಳಿಗೆ ಪತಿಯು" ಹೀಗೆ ತೈತ್ತಿರೀಯದಲ್ಲಿ ಹೇಳಲಾಗಿದೆ. ಇಲ್ಲಿ ಯಜ್ಞಾಧಿಪತಿಯು ನಾರಾಯಣನೇ? ಪರಬ್ರಹ್ಮರೂಪನಾದ ಪರಶಿವನೇ? ಎಂದು ಸಂಶಯ ಬರುತ್ತದೆ. "ಯಜ್ಞೋ ವೈ ವಿಷ್ಣುಃ" ಎಂಬಲ್ಲಿ ನಾರಾಯನೇ ಯಜ್ಞರೂಪನೆಂದು ಹೇಳಿದೆ. "ವಿಷ್ಣು ಒಬ್ಬನೇ ಉತ್ತಮನು" "ನಾರಾಯಣನೊಬ್ಬನೇ ಇದ್ದನು; ಬ್ರಹ್ಮನಾಗಲೀ ಈಶ್ವರನಾಗಲೀ ಆಗ ಇರಲಿಲ್ಲ" ಎಂಬಲ್ಲಿ ನಾರಾಯಣನೇ ಎಲ್ಲರಿಗೂ ಅಧಿಕನೆಂದು ಹೇಳಿದೆ. ಸ್ಮಾರ್ತರು ಕರ್ಮಗಳನ್ನು ಆರಂಭಿಸುವಾಗ ಸಂಕಲ್ಪದಲ್ಲಿ ವಿಷ್ಣುವಿನ ಹೆಸರನ್ನು ಹೇಳುತ್ತಾರೆ. ಆದ್ದರಿಂದ ಅವನೇ ಯಜ್ಞೇಶ್ವರನೂ ಯಜ್ಞಾತ್ಮಕನೂ ಯಜ್ಞಫಲದಾತೃವೂ ಇರುವನೆಂಬುದೇ ಸಮಂಜಸವೆಂದು ಆಕ್ಷೇಪ ಬರುತ್ತದೆ. "ಯಜ್ಞದ ಅಧಿಪತಿಯಾದ ರುದ್ರನನ್ನು ನೀವು ಎಲ್ಲಾ ಕಡೆಯೂ ಅರ್ಚಿಸಿರಿ" ಎಂಬಲ್ಲಿ ರುದ್ರನೇ ಯಜ್ಞದ ಪ್ರಭುವೆಂದು ಯಜ್ಞಫಲವನ್ನು ತಿಳಿಸಿರುವುದರಿಂದ ಪರಶಿವನೇ ಬ್ರಹ್ಮವಿದ್ಯೆಗಳೆಲ್ಲದರಲ್ಲೂ ಉಪಾಸ್ಯನೆನಿಸಿರುವುದಾಗಿ ಆತ್ರೇಯನು ಹೇಳುತ್ತಾನೆ. "ತ್ರಿಯಂಬಕಂ ಯಜಾಮಹೇ" ಎಂಬ ಮಂತ್ರವು ತ್ರಿಯಂಬಕನೆನಿಸಿದ ಶಿವನನ್ನೇ ಯಜ್ಞೇಶ್ವರನೆಂದು ತಿಳಿಸುತ್ತದೆ. "ಯಾವನು ತನ್ನ ಉಪಾಸ್ಯದೇವತೆಯನ್ನು ತೊರೆದು ಬೇರೆ ದೇವತೆಯಲ್ಲಿಗೆ ಓಡುತ್ತಾನೋ ಅವನು ಆ ದೇವತೆಯಿಂದಲೂ ಹೊರಗಾಗಿ ಪಾಪಿಷ್ಠನಾಗುತ್ತಾನೆ" ಹೀಗೆ ತನ್ನ ದೇವತೆಯನ್ನು ಬಿಟ್ಟು ಬೇರೆ ದೇವತೆಯನ್ನು ಅರ್ಚಿಸುವುದು ಪಾಪವೆಂದು ಪರಿಗಣಿತವಾಲಾಗಿದೆ. "ಸರ್ವಪ್ರಕಾಶನಾದ ಸೂರ್ಯನಿಗೂ ಪ್ರಕಾಶಕನಾಗಿ ಅಕ್ಷರನೆನಿಸಿದ ಶಿವನಿಂದ ಪ್ರಜ್ಞಾಶಕ್ತಿಯು ಹೊರ

ಹೊಮ್ಮಿತು." ಎಂಬ ಶ್ರುತಿಯಲ್ಲಿ ಎಲ್ಲಾ ವೈದಿಕಕರ್ಮಗಳಿಗೂ ಆಧಾರವಾದ ಗಾಯತ್ರೀ ಮಂತ್ರವು ಶಿವನನ್ನೇ ಪ್ರತಿಪಾದಿಸುವುದರಿಂದ ಶಿವನಲ್ಲದೆ ಬೇರೆ ಯಾರೂ ಯಜ್ಞವೇ ಮೊದಲಾದ ಎಲ್ಲಾ ಕರ್ಮಗಳಲ್ಲೂ ಆರಾಧ್ಯನಾಗಲಾರನು. "ಎಲ್ಲಾ ಪ್ರಾಣಿಗಳಲ್ಲಿ ಒಬ್ಬ ದೇವನೇ ಗೂಢವಾಗಿ ನೆಲಸಿದ್ದಾನೆ. ಅವನೇ ಎಲ್ಲೆಲ್ಲೂ ವ್ಯಾಪಿಸಿ ಎಲ್ಲರೊಳಗೂ ಅಂತರಾತ್ಮನಾಗಿದ್ದಾನೆ. ಎಲ್ಲಕ್ಕೂ ಅಧ್ಯಕ್ಷನಾಗಿ ಎಲ್ಲರೊಡನೆ ವಾಸಿಸುತ್ತ ಸಾಕ್ಷಿಯೂ ಕೇವಲನೂ ನಿರ್ಗುಣನೂ ಆದ ಚೈತನ್ಯನಾಗಿದ್ದಾನೆ". "ರುದ್ರನೇ ಜ್ಞಾನಿಯಾಗಿ ಎಲ್ಲರಿಗೂ ಮೊದಲಿಗೆ ಇದ್ದು ಎಲ್ಲಕ್ಕೂ ಅಧಿಕನೆನಿಸಿದ್ದಾನೆ". "ಆ ದೇವನು ನಮಗೆ ಒಳ್ಳೆಯ ಬುದ್ಧಿಯನ್ನು ಕೊಡಲಿ" "ಯಾವನು ದೇವತೆಗಳಿಗೂ ಅಧಿಕನೋ ಯಾವನಿಂದ ಲೋಕಗಳು ವಾಸಿಸುತ್ತವೆಯೋ, ಯಾವನು ಈ ಜೀವರೆಲ್ಲರಿಗೂ ಈಶ್ವರನೋ ಅಂತಹ ದೇವನಿಗೆ ಹವಿಸ್ಸನ್ನು ಅರ್ಪಿಸೋಣ" ಎಂದು ಶ್ವೇತಾಶ್ವತರದಲ್ಲಿ ದೇವನೆಂದರೆ ಕರ್ಮಗಳಿಗೆ ಸಾಕ್ಷಿಯೂ ವಿಶ್ವಕ್ಕೆ ಅಧಿಕನೂ ಆದ್ದರಿಂದ ಪರಮಶಿವನೆಂದು ಸ್ಪಷ್ಟವಾಗಿ ಹೇಳಲಾಗಿದೆ. ಆದ್ದರಿಂದ ಶಿವನೇ ಎಲ್ಲ ಕರ್ಮಗಳಲ್ಲೂ ಆರಾಧ್ಯನೆಂದೂ ಎಲ್ಲಕ್ಕೂ ಫಲಗಳನ್ನು ಕೊಡುವವನೆಂದೂ ನಿಶ್ಚಯಿಸಲಾಗಿದೆ.

ಅಸ್ಮಿನ್ನರ್ಥೇ ಹೇತ್ವಂತರಮಾಹ. ಆರ್ತ್ವಿಜ್ಯಮಿತ್ಯೌಡುಲೋಮಿಸ್ತಸ್ಮೈ ಹಿ ಪರಿಕ್ರೀಯತೇ ॥ ೪೫ ॥ "ಇಮಂ ಪಶುಂ ಪಶುಪತೇ ತೇಽದ್ಯ ಬಧ್ನಾಮ್ಯಗ್ನೇ ಸುಕೃತಸ್ಯ ಮಧ್ಯೇ ಅನುಮನ್ಯಸ್ವ ಸುಯಜಾ ಯಜಾಮ" "ಜುಷ್ಟಂ ದೇವಾನಾಮಿದಮಸ್ತು ಹವ್ಯಂ" ಇತ್ಯತ್ರ ಆರ್ತ್ವಿಜ್ಯಂ ಋತ್ವಿಕ್ಸಂಬಂಧಂ ಪಶುಬಂಧನಾತ್ಮಕೋಪಕರಣಕರ್ಮಣಿ ಚ ಪಶುಪುರೋಡಾಶಂ ಪರಮಶಿವಸಮರ್ಪಣತ್ವೇನ ದೇವತಾರ್ಹತ್ವ ವ್ಯವಸ್ಥಾಪನಾತ್ ಸರ್ವವಿದ್ಯೋಪಾಸ್ಯತ್ವಂ ಶಿವಸ್ಯೈವ ಸಮುಚಿತಮಿತಿ ಔಡುಲೋಮ್ಯಾಚಾರ್ಯೋ ಮನ್ಯತೇ. ಕುತಃ? ತಸ್ಮೈ ಹಿ ಪರಿಕ್ರೀಯತೇ, "ಯೋ ರುದ್ರೋ ಅಗ್ನೌ" ಇತ್ಯಾದಿಷು ಸರ್ವಾಂತರ್ಯಾಮಿತ್ವಂ, "ಸರ್ವೋ ವೈ ರುದ್ರಃ" ಇತಿ ಸರ್ವಾತ್ಮಕತ್ವಂ, "ವಿಶ್ವಾಧಿಕೋ ರುದ್ರೋ ಮಹರ್ಷಿಃ" ಇತ್ಯಾದೌ ವಿಶ್ವಾಧಿಕತ್ವಂ ಚ ತಸ್ಯೈವೋಪದೇಶಾತ್ ಇಂದ್ರೋಪೇಂದ್ರದಿನೇಂದ್ರಚಂದ್ರಾದಿದೇವತಾದತ್ತಹವಿಷ್ಯಾದಿಕಂ ಶಿವೇ ಹಿ ಪರಿವರ್ತತೇ. ತಸ್ಮಾತಸ್ಸರ್ವಕರ್ಮಾಧ್ಯಕ್ಷತ್ವಂ ನೇತರಸ್ಯೋಪಪನ್ನಂ. ಕಿಂಚ "ಋತ್ವಿಜೋ ವೃಣೀತೇ" "ಋತ್ವಿಗ್ಭ್ಯೋ ದಕ್ಷಿಣಾಂ ದದಾತಿ" "ಋತ್ವಿಕ್ಕರ್ತೃಕತ್ವಶಾಸ್ತ್ರೇಣ ಫಲಸಾಧನಭೂತಂ ಸಾಂಗಂ ಕರ್ಮ ಋತ್ವಿಗ್ಭಿರನುಷ್ಠೇಯಂ" ಇತ್ಯವಗಮ್ಯತೇ. ತದಂತರ್ಗತಾನಿ ಕಾಯಿಕಾನಿ ಮಾನಸಾನಿ ಚ ಕರ್ಮಾಣಿ ಋತ್ವಿಕ್ಕರ್ತೃಕಾಣ್ಯೇವ, ತಥಾಪಿ ತತ್ಫಲಂ ತತ್ಸ್ವಾಮಿನಃ ಸಂಭವತಿ. ತದ್ವದ್ಯಾಗೀಯಪ್ರಕರಣಪಠಿತೇಂದ್ರಾದಿದೇವತಾದತ್ತಸ್ವರ್ಗಾದಿಫಲಭೋಗೋಽಪಿ ತದಂ

ತರ್ಯಾಮಿತ್ವೇನ ತನ್ನಿಯಾಮಕಶಿವಸ್ಯೈವೋಪದಿಶ್ಯತೇ. ತಸ್ಮಾತ್ "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ" ಇತ್ಯಾದೌ ಜ್ಯೋತಿಷ್ಟೋಮಸ್ಯ ಸ್ವರ್ಗಫಲಕತ್ವೇಽಪಿ ತತ್ಸ್ವರ್ಗಸ್ಯೇಂದ್ರದೇವತಾ ಪ್ರಾಧಾನ್ಯೇಽಪಿ "ಯಜ್ಞಕರ್ತಾ ಚ ದೇವೇಂದ್ರೋ ವೇದಕರ್ತಾ ಚ ವಾಕ್ಪತಿಃ । ಅಹಮೇವ ಜಗತ್ಕರ್ತಾ ಮಮ ಕರ್ತಾ ಮಹೇಶ್ವರಃ" ಇತಿ ವಿಷ್ಣುನಾ ಯಜ್ಞಕರ್ತೃತ್ವಸ್ಯೇಂದ್ರ ಏವ ಸ್ಕಾಂದೇ ಪ್ರತಿಪಾದಿತತ್ವೇಽಪಿ ಪಾಕಶಾಸನಾತಿರಿಕ್ತಶಿವಸ್ಯ ಪರಬ್ರಹ್ಮಣಃ ಯಜ್ಞಕರ್ತೃತ್ವವಿಧಾಯಕ ಶ್ರುತಿಸ್ಮೃತಿಪುರಾಣಾನಾಂ ಪ್ರಾಮಾಣ್ಯಂ ನ ವಿರುಧ್ಯತೇ. "ಯಜ್ಞೋ ವೈ ವಿಷ್ಣುಃ" ಇತ್ಯತ್ರ ಶಿವಶಕ್ತ್ಯಾತ್ಮಕವಿಷ್ಣೋರ್ಯಜ್ಞ ಮಯತ್ವಂ. "ಆ ವೋ ರಾಜಾನಂ ಅಧ್ವರಸ್ಯ ರುದ್ರಗ್ಂ" ಇತ್ಯತ್ರ ರುದ್ರಸ್ಯ ಯಜ್ಞಾಧಿಪತಿತ್ವಸ್ಯಾಸಂಕುಚಿತತ್ವೇನ ನಿರ್ದೇಶಾತ್ ಯಜ್ಞಾತ್ಮಕಸ್ಯ ಯಜ್ಞಪತಿತ್ವಮಯುಕ್ತ ಮಿತಿ ಸಿದ್ಧಂ.

ಈ ಬಗ್ಗೆ ಬೇರೊಂದು ಕಾರಣವನ್ನು ತಿಳಿಸುತ್ತಾನೆ. "ಪಶುಪತಿಯೇ, ಈ ಪರಿಷ್ಕೃತವಾದ ಯಜ್ಞಭೂಮಿಯಲ್ಲಿ ಈ ಪಶುವನ್ನು ನಿನಗಾಗಿ ಕಟ್ಟುತ್ತೇನೆ. ನೀನು ದಯವಿಟ್ಟು ಇದನ್ನು ಒಪ್ಪಿಸಿಕೋ. ಬಹಳ ಸಂತೋಷದಿಂದ ನಿನ್ನನ್ನು ಆರಾಧಿಸುತ್ತೇವೆ'' "ಈ ಹವಿಸ್ಸು ದೇವತೆಗಳಿಗೆ ಪ್ರಿಯವಾಗಲಿ" ಇಲ್ಲಿ ಋತ್ವಿಜರಿಗೆ ಸಂಬಂಧಿಸಿದ ಪಶುಬಂಧಾತ್ಮಕವಾದ ಕರ್ಮದಲ್ಲಿ ಪಶುವೆಂಬ ಹವಿಸ್ಸನ್ನು ಪರಶಿವನಿಗೆ ಅರ್ಪಿಸಬೇಕೆಂದು ಹೇಳಿರುವುದರಿಂದಲೂ, ಅದೂ ಸಹ ದೇವತಾಸ್ವರೂಪವೇ ಆದ್ದರಿಂದಲೂ ಎಲ್ಲಾ ಬ್ರಹ್ಮವಿದ್ಯೆಗಳಲ್ಲೂ ಶಿವನೇ ಉಪಾಸ್ಯನೆಂಬುದು ಯುಕ್ತವೆಂದು ಔಡುಲೋಮ್ಯಾಚಾರ್ಯನು ಹೇಳುತ್ತಾನೆ. ರುದ್ರಾಧ್ಯಾಯದಲ್ಲಿ ಶಿವನೇ ಸರ್ವಾಂತರ್ಯಾಮಿ ಎಂದೂ ಸರ್ವಾತ್ಮಕನೆಂದೂ ವಿಶ್ವಾಧಿಕನೆಂದೂ ಹೇಳಲಾಗಿದೆ. ಇಂದ್ರ ವಿಷ್ಣು ಸೂರ್ಯ ಚಂದ್ರ ಮೊದಲಾದ ದೇವತೆಗಳಿಗೆ ಕೊಟ್ಟ ಹವಿಸ್ಸೂ ಸಹ ಶಿವನಿಗೇ ಸೇರುತ್ತದೆಯಾದ್ದರಿಂದ ಶಿವನೇ ಎಲ್ಲಕರ್ಮಗಳಿಗೂ ಅಧ್ಯಕ್ಷನೆನಿಸಿದ್ದಾನೆ. "ಋತ್ವಿಕ್ಕುಗಳನ್ನು ಆರಿಸುತ್ತಾನೆ" "ಋತ್ವಿಜರಿಗೆ ದಕ್ಷಿಣೆಯನ್ನು ಕೊಡುತ್ತಾನೆ" "ಫಲವನ್ನು ಕೊಡುವಂತಹ ಯಜ್ಞಾದಿಕರ್ಮಗಳನ್ನು ವಿಹಿತಮಾರ್ಗದಲ್ಲಿ ಋತ್ವಿಜರೇ ನಡೆಸಬೇಕು" ಹೀಗೆ ಶ್ರುತಿಯಲ್ಲಿ ಹೇಳಿದೆ. ಇಲ್ಲಿ ಹೇಳಿರುವ ಕಾಯಿಕ ಮಾನಸಿಕ ಕರ್ಮಗಳೆಲ್ಲವೂ ಋತ್ವಿಜರಿಂದಲೇ ಆಗಬೇಕಾದವು. ಆದರೂ ಅವುಗಳ ಫಲವೆಲ್ಲವೂ ಯಜಮಾನನಿಗೇ ಸಂಭವಿಸುತ್ತದೆ. ಹಾಗೆಯೇ ಯಾಗದಲ್ಲಿ ಹೇಳಿದ ಇಂದ್ರ ಮೊದಲಾದ ದೇವತೆಗಳು ಅನುಗ್ರಹಿಸುವ ಸ್ವರ್ಗಾದಿಫಲಗಳ ಭೋಗವೂ ಸಹ ಅವರೊಳಗೆ ಅಂತರ್ಯಾಮಿಯಾದ ಪರಶಿವನಿಗೇ ಅನ್ವಯಿಸುತ್ತದೆ. ಆದ್ದರಿಂದ "ಸ್ವರ್ಗಾಪೇಕ್ಷೆಯು ಜ್ಯೋತಿಷ್ಟೋಮವನ್ನಾಚರಿಸಬೇಕು" ಎಂಬಲ್ಲಿ ಜ್ಯೋತಿಷ್ಟೋಮವು ಸ್ವರ್ಗ ಫಲವನ್ನು ಕೊಡುವುದಾದರೂ, ಆ ಸ್ವರ್ಗಕ್ಕೆ ಇಂದ್ರನೇ ಪ್ರಧಾನದೇವತೆಯಾಗಿ

ದ್ವರೂ, “ ದೇವೇಂದ್ರನು ಯಜ್ಞಕರ್ತನೂ, ಬ್ರಹ್ಮನು ವೇದಕರ್ತನೂ, ನಾನು ಜಗ ತ್ಕರ್ತನೂ ಆಗಿದ್ದರೆ ನನಗೆ ಮಹೇಶ್ವರನು ಕರ್ತನು” ಎಂದು ವಿಷ್ಣುವೇ ಇಂದ್ರನಿಗೆ ಯಜ್ಞಕರ್ತನೆಂದು ಸ್ಕಂದಪುರಾಣದಲ್ಲಿ ಹೇಳಿದ್ದರೂ ಸಹ ಇಂದ್ರನಿಗಿಂತ ಬೇರೆ ಪರ ಶಿವಬ್ರಹ್ಮವೇ ಯಜ್ಞಕರ್ತನೆಂದು ತಿಳಿಸುವ ಶ್ರುತಿಸ್ಮೃತಿಪುರಾಣಗಳ ಪ್ರಾಮಾಣ್ಯಕ್ಕೆ ಯಾವ ಅಡಚಣೆಯೂ ಸಂಭವಿಸುವುದಿಲ್ಲ. “ ವಿಷ್ಣುವೇ ಯಜ್ಞ ” ವೆಂಬಲ್ಲಿ ಶಿವನ ಶಕ್ತಿರೂಪನಾದ ವಿಷ್ಣುವೇ ಯಜ್ಞಸ್ವರೂಪನಾಗಿರುವನೆಂದೂ, “ರಾಜಾನಂ ಅಧ್ವರಸ್ಯ ರುದ್ರಂ” ಎಂಬಲ್ಲಿ ರುದ್ರನೇ ಯಜ್ಞದ ರಾಜನೆಂದೂ ಸ್ಪಷ್ಟವಾಗಿ ಹೇಳಿರುವುದರಿಂದ ಯಜ್ಞಾತ್ಮಕನಾದ ವಿಷ್ಣುವು ಯಜ್ಞಪತಿಯಾಗುವನೆಂಬುದು ಯುಕ್ತವಲ್ಲವೆಂದು ಸಿದ್ಧವಾಯಿತು.

ಅಸ್ಮಿನ್ನರ್ಥೇ ಪುನರ್ಹೇತ್ವಂತರಮಾಹ. ಶ್ರುತೇಶ್ಚ ॥ ೪೬ ॥ “ ಈಶಾನಸ್ಸರ್ವವಿದ್ಯಾನಾಮೀಶ್ವರಸ್ಸರ್ವಭೂತಾನಾಂ ಬ್ರಹ್ಮಾಧಿಪತಿ ರ್ಬ್ರಹ್ಮಣೋಽಧಿಪತಿಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಂ ” ಇತ್ಯಾದೌ ಸರ್ವವಿದ್ಯಾಸರ್ವಜೀವನಿಯಾಮಕತ್ವಸ್ಯ ಶಿವ ಏವಾವಗಮಾತ್ ಕರ್ಮಬ್ರಹ್ಮೋಪಾಸನಾಫಲಪ್ರದಾತೃತ್ವಂ ಶಿವಸ್ಯೈವ ಸಿದ್ಧಂ.

ಈ ಬಗ್ಗೆ ಬೇರೊಂದು ಕಾರಣವಿದೆ. “ ಎಲ್ಲಾ ವಿದ್ಯೆಗಳಿಗೂ ಪ್ರೇರಕನಾಗಿ, ಎಲ್ಲಾ ಜೀವರಿಗೂ ಈಶ್ವರನಾಗಿ, ಸಾಕಾರಮೂರ್ತಿಗೂ ಅಧಿಪತಿಯಾಗಿ, ಚತುರ್ಮುಖ ನಿಗೂ ನಿಯಾಮಕನಾಗಿ ಪರಬ್ರಹ್ಮಸ್ವರೂಪನಾದ ಪರಶಿವನು ನನಗೆ ಸದಾಶಿವನೆನಿ ಸಲಿ ” ಎಂಬಲ್ಲಿ ಎಲ್ಲ ವಿದ್ಯೆಗಳಿಗೂ ಎಲ್ಲ ಜೀವರಿಗೂ ನಿಯಮಕನಾಗುವನೆಂಬುದು ಶಿವನಿಗೇ ಅನ್ವಯಿಸುವುದರಿಂದ ಎಲ್ಲಾ ಬಗೆಯ ಉಪಾಸನಗಳಿಗೂ ಫಲವನ್ನು ಕೊಡು ವವನು ಶಿವನೆಂದೇ ಸಿದ್ಧವಾಯಿತು.

ನನು ಪರಮೇಶ್ವರಾರ್ಪಿತಯಜ್ಞದಾನತಪಃಪೂಜಾದಿನಾ ಶುದ್ಧಾಂ ತಃಕರಣಾನಾಂ ಬ್ರಹ್ಮೋಪಾಸಕಾನಾಂ ಶಮದಮಾದಿವನ್ಮಾನನಿಷ್ಠಾ ವಶ್ಯಕತ್ವಂ ಉತ ಪಾಣಿನೀಯಕಾಣಾದಶಾಸ್ತ್ರಾದಿವದ್ವಾಗಾಡಂಬರತ್ವ ಪ್ರಾಧಾನ್ಯಂ ಇತ್ಯಾಶಂಕಾಯಾಮಧಿಕರಣಾಂತರಂ ದರ್ಶಯತಿ. ಸಹ ಕಾರ್ಯಾಂತರವಿಧ್ಯಧಿಕರಣಂ ॥ ೧೩ ॥ ಸಹಕಾರ್ಯಾಂತರವಿಧಿಃ ಪಕ್ಷೇಣ ತೃತೀಯಂ ತದ್ವತೋ ವಿದ್ಯಾದಿವತ್ ॥ ೪೭ ॥ ವಿದ್ಯಾದಿವತ್ ವಿದ್ಯಾದೌ ಕರ್ಮಕಾಂಡೇ ಯಥಾ ಗೃಹಸ್ಥಾಶ್ರಮವತಃ ಸಾಗ್ನಿಹೋತ್ರಾದೀನಿ ಬಹೂನಿ ಕರ್ಮಾಣಿ ಸ್ವರ್ಗಫಲೋದ್ದೇಶೇನ ವಿಹಿತಾನಿ ಏವಂ ತದ್ವತಃ ಬ್ರಹ್ಮವಿದ್ಯಾವತಃ ಪುರುಷಸ್ಯ “ ತಸ್ಮಾದ್ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ ” ಇತಿ ಜ್ಞಾನಕಾಂಡಶ್ರುತೌ ಸಹಕಾರ್ಯಾಂತರವಿಧಿಃ. ಶಮದಮಾದ್ಯಪೇಕ್ಷಯಾ ಸಹಕಾರ್ಯಾಂತರಾಣಾಂ ಶ್ರವಣಮನನನಿದಿ ಧ್ಯಾಸನಾನಾಂ ಪರಶಿವಬ್ರಹ್ಮಸಾಕ್ಷಾತ್ಕಾರೋದ್ದೇಶೇನ ವಿಧಿರಂಗೀ

ಕರ್ತವ್ಯಃ. ತತ್ರ ತ್ರಯಾಣಾಂ ಮಧ್ಯೇ ಶ್ರವಣಮನನೇ ಸರ್ವೇಷಾಮಪಿ ತತ್ಸಾಕ್ಷಾತ್ಕಾರಕಾಮಾನಾಂ ಬಹುಕಾಲಮನುಷ್ಠಾತವ್ಯೇ. ತೃತೀಯಂ ನಿದಿಧ್ಯಾಸನಂ ತು ಪಕ್ಷೇಣ ಕಾಲಪರಿಪಾಕತ್ವೇನ ಅನುಷ್ಠೇಯಂ. ಸಾಧಕಾನಾಂ ಶ್ರವಣಮನನಾನಂತರಮಪಿ ಬ್ರಾಹ್ಮಣತ್ವಕ್ಷತ್ರಿಯತ್ವಾದಿವರ್ಣಾಭಿಮಾನಃ, ಬ್ರಹ್ಮಚಾರಿಗೃಹಸ್ಥಾಶ್ರಮತ್ವಾದ್ಯಾಶ್ರಮಾಭಿಮಾನಃ, ಜಾತಿಕುಲಾದ್ಯಭಿಮಾನಃ. "ಸ್ಥೂಲೋಽಹಂ ಕೃಶೋಽಹಂ ಕರ್ತಾಽಹಂ ಭೋಕ್ತಾಽಹಂ" ಇತ್ಯೇವಂವಿಧೋ ದೇಹಾಭಿಮಾನೋ ದೃಢೋ ವರ್ತತೇ. ತಸ್ಮಾತ್ತೇಷಾಂ ಪ್ರಶಮನಾಯ ನಿದಿಧ್ಯಾಸನಂ ಕರ್ತವ್ಯಂ. ಯೇಷಾಂ ತ್ವತಿವಿಶುದ್ಧಾಂತಃಕರಣಾನಾಂ ದೇಹಾದ್ಯಭಿಮಾನಃ ಶ್ರವಣಮನನಾಭ್ಯಾಸಾದೇವ ಶಿಥಿಲೀಭೂತಸ್ತೇಷಾಂ ಸ್ವಲ್ಪಕಾಲನಿದಿಧ್ಯಾಸನೇನೈವ ತತ್ಸಾಕ್ಷಾತ್ಕಾರಸಂಭವಾತ್ ಬಹುಕಾಲನಿದಿಧ್ಯಾಸನಮಕರ್ತವ್ಯಮಿತಿ ಸೂತ್ರಾರ್ಥಃ. ಕಹೋಲಬ್ರಾಹ್ಮಣೇ ಶ್ರೂಯತೇ. "ತಸ್ಮಾದ್ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇತ್", "ಬಾಲ್ಯಂ ಚ ಪಾಂಡಿತ್ಯಂ ಚ ನಿರ್ವಿದ್ಯಾಥ ಮುನಿಃ" ಇತ್ಯತ್ರ ಬಾಲ್ಯಪಾಂಡಿತ್ಯವನ್ಮೌನಮಪಿ ವಿಧೀಯತೇ. ಉತ ಬಹೂಪನಿಷತ್ತಾತ್ಪರ್ಯನಿರ್ಣಯರೂಪಂ ಪಾಂಡಿತ್ಯಂ ನಿಶ್ಶೇಷೇಣ ಸಂಪಾದ್ಯ ಬಾಲ್ಯೇನ ರಾಗದ್ವೇಷಾದಿರಹಿತತ್ವಾತ್ ಬಾಲ್ಯಸದೃಶೇನಾವಸ್ಥಾಂತರೇಣ ಅವತಿಷ್ಠೇತ. ತತಃ ಪಾಂಡಿತ್ಯಂ ಬಾಲ್ಯೇ ನಿಶ್ಶೇಷಂ ಸಂಪಾದ್ಯ "ಅಥ ಮುನಿಃ" ಇತ್ಯತ್ರ ಪಾಂಡಿತ್ಯಬಾಲ್ಯವನ್ಮೌನಮಪಿ ವಿಧೀಯತೇ ನವಾ? ಇತಿ ಸಂಶಯಃ. ಮೌನಪಾಂಡಿತ್ಯಶಬ್ದಯೋರ್ಜ್ಞಾನಾರ್ಥತ್ವಾತ್ "ಪಾಂಡಿತ್ಯಂ ನಿರ್ವಿದ್ಯ" ಇತಿ ವಿಹಿತಮೇವ ಜ್ಞಾನಂ "ಅಥ ಮುನಿಃ" ಇತ್ಯನೂದ್ಯತೇ. ವಿಧಿಶಬ್ದೋ ನ ಹ್ಯತ್ರ ಶ್ರೂಯತೇ ಇತ್ಯೇವಂ ಪ್ರಾಪ್ತೇ ವದಾಮಃ. ಸಹಕಾರ್ಯಂತರವಿಧಿಃ ತದ್ವತಃ ವಿದ್ಯಾವತಃ ವಿದ್ಯಾದಿವತ್ ವಿಧೀಯತೇ. ಯಜ್ಞಾದಿಸರ್ವಾಶ್ರಮಧರ್ಮಾಃ ಶಮದಮಾದಿಶ್ಚ ವಿಧಿಶಬ್ದೇನೋಚ್ಯತೇ. ಆದಿಶಬ್ದೇನ ಶ್ರವನಮನನೇ ಗೃಹ್ಯೇತೇ. ಸಹಕಾರ್ಯಂತರವಿಧಿರಿತ್ಯತ್ರಾಪಿ ವಿಧೀಯತ ಇತಿ ವಿಧಿಃ. ಸಹಕಾರ್ಯಂತರಂ ವಿಧಿಶ್ಚೇತಿ ಸಹಕಾರ್ಯಂತರವಿಧಿಃ. ಏತದುಕ್ತಂ ಭವತಿ. ಯಥಾ "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ," "ಯಜ್ಞೇನ ದಾನೇನ" ಇತ್ಯಾದಿನಾ, "ಶಾಂತೋ ದಾಂತಃ" ಇತ್ಯಾದಿನಾ ಚ ಸಹಕಾರೀ ಯಜ್ಞಾದಿಃ ಶಮದಮಾದಿಶ್ಚ ವಿಧೀಯತೇ. ಯಥಾ ಚ "ಶ್ರೋತವ್ಯೋ ಮಂತವ್ಯಃ" ಇತಿ ಶ್ರವಣಮನನೇ ಚ ಅರ್ಥಪ್ರಾಪ್ತೇ ವಿದ್ಯಾಸಹಕಾರಿತ್ವೇನ ಗೃಹ್ಯೇತೇ ತಥಾ "ತಸ್ಮಾದ್ಬ್ರಾ

ಹ್ಮಣಃ ಪಾಂಡಿತ್ಯಂ ನಿರ್ವಿದ್ಯ” ಇತ್ಯಾದಿನಾ “ಪಾಂಡಿತ್ಯಂ ಬಾಲ್ಯಂ ಮೌನಂ” ಇತಿ ತ್ರಯಂ ಬ್ರಹ್ಮವಿದ್ಯಾಯಾಃ ಸಹಕಾರ್ಯಂತರಂ ವಿಧೀಯತ ಇತಿ ಮೌನಂ ಚ ಪಾಂಡಿತ್ಯಾದರ್ಥಾಂತರಮಿತ್ಯಾಹ. ಪಕ್ಷೇಣೇತಿ ಮುನಿಶಬ್ದಸ್ಯ ಪಕ್ಷೇಣ ಪ್ರಕೃಷ್ಟಮನನಶೀಲೇ ವ್ಯಾಸಾದೌ ಪ್ರಯೋಗದರ್ಶನಾತ್ ಮೌನಂ ಪಾಂಡಿತ್ಯಬಾಲ್ಯಯೋರ್ದ್ವಯೋಸ್ತೃತೀಯಂ. ಯದ್ಯಪಿ “ಅಥ ಮುನಿಃ ಇತ್ಯತ್ರ ವಿಧಿಪ್ರತ್ಯಯೋ ನ ಶ್ರೂಯತೇ. ತಥಾಪಿ ಮೌನಸ್ಯಾಪ್ರಾಪ್ತತ್ವಾತ್ ವಿಧೇಯತ್ವಮಂಗೀಕರಣೀಯಂ “ಅಥ ಮುನಿಃ ಸ್ಯಾತ್” ಇತಿ. ಇದಂ ಚ ಮೌನಂ ಶ್ರವಣಪ್ರತಿಷ್ಠಾರ್ಥಾನ್ಮನನಾತ್ ಅರ್ಥಾಂತರಭೂತಂ, ಉಪಾಸನಾಲಂಬನಸ್ಯ ಪುನಃಪುನಃ ಸಂಶೀಲನಂ ತದ್ಭಾವನಾರೂಪಂ. ಅಯಮೇವಾತ್ರ ವಾಕ್ಯಾರ್ಥಃ ಬ್ರಾಹ್ಮಣಃ ವಿದ್ಯಾವಾನ್ ಪಾಂಡಿತ್ಯಂ ನಿರ್ವಿದ್ಯ ಉಪಾಸ್ಯಂ ಬ್ರಹ್ಮತತ್ತ್ವಂ ಪರಿಶುದ್ಧಂ ಪರಿಪೂರ್ಣಂ ಚ ವಿದಿತ್ವಾ ಶ್ರವಣಮನನಾಭ್ಯಾಂ ಪ್ರಾಪ್ತಂ ವೇದನಂ ಪ್ರತಿಲಭ್ಯೇತ್ಯತ್ರ. ತಚ್ಚ ಭಗವದ್ಭಕ್ತಿಕೃತಸತ್ತ್ವವಿವೃದ್ಧಿಕೃತಂ. ಯಥೋಕ್ತಂ “ನಾಹಂ ವೇದೈಃ” ಇತ್ಯಾರಭ್ಯ “ಭಕ್ತ್ಯಾ ತ್ವನನ್ಯಯಾ ಶಕ್ಯಃ ಅಹಂ ಏವಂವಿಧೋಽರ್ಜನ” ಇತಿ. ಶ್ರುತಿಶ್ಚ “ಯಸ್ಯ ದೇವೇ ಪರಾಭಕ್ತಿಃ ಯಥಾ ದೇವೇ ತಥಾ ಗುರೌ,” “ನಾಯಮಾತ್ಮಾ ಪ್ರವಚನೇನ ಲಭ್ಯಃ” ಇತ್ಯಾದಿನಾ. “ಬಾಲ್ಯೇನ ತಿಷ್ಠಾಸೇತ್” ಇತಿ ಬಾಲ್ಯಸ್ವರೂಪಂ ಚಾನಂತರಮೇವ ವಕ್ಷ್ಯತೇ. “ಬಾಲ್ಯಂ ಚ ಪಾಂಡಿತ್ಯಂ ಚ ನಿರ್ವಿದ್ಯಾಥ ಮುನಿಃ ಸ್ಯಾತ್” ಬಾಲ್ಯಪಾಂಡಿತ್ಯೇ ಯಥಾವದುಪಾದಾಯ ಪರಿಶುದ್ಧೇ ಪರಿಪೂರ್ಣೇ ಪರಶಿವಬ್ರಹ್ಮಣಿ ಮನನಶೀಲೋ ಭವೇತ್. ನಿದಿಧ್ಯಾಸನರೂಪವಿದ್ಯಾವ್ಯಾವೃತ್ತಯೇ ಏವಮೇವ ತ್ರಿತಯೋಪಾದಾನಲಬ್ಧವಿದ್ಯೋ ಭವತೀತ್ಯಾಹ “ಅಮೌನಂ ಮೌನಂ ಚ ನಿರ್ವಿದ್ಯಾಥ ಬ್ರಾಹ್ಮಣಃ” ಇತಿ. ಅಮೌನಂ ಮೌನೇತರಸಹಕಾರಿಕಲಾಪಃ. ತಂ ಚ ಮೌನಂ ಚ ಯಥಾವದುಪಾದಾನೋ ವಿದ್ಯಾಕಾಷ್ಠಾಂ ತದೇಕನಿಷ್ಠಾಂ ಅಲಂಭ್ಯೇತ್ಯರ್ಥಃ. “ಸ ಬ್ರಾಹ್ಮಣಃ ಕೇನ ಸ್ಯಾತ್” ಇತ್ಯುಕ್ತಾದುಪಾಯಾತ್ಕಿಮನ್ಯೋಽಪ್ಯುತ್ಪಾದನೀಯೋಽಸ್ತಿ? ಇತಿ ಪೃಷ್ಟೇ ಯೇನ ಸ್ಯಾತ್ ತೇನೇದೃಶ ಏವೇತಿ “ಯೇನ ಮೌನಿವರ್ಯಸ್ತೇನ ಬ್ರಾಹ್ಮಣಃ ಸ್ಯಾತ್” ಇತ್ಯುಕ್ತಂ. “ತೇನೇದೃಶಃ ಸ್ಯಾತ್ ನ ಕೇನಾಪ್ಯನ್ಯೇನೋಪಾಯೇನ” ಇತಿ ಪರಿಹೃತಂ. ಅತಃ ಸರ್ವೇಷ್ವಾಶ್ರಮೇಷು ಸ್ಥಿತಸ್ಯ ವಿದುಷೋ ಯಜ್ಞಾದಿಸ್ವಾಶ್ರಮಧರ್ಮವತ್ ಪಾಂಡಿತ್ಯಾದಿಕಂ ಮೌನಂ ತೃತೀಯಂ ವಿದ್ಯಾಸಹಕಾರ್ಯಂತರಂ ವಿಧೀಯತೇ.

ಈಶ್ವರಾರ್ಪಣದೃಷ್ಟಿಯಿಂದಲೇ ಯಜ್ಞ ದಾನ ತಪಸ್ಸು ಪೂಜೆಗಳನ್ನಾಚರಿಸುತ್ತ ಶುದ್ಧಹೃದಯರಾದ ಬ್ರಹ್ಮೋಪಾಸಕರಿಗೆ ಶಮದಮಾದಿಗಳಂತೆ ಮೌನನಿಷ್ಠೆ ಆವಶ್ಯಕವೇ? ಅಥವಾ ವ್ಯಾಕರಣ ನ್ಯಾಯಶಾಸ್ತ್ರಗಳಂತೆ ವಾಗಾಡಂಬರತ್ವವು ಪ್ರಧಾನವೇ? ಎಂದಾಶಂಕಿಸಿ ಸಮಾಧಾನವನ್ನು ತಿಳಿಸುತ್ತಾನೆ. ಬ್ರಹ್ಮವಿದ್ಯೆಯಲ್ಲಿ ಹೇಳಿರುವಂತೆಯೇ ಆ ಬ್ರಹ್ಮವಿದ್ಯೆಯನ್ನಾರಂಭಿಸುವುದಕ್ಕೆ ಮೊದಲು ಕರ್ಮಕಾಂಡದಲ್ಲಿ ಗೃಹಸ್ಥಾಶ್ರಮಿಗೆ ಅಗ್ನಿಹೋತ್ರ ಮೊದಲಾದ ಅನೇಕ ಕರ್ಮಗಳನ್ನು ಸ್ವರ್ಗದ ಉದ್ದೇಶದಿಂದ ವಿಧಿಸಲಾಗಿದೆ. ಹೀಗೆಯೇ ಬ್ರಹ್ಮವಿದ್ಯೆಯಲ್ಲಿ ನಿರತನಾದವನಿಗೂ ಜ್ಞಾನಕಾಂಡದ ಶ್ರುತಿಯಲ್ಲಿ ಶಮದಮಾದಿಗಳೊಡನೆ ಶ್ರವಣಮನನನಿದಿಧ್ಯಾಸಗಳನ್ನು ಪರಶಿವಬ್ರಹ್ಮಸಾಕ್ಷಾತ್ಕಾರಕ್ಕೆ ಸಹಕಾರಿಸಾಧನಗಳನ್ನಾಗಿ ವಿಧಿಸಬೇಕೆಂದು ಒಪ್ಪಬೇಕು. ಈ ಮೂರರಲ್ಲಿ ಶ್ರವಣಮನನಗಳನ್ನು ಪರಮಾತ್ಮದರ್ಶನಾಪೇಕ್ಷಿಗಳು ಬಹುಕಾಲ ಆಚರಿಸಬೇಕು. ಮೂರನೆಯ ನಿದಿಧ್ಯಾಸನವನ್ನಾದರೋ ಕಾಲಪರಿಪಾಕಕ್ಕೆ ತಕ್ಕಂತೆ ಆಚರಿಸಬೇಕು. ಅವರಿಗೆ ಶ್ರವಣಮನನಗಳ ಅನಂತರವೂ "ನಾನು ಬ್ರಾಹ್ಮಣ, ನಾನು ಕ್ಷತ್ರಿಯ" ಎಂಬ ವರ್ಣಾಭಿಮಾನವೂ, "ನಾನು ಬ್ರಹ್ಮಚಾರಿ, ನಾನು ಗೃಹಸ್ಥ" ಎಂಬ ಆಶ್ರಮಾಭಿಮಾನವೂ, ಜಾತಿಕುಲಾದ್ಯಭಿಮಾನವೂ "ನಾನು ಸ್ಥೂಲ, ನಾನು ಕೃಶ, ನಾನು ಕರ್ತ, ನಾನು ಭೋಕ್ತ" ಎಂಬ ದೇಹಾಭಿಮಾನವೂ ದೃಢವಾಗಿರುತ್ತವೆ. ಆದ್ದರಿಂದ ಅವುಗಳನ್ನು ಸರಿಪಡಿಸಲಿಕ್ಕಾಗಿ ನಿದಿಧ್ಯಾಸನವು ಆವಶ್ಯಕವೆನಿಸಿದೆ. ಯಾವ ನಿರ್ಮಲಹೃದಯರಿಗೆ ದೇಹಾಭಿಮಾನವು ಶ್ರವಣಮನನಗಳ ಅಭ್ಯಾಸದಿಂದ ಕಡಮೆಯಾಗಿದೆಯೋ ಅವರಿಗೆ ಸ್ವಲ್ಪಕಾಲದ ನಿದಿಧ್ಯಾಸನದಿಂದಲೇ ಶಿವಸಾಕ್ಷಾತ್ಕಾರವು ಸಂಭವಿಸುವುದರಿಂದ ಅವರು ಬಹುಕಾಲದವರೆಗೂ ಧ್ಯಾನಮಾಡಬೇಕಾಗಿಲ್ಲ. ಕೌಹಲ ಬ್ರಾಹ್ಮಣದಲ್ಲಿ "ಬ್ರಾಹ್ಮಣನು ಪಾಂಡಿತ್ಯವನ್ನು ಹೊಂದಿ ನಿರಾಡಂಬರದಿಂದ ಹುಡುಗನಂತೆ ತೋರಬೇಕು" ಎಂಬಲ್ಲಿ ಬಾಲ್ಯಪಾಂಡಿತ್ಯಗಳಂತೆ ಮೌನವನ್ನು ವಿಧಿಸಲಾಗಿದೆ. ಅನೇಕ ಉಪನಿಷತ್ತುಗಳ ತಾತ್ಪರ್ಯವೆನಿಸಿದ ಪಾಂಡಿತ್ಯವನ್ನು ಅವನು ಪೂರ್ತಿಯಾಗಿ ಪಡೆದು ಬಾಲ್ಯದಲ್ಲಿ ರಾಗದ್ವೇಷಗಳಿಲ್ಲದ್ದರಿಂದ ಅದಕ್ಕೆ ಸದೃಶವಾದ ಬೇರೊಂದು ಅವಸ್ಥೆಯಲ್ಲಿ ನೆಲಸಬೇಕು. ಆದ್ದರಿಂದ "ಬಾಲ್ಯದಲ್ಲಿ ಪಾಂಡಿತ್ಯವನ್ನು ಚೆನ್ನಾಗಿ ಪಡೆದು ಆಮೇಲೆ ಮುನಿಯಾಗಬೇಕು" ಎಂಬಲ್ಲಿ ಪಾಂಡಿತ್ಯ ಮತ್ತು ಬಾಲ್ಯಗಳಂತೆ ಮೌನವನ್ನು ವಿಧಿಸಿದೆಯೇ ಇಲ್ಲವೇ ಎಂದು ಸಂಶಯಬರುತ್ತದೆ. ಮೌನ ಮತ್ತು ಪಾಂಡಿತ್ಯ ಶಬ್ದಗಳೆರಡೂ ಜ್ಞಾನವನ್ನೇ ಬೋಧಿಸುತ್ತವೆ. "ಪಾಂಡಿತ್ಯವನ್ನು ಹೊಂದಿ" ಎಂಬಲ್ಲಿ ಹೇಳಿದ ಜ್ಞಾನವನ್ನೇ "ಅಥ ಮುನಿಃ" ಎಂಬಲ್ಲಿಯೂ ಮುಂದುವರಿಸಲಾಗಿದೆ. ಆದರೆ ಇಲ್ಲಿ ವಿಧಿಶಬ್ದವನ್ನು ಮಾತ್ರ ಪ್ರಯೋಗಿಸಿಲ್ಲ. ಹೀಗೆ ಆಕ್ಷೇಪ ಬಂದರೆ ಸಮಾಧಾನವನ್ನು ಸೂತ್ರದಲ್ಲಿ ತಿಳಿಸಲಾಗಿದೆ. ವಿದ್ಯಾನಿಷ್ಠನಿಗೆ ವರ್ಣಾಶ್ರಮಗಳನ್ನೂ ಶಮದಮಾದಿಗಳನ್ನೂ ಶ್ರವಣಮನನಾದಿಗಳನ್ನು ಸಹಕಾರಿಯಾಗಿ ವಿಧಿಸಿರುವಂತೆ ಮೌನವನ್ನೂ ಒಂದು ಸಹಕಾರಿಯಾಗಿ ಇಲ್ಲಿ ವಿಧಿಸಲಾಗಿದೆ. "ಯಜ್ಞೇನ

ದಾನೇನ"ಎಂಬಲ್ಲಿ ಸಹಕಾರಿಗಳಾದ ಯಜ್ಞಾದಿಕರ್ಮಗಳನ್ನೂ,"ಶಾಂತೋ ದಾಂತಃ" ಎಂಬಲ್ಲಿ ಶಮದಮಾದಿಗುಣಗಳನ್ನೂ ವಿಧಿಸಲಾಗಿದೆ. "ಶ್ರೋತವ್ಯೋ ಮಂತವ್ಯಃ" ಎಂಬಲ್ಲಿ ಶ್ರವಣಮನನಗಳನ್ನು ಬ್ರಹ್ಮವಿದ್ಯೆಗೆ ಸಹಕಾರಿಸಾಧನಗಳೆಂದು ವಿಧಿಸಲಾಗಿದೆ. ಹಾಗೆಯೇ "ತಸ್ಮಾದ್ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ" ಎಂಬಲ್ಲಿ ಪಾಂಡಿತ್ಯ ಮೌನಗಳನ್ನು ಬ್ರಹ್ಮವಿದ್ಯೆಗೆ ಸಹಕಾರಿಗಳೆಂದು ವಿಧಿಸಿದೆ. ಆದರೆ ಮೌನವನ್ನು ಪಾಂಡಿತ್ಯಕ್ಕಿಂತಲೂ ಬೇರೆ ಎಂದೇ ಹೇಳಲಾಗಿದೆ. ಸೂತ್ರದಲ್ಲಿ "ಪಕ್ಷೇಣ ತೃತೀಯಂ" ಎಂದು ಹೇಳಿದ್ದರಿಂದ ಮುನಿಶಬ್ದವನ್ನು ತತ್ತ್ವವನ್ನೇ ಹೆಚ್ಚಾಗಿ ಮನನಮಾಡುವ ಸ್ವಭಾವದ ವ್ಯಾಸಾದಿಮಹರ್ಷಿಗಳಲ್ಲಿಯೇ ಪ್ರಯೋಗಿಸಲಾಗಿದೆ. ಆದ್ದರಿಂದ ಮುನಿಗಳ ಸ್ವಭಾವವೆನಿಸಿದ ಮೌನವು ಪಾಂಡಿತ್ಯ ಬಾಲ್ಯಗಳಿಗಿಂತ ಮೂರನೆಯ ಸಹಕಾರಿ ಸಾಧನವೆಂದು ವ್ಯಕ್ಯವಾಗುತ್ತದೆ. "ಅಥ ಮುನಿಃ" ಎಂಬಲ್ಲಿ ವಿಧಿಪ್ರತ್ಯಯವಿಲ್ಲದಿದ್ದರೂ ಮೌನವನ್ನು ಹಿಂದೆ ಹೇಳಿಲ್ಲವಾದರಿಂದ ಇಲ್ಲಿ ವಿಧಿಸಲಾಗಿದೆ ಎಂದು ಒಪ್ಪಲೇಬೇಕು. "ಅಥ ಮುನಿಃ ಸ್ಯಾತ್" ಎಂಬಲ್ಲಿ ಹೇಳಿರುವ ಮೌನವಾದರೋ ಶ್ರವಣವನ್ನು ದೃಢೀಕರಿಸುವ ಮನನಕ್ಕಿಂತಲೂ ಬೇರೆಯಾಗಿದ್ದು ಉಪಾಸನವನ್ನು ದೊರಕಿಸಲಿಕ್ಕೆ ಬೇಕಾದ ಭಾವರೂಪವಾದ ಸ್ವಭಾವವೆನಿಸುತ್ತದೆ ಎಂದು ತಿಳಿಯಬೇಕು. "ಬ್ರಾಹ್ಮಣನು ಪಾಂಡಿತ್ಯವನ್ನು ಪಡೆದು ಬ್ರಹ್ಮತತ್ತ್ವವನ್ನು ಶುದ್ಧವಾಗಿಯೂ ಮತ್ತು ಪೂರ್ಣವಾಗಿಯೂ ಅರಿತು ಶ್ರವಣ ಮನನಗಳಿಂದ ಬಂದ ಜ್ಞಾನವನ್ನು ಪಡೆದು" ಎಂಬುದೇ ಆ ವಾಕ್ಯದ ಅರ್ಥವಾಗುತ್ತದೆ. ಇದಾದರೋ ಭಗವದ್ಭಕ್ತಿಯಿಂದಲೂ ಸತ್ತ್ವಗುಣದ ವಿಕಾಸದಿಂದಲೂ ಆಗುವಂತಹದು. "ನಾನು ವೇದಗಳಿಂದ ದೊರಕದೆ ಅವ್ಯಭಿಚರಿತವಾದ ಭಕ್ತಿಯೊಂದರಿಂದಲೇ ನಿನಗೆ ದೊರೆಯುವೆನು" ಎಂದು ಸ್ಮೃತಿಯಲ್ಲೂ, "ಯಾವನಿಗೆ ದೇವರಲ್ಲೂ ಗುರುವಿನಲೂ ಪರಾಭಕ್ತಿ ಇರುವುದೋ ಅವನಿಗೇ ನಾನು ದೊರಕುವೆನು," "ಈ ಆತ್ಮನು ಓದಿನಿಂದ ದೊರಕಲಾರನು" ಎಂದು ಶ್ರುತಿಯಲ್ಲೂ ಹೇಳಿದೆ. "ಜ್ಞಾನಿಯು ಬಾಲಕನಂತಿರುವನು" ಎಂಬಲ್ಲಿ ಹೇಳಿರುವ ಬಾಲ್ಯದ ಸ್ವರೂಪವನ್ನು ಮುಂದೆ ತಿಳಿಸಲಾಗುವುದು. "ಬಾಲ್ಯ ಮತ್ತು ಪಾಂಡಿತ್ಯಗಳನ್ನು ಪಡೆದು ಒಬ್ಬನು ಮುನಿಯಾಗಬೇಕು" ಎಂಬಲ್ಲಿ ಬಾಲ್ಯ ಮತ್ತು ಪಾಂಡಿತ್ಯಗಳನ್ನು ಗಳಿಸಿದಮೇಲೆಯೇ ಒಬ್ಬನು ಪರಿಶುದ್ಧವೂ ಪರಿಪೂರ್ಣವೂ ಆದ ಪರಶಿವಬ್ರಹ್ಮವನ್ನೇ ಮನನಮಾಡತೊಡಗುವನು. ನಿದಿಧ್ಯಾಸನವನ್ನು ಪಡೆಯಲಿಕ್ಕೆ ಬಾಲ್ಯಪಾಂಡಿತ್ಯ ಮೌನಗಳು ಆವಶ್ಯಕವೆನಿಸಿವೆ. "ಅಮೌನಂ ಚ ನಿರ್ವಿದ್ಯ" ಎಂಬಲ್ಲಿ ಅಮೌನವೆಂದರೆ ಮೌನಕ್ಕಿಂತ ಬೇರೆಯಾದ ಸಹಕಾರಸಾಧನಗಳೆಂದು ಭಾವಿಸಬೇಕು. "ಅವನ್ನೂ ಮತ್ತು ಮೌನವನ್ನೂ ಪಡೆದು ಬ್ರಹ್ಮವಿದ್ಯೆಯ ಫಲವನ್ನು ಬ್ರಾಹ್ಮಣನು ಅನುಭವಿಸಬೇಕು" ಎಂದು ಆ ವಾಕ್ಯವು ತಿಳಿಸುತ್ತದೆ. "ಅವನು ಯಾತರಿಂದ ಬ್ರಾಹ್ಮಣನಾದನು?" ಇದಕ್ಕಾಗಿ ಇಲ್ಲಿ ಹೇಳಿದ ಉಪಾಯಕ್ಕಿಂತ ಬೇರೊಂದು ಉಪಾಯವಿದೆಯೆ?" ಎಂದು ಕೇಳಿ "ಇವನು ಮೌನಿಯಾದ್ದರಿಂದಲೇ ಬ್ರಾಹ್ಮಣನಾದನು"

ಎಂದು ಉತ್ತರವನ್ನು ಕೊಡಲಾಗಿದೆ. "ಇದರಿಂದಲೇ ಅವನು ಹೀಗಾದನು; ಆದರೆ ಇದಕ್ಕಿಂತ ಬೇರೆ ಯಾವ ಉಪಾಯದಿಂದಲೂ ಅಲ್ಲ" ವೆಂದು ಉತ್ತರವನ್ನು ಮುಂದೆ ದೃಢಪಡಿಸಲಾಗಿದೆ. ಆದ್ದರಿಂದ ಎಲ್ಲಾ ಆಶ್ರಮಗಳಲ್ಲಿರುವ ವಿದ್ವಾಂಸರಿಗೂ ಯಜ್ಞ ಮೊದಲಾದ ಆಯಾ ಆಶ್ರಮಧರ್ಮಗಳಂತೆ ಪಾಂಡಿತ್ಯಬಾಲ್ಯ ಮೌನಗಳನ್ನು ಸಹಕಾರಿಗಳಾಗಿ ವಿಧಿಸಲಾಗಿದೆ.

ಅಥ ಸ್ಯಾದ್ಯದಿ ಸರ್ವೇಷ್ವಾಶ್ರಮೇಷು ಸ್ಥಿತಾನಾಂ ವಿದುಷಾಂ ತತ್ತದಾಶ್ರಮಧರ್ಮಸಹಕಾರಿಣೀ ಮೌನತೃತೀಯಾ ಸಚಿವಾ ವಿದ್ಯಾ ಬ್ರಹ್ಮಪ್ರಾಪ್ತಿಸಾಧನಮುಚ್ಯತೇ. ಕಥಂ ತರ್ಹಿ ಛಾಂದೋಗ್ಯೇ "ಅಭಿಸಮಾವೃತ್ಯ ಕುಟುಂಬೇ ಶುಚೌ ದೇಶೇ ಸ್ವಾಧ್ಯಾಯಮಧೀಯಾನಃ" ಇತ್ಯಾರಭ್ಯ "ಸ ಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ ನಚ ಪುನರಾವರ್ತತೇ" ಇತಿ ಯಾವದಾಯುಷಂ ಗಾರ್ಹಸ್ಥ್ಯಧರ್ಮೇಣ ಸ್ಥಿತಿದರ್ಶನಮುಪಪದ್ಯತೇ. ಅತ ಆಹ. ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ॥ ೪೮ ॥ ತುಶಬ್ದಃ ಶಂಕಾನಿರಾಸಾರ್ಥಃ. ಕೃತ್ಸ್ನೇಷ್ವಾಶ್ರಮಧರ್ಮೇಷು ಬ್ರಹ್ಮವಿದ್ಯಾಯಾಸ್ಸದ್ಭಾವಾತ್ ಗೃಹಿಣೋಽಪ್ಯಸ್ತೀತಿ ತೇನೋಪಸಂಹಾರಃ. ತಸ್ಮಾತ್ ಸರ್ವಾಶ್ರಮಧರ್ಮಪ್ರದರ್ಶನಾರ್ಥೋ ಗೃಹಿಣೋಪಸಂಹಾರ ಇತಿ ಭಾವಃ. ನನು "ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ" ಇತಿ ಕೈವಲ್ಯೇ ವೇದಾಂತಾರ್ಥಜ್ಞಾನವತಾಂ ಸಂನ್ಯಾಸಯೋಗವಿಧಿವ್ಯಪದೇಶಾತ್ "ಅತ್ಯಾಶ್ರಮಸ್ಥಃ" ಇತಿ ಧ್ಯಾನಯೋಗಸ್ಯ ಅತ್ಯಾಶ್ರಮಧರ್ಮತ್ವೋಪದೇಶಾತ್ ಬ್ರಹ್ಮಚಾರಿಣಾಂ ವೇದವ್ರತಾದ್ಯನುಷ್ಠಾನಾಚಾರ್ಯಪರವಶತ್ವಾತ್, ಗೃಹಿಣಾಂ ಕುಟುಂಬಪೋಷಣಭಾರಾದಿವ್ಯಾಪಾರಸತ್ತ್ವಾತ್, ವಾನಪ್ರಸ್ಥಾನಾಂ ಉಪವಾಸಕೃಚ್ಛ್ರಚಾಂದ್ರಾಯಣಾದಿಬಹುಕ್ಲೇಶದರ್ಶನಾಚ್ಚ ಯತೀನಾಮೇವ ಬ್ರಹ್ಮವಿದ್ಯಾಧಿಕಾರಿತ್ವಮಿತಿ ಚೇನ್ನ, "ತದ್ವಿಜ್ಞಾನಾರ್ಥಂ ಸ ಗುರುಮೇವಾಭಿಗಚ್ಛೇತ್ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ" ಇತ್ಯತ್ರ ಶಿಷ್ಯಸ್ಯ ಸಮಿತ್ಪಾಣಿತ್ವವ್ಯವಸ್ಥಾಪನೇ ಗುರೋರ್ಗೃಹಸ್ಥತ್ವಂ, ಶ್ರೋತ್ರಿಯಶಬ್ದೇನ ಸ್ವಾಶ್ರಮಸದಾಚಾರನಿಷ್ಠತ್ವಂ, "ಬ್ರಹ್ಮನಿಷ್ಠಂ" ಇತ್ಯನೇನ ಬ್ರಹ್ಮವೇತ್ತೃತ್ವಮಪ್ಯಸಂಕುಚಿತತ್ವೇನ ನಿರ್ದೇಶಾತ್ ಯತೀನಾಮಪಿ ಮುಖ್ಯತ್ವೇನ ಬ್ರಹ್ಮವಿದ್ಯಾಧಿಕಾರಿತ್ವಸಿದ್ಧೇಽಪಿ ಬ್ರಹ್ಮಚರ್ಯಾದಿಸರ್ವೇಷಾಮಾಶ್ರಮಿಣಾಮಪಿ ನ ಬ್ರಹ್ಮವಿದ್ಯಾ ವಿರುಧ್ಯತೇ. ಛಾಂದೋಗ್ಯೇ "ಕುಟುಂಬೇ ಶುಚೌ ದೇಶೇ ಸ್ವಾಧ್ಯಾಯಮಧೀಯಾನಃ" ಇತ್ಯಾರಭ್ಯ "ಸ ಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ" ಇತಿ ಕೃತ್ಸ್ನಾ

**ಶ್ರಮೇಷು ಬ್ರಹ್ಮವಿದ್ಯಾಧಿಕಾರತ್ವಶ್ರವಣಾತ್ ಗೃಹಿಣೋಪಸಂಹಾರ ಸ್ಸರ್ವೇಷಾಂ ಪ್ರದರ್ಶನಾರ್ಥಮಿತಿ ವೇದಿತವ್ಯಂ.**

ಎಲ್ಲಾ ಆಶ್ರಮಗಳಲ್ಲಿರುವ ವಿದ್ವಾಂಸರಿಗೂ ಆಯಾ ಆಶ್ರಮಧರ್ಮಗಳೊಡನೆ ಮೌನವನ್ನು ಬ್ರಹ್ಮಪ್ರಾಪ್ತಿಗೆ ಸಹಕಾರಿಸಾಧನವಾಗಿ ಹೇಳಿದಮೇಲೆ ಛಾಂದೋಗ್ಯ ದಲ್ಲಿ "ಗೃಹಸ್ಥನು ಸಪತ್ನೀಕನಾಗಿ ವೇದಾಧ್ಯಯನಮಾಡುತ್ತಲೂ ಕರ್ಮಗಳನ್ನಾಚ ರಿಸುತ್ತಲೂ ಇದ್ದು ಆಯುಷ್ಯ ತೀರಿದಮೇಲೆ ಬ್ರಹ್ಮಲೋಕಕ್ಕೆ ಹೋಗುತ್ತಾನೆ; ಮತ್ತೆ ಹಿಂತಿರುಗುವುದಿಲ್ಲ" ವೆಂದು ಆಯುಷ್ಯತೀರುವವರೆಗೂ ಗೃಹಸ್ಥಧರ್ಮವನ್ನು ಹೇಳಿದ್ದು ಹೇಗೆ ಹೊಂದುತ್ತದೆ? ಎಂದಾಶಂಕಿಸಿ ತಿಳಿಸುತ್ತಾನೆ. ಎಲ್ಲಾ ಆಶ್ರಮ ಧರ್ಮಗಳಲ್ಲೂ ಬ್ರಹ್ಮವಿದ್ಯೆಯ ಸಂಬಂಧವಿರುವುದರಿಂದ ಗೃಹಸ್ಥನಿಗೂ ಇದ್ದೇಇರುವು ದೆಂದು ತಿಳಿಯಬೇಕು. ಹೀಗೆ ಎಲ್ಲಾ ಆಶ್ರಮಧರ್ಮಗಳನ್ನು ತಿಳಿಸುತ್ತಲೇ ಗೃಹಸ್ಥಧರ್ಮದಲ್ಲಿ ಕೊನೆಯಾಗಿದೆ. "ವೇದಾಂತಜ್ಞಾನದಿಂದ ಯಥಾರ್ಥವನ್ನು ತಿಳಿದು ಸಂನ್ಯಾಸಯೋಗದಿಂದ ಯತಿಗಳು ಶುದ್ಧರಾಗಿದ್ದಾರೆ" ಎಂಬಲ್ಲಿ ವೇದಾಂತ ವನ್ನು ತಿಳಿದವರಿಗೆ ಸಂನ್ಯಾಸಯೋಗವನ್ನು ವಿಧಿಸಲಾಗಿದೆ. "ಅತ್ಯಾಶ್ರಮಸ್ಥಃ" ಎಂಬಲ್ಲಿ ಧ್ಯಾನಯೋಗವನ್ನು ಅತ್ಯಾಶ್ರಮಧರ್ಮವೆಂದು ತಿಳಿಸಲಾಗಿದೆ. ಬ್ರಹ್ಮ ಚಾರಿಗಳು ವೇದವನ್ನು ಓದುತ್ತಲೂ ವ್ರತಗಳನ್ನಾಚರಿಸುತ್ತಲೂ ಆಚಾರ್ಯರ ಸೇವೆ ಯನ್ನು ಮಾಡುತ್ತಲೂ ಇರಬೇಕು. ಗೃಹಸ್ಥರು ಕುಟುಂಬರಕ್ಷಣ ಮೊದಲಾದ ಕಾರ್ಯಗಳನ್ನು ನಡೆಸಬೇಕು. ವಾನಪ್ರಸ್ಥರು ಉಪವಾಸಕೃಚ್ಛ್ರಚಾಂದ್ರಯಣ ಮೊದಲಾದ ಅನೇಕ ಕ್ಲೇಶಗಳನ್ನು ಅನುಭವಿಸಬೇಕು. ಆದ್ದರಿಂದ ಯತಿಗಳಿಗೆ ಮಾತ್ರವೇ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುವುದು ಎಂದು ಹೇಳುವುದು ಯುಕ್ತವಲ್ಲ. "ಮೋಕ್ಷಸುಖವನ್ನು ತಿಳಿಯಲು ಸಾಧಕನು ಸಮಿತ್ಪಾಣಿಯಾಗಿ ಶ್ರೋತ್ರಿಯನೂ ಬ್ರಹ್ಮನಿಷ್ಠನೂ ಆದ ಗುರುವಿನಬಳಿಗೆ ಹೋಗಬೇಕು" ಎಂಬಲ್ಲಿ ಸಾಧಕನನ್ನು ಸಮಿ ತ್ಪಾಣಿ ಎಂದು ಹೇಳಿದ್ದರಿಂದ ಗುರುವು ಗೃಹಸ್ಥನೆಂದೂ, ಶ್ರೋತ್ರಿಯಶಬ್ದದಿಂದ ಅವನು ತನ್ನ ಆಶ್ರಮಧರ್ಮಗಳನ್ನು ಶ್ರದ್ಧೆಯಿಂದ ಆಚರಿಸುವನೆಂದೂ, "ಬ್ರಹ್ಮ ನಿಷ್ಠಂ" ಎಂಬುದರಿಂದ ಅವನು ಬ್ರಹ್ಮವನ್ನರಿತವನೆಂದೂ ಸ್ಪಷ್ಟವಾಗಿ ತಿಳಿದುಬರು ತ್ತದೆ. ಯತಿಗಳಿಗೂ ಮುಖ್ಯವಾಗಿ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿದ್ದರೂ ಬ್ರಹ್ಮ ಚರ್ಯ ಮೊದಲಾದ ಇತರ ಆಶ್ರಮಿಗಳಿಗೂ ಅಧಿಕಾರವಿರುವುದರಲ್ಲಿ ತಪ್ಪೇನಿಲ್ಲ. ಛಾಂದೋಗ್ಯದಲ್ಲಿ ಗೃಹಸ್ಥಾಶ್ರಮಿಗೆ ಸ್ವಕರ್ಮಾಚರಣದಿಂದ ಬ್ರಹ್ಮಲೋಕಪ್ರಾಪ್ತಿ ಯನ್ನು ಹೇಳಿದ್ದಕ್ಕೆ ಎಲ್ಲಾ ಆಶ್ರಮಿಗಳಿಗೂ ಇರುವ ಬ್ರಹ್ಮವಿದ್ಯೆಯ ಅವಕಾಶವು ಗೃಹಸ್ಥಾಶ್ರಮದಲ್ಲಿ ಕೊನೆಗಾಣುವುದಾಗಿ ತಿಳಿಸುವುದೇ ಉದ್ದೇಶವೆನಿಸಿದೆ.

**ನನು ಗೃಹಸ್ಥಾನಾಮಪಿ ಬ್ರಹ್ಮವಿದ್ಯಾಧಿಕಾರತ್ವೇ "ನ ಕುರ್ಯಾ ನ್ನಿಷ್ಫಲಂ ಕರ್ಮ" ಇತಿ ನ್ಯಾಯೇನ ಯತ್ಯಾಶ್ರಮಸ್ಯ ಪ್ರಯೋಜನತ್ವ ಮನಪೇಕ್ಷ್ಯಂ. "ಯಾವಜ್ಜೀವಮಗ್ನಿಹೋತ್ರಂ ಜುಹೋತಿ" ಇತಿ**

ಶ್ರೌತವಿಧಿವಿರೋಧಾಭಾವಾತ್ ಸರ್ವೇಷಾಮಾಧಾರಭೂತತ್ವೇನ ಸ್ಮೃತಿಪುರಾಣೇಷು ಗೃಹಸ್ಥಾಶ್ರಮಸ್ಯ ಸರ್ವಾಧಿಕತ್ವನಿರ್ದೇಶಾತ್ " ಅತ್ಯಾಶ್ರಮಸ್ಥಃ ಸಕಲೇಂದ್ರಿಯಾಣಿ ನಿರುಧ್ಯ ಭಕ್ತ್ಯಾ ಸ ಗುರುಂ ಪ್ರಣಮ್ಯ " ಇತ್ಯಾದಿಶ್ರುತಿಸಿದ್ಧ ಅತ್ಯಾಶ್ರಮಸಂನ್ಯಾಸಯತ್ಯಾದಿಶಬ್ದಾನಾಂ ಅನ್ಯಥಾ ಸಮನ್ವಯಾತ್ " ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ " ಇತಿ ಸ್ಮೃತಿದರ್ಶನಾತ್ ಫಲತ್ಯಾಗಃ ಸಂನ್ಯಾಸಃ ಇತಿ ತತ್ತ್ವಂ. " ಯತ್ನಶೀಲೋ ಯತಿಃ " ಇತಿ ನಿಯಮೇನ ಮೋಕ್ಷಪ್ರಯತ್ನೋ ಹಿ ಗೃಹಿಣಾಮಪಿ ಸಂಭವತ್ವೇನ ಸರ್ವೇಷಾಮಾಶ್ರಮಿಣಾಂ ಸಂಭವತಿ. " ಯಸ್ತು ಲಿಂಗಾಂಗಸಂಯುಕ್ತಃ ಸ ಏವಾತ್ಯಾಶ್ರಮೀ ಭವೇತ್ । ಲಿಂಗಂ ಶಿವೋ ಭವೇತ್ ಕ್ಷೇತ್ರಂ ಅಂಗಂ ಸಂಯೋಗ ಆಶ್ರಯಃ ॥ ", " ತಸ್ಮಾಲ್ಲಿಂಗಾಂಗಸಂಯುಕ್ತೋ ಯೋಽಪಿ ಸೋಽತ್ಯಾಶ್ರಮೀ ಭವೇತ್ " ಇತ್ಯಾದಿಷ್ವತ್ಯಾಶ್ರಮಶಬ್ದಸ್ಯಾಪಿ ಸರ್ವಾಶ್ರಮಸಾಧಾರಣತ್ವೇನ ಶಿವೋಕ್ತವಾತುಲಾಗಮೇ ವ್ಯಪದೇಶಾಚ್ಚ ಮೌನಾದಿವಿಧಾಯಕಃ ಯತ್ಯಾಶ್ರಮಃ ಮುಮುಕ್ಷೂಣಾಂ ನ ಯುಕ್ತಃ ಇತ್ಯಾಶಂಕ್ಯ ತತ್ರ ಅಧಿಕಾರಣಾಂತರಮಾಹ. ಮೌನಾಧಿಕರಣಂ ॥ ೧೪ ॥ ಮೌನವದಿತರೇಷಾಮಪ್ಯುಪದೇಶಾತ್ ॥ ೪೯ ॥ ಛಾಂದೋಗ್ಯೇ " ಬ್ರಾಹ್ಮಣಃ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾನಾದ್ಭಿಕ್ಷಾಚರ್ಯಂ ಚರತಿ " ಇತಿ ಪಾರಿವ್ರಾಜ್ಯೈಕಾಂತಧರ್ಮಂ ಪ್ರತಿಪಾದ್ಯ ತತ್ರೈವ ತಸ್ಮಿನ್ನೇವ " ತಸ್ಮಾದ್ಬ್ರಾಹ್ಮಣಃ ಪಾಂಡಿತ್ಯಂ ನಿರ್ವಿದ್ಯ " ಇತ್ಯಾದಿನಾ ಪಾರಿವ್ರಾಜ್ಯಧರ್ಮಸ್ಥಿತಿಹೇತುಕಮೌನತೃತೀಯಸಹಕಾರಿವಿಧಾನಂ ಪ್ರದರ್ಶ್ಯ ತದ್ವತ್ ತತ್ರೈವ ಅಭಿಸಮಾವೃತ್ಯ " ಕುಟುಂಬೇ ಶುಚೌ ದೇಶೇ " ಇತ್ಯಾದಿನಾ ಗೃಹಸ್ಥಾದೀನಾಮಪಿ ಬ್ರಹ್ಮವಿದ್ಯೋಪದೇಶಾತ್ ಸಂನ್ಯಾಸಯತ್ಯಾದಿಶಬ್ದಾನಾಂ ಪಂಕಜಾದಿವತ್ತತ್ರೈವ ರೂಢಿಃ. ತಸ್ಮಾದ್ಯತೀನಾಂ ಬ್ರಹ್ಮವಿದ್ಯಾ ಮುಖ್ಯಾ. ತದ್ಭಿನ್ನಾನಾಂ ಅಗ್ನಿಹೋತ್ರಾದಿಕಂ ಕರ್ಮ ಮುಖ್ಯಂ. " ಅತ್ಯಾಶ್ರಮೀ ಪ್ರಾಣಲಿಂಗಸಂಬಂಧೀ ಭಸ್ಮಘುಟಿಕಾಂ ಕಂಥಾಂ ಕಮಂಡಲುಂ ಭಿಕ್ಷಾಪಾತ್ರಂ ದಂಡಂ ಚ ಧಾರಯೇತ್ " ಇತ್ಯಾದಿನಾ ಶಂಕರಸಂಹಿತಾದಿಷು ಅತ್ಯಾಶ್ರಮಶಬ್ದಸ್ಯ ಸರ್ವಾಶ್ರಮಸಾಧಾರಣ್ಯೇಽಪಿ ಯತೀನಾಂ ಮುಖ್ಯತ್ವಾವಗಮಾತ್. " ಮೌನವದಿತರೇಷಾಂ " ಇತ್ಯತ್ರ ಮೌನಸ್ಯ ಯತೇಃ ಮುಖ್ಯತ್ವೇನ ಬ್ರಹ್ಮವಿದ್ಯಾಧಿಕಾರತ್ವಂ ಪ್ರದರ್ಶ್ಯ " ಸಮುದ್ರವತ್ತಟಾಕಂ " ಇತಿ ನ್ಯಾಯವತ್ ತದ್ದೃಷ್ಟಾಂತೇನೇತರೇಷಾಮಪಿ ಬ್ರಹ್ಮವಿದ್ಯಾಯಾ ಉಪದೇಶಾತ್ ಸರ್ವಾಧಿಕತ್ವಂ ಯತೀನಾಮನವದ್ಯ

ಮಿತಿ ಸೂತ್ರಾರ್ಥಃ. "ಬ್ರಹ್ಮಸಂಸ್ಥೋಽಮೃತತ್ವಮೇತಿ" ಇತ್ಯತ್ರ ಬ್ರಹ್ಮನಿಷ್ಠಪುರುಷಸ್ಯ ಮೋಕ್ಷತ್ವಾವಗಮಾತ್ "ಬ್ರಹ್ಮವಿದಾಪ್ನೋತಿ ಪರಂ" ಇತ್ಯತ್ರ ಬ್ರಹ್ಮವಿದಾಮೇವ ಮುಕ್ತ್ಯುಪದೇಶಾತ್ "ಧ್ಯಾನ ನಿರ್ಮಥನಾಭ್ಯಾಸಾತ್ಪಾಶಂ ದಹತಿ ಪಂಡಿತಃ" ಇತ್ಯಾದೌ ಧ್ಯಾನವಿಧಾನಸ್ಯ ಪಾಶವಿಚ್ಛೇದಲಕ್ಷಣಕಥನಾತ್. ಅಥರ್ವಶಿರಸಿ "ತೃಷ್ಣಾಂ ದತ್ವಾ ಹೇತುಜಾಲಸ್ಯ ಮೂಲಂ ಬುದ್ಧ್ಯಾ ಸಂಚಿಂತ್ಯ ಸ್ಥಾಪಯಿತ್ವಾಽಥ ರುದ್ರೇ", "ರುದ್ರಂ ಶಾಶ್ವತಂ ಪುರಾಣಂ ಇಷ್ಟಮೂರ್ಜಂ ತಪಸಾ ನಿಯಚ್ಛತ", "ವ್ರತಮೇತತ್ಪಾಶುಪತಂ ತತ್ಸಮಾಚರೇನ್ಮುಮುಕ್ಷುರ್ನ ಪುನರ್ಭವಾಯ" ಇತಿ ಪಾಶುಪತವ್ರತಸ್ಯೈವ ಮೋಕ್ಷವ್ಯವಸ್ಥಾಪನಾತ್, ಪುರಾಣೇಷ್ವಪಿ ತಥಾ ದರ್ಶನಾಚ್ಚ ಕೇವಲಬ್ರಹ್ಮವಿದ್ಯಾವತಾಂ ಅಮೃತತ್ವಂ ಉತ ಪಾಶುಪತವ್ರತನಿಷ್ಠಾನಾಮೇವೇತಿ ಸಂದಿಹ್ಯತೇ. ಪಾಶುಪತವ್ರತಸ್ಯ ಸರ್ವಾಶ್ರಮಿಣಾಮಾವಶ್ಯಕತ್ವೇನ ಆಶ್ರಮೇಷ್ವಂತರ್ಭಾವಾತ್, ತಸ್ಯ ಕಾಲಪರಿಮಿತಿದರ್ಶನಾತ್, ಕಲತ್ರಪುತ್ರಾದಿಸಾಧನಾರ್ಥಂ ರಾಮಕೃಷ್ಣಾದಿಭಿರನುಷ್ಠಿತತ್ವಾತ್ "ತಮೇವ ವಿದಿತ್ವಾತಿಮೃತ್ಯುಮೇತಿ" ಇತ್ಯಾದೌ ಮೋಕ್ಷಸ್ಯ ಸಾಧನಾಂತರನಿರಪೇಕ್ಷತ್ವಾವಗಮಾಚ್ಚ ಶ್ರುತಿಸಿದ್ಧತ್ವೇಽಪಿ ಪಾಶುಪತವ್ರತಸ್ಯ ಕಾಮ್ಯಮಾತ್ರಫಲಮಿತಿ ಪ್ರಾಪ್ತೇ ಪ್ರಚಕ್ಷ್ಮಹೇ. ಪಾಶುಪತವ್ರತಧಾರಿಣಾಂ ಮುಕ್ತಿರೇವ ಫಲಂ ವಿದ್ಯಾಸಂಪತ್ತೇಶ್ಚ. ಪರಬ್ರಹ್ಮಣೋ ರುದ್ರಸ್ಯ ಅನುಸಂಧಾನರೂಪಮುನಿಧರ್ಮವದಿತರೇಷಾಮಪಿ ಭಿಕ್ಷಾಚರ್ಯಶಮಾದಿಮೋಕ್ಷಧರ್ಮಾಣಾಂ ಪಾಶುಪತವ್ರತೇ ನಿರ್ದೇಶಾತ್ ತನ್ನಿಷ್ಠಾನಾಮಪಿ ರುದ್ರಏಕತ್ವಮಾಹುಃ. ಅಗ್ನಿರಿತ್ಯಾದಿನಾ ಭಸ್ಮ ಗೃಹೀತ್ವಾ ವಿಮೃಜ್ಯಾಂಗಾನಿ ಸಂಸ್ಪೃಶೇತ್. "ವ್ರತಮೇತತ್ಪಶುಪತಂ ಪಶುಪಾಶವಿಮೋಕ್ಷಾಯ" ಇತಿ ರುದ್ರಧ್ಯಾನಸ್ಯ ಪಾಶವಿಚ್ಛೇದರೂಪಮೋಕ್ಷಫಲತ್ವಾವಗಮಾತ್ ಯಾವದಾಯುಷಂ ಪಾಶುಪತವ್ರತಧಾರಿಣಾಂ ಮುಕ್ತಿರೇವ ಫಲಂ. ಕಿಂಚ ಪಾಶುಪತವ್ರತಾಶ್ರಮೇ ವಿದ್ಯಾಸಾಧನಬ್ರಹ್ಮಚರ್ಯಾದಿಯತಿಧರ್ಮಸಮನ್ವಯಾತ್ ಅತ್ಯಾಶ್ರಮಸಂಜ್ಞಿಕೋಽಯಮಾಶ್ರಮಭೇದಃ ಸ್ವತಂತ್ರಪರಶಿವಪ್ರಾಪ್ತಿಹೇತುಃ. "ಯಾವಚ್ಛರೀರಪಾತಂ ವಾ ದ್ವಾದಶಾಬ್ದಮಥಾಪಿ ವಾ । ಕುರ್ಯಾತ್ಪಾಶುಪತಂ ದಿವ್ಯಂ ಪಶುಪಾಶನಿವೃತ್ತಯೇ । ದ್ವಿಧಾ ಪಾಶುಪತಂ ಜ್ಞೇಯಂ ಪೂರ್ವಾಪರವಿಭೇದತಃ । ಶೈವದೀಕ್ಷಾನುಸಾರೇಣ ಭಸ್ಮರುದ್ರಾಕ್ಷಧಾರಣಂ । ಲಬ್ಧ್ವಾ ಶಿವಂ ಮಹಾದೇವಂ ಲಿಂಗರೂಪಮುಮಾಪತಿಂ । ಯೋಽರ್ಚಯೇತ್ತಂ ತ್ರಿಕಾಲಂ ವೈ ಪೂರ್ವ ಪಾಶುಪತಂ ಹಿ ತತ್ । ನಿಗಮಾಗಮಸಂಧಾನಶೈವದೀಕ್ಷಾವಿಧಾನತಃ ।

ಶಿವಲಿಂಗಂ ಕರೇ ಕಂಠೇ ಧೃತ್ವಾ ವಕ್ಷಃಸ್ಥಲೇಽಪಿ ವಾ । ತ್ರಿಕಾಲಂ ಯೋಽರ್ಚಯೇದ್ಭಕ್ತ್ಯಾ ಮಹಾಪಾಶುಪತೋ ಹಿ ಸಃ । ಶ್ರೌತಾಶ್ರೌತ ವಿಭೇದೇನ ತದ್ದ್ವಿಧಾ ಪರಿಚಕ್ಷ್ಯತೇ । ವರ್ಣಾಶ್ರಮೋಚಿತಂ ಧರ್ಮಂ ವೇದಮಾರ್ಗಾವಿರೋಧತಃ । ಕೃತ್ವಾರ್ಚಯತಿ ಯಃ ಶಂಭುಂ ಶ್ರೌತ ಶೈವಸ್ಸ ಈರ್ಯತೇ ॥ ವರ್ಣಾಶ್ರಮೋಚಿತಂ ಧರ್ಮಂ ತ್ಯಕ್ತ್ವಾ ತಾಂತ್ರಿಕಮಾರ್ಗತಃ । ಯಃ ಪೂಜಯತಿ ವಿಶ್ವೇಶಂ ತಂತ್ರಶೈವಸ್ಸ ಉಚ್ಯತೇ ॥ " ಇತಿ ಶಿವಾಗಮೇ ಶ್ರೂಯತೇ. ತಸ್ಮಾತ್ ದ್ವಾದಶಾಬ್ದ ಪರಿಮಿತಪಾಶುಪತವ್ರತಸ್ಯ ಸ್ವಾಭೀಷ್ಟಕಾಮ್ಯಫಲಹೇತುತ್ವಂ, ಯಾವ ಜ್ಜೀವಪಾಶುಪತವ್ರತಸ್ಯ ಹಿ ಪಾಶನಿವೃತ್ತಿಪೂರ್ವಕಶಿವತ್ವಪ್ರಾಪ್ತಿರೂಪ ನಿತ್ಯಫಲಕತ್ವಮಿತಿ ನಿಶ್ಚೀಯತೇ. " ಅತ್ಯಾಶ್ರಮೀ ನಿರಾಭಾರಃ ಷಟ್ಸ್ಥಲೀ ಜಂಗಮಶ್ಚರಃ । ಶಿವಯೋಗಯುತಿರ್ವೀರೋ ನಾನ್ಯೇಷು ನ ಕದಾಚನ ॥ " ಇತಿ ವೀರಾಗಮೇ ದರ್ಶನಾತ್. ಅತ್ಯಾಶ್ರಮಶಬ್ದಸ್ಯ ಶೈವದೀಕ್ಷಾವಚ್ಛಿನ್ನಚತುರ್ವಿಧಾಶ್ರಮಪರಸಾಧಾರಣ್ಯೇಽಪಿ ಸಃ ತ್ಯಕ್ತೈಷಣತ್ರಯನಿರಾಭಾರವೀರಶೈವೇ ರೂಢಃ. ಬ್ರಹ್ಮಚಾರಿಣಾಂ ಯಥೇಷ್ಟ ಭೋಜನಪೂರ್ವಕಸ್ವಾಧ್ಯಾಯಾಧ್ಯಯನತ್ವಂ ಅಸಾಧಾರಣಧರ್ಮಃ. ಗೃಹಿಣಾಂ ಯಥೋಚಿತಭೋಜನಪೂರ್ವಕನಿತ್ಯಾಗ್ನಿಹೋತ್ರಾದಿಕ ರ್ಮಾನುಷ್ಠಾನಂ, ವಾನಪ್ರಸ್ಥಾನಾಂ ಉಪವಾಸಾದಿಪ್ರಧಾನಕಾಯಶೋಷಣಹೇತುಭೂತಪಂಚಾಗ್ನಿಮಧ್ಯಾದಿಸ್ಥಾನರೂಪತಪಶ್ಚರಣಂ. ಸಂನ್ಯಾಸಿನಾಂ ಯಥೋಚಿತಭೋಜನಪೂರ್ವಕಯಮಾದ್ಯಷ್ಟಾಂಗ ಪೂರ್ವಕಯೋಗಾಭ್ಯಾಸಾನುಕೂಲಶ್ರವಣಮನನನಿದಿಧ್ಯಾಸನಾತ್ಮಕ ವೇದಾಂತಚಿಂತನಂ ಮುಖ್ಯಧರ್ಮ ಇತಿ ನಿಶ್ಚೀಯತೇ. ತಥಾಪಿ ಬ್ರಹ್ಮವಿದ್ಯಾಧಿಕಾರಿತ್ವಂ ಸರ್ವಾಶ್ರಮಿಣಾಂ ಯುಕ್ತಂ. ಬ್ರಹ್ಮ ವಿತ್ಪಾಶುಪತಯೋಃ ಮುಕ್ತ್ಯುಪದೇಶವಿಧಾಯಕವಾಕ್ಯಾನಾಂ ಪರಸ್ಪರ ವಿರೋಧಃ. " ಏಷಾಮೀಶೇ ಪಶುಪತಿಃ " ಇತ್ಯಾದಿಶ್ರುತಿಷು ಶಿವಸ್ಯ ಬ್ರಹ್ಮಣಃ ಸರ್ವಜೀವಾಧಿಪತಿತ್ವಂ ತದ್ಬಂಧಮೋಕ್ಷಹೇತುತ್ವಾವ ಗಮಾತ್, ತದನುಗ್ರಹಾಭಾವೇ ತತ್ಪ್ರಾಪ್ತ್ಯಸಂಭವಾತ್ ಬ್ರಹ್ಮವೇತ್ತೃತ್ವ ವಿಧಾಯಕವಾಕ್ಯಾನಾಂ ತದ್ದೀಕ್ಷಾನುಸರಣೇ ತದುಪಾಸಕಾನಾಂ ತತ್ಸಾ ಕ್ಷಾತ್ಕಾರಃ ಅರ್ಥಾದುಪದಿಶ್ಯತೇ.

ಗೃಹಸ್ಥರಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುವುದಾದರೆ "ನಿಷ್ಫಲವಾದ ಕರ್ಮ ವನ್ನು ಮಾಡಬಾರದು" ಎಂಬ ನ್ಯಾಯದಿಂದ ಯತ್ಯಾಶ್ರಮಕ್ಕೆ ಪ್ರಯೋಜನವೇ ಇಲ್ಲವಾಗುತ್ತದೆ. " ಬದುಕಿರುವವರೆಗೂ ಅಗ್ನಿಹೋತ್ರವನ್ನಾಚರಿಸಬೇಕು " ಎಂದು ಶ್ರೌತವಿಧಿಯ ವಿರೋಧವಿಲ್ಲದ್ದರಿಂದಲೂ, ಎಲ್ಲ ಆಶ್ರಮಗಳಿಗೂ ಗೃಹಸ್ಥಾಶ್ರಮವೇ

ಆಧಾರವಾದ್ದರಿಂದ ಶ್ರೇಷ್ಠವೆನಿಸಿರುವುದರಿಂದಲೂ, "ಅತ್ಯಾಶ್ರಮಿಯು ಎಲ್ಲಾ ಇಂದ್ರಿಯಗಳನ್ನು ತಡೆದು ಭಕ್ತಿಯಿಂದ ಗುರುವಿಗೆ ವಂದಿಸಿ" ಎಂಬಲ್ಲಿ ಹೇಳಿರುವ ಅತ್ಯಾಶ್ರಮ, ಸಂನ್ಯಾಸ, ಯತಿ ಮೊದಲಾದ ಶಬ್ದಗಳಿಗೆ ಬೇರೆರೀತಿಯಲ್ಲಿ ಸಮನ್ವಯ ಮಾಡಬಹುದಾದ್ದರಿಂದಲೂ, "ಕಾಮ್ಯಕರ್ಮಗಳನ್ನು ತೊರೆಯುವುದೇ ಸಂನ್ಯಾಸ ವೆನಿಸುತ್ತದೆ" ಎಂಬ ಸ್ಮೃತಿ ಇರುವುದರಿಂದಲೂ ಫಲತ್ಯಾಗವೇ ಸಂನ್ಯಾಸವೆಂಬುದು ಯುಕ್ತವಾಗಿ ಹೊಂದುತ್ತದೆ. "ಪ್ರಯತ್ನಮಾಡುವವನೇ ಯತಿ" ಎಂಬ ನಿಯಮ ದಿಂದ ಮೋಕ್ಷಪ್ರಯತ್ನವು ಗೃಹಸ್ಥರಂತೆ ಎಲ್ಲಾ ಆಶ್ರಮಿಗಳಿಗೂ ಅನ್ವಯಿಸುತ್ತದೆ. "ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಯತಿ ಇವರಲ್ಲಿ ಯಾರೇ ಆಗಲಿ ಲಿಂಗಾಂಗಿ ಎನಿಸಿದರೆ ಅತ್ಯಾಶ್ರಮಿಯಾಗುವನು. ಶಿವನೇ ಲಿಂಗ, ಜೀವನೇ ಅಂಗ. ಇವರ ಸಮ್ಮೇಳನವೇ ಸಂಯೋಗ. ಆದ್ದರಿಂದ ಲಿಂಗಾಂಗಸಂಬಂಧವುಳ್ಳವನೇ ಅತ್ಯಾಶ್ರಮಿ ಎನಿಸುತ್ತಾನೆ." ಹೀಗೆ ಅತ್ಯಾಶ್ರಮಿಶಬ್ದವೂ ಸಹ ಎಲ್ಲಾ ಆಶ್ರಮಗಳಿಗೂ ಅನ್ವಯಿಸುವುದೆಂದು ವಾತುಲಾಗಮದಲ್ಲಿ ಶಿವನೇ ಹೇಳಿದ್ದಾನೆ. ಆದ್ದರಿಂದ ಮೌನವನ್ನು ವಿಧಿಸಿರುವ ಯತ್ಯಾಶ್ರಮವು ಮುಮುಕ್ಷುಗಳಿಗೆ ವಿಹಿತವಾಗಲಾರ ದೆಂದಾಶಂಕಿಸಿ ನಿರಾಕರಿಸುತ್ತಾನೆ. ಛಾಂದೋಗ್ಯದಲ್ಲಿ "ಬ್ರಾಹ್ಮಣನು ಈಷಣತ್ರಯ ದಿಂದ ದೂರನಾಗಿ ಭಿಕ್ಷೆಯನ್ನಾಚರಿಸುತ್ತಾನೆ" ಎಂದು ಸಂನ್ಯಾಸದ ಮುಖ್ಯ ಧರ್ಮವನ್ನು ತಿಳಿಸಿ ಅವನಲ್ಲಿ ಸಂನ್ಯಾಸಧರ್ಮಕ್ಕೆ ಅವಶ್ಯವೆನಿಸಿದ ಮೌನ ಮೊದಲಾದ ಸಹಕಾರಿಸಾಧನಗಳನ್ನು ತಿಳಿಸಿ ಅದರಂತೆ ಅಲ್ಲಿಯೇ ಗೃಹಸ್ಥ ಧರ್ಮವನ್ನೂ ತಿಳಿಸಿ ಗೃಹಸ್ಥರಿಗೂ ಸಹ ಬ್ರಹ್ಮವಿದ್ಯೆಯನ್ನು ಉಪದೇಶಿಸಿರುವುದರಿಂದ ಸಂನ್ಯಾಸ, ಯತಿ ಮೊದಲಾದ ಶಬ್ದಗಳು ಪಂಕಜಾದಿಪದದಂತೆ ಆ ಆಶ್ರಮದಲ್ಲಿಯೇ ರೂಢವೆನಿಸಿವೆ. ಆದ್ದರಿಂದ ಯತಿಗಳಿಗೆ ಮಾತ್ರವೇ ಬ್ರಹ್ಮವಿದ್ಯೆಯು ಆವಶ್ಯಕ. ಉಳಿದವರು ಅಗ್ನಿಹೋತ್ರಾದಿಕರ್ಮಗಳನ್ನಾಚರಸಬೇಕು. "ಅತ್ಯಾಶ್ರಮಿಯು ಪ್ರಾಣಲಿಂಗದ ಸಂಪರ್ಕವನ್ನು ಪಡೆದು ಭಸ್ಮದ ಗಂಟು, ಬಟ್ಟೆಗಂಟು, ಕಮಂಡಲು ಭಿಕ್ಷಾಪಾತ್ರೆ, ದಂಡ ಇವನ್ನು ಧರಿಸಿರಬೇಕು" ಎಂದು ಶಂಕರಸಂಹಿತೆಯಲ್ಲಿ ಅತ್ಯಾಶ್ರಮಿಶಬ್ದವು ಎಲ್ಲಾ ಆಶ್ರಮಿಗಳಿಗೂ ಸಾಮಾನ್ಯವಾಗಿ ಅನ್ವಯಿಸಿದರೂ ಯತಿಗಳಿಗೇ ಮುಖವಾಗಿ ಅನ್ವಯಿಸುವುದಾಗಿ ತಿಳಿದುಬರುತ್ತದೆ. ಈ ಸೂತ್ರದಲ್ಲಿ ಯತಿಗೆ ಮೌನವೇ ಮುಖ್ಯವಾದ್ದರಿಂದ ಅವನೇ ಬ್ರಹ್ಮವಿದ್ಯೆಗೆ ಅಧಿಕಾರಿ ಎಂದು ತಿಳಿಸಿ "ಸಮುದ್ರದಂತೆಯೇ ಕೆರೆಯೂ ಇರುವುದು" ಎಂಬ ನ್ಯಾಯದಿಂದ ಯತಿ ಯಂತೆಯೇ ಇತರರೂ ಬ್ರಹ್ಮವಿದ್ಯೆಗೆ ಅಧಿಕಾರಿಗಳು ಎಂದು ಹೇಳಿದ್ದರಿಂದ ಯತಿಯೇ ಶ್ರೇಷ್ಠನೆಂಬುದು ನಿರ್ವಿವಾದವೆನಿಸುತ್ತದೆ. "ಬ್ರಹ್ಮನಿಷ್ಠನು ಅಮೃತ ನಾಗುತ್ತಾನೆ" ಎಂಬಲ್ಲಿ ಬ್ರಹ್ಮನಿಷ್ಠನಾದವನಿಗೇ ಮೋಕ್ಷವೆಂದು ತಿಳಿದುಬರುತ್ತದೆ. "ಬ್ರಹ್ಮವನ್ನು ತಿಳಿದವನು ಬ್ರಹ್ಮವನ್ನೇ ಹೊಂದುತ್ತಾನೆ" ಎಂಬಲ್ಲಿ ಬ್ರಹ್ಮಜ್ಞರಿಗೇ ಮುಕ್ತಿಯನ್ನು ಹೇಳಲಾಗಿದೆ. "ಧ್ಯಾನವನ್ನು ಮತ್ತೆ ಮತ್ತೆ ನಡೆಸುವುದರಿಂದ

ಪಾಶವು ನಶಿಸುತ್ತದೆ" ಎಂಬಲ್ಲಿ ಧ್ಯಾನದಿಂದ ಪಾಶವಿಚ್ಛೇದವನ್ನು ಹೇಳಲಾಗಿದೆ. ಅಥರ್ವಶಿರಸ್ಸಿನಲ್ಲಿ "ಎಲ್ಲಾ ವ್ಯವಹಾರಗಳಿಗೂ ಮೂಲವಾದ ಆಶೆಯನ್ನು ತಡೆದು ರುದ್ರನಲ್ಲಿ ನೆಲೆಗೊಳಿಸಿರಿ" "ರುದ್ರನನ್ನು ತಪಸ್ಸಿನಿಂದ ಮೆಚ್ಚಿಸಿರಿ. ಇದೇ ಪಾಶುಪತ ವ್ರತ. ಇದನ್ನು ಆಚರಿಸುವವನು ಮತ್ತೆ ಹುಟ್ಟುವುದಿಲ್ಲ." ಎಂಬಲ್ಲಿ ಪಾಶುಪತ ವ್ರತವನ್ನೇ ಮೋಕ್ಷವೆಂದು ತಿಳಿಸಲಾಗಿದೆ. ಪುರಾಣಗಳಲ್ಲೂ ಹಾಗೆಯೇ ಹೇಳಿದೆ. ಆದ್ದರಿಂದ ಬ್ರಹ್ಮವಿದ್ಯೆಯಲ್ಲಿ ನಿರತರಾದವರಿಗೆಮಾತ್ರವೇ ಮುಕ್ತಿದೊರಕುವುದೋ ಅಥವಾ ಪಾಶುಪತವ್ರತವನ್ನಾಚರಿಸುವವರಿಗೂ ಉಂಟೋ? ಎಂದು ಸಂದೇಹ ವುಂಟಾಗುತ್ತದೆ. ಪಾಶುಪತವ್ರತವು ಎಲ್ಲಾ ಆಶ್ರಮಿಗಳಿಗೂ ಅವಶ್ಯಕವಾದ್ದರಿಂದ ಎಲ್ಲದರಲ್ಲೂ ಸೇರಿಕೊಂಡಿದೆ. ಅದಕ್ಕೆ ಕಾಲಪರಿಮಿತಿಯೂ ಕಂಡುಬಂದಿದೆ. ಹೆಂಡತಿ ಮಕ್ಕಳ ರಕ್ಷಣೆಗಾಗಿ ರಾಮ, ಕೃಷ್ಣ ಮೊದಲಾದವರೂ ಸಹ ಪಾಶುಪತವನ್ನು ಆಚರಿಸಿದ್ದಾರೆ. "ಮೋಕ್ಷಕ್ಕೆ ಜ್ಞಾನಕ್ಕಿಂತ ಬೇರೆ ಮಾರ್ಗವಿಲ್ಲ" ಎಂಬಲ್ಲಿ ಬೇರೆ ಎಲ್ಲಾ ಸಾಧನಗಳನ್ನು ನಿರಾಕರಿಸಲಾಗಿದೆ. ಆದ್ದರಿಂದ ಪಾಶುಪತವ್ರತವು ಶ್ರುತಿ ಯಲ್ಲಿ ವಿಹಿತವಾಗಿದ್ದರೂ ಕಾಮ್ಯಫಲವನ್ನು ಮಾತ್ರವೇ ಕೊಡಬಲ್ಲದು ಎಂದು ಪೂರ್ವಪಕ್ಷಿಯು ಹೇಳುತ್ತಾನೆ. ಇದಕ್ಕೆ ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. ಪಾಶುಪತವ್ರತವನ್ನು ಆಶ್ರಯಿಸಿದವರಿಗೆ ಮುಕ್ತಿಯೇ ಫಲವೆನಿಸಿದೆ. ಪರಬ್ರಹ್ಮವೆನಿಸಿದ ರುದ್ರನ ಅನುಸಂಧಾನರೂಪವಾದ ವಿದ್ಯಾವೈಭವವನ್ನೂ, ಮುನಿಧರ್ಮದಂತೆಯೇ ಭಿಕ್ಷಾಟನ, ಶಮದಮ ಮೊದಲಾದ ಮೋಕ್ಷಧರ್ಮಗಳನ್ನೂ ಪಾಶುಪತವ್ರತದಲ್ಲಿ ಹೇಳಿರುವುದರಿಂದ ಅದನ್ನಾಚರಿಸುವವರೂ ರುದ್ರನಲ್ಲಿ ಏಕೀಭವಿಸುತ್ತಾರೆ. "ಅಗ್ನಿ ರಿತಿ ಭಸ್ಮ" ಎಂಬ ಮಂತ್ರದಿಂದ ಭಸ್ಮವನ್ನು ತೆಗೆದುಕೊಂಡು ದೇಹದ ಎಲ್ಲಾ ಅವಯವಗಳಿಗೂ ಧರಿಸಬೇಕು" ಎಂದು ಮುಂತಾಗಿ ಅಲ್ಲಿ ಹೇಳಿರುವುದರಿಂದ ಪಾಶವಿಚ್ಛೇದವೇ ರುದ್ರಧ್ಯಾನದ ಫಲವೆನಿಸುತ್ತದೆ. ಆಯುಷ್ಯವಿರುವವರೆಗೂ ಪಾಶುಪತವ್ರತವನ್ನಾಚರಿಸುವವರಿಗೆ ಮುಕ್ತಿಯೇ ಫಲವಾಗಿ ದೊರಕುತ್ತದೆ. ಪಾಶುಪತಾಶ್ರಮದಲ್ಲಿ ಉಳಿದ ಆಶ್ರಮಧರ್ಮಗಳೂ ಅನ್ವಯಿಸುವುದರಿಂದ ಅದು ಅತ್ಯಾಶ್ರಮವೆನಿಸಿ ಸ್ವತಂತ್ರವಾಗಿ ಪರಶಿವನನ್ನು ದೊರಕಿಸುವ ಸಾಧನ ವಾಗುತ್ತದೆ. "ದೇಹ ಅಳಿಯುವವರೆಗೂ ಅಥವಾ ಹನ್ನೆರಡುವರ್ಷಗಳ ಕಾಲವಾದರೂ ಪಾಶನಿವೃತ್ತಿಗಾಗಿ ಪಾಶುಪತವ್ರತವನ್ನಾಚರಿಸಬೇಕು. ಪಾಶುಪತವು ಪೂರ್ವ ಅಪರ ಎಂದು ಎರಡುಬಗೆಯಾಗಿದೆ. ಶೈವದೀಕ್ಷೆಯಂತೆ ಭಸ್ಮ ರುದ್ರಾಕ್ಷ ಗಳನ್ನು ಧರಿಸಿ ಶಿವನನ್ನು ಲಿಂಗರೂಪದಿಂದ ಮೂರುಕಾಲವೂ ಅರ್ಚಿಸುವುದೇ ಪೂರ್ವ ದಲ್ಲಿ ಪಾಶುಪತವೆನಿಸುತ್ತದೆ. ವೈದಿಕದೀಕ್ಷೆಯ ಪ್ರಕಾರ ಹಸ್ತದಲ್ಲೋ ಕಂಠದಲ್ಲೋ ವಕ್ಷಸ್ಥಳದಲ್ಲೋ ಲಿಂಗವನ್ನು ಧರಿಸಿ ದಿನಕ್ಕೆ ಮೂರುವೇಳೆ ಭಕ್ತಿಯಿಂದ ಅರ್ಚಿಸುವುದು ಮಹಾಪಾಶುಪತವೆನಿಸಿಸುತ್ತದೆ. "ಶ್ರೌತ ಅಶ್ರೌತವೆಂದು ಇದು ಮತ್ತೆ ಎರಡು ಬಗೆ ಯಾಗಿದೆ. ವರ್ಣಾಶ್ರಮೋಚಿತವಾದ ಧರ್ಮವನ್ನು ವೇದಮಾರ್ಗಕ್ಕನುಗುಣವಾಗಿ

ಆಚರಿಸುತ್ತ ಶಿವನನ್ನು ಅರ್ಚಿಸುವವನೇ ಶ್ರೌತಶೈವನೆನಿಸುತ್ತಾನೆ. ವರ್ಣಾಶ್ರಮಧರ್ಮ ಗಳನ್ನು ತೊರೆದು ತಾಂತ್ರಿಕಮಾರ್ಗದಿಂದ ಶಿವನನ್ನು ಅರ್ಚಿಸುವವನು ತಂತ್ರಶೈವನೆನಿಸುತ್ತಾನೆ." ಹೀಗೆ ಶಿವಾಗಮದಲ್ಲಿ ಹೇಳಿದೆ. ಆದ್ದರಿಂದ ಹನ್ನೆರಡು ವರ್ಷಗಳಕಾಲ ಪಾಶುಪತವನ್ನಾಚರಿಸಿದವನು ತನಗೆ ಇಷ್ಟವಾದ ಕಾಮ್ಯಫಲಗಳನ್ನು ಪಡೆಯುವನೆಂದೂ, ಪ್ರಾಣವಿರುವವರೆಗೂ ಪಾಶುಪತವನ್ನಾಚರಿಸುವವನು ಪಾಶವನ್ನು ತೊಲಗಿಸಿಕೊಂಡು ಶಿವತ್ವವೆಂಬ ನಿತ್ಯಫಲವನ್ನು ಪಡೆಯುವನೆಂದೂ ನಿಶ್ಚಯಿಸಲಾಗಿದೆ. "ಆಶ್ರಮಧರ್ಮಗಳನ್ನು ಅತಿಕ್ರಮಿಸಿ ಹೊರಗಿನ ಹೊರೆಯನ್ನಿಳಿಸಿ ಷಟ್ಸ್ಥಲಜ್ಞಾನದಿಂದ ಹೊರಗೆ ಸಂಚರಿಸುವ ಜಂಗಮನು ಶಿವಯೋಗನಿಷ್ಠನಾಗಿ ವೀರನೆನಿಸುವವನೇ ಹೊರತು ಬೇರೆ ಯಾರು ಎಂದಿಗೂ ವೀರನೆನಿಸಲಾರರು" ಎಂದು ವೀರಾಗಮದಲ್ಲಿ ಹೇಳಿದೆ. ಆದ್ದರಿಂದ ಅತ್ಯಾಶ್ರಮಶಬ್ದವು ಶೈವದೀಕ್ಷೆಯನ್ನು ಹೊಂದಿದ ನಾಲ್ಕು ಆಶ್ರಮಿಗಳಿಗೂ ಸಾಮಾನ್ಯವಾಗಿ ಅನ್ವಯಿಸಿದರೂ ಆ ಎಲ್ಲಾ ಆಶೆಗಳನ್ನೂ ತೊರೆದ ನಿರಾಭಾರವೀರಶೈವನಲ್ಲಿಯೇ ರೂಢವಾಗಿದೆ. ಬ್ರಹ್ಮಚಾರಿಗಳು ಯಥೇಚ್ಛವಾಗಿ ಉಂಡು ವೇದಾಧ್ಯಯನಮಾಡುವುದೇ ಅವರ ಅಸಾಧಾರಣಧರ್ಮವೆನಿಸಿದೆ. ಗೃಹಸ್ಥರು ಯಥೋಚಿತವಾಗಿ ಉಂಡು ನಿತ್ಯವೂ ಅಗ್ನಿಹೋತ್ರಾದಿಕರ್ಮಗಳನ್ನಾಚರಿಸುವುದೇ ಅವರ ವಿಶೇಷಧರ್ಮವೆನಿಸಿದೆ. ವಾನಪ್ರಸ್ಥರು ಉಪವಾಸದಿಂದ ದೇಹವನ್ನು ಒಣಗಿಸುತ್ತ ಪಂಚಾಗ್ನಿಮಧ್ಯದಲ್ಲಿ ತಪಸ್ಸನ್ನಾಚರಿಸುವುದೇ ಅವರ ಅಸಾಧಾರಣಧರ್ಮವೆನಿಸಿದೆ. ಸಂನ್ಯಾಸಿಗಳು ಹಾಗೆಯೇ ಉಂಡು ಅಷ್ಟಾಂಗಯೋಗವನ್ನಾಚರಿಸುತ್ತ ಶ್ರವಣ ಮನನ ನಿದಿಧ್ಯಾಸನಗಳ ಮೂಲಕ ವೇದಾಂತವನ್ನು ಚಿಂತಿಸಬೇಕು. ಇದೇ ಅವರಿಗೆ ಮುಖ್ಯಧರ್ಮವೆಂದು ವಿಧಿಸಲಾಗಿದೆ. ಆದರೂ ಎಲ್ಲಾ ಆಶ್ರಮಿಗಳಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರುವುದು ಯುಕ್ತವೇ ಆಗಿದೆ. ಆದರೆ ಬ್ರಹ್ಮಜ್ಞಾನಿಗೂ ಪಾಶುಪತನಿಗೂ ಮುಕ್ತಿಯನ್ನು ವಿಧಿಸುವ ವಾಕ್ಯಗಳಲ್ಲಿ ಪರಸ್ಪರ ವಿರೋಧವಿದ್ದರೂ ಶ್ರುತಿಗಳಲ್ಲಿ ಪರಶಿವಬ್ರಹ್ಮವನ್ನೇ ಜೀವರೆಲ್ಲರಿಗೂ ಅಧಿಪತಿ ಎಂದೂ, ಅವರ ಬಂಧಮೋಕ್ಷಗಳೆಲ್ಲಕ್ಕೂ ಕಾರಣವೆಂದೂ ಹೇಳಿರುವುದರಿಂದ ಅವನೇ ಅವರನ್ನು ಅನುಗ್ರಹಿಸಲಿಕ್ಕೂ ಸಮರ್ಥನೆಂಬುದು ಸ್ಪಷ್ಟಪಡುತ್ತದೆ. ಆದ್ದರಿಂದ ಬ್ರಹ್ಮವನ್ನರಿಯಬೇಕೆಂದು ವಿಧಿಸಿರುವ ವಾಕ್ಯಗಳಿಗೂ ಅಲ್ಲಿ ಹೇಳಿರುವ ದೀಕ್ಷೆಯಂತೆಯೇ ಸಾಧಕರಿಗೆ ಬ್ರಹ್ಮಸಾಕ್ಷಾತ್ಕಾರವನ್ನೇ ಫಲವೆಂದು ಉಪದೇಶಿಸಲಾಗಿದೆ.

ನನು ಸರ್ವೇಷಾಮಾಶ್ರಮಿಣಾಂ ಬ್ರಹ್ಮವಿದ್ಯಾಧಿಕಾರೋಽಸ್ತು; ತಥಾಪಿ ತದ್ವೃತ್ತಿಃ ಕಿಮಿತ್ಯಾಕಾಂಕ್ಷಾಯಾಂ ತಲ್ಲಕ್ಷಣಮಧಿಕರಣಾಂತರೇಣ ದರ್ಶಯತಿ. **ಅನಾವಿಷ್ಕಾರಾಧಿಕರಣಂ ॥ ೧೫ ॥ ಅನಾವಿಷ್ಕುರ್ವನ್ನನ್ವಯಾತ್ ॥ ೫೦ ॥** ಅನಾವಿಷ್ಕುರ್ವನ್ ಬಾಲಕವತ್ ಸ್ವನಿಷ್ಠಭಕ್ತಿಜ್ಞಾನವೈರಾಗ್ಯಶಮದಮಾದಿಕಂ ಲೋಕಾನಾಮಪ್ರಕಟಯನ್ ದಂಭದರ್ಪರಾಗದ್ವೇಷಾದಿರಹಿತಸ್ಸನ್ ಸದಾ ಶ್ರವಣಮನನನಿದಿಧ್ಯಾಸನ

ಧ್ಯಾನಧಾರಣಾವಧಾನಸಮಾಧಿನಾ ಶಿವಯೋಗೀ ಸರ್ವದಾ ಸರ್ವಶಿವೈಕಜ್ಞಾನನಿಷ್ಠಾಗರಿಷ್ಠಭಾವಾನುಸಂಧಾನಂ ಕುರ್ವಂಸ್ತಿಷ್ಠೇತ್. ಕುತಃ? ಅನ್ವಯಾತ್ ಶಿವಯೋಗಿನಃ ಶರೀರೇಂದ್ರಿಯಾದ್ಯಭಿಮಾನನಿರಾಕರಣಪೂರ್ವಕಸ್ವಮನೋವೃತ್ತೇಃ ಶಿವೇ ಸದಾ ಸಮನ್ವಯಾತ್ ಬಾಲಾದಿವದುಗ್ರಶಿವಜ್ಞಾನವೈಭವತ್ವಂ ಸ್ವಾಭಾವಿಕಮಿತಿ ಸೂತ್ರಾರ್ಥಃ. "ಆತ್ಮನೈವ ಸಹಾಯೇನ ಸುಖಾರ್ಥೀ ವಿಚರೇದಿಹ | ಸಂದಿಗ್ಧಸ್ಸರ್ವಭೂತಾನಾಂ ವರ್ಣಾಶ್ರಮವಿವರ್ಜಿತಃ | ಅಂಧವಜ್ಜಡವಚ್ಚಾಪಿ ಮೂಕವಚ್ಚ ಮಹೀಂ ಚರೇತ್ | ಗಚ್ಛಂಸ್ತಿಷ್ಠನ್ನುಪವಿಶನ್ ಶಯಾನೋ ವಾನ್ಯಥಾಪಿ ವಾ | ಯಥೇಚ್ಛಯಾ ವಸೇದ್ವಿದ್ವಾನ್ ಸ್ವಾತ್ಮಾರಾಮಸ್ಸದಾ ಮುನಿಃ | ಬಾಲೋನ್ಮತ್ತಪಿಶಾಚವತ್ ಜಡವೃತ್ತ್ಯಾ ಲೋಕಮಾಚರೇತ್ ||", ಬ್ರಾಹ್ಮಣಸ್ಸಮಾಹಿತೋ ಭೂತ್ವಾ ತತ್ತ್ವಂಪದೈಕ್ಯಮೇವ ಸದಾ ಕುರ್ಯಾತ್. "ಆಶಾಂಬರೋ ನ ನಮಸ್ಕಾರೋ ನ ಸ್ವಾಹಾಕಾರೋ ನ ಸ್ವಧಾಕಾರೋ ನ ನಿಂದಾಸ್ತುತಿರ್ಯಾದೃಚ್ಛಿಕೋ ಭವೇತ್" ಇತ್ಯಾದಿನಾ ಶಿವಜ್ಞಾನವತಾಂ ಬಾಲಾದಿವದುಪಾದೇಯತಯಾ ಶ್ರುತಂ. ಅತ್ರ ಬಾಲವತ್ ಕಾಮಕರ್ಮಚಾರಾದಿಕಂ ಸರ್ವಂ ವಿದುಷೋಪಾದೇಯಂ ಉತ ಡಂಭಾದಿರಹಿತತ್ವಮೇವೇತಿ ವಿಶಯಃ. "ಬಾಲೋನ್ಮತ್ತಪಿಶಾಚವಜ್ಜಡವೃತ್ತಿತ್ವಸ್ಯ ಬ್ರಹ್ಮವಿದಾಮುಪದೇಶಾತ್ ತದ್ವದ್ಯುಕ್ತ್ಯಾಯುಕ್ತಶೂನ್ಯತಯಾ ಪುಣ್ಯಾಪುಣ್ಯಕರ್ಮಾನುಷ್ಠಾನಮುಪಾದೇಯಂ. ತಸ್ಮಾತ್ "ಆತ್ಮಾ ವಾರೇ ದ್ರಷ್ಟವ್ಯಃ" ಇತ್ಯಾದಿಶ್ರುತಿವಿಹಿತವೇದಾಂತಶ್ರವಣಮನನಾದಿಕಸ್ಯಾಪ್ಯನುಪಪತ್ತಿಸ್ಸಂಭವತೀತಿ ಪ್ರಾಪ್ತೇ ತತ್ರಾಭಿಧೀಯತೇ. ಅನಾವಿಷ್ಕುರ್ವನ್ನಿತಿ ಬಾಲಸ್ಯ ಯತ್ ಸ್ವಭಾವಾನಾವಿಷ್ಕಾರರೂಪಂ ಕರ್ಮ ತದುಪಾದಾನೋ ವರ್ತೇತ ವಿದ್ವಾನ್. ಕುತಃ? ಅನ್ವಯಾತ್. ಸದಾ ಶಿವಸ್ಯೈಕನಿಷ್ಠಾಗರಿಷ್ಠಚಿತ್ತಸಮನ್ವಯಾತ್ ಯುಕ್ತಂ. "ಬಾಲ್ಯೇನ ತಿಷ್ಠಾಸೇತ್"ಇತ್ಯಸ್ಮಿನ್ ವಿಧೌ ತಸ್ಯೈವ ವಿದುಷೋಽನ್ವಯಸಂಭವೋ ಯುಕ್ತಃ ಇತರೇಷಾಂ ವಿದ್ಯಾವಿರೋಧಿತ್ವಶ್ರವಣಾತ್. "ನಾಽವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ | ನಾಶಾಂತಮಾನಸೋ ವಾಪಿ ಪ್ರಜ್ಞಾನೇನೈನಮಾಪ್ನುಯಾತ್," "ಆಹಾರಶುದ್ಧೌ ಸತ್ತ್ವಶುದ್ಧಿಃ, ಸತ್ತ್ವಶುದ್ಧೌ ಧ್ರುವಾ ಸ್ಮೃತಿಃ" ಇತ್ಯಾದಿಷು ಬ್ರಹ್ಮನಿಷ್ಠನಿಯಮಾಃ ಶ್ರೂಯಂತೇ. "ದೃಷ್ಟಾಂತೇ ನಹಿ ಸರ್ವಸಂಭವಃ" ಇತಿ ನ್ಯಾಯೇನ ಬಾಲಾದಿವದ್ದಂಭರಹಿತತ್ವಮಾತ್ರಮುಕ್ತಂ. ಪೂರ್ಣಶಿವಜ್ಞಾನಿನಾಂ ಸರ್ವಶಿವಾತ್ಮಕತ್ವನಿರಂತರಭಾವಾನಾಂ ವೇದಾಂತಶ್ರವಣಾದಿಕಂ ಅಪ್ರಯೋಜನಂ. ಮಂದಶಿವಜ್ಞಾನಿನಾಂ ಸರ್ವಶಿವಾತ್ಮಕತ್ವ

**ಜ್ಞಾನದಾರ್ಢ್ಯಾರ್ಥಂ ಶ್ರವಣಮನನವರ್ಣಾಶ್ರಮಾಚಾರಾದಿಕಂ ಸರ್ವಂ ವಿಧೇಯಂ. "ಸಮಾಧಿಮಗ್ನಃ ಕರ್ಮಾಣಿ ಕರೋತು ಮಾ ಕರೋತು ವಾ । ಹೃದಯೇನಾಸ್ತಸಂದೇಹಃ ಸ ಜೀವನ್ಮುಕ್ತ ಉಚ್ಯತೇ" ಇತ್ಯಾದಿವೇದಾಂತೇಷ್ವವಿದುಷಾಮೇವ ವಿಧಿವಿಹಿತಕರ್ಮಾನುಷ್ಠಾನತ್ವಂ,ವಿದುಷಾಂ ಸ್ವೇಚ್ಛಾಧೀನಪ್ರವರ್ತಕತ್ವಂ ಚೋಪದಿಷ್ಟಂ.**

ಎಲ್ಲಾ ಆಶ್ರಮಿಗಳಿಗೂ ಬ್ರಹ್ಮವಿದ್ಯೆಯಲ್ಲಿ ಅಧಿಕಾರವಿರಲಿ. ಆದರೂ ಅವರ ವೃತ್ತಿ ಹೇಗಿರುವುದು? ಎಂದಾಶಂಕಿಸಿ ಅದಕ್ಕೆ ಸಮಾಧಾನವನ್ನು ತಿಳಿಸುತ್ತಾನೆ. ಶಿವಯೋಗಿಯು ಬಾಲಕನಂತೆ ತನ್ನ ಭಕ್ತಿ ಜ್ಞಾನ ವೈರಾಗ್ಯ ಶಮದಮಾದಿಗಳನ್ನು ಲೋಕದ ಜನರಿಗೆ ತಿಳಿಸದಂತೆ ದಂಭ ದರ್ಪ ರಾಗದ್ವೇಷಗಳಿಲ್ಲದವನಾಗಿ ಯಾವಾಗಲೂ ಶ್ರವಣ ಮನನ ನಿದಿಧ್ಯಾಸನ ಧ್ಯಾನ ಧಾರಣ ಅವಧಾನ ಸಮಾಧಾನಗಳಿಂದ ಶಿವಜ್ಞಾನಪೂರ್ಣನಾಗಿ ಶಿವಭಾವವನ್ನು ಅನುಸಂಧಾನಮಾಡುತ್ತಿರುವನು. ಶರೀರೇಂದ್ರಿಯಾಭಿಮಾನವಿಲ್ಲದ್ದರಿಂದ ಶಿವಯೋಗಿಯ ಮನೋವೃತ್ತಿಯು ಶಿವನಲ್ಲಿಯೇ ಯಾವಾಗಲೂ ಸಮರಸವಾಗಿ ಬೆರೆತಿರುತ್ತದೆ. ಆದ್ದರಿಂದ ಅವನಲ್ಲಿ ಶಿವಜ್ಞಾನವೈಭವವು ಬಾಲಕನಂತೆ ಗುಪ್ತವೂ ಸ್ವಾಭಾವಿಕವೂ ಆಗಿರುವುದು. "ಶಿವಯೋಗಿಯು ತನ್ನ ಸಹಾಯದಿಂದಲೇ ಅಂಧನತೆಯೂ ಜಡನಂತೆಯೂ ಮೂಕನಂತೆಯೂ ನಿತ್ಯಸುಖಕ್ಕಾಗಿ ಸಂಚರಿಸುವನು. ಅವನು ತಿರುಗಾಡುವಾಗಲೂ ನಿಂತಾಗಲೂ ಕುಳಿತಾಗಲೂ ಮಲಗಿದ್ದಾಗಲೂ ಆತ್ಮರಾಮನಾಗಿದ್ದು ಬಾಲಕನಂತೆಯೂ, ಉನ್ಮತ್ತನಂತೆಯೂ ಪಿಶಾಚದಂತೆಯೂ ಜಡವೃತ್ತಿಯಿಂದ ವ್ಯವಹರಿಸಬೇಕು. ಅವನು ಯಾವಾಗಲೂ ಮನಸ್ಸಮಾಧಾನದಿಂದ ತತ್ತ್ವಚಿಂತನದಲ್ಲಿಯೇ ನಿರತನಾಗಬೇಕು. ಯಾರೊಬ್ಬರನ್ನೂ ಕಾಡದೆ ಬೇಡದೆ, ಸ್ತುತಿನಿಂದೆಗಳನ್ನು ಸಮನಾಗಿ ಭಾವಿಸಬೇಕು." ಶಿವಯೋಗಿಯು ಬಾಲಕನಂತೆ ಇರಬೇಕೆಂದರೆ ಅವನು ಎಲ್ಲಾ ಕರ್ಮಗಳನ್ನು ತನಗಾಗಿ ಮಾಡುವನೇ ಅಥವಾ ಸಹಜವಾಗಿ ನಡೆಸುವನೆ? ಎಂದು ಸಂಶಯ ಬರುತ್ತದೆ. "ಬಾಲೋನ್ಮತ್ತಪಿಶಾಚರಂತೆ ಜ್ಞಾನಿಯು ಜಡನಾಗಿರುವನು" ಎಂದು ಶ್ರುತ್ಯಾಗಮಗಳಲ್ಲಿ ಅವನಿಗೆ ಜಡವರ್ತನವನ್ನು ಹೇಳಿರುವುದರಿಂದ ಅವನು ಯುಕ್ತಾಯುಕ್ತವಿವೇಕಶೂನ್ಯನಾಗಿ ಪುಣ್ಯಪಾಪಕರ್ಮಗಳನ್ನಾಚರಿಸುವನೆಂದು ತಿಳಿದುಬರುತ್ತದೆ. ಆದ್ದರಿಂದ "ಶ್ರೋತವ್ಯೋ ಮಂತವ್ಯಃ" ಎಂಬಲ್ಲಿ ಹೇಳಿರುವ ವೇದಾಂತಶ್ರವಣಮನನ ಮೊದಲಾದವು ಅಯುಕ್ತವೆನಿಸುತ್ತವೆ ಎಂದು ಪೂರ್ವಪಕ್ಷಿಯು ಕೇಳುತ್ತಾನೆ. ಅದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಬಾಲಕನು ತನ್ನ ಸ್ವಭಾವವನ್ನು ತೋರ್ಪಡಿಸದಿರುವಂತೆ ಜ್ಞಾನಿಯ ಮನಸ್ಸು ಯಾವಾಗಲೂ ಶಿವನಲ್ಲಿಯೇ ನಿಷ್ಠೆಯಿಂದ ಅಂಟಿಕೊಂಡಿರುವುದರಿಂದ ಅವನು ಲೀಲೆಯಿಂದ ಕರ್ಮಗಳನ್ನಾಚರಿಸುವನು. "ಬಾಲ್ಯಾವಸ್ಥೆಯಲ್ಲಿಯೇ ನೆಲಸುವನು" ಎಂಬ ವಿಧಿವಾಕ್ಯವು ಬೇರೆಯವರಿಗೆ ಹೊಂದದೆ ಇರುವುದರಿಂದ ಜ್ಞಾನಿಗೆ ಮಾತ್ರವೇ ಅನ್ವಯವಾಗುತ್ತದೆ.

"ದುರ್ಮಾರ್ಗವನ್ನು ತೊರೆಯದವನು,ಮನಶ್ಶಾಂತಿ ಮತ್ತು ಸಮಾಧಾನಗಳಿಲ್ಲದವನು ಜ್ಞಾನದಿಂದಲೂ ಬ್ರಹ್ಮವನ್ನು ಹೊಂದಲಾರನು" "ಆಹಾರ ಶುದ್ಧಿಯಿಂದ ಸತ್ತ್ವ ಶುದ್ಧಿಯೂ, ಅದರಿಂದ ನಿತ್ಯಸ್ಮರಣವೂ ಉಂಟಾಗುತ್ತದೆ." ಹೀಗೆ ಬ್ರಹ್ಮನಿಷ್ಠರ ನಿಯಮಗಳು ಕಂಡುಬರುತ್ತವೆ. "ದೃಷ್ಟಾಂತದಲ್ಲಿ ಎಲ್ಲವೂ ಸಂಭವಿಸುವುದಿಲ್ಲ" ವೆಂಬ ನ್ಯಾಯದಿಂದ ಬಾಲಕನಂತೆ ಡಂಭವಿಲ್ಲದಿರುವಿಕೆಯೇ ಶಿವಯೋಗಿಯ ಸ್ವಭಾವವೆಂದು ತಿಳಿಯಬೇಕು. ಪೂರ್ಣವಾಗಿ ಶಿವನನ್ನಾರಿತಪೂರ್ಣಾಧಿಕಾರಿಗಳಿಗೆ ಎಲ್ಲವೂ ಶಿವನೆಂಬ ಭಾವನೆ ನಿರಂತರವಾಗಿರುವುದರಿಂದ ವೇದಾಂತಶ್ರವಣವೇ ಬೇಕಾಗಿಲ್ಲ. ಆದರೆ ಮಂದಾಧಿಕಾರಿಗಳಿಗೆ ಎಲ್ಲವೂ ಶಿವನೆಂಬ ಜ್ಞಾನವನ್ನು ಬಲಪಡಿಸಲಿಕ್ಕಾಗಿ ಶ್ರವಣ ಮನನಗಳು, ವರ್ಣಾಶ್ರಮಧರ್ಮಗಳು ಇವೆಲ್ಲವೂ ಆವಶ್ಯಕ. "ಸಮಾಧಿಯನ್ನಾಗಲೀ ಅಶ್ರಮಕರ್ಮಗಳನ್ನಾಗಲಿ ಒಬ್ಬನು ಆಚರಿಸಲಿ ಅಥವಾ ಬಿಡಲಿ. ಆದರೆ ಯಾವನ ಹೃದಯದಲ್ಲಿ ಎಲ್ಲಾ ಸಂಶಯಗಳೂ ತೊಲಗಿರುತ್ತವೆಯೋ ಅವನೇ ಜೀವನ್ಮುಕ್ತನೆನಿಸುತ್ತಾನೆ." ಹೀಗೆ ಶ್ರುತಿಗಳಲ್ಲಿ ವಿದ್ವಾಂಸರಲ್ಲದವರು ಮಾತ್ರವೇ ಶಾಸ್ತ್ರೋಕ್ತವಾದ ಕರ್ಮಗಳನ್ನು ಆಚರಿಸಬೇಕೆಂದೂ, ವಿದ್ವಾಂಸರು ತಮ್ಮ ಇಚ್ಛೆಬಂದಂತೆ ಪ್ರವರ್ತಿಸಬಹುದೆಂದೂ ತಿಳಿಸಲಾಗಿದೆ.

ನನು ಶ್ರವಣಮನನಾದಿಸಹಕೃತಶಿವತತ್ತ್ವಸಾಕ್ಷಾತ್ಕಾರವತಾಂ ಪುರುಷಾಣಾಂ ಪೂರ್ಣಾಧಿಕಾರಿಣಾಮಿಹೈವ ಜನ್ಮನಿ ಜೀವಭಾವನಿವೃತ್ತಿಪೂರ್ವಕಶಿವತತ್ತ್ವಪ್ರಾಪ್ತಿರ್ವಾ ಸಾಲೋಕ್ಯಾದಿಕ್ರಮೇಣ ಕ್ರಮಮುಕ್ತಿರುತ ಜನ್ಮಾಂತರೇ ವೇತ್ಯಾಶಂಕಾಯಾಂ ಅಧಿಕರಣಾಂತರೇಣಾಹ.

ಐಹಿಕಾಧಿಕರಣಂ ‖ ೧೬ ‖ ಐಹಿಕಮಪ್ರಸ್ತುತಪ್ರತಿಬಂಧೇ ತದ್ದರ್ಶನಾತ್ ‖ ೫೧ ‖ ಅಪ್ರಸ್ತುತಪ್ರತಿಬಂಧೇ ಪ್ರಸ್ತುತಾನಾಂ ಭಕ್ತಿವೈರಾಗ್ಯಶಮದಮಾದಿಸಹಕೃತಶ್ರವಣಾದೀನಾಂ ದೃಢಾದ್ಯಭಿಮಾನಲಕ್ಷಣೇ ಪ್ರತಿಬಂಧಕೇ ಅಸತಿ ಐಹಿಕಂ ಜ್ಞಾನಮುತ್ಪದ್ಯತೇ. ಅಸ್ಮಿನ್ನೇವ ಜನ್ಮನಿ ಪರಶಿವಬ್ರಹ್ಮಸಾಕ್ಷಾತ್ಕಾರ ಉತ್ಪದ್ಯತೇ. ದೃಢದೇಹಾದ್ಯಭಿಮಾನರೂಪಪ್ರತಿಬಂಧಕೇ ಸತಿ ತು ಜನ್ಮಾಂತರೇ ಪುನರಪಿ ಶ್ರವಣಮನನನಿದಿಧ್ಯಾಸನಾನುಷ್ಠಾನಾನಂತರಂ ತತ್ಸಾಕ್ಷಾತ್ಕಾರೋ ಲಭ್ಯತೇ. ಕುತಃ? ತದ್ದರ್ಶನಾತ್ "ಅನೇಕಜನ್ಮಸಂಸಿದ್ಧಸ್ತತೋ ಯಾತಿ ಪರಾಂ ಗತಿಂ" ಇತ್ಯಾದಿನಾ. ಸ್ಮೃತಿಪುರಾಣೇಷು ಜಡಭರತಸ್ಯ ಜನ್ಮತ್ರಯೇಣ ಜನ್ಮಾಂತರಫಲೇನ ವಾಮದೇವಸ್ಯೈಕಜನ್ಮನಿ ಪಾಶನಿವೃತ್ತಿಪೂರ್ವಕಶಿವತ್ವಪ್ರಾಪ್ತ್ಯುಪಗಮಾತ್ ಪ್ರಬಲದೇಹಾದ್ಯಭಿಮಾನವತಾಂ ಅನೇಕಜನ್ಮಕೃತಧ್ಯಾನಧಾರಣಪೂಜಾನಮಸ್ಕಾರಶ್ರವಣಮನನನಿದಿಧ್ಯಾಸನಾನುಷ್ಠಾನೇನ ಶಿವಸಾಕ್ಷಾತ್ಕಾರಃ. ವಿಶುದ್ಧಾಂತಃಕರಣಾನಾಂ ಸ್ವಲ್ಪದೇಹಾಭಿಮಾನವತಾಂ ಈಶ್ವರಾನುಗ್ರಹವತಾಂ ಏಕಜನ್ಮಾನುಷ್ಠಿತಶಿವಭಕ್ತಿ

ವೈರಾಗ್ಯಶ್ರವಣಾದ್ಯನುಷ್ಠಾನಾದಿಭಿರೇವ ಶಿವಸಾಕ್ಷಾತ್ಕಾರ ಇತಿ ಸೂತ್ರಾರ್ಥಃ. ಮುಂಡಕೋಪನಿಷದಿ “ ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ ಭವತಿ ತಸ್ಮೈ ಸ ಹೋವಾಚ ದ್ವೇ ವಿದ್ಯೇ ವೇದಿತವ್ಯೇ ” ಇತಿ. “ ಬ್ರಹ್ಮವಿದೋ ವದಂತಿ ” ಇತ್ಯುಪಕ್ರಮ್ಯ “ ಸ ಯೋ ಹ ವೈ ಪರಮಂ ಬ್ರಹ್ಮ ವೇದ ಬ್ರಹ್ಮೈವ ಭವತಿ ” ಇತ್ಯತ್ರ ಅಭ್ಯುದಯ ನಿಃಶ್ರೇಯಸಾತ್ಮಕಫಲದ್ವಯವಿಧಾಯಕದ್ವಿವಿಧವಿದ್ಯಾ ಆಮ್ನಾತಾ. ಫಲಾಭಿಲಾಷಾಸಕ್ತಪುಣ್ಯಕರ್ಮೋತ್ಪಾದಕಫಲಮಭ್ಯುದಯ ಫಲಂ. ಶಮದಮವೈರಾಗ್ಯಭಕ್ತಿಜೀವಕರುಣಾಶ್ರವಣಾದಿಫಲಕಂ ಮುಕ್ತಿಫಲಂ ನಿಃಶ್ರೇಯಸಸಂಜ್ಞಿಕಂ. ತತ್ರ ಶಿವಜ್ಞಾನನಿಷ್ಠಾವತಾಂ ಇಹ ಜನ್ಮನಿ ಜನ್ಮಾಂತರೇ ವಾ ಮುಕ್ತಿರಿತಿ ಸಂದಿಹ್ಯತೇ “ ಅತ್ರ ಬ್ರಹ್ಮ ಸಮಶ್ನುತೇ ” ಇತಿ ವಿದುಷಾಮಿಹೈವ ಬ್ರಹ್ಮಪ್ರಾಪ್ತ್ಯುಪದೇಶಾತ್ ಕಾಲವಿಲಂಬಫಲ ಸ್ವೀಕಾರೇ ವಿದ್ಯಾಯಾ ಮಾಹಾತ್ಮ್ಯೋಚ್ಛೇದಪ್ರಸಂಗಾತ್. ತಥಾ ಚೇತ್ ಜ್ಯೋತಿಷ್ಟೋಮಾದಿವತ್ ಮುಖ್ಯಸಾಧನತ್ವಾಯೋಗಾಚ್ಚ ಬ್ರಹ್ಮ ವಿದ್ಯಾವತಾಮಿಹೈವ ಜನ್ಮನ್ಯೇವ ಮುಕ್ತಿಫಲಂ ಉಚಿತಮಿತಿ ಪ್ರಾಪ್ತೇ ತತ್ರ ವಕ್ಷ್ಯಾಮಃ. ಐಹಿಕಂ ಅಭ್ಯುದಯಫಲಂ ಉಪಾಸನಂ ಅಪ್ರಸ್ತುತೇ ಪ್ರಬಲಕರ್ಮಾಂತರಪ್ರತಿಬಂಧೇ ಸತ್ಯನಂತರಂ ಪ್ರತಿಬಂಧೇ ಸತಿ ತದುತ್ತರಕಾಲೇ ಇತ್ಯನಿಯಮಃ. ಕುತಃ? ತದ್ದರ್ಶನಾತ್. ದೃಶ್ಯತೇ ಹಿ ಪ್ರಬಲಕರ್ಮಾಂತರೇಣ ಕರ್ಮಫಲಪ್ರತಿಬಂಧಾಭ್ಯುಪಗಮಃ ಶ್ರುತೌ. “ ಯದೇವ ವಿದ್ಯಯಾ ಕರೋತಿ ಶ್ರದ್ಧಯೋಪನಿಷದಾ ತದೇವ ವೀರ್ಯವತ್ತರಂ ಭವತಿ ” ಇತ್ಯುದ್ಗೀಥವಿದ್ಯಾಯುಕ್ತಸ್ಯ ಕರ್ಮಣಃ ಫಲಾಪ್ರತಿಬಂಧಶ್ರವಣಾತ್ ಭೂತಪ್ರತಿಬಂಧವರ್ತಮಾನಪ್ರತಿಬಂಧ ಭಾವಿಪ್ರತಿಬಂಧಸಂಜ್ಞಿಕಬಂಧತ್ರಯೇಷು ಭೂತವರ್ತಮಾನಪ್ರತಿ ಬಂಧಯೋಃ ಶ್ರುತಿಸ್ಮೃತಿಪುರಾಣೇಷು ತಾರಣೋಪಾಯಾವಗಮಾತ್ ಭಾವಿಪ್ರತಿಬಂಧನಿವೃತ್ತ್ಯುಪಾಯದರ್ಶನಾತ್ ಭರತಸ್ಯ ತ್ರಿಜನ್ಮಸು ಜಡ ಭರತಾದೀನಾಮಿವ ಜನ್ಮಾಂತರಮುಕ್ತಿಫಲಂ ನ ವಿರುದ್ಧ್ಯತೇ. ಇಹ ಜನ್ಮನಿ ಮುಕ್ತಿವಿಧಾಯಕವಾಕ್ಯಾನಾಂ ವಾಮದೇವಾದಿವದ್ಭವಿಪ್ರತಿಬಂಧನಿ ರ್ಮುಕ್ತವಿದ್ವದ್ವಿಷಯಂ. “ ವಾಸನಾತಾನವಂ ಬ್ರಹ್ಮನ್ ಮೋಕ್ಷ ಇತ್ಯಭಿಧೀಯತೇ । ನ ಮೋಕ್ಷೋ ನಭಸಃ ಪೃಷ್ಠೇ ನ ಪಾತಾಲೇ ನ ಭೂತಲೇ । ಸರ್ವಾಶಾಸಂಕ್ಷಯೋ ಚೇತಃಕ್ಷಯೋ ಮೋಕ್ಷ ಇತೀರ್ಯತೇ । ಬದ್ಧೋ ಹಿ ವಾಸನಾಬದ್ಧೋ ಮೋಕ್ಷಃ ಸ್ಯಾದ್ವಾಸನಾಕ್ಷಯಃ ॥ ” ಇತ್ಯಾದೌ ನಿರ್ವಾಸನಾಯುಕ್ತಸ್ಯ ಬ್ರಹ್ಮವಿದ್ಯಾಪೂರ್ಣಸ್ಯೈವಾಸ್ಮಿನ್ ಜನ್ಮನಿ ಮುಕ್ತ್ಯುಪದೇಶಾದತೋ ನ ವಿರೋಧಃ.

ಶ್ರವಣ ಮನನಗಳ ಮೂಲಕ ಶಿವನನ್ನು ಸಾಕ್ಷಾತ್ಕರಿಸಿದ ಪೂರ್ಣಾಧಿಕಾರಿಗಳು ಈ ಜನ್ಮದಲ್ಲಿಯೇ ಜೀವಭಾವವನ್ನು ಕಳೆದುಕೊಂಡು ಶಿವತ್ವವನ್ನು ಹೊಂದುವರೆ? ಅಥವಾ ಸಾಲೋಕ್ಯಾದಿಕ್ರಮದಿಂದ ಮುಕ್ತಿಯನ್ನು ಪಡೆಯುವರೆ? ಅಥವಾ ಬೇರೆ ಜನ್ಮದಲ್ಲಿ ಮುಕ್ತರಾಗುವರೆ? ಎಂದು ಆಶಂಕಿಸಿ ತಿಳಿಸುತ್ತಾನೆ. ಭಕ್ತಿವೈರಾಗ್ಯ ಶಮದಮಗಳೊಡಗೂಡಿದ ಶ್ರವಣಮನನಾದಿಗಳಿಂದ ದೇಹಾಭಿಮಾನರೂಪವಾದ ಪ್ರತಿಬಂಧಕವೊಂದು ತೊಲಗಿದರೆ ಐಹಿಕಜ್ಞಾನ ಉಂಟಾಗುತ್ತದೆ; ಈ ಜನ್ಮದಲ್ಲಿಯೇ ಪರಶಿವಬ್ರಹ್ಮಸಾಕ್ಷಾತ್ಕಾರವೂ ಹುಟ್ಟುತ್ತದೆ. ಆದರೆ ದೇಹಾಭಿಮಾನರೂಪವಾದ ಪ್ರತಿಬಂಧಕವಿದ್ದರೆ ಬೇರೆ ಜನ್ಮದಲ್ಲಿ ಮತ್ತೆ ಶ್ರವಣ ಮನನ ನಿದಿಧ್ಯಾಸನಗಳ ಆಚರಣದಿಂದ ಬ್ರಹ್ಮಸಾಕ್ಷಾತ್ಕಾರವಾಗುತ್ತದೆ. "ಅನೇಕಜನ್ಮಗಳಲ್ಲಿ ಸಿದ್ಧಿಯನ್ನು ಪಡೆದವನು ಉತ್ತಮ ಗತಿಯನ್ನು ಹೊಂದುತ್ತಾನೆ" ಹೀಗೆಂದು ನಿಗಮಾಗಮಗಳು ತಿಳಿಸುತ್ತಿವೆ. ಸ್ಮೃತಿ ಪುರಾಣಗಳಲ್ಲಿ ಜಡಭರತನಿಗೆ ಮೂರು ಜನ್ಮಗಳಲ್ಲಿಯೂ, ವಾಮದೇವನಿಗೆ ಒಂದೇ ಜನ್ಮದಲ್ಲೂ ಪಾಶವು ತೊಲಗಿ ಶಿವಭಾವವು ದೊರಕಿತೆಂದು ಹೇಳಿರುವುದರಿಂದ ದೇಹಾಭಿಮಾನ ಹೆಚ್ಚಾಗಿರುವವರಿಗೆ ಅನೇಕ ಜನ್ಮಗಳಲ್ಲಿ ಧ್ಯಾನಧಾರಣ ಪೂಜೆ ನಮಸ್ಕರ ಶ್ರವಣ ಮನನ ನಿದಿಧ್ಯಾಸನಗಳನ್ನು ಆಚರಿಸುವುದರಿಂದ ಶಿವಸಾಕ್ಷಾತ್ಕಾರವಾಗುತ್ತದೆ. ನಿರ್ಮಲಹೃದಯರಿಗೆ ದೇಹಾಭಿಮಾನ ಕಡಮೆಯಾಗಿರುವುದರಿಂದ ಈಶ್ವರಾನುಗ್ರಹದಿಂದ ಭಕ್ತಿ ವೈರಾಗ್ಯ ಶ್ರವಣ ಮನನಗಳ ಅನುಷ್ಠಾನದಿಂದ ಒಂದೇ ಜನ್ಮದಲ್ಲಿಯೇ ಶಿವಸಾಕ್ಷಾತ್ಕಾರವಾಗುತ್ತದೆ. ಮುಂಡಕೋಪನಿಷತ್ತಿನಲ್ಲಿ "ಸ್ವಾಮಿ, ಯಾವುದನ್ನು ತಿಳಿದರೆ ಇದೆಲ್ಲವನ್ನು ತಿಳಿಯಬಹುದು? ಎಂಬ ಪ್ರಶ್ನೆಗೆ "ಎರಡು ವಿದ್ಯೆಗಳನ್ನು ತಿಳಿಯಬೇಕು" ಎಂದು ಅವನು ಹೇಳಿದನು" ಎಂದು ಮುಂತಾಗಿ ಹೇಳಿದೆ. "ಪರಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ" ಎಂಬಲ್ಲಿ ಅಭ್ಯುದಯ, ನಿಃಶ್ರೇಯಸ ಎಂಬ ಎರಡು ಫಲಗಳನ್ನು ಕೊಡುವ ಎರಡು ವಿದ್ಯೆಗಳನ್ನು ಹೇಳಲಾಗಿದೆ. ಫಲಾಭಿಲಾಷೆಯಲ್ಲಾಸಕ್ತನಾದವನು ಪುಣ್ಯಕರ್ಮಗಳಿಂದ ಪಡೆಯುವ ಫಲವೇ ಅಭ್ಯುದಯವೆನಿಸುತ್ತದೆ. ಶಮ, ದಮ, ವೈರಾಗ್ಯ, ಭಕ್ತಿ, ಜೀವರ ಮೇಲೆ ಕರುಣೆ ಮತ್ತು ಶ್ರವಣಗಳಿಂದ ದೊರಕುವ ಮುಕ್ತಿಫಲವು ನಿಶ್ರ್ಶೇಯಸವೆನಿಸುತ್ತದೆ. ಅದರಲ್ಲೂ ಶಿವಜ್ಞಾನನಿಷ್ಠರಾದವರಿಗೆ ಈ ಜನ್ಮದಲ್ಲಿಯೇ ಮುಕ್ತಿಯೆ? ಅಥವಾ ಬೇರೆ ಜನ್ಮದಲ್ಲಿಯೇ? ಎಂದು ಸಂದೇಹ ಬರುತ್ತದೆ. "ಇಲ್ಲಿಯೇ ಬ್ರಹ್ಮವನ್ನು ಹೊಂದುತ್ತಾನೆ" ಎಂಬಲ್ಲಿ ವಿದ್ವಾಂಸರಿಗೆ ಇಲ್ಲಿಯೇ ಬ್ರಹ್ಮಭಾವವನ್ನು ಹೇಳಲಾಗಿದೆ. ಸ್ವಲ್ಪ ಕಾಲ ಕಳೆದಮೇಲೆ ಫಲಬರುವುದೆಂದು ಹೇಳಿದರೆ ಬ್ರಹ್ಮವಿದ್ಯೆಯ ಮಹತ್ತ್ವವೇ ನಷ್ಟವಾಗಬೇಕಾಗುತ್ತದೆ. ಹಾಗದರೆ ಜ್ಯೋತಿಷ್ಟೋಮದಂತ ಬ್ರಹ್ಮವಿದ್ಯೆಯು ಮುಕ್ತಿಗೆ ಮುಖ್ಯ ಸಾಧನವಾಗದೇಹೋಗುತ್ತದೆ. ಆದ್ದರಿಂದ ಬ್ರಹ್ಮೋಪಾಸಕರಿಗೆ ಈ ಜನ್ಮದಲ್ಲಿಯೇ ಮುಕ್ತಿ ದೊರಕುವುದೆಂದು ಪೂರ್ವಪಕ್ಷಿ ಹೇಳುತ್ತಾನೆ. ಇದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಅಭ್ಯುದಯವನ್ನು ಸಾಧಿಸುವ ಐಹಿಕೋ

ಪಾಸನವು ಪ್ರಬಲವಾದ ಪ್ರತಿಬಂಧಕವಿಲ್ಲದಿದ್ದರೆ ಈಗಲೂ, ಪ್ರತಿಬಂಧಕವಿದ್ದರೆ ಮುಂದಿನಜನ್ಮದಲ್ಲೂ ಫಲಿಸುತ್ತದೆ ಎಂಬ ನಿಯಮವಿಲ್ಲ. ಶ್ರುತಿಯಲ್ಲಿ ಪ್ರಬಲಕರ್ಮ ದಿಂದ ಕರ್ಮಫಲಕ್ಕೆ ಆತಂಕವುಂಟಾಗುವುದೆಂದು ಹೇಳಿದೆ. “ ಶ್ರದ್ಧೆಯಿಂದ ಮಾಡಿ ದ್ದೆಲ್ಲವೂ ವೀರ್ಯವತ್ತರವಾಗುವುದು ” ಹೀಗೆ ಉದ್ಗೀಥವಿದ್ಯೆಯಲ್ಲಿ ಕರ್ಮಕ್ಕೆ ಫಲ ದಿಂದ ಯಾವ ಪ್ರತಿಬಂಧಕವೂ ಆಗುವುದಿಲ್ಲವೆಂದು ಹೇಳಿದೆ. ಹಿಂದಿನ, ಈಗಿನ ಮತ್ತು ಮುಂದಿನ ಪ್ರತಿಬಂಧಕಗಳಲ್ಲಿ ಹಿಂದಿನದಕ್ಕೂ ಈಗಿನದಕ್ಕೂ ಶ್ರುತಿಸ್ಮೃತಿಗಳಲ್ಲಿ ಪರಿಹಾರವನ್ನು ಹೇಳಲಾಗಿದೆ. ಆದರೆ ಮುಂದಿನ ಪ್ರತಿಬಂಧಕಗಳಿಗೆ ನಿವೃತ್ತ್ಯು ಪಾಯವನ್ನೇ ಹೇಳಿಲ್ಲ. ಜಡಭರತನಿಗೆ ಮೂರು ಜನ್ಮಗಳಲ್ಲಿ ಮುಕ್ತಿದೊರೆತಂತೆ ಬೇರೆಯವರಿಗೂ ಬೇರೆ ಜನ್ಮದಲ್ಲಿ ಮುಕ್ತಿದೊರಕುವುದರಲ್ಲಿ ವಿರೋಧವೇನೂ ಇಲ್ಲ. ಈ ಜನ್ಮದಲ್ಲಿಯೇ ಮುಕ್ತಿಯನ್ನು ತಿಳಿಸುವ ವಾಕ್ಯಗಳು ವಾಮದೇವನಂತೆ ಮುಂದಿನ ಯಾವ ಪ್ರತಿಬಂಧಕಕ್ಕೂ ಸಿಲುಕದಿರುವಂತಹ ವಿದ್ವಾಂಸರಿಗೆ ಮಾತ್ರವೇ ಅನ್ವ ಯಿಸುತ್ತವೆ. “ ಎಲ್ಲಾ ಬಗೆಯ ವಾಸನೆಗಳಿಂದಲೂ ದೂರನಾಗುವುದೇ ಮೋಕ್ಷವೆನಿಸು ತ್ತದೆ. ಮೋಕ್ಷವೆಂಬುದು ಆಕಾಶದ ತುದಿಯಲ್ಲಿಲ್ಲ; ಪಾತಾಳದಲ್ಲಿಲ್ಲ ; ನೆಲದ ಮೇಲಿಲ್ಲ; ಆದರೆ ಹೃದಯದ ಎಲ್ಲಾ ಆಶೆಗಳೂ ತೊಲಗಿ ಮನಸ್ಸಿನಲ್ಲಿ ಸಂಕಲ್ಪವಿಕಲ್ಪಗಳಿಲ್ಲದಿರು ವುದೇ ಮೋಕ್ಷವೆನಿಸುತ್ತದೆ. ವಾಸನೆಗಳ ಸಂಬಂಧವೇ ಬಂಧವೆನಿಸಿದರೆ ಅವುಗಳ ನಾಶವೇ ಮೋಕ್ಷವೆನಿಸುವುದು ” ಹೀಗೆ ವಾಸನೆಗಳೇನೊಂದೂ ಇಲ್ಲದೆ ಬ್ರಹ್ಮವಿದ್ಯೆ ಯಿಂದ ತುಂಬಿಕೊಂಡಿರುವವನಿಗೆ ಈ ಜನ್ಮದಲ್ಲಿಯೇ ಮುಕ್ತಿಯನ್ನು ಹೇಳಿರುವುದ ರಿಂದ ಯಾವ ಸಂಶಯಕ್ಕೂ ಅವಕಾಶವಿಲ್ಲ.

ನನು ಜಗದ್ವಾಸನಾಯುಕ್ತಬ್ರಹ್ಮವಿದ್ಯಾವತಾಂ ಜಡಭರತಾದಿವತ್ ಕಾಲಾಂತರೇಣ ಮುಕ್ತಿಃ ನಿರ್ವಾಸನಾಮೌನನಿಷ್ಠಾನಾಂ ಶಿವೈಕಚೇತಸಾಂ ವಾಮದೇವಾದಿವದಿಹ ಜನ್ಮನ್ಯೇವ ಮೋಕ್ಷಫಲಮಸ್ತು. ತಥಾಪಿ ದಹ ರಾದಿಬ್ರಹ್ಮವಿದ್ಯಾವತಾಂ ಸಶರೀರಮುಕ್ತಿರಶರೀರಮುಕ್ತಿರ್ವೇತ್ಯಾಶಂಕಾ ಯಾಮಧಿಕರಣಾಂತರೇಣಾಹ. ಮುಕ್ತಿಫಲಾಧಿಕರಣಂ || ೧೭ || ಏವಂ ಮುಕ್ತಿಫಲಾನಿಯಮಸ್ತದವಸ್ಥಾವಧೃತೇಸ್ತದವಸ್ಥಾವಧೃತೇಃ || ೫೨ || ಪೂರ್ವಂ ಜಗದ್ವಾಸನಾಯುಕ್ತಾನಾಂ ಜನ್ಮಾಂತರೇಣ, ನಿರ್ವಾಸನಶಿವ ಜ್ಞಾನನಿಷ್ಠಾನಾಮಿಹೈವ ಜನ್ಮನಿ ಶಿವಪ್ರಾಪ್ತಿರೂಪಮುಕ್ತಿಫಲಮಭಿ ಹಿತಂ. ತಥಾಪ್ಯೇವಂ ಶಿವತತ್ತ್ವಸಾಕ್ಷಾತ್ಕಾರವತಾಂ ಸರ್ವೇಷಾಂ ಮುಕ್ತಿಫಲಮೇಕಮೇವೇತ್ಯನಿಯಮಃ. “ ಸೋಽಶ್ನುತೇ ಸರ್ವಾನ್ಕಾ ಮಾನ್ ಸಹ ಬ್ರಹ್ಮಣಾ ” ಇತಿ ಶ್ರುತೌ ಬ್ರಹ್ಮವಿದಾಂ ಬ್ರಹ್ಮಣಾ ಸಹ ಸರ್ವಕಾಮಾವಾಪ್ತಿದರ್ಶನಾತ್ ಸರ್ವೇಷಾಂ ಬ್ರಹ್ಮವಿದಾಂ ಅಶರೀರ ಮುಕ್ತಿಸಂಜ್ಞಿಕಕೈವಲ್ಯಮುಕ್ತಿರೇವೇತಿ ನಿಯಮೋ ನಾಸ್ತಿ. ಕಿಂತು ಶಿವಾನುಗ್ರಹವತಾಂ ಶಮದಮಾದಿವೈರಾಗ್ಯಯುಕ್ತಾನಾಮಶರೀರ

ಜ್ಯೋತಿರ್ಲಿಂಗಾನುಸಂಧಾನಚೇತಸಾಂ ಪರಲೋಕವಾಸನಾನಿರ್ಮು ಕ್ತಾನಾಂ ಇಹೈವ ದಹರಾಕಾಶಜ್ಯೋತಿರ್ಲಿಂಗೇ ಸುಷುಪ್ತಿಸುಖವದ ಶರೀರೇಣ ಪ್ರಾರಬ್ಧನಾಶಪರ್ಯಂತಂ ಜೀವನ್ಮುಕ್ತದಶಾಯಾಂ ನಿತ್ಯ ನಿರತಿಶಯಾನಂದಮನುಭೂಯ ತತ್ಸಮಾಧಿಕಾಲೇ ಪ್ರಚಂಡಾತಪ ಮಧ್ಯನಿಕ್ಷಿಪ್ತನಿವಾತಕರ್ಪೂರದೀಪವತ್ ಸ್ಥಿತ್ವಾ, ವಿದೇಹಮುಕ್ತ್ಯವ ಸರೇ ನದೀಸಮುದ್ರನ್ಯಾಯವದೇಕತ್ವಂ ಪರಮಾಕಾಶೇ ಪರಶಿವೇ ಸಂಭ ವತಿ. ತದ್ಭಿನ್ನಾನಾಂ ಮೂರ್ತಪರಶಿವಬ್ರಹ್ಮಲೋಕಭೋಗವಾಸನಾ ಯುಕ್ತಾನಾಂ ಪ್ರಾಣಾವಸಾನೇ ಶಿವಲೋಕನಿವಾಸೋಚಿತದಿವ್ಯಮಂಗಳ ವಿಗ್ರಹೇಣ ಸಾಲೋಕ್ಯಸಾಮೀಪ್ಯಸಾರೂಪ್ಯಾತ್ಮಕಕಲ್ಯಾಣವಿಭೂತಿ ಸಂಜ್ಞಿಕಸಶರೀರಮುಕ್ತಿರ್ಭವತಿ. ತಸ್ಮಾಜ್ಜೀವನ್ಮುಕ್ತಾನಾಂ ಅಶರೀರ ಮುಕ್ತಿಸ್ಸಶರೀರಮುಕ್ತಿರಿತ್ಯನಿಯಮಃ. ಕುತಃ? ತದವಸ್ಥಾವಧೃತೇಃ. " ಯದೇವ ಜ್ಞಾನಫಲಂ ತದೇವ ಕರ್ಮಫಲಂ ", " ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಳೇಬರಂ । ತಂ ತಮೇವೈತಿ ತತ್ತ್ವಜ್ಞಸ್ತದಾ ತದ್ಭಾವಭಾವಿತಃ ॥ ", " ಅಂತ್ಯಕಾಲೇ ಪ್ರಬುದ್ಧೋ ಯಃ ಸುಹೃದಾ ಬುದ್ಧಿತೋಽಪಿ ವಾ । ಶಿವಮೇಕಮನುಧ್ಯಾಯನ್ ಸ ಯಾತಿ ಪರಮಾಂ ಗತಿಂ ॥ ", " ಸದಾ ಶಿವಾತ್ಮಕಂ ರೂಪಂ ಧ್ಯಾಯನ್ ಪ್ರಾಣಾನ್ವಿ ಮುಂಚತಿ । ತದಾಸೌ ಶಿವತಾಂ ಯಾತಿ ನಾನ್ಯಾ ಗತಿರಿತಿ ಶ್ರುತಿಃ ॥ " ಇತ್ಯಾದಿಶ್ರುತಿಸ್ಮೃತ್ಯಾಗಮಾದಿಷು ತದ್ವದುಪದೇಶಾತ್ ಮೂರ್ತಪರ ಶಿವಬ್ರಹ್ಮೋಪಾಸನಾವಸ್ಥಾಯಾಂ ತಚ್ಚಿತ್ತಸ್ಯ ಮೂರ್ತಬ್ರಹ್ಮಧೃತೇಃ ಮೂರ್ತಬ್ರಹ್ಮಾಕಾರಾಕಾರಿತತ್ವಾತ್ ಅಮೂರ್ತಪರಶಿವತತ್ತ್ವೋಪಾಸ ನಾಯಾಂ ಭಕ್ತಚಿತ್ತಸ್ಯಾಮೂರ್ತಶಿವತತ್ತ್ವಧೃತೇಃ ಮುಕ್ತಿಭೇದೋ ನ ವಿರುಧ್ಯತ ಇತಿ ಸೂತ್ರಾರ್ಥಃ. " ನ ತತ್ರ ಪ್ರಾಣಾ ನೋತ್ಕ್ರಾಮಂತೇ ತತ್ರೈವ ಸಮವಲೀಯಂತೇ " ಇತ್ಯತ್ರ ಸದ್ಯೋಮುಕ್ತ್ಯವಗಮಾತ್, " ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ " ಇತ್ಯತ್ರ ಕ್ರಮಮುಕ್ತ್ಯುಪದೇಶಾತ್ ಪರಶಿವಬ್ರಹ್ಮೋಪಾಸಕಾನಾಂ ಸದ್ಯೋಮುಕ್ತಿಸಂಜ್ಞಿಕಾಶರೀರಮುಕ್ತಿಃ ಕ್ರಮಮುಕ್ತಿಸಂಜ್ಞಿಕಸಶರೀರ ಮುಕ್ತಿರ್ವೇತಿ ಸಂಶಯಃ. " ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ ", " ವಾಜಪೇಯೇನ ಸ್ವಾರಾಜ್ಯಕಾಮೋ ಯಜೇತ " ಇತ್ಯಾದಿ ಧರ್ಮಪ್ರಕರಣಪಠಿತಾಭ್ಯುದಯಫಲವತ್ ಬ್ರಹ್ಮವಿದ್ಯಾಫಲಸ್ಯಾಪಿ ಸ್ವಾತಿಶಯತ್ವಮನವದ್ಯಂ. ದಹರಶಾಂಡಿಲ್ಯೋಪಕೋಸಲಾದಿಬ್ರಹ್ಮ ಪ್ರಕರಣಪಠಿತೋಪಾಸನಾನಾಂ ಕರ್ಮತ್ವಾತ್ " ನಾಸ್ತ್ಯಕೃತಃ ಕೃತೇನ " ಇತಿ ಶ್ರುತೌ ಕೃತಸ್ಯ ಕರ್ಮಣೋಽಕೃತಮೋಕ್ಷಹೇತುತ್ವನಿರಾಸಾವ

ಗಮಾತ್ " ಆತ್ಮಾ ವಾಽರೇ ದ್ರಷ್ಟವ್ಯ " ಇತ್ಯಾದೌ ಶ್ರವಣಜನಿತತದ್ಜ್ಞಾನಸ್ಯೈವ ಮೋಕ್ಷಾಂಗತ್ವವ್ಯವಸ್ಥಾಪನಾಚ್ಚ ಉಪಾಸನೇನ ಬ್ರಹ್ಮಪ್ರಾಪ್ತಿರ್ನ ಸಂಭವತೀತಿ ಪ್ರಾಪ್ತೇ ಪ್ರಚಕ್ಷ್ಮಹೇ. ಧರ್ಮಪ್ರಕರಣಪಠಿತಜ್ಯೋತಿಷ್ಟೋಮಾದ್ಯುಪಾಸಕಾನಾಮಿವ ಬ್ರಹ್ಮಪ್ರಕರಣದಹರಾದಿವಿದ್ಯೋಪಾಸಕಾನಾಂ ಅನಿತ್ಯಫಲಮುಶ್ರಾವಣೀಯಂ ತದ್ವಿಧಾಯಕಶ್ರುತ್ಯದರ್ಶನಾತ್. ತೈತ್ತಿರೀಯೇ " ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ " ಇತ್ಯತ್ರ ಸಾಲೋಕ್ಯಾದಿತ್ರಿವಿಧವಿಭೂತ್ಯಾತ್ಮಕಕಲ್ಯಾಣವಿಭೂತಿರ್ವಾಸನಾಯುಕ್ತದಹರೋಪಾಸಕಾನಾಂ ದೃಶ್ಯತೇ. " ದಹರಂ ವಿಪಾಪಂ ಪರವೇಶ್ಮಭೂತಂ " ಇತ್ಯಾದಿನಾ ತೈತ್ತಿರೀಯೇ, " ಹೃತ್ಪುಂಡರೀಕಂ ವಿರಜಂ ವಿಶುದ್ಧಂ " ಇತ್ಯಾರಭ್ಯ " ಉಮಾಸಹಾಯಂ ಪರಮೇಶ್ವರಂ ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ" ಇತಿ ಚ ಕೈವಲ್ಯೇ ದಹರೋಪಾಸಕಾನಾಂ ನಿರ್ವಾಸನಪರಶಿವಧ್ಯಾನನಿಷ್ಠಾನಾಂ ಅಶರೀರಕೈವಲ್ಯವಿಭೂತಿರುಪದಿಶ್ಯತೇ. " ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ ", " ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ " ಇತ್ಯಾದಿಶ್ರುತಿಶತೇಷು ಬ್ರಹ್ಮವಿದ್ಯೋಪಾಸಕಾನಾಂ ನಿತ್ಯನಿರುಪಮಶರೀರಾಶರೀರಮುಕ್ತಿದ್ವಯಪ್ರಾಪ್ತ್ಯುಪದೇಶಾತ್ ಬ್ರಹ್ಮವಿದ್ಯಾಯಾಃ ಸರ್ವಾರ್ಥಿಕತ್ವಮನಿವಾರ್ಯಂ. ಧ್ಯಾನಾದ್ಯುಪಾಸನಾನಾಂ ಕರ್ಮತ್ವವ್ಯಪದೇಶೇ ಶ್ರವಣಾದೀನಾಮಪಿ ಕರ್ಮತ್ವಂ ಪ್ರಸಜ್ಯೇತ. " ಆತ್ಮಾ ವಾರೇ ದ್ರಷ್ಟವ್ಯಃ " ಇತ್ಯತ್ರ ಪರಶಿವಸಾಕ್ಷಾತ್ಕಾರಫಲಮನೂದ್ಯ ತತ್ಸಾಧನತ್ವೇನ ಶ್ರವಣಾದಿಕಮುಪದಿಷ್ಟಂ. ತತ್ರ ಶ್ರವಣಮನನಾದಿಸಹಕೃತನಿದಿಧ್ಯಾಸನಾರೂಪೋಪಾಸನಸ್ಯೈವ ಮುಖ್ಯಸಾಕ್ಷಾತ್ಕಾರಹೇತುತ್ವಮುಪದಿಷ್ಟಂ, ನ ವೈದ್ಯಶಾಸ್ತ್ರಾದಿವತ್ಕೇವಲವಾಕ್ಯಾರ್ಥಜ್ಞಾನಸ್ಯ. ನನು ಲೋಕೇ ವ್ಯೋಮಸ್ಥಿತನಕ್ಷತ್ರಾಣಾಂ ಸರ್ವಾನುಭವದರ್ಶನಾತ್ ತತ್ಪುಣ್ಯಕ್ಷಯೇ ಭೂಪತನದ್ಯೋತನಾತ್ " ಸಶರೀರಮುಕ್ತಿಃ ಕೈಲಾಸೇ ಸಂಭವತಿ " ಇತ್ಯೂಹ್ಯ ಉಪಮನ್ಯುದಧೀಚಿಗೌತಮಪ್ರಮುಖಶಿವಯೋಗಿಭಿರ್ಯೋಗಮಹಿಮ್ನಾ ಕೈಲಾಸೇ ತ್ರಿವಿಧಮುಕ್ತಿವಿಭೂತ್ಯನುಭವಸ್ಯ ಪುರುಷಾಣಾಂ ದೃಷ್ಟತ್ವಾತ್ ತತ್ರಾಪಿ ಪೂಜ್ಯಪೂಜಕಭಾವಸದ್ಭಾವಾತ್, ಭಲ್ಲಾಣಚಿರುತುಂಡಚಾರಮಾಮೇಮಾರಾಧ್ಯೋದ್ಭಟಾರಾಧ್ಯಾನಾಂ ಶರೀರೇಣ ರಾಜ್ಯೇನ ಪರಿವಾರೇಣ ಗ್ರಾಮೇಣ ಸಹ ಶಿವಲೋಕಪ್ರಾಪ್ತಿದರ್ಶನಾಚ್ಚ ನಾನುಭವವಿಷಯಾ ಅಶರೀರಮುಕ್ತಿರಿತಿ ಚೇನ್ನ ಸಶರೀರಮುಕ್ತಿವತ್ ಅಶರೀರಮುಕ್ತೇರಪಿ ಶ್ರುತಿಯುಕ್ತ್ಯನುಭವಸಿದ್ಧತ್ವಾತ್. ಸುಷುಪ್ತಿಸಮಾಧಿಷು ಸ್ಥೂಲಸೂಕ್ಷ್ಮಶರೀರಾಭಾವ

ತಯಾ ವಿದುಷಾಮವಿದುಷಾಮಪಿ ಅಶರೀರಾನುಭವಂ ಲಬ್ಧ್ವಾ ಪುನ ಸ್ತದನುಭವೋಪದೇಶಾಚ್ಚ ನಚ ಸ್ವರ್ಗಪ್ರಾಪ್ತೇಜಶ್ಯರೀರನಕ್ಷತ್ರಾದಿ ವತ್ ಶಿವಲೋಕಪ್ರಾಪ್ತಮಹಾಪುರುಷಾಣಾಮಪಿ ಪುನಃಪುನರಾವೃತ್ತಿಃ " ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ " ಇತಿಶ್ರುತೌ ತಲ್ಲೋಕಾದೇವ ಕೈವಲ್ಯಮುಕ್ತ್ಯುಪದೇಶಾತ್ ಬ್ರಹ್ಮವಿದ್ಯೋಪಾಸಕಾನಾಂ ನಿತ್ಯನಿರತಿಶಯಾನಂದಸ್ವಭಾವಾದ್ವಿತೀಯ ಸಶರೀರಾಶರೀರಮುಕ್ತಿದ್ವಯಂ ಸ್ವೇಚ್ಛಾನುಸಾರೇಣ ಲಭ್ಯತೇ. ತಸ್ಮಾನ್ನ ಚೈಕಮುಕ್ತಿರಿತಿ ನಿಯಮಸ್ಸಂಭವತೀತಿ ನಿಶ್ಚೀಯತೇ.

ಇತಿ ಶ್ರೀಮದ್ಯತಿವ್ರಜಪರಿವೃಢಶ್ರೀಪತಿಪಂಡಿತಾರಾಧ್ಯಸ್ವಾಮಿಕೃತೇ
ಬ್ರಹ್ಮಮೀಮಾಂಸಾಸೂತ್ರಾರ್ಥಪ್ರಕಾಶಕೇ ಶ್ರೀಕರಭಾಷ್ಯೇ
ತೃತೀಯಾಧ್ಯಾಯಸ್ಯ ಚತುರ್ಥಃ ಪಾದಃ ಸಮಾಪ್ತಃ.



ಬ್ರಹ್ಮಜ್ಞಾನಿಗಳೆನಿಸಿದ್ದರೂ ಜಗದ್ವಾಸನೆಯುಳ್ಳವರಿಗೆ ಜಡಭರತಾದಿಗಳಂತೆ ಕಾಲಾಂತರದಲ್ಲಿಯೂ, ಯಾವ ವಾಸನೆಯೂ ಇಲ್ಲದೆ ಮೌನದಿಂದ ಶಿವನಲ್ಲಿಯೇ ಪ್ರಾಣವಿಟ್ಟಿರುವವರಿಗೆ ವಾಮದೇವಾದಿಗಂತೆ ಈ ಜನ್ಮದಲ್ಲಿಯೇ ಮುಕ್ತಿಯು ದೊರಕಲಿ. ಆದರೆ ದಹರಾದ್ಯುಪಾಸಕರಿಗೆ ಸಶರೀರಮುಕ್ತಿ ದೊರಕುವುದೋ ಅಥವಾ ಅಶರೀರಮುಕ್ತಿಯೋ ಎಂಬುದನ್ನಾಶಂಕಿಸಿ ಪರಿಹರಿಸುತ್ತಾನೆ. ಜಗದ್ವಾಸನೆಯುಳ್ಳವರಿಗೆ ಜನ್ಮಾಂತರದಲ್ಲಿಯೂ, ಯಾವ ವಾಸನೆಯೂ ಇಲ್ಲದ ಶಿವಯೋಗಿಗಳಿಗೆ ಈ ಜನ್ಮದಲ್ಲಿ ಇಲ್ಲಿಯೇ ಶಿವಸಾಯುಜ್ಯರೂಪವಾದ ಮುಕ್ತಿದೊರಕುವುದೆಂದು ಹಿಂದೆ ಹೇಳಿಯಾಯಿತು. ಆದರೂ ಹೀಗೆ ಶಿವತತ್ತ್ವವನ್ನು ಸಾಕ್ಷಾತ್ಕರಿಸಿದರೆಲ್ಲರಿಗೂ ಮುಕ್ತಿ ಒಂದೇಬಗೆಯಾಗಿರುವುದೆಂಬ ನಿಯಮವಿಲ್ಲ. " ಬ್ರಹ್ಮವನ್ನು ತಿಳಿದವನು ಬ್ರಹ್ಮದೊಡನೆ ಎಲ್ಲಾ ಸುಖಗಳನ್ನು ಪಡೆಯುತ್ತಾನೆ " ಎಂಬ ಶ್ರುತಿಯಲ್ಲಿ ಬ್ರಹ್ಮಜ್ಞಾನಿಗಳು ಬ್ರಹ್ಮದೊಡನೆ ಎಲ್ಲಾ ಫಲಗಳನ್ನೂ ಹೊಂದುವರೆಂದು ಹೇಳಿರುವುದರಿಂದ ಬ್ರಹ್ಮಜ್ಞಾನಿಗಳೆಲ್ಲರಿಗೂ ಅಶರೀರಮುಕ್ತಿ ಎಂಬ ಕೈವಲ್ಯವೇ ದೊರಕುವುದೆಂಬ ನಿಯಮವಿಲ್ಲ. ಆದರೆ ಶಿವಾನುಗ್ರಹವನ್ನುಪಡೆದು ಶಮದಮವೈರಾಗ್ಯಗಳಿಂದ ಕೂಡಿ ಪರಾಕಾಶ ಸ್ವರೂಪನಾದ ಜ್ಯೋತಿರ್ಲಿಂಗವನ್ನೇ ಧ್ಯಾನಿಸುತ್ತ ಪರಲೋಕವಾಸನೆಯನ್ನು ತೊರೆದಿರುವ ಶಿವಯೋಗಿಗಳಿಗೆ ಇಲ್ಲಿಯೇ ಹೃದಯದ ದಹರಾಕಾಶದೊಳಗಿನ ಜ್ಯೋತಿರ್ಲಿಂಗದಲ್ಲಿ ಸುಷುಪ್ತಿ ದೊರಕುತ್ತದೆ; ಅಂದರೆ ಅವರು ಶರೀರವಿದ್ದರೂ ಇಲ್ಲದಂತೆ ಭಾವಿಸುತ್ತ ಪ್ರಾರಬ್ಧ ನಾಶವಾಗುವವರೆಗೂ ಜೀವನ್ಮುಕ್ತಸ್ಥಿತಿಯಲ್ಲಿದ್ದು ನಿರತಿಶಯಾನಂದವನ್ನು ಅನುಭವಿಸುತ್ತ ಪ್ರಚಂಡವಾದ ಸೂರ್ಯಪ್ರಕಾಶದ ಮಧ್ಯದಲ್ಲಿ ಉರಿಯುವ ಕರ್ಪೂರದ ದೀಪದಂತೆ ನೆಲಸಿದ್ದು ದೇಹವನ್ನು ತೊರೆದೊಡನೆ ನದಿಯು ಸಮುದ್ರದಲ್ಲಿ

ಬೆರೆಯುವಂತೆ ಪರಾಕಾಶರೂಪನಾದ ಪರಶಿವನಲ್ಲಿ ಸಮರಸವಾಗಿ ಏಕೀಭವಿಸುವರು. ಇದಕ್ಕೆ ಅಶರೀರಮುಕ್ತಿ ಎಂದು ಹೆಸರು. ಆದರೆ ವಿಷಯವಾಸನೆ ಪೂರ್ಣವಾಗಿ ಹರಿಯದ ಶಿವಜ್ಞಾನಿಗಳು ದೇಹವನ್ನು ತೊರೆದಮೇಲೆ ಶಿವಲೋಕವಾಸಕ್ಕೆ ಯೋಗ್ಯವಾದ ದಿವ್ಯಮಂಗಳವಿಗ್ರಹದಿಂದ ಸಾಲೋಕ್ಯಸಾಮಿಪ್ಯ ಸಾರೂಪ್ಯವೆಂಬ ಕಲ್ಯಾಣ ವಿಭೂತಿಯನ್ನು ಪಡೆಯುವರು. ಇದಕ್ಕೆ ಸಂಶರೀರಮುಕ್ತಿ ಎಂದು ಹೆಸರು. ಆದ್ದರಿಂದ ಜೀವನ್ಮುಕ್ತರಿಗೆ ಅಶರೀರಮುಕ್ತಿ ಸಶರೀರಮುಕ್ತಿ ಎಂಬ ನಿಯಮವಿಲ್ಲ. ಶ್ರುತಿಸ್ಮೃತ್ಯಾಗಮಗಳಲ್ಲಿ ಹೀಗೆ ಸ್ಪಷ್ಟವಾಗಿ ಉಪದೇಶಿಸಲಾಗಿದೆ. "ಯಾವ ಭಾವವನ್ನು ಸ್ಮರಿಸುತ್ತ ತತ್ತ್ವಜ್ಞಾನಿಯು ಪ್ರಾಣವನ್ನು ಬಿಡುವನೋ ಅದೇ ಭಾವವನ್ನು ಅವನು ಮುಂದಿನಜನ್ಮದಲ್ಲೂ ಪಡೆಯುವನು. ಅಂತ್ಯಕಾಲದಲ್ಲಿ ಯಾವನು ಸ್ವಬುದ್ಧಿಯಿಂದಲೋ ಅಥವಾ ಪರಪ್ರೇರಣೆಯಿಂದಲೋ ಶಿವನೊಬ್ಬನನ್ನೇ ನಿಶ್ಚಲವಾದ ಮನಸ್ಸಿನಿಂದ ಧ್ಯಾನಿಸುವನೋ ಅವನು ಉತ್ತಮಗತಿಯನ್ನು ಹೊಂದುತ್ತಾನೆ. ಶಿವನ ರೂಪವನ್ನೇ ಧ್ಯಾನಿಸುತ್ತ ಯಾವನು ಪ್ರಾಣವನ್ನು ಬಿಡುವನೋ ಅವನು ಶಿವನೇ ಆಗುವನು. ಅವನಿಗೆ ಬೇರೆ ಗತಿಯೇ ಇಲ್ಲವೆಂದು ಶ್ರುತಿ ಸ್ಪಷ್ಟಪಡಿಸಿದೆ" ಈ ರೀತಿಯಲ್ಲಿ ಶಿವನ ದಿವ್ಯಮೂರ್ತರೂಪವನ್ನು ಉಪಾಸನಮಾಡುವಾಗ ಸಾಧಕನ ಚಿತ್ತವು ಆ ಆಕಾರವನ್ನೇ ಹೊಂದಿರುವುದರಿಂದಲೂ, ಅಮೂರ್ತಪರಶಿವತತ್ತ್ವವನ್ನು ಉಪಾಸನಮಾಡುವ ಭಕ್ತನ ಚಿತ್ತವು ಆ ಅಮೂರ್ತಸ್ಥಿತಿಯನ್ನೇ ಹೊಂದಿರುವುದರಿಂದಲೂ ಮುಕ್ತಿಯಲ್ಲಿ ಸಶರೀರಮುಕ್ತಿ ಅಶರೀರಮುಕ್ತಿ ಎಂದು ಭೇದವಿರುವುದರಲ್ಲಿ ತಪ್ಪೇನಿಲ್ಲ. "ಅಲ್ಲೆಲ್ಲಿಗೂ ಪ್ರಾಣಗಳು ಹೊರಡದೆ ಇಲ್ಲಿಯೇ ಲಯವಾಗುತ್ತವೆ" "ಅವರು ಬ್ರಹ್ಮಲೋಕದಲ್ಲಿ ಎಲ್ಲಾ ವಾಸನೆಗಳೂ ಅಳಿದೊಡನೆ ಸಾಲೋಕ್ಯಾದಿ ತ್ರಿವಿಧ ಮುಕ್ತಿಗಳಿಗೂ ಆಚಿನ ಸಾಯುಜ್ಯಮುಕ್ತಿಯನ್ನು ಪಡೆಯುತ್ತಾರೆ" ಎಂದು ಶ್ರುತಿಯು ತಿಳಿಸಿದೆ. ಮೊದಲನೆಯ ಶ್ರುತಿಯು ಸದ್ಯೋಮುಕ್ತಿಯನ್ನೂ, ಎರಡನೆಯದು ಕ್ರಮಮುಕ್ತಿಯನ್ನೂ ತಿಳಿಸುತ್ತವೆ. ಆದ್ದರಿಂದ ಬ್ರಹ್ಮೋಪಾಸಕರಿಗೆ ಸದ್ಯೋಮುಕ್ತಿ ಎನಿಸಿದ ಅಶರೀರಮುಕ್ತಿ ದೊರಕುವುದೆ? ಅಥವಾ ಕ್ರಮಮುಕ್ತಿ ಎನಿಸಿದ ಸಶರೀರಮುಕ್ತಿ ದೊರಕುವುದೆ? ಎಂಬ ಸಂಶಯವುಂಟಾಗುತ್ತದೆ. "ಸ್ವರ್ಗಕಾಮನು ಜ್ಯೋತಿಷ್ಟೋಮವನ್ನಾಚರಿಸಬೇಕು." "ಸ್ವಾತಂತ್ರ್ಯವನ್ನು ಬಯಸುವವನು ವಾಜಪೇಯವನ್ನಾಚರಿಸಬೇಕು" ಎಂದು ಕರ್ಮಕಾಂಡದಲ್ಲಿ ಹೇಳಿರುವ ಅಭ್ಯುದಯಫಲದಂತೆ ಬ್ರಹ್ಮಪ್ರಕರಣದಲ್ಲಿ ಹೇಳಿರುವ ಶ್ರೇಯೋರೂಪವಾದ ಫಲವೂ ಉತ್ಕೃಷ್ಟವೇ ಆಗಿದೆ. ದಹರ ಶಾಂಡಿಲ್ಯ ಮೊದಲಾದ ಬ್ರಹ್ಮಪ್ರಕರಣದಲ್ಲಿ ಹೇಳಿರುವ ಉಪಾಸನೆಗಳು ಕರ್ಮರೂಪವೇ ಆದ್ದರಿಂದಲೂ, "ಮಾಡಿದ ಕರ್ಮದಿಂದ ಸಹಜಸಿದ್ಧವಾದ ಮುಕ್ತಿ ದೊರಕುವುದಿಲ್ಲ" ಎಂಬ ಶ್ರುತಿಯಲ್ಲಿ ಕರ್ಮದಿಂದ ಮುಕ್ತಿ ಇಲ್ಲವೆಂದು ಹೇಳಿರುವುದರಿಂದಲೂ "ಆತ್ಮನನ್ನು ಕಾಣಬೇಕು" ಎಂಬಲ್ಲಿ ಶ್ರವಣದಿಂದವುಂಟಾದ ಜ್ಞಾನವೇ ಮೋಕ್ಷಕ್ಕೆ ಅಂಗವೆಂದು ವ್ಯವಸ್ಥೆಯಾಗಿರುವುದರಿಂದ ಉಪಾ

ಸನರೂಪವಾದ ಕರ್ಮದಿಂದ ಬ್ರಹ್ಮಸಾಯುಜ್ಯವು ದೊರಕುವುದಿಲ್ಲವೆಂದು ಪೂರ್ವ ಪಕ್ಷಿಯು ಹೇಳುತ್ತಾನೆ. ಇದಕ್ಕೆ ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. ಧರ್ಮಪ್ರಕರಣದಲ್ಲಿ ಹೇಳಿದ ಜ್ಯೋತಿಷ್ಟೋಮಾದ್ಯುಪಾಸನಗಳಂತೆ ಬ್ರಹ್ಮಪ್ರಕರಣ ದಲ್ಲಿ ಹೇಳಿದ ದಹರಾದ್ಯುಪಾಸನಗಳಿಗೆ ಅನಿತ್ಯಫಲವನ್ನು ಕಲ್ಪಿಸುವುದು ಯುಕ್ತವಲ್ಲ; ಹಾಗೆ ಶ್ರುತಿಯಲ್ಲಿ ಎಲ್ಲಿಯೂ ವಿಧಿಸಿಲ್ಲ. "ಪರಮಾಕಾಶದಲ್ಲಿ ನೆಲಸಿರುವ ಶಿವತತ್ತ್ವ ವನ್ನು ತಿಳಿದವನು ಅದರೊಡನೆ ಎಲ್ಲಾ ಫಲಗಳನ್ನೂ ಭೋಗಿಸುತ್ತಾನೆ" ಎಂಬಲ್ಲಿ ವಾಸನೆಯೊಡಗೂಡಿದ ಸಾಲೋಕ್ಯ ಮೊದಲಾದ ಮೂರುಬಗೆಯ ಮುಕ್ತಿಗಳೆಂಬ ಕಲ್ಯಾಣವಿಭೂತಿ ದೊರಕುವುದೆಂದು ತಿಳಿಸಲಾಗಿದೆ. ಯಾವ ವಾಸನೆಯೂ ಇಲ್ಲದೆ ಪರಶಿವನ ಧ್ಯಾನದಲ್ಲಿಯೇ ಮಗ್ನರಾದ ದಹರೋಪಾಸಕರಿಗೆ ತೈತ್ತಿರಿಯದಲ್ಲೂ ಕೈವಲ್ಯ ಶ್ರುತಿಯಲ್ಲೂ ಅಶರೀರಮುಕ್ತಿ ಎಂಬ ಕೈವಲ್ಯವಿಭೂತಿ ದೊರಕುವುದೆಂದು ತಿಳಿಸ ಲಾಗಿದೆ. "ಶ್ರದ್ಧಾಭಕ್ತಿಗಳಿಂದೊಡಗೂಡಿದ ಧ್ಯಾನಯೋಗದಿಂದ ಶಿವನನ್ನು ತಿಳಿ" "ಅವನನ್ನು ನಿರಂತರವೂ ಧ್ಯಾನಿಸುತ್ತಲೂ, ಧರಿಸುತ್ತಲೂ, ಅವನೊಡನೆ ಬೆರೆಯು ತ್ತಲೂ ಇದ್ದರೆ ಕೊನೆಗೆ ಮಾಯೆ ಪೂರ್ಣವಾಗಿ ಅಳಿಯುತ್ತದೆ" ಹೀಗೆ ನೂರಾರು ಶ್ರುತಿಗಳಲ್ಲಿ ಬ್ರಹ್ಮೋಪಾಸಕರಿಗೆ ಸಶರೀರ ಮತ್ತು ಅಶರೀರಮುಕ್ತಿಗಳೆರಡನ್ನೂ ಹೇಳಿ ರುವುದರಿಂದ ಬ್ರಹ್ಮೋಪಾಸನವೇ ಸರ್ವಶ್ರೇಷ್ಠವೆನಿಸಿದೆ. ಧ್ಯಾನ ಮೊದಲಾದ ಉಪಾಸನಗಳನ್ನು ಕರ್ಮವೆಂದೇ ಹೇಳುವುದಾದರೆ ಶ್ರವಣ ಮನನಗಳನ್ನೂ ಕರ್ಮ ವೆಂದೇ ಹೇಳಬೇಕಾದೀತು. "ಆತ್ಮನನ್ನು ಕಾಣಬೇಕು" ಎಂಬಲ್ಲಿ ಪರಶಿವನ ಸಾಕ್ಷಾ ತ್ಕಾರಕ್ಕೆ ಸಾಧನವಾಗಿ ಶ್ರವಣಾದಿಗಳನ್ನು ವಿಧಿಸಲಾಗಿದೆ. ಅಲ್ಲಿ ಶ್ರವಣಮನನಗಳೊಡ ಗೂಡಿದ ನಿದಿಧ್ಯಾಸನವೆಂಬ ಉಪಾಸನವನ್ನೇ ಬ್ರಹ್ಮಸಾಕ್ಷಾತ್ಕಾರದ ಮುಖ್ಯಕಾರಣ ವೆಂದು ತಿಳಿಸಲಾಗಿದೆ. ಆದರೆ ವೈದ್ಯಶಾಸ್ತ್ರಗಳಂತೆ ವಾಕ್ಯಾರ್ಥಜ್ಞಾನದಿಂದ ಬ್ರಹ್ಮ ಸಾಕ್ಷಾತ್ಕಾರವು ಸಿದ್ಧಿಸಲಾರದು. ಆಕಾಶದಲ್ಲಿರುವ ನಕ್ಷತ್ರಗಳು ಎಲ್ಲರಿಗೂ ಅನು ಭವಗೋಚರವಾಗುತ್ತವೆ. ಅವುಗಳ ಪುಣ್ಯ ಮುಗಿದೊಡನೆ ಅವು ಕೆಳಗೆ ಉದುರು ತ್ತವೆ. ಇದರಿಂದ ಕೈಲಾಸದಲ್ಲಿ ಸಶರೀರಮುಕ್ತಿಯೊಂದೇ ಸಂಭವಿಸುತ್ತದೆ ಎಂದು ಊಹಿಸಬಹುದಾಗಿದೆ. ಇದೂ ಅಲ್ಲದೆ, ಉಪಮನ್ಯು ದಧೀಚಿ ಗೌತಮ ಮೊದಲಾದ ಶಿವಯೋಗಿಗಳು ಯೋಗಮಹಿಮೆಯಿಂದ ಕೈಲಾಸದಲ್ಲಿ ಮೂರುಬಗೆಯ ಮುಕ್ತಿ ಯನ್ನು ಪಡೆದಿದ್ದರೆಂದು ಕಂಡುಬಂದಿದೆ. ಅಲ್ಲಿಯೂ ಪೂಜ್ಯಪೂಜಕಭಾವವಿರು ವುದಾಗಿ ತಿಳಿದುಬಂದಿದೆ. ಭಲ್ಲಾಣ, ಚಿರುತುಂಡ, ಚಾರಮದೇವ, ವೇಮಾರಾಧ್ಯ, ಉದ್ಭಟಾರಾಧ್ಯ ಮೊದಲಾದವರು ಶರೀರ ರಾಜ್ಯ ಪರಿವಾರ ಮತ್ತು ವಾಸಗೃಹ ಇವು ಗಳೊಡನೆ ಶಿವಲೋಕವನ್ನು ಹೊಂದಿದರೆಂದು ತಿಳಿದುಬಂದಿದೆ. ಆದ್ದರಿಂದ ಅಶರೀರ ಮುಕ್ತಿ ಎಂಬುದು ಯಾರ ಅನುಭವಕ್ಕೂ ವಿಷಯವೇ ಆಗಿಲ್ಲವೆಂದು ಆಕ್ಷೇಪಬರುತ್ತದೆ. ಇದಕ್ಕೆ ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. ಸಶರೀರಮುಕ್ತಿಯಂತೆಯೇ ಅಶರೀ ಮುಕ್ತಿಯೂ ಇರುವುದೆಂಬ ಅಂಶ ಶ್ರುತಿಗೆ ಸಮ್ಮತವಷ್ಟೇ ಅಲ್ಲದೆ ಯುಕ್ತಿಗೂ ಅನು

ಭವಕ್ಕೂ ಸಮ್ಮತವೆನಿಸಿದೆ. ಸುಷುಪ್ತಿ ಸಮಾಧಿಗಳಲ್ಲಿ ಸ್ಥೂಲಸೂಕ್ಷ್ಮಶರೀರಗಳೇ ಇಲ್ಲದಿರುವುದರಿಂದ ವಿದ್ವಾಂಸರಿಗೂ ಪಾಮರರಿಗೂ ಕಾರಣಶರೀರದಲ್ಲಿ ಅಶರೀರಸ್ವರೂಪನಾದ ಪರಶಿವನಲ್ಲಿ ಬೆರೆಯುವಿಕೆ ಸಹಜವೇ ಆಗಿದೆ. ಹಾಗೆ ಅವರು ಅನುಭವಿಸಿದ ಆನಂದವನ್ನು ಅವರು ಎಚ್ಚರಗೊಂಡಾಗ ಹೇಳುತ್ತಾರೆ. ಆದರೆ ಸ್ವರ್ಗಕ್ಕೆಹೋಗಿರುವ ದಿವ್ಯದೇಹಿಗಳಾದ ನಕ್ಷತ್ರಗಳಂತೆ ಶಿವಲೋಕಕ್ಕೆ ಹೋದ ಮಹಾಪುರುಷರಿಗಾದರೋ ಮತ್ತೆ ಮತ್ತೆ ಹಿಂತಿರುಗುವ ಆವಶ್ಯಕತೆ ಇಲ್ಲ. ಸಂನ್ಯಾಸಯೋಗದಿಂದ ಯತಿಗಳು ಬ್ರಹ್ಮಲೋಕದಲ್ಲಿಯೇ ಸಾಲೋಕ್ಯಾದಿತ್ರಿವಿಧಮುಕ್ತಿಗಳನ್ನು ಅನುಭವಿಸಿದಮೇಲೆ ಸಾಯುಜ್ಯಮುಕ್ತಿಯನ್ನು ಪಡೆಯುವರೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಬ್ರಹ್ಮೋಪಾಸನಗಳಿಗೆ ನಿತ್ಯನಿರತಿಶಯಾನಂದಸ್ವರೂಪವೂ ಅದ್ವಿತೀಯವೂ ಆದ ಸಶರೀರ ಮತ್ತು ಅಶರೀರ ಮುಕ್ತಿಗಳೆರಡೂ ಅವರವರ ಇಚ್ಛಾನುಸಾರವಾಗಿ ಸಂಭವಿಸುತ್ತವೆ. ಆದ್ದರಿಂದ ಎಲ್ಲರಿಗೂ ಒಂದೇಬಗೆಯ ಮುಕ್ತಿಯೇ ಸಂಭವಿಸುವುದೆಂಬ ನಿಯಮವಿಲ್ಲ.

## ಅಥ ಶ್ರೀಕರಭಾಷ್ಯೇ ಚತುರ್ಥಾಧ್ಯಾಯಸ್ಯ ಪ್ರಥಮಃ ಪಾದಃ
## ಫಲಾಧ್ಯಾಯಪ್ರಾರಂಭಃ

ತೃತೀಯಾಧ್ಯಾಯೇ ತತ್ತ್ವಂಪದವಾಕ್ಯಾರ್ಥಸಿದ್ಧೋಪಾಸ್ಯೋಪಾಸಕಶಿವಜೀವಪ್ರತಿಪಾದಕದಹರಾದಿವಿದ್ಯಾಚಿಂತಾ ಕೃತಾ. ಇದಾನೀಂ ಚತುರ್ಥಾಧ್ಯಾಯಸ್ಯ ಪ್ರಥಮಪಾದೇ ಸರ್ವಾಸಾಂ ವಿದ್ಯಾನಾಂ ಫಲಂ, ದ್ವಿತೀಯೇ ತ್ವಂಪದಾರ್ಥಭೂತಜೀವೋತ್ಕ್ರಾಂತಿದಶಾವಿಶೇಷಫಲಂ, ತೃತೀಯೇ ಅರ್ಚಿರಾದಿಗತಿಫಲಂ, ಚತುರ್ಥೇ ಸ್ವಾಭಾವಿಕಜೀವಭಾವನಿವೃತ್ತಿಪೂರ್ವಕಶಿವತ್ವಪ್ರಾಪ್ತಿರೂಪಪರಮಪುರುಷಾರ್ಥಫಲಂ ಚ ದರ್ಶಯತಿ. ತಸ್ಮಾದೇತದಧ್ಯಾಯಸ್ಯ ಫಲಾಭಿಧಾನಂ. ಪೂರ್ವಾಧ್ಯಾಯೇ ದಹರಶಾಂಡಿಲ್ಯಾದಿವಿದ್ಯಾವಿಧಾನಸ್ಯ ಪಾಶನಿವೃತ್ತಿಪೂರ್ವಕಶಿವಪ್ರಾಪ್ತಿ, ಸಿದ್ಧ್ಯರ್ಥಂ ಸಾಧನೈಸ್ಸಹ ನಿರೂಪಣೇ ಸಕೃದೇವ ಪ್ರಪನ್ನಾನಾಂ "ಸಕೃತ್ಸ್ಮರಣಮಾತ್ರೇಣ ಸರ್ವಸಿದ್ಧಿಕರಂ ಭವೇತ್ । ಸಕೃದೌಪಾಸನಂ ಕುರ್ಯಾನ್ಮಾಯಾಪಾಶನಿವೃತ್ತಯೇ ॥" ಇತ್ಯಾದಿಸ್ಮೃತಿಪುರಾಣೇಷು ಸಕೃದುಪಾಸನಾಮಾತ್ರೇಣ ಜೀವಭಾವನಿವೃತ್ತಿಪೂರ್ವಕಶಿವತ್ವಪ್ರಾಪ್ತಿಃ ಅಸಕೃದುಪಾಸನೇ ಮಾನಾಭಾವಾತ್. "ಬ್ರಹ್ಮವಿದಾಪ್ನೋತಿ ಪರಂ" ಇತ್ಯಾದಿಬ್ರಹ್ಮೋಪಾಸನವಿಧಾಯಕವಾಕ್ಯಾನಾಂ ಸಕೃತ್ಕಾಲಪರತ್ವಮಿತ್ಯಾಶಂಕಾಯಾಂ ತನ್ನಿರಾಕರಣಾರ್ಥಮಧಿಕರಣಾಂತರಮಾಹ. ಆವೃತ್ತ್ಯಧಿಕರಣಂ ॥ ೧ ॥ ಆವೃತ್ತಿರಸಕೃದುಪದೇಶಾತ್ ॥ ೧ ॥ "ಆತ್ಮಾ ವಾಽರೇ ದ್ರಷ್ಟವ್ಯಃ" ಇತ್ಯಾದಿಶ್ರುತಿಷು ಸಕೃದಸಕೃನ್ನಿಯಮಾದರ್ಶನೇಽಪಿ ಅಸಕೃದನೇಕವಾರಂ ಅವಿಸ್ಮರಣೇನ ಆವೃತ್ತಿಃ ಪರಶಿವಧ್ಯಾನೆ

ಶ್ರವಣಮನನಾದ್ಯಭ್ಯಾಸಃ ಕರ್ತವ್ಯಃ. ಕುತಃ? ಉಪದೇಶಾತ್. "ಆಸುಪ್ತೇರಾಮೃತೇಃ ಕಾಲಂ ನಯೇದ್ವೇದಾಂತಚಿಂತಯಾ । ದದ್ಯಾನ್ನಾವಸರಂ ಕಿಂಚಿತ್ಕಾಮಾದೀನಾಂ ಮನಾಗಪಿ ॥", "ಸುಪ್ತೇರುತ್ಥಾಯ ಸುಪ್ತ್ಯಂತಂ ಬ್ರಹ್ಮೈಕ್ಯಂ ಪ್ರವಿಚಿಂತ್ಯತಾಂ । ಗಚ್ಛಂಸ್ತಿಷ್ಠನ್ನುಪವಿಶನ್ ಶಯಾನೋಽಪ್ಯನ್ಯಥಾಪಿ ವಾ । ಯಥೇಚ್ಛಯಾ ವಸೇದ್ವಿದ್ವಾನ್ ಸ್ವಾತ್ಮಾರಾಮಃ ಸದಾ ಮುನಿಃ ॥" ಇತಿ ಸ್ಮೃತ್ಯಾ ಸರ್ವತಃ ಸ್ವರೂಪಮೇವ ಪಶ್ಯನ್ ಸಃ ಜೀವನ್ಮುಕ್ತಿಮವಾಪ್ಯ ಪ್ರಾರಬ್ಧಪ್ರತಿಭಾಸನಾಶಪರ್ಯಂತಂ ಸ್ವರೂಪಾನುಸಂಧಾನೇನ ವಸೇತ್. ಸ್ವರೂಪಾನುಸಂಧಾನಂ ವಿನಾ ಅನ್ಯಥಾಚಾರಪರೋ ನ ಭವೇತ್ಸವಿದ್ವಾನ್. "ವೇದಾಂತಶ್ರವಣಂ ಕುರ್ವನ್ ಯೋಗಂ ಸಮಾರಭೇತ್" ಇತ್ಯಾದಿಶ್ರುತಿಷು "ತಚ್ಚಿಂತನಂ ತನ್ಮನನಂ ಅನ್ಯೋಽನ್ಯಂ ತತ್ಪ್ರಬೋಧನಂ । ಏತದೇಕಪರತ್ವಂ ಚ ಬ್ರಹ್ಮಾಭ್ಯಾಸಂ ವಿದುರ್ಬುಧಾಃ ॥", "ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ", "ದಿನೇದಿನೇ ಚ ವೇದಾಂತಶ್ರವಣಾದ್ಭಕ್ತಿಸಂಯುತಾತ್ । ಗುರುಭಕ್ತಿಂ ಸದಾ ಲಬ್ಧ್ವಾ ಭಜಂತೇ ಶಿವಮವ್ಯಯಂ ॥" ಇತ್ಯಾದಿಸ್ಮೃತಿಷ್ವಪಿ ನಿರಂತರಂ ಶಿವಶ್ರವಣಮನನಧ್ಯಾನಧಾರಣಾವಧಾನಜ್ಞಾನವಿಧಾನಸ್ಯೋಪದಿಷ್ಟತ್ವಾತ್ ಸಕೃದುಪಾಸನೇನ ಬುದ್ಧೇಸ್ತದಾತ್ಮಕತ್ವಾಭಾವಾಚ್ಚ ಅವಿಸ್ಮರಣೇನ ಸದಾ ತದುಪಾಸನಮಾವಶ್ಯಕಮಿತಿ ಸೂತ್ರಸೂಕ್ತಾರ್ಥಃ. "ಬ್ರಹ್ಮ ವೇದ ಬ್ರಹ್ಮೈವ ಭವತಿ" ಇತ್ಯಾದಿಶ್ರುತಿಷು ಬ್ರಹ್ಮವೇದನರೂಪೋಪಾಸನಸ್ಯ ಸಕೃದಸಕೃದಿತಿ ವಿನಿಗಮಕಾಭಾವಾತ್ ಭಕ್ತಾನಾಂ ಸಕೃದುಪಾಸನಮುತಾಸಕೃದುಪಾಸನಮೇವೇತಿ ಸಂದಿಹ್ಯತೇ. "ಬ್ರಹ್ಮ ವೇದ" ಇತ್ಯತ್ರ ವೇದನಮಾತ್ರಸ್ಯೈವ ವಿಧಾನಾತ್ ಅಸಕೃದಾವೃತ್ತೌ ಪ್ರಮಾಣಾಭಾವಾತ್. ನಚ ಅವಘಾತಾದಿವತ್ ವೇದನಸ್ಯ ಬ್ರಹ್ಮಾಪರೋಕ್ಷ್ಯಂ ಪ್ರತಿದೃಷ್ಟೋಪಾಯತ್ವಾತ್ ಯಾವತ್ಕಾರ್ಯಪೂರ್ವವೃತ್ತಿರಿತಿ ಶಕ್ಯಂ ವಕ್ತುಂ, ವೇದನಸ್ಯ ದೃಷ್ಟೋಪಾಯತ್ವಾಭಾವಾತ್. ಜ್ಯೋತಿಷ್ಟೋಮಾದಿಕರ್ಮವತ್ ವೇದಾಂತವಿಹಿತಂ ಚ ವೇದನಂ ಶಿವಾರಾಧನರೂಪಂ. ಆರಾಧಿತಾಚ್ಚ ಪರಮಪುರುಷಾತ್ ಧರ್ಮಾರ್ಥಕಾಮಮೋಕ್ಷಾಖ್ಯಪುರುಷಾರ್ಥಾವಾಪ್ತಿರಿತಿ ಹಿ "ಫಲಮತ ಉಪಪತ್ತೇಃ" ಇತ್ಯತ್ರ ಪ್ರತಿಪಾದಿತಂ. ಅತೋ ಜ್ಯೋತಿಷ್ಟೋಮಾದಿವತ್ ಯಥಾಶಬ್ದಂ ಸಕೃತ್ಕೃತಮೇವ ಶಾಸ್ತ್ರಂ ತಾತ್ಪರ್ಯವದಿತಿ ನಿಶ್ಚೀಯತೇ. "ಸಕೃತ್ಕೃತೇಃ ಕೃತಃ ಶಾಸ್ತ್ರಾರ್ಥಃ" ಇತಿ ನ್ಯಾಯದರ್ಶನಾತ್ ಪ್ರಯಾಜಾದಿವತ್ ಸಕೃದನುಷ್ಠೇಯಮೇವೇತಿ ಪ್ರಾಪ್ತೇ ಪ್ರಚಕ್ಷ್ಮಹೇ. ಆವೃತ್ತಿರಸಕೃದಿತಿ, ಅಸಕೃದಾವೃತ್ತಮೇವ ವೇದನಂ ಶಾಸ್ತ್ರಾರ್ಥಃ. ಕುತಃ? ಉಪದೇಶಾತ್.

" ಸಂದೇಹೇ ಕಾರ್ಯಶೇಷಾತ್ " ಇತಿ ನಿಯಮೇನ ಛಾಗಪಶುನ್ಯಾಯವತ್ ಶ್ರುತ್ಯಂತರೇಷ್ವಸಂದಿಗ್ಧತಯಾ ಸದಾ ಪರಶಿವಬ್ರಹ್ಮೋಪಾಸನಂ ಪಾಶನಿವೃತ್ತಿಪೂರ್ವಕಶಿವತ್ವಪ್ರಾಪ್ತಿಮೂಲಮಿತ್ಯುಪದೇಶಾದ್ವ್ಯಪದೇಶಾತ್. " ಯದಾ ಚರ್ಮವದಾಕಾಶಂ ವೇಷ್ಟಯಿಷ್ಯತಿ ಮಾನವಃ।ತದಾ ಶಿವಮವಿಜ್ಞಾಯ ದುಃಖಸ್ಯಾಂತೋ ಭವಿಷ್ಯತಿ ॥ ", " ಆದಿಮಧ್ಯಾವಸಾನೇಷು ದುಃಖಂ ಸರ್ವಮಿದಂ ಯತಃ । ತಸ್ಮಾತ್ಸರ್ವಂ ಪರಿತ್ಯಜ್ಯ ತತ್ತ್ವನಿಷ್ಠೋ ಭವಾನಘ ॥ ", " ನಿದ್ರಾಯಾ ಲೋಕವಾರ್ತಾಯಾ ಶಬ್ದಾದೇರಾತ್ಮವಿಸ್ಮೃತೇಃ । ಕ್ವಚಿನ್ನಾವಸರಂ ದತ್ವಾ ಚಿಂತಯಾತ್ಮಾನಮಾತ್ಮನಿ ॥ " ಇತ್ಯಾದಿಸ್ಮೃತಿಷು, " ಈಶ್ವರಂ ತಮಹಂ ವಂದೇ ಯಸ್ಯ ಲಿಂಗಮಹರ್ನಿಶಂ । ಯಜಂತೇ ಸಹ ಭಾರ್ಯಾಭಿಃ ಇಂದ್ರಜ್ಯೇಷ್ಠಾ ಮರುದ್ಗಣಾಃ ॥ " ಇತಿ ಜೈಮಿನ್ಯಾಚಾರ್ಯಕೃತವೇದಪಾದಸ್ತವೇಽಪಿ ಚ ಅಸಕೃದುಪಾಸನಾವಿಧ್ಯವಗಮಾತ್. " ಸಕೃದೇವ ಪ್ರಪನ್ನಾನಾಂ ಸದ್ಯೋಮುಕ್ತಿರ್ವಿಧೀಯತೇ " ಇತ್ಯಾದಿಸ್ಮೃತೀನಾಂ ತನ್ಮಾಹಾತ್ಮ್ಯಸ್ಮರಣಮಾತ್ರಪರತ್ವಮಿತಿ ವಿವಕ್ಷಿತಂ. " ಮನೋ ಬ್ರಹ್ಮೇತ್ಯುಪಾಸೀತ ", " ಭಾತಿ ಚ ತಪತಿ ಚ ಕೀರ್ತ್ಯಾ ಯಶಸಾ ಬ್ರಹ್ಮವರ್ಚಸೇನ ಯ ಏವಂ ವೇದಂ ಯತ್ಸ ವೇದ ಸ ಮಯೈತದುಕ್ತಃ ", " ಅನು ಮ ಏತಾಂ ದೇವತಾಂ ಗಾಧೀಯದೇವತಾಮುಪಾಸ್ವ " ಇತ್ಯಾದಿಶ್ರುತಿಷು ಉಪಕ್ರಮೋಪಸಂಹಾರಯೋರ್ವಿಧ್ಯುಪಾಸ್ಯಯೋರ್ವ್ಯತಿಕರೋಪದೇಶೇ ಮೋಕ್ಷಸಾಧನರೂಪಸ್ಯ ವೇದನಸ್ಯ ಉಪಾಸನರೂಪತ್ವಾವಗಮಾತ್ ಉಪಾಸನಶಬ್ದಸ್ಯ ಚ ಸ್ಮೃತಿಸಂತಾನವಾಚಿತ್ವಾತ್ ಯದುಕ್ತಂ ಪ್ರಯಾಜಾದಿವದಿತಿ ತನ್ನ ತಸ್ಯಾದೃಷ್ಟಫಲತ್ವಾತ್. ಉಕ್ತಂ ಸಕೃದನುಷ್ಠಾನಂ. ತಥಾ " ಬ್ರಹ್ಮವಿದಾಪ್ನೋತಿ ಪರಂ " ಇತ್ಯಾದಿವಾಕ್ಯಸಮಾನಾರ್ಥೇಷು ವಾಕ್ಯೇಷು " ಆತ್ಮಾ ವಾರೇ ದ್ರಷ್ಟವ್ಯಃ ", " ತತಸ್ತು ತಂ ಪಶ್ಯತಿ ನಿಷ್ಕಲಂ ಧ್ಯಾಯಮಾನಃ " ಇತ್ಯಾದಿಷು ಧ್ಯಾಯತಿನಾ ವೇದನಮಭಿಧೀಯತೇ. ಧ್ಯಾನಂ ಚ ಚಿಂತನಂ ತಚ್ಚ ಸ್ಮೃತಿಸಂತತಿರೂಪಂ ನ ಸ್ಮೃತಿಮಾತ್ರಂ. ಉಪಾಸ್ತಿರಪಿ ತದೇಕಾರ್ಥಃ, ಏಕಾಗ್ರಚಿತ್ತವೃತ್ತಿನೈರಂತರ್ಯೇ ಪ್ರಯೋಗದರ್ಶನಾತ್. ತದುಭಯೈಕಾರ್ಥ್ಯಾದಸಕೃದಾವೃತ್ತಸಂತತಸ್ಮೃತಿರಿಹ " ಬ್ರಹ್ಮ ವೇದ " ಇತ್ಯಾದಿಷು ವೇದನಾದಿಶಬ್ದೈರುಪಾಸನಮೇವಾಭಿಧೀಯತೇ.

ತ್ವಂಪದದ ಅರ್ಥವೆನಿಸಿದ ಜೀವನು ತತ್ಪದದ ಅರ್ಥವೆನಿಸಿದ ಶಿವನನ್ನು ಉಪಾಸನಮಾಡಲಿಕ್ಕಾಗಿಯೇ ವಿಹಿತವಾಗಿರುವ ದಹರಾದಿವಿದ್ಯೆಗಳ ಸ್ವರೂಪವನ್ನು ತೃತೀಯಾಧ್ಯಾಯದಲ್ಲಿ ವಿಮರ್ಶಿಸಲಾಯಿತು. ಈಗ ಚತುರ್ಥಾಧ್ಯಾಯದ ಪ್ರಥಮಪಾದ

ದಲ್ಲಿ ಎಲ್ಲಾ ವಿದ್ಯೆಗಳ ಫಲವನ್ನೂ, ದ್ವಿತೀಯಪಾದದಲ್ಲಿ ತ್ವಂಪದದ ಅರ್ಥವೆನಿಸಿದ ಜೀವನ ಉತ್ಕ್ರಮಣಾವಸ್ಥೆಯ ವಿಶೇಷಫಲವನ್ನೂ, ತೃತೀಯಪಾದದಲ್ಲಿ ಅರ್ಚಿರಾದಿ ಮಾರ್ಗಗಳ ಫಲವನ್ನು, ಚತುರ್ಥಪಾದದಲ್ಲಿ ಸ್ವಾಭಾವಿಕವಾದ ಜೀವಭಾವವನ್ನು ಕಳೆದು ಕೊಂಡು ಜೀವನು ಶಿವಭಾವವನ್ನು ಹೊಂದುವನೆಂದೂ, ಇದೇ ಪರಮಪುರುಷಾರ್ಥ ವೆಂದೂ ತಿಳಿಸಲಾಗುವುದು. ಆದ್ದರಿಂದ ಈ ಅಧ್ಯಾಯಕ್ಕೆ ಫಲಾಧ್ಯಾಯವೆಂಬ ಹೆಸರು ಬಂದಿದೆ. ಹಿಂದಿನ ಅಧ್ಯಾಯದಲ್ಲಿ ದಹರ ಶಾಂಡಿಲ್ಯ ಮೊದಲಾದ ವಿದ್ಯೆಗಳಿಂದ ಜೀವನಿಗೆ ಪಾಶವು ತೊಲಗಿ ಶಿವಭಾವವು ಹೊರಹೊಮ್ಮಲಿಕ್ಕಾಗಿ ಸಾಧನಗಳನ್ನು ಒಟ್ಟಿಗೆ ತಿಳಿಸುವಾಗ, "ಒಮ್ಮೆ ಸ್ಮರಿಸಿಕೊಂಡರೇ ಎಲ್ಲವೂ ಸಿದ್ಧಿಸುತ್ತದೆ, ಮಾಯಾಪಾಶವನ್ನು ತೊಲಗಿಸಲು ಒಮ್ಮೆ ಉಪಾಸನಮಾಡಬೇಕು" ಎಂದು ಸ್ಮೃತಿಪುರಾಣಗಳಲ್ಲಿ ಶರಣಾ ಗತರು ಒಮ್ಮೆ ಮಾಡಿದ ಉಪಾಸನದಿಂದಲೇ ಜೀವಭಾವವನ್ನು ತೊಲಗಿಸಿಕೊಂಡು ಶಿವಭಾವವನ್ನು ಪಡೆಯುವರೆಂದು ಹೇಳಿರುವುದರಿಂದಲೂ ಜೀವಭಾವವನ್ನು ಕಳೆದು ಕೊಂಡು ಶಿವಭಾವವನ್ನು ಹೊಂದಲಿಕ್ಕೆ ಜೀವನು ಮತ್ತೆ ಉಪಾಸನಮಾಡಬೇಕೆಂಬಲ್ಲಿ ಪ್ರಮಾಣವಿಲ್ಲದ್ದರಿಂದಲೂ "ಬ್ರಹ್ಮವನ್ನರಿತವನು ಬ್ರಹ್ಮವನ್ನೇ ಹೊಂದುತ್ತಾನೆ" ಎಂದು ಮುಂತಾಗಿ ಬ್ರಹ್ಮೋಪಾಸನವನ್ನು ವಿಧಿಸುವ ವಾಕ್ಯಗಳೆಲ್ಲವೂ ಜೀವನಿಗೆ ಒಮ್ಮೆಮಾತ್ರವೇ ಉಪಾಸನವನ್ನು ವಿಧಿಸುತ್ತವೆ ಎಂದು ಆಶಂಕಿಸಿ ಅದನ್ನು ನಿರಾಕ ರಿಸಲು ತಿಳಿಸುತ್ತಾನೆ. "ಆತ್ಮನನ್ನು ಕೇಳಿ ತಿಳಿದು ಧ್ಯಾನಿಸಿ ನೋಡಬೇಕು." "ನಿರಂತರವೂ ಅವನ ಧ್ಯಾನಧಾರಣಾನುಸಂಧಾನಗಳಿಂದ ಕೊನೆಗೆ ಮಾಯೆ ಪೂರ್ಣವಾಗಿ ತೊಲಗುತ್ತದೆ" ಈ ಬಗೆಯ ಶ್ರುತಿಗಳಲ್ಲಿ ಧ್ಯಾನಾದಿಗಳನ್ನು ಒಮ್ಮೆ ಮಾಡಬೇಕೋ ಅಥವಾ ಮತ್ತೆಮತ್ತೆ ಮಾಡಬೇಕೋ ಎಂಬ ನಿಯಮವಿಲ್ಲದಿದ್ದರೂ ಅವನನ್ನು ಯಾವತ್ತು ಮರೆಯದಂತಾಗಲು ಶ್ರವಣಮನನ ಧ್ಯಾನಗಳನ್ನು ನಿರಂತ ರವೂ ಅಭ್ಯಾಸಮಾಡಬೇಕೆಂಬುದೇ ಯುಕ್ತವೆನಿಸುತ್ತದೆ. ಹಾಗೆಯೇ ಬೇರೆ ಶ್ರುತಿ ಗಳಲ್ಲೂ ಉಪದೇಶಿಸಲಾಗಿದೆ. "ಮುಂಜಾನಿಂದ ಸಂಜೆಯವರೆಗೂ ವೇದಾಂತವಿಚಾರ ದಲ್ಲಿಯೇ ಕಾಲವನ್ನು ಕಳೆಯಬೇಕು. ಕಾಮಕ್ರೋಧಾದಿಗಳಿಗೆ ಕೊಂಚವಾದರೂ ಅವಕಾಶವನ್ನು ಕೊಡಬಾರದು" ಮಲಗಿದ್ದು ಎದ್ದಮೇಲೆ ಮತ್ತೆ ಮಲಗುವವರೆಗೂ ನಡೆಯುವಾಗ, ನಿಂತಾಗ, ಕುಂತಾಗ, ಮಲಗಿದಾಗ ಮತ್ತೆ ಬೇರೆ ಕಾಲದಲ್ಲೂ ಪರ ಶಿವಬ್ರಹ್ಮವನ್ನೇ ಚಿಂತಿಸಬೇಕು. ಸಾಧಕನು ಯಾವಾಗಲೂ ಪರಶಿವನಲ್ಲಿಯೇ ರಮಿಸುತ್ತ ಪ್ರಕೃತಿಗೆ ವಶನಾಗದಂತಿರಬೇಕು. ಜೀವನ್ಮುಕ್ತನು ತನ್ನ ಪ್ರಾರಬ್ಧ ಮುಗಿಯುವವರೆಗೂ ತನ್ನ ವಾಸ್ತವಸ್ವರೂಪವನ್ನೇ ಎಲ್ಲಾಕಡೆಯೂ ಕಾಣುತ್ತ ಅದರ ಅನುಸಂಧಾನದಲ್ಲಿಯೇ ನಿರತನಾಗಿರಬೇಕು. ಇದರ ವಿನಹಾ ಬೇರೆ ಯಾವ ಮಾರ್ಗ ವನ್ನೂ ಆಶ್ರಯಿಸಬಾರದು. ವೇದಾಂತವನ್ನು ಹೇಳುತ್ತಲೇ ಯೋಗವನ್ನಾರಂಭಿಸ ಬೇಕು." ಹೀಗೆ ಶ್ರುತಿಗಳಲ್ಲೂ, "ಯಾವಾಗಲೂ ಶಿವನನ್ನು ಚಿಂತಿಸುತ್ತ ಮನದಲ್ಲಿ ಭಾವಿಸುತ್ತ ಅವನಿಗೆ ಸಂಬಂಧಿಸಿದ ವಿಚಾರವನ್ನೇ ಕೇಳುತ್ತ ಅವನಲ್ಲಿಯೇ ಆಸಕ್ತ

ನಾಗಿರುವುದಕ್ಕೆ ಬ್ರಹ್ಮಾಭ್ಯಾಸವೆನ್ನುತ್ತಾರೆ." "ಅವನಲ್ಲಿಯೇ ಮನಸ್ಸನ್ನಿಟ್ಟು ಅವ ನೊಡಗೂಡಿರುವವರು ಅವನಲ್ಲಿಯೇ ಆಸಕ್ತರಾಗಿರುತ್ತಾರೆ." "ಪ್ರತಿದಿನವೂ ಭಕ್ತಿ ಯಿಂದ ವೇದಾಂತವನ್ನು ಕೇಳುತ್ತಲಿರುವವರು ನಿತ್ಯಸುಂದರನಾದ ಶಿವನಲ್ಲಿ ಬೆರೆಯುತ್ತಾರೆ" ಹೀಗೆ ಸ್ಮೃತಿಗಳಲ್ಲೂ ಶಿವನ ಶ್ರವಣಮನನಧ್ಯಾನಧಾರಣ ಮತ್ತು ಅವಧಾನಗಳಿಂದಲೇ ಅವನ ಜ್ಞಾನವನ್ನು ನಿರಂತರವೂ ಪಡೆಯಬೇಕೆಂದು ಹೇಳಿರು ವುದರಿಂದ ಒಮ್ಮೆ ಮಾಡಿದ ಉಪಾಸನದಿಂದ ಬುದ್ಧಿ ಶಿವಮಯವಾಗದೆ ಜೀವನಿಗೆ ವಿಸ್ಮೃತಿಯುಂಟಾಗುತ್ತದೆ. ಆದ್ದರಿಂದ ಯಾವಾಗಲೂ ಅವನನ್ನು ಮರೆಯದಂತೆ ಉಪಾಸನಮಾಡಬೇಕು." ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ" ಎಂಬಲ್ಲಿ ಬ್ರಹ್ಮೋಪಾಸನವು ಒಮ್ಮೆಗೋ ಅಥವಾ ಬಾರಿಬಾರಿಗೋ ಎಂಬಲ್ಲಿ ಪ್ರಮಾಣವಿಲ್ಲದ್ದ ರಿಂದ ಭಕ್ತರು ಒಮ್ಮೆ ಉಪಾಸನಮಾಡಬೇಕೇ ಅಥವಾ ನಿರಂತರವೂ ಉಪಾಸನ ಮಾಡಬೇಕೇ ಎಂದು ಸಂದೇಹವುಂಟಾಗುತ್ತದೆ. "ಬ್ರಹ್ಮವನ್ನು ತಿಳಿದವನು" ಎಂಬಲ್ಲಿ ತಿಳಿಯುವಿಕೆಯೊಂದನ್ನೇ ವಿಧಿಸಿರುವುದರಿಂದ ಬಾರಿಬಾರಿಗೂ ಆ ತಿಳಿವನ್ನೇ ಅನುವರ್ತಿಸಬೇಕೆಂಬುದಕ್ಕೆ ಪ್ರಮಾಣವಿಲ್ಲ. ಯಜ್ಞದಲ್ಲಿ ಅಕ್ಕಿಯನ್ನು ಕುಟ್ಟುವ ಕರ್ಮದಂತೆ ಜ್ಞಾನವು ಬ್ರಹ್ಮದ ಸಾಕ್ಷಾತ್ಕಾರಕ್ಕೆ ಪ್ರತ್ಯಕ್ಷವಾದ ಉಪಾಯವಾಗುವುದ ರಿಂದ ಆ ಕಾರ್ಯವು ಸಿದ್ಧಿಸುವವರೆಗೂ ಕಾರಣವನ್ನು ಅನುವರ್ತಿಸುವುದು ಆವಶ್ಯಕ ವೆಂದು ಹೇಳಿದರೆ ಅದು ಹೊಂದುವುದಿಲ್ಲ. ಜ್ಯೋತಿಷ್ಟೋಮಾದಿ ಕರ್ಮಗಳು ಅಪ್ರ ತ್ಯಕ್ಷವಾದ ರೀತಿಯಲ್ಲಿಯೇ ಫಲವನ್ನು ಕೊಡುವಂತೆ ಬ್ರಹ್ಮಜ್ಞಾನವೂ ಅದೃಷ್ಟೋ ಪಾಯವೇ ಆಗುವುದರಿಂದ ಅಕ್ಕಿಯನ್ನು ಕೊಟ್ಟುವ ದೃಷ್ಟಾಂತ ಇಲ್ಲಿ ಹೊಂದುವುದಿಲ್ಲ ವೆಂದರೆ ವೇದಾಂತದಲ್ಲಿ ವಿಹಿತವಾದ ಜ್ಞಾನವು ಶಿವಾರಾಧನರೂಪವಾದುದು. ಆರಾಧಿತ ನಾದ ಶಿವನಿಂದ ಧರ್ಮಅರ್ಥ ಕಾಮಮೋಕ್ಷಗಳೆಂಬ ಪುರುಷಾರ್ಥಗಳು ಸಿದ್ಧಿಸುವು ವೆಂದು "ಫಲಮತ ಉಪಪತ್ತೇಃ" ಎಂಬಲ್ಲಿ ಹೇಳಿಯಾಗಿದೆ. ಆದ್ದರಿಂದ ಜ್ಯೋತಿ ಷ್ಟೋಮಾದಿಗಳನ್ನು ಒಮ್ಮೆ ಮಾಡುವಂತೆ ಉಪಾಸನವನ್ನೂ ಒಂದೇಸಲ ಮಾಡ ಬೇಕು. ಒಂದೇಸಾರಿ ಮಾಡಿದರೆ ಮಾತ್ರವೇ ಶಾಸ್ತ್ರವನ್ನು ಆಚರಿಸದಂತಾಯಿತೆಂದು ನ್ಯಾಯವೂ ಹೇಳುತ್ತದೆ. ಆದ್ದರಿಂದ ಪ್ರಯಾಜಾದಿಗಳಂತೆ ಉಪಾಸನವನ್ನೂ ಒಂದೇ ಬಾರಿಗೆ ಮಾಡಬೇಕು ಎಂದು ಪೂರ್ವಪಕ್ಷಿಯು ಹೇಳುತ್ತಾನೆ. ಅದಕ್ಕೆ ಸಿದ್ಧಾಂತ ವನ್ನು ಹೇಳಲಾಗುವುದು. ಮತ್ತೆಮತ್ತೆ ತಿಳಿಯುವುದರಿಂದಲೇ ಜ್ಞಾನವು ಶಾಸ್ತ್ರ ದಲ್ಲಿ ವಿಹಿತವೆನಿಸುತ್ತದೆ. ಹೀಗೆ ಶಾಸ್ತ್ರವೇ ಉಪದೇಶಿಸಿದೆ. "ಸಂದೇಹಬಂದಾಗ ಕಾರ್ಯಶೇಷದಿಂದ ಯಥಾರ್ಥವಿಷಯವನ್ನು ನಿರ್ಣಯಿಸಬೇಕು" ಎಂಬ ನಿಯಮ ದಿಂದಲೂ, ಸಾಮಾನ್ಯಪಶುವನ್ನು ಬೋಧಿಸುವ ಪಶುಪದವು ಛಾಗ (ಕುರಿ) ಎಂಬ ವಿಶೇಷಾರ್ಥವನ್ನು ಬೋಧಿಸುವಂತೆ ಬೇರೆ ಶ್ರುತಿಗಳಲ್ಲಿ ಯಾವ ಸಂದೇಹಕ್ಕೂ ಅವ ಕಾಶವಿಲ್ಲದಂತೆ ಯಾವಾಗಲೂ ಪರಶಿವಬ್ರಹ್ಮದ ಉಪಾಸನದಿಂದಲೇ ಪಾಶವು ತೊಲಗಿ ಶಿವತ್ವವು ದೊರಕುವುದೆಂದು ಹೇಳಲಾಗಿದೆ. "ಮಾನವನು ತನ್ನ ಸುತ್ತಲಿನ ಬಯ

ಲನ್ನೇ ಚರ್ಮದಂತೆ ಹೊದೆಯುವುದಾದರೆ ಆಗ ಅವನಿಗೆ ಶಿವನನ್ನು ತಿಳಿಯದಿದ್ದರೂ ದುಃಖವು ಕೊನೆಗೊಳುತ್ತದೆ." "ಮೊದಲಿಗೆ ಕೊನೆಯಲ್ಲಿ ಮಧ್ಯದಲ್ಲಿ ಎಲ್ಲೆಲ್ಲಿಯೂ ದುಃಖವೇ ಇರುವುದರಿಂದ ಎಲ್ಲವನ್ನೂ ತೊರೆದು ತತ್ತ್ವದಲ್ಲಿಯೇ ನಿಲ್ಲು" "ನಿದ್ರೆಗೂ ಲೋಕವಾರ್ತೆಗೂ ಶಬ್ದಾದಿವ್ಯವಹಾರಗಳಿಗೂ, ಆತ್ಮದ ಮರವೆಗೂ ಕೊಂಚವೂ ಅವಕಾಶಕೊಡದಂತೆ ಪರಶಿವನ ಚಿಂತನೆಯಲ್ಲಿಯೇ ಇರು" ಎಂದು ಸ್ಮೃತಿಗಳಲ್ಲೂ, "ಯಾವ ಪರಶಿವನ ವಿಶ್ವವ್ಯಾಪಕವಾದ ಲಿಂಗವನ್ನು ಇಂದ್ರಾದಿ ದೇವತೆಗಳು ನಿರಂತರವೂ ಅರ್ಚಿಸುತ್ತಾರೆಯೋ ಅಂತಹ ಪ್ರಭುವನ್ನು ನಾನು ವಂದಿಸುತ್ತೇನೆ" ಎಂದು ಜೈಮಿನಿವಿರಚಿತವಾದ ವೇದಪಾದಸ್ತವದಲ್ಲಿ ಹೇಳಿರುವುದರಿಂದಲೂ, ಬಾರಿಬಾರಿಗೂ ಉಪಾಸನಮಾಡಬೇಕೆಂದು ವಿಧಿ ಇರುವುದರಿಂದಲೂ "ಒಮ್ಮೆ ಶರಣಾಗತರಾದವರಿಗೂ ಬೇಗನೆ ಮುಕ್ತಿಯಾಗುತ್ತದೆ. ಒಮ್ಮೆ ನಾಮೋಚ್ಚಾರಣದಿಂದಲೇ ಎಲ್ಲವೂ ಸಿದ್ಧಿಸುತ್ತದೆ" ಎಂಬ ಸ್ಮೃತಿಗಳು ನಾಮಸ್ಮರಣದ ಮಹಿಮೆಯನ್ನು ಮಾತ್ರವೇ ತಿಳಿಸುತ್ತವೆ ಎಂದು ಹೇಳಬೇಕು. "ಮನಸ್ಸನ್ನು ಬ್ರಹ್ಮವೆಂದು ತಿಳಿ. "ಬ್ರಹ್ಮವನ್ನು ತಿಳಿದವನು ಕೀರ್ತಿಯಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ಹೊಳೆಯುತ್ತಾನೆ. ಅವನು ತಿಳಿದದ್ದನ್ನೇ ನಾನು ಹೇಳಿದ್ದೇನೆ. ಪೂಜ್ಯನೇ, ನನ್ನನ್ನು ಅನುಸರಿಸಿ ಸ್ತುತ್ಯರ್ಹವಾದ ಈ ದೇವತೆಯನ್ನು ಉಪಾಸನಮಾಡು" ಈ ಬಗೆಯ ಶ್ರುತಿಗಳಲ್ಲಿ ಮೊದಲಿಗೂ ಕೊನೆಗೂ ವೇದನ ಮತ್ತು ಉಪಾಸನಗಳನ್ನು ಬದಲಾಯಿಸಿ ಹೇಳರುವುದರಿಂದ ಉಪಾಸನರೂಪವಾದ ಜ್ಞಾನವೇ ಮೋಕ್ಷಸಾಧನವೆಂದು ತಿಳಿಯುತ್ತದೆ. ಉಪಾಸನವೆಂದರೆ ಸ್ಮೃತಿಯ ಪರಂಪರೆ. ಪ್ರಯಾಜಾದಿಗಳನ್ನು ದೃಷ್ಟಾಂತವಾಗಿ ಹೇಳಿದ್ದೂ ಸರಿಯಲ್ಲ. ಅವು ಅದೃಷ್ಟರೀತಿಯಲ್ಲಿಯೇ ಫಲವನ್ನು ಕೊಡುವುದರಿಂದ ಅವಕ್ಕೆ ಸರ್ವದಾ ಅನುಷ್ಠಾನವನ್ನು ಹೇಳಲಾಗಿದೆ, ಹಾಗೆಯೇ "ಬ್ರಹ್ಮವಿದಾಪ್ನೋತಿ" ಎಂಬ ವಾಕ್ಯಕ್ಕೆ ಸಮಾನವೆನಿಸಿದ್ದ "ತಂ ಪಶ್ಯತಿ ನಿಷ್ಕಲಂ ಧ್ಯಾಯಮಾನಃ" "ನಿಷ್ಕಲಶಿವನನ್ನು ಧ್ಯಾನಿಸುವವನು ಅವನನ್ನು ಹಾಗೆಯೇ ಕಾಣುತ್ತಾನೆ" ಎಂಬಲ್ಲಿ ಧ್ಯಾನವೆಂದರೆ ತಿಳಿಯುವಿಕೆ ಎಂದೇ ಅರ್ಥವಾಗುತ್ತದೆ. ಧ್ಯಾನವೆಂದರೆ ಪರಮೇಶ್ವರನ ಗುಣಗಳ ಚಿಂತನೆ. ಆದರೆ ಅದು ಸ್ಮರಣವಷ್ಟೇ ಅಲ್ಲದೆ ಸ್ಮರಣದ ಪರಂಪರೆ ಎನಿಸುತ್ತದೆ. ಉಪಾಸನವೂ ಇದೇ ಅರ್ಥವನ್ನು ಕೊಡುತ್ತದೆ. ಉಪಾಸನಪದವನ್ನು ಚಿತ್ತವೃತ್ತಿಯ ಏಕಾಗ್ರತೆಯ ನೈರಂತರ್ಯವೆಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ. ಹೀಗೆ ಅವೆರಡಕ್ಕೂ ಒಂದೇ ಅರ್ಥವಾಗುವುದರಿಂದ ಅನೇಕಬಾರಿ ಅನುಸರಿಸಿಕೊಂಡುಬಂದ ಸ್ಮೃತಿಪರಂಪರೆ ಎಂಬ ಉಪಾಸನವನ್ನೇ "ಬ್ರಹ್ಮ ವೇದ" ಎಂಬಲ್ಲಿ ವೇದನಪದದಿಂದ ಹೇಳಲಾಗಿದೆ.

ಅಸ್ಮಿನ್ನರ್ಥೇ ಹೇತ್ವಂತರಮಾಹ. ಲಿಂಗಾಚ್ಚ ||೨|| "ಊರ್ಧ್ವಾಯ ನಮಃ ಊರ್ಧ್ವಲಿಂಗಾಯ ನಮಃ" ಇತ್ಯಾರಭ್ಯ ಲಿಂಗಸ್ಯ ಸರ್ವಾತ್ಮಕತ್ವಂ ಪ್ರಸಾಧ್ಯ "ಏತತ್ಸೋಮಸ್ಯ ಸೂರ್ಯಸ್ಯ ಸರ್ವಲಿಂಗಗ್ಂ ಸ್ಥಾಪಯತಿ" ಇತ್ಯತ್ರ ಸ್ಥಾಪಯತಿವಾಕ್ಯೇನ ಯಥಾ ಸರ್ವಥಾ ಭೂಶರೀರ

ಸಾಧಾರಣ್ಯೇನ ಲಿಂಗಸ್ಥಾಪನವಿಧಾನದರ್ಶನಾತ್ ತಥಾ ಸರ್ವಥಾ ಬಾಹ್ಯಾಭ್ಯಂತರೇಷು ಜಪಪೂಜಾನಮಸ್ಕಾರಶ್ರವಣಮನನಾದಿಶಿವೋಪಾಸನಮಭಿಹಿತಂ. ತಥಾಚ ಸ್ಮೃತಿಃ "ಗಚ್ಛಂಸ್ತಿಷ್ಠನ್ ಸದಾ ವಿದ್ವಾನ್ ಶಿವಲಿಂಗಂ ಯಥಾ ಮುದಾ|ಬಾಹ್ಯಾಭ್ಯಂತರದೇಹೇಷು ಧೃತ್ವಾ ಭಕ್ತ್ಯಾ ಚಿದಾತ್ಮಕಂ ||", "ಲೋಕೇ ಪ್ರವರ್ತತೇ ಭಕ್ತ್ಯಾ ತದ್ವಚ್ಛ್ರವಣಕೀರ್ತನಾತ್ | ಶ್ರವಣಾತ್ಪೂಜನಾದ್ಧ್ಯಾನಾತ್ ಸಾಂಬಂ ಸಂಸಾರಭೇಷಜಂ | ಚಿಂತಯೇತ್ಸತತಂ ಧೀಮಾನ್ ನಾನ್ಯಾಥಾ ಮೋಕ್ಷಮಾಪ್ನುಯಾತ್ ||" ಇತಿ ದರ್ಶನಾತ್. ನಿರಂತರಮನನ್ಯಭಾವೇನ ಶ್ರವಣಮನನಾದಿಸಾಧನತ್ವೇನ ತದುಪಾಸನಂ ಕರ್ತವ್ಯಮಿತಿ ನಿಶ್ಚೀಯತೇ.

ಈ ಬಗ್ಗೆ ಬೇರೊಂದು ಕಾರಣವನ್ನು ತಿಳಿಸುತ್ತಾನೆ. "ಊರ್ಧ್ವಾಲಿಂಗಾಯ ನಮಃ" ಎಂದು ಮುಂತಾಗಿ ಲಿಂಗವನ್ನು ಸರ್ವಾತ್ಮಕವೆಂದು ಸಾಧಿಸಿ ಸರ್ವಲಿಂಗ ವಾಕ್ಯದಿಂದ ಭೂಮಿಯಲ್ಲಿ ಲಿಂಗವನ್ನು ಸ್ಥಾಪಿಸುವಂತೆ ಶರೀರದಲ್ಲಿ ಲಿಂಗಸ್ಥಾಪನವನ್ನು ವಿಧಿಸಿರುವುದರಿಂದ ಯಾವಾಗಲೂ ದೇಹದ ಒಳಗೂ ಹೊರಗೂ ಜಪ, ಪೂಜೆ, ನಮಸ್ಕಾರ ಶ್ರವಣ ಮನನ ಮೊದಲಾದ ಶಿವೋಪಾಸನವನ್ನು ಹೇಳಲಾಗಿದೆ. "ತಿರುಗಾಡುವಾಗಲೂ ನಿಂತಾಗಲೂ ಯಾವಾಗಲೂ ಚಿದಾತ್ಮಕವಾದ ಶಿವಲಿಂಗವನ್ನು ದೇಹದ ಒಳಗೂ ಹೊರಗೂ ಧರಿಸಿ ಭಕ್ತಿಯಿಂದ ಅರ್ಚಿಸಬೇಕು. ಲೋಕದ ಜನರು ಭವರೋಗವೈದ್ಯನಾದ ಪರಶಿವನನ್ನು ಕೇಳಿ ಕೊಂಡಾಡಿ ಪೂಜಿಸಿ ಧ್ಯಾನಿಸುತ್ತಲೇ ಭಕ್ತಿಯಲ್ಲಿ ತೊಡಗುತ್ತಾರೆ. ಬುದ್ಧಿವಂತನು ಯಾವಾಗಲೂ ಹೀಗೆ ಚಿಂತಿಸುವುದರಿಂದಲೇ ಮೋಕ್ಷವನ್ನು ಹೊಂದುತ್ತಾನೆ" ಎಂದು ಸ್ಮೃತಿಯಲ್ಲಿ ಹೇಳಿದೆ. ಆದ್ದರಿಂದ ಶ್ರವಣಮನನಗಳಿಂದ ದೊರಕುವ ಶಿವೋಪಾಸನವನ್ನು ನಿರಂತರವೂ, ಅನನ್ಯಭಾವದಿಂದ ಆಚರಿಸುತ್ತಿರಬೇಕೆಂದು ನಿಶ್ಚಯಿಸಲಾಗಿದೆ.

ನನ್ವಸಕೃತ್ ಶಿವೋಪಾಸನಂ ಮುಮುಕ್ಷೂಣಾಮಸ್ತು. ತಥಾಪಿ ಕೇನ ಮಾರ್ಗೇಣ ತದುಪಾಸನಂ ಕರ್ತವ್ಯಂ ತತ್ರ ಭೇದಭಾವೇನೋತಾಭೇದೇನ ವೇತ್ಯಾಶಂಕಾಯಾಮಧಿಕರಣಾಂತರೇಣ ದರ್ಶಯತಿ. ಆತ್ಮಾಧಿಕರಣಂ || ೨ || ಆತ್ಮೇತಿ ತೂಪಗಚ್ಛಂತಿ ಗ್ರಾಹಯಂತಿ ಚ || ೩ || ಆತ್ಮಾ ಜೀವಃ ನಿರಂತರಾನುಸಂಧಾನೇನ ಪರಶಿವಬ್ರಹ್ಮಸಾಕ್ಷಾತ್ಕಾರಂ ತತ್ಪ್ರಾಪ್ತಿಂ ಚ ಲಭತ ಇತಿ. ಮುಮುಕ್ಷವೋ ಭಕ್ತಾಃ ವೇದಾಂತಾದಿಭಿರ್ಜ್ಞಾತ್ವಾ ದಹರಶಾಂಡಿಲ್ಯಾದ್ಯುಪಾಸನೇನ ಪರಮಾತ್ಮಾನಂ ಗ್ರಾಹಯಂತಿ ಜಾನಂತಿ, ಉಪಗಚ್ಛಂತಿ ಪ್ರಾಪ್ನುವಂತಿ ಚೇತಿ ಸೂತ್ರಾರ್ಥಃ. ತುಶಬ್ದೋऽತ್ರ ನಿಶ್ಚಯಾರ್ಥಃ. "ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ। ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಂ ಪರಮಂ ಸಾಮ್ಯಮುಪೈತಿ ||", "ಯಥಾ ನದ್ಯಃ

ಸ್ಯಂದಮಾನಾಸ್ಸಮುದ್ರೇ ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ।ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ॥" ಇತಿ ಮುಂಡಕೇ ಬ್ರಹ್ಮೋಪಾಸಕಾನಾಂ ಬ್ರಹ್ಮಸಾಕ್ಷಾತ್ಕಾರತ್ವಂ ಬ್ರಹ್ಮ ಪ್ರಾಪ್ತಿತ್ವಂ ಚ ದರ್ಶಿತಂ. "ಹೃತ್ಪುಂಡರೀಕಂ ವಿರಜಂ ವಿಶುದ್ಧಂ" ಇತ್ಯಾರಭ್ಯ "ಉಮಾಸಹಾಯಂ ಪರಮೇಶ್ವರಂ ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ" ಇತ್ಯಂತೇನ ಕೈವಲ್ಯೇ ದಹರೋಪಾಸಕಾನಾಂ ಮುಮುಕ್ಷೂಣಾಂ ಶಿವತತ್ತ್ವಪ್ರಾಪ್ತಿಃ ಶ್ರೂಯತೇ. ಉಪಾಸನಾನಿ ತ್ರಿವಿಧಾನಿ, ಅಹಂಗ್ರಹೋಪಾಸನಾನಿ ಪ್ರತೀಕೋಪಾಸನಾನಿ ಅಂಗಾವಬದ್ಧೋಪಾಸನಾನಿ ಚೇತಿ. ತತ್ರಾಹಂಗ್ರಹೋಪಾಸನಾನಿ ದಹರಶಾಂಡಿಲ್ಯವೈಶ್ವಾನರೋಪಕೋಸಲವಿದ್ಯಾದೀನಿ. ತಾಸು ಕಾಸುಚಿದ್ವಿದ್ಯಾಸು "ವಾಚಂ ಬ್ರಹ್ಮೇತ್ಯುಪಾಸೀತ" ಇತಿವತ್ ಚೇತನಜೀವಾತ್ಮಕತ್ವೇನ ಪರಮಾತ್ಮೋಪಾಸನಮುಪದಿಷ್ಟಂ. ಕಾಸುಚಿದ್ವಿದ್ಯಾಸು "ಅಧಿಕಂ ತು ಭೇದ ನಿರ್ದೇಶಾತ್", "ವಿಶ್ವಾಧಿಕೋ ರುದ್ರಃ" ಇತ್ಯಾದಿಶಾಸ್ತ್ರಾನುಸರಣೇನ ಜೀವಸ್ಯ ಸ್ವಾಭಿನ್ನತಯಾ ಬ್ರಹ್ಮೋಪಾಸನಂ ದರ್ಶಿತಂ. ತದೇವಾಹಂಗ್ರಹೋಪಾಸನಂ. "ಕಂ ಬ್ರಹ್ಮ ಖಂ ಬ್ರಹ್ಮ" ಇತ್ಯಾದಿಶ್ರುತಿಷು ತಾಮ್ರಮೃಣ್ಮಯಶಿಲಾದಿವಿಗ್ರಹೇಷು ಶಿವಕೇಶವಾದಿವತ್ "ನಾಮ ಬ್ರಹ್ಮೇತ್ಯುಪಾಸೀತ" ಇತ್ಯಾದಿನಾ ನಾಮಾದಿಜಡಪದಾರ್ಥೇಷು ಬ್ರಹ್ಮದೃಷ್ಟ್ಯಾ ಬ್ರಹ್ಮೋಪಾಸನಂ ಪ್ರತೀಕೋಪಾಸನಮಿತ್ಯುಚ್ಯತೇ. ಉದ್ಗೀಥಾದಿಪದಾರ್ಥೇಷು ಕರ್ಮಾಂಗಯಜ್ಞಾದಿಷು ಬ್ರಹ್ಮದೃಷ್ಟಿರಂಗಾವಬದ್ಧೋಪಾಸನಮಿತ್ಯುಚ್ಯತೇ. ತಸ್ಮಾದತ್ರ ಉಪಾಸಕಸ್ಯ ಜೀವಸ್ಯ ಚೇತನರೂಪಸ್ಯ ಸ್ವಾತ್ಮಾನಮೇವ ಶಿವತ್ವೇನೋಪಾಸನಂ ಉತ ಸ್ವಭಿನ್ನಜಡಪದಾರ್ಥೇಷು ಬ್ರಹ್ಮದೃಷ್ಟ್ಯಾ ಬ್ರಹ್ಮೋಪಾಸನಂ ಉತ ದಹರಾದಿಷು ಕೇವಲಶಿವೋಪಾಸನಂ ಕರ್ತವ್ಯಂ ವೇತಿ ಸಂದಿಹ್ಯತೇ. "ಅಯಮಾತ್ಮಾ ಬ್ರಹ್ಮ", "ಅಹಂ ಬ್ರಹ್ಮಾಸ್ಮಿ" ಇತ್ಯಾದಿಷು ಜೀವಸ್ಯೈವ ಬ್ರಹ್ಮತ್ವವ್ಯವಸ್ಥಾಪನಾತ್ ಸ್ವಸ್ಯ ಸ್ವಾತ್ಮಾನಮೇವ ಬ್ರಹ್ಮೋಪಾಸನಂ ಅನಿವಾರ್ಯಂ. "ವಾಚಂ ಬ್ರಹ್ಮೇತ್ಯುಪಾಸೀತ", "ನಾಮ ಬ್ರಹ್ಮೇತ್ಯುಪಾಸೀತ", "ಮನೋ ಬ್ರಹ್ಮೇತ್ಯುಪಾಸೀತ", "ಪ್ರಾಣೋ ಬ್ರಹ್ಮೇತ್ಯುಪಾಸೀತ" ಇತ್ಯಾದಿಷು ವಾಗಾದ್ಯಚೇತನಪದಾರ್ಥೇಷು ಬ್ರಹ್ಮತ್ವೋಪದೇಶಾತ್ ತದಾತ್ಮಕತ್ವೇನ ಬ್ರಹ್ಮೋಪಾಸನಮುಪ್ಯುಚಿತಂ. ಅತಶ್ಚೇತನಾಚೇತನ ಪದಾರ್ಥವಿಲಕ್ಷಣತ್ವೇನ ದಹರಾದಿಸ್ಥಲೇಷು ಮುಮುಕ್ಷೂಣಾಂ ಶಿವೋಪಾಸನಮಕರ್ತವ್ಯಮೇವೇತಿ ಪ್ರಾಪ್ತೇಽಭಿಧೀಯತೇ. "ದಹರಂ ವಿಪಾಪಂ" ಇತ್ಯಾರಭ್ಯ "ತಸ್ಮಿನ್ಯದಂತಸ್ತದುಪಾಸಿತವ್ಯಂ" ಇತಿ ದಹ

ರಾಂತರತ್ವೇನ ಪರಮಾತ್ಮೋಪಾಸನಮಭಿಧಾಯ “ಸಃ ಕಃ” ಇತ್ಯಾಕಾಂಕ್ಷಾಯಾಂ “ಯೋ ವೇದಾದೌ ಸ್ವರಃ ಪ್ರೋಕ್ತಃ ವೇದಾಂತೇ ಚ ಪ್ರತಿಷ್ಠಿತಃ । ತಸ್ಯ ಪ್ರಕೃತಿಲೀನಸ್ಯ ಯಃ ಪರಸ್ಸ ಮಹೇಶ್ವರಃ ॥” ಇತ್ಯಾದಿನಾ ಶಿವತತ್ತ್ವೋಪಾಸನಂ ತೈತ್ತಿರೀಯೇ ಮುಮುಕ್ಷೂಣಾಂ ಚೇತನಾಚೇತನವಿಲಕ್ಷಣತ್ವೇನ ಬಹುಧಾ ಪ್ರಪಂಚಿತಂ. ಕೈವಲ್ಯೇ “ಹೃತ್ಪುಂಡರೀಕಂ ವಿರಜಂ” ಇತ್ಯಾರಭ್ಯ “ಉಮಾಸಹಾಯಂ ಪರಮೇಶ್ವರಂ ಧ್ಯಾತ್ವಾ” ಇತ್ಯಾದಿನಾ ಚಿತ್ಪ್ರಕೃತ್ಯಾತ್ಮಕಲೀಲಾಮಂಗಲವಿಗ್ರಹೋಪಾಸನಂ ದಹರಪುಂಡರೀಕೇ ಮುಮುಕ್ಷೂಣಾಮುಪದಿಷ್ಟಂ. “ಆಕಾಶಶರೀರಂ ಬ್ರಹ್ಮ । ಸತ್ಯಾತ್ಮ ಪ್ರಾಣಾರಾಮಂ ಮನಆನಂದಂ । ಶಾಂತಿಸಮೃದ್ಧಮಮೃತಂ ॥” ಇತ್ಯಾದಿನಾ ತಥಾ ದರ್ಶಿತಂ. ತಸ್ಮಾತ್ ಚೇತನಾಚೇತನಾವಿಲಕ್ಷಣತ್ವೇನ ಪರಶಿವೋಪಾಸನಂ ಮುಮುಕ್ಷೂಣಾಂ ಕರ್ತವ್ಯಮಿತಿ ನಿಶ್ಚೀಯತೇ. “ಸರ್ವಂ ಖಲ್ವಿದಂ ಬ್ರಹ್ಮ”, “ಸರ್ವೋ ವೈ ರುದ್ರಃ” ಇತ್ಯಾದಿಷು ಶಿವಸ್ಯ ಪರಬ್ರಹ್ಮಣಃ ಸರ್ವಾತ್ಮಕತ್ವಂ. “ಯ ಆತ್ಮನಿ ತಿಷ್ಠನ್ನಾತ್ಮನೋಽಂತರಃ ಯಮಾತ್ಮಾ ನ ವೇದ ಯಸ್ಯಾತ್ಮಾ ಶರೀರಂ ಯ ಆತ್ಮಾನಮಂತರೋ ಯಮಯತಿ ಸ ತ ಆತ್ಮಾಂತರ್ಯಾಮ್ಯಮೃತಃ” ಇತಿ. “ಯೋ ರುದ್ರೋ ಅಗ್ನೌ ಯೋ ಅಪ್ಸು ಯ ಓಷಧೀಷು ಯೋ ರುದ್ರೋ ವಿಶ್ವಾ ಭುವನಾ ವಿವೇಶ” ಇತ್ಯಾದಿಷು ತಸ್ಯ ಸರ್ವಾಂತರ್ಯಾಮಿತ್ವನಿರ್ದೇಶಾತ್ ಚೇತನಾಚೇತನಾದಿಷು ಬ್ರಹ್ಮೋಪಾಸನಂ ನ ವಿರುಧ್ಯತೇ. ಕಿಂಚ “ಅಧಿಕಂ ತು ಭೇದನಿರ್ದೇಶಾತ್”, “ಭೇದವ್ಯಪದೇಶಾಚ್ಚಾನ್ಯಃ”, “ವಿಷಾಮೀಶೇ ಪಶುಪತಿಃ ಪಶೂನಾಂ”, “ವಿಶ್ವಾಧಿಕೋ ರುದ್ರೋ ಮಹರ್ಷಿಃ” ಇತ್ಯಾದಿಪ್ರಾತ್ಯಕ್ಷಿಕಶಾಸ್ತ್ರದರ್ಶನಾತ್ ಶಿವಾಖ್ಯಂ ಪರಬ್ರಹ್ಮ ಜೀವಾದಧಿಕಮೇವ. ತಥಾಪಿ “ತತ್ತ್ವಮಸಿ” ಇತ್ಯಾದಿಭೇದಾಭೇದವಿಧಾಯಕವಾಕ್ಯೇಷು ಉಪಾಸ್ಯೋಪಾಸಕಾನಾಂ ಚರಮಾವಸ್ಥಾಯಾಮಭೇದವ್ಯಪದೇಶಾತ್ “ಅಹಂ ಬ್ರಹ್ಮಾಸ್ಮಿ” ಇತ್ಯಾದಿಮಹಾವಾಕ್ಯೇನ ಶಿವೋಽಹಮಿತ್ಯುಪಾಸನಮವಿರೋಧಂ. “ಧ್ಯಾನನಿರ್ಮಥನಾಭ್ಯಾಸಾತ್ಪಾಶಂ ದಹತಿ ಪಂಡಿತಃ” ಇತ್ಯಾದೌ ನಿರತಿಶಯಪರಮಾನಂದಚಿದಚಿತ್ಪ್ರಪಂಚವಿಲಕ್ಷಣ ಶಿವತತ್ತ್ವಪ್ರಾಪ್ತಿರೇವ ಮೋಕ್ಷ ಇತಿ ಸರ್ವವೇದಾಂತಸಿದ್ಧಾಂತೋಪದೇಶೇಽಪಿ ತದುಪಾಸನಾರೂಪಧ್ಯಾನಾಭಾವೇನ ಪಶುತ್ವನಿವೃತ್ತಿಃ ಪಾಶವಿಚ್ಛೇದಶ್ಚ ನ ಸಂಭವತಿ. ತದಸಂಭವೇ ಶಿವತತ್ತ್ವಪ್ರಾಪ್ತ್ಯಯೋಗಾತ್ ನಿರಂತರಮನವಚ್ಛಿನ್ನಶಿವೋಪಾಸನಂ ಕರ್ತವ್ಯಂ. “ಧ್ಯಾಯೀತೇಶಾನಂ ಪ್ರಧ್ಯಾಯಿತವ್ಯಂ” ಇತ್ಯಾರಭ್ಯ “ಶಂಭುರಾಕಾಶಮಧ್ಯೇ ಶಿವ ಏಕೋ

ಧ್ಯೇಯಶ್ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ" ಇತ್ಯಂತೇನ ಮುಮುಕ್ಷೂಣಾಂ ಅನ್ಯದೇವತೋಪಾಸನನಿಷೇಧಾವಗಮಾತ್ ಚೇತನಾತ್ಮಕ ಜೀವೇ ಜಡಪ್ರಪಂಚೇ ವಾ ಸಂತತಶಿವಭಾವನಾ ಶಿವತತ್ತ್ವಪ್ರಾಪ್ತಿಹೇತುರಿತಿ ನಿಶ್ಚೀಯತೇ. "ತದನನ್ಯತ್ವಮಾರಂಭಣಶಬ್ದಾದಿಭ್ಯಃ" ಇತ್ಯತ್ರ ಶಿವೋಪಾದಾನಪ್ರಪಂಚಸ್ಯ ಶಿವಾತ್ಮಕತ್ವಂ ಅಸಂಕುಚಿತತ್ವೇನ ನಿರ್ದಿಷ್ಟಂ. ಅತ್ರ ಕೇಚಿತ್ "ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ" ಇತ್ಯಾದಿಶ್ರುತಿಶತೇಷು ಪರಬ್ರಹ್ಮಣಃ ಶಿವಸ್ಯಾತ್ಮಶಬ್ದಪ್ರಯೋಗದರ್ಶನಾತ್ ಆತ್ಮಾ ತು ಶಿವ ಏವ ಮುಮುಕ್ಷೂಣಾಂ ದಹರಾದಿಸರ್ವಬ್ರಹ್ಮವಿದ್ಯಾಸು ನಿರಂತರಮುಪಾಸ್ಯಃ ಇತ್ಯುಪಮನ್ಯುದಧೀಚಿಗೌತಮಪ್ರಮುಖಾಃ ಸ್ವಹೃದಯಪುಂಡರೀಕೇ ಶಿವಂ ಪರಮಾತ್ಮಾನಂ ಶ್ರವಣಮನನಕೀರ್ತನಸ್ಮರಣಾದ್ಯುಪಾಸನೇನ ಗ್ರಾಹಯಂತಿ ಜಾನಂತಿ ಸಾಕ್ಷಾತ್ಕುರ್ವಂತಿ ಉಪಗಚ್ಛಂತಿ ಪ್ರಾಪ್ನುವಂತಿ ಇತಿ ವದಂತಿ. ಚಕಾರಸ್ಸಮುಚ್ಚಯಾರ್ಥಃ. ತುಶಬ್ದೇನ ದೇವತಾಂತರಧ್ಯಾನನಿರಾಸಾ ನಿಶ್ಚೀಯತ ಇತಿ ಗಮ್ಯತೇ. ತದಪಿ ಯುಕ್ತಮೇವ.

ಮುಮುಕ್ಷುಗಳು ಬಾರಿಬಾರಿಗೂ ಶಿವನನ್ನು ಉಪಾಸನಮಾಡಲಿ. ಆದರೂ ಯಾವ ಮಾರ್ಗದಿಂದ ಅವನನ್ನು ಉಪಾಸನಮಾಡಬೇಕು. ಭೇದಭಾವದಿಂದಲೋ ಅಥವಾ ಅನನ್ಯಭಾವದಿಂದಲೋ? ಎಂದು ಆಶಂಕಿಸಿ ಸಮಾಧಾನಮಾಡುತ್ತಾನೆ. ಜೀವನು ಪರಶಿವನ ನಿರಂತರಾನುಸಂಧಾನದಿಂದ ಅವನನ್ನು ಕಂಡು ಅವನಲ್ಲಿ ಬೆರೆಯುತ್ತಾನೆ. ಆದ್ದರಿಂದ ಮುಮುಕ್ಷುಗಳೆಲ್ಲರೂ ದಹಾರಾದ್ಯುಪಾಸನದಿಂದ ಪರಮಾತ್ಮನನ್ನು ತಿಳಿಯುತ್ತಾರೆ ಮತ್ತು ಅವನಲ್ಲಿಯೇ ಸೇರುತ್ತಾರೆ ಎಂದು ಸೂತ್ರದ ಅರ್ಥ. ಸೂತ್ರದಲ್ಲಿ ತು ಶಬ್ದವು ನಿಶ್ಚಯವನ್ನು ತಿಳಿಸುತ್ತದೆ. "ಜೀವನು ಸರ್ವನಿಯಾಮಕನೂ ನಿತ್ಯಸುಂದರನೂ ಆದ ಶಿವನನ್ನು ಯಾವಾಗ ಕಾಣುವನೋ ಆಗ ಶಿವನಜ್ಞಾನದಿಂದಲೇ ಪೂರ್ಣವಾಗಿ ಪಾಪಗಳನ್ನು ಕಳೆದುಕೊಂಡು ನಿರಂಜನಸ್ಥಿತಿಯನ್ನು ಹೊಂದುತ್ತಾನೆ" "ನದಿಗಳು ಹರಿಯುತ್ತ ಸಮುದ್ರದಲ್ಲಿ ಸೇರಿ ನಾಮರೂಪಗಳನ್ನು ಕಳೆದುಕೊಳ್ಳುವಂತೆ ಶಿವಯೋಗಿಯು ನಾಮರೂಪಗಳಿಂದ ಬಿಡುಗಡೆಹೊಂದಿ ಪರಶಿವಜ್ಯೋತಿಯಲ್ಲಿ ಬೆರೆಯುತ್ತಾನೆ" ಎಂದು ಮುಂಡಕದಲ್ಲಿ ಬ್ರಹ್ಮೋಪಾಸಕರಿಗೆ ಬ್ರಹ್ಮಸಾಕ್ಷಾತ್ಕಾರವನ್ನೂ ಬ್ರಹ್ಮಪ್ರಾಪ್ತಿಯನ್ನೂ ಹೇಳಲಾಗಿದೆ. "ಹೃದಯಕಮಲವನ್ನು ಪರಿಶುದ್ಧವೆಂದು ತಿಳಿಸಿ ಅದರಲ್ಲಿ ಉಮಾಶಕ್ತಿವಿಶಿಷ್ಟನಾದ ಶಿವನನ್ನು ಸಾಧಕನು ಧ್ಯಾನಿಸಿ ಸರ್ವಸಾಕ್ಷಿ ಎನಿಸಿದ ನಿಷ್ಕಲಪರಮಶಿವನಲ್ಲಿ ಸೇರುತ್ತಾನೆ" ಎಂದು ಕೈವಲ್ಯದಲ್ಲಿ ದಹರೋಪಾಸಕರಾದ ಮುಮುಕ್ಷುಗಳಿಗೆ ಶಿವತತ್ತ್ವಪ್ರಾಪ್ತಿಯನ್ನು ಹೇಳಲಾಗಿದೆ. ಅಹಂಗ್ರಹೋಪಾಸನ, ಪ್ರತೀಕೋಪಾಸನ, ಅಂಗಾವಬದ್ಧೋಪಾಸನವೆಂದು ಉಪಾಸನಗಳು ಮೂರು ಬಗೆಯಾಗಿವೆ. ಅವುಗಳಲ್ಲಿ ದಹರಶಾಂಡಿಲ್ಯ ಮೊದಲಾದವು ಅಹಂಗ್ರೋಪಾಸನಗಳು.

ಕೆಲವು ಬ್ರಹ್ಮವಿದ್ಯೆಗಳಲ್ಲಿ "ವಾಕ್ಕನ್ನು ಬ್ರಹ್ಮವೆಂದು ತಿಳಿಯಬೇಕು" ಎಂಬಂತೆ ಚೇತನನಾದ ಜೀವನನ್ನು ಪರಮಾತ್ಮನೆಂದು ಉಪಾಸನಮಾಡಬೇಕೆಂದು ಹೇಳಲಾಗಿದೆ. ಮತ್ತೆ ಕೆಲವು ವಿದ್ಯೆಗಳಲ್ಲಿ "ಅಧಿಕಂ ತು ಭೇದನಿರ್ದೇಶಾತ್," "ವಿಶ್ವಾಧಿಕೋ ರುದ್ರಃ" ಎಂಬ ಶ್ರುತಿಗಳ ಪ್ರಕಾರ ಜೀವನು ತನಗಿಂತ ಉತ್ಕೃಷ್ಟನಾದ ಶಿವನನ್ನೇ ತಾನೆಂದು ಭಾವಿಸಿ ಉಪಾಸನಮಾಡುವುದೇ ಅಹಂಗ್ರಹೋಪಾಸನವೆನಿಸುತ್ತದೆ. "ಸುಖವೇ ಬ್ರಹ್ಮ, ಆಕಾಶವೇ ಬ್ರಹ್ಮ" ಎಂಬ ಶ್ರುತಿಗಳಲ್ಲಿ ಹೇಳಿರುವ ತಾಮ್ರದ, ಮಣ್ಣಿನ ಮತ್ತು ಶಿಲೆಯ ವಿಗ್ರಹಗಳಲ್ಲಿ ಶಿವ ಕೇಶವ ಎಂದು ಭಾವಿಸುವಂತೆ "ಶಿವನಾಮವನ್ನೇ ಬ್ರಹ್ಮವೆಂದು ತಿಳಿ" ಎಂಬಲ್ಲಿ ನಾಮವೆಂಬ ಜಡವಸ್ತುವಿನಲ್ಲಿಯೇ ಬ್ರಹ್ಮದೃಷ್ಟಿಯಿಂದ ಉಪಾಸನಮಾಡುವುದೇ ಪ್ರತೀಕೋಪಾಸನವೆನಿಸುಸುತ್ತದೆ. ಒಂದು ಪ್ರಧಾನಕರ್ಮಕ್ಕೆ ಅಂಗವೆನಿಸಿದ ಉದ್ಗೀಥವೆಂಬ ಓಂಕಾರದ ಧ್ಯಾನವನ್ನು ಬ್ರಹ್ಮವೆಂದು ಭಾವಿಸುವುದೇ ಅಂಗಾವಬದ್ಧೋಪಾಸನವೆನಿಸುತ್ತದೆ. ಆದ್ದರಿಂದ ಉಪಾಸಕಜೀವನು ಚೇತನನೆನಿಸಿದ ತನ್ನನ್ನು ಶಿವಭಾವದಿಂದ ಉಪಾಸನಮಾಡಬೇಕೇ ಅಥವಾ ತನಗಿಂತ ಭಿನ್ನವಾದ ಜಡವಸ್ತುಗಳಲ್ಲಿ ಬ್ರಹ್ಮದೃಷ್ಟಿಯಿಂದ ಉಪಾಸನಮಾಡಬೇಕೆ? ಅಥವಾ ದಹರಾದಿವಿದ್ಯೆಗಳಿಂದ ನಿಷ್ಕಲಪರಶಿವನನ್ನು ಉಪಾಸನಮಾಡಬೇಕೆ? ಎಂದು ಸಂದೇಹವುಂಟಾಗುತ್ತದೆ. "ಈ ಆತ್ಮನೇ ಬ್ರಹ್ಮವು" ಎಂಬಲ್ಲಿ ಜೀವನೇ ಬ್ರಹ್ಮವೆಂದು ವ್ಯವಸ್ಥೆಯಾಗಿರುವುದರಿಂದ ತಾನು ತನ್ನನ್ನು ಬ್ರಹ್ಮನೆಂದು ಉಪಾಸನಮಾಡಬೇಕೆಂಬುದೇ ಇಲ್ಲಿ ಸ್ಪಷ್ಟವಾಗುತ್ತದೆ. "ವಾಕ್ಕನ್ನು ಬ್ರಹ್ಮವೆಂದು ಉಪಾಸನಮಾಡು. ಹಾಗೆಯೇ ಮನಸ್ಸು ಮತ್ತು ಪ್ರಾಣಗಳನ್ನು ಬ್ರಹ್ಮವೆಂದು ಉಪಾಸನಮಾಡು" ಎಂಬ ವಾಕ್ಯಗಳಲ್ಲಿ ಜಡವಸ್ತುಗಳನ್ನೂ ಬ್ರಹ್ಮವೆಂದು ಹೇಳಿರುವುದರಿಂದ ಅವೆಲ್ಲವನ್ನೂ ಬ್ರಹ್ಮಾತ್ಮಕವೆಂದು ತಿಳಿಯುವುದೇ ಯುಕ್ತವಾಗಿದೆ. ಈ ರೀತಿಯಲ್ಲಿ ಚೇತನರಿಗೂ ಅಚೇತನವಸ್ತುಗಳಿಗೂ ವಿಲಕ್ಷಣವಾದ್ದರಿಂದ ದಹರಾದಿವಿದ್ಯೆಗಳಿಂದ ಮುಮುಕ್ಷುಗಳು ಪರಶಿವನನ್ನು ಉಪಾಸನಮಾಡುವಂತಿಲ್ಲವೆಂದು ಆಕ್ಷೇಪಬರುತ್ತದೆ. ಅದಕ್ಕೆ ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. "ಪರಮಾತ್ಮನ ವಾಸಗೃಹವೆನಿಸಿದ ದಹರಾಕಾಶದಲ್ಲಿ ಇರುವ ಪರಂಜ್ಯೋತಿಯನ್ನು ಉಪಾಸನಮಾಡಬೇಕು" ಎಂಬಲ್ಲಿ ದಹರಾಕಾಶದಲ್ಲಿ ಪರಮಾತ್ಮನ ಉಪಾಸನವನ್ನು ತಿಳಿಸಿ, ಅವನು ಯಾರು? ಎಂದು ಆಕಾಂಕ್ಷೆ ಬಂದು "ವೇದಗಳೆಲ್ಲಕ್ಕೂ ಮೊದಲು ಉಚ್ಚರಿಸುವ ಪ್ರಣವವೇ ವೇದಾಂತದಲ್ಲಿಯೂ ವರ್ಣಿತವಾಗಿದೆ. ಮೂಲಪ್ರಕೃತಿಯಲ್ಲಿ ನೆಲಸಿರುವ ಈ ಪ್ರಣವಕ್ಕಿಂತ ಆಚೆಯವನೇ ಮಹೇಶ್ವರನು" ಎಂಬಲ್ಲಿ ತೈತ್ತಿರೀಯವು ಮುಮುಕ್ಷುಗಳಿಗೆ ಶಿವನ ಉಪಾಸನವನ್ನು ಚೇತನಅಚೇತನವೆರಡಕ್ಕೂ ವಿಲಕ್ಷಣವೆಂದು ವಿಸ್ತಾರವಾಗಿ ನಿರೂಪಿಸಿದೆ. ಕೈವಲ್ಯದಲ್ಲಿ ದಹರವೆಂಬ ಹೃದಯ ಕಮಲವನ್ನು ಶುದ್ಧವೆಂದು ತಿಳಿಸಿ ಅಲ್ಲಿ ಚಿದ್ರೂಪನಾದ ಶಿವನ ದಿವ್ಯಮಂಗಳವಿಗ್ರಹದ ಆರಾಧನವನ್ನು ಹೇಳಿದ್ದರಿಂದ ಮುಮುಕ್ಷುಗಳಿಗೆ ದಹರೋಪಾಸನವೇ ವಿಹಿತವಾ

ಗಿದೆ. "ಬ್ರಹ್ಮಕ್ಕೆ ಆಕಾಶವೇ ಶರೀರ, ಸತ್ಯವೇ ಆತ್ಮ, ಮನಪ್ರಾಣಗಳೇ ಆನಂದ ಸ್ಥಾನಗಳು. ಬ್ರಹ್ಮವು ಶಾಂತಿಯಿಂದ ಸಮೃದ್ಧವೂ ಆನಂದವೂ ಆಗಿದೆ" ಎಂಬಲ್ಲೂ ಹಾಗೆಯೇ ಹೇಳಿದೆ. ಅದ್ದರಿಂದ ಪರಶಿವನ ಉಪಾಸನವನ್ನು ಚಿದಚಿದ್ವಿಲಕ್ಷಣ ವೆಂದೇ ಮುಮುಕ್ಷುಗಳು ಭಾವಿಸಬೇಕೆಂದು ನಿಶ್ಚಯಿಸಲಾಗಿದೆ. "ಯಾವನು ಆತ್ಮ ನೊಳಗಿದ್ದರೂ ಆತ್ಮನಿಗಿಂತ ಹೊರಗೆನಿಸಿ, ಆತ್ಮನ ತಿಳಿವಿಗೂ ಸಿಲುಕದೆಇರುವನೋ, ಯಾವನಿಗೆ ಆತ್ಮವೇ ಶರೀರವಾಗಿದೆಯೋ ಯಾವನು ಆತ್ಮನನ್ನು ಒಳಗೇ ನಿಯಮನ ಮಾಡುತ್ತಾನೆಯೋ ಆವನೇ ನಿನ್ನ ನಿಯಮಕನಾದ ಆತ್ಮನು ಮತ್ತು ಅಮೃತಸ್ವರೂ ಪನು" "ಬೆಂಕಿ ನೀರು ಪೃಥಿವಿಗಳಲ್ಲಿರುವ ರುದ್ರನೇ ಸಮಸ್ತ ಪ್ರಪಂಚವನ್ನೂ ವ್ಯಾಪಿ ಸಿರುವನು" ಎಂಬಲ್ಲಿ ಶಿವನೇ ಸರ್ವಾಂತರ್ಯಾಮಿ ಎಂದು ಹೇಳಿರುವುದರಿಂದ ಚೇತ ನಾಚೇತನಗಳೆಲ್ಲದರಲ್ಲಿಯೂ ಬ್ರಹ್ಮಭಾವನೆಯಿಂದ ಉಪಾಸನಮಾಡುವುದರಲ್ಲಿ ವಿರೋಧವಿಲ್ಲ. ಆದರೂ "ಅಧಿಕಂ ತು ಭೇದನಿರ್ದೇಶಾತ್" "ಭೇದವ್ಯಪದೇಶಾ ಚ್ಚಾನ್ಯಃ" "ಪಶುಜೀವರೆಲ್ಲರಿಗೂ ಈಶನು" ಎಂದು ಮುಂತಾಗಿ ಶ್ರುತಿಯಲ್ಲಿ ಪ್ರತ್ಯಕ್ಷ ವಾಗಿ ಕಂಡುಬಂದಿರುವುದರಿಂದ ಪರಶಿವಬ್ರಹ್ಮವು ಜೀವನಿಗಿಂತ ಬೇರೆಯೇ ಆಗಿದ್ದರೂ "ತತ್ತ್ವಮಸಿ" ಮುಂತಾದ ವಾಕ್ಯಗಳಲ್ಲಿ ಉಪಾಸ್ಯೋಪಾಸಕರಿಗೆ ಕೊನೆಯ ಅವಸ್ಥೆ ಯಲ್ಲಿ ಅಭೇದವನ್ನು ಹೇಳಿರುವುದರಿಂದ" "ನಾನು ಬ್ರಹ್ಮನಿದ್ದೇನೆ" ಎಂಬ ವಾಕ್ಯ ದಿಂದ ತನ್ನನ್ನು ಶಿವನೆಂದು ಭಾವಿಸಿ ಉಪಾಸನಮಾಡುವುದರಲ್ಲಿ ತಪ್ಪೇನಿಲ್ಲ. "ಪಂಡಿತನು ಧ್ಯಾನಾಗ್ನಿಯಿಂದ ಪಾಶವನ್ನುಸುಡುತ್ತಾನೆ" ಎಂಬಲ್ಲಿ ನಿರತಿಶಯ ಪರಮಾನಂದಮಯವೂ ಚಿದಚಿದ್ವಿಲಕ್ಷಣವೂ ಆದ ಶಿವಭಾವವನ್ನು ಹೊಂದುವುದೇ ಮೋಕ್ಷವೆಂದು ಎಲ್ಲಾ ವೇದಾಂತಗಳೂ ಉಪದೇಶಿಸಿವೆ. ಆದರೂ ಶಿವನ ಉಪಾಸನ ವೆಂಬ ಧ್ಯಾನವಿಲ್ಲದಿದ್ದರೆ ಪಾಶವಿಚ್ಛೇದ ಸಂಭವಿಸುವಂತಿಲ್ಲ. ಅದಿಲ್ಲದಮೇಲೆ ಶಿವಭಾ ವವೂ ದೊರಕುವುದಿಲ್ಲ. ಆದ್ದರಿಂದ ನಿರಂತರವೂ ಶಿವನನ್ನು ಉಪಾಸನಮಾಡಬೇಕು. "ಈಶ್ವರನನ್ನು ಧ್ಯಾನಿಸಬೇಕು" ಎಂದು ಆರಂಭಿಸಿ "ಚಿದಾಕಾಶದ ಮಧ್ಯದಲ್ಲಿ ಎಲ್ಲ ವನ್ನೂ ತೊರೆದು ಶಿವಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು" ಎಂಬಲ್ಲಿ ಮುಮುಕ್ಷುಗಳಿಗೆ ಬೇರೆ ದೇವತೆಗಳ ಉಪಾಸನವನ್ನು ನಿಷೇಧಿಸಲಾಗಿದೆ. ಅದ್ದರಿಂದ ಚೇತನೆನಿಸಿದ ಜೀವನಲ್ಲಿಯೂ ಜಡಪ್ರಪಂಚದಲ್ಲಿಯೂ ಯಾವಾಗಲೂ ಶಿವನೆಂದು ಭಾವಿಸುವುದೇ ಶಿವಭಾವವನ್ನು ದೊರಕಿಸಬಲ್ಲದೆಂದು ನಿಶ್ಚಯಿಸಲಾಗಿದೆ. "ತದನ ನ್ಯತ್ವಂ" ಎಂಬ ಸೂತ್ರವು ಶಿವನೇ ಉಪಾದಾನವೆನಿಸಿರುವ ಈ ಪ್ರಪಂಚವನ್ನು ಶಿವಾ ತ್ಮಕವೆಂದು ನಿಸ್ಸಂಕೋಚವಾಗಿ ತಿಳಿಸಿದೆ. "ಪ್ರಪಂಚಕ್ಕಾಶ್ರಯಸ್ಥಲವೂ ತ್ರಿಮೂರ್ತ್ಯ ತೀತನೂ ಆದ ಶಿವನೇ ಆತ್ಮನು" ಎಂದು ಅನೇಕ ಶ್ರುತಿಗಳು ಪರಶಿವಬ್ರಹ್ಮದಲ್ಲಿಯೇ ಆತ್ಮಶಬ್ದವನ್ನು ಪ್ರಯೋಗಿಸಿರುವುದರಿಂದ ಆತ್ಮನೆಂದರೆ ಶಿವನೇ ಇರುವನು. ಅವನೇ ಮುಮುಕ್ಷುಗಳಿಗೆ ಎಲ್ಲಾ ಬ್ರಹ್ಮವಿದ್ಯೆಗಳಲ್ಲಿಯೂ ನಿರಂತರವೂ ಉಪಾಸ್ಯನು. ಹೀಗೆ ಉಪಮನ್ಯು ದಧೀಚಿ ಗೌತಮ ಮೊದಲಾದವರು ತಮ್ಮ ಹೃದಯಕಮಲದಲ್ಲಿ ಪರ

ಶಿವನನ್ನೇ ಶ್ರವಣಮನನ ಕೀರ್ತನ ಸ್ಮರಣ ಮೊದಲಾದ ಉಪಾಸನದಿಂದ ತಿಳಿಯು ತ್ತಾರೆ. ಅವನನ್ನು ಕಂಡು ಅವನಲ್ಲಿಯೇ ಬೆರೆಯುತ್ತಾರೆ ಎಂದು ಕೆಲವರು ಹೇಳುತ್ತಾರೆ. ಸೂತ್ರದಲ್ಲಿ ಚಕಾರವು ತಿಳಿವು ಮತ್ತು ಪ್ರಾಪ್ತಿಗಳೆರಡನ್ನು ಒಟ್ಟಿಗೆ ತಿಳಿ ಸುತ್ತದೆ. ಬೇರೆ ದೇವತೆಯ ಧ್ಯಾನವನ್ನು ನಿರಾಕರಿಸಬೇಕೆಂಬುದು ನಿಶ್ಚಯವೆಂದು ತುಶಬ್ದವು ತಿಳಿಸುತ್ತದೆ. ಇದೂ ಸಹ ಯುಕ್ತವೇ ಆಗಿದೆ.

ನನು "ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಸ್ಸಂಸಾರಮೋಕ್ಷಸ್ಥಿತಿ ಬಂಧಹೇತುಃ", "ಪೃಥಗಾತ್ಮಾನಂ ಪ್ರೇರಿತಾರಂ ಚ ಮತ್ವಾ" ಇತ್ಯಾದಿ ಶ್ರುತಿಷು ಜೀವಬ್ರಹ್ಮಣೋಃ ಪೃಥಕ್ತ್ವಾನುಸಂಧಾನವಿಧಾನಾವಗಮಾತ್ ಕಥಂ ಬ್ರಹ್ಮಭಾವೇನ ಜೀವೋಪಾಸನಂ ಕರ್ತವ್ಯಮಿತ್ಯಾಶಂಕಾಯಾ ಮಧಿಕರಣಾಂತರೇಣಾಹ. ಪ್ರತೀಕಾಧಿಕರಣಂ ॥ ೩ ॥ ನ ಪ್ರತೀಕೇ ನಹಿ ಸಃ ॥ ೪ ॥ ಪ್ರತೀಕೋಪಾಸನಂ ತೈತ್ತಿರೀಯೇ ಶ್ರೂಯತೇ. "ಭೃಗುರ್ವೈ ವಾರುಣಿಃ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಸ್ಮೈ ಏತತ್ಪ್ರೋವಾಚ ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಂ ಬ್ರಹ್ಮೇತ್ಯುಪಾಸೀತ ॥" ಇತ್ಯಾದಿನಾ ಅನ್ನಾದಿಪ್ರತಿಕೋಪಾಸನೇ ಬ್ರಹ್ಮಭಾವೇನ ಅನ್ನಾದೀನಾಮುಪಾಸನಂ ಕರ್ತವ್ಯಮಿತಿ ಚೇನ್ನ. ಕುತಃ? ನಹಿ ಸರ್ವವ್ಯಾಪಕಃ ಶಿವ ಏವ ಅನ್ನಾ ದಿಷ್ವಂತರ್ಯಾಮಿತ್ವೇನ ಸ್ಥಿತಃ. ಅತಸ್ತತದುಪಾಸನೇನ ಮುಮುಕ್ಷೂಣಾಂ ಸ್ಥೂಲಾರುಂಧತೀನ್ಯಾಯವತ್ ಪರಂಪರಾಮುಕ್ತಿಹೇತುತ್ವಂ ಸಂಭವ ತೀತಿ ಸೂತ್ರಸೂಚಿತಭಾವಾರ್ಥಃ. ಅನ್ನಾದೀನಾಂ ಜಗಜ್ಜನ್ಮಾದಿ ಹೇತುತ್ವೇನ ಬ್ರಹ್ಮತ್ವೋಪದೇಶಾತ್ ಘಟಪಟಾದಿವತ್ಪರಿಚ್ಛಿನ್ನಜಡಾತ್ಮ ಕಾನ್ನಾದಿಷು ಬ್ರಹ್ಮಭಾವೇನೋಪಾಸನಂ ಕರ್ತವ್ಯಮೇವೇತಿ ಪ್ರತಿ ಪಾದ್ಯೋ ವಿಷಯಃ. ಪಿತಾ ವರುಣೋಽಪಿ ಪುತ್ರಂ ಭೃಗುಂ ಪ್ರತ್ಯನ್ನಾ ದೀನಾಂ ಬ್ರಹ್ಮತ್ವೇನೋಪಾಸನಂ ಯದ್ಯಪ್ಯಭಿಹಿತವಾನ್, ಅಥಾಪಿ ತನ್ನ ವಿಧೇಯಂ ಜಡತ್ವಾತ್. ಲೋಕೇ ಕೃತ್ರಿಮಗಜಾಶ್ವಾದಿಷು ಗಜಾದಿ ಭಾವಭಾವಿತಾನಾಂ ತತ್ಫಲಾದರ್ಶನಾತ್ ನಶ್ವರಾನ್ನಾದಿಷು ಸತ್ಯಶಿವೋ ಪಾಸನಂ ಸರ್ವಥಾ ನ ಸಂಭವತೀತಿ ಪ್ರಾಪ್ತೇ ಪ್ರಚಕ್ಷ್ಮಹೇ. "ಸಾಧನಾ ಭಾವೇ ಸಾಧ್ಯಾನಿಷ್ಪತ್ತೇಃ" ಇತಿ ನ್ಯಾಯೇನ ಲೋಕೇ ಸೌಧಾರೋಹಣ ಕಾಮಾನಾಂ ಸೋಪಾನಾರೋಹಣಂ ದೃಷ್ಟಂ. ತದ್ವದ್ದಹರಾದ್ಯುಪಾಸ ನಾಽಸಮರ್ಥಾನಾಂ ಮಂದಪ್ರಜ್ಞಾನಾಂ ಅನ್ನಾದಿಷ್ವಪಿ ಪರಶಿವಬ್ರಹ್ಮ ತ್ವೇನೋಪಾಸನಸ್ಯ ಸಮುಕ್ಷಜಲನ್ಯಾಯೇನ ಸ್ಥೂಲಾರುಂಧತೀನ್ಯಾಯೇನ ಚ ಪರಂಪರಯಾ ಬ್ರಹ್ಮಸಾಕ್ಷಾತ್ಕಾರಹೇತುತ್ವಮಿತಿ ನಿಶ್ಚೀಯತೇ. ಲೋಕೇ ಭೃತ್ಯಾದಿಷು ಪ್ರಭುಭಾವನಯಾ ಸನ್ಮಾನಸ್ಯ ಪ್ರಭುಕಟಾಕ್ಷ

ಹೇತುತ್ವಂ, ರಾಜ್ಞಿ ಭೃತ್ಯಭಾವಸ್ಯ ದಂಡನಹೇತುತ್ವಂ ಚ ದೃಷ್ಟಂ. ತದ್ವತ್ ಶಿವೋತ್ಪನ್ನಚೇತನಾಚೇತನೇಷು ಶಾಸ್ತ್ರನಿಶ್ಚಿತೇಷ್ವನ್ನಾದಿಷು ಶಿವದೃಷ್ಟ್ಯೋಪಾಸನಸ್ಯ ಶಿವಸಾಕ್ಷಾತ್ಕಾರಹೇತುತ್ವಮಿತಿ ನಿಶ್ಚೀಯತೇ. ತಸ್ಮಾತ್ "ಯೋಽನ್ಯಾಂ ದೇವತಾಮುಪಾಸ್ತೇ ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ ಕೃತ್ಸ್ನೋ ಹ್ಯೇಷ ಆತ್ಮೇತ್ಯೇವೋಪಾಸೀತ ತ್ವಂ ವಾ ಅಹಮಸ್ಮಿ ಭಗವೋ ದೇವತಾ ಅಹಂ ವೈ ತ್ವಮಸಿ ಭಗವೋ ದೇವತಾ" ಇತಿ ವ್ಯತಿರೇಕೇಣೋಕ್ತಾನಾಂ ಸರ್ವೇಷಾಮುಪಾಸನಂ ಸಮಂಜಸಮೇವ. ತದ್ವತ್ ಛಾಂದೋಗ್ಯೇ "ಸರ್ವಂ ಖಲ್ವಿದಂ ಬ್ರಹ ತಜ್ಜಲಾನಿತಿ ಶಾಂತ ಉಪಾಸೀತ" ಇತಿ ಚೇತನಾಚೇತನಪ್ರಪಂಚಸ್ಯ ಸರ್ವಸ್ಯ ಬ್ರಹ್ಮತ್ವೇನೋಪಾಸನಮುಪದಿಶತಿ. ತಜ್ಜತ್ವಾತ್ತಲ್ಲತ್ವಾತ್ತದಂತ್ವಾತ್ತನ್ನಿಯಾಮಕತ್ವಾತ್ತದಂತರ್ಯಾಮಿತ್ವಾತ್ಸರ್ವಂ ಬ್ರಹ್ಮೇತ್ಯುಪದಿಷ್ಟಂ.

"ಪ್ರಧಾನಜೀವರಿಗೆ ಪತಿಯೂ, ತ್ರಿಗುಣಗಳಿಗೆ ನಿಯಾಮಕನೂ ಆದ ಈಶ್ವರನು ಸಂಸಾರಮೋಕ್ಷಸ್ಥಿತಿಬಂಧಗಳಿಗೆ ಕಾರಣನೆನಿಸಿದ್ದಾನೆ." "ಅವನನ್ನು ಬೇರೊಬ್ಬ ಆತ್ಮನೆಂದೂ, ಪ್ರೇರಕನೆಂದೂ ತಿಳಿದು" ಎಂಬ ಶ್ರುತಿಗಳಲ್ಲಿ ಜೀವಬ್ರಹ್ಮರನ್ನು ಬೇರೆಯಾಗಿ ತಿಳಿಯಬೇಕೆಂದು ಹೇಳಿರುವುದರಿಂದ ಜೀವನನ್ನು ಬ್ರಹ್ಮಭಾವದಿಂದ ಹೇಗೆ ಉಪಾಸನಮಾಡಬೇಕೆಂದು ಆಶಂಕಿಸುತ್ತಾನೆ. ತೈತ್ತಿರೀಯದಲ್ಲಿ ಪ್ರತೀಕೋಪಾಸನವನ್ನು ಹೇಳಲಾಗಿದೆ. ವರುಣನ ಮಗನಾದ ಭೃಗುವು ತಂದೆಯ ಬಳಿಗೆ ಹೋಗಿ "ಸ್ವಾಮಿ ನನಗೆ ಬ್ರಹ್ಮವನ್ನು ತಿಳಿಸು" ಎಂದು ಕೇಳಿದನು. ಅದಕ್ಕೆ ಅವನು "ಅನ್ನ, ಪ್ರಾಣ, ಕಣ್ಣು, ಕಿವಿ, ಮನಸ್ಸು, ಇವನ್ನು ಬ್ರಹ್ಮವೆಂದು ತಿಳಿ" ಎಂದು ಹೇಳಿದನು. ಇದರಿಂದ ಅನ್ನವೇ ಮೊದಲಾದ ಒಂದೊಂದು ಅವಯವವನ್ನೇ ಬ್ರಹ್ಮವೆಂದು ಭಾವಿಸಿ ಉಪಾಸನಮಾಡಬೇಕು ಎಂದು ಹೇಳುವುದಾದರೆ ಅದು ಯುಕ್ತವಲ್ಲ; ಯಾಕೆಂದರೆ ಸರ್ವವ್ಯಾಪಕನಾದ ಶಿವನೇ ಅನ್ನ ಮೊದಲಾದವುಗಳಲ್ಲಿಯೂ ಅಂತರ್ನಿಯಾಮಕನಾಗಿರುವುದರಿಂದ ಅನ್ನಾದಿಗಳ ಉಪಾಸನವು ಮುಮುಕ್ಷುಗಳಿಗೆ ಸ್ಥೂಲಾರುಂಧತೀನ್ಯಾಯದಂತೆ ಪರಂಪರೆಯಿಂದ ಮುಕ್ತಿಯನ್ನು ಕೊಡಬಲ್ಲದು ಎಂದು ಸೂತ್ರವು ತಿಳಿಸುತ್ತದೆ. ಇಲ್ಲಿ ಅನ್ನ ಮೊದಲಾದವುಗಳನ್ನೂ ಜಗತ್ತಿನ ಉತ್ಪತ್ತಿಗೆ ಕಾರಣವಾದ ಬ್ರಹ್ಮವೆಂದೇ ಹೇಳಿದೆಯಾದ್ದರಿಂದ ಘಟಪಟಗಳಂತೆ ಪರಿಮಿತವೂ ಜಡವೂ ಆದ ಇವುಗಳಲ್ಲಿ ಬ್ರಹ್ಮಭಾವದಿಂದ ಉಪಾಸನಮಾಡಬೇಕೆಂಬುದೇ ಇಲ್ಲಿ ಪ್ರತಿಪಾದಿತವಾದ ವಿಷಯವಾಗಿದೆ. ತಂದೆಯಾದ ವರುಣನೂ ಮಗನಾದ ಭೃಗುವಿಗೆ ಅನ್ನ ಮೊದಲಾದವನ್ನೂ ಬ್ರಹ್ಮವೆಂದು ಭಾವಿಸಿ ಉಪಸನಮಾಡಬೇಕೆಂದು ಹೇಳಿದ್ದರೂ ಅವು ಜಡವಾದ್ದರಿಂದ ಅವನ್ನು ಹಾಗೆ ಉಪಾಸನಮಾಡಲಿಕ್ಕಾಗುವುದಿಲ್ಲ. ಲೋಕದಲ್ಲಿ ಕೃತ್ರಿಮವಾದ ಆನೆ ಕುದುರೆಗಳು ಜೀವಂತವಾಗಿರುವಂತೆ ತೋರಿದರೂ ಅವುಗಳಿಂದ ಯಾವ ಕೆಲಸವೂ ಆಗುವುದಿಲ್ಲ. ಆದ್ದರಿಂದ ನಶ್ವರವಾದ

ಅನ್ನಾದಿಗಳಲ್ಲಿ ಸತ್ಯನಾದ ಶಿವನನ್ನು ಭಾವಿಸಿ ಉಪಾಸನಮಾಡಲಿಕ್ಕೆ ಎಂದಿಗೂ ಸಾಧ್ಯವಾಗುವುದಿಲ್ಲವೆಂದು ಆಕ್ಷೇಪಬಂದರೆ ಸಮಾಧಾನವನ್ನು ತಿಳಿಸಲಾಗುವುದು. ಕಾರಣವಿಲ್ಲದಿದ್ದರೆ ಕಾರ್ಯವೂ ಹುಟುವುದಿಲ್ಲವೆಂಬ ನ್ಯಾಯದಿಂದ ಲೋಕದಲ್ಲಿ ಜನರು ಉಪ್ಪರಿಗೆಯನ್ನು ಹತ್ತಲಿಕ್ಕೆ ಮೊದಲು ಮೆಟ್ಟಲುಗಳನ್ನು ಒಂದೊಂದಾಗಿ ಹತ್ತುವರೆಂದು ಕಂಡುಬಂದಿದೆ. ಹಾಗೆ ದಹರಾಕಾಶದಲ್ಲಿ ಶಿವನ ಉಪಾಸನವನ್ನು ನಡೆಸಲು ಅಶಕ್ತರಾದ ಮಂದಾಧಿಕಾರಿಗಳಿಗೆ ಅನ್ನಮಯಾದಿಗಳನ್ನು ಪರಶಿವಬ್ರಹ್ಮವೆಂದು ಭಾವಿಸುವಂತೆ ಹೇಳಿರುವುದರಿಂದ ಇದೂ ಸಹ ಪರಂಪರೆಯಿಂದ ಬ್ರಹ್ಮಸಾಕ್ಷಾತ್ಕಾರಕ್ಕೆ ಕಾರಣವಾಗುವುದೆಂದು ನಿಶ್ಚಯಿಸಲಾಗಿದೆ. ಒಬ್ಬ ಸೇವಕನನ್ನು ಅವನೇ ದೊಡ್ಡ ಅಧಿಕಾರಿ ಎಂದು ಗೌರವಿಸಿದರೆ ಸುಖವುಂಟಾಗುವುದೆಂದೂ ಒಬ್ಬ ಅಧಿಕಾರಿಯನ್ನು ಸೇವಕನೆಂದು ಭಾವಿಸಿದರೆ ಶಿಕ್ಷೆಯಾಗುವುದೆಂದೂ ಲೋಕದಲ್ಲಿ ಕಂಡುಬಂದಿದೆ. ಹಾಗೆಯೇ ಶಿವನಿಂದ ಹುಟ್ಟಿದ ಚೇತನವಸ್ತುಗಳನ್ನು ಶಿವದೃಷ್ಟಿಯಿಂದ ಉಪಾಸನಮಾಡಿದರೆ ಶಿವನ ಸಾಕ್ಷಾತ್ಕಾರವಾಗುವುದೆಂದು ನಿಶ್ಚಯಿಸಲಾಗಿದೆ. "ಯಾವನು ಬೇರೊಂದು ದೇವತೆಯನ್ನು ತಾನೇ ಬೇರೆ, ಅದೇ ಬೇರೆ ಎಂದು ಭಾವಿಸಿ ಉಪಾಸನಮಾಡುವನೋ ಅವನು ವಸ್ತುಸ್ಥಿತಿಯನ್ನು ತಿಳಿಯನು." "ಎಲೈ ಪೂಜ್ಯದೇವತೆಯೇ, ನೀನಾದರೂ ನಾನೇ ಆಗಿರುವೆ, ನಾನಾದರೂ ನೀನೇ ಆಗಿರುವೆ" ಎಂದು ಇದೆಲ್ಲವನ್ನೂ ಆತ್ಮವೆಂದೇ ಉಪಾಸನಮಾಡಬೇಕೆಂದು ಹೇಳಿರುವುದರಿಂದ ಎಲ್ಲಾ ಉಪಾಸನಗಳೂ ಸಮಂಜಸವೇ ಆಗುತ್ತವೆ. ಹಾಗೆಯೇ ಛಾಂದೋಗ್ಯದಲ್ಲಿ "ಇದೆಲ್ಲವೂ ಬ್ರಹ್ಮವೇ" "ಬ್ರಹ್ಮದಿಂದಲೇ ಹುಟ್ಟಿ ಬೆಳೆದು ಅಲ್ಲಿಯೇ ಸೇರುವುದರಿಂದ ಇದೆಲ್ಲವನ್ನು ಬ್ರಹ್ಮವೆಂದು ತಿಳಿ" ಎಂಬಲ್ಲಿ ಚೇತನ ಅಚೇತನಪ್ರಪಂಚವೆಲ್ಲವನ್ನೂ ಬ್ರಹ್ಮವೆಂದು ಭಾವಿಸುವಂತೆ ಹೇಳಲಾಗಿದೆ. ಇದೆಲ್ಲಕ್ಕೂ ಶಿವನೇ ನಿಯಮಕನೂ ಅಂತರ್ಯಾಮಿಯೂ ಆಗಿರುವುದರಿಂದ ಎಲ್ಲವೂ ಬ್ರಹ್ಮವೆಂದು ಅಲ್ಲಿ ಹೇಳಲಾಗಿದೆ.

**ಪುನರತ್ರ ಹೇತ್ವಂತರಮಾಹ. ಬ್ರಹ್ಮದೃಷ್ಟಿರುತ್ಕರ್ಷಾತ್ ||೫|| ಉತ್ಕರ್ಷಾತ್, "ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ," "ವಿಶ್ವಾಧಿಕೋ ರುದ್ರೋ", "ಪುರುಷೋ ವೈ ರುದ್ರಃ ಸನ್ಮಹಃ", "ಬಹುಧಾ ಜಾತಂ ಜಾಯಮಾನಂ ಚ ಯತ್ ಸರ್ವೋ ಹ್ಯೇಷ ರುದ್ರಃ" ಇತ್ಯಾದಿಶ್ರುತಿಶತೇಷು ಶಿವಸ್ಯ ಪರಬ್ರಹ್ಮಣಃ ಚಿದಚಿದ್ವಿಶ್ವೋತ್ಕರ್ಷತ್ವವ್ಯಪದೇಶಾತ್ ಸರ್ವಾಧಿಕ್ಯಂ ನಿಷ್ಪ್ರತ್ಯೂಹಂ. ತಥಾಪಿ "ಸರ್ವೋ ವೈ ರುದ್ರಃ" ಇತ್ಯಾದಿಷು ತಸ್ಯೈವ ಸರ್ವಾತ್ಮಕತ್ವಕಥನಾತ್ ಅನ್ನಾದಿಷು ಬ್ರಹ್ಮದೃಷ್ಟಿರ್ಯುಕ್ತಾ. "ನಿಧನಪತಯೇ ನಮಃ" ಇತ್ಯಾರಭ್ಯ ಲಿಂಗಾತ್ಮಕಸ್ಯ ಶಿವಸ್ಯ ಬ್ರಹ್ಮಣಃ ಸರ್ವಾತ್ಮಕತ್ವಂ ದರ್ಶಯಿತ್ವಾ "ಏತತ್ಸೋಮಸ್ಯ ಸೂರ್ಯಸ್ಯ" ಇತ್ಯತ್ರ ಸೂರ್ಯಸ್ಯ ಸೂರ್ಯಮಂಡಲಾಂತರ್ವರ್ತಿನಃ ಸೋಮಸ್ಯ ಉಮಾಸಹಿತಸ್ಯ ಭಕ್ತ**

ತಾರಣಾರ್ಥಂ ಪರಿಚ್ಛಿನ್ನಪಾಣ್ಯಧಿಕರಣಕಲಿಂಗಪೂಜಾವಿಧಿರುಕ್ತಾ. ಸದ್ಯೋಜಾತಾದಿಪಂಚಬ್ರಹ್ಮಮಂತ್ರೈಃ ತದುತ್ಕರ್ಷತ್ವವ್ಯಪದೇಶಾತ್ ವ್ಯಾಪಕಸ್ಯ ಶಿವಸ್ಯಾನ್ಯಾದಿಪರಿಚ್ಛಿನ್ನೇಷೂಪಾಸನಮವಿರುದ್ಧಂ. ನನು "ವಾಚಂ ಬ್ರಹ್ಮೇತ್ಯುಪಾಸೀತ", "ಮನೋ ಬ್ರಹ್ಮೇತ್ಯುಪಾಸೀತ", "ಆದಿತ್ಯಂ ಬ್ರಹ್ಮೇತ್ಯುಪಾಸೀತ" ಇತ್ಯಾದಿಷು ವಾಗಾದೀನಾಂ ಬ್ರಹ್ಮತ್ವನಿರ್ದೇಶಾತ್ ಬ್ರಹ್ಮಣಿ ವಾಗಾದಿದೃಷ್ಟ್ಯಾ ಬ್ರಹ್ಮೋಪಾಸನಂ ಕರ್ತವ್ಯಮಿತಿ ಚೇನ್ನ ತದ್ವಿಧಾಯಕಶ್ರುತಿಯುಕ್ತ್ಯನುಭವಾದರ್ಶನಾತ್. "ಯಸ್ಮೈ ನಮಸ್ತಚ್ಛಿರೋ ಧರ್ಮಃ ಮೂರ್ಧಾನಂ ಬ್ರಹ್ಮ ಉತ್ತರಾಹನುರ್ಯಜ್ಞೋಧರಾಹನುರ್ವಿಷ್ಣುರ್ಹೃದಯಂ ಸಂವತ್ಸರಃ ಪ್ರಜನನಂ" ಇತ್ಯಾದಿನಾ ಶಿಂಶುಮಾರಾತ್ಮನಿರೂಪಣೇ ಹೃದಯಾದಿರೂಪೇಭ್ಯಃ ವಿಷ್ಣ್ವಾದಿಭ್ಯಃ ಪಾರ್ಥಕ್ಯೇನ ಸರ್ವೋತ್ಕೃಷ್ಟತ್ವಾದೇವ ಹಿ ಪರಬ್ರಹ್ಮಣಶ್ಶಿವಸ್ಯ ಪ್ರಧಾನಶಿರೋರೂಪತ್ವಂ "ಯಸ್ಮೈ ನಮಃ" ಇತಿ ನಮಸ್ಕಾರವಿಷಯತ್ವೇನ ಲಕ್ಷಣೇನೈವಾನೂದ್ಯಾಭಿಹಿತಂ. ಅವಸಾನೇ ಚ "ತ್ವಂ ಭೂತಾನಾಮಧಿಪತಿರಸಿ ತ್ವಂ ಭೂತಾನಾಂ ಶ್ರೇಷ್ಠೋಸಿ" ಇತಿ ತಸ್ಯೈವ ಸರ್ವಭೂತವಿಷಯಮಾಧಿಪತ್ಯಂ ಶ್ರೇಷ್ಠತ್ವಂ ಚೋಕ್ತ್ವಾ "ನಮಸ್ತೇ ನಮಸ್ಸರ್ವತೇ ನಮಃ" ಇತಿ ಸರ್ವಭೂತೋತ್ಕೃಷ್ಟತಾಸಿದ್ಧಂ ನಿಖಿಲನಮಸ್ಕಾರಪರ್ಯವಸಾನಭೂಮಿತ್ವಮುಕ್ತಂ. ಸರ್ವತ್ರ ಚ "ನಮಸ್ತೇ ರುದ್ರಮನ್ಯವ" ಇತ್ಯಾದಿಷು ಸರ್ವೋತ್ಕೃಷ್ಟತಯೈವ ಪುನಃಪುನಃ ತಸ್ಮೈ ನಮಃ ಪ್ರಯುಜ್ಯತೇ. "ಐಶ್ವರ್ಯಾದಿನಾ ಹಿ ಲೋಕೇಧಿಕಂ ನಮಂತಿ" ತತಸ್ಸರ್ವನಮಸ್ಕಾರವಿಷಯತಯಾ ಸರ್ವೋತ್ಕೃಷ್ಟಮುಮಾಸಹಿತಂ ವಿರೂಪಾಕ್ಷಂ ಈಶ್ವರಶಬ್ದವಿಷಯಭೂತಂ ಪರಂಬ್ರಹ್ಮ, ಅಸ್ಯ ಸರ್ವೋತ್ಕೃಷ್ಟಸ್ಯ ಸರ್ವನಮಸ್ಕಾರವ್ಯಾಪ್ತಿದೃಷ್ಟಸ್ಯ ಸರ್ವೇಷಾಂ ಮನಆದಿತ್ಯಾದೀನಾಂ ಪ್ರತೀಕಾನಾಮುಪಾಸ್ಯತ್ವಂ. ಅತ ಏವ "ಶ್ವಭ್ಯಃ ಶ್ವಪತಿಭ್ಯಶ್ಚ ವೋ ನಮಃ" ಇತ್ಯಾದಿಷು ಅತ್ಯಂತನಿಕೃಷ್ಟೇಷ್ವಪಿ ಸರ್ವೋತ್ಕೃಷ್ಟಬ್ರಹ್ಮವ್ಯಾಪ್ತಿದೃಷ್ಟ್ಯಾ ಶ್ರುತಿಃ ಪ್ರಯುಕ್ತಾ. ತಸ್ಮಾದುತ್ಕೃಷ್ಟಾನುಸಂಧಾನಾನಿ ನಿಕೃಷ್ಟೇಷೂಪಚಾರದರ್ಶನಾತ್ ವಿಶ್ವಾಧಿಕಬ್ರಹ್ಮದೃಷ್ಟ್ಯಾ ಮನಃಪ್ರಭೃತೀನಾಮುಪಾಸ್ಯತ್ವಂ ಸಿದ್ಧಂ. ಪ್ರಭುಭೃತ್ಯವದ್ಬ್ರಹ್ಮಣಿ ವಾಗಾದಿದೃಷ್ಟಿಃ ಪ್ರತ್ಯವಾಯಕಾರೀ.

ಇಲ್ಲಿ ಬೇರೊಂದು ಹೇತುವನ್ನು ತಿಳಿಸುತ್ತಾನೆ. "ರುದ್ರನು ವಿಶ್ವಾಧಿಕನು" ರುದ್ರನೇ ಪುರುಷನು ಮತ್ತು ಪರಂಜ್ಯೋತಿಯು." "ಹಿಂದಿನದು ಮುಂದಿನದು ವಿಚಿತ್ರವಾದುದು ಮತ್ತು ಅನೇಕಬಗೆಯಾಗಿರುವುದು ಎಲ್ಲವೂ ರುದ್ರನೇ." ಈ ಶ್ರುತಿಗಳಲ್ಲಿ ಪರಶಿವಬ್ರಹ್ಮವನ್ನೇ ಚಿದ್ರೂಪವಾದ ವಿಶ್ವವೆಲ್ಲಕ್ಕೂ ಉತ್ಕೃಷ್ಟವೆಂದು ಹೇಳಿರುವುದ

ರಿಂದ ಅವನೇ ಎಲ್ಲಕ್ಕೂ ಅಧಿಕನೆಂಬುದು ನಿರ್ವಿವಾದವೆನಿಸಿದೆ. "ಎಲ್ಲವೂ ರುದ್ರನೇ" ಎಂಬಲ್ಲಿ ಅವನನ್ನು ಸರ್ವಾತ್ಮಕನೆಂದು ಹೇಳಿದ್ದರಿಂದ ಅನ್ನಮಯ ವೊದಲಾದವು ಗಳಲ್ಲಿಯೂ ಬ್ರಹ್ಮದೃಷ್ಟಿಯು ಯುಕ್ತವೇ ಆಗಿದೆ. "ನಿಧನಪತಯೇ ನಮಃ" ಎಂದಾ ರಂಭಿಸಿ ಲಿಂಗರೂಪನಾದ ಶಿವನನ್ನು ಸರ್ವಾತ್ಮಕನೆಂದು ತಿಳಿಸಿ ಸೂರ್ಯಮಂಡಲ ದಲ್ಲಿ ಅಂತರ್ಯಾಮಿಯಾಗಿ ನೆಲಸಿರುವ ಉಮಾಸಹಿತನಾದ ಶಿವನನ್ನು ಭಕ್ತಾನುಗ್ರಹ ಕ್ಕಾಗಿ ಪರಿಚ್ಛಿನ್ನವಾದ ಹಸ್ತಪೀಠದಲ್ಲಿ ಲಿಂಗರೂಪದಿಂದ ಅರ್ಚಿಸಬೇಕೆಂದು ವಿಧಿಸ ಲಾಗಿದೆ. "ಸದ್ಯೋಜಾತಂ ಪ್ರಪದ್ಯಾಮಿ" ಎಂಬ ಪಂಚಬ್ರಹ್ಮಮಂತ್ರಗಳಲ್ಲಿ ಶಿವನ ಉತ್ಕರ್ಷವನ್ನೇ ಹೇಳಿರುವುದರಿಂದ ಅನ್ನಮಯಾದಿಪರಿಚ್ಛಿನ್ನವಸ್ತುಗಳನ್ನು ಶಿವನೆಂದು ಭಾವಿಸಿ ಅರ್ಚಿಸುವುದರಲ್ಲಿ ತಪ್ಪೇನಿಲ್ಲ. "ವಾಕ್ಕು, ಮನಸ್ಸು, ಆದಿತ್ಯ ಗಳನ್ನು ಬ್ರಹ್ಮವೆಂದು ಭಾವಿಸಬೇಕು" ಎಂಬಲ್ಲಿ ವಾಗಾದಿಗಳನ್ನೂ ಬ್ರಹ್ಮವೆಂದು ಹೇಳಿರುವುದರಿಂದ ಬ್ರಹ್ಮವನ್ನು ವಾಕ್, ಮನಸ್ಸು, ಆದಿತ್ಯವೆಂದು ವ್ಯತ್ಯಾಸವಾಗಿ ಭಾವಿಸಿ ಏಕೆ ಉಪಾಸನಮಾಡಬಾರದು ? ಎಂದರೆ ಹಾಗೆ ಶ್ರುತಿಯಲ್ಲಿ ಎಲ್ಲಿಯೂ ವಿಧಿ ಸದೆ, ಅದಕ್ಕೆ ತಕ್ಕ ಯುಕ್ತಿಯೂ ಇಲ್ಲದೆ, ಅನುಭವಕ್ಕೂ ವಿರುದ್ಧವಾಗಿರುವುದರಿಂದ ಅದು ಹೊಂದುವುದಿಲ್ಲ. "ಯಾವುದಕ್ಕೆ ನಮಸ್ಕಾರ ಮಾಡುವೆವೋ ಅದೇ ಶಿರಸ್ಸಿನ ಮುಂಭಾಗ, ಧರ್ಮವೇ ಅದರ ಹಿಂಭಾಗ, ಬ್ರಹ್ಮವೇ ಮೇಲಿನ ಕೆನ್ನೆ, ಯಜ್ಞವೇ ಕೆಳಗಿನ ಕೆನ್ನೆ, ವಿಷ್ಣುವೇ ಹೃದಯ, ಸಂವತ್ಸರವೇ ಜನನೇಂದ್ರಿಯ" ಹೀಗೆ ಶಿಂಶು ಮಾರವೆಂಬ ಪ್ರಾಣಿಯ ಆಕಾರವನ್ನು ಹೋಲಿಸುವಾಗ ಹೃದಯ ವೊದಲಾದ ರೂಪ ಗಳಲ್ಲಿರುವ ವಿಷ್ಣು ವೊದಲಾದವರಿಗಿಂತಲೂ ಪ್ರತ್ಯೇಕವಾಗಿಯೂ ಉತ್ಕೃಷ್ಟವಾಗಿಯೂ ಪರಶಿವಬ್ರಹ್ಮನನ್ನು ಶಿರಸ್ಸೆಂದು ಹೇಳಿ ನಮಸ್ಕಾರಕ್ಕೆ ಯೋಗ್ಯವೆಂದು ತಿಳಿಸಲಾಗಿದೆ. ಕೊನೆಯಲ್ಲಿ "ನೀನು ಪ್ರಾಣಿಗಳೆಲ್ಲಕ್ಕೂ ಅಧಿಕನು ಮತ್ತು ಶ್ರೇಷ್ಠನು" ಎಂದು ಹೇಳಿ ಎಲ್ಲಾ ನಮಸ್ಕಾರಗಳೂ ಅವನಲ್ಲಿಯೇ ಕೊನೆಗಾಣುತ್ತವೆ ಎಂದು ತಿಳಿಸಲಾಗಿದೆ. ಹೀಗೆಯೇ ಎಲ್ಲಾ ಕಡೆಗಳಲ್ಲೂ ಹೇಳಿದೆ. "ರುದ್ರನೇ ನಿನ್ನ ಕೋಪಶಮನವಾಗಲೆಂದು ನಿನಗೆ ನಮಸ್ಕರಿಸುತ್ತೇನೆ" ಎಂಬಲ್ಲಿ ಅವನೇ ಸರ್ವೋತ್ಕೃಷ್ಟನಾದ್ದರಿಂದ ಅವನಿಗೆ ಮತ್ತೆಮತ್ತೆ ನಮಸ್ಕರಿಸಲಾಗಿದೆ. ಲೋಕದಲ್ಲೂ ಐಶ್ವರ್ಯವನ್ನು ನೋಡಿ ಒಬ್ಬನಿಗೆ ಜನರು ನಮಸ್ಕರಿಸುತ್ತಾರೆ. ಆದ್ದರಿಂದ ಎಲ್ಲರಿಗೂ ನಮಸ್ಕಾರಕ್ಕೆ ಯೋಗ್ಯನಾದ್ದ ರಿಂದಲೇ ಉತ್ಕೃಷ್ಟನೆನಿಸಿದ ಉಮಾಶಕ್ತಿವಿಶಿಷ್ಟನಾದ ಶಿವನೇ ಈಶ್ವರನೆನಿಸಲು ಅರ್ಹ ನಾಗಿದ್ದಾನೆ. ಹೀಗೆ ಪರಶಿವನು ಸರ್ವೋತ್ಕೃಷ್ಟನೂ ಸರ್ವವ್ಯಾಪಕನೂ ಆದ್ದರಿಂದಲೇ ಮನಸ್ಸು ಆದಿತ್ಯ ವೊದಲಾದ ಪ್ರತಿಯೊಂದು ವಸ್ತುವೂ ಉಪಾಸ್ಯವೆನಿಸಿದೆ. ಆದ್ದ ರಿಂದ "ಶ್ವಭ್ಯಃ ಶ್ವಪತಿಭ್ಯಶ್ಚ ವೋ ನಮಃ" ಎಂಬಲ್ಲಿ ಅತ್ಯಂತನಿಕೃಷ್ಟವಾದ ನಾಯಿ ಮತ್ತು ಚಂಡಾಲರಲ್ಲೂ ಸರ್ವೋತ್ಕೃಷ್ಟವಾದ ಪರಶಿವನು ವ್ಯಾಪಿಸಿರುವನೆಂದು ತಿಳಿಸ ಲಾಗಿದೆ. ಆದ್ದರಿಂದ ನಿಕೃಷ್ಟವ್ಯಕ್ತಿಯಲ್ಲಿ ಉತ್ಕೃಷ್ಟಭಾವನೆಯನ್ನು ಮಾಡುವುದರಲ್ಲಿ ತಪ್ಪೇನಿಲ್ಲ. ಇದರಿಂದ ಮನಸ್ಸು ವೊದಲಾದ ವಸ್ತುಗಳಲ್ಲಿ ಬ್ರಹ್ಮಭಾವನೆಯನ್ನು

ಮಾಡಬೇಕೇ ಹೊರತು ಉತ್ಕೃಷ್ಟವಾದ ಬ್ರಹ್ಮದಲ್ಲಿ ವಾಗಾದಿನಿಕೃಷ್ಟವಸ್ತುಗಳ ಭಾವನೆಯನ್ನು ಕಲ್ಪಿಸುವುದು ಪಾಪಕರವೆಂದು ಸಿದ್ಧವಾಯಿತು.

ಛಾಂದೋಗ್ಯೇ "ಆದಿತ್ಯಂ ಯೂಪಮುಪಾಸೀತ" ಇತ್ಯಾದೌ ಸಮುತ್ಕೃಷ್ಟಸ್ಯಾಪಕೃಷ್ಟಾರೋಪಣೋಪಾಸನಾದರ್ಶನಾತ್ ಉತ್ಕೃಷ್ಟೇ ರಾಜನಿ ಭೃತ್ಯದೃಷ್ಟಿಃ ಪ್ರತ್ಯವಾಯಕಾರೀ ಭೃತ್ಯೇಷು ರಾಜದೃಷ್ಟಿರಭ್ಯು ದಯಫಲಾಯೇತಿ ಯದುಕ್ತಂ ತದಯುಕ್ತಂ ಇತ್ಯಾಶಂಕಾಯಾಮಧಿ ಕರಣಾಂತರೇಣಾಹ. ಅದಿತ್ಯಾದಿಮತ್ಯಧಿಕರಣಂ ॥ ೪ ॥ ಆದಿತ್ಯಾದಿ ಮತಯಶ್ಚಾಂಗ ಉಪಪತ್ತೇಃ ॥ ೬ ॥ "ಆದಿತ್ಯೋ ಬ್ರಹ್ಮೇತ್ಯುಪಾ ಸೀತ" ಇತ್ಯಾದಿಷ್ವಂಗಾವಬದ್ಧೋಪಾಸನೇಷು ಆದಿತ್ಯಾದೀನಾಂ ಬ್ರಹ್ಮ ತ್ವೋಪದೇಶೇಽಪಿ ಆದಿತ್ಯಾದಿಮತಯಶ್ಚ "ಆದಿತ್ಯಂ ಯೂಪಮುಪಾ ಸೀತ" ಇತ್ಯಾದಿಶ್ರೌತವಿಧ್ಯನುಸಾರೇಣ ಆದಿತ್ಯಾದಿಷು ಯೂಪಾದಿ ಬುದ್ಧಯಃ ಸರ್ವೇ ಚ ಅಂಗಃ ಬ್ರಹ್ಮವಿದ್ಯಾಯಾ ಅಂಗಏವ. ಕುತಃ? ಉಪಪತ್ತೇಃ. "ಉದ್ಗೀಥಂ ಬ್ರಹ್ಮೇತ್ಯುಪಾಸೀತ" ಇತ್ಯಾದಿನಾ ಉದ್ಗೀಥವಿದ್ಯಾಯಾಃ ಸಾಕ್ಷಾತ್ ಬ್ರಹ್ಮಸಾಕ್ಷಾತ್ಕಾರತ್ವಾವಗಮಾತ್ ತದಂಗಭೂತಯೂಪಸ್ಯ ಬ್ರಹ್ಮಪ್ರಕರಣಪಠಿತತ್ವೇನ ಆದಿತ್ಯಾದೇಸ್ಸಮು ತ್ಕೃಷ್ಟತ್ವೇನ "ಆದಿತ್ಯಂ ಯೂಪಮುಪಾಸೀತ" ಇತಿ ವಾಕ್ಯೋಪಪತ್ತೇರ ವಿರೋಧಃ. "ವಿದ್ಯಾಂ ಚಾವಿದ್ಯಾಂ ಚ ಯಸ್ತದ್ವೇದೋಭಯಂ ಸಃ" ಇತ್ಯಾದಿಷು ಕರ್ಮಪ್ರತಿಪಾದಕವೇದೇಽವಿದ್ಯಾತ್ಮಕತ್ವಸ್ಯ, ಬ್ರಹ್ಮಪ್ರತಿ ಪಾದಕವೇದೇ ವಿದ್ಯಾತ್ಮಕತ್ವಸ್ಯ ಚೋಪದೇಶಾತ್ "ಬ್ರಹ್ಮವಿದಾಪ್ನೋತಿ ಪರಂ" ಇತ್ಯಾದಿಷು ಬ್ರಹ್ಮವಿದ್ಯಾಯಾಃ ಪಾಶನಿವೃತ್ತಿಪೂರ್ವಕಪರಶಿವ ಪ್ರಾಪ್ತಿರೂಪಪರಮಪುರುಷಾರ್ಥಫಲಕತ್ವಾಚ್ಚ ಸಮುತ್ಕೃಷ್ಟತ್ವಮನಿ ವಾರ್ಯಂ. ತಸ್ಮಾದ್ಬ್ರಹ್ಮಪ್ರಕರಣಪಠಿತೋದ್ಗೀಥವಿದ್ಯಾಂತರ್ಗತ ಯೂಪಸ್ಯ ಅವಿದ್ಯಾಪ್ರಪಂಚಾವಚ್ಛಿನ್ನಸೂರ್ಯಾದೇರುತ್ಕೃಷ್ಟತ್ವಾತ್ ಪ್ರಭುಭೃತ್ಯಾದಿವತ್ ಉತ್ಕೃಷ್ಟಕನಿಷ್ಠತ್ವವಾದೋ ಹ್ಯಯುಕ್ತಃ ಇತಿ ಸೂಕ್ಷ್ಮಾರ್ಥಃ. "ಅಸಾವಾದಿತ್ಯೋ ಬ್ರಹ್ಮ" ಇತ್ಯಾದೌ ಸೂರ್ಯಸ್ಯ ಬ್ರಹ್ಮಾತ್ಮಕತ್ವಕಥನಾತ್, "ಆದಿತ್ಯಂ ಯೂಪಮುಪಾಸೀತ" ಇತ್ಯಾದೌ ಆದಿತ್ಯಸ್ಯ ಯೂಪತ್ವವ್ಯಪದೇಶಾಚ್ಚ ಆದಿತ್ಯಾದೌ ಯೂಪಾದಿ ಬುದ್ಧಯಃ ಸಂಭವಂತಿ ನವೇತಿ ಸಂದಿಹ್ಯತೇ. ಆದಿತ್ಯೋ ವಾ ಏಷ ಏತನ್ಮಂಡಲಂ ತಪತಿ", "ಅಸೌ ಯೋಽವಸರ್ಪತಿ ನೀಲಗ್ರೀವೋ ವಿಲೋಹಿತಃ" ಇತ್ಯಾದಿಷು ಆದಿತ್ಯಸ್ಯ ಸಾಕ್ಷಾಚ್ಛಿವತ್ವವ್ಯವಸ್ಥಾಪನಾತ್ "ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ" ಇತ್ಯಾದಿಶ್ರುತಿಷು, "ಸೌರಮಂಡಲಮಧ್ಯಸ್ಥಂ ಸಾಂಬಂ ಸಂಸಾರಭೇಷಜಂ" ಇತ್ಯಾದಿ

ಸ್ಮೃತಿಷು ಚ ಶಿವಸ್ಯ ಪರಬ್ರಹ್ಮಣಃ ಮುಖ್ಯತ್ವೇನ ಸೂರ್ಯಮಂಡಲಾಂತರ್ವರ್ತಿತ್ವೋಪದೇಶಾಚ್ಚ ತಸ್ಯ ಯೂಪಾದಿಸಾಮ್ಯಮಯುಕ್ತಮಿತಿ ಪ್ರಾಪ್ತೇ ಪ್ರಚಕ್ಷ್ಮಹೇ ಆದಿತ್ಯಾದಿಮತಯಶ್ಚೇತಿ. ಚಶಬ್ದೋಽವಧಾರಣೇ. ಆದಿತ್ಯಾದಿಮತಯಃ ಆದಿತ್ಯಾದಿಷು ಮಾನಸಕ್ರತ್ವಂಗಭೂತಯೂಪಾದಿಬುದ್ಧಯಃ ಅಂಗಃ ಸಾಕ್ಷಾದ್ಬ್ರಹ್ಮವಿದ್ಯಾಂಗ ಏವ. ಕುತಃ ? ಉಪಪತ್ತೇಃ ಬ್ರಹ್ಮಾದಿತ್ಯಾದಿಪದಾರ್ಥೇಭ್ಯಃ ಮಾನಸಿಕಬ್ರಹ್ಮವಿದ್ಯಾಂಗಯೂಪಾದೇಃ ಸಮುತ್ಕೃಷ್ಟತ್ವೋಪಪತ್ತೇಃ. " ತತ್ಪ್ರಾಣೇಷ್ವಂತರ್ಮನಸೋ ಲಿಂಗಮಾಹುಃ ", " ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ । ದೇಶಾದ್ದೇಶಂ ಗತೇ ಚಿತ್ತೇ ಮಧ್ಯೇ ಯಚ್ಚೇತಸೋ ವಪುಃ । ಅಜಾಡ್ಯಸಂವಿನ್ಮನನಂ ಸಂವಿದ್ರೂಪಂ ತದುಚ್ಯತೇ ॥ " ಇತ್ಯಾದಿಶ್ರುತಿಷು ಪ್ರಪಂಚಾದಿಭ್ಯಃ ಸ್ಥೂಲೇಭ್ಯಃ ಸೂಕ್ಷ್ಮರೂಪಮಾನಸಸ್ಯ ಸರ್ವಾಧಿಕ್ಯವ್ಯವಸ್ಥಾಪನಾತ್ ಮಾನಸಿಕಬ್ರಹ್ಮವಿದ್ಯಾಂಗಭೂತಯೂಪಾದೇಃ ಸೂರ್ಯಾದಿಭ್ಯಃ ಸಮುತ್ಕೃಷ್ಟತ್ವಂ. " ಅಸಾವಾದಿತ್ಯೋ ಬ್ರಹ್ಮ " ಇತ್ಯಾದಿಷು ಸೂರ್ಯಸ್ಯ ಬ್ರಹ್ಮಾತ್ಮಕತ್ವಕಥನಾತ್ ಸರ್ವೋತ್ಕೃಷ್ಟತ್ವಮಿತಿ ಯತ್ತದಯುಕ್ತಂ. " ಕಂ ಬ್ರಹ್ಮ ಖಂ ಬ್ರಹ್ಮ ಅನ್ನಂ ಬ್ರಹ್ಮ ಪ್ರಾಣೋ ಬ್ರಹ್ಮ " ಇತ್ಯಾದಿಷು ಶಿವೋಪಾದಾನತ್ವಾದುಪಾಸನಾರ್ಥಂ ಸರ್ವಂ ಬ್ರಹ್ಮೇತ್ಯುಕ್ತಂ. " ಏಷೋಽಂತರಾದಿತ್ಯೇ ಹಿರಣ್ಮಯಃ ಪುರುಷಃ " ಇತ್ಯಾದೌ ಪರಮಾತ್ಮನಃ ಸೂರ್ಯಾಂತರ್ವರ್ತಿತ್ವಾತ್ ಸೂರ್ಯಸ್ಯ ಸರ್ವಾತಿಶಯಿತ್ವಮಿತಿ ಯತ್ ತದಪ್ಯನುಪಪನ್ನಂ, " ಯೋ ರುದ್ರೋ ಅಗ್ನೌ ಯೋ ಅಪ್ಸು " ಇತ್ಯಾದಿಷು ಶಿವಸ್ಯ ಸರ್ವಾಂತರ್ಯಾಮಿತ್ವವ್ಯವಸ್ಥಾಪನಾತ್. ಅತೋ ಮಾನಸಿಕೋದ್ಗೀಥವಿದ್ಯಾಕ್ರತ್ವಂಗಯೂಪಾದೇಃ ಸಮುತ್ಕೃಷ್ಟತ್ವಮವಿರುದ್ಧಂ.

ಛಾಂದೋಗ್ಯದಲ್ಲಿ " ಆದಿತ್ಯನನ್ನು ಯೂಪವೆಂದು ಭಾವಿಸು " ಎಂಬಲ್ಲಿ ಉತ್ಕೃಷ್ಟವಾದ ಆದಿತ್ಯನನ್ನು ನೀಚವಾದ ಯೂಪಸ್ತಂಭವೆಂದು ಆರೋಪಿಸಿ ಉಪಾಸನಮಾಡಬೇಕೆಂದು ಹೇಳಿದ್ದರಿಂದ ಉತ್ಕೃಷ್ಟನಾದ ರಾಜನಲ್ಲಿ ಸೇವಕನೆಂಬ ದೃಷ್ಟಿಯು ಹಾನಿಕರವೆನಿಸಿದೆ. ಆದರೆ ಸೇವಕರಲ್ಲಿ ರಾಜನೆಂಬ ದೃಷ್ಟಿಯು ಸುಖಕರವೆಂದು ಹಿಂದೆ ಹೇಳಿದ್ದು ಯುಕ್ತವಲ್ಲವೆಂದಾಶಂಕಿಸಿ ನಿರಾಕರಿಸುತ್ತಾನೆ. " ಆದಿತ್ಯನನ್ನು ಬ್ರಹ್ಮವೆಂದು ತಿಳಿ " ಎಂದು ಮುಂತಾದ ಅಂಗಾವಬದ್ಧೋಪಾಸನಗಳಲ್ಲಿ ಆದಿತ್ಯಾದಿಗಳನ್ನು ಬ್ರಹ್ಮವೆಂದು ಹೇಳಿದ್ದರೂ " ಆದಿತ್ಯನನ್ನು ಯೂಪವೆಂದು ತಿಳಿ " ಎಂಬ ಶ್ರೌತವಿಧಿಗನುಸಾರವಾಗಿ ಆದಿತ್ಯನಲ್ಲಿ ಯೂಪವೆಂಬ ಬುದ್ಧಿಯೂ ಬ್ರಹ್ಮವಿದ್ಯೆಗೆ ಅಂಗವೇ ಆಗಿದೆ; ಯಾಕೆಂದರೆ ಹಾಗೆ ಹೇಳುವುದೇ ಯುಕ್ತವಾಗುತ್ತದೆ. ಉದ್ಗೀಥವಿದ್ಯೆಯಿಂದ ನೇರವಾಗಿ ಬ್ರಹ್ಮಸಾಕ್ಷಾತ್ಕಾರವಾಗದಿರುವು

ದರಿಂದಲೂ, ಅದರ ಅಂಗವೆನಿಸಿದ ಯೂಪವೂ ಬ್ರಹ್ಮಪ್ರಕರಣದಲ್ಲಿಯೇ ಬಂದಿರುವುದ ರಿಂದಲೂ ಆದಿತ್ಯನಿಗಿಂತಲೂ ಅದನ್ನು ಉತ್ಕೃಷ್ಟವೆಂದು ಭಾವಿಸಿ "ಆದಿತ್ಯನನ್ನು ಯೂಪ ವೆಂದು ತಿಳಿ" ಎಂಬ ವಾಕ್ಯವನ್ನು ಶ್ರುತಿಯಲ್ಲಿ ಪ್ರಯೋಗಿಸಿರುವುದರಲ್ಲಿ ತಪ್ಪೇನಿಲ್ಲ. "ವಿದ್ಯೆ ಅವಿದ್ಯೆಗಳೆರಡನ್ನು ಯಾವನು ತಿಳಿದಿರುವನೋ" ಎಂಬಲ್ಲಿ ಕರ್ಮಕಾಂಡ ವನ್ನು ಅವಿದ್ಯೆಯೆಂದೂ, ಜ್ಞಾನಕಾಂಡವನ್ನು ವಿದ್ಯೆಎಂದೂ ಹೇಳಲಾಗಿದೆ. ಆದ್ದ ರಿಂದ "ಬ್ರಹ್ಮವನ್ನರಿತವನು ಬ್ರಹ್ಮವನ್ನೇಹೊಂದುತ್ತಾನೆ" ಎಂಬಲ್ಲಿ ಜೀವನಿಗೆ ಪಾಶ ವನ್ನು ತೊಲಗಿಸಿ ಪರಶಿವನನ್ನು ದೊರಕಿಸುವುದನ್ನೇ ಬ್ರಹ್ಮವಿದ್ಯೆಯ ಪರಮಫಲವೆಂದು ಹೇಳಿದ್ದರಿಂದ ಬ್ರಹ್ಮವಿದ್ಯೆಯೇ ಸರ್ವೋತ್ಕೃಷ್ಟವೆನಿಸಿದೆ. ಆದ್ದರಿಂದ ಬ್ರಹ್ಮಪ್ರಕರಣ ದಲ್ಲಿ ಹೇಳಿರುವ ಉದ್ಗೀಥವಿದ್ಯೆಯೊಳಗೆಬಂದಿರುವ ಯೂಪವು ಕರ್ಮಪ್ರಕರಣದಲ್ಲಿ ಹೇಳಿರುವ ಸೂರ್ಯನಿಗಿಂತ ಉತ್ಕೃಷ್ಟವಾದ್ದರಿಂದ ಪ್ರಭುಭೃತ್ಯರಂತೆ ಯಾವುದು ಉತ್ಕೃಷ್ಟ? ಯಾವುದು ಕನಿಷ್ಠ ? ವೆಂಬ ವಾದವು ಯುಕ್ತವಾಗಲಾರದು. "ಈ ಆದಿ ತ್ಯನೇ ಬ್ರಹ್ಮ" ಎಂಬಲ್ಲಿ ಸೂರ್ಯನನ್ನು ಬ್ರಹ್ಮಾತ್ಮಕನೆಂದು ಹೇಳಿದ್ದರಿಂದಲೂ "ಆದಿತ್ಯನನ್ನು ಯೂಪವೆಂದು ತಿಳಿ" ಎಂಬಂತೆ ಆದಿತ್ಯನನ್ನು ಯೂಪವೆಂದು ಹೇಳಿ ದ್ದರಿಂದಲೂ ಆದಿತ್ಯನಲ್ಲಿ ಯೂಪವೆಂಬ ಭಾವನೆ ಸಂಭವಿಸುತ್ತದೆಯೇ ಇಲ್ಲವೆ? ಎಂದು ಸಂದೇಹವುಂಟಾಗುತ್ತದೆ. "ಇವನು ಆದಿತ್ಯನೇ ಈ ಮಂಡಲದಲ್ಲಿ ಶೋಭಿಸು ತ್ತಾನೆ." "ಕಪ್ಪು ಮತ್ತು ಕೆಂಪುಬಣ್ಣಗಳಿಂದ ಇವನೇ ಎಲ್ಲೆಲ್ಲೂ ವ್ಯಾಪಿಸಿದ್ದಾನೆ" ಎಂಬಲ್ಲಿ ಆದಿತ್ಯನನ್ನು ಸಾಕ್ಷಾತ್ ಶಿವನೆಂದು ಹೇಳಿರುವುದರಿಂದಲೂ, "ಆದಿತ್ಯನೊಳಗೆ ಹಿರಣ್ಮಯಪುರುಷನಿದ್ದಾನೆ" ಎಂದು ಶ್ರುತಿಯಲ್ಲೂ "ಸೂರ್ಯಮಂಡಲದಲ್ಲಿ ಭವ ರೋಗವೈದ್ಯನಾದ ಸಾಂಬಶಿವನನ್ನು ಅರ್ಚಿಸೋಣ" ಎಂದು ಸ್ಮೃತಿಗಳಲ್ಲೂ ಶಿವನೇ ಸೂರ್ಯಮಂಡಲದೊಳಗೆ ಇರುವನೆಂದು ಹೇಳಿರುವುದರಿಂದಲೂ ಅಂತಹ ಶಿವನಿಗಾಶ್ರಯವಾದ ಆದಿತ್ಯನನ್ನು ಯೂಪಸ್ತಂಭಕ್ಕೆ ಹೋಲಿಸಿದ್ದು ಯುಕ್ತವಲ್ಲ ವೆಂದು ಪೂರ್ವಪಕ್ಷಿಯು ಹೇಳುತ್ತಾನೆ. ಇದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಸೂತ್ರದಲ್ಲಿ ಚಶಬ್ದವು ನಿಶ್ಚಯವನ್ನು ತಿಳಿಸುತ್ತದೆ. ಆದಿತ್ಯನನ್ನು ಮಾನಸಯಾಗಕ್ಕೆ ಅಂಗವಾದ ಯೂಪವೆಂದು ಭಾವಿಸುವುದೂ ಸಹ ನೇರವಾಗಿ ಬ್ರಹ್ಮವಿದ್ಯೆಗೇ ಅಂಗವೆನಿಸುತ್ತದೆ. ಬ್ರಹ್ಮ ಆದಿತ್ಯ ಮೊದಲಾದ ವಸ್ತು ಗಳಿಗಿಂತಲೂ ಮಾನಸಿಕಬ್ರಹ್ಮವಿದ್ಯೆಗೆ ಅಂಗವಾದ ಯೂಪವು ಉತ್ಕೃಷ್ಟವೆಂಬುದು ಯುಕ್ತವೇ ಆಗಿದೆ. "ಪ್ರಾಣಗಳೊಳಗಿನ ಮನಸ್ಸನ್ನೇ ಲಿಂಗವೆಂದು ಹೇಳುತ್ತಾರೆ." "ಮನಸ್ಸೇ ಬಂಧಮೋಕ್ಷಗಳೆರಡಕ್ಕೂ ಕಾರಣವಾಗಿದೆ." "ಮನಸ್ಸು ಒಂದುಕಡೆ ಯಿಂದ ಮತ್ತೊಂದುಕಡೆಗೆ ಹೋದಾಗ ಮಧ್ಯದಲ್ಲಿರುವ ಅದರ ಆಕಾರದಲ್ಲಿ ಜಡವ ಲ್ಲದ ಚೈತನ್ಯಾಕಾರವನ್ನು ಭಾವಿಸುವುದೇ ಸಂವಿದ್ರೂಪವೆನಿಸುತ್ತದೆ" ಈ ಶ್ರುತಿಗಳಲ್ಲಿ ಸ್ಥೂಲವಸ್ತುಗಳಿಗಿಂತಲೂ ಸೂಕ್ಷ್ಮವಾದ ಮಾನಸಯಜ್ಞವನ್ನೇ ಉತ್ಕೃಷ್ಟವೆಂದು ತಿಳಿಸಲಾಗಿದೆ. ಆದ್ದರಿಂದ ಮಾನಸಿಕಬ್ರಹ್ಮವಿದ್ಯೆಗೆ ಅಂಗವಾದ ಯೂಪವು

ಸೂರ್ಯನಿಗಿಂತಲೂ ಉತ್ಕೃಷ್ಟವೆನಿಸಿದೆ. "ಈ ಆದಿತ್ಯವೇ ಬ್ರಹ್ಮ" ಎಂಬಲ್ಲಿ ಸೂರ್ಯನನ್ನೇ ಬ್ರಹ್ಮವೆಂದು ಹೇಳಿದ್ದರಿಂದ ಅವನೇ ಸರ್ವೋತ್ಕೃಷ್ಟನೆಂದು ಹೇಳಿದ್ದು ಯುಕ್ತವಲ್ಲ. "ಸುಖವೇ ಬ್ರಹ್ಮ, ಆಕಾಶವೇ ಬ್ರಹ್ಮ, ಅನ್ನವೇ ಬ್ರಹ್ಮ" ಎಂಬಲ್ಲಿ ಶಿವನೇ ಉಪಾದಾನಕಾರಣವಾಗಿರುವುದರಿಂದ ಎಲ್ಲವನ್ನೂ ಬ್ರಹ್ಮವೆಂದು ಹೇಳಿದೆ. "ಆದಿತ್ಯನೊಳಗೆ ಇರುವ ಹಿರಣ್ಮಯಪುರುಷನು ಇವನೇ" ಎಂಬಲ್ಲಿ ಪರಶಿವನೇ ಸೂರ್ಯನಲ್ಲಿ ಅಂತರ್ಯಾಮಿಯಾಗಿರುವುದರಿಂದ ಸೂರ್ಯನೇ ಸರ್ವೋತ್ಕೃಷ್ಟನೆಂದು ಹೇಳಿದ್ದೂ ಸಹ ಯುಕ್ತವಲ್ಲ. "ಅಗ್ನಿಯಲ್ಲಿಯೂ ರುದ್ರನೇ" ಎಂದು ಮುಂತಾಗಿ ಶ್ರುತಿಯಲ್ಲಿ ಶಿವನೇ ಸರ್ವಾಂತರ್ಯಾಮಿ ಎಂದು ವ್ಯವಸ್ಥೆಯಾಗಿರುವುದರಿಂದ ಮಾನಸಿಕೋದ್ಗೀಥವಿದ್ಯೆಗೆ ಅಂಗವಾದ ಯೂಪ ಮೊದಲಾದವುಗಳ ಉಪಾಸನವೂ ಉತ್ಕೃಷ್ಟವೆಂಬಲ್ಲಿ ವಿರೋಧವೇನಿಲ್ಲ.

ನನು "ಗಚ್ಛಂಸ್ತಿಷ್ಠನ್ನುಪವಿಶನ್ ಶಯಾನೋಽಪ್ಯನ್ಯಥಾಪಿ ವಾ । ಯಥೇಚ್ಛಯಾ ವಸೇದ್ವಿದ್ವಾನ್ ಆತ್ಮಾರಾಮಸ್ಸದಾ ಮುನಿಃ ॥" ಇತ್ಯಾದೌ ಬ್ರಹ್ಮೋಪಾಸಕಸ್ಯ ಆಸನಕಾಲಾದಿನಿಯಮಾದರ್ಶನಾತ್ ದಹರಾದಿವಿದ್ಯೋಪಾಸಕಾನಾಂ ಆಸನಾದ್ಯಪೇಕ್ಷಾ ಸಂಭವತೀತ್ಯಾಶಂಕಾಯಾಮಧಿಕರಣಾಂತರಂ ದರ್ಶಯತಿ. ಆಸೀನಾಧಿಕರಣಂ ॥ ೫ ॥

ಆಸೀನಸ್ಸಂಭವಾತ್ ॥ ೭ ॥ "ತ್ರಿರುನ್ನತಂ ಸ್ಥಾಪ್ಯ ಸಮಂ ಶರೀರಂ ಹೃದೀಂದ್ರಿಯಾಣಿ ಮನಸಾ ಸನ್ನಿವೇಶ್ಯ । ಬ್ರಹ್ಮೋಡುಪೇನ ಪ್ರತರೇತ ವಿದ್ವಾನ್ ಸ್ರೋತಾಂಸಿ ಸರ್ವಾಣಿ ಭಯಾವಹಾನಿ ॥" ಇತಿ ಶ್ವೇತಾಶ್ವತರೇ, "ವಿವಿಕ್ತದೇಶೇ ತು ಸುಖಾಸನಸ್ಥಃ ಶುಚಿಸ್ಸಮಗ್ರೀವಶಿರಶ್ಶರೀರಃ । ಅತ್ಯಾಶ್ರಮಸ್ಥಃ ಸಕಲೇಂದ್ರಿಯಾಣಿ ನಿರುಧ್ಯ ಭಕ್ತ್ಯಾ ಸ್ವಗುರುಂ ಪ್ರಣಮ್ಯ ॥" ಇತಿ ಕೈವಲ್ಯೇ ಶ್ರೂಯತೇ. ಸುಖಾಸನೇ ಸಮಾಸೀನಸ್ಸನ್ ದಹರಾದ್ಯುಪಾಸನಾರೂಪಶಿವೈಕಧ್ಯಾನಂ ಕುರ್ಯಾತ್. ಕುತಃ? ಸಂಭವಾತ್. ಪದ್ಮಾಸನಾದ್ಯಾಸನೇಷು ಸಮಾಸೀನಸ್ಯೈವ ಚಿತ್ತೈಕಾಗ್ರ್ಯಸಂಭವಾತ್ ಇತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಅತ್ರ, ಮೋಕ್ಷಸಾಧನಭೂತದಹರಾದ್ಯುಪಾಸನಾತ್ಮಕಂ ಜ್ಞಾನಂ ಅಸಕೃದಾವರ್ತನಂ ತತಃ ಸ್ಮೃತಿರೂಪಂ ಆಸನಾಭ್ಯಾಸಪೂರ್ವಕಂ ಉತ ತದತಿರಿಕ್ತಂ ವೇತಿ ಸಂದೇಹಃ. "ಗಚ್ಛಂಸ್ತಿಷ್ಠನ್ ಸ್ವಾತ್ಮಾರಾಮಸ್ಸದಾ ಮುನಿಃ ॥", "ಜ್ಯೋತಿರ್ಲಿಂಗಂ ಭ್ರುವೋರ್ಮಧ್ಯೇ ನಿತ್ಯಂ ಧ್ಯಾಯೇತ್ಸದಾ ಯತಿಃ" ಇತ್ಯಾದಿಷು ಬ್ರಹ್ಮೋಪಾಸನೇ ಪದ್ಮಾಸನಾದಿನಿಯಮಾದರ್ಶನಾತ್ ಮನೋರೂಪೋಪಾಸನಸ್ಯ ಶರೀರಕೃತಸ್ವಸ್ತಿಕಾದ್ಯಾಸನಾದಿವಿಧಾನಪ್ರಯೋಜನಾಭಾವಾತ್, "ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ" ಇತಿ ಸರ್ವೇಷಾಂ ಕರ್ಮಣಾಂ ಮನಃ

ಪ್ರಾಧಾನ್ಯೋಪದೇಶಾಚ್ಚ ಮುಮುಕ್ಷೂಣಾಂ ಉಪಾಸನೇ ನ ಹ್ಯಾಸನ ನಿಯಮ ಇತಿ ಪ್ರಾಪ್ತೇ ವದಾಮಃ. ಶ್ವೇತಾಶ್ವತರಕೈವಲ್ಯಾದ್ಯುಪ ನಿಷತ್ಸು ಬ್ರಹ್ಮವಿದ್ಯಾಕಾಮಾನಾಂ ಆಸನಪೂರ್ವಕತ್ವೇನ ತದುಪಾಸನ ವಿಧ್ಯುಪದೇಶಾತ್ ಆರೂಢಾನಾಂ ಆಸನನಿಯಮಾಭಾವೇನ ನ ವಿರುಧ್ಯತೇ. "ಸಾಧನಂ ವಿನಾ ಸಾಧ್ಯಾನಿಷ್ಪತ್ತೇಃ" ಇತಿ ನ್ಯಾಯಾತ್ ಸ್ಥಿತಿ ಗತ್ಯೋಃ ಪ್ರಯತ್ನಸಾಪೇಕ್ಷತ್ವಾತ್ ಶಯಾನೇ ಚ ನಿದ್ರಾಸಂಭವಾತ್ ಆಸೀನಸ್ಯೈವ ಚಿತ್ತೈಕಾಗ್ರತಾ ಭವತಿ. ತಸ್ಮಾದ್ "ಆಸೀನಸ್ಸನ್ ಬ್ರಹ್ಮೋಪಾಸನಮನುತಿಷ್ಠೇತ" ಇತಿ ಶಾಸ್ತ್ರನಿಯಮಾವಗಮಾತ್ ಆಸನ ಪೂರ್ವಕತ್ವೇನ ದಹರಾದ್ಯುಪಾಸನಂ ಮುಮುಕ್ಷುಭಿಃ ಕರ್ತವ್ಯಂ.

"ಬ್ರಹ್ಮಜ್ಞಾನಿಯೂ ಆತ್ಮಾರಾಮನಾಗಿ ಯಥೇಚ್ಛವಾಗಿರಬಹುದು" ಎಂಬಲ್ಲಿ ಬ್ರಹ್ಮೋಪಾಸಕನಿಗೆ ಆಸನ, ಕಾಲ ಮೊದಲಾದ ನಿಯಮವನ್ನು ಹೇಳಿಲ್ಲವಾದ್ದರಿಂದ ದಹರ ಶಾಂಡಿಲ್ಯ ಉದ್ಗೀಥ ಉಪಕೋಸಲ ಮೊದಲಾದ ವಿದ್ಯೆಗಳನ್ನಾಶ್ರಯಿಸಿದವರಿಗೂ ಆಸನಾದಿಗಳು ಬೇಕೇ ಬೇಡವೇ ? ಎಂದಾಶಂಕಿಸಿ ತಿಳಿಸುತ್ತಾನೆ. "ದೇಹವನ್ನು ನೆಟ್ಟಗೆ ನಿಲ್ಲಿಸಿ ಇಂದ್ರಿಯಗಳನ್ನು ಮನಸ್ಸಿನೊಡನೆ ಹೃದಯದಲ್ಲಿ ನೆಲೆಗೊಳಿಸಿ ಸಾಧಕನು ಬ್ರಹ್ಮವೆಂಬ ದೋಣಿಯಿಂದ ಭಯಂಕರವಾದ ವಿಷಮಪ್ರವಾಹಗಳನ್ನು ದಾಟಬೇಕು" ಎಂದು ಶ್ವೇತಾಶ್ವತರದಲ್ಲಿಯೂ, "ಸಾಧಕನು ನಿರ್ಮಲನಾಗಿ ಶಿರಸ್ಸು ಕುತ್ತಿಗೆಗಳನ್ನು ನೆಟ್ಟಗೆ ಮಾಡಿಕೊಂಡು ಆಶ್ರಮಧರ್ಮಗಳಿಗೆ ಸಿಲುಕದಂತೆ ನಿರ್ಜನ ಪ್ರದೇಶದಲ್ಲಿ ಕುಳಿತು ಎಲ್ಲಾ ಇಂದ್ರಿಯಗಳನ್ನೂ ತಡೆದು ಭಕ್ತಿಯಿಂದ ಗುರುವಿಗೆ ವಂದಿಸಿ ಆತ್ಮನನ್ನು ಚಿಂತಿಸಬೇಕು" ಎಂದು ಕೈವಲ್ಯದಲ್ಲೂ ಹೇಳಲಾಗಿದೆ. ಆದ್ದರಿಂದ ಆಸನದಲ್ಲಿ ಸಾಧಕನು ಸುಖವಾಗಿ ನೆಲಸಿ ದಹರಾಕಾಶದಲ್ಲಿ ಪರಶಿವನನ್ನು ಧ್ಯಾನಿಸಬೇಕು ; ಯಾಕೆಂದರೆ ಪದ್ಮಾಸನ ಮೊದಲಾದ ಆಸನಗಳಲ್ಲಿ ನೆಲಸಿದವನಿಗೆ ಚಿತ್ತೈಕಾಗ್ರತೆಯು ಸಂಭವಿಸುತ್ತದೆ ಎಂಬುದು ಸೂತ್ರದ ಸೂಕ್ಷ್ಮಾರ್ಥ. ಮೋಕ್ಷಕ್ಕೆ ಸಾಧನವೆನಿಸಿದ ದಹರ ಶಾಂಡಿಲ್ಯ ಮೊದಲಾದ ಉಪಾಸನರೂಪವಾದ ಜ್ಞಾನವನ್ನು ಸಾಧಕನು ಬಾರಿಬಾರಿಗೂ ಅನುವರ್ತಿಸುವಾಗ ಆಸನಗಳನ್ನಾಶ್ರಯಿಸಬೇಕೇ ಬೇಡವೇ ಎಂದು ಸಂಶಯಬರುತ್ತದೆ. "ನಿಂತಾಗ ಕುಂತಾಗ ಮಲಗುವಾಗ ಎಲ್ಲಾ ಕಾಲದಲ್ಲಿಯೂ ಮುನಿಯು ಆತ್ಮಾರಾಮನಾಗಿ ತೃಪ್ತಿಯಿಂದಿರ-ವನು "ಯತಿಯು ಭ್ರೂಮಧ್ಯದಲ್ಲಿ ಜ್ಯೋತಿರ್ಲಿಂಗವನ್ನು ಯಾವಾಗಲೂ ಧ್ಯಾನಿಸಬೇಕು" ಎಂಬಲ್ಲಿ ಬ್ರಹ್ಮೋಪಾಸನೆಗೆ ಪದ್ಮಾಸನದ ನಿಯಮವು ಕಂಡುಬಂದಿಲ್ಲ. ಮಾನಸಿಕ ಉಪಾಸನೆಗೆ ಶರೀರದಿಂದ ಹಾಕುವ ಸ್ವಸ್ತಿಕ ಮೊದಲಾದ ಆಸನಗಳಿಂದ ಏನೂ ಪ್ರಯೋಜನವಿಲ್ಲ. "ಮನಸ್ಸೇ ಮನುಷ್ಯರ ಬಂಧಮೋಕ್ಷಗಳಿಗೆ ಕಾರಣವಾಗಿದೆ" ಎಂಬಲ್ಲಿ ಎಲ್ಲಾ ಕರ್ಮಗಳಿಗೂ ಮನಸ್ಸನ್ನೇ ಪ್ರಧಾನವೆಂದು ಹೇಳಿದೆ. ಆದ್ದರಿಂದ ಮುಮುಕ್ಷುಗಳ ಉಪಾಸನೆಗೆ ಆಸನಗಳ ನಿಯಮವಿಲ್ಲವೆಂದು ಆಕ್ಷೇಪಬಂದರೆ ಸಮಾಧಾನವನ್ನು

ಹೇಳಲಾಗುವುದು. ಶ್ವೇತಾಶ್ವತರಾದ್ಯುಪನಿಷತ್ತುಗಳಲ್ಲಿ ಬ್ರಹ್ಮವಿದ್ಯಾಧಿಕಾರಿಗಳು ಆಸನಪೂರ್ವಕವಾಗಿಯೇ ಉಪಾಸನಮಾಡಬೇಕೆಂಬ ವಿಧಿಯನ್ನು ಹೇಳಿರುವುದರಿಂದ ಆರೂಢರಿಗೆ ಆಸನನಿಯಮವಿಲ್ಲದಿದ್ದರೂ ಆರುರುಕ್ಷುಗಳಿಗೆ ಆಸನ ಮುದ್ರೆ ಮತ್ತು ಲಕ್ಷ್ಯಗಳನ್ನು ಅಭ್ಯಾಸಮಾಡುವುದರಲ್ಲಿ ತಪ್ಪೇನಿಲ್ಲ. ಸಾಧನವಿಲ್ಲದೆ ಸಾಧ್ಯ ಹುಟ್ಟು ವುದಿಲ್ಲವೆಂಬ ನ್ಯಾಯದಿಂದ ನಿಂತವನೂ ತಿರುಗುವವನೂ ಪ್ರಯತ್ನದಲ್ಲಿ ನಿರತನಾಗ ಬೇಕಾಗುವುದರಿಂದಲೂ, ಮಲಗಿದ್ದಾಗ ನಿದ್ರೆಬರುವುದರಿಂದಲೂ ಕುಳಿತವನಿಗೇ ಚಿತ್ತೈಕಾಗ್ರತೆ ಸಂಭವಿಸುತ್ತದೆ. "ಹೀಗೆ ಸಾಧಕನು ಕುಳಿತುಕೊಂಡೇ ಬ್ರಹ್ಮವನ್ನು ಉಪಾಸನಮಾಡಬೇಕು" ಎಂಬ ಶಾಸ್ತ್ರನಿಯಮವಿರುವುದರಿಂದ ಆಸನಗಳ ಮೂಲ ಕವೇ ಮುಮುಕ್ಷುಗಳು ದಹರಾದ್ಯುಪಾಸನವನ್ನು ನಡೆಸಬೇಕು.

**ಅತ್ರ ಹೇತ್ವಂತರಮಾಹ. ಧ್ಯಾನಾಚ್ಚ ॥ ೮ ॥ "ತಸ್ಯಾಭಿಧ್ಯಾನಾ ದ್ಯೋಜನಾತತ್ತ್ವಭಾವಾತ್" ಇತಿ ಶ್ವೇತಾಶ್ವತರೇ ಸಮಾಸೀನಸ್ಯೈವ ಧ್ಯಾನವಿಧೇರುಪದೇಶಾತ್. ಕೈವಲ್ಯೇ ತದ್ವತ್ "ವಿವಿಕ್ತದೇಶೇ ತು ಸುಖಾಸನಸ್ಥಃ ಶುಚಿಃ ಸಮಗ್ರೀವಶಿರಶ್ಶರೀರಃ।" ಇತ್ಯಾದಿನಾ ಸಮಾ ಸೀನಸ್ಯೈವ "ಹೃತ್ಪುಂಡರೀಕಂ ವಿರಜಂ ವಿಶುದ್ಧಂ" ಇತ್ಯಾರಭ್ಯ "ಉಮಾಸಹಾಯಂ ಪ್ರಭುಂ ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ" "ಧ್ಯಾನನಿರ್ಮಥನಾಭ್ಯಾಸಾತ್ಪಾಶಂ ದಹತಿ ಪಂಡಿತಃ" ಇತ್ಯಾದಿನಾ ಸಮಾಸೀನಸ್ಯೈವ ಬ್ರಹ್ಮೋಪಾಸನರೂಪಧ್ಯಾನಂ ಸಮಂಜಸಂ. ಸಕಲೇ ತರವಸ್ತುಪರಿತ್ಯಾಗಪೂರ್ವಕಶಿವೈಕವಿಷಯಚಿತ್ತವೃತ್ತಿರೇವ ಧ್ಯಾನಂ.**

ಇಲ್ಲಿ ಬೇರೊಂದು ಹೇತುವಿದೆ. "ಪರಮೇಶ್ವರನ ಧ್ಯಾನದಿಂದಲೇ ಜೀವನಿಗೆ ಮಾಯೆ ಪೂರ್ಣವಾಗಿ ತೊಲಗುತ್ತದೆ" ಎಂದು ಶ್ವೇತಾಶ್ವತರದಲ್ಲಿ ಕುಳಿತುಕೊಂಡೇ ಧ್ಯಾನಮಾಡಬೇಕೆಂದು ವಿಧಿಸಲಾಗಿದೆ. ಹಾಗೆಯೇ ಕೈವಲ್ಯದಲ್ಲಿ "ನಿರ್ಜನಸ್ಥಲ ವಲ್ಲಿ ಶುಚಿರ್ಭೂತನಾಗಿ ಶರೀರವನ್ನು ನೆಟ್ಟಗೆ ನಿಲ್ಲಿಸಿ ಸಾಧಕನು ಸುಖವಾಗಿ ಕುಳಿತು ಧ್ಯಾನಿಸಬೇಕು" ಎಂದು ಹೇಳಿದ್ದರಿಂದ ಕುಳಿತವನೇ ಪರಮೇಶ್ವರನನ್ನು ಶುದ್ಧವಾದ ಹೃದಯಕಮಲದಲ್ಲಿ ಧ್ಯಾನಿಸುತ್ತ ಆವನಲ್ಲಿ ಸಮರಸವಾಗಿ ಬೆರೆಯುವನೆಂದು ತಿಳಿದುಬರುತ್ತದೆ. "ಧ್ಯಾನವೆಂಬ ಅಗ್ನಿಯ ಸಂಪರ್ಕದಿಂದಲೇ ಪಂಡಿತನು ಪಾಶ ವನ್ನು ಸುಡುತ್ತಾನೆ" ಎಂಬಲ್ಲಿ ಕುಳಿತವನಿಗೇ ಬ್ರಹ್ಮೋಪಾಸನರೂಪವಾದ ಧ್ಯಾನವು ಯುಕ್ತವಾಗಿ ಹೊಂದುತ್ತದೆ. ಎಲ್ಲಾವಸ್ತುಗಳಮೇಲೆ ಅಭಿಮಾನವನ್ನು ತೊರೆದು ಶಿವನೊಬ್ಬನಲ್ಲಿಯೇ ಮನಸ್ಸನ್ನು ನಿಲ್ಲಿಸುವುದೇ ಧ್ಯಾನವೆನಿಸುತ್ತದೆ.

**ಪುನರ್ಹೇತ್ವಂತರಮಾಹ. ಅಚಲತ್ವಂ ಚಾಪೇಕ್ಷ್ಯ ॥ ೯ ॥ "ತೇ ಧ್ಯಾನಯೋಗಾನುಗತಾ ಅಪಶ್ಯನ್ ದೇಹಾತ್ಮಶಕ್ತಿಂ ಸ್ವಗುಣೈರ್ನಿಗೂಢಾಂ" "ಯಃ ಕಾರಣಾನಿ ನಿಖಿಲಾನಿ ತಾನಿ ಕಾಲಾತ್ಮಯುಕ್ತಾನ್ಯಧಿತಿಷ್ಠತ್ಯೇಕಃ" ಇತ್ಯಾದಿನಾ ಅಚಲತ್ವಂ ನಿಶ್ಚಲತ್ವಂ ಚಾಪೇಕ್ಷ್ಯ ಉದ್ದಿಶ್ಯ ಆಸೀನ ಏವ**

ಪರಮೇಶ್ವರಧ್ಯಾನಂ ಕುರ್ಯಾದಿತ್ಯರ್ಥಃ.

ಮತ್ತೊಂದು ಹೇತುವನ್ನು ಹೇಳುತ್ತಾನೆ. "ದೇಹದೊಳಗೆ ಆತ್ಮಶಕ್ತಿಯು ತನ್ನ ಗುಣಗಳಿಂದಲೇ ಮುಚ್ಚಿದ್ದಿತೆಂಬುದನ್ನು ಅವರು ಧ್ಯಾನಯೋಗದಿಂದ ಕಂಡುಕೊಂಡರು." "ಕಾಲ ಮತ್ತು ಆತ್ಮರೊಡಗೂಡಿದ ಸಮಸ್ತ ಕಾರಣಗಳಿಗೂ ಯಾವನು ಆಶ್ರಯನಾಗಿರುವನೋ ಅವನೊಬ್ಬನೇ ನಿಶ್ಚಲನಾಗಿದ್ದಾನೆ " ಎಂಬಲ್ಲಿ ಸರ್ವಕಾರಣನಾದ ಪರಮಾತ್ಮನು ನಿಶ್ಚಲನೆಂದು ತಿಳಿದುಬರುವುದರಿಂದ ಸಾಧಕನೂ ನಿಶ್ಚಲನಾಗಿ ಕುಳಿತೇ ಪರಮೇಶ್ವರನನ್ನು ಧ್ಯಾನಿಸಬೇಕು.

ಪುನರ್ಹೇತ್ವಂತರಮಾಹ. ಸ್ಮರಂತಿ ಚ ॥ ೧೦ ॥ "ನ ತಸ್ಯ ರೋಗೋ ನ ಜರಾ ನ ಮೃತ್ಯುಃಪ್ರಾಪ್ತಸ್ಯ ಯೋಗಾಗ್ನಿಮಯಂ ಶರೀರಂ। "ಲಘುತ್ವಮಾರೋಗ್ಯಮಲೋಲುಪತ್ವಂ ವರ್ಣಪ್ರಸಾದಂ ಸ್ವರಸೌಷ್ಠವಂ ಚ ॥ " ಇತ್ಯಾದಿನಾ ಶ್ವೇತಾಶ್ವತರೇ ಸಮಾಸೀನಸ್ಯ ಶಿವಧ್ಯಾನಯೋಗನಿಷ್ಠಸ್ಯ ಮಹಿಮಾನಂ ಬಹುಧಾ ಸ್ಮರಂತಿ. ಚಕಾರೋಽತ್ರ ನಿಶ್ಚಯಾರ್ಥಃ. "ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ । ನಾತ್ಯುಚ್ಛ್ರಿತಂ ನಾತಿನೀಚಂ ಚೇಲಾಜಿನಕುಶೋತ್ತರಂ । ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ । ಉಪವಿಶ್ಯಾಸನೇ ಯುಂಜೇದ್ಯೋಗಮಾತ್ಮವಿಶುದ್ಧಯೇ ॥ " ಇತ್ಯಾದಿನಾ ಸ್ಮೃತಾವಪಿ ತದ್ವದುಪದಿಶ್ಯತೇ.

ಮತ್ತೊಂದು ಹೇತುವಿದೆ. "ಯೋಗದಿಂದ ತೇಜೋಮಯವಾದ ಶರೀರವನ್ನು ಪಡೆದವನಿಗೆ ರೋಗವಾಗಲಿ ಜರಾಮರಣಗಳಾಗಲೀ ಸಂಭವಿಸುವುದಿಲ್ಲ. ಅವನ ದೇಹವು ಲಘುವೂ ನಿಶ್ಚಲವೂ ಅರೋಗದೃಢವೂ ಆಗುವುದು. ಅವನ ಬಾಯಿಂದ ಬರುವ ಶಬ್ದಗಳು ಪ್ರಸನ್ನವೂ ಸಮೀಚೀನವೂ ಆಗಿರುವುವು" ಎಂದು ಶ್ವೇತಾಶ್ವತರ ಶ್ರುತಿಯು ಕುಳಿತುಕೊಂಡು ಯೋಗಾಭ್ಯಾಸಮಾಡುವವನ ಮಹಿಮೆಯನ್ನು ತಿಳಿಸಿದೆ. ಸೂತ್ರದಲ್ಲಿ ಬಂದಿರುವ ಚಕಾರವು ಇದನ್ನು ನಿಶ್ಚಯವೆಂದು ತಿಳಿಸುತ್ತದೆ. "ಶುಚಿಯಾದೆಡೆಯಲ್ಲಿ ಸಾಧಕನು ಜಿಂಕೆಯ ಚರ್ಮದ ಮೇಲೆ ದರ್ಭೆಯನ್ನು ಹಾಕಿ ಅದರ ಮೇಲೆ ಮೈಯನ್ನು ಹೆಚ್ಚಾಗಿ ಉದ್ದವಾಗದಂತೆಯೂ ಬಹಳವಾಗಿ ಕುಗ್ಗಿಸದಂತೆಯೂ ಮಾಡಿಕೊಂಡು ಆಸನದಲ್ಲಿ ಸ್ಥಿರವಾಗಿ ಕುಳಿತು ಮನಸ್ಸನ್ನು ಶಿವನೊಬ್ಬನಲ್ಲಿಯೇ ನಿಲಿಸಿ ಚಿತ್ತ ಮತ್ತು ಇಂದ್ರಿಯಗಳ ವೃತ್ತಿಯನ್ನು ತಡೆದು ಆತ್ಮಶುದ್ಧಿಗಾಗಿಯೇ ಶಿವಯೋಗವನ್ನು ಆಚರಿಸಬೇಕು" ಎಂದು ಸ್ಮೃತಿಯಲ್ಲಿಯೂ ಹೇಳಲಾಗಿದೆ.

ಪುನರ್ಹೇತ್ವಂತರಮಾಹ. ಯತ್ರೈಕಾಗ್ರತಾ ತತ್ರಾವಿಶೇಷಾತ್ ॥ ೧೧ ॥ "ದೇವಾಗಾರೇ ತರುಮೂಲೇ ಗುಹಾಯಾಂ ವಸೇದಸಂಗೋ ಲಕ್ಷಿತಶೀಲವೃತ್ತಃ। ನಿರಿಂಧನಜ್ಯೋತಿರಿವೋಪಶಾಂತಃ ನ ಚೋದ್ವಿಜೇದ್ಬ್ರಹ್ಮವಿದತ್ರ ಲೋಕೇ ದುಷ್ಟಾಶ್ಚಯುಕ್ತಮಿವ ನಾಹಮಿದಂ ವಿದ್ವಾ

ನ್ಮನೋ ಧಾರಯತಿ ಪ್ರಯತ್ನತಃ । ಸಮೇ ಶುಚೌ ಶರ್ಕರಾವಹ್ನಿವಾಲುಕಾ ವಿವರ್ಜಿತೇ ಶಬ್ದಜಲಾಶ್ರಯಾದಿಭಿಃ । ಮನೋಽನುಕೂಲೇ ನ ಚ ನೇತ್ರಪೀಡನೇ ಗುಹಾನಿವಾತಾಶ್ರಯಣೇ ಪ್ರಯೋಜಯೇತ್ ॥ ” ಇತ್ಯಾದಿನಾ ಏಕಾಗ್ರತಾತಿರಿಕ್ತದೇಶಕಾಲವಿಶೇಷಾಶ್ರಯಣಾದೇಕಾಗ್ರತಾನುಕೂಲೋ ಯೋ ದೇಶಃ ಕಾಲಶ್ಚ ಸ ಏವೋಪಾಸನಸ್ಯ ದೇಶಃ ಕಾಲಶ್ಚೇತಿ ಶಾಸ್ತ್ರೇ ನಿರ್ಣೀಯತೇ. ತಸ್ಮಾತ್ ನದೀತೀರದೇವಾಲಯಪುಣ್ಯಕ್ಷೇತ್ರಸ್ಯ ಗ್ರಾಮಮಧ್ಯೇ ಯತ್ರ ಯಸ್ಮಿನ್ ಪ್ರದೇಶೇ ಮನಸ ಏಕಾಗ್ರತಾ ಚಿತ್ತಪ್ರಸನ್ನತ್ವಂ, ತತ್ರ ಧ್ಯಾನಂ ನಿರಂತರಶಿವೋಪಾಸನಾತ್ಮಕಂ ಕರ್ತವ್ಯಂ. ಕುತಃ? ಅವಿಶೇಷಾತ್. ಶುದ್ಧಾಂತಃಕರಣಸ್ಯ ಸರ್ವತ್ರಾಪಿ ಮನಃಪ್ರಸಾದಸ್ಯ ತುಲ್ಯತ್ವಾದಿತಿ ನಿಶ್ಚೀಯತೇ.

ಮತ್ತೊಂದು ಕಾರಣವೂ ಇದೆ. “ ದೇವಾಲಯದಲ್ಲೂ ಮರದ ಬುಡದಲ್ಲೂ ಗವಿಯಲ್ಲೂ ಸಾಧಕನು ಅನಾಸಕ್ತನಾಗಿ ಶೀಲಶುದ್ಧಿಯಿಂದ ನೆಲಸಬೇಕು. ಕಟ್ಟಿಗೆಯಿಲ್ಲದೆ ಆರಿದ ಜ್ವಾಲೆಯಂತೆ ಸಾಧಕನು ಶಾಂತನಾಗಿ ಯಾರೊಡನೆಯೂ ಕೋಪಮಾಡಬಾರದು. ಜ್ಞಾನಿಯು ಎಚ್ಚರದಪ್ಪಿದರೆ ದುಷ್ಟಾಶ್ವದೊಡಗೂಡಿದ ರಥದಂತೆ ಮನಸ್ಸನ್ನು ನಿಗ್ರಹಿಸಲಶಕ್ತನಾಗುವನು. ಸಕ್ಕರೆ, ಬೆಂಕಿ, ಮರಳು ಇಲ್ಲದಿರುವ ಮತ್ತು ಹೆಚ್ಚಾಗಿ ನೀರು ಸುರಿಯದೆಯೂ ಮತ್ತು ವ್ಯವಹಾರಕ್ಕವಕಾಶವಿಲ್ಲದೆಯೂ ಇರುವ ಶುಚಿಯಾದ ಜಾಗದಲ್ಲೂ, ಗಾಳಿಯಿಲ್ಲದ ಗುಹೆಯಲ್ಲೂ, ಕಣ್ಣಿಗೆ ಘೋರವಾದ ದೃಶ್ಯಗಳು ಬೀಳದಿರುವ ಕಡೆಗಳಲ್ಲೂ ಸಾಧಕನು ಯೋಗವನ್ನು ಅಭ್ಯಾಸಮಾಡಬೇಕು ” ಎಂಬಲ್ಲಿ ಏಕಾಗ್ರತೆಗೆ ಅತಿರಿಕ್ತವಾದ ದೇಶ ಕಾಲಗಳನ್ನಾಶ್ರಯಿಸುವುದಕ್ಕಿಂತಲೂ ತದನುಗುಣವಾದ ಕಾಲ ದೇಶಗಳನ್ನು ಆಶ್ರಯಿಸುವುದೇ ಉತ್ತಮವೆಂದು ನಿರ್ಣಯಿಸಲಾಗಿದೆ. ಆದ್ದರಿಂದ ನದೀತೀರ, ದೇವಾಲಯ, ಪುಣ್ಯಕ್ಷೇತ್ರಗಳಂತೆಯೇ ಗ್ರಾಮಮಧ್ಯದಲ್ಲೂ ಎಲ್ಲೆಲ್ಲಿ ಮನಸ್ಸು ಪ್ರಸನ್ನವಾಗುವುದೋ ಅಲ್ಲೆಲ್ಲಾ ನಿರಂತರವೂ ಶಿವನ ಉಪಾಸನವನ್ನು ನಡೆಸಬೇಕು; ಯಾಕೆಂದರೆ ಉಪಾಸನೆಗೆ ಇಂತಹ ಅಂತಹ ಸ್ಥಲವೆಂಬ ವಿಶೇಷವೇನೂ ಇಲ್ಲ. ಶುದ್ಧಾಂತಃಕರಣನಿಗೆ ಎಲ್ಲಾ ಕಡೆಯಲ್ಲೂ ಮನಸ್ಸಿನ ಪ್ರಸನ್ನತೆ ಸಮನಾಗಿಯೇ ಇರುತ್ತದೆ.

ಆಸನಮುದ್ರಾಲಕ್ಷ್ಯಾಭ್ಯಾಸೇನ ಶಿವಧ್ಯಾನಂ ಕತಿ ಸಂವತ್ಸರಾಣಿ ಮುಮುಕ್ಷುಭಿಃ ಕರ್ತವ್ಯಂ ಇತ್ಯಾಕಾಂಕ್ಷಾಯಾಮಾಹ. ಆಪ್ರಯಾಣಾತ್ತತ್ರಾಪಿ ಹಿ ದೃಷ್ಟಂ ॥ ೧೨ ॥ “ ಸ ಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ ” ಇತಿ ಶ್ರುತಿದರ್ಶನಾತ್ ಆಪ್ರಯಾಣಾತ್ ಆಮರಣಾದನುವರ್ತನೀಯಂ ಶಿವಧ್ಯಾನಂ. ಕುತಃ? ತತ್ರಾಪಿ ಹಿ ದೃಷ್ಟಂ. “ ಜ್ಞಾತ್ವಾ ದೇವಂ ವಿಶ್ವಪಾಶಾಪನೀತಃ ಕ್ಷೀಣೈಃ ಕ್ಲೇಶೈರ್ಜನ್ಮಮೃತ್ಯುಪ್ರಹಾಣಿಃ”, “ ತಸ್ಯಾಭಿಧ್ಯಾನಾತ್ತೃತೀಯದೇಹ

**ಭೇಧೇ ವಿಶ್ವೈಶ್ವರ್ಯಂ ಕೇವಲ ಆಪ್ತಕಾಮಃ " ಇತ್ಯಾದಿನಾ ತೃತೀಯ ದೇಹಸಂಜ್ಞಿಕತಮೋಽಜ್ಞಾನನಿವೃತ್ತಿಪೂರ್ವಕಶಿವಸಾಕ್ಷಾತ್ಕಾರಪರ್ಯಂತಂ ಶಿವೋಪಾಸನಂ ದೃಷ್ಟಂ. "ಯಂ ಯಂ ವಾಪಿ ಸ್ಮರನ್ ಭಾವಂ ತ್ಯಜತ್ಯಂತೇ ಕಲೇಬರಂ। ತಂ ತಮೇವೈತಿ ತತ್ತ್ವಜ್ಞಸ್ತದಾ ತದ್ಭಾವಭಾವಿತಃ ॥" ಇತಿ ಸ್ಮೃತೌ ಕಳೇಬರಪತನೇ ಶಿವತಾದಾತ್ಮ್ಯಂ ಶಿವೋಪಾಸಕಾನಾಮುಪದಿಷ್ಟಂ. ಸ್ಥೂಲಕಳೇಬರಸ್ಯ ಬಹುವಾರಪತನದರ್ಶನಾತ್ "ತ್ಯಜೇದಂತೇ ಕಳೇಬರಂ" ಇತ್ಯನೇನ ಕಾರಣದೇಹಪತನಮೇವಾ ಗಮ್ಯತೇ. ಅತಃ ಕಾರಣದೇಹಸಂಜ್ಞಿಕಪಾಶವಿಚ್ಛೇದನಾರ್ಥಂ ಶ್ರವಣಕೀರ್ತನಪೂಜಾದಿನಿಯಮೇನ ಶಿವಯೋಗಾಭ್ಯಾಸಃ ಮುಮುಕ್ಷೂಣಾಮಾವಶ್ಯಕ ಇತಿ ನಿರ್ದಿಶ್ಯತೇ.**

ಆಸನಮುದ್ರೆಗಳ ಅಭ್ಯಾಸದಿಂದ ಶಿವಧ್ಯಾನವನ್ನು ಮುಮುಕ್ಷುಗಳು ಎಷ್ಟು ಕಾಲ ಆಚರಿಸಬೇಕೆಂದು ಆಶಂಕಿಸಿ ತಿಳಿಸುತ್ತಾನೆ, " ದೇಹವಿರುವವರಿಗೂ ಅವನು ಹೀಗೆಯೇ ಧ್ಯಾನಿಸುತ್ತಲಿದ್ದು ಕೊನೆಗೆ ಬ್ರಹ್ಮಲೋಕಕ್ಕೆ ಹೋಗುತ್ತಾನೆ " ಎಂಬ ಶ್ರುತಿಇರುವುದರಿಂದ ಮರಣದವರೆಗೂ ಶಿವಧ್ಯಾನವನ್ನು ನಡೆಸುತ್ತಿರಲೇಬೇಕು. ಹಾಗೆಯೇ ಶಾಸ್ತ್ರದಲ್ಲಿ ಕಂಡುಬಂದಿದೆ. " ದೇವನನ್ನು ತಿಳಿದು ಎಲ್ಲಾ ಪಾಶಗಳಿಂದಲೂ ಬಿಡುಗಡೆಹೊಂದಿ, ಕ್ಲೇಶಗಳನ್ನು ಕಳೆದುಕೊಂಡು ಜನನಮರಣಗಳಿಂದ ದೂರವಾಗಬೇಕು" ಅವನ ನಿರಂತರ ಧ್ಯಾನದಿಂದ ಕಾರಣವೆಂಬ ಮೂರನೆಯ ದೇಹವನ್ನು ಕಳೆದುಕೊಂಡು ವಿಶ್ವಾತ್ಮನಲ್ಲಿ ಬೆರೆತವನು ಪೂರ್ಣಕಾಮನಾಗಿ ಕೇವಲನೆನಿಸುವನು " ಹೀಗೆ ಮೂರನೆಯ ದೇಹವೆಂಬ ತಮಸ್ಸು ಅಥವಾ ಅಜ್ಞಾನವನ್ನು ತೊಲಗಿಸಿಕೊಳ್ಳುವವರೆಗೂ ಶಿವೋಪಾಸನವು ನಡೆಯುತ್ತಲೇ ಇರಬೇಕು. " ಯಾವಭಾವವನ್ನು ಮನದಲ್ಲಿ ಸ್ಮರಿಸುತ್ತ ಜ್ಞಾನಿಯು ದೇಹವನ್ನು ತೊರೆಯುವನೋ ಅದೇ ಭಾವವನ್ನೇ ಅವನು ಮತ್ತೆ ಹೊಂದುತ್ತಾನೆ " ಎಂಬಲ್ಲಿ ದೇಹವನ್ನು ಬಿಡುವಾಗ ಶಿವೋಪಾಸಕರಿಗೆ ಶಿವತಾದಾತ್ಮ್ಯವನ್ನು ಹೇಳಲಾಗಿದೆ. ಸ್ಥೂಲದೇಹವು ಇಲ್ಲಿಯೇ ಬಹಳ ಕಾಲ ಬಿದ್ದಿರುವುದಾಗಿ ಕಾಣುವುದರಿಂದ ಇಲ್ಲಿ ದೇಹವನ್ನು ಬಿಡುವುದೆಂದರೆ ಕಾರಣದೇಹವನ್ನು ತೊರೆಯುವುದೆಂದು ಅರ್ಥವಾಗುತ್ತದೆ. ಈ ಕಾರಣದೇಹವೆಂಬ ಅಜ್ಞಾನವು ನಾಶವಾಗಲಿಕ್ಕಾಗಿ ಶಿವನ ಶ್ರವಣ ಕೀರ್ತನ ಪೂಜೆಗಳಿಗೆ ಸಂಬಂಧಿಸಿದ ಶಿವಯೋಗವನ್ನು ಮುಮುಕ್ಷುಗಳು ಅವಶ್ಯವಾಗಿ ಅಭ್ಯಾಸಮಾಡಬೇಕು.

**ಶಯಾನಸ್ಯ ನಿದ್ರಾದಿಪೀಡಿತತ್ವೇನ, ಗಮನಸ್ಯ ಕಂಟಕಾದಿಬಾಧಕತ್ವೇನ, ತಿಷ್ಠತಃ ಪಾದವೇದನಾಜನಕತ್ವೇನ, ಸಮಾಸೀನಸ್ಯೈವ ಶಿವೋಪಾಸನವಿಧಿರಾವಶ್ಯಕ ಇತ್ಯುಕ್ತಂ. ತಥಾಪಿ " ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ ", " ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ " ಇತಿ ಸ್ಮೃತಿದರ್ಶನಾತ್ ಉಪಾಸಕಸ್ಯ ಕಿಂ**

ಫಲಮಿತ್ಯಾಕಾಂಕ್ಷಾಯಾಮಧಿಕರಣಾಂತರೇಣ ನಿರಾಕರೋತಿ. ತದಧಿಗಮಾಧಿಕರಣಂ ॥ ೬ ॥ ತದಧಿಗಮ ಉತ್ತರಪೂರ್ವಾಘಯೋರಶ್ಲೇಷವಿನಾಶೌ ತದ್ವ್ಯಪದೇಶಾತ್ ॥ ೧೩ ॥ ತದಧಿಗಮೇ ತಸ್ಯ ಪರಮಶಿವಸ್ಯ ಅಧಿಗಮೇ ಧ್ಯಾನೋಪಾಸನಯಾ ಸಾಕ್ಷಾತ್ಕಾರೇ ಸತಿ ಉತ್ತರಪೂರ್ವಾಘಯೋಃ ಆಗಾಮಿಸಂಚಿತಪಾಪಯೋಃ ಅಶ್ಲೇಷವಿನಾಶೌ ಭವತಃ. ಆಗಾಮಿಪಾಪಸ್ಯ ಅಸಂಸ್ಪರ್ಶಃ ಸಂಚಿತಪಾಪಸ್ಯ ವಿನಾಶಶ್ಚ ಭವತಿ. ಕುತಃ? ತದ್ವ್ಯಪದೇಶಾತ್. "ತದ್ಯಥಾ ಪುಷ್ಕರಪಲಾಶ ಆಪೋ ನ ಸಂಶ್ಲಿಷ್ಯಂತೇ। ತದ್ಯಥೇಹೇಷಿಕಾತೂಲಮಗ್ನೌ ಪ್ರೋತಂ ಪ್ರದೂಯೇತ ॥", "ಯಥೈಧಾಂಸಿ ಸಮಿದ್ಧೋಽಗ್ನಿರ್ಭಸ್ಮಸಾತ್ಕುರುತೇಽನಿಶಂ", "ಜ್ಞಾನಾಗ್ನಿಸ್ಸರ್ವಕರ್ಮಾಣಿ ಭಸ್ಮಸಾತ್ಕುರುತೇಽರ್ಜನ" ಇತ್ಯಾದಿಸ್ಮೃತಿಷ್ವಾಗಾಮಿಸಂಚಿತಕರ್ಮಣೋರಶ್ಲೇಷವಿನಾಶವ್ಯಪದೇಶಾದಿತ್ಯರ್ಥಃ. ಸಂಚಿತಪ್ರಾರಬ್ಧಾತೀತಾಗಾಮಿಭೇದೇನ ಕರ್ಮಾಣಿ ಚತುರ್ವಿಧಾನಿ. ತತ್ರ ಪೂರ್ವಜನ್ಮಕೃತಾನಿ ಭವಿಷ್ಯದ್ದೇಹಜನನಯೋಗ್ಯಾನಿ ಸ್ವರ್ಗಾದಿಫಲೋದ್ದೇಶೇನ ಕೃತಾನಿ ಕರ್ಮಾಣಿ ಸಂಚಿತಾನಿ. ಮಹತಾ ಪ್ರಯಾಸೇನ ಶ್ರವಣಕೀರ್ತನಮನನಪೂಜಾದಿಮೋಕ್ಷಸಾಧಕವರ್ತಮಾನಶರೀರಾರಂಭಕಾಣಿ ಪೂರ್ವಜನ್ಮಸು ಕೃತಾನಿ ಕರ್ಮಾಣಿ ಪ್ರಾರಬ್ಧಾನಿ. ಬ್ರಹ್ಮಸಾಕ್ಷಾತ್ಕಾರೋಪಪತ್ತೇಃ ಪೂರ್ವಸ್ಮಿನ್ ಜನ್ಮನಿ ಜನ್ಮಾಂತರೇ ವಾ ಬ್ರಹ್ಮಸಾಕ್ಷಾತ್ಕಾರೋದ್ದೇಶೇನ ಕೃತಾನಿ ಕರ್ಮಾಣ್ಯತೀತಾನಿ. ಬ್ರಹ್ಮಸಾಕ್ಷಾತ್ಕಾರಾನಂತರಂ ಅಸ್ಮಿನ್ ಜನ್ಮನಿ ಕೃತಾನಿ ಕರ್ಮಾಣಿ ಆಗಾಮೀನಿ. ತತ್ರ ಚತುರ್ವಿಧಕರ್ಮಸು ಸಂಚಿತಾನಾಂ ಭವಿಷ್ಯದ್ದೇಹಪರಂಪರಾರೂಪಫಲಮನುತ್ಪಾದ್ಯೈವ ನಾಶಃ. ಆಗಾಮಿನಾಂ ಚ ಕರ್ಮಣಾಂ ದೇಹಾಭಿಮಾನಗಳಿತತ್ವೇನ ಕೃತತ್ವಾತ್ ಫಲಜನನಸಾಮರ್ಥ್ಯಂ ನ ಸಂಭವತಿ. ತಥಾಚ ಸ್ಮೃತಿಃ "ಪ್ರಾರಬ್ಧಂ ಭೋಗತೋ ನಶ್ಯಾತ್ ತತ್ತ್ವಜ್ಞಾನೇನ ಸಂಚಿತಂ। ಆಗಾಮಿದ್ವಿತಯಂ ಕರ್ಮ ತದ್ದ್ವೇಷಿಪ್ರಿಯವಾದಿನೋಃ॥ ಯಥಾ ರವಿಸ್ಸರ್ವರಸಾನ್ ಪ್ರಭುಂಕ್ತೇ ಹುತಾಶನಶ್ಚಾಪಿ ಚ ಸರ್ವಭಕ್ಷಕಃ। ತಥಾಚ ಯೋಗೀ ವಿಷಯಾನ್ ಪ್ರಭುಂಕ್ತೇ ನ ಲಿಪ್ಯತೇ ಪುಣ್ಯಪಾಪೈಶ್ಚ ಶುದ್ಧಃ॥" ಇತ್ಯಾದಿಷು ಬ್ರಹ್ಮೋಪಾಸಕಾನಾಂ ಸರ್ವಕರ್ಮಕ್ಷಯಫಲಾವಗಮಾತ್ "ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ" ಇತ್ಯಾದಿಸ್ಮೃತೀನಾಂ ಅಜ್ಞಾನವಿಷಯತ್ವಮಿತಿ ಸೂತ್ರಸೂಕ್ಷ್ಮಾರ್ಥಃ. ಪೂರ್ವಾಧಿಕರಣೇ ವಿದ್ಯಾಸ್ವರೂಪಂ ವಿಶೋಧ್ಯ ವಿದ್ಯಾಫಲವಿಚಾರಣಾರ್ಥಮಿದಮಧಿಕರಣಮಾರಭತೇ. ಬ್ರಹ್ಮವಿದ್ಯಾಪ್ರಾಪ್ತೌ ಪುರುಷಸ್ಯೋತ್ತರಪೂರ್ವಾಘವಿನಾಶಯೋರಶ್ಲೇಷವಿನಾಶೌ

ಶ್ರೂಯೇತೇ. "ತದ್ಯಾಥಾ ಪುಷ್ಕರಪಲಾಶೇ ಆಪೋ ನ ಶ್ಲಿಷ್ಯಂತೇ। ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ। ತಸ್ಯೈವಾತ್ಮಾ ಪರಾವರಂ ವಿದಿತ್ವಾ ನ ಕರ್ಮಣಾ ಲಿಪ್ಯತೇ ಪಾಪಕೇನ॥" ಇತ್ಯುತ್ತರಾಘಾಶ್ಲೇಷಃ. "ತದ್ಯಥೇಷಿಕಾತೂಲಮಗ್ನೌ ಪ್ರೋತಂ ಪ್ರದೂಯೇತೈವಂ ಹ್ಯಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ। ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ॥" ಇತಿ ಪೂರ್ವಾಘವಿನಾಶಃ. ಏತಾವದ ಶ್ಲೇಷವಿನಾಶೌ ವಿದ್ಯಾಫಲಭೂತೌ ಉಪಪದ್ಯೇತೇ ನವೇತಿ ಸಂಶಯಃ. ಕಿಂ ಯುಕ್ತಂ? ನೋಪಪದ್ಯೇತೇ ಇತಿ. ಕುತಃ? "ನಾಭುಕ್ತಂ ಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ" ಇತ್ಯಾದಿಶಾಸ್ತ್ರವಿರೋಧಾತ್. ಅಶ್ಲೇಷವಿನಾಶವ್ಯಪದೇಶಸ್ತು ಮೋಕ್ಷಸಾಧನಭೂತವಿದ್ಯಾವಿಧಾಯಕ ವಾಕ್ಯಶೇಷಗತಃ. ಕಥಂಚಾದ್ವಿದ್ಯಾ ಸ್ತುತಿಪ್ರತಿಪಾದನಾಪ್ಯುಪಪದ್ಯತೇ. ನಚ ವಿದ್ಯಾ ಪೂರ್ವೋತ್ತರಾಘಯೋಃ ಪ್ರಾಯಶ್ಚಿತ್ತತಯಾ ವಿಧೀಯತೇ, ಯೇನ ಪ್ರಾಯಶ್ಚಿತ್ತೇನ ಅಘವಿನಾಶ ಉಚ್ಯೇತ. ವಿದ್ಯಾ ಹಿ "ಬ್ರಹ್ಮವಿದಾಪ್ನೋತಿ ಪರಂ" ಇತಿ ಬ್ರಹ್ಮಪ್ರಾಪ್ತ್ಯುಪಾಯತಯಾ ವಿಧೀಯತೇ. ಅತೋ ವಿದ್ಯಾರ್ಥವಾದೋಽಯಮಘವಿನಾಶಾಶ್ಲೇಷ ವ್ಯಪದೇಶ ಇತ್ಯೇವಂ ಪ್ರಾಪ್ತೇಽಭಿಧೀಯತೇ ತದಧಿಗಮ ಇತಿ. ವಿದ್ಯಾ ಪ್ರಾಪ್ತೌ ಪುರುಷಸ್ಯ ವಿದ್ಯಾಮಾಹಾತ್ಮ್ಯಾದುತ್ತರಪೂರ್ವಾಘಯೋರ ಶ್ಲೇಷವಿನಾಶೌ ಉಪಪದ್ಯೇತೇ. ಕುತಃ? ಏವಂವಿಧಂ ಹಿ ವಿದ್ಯಾಮಾಹಾತ್ಮ್ಯಮವಗಮ್ಯತೇ. "ಏವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ। ಏವಂ ಹಾಽಸ್ಯ ಸರ್ವೇ ಪಾಪ್ಮಾನಃ ಪ್ರದೂಯಂತೇ॥", "ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಂ ಪರಮಂ ಸಾಮ್ಯಮುಪೈತಿ" ಇತ್ಯಾದಿಬಹುಶ್ರುತಿದರ್ಶನಾತ್. ನಚ "ನಾಭುಕ್ತಂ ಕ್ಷೀಯತೇ ಕರ್ಮ" ಇತ್ಯನೇನ ಶಾಸ್ತ್ರೇಣಾಸ್ಯ ವಿರೋಧಃ, ಭಿನ್ನವಿಷಯತ್ವಾತ್. ತದ್ಧಿ ಕರ್ಮಣಾಂ ಫಲಜನನಸಾಮರ್ಥ್ಯಂ ದ್ರಢಿಮವಿಷಯಂ. ಏತತ್ಪೂತ್ಪನ್ನಾಯಾಃ ವಿದ್ಯಾಯಾಃ ಪ್ರಾಕ್ಕೃತಾನಾಂ ಪಾಪಾನಾಂ ಫಲಜನನಶಕ್ತಿ ವಿನಾಶಸಾಮರ್ಥ್ಯಂ, ಉತ್ಪತ್ಸ್ಯಮಾನಾನಾಂ ಚ ಫಲಜನನಶಕ್ತ್ಯುತ್ಪತ್ತಿ ಪ್ರತಿಬಂಧಕರಣಸಾಮರ್ಥ್ಯಂ ಚ ಪ್ರತಿಪಾದಯತೀತಿ ದ್ವಯೋರ್ವಿಷಯ ಯೋರ್ಭಿದ್ಯತೇ. ಯಥಾಗ್ನಿಜಲಯೋರೌಷ್ಣ್ಯಂ ತನ್ನಿವಾರಣಸಾಮರ್ಥ್ಯಂಚ ವಿಷಯಯೋರ್ದ್ವಯೋಃ ಪ್ರಮಾಣಯೋರಪಿ ವಿಷಯಭೇದಾತ್ಪ್ರಾಮಾಣ್ಯಂ. ಏವಮತ್ರಾಪೀತಿ ನ ಕಶ್ಚಿದ್ವಿರೋಧಃ. ಅಘಸ್ಯಾಶ್ಲೇಷ ಕರಣಂ ವೈದಿಕಕರ್ಮಯೋಗ್ಯತಾವಾಸನಾಪ್ರತ್ಯವಾಯಹೇತುಶಕ್ತ್ಯುತ್ಪತ್ತಿಪ್ರತಿಬಂಧಕರಣಂ. ಅಘಾನಿ ಹಿ ಕೃತಾನಿ ಪುರುಷಸ್ಯ ವೈದಿಕಕರ್ಮ

ಯೋಗ್ಯತಾಂ ಸಜಾತೀಯಕರ್ಮಾಂತರಾರಂಭರುಚಿಂ ಪ್ರತ್ಯವಾಯಂ ಚ ಕುರ್ವಂತಿ. ಅಘಸ್ಯ ವಿನಾಶಕರಣಂ ಉತ್ಪನ್ನಾಯಾಸ್ತಚ್ಛಕ್ತೇರ್ವಿನಾಶ ಕರಣಂ. ಶಕ್ತಿರಪಿ ಪರಮಪುರುಷಾಪ್ರೀತಿರೇವ. ತದೇವಂ ವಿದ್ಯಾ ವೇದಿತುರ್ವೇದ್ಯಾರ್ಥಪ್ರಿಯತ್ವೇನ ಸ್ವಯಮಪಿ ನಿರತಿಶಯಪ್ರಿಯಾನತಿ ವೇದ್ಯಭೂತಪರಮಪುರುಷಶಿವಾರಾಧನರೂಪಾ ಪೂರ್ವಕೃತಾಘಸಂಚಯಜನಿತಪರಮಪುರುಷಾಪ್ರೀತಿಂ ವಿನಾಶಯತಿ. ಸೈವ ವಿದ್ಯಾ ಸ್ವೋತ್ಪತ್ತ್ಯುತ್ತರಕಾಲಭವಾಘನಿಮಿತ್ತಪರಮಪುರುಷಾಪ್ರೀತ್ಯುತ್ಪತ್ತಿಂ ಚ ಪ್ರತಿಬಧ್ನಾತಿ. ತದಿದಮಶ್ಲೇಷವಚನಂ ಪ್ರಾಮಾದಿಕವಿಷಯಂ ಮಂತವ್ಯಂ. "ನಾವಿರತೋ ದುಶ್ಚರಿತಾತ್" ಇತ್ಯಾದಿನಾ ಆಪ್ರಯಾಣಾತ್ ಅಹರಹರುತ್ಪದ್ಯಮಾನಾಯಾ ಉತ್ತರೋತ್ತರಾತಿಶಯಭೋಗಿನ್ಯಾಃ ವಿದ್ಯಾಯಾ ದುಶ್ಚರಿತವಿರತಿನಿಷ್ಪಾದ್ಯತ್ವಾವಗಮಾತ್ ವಿದುಷಾಂ ಜಗದ್ವಾಸನಾಯುಕ್ತಾನಾಂ ಆಗಾಮಿಸಂಚಿತಕರ್ಮಕ್ಷಯೇ ಸತಿ ಪ್ರಾರಬ್ಧಮಾತ್ರಂ ಅನುಭವೇನ ಜಹಾತಿ. ನಿರ್ಜಗದ್ವಾಸನಾನಾಂ ಅಯಸ್ಕಾಂತಸೂಚಿನ್ಯಾಯೇನ ಸಂತತಶಿವಾಕಾರಾಕಾರಿತಚಿತ್ತಾನಾಂ ಚತುರ್ವಿಧಕರ್ಮನಾಶೋ ಭವತೀತಿ ನಿಶ್ಚೀಯತೇ. ತಥಾ ಸ್ಕಾಂದೇ ಶ್ರೂಯತೇ "ಬ್ರಹ್ಮವಿತ್ಸರ್ವಕರ್ಮಾಣಿ ಶ್ರೌತಸ್ಮಾರ್ತಾನಿ ಭಕ್ತಿತಃ । ಕೃತ್ವಾ ಕಾಮ್ಯಾನಿ ಸಂತ್ಯಜ್ಯ ಸಂಸಾರೀವ ಪ್ರವರ್ತತೇ ॥ ಬ್ರಹ್ಮವಿದ್ವರಯೋಗೀ ತು ಶ್ರೌತಸ್ಮಾರ್ತಾನಿ ಸರ್ವದಾ । ಸಂತ್ಯಜ್ಯ ಪೂರ್ಣವೈರಾಗ್ಯಸಿದ್ಧ್ಯೈ ವೇದಾಂತಚಿಂತನಂ।ಧ್ಯಾನನಿಷ್ಠಾಂ ಪರಾ ಲಬ್ಧ್ವಾ ಭೈಕ್ಷ್ಯಾನ್ನಂ ಪ್ರಾಶಯೇನ್ಮಿತಂ ॥ ವರೀಯಾಖ್ಯೋ ಬ್ರಹ್ಮವಿಚ್ಚ ಸರ್ವವ್ಯಾಪಾರಮುತ್ಸೃಜನ್ । ನಿರಂತರಶಿವಧ್ಯಾನನಿಷ್ಠಾನುಷ್ಠಾನಬೋಧತಃ । ವಿಶ್ವವಿಸ್ಮರಣಂ ಪ್ರಾಪ್ಯ ಸುಪ್ತವದ್ವಾಸನಾಕ್ಷಯಃ । ಪರದತ್ತಾನ್ನಪಾನಾದೀನ್ ಪ್ರಾಶಯಿತ್ವಾ ನಿರಾಶಯಾ । ವಸೇದೇಕತ್ರ ನಿರತೋ ನಿತ್ಯಾನಂದಸ್ವಭಾವತಃ ॥ ವರಿಷ್ಠಾಖ್ಯೋ ಬ್ರಹ್ಮವಿಚ್ಚ ಶಿವತತ್ತ್ವೇ ನಿರಂತರಂ । ಚಿತ್ತಂ ವಿಲಾಪ್ಯ ಧ್ಯಾನೇನ ಜೀವತ್ಯಕ್ತಶರೀರವತ್ । ಸ್ವಬುದ್ಧ್ಯಾ ಪರಬುದ್ಧ್ಯಾ ಚ ಪುನರುತ್ಥಾನವರ್ಜಿತಃ । ಸಂತ್ಯಜ್ಯ ಶಿವತಾದಾತ್ಮ್ಯಸಿದ್ಧ್ಯಾ ಯೋಗೀ ವಸೇತ್ಸದಾ । ಚತುರ್ಣಾಂ ಮುಕ್ತಿರೇಕಾಪಿ ತಾರತಮ್ಯಂ ಪ್ರದೃಶ್ಯತೇ । ಪ್ರಥಮಸ್ಯ ದ್ವಿತೀಯಸ್ಯ ಪ್ರಾರಬ್ಧಂ ವಿದ್ಯತೇ ಸದಾ । ತೃತೀಯಸ್ಯ ತು ಪ್ರಾರಬ್ಧವಾರ್ತಾನುಭವ ಏವ ಹಿ । ಚತುರ್ಥಸ್ಯ ತು ಪ್ರಾರಬ್ಧಂ ನ ಸ್ಪೃಶೇನ್ನ ಚ ಲಿಪ್ಯತೇ ॥" ಇತಿ.

ಮಲಗಿದವನಿಗೆ ನಿದ್ರೆಯಿಂದ ತೊಂದರೆಯೂ ತಿರುಗಾಡುವವನಿಗೆ ಕಂಟಕಗಳಿಂದ ಬಾಧೆಯೂ, ನಿಂತವನಿಗೆ ಕಾಲಿನ ನೋವೂ ಆಗುವುದರಿಂದ ಕುಳಿತವನೇ ಶಿವನ

ಉಪಾಸನವನ್ನು ನಡೆಸಬಲ್ಲನೆಂದು ವಿಧಿಸಿದ್ದು ಯುಕ್ತವೇ ಆಗಿದೆ. ಆದರೂ "ತಾನು ಮಾಡಿದ ಶುಭಕರ್ಮಗಳನ್ನು ತಾನೇ ಅನುಭವಿಸಬೇಕು. ಎಷ್ಟೋ ಕಲ್ಪಗಳು ಕಳೆದರೂ ಕರ್ಮವನ್ನು ಅನುಭವಿಸದೆ ಕಳೆಯಲಾಗುವುದಿಲ್ಲ" ಎಂದು ಸ್ಮೃತಿಯಲ್ಲಿ ಹೇಳಿರುವುದರಿಂದ ಉಪಾಸನೆಗೆ ಫಲವೇನು ? ಎಂದು ಆಶಂಕಿಸಿ ನಿರಾಕರಿಸುತ್ತಾನೆ. ಧ್ಯಾನರೂಪವಾದ ಉಪಾಸನದಿಂದ ಪರಶಿವನ ಸಾಕ್ಷಾತ್ಕಾರವಾದರೆ ಮುಂದಿನ ಪಾಪದ ವಿಶ್ಲೇಷವೂ, ಹಿಂದಿನ ಪಾಪದ ವಿನಾಶವೂ ಸಂಘಟಿಸುತ್ತವೆ. ಜ್ಞಾನಿಗೆ ಮುಂದಿನ ಪಾಪವು ತಗಲುವುದಿಲ್ಲ ; ಹಿಂದಿನ ಪಾಪವು ನಶಿಸುತ್ತದೆ. ಹೀಗೆಂದು ಶ್ರುತಿಯೇ ಸ್ಪಷ್ಟವಾಗಿ ಉಪದೇಶಿಸಿದೆ. "ತಾವರೆಹೂವಿನ ದಳದಮೇಲೆ ಬಿದ್ದ ನೀರು ಹೇಗೆ ಅದಕ್ಕೆ ಅಂಟದೆ ಕೆಳಗೆ ಉದುರುವುದೋ, ಹತ್ತಿಯು ಬೆಂಕಿಯಲ್ಲಿ ಬಿದ್ದರೆ ಹೇಗೆ ಸುಟ್ಟುಹೋಗುವುದೋ ಹಾಗೆ ಕರ್ಮಗಳು ಜ್ಞಾನಿಗೆ ಅಂಟುವುದಿಲ್ಲ." "ಉರಿಯುವ ಬೆಂಕಿಯು ಕಟ್ಟಿಗೆಗಳನ್ನು ಸುಡುವಂತೆ ಜ್ಞಾನಾಗ್ನಿಯು ಎಲ್ಲಾ ಕರ್ಮಗಳನ್ನೂ ಸುಡುತ್ತದೆ" ಈ ಸ್ಮೃತಿಗಳಲ್ಲಿ ಆಗಾಮಿಕರ್ಮಗಳು ಜ್ಞಾನಿಗೆ ಅಂಟುವುದಿಲ್ಲವೆಂದೂ, ಸಂಚಿತಕರ್ಮಗಳು ನಶಿಸುತ್ತವೆ ಎಂದೂ ಹೇಳಲಾಗಿದೆ, ಸಂಚಿತ, ಪ್ರಾರಬ್ಧ, ಅತೀತ, ಆಗಾಮಿ ಎಂದು ಕರ್ಮಗಳು ನಾಲ್ಕುಬಗೆಯಾಗಿವೆ. ಸ್ವರ್ಗಾದಿ ಫಲವನ್ನು ಉದ್ದೇಶಿಸಿ ಹಿಂದಿನ ಜನ್ಮದಲ್ಲಿ ಮಾಡಿದ್ದು ಮುಂದೆ ದೇಹವನ್ನು ಕೊಡುವಂತಹ ಕರ್ಮಗಳು ಸಂಚಿತಗಳೆನಿಸಿವೆ. ಶ್ರವಣ ಕೀರ್ತನ ಮನನ ಪೂಜೆ ಮೊದಲಾದ ಮುಕ್ತಿಸಾಧನಗಳನ್ನು ಬಹಳ ಪ್ರಯಾಸದಿಂದ ಆಚರಿಸಲಿಕ್ಕೆ ಬೇಕಾದ ಶರೀರವನ್ನು ದೊರಕಿಸಲು ಹಿಂದಿನಜನ್ಮದಲ್ಲಿ ಮಾಡಿದ್ದ ಕರ್ಮಗಳು ಪ್ರಾರಬ್ಧಗಳೆನಿಸಿವೆ. ಬ್ರಹ್ಮಸಾಕ್ಷಾತ್ಕಾರವಾಗುವ ಮೊದಲು ಹಿಂದಿನಜನ್ಮದಲ್ಲೋ ಬೇರೆ ಜನ್ಮದಲ್ಲೋ ಬ್ರಹ್ಮಸಾಕ್ಷಾತ್ಕಾರಕ್ಕಾಗಿ ಮಾಡಿದ ಕರ್ಮಗಳು ಅತೀತಗಳೆನಿಸುತ್ತವೆ. ಬ್ರಹ್ಮಸಾಕ್ಷಾತ್ಕಾರವಾದಮೇಲೆ ಈ ಜನ್ಮದಲ್ಲಿ ಮಾಡಿದ ಕರ್ಮಗಳು ಆಗಾಮಿಕರ್ಮಗಳೆನಿಸುತ್ತವೆ. ಈ ನಾಲ್ಕರಲ್ಲಿ ಸಂಚಿತಕರ್ಮಗಳು ಜ್ಞಾನಿಗೆ ಮುಂದಿನ ದೇಹಪರಂಪರೆಯೆಂಬ ಫಲವನ್ನು ಕೊಡದೆಯೇ ನಷ್ಟವಾಗುತ್ತವೆ. ಆಗಾಮಿಕರ್ಮಗಳನ್ನು ದೇಹಾಭಿಮಾನವು ತೊಲಗಿದಮೇಲೆ ಮಾಡಿದ್ದರಿಂದ ಅವಕ್ಕೆ ಫಲವನನ್ನು ಹುಟ್ಟಿಸುವ ಸಾಮರ್ಥ್ಯವಿರುವುದಿಲ್ಲ. "ಪ್ರಾರಬ್ಧವು ಭೋಗದಿಂದಲೂ, ಸಂಚಿತವು ತತ್ತ್ವಜ್ಞಾನದಿಂದಲೂ ನಶಿಸುತ್ತವೆ. ಆಗಾಮಿಕರ್ಮಗಳು ಜ್ಞಾನಿಯ ಶತ್ರುಗಳಿಗೂ, ಅತೀತಕರ್ಮಗಳು ಅವನ ಪ್ರಿಯವಾದಿಗಳಿಗೂ ಸೇರುತ್ತವೆ.'' ಸೂರ್ಯನೂ, ಸರ್ವಭಕ್ಷಕನಾದ ಅಗ್ನಿಯೂ ಎಲ್ಲಾ ರಸಗಳನ್ನು ಭೋಗಿಸುವಂತೆ ಯೋಗಿಯು ಎಲ್ಲಾ ವಿಷಯಗಳನ್ನು ಭೋಗಿಸಿದರೂ ಶುದ್ಧನಾಗಿರುವನು. ಅವನಿಗೆ ಪುಣ್ಯಪಾಪಗಳು ಅಂಟುವುದಿಲ್ಲ." ಇಲ್ಲಿ ಬ್ರಹ್ಮೋಪಾಸಕರಿಗೆ ಎಲ್ಲಾ ಕರ್ಮಗಳ ನಾಶವನ್ನೇ ಫಲವೆಂದು ಹೇಳಿದೆಯಾದ್ದರಿಂದ "ಮಾಡಿದ ಶುಭಾಶುಭಕರ್ಮಗಳನ್ನು ಅವನವನೇ ಅವಶ್ಯವಾಗಿ ಅನುಭವಿಸಬೇಕು" ಎಂದು ತಿಳಿಸುವ ಸ್ಮೃತಿಗಳು ಅಜ್ಞಾನಿಗಳಿಗೆ ಮಾತ್ರವೇ ಅನ್ವಯಿಸುತ್ತವೆ. ಹಿಂದಿನ ಅಧಿಕರ.

ಣದಲ್ಲಿ ವಿದ್ಯಾಸ್ವರೂಪವನ್ನು ವಿವೇಚನಮಾಡಿ ವಿದ್ಯಾಫಲವನ್ನು ತಿಳಿಸಲಿಕ್ಕಾಗಿ ಈ ಅಧಿಕರಣವನ್ನು ಆರಂಭಿಸಲಾಗಿದೆ. ಬ್ರಹ್ಮವಿದ್ಯೆಯು ಫಲಿಸಿದಾಗ ಜೀವನಿಗೆ ಹಿಂದಿನ ಪಾಪವೆಲ್ಲವೂ ನಷ್ಟವಾಗಿ ಮುಂದಿನ ಪಾಪದ ಸಂಪರ್ಕವೂ ತಪ್ಪುತ್ತದೆ. "ತಾವರೆದಳಕ್ಕೆ ನೀರು ಅಂಟದಿರುವಂತೆ ಆತ್ಮಜ್ಞಾನಿಗೆ ಪಾಪವು ಅಂಟುವುದಿಲ್ಲ. ಅವನ ಆತ್ಮವೇ ತನ್ನೊಳಗೆ ನಿರ್ಲಿಪ್ತನಾಗಿ ನೆಲಸಿರುವ ಪರಮಾತ್ಮನನ್ನು ಕಾಣುವುದರಿಂದ ಅದಕ್ಕೆ ಮುಂದಿನಪಾಪವು ಅಂಟುವುದಿಲ್ಲ " ಹೀಗೆ ಶ್ರುತಿಯಲ್ಲಿ ಮುಂದಿನ ಪಾಪದ ಸಂಪರ್ಕವಿಲ್ಲವೆಂದು ತಿಳಿಸಲಾಗಿದೆ. ಬೆಂಕಿಗೆ ಬಿದ್ದ ಹತ್ತಿಯಂತೆ ಜ್ಞಾನಿಯ ಪಾಪಗಳೆಲ್ಲವೂ ನಾಶವಾಗುತ್ತವೆ. "ಪರಮಾತ್ಮನನ್ನು ಕಂಡರೆ ಇವನ ಎಲ್ಲಾ ಕರ್ಮಗಳೂ ನಶಿಸುತ್ತವೆ" ಎಂಬಲ್ಲಿ ಹಿಂದಿನ ಪಾಪವು ನಶಿಸುವುದೆಂದು ಹೇಳಿದೆ. ಹೀಗೆ ಅಶ್ಲೇಷ ವಿನಾಶಗಳು ಬ್ರಹ್ಮವಿದ್ಯೆಗೆ ಫಲಗಳೆನಿಸಬಲ್ಲವೆ? ಇಲ್ಲವೆ?" ಎಂಬ ಸಂಶಯಬಂದು ಇವು ಫಲಗಳಾಗಲಾರವೆಂದು ಆಕ್ಷೇಪಬರುತ್ತದೆ. "ತಾನುಮಾಡಿದ ಕರ್ಮವನ್ನು ಭೋಗಿಸದೆ ತಾನೇ ಕಳೆಯಲಾಗುವುದಿಲ್ಲ." ಎಂಬ ಶಾಸ್ತ್ರವೂ ವಿರುದ್ಧವಾಗುತ್ತದೆ. ಮೋಕ್ಷಕ್ಕೆ ಸಾಧನವನ್ನು ವಿಧಿಸುವ ವಾಕ್ಯಗಳಲ್ಲಿ ಕಂಡುಬರುವ ಕರ್ಮದ ಅಶ್ಲೇಷ ಮತ್ತು ವಿನಾಶಗಳು ಬ್ರಹ್ಮವಿದ್ಯೆಯನ್ನು ಪ್ರಶಂಸಿಸಲಿಕ್ಕಾಗಿಯೇ ಬಂದಿರುವುವು. ಈ ಬ್ರಹ್ಮವಿದ್ಯೆಗೆ ಹಿಂದಿನ ಮುಂದಿನ ಪಾಪಗಳಿಗೆ ಯಾವ ಪ್ರಾಯಶ್ಚಿತ್ತವನ್ನೂ ವಿಧಿಸಿಲ್ಲ. ವಿಧಿಸಿದ್ದರೆ ಅದರಿಂದ ಕರ್ಮಗಳ ನಾಶವನ್ನು ಒಪ್ಪಬಹುದಾಗಿತ್ತು. ಬ್ರಹ್ಮವಿದ್ಯೆಯನ್ನಾದರೋ "ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ" ಎಂಬಲ್ಲಿ ಬ್ರಹ್ಮಪ್ರಾಪ್ತಿಗೆ ಉಪಾಯವೆಂದೇ ವಿಧಿಸಲಾಗಿದೆ. ಆದ್ದರಿಂದ ಹಿಂದಿನ ಪಾಪದ ನಾಶವನ್ನೂ ಮುಂದಿನ ಪಾಪದ ಅಸಂಸ್ಪರ್ಶವನ್ನೂ ತಿಳಿಸುವ ಉಪದೇಶವು ಅರ್ಥವಾದವೆನಿಸುತ್ತದೆ ಎಂದು ಪೂರ್ವಪಕ್ಷವು ತಿಳಿಸುತ್ತದೆ. ಅದಕ್ಕೆ ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. ಬ್ರಹ್ಮವಿದ್ಯೆಯು ಸಿದ್ಧಿಸಿದಾಗ ಜೀವನಿಗೆ ವಿದ್ಯಾಮಹಿಮೆಯಿಂದ ಹಿಂದಿನ-ಮುಂದಿನ ಪಾಪಗಳ ನಾಶ ಮತ್ತು ಅಸಂಸ್ಪರ್ಶಗಳೆರಡೂ ಹೊಂದುತ್ತವೆ. ಹೀಗೆ ಹೇಳುವುದೇ ವಿದ್ಯೆಯ ಮಹಿಮೆಯೆಂದು ತಿಳಿದುಬರುತ್ತದೆ. "ಹೀಗೆ ತಿಳಿದವರಿಗೆ ಪಾಪವು ಅಂಟುವುದಿಲ್ಲ. ಇಂತವನಿಗೆ ಎಲ್ಲಾ ಕರ್ಮಗಳೂ ನಷ್ಟವಾಗುತ್ತವೆ. ಪರಮಾತ್ಮನ ದರ್ಶನವಾದಮೇಲೆ ಹೃದಯದ ಪಾಶವು ಹರಿದು, ಸಂಶಯಗಳು ತೊಲಗಿ ಕರ್ಮಗಳು ನಶಿಸುತ್ತವೆ." ಹೀಗೆ ಅನೇಕ ಶ್ರುತಿಗಳಲ್ಲಿ ಹೇಳಿರುವುದರಿಂದ "ಮಾಡಿದ ಕರ್ಮವು ಭೋಗವಿಲ್ಲದೆ ಕಳೆಯುವುದಿಲ್ಲ" ಎಂಬ ಶಾಸ್ತ್ರದಿಂದ ಇದಕ್ಕೆ ವಿರೋಧವಿಲ್ಲ; ಯಾಕೆಂದರೆ ಇವೆರಡೂ ಭಿನ್ನವಿಷಯಗಳೇ ಆಗಿವೆ. ಕರ್ಮಗಳು ಫಲವನ್ನು ಕೊಟ್ಟೇಕೊಡುತ್ತವೆ ಎಂಬುದನ್ನು ದೃಢಪಲಿಸಲಿಕ್ಕಾಗಿಯೇ ಈ ವಾಕ್ಯವು ಬಂದಿದೆ. "ಕ್ಷೀಯಂತೇ ಚಾಸ್ಯ ಕರ್ಮಾಣಿ" ಎಂಬ ವಾಕ್ಯವಾದರೋ ಬ್ರಹ್ಮವಿದ್ಯೆಯು ಸಿದ್ಧವಾದಮೇಲೆ ಪ್ರಕೃತಿ ಸಂಬಂಧವಾದ ಪಾಪಗಳು ತಮ್ಮ ಶಕ್ತಿಯನ್ನು ಕಳೆದುಕೊಳ್ಳುತ್ತವೆ ಎಂದೂ

ಮುಂದೆ ಮಾಡುವ ಕರ್ಮಗಳಿಗೆ ಫಲವನ್ನು ಕೊಡುವ ಶಕ್ತಿಯೇ ಹುಟ್ಟುವುದಿಲ್ಲ ವೆಂದೂ ತಿಳಿಸುತ್ತದೆ. ಆದ್ದರಿಂದ ಶ್ರುತಿಯ ಈ ಎರಡು ವಾಕ್ಯಗಳಿಗೂ ವಿಷಯವು ಭಿನ್ನವೇ ಆಗಿದೆ. ಅಗ್ನಿ ಮತ್ತು ಜಲಗಳಲ್ಲಿ ಔಷ್ಣ್ಯವೂ ಮತ್ತು ಅದನ್ನು ಅಡಗಿಸುವ ಶಕ್ತಿಯೂ ಇರುವುದಾಗಿ ಪ್ರಮಾಣದಿಂದ ಸಿದ್ಧವಾಗಿರುವುದರಿಂದ ವಿಷಯಗಳು ಭಿನ್ನವಾಗಿರುವುದರಿಂದಲೇ ಅವುಗಳಿಗೆ ಪ್ರಾಮಾಣ್ಯವು ಸಿದ್ಧವಾಗಿದೆ. ಇಲ್ಲಿಯೂ ಅದರಂತೆಯೇ ಯಾವ ವಿರೋಧಕ್ಕೂ ಅವಕಾಶವಿಲ್ಲ. ಪಾಪ ಅಂಟುವುದಿಲ್ಲವೆಂದರೆ ವೈದಿಕಕರ್ಮಗಳ ಅನುಷ್ಠಾನದ ಅರ್ಹತೆಗೆ ತಡೆಯಾಗಿರುವ ಪಾಪದ ಶಕ್ತಿಯು ಹುಟ್ಟುವುದಿಲ್ಲವೆಂದರ್ಥ. ಪಾಪಗಳ ಸಂಪರ್ಕದಿಂದ ಮನುಷ್ಯನಿಗೆ ವೈದಿಕ ಕರ್ಮಾನುಷ್ಠಾನದಲ್ಲಿ ಅನರ್ಹತೆಯೂ, ಮುಂದೆ ಅದರಂತೆ ಪಾಪಗಳನ್ನಾಚರಿಸುವುದರಲ್ಲಿ ಅಭಿರುಚಿಯೂ ಮತ್ತೆ ಬೇರೆ ಪಾಪವೂ ಸಂಘಟಿಸುತ್ತವೆ. ಇಂತಹ ಪಾಪದ ವಿನಾಶವೆಂದರೆ ಹುಟ್ಟಿದ ಪಾಪಕ್ಕೆ ಫಲವನ್ನು ಕೊಡುವ ಶಕ್ತಿಯನ್ನು ನಾಶಪಡಿಸುವುದೆಂದರ್ಥ. ಈ ಬಗೆಯ ಶಕ್ತಿಯಾದರೋ ಪರಮಾತ್ಮನ ಆಗ್ರಹವೇ ಆಗಿದೆ; ಈ ಬ್ರಹ್ಮವಿದ್ಯೆಯು ಅದನ್ನು ಆಚರಿಸುವವನಿಗೆ ಬಹಳ ಪ್ರಿಯವಾಗಿರುವುದರಿಂದ ತಾನು ನಿರತಿಶಯಪ್ರಿಯವೆನಿಸಿ ತನಗೆ ವಿಷಯವಾದ ಪರಮಾತ್ಮನ ಆರಾಧನರೂಪವಾಗಿ ಹಿಂದೆಮಾಡಿದ ಪಾಪದ ರಾಶಿಯಿಂದ ಸಂಭವಿಸುವ ಪರಮಾತ್ಮನ ಆಗ್ರಹವನ್ನು ಪರಿಹರಿಸಬಲ್ಲದು. ಪಾಪಗಳು ಅಂಟುವುದಿಲ್ಲವೆಂಬುದು ಬುದ್ಧಿಪೂರ್ವಕವಲ್ಲದೆ ಮಾಡಿದ ಪಾಪಗಳಿಗೆ ಸಂಬಂಧಿಸುವುದು. "ದುರ್ಮಾರ್ಗವನ್ನು ತೊರೆಯದವನು ಪರಮಾತ್ಮನನ್ನು ಹೊಂದಲಾರನು" ಎಂಬ ಶ್ರುತಿಯಂತೆ ಕೊನೆಯುಗಳಿಗೆಯವರೆಗೆ ಪ್ರತಿದಿನವೂ ಬೆಳೆಯುತ್ತಿರುವ ಪ್ರೇಮರೂಪವಾದ ಬ್ರಹ್ಮವಿದ್ಯೆಯು ಪಾಪದಿಂದ ದೂರನಾದ ಸಾಧಕನಿಗೆ ಮಾತ್ರವೇ ಅನ್ವಯಿಸುವುದು. ಜಗದ್ವಾಸನೆಯುಳ್ಳ ಜ್ಞಾನಿಗಳಿಗೆ ಹಿಂದಿನ ಮುಂದಿನ ಕರ್ಮಗಳು ನಾಶವಾದರೂ ಪ್ರಾರಬ್ಧವು ಅನುಭವದಿಂದಲೇ ಕೊನೆಗಾಣುವುದು. ಜಗದ್ವಾಸನೆ ಇಲ್ಲದೆ ಪೂರ್ಣಶುದ್ಧರಾದವರು ಆಯಸ್ಕಾಂತಸೂಚೀನ್ಯಾಯದಿಂದ ಶಿವೋಽಹಂಭಾವನೆಯಿಂದಲೇ ಇರುವುದರಿಂದ ಅವರಿಗೆ ನಾಲ್ಕುಬಗೆಯ ಕರ್ಮಗಳೂ ನಶಿಸುತ್ತವೆ ಎಂದು ಸೂಚಿಸಲಾಗಿದೆ. ಸ್ಕಾಂದಪುರಾಣದಲ್ಲಿ "ಬ್ರಹ್ಮಜ್ಞಾನಿಯು ಶ್ರೌತಸ್ಮಾರ್ತಕರ್ಮಗಳೆಲ್ಲವನ್ನೂ ಭಕ್ತಿಯಿಂದ ಆಚರಿಸುತ್ತ ಕಾಮ್ಯಕರ್ಮಗಳನ್ನು ತೊರೆದು ಸಂಸಾರಿಯಂತೆ ಪ್ರವರ್ತಿಸುತ್ತಾನೆ. ಬ್ರಹ್ಮಜ್ಞಾನವನ್ನು ಇನ್ನೂ ಹೆಚ್ಚಾಗಿ ಪಡೆದವನು ಬ್ರಹ್ಮವಿದ್ವರನೆನಿಸುವನು. ಇವನು ಶ್ರೌತಸ್ಮಾರ್ತ ಕರ್ಮಗಳೆಲ್ಲವನ್ನೂ ತೊರೆದು ಯಾವಾಗಲೂ ಪೂರ್ಣ ವೈರಾಗ್ಯದಿಂದ ವೇದಾಂತವನ್ನೇ ಚಿಂತಿಸುತ್ತ ಧ್ಯಾನಾಸಕ್ತನಾಗಿ ಭಿಕ್ಷೆಯಿಂದ ಜೀವಿಸುವನು. ಮತ್ತಷ್ಟು ಹೆಚ್ಚಾಗಿ ಜ್ಞಾನವನ್ನು ಪಡೆದವನು ಬ್ರಹ್ಮವಿದ್ವರೀಯನೆನಿಸುವನು. ಇವನು ಎಲ್ಲಾ ವ್ಯಾಪಾರಗಳನ್ನು ತೊರೆದು ಯಾವಾಗಲೂ ಶಿವನ ಧ್ಯಾನವನ್ನೇ ಮಾಡುತ್ತ ವಿಶ್ವವೆಲ್ಲವನ್ನೂ ಮರೆತು ಸುಷುಪ್ತನಂತೆ ಎಲ್ಲಾ ವಾಸನೆಗಳನ್ನು

ಕಳೆದುಕೊಂಡು, ಯಾರಾದರೂ ಕೊಡುವ ಅನ್ನವನ್ನು ತಿನ್ನುತ್ತ ಎಲ್ಲಾ ಆಶೆಯನ್ನೂ ತೊರೆದು ನಿತ್ಯಾನಂದಸ್ವಭಾವದಿಂದಿರುವನು. ಆದರೆ ಶಿವತತ್ತ್ವದಲ್ಲಿಯೇ ನೆಲಸಿದವನು ಬ್ರಹ್ಮವಿದ್ವರಿಷ್ಠನೆನಿಸುವನು. ಇವನು ಶಿವನೊಡನೆ ಸಮರಸವಾಗಿ ಬೆರೆತಿರುವುದರಿಂದ ನಿರ್ಜೀವಶರೀರದಂತಿರುವನು. ಇವನಿಗೆ ಶಿವಧ್ಯಾನದಲ್ಲಿ ಚಿತ್ತವೇ ಲಯಿಸಿರುವುದರಿಂದ ಸ್ವಬುದ್ಧಿಯಿಂದಾಗಲೀ ಪರಪ್ರೇರಣದಿಂದಾಗಲೀ ಇವನಿಗೆ ದೇಹದಿಂದ ಮೇಲಕ್ಕೆ ಎಲ್ಲಿಗೂ ಎದ್ದು ಹೋಗುವ ಆವಶ್ಯಕತೆ ಇರುವುದಿಲ್ಲವಾದ್ದರಿಂದ ಇವನು ಇಲ್ಲಿಯೇ ಶಿವತಾದಾತ್ಮ್ಯವನ್ನು ಹೊಂದಿರುವನು. ಹೀಗೆ ಸಾಮಾನ್ಯಬ್ರಹ್ಮಜ್ಞಾನಿ, ಬ್ರಹ್ಮವಿದ್ವರ, ಬ್ರಹ್ಮವಿದ್ವರೀಯ, ಬ್ರಹ್ಮವಿದ್ವರಿಷ್ಠ ಈ ನಾಲ್ವರಿಗೂ ಮುಕ್ತಿ ಒಂದೇ ಬಗೆಯಾದರೂ ಅವರ ವರ್ತನೆಯಲ್ಲಿ ತಾರತಮ್ಯವಿರುತ್ತದೆ. ಮೊದಲನೆಯವನಿಗೂ ಎರಡನೆಯವನಿಗೂ ಪ್ರಾರಬ್ಧಕರ್ಮವಿರುತ್ತದೆ. ಮೂರನೆಯವನಿಗೆ ಪ್ರಾರಬ್ಧದ ವಾಸನೆ ಮಾತ್ರ ಇರುತ್ತದೆ. ನಾಲ್ಕನೆಯವನಿಗೆ ಪ್ರಾರಬ್ಧವು ಅಂಟುವುದೇ ಇಲ್ಲ.

ನನು ಬ್ರಹ್ಮವಿದ್ವರಿಷ್ಠಸ್ಯ ಮನಶ್ಶೂನ್ಯತ್ವೇನ ಜ್ಞಾನಾಂನತರಾಗಾಮಿಕರ್ಮಾಭಾವತಯಾ ಕರ್ಮನಿರ್ಲಿಪ್ತತ್ವಂ ಯುಕ್ತಂ. ಬ್ರಹ್ಮವಿದಾದೀನಾಂ ಅಜ್ಞಾನಕೃತಸರ್ವಕರ್ಮಣಾಂ ಜ್ಞಾನೇನ ವಿನಷ್ಟತ್ವೇಽಪಿ ಶಿವಜ್ಞಾನಾನಂತರಕೃತಾಗಾಮಿಕರ್ಮಣಾಂ ಕಾ ಗತಿರಿತ್ಯಾಶಂಕಾಯಾಂ ಅಧಿಕರಣಾಂತರಂ ದರ್ಶಯತಿ. ಇತರಾಧಿಕರಣಂ ॥ ೭ ॥ ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇ ತು ॥ ೧೪ ॥ ಪಾತೇ ಗುರುಕಟಾಕ್ಷಲಬ್ಧಶಕ್ತಿಪಾತೇ ತು ಇತರಸ್ಯ ಶಿವಜ್ಞಾನೋತ್ತರಕಾಲಿಕಪುಣ್ಯಾಪುಣ್ಯಕರ್ಮಣಃ ಅಸಂಶ್ಲೇಷಃ ಅಸಂಸ್ಪರ್ಶೋ ಭವತಿ. ಶಕ್ತಿಪಾತದೀಕ್ಷಾಭಾವೇಽಪಿ ಗುರೂಪದೇಶಪೂರ್ವಕದೃಢಶಿವಯೋಗಾಭ್ಯಾಸಮಹಿಮ್ನಾ ವಿಚ್ಛಿನ್ನಪಾಶಽವಿದ್ಯಾಽಜ್ಞಾನಮಾಯಾದಿಸಂಜ್ಞಿಕತಮೋರೂಪಕಾರಣದೇಹಾನಾಂ ಪುರುಷಾಣಾಮಪ್ಯೇವಮುಪಲಕ್ಷಣಂ ದ್ರಷ್ಟವ್ಯಮಿತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಗಳಿತಪಾಶಾನಾಂ ಶಿವಜ್ಞಾನವತಾಂ ಪುರುಷಾಣಾಂ ತಜ್ಜ್ಞಾನೋತ್ತರಕೃತಪುಣ್ಯಾಪುಣ್ಯರೂಪಾಗಾಮಿಕರ್ಮಣಾಂ ನಿವೃತ್ತಿಸ್ಸಂಭವತಿ ವಾ ನವೇತಿ ಸಂದಿಹ್ಯತೇ. ಜ್ಞಾನಪೂರ್ವಕಾಲಕೃತಕರ್ಮಣಾಂ ಪುಣ್ಯಾಪುಣ್ಯರೂಪಾಣಾಂ ಶ್ರುತಿಸ್ಮೃತಿಪ್ರಾಮಾಣ್ಯದರ್ಶನಾನ್ನಿವೃತ್ತಿರಸ್ತು. ಜ್ಞಾನೋತ್ತರಕಾಲಜನಿತಕರ್ಮಣಾಂ ನಷ್ಟತ್ವಂ ನ ಸಂಭವತಿ. ನಷ್ಟತ್ವೇ ಹಿ ಪುಣ್ಯಕರ್ಮಣಾಂ? ಉತ ಪಾಪಕರ್ಮಣಾಂ ವಾ? ನಾದ್ಯಃ ಪುಣ್ಯಕರ್ಮಣಾಂ ಜ್ಞಾನಾವಿರೋಧಿತ್ವಾತ್ ಪರಮೇಶ್ವರಾಜ್ಞಾರೂಪತ್ವಾಚ್ಚ. ನಾಂತ್ಯಃ ಜ್ಞಾನಪೂರ್ವಕಪಾಪಾನಾಂ ಶಾಸ್ತ್ರೇ ಪ್ರಾಯಶ್ಚಿತ್ತಾದರ್ಶನಾತ್ ಪಾಪಕರ್ಮಾಚರಣೇ ಜ್ಞಾನಭಂಗಪ್ರಸಂಗಾಚ್ಚ ಸರ್ವಥಾ ಜ್ಞಾನೋತ್ತರಕಾಲಕೃತಕರ್ಮಕ್ಷಯೋ ವಿದುಷಾಂ ನ ಘಟತೇ ಇತಿ

**ಪ್ರಾಪ್ತೇ ಪ್ರಚಕ್ಷ್ಮಹೇ. "ಕ್ಷೀಯಂತೇ ಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ", "ಪ್ರಾರಬ್ಧಂ ಭೋಗತೋ ನಶ್ಯೇತ್ ತತ್ತ್ವಜ್ಞಾನೇನ ಸಂಚಿತಂ । ಆಗಾಮಿದ್ವಿತಯಂ ಕರ್ಮ ಪ್ರದ್ವೇಷಿಪ್ರಿಯವಾದಿನೋಃ ॥" ಇತ್ಯಾದಿಶ್ರುತಿಸ್ಮೃತಿಷು ಸರ್ವಕರ್ಮಕ್ಷಯತ್ವಸ್ಯ ವಿದುಷಾಮುವಗಮಾತ್, ಅನ್ಯಥಾ ವಿನಿಗಮಕಾದರ್ಶನಾತ್ ಶಿವಜ್ಞಾನಸ್ಯ ಮಹಾಮಹಿಮಾತಿಶಯಸ್ಯ ಪ್ರಾಚೀನಜನ್ಮಕೃತಪುಣ್ಯಾಪುಣ್ಯಕರ್ಮನಷ್ಟತ್ವಶಕ್ತಿಸತ್ತ್ವೇನ ಜ್ಞಾನೋತ್ತರಕಾಲಕೃತಕರ್ಮನಷ್ಟತ್ವಂ ಕಿಂ ನ ಸ್ಯಾತ್. ಶ್ರುತಿಸ್ಮೃತಿಸಂಕೋಚೇ ಮಾನಾಭಾವಾತ್, ಪುಣ್ಯಸ್ಯಾಪಿ ಪಾಪವತ್ ಶಿವಜ್ಞಾನಪ್ರತಿಬಂಧಕತ್ವಾತ್ ಸರ್ವಶಿವಾತ್ಮಕಭಾವಕೃತಪುಣ್ಯಕರ್ಮಣಾಂ ತಸ್ಯ ಕರ್ತೃತ್ವಾಭಾವೇನ ನಿರ್ಲೇಪತ್ವಂ ಯುಕ್ತಂ. ಮೂಢವದ್ವಿದುಷಾಂ ಸ್ವಾಹಂಕಾರೇಣ ಪಾಪಾಚರಣಾಭಾವೇऽಪಿ ಪ್ರಾರಬ್ಧವಶಾತ್ ಪ್ರಮಾದಜನಿತಪಾಪಾನಾಂ ಅಸಂಸ್ಪೃಷ್ಟತ್ವಂ ಅವಿರುದ್ಧಂ. ತದುಕ್ತಂ ಸಿದ್ಧಾಂತಾಗಮೇ "ಶಿವಭಾವನಯಾ ಸರ್ವಂ ನಿತ್ಯನೈಮಿತ್ತಿಕಾದಿಕಂ । ಕುರ್ವನ್ನಪಿ ಮಹಾಯೋಗೀ ಗುಣದೋಷೈರ್ನ ಲಿಪ್ಯತೇ ॥" ಇತಿ ದರ್ಶನಾತ್ ಶಿವವತ್ ಶಿವಯೋಗಿನಾಮಪಿ ಸರ್ವಕರ್ಮಾಸಂಸ್ಪೃಷ್ಟತ್ವಂ ಸಿದ್ಧಂ.**

ಬ್ರಹ್ಮವಿದ್ವರಿಷ್ಠನಿಗೆ ಮನಸ್ಸೇ ಇಲ್ಲದ್ದರಿಂದ ಜ್ಞಾನವುಂಟಾದಮೇಲೆ ಮಾಡುವ ಆಗಾಮಿಕರ್ಮಗಳೂ ಇರುವುದಿಲ್ಲ. ಆದ್ದರಿಂದ ಅವನಿಗೆ ಕರ್ಮದ ಲೇಪನವೇ ಇಲ್ಲವೆಂಬುದು ಯುಕ್ತವೇ ಆಗಿದೆ. ಆದರೆ ಸಾಧಾರಣಬ್ರಹ್ಮಜ್ಞಾನಿಗೆ ಅಜ್ಞಾನದಿಂದ ಮಾಡಿದ ಕರ್ಮಗಳೆಲ್ಲವೂ ಜ್ಞಾನದಿಂದ ನಷ್ಟವಾಗುವುದರಿಂದ ಶಿವಜ್ಞಾನವಾದ ಮೇಲೆ ಮಾಡಿದ ಆಗಾಮಿಕರ್ಮಗಳಿಗೆ ಗತಿ ಏನು ? ಎಂದು ಆಶಂಕಿಸಿ ತಿಳಿಸುತ್ತಾನೆ. ಗುರುಕರುಣೆಯಿಂದ ಶಕ್ತಿಪಾತವುಂಟಾದರೆ ಜ್ಞಾನಿಗೆ ಮುಂದಿನ ಪುಣ್ಯಪಾಪ ಕರ್ಮಗಳು ಅಂಟುವುದಿಲ್ಲ. ಶಕ್ತಿಪಾತವೆಂದರೆ ಶಿವಾನುಗ್ರಹ. ಇದಕ್ಕಾಗಿ ದೀಕ್ಷೆಯನ್ನು ಪಡೆದವರಿಗೆ ಕರ್ಮಸಂಪರ್ಕ ತಪ್ಪುತ್ತದೆ. ಹೀಗೆ ದೀಕ್ಷೆಯಿಲ್ಲದೆ ಗುರುವಿನ ಉಪದೇಶದಿಂದಲೇ ಶಿವಯೋಗವನ್ನು ಪಡೆದು ದೃಢವಾಗಿ ಅಭ್ಯಾಸಮಾಡಿ ಅದರ ಮಹಿಮೆಯಿಂದ ಪಾಶ, ಅವಿದ್ಯೆ, ಅಜ್ಞಾನ, ಮಾಯೆ, ತಮಸ್ಸು ಎನಿಸಿದ ಕಾರಣದೇಹವನ್ನು ಕಳೆದುಕೊಂಡ ಜೀವರಿಗೂ ಹೀಗೆಯೇ ಕರ್ಮಸಂಪರ್ಕವು ತಪ್ಪುತ್ತದೆ. ಆದರೆ ಇಲ್ಲಿ ಒಂದು ಸಂದೇಹಬರುತ್ತದೆ. ಮಾಯಾಪಾಶವನ್ನು ಕಳೆದುಕೊಂಡವರಿಗೆ ಅನಂತರ ಮಾಡಿದ ಪುಣ್ಯಪಾಪ ಕರ್ಮಗಳು ತೊಲಗುತ್ತವೆಯೋ ಇಲ್ಲವೇ ಎಂಬುದೇ ಈ ಸಂದೇಹ. ಜ್ಞಾನಕ್ಕೆ ಮೊದಲುಮಾಡಿದ್ದ ಪುಣ್ಯಪಾಪಕರ್ಮಗಳು ಜ್ಞಾನದಿಂದ ನಶಿಸುತ್ತವೆ ಎಂಬುದಕ್ಕೆ ಶ್ರುತಿಸ್ಮೃತಿಗಳು ಪ್ರಮಾಣವಾಗಿದೆ. ಆದರೆ ಜ್ಞಾನವಾದಮೇಲೆ ಮಾಡಿದ ಕರ್ಮಗಳು ನಶಿಸುವಂತಿಲ್ಲ. ಅವೂ ನಷ್ಟವಾಗುತ್ತವೆ ಎಂದು

ಹೇಳಿದರೆ ಹಾಗೆ ನಶಿಸುವಂತವು ಪುಣ್ಯಕರ್ಮಗಳೋ ಅಥವಾ ಪಾಪಗಳೋ? ಎಂದು ಕೇಳಬೇಕಾಗುತ್ತದೆ. ಪುಣ್ಯಕರ್ಮಗಳು ಜ್ಞಾನಕ್ಕೆ ವಿರೋಧವಲ್ಲದ್ದರಿಂದಲೂ, ಪರಮೇಶ್ವರನ ಆಜ್ಞಾರೂಪವಾದ್ದರಿಂದಲೂ ನಶಿಸುವಂತಿಲ್ಲ. ತಿಳಿದುಮಾಡಿದ ಪಾಪಗಳಿಗೆ ಶಾಸ್ತ್ರದಲ್ಲಿ ಪ್ರಾಯಶ್ಚಿತ್ತವನ್ನೆ ಹೇಳಿಲ್ಲ. ಪಾಪಕರ್ಮವನ್ನಾಚರಿಸಿದರೆ ಜ್ಞಾನವೇ ನಷ್ಟವಾಗಬೇಕಾಗುತ್ತದೆ. ಆದ್ದರಿಂದ ಜ್ಞಾನವಾದಮೇಲೆ ಮಾಡಿದ ಕರ್ಮಗಳು ನಶಿಸುತ್ತವೆ ಎಂಬುದು ಯುಕ್ತವಲ್ಲವೆಂದು ಆಕ್ಷೇಪಬರುತ್ತದೆ. ಅದಕ್ಕೆ ಸಮಾಧಾನವನ್ನು ಇಲ್ಲಿ ತಿಳಿಸಲಾಗುವುದು. "ಪರಮಾತ್ಮನ ದರ್ಶನವಾದಮೇಲೆ ಮಲಕರ್ಮ ಸಂಶಯಗಳೆಲ್ಲವೂ ತೊಲಗುತ್ತವೆ" "ಜ್ಞಾನಾಗ್ನಿಯು ಎಲ್ಲಾ ಕರ್ಮಗಳನ್ನೂ ಸುಡುತ್ತದೆ" ಎಂಬಲ್ಲಿ ವಿದ್ವಾಂಸರಿಗೆ ಎಲ್ಲಾಕರ್ಮಗಳೂ ನಶಿಸುತ್ತವೆ ಎಂದು ತಿಳಿದುಬರುತ್ತದೆ. ಇಲ್ಲವಾದರೆ ಪ್ರಮಾಣವಿಲ್ಲದ್ದರಿಂದ ಹೆಚ್ಚು ಮಹಿಮೆಯುಳ್ಳ ಶಿವಜ್ಞಾನಕ್ಕೆ ಹಿಂದಿನ ಜನ್ಮಗಳಲ್ಲಿ ಮಾಡಿದ ಪುಣ್ಯಪಾಪಕರ್ಮಗಳನ್ನು ನಾಶಪಡಿಸುವ ಶಕ್ತಿ ಇರುವುದರಿಂದ ಜ್ಞಾನವಾದಮೇಲೆ ಮಾಡಿದ ಕರ್ಮಗಳನ್ನು ನಾಶಪಡಿಸಲಿಕ್ಕೆ ಅದಕ್ಕೆ ಹೇಗೆ ಸಾಧ್ಯವಾಗದೆ ಹೋದೀತು? ಶ್ರುತಿಸ್ಮೃತಿಗಳನ್ನು ಸಂಕೋಚಪಡಿಸಲಿಕ್ಕೆ ಯಾವ ಪ್ರಮಾಣವೂ ಇಲ್ಲ. ಪುಣ್ಯವೂ ಸಹ ಪಾಪದಂತೆ ಶಿವಜ್ಞಾನವನ್ನು ತಡೆಯಲಿರುವುದು. ಆದ್ದರಿಂದ ಶಿವಭಾವನೆಯಿಂದ ಮಾಡಿದ ಪುಣ್ಯಕರ್ಮಗಳಿಗೆ ಜ್ಞಾನಿಯು ಕರ್ತನಲ್ಲದ್ದರಿಂದ ಅವುಗಳ ಲೇಪನ ಅವನಿಗೆ ಇರುವುದಿಲ್ಲ. ಜ್ಞಾನಿಯು ಮೂಢನಂತೆ ಅಹಂಕಾರದಿಂದ ಪಾಪವನ್ನು ಆಚರಿಸದಿದ್ದರೂ ಪ್ರಾರಬ್ಧವಶದಿಂದ ಎಚ್ಚರದಪ್ಪಿ ಪಾಪವನ್ನು ಅಕಸ್ಮಾತ್ ಮಾಡಿದರೂ ಅದರ ಸ್ಪರ್ಷ ಅವನಿಗಾಗುವುದಿಲ್ಲ. "ಶಿವಭಾವನೆಯಿಂದ ನಿತ್ಯನೈಮಿತ್ತಿಕ ಕರ್ಮಗಳನ್ನು ಯೋಗಿಯು ಮಾಡಿದರೂ ಅವನಿಗೆ ಅವುಗಳ ಗುಣದೋಷಗಳು ಅಂಟುವುದಿಲ್ಲ" ವೆಂದು ಸಿದ್ಧಾಂತಾಗಮದಲ್ಲಿ ಹೇಳಿದೆ. ಇದರಿಂದ ಶಿವಯೋಗಿಗಳಿಗೂ ಸಹ ಕರ್ಮಲೇಪನವಿಲ್ಲವೆಂದು ಸಿದ್ಧವಾಯಿತು.

ವಿದುಷಾಮಾಗಾಮಿಜನಿತಕರ್ಮಣಾಂ ಅಸಂಸ್ಪೃಷ್ಟತ್ವಮಿತಿ ಯದುಕ್ತಂ ತದಸಂಗತಂ ಜಡಭರತಾದೀನಾಂ ಸುಕೃತದುಷ್ಕೃತೇ ಅನಾರಬ್ಧಕಾರ್ಯೇ ಅಪ್ರವೃತ್ತಫಲೇಽಪಿ ಚ ವಿದ್ಯಯಾ ನಶ್ಯತಃ. ಕುತಃ? ಜನ್ಮತ್ರಯದರ್ಶನಾತ್ ಇತ್ಯಾಶಂಕಾಯಾಮಧಿಕರಣಾಂತಮಾಹ. ಅನಾರಬ್ಧಕಾರ್ಯಾಧಿಕರಣಂ ‖ ೮ ‖ ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ ‖ ೧೫ ‖ ಪೂರ್ವೇ ಶಿವಜ್ಞಾನೋತ್ಪತ್ತೇಃ ಪೂರ್ವಂ ಶುದ್ಧಜೀವಾನಾಂ ಆರುರುಕ್ಷೂಣಾಂ ಸುಕೃತದುಷ್ಕೃತೇ ಅನಾರಬ್ಧಕಾರ್ಯೇ ಅಪ್ರವೃತ್ತಫಲೇ ಏವ ವಿದ್ಯಯಾ ನಶ್ಯತಃ. ಕುತಃ? ತದವಧೇಃ. "ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ ಅಥ ಸಂಪತ್ಸ್ಯೇ" ಇತ್ಯತ್ರ ಶಿವಜ್ಞಾನಸಂಪೂರ್ಣಸಿದ್ಧಿಪರ್ಯಂತಂ ಬದ್ಧಜೀವವತ್ ಶುದ್ಧಜೀವಾನಾಂ ಮೋಕ್ಷವಿಲಂಬಾವಗಮಾತ್ ಜಡಭರತಾದೀನಾಂ ನಿರ್ವಾ

ಸನಾಪೂರ್ವಕಶಿವಜ್ಞಾನಸಿದ್ಧ್ಯಭಾವೇನ ವಿಲಂಬಮುಕ್ತಿಃ. ನಿರ್ವಾಸನ ಶಿವಜ್ಞಾನನಿಷ್ಠಾನಾಂ ವಾಮದೇವಾದೀನಾಂ ಅವಿಲಂಬಮುಕ್ತಿರಿತ್ಯ ವಿರೋಧಃ ಇತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಶಿವಜ್ಞಾನವತಾಂ ಸರ್ವೇಷಾಮಾಗಾಮಿಫಲಭೋಗನಿವೃತ್ತಿಪೂರ್ವಕಸದ್ಯೋಮುಕ್ತಿಃ ಉತ ಅಧಿಕಾರಿತಾರತಮ್ಯೇನ ವಿಲಂಬಮುಕ್ತಿಃ ಸಂಭವತಿ ವೇತಿ ಸಂದಿಹ್ಯತೇ. " ಯಾವದುತ್ಪದ್ಯತೇ ಜ್ಞಾನಂ ತಾವದನುಷ್ಠೇಯಾನಿ ಕರ್ಮಾಣಿ " ಇತಿ ಶ್ರುತೌ ಜ್ಞಾನೋತ್ಪತ್ತಿಮಾತ್ರೇಣ ಸರ್ವೇಷಾಂ ಸರ್ವಕರ್ಮತ್ಯಾಗಾವಗಮಾತ್ ಜ್ಞಾನಮಾತ್ರೇಣೈವ ಸದ್ಯೋಮುಕ್ತಿಸ್ಸಂಭವತಿ. ತದನಂಗೀಕಾರೇ " ಜ್ಞಾನಾದೇವ ತು ಕೈವಲ್ಯಂ ನಾನ್ಯಃ ಪಂಥಾ ವಿಮುಕ್ತಯೇ " ಇತಿ ಬಹುಶ್ರುತಿಭಂಗಪ್ರಸಂಗಃ ಇತಿ ಪ್ರಾಪ್ತೇ ಪ್ರಚಕ್ಷ್ಮಹೇ. ಶಿವಜ್ಞಾನಸಿದ್ಧಿಂ ವಿನಾ ವೈದ್ಯಶಾಸ್ತ್ರಾದಿಜ್ಞಾನವತ್ ಪರೋಕ್ಷಜ್ಞಾನೇನ ಪಾಶವಿಚ್ಛೇದಪೂರ್ವಕಶಿವತ್ವಪ್ರಾಪ್ತಿರ್ನ ಘಟತೇ. " ಅನುಭೂತಿಂ ವಿನಾ ಮೂಢೋ ವೃಥಾ ಬ್ರಹ್ಮಣಿ ಮೋದತೇ । ಪ್ರತಿಬಿಂಬಿತಶಾಖಾಗ್ರಫಲಾಸ್ವಾದನಮೋದವತ್ ॥ " ಇತ್ಯಾದಿಶ್ರುತಿಷು ಶಾಸ್ತ್ರಜನ್ಯಪುರುಷಜ್ಞಾನಪುರುಷನಿಂದಾಶ್ರವಣಾತ್ ಕೇವಲಜ್ಞಾನಶಬ್ದೇನೇಚ್ಛಾಪರ್ಯಾಯತ್ವೇನ ತದಿಚ್ಛಾಯಾಃ ಪುರುಷಾರ್ಥತ್ವಾಯೋಗಾತ್ " ಯಾವದುತ್ಪದ್ಯತೇ ಜ್ಞಾನಂ " ಇತ್ಯಾದಿಶ್ರುತಿಷು ಜ್ಞಾನಶಬ್ದೇನ ಶಿವೋಪಾಸನಾಜ್ಞಾನಸಿದ್ಧಿರವಗಮ್ಯತೇ. " ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ " ಇತ್ಯಾದಿಷು ಉಪಾಸನಜ್ಞಾನಸಿದ್ಧಾನಾಮೇವ ಪಾಶನಿವೃತ್ತಿಪೂರ್ವಕಶಿವತ್ವಪ್ರಾಪ್ತೇರುಪದೇಶಾತ್ ಜ್ಞಾನಸಿದ್ಧಿರೂಪಾಪರೋಕ್ಷಜ್ಞಾನಸ್ಯೈವ ಮೋಕ್ಷಹೇತುತ್ವಂ. " ಅಸ್ತಿ ಬ್ರಹ್ಮ " ಇತ್ಯಾದಿಶಾಸ್ತ್ರಜನ್ಯಪರೋಕ್ಷಜ್ಞಾನಸ್ಯ ಕಾಲಾಂತರಮೋಕ್ಷಫಲಜನಕತ್ವಮಿತಿ ನಿಶ್ಚೀಯತೇ. " ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ ಯಾವತ್ಪ್ರಾರಬ್ಧಕರ್ಮ ನ ವಿಮುಚ್ಯತೇ ಅಥ ಸಂಪತ್ಸ್ಯತೇ. ಅಥ ಪ್ರಾರಬ್ಧಕರ್ಮನಾಶಾನಂತರಂ ಸಂಪತ್ಸ್ಯತೇ ವಿದೇಹಕೈವಲ್ಯಂ ಪ್ರಾಪ್ನೋತೀತ್ಯುಪದಿಶತಿ. ಏತೇನ ಶಾಸ್ತ್ರಜನ್ಯಶಿವಜ್ಞಾನಾಭ್ಯಾಸವತಾಮುಪಾಸಕಾನಾಂ ಕಾಲಾಂತರಮುಕ್ತಿಫಲತ್ವಂ, ನಿರ್ವಾಸನಾಪೂರ್ವಕಶಿವಜ್ಞಾನಸಿದ್ಧಾನಾಂ ಏತಚ್ಛರೀರೇಣೈವ ಪಾಶನಿವೃತ್ತಿಪೂರ್ವಕಪರಶಿವತಶ್ರಾತ್ಮಕತ್ವಂ ನಿಶ್ಚೀಯತೇ.

ವಿದ್ವಾಂಸರಿಗೆ ಮುಂದಿನ ಕರ್ಮಗಳ ಸಂಪರ್ಕವಿಲ್ಲವೆಂದು ಹೇಳಿದ್ದು ಯುಕ್ತವಲ್ಲ. ಜಡಭರತಾದಿಗಳು ಪುಣ್ಯಪಾಪಕರ್ಮಗಳನ್ನು ಆಚರಿಸದಿದ್ದರೂ ಅವರಿಗೆ ಮೂರು ಜನ್ಮಗಳಿದ್ದುದಾಗಿ ಕಂಡುಬಂದಿರುವುದರಿಂದ ಆ ಕರ್ಮಗಳು ವಿದ್ಯೆಯಿಂದ ನಷ್ಟವಾಗಿದ್ದವೆಂದು ಆಶಂಕಿಸಿ ನಿರಾಕರಿಸುತ್ತಾನೆ. ಶಿವಜ್ಞಾನ

ಹುಟ್ಟುವುದಕ್ಕಿಂತಲೂ ಮೊದಲು ಶುದ್ಧರಾದ ಸಾಧಕರಿಗೆ ಪುಣ್ಯಪಾಪಗಳು ಫಲವನ್ನು ಕೊಡದೆ ವಿದ್ಯೆಯಿಂದಲೇ ನಷ್ಟವಾಗಿರುತ್ತವೆ. ಯಾಕೆಂದರೆ “ ಜ್ಞಾನಿಗೆ ಎಷ್ಟು ಹೊತ್ತಿಗೆ ದೇಹದ ವಿಯೋಗವಾಗುವುದೋ ಅಷ್ಟೇ ವಿಳಂಬವಿರುವುದು. ದೇಹವು ಉದುರಿದೊಡನೆ ಅವನು ಶಿವನಲ್ಲಿ ಬೆರೆಯುತ್ತಾನೆ.” ಹೀಗೆ ಶಿವಜ್ಞಾನವು ಪೂರ್ಣವಾಗಿ ಸಿದ್ಧಿಸುವವರೆಗೂ ಬದ್ಧಜೀವನಂತೆಯೇ ಶುದ್ಧಜೀವನಿಗೂ ಮೋಕ್ಷವು ತಡವಾಗುವುದೆಂದು ತಿಳಿದುಬರುವುದರಿಂದ ಜಡಭರತಾದಿಗಳಿಗೆ ವಿಷಯವಾಸನೆ ಇದ್ದ ಪ್ರಯುಕ್ತ ಶಿವಜ್ಞಾನವು ಸಿದ್ಧಿಸಿರಲಿಲ್ಲ. ಆದ್ದರಿಂದ ಅವರಿಗೆ ಸದ್ಯೋಮುಕ್ತಿಯುಂಟಾಗದೆ ಕೊಂಚ ತಡವಾಯಿತು. ಆದರೆ ವಿಷಯವಾಸನೆಯಿಲ್ಲದೆ ಶಿವಜ್ಞಾನನಿಷ್ಠರಾದ ವಾಮದೇವಾದಿಗಳಿಗೆ ತಡವಿಲ್ಲದೆ ಸದ್ಯೋಮುಕ್ತಿಯುಂಟಾಯಿತು. ಆದರೆ ಇಲ್ಲಿ ಒಂದು ಸಂಶಯ ಬರುತ್ತದೆ. ವಾಮದೇವನಂತೆ ಶಿವಜ್ಞಾನವುಳ್ಳವರೆಲ್ಲರೂ ಆಗಾಮಿ ಫಲಗಳನ್ನು ಭೋಗಿಸದೆ ಬೇಗನೆ ಮುಕ್ತರಾಗುವರೆ ? ಅಥವಾ ಅಧಿಕಾರತಾರತಮ್ಯದಿಂದ ತಡವಾಗಿ ಮುಕ್ತರಾಗುವರೆ ? ಎಂಬುದೇ ಇಲ್ಲಿನ ಸಂಶಯ. “ಜ್ಞಾನ ಹುಟ್ಟುವವರೆಗೂ ಕರ್ಮಗಳನ್ನಾಚರಿಸಬೇಕು.” ಈ ಶ್ರುತಿಯಲ್ಲಿ ಜ್ಞಾನ ಹುಟ್ಟಿದ್ದರಿಂದಲೇ ಎಲ್ಲರಿಗೂ ಎಲ್ಲಾ ಕರ್ಮಗಳೂ ತೊಲಗುವುದರಿಂದ ಜ್ಞಾನದಿಂದಲೇ ಸದ್ಯೋಮುಕ್ತಿ ಉಂಟಾಗುತ್ತದೆ. ಅದನ್ನು ಒಪ್ಪದಿದ್ದರೆ “ ಜ್ಞಾನದಿಂದಲೇ ಕೈವಲ್ಯವು ಸಿಕ್ಕುತ್ತದೆ. ಮುಕ್ತಿಗೆ ಇದಕ್ಕಿಂತ ಬೇರೆ ದಾರಿಯಿಲ್ಲ” ಇದೇ ಮೊದಲಾದ ಅನೇಕ ಶ್ರುತಿಗಳು ನಷ್ಟವಾಗಬೇಕಾಗುತ್ತದೆ. ಹೀಗೆ ಪೂರ್ವಪಕ್ಷ ಬಂದರೆ ಸಮಾಧಾನವನ್ನು ತಿಳಿಸಲಾಗಿದೆ. ಶಿವಜ್ಞಾನವು ಸಿದ್ಧಿಸದೆ ಇದ್ದರೆ ವೈದ್ಯಶಾಸ್ತ್ರದ ಜ್ಞಾನದಂತೆ ಪರೋಕ್ಷಜ್ಞಾನದಿಂದ ಪಾಶವು ತೊಲಗಿ ಶಿವಭಾವವು ಬರುವುದೆಂಬುದು ಹೊಂದುವುದಿಲ್ಲ. “ಅನುಭವವಿಲ್ಲದ ಮೂಢನು ನೆರಳಿನಲ್ಲಿ ಕಾಣುವ ಹಣ್ಣನ್ನು ತಿನ್ನಲು ಬಯಸುವಂತೆ ಬ್ರಹ್ಮದಲ್ಲಿ ವ್ಯರ್ಥವಾಗಿ ರಮಿಸುತ್ತಾನೆ.” ಹೀಗೆ ಶ್ರುತಿಗಳಲ್ಲಿ ಶಾಸ್ತ್ರದಿಂದ ಹುಟ್ಟುವ ಪರೋಕ್ಷಜ್ಞಾನವನ್ನು ನಿಂದಿಸಲಾಗಿದೆ. ಆದ್ದರಿಂದ ಕೇವಲಜ್ಞಾನವು ಇಚ್ಛೆಯಲ್ಲಿ ಕೊನೆಗಾಣುತ್ತದೆ. ಆ ಇಚ್ಛೆಯಾದರೂ ಪುರುಷಾರ್ಥವಾಗದೆ ಇರುವುದರಿಂದ “ ಜ್ಞಾನ ಹುಟ್ಟುವವರೆಗೆ ಕರ್ಮಗಳನ್ನು ಮಾಡಬೇಕು” ಎಂಬಲ್ಲಿ ಜ್ಞಾನಪದವು ಕೇವಲ ಜ್ಞಾನಕ್ಕೆ ಅನ್ವಯಿಸದೆ ಶಿವೋಪಾಸನಜ್ಞಾನದ ಸಿದ್ಧಿಯನ್ನು ತಿಳಿಸುತ್ತದೆ. “ ಶ್ರದ್ಧಾಭಕ್ತಿಗಳಿಂದೊಡಗೂಡಿದ ಯೋಗದಿಂದ ತಿಳಿ” ಎಂಬಲ್ಲಿ ಉಪಾಸನಜ್ಞಾನವನ್ನು ಪಡೆದವರಿಗೆ ಮಾತ್ರವೇ ಪಾಶವು ತೊಲಗಿ ಶಿವಭಾವವು ಸಿದ್ಧಿಸುವುದೆಂದು ಹೇಳಿರುವುದರಿಂದ ಜ್ಞಾನಸಿದ್ಧಿ ಎಂಬ ಅಪರೋಕ್ಷಾನುಭವವೇ ಮೋಕ್ಷಸಾಧನವೆನಿಸಿದೆ. “ ಬ್ರಹ್ಮವಿದ” ಎಂಬಲ್ಲಿ ಹೇಳಿದ ಪರೋಕ್ಷಜ್ಞಾನವು ಕಾಲಾಂತರದಲ್ಲಿ ಮೋಕ್ಷವನ್ನು ದೊಸಕಿಸುತ್ತದೆ ಎಂದು ನಿಶ್ಚಯಿಸಲಾಗಿದೆ. “ ಅವನಿಗೆ ದೇಹವನ್ನು ತೊರೆಯುವಷ್ಟುಕಾಲ ಮುಕ್ತಿಯ ವಿಳಂಬವಿರುವುದು” ಎಂಬ ಶ್ರುತಿಯಲ್ಲಿ ಹಾಗೆ ತಿಳಿಸಲಾಗಿದೆ. “ ಶಿವಜ್ಞಾನಿಗೆ ಕೊಂಚ ವಿಷಯವಾಸನೆ ಇದ್ದರೂ ವಿದೇಹ ಕೈವಲ್ಯಕ್ಕೆ

ದೇಹ ಬಿಡುವವರೆಗೆ ಮಾತ್ರವೇ ಕೊಂಚ ಕಾಲ ವಿಳಂಬವಾಗುತ್ತದೆ. ಪ್ರಾರಬ್ಧಕರ್ಮ ನಾಶವಾದೊಡನೆ ಅಂದರೆ ದೇಹವು ಅಳಿದೊಡನೆ ಅವನು ವಿದೇಹಕೈವಲ್ಯವನ್ನು ಹೊಂದುತ್ತಾನೆ ಎಂದು ಆ ಶ್ರುತಿಯು ಉಪದೇಶಿಸುತ್ತದೆ. ಇದರಿಂದ ಶಾಸ್ತ್ರ ವ್ಯಾಸಂಗದಿಂದ ಶಿವಜ್ಞಾನವನ್ನು ಪಡೆದು ಅಭ್ಯಾಸ ಮಾಡಿದವರಿಗೆ ಕಾಲಾಂತರದಲ್ಲಿ ಮುಕ್ತಿ ಎಂದೂ, ಯಾವ ವಿಷಯವಾಸನೆಯೂ ಇಲ್ಲದೆ ಶಿವಜ್ಞಾನದಿಂದ ಸಿದ್ಧ ರಾದವರು ಈ ಶರೀರದಲ್ಲಿಯೇ ಪಾಶವನ್ನು ತೊಲಗಿಸಿಕೊಂಡು ಪರಶಿವನಲ್ಲಿ ಸಾಮ ರಸ್ಯವನ್ನು ಹೊಂದುವರೆಂದೂ ನಿಶ್ಚಯಿಸಲಾಗಿದೆ.

ನನು " ರುದ್ರೋ ವಾ ಏಷ ಯದಗ್ನಿಸ್ತಸ್ಯೈತೇ ತನುವೌ ಘೋ ರಾಽನ್ಯಾ ಶಿವಾನ್ಯಾ " ಇತಿ ಶ್ರುತೌ ಅಗ್ನೇಶ್ಶಿವಶರೀರತ್ವನಿರ್ದೇಶಾತ್, " ಯಾವಜ್ಜೀವಮಗ್ನಿಹೋತ್ರಂ ಜುಹೋತಿ ", " ಯ ಏವಂ ವಿದ್ವಾ ನಗ್ನಿಹೋತ್ರಂ ಜುಹುಯಾತ್ " ಇತ್ಯಾದೌ ವಿದ್ವದವಿದ್ವದಾವಶ್ಯಕತ್ವೇನ ಚೋದನಾವಗಮಾತ್, " ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭವಂತಿ ಭಾರತ । ಕುರ್ಯಾದ್ವಿದ್ವಾಂಸ್ತಥಾಽಸಕ್ತಃ ಚಿಕೀರ್ಷು ರ್ಲೋಕಸಂಗ್ರಹಃ " ಇತಿ ಸ್ಮೃತೌ ತದ್ವದ್ವ್ಯವಸ್ಥಾಪನಾತ್ ಕಥಮಗ್ನಿ ಹೋತ್ರಾದಿಕರ್ಮಣಾಮಾವಶ್ಯಕತ್ವಂ ನಾಸ್ತಿ ? ಇತ್ಯಾಶಂಕಾಯಾಮಧಿ ಕರಣಾಂತರೇಣಾಹ. ಅಗ್ನಿಹೋತ್ರಾಧಿಕರಣಂ ॥ ೯ ॥ ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್ ॥ ೧೬ ॥ ಶಿವಜ್ಞಾನೋದ್ದೇಶೇನ ಕೃತಮಗ್ನಿಹೋತ್ರಾದಿಕಂ ಸ್ವಕಾರ್ಯಾಯ ಜ್ಞಾನರೂಪಕಾರ್ಯಾ ಯೈವ ಭವತಿ. ಕುತಃ ? ತದ್ದರ್ಶನಾತ್. " ತಮೇವಂ ವೇದಾನುವಚ ನೇನ ಬ್ರಾಹ್ಮಣಾ ವಿವಿದಿಷಂತಿ ", " ಯಜ್ಞೇನ ದಾನೇನ ತಪಸಾಽನಾಶ ಕೇನ " ಇತ್ಯಾದಿಶ್ರುತಿಷು ಅಗ್ನಿಹೋತ್ರಾದೀನಾಂ ಶಿವಜ್ಞಾನಸಾಧನ ತ್ವೇನ ಶಿವಜ್ಞಾನಂ ಪ್ರತ್ಯುಪಜೀವ್ಯತ್ವಾತ್ ಬ್ರಹ್ಮಜ್ಞಾನನಾಶ್ಯತ್ವಂ ನಾಸ್ತೀತ್ಯುಪದಿಶ್ಯತೇ. ತದುಕ್ತಂ ಶಿವಗೀತಾಸೂಪನಿಷತ್ಸು " ಕೋಟಿ ಜನ್ಮಾರ್ಜಿತೈಃ ಪುಣ್ಯೈಃ ಶಿವೇ ಭಕ್ತಿಃ ಪ್ರಜಾಯತೇ । ಇಷ್ಟಪೂರ್ತಾದಿ ಕರ್ಮಾಣಿ ಯೇನಾಚರತಿ ಮಾನವಃ । ಶಿವಾರ್ಪಣಧಿಯಾ ಕಾಮಾನ್ ಪರಿತ್ಯಜ್ಯ ಯಥಾವಿಧಿ ॥ " ಇತ್ಯಾದಿನಾ ಬಹುಧಾ ಪ್ರಪಂಚಿತಂ. ಯದ್ಯಪಿ ಕರ್ಮಣಾಂ ಫಲನಾಶ್ಯತ್ವಾತ್ ಫಲಭೂತೇನ ಬ್ರಹ್ಮಜ್ಞಾನೇನ ನಾಶೋಽಸ್ತ್ಯೇವ. ತಥಾಪಿ ಫಲತ್ವೇನ ರೂಪೇಣೈವ ಶಿವಜ್ಞಾನಸ್ಯ ಕರ್ಮನಾಶಕತ್ವಂ ನತು ಜ್ಞಾನತ್ವೇನ ರೂಪೇಣೇತಿ ಸೂತ್ರಸೂಚಿತ ಸೂಕ್ಷ್ಮಾರ್ಥಃ. ಪೂರ್ವಾಧಿಕರಣೇ ಶಿವಜ್ಞಾನಪೂರ್ಣನಿಷ್ಠಾನಾಂ ಸದ್ಯೋಮುಕ್ತಿಃ, ಶಾಸ್ತ್ರೀಯಪರೋಕ್ಷಶಿವಜ್ಞಾನವತಾಂ ಶಮದಮ ವೈರಾಗ್ಯೋಪರತಿಜೀವಕರುಣಾದಿಧರ್ಮರಹಿತಾನಾಂ ಉಪಾಸಕಾನಾಂ

ಪರಂಪರಾಮೋಕ್ಷಫಲಮುಪದಿಷ್ಟಂ, ತಥೈವ ಯಾವಜ್ಜೀವಂ ಶಿವೋಪಾಸನಮಪ್ಯುಪಪಾದಿತಂ. ಇಹ ತು "ವಿದ್ವಾನಗ್ನಿಹೋತ್ರಂ ಜುಹುಯಾತ್," "ನ ಕರ್ಮಣಾ ನ ಪ್ರಜಯಾ ಧನೇನ" ಇತ್ಯಾದಿಷು ಸಾವಕಾಶನಿರವಕಾಶಾಗ್ನಿಹೋತ್ರಚೋದನಾವಗಮಾತ್ ಯಾವಚ್ಛರೀರಪಾತಪರ್ಯಂತಂ ಅಗ್ನಿಹೋತ್ರಾದಿಕರ್ಮಾನುಷ್ಠಾನಂ ವಿಧೇಯಂ ಉತ ಜ್ಞಾನೋತ್ಪತ್ತಿಪರ್ಯಂತಂ? ಇತಿ ಸಂದಿಹ್ಯತೇ. "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ", "ಯಾವಜ್ಜೀವಮಗ್ನಿಹೋತ್ರಂ ಜುಹುಯಾತ್", "ಅಹರಹಸ್ಸಂಧ್ಯಾಮುಪಾಸೀತ" ಇತ್ಯಾದಿಬಹುಶ್ರುತಿಷು ಯಾವಜ್ಜೀವವಿಧ್ಯುಪದೇಶಾತ್ ವಿದುಷಾಮವಿದುಷಾಮಭ್ಯುದಯಫಲಹೇತುಕಂ ಕರ್ಮಾನುಷ್ಠಾನಮಾವಶ್ಯಕಮಿತಿ ಪ್ರಾಪ್ತೇಽಭಿಧೀಯತೇ. ಯಾವಚ್ಛರೀರೇಷಣತ್ರಯವಾಸನಾ ದೃಶ್ಯತೇ ತಾವತ್ಕಾಲಂ ಸರ್ವವಾಸನಾನಿರ್ಮುಕ್ತಶಿವಜ್ಞಾನಸಿದ್ಧ್ಯರ್ಥಂ ಫಲಾಭಿಸಂಧಿರಹಿತಪರಮೇಶ್ವರಾರ್ಪಿತಕರ್ಮಾನುಷ್ಠಾನಮಾರುರುಕ್ಷೂಣಾಂ ಶಿವಜ್ಞಾನವತಾಂ ಆವಶ್ಯಕಂ. ಏವಂ ಶಿವಜ್ಞಾನದೃಢಫಲಕತ್ವಾತ್ "ತಮೇವಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಶಂತಿ", "ಯಜ್ಞೇನ ದಾನೇನ ತಪಸಾಽನಾಶಕೇನ" ಇತ್ಯಾದಿನಾ ಅಗ್ನಿಹೋತ್ರಾದೀನಾಂ ವಿದ್ಯಾಸಾಧನತ್ವಂ. ವಿದ್ಯಾಯಾಶ್ಚ ಆಪ್ರಯಾಣಾದಭ್ಯಾಸಾಧೇಯಾತಿಶಯಾಯಾಃ ಅಹರಹರುತ್ಪಾದ್ಯತ್ವಾತ್ ತದುತ್ಪತ್ತ್ಯರ್ಥಂ ಆಶ್ರಮಕರ್ಮ ಶಿವಾರ್ಪಣಬುದ್ಧ್ಯಾ ಅನುಷ್ಠೇಯಮೇವ. ಅನ್ಯಥಾ ಆಶ್ರಮಕರ್ಮಲೋಪೇ ದೂಷಿತಾಂತಃಕರಣಸ್ಯ ವಿದ್ಯೋತ್ಪತ್ತಿರೇವ ನ ಸ್ಯಾತ್. "ತಮೇವಂ ವೇದಾನುವಚನೇನ" ಇತ್ಯತ್ರ ವೇದಾನುವಚನಂ ವೇದಾಭ್ಯಾಸಃ ಪರಮಶಿವಪ್ರಾಪ್ತಿಸಾಧನಫಲಂ; ಸಹೇತುಕಾನಾಮಧ್ಯಾತ್ಮವಾದಿನಾಂ ವೇದಮಂತ್ರಾಣಾಂ ಜಪಾವೃತ್ತಿಃ. ತಥಾ ಜಾಬಾಲೋಪನಿಷದಿ "ಅಥೈನಂ ಬ್ರಹ್ಮಚಾರಿಣ ಊಚುಃ "ಕಿಂ ಜಪ್ಯೇನಾಽಮೃತತ್ವಂ ಬ್ರೂಹಿ" ಇತಿ. ಸ ಹೋವಾಚ ಯಾಜ್ಞವಲ್ಕ್ಯಃ "ಶತರುದ್ರೀಯೇಣೇತಿ" "ಏತಾನಿ ಹ ವಾಽಮೃತಸ್ಯ ನಾಮಧೇಯಾನ್ಯೇತೈರ್ಹ ವಾಽಮೃತೋ ಭವತಿ" ಇತಿ. ಕೈವಲ್ಯೇ "ಯಃ ಶತರುದ್ರೀಯಂ ಬ್ರಾಹ್ಮಣೋ ನಿತ್ಯಮಧೀತಸ್ಸೋಽಗ್ನಿಪೂತೋ ಭವತಿ ಸ ವಾಯುಪೂತೋ ಭವತಿ। ಸುರಾಪಾನಾತ್ಪೂತೋ ಭವತಿ। ಸ್ವರ್ಣಸ್ತೇಯಾತ್ಪೂತೋ ಭವತಿ। ಬ್ರಹ್ಮಹತ್ಯಾಯಾಃ ಪೂತೋ ಭವತಿ। ತಸ್ಮಾದ್ವಿಮುಕ್ತಿಮಾಶ್ರಿತೋ ಭವತಿ। ಅತ್ಯಾಶ್ರಮೀ ಸರ್ವದಾ ಸ್ಸಕೃದ್ವಾ ಜಪೇತ್ ॥", "ಅನೇನ ಜ್ಞಾನಮಾಪ್ನೋತಿ ಸಂಸಾರಾರ್ಣವತಾರಕಃ। ತಸ್ಮಾದೇವಂ ವಿದಿತ್ವೈನಂ ಕೈವಲ್ಯಂ ಪದಮಶ್ನುತೇ ॥" ಇತಿ. ಇಹ

ಶತರುದ್ರೀಯಸಂಜ್ಞಿಕಾನಾಂ ಬ್ರಹ್ಮಬೋಧಕಮಂತ್ರಾಣಾಂ ಸಂಸ್ಮರಣಾತ್ ಸಂಸಾರತಾರಣಜ್ಞಾನೋತ್ಪತ್ತಿನಿಧ್ಯವಗಮಾತ್ "ವೇದಶ್ಶಿವೋ ಶಿವೋ ವೇದಃ ವೇದಾಭ್ಯಾಸೀ ಸದಾ ಶಿವಃ" ಇತ್ಯಾದಿಸ್ಮೃತಿಷು "ಈಶಾನಸ್ಸರ್ವವಿದ್ಯಾನಾಂ" ಇತ್ಯಾದಿಶ್ರುತಿಷು ಚ ವೇದಸ್ಯ ಶಿವಾತ್ಮಕತ್ವಂ ಶಿವಾಧೀನತ್ವಂ ಚ ದ್ಯೋತತಮಪಿ ಸಾಕ್ಷಾಚ್ಛಿವತತ್ತ್ವಪ್ರತಿಪಾದಕಶತರುದ್ರೀಯಪಂಚಬ್ರಹ್ಮಾದಿಮಂತ್ರಾಣಾಂ ಸಮುತ್ಕೃಷ್ಟತ್ವಮವಿರೋಧಂ. "ಮದ್ಯಂ ಪೀತ್ವಾ ಗುರುದಾರಾಂಶ್ಚ ಗತ್ವಾ ಸ್ವರ್ಣಸ್ತೇಯಂ ಬ್ರಹ್ಮಹತ್ಯಾಂ ಚ ಕೃತ್ವಾ। ಭಸ್ಮಚ್ಛನ್ನೋ ಭಸ್ಮಶಾಯೀ ಶಯಾನೋ ರುದ್ರಾಧ್ಯಾಯೀ ಮುಚ್ಯತೇ ಸರ್ವಪಾಪೈಃ ॥" ಇತ್ಯಾದಿನಾ ಸಾಮಶಾಖಾಯಾಮಪಿ ಶತರುದ್ರೀಯಾಧಿಕ್ಯಕಥನಾತ್. ಜಾಬಾಲೇ "ಏತಾನಿ ಹ ವಾ ಅಮೃತಸ್ಯ ನಾಮಧೇಯಾನಿ" ಇತಿ ಅಮೃತಸ್ಯ ಅನಾದಿಮುಕ್ತಸ್ಯ ಶಿವಸ್ಯ ನಾಮಧೇಯತ್ವಾದ್ಧೇತೋಃ ಶತರುದ್ರೀಯಜಪಾತ್ಸರ್ವಾಘನಾಶಃ ಸ್ಮರ್ಯತೇ. ಅಪಚ "ಯಶ್ಚಂಡಾಲಶ್ಶಿವ ಇತಿ ವಾಚಂ ವದೇತ್। ತೇನ ಸಹ ವಸೇತ್ ತೇನ ಸಹ ಭುಂಜೀತ ॥" ಅತ್ರ ಹಿ ಶಿವಶಬ್ದಸ್ಯ ಬ್ರಹ್ಮಬೋಧಕಸ್ಯ ಸಮುಚ್ಚಾರಣಮಾತ್ರೇಣ ಅತ್ಯಂತಾವಿಶುದ್ಧಸ್ಯ ಅಪಾತಕಿನಃ ಪರಮಶುದ್ಧಿರ್ವಿಧೀಯತೇ. "ಅಸ್ಯತ್ರ ಯೋಽಥರ್ವಶಿರಸಾ ಬ್ರಾಹ್ಮಣೋ ನಿತ್ಯಮಧೀತೇ" ಇತ್ಯಾರಭ್ಯ ತದಭ್ಯಸನೇನ ಸರ್ವದುರಿತಕ್ಷಯಫಲಮುಪದಿಶ್ಯ "ಸಕೃಜ್ಜಪ್ತ್ವಾ ವಿಶುದ್ಧಃ ಪೂತಃ ಕರ್ಮಣೋ ಭವತಿ. ದ್ವಿತೀಯಂ ಜಪ್ತ್ವಾ ಗಾಣಾಪತ್ಯಮವಾಪ್ನೋತಿ. ತೃತೀಯಂ ಜಪ್ತ್ವಾ ದೇವಮೇವಾನುಪ್ರವಿಶತಿ" ಇತಿ ಮೋಕ್ಷಫಲಮವಗಮ್ಯತೇ. "ಆತ್ಮಾನಮರಣಿಂ ಕೃತ್ವಾ" ಇತ್ಯಾದಿಷು ಶಿವಾತ್ಮಕಪ್ರಾಣಾಭ್ಯಾಸಸ್ಯ ಪಾಶವಿಚ್ಛೇದಕಸ್ಯ ಲಕ್ಷಣಮುಚ್ಯತೇ. ಏವಮನ್ಯತ್ರಾಪಿ ವೇದಿತವ್ಯಂ. ಅತಶ್ಶಿವಪರಾಣಾಂ ವೇದಮಂತ್ರಾಣಾಂ ಪಾಪಕ್ಷಯದ್ವಾರಾ ಶಿವಜ್ಞಾನಹೇತುತಯಾ ಮೋಕ್ಷಸಾಧನತ್ವಾವಗಮಾತ್ ತದಭ್ಯಾಸಃ ಕರ್ತವ್ಯಃ. ವಿದ್ಯಾವತಾಂ ಪೂರ್ಣವೈರಾಗ್ಯನಿಷ್ಠಾರಹಿತಾನಾಂ ಯಾವಜ್ಜೀವಮಗ್ನಿಹೋತ್ರಾದಿಯಜ್ಞಾನಾಂ ಪರಮಶಿವಾರ್ಚಿತಫಲಾನಾಂ ತದಾಜ್ಞಾಸಿದ್ಧತ್ವಾತ್ ತದಾರಾಧನರೂಪತ್ವಾಚ್ಚ ವೇದವೈದಿಕಾಭ್ಯಾಸಃ ಕರ್ತವ್ಯಃ. ಏವಂ ದಾನಾದೀನಾಮಪಿ. ತಸ್ಮಾನ್ನಿರ್ವಾಸನಾನಾಂ ನಿರಾಭಾರಧರ್ಮಾಶ್ರಯಿಣಾಂ ಕರ್ಮತ್ಯಾಗಸ್ಯ ಉಚಿತತ್ವೇಽಪಿ ಲೌಕಿಕೇಷಣತ್ರಯಬದ್ಧಾನಾಂ ಗೃಹಿಣಾಂ ಶಿವೋಪಾಸಕಾನಾಂ ಕರ್ಮತ್ಯಾಗ ಅಸಮಂಜಸಃ.

"ಈ ಅಗ್ನಿಯೇ ರುದ್ರನು. ಅವನಿಗೆ ಘೋರ ಶಿವ ಎಂಬ ಎರಡು ದೇಹ

ಗಳಿವೆ" ಎಂಬ ಶ್ರುತಿಯಲ್ಲಿ ಅಗ್ನಿಯನ್ನು ಶಿವನ ಶರೀರವೆಂದು ಹೇಳಿರುವುದರಿಂದ "ಬದುಕಿರವವರೆಗೂ ಅಗ್ನಿಹೋತ್ರವನ್ನಾಚರಿಸುತ್ತಾನೆ" "ಹೀಗೆ ತಿಳಿದವನು ಅಗ್ನಿಹೋತ್ರವನ್ನಾಚರಿಸಬೇಕು" ಎಂಬಲ್ಲಿ ವಿದ್ವಾಂಸರಿಗೂ ಸಾಮಾನ್ಯರಿಗೂ ವಿಧಿಯನ್ನು ಸಮಾನವಾಗಿ ಹೇಳಿರುವುದರಿಂದಲೂ, "ಸಾಮನ್ಯಜನರು ಆಸಕ್ತಿಯಿಂದ ಕರ್ಮವನ್ನಾಚರಿಸಿದರೆ ವಿದ್ವಾಂಸನು ಲೋಕಕಾರುಣ್ಯದಿಂದ ಕರ್ಮಮಾಡುವನು" ಎಂಬ ಸ್ಮೃತಿಯಲ್ಲೂ ಹಾಗೆಯೇ ಹೇಳಿರುವುದರಿಂದಲೂ ಅಗ್ನಿಹೋತ್ರಾದಿಕರ್ಮಗಳೇ ಅನಾವಶ್ಯಕವೆಂದಾಶಂಕಿಸಿ ನಿರಾಕರಿಸುತ್ತಾನೆ. ಶಿವಜ್ಞಾನಕ್ಕಾಗಿ ಮಾಡಿದ ಅಗ್ನಿಹೋತ್ರಾದಿ ಕರ್ಮವು ಜ್ಞಾನವೆಂಬ ಆ ಕಾರ್ಯವನ್ನು ಹುಟ್ಟಿಸುವುದಾಗಿ ಶ್ರುತಿಯಲ್ಲಿ ಕಂಡುಬಂದಿದೆ. "ಬ್ರಾಹ್ಮಣರು ಯಜ್ಞದಿಂದಲೂ ದಾನದಿಂದಲೂ ತಪಸ್ಸಿನಿಂದಲೂ ಅವನನ್ನು ತಿಳಿಯುತ್ತಾರೆ" ಎಂಬಲ್ಲಿ ಅಗ್ನಿಹೋತ್ರ ಮೊದಲಾದ ಕರ್ಮಗಳನ್ನು ಜ್ಞಾನಕ್ಕೆ ಸಾಧನವೆಂದು ಹೇಳಲಾಗಿದೆ. ಹೀಗೆ ಅಗ್ನಿಹೋತ್ರಾದಿ ಕರ್ಮಗಳು ಶಿವಜ್ಞಾನಕ್ಕೆ ಸಾಧನವಾದ್ದರಿಂದ ಅವು ಅದಕ್ಕೆ ಆಶ್ರಯವಾಗಿವೆ. ಆದ್ದರಿಂದ ಅವು ಶಿವಜ್ಞಾನದಿಂದ ನಾಶವಾಗಲಾರವೆಂದು ಶಿವಗೀತೆಯು ತಿಳಿಸುತ್ತದೆ. "ಕೋಟಿಜನ್ಮಗಳಲ್ಲಿ ಗಳಿಸಿದ ಪುಣ್ಯದಿಂದ ಶಿವನಲ್ಲಿ ಭಕ್ತಿ ಹುಟ್ಟುತ್ತದೆ. ಇದರಿಂದಲೇ ಮಾನವನು ಯಜ್ಞಾದಿಕರ್ಮಗಳನ್ನೂ ಸಾರ್ವಜನಿಕಕರ್ಮಗಳನ್ನೂ ಫಲಪೇಕ್ಷೆಯಿಲ್ಲದೆ ಈಶ್ವರಪ್ರೀತಿಗಾಗಿ ಮಾಡುವನು" ಎಂದು ಮುಂತಾಗಿ ಅಲ್ಲಿ ವಿಸ್ತರಿಸಲಾಗಿದೆ. ಕರ್ಮಗಳು ಫಲದಿಂದ ನಾಶವಾಗಬೇಕಾದ್ದರಿಂದ ಫಲವೆನಿಸಿದ ಶಿವಜ್ಞಾನದಿಂದ ಅವಕ್ಕೆ ನಾಶವೇನೋ ಸಂಭವಿಸುತ್ತದೆ. ಆದರೂ ಫಲವೆಂಬ ರೂಪದಿಂದ ಶಿವಜ್ಞಾನವು ಕರ್ಮವನ್ನು ನಾಶಪಡಿಸುವುದೇ ಹೊರತು ಜ್ಞಾನವೆಂಬ ರೂಪದಿಂದಲ್ಲವೆಂದು ಸೂತ್ರವು ತಿಳಿಸುತ್ತದೆ. ಶಿವಜ್ಞಾನದಲ್ಲಿ ಪೂರ್ಣನಿಷ್ಠರಾದವರಿಗೆ ಸದ್ಯೋಮುಕ್ತಿಯೂ, ಶಾಸ್ತ್ರದಮೂಲಕ ಶಿವಜ್ಞಾನವನ್ನು ಪಡೆದು ಶಮದಮ ವೈರಾಗ್ಯ ಉಪರತಿ ಜೀವಕರುಣೆ ಮೊದಲಾದ ಧರ್ಮಗಳಿಲ್ಲದ ಸಾಧಕರಿಗೆ ಕ್ರಮಮುಕ್ತಿಯೂ ದೊರಕುವುದೆಂದು ಹಿಂದಿನ ಅಧಿಕರಣದಲ್ಲಿ ಹೇಳಿದೆ. ಆದರೆ ಬದುಕಿರುವವರೆಗೂ ಶಿವನನ್ನು ಉಪಾಸನವಮಾಡಬೇಕೆಂದು ಇಲ್ಲಿ ತಿಳಿಸಲಾಗಿದೆ. "ಬದುಕಿರುವವರೆಗೂ ಅಗ್ನಿಹೋತ್ರವನ್ನಾಚರಿಸಬೇಕು" "ಜ್ಞಾನ ಹುಟ್ಟುವವರೆಗೂ ಕರ್ಮವನ್ನಾಚರಿಸಬೇಕು" ಎಂಬಲ್ಲಿ ಅಗ್ನಿಹೋತ್ರವನ್ನು ಮಾಡಲಿಕ್ಕೂ ಮಾಡದಿರಲಿಕ್ಕೂ ವಿಧಿಯು ಕಂಡುಬರುತ್ತದೆ. ಆದ್ದರಿಂದ ಇಲ್ಲಿ ಸಂದೇಹಕ್ಕೆ ಅವಕಾಶವಿದೆ. ಶರೀರ ಕೆಳಗೆ ಬೀಳುವವರೆಗೂ ಅಗ್ನಿಹೋತ್ರಗಳನ್ನಾಚರಿಸುತ್ತಿರಬೇಕೆ? ಅಥವಾ ಜ್ಞಾನ ಹುಟ್ಟುವವರೆಗೆ ಮಾತ್ರವೇ ಮಾಡಬೇಕೆ? ಎಂಬುದೇ ಆ ಸಂದೇಹ. "ಪ್ರತಿ ಹಗಲಿನಲ್ಲೂ ಸಂಧ್ಯಾವಂದನ ಮಾಡಬೇಕು" ಎಂದು ಮುಂತಾದ ಶ್ರುತಿಗಳಲ್ಲಿ ಬದುಕಿರುವವರೆಗೂ ಕರ್ಮಮಾಡಬೇಕೆಂದು ವಿಧಿಸಿರುವುದರಿಂದ ವಿದ್ವಾಂಸರು ಮತ್ತು ಸಾಮಾನ್ಯರು ಎಲ್ಲರೂ ಐಹಿಕಫಲಕ್ಕಾಗಿಯೇ ಕರ್ಮವನ್ನಾಚರಿಸಬೇಕೆಂದು ಪೂರ್ವ

ಪಕ್ಷಿಯು ಹೇಳುತ್ತಾನೆ ಅದಕ್ಕೆ ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. ಎಲ್ಲಿಯವರೆಗೆ ದಾರೇಷಣ ಪುತ್ರೇಷಣ ವಿತ್ತೇಷಣಗಳ ವಾಸನೆ ಇರುವುದೋ ಅಲ್ಲಿಯವರೆಗೂ ವಾಸನೆಗಳೆಲ್ಲವನ್ನೂ ಕಳೆದುಕೊಂಡು ಶಿವಜ್ಞಾನವೆಂಬ ದೃಢಫಲವನ್ನು ಪಡೆಯಲಿಕ್ಕಾಗಿ ಐಹಿಕಫಲಾಪೇಕ್ಷೆಯಿಲ್ಲದೆ ಈಶ್ವರಪ್ರೀತಿಗಾಗಿಯೇ ಕರ್ಮಾನುಷ್ಠಾನವು ಶಿವಜ್ಞಾನವನ್ನು ಪಡೆದ ಸಾಧಕರೆಲ್ಲರಿಗೂ ಆವಶ್ಯಕವೇ ಆಗಿದೆ. " ಯಜ್ಞ ದಾನ ತಪಸ್ಸುಗಳಿಂದ ಬ್ರಾಹ್ಮಣರು ಅವನನ್ನು ತಿಳಿಯುತ್ತಾರೆ" ಎಂಬಲ್ಲಿ ಅಗ್ನಿಹೋತ್ರಾದಿಗಳು ಬ್ರಹ್ಮವಿದ್ಯೆಗೆ ಸಾಧನವಾಗಿವೆ. ಬ್ರಹ್ಮವಿದ್ಯೆಯಾದರೂ ಪ್ರತಿನಿಮಿಷದ ಅಭ್ಯಾಸದಿಂದ ಆಗಾಗಲೇ ಹುಟ್ಟುತ್ತದೆ. ಅದಕ್ಕಾಗಿಯೇ ಆಶ್ರಮಕರ್ಮವನ್ನು ಶಿವಾರ್ಪಣಬುದ್ಧಿಯಿಂದ ಆಚರಿಸಲೇಬೇಕು. ಇಲ್ಲವಾದರೆ ಆಶ್ರಮಕರ್ಮವನ್ನು ತೊರೆಯುವುದರಿಂದ ಹೃದಯವು ಕೆಡುವುದು. ಇದರಿಂದ ವಿದ್ಯೆಯೇ ಹುಟ್ಟದೇಹೋದೀತು. ಶ್ರುತಿಯಲ್ಲಿ ಹೇಳಿರುವ ವೇದಾನುವಚನವೆಂದರೆ ಪರಶಿವನನ್ನು ದೊರಕಿಸುವ ವೇದದ ಅಭ್ಯಾಸವೆಂದರ್ಥ. ಆತ್ಮತತ್ತ್ವವನ್ನೂ ಸಾಧನಗಳನ್ನೂ ತಿಳಿಸುವ ವೇದಮಂತ್ರಗಳನ್ನು ಮತ್ತೆ ಮತ್ತೆ ಜಪಿಸುವುದಕ್ಕೆ ವೇದಾನುವಚನವೆಂದು ಹೆಸರು. ಜಾಬಾಲೋಪನಿಷತ್ತಿನಲ್ಲಿ ಬ್ರಹ್ಮಚಾರಿಗಳಿಗೆ ಯಾವುದರ ಜಪದಿಂದ ಅಮೃತವು ದೊರಕುವುದೆಂಬ ಪ್ರಶ್ನೆಗೆ ಯಜ್ಞವಲ್ಕ್ಯನು ಶತರುದ್ರೀಯವನ್ನು ಉತ್ತರವಾಗಿ ತಿಳಿಸುವನು. "ಇವು ಅಮೃತದ ನಾಮಧೇಯಗಳು; ಇವುಗಳ ಜಪದಿಂದ ಜೀವನು ಅಮೃತನಾಗುತ್ತಾನೆ" ಎಂದು ಅಲ್ಲಿ ಹೇಳಿದೆ. " ಯಾವನು ನಿತ್ಯವೂ ಶತರುದ್ರೀಯವನ್ನು ಓದುತ್ತಾನೋ ಅವನು ಅಗ್ನಿವಾಯುಗಳ ಭಯದಿಂದಲೂ, ಸುರಾಪಾನ, ಸ್ವರ್ಣಸ್ತೇಯ ಮತ್ತು ಬ್ರಹ್ಮಹತ್ಯೆ ಮೊದಲಾದ ದೋಷಗಳಿಂದಲೂ ಬಿಡುಗಡೆಹೊಂದುತ್ತಾನೆ" ಅದರ ಜಪದಿಂದಲೇ ಸಾಧಕನು ಮುಕ್ತಿಯನ್ನು ಹೊಂದುತ್ತಾನೆ. ಅತ್ಯಾಶ್ರಮಿಯು ಯಾವಾಗಲೂ ಅಥವಾ ಒಮ್ಮೆಯಾದರೂ ಅದನ್ನು ಜಪಿಸಬೇಕು. ಇದರಿಂದ ಸಂಸಾರಸಾಗರವನ್ನು ದಾಟುವೆನೆಂದು ತಿಳಿದು ಜೀವನು ಕೈವಲ್ಯವನ್ನು ಹೊಂದುತ್ತಾನೆ" ಹೀಗೆ ಕೈವಲ್ಯಶ್ರುತಿಯಲ್ಲಿ ಹೇಳಿದೆ. ಹೀಗೆ ಶತರುದ್ರೀಯವೆಂಬ ಶಿವಮಂತ್ರಗಳನ್ನು ಸ್ಮರಣಮಾಡುವುದರಿಂದ ಜೀವನಿಗೆ ಸಂಸಾರವನ್ನು ದಾಟುವ ಜ್ಞಾನವು ಹುಟ್ಟುವುದೆಂದು ವಿಧಿ ಇರುವುದರಿಂದ "ವೇದವೇ ಶಿವನು ಶಿವನೇ ವೇದವು ವೇದಾಧ್ಯಾಯಿಯೇ ಸದಾಶಿವನು" ಎಂದು ಸ್ಮೃತಿಗಳಲ್ಲೂ, "ಎಲ್ಲಾ ವಿದ್ಯೆಗಳಿಗೂ ಶಿವನೇ ಅಧಿಪತಿ" ಎಂದು ಶ್ರುತಿಗಳಲ್ಲೂ ವೇದವನ್ನೇ ಶಿವನೆಂದೂ ಶಿವನಿಗಧೀನನೆಂದೂ ಹೇಳಿದ್ದರೂ ಶಿವತತ್ತ್ವವನ್ನೇ ನೇರವಾಗಿ ತಿಳಿಸುವ ಶತರುದ್ರೀಯ ಪಂಚಬ್ರಹ್ಮಮಂತ್ರಗಳು ಉತ್ಕೃಷ್ಟವೆಂಬಲ್ಲಿ ಯಾವ ವಿರೋಧವೂ ಇಲ್ಲ. " ಹೆಂಡವನ್ನು ಕುಡಿದು, ಗುರುಪತ್ನಿಯಲ್ಲಿ ಭೋಗಿಸಿ, ಸ್ವರ್ಣವನ್ನು ಕದ್ದು, ಬ್ರಹ್ಮಹತ್ಯವನ್ನು ಆಚರಿಸಿದವನು ಭಸ್ಮಸ್ನಾನಮಾಡಿ ಶ್ರೀ ರುದ್ರವನ್ನು ಪಠಿಸಿದರೆ ಎಲ್ಲಾ ಪಾಪಗಳಿಂದಲೂ ಮುಕ್ತನಾಗುವನು" ಹೀಗೆ ಸಾಮಶಿಖೆಯುಲ್ಲಿಯೂ ಶತರುದ್ರೀಯದ ಆಧಿಕ್ಯವನ್ನು ಹೇಳಲಾಗಿದೆ. ಜಾಬಾಲದಲ್ಲಿ "ಇವೇ ಅಮೃತದ ಹೆಸರುಗಳು" ಎಂದು

ಅನಾದಿಮುಕ್ತನಾದ ಶಿವನ ಮಹತ್ತ್ವವನ್ನು ತಿಳಿಸುವುದರಿಂದ "ಈ ಶತರುದ್ರೀಯದ ಜಪದಿಂದ ಪಾಪಗಳೆಲ್ಲವೂ ತೊಲಗುತ್ತವೆ" ಎಂದು ಹೇಳಲಾಗಿದೆ. "ಇದೂಅಲ್ಲದೆ ಚಂಡಾಲನೂ ಸಹ ಶಿವನೆಂಬ ಹೆಸರನ್ನು ಹೇಳಿದರೆ ಅವನೊಡನೆ ವಾಸಮಾಡಬಹುದು ಮತ್ತು ಊಟಮಾಡಬಹುದು" ಎಂಬಲ್ಲಿ ಅತ್ಯಂತಅಶುದ್ಧನಾದ ಪಾತಕಿಯೂ ಸಹ ಬ್ರಹ್ಮವನ್ನು ತಿಳಿಸುವ ಈ ಶಿವಶಬ್ದವನ್ನು ಉಚ್ಚರಿಸಿದ್ದರಿಂದಲೇ ಪೂರ್ಣ ಶುದ್ಧನಾಗುವನೆಂದು ಹೇಳಲಾಗಿದೆ. ಅಥರ್ವಶಿವರಸ್ಸಿನಲ್ಲಿ "ಬ್ರಾಹ್ಮಣನು ನಿತ್ಯವೂ ಜಪಿಸಬೇಕು" ಎಂದಾರಂಭಿಸಿ ಎಲ್ಲಾ ಪಾಪಗಳ ನಾಶವನ್ನೂ ಅದಕ್ಕೆ ಫಲವೆಂದು ತಿಳಿಸಿ "ಒಮ್ಮೆ ಜಪಿಸಿದವನು ಎಲ್ಲಾ ಪಾಪಗಳಿಂದಲೂ ಬಿಡುಗಡೆಯಾಗಿ ಶುದ್ಧನಾಗುವನು. ಮತ್ತೊಮ್ಮೆ ಜಪಿಸಿದವನು ಪ್ರಮಥಗಣದ ಅಧಿಪತಿಯಾಗುವನು. ಮೂರನೆಸಾರಿ ಜಪಿಸಿದವನು ಪರಶಿವನಲ್ಲಿಯೇ ಬೆರೆಯುತ್ತಾನೆ" ಎಂದು ಹೇಳಿರುವುದರಿಂದ ಶ್ರೀ ರುದ್ರಜಪಕ್ಕೆ ಮೋಕ್ಷವೇ ಫಲವೆಂದು ತಿಳಿದುಬರುತ್ತದೆ. "ತನ್ನನ್ನು ಅರಣಿಯನ್ನಾಗಿಯೂ ಪ್ರಣವವನ್ನು ಮೇಲಿನ ಅರಣಿಯನ್ನಾಗಿಯೂ ಮಾಡಿ ಮಥನದ ಮೂಲಕ ಧ್ಯಾನವನ್ನಾಚರಿಸುವುದರಿಂದ ಪಾಶವು ತೊಲಗುತ್ತದೆ" ಎಂಬಲ್ಲಿ ಶಿವನೆಂಬ ಪ್ರಣವವನ್ನು ಅಗ್ನ್ಯುತ್ಪಾದಕಸಾಮಗ್ರಿ ಎಂದು ಹೇಳಿರುವುದರಿಂದ ಅದರ ನಿತ್ಯಜಪವು ಸಾಧಕನ ಪಾಶವನ್ನು ದಹಿಸುವುದೆಂಬುದು ಸ್ಪಷ್ಟವಾಗುತ್ತದೆ. ಹೀಗೆಯೇ ಎಲ್ಲಾಕಡೆಯಲ್ಲೂ ತಿಳಿಯಬೇಕು. ಆದ್ದರಿಂದ ಶಿವಪರವಾದ ವೇದಮಂತ್ರಗಳು ಪಾಪವನ್ನು ತೊಲಗಿಸಿ ಶಿವಜ್ಞಾನವನ್ನು ದೊರಕಿಸುತ್ತ ಮೋಕ್ಷಸಾಧನವೆನಿಸಿರುವುದರಿಂದ ಅವುಗಳ ಅಭ್ಯಾಸ ಆವಶ್ಯಕವೆನಿಸಿದೆ. ಪೂರ್ಣವೈರಾಗ್ಯವಿಲ್ಲದೆಇದ್ದರೂ ಬ್ರಹ್ಮಜ್ಞಾನವನ್ನು ಪಡೆದು ಅಗ್ನಿಹೋತ್ರಾದಿಕರ್ಮಗಳನ್ನು ಮಾಡುತ್ತ ಅವುಗಳ ಫಲವನ್ನು ಶಿವನಿಗರ್ಪಿಸುತ್ತಲಿರುವವರು ಶಿವನ ಆರಾಧನವೆಂದು ಶಿವನ ಇಚ್ಛೆಯಂತೆ ಆ ವೈದಿಕಕರ್ಮಗಳನ್ನು ಆಚರಿಸಬೇಕು. ಹೀಗೆಯೇ ದಾನಾದಿಕರ್ಮಗಳನ್ನೂ ಆಚರಿಸುತ್ತಿರಬೇಕು. ಜಗದ್ವಾಸನೆಯೆಲ್ಲವನ್ನು ತೊರೆದು ಎಲ್ಲಾ ಬಗೆಯ ಹೊರೆಯನ್ನೂ ಇಳಿಸಿದವರಿಗೆ ಕರ್ಮವನ್ನು ತೊರೆಯುವುದು ಯುಕ್ತವಾದರೂ ಲೋಕದಲ್ಲಿ ಹೊನ್ನು, ಹೆಣ್ಣು, ಮಣ್ಣಿನ ಆಶೆಯುಳ್ಳ ಗೃಹಸ್ಥರು ಶಿವಪೂಜೆ ಮೊದಲಾದ ಕರ್ಮಗಳನ್ನು ತೊರೆಯುವುದು ಯುಕ್ತವಲ್ಲ. ಬ್ರಹ್ಮವಿದ್ಯೆಯಲ್ಲಿ ಆಸಕ್ತಿಯನ್ನು ಹುಟ್ಟಿಸಲಿಕ್ಕಾಗಿಯೇ ಅಗ್ನಿಹೋತ್ರ ಮೊದಲಾದ ಸತ್ಕರ್ಮಗಳನ್ನು ಆಚರಿಸಬೇಕೆಂದರೆ ಬ್ರಹ್ಮವಿದ್ಯೆಗಿಂತಲೂ ಮೊದಲಿಗೆ ಮಾಡಿದ್ದ ಸುಕೃತವು ದೇಹವಿರುವವರೆಗೂ ಇದ್ದು ಅದರ ಫಲವನ್ನು ಅನುಭವಿಸಿದ ಮೇಲೆ ನಷ್ಟವಾಗುತ್ತದೆ. ಹಾಗೆ ಭೋಗಿಸಿ ಉಳಿದದ್ದೇ ಪ್ರಾರಬ್ಧವೆನಿಸುತ್ತದೆ.

**ಯದಿ ಅಗ್ನಿಹೋತ್ರಾದಿಸಾಧುಕೃತ್ಯಾಃ ವಿದ್ಯೋತ್ಪತ್ತ್ಯರ್ಥಾಃ ವಿದ್ಯೋತ್ಪತ್ತೇಃ ಪ್ರಾಚೀನಂ ಚ ಸುಕೃತಂ ಯಾವತ್ಸಂಪಾತಮುಷಿತ್ವಾ "ಪ್ರಾಪ್ಯಾಂತಂ ಕರ್ಮಣಃ" ಇತ್ಯನುಭವೇನ ವಿನಷ್ಟಂ. ಭುಕ್ತಶಿಷ್ಟಂ ಚ ಪ್ರಾರಬ್ಧಫಲಂ. ಅತಃ "ಸುಹೃದಸ್ಸಾಧುಕೃತ್ಯಾಂ" ಇತ್ಯಸ್ಯ ಕೋ**

ವಿಷಯಸ್ತತ್ರಾಹ. ಅತೋಽನ್ಯಾಪಿ ಹ್ಯೇಕೇಷಾಮುಭಯೋಃ||೧೭|| ಅತಃ ಅಗ್ನಿಹೋತ್ರಾದಿಸಾಧುಕೃತ್ಯಾಯಾಃ ವಿದ್ಯೋತ್ಪತ್ತ್ಯರ್ಥಾಯಾಃ ಅನ್ಯಾಪಿ ವಿದ್ಯಾಧಿಗಮಾತ್ಪೂರ್ವೋತ್ತರಯೋರುಭಯೋರಪಿ ಪುಣ್ಯ ಕರ್ಮಣೋಃ ಪ್ರಬಲಕರ್ಮಪ್ರತಿಬಂಧಫಲಸಾಧುಕೃತ್ಯಾನಂತಾಸಂಭ ವತ್ವೇ ವಾ ತದ್ವಿಷಯಮಿದಮೇಕೇಷಾಂ ಶಾಟ್ಯಾಯನಶಾಖಿನಾಂ ವಚ ನಂ. "ತಸ್ಯ ಪುತ್ರಾದಯ ಉಪಯಂತಿ, ಸುಹೃದಸ್ಸಾಧುಕೃತ್ಯಾಂ" ಇತಿ ವಿದ್ಯಾಯಾಃ ಅಶ್ಲೇಷವಿನಾಶಶ್ರುತಿಶ್ಚ ತದ್ವಿಷಯಾ. ತಸ್ಮಾಚ್ಛಿವಾರ್ಪಿ ತಾಽಗ್ನಿಹೋತ್ರಾದಿವೈದಿಕದ್ವೈತಕರ್ಮಣಾಂ ಭ್ರಮರಕೀಟನ್ಯಾಯ ವತ್ ಜೀವಭಾವನಿವೃತ್ತಿಪೂರ್ವಕಶಿವತ್ವಪ್ರಾಪ್ತಿರೂಪಸಿದ್ಧ್ಯಂಗತ್ವೇನ ಸರ್ವವೇದಾಂತಾರ್ಥವಿಜ್ಞಾನನಿಧಾನಭೂತಜೈಮಿನಿಬಾದರಾಯಣಾದಿ ಪೂರ್ವಾಚಾರ್ಯೈರ್ವ್ಯವಸ್ಥಾಪನಾತ್ ದ್ವೈತಾದ್ವೈತಮತಮೇವ ವೈದಿಕಾನಾಂ ಮುಮುಕ್ಷೂಣಾಂ ಆವಶ್ಯಕಮಿತಿ ನಿಶ್ಚೀಯತೇ. ಏತೇನ ಶ್ರುತ್ಯಾಭಾಸಪ್ರಧಾನಾಧ್ಯಾರೋಪಾಪವಾದವಿಧಾಯಕಜಗ ನ್ಮಿಥ್ಯಾದ್ವೈತಂ ಸರ್ವಥಾ ಮುಮುಕ್ಷುಭಿರ್ನಾಶ್ರಯಣೀಯಮಿತಿ ವೇದಿತವ್ಯಂ.

"ಜ್ಞಾನಿಯು ಮಾಡುವ ಸತ್ಕರ್ಮವನ್ನು ಅವನ ಮಿತ್ರರು ಒಯ್ಯುತ್ತಾರೆ" ಎಂಬುದಕ್ಕೆ ಅರ್ಥವೇನೆಂದು ವಿಚಾರಿಸುತ್ತಾನೆ. ವಿದ್ಯಾಂಗವಾದ ಅಗ್ನಿಹೋತ್ರ ಮೊದ ಲಾದ ಸತ್ಕರ್ಮಗಳನ್ನು ಬಿಟ್ಟು ಅದಕ್ಕೆ ಹಿಂದೆಮಾಡಿದ ಕರ್ಮಗಳಲ್ಲಿ ಪ್ರಬಲವಾದ ಪ್ರತಿಬಂಧಕದಿಂದ ಫಲವನ್ನುಕೊಡದೆ ಉಳಿದಿರುವ ಸತ್ಕರ್ಮಗಳು ಸ್ನೇಹಿತರನ್ನು ಸೇರುತ್ತವೆ ಎಂದು "ಅವನಬಳಿಗೆ ಮಕ್ಕಳೇ ಮೊದಲಾದವರೆಲ್ಲರೂ ಬರುತ್ತಾರೆ; ಆದರೆ ಮಿತ್ರರು ಮಾತ್ರ ಸತ್ಕರ್ಮವನ್ನು ಒಯ್ಯುತ್ತಾರೆ" ಎಂಬ ಶ್ರುತಿಗೆ ಅರ್ಥವಾಗುವು ದೆಂದು ಶಾಟ್ಯಾಯನಶಾಖೀಯರು ಹೇಳುತ್ತಾರೆ. ಈ ಅಭಿಪ್ರಾಯದಿಂದಲೇ ಕರ್ಮಗಳಿಗೆ ಅಶ್ಲೇಷ ಮತ್ತು ವಿನಾಶಗಳನ್ನು ಶ್ರುತಿ ತಿಳಿಸುತ್ತದೆ. ಆದ್ದರಿಂದ ಶಿವ ಪ್ರೀತ್ಯರ್ಥವಾಗಿ ಅಗ್ನಿಹೋತ್ರ ಮೊದಲಾದ ಸತ್ಕರ್ಮಗಳನ್ನು ಆಚರಿಸುವವರು ಭ್ರಮ ರಕೀಟನ್ಯಾಯದಂತೆ ಜೀವಭಾವವನ್ನು ಕಳೆದುಕೊಂಡು ಶಿವಭಾವವನ್ನು ಹೊಂದುವ ರೆಂದು ವೇದಾಂತವಿಜ್ಞಾನಿಗಳಾದ ಜೈಮಿನಿ ಮೊದಲಾದ ಪೂರ್ವಾಚಾರ್ಯರು ವ್ಯವಸ್ಥೆಮಾಡಿರುವುದು ಯುಕ್ತವೇ ಆಗಿದೆ. ಹೀಗೆ ದ್ವೈತಾದ್ವೈತಮತವೇ ವೈದಿಕ ರಾದ ಮುಮುಕ್ಷುಗಳಿಗೆ ಆವಶ್ಯಕವೆಂದು ನಿಶ್ಚಯಿಸಲಾಗಿದೆ. ಇದರಿಂದ ಶ್ರುತಿಗೆ ವಿರುದ್ಧವಾಗಿ ಆರೋಪಾಪವಾದಗಳನ್ನು ತಿಳಿಸುವ ಅದ್ವೈತಮತದ ಜಗನ್ಮಿಥ್ಯಾತ್ವವು ಮುಮುಕ್ಷುಗಳಿಗೆ ಎಂದಿಗೂ ಹೊಂದುವುದಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ನನು "ತಮೇವ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ" ಇತ್ಯಾದಿಶ್ರುತಿಭಿಸ್ಸರ್ವೇಷಾಂ ಪುಣ್ಯಕರ್ಮಣಾಂ ಜ್ಞಾನಸಾಧನತ್ವೇನ

ಚೋದನಾವಗಮಾತ್ ಜ್ಞಾನಸಾಧನಭೂತತ್ವಂ ಕರ್ಮಣಾಂ ಸಂಭವತೀತಿ ಚೇತ್ತದಯುಕ್ತಂ. "ನಿಷ್ಕಲಂ ನಿಷ್ಕ್ರಿಯಂ ಶಾಂತಂ" ಇತ್ಯಾದಿಶ್ರುತಿಷು, ತಥಾಚ "ತದಧಿಗಮೇ" ಇತಿ ಸೂತ್ರೇ ಚ ಬ್ರಹ್ಮಣೋ ನಿರ್ವಿಶೇಷತ್ವನಿರ್ವಿಷಯತ್ವಾದಿಧರ್ಮಪ್ರದರ್ಶನಾದಿತ್ಯಾಶಂಕಾಯಾಮಾಹ. ಯದೇವ ವಿದ್ಯಯೇತಿ ಹಿ ॥ ೧೮ ॥ "ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ ಭವತಿ" ಇತಿ ಶ್ರುತೌ ಯತ್ಕರ್ಮ ವಿದ್ಯಯಾ ದಹರಶಾಂಡಿಲ್ಯಾದ್ಯುಪಾಸನಯಾ ಸಹಕೃತಂ ತದೇವ ಕರ್ಮ ಅಸ್ಮಿನ್ ಜನ್ಮನಿ ಬ್ರಹ್ಮಜ್ಞಾನಸಾಧನಂ, "ಯದೇವ ವಿದ್ಯಯಾ ಕರೋತಿ" ಇತ್ಯತ್ರ ದಹರಾದ್ಯುಪಾಸನಾರಹಿತಪರಮೇಶ್ವರಾರ್ಪಿತಜ್ಯೋತಿಷ್ಟೋಮಾದಿಕರ್ಮಣಃ ಕಾಲವಿಳಂಬೇನ ಬ್ರಹ್ಮಜ್ಞಾನಸಾಧನತ್ವಂ ಭವತೀತ್ಯುಪದಿಶ್ಯತೇ. ಹಿಕಾರೋ ನಿಶ್ಚಯಾರ್ಥಃ. "ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ" ಇತ್ಯತ್ರ ಬ್ರಹ್ಮಶಕ್ತೇಃ ಸ್ವಾಭಾವಿಕತ್ವವ್ಯಪದೇಶಾತ್ ನ ನಿರ್ವಿಶೇಷಾದ್ಯುಪಪತ್ತಿಃ. ತಥಾಪಿ "ನಿಷ್ಕಲಂ ನಿಷ್ಕ್ರಿಯಂ" ಇತ್ಯಾದಿಶ್ರುತೀನಾಂ ಶಕ್ತಿಸಂಕೋಚಕಾಲವಿಷಯತ್ವಂ. "ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ" ಇತ್ಯಾದಿಶ್ರುತೀನಾಂ ಶಕ್ತಿವಿಕಾಸಾವಸ್ಥಾವಿಷಯತ್ವಮಿತಿ "ಲೋಕವತ್ತು" ಇತ್ಯಾದಿಸೂತ್ರಾನುಸಾರೇಣ ಪೂರ್ವಮೇವೋಕ್ತಂ. "ತದಧಿಗಮೇ" ಇತಿ ಸೂತ್ರಂ ಚ ನ ನಿರ್ವಿಶೇಷವಿಷಯಮಿತಿ ನಿಶ್ಚೀಯತೇ.

"ಬ್ರಹ್ಮವು ನಿಷ್ಕಲವೂ ನಿಷ್ಕ್ರಿಯವೂ ಶಾಂತವೂ ಆಗಿದೆ" ಎಂಬ ಶ್ರುತಿಯಲ್ಲೂ "ತದಧಿಗಮೇ" ಎಂಬ ಸೂತ್ರದಲ್ಲೂ ಬ್ರಹ್ಮವನ್ನು ನಿರ್ವಿಶೇಷ ಮತ್ತು ನಿರ್ವಿಷಯವೆಂದು ಹೇಳಿರುವುದರಿಂದ "ಹೀಗೆ ವೇದಾಭ್ಯಾಸದಿಂದ ಬ್ರಾಹ್ಮಣರು ತಿಳಿಯುತ್ತಾರೆ" ಎಂಬ ಶ್ರುತಿಯೇ ಪುಣ್ಯಕರ್ಮಿಗಳೆಲ್ಲರಿಗೂ ಕರ್ಮವನ್ನು ಜ್ಞಾನಸಾಧನವೆಂದು ವಿಧಿಸಿರುವುದರಿಂದ ಕರ್ಮವು ಜ್ಞಾನಸಾಧನವೆನಿಸಿದೆ ಎಂದು ಹೇಳುವುದು ಯುಕ್ತವಲ್ಲವೆಂದು ಆಶಂಕಿಸಿ ನಿರಾಕರಿಸುತ್ತಾನೆ. "ಯಾವುದನ್ನು ತಿಳಿದುಮಾಡುತ್ತಾನೋ ಅದೇಯೇ ವೀರ್ಯವತ್ತರವಾಗುತ್ತದೆ" ಎಂಬ ಶ್ರುತಿಯಲ್ಲಿ ಯಾವ ಕರ್ಮವು ದಹರಾದಿವಿದ್ಯೆಯೊಡಗೂಡಿರುವುದೋ ಅದೇಯೇ ಈ ಜನ್ಮದಲ್ಲಿ ಬ್ರಹ್ಮಜ್ಞಾನವನ್ನು ದೊರಕಿಸಬಲ್ಲದು. "ಯಾವುದನ್ನು ವಿದ್ಯೆಯಿಂದಲೂ ಶ್ರದ್ಧೆಯಿಂದಲೂ ಗೋಪ್ಯವಾಗಿಯೂ ಮಾಡುವನೋ ಅದೇ ವೀರ್ಯವತ್ತರವಾಗುತ್ತದೆ" ಎಂಬಲ್ಲಿ ದಹರಾದ್ಯುಪಾಸನವಿಲ್ಲದೆ ಈಶ್ವರನಿಗೆ ಅರ್ಪಿಸುವ ಉದ್ದೇಶದಿಂದ ಮಾಡಿದ ಅಗ್ನಿಹೋತ್ರಾದಿ ಕರ್ಮಗಳು ಕಾಲವಿಳಂಬದಿಂದ ಬ್ರಹ್ಮಜ್ಞಾನವನ್ನು ದೊರಕಿಸುತ್ತವೆ ಎಂದು ಉಪದೇಶಿಸಲಾಗಿದೆ. ಹಿಕಾರವು ನಿಶ್ಚಯವನ್ನು ತಿಳಿಸುತ್ತದೆ. "ಜ್ಞಾನಕ್ರಿಯಾರೂಪವಾದ ನಾನಾಬಗೆಯಾದ ಶಕ್ತಿಯು ಪರಶಿವನಲ್ಲಿ ಸಹಜವಾಗಿ ನೆಲಸಿದೆ" ಎಂಬಲ್ಲಿ

ವಿಷಯಸ್ತತ್ರಾಹ. ಅತೋಽನ್ಯಾಪಿ ಹ್ಯೇಕೇಷಾಮುಭಯೋಃ||೧೭|| ಅತಃ ಅಗ್ನಿಹೋತ್ರಾದಿಸಾಧುಕೃತ್ಯಾಯಾಃ ವಿದ್ಯೋತ್ಪತ್ತ್ಯರ್ಥಾಯಾಃ ಅನ್ಯಾಪಿ ವಿದ್ಯಾಧಿಗಮಾತ್ಪೂರ್ವೋತ್ತರಯೋರುಭಯೋರಪಿ ಪುಣ್ಯಕರ್ಮಣೋಃ ಪ್ರಬಲಕರ್ಮಪ್ರತಿಬಂಧಫಲಸಾಧುಕೃತ್ಯಾನಂತಾಸಂಭವತ್ಸೇ ವಾ ತದ್ವಿಷಯಮಿದಮೇಕೇಷಾಂ ಶಾಟ್ಯಾಯನಶಾಖಿನಾಂ ವಚನಂ. "ತಸ್ಯ ಪುತ್ರಾದಯ ಉಪಯಂತಿ, ಸುಹೃದಸ್ಸಾಧುಕೃತ್ಯಾಂ" ಇತಿ ವಿದ್ಯಾಯಾಃ ಅಶ್ಲೇಷವಿನಾಶಶ್ರುತಿಶ್ಚ ತದ್ವಿಷಯಾ. ತಸ್ಮಾಚ್ಛಿವಾರ್ಪಿತಾಽಗ್ನಿಹೋತ್ರಾದಿವೈದಿಕದ್ವೈತಕರ್ಮಿಣಾಂ ಭ್ರಮರಕೀಟನ್ಯಾಯವತ್ ಜೀವಭಾವನಿವೃತ್ತಿಪೂರ್ವಕಶಿವತ್ವಪ್ರಾಪ್ತಿರೂಪಸಿದ್ಧ್ಯಂಗತ್ವೇನ ಸರ್ವವೇದಾಂತಾರ್ಥವಿಜ್ಞಾನನಿಧಾನಭೂತಜೈಮಿನಿಬಾದರಾಯಣಾದಿಪೂರ್ವಾಚಾರ್ಯೈರ್ವ್ಯವಸ್ಥಾಪನಾತ್ ದ್ವೈತಾದ್ವೈತಮತಮೇವ ವೈದಿಕಾನಾಂ ಮುಮುಕ್ಷೂಣಾಂ ಆವಶ್ಯಕಮಿತಿ ನಿಶ್ಚೀಯತೇ. ಏತೇನ ಶ್ರುತ್ಯಾಭಾಸಪ್ರಧಾನಾಧ್ಯಾರೋಪಾಪವಾದವಿಧಾಯಕಜಗನ್ಮಿಥ್ಯಾದ್ವೈತಂ ಸರ್ವಥಾ ಮುಮುಕ್ಷುಭಿರ್ನಾಶ್ರಯಣೀಯಮಿತಿ ವೇದಿತವ್ಯಂ.

"ಜ್ಞಾನಿಯು ಮಾಡುವ ಸತ್ಕರ್ಮವನ್ನು ಅವನ ಮಿತ್ರರು ಒಯ್ಯುತ್ತಾರೆ" ಎಂಬುದಕ್ಕೆ ಅರ್ಥವೇನೆಂದು ವಿಚಾರಿಸುತ್ತಾನೆ. ವಿದ್ಯಾಂಗವಾದ ಅಗ್ನಿಹೋತ್ರ ಮೊದಲಾದ ಸತ್ಕರ್ಮಗಳನ್ನು ಬಿಟ್ಟು ಅದಕ್ಕೆ ಹಿಂದೆಮಾಡಿದ ಕರ್ಮಗಳಲ್ಲಿ ಪ್ರಬಲವಾದ ಪ್ರತಿಬಂಧಕದಿಂದ ಫಲವನ್ನುಕೊಡದೆ ಉಳಿದಿರುವ ಸತ್ಕರ್ಮಗಳು ಸ್ನೇಹಿತರನ್ನು ಸೇರುತ್ತವೆ ಎಂದು "ಅವನಬಳಿಗೆ ಮಕ್ಕಳೇ ಮೊದಲಾದವರೆಲ್ಲರೂ ಬರುತ್ತಾರೆ; ಆದರೆ ಮಿತ್ರರು ಮಾತ್ರ ಸತ್ಕರ್ಮವನ್ನು ಒಯ್ಯುತ್ತಾರೆ" ಎಂಬ ಶ್ರುತಿಗೆ ಅರ್ಥವಾಗುವುದೆಂದು ಶಾಟ್ಯಾಯನಶಾಖೀಯರು ಹೇಳುತ್ತಾರೆ. ಈ ಅಭಿಪ್ರಾಯದಿಂದಲೇ ಕರ್ಮಗಳಿಗೆ ಅಶ್ಲೇಷ ಮತ್ತು ವಿನಾಶಗಳನ್ನು ಶ್ರುತಿ ತಿಳಿಸುತ್ತದೆ. ಆದ್ದರಿಂದ ಶಿವಪ್ರೀತ್ಯರ್ಥವಾಗಿ ಅಗ್ನಿಹೋತ್ರ ಮೊದಲಾದ ಸತ್ಕರ್ಮಗಳನ್ನು ಆಚರಿಸುವವರು ಭ್ರಮರಕೀಟನ್ಯಾಯದಂತೆ ಜೀವಭಾವವನ್ನು ಕಳೆದುಕೊಂಡು ಶಿವಭಾವವನ್ನು ಹೊಂದುವರೆಂದು ವೇದಾಂತವಿಜ್ಞಾನಿಗಳಾದ ಜೈಮಿನಿ ಮೊದಲಾದ ಪೂರ್ವಾಚಾರ್ಯರು ವ್ಯವಸ್ಥೆಮಾಡಿರುವುದು ಯುಕ್ತವೇ ಆಗಿದೆ. ಹೀಗೆ ದ್ವೈತಾದ್ವೈತಮತವೇ ವೈದಿಕರಾದ ಮುಮುಕ್ಷುಗಳಿಗೆ ಆವಶ್ಯಕವೆಂದು ನಿಶ್ಚಯಿಸಲಾಗಿದೆ. ಇದರಿಂದ ಶ್ರುತಿಗೆ ವಿರುದ್ಧವಾಗಿ ಆರೋಪಾಪವಾದಗಳನ್ನು ತಿಳಿಸುವ ಅದ್ವೈತಮತದ ಜಗನ್ಮಿಥ್ಯಾತ್ವವು ಮುಮುಕ್ಷುಗಳಿಗೆ ಎಂದಿಗೂ ಹೊಂದುವುದಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ನನು "ತಮೇವ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ" ಇತ್ಯಾದಿಶ್ರುತಿಭಿಸ್ಸರ್ವೇಷಾಂ ಪುಣ್ಯಕರ್ಮಣಾಂ ಜ್ಞಾನಸಾಧನತ್ವೇನ

ಚೋದನಾವಗಮಾತ್ ಜ್ಞಾನಸಾಧನಭೂತತ್ವಂ ಕರ್ಮಣಾಂ ಸಂಭವತೀತಿ ಚೇತ್ತದಯುಕ್ತಂ. "ನಿಷ್ಕಲಂ ನಿಷ್ಕ್ರಿಯಂ ಶಾಂತಂ" ಇತ್ಯಾದಿ ಶ್ರುತಿಷು, ತಥಾಚ "ತದಧಿಗಮೇ" ಇತಿ ಸೂತ್ರೇ ಚ ಬ್ರಹ್ಮಣೋ ನಿರ್ವಿಶೇಷತ್ವನಿರ್ವಿಷಯತ್ವಾದಿಧರ್ಮಪ್ರದರ್ಶನಾದಿತ್ಯಾಶಂಕಾಯಾಮಾಹ. ಯದೇವ ವಿದ್ಯಯೇತಿ ಹಿ ॥ ೧೮ ॥ "ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ ಭವತಿ" ಇತಿ ಶ್ರುತೌ ಯತ್ಕರ್ಮ ವಿದ್ಯಯಾ ದಹರಶಾಂಡಿಲ್ಯಾದ್ಯುಪಾಸನಯಾ ಸಹಕೃತಂ ತದೇವ ಕರ್ಮ ಅಸ್ಮಿನ್ ಜನ್ಮನಿ ಬ್ರಹ್ಮಜ್ಞಾನಸಾಧನಂ, "ಯದೇವ ವಿದ್ಯಯಾ ಕರೋತಿ" ಇತ್ಯತ್ರ ದಹರಾದ್ಯುಪಾಸನಾರಹಿತಪರಮೇಶ್ವರಾರ್ಪಿತಜ್ಯೋತಿಷ್ಟೋಮಾದಿಕರ್ಮಣಃ ಕಾಲವಿಳಂಬೇನ ಬ್ರಹ್ಮಜ್ಞಾನಸಾಧನತ್ವಂ ಭವತೀತ್ಯುಪದಿಶ್ಯತೇ. ಹಿಕಾರೋ ನಿಶ್ಚಯಾರ್ಥಃ. "ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ" ಇತ್ಯತ್ರ ಬ್ರಹ್ಮಶಕ್ತೇಃ ಸ್ವಾಭಾವಿಕತ್ವವ್ಯಪದೇಶಾತ್ ನ ನಿರ್ವಿಶೇಷಾದ್ಯುಪಪತ್ತಿಃ. ತಥಾಪಿ "ನಿಷ್ಕಲಂ ನಿಷ್ಕ್ರಿಯಂ" ಇತ್ಯಾದಿಶ್ರುತೀನಾಂ ಶಕ್ತಿಸಂಕೋಚಕಾಲವಿಷಯತ್ವಂ. "ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ" ಇತ್ಯಾದಿಶ್ರುತೀನಾಂ ಶಕ್ತಿವಿಕಾಸಾವಸ್ಥಾವಿಷಯತ್ವಮಿತಿ "ಲೋಕವತ್ತು" ಇತ್ಯಾದಿಸೂತ್ರಾನುಸಾರೇಣ ಪೂರ್ವಮೇವೋಕ್ತಂ. "ತದಧಿಗಮೇ" ಇತಿ ಸೂತ್ರಂ ಚ ನ ನಿರ್ವಿಶೇಷವಿಷಯಮಿತಿ ನಿಶ್ಚೀಯತೇ.

"ಬ್ರಹ್ಮವು ನಿಷ್ಕಲವೂ ನಿಷ್ಕ್ರಿಯವೂ ಶಾಂತವೂ ಆಗಿದೆ" ಎಂಬ ಶ್ರುತಿಯಲ್ಲೂ "ತದಧಿಗಮೇ" ಎಂಬ ಸೂತ್ರದಲ್ಲೂ ಬ್ರಹ್ಮವನ್ನು ನಿರ್ವಿಶೇಷ ಮತ್ತು ನಿರ್ವಿಷಯವೆಂದು ಹೇಳಿರುವುದರಿಂದ "ಹೀಗೆ ವೇದಾಭ್ಯಾಸದಿಂದ ಬ್ರಾಹ್ಮಣರು ತಿಳಿಯುತ್ತಾರೆ" ಎಂಬ ಶ್ರುತಿಯೇ ಪುಣ್ಯಕರ್ಮಿಗಳೆಲ್ಲರಿಗೂ ಕರ್ಮವನ್ನು ಜ್ಞಾನಸಾಧನವೆಂದು ವಿಧಿಸಿರುವುದರಿಂದ ಕರ್ಮವು ಜ್ಞಾನಸಾಧನವೆನಿಸಿದೆ ಎಂದು ಹೇಳುವುದು ಯುಕ್ತವಲ್ಲವೆಂದು ಆಶಂಕಿಸಿ ನಿರಾಕರಿಸುತ್ತಾನೆ. "ಯಾವುದನ್ನು ತಿಳಿದುಮಾಡುತ್ತಾನೋ ಅದೇಯೇ ವೀರ್ಯವತ್ತರವಾಗುತ್ತದೆ" ಎಂಬ ಶ್ರುತಿಯಲ್ಲಿ ಯಾವ ಕರ್ಮವು ದಹರಾದಿವಿದ್ಯೆಯೊಡಗೂಡಿರುವುದೋ ಅದೇಯೇ ಈ ಜನ್ಮದಲ್ಲಿ ಬ್ರಹ್ಮಜ್ಞಾನವನ್ನು ದೊರಕಿಸಬಲ್ಲದು. "ಯಾವುದನ್ನು ವಿದ್ಯೆಯಿಂದಲೂ ಶ್ರದ್ಧೆಯಿಂದಲೂ ಗೋಪ್ಯವಾಗಿಯೂ ಮಾಡುವನೋ ಅದೇ ವೀರ್ಯವತ್ತರವಾಗುತ್ತದೆ" ಎಂಬಲ್ಲಿ ದಹರಾದ್ಯುಪಾಸನವಿಲ್ಲದೆ ಈಶ್ವರನಿಗೆ ಅರ್ಪಿಸುವ ಉದ್ದೇಶದಿಂದ ಮಾಡಿದ ಅಗ್ನಿಹೋತ್ರಾದಿಕರ್ಮಗಳು ಕಾಲವಿಳಂಬದಿಂದ ಬ್ರಹ್ಮಜ್ಞಾನವನ್ನು ದೊರಕಿಸುತ್ತವೆ ಎಂದು ಉಪದೇಶಿಸಲಾಗಿದೆ. ಹಿಕಾರವು ನಿಶ್ಚಯವನ್ನು ತಿಳಿಸುತ್ತದೆ. "ಜ್ಞಾನಕ್ರಿಯಾರೂಪವಾದ ನಾನಾಬಗೆಯಾದ ಶಕ್ತಿಯು ಪರಶಿವನಲ್ಲಿ ಸಹಜವಾಗಿ ನೆಲಸಿದೆ" ಎಂಬಲ್ಲಿ

ವಿಷಯಸ್ತತ್ರಾಹ. ಅತೋಽನ್ಯಾಪಿ ಹ್ಯೇಕೇಷಾಮುಭಯೋಃ॥೧೭॥ ಅತಃ ಅಗ್ನಿಹೋತ್ರಾದಿಸಾಧುಕೃತ್ಯಾಯಾಃ ವಿದ್ಯೋತ್ಪತ್ತ್ಯರ್ಥಾಯಾಃ ಅನ್ಯಾಪಿ ವಿದ್ಯಾಧಿಗಮಾತ್ಪೂರ್ವೋತ್ತರಯೋರುಭಯೋರಪಿ ಪುಣ್ಯ ಕರ್ಮಣೋಃ ಪ್ರಬಲಕರ್ಮಪ್ರತಿಬಂಧಫಲಸಾಧುಕೃತ್ಯಾನಂತಾಸಂಭವತ್ವೇ ವಾ ತದ್ವಿಷಯಮಿದಮೇಕೇಷಾಂ ಶಾಟ್ಯಾಯನಶಾಖಿನಾಂ ವಚನಂ. "ತಸ್ಯ ಪುತ್ರಾದಯ ಉಪಯಂತಿ, ಸುಹೃದಸ್ಸಾಧುಕೃತ್ಯಾಂ" ಇತಿ ವಿದ್ಯಾಯಾಃ ಅಶ್ಲೇಷವಿನಾಶಶ್ರುತಿಶ್ಚ ತದ್ವಿಷಯಾ. ತಸ್ಮಾಚ್ಛಿವಾರ್ಪಿತಾಽಗ್ನಿಹೋತ್ರಾದಿವೈದಿಕದ್ವೈತಕರ್ಮಿಣಾಂ ಭ್ರಮರಕೀಟನ್ಯಾಯವತ್ ಜೀವಭಾವನಿವೃತ್ತಿಪೂರ್ವಕಶಿವತ್ವಪ್ರಾಪ್ತಿರೂಪಸಿದ್ಧ್ಯಂಗತ್ವೇನ ಸರ್ವವೇದಾಂತಾರ್ಥವಿಜ್ಞಾನನಿಧಾನಭೂತಜೈಮಿನಿಬಾದರಾಯಣಾದಿ ಪೂರ್ವಾಚಾರ್ಯೈರ್ವ್ಯವಸ್ಥಾಪನಾತ್ ದ್ವೈತಾದ್ವೈತಮತಮೇವ ವೈದಿಕಾನಾಂ ಮುಮುಕ್ಷೂಣಾಂ ಆವಶ್ಯಕಮಿತಿ ನಿಶ್ಚೀಯತೇ. ಏತೇನ ಶ್ರುತ್ಯಾಭಾಸಪ್ರಧಾನಾಧ್ಯಾರೋಪಾಪವಾದವಿಧಾಯಕಜಗನ್ಮಿಥ್ಯಾದ್ವೈತಂ ಸರ್ವಥಾ ಮುಮುಕ್ಷುಭಿರ್ನಾಶ್ರಯಣೀಯಮಿತಿ ವೇದಿತವ್ಯಂ.

"ಜ್ಞಾನಿಯು ಮಾಡುವ ಸತ್ಕರ್ಮವನ್ನು ಅವನ ಮಿತ್ರರು ಒಯ್ಯುತ್ತಾರೆ" ಎಂಬುದಕ್ಕೆ ಅರ್ಥವೇನೆಂದು ವಿಚಾರಿಸುತ್ತಾನೆ. ವಿದ್ಯಾಂಗವಾದ ಅಗ್ನಿಹೋತ್ರ ಮೊದಲಾದ ಸತ್ಕರ್ಮಗಳನ್ನು ಬಿಟ್ಟು ಅದಕ್ಕೆ ಹಿಂದೆಮಾಡಿದ ಕರ್ಮಗಳಲ್ಲಿ ಪ್ರಬಲವಾದ ಪ್ರತಿಬಂಧಕದಿಂದ ಫಲವನ್ನುಕೊಡದೆ ಉಳಿದಿರುವ ಸತ್ಕರ್ಮಗಳು ಸ್ನೇಹಿತರನ್ನು ಸೇರುತ್ತವೆ ಎಂದು "ಅವನಬಳಿಗೆ ಮಕ್ಕಳೇ ಮೊದಲಾದವರೆಲ್ಲರೂ ಬರುತ್ತಾರೆ; ಆದರೆ ಮಿತ್ರರು ಮಾತ್ರ ಸತ್ಕರ್ಮವನ್ನು ಒಯ್ಯುತ್ತಾರೆ" ಎಂಬ ಶ್ರುತಿಗೆ ಅರ್ಥವಾಗುವುದೆಂದು ಶಾಟ್ಯಾಯನಶಾಖೀಯರು ಹೇಳುತ್ತಾರೆ. ಈ ಅಭಿಪ್ರಾಯದಿಂದಲೇ ಕರ್ಮಗಳಿಗೆ ಅಶ್ಲೇಷ ಮತ್ತು ವಿನಾಶಗಳನ್ನು ಶ್ರುತಿ ತಿಳಿಸುತ್ತದೆ. ಆದ್ದರಿಂದ ಶಿವ ಪ್ರೀತ್ಯರ್ಥವಾಗಿ ಅಗ್ನಿಹೋತ್ರ ಮೊದಲಾದ ಸತ್ಕರ್ಮಗಳನ್ನು ಆಚರಿಸುವವರು ಭ್ರಮರಕೀಟನ್ಯಾಯದಂತೆ ಜೀವಭಾವವನ್ನು ಕಳೆದುಕೊಂಡು ಶಿವಭಾವವನ್ನು ಹೊಂದುವರೆಂದು ವೇದಾಂತವಿಜ್ಞಾನಿಗಳಾದ ಜೈಮಿನಿ ಮೊದಲಾದ ಪೂರ್ವಾಚಾರ್ಯರು ವ್ಯವಸ್ಥೆಮಾಡಿರುವುದು ಯುಕ್ತವೇ ಆಗಿದೆ. ಹೀಗೆ ದ್ವೈತಾದ್ವೈತಮತವೇ ವೈದಿಕರಾದ ಮುಮುಕ್ಷುಗಳಿಗೆ ಆವಶ್ಯಕವೆಂದು ನಿಶ್ಚಯಿಸಲಾಗಿದೆ. ಇದರಿಂದ ಶ್ರುತಿಗೆ ವಿರುದ್ಧವಾಗಿ ಆರೋಪಾಪವಾದಗಳನ್ನು ತಿಳಿಸುವ ಅದ್ವೈತಮತದ ಜಗನ್ಮಿಥ್ಯಾತ್ವವು ಮುಮುಕ್ಷುಗಳಿಗೆ ಎಂದಿಗೂ ಹೊಂದುವುದಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ನನು "ತಮೇವ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ" ಇತ್ಯಾದಿಶ್ರುತಿಭಿಸ್ಸರ್ವೇಷಾಂ ಪುಣ್ಯಕರ್ಮಿಣಾಂ ಜ್ಞಾನಸಾಧನತ್ವೇನ

ಚೋದನಾವಗಮಾತ್ ಜ್ಞಾನಸಾಧನಭೂತತ್ವಂ ಕರ್ಮಣಾಂ ಸಂಭವತೀತಿ ಚೇತ್ತದಯುಕ್ತಂ. "ನಿಷ್ಕಲಂ ನಿಷ್ಕ್ರಿಯಂ ಶಾಂತಂ" ಇತ್ಯಾದಿ ಶ್ರುತಿಷು, ತಥಾಚ "ತದಧಿಗಮೇ" ಇತಿ ಸೂತ್ರೇ ಚ ಬ್ರಹ್ಮಣೋ ನಿರ್ವಿಶೇಷತ್ವನಿರ್ವಿಷಯತ್ವಾದಿಧರ್ಮಪ್ರದರ್ಶನಾದಿತ್ಯಾಶಂಕಾಯಾಮಾಹ. ಯದೇವ ವಿದ್ಯಯೇತಿ ಹಿ ॥ ೧೮ ॥ "ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ ಭವತಿ" ಇತಿ ಶ್ರುತೌ ಯತ್ಕರ್ಮ ವಿದ್ಯಯಾ ದಹರಶಾಂಡಿಲ್ಯಾದ್ಯುಪಾಸನಯಾ ಸಹಕೃತಂ ತದೇವ ಕರ್ಮ ಅಸ್ಮಿನ್ ಜನ್ಮನಿ ಬ್ರಹ್ಮಜ್ಞಾನಸಾಧನಂ, "ಯದೇವ ವಿದ್ಯಯಾ ಕರೋತಿ" ಇತ್ಯತ್ರ ದಹರಾದ್ಯುಪಾಸನಾರಹಿತಪರಮೇಶ್ವರಾರ್ಪಿತಜ್ಯೋತಿಷ್ಟೋಮಾದಿಕರ್ಮಣಃ ಕಾಲವಿಳಂಬೇನ ಬ್ರಹ್ಮಜ್ಞಾನಸಾಧನತ್ವಂ ಭವತೀತ್ಯುಪದಿಶ್ಯತೇ. ಹಿಕಾರೋ ನಿಶ್ಚಯಾರ್ಥಃ. "ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ" ಇತ್ಯತ್ರ ಬ್ರಹ್ಮಶಕ್ತೇಃ ಸ್ವಾಭಾವಿಕತ್ವವ್ಯಪದೇಶಾತ್ ನ ನಿರ್ವಿಶೇಷಾದ್ಯುಪಪತ್ತಿಃ. ತಥಾಪಿ "ನಿಷ್ಕಲಂ ನಿಷ್ಕ್ರಿಯಂ" ಇತ್ಯಾದಿಶ್ರುತೀನಾಂ ಶಕ್ತಿಸಂಕೋಚಕಾಲವಿಷಯತ್ವಂ. "ಪ್ರಧಾನಕ್ಷೇತ್ರಜ್ಞಪತಿರ್ಗುಣೇಶಃ" ಇತ್ಯಾದಿಶ್ರುತೀನಾಂ ಶಕ್ತಿವಿಕಾಸಾವಸ್ಥಾವಿಷಯತ್ವಮಿತಿ "ಲೋಕವತ್ತು" ಇತ್ಯಾದಿಸೂತ್ರಾನುಸಾರೇಣ ಪೂರ್ವಮೇವೋಕ್ತಂ. "ತದಧಿಗಮೇ" ಇತಿ ಸೂತ್ರಂ ಚ ನ ನಿರ್ವಿಶೇಷವಿಷಯಮಿತಿ ನಿಶ್ಚೀಯತೇ.

"ಬ್ರಹ್ಮವು ನಿಷ್ಕಲವೂ ನಿಷ್ಕ್ರಿಯವೂ ಶಾಂತವೂ ಆಗಿದೆ" ಎಂಬ ಶ್ರುತಿಯಲ್ಲೂ "ತದಧಿಗಮೇ" ಎಂಬ ಸೂತ್ರದಲ್ಲೂ ಬ್ರಹ್ಮವನ್ನು ನಿರ್ವಿಶೇಷ ಮತ್ತು ನಿರ್ವಿಷಯವೆಂದು ಹೇಳಿರುವುದರಿಂದ "ಹೀಗೆ ವೇದಾಭ್ಯಾಸದಿಂದ ಬ್ರಾಹ್ಮಣರು ತಿಳಿಯುತ್ತಾರೆ" ಎಂಬ ಶ್ರುತಿಯೇ ಪುಣ್ಯಕರ್ಮಿಗಳೆಲ್ಲರಿಗೂ ಕರ್ಮವನ್ನು ಜ್ಞಾನಸಾಧನವೆಂದು ವಿಧಿಸಿರುವುದರಿಂದ ಕರ್ಮವು ಜ್ಞಾನಸಾಧನವೆನಿಸಿದೆ ಎಂದು ಹೇಳುವುದು ಯುಕ್ತವಲ್ಲವೆಂದು ಆಶಂಕಿಸಿ ನಿರಾಕರಿಸುತ್ತಾನೆ. "ಯಾವುದನ್ನು ತಿಳಿದುಮಾಡುತ್ತಾನೋ ಅದೇಯೇ ವೀರ್ಯವತ್ತರವಾಗುತ್ತದೆ" ಎಂಬ ಶ್ರುತಿಯಲ್ಲಿ ಯಾವ ಕರ್ಮವು ದಹರಾದಿವಿದ್ಯೆಯೊಡಗೂಡಿರುವುದೋ ಅದೇಯೇ ಈ ಜನ್ಮದಲ್ಲಿ ಬ್ರಹ್ಮಜ್ಞಾನವನ್ನು ದೊರಕಿಸಬಲ್ಲದು. "ಯಾವುದನ್ನು ವಿದ್ಯೆಯಿಂದಲೂ ಶ್ರದ್ಧೆಯಿಂದಲೂ ಗೋಪ್ಯವಾಗಿಯೂ ಮಾಡುವನೋ ಅದೇ ವೀರ್ಯವತ್ತರವಾಗುತ್ತದೆ" ಎಂಬಲ್ಲಿ ದಹರಾದ್ಯುಪಾಸನವಿಲ್ಲದೆ ಈಶ್ವರನಿಗೆ ಅರ್ಪಿಸುವ ಉದ್ದೇಶದಿಂದ ಮಾಡಿದ ಅಗ್ನಿಹೋತ್ರಾದಿಕರ್ಮಗಳು ಕಾಲವಿಳಂಬದಿಂದ ಬ್ರಹ್ಮಜ್ಞಾನವನ್ನು ದೊರಕಿಸುತ್ತವೆ ಎಂದು ಉಪದೇಶಿಸಲಾಗಿದೆ. ಹಿಕಾರವು ನಿಶ್ಚಯವನ್ನು ತಿಳಿಸುತ್ತದೆ. "ಜ್ಞಾನಕ್ರಿಯಾರೂಪವಾದ ನಾನಾಬಗೆಯಾದ ಶಕ್ತಿಯು ಪರಶಿವನಲ್ಲಿ ಸಹಜವಾಗಿ ನೆಲಸಿದೆ" ಎಂಬಲ್ಲಿ

ಬ್ರಹ್ಮಶಕ್ತಿಯನ್ನು ಸ್ವಾಭಾವಿಕವೆಂದು ಹೇಳಿರುವುದರಿಂದ ಬ್ರಹ್ಮವನ್ನು ನಿರ್ವಿಶೇಷವೆಂದು ಹೇಳುವುದು ಯುಕ್ತವಲ್ಲ. ಆದರೂ ನಿಷ್ಕಲಶ್ರುತಿಯು ಶಕ್ತಿಸಂಕೋಚಕಾಲಕ್ಕೆ ಅನ್ವಯಿಸುತ್ತದೆ. "ಶಿವನು ಪ್ರಧಾನಜೀವರ ಪತಿಯೂ ಗುಣಗಳಿಗೆ ನಿಯಾಮಕನೂ ಬಂಧಮೋಕ್ಷಸ್ಥಿತಿಗಳ ವ್ಯವಸ್ಥಾಪಕನೂ ಆಗಿದ್ದಾನೆ" ಎಂದು ಮುಂತಾದ ಶ್ರುತಿಗಳು ಪರಶಿವಬ್ರಹ್ಮದ ಶಕ್ತಿವಿಕಾಸಾವಸ್ಥೆಯನ್ನು ತಿಳಿಸುತ್ತವೆ. ಈ ಅಂಶವನ್ನು "ಲೋಕವತ್ತು ಲೀಲಾಕೈವಲ್ಯಂ" ಎಂಬ ಸೂತ್ರಾನುಸಾರವಾಗಿ ಹಿಂದೆಯೇ ಹೇಳಿದೆ. ಆದ್ದರಿಂದ "ತದಧಿಗಮೇ" ಎಂಬ ಸೂತ್ರವು ಬ್ರಹ್ಮವನ್ನು ನಿರ್ವಿಶೇಷವೆಂದು ತಿಳಿಸುವುದಿಲ್ಲವೆಂದು ನಿಶ್ಚಯಿಸಲಾಗಿದೆ.

ನನು ತಥಾಪಿ ದಹರಾದ್ಯುಪಾಸಕಾನಾಂ ವಿದುಷಾಂ ಪುಣ್ಯಾಪುಣ್ಯರೂಪಪ್ರಾರಬ್ಧಕರ್ಮಕ್ಷಯಃ ಕಥಂ ಸಂಭವತೀತ್ಯಾಶಂಕಾಯಾಮಧಿಕರಣಾಂತರೇಣಾಹ. ಭೋಗಾಧಿಕರಣಂ ॥ ೧೦ ॥ ಭೋಗೇನ ತ್ವಿತರೇ ಕ್ಷಪಯಿತ್ವಾಥ ಸಂಪದ್ಯತೇ ॥ ೧೯ ॥ ವಿದ್ವಾನ್ ಭಕ್ತಃ ಭೋಗೇನ ಸುಖದುಃಖಾತ್ಮಕಪ್ರಾರಬ್ಧಭೋಗೇನ ಇತರೇ ಭಾವಿಶರೀರಜನಕಾಗಾಮಿರೂಪಪುಣ್ಯಪಾಪೇ ವಿದ್ಯಾಮಹಿಮ್ನಾ ಕ್ಷಪಯಿತ್ವಾ ನಾಶಯಿತ್ವಾ ಸ್ವೇಚ್ಛಾನುಸಾರೇಣ ಚತುರ್ವಿಧಮುಕ್ತಿಂ ಸಂಪದ್ಯತೇ ಪ್ರಾಪ್ನೋತೀತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಪೂರ್ಣಾಧಿಕಾರಿಣಾಂ ಸಾಕ್ಷಾದಿಹ ಶರೀರೇ ಮುಕ್ತಿಃ; ಮಂದಪ್ರಜ್ಞಾನಾಂ ಜನ್ಮತ್ರಯೇಣ; ಕೇವಲ ಪರಮೇಶ್ವರಾರ್ಪಿತವೈದಿಕಕರ್ಮಣಾಂ ಬಹುಜನ್ಮಪರಂಪರಯಾ ಜ್ಞಾನಹೇತುತ್ವಮಾತ್ರಂ ಪೂರ್ವಾಧಿಕರಣೇ ಅಭಿಹಿತಂ. ಪೂರ್ವತ್ರ ವಿದ್ಯಾಯಾಃ ಪುಣ್ಯಾಪುಣ್ಯನಾಶಹೇತುತ್ವವ್ಯಪದೇಶಾತ್, ವಿದ್ಯಾವತಾಂ ಪುಂಸಾಮಿಹ ಶರೀರೇಣ ಶರೀರಾಂತರೇಣ ವಾ ವಿದ್ಯಾ ಫಲಿಷ್ಯತೀತಿ ಅತ್ರ ಸಂದಿಹ್ಯತೇ. "ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ" ಇತಿ ಶ್ರುತೌ ಶರೀರಮೋಕ್ಷಾವಸಾನತ್ವಶ್ರವಣಾತ್ ಸರ್ವೇಷಾಂ ಜ್ಞಾನವತಾಂ ಏತಚ್ಛರೀರಾವಸಾನೇ ಮುಕ್ತಿಸ್ಸಂಭವತಿ. ಪ್ರಾರಬ್ಧಭೋಗಕ್ಷಯಾರ್ಥಂ ಬಹುಶರೀರಸ್ವೀಕಾರೇ ವಿದ್ಯಾಯಾಃ ಅಪುರುಷಾರ್ಥತ್ವಂ ಸಂಭವತಿ. ಪೂರ್ವವಿದ್ಯಾಯಾಮಿವ ತದುತ್ತರವಿದ್ಯಾಯಾಮಪಿ ಪುರುಷೇಣ ಯತ್ಕರ್ಮ ಕ್ರಿಯತೇ ತದಪಿ ಫಲಭೋಗಾಯ ಭವತ್ಯೇವ. ತಸ್ಮಾಜ್ಜನ್ಮಪರಂಪರಾವಿಚ್ಛೇದಾಯೋಗಾತ್ಸರ್ವಥಾ ಮುಕ್ತಿರ್ನ ಸಂಭವತೀತಿ ಪ್ರಾಪ್ತೇ ವದಾಮಃ ಭೋಗೇನ ತ್ವಿತಿ. ತುಶಬ್ದಃ ಪಕ್ಷವ್ಯಾವೃತ್ತ್ಯರ್ಥಃ. ಇತರೇ ಆರಬ್ಧಕಾರ್ಯೇ ಪುಣ್ಯಪಾಪೇ ಪ್ರಾರಬ್ಧಫಲಭೋಗೇನ ಕ್ಷಪಯಿತ್ವಾ ತದ್ಭೋಗಸಮಾಪ್ತ್ಯನಂತರಂ ಬ್ರಹ್ಮ ಸಂಪದ್ಯತೇ ಚ. ಪುಣ್ಯಪಾಪೇ ಏಕಶರೀರಭೋಗ್ಯಫಲೇ ಚೇತ್ ತದವಸಾನೇ ಬ್ರಹ್ಮಸಂಪದ್ಯತೇ. ಭೋಗೇನೈವ ಕ್ಷಪಯಿತವ್ಯ

**ತ್ವಾತ್ ಆರಬ್ಧಫಲಯೋಃ ಕರ್ಮಣೋಃ "ತಸ್ಯ ತಾವದೇವ ಚಿರಂ" ಇತಿ ಚ ಭೋಗೇನ ತಯೋಃ ಕರ್ಮಣೋಃ ಮೋಕ್ಷ ಉಚ್ಯತೇ. "ದೇಹಾವಧಿ ನಿಯಮಾಶ್ರವಣಾತ್ ತದೇವಂ ಬ್ರಹ್ಮವಿದ್ಯಾಯಾಃ ಪ್ರಾಗನುಷ್ಠಿತಮ ಭುಕ್ತಫಲಮನಾರಬ್ಧಫಲಂ ಪುಣ್ಯಪಾಪರೂಪಂ ಕರ್ಮ ಅನಾದಿಕಾಲ ಸಂಚಿತಂ ಅನಂತಂ ವಿದ್ಯಾಮಾಹಾತ್ಮ್ಯಾದ್ವಿನಶ್ಯತಿ. ವಿದ್ಯಾರಂಭೋತ್ತರ ಕಾಲಮನುಷ್ಠಿತಂ ಚ ನ ಶ್ಲಿಷ್ಯತೇ. ತತ್ರ ಪುಣ್ಯರೂಪಂ ಸರ್ವಂ ವಿದುಷಃ ಸುಹೃದೋ ಗೃಹ್ಣಂತಿ, ಪಾಪಂ ಚ ದ್ವಿಷಂತಃ ಇತಿ ಪೂರ್ವಮೇವೋಕ್ತಂ.**

**ಇತಿ ಶ್ರೀಕರಭಾಷ್ಯೇ ಚತುರ್ಥಾಧ್ಯಾಯಸ್ಯ ಪ್ರಥಮಃಪಾದಃ.**

ಹಾಗಾದರೆ ದಹರಾದ್ಯುಪಾಸಕರಿಗೆ ಪುಣ್ಯಪಾಪಗಳೆಂಬ ಪ್ರಾರಬ್ಧಕರ್ಮಗಳು ಹೇಗೆ ನಷ್ಟವಾಗುತ್ತವೆ ಎಂದಾಶಂಕಿಸಿ ತಿಳಿಸುತ್ತಾನೆ. ಜ್ಞಾನಿಯು ಸುಖದುಃಖ ಗಳೆಂಬ ಪ್ರಾರಬ್ಧವನ್ನು ಭೋಗಿಸುತ್ತ ಮುಂದೆ ಶರೀರವನ್ನು ದೊರಕಿಸುವ ಪುಣ್ಯ ಪಾಪಗಳೆಂಬ ಆಗಾಮಿಕರ್ಮಗಳನ್ನು ಜ್ಞಾನದ ಬೆಳಕಿನಲ್ಲಿ ಕಳೆದುಕೊಳ್ಳುತ್ತ ಆತ್ಮಾ ರಾಮನಾಗಿರುವುದರಿಂದ ಅವನಿಗೆ ನಾಲ್ಕುಬಗೆಯ ಮುಕ್ತಿಗಳೂ ದೊರಕುತ್ತವೆ. ಉತ್ತಮಾಧಿಕಾರಿಗಳಿಗೆ ನೇರವಾಗಿ ಈ ಪ್ರಸಾದಕಾಯದಲ್ಲಿಯೇ ಮುಕ್ತಿ ಎಂದೂ, ಮಂದಾಧಿಕಾರಿಗಳು ಈಶ್ವರಾರ್ಪಣದೃಷ್ಟಿಯಿಂದ ಕರ್ಮಗಳನ್ನು ಮಾಡುತ್ತಲಿದ್ದು ಮೂರುಜನ್ಮಗಳಲ್ಲಿ ಕ್ರಮವಾಗಿ ಶಿವಜ್ಞಾನವನ್ನು ಪಡೆಯುವರೆಂದೂ ಹಿಂದಿನ ಅಧಿ ಕರಣದಲ್ಲಿ ಹೇಳಿಯಾಯಿತು. ಅಲ್ಲಿ ಬ್ರಹ್ಮವಿದ್ಯೆಯು ಪುಣ್ಯಪಾಪಕರ್ಮಗಳನ್ನು ತೊಲಗಿಸುವುದೆಂದು ಹೇಳಿರುವುದರಿಂದ ಇಲ್ಲಿ ಒಂದು ಸಂಶಯಕ್ಕವಕಾಶವಿದೆ. ಬ್ರಹ್ಮಜ್ಞಾನಿಗಳಿಗೆ ಆ ವಿದ್ಯೆಯ ಫಲವು ಈ ಜನ್ಮದಲ್ಲಿಯೇ ದೊರಕುವುದೋ ಅಥವಾ ಮುಂದಿನ ಜನ್ಮದಲ್ಲಿಯೋ ಎಂಬುದೇ ಆ ಸಂಶಯ. "ಅವನ ಮುಕ್ತಿಗೆ ದೇಹ ವಿಯೋಗವಷ್ಟೇ ವಿಳಂಬವಾಗುವುದು" ಎಂಬ ಶ್ರುತಿಯಲ್ಲಿ ಶರೀರವಿಯೋಗವೇ ಕೊನೆ ಎಂದು ಹೇಳಿರುವುದರಿಂದ ಜ್ಞಾನಿಗಳೆಲ್ಲರಿಗೂ ಶರೀರವನ್ನು ತೊರೆದಮೇಲೆಯೇ ಮುಕ್ತಿ ದೊರಕುತ್ತದೆ. ಪ್ರಾರಬ್ಧವನ್ನು ಕಳೆಯಲಿಕ್ಕಾಗಿ ಅನೇಕ ಶರೀರಗಳನ್ನು ಜ್ಞಾನಿಯು ಹೊಂದುವುದಾದರೆ ಬ್ರಹ್ಮವಿದ್ಯೆಯೇ ನಿರರ್ಥಕವಾಗಬೇಕಾಗುತ್ತದೆ. ಹಿಂದಿನ ವಿದ್ಯೆಯಂತೆ ಮುಂದಿನ ವಿದ್ಯೆಯಲ್ಲೂ ಜೀವನು ಯಾವ ಕರ್ಮವನ್ನು ಮಾಡುತ್ತಾನೆಯೋ ಅದೂ ಸಹ ಫಲವನ್ನು ದೊರಕಿಸುತ್ತದೆಯಾದ್ದರಿಂದ ಮತ್ತೆ ಮತ್ತೆ ಹುಟ್ಟುವ ಸ್ಥಿತಿ ತಪ್ಪುವಂತೆಯೇ ಇಲ್ಲ. ಆದ್ದರಿಂದ ಎಂದಿಗೂ ಮುಕ್ತಿಯೇ ಸಂಭವಿಸುವುದಿಲ್ಲ. ಹೀಗೆ ಆಕ್ಷೇಪ ಬಂದರೆ ಸೂತ್ರದಲ್ಲಿ ಸಮಾಧಾನವನ್ನು ತಿಳಿಸ ಲಾಗಿದೆ. ಸೂತ್ರದಲ್ಲಿ ತು ಶಬ್ದವು ಆಕ್ಷೇಪವನ್ನು ಅಲ್ಲಗಳೆಯುತ್ತದೆ. ಪ್ರಾರಬ್ಧಫಲವನ್ನು ಭೋಗಿಸುತ್ತಲೇ ಪುಣ್ಯಪಾಪಗಳೆರಡನ್ನು ಕೊನೆಗಾಣಿಸಿಕೊಂಡವನು ಪರಶಿವಬ್ರಹ್ಮ ವಲ್ಲಿ ಬೆರೆಯುತ್ತಾನೆ. ಈ ಪುಣ್ಯಪಾಪಗಳನ್ನು ಒಂದೇ ಶರೀರದಲ್ಲಿ ಭೋಗಿಸಬ ಹುದಾದರೆ ಒಂದೇ ಜನ್ಮದಲ್ಲಿ ಮುಕ್ತಿಸಂಭವಿಸುತ್ತದೆ. ಅನೇಕ ಶರೀರಗಳಲ್ಲಿ

ಭೋಗಿಸಬೇಕಾದರೆ ಅದು ಮುಗಿದಮೇಲೆಯೇ ಮುಕ್ತಿ ಸಂಭವಿಸಬೇಕಾಗುತ್ತದೆ. ಭೋಗದಿಂದಲೇ ಈ ಕರ್ಮಗಳನ್ನು ಕಳೆಯಬೇಕಾದ್ದರಿಂದ ಅವುಗಳ ಅನಂತರವೇ ಮುಕ್ತಿ ದೊರಕುವುದೆಂದು ಹೇಳಲಾಗಿದೆ. "ತಸ್ಯ ತಾವದೇವ ಚಿರಂ" ಎಂಬ ಶ್ರುತಿಯಲ್ಲಿ ದೇಹವನ್ನು ತೊರೆಯುವ ಅವಧಿಯನ್ನು ಹೇಳಿಲ್ಲವಾದ್ದರಿಂದ ಬ್ರಹ್ಮವಿದ್ಯೆಗಿಂತಲೂ ಮೊದಲಿಗೆಮಾಡಿದ್ದು ಫಲವನ್ನು ಅನುಭವಿಸದೆ ಉಳಿದಿದ್ದ ಅನೇಕ ಪುಣ್ಯಪಾಪಗಳು ಬಹಳಕಾಲದಿಂದ ಕೂಡಿದ್ದು ಬ್ರಹ್ಮವಿದ್ಯೆಯ ಮಹಿಮೆಯಿಂದ ನಷ್ಟವಾಗುತ್ತವೆ. ಬ್ರಹ್ಮವಿದ್ಯೆಯ ಅನಂತರಕಾಲದಲ್ಲಿ ಮಾಡಿದ್ದೆಲ್ಲವೂ ಜ್ಞಾನಿಗೆ ಅಂಟುವುದೇ ಇಲ್ಲ. ಅವನು ಮಾಡಿದ ಪುಣ್ಯವನ್ನು ಸ್ನೇಹಿತರೂ ಪಾಪವನ್ನು ಶತ್ರುಗಳೂ ಒಯ್ಯುತ್ತಾರೆಂದು ಹಿಂದೆಯೇ ಹೇಳಿದೆ.

---

## ಅಥ ಶ್ರೀಕರಭಾಷ್ಯೇ ಚತುರ್ಥಾಧ್ಯಾಯಸ್ಯ ದ್ವಿತೀಯಪಾದಃ

ಪೂರ್ವತ್ರ ಉಪಾಸಕಾನಾಮೇವ ಮುಕ್ತಿರಭಿಹಿತಾ. ಉಪಾಸಕಾನಾಂ ಅವಸ್ಥಾ ದ್ವಿವಿಧಾ ಮರಣೋತ್ಕ್ರಾಂತಿಸಂಜ್ಞಿಕಾವಸ್ಥಾಭೇದೇನ. ತತ್ರ ಮರಣಾನಂತರಂ ಮೂರ್ತಬ್ರಹ್ಮೋಪಾಸಕಾನಾಂ ಅರ್ಚಿರಾದಿಮಾರ್ಗೇಣ ನಿರತಿಶಯಾನಂದವಿಭವಶೀಲಕಲ್ಯಾಣವಿಭೂತ್ಯಾತ್ಮಕಶಿವಲೋಕಪ್ರಾಪ್ತಿಃ. ಸುಕೃತಿನಾಂ ತು ಧೂಮಾದಿಮಾರ್ಗೇಣ ಸ್ವರ್ಗಲೋಕಪ್ರಾಪ್ತಿಃ. ಪಾಪಿನಾಂ ತೃತೀಯಮಾರ್ಗೇಣ ನರಕಲೋಕಪ್ರಾಪ್ತಿಃ. ದಹರಭೂಮಾದಿವಿದ್ಯಾವಶಾತ್ ನಿರವಯವಪರಂಜ್ಯೋತಿರ್ಮಯಶಿವತತ್ತ್ವಸಾಕ್ಷಾತ್ಕಾರವತಾಂ ಅತ್ರೈವ ಪರಶಿವಜ್ಯೋತಿರ್ಲಿಂಗೇ ಲಯ ಇತಿ ವಕ್ತುಂ ಪ್ರಥಮಂ ಸರ್ವಸಾಧಾರಣಮರಣಾವಸ್ಥಾಂ ದರ್ಶಯತಿ. ವಾಗಧಿಕರಣಂ ‖ ೧ ‖ ವಾಙ್ಮನಸಿ ದರ್ಶನಾಚ್ಛಬ್ದಾಚ್ಚ ‖ ೧ ‖ ವಾಗಿಂದ್ರಿಯಂ ಮನಸಿ ಸಂಪದ್ಯತೇ ಕುತಸ್ತದ್ದರ್ಶನಾತ್. ಲೋಕೇ ಮುಮುಕ್ಷೂಣಾಂ ವಾಗ್ವ್ಯಾಪಕನಾಶಾನಂತರಮಪಿ ಮನೋವ್ಯಾಪಾರಸ್ಯ ದ್ಯೋತನಾತ್. ಶಬ್ದಾಚ್ಚ "ಅಸ್ಯ ಪ್ರಯತೋ ಜೀವಸ್ಯ ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣೋಽಧ್ಯಕ್ಷೇ ಅಧ್ಯಕ್ಷಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಂ" ಇತಿ ಶ್ರುತಾ ವಾಗಿಂದ್ರಿಯಸ್ಯ ಮನಸಿ ಸಂಬಂಧವ್ಯಪದೇಶಾತ್ ಸುಪ್ತಿವನ್ಮರಣಾವಸ್ಥಾಯಾಮಪಿ ವಾಗಿಂದ್ರಿಯಂ ಮನಸಿ ಲೀಯತ ಇತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಉಪಾಸಕಸ್ಯ ವಿದುಷಃ ಗತಿಪ್ರಕಾರಮಿದಾನೀಂ ಚಿಂತಯಿತುಮಾರಭತೇ. ಪ್ರಥಮಂ ತಾವದುತ್ಕ್ರಾಂತಿಶ್ಚಿಂತ್ಯತೇ. ತತ್ರೇದಮಾಮ್ನಾಯತೇ. "ಅಸ್ಯ ಸೌಮ್ಯ ಪುರುಷಸ್ಯ ಪ್ರಯತೋ ವಾಙ್ಮನಸಿ ಸಂಪದ್ಯತೇ" ಇತ್ಯಾದಿ. ಅತ್ರ ವಾಙ್ಮನಸಿ ಸಂಪದ್ಯತ ಇತಿ ವಾಚೋ

ಮನಸಿ ಸಂಪತ್ತಿಶ್ರುತಿಃ ಕಿಂ ವಾಗ್ವೃತ್ತಿಮಾತ್ರವಿಷಯಾ ಉತ ವಾಗ್ವಿಷಯೇತಿ ಸಂಶಯೇ ವೃತ್ತಿಮಾತ್ರವಿಷಯೇತ್ಯೇವ ಯುಕ್ತಂ. ಕುತಃ? ಮನಸೋ ವಾಕ್ಪ್ರಕೃತಿತ್ವಾಭಾವಾತ್. ಅತ್ರ ವಾಕ್ಸ್ವರೂಪಸಂಪತ್ಯಸಂಭವಾತ್ ವಾಗಾದೀನಾಂ ಮನೋಽಧೀನತ್ವೇನ ವೃತ್ತಿಸಂಪತ್ತಿಶ್ರುತಿಃ ಕಥಂಚಿದುಪಪದ್ಯತೇ. ಲೋಕೇ ಮೃದ್ಘಟಾದಿವತ್ ಕಾರ್ಯಸ್ಯ ಉಪಾದಾನೇ ಲಯಾವಗಮಾತ್ ವಾಗಾದೀನಾಂ ಬ್ರಹ್ಮೋಪಾಸನಾಯ ತಸ್ಮಿನ್ನೇವ ಸ್ವಾತಂತ್ರ್ಯೇಣ ವರ್ತನಾತ್ ಏತದ್ವೃತ್ತಿಲಯ ಏವ ಯುಕ್ತ ಇತಿ ಪ್ರಾಪ್ತೇ ಪ್ರಚಕ್ಷ್ಮಹೇ ವಾಙ್ಮನಸೀತಿ. ವಾಕ್ ಸ್ವರೂಪತಯೈವ ಮನಸಿ ಸಂಪದ್ಯತೇ. ಕುತಃ? ತಥಾ ದರ್ಶನಾತ್. ದೃಶ್ಯತೇ ಹಿ ವಾಗೀಂದ್ರಿಯೇ ಉಪರತೇಽಪಿ ಮನಃಪ್ರವೃತ್ತಿಃ. ತನ್ಮಾತ್ರಸಂಪತ್ತ್ಯಾಪಿ ತದುಪಪದ್ಯತ ಇತಿ ಚೇತ್ತತ್ರಾಹ ಶಬ್ದಾಚ್ಚೇತಿ. "ವಾಙ್ಮನಸಿ ಸಂಪದ್ಯತ" ಇತಿ ಶಬ್ದಃ ವಾಕ್ಸ್ವರೂಪಸಂಪತ್ತಾವೇವ ನ ವೃತ್ತಿಮಾತ್ರಸಂಪತ್ತೌ. ನಹಿ ತದಾನೀಂ ವೃತ್ತ್ಯುಪರಮೋ ವಾಗಿಂದ್ರಿಯಂ ಪ್ರಮಾಣಾಂತರೇಣೋಪಲಭ್ಯತೇ. ತೇನ ವೃತ್ತಿಮಾತ್ರಮೇವ ಸಂಪದ್ಯತ ಇತ್ಯುಚ್ಯತೇ. ಯದುಕ್ತಂ ಮನಸೋ ವಾಕ್ಪ್ರಕೃತಿತ್ವಾಭಾವಾತ್ ವಾಚೋ ಮನಸಿ ಸಂಪತ್ತಿರ್ನೋಪಪದ್ಯತ ಇತಿ ತತ್ "ವಾಙ್ಮನಸಿ ಸಂಪದ್ಯತೇ" ಇತಿ ವಚನಾತ್ "ಮನಸಾ ವಾಕ್ ಸಂಯುಜ್ಯತೇ ನತು ತತ್ರ ಸ್ವಾತಂತ್ರ್ಯೇಣ ಲೀಯತೇ" ಇತಿ ವಾದೇನ ಪರಿಹರ್ತವ್ಯಂ. ಕಿಂಚ "ಅಸ್ಯ ಪುರುಷಸ್ಯ ಪ್ರಯತೋ ವಾಙ್ಮನಸಿ ಸಂಪದ್ಯತೇ ಇಂದ್ರಿಯಾಣಿ ಮನಸಿ ಸಂಪದ್ಯಂತೇ" ಇತಿ ಶ್ರುತೌ ಉತ್ಕ್ರಾಂತಮನಸಃ ಪ್ರಾಗೇವ ವಾಗಾದೀನಾಮುಪರಿಮನೋಲಯಶ್ರವಣಾಚ್ಚ ವಾಙ್ಮನಸಿ ಪ್ರಥಮಂ ಸಂಪದ್ಯತೇ ತತಸ್ಸರ್ವೇಂದ್ರಿಯಾಣಿ ಮನಸಸ್ಸಂಪದ್ಯಂತೇ ಇತಿ ವಾಕ್ಯೇನ "ಕಾರ್ಯಸ್ಯೋಪಾದಾನೇ ಲಯಃ" ಇತಿ ಯದುಕ್ತಂ ತನ್ನ ಸಂಭವತಿ, ಸ್ವರೂಪಲಯಸ್ಯೈವೋಪಾದಾನಾಪೇಕ್ಷತ್ವಾತ್. ಅತೋ ವಾಗಾದೀನಾಂ ಮನಸಿ ಸರ್ವರೂಪಲಯ ಉಚ್ಯತೇ; ನ ಕೇವಲಂ ವೃತ್ತಿಲಯಃ. ಯಥಾಂಬುಮಧ್ಯನಿಕ್ಷಿಪ್ತಾಗ್ನಿಕಣಸ್ಯ ಪ್ರಕಾಶಾದಿವೃತ್ತಿಲಯಃ ತದ್ವದುಪಾದಾನೇ ಮನಸಿ ವಾಗಾದೀನಾಂ ವೃತ್ತಿಲಯೋಽಪಿ ನಿರ್ದಿಷ್ಟಃ ವೃತ್ತಿವೃತ್ತಿಮತೋರ್ಭೇದೇ ಸತಿ ಅಭೇದಸಿದ್ಧಿದರ್ಶನಾತ್.

ಹಿಂದೆ ಉಪಾಸಕರಿಗೆ ಮಾತ್ರವೇ ಮುಕ್ತಿಯನ್ನು ಹೇಳಿತ್ತು. ಆದರೆ ಆ ಉಪಾಸಕರ ಅವಸ್ಥೆ ಮರಣ, ಉತ್ಕ್ರಾಂತಿ ಎಂದು ಎರಡುಬಗೆಯಾಗಿರುವುದು. ಮೂರ್ತಬ್ರಹ್ಮವನ್ನು ಉಪಾಸನಮಾಡಿದವರಿಗೆ ಮರಣಾನಂತರದಲ್ಲಿ ಅರ್ಚಿರಾದಿ ಮಾರ್ಗದಿಂದ ನಿರತಿಶಯಾನಂದವೈಭವವನ್ನು ದೊರಕಿಸುವ ಕಲ್ಯಾಣವಿಭೂತಿ ಎಂಬ

ಶಿವಲೋಕವು ದೊರಕುತ್ತದೆ. ಪುಣ್ಯಕರ್ಮಗಳನ್ನಾಚರಿಸಿದವರಿಗೆ ಧೂಮಾದಿ ಮಾರ್ಗದಿಂದ ಸ್ವರ್ಗಲೋಕವು ದೊರಕುವುದು. ಪಾಪಿಗಳಿಗೆ ಮೂರನೆಯಮಾರ್ಗ ದಿಂದ ನರಕವು ದೊರಕುವುದು. ದಹರ ಭೂಮಾ ಮೊದಲಾದ ಬ್ರಹ್ಮವಿದ್ಯೆಗಳ ಮಹಿಮೆಯಿಂದ ನಿರವಯವ ಪರಂಜ್ಯೋತಿ ಎಂಬ ಶಿವತತ್ತ್ವವನ್ನು ಸಾಕ್ಷಾತ್ಕಾರಿಸಿ ದವರು ಇಲ್ಲಿಯೇ ಹೃದಯದ ಪರಶಿವಜ್ಯೋತಿರ್ಲಿಂಗದಲ್ಲಿ ಲಯವಾಗುವರೆಂದು ತಿಳಿಸ ಲಿಕ್ಕಾಗಿ ಮೊದಲು ಎಲ್ಲರಿಗೂ ಸಾಮಾನ್ಯವಾಗಿ ಅನ್ವಯಿಸುವ ಮರಣಾವಸ್ಥೆಯನ್ನು ತಿಳಿಸುತ್ತಾನೆ. ಮರಣಕಾಲದಲ್ಲಿ ಮಾತು ಮನಸ್ಸಿನಲ್ಲಿ ಸೇರಿಕೊಳುತ್ತದೆ. ಹಾಗೆಂದು ಲೋಕದಲ್ಲಿಯೂ ಸ್ಪಷ್ಟವಾಗಿ ಕಂಡುಬಂದಿದೆ. ಲೋಕದಲ್ಲಿ ಮುಮುಕ್ಷುಗಳಿಗೆ ವಾಗ್ವ್ಯ ವಹಾರವು ನಿಂತಮೇಲೂ ಮನೋವ್ಯಾಪಾರವಿರುವುದಾಗಿ ಕಂಡುಬಂದಿದೆ. ದೇಹ ವನ್ನು ಬಿಟ್ಟುಹೊರಟ ಜೀವನಿಗೆ ಮಾತು ಮನಸ್ಸಿನಲ್ಲಿ ಸೇರಿಕೊಳ್ಳುತ್ತದೆಂದು ಶ್ರುತಿ ಯಿಂದಲೂ ತಿಳಿದುಬರುತ್ತದೆ. "ಮನಸ್ಸು ಪ್ರಾಣದಲ್ಲೂ, ಪ್ರಾಣವು ಜೀವನಲ್ಲೂ, ಜೀವನು ತನಗೆ ಮೂಲಭೂತವಾದ ಚೈತನ್ಯಶಕ್ತಿಯಲ್ಲೂ, ಆ ತೇಜಸ್ಸು ನಿಷ್ಕಲಪರಶಿವ ನಲ್ಲಿಯೂ ಬೆರೆಯುತ್ತವೆ" ಎಂಬ ಶ್ರುತಿಯಲ್ಲಿ ವಾಗಿಂದ್ರಿಯವು ಮನಸ್ಸಿನಲ್ಲಿ ಬೆರೆಯುವು ದೆಂದು ಹೇಳಿರುವುದರಿಂದ ಸುಷುಪ್ತಿಯಂತೆ ಮರಣದಲ್ಲಿಯೂ ವಾಕ್ಕು ಮನಸ್ಸಿನಲ್ಲಿ ಸೇರುತ್ತದೆ ಎಂಬುದೇ ಸೂತ್ರದ ಸೂಕ್ಷ್ಮಾರ್ಥ. ಆದರೆ ಬ್ರಹ್ಮಜ್ಞಾನಿ ಈ ದೇಹದಿಂದ ಹೊರಡುವ ಕ್ರಮವನ್ನು ಇಲ್ಲಿ ವಿಚಾರಿಸಲಾಗುವುದು. ಮೊದಲು ಉತ್ಕ್ರಮಣವನ್ನು ತಿಳಿಸಲಾಗುವುದು. ಆ ಬಗ್ಗೆ ಶ್ರುತಿ "ಹೊರಡುವ ಜೀವಾತ್ಮನ ವಾಕ್ಕು ಮನಸ್ಸಿನಲ್ಲೂ, ಮನಸ್ಸು ಪ್ರಾಣದಲ್ಲೂ, ಪ್ರಾಣವು ತೇಜಸ್ಸಿನಲ್ಲೂ, ತೇಜಸ್ಸು ಪರಂಜ್ಯೋತಿಯಲ್ಲೂ ಸೇರುತ್ತವೆ." ಎಂದು ತಿಳಿಸಿದೆ. ಹೀಗೆ ವಾಙ್ಮನಸ್ಸುಗಳ ಸಮಾಗಮವನ್ನು ತಿಳಿಸುವ ಶ್ರುತಿಯು ವಾಕ್ಕಿಗೇ ಅನ್ವಯಿಸುತ್ತದೆಯೋ? ಅಥವಾ ವಾಗ್ವ್ಯಾಪಾರಕ್ಕೆ ಅನ್ವಯಿ ಸುತ್ತದೆಯೋ? ಎಂದು ಸಂಶಯಬಂದರೆ ವಾಗ್ವ್ಯಾಪಾರಕ್ಕೆಮಾತ್ರವೇ ಅನ್ವಯಿಸುವು ದೆಂದು ಹೇಳುವುದೇ ಯುಕ್ತವಾಗಿದೆ. ಮನಸ್ಸು ಮತ್ತು ವಾಕ್ಕು ಭಿನ್ನಸ್ವರೂಪದವಾ ದ್ದರಿಂದ ಮನಸ್ಸಿಗೆ ವಾಗ್ರೂಪವು ಸಂಭವಿಸುವಂತಿಲ್ಲ. ಆದರೆ ವಾಗಾದಿಗಳು ಮನಸ್ಸಿಗೆ ಅಧೀನವಾಗಿರುವುದರಿಂದ ವಾಗ್ವೃತ್ತಿಗಳು ಮನಸ್ಸಿನಲ್ಲಿ ಅಡಗಬಹುದು. ಹೀಗೆಯೇ ಇಲ್ಲಿಯೂ ಹೇಳಬೇಕಾಗುತ್ತದೆ. ಮಣ್ಣಿನಿಂದಾದಗಡಿಗೆಯಂತೆ ಕಾರ್ಯಗಳು ಉಪಾದಾ ನಕಾರಣದಲ್ಲಿ ಲಯವಾಗುವುದನ್ನು ಲೋಕದಲ್ಲಿ ಕಾಣಬಹುದಾಗಿದೆ. ಆದರೆ ವಾಕ್ಕಿಗೂ ಮನಸಿಗೂ ಉಪಾದಾನೋಪಾದೇಯಭಾವವಿಲ್ಲದ್ದರಿಂದ ಒಂದರಲ್ಲಿ ಮತ್ತೊಂದರ ಸ್ವರೂಪಲಯವನ್ನು ಹೇಳಲಿಕ್ಕಾಗುವುದಿಲ್ಲ. ಇದರಿಂದ ವಾಗಾದಿಗಳು ಬ್ರಹ್ಮೋಪಾ ಸನೆಗಾಗಿ ಸ್ವತಂತ್ರವಾಗಿದ್ದುಕೊಂಡು ಅವುಗಳ ವೃತ್ತಿಮಾತ್ರ ಮನಸ್ಸಿನಲ್ಲಿ ಲಯವನ್ನು ಹೊಂದುವುದೆಂದು ಹೇಳಬೇಕು ಎಂದು ಪೂರ್ವಪಕ್ಷಿಯು ಹೇಳುತ್ತಾನೆ. ಇದಕ್ಕೆ ಸೂತ್ರದಲ್ಲಿ ಸಮಾಧಾನವನ್ನು ತಿಳಿಸಲಾಗಿದೆ. ವಾಕ್ಸ್ವರೂಪವೇ ಮನಸ್ಸಿನಲ್ಲಿ ಬೆರೆ ಯುತ್ತದೆ. ಹಾಗೆಯೇ ಲೋಕದಲ್ಲಿಯೂ ಕಂಡುಬಂದಿದೆ. ಆದರೆ ವಾಗಿಂದ್ರಿಯವು

ತನ್ನ ಕಾರ್ಯವನ್ನು ತೋರದಿದ್ದರೂ ಮನಸ್ಸುಮಾತ್ರ ಪ್ರವರ್ತಿಸುತ್ತಲೇ ಇರುವುದರಿಂದ ವಾಗಿಂದ್ರಿಯಕ್ಕೂ ಕೆಲಸವಿದ್ದೇ ಇರುತ್ತದೆ ಎಂದು ಹೇಳುವುದಾದರೆ "ವಾಙ್ಮನಸಿ ಸಂಪದ್ಯತೇ" ಎಂಬ ಶ್ರುತಿಯು ವಾಗ್ವೃತ್ತಿಯನ್ನು ತಿಳಿಸದೆ ವಾಕ್ಸ್ವರೂಪವೇ ಮನಸ್ಸಿನಲ್ಲಿ ಬೆರೆಯುವುದೆಂದು ಸ್ಪಷ್ಟವಾಗಿ ತಿಳಿಸಿದೆ. ವೃತ್ತಿ ನಿಂತಮೇಲೆ ವಾಗಿಂದ್ರಿಯವಿದೆ ಎಂದು ಬೇರೆ ಯಾವ ಪ್ರಮಾಣದಿಂದಲ್ಲೂ ಸಾಧಿಸಲಾಗುವುದಿಲ್ಲ. ಹಾಗೆ ಪ್ರಮಾಣವಿದ್ದರೆ ವೃತ್ತಿಯೊಂದೇ ಮನಸ್ಸಿನಲ್ಲಿ ಬೆರೆಯುತ್ತದೆ ಎಂದು ಒಪ್ಪಬಹುದಾಗಿತ್ತು. ಮನಸ್ಸು ಮತ್ತು ವಾಕ್ಕು ಬೇರೆಬೇರೆ ಸ್ವಭಾವದವಾದ್ದರಿಂದ ವಾಕ್ಕು ಮನಸ್ಸಿನಲ್ಲಿ ಬೆರೆಯಲಾರದೆಂದು ಹೇಳುವುದಾದರೆ ವಾಙ್ಮನಸ್ಸಂಯೋಗವನ್ನು ತಿಳಿಸುವ ಶ್ರುತಿಯೇ ಇರುವುದರಿಂದ ಈ ಆಕ್ಷೇಪವೇ ನಿಲ್ಲುವುದಿಲ್ಲ. ಆದರೆ ವಾಕ್ಕು ಮನಸ್ಸಿನಲ್ಲಿ ಸ್ವತಂತ್ರವಾಗಿ ಬೆರೆಯುವುದೆಂಬ ವಾದವು ಮಾತ್ರ ಯುಕ್ತವಲ್ಲ. ಇದೂಅಲ್ಲದೆ "ದೇಹದಿಂದ ಹೊರಡುವ ಜೀವನ ವಾಕ್ಕು ಮನಸ್ಸಿನಲ್ಲಿ ಬೆರೆಯುತ್ತದೆ" ಎಂದು ಮನಸ್ಸಿನೊಡನೆ ಇಂದ್ರಿಯಗಳ ಸಮಾಗಮವನ್ನು ತಿಳಿಸುವ ಶ್ರುತಿಯಲ್ಲಿ ಮನಸ್ಸು ಹೊರಡುವುದಕ್ಕೆ ಮೊದಲೇ ವಾಗಾದಿ ಇಂದ್ರಿಯಗಳು ಮನಸ್ಸಿನಲ್ಲಿ ಬೆರೆಯುತ್ತವೆ ಎಂದು ಹೇಳಿರುವುದರಿಂದ ವಾಗಾದಿಗಳು ಸ್ವರೂಪದಿಂದಲೇ ಮನಸ್ಸಿನಲ್ಲಿ ಲಯವಾಗುತ್ತವೆ ಎಂದು ಹೇಳುವುದೇ ಯುಕ್ತವಾಗಿದೆ. "ವಾಕ್ಕು ಮೊದಲು ಮನಸ್ಸಿನಲ್ಲಿ ಬೆರೆಯುತ್ತದೆ; ಆಮೇಲೆ ಎಲ್ಲಾ ಇಂದ್ರಿಯಗಳೂ ಬೆರೆಯುತ್ತವೆ" ಎಂಬ ವಾಕ್ಯದಿಂದ ಕಾರ್ಯವು ಉಪಾದಾನದಲ್ಲಿ ಬೆರೆಯುವುದೆಂದು ಸಿದ್ಧಾಂತದಲ್ಲಿ ಹೇಳಿದ್ದು ಸಂಭವಿಸುವುದಿಲ್ಲ; ಯಾಕೆಂದರೆ ಕಾರ್ಯವು ತನ್ನ ರೂಪದಿಂದಲೇ ಕಾರಣದಲ್ಲಿ ಬೆರೆಯಬೇಕಾದರೆ ಕಾರಣವು ಉಪಾದಾನವೇ ಆಗಬೇಕು. ಆದ್ದರಿಂದ ವಾಗಾದಿಗಳು ಮನಸ್ಸಿನಲ್ಲಿ ಸ್ವರೂಪದಿಂದಲೇ ಬೆರೆಯುತ್ತವೆ ಎಂದೇ ಹೇಳಬೇಕು. ಆದರೆ ವಾಗ್ವೃತ್ತಿಯೇ ಮನಸ್ಸಿನಲ್ಲಿ ಬೆರೆಯತ್ತದೆ ಎಂದು ಹೇಳಿದರೂ ನೀರಿನಮಧ್ಯದಲ್ಲಿ ಇಟ್ಟ ಬೆಂಕಿಯ ಕಿಡಿಯಲ್ಲಿ ಪ್ರಕಾಶವೆಂಬ ವೃತ್ತಿಯು ತೊಲಗುವಂತೆ ಉಪಾದಾನವಾದ ಮನಸ್ಸಿನಲ್ಲಿ ವಾಗಾದಿ ಇಂದ್ರಿಯಗಳ ವೃತ್ತಿಗಳೇ ಬೆರೆಯುತ್ತವೆ ಎಂದೇ ಹೇಳಬೇಕಾಗುತ್ತದೆ. ಆಗ ವೃತ್ತಿಗೂ ಆ ವೃತ್ತಿಯುಳ್ಳ ವಸ್ತುವಿಗೂ ಭೇದವಿದ್ದರೂ ಅಭೇದವೇ ಸಿದ್ಧಿಸುತ್ತದೆ ಎಂದು ಹೀಗಾದರೂ ಸಮಾಧಾನಮಾಡಬಹುದು.

ಅತ್ರ ಹೇತ್ವಂತರಮಾಹ. **ಅತ ಏವ ಚ ಸರ್ವಾಣ್ಯನು ॥ ೨ ॥** ಯತೋ ವಾಚೋ ಮನಸಾ ಸಂಯೋಗಮಾತ್ರಸಂಪತ್ತಿಃ ನತು ಲಯಃ, ಅತಏವ ವಾಚಮನು ಸರ್ವೇಷಾಂ ಇಂದ್ರಿಯಾಣಾಂ ಮನಸಿ ಸಂಪತ್ತಿ ಶ್ರುತಿರುಪಪದ್ಯತೇ "ತಸ್ಮಾದುಪಶಾಂತತೇಜಾ ಅಪುನರ್ಭವಮಿಂದ್ರಿಯೈರ್ಮನಸಿ ಸಂಪದ್ಯಮಾನೈಃ" ಇತಿ. ಕಿಂಚ ಸೃಷ್ಟಿಮಾರ್ಗೇಽಪಿ ಮನಸಃ ಪ್ರಾಧಾನ್ಯಂ ಶ್ರೂಯತೇ. "ಯದ್ಧಿ ಮನಸಾ ಧ್ಯಾಯತೇ ತದ್ವಾಚಾ ವದತಿ ಕರ್ಮಣಾ ಕರೋತಿ" ಇತಿ. ಶಿವಯೋಗಸಮಾಧಿಪ್ರಕರಣೇ

" ಯಚ್ಛೇದ್ವಾಙ್ಮನಸಿ ಪ್ರಾಜ್ಞಃ ತದ್ಯಚ್ಛೇಚ್ಛಾಂತ ಆತ್ಮನಿ । ಜ್ಞಾನಮಾತ್ಮನಿ ಮಹತಿ ತದ್ಯಚ್ಛೇಂಚ್ಛಾಂತ ಆತ್ಮನಿ ॥ " ಇತ್ಯಾದಿನಾ ವಾಗಾದೇರ್ಮಾನಸಸ್ಯೋತ್ಕೃಷ್ಟತ್ವಮವಗಮ್ಯತೇ. ತಸ್ಮಾನ್ಮರಣಕಾಲೇಽಪಿ ವಾಗಿಂದ್ರಿಯಸ್ಯ ಮನಸಿ ಲಯತ್ವಂ ನ ವಿರುಧ್ಯತೇ.

ಇಲ್ಲಿ ಬೇರೊಂದು ಕಾರಣವನ್ನು ತಿಳಿಸುತ್ತಾನೆ. ಶ್ರುತಿಯಲ್ಲಿ ವಾಕ್ಕಿಗೆ ಮನಸ್ಸಿನೊಡನೆ ಸಂಯೋಗವನ್ನು ಹೇಳಿದೆಯೇ ಹೊರತು ಲಯವನ್ನು ಹೇಳಿಲ್ಲ. ಆದ್ದರಿಂದಲೇ " ಇಂದ್ರಿಯಶಕ್ತಿಗಳು ಉಪಶಾಂತವಾಗಿ ಮತ್ತೆ ಹುಟ್ಟದೆ ಮನಸ್ಸಿನಲ್ಲಿಯೇ ಇಂದ್ರಿಯಗಳು ಅಡಗುತ್ತವೆ " ಎಂದು ವಾಕ್ಕನ್ನು ಅನುಸರಿಸಿಕೊಂಡೇ ಎಲ್ಲಾ ಇಂದ್ರಿಯಗಳೂ ಮನಸ್ಸಿನಲ್ಲಿ ಸೇರುತ್ತವೆ ಎಂದು ಶ್ರುತಿಯಲ್ಲಿ ಹೇಳಿದ್ದು ಹೊಂದುತ್ತದೆ. ಸೃಷ್ಟಿಕ್ರಮದಲ್ಲಿಯೂ ಮನಸ್ಸು ಪ್ರಧಾನವೆಂದು ತಿಳಿಸಲಾಗಿದೆ. " ಮನಸ್ಸಿನಲ್ಲಿ ಯಾವುದನ್ನು ನೆನೆಯುತ್ತಾನೋ ಅದನ್ನೇ ಬಾಯಿಂದ ಹೇಳಿ ಕೈಯಿಂದ ಮಾಡುತ್ತಾನೆ " ಎಂದು ಶ್ರುತಿಯೇ ತಿಳಿಸಿದೆ. ಶಿವಯೋಗಸಮಾಧಿಪ್ರಕರಣದಲ್ಲಿ " ಪ್ರಾಜ್ಞನು ವಾಕ್ಕನ್ನು ಮನಸ್ಸಿನಲ್ಲೂ ಮನಸ್ಸನ್ನು ಶಾಂತಾತ್ಮನಲ್ಲೂ, ಹಾಗೆಯೇ ಜ್ಞಾನವನ್ನು ಮಹದಾತ್ಮನಲ್ಲೂ, ಅದನ್ನು ಶಾಂತಆತ್ಮನಲ್ಲೂ ಸೇರಿಸಬೇಕು" ಎಂದು ಹೇಳಿರುವುದರಿಂದ ವಾಗಾದಿ ಇಂದ್ರಿಯಗಳು ಮನಸ್ಸಿಗಿಂತಲೂ ಉತ್ಕೃಷ್ಟವೆಂದು ತಿಳಿದುಬರುತ್ತದೆ. ಆದ್ದರಿಂದ ಮರಣಕಾಲದಲ್ಲಿಯೂ ವಾಗಿಂದ್ರಿಯವು ಮನಸ್ಸಿನಲ್ಲಿ ಲಯವಾಗುವುದರಲ್ಲಿ ವಿರೋಧವೇನೂ ಇಲ್ಲ.

ನನು ವಾಗಾದೀಂದ್ರಿಯೇಭ್ಯೋ ಮಾನಸಸ್ಯ ಸಮುತ್ಕೃಷ್ಟತ್ವೇನ ಮನಸಿ ವಾಗ್ವೃತ್ತಿಲಯೋಽಸ್ತು, " ಇಂದ್ರಿಯಾಣಾಂ ಮನೋ ನಾಥಃ " ಇತ್ಯಾದಿಶಾಸ್ತ್ರಯುಕ್ತ್ಯನುಭವಾತ್. ತಥಾಪಿ ಮಾನಸಸ್ಯ ಕಸ್ಮಿನ್ ಲಯೋಪಪತ್ತಿಃ ಸ್ಯಾದಿತ್ಯಾಶಂಕಾಯಾಮಧಿಕರಣಾಂತರಮಾಹ. ಮನೋಽಧಿಕರಣಂ ॥ ೨ ॥ ತನ್ಮನಃ ಪ್ರಾಣ ಉತ್ತರಾತ್ ॥ ೩ ॥ " ಮನಃ ಪ್ರಾಣೇ ಸಂಪದ್ಯತೇ " ಇತಿ ಶ್ರುತೌ " ಇಂದ್ರಿಯಾಣಾಂ ಮನೋ ನಾಥಃ ಮನೋನಾಥಸ್ತು ಮಾರುತಃ । ಮಾರುತೇ ಮಧ್ಯಸಂಚಾರೇ ಮನಸ್ಸ್ಥೈರ್ಯಂ ಪ್ರಜಾಯತೇ ॥ " ಇತಿ ವಾಕ್ಯೇ ಮನಸಃ ಪ್ರಾಣಾಧೀನತ್ವಾವಗಮಾತ್ ಮನಃ ಪ್ರಾಣೇ ಲೀಯತೇ. ಕುತಃ? ತದುತ್ತರಾತ್ ತದುತ್ತರವಾಕ್ಯಾತ್. "ಮನಃ ಪ್ರಾಣೇ " ಇತ್ಯಾದಿನಾ ವಾಗಾದಿ ಸರ್ವೇಂದ್ರಿಯಾಣಾಂ ಮನಸಿ ಲಯಃ. ತನ್ಮಾನಸಸ್ಯ ಪ್ರಾಣೇ ಲಯಾವಗಮಾತ್ ತದುಪಾದಾನಮನಸಿ ವಾಗಾದೀನಾಂ, ಪ್ರಾಣೇ ಮಾನಸಸ್ಯ ಚ ಸ್ವರೂಪಲಯೋ ವಾ ವೃತ್ತಿಲಯೋ ವೇತಿ ಸಂಶಯಃ. " ಅನ್ನಮಯಂ ಹಿ ಸೌಮ್ಯ ಮನಃ, ಆಪೋಮಯಃ ಪ್ರಾಣಃ, ತೇಜೋಮಯೀ ವಾಕ್ " ಇತಿ ಶ್ರುತೌ ಮಾನಸಸ್ಯಾನ್ನಪ್ರಕೃತಿತ್ವಮವಗಮ್ಯತೇ. ಅನ್ನಸ್ಯ

ಚ "ತಾ ಅನ್ನಮಸೃಜಂತ" ಇತ್ಯಾದೌ ಅನ್ನೋಪಾದಾನಕಾರಣತ್ವಂ ಜಲಸ್ಯಾಪಿ ಪ್ರತೀಯತೇ. ತಸ್ಮಾತ್ "ಮನಃ ಪ್ರಾಣೇ ಸಂಪದ್ಯತೇ" ಇತ್ಯತ್ರ ಪ್ರಾಣಶಬ್ದೇನ ಪ್ರಾಣಪ್ರಕೃತಿರೂಪಾಪೋ ನಿರ್ದಿಶ್ಯ ತಾಸು ಮನಸಸ್ಸಂಪತ್ತಿಪ್ರತಿಪಾದನೇ ಪರಂಪರಯಾ "ಸ್ವಕಾರಣೇ ಲಯಃ" ಇತಿ ಸಂಪತ್ತಿವಚನಂ ಉಪಪನ್ನಂ ಭವತೀತಿ ಪ್ರಾಪ್ತೇ ಬ್ರೂಮಃ. ಪೂರ್ವವದತ್ರಾಪಿ ಮಾನಸಸ್ಯ ಪ್ರಾಣೇ ವೃತ್ತಿಲಯಮಾತ್ರಮೇವ ನ ಸ್ವರೂಪಲಯಃ. "ಮನಃ ಪ್ರಾಣೇ ಸಂಪದ್ಯತೇ" ಇತ್ಯುತ್ತರವಾಕ್ಯ ದರ್ಶನಾತ್, ಮಾನಸಸ್ಯ ಪ್ರಾಣೋಪಾದಾನತ್ವಾಯೋಗಾಚ್ಚ. "ಅನ್ನ ಮಯಂ ಹಿ ಸೌಮ್ಯ ಮನಃ, ಆಪೋಮಯಃ ಪ್ರಾಣಃ" ಇತಿ ಮನಃ ಪ್ರಾಣಯೋರನ್ನೇನಾದ್ಭಿಶ್ಚಾಪ್ಯಾಯನಮುಚ್ಯತೇ. ನ ತತ್ಪ್ರಕೃತಿತ್ವಂ, ಆಹಂಕಾರಿಕತ್ವಾನ್ಮನಸಃ ಆಕಾಶವಿಕಾರಿತ್ವಾಚ್ಚ ಪ್ರಾಣಸ್ಯ ಪ್ರಾಣಶಬ್ದೇ ನಾಪಾಂ ಲಕ್ಷಣಾ ಚ ಸ್ಯಾದಿತಿ ನಿಶ್ಚೀಯತೇ.

ವಾಗಾದಿ ಇಂದ್ರಿಯಗಳಿಗಿಂತಲೂ ಮನಸ್ಸು ಉತ್ಕೃಷ್ಟವಾದ್ದರಿಂದ ಮನಸ್ಸಿನಲ್ಲಿಯೇ ವಾಗ್ವೃತ್ತಿಯು ಲಯವಾಗಲಿ. ಇಂದ್ರಿಯಗಳಿಗೆ ಮನಸ್ಸೇ ಪ್ರಭುವೆಂದು ಶಾಸ್ತ್ರಯುಕ್ತಿ ಮತ್ತು ಅನುಭವಗಳಿಂದ ತಿಳಿದುಬಂದಿದೆಯಾದರೂ ಆ ಮನಸ್ಸು ಎಲ್ಲಿ ಲಯವಾಗುತ್ತದೆ ಎಂದಾಶಂಕಿಸಿ ತಿಳಿಸುತ್ತಾನೆ. "ಮನಸ್ಸು ಪ್ರಾಣದಲ್ಲಿ ಬೆರೆಯುತ್ತದೆ" ಎಂಬ ಶ್ರುತಿಯಲ್ಲೂ "ಇಂದ್ರಿಯಗಳಿಗೆ ಮನಸ್ಸೇ ಪ್ರಭುವಾದರೆ ಮನಸ್ಸಿಗೆ ಪ್ರಾಣವಾಯುವೇ ಪ್ರಭುವೆನಿಸಿದೆ. ಪ್ರಾಣವಾಯುವು ದೇಹದ ಮಧ್ಯದಲ್ಲಿ ಸಂಚರಿಸುತ್ತಿದ್ದರೆ ಮನಸ್ಸ್ಥೈರ್ಯವುಂಟಾಗುತ್ತದೆ" ಎಂಬ ವಾಕ್ಯದಲ್ಲೂ ಮನಸ್ಸು ಪ್ರಾಣವಾಯುವಿಗೆ ಅಧೀನವೆಂದು ಹೇಳಿರುವುದರಿಂದ ಮನಸ್ಸು ಪ್ರಾಣದಲ್ಲಿ ಬೆರೆಯುತ್ತದೆ ಎಂದು ಆ ಶ್ರುತಿಯ ಮುಂದಿನ ವಾಕ್ಯದಿಂದ ತಿಳಿದುಬರುತ್ತದೆ. ವಾಕ್ಕು ಮೊದಲಾದ ಎಲ್ಲಾ ಇಂದ್ರಿಯಗಳು ಮನಸ್ಸಿನಲ್ಲೂ, ಆ ಮನಸ್ಸು ಪ್ರಾಣದಲ್ಲೂ ಬೆರೆಯುತ್ತವೆ ಎಂದು ಇಲ್ಲಿ ತಿಳಿದುಬರುವುದರಿಂದ ಇವೆಲ್ಲಕ್ಕೂ ಉಪಾದಾನವಾದ ಮನಸ್ಸಿನಲ್ಲಿ ವಾಗಾದಿಗಳಿಗೂ, ಪ್ರಾಣದಲ್ಲಿ ಮನಸ್ಸಿಗೂ ಸ್ವರೂಪದಿಂದ ಲಯವೇ ಅಥವಾ ಕೇವಲ ವೃತ್ತಿಯ ಲಯವೇ? ಎಂಬ ಸಂಶಯ ಬರುತ್ತದೆ. "ಮನಸ್ಸು ಪೃಥಿವೀಮಯವೂ, ಪ್ರಾಣವು ಜಲಮಯವೂ, ವಾಕ್ಕು ತೇಜೋಮಯವೂ ಆಗಿವೆ" ಎಂಬ ಶ್ರುತಿಯಲ್ಲಿ ಮನಸ್ಸು ಪೃಥಿವೀಮಯವೆಂದು ತಿಳಿದುಬರುತ್ತದೆ. ಆ ಪೃಥಿವಿಗೂ ಜಲವೇ ಉಪಾದಾನಕಾರಣವೆಂದು "ಆ ನೀರು ಪೃಥಿವಿಯನ್ನು ಸೃಜಿಸಿತು" ಎಂಬ ಶ್ರುತಿಯು ತಿಳಿಸುತ್ತದೆ. ಆದ್ದರಿಂದ "ಮನಸ್ಸು ಪ್ರಾಣದಲ್ಲಿ ಸೇರುತ್ತದೆ" ಎಂಬಲ್ಲಿ ಪ್ರಾಣಶಬ್ದದಿಂದ ಪ್ರಾಣಾಧಾರವಾದ ಜಲವನ್ನೇ ಗ್ರಹಿಸಬೇಕು. ಅದರಲ್ಲಿ ಮನಸ್ಸಿನ ಲಯವನ್ನು ಹೇಳಿದರೆ ಪರಂಪರೆಯಿಂದ ತನ್ನ ಕಾರಣದಲ್ಲಿಯೇ ಲಯವನ್ನು ಹೇಳಿದಂತಾಯಿತು. ಆದ್ದರಿಂದ "ಸಂಪದ್ಯತೇ" ಎಂದು ಹೇಳಿದ್ದು ಯುಕ್ತವಾಗು.

ತ್ತದೆ ಎಂದು ಆಕ್ಷೇಪಬಂದರೆ ಅದಕ್ಕೆ ಸಮಾಧಾನವನ್ನು ಇಲ್ಲಿ ತಿಳಿಸಲಾಗಿದೆ. ಹಿಂದಿನಂತೆ ಇಲ್ಲಿಯೂ ಮನಸ್ಸು ಪ್ರಾಣದಲ್ಲಿ ಸ್ವರೂಪದಿಂದ ಬೆರೆಯದೆ ವೃತ್ತಿಯಿಂದಲೇ ಬೆರೆಯುವುದೆಂದೇ ಹೇಳಬೇಕು. "ಮನಸ್ಸು ಪ್ರಾಣದಲ್ಲಿ ಬೆರೆಯುತ್ತದೆ" ಎಂದು ಮುಂದಿನ ವಾಕ್ಯವು ತಿಳಿಸುವುದರಿಂದಲೂ, ಮನಸ್ಸಿಗೆ ಪ್ರಾಣವೇ ಉಪಾದಾನವೆಂಬುದು ಹೊಂದದಿರುವುದರಿಂದಲೂ ಮನಸ್ಸು ಪೃಥಿವಿಯೊಡನೆಯೂ ಪ್ರಾಣವು ಜಲದೊಡನೆಯೂ ಬೆರೆಯುತ್ತವೆ ಎಂದು ಹೇಳಲಾಗಿದೆ. ಆದರೆ ಅದಕ್ಕೆ ಅವುಗಳ ಪ್ರಕೃತಿ ಸಂಭವಿಸುವುದಿಲ್ಲ. ಮನಸ್ಸು ಅಹಂಕಾರದ ವಿಕಾರವೆನಿಸಿ ಪ್ರಾಣವು ಆಕಾಶದ ವಿಕಾರವೆನಿಸಿದ್ದರಿಂದ ಪ್ರಾಣಶಬ್ದದಿಂದ ಜಲವೆಂಬ ಅರ್ಥವನ್ನು ಲಕ್ಷಣೆಯಿಂದಲೇ ಹೇಳಬೇಕೆಂದು ನಿಶ್ಚಯಿಸಲಾಗಿದೆ.

ಪ್ರಾಣಸ್ಯ ಮನೋಽಧಿಷ್ಠಾನತ್ವಸಂಭವೇನ ಮಾನಸಸ್ಯ ಪ್ರಾಣೇ ಲಯೋಽಸ್ತು. ತಥಾಪಿ ಪ್ರಾಣಸ್ಯ ಕಸ್ಮಿನ್ನಾಪ್ಯಾಯನಮುಚಿತಮಿತ್ಯಾಕಾಂಕ್ಷಾಯಾಮಧಿಕರಣಾಂತರಮಾಹ. ಅಕ್ಷರಾದಧ್ಯಕ್ಷಾಧಿಕರಣಂ ॥ ೩ ॥ ಸೋಽಧ್ಯಕ್ಷೇ ತದುಪಗಮಾದಿಭ್ಯಃ ॥ ೪ ॥ ಸ ಪ್ರಾಣ ಅಧ್ಯಕ್ಷೇ ಜೀವೇ ಸಂಪದ್ಯತೇ. ಕುತಃ? ತದುಪಗಮಾದಿಭ್ಯಃ ಹೇತುಭ್ಯಃ. "ತಮುತ್ಕ್ರಾಮಂತಂ ಪ್ರಾಣಾ ನೋತ್ಕ್ರಾಮಂತೇ ಪ್ರಾಣಮನೂತ್ಕ್ರಾಮಂತಂ ಸರ್ವೇ ಪ್ರಾಣಾ ಅನೂತ್ಕ್ರಾಮಂತಿ" ಇತಿ ಶ್ರುತೌ ಪ್ರಾಣಾದೀನಾಂ ಕ್ಷೇತ್ರಜ್ಞೇನ ಸಹ ಪರಲೋಕಗಮನಶ್ರವಣಾತ್ ಪ್ರಾಣಾಧ್ಯಕ್ಷತ್ವಂ ಸರ್ವಥಾ ಜೀವಸ್ಯ ವಿರುದ್ಧ್ಯತೇ ಇತಿ ಸೂತ್ರಸೂಚಿತಾರ್ಥಃ. "ನ ತತ್ರ ಪ್ರಾಣಾ ನೋತ್ಕ್ರಾಮಂತೇ" ಇತಿ ಶ್ರುತೌ ಪ್ರಾಣಾನಾಂ ಪರಮಾತ್ಮನಿ ಲಯಾವಗಮಾತ್ "ತಮುತ್ಕ್ರಾಮಂತಂ ಪ್ರಾಣೋಽನೂತ್ಕ್ರಾಮತಿ" ಇತಿ ಶ್ರುತೌ ಜೀವಾನುಗಾಮಿತ್ವೇನ ಸ್ವಾತಂತ್ರ್ಯೇಣ ವಾ ಪರಮಾತ್ಮನ್ಯಾಪ್ಯಾಯನಮಿತಿ ಸಂಶಯಃ. "ಏತಸ್ಮಾಜ್ಜಾಯತೇ ಪ್ರಾಣಃ" ಇತಿ ಶ್ರುತೌ ತಸ್ಯ ಪರಮಾತ್ಮಜನ್ಯತ್ವಂ. "ಪ್ರಾಣಾನಾಂ ಗ್ರಂಥಿರಸಿ ರುದ್ರೋ ಮಾ ವಿಶಾಂತಕಃ" ಇತ್ಯತ್ರ ತದಾಧಾರತ್ವಂ. "ನ ತತ್ರ ಪ್ರಾಣಾ ನೋತ್ಕ್ರಾಮಂತೇ" ಇತ್ಯತ್ರ ತಸ್ಮಿನ್ನೇತೇಷಾಂ ಲಯತ್ವಸ್ಯ ಚ ದ್ಯೋತನಾತ್ ಪರಮಾತ್ಮಾಧೀನತ್ವಮೇವ ಪ್ರಾಣಸ್ಯ ನಿರ್ದಿಶ್ಯತೇ. ಕಿಂಚ "ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ" ಇತಿ ವಚನಾನುರೋಧೇನ ಮನಃಪ್ರಾಣಯೋರೇವ ವಾಙ್ಮನಸಯೋಸ್ಸಂಪತ್ತಿಃ. ತಥಾ "ಪ್ರಾಣಸ್ತೇಜಸಿ" ಇತಿ ವಚನಾತ್ ತೇಜಸ್ಯೇವ ಪ್ರಾಣಸ್ಸಂಪದ್ಯತೇ ಇತಿ ಪ್ರಾಪ್ತೇ ಪ್ರಚಕ್ಷ್ಮಹೇ. "ಸೋಽಧ್ಯಕ್ಷೇ" ಇತಿ ಸ ಪ್ರಾಣಃ ಅಧ್ಯಕ್ಷೇ ಕರಣಾಧಿಪೇ ಜೀವೇ ಸಂಪದ್ಯತೇ. ಕುತಃ? ತದುಪಗಮಾದಿಭ್ಯಃ. ಪ್ರಾಣಸ್ಯ ಜೀವೋಪಗಮಸ್ತಾವಚ್ಛ್ರೂಯತೇ. "ಏವಮೇವ ಮಮಾ

ತ್ಮಾನಮಂತಕಾಲೇ ಸರ್ವೇ ಪ್ರಾಣಾ ಅಭಿಸಮಾಯಂತಿ " ಇತಿ. ತಥಾ ಜೀವೋ ನ ಸಹತೇ ಪ್ರಾಣಸ್ಯೋತ್ಕ್ರಾಂತಿಂ. ಶ್ರೂಯತೇ " ತಮುತ್ಕ್ರಾಮಂತಂ ಪ್ರಾಣೋಽನೂತ್ಕ್ರಾಮತಿ " ಇತಿ ಪ್ರತಿಷ್ಠಾ ಚ ಜೀವೇನ ಸಹ ಸ್ಮರ್ಯತೇ. " ಕಸ್ಮಿನ್ನುತ್ಕ್ರಾಂತೇ ಉತ್ಕ್ರಾಂತೋ ಭವಿಷ್ಯಾಮಿ ಕಸ್ಮಿನ್ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮಿ " ಇತಿ. ಏವಂ ಜೀವೇನ ಸಂಯುಜ್ಯ ತೇನ ಸಹ ತೇಜಸ್ಸಂಪತ್ತಿರಿಹ ಪ್ರಾಣಸ್ತೇಜಸಿ ಉಚ್ಯತೇ. ಯಥಾ ಯಮುನಾಯಾಃ ಗಂಗಯಾ ಸಂಯುಜ್ಯ ಸಾಗರಗಮನೇಽಪಿ ಯಮುನಾ ಸಾಗರಂ ಗಚ್ಛತೀತಿ ವಚೋ ನ ವಿರುಧ್ಯತೇ ತದ್ವತ್ " ನ ತತ್ರ ಪ್ರಾಣಾ ನೋತ್ಕ್ರಾಮಂತೇ " ಇತಿ ವಾಕ್ಯಾನಾಂ ಅವಿರೋಧಃ. " ಏತಸ್ಮಾಜ್ಜಾಯತೇ ಪ್ರಾಣಃ " ಇತ್ಯಾದಿವಾಕ್ಯಾನಾಂ ಸರ್ವಕಾರಣತ್ವಂ ಪರಮಾತ್ಮನಿ ವ್ಯವಸ್ಥಾಪಿತಂ ನ ಕ್ರಮಸೃಷ್ಟಿಪರತ್ವಂ. ಸರ್ವಾಂತರ್ಯಾಮಿತ್ವೇನ ಶಿವಸ್ಯೈವ ಸರ್ವಜಗಜ್ಜನ್ಮಾದಿಹೇತುತ್ವಾತ್ಸರ್ವಂ ತತ್ರ ನ ವಿರುಧ್ಯತೇ. ತಥಾಪಿ ಪ್ರಾಣಾನಾಂ ಜೀವಾತಿರಿಕ್ತಸ್ಥಿತ್ಯನುಪಪನ್ನತ್ವೇನ ಜೀವಾನುಗಾಮಿತ್ವಂ ವಿಹಿತಂ. ತಸ್ಮಾದುಭಯಶಾಸ್ತ್ರಂ ಸಮಂಜಸಂ.

ಪ್ರಾಣಕ್ಕೆ ಮನಸ್ಸೇ ಆಶ್ರಯವೆಂಬುದು ಹೊಂದುವುದರಿಂದ ಮನಸ್ಸು ಪ್ರಾಣದಲ್ಲಿ ಬೆರೆಯಲಿ. ಆದರೆ ಪ್ರಾಣವು ಎಲ್ಲಿ ಬೆರೆಯುತ್ತದೆ? ಎಂದಾಶಂಕಿಸಿ ತಿಳಿಸುತ್ತಾನೆ. ಆ ಪ್ರಾಣವು ಜೀವನಲ್ಲಿ ಬೆರೆಯುತ್ತದೆ. " ದೇಹದಿಂದ ಜೀವನು ಹೊರಡುವಾಗ ಪ್ರಾಣಗಳು ಹೊರಡುವುದಿಲ್ಲ. ಆಗ ಎಲ್ಲಾ ಇಂದ್ರಿಯಗಳೂ ಅವನ ಪ್ರಾಣವನ್ನು ಅನುಸರಿಸುತ್ತವೆ " ಎಂಬ ಶ್ರುತಿಯಲ್ಲಿ ಇಂದ್ರಿಯಗಳು ಜೀವನನ್ನು ಅನುಸರಿಸುತ್ತವೆ ಎಂದೂ, ಅವನೊಡನೆ ಅವೆಲ್ಲವೂ ಪರಲೋಕಕ್ಕೆ ಹೊರಡುತ್ತವೆ ಎಂದೂ ಹೇಳಿರುವುದರಿಂದ ಜೀವನಿಗೆ ಪ್ರಾಣವೇ ಅಧಿಪತಿ ಎಂಬುದು ವಿರುದ್ಧವಾಗುತ್ತದೆ. " ಅಲ್ಲಿಗೆ ಪ್ರಾಣಗಳು ಹೊರಡದೆ ಇಲ್ಲಿಯೇ ಲಯವಾಗುತ್ತವೆ " ಎಂಬ ಶ್ರುತಿಯಲ್ಲಿ ಪ್ರಾಣಗಳು ಪರಮಾತ್ಮನಲ್ಲಿ ಬೆರೆಯುತ್ತವೆ ಎಂದು ತಿಳಿದುಬರುವುದರಿಂದ ಇವು ಜೀವನನ್ನು ಅನುಸರಿಸುತ್ತವೆಯೋ ಅಥವಾ ಪರಶಿವನಲ್ಲಿ ಬೆರೆಯುತ್ತವೆಯೋ? ಎಂದು ಸಂಶಯಬರುತ್ತದೆ. " ಇವನಿಂದಲೇ ಪ್ರಾಣ ಮನಸ್ಸು ಮತ್ತು ಎಲ್ಲಾ ಇಂದ್ರಿಯಗಳೂ ಹುಟ್ಟುತ್ತವೆ " ಎಂಬ ಶ್ರುತಿಯಲ್ಲಿ ಪ್ರಾಣವು ಪರಮಾತ್ಮನಿಂದಲೇ ಹುಟ್ಟುವುದೆಂದೂ, " ರುದ್ರನೇ, ನೀನು ಪ್ರಾಣಗಳನ್ನು ಹಿಡಿದಿರುವೆ " ಎಂಬಲ್ಲಿ ಅವನೇ ಪ್ರಾಣಗಳಿಗಾಧಾರವೆಂದೂ ತಿಳಿಸಿ, " ಅಲ್ಲಿಗೆ ಪ್ರಾಣಗಳು ಹೋಗದೆ ಇಲ್ಲಿಯೇ ಲಯವಾಗುತ್ತವೆ " ಎಂಬ ಶ್ರುತಿಯಲ್ಲಿ ಅವನಲ್ಲಿಯೇ ಇವುಗಳ ಲಯವನ್ನು ಹೇಳಿರುವುದರಿಂದ ಪ್ರಾಣವು ಪರಮಾತ್ಮನಿಗಧೀನವೆಂಬುದು ಸ್ಪಷ್ಟವಾಗುತ್ತದೆ. " ವಾಕ್ಕು ಮನಸ್ಸಿನಲ್ಲೂ ಮನಸ್ಸು ಪ್ರಾಣದಲ್ಲೂ ಬೆರೆಯುತ್ತವೆ " ಎಂಬ ಶ್ರುತಿಯಲ್ಲಿ ಮನಸ್ಸಿಗೆ

ವಾಕ್ಕಿನಲ್ಲೂ ಪ್ರಾಣಕ್ಕೆ ಮನಸ್ಸಿನಲ್ಲೂ ಸಮಾಗಮವನ್ನು ಹೇಳಲಾಗಿದೆ. ಹಾಗೆಯೇ "ಪ್ರಾಣವು ತೇಜಸ್ಸಿನಲ್ಲಿ ಸೇರುವುದು" ಎಂಬ ಮಾತಿನಿಂದ "ತೇಜಸ್ಸಿನಲ್ಲಿಯೇ ಪ್ರಾಣವು ಸೇರುತ್ತದೆ" ಎಂದು ಆಕ್ಷೇಪ ಬಂದರೆ ಅದಕ್ಕೆ ಸಮಾಧಾನವನ್ನು ಮುಂದೆ ತಿಳಿಸಲಾಗಿದೆ. "ಆ ಪ್ರಾಣವು ಇಂದ್ರಿಯಗಳಿಗಧಿಪತಿಯಾದ ಜೀವನಲ್ಲಿ ಸೇರುತ್ತದೆ." ಯಾಕೆಂದರೆ "ಹೀಗೆಯೇ ಕೊನೆಗಾಲದಲ್ಲಿ ಎಲ್ಲಾ ಪ್ರಾಣಗಳೂ ನನ್ನ ಆತ್ಮನಲ್ಲಿ ಸೇರುತ್ತವೆ" ಎಂಬ ಶ್ರುತಿಯಲ್ಲಿ ಪ್ರಾಣವು ಜೀವನಲ್ಲಿ ಸೇರುವುದೆಂದು ತಿಳಿಸಲಾಗಿದೆ. "ಹೋಗುವ ಜೀವನನ್ನು ಪ್ರಾಣವು ಅನುಸರಿಸುತ್ತದೆ" ಎಂಬ ಶ್ರುತಿಯಪ್ರಕಾರ ಜೀವನು ಪ್ರಾಣದ ಉತ್ಕ್ರಮಣವನ್ನು ಸಹಿಸುವುದಿಲ್ಲ. ಇದೂ ಅಲ್ಲದೆ, ಅದು ಜೀವನೊಡನೆ ನೆಲಸುವುದನ್ನು ಸ್ಮೃತಿಯೂ ತಿಳಿಸಿದೆ. "ದೇಹದಿಂದ ಯಾವುದು ಹೊರಟಮೇಲೆ ನಾನು ಹೊರಟಂತಾಗುತ್ತದೆ. ಯಾವುದಿದ್ದರೆ ನಾನು ಇರಬಲ್ಲೆನು?" ಎಂಬುದರಿಂದ ಜೀವನೊಡನೆಬೆರೆತು ಪ್ರಾಣವು ತೇಜಸ್ಸಿನಲ್ಲಿ ಸೇರುವುದೇ ಇಲ್ಲಿ ಪ್ರಾಣತೇಜಸ್ಸಮಾಗಮವೆನಿಸುತ್ತದೆ. ಯಮುನೆಯು ಗಂಗೆಯೊಡನೆ ಬೆರೆತು ಸಾಗರಕ್ಕೆ ಹೋಗುತ್ತಿದ್ದರೂ ಯಮುನೆಯು ಸಾಗರವನ್ನು ಸೇರುತ್ತಿದೆ ಎಂಬ ಮಾತು ಹೇಗೆ ವಿರುದ್ಧವಾಗುವುದಿಲ್ಲವೋ ಹಾಗೆ "ಅಲ್ಲಿಗೆ ಪ್ರಾಣಗಳು ಹೋಗುವುದಿಲ್ಲ" ಎಂಬ ಮಾತಿನಲ್ಲೂ ವಿರೋಧವಿಲ್ಲ. "ಇದರಿಂದಲೇ ಪ್ರಾಣಾದಿಗಳು ಹುಟ್ಟುತ್ತವೆ". ಎಂಬ ವಾಕ್ಯಗಳಲ್ಲಿ ಪರಮಾತ್ಮನೇ ಎಲ್ಲಕ್ಕೂ ಕಾರಣನೆಂದು ವ್ಯವಸ್ಥೆಮಾಡಲಾಗಿದೆ. ಆದ್ದರಿಂದ ಆ ವಾಕ್ಯಗಳು ಕ್ರಮಸೃಷ್ಟಿಗೆ ಅನ್ವಯಿಸುವುದಿಲ್ಲ. ಸರ್ವಾಂತರ್ಯಾಮಿಯಾದ ಶಿವನೇ ಎಲ್ಲಾ ಜಗತ್ತಿನ ಸೃಷ್ಟ್ಯಾದಿವ್ಯಾಪಾರಗಳಿಗೆ ಕಾರಣನಾದ್ದರಿಂದ ಅವನಲ್ಲಿ ಯಾವ ವಿರೋಧವೂ ಸಂಭವಿಸುವುದಿಲ್ಲ. ಆದರೂ ಪ್ರಾಣಗಳು ಜೀವನಿಗಿಂತ ಬೇರೆಕಡೆ ಇರಲಾರವಾದ್ದರಿಂದ ಅವು ಜೀವನನ್ನು ಅನುಸರಿಸುವುದೇ ವಿಹಿತವಾಗಿದೆ. ಆದ್ದರಿಂದ ಎರಡು ಬಗೆಯ ಶಾಸ್ತ್ರಗಳೂ ಸಮಂಜಸವೇ ಆಗುತ್ತವೆ.

**ನನು "ಪ್ರಾಣಸ್ತೇಜಸಿ" ಇತಿ ಶ್ರುತೌ ಪ್ರಾಣಸ್ಯ ವಹ್ನಿಲಯತ್ವಾವಗಮಾತ್ ಕಥಂ ಜೀವೇನ ಸಹ ಪರಮಾತ್ಮಾನುಪ್ರವಿಷ್ಟತ್ವಮುಚಿತಮಿತ್ಯಾಶಂಕ್ಯ ತನ್ನಿರಾಕರಣಾರ್ಥಮಧಿಕರಣಾಂತರಮಾಹ. ಭೂತಾಧಿಕರಣಂ ॥ ೪ ॥ ಭೂತೇಷು ತಚ್ಛ್ರುತೇಃ ॥ ೫ ॥ ಸ ಚಾಧ್ಯಕ್ಷಃ ಭೂತೇಷು ಪಂಚಮಹಾಭೂತೇಷು ಸಂಪದ್ಯತೇ. ಕುತಃ? ತಚ್ಛ್ರುತೇಃ "ಅಕ್ಷರಸ್ತೇಜಸಿ" ಇತಿ ಶ್ರುತೇಃ. ಸರ್ವಾಧ್ಯಕ್ಷತ್ವಂ ಸರ್ವಾಂತರ್ಯಾಮಿಣಃ ಶಿವಸ್ಯ ಸಮುಚಿತತ್ವಾತ್ ತೇಜಶ್ಶಬ್ದವಾಚ್ಯತ್ವಂ ಶಿವೇ ನ ವಿರುಧ್ಯತೇ. "ತಂ ದೇವೋ ಜ್ಯೋತಿಷಾಂ ಜ್ಯೋತಿಃ", "ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ" ಇತ್ಯಾದೌ ಪರಮತೇಜೋಮಯತ್ವಸ್ಯ ಶಿವ ಏವ ದರ್ಶನಾತ್, "ಸರ್ವೋ ವೈ ರುದ್ರಃ" ಇತ್ಯಾದೌ ತಸ್ಯ ಸರ್ವಾತ್ಮಕತ್ವವ್ಯಪದೇಶಾತ್, "ಯೋ ರುದ್ರೋ ಅಗ್ನೌ" ಇತ್ಯಾದಿಷು ತಸ್ಯ ಸರ್ವಾಂ**

ತರ್ಯಾಮಿತ್ವಕಥನಾತ್ ಸರ್ವಭೂತಾಧಿವಾಸಸ್ಯ ಸರ್ವಾತ್ಮಕಸ್ಯ ಸರ್ವ ಶಬ್ದವಾಚ್ಯತ್ವಂ ಯುಕ್ತಮಿತಿ ಸೂಕ್ತಾರ್ಥಃ. "ಖಂ ವಾಯುರ್ಜ್ಯೋ ತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ" ಇತಿ ಶ್ರುತೌ ಲೋಕೇ ಚ ತೇಜ ಶ್ಶಬ್ದಸ್ಯ ವಹ್ನೌ ಪ್ರಯೋಗದರ್ಶನಾತ್ "ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಂ । ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಃ" ಇತ್ಯಾದೌ ಶಿವಸ್ಯ ತೇಜೋಮಯತ್ವವ್ಯಪದೇಶಾತ್ "ಪ್ರಾಣಸ್ತೇಜಸಿ" ಇತಿ ಜೀವಸಂಯುಕ್ತಸ್ಯ ಪ್ರಾಣಸ್ಯ ತೇಜಸಿ ಸಂಪತ್ತ್ಯವಗಮಾತ್ ಪ್ರಾಣಜೀವಮಯಾಧಿಷ್ಠಾನತೇಜಶ್ಶಬ್ದಸ್ಯ ವಹ್ನಿಪರತ್ವಂ ಉತ ಪರ ಮಾತ್ಮಪರತ್ವಂ ವೇತಿ ಸಂಶಯಃ. ತೇಜಶ್ಶಬ್ದಸ್ಯ ಭೂತಾಗ್ನಾವೇವ ರೂಢತ್ವಾತ್, ಮುಖ್ಯಾರ್ಥತ್ಯಾಗೇ ಮಾನಾಭಾವಾತ್ "ಅಗ್ನಿರಗ್ರೇ ಪ್ರಥಮೋ ದೇವತಾನಾಂ" "ಯ ಏವಂ ವಿದ್ವಾನಗ್ನಿಹೋತ್ರಂ ಜುಹೂ ಯಾತ್" "ಯಾವಜ್ಜೀವಮಗ್ನಿಹೋತ್ರಂ ಜುಹೋತಿ" ಇತ್ಯಾದೌ ಸರ್ವದೇವತಾಪ್ರಾಧಾನ್ಯೇನ ಯಾವಜ್ಜೀವಮಗ್ನಿಹೋತ್ರೋಪಾಸನ ವಿಧೇರ್ವಿದ್ವದವಿದ್ವತ್ಸಾಧಾರಣ್ಯೇನ ಕಥನಾದುಪಾಸ್ಯವಸ್ತುನಿ ಸರ್ವೇಷಾ ಮುಪಾಸಕಾನಾಂ ಏಕತ್ವಸ್ಯ "ತತ್ತ್ವಮಸಿ" ಇತ್ಯಾದಿವೇದಾಂತೇಷು ವ್ಯವಸ್ಥಾಪನಾತ್ ವಹ್ನ್ಯಪರಪರ್ಯಾಯತೇಜಸಿ ಜೀವಾನಾಮಾಪ್ಯಾ ಯನಮವಿರುದ್ಧಮಿತಿ ಪ್ರಾಪ್ತೇ ಪ್ರಚಕ್ಷ್ಮಹೇ. "ಪ್ರಜ್ಞಾನಂ ಬ್ರಹ್ಮ" "ಅಹಂ ಬ್ರಹ್ಮಾಸ್ಮಿ" "ತತ್ತ್ವಮಸಿ" ಇತ್ಯಾದಿನಾ ಸರ್ವವೇದಾಂತೇಷು ಮುಮುಕ್ಷೂಣಾಂ ಬ್ರಹ್ಮೋಪಾಸಕಾನಾಂ ಪರಶಿವಬ್ರಹ್ಮಾತ್ಮಕತ್ವೋಪ ದೇಶಾತ್ "ನ ತತ್ರ ಸೂರ್ಯೋ ಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾತಿ ಕುತೋಽಯಮಗ್ನಿಃ । ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥" ಇತ್ಯಾದೌ ನಿರತಿಶಯ ಶಿರಸ್ಕತೇಜಸ್ತ್ವಸ್ಯ ಬ್ರಹ್ಮಣ್ಯವಗಮಾತ್ ಜಡರೂಪವಹ್ನೌ ಚೇತನ ಜೀವಸ್ಯ ಲಯಾಸಂಭವಾತ್ ಶ್ರುತ್ಯುಕ್ತತೇಜಶ್ಶಬ್ದಸ್ಯ ಪರಶಿವಬ್ರಹ್ಮ ಣ್ಯೇವ ಸಮನ್ವಯಃ.

ಪ್ರಾಣವು ತೇಜಸ್ಸಿನಲ್ಲಿ ಬೆರೆಯುವುದೆಂಬ ಶ್ರುತಿಯಲ್ಲಿ ಪ್ರಾಣವು ಬೆಂಕಿಯಲ್ಲಿ ಸೇರುವುದೆಂದು ತಿಳಿದುಬರುವುದರಿಂದ ಅದು ಜೀವನೊಡನೆ ಪರಮಾತ್ಮನಲ್ಲಿ ಸೇರುವು ದೆಂಬುದು ಹೇಗೆ ಯುಕ್ತವೆಂದಾಶಂಕಿಸಿ ಅದನ್ನು ನಿರಾಕರಿಸುತ್ತಾನೆ. ಇಂದ್ರಿಯಗಳ ಗಧಿಪತಿಯಾದ ಜೀವನು ಪಂಚಮಹಾಭೂತಗಳಲ್ಲಿ ಸೇರುತ್ತಾನೆಂದು "ನಾಶರಹಿತನಾದ ಜೀವನು ತೇಜಸ್ಸಿನಲ್ಲಿ ಸೇರುವನು" ಎಂಬ ಶ್ರುತಿಯು ತಿಳಿಸುತ್ತದೆ. ಶಿವನೇ ಎಲ್ಲಕ್ಕೂ ಅಧ್ಯಕ್ಷನೂ ಮತ್ತು ಅಂತರ್ಯಾಮಿಯೂ ಆಗಿರುವನೆಂಬುದು ಯುಕ್ತವಾದ್ದರಿಂದ ತೇಜಸ್ಸೆಂದರೆ ಶಿವನೆಂಬುದರಲ್ಲಿ ಯಾವ ವಿರೋಧವೂ ಇಲ್ಲ. "ಆ ದೇವನು ಪ್ರಕಾಶ

ಗಳೆಲ್ಲಕ್ಕೂ ಹೆಚ್ಚಿನ ಪ್ರಕಾಶವು" "ಅಲ್ಲಿ ಸೂರ್ಯನಾಗಲೀ ಚಂದ್ರನಕ್ಷತ್ರಗಳಾಗಲಿ ಹೋಗುವಂತಿಲ್ಲ" ಎಂಬಲ್ಲಿ ಶಿವನನ್ನೇ ಪರಮತೇಜಸ್ಸೆಂದು ಹೇಳಲಾಗಿದೆ. "ಎಲ್ಲವೂ ರುದ್ರನೇ" ಎಂಬಲ್ಲಿ ಅವನನ್ನೇ ಸರ್ವಾತ್ಮಕನೆಂದು ಹೇಳಿದೆ. "ಅಗ್ನಿಯಲ್ಲಿ ಯಾವ ರುದ್ರನಿರುವನೋ" ಎಂಬ ಶ್ರುತಿಯಲ್ಲಿ ಅವನೇ ಸರ್ವಾಂತರ್ಯಾಮಿ ಎಂದು ಹೇಳಿದೆ. ಆದ್ದರಿಂದ ಎಲ್ಲಾ ಭೂತಗಳಿಗಾಶ್ರಯನೂ ಸರ್ವಾತ್ಮಕನೂ ಆದ್ದರಿಂದ ಶಿವನೇ ಸರ್ವನೆನಿಸುವುದು ಯುಕ್ತವಾಗಿದೆ. ಲೋಕದಲ್ಲೂ ವೇದದಲ್ಲೂ ತೇಜಶ್ಶಬ್ದವನ್ನು ಬೆಂಕಿಯಲ್ಲಿಯೇ ಪ್ರಯೋಗಿಸಿರುವುದರಿಂದಲೂ "ಹಿರಣ್ಮಯವಾದ ಹೃದಯಕಮಲದಲ್ಲಿ ಶುಭ್ರವೂ ಶುದ್ಧವೂ ಆದ ನಿಷ್ಕಲಶಿವನಿದ್ದಾನೆ. ಅವನನ್ನು ಪರಂಜ್ಯೋತಿ ಎಂದು ಅನುಭವಿಗಳು ಹೇಳುತ್ತಾರೆ" ಎಂಬಲ್ಲಿ ಶಿವನನ್ನೇ ತೇಜಸ್ಸೆಂದು ಹೇಳಿರುವುದರಿಂದಲೂ, "ಪ್ರಾಣಸ್ತೇಜಸಿ" ಎಂಬಲ್ಲಿ ಜೀವನೊಡಗೂಡಿದ ಪ್ರಾಣವು ತೇಜಸ್ಸಿನಲ್ಲಿ ಬೆರೆಯುವುದೆಂದು ತಿಳಿದುಬರುವುದರಿಂದಲೂ ಪ್ರಾಣ ಮತ್ತು ಜೀವಗಳೆರಡಕ್ಕೂ ಆಶ್ರಯವಾದ ತೇಜಸ್ಸೆಂದರೆ ಬೆಂಕಿಯೇ ಅಥವಾ ಪರಮಾತ್ಮನೇ ಎಂದು ಸಂಶಯ ಬರುತ್ತದೆ. ತೇಜಶ್ಶಬ್ದವು ಭೂತಾಗ್ನಿಯಲ್ಲಿಯೇ ರೂಢವಾಗಿದೆ. ಈ ರೂಢ್ಯರ್ಥವನ್ನು ಬಿಡಲಿಕ್ಕೆ ಯಾವ ಪ್ರಮಾಣವೂ ಇಲ್ಲ. "ಅಗ್ನಿಯೇ ದೇವತೆಗಳೆಲ್ಲರಿಗೂ ಮೊದಲನೆಯವನು" "ಹೀಗೆ ತಿಳಿದವನು ಅಗ್ನಿಹೋತ್ರವನ್ನಾಚರಿಸಬೇಕು" ಎಂಬಲ್ಲಿ ಎಲ್ಲಾ ದೇವತೆಗಳಿಗೂ ಪ್ರಧಾನವಾದ್ದರಿಂದ ಅಗ್ನಿಹೋತ್ರವನ್ನು ಬದುಕಿರುವವರೆಗೂ ವಿದ್ವಾಂಸರು ಮತ್ತು ಇತರರು ಎಲ್ಲರೂ ಆಚರಿಸಬೇಕು ಎಂದು ಹೇಳಿರುವುದರಿಂದಲೂ, ಉಪಾಸ್ಯವಸ್ತುವು ಉಪಾಸಕರೆಲ್ಲರಿಗೂ ಒಂದೇ ಆಗಿದೆ ಎಂಬುದು "ತತ್ತ್ವಮಸಿ" ಮುಂತಾದ ವೇದಾಂತದಲ್ಲಿ ವ್ಯವಸ್ಥೆಯಾಗಿರುವುದರಿಂದಲೂ ಬೆಂಕಿ ಎನಿಸಿದ ತೇಜಸ್ಸಿನಲ್ಲಿ ಜೀವರು ಬೆರೆಯಲಿಕ್ಕೆ ಯಾವ ಅಡ್ಡಿಯೂ ಇಲ್ಲವೆಂದು ಆಕ್ಷೇಪ ಬಂದರೆ ಸಮಾಧಾನವನ್ನು ಇಲ್ಲಿ ತಿಳಿಸಲಾಗುವುದು. "ಪ್ರಜ್ಞಾನವೇ ಬ್ರಹ್ಮ." "ಈ ಆತ್ಮನೇ ಬ್ರಹ್ಮ" ಎಂದು ಮುಂತಾಗಿ ಎಲ್ಲ ವೇದಾಂತಗಳಲ್ಲೂ ಪರಶಿವನನ್ನು ಉಪಾಸನ ಮಾಡುವವರೆಲ್ಲರೂ ಪರಶಿವನೇ ಆಗುವರೆಂದು ಹೇಳಿರುವುದರಿಂದ "ಅಲ್ಲಿಗೆ ಸೂರ್ಯ ಚಂದ್ರರಾಗಲೀ ಮಿಂಚಾಗಲಿ ಪ್ರವೇಶಿಸಲಿಕ್ಕೇ ಆಗದವ್ಮೇಲೆ ಈ ಅಗ್ನಿ ಹೇಗೆ ಪ್ರವೇಶಿಸಿಯಾನು? ಅವನನ್ನು ಅನುಸರಿಸಿಕೊಂಡೇ ಎಲ್ಲವೂ ಬೆಳಗುತ್ತವೆ" ಎಂಬಲ್ಲಿ ನಿರತಿಶಯವಾದ ತೇಜಸ್ಸೆಂದರೆ ಪರಶಿವಬ್ರಹ್ಮವೆಂದೇ ತಿಳಿದುಬರುವುದರಿಂದಲೂ, ಜಡವಾದ ಬೆಂಕಿಯಲ್ಲಿ ಚೇತನಜೀವನ ಲಯವು ಸಂಭವಿಸದಿರುವುದರಿಂದಲೂ ಶ್ರುತಿಯಲ್ಲಿ ಹೇಳಿದ ತೇಜಸ್ಸು ಪರಶಿವಬ್ರಹ್ಮದಲ್ಲಿಯೇ ಅನ್ವಯಿಸುತ್ತದೆ.

**ನನು ತೇಜಃಪ್ರಭೃತಿಷ್ವೇಕೈಕಸ್ಮಿನ್ ಕ್ರಮೇಣ ಸಂಪತ್ತಾವಪಿ ಪೃಥಿವೀಮಯ ಇತ್ಯಾದಿಕಾ ಶ್ರುತಿಃ ಕಥಮುಪಪದ್ಯತೇ? ಅತ ಆಹ, ನೈಕಸ್ಮಿನ್ ದರ್ಶಯತೋ ಹಿ ॥ ೬ ॥ ನೈಕಸ್ಮಿನ್ ಏಕೈಕಸ್ಯ ಕಾರ್ಯಾಕ್ಷಮತ್ವಾತ್ ದರ್ಶಯತೋಽಕ್ಷಮತ್ವಂ ಶ್ರುತಿಸ್ಮೃತೀ. "ಅನೇನ**

ಜೀವೇನಾತ್ಮನಾನುಪ್ರವಿಶ್ಯ ನಾಮರೂಪೇ ವ್ಯಾಕರವಾಣಿ. ತಾಸಾಂ ತ್ರಿವೃತಮೇಕೈಕಾಂ ಕರವಾಣಿ" ಇತಿ ನಾಮರೂಪವ್ಯಾಕರಣಯೋಗ್ಯತಾಯಾಃ ತ್ರಿವೃತ್ಕರಣಮುಪದಿಶ್ಯತೇ."ನಾನಾವೀರ್ಯಾಃ ಪೃಥಗ್ಭೂತಾಃ ತತಸ್ತೇ ಸಂಹತಿಂ ವಿನಾ। ನಾಶಕ್ನುವನ್ ಪ್ರಜಾಃ ಸ್ರಷ್ಟುಂ ಅಸಮಾಗತ್ಯ ಕೃತ್ಸ್ನಶಃ। ಸಮೇತ್ಯಾನ್ಯೋನ್ಯಸಂಯೋಗಂ ಪರಸ್ಪರಸಮಾಶ್ರಯಾಃ। ಮಹದಾದ್ಯಾ ವಿಶೇಷಾಂತಾ ಹ್ಯಂಡಮುತ್ಪಾದಯಂತಿ ತೇ॥" ಇತಿ. ಅತಃ "ಪ್ರಾಣಸ್ತೇಜಸಿ" ಇತಿ ತೇಜಶ್ಶಬ್ದೇನ ಸರ್ವಭೂತಾಂತರಸಂಸ್ಪೃಷ್ಟಂ ಪರಶಿವಾತ್ಮಕತೇಜ ಏವಾಭಿಧೀಯತೇ.

ತೇಜಸ್ಸು ಮೊದಲಾದ ಭೂತಗಳಲ್ಲೊಂದೊಂದರಲ್ಲೂ ಮನಸ್ಸು ಕ್ರಮವಾಗಿ ಸೇರುವುದಾದರೂ ಅದನ್ನು ಕೇವಲ ಪೃಥಿವೀಮಯವೆಂದು ಶ್ರುತಿಯಲ್ಲಿ ಹೇಳಿದ್ದು ಹೇಗೆ ಹೊಂದುತ್ತದೆ ಎಂಬುದಕ್ಕೆ ಸಮಾಧಾನವನ್ನು ಹೇಳುತ್ತಾನೆ. ಒಂದೊಂದು ಭೂತವೇ ಕಾರ್ಯವನ್ನು ನಡೆಸಬಹುದಾದ್ದರಿಂದ ಅದರದರ ಸಾಮರ್ಥ್ಯವನ್ನು ಶ್ರುತಿಸ್ಮೃತಿಗಳೆರಡೂ ತಿಳಿಸುತ್ತವೆ. "ಈ ಜೀವನೊಳಗೆ ಪ್ರವೇಶಿಸಿ ನಾಮರೂಪಗಳನ್ನು ವಿಭಾಗಿಸುವೆನು" "ಅವುಗಳಲ್ಲಿ ಒಂದೊಂದನ್ನೂ ಮೂರುಬಗೆಯಾಗಿ ಮಾಡುವೆನು" ಇಲ್ಲಿ ನಾಮರೂಪಗಳ ವಿಭಾಗಕ್ಕೆ ತ್ರಿವೃತ್ಕರಣವನ್ನು ಆವಶ್ಯಕವೆಂದು ತಿಳಿಸಲಾಗಿದೆ. "ಅನೇಕವಿಧವಾದ ಶಕ್ತಿಗಳನ್ನು ಹೊಂದಿರುವ ಈ ಭೂತಗಳು ಪರಸ್ಪರವಾಗಿ ಕೂಡದೆ ಸೃಷ್ಟಿಯನ್ನು ಮಾಡಲಾರವಾದ್ದರಿಂದ ಅವು ಒಂದಕೊಂದು ಸೇರಿಯೇ ಮಹತ್ತತ್ತ್ವದಿಂದ ಪೃಥಿವಿಯವರೆಗೂ ಸೃಷ್ಟಿಯನ್ನುಮಾಡುತ್ತವೆ" ಆದ್ದರಿಂದ ಪ್ರಾಣವು ತೇಜಸ್ಸಿನಲ್ಲಿ ಬೆರೆಯುವುದೆಂಬಲ್ಲಿ ತೇಜಶ್ಶಬ್ದವು ಎಲ್ಲಾ ಭೂತಗಳೊಳಗೆ ಅಂತರ್ಯಾಮಿಯಾಗಿ ಸೇರಿರುವ ಪರಶಿವನೆಂಬ ತೇಜಸ್ಸನ್ನೇ ತಿಳಿಸುತ್ತದೆ.

ನನು ತೇಜಶ್ಶಬ್ದಸ್ಯ ಪರಶಿವಬ್ರಹ್ಮಪರತ್ವಮಸ್ತು; ತಥಾಪ್ಯುತ್ಕ್ರಾಂತಿಸಮಯೇ ಮೂರ್ತಾಮೂರ್ತಶಿವತತ್ತ್ವೋಪಾಸಕಾನಾಂ ಪುಣ್ಯಾಪುಣ್ಯಕರ್ಮಿಣಾಂ ಚ ಕೋ ಭೇದಃ ಇತ್ಯಾಶಂಕಾಯಾಮಧಿಕರಣಾಂತರಮಾಹ. ಆಸೃತ್ಯುಪಕ್ರಮಾಧಿಕರಣಂ ॥ ೫ ॥ ಸಮಾನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ॥ ೭ ॥ ಇಯಂ ಮರಣಾವಸ್ಥಾ ಆಸೃತ್ಯುಪಕ್ರಮಾತ್ ಸೃತ್ಯುಪಕ್ರಮಂ ವರ್ಜಯಿತ್ವಾ ಸಮಾನಾ ನಿರವಯವಷಟ್ಸ್ಥಲಪರಶಿವಬ್ರಹ್ಮಸಾಕ್ಷಾತ್ಕಾರವತಾಂ ಸಾವಯವಶಿವತತ್ತ್ವೋಪಾಸಕಾನಾಂ ಕರ್ಮಿಣಾಂ ಚ ತುಲ್ಯಾ. ಸೃತ್ಯುಪಕ್ರಮೋ ನಾಮ ಹೃತ್ಪುಂಡರೀಕಸ್ಥಸ್ಯ ಪಂಚಮಹಾಭೂತಪ್ರಾಣೇಂದ್ರಿಯಮನಃಪ್ರಭೃತಿಚತುರಂಗಬಲಪರಿವೃತಸ್ಯ ಜೀವಾಖ್ಯಸ್ಯ ರಾಜ್ಞಃ ಸ್ವರ್ಗನರಕಶಿವಲೋಕಾದಿರಾಷ್ಟ್ರದರ್ಶನಾರ್ಥಂ ನಾಡೀದ್ವಾರಾ ದೇಹಾಖ್ಯಾತ್ಪುರಾದ್ಬಹಿರ್ನಿರ್ಗಮನರೂಪಾ ಉತ್ಕ್ರಾಂತಿಃ. ಏತಾಮುತ್ಕ್ರಾಂತಿಂ ವಿನಾ ಜೀವ

ಸ್ಯೇಂದ್ರಿಯಾದಿಸಕಲಪರಿವಾರಮೇಳನರೂಪಮರಣಾವಸ್ಥಾ ಲಿಂಗಶರೀರಮಿವ ಶಿವಜ್ಞಾನಿನಾಂ ತುಲ್ಯೇತ್ಯುಚ್ಯತೇ. ಹೃತ್ಪುಂಡರೀಕೇ ಮಿಳಿತಂ ಶಿವಜ್ಞಾನಿನಾಂ ಲಿಂಗಶರೀರಮನುಪೋಷ್ಯ ಲೋಕಾಂತರಮಗತ್ವಾ ಹೃತ್ಪುಂಡರೀಕಾವಚ್ಛಿನ್ನೇ ಪರಶಿವಬ್ರಹ್ಮಣ್ಯೇವ ಅಮೃತತ್ವಂ ಮೋಕ್ಷಃ ಕಾರಣಪರಶಿವತತ್ತ್ವೇ ಲಯಃ ನ ಮಿಥ್ಯಾತ್ವಂ ಪ್ರಾಪ್ನೋತಿ. "ಲೀನಂ ಗಮಯತೀತಿ ಲಿಂಗಂ" ಇತಿ ವ್ಯುತ್ಪತ್ತ್ಯಾ ಪರಮಾತ್ಮನಿ ಶಿವೇ ಲೀನಂ ತದಂತರ್ಲೀನತ್ವಂ ಗಮಯತಿ ಪ್ರಾಪ್ನೋತೀತಿ ಲಿಂಗಂ. ಶೀರ್ಯತ ಇತಿ ಶರೀರಂ. ಲಿಂಗಂ ಚ ತತ್ ಶರೀರಂ ಚ ಲಿಂಗಶರೀರಂ. ಏತಲ್ಲಿಂಗ ಶರೀರಸ್ಯ ಬ್ರಹ್ಮಣಿ ವಿಲಯೇ ಸತಿ ತದವಚ್ಛಿನ್ನಾಣುಸ್ವರೂಪೋ ಜೀವಸ್ತು ಶಿವತತ್ತ್ವಮಯೋ ಭವತೀತಿ ಭಾವಃ. ತಥಾಚ "ತೇಜಃ ಪರಸ್ಯಾಂ ದೇವತಾಯಾಂ" ಇತಿ ಶ್ರುತಿಃ ಶಿವಜ್ಞಾನಿಮಾತ್ರವಿಷಯಾ. ತತಃ ಪೂರ್ವೋಕ್ತಲಿಂಗಶರೀರವಿಲಯಪೂರ್ವಕಜೀವೋತ್ಕ್ರಾಂತಿವಿಧಾಯಕಶ್ರುತಿಸ್ಸರ್ವಸಾಧಾರಣೀತಿ ಸೂಕ್ಷ್ಮಾರ್ಥಃ. ಇಯಮುತ್ಕ್ರಾಂತಿಃ ಕಿಂ ವಿದ್ವದವಿದುಷೋಸ್ಸಮಾನಾ ಉತ ಅವಿದುಷ ಏವೇತಿ ಸಂಶಯಃ. ಅವಿದುಷ ಏವೇತಿ ಪ್ರಾಪ್ತಂ. ಕುತಃ ವಿದುಷೋಽತ್ರೈವಾಮೃತತ್ವವಚನಾದುತ್ಕ್ರಾಂತ್ಯಭಾವಾತ್ ವಿದುಷೋ ಹ್ಯತ್ರೈವಾಮೃತತ್ವಂ ಶ್ರಾವ್ಯತೇ. "ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ। ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ॥" ಇತ್ಯೇವಂ ಪ್ರಾಪ್ತೇಽಭಿಧೀಯತೇ ಸಮಾನಾ ಚಾಸೃತ್ಯುಪಕ್ರಮಾದಿತಿ. ವಿದುಷಃ ಉಪಸೃತ್ಯುಪಕ್ರಮಾತ್ ಉತ್ಕ್ರಾಂತಿಸ್ಸಮಾನಾ. ಅಸೃತ್ಯುಪಕ್ರಮಾತ್ ಆಗತ್ಯುಪಕ್ರಮಾತ್ ನಾಡೀಪ್ರವೇಶನಾತ್ಪ್ರಾಕ್ ಇತ್ಯರ್ಥಃ. ವಿದುಷೋಽಪಿ ಹಿ ನಾಡೀವಿಶೇಷೇಣೋತ್ಕ್ರಮ್ಯ ಗತಿಃ ಶ್ರೂಯತೇ. "ಶತಂ ಚೈಕಾ ಚ ಹೃದಯಸ್ಯ ನಾಡ್ಯಃ ತಾಸಾಂ ಮೂರ್ಧಾನಮಭಿನಿಸ್ಸೃತೈಕಾ। ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಙ್ಙನ್ಯಾ ಉತ್ಕ್ರಮಣೇ ಭವಂತಿ॥" ಇತಿ ನಾಡೀವಿಶೇಷೇಣ ಗತಿಶ್ರವಣಾತ್ ವಿದುಷೋಽಪ್ಯುತ್ಕ್ರಾಂತಿರವರ್ಜನೀಯಾ. ಸಾ ಚ ನಾಡೀಪ್ರವೇಶಾತ್ಪ್ರಾಕ್ ವಿಶೇಷಾಶ್ರವಣಾತ್ಸಮಾನಾ. ತತ್ಪ್ರವೇಶದಶಾಯಾಂ ವಿಶೇಷಃ ಶ್ರೂಯತೇ. "ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತಿ ಚಕ್ಷುಷೋ ವಾ ಮೂರ್ಧ್ನೋ ವಾ ಅನ್ಯೇಭ್ಯೋ ವಾ ಶರೀರದೇಶೇಭ್ಯಃ" ಇತ್ಯಸ್ಯಾಃ "ಶತಂ ಚೈಕಾ ಚ ಹೃದಯಸ್ಯ ನಾಡ್ಯಃ" ಇತ್ಯನಯಾ ಶ್ರುತ್ಯಾ ಐಕಾರ್ಥ್ಯಾತ್ ಮೂರ್ಧ್ನೋ ನಿಷ್ಕ್ರಮಣಂ ವಿದ್ವದ್ವಿಷಯಂ, ಇತರದವಿದ್ವದ್ವಿಷಯಂ. ಯದುಕ್ತಂ ವಿದುಷೋಽತ್ರೈವಾಮೃತತ್ವಂ ಶ್ರಾವ್ಯತ ಇತಿ ತತ್ರೋಚ್ಯತೇ "ಅಮೃ

ತತ್ವಂ ಚಾನುಪ್ರೋಷ್ಯ" ಇತಿ. ಚಶಬ್ದೋಽವಧಾರಣೇ. ಅನುಪೋಷ್ಯ ಶರೀರೇಂದ್ರಿಯಾದಿಸಂಬಂಧಮದಗ್ಧ್ವೈವ ತದಪ್ಯೃತತ್ವಂ ಉತ್ತರಪೂರ್ವಾಘಯೋರಶ್ಲೇಷವಿನಾಶರೂಪಂ ನಹಿ ಪ್ರಾಪ್ಯತೇ. ತದುಚ್ಯತೇ "ಯದಾ ಸರ್ವೇ ಪ್ರಮುಚ್ಯಂತೇ ಕಾಮಾಃ" ಇತ್ಯಾದಿಕಯಾ ಶ್ರುತ್ಯೇತ್ಯರ್ಥಃ. "ಅತ್ರ ಬ್ರಹ್ಮ ಸಮಶ್ನುತೇ" ಇತಿ ತು ನಿರವಯವಪರಶಿವಬ್ರಹ್ಮೋಪಾಸಕವಿದ್ವದುತ್ಕ್ರಾಂತಿವಿಷಯಂ; ತದುಪಾಸನವೇಳಾಯಾಂ ಯೋಬ್ರಹ್ಮಾನುಭವಸ್ತದ್ವಿಷಯಮಪ್ಯುಪದಿಶತಿ. ಪುಣ್ಯಾಪುಣ್ಯಕರ್ಮಿಣಾಂ ಸರ್ವದುಃಖಭೋಗಾಶ್ರಯಸ್ವರ್ಗನರಕಲೋಕಪ್ರಾಪ್ತಿಃ, ಮೂರ್ತಬ್ರಹ್ಮೋಪಾಸಕಾನಾಂ ಲೌಕಿಕನಾಮಿವ ಲಿಂಗಶರೀರೇಣ ಸಹೋತ್ಕ್ರಾಂತಿಸತ್ವೇಽಪಿ ನಿರತಿಶಯನಿತ್ಯಾಮಂಗಳಾಲಯಸಾಲೋಕ್ಯಾದಿ ತ್ರಿಪಾದ್ವಿಭೂತಿಃ ಲಭ್ಯತೇ.

ತೇಜಶ್ಶಬ್ದವು ಪರಶಿವಬ್ರಹ್ಮವನ್ನೇ ತಿಳಿಸಲಿ. ಆದರೂ ಉತ್ಕ್ರಮಣಕಾಲದಲ್ಲಿ ಮೂರ್ತಶಿವನನ್ನೂ ಅಮೂರ್ತಪರಮಶಿವನನ್ನೂ ಉಪಾಸನಮಾಡಿದ ಪುಣ್ಯಾಪಾಪಕರ್ಮಿಗಳಿಗೆ ಪರಸ್ಪರಭೇದವೇನೆಂದಾಶಂಕಿಸಿ ತಿಳಿಸುತ್ತಾನೆ. ನಿರವಯವಪರಶಿವಬ್ರಹ್ಮವನ್ನು ಸಾಕ್ಷಾತ್ಕರಿಸಿದವರಿಗೂ, ಮೂರ್ತೋಪಾಸಕರಿಗೂ, ಕರ್ಮಿಗಳಿಗೂ ಮರಣಾವಸ್ಥೆಯು ಸಮಾನವೇ ಆಗಿದೆ ಹೃದಯಕಮಲದಲ್ಲಿ ಪಂಚಮಹಾಭೂತಗಳು ಪ್ರಾಣಗಳು ಇಂದ್ರಿಯಗಳು ಮನಸ್ಸು ಇವೇ ಮೊದಲಾದ ಚತುರಂಗ ಸೈನ್ಯದೊಡಗೂಡಿದ ಜೀವರಾಜನು ಸ್ವರ್ಗ ನರಕ ಶಿವಲೋಕ ಮೊದಲಾದ ರಾಷ್ಟ್ರಗಳನ್ನು ನೋಡಲಿಕ್ಕಾಗಿ ನಾಡಿಯ ಮೂಲಕ ದೇಹವೆಂಬ ನಗರದಿಂದ ಹೊರಗೆ ಹೊರಡುವುದೇ ಸೃತಿ ಅಥವಾ ಉತ್ಕ್ರಾಂತಿ ಎನಿಸುತ್ತದೆ. ಈಬಗೆಯ ಉತ್ಕ್ರಮಣವನ್ನು ಬಿಟ್ಟರೆ ಜೀವನಿಗೆ ಇಂದ್ರಿಯಾದಿ ಪರಿವಾರದೊಡಗೂಡುವಿಕೆಯೆಂಬ ಮರಣಾವಸ್ಥೆಯು ಲಿಂಗಶರೀರದಂತೆ ಶಿವಯೋಗಿಗಳಿಗೂ ಇತರರಿಗೂ ಸಮಾನವೇ ಆಗಿದೆ. ಹೃದಯಕಮಲದಲ್ಲಿಯೇ ಬೆರೆತಿರುವ ಲಿಂಗಶರೀರವನ್ನು ಅನುಸರಿಸಿಕೊಂಡು ಶಿವಯೋಗಿಗಳು ಬೇರೆ ಲೋಕಕ್ಕೆ ಹೋಗದೆ ಇಲ್ಲಿಯೇ ಹೃದಯಕಮಲದಲ್ಲಿಯೇ ನೆಲಸಿರುವ ಪರಶಿವಬ್ರಹ್ಮದಲ್ಲಿಯೇ ಬೆರೆಯುವುದೇ ಅಮೃತ ಅಥವಾ ಮೋಕ್ಷವೆನಿಸುತ್ತದೆ. ಹೀಗೆ ಕಾರಣವೆನಿಸಿದ ಪರಶಿವತತ್ತ್ವದಲ್ಲಿ ಮುಕ್ತನು ಬೆರೆಯುವುದು ಮಿಥ್ಯೆಎನಿಸಲಾರದು. "ಲೀನವಾಗುವುದೇ ಲಿಂಗವೆನಿಸುತ್ತದೆ" ಎಂಬ ವ್ಯುತ್ಪತ್ತಿಯಿಂದ ಲಿಂಗಪದವು ಮುಕ್ತಜೀವನನ್ನು ಪರಶಿವಬ್ರಹ್ಮದಲ್ಲಿ ಲಯವಾಗುವನೆಂದು ತಿಳಿಸುತ್ತದೆ. ಅಲ್ಲಿಗೆ ಲಿಂಗಶರೀರವೆಂದರೆ ಬೇರೊಂದುವಸ್ತುವಿನಲ್ಲಿ ಬೆರೆಯುವುದರಿಂದ ತಾನು ನಶಿಸುವುದೆಂದು ಅರ್ಥವಾಗುತ್ತದೆ. ಲಿಂಗವೆಂದರೆ ಬೇರೆಕಡೆ ತಾನು ಸೇರುವಿಕೆ. ಶರೀರವೆಂದರೆ ತಾನೇ ನಶಿಸುವಿಕೆ. ಇಂತಹ ಲಿಂಗಶರೀರವು ಪರಬ್ರಹ್ಮದಲ್ಲಿ ಲಯವಾದರೆ ಅದರೊಳಗಿದ್ದ ಅಣುಜೀವನು ತನ್ನ ಮೂಲವೆನಿಸಿದ ಶಿವನೇ ಆಗುತ್ತಾನೆ. ಆದ್ದರಿಂದ ತೇಜಸ್ಸು ಪರದೇವತೆಯಲ್ಲಿ ಬೆರೆಯುವುದೆಂಬ

ಶ್ರುತಿಯು ಶಿವಯೋಗಿಗೆ ಮಾತ್ರವೇ ಅನ್ವಯಿಸುತ್ತದೆ. ಆದ್ದರಿಂದ ಹಿಂದೆಹೇಳಿದಂತೆ ಲಿಂಗಶರೀರದೊಡನೆ ಜೀವನ ಉತ್ಕ್ರಮಣವನ್ನು ತಿಳಿಸುವ ಶ್ರುತಿಯು ಎಲ್ಲರಿಗೂ ಸಾಮಾನ್ಯವಾಗಿ ಅನ್ವಯಿಸುತ್ತದೆ. ಈ ಉತ್ಕ್ರಮಣವು ವಿದ್ವಾಂಸರಿಗೂ ಇತರರಿಗೂ ಸಮಾನವೇ? ಅಥವಾ ವಿದ್ವಾಂಸರಲ್ಲದವರಿಗೆ ಮಾತ್ರವೇ ಅನ್ವಯಿಸುತ್ತದೆಯೆ? ಎಂಬ ಸಂಶಯಬಂದರೆ ವಿದ್ವಾಂಸರಲ್ಲದವರಿಗೆ ಮಾತ್ರವೇ ಹೀಗೆ ಉತ್ಕ್ರಮಣವೆಂದು ಪೂರ್ವಪಕ್ಷಿಯು ಹೇಳುತ್ತಾನೆ. ವಿದ್ವಾಂಸನು ಇಲ್ಲಿಯೇ ಅಮೃತನಾಗುವುದರಿಂದ ಅವನಿಗೆ ಉತ್ಕ್ರಮಣವೇ ಸಂಭವಿಸುವಂತಿಲ್ಲ. "ಎಲ್ಲಾ ಆಶೆಗಳೂ ತೊಲಗಿದಾಗ ಮಾನವನು ಇಲ್ಲಿಯೇ ಅಮೃತನಾಗುತ್ತಾನೆ. ಇಲ್ಲಿಯೇ ಬ್ರಹ್ಮವನ್ನು ಹೊಂದುತ್ತಾನೆ" ಎಂಬ ಶ್ರುತಿಯೂ ಇದನ್ನೇ ತಿಳಿಸುತ್ತದೆ. ಇದಕ್ಕೆ ಸೂತ್ರವು ಸಮಾಧಾನವನ್ನು ಹೇಳುತ್ತದೆ. ಹೊರಡುವಕಾಲ ಸಮೀಪಿಸುವವರೆಗೂ ವಿದ್ವಾಂಸನಿಗೂ ಕರ್ಮಿಗೂ ಉತ್ಕ್ರಮಣವು ಸಮಾನವೇ ಆಗಿರುವುದು. ವಿದ್ವಾಂಸನು ಇಲ್ಲಿಂದ ಬ್ರಹ್ಮನಾಡಿಯಿಂದಲೇ ಹೊರಡುವನೆಂದು ಶ್ರುತಿಯಲ್ಲಿ ಹೇಳಿದೆ. "ಹೃದಯದಲ್ಲಿ ನೂರೊಂದು ನಾಡಿಗಳಿವೆ. ಅವುಗಳಲ್ಲಿ ಒಂದು ಮಾತ್ರ ತಲೆಯಕಡೆ ಹೊರಟಿದೆ. ಅದರಲ್ಲಿ ಹೊರಟ ಜೀವನು ಅಮೃತನಾಗುತ್ತಾನೆ. ಉಳಿದ ನಾಡಿಗಳಲ್ಲಿ ಹೊರಟವನು ಅಲೆಯುತ್ತಾನೆ" ಹೀಗೆ ಒಂದುನಾಡಿಯಿಂದ ಗಮನವನ್ನು ಹೇಳಿರುವುದರಿಂದ ವಿದ್ವಾಂಸನಿಗೂ ಉತ್ಕ್ರಮಣವಿದ್ದೇ ಇರುವುದು. ಈನಾಡಿಯನ್ನು ಪ್ರವೇಶಿಸುವುದಕ್ಕೆ ಮೊದಲು ಯಾವ ವಿಶೇಷವೂ ಇಲ್ಲದ್ದರಿಂದ ಉತ್ಕ್ರಮಣವು ಎಲ್ಲರಿಗೂ ಸಮಾನವೇ ಆಗಿದೆ. ನಾಡಿಯನ್ನು ಪ್ರವೇಶಿಸುವಕಾಲದಲ್ಲಿ ಮಾತ್ರ ವಿಶೇಷವಿರುತ್ತದೆ. "ಕಣ್ಣುಗಳಿಂದಲೂ ತಲೆಯಿಂದಲೂ ಶರೀರದ ಬೇರೆಕಡೆಗಳಿಂದಲೊ ಈ ಪ್ರಕಾಶದೊಡನೆ ಆತ್ಮನು ಹೊರಡುತ್ತಾನೆ."ಎಂಬೀ ಶ್ರುತಿಗೂ "ಹೃದಯದಲ್ಲಿ ನೂರೊಂದು ನಾಡಿಗಳಿವೆ" ಎಂದು ಹೇಳುವ ಶ್ರುತಿಗೂ ಸಮಾನವಾದ ಅರ್ಥವೇ ಇರುವುದರಿಂದ ವಿದ್ವಾಂಸರು ತಲೆಯಿಂದ ಹೊರಡುವರು. ಬೇರೆಯವರು ಇತರಕಡೆಗಳಿಂದ ಹೊರಡುವರೆಂದು ತಿಳಿಯಲಾಗಿದೆ. "ವಿದ್ವಾಂಸನು ಇಲ್ಲಿಯೇ ಅಮೃತನಾಗುತ್ತಾನೆ" ಎಂಬುದರ ಬಗ್ಗೆ ಸೂತ್ರದಲ್ಲಿ ತಿಳಿಸಲಾಗುವುದು. ಇದಕ್ಕೆ "ಅಮೃತತ್ವಂ ಚಾನುಪೋಷ್ಯ" ಎಂಬ ಸೂತ್ರಖಂಡವು ಸಮಾಧಾನಮಾಡುತ್ತದೆ. ಚಶಬ್ದವು ನಿಶ್ಚಯವನ್ನು ತಿಳಿಸುತ್ತದೆ. ಶರೀರೇಂದ್ರಿಯಗಳಿಗೆ ಅಂಟದಂತೆ ಇರುವಿಕೆಯೇ ಅಮೃತವೆನಿಸುತ್ತದೆ. ಇದರಿಂದ ಮುಂದಿನ ಪಾಪವು ಅಂಟದೆ ಹಿಂದಿನದೂ ನಷ್ಟವಾಗುತ್ತದೆ ಎಂಬುದೇ "ಅಮೃತೋ ಭವತಿ" ಎಂಬುದರ ಅರ್ಥವಾಗುತ್ತದೆ. ಅಲ್ಲಿಗೆ "ಅತ್ರ ಬ್ರಹ್ಮ ಸಮಶ್ನುತೇ" ಎಂಬ ವಾಕ್ಯವು ಅಮೂರ್ತಪರಶಿವನನ್ನು ಉಪಾಸನಮಾಡುವ ವಿದ್ವಾಂಸರ ಉತ್ಕ್ರಮಣಕ್ಕೆ ಅನ್ವಯಿಸುತ್ತದೆ; ಹಾಗೆಯೇ ಉಪಾಸನಕಾಲದಲ್ಲಿ ಯಾವ ಶಿವಾನುಭವವು ದೊರಕುವುದೋ ಅದಕ್ಕೂ ಅದು ಅನ್ವಯಿಸುತ್ತದೆ. ಪುಣ್ಯಪಾಪಕರ್ಮಗಳಿಗೆ ಸುಖದುಃಖಭೋಗಗಳಿಗಾಶ್ರಯವಾದ ಸ್ವರ್ಗನರಕಲೋಕಗಳೇ ಫಲವಾಗಿ ದೊರಕುತ್ತವೆ. ಮೂರ್ತಶಿವ

ನನ್ನು ಉಪಾಸನಮಾಡುವವರಿಗೂ ಲೋಕದ ಜನರಂತೆಯೇ ಲಿಂಗಶರೀರದೊಡನೆ ಉತ್ಕ್ರಮಣವೇ ಇದ್ದರೂ ನಿರತಿಶಯನಿತ್ಯಮಂಗಳಗಳಿಗಾಶ್ರಯವಾದ ಸಾಲೋಕ್ಯ ಸಾಮೀಪ್ಯ ಸಾರೂಪ್ಯವೆಂಬ ಕಲ್ಯಾಣವಿಭೂತಿಯು ದೊರಕುತ್ತದೆ.

**ನನು "ತೇಜಃ ಪರಸ್ಯಾಂ ದೇವತಾಯಾಂ" ಇತಿ ಶ್ರುತಿರಪಿ ಪೂರ್ವಶ್ರುತಿವತ್ಸರ್ವಸಾಧಾರಣೇತ್ಯಾಶಂಕಾಯಾಮಾಹ. ತದಾಪೀತೇಸ್ಸಂಸಾರವ್ಯಪದೇಶಾತ್ ॥೮॥ ತಲ್ಲಿಂಗಶರೀರಂ ಆಪೀತೇಃ ಮೋಕ್ಷಾತ್ ಸ್ವಾಭಾವಿಕಜೀವಭಾವನಿವೃತ್ತಿಪೂರ್ವಕಶಿವತತ್ತ್ವಪ್ರಾಪ್ತಿಪರ್ಯಂತಂ ತಿಷ್ಠತಿ. ಕುತಃ? ಸಂಸಾರವ್ಯಪದೇಶಾತ್. ಮೂರ್ತಬ್ರಹ್ಮೋಪಾಸಕಾನಾಂ ಕರ್ಮಿಣಾಂ ಚ ಶಿವಲೋಕಸ್ವರ್ಗನರಕಾದಿಸಂಚಾರೋಪದೇಶಾದಿತ್ಯರ್ಥಃ. ತಥಾಚ "ತೇಜಃ ಪರಸ್ಯಾಂ ದೇವತಾಯಾಂ" ಇತಿ ಶ್ರುತೇಃ ನಿರವಯವ ಪರಶಿವಜ್ಞಾನಿಪರತ್ವಮಿತಿ ನಿಶ್ಚೀಯತೇ. ಕಿಂಚ "ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ" ಇತಿ. "ಅಶ್ವ ಇವ ರೋಮಾಣಿ ವಿಧೂಯ ಪಾಪಂ ಚಂದ್ರ ಇವ ರಾಹೋರ್ಮುಖಾತ್ಪ್ರಮುಚ್ಯ। ಧೂತ್ವಾ ಶರೀರಮಕೃತಂ ಕೃತಾತ್ಮಾ ಬ್ರಹ್ಮಲೋಕಮಭಿಸಂಭವಾಮಿ" ಇತಿ ಚ ನಿರವಯವಸಾವಯವಪರಶಿವತತ್ತ್ವೋಪಾಸಕಾನಾಂ ಸಾಯುಜ್ಯ ಸಾಲೋಕ್ಯಾದಿಮುಕ್ತಿಫಲತ್ವಮವಗಮ್ಯತೇ.**

"ತೇಜಸ್ಸು ಪರಾದೇವತೆಯಲ್ಲಿ ಬೆರೆಯುತ್ತದೆ" ಎಂಬ ಶ್ರುತಿಯು ಹಿಂದಿನ ಶ್ರುತಿಯಂತೆ ಎಲ್ಲರಿಗೂ ಅನ್ವಯಿಸುತ್ತದೆಯೇ? ಎಂದು ಆಶಂಕಿಸಿ ಸಮಾಧಾನ ಮಾಡುತ್ತಾನೆ. ಲಿಂಗಶರೀರವು ಮೋಕ್ಷದವರೆಗೂ ಇರುತ್ತದೆ. ಮೂರ್ತಶಿವನನ್ನು ಉಪಾಸನಮಾಡಿದವರೂ ಮತ್ತು ಕರ್ಮಿಗಳೂ ಶಿವಲೋಕಸ್ವರ್ಗನರಕಗಳಲ್ಲಿ ಸಂಚರಿಸಬೇಕಾಗಿರುವುದರಿಂದ ಅವರು ಜೀವಭಾವವನ್ನು ಕಳೆದುಕೊಂಡು ಶಿವಭಾವವನ್ನು ಹೊಂದುವವರೆಗೂ ಅವರಿಗೆ ಲಿಂಗಶರೀರವಿದ್ದೇ ಇರುತ್ತದೆ. ಆದ್ದರಿಂದ "ತೇಜಃ ಪರಸ್ಯಾಂ ದೇವತಾಯಾಂ" ಎಂಬ ಶ್ರುತಿಯು ಅಮೂರ್ತಶಿವನನ್ನು ತಿಳಿದು ಅವನೊಡನೆ ಸಮರಸವಾಗಿ ಬೆರೆತವರಿಗೆ ಅನ್ವಯಿಸುವುದೆಂದು ನಿಶ್ಚಯಿಸಲಾಗಿದೆ. "ಅವನಿಗೆ ಸಾಯುಜ್ಯಮುಕ್ತಿಗೂ ದೇಹವಿಯೋಗದ ಅವಧಿಯಷ್ಟೇ ವಿಳಂಬವಿರುವುದು" "ಕುದುರೆಯು ಮೈಯಿಂದ ರೋಮಗಳನ್ನು ಉದುರಿಸುವಂತೆ, ಚಂದ್ರನು ರಾಹುವಿನ ಮುಖದಿಂದ ಬಿಡುಗಡೆಹೊಂದುವಂತೆ ಶಿವಯೋಗಿಯು ಪಾಪವನ್ನು ಒದರಿ ಶರೀರವನ್ನು ಹೊರದೂಡಿ ಸಹಜಸಿದ್ಧವಾದ ಬ್ರಹ್ಮಲೋಕವನ್ನು ಹೊಂದುತ್ತಾನೆ" ಎಂಬಲ್ಲಿ ನಿರವಯವಶಿವತತ್ತ್ವವನ್ನು ಉಪಾಸನಮಾಡಿದವರಿಗೆ ಸಾಯುಜ್ಯವೂ, ಸಾವಯವಶಿವನನ್ನು ಉಪಾಸನಮಾಡಿದವರಿಗೆ ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಮುಕ್ತಿಗಳೂ ಉಂಟೆಂದು ಹೇಳಲಾಗಿದೆ.

**ಯದಿ ಲಿಂಗಶರೀರಂ ಮರಣಕಾಲೇ ಶರೀರಾದ್ಬಹಿರ್ನಿರ್ಗಚ್ಛತಿ**

ತರ್ಹಿ ಮೃತಶರೀರಸಮೀಪವರ್ತಿನಾಂ ಕಥಂ ನ ದೃಶ್ಯತ ಇತ್ಯಾ ಶಂಕ್ಯಾಹ. ಸೂಕ್ಷ್ಮಂ ಪ್ರಮಾಣತಶ್ಚ ತಥೋಪಲಬ್ಧೇಃ||೯|| ಲಿಂಗಶರೀರಂ ಸೂಕ್ಷ್ಮಂ ಇಂದ್ರಿಯಾಗ್ರಾಹ್ಯಂ ಪ್ರಮಾಣತಃ ಪರಿಮಾಣತೋಽಪಿ ಸೂಕ್ಷ್ಮಂ. ಕುತ? ತಥೋಪಲಬ್ಧೇಃ ಶ್ರುತಿಷು ಲಿಂಗಶರೀರಸ್ಯಾತೀಂದ್ರಿಯತ್ವಪ್ರತಿಪಾದನಾತ್. ತಚ್ಛರೀರಸ್ಯ ಸ್ಥೂಲಶರೀರಾದ್ಬಹಿರ್ನಿರ್ಗಮನೇಽಪಿ ಸರ್ವೇಷಾಮಗೋಚರತ್ವಮವಿರುದ್ಧಂ. ಕಿಂಚ ಕ್ಷೇತ್ರಜ್ಞಃ ಸ್ಥೂಲಶರೀರಾದುತ್ಕ್ರಾಂತೋಽಪಿಸೂಕ್ಷ್ಮಶರೀರಮನುವರ್ತತೇ. ಅನ್ಯಥಾ ಗತ್ಯನುಪಪತ್ತ್ಯಾ ಚಂದ್ರಸಂವಾದಾದ್ಯನುಪಪತ್ತಿಪ್ರಸಂಗಃ. ಶ್ರೂಯತೇ ಹಿ ಪರ್ಯಂಕವಿದ್ಯಾಯಾಂ ದೇವಯಾನೇ ಪಥಿ ವಿದುಷಶ್ಚಂದ್ರಮಸಃ ಸಂವಾದಃ. "ಯೇ ಹಿ ಚಾಸ್ಮಾಲ್ಲೋಕಾತ್ಪ್ರಯಾಂತಿ ಚಂದ್ರಮಸಮೇವ ತೇ ಸರ್ವೇ ಗಚ್ಛಂತಿ" ಇತ್ಯುಪಕ್ರಮ್ಯ "ಏತದ್ವೈ ಸ್ವರ್ಗಸ್ಯ ಲೋಕಸ್ಯ ದ್ವಾರಂ ತಂ ಯಃ ಪ್ರತ್ಯಾಹ ತಮತಿಸೃಜತೇ." "ಅಥ ಯ ಏನಂ ಪ್ರತ್ಯಾಹ ತಮಿಹ ವೃಷ್ಟಿರ್ಭೂತ್ವಾ ವರ್ಷತಿ. ಇಹ ಕೀಟೋ ವಾ ಪತಂಗೋ ವಾ ಶಕುನಿರ್ವಾ ಶಾರ್ದೂಲೋ ವಾ ಸಿಂಹೋ ವಾ ಮತ್ಸ್ಯೋ ವಾ ಪರಸ್ವಾನ್ವಾ ಪುರುಷೋ ವಾ. ಅನ್ಯೋ ವೈತೇಷು ಪ್ರತ್ಯಾಜಾಯತೇ. ಯಥಾಕರ್ಮ ಯಥಾವಿದ್ಯಂ ತಮಾಗತಂ ಪೃಚ್ಛತಿ "ಕೋಽಸಿ" ಇತಿ. ತಂ ಪ್ರತಿ ಬ್ರೂಯಾತ್" ಇತ್ಯಾದಿನಾ ಶರೀರಾದುತ್ಕ್ರಾಂತಸ್ಯ ವಿದುಷೋಽರ್ಚಿರಾದಿಗತಿಃ ಶ್ರೂಯತೇ.

ಮರಣಕಾಲದಲ್ಲಿ ಲಿಂಗಶರೀರವು ಹೊರಗೆ ಹೋಗುವುದೆಂದರೆ ಆಗ ಹೊರಗೆ ಇರುವ ಜನರಿಗೆ ಅದು ಏಕೆ ಕಾಣುವುದಿಲ್ಲವೆಂದು ಆಶಂಕಿಸಿ ತಿಳಿಸುತ್ತಾನೆ. ಲಿಂಗಶರೀರವು ಇಂದ್ರಿಯಗೋಚರವಾಗದೆ ಸೂಕ್ಷ್ಮಪ್ರಮಾಣದ್ದೆಂದು ಶ್ರುತಿಯಲ್ಲಿ ಹೇಳಿರುವುದರಿಂದ ಅದು ಸ್ಥೂಲಶರೀರದಿಂದ ಹೊರಗೆ ಹೊರಟರೂ ಎಲ್ಲರಿಗೂ ಗೋಚರವಾಗುವುದಿಲ್ಲ. ಆದರೆ ಜೀವನು ಸ್ಥೂಲಶರೀರದಿಂದ ಹೊರಟರೂ ಸಹ ಸೂಕ್ಷ್ಮಶರೀರವನ್ನು ಅನುಸರಿಸಿಕೊಂಡೇ ಹೊರಡುತ್ತಾನೆ. ಹಾಗಿಲ್ಲದಿದ್ದರೆ ಅವನಿಗೆ ಗಮನವೇ ಹೊಂದದಿರುವುದರಿಂದ ಅಲ್ಲಿ ಚಂದ್ರನೊಡನೆ ನಡೆಯುವ ಸಂಭಾಷಣವೂ ಅಯುಕ್ತವೇ ಆಗಬೇಕಾದೀತು. ದೇವಯಾನಮಾರ್ಗದಲ್ಲಿ ನಿರತನಾದ ಜ್ಞಾನಿಗೂ ಚಂದ್ರನಿಗೂ ಸಂವಾದವು ನಡೆಯುವುದಾಗಿ ಪರ್ಯಂಕವಿದ್ಯೆಯಲ್ಲಿ ಹೇಳಿದೆ. "ಯಾರು ಈ ಲೋಕದಿಂದ ಹೊರಡುತ್ತಾರೋ ಅವರೆಲ್ಲರೂ ಚಂದ್ರನಲ್ಲಿಗೇ ಹೋಗುತ್ತಾರೆ. ಈ ಚಂದ್ರನು ಸ್ವರ್ಗಕ್ಕೆ ಬಾಗಿಲಂತಿರುವನು. ಅವನಲ್ಲಿ ಹೋಗಿ ಯಾರು ಸೇರುವರೋ ಅವರು ಮತ್ತೆ ವೃಷ್ಟಿಹೊಂದಲು ಭೂಮಿಯಲ್ಲಿ ಬೀಳುತ್ತಾರೆ. ಬಿದ್ದಾಗ ಅವರು ತಮ್ಮ ತಮ್ಮ ಕರ್ಮದಂತೆ ಕೀಟ, ಪತಂಗ, ಶಕುನಿ, ಶಾರ್ದೂಲ, ಸಿಂಹ, ಮತ್ಸ್ಯ ಮೊದಲಾದ ರೂಪಗಳನ್ನು ತಾಳುತ್ತಾರೆ. ಆದರೆ ವಿದ್ವಾಂಸನನ್ನು ಚಂದ್ರನು

"ನೀನು ಯಾರು" ಎಂದು ಪ್ರಶ್ನಿಸುತ್ತಾನೆ. ಅದಕ್ಕೆ ಅವನು ಉತ್ತರಕೊಡುತ್ತಾನೆ" ಹೀಗೆ ಶರೀರದಿಂದ ಹೊರಟ ಜ್ಞಾನಿಗೆ ಅರ್ಚಿರಾದಿಗತಿಯನ್ನೂ ಚಂದ್ರಸಂವಾದ ವನ್ನೂ ಶ್ರುತಿಯಲ್ಲಿ ಹೇಳಲಾಗಿದೆ

ನಿರವಯವಶಿವೋಪಾಸಕಾತಿರಿಕ್ತಾನಾಂ ವಿದುಷಾಂ ಸ್ಥೂಲ ಶರೀರಾಲ್ಲಿಂಗಶರೀರಸ್ಯ ಬಹಿರ್ನಿರ್ಗಮನೇ ಕೋ ಹೇತುರಿತ್ಯಾಶಂಕಾ ಯಾಮಾಹ. ನೋಪಮರ್ದೇನಾತಃ ॥ ೧೦ ॥ ಅತೋ ಲಿಂಗಶರೀರಸ್ಯ ಮರಣಾನಂತರಂ ಸ್ಥೂಲಶರೀರಾದ್ಬಹಿರ್ನಿರ್ಗಮನಾದೇವ ಉಪಮ ರ್ದೇನ ಪೀಡಾಸಾಧನೇನ ದಹನಾದಿನಾ ಸ್ಥೂಲಶರೀರಸ್ಯ ದುಃಖವೇದ ನಾನಾಸ್ತಿ. ತದುತ್ಕ್ರಮಣೇ ಸ್ವಕೃತಕರ್ಮೈವ ಹೇತುಃ. ಸರ್ವಕರ್ಮ ನಿರ್ಮುಕ್ತಾನಾಂ ತಲ್ಲಿಂಗಶರೀರಂ ಪರಮಾತ್ಮನ್ಯೇವಾತ್ರ ಶರೀರೇ ವಿಲೀನಂ ಭವತಿ. ತಥಾ ಶ್ರೂಯತೇ " ಅತ್ರ ಬ್ರಹ್ಮ ಸಮಶ್ನುತೇ " ಇತಿ.

ನಿರವಯವಶಿವತತ್ತ್ವವನ್ನು ಉಪಾಸನಮಾಡದೇ ಇರುವವರಿಗೆ ಸ್ಥೂಲಶರೀರ ದಿಂದ ಲಿಂಗಶರೀರವು ಹೊರಗೆ ಹೊರಡಲಿಕ್ಕೆ ಕಾರಣವೇನೆಂದಾಶಂಕಿಸಿ ತಿಳಿಸುತ್ತಾನೆ. ಮರಣಕಾಲದಲ್ಲಿ ಸ್ಥೂಲಶರೀರದಿಂದ ಲಿಂಗಶರೀರವು ಹೊರಡುವುದರಿಂದಲೇ ಬೆಂಕಿ ಮೊದಲಾದವುಗಳಿಂದ ತೊಂದರೆಯಾದರೂ ಸ್ಥೂಲಶರೀರಕ್ಕೆ ಆ ನೋವು ತಟ್ಟುವು ದಿಲ್ಲ. ಸೂಕ್ಷ್ಮದೇಹ ಇಲ್ಲಿಂದ ಹೊರಡಲಿಕ್ಕೆ ಅದರದರ ಕರ್ಮವೇ ಕಾರಣವೆನಿ ಸಿದೆ. ಎಲ್ಲಾ ಕರ್ಮಗಳ ವಾಸನೆಯನ್ನು ತೊರೆದವರಿಗೆ ಲಿಂಗಶರೀರವು ಇಲ್ಲಿಯೇ ಈ ಶರೀರದಲ್ಲಿಯೇ ಪರಮಾತ್ಮನಲ್ಲಿ ವಿಲೀನವಾಗುತ್ತದೆ. " ಹೃದಯದ ಎಲ್ಲಾ ಬಗೆಯ ಆಶೆಗಳೂ ತೊಲಗಿದರೆ ಇಲ್ಲಿಯೇ ಜೀವನು ಅಮೃತನಾಗಿ ಬ್ರಹ್ಮಭಾವವನ್ನು ಹೊಂದುವನು " ಎಂಬ ಶ್ರುತಿಯಲ್ಲಿ ಈ ಅಂಶ ಸ್ಪಷ್ಟವಾಗಿದೆ.

ಅಸ್ಮಿನ್ನರ್ಥೇ ಪುನರ್ಹೇತ್ವಂತರಮಾಹ. ಅಸ್ಯೈವ ಚೋಪಪತ್ತೇ ರೂಷ್ಮ ॥ ೧೧ ॥ ಅಸ್ಯ ಸೂಕ್ಷ್ಮಶರೀರಸ್ಯ ಕ್ವಚಿದ್ವಿದ್ಯಮಾನತ್ವೋಪಪತ್ತೇ ರ್ವಿದುಷಃ ಪ್ರಕ್ರಾಂತಮರಣಸ್ಯ ಮರಣಾತ್ಪ್ರಾಕ್ ಊಷ್ಮ ಸ್ಥೂಲಶರೀರೇ ಕ್ವಾಚಿತ್ಕಮುಪಪದ್ಯತೇ ನಚ ಸ್ಥೂಲಸ್ಯೈವ ಶರೀರಸ್ಯೇದಮೂಷ್ಮ, ಅನ್ಯ ತ್ರಾನುಪಲಬ್ಧೇಃ. ತತಶ್ಚೋಷ್ಮಣಃ ಕ್ವಚಿದುಪಲಬ್ಧಿರ್ವಿದುಷಃ ಸೂಕ್ಷ್ಮ ಶರೀಸ್ಯೋತ್ಕ್ರಾಂತಿನಿಬಂಧನೇತಿ ಗಮ್ಯತೇ. ತಸ್ಮಾದ್ವಿದುಷೋಽಪ್ಯಾ ಸೃತ್ಯುಪಕ್ರಮಾತ್ಸಮಾನೋತ್ಕ್ರಾಂತಿರಿತಿ ಸುಷ್ಠೂಕ್ತಂ ಯದಾ ಸ್ಥೂಲ ಶರೀರೇ ಸೂಕ್ಷ್ಮದೇಹಸಂಬಂಧೋ ಯುಜ್ಯತೇ ತಾವತ್ಪರ್ಯಂತಂ ಸ್ಥೂಲಸ್ಯ ಊಷ್ಮ ಉಷ್ಣಸ್ಪರ್ಶಾದಿಕಂ ಸರ್ವತ್ರ ದೃಶ್ಯತೇ. ಸೂಕ್ಷ್ಮ ಶರೀರವಿಯೋಗಾನಂತರಂ ಸ್ಥೂಲಸ್ಯ ಶೈತ್ಯಾದಿಧರ್ಮಾಂತರೋಪಪತ್ತ್ಯವ ಗಮಾತ್ ಸೂಕ್ಷ್ಮಶರೀರಗಮನಮನುಮೀಯತೇ.

ಈ ಬಗ್ಗೆ ಬೇರೊಂದು ಕಾರಣವನ್ನು ತಿಳಿಸುತ್ತಾನೆ. ಆ ಸೂಕ್ಷ್ಮಶರೀರವು ಒಂದೇ ಕಡೆ ಇರುವುದೆಂಬುದು ಯುಕ್ತವಾದರೂ ಮರಣಾವಸ್ಥೆಯಲ್ಲಿರುವ ಜ್ಞಾನಿಗೆ ಮರಣಕ್ಕೆ ಮೊದಲು ಸ್ಥೂಲಶರೀರದಲ್ಲಿ ಯಾವುದಾದರೊಂದು ಕಡೆ ಶಾಖ ಹುಟ್ಟುತ್ತದೆ. ಈ ಶಾಖವು ಸ್ಥೂಲಶರೀರಕ್ಕೆ ಮಾತ್ರವೇ ಅನ್ವಯಿಸದೆ ಸೂಕ್ಷ್ಮಶರೀರಕ್ಕೂ ಸೇರಿರುತ್ತದೆ. ಈ ಶಾಖವು ದೇಹದಲ್ಲಿ ಒಂದುಕಡೆ ಮಾತ್ರವೇ ಕಾಣುವುದರಿಂದ ಜ್ಞಾನಿಗೂ ಸಹ ಸೂಕ್ಷ್ಮಶರೀರಕ್ಕೆ ಉತ್ಕ್ರಮಣ ಉಂಟೆಂದು ತಿಳಿದುಬರುತ್ತದೆ. ಆದ್ದರಿಂದ ಜ್ಞಾನಿಯೂ ಸಹ ಹೊರಗೆ ಸಂಚರಿಸುವನೆಂಬುದು ಯುಕ್ತವೇ ಆಗಿದೆ. ಸ್ಥೂಲದೇಹದಲ್ಲಿ ಸೂಕ್ಷ್ಮದೇಹದ ಸಂಬಂಧವಿರುವವರೆಗೂ ಸ್ಥೂಲದೇಹಕ್ಕೆ ಶಾಖ ಮೊದಲಾದವು ಎಲ್ಲಾ ಕಡೆಯೂ ಕಾಣಬರುತ್ತದೆ. ಸೂಕ್ಷ್ಮಶರೀರವು ತೊಲಗಿದ ಮೇಲೆ ಸ್ಥೂಲದೇಹಕ್ಕೆ ಶೈತ್ಯ ಮೊದಲಾದ ಧರ್ಮಗಳ ಸಂಪರ್ಕವು ಕಾಣಬರುವುದರಿಂದ ಸೂಕ್ಷ್ಮಶರೀರವು ಇಲ್ಲಿಂದ ಹೊರಡುವುದನ್ನು ಊಹಿಸಬಹುದು.

ಪುನರಪಿ ವಿದುಷಾಮುತ್ಕ್ರಾಂತಿರ್ನ ಸಂಭವತೀತ್ಯಾಶಂಕ್ಯ ಪರಿಹ್ರಿಯತೇ. ಪ್ರತಿಷೇಧಾದಿತಿ ಚೇನ್ನ ಶಾರೀರಾತ್ ಸ್ಪಷ್ಟೋ ಹ್ಯೇಕೇಷಾಂ ॥ ೧೨ ॥ ಯದುಕ್ತಂ ವಿದುಷೋಽಪ್ಯುತ್ಕ್ರಾಂತಿಸ್ಸಮಾನೇತಿ ತನ್ನೋಪಪದ್ಯತೇ, ವಿದುಷ ಉತ್ಕ್ರಾಂತಿಪ್ರತಿಷೇಧಾತ್. ತಥಾಹಿ "ಸ ಏತಾಸ್ತೇಜೋಮಾತ್ರಾಸ್ಸಮಭ್ಯಾದದಾನೋ ಹೃದಯಮೇವಾನ್ವಪಕ್ರಾಮತಿ" ಇತ್ಯುಪಕ್ರಮ್ಯ "ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತಿ ತಮುತ್ಕ್ರಾಮಂತಂ ಪ್ರಾಣೋಽನೂತ್ಕ್ರಾಮತಿ" ಇತ್ಯವಿದುಷ ಉತ್ಕ್ರಾಂತಿಪ್ರಕಾರಮಭಿಧಾಯ, "ಅನ್ಯಂ ನವತರಂ ಕಲ್ಯಾಣತರಂ ರೂಪಂ ಕುರುತೇ" ಇತಿ ದೇಹಾಂತರಪರಿಗ್ರಹಂ ಚಾಭಿಧಾಯ, "ಪ್ರಾಪ್ಯಾಂತಂ ಕರ್ಮಣಸ್ತಸ್ಯ ಯತ್ಕಿಂಚೇಹ ಕರೋತ್ಯಯಂ । ತಸ್ಮಾಲ್ಲೋಕಾತ್ಪುನರೇತ್ಯಸ್ಮೈ ಲೋಕಾಯ ಕರ್ಮಣೇ ॥" ಇತಿ ತು "ಕಾಮಯಮಾನ" ಇತ್ಯವಿದ್ವದ್ವಿಷಯಂ ಪರಿಸಮಾಪ್ಯ, "ಯಥಾ ಕಾಮಯಮಾನೋ ಯೋಽಕಾಮೋ ನಿಷ್ಕಾಮ ಆಪ್ತಕಾಮ ಆತ್ಮಕಾಮಃ ನ ತಸ್ಯ ಪ್ರಾಣಾ ನೋತ್ಕ್ರಾಮಂತೇ", "ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ" ಇತಿ ವಿದುಷ ಉತ್ಕ್ರಾಂತಿಃ ಪ್ರತಿಷಿದ್ಧ್ಯತೇ. ಯಥಾ ಪೂರ್ವತ್ರ ಆರ್ತಭಾಗಪ್ರಶ್ನೇಽಪಿ ವಿದುಷ ಉತ್ಕ್ರಾಂತಿಪ್ರತಿಷೇಧೋ ದೃಶ್ಯತೇ. ಅಥ ಪುನಃ "ಮೃತ್ಯುಂ ಜಯತಿ" ಇತಿ ವಿದ್ವಾಂಸಂ ಪ್ರಸ್ತುತ್ಯ ಯಾಜ್ಞವಲ್ಕ್ಯ ಉವಾಚ "ಯತ್ರಾಯಂ ಪುರುಷೋ ಮ್ರಿಯತೇ, ಉದಸ್ಮಾತ್ ಪ್ರಾಣಾ ಉತ್ಕ್ರಾಮಂತ್ಯಾಹೋಸ್ವಿನ್ನೇತಿ ಪೃಷ್ಟಃ ನೇತಿ ಹೋವಾಚ ಯಾಜ್ಞವಲ್ಕ್ಯಃ. "ಅತ್ರೈವ ಸಮವಲೀಯಂತೇ ಸ ಉಚ್ಛ್ವಯತ್ಯಾಧ್ಮಾತೋ ಮೃತಶ್ಶೇತೇ" ಇತಿ. ಅತೋ ವಿದ್ವಾನಿಹೈವಾಮೃತತ್ವಂ

ಪ್ರಾಪ್ನೋತೀತಿ ಚೇತ್ ತನ್ನ ಶಾರೀರಾತ್ ಪ್ರತ್ಯಗಾತ್ಮನಃ ಪ್ರಾಣಾನಾ ಮುತ್ಕ್ರಾಂತಿರ್ಹ್ಯತ್ರ ಪ್ರತಿಷಿದ್ಧ್ಯತೇ ನ ಶರೀರಾತ್. "ನ ತಸ್ಯ ಪ್ರಾಣಾ ಉತ್ಕ್ರಾಮಂತಿ" ಇತ್ಯತ್ರ ತಚ್ಛಬ್ದೇನ "ಯಥಾ ಕಾಮಯ ಮಾನ" ಇತಿ ಪ್ರಾಕೃತಶಾರೀರ ಏವ ಪರಾಮೃಶ್ಯತೇ ನಾಶ್ರುತಂ ಶರೀರಂ. ತಸ್ಯೇತಿ ಷಷ್ಠ್ಯಾ ಪ್ರಾಣಾನಾಂ ಸಂಬಂಧಿತ್ವೇನ ಶಾರೀರೋ ನಿರ್ದಿಷ್ಟಃ ನ ತೂತ್ಕ್ರಾಂತ್ಯುಪಾದಾನತ್ವೇನ. ಉತ್ಕ್ರಾಂತ್ಯುಪಾದಾನಂ ತು ಶರೀರ ಮೇವೇತಿ ಚೇನ್ನ ಉಪಾದಾನಾಪೇಕ್ಷಾಯಾಂ ಅಶ್ರುತಾತ್ ಶರೀರಾತ್ ಸಂಬಂಧಿತಯಾ ಶ್ರುತಸ್ಯಾತ್ಮನ ಏವ ಸನ್ನಿಹಿತತ್ವೇನ ಅಪಾದಾನತಯಾಪಿ ಗ್ರಾಹ್ಯತ್ವಾತ್, ಕಿಂಚ ಪ್ರಾಣಾನಾಂ ಜೀವಸಂಬಂಧಿತಯೈವ ಪ್ರಜ್ಞಾ ತಾನಾಂ ತತ್ಸಂಬಂಧಿತ್ವಕಥನೇ ಪ್ರಯೋಜನಾಭಾವಾತ್ ಸಂಬಂಧಮಾತ್ರ ವಾಚಿನ್ಯಾಃ ಷಷ್ಠ್ಯಾ ಅಪಾದಾನಮೇವ ವಿಶೇಷ ಇತಿ ನಿಶ್ಚೀಯತೇ ಯಥಾ ನಟಸ್ಯ ಶೃಣೋತೀತಿ. ನಚಾತ್ರ ವಿವದಿತವ್ಯಂ. ಸ್ಪಷ್ಟೋ ಹ್ಯೇಕೇಷಾಂ ಮಾಧ್ಯಂದಿನಾನಾಮಾಮ್ನಾಯೇ ಶಾರೀರೋ ಜೀವ ಏವಾಪಾದಾನ ಮಿತಿ, "ಯೋಽಕಾಮೋ ನಿಷ್ಕಾಮ ಆಪ್ತಕಾಮ ಆತ್ಮಕಾಮೋ ನ ತಸ್ಮಾತ್ಪ್ರಾಣಾ ಉತ್ಕ್ರಾಮಂತೇ" ಇತಿ ಶರೀರಾತ್ಪ್ರಾಣಾನಾಮು ತ್ಕ್ರಾಂತಿಪ್ರಸಂಗಾಭಾವಾತ್ತನ್ನಿಷೇಧೋ ನೋಪಪದ್ಯತ ಇತಿ ಚೇನ್ನ ತಸ್ಯ ತಾವದೇವ ಚಿರಮಿತಿ ವಿದುಷಃ ಶರೀರವಿಯೋಗಕಾಲೇ ಬ್ರಹ್ಮ ಸಂಪತ್ತಿವಚನೇನ ಪ್ರಾಣಾನಾಮಪಿ ತಸ್ಮಿನ್ ಕಾಲೇ ಶರೀರಾದ್ವಿದುಷೋ ವಿಯೋಗಃ ಪ್ರಸಜ್ಯತೇ. ತತಶ್ಚ ದೇವಯಾನೇನ ಪಥಾ ಬ್ರಹ್ಮಸಂಪತ್ತಿ ರ್ನೋಪಪದ್ಯತ ಇತ್ಯಸ್ಯ ನ ತಸ್ಯ ಪ್ರಾಣಾ ಉತ್ಕ್ರಾಮಂತಿ ದೇವಯಾ ನೇನ ಪಥಾ ಬ್ರಹ್ಮಪ್ರಾಪ್ತೇಃ ಪ್ರಾಕ್ ಜೀವಾದ್ವಿದುಷೋಽಪಿ ಪ್ರಾಣಾ ನ ವಿಶ್ಲಿಷ್ಯಂತೀತ್ಯುಚ್ಯತೇ. ಆರ್ತಭಾಗಪ್ರಶ್ನೋಽಪಿ ಯಥಾ ವಿದ್ವದ್ವಿಷಯಃ ತಥಾಽಯಮೇವ ಪರಿಹಾರಃ, ಸ ತ್ವವಿದ್ವದ್ವಿಷಯಃ. ತತ್ರ ಪ್ರಶ್ನಪ್ರತಿ ವಚನಯೋಃ ಬ್ರಹ್ಮವಿದ್ಯಾಪ್ರಸಂಗಾದರ್ಶನಾತ್. ತತ್ರ ಹಿ ಗ್ರಹಾತಿ ಗ್ರಹರೂಪೇಣೇಂದ್ರಿಯೇಂದ್ರಿಯಾರ್ಥಸ್ವಭಾವೋಽಪಾಮಗ್ನ್ಯನ್ನತ್ವಂ, ಮ್ರಿಯಮಾಣಸ್ಯ ಜೀವಸ್ಯ ಪ್ರಾಣಪರಿತ್ಯಾಗಃ, ಅಮೃತಸ್ಯ ನಾಮವಾಚ್ಯ ಕರ್ತ್ರ್ಯನುವೃತ್ತಿಃ, ತಸ್ಯ ಚ ಪುಣ್ಯಪಾಪಾನುಗುಣಗತಿಪ್ರಾಪ್ತಿರಿತ್ಯರ್ಥಾಃ ಪ್ರಶ್ನಪೂರ್ವಕಂ ಪ್ರತ್ಯುಕ್ತಾಃ. ತತ್ರ ಚ ಅಪಪುನರ್ಮೃತ್ಯುಂ ಜಯ ತೀತಿ ಅಪಾಮಗ್ನ್ಯನ್ನತ್ವಜ್ಞಾನಾತ್ ಅಗ್ನಿಜಯ ಏವ ಮೃತ್ಯುಂಜಯ ಉಚ್ಯತೇ. ಅತೋ ನಾತ್ರ ವಿದುಷಃ ಪ್ರಸಂಗಃ. ಅವಿದುಷಸ್ತು ಪ್ರಾಣಾನುತ್ಕ್ರಾಂತಿವಚನಂ "ಸ್ಥೂಲದೇಹವತ್ ಪ್ರಾಣಾ ನ ಮುಂಚಂತಿ ಅಪಿತು ಭೂತಸೂಕ್ಷ್ಮವತ್ ಜೀವಂ ಪರಿಷ್ವಜ್ಯ ಗಚ್ಛಂತಿ" ಇತ್ಯಭಿಧತ್ತೇ.

ವಿದ್ವಾಂಸರಿಗೆ ಉತ್ಕ್ರಮಣವೇ ಇಲ್ಲವೆಂದು ಮತ್ತೆ ಆಶಂಕಿಸಿ ಪರಿಹರಿಸುತ್ತಾನೆ. ವಿದ್ವಾಂಸನಿಗೂ ಉತ್ಕ್ರಮಣವು ಸಮಾನವೆಂದು ಹೇಳಿದ್ದು ಯುಕ್ತವಲ್ಲ; ಯಾಕೆಂದರೆ ವಿದ್ವಾಂಸನಿಗೆ ಉತ್ಕ್ರಮಣವನ್ನೇ ನಿಷೇಧಿಸಲಾಗಿದೆ. "ಅವನು ಇಂದ್ರಿಯಗಳನ್ನು ತನ್ನಕಡೆಗೆ ಸೆಳೆದುಕೊಳ್ಳುತ್ತ ಹೃದಯದಲ್ಲಿ ಬೆರೆಯುತ್ತಾನೆ" ಎಂದಾರಂಭಿಸಿ "ಅಲ್ಲಿನ ಜ್ಯೋತಿಯೊಂದಿಗೆ ಇವನು ಹೊರಡುತ್ತಾನೆ. ಅವನನ್ನು ಅನುಸರಿಸಿ ಪ್ರಾಣಗಳು ಹೊರಡುತ್ತವೆ" ಹೀಗೆ ಸಾಮಾನ್ಯಜೀವನ ಉತ್ಕ್ರಮಣವನ್ನು ಹೇಳಿ "ಬೇರೊಂದು ಸುಂದರವಾದ ಹೊಸ ರೂಪವನ್ನು ಪಡೆಯುತ್ತಾನೆ" ಎಂಬಲ್ಲಿ ಬೇರೊಂದು ದೇಹವನ್ನು ಪಡೆಯುವನೆಂದು ತಿಳಿಸಿ "ಇಲ್ಲಿ ಮಾಡಿದ್ದ ಕರ್ಮದ ಫಲವನ್ನು ತೀರಿಸಿ ಲೋಕಾಂತರಕ್ಕೆ ಹೋಗಿ ಆ ಲೋಕದಿಂದ ಮತ್ತೆ ಈ ಲೋಕಕ್ಕೆ ಕರ್ಮಾನುಷ್ಠಾನಕ್ಕಾಗಿ ಹಿಂತಿರುಗುತ್ತಾನೆ" ಎಂಬ ಶ್ರುತಿಯನ್ನು ಫಲಾಪೇಕ್ಷಿಗಳಾದ ಪಾಮರಜನಕ್ಕೆ ಅನ್ವಯಿಸುವುದೆಂದು ತಿಳಿಸಿ, "ಇಚ್ಛಿಸುವವನೇ ಎಲ್ಲಾ ಇಚ್ಛೆಗಳನ್ನು ಮುಗಿಸಿಕೊಂಡು ನಿಷ್ಕಾಮನೂ ಆಪ್ತಕಾಮನೂ ಆಗಿ ಕೊನೆಗೆ ಆತ್ಮಕಾಮನಾಗುವನು. ಆವನ ಪ್ರಾಣಗಳು ಮತ್ತೆಲ್ಲಿಗೂ ಹೋಗದೆ ಶಿವನಲ್ಲಿಯೇ ಬೆರೆಯುತ್ತವೆ." "ಬ್ರಹ್ಮನಾಗಿ ಬ್ರಹ್ಮವನ್ನು ಸೇರುತ್ತಾನೆ" ಎಂದು ಮುಂತಾದ ಶ್ರುತಿಗಳಲ್ಲೂ ಜ್ಞಾನಿಯ ಉತ್ಕ್ರಮಣವನ್ನು ನಿಷೇಧಿಸಲಾಗಿದೆ. ಆರ್ತಭಾಗನ ಪ್ರಶ್ನೆಯಲ್ಲಿಯೂ ಹೀಗೆಯೇ ಹೇಳಿದೆ."ಅವನು ಮೃತ್ಯುವನ್ನು ಜಯಿಸುವನು" ಎಂದು ವಿದ್ವಾಂಸನನ್ನು ಹೊಗಳಿ ಯಾಜ್ಞವಲ್ಕ್ಯನು ಹೇಳಿದನು. ಜೀವನು ಈ ದೇಹವನ್ನು ಬಿಡುವಾಗ ಪ್ರಾಣಗಳು ದೇಹದಿಂದ ಹೊರಡುತ್ತವೆಯೋ ಇಲ್ಲವೋ ? ಎಂದು ಕೇಳಿದಾಗ ಇಲ್ಲವೆಂದು ಯಾಜ್ಞವಲ್ಕ್ಯನು ತಿಳಿಸಿದನು. ಅವು ಇಲ್ಲಿಯೇ ಅಡಗುತ್ತವೆ; ಆಗಲೇ ಅವನು ಮೇಲಕ್ಕೆ ಉಸಿರುಬಿಡುತ್ತಾನೆ ಅಂದರೆ ಸತ್ತು ಮಲಗುತ್ತಾನೆ.ಆದ್ದರಿಂದ"ವಿದ್ವಾಂಸನು ಇಲ್ಲಿಯೇ ಅಮೃತನಾಗುತ್ತಾನೆ"ಎಂದು ಹೇಳುವುದು ಯುಕ್ತವಲ್ಲ; ಯಾಕೆಂದರೆ ಜೀವನಿಂದ ಪ್ರಾಣಗಳು ಹೊರಡುವುದನ್ನು ಇಲ್ಲಿ ನಿಷೇಧಿಸಿದೆಯೇ ಹೊರತು ಶರೀರದಿಂದ ಹೊರಡುವುದನ್ನು ನಿಷೇಧಿಸಿಲ್ಲ. "ಅವನ ಪ್ರಾಣಗಳು ಶರೀರದಿಂದ ಹೊರಡುವುದಿಲ್ಲ" ಎಂಬಲ್ಲಿ ತಚ್ಛಬ್ದವು "ಯಥಾ ಕಾಮಯಮಾನಃ" ಎಂಬ ವಾಕ್ಯದಲ್ಲಿ ಹೇಳಿರುವ ಜೀವನನ್ನು ಬೋಧಿಸುವುದೇ ಹೊರತು ಶರೀರವನ್ನು ಬೋಧಿಸುವುದಿಲ್ಲ. ಜೀವನು ಉತ್ಕ್ರಮಣಕ್ಕೆ ಉಪಾದಾನನೆನಿಸದೆ ಪ್ರಾಣಗಳಿಗೆ ಮಾತ್ರವೇ ಸಂಬಂಧಿಸಿರುವನೆಂಬ ಅಂಶವು "ತಸ್ಯ" ಎಂಬಲ್ಲಿ ಷಷ್ಠಿ ವಿಭಕ್ತಿಯಿಂದ ತಿಳಿದುಬರುತ್ತದೆ. ಶರೀರವೇ ಉತ್ಕ್ರಮಣಕ್ಕೆ ಉಪಾದಾನವಾಗಲಿ ಅಂದರೆ ಶರೀರದಿಂದಲೇ ಉತ್ಕ್ರಾಂತಿಯನ್ನು ಹೇಳುವುದಾದರೂ ಅದೂ ಸಹ ಯುಕ್ತವಲ್ಲ; ಯಾಕೆಂದರೆ ಉತ್ಕ್ರಾಂತಿಯನ್ನು ಹೇಳುವಾಗ ಯಾವುದರಿಂದ ಎಂಬ ಸಂಶಯಬಂದರೆ ಪ್ರಕರಣೋಚಿತವಾದ ಶಾರೀರ ಅಂದರೆ ಜೀವನನ್ನು ಬಿಟ್ಟು ಶರೀರವನ್ನು ಗ್ರಹಿಸುವುದು ಉಚಿತವಲ್ಲ. ಇದೂ ಅಲ್ಲದೆ ಪ್ರಾಣಗಳು ಜೀವನಿಗೇ ಸಂಬಂಧಿಸಿರುವುದಾಗಿ ತಿಳಿದುಬಂದಿರುವುದರಿಂದ ಮತ್ತೆ ಅವನ್ನು ಅವನಿಗೇ

ಸಂಬಂಧಿಸಿದವೆಂದು ಹೇಳುವುದರಲ್ಲಿ ಯಾವ ಪ್ರಯೋಜನವೂ ಇಲ್ಲ. ಆದ್ದರಿಂದ ಸಂಬಂಧಸಾಮಾನ್ಯವನ್ನಷ್ಟೇ ತಿಳಿಸುವ ಷಷ್ಠೀವಿಭಕ್ತಿಗೆ ಅಪಾದಾನವೇ ಒಂದು ವಿಶೇಷವೆಂದು ಇಲ್ಲಿ ನಿಶ್ಚಯಿಸಲಾಗಿದೆ. "ನಟಸ್ಯ ಶೃಣೋತಿ" ಎಂಬಲ್ಲಿ ಷಷ್ಠಿಗೆ ಸಂಬಂಧಮಾತ್ರವೇ ಅರ್ಥವೆಂಬುದು ಸ್ಪಷ್ಟವಾಗಿದೆ. ಆದರೆ ಮಾಧ್ಯಂದಿನರು ಜೀವನನ್ನೇ ಉತ್ಕ್ರಮಣಕ್ಕೆ ಅಪಾದಾನನೆಂದು ಸ್ಪಷ್ಟವಾಗಿ ಹೇಳಿರುವುದರಿಂದ ಇಲ್ಲಿ ವಿವಾದಕ್ಕವಕಾಶವೇ ಇಲ್ಲ. "ಯಾವನಿಗೆ ಆಶೆಗಳೊಂದೂ ಇಲ್ಲವೋ ಅವನು ನಿಷ್ಕಾಮನೂ ಆಪ್ತಕಾಮನೂ ಆತ್ಮಕಾಮನೂ ಆಗುವನು. ಅವನ ಪ್ರಾಣಗಳು ಎಲ್ಲಿಗೂ ಹೊರಡುವುದಿಲ್ಲ" ಎಂಬಲ್ಲಿ ಪ್ರಾಣಗಳು ಎಲ್ಲಿಗೂ ಹೊರಡುವ ಪ್ರಸಂಗವೇ ಇಲ್ಲದ್ದರಿಂದ ಅದನ್ನು ಅಪಾದಾನವಲ್ಲವೆಂದು ಹೇಳಿದ್ದು ಹೊಂದುವುದಿಲ್ಲವೆಂದರೆ ಇದೂ ಸರಿಯಲ್ಲ. "ಅವನಿಗೆ ದೇಹವಿಯೋಗದವರೆಗೆ ಮಾತ್ರವೇ ಮುಕ್ತಿಗೆ ವಿಳಂಬವಾಗುವುದು" ಎಂಬಲ್ಲಿ ಜ್ಞಾನಿಗೆ ಶರೀರವನ್ನು ತೊರೆಯುವಾಗಲೇ ಶಿವಸಾಯುಜ್ಯವನ್ನು ಹೇಳಿರುವುದರಿಂದ ಆ ಕಾಲದಲ್ಲಿಯೇ ಅವನಿಗೆ ಶರೀರದಿಂದ ಪ್ರಾಣಗಳ ವಿಯೋಗವೂ ಸಂಭವಿಸುತ್ತದೆ. ಇದರಿಂದ ದೇವಯಾನಮಾರ್ಗದಿಂದಲೇ ಶಿವಸಾಯುಜ್ಯವು ದೊರೆಯುವುದೆಂಬುದಿಲ್ಲ. "ಅವನ ಪ್ರಾಣಗಳು ಹೊರಡುವುದಿಲ್ಲ" ಎಂಬ ಶ್ರುತಿಯು ದೇವಯಾನಮಾರ್ಗದಿಂದ ಶಿವಸಾಯುಜ್ಯವು ದೊರಕುವುದಕ್ಕೂ ಮೊದಲೇ ಜ್ಞಾನಿಗೂ ಸಹ ಪ್ರಾಣಗಳ ವಿಯೋಗವಾಗುವಂತಿಲ್ಲವೆಂಬ ಅರ್ಥವನ್ನು ತಿಳಿಸುತ್ತದೆ. ಆರ್ತಭಾಗನ ಪ್ರಶ್ನೆಯೂ ಸಹ ಹೇಗೆ ಜ್ಞಾನಿಗೆಮಾತ್ರವೇ ಅನ್ವಯಿಸುತ್ತದೆಯೋ ಹಾಗೆಯೇ ಇಲ್ಲಿಯೂ ಹೇಳಬೇಕು. ಆದರೆ ಈ ಪ್ರಶ್ನೆಯು ಸಾಮಾನ್ಯ ಜೀವನಿಗೆ ಮಾತ್ರವೇ ಅನ್ವಯಿಸುತ್ತದೆ; ಯಾಕೆಂದರೆ ಅಲ್ಲಿ ನಡೆಯುವ ಪ್ರಶ್ನೋತ್ತರಗಳಲ್ಲಿ ಬ್ರಹ್ಮವಿದ್ಯೆಗೆ ಪ್ರಸಕ್ತಿಯೇ ಕಂಡುಬರುವುದಿಲ್ಲ; ಆದರೆ ಅಲ್ಲಿ ಗ್ರಹ ಅಂದರೆ ಇಂದ್ರಿಯ, ಅತಿಗ್ರಹ ಅಂದರೆ ವಿಷಯಗಳು ಈ ಇಂದ್ರಿಯಗಳ ಮತ್ತು ವಿಷಯಗಳ ಸ್ವಭಾವವನ್ನೂ, ವಿಷಯಗಳಲ್ಲಿ ಸೇರಿದ ನೀರು, ಅಗ್ನಿ ಮತ್ತು ಪೃಥಿವಿ ಇವುಗಳ ಸ್ವರೂಪವನ್ನೂ ಅಲ್ಲಿ ವಿಮರ್ಶಿಸಲಾಗಿದೆ. ದೇಹವನ್ನು ತೊರೆಯುವ ಸ್ಥಿತಿಯಲ್ಲಿರುವ ಜೀವನಿಗೆ ಪ್ರಾಣವು ತೊಲಗುವುದನ್ನೂ, ದೇಹವನ್ನುತೊರೆದವನಿಗೆ ಪುಣ್ಯಪಾಪ ಕರ್ಮಾನುಗುಣವಾಗಿ ಫಲವು ದೊರಕುವುದನ್ನೂ ಅಲ್ಲಿ ಪ್ರಶ್ನೋತ್ತರಗಳಿಂದ ನಿರಾಕರಿಸಲಾಗಿದೆ. ಆದರೆ "ಅವನು ಮೃತ್ಯುವನ್ನು ಜಯಿಸುತ್ತಾನೆ" ಎಂಬಲ್ಲಿ ನೀರನ್ನೇ ಅಗ್ನಿ ಪೃಥಿವಿಗಳ ವಿಕಾರವೆಂದು ತಿಳಿಯುವುದರಿಂದ ಅಗ್ನಿ ಜಯವನ್ನೇ ಮೃತ್ಯುಂಜಯವೆಂದು ಹೇಳಲಾಗಿದೆ. ಆದ್ದರಿಂದ ಇಲ್ಲಿ ಜ್ಞಾನಿಯ ಉತ್ಕ್ರಮಣವನ್ನು ತಿಳಿಸುವ ಪ್ರಸಕ್ತಿಯೇ ಇಲ್ಲ. ಕರ್ಮಿಗೆ ಪ್ರಾಣಗಳು ಹೊರಡುವುದಿಲ್ಲವೆಂಬ ಮಾತು "ಸ್ಥೂಲದೇಹದಂತೆ ಪ್ರಾಣಗಳು ಹೊರಡುವುದಿಲ್ಲ ಆದರೆ ಸೂಕ್ಷ್ಮಭೂತಗಳಂತೆ ಜೀವನೊಡನೆ ಅವು ಹೊರಡುತ್ತವೆ" ಎಂಬ ಅರ್ಥವನ್ನು ತಿಳಿಸುತ್ತದೆ ಎಂದು ಭಾವಿಸಬೇಕು.

ಮೂರ್ತಪರಶಿವಬ್ರಹ್ಮೋಪಾಸಕಾನಾಂ ಶುದ್ಧಜೀವಾನಾಂ ಶಿವ

ಲೋಕಂ ಪ್ರಾಪ್ಯ ತತ್ರ ನಿರತಿಶಯಾನಂದಮನುಭೂಯ ತದನಂತರಂ ಶಿವಸಾಯುಜ್ಯಾತ್ಮಕಕೈವಲ್ಯವಿಭೂತಿರ್ಲಭ್ಯತ ಇತ್ಯತ್ರ ಕಿಂ ಮಾನಂ ಇತ್ಯಾಶಂಕಾಯಾಮಾಹ. ಸ್ಮರ್ಯತೇ ಚ ॥ ೧೩ ॥ "ತೇ ಬ್ರಹ್ಮ ಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ" ಇತ್ಯಾದಿಶ್ರುತಿಷು "ಊರ್ಧ್ವಮೇಕಸ್ಥಿತಸ್ತೇಷಾಂ ಯೋ ಭಿತ್ವಾ ಸೂರ್ಯಮಂಡಲಂ । ಬ್ರಹ್ಮಲೋಕಮತಿಕ್ರಮ್ಯ ತೇನ ಯಾತಿ ಪರಾಂ ಗತಿಂ ॥" ಇತ್ಯಾದಿಸ್ಮೃತಿಷು ಚ ಸ್ಮರ್ಯತೇ. ತಸ್ಮಾತ್ ಸರ್ವಕಾಮ ನಿರ್ಮುಕ್ತನಿರವಯವೋಪಾಸಕಾನಾಂ ವಿದುಷಾಂ ಮೂರ್ತಬ್ರಹ್ಮೋ ಪಾಸಕಾನಾಂ ಚ ಸದ್ಯೋಮುಕ್ತಿಃ ಕ್ರಮಮುಕ್ತಿಶ್ಚ ನ ವಿರುಧ್ಯತೇ.

ಮೂರ್ತೋಪಾಸಕರಾದ ಶುದ್ಧಜೀವರು ಶಿವಲೋಕಕ್ಕೆಹೋಗಿ ಅಲ್ಲಿ ನಿರತಿಶ ಯಾನಂದವನ್ನು ಅನುಭವಿಸಿ ಅನಂತರ ಅಲ್ಲಿಂದಲೇ ಶಿವಸಾಯುಜ್ಯವೆಂಬ ಕೈವಲ್ಯ ವಿಭೂತಿಯನ್ನು ಪಡೆಯುವರೆಂಬಲ್ಲಿ ಪ್ರಮಾಣವೇನೆಂದಾಶಂಕಿಸಿ ಸಮಾಧಾನಮಾಡು ತ್ತಾನೆ. ವೇದಾಂತವಿಜ್ಞಾನದಿಂದ ಯಥಾರ್ಥಪರಿಸ್ಥಿತಿಯನ್ನು ತಿಳಿದು ಶುದ್ಧರಾದ ಯತಿಗಳೆಲ್ಲರೂ ಬ್ರಹ್ಮಲೋಕದಲ್ಲಿದ್ದು ಕೊನೆಗೆ ಕಲ್ಯಾಣವಿಭೂತಿಎನಿಸಿದ ಪರಾಮೃತ ದಿಂದ ಬಿಡುಗಡೆಹೊಂದಿ ಅದರ ಮುಂದಿನ ಶಿವಸಾಯುಜ್ಯವೆಂಬ ಕೈವಲ್ಯವಿಭೂತಿ ಯನ್ನು ಹೊಂದುತ್ತಾರೆ" ಎಂದು ಶ್ರುತಿಗಳಲ್ಲೂ "ಯಾವನು ಮೇಲಿನಲೋಕದಲ್ಲಿದ್ದು ಸೂರ್ಯಮಂಡಲವನ್ನು ಭೇದಿಸುವನೋ ಅವನು ಬ್ರಹ್ಮಲೋಕವನ್ನು ದಾಟಿ ಅಲ್ಲಿಂದ ಶಿವಸಾಯುಜ್ಯವೆಂಬ ಉತ್ತಮಗತಿಯನ್ನು ಹೊಂದುತ್ತಾನೆ" ಎಂದು ಸ್ಮೃತಿಗಳಲ್ಲೂ ಹೇಳಲಾಗಿದೆ. ಆದ್ದರಿಂದ ಎಲ್ಲಾ ಆಶೆಗಳನ್ನೂ ತೊರೆದ ಅಮೂರ್ತೋಪಾಸಕರಿಗೆ ಸದ್ಯೋಮುಕ್ತಿಯೂ, ಮೂರ್ತಶಿವನನ್ನು ಉಪಾಸನಮಾಡುವವರಿಗೆ ಕ್ರಮಮು ಕ್ತಿಯೂ ಸಂಭವಿಸುವುದರಲ್ಲಿ ವಿರೋಧವಿಲ್ಲ.

ಕೇಚಿತ್ ಶರೀರವದ್ಘಟಪಟವಜ್ಜೀವಬ್ರಹ್ಮಣೋಃ ಸಂಯುಕ್ತಾ ಸಂಯುಕ್ತಭೇದವಾದಿನಃ ಸ್ವಶರೀರೇ ದಹರಾಕಾಶೇ ಪರಮಶಿವೇ ಲಿಂಗ ಶರೀರೇಣ ಸಹ ಜೀವಸ್ಯ ತತ್ಸ್ವರೂಪೈಕ್ಯಂ ನ ಸಂಭವತೀತಿ ಸಾಧ ಯಂತಿ. ಕೇಚಿತ್ ಜಗನ್ಮಿಥ್ಯಾತ್ವಸಾಧಕಾಃ ಹಂಬ್ರಹ್ಮವಾದಿನಃ ವಿದುಷಾ ಮುತ್ಕ್ರಾಂತೌ ಲಿಂಗಶರೀರೋತ್ಕ್ರಾಂತಿಂ ದೂಷಯಂತಿ. ತಸ್ಮಾತ್ ಬೌದ್ಧಾದಿವತ್ ಶ್ರುತ್ಯೇಕದೇಶಪ್ರಾಮಾಣ್ಯಪಕ್ಷೈಕದೇಶಮತನಿರಾಕರ ಣಾರ್ಥಂ ಕ್ರಮಮುಕ್ತಿಂ ಸದ್ಯೋಮುಕ್ತಿಂ ಚೋಪದಿಶ್ಯ ತಥಾ ಕೇಚಿತ್ ಜಲಶರ್ಕರನ್ಯಾಯವತ್ ಜೀವಬ್ರಹ್ಮೈಕ್ಯಂ ನ ಸಂಭವತೀತಿ ವದಂತಿ. ತನ್ಮತನಿರಾಕರಣಾರ್ಥಮಧಿಕರಣಾಂತರಮಾಹ. ಸರ್ವಸಂಪತ್ತ್ಯಧಿ ಕರಣಂ॥೬॥ತಾನಿ ಪರೇ ತಥಾ ಹ್ಯಾಹ ॥೧೪॥ ತಾನಿ ಜ್ಞಾನಿನಾಂ ಭೂತೇಂ ದ್ರಿಯಪ್ರಾಣಾಂತಃಕರಣಾನಿ ಪರೇ ಜೀವಾತಿರಿಕ್ತೇ ಪರಮಶಿವೇ

ಲೀಯಂತೇ. ಕುತಃ? ತಥಾ ಹ್ಯಾಹ "ಇಮಾಃ ಶೋಡಷಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯಾಸ್ತಂ ಗಚ್ಛಂತಿ" "ಗತಾಃ ಕಲಾಃ ಪಂಚದಶ ಪ್ರತಿಷ್ಠಾಃ ದೇವಾಶ್ಚ ಸರ್ವೇ ಪ್ರತಿದೇವತಾಸು । ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ ॥" ಇತ್ಯಾದಯಃ ಶಿವಜ್ಞಾನಿಸಂಬಂಧಿನಾಂ ದಶೇಂದ್ರಿಯಾಣಾಂ ಪಂಚಪ್ರಾಣಾನಾಂ ಮನಸಶ್ಚ ಪರಮಾತ್ಮನಿ ವಿಲಯಂ ಪ್ರತಿಪಾದಯಂತೀತ್ಯರ್ಥಃ. ಯದ್ಯಪಿ "ಸಮಾನಾ ಚಾಸೃತ್ಯುಪಕ್ರಮಾತ್" ಇತಿ ಸೂತ್ರೇ ಜ್ಞಾನಿನಾಂ ಲಿಂಗಶರೀರಸ್ಯ ಬ್ರಹ್ಮಣಿ ಲಯ ಉಕ್ತಃ. ತಥಾಪ್ಯದ್ಯ ವಕ್ಷ್ಯಮಾಣ ಏವಾರ್ಥಃ ಸುಖಬೋಧಾರ್ಥಂ ಶ್ರುತ್ಯೇಕದೇಶಮತನಿರಾಕರಣಾರ್ಥಂ ಚಾಕೃಷ್ಯ ಪುನರುಕ್ತ ಇತಿ ನ ಪೌನರುಕ್ತ್ಯದೋಷ ಇತಿ ಸೂತ್ರಾರ್ಥಃ. "ಯಥಾ ನದ್ಯಃ" ಇತ್ಯಾದಿಶ್ರುತಿಷು ಜೀವಬ್ರಹ್ಮಣೋಃ ಪ್ರಾಪ್ಯಪ್ರಾಪಕತ್ವೇನ ಮೋಕ್ಷದಶಾಯಾಂ ಏಕತ್ವೋಪದೇಶಾತ್ ಮುಕ್ತಜೀವಮನಃಪ್ರಾಣಾದೀನಾಂ ಬ್ರಹ್ಮಣಿ ಸ್ವರೂಪೈಕ್ಯಂ ಉತ ಸುಷುಪ್ತಿಪ್ರಳಯಾದಿವತ್ ತೂಷ್ಣೀಂ ಸ್ಥಿತಿರ್ವೇತಿ ಸಂದಿಹ್ಯತೇ ಜೀವಬ್ರಹ್ಮಣೋಃ ಸರ್ವಥಾ ನ ಸ್ವರೂಪೈಕ್ಯಂ, ಜೀವವ್ಯತಿರಿಕ್ತಪರಮಾತ್ಮಾಭಾವಾತ್, ಜಡಾತ್ಮಕಸ್ಯ ಲಿಂಗಶರೀರಸ್ಯ ಚಿದ್ರೂಪೇ ಬ್ರಹ್ಮಣ್ಯೇಕತ್ವಾಯೋಗಾತ್. "ಕಾರ್ಯೋಪಾಧಿರಯಂ ಜೀವಃ ಕಾರಣೋಪಾಧಿರೀಶ್ವರಃ । ಕಾರ್ಯಕಾರಣತಾಂ ತ್ಯಕ್ತ್ವಾ ಪೂರ್ಣಬೋಧೋಽವಶಿಷ್ಯತೇ" ಇತ್ಯಾದಿಪೂರ್ವಾಚಾರ್ಯಸಿದ್ಧಾಂತಾನುಸಾರೇಣ "ಅಹಂ ಬ್ರಹ್ಮಾಸ್ಮಿ" "ತತ್ತ್ವಮಸಿ" ಇತ್ಯಾದಿಜೀವಬ್ರಹ್ಮೈಕ್ಯವಿಧಾಯಕವೇದಾಂತಾನಾಂ ಜಹದಜಹಲ್ಲಕ್ಷಣವ್ಯಪದೇಶಕೇನ "ಸೋಽಯಂ ದೇವದತ್ತಃ" ಇತಿ ನ್ಯಾಯೇನ ಬಿಂಬಪ್ರತಿಬಿಂಬವದ್ಘಟಾಕಾಶಮಹಾಕಾಶವತ್ ಉಪಾಧಿಪರಿತ್ಯಾಗಪೂರ್ವಕಚೈತನ್ಯೈಕತ್ವಂ ವಕ್ತುಂ ಯುಕ್ತಂ. ಜೀವೇಶ್ವರೋಪಾಧಿಭೂತಾವಿದ್ಯಾಮಾಯಾಽಸಂಭವೇ ಅಶ್ವಗವಾದಿವತ್ತಯೋರೇಕತ್ವಾಯೋಗಾತ್, ತಯೋರ್ಭೇದಸ್ಯ ಸತ್ಯತ್ವೇ ನಿವೃತ್ತ್ಯಸಂಭವಾಚ್ಚ, ಉತ ಸತ್ಯಸ್ಯ ಅನ್ಯಥಾಯೋಗಾತ್ ಲಿಂಗಶರೀರಸ್ಯ ಪರಮೇಶ್ವರವನ್ನಿತ್ಯತ್ವಂ. ತದಯೋಗೇ ಮುಕ್ತಾನಾಂ ಪೃಥಕ್ಸ್ಥಿತ್ಯಸಂಭವೇನ ಶೇಷತ್ವಪಾರತಂತ್ರ್ಯಕೈಂಕರ್ಯಾದಿವಿಧಾಯಕಸರ್ವಶಾಸ್ತ್ರವಿರೋಧಾತ್ ಸಂಸಾರದಶಾಯಾಂ ಜೀವಬ್ರಹ್ಮಣೋಃ ಸ್ವಾಭಾವಿಕಭೇದಃ, ಮುಕ್ತದಶಾಯಾಂ ತದ್ವದಭೇದಶ್ಚ ಅಸಮಂಜಸಃ ಇತಿ ಪ್ರಾಪ್ತೇಽಭಿಧೀಯತೇ. ತಾನಿ ಪರಸ್ಮಿನ್ನಾತ್ಮನಿ ಜೀವಾಃ ಲಿಂಗಶರೀರೇಣ ಸಹ ಸಂಪದ್ಯಂತೇ. ಕುತಃ? ತಥಾಹ್ಯಾಹ "ಗತಾಃ ಕಲಾಃ ಪಂಚದಶ" ಇತ್ಯಾತಿಶ್ರುತಿಶತೇಷು ಜೀವಾನಾಂ ತದ್ವ

ದಾಹ. ಚಿಜ್ಜಡಾನಾಂ ಏಕತ್ವಾಯೋಗೇನ ಲಕ್ಷಣಾ ಸ್ವೀಕಾರ್ಯಾ" ಇತಿ ಯದುಕ್ತಂ ತದಯುಕ್ತಂ ಮುಖ್ಯಾರ್ಥಬಾಧಾಭಾವಾತ್. "ಯಥಾ ನದ್ಯಃ" ಇತ್ಯಾದಿಬಹುಶ್ರುತಿಷು ಅಸಂದಿಗ್ಧತಯಾ ಜೀವಬ್ರಹ್ಮಣೋಃ ಸ್ವರೂಪೈಕ್ಯವ್ಯಪದೇಶಾತ್ ಲೋಕೇ ಮಣಿಮಂತ್ರಾದ್ಯೌಷಧಸಿದ್ಧಾನಾಂ ಮನುಷ್ಯಾದೀನಾಂ ವ್ಯಾಘ್ರಾದಿನಾನಾವಿಧಸ್ವರೂಪಕಲ್ಪನಂ ದೃಷ್ಟಂ. ಅಘಟಿತಘಟನಸಮರ್ಥಸ್ಯ ಸತ್ಯಸಂಕಲ್ಪಾದಿಧರ್ಮಾಶ್ರಯಸ್ಯ ಸರ್ವವಿದ್ಯಾನಿಧಾನಸ್ಯ ಶಿವಸ್ಯ ಪರಬ್ರಹ್ಮಣಃ ಸ್ವೋಪಾಸಕಭಕ್ತಾನಾಂ ಜೀವಭಾವನಿವೃತ್ತಿಪೂರ್ವಕಸ್ವತಾದಾತ್ಮ್ಯಸಿದ್ಧಿಪ್ರದಾಯಕತ್ವೇ ಕಿಂ ಚಿತ್ರಂ. ಭ್ರಮರಕೀಟಲೋಹರಸಾದಿಬಹುದೃಷ್ಟಾಂತಾನುಸಾರೇಣ ಸ್ವಾಭಾವಿಕಸ್ಥಿತಿನಿವೃತ್ತಿಃ ಪೂರ್ವಮೇವೋಕ್ತಃ. ಜೀವಾನಾಂ ಬದ್ಧಾವಸ್ಥಾವತ್ ಮುಕ್ತಾವಸ್ಥಾಯಾಮಪಿ ಸೂಕ್ಷ್ಮಶರೀರಸ್ವೀಕಾರೇ ಸಂಸಾರಿತ್ವಪ್ರಸಂಗಾತ್, ಮುಕ್ತಾವಸ್ಥಾಯಾಂ ದಾಸ್ಯದಾಸಕತ್ವಪ್ರಾಧಾನ್ಯರಾಜಭೃತ್ಯನ್ಯಾಯವತ್ ದಾಸಸ್ಯ ಭಯಹೇತುತ್ವೇನ ಪೂರ್ಣಾನಂದಾನುಭವಾಯೋಗಾತ್, "ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ", "ಅಭಯಂ ವೈ ಜನಕ ಪ್ರಾಪ್ತೋಽಸಿ" ಇತಿ ಮುಕ್ತಾನಾಂ ಅಭಯತ್ವವ್ಯವಸ್ಥಾಪಕಶ್ರುತಿಶತವಿರೋಧಾತ್, "ಯಥಾ ನದ್ಯಃ" ಇತ್ಯಾದಿಶ್ರುತೀನಾಂ ಸಂಕೋಚೇ ಮಾನಾಭಾವಾಚ್ಚ ಸರ್ವಶ್ರುತಿಸಿದ್ಧ ಜೀವಬ್ರಹ್ಮಣೋಃ ಸ್ವರೂಪೈಕ್ಯಮನವದ್ಯಂ.

ಕೆಲವರು ಘಟಪಟಗಳಂತೆ ಜೀವಬ್ರಹ್ಮರಿಗೆ ಶರೀರಶರೀರಿಭಾವದಿಂದ ಭೇದ ಮತ್ತು ಅಭೇದಗಳೆರಡನ್ನೂ ಒಪ್ಪಿ ಈ ಶರೀರದಲ್ಲಿಯೇ ದಹರಾಕಾಶದಲ್ಲಿರುವ ಪರಮಶಿವನಲ್ಲಿ ಲಿಂಗಶರೀರದೊಡನೆ ಜೀವನಿಗೆ ಐಕ್ಯವು ಸಂಭವಿಸುವುದಿಲ್ಲವೆಂದು ಹೇಳುತ್ತಾರೆ. ಜಗತ್ತನ್ನೇ ಮಿಥ್ಯೆ ಎಂದು ಹೇಳುತ್ತ ತಾನೇ ಬ್ರಹ್ಮವೆಂದು ವಾದಿಸುವ ಕೆಲವರು ಜ್ಞಾನಿಗೆ ಉತ್ಕ್ರಮಣಕಾಲದಲ್ಲಿ ಲಿಂಗಶರೀರದ ಉತ್ಕ್ರಮಣವನ್ನು ನಿಷೇಧಿಸುತ್ತಾರೆ. ಆದ್ದರಿಂದ ಬೌದ್ಧಾದಿಗಳಂತೆ ಶ್ರುತಿಯ ಏಕದೇಶವನ್ನೇ ಪ್ರಮಾಣವೆಂದು ಸ್ವೀಕರಿಸುವ ಈ ಮತಗಳನ್ನು ನಿರಾಕರಿಸಲಿಕ್ಕಾಗಿಗಿಯೇ ಕ್ರಮಮುಕ್ತಿ ಸದ್ಯೋಮುಕ್ತಿಗಳೆರಡನ್ನೂ ಒಪ್ಪಿ ಕೆಲವರು ನೀರಿನಲ್ಲಿ ಸಕ್ಕರೆ ಬೆರೆತಂತೆ ಜೀವನು ಬ್ರಹ್ಮದಲ್ಲಿ ಬೆರೆಯುವನೆಂಬುದು ಹೊಂದುವುದಿಲ್ಲವೆಂದು ಹೇಳುತ್ತಾರೆ. ಆ ಮತವನ್ನು ಇಲ್ಲಿ ನಿರಾಕರಿಸಲಾಗಿದೆ. ಜ್ಞಾನಿಗಳ ಜ್ಞಾನಕರ್ಮೇಂದ್ರಿಯಗಳು, ಪ್ರಾಣಗಳು, ಅಂತಃಕರಣ, ಪಂಚಭೂತಗಳು ಇವೆಲ್ಲವೂ ಜೀವನಿಗಿಂತ ಬೇರೆಯಾದ ಪರಶಿವನಲ್ಲಿ ಬೆರೆಯುತ್ತವೆ. ಹಾಗೆಯೇ ಶ್ರುತಿಯೂ ತಿಳಿಸುತ್ತದೆ. "ಹದಿನಾರು ಕಲೆಗಳು ಪರಮಪುರುಷನಲ್ಲಿ ಸೇರಿ ಮರೆಯಾಗುತ್ತವೆ." ಹಾಗೆಯೇ "ಎಲ್ಲ ಇಂದ್ರಿಯಗಳು ಕರ್ಮಗಳು ಮತ್ತು ವಿಜ್ಞಾನಮಯನಾದ ಜೀವನು ಪರಮಾತ್ಮನಲ್ಲಿ

ಏಕೀಭವಿಸುತ್ತವೆ." "ಎಲ್ಲಾ ಆಶೆಗಳು ಕೊನೆಗೊಂಡಮೇಲೆ ಇಲ್ಲಿಯೇ ಜೀವನು ಅಮೃತನಾಗುತ್ತಾನೆ" ಎಂದು ಮುಂತಾದ ಶ್ರುತಿಗಳು ಶಿವಯೋಗಿಗಳ ಹತ್ತು ಇಂದ್ರಿಯಗಳಿಗೂ ಐದು ಪ್ರಾಣಗಳಿಗೂ ಮತ್ತು ಮನಸ್ಸಿಗೂ ಪರಮಾತ್ಮನಲ್ಲಿ ಇಲ್ಲಿಯೇ ಲಯವನ್ನು ತಿಳಿಸುತ್ತಿವೆ. ಹಾಗೆಯೇ "ಸಮಾನಾ ಚಾಸೃತ್ಯುಪಕ್ರಮಾತ್" ಎಂಬ ಸೂತ್ರವು ಜ್ಞಾನಿಗಳಿಗೆ ಲಿಂಗಶರೀರವು ಬ್ರಹ್ಮದಲ್ಲಿ ಲಯವಾಗುವುದೆಂದು ಹಿಂದೆಯೇ ತಿಳಿಸಿದೆ. ಆದರೆ ಇಲ್ಲಿಯೂ ಅದೇ ವಿಷಯವನ್ನು ಚೆನ್ನಾಗಿ ತಿಳಿಸಲಿಕ್ಕೂ, ಪ್ರತ್ಯೇಕ ದೇಶವನ್ನು ಮಾತ್ರವೇ ಒಪ್ಪುವ ಮತಗಳನ್ನು ನಿರಕರಿಸಲಿಕ್ಕೂ ಮತ್ತೆ ಹೇಳಿದ್ದರಲ್ಲಿ ಪುನರುಕ್ತಿ ಏನೂ ಸಂಭವಿಸುವುದಿಲ್ಲ. "ಯಥಾ ನದ್ಯಃ" ಎಂದು ಮುಂತಾದ ಶ್ರುತಿಗಳಲ್ಲಿ ಜೀವನು ಬ್ರಹ್ಮವನ್ನು ಹೊಂದುತ್ತಾನೆಂದು ಹೇಳಿದ್ದರಿಂದ ಮೋಕ್ಷದಶೆಯಲ್ಲಿ ಅವರಿಬ್ಬರಿಗೂ ಐಕ್ಯವನ್ನು ತಿಳಿಸಲಾಗಿದೆ. ಆದರೆ ಇಲ್ಲಿ ಒಂದು ಸಂದೇಹ ಬರುತ್ತದೆ. ಮುಕ್ತಜೀವನ ಮನಸ್ಸು ಪ್ರಾಣ ಮೊದಲಾದವುಗಳಿಗೆ ಬ್ರಹ್ಮದಲ್ಲಿ ಸ್ವರೂಪೈಕ್ಯವೆ? ಅಥವಾ ಸುಷುಪ್ತಿಪ್ರಳಯಗಳಂತೆ ತಾತ್ಕಾಲಿಕವಾಗಿ ಸೇರುವಿಕೆಯೆ? ಎಂಬುದೇ ಆ ಸಂದೇಹ. ಪರಮಾತ್ಮನು ಜೀವನಿಗಿಂತ ಬೇರೆಯಾಗಿರುವುದರಿಂದಲೂ, ಲಿಂಗಶರೀರವು ಚಿದ್ರೂಪನಾದ ಶಿವನಲ್ಲಿ ಬೆರೆಯಲು ಸಾಧ್ಯವಿಲ್ಲದ್ದರಿಂದಲೂ ಜೀವಬ್ರಹ್ಮರಿಗೆ ಎಂದಿಗೂ ಸ್ವರೂಪೈಕ್ಯವು ಬರಲಾರದು. "ಜಡವಾದ ಕರ್ಮಪ್ರಪಂಚವೇ ಜೀವನಿಗೆ ಉಪಾಧಿಯಾಗಿದ್ದರೆ ಕಾರಣಪ್ರಪಂಚವೇ ಈಶ್ವರನಿಗೆ ಉಪಾಧಿ ಎನಿಸಿದೆ" ಎಂಬ ಪೂರ್ವಾಚಾರ್ಯರ ಸಿದ್ಧಾಂತದಂತೆ "ನಾನು ಬ್ರಹ್ಮನಿದ್ದೇನೆ" "ನೀನು ಅದೇ ಆಗಿದ್ದೀಯೆ" ಎಂದು ಮುಂತಾಗಿ ಜೀವಬ್ರಹ್ಮರ ಐಕ್ಯವನ್ನು ತಿಳಿಸುವ ವಾಕ್ಯಗಳಿಗೆ ಜಹದಜಹಲ್ಲಕ್ಷಣೆಯಿಂದ "ಸೋಽಯಂ ದೇವದತ್ತಃ" 'ಹಿಂದೆ ನೋಡಿದ್ದ ದೇವದತ್ತನೇ ಇವನು' ಎಂಬಂತೆ ಬಿಂಬಪ್ರತಿಬಿಂಬಗಳಂತೆಯೂ ಘಟಾಕಾಶಮಹಾಕಾಶಗಳಂತೆಯೂ ಉಪಾಧಿಗಳನ್ನು ತೊರೆದು ಚೈತನ್ಯಗಳೆರಡಕ್ಕೂ ಐಕ್ಯವನ್ನು ಹೇಳುವುದೇ ಯುಕ್ತವೆನಿಸುತ್ತದೆ. ಜೀವೇಶ್ವರರ ಉಪಾಧಿಗಳೆನಿಸಿದ ಅವಿದ್ಯೆಮಾಯೆಗಳು ತೊಲಗದಿದ್ದರೆ ಆನೆ ಗೋವುಗಳಂತೆ ಅವರಿಗೆ ಐಕ್ಯವು ಬರುವಂತಿಲ್ಲ. ಅವರಿಗೆ ಭೇದವು ಸತ್ಯವಾಗಿದ್ದಲ್ಲಿ ಆದು ತೊಲಗುವಂತೆಯೇ ಇಲ್ಲ. ಇದೂಅಲ್ಲದೆ ಅವರಿಬ್ಬರಿಗೆ ಭೇದವೂ ಸತ್ಯವಾದ್ದರಿಂದಲೂ, ಸತ್ಯವನ್ನು ಬೇರೆರೀತಿಯಲ್ಲಿ ಮರೆಮಾಚಲಿಕ್ಕಾಗದ್ದರಿಂದಲೂ ಲಿಂಗಶರೀರವು ಪರಮೇಶ್ವರನಂತೆ ನಿತ್ಯವೇ ಆಗಿರುವುದು. ಅದನ್ನು ಒಪ್ಪದಿದ್ದರೆ ಮುಕ್ತರು ಬೇರೆ ಇರಲಿಕ್ಕೆ ಸಾಧ್ಯವಿಲ್ಲದ್ದರಿಂದ ಅವರಿಗೆ ಪರಾಧೀನತೆ, ಶೇಷಭಾವ, ಕೈಂಕರ್ಯಮೊದಲಾದವನ್ನು ತಿಳಿಸಿರುವ ಶಾಸ್ತ್ರಗಳೆಲ್ಲವೂ ವಿರುದ್ಧವಾದೀತು. ಆದ್ದರಿಂದ ಸಂಸಾರದಶೆಯಲ್ಲಿ ಜೀವಬ್ರಹ್ಮರಿಗೆ ಸ್ವಭಾವಿಕವಾದ ಭೇದವನ್ನೂ, ಮುಕ್ತದಶೆಯಲ್ಲಿ ಹಾಗೆಯೇ ಅಭೇದವನ್ನೂ ಒಪ್ಪುವುದು ಸಮಂಜಸವಲ್ಲವೆಂದು ಆಕ್ಷೇಪಬರುತ್ತದೆ. ಇದಕ್ಕೆ ಸೂತ್ರದಲ್ಲಿ ಸಮಾಧಾನವನ್ನು ತಿಳಿಸಲಾಗಿದೆ. "ಹತ್ತು ಇಂದ್ರಿಯಗಳು ಮನಸ್ಸು ಮತ್ತು ಜೀವ ಇವರೆಲ್ಲರೂ ಪರಮಾತ್ಮನಲ್ಲಿಯೇ ಬೆರೆಯುತ್ತಾರೆ." ಹೀಗೆ

ಜೀವನು ಲಿಂಗಶರೀರದೊಡನೆ ಪರಮಾತ್ಮನಲ್ಲಿ ಬೆರೆಯುವುದನ್ನು ಶ್ರುತಿಯೇ ಸ್ಪಷ್ಟ ಪಡಿಸಿದೆ. ಚೇತನಕ್ಕೂ ಜಡವಸ್ತುವಿಗೂ ಐಕ್ಯವು ಹೊಂದದೆಇರುವುದರಿಂದ ಲಕ್ಷಣೆಯನ್ನು ಸ್ವೀಕರಿಸಬೇಕೆಂದು ಹೇಳಿದ್ದು ಮುಖ್ಯಾರ್ಥಕ್ಕೆ ಬಾಧವೇ ಇಲ್ಲದ್ದರಿಂದ ಯುಕ್ತವಲ್ಲ. "ಯಥಾ ನದ್ಯಃ" ಎಂಬ ಅನೇಕ ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಐಕ್ಯವನ್ನು ಸಂದೇಹಕ್ಕೆಡೆಯಿಲ್ಲದಂತೆ ಸ್ಪಷ್ಟವಾಗಿಯೇ ಹೇಳಿದೆ. ಮಣಿಮಂತ್ರೌಷಧಿಗಳ ಸಿದ್ಧಿಯನ್ನು ಪಡೆದವರೇ ಹುಲಿ ಕರಡಿ ಮೊದಲಾದ ಅನೇಕರೂಪಗಳನ್ನು ಹೊಂದುವುದಾಗಿ ಲೋಕದಲ್ಲಿ ಕಂಡುಬಂದಿದೆ. ಆಗದೇಇರುವುದನ್ನು ಆಗುವಂತೆ ಮಾಡಲು ಶಕ್ತನೂ, ಸತ್ಯಸಂಕಲ್ಪನೂ, ಸರ್ವವಿದ್ಯಾನಿಧಿಯೂ ಆದ ಪರಶಿವಬ್ರಹ್ಮವು ತನ್ನನ್ನು ಉಪಾಸನಮಾಡಿದ ಸದ್ಭಕ್ತರಿಗೆ ಜೀವಭಾವವನ್ನು ತೊಲಗಿಸಿ ತನ್ನೊಡನೆ ಸಾಮರಸ್ಯವನ್ನು ದೊರಕಿಸುವುದರಲ್ಲಿ ಆಶ್ಚರ್ಯವೇನಿದೆ? ಭ್ರಮರಕೀಟ-ಲೋಹರಸ ಮೊದಲಾದ ಅನೇಕ ದೃಷ್ಟಾಂತಗಳಿಂದ ಸ್ವಭಾವವೂ ಬದಲಾವಣೆಯಾಗುವುದೆಂದು ಹಿಂದೆ ಹೇಳಿದೆ. ಜೀವನಿಗೆ ಬದ್ಧಾವಸ್ಥೆಯಂತೆಯೇ ಮುಕ್ತಾವಸ್ಥೆಯಲ್ಲೂ ಸೂಕ್ಷ್ಮಶರೀರವನ್ನು ಒಪ್ಪುವುದಾದರೆ ಅವನು ಯಾವಾಗಲೂ ಸಂಸಾರಿಯೇ ಆಗಿರಬೇಕಾಗುತ್ತದೆ. ಮುಕ್ತಿಯಲ್ಲೂ ದಾಸ್ಯವೇ ಪ್ರಧಾನವಾಗಿದ್ದರೆ ರಾಜಭೃತ್ಯನ್ಯಾಯದಂತೆ ದಾಸನಿಗೆ ಪ್ರಭುವಿನ ಬಗ್ಗೆ ಭಯವೇ ಇರುವುದರಿಂದ ಪೂರ್ಣಾನಂದದ ಅನುಭವವೇ ತಪ್ಪಿಹೋಗುವುದು. "ಬ್ರಹ್ಮದ ಆನಂದವನ್ನು ತಿಳಿದವನು ಯಾವುದಕ್ಕೂ ಹೆದರುವುದಿಲ್ಲ" ಎಂದು ಮುಕ್ತರಿಗೆ ಅಭಯಸ್ಥಿತಿಯನ್ನು ತಿಳಿಸುವ ಅನೇಕ ಶ್ರುತಿಗಳ ವಿರೋಧವು ಸಂಭವಿಸೀತು. "ಯಥಾ ನದ್ಯಃ" ಎಂದು ಮುಂತಾದ ಶ್ರುತಿಗಳ ಅರ್ಥವನ್ನು ಸಂಕೊಚಪಡಿಸಲಿಕ್ಕೆ ಯಾವ ಪ್ರಮಾಣವೂ ಇಲ್ಲ. ಆದ್ದರಿಂದ ಜೀವಬ್ರಹ್ಮರ ಸ್ವರೂಪೈಕ್ಯವೇ ಶ್ರುತಿಸಮ್ಮತವೆಂಬುದು ನಿರ್ವಿವಾದವೆನಿಸಿದೆ.

ನನು ಲಿಂಗಶರೀರವಿಲಯಪೂರ್ವಕತ್ವೇನ ಜೀವಾನಾಂ ಶಿವತತ್ತ್ವಪ್ರಾಪ್ತಿಃ ಸುಷುಪ್ತ್ಯುತ್ಕ್ರಾಂತಿಪ್ರಳಯಾದಿಕಾಲೇಷ್ವಿವ ಸ್ಥೂಲಾವಸ್ಥಾಪ್ರತಿಷೇಧಮಾತ್ರತ್ವಮಿತ್ಯಾಶಂಕಾಯಾಮಧಿಕರಣಾಂತರೇಣ ನಿರಾಕರೋತಿ. ಅವಿಭಾಗಾಧಿಕರಣಂ ‖ ೭ ‖ ಅವಿಭಾಗೋ ವಚನಾತ್ ‖ ೧೫ ‖ ಅವಿಭಾಗಃ ಶಿವಜ್ಞಾನಿನಾಂ ಸೂಕ್ಷ್ಮಶರೀರಸ್ಯ ಆತ್ಯಂತಿಕನಾಶೋ ವಿಧೀಯತೇ. ಕುತಃ? ವಚನಾತ್. "ಅವಿದ್ಯಾಯಾಃ ಪರಂ ಪಾರಂ ತಾರಯಸಿ," "ನ ಸ ಪುನರಾವರ್ತತೇ" ಇತ್ಯಾದಿಶ್ರುತಿಷು ಶಿವತತ್ತ್ವನಿಷ್ಠಾನಾಂ ಅವಿದ್ಯಾತ್ಮಕಪಾಶನಿವೃತ್ತೇಃ ಪುನರಾವೃತ್ತಿರಹಿತತ್ವಸ್ಯ ಚ ಸ್ಪಷ್ಟಮುಪದಿಷ್ಟತ್ವಾತ್ ಪಾಶರೂಪಾಽವಿದ್ಯಾಜನ್ಯಸ್ಯ ಲಿಂಗಶರೀರಸ್ಯ ಆತ್ಯಂತಿಕನಾಶ ಏವಾಂಗೀಕರ್ತವ್ಯಃ ಇತಿ ಸೂತ್ರಾರ್ಥಃ. "ಕ್ಷರಾತ್ಮಾನಾವೀಶತೇ ದೇವ ಏಕಃ", "ತಸ್ಯಾಭಿಧ್ಯಾನಾದ್ಯೋಜನಾತ್ತತ್ತ್ವಭಾವಾದ್ಭೂಯಶ್ಚಾಂತೇ ವಿಶ್ವಮಾಯಾನಿವೃತ್ತಿಃ", "ಭಿದ್ಯತೇ

ಹೃದಯಗ್ರಂಥಿಃ ತಸ್ಮಿನ್ ದೃಷ್ಟೇ ಪರಾವರೇ " ಇತ್ಯಾದಿಶ್ರುತಿಷು ಶಿವ ಜ್ಞಾನಿನಾಂ ಅವಿದ್ಯಾಪಾಶರೂಪಹೃದಯಗ್ರಂಥಿವಿಚ್ಛೇದಲಕ್ಷಣೋಪ ದೇಶಾತ್ ಲಿಂಗಶರೀರೋಪಾದಾನಭೂತಪಾಶರೂಪಾವಿದ್ಯಾನಿವೃತ್ತಿ ಪೂರ್ವಕತ್ವೇನ ಸ್ವರೂಪೈಕ್ಯಂ ಸುಷುಪ್ತಿಪ್ರಳಯಾದಿವತ್ ಪಾಶಪ್ರಕೃತಿ ರೂಪಲಿಂಗಶರೀರೇಣ ವಾ ಜಲೇ ಜಲವತ್ ಲಿಂಗಶರೀರವಿಲಯಪೂರ್ವ ಕತ್ವೇನ ವಾ ಸಂಭವತೀತಿ ಸಂದಿಹ್ಯತೇ. ಜೀವಾನಾಂ ಮುಕ್ತದಶಾಯಾ ಮಪಿ ಮಧುಪಿಷ್ಟೇ ಸ್ವರ್ಣರೇಣುವತ್ ಕುಸೂಲಧಾನ್ಯವತ್ ಲಿಂಗಶರೀ ರೇಣ ಸಹ ಬ್ರಹ್ಮಪ್ರಾಪಕತ್ವಂ ಯುಕ್ತಂ. " ಅಜೋ ಹ್ಯೇಕೋ ಜುಷ ಮಾಣೋಽನುಶೇತೇ ಜಹಾತ್ಯೇನಾಂ ಭುಕ್ತಭೋಗಾಮಜೋಽನ್ಯಃ " ಇತ್ಯಾದೌ ಜೀವಾನಾಂ ಅಜನ್ಯತ್ವವ್ಯವಸ್ಥಾಪನಾತ್ ಚಿದಾತ್ಮಕಸ್ಯ ಜೀವಸ್ಯ ಲಯಾಯೋಗಾತ್ ಲಿಂಗಶರೀರಾಭಾವೇ ಪರಮಾತ್ಮಾನಂದಾ ನುಭವಸಿದ್ಧ್ಯಭಾವಾಚ್ಚ ಸರ್ವಥಾ ಮುಕ್ತಾನಾಮಪಿ ಜಲೇ ಜಲವತ್ ಸ್ವರೂಪೈಕ್ಯಂ ಅಯುಕ್ತಮಿತಿ ಪ್ರಾಪ್ತೇ ವದಾಮಃ. ಮಧುಪಿಷ್ಟೇ ಸ್ವರ್ಣರೇಣುವತ್ ಜೀವಬ್ರಹ್ಮಣೋಃ ಪೃಥಕ್‌ಸ್ವರೂಪೈಕ್ಯಂ ನ ಸಂಭ ವತಿ. ಕಿಂತು ವಹ್ನೌ ವಹ್ನಿವಜ್ಜಲೇ ಜಲವದಪೃಥಗ್ಭಾವೋ ಯುಕ್ತಃ. ಕುತಃ? ವಚನಾತ್ " ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇ ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ । ತಥಾ ವಿದ್ವಾನ್ನಾಮರೂಪಾದ್ವಿ ಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ ॥ " ಇತ್ಯಾದಿಶ್ರುತಿವಚ ನಾತ್ ಸ್ವರೂಪೈಕ್ಯಂ ಅವಿಭಾಗೋ ನಿರ್ದಿಶ್ಯತೇ. ಬದ್ಧಾವಸ್ಥಾವತ್ ಮುಕ್ತಾವಸ್ಥಾಯಾಂ ಲಿಂಗಶರೀರಸದ್ಭಾವೇ "ಕಾರಣಾಭಾವೇ ಕಾರ್ಯಾ ಭಾವಃ " ಇತಿ ನ್ಯಾಯೇನ ತಲ್ಲಿಂಗಶರೀರೋಪಾದಾನಕಾರಣಪಾಶ ರೂಪಾವಿದ್ಯಾಸ್ಥಿತಿರರ್ಥಾತ್ಸೂಚಿತಾ. ತದಂಗೀಕಾರೇ ಬ್ರಹ್ಮೋಪಾ ಸನಜ್ಞಾನಸ್ಯ ವೈಫಲ್ಯಂ ಪ್ರಸಜ್ಯೇತ. ಮುಕ್ತಾನಾಂ ಅಪ್ರಾಕೃತಲಿಂಗಮ ಸ್ತೀತಿ ಚೇತ್ತದಸಂಗತಂ ಸರ್ವವೇದಾಂತವಿರುದ್ಧಪ್ರಸಂಗಾತ್, ಅಪ್ರಾ ಕೃತಸ್ಯ ಲಿಂಗಶರೀರೋಪಾದಾನಕಾರಣತ್ವಾಯೋಗಾತ್, ಲಿಂಗಶರೀರಸ್ಯ ಭೂತಪಂಚಕರಜಸ್ಸತ್ತ್ವಜನ್ಯಸಪ್ತದಶತತ್ತ್ವಾತ್ಮಕತ್ವಸ್ಯ ಸರ್ವ ಶಾಸ್ತ್ರೇಷು ಪ್ರಸಿದ್ಧತ್ವಾಚ್ಚ ಪೂರ್ವೋಕ್ತಮೇವ ವಿದುಷಾಂ ವಿಧೇಯಂ.

ಜೀವರು ಲಿಂಗಶರೀರವನ್ನು ಕಳೆದುಕೊಂಡು ಶಿವಭಾವವನ್ನು ಹೊಂದುತ್ತಾರೆ. ಆದರೆ ಇದು ಸುಷುಪ್ತಿ, ಉತ್ಕ್ರಾಂತಿ ಮತ್ತು ಪ್ರಳಯಗಳಂತೆ ಕೇವಲ ಸ್ಥೂಲಾ ವಸ್ಥೆಯನ್ನು ಮಾತ್ರವೇ ನಿಷೇಧಿಸುತ್ತದೆ ಎಂದಾಶಂಕಿಸಿ ನಿರಾಕರಿಸುತ್ತಾನೆ. ಶಿವ ಯೋಗಿಗೆ ಸೂಕ್ಷ್ಮಶರೀರವು ಪೂರ್ತಿಯಾಗಿ ನಷ್ಟವಾಗುತ್ತದೆ ಎಂದೇ ಶ್ರುತಿಯು ವಿಧಿಸಿದೆ. " ಜ್ಞಾನಿಯು ಅವಿದ್ಯೆಯಿಂದ ಆಚಿನ ದಡವನ್ನು ಮುಟ್ಟಿದ್ದಾನೆ "

" ಧ್ಯಾನಾಗ್ನಿಯಿಂದ ಪಂಡಿತನು ಪಾಶವನ್ನು ಸುಡುತ್ತಾನೆ." " ಆವನು ಮತ್ತೆ ಹಿಂತಿರುಗುವುದೇ ಇಲ್ಲ " ಈಬಗೆಯ ಶ್ರುತಿಗಳಲ್ಲಿ ಶಿವತತ್ತ್ವದಲ್ಲಿ ದೃಢವಾಗಿ ನಿಂತ ವರಿಗೆ ಅವಿದ್ಯೆ ಎಂಬ ಪಾಶವು ತೊಲಗುವುದೆಂದೂ, ಮತ್ತೆ ಹುಟ್ಟುವ ಸ್ಥಿತಿ ತಪ್ಪು ವುದೆಂದೂ ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ ಅವಿದ್ಯೆಯಿಂದ ಹುಟ್ಟಿದ ಪಾಶವೆಂಬ ಲಿಂಗಶರೀರವು ಮುಕ್ತನಿಗೆ ಅತ್ಯಂತವಾಗಿ ನಾಶವಾಗುವುದೆಂದೇ ಅಂಗೀಕರಿಸಬೇಕು. " ಅವನ ನಿರಂತರ ಧ್ಯಾನಧಾರಣ ಸಮಾಧಿಗಳಿಂದ ಮಾಯೆ ಪೂರ್ತಿಯಾಗಿ ತೊಲಗು ವುದು " " ಅವನ ದರ್ಶನದಿಂದ ಎಲ್ಲಾ ಮಲಕರ್ಮಗಳೂ ಸಂಶಯಗಳೂ ತೊಲಗು ತ್ತವೆ " ಎಂದು ಮುಂತಾದ ಶ್ರುತಿಗಳಲ್ಲಿ ಶಿವಯೋಗಿಗಳಿಗೆ ಅವಿದ್ಯಾಪಾಶವೆಂಬ ಹೃದ ಯದ ಗಂಟು ನಷ್ಟವಾಗುವುದೆಂದು ಹೇಳಲಾಗಿದೆ. ಆದ್ದರಿಂದ ಇಲ್ಲಿ ಒಂದು ಸಂಶಯ ಬರುತ್ತದೆ. ಲಿಂಗಶರೀರಕ್ಕೆ ಉಪಾದಾನವೆನಿಸಿದ ಪಾಶವೆಂಬ ಅವಿದ್ಯೆಯು ತೊಲಗುವುದರ ಮೂಲಕ ಜೀವಬ್ರಹ್ಮರಿಗೆ ದೊರಕುವ ಸ್ವರೂಪೈಕ್ಯವು ಸುಷುಪ್ತಿ ಪ್ರಳಯಗಳಂತೆ ಪಾಶವೆಂಬ ಲಿಂಗಶರೀರದೊಡನೆ ಸಂಭವಿಸುತ್ತದೆಯೋ ? ಅಥವಾ ನೀರಿನಲ್ಲಿ ನೀರಿನಂತೆ ಲಿಂಗಶರೀರವನ್ನು ತೊರೆದಮೇಲೆಯೋ? ಎಂಬುದೇ ಈ ಸಂಶಯ. ಜೀವರು ಮುಕ್ತದಶೆಯಲ್ಲಿ ಜೇನುತುಪ್ಪದೊಡನೆ ಕಲಸಿದ ಹಿಟ್ಟಿನಲ್ಲಿ ಭಂಗಾರದ ರೇಣುವಿನಂತೆಯೂ, ಕಣಜದಲ್ಲಿ ಹಾಕಿರುವ ಧಾನ್ಯದಂತೆಯೂ ಲಿಂಗಶರೀರದೊಡನೆ ಪರಮಶಿವನಲ್ಲಿ ಸೇರುವರೆಂಬುದೇ ಯುಕ್ತವಾಗಿದೆ. " ಇಬ್ಬರೂ ಅಜರು " " ಒಬ್ಬ ಅಜನು ಪ್ರಕೃತಿಯನ್ನು ಭೋಗಿಸುತ್ತಿದ್ದರೆ ಮತ್ತೊಬ್ಬನು ಅದನ್ನು ಭೋಗಿಸಿ ತೊರೆದಿದ್ದಾನೆ " ಹೀಗೆ ಶ್ರುತಿಯಲ್ಲಿ ಜೀವರನ್ನು ಅಜನ್ಯರೆಂದು ತಿಳಿಸಲಾಗಿದೆ. ಚಿದ್ರೂಪನಾದ ಜೀವನಿಗೆ ಲಯವೇ ಹೊಂದುವುದಿಲ್ಲ. ಇದೂ ಅಲ್ಲದೆ ಲಿಂಗಶರೀ ರವೇ ಇಲ್ಲದಿದ್ದರೆ ಮುಕ್ತನು ಶಿವಾನಂದವನ್ನೇ ಅನುಭವಿಸಲಾಗುವುದಿಲ್ಲ. ಆದ್ದ ರಿಂದ ಮುಕ್ತರಿಗೆ ನೀರಿನಲ್ಲಿ ನೀರು ಬೆರೆಯುವಂತೆ ಸ್ವರೂಪೈಕ್ಯವು ಹೊಂದುವುದಿಲ್ಲ ವೆಂದು ಆಕ್ಷೇಪವು ಬರುತ್ತದೆ. ಅದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಮಧುಪಿಷ್ಟದಲ್ಲಿ ಸ್ವರ್ಣರೇಣುವಿನಂತೆ ಜೀವಬ್ರಹ್ಮರು ಒಟ್ಟಿಗಿದ್ದರೂ ಬೇರೆಯಾಗುವ ಸ್ಥಿತಿ ಸಂಭವಿಸುವುದಿಲ್ಲ ; ಆದರೆ ಬೆಂಕಿಯಲ್ಲಿ ಬೆಂಕಿಯೂ ನೀರಿನಲ್ಲಿ ನೀರೂ ಬೆರೆತಂತೆ ಬೇರೆಯಾಗದ ಸ್ಥಿತಿಯೇ ಅವರಿಗೆ ಹೊಂದಿಕೆಯಾಗುತ್ತದೆ. ಇದನ್ನು " ಯಥಾ ನದ್ಯಃ " ಎಂಬ ಶ್ರುತಿಯೇ ತಿಳಿಸಿದೆ. ಆದರೆ ಮುಕ್ತನಿಗೂ ಶಿವನಿಗೂ ವಿಭಾಗವಾಗದ ಸ್ಥಿತಿ ಎಂದರೆ ಸ್ವರೂಪೈಕ್ಯವೇ ಆಗುತ್ತದೆ. ಬದ್ಧಾವಸ್ಥೆಯಂತೆ ಮುಕ್ತಾವಸ್ಥೆಯಲ್ಲೂ ಲಿಂಗಶರೀರವಿದ್ದರೆ "ಕಾರಣವಿಲ್ಲದಿದ್ದರೆ ಕಾರ್ಯವೂ ಇರುವುದಿಲ್ಲ"ವೆಂಬ ನ್ಯಾಯದಿಂದ ಲಿಂಗಶರೀರಕ್ಕೆ ಉಪಾದಾನಕಾರಣವೆನಿಸಿದ ಪಾಶವೆಂಬ ಅವಿದ್ಯೆಯೂ ಇರುವುದೆಂದೇ ಒಪ್ಪಬೇಕಾಗುತ್ತದೆ. ಮುಕ್ತಿಯಲ್ಲೂ ಅವಿದ್ಯೆಯನ್ನು ಒಪ್ಪಿದರೆ ಬ್ರಹ್ಮವಿದ್ಯೆಯೇ ವ್ಯರ್ಥವಾಗಬೇಕಾದೀತು. ಮುಕ್ತರಿಗೆ ಅಪ್ರಾಕೃತವಾದ ಲಿಂಗದೇಹವಿರುವುದೆಂದು ಹೇಳಿದರೆ ಇದು ಎಲ್ಲಾ ವೇದಾಂತಗಳಿಗೂ ವಿರುದ್ಧವಾಗಬೇಕಾಗುತ್ತದೆ. ಅಪ್ರಾ

ಕೃತವಾದ ಲಿಂಗಶರೀರವು ಉಪಾದಾನಕಾರಣವಾಗುವಂತೆಯೂ ಇಲ್ಲ. ಲಿಂಗಶರೀರದಲ್ಲಿ ಪಂಚಭೂತಗಳ ಮತ್ತು ಸತ್ತ್ವ ರಜೋಗುಣಗಳ ಸಂಪರ್ಕದಿಂದಾದ ಹದಿನೇಳು ತತ್ತ್ವಗಳಿರುವುವೆಂದು ಎಲ್ಲಾ ಶಾಸ್ತ್ರಗಳಲ್ಲೂ ಪ್ರಸಿದ್ಧವಾಗಿದೆ. ಆದ್ದರಿಂದ ಹಿಂದೆ ಹೇಳಿದಂತೆ ಸಾಯುಜ್ಯಮುಕ್ತನಿಗೆ ಲಿಂಗಶರೀರವಿಲ್ಲವೆಂದೇ ಹೇಳಬೇಕು.

ಏವಂ ಅಮೂರ್ತಶಿವಜ್ಞಾನನಿಷ್ಠಾನಾಂ ಇಹೈವ ಶರೀರೇ ಶಿವಜ್ಞಾನಸಾಮರ್ಥ್ಯೇನ ಪಾಶರೂಪಾವಿದ್ಯಾಪಟಲಂ ಭಿತ್ತ್ವಾ ನದೀಸಮುದ್ರವದವಿಭಾಗೇನ ಶಿವಸಾಯುಜ್ಯಮುಕ್ತಿರ್ಲಭ್ಯತ ಇತಿ ವ್ಯವಸ್ಥಾಪನೇ ಮೂರ್ತಬ್ರಹ್ಮೋಪಾಸಕಾನಾಂ ವಿದುಷಾಂ ಚರಮಕಾಲೇ ಕೇನ ಮಾರ್ಗೇಣ ಗತ್ವಾ ಸಾಲೋಕ್ಯಾದಿತ್ರಿವಿಧಕಲ್ಯಾಣಾತ್ಮಕವಿಭೂತ್ಯನುಭವಃ ಸಂಪದ್ಯತ ಇತ್ಯಾಶಂಕಾಯಾಂ ಅಧಿಕರಣಾಂತರೇಣ ತನ್ಮಾಹಾತ್ಮ್ಯಂ ಪ್ರಪಂಚಯತಿ. ತದೋಕೋಽಗ್ರಜ್ವಲನಾಧಿಕರಣಂ ॥ ೮ ॥

ತದೋಕೋಽಗ್ರಜ್ವಲನಂ ತತ್ಪ್ರಕಾಶಿತ್ವದ್ವಾರೋ ವಿದ್ಯಾಸಾಮರ್ಥ್ಯಾತ್ತಚ್ಛೇಷಗತ್ಯನುಸ್ಮೃತಿಯೋಗಾಚ್ಚ ಹಾರ್ದಾನುಗೃಹೀತಶ್ಶತಾಧಿಕಯಾ ॥ ೧೬ ॥ ತದೋಕೋಽಗ್ರಜ್ವಲನಂ ತಸ್ಯ ಜೀವಸ್ಯ ಪ್ರಾಣೇಂದ್ರಿಯಾದಿಪರಿವೃತಸ್ಯ ಓಕಃ ಸ್ಥಾನಂ ಹೃತ್ಪುಂಡರೀಕಂ ತಸ್ಯ ಅಗ್ರಜ್ವಲನಂ ಸಂಭವತಿ ಅಗ್ರಸ್ಯ ಊರ್ಧ್ವಭಾಗಸ್ಯ ವಿಕಾಸೋ ಭವತಿ. ತತ್ಪ್ರಕಾಶಿತದ್ವಾರಃ ತೇನ ವಿಕಾಸಿನಾ ಪ್ರದರ್ಶಿತದೇವಯಾನಮಾರ್ಗಃ ಸನ್ ಮೂರ್ತಬ್ರಹ್ಮೋಪಾಸಕೋ ಭಕ್ತಃ ಸುಷುಮ್ನಾನಾಡೀದ್ವಾರಾ ದೇಹಾದ್ಬಹಿರ್ಗಚ್ಛತಿ. ಹೃತ್ಪುಂಡರೀಕಸ್ಯ ಊರ್ಧ್ವಪ್ರದೇಶವಿಕಾಸೇ ಹೇತುದ್ವಯಮಾಹ. ತಸ್ಯಾಃ ಮೂರ್ತಬ್ರಹ್ಮೋಪಾಸನಾಯಾಃ ಶೇಷಭೂತಯಾ ಲಿಂಗಭೂತಯಾ ಗತ್ಯನುಸ್ಮೃತ್ಯಾ ದೇವಯಾನಮಾರ್ಗಚಿಂತಯಾ ಯೋಗಾತ್ ಶಿವಯೋಗಸಂಬಂಧಾಚ್ಚ ತದೋಕೋಽಗ್ರಜ್ವಲನಂ ಭವತಿ, ತತ್ಪ್ರಕಾಶಿತದ್ವಾರಸ್ಸನ್ ಉಪಾಸಕಃ ಹಾರ್ದಾನುಗೃಹೀತಃ ಹೃತ್ಪುಂಡರೀಕಸ್ಥೇನ ಉಮಾಸಹಿತಮೂರ್ತಪರಶಿವಬ್ರಹ್ಮಣಾ ಅನುಗೃಹೀತಃ ಪ್ರೇರಿತಸ್ಸನ್ ಶತಾಧಿಕಯಾ ಶತಸಂಖ್ಯಾಕಾಭ್ಯಃ ಪ್ರಧಾನನಾಡೀಭ್ಯಃ ಅಧಿಕಯಾ ಅತಿರಿಕ್ತಯಾ ಏಕಶತತಮ್ಯಾ ಸುಷುಮ್ನಾನಾಡ್ಯಾ ದೇಹಾದ್ಬಹಿರ್ಗಚ್ಛತೀತಿ ಭಾವಃ. "ಶತಂ ಚೈಕಾಚ ಹೃದಯಸ್ಯ ನಾಡ್ಯಃ ತಾಸಾಂ ಮೂರ್ಧಾನಮಭಿನಿಸೃತೈಕಾ। ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಙ್ಙನ್ಯಾ ಉತ್ಕ್ರಮಣೇ ಭವಂತಿ ॥" ಇತಿ ಶ್ರುತಿಬಲಾತ್ ಇತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಪೂರ್ವೇ ನಿರಾಸನಜ್ಞಾನನಿಷ್ಠಾನಾಂ ನಿರವಯಪರಶಿವೋಪಾಸಕಾನಾಂ ಉತ್ಕ್ರಾಂತಿಲಕ್ಷಣಮಭಿಹಿತಂ. ಅತ್ರ ಮೂರ್ತಬ್ರಹ್ಮೋಪಾಸಕಾನಾಂ

ಮಹಾತ್ಮನಾಂ ಕರ್ಮಿಣಾಂ ಚ ಉತ್ಕ್ರಾಂತೌ ವಿಶೇಷೋಽಸ್ತಿ ವಾ ನವಾ ಇತಿ ಸಂದಿಹ್ಯಾತ್ರೇದಮಾಮ್ನಾಯತೇ. "ತಯೋಽರ್ಧ್ವಮಾಯನ್ನಮೃತತ್ವಮೇತಿ" ಇತ್ಯಸ್ಯಾಃ ಶ್ರುತೇರಯಮರ್ಥಃ. ಹೃತ್ಪುಂಡರೀಕಸಂಬಂಧಿನ್ಯೋ ನಾಡ್ಯಃ ಏಕೋತ್ತರಶತಂ ಭವಂತಿ. ತಾಸಾಂ ಮಧ್ಯೇ ಏಕಾ ಸುಷುಮ್ನಾಖ್ಯಾ ನಾಡೀ ಮೂರ್ಧಾನಮಭಿನಿಃಸೃತಾ ಬ್ರಹ್ಮರಂಧ್ರಪರ್ಯಂತಂ ವ್ಯಾಪ್ತಾ. ತಯಾ ದ್ವಾರಾ ಊರ್ಧ್ವಮಾಯನ್ ದೇಹಾದ್ಬಹಿರ್ನಿರ್ಗಚ್ಛನ್ ಉಪಾಸಕಃ ಅಮೃತತ್ವಂ ಪರಶಿವಲೋಕಂ ಪ್ರಾಪ್ನೋತಿ. ಹೃತ್ಪುಂಡರೀಕಸ್ಯ ಚತಸೃಷು ದಿಕ್ಷು ವಿದ್ಯಮಾನಾ ಅನ್ಯಾಃ ನಾಡ್ಯಃ ಕರ್ಮಿಣಾಮುತ್ಕ್ರಮಣೇ ದ್ವಾರಾಣಿ ಭವಂತೀತ್ಯರ್ಥಃ. ಸುಕೃತಿನಾಂ ದುಷ್ಕೃತಿನಾಂ ಚ ಧೂಮಾದಿಮಾರ್ಗೇಣ ತೃತೀಯಮಾರ್ಗೇಣ ಚ ಸ್ವರ್ಗನರಕಾದಿಪ್ರಾಪ್ತಿಃ ರಂಹತಿಪಾದ ಏವೋಕ್ತೇತಿ ನಾತ್ರೋಚ್ಯತೇ. ಅನಯಾ ನಾಡೀನಾಂ ಶತಾಧಿಕಯಾ ಮೂರ್ಧನ್ಯನಾಡ್ಯೈವ ವಿದುಷೋ ಗಮನಂ. ಅನ್ಯಾಭಿರೇವಾ ಚಾವಿದುಷೋ ಗಮನಂ ಇತ್ಯಯಂ ನಿಯಮ ಉಪಪದ್ಯತೇ ವಾ ನವೇತಿ ಸಂಶಯಃ. ಕಿಂ ಯುಕ್ತಂ? ನಿಯಮೋ ನೋಪಪದ್ಯತ ಇತಿ. ಕುತಃ? ನಾಡೀನಾಂ ಭೂಯಸ್ತ್ವಾದತಿ ಸೂಕ್ಷ್ಮತ್ವಾಚ್ಚ ದುರ್ವಿವೇಚನತಯಾ ಪುರುಷೇಣೋಪಾದಾತುಮಶಕ್ಯತ್ವಾತ್ "ತಯೋರ್ಧ್ವಮಾಯನ್ನಮೃತತ್ವಮೇತಿ" ಇತಿ ಶ್ರುತಿಃ ಯಾದೃಚ್ಛಿಕಮುತ್ಕ್ರಾಂತಿಮನುವದತಿ. ಕಿಂಚ "ತೇಜಃ ಪರಸ್ಯಾಂ ದೇವತಾಯಾಂ" ಇತಿ ಶ್ರುತೌ ಭೂತಸ್ಯ ಪರಮಕಾರಣೇ ಪರಮಾಕಾಶರೂಪೇ ಪರಶಿವೇ ಪರಬ್ರಹ್ಮಣೇ ಸ್ವಪ್ರಕಾಶೇ ವಿದ್ವಾನವಿದ್ವಾಂಶ್ಚ ವಿಲಯಾಽವಿಭಾಗಲಕ್ಷಣೇನ ವಿಶ್ರಾಮ್ಯತೀತಿ ಶ್ರುತಿಶ್ರವಣಾತ್ ಸರ್ವೇಷಾಮುತ್ಕ್ರಾಂತಿಸ್ಸಮಾನೈವ. "ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತತೇ ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತಿ ಚಕ್ಷುಷೋ ವಾ ಮೂರ್ಧ್ನೋ ವಾನ್ಯೇಭ್ಯೋ ವಾ ಶರೀರೇಭ್ಯೋ ಗಚ್ಛತಿ" ಇತಿ ದರ್ಶನಾತ್ ವಿದುಷಾಮತಿಶಯತ್ವಂ ಸರ್ವಥಾ ನ ಘಟತ ಇತಿ ಪ್ರಾಪ್ತೇ ಬ್ರೂಮಃ. "ಶತಾಧಿಕಯಾ" ಇತಿ. ವಿದ್ವಾನ್ ಶತಾಧಿಕಯಾ ಮೂರ್ಧನ್ಯಯೈವ ನಾಡ್ಯಾ ಉತ್ಕ್ರಾಮತಿ. ನ ಚಾಸ್ಯಾಃ ವಿದುಷೋ ದುರ್ವಿವೇಚತ್ವಂ. ವಿದ್ವಾನ್ ಹಿ ಪರಮಪುರುಷಶಿವಾರಾಧನಭೂತಾತ್ಯರ್ಥಪ್ರಿಯಾವಿದ್ಯಾಸಾಮರ್ಥ್ಯಾದ್ವಿದ್ಯಾಶೇಷಭೂತತಯಾ ಅತ್ಯರ್ಥಪ್ರಿಯಗತ್ಯನುಸರಣಯೋಗಾಚ್ಚ ಪ್ರಸನ್ನೇನ ಹರೇಣ ಪರಬ್ರಹ್ಮಣಾ ಮಹೇಶ್ವರೇಣಾನುಗೃಹೀತೋ ಭವತಿ. ತತಶ್ಚ ತದೋಕಸ್ತಸ್ಯ ಜೀವಸ್ಯ ಸ್ಥಾನಂ ಹೃದಯಂ ಅಗ್ರಜ್ವಲನಂ

ಭವತಿ. ಅಗ್ರೇ ಜ್ವಲನಂ ಪ್ರಕಾಶನಂ ಯಸ್ಯ ತದಿದಮುಗ್ರಜ್ವಲನಂ ಪರಮಪುರುಷಶಿವಪ್ರಸಾದಾತ್ಪ್ರಕಾಶಿತದ್ವಾರೋ ವಿದ್ವಾಂಸ್ತಾಂ ನಾಡೀಂ ವಿಜಾನಾತೀತಿ ಯೊ ವಿದುಷೋ ಗತಿರುಪಪದ್ಯತೇ ತಸ್ಮಾದವಿದುಷಾಂ ಹೃದಯೇ ಸುಷುಮ್ನನಾಡ್ಯಾ ಲಿಂಗಶರೀರೇಣ ಸಹ ಜೀವೋತ್ಕ್ರಮಣಂ ನ ಸಂಭವತಿ. ಇದಮೇವ ವೈಶೇಷ್ಯಂ. ಶ್ರುತ್ಯಂತರೇಽಪಿ ಏತದುಕ್ತಂ. "ರುದ್ರೋ ಜನಾನಾಂ ಹೃದಯೇ ಸನ್ನಿವಿಷ್ಟಃ," "ಹೃತ್ಪುಂಡರೀಕಂ ವಿರಜಂ ವಿಶುದ್ಧಂ ವಿಚಿಂತ್ಯ ಮಧ್ಯೇ ವಿಶದಂ ವಿಶೋಕಂ," "ಅಚಿಂತ್ಯ ಮವ್ಯಕ್ತಮನಂತಬೋಧಂ ಶಿವಂ ಪ್ರಶಾಂತಮಮೃತಂ ಬ್ರಹ್ಮಯೋನಿಂ" ಇತ್ಯಾದಿಶ್ರುತಿಶತೇಷು, "ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ। ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ॥ ಶುಚೌ ದೇಶೇ ಸಮಾಸೀನೋ ಯಥಾವತ್ಕಲ್ಪಿತಾಸನಃ। ಜಿತೇಂದ್ರಿಯೋ ಜಿತಕ್ರೋಧಃ ಚಿಂತಯೇಚ್ಛಿವಮವ್ಯಯಂ। ಹೃತ್ಪುಂಡರೀಕಾಂತರಸನ್ನಿವಿಷ್ಟಂ ಸ್ವತೇಜಸಾ ವ್ಯಾಪ್ತನಭೋಽವಕಾಶಂ। ಅತೀಂದ್ರಿಯಂ ಸೂಕ್ಷ್ಮಮನಂತಮಾದ್ಯಂ ಧ್ಯಾಯೇತ್ಪರಾನಂದಮಯಂ ಮಹೇಶಂ। ಧ್ಯಾನಾವಧೂತಾಖಿಲಕರ್ಮಬಂಧಃ ಚಿರಂ ಚಿದಾನಂದನಿಮಗ್ನಚೇತಾಃ॥" ಇತ್ಯಾದಿಸ್ಮೃತಿಷು ಚ ಸರ್ವಜೀವಹೃದಯಪುಂಡರೀಕಸ್ಥಿತಿತ್ವಂ ಮುಮುಕ್ಷುಜನಧ್ಯೇಯತ್ವಂ ಚ ಶಿವಸ್ಯೈವ ನಿಶ್ಚೀಯತೇ, "ಲಿಂಗೇ ಸುಷುಪ್ತಿಃ", "ಸತಾ ಸೌಮ್ಯ ತದಾ ಸಂಪನ್ನೋ ಭವತಿ" ಇತ್ಯಾದಿಶ್ರುತಿಷು ಸರ್ವೇಂದ್ರಿಯವೃತ್ತಿಭಿಸ್ಸಹ ಶಾರೀರಸ್ಸುಷುಪ್ತೌ ಸ್ವಾವೃತಪಾಪೇನ ಸಹ ಸದಾಶಿವಮವಗಮಯತಿ. "ವಿಶ್ವಾಧಿಕೋ ರುದ್ರೋ ಮಹರ್ಷಿಃ", "ಸರ್ವೋ ವೈ ರುದ್ರಃ", "ರುದ್ರ ಏಕತ್ವಮಾಹುಃ", "ರುದ್ರೋ ವೈ ಶಾಶ್ವತಂ ವೈ ಪುರಾಣಂ", "ಅಜಾತ ಇತ್ಯೇವ ಕಶ್ಚಿದ್ಭೀರುಃ ಪ್ರಪದ್ಯತೇ", "ರುದ್ರ ಯತ್ತೇ ದಕ್ಷಿಣಂ ಮುಖಂ ತೇನ ಮಾಂ ಪಾಹಿ ನಿತ್ಯಂ", "ಶಿವ ಏಕೋ ಧ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ", "ಈಶಂ ಜ್ಞಾತ್ವಾ ಅಮೃತಾ ಭವಂತಿ" ಇತ್ಯಾದಿಶ್ರುತಿಷು ಸರ್ವೋಪಾದಾನತ್ವಂ ಸರ್ವೋಪಾಸ್ಯತ್ವಂ ಸರ್ವಮುಕ್ತಿಫಲಪ್ರದಾಯಕತ್ವಂ ಚ ಶಿವಸ್ಯೈವಾವಗಮ್ಯತೇ. ತಸ್ಮಾನ್ಮುಮುಕ್ಷೂಣಾಂ ಶಿವೇತರಜ್ಞೇಯವಸ್ತು ನಾಸ್ತೀತಿ ವೇದಿತವ್ಯಂ. ಅಸ್ಯ ಹಿ ಜಂತೋಃ ಪ್ರಾಣೇಷೂತ್ಕ್ರಮಮಾಣೇಷು ರುದ್ರಸ್ತಾರಕಂ ಬ್ರಹ್ಮ ಪ್ರಣವಮಾಚಷ್ಟ ಇತಿ ವಿದುಷಾಮುತ್ಕ್ರಾಂತೌ ಸ್ವತತ್ತ್ವಪ್ರಕಾಶಕಪ್ರಣವಾತ್ಮಕತಾರಕಬ್ರಹ್ಮೋಪದೇಶಕಥನೇನ ಮೋಕ್ಷಪ್ರದಾಯಕತ್ವಂ ನೇತರಸ್ಯ ಸಿದ್ಧಂ. "ಅಧ್ಯವೋಚದಧಿ ವಕ್ತಾ ಪ್ರಥಮೋ ದೈವ್ಯೋ ಭಿಷಕ್", "ಮಾ ತ್ವಾ ರುದ್ರ

ಚಕೃಧಾ ಮಾ ನಮೋಭಿರ್ಮಾ ತುಷ್ಟುಭಿರ್ವೃಷಭಮಾ ಸಹೂತೀ | ಉನ್ನೋವೀರಾಂ ಅರ್ಪಯ ಭೇಷಜೇಭಿರ್ಭಿಷಕ್ತಮಂ ತ್ವಾ ಭಿಷಜಾಂ ಶೃಣೋಮಿ" ಇತ್ಯನಾದಿಸಂಸಾರವ್ಯಾಧಿನಿರ್ಮುಕ್ತಭಿಷಕ್ತ್ವಂ ಶಿವಸ್ಯೈವ ದೃಶ್ಯತೇ. "ಮಾಯಾಂ ತು ಪ್ರಕೃತಿಂ ವಿಂದ್ಯಾನ್ಮಾಯಿನಂ ತು ಮಹೇಶ್ವರಂ" ಇತ್ಯಾದೌ ನಿಖಿಲಬ್ರಹ್ಮಾಂಡನಿರ್ಮಾಣಲಕ್ಷಣಮಾಯಾಶಕ್ತ್ಯವಚ್ಛಿನ್ನತ್ವೇನ ಜಗದೇಕಕಾರಣತ್ವಂ ಶ್ರೂಯತೇ. ತಸ್ಮಾತ್ಸಕಲಹೃದಯಪುಂಡರೀಕವಾಸಃ ಪರಮಪುರುಷಶ್ಶಿವ ಏವೋಮಾಪತಿಃ ಸ್ವಾಜ್ಞಾರೂಪಶ್ರುತಿಚೋದಿತೇಷು ಶ್ರೌತಸ್ಮಾರ್ತಾದಿಷು ಸ್ವಾರಾಧನರೂಪೇಷು ಕರ್ಮಸುಸ್ವಾಹಂಕಾರಪರಿತ್ಯಾಗಪೂರ್ವಕಸ್ವಾರ್ಪಿತಸ್ವಜಾತ್ಯಾಶ್ರಮಕರ್ಮಾನುಷಂಗಿಣಂ ಸ್ವಭಕ್ತಂ ಸ್ವಾನುಗ್ರಹವಿಶೇಷೇಣ ಪಾಶರೂಪಾವಿದ್ಯಾಮಲಧ್ವಂಸಂ ಕೃತ್ವಾ ಪ್ರಕಾಶಿತಾತ್ಮಜ್ಯೋತಿಃ ತಂ ಮೂರ್ಧನ್ಯನಾಡ್ಯೋದ್ಧೃತ್ಯ ಅರ್ಚಿರಾದಿಮಾರ್ಗೇಣ ಸ್ವಕೀಯಂ ಪರಮಪದಮಪ್ರಾಕೃತಂ ನಿರತಿಶಯಾನಂದಸ್ವಭಾವಂ ಪ್ರಾಪಯಿತ್ವಾ ಸ್ವೀಯಾಕಾರೇಣ ನಿತ್ಯನಿರತಿಶಯನಿರ್ಮಲನಿಜಾನಂದಂ ಗಮಯತಿ. ತಸ್ಮಾದವಿದುಷೋ ವಿದುಷಶ್ಚ ಗತಿವೈಷಮ್ಯಮೇವಂ ನಿರ್ಣೀಯತೇ.

ಹೀಗೆ ಅಮೂರ್ತೋಪಾಸಕರು ಇಲ್ಲಿಯೇ ಈ ಶರೀರದಲ್ಲಿ ಶಿವಜ್ಞಾನದ ಬಲದಿಂದ ಪಾಶವೆಂಬ ಅವಿದ್ಯೆಯನ್ನು ಕಳೆದುಕೊಂಡು ನದೀ ಸಮುದ್ರದಂತೆ ವಿಭಾಗವಾಗದ ಸ್ಥಿತಿಯಲ್ಲಿ ಶಿವಸಾಯುಜ್ಯವನ್ನು ಹೊಂದುವರೆಂದು ವ್ಯವಸ್ಥೆಯಾದಮೇಲೆ ಮೂರ್ತೋಪಾಸಕರು ಕೊನೆಗಾಲದಲ್ಲಿ ಯಾವ ಮಾರ್ಗದಿಂದ ಹೋಗಿ ಸಾಲೋಕ್ಯ ಮೊದಲಾದ ಮೂರುಬಗೆಯ ಮುಕ್ತಿಯನ್ನು ಅನುಭವಿಸುತ್ತಾರೆಂದು ಆಶಂಕಿಸಿ ಸಮಾಧಾನಮಾಡುತ್ತಾನೆ. ಜೀವನು ಪ್ರಾಣೇಂದ್ರಿಯಗಳೊಡಗೂಡಿ ತನ್ನ ವಾಸಸ್ಥಾನವಾದ ಹೃದಯಕಮಲದಲ್ಲಿ ಬೆರೆತಾಗ ಅವನಿಗೆ ಮೇಲ್ಭಾಗದಲ್ಲಿ ವಿಕಾಸವುಂಟಾಗುವುದು. ಆ ಪ್ರಕಾಶದಿಂದ ಅವನಿಗೆ ದೇವಯಾನಮಾರ್ಗವು ಕಾಣಬರುವುದು. ಹೀಗೆ ಮೂರ್ತೋಪಾಸಕನಾದ ಭಕ್ತನು ಸುಷುಮ್ನೆಯಮೂಲಕ ದೇಹದಿಂದ ಹೊರಗೆ ಹೊರಡುತ್ತಾನೆ. ಹೃದಯಕಮಲದ ಮೇಲ್ಭಾಗ ವಿಕಾಸವಾಗಲಿಕ್ಕೆ ಎರಡು ಕಾರಣಗಳಿವೆ. ಮೂರ್ತೋಪಾಸನದ ಸಾಮರ್ಥ್ಯವೇ ಮೊದಲನೆಯಕಾರಣ. ಆ ಉಪಾಸನೆಗೆ ಅಂಗವಾದ ದೇವಯಾನಮಾರ್ಗದ ಸ್ಮರಣದಿಂದಲೇ ದೊರಕುವ ಶಿವಯೋಗವೇ ಎರಡನೆಯ ಕಾರಣ. ಇವುಗಳಿಂದ ಹೃದಯಕಮಲವು ವಿಕಾಸವಾಗುತ್ತದೆ. ಆ ಪ್ರಕಾಶದಿಂದ ಉಪಾಸಕನು ತನ್ನ ಮುಂದಿನ ಮಾರ್ಗವನ್ನು ತಿಳಿಯುತ್ತಾನೆ. ಹೃದಯಕಮಲದಲ್ಲಿ ಉಮಾಶಕ್ತಿವಿಶಿಷ್ಟನಾಗಿ ದಿವ್ಯಮಂಗಳವಿಗ್ರಹದೊಡನೆ ಗುಪ್ತವಾಗಿ ನೆಲಸಿರುವ ಪರಶಿವನ ಅನುಗ್ರಹವನ್ನು ಪಡೆದು ಮುಕ್ತನು ನೂರು ನಾಡಿಗಳಿಗೂ ಅಧಿಕವಾದ ಸುಷುಮ್ನಾನಾಡಿಯಿಂದ ಹೊರಗೆ ಹೊರಡುತ್ತಾನೆ. "ದೇಹದಲ್ಲಿ

ನೂರೊಂದುನಾಡಿಗಳಿವೆ. ಅವುಗಲ್ಲೊಂದು ಶಿರಸ್ಸಿನಕಡೆಗೆ ಹೊರಟಿದೆ. ಅದರಮೂಲಕ ಹೊರಟವನು ಅಮೃತನಾಗುತ್ತಾನೆ. ಬೇರೆ ನಾಡಿಗಳಮೂಲಕ ಹೊರಟವನು ಸುತ್ತುತ್ತಲೇ ಇರುವನು " ಎಂಬ ಶ್ರುತಿಯೂ ಇದನ್ನೆ ತಿಳಿಸುತ್ತದೆ. ಯಾವ ವಾಸನೆಯೂ ಇಲ್ಲದೆ ಶುದ್ಧರಾಗಿ ಅಮೂರ್ತಪರಶಿವನನ್ನು ಉಪಾಸನಮಾಡುವವರಿಗೆ ಉತ್ಕ್ರಮಣದ ಸ್ವರೂಪವನ್ನು ಹಿಂದೆ ತಿಳಿಸಿಯಾಯಿತು. ಇಲ್ಲಿ ಮೂರ್ತೋಪಾಸಕರಿಗೂ ಮೂರ್ಖರಿಗೂ ಉತ್ಕ್ರಮಣದಲ್ಲಿ ವಿಶೇಶವುಂಟೇ ಇಲ್ಲವೇ ಎಂಬ ಸಂದೇಹ ಬಂದದ್ದರಿಂದ ಸುಷುಮ್ನಾನಾಡಿಯ ವಿಚಾರವನ್ನು ತಿಳಿಸಲಾಗಿದೆ. ಈ ಶ್ರುತಿಯ ಅರ್ಥ ಹೀಗಿದೆ. ಹೃದಯಕಮಲಕ್ಕೆ ಸಂಬಂಧಿಸಿದ ನಾಡಿಗಳು ನೂರೊಂದು ಇವೆ. ಅವುಗಳಲ್ಲಿ ಸುಷುಮ್ನೆ ಎಂಬುದೊಂದು ಮಾತ್ರ ಶಿರಸ್ಸಿನಲ್ಲಿ ಬ್ರಹ್ಮರಂಧ್ರದವರೆಗೆ ವ್ಯಾಪಿಸಿದೆ. ಆ ಮೂಲಕ ಮೇಲಕ್ಕೆಹೋದವನು ದೇಹದಿಂದ ಹೊರಗೆ ಹೊರಟು ಪರಶಿವಲೋಕವನ್ನು ಹೊಂದುತ್ತಾನೆ. ಹೃದಯಕಮಲದ ನಾಲ್ಕು ದಿಕ್ಕುಗಳಲ್ಲೂ ವ್ಯಾಪಿಸಿರುವ ಇತರ ನಾಡಿಗಳು ಕರ್ಮಿಗಳಿಗೆ ಹೊರಡಲು ಮಾರ್ಗಗಳೆನಿಸಿವೆ. ಸುಕೃತಿಗಳು ಧೂಮಾದಿಮಾರ್ಗದಿಂದಲೂ, ದುಷ್ಕೃತಿಗಳು ತೃತೀಯ ಮಾರ್ಗದಿಂದಲೂ ಸ್ವರ್ಗ ನರಕಗಳನ್ನು ಹೊಂದುತ್ತಾರೆ. ಆಶೆ ಎಲ್ಲಕ್ಕೂ ಅಧಿಕವೆನಿಸಿದ ಸುಷುಮ್ನೆಯಿಂದಲೇ ಜ್ಞಾನಿಯು ಹೊರಡುವನು, ಬೇರೆ ನಾಡಿಗಳಿಂದ ಕರ್ಮಿಗಳು ಹೊರಡುವರು ಎಂಬ ನಿಯಮವು ಯುಕ್ತವೇ ಅಲ್ಲವೆ? ಎಂದು ಸಂಶಯಬರುತ್ತದೆ ; ಯಾಕೆಂದರೆ ನಾಡಿಗಳು ಬಹಳವಾಗಿದ್ದು ಬಹು ಸೂಕ್ಷ್ಮವಾಗಿರುವುದರಿಂದಲೂ, ಜೀವರಿಗೆ ವಿವೇಚನಮಾಡಲಿಕ್ಕಾಗದ್ದರಿಂದಲೂ, " ಅದರ ಮೂಲಕ ಮೇಲೆ ಹೋದವನು ಅಮೃತನಾಗುತ್ತಾನೆ, ಉಳಿದವರು ಅಲೆಯುತ್ತಾರೆ " ಎಂಬ ಶ್ರುತಿಯು ಉತ್ಕ್ರಮಣವನ್ನು ಆಕಸ್ಮಿಕವೆಂದು ತಿಳಿಸುತ್ತದೆ. ಇದೂ ಅಲ್ಲದೆ " ತೇಜಸ್ಸು ಪರಾದೇವತೆಯಲ್ಲಿ ಲಯವಾಗುತ್ತದೆ " ಎಂಬ ಶ್ರುತಿಯಲ್ಲಿ ಪಂಚಭೂತಗಳು ಪರಮಾಕಾಶಸ್ವರೂಪನೂ ದಿವ್ಯಪ್ರಕಾಶನೂ ಆದ ಪರಶಿವಬ್ರಹ್ಮದಲ್ಲಿ ವಿಭಾಗವಾಗದಂತೆ ಲಯವಾಗುತ್ತವೆ ಎಂದು ಹೇಳಿರುವುದರಿಂದ ಜ್ಞಾನಿ ಕರ್ಮಿ ಎಲ್ಲರಿಗೂ ಉತ್ಕ್ರಮಣವು ಸಮಾನವೇ ಆಗಿದೆ. " ಅವನ ಹೃದಯದ ಮೇಲ್ಭಾಗವು ಪ್ರಕಾಶಿಸುತ್ತದೆ. ಅದರ ಬೆಳಕಿನಿಂದ ಆತ್ಮನು ಕಣ್ಣು ತಲೆ ಅಥವಾ ದೇಹದ ಬೇರೊಂದು ಭಾಗದಿಂದ ಹೊರಗೆ ಹೊರಡುತ್ತಾನೆ " ಎಂದು ಶ್ರುತಿಯು ಎಲ್ಲರಿಗೂ ಸಮಾನವಾಗಿ ಅನ್ವಯಿಸುತ್ತದೆ. ಆದ್ದರಿಂದ ಉತ್ಕ್ರಮಣದಲ್ಲಿ ಜ್ಞಾನಿಗೆ ವಿಶೇಷವೇನೂ ಇಲ್ಲವೆಂದೂ ಪೂರ್ವಪಕ್ಷಿಯು ಹೇಳುತ್ತಾನೆ. ಜ್ಞಾನಿಯು ಮೂರ್ಧನ್ಯನಾಡಿಯಿಂದಲೇ ಮೇಲೆಕ್ಕೆ ಹೋಗುತ್ತಾನೆ. ಈ ನಾಡಿಯನ್ನು ಅವನೊಬ್ಬನು ಮಾತ್ರವೇ ತಿಳಿಯಬಲ್ಲನು. ಪರಮಪುರುಷನೆನಿಸಿದ ಶಿವನ ಆರಾಧನಕ್ಕೆ ಅತ್ಯಂತ ಪ್ರಿಯವಾದ ವಿದ್ಯೆಯ ಬಲದಿಂದಲೂ, ಆ ವಿದ್ಯೆಗೆ ಅಂಗವಾದ್ದರಿಂದಲೇ ಬಹಳ ಪ್ರಿಯವಾದ ಅರ್ಚಿರಾದಿ ಗತಿಯನ್ನು ಅನುಸರಿಸುವುದರಿಂದಲೂ ಅವನಿಗೆ ಪರಮಶಿವನು ಪ್ರಸನ್ನನಾಗುವನು. ಆಗಲೇ ಜೀವನ ವಾಸಸ್ಥಾನವಾದ

ಹೃದಯವು ಮೇಲ್ಭಾಗದಲ್ಲಿ ಪ್ರಕಾಶಮಾನವಾಗುವುದು. ಈ ಪ್ರಕಾಶದಿಂದ ಜೀವನ ಮುಂದಿನ ಬಾಗಿಲು ತೆಗೆಯುವುದು. ಆಗ ಅವನು ಮೂರ್ಧನ್ಯನಾಡಿಯನ್ನು ಗುರ್ತಿಸುವನು. ಇದರಿಂದ ಅವನಿಗೆ ಅರ್ಚಿರಾದಿಮಾರ್ಗವು ಸಾಧ್ಯವಾಗುತ್ತದೆ. ಆದರೆ ಕರ್ಮಿಗೆ ಹೃದಯದ ಸುಷುಮ್ನನಾಡಿಯಿಂದ ಲಿಂಗಶರೀರದೊಡನೆ ಹೊರಡಲಿಕ್ಕೆ ಸಾಧ್ಯವಾಗುವುದಿಲ್ಲ. ಜ್ಞಾನಿಗೂ ಕರ್ಮಿಗೂ ಇಷ್ಟೇ ವಿಶೇಷ. ಇಬ್ಬರೂ ಒಂದೇ ರೀತಿಯಲ್ಲಿ ಕಂಡರೂ ಅವರು ಹೊರಡುವ ರೀತಿಗಳೇ ಬೇರೆಯಾಗಿವೆ. ಶ್ರುತಿಸ್ಮೃತಿಗಳಲ್ಲಿ ಶಿವನೇ ಎಲ್ಲಾ ಜೀವರ ಹೃದಯಕಮಲದಲ್ಲೂ ಇರುವನೆಂದೂ, ಮುಮುಕ್ಷುಗಳಿಗೆ ಧ್ಯಾನಾರ್ಹನೆಂದೂ ನಿಶ್ಚಯಿಸಲಾಗಿದೆ. "ಲಿಂಗದಲ್ಲಿ ಸುಷುಪ್ತಿ" "ಆಗ ಸತ್ಸಮಾಗಮವಾಗುತ್ತದೆ" ಎಂಬ ಶ್ರುತಿಗಳಲ್ಲಿ ಎಲ್ಲಾ ಇಂದ್ರಿಯ ವೃತ್ತಿಗಳೊಡನೆ ಜೀವನು ಸುಷುಪ್ತಿಯಲ್ಲಿ ತನ್ನ ಮಲಕರ್ಮಸಹಿತನಾಗಿ ಶಿವನೊಡನೆ ಸೇರಿರುತ್ತಾನೆ ಎಂಬುದು ಸ್ಪಷ್ಟಪಡುತ್ತದೆ. "ರುದ್ರನೇ ಎಲ್ಲಕ್ಕೂ ಅಧಿಕನು" ಅವನನ್ನು ಅಜಾತನೆಂದು ತಿಳಿದು ಜೀವನು ಅವನಿಗೆ ಶರಣಾಗುತ್ತಾನೆ." "ರುದ್ರನೇ, ನಿನ್ನ ಬಲಮುಖದಿಂದ ನನ್ನನ್ನು ನಿತ್ಯವೂ ರಕ್ಷಿಸು. "ಶಿವಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು." "ಈಶ್ವರನನ್ನು ತಿಳಿದು ಅಮೃತನಾಗುತ್ತಾನೆ." ಈ ಶ್ರುತಿಗಳಲ್ಲಿ ಬ್ರಹ್ಮ ರುದ್ರ, ಶಿವ, ಈಶ್ವರ ಎಂಬ ಪದಗಳನ್ನು ಒಂದೇ ಅರ್ಥದಲ್ಲಿ ಉಪಯೋಗಿಸಿರುವುದರಿಂದ ತ್ರಿಮೂರ್ತ್ಯತೀತನಾದ ಶಿವನೇ ಎಲ್ಲಕ್ಕೂ ಉಪಾದಾನವೂ ಎಲ್ಲರಿಗೂ ಉಪಾಸ್ಯನೂ ಎಲ್ಲರಿಗೂ ಮುಕ್ತಿಯನ್ನೂ ಕೊಡುವವನೂ ಆಗಿರುವುದಾಗಿ ತಿಳಿದುಬರುತ್ತದೆ. ಆದ್ದರಿಂದ ಮುಮುಕ್ಷುಗಳಿಗೆ ಶಿವನಲ್ಲದೆ ಬೇರೆ ತಿಳಿಯುವ ವಸ್ತುವೇ ಇಲ್ಲ. ಈ ಜೀವನಿಗೆ ಪ್ರಾಣಗಳು ಹೊರಡುವಾಗ್ಯೆ ರುದ್ರನು ತನ್ನ ಸ್ವರೂಪವನ್ನು ಬೋಧಿಸುವ ಪ್ರಣವವನ್ನು ತಿಳಿಸುತ್ತಾನೆ" ಎಂಬಲ್ಲಿ ವಿದ್ವಾಂಸರಿಗೆ ಉತ್ಕ್ರಮಣಕಾಲದಲ್ಲಿ ತನ್ನ ನಿಜತತ್ತ್ವವನ್ನು ತಿಳಿಸುವ ಪ್ರಣವವೆಂಬ ತಾರಕಬ್ರಹ್ಮವನ್ನು ಶಿವನೇ ಉಪದೇಶಿಸುವುದಾಗಿ ತಿಳಿದುಬರುವುದರಿಂದ ಅವನೇ ಮೋಕ್ಷವನ್ನು ಅನುಗ್ರಹಿಸಬಲ್ಲನೆಂಬುದು ಸಿದ್ಧವಾಯಿತು. "ಅವನು ಸಂಸಾರದುಃಖಗಳನ್ನು ಪರಿಹರಿಸಲು ಮೊದಲನೆಯ ವೈದ್ಯನೆನಿಸಿದ್ದಾನೆ" "ರುದ್ರನೇ, ನೀನು ನಮ್ಮಮೇಲೆ ಕೋಪಿಸಬೇಡ. ನಿನ್ನನ್ನು ಸ್ತೋತ್ರಗಳಿಂದಲೂ ನಮಸ್ಕಾರಗಳಿಂದಲೂ ಮೆಚ್ಚಿಸುತ್ತೇವೆ. ನೀನು ಎಲ್ಲಾ ವೈದ್ಯರಿಗಿಂತಲೂ ಉತ್ತಮನಾದ ಚಿಕಿತ್ಸಕನಾಗಿದ್ದೀಯೆ. ನಮಗೆ ವೀರ್ಯವರ್ಧಕವಾದ ನಿನ್ನ ಅನುಗ್ರಹರೂಪವಾದ ದಿವ್ಯ ಸಂಜೀವಿನಿಯನ್ನು ಕರುಣಿಸು" ಎಂಬಲ್ಲಿ ಶಿವನೇ ಭವರೋಗವೈದ್ಯನೆಂದು ಹೇಳಲಾಗಿದೆ. "ಮಾಯೆಯೇ ಎಲ್ಲವನ್ನು ನಿರ್ವಹಿಸುವ ಚಮತ್ಕಾರವುಳ್ಳವಳಾದರೆ ಈಶ್ವರನು ಆ ಮಾಯೆಗೆ ಪತಿಯೆನಿಸಿದ್ದಾನೆ" ಎಂಬಲ್ಲಿ ಸಮಸ್ತಬ್ರಹ್ಮಾಂಡಗಳನ್ನು ನಿರ್ಮಿಸಲು ಶಕ್ತಳಾದ ಮಾಯೆಗೆ ಪತಿ ಎನಿಸಿದ್ದರಿಂದ ಶಿವನೇ ಜಗತ್ಕಾರಣನೆಂದು ಹೇಳಲಾಗಿದೆ. ಆದ್ದರಿಂದ ಎಲ್ಲರ ಹೃದಯಕಮಲದಲ್ಲಿ ವಾಸಿಸುವ ಪರಮಪುರುಷನಾದ ಶಿವನೇ ಉಮಾಪತಿಎನಿಸಿ ತನ್ನ ಆಜ್ಞೆ ಎನಿಸಿದ ಶ್ರುತಿ

ಯಲ್ಲಿ ಹೇಳಿರುವ ತನ್ನ ಆರಾಧನರೂಪವಾದ ಶ್ರೌತಸ್ಮಾರ್ತಕರ್ಮಗಳಲ್ಲಿ ಜೀವನು ಅಹಂಕಾರಾಭಿಮಾನಗಳನ್ನು ತೊರೆದು ತನ್ನ ಜಾತಿಗೆ ಸಂಬಂಧಿಸಿದ ಕರ್ಮಗಳನ್ನು ಶಿವಾರ್ಪಣದೃಷ್ಟಿಯಿಂದ ಆಚರಿಸುತ್ತಬಂದರೆ ಅಂತವನಿಗೆ ಶಿವನು ತನ್ನ ಅನುಗ್ರಹ ದಿಂದ ಪಾಶ, ಅವಿದ್ಯೆ ಎಂಬ ಮಲವನ್ನು ತೊಲಗಿಸಿ ತನ್ನ ಪ್ರಕಾಶವನ್ನು ಪರಿಚಯ ಮಾಡಿಸಿ ಅವನನ್ನು ಮೂರ್ಧನ್ಯನಾಡಿಯಿಂದ ಮೇಲಕ್ಕೆ ಒಯ್ದು ಅರ್ಚಿರಾದಿಮಾರ್ಗ ದಿಂದ ತನ್ನ ಪರಮಪದವೆನಿಸಿದ ನಿರತಿಶಯಾನಂದಸ್ವಭಾವದ ದಿವ್ಯಸ್ಥಲಕ್ಕೆ ಒಯ್ದು ತನ್ನ ಆಕಾರದಿಂದಲೇ ನಿತ್ಯನಿರ್ಮಲಾನಂದವನ್ನು ದೊರಕಿಸುತ್ತಾನೆ. ಆದ್ದರಿಂದ ಜ್ಞಾನಿಗೂ ಕರ್ಮಿಗೂ ಉತ್ಕ್ರಮಣದಲ್ಲಿ ವ್ಯತ್ಯಾಸವಿದೆ ಎಂದು ನಿಶ್ಚಯಿಸಲಾಗಿದೆ.

ಶಿವೋಪಾಸಕೋ ವಿದ್ವಾನ್ಪ್ರಾರಬ್ಧಾವಸಾನೇ ಮೂರ್ಧನ್ಯಯಾ ಸುಷುಮ್ನನಾಡ್ಯಾ ನಿರ್ಗತ್ಯ ಕೇನಾಧಾರೇಣ ಅಪ್ರಾಕೃತನಿರತಿಶಯಾ ನಂದಸ್ವಭಾವಂ ಪರಶಿವಲೋಕಂ ಗಚ್ಛತೀತ್ಯಾಶಂಕಾಯಾಂ ಅಧಿಕರ ಣಾಂತರೇಣಾಹ. ರಶ್ಮ್ಯನುಸಾರಾಧಿಕರಣಂ ॥೯॥ ರಶ್ಮ್ಯನುಸಾರೀ ॥೧೭॥ ಯದಾ ಪರಶಿವಾನುಗ್ರಹೇಣ ಮೂರ್ಧನ್ಯಯಾ ಸುಷುಮ್ನನಾಡ್ಯಾ ದೇಹಾದ್ಬಹಿರ್ನಿರ್ಗತಃ ತತ್ಕಾಲೇ ಸ್ವನೇತ್ರಾದಿಮಹಾಕೈಲಾಸಪರ್ಯಂತಂ ಸ್ವಪ್ರಕಾಶೋ ದೃಶ್ಯತೇ. ತದಾ ಶಿವೋಪಾಸಕಃ ಅಖಂಡಜ್ಯೋತಿರ್ಮಯ ರಶ್ಮ್ಯನುಸಾರೀ ರಶ್ಮ್ಯಧಿಷ್ಠಿತಸ್ಸನ್ ತಚ್ಛಿವಪ್ರಕಾಶದ್ವಾರೇಣ ನಿತ್ಯ ಮಂಗಳಾಲಯನಿರತಿಶಯವಿಭವಂ ಶಿವಲೋಕಂ ಗಚ್ಛತಿ. ಪೂರ್ವತ್ರ ಸಾಧಕಸ್ಯ ಶಿವಯೋಗಿನಃ ಸ್ವಹೃದಯಪ್ರಕಾಶಕಪರಶಿವಾನುಗೃಹೀತಸ್ಯ ಶತಾಧಿಕಯಾ ಮೂರ್ಧನ್ಯನಾಡ್ಯಾ ಮಹಾತೇಜೋಮಯಶಿವಪ್ರಕಾಶ ಮಹಿಮ್ನಾ ಸೂರ್ಯಮಂಡಲದ್ವಾರಾ ಮಹಾಕೈಲಾಶಪ್ರಾಪ್ತಿರುಪ ದಿಷ್ಟಾ. " ಅಥ ಯತ್ರೈತಸ್ಮಾತ್ ಶರೀರಾದುತ್ಕ್ರಾಮತ್ಯಥೈತೈರೇವ ರಶ್ಮಿಭಿರೂರ್ಧ್ವಮಾಕ್ರಾಮತೇ " ಇತಿ ಶ್ರುತೌ ರಶ್ಮಿಭಿರ್ವಿದುಷಾಂ ಪರ ಲೋಕಗಮನಮಾಮ್ನಾಯತೇ. ಅತ್ರ ರಶ್ಮ್ಯನುಸಾರೇಣೈವ ಗತಿಃ ಉತ ಅನ್ಯಥಾ ಸಂಭವತೀತಿ ಚಿಂತ್ಯತೇ. " ಬ್ರಹ್ಮವಿದ್ಬ್ರಹ್ಮೈವ ಭವತಿ ". " ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ ಸಮಸ್ತಸಾಕ್ಷಿಂ ತಮಸಃ ಪರ ಸ್ತಾತ್ ", " ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ " ಇತ್ಯಾದಿಷು ತದು ಪಾಸಕಾನಾಂ ಅನ್ಯಥಾ ದ್ಯೋತನಾತ್ ರಶ್ಮ್ಯನುಸಾರೇಣೈವೇತ್ಯಯಂ ಗತಿನಿಯಮೋ ನ ಭವತಿ. ಕಿಂಚ ಮೃತಸ್ಯ ವಿದುಷೋ ರಶ್ಮ್ಯನುಸಾರಣಾ ಸಂಭವಾತ್ ಅನಿಯಮಃ ಪ್ರವರ್ತತ ಇತಿ ಪ್ರಾಪ್ತೇ ಪ್ರಚಕ್ಷ್ಮಹೇ. ರಶ್ಮ್ಯನುಸಾರ್ಯೇವ ವಿದ್ವಾನೂರ್ಧ್ವಂ ಗಚ್ಛತಿ. ಕುತಃ? ಅಥೈತೈರೇವ ರಶ್ಮಿಭಿಃ ಇತ್ಯವಧಾರಣಾತ್. ಪಾಕ್ಷಿಕತ್ವೇ ಹ್ಯೇವಕಾರೋಽನರ್ಥಕಃ ಸ್ಯಾತ್. ಯದುಕ್ತಂ ನಿಶಿ ಮೃತಸ್ಯ ರಶ್ಮ್ಯಸಂಭವಾತ್ ರಶ್ಮೀನನುಸೃತ್ಯ

ಗಮನಂ ನೋಪಪದ್ಯತ ಇತಿ ತನ್ನ, ನಿಶಾಯಾಮಪಿ ಸೂರ್ಯರಶ್ಮ್ಯನುಸರಣಂ ಸಂಭವತಿ. ಲಕ್ಷ್ಯತೇ ಹಿ ನಿಶಾಯಾಮಪಿ ನಿದಾಘಸಮಯೇ ಊಷ್ಮೋಪಲಬ್ಧ್ಯಾ ರಶ್ಮಿಸದ್ಭಾವಃ. ಹೇಮಂತಾದೌ ತು ಹಿಮಾಭಿಭವಾತ್ ದುರ್ದಿನಇವೋಷ್ಮಾನುಪಲಂಭಃ. ಶ್ರೂಯತೇ ಚ. ನಾಡೀರಶ್ಮೀನಾಂ ಸರ್ವದಾಽನ್ಯೋನ್ಯಾಶ್ರಯಃ. ತದ್ಯಥಾ ಮಹಾಪಥ ಆತತಃ ಉಭೌ ಗ್ರಾಮೌ ಗಚ್ಛತಿ ಇಮಂಚಾಮುಂಚ ಏವಮೇವೈತೇ ಆದಿತ್ಯಸ್ಯ ರಶ್ಮಯಃ ಉಭೌ ಲೋಕೌ ಗಚ್ಛಂತಿ. " ಅಯಂಚಾಯಂಚ ಅಮುಷ್ಮಾದಾದಿತ್ಯಾತ್ಪ್ರತಾಯಂತೇ।ತ ಆಸು ನಾಡೀಷು ಸುಪ್ತಾ ಆಭ್ಯೋ ನಾಡೀಭ್ಯಃ ಪ್ರತಾಯಂತೇ । ತೇಽಮುಷ್ಮಿನ್ನಾದಿತ್ಯೇ ಸುಪ್ತಾಃ ॥ " ಇತಿ. ತಸ್ಮಾತ್ ನಿಶ್ಯಪಿ ರಶ್ಮಿಸದ್ಭಾವಾತ್ ನಿಶಿ ಮೃತಾನಾಮಪಿ ವಿದುಷಾಂ ರಶ್ಮ್ಯನುಸಾರೇಣೈವ ಪರಶಿವಬ್ರಹ್ಮಪ್ರಾಪ್ತಿರಸ್ತೀತಿ ನಿಶ್ಚೀಯತೇ. " ಬ್ರಹ್ಮವಿದ್ಬ್ರಹ್ಮೈವ ಭವತಿ " ಇತ್ಯಾದಿಶ್ರುತೀನಾಂ ಉತ್ಕ್ರಮಣವಿಧಾಯಕತ್ವಾದರ್ಶನಾತ್ ಫಲಮಾತ್ರದ್ಯೋತನತ್ವಂ ಅಚಕ್ಷ್ಯತೇ.

ಶಿವನ ಉಪಾಸಕನು ಪ್ರಾರಬ್ಧವು ಮುಗಿದೊಡನೆ ಸುಷುಮ್ನಾನಾಡಿಯಿಂದ ಹೊರಟು ದಿವ್ಯಾನಂದರೂಪವಾದ ಪರಶಿವಲೋಕಕ್ಕೆ ಯಾವ ಆಧಾರದಿಂದ ಹೋಗುತ್ತಾನೆ ಎಂಬುದನ್ನು ತಿಳಿಸಲಾಗಿದೆ. ಪರಶಿವನ ಅನುಗ್ರಹದಿಂದ ಸುಷುಮ್ನಾನಾಡಿಯ ಮೂಲಕ ದೇಹದಿಂದ ಹೊರಗೆ ಹೊರಡುವ ಶಿವಪ್ರಕಾಶವು ಆ ಕಾಲದಲ್ಲಿ ನೇತ್ರದಿಂದ ಮಹಾ ಕೈಲಾಸದವರೆಗೂ ಒಂದೇಸಮನಾಗಿ ಪ್ರಕಾಶಿಸುತ್ತಿರುವುದು. ಈ ಅಖಂಡ ಜ್ಯೋತಿಯನ್ನು ಅನುಸರಿಸುತ್ತ ಶಿವಭಕ್ತನು ಅದರ ಮೂಲಕ ನಿತ್ಯಮಂಗಳಾಲಯವೆನಿಸಿ ನಿರತಿಶಯವೈಭವದಿಂದ ಕೂಡಿದ ಶಿವಲೋಕಕ್ಕೆ ಹೋಗುತ್ತಾನೆ. ಸಾಧಕನಾದ ಶಿವಯೋಗಿಯು ತನ್ನ ಹೃದಯದಲ್ಲಿ ಪ್ರಕಾಶಿಸುವ ಪರಶಿವನ ಅನುಗ್ರಹದಿಂದ ನೂರೊಂದನೆಯ ನಾಡಿಯಿಂದ ಹೊರಡುವ ಶಿವಪ್ರಕಾಶದ ಮಹಿಮೆಯಿಂದ ಸೂರ್ಯಮಂಡಲದ ಮೂಲಕ ಮಹಾಕೈಲಾಸವನ್ನು ಹೊಂದುವನೆಂದು ಹಿಂದಿನ ಅಧಿಕರಣದಲ್ಲಿ ಹೇಳಿದೆ. " ಈ ಶರೀರದಿಂದ ಅವನು ಯಾವಾಗ ಹೊರಗೆ ಹೊರಡುವನೋ ಅಂದೇ ಈ ಪ್ರಕಾಶದ ಕಿರಣಗಳಿಂದಲೇ ಮೇಲಕ್ಕೆ ಹೋಗುತ್ತಾನೆ" ಎಂಬ ಶ್ರುತಿಯಲ್ಲಿ ಕಿರಣಗಳ ಮೂಲಕ ಜ್ಞಾನಿಗಳು ಪರಲೋಕಕ್ಕೆ ಹೊರಡುವರೆಂದು ಹೇಳಲಾಗಿದೆ. ಆದರೆ ಇವರು ಕಿರಣಗಳನ್ನು ಅನುಸರಿಸಿಕೊಂಡೇ ಹೊರಡುವರೇ ಅಥವಾ ಬೇರೆ ರೀತಿಯಲ್ಲಿ ಹೊರಡುವರೇ ಎಂಬ ಅಂಶವನ್ನು ಇಲ್ಲಿ ವಿಮರ್ಶಿಸಲಾಗಿದೆ."ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ." " ಸಾಕಾರಮೂರ್ತಿಯನ್ನು ಧ್ಯಾನಿಸಿದವನು ನಿಷ್ಕಲಶಿವನಲ್ಲಿ ಬೆರೆಯುತ್ತಾನೆ" "ಜೀವನು ಶಿವನನ್ನು ಕಂಡೊಡನೆ ಪುಣ್ಯಪಾಪಗಳನ್ನು ಕಳೆದುಕೊಂಡು ನಿರಂಜನನಾಗುತ್ತಾನೆ" ಇಲ್ಲಿ ಶಿವೋಪಾಸಕರು ಬೇರೆ ರೀತಿಯಲ್ಲಿ ಹೋಡುವುದರಿಂದ ಅವರು ಕಿರಣಗಳನ್ನು ಅನುಸರಿಸಿಕೊಂಡೇ ಹೊರಡು

ವರೆಂಬುದು ಸಂಭವಿಸುವುದಿಲ್ಲ. ಇದೂ ಅಲ್ಲದೆ, ಜ್ಞಾನಿಯು ದೇಹವನ್ನು ತೊರೆದಾಗ ಕಿರಣಗಳನ್ನು ಅನುಸರಿಸಲು ಸಾಧ್ಯವಾಗದ್ದರಿಂದ ಹೀಗೆ ನಿಯಮವನ್ನು ಮಾಡಲಿಕ್ಕೂ ಆಗುವುದಿಲ್ಲ. ಹೀಗೆ ಆಕ್ಷೇಪವು ಬಂದರೆ ಸಮಾಧಾನವನ್ನು ಮುಂದೆ ತಿಳಿಸಲಾಗುವುದು. ಕಿರಣಗಳನ್ನು ಅನುಸರಿಸಿಕೊಂಡೇ ಜ್ಞಾನಿಯು ಹೊರಡುತ್ತಾನೆ; ಯಾಕೆಂದರೆ ಈ ಕಿರಣಗಳೊಡನೆಯೇ ಎಂದು ಏವಕಾರದಿಂದ ಇದನ್ನು ನಿರ್ಧರಿಸಲಾಗಿದೆ. ಹೀಗೆ ನಿರ್ಧಾರವಿಲ್ಲದಪಕ್ಷಕ್ಕೆ ಏವಕಾರಕ್ಕೆ ಅರ್ಥವೇ ಇಲ್ಲದಂತಾಗುವುದು. ರಾತ್ರಿ ಸತ್ತವನಿಗೆ ಕಿರಣಗಳೇ ಇರುವುದಿಲ್ಲವಾದ್ದರಿಂದ ಕಿರಣಗಳನ್ನು ಅನುಸರಿಸಿಕೊಂಡು ಹೋಗಲಿಕ್ಕೆ ಸಾಧವಿಲ್ಲವೆಂದು ಹೇಳಿದ್ದು ರಾತ್ರಿಯಲ್ಲೂ ಸೂರ್ಯಕಿರಣಗಳನ್ನು ಅನುಸರಿಸಲು ಸಾಧ್ಯ ವಿರುವುದರಿಂದ ಹೊಂದುವುದಿಲ್ಲ. ರಾತ್ರಿಯಲ್ಲೂ ಸಹ ಬೇಸಿಗೆಕಾಲದಲ್ಲಿ ಉಷ್ಣ ಹೆಚ್ಚಾಗಿರುವುದರಿಂದ ಕಿರಣಗಳು ವ್ಯಾಪಿಸಿರುವುದನ್ನು ಎಲ್ಲರೂ ಅನುಭವಿಸಬಹುದು. ಹಿಮಗಾಲದಲ್ಲಿ ಬೀಳುವ ಹಿಮದಿಂದ ದುರ್ದಿನದಂತೆ ಬಾಧಿತವಾಗಿ ಉಷ್ಣವು ಇದ್ದರೂ ಕಂಡುಬರುವುದಿಲ್ಲ. ನಾಡಿಗೂ ರಶ್ಮಿಗಳಿಗೂ ಯಾವಾಗಲೂ ಅನ್ಯೋನ್ಯಾಶ್ರಯವಿರುತ್ತದೆ. "ದೊಡ್ಡದಾರಿಯು ಎರಡು ಗ್ರಾಮಗಳನ್ನು ಕೂಡಿಸಿಕೊಂಡು ಮುಂದುವರಿಯುವಂತೆ ಸೂರ್ಯರಶ್ಮಿಗಳು ಇಹಪರಲೋಕಗಳನ್ನು ಕೂಡಿಸುತ್ತವೆ. ಆದ್ದರಿಂದ ಈ ನಾಡಿಯಲ್ಲಿ ಲೀನರಾಗಿ ಆ ಮೂಲಕ ಹೊರಡುವವರು ಸೂರ್ಯನಲ್ಲಿಯೇ ಲೀನರಾಗುತ್ತಾರೆ" ಹೀಗೆ ರಾತ್ರಿಯಲ್ಲೂ ಕಿರಣಗಳು ಇದ್ದೇ ಇರುತ್ತವೆ. ರಾತ್ರಿವೇಳೆ ದೇಹವನ್ನು ಬಿಟ್ಟವರೂ ಕಿರಣಗಳ ಅನುಸರಣದಿಂದಲೇ ಪರಶಿವಬ್ರಹ್ಮವನ್ನು ಹೊಂದುತ್ತಾರೆ. "ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ" ಎಂಬ ಶ್ರುತಿಗಳು ಉತ್ಕ್ರಾಂತಿಯನ್ನು ತಿಳಿಸದಿರುವುದರಿಂದ ಬ್ರಹ್ಮಜ್ಞಾನದ ಫಲವನ್ನಷ್ಟನ್ನೇ ತಿಳಿಸುತ್ತವೆ.

"ದಿವಾ ಚ ಶುಕ್ಲಪಕ್ಷಂ ಚ ಉತ್ತರಾಯಣಮೇವ ಚ । ಮುಮುಕ್ಷೂಣಾಂ ಪ್ರಶಸ್ತಾನಿ ವಿಪರೀತಂ ತು ಗರ್ಹಿತಂ ॥" ಇತಿ ನಿಶಾಮರಣನಿಂದಾ ಶ್ರೂಯತೇ. ತಸ್ಮಾನ್ನಿಶಿ ಮೃತಾನಾಂ ಉಪಾಸಕಾನಾಂ ಪರಶಿವಲೋಕಪ್ರಾಪ್ತಿಃ ಕಥಮುಪಪದ್ಯತ ಇತ್ಯಾಶಂಕಾಯಾಮಧಿಕರಣಾಂತರಂ ದರ್ಶಯತಿ. ನಿಶಾಧಿಕರಣಂ ॥ ೧೦ ॥ ನಿಶಿ ನೇತಿ ಚೇನ್ನ ಸಂಬಂಧಸ್ಯ ಯಾವದ್ದೇಹಭಾವಿತ್ವಾದ್ದರ್ಶಯತಿ ಚ ॥ ೧೮ ॥ ಇದಮಿದಾನೀಂ ಚಿಂತ್ಯತೇ. ವಿದುಷೋ ನಿಶಿ ಮೃತಸ್ಯ ಪರಶಿವಬ್ರಹ್ಮಲೋಕಸ್ಯ ಪ್ರಾಪ್ತಿರಸ್ತಿ ವಾ ನವಾ ಇತಿ. ಯದ್ಯಪಿ ನಿಶಾಯಾಂ ಸೂರ್ಯರಶ್ಮಿಸಂಭವಾತ್ ರಶ್ಮ್ಯನುಸಾರೇಣ ಗತಿರ್ನಿಶಾಯಾಮಪಿ ಸಂಭವತಿ. ತಥಾಪಿ ನಿಶಾಮರಣಸ್ಯ ಶಾಸ್ತ್ರನಿಷಿದ್ಧತ್ವಾತ್ ಪರಮಪುರುಷಾರ್ಥಲಕ್ಷಣಪರಶಿವಬ್ರಹ್ಮಪ್ರಾಪ್ತಿರ್ನಿಶಾಮೃತಸ್ಯ ನ ಸಂಭವತಿ. ಶಾಸ್ತ್ರೇಷು ದಿವಾಮರಣಂ ಪ್ರಶಸ್ತಂ. ವಿಪರೀತಂ ತು ನಿಶಾಮರಣಂ. "ದಿವಾ ಚ ಶುಕ್ಲಪಕ್ಷಂ ಚ" ಇತ್ಯಾದಿನಾ ದಿವಾಮರಣನಿಶಾಮರಣಯೋಃ ಪ್ರಶಸ್ತತ್ವವಿಪರೀತತ್ವೇ ಚ

ಉತ್ತಮಾಥಮಗತಿಹೇತುತ್ವೇನ ಸ್ಯಾತಾಂ. ಅತೋ ನಿಶಾಮರಣಸ್ಯ ಅಧೋಗತಿಹೇತುತ್ವಮಿತಿ ಪ್ರಾಪ್ತೇ ವದಾಮಃ ನಿಶಿ ನೇತಿ ಚೇನ್ನ. ನಿಶಿ ಮರಣಸ್ಯ ಅಧೋಲೋಕಹೇತುತ್ವಾವಗಮಾತ್ ವಿದುಷಾಂ ನಿಶಿ ಮರಣೇ ಪರಶಿವಬ್ರಹ್ಮಲೋಕಪ್ರಾಪ್ತಿರ್ನೇತಿ ಚೇನ್ನ ಸಂಬಂಧಸ್ಯ ರುದ್ರ ದೇವತಾಕಸುಷುಮ್ನಾನಾಡೀಸಂಬಂಧಸ್ಯ ಜ್ಯೋತಿಷಃ ಯಾವದ್ದೇಹಭಾವಿತ್ವಾತ್ ದಿವಾರಾತ್ರೌ ಚ ರಶ್ಮಿನಾಡೀಸಂಬಂಧಸ್ಯ ವಿದ್ಯಾಮಾನತ್ವಾತ್ ದರ್ಶಯತಿ ಚ " ಅಸು ನಾಡೀಷು ರಶ್ಮಯಸ್ಸಂತಿ " ಇತಿ ಶ್ರುತಿಃ ಸರ್ವ ಕಾಲೇಷ್ವಪಿ ರಶ್ಮಿನಾಡೀಸಂಬಂಧಂ ಪ್ರತಿಪಾದಯತಿ. ಕಿಂಚ ವಿದುಷಃ ಕರ್ಮಸಂಬಂಧಸ್ಯ ಯಾವದ್ದೇಹಭಾವಿತ್ವಾತ್ ಏತದುಕ್ತಂ ಭವತಿ. ಅನಾರಬ್ಧಕಾರ್ಯಾಣಾಂ ಅಧೋಗತಿಹೇತುಭೂತಾನಾಂ ಕರ್ಮಣಾಂ ವಿದ್ಯಾಸಂಬಂಧೇನೈವ ವಿನಾಶಃ,ತದುತ್ತರೇಷಾಂ ಚಾಶ್ಲೇಷಾತ್.ಪ್ರಾರಬ್ಧ ಕಾರ್ಯಸ್ಯ ಚ ಚರಮದೇಹಾವಧಿತ್ವಾತ್ ಬಂಧಹೇತ್ವಭಾವಾತ್ ವಿದುಷೋ ನಿಶಾಮೃತಸ್ಯಾಪಿ ಬ್ರಹ್ಮಪ್ರಾಪ್ತಿಸ್ಸಿದ್ಧೈವ. " ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ " ಇತಿ ಶ್ರುತಿದರ್ಶನಾತ್ " ದಿವಾ ಚ ಶುಕ್ಲಪಕ್ಷಂ ಚ " ಇತ್ಯಾದಿಶ್ರುತೀನಾಂ ಅವಿದ್ವದ್ವಿಷಯಮಿತಿ ನಿಶ್ಚೀಯತೇ.

" ಹಗಲು, ಶುಕ್ಲಪಕ್ಷ ಮತ್ತು ಉತ್ತರಾಯಣಗಳು ಮುಮುಕ್ಷುಗಳಿಗೆ ಪ್ರಶಸ್ತಗಳು; ಇವಕ್ಕೆ ವಿರುದ್ಧವಾದ ಕಾಲಗಳು ಉತ್ತಮವಲ್ಲ " ಎಂಬಲ್ಲಿ ರಾತ್ರಿ ಮರಣವನ್ನು ನಿಂದಿಸಲಾಗಿದೆ. ಆದ್ದರಿಂದ ರಾತ್ರಿ ಸತ್ತವರಿಗೆ ಶಿವಲೋಕಪ್ರಾಪ್ತಿ ಹೇಗೆ ಹೊಂದುತ್ತದೆ ? ಎಂದಾಶಂಕಿಸಿ ತಿಳಿಸುತ್ತಾನೆ. ರಾತ್ರಿ ಸತ್ತ ಜ್ಞಾನಿಗೆ ಶಿವಲೋಕವು ದೊರಕುವುದೇ ಇಲ್ಲವೇ ಎಂಬುದನ್ನು ಇಲ್ಲಿ ವಿಚಾರಿಸಲಾಗಿದೆ. ರಾತ್ರಿಯೂ ಸೂರ್ಯನ ಕಿರಣಗಳಿರುವುದರಿಂದ ಆ ಕಿರಣಗಳನ್ನು ಅನುಸರಿಸಿಕೊಂಡು ಹೊರಡಲಿಕ್ಕೆ ರಾತ್ರಿಯಲ್ಲೂ ಏನೂ ಅಡ್ಡಿ ಇಲ್ಲ. ಆದರೂ ನಿಶಾದಿಮರಣವನ್ನು ಶಾಸ್ತ್ರದಲ್ಲಿ ನಿಂದಿಸಿರುವುದರಿಂದ ಪರಮಪುರುಷಾರ್ಥವೆನಿಸಿದ ಶಿವಲೋಕವು ರಾತ್ರಿ ಸತ್ತವನಿಗೆ ಸಂಭವಿಸುವುದಿಲ್ಲ. ಶಾಸ್ತ್ರವು ಹಗಲು ಸಾಯುವುದನ್ನೇ ಪ್ರಶಂಸಿಸಿದೆ. ರಾತ್ರಿಯ ಸಾವು ಇದಕ್ಕೆ ವಿರುದ್ಧವಾಗಿದೆ. ದಿವಾಮರಣವು ಪ್ರಶಸ್ತವಾದ್ದರಿಂದ ಉತ್ತಮಗತಿಗೆ ಕಾರಣವಾಗಿದೆ. ನಿಶಾಮರಣವು ಇದಕ್ಕೆ ವಿಪರೀತವಾದ್ದರಿಂದ ಅಧೋಗತಿಗೆ ಹೇತುವೆನಿಸಿದೆ. ಆದ್ದರಿಂದ ನಿಶಾಮರಣದಿಂದ ಉತ್ತಮಗತಿ ಇಲ್ಲವೆಂದು ಆಕ್ಷೇಪವು ಬರುತ್ತದೆ. ಇದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ರಾತ್ರಿ ಸತ್ತವನು ಅಧೋಗತಿಯನ್ನು ಹೊಂದುವುದಾಗಿ ಶಾಸ್ತ್ರದಲ್ಲಿ ಹೇಳಿರುವುದರಿಂದ ಜ್ಞಾನಿಯು ರಾತ್ರಿ ಸತ್ತರೆ ಬ್ರಹ್ಮಲೋಕವು ದೊರಕುವುದಿಲ್ಲವೆಂದು ಹೇಳುವುದು ಸರಿಯಲ್ಲ; ಯಾಕೆಂದರೆ ರುದ್ರದೇವತಾತ್ಮಕವಾದ ಸುಷುಮ್ನಾನಾಡಿಗೆ ಸಂಬಂಧಿಸಿದ ಪ್ರಕಾಶವು ಹಗಲು ರಾತ್ರಿ ಎರಡು

ವೇಳೆಯೂ ದೇಹದಲ್ಲಿಯೇ ಇರುವುದರಿಂದ ರಾತ್ರಿಯಲ್ಲೂ ನಾಡಿಗೂ ರಶ್ಮಿಗೂ ಸಂಬಂಧವಿದ್ದೇ ಇರುತ್ತದೆ. " ಈ ನಾಡಿಗಳಲ್ಲಿ ರಶ್ಮಿಗಳಿವೆ " ಎಂಬ ಶ್ರುತಿಯು ಎಲ್ಲಾ ಕಾಲಗಳಲ್ಲೂ ರಶ್ಮಿಗೂ ನಾಡಿಗೂ ಸಂಬಂಧವಿರುವುದೆಂದು ತಿಳಿಸುತ್ತದೆ. ಜ್ಞಾನಿಗೆ ಕರ್ಮಸಂಬಂಧವು ದೇಹವಿರುವವರೆಗೂ ಇದ್ದೇ ಇರುವುದರಿಂದ ಅಧೋಗತಿಯನ್ನು ತರುವಂತಹ ಕರ್ಮಗಳು ಆರಂಭವಾಗುವುದಕ್ಕೆ ಮೊದಲೇ ಬ್ರಹ್ಮವಿದ್ಯೆಯ ಸಂಬಂಧ ದಿಂದ ನಾಶವಾಗುತ್ತವೆ; ಹಾಗೆಯೇ ಮುಂದಿನ ಕರ್ಮಗಳೂ ಅಂಟುವಂತಿಲ್ಲ. ಪ್ರಾರಬ್ಧ ಕರ್ಮವು ಕೊನೆಯ ದೇಹಕ್ಕೇ ಮುಗಿದು ಬಂಧಕವಾಗದಿರುವುದರಿಂದ ರಾತ್ರಿ ಸತ್ತ ಜ್ಞಾನಿಗೂ ಬ್ರಹ್ಮಪ್ರಾಪ್ತಿ ಇದ್ದೇ ಇದೆ. " ಅವನಿಗೆ ಮುಕ್ತಿಗೆ ದೇಹ ಬಿಡುವಷ್ಟು ಕಾಲವೇ ತಡವಾಗುವುದು " ಎಂದು ಶ್ರುತಿಯೇ ಹೇಳಿದೆ. ಆದ್ದರಿಂದ ಹಗಲು ಶುಕ್ಲ ಪಕ್ಷ ಉತ್ತರಾಯಣಗಳನ್ನು ಪ್ರಶಸ್ತವೆಂದೂ, ರಾತ್ರಿ ಕೃಷ್ಣಪಕ್ಷ ದಕ್ಷಿಣಾಯನಗಳನ್ನು ವಿರುದ್ಧವೆಂದೂ ಹೇಳುವ ಸ್ಮೃತಿ ಕರ್ಮಿಗಳ ಮರಣಕ್ಕೆ ಅನ್ವಯಿಸುತ್ತದೆ.

ನನು " ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಂ । ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಂ । ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ ॥ " ಇತಿ ಭಗವದ್ಗೀತಾದಿ ಸ್ಮೃತಿಷು ಉತ್ತರಾಯಣದಕ್ಷಿಣಾಯನಯೋಃ ಮೃತಾನಾಮೇವ ಉಪಾ ಸಕಾನಾಂ ಕರ್ಮಿಣಾಂ ಚ ಪರಶಿವಬ್ರಹ್ಮಲೋಕಪ್ರಾಪ್ತಿಃ ಸ್ವರ್ಗಲೋಕ ಪ್ರಾಪ್ತಿಶ್ಚಾವಗಮ್ಯತೇ. ತಸ್ಮಾತ್ಕಥಂ ಕೃಷ್ಣಪಕ್ಷದಕ್ಷಿಣಾಯನ ರಾತ್ರ್ಯಾದಿಕಾಲೇಷು ಮೃತಾನಾಮುಪಾಸಕಾನಾಂ ಬ್ರಹ್ಮಲೋಕಪ್ರಾಪ್ತಿ ರಿತ್ಯಾಶಂಕಾಯಾಮಧಿಕರಣಾಂತರೇಣ ತನ್ನಿರಾಕರೋತಿ. ದಕ್ಷಿಣಾಯ ನಾಧಿಕರಣಂ ॥ ೧೧ ॥ ಅತಶ್ಚಾಯನೇಽಪಿ ದಕ್ಷಿಣೇ ॥ ೧೯ ॥ " ಬ್ರಹ್ಮ ವಿದಾಪ್ನೋತಿ ಪರಂ " ಇತ್ಯಾದೌ ಬ್ರಹ್ಮವಿದಾಂ ಬ್ರಹ್ಮಪ್ರಾಪ್ತೇಃ ಬ್ರಹ್ಮಣಾ ಸಹ ಸರ್ವಕಾಮಾವಾಪ್ತೇಶ್ಚ ಶ್ರವಣಾದತ್ರ ದಕ್ಷಿಣಾಯನ ಮೃತಾನಾಮುಪಾಸಕಾನಾಂ ಪರಶಿವಬ್ರಹ್ಮಲೋಕೇ ತೇನ ಸಹ ಸರ್ವ ಕಾಮಾವಾಪ್ತಿಃ ಸಮಾನರೂಪತ್ವಂ ಚ ಸಂಭವತಿ ವಾ ನವೇತಿ ಸಂದಿಹ್ಯ ತೇ. " ಅಥ ಯೋ ದಕ್ಷಿಣೇ ಪ್ರಮೀಯತೇ ಪಿತೃಣಾಮೇವ ಮಹಿಮಾನಂ ಗತ್ವಾ ಚಂದ್ರಮಸಸ್ಸಾಯುಜ್ಯಂ ಗಚ್ಛತಿ " ಇತಿ ದಕ್ಷಿಣಾಯನಮೃತಸ್ಯ ಚಂದ್ರಪ್ರಾಪ್ತಿಶ್ರವಣಾತ್ ಚಂದ್ರಪ್ರಾಪ್ತಾನಾಂ ಚ ತೇಷಾಂ " ಯದಾ ಪರ್ಯವತಿಷ್ಠತೈತಮೇವಾಧ್ವಾನಂ ಪುನರ್ನಿವರ್ತತ " ಇತಿ ಪುನರಾವೃತ್ತಿ ವ್ಯಪದೇಶಾತ್ ಬ್ರಹ್ಮವಿದ್ಯಾನಿಷ್ಠಾನಾಂ ಭೀಷ್ಮಾದೀನಾಮುತ್ತರಾಯಣ ಪ್ರತೀಕ್ಷಾದರ್ಶನಾಚ್ಚ ದಕ್ಷಿಣಾಯನಮೃತಾನಾಂ ವಿದುಷಾಂ ಸರ್ವಥಾ ಬ್ರಹ್ಮಪ್ರಾಪ್ತಿರ್ನ ಸಂಭವತೀತಿ ಪ್ರಾಪ್ತೇ ತತ್ರೋಚ್ಯತೇ. ಸೂತ್ರೇ

ಹಿಕಾರೋ ನಿಶ್ಚಯಾರ್ಥಃ. ನಿಶಿ ಮೃತಸ್ಯ ವಿದುಷೋ ಯತಃ ಪರಶಿವ ಬ್ರಹ್ಮಲೋಕಪ್ರಾಪ್ತಿಹೇತುರುಕ್ತಃ ತತ ಏವ ಹೇತೋರ್ದಕ್ಷಿಣಾಯನೇ ಮೃತಸ್ಯ ಪರಶಿವಬ್ರಹ್ಮಲೋಕಪ್ರಾಪ್ತಿಸ್ಸಿದ್ಧಾ. "ಬ್ರಹ್ಮವಿದಾಪ್ನೋತಿ ಪರಂ" ಇತ್ಯಾದಿಶುತಿಷು ಬ್ರಹ್ಮವಿದಾಂ ಕಾಲನಿಯಮಾದರ್ಶನಾತ್, "ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ। ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ॥" ಇತ್ಯಾದೌ ವಿದುಷಾಂ ಯದಾ ಲೌಕಿಕಸರ್ವೋಪಾಸನತ್ಯಾಗಃ ತದಾ ಅತ್ರೈವ ಬ್ರಹ್ಮ ಪ್ರಾಪ್ತೇಃ ಪ್ರಪಂಚಿತತ್ವಾಚ್ಚ ಅವಿದುಷಾಮೇವ ಪಿತೃಯಾಣೇನ ಪಥಾ ಚಂದ್ರಪ್ರಾಪ್ತಿದ್ವಾರಾ ಪುನರಾವೃತ್ತಿಃ, ವಿದುಷಾಂ ತು ಚಂದ್ರಪ್ರಾಪ್ತಾನಾ ಮಪಿ"ತಸ್ಮಾದ್ಬ್ರಹ್ಮಣೋ ಮಹಿಮಾನಮಾಪ್ನೋತಿ"ಇತಿ ವಾಕ್ಯಶೇಷಾತ್ ತೇಷಾಂ ದಕ್ಷಿಣಾಯನಮೃತಾನಾಂ ಚಂದ್ರಪ್ರಾಪ್ತಿಃ ಬ್ರಹ್ಮಲೋಕಗಮ ನೇಚ್ಛಾಪುರುಷಾಣಾಂ ವಿಶ್ರಮಹೇತುಮಾತ್ರಮಿತಿ ಗಮ್ಯತೇ. ವಾಕ್ಯ ಶೇಷಾಭಾವೇಽಪಿ ಪೂರ್ವೋಕ್ತಾದೇವ ಬಂಧಹೇತ್ವಭಾವಾತ್ ವಿದುಷಾಂ ಚಂದ್ರಪ್ರಾಪ್ತಿಃ ಪ್ರಸಕ್ತಾಪಿ ಪರಶಿವಬ್ರಹ್ಮಲೋಕಪ್ರಾಪ್ತಿರನಿವಾರ್ಯಾ. "ವೇದಾಂತವಿಜ್ಞಾನಸುನಿಶ್ಚಿತಾರ್ಥಃ—ತೇ ಬ್ರಹ್ಮಲೋಕೇ ತು ಪರಾಂತ ಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ" ಇತಿ ವೇದಾಂತಿನಾಂ ಸರ್ವೇಷಾಂ ಬ್ರಹ್ಮಲೋಕಪ್ರಾಪ್ತಿದ್ವಾರಾ ಕ್ರಮಮುಕ್ತ್ಯುಪದೇಶಾತ್. "ಬ್ರಹ್ಮಭವನಕಾಮೋ ಬ್ರಹ್ಮವೇದನಂ ಕುರ್ಯಾತ್." "ನ ಸ ಪುನರಾ ವರ್ತತೇ" ಇತ್ಯಾದಿಷು ಬ್ರಹ್ಮವಿದಾಮೇವ ಪುನರಾವೃತ್ತಿರಹಿತಶಿವ ಸಾಯುಜ್ಯೋಪದೇಶಾತ್ ದಕ್ಷಿಣಾಯನಮೃತಾನಾಮಪಿ ಶಿವಜ್ಞಾ ನಿನಾಂ ಶಿವಲೋಕಪ್ರಾಪ್ತಿರೇವೇತಿ ಘಂಟಾಘೋಷಃ. ಭೀಷ್ಮಾದೀನಾಂ ಸ್ವಚ್ಛಂದಮರಣಾನಾಂ ಯೋಗಪ್ರಭಾವಾತ್ ಧರ್ಮಪ್ರವರ್ತನಾಯ ಉತ್ತರಾಯಣಪ್ರಾಶಸ್ತ್ಯಪ್ರದರ್ಶನಾರ್ಥಂ ತಥಾವಿಧಾಚಾರಃ ಇತಿ ನಿಶ್ಚೀಯತೇ.

"ಅಗ್ನಿಯಲ್ಲೂ ಜ್ಯೋತಿಯೊಡನೆಯೂ ಹಗಲು, ಶುಕ್ಲಪಕ್ಷ ಮತ್ತು ಉತ್ತರಾ ಯಣಗಳಲ್ಲೂ ಹೊರಟ ಜ್ಞಾನಿಗಳು ಬ್ರಹ್ಮವನ್ನು ಸೇರುತ್ತಾರೆ" "ಹೊಗೆಯೊಡ ನೆಯೂ ಕೃಷ್ಣಪಕ್ಷ ದಕ್ಷಿಣಾಯನಗಳಲ್ಲೂ ಹೊರಟ ಯೋಗಿಯು ಚಂದ್ರನಲ್ಲಿಗೆ ಹೋಗಿ ಹಿಂತಿರುಗುತ್ತಾನೆ" ಎಂಬ ಗೀತವಾಕ್ಯದಲ್ಲಿ ಉತ್ತರಾಯಣ ದಕ್ಷಿಣಾಯನ ಗಳಲ್ಲಿ ಸತ್ತ ಉಪಾಸಕರು ಶಿವಲೋಕವನ್ನೂ, ಕರ್ಮಿಗಳು ಸ್ವರ್ಗವನ್ನೂ ಹೊಂದು ವರೆಂದು ಹೇಳಿದೆ. ಆದರೆ ಕೃಷ್ಣಪಕ್ಷ ಮತ್ತು ದಕ್ಷಿಣಾಯನಗಳ ರಾತ್ರಿಗಳಲ್ಲಿ ಸತ್ತ ಉಪಾಸಕರಿಗೆ ಹೇಗೆ ಬ್ರಹ್ಮಲೋಕ ದೊರಕುತ್ತದೆ ಎಂದು ಆಶಂಕಿಸಿ ನಿರಾಕರಿಸುತ್ತಾನೆ. "ಪರಶಿವಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ." "ಪರಮಾಕಾಶದಲ್ಲಿ ನೆಲಸಿ

ರುವ ಪರಬ್ರಹ್ಮವನ್ನು ತಿಳಿದವನು ಬ್ರಹ್ಮದೊಡನೆ ಎಲ್ಲಾ ಇಷ್ಟಗಳನ್ನು ಪಡೆಯು ತ್ತಾನೆ" ಎಂಬಲ್ಲಿ ಬ್ರಹ್ಮಜ್ಞಾನಿಗಳು ಬ್ರಹ್ಮವನ್ನು ಹೊಂದುವರೆಂದೂ ಮತ್ತು ಬ್ರಹ್ಮ ದೊಡನೆ ಎಲ್ಲಾ ಫಲಗಳನ್ನು ಪಡೆಯುವರೆಂದೂ ಹೇಳಿರುವುದರಿಂದ ದಕ್ಷಿಣಾಯನ ದಲ್ಲಿ ಸತ್ತವರಿಗೆ ಬ್ರಹ್ಮಲೋಕದಲ್ಲಿ ಬ್ರಹ್ಮದೊಡನೆ ಸಮಸ್ತ ಫಲಪ್ರಾಪ್ತಿಯೂ ಉಂಟೇ ಇಲ್ಲವೇ ಎಂದು ಸಂದೇಹಬರುತ್ತದೆ. "ಯಾವನು ದಕ್ಷಿಣಾಯನದಲ್ಲಿ ಸಾಯು ವನೋ ಅವನು ಪಿತೃಗಳ ಮಹಿಮೆಯನ್ನು ಅರಿತು ಚಂದ್ರನೊಡನೆ ಬೆರೆಯುತ್ತಾನೆ" ಎಂಬಲ್ಲಿ ದಕ್ಷಿಣಾಯನದಲ್ಲಿ ಸತ್ತವನಿಗೆ ಚಂದ್ರಪ್ರಾಪ್ತಿಯನ್ನು ಹೇಳಿರುವುದರಿಂದ ಹಾಗೆ ಚಂದ್ರನಲ್ಲಿ ಸೇರಿದವನು ಯಾವಮಾರ್ಗದಲ್ಲಿ ಹೊರಟನೋ ಅದೇ ಮಾರ್ಗ ದಲ್ಲಿ ಹಿಂತಿರುಗುವನೆಂದು ಪುನರಾವೃತ್ತಿಯನ್ನು ಹೇಳಿರುವುದರಿಂದಲೂ, ಬ್ರಹ್ಮವಿದ್ಯೆ ಯಲ್ಲಿ ದೃಢವಾಗಿ ಅಂಟಿಕೊಂಡಿದ್ದ ಭೀಷ್ಮಾದಿಗಳು ಉತ್ತರಾಯಣವನ್ನು ನಿರೀಕ್ಷಿಸಿದು ದಾಗಿ ಕಂಡುಬರುವುದರಿಂದಲೂ ದಕ್ಷಿಣಾಯನದಲ್ಲಿ ಸತ್ತವರಿಗೆ ಎಂದಿಗೂ ಬ್ರಹ್ಮ ಪ್ರಾಪ್ತಿ ಸಾಧ್ಯವೇ ಇಲ್ಲವೆಂದು ಆಕ್ಷೇಪ ಬರುತ್ತದೆ. ಅದಕ್ಕೆ ಸೂತ್ರವು ಸಮಾಧಾನ ವನ್ನು ತಿಳಿಸುತ್ತದೆ. ಹಿಕಾರವು ನಿಶ್ಚಯವನ್ನು ತಿಳಿಸುತ್ತದೆ. ರಾತ್ರಿ ಸತ್ತ ಜ್ಞಾನಿಗೂ ಶಿವಲೋಕಪ್ರಾಪ್ತಿಯನ್ನು ಹೇಳಿರುವುದರಿಂದ ದಕ್ಷಿಣಾಯನದಲ್ಲಿ ಸತ್ತವನಿಗೂ ಶಿವ ಲೋಕ ಉಂಟೆಂದು ಸಿದ್ಧವಾಗುತ್ತದೆ. "ಬ್ರಹ್ಮವಿದಾಪ್ನೋತಿ ಪರಂ" ಎಂಬ ಶ್ರುತಿ ಗಳಲ್ಲಿ ಬ್ರಹ್ಮಜ್ಞಾನಿಗಳಿಗೆ ಕಾಲನಿಯಮವಿಲ್ಲವಾದ್ದರಿಂದ "ಎಲ್ಲಾ ಕರ್ಮವಾಸನೆ ಗಳೂ ತೊಲಗಿದೊಡನೆಯೇ ಒಬ್ಬನು ಅಮೃತನಾಗಿ ಇಲ್ಲಿಯೇ ಬ್ರಹ್ಮವನ್ನು ಹೊಂದು ತ್ತಾನೆ" ಎಂಬಲ್ಲಿ ಜ್ಞಾನಿಗಳಿಗೆ ಎಲ್ಲಾ ಕರ್ಮವಾಸನೆಗಳೂ ತೊಲಗಿದೊಡನೆಯೇ ಬ್ರಹ್ಮಪ್ರಾಪ್ತಿಯನ್ನು ಹೇಳಿರುವುದರಿಂದ ಕರ್ಮಿಗಳು ಮಾತ್ರವೇ ಪಿತೃಯಾನ ಮಾರ್ಗದಿಂದ ಚಂದ್ರಲೋಕಕ್ಕೆ ಹೋಗಿ ಹಿಂತಿರುಗುವರೆಂದೂ, ವಿದ್ವಾಂಸರು ಚಂದ್ರಲೋಕಕ್ಕೆ ಹೋದರೂ ಅಲ್ಲಿಂದ ಬ್ರಹ್ಮಲೋಕಕ್ಕೆ ಹೋಗುವರೆಂದೂ ವಾಕ್ಯ ಶೇಷದಿಂದ ತಿಳಿದುಬರುತ್ತದೆ. ಆದ್ದರಿಂದ ದಕ್ಷಿಣಾಯನದಲ್ಲಿ ಸತ್ತ ಜ್ಞಾನಿಗಳು ಬ್ರಹ್ಮಲೋಕಕ್ಕೆ ಹೋಗುವ ಮುನ್ನ ಚಂದ್ರಪ್ರಾಪ್ತಿಯನ್ನು ವಿಶ್ರಾಂತಿಸ್ಥಲವೆಂದು ತಿಳಿ ಯಬೇಕು. ವಾಕ್ಯಶೇಷವಿಲ್ಲದಿದ್ದರೂ ಹಿಂದೆ ಹೇಳಿದ ಬಂಧನಕ್ಕೆ ಯಾವ ಕಾರಣವೂ ಇಲ್ಲದ್ದರಿಂದ ಜ್ಞಾನಿಯು ಚಂದ್ರಲೋಕಕ್ಕೆಹೋದರೂ ಅಲ್ಲಿಂದ ಬ್ರಹ್ಮಲೋಕಕ್ಕೆ ಹೋಗಲೇಬೇಕು. "ವೇದಾಂತವಿಜ್ಞಾನದಿಂದ ಯಥಾರ್ಥಸ್ಥಿತಿಯನ್ನು ಅರಿತ ಯತಿ ಗಳು ಬ್ರಹ್ಮಲೋಕದಲ್ಲಿ ಕೊನೆಗೆ ಸಾಲೋಕ್ಯಾದಿ ತ್ರಿವಿಧಮುಕ್ತಿಗಳಿಂದ ಪಾರಾಗು ತ್ತಾರೆ" ಎಂಬಲ್ಲಿ ತತ್ತ್ವಜ್ಞಾನಿಗಳೆಲ್ಲರಿಗೂ ಬ್ರಹ್ಮಲೋಕದಮೂಲಕ ಕ್ರಮಮುಕ್ತಿ ಯನ್ನು ಹೇಳಿರುವುದರಿಂದಲೂ, "ಬ್ರಹ್ಮವಾಗಲು ಇಚ್ಛಿಸುವವನು ಬ್ರಹ್ಮವನ್ನು ತಿಳಿಯ ಬೇಕು" "ಅವನು ಮತ್ತೆ ಹಿಂತಿರುಗುವುದಿಲ್ಲ" ಎಂಬಲ್ಲಿ ಬ್ರಹ್ಮಜ್ಞಾನಿಗಳೇ ಮತ್ತೆ ಹುಟ್ಟದಂತಾಗಿ ಶಿವಸಾಯುಜ್ಯವನ್ನು ಹೊಂದುವರೆಂದು ಹೇಳಿರುವುದರಿಂದಲೂ, ದಕ್ಷಿಣಾಯನದಲ್ಲಿ ಸತ್ತ ಶಿವಯೋಗಿಗಳೂ ಶಿವಲೋಕವನ್ನೇ ಹೊಂದುವರು. ಭೀಷ್ಮಾ

ದಿಗಳು ಯೋಗಪ್ರಭಾವದಿಂದ ಸ್ವೇಚ್ಛಾಮರಣರಾಗಿದ್ದುದರಿಂದ ಧರ್ಮವನ್ನು ಬೋಧಿಸಲಿಕ್ಕೂ ಉತ್ತರಾಯಣದ ಪ್ರಾಶಸ್ತ್ಯವನ್ನು ತೋರಿಸಲಿಕ್ಕೂ ಹಾಗೆ ನಿಶಾಮರಣದಿಂದೆ ರೂಢಿಗೆ ಬಂದಿರಬೇಕೆಂದು ನಿಶ್ಚಯಿಸಲಾಗಿದೆ.

ನನು ಚ ವಿದುಷೋ ಮುಮುಕ್ಷೂನ್ ಪ್ರತಿ ಪುನರಾವೃತ್ತ್ಯಪುನರಾವೃತ್ತಿಹೇತುತ್ವೇನ ಕಾಲವಿಶೇಷವಿಧಿರ್ದೃಶ್ಯತೇ. "ಯತ್ರ ಕಾಲೇ ತ್ವನಾವೃತ್ತಿಂ ಆವೃತ್ತಿಂ ಚೈವ ಯೋಗಿನಃ । ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥", "ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಶ್ಶಾಶ್ವತೀ ಮತೇ । ಏಕಯಾ ಯಾತ್ಯನಾವೃತ್ತಿಂ ಅನ್ಯಯಾಽಽವರ್ತತೇ ಪುನಃ ॥" ಇತಿ ದರ್ಶನಾತ್ ಅಯನದ್ವಯಮೃತಾನಾಂ ಸರ್ವೇಷಾಂ ಕಥಂ ಬ್ರಹ್ಮಪ್ರಾಪ್ತಿರಿತ್ಯಾಶಂಕಾಯಾಂ ತತ್ರಾಹ.

ಯೋಗಿನಃ ಪ್ರತಿಸ್ಮರ್ಯೇತೇ ಸ್ಮಾರ್ತೇ ಚೈತೇ ॥ ೨೦ ॥ ನಾತ್ರ ಮುಮುಕ್ಷೂನ್ ಪ್ರತಿ ಮರಣಕಾಲವಿಶೇಷೋಪಾದಾನಂ ಸ್ಮರ್ಯತೇ, ಅಪಿತು ಯೋಗಿನಃ ಯೋಗನಿಷ್ಠಾನ್ ಪ್ರತಿ ಸ್ಮಾರ್ತೇ ಸ್ಮೃತಿವಿಷಯಭೂತೇ ಸ್ಮರ್ತವ್ಯೇ ದೇವಯಾನಪಿತೃಯಾನಾಖ್ಯೇ ಗತೀ ಸ್ಮರ್ಯೇತೇ. ಯೋಗಾಂಗತಯಾಽನುದಿನಂ ಸ್ಮರ್ತುಂ ತಥಾಹ್ಯುಪಸಂಹಾರಃ. "ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ । ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥" ಇತಿ. "ಅಗ್ನಿರ್ಜ್ಯೋತಿರ್ಧೂಮೋ ರಾತ್ರಿಃ" ಇತಿ ಚ ದೇವಯಾನಪಿತೃಯಾನೇ ಪ್ರತ್ಯಭಿಜ್ಞಾಯೇತೇ. ಉಪಕ್ರಮೇ ಚ "ಯತ್ರ ಕಾಲೇ ತು" ಇತಿ ಕಾಲಶಬ್ದಃ ಕಾಲಾಭಿಮಾನಿದೇವತಾತಿವಾಹಿಕಪರಃ, ಅಗ್ನ್ಯಾದೇಃ ಕಾಲತ್ವಾಸಂಭವಾತ್. ಅತಃ "ತೇಽರ್ಚಿಷಮಭಿಸಂಭವಂತಿ" ಇತಿ ವಿಹಿತಾ ದೇವಯಾನಾನುಸೃತಿರತ್ರ ವಿದ್ಯಾನಿಷ್ಠಾನ್ ಪ್ರತಿ ವಿಧೀಯತೇ, "ನ ಮುಮುಕ್ಷೂನ್ ಪ್ರತಿ ಮರಣಕಾಲವಿಶೇಷಃ", "ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯೇ" ಇತಿ ಶ್ರುತ್ಯವಗಮಾತ್. ಅತಸ್ಸರ್ವದಾ ಪರಶಿವಬ್ರಹ್ಮಪ್ರಾಪ್ತೌ ನಿಶಾದಕ್ಷಿಣಾಯನಕೃಷ್ಣಪಕ್ಷನಿಷೇಧೋ ನಾಸ್ತ್ಯೇವ. ಯದಾ ದೇಹಪಾತಸ್ತದಾನೀಮೇವ ಶಿವತತ್ತ್ವಪ್ರಾಪ್ತಿರಿತಿ ವೇದಿತವ್ಯಂ. ಭಗವದ್ಗೀತಾದಿಸ್ಮೃತಿಷು ದ್ಯೋತಮಾನಾನಾಂ ಅಹಶ್ಯಬ್ದರಾತ್ರಿಶಬ್ದಶುಕ್ಲಕೃಷ್ಣದಕ್ಷಿಣೋತ್ತರಾಯಣಶಬ್ದಾನಾಂ ಶ್ರುತಿಸೂತ್ರಸ್ಥಾಽಹರಾದಿಶಬ್ದಾನಾಮಿವ ಲೋಕಪರತ್ವೇನ ಕಾಲಪರತ್ವಾಯೋಗಾತ್ ಅಸ್ಯಾಃ ಶ್ರುತೇಃ ಮೂರ್ತಪರಶಿವಬ್ರಹ್ಮೋಪಾಸಕಮಾತ್ರಪರತ್ವೇಽಪಿ ನ ಕೋಽಪಿ ವಿರೋಧಃ.

ಇತಿ ಶ್ರೀಕರಭಾಷ್ಯೇ ಚತುರ್ಥಾಧ್ಯಾಯೇ ದ್ವಿತೀಯಪಾದಃ ಸಮಾಪ್ತಃ.

ದೇಹವನ್ನು ಬಿಡಲಿರುವ ವಿದ್ವಾಂಸರಿಗೆ ಮತ್ತೆ ಹಿಂತಿರುಗಲಿಕ್ಕೂ ಹಿಂತಿರುಗದಿರಲಿಕ್ಕೂ ಕೆಲವು ಕಾಲಗಳನ್ನು ಕಾರಣಗಳೆಂದು ವಿಧಿಸಲಾಗಿದೆ. "ಯಾವಾಗ ಹೊರಟವರು ಮತ್ತೆ ಹಿಂತಿರುಗುವರು? ಯಾವಾಗ ಹೊರಟವರು ಮತ್ತೆ ಹಿಂತಿರುಗುವುದಿಲ್ಲ? ಎಂಬುದನ್ನು ಇಲ್ಲಿ ಹೇಳಲಾಗಿದೆ. "ಶುಕ್ಲಪಕ್ಷದಲ್ಲಿ ಹೊರಟವರು ಹಿಂತಿರುಗುವುದಿಲ್ಲ. ಕೃಷ್ಣಪಕ್ಷದಲ್ಲಿ ಹೋದವರು ಹಿಂತಿರುಗುತ್ತಾರೆ" ಹೀಗೆ ಗೀತೆಯಲ್ಲಿ ಹೇಳಿರುವುದರಿಂದ ಎರಡು ಪಕ್ಷಗಳಲ್ಲೂ ಸತ್ತವರಿಗೆ ಹೇಗೆ ಬ್ರಹ್ಮಲೋಕವು ಸಿಕ್ಕುತ್ತದೆ ಎಂದಾಶಂಕಿಸಿ ತಿಳಿಸುತ್ತಾನೆ. ಸಾಯಲಿಚ್ಛೆಯುಳ್ಳವರಿಗೆ ಇಲ್ಲಿ ಮರಣಕಾಲವನ್ನು ತಿಳಿಸಿಲ್ಲ; ಆದರೆ ಯೋಗನಿಷ್ಠರಾದ ಯೋಗಿಗಳಿಗೆ ಸ್ಮೃತಿಗಳಲ್ಲಿರುವ ದೇವಯಾನ ಪಿತೃಯಾನವೆಂಬ ಗತಿಗಳನ್ನು ತಿಳಿಸಲಿಕ್ಕಾಗಿಯೇ ಈ ವಾಕ್ಯಗಳು ಹೊರಟವೆ. ಯೋಗವನ್ನು ತಿಳಿಸುವಾಗ ಅದರ ಅಂಗವೆಂದು ಪ್ರತಿದಿನವೂ ಸ್ಮರಿಸಲಿಕ್ಕಾಗಿ ಉಪಸಂಹಾರದಲ್ಲೂ ಹಾಗೆಯೇ ತಿಳಿಸಲಾಗಿದೆ. "ಈ ಎರಡು ಮಾರ್ಗಗಳನ್ನು ತಿಳಿದ ಯಾವ ಯೋಗಿಯೂ ಈ ಸಂಸಾರದಲ್ಲಿ ಮೋಹಗೊಳ್ಳುವುದಿಲ್ಲ. ಅದ್ದರಿಂದ ನೀನು ಯಾವಾಗಲೂ ಯೋಗಯುಕ್ತನಾಗಿರು" ಎಂಬಲ್ಲೂ ದೇವಯಾನ ಪಿತೃಯಾನಗಳನ್ನೇ ಜ್ಞಾಪಿಸಲಾಗಿದೆ. ಆರಂಭದಲ್ಲಿ ಬಂದಿರುವ ಕಾಲಶಬ್ದವು ಕಾಲಾಭಿಮಾನಿದೇವತೆ ಎನಿಸಿದ ಆತಿವಾಹಿಕರಿಗೆ ಅನ್ವಯಿಸುತ್ತದೆ; ಯಾಕೆಂದರೆ ಅಗ್ನಿ ಜ್ಯೋತಿ ಮೊದಲಾದವು ಕಾಲವೆನಿಸಲಾರವು. ಆದ್ದರಿಂದ "ಅವರು ಪ್ರಕಾಶದೊಡನೆ ಬೆರೆಯುತ್ತಾರೆ" ಎಂಬಲ್ಲಿ ಹೇಳಿದ ದೇವಯಾನದ ಅನುಸರಣವನ್ನು ಇಲ್ಲಿ ವಿದ್ಯಾನಿಷ್ಠರಾದ ಸಾಧಕರಿಗೆ ಮಾತ್ರವೇ ವಿಧಿಸಲಾಗಿದೆ. "ಅವನಿಗೆ ಮುಕ್ತಿಗೆ ದೇಹಬಿಡುವಷ್ಟು ಕಾಲವೇ ವಿಳಂಬ"ವೆಂದು ಶ್ರುತಿಯಲ್ಲಿ ಹೇಳಿದ್ದರಿಂದ ಸಾಯುವವರಿಗೆ ಮರಣಕಾಲವನ್ನು ತಿಳಿಸುವುದು ಅಲ್ಲಿನ ವಾಕ್ಯಗಳ ಉದ್ದೇಶವಲ್ಲ. ಆದ್ದರಿಂದ ವಿದ್ವಾಂಸರಿಗೆ ಪರಶಿವಬ್ರಹ್ಮವನ್ನು ಹೊಂದಲು ರಾತ್ರಿ, ದಕ್ಷಿಣಾಯನ, ಕೃಷ್ಣಪಕ್ಷವೆಂಬ ನಿಷೇಧವಿಲ್ಲ ಮೊದಲೇ ಶಿವಭಾವದಲ್ಲಿರುವವರು ಯಾವಾಗ ದೇಹವನ್ನು ಬಿಡುವರೋ ಆಗಲೇ ಶಿವಸಾಯುಜ್ಯವನ್ನು ಹೊಂದುವರೆಂದು ತಿಳಿಯಬೇಕು. ಭಗವದ್ಗೀತೆಯಲ್ಲಿ ಬರುವ ಹಗಲುರಾತ್ರಿ, ಶುಕ್ಲಕೃಷ್ಣಪಕ್ಷ, ದಕ್ಷಿಣಾಯನೋತ್ತರಾಯಣ ಶಬ್ದಗಳು ಶ್ರುತಿಸೂತ್ರಗಳಲ್ಲಿ ಬರುವ ಅಂತಹ ಶಬ್ದಗಳಂತೆಯೇ ಲೋಕಕ್ಕೆ ಅನ್ವಯಿಸುತ್ತವೆಯೇ ಹೊರತು ಕಾಲಕ್ಕೆ ಅನ್ವಯಿಸುವುದಿಲ್ಲ. ಆದ್ದರಿಂದ ಈ ಶ್ರುತಿಯು ಮೂರ್ತೋಪಾಸಕರಿಗೆ ಅನ್ವಯಿಸುವುದೆಂದು ಹೇಳಿದರೂ ವಿರೋಧವಿಲ್ಲ.



## ಅಥ ಶ್ರೀಕರಭಾಷ್ಯೇ ಚತುರ್ಥಾಧ್ಯಾಯಸ್ಯ ತೃತೀಯಃ ಪಾದಃ

**ಪೂರ್ವೇ ಪುಣ್ಯಕರ್ಮವಾನ್ ಸ್ವಕಾಲವಿಧಿಪರಿಪಾಕೇನ ಸ್ಥೂಲಶರೀರಂ ವಿಹಾಯ ಮುಖನೇತ್ರಾದ್ಯುತ್ತಮದ್ವಾರೇಣೋತ್ಕ್ರಮ್ಯ ಪಿತೃಯಾನಮಾರ್ಗೇಣ ಚಂದ್ರಮಸಂ ಪ್ರಾಪ್ಯ ತದನಂತರಂ ತಲ್ಲೋಕಾತ್ ಸ್ವರ್ಗಾದಿಲೋಕಮನುಭೂಯ ತತ್ಪುಣ್ಯಶೇಷೇಣ ಶ್ರೋತ್ರಿಯ**

ಬ್ರಾಹ್ಮಣಾದ್ಯುತ್ತಮಯೋನಿಜನನಂ ಪ್ರಾಪ್ನೋತಿ. ದುರಿತಕರ್ಮವಾನ್ ಸ್ಥೂಲದೇಹಾವಸಾನೇ ತತ್ಕರ್ಮಾನುಸಾರೇಣ ಗುದಾದಿಕನಿಷ್ಠಾಂಗಮಾರ್ಗೇಣ ನಿರ್ಗತ್ಯ ಧೂಮಗತ್ಯಾ ಯಮಲೋಕೇ ಕುಂಭೀಪಾಕಾದಿಘೋರನರಕಮನುಭೂಯ ತತ್ಪಾಪಲೇಶೇನ ಮರ್ತ್ಯಲೋಕೇ ಗರ್ದಭಸೂಕರಾದಿದುಷ್ಟಯೋನಿಸಂಭವಂ ಲಭತೇ. ತಥೈವಾತ್ರ ನಿರವಯವಪರಮಾಕಾಶಶಿವತತ್ತ್ವೋಪಾಸನಾವಿಶೇಷೇಣ ವಿದ್ವಾನಿಹೈವ ಷೋಡಶಕಲಾತ್ಮಕಲಿಂಗಶರೀರೇಣ ಸಹ ಶಿವತತ್ತ್ವಂ ಲಭತೇ. ಉಮಾಮಹೇಶ್ವರಾತ್ಮಕಮೂರ್ತಬ್ರಹ್ಮೋಪಾಸಕೋ ಭಕ್ತಃ ಸ್ಥೂಲದೇಹತ್ಯಾಗೇ ತದುಪಾಸನಮಹಿಮ್ನಾ ಸುಷುಮ್ನಾನಾಡ್ಯಗ್ರಜ್ವಲನತೇಜೋಮಾರ್ಗೇಣೋತ್ಕ್ರಮ್ಯ ಅರ್ಚಿರಾದಿಪಥಾನುಗುಣ್ಯೇನ ಉತ್ತರಾಯಣೇ ಪ್ರಭಾಕರಮಂಡಲಾನುಸರಣೇನ ದಕ್ಷಿಣಾಯನೇ ಚಂದ್ರಮಂಡಲದ್ವಾರಾ ನಿರುಪಮನಿರತಿಶಯಶಿವಲೋಕಾದಿಕಲ್ಯಾಣವಿಭೂತ್ಯನುಭವವಾನ್ ಭವತೀತ್ಯುಪದೇಶೇನ "ಯ ಏವಮೇತದ್ವಿದುರ್ಯೇ ಚೇಮೇಽರಣ್ಯೇ ಶ್ರದ್ಧಾಂ ಸತ್ಯಮುಪಾಸತೇ ತೇಽರ್ಚಿಷಮಭಿಸಂಭವಂತಿ" ಇತ್ಯುಪಕ್ರಮ್ಯ "ಷಣ್ಮಾಸೇಭ್ಯೋ ದೇವಲೋಕಂ ದೇವಲೋಕಾದಾದಿತ್ಯಮಾದಿತ್ಯಾದ್ವೈದ್ಯುತಂ" ಇತ್ಯಾದಿನಾ ಪುಣ್ಯಕರ್ಮಿಣಾಂ ವಾಯುಲೋಕವರುಣಲೋಕೇಂದ್ರಲೋಕಾದಿಪ್ರಾಪ್ತೇಃ ಬೃಹದಾರಣ್ಯಕೇ ವ್ಯವಸ್ಥಾಪನಾತ್, "ತೇಽರ್ಚಿಷಮಭಿಸಂಭವಂತಿ" ಇತಿ ಛಾಂದೋಗ್ಯಶ್ರುತ್ಯಾ ಮೂರ್ತಬ್ರಹ್ಮೋಪಾಸಕಾನಾಂ ಅರ್ಚಿರಾದಿಮಾರ್ಗೇಣ ತಲ್ಲೋಕಾದಿಪ್ರಾಪ್ತಿವಿಧಾಯಕಶಾಸ್ತ್ರೋಪಪತ್ತಿಃ ಕಥಮುಪಪದ್ಯತ ಇತ್ಯಾಶಂಕ್ಯ ತೃತೀಯಪಾದಮಾರಭತೇ. ಅರ್ಚಿರಾದ್ಯಧಿಕರಣಂ ॥ ೧ ॥ ಅರ್ಚಿರಾದಿನಾ ತತ್ಪ್ರಥಿತೇಃ ॥ ೧ ॥ ಪೂರ್ವತ್ರ ಹೃದಯಪುಂಡರೀಕಗತಪರಶಿವಾನುಗ್ರಹೇಣ ಪ್ರಕಾಶಿತದ್ವಾರಸ್ಯ ತದುಪಾಸಕಸ್ಯೋತ್ಕ್ರಾಂತಸ್ಯ ಮೂರ್ಧನ್ಯನಾಡೀವಿಶೇಷೇಣ ಹಾರ್ದಾನುಗ್ರಹಾತ್ ಗತ್ಯುಪಕ್ರಮ ಉಕ್ತಃ. ತಸ್ಯ ಗಚ್ಛತೋ ಮಾರ್ಗ ಇದಾನೀಂ ನಿರ್ಣೀಯತೇ. ತತ್ರ ಶ್ರುತಿಷು ಮಾರ್ಗಾಂತರಾ ಬಹುಧಾ ಆಮ್ನಾಯಂತೇ. ಛಾಂದೋಗ್ಯೇ ತಾವತ್ "ಯಥಾ ಪುಷ್ಕರಪಲಾಶ ಆಪೋ ನ ಶ್ಲಿಷ್ಯಂತೇ । ಏವಮೇವಂವಿದಿ ಪಾಪಂ ಕರ್ಮ ನ ಶ್ಲಿಷ್ಯತೇ ॥" ಇತ್ಯುಪಕ್ರಮ್ಯ ಬ್ರಹ್ಮವಿದ್ಯಾಮುಪದಿಶ್ಯಾಮ್ನಾಯತೇ. "ಅಥ ಯದಿ ಚಾಸ್ಮಿನ್ ಶವ್ಯಂ ಕುರ್ವಂತಿ ಯದಿ ಚ ನಾರ್ಚಿಷಮೇವಾಭಿಸಂಭವಂತಿ", "ಅರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಂ ಅಪೂರ್ಯಮಾಣಪಕ್ಷಾದ್ಯಾನ್ ಷಡುದಙ್ಮಾಸಾನ್ ತನ್ಮಾಸೇಭ್ಯಃ ಸಂವತ್ಸರಂ ಸಂವತ್ಸರಾದಾದಿತ್ಯಮಾದಿತ್ಯಾ

ಚ್ಚಂದ್ರಮಸಂ ಚಂದ್ರಮಸೋ ವಿದ್ಯುತಂ ತತ್ಪುರಷೋಽಮಾನವಸ್ಸ ಏತಾನ್ ಬ್ರಹ್ಮ ಗಮಯತ್ಯೇಷ ದೇವಪಥೋ ಬ್ರಹ್ಮಪಥ ಏತೇನ ಪ್ರತಿಪದ್ಯಮಾನಾ ಇಮಂ ಮಾನವಮಾವರ್ತಂ ನಾವರ್ತಂತೇ ನಾವರ್ತಂತೇ ” ಇತಿ. ತಥಾತ್ರೈವಾಷ್ಟಮೇ “ ಅಥೈತೈರೇವ ರಶ್ಮಿಭಿರೂರ್ಧ್ವಮಾಕ್ರಮತೇ ” ಇತಿ. ಕೌಷೀತಕಿನಶ್ಚ ದೇವಯಾನಮಾರ್ಗಮನ್ಯಥಾಧೀಯತೇ “ ಸ ಏತಂ ದೇವಯಾನಂ ಪಂಥಾನಮಾಪದ್ಯ ಅಗ್ನಿಲೋಕಮಾಗಚ್ಛತಿ ಸ ವಾಯುಲೋಕಂ ಸ ವರುಣಲೋಕಂ ಸ ಆದಿತ್ಯಲೋಕಂ ಸ ಇಂದ್ರಲೋಕಂ ಸ ಪ್ರಜಾಪತಿಲೋಕಂ ಸ ಬ್ರಹ್ಮಲೋಕಂ ” ಇತಿ. ತಥಾ ಬೃಹದಾರಣ್ಯಕೇ “ ಯ ಏವಮೇತದ್ವಿದುರ್ಯೇ ಚೇಮೇಽರಣ್ಯೇ ಶ್ರದ್ಧಾಂ ಸತ್ಯಮುಪಾಸತೇ ತೇಽರ್ಚಿಷಮಭಿಸಂಭವಂತಿ ” ಇತಿ. ತತ್ರೈವ ಪುನರನ್ಯಥಾ “ ಯಥಾ ವೈ ಪುರುಷೋಽಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮಭಿಗಚ್ಛತಿ ತಸ್ಮೈ ಸ ತತ್ರ ಜಿಹೀರ್ಷತೇ । ಯಥಾ ರಥಚಕ್ರಸ್ಯ ಖಂಡೇನ ಸ ಊರ್ಧ್ವಮಾಕ್ರಮತೇ ಸ ಆದಿತ್ಯಮಾಗಚ್ಛತಿ ತಸ್ಮೈ ಸ ತತ್ರ ಜಿಹೀರ್ಷತೇ । ಯಥಾ ಆಡಂಬರಸ್ಯ ಖಂಡೇನ ಸ ಊರ್ಧ್ವಮಾಕ್ರಮತೇ ಸ ಚಂದ್ರಮಸಮಾಗಚ್ಛತಿ ತಸ್ಮೈ ನ ತತ್ರ ಜಿಹೀರ್ಷತೇ ।” ಇತ್ಯಾದಿ. ತತ್ರ ಸಂಶಯಃ. ಕಿಂ ಅರ್ಚಿರಾದಿರೇಕ ಏವ ಮಾರ್ಗಃ ಆಭಿಃ ಶ್ರುತಿಭಿಃ ಪ್ರತಿಪಾದ್ಯತ ಇತಿ ತೇನೈವ ಗಚ್ಛತಿ ವಿದ್ವಾನ್? ಉತ ತಸ್ಮಾದನ್ಯೇ ಅನ್ಯತ್ರ ಮಾರ್ಗಾ ವರ್ತಂತ ಇತಿ ಸ್ಮರ್ಯತೇ? ವಿದುಷಾಮರ್ಚಿರಾದಿಮಾರ್ಗೇಣೈವ ಪರಶಿವಲೋಕಪ್ರಾಪ್ತಿರಿತಿ ನಿಯಮೋ ನಾಸ್ತಿ. ತೈತ್ತಿರೀಯೇ “ ಯ ಏಷೋಽಂತರ್ಹೃದಯ ಆಕಾಶಃ । ತಸ್ಮಿನ್ನಯಂ ಪುರುಷೋ ಮನೋಮಯಃ । ಅಮೃತೋ ಹಿರಣ್ಮಯಃ । ಅಂತರೇಣ ತಾಲುಕೇ । ಯ ಏಷ ಸ್ತನ ಇವಾವಲಂಬತೇ । ಸೇಂದ್ರಯೋನಿಃ । ಯತ್ರಾಸೌ ಕೇಶಾಂತೋ ವಿವರ್ತತೇ । ವ್ಯಪೋಹ್ಯ ಶೀರ್ಷಕಪಾಲೇ । ಭೂರಿತ್ಯಗ್ನೌ ಪ್ರತಿತಿಷ್ಠತಿ । ಭುವ ಇತಿ ವಾಯೌ । ಸುವರಿತ್ಯಾದಿತ್ಯೇ । ಮಹ ಇತಿ ಬ್ರಹ್ಮಣಿ । ಆಪ್ನೋತಿ ಸ್ವಾರಾಜ್ಯಂ ॥ ” ಇತಿ. ಏವಂ ಬೃಹದಾರಣ್ಯಕವಾಜಸನೇಯಶಾಖಾದಾವಪ್ಯರ್ಚಿರಾದಿಗತಿನಿರಪೇಕ್ಷತಯಾ ಪರಶಿವಬ್ರಹ್ಮಲೋಕಪ್ರಾಪ್ತಿದರ್ಶನಾತ್ ತಲ್ಲೋಕಾವಾಪ್ತಿರನ್ಯಥೈವೇತಿ ಪ್ರಾಪ್ತೇ ಪ್ರಚಕ್ಷ್ಮಹೇ. ವಿದುಷಾಮರ್ಚಿರಾದಿಮಾರ್ಗೇಣೈವ ಪರಶಿವಲೋಕಪ್ರಾಪ್ತಿಃ. ಕುತಃ? ತತ್ಪ್ರಥಿತೇಃ ಪಂಚಾಗ್ನಿವಿದ್ಯಾದಿಷು “ ತೇಽರ್ಚಿಷಮಭಿಸಂಭವಂತಿ ” ಇತ್ಯಾದಿನಾ ಅರ್ಚಿರಾದೇಃ ಬ್ರಹ್ಮಪ್ರಾಪಕತ್ವೇನ ಪ್ರಸಿದ್ಧತ್ವಾತ್. “ ಭೂರಿತ್ಯಗ್ನೌ ಪ್ರತಿತಿಷ್ಠತಿ ” ಇತ್ಯಾದಿನಾ ವಿದ್ಯಾದಿಷು ನ ಪರಶಿವಬ್ರಹ್ಮಲೋಕಪ್ರಾಪ್ತಿಮಾರ್ಗ ಉಚ್ಯತೇ ಕಿಂತು

**ತದ್ವಿಭೂತಿಪ್ರಾಪ್ತಿರೇವ. ತಸ್ಮಾತ್ತಲ್ಲೋಕಪ್ರಾಪ್ತಿರ್ನಾನ್ಯಥಾ ಗಮ್ಯತೇ. ಪ್ರತ್ಯಭಿಜ್ಞಾನಾತ್ಸ ಏವ ಮಾರ್ಗಃ ಸರ್ವತ್ರ ನ್ಯೂನಾಧಿಕಭಾವೇನ ಪ್ರತಿಪಾದ್ಯತ ಇತಿ ವಿದ್ಯಾಗುಣೋಪಸಂಹಾರವತ್ ಅನ್ಯತ್ರ ಪ್ರೋಕ್ತಾನಾಂ ಅನ್ಯತ್ರೋಪಸಂಹಾರಃ ಕ್ರಿಯತೇ. ಛಾಂದೋಗ್ಯೇ ತಾವದುಪಕೋಸಲವಿದ್ಯಾಯಾಂ ಪಂಚಾಗ್ನಿವಿದ್ಯಾಯಾಂ ಚೈಕರೂಪತ್ವಮೇವಾಮ್ನಾಯತೇ. ವಾಜಸನೇಯಕೇ ಚ ಪಂಚಾಗ್ನಿವಿದ್ಯಾಯಾಂ ತಥೈವಾರ್ಚಿರಾದಿಕಲ್ಪಾಂತರ ಆಮ್ನಾಯತೇ. ತಸ್ಮಾತ್ತಥಾಪಿ ಸ ಏವೇತಿ ಪ್ರತೀಯತೇ. ಅನ್ಯತ್ರಾಪಿ ಸರ್ವತ್ರ ಅಗ್ನ್ಯಾದಿತ್ಯಾದಯಃ ಪ್ರತ್ಯಭಿಜ್ಞಾಯಂತೇ.**

ಪುಣ್ಯಕರ್ಮವನ್ನಾಚರಿಸಿದವನು ತನ್ನ ಕರ್ಮಪರಿಪಾಕದಿಂದ ಸ್ಥೂಲಶರೀರವನ್ನು ತೊರೆದು ಮುಖ ನೇತ್ರ ಮೊದಲಾದ ಉತ್ತಮದ್ವಾರದಿಂದ ಹೊರಟು ಪಿತೃಯಾನಮಾರ್ಗದಿಂದ ಚಂದ್ರನಲ್ಲಿ ಹೋಗಿ ಆಮೇಲೆ ಅಲ್ಲಿಂದ ಸ್ವರ್ಗಾದಿಲೋಕಗಳನ್ನು ಅನುಭವಿಸಿ ಪುಣ್ಯಶೇಷದಿಂದ ಶ್ರೋತ್ರಿಯಬ್ರಾಹ್ಮಣಾದ್ಯುತ್ತಮಜನ್ಮವನ್ನು ಹೊಂದುತ್ತಾನೆ. ಪಾಪಕರ್ಮವನ್ನಾಚರಿಸಿದವನು ಅವನ ಕರ್ಮಾನುಸಾರವಾಗಿ ಗುದ ಮೊದಲಾದ ಕನಿಷ್ಠಾವಯವಗಳ ಮೂಲಕ ಸ್ಥೂಲದೇಹವನ್ನು ತೊರೆದು ಧೂಮಗತಿಯಿಂದ ಯಮಲೋಕದಲ್ಲಿ ಕುಂಭೀಪಾಕವೇ ಮೊದಲಾದ ಭೀಕರವಾದ ನರಕವನ್ನು ಅನುಭವಿಸಿ ಉಳಿದ ಪಾಪಲೇಶದಿಂದ ಮರ್ತ್ಯಲೋಕದಲ್ಲಿ ಕತ್ತೆ, ನರಿ ಮೊದಲಾದ ದುಷ್ಟಯೋನಿಗಳಲ್ಲಿ ಮತ್ತೆ ಹುಟ್ಟುತ್ತಾನೆ ಎಂದು ಹಿಂದೆಯೇ ಹೇಳಿಯಾಗಿದೆ. ಆದರೆ ಇಲ್ಲಿ ನಿರವಯವಪರಮಾಕಾಶವೆನಿಸಿದ ಶಿವತತ್ತ್ವವನ್ನು ಉಪಾಸನಮಾಡಿದವನು ಇಲ್ಲಿಯೇ ಹದಿನಾರುಕಲೆಗಳುಳ್ಳ ಲಿಂಗಶರೀರದೊಡನೆ ಶಿವನೇ ಆಗಿರುತ್ತಾನೆ ಎಂದು ಹೇಳಲಾಗುವುದು. ಉಮಾಮಹೇಶ್ವರನೆನಿಸಿದ ಮೂರ್ತಬ್ರಹ್ಮವನ್ನು ಉಪಾಸನಮಾಡಿದ ಭಕ್ತನು ಸ್ಥೂಲದೇಹವನ್ನು ತೊರೆದು ಆ ಉಪಾಸನದ ಮಹಿಮೆಯಿಂದ ಸುಷುಮ್ನಾನಾಡಿಯ ಮೇಲ್ಭಾಗದಲ್ಲಿ ಬೆಳಗುವ ತೇಜಸ್ಸಿನ ಮೂಲಕ ಅರ್ಚಿರಾದಿಮಾರ್ಗದಿಂದ ಉತ್ತರಾಯಣದಲ್ಲಿ ಸೂರ್ಯಮಂಡಲದಮೂಲಕವೂ,ದಕ್ಷಿಣಾಯನದಲ್ಲಿ ಚಂದ್ರಮಂಡಲದಮೂಲಕವೂ ಹೊರಟು ಶಿವಲೋಕದಲ್ಲಿ ಮಂಗಳಕರವಾದ ಕಲ್ಯಾಣವಿಭೂತಿಯನ್ನು ಅನುಭವಿಸುತ್ತಾನೆ ಎಂದು ಹೇಳಿದ್ದರಿಂದಲೂ,"ಯಾರು ಹೀಗೆ ತಿಳಿಯುತ್ತಾರೋ ಮತ್ತು ಯಾರು ಅರಣ್ಯದಲ್ಲಿ ಶ್ರದ್ಧೆಯನ್ನು ಸತ್ಯವೆಂದು ಉಪಾಸನಮಾಡುತ್ತಾರೋ ಅವರು ಅರ್ಚಿರಾದಿಮಾರ್ಗದಲ್ಲಿ ಹೊರಡುತ್ತಾರೆ" ಎಂದು ಆರಂಭಿಸಿ "ಆರು ಮಾಸಗಳನಂತರ ದೇವಲೋಕವನ್ನೂ ಅಲ್ಲಿಂದ ಆದಿತ್ಯನನ್ನೂ ಅಲ್ಲಿಂದ ವಿದ್ಯುತ್ತನ್ನೂ ಸೇರುತ್ತಾರೆ" ಎಂದು ಹೇಳಿ ಪುಣ್ಯಕರ್ಮಿಗಳು ವಾಯುಲೋಕ, ವರುಣಲೋಕ, ಇಂದ್ರಲೋಕಗಳಿಗೆ ಹೋಗುವರೆಂದು ತಿಳಿಸಿರುವುದರಿಂದಲೂ " ಅವರು ಅರ್ಚಿರ್ಮಾರ್ಗವನ್ನಾಶ್ರಯಿಸುತ್ತಾರೆ" ಎಂದು ಛಾಂದೊಗ್ಯಶ್ರುತಿಯಿಂದ ಮೂರ್ತಬ್ರಹ್ಮೋಪಾಸಕರು ಅರ್ಚಿರಾದಿಮಾರ್ಗ

ಹಿಂದ ಅಯಾ ಲೋಕಗಳಿಗೆ ಹೋಗುವವರೆಂದು ವಿಧಿಸುವ ಶಾಸ್ತ್ರವು ಹೇಗೆ ಹೊಂದು ತ್ತದೆ? ಎಂದಾಶಂಕಿಸಿ ಮೂರನೆಯ ಪಾದವನ್ನಾರಂಭಿಸುತ್ತಾನೆ. ಹೃದಯಕಮಲದಲ್ಲಿ ರುವ ಪರಶಿವನ ಅನುಗ್ರಹದಿಂದ ಕಾಣಬರುವ ಬಾಗಿಲಿನಿಂದ ಮೂರ್ಧನ್ಯನಾಡಿಯ ಮೂಲಕ ಭಕ್ತನು ಹೊರಡುವನೆಂದು ಹಿಂದೆ ಹೇಳಿಯಾಯಿತು. ಹಾಗೆ ಹೊರಟವನ ಮಾರ್ಗವನ್ನು ಇಲ್ಲಿ ನಿರ್ಣಯಿಸಲಾಗುವುದು. ಈ ಬಗ್ಗೆ ಶ್ರುತಿಗಳಲ್ಲಿ ಅನೇಕ ಮಾರ್ಗಗಳನ್ನು ಹೇಳಲಾಗಿದೆ. ಛಾಂದೋಗ್ಯದಲ್ಲಿ "ಕಮಲದಳಕ್ಕೆ ನೀರು ಅಂಟ ದಿರುವಂತೆ ಜ್ಞಾನಿಗೆ ಪಾಪವು ಅಂಟುವುದಿಲ್ಲ" ಎಂದಾರಂಭಿಸಿ ಬ್ರಹ್ಮವಿದ್ಯೆಯನ್ನು ಉಪದೇಶಿಸಿ "ಅವನಿಗೆ ಉತ್ತರಕ್ರಿಯೆಗಳನ್ನು ಮಾಡಿದರೂ ಮಾಡದಿದ್ದರೂ ಅವನು ಅರ್ಚಿರ್ಮಾರ್ಗದಿಂದಲೇ ಹೊರಡುತ್ತಾನೆ. ಅಲ್ಲಿಂದ ಹಗಲು, ಶುಕ್ಲಪಕ್ಷ ಉತ್ತರಾಯಣ, ಸಂವತ್ಸರ, ಆದಿತ್ಯ, ಚಂದ್ರ, ವಿದ್ಯುತ್ ಈ ಕ್ರಮದಿಂದ ಹೊರಡುವ ಜ್ಞಾನಿಯನ್ನು ಅಮಾನವನೆಂಬ ದೇವನು ಬ್ರಹ್ಮದೊಡನೆ ಸೇರಿಸುತ್ತಾನೆ. ಇದೇ ದೇವಯಾನ; ಇದೇ ಬ್ರಹ್ಮಯಾನ; ಈ ದಾರಿಯಲ್ಲಿ ಹೊರಡುವವರು ಮತ್ತೆ ಸಂಸಾ ರದ ಸುಳಿಯಲ್ಲಿ ಸಿಕ್ಕಿಕೊಳ್ಳುವುದಿಲ್ಲ" ಎಂದು ಹೇಳಿದೆ. ಅಲ್ಲಿಯೇ ಎಂಟನೆಯ ಅನು ವಾಕದಲ್ಲಿ "ಈ ಕಿರಣಗಳಿಂದಲೇ ಅವನು ಮೇಲಕ್ಕೆ ಹೋಗುತ್ತಾನೆ" ಎಂದು ಹೇಳಿದೆ. ಕೌಷೀತಕಿಗಳು ದೇವಯಾನಮಾರ್ಗವನ್ನು "ಅವನು ಈ ದೇವಯಾನಮಾರ್ಗ ದಿಂದ ಅಗ್ನಿಲೋಕಕ್ಕೆ ಹೋಗುತ್ತಾನೆ. ಅಲ್ಲಿಂದ ವಾಯುಲೋಕವನ್ನೂ ಮತ್ತೆ ವರುಣಲೋಕವನ್ನೂ, ಅಲ್ಲಿಂದ ಆದಿತ್ಯಲೋಕವನ್ನೂ ಅನಂತರ ಇಂದ್ರಲೋಕವನ್ನೂ ಮತ್ತೆ ಪ್ರಜಾಪತಿಲೋಕವನ್ನೂ ಅಲ್ಲಿಂದ ಬ್ರಹ್ಮಲೋಕವನ್ನೂ ಹೊಂದು ತ್ತಾನೆ" ಹೀಗೆ ಬೇರೆರೀತಿಯಲ್ಲಿ ಹೇಳುತ್ತಾರೆ. ಹಾಗೆಯೇ ಬೃಹದಾರಣ್ಯಕದಲ್ಲಿ ಬೇರೊಂದುಕಡೆ "ಜೀವನು ಇಲ್ಲಿಂದ ಹೊರಟು ವಾಯುವಿನಲ್ಲಿ ಸೇರಿ ಅದನ್ನು ಬಿಟ್ಟು ಮುಂದೆ ಹೋಗಲಿಚ್ಛಿಸುತ್ತಾನೆ. ಹೇಗೆ ಮೇಲಕ್ಕೆ ಹೊಗುತ್ತಾನೆಯೋ ಹಾಗೆ ಇವನು ಮೇಲೆಹೋಗಿ ಆದಿತ್ಯನನ್ನು ತಲುಪುತ್ತಾನೆ. ಅಲ್ಲಿಂದ ಮುಂದೆ ಮೇಘದ ಖಂಡದಂತೆ ಮೇಲಕ್ಕೆಹೋಗಲಿಚ್ಛಿಸಿ ಚಂದ್ರನನ್ನು ಮುಟ್ಟುತ್ತಾನೆ. ಅಲ್ಲಿಂದ ಮುಂದೆ ದುಂದುಭಿಯೊಳಗಿನ ಬಯಲಿನಂತೆ ಮುಂದೆಹೋಗಲು ಅವಕಾಶವಿಲ್ಲದೆ ಅಲ್ಲಿಯೇ ನಿಲ್ಲುತ್ತಾನೆ." ಈ ರೀತಿಯಲ್ಲಿ ಶ್ರುತಿಗಳ ಅಭಿಪ್ರಾಯವು ಅನೇಕಬಗೆಯಾಗಿ ರುವುದರಿಂದ ಇಲ್ಲಿ ಒಂದು ಸಂಶಯಬರುತ್ತದೆ. ಈ ಶ್ರುತಿಗಳು ಜೀವನಿಗೆ ಹೊರಡ ಲಿಕ್ಕೆ ಅರ್ಚಿರಾದಿಮಾರ್ಗ ಒಂದನ್ನೇ ತಿಳಿಸುತ್ತವೆಯೋ ಅಥವಾ ಇತರ ಮಾರ್ಗ ಗಳನ್ನು ತಿಳಿಸುತ್ತವೆಯೇ ಎಂಬುದೇ ಈ ಸಂದೇಹ. ಜ್ಞಾನಿಗಳು ಅರ್ಚಿರಾದಿ ಮಾರ್ಗದಿಂದಲೇ ಶಿವಲೋಕಕ್ಕೆ ಹೋಗುವರೆಂಬ ನಿಯಮವಿಲ್ಲ. ತೈತ್ತಿರೀಯದಲ್ಲಿ, "ಈ ಹೃದಯದೊಳಗಿನ ಆಕಾಶದಲ್ಲಿ ಮನೋಮಯನಾದ ಜೀವನೇ ಅಮೃತನೂ ಮತ್ತು ಹಿರಣ್ಮಯನೂ ಆಗಿ ದವಡೆಯೊಳಗಿನ ಕಿರುನಾಲಿಗೆಯಂತೆ ಜೋತಾಡುವನು. ಅವನೇ ಇಂದ್ರಯೋನಿ ಎನಿಸುವನು. ಅವನೇ ಕೂದಲಿನ ತುದಿಯಲ್ಲೂ ವ್ಯಾಪಿಸಿದ್ದಾನೆ.

ಆವನು ಭೂಃ ಎಂದೇ ಹೇಳುತ್ತ ಅಗ್ನಿಯಲ್ಲೂ, ಭುವಃ ಎಂದು ಹೇಳುತ್ತ ವಾಯುವಿನಲ್ಲೂ, ಸುವಃ ಎಂದು ಹೇಳುತ್ತ ಆದಿತ್ಯನಲ್ಲೂ, ಮಹಃ ಎಂದು ಹೇಳುತ್ತ ಬ್ರಹ್ಮದಲ್ಲೂ ವ್ಯಾಪಿಸಿ ಸ್ವಾತಂತ್ರ್ಯವನ್ನು ಪಡೆಯುತ್ತಾನೆ." ಎಂದು ಹೇಳಲಾಗಿದೆ. ಇದೇರೀತಿಯಲ್ಲಿ ಬ್ರಹದಾರಣ್ಯಕ ವಾಜಸನೇಯ ಶಾಖೆಗಳಲ್ಲೂ ಮುಕ್ತನು ಅರ್ಚಿರಾದಿಮಾರ್ಗವನ್ನು ಅಪೇಕ್ಷಿಸದೆಯೇ ಶಿವಲೋಕವನ್ನು ಸೇರುವನೆಂದು ಹೇಳಿದೆ. ಆದ್ದರಿಂದ ಶಿವಲೋಕಕ್ಕೆಹೋಗಲು ಬೇರೆ ಮಾರ್ಗವೇ ಇರುವುದೆಂದು ಆಕ್ಷೇಪಬರುತ್ತದೆ. ಅದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಜ್ಞಾನಿಗಳು ಅರ್ಚಿರಾದಿಮಾರ್ಗದಿಂದಲೇ ಶಿವಲೋಕಕ್ಕೆ ಹೋಗಬೇಕು. ಹಾಗೆಯೇ ಪ್ರಸಿದ್ಧಿ ಇದೆ. ಪಂಚಾಗ್ನಿವಿದ್ಯೆಗಳಲ್ಲಿ "ಅವರು ಅರ್ಚಿಮಾರ್ಗವನ್ನು ಆಶ್ರಯಿಸುತ್ತಾರೆ" ಎಂಬಲ್ಲಿ ಅರ್ಚಿಮಾರ್ಗವೇ ಬ್ರಹ್ಮಲೋಕಕ್ಕೆ ಒಯ್ಯುವುದೆಂದು ಪ್ರಸಿದ್ಧವಾಗಿದೆ. ಭೂಃ ಎಂದು ಹೇಳುತ್ತ "ಅಗ್ನಿಯಲ್ಲಿ ಸೇರುತ್ತಾನೆ" ಎಂಬಲ್ಲಿ ವಿದ್ಯೆಗಳಿಂದ ಬ್ರಹ್ಮಪ್ರಾಪ್ತಿಯ ಮಾರ್ಗವನ್ನು ಹೇಳಿಲ್ಲ; ಆದರೆ ಆ ಬ್ರಹ್ಮದ ವಿಭೂತಿಯನ್ನು ಹೊಂದುವ ಮಾರ್ಗವನ್ನಷ್ಟೇ ಹೇಳಲಾಗಿದೆ. ಆದ್ದರಿಂದ ಶಿವಲೋಕಪ್ರಾಪ್ತಿಯು ಬೇರೆ ಮಾರ್ಗದಿಂದ ಬರುವಂತಿಲ್ಲ. ಒಂದೊಂದು ಕಡೆಯಲ್ಲಿ ಸ್ವಲ್ಪ ಭೇದವು ಕಂಡುಬಂದರೂ ಗುಣೋಪಸಂಹಾರಪಾದದಲ್ಲಿ ಹೇಳಿದ ನ್ಯಾಯದಂತೆ ಮಾರ್ಗಗಳಲ್ಲಿ ನ್ಯೂನಾತಿರೇಕವಿದ್ದರೂ ಎಲ್ಲವೂ ಬ್ರಹ್ಮಲೋಕಮಾರ್ಗವೇ ಆದ್ದರಿಂದ ಪರಸ್ಪರಸಮನ್ವಯವನ್ನು ಕಂಡುಕೊಳಬೇಕು. ಛಾಂದೋಗ್ಯ ಉಪಕೋಸಲ ಮತ್ತು ಪಂಚಾಗ್ನಿವಿದ್ಯೆ ಇವುಗಳಲ್ಲಿ ಏಕರೂಪತೆಯೇನೋ ಕಂಡುಬರುತ್ತದೆ. ವಾಜಸನೇಯದ ಪಂಚಾಗ್ನಿವಿದ್ಯೆಯಲ್ಲಿ ಸ್ವಲ್ಪ ವ್ಯತ್ಯಾಸವು ಕಂಡುಬಂದರೂ ಛಾಂದೋಗ್ಯದ ಕ್ರಮವನ್ನೇ ಅಲ್ಲಿಯೂ ಅನುಸರಿಸಬೇಕು. ಹೀಗೆಯೇ ಉಳಿದಕಡೆಗಳಲ್ಲೂ ಅಗ್ನಿ ಆದಿತ್ಯ ಇವೇ ಮೊದಲಾದವು ಸಮಾನವಾಗಿರುವುದರಿಂದ ಉಳಿದವನ್ನೂ ಅದೇ ಕ್ರಮದಿಂದ ಊಹಿಸಿಕೊಳ್ಳಬೇಕು.

ನನು ಬೃಹದಾರಣ್ಯಕೇ ಶ್ರುತೌ "ಸ ವಾಯುಲೋಕಂ ಸ ವರುಣಲೋಕಂ ಸ ಇಂದ್ರಲೋಕಂ ಸ ಪ್ರಜಾಪತಿಲೋಕಂ" ಇತಿ ವಾಯುಲೋಕವರುಣಲೋಕಾದಯಶ್ಚತ್ವಾರ ಉಕ್ತಾಃ. ತೇಷಾಂ ಕುತಃ ಪ್ರವೇಶಃ? ಇತ್ಯಾಶಂಕಾಯಾಮಧಿಕರಣಾಂತರೇಣಾಹ. ವಾಯ್ವಧಿಕರಣಂ ॥ ೨ ॥ ವಾಯುಮಬ್ದಾದವಿಶೇಷವಿಶೇಷಾಭ್ಯಾಂ ॥೨॥ ಅಬ್ದಾತ್ ಸಂವತ್ಸರಾದುಪರಿ ವಾಯುಲೋಕಂ ಪ್ರವಿಶತಿ. ಕುತಃ? ಅವಿಶೇಷವಿಶೇಷಾಭ್ಯಾಂ. "ಸ ವಾಯುಲೋಕಂ" ಇತ್ಯವಿಶೇಷವಚನಾತ್ ಸಾಮಾನ್ಯವಚನಾತ್ ವಾಯುಲೋಕಸ್ಯ ಕುತ್ರಚಿತ್ಪ್ರವೇಶಃ ಕರ್ತವ್ಯಃ. ತತ್ರ ವಾಯ್ವಾದಿತ್ಯಯೋಃ ಪರಸ್ಪರರೂಪಸಂಬಂಧವಿಶೇಷಾತ್ ಸಂವತ್ಸರಾದಿತ್ಯಯೋರ್ಮಧ್ಯೇ ವಾಯೋರ್ನಿವೇಶ ಇತಿ ನಿಶ್ಚೀಯತೇ. "ಸ ವಾಯುಲೋಕಂ" ಇತಿ ಶ್ರುತೇಃ ಲೋಕಮಾತ್ರಪ್ರತಿಪಾದಕತ್ವೇಪಿ

ಕ್ರಮಪ್ರತಿಪಾದಕತ್ವಾಭಾವಾತ್ ಅವಿಶೇಷವಚನಂ ದ್ರಷ್ಟವ್ಯಂ ಇತಿ ಸೂತ್ರಸೂಚಿತಸೂಕ್ಷ್ಮಾರ್ಥಃ. ಅರ್ಚಿರಾದಿನೈವ ಗಚ್ಛಂತಿ ವಿದ್ವಾಂಸಃ ಇತ್ಯುಕ್ತಂ. ತತ್ರ ಅರ್ಚಿರಾದಿಕೇ ಮಾರ್ಗೇ ಛಾಂದೋಗಾಃ ಮಾಸಾದಿತ್ಯಯೋರಂತರಾಲೇ ಸಂವತ್ಸರಮಧೀಯತೇ. "ತೇಽರ್ಚಿಷಮಭಿಸಂಭವಂತ್ಯರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಂ ಆಪೂರ್ಯಮಾಣಪಕ್ಷಾತ್ ಷಡುದಙ್ಮಾಸಾಂಸ್ತನ್ಮಾಸೇಭ್ಯಸ್ಸಂವತ್ಸರಂ ಸಂವತ್ಸರಾದಾದಿತ್ಯಮಾದಿತ್ಯಾಚ್ಚಂದ್ರಮಸಂ ಚಂದ್ರಮಸೋ ವಿದ್ಯುತಂ ತತ್ಪುರೋಷೋಽಮಾನವಸ್ಸ ಏನಾನ್ ಬ್ರಹ್ಮ ಗಮಯತಿ ಇತ್ಯಯಮರ್ಚಿರಾದಿಕ್ರಮಃ?" ಇತಿ ವದಂತಿ. ಬೃಹದಾರಣ್ಯಕೇ "ಯದಾ ವೈ ಪುರುಷೋಽಸ್ಮಾಲ್ಲೋಕಾತ್ಪ್ರೈತಿ ವಾಯುಮಾಗಚ್ಛತಿ ತಸ್ಮೈ ಸ ತತ್ರ ಜಿಹೀರ್ಷತೇ "ಯಥಾ ಸ ರಥಚಕ್ರಸ್ಯ ಖಂಡೇನ ಊರ್ಧ್ವಮಾಕ್ರಮತೇ ಸ ಆದಿತ್ಯಮಾಗಚ್ಛತಿ" ಇತಿ ಶ್ರೂಯತೇ. ವಾಜಸನೇಯಿನಸ್ತು ತಯೋರೇವಾಂತರಾಲೇ ದೇವಲೋಕಂ ಅಧೀಯತೇ. "ಮಾಸೇಭ್ಯೋ ದೇವಲೋಕಂ ದೇವಲೋಕಾದಾದಿತ್ಯಂ" ಇತಿ ದರ್ಶನಾತ್, ಸಂವತ್ಸರಾದಿತ್ಯಯೋರ್ಮಧ್ಯೇ ವಾಯುಃ ಶ್ರುತಃ. ಸ ತತ್ರ ನಿವೇಶ್ಯೋ ನವೇತಿ ಸಂಶಯೇ, ನ ನಿವೇಶ್ಯಃ. ಶ್ರವಣಾದ್ಗುಣೋಪಸಂಹಾರನ್ಯಾಯೇನ ಸಂವತ್ಸರಾದೂರ್ಧ್ವಂ ಆದಿತ್ಯಾತ್ಪೂರ್ವಂ ವಾಯುರ್ನಿವೇಶ್ಯಃ. ಛಾಂದೋಗ್ಯವಾಜಸನೇಯಯೋರುಭಯತ್ರಾಪಿ ಮಾರ್ಗೈಕತ್ವಾತ್ ಉಭಾವುಭಯತ್ರ ಉಪಸಂಹಾರ್ಯೌ, ತತ್ರ ಮಾಸಾದೂರ್ಧ್ವಮಭಿಹಿತಯೋಃ ಸಂವತ್ಸರದೇವಲೋಕಯೋಃ ಪಂಚಮ್ಯಾ ಅಭಿಹಿತಸ್ಯ ಶ್ರೌತಕ್ರಮಸ್ಯ ತುಲ್ಯತ್ವೇಽಪಿ "ಅರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಮಾಪೂರ್ಯಮಾಣಪಕ್ಷಾದ್ಯಾನ್ ಷಡುದಙ್ಮಾಸಾನ್" ಇತ್ಯಧಿಕಕಾಲಾನಾಂ ನ್ಯೂನಕಾಲೇಭ್ಯಃ ಉತ್ತರೋತ್ತರತ್ವೇನ ನಿವೇಶದರ್ಶನಾತ್ ಸಂವರತ್ಸರಸ್ಯೈವ ಮಾಸಾನಂತರಂ ಬುದ್ಧಾವಿಪರಿವೃತ್ತೇಃ ಸಂವತ್ಸರ ಏವ ಮಾಸಾದೂರ್ಧ್ವಂ ನಿವೇಶಯತವ್ಯ ಇತಿ ತದೂರ್ಧ್ವಂ ದೇವಲೋಕ ಇತಿ ನಿಶ್ಚೀಯತೇ. ಅನ್ಯತ್ರ ವಾಜಸನೇಯಿನಃ "ಯಥಾ ವೈ ಪುರುಷೋಽಸ್ಮಾಲ್ಲೋಕಾತ್ ಪ್ರೈತಿ ವಾಯುಮಾಗಚ್ಛತಿ ತಸ್ಮೈ ಸ ತತ್ರ ಜಿಹೀರ್ಷತೇ ಯಥಾ ರಥಚಕ್ರಸ್ಯ ಖಂಡೇನ ಸ ಊರ್ಧ್ವಮಾಕ್ರಮತೇ ಸ ಆದಿತ್ಯಮಾಗಚ್ಛತಿ" ಇತ್ಯಾದಿತ್ಯಾತ್ಪೂರ್ವಂ ವಾಯುಮಧೀಯತೇ. ಕೌಷೀತಕಿನಸ್ತು "ಸ ಏತಂ ದೇವಯಾನಂ ಪಂಥಾನಮಾಪದ್ಯ ಅಗ್ನಿಲೋಕಮಾಗಚ್ಛತಿ ಸ ವಾಯುಲೋಕಂ" ಇತ್ಯಗ್ನಿಲೋಕಶಬ್ದನಿರ್ದಿಷ್ಟಾದರ್ಚಿಷಃ ಪರಂ ವಾಯು

ಮಭಿಧೀಯತೇ. ತತ್ರ ಕೌಷೀತಕಿನಾಂ ಪಾಠಕ್ರಮೇಣಾರ್ಚಿಷಃ ಪರತ್ವೇನ ಪ್ರಾಪ್ತಸ್ಯ ವಾಯೋಃ ವಾಜಸನೇಯಿನಾಂ ತೇನ "ಸ ಊರ್ಧ್ವಮಾಕ್ರಮತೇ ಸ ಆದಿತ್ಯಮಾಗಚ್ಛತಿ" ಇತ್ಯೂರ್ಧ್ವಶಬ್ದನಿರ್ದಿಷ್ಟಶ್ರೌತಕ್ರಮೇಣ ಪಾಠಕ್ರಮಾದ್ಬಲೀಯಸಾ ಆದಿತ್ಯಾತ್ಪೂರ್ವಂ ಪ್ರವೇಶೋ ನಿಶ್ಚೀಯತೇ. ಅತ ಆದಿತ್ಯಾತ್ಪೂರ್ವಂ ಸಂವತ್ಸರಾದೂರ್ಧ್ವಂ ದೇವಲೋಕಸ್ಯ ವಾಯುಲೋಕಸ್ಯ ಚ ವ್ಯಪದೇಶಾದ್ಭಿನ್ನತ್ವಂ ಗಮ್ಯತೇ. ಭಿನ್ನಾರ್ಥತ್ವೇ ಚ ಊರ್ಧ್ವಶಬ್ದೇನ ಪಂಚಮ್ಯಾಚೋಭಯೋಃ ಸಂವತ್ಸರಾದಿತ್ಯಾಂತರಾಲೇ ಶ್ರುತಿಕ್ರಮೇಣ ಪ್ರಾಪ್ತತ್ವಾತ್ ವಿಶೇಷಾಭಾವಾಚ್ಚ ಯಥೇಷ್ಟಮಿತಿ ಪ್ರಾಪ್ತೇ ತತ್ರೋಚ್ಯತೇ ವಾಯುಮಬ್ದಾದಿತಿ. ವಾಯುಂ ಸಂವತ್ಸರಾದೂರ್ಧ್ವಮಧಿಗಚ್ಛೇತ್. ಕುತಃ? ಅವಿಶೇಷವಿಶೇಷಾಭ್ಯಾಂ ವಾಯುರೇವ ನಿರ್ದಿಷ್ಟವಾನ್. ದೇವಲೋಕಶಬ್ದೋ ಹ್ಯವಿಶೇಷೇಣ ಸಾಮಾನ್ಯೇನ "ದೇವಾನಾಂ ಲೋಕಃ" ಇತ್ಯನೇನ ರೂಪೇಣ ವಾಯುಮಭಿಧತ್ತೇ. "ಸ ವಾಯುಮಭಿಗಚ್ಛತಿ ತಸ್ಮೈ ಸ ತತ್ರ" ಇತಿ ವಾಯುಶಬ್ದೋ ವಿಶೇಷೇಣ ವಾಯುಮಭಿಧತ್ತೇ. ಅತೋ ದೇವಲೋಕವಾಯುಶಬ್ದಾಭ್ಯಾಂ ಅವಿಶೇಷವಿಶೇಷಾಭ್ಯಾಂ ವಾಯುರೇವಾಭಿಧೀಯತೇ ಇತಿ ಸಂವತ್ಸರಾದೂರ್ಧ್ವಂ ವಾಯುಮೇವಾಭಿಗಚ್ಛೇತ್. ಕೌಷೀತಕಿನಾಂ ವಾಯುಲೋಕಶಬ್ದಶ್ಚಾಗ್ನಿಲೋಕಶಬ್ದವತ್ "ವಾಯುಶ್ಚಾಸೌ ಲೋಕಶ್ಚ" ಇತಿ ವ್ಯುತ್ಪತ್ತ್ಯಾ ವಾಯುಮೇವಾಭಿಧತ್ತೇ. ವಾಯುಶ್ಚ ದೇವಾನಾಮಾವಾಸಭೂತ ಇತ್ಯನ್ಯತ್ರ ಶ್ರೂಯತೇ. "ಯೋಽಯಂ ಪವನ ಏಷ ದೇವಾನಾಂ ಗೃಹಂ" ಇತಿ ದರ್ಶನಾದವಿರೋಧಃ.

ಬೃಹದಾರಣ್ಯಕದಲ್ಲಿ "ಅವನು ವಾಯುಲೋಕ ವರುಣಲೋಕ ಇಂದ್ರಲೋಕ ಪ್ರಜಾಪತಿಲೋಕಗಳನ್ನುಪ್ರವೇಶಿಸುವನು" ಎಂದು ಹೇಳಿದೆ. ಅವನು ಹೀಗೆ ಯಾತಕ್ಕೆ ಪ್ರವೇಶಿಸುವನು? ಎಂದಾಶಂಕಿಸಿ ತಿಳಿಸುತ್ತಾನೆ. ಸಂವತ್ಸರವಾದ ಮೇಲೆ ವಾಯುಲೋಕವನ್ನು ಪ್ರವೇಶಿಸುತ್ತಾನೆ; ಯಾಕೆಂದರೆ ಇಲ್ಲಿ ವಾಯುಲೋಕವೆಂದು ಸಾಮಾನ್ಯವಾಗಿ ಹೇಳಿದ್ದರಿಂದ ವಾಯುಲೋಕದಲ್ಲಿಯೇ ಒಂದು ಕಡೆ ಅವನು ಪ್ರವೇಶಿಸಬೇಕು. ಅಲ್ಲಿ ವಾಯು ಆದಿತ್ಯಗಳಿಗೆ ಪರಸ್ಪರಸಂಬಂಧವಿರುವುದರಿಂದ ಸಂವತ್ಸರ ಮತ್ತು ಆದಿತ್ಯಗಳ ಮಧ್ಯದಲ್ಲಿ ವಾಯುವನ್ನು ಸೇರಿಸಬೇಕೆಂದು ನಿಶ್ಚಯಿಸಲಾಗಿದೆ. "ಸ ವಾಯುಲೋಕಂ" ಎಂಬ ಶ್ರುತಿಯು ಲೋಕಒಂದನ್ನೇ ತಿಳಿಸುತ್ತ ಕ್ರಮವನ್ನು ತಿಳಿಸದಿರುವುದರಿಂದ ಅದನ್ನು ಸಾಮಾನ್ಯವಚನವೆಂದು ತಿಳಿಯಬೇಕು. ಅರ್ಚಿರಾದಿ ಮಾರ್ಗದಿಂದಲೇ ಜ್ಞಾನಿಗಳು ಹೊರಡುತ್ತಾರೆ" ಎಂದು ಹೇಳಿದಾಗ ಇಲ್ಲಿ ಅರ್ಚಿರಾದಿ ಮಾರ್ಗದಲ್ಲಿ ಛಾಂದೋಗರು ಮಾಸ ಆದಿತ್ಯಗಳ ನಡುವೆ ಸಂವತ್ಸರವನ್ನು

ಸೇರಿಸುತ್ತಾರೆ. ವಾಜಸನೇಯಿಗಳಾದರೋ ಅವೆರಡರ ಮಧ್ಯದಲ್ಲಿ ದೇವಲೋಕವನ್ನು ಸೇರಿಸುತ್ತಾರೆ. " ಮಾಸಗಳಿಂದ ದೇವಲೋಕಕ್ಕೂ ಅಲ್ಲಿಂದ ಆದಿತ್ಯನಲ್ಲಿಗೂ ಹೋಗುತ್ತಾನೆ" ಎಂದು ಅಲ್ಲಿಯೇ ಹೇಳಲಾಗಿದೆ. ಹೀಗೆ ಸಂವತ್ಸರ ಆದಿತ್ಯಗಳ ಮಧ್ಯದಲ್ಲಿ ವಾಯುವನ್ನು ಹೇಳಿರುವುದರಿಂದ ಅದನ್ನು ಅಲ್ಲಿ ಸೇರಿಸಬೇಕೇ ಬೇಡವೇ ಎಂದು ಸಂಶಯ ಒಂದು ಸೇರಿಸಬೇಕಾಗಿಲ್ಲವೆಂದು ಆಕ್ಷೇಪವು ಬರುತ್ತದೆ. ಗುಣೋಪಸಂಹಾರ ನ್ಯಾಯದಿಂದ ಸಂವತ್ಸರದ ಮುಂದೆ ಆದಿತ್ಯನಿಗೆ ಮೊದಲು ವಾಯುವನ್ನು ಸೇರಿಸಬೇಕು. ಛಾಂದೋಗ್ಯ ವಾಜಸನೇಯಗಳೆರಡರಲ್ಲೂ ಮಾರ್ಗ ಒಂದೇ ಆದ್ದರಿಂದ ಎರಡನ್ನೂ ಎರಡುಕಡೆಗಳಲ್ಲೂ ಸೇರಿಸಿಕೊಳ್ಳಬೇಕು. ಮಾಸದ ಮುಂದೆ ಹೇಳಿರುವ ಸಂವತ್ಸರದೇವಲೋಕಗಳಿಗೆ ಪಂಚಮೀ ವಿಭಕ್ತಿಯಿಂದ ಹೇಳಿದ ಶ್ರೌತಕ್ರಮವು ಸಮಾನವಾಗಿದ್ದರೂ, ಅಗ್ನಿ ಸಂಸ್ಕಾರವಾದಮೇಲೆ ಜೀವನು ಹಗಲು ಶುಕ್ಲಪಕ್ಷ ಇತ್ಯಾದಿ ಕ್ರಮದಿಂದ ಹೊರಡುವನೆಂದು ಹೇಳಿ " ಹೆಚ್ಚಿನ ಕಾಲಗಳನ್ನು ಕಡಮೆ ಕಾಲಗಳ ಮುಂದೆ ತಿಳಿಸಿರುವುದರಿಂದಲೂ, ಸಂವತ್ಸರವೇ ಮಾಸದ ಮುಂದೆ ತೋರುವುದಾಗಿ ಬುದ್ಧಿಗೋಚರವಾಗುವುದರಿಂದಲೂ ಸಂವತ್ಸರವನ್ನೇ ಮಾಸದಮುಂದೆ ಸೇರಿಸಬೇಕು ಮತ್ತು ಅದರಮುಂದೆ ದೇವಲೋಕವನ್ನು ಸೇರಿಸಬೇಕು ಎಂದು ನಿಶ್ಚಯಿಸಲಾಗಿದೆ. ಬೇರೆಕಡೆ ವಾಜಸನೇಯಿಗಳು ಆದಿತ್ಯನಿಗೆ ಮೊದಲು ವಾಯುವನ್ನು ಸೇರಿಸಿದ್ದಾರೆ. ಕೌಷೀತಕಿಗಳು " ಅವನು ಈ ದೇವಯಾನಮಾರ್ಗದಿಂದ ಅಗ್ನಿಲೋಕಕ್ಕೂ ಅಲ್ಲಿಂದ ವಾಯುಲೋಕಕ್ಕೂ ಹೋಗುತ್ತಾನೆ" ಎಂಬಲ್ಲಿ ಅಗ್ನಿಲೋಕವೆಂದರೆ ಅಗ್ನಿಯಿಂದಾಚೆಗೆ ಇರುವ ವಾಯುಲೋಕವೆಂದು ಹೇಳುತ್ತಾರೆ. ಅದರಲ್ಲೂ ಕೌಷೀತಕಿಗಳ ಪಾಠಕ್ರಮದಿಂದ ಅಗ್ನಿಗೆ ಮುಂದೆಬರುವ ವಾಯುವಿಗೆ ವಾಜಸನೇಯಿಗಳ ಪ್ರಕಾರ " ಅವನು ಮೇಲೆ ಹೋಗಿ ಆದಿತ್ಯನಲ್ಲಿ ಸೇರುತ್ತಾನೆ " ಎಂಬಲ್ಲಿ ಊರ್ಧ್ವಶಬ್ದದಿಂದ ತಿಳಿದುಬರುವ ಶ್ರೌತಕ್ರಮದಿಂದ ವಾಯುವಿಗೆ ಆದಿತ್ಯನಿಗಿಂತಲೂ ಮೊದಲು ಪ್ರವೇಶವುಂಟೆಂದು ನಿಶ್ಚಯಿಸಲಾಗಿದೆ. ಆದ್ದರಿಂದ ಆದಿತ್ಯನ ಹಿಂದೆ ಸಂವತ್ಸರದ ಮುಂದೆ ದೇವಲೋಕ ಮತ್ತು ವಾಯುಲೋಕಗಳನ್ನು ಹೇಳಿರುವುದರಿಂದ ಅವೆರಡೂ ಬೇರೆ ಎಂದು ಕಂಡುಬರುತ್ತದೆ. ಹೀಗೆ ಬೇರೆಯಾಗಿದ್ದರೂ ಊರ್ಧ್ವಶಬ್ದದಿಂದಲೂ ಪಂಚಮೀ ವಿಭಕ್ತಿಯಿಂದಲೂ ಆ ಎರಡು ಲೋಕಗಳಿಗೂ ಸಂವತ್ಸರ ಆದಿತ್ಯ ಇವುಗಳ ಮಧ್ಯದಲ್ಲಿ ಶ್ರುತಿಕ್ರಮದಿಂದ ಪ್ರಾಪ್ತಿಯು ಸಂಭವಿಸುವುದಾದರೂ ಆ ಎರಡರಲ್ಲಿಯೂ ಕ್ರಮವನ್ನು ಹೇಳುವ ಯಾವ ವಿಶೇಷಪ್ರಮಾಣವೂ ಇಲ್ಲದಿರುವುದರಿಂದ ಇಚ್ಛಾನುಸಾರವಾಗಿ ಆ ಎರಡು ಲೋಕಗಳಿಗೂ ಜೀವನು ಪ್ರವೇಶಿಸಬಹುದೆಂದು ಹೇಳಬೇಕು. ಹೀಗೆ ಆಕ್ಷೇಪ ಬಂದರೆ ಅದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ವಾಯುಲೋಕವನ್ನು ಸಂವತ್ಸರದ ಮುಂದೆಯೇ ಸೇರಿಸಬೇಕು. ದೇವಲೋಕಶಬ್ದವು ಸಾಮಾನ್ಯವಾಗಿ ದೇವತೆಗಳ ಲೋಕವೆಂಬ ಅರ್ಥದಲ್ಲಿ ವಾಯುವನ್ನೇ ತಿಳಿಸುತ್ತದೆ. "ಅವನು ವಾಯುವಿನಲ್ಲಿ ಸೇರುತ್ತಾನೆ" ಎಂಬಲ್ಲಿ ವಾಯುಶಬ್ದವು ವಿಶೇಷವಾಗಿ ವಾಯುವನ್ನೇ ತಿಳಿಸು

ತ್ತದೆ. ಹೀಗೆ ದೇವಲೋಕವನ್ನು ಸಾಮಾನ್ಯವಾಗಿಯೂ ವಾಯುಶಬ್ದವನ್ನು ವಿಶೇಷ ವಾಗಿಯೂ ತಿಳಿಸಿದ್ದರೂ ವಾಯುವನ್ನೇ ಇಲ್ಲಿ ಹೇಳಿರುವುದರಿಂದ ಜೀವನು ಸಂವತ್ಸರ ವಾದ ಮೇಲೆ ವಾಯುಲೋಕವನ್ನೇ ಸೇರಬೇಕು. ಕೌಷೀತಕಿಗಳಿಗೆ ವಾಯುಶಬ್ದವು, ಅಗ್ನಿಲೋಕಶಬ್ದದಂತೆ ವಾಯುವೆನಿಸಿದ ಲೋಕವೆಂಬ ವ್ಯುತ್ಪತ್ತಿಯಿಂದ ವಾಯು ವನ್ನೇ ತಿಳಿಸುತ್ತದೆ. ವಾಯುವು ದೇವತೆಗಳಿಗೆ ವಾಸಕ್ಕೆ ಆಶ್ರಯನಾಗಿರುವನೆಂದು ಶ್ರುತಿಯೇ ಬೇರೆ ಕಡೆಯಲ್ಲಿ ಹೇಳಿದೆ. " ಈ ವಾಯುವೇ ದೇವತೆಗಳಿಗೆ ಮನೆಯಾಗಿ ದ್ದಾನೆ " ಎಂದು ಹೇಳಿರುವುದರಿಂದ ವಾಯುಲೋಕಪದವು ವಾಯುವಿಗೆ ಅನ್ವಯಿಸು ವುದರಲ್ಲಿ ಯಾವ ವಿರೋಧವೂ ಇಲ್ಲ.

ನನ್ವರ್ಚಿರಾದಿಗತ್ಯನುಸರಣಾನಾಂ ವಿದುಷಾಂ ವಾಯುಲೋಕಾ ದೂರ್ಧ್ವಂ ತಸ್ಮಾಲ್ಲೋಕಾತ್ ಶಿವಲೋಕಃ ಸಂಭವತೀತ್ಯಾಶಂಕಾಯಾ ಮಧಿಕರಣಾಂತರೇಣ ದರ್ಶಯತಿ. ವರುಣಾಧಿಕರಣಂ || ೩ || ತಟಿ ತೋಽಧಿ ವರುಣಸ್ಸಂಬಂಧಾತ್ || ೩ || ವಾಯುಲೋಕಾನಂತರಂ ಜೀವಸ್ತಟಿಲ್ಲೋಕಂ ಪ್ರವಿಶತಿ. ತಟಿಲ್ಲೋಕಾದ್ವಿದ್ಯುಲ್ಲೋಕಾದುಪರಿ ಅಧಿವರುಣಃ ವರುಣಲೋಕಂ ಗಮಯತಿ. ಕುತಃ? ಸಂಬಂಧಾತ್ ವಿದ್ಯುದ್ವರುಣಯೋಃ ಪರಸ್ಪರಸಂಬಂಧಾತ್ ಇಂದ್ರಪ್ರಜಾಪತಿಲೋಕ ಯೋಸ್ತು " ಅವಶಿಷ್ಟಾನಾಮಂತೇ ನಿವೇಶಃ " ಇತಿ ನ್ಯಾಯೇನ ವರುಣ ಲೋಕಾದನಂತರಮಿಂದ್ರಲೋಕಃ ತದನಂತರಂ ಪ್ರಜಾಪತಿಲೋಕ ದ್ವಾರಾ ಶಿವಲೋಕಂ ಪ್ರಾಪ್ನೋತೀತಿ ಸೂತ್ರಾರ್ಥಃ. ಕೌಷೀತಕಿನಾಂ " ಸ ಏತಂ ದೇವಯಾನಂ ಪಂಥಾನಮಾಗತ್ಯಾಗ್ನಿಲೋಕಮಾಗಚ್ಛತಿ ಸ ವಾಯುಲೋಕಂ ಸ ಆದಿತ್ಯಲೋಕಂ ಸ ಇಂದ್ರಲೋಕಂ ಸ ಪ್ರಜಾಪತಿ ಲೋಕಂ ಸ ಬ್ರಹ್ಮಲೋಕಂ " ಇತ್ಯಾಗ್ನಿಲೋಕಶಬ್ದಸ್ಯಾರ್ಚಿಃಪರ್ಯಾಯ ತ್ವೇನ ಪ್ರಾಥಮ್ಯಮವಿಗೀತಂ. ವಾಯೋಶ್ಚ ಸಂವತ್ಸರಾದೂರ್ಧ್ವಂ ಪ್ರವೇಶಃ ಉತ ಆದಿತ್ಯಸ್ಯಾನ್ಯತ್ರ ಪ್ರಾಪ್ತಪಾಠಕ್ರಮಬಾಧೇನ " ದೇವ ಲೋಕಾದಾದಿತ್ಯಮಾದಿತ್ಯಾಚ್ಚಂದ್ರಮಸಂ " ಇತಿ ವಾಜಸನೇಯೋಕ್ತ ಶ್ರುತಿಕ್ರಮಾತ್ ದೇವಲೋಕಶಬ್ದಾಭಿಹಿತಾದ್ವಾಯೋರುಪರಿ ನಿವೇಶಃ ಸಿದ್ಧಃ, ಇದಾನೀಂ ವರುಣೇಂದ್ರಾದಿಷು ಚಿಂತಾ, ಕಿಮೇತೇ ವರುಣಾ ದಯಃ ಯಥಾಪಾಠಂ ವಾಯೋರೂರ್ಧ್ವಂ ನಿವೇಶಿತವ್ಯಾಃ ಆಹೋಸ್ವಿದ್ವಿ ದ್ಯುತೋಽಧಿ ಇತಿ ವಿಶಯೇ, " ಅರ್ಚಿಃಪ್ರಭೃತಿಷು ಸರ್ವೇಷು ಅರ್ಚಿ ಷೋಽಹರಿತ್ಯಾದಿಶ್ರುತಿಕ್ರಮೋಪರೋಧಾತ್ ವಿದ್ಯುತಃ ಪರಸ್ತಾಚ್ಚ ತತ್ಪುರುಷೋಽಮಾನವಃ ಸ ಏನಾನ್ ಬ್ರಹ್ಮ ಗಮಯತಿ " ಇತಿ ವಿದ್ಯು ತ್ಪುರುಷಸ್ಯ ಬ್ರಹ್ಮಗಮಯಿತೃತ್ವಶ್ರವಣಾಚ್ಚ ಸರ್ವತ್ರಾವಕಾಶಾಭಾವೇನ ಅಪ್ರಾಪ್ತೌ ಚೋಪದೇಶಾನ್ಯೈಯರ್ಥ್ಯಾಯ ಅವಶ್ಯಂ ಕಸ್ಯಚಿದ್ವಾಧ್ಯತ್ವೇ

ಪಾಠಕ್ರಮಾನುರೋಧೇನ ವಾಯೋರನಂತರಂ ವರುಣೋ ನಿವೇಶ ಯಿತವ್ಯಃ, ವಾಯ್ವಾದಿತ್ಯಯೋಃ ಕ್ರಮಸ್ಯ ಬಾಧಿತತ್ವೇನ ಇಂದ್ರಪ್ರಜಾ ಪತೀ ಅಪಿ ಹ್ಯತ್ರೈವ ನಿವೇಶಯಿತವ್ಯೇ ಇತಿ ಪ್ರಾಪ್ತೇ ಉಚ್ಯತೇ ತಟಿತೋಽಧಿ ಇತಿ. ವರುಣಸ್ತಾವತ್ ವಿದ್ಯುತ ಉಪರಿಷ್ಟಾತ್ ನಿವೇಶಯಿತವ್ಯಃ. ಕುತಃ? ಸಂಬಂಧಾತ್, ಮೇಘೋದರವರ್ತಿ ತ್ವಾದ್ವಿದ್ಯುತೋ ವರುಣೇನ ಸಂಬಂಧೋ ಲೋಕವೇದಯೋಃ ಪ್ರಸಿದ್ಧಃ. ಏತದುಕ್ತಂ ಭವತಿ. ವರುಣಾದೀನಾಮುಪದೇಶಾನ್ಯೈಯ ಥ್ಯಾರ್ಯ ಕ್ವಚಿನ್ನಿವೇಶಯಿತವ್ಯತ್ವೇ ಸತಿ ಪಾಠಕ್ರಮಾದರ್ಥಕ್ರಮಸ್ಯ ಬಲೀಯಸ್ತ್ವಾತ್ ವಿದ್ಯುತೋಽಧಿ ವರುಣೋ ನಿವೇಶಯಿತವ್ಯಃ. ತತಶ್ಚಾ ಮಾನವಸ್ಯ ಗಮಯಿತೃತ್ವಂ ವ್ಯವಧಾನಸಹಮಿತ್ಯವಗಮ್ಯತೇ. ತಸ್ಯ ಚ ವ್ಯವಧಾನಸಹತ್ವಾದಿಂದ್ರಾದೇಶ್ಚೋಪತಿಷ್ಠತೋಽವಶ್ಯನಿವೇಶ ಯಿತವ್ಯಸ್ಯ ವರುಣಾದುಪರ್ಯುಪದಿಷ್ಟತ್ವಾದಾಗಂತೂನಾಮಂತೇ ನಿವೇಶ ಯಿತವ್ಯತ್ವಾಚ್ಚ ವರುಣಾದುಪರಿ ಇಂದ್ರಾದಿರ್ನಿವೇಶಯಿತವ್ಯ ಇತಿ ವೇದಿತವ್ಯಂ.

ಅರ್ಚಿರಾದಿಮಾರ್ಗವನ್ನು ಅನುಸರಿಸುವ ಜ್ಞಾನಿಗಳು ವಾಯುಲೋಕದ ಮುಂದೆ ಅಲ್ಲಿಂದಲೇ ಶಿವಲೋಕವನ್ನು ಹೊಂದುತ್ತಾರೆ ಎಂಬುದನ್ನು ಆಶಂಕಿಸಿ ಸಿದ್ಧಾಂತವನ್ನು ತಿಳಿಸುತ್ತಾನೆ. ವಾಯುಲೋಕವನ್ನು ಹೊಕ್ಕಮೇಲೆ ಜೀವನು ಮಿಂಚಿನಲೋಕವನ್ನು ಪ್ರವೇಶಿಸುತ್ತಾನೆ; ಅಲ್ಲಿಂದ ವರುಣಲೋಕಕ್ಕೆ ಹೋಗು ತ್ತಾನೆ; ಯಾಕೆಂದರೆ ಈ ಎರಡುಲೋಕಗಳಿಗೂ ಪರಸ್ಪರ ಸಂಬಂಧವಿದೆ. ಇಂದ್ರ ಪ್ರಜಾಪತಿ ಲೋಕಗಳಿಗಾದರೋ “ ಉಳಿದವಕ್ಕೆ ಕೊನೆಗೆ ಪ್ರವೇಶಿಸಬೇಕು ” ಎಂಬ ನ್ಯಾಯದಿಂದ ವರುಣಲೋಕವಾದಮೇಲೆ ಇಂದ್ರಲೋಕವನ್ನೂ ಆಮೇಲೆ ಪ್ರಜಾಪತಿ ಲೋಕದಮೂಲಕ ಶಿವಲೋಕವನ್ನೂ ಜೀವನು ಸೇರುತ್ತಾನೆ. ಕೌಷೀತಕಿಗಳಾದರೋ “ ಅವನು ಹೀಗೆ ದೇವಯಾನಮಾರ್ಗದಿಂದ ಹೊರಟು ಅಗ್ನಿಲೋಕಕ್ಕೂ ಅಲ್ಲಿಂದ ವಾಯುಲೋಕಕ್ಕೂ ಅಲ್ಲಿಂದ ವರುಣಲೋಕಕ್ಕೂ ಅಲ್ಲಿಂದ ಆದಿತ್ಯಲೋಕಕ್ಕೂ ಅಲ್ಲಿಂದ ಇಂದ್ರಲೋಕಕ್ಕೂ ಅಲ್ಲಿಂದ ಪ್ರಜಾಪತಿಲೋಕಕ್ಕೂ ಅಲ್ಲಿಂದ ಬ್ರಹ್ಮಲೋ ಕಕ್ಕೂ ಹೋಗುತ್ತಾನೆ ” ಎಂಬಲ್ಲಿ ಅಗ್ನಿಲೋಕಶಬ್ದಕ್ಕೆ ಪ್ರಕಾಶವೆಂಬ ಅರ್ಥವಿರು ವುದರಿಂದ ಅರ್ಚಿರ್ಮಾರ್ಗವೂ ಇಲ್ಲಿ ಕೌಷೀತಾಕಿಗಳು ಹೇಳಿರುವ ಅಗ್ನಿಲೋಕದ ಮಾರ್ಗವೂ ಒಂದೆಬಗೆಯಾಗಿವೆ. ಸಂವತ್ಸರದ ಮುಂದೆ ಜೀವನು ವಾಯುಲೋಕಕ್ಕೆ ಪ್ರವೇಶಿಸುವನೆಂದು ಹಿಂದೆ ಹೇಳಿಯಾಗಿದೆ. “ ದೇವಲೋಕದಿಂದ ಆದಿತ್ಯನಲ್ಲೂ ಆದಿತ್ಯನಿಂದ ಚಂದ್ರನಲ್ಲೂ ಸೇರುತ್ತಾನೆ ” ಎಂಬ ಶ್ರುತಿಯಲ್ಲಿ ದೇವಲೋಕಶಬ್ದದಿಂದ ಹೇಳಿರುವ ವಾಯುವಿಗಿಂತಲೂ ಮುಂದೆ ಆದಿತ್ಯಲೋಕವನ್ನು ಜೀವನು ಪ್ರವೇಶಿಸ ಬೇಕೆಂಬುದನ್ನು ಹೇಳಿಯಾಗಿದೆ. ಈಗ ವರುಣಲೋಕ ಮತ್ತು ಇಂದ್ರಲೋಕ ಇವು

ಗಳಿಗೆ ಹೋಗುವ ಕ್ರಮವನ್ನು ಆಲೋಚಿಸಲಾಗಿದೆ. ಇವನ್ನೂ ಅಲ್ಲಿ ಹೇಳಿರುವ ಪಾಠ ಕ್ರಮದಂತೆಯೇ ವಾಯುವಿನ ಅನಂತರವೇ ಸೇರಿಸಬೇಕೆ? ಅಥವಾ ವಿದ್ಯುತ್ತಿನ ಮುಂದೆ ಸೇರಿಸಬೇಕೇ ?ಎಂದು ಸಂಶಯಬಂದರೆ "ಅಗ್ನಿಯಿಂದ ಹಗಲು" ಈ ಬಗೆಯ ಶ್ರುತಿಕ್ರಮದಿಂದ "ಜೀವನು ವಿದ್ಯುಲ್ಲೋಕವನ್ನು ಬಿಟ್ಟಮೇಲೆ ಅಮಾನವಪುರುಷನು ಅವನನ್ನು ಬ್ರಹ್ಮದೊಡನೆ ಸೇರಿಸುತ್ತಾನೆ" ಎಂಬಲ್ಲಿ ವಿದ್ಯುತ್ಪುರುಷನೇ ಜೀವನನ್ನು ಬ್ರಹ್ಮದಲ್ಲಿ ಸೇರಿಸುವನೆಂದು ಹೇಳಿರುವುದರಿಂದ "ಎಲ್ಲಾ ಕಡೆಯಲ್ಲೂ ಅವಕಾಶವಿಲ್ಲದೆ ಒಂದು ವಿಧಿಯು ಸಂಭವಿಸದೆಇದ್ದಾಗ ಆ ವಿಧಿಯು ವ್ಯರ್ಥವಾಗದಿರಬೇಕಾದರೆ ಎಲ್ಲಾದರೊಂದುಕಡೆ ಅದನ್ನು ಸೇರಿಸಲೇಬೇಕು ಎಂಬ ನ್ಯಾಯದಂತೆ ಅಲ್ಲಿರುವ ಪಾಠ ಕ್ರಮವನ್ನು ಅನುಸರಿಸಿ ವಾಯುವಿನ ಅನಂತರವೇ ಜೀವನು ವರುಣಲೋಕಕ್ಕೆ ಹೋಗುವನೆಂದೇ ಹೇಳಬೇಕು. ಹೀಗೆ ವರುಣನನ್ನು ಸೇರಿಸಿದಮೇಲೆ ವಾಯು ಆದಿತ್ಯಗಳ ಮಧ್ಯದಲ್ಲಿ ಇಂದ್ರ ಪ್ರಜಾಪತಿಗಳನ್ನೂ ಅಲ್ಲಿಯೇ ಸೇರಿಸಬೇಕು. ಹೀಗೆ ಆಕ್ಷೇಪ ಬಂದರೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ವಿದ್ಯುತ್ತಿಗೂ ವರುಣನಿಗೂ ಪರಸ್ಪರ ಸಂಬಂಧವಿರುವುದರಿಂದ ವಿದ್ಯುತ್ತಿನ ಮುಂದೆಯೇ ವರುಣನನ್ನು ಸೇರಿಸಬೇಕು. ವಿದ್ಯುತ್ತು ಮೇಘದೊಳಗೇ ಇರುವುದರಿಂದ ವಿದ್ಯುತ್ತಿಗೆ ವರುಣನೊಡನೆ ಸಂಬಂಧವು ಲೋಕದಲ್ಲೂ ವೇದದಲ್ಲೂ ಪ್ರಸಿದ್ಧವಾಗಿದೆ. ಒಟ್ಟಿನಲ್ಲಿ ಈ ಬಗ್ಗೆ ಇಲ್ಲಿ ಇಷ್ಟನ್ನು ಹೇಳಬಹುದು. ವರುಣಾದಿಗಳನ್ನು ತಿಳಿಸಿರುವುದು ವ್ಯರ್ಥವಾಗದಿರಲೆಂದು ಅವನ್ನು ಎಲ್ಲಿಯಾದರೂ ಸೇವಿಸಬೇಕಾಗಿಬಂದರೆ ಪಾಠಕ್ರಮಕ್ಕಿಂತ ಅರ್ಥಕ್ರಮವು ಬಲಿಷ್ಠವಾದ್ದರಿಂದ ವಿದ್ಯುತ್ತಿನ ಮುಂದೆ ವರುಣನನ್ನು ಸೇರಿಸುವುದೇ ಯುಕ್ತವಾಗಿದೆ. ಅಲ್ಲಿಂದ ಅಮಾನವಪುರುಷನು ಜೀವನನ್ನು ಒಯ್ಯುವನೆಂಬ ವಾಕ್ಯಕ್ಕೆ ಮಧ್ಯದಲ್ಲಿ ವರುಣನಿಂದ ಕೊಂಚ ವಿಳಂಬವಿರುವುದಾಗಿ ತಿಳಿದುಬರುತ್ತದೆ. ಹೀಗೆ ವಿಳಂಬವಾದರೂ ವರುಣನ ಮುಂದೆ ಇಂದ್ರಾದಿಗಳನ್ನೂ ಹೇಳಿರುವುದರಿಂದ "ಕೋನೆಯಲ್ಲಿ ಬಂದವರನ್ನು ಕೊನೆಯಲ್ಲಿಯೇ ಸೇರಿಸಬೇಕು" ಎಂಬ ನಿಯಮದಂತೆ ವರುಣನ ಮುಂದೆಯೇ ಅವರನ್ನೂ ಸೇರಿಸಬೇಕೆಂದು ತಿಳಿಯಬೇಕು.

**ನನ್ವರ್ಚಿರಾದಿಗತ್ಯಾ ವಾಯುತಟಿದ್ವರುಣಾದಿಲೋಕಗಮನೇ ಮುಕ್ತಜೀವಃ ಕೇನ ಸಹಾಯೇನ ಶಿವಲೋಕಪರ್ಯಂತಂ ಗಚ್ಛತೀತ್ಯಾಶಂಕಾಯಾಂ ಅಧಿಕರಣಾಂತರೇಣ ಸಮಾಧಾನಮುಪದಿಶತಿ. ಆತಿವಾಹಿಕಾಧಿಕರಣಂ ॥ ೪ ॥ ಆತಿವಾಹಿಕಾಸ್ತಲ್ಲಿಂಗಾತ್ ॥ ೪ ॥ ತೇಷ್ವರ್ಚಿರಾದಿಲೋಕೇಷು ಪೂರ್ವಪೂರ್ವಲೋಕಸ್ಥಾಃ ದೇವಾ ಹ್ಯುತ್ತರೋತ್ತರಲೋಕಪ್ರಾಪ್ತಿಪರ್ಯಂತಮುಪಾಸಕಾನಾಮಾತಿವಾಹಿಕಾಸ್ಸಹಾಯಭೂತಾಃ, ನೇತರಾಃ. ಕುತಃ? ತಲ್ಲಿಂಗಾತ್ "ಸ ಏನಾನ್ ಬ್ರಹ್ಮ ಗಮಯತಿ" ಇತಿ ಶ್ರುತೌ ವಿದ್ಯುಲ್ಲೋಕಪ್ರಾಪ್ತ್ಯನಂತರಮಮಾನುಷಸ್ಯ ನೇತೃತ್ವಪ್ರತಿಪಾದನರೂಪಾಲ್ಲಿಂಗಾತ್ ದೃಷ್ಟಾಂತೇನ ಪೂರ್ವಲೋಕೇ**

ಷ್ವಪಿ ನೇತರ ಅಂಗೀಕರ್ತವ್ಯ ಇತಿ ಸೂಕ್ತ್ಯರ್ಥಃ. ಇದಮಿದಾನೀಂ ಚಿಂತ್ಯತೇ. ಕಿಮರ್ಚಿರಾದಯೋ ಮಾರ್ಗಾಃ ಚಿಹ್ನಭೂತಾ ಉತ ಭೋಗಭೂಮಯಃ? ಅಥವಾ ವಿದುಷಾಂ ಬ್ರಹ್ಮಪ್ರೇಪ್ಸತಾಂ ಅತಿವೋಢಾರಃ ಇತಿ? ಕಿಂ ತಾವದ್ಯುಕ್ತಂ? ಮಾರ್ಗಚಿಹ್ನಭೂತಾಃ ಇತಿ. ಕುತಃ? ಉಪದೇಶಸ್ಯ ತಥಾವಿಧತ್ವಾತ್. ದೃಶ್ಯತೇ ಹಿ ಲೋಕೇ ಗ್ರಾಮಾದೀನ್ ಪ್ರತಿಗಂತ್ಯಣಾಂ ಏವಂವಿಧೋ ದೈಶಿಕೈರುಪದೇಶಃ. "ಇತೋ ನಿಷ್ಕ್ರಮ್ಯಾಮುಕಂ ವೃಕ್ಷಂ ಅಮುಕಾಂ ನದೀಂ ಅಮುಕಂ ಚ ಪರ್ವತಪಾರ್ಶ್ವಂ ಗತ್ವಾ ಅಮುಕಂ ಗ್ರಾಮಂ ಗಚ್ಛ" ಇತಿ. ಅಥವಾ ಭೋಗಭೂಮಯ ಏತಾಸ್ಸ್ಯುಃ. ಕಾಲವಿಶೇಷತಯಾ ಪ್ರಸಿದ್ಧಾನಾಂ ಅಹರಾದೀನಾಂ ಮಾರ್ಗಚಿಹ್ನತ್ವಾನುಪಪತ್ತೇರನ್ಯಸ್ಯ ಚ ಮಾರ್ಗಚಿಹ್ನಭೂತಸ್ಯೈತೇಷಾಮನಭಿಧಾಯಕತ್ವಾತ್ ಭೋಗಭೂಮಿತ್ವಂ. "ಏತ ಏವ ಲೋಕಾ ಯದಹೋರಾತ್ರಾಣ್ಯಬ್ದಮಾಸಾ ಋತವತ್ಸಂವತ್ಸರಾಃ" ಇತ್ಯಹರಾದೀನಾಂ ಲೋಕಪರತ್ವವಚನಮುಪಪದ್ಯತೇ. ಅತ ಏವ ಚ ಕೌಷೀತಕಿನಃ "ಅಗ್ನಿಲೋಕಮಾಗಚ್ಛತಿ" ಇತ್ಯಾದಿನಾ ಲೋಕಶಬ್ದಾನುವಿಧಾನೇನ ಅರ್ಚಿರಾದೀನ್ ಪಠಂತೀತ್ಯೇವಂ ಪ್ರಾಪ್ತೇ ವಕ್ಷ್ಯಾಮಿ, ಆತಿವಾಹಿಕಾ ಇತಿ. ವಿದುಷಾಂ ಅತಿವಾಹೇನ ಶಿವೇನ ಪರಮಪುರುಷೇಣ ನಿಯುಕ್ತಾಃ ಆತಿವಾಹಿಕಾಃ ದೇವವಿಶೇಷಾಃ. ಏತೇ ಅರ್ಚಿರಾದಯಃ. ಕುತಃ? ತಲ್ಲಿಂಗಾತ್. ಆತಿವಾಹಿಕಲಿಂಗಾತ್. ಅತಿವಾಹನಂ ಹಿ ಗಂತ್ಯಣಾಂ ಗಮಯಿತೃತ್ವಂ. ತಚ್ಚ "ತತ್ಪುರುಷೋಽಮಾನವಸ್ಸ ಏತಾನ್ ಬ್ರಹ್ಮ ಗಮಯತಿ" ಇತ್ಯುಪಸಂಹಾರೇ ಪೂರ್ವೇಷಾಮಪ್ಯವಿಶೇಷಶ್ರುತೀನಾಂ ಸ ಏವ ಸಂಬಂಧ ಇತಿ ಗಮಯತಿ. ವದಂತಿ ಚಾರ್ಚಿರಾದಯಶ್ಶಬ್ದಾಃ ಅರ್ಚಿರಾದ್ಯಾತ್ಮಭೂತಾನ್ ಅಭಿಮಾನಿದೇವತಾವಿಶೇಶಾನ್ "ಪೃಥಿವ್ಯಬ್ರವೀತ್" ಇತಿವತ್. ಕಿಂಚಾಸ್ಮಿನ್ ಸೂತ್ರೇ ಅಗಸ್ತ್ಯಮುನಿಸಾರ್ವಭೌಮೇನ ಕೃತಲಘುಸೂತ್ರವೃತ್ತೌ, "ಲಿಂಗೇ ಸುಷುಪ್ತಿಃ" ಇತ್ಯಾದಿಬಹುಶ್ರುತಿಷು ಘಟಕುಂಭಶಬ್ದಾದಿವತ್ ಬ್ರಹ್ಮಲಿಂಗಶಬ್ದಯೋಃ ಪರ್ಯಾಯತ್ವಾವಗಮಾತ್ ತಲ್ಲಿಂಗಾತ್ ಪೂರ್ವೋಕ್ತದಹರಾದಿಸರ್ವವಿದ್ಯೋಪಾಸ್ಯಪರಶಿವಾತ್ ಪ್ರೇರಿತಾಸ್ಸಂತಃ ಆತಿವಾಹಿಕಾಃ ಮರ್ತ್ಯಲೋಕಶಿವಲೋಕಾಂತರಾಳನಿವಾಸಿದೇವಾಃ ದಹರಾದಿಸರ್ವಬ್ರಹ್ಮವಿದ್ಯೋಪಾಸಕಂ ಪುರುಷಂ ಸೌಧಸೋಪಾನನ್ಯಾಯೇನ ಕ್ರಮಕ್ರಮೇಣ ನಿರುಪಮಾನಂದನಿತ್ಯವೈಭವಂ ಮಹಾಕೈಲಾಸಮಾನಯಂತೀತಿ ವ್ಯಾಖ್ಯಾತಂ ತದಪ್ಯವಿರುದ್ಧಂ.

ಅರ್ಚಿರಾದಿಮಾರ್ಗದಿಂದ ವಾಯು ವಿದ್ಯುತ್ ವರುಣ ಇವರ ಲೋಕಕ್ಕೆ

ಹೋಗುವಾಗ ಮುಕ್ತಜೀವನು ಯಾರ ಸಹಾಯದಿಂದ ಶಿವಲೋಕದವರೆಗೂ ಹೋಗುತ್ತಾನೆ? ಎಂದಾಶಂಕಿಸಿ ಸಮಾಧಾನವನ್ನು ತಿಳಿಸುತ್ತಾನೆ. ಈ ಅರ್ಚಿರಾದಿ ಲೋಕಗಳಲ್ಲಿ ಹಿಂದಿನ ಲೋಕದಲ್ಲಿರುವ ದೇವತೆಗಳು ಮುಕ್ತನಿಗೆ ಮುಂದುಮುಂದಿನ ಲೋಕಕ್ಕೆ ಹೋಗಲು ಸಹಾಯಮಾಡುತ್ತಾರೆ. ಶ್ರುತಿಯೂ ಹಾಗೆಯೇ ತಿಳಿಸಿದೆ. "ಅವರು ಇವರನ್ನು ಬ್ರಹ್ಮದಲ್ಲಿ ಸೇರಿಸುತ್ತಾರೆ" ಎಂಬ ಶ್ರುತಿಯಲ್ಲಿ ವಿದ್ಯುಲ್ಲೋಕಕ್ಕೆ ಹೋದಮೇಲೆ ಅಮಾನುಷಪುರುಷನೇ ಮುಕ್ತರನ್ನು ಮುಂದಕ್ಕೊಯ್ಯುವನೆಂದು ಹೇಳಿರುವುದರಿಂದ ಹಿಂದಿನ ಲೋಕಗಳಲ್ಲೂ ಅವನೇ ಒಯ್ಯುವನೆಂದು ಒಪ್ಪಬೇಕು. ಈ ಅರ್ಚಿರಾದಿಗಳು ದಾರಿಯಲ್ಲಿ ಕೇವಲ ಗುರುತಿಗಾಗಿ ಇರುತ್ತವೆಯೇ ಅಥವಾ ಭೋಗಭೂಮಿಗಳೇ? ಅಥವಾ ಬ್ರಹ್ಮದಲ್ಲಿ ಸೇರಲು ಹೋಗಲಿರುವ ಜ್ಞಾನಿಗಳನ್ನು ಕರೆದೊಯ್ಯುವವರೆ? ಎಂಬುದನ್ನು ಇಲ್ಲ ವಿಚಾರಮಾಡಲಾಗುವುದು. ಶ್ರುತಿಯ ಉಪದೇಶದಂತೆ ಅರ್ಚಿರಾದಿಮಾರ್ಗಗಳು ಕೇವಲ ಗುರುತುಗಳೆಂದೇ ತಿಳಿಯಬೇಕು. ಊರಿಂದ ಊರಿಗೆ ಹೋಗುವವರಿಗೆ ದಾರಿಯನ್ನು ತಿಳಿಸಲಿಕ್ಕಾಗಿ ಇಂತಹ ಗುರುತುಗಳು ಲೋಕದಲ್ಲಿಯೂ ಕಂಡುಬಂದಿವೆ. "ಈ ಮರವನ್ನೂ ಈ ನದಿಯನ್ನೂ ಈ ಪರ್ವತಪ್ರದೇಶವನ್ನು ದಾಟಿ ಆ ಗ್ರಾಮಕ್ಕೆ ಹೋಗಬೇಕು' ಎಂದು ಹೇಳುವಾಗ ಗುರುತುಗಳನ್ನು ಲೋಕದಲ್ಲಿ ನಾವು ಕಾಣಬಹುದು. ಅಥವಾ ಇವು ಭೋಗಭೂಮಿಗಳೇ ಆಗಬಹುದು. ಯಾಕೆಂದರೆ ಕಾಲವಿಶೇಷವೆಂದು ಪ್ರಸಿದ್ಧವಾದ ಹಗಲು ಮೊದಲಾದವುಗಳನ್ನು ದಾರಿಯ ಗುರುತುಗಳೆಂದು ಹೇಳುವುದು ಯುಕ್ತವಲ್ಲ. ಇವು ಬೇರೊಂದು ಗುರುತನ್ನು ತಿಳಿಸಲಾರವಾದ್ದರಿಂದ ಇವು ಭೋಗಭೂಮಿಗಳೇ ಇರಬಹುದು. "ಹಗಲು ರಾತ್ರಿ ವರ್ಷ ಮಾಸ ಋತು ಸಂವತ್ಸರ ಇವೆಲ್ಲವೂ ಲೋಕಗಳೆನಿಸಿವೆ" ಎಂಬಲ್ಲಿ ಇವೆಲ್ಲವೂ ಲೋಕಕ್ಕೆ ಅನ್ವಯಿಸುವುದಾಗಿ ತಿಳಿದುಬರುತ್ತದೆ. "ಇವನು ಅಗ್ನಿಲೋಕಕ್ಕೆ ಹೋಗುತ್ತಾನೆ" ಎಂಬಲ್ಲಿ ಲೋಕಶಬ್ದವನ್ನು ಹೇಳಿರುವುದರಿಂದಲೇ ಕೌಷೀತಕಿಗಳು ಅರ್ಚಿರಾದಿಗಳನ್ನು ಲೋಕಶಬ್ದದಿಂದಲೇ ತಿಳಿಸಿದ್ದಾರೆ. ಹೀಗೆ ಆಕ್ಷೇಪಬಂದರೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ವಿದ್ವಾಂಸನನ್ನು ಸರ್ವನಿಯಾಮಕನಾದ ಪರಮಪುರುಷನೊಡನೆ ಸೇರಿಸುವ ಆತಿವಾಹಿಕದೇವತೆಗಳೇ ಅರ್ಚಿರಾದಿಗಳೆನಿಸಿವೆ. ಶ್ರುತಿಯಲ್ಲಿ ಹೀಗೆ ತಿಳಿಸುವ ಹೇತುಗಳೇ ಕಂಡುಬಂದಿವೆ. ಅತಿವಾಹನವೆಂದರೆ ಪ್ರಯಾಣಿಕರನ್ನು ಅವರವರ ಸ್ಥಳಕ್ಕೆ ಸೇರಿಸುವುದೆಂದರ್ಥ. "ದಿವ್ಯಪುರುಷನು ಇವರನ್ನು ಬ್ರಹ್ಮದಲ್ಲಿಗೆ ಸೇರಿಸುತ್ತಾನೆ" ಎಂದು ಉಪಸಂಹಾರಮಾಡಿರುವುದರಿಂದ ಹಿಂದೆ ಹೇಳಿದ ಸಾಮಾನ್ಯಶ್ರುತಿಗಳಿಗೂ ಇದೇ ಸಂಬಂಧವನ್ನು ಭಾವಿಸಬೇಕು. "ಪೃಥಿವಿಯು ಹೇಳಿತು" ಎಂಬಂತೆ ಅರ್ಚಿರಾದಿ ಶಬ್ದಗಳು ಅವುಗಳ ಅಭಿಮಾನದೇವತೆಗಳಿಗೆ ಅನ್ವಯಿಸುತ್ತವೆ. ಇದೂ ಅಲ್ಲದೆ ಈ ಸೂತ್ರಕ್ಕೆ ಅಗಸ್ತ್ಯಮಹರ್ಷಿಯು ಬರೆದಿರುವ ಸೂತ್ರವೃತ್ತಿಯಲ್ಲಿ "ಲಿಂಗೇ ಸುಷುಪ್ತಿಃ" ಎಂದು ಮುಂತಾದ ಅನೇಕ ಶ್ರುತಿಗಳಲ್ಲಿ ಘಟ ಕುಂಭ ಮೊದಲಾದ ಶಬ್ದಗಳಂತೆ ಬ್ರಹ್ಮಲಿಂಗಶಬ್ದಗಳು

ಸಮಾನಾರ್ಥಕವೆಂದು ಸ್ಪಷ್ಟವಾಗಿ ಹೇಳಿದೆ. ಆದ್ದರಿಂದ ಹಿಂದೆ ಹೇಳಿದ ದಹರಾದಿ ವಿದ್ಯೆಗಳಲ್ಲೂ ಉಪಾಸ್ಯನಾದ ಪರಶಿವನಿಂದ ಪ್ರೇರಿತರಾಗಿ ಆತಿವಾಹಿಕ ದೇವತೆಗಳು ಮರ್ತ್ಯಲೋಕ ಮತ್ತು ಶಿವಲೊಕಗಳ ಮಧ್ಯದಲ್ಲಿ ಇದ್ದು ಮುಕ್ತನನ್ನು ಒಂದೊಂದು ಕ್ರಮದಿಂದ ಮೆಟ್ಟಲುಗಳನ್ನು ಹತ್ತಿಸುತ್ತ ಕೊನೆಗೆ ನಿತ್ಯವೈಭವದಿಂದಲೂ ನಿತ್ಯಾನಂದದಿಂದಲೂ ಶೋಭಿಸುವ ಮಹಾಕೈಲಾಸಕ್ಕೆ ಸೇರಿಸುತ್ತಾರೆ.

ಯದ್ಯೇವಂ "ತತ್ಪುರುಷೋಽಮಾನವಸ್ಸ ಏತಾನ್ ಬ್ರಹ್ಮ ಗಮಯತಿ" ಇತಿ ವೈದ್ಯುತಸ್ಯೈವ ಪುರುಷಸ್ಯ ಬ್ರಹ್ಮಗಮಯಿತೃತ್ವಶ್ರುತೇರ್ವಿದ್ಯುತಃ ಪರೇಷಾಂ ವರುಣಾದೀನಾಂ ಕಥಮಾತಿವಾಹಿಕತ್ವೇನಾನ್ವಯ ಇತ್ಯತ ಆಹ. **ವೈದ್ಯುತೇನೈವ ತತಸ್ತಚ್ಛ್ರುತೇಃ ॥ ೫ ॥** ತತಃ ವಿದ್ಯುತ ಉಪರಿ ವೈದ್ಯುತೇನ ಅಮಾನವೇನಾತಿವಾಹಿಕೇನ ವಿದುಷಾಂ ಆಬ್ರಹ್ಮಪ್ರಾಪ್ತೇರ್ಗಮನಂ. ಕುತಃ? ತಚ್ಛ್ರುತೇಃ. "ಸ ಏನಾನ್ ಬ್ರಹ್ಮ ಗಮಯತಿ" ತಸ್ಯೈವ ಗಮಯಿತೃತ್ವಶ್ರುತೇರ್ವರುಣಾದಯಸ್ತದನುಗ್ರಾಹಕಾಃ ಇತಿ ತೇಷಾಮಪ್ಯಾತಿವಾಹಿಕತ್ವೇನಾನ್ವಯೋ ವಿದ್ಯುತ ಏವ.

"ಹಾಗಾದರೆ ಈ ಅಮಾನವಪುರುಷನು ಮುಕ್ತರನ್ನು ಬ್ರಹ್ಮದಲ್ಲಿ ಸೇರಿಸುತ್ತಾನೆ" ಎಂಬಲ್ಲಿ ವಿದ್ಯುತ್ಸಂಬಂಧವಾದ ಪುರುಷನೇ ಬ್ರಹ್ಮವನ್ನು ಸೇರಿಸುವನೆಂದು ಹೇಳಿರುವುದರಿಂದ ವಿದ್ಯುತ್ತಿನಿಂದಾಚೆಗೆ ಇರುವ ವರುಣಾದಿಗಳನ್ನು ಹೇಗೆ ಆತಿವಾಹಕದೇವತೆಗಳೆಂದು ತಿಳಿಯಲಾಗುತ್ತದೆ ಎಂದು ಆಕ್ಷೇಪಿಸಿ ಸಮಾಧಾನಮಾಡುತ್ತಾನೆ. ವಿದ್ಯುತ್ತಿನಮೇಲೆ ಇರುವ ಅಮಾನವಪುರುಷನೇ ಆತಿವಾಹಿಕನೆನಿಸಿ ಮುಕ್ತರನ್ನು ಬ್ರಹ್ಮದವರೆಗೂ ಒಯ್ಯುತ್ತಾನೆ. "ಅವನು ಇವರನ್ನು ಒಯ್ಯುತ್ತಾನೆ" ಎಂಬ ಶ್ರುತಿಯಲ್ಲಿ ಅವನೇ ಮುಕ್ತರನ್ನು ಕರೆದೊಯ್ಯುವನೆಂಬುದು ಸ್ಪಷ್ಟವಾಗಿದೆ. ವರುಣಾದಿಗಳು ಅವನಿಗೆ ಸಹಾಯಕರಾಗಿರುವುದರಿಂದ ಅವರಿಗೂ ಆತಿವಾಹಕರೆಂದು ಕರೆಯಲಾಗಿದೆ.

ಕೇಚಿದಿಹೈವ ಅಪರೇ ತು ಚಿಲ್ಲೋಕಾಂತರೇ ಮುಕ್ತಿರಿತ್ಯುಪದೇಶಂತಿ. ಅತಃ ಬ್ರಹ್ಮವಿದ್ಯೋಪಾಸಕಾನಾಂ ಸರ್ವೇಷಾಂ ಫಲೈಕ್ಯವಿಧಾಯಕಶ್ರೌತಬಾಧಾಪ್ರಸಂಗಾದುಭಯೋರೇಕಪಕ್ಷ ಏವಾಂಗೀಕರಣಯ ಇತ್ಯಾಶಂಕಾಯಾಮಾಹ. **ಉಭಯವ್ಯಾಮೋಹಾತ್ತತ್ಸಿದ್ಧೇಃ ॥ ೬ ॥** ಲೋಕಾಂತರಪ್ರಾಪ್ತಿಮಾತ್ರಸಾಧಕದ್ವೈತಮಾರ್ಗಿಣಾಂ ಸ್ವಕಂಠಾಭರಣದಶಮಿಾವಿವೇಕಸಂಧಾನಾದಿವತ್ ಸ್ವಾಭಿನ್ನಬ್ರಹ್ಮಜ್ಞಾನೇನ ಇಹೈವ ಮುಕ್ತಿವಿಧಾಯಕಾದ್ವೈತವಾದಿನಾಂ ಚೋಭಯೇಷಾಂ ವ್ಯಾಮೋಹಾತ್ ಸರ್ವಶ್ರುತಿಸಿದ್ಧಮುಖ್ಯಾರ್ಥಪರಿಜ್ಞಾನಾಭಾವಾತ್ ಶ್ರುತ್ಯೇಕದೇಶಪ್ರಾಮಾಣ್ಯಪಕ್ಷೈಕದೇಶಮತದ್ವಯಂ ಮುಮುಕ್ಷುಭಿರ್ನಾಂಗೀಕರ್ತವ್ಯಂ. ಕುತಃ? ತತ್ಸಿದ್ಧೇಃ. "ನ ತತ್ರ ಪ್ರಾಣಾ ನೋತ್ಕ್ರಾಮಂತೇ ತತ್ರೈವ ಸಮವಲೀಯಂತೇ" ಇತಿ "ತೇ ಬ್ರಹ್ಮಲೋಕೇ ತು ಪರಾಂತ

**ಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ" ಇತಿ ಚ. ಇಹಲೋಕ ಪರಲೋಕಮುಕ್ತ್ಯಸಂದಿಗ್ಧವಿಧಾಯಕಶ್ರೌತವಿಧಿದರ್ಶನಾತ್ ಅಧಿಕಾರಿಭೇದೇನ ತದುಭಯಂ ಸಮಂಜಸಂ.**

ಕೆಲವರು ಇಲ್ಲಿಯೂ ಮತ್ತೆ ಕೆಲವರು ಲೋಕಾಂತರದಲ್ಲೂ ಮುಕ್ತಿಯನ್ನು ಹೇಳಿರುವುದರಿಂದ ಉಪಾಸಕರೆಲ್ಲರಿಗೂ ಫಲೈಕ್ಯವನ್ನು ತಿಳಿಸಲು ಶ್ರುತಿಯಲ್ಲಿ ಬಾಧವಿರುವುದರಿಂದ ಈ ಎರಡು ಮತಗಳಿಗೂ ಅನ್ವಯಿಸುವಂತೆ ಒಂದೇ ಪಕ್ಷವನ್ನು ಅಂಗೀಕರಿಸಬೇಕೆಂದು ಆಶಂಕಿಸಿ ತಿಳಿಸುತ್ತಾನೆ. ಬೇರೆ ಲೋಕಕ್ಕೆ ಹೋಗುವರೆಂಬುದನ್ನು ಸಾಧಿಸುವ ದ್ವೈತಿಗಳಿಗೂ ತನ್ನ ಕಂಠಾಭರಣವನ್ನು ಮರೆತಿದ್ದು ಜ್ಞಾಪಿಸಿಕೊಂಡತೆಯೂ, ತಾನೇ ಹತ್ತನೆಯವನೆಂಬ ವಿವೇಕದಿಂದ ತನ್ನನ್ನು ಹತ್ತನೆಯವನೆಂದು ತಿಳಿಯುವಂತೆಯೂ ತಾನೇ ಬ್ರಹ್ಮನೆಂಬ ಜ್ಞಾನದಿಂದ ಇಲ್ಲಿಯೇ ಮುಕ್ತಿಯನ್ನು ತಿಳಿಸುವ ಅದ್ವೈತವಾದಿಗಳಿಗೂ ವ್ಯಾಮೋಹದಿಂದ ಸರ್ವಶ್ರುತಿಸಮ್ಮತವಾದ ಮುಖ್ಯಾರ್ಥವು ತಿಳಿಯದೇ ಇರುವುದರಿಂದ ಶ್ರುತಿಯ ಒಂದೊಂದು ಭಾಗವನ್ನು ಮಾತ್ರವೇ ಪ್ರಮಾಣವೆಂದು ಒಪ್ಪಿರುವ ಈ ಮತಗಳೆರಡೂ ಮುಮುಕ್ಷುಗಳಿಗೆ ಗ್ರಾಹ್ಯವಲ್ಲ. "ಅಲ್ಲಿಗೆ ಪ್ರಾಣಗಳು ಹೋಗುವುದಿಲ್ಲ; ಇಲ್ಲಯೇ ಲೀನವಾಗುತ್ತವೆ" ಎಂದೂ, "ಅವರು ಬ್ರಹ್ಮಲೋಕದಲ್ಲಿ ಕಲ್ಯಾಣವಿಭೂತಿಯನ್ನು ಅನುಭವಿಸಿ ಕೊನೆಗೆ ಕೈವಲ್ಯವಿಭೂತಿಯನ್ನು ಹೊಂದುತ್ತಾರೆ" ಎಂದೂ ಶ್ರುತಿಯಲ್ಲಿ ಇಲ್ಲಿಯೂ ಮತ್ತು ಪರಲೋಕದಲ್ಲೂ ಮುಕ್ತಿಯನ್ನು ವಿಧಿಸಿರುವುದರಿಂದ ಅಧಿಕಾರಿಭೇದದಿಂದ ಎರಡೂ ಹೊಂದುತ್ತವೆ.

**ನನು "ಪ್ರಜ್ಞಾನಂ ಬ್ರಹ್ಮ" ಇತ್ಯಾದಿಶ್ರುತಿಷು ಜೀವಸ್ಯೈವ ಸಾಕ್ಷಾದ್ಬ್ರಹ್ಮತ್ವವ್ಯವಸ್ಥಾಪನಾತ್ ಜೀವಬ್ರಹ್ಮಣೋಃ ಪ್ರಾಪ್ಯಪ್ರಾಪಕತ್ವವಿಧಾಯಕಶಾಸ್ತ್ರಂ ಔಪಚಾರಿಕಂ. ಉತ "ಆಕಾಶವತ್ಸರ್ವಗತಶ್ಚ ನಿತ್ಯಃ." "ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ । ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥" ಇತ್ಯಾದಿಷು ಬ್ರಹ್ಮಣಃ ಸರ್ವವ್ಯಾಪಕತ್ವಾವಗಮಾಚ್ಚ ಪರಬ್ರಹ್ಮಪ್ರಾಪ್ಯತ್ವಮರ್ಚಿರಾದಿಮಾರ್ಗೇಣ ಗಮನಂ ಚ ವ್ಯರ್ಥಮೇವ ಸ್ಯಾತ್. ಕಿಂಚ ಜೀವಸ್ಯ ಬ್ರಹ್ಮಾತ್ಮಕತ್ವೇನ ಬ್ರಹ್ಮಜನ್ಯತ್ವಾಯೋಗಾತ್ ಬ್ರಹ್ಮಪ್ರಾಪ್ತಿರಯುಕ್ತಾ. ತಸ್ಮಾತ್ ಬ್ರಹ್ಮಪ್ರಾಪ್ತಿವಿಧಾಯಕಾನಾಂ ಶ್ರುತೀನಾಂ ಹಿರಣ್ಯಗರ್ಭಪರತ್ವಮೇವೇತ್ಯಾಶಂಕಾಯಾಮಧಿಕರಣಾಂತರೇಣಾಹ. ಕಾರ್ಯಾಧಿಕರಣಂ ॥ ೫ ॥ ಕಾರ್ಯಂ ಬಾದರಿರಸ್ಯ ಗತ್ಯುಪಪತ್ತೇಃ ॥೭॥ ಕಾರ್ಯಂ "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಇತ್ಯಾದಿಶ್ರುತಿಷು ಜೀವಾನಾಂ ಅಜನ್ಯತ್ವೇಽಪಿ ಪರಬ್ರಹ್ಮಾವಿರ್ಭೂತತ್ವೇನ ವ್ಯಪದೇಶಾತ್ ಬಾದರಿರಸ್ಯ ಜೀವಸ್ಯ ಬ್ರಹ್ಮಕಾರ್ಯತ್ವಂ ನಿರ್ದಿಶತಿ. ಕುತಃ? ಗತ್ಯುಪಪತ್ತೇಃ. "ಯತ್ಪ್ರಯಂತ್ಯಭಿಸಂವಿಶಂತಿ" ಇತ್ಯತ್ರ**

ಜೀವಾನಾಂ ಬ್ರಹ್ಮಲಯತ್ವಾವಗಮಾತ್. ಅತಃ ಆರ್ಚಿರಾದಿಮಾರ್ಗೇಣ ಪರಶಿವಬ್ರಹ್ಮಲೋಕಗಮನಂ ಯುಕ್ತಮಿತಿ ಸೂಕ್ತಾರ್ಥಃ. ಅರ್ಚಿರಾದಿನೈವ ವಿದ್ವಾನ್ ಗಚ್ಛತಿ. ಅರ್ಚಿರಾದಿರಮಾನವಾಂತಶ್ಚ ಗಣ ಆತಿವಾಹಿಕೋ ವಿದ್ವಾಂಸಂ ಬ್ರಹ್ಮ ಗಮಯತೀತ್ಯುಕ್ತಂ. ಇದಾನೀಮತ್ರ ಚಿಂತ್ಯತೇ. ಕಿಮಯಮರ್ಚಿರಾದಿಕೋ ಗಣಃ ಕಾರ್ಯರೂಪಹಿರಣ್ಯಗರ್ಭೋಪಾಸಕಾನ್ನಯತಿ? ಉತ ಪರಬ್ರಹ್ಮಣ ಉಪಾಸಕಾನೇವ? ಅಥ ಪರಬ್ರಹ್ಮೋಪಾಸಕೇಷು ಪ್ರತ್ಯಗಾತ್ಮಾನಂ ಬ್ರಹ್ಮಾತ್ಮಕತಯೋಪಾಸಮಾನಾಂಶ್ಚ ಇತಿ ವಿಶಯೇ ಕಾರ್ಯಬ್ರಹ್ಮೋಪಾಸಕಾನೇವ ಗಮಯತೀತಿ ನಿಶ್ಚೀಯತೇ. ಕುತಃ? "ಹಿರಣ್ಯಗರ್ಭಸ್ಸಮವರ್ತತಾಗ್ರೇ ಭೂತಸ್ಯ ಜಾತಃ ಪತಿರೇಕ ಆಸೀತ್" "ಬ್ರಹ್ಮ ವಾ ಇದಮಗ್ರ ಆಸೀತ್" ಇತ್ಯಾದಿಷು ಚತುರ್ಮುಖಸ್ಯ ಹಿರಣ್ಯಗರ್ಭಸ್ಯ ಸರ್ವಾಧಿಕ್ಯಕಥನಾತ್ ತದುಪಾಸಕಾನೇವ ಆತಿವಾಹಿಕಾಸ್ತಲ್ಲೋಕಂ ಗಮಯಂತಿ. ನಹಿ ಪರಿಪೂರ್ಣಸರ್ವಜ್ಞಸರ್ವಗತಸರ್ವಾತ್ಮಭೂತಪರಶಿವಬ್ರಹ್ಮೋಪಾಸಕಸ್ಯ ತತ್ಪ್ರಾಪ್ತಯೇ ದೇಶಾಂತರಗತಿರುಪಪದ್ಯತೇ. ಪ್ರಾಪ್ತತ್ವಾದೇವ ನಿತ್ಯಪ್ರಾಪ್ತಪರಬ್ರಹ್ಮವಿಷಯಾಽವಿದ್ಯಾನಿವೃತ್ತಿಮಾತ್ರಮೇವ ಹಿ ಪರವಿದ್ಯಾಕಾರ್ಯಂ. ಕಾರ್ಯಂ ತು ಹಿರಣ್ಯಗರ್ಭರೂಪಂ ಬ್ರಹ್ಮ ಉಪಾಸೀನಸ್ಯ ಪರಿಚ್ಛಿನ್ನದೇಶವರ್ತಿಪ್ರಾಪ್ಯಪ್ರಾಪ್ತ್ಯರ್ಥಂ ಗಮನಮುಪಪದ್ಯತೇ. ತಸ್ಮಾದರ್ಚಿರಾದಿರಾತಿವಾಹಿಕಗಣಃ ತಮೇವ ನಯತೀತಿ ಪ್ರಾಪ್ತೇ ಪ್ರಚಕ್ಷ್ಮಹೇ. ಅಸ್ಯ ಪರಬ್ರಹ್ಮೋಪಾಸಕಸ್ಯ ಕಾರ್ಯಂ ಪರಶಿವಲೋಕಗಮನಕಾರ್ಯಂ ಬಾದರಿರ್ಮನ್ಯತೇ ಬಾದರಿರಾಚಾರ್ಯೋ ಮನ್ಯತೇ. ಕುತಃ? "ಬ್ರಹ್ಮವಿದಾಪ್ನೋತಿ ಪರಂ" "ಸೋಽಶ್ನುತೇ ಸರ್ವಾನ್ಕಾಮಾನ್ ಬ್ರಹ್ಮಣಾ ವಿಪಶ್ಚಿತಾ" "ಬ್ರಹ್ಮವಿದ್ಬ್ರಹ್ಮೈವ ಭವತಿ" ಇತ್ಯಾದಿ ಪರಬ್ರಹ್ಮೋಪಾಸಕಾನಾಮೇವ ತೇನ ಸಹ ಸರ್ವಕಾಮಾವಾಪ್ತಿದರ್ಶನಾತ್, ಲೋಕೇ ಶಿವಕೇಶವಪೂಜಾನಮಸ್ಕಾರಾಲಯಸ್ಮರಣಮಂತ್ರತಂತ್ರದೀಕ್ಷಾವಿಧಾನಸ್ಯೈವ ದ್ಯೋತನಾಚ್ಚ ಮುಮುಕ್ಷೂಣಾಂ ಹಿರಣ್ಯಗರ್ಭೋಪಾಸನಂ ನಾಂಗೀಕರ್ತವ್ಯಂ." "ಕಿನ್ನರಾ ಇಂದ್ರಭಕ್ತಾಶ್ಚ ಬ್ರಹ್ಮಭಕ್ತಾಸ್ತು ರಾಕ್ಷಸಾಃ । ವಿಷ್ಣುಭಕ್ತಾಸ್ತು ಗಂಧರ್ವಾಃ ಸಿದ್ಧಾಶ್ಶಂಕರಭಾಕ್ತಿಕಾಃ ॥ ತಥಾಪಿ ಬಲಿಪ್ರಹ್ಲಾದವಿಭೀಷಣಸುರಾಂತಕಾಃ । ವಿಷ್ಣುಭಕ್ತಾ ಇತಿ ಪ್ರೋಕ್ತಾ ಬಾಣಾಸುರದಶಾನನೌ ಶಿವಭಕ್ತಾವಿತಿಪ್ರೋಕ್ತಾವನ್ಯೇ ದ್ರುಹಿಣಭಾಕ್ತಿಕಾಃ ॥" ಇತಿ ಹಿರಣ್ಯಗರ್ಭಸ್ಯ ರಾಕ್ಷಸದೇವತಾಪ್ರಾಧಾನ್ಯತ್ವಾನ್ಮುಮುಕ್ಷೂಣಾಂ ತದುಪಾಸನೇನಾರ್ಚಿರಾದಿಗತಿರ್ನ ಸಂಭವತಿ. ಕಿಂಚ "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ। ಆಕಾಶದ್ವಾಯುಃ । ವಾಯೋರಗ್ನಿಃ। ಅಗ್ನೇರಾಪಃ

**ಅದ್ಭ್ಯಃ ಪೃಥಿವೀ। ಪೃಥಿವ್ಯಾ ಓಷಧಯಃ। ಓಷಧೀಭ್ಯೋಽನ್ನಂ। ಅನ್ನಾತ್ಪುರುಷಃ " ಇತ್ಯಾದಿನಾ ಹಿರಣ್ಯಗರ್ಭಾತ್ಪ್ರಾಗೇವ ಜೀವಸೃಷ್ಟಿಃ ಶ್ರೂಯತೇ. " ಯಥಾ ಸುದೀಪ್ತಾತ್ಪಾವಕಾದ್ವಿಸ್ಫುಲಿಂಗಾತ್ಸಹಸ್ರಶಃ ಪ್ರಭವಂತೇ ಸರೂಪಾಃ । ತಥಾಕ್ಷರಾದ್ವಿವಿಧಾಸ್ಸೌಮ್ಯ ಭಾವಾಃ ಪ್ರಜಾಯಂತೇ ತತ್ರ ಚೈವಾಪಿ ಯಂತಿ॥ " ಇತ್ಯಾದಿಭಿಃ ಪರಬ್ರಹ್ಮಣೋ ಜೀವಾನಾಮಾವಿರ್ಭಾವಸ್ಯ ತಸ್ಮಿನ್ನೇವ ಮುಕ್ತದಶಾಯಾಂತೇಷಾಮೇಕತ್ವಸ್ಯ ಚ ವ್ಯವಸ್ಥಾಪನಾತ್ ನಾನ್ಯಾರ್ಥೋ ಯುಕ್ತಃ. " ದ್ವೇ ಏವ ಬ್ರಹ್ಮಣೋ ರೂಪೇ ಮೂರ್ತಂ ಚಾಮೂರ್ತಮೇವ ಚ " " ನಮೋ ಹಿರಣ್ಯಬಾಹವೇ ಹಿರಣ್ಯವರ್ಣಾಯ ಹಿರಣ್ಯರೂಪಾಯ ಹಿರಣ್ಯಪತಯೇಽಂಬಿಕಾಪತಯ ಉಮಾಪತಯೇ ಪಶುಪತಯೇ ನಮೋ ನಮಃ " ಇತ್ಯಾದಿನಾ ಶಿವಸ್ಯೈವ ಮೂರ್ತಾಮೂರ್ತತ್ವನಿರೂಪಣಾವಗಮಾತ್ ಸರ್ವಗತಸ್ಯ ತಸ್ಯ ಏವ ನಾದಿವನ್ಮೂರ್ತಾಮೂರ್ತತ್ವಮವಿರೋಧಂ.**

" ಪ್ರಜ್ಞಾನಮೇ ಬ್ರಹ್ಮ " ಎಂಬ ಶ್ರುತಿಯಲ್ಲಿ ಜೀವನೇ ಸಾಕ್ಷಾದ್ಬ್ರಹ್ಮವೆಂದು ವ್ಯವಸ್ಥೆಯಾಗಿರುವುದರಿಂದ ಜೀವನು ಬ್ರಹ್ಮವನ್ನು ಸೇರುವನೆಂದು ಪ್ರಾಪ್ಯಪ್ರಾಪಕ ಸಂಬಂಧವನ್ನು ತಿಳಿಸುವ ಶಾಸ್ತ್ರವು ಔಪಚಾರಿಕವೋ ಅಥವಾ " ಆಕಾಶದಂತೆ ಸರ್ವಗತನು ಮತ್ತು ನಿತ್ಯನು " " ಅದೂ ಪೂರ್ಣವೇ, ಇದೂ ಪೂರ್ಣವೇ, ಪೂರ್ಣದಿಂದಲೇ ಪೂರ್ಣವು ಹೊರಟಿದೆ. ಪೂರ್ಣವಸ್ತುವಿನಲ್ಲಿ ಪೂರ್ಣಾಂಶವನ್ನು ತೆಗೆದರೆ ಪೂರ್ಣವೇ ಉಳಿಯುತ್ತದೆ"ಎಂಬಲ್ಲಿ ಬ್ರಹ್ಮವು ಸರ್ವವ್ಯಾಪಕವೆಂದು ತಿಳಿದುಬರುವುದರಿಂದ ಬ್ರಹ್ಮಪ್ರಾಪ್ತಿಗಾಗಿ ಅರ್ಚಿರಾದಿಮಾರ್ಗದಿಂದ ಮುಕ್ತನ ಗಮನವನ್ನು ಹೇಳಿದ್ದು ವ್ಯರ್ಥವೇ ಆಯಿತು. ಇದೂ ಅಲ್ಲದೆ ಜೀವನೇ ಬ್ರಹ್ಮವಾದ್ದರಿಂದ ಬ್ರಹ್ಮದಿಂದ ಹುಟ್ಟಿದನೆಂಬುದೂ ಹೊಂದುವುದಿಲ್ಲ. ಅವನು ಬ್ರಹ್ಮವನ್ನು ಸೇರುವನೆಂಬುದೂ ಯುಕ್ತವಾಗುವುದಿಲ್ಲ. ಇದರಿಂದ ಬ್ರಹ್ಮಪ್ರಾಪ್ತಿಯನ್ನು ತಿಳಿಸುವ ಶ್ರುತಿಗಳು ಚತುರ್ಮುಖ ಬ್ರಹ್ಮನಿಗೇ ಅನ್ವಯಿಸುತ್ತವೆ ಎಂದು ಆಶಂಕಿಸಿ ತಿಳಿಸುತ್ತಾನೆ. " ಯಾವನಿಂದ ಈ ಜೀವರು ಹುಟ್ಟಿದ್ದಾರೆಯೋ " ಎಂಬಲ್ಲಿ ಜೀವರು ಅಜನ್ಯರಾದರೂ ಪರಮಾತ್ಮನಿಂದ ಹುಟ್ಟಿರುವರೆಂಬುದು ಸ್ಪಷ್ಟಪಡುತ್ತದೆ. ಬಾದರಿಯು ಜೀವನನ್ನು ಬ್ರಹ್ಮದಿಂದ ಹುಟ್ಟಿದವನೆಂದೇ ಸ್ಪಷ್ಟವಾಗಿ ತಿಳಿಸಿದ್ದಾನೆ; ಯಾಕೆಂದರೆ ಶ್ರುತಿಯು ಜೀವರಿಗೆ ಬ್ರಹ್ಮದಲ್ಲಿಯೇ ಲಯವನ್ನು ಹೇಳಿದೆ. ಆದ್ದರಿಂದ ಅರ್ಚಿರಾದಿ ಮಾರ್ಗದಿಂದ ಮುಕ್ತರು ಶಿವಲೋಕಕ್ಕೆ ಹೋಗುವುದು ಯುಕ್ತವೇ ಆಗಿದೆ ಎಂಬುದು ಸೂತ್ರದ ಸೂಕ್ಷ್ಮಾರ್ಥ. ಅರ್ಚಿರಾದಿಮಾರ್ಗದಿಂದಲೇ ಜ್ಞಾನಿಯು ಹೊರಡುತ್ತಾನೆ. ಇಲ್ಲಿ ಅರ್ಚಿರಾದಿಮಾರ್ಗವೆಂದರೆ ಆತಿವಾಹಕನೆಂಬ ಅಮಾನವ ಪುರುಷನೆಂದರ್ಥ. ಇದರಿಂದ ಇವನೇ ಜ್ಞಾನಿಯನ್ನು ಬ್ರಹ್ಮದಲ್ಲಿ ಸೇರಿಸುತ್ತಾನೆಂದು ಹೇಳಿಯಾಯಿತು. ಈ ಅರ್ಚಿರಾದಿದೇವತೆಗಳು ಕಾರ್ಯಕೋಟಿಯಲ್ಲಿ ಸೇರಿದ

ಚತುರ್ಮುಖ ಬ್ರಹ್ಮನ ಉಪಾಸಕರನ್ನು ಕರೆದೊಯ್ಯುವರೋ ಅಥವಾ ಪರಬ್ರಹ್ಮೋಪಾಸಕರನ್ನೋ? ಅಥವಾ ಜೀವನನ್ನು ಬ್ರಹ್ಮವೆಂದು ಭಾವಿಸಿ ಉಪಾಸನಮಾಡಿದವರನ್ನೋ? ಎಂದು ಸಂಶಯಬರುತ್ತದೆ. ಆದರೆ ಚತುರ್ಮುಖನ ಉಪಾಸಕರನ್ನೇ ಆತಿವಾಹಿಕರು ಒಯ್ಯುತ್ತಾರೆ ಎಂದು ನಿಶ್ಚಯಿಸಬಹುದು; ಯಾಕೆಂದರೆ "ಎಲ್ಲರಿಗೂ ಮೊದಲು ಚತುರ್ಮುಖನಿದ್ದನು; ಎಲ್ಲಕ್ಕೂ ಅವನೊಬ್ಬನೇ ಪತಿಯಾಗಿದ್ದನು." "ಬ್ರಹ್ಮವೇ ಎಲ್ಲಕ್ಕೂ ಮೊದಲು ಇತ್ತು" ಹೀಗೆ ಚತುರ್ಮುಖಬ್ರಹ್ಮನನ್ನೇ ಸರ್ವಾಧಿಕನೆಂದು ಹೇಳಿದ್ದರಿಂದ ಅವನ ಉಪಾಸಕರನ್ನೇ ಆತಿವಾಹಿಕರು ಅವನ ಲೋಕಕ್ಕೆ ಒಯ್ಯುತ್ತಾರೆ. ಪರಿಪೂರ್ಣವೂ ಸರ್ವಜ್ಞವೂ ಸರ್ವಗತವೂ ಸರ್ವರ ಆತ್ಮವೂ ಆಗಿರುವ ಪರಶಿವಬ್ರಹ್ಮವನ್ನು ಉಪಾಸನಮಾಡಿದವನು ಆ ಬ್ರಹ್ಮವನ್ನು ಪಡೆಯಲಿಕ್ಕಾಗಿ ಬೇರೆಲ್ಲಿಗೂ ಹೋಗಬೇಕಾಗಿಲ್ಲ. ಬ್ರಹ್ಮಭಾವವು ಇವನಿಗೆ ಮೊದಲೇ ಪ್ರಾಪ್ತವಾಗಿದೆ; ಆದರೆ ಇವನನ್ನಾವರಿಸಿರುವ ಅವಿದ್ಯೆಯನ್ನು ತೊಲಗಿಸುವುದಷ್ಟೇ ಬ್ರಹ್ಮವಿದ್ಯೆಯಿಂದಾಗಬೇಕಾಗಿರುವ ಕೆಲಸ. ಇದೂ ಅಲ್ಲದೆ ಹಿರಣ್ಯಗರ್ಭನೆಂಬ ಬ್ರಹ್ಮನ ಉಪಾಸಕನೇ ಆ ಬ್ರಹ್ಮಲೋಕಕ್ಕೆ ಹೋಗುವನೆಂಬುದೇ ಯುಕ್ತವಾಗಿದೆ. ಆದ್ದರಿಂದ ಆತಿವಾಹಕರೆಂಬ ಅರ್ಚಿರಾದಿಗಣವು ಇಂತಹ ಉಪಾಸಕನನ್ನೇ ಮೇಲಕ್ಕೆ ಒಯ್ಯುತ್ತದೆ ಎಂದು ಪೂರ್ವಪಕ್ಷಿಯು ಹೇಳುತ್ತಾನೆ. ಇದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಪರಶಿವಬ್ರಹ್ಮವನ್ನು ಉಪಾಸನಮಾಡಿದವನು ಶಿವಲೋಕಕ್ಕೇ ಹೋಗಬೇಕೆಂದು ಬಾದರ್ಯಾಚಾರ್ಯನು ಹೇಳುತ್ತಾನೆ; ಯಾಕೆಂದರೆ "ಬ್ರಹ್ಮವನ್ನು ತಿಳಿದವನು ಬ್ರಹ್ಮವನ್ನೇ ಹೊಂದುತ್ತಾನೆ" "ಬ್ರಹ್ಮದೊಡನೆ ಸಕಲ ಭೋಗಗಳನ್ನು ಪಡೆಯುತ್ತಾನೆ" ಎಂಬಲ್ಲಿ ಪರಬ್ರಹ್ಮೋಪಾಸಕರಿಗೆ ಮಾತ್ರವೇ ಬ್ರಹ್ಮದೊಡನೆ ಸರ್ವಫಲಪ್ರಾಪ್ತಿಯನ್ನು ಹೇಳಲಾಗಿದೆ. ಲೋಕದಲ್ಲಿ ಶಿವಕೇಶವರಿಬ್ಬರ ಪೂಜೆ ನಮಸ್ಕಾರಗಳಿಗಾಗಿ ನಿಲಯವನ್ನು ಏರ್ಪಡಿಸಿ ಅಲ್ಲಿ ಅವರ ಸ್ಮರಣಕ್ಕೂ ಮಂತ್ರತಂತ್ರಗಳಿಗೂ ದೀಕ್ಷೆಯನ್ನು ವಿಧಿಸಲಾಗಿದೆ. ಆದ್ದರಿಂದ ಮುಮುಕ್ಷುಗಳಿಗೆ ಹಿರಣ್ಯಗರ್ಭನ ಉಪಾಸನವು ಗ್ರಾಹ್ಯವಲ್ಲ. "ಕಿನ್ನರರು ಇಂದ್ರನ ಭಕ್ತರಾದರೆ, ರಾಕ್ಷಸರು ಬ್ರಹ್ಮನ ಭಕ್ತರೂ ಗಂಧರ್ವರು ವಿಷ್ಣುವಿನ ಭಕ್ತರೂ, ಸಿದ್ಧರು ಶಂಕರನ ಭಕ್ತರೂ ಆಗಿದ್ದಾರೆ. ಆದರೂ ಬಲಿ ಪ್ರಹ್ಲಾದ ವಿಭೀಷಣರು ವಿಷ್ಣುಭಕ್ತರೆನಿಸಿದ್ದಾರೆ. ಬಾಣ ಮತ್ತು ರಾವಣರು ಶಿವಭಕ್ತರಾಗಿದ್ದಾರೆ. ಉಳಿದವರು ಬ್ರಹ್ಮನ ಭಕ್ತರು" ಎಂಬಲ್ಲಿ ಹಿರಣ್ಯಗರ್ಭನು ರಾಕ್ಷಸರ ದೇವತೆ ಎನಿಸಿದರೂ ಮುಮುಕ್ಷುಗಳಿಗೆ ಅವನ ಉಪಾಸನದಿಂದ ಅರ್ಚಿರಾದಿ ಗತಿಯೇ ಸಂಭವಿಸುವುದಿಲ್ಲ ಅಂದರೆ ಅವನನ್ನು ಕರೆದೊಯ್ಯಲು ಆತಿವಾಹಿಕದೇವತೆಗಳೇ ಹಾಜರಾಗುವುದಿಲ್ಲ. "ಈ ಆತ್ಮನಿಂದ ಆಕಾಶ ಹುಟ್ಟಿತು, ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ನೀರಿನಿಂದ ಪೃಥಿವಿ, ಪೃಥಿವಿಯಿಂದ ಲತೆಗಳು, ಲತೆಗಳಿಂದ ಭೋಜ್ಯವಸ್ತು, ಅದರಿಂದ ಪುರುಷನು." ಈ ಕ್ರಮದಲ್ಲಿ ಹಿರಣ್ಯಗರ್ಭನಿಗೂ ಮೊದಲೇ ಜೀವಸೃಷ್ಟಿಯನ್ನು ಶ್ರುತಿಯಲ್ಲಿ ಹೇಳಲಾಗಿದೆ. "ಉರಿಯುವ ಬೆಂಕಿಯಿಂದ ಅದಕ್ಕೆ ಸದೃಶವಾದ

ಸಾವಿರಾರು ಕಿಡಿಗಳು ಉದುರುವಂತೆ ಪರಮಾತ್ಮನಿಂದಲೇ ಅನೇಕ ಜೀವರು ಬಂದು ಅಲ್ಲಿಯೇ ಲಯವಾಗುತ್ತಾರೆ" ಎಂಬಲ್ಲಿ ಪರಬ್ರಹ್ಮದಿಂದಲೇ ಜೀವರ ಉತ್ಪತ್ತಿಯನ್ನೂ, ಅವನಲ್ಲಿಯೇ ಮುಕ್ತದಶೆಯಲ್ಲಿ ಅವರ ಐಕ್ಯವನ್ನೂ ಹೇಳಿರುವುದರಿಂದ ಈ ಬಗ್ಗೆ ಬೇರೆ ಅರ್ಥವೇ ಹೊಂದುವುದಿಲ್ಲ. "ಬ್ರಹ್ಮಕ್ಕೆ ಮೂರ್ತ ಅಮೂರ್ತವೆಂದು ಎರಡು ರೂಪಗಳಿವೆ" "ಶಿವನು ಹಿರಣ್ಯಬಾಹುವೂ ಹಿರಣ್ಯವರ್ಣನೂ ಹಿರಣ್ಯರೂಪನೂ ಹಿರಣ್ಯಪತಿಯೂ ಆಗಿದ್ದು ಅಂಬಿಕಾಪತಿ ಉಮಾಪತಿ ಪಶುಪತಿ ಎನಿಸಿದ್ದಾನೆ" ಎಂಬಲ್ಲಿ ಶಿವನನ್ನೇ ಮೂರ್ತನೆಂದೂ ಅಮೂರ್ತನೆಂದೂ ಹೇಳಿದ್ದರಿಂದ ಸರ್ವಗತನಾದರೂ ಶಿವನು ವಾಯುವಿನಂತೆ ಮೂರ್ತ ಮತ್ತು ಅಮೂರ್ತನೆನಿಸುವುದರಲ್ಲಿ ವಿರೋಧವಿಲ್ಲ.

**ಅಸ್ಮಿನ್ನರ್ಥೇ ಹೇತ್ವಂತರಮಾಹ. ವಿಶೇಷಿತತ್ವಾಚ್ಚ ॥ ೮ ॥ "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ । ತಂ ಹಿ ದೇವಮಾತ್ಮಬುದ್ಧಿಪ್ರಕಾಶಂ ಮುಮುಕ್ಷುರ್ವೈ ಶರಣಮಹಂ ಪ್ರಪದ್ಯೇ ॥" ಇತಿ ಶ್ರುತೌ ಶಿವಾತ್ಪರಬ್ರಹ್ಮಣಶ್ಚತುರ್ಮುಖೋತ್ಪತ್ತೇಸ್ತಸ್ಯ ವೇದಶಾಸ್ತ್ರಪುರಾಣಾದಿಪ್ರದಾಯಕತ್ವಸ್ಯ ಚ ದರ್ಶನಾತ್ ಹಿರಣ್ಯಗರ್ಭಸ್ಯ ಸರ್ವಾತಿಶಾಯಿತ್ವಮಮೃತಪ್ರದಾಯಕತ್ವಂ ಚ ಸರ್ವಥಾ ನ ಸಂಭವತಿ.**

ಈ ಬಗ್ಗೆ ಬೇರೊಂದು ಹೇತುವನ್ನು ತಿಳಿಸುತ್ತಾನೆ. "ಯಾವನು ಮೊದಲಿಗೆ ಬ್ರಹ್ಮನನ್ನು ಸೃಷ್ಟಿಸಿ ಅವನಿಗೆ ವೇದಗಳನ್ನು ಅನುಗ್ರಹಿಸಿದನೋ ಅಂತಹ ದೇವನೇ ಜೀವನನ್ನೂ ಬುದ್ಧಿಯನ್ನೂ ಪ್ರಕಾಶಿಸಬಲ್ಲನು. ಅಂತಹ ದೇವನಿಗೆ ಮುಮುಕ್ಷುವಾದ ನಾನು ಶರಣಾಗುತ್ತೇನೆ" ಎಂಬ ಶ್ರುತಿಯಲ್ಲಿ ಪರಶಿವಬ್ರಹದಿಂದಲೇ ಚತುರ್ಮುಖನು ಹುಟ್ಟಿದನೆಂದೂ ಅವನಿಗೆ ನಿಗಮಾಗಮಶಾಸ್ತ್ರಗಳು ಅನುಗ್ರಹವಾಗಿ ಬಂದವೆಂದೂ ಹೇಳಿರುವುದರಿಂದ ಎಲ್ಲರಿಗೂ ಹೆಚ್ಚಿನವನಾಗಲಿಕ್ಕೂ ಮೋಕ್ಷವನ್ನು ಅನುಗ್ರಹಿಸಲಿಕ್ಕೂ ಹಿರಣ್ಯಗರ್ಭನಿಗೆ ಸಾಧ್ಯವಾಗಲಿಕ್ಕಿಲ್ಲ.

**ನನು "ಪುರುಷೋಽಮಾನವ ಏತ್ಯ ಬ್ರಹ್ಮಲೋಕಾನ್ ಗಮಯತಿ" ಇತ್ಯಾದೌ ಮುಮುಕ್ಷೂಣಾಂ ಹಿರಣಗರ್ಭಲೋಕಪ್ರಾಪ್ತೇರ್ಹಿರಣ್ಯಗರ್ಭಪ್ರಾಪ್ತೇಶ್ಚಾವಗಮಾತ್ ಸರ್ವಾಧಿಕತ್ವಂ ತಸ್ಯೈವೇತ್ಯಾಶಂಕಾಯಾಮಾಹ. ಸಾಮೀಪ್ಯಾತ್ತು ತದ್ವ್ಯಪದೇಶಃ ॥ ೯ ॥ ತುಶಬ್ದೋಽತ್ರ ಶಂಕಾನಿರಾಸಾರ್ಥಃ. "ಯೋ ದೇವಾನಾಂ ಪ್ರಭವಶ್ಚೋದ್ಭವಶ್ಚ ವಿಶ್ವಾಧಿಕೋ ರುದ್ರೋ ಮಹರ್ಷಿಃ", "ಹಿರಣ್ಯಗರ್ಭಂ ಪಶ್ಯತ ಜಾಯಮಾನಂ ಸ ನೋ ಬುದ್ಧ್ಯಾ ಶುಭಯಾ ಸಂಯುನಕ್ತು" ಇತಿ ಸ್ವಸಮೀಪಹಿರಣ್ಯಗರ್ಭೇಕ್ಷಿತೃತ್ವಸ್ಯ ಶುಭಸ್ಮೃತಿಹೇತುತ್ವಸ್ಯ ಚ ವ್ಯವಸ್ಥಾಪನಾಚ್ಚ ಮುಮುಕ್ಷೋರುಪಾಸ್ಯತ್ವಂ ಶಿವಾನ್ನೇತರಸ್ಯೋಪಪನ್ನಂ. "ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ ।**

ಸೋಽಶ್ನುತೇ ಸರ್ವಾನ್ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ ॥ " ಇತ್ಯಾತ್ರಾಪಿ ಪರಶಿವಬ್ರಹ್ಮೋಪಾಸಕಸ್ಯ ತೇನ ಸಹ ಸರ್ವಕಾಮಾವಾಪ್ತೇರವಗಮಾತ್ ತದೇವ ಸಿದ್ಧಂ. " ತತ್ಪುರುಷೋಽಮಾನವಃ ಸ ಏನಾನ್ ಬ್ರಹ್ಮ ಗಮಯತಿ " ಇತ್ಯಾದಿಶ್ರುತಿಭಿಃ ಶಿವ ಏವಾವಗಮ್ಯತೇ. " ಶಿವ ಏಕೋ ಧ್ಯೇಯಶ್ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ " ಇತ್ಯಾದಿಷು ಮುಮುಕ್ಷೂಣಾಂ ಶಿವೇತರಧ್ಯಾನನಿಷೇಧದರ್ಶನಾತ್.

" ಅಮಾನವಪುರುಷನು ಬಂದು ಮುಕ್ತನನ್ನು ಬ್ರಹ್ಮಲೋಕಕ್ಕೆ ಒಯ್ಯುತ್ತಾನೆ" ಎಂಬಲ್ಲಿ ಮುಕ್ತರು ಹಿರಣ್ಯಗರ್ಭನ ಲೋಕವನ್ನೂ ಮತ್ತು ಹಿರಣ್ಯಗರ್ಭನನ್ನೂ ಹೊಂದುವರೆಂದು ಹೇಳಿದ್ದರಿಂದ ಅವನೇ ಎಲ್ಲಕ್ಕೂ ಹೆಚ್ಚಿನವನೆಂದಾಶಂಕಿಸಿ ನಿರಾಕರಿಸುತ್ತಾನೆ. ತುಶಬ್ದವು ಶಂಕೆಯನ್ನು ಅಲ್ಲಗಳೆಯುತ್ತದೆ. " ಯಾವ ರುದ್ರನು ದೇವತೆಗಳೆಲ್ಲರಿಗೂ ಮೂಲಕಾರಣನೋ ಅವನೇ ವಿಶ್ವಾಧಿಕನು ಮತ್ತು ಮಹಾಜ್ಞಾನಿಯು " ಹಿರಣ್ಯಗರ್ಭನನ್ನು ಮೊದಲಿಗೆ ಹುಟ್ಟಿಸಿದ ಆ ದೇವನೇ ನಮಗೆ ಒಳ್ಳೆಯ ಬುದ್ಧಿಯನ್ನು ಅನುಗ್ರಹಿಸಲಿ" ಇಲ್ಲಿ ಪರಶಿವಬ್ರಹ್ಮದಿಂದಲೇ ಹಿರಣ್ಯಗರ್ಭನು ಹುಟ್ಟಿದನೆಂದೂ ಉಪಾಸಕರು ಅವನಿಂದಲೇ ಸ್ಫೂರ್ತಿಯನ್ನು ಪಡೆಯುವರೆಂದೂ ಹೇಳಲಾಗಿದೆ. ಇದೂ ಅಲ್ಲದೆ ಅಲ್ಲಿಯೇ " ಸರ್ವವಂದ್ಯನೂ ಸರ್ವೇಶ್ವರನೂ ವರಪ್ರದನೂ ಆದ ದೇವನನ್ನು ಧ್ಯಾನಿಸಿ ಶಾಂತಿಯನ್ನು ಹೊಂದುತ್ತಾನೆ" " ಆಗತಾನೆ ಹುಟ್ಟಿದ ಬ್ರಹ್ಮವನ್ನು ದರ್ಶನದಿಂದ ಅನುಗ್ರಹಿಸಿದ ದೇವನೇ ನಮಗೆ ಸದ್ಬುದ್ಧಿಯನ್ನು ಅನುಗ್ರಹಿಸಲಿ " ಹೀಗೆ ಶಿವನೇ ತನ್ನ ಸಮೀಪದಲ್ಲಿ ಇರುವ ಹಿರಣ್ಯಗರ್ಭನನ್ನು ನೋಡಿ ಅನುಗ್ರಹಿಸಿದನೆಂದೂ, ಭಕ್ತರಿಗೆ ಶುಭಸ್ಮೃತಿಯನ್ನು ಅನುಗ್ರಹಿಸಬಲ್ಲನೆಂದೂ ಹೇಳಿರುವುದರಿಂದ ಶಿವನೇ ಮುಮುಕ್ಷುಗಳಿಗೆ ಉಪಾಸ್ಯನೆನಿಸಿದ್ದಾನೆ. " ಪರಮಾಕಾಶದಲ್ಲಿ ಪರಮನಿರಂಜನಪ್ರಭುವನ್ನು ತಿಳಿದವನು ಅವನೊಡನೆಯೇ ಎಲ್ಲಾ ಫಲಗಳನ್ನೂ ಭೋಗಿಸುವನು" ಎಂಬಲ್ಲಿ ಪರಬ್ರಹ್ಮೋಪಾಸಕನಿಗೇ ಬ್ರಹ್ಮದೊಡನೆ ಎಲ್ಲಾ ಫಲಗಳ ಭೋಗವನ್ನು ಹೇಳಲಾಗಿದೆ. ಆದ್ದರಿಂದ ಆತಿವಾಹಿಕನು ಮುಕ್ತರನ್ನು ಬ್ರಹ್ಮದಲ್ಲಿಗೆ ಒಯ್ಯುತ್ತಾನೆ." ಎಂಬ ಶ್ರುತಿಗಳು ಶಿವನಿಗೇ ಅನ್ವಯಿಸುತ್ತವೆ. " ಎಲ್ಲವನ್ನೂ ತೊರೆದು ಶಿವಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು" ಎಂಬಲ್ಲಿ ಮುಮುಕ್ಷುಗಳಿಗೆ ಶಿವೇತರಧ್ಯಾನವನ್ನು ನಿಷೇಧಿಸಲಾಗಿದೆ.

ಅಸ್ಮಿನ್ನರ್ಥೇ ಹೇತ್ವಂತರಮಾಹ. **ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮಭಿಧಾನಾತ್ ॥ ೧೦ ॥** " ಗತಾಃ ಕಲಾಃ ಪಂಚದಶ ಪ್ರತಿಷ್ಠಾಃ ದೇವಾಶ್ಚ ಸರ್ವೇ ಪ್ರತಿದೇವತಾಸು । ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಸರ್ವ ಏಕೀಭವಂತಿ ॥ " ಇತಿ ಶ್ರವಣಾತ್ ಕಾರ್ಯಾತ್ಯಯೇ ಚರಮಶರೀರಿಣಾಂ ಮುಮುಕ್ಷೂಣಾಂ ವಿದೇಹಮುಕ್ತ್ಯವಸರೇ ಕಾರ್ಯಾತ್ಮಕಪ್ರಾಣೇಂದ್ರಿಯಾದಿಕಸ್ಯ ಸರ್ವಸ್ಯ

ನಾಶೇ ಸತಿ ಅತಃ ತದಧಿಷ್ಠಾನಬ್ರಹ್ಮಾದಿದೇವತಾಭಿಸ್ಸಹ ಪರಮಭಿಧಾನಾತ್ ಪರಮಾತ್ಮನ್ಯೇಕೀಭಾವತ್ವವ್ಯಪದೇಶಾತ್ ಹಿರಣ್ಯಗರ್ಭೋಪಾಸನಂ ಮುಮುಕ್ಷೂಣಾಮವಿಚಾರಿತಾರಮಣೀಯಂ. ತಸ್ಮಾತ್ "ಏಷ ದೇವಪಥೋ ಬ್ರಹ್ಮಪಥಶ್ಚ ಏತೇನ ಪ್ರತಿಪದ್ಯಮಾನಾ ಇಮಂ ಮಾನವಂ ನಾವರ್ತಂತೇ," "ತಯೋರ್ಧ್ವಮಾಯನ್ನಮೃತತ್ವಮೇತಿ" ಇತ್ಯಮೃತತ್ವಪ್ರಾಪ್ತಿಬೋಧಕಶ್ರುತೀನಾಂ ಹಿರಣ್ಯಗರ್ಭಪರತ್ವಂ ನೋಪದಿಶ್ಯತೇ. ಅಪುನರಾವೃತ್ತಿವ್ಯಪದೇಶೇನ ಚಿತ್ಕೈಲಾಸ ಏವಾಭಿಹಿತಃ. "ಆಬ್ರಹ್ಮಭವನಾಲ್ಲೋಕಾಃ ಪುನರಾವರ್ತಿನೋಽರ್ಜನ" ಇತ್ಯಾದಿಸ್ಮೃತಿಷು ಬ್ರಹ್ಮಾದಿಲೋಕಾನಾಂ ಅನಿತ್ಯತ್ವಶ್ರವಣಾತ್, "ಯದಾ ಚಿತಮಸ್ತನ್ನ ದಿವಾ ನ ರಾತ್ರಿರ್ನ ಸನ್ನ ಚಾಸಚ್ಛಿವ ಏವ ಕೇವಲಃ। ತತ್ಸವಿತುರ್ವರೇಣ್ಯಂ ಪ್ರಜ್ಞಾ ಚ ತಸ್ಮಾತ್ಪ್ರಸೃತಾ ಪುರಾಣೀ॥" ಇತಿ ಜಗತಃ ಪ್ರಾಗವಸ್ಥಾಯಾಂ ಪ್ರಳಯಾನಂತರಮಪಿ ಶಿವೇ ಸ್ಥಿತಿಮಾತ್ರಸ್ಯೈವೋಪದೇಶಾತ್ "ಋತಂ ಸತ್ಯಂ ಪರಂ ಬ್ರಹ್ಮ" ಇತ್ಯಾದೌ ತಸ್ಯೈವ ತ್ರೈಕಾಲಿಕಾಬಾಧ್ಯತ್ವೇನ ಋತತ್ವಸತ್ಯತ್ವಾದ್ಯನನ್ಯಸಾಧಾರಣಧರ್ಮೋಪದೇಶಾಚ್ಚ ಮುಮುಕ್ಷೂಪಾಸ್ಯತ್ವಂ ನೇತರಸ್ಯಸಂಭವತಿ.

ಈ ಬಗ್ಗೆ ಬೇರೊಂದು ಹೇತುವನ್ನು ತಿಳಿಸುತ್ತಾನೆ. "ಶಕ್ತಿಗಳು, ಇಂದ್ರಿಯಗಳು, ಪ್ರಾಣಗಳು, ಕರ್ಮಗಳು, ಜೀವ ಇವರೆಲ್ಲರೂ ಪರಮಾತ್ಮನಲ್ಲಿ ಏಕೀಭವಿಸುತ್ತಾರೆ" ಎಂಬ ಶ್ರುತಿಯಲ್ಲಿ ಕೊನೆಯದಾಗಿ ಶರೀರವನ್ನು ಪಡೆದಿರುವ ಮುಮುಕ್ಷುಗಳು ವಿದೇಹಮುಕ್ತಿಯನ್ನು ಹೊಂದುವಾಗ ಕಾರ್ಯರೂಪವಾದ ಪ್ರಾಣ ಇಂದ್ರಿಯ ಮೊದಲಾದವು ಅವುಗಳ ಅಭಿಮಾನಿ ದೇವತೆಗಳೊಡನೆ ಪರಮಾತ್ಮನಲ್ಲಿ ಬೆರೆಯುತ್ತವೆ ಎಂದು ಹೇಳಿರುವುದರಿಂದ ಮುಮುಕ್ಷುಗಳಿಗೆ ಹಿರಣ್ಯಗರ್ಭನ ಉಪಾಸನವು ಯುಕ್ತವಲ್ಲ. ಆದ್ದರಿಂದ "ಇದೇ ದೇವಮಾರ್ಗ, ಬ್ರಹ್ಮಪಥ. ಇದರಿಂದ ಹೊರಟವರು ಈ ಮಾನವ ಲೋಕಕ್ಕೆ ಹಿಂತಿರುಗುವುದಿಲ್ಲ. ಇದರಿಂದ ಮೇಲೆ ಹೋದವರು ಅಮೃತರಾಗುತ್ತಾರೆ" ಎಂದು ಮುಂತಾಗಿ ಅಮೃತಸ್ಥಿತಿಯನ್ನು ತಿಳಿಸುವ ಶ್ರುತಿಗಳು ಹಿರಣ್ಯಗರ್ಭನಿಗೆ ಅನ್ವಯಿಸುವುದಿಲ್ಲ. "ಅವರು ಮತ್ತೆ ಹಿಂತಿರುಗುವುದಿಲ್ಲ" ವೆಂದು ಹೇಳಿದ್ದರಿಂದ ಅವರು ಚಿತ್ಕೈಲಾಸದಲ್ಲಿ ನೆಲಸುವರೆಂಬುದು ಸಿದ್ಧವಾಗುತ್ತದೆ. "ಬ್ರಹ್ಮಲೋಕದಿಂದ ಆರಂಭಿಸಿ ಎಲ್ಲರೂ ಹಿಂತಿರುಗುತ್ತಾರೆ" ಎಂಬ ಸ್ಮೃತಿಯಲ್ಲಿ ಬ್ರಹ್ಮಾದಿಲೋಕಗಳನ್ನು ಅನಿತ್ಯವೆಂದು ಹೇಳಲಾಗಿದೆ. "ಪ್ರಳಯದಲ್ಲಿ ಯಾರೊಬ್ಬರೂ ಇಲ್ಲದೆ ಅದ್ವಿತೀಯಪ್ರಕಾಶನಾದ ಶಿವನೊಬ್ಬನೇ ಇದ್ದನು; ಅವನಿಂದಲೇ ಪ್ರಜ್ಞಾಶಕ್ತಿಯು ಹೊರಹೊಮ್ಮಿತು" ಎಂಬಲ್ಲಿ ಜಗತ್ತು ಪ್ರಳಯದಲ್ಲಿ ಇದ್ದಂತೆಯೇ ಅನಂತರವೂ ಶಿವನಲ್ಲಿಯೇ ಇರುವುದಾಗಿ ತಿಳಿದುಬರುತ್ತದೆ. "ಋತಂ ಸತ್ಯಂ ಪರಂ ಬ್ರಹ್ಮ" ಎಂಬಲ್ಲಿ ಶಿವನೇ ತ್ರಿಕಾಲಗಳಲ್ಲೂ ಅಬಾಧಿತನಾದ್ದರಿಂದ ಋತ, ಸತ್ಯ

ಮೊದಲಾದ ಅಸಾಧರಾಣಧರ್ಮಗಳುಳ್ಳವನೂ ಆಗಿದ್ದಾನೆ. ಆದ್ದರಿಂದ ಅವನ ಲ್ಲದೆ ಬೇರೆ ಯಾರೂ ಮುಮುಕ್ಷುಗಳಿಗೆ ಉಪಾಸ್ಯನಾಗುವಂತಿಲ್ಲ.

ಪುನರ್ಹೇತ್ವಂತರಮಾಹ. ಸ್ಮೃತೇಶ್ಚ ॥ ೧೧ ॥ " ಶಿವಾಂಶಭೂತ ಜೀವಾನಾಂ ಶಿವೋಪಾಸನಮುಚ್ಯತೇ । ಶಿವಸ್ಯಾನುಗ್ರಹಾದೇವ ಕ್ರಿಮಿ ಕೀಟಕವತ್ಸದಾ ॥ ಶಿವಾತ್ಮಕತ್ವಂ ಸಂಪ್ರಾಪ್ಯ ಪುನರ್ಜನ್ಮ ನ ಲಭ್ಯತೇ " ಇತಿ ಸ್ಮೃತಿಷ್ವಪಿ ಶಿವೋಪಾಸಕಾನಾಮೇವ ಪುನರಾವೃತ್ತಿರಹಿತಶಿವ ತತ್ತ್ವಾತ್ಮಕತ್ವವ್ಯಪದೇಶಾತ್ ಮುಮುಕ್ಷೂಣಾಂ ಶಿವ ಏವೋಪಾಸ್ಯಃ.

ಶಿವಾಂಶರಾದ ಜೀವರಿಗೆ ಶಿವೋಪಾಸನವನ್ನು ಹೇಳಿದೆ. " ಶಿವನ ಅನುಗ್ರಹ ದಿಂದಲೇ ಜೀವನು ಭ್ರಮರಕೀಟನ್ಯಾಯದಿಂದ ಶಿವಭಾವವನ್ನು ಹೊಂದಿ ಮತ್ತೆ ಹುಟ್ಟುವುದಿಲ್ಲ " ಹೀಗೆ ಸ್ಮೃತಿಗಳಲ್ಲೂ ಶಿವೋಪಾಸಕರು ಮಾತ್ರವೇ ಮತ್ತೆ ಹುಟ್ಟ ದಂತೆ ಶಿವಭಾವವನ್ನು ಹೊಂದುವರೆಂದು ಹೇಳಲಾಗಿದೆ. ಆದ್ದರಿಂದ ಮುಮುಕ್ಷು ಗಳು ಶಿವನಲ್ಲದೆ ಬೇರೆ ಯಾರನ್ನೂ ಉಪಾಸನಮಾಡುವಂತಿಲ್ಲ.

ಅಸ್ಮಿನ್ನರ್ಥೇ ಹ್ಯಾಚಾರ್ಯಾಂತರಮುಪ್ಯಾಹ. ಪರಂ ಜೈಮಿನಿ ರ್ಮುಖ್ಯತ್ವಾತ್ ॥ ೧೨ ॥ " ಬ್ರಹ್ಮಾಧಿಪತಿರ್ಬ್ರಹ್ಮಣೋಽಧಿಪತಿರ್ಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಂ " ಇತ್ಯಾದಿಶ್ರುತಿಷು ಶಿವಸ್ಯ ಪರ ಬ್ರಹ್ಮಣಃ ಪ್ರಣವಾತ್ಮಕತ್ವಸರ್ವಾಧಿಕತ್ವನಿರ್ದೇಶಾತ್ ಶಿವಾಖ್ಯ ಪರಬ್ರಹ್ಮೋಪಾಸಕಾನ್ ಅರ್ಚಿರಾದಿಮಾರ್ಗೇಣ ಆತಿವಾಹಿಕಾಃ ಸ್ವರ್ಲೋಕಂ ಗಮಯಂತೀತಿ ಜೈಮಿನ್ಯಾಚಾರ್ಯೋ ಮನ್ಯತೇ. ಕುತಃ? ಮುಖ್ಯತ್ವಾತ್. " ಬ್ರಹ್ಮವಿದಾಪ್ನೋತಿ ಪರಂ " ಇತ್ಯಾದಿಷು ಬ್ರಹ್ಮ ಶಬ್ದಸ್ಯ ಪರಸ್ಮಿನ್ನೇವ ಬ್ರಹ್ಮಣಿ ಮುಖ್ಯತ್ವಾತ್ ಚತುರ್ಮುಖಹಿರಣ್ಯ ಗರ್ಭಪಕ್ಷೇ ಉಪಕ್ರಮೋಪಸಂಹಾರಾದಿಷಡ್ವಿಧತಾತ್ಪರ್ಯಲಿಂಗ ವಿರೋಧಾಚ್ಚ " ತತ್ಪುರುಷೋಽಮಾನವಃ ಸ ಏನಾನ್ ಬ್ರಹ್ಮ ಗಮ ಯತಿ " ಇತ್ಯಾದಿಷು ಬ್ರಹ್ಮಶಬ್ದಸ್ಯ ಶಿವಪರತ್ವಮೇವೇತಿ ನಿಶ್ಚೀಯತೇ.

ಈ ಬಗ್ಗೆ ಬೇರೊಬ್ಬ ಆಚಾರ್ಯನ ಮತವನ್ನು ತಿಳಿಸುತ್ತಾನೆ. " ಋತಂ ಸತ್ಯಂ ಪರಂ ಬ್ರಹ್ಮ " ಎಂಬ ಶ್ರುತಿಯಲ್ಲಿ ಪರಶಿವಬ್ರಹ್ಮವನ್ನು ಪ್ರಣವಾತ್ಮಕವೆಂದೂ ಸರ್ವೋ ತ್ಕೃಷ್ಟವೆಂದೂ ಹೇಳಿದ್ದರಿಂದ ಪರಶಿವಬ್ರಹ್ಮದ ಉಪಾಸಕರನ್ನೇ ಅರ್ಚಿರಾದಿಮಾರ್ಗ ದಿಂದ ಆತಿವಾಹಿಕರು ಸ್ವರ್ಗಕ್ಕೆ ಒಯ್ಯುತ್ತಾರೆ ಎಂದು ಜೈಮಿನಿಯು ಹೇಳುತ್ತಾನೆ. " ಬ್ರಹ್ಮವನ್ನು ಅರಿತವನು ಬ್ರಹ್ಮವನ್ನೇ ಹೊಂದುತ್ತಾನೆ " ಎಂಬಲ್ಲಿ ಬ್ರಹ್ಮಶಬ್ದವು ಪರಬ್ರಹ್ಮದಲ್ಲಿಯೇ ಮುಖ್ಯವೆನಿಸಿದೆ. ಹಿರಣ್ಯಗರ್ಭನಿಗೆ ಅದನ್ನು ಅನ್ವಯಿಸುವುದಕ್ಕೆ ಉಪಕ್ರಮೋಪಾಸಂಹಾರೈಕ್ಯ ಮೊದಲಾದ ತಾತ್ಪರ್ಯಲಿಂಗಗಳು ವಿರುದ್ಧವಾಗು ತ್ತವೆ. ಆದ್ದರಿಂದ " ಅಮಾನವಪುರುಷನು ಮುಕ್ತರನ್ನು ಬ್ರಹ್ಮದಲ್ಲಿಗೆ ಒಯ್ಯು ತ್ತಾನೆ " ಎಂಬ ಶ್ರುತಿಯಲ್ಲಿ ಬ್ರಹ್ಮವೆಂದರೆ ಶಿವನೆಂದೇ ನಿಶ್ಚಯಿಸಲಾಗಿದೆ.

**ಪುನರ್ಹೇತ್ವಂತರಮಾಹ. ದರ್ಶನಾಚ್ಚ ॥ ೧೩ ॥ "ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ", "ಯಥಾ ನದ್ಯಃ ಸ್ಯಂದಮಾನಾಸ್ಸಮುದ್ರೇ ಅಸ್ತಂ ಗಚ್ಛಂತಿ ನಾಮರೂಪೇ ವಿಹಾಯ । ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ ಪರಾತ್ಪರಂ ಪುರುಷಮುಪೈತಿ ದಿವ್ಯಂ ॥" ಇತ್ಯಾದಿಶ್ರುತಿಷು ಜೀವಬ್ರಹ್ಮಣೋಃ ಪ್ರಾಪ್ಯಪ್ರಾಪಕತ್ವೇನ ಅಸಂದಿಗ್ಧತಯಾ ಭೇದಾಭೇದ ದರ್ಶನಾಚ್ಚ ಜೀವಸ್ಯೈವ ಬ್ರಹ್ಮತ್ವಂ ಸದಾ ಜೀವಭಿನ್ನತ್ವಂ ಚ ನಾಂಗೀಕರ್ತವ್ಯಂ.**

"ಈ ಸಂಪ್ರಸಾದನು ಈ ಶರೀರದಿಂದ ಎದ್ದು ಪರಂಜ್ಯೋತಿಯಲ್ಲಿ ಸೇರಿ ತನ್ನ ವಾಸ್ತವಸ್ವರೂಪವನ್ನು ಪಡೆಯುತ್ತಾನೆ" "ನದಿಗಳು ಹರಿಯುತ್ತ ಸಮುದ್ರದಲ್ಲಿ ಸೇರಿ ನಾಮರೂಪಗಳನ್ನು ಕಳೆದುಕೊಳ್ಳುವಂತೆ ಜ್ಞಾನಿಯು ಪರಮಪುರುಷನನ್ನು ಸೇರಿ ನಾಮರೂಪಗಳನ್ನು ತೊರೆಯುತ್ತಾನೆ." ಎಂಬ ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಪ್ರಾಪ್ಯ ಪ್ರಾಪಕಸಂಬಂಧವಿರುವುದರಿಂದ ಪ್ರಾಪ್ಯಬ್ರಹ್ಮಕ್ಕೂ ಪ್ರಾಪಕಜೀವನಿಗೂ ಭೇದಾಭೇದವೇ ಸ್ಪಷ್ಟವಾಗಿದೆ. ಆದ್ದರಿಂದ ಜೀವನೇ ಬ್ರಹ್ಮವೆಂಬ ಅದ್ವೈತವಾದವೂ ಜೀವನು ಯಾವಾಗಲೂ ಬ್ರಹ್ಮದಿಂದ ಭಿನ್ನನೆಂಬ ದ್ವೈತವಾದವೂ ಗ್ರಾಹ್ಯವಲ್ಲ.

**ಪುನರ್ಹೇತ್ವಂತರಮಾಹ. ನ ಚ ಕಾರ್ಯೇ ಪ್ರತ್ಯಭಿಸಂಧಿಃ ॥ ೧೪ ॥ "ವಿಶ್ವಾಧಿಕೋ ರುದ್ರೋ ಮಹರ್ಷಿಃ", "ಹಿರಣ್ಯಗರ್ಭಂ ಜನಯಾಮಾಸ ಪೂರ್ವಂ" ಇತ್ಯಾದಿಶ್ರುತಿದರ್ಶನಾತ್ ಕಾರ್ಯೇ ಹಿರಣ್ಯಗರ್ಭೇ ಜೀವಾನಾಂ ಪ್ರತ್ಯಭಿಸಂಧಿಃ ಜೀವಭಾವನಿವೃತ್ತಿಪೂರ್ವಕಶಿವತ್ವಪ್ರಾಪ್ತಿರೂಪಮೋಕ್ಷೋ ನ ವಿಧೀಯತೇ. "ನಾನ್ಯಃ ಪಂಥಾ ವಿದ್ಯತೇಽಯನಾಯ" ಇತ್ಯಾದಿಶ್ರುತಿಷು ಶಿವೈಕಜ್ಞಾನಾದೇವ ತಾದಾತ್ಮ್ಯರೂಪಸಾಯುಜ್ಯಮುಕ್ತಿವ್ಯಪದೇಶಾತ್ ಚತುರ್ಮುಖೋಪಾಸಕಾನಾಂ ಶ್ರುತಿಸ್ಮೃತಿಪುರಾಣಾಗಮೇಷು ಪುನರಾವೃತ್ತಿರಹಿತಮೋಕ್ಷೋಪಲಬ್ಧ್ಯದರ್ಶನಾಚ್ಚ "ಅಶ್ವ ಇವ ರೋಮಾಣಿ ವಿಧೂಯ ಪಾಪಂ ಚಂದ್ರ ಇವ ರಾಹೋರ್ಮುಖಾತ್ಪ್ರಮುಚ್ಯ ಧೂತ್ವಾ ಶರೀರಮಕೃತಂ ಕೃತಾತ್ಮಾ ಬ್ರಹ್ಮಲೋಕಮಭಿಸಂಭವಾಮಿ" ಇತ್ಯಾದಿಶ್ರುತಿನಿರ್ದಿಷ್ಟಬ್ರಹ್ಮಲೋಕಸ್ಯ ಶಿವಲೋಕಪರತ್ವಂ ವೇದಿತವ್ಯಂ.**

ಮತ್ತೊಂದು ಕಾರಣವನ್ನು ತಿಳಿಸುತ್ತಾನೆ. "ರುದ್ರನು ವಿಶ್ವಾಧಿಕನು" "ಅವನು ಮೊದಲು ಹಿರಣ್ಯಗರ್ಭನನ್ನು ಸೃಜಿಸಿದನು" ಹೀಗೆ ಶ್ರುತಿಯಲ್ಲಿ ಹೇಳಿರುವುದರಿಂದ ಕಾರ್ಯನೆನಿಸಿದ ಹಿರಣ್ಯಗರ್ಭನು ಜೀವರಿಗೆ ಜೀವಭಾವವನ್ನು ತೊಲಗಿಸಿ ಶಿವಭಾವವನ್ನು ದೊರಕಿಸುವನೆಂಬುದು ಹೊಂದುವುದಿಲ್ಲ. "ಅವನನ್ನು ತಿಳಿದು ಮೃತ್ಯುವನ್ನು ದಾಟುತ್ತಾನೆ. ಇವಕ್ಕೆ ಬೇರೆ ಮಾರ್ಗವಿಲ್ಲ" ಈ ಬಗೆಯ ಶ್ರುತಿಗಳಲ್ಲಿ

ಶಿವನೊಬ್ಬನ ಜ್ಞಾನದಿಂದಲೇ ತಾದಾತ್ಮ್ಯವೆಂಬ ಸಾಯುಜ್ಯಮುಕ್ತಿಯನ್ನು ಹೇಳ ಲಾಗಿದೆ. ಶ್ರುತಿಸ್ಮೃತಿ ಪುರಾಣಾಗಮಗಳಲ್ಲಿ ಎಲ್ಲಿಯೂ ಚತುರ್ಮುಖನ ಉಪಾಸ ಕರಿಗೆ ಮತ್ತೆ ಹುಟ್ಟದಂತಹ ಅಮೃತಸ್ಥಿತಿ ದೊರಕುವುದಾಗಿ ಹೇಳಿಲ್ಲ. ಕುದುರೆಯು ರೋಮಗಳನ್ನು ಉದುರಿಸುವಂತೆ, ಚಂದ್ರನು ರಾಹುವಿನ ಬಾಯಿಂದ ಹೊರಗೆ ಬರು ವಂತೆ ಕೃತಕೃತ್ಯನಾಗಿ ಪ್ರಾಕೃತಶರೀರವನ್ನು ತೊರೆದು ಸಹಜಸಿದ್ಧವಾದ ಬ್ರಹ್ಮ ಲೋಕವನ್ನು ಸೇರುತ್ತೇನೆ" ಎಂಬ ಶ್ರುತಿಯಲ್ಲಿ ಹೇಳಿದ ಬ್ರಹ್ಮಲೋಕವೆಂದರೆ ಶಿವ ಲೋಕವೆಂದೇ ತಿಳಿಯಬೇಕು.

ಏವಂ "ಬಹವೋಽಪ್ಯೇಕಯತ್ನತಃ" ಇತಿ ನ್ಯಾಯೇನ ಸ್ವಸಿ ದ್ಧಾಂತಾನುಗುಣ್ಯೇನ ಆಚಾರ್ಯಾಂತರಮತಂ ದರ್ಶಯಿತ್ವಾ ತಥಾ ಸ್ವಮತಂ ಪ್ರಕಾಶಯತಿ. ಅಪ್ರತೀಕಾಲಂಬನಾನ್ನಯತೀತಿ ಬಾದರಾ ಯಣ ಉಭಯಥಾ ಚ ದೋಷಾತ್ತತ್ಕ್ರತುಶ್ಚ ॥ ೧೫ ॥ ಅಪ್ರತೀಕಾಲಂಬ ನಾನ್ ಪ್ರತೀಕಾಲಂಬನವ್ಯತಿರಿಕ್ತಾನ್ ನಯತ್ಯರ್ಚಿರಾದಿರಾತಿವಾ ಹಿಕೋ ಗಣ ಇತಿ ಭಗವಾನ್ ಬಾದರಾಯಣೋ ಮನ್ಯತೇ. ಏತದುಕ್ತಂ ಭವತಿ. ಕಾರ್ಯಪ್ರಪಂಚೋಪಸಕಾನ್ ನಯತೀತಿ ನಾಯಂ ಪಕ್ಷ ಸ್ಸಂಭವತೀತಿ ಚೇನ್ನ "ಸರ್ವಂ ಖಲ್ವಿದಂ ಬ್ರಹ್ಮ ತಜ್ಜಲಾನಿತಿ ಶಾಂತ ಉಪಾಸೀತ", "ತತ್ತ್ವಮೇವ ತ್ವಮೇವ ತತ್" ಇತ್ಯಾದಿಶ್ರುತಿಷು ಬ್ರಹ್ಮಕಾರ್ಯರೂಪಚೇತನಪ್ರಪಂಚಸ್ಯ ಬ್ರಹ್ಮಾತ್ಮಕತ್ವಧ್ಯಾನೇನ ಬ್ರಹ್ಮತತ್ತ್ವಪ್ರಾಪ್ತ್ಯವಗಮಾತ್, ಉಭಯಥಾ ಚ ದೋಷಾತ್, "ದ್ವಾ ಸುಪರ್ಣಾ" ಇತ್ಯಾದಿದ್ವೈತಶ್ರುತ್ಯಾನುಗುಣ್ಯೇನ ಜೀವಬ್ರಹ್ಮಣೋ ರ್ಭೇದಮಾತ್ರತ್ವೋಪಾದಾನೇ ತತ್ತ್ವಮಸ್ಯಾದ್ಯದ್ವೈತವಿಧಾಯಕಬಹು ಶ್ರುತಿಸಂಕೋಚದೋಷಾತ್, ತಥಾ ಅದ್ವೈತಪ್ರಾಧಾನ್ಯೇ ದ್ವೈತಶ್ರುತಿ ಶತಸಂಕೋಚದೋಷಾಚ್ಚ, ಭ್ರಮರಕೀಟಾದಿಬಹುದೃಷ್ಟಾಂತಾನು ಸಾರೇಣ ಜೀವಬ್ರಹ್ಮಣೋರ್ಭೇದಾಭೇದೋಽಂಗೀಕರ್ತವ್ಯಃ. "ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂಜ್ಯೋತಿರುಪ ಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ" ಇತ್ಯಾದಿ ಶ್ರುತಿಷು ಪಕ್ಷೈಕ ದೇಶನಿರಾಕರಣಾವಗಮಾತ್. ತತ್ಕ್ರತುಶ್ಚೇತಿ ಯಥೋಪಾಸಕ ಸ್ತಥೈವ ಪ್ರಾಪ್ನೋತೀತ್ಯರ್ಥಃ. "ಯಥಾಕ್ರತುರಸ್ಮಿನ್ ಲೋಕೇ ಪುರುಷೋ ಭವತಿ ತಥೇತಃ ಪ್ರೇತ್ಯ ಭವತಿ," "ತಂ ಯಥಾ ಯಥೋ ಪಾಸತೇ" ಇತಿ ಶ್ರುತಿಶಾಸನಾತ್ ಉಪಾಸಕಾನಾಂ ಉಪಾಸ್ಯ ವಸ್ತು ಪ್ರಾಪ್ತಿಸ್ಸರ್ವತ್ರೋಪಲಭ್ಯತೇ. ತಸ್ಮಾತ್ ಸರ್ವೇಷು ವೇದಾಂತೇಷು ಭೇದಾಭೇದಸಿದ್ಧಿರ್ದುರ್ವಾರೈವ.

ಹೀಗೆ "ಬಹಳ ಮಾರ್ಗಗಳಿದ್ದರೂ ಒಂದೇ ದಾರಿಯಲ್ಲಿ ಪ್ರಯತ್ನಮಾಡಬೇಕು"

ಎಂಬ ನ್ಯಾಯದಿಂದ ತನ್ನ ಸಿದ್ಧಾಂತಕ್ಕನುಗುಣವಾದ ಬೇರೊಬ್ಬ ಆಚಾರ್ಯನ ಮತವನ್ನು ತಿಳಿಸಿ ಈಗ ತನ್ನ ಮತವನ್ನು ತಿಳಿಸುತ್ತಾನೆ. ಪ್ರತೀಕವನ್ನಾಶ್ರಯಿಸದವರನ್ನು ಆತಿವಾಹಿಕರು ಮೇಲಕ್ಕೆ ಕರೆದೊಯ್ಯುತ್ತಾರೆ ಎಂದು ಬಾದರಾಯಣಾಚಾರ್ಯನು ಭಾವಿಸುತ್ತಾನೆ. ಆದರೆ ಕಾರ್ಯಕೋಟಿಯಲ್ಲಿ ಸೇರಿದ ಚತುರ್ಮುಖನ ಉಪಾಸಕರನ್ನೂ ಅವರು ಒಯ್ಯುತ್ತಾರೆ ಎಂಬ ಪಕ್ಷವು ಸಂಭವಿಸುವುದಿಲ್ಲ; ಯಾಕೆಂದರೆ “ಎಲ್ಲವೂ ಬ್ರಹ್ಮವೇ, ಅದೇ ನೀನಾಗಿದ್ದೀಯೆ, ನೀನು ಬ್ರಹ್ಮನಿದ್ದೀಯೆ, ನಾನು ಬ್ರಹ್ಮನಿದ್ದೇನೆ.” ಈ ಬಗೆಯ ಶ್ರುತಿಗಳಲ್ಲಿ ಬ್ರಹ್ಮದ ಕಾರ್ಯವೆನಿಸಿದ ಚೇತನಾಚೇತನ ಪ್ರಪಂಚವನ್ನು ಹಾಗೆಯೇ ಭಾವಿಸಿ ಧ್ಯಾನಿಸುವುದರಿಂದ ಬ್ರಹ್ಮತತ್ತ್ವವೇ ದೊರಕುವುದೆಂದು ತಿಳಿದುಬರುತ್ತದೆ. “ದ್ವಾ ಸುಪರ್ಣಾ” ಎಂಬ ದ್ವೈತಶ್ರುತಿಯಂತೆ ಜೀವಬ್ರಹ್ಮರಿಗೆ ಭೇದವನ್ನಷ್ಟನ್ನೇ ಗಮನಿಸುವುದರಿಂದ “ತತ್ತ್ವಮಸಿ” ಮೊದಲಾದ ಅದ್ವೈತಶ್ರುತಿಗಳನ್ನು ಸಂಕೋಚಗೊಳಿಸುವ ದೋಷವೂ, ಅದ್ವೈತ ಶ್ರುತಿಯಂತೆ ಅದ್ವೈತವನ್ನೇ ಗಮನಿಸಿದರೆ ದ್ವೈತಶ್ರುತಿಗಳನ್ನು ಸಂಕೋಚಗೊಳಿಸುವ ದೋಷವೂ ಹೀಗೆ ಎರಡು ಬಗೆಗಳಿಂದಲೂ ದೋಷವೇ ಬರುವುದರಿಂದ ಜೀವಬ್ರಹ್ಮರಿಗೆ ಭ್ರಮರಕೀಟ ಮೊದಲಾದ ಅನೇಕ ದೃಷ್ಟಾಂತಗಳಿಂದ ಭೇದಾಭೇದವನ್ನೇ ಅಂಗೀಕರಿಸಬೇಕು. “ಏಷ ಸಂಪ್ರಸಾದಃ” “ಯಥಾ ನದ್ಯಃ” ಎಂಬ ಶ್ರುತಿಗಳಲ್ಲಿ ಪಕ್ಷದ ಏಕದೇಶವನ್ನು ನಿರಾಕರಿಸಲಾಗಿದೆ. “ಈ ಲೋಕದಲ್ಲಿ ಪುರುಷನು ಹೇಗೆ ಯಜ್ಞವನ್ನು ಮಾಡುವನೋ ಹಾಗೆಯೇ ಇಲ್ಲಿಂದ ಹೊರಡುತ್ತಾನೆ” “ಹೇಗೆ ಉಪಾಸನಮಾಡುವನೋ ಹಾಗೆ ಫಲವನ್ನು ಪಡೆಯುತ್ತಾನೆ” ಎಂದು ಶ್ರುತಿಯಲ್ಲಿ ಹೇಳಿರುವುದರಿಂದ ಉಪಾಸಕರು ಉಪಾಸ್ಯವಸ್ತುವನ್ನೇ ಪಡೆಯುವರೆಂಬುದು ಎಲ್ಲರಿಗೂ ತಿಳಿದದ್ದೇ ಆಗಿದೆ. ಆದ್ದರಿಂದ ಎಲ್ಲಾ ವೇದಾಂತಗಳಲ್ಲಿಯೂ ಭೇದವೇ ಸಿದ್ಧಿಸುವುದೆಂಬುದನ್ನು ತಡೆಯಲಿಕ್ಕೇ ಆಗುವುದಿಲ್ಲ.

**ನನು “ನಾರಾಯಣಪರಂ ಬ್ರಹ್ಮ” ಇತ್ಯಾದಿಶ್ರುತಿಷು ವಿಷ್ಣ್ವಾದಿನಾನಾದೇವತೋಪಾಸನಾವಗಮಾತ್ ಮುಮುಕ್ಷೂಣಾಂ ಪುನರಾವೃತ್ತಿನಿರಾಕರಣಾರ್ಥಂ ದಹರಾದಿಸರ್ವವಿದ್ಯಾಸು ಮಾಯಾಪಾಶವಿಚ್ಛೇದಲಕ್ಷಣಂ ವಸ್ತು ಕಿಮುಪಾಸ್ಯಮಿತ್ಯಾಶಂಕಾಯಾಮಾಹ. ವಿಶೇಷಂ ಚ ದರ್ಶಯತಿ ॥ ೧೬ ॥ ಚಕಾರೋಽತ್ರ ನಿಶ್ಚಯಾರ್ಥಃ, ಪಶುರೂಪಬ್ರಹ್ಮವಿಷ್ಣ್ವಾದಿಜೀವಾನಾಂ ಮಧ್ಯೇ ಪಶುಪತೇಶ್ಶಿವಸ್ಯ ಪರಬ್ರಹ್ಮಣಃ ವಿಶೇಷಂ ಚ ಋಗಾದಿವೇದೇಷು ವೇದಾಂತೇಷು ದರ್ಶಯತಿ ದ್ಯೋತಯತಿ. “ಅಂತರಿಚ್ಛಂತಿ ತಂ ಜನೇ ರುದ್ರಂ ಪರೋ ಮನೀಷಯಾ ಗೃಭ್ಣಂತಿ ಜಿಹ್ವಯಾ ಸಸಂ”, “ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ । ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ ॥” ಇತ್ಯಾದಿನಾ ಋಗ್ವೇದೇ, “ಯಾ ತೇ ರುದ್ರ ಶಿವಾ**

ತನೂರಘೋರಾಪಾಪಕಾಶಿನೀ । ತಯಾ ನಾಸ್ತನುವಾ ಶಂತಮಯಾ ಗಿರಿಶಂತಾಭಿಚಾಕಶೀಹಿ ॥ ” ಇತ್ಯಾದಿನಾ ಯಜುರಾಮ್ನಾಯೇ. ತಥಾನ್ಯತ್ರಾಪಿ ದ್ರಷ್ಟವ್ಯಂ. ಕಿಂಚ ತೈತ್ತಿರೀಯೇ “ ದಹರಂ ವಿಪಾಪಂ ” ಇತ್ಯಾದಿನಾ ಮುಮುಕ್ಷೂಣಾಂ ದಹರಪುಂಡರೀಕೇ ಪರಮಾತ್ಮೋಪಾಸನಂ ವಿಧಾಯ, ಮಹೇಶ್ವರಸ್ಯೈವ ತತ್ರೋಪಾಸ್ಯತ್ವಂ ನಿಶ್ಚಿತ್ಯ “ ನ ಕರ್ಮಣಾ ” ಇತ್ಯಾದಿನಾ ದಾರೇಷಣಾದಿಪರಿತ್ಯಾಗಪೂರ್ವಕವಿರಕ್ತಾನಾಂ ತತ್ಪ್ರಾಪ್ತಿಂ ಉಪದಿಶ್ಯ ಸರ್ವೇಷಾಂ ದೇವಾನಾಂ ಮಧ್ಯೇ ಶಿವೋಪಾಸನಾಧಿಕಾರಃ ಕಸ್ಯಾಸ್ತೀತ್ಯಾಕಾಂಕ್ಷಾಯಾಂ “ ಸಹಸ್ರಶೀರ್ಷಂ ದೇವಂ ” ಇತ್ಯಾದಿನಾ ನಾರಾಯಣಂ ಪ್ರಸ್ತುತ್ಯ, “ ತಸ್ಯಾಃ ಶಿಖಾಯಾ ಮಧ್ಯೇ ಪರಮಾತ್ಮಾ ವ್ಯವಸ್ಥಿತಃ ” ಇತ್ಯಂತೇನ ನಾರಾಯಣಹೃತ್ಪುಂಡರೀಕೇ ತ್ರಿಮೂರ್ತ್ಯತೀತಪರಮಾತ್ಮೋಪಾಸಂ ಪ್ರಸಾಧ್ಯ ತತಸ್ತಸ್ಯ ಸರ್ವಗತಸ್ಯ ಶಿವಸ್ಯ ಆದಿತ್ಯಮಂಡಲಾಭಿವ್ಯಕ್ತತ್ವಂ ಪ್ರದರ್ಶ್ಯ “ ನಿಧನಪಯೇ ನಮಃ ಪಾಣಿಮಂತ್ರಂ ಪವಿತ್ರಂ ” ಇತ್ಯಾದಿನಾ ತಸ್ಯ ಸರ್ವಗತ್ವೇನ ಸರ್ವಾತ್ಮಕತ್ವಂ ಪರಿಚ್ಛಿನ್ನತ್ವಂ ಮೂರ್ತಾಮೂರ್ತಲಿಂಗಾತ್ಮಕತ್ವೇನ ಜಗದಭಿವ್ಯಕ್ತತ್ವಂ ಚೋಪದಿಶ್ಯ, ಸದ್ಯೋಜಾತಾದಿಪಂಚಬ್ರಹ್ಮಮಂತ್ರೈಃ ಮೂರ್ತಾಮೂರ್ತಶಿವಸ್ತುತಿಮಭಿಧಾಯ “ ನಮೋ ಹಿರಣ್ಯಬಾಹವೇ ” ಇತ್ಯನೇನ ತಸ್ಯ ಜ್ಯೋತಿರ್ಮಯವಿಗ್ರಹತ್ವಂ ಉಮಾಶಕ್ತಿವಿಶಿಷ್ಟತ್ವೇನ ಸರ್ವೋಪಾಸ್ಯತ್ವಂ ಚ ಪ್ರಕೀರ್ತ್ಯ, “ ಋತಂ ಸತ್ಯಂ ” ಇತ್ಯಾದಿನಾ ತಸ್ಯ ಕೃಷ್ಣಪಿಂಗಳತ್ವಂ ವಿರೂಪಾಕ್ಷತ್ವಂ ವಿಶ್ವರೂಪತ್ವಂ ಚ ಪ್ರಚಕ್ಷ್ಯತೇ. ಕೈವಲ್ಯೇऽಪಿ ಶಿವೋಪಾಸನೇನೈವ ಮುಕ್ತಿರುಪದಿಷ್ಟಾ. ಶಿವಸಂಕಲ್ಪೋಪನಿಷದಿ ಬೋಧಾಯನಸೂತ್ರೇ ಚ “ ಪರಾತ್ಪರತರೋ ಬ್ರಹ್ಮಾ ತತ್ಪರಾತ್ಪರತೋ ಹರಿಃ । ಯತ್ಪರಾತ್ಪರತೋऽಧೀಶಸ್ತನ್ಮೇ ಮನಶ್ಶಿವಸಂಕಲ್ಪಮಸ್ತು ॥ ” ಇತಿ ಮಹೇಶ್ವರಸ್ಯ ಸರ್ವಾಧಿಕತ್ವನಿರ್ದೇಶಾತ್ “ ತದ್ವಿಷ್ಣೋಃ ಪರಮಂ ಪದಂ ಸದಾ ಪಶ್ಯಂತಿ ಸೂರಯಃ ” ಇತ್ಯತ್ರ ವಿಷ್ಣೋಃ ಪರಂ ಕೈಲಾಸಾಖ್ಯಂ ಶಿವಪದಂ ಸೂರಯಃ ವಿದ್ವಾಂಸಃ ಜ್ಞಾನದೃಷ್ಟ್ಯಾ ಸದಾ ಪಶ್ಯಂತಿ ಇತ್ಯುಪದಿಶ್ಯತೇ. ಸ್ಕಾಂದೇ “ ತದ್ವಿಷ್ಣೋಃ ಪರಮಂ ದಿವ್ಯಂ ಪದಂ ಕೈಲಾಸಸಂಜ್ಞಿಕಂ । ಶಿವಕಾರುಣ್ಯಲೇಶೇನ ಸದಾ ಪಶ್ಯಂತಿ ಸೂರಯಃ ॥ ” ಇತಿ. ಅಥರ್ವಣಶಿಖಾಯಾಂ “ ಶಿವ ಏಕೋ ಧ್ಯೇಯಶ್ಶಿವಂಕರಃ ಸರ್ವಮನ್ಯತ್ಪರಿತ್ಯಜ್ಯ ” ಇತ್ಯಾದಿಶ್ರುತಿಶತೇಷು ಸಾಕ್ಷಾಚ್ಛಿವೋಪಾಸಕಾನಾಮೇವ ಮೋಕ್ಷೋಪದೇಶಾತ್ “ ವಾಚಂ ಬ್ರಹ್ಮೇತ್ಯುಪಾಸೀತ ”, “ ಮನೋ ಬ್ರಹ್ಮೇತ್ಯುಪಾಸೀತ ”, “ ನಾರಾಯಣಪರಂ ಬ್ರಹ್ಮ ” ಇತ್ಯಾದಿಶ್ರುತಿಸಿದ್ಧವಾಕ್ಪ್ರಾಣಮನೋನಾರಾಯ

ಣಾದ್ಯುಪಾಸಕಾನಾಂ ಚಿತ್ತಶುದ್ಧಿದ್ವಾರಾ ಪರಂಪರಯಾ ಮುಕ್ತಿರಿತಿ ನಿರ್ಣೀಯತೇ. ತಸ್ಮಾತ್ ಮೂರ್ತಪರಶಿವಬ್ರಹ್ಮೋಪಾಸಕಾನಾಂ ಶರೀರಾವಸಾನೇ ಸುಷುಮ್ನಾನಾಡ್ಯಾ ನಿರುಪಮಾನಸ್ವಪ್ರಕಾಶಾಖಂಡ ತೇಜೋರೂಪಾರ್ಚಿರಾದಿಮಾರ್ಗೇಣಾತಿವಾಹಿಕಾಭಿಧಾನಶಿವಕಿಂಕರಾನುಗ್ರಹೇಣ ಇಂದ್ರಾದಿಲೋಕಾನುಸರಣೇನ ಚಿತ್ಕೈಲಾಸಾಖ್ಯಂ ಪರಮಾನಂದಕಂದಪರಮಪದಂ ಸಂಭವತೀತಿ ರಾದ್ಧಾಂತಃ.

ಇತಿ ಶ್ರೀಕರಭಾಷ್ಯೇ ಚತುರ್ಥಾಧ್ಯಾಯಸ್ಯ ತೃತೀಯಃ ಪಾದಃ.

"ನಾರಾಯಣನೇ ಪರತತ್ತ್ವ ಮತ್ತು ಪರಬ್ರಹ್ಮ" ಎಂಬ ಶ್ರುತಿಗಳಲ್ಲಿ ವಿಷ್ಣ್ವಾದಿ ಅನೇಕ ದೇವತೆಗಳ ಉಪಾಸನವನ್ನು ಹೇಳಿರುವುದರಿಂದ ಮುಮುಕ್ಷುಗಳಿಗೆ ಮತ್ತೆ ಹುಟ್ಟದಂತಾಗಲು ಮಾಯಾಪಾಶವನ್ನು ತೊಲಗಿಸಲಿಕ್ಕಾಗಿ ದಹರಾದಿವಿದ್ಯಗಳೆಲ್ಲದರಲ್ಲೂ ಯಾವ ವಸ್ತುವನ್ನು ಉಪಾಸನಮಾಡಬೇಕು? ಎಂದಾಶಂಕಿಸಿ ನಿರಾಕರಿಸುತ್ತಾನೆ. ಚಕಾರವು ನಿಶ್ಚಯವನ್ನು ತಿಳಿಸುತ್ತದೆ. ಋಗಾದಿ ವೇದಗಳು ಮತ್ತು ವೇದಾಂತಗಳು ಪಶುವೆನಿಸಿದ ಬ್ರಹ್ಮ ವಿಷ್ಣು ಮೊದಲಾದ ಜೀವರ ಮಧ್ಯದಲ್ಲಿ ಪರಶಿವಬ್ರಹ್ಮದ ವೈಶಿಷ್ಟ್ಯವನ್ನು ತಿಳಿಸಿವೆ. "ಯಾರು ಹೃದಯದಲ್ಲಿ ರುದ್ರನನ್ನು ನೆನೆಯುವುದಿಲ್ಲವೋ ಅವರು ವಿವೇಕಶೂನ್ಯರಾಗಿ ತಮ್ಮ ನಾಲಿಗೆಯಿಂದ ಅಮೇಧ್ಯವನ್ನು ನೆಕ್ಕುತ್ತಾರೆ", "ಲಿಂಗದೇವನನ್ನು ಧರಿಸಿರುವ ಈ ಹಸ್ತವೂ ಪೂಜ್ಯವೆನಿಸಿದೆ. ಇದು ಶಿವನ ನಿತ್ಯಸ್ಪರ್ಶದಿಂದ ಸರ್ವಾಧಿವ್ಯಾಧಿನಿವಾರಕವೆನಿಸಿದೆ." ಎಂದು ಋಗ್ವೇದದಲ್ಲೂ, "ರುದ್ರನೇ ಯಾವ ನಿನ್ನ ಮಂಗಳಕರವಾದ ಶರೀರವು ಶಾಂತವೂ ಸರ್ವಪಾಪನಿವಾರಕವೂ ಆಗಿದೆಯೋ ಆ ಈ ಶಾಂತವಾದ ಶರೀರದಿಂದ ನೀನು ನಮ್ಮ ಎದುರಿಗೆ ಪ್ರಕಾಶನಾಗಬೇಕು," ಎಂದು ಯಜುರ್ವೇದದಲ್ಲಿಯೂ, ಹೀಗೆಯೇ ಅನೇಕಕಡೆಗಳಲ್ಲೂ ಹೇಳಿದೆ. ತೈತ್ತಿರೀಯದಲ್ಲಿ "ದಹರಂ ವಿಪಾಪಂ" ಎಂಬಲ್ಲಿ ಮುಮುಕ್ಷುಗಳಿಗೆ ದಹರಕಮಲದಲ್ಲಿ ಪರಮಾತ್ಮನ ಉಪಾಸನವನ್ನು ತಿಳಿಸಿ, "ಅಲ್ಲಿ ಮಹೇಶ್ವರನೇ ಉಪಾಸ್ಯನೆಂದು ನಿಶ್ಚಯಿಸಿ "ನ ಕರ್ಮಣಾ" ಎಂಬಲ್ಲಿ ಈಷಣತ್ರಯವನ್ನು ತೊರೆದವರಿಗೆ ಮಾತ್ರವೇ ಅವನು ದೊರಕುವನೆಂದು ಹೇಳಿ, ಎಲ್ಲಾ ದೇವತೆಗಳೊಳಗೆ ಯಾರು ಶಿವನ ಉಪಾಸನೆಗೆ ಮುಖ್ಯಾಧಿಕಾರಿ ಎಂದು ಪ್ರಶ್ನೆಮಾಡಿ, "ಸಹಸ್ರಶೀರ್ಷಂ ದೇವಂ" ಎಂಬಲ್ಲಿ ನಾರಾಯಣನನ್ನು ಪ್ರಶಂಸಿಸಿ "ಪದ್ಮಕೋಶಪ್ರತೀಕಾಶಂ" ಎಂದಾರಂಭಿಸಿ, ನಾರಾಯಣನ ಹೃದಯಕಮಲದಲ್ಲಿ ತ್ರಿಮೂರ್ತ್ಯತೀತನಾದ ಪರಮಾತ್ಮನ ಉಪಾಸನವನ್ನು ತಿಳಿಸಿ, ಆಮೇಲೆ "ಈ ಆದಿತ್ಯನೇ ಈ ಮಂಡಲದಲ್ಲಿ ಶೋಭಿಸುತ್ತಾನೆ" ಎಂಬಲ್ಲಿ ಸರ್ವಗತನಾದ ಶಿವನೇ ಆದಿತ್ಯಮಂಡಲದಲ್ಲಿ ಪ್ರಕಾಶಿಸುವನೆಂದು ಹೇಳಿ, "ನಿಧನಪತಯೇ ನಮಃ—ಪಾಣಿಮಂತ್ರಂ ಪವಿತ್ರಂ" ಎಂಬಲ್ಲಿ ಅವನು ಸರ್ವವ್ಯಾಪಕನಾದ್ದರಿಂದ ಸರ್ವಾತ್ಮಕನೂ ಪರಿಚ್ಛಿನ್ನನೂ ಹಾಗೆಯೇ ಮೂರ್ತಾಮೂರ್ತನೆನಿಸಿದ್ದರಿಂದ ಜಗದ್ರೂಪನೂ ಆಗಿ ಶೋಭಿಸುತ್ತಿರುವನೆಂದು ಹೇಳಿ, ಸದ್ಯೋಜಾತಾದಿಪಂಚಬ್ರಹ್ಮಮಂತ್ರಗ

ಳಿಂದ ಮೂರ್ತಾಮೂರ್ತಶಿವನನ್ನು ಸ್ತುತಿಸಿ, "ನಮೋ ಹಿರಣ್ಯಬಾಹವೇ" ಎಂಬಲ್ಲಿ ಅವನನ್ನು ದಿವ್ಯಮಂಗಳವಿಗ್ರಹಧಾರಿ ಎಂದೂ, ಮಾಯಾಶಕ್ತಿವಿಶಿಷ್ಟನಾದ್ದರಿಂದ ಎಲ್ಲರಿಗೂ ಉಪಾಸ್ಯನೆಂದೂ ಹೇಳಿ, "ಋತಂ ಸತ್ಯಂ" ಎಂಬಲ್ಲಿ ಅವನನ್ನೇ ಕೃಷ್ಣಪಿಂಗಳ, ವಿರೂಪಾಕ್ಷ, ವಿಶ್ವರೂಪನೆಂದು ತಿಳಿಸಲಾಗಿದೆ. ಕೈವಲ್ಯದಲ್ಲೂ ಹೀಗೆಯೇ ಶಿವನಿಗೆ ಮೂರ್ತಾಮೂರ್ತಸ್ಥಿತಿಯನ್ನು ತಿಳಿಸಿ "ಎಲ್ಲರೊಳಗೆ ಶಿವನನ್ನೂ ಆ ಶಿವನಲ್ಲಿ ಎಲ್ಲಾ ಜೀವರನ್ನೂ ಕಾಣುವುದರಿಂದಲೇ ಯೋಗಿಯು ಅಮೂರ್ತಶಿವನಲ್ಲಿ ಸೇರುತ್ತಾನೆ" ಎಂಬಲ್ಲಿ ಶಿವೋಪಾಸಕನಿಗೇ ಮುಕ್ತಿಯನ್ನು ಹೇಳಲಾಗಿದೆ. ಶಿವಸಂಕಲ್ಪದಲ್ಲೂ ಬೋಧಾಯನಸೂತ್ರದಲ್ಲೂ "ಬ್ರಹ್ಮ ವಿಷ್ಣುಗಳಿಗಿಂತಲೂ ಉತ್ಕೃಷ್ಟವೆನಿಸಿದ ಈಶ್ವರನಲ್ಲಿ ನನ್ನ ಮನಸ್ಸು ನೆಲಸಲಿ" ಎಂದು ಮಹೇಶ್ವರನ ಆಧಿಕ್ಯವನ್ನು ತಿಳಿಸಲಾಗಿದೆ. "ಇದೇ ವಿಷ್ಣುವಿನ ಪರಮಪದ. ಇದನ್ನು ಜ್ಞಾನಿಗಳು ಯಾವಾಗಲೂ ನೋಡುತ್ತಾರೆ" ಎಂಬಲ್ಲಿ ವಿಷ್ಣುವಿಗಿಂತಲೂ ಆಚೆಗಿರುವ ಕೈಲಾಸವೆಂಬ ಶಿವಪದವನ್ನು ಯೋಗಿಗಳು ಜ್ಞಾನದೃಷ್ಟಿಯಿಂದ ಯಾವಾಗಲೂ ಕಾಣುವರು ಎಂದು ಹೇಳಲಾಗಿದೆ. ಸ್ಕಾಂದದಲ್ಲಿ "ವಿಷ್ಣುವಿಗಿಂತ ಆಚೆಗೆ ನೆಲಸಿರುವ ಕೈಲಾಸವೆಂಬ ದಿವ್ಯಸ್ಥಾನವನ್ನು ಜ್ಞಾನಿಗಳು ಶಿವಾನುಗ್ರಹದಿಂದ ಕಾಣುತ್ತಾರೆ" ಎಂದೂ, ಮಾಂಡೂಕ್ಯದಲ್ಲಿ ಪ್ರಪಂಚಕ್ಕಾಶ್ರಯವಾದ ಶಿವನು ತ್ರಿಮೂರ್ತ್ಯತೀತನು" ಎಂದೂ, ಶ್ವೇತಾಶ್ವತರದಲ್ಲಿ "ರುದ್ರನು ವಿಶ್ವಾಧಿಕನು" ಎಂದೂ ಹೀಗೆಯೇ ಅನೇಕ ಶ್ರುತಿಗಳಲ್ಲೂ ಶಿವೋಪಾಸಕರಿಗೇ ಮೋಕ್ಷವೆಂದು ತಿಳಿಸಲಾಗಿದೆ. "ವಾಕ್ಕನ್ನು ಬ್ರಹ್ಮವೆಂದು ಉಪಾಸನಮಾಡು" ಎಂದು ಮುಂತಾದ ಶ್ರುತಿಗಳಲ್ಲಿ ಹೇಳಿರುವಂತೆ ವಾಕ್, ಪ್ರಾಣ, ಮನಸ್ಸು, ನಾರಾಯಣ ಮೊದಲಾದವರನ್ನು ಉಪಾಸನಮಾಡುವವರಿಗೆ ಚಿತ್ತಶುದ್ಧಿಯ ಮೂಲಕ ವೈದಿಕರಿಗೆ ಪರಂಪರೆಯಿಂದ ಮುಕ್ತಿಯು ದೊರಕುವುದೆಂದು ನಿರ್ಣಯಿಸಲಾಗಿದೆ. ಆದ್ದರಿಂದ ಪರಶಿವನ ದಿವ್ಯ ಮೂರ್ತರೂಪವನ್ನು ಉಪಾಸನಮಾಡುವವನಿಗೆ ಶರೀರವನ್ನು ತೊರೆದಮೇಲೆ ಸುಷುಮ್ನಾನಾಡಿಯ ಅಖಂಡ ತೇಜೋರೂಪವಾದ ಅರ್ಚಿಮಾರ್ಗದಿಂದ ಆತಿವಾಹಿಕರೆಂಬ ಶಿವಕಿಂಕರರೊಡನೆ ಇಂದ್ರ ಬ್ರಹ್ಮ ವಿಷ್ಣು ಇವರ ಲೋಕಗಳಮೂಲಕ ಪರಮಾನಂದಮೂಲವೆನಿಸಿದ ಚಿತ್ಕೈಲಾಸವೆಂಬ ಬ್ರಹ್ಮಸ್ಥಾನವು ದೊರಕುತ್ತದೆ.

---

## ಅಥ ಶ್ರೀಕರಭಾಷ್ಯೇ ಚತುರ್ಥಾಧ್ಯಾಯಸ್ಯ ಚತುರ್ಥಃ ಪಾದಃ

**ಪೂರ್ವತ್ರ ಇಂದ್ರಾದಿನಾನಾವಿಧದೇವತೋಪಾಸಕಾನಾಂ ಅಧಿಕಾರತಾರತಮ್ಯೇನ, ನಿಷ್ಕಾಮಾನಾಂ ಚ ಕಾಲವಿಳಂಬೇನ ಶಿವೋಪಾಸನದ್ವಾರಾ ಪುನರಾವೃತ್ತಿರಹಿತಪಾಶನಿವೃತ್ತಿಪೂರ್ವಕಶಿವತತ್ತ್ವಪ್ರಾಪ್ತಿಂ ಪ್ರದರ್ಶ್ಯ ಇದಾನೀಂ ಮುಮುಕ್ಷೂಣಾಂ ಮುಕ್ತಿಸ್ವರೂಪಪ್ರಕಾರಶ್ಚಿಂತ್ಯತೇ. ನನು ಅನಾತ್ಮರೂಪದೇಹೇಂದ್ರಿಯಾದಿಷ್ವಾತ್ಮಭ್ರಾಂತಿಯು**

ಕ್ತಾನಾಂ ಸ್ವಾಭಿನ್ನಶಿವೋಪಾಸಕಾನಾಂ ಅರ್ಚಿರಾದಿಮಾರ್ಗೇಣೇಂದ್ರಾದಿ ಲೋಕಸ್ಯೋಪಾನದ್ವಾರಾ ಶಿವಲೋಕಪ್ರಾಪ್ತಿರಸ್ತು. ದಶವಿಧವಿವೇಕ ಸಂಧಾನೇನ ಭೂತಪಂಚಕಕೋಶಪಂಚಕತನುತ್ರಯವಿಲಕ್ಷಣಸ್ವಸ್ವ ರೂಪಜ್ಞಾನನಿಷ್ಠಾನಾಂ ತದ್ ಜ್ಞಾನಮೇವ ತೇಷಾಂ ಜನನಮರಣಪ್ರವಾ ಹೋತ್ತರಣರೂಪಮೋಕ್ಷಫಲಮಿತಿ ನಿರ್ದಿಷ್ಟಂ. ಅಥವಾ ಮಹಾ ಕೈಲಾಸವೈಕುಂಠಾದಿದಿವ್ಯಸ್ಥಾನೇಷು ಸ್ಥಿತಶಿವಕೇಶವಾದ್ಯುಪಾಸಕಾನಾಂ ಮುಕ್ತದಶಾಯಾಂ ತದುಪಾಸನಮಹಿಮ್ನಾ ತಾದೃಶಸ್ವರೂಪಪ್ರಾ ಪ್ತಿರ್ವಾ ಉತ ತದ್ಗತದಿವ್ಯಸೂರಿಭಿಸ್ಸಹ ಶೇಷತ್ವಕೈಂಕರ್ಯಪಾರ ತಂತ್ರ್ಯಾದಿಭಾವೇನ ತತ್ಸಾಮೀಪ್ಯವರ್ತಿತ್ವಂ ವಾ ಮುಕ್ತಿರಿತ್ಯಾಕಾಂ ಕ್ಷಾಯಾಂ ಭಗವತಾ ಬಾದರಾಯಣೇನ ಸ್ವಾಭಿಪ್ರಾಯಂ ಮುಖ್ಯ ವೈದಿಕಸಿದ್ಧಾಂತಂ ಮುಮುಕ್ಷೂಣಾಂ ದರ್ಶಯತಿ. ಸಂಪದ್ಯಾವಿರ್ಭೂ ತಾಧಿಕರಣಂ ॥ ೧ ॥ ಸಂಪದ್ಯಾವಿರ್ಭಾವಸ್ಸ್ವೇನ ಶಬ್ದಾತ್ ॥ ೧ ॥ " ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚಾಮೂರ್ತಂ ಚ " ಇತಿ ಶ್ರುತಿದರ್ಶನಾತ್ ಮೂರ್ತಶಿವೋಪಾಸಕಾನಾಂ ಅಮೂರ್ತಶಿವೋ ಪಾಸಕಾನಾಂ ಚ ಕ್ರಮಮುಕ್ತಿಸದ್ಯೋಮುಕ್ತಿಭೇದೇನ ಚರಮಮೋಕ್ಷ ದಶಾಯಾಂ ಜ್ಯೋತಿರ್ಮಯಶಿವತತ್ತ್ವಂ ಸಂಪದ್ಯ ಪ್ರಾಪ್ಯ ಸ್ವೇನ ಸರ್ವಜ್ಞಸರ್ವಶಕ್ತಸತ್ಯಜ್ಞಾನಾನಂದಲಕ್ಷಣಲಕ್ಷಿತನಿತ್ಯಶುದ್ಧಬುದ್ಧಶಿವ ತತ್ತ್ವಸ್ವರೂಪೇಣ ಆವಿರ್ಭಾವಃ ಅಭಿವ್ಯಕ್ತಸ್ವರೂಪವಾನ್ ಭವತಿ. ಯಥಾ ತಾಮ್ರಾದಿಕಂ ರಸವೇಧಯಾ ಹಿರಣ್ಯಂ ಭವತಿ ತಥಾ ದಹರಾದಿ ಬ್ರಹ್ಮವಿದ್ಯೋಪಾಸನಮಹಿಮ್ನಾ ಶಾರೀರೋ ಜೀವಸ್ಸಾಕ್ಷಾತ್ ಸದಾ ಶಿವರೂಪೋ ಭವತಿ. ಕುತಃ? ಶಬ್ದಾತ್. "ಏಷ ಸಂಪ್ರಸಾದೋಽಸ್ಮಾತ್ ಶರೀರಾತ್ಸಮುತ್ಥಾಯ"ಇತ್ಯಾದಿಶ್ರುತಿದರ್ಶನಾತ್ ಇತಿ ಸೂಕ್ತಾರ್ಥಃ. ಏವಮೇವ " ಏಷ ಸಂಪ್ರಸಾದೋಽಸ್ಮಾಚ್ಛರೀರಾತ್ಸಮುತ್ಥಾಯ ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ " ಇತ್ಯಾಮ್ನಾ ಯತೇ. ಕಿಮಸ್ಮಾತ್ ಶರೀರಾತ್ ಸಮುತ್ಥಾಯ ಪರಂಜ್ಯೋತಿರುಪ ಸಂಪನ್ನಸ್ಯ ದೇವಾದಿರೂಪವತ್ಸಾಧ್ಯೇನ ರೂಪೇಣ ಸಂಬಂಧೋಽನೇನ ವಾಕ್ಯೇನ ಪ್ರತಿಪಾದ್ಯತೇ. ಉತ ಸ್ವಾಭಾವಿಕಸ್ಯ ಸ್ವರೂಪಸ್ಯಾವಿರ್ಭಾವ ಏವ ಇತಿ ಸಂಶಯೇ ದಶವಿಧವಿವೇಕಸಂಧಾನಾದಿವತ್ ಸ್ವಾಭಾವಿಕಸ್ವರೂ ಪಸ್ಯಾವಿರ್ಭಾವೋ ಮೋಕ್ಷ ಇತಿ ನಿಶ್ಚೀಯತೇ. ಆಗಂತುಕಪರಿಗ್ರಹತ್ವೇ ಸ್ವೇನ ರೂಪೇಣೇತಿ ವಿಶೇಷಣಮನರ್ಥಕಂ ಸ್ಯಾತ್. ತಸ್ಮಾದವಿಶೇ ಷೇಽಪಿ ತಸ್ಯ ಸ್ವಕೀಯಸ್ವರೂಪತ್ವಸಿದ್ಧಿಃ. ಜಲೋಷ್ಣಾದಿವಜ್ಜೀವಬಹು ತ್ವಸ್ಯಾಗಂತುಕತ್ವೇನ ತದ್ವದನಿತ್ಯತ್ವಪ್ರಸಂಗೋ ದುರ್ನಿವಾರಃ. ಅಥವಾ

" ದ್ವಾ ಸುಪರ್ಣಾ " ಇತ್ಯಾದಿಬಹುಶ್ರುತಿಷು ಜೀವಬ್ರಹ್ಮಣೋಃ ಪರಸ್ಪರ ವಿಲಕ್ಷಣತ್ವೇನ ಭೇದವ್ಯವಸ್ಥಾಪನಾತ್, ಸ್ವಾಭಾವಿಕಭೇದಸ್ಯ ನಿವೃತ್ತ್ಯಯೋಗಾಚ್ಚ ಪರಲೋಕೇ ತದುಪಾಸ್ಯಪರಮೇಶ್ವರೇಣ ಸಹ ಶೇಷತ್ವ ಕೈಂಕರ್ಯಪಾರತಂತ್ರ್ಯವಿಧಾನೇನ ಸ್ಥಿತಿತ್ವಂ? ಉತ ತತ್ಸಮಾನ ರೂಪೇಣ ಸ್ವಾತಂತ್ರ್ಯಭಾವೇನ ಸ್ಥಿತಿರ್ವಾ ಸ್ಯಾತ್. ಅತೋ ಜೀವ ಬ್ರಹ್ಮಣೋಃ ಸಂಸಾರದಶಾಯಾಂ ಪಾರಮಾರ್ಥಿಕಭಿನ್ನತ್ವಂ ಮುಕ್ತ ದಶಾಯಾಂ ತದ್ವತ್ಪಾರಮಾರ್ಥಿಕಾಭೇದತ್ವಂ ಚ ಸಂಭವತೀತಿ ವಾದಸ್ತು ದ್ವೈತವಿಶಿಷ್ಟಸಾಂಖ್ಯಯೋಗನ್ಯಾಯವೈಶೇಷಿಕಾದ್ವೈತಾದಿಸರ್ವಮತ ವಿರುದ್ಧಪ್ರಸಂಗಾತ್ ಅಸಮಂಜಸಮಿತಿ ಪ್ರಾಪ್ತೇ ಪ್ರಚಕ್ಷ್ಮಹೇ ಸಂಪ ದ್ಯಾವಿರ್ಭಾವ ಇತಿ. ಅಯಂ ಪ್ರತ್ಯಗಾತ್ಮಾ ಪ್ರಾರಬ್ಧಸ್ಯಾವಸಾನೇ ಪರಂಜ್ಯೋತಿರುಪಸಂಪದ್ಯ ಇಮಂ ದಶಾವಿಶೇಷಮಾಪದ್ಯತೇ. ಭ್ರಮರ ಕೀಟನ್ಯಾಯವತ್ ಜೀವಭಾವನಿವೃತ್ತಿಪೂರ್ವಕಶಿವತತ್ತ್ವಪ್ರಾಪ್ತಿದಶಾ ವಿಶೇಷಃ ನ ಪೂರ್ವಪ್ರಕಾರೋ ರೂಪಃ. ಕುತಃ? ಸ್ವೇನ ಶಬ್ದಾತ್. " ಸ್ವೇನ ರೂಪೇಣ " ಇತಿ ವಿಶೇಷಣೇನ ನದೀಸಮುದ್ರವತ್ ಸ್ವರೂಪ ಸ್ವರೂಪಯೋರೈಕ್ಯಮುಪದಿಶ್ಯತೇ. ಏತೇನ ರಜ್ಜುಸರ್ಪವತ್ ಜೀವಾಳೀ ಕತ್ವವಾದಶ್ಚ ಘಟಪಟವತ್ ಅಂಗಾಂಗಿವತ್ ಸದಾ ಜೀವಬ್ರಹ್ಮಣೋಃ ಭೇದಮಾತ್ರತ್ವಸ್ವೀಕಾರಾತ್ ಅಸಂಯುಕ್ತಸಂಯುಕ್ತಭೇದವಾದಶ್ಚ ನಿರಾಕೃತಃ, ಬ್ರಹ್ಮವಿದ್ಯಾಮಹಿಮ್ನಾ ಜೀವಸ್ಯ ಸ್ವಾಭಾವಿಕಾವಿದ್ಯಾ ನಿವೃತ್ತಿಪೂರ್ವಕಶಿವತ್ವಪ್ರಾಪ್ತಿವಾದೋ ಯುಕ್ತಃ. ಅನ್ಯಥಾ ಹ್ಯಪುರು ಷಾರ್ಥಾವಬೋಧಿತ್ವಂ ಮೋಕ್ಷಶಾಸ್ತ್ರಸ್ಯ ಸ್ಯಾತ್. ಸ್ವರೂಪಸ್ಯ ಸ್ವತಃ ಪುರುಷಾರ್ಥತ್ವಾದರ್ಶನಾತ್. ನಹಿ ಸುಷುಪ್ತೌ ದೇಹೇಂದ್ರಿಯವ್ಯಾಪಾ ರೇಷೂಪರತೇಷು ಕೇವಲಸ್ಯಾತ್ಮಸ್ವರೂಪಸ್ಯ ಪುರುಷಾರ್ಥಸಂಬಂಧೋ ದೃಶ್ಯತೇ. ನಚ ದುಃಖನಿವೃತ್ತಿಮಾತ್ರಂ ಪರಂಜ್ಯೋತಿರುಪಸಂಪನ್ನಸ್ಯ ಪುರುಷಾರ್ಥಃ, ಯೇನ ಸ್ವರೂಪಾವಿರ್ಭಾವ ಏವ ಮೋಕ್ಷ ಇತ್ಯುಚ್ಯೇತ. " ಸ ಏಕೋ ಬ್ರಹ್ಮಣ ಆನಂದಃ ಶ್ರೋತ್ರಿಯಸ್ಯ ಚಾಕಾಮಹತಸ್ಯ ", " ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ " ಇತ್ಯಾದಿಭ್ಯೋ ಜೀವನ್ಮು ಕ್ತಸ್ಯ ಸುಖಾನಂತ್ಯಶ್ರವಣಾತ್. ನಚ ಅಪರಿಚ್ಛಿನ್ನಾನಂದರೂಪಚೈತನ್ಯ ಮೇವಾಸ್ಯ ಸ್ವರೂಪಂ. ತಸ್ಯ ಸಂಸಾರದಶಾಯಾಂ ಅವಿದ್ಯಾತಿರೋ ಹಿತಂ ಪರಂಜ್ಯೋತಿರುಪಸಂಪನ್ನಸ್ಯಾವಿರ್ಭವತೀತಿ ವಕ್ತುಂ ಶಕ್ಯಂ, ಜ್ಞಾನಸ್ವರೂಪಸ್ಯ ತಿರೋಧಾನಾಸಂಭವಾತ್. ಪ್ರಕಾಶಪರ್ಯಾಯಸ್ಯ ಜ್ಞಾನಸ್ಯ ತಿರೋಧಾನಂ ತದ್ವಿನಾಶ ಏವೇತಿ ಹಿ ಪೂರ್ವಮೇವೋಕ್ತಂ. ನಚ ಪ್ರಕಾಶಮಾತ್ರಸ್ಯಾನಂದತಾ ಸಂಭವತಿ. ಸುಖಸ್ವರೂಪತ್ವಂ ಹಿ

ಆನಂದಸ್ವರೂಪತಾ. ಸುಖಸ್ವರೂಪತ್ವಂ ಚಾತ್ಮನೋಽನುಕೂಲತ್ವಂ. ಪ್ರಕಾಶಮಾತ್ರಾತ್ಮವಾದಿನಃ ತಸ್ಯ ಪ್ರಕಾಶೋಽನುಕೂಲವೇದನೀಯೋ ಭವೇದಿತಿ ಪ್ರಕಾಶಮಾತ್ರಾತ್ಮವಾದಿನಃ ಕಥಂಚಿದಸ್ಯಾನಂದಸ್ವರೂಪತಾ ದುರುಪಪಾದ್ಯಾ. ಸ್ವರೂಪಾಪತ್ತಿಮಾತ್ರೇ ಚ ಸಾಧ್ಯೇ ಸ್ವರೂಪಸ್ಯ ನಿತ್ಯನಿಷ್ಪನ್ನತ್ವಾದುಪಪನ್ನಸ್ಯ "ಸ್ವೇನ ರೂಪೇಣಾಭಿನಿಷ್ಪದ್ಯತೇ" ಇತಿ ವಚನಮನರ್ಥಕಂ ಸ್ಯಾತ್. ಅತಃ ಪೂರ್ವೇಣೋಪಾಸನಾಸಾಧ್ಯೇನ ರೂಪೇಣ ಸಂಬಧ್ಯತೇ. ಏವಂ ಚ "ಅಭಿನಿಷ್ಪದ್ಯತೇ" ಇತಿ ವಚನಂ ಮುಖ್ಯಾರ್ಥಮೇವ ಭವತಿ. "ಸ್ವೇನ ರೂಪೇಣ" ಇತ್ಯಪ್ಯಾನಂದೈಕಾನಂತ್ಯೇನ ಸ್ವಾಸಾಧಾರಣೇನ "ಅಭಿನಿಷ್ಪದ್ಯತೇ" ಇತ್ಯನೇನ ಸಂಗಚ್ಛತೇ.

ಇಂದ್ರ ಬ್ರಹ್ಮ ವಿಷ್ಣು ಮೊದಲಾದ ಅನೇಕ ದೇವತೆಗಳನ್ನು ಉಪಾಸನಮಾಡಿದವರಿಗೆ ಅವರವರ ಯೋಗ್ಯತೆಯಂತೆಯೂ ಅವರೇ ನಿಷ್ಕಾಮಬುದ್ಧಿಯಿಂದ ಶಿವನನ್ನು ಉಪಾಸನಮಾಡಿದರೆ ಕೊಂಚ ತಡವಾಗಿಯೂ ಮತ್ತೆ ಹುಟ್ಟದಂತಾಗಲು ಪಾಶವು ತೊಲಗುವಮೂಲಕ ಶಿವಭಾವವು ದೊರಕುವುದೆಂದು ಹಿಂದೆ ತಿಳಿಸಿದೆ. ಈಗ ಮುಮುಕ್ಷುಗಳಿಗೆ ದೊರಕುವ ಮುಕ್ತಿಯ ಸ್ವರೂಪವನ್ನು ವಿಚಾರಮಾಡಲಾಗುವುದು. ಆತ್ಮವಲ್ಲದ ದೇಹ ಇಂದ್ರಿಯ ಮೊದಲಾದವುಗಳಲ್ಲಿ ಆತ್ಮವೆಂದು ಭ್ರಮಿಸದೆ ತನ್ನನ್ನೇ ಶಿವನೆಂದು ಭಾವಿಸಿ ಉಪಾಸನಮಾಡುವವರಿಗೆ ಅರ್ಚಿರಾದಿಮಾರ್ಗದಿಂದ ಇಂದ್ರಾದಿಲೋಕಗಳ ಮೂಲಕ ಶಿವಲೋಕವು ದೊರಕಲಿ. ತಾನೇ ಹತ್ತನೆಯವನೆಂದು ಎಣಿಕೆಯಿಂದ ತಿಳಿಯುವಂತೆ ತನ್ನನ್ನು ಐದು ಭೂತಗಳಿಗೂ ಐದು ಕೋಶಗಳಿಗೂ ಮೂರು ದೇಹಗಳಿಗೂ ಬೇರೆಯೆಂದು ತಿಳಿದವರಿಗೆ ಆ ಜ್ಞಾನವೇ ಅವರನ್ನು ಜನನಮರಣಗಳ ಪ್ರವಾಹದಿಂದ ಮೇಲಕ್ಕೆ ಎತ್ತಬಲ್ಲದೆಂದು ಹೇಳಲಾಗಿದೆ. ಹೀಗೆ ಸ್ವಸ್ವರೂಪಜ್ಞಾನವೇ ಮುಕ್ತಿಯೆ? ಅಥವಾ ಮಹಾಕೈಲಾಸ ವೈಕುಂಠ ಮೊದಲಾದ ದಿವ್ಯಸ್ಥಾನಗಳಲ್ಲಿರುವ ಶಿವಭಕ್ತರಿಗೂ ವಿಷ್ಣುಭಕ್ತರಿಗೂ ಮುಕ್ತದಶೆಯಲ್ಲಿ ಪರಮಾತ್ಮನ ಉಪಾಸನದಿಂದಲೇ ಆ ಸ್ವರೂಪವನ್ನು ಪಡೆಯುವುದೆ ಮುಕ್ತಿಯೆ? ಅಥವಾ ಅಲ್ಲಿನ ನಿತ್ಯಜ್ಞಾನಿಗಳೊಡನೆ ಪರಮಾತ್ಮನಿಗೆ ಸೇವೆಮಾಡುತ್ತಿರುವುದೇ ಮುಕ್ತಿಯೆ? ಅಥವಾ ಪರಮಾತ್ಮನ ಸಮೀಪದಲ್ಲಿರುವುದೇ ಮುಕ್ತಿಯೆ? ಎಂದು ಆಶಂಕಿಸಿ ಪೂಜ್ಯ ಬಾದರಾಯಣರು ತಮ್ಮ ಅಭಿಪ್ರಾಯವನ್ನು ಮುಖ್ಯ ಸಿದ್ಧಾಂತವೆಂದು ಈ ಪಾದದಲ್ಲಿ ತಿಳಿಸುತ್ತಾರೆ. ಪರಶಿವಬ್ರಹ್ಮಕ್ಕೆ ಮೂರ್ತ ಅಮೂರ್ತವೆಂದು ಎರಡು ಅವಸ್ಥೆಗಳನ್ನು ಶ್ರುತಿಯು ತಿಳಿಸಿದೆ. ಮೂರ್ತ ಶಿವೋಪಾಸಕರಿಗೆ ಕ್ರಮಮುಕ್ತಿಯೂ ಅಮೂರ್ತ ಶಿವೋಪಾಸಕರಿಗೆ ಸದ್ಯೋಮುಕ್ತಿಯೂ ದೊರಕುವುದರಿಂದ ಇಂತಹ ಮುಕ್ತನು ಈ ಸ್ಥಿತಿಯಲ್ಲಿ ಜ್ಯೋತಿರ್ಮಯವಾದ ಶಿವತತ್ತ್ವವನ್ನು ಹೊಂದಿ ಸರ್ವಜ್ಞನೂ ಸರ್ವಶಕ್ತನೂ ಸತ್ಯಜ್ಞಾನಾನಂದನೂ ನಿತ್ಯ ಶುದ್ಧಬುದ್ಧನೂ ಆಗುತ್ತಾನೆ. ತಾಮ್ರವು ರಸದ ಸಂಪರ್ಕದಿಂದ ಹಿರಣ್ಯವಾಗುವಂತೆ ದಹರಾದಿ

ವಿದ್ಯೆಯಪ್ರಕಾರ ಉಪಾಸನಮಾಡುತ್ತ ಜೀವನು ಸಾಕ್ಷಾತ್ ಸದಾಶಿವನೇ ಆಗು ತ್ತಾನೆ. ಈ ಅಂಶವನ್ನು "ಈ ಜೀವನು ಶರೀರದಿಂದ ಹೊರಟು ಪರಂಜ್ಯೋತಿ ಯಲ್ಲಿ ಸೇರಿ ತನ್ನ ವಾಸ್ತವಸ್ವರೂಪದಿಂದ ಶೋಭಿಸುತ್ತಾನೆ" ಎಂಬ ಶ್ರುತಿಯು ಸ್ಪಷ್ಟವಾಗಿ ತೋರಿಸಿದೆ. ಇಲ್ಲಿ ಜೀವನಿಗೆ ಹೀಗೆ ಹೊಸದಾದ ರೂಪವೇ ಬರುವುದೇ? ಅಥವಾ ಅವನಿಗೆ ತನ್ನ ಸ್ವಾಭಾವಿಕವಾದ ಸ್ವರೂಪವು ಹೊರಹೊಮ್ಮುವುದೆ? ಎಂದು ಸಂಶಯಬಂದರೆ ತನ್ನನ್ನು ಬಿಟ್ಟು ಎಣಿಕೆಮಾಡಿದವನಿಗೆ ತಾನೇ ಹತ್ತನೆಯವ ನೆಂಬ ವಿವೇಕಬರುವಂತೆ ತನಗೆ ತನ್ನ ಸ್ವಾಭಾವಿಕವಾದ ಸ್ವರೂಪದ ಆವಿರ್ಭಾವವೇ ಮೋಕ್ಷವೆಂದು ನಿಶ್ಚಯಿಸಲಾಗಿದೆ. ಹೊಸದೊಂದು ರೂಪವು ಅವನಿಗೆ ಬರುವು ದೆಂದು ಹೇಳುವುದಾದರೆ ಸ್ವೇನ ಎಂಬ ವಿಶೇಷಣವು ವ್ಯರ್ಥವಾದೀತು. ಹೀಗೆ ಏನೊಂದು ವಿಶೇಷಣವಿಲ್ಲದಿದ್ದರೂ ಅವನಿಗೆ ತನ್ನ ಸ್ವರೂಪವೇ ಅಭಿವ್ಯಕ್ತವಾಗುತ್ತದೆ. ನೀರಿನಲ್ಲಿ ಉಷ್ಣವಿಲ್ಲದಿದ್ದರೂ ಅಗ್ನಿಸಂಪರ್ಕದಿಂದ ಅಲ್ಲಿ ಅದು ಕಾಣುವಂತೆ ಜೀವನಿಗೆ ಬ್ರಹ್ಮಭಾವವು ಆಗಂತುಕವಾಗಿ ಬಂದರೂ ಅದು ಅನಿತ್ಯವೆನಿಸಬೇಕಾದೀತು. ಅಥವಾ "ದ್ವಾ ಸುಪರ್ಣಾ" ಎಂಬ ಅನೇಕ ಶ್ರುತಿಗಳಲ್ಲಿ ಜೀವಬ್ರಹ್ಮರು ಪರಸ್ಪರ ವಿಲ ಕ್ಷಣರೆಂದು ಅವರಿಗೆ ಭೇದವನ್ನು ಹೇಳಿರುವುದರಿಂದಲೂ, ಸ್ವಭಾವಿಕ ಭೇದವು ತೊಲ ಗದಿರುವುದರಿಂದಲೂ, ಪರಲೋಕದಲ್ಲಿ ಮುಕ್ತನು ತನಗುಪಾಸ್ಯನಾದ ಪರಮೇಶ್ವರ ನಿಗೆ ಅಧೀನನಾಗಿ ಕೈಂಕಾರ್ಯವನ್ನು ಸಲ್ಲಿಸುತ್ತಲೂ ಇರಬಹುದು. ಅಥವಾ ಅವನಿಗೆ ಸಮಾನವಾದ ಆಕಾರದಲ್ಲಿ ಸ್ವತಂತ್ರನಾಗಿಯಾದರೂ ಇರಬಹುದು. ಆದ್ದರಿಂದ ಜೀವಬ್ರಹ್ಮರಿಗೆ ಸಂಸಾರದಶೆಯಲ್ಲಿ ಪಾರಮಾರ್ಥಿಕ ಭೇದವೂ ಹಾಗೆಯೇ ಮುಕ್ತದಶೆ ಯಲ್ಲಿ ಪಾರಮಾರ್ಥಿಕ ಅಭೇದವೂ ಸಂಭವಿಸುವುದಿಲ್ಲ. ಹೀಗೆ ದ್ವೈತ ವಿಶಿಷ್ಟಾ ದ್ವೈತ ಸಾಂಖ್ಯ ಯೋಗ ನ್ಯಾಯ ವೈಶೇಷಿಕ ಅದ್ವೈತ ಮೊದಲಾದ ಎಲ್ಲಾ ಮತಗ ಳಿಗೂ ವಿರುದ್ಧವಾಗುವುದರಿಂದ ಭೇದಾಭೇದಮತವು ಸಮಂಜಸವಲ್ಲವೆಂದು ಆಕ್ಷೇ ಪವು ಬರುತ್ತದೆ. ಇದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಈ ಜೀವನು ಪ್ರಾರಬ್ಧ ಮುಗಿದಮೇಲೆ ಪರಂಜ್ಯೋತಿಯಲ್ಲಿ ಸೇರಿ ಒಂದು ಅವಸ್ಥೆಯನ್ನು ಹೊಂದು ತ್ತಾನೆ. ಕೀಟವು ಭ್ರಮರವಾಗುವಂತೆ ಅವನು ಜೀವಭಾವವನ್ನು ಕಳೆದುಕೊಂಡು ಶಿವಭಾವವನ್ನು ಹೊಂದವುದೇ ಈ ಅವಸ್ಥಾ ವಿಶೇಷ. ಆದರೆ ಇದು ಹಿಂದಿನ ರೂಪವಲ್ಲ; ಯಾಕೆಂದರೆ "ಸ್ವೇನ ರೂಪೇಣ" ಎಂದು ಶ್ರುತಿಯಲ್ಲಿ "ಸ್ವೇನ" ಎಂಬ ವಿಶೇಷಣ ದಿಂದ ಸಮುದ್ರದಿಂದ ಹುಟ್ಟಿದ ನದಿಯು ಮತ್ತೆ ಸಮುದ್ರವೇ ಆಗುವಂತೆ ಜೀವನು ತನ್ನ ವಾಸ್ತವರೂಪವೆನಿಸಿದ ಶಿವಭಾವವನ್ನು ಮತ್ತೆ ಪಡೆಯುವುದರಿಂದ ಇಬ್ಬರಿಗೂ ಸ್ವರೂಪೈಕ್ಯವನ್ನೇ ಹೇಳಲಾಗಿದೆ. ಇದರಿಂದ ರಜ್ಜುಸರ್ಪದಂತೆ ಜೀವನು ಸುಳ್ಳೆಂಬ ವಾದವೂ, ಘಟಪಟಗಳಂತೆ ಯಾವಾಗಲೂ ಜೀವಬ್ರಹ್ಮರಿಗೆ ಭೇದ ಒಂದನ್ನೇ ಒಪ್ಪುವ ದ್ವೈತವಿಶಿಷ್ಟಾದ್ವೈತವಾದಗಳೂ ನಿರಾಕೃತವಾದವು. ಬ್ರಹ್ಮವಿದ್ಯೆಯ ಮಹಿ ಮೆಯಿಂದ ಜೀವನಿಗೆ ಸ್ವಾಭಾವಿಕವಾದ ಅವಿದ್ಯೆ ತೊಲಗಿ ಶಿವಭಾವವು ಬರುವುದೆಂಬ

ಇತ್ಯತ್ರ ಶರೀರೇ ವರ್ತಮಾನೇಽಪಿ ಶರೀರಾಭಿಮಾನನಿರ್ಮುಕ್ತಶುದ್ಧ ಜೀವ ಉಚ್ಯತೇ. ಕುತಃ? ಪ್ರತಿಜ್ಞಾನಾತ್. "ಸ್ವೇನ ರೂಪೇಣ" ಇತಿ ಉತ್ತರವಾಕ್ಯೇ ಜೀವಸ್ಯ ಶಿವತತ್ತ್ವಪ್ರಾಪ್ತ್ಯುಪದೇಶಿತತ್ವೇನ ಜಲೇ ಜಲಮಿವ ವಹ್ನೌ ವಹ್ನಿರಿವ ಶಿವಸ್ವರೂಪೇಣ ಸ್ವರೂಪೈಕ್ಯಕಥನಾತ್ ನಿರವಯವಪರಮಾಕಾಶಪರಂಜ್ಯೋತಿಸ್ಸ್ವರೂಪಶಿವತತ್ತ್ವೋಪಾಸಕಾನಾಮಿಹೈವ ದಹರಪುಂಡರೀಕೇ ಲಿಂಗಶರೀರವಿಲಯಪೂರ್ವಕತ್ವೇನ ತತ್ಪ್ರಾಪ್ತಿರುಪದಿಶ್ಯತೇ. ಕೇಚಿತ್ ಪ್ರಪತ್ತೇಶ್ಚ ವೈಕುಂಠಪರಮಪದಾಖ್ಯ ವಿಷ್ಣುಲೋಕಪ್ರಾಪ್ತಿಹೇತುತ್ವಂ, ತತ್ಪ್ರಪತ್ತೇಶ್ಚ ಪಂಚಸಂಸ್ಕಾರಾಂಗತ್ವಂ "ತಾಪಃ ಪುಂಡ್ರಸ್ತಥಾ ನಾಮ ಮಂತ್ರೋ ಯಾಗಶ್ಚ ಪಂಚಮಃ" ಇತಿ ಪಂಚಸಂಸ್ಕಾರಾಃ. "ಪಾಂಚಜನ್ಯ ನಿಜಧ್ಯಾನಧ್ವಸ್ತಪಾತಕಸಂಚಯ । ಪಾಹಿ ಮಾಂ ಪಾಪಿನಂ ಘೋರಂ ಸಂಸಾರಾರ್ಣವಪಾತಿನಂ । ಇತಿ ಮಂತ್ರಂ ಸಮುಚ್ಚಾರ್ಯ ದಹೇತ್ಸವ್ಯಂ ಭುಜಂ ತಥಾ । ಏತೇನೈವ ವಿಧಾನೇನ ಶಂಖಂ ಚಕ್ರಂ ಚ ಧಾರಯೇತ್ ॥" ಇತ್ಯಾದಿತಾಂತ್ರಿಕಮಂತ್ರಪ್ರಾಧಾನ್ಯೇನ ವದಂತಿ, ತದನಾದರಣೀಯಂ ವೇದಬಾಹ್ಯತ್ವಾತ್. ಪಂಚಸಂಸ್ಕಾರಾಣಾಮಪಿ ಪಂಚಪ್ರಯಾಜವತ್ ಆಗ್ನೇಯಾದಿಷಡ್ಯಾಗವದ್ವಾ ಸ್ವಪ್ರಕರಣೇ ಪಾಠಾಭಾವಾತ್, ವೇದಂಗೇಷು ಕಲ್ಪಸೂತ್ರೇಷು ನಾ ಸೂತ್ರಕಾರೈರಪ್ರತಿಪಾದನಾಚ್ಚ ಕಿಂಚ ವೈಷ್ಣವಧರ್ಮಪ್ರತಿಪಾದಕೇಷು ರಾಮಾಯಣಭಾಗವತಭಾರತವಿಷ್ಣುಪುರಾಣಾದೀಷು ಪಂಚಸಂಸ್ಕಾರಾಣಾಂ ಅಪ್ರತಿಪಾದನಾತ್ ತನ್ಮತವೇದ್ಯಯೋಃ ಪದ್ಮಪುರಾಣಹಾರೀತಸ್ಮೃತ್ಯೋಃ ಸರ್ವಜನಾಂಗೀಕಾರಾಭಾವೇನ ವಿಶ್ವಾಸಾನರ್ಹತ್ವಾತ್ ಪಂಚಸಂಸ್ಕಾರವಿಧಿರ್ನಾದರಣೀಯಃ. "ಶ್ರುತಿಪಥಾಗಳಿತಾನಾಂ ತಂತ್ರಮಾರ್ಗೇ ಪ್ರವೇಶಃ" ಇತಿ ವೈಯಾಸಿಕಸಿದ್ಧಾಂತಾವಗಮಾತ್ ಉತ ವೈಷ್ಣವಮತೇಽಪಿ ಪಂಚಸಂಸ್ಕಾರಾಣಾಮೇವ ಪುರುಷಸಂಸ್ಕಾರಹೇತುತ್ವೇ ಸಂಸ್ಕೃತಸ್ಯ ಪುರುಷಸ್ಯ ಪರಮಪದಪ್ರಾಪ್ತಿರೂಪಮೋಕ್ಷಾಖ್ಯೇ ಸಾಧ್ಯೇ ವಿನಿಯೋಜಕಪ್ರಮಾಣಾಭಾವಾತ್ "ರಾವಣೇನ ಸಭಾಮಧ್ಯೇ ನಿಷ್ಕಾಸಿತಸ್ಯ ವಿಭೀಷಣಸ್ಯ ಸದ್ಯೋ ರಾಮಚಂದ್ರಪ್ರಪದ್ಯಮಾನಸ್ಯ ಪಂಚಸಂಸ್ಕಾರಾಣಾಂ ಕಲ್ಪನಾಸಂಭವಾತ್ ನಾಮಾಂತರಕರಣಸ್ಯಾನ್ಯಸ್ಯಾಪಿ ಪ್ರಮಾಣವಿರೋಧೇನ ಕಲ್ಪಯಿತುಮಶಕ್ಯತ್ವಾಚ್ಚ ದ್ರೌಪದ್ಯಾಶ್ಚ ಶತ್ರುಭಿರಾಕ್ರಾಂತಾಯಾಃ ಸದ್ಯಃ ಕೃಷ್ಣಂ ಪ್ರಪದ್ಯಮಾನಯಾಃ ಪಂಚಸಂಸ್ಕಾರಾಣಾಮಭಾವಾಚ್ಚ "ತಮೇವ ಚಾದ್ಯಂ ಪುರುಷಂ ಪ್ರಪದ್ಯೇ ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ" ಇತಿ ಗೀತಾವಾಕ್ಯಾತ್ ಕೃಷ್ಣಸ್ಯಾಪಿ ಅನ್ಯವಿಷಯಪ್ರವೃತ್ತಿದರ್ಶನಾತ್. ತತ್ರ ಚ ತೇಷಾಂ ಪಂಚ

ವಾದವೇ ಹೊಂದುತ್ತದೆ. ಇಲ್ಲವಾದರೆ ಮೋಕ್ಷಶಾಸ್ತ್ರಕ್ಕೆ ಪ್ರಯೋಜನವೇ ಇಲ್ಲವಾದೀತು. ಜೀವನ ಸ್ವರೂಪವು ತಾನಾಗಿಯೇ ಪುರುಷಾರ್ಥವಾಗುವಂತಿಲ್ಲ. ಸುಷುಪ್ತಿಯಲ್ಲಿ ಇಂದ್ರಿಯಗಳ ವ್ಯಾಪಾರಗಳೆಲ್ಲವೂ ನಿಂತು ಜೀವನಿಗೆ ಕೇವಲಾತ್ಮಸ್ವರೂಪವೇ ಇದ್ದರೂ ಸಹ ಅದೂ ಪುರುಷಾರ್ಥವೆನಿಸುವುದಿಲ್ಲ. ಪರಂಜ್ಯೋತಿಯಲ್ಲಿ ಬೆರೆತವನಿಗೆ ದುಃಖದ ಬಿಡುಗಡೆಯಷ್ಟೇ ಪುರುಷಾರ್ಥವಾಗಲಾರದು; ಹಾಗಿದ್ದರೆ ಸ್ವರೂಪಾವಿರ್ಭಾವವನ್ನೇ ಮೋಕ್ಷವೆಂದು ಹೇಳಬಹುದಾಗಿತ್ತು. "ಎಲ್ಲಾ ಆಶೆಗಳನ್ನೂ ತೊರೆದ ಶ್ರೋತ್ರಿಯನಿಗೆ ಬ್ರಹ್ಮದ ಆನಂದ ಒಂದೇ ಇರುತ್ತದೆ." "ಇವನು ರಸಸ್ವರೂಪನಾದ ಪರಮಾತ್ಮನನ್ನು ಪಡೆದು ಆನಂದಪಡುತ್ತಾನೆ" ಎಂಬಲ್ಲಿ ಜೀವನ್ಮುಕ್ತನ ಸುಖಕ್ಕೆ ಕೊನೆಯೇ ಇಲ್ಲವೆಂದು ಹೇಳಲಾಗಿದೆ. ಆದರೂ ಅಪರಿಮಿತವಾದ ಆನಂದವಿರುವ ಚೈತನ್ಯವೇ ಇವನ ವಾಸ್ತವಸ್ವರೂಪವೆನಿಸಿದೆ. ಆದರೂ ಅದು ಸಂಸಾರದಶೆಯಲ್ಲಿ ಅವಿದ್ಯೆಯಿಂದ ತಿರೋಹಿತವಾಗಿತ್ತು. ಪರಂಜ್ಯೋತಿಯಲ್ಲಿ ಸೇರಿದಾಗ ಅದು ಪ್ರಕಟವಾಯಿತು ಎಂದು ಹೇಳುವುದಾದರೆ ಇದು ಯುಕ್ತವಲ್ಲ; ಯಾಕೆಂದರೆ ಜ್ಞಾನದ ಸ್ವರೂಪವನ್ನು ಯಾವುದರಿಂದಲೂ ಮುಚ್ಚಲಿಕ್ಕಾಗುವುದಿಲ್ಲ. ಪ್ರಕಾಶವೆನಿಸಿದ ಜ್ಞಾನಕ್ಕೆ ತಿರೋಧಾನವೆಂದರೆ ಅದರ ವಿನಾಶವೆಂದು ಹಿಂದೆಯೇ ಹೇಳಿದೆ. ಪ್ರಕಾಶವಷ್ಟೇ ಆನಂದವಾಗಲಾರದು; ಆದರೆ ಸುಖಸ್ವರೂಪವೇ ಆನಂದವೆನಿಸುತ್ತದೆ. ತನಗೆ ಅನುಕೂಲವೆನಿಸಿದ್ದೇ ಸುಖಸ್ವರೂಪವಾಗುವುದು. ಪ್ರಕಾಶವಷ್ಟೇ ಆತ್ಮನ ಸ್ವರೂಪವೆಂದು ಹೇಳುವವನಿಗೆ ನಿರ್ಗುಣಾತ್ಮವಾದದಲ್ಲಿ ಆ ಪ್ರಕಾಶವು ಯಾರಿಗೆ ಅನುಕೂಲವಾಗಿ ತೋರುವುದೆಂದು ಹೇಳಬೇಕಾಗುವುದು. ಆತ್ಮನಲ್ಲಿ ಯಾವ ವಿಶೇಷವೂ ಇಲ್ಲವೆಂದು ಹೇಳುವ ನಿರ್ವಿಶೇಷವಾದದಲ್ಲಿ ಆತ್ಮನೊಬ್ಬನೇ ಇರುವುದರಿಂದ ಆತ್ಮನು ಆನಂದಸ್ವರೂಪನು ಎಂಬುದನ್ನೇ ನಿರೂಪಿಸಲಿಕ್ಕಾಗುವುದಿಲ್ಲ. ಕೇವಲ ಸ್ವರೂಪವಂತೂ ಯಾವಾಗಲೂ ಸಿದ್ಧವಾಗಿಯೇ ಇರುವುದರಿಂದ ಅದಕ್ಕಾಗಿ ಸಾಧನವೇ ಬೇಕಾಗುವುದಿಲ್ಲ. ಯಾವತ್ತೂ ಇರುವ ತನ್ನ ಸ್ವರೂಪಕ್ಕೆ "ಅಭಿನಿಷ್ಪದ್ಯತೇ" ಎಂದು ಅಭಿವ್ಯಕ್ತಿಯನ್ನು ಶ್ರುತಿಯಲ್ಲಿ ಹೇಳಿದ್ದು ತಪ್ಪಾಗುವುದು. ಆದ್ದರಿಂದ ಉಪಾಸನೆಯಿಂದ ಹೊಸದಾದ ಒಂದು ಆಕಾರವು ಜೀವನಲ್ಲಿ ಬರುವುದೆಂದೇ ಹೇಳಬೇಕು. ಹಾಗೆ ಹೇಳಿದರೆಬೇ "ಅಭಿನಿಷ್ಪದ್ಯತೇ" ಎಂಬ ಶ್ರುತಿಯು ಸ್ವರಸವಾಗುವುದು. "ಸ್ವೇನ ರೂಪೇಣ" ಎಂಬ ಪದವೂ ಜೀವನ ಅಸಾಧಾರಣಸ್ವರೂಪವನ್ನೇ ತಿಳಿಸುವುದರಲ್ಲಿ ವಿರೋಧವೇನೂ ಇಲ್ಲ.

**ನನು "ಏವಮೇವೈಷ ಸಂಪ್ರಸಾದಃ" ಇತಿ ವಾಕ್ಯೇ ನಿರವಯವ ಪರಶಿವೋಪಾಸಕಾನಾಂ ಜ್ಞಾನಿನಾಮಪಿ ಲಿಂಗಶರೀರಸ್ಯ ಶರೀರಾದ್ವಹಿರ್ನಿರ್ಗಮನಾವಗಮಾತ್ ಕಥಂ ಲಿಂಗಶರೀರವಿಲಯಪೂರ್ವಕತ್ವೇನ ಹೃತ್ಪುಂಡರೀಕಾವಚ್ಛಿನ್ನಪರಶಿವಬ್ರಹ್ಮಪ್ರಾಪ್ತಿರಿತ್ಯಾಶಂಕ್ಯ ತತ್ರಾಹ. ಮುಕ್ತಃ ಪ್ರತಿಜ್ಞಾನಾತ್ ॥ ೨ ॥ "ಅಸ್ಮಾತ್ ಶರೀರಾತ್ಸಮುತ್ಥಾಯ"**

ಇತ್ಯತ್ರ ಶರೀರೇ ವರ್ತಮಾನೇಽಪಿ ಶರೀರಾಭಿಮಾನನಿರ್ಮುಕ್ತಶುದ್ಧ ಜೀವ ಉಚ್ಯತೇ. ಕುತಃ? ಪ್ರತಿಜ್ಞಾನಾತ್. “ಸ್ವೇನ ರೂಪೇಣ” ಇತಿ ಉತ್ತರವಾಕ್ಯೇ ಜೀವಸ್ಯ ಶಿವತತ್ತ್ವಪ್ರಾಪ್ತ್ಯುಪದೇಶಿತತ್ವೇನ ಜಲೇ ಜಲಮಿವ ವಹ್ನೌ ವಹ್ನಿರಿವ ಶಿವಸ್ವರೂಪೇಣ ಸ್ವರೂಪೈಕ್ಯಕಥನಾತ್ ನಿರವಯವಪರಮಾಕಾಶಪರಂಜ್ಯೋತಿಸ್ಸ್ವರೂಪಶಿವತತ್ತ್ವೋಪಾಸಕಾನಾಮಿಹೈವ ದಹರಪುಂಡರೀಕೇ ಲಿಂಗಶರೀರವಿಲಯಪೂರ್ವಕತ್ವೇನ ತತ್ಪ್ರಾಪ್ತಿರುಪದಿಶ್ಯತೇ. ಕೇಚಿತ್ ಪ್ರಪತ್ತೇಶ್ಚ ವೈಕುಂಠಪರಮಪದಾಖ್ಯ ವಿಷ್ಣುಲೋಕಪ್ರಾಪ್ತಿಹೇತುತ್ವಂ, ತತ್ಪ್ರಪತ್ತೇಶ್ಚ ಪಂಚಸಂಸ್ಕಾರಾಂಗತ್ವಂ “ತಾಪಃ ಪುಂಡ್ರಸ್ತಥಾ ನಾಮ ಮಂತ್ರೋ ಯಾಗಶ್ಚ ಪಂಚಮಃ” ಇತಿ ಪಂಚಸಂಸ್ಕಾರಾಃ. “ಪಾಂಚಜನ್ಯ ನಿಜಧ್ಯಾನಧ್ವಸ್ತಪಾತಕಸಂಚಯ। ಪಾಹಿ ಮಾಂ ಪಾಪಿನಂ ಘೋರಂ ಸಂಸಾರಾರ್ಣವಪಾತಿನಂ। ಇತಿ ಮಂತ್ರಂ ಸಮುಚ್ಚಾರ್ಯ ದಹೇತ್ಸವ್ಯಂ ಭುಜಂ ತಥಾ। ಏತೇನೈವ ವಿಧಾನೇನ ಶಂಖಂ ಚಕ್ರಂ ಚ ಧಾರಯೇತ್ ॥” ಇತ್ಯಾದಿತಾಂತ್ರಿಕಮಂತ್ರಪ್ರಾಧಾನ್ಯೇನ ವದಂತಿ, ತದನಾದರಣೀಯಂ ವೇದಬಾಹ್ಯತ್ವಾತ್. ಪಂಚಸಂಸ್ಕಾರಾಣಾಮಪಿ ಪಂಚಪ್ರಯಾಜವತ್ ಆಗ್ನೇಯಾದಿಷಡ್ಯಾಗವದ್ವಾ ಸ್ವಪ್ರಕರಣೇ ಪಾಠಾಭಾವಾತ್, ವೇದಂಗೇಷು ಕಲ್ಪಸೂತ್ರೇಷು ಸಾ ಸೂತ್ರಕಾರೈರಪ್ರತಿಪಾದನಾಚ್ಚ ಕಿಂಚ ವೈಷ್ಣವಧರ್ಮಪ್ರತಿಪಾದಕೇಷು ರಾಮಾಯಣಭಾಗವತಭಾರತವಿಷ್ಣುಪುರಾಣಾದೀಷು ಪಂಚಸಂಸ್ಕಾರಾಣಾಂ ಅಪ್ರತಿಪಾದನಾತ್ ತನ್ಮತವೇದ್ಯಯೋಃ ಪದ್ಮಪುರಾಣಹಾರೀತಸ್ಮೃತ್ಯೋಃ ಸರ್ವಜನಾಂಗೀಕಾರಾಭಾವೇನ ವಿಶ್ವಾಸಾನರ್ಹತ್ವಾತ್ ಪಂಚಸಂಸ್ಕಾರವಿಧಿರ್ನಾದರಣೀಯಃ. “ಶ್ರುತಿಪಥಾಗಳಿತಾನಾಂ ತಂತ್ರಮಾರ್ಗೇ ಪ್ರವೇಶಃ” ಇತಿ ವೈಯಾಸಿಕಸಿದ್ಧಾಂತಾವಗಮಾತ್ ಉತ ವೈಷ್ಣವಮತೇಽಪಿ ಪಂಚಸಂಸ್ಕಾರಾಣಾಮೇವ ಪುರುಷಸಂಸ್ಕಾರಹೇತುತ್ವೇ ಸಂಸ್ಕೃತಸ್ಯ ಪುರುಷಸ್ಯ ಪರಮಪದಪ್ರಾಪ್ತಿರೂಪಮೋಕ್ಷಾಖ್ಯೇ ಸಾಧ್ಯೇ ವಿನಿಯೋಜಕಪ್ರಮಾಣಾಭಾವಾತ್ “ರಾವಣೇನ ಸಭಾಮಧ್ಯೇ ನಿಷ್ಕಾಸಿತಸ್ಯ ವಿಭೀಷಣಸ್ಯ ಸದ್ಯೋ ರಾಮಚಂದ್ರಪ್ರಪದ್ಯಮಾನಸ್ಯ ಪಂಚಸಂಸ್ಕಾರಾಣಾಂ ಕಲ್ಪನಾಸಂಭವಾತ್ ನಾಮಾಂತರಕರಣಸ್ಯಾನ್ಯಸ್ಯಾಪಿ ಪ್ರಮಾಣವಿರೋಧೇನ ಕಲ್ಪಯಿತುಮಶಕ್ಯತ್ವಾಚ್ಚ ದ್ರೌಪದ್ಯಾಶ್ಚತುರ್ಭಿರಾಕ್ರಾಂತಾಯಾಃ ಸದ್ಯಃ ಕೃಷ್ಣಂ ಪ್ರಪದ್ಯಮಾನಯಾಃ ಪಂಚಸಂಸ್ಕಾರಾಣಾಮಭಾವಾಚ್ಚ “ತಮೇವ ಚಾದ್ಯಂ ಪುರುಷಂ ಪ್ರಪದ್ಯೇ ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ” ಇತಿ ಗೀತಾವಾಕ್ಯಾತ್ ಕೃಷ್ಣಸ್ಯಾಪಿ ಅನ್ಯವಿಷಯಪ್ರವೃತ್ತಿದರ್ಶನಾತ್. ತತ್ರ ಚ ತೇಷಾಂ ಪಂಚ

ಸಂಸ್ಕಾರಾಣಾಂ ಅಹೇತುತ್ವಾಚ್ಚ ಪ್ರಪತ್ತಿಂ ವಿನಾಪಿ ಗೋಪಿಕಾಪ್ರಭೃತೀನಾಂ ಧ್ಯಾನಮಾತ್ರಾದೇವ ವಿಷ್ಣುಪ್ರಾಪ್ತೇರ್ಭಾಗವತೇ ವಿವಕ್ಷಿತತ್ವಾತ್. "ಕಾಮಾದ್ಗೋಪ್ಯೋ ಭಯಾತ್ಕಂಸೋ ದ್ವೇಷಾಚ್ಚೈತ್ಯಾದಯೋ ನೃಪಾಃ। ಸಂಬಂಧಾದ್ವಿಜಯೋ ರಾಜನ್ ಯೂಯಂ ಭಕ್ತ್ಯಾ ವಯಂ ಪ್ರಭೋ॥" ಅನ್ಯತ್ರ ಚ "ಯೇ ಯೇ ಹತಾಶ್ಚಕ್ರಧರೇಣ ರಾಜನ್ ತ್ರೈಲೋಕ್ಯನಾಥೇನ ಜನಾರ್ದನೇನ। ತೇ ತೇ ಗತಾಸ್ತಂ ನಿಲಯಂ ನರೇಂದ್ರಾಃ ಕ್ರೋಧೋಽಪಿ ಕೃಷ್ಣಸ್ಯ ಪರೇಣ ತುಲ್ಯಃ॥". ನನು ತೇಷಾಂ ಪೂರ್ವಜನ್ಮನಿ ಪ್ರವೃತ್ತಿರಸ್ತಿ ಇತಿ ಚೇತ್ ಸಕೃತ್ಪ್ರಪನ್ನಸ್ಯಾಪ್ಯಭಯಪ್ರಾಪ್ತ್ಯವಗಮವಚನವಿರೋಧಾತ್ತದುಕ್ತಂ. "ಸಕೃದೇವ ಪ್ರಪನ್ನಾಯ ತವಾಸ್ಮೀತಿ ಚ ಯಾಚತೇ। ಅಭಯಂ ಸರ್ವಭೂತೇಭ್ಯೋ ದದಾಮ್ಯೇತದ್ವ್ರತಂ ಮಮ॥" ಇತಿ ಪ್ರಪನ್ನಾನಾಮಪಿ ದೈತ್ಯಾದಿಜನ್ಮಪ್ರಾಪ್ತೌ ಪ್ರಪತ್ತಿವೈಯರ್ಥ್ಯಾತ್ ತದುಕ್ತಂ. "ಸರ್ವಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ। ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ॥" ಇತಿ ಪೂರ್ವಜನ್ಮನಿ ಪ್ರಪತ್ತಿಸಂದೇಹೇನ ಪ್ರಪತ್ತೌ ಪ್ರವೃತ್ತಿಃ ತಸ್ಯಾಪಿ ನ ಸ್ಯಾತ್. ಕಿಂಚ ಜಯವಿಜಯಾದೀನಾಂ ವೈಕುಂಠಪ್ರಾಪ್ತೇಃ ಪ್ರಪತ್ತಿಂ ವಿನಾ ದುರ್ಲಭತ್ವಾತ್ ತಾದೃಶಾನಾಮಪಿ ಪುನರ್ದೈತ್ಯಜನ್ಮಪ್ರಾಪ್ತೌ ಸತ್ಯಾಮನ್ಯೇಷಾಮಪಿ ಪ್ರಪನ್ನಾನಾಂ ಪುನಸ್ಸಂಸಾರೋ ನ ಭವಿಷ್ಯತೀತ್ಯತ್ರ ಕಾಪ್ಯೇವಾಶಾ? "ಶ್ರದ್ಧಾಭಕ್ತಿಧ್ಯಾನಯೋಗಾದವೇಹಿ", "ಅರ್ಚತ ಪ್ರಾರ್ಚತ", "ತ್ರಿಯಂಬಕಂ ಯಜಾಮಹೇ", "ಸರ್ವಲಿಂಗಂ ಸ್ಥಾಪಯತಿ ಪಾಣಿಮಂತ್ರಂ ಪವಿತ್ರಂ" ಇತ್ಯಾದಿನಾ ಶಿವಭಕ್ತಿಪೂಜಾಧ್ಯಾನಧಾರಣವಿಧಾಯಕತ್ವಶ್ರುತಿವತ್ ವಿಷ್ಣುಭಕ್ತಿಪೂಜಾವಿಧಾಯಕಶ್ರುತ್ಯದರ್ಶನಾತ್ ತನ್ಮತಸ್ಯ ತಾಂತ್ರಿಕತ್ವಂ ದುರ್ವಾರಂ.

"ಇವನು ಪರಂಜ್ಯೋತಿಯನ್ನು ಸೇರಿ ತನ್ನ ವಾಸ್ತವರೂಪವನ್ನು ಪಡೆಯುತ್ತಾನೆ" ಎಂಬ ವಾಕ್ಯದಲ್ಲಿ ನಿರವಯವಪರಶಿವನನ್ನು ಉಪಾಸನಮಾಡಿದ ಜ್ಞಾನಿಗಳಿಗೂ ಸಹ ಸೂಕ್ಷ್ಮಶರೀರವು ಸ್ಥೂಲಶರೀರದಿಂದ ಹೊರಗೆ ಹೊರಡುವುದರಿಂದ ಆ ಸೂಕ್ಷ್ಮಶರೀರವು ಇಲ್ಲಿಯೇ ನಷ್ಟವಾಗಿ ಹೃದಯಕಮಲದಲ್ಲಿರುವ ಪರಶಿವಬ್ರಹ್ಮದಲ್ಲಿ ಅವರು ಬೆರೆಯಲಿಕ್ಕೆ ಹೇಗೆ ಸಾಧ್ಯವಾದೀತೆಂದು ಆಶಂಕಿಸಿ ಸಮಾಧಾನಮಾಡುತ್ತಾನೆ. "ಈ ಶರೀರದಿಂದ ಹೊರಟು" ಎಂಬಲ್ಲಿ ಈ ಶರೀರದಲ್ಲಿ ಇದ್ದರೂ ಸಹ ಅದರ ಅಭಿಮಾನವನ್ನು ಬಿಟ್ಟಿದ್ದ ಶುದ್ಧಜೀವನನ್ನೇ ಹೇಳಲಾಗಿದೆ. ಮುಂದಿನವಾಕ್ಯದಲ್ಲಿ ಜೀವನಿಗೆ ಶಿವಭಾವ ಬರುವುದೆಂದು ಹೇಳಿರುವುದರಿಂದ ನೀರಿನಲ್ಲಿ ನೀರಿನಂತೆ ಬೆಂಕಿಯಲ್ಲಿ ಬೆಂಕಿಯಂತೆ ಶಿವಭಾವದಿಂದ ಶಿವಸ್ವರೂಪದಲ್ಲಿ ಐಕ್ಯವನ್ನೇ

ಹೇಳಲಾಗಿದೆ. ಆದ್ದರಿಂದ ನಿರವಯವವೂ ಪರಮಾಕಾಶವೂ ಪರಂಜ್ಯೋತಿಯೂ ಎನಿಸಿದ ಶಿವತತ್ತ್ವವನ್ನು ಉಪಾಸನಮಾಡಿದವರಿಗೆ ಇಲ್ಲಿಯೇ ದಹರಕಮಲದಲ್ಲಿ ಸೂಕ್ಷ್ಮ ಶರೀರವು ಲಯಿಸಿ ಶಿವಭಾವವು ದೊರಕುವುದೆಂದು ಹೇಳಲಾಗಿದೆ. ವೈಕುಂಠವೆಂಬ ವಿಷ್ಣುಲೋಕವೇ ಪರಮಪದವೆಂದೂ, ಅಲ್ಲಿಗೆ ಹೋಗುವುದೇ ಮೋಕ್ಷವೆಂದೂ, ಜೀವನು ಪರಮಾತ್ಮನಿಗೆ ಶರಣಾಗತನಾಗಿ ಆ ಸ್ಥಾನವನ್ನು ಪಡೆಯಬೇಕೆಂದೂ ಕೆಲವರು ಹೇಳುತ್ತಾರೆ. ಈ ಶರಣಾಗತಿಯೇ ಪ್ರಪತ್ತಿ ಎನಿಸುವುದು. ಐದುಬಗೆಯ ಸಂಸ್ಕಾರಗಳನ್ನು ಪಡೆದವನೇ ಈ ಪ್ರಪತ್ತಿಗೆ ಅರ್ಹನಾಗುವನು. ತಾಪ, ಪುಂಡ್ರ, ನಾಮ, ಮಂತ್ರ, ಯಾಗ ಇವೇ ಈ ಐದು ಸಂಸ್ಕಾರಗಳು. ಘೋರಪಾಪಿಯಾದ ತನ್ನನ್ನು ರಕ್ಷಿಸುವಂತೆ ನಾರಾಯಣನಲ್ಲಿ ಪ್ರಾರ್ಥಿಸುತ್ತ ಬಲಭುಜವನ್ನು ಸಂಸ್ಕರಿಸಿ ಅಲ್ಲಿ ಶಂಖಚಕ್ರಗಳ ಮುದ್ರೆಗಳನ್ನು ಒತ್ತಬೇಕು. ಇದೇ ತಾಪವೆನಿಸುತ್ತದೆ. ಹಣೆಯಲ್ಲಿ ಊರ್ಧ್ವಪುಂಡ್ರವನ್ನು ಧರಿಸಬೇಕು. ಭಕ್ತನು ತನ್ನ ಹಿಂದಿನ ಹೆಸರನ್ನು ಬದಲಾಯಿಸಿಕೊಳ್ಳಬೇಕು. ಮನದಲ್ಲಿ ಅಷ್ಟಾಕ್ಷರೀಮಂತ್ರವನ್ನು ಜಪಿಸಬೇಕು. ನಾರಾಯಣನನ್ನು ಸರ್ವೇಂದ್ರಿಯಗಳಿಂದಲೂ ಅರ್ಚಿಸಬೇಕು. ಹೀಗೆ ಐದುಬಗೆಯ ಸಂಸ್ಕಾರಗಳುಳ್ಳವನೇ ಪ್ರಪನ್ನನೆನಿಸಿ ನಾರಾಯಣನ ಅನುಗ್ರಹಕ್ಕೆ ಪಾತ್ರನಾಗುವನು. ಆದರೆ ಈ ಮತವು ವೇದಬಾಹ್ಯವಾದ್ದರಿಂದ ಮುಮುಕ್ಷುಗಳಿಗೆ ಗ್ರಾಹ್ಯವಲ್ಲ. ಈ ಐದು ಸಂಸ್ಕಾರಗಳನ್ನು ಪಂಚಪ್ರಯಾಜಗಳಂತೆಯೂ ಆಗ್ನೇಯ ಮೊದಲಾದ ಆರು ಯಾಗಗಳಂತೆಯೂ ಆಚರಿಸಬೇಕೆಂದು ಆಯಾ ಪ್ರಕರಣಗಳಲ್ಲಿ ಹೇಳಿಲ್ಲ. ವೇದಾಂಗಗಳಲ್ಲಿಯೂ ಕಲ್ಪಸೂತ್ರಗಳಲ್ಲಿಯೂ ಸೂತ್ರಕಾರರು ಇವನ್ನು ಪ್ರತಿಪಾದಿಸಿಲ್ಲ. ವೈಷ್ಣವಧರ್ಮವನ್ನು ತಿಳಿಸುವ ರಾಮಾಯಣ, ಭಾಗವತ, ಭಾರತ ವಿಷ್ಣುಪುರಾಣಗಳಲ್ಲಿ ಎಲ್ಲಿಯೂ ಈ ಪಂಚಸಂಸ್ಕಾರಗಳನ್ನು ತಿಳಿಸಿಲ್ಲ. ಆ ಮತವನ್ನು ತಿಳಿಸುವ ಪದ್ಮಪುರಾಣ, ಹಾರೀತಸ್ಮೃತಿಗಳನ್ನು ಎಲ್ಲರೂ ಒಪ್ಪದೇ ಇರುವುದರಿಂದ ಅವು ಯಾರಿಗೂ ವಿಶ್ವಾಸಾರ್ಹವಾಗಿಲ್ಲ. ಆದ್ದರಿಂದ ಪಂಚಸಂಸ್ಕಾರ ವಿಧಿಯು ಅವೈದಿಕವೆನಿಸಿದೆ. "ವೈದಿಕಮಾರ್ಗಕ್ಕೆ ಸಲ್ಲದಿರುವವರು ತಂತ್ರಮಾರ್ಗವನ್ನಾಚರಿಸಬಹುದು" ಎಂದು ವ್ಯಾಸರು ಸಿದ್ಧಾಂತಮಾಡಿದ್ದಾರೆ. ಇದೂ ಅಲ್ಲದೆ ವೈಷ್ಣವಮತದಲ್ಲಿಯೂ ಪಂಚಸಂಸ್ಕಾರಗಳೇ ಜೀವನನ್ನು ಶುದ್ಧಿಮಾಡುವುದಾದರೆ ಹೀಗೆ ಸಂಸ್ಕೃತನಾದವನಿಗೇ ಪರಮಪದವೆನಿಸಿದ ಮೋಕ್ಷವು ದೊರಕುವುದೆಂಬುದಕ್ಕೆ ಯಾವ ಪ್ರಮಾಣವೂ ಇಲ್ಲ. ರಾವಣನು ಸಭೆಯಿಂದ ಹೊರದೂಡಿದಕೂಡಲೇ ವಿಭೀಷಣನು ರಾಮನಿಗೆ ಶರಣಾಗತನಾದನು. ಆಗ ಅವನಿಗೆ ಪಂಚಸಂಸ್ಕಾರಗಳು ಆಗಿಯೇ ಇರಲಿಲ್ಲ. ಅವನಿಗೆ ಬೇರೊಂದು ಹೆಸರನ್ನು ಇಡಲಿಕ್ಕೂ ಪ್ರಮಾಣವಿಲ್ಲದ್ದರಿಂದ ಅದಕ್ಕೂ ಸಾಧ್ಯವಾಗಲಿಲ್ಲ. ಹಾಗೆಯೇ ದ್ರೌಪದಿಯು ಶತ್ರುಗಳ ಹಿಂಸೆಗೊಳಗಾಗಿ ಕೃಷ್ಣನಿಗೆ ಶರಣಾಗತಳಾದಾಗ ಅವಳಿಗೂ ಪಂಚಸಂಸ್ಕಾರಗಳು ಆಗಿರಲಿಲ್ಲ. "ಯಾವನಿಂದ ಈ ಸನಾತನವಾದ ಜಗದ್ವ್ಯಾಪಾರಲೀಲೆಯು ಹೊರಹೊಮ್ಮಿದೆಯೋ ಅಂತಹ ಪರಮಾಕಾಶನಿಗೆ

ಶರಣಾಗುತ್ತೇನೆ" ಎಂಬ ಗೀತಾವಾಕ್ಯದಿಂದ ಕೃಷ್ಣನಿಗೂ ಬೇರೊಬ್ಬ ದೇವನ ವಿಷಯದಲ್ಲಿ ಪ್ರಪತ್ತಿಯು ಕಂಡುಬರುತ್ತದೆ. ಅಲ್ಲಿಯೂ ಪ್ರಪತ್ತಿಗೆ ಪಂಚಸಂಸ್ಕಾರಗಳನ್ನು ಹೇತುವೆಂದು ಹೇಳಿಲ್ಲ. ಪ್ರಪತ್ತಿ ಇಲ್ಲದೆಯೇ ಗೋಪಿಕಾಸ್ತ್ರೀಯರು ಧ್ಯಾನದಿಂದಲೇ ವಿಷ್ಣುವನ್ನು ಸೇರಿದರೆಂದು ಭಾಗವತದಲ್ಲಿ ಹೇಳಿದೆ. ಪ್ರಭುವೇ, ಪ್ರೇಮದಿಂದ ಗೋಪಿಯರೂ, ಭಯದಿಂದ ಕಂಸನೂ, ದ್ವೇಷದಿಂದ ಶಿಶುಪಾಲ ಮೊದಲಾದವರೂ, ಬಾಂಧವ್ಯದಿಂದ ಅರ್ಜುನನೂ, ಭಕ್ತಿಯಿಂದ ನಾವು ಎಲ್ಲರೂ ನಿನ್ನಲ್ಲಿ ಸೇರುವೆವು" ಎಂದೂ, "ರಾಜನೇ, ನಾರಾಯಣನ ಚಕ್ರಸಿಂದ ಸಂಹೃತರಾದವರೆಲ್ಲರೂ ಅವನ ಬಳಿಗೇ ಹೋಗಿ ಸೇರುವರು. ಆದ್ದರಿಂದ ಅವನ ಕೋಪವೂ ದೊಡ್ಡ ಅನುಗ್ರಹವೇ ಆಗಿದೆ." ಹೀಗೆ ಭಾಗವತದಲ್ಲಿ ಹೇಳಿದೆ. ಇವಕ್ಕೆಲ್ಲಾ ಏನು ಸಮಾಧಾನವಿದೆ? ಅಂದರೆ ಅವರೆಲ್ಲರೂ ಹಿಂದಿನ ಜನ್ಮದಲ್ಲಿ ಪ್ರಪತ್ತಿಯ ಸಂಸ್ಕಾರಗಳನ್ನು ಹೊಂದಿದ್ದರು ಎಂದೇ ಹೇಳಬೇಕು. ಆದರೆ ಇದೂ ಸರಿಯಲ್ಲ; ಒಮ್ಮೆ ಶರಣಾಗತನಾದವನಿಗೂ ಅಭಯವುಂಟೆಂಬ ವಚನಕ್ಕೆ ವಿರೋಧಬರುವುದು. "ಒಮ್ಮೆ ಶರಣಾಗತನಾಗಿ ನಾನು ನಿನ್ನವನೆಂದು ಭಾವಿಸುವ ಎಲ್ಲಾ ಪ್ರಾಣಿಗಳಿಗೂ ಅಭಯವನ್ನು ನೀಡುವುದೇ ನನ್ನ ವ್ರತ." ಈ ರೀತಿಯಲ್ಲಿ ಶರಣಾಗತರಾದವರಿಗೂ ರಾಕ್ಷಸಜನ್ಮವು ಬಂದದ್ದರಿಂದ ಪ್ರಪತ್ತಿಯೇ ವ್ಯರ್ಥವಾಯಿತು. "ಎಲ್ಲಾ ಧರ್ಮಗಳನ್ನೂ ತೊರೆದು ನನಗೆ ಶರಣಾಗು. ನಾನು ನಿನ್ನನ್ನು ಎಲ್ಲಾ ಪಾಪಗಳಿಂದಲೂ ಬಿಡಿಸುತ್ತೇನೆ. ಗೋಳಾಡಬೇಡ" ಹೀಗೆ ನಾರಾಯಣನೇ ಹೇಳಿದ್ದಾನೆ. ಹಿಂದಿನಜನ್ಮದಲ್ಲಿ ಮಾಡಿದ್ದ ಪ್ರಪತ್ತಿಯಲ್ಲಿ ಸಂಶಯಬಂದರೆ ಈ ಜನ್ಮದಲ್ಲಿ ಆ ಪ್ರಪತ್ತಿಯ ಬಗ್ಗೆ ಯಾರಿಗೂ ಪ್ರವೃತ್ತಿಯೇ ಬರುವಂತಿಲ್ಲ. ಇದೂ ಅಲ್ಲದೆ, ಜಯ ವಿಜಯ ಮೊದಲಾದವರಿಗೆ ಪ್ರಪತ್ತಿ ಇಲ್ಲದೆ ವೈಕುಂಠವು ದೊರೆಯುವಂತಿಲ್ಲವಾದ್ದರಿಂದ ಅಂತವರಿಗೆ ಪುನರ್ಜನ್ಮವನ್ನು ಹೇಳಿರುವುದರಿಂದ ಹಾಗೆಯೇ ಉಳಿದ ಶರಣಾಗತರಿಗೂ ಮತ್ತೆ ಸಂಸ್ಕಾರವು ಬರುವುದಿಲ್ಲವೆಂಬುವಕ್ಕೆ ಭರವಸೆಯೇ ಇಲ್ಲದೇಹೋಗುವುದು. "ಶ್ರದ್ಧಾಭಕ್ತಿಗಳಿಂದೊಡಗೂಡಿದ ಭಕ್ತಿಯಿಂದ ತಿಳಿ. ತ್ರಿಯಂಬಕನನ್ನು ಭಕ್ತಿಯಿಂದ ಅರ್ಚಿಸಿರಿ." ಸರ್ವವ್ಯಾಪಕನಾದ ಮಹಾದೇವನನ್ನು ಪಾಣಿಯಲ್ಲಿ ಧರಿಸಿರಿ. ಹೀಗೆ ಶಿವಭಕ್ತಿಯನ್ನೂ ಶಿವಪೂಜೆಯನ್ನೂ ಶಿವನ ಧಾರಣವನ್ನೂ ವಿಧಿಸುವ ಶ್ರುತಿಗಳಿರುವಂತೆ ವಿಷ್ಣುಭಕ್ತಿಯನ್ನೂ ವಿಷ್ಣುವಿನಪೂಜೆ ಧಾರಣಗಳನ್ನೂ ವಿಧಿಸುವ ಶ್ರುತಿಗಳಿಲ್ಲದ್ದರಿಂದ ಆ ಮತವು ತಾಂತ್ರಿಕವೆನಿಸಿದೆ.

ನನು "ಪರಂ ಜ್ಯೋತಿರುಪಸಂಪದ್ಯ" ಇತಿ ವಾಕ್ಯೇ ಜ್ಯೋತಿಶ್ಶಬ್ದೇನ ಆದಿತ್ಯಮಂಡಲಮುಚ್ಯತೇ. ತಸ್ಮಾನ್ನಿರವಯವಪರಶಿವಜ್ಞಾನನಿಷ್ಠಾನಾಂ ಮೂರ್ತಶಿವೋಪಾಸಕಾನಾಮಿವ ಪ್ರಭಾಕರಮಂಡಲದ್ವಾರಾ ಶಿವಲೋಕಪ್ರಾಪ್ತಿರೇವ. ಕಿಂ ತತ್ರೈವ ಲಿಂಗಶರೀರವಿಲಯಪೂರ್ವಕವ್ಯಾಪಕಾಮೂರ್ತಪರಶಿವಬ್ರಹ್ಮಪ್ರಾಪ್ತಿರ್ನ ಘಟೇತ ಇತ್ಯಾ

ಶಂಕಾಯಾಮಾಹ. ಆತ್ಮಾ ಪ್ರಕರಣಾತ್ ॥ ೩ ॥ ಜ್ಯೋತಿಶ್ಶಬ್ದೇನಾತ್ರ ಪರಮಾತ್ಮೈವೋಚ್ಯತೇ ನ ತ್ವಾದಿತ್ಯಮಂಡಲಂ. ಕುತಃ? ಪ್ರಕರಣಾತ್ "ಯ ಆತ್ಮಾ ಅಪಹತಪಾಪ್ಮಾ ವಿಜರೋ ವಿಮೃತ್ಯುರ್ವಿಶೋಕೋ ವಿಜಿಘತ್ಸೋಽಪಿಪಾಸಸ್ಸತ್ಯಕಾಮಸ್ಸತ್ಯಸಂಕಲ್ಪಃ" ಇತಿ ಹಿ ಪ್ರಜಾಪತಿ ವಾಕ್ಯಪ್ರಕ್ರಮಃ. ಇದಂ ಚ ಪ್ರಕರಣಂ ಪರಮಾತ್ಮವಿಷಯಮಿತಿ "ಉತ್ತ ರಾಚ್ಚೇತ್" ಇತ್ಯಸ್ಮಿನ್ ಸೂತ್ರೇ ಪ್ರತಿಪಾದಿತಂ. ನೋ ಚೇತ್ ಅನಾದಿ ಪಾಶಬದ್ಧಸ್ಯ ಜೀವಸ್ಯ ಅಪಹತಪಾಪ್ಮತ್ವಾದಿಕಂ ಕಥಮುಪಪದ್ಯತೇ. "ಜ್ಞಾಜ್ಞೌ ದ್ವಾವಜಾವೀಶಾನೀಶೌ" ಇತ್ಯತ್ರ ಜೀವೇಶ್ವರಯೋರ ನಾದಿಸಿದ್ಧಸರ್ವಜ್ಞತ್ವಕಿಂಚಿಜ್ಜ್ಞತ್ವಪರಸ್ಪರವಿರುದ್ಧಸ್ವಭಾವಧರ್ಮವೈಲ ಕ್ಷಣ್ಯೇಽಪಿ ಬ್ರಹ್ಮವಿದ್ಯಾಮಹಿಮ್ನಾ ವಿಗಳಿತಮಲತ್ರಯಪಾಶಬದ್ಧಸ್ಸನ್ ಮುಕ್ತದಶಾಯಾಂ ಶುದ್ಧಜೀವಃ ನದೀಸಮುದ್ರವತ್ಪರಂಜ್ಯೋತಿ ರುಪಸಂಪದ್ಯ ಆವಿರ್ಭೂತಪರಂಜ್ಯೋತಿರ್ಮಯಪರಶಿವೋ ಭವತಿ. "ಯಥಾ ನದ್ಯಃ", "ಬ್ರಹ್ಮವಿದಾಪ್ನೋತಿ ಪರಂ" ಇತ್ಯಾದಿಶ್ರುತಿ ಶತೇಷು ಜೀವಬ್ರಹ್ಮಣೋರ್ಭೇದಾಭೇದಃ ಸ್ಪಷ್ಟ ಮುಪದಿಷ್ಟಃ.

"ಪರಂಜ್ಯೋತಿರುಪಸಂಪದ್ಯ" ಎಂಬ ವಾಕ್ಯದಲ್ಲಿ ಜ್ಯೋತಿಶ್ಶಬ್ದವು ಆದಿತ್ಯ ಮೊದಲಾದವನ್ನು ತಿಳಿಸುತ್ತದೆ. ಆದ್ದರಿಂದ ನಿರವಯವಪರಶಿವನಲ್ಲಾಸಕ್ತರಾದವ ರಿಗೂ ಮೂರ್ತಶಿವೋಪಾಸಕರಂತೆ ಸೂರ್ಯಮಂಡಲದಮೂಲಕ ಶಿವಲೋಕವು ದೊರಕುತ್ತದೆ. ಹಾಗಾದರೆ ಅಮೂರ್ತೋಪಾಸಕರಿಗೆ ಇಲ್ಲಿಯೇ ಲಿಂಗಶರೀರವನ್ನು ಕಳೆದುಕೊಂಡು ಸರ್ವವ್ಯಾಪಕವಾದ ಅಮೂರ್ತಪರಶಿವಬ್ರಹ್ಮದಲ್ಲಿ ಸೇರುವರೆಂಬುದು ಹೊಂದುವುದಿಲ್ಲ. ಹೀಗೆ ಆಶಂಕಿಸಿ ಸಮಾಧಾನಮಾಡುತ್ತಾನೆ. "ಪರಂ ಜ್ಯೋತಿಃ" ಎಂಬಲ್ಲಿ ಜ್ಯೋತಿಶ್ಶಬ್ದವು ಆತ್ಮಪ್ರಕರಣದಲ್ಲಿ ಬಂದಿವುದರಿಂದ ಪರಮಾತ್ಮನನ್ನು ತಿಳಿ ಸುವುದೇ ಹೊರತು ಆದಿತ್ಯಮಂಡಲವನ್ನು ಬೋಧಿಸುವುದಿಲ್ಲ. "ಆತ್ಮನು ಪಾಪರ ಹಿತನಾಗಿ ಜರಾಮೃತ್ಯುಶೋಕಗಳಿಲ್ಲದೆ ಕ್ಷುತ್ಪಿಪಾಸಗಳಿಲ್ಲದೆ ಸತ್ಯಕಾಮನೂ ಸತ್ಯ ಸಂಕಲ್ಪನೂ ಆಗಿರುವನು" ಎಂಬ ಆತ್ಮಪ್ರಕರಣದಲ್ಲಿ ಜ್ಯೋತಿಶ್ಶಬ್ದವು ಬಂದಿದೆ. ಈ ಪ್ರಕರಣವು ಪರಮಾತ್ಮನಿಗೆ ಸಂಬಂಧಿಸಿದ್ದೆಂದು "ಉತ್ತರಾಚ್ಚೇದಾವಿರ್ಭೂತ ಸ್ವರೂಪಸ್ತು" ಎಂಬ ಸೂತ್ರದಲ್ಲಿ ತಿಳಿಸಲಾಗಿದೆ. ಇಲ್ಲವಾದರೆ ಅನಾದಿಕಾಲದಿಂದಲೂ ಪಾಶದಿಂದ ಬದ್ಧನಾಗಿರುವ ಜೀವನಿಗೆ ಪಾಪರಾಹಿತ್ಯವೆಂಬುದು ಹೇಗೆ ಹೊಂದುತ್ತದೆ. "ದ್ವಾವಜೌ" ಎಂಬಲ್ಲಿ ಜೀವೇಶ್ವರರಿಗೆ ಅನಾದಿಕಾಲದಿಂದಲೂ ಸರ್ವಜ್ಞತ್ವ ಕಿಂಚಿ ದ್ಜ್ಞತ್ವ ಮೊದಲಾದ ಪರಸ್ಪರ ವಿರುದ್ಧಧರ್ಮಗಳು ಸಹಜವಾಗಿದ್ದರೂ ಬ್ರಹ್ಮ ವಿದ್ಯೆಯ ಮಹಿಮೆಯಿಂದ ಆಣವ ಮಾಯೀಯ ಕಾರ್ಮಿಕ ಮಲಗಳೆಂಬ ಪಾಶ ವನ್ನು ಕಳೆದುಕೊಂಡು ಶುದ್ಧನಾದವನು ಮುಕ್ತದಶೆಯಲ್ಲಿ ನದೀ ಸಮುದ್ರದಂತೆ ಪರಂಜ್ಯೋತಿಯಲ್ಲಿ ಸೇರಿ ಜ್ಯೋತಿರ್ಮಯಃಪರಶಿವನೇ ಆಗುತ್ತಾನೆ. ನದಿಯೂ

ಸಮುದ್ರದಿಂದ ಹೊರಗೆಬಂದು ಪ್ರತ್ಯೇಕವಾಗಿ ಪ್ರವರ್ತಿಸುತ್ತಿದ್ದು ನಾಮರೂಪಗಳನ್ನು ಕಳೆದುಕೊಂಡು ಸಮುದ್ರಕ್ಕೆ ಸೇರುವಂತೆ ಜ್ಞಾನಿಯು ನಾಮರೂಪಗಳನ್ನು ಕಳೆದು ಕೊಂಡು ಪರಂಜ್ಯೋತಿಯಲ್ಲಿ ಸೇರುತ್ತಾನೆ. ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ" "ನೀನು ಅದೇ ಆಗಿದ್ದೀಯೆ" "ನಾನು ಬ್ರಹ್ಮನಿದ್ದೇನೆ" ಈ ಬಗೆಯ ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಭೇದಾಭೇದವನ್ನು ಸ್ಪಷ್ಟವಾಗಿ ಹೇಳಲಾಗಿದೆ.

ನನು "ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ" ಇತ್ಯತ್ರ ಮುಕ್ತಜೀವಸ್ಯ ಬ್ರಹ್ಮಣಾ ಸಹ ಸರ್ವಕಾಮಾವಾಪ್ತಿದರ್ಶನಾತ್ "ಪರಂಜ್ಯೋತಿರುಪಸಂಪದ್ಯ" ಇತಿ ವಾಕ್ಯೇ ಶಿವಜ್ಞಾನಿನಾಂ ಶಿವಸಂಬಂಧ ಏವ ವಿಧೀಯತೇ, ನತು ಶಿವೈಕ್ಯಂ ಇತ್ಯಾಕಾಂಕ್ಷಾಯಾಮಧಿಕರಣಾಂತರಂ ದರ್ಶಯತಿ. ಅವಿಭಾಗಾಧಿಕರಣಂ ॥ ೨ ॥ ಅವಿಭಾಗೇನ ದೃಷ್ಟತ್ವಾತ್ ॥ ೪ ॥ ನದೀಸಮುದ್ರವನ್ಮುಕ್ತಜೀವಃ ಅವಿಭಾಗೇನ ಪರಶಿವಬ್ರಹ್ಮಭಿನ್ನಾಭಿನ್ನತ್ವೇನ ತಿಷ್ಠತಿ, ನತು ಬ್ರಹ್ಮಸಂಬಂಧಿತಯಾ. ಕುತಃ? ದೃಷ್ಟತ್ವಾತ್. "ಯದಾ ಹ್ಯೇವೈಷ ಏತಸ್ಮಿನ್ ಅದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ ಅಥ ಸೋಽಭಯಂ ಗತೋ ಭವತಿ" ಇತ್ಯಾದಿಷು ಮುಕ್ತದಶಾಯಾಂ ಜೀವಬ್ರಹ್ಮಣೋರಭೇದಃ ದೃಷ್ಟತ್ವಾತ್ ದರ್ಶನಾದಿತಿ ಸೂತ್ರಾರ್ಥಃ. "ಪರಂಜ್ಯೋತಿರುಪಸಂಪದ್ಯ", "ತತ್ತ್ವಮಸಿ" ಇತ್ಯಾದಿಶ್ರುತ್ಯರ್ಥಜ್ಞಾನನಿಷ್ಠಾನಾಂ ಶಿವತತ್ತ್ವಪ್ರಾಪ್ತಜೀವಾನಾಂ ಕುಸೂಲಧಾನ್ಯಮಧುಪಿಷ್ಟಸ್ವರ್ಣರೇಣುತಿಲತಂಡುಲಾದಿವತ್ತೇಷಾಂ ತದವಸ್ಥಾಯಾಂ ಪೃಥಗ್ಭೂತಸ್ಥಿತಿಃ ಉತ ನದೀಸಮುದ್ರವದಪೃಥಕ್ಸ್ಥಿತಿರ್ವೇತಿ ಸಂಶಯಃ. "ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ । ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತಿ ॥" ಇತ್ಯಾದಿಶ್ರುತಿಷು "ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ । ಸರ್ಗೇಽಪಿ ನೋಪಜಾಯಂತೇ ಪ್ರಳಯೇ ನ ವ್ಯಥಂತಿ ಚ ॥ ಅನೇಕಜನ್ಮಶುದ್ಧಾನಾಂ ಶ್ರೌತಸ್ಮಾರ್ತಾನುವರ್ತಿನಾಂ । ವಿರಕ್ತಾನಾಂ ಪ್ರಬುದ್ಧಾನಾಂ ಪ್ರಸೀದತಿ ಮಹೇಶ್ವರಃ । ಪ್ರಸನ್ನೇ ಸತಿ ಮುಕ್ತೋಽಭೂನ್ಮುಕ್ತಃ ಶಿವಸಮೋ ಭವೇತ್ ॥" ಇತ್ಯಾದಿಸ್ಮೃತಿಷು ಚ ಮುಕ್ತಾನಾಂ ಜೀವಾನಾಂ ಬ್ರಹ್ಮಪ್ರಾಪ್ತ್ಯನಂತರಮಪಿ ತಿಲತಂಡುಲವತ್ ಕುಸೂಲಧಾನ್ಯವತ್ ಪೃಥಗ್ಭಾವೇನ ಸ್ಥಿತಿತ್ವಸ್ಯ ಬ್ರಹ್ಮವತ್ಸರ್ವಕಾಮಾವಾಪ್ತೇಶ್ಚ ಶ್ರವಣಾತ್ ಮುಕ್ತಜೀವಾನಾಂ ಬ್ರಹ್ಮಸಾದೃಶ್ಯಾಭಾವೇನ ಸ್ಥಿತಿರ್ನಿಶ್ಚೀಯತೇ. ಇತಿ ಪ್ರಾಪ್ತೇ ತತ್ರೋಚ್ಯತೇ ಅವಿಭಾಗೇನೇತಿ. ಶಿವತತ್ತ್ವಪ್ರಾಪ್ತಾನಾಂ

ಜೀವಾನಾಂ ಬ್ರಹ್ಮಾಭಿನ್ನತ್ವೇನ ಸ್ಥಿತಿರುಪದಿಶ್ಯತೇ. ಕುತಃ? ದೃಷ್ಟತ್ವಾತ್, "ಹಿರಣ್ಮಯೋಽಹಂ ಶಿವರೂಪಮಸ್ಮಿ", "ತತ್ತ್ವಮಸಿ", "ಸರ್ವೋ ವೈ ರುದ್ರಃ", "ಸರ್ವಂ ಖಲ್ವಿದಂ ಬ್ರಹ್ಮ" ಇತ್ಯಾದಿ ಶ್ರುತಿಷು ಮುಕ್ತಜೀವಸ್ಯ ಬ್ರಹ್ಮಾಭಿನ್ನತ್ವೇನ ದೃಷ್ಟತ್ವಾತ್ ಬದ್ಧಾವಸ್ಥಾವನ್ಮುಕ್ತಾವಸ್ಥಾಯಾಂ ಜೀವಬ್ರಹ್ಮಣೋರ್ಭೇದೋ ನಾಂಗೀಕರಣೀಯಃ. "ನಿರಂಜನಃ ಪರಮಂ ಸಾಮ್ಯಮುಪೈತಿ", "ಸೋಽಶ್ನುತೇ ಸರ್ವಾನ್ ಕಾಮಾನ್" ಇತ್ಯಾದಿಶ್ರುತೀನಾಂ ಜೀವನ್ಮುಕ್ತದಶಾಯಾಂ ದಹರಾದ್ಯುಪಾಸನಮಹಿಮ್ನಾ ಸ್ವಹೃದಯಕರ್ಣಿಕಾಂತರಭಾಸಮಾನ ಪರಂಜ್ಯೋತಿರ್ಲಿಂಗಾನುಭವದಶಾವಿಶೇಷ ಇತಿ ವೇದಿತವ್ಯಂ. ತತ್ಪೂರ್ವೇ "ಸತ್ಯಂ ಜ್ಞಾನಮನಂತಂ ಬ್ರಹ್ಮ", "ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್" ಇತಿ ದಹರಾಕಾಶೇ ಪರಮಾತ್ಮವೇದನೋಪದೇಶಾತ್. "ಪ್ರಶಾಂತವೃತ್ತಿಕಂ ಚಿತ್ತಂ ಪರಮಾನಂದದೀಪಕಂ। ಅಸಂಪ್ರಜ್ಞಾತನಾಮಾಯಂ ಸಮಾಧಿರ್ಯೋಗಿನಾಂ ಪ್ರಿಯಃ॥", "ತತ್ಸಮಾಧೌ ಮಹಾಯೋಗೀ ಶಿವಂ ಸತ್ಯಾದಿಲಕ್ಷಣಂ। ಹೃದಾಕಾಶೇ ಪರಂ ಲಬ್ಧ್ವಾ ತದ್ರೂಪೇಣಾನುಮೋದತೇ॥" ಇತ್ಯಾದಿನಾ ಸ್ಮೃತ್ಯಾಗಮೇಷ್ವಪಿ ಶಿವಾನುಭವೋ ಬಹುಧಾ ಪ್ರಪಂಚಿತಃ. ತಸ್ಮಾತ್ಸಮಾಧಿಕಾಲೇ ಪ್ರಾರಬ್ಧಾವಸಾನವಿದೇಹಕೈವಲ್ಯಮುಕ್ತೌ ಚ ಬ್ರಹ್ಮಾವಿಭಾಗೇನ ಸ್ಥಿತಿತ್ವಮವಿರುದ್ಧಂ.

"ಮುಕ್ತನು ಬ್ರಹ್ಮದೊಡನೆ ಎಲ್ಲಾ ಫಲವನ್ನು ಅನುಭವಿಸುತ್ತಾನೆ" ಎಂಬಲ್ಲಿ ಮುಕ್ತನಿಗೆ ಬ್ರಹ್ಮದೊಡನೆ ಎಲ್ಲಾ ಫಲಗಳನ್ನೂ ಪಡೆಯುಪನೆಂದು ಹೇಳಿದ್ದರಿಂದ "ಪರಂಜ್ಯೋತಿಯಲ್ಲಿ ಸೇರಿ" ಎಂಬಲ್ಲಿ ಶಿವಯೋಗಿಗಳಿಗೆ ಶಿವನ ಸಂಬಂಧವನ್ನು ಹೇಳಿದೆಯೇ ಹೊರತು ಶಿವೈಕ್ಯವನ್ನು ಹೇಳಿಲ್ಲವೆಂದಾಶಂಕಿಸಿ ಸಮಾಧಾನಮಾಡುತ್ತಾನೆ. ನದೀ ಸಮುದ್ರದಂತೆ ಮುಕ್ತಜೀವನು ಪರಶಿವಬ್ರಹ್ಮದಿಂದ ಬೇರ್ಪಡದಂತಾಗಿರುವನು. ಹೀಗೆ ಅವನಿಗೆ ಬ್ರಹ್ಮದಿಂದ ವಿಭಾಗವೇ ಇಲ್ಲದ್ದರಿಂದ ಅವನು ಬ್ರಹ್ಮಕ್ಕೆ ಸಂಬಂಧಿಸಿಕೊಂಡು ಬೇರೆಯಾಗಿ ಇರುವ ಪ್ರಸಕ್ತಿಯೇ ಇಲ್ಲವೆಂದು ಶ್ರುತಿಯಲ್ಲಿ ಸ್ಪಷ್ಟವಾಗಿ ಕಾಣಬಹುದು. "ಅದೃಶ್ಯನಾದ ಪರಮಾತ್ಮನಲ್ಲಿ ನೆಲೆಗೊಂಡವನು ಅಭಯವನ್ನು ಹೊಂದುತ್ತಾನೆ" ಹೀಗೆ ಶ್ರುತಿಯು ಮುಕ್ತನಿಗೆ ಶಿವೈಕ್ಯವನ್ನು ಹೇಳಿದೆಯೇ ಹೊರತು ಕೇವಲ ಶಿವಸಂಬಂಧವನ್ನು ತಿಳಿಸಿಲ್ಲ. ಆದರೆ "ತತ್ತ್ವಮಸಿ" "ಅಹಂ ಬ್ರಹ್ಮಾಸ್ಮಿ" ಮೊದಲಾದ ಶ್ರುತಿಗಳ ಅರ್ಥವನ್ನು ತಿಳಿದು ಶಿವಭಾವವನ್ನು ಹೊಂದಿದ ಜೀವರು ಕಣಜದಲ್ಲಿರುವ ಧಾನ್ಯದಂತೆಯೂ, ಮಧುವಿನಲ್ಲಿರುವ ಹಿಟ್ಟಿನಂತೆಯೂ, ಸ್ವರ್ಣದ ರೇಣುವಿನಂತೆಯೂ, ತಿಲತಂಡುಲಗಳಂತೆಯೂ ಮುಕ್ತ್ಯವಸ್ಥೆಯಲ್ಲಿ ಶಿವನಿಂದ ಬೇರೆಯಾಗಿರುವರೆ? ಅಥವಾ ನದಿಯು ಸಮುದ್ರ

ವನ್ನು ಸೇರಿ ಸಮುದ್ರವೇ ಆದಂತೆ ಮುಕ್ತನು ಶಿವನಿಂದ ಬೇರ್ಪಡದಿರುವನೆ? ಎಂದು ಸಂಶಯ ಬರುತ್ತದೆ. "ಮುಕ್ತಜೀವನು ದಿವ್ಯಮಂಗಳವಿಗ್ರಹಧಾರಿಯಾದ ಪರಮೇಶ್ವರನನ್ನು ಕಂಡಾಗ ಪುಣ್ಯಪಾಪಗಳನ್ನು ಒದರಿ ನಿರಂಜನನಾಗಿ ಪರಮಾತ್ಮನಿಗೆ ಸಮನಾಗುತ್ತಾನೆ", "ಅವನು ಬ್ರಹ್ಮದೊಡನೆ ಎಲ್ಲಾ ಆಶೆಗಳನ್ನೂ ಹೊಂದುತ್ತಾನೆ" ಎಂದು ಶ್ರುತಿಗಳಲ್ಲೂ, "ಈ ಜ್ಞಾನವನ್ನಾಶ್ರಯಿಸಿ ನನಗೆ ಸಮಾನವಾದ ರೂಪವನ್ನು ಪಡೆದವರು ಲೋಕದಲ್ಲಿ ಮತ್ತೆ ಹುಟ್ಟುವುದಿಲ್ಲ, ಪ್ರಳಯದಲ್ಲಿ ವ್ಯಥೆಪಡುವುದಿಲ್ಲ" "ಅನೇಕಜನ್ಮಗಳಲ್ಲಿ ಶುದ್ಧನಾಗಿ ಶ್ರೌತಸ್ಮಾರ್ತಕರ್ಮಗಳನ್ನು ಫಲಾಪೇಕ್ಷೆಯಿಲ್ಲದೆ ಆಚರಿಸುವ ವಿವೇಕಿಗಳಿಗೆ ಮಹೇಶ್ವರನು ಪ್ರಸನ್ನನಾಗುತ್ತಾನೆ. ಅವನು ಪ್ರಸನ್ನನಾದರೆ ಮುಕ್ತನು ಶಿವನಿಗೆ ಸಮಾನನಾಗುತ್ತಾನೆ" ಎಂದು ಸ್ಮೃತಿಗಳಲ್ಲೂ ಮುಕ್ತರು ಬ್ರಹ್ಮವನ್ನು ಸೇರಿದವೇಲೆಯೂ ತಿಲತಂಡುಲಗಳಂತೆಯೂ, ಕಣಜದಲ್ಲಿ ತುಂಬಿದ ಧಾನ್ಯದಂತೆಯೂ ಬ್ರಹ್ಮದಿಂದ ಬೇರೆಯಾಗಿದ್ದು ಬ್ರಹ್ಮದಂತೆಯೇ ಎಲ್ಲಾ ಇಚ್ಛೆಗಳನ್ನು ಹೊಂದುವರೆಂದು ಹೇಳಲಾಗಿದೆ. ಆದ್ದರಿಂದ ಮುಕ್ತರಿಗೆ ಬ್ರಹ್ಮಸಾದೃಶ್ಯವೇ ಗತಿ ಎಂದು ಆಕ್ಷೇಪಬರುತ್ತದೆ. ಇದಕ್ಕೆ ಸೂತ್ರವು ಸಮಾಧಾನವನ್ನು ತಿಳಿಸುತ್ತದೆ. ಶಿವತತ್ವವನ್ನು ಹೊಂದಿದವರು ಶಿವನಿಂದ ಭಿನ್ನರಾಗದಂತಿರುವರು. "ನಾನು ಹಿರಣ್ಮಯ ಸದಾಶಿವನಾಗಿದ್ದೇನೆ." "ಎಲ್ಲವೂ ಬ್ರಹ್ಮವೇ" "ಎಲ್ಲವೂ ರುದ್ರನೇ" "ಇದೆಲ್ಲವೂ ಆತ್ಮವೇ ಆಗಿದೆ." ಈ ಶ್ರುತಿಗಳು ಮುಕ್ತರನ್ನು ಬ್ರಹ್ಮದಿಂದ ಭಿನ್ನರಲ್ಲವೆಂದು ಸ್ಪಷ್ಟವಾಗಿ ತಿಳಿಸುತ್ತಿವೆ. ಆದ್ದರಿಂದ ಬದ್ಧಾವಸ್ಥೆಯಲ್ಲಿರುವಂತೆ ಮುಕ್ತಾವಸ್ಥೆಯಲ್ಲೂ ಜೀವರಿಗೆ ಭೇದವನ್ನು ಒಪ್ಪಲಾಗುವುದಿಲ್ಲ. "ನಿರಂಜನನಾಗಿ ಪರಮಾತ್ಮನಿಗೆ ಸಮನಾಗುತ್ತಾನೆ." "ಅವನು ಬ್ರಹ್ಮದೊಡನೆ ಎಲ್ಲಾ ಇಚ್ಛೆಗಳನ್ನೂ ಪಡೆಯುತ್ತಾನೆ" ಈ ಶ್ರುತಿಗಳು ಜೀವನ್ಮುಕ್ತದಶೆಯಲ್ಲಿ ದಹರಾದ್ಯುಪಾಸನಗಳ ಮಹಿಮೆಯಿಂದ ಹೃದಯಕಮಲದಲ್ಲಿ ಶೋಭಿಸುವ ಜ್ಯೋತಿರ್ಲಿಂಗದ ಅನುಭವವನ್ನು ಪಡೆದ ಸ್ಥಿತಿಯನ್ನು ತಿಳಿಸುತ್ತವೆ. ಈ ವಾಕ್ಯಗಳಿಗೆ ಮೊದಲು "ಬ್ರಹ್ಮವು ಸತ್ಯಜ್ಞಾನಾತ್ಮಕವೂ ಸರ್ವವ್ಯಾಪಕವೂ ಆಗಿದೆ." "ಪರಮಾಕಾಶದಲ್ಲಿ ನೆಲಸಿರುವ ಪರಮಾತ್ಮನನ್ನು ತಿಳಿದವನು" ಎಂಬ ವಾಕ್ಯಗಳಲ್ಲಿ ಪರಮಾತ್ಮನನ್ನು ತಿಳಿಯಬೇಕೆಂದು ಉಪದೇಶಿಸಲಾಗಿದೆ. "ಚಿತ್ತವೃತ್ತಿಗಳು ಪ್ರಶಾಂತವಾಗಿ ವಿಚಿತ್ರವಾದ ಪರಮಾನಂದವನ್ನು ಪ್ರಕಾಶಗೊಳಿಸುವ ಅಸಂಪ್ರಜ್ಞಾತವೆಂಬ ಸಮಾಧಿಯು ಯೋಗಿಗಳಿಗೆ ಬಹಳ ಪ್ರಿಯವಾಗಿರುವುದು. ಆ ಸಮಾಧಿಯಲ್ಲಿ ಶಿವಯೋಗಿಯು ಸಚ್ಚಿದಾನಂದರೂಪನಾದ ಶಿವನನ್ನು ಹೃದಯಾಕಾಶದಲ್ಲಿ ಅನುಭವಿಸಿ ಆ ರೂಪದಿಂದಲೇ ಸಂತೋಷಪಡುತ್ತಾನೆ" ಹೀಗೆ ಸ್ಮೃತ್ಯಾಗಮಗಳಲ್ಲಿಯೂ ಶಿವಾನುಭಾವವನ್ನು ಬಹಳವಾಗಿ ತಿಳಿಸಲಾಗಿದೆ. ಆದ್ದರಿಂದ ಸಮಾಧಿಕಾಲದಲ್ಲಿಯೂ ಪ್ರಾರಬ್ಧವು ಮುಗಿದಮೇಲೆ ವಿದೇಹಕೈವಲ್ಯಮುಕ್ತಿಯಲ್ಲಿಯೂ ಮುಕ್ತನು ಬ್ರಹ್ಮದಿಂದ ಬೇರ್ಪಡದ ರೀತಿಯಲ್ಲಿರುವನೆಂಬುದಕ್ಕೆ ವಿರೋಧವಿಲ್ಲ.

**ನನು "ನಮೋ ಹಿರಣ್ಯಬಾಹವೇ ಹಿರಣ್ಯವರ್ಣಾಯ" ಇತ್ಯಾ.**

ದಿಷು ಬ್ರಹ್ಮಣಃ ಸಾವಯವತ್ವಂ. " ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ" ಇತ್ಯಾದಿಷು ನಿರ್ದೇಹತ್ವನಿರ್ವಿಶೇಷತ್ವಾದಿಕಸ್ಯ, " ಸಾಕ್ಷೀ ಚೇತೋ ಕೇವಲೋ ನಿರ್ಗುಣಶ್ಚ " " ನಿಷ್ಕಲಂ ನಿಷ್ಕ್ರಿಯಂ ಶಾಂತಂ " ಇತ್ಯಾದಿಷು ನಿರ್ಗುಣತ್ವಸ್ಯ, " ಆನಂದಮಯೋ ಹ್ಯಾನಂದಭುಕ್", " ಸತ್ಯಕಾಮಸ್ಸತ್ಯಸಂಕಲ್ಪಃ " ಇತ್ಯಾದಿಷು ಸಗುಣತ್ವಸ್ಯ ಚ ದೃಷ್ಟತ್ವಾತ್ ಸರ್ವೇಷಾಂ ವೇದಾಂತಾನಾಂ ಪರಸ್ಪರವಿರೋಧ ಅನಿವಾರ್ಯಃ. ಸರ್ವಶ್ರುತಿಸಮನ್ವಯಸ್ಥಾಪನಾರ್ಥಂ ಬ್ರಹ್ಮದ್ವಯ ಸ್ವೀಕಾರೇ " ಏಕಮೇವಾದ್ವಿತೀಯಂ ಬ್ರಹ್ಮ " " ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ " ಇತ್ಯಾದಿಶ್ರುತಿವಿರೋಧಃ. ಕಿಂಚ " ತತ್ತ್ವಮಸಿ " ಇತ್ಯಾದಿಶ್ರುತೀನಾಂ ಜಹದಜಹಲ್ಲಕ್ಷಣಯಾ ಶಿವಜೀವೋಪಾಧಿ ಭೇದಕಲ್ಪಕಮಾಯಾವಿದ್ಯೋಪಾಧಿತ್ಯಾಗೇನ ಬಿಂಬಪ್ರತಿಬಿಂಬವದೇಕತ್ವಂ. ಘಟಪಟೋಪಾಧಿತ್ಯಾಗೇನಾಕಾಶೈಕತ್ವವತ್ ಶಿವಜೀವೈಕ್ಯಮಿತಿ ಕೇಚಿತ್ ಬ್ರಹ್ಮಣಃ ಶರೀರೇಂದ್ರಿಯಾದ್ಯಭಾವೇ ಜಗಜ್ಜನ್ಮಾದಿಕಾರಣತ್ವಾಯೋಗಾತ್ ನಿಷ್ಪ್ರಯೋಜಕೇನ ಪ್ರಯೋಜನಾಭಾವಾತ್ ನಿರ್ವಿಶೇಷವಸ್ತುಸತ್ತ್ವೇ ಮಾನಾಭಾವಾಚ್ಚ ಮುಕ್ತದಶಾಯಾಂ ತದುಪಾಸಕಃ ತದ್ವದ್ದಿವ್ಯಮಂಗಳವಿಗ್ರಹಸ್ಸನ್ ಶೇಷತ್ವಕೈಂಕರ್ಯಪಾರತಂತ್ರ್ಯಾದಿ ಭಾವೇನ ಸ್ಥಿತ ಇತ್ಯಾದಿನಾನಾಭೇದೇನ ತದ್ವತ್ಪೂರ್ವಾಚಾರ್ಯಮತಾನುಸಾರಿಣೋ ವದಂತಿ. ತಸ್ಮಾದ್ವೇದಾಂತಪೂರ್ವಾಚಾರ್ಯಮತೇಷು ಅವ್ಯವಸ್ಥಾ ಕಥಂ ವಾರ್ಯತ ಇತ್ಯಾಶಂಕಯಾ ಶ್ರುತ್ಯೇಕದೇಶಪ್ರಾಮಾಣ್ಯಾಚಾರ್ಯಾಂತರಮತಂ ಸರ್ವಶ್ರುತಿಪ್ರಾಮಾಣ್ಯಸ್ವಮತಂ ಚ ಭಗವಾನ್ ಬಾದರಾಯಣೋ ದರ್ಶಯತಿ. ಬ್ರಾಹ್ಮೇಣ ಜೈಮಿನಿರುಪನ್ಯಾಸಾದಿಭ್ಯಃ ॥ ೫ ॥ " ಬ್ರಾಹ್ಮಣೋಽಸ್ಯ ಮುಖಮಾಸೀದ್ಬಾಹೂ ರಾಜನ್ಯಃ ಕೃತಃ। ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋ ಅಜಾಯತ ॥ " ಇತ್ಯಾದೌ ಶಿವಸ್ಯ ಪರಬ್ರಹ್ಮಣಃ ಮುಖಾದ್ಯವಯವೇಷು ಬ್ರಾಹ್ಮಣಾದ್ಯುತ್ಪತ್ತ್ಯವಗಮಾತ್ ನಿರ್ದೇಹಸ್ಯ ನಿರಿಂದ್ರಿಯಸ್ಯ ಜಗತ್ಕಲ್ಪನಾಯೋಗಾಚ್ಚ " ಅಪ್ರಾಣೋ ಹ್ಯಮನಾಶ್ಶುಭ್ರಃ " ಇತ್ಯಾದಿಶ್ರುತೀನಾಂ ಅಪ್ರಾಕೃತಾಸದೃಶಶರೀರೇಂದ್ರಿಯಮನಃಪ್ರಾಣಸದ್ಭಾವೋ ವಿಧೀಯತ ಇತಿ ಜೈಮಿನ್ಯಾಚಾರ್ಯೋ ಮನ್ಯತೇ. ಕುತಃ? ಉಪನ್ಯಾಸಾದಿಭ್ಯಃ " ಯ ಆತ್ಮಾ ಅಪಹತಪಾಪ್ಮಾ" ಇತ್ಯಾದಿನಾ ಪ್ರಜಾಪತಿ ವಾಕ್ಯೇ ಮುಕ್ತಾನಾಂ ಪರಬ್ರಹ್ಮವತ್ಸತ್ಯಸಂಕಲ್ಪಾಸನೇಭ್ಯಃ ಮುಕ್ತಾನಾಂ ಶರೀರತ್ವಂ ಗಮ್ಯತೇ. " ಜಕ್ಷನ್ ಕ್ರೀಡನ್ ರಮಮಾಣಃ " ಇತ್ಯಾದಿಶ್ರುತಿಷು ಮುಕ್ತಾನಾಂ ಬ್ರಹ್ಮಭಾವಮಾಪನ್ನಾನಾಂ ವ್ಯವಹಾರಾ ದೃಶ್ಯಂತೇ.

**ಅತ ಏಭ್ಯ ಉಪನ್ಯಾಸಾದಿಭ್ಯಃ ಬ್ರಹ್ಮಶರೀರತ್ವವಾದ ಏವ ಯುಕ್ತ ಇತಿ ಜೈಮಿನ್ಯಾಚಾರ್ಯಮತಂ.**

"ನಮೋ ಹಿರಣ್ಯಬಾಹವೇ" ಎಂಬಲ್ಲಿ ಬ್ರಹ್ಮ ಸಾವಯವವೆನಿಸಿದೆ. "ಶರೀರದ ಅಭಿಮಾನವನ್ನು ಬಿಟ್ಟವನಿಗೆ ಪ್ರಿಯಾಪ್ರಿಯಗಳು ಅಂಟುವುದಿಲ್ಲ" ಎಂಬಲ್ಲಿ ಬ್ರಹ್ಮ ನಿರ್ದೇಹವೂ ನಿರ್ವಿಶೇಷವೂ ಎನಿಸಿದೆ. "ಅವನು ಸಾಕ್ಷಿಯೂ ಕೇವಲನೂ ನಿರ್ಗುಣನೂ ಆಗಿದ್ದಾನೆ" ಎಂಬಲ್ಲಿ ಬ್ರಹ್ಮ ನಿರ್ಗುಣವೆನಿಸಿದೆ. "ಅವನು ಸತ್ಯಕಾಮನೂ ಇರುವನು" ಎಂಬಲ್ಲಿ ಬ್ರಹ್ಮ ಸಗುಣವೆನಿಸಿದೆ. ಇದರಿಂದ ವೇದಾಂತಗಳೆಲ್ಲಕ್ಕೂ ಪರಸ್ಪರ ವಿರೋಧವು ಕಂಡುಬರುತ್ತದೆ. ಈ ಎಲ್ಲಾ ಶ್ರುತಿಗಳಿಗೂ ಸಮನ್ವಯವನ್ನು ಏರ್ಪಡಿಸಲಿಕ್ಕಾಗಿ ಬ್ರಹ್ಮದ ಎರಡು ಅವಸ್ಥೆಗಳನ್ನೂ ಮತ್ತು ಬ್ರಹ್ಮಗಳೆರಡನ್ನು ಒಪ್ಪಿದರೆ "ಬ್ರಹ್ಮ ಒಂದೇ ಇದೆ. ರುದ್ರನೊಬ್ಬನೇ ಎರಡನೆಯವನಿಲ್ಲದಿರುವನು" ಎಂಬ ಶ್ರುತಿಗಳಂತೆ ಶಿವಜೀವರ ಉಪಾಧಿಗಳೆನಿಸಿದ ಮಾಯೆ ಅವಿದ್ಯೆಗಳನ್ನು ಜಹದಜಹಲ್ಲಕ್ಷಣೆಯಿಂದ ತೊರೆದರೆ ಅವರಿಬ್ಬರೂ ಬಿಂಬಪ್ರತಿಬಿಂಬಗಳಂತೆ ಒಂದೇ ಆಗುತ್ತಾರೆ. ಘಟಮಠಗಳ ಉಪಾಧಿಗಳನ್ನು ತೊರೆದರೆ ಅವೆರಡರೊಳಗಿನ ಆಕಾಶವು ಒಂದೇ ಆಗುವಂತೆ ಶಿವಜೀವರು ಒಂದೇಆಗಿದ್ದಾರೆ ಎಂದು ಕೆಲವರು ಹೇಳುತ್ತಾರೆ. ಬ್ರಹ್ಮಕ್ಕೆ ಶರೀರ ಇಂದ್ರಿಯಗಳಿಲ್ಲದಮೇಲೆ ಅದು ಜಗತ್ಕಾರಣವಾಗಲಾರದು; ಅದರಿಂದ ಯಾರಿಗೂ ಯಾವ ಪ್ರಯೋಜನವೂ ಆಗಲಾರದು. ಇದೂ ಅಲ್ಲದೆ ನಿರ್ವಿಶೇಷವಾದ ವಸ್ತುವೇ ಎಲ್ಲಿಯೂ ಇಲ್ಲದ್ದರಿಂದ ಬ್ರಹ್ಮ ನಿರ್ವಿಶೇಷವೆಂಬುದಕ್ಕೆ ಯಾವ ಪ್ರಮಾಣವೂ ಇಲ್ಲ. ಆದ್ದರಿಂದ ಬ್ರಹ್ಮವು ದಿವ್ಯಮಂಗಳವಿಗ್ರಹ ಧಾರಿಯಾಗಿರುವುದು. ಮುಕ್ತದಶೆಯಲ್ಲಿ ಜೀವನೂ ಹಾಗೆಯೇ ದಿವ್ಯರೂಪದಿಂದ ಪರಮಾತ್ಮನಿಗೆ ಸೇವೆಯನ್ನು ಸಲ್ಲಿಸುತ್ತಲಿರುವನು ಎಂದು ಕೆಲವರು ಹೇಳುತ್ತಾರೆ. ಹೀಗೆ ಪೂರ್ವಾಚಾರ್ಯರಲ್ಲಿಯೇ ಅನೇಕ ಮತಗಳು ಇರುವುದರಿಂದ ಈ ಅವ್ಯವಸ್ಥೆಯನ್ನು ಹೇಗೆ ಬಗೆಹರಿಸಬೇಕೆಂದಾಶಂಕಿಸಿ ಶ್ರುತಿಯ ಒಂದೊಂದು ಭಾಗವನ್ನು ಪ್ರಮಾಣವೆಂದು ಸ್ವೀಕರಿಸುವ ಆಚಾರ್ಯರ ಮತವನ್ನು ಹೇಳಿ ಎಲ್ಲ ಶ್ರುತಿಗಳನ್ನೂ ಪ್ರಮಾಣವೆಂದು ಒಪ್ಪುವ ತನ್ನ ಮತವನ್ನು ಕೊನೆಗೆ ಪೂಜ್ಯ ಬಾದರಾಯಣನು ತಿಳಿಸುತ್ತಾನೆ. "ವಿಶ್ವಾತ್ಮನ ಮುಖವೇ ಬ್ರಾಹ್ಮಣನೂ, ತೋಳುಗಳೇ ಕ್ಷತ್ರಿಯನೂ, ತೊಡೆಗಳೇ ವೈಶ್ಯನೂ ಆಗಿರುವಂತೆ ಅವನ ಕಾಲುಗಳಿಂದ ಶೂದ್ರನು ಹುಟ್ಟಿದನು" ಎಂಬಲ್ಲಿ ಪರಶಿವಬ್ರಹ್ಮದ ಮುಖಾದ್ಯವಯವಗಳಲ್ಲಿ ಬ್ರಾಹ್ಮಣ ಮೊದಲಾದ ನಾಲ್ಕುಬಗೆಯ ವರ್ಣದವರು ಹುಟ್ಟಿದರೆಂದು ಹೇಳಿದೆ. ದೇಹ ಇಂದ್ರಿಯಗಳಿಲ್ಲದಿರುವವನು ಜಗತ್ತನ್ನು ಸೃಷ್ಟಿಸಲಾರನಾದ್ದರಿಂದ "ಪ್ರಾಣ ಮನಸ್ಸುಗಳಿಲ್ಲದೆಯೇ ಅವನು ಶುಭ್ರನಾಗಿದ್ದಾನೆ" ಎಂಬ ಶ್ರುತಿಯು ಅವನಲ್ಲಿ ಅಪ್ರಾಕೃತವೂ ಅಸದೃಶವೂ ಆದ ಶರೀರ ಇಂದ್ರಿಯ ಮನಸ್ಸು ಮತ್ತು ಪ್ರಾಣಗಳನ್ನು ತಿಳಿಸುತ್ತದೆ ಎಂದು ಜೈಮಿನಿಯು ಭಾವಿಸುತ್ತಾನೆ; "ಯಾಕೆಂದರೆ ಆತ್ಮನು ಪಾಪರಹಿತನು" ಎಂದು ಮುಂತಾದ ಪ್ರಜಾಪತಿ ವಾಕ್ಯದಲ್ಲಿ ಮುಕ್ತರು

ಪರಬ್ರಹ್ಮದಂತೆ ಸತ್ಯಸಂಕಲ್ಪರಾಗಿರುವರೆಂದು ಹೇಳಿದ್ದರಿಂದ ಅವರಿಗೂ ಶರೀರವಿರುವುದಾಗಿ ತಿಳಿದುಬರುತ್ತದೆ. ಮುಕ್ತರ ಕ್ರೀಡಾವಿಹಾರವನ್ನು ಶ್ರುತಿಯಲ್ಲಿ ತಿಳಿಸಿರುವುದರಿಂದ ಅವರು ಬ್ರಹ್ಮಭಾವವನ್ನು ಹೊಂದಿದ್ದರೂ ಅವರಿಗೆ ದಿವ್ಯದೇಹವಿರಲೇಬೇಕೆಂದು ಕಾಣುತ್ತದೆ. ಶ್ರುತಿಯಲ್ಲಿ ಬ್ರಹ್ಮದೊಡನೆ ಮುಕ್ತನ ವಿಹಾರಯಾತ್ರೆಯನ್ನು ತಿಳಿಸಿರುವುದರಿಂದ ಬ್ರಹ್ಮಕ್ಕೂ ಶರೀರವಿರಬೇಕೆಂದು ಜೈಮಿನಿಯು ಹೇಳುತ್ತಾನೆ.

ಏವಂ ಸಾವಯವಮಾತ್ರಬ್ರಹ್ಮವಾದಿಮತಮುಪನ್ಯಸ್ಯ ನಿರವಯವನಿಷ್ಕ್ರಿಯನಿರ್ವಿಶೇಷಬ್ರಹ್ಮವಾದಿಮತಮಾಹ. ಚಿತಿ ತನ್ಮಾತ್ರೇಣ ತದಾತ್ಮಕತ್ವಾದಿತ್ಯೌಡುಲೋಮಿಃ ॥ ೬ ॥ "ಸದೇವ ಸೌಮ್ಯೇದಮಗ್ರ ಆಸೀತ್" "ಏಕಮೇವಾದ್ವಿತೀಯಂ ಬ್ರಹ್ಮ" ಇತ್ಯಾದಿಷು ಬ್ರಹ್ಮಾತಿರಿಕ್ತವಸ್ತುನಿಷೇಧತ್ವಸ್ಯ ಬ್ರಹ್ಮಣಶ್ಚೈತನ್ಯಮಾತ್ರತ್ವಸ್ಯ ಚೋಪದೇಶಾತ್, ಚೈತನ್ಯರೂಪಸ್ಯ ಜಡಪ್ರಪಂಚಕಾರಣತ್ವಾಯೋಗಾತ್ ಚಿತಿತನ್ಮಾತ್ರೇಣ ಚೈತನ್ಯಮಾತ್ರಸ್ವರೂಪತ್ವೇನ ಕಾಲತ್ರಯೇಷು ಬ್ರಹ್ಮೈಕಮೇವ ತಿಷ್ಠತೀತ್ಯೌಡುಲೋಮ್ಯಾಚಾರ್ಯೋ ಮನ್ಯತೇ. ಕುತಃ? "ತದಾತ್ಮಕತ್ವಾತ್." ಅದೃಶ್ಯಮವ್ಯವಹಾರ್ಯಮಗ್ರಾಹ್ಯಮಲಕ್ಷಣಮಚಿಂತ್ಯಮವ್ಯಪದೇಶ್ಯಮೇಕಾತ್ಮಪ್ರತ್ಯಯಸಾರಂ" "ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ" ಇತಿ. "ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣಮಚಕ್ಷುಃಶ್ರೋತ್ರಂ ತದಪಾಣಿಪಾದಂ" "ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ" ಇತ್ಯಾದಿಶ್ರುತಿಷು ಶಿವಸ್ಯ ಪರಬ್ರಹ್ಮಣಃ ಶರೀರೇಂದ್ರಿಯಾದಿನಿರಾಕರಣಪೂರ್ವಕಚೈತನ್ಯಮಾತ್ರಾತ್ಮಕತತ್ತ್ವೋಪದೇಶಾತ್ ಪರಮಾತ್ಮಸ್ವರೂಪಂ ನಿತ್ಯನಿರವಯವಾತ್ಮಮೇವ ಯುಕ್ತಂ. ಜೀವೇಶ್ವರಾದಿಪ್ರಪಂಚಃ ರಜ್ಜುಸರ್ಪವತ್ತತ್ರಭ್ರಾಂತ್ಯಾ ಪ್ರಸಕ್ತ ಇತ್ಯೌಡುಲೋಮಿಮತಂ.

ಹೀಗೆ ಬ್ರಹ್ಮ ಸಾವಯವವೆಂಬುದನ್ನು ತಿಳಿಸಿ ಅದನ್ನು ನಿರವಯವ ನಿಷ್ಕ್ರಿಯ ನಿರ್ವಿಶೇಷವೆಂದು ಹೇಳುವ ಮತವನ್ನು ತಿಳಿಸುತ್ತಾನೆ. "ಬ್ರಹ್ಮ ಒಂದೇ ಅದ್ವಿತೀಯವಾಗಿದೆ" ಎಂಬಲ್ಲಿ ಬ್ರಹ್ಮಕ್ಕಿಂತ ಬೇರೆ ವಸ್ತುವೇ ಇಲ್ಲವೆಂದೂ, ಅದು ಕೇವಲ ಚೈತನ್ಯವೆಂದೂ ಹೇಳಿದ್ದರಿಂದಲೂ, ಇಂತಹ ಚೈತನ್ಯವು ಜಡಪ್ರಪಂಚಕ್ಕೆ ಕಾರಣವಾಗದೇಇರುವುದರಿಂದಲೂ ಕೇವಲ ಚೈತನ್ಯವಷ್ಟೇ ಬ್ರಹ್ಮದ ಸ್ವರೂಪವಾದ್ದರಿಂದಲೂ ಬ್ರಹ್ಮವು ಒಂದೇಬಗೆಯಾಗಿರುತ್ತದೆ ಎಂದು ಔಡುಲೋಮ್ಯಾಚಾರ್ಯನು ಹೇಳುತ್ತಾನೆ. ಬ್ರಹ್ಮವು ಹಾಗೆಯೇ ಇರುವುದೆಂದು ಶ್ರುತಿಯೇ ಸ್ಪಷ್ಟವಾಗಿ ತಿಳಿಸಿದೆ. "ಬ್ರಹ್ಮವು ಅದೃಶ್ಯವೂ ವ್ಯವಹಾರಾನರ್ಹವೂ ಅಗ್ರಾಹ್ಯವೂ ಆಗಿದೆ. ಇದಕ್ಕೆ ಯಾವ ಗುರುತೂ ಇಲ್ಲ. ಅದರ ಬಗ್ಗೆ ಚಿಂತಿಸಲಿಕ್ಕೆ ಯಾರಿಗೂ ಸಾಧ್ಯವಿಲ್ಲ. ಅದು ಹೀಗೆಯೇ ಇದೆ ಎಂದು ಹೇಳಲಿಕ್ಕೆ ಯಾರಿಗೂ ಆಗುವುದಿಲ್ಲ. ಎಲ್ಲೆಲ್ಲಿಯೂ ಆತ್ಮನೊಬ್ಬನೇ ಇರುವ

ನೆಂಬುದು ನಮ್ಮ ಅನುಭವಕ್ಕೆ ಮಾತ್ರವೇ ಗೋಚರವಾಗುವುದು." "ಪ್ರಪಂಚಕ್ಕೆ ವಿಶ್ರಾಂತಿಸ್ಥಲವೂ ಶಾಂತವೂ ಅದ್ವೈತನೂ ಆದ ಈ ಶಿವನನ್ನು ತ್ರಿಮೂರ್ತ್ಯತೀತನೆಂದು ಅನುಭವಿಗಳು ಹೇಳುತ್ತಾರೆ." "ಅವನೇ ಸರ್ವವ್ಯಾಪಕ ಜೀವನೆಂದು ತಿಳಿಯಬೇಕು" ಪರಮಾತ್ಮನು ಕಣ್ಣಿಂದ ನೋಡಲಿಕ್ಕಾಗದೆ, ಕೈಯಿಂದ ಹಿಡಿಯಲಿಕ್ಕಾಗದೆ, ವರ್ಣ ಗೋತ್ರಗಳಿಲ್ಲದೆ ಜ್ಞಾನಕರ್ಮೇಂದ್ರಿಯಗಳಿಲ್ಲದೆ ನಿತ್ಯವೂ ವಿಭುವೂ ಸರ್ವವ್ಯಾಪಕವೂ ಸೂಕ್ಷ್ಮವೂ ಆಗಿರುವವನು" ಈ ಬಗೆಯ ಶ್ರುತಿಗಳು ಪರಶಿವಬ್ರಹ್ಮಕ್ಕೆ ಶರೀರೇಂದ್ರಿಯ ಗಳಿಲ್ಲವೆಂದು ತಿಳಿಸಿ ಅದು ಕೇವಲ ಚೈತನ್ಯಮಾತ್ರವೆಂದು ನಿರ್ದೇಶಿಸಿವೆ. ಆದ್ದರಿಂದ ಪರಮಾತ್ಮನು ನಿರವಯವನೂ ಆಗಿರುವನೆಂಬುದೇ ಯುಕ್ತವಾಗಿದೆ. ಜೀವ ಈಶ್ವರ ಮೊದಲಾದ ಪ್ರಪಂಚವು ರಜ್ಜುವಿನಲ್ಲಿ ಸರ್ಪದಂತೆ ಪರಮಾತ್ಮನಲ್ಲಿ ಭ್ರಾಂತಿಯಿಂದ ತೋರುತ್ತದೆ ಎಂದು ಔಡುಲೋಮಿಯು ಹೇಳುತ್ತಾನೆ.

**ಏವಂ ಶ್ರುತ್ಯೇಕದೇಶಪ್ರಾಮಾಣ್ಯಸಾವಯವವಾದಿಮತಂ ನಿರವಯವಾದಿಮತಂ ಚ ನಿರೂಪ್ಯ ಸರ್ವವೇದಾಂತಸಾರಭೂತಂ ಸ್ವಮತಮುಪ್ಯಾಹ.**

**ಏವಮಪ್ಯುಪನ್ಯಾಸಾತ್ಪೂರ್ವಭಾವಾದವಿರೋಧಂ ಬಾದರಾಯಣಃ ॥೭॥**

ಏವಮುಪನ್ಯಾಸಾತ್ "ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚಾಮೂರ್ತಮೇವ ಚ," "ತದಾದಿಮಧ್ಯಾಂತವಿಹೀನಮೇಕಂ ವಿಭುಂ ಚಿದಾನಂದಮರೂಪಮದ್ಭುತಂ", "ಉಮಾಸಹಾಯಂ ಪರಮೇಶ್ವರಂ ಪ್ರಭುಂ ತ್ರಿಲೋಚನಂ ನೀಲಕಂಠಂ ಪ್ರಶಾಂತಂ" ಇತ್ಯಾದಿಶ್ರುತಿಶತೇಷು ಶಿವಸ್ಯ ಪರಬ್ರಹ್ಮಣಃ ಪ್ರಪಂಚಪವನಾದಿವನ್ಮೂರ್ತಾಮೂರ್ತೋಪನ್ಯಾಸಾತ್ ಪ್ರತಿಪಾದನಾತ್ ಏಕಸ್ಯ ಬ್ರಹ್ಮಣಃ ಮೂರ್ತಾಮೂರ್ತಾತ್ಮಕತ್ವಮವಿರೋಧಮಿತಿ ಸರ್ವವೇದಾಂತಸಿದ್ಧಾಂತನಿಪುಣೋ ಬಾದರಾಯಣಾಚಾರ್ಯೋ ಮನ್ಯತೇ. ಕುತಃ? ಪೂರ್ವಭಾವಾತ್. ಪೂರ್ವೇಷಾಂ "ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ।" "ಯ ಆತ್ಮಾ ಅಪಹತಪಾಪ್ಮಾ" ಇತ್ಯಾದಿಷು ಸರ್ವಶಕ್ತತ್ವಾಪಹತಪಾಪ್ಮತ್ವಸತ್ಯಕಾಮತ್ವಾದೀನಾಮಪಿ ಭಾವಾತ್ ವಿದ್ಯಮಾನತ್ವಾತ್ "ಉಭಯವಿಧಿಬಲಾದುಭಯಸಿದ್ಧಿಃ" ಇತಿ ನ್ಯಾಯೇನ ಮೂರ್ತಾಮೂರ್ತೋಭಯವಿಧಾಯಕಶ್ರುತಿಬಲಾತ್ ಉಭಯಮಂಗೀಕರ್ತವ್ಯಂ. "ಬ್ರಾಹ್ಮಣೋಽಸ್ಯ ಮುಖಮಾಸೀತ್" ಇತ್ಯಾದಿಮೂರ್ತಬ್ರಹ್ಮಶ್ರುತಿಮಾತ್ರಪ್ರಮಾಣತ್ವೇ "ಆಕಾಶವತ್ಸರ್ವಗತಶ್ಚ ನಿತ್ಯಃ", "ಅಂತಃಪೂರ್ಣೋ ಬಹಿಃ ಪೂರ್ಣಃ ಪೂರ್ಣಕುಂಭಮಿವಾರ್ಣವೇ । ಅಂತಶ್ಶೂನ್ಯೋ ಬಹಿಶ್ಶೂನ್ಯಶ್ಶೂನ್ಯಕುಂಭ ಇವಾಂಬರೇ ॥", "ಖಂ ವಾಯುರ್ಜ್ಯೋತಿರಾಪಃ ಪೃಥಿವೀ ವಿಶ್ವಸ್ಯ ಧಾರಿಣೀ । ಯತ್ಪರಂ ಬ್ರಹ್ಮ ಸರ್ವಾತ್ಮಾ ವಿಶ್ವಸ್ಯಾಯತನಂ ಮಹತ್ ॥" ಇತ್ಯಾದಿನಾ ವ್ಯಾಪಕತ್ವ

ವಿಧಾಯಕಬಹುಶ್ರುತಿವಿರೋಧಾತ್ ಸಾವಯವಸ್ಯ ಘಟಾದಿವತ್ಪರಚ್ಛಿನ್ನತ್ವಾತ್ "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ" ಇತ್ಯಾದಿಶ್ರುತಿನಿರ್ದಿಷ್ಟವ್ಯಾಪಕಾಮೂರ್ತಾಕಾಶಾದಿಕಾರಣತ್ವಂ ಕಥಮುಪಪದ್ಯತೇ? ಉತ ಸರ್ವಾಂತರ್ಯಾಮಿತ್ವಮಪ್ಯಸಂಗತಂ. ಜಗದಧಿಷ್ಠಾನತ್ವಂ ಚ ನೋಪಪನ್ನಂ. "ಸತ್ಯಂ ಜ್ಞಾನಮನಂತಂ ಬ್ರಹ್ಮ" "ಸ ಯಥಾ ಸೈಂಧವಘನೋಽನಂತರೋಽಬಾಹ್ಯಃ ಕೃತ್ಸ್ನೋ ರಸಘನ ಏವ। ಏವಂ ವಾ ಅರೇಽಯಮಾತ್ಮಾನಮಂತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನ ಏವ॥" ಇತ್ಯಾದಿಶ್ರುತ್ಯನುಸಾರೇಣ ಶಿವಸ್ಯ ಪರಬ್ರಹ್ಮಣಃ ನಿರವಯವನಿರ್ವಿಶೇಷಚಿನ್ಮಾತ್ರತ್ವಾಂಗೀಕಾರೇ "ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯ," "ತತ್ಸೃಷ್ಟ್ವಾ ತದೇವಾನುಪ್ರಾವಿಶತ್," "ಯತೋ ವಾ ಇಮಾನಿ ಭೂತಾನಿ ಜಾಯಂತೇ। ಯೇನ ಜಾತಾನಿ ಜೀವಂತಿ। ಯತ್ಪ್ರಯಂತ್ಯಭಿಸಂವಿಶಂತಿ॥" ಇತ್ಯಾದಿಬಹುಶ್ರುತಿವಿರೋಧಶ್ಚ ದುರ್ನಿವಾರಃ. ತಸ್ಮಾತ್ತಸ್ಯ ಮೂರ್ತಾಮೂರ್ತೋಭಯತ್ವಂ ಯುಕ್ತಂ. ನೋ ಚೇತ್ ಮೂರ್ತಪರಶಿವೋಪಾಸನಫಲವಿಧಾಯಕಾನಾಂ "ಜಕ್ಷನ್ ಕ್ರೀಡನ್ ರಮಮಾಣಃ" ಇತ್ಯಾದಿವಾಕ್ಯಾನಾಂ ಅಮೂರ್ತಪರಶಿವೋಪಾಸನಫಲಪ್ರದರ್ಶಕಾನಾಂ, "ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪುರುಷಃ। ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂಚರೇತ್। ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ಕೇನ ಕಂ ಪಶ್ಯೇತ್ಕೇನ ಕಂ ವದೇತ್॥" ಇತ್ಯಾದಿವಾಕ್ಯಾನಾಂ ಚ ವಿರೋಧಃ ಪ್ರಸಜ್ಯೇತ. ಮೂರ್ತಬ್ರಹ್ಮಣಃ ಸ್ವರೂಪಸ್ಯಾನಿತ್ಯತ್ವವ್ಯಪದೇಶೇ "ಸ್ಥಿರೇಭಿರಂಗೈಃ ಪುರುರೂಪ ಉಗ್ರಃ" ಇತ್ಯಾದಿಮೂರ್ತಬ್ರಹ್ಮಶರೀರಸ್ಥಿರತ್ವವ್ಯವಸ್ಥಾಪಕಶ್ರುತಿವಿರೋಧೋ ಯುಜ್ಯತೇ. "ಅಪಾಣಿಪಾದೋಽಹಮಚಿಂತ್ಯಶಕ್ತಿಃ। ಪಶ್ಯಾಮ್ಯಚಕ್ಷುಃ ಸ ಶೃಣೋಮ್ಯಕರ್ಣಃ" ಇತ್ಯಾದೌ ಶರೀರೇಂದ್ರಿಯನಿರಪೇಕ್ಷತಯಾ ತಸ್ಯ ಸರ್ವಕರ್ತೃತ್ವಾವಗಮಾತ್ ಸ್ವತಂತ್ರಸ್ಯ ತಸ್ಯ ಸರ್ವಮುಪಪನ್ನಮಿತಿ ಸಿದ್ಧಂ.

ಹೀಗೆ ಶ್ರುತಿಯ ಏಕದೇಶವನ್ನೇ ಪ್ರಮಾಣವೆಂದು ಒಪ್ಪುವ ಸಾವಯವಮತವನ್ನೂ ನಿರವಯವಮತವನ್ನೂ ನಿರೂಪಿಸಿ ಎಲ್ಲಾ ವೇದಾಂತಗಳ ಸಾರವೆನಿಸಿದ ಸ್ವಮತವನ್ನು ತಿಳಿಸುತ್ತಾನೆ. ಬ್ರಹ್ಮಕ್ಕೆ ಮೂರ್ತ ಅಮೂರ್ತವೆಂದು ಎರಡು ಅವಸ್ಥೆಗಳಿವೆ. ಆದಿ-ಮಧ್ಯ-ಅಂತ್ಯಗಳಿಲ್ಲದೆ, ರೂಪವಿಲ್ಲದೆ, ಒಂದೇಬಗೆಯಾಗಿರುವ ಪ್ರಭುವು ಚಿದಾನಂದನೂ ಅದ್ಭುತನೂ ಆಗಿದ್ದಾನೆ" "ಪರಮೇಶ್ವರನು ಉಮಾಶಕ್ತಿವಿಶಿಷ್ಟನೂ ತ್ರಿಲೋಚನನೂ ನೀಲಕಂಠನೂ ಪ್ರಶಾಂತನೂ ಆಗಿದ್ದಾನೆ" ಹೀಗೆ ನೂರಾರು ಶ್ರುತಿಗಳಲ್ಲಿ ಪರಶಿವಬ್ರಹ್ಮವನ್ನು ಪ್ರಪಂಚದಂತೆ ಮೂರ್ತವೆಂದೂ ವಾಯುವಿನಂತೆ ಅಮೂರ್ತ

ನೆಂದೂ ತಿಳಿಸಿರುವುದರಿಂದ ಒಬ್ಬ ಬ್ರಹ್ಮವೇ ಮೂರ್ತವೂ ಅಮೂರ್ತವೂ ಆಗಿರುವುದರಲ್ಲಿ ವಿರೋಧವಿಲ್ಲವೆಂದು ಸರ್ವವೇದಾಂತನಿಪುಣನಾದ ಬಾದರಾಯಣನು ಹೇಳುತ್ತಾನೆ; ಯಾಕೆಂದರೆ "ಅವನಲ್ಲಿ ಜ್ಞಾನಕ್ರಿಯರೂಪವಾದ ಶಕ್ತಿಯು ಸಹಜವಾಗಿಯೂ ಅನೇಕಬಗೆಯಾಗಿಯೂ ನೆಲಸಿದೆ" ಎಂದು ಮುಂತಾದ ಶ್ರುತಿಗಳು "ಅವನು ಸರ್ವಶಕ್ತನು ಪಾಪರಹಿತನು ಸತ್ಯಸಂಕಲ್ಪನು" ಎಂದು ಮುಂತಾದ ವಿಶೇಶಗಳನ್ನು ಅವನಲ್ಲಿ ಹೇಳಿರುವುದರಿಂದ "ಎರಡನ್ನೂ ವಿಧಿಸಿರುವುದರಿಂದ ಎರಡೂ ಸಿದ್ಧಿಸುತ್ತವೆ" ಎಂಬ ನ್ಯಾಯದಿಂದ "ಅವನು ಮೂರ್ತನೂ ಅಮೂರ್ತನೂ ಆಗಿದ್ದಾನೆ" ಎಂದು ತಿಳಿಸುವ ಶ್ರುತಿಯ ಬಲದಿಂದ ಅವನು ಎರಡುಬಗೆಯಾಗಿರುವನೆಂದೇ ಒಪ್ಪಬೇಕು. "ಇವನ ಮುಖವೇ ಬ್ರಾಹ್ಮಣನಾಯಿತು" ಎಂದು ಮೂರ್ತಬ್ರಹ್ಮವನ್ನು ತಿಳಿಸುವ ಶ್ರುತಿಯೇ ಪ್ರಮಾಣವೆಂದು ಹೇಳಿದರೆ "ಆಕಾಶದಂತೆ ಅವನು ಸರ್ವಗತನು ನಿತ್ಯನು" "ಸಮುದ್ರದಲ್ಲಿ ಪೂರ್ಣಕುಂಭದಂತೆ ಒಳಗೆ ಹೊರಗೆ ಎಲ್ಲಕಡೆಯೂ ಅವನು ಪೂರ್ಣನು; ಆಕಾಶದಲ್ಲಿ ಶೂನ್ಯಕುಂಭದಂತೆ ಒಳಗೆ ಹೊರಗೆ ಎಲ್ಲಾ ಕಡೆಯಲ್ಲೂ ಅವನು ಶೂನ್ಯನು." "ಎಲ್ಲರಲ್ಲೂ ವ್ಯಾಪಿಸಿ ವಿಶ್ವಕ್ಕಾಶ್ರಯಸ್ಥಲನಾದ ಪರಮಾತ್ಮನೇ ಪಂಚಭೂತಗಳೂ ಆಗಿದ್ದಾನೆ" ಹೀಗೆ ಪರಮಾತ್ಮನನ್ನು ಸರ್ವವ್ಯಾಪಕನೆಂದು ತಿಳಿಸುವ ಅನೇಕ ಶ್ರುತಿಗಳ ವಿರೋಧವುಂಟಾಗುವುದು. ಸಾವಯವಬ್ರಹ್ಮವು ಘಟಾದಿಗಳಂತೆ ಪರಿಮಿತವೆನಿಸುವುದರಿಂದ ಅಂತಹ ಬ್ರಹ್ಮವು "ಈ ಆತ್ಮನಿಂದ ಆಕಾಶ ಹುಟ್ಟಿತು" ಎಂಬ ಶ್ರುತಿಯಲ್ಲಿ ಹೇಳಿದ ವ್ಯಾಪಕವೂ ಅಮೂರ್ತವೂ ಆದ ಆಕಾಶಕ್ಕೆ ಕಾರಣವೆಂಬುದು ಹೇಗೆ ಹೊಂದುತ್ತದೆ? ಇದೂಅಲ್ಲದೆ ಬ್ರಹ್ಮವು ಸರ್ವಾಂತರ್ಯಾಮಿ ಎಂಬುದೂ ಹೊಂದದೇಹೋಗುತ್ತದೆ. ಜಗತ್ತಿಗೆ ಬ್ರಹ್ಮವೇ ಆಶ್ರಯವೆಂಬುದೂ ಅಸಂಗತವಾಗುತ್ತದೆ. "ಸತ್ಯಂ ಜ್ಞಾನಂ ಅನಂತಂ ಬ್ರಹ್ಮಂ" "ಉಪ್ಪಿನಕಲ್ಲು ಹೊರಗೆ ಒಳಗೆ ಎಲ್ಲಾ ಕಡೆಯಲ್ಲೂ ರಸಮಯವಾಗಿರುವಂತೆ ಈ ಆತ್ಮನು ಎಲ್ಲಾ ಕಡೆಯೂ ಜ್ಞಾನಮಯನಾಗಿರುವನು" "ಪ್ರಾಣ ಮನಸ್ಸುಗಳಿಲ್ಲದೆಯೇ ಶುಭ್ರನು" ಎಂದು ಮುಂತಾದ ಶ್ರುತಿಗಳಂತೆ ಪರಶಿವಬ್ರಹ್ಮವನ್ನು ನಿರವಯುವವೂ ನಿರ್ವಿಶೇಷವೂ ಆದ ಚೈತನ್ಯವೆಂದು ಅಂಗೀಕರಿಸಿದರೆ "ಅವನಿಂದಲೇ ಇವರೆಲ್ಲರೂ ಹುಟ್ಟಿ ಅವನೊಳಗೇ ಜೀವಿಸುತ್ತ ಕೊನೆಗೆ ಅವನಲ್ಲಿಯೇ ಸೇರುತ್ತಾರೆ" ಎಂದು ಅನೇಕ ಶ್ರುತಿಗಳಲ್ಲಿ ಹೇಳಿದಂತೆ ಬ್ರಹ್ಮವೇ ಜಗಜ್ಜನ್ಮಾದಿಹೇತುವೆಂಬುವ ಲಕ್ಷಣಕ್ಕೆ ವಿರೋಧವುಂಟಾಗುತ್ತದೆ. "ನಮೋ ಹಿರಣ್ಯಬಾಹವೇ" ಎಂದು ಮುಂತಾದ ಅನೇಕ ಶ್ರುತಿಗಳ ವಿರೋಧವನ್ನಂತೂ ತಡೆಯಲಿಕ್ಕೇ ಆಗುವುದಿಲ್ಲ. ಆದ್ದರಿಂದ ಅವನು ಮೂರ್ತಾಮೂರ್ತೋಭಯಸ್ವರೂಪನೆಂಬುದೇ ಯುಕ್ತವಾಗುತ್ತದೆ. ಇಲ್ಲವಾದರೆ ಮೂರ್ತಶಿವನ ಉಪಾಸಕರಿಗೆ ಫಲವನ್ನು ತಿಳಿಸುವ "ಅವನು ತಿನ್ನುತ್ತ ಕ್ರೀಡಿಸುತ್ತ ವಿನೋದಿಸುತ್ತಾನೆ" ಎಂಬವಾಕ್ಯಗಳಿಗೂ ಅಮೂರ್ತಪರಶಿವನ ಉಪಾಸಕರಿಗೆ ಫಲವನ್ನು ತಿಳಿಸುವ "ನಾನು ಆ ಪರಮಾತ್ಮನೇ ಆಗಿದ್ದೇನೆಂದು ತಿಳಿದವನು ಯಾವ ಇಚ್ಛೆಯಿಂದ

ಯಾವ ಫಲಕ್ಕಾಗಿ ಶರೀರವನ್ನು ಪೀಡಿಸಿಯಾನು" "ಯಾವನಿಗೆ ಎಲ್ಲವೂ ಪರಮಾತ್ಮನೇ ಆಗಿರುವುದೋ ಅವನು ಆ ಪರಮಾತ್ಮನಿಗಿಂತ ಬೇರೆ ಯಾರಿಂದ ಏನನ್ನು ಕಾಣಬಹುದು? ಯಾರೊಡನೆ ವ್ಯವಹರಿಸಿಯಾನು?" ಈ ಬಗೆಯ ವಾಕ್ಯಗಳಿಗೂ ಪರಸ್ಪರ ವಿರೋಧವುಂಟಾದೀತು. ಮೂರ್ತಶಿವನ ಸ್ವರೂಪವನ್ನು ಅನಿತ್ಯವೆಂದು ಒಪ್ಪಿದರೆ "ನಿಶ್ಚಲವಾದ ಅವಯವಗಳಿಂದ ಇವನು ವಿಸ್ತಾರನೂ ಮತ್ತು ಉಗ್ರನೂ ಆಗಿದ್ದಾನೆ" ಎಂದು ಮುಂತಾಗಿ ಮೂರ್ತಬ್ರಹ್ಮದ ಶರೀರವನ್ನು ಸ್ಥಿರವೆಂದು ತಿಳಿಸುವ ಶ್ರುತಿಗಳಿಗೆ ವಿರೋಧವುಂಟಾಗುತ್ತದೆ. "ನನಗೆ ಹಸ್ತಪಾದಗಳಿಲ್ಲದಿದ್ದರೂ ನನ್ನ ಶಕ್ತಿ ಅಸಾಧ್ಯವಾದದು. ಕಣ್ಣು ಕಿವಿಗಳಿಲ್ಲದೆಯೇ ನೋಡುವೆನು ಮತ್ತು ಕೇಳುವೆನು" ಎಂಬಲ್ಲಿ ಶರೀರೇಂದ್ರಿಯಗಳ ಅಪೇಕ್ಷೆಯಿಲ್ಲದೆ ಅವನು ಎಲ್ಲಕ್ಕೂ ಕರ್ತನೆಂದು ತಿಳಿದುಬರುವುದರಿಂದ ಸ್ವತಂತ್ರನಾದ ಪರಮೇಶ್ವರನಿಗೆ ಎಲ್ಲವೂ ಹೊಂದುತ್ತದೆ.

ಏವಮಮೂರ್ತಪರಶಿವಬ್ರಹ್ಮೋಪಾಸಕಾನಾಂ ತದಭೇದಫಲಂ ಪ್ರಸಾಧ್ಯ ಮೂರ್ತಪರಶಿವಬ್ರಹ್ಮೋಪಾಸಕಾನಾಂ ಫಲಂ ಕಿಮಿತ್ಯಾಕಾಂಕ್ಷಾಯಾಮಧಿಕರಣಾಂತರೇಣ ತತ್ಫಲಂ ದರ್ಶಯತಿ. ಸಂಕಲ್ಪಾಧಿಕರಣಂ ॥ ೩ ॥ ಸಂಕಲ್ಪಾದೇವ ತಚ್ಛ್ರುತೇಃ ॥ ೮ ॥ ಪೂರ್ವತ್ರ ವ್ಯಾಪಕಾಮೂರ್ತಪರಶಿವಬ್ರಹ್ಮಧ್ಯಾನಜಜ್ಞಾನನಿಷ್ಠಾನಾಂ ಸರ್ವಕಾಮನಿರ್ಮುಕ್ತತಯಾ ತದಾತ್ಮಕತ್ವಂ ತಸ್ಯ ಮೂರ್ತಾಮೂರ್ತತ್ವಂ ಚ ಪ್ರಸಾಧ್ಯ ಇದಾನೀಂ ಮೂರ್ತಪರಶಿವಬ್ರಹ್ಮೋಪಾಸಕಾನಾಂ ನಿರತಿಶಯಾನಂದವೈಭವತ್ವಂ ಪ್ರಪಂಚಯತಿ. ಉಪಾಸಕಾನಾಂ ಸಂಕಲ್ಪಾದೇವ ಸ್ರಕ್ಚಂದನವನಿತಾದಿಸರ್ವವಿಷಯಪ್ರಾಪ್ತಿರ್ಭವತಿ. ಕುತಃ? ತಚ್ಛ್ರುತೇಃ. "ಸಂಕಲ್ಪಾದೇವಾಸ್ಯ ಪಿತರಸ್ಸಮುತ್ತಿಷ್ಠಂತಿ" ಇತಿ ಶ್ರುತೌ ಮೂರ್ತಪರಶಿವೋಪಾಸಕಾನಾಂ ದೇವಪಿತೃಗಂಧರ್ವಾದಯೋ ಭೃತ್ಯವತ್ಪರಿಚಾರಕಾ ಭವಂತೀತಿ ಸೂಕ್ತ್ಯರ್ಥಃ. "ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾ ಯಾನೈರ್ವಾ ಜ್ಞಾತಿಭಿರ್ವಾ" ಇತಿ ಶ್ರುತೌ ಮೂರ್ತಬ್ರಹ್ಮೋಪಾಸಕಸ್ಯ ಸತ್ಯಸಂಕಲ್ಪತ್ವಪ್ರಯುಕ್ತವ್ಯವಹಾರಾಃ ಶ್ರೂಯಂತೇ. ಅತ್ರ ಮುಕ್ತಜೀವಸ್ಯ ದೇಹೇಂದ್ರಿಯಾಣಿ ಸಂತಿ ನ ಸಂತಿ ವಾ? ಉತ ಸಂಕಲ್ಪಾದೀನಿ ಸಂತಿ ನ ಸಂತಿ ವಾ? ತಸ್ಯ ಸಂಕಲ್ಪಪರಿಗ್ರಹಃ ಸ್ವಾತಂತ್ರ್ಯೇಣ? ಉತ ಪರಮೇಶ್ವರಸಂಕಲ್ಪಾದೇವ ಸಂಭವತಿ? ಇತಿ ಸಂದಿಹ್ಯತೇ. "ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪುರುಷಃ। ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂಚರೇತ್ ॥", "ನಹ ವೈ ಸಶರೀರಸ್ಯ ಸತಃ ಪ್ರಿಯಾಪ್ರಿಯಯೋರಪಹತಿರಸ್ತಿ। ಅಶರೀರಂ ವಾವ ಸಂತಂ ನ ಪ್ರಿಯಾಪ್ರಿಯೇ ಸ್ಪೃಶತಃ॥" ಇತಿ ಶರೀರಸಂಬಂಧೇ ದುಃಖಸ್ಯ ಅವರ್ಜನೀಯತ್ವಮಭಿಧಾಯ "ಅಸ್ಮಾಚ್ಛರೀರಾ

ತ್ಸಮುತ್ಥಾಯ ಪರಂಜ್ಯೋತಿರುಪಸಂಪದ್ಯ" ಇತಿ ಮುಕ್ತಸ್ಯಾಶರೀರತ್ವಂ ಹ್ಯಾಹ ಶ್ರುತಿಃ. ತಸ್ಮಾತ್ಸಂಕಲ್ಪವತ್ತ್ವಂ ನ ಸಂಭವತಿ. ಕಿಂಚ ಸಂಕಲ್ಪ ತ್ವೇನ ವ್ಯವಹ್ರಿಯಮಾಣಾನಾಂ ಕಾರ್ಯನಿಷ್ಪಾದನೇ ಪ್ರಯತ್ನಾಂತರ ಸಾಪೇಕ್ಷತ್ವದರ್ಶನಾದಸ್ಯಾಪಿ ತತ್ಸಾಪೇಕ್ಷಾ ಇತಿ ಪ್ರಾಪ್ತೇ ಉಚ್ಯತೇ "ಸಂಕಲ್ಪಾದೇವಾಸ್ಯ ಪಿತರಃ ಸಮುತ್ತಿಷ್ಠಂತಿ" ಇತಿ ಹಿ ಸಂಕಲ್ಪಾದೇವ ಪಿತ್ರಾದೀನಾಂ ಸಮುತ್ಥಾನಂ ಶ್ರೂಯತೇ. ನಚ ಪ್ರಯತ್ನಾಂತರಸ್ಯ ವ್ಯಪೇಕ್ಷತ್ವಾಭಿಧಾಯಿ ಶ್ರುತ್ಯಂತರಂ ಶ್ರೂಯತೇ. ಯೇನಾಸ್ಯ ಸತ್ಯಸಂ ಕಲ್ಪಾದೇವೇತ್ಯವಧಾರಣಸ್ಯ ವಿಜ್ಞಾನಘನ ಏವೇತಿವದ್ವ್ಯವಸ್ಥಾಪನಂ ಕ್ರಿಯತೇ. "ಸ ಏಕಧಾ ಭವತಿ ತ್ರಿಧಾ ಭವತಿ ಪಂಚಧಾ ಸಪ್ತಧಾ" ಇತ್ಯಾದಿಶ್ರುತೌ ಆತ್ಮನ ಏಕಸ್ಯಾಚ್ಛೇದ್ಯಸ್ಯಾನೇಕಧಾ ಭಾವವ್ಯಪದೇ ಶಾತ್ ತ್ರಿಧಾಭಾವಾದಯಃ ಶರೀರಸಂಬಂಧಿನ ಇತ್ಯಾವಗಮ್ಯಂತೇ। ಶರೀರಾಭಾವವಚನಸ್ಯ ನಿರವಯವಬ್ರಹ್ಮೋಪಾಸಕವಿಷಯತ್ವಂ. ಕಿಂಚ ಅಶರೀರತ್ವವಚನಂ ತು ಕರ್ಮನಿಮಿತ್ತಶರೀರಾಭಾವಪರಂ. ತದೇವ ಹಿ ಶರೀರಂ ಪ್ರಿಯಾಪ್ರಿಯಹೇತುಃ. ಕಾರಣಕೈಲಾಸಪದ ಪ್ರಾಪ್ತಭಕ್ತಶರೀರಂ ಅಪ್ರಾಕೃತಜ್ಯೋತಿರ್ಮಯತ್ವೇನ ಪರಮೇಶ್ವರ ಶರೀರವತ್ ನ ದುಃಖಹೇತುರಿತಿ ಸಿದ್ಧಂ.

ಹೀಗೆ ಅಮೂರ್ತಪರಶಿವಬ್ರಹ್ಮದ ಉಪಾಸಕರಿಗೆ ಬ್ರಹ್ಮದೊಡನೆ ಅಭೇದವೇ ಫಲವೆಂದು ತಿಳಿಸಿ ಮೂರ್ತಶಿವನನ್ನು ಉಪಾಸನಮಾಡಿದವರಿಗೆ ದೊರಕುವ ಫಲ ವನ್ನು ತಿಳಿಸುತ್ತಾನೆ. ವ್ಯಾಪಕವೂ ಅಮೂರ್ತವೂ ಆದ ಪರಶಿವಬ್ರಹ್ಮವನ್ನು ತಿಳಿದು ಧ್ಯಾನಿಸುತ್ತ ಅದರಲ್ಲಿ ಸಮಾನನಾಗಿ ಬೆರೆತವರು ಎಲ್ಲಾ ಬಗೆಯ ಆಶೆಗಳನ್ನೂ ತೊರೆದು ಶಿವಸ್ವರೂಪರೇ ಆಗಿರುವರೆಂದೂ ಹಿಂದೆ ಹೇಳಿಯಾಯಿತು. ಶಿವನು ಮೂರ್ತನೂ ಅಮೂರ್ತನೂ ಆಗಿರುವುದರಿಂದ ಮೂರ್ತಶಿವನನ್ನು ಉಪಾಸನಮಾಡಿದವರಿಗೆ ದೊರಕುವ ನಿರತಿಶಯಾನಂದವೈಭವವನ್ನು ಇಲ್ಲಿ ತಿಳಿಸಲಾಗುವುದು. ಉಪಾಸಕ ರಿಗೆ ಸಂಕಲ್ಪದಿಂದಲೇ ಸ್ರಕ್ಚಂದನವನಿತಾದಿ ಸಕಲ ವಿಷಯಗಳೂ ದೊರಕುತ್ತವೆ. ಎಂದು ಶ್ರುತಿಯೇ ತಿಳಿಸಿದೆ. "ಇವನ ಸಂಕಲ್ಪದಿಂದ ಪಿತೃದೇವತೆಗಳೂ ಗಂಧರ್ವರೂ ಅನುಕೂಲರಾಗುತ್ತಾರೆ" ಎಂಬ ಶ್ರುತಿಯಲ್ಲಿ ಮೂರ್ತಶಿವನನ್ನು ಉಪಾಸನಮಾಡಿದ ವರಿಗೆ ದೇವತೆಗಳು ಪಿತೃಗಳು ಮತ್ತು ಗಂಧರ್ವರು ಭೃತ್ಯರಂತೆ ಸೇವೆಮಾಡುವರೆಂದು ತಿಳಿದುಬರುತ್ತದೆ. "ಅವನು ಅಲ್ಲಿ ಭೋಗವನ್ನು ಅನುಭವಿಸುತ್ತ ಸ್ತ್ರೀಯರೊಡ ನೆಯೂ ವಾಹನಗಳೊಡನೆಯೂ ಬಂಧುಗಳೊಡನೆಯೂ ವಿಹರಿಸುವನು" ಎಂಬ ಶ್ರುತಿಯಲ್ಲಿ ಮೂರ್ತಶಿವನನ್ನು ಉಪಾಸನಮಾಡಿದವರಿಗೆ ಸತ್ಯಸಂಕಲ್ಪಕ್ಕನುಗುಣ ವಾದ ವ್ಯವಹಾರಗಳೇ ಇರುವುದಾಗಿ ಕಂಡುಬಂದಿವೆ. ಆದರೆ ಇಲ್ಲಿ ಕೆಲವು ಸಂಶಯ ಗಳು ತೋರುತ್ತವೆ. ಮುಕ್ತಜೀವನಿಗೆ ದೇಹೇಂದ್ರಿಯಗಳು ಇವೆಯೇ ಇಲ್ಲವೇ?

ಸಂಕಲ್ಪಾದಿಗಳು ಇರುತ್ತವೆಯೇ ಇಲ್ಲವೆ? ಅವನಲ್ಲಿ ಸಂಕಲ್ಪಗಳನ್ನು ಒಪ್ಪಿದರೆ ಅವು ಅವನಿಗೆ ಸ್ವತಂತ್ರವಾಗಿ ಸಂಭವಿಸುತ್ತವೆಯೇ ಅಥವಾ ಪರಮೇಶ್ವರನ ಸಂಕಲ್ಪ ದಿಂದಲೇ ಸಂಭವಿಸುತ್ತವೆಯೇ? ಇವೇ ಆ ಸಂದೇಹಗಳು. "ಶರೀರಾಭಿಮಾನ ವುಳ್ಳವನಿಗೆ ಪ್ರಿಯಅಪ್ರಿಯಗಳು ತೊಲಗುವುದಿಲ್ಲ. ಶರೀರಾಭಿಮಾನವನ್ನು ತೊರೆದ ವನಿಗೆ ಅವು ಅಂಟುವುದಿಲ್ಲ" ಎಂಬಲ್ಲಿ ಶರೀರಸಂಬಂಧವಿದ್ದರೆ ದುಃಖವು ಅನಿವಾ ರ್ಯವಾಗಿ ಸಂಭವಿಸುವುದೆಂದು ತಿಳಿಸಿ "ಈ ಶರೀರದಿಂದ ಹೊರಟು ಪರಂಜ್ಯೋತಿ ಯಲ್ಲಿ ಸೇರಿ ತನ್ನ ವಾಸ್ತವ ಶಿವಭಾವವನ್ನು ಪಡೆಯುತ್ತಾನೆ" ಎಂಬಲ್ಲಿ ಮುಕ್ತನಿಗೆ ಶರೀರವಿರುವುದಿಲ್ಲವೆಂದು ಶ್ರುತಿಯು ತಿಳಿಸಿದೆ. ಆದ್ದರಿಂದ ಅವನಿಗೆ ಸಂಕಲ್ಪಗಳೇ ಸಂಭವಿಸುವುದಿಲ್ಲ. ಸಂಕಲ್ಪಮಾಡುವುದಾದರೂ ಲೋಕದಲ್ಲಿ ಒಬ್ಬ ಉನ್ನತಾಧಿಕಾ ರಿಯು ತನ್ನ ಸಂಕಲ್ಪವನ್ನು ನೆರವೇರಿಸಲು ಬೇರೆ ಪ್ರಯತ್ನವನ್ನು ಅಪೇಕ್ಷಿಸುವನೆಂದು ಕಂಡುಬಂದಿರುವುದರಿಂದ ಮುಕ್ತನೂ ಸಹ ಪ್ರಯತ್ನದಿಂದಲೇ ಕಾರ್ಯವನ್ನು ಸಾಧಿಸ ಬೇಕೇ ಹೊರತು ಸಂಕಲ್ಪಮಾತ್ರದಿಂದಲೇ ಏನೂ ಆಗುವುದಿಲ್ಲವೆಂದು ಆಕ್ಷೇಪಬಂದರೆ ಇದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಮುಕ್ತನಿಗೆ ಪ್ರಯತ್ನವಿಲ್ಲದೆ ಸಂಕಲ್ಪ ದಿಂದಲೇ ಕಾರ್ಯವು ಸಿದ್ಧಿಸುತ್ತದೆ. ಹಾಗೆ ಶ್ರುತಿಯೇ ತಿಳಿಸಿದೆ. "ಅವನು ಪಿತೃಲೋಕ ವನ್ನು ಇಚ್ಛಿಸಿದರೆ ಆ ಸಂಕಲ್ಪದಿಂದಲೇ ಪಿತೃದೇವತೆಗಳು ಅವನಿಗೆ ಅಭಿಮುಖರಾ ಗುತ್ತಾರೆ." ಎಂಬಲ್ಲಿ ಇವನ ಸಂಕಲ್ಪದಿಂದಲೇ ಪಿತೃದೇವತೆಗಳ ಆಭಿಮುಖ್ಯವನ್ನು ಹೇಳಲಾಗಿದೆ. ಇದಕ್ಕಾಗಿ ಮುಕ್ತನಿಗೆ ಬೇರೊಂದು ಪ್ರಯತ್ನದ ಅಪೇಕ್ಷೆಯನ್ನು ತಿಳಿಸುವ ಶ್ರುತಿಯೇ ಇಲ್ಲ. "ಸಂಕಲ್ಪಾದೇವ" ಎಂಬಲ್ಲಿ ಏವಕಾರವನ್ನು "ವಿಜ್ಞಾನ ಘನ ಏವ" ಎಂಬಲ್ಲಿ ಇರುವಂತೆ "ಬೇರೊಂದನ್ನು ತಪ್ಪಿಸುವಿಕೆ" ಎಂಬ ಅರ್ಥದಲ್ಲಿ ಉಪಯೋಗಿಸಲಾಗಿದೆ. "ಅವನು ಒಂದುಬಗೆಯೂ ಮೂರುಬಗೆಯೂ ಐದುಬಗೆಯೂ ಏಳುಬಗೆಯೂ ಆಗುತ್ತಾನೆ" ಎಂಬ ಶ್ರುತಿಯಲ್ಲಿ ಆತ್ಮನೊಬ್ಬನೇ ವಿಭಾಗವಿಲ್ಲದೆಯೇ ಅನೇಕಬಗೆಯಾಗುವನೆಂದು ಹೇಳಿರುವುದರಿಂದ ಹೀಗೆ ಮೂರುಬಗೆಯಾಗುವಿಕೆ ಮೊದ ಲಾದವು ಶರೀರಕ್ಕೆ ಸಂಬಂಧಿಸಿರುವುದಾಗಿ ತಿಳಿದುಬರುತ್ತದೆ. ಶರೀರವಿಲ್ಲವೆಂದು ತಿಳಿ ಸುವ ಮಾತುಗಳು ನಿರವಯವ ಬ್ರಹ್ಮದ ಉಪಾಸಕರಿಗೆ ಅನ್ವಯಿಸುತ್ತವೆ. ಇಂತಹ ವಾಕ್ಯಗಳು ಮುಕ್ತನಿಗೆ ಕರ್ಮದಿಂದಾದ ಶರೀರವಿಲ್ಲವೆಂದು ತಿಳಿಸುತ್ತವೆ. ಕರ್ಮದಿಂ ದಾದ ಶರೀರವೇ ಪ್ರಿಯಅಪ್ರಿಯಗಳಿಗೆ ಕಾರಣವೆನಿಸಿದೆ. ಮಹಾಕೈಲಾಸದಲ್ಲಿರುವ ಮುಕ್ತರಿಗೆ ಶರೀರಗಳು ಅಪ್ರಾಕೃತವೂ ಜ್ಯೋತಿರ್ಮಯವೂ ಆದ್ದರಿಂದ ಪರಮೇಶ್ವರನ ಶರೀರದಂತೆಯೇ ದುಃಖಕರವಲ್ಲ.

**ನನು ಕಾರಣಮಹಾಕೈಲಾಸಪದಪ್ರಾಪ್ತಾನಾಂ ಭಕ್ತಾನಾಂ ಪರ ಮೇಶ್ವರಶೇಷತ್ವಪಾರತಂತ್ರ್ಯಕೈಂಕರ್ಯಾದಿವಿಧೀನಾಂ ಸತ್ತ್ವೇನ ರಾಜ ಭೃತ್ಯನ್ಯಾಯವತ್ ಭಯಹೇತುತ್ವಮಸಿ. ತಸ್ಮಾತ್ "ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ" ಇತ್ಯಾದಿಶ್ರುತಿವಿರೋಧ**

ಪ್ರಸಂಗಃ ಸ್ಯಾದಿತ್ಯಾಶಂಕ್ಯಾಹ. ಅತ ಏವ ಚಾನನ್ಯಾಧಿಪತಿಃ ॥ ೯ ॥
ಯತೋ ಮುಕ್ತಃ ಸತ್ಯಸಂಕಲ್ಪಃ ಅತ ಏವಾನನ್ಯಾಧಿಪತಿಶ್ಚ ಭವತಿ. ಅನ್ಯಾಧಿಪತಿತ್ವಂ ಹಿ ವಿಧಿನಿಷೇಧಯೋಗ್ಯತ್ವಂ. ವಿಧಿನಿಷೇಧಯೋಗ್ಯತ್ವೇ ಹಿ ಪ್ರತಿಹತಸತ್ಯಸಂಕಲ್ಪತ್ವಂ ಭವೇತ್. ಅತಃ ಸತ್ಯಸಂಕಲ್ಪತ್ವಶ್ರುತ್ಯೈವ ಅನನ್ಯಾಧಿಪತಿತ್ವಂ ಚ ಸಿದ್ಧಂ. ಅತ ಏವ ಸಃ ಸ್ವರಾಡ್ಭವತೀತ್ಯುಕ್ತಂ. ಅತಏವ ಸರ್ವಶಕ್ತಿವಿಶಿಷ್ಟಶಿವೋಪಾಸನಾದೇವ ತದುಪಾಸಕಃ ಸತ್ಯ ಸಂಕಲ್ಪಾಧೀನಸರ್ವಕಾಮಾವಾಪ್ತಿಸತ್ತ್ವಾದನನ್ಯಾಧಿಪತಿಃ. "ಶಿವ ಏಕೋ ಧ್ಯೇಯಃ" ಇತಿ ಶ್ರುತಿಶ್ರವಣಾತ್ ಶಿವೇತರೋ ನ ವಿದ್ಯತೇಽನ್ಯಃ ಅಧಿಪತಿಃ ಯಸ್ಯ ಸಃ ಅನನ್ಯಾಧಿಪತಿಃ. ಅನ್ಯಃ ನಿಯಮ್ಯೋ ನ ಭವತಿ, ತಸ್ಮಾತ್ ಶಿವವತ್ ಸ್ವತಂತ್ರ ಏವ. ತದುಕ್ತಂ ಸ್ಕಾಂದೇ "ಶಿವೈಕನಿಷ್ಠಾ ಪ್ರಥಿತಸ್ವಮಾಣಾಂ ಶಿವೇತರಧ್ಯಾನನಿಷೇಧಕಾನಾಂ । ತೃಣೀಕೃತಬ್ರಹ್ಮ ಪುರಂದರಾಣಾಂ ಕಿಂ ದುಷ್ಕೃತಂ ಶಂಕರಕಿಂಕರಾಣಾಂ ॥" ಇತಿ. ಅನನ್ಯಾಧಿಪತಿತ್ವವ್ಯಪದೇಶೇನ ಮುಕ್ತಸ್ಯ ಸ್ವಾತಂತ್ರ್ಯಮುಪದಿಷ್ಟಂ. ತೇನ ನ ಕದಾಚಿದಪಿ ಕರ್ಮಾಧೀನತ್ವಂ ಸೂಚಿತಂ. ಕರ್ಮಣಾಂ ವಿನಷ್ಟತ್ವ ಸ್ವಭಾವಾತ್ ನಾನ್ಯಃಪರಮೇಶ್ವರೋ ನಿಯಾಮಕಃ ಜನ್ಮಮರಣಪ್ರವಾಹಲಬ್ಧಶಿವಾಜ್ಞಾರೂಪವಿಧಿನಿಷೇಧಶಾಸ್ತ್ರಪಥಾತೀತತ್ವಾತ್. ಕುತಃ? ಪಶುತ್ವವ್ಯಾವೃತ್ತೇಃ. ಅನಾದ್ಯಜ್ಞಾನವಾಸನಾಬದ್ಧೇಷಣತ್ರಯದೋಷ ವಿಶಿಷ್ಟಾನಾಂ ಶಿವಾಜ್ಞಾರೂಪಕರ್ಮಾಧೀನತ್ವಂ ಯುಕ್ತಂ. ನಿತ್ಯನಿರತಿ ಶಯಮಂಗಳಾಕರಶಿವಸಾರೂಪ್ಯಧಾರಿಷು ಶಿವವತ್ಸರ್ವಜ್ಞತ್ವಾದೀನಾಂ ಸತ್ತ್ವೇನ ಪರಿಚ್ಛಿನ್ನಶರೀರೇಂದ್ರಿಯಾದ್ಯಭಿಮಾನಭ್ರಮಗಳಿತತ್ವೇನ ಜರಾಮರಣಶೋಕಭಯವಿಲಕ್ಷಣತ್ವೇನ ನಿರತಿಶಯಾನಂದಾನುಭವೈಕ ಸ್ವಾತ್ಮಾರಾಮತ್ವೇನ ಚ ಸ್ವಾತಂತ್ರ್ಯಮವಿರೋಧಂ.

ಮಹಾಕೈಲಾಸವನ್ನು ಸೇರಿದ ಮುಕ್ತರು ಪರಮೇಶ್ವರನಿಗೆ ಸೇವೆಮಾಡುತ್ತಲಿರುವುದರಿಂದ ರಾಜಭೃತ್ಯನ್ಯಾಯದಂತೆ ಅವರಿಗೆ ಭಯವಿದ್ದೇ ಇರುತ್ತದೆ. ಆದ್ದರಿಂದ "ಬ್ರಹ್ಮದ ಆನಂದವನ್ನು ತಿಳಿದವನು ಯಾತಕ್ಕೂ ಹೆದರುವುದಿಲ್ಲ" ಎಂದು ಮುಂತಾದ ಶ್ರುತಿಗಳಿಗೆ ವಿರೋಧವುಂಟಾಗುವುದಿಲ್ಲವೆ? ಎಂದಾಶಂಕಿಸಿ ಸಮಾಧಾನಮಾಡುತ್ತಾನೆ. ಮುಕ್ತನು ಸತ್ಯಸಂಕಲ್ಪನಾದ್ದರಿಂದಲೇ ಅವನಿಗೆ ಬೇರೊಬ್ಬ ಅಧಿಪತಿ ಇರುವುದಿಲ್ಲ. ಬೇರೊಬ್ಬ ವ್ಯವಸ್ಥಾಪಕನ ಆಜ್ಞೆಗೆ ಒಳಪಡುವುದಾದರೆ ಇವನ ಸತ್ಯಸಂಕಲ್ಪವೇ ತಪ್ಪಿಹೋಗುತ್ತಿತ್ತು. ಮುಕ್ತನು ಸತ್ಯಸಂಕಲ್ಪನಿರುವನೆಂದು ಶ್ರುತಿಯಲ್ಲಿ ಹೇಳಿದ್ದರಿಂದ ಇವನು ಸ್ವತಂತ್ರನೆಂಬುದು ಸಿದ್ಧಿಸುತ್ತದೆ. ಆದ್ದರಿಂದ ಶ್ರುತಿಯು ಇವನನ್ನು ಸ್ವರಾಟ್-ಸ್ವತಂತ್ರನೆಂದು ಕರೆದಿದೆ. ಹೀಗೆ ಸರ್ವಶಕ್ತಿವಿಶಿಷ್ಟಶಿವನನ್ನು ಉಪಾಸನಮಾಡಿದ್ದರಿಂದಲೇ ಉಪಾಸಕನೂ ಸಹ ಸತ್ಯಸಂಕಲ್ಪನಾಗಿ ಎಲ್ಲಾ ಫಲ

ಗಳನ್ನು ಹೊಂದುವನು. ಆದ್ದರಿಂದಲೇ ಅವನಿಗೆ ಬೇರೊಬ್ಬ ನಿಯಾಮಕನಿರುವುದಿಲ್ಲ. "ಎಲ್ಲವನ್ನೂ ತೊರೆದು ಶಿವಂಕರನಾದ ಶಿವನೊಬ್ಬನನ್ನೇ ಧ್ಯಾನಿಸಬೇಕು" ಎಂದು ಶ್ರುತಿಯಲ್ಲಿ ಹೇಳಿದ್ದರಿಂದ ಮುಕ್ತನಿಗೆ ಶಿವನಿಗಿಂತ ಬೇರೊಬ್ಬ ಅಧಿಪತಿಯೇ ಇಲ್ಲದ್ದರಿಂದ ಇವನು ಶಿವನಂತೆ ಸ್ವತಂತ್ರನಾಗಿರುವನು. "ಶಿವಭಕ್ತರು ಶಿವನನ್ನಲ್ಲದೆ ಬೇರೆ ಯಾರನ್ನೂ ಧ್ಯಾನಿಸದೆ ಶಿವನಲ್ಲಿಯೇ ನಿಷ್ಠೆಯುಳ್ಳವರಾದ್ದರಿಂದ ಬ್ರಹ್ಮ ಇಂದ್ರ ಮೊದಲಾದವರ್ಯಾರನ್ನೂ ಗಮನಿಸುವುದಿಲ್ಲ. ಹೀಗೆ ಅವರಿಗೆ ಅಸಾಧ್ಯವಾದದ್ದೇ ಇರುವುದಿಲ್ಲ. ಮುಕ್ತರಿಗೆ ಬೇರೊಬ್ಬ ನಿಯಾಮಕನೇ ಇಲ್ಲದ್ದರಿಂದ ಅವನನ್ನು ಸ್ವತಂತ್ರನೆಂದು ಶ್ರುತಿಯು ತಿಳಿಸಿ ಕರ್ಮಗಳೇ ನಷ್ಟವಾಗುವ ಸ್ವಭಾವದವಾದ್ದರಿಂದ ಅವನು ಎಂದೆಂದಿಗೂ ಕರ್ಮಕ್ಕೆ ಅಧೀನನಾಗುವುದಿಲ್ಲ. ಸಂಸಾರದಶೆಯಲ್ಲಿ ಆಚರಿಸಬೇಕಾದ ಶಿವಾಜ್ಞಾರೂಪವಾದ ವಿಧಿನಿಷೇಧಗಳನ್ನು ತಿಳಿಸುವ ಶಾಸ್ತ್ರವನ್ನೇ ಅತಿಕ್ರಮಿಸಿದ್ದರಿಂದ ಅವನಿಗೆ ಬೇರೊಬ್ಬ ನಿಯಾಮಕನಾದ ಪ್ರಭುವೇ ಇರುವುದಿಲ್ಲ. ಅನಾದಿಯಾದ ಅಜ್ಞಾನವಾಸನೆಯಿಂದ ಈಷಣತ್ರಯವೆಂಬ ದೋಷಕ್ಕೆ ಸಿಲುಕಿದವರೇ ಶಿವಾಜ್ಞೆ ಎಂಬ ಕರ್ಮಕ್ಕೆ ಅಧೀನರಾಗುವರು. ನಿತ್ಯನಿರತಿಶಯ ಮಂಗಳಗಳಿಗಾಕರವಾದ ಶಿವಸಾರೂಪ್ಯವನ್ನು ಹೊಂದಿದ ಶಿವಯೋಗಿಗಳಲ್ಲಿ ಶಿವನಂತೆ ಸರ್ವಜ್ಞತಾದಿ ಗುಣಗಳಿರುವುದರಿಂದಲೂ, ಅವರಿಗೆ ಶರೀರೇಂದ್ರಿಯಾದ್ಯಭಿಮಾನವು ತೊಲಗಿರುವುದರಿಂದಲೂ ಜರಾಮರಣ ಶೋಕಭಯಗಳಿಲ್ಲದೆ ಆತ್ಮಾನಂದವನ್ನು ಅನುಭವಿಸುತ್ತಿರುವುದರಿಂದಲೂ ಅವರು ಸ್ವತಂತ್ರರೆಂಬುದಕ್ಕೆ ಯಾವ ವಿರೋಧವೂ ಇಲ್ಲ.

ನನು "ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ ಹೃದಿ ಸ್ಥಿತಾಃ । ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ॥", "ಬದ್ಧೋ ಹಿ ವಾಸನಾಬದ್ಧಃ ಮೋಕ್ಷಃ ಸ್ಯಾದ್ವಾಸನಾಕ್ಷಯಃ । ವಾಸನಾತಾನವಂ ಬ್ರಹ್ಮನ್ ಮೋಕ್ಷ ಇತ್ಯಭಿಧೀಯತೇ ॥" ಇತ್ಯಾದಿಶ್ರುತಿಷು ಮುಕ್ತಸ್ಯ ಸರ್ವಕಾಮನಿವೃತ್ತ್ಯವಗಮಾತ್. ಮುಕ್ತಾನುಭವಶ್ರುತೌ "ಕಿಂ ಕರೋಮಿ ಕ್ವ ಗಚ್ಛಾಮಿ ಕಿಂ ಗೃಹ್ಣಾಮಿ ತ್ಯಜಾಮಿ ಕಿಂ । ಯನ್ಮಯಾ ಪೂರಿತಂ ವಿಶ್ವಂ ಮಹತ್ಕಲ್ಪಾಂಬುನಾ ಯಥಾ ॥" ಇತಿ ದೇಶಾಂತರನಿಷೇಧಾದಿಕಂ ತಸ್ಯ ನಿರ್ದಿಶ್ಯತೇ. ತಸ್ಮಾತ್ "ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ" ಇತ್ಯಾದಿಶ್ರುತಿನಿರ್ದಿಷ್ಟ ಮುಕ್ತಸ್ಯ ವ್ಯವಹಾರಃ ಕಥಮುಪಪದ್ಯತೆ? ಕಿಂಚ "ನಾನ್ಯತ್ಕಿಂಚನ ಮಿಷತ್", "ವಾಚಾರಂಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಂ", "ಅತೋಽನ್ಯದಾರ್ತಂ ನತು ದ್ವಿತೀಯಮಸ್ತಿ" ಇತ್ಯಾದಿಷು ಬ್ರಹ್ಮೇತರವಸ್ತುನಿರಾಸಾ ದೃಶ್ಯತೇ. ತಥಾನ್ಯತ್ರ "ಯ ಆತ್ಮನಿ ತಿಷ್ಠನ್ನಾತ್ಮನೋಽಂತರೋ ಯಮಾತ್ಮಾ ನ ವೇದ ಯಸ್ಯಾತ್ಮಾ ಶರೀರಂ ಯ ಆತ್ಮಾನಮಂತರೋ ಯಮಯತಿ ಸ ತ ಆತ್ಮಾಂತರ್ಯಾ

ನ್ಯ್ಯನ್ಯ್ಯೃತಃ", "ಅಂತಃ ಪ್ರವಿಷ್ಟಃಶಾಸ್ತಾ ಜನಾನಾಂ", "ದ್ವಾ ಸುಪರ್ಣಾ," "ಜ್ಞಾಜ್ಞೌ ದ್ವಾವಜಾ" ಇತ್ಯಾದಿಶ್ರುತಿಭಿರ್ಜೀವಬ್ರಹ್ಮಣೋರ್ಭೇದೋಽವಗಮ್ಯತೇ ತತ್ತ್ವಮಸ್ಯಾದಿವಾಕ್ಯೇಷು ಭೇದಾಭೇದಾವಗಮ್ಯತ್ವೇನ ವೇದಾಂತಾನಾಂ ನಿಶ್ಚಯಾರ್ಥಕತ್ವಾಯೋಗಾತ್ ಅವ್ಯವಸ್ಥಾಪ್ರಸಂಗೇನ ಧರ್ಮಜಿಜ್ಞಾಸಾಶಾಸ್ತ್ರಮೇವ ಅಯುಕ್ತಮಿತ್ಯಾಶಂಕಾಯಾಂ ಮತತ್ರಯಂ ದರ್ಶಯತಿ. ಅಭಾವಂ ಬಾದರಿರಾಹ ಹ್ಯೇವಂ ॥ ೧೦ ॥ "ಏಕಮೇವಾದ್ವಿತೀಯಂ ಬ್ರಹ್ಮ", "ಯತ್ರ ನಾನ್ಯತ್ಪಶ್ಯತಿ ನಾನ್ಯತ್ ಶೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ", "ನೇಹ ನಾನಾಸ್ತಿ ಕಿಂಚನ" ಇತ್ಯಾದಾವೇವಂ ಕಾಲತ್ರಯೇಷು ಭೇದನಿಷೇಧಾವಗಮಾತ್ ಮಧ್ಯೇ ರಜ್ಜುಸರ್ಪವತ್ ಜಗದವಭಾಸಮಾನತ್ವೇಽಪಿ ಜಗಜ್ಜೀವೇಶ್ವರಾದಿಕಸ್ಯ ಸರ್ವಸ್ಯ ಅಪಾರಮಾರ್ಥಿಕತ್ವೇನ ಶಶಶೃಂಗಾದಿವಪಭಾವಂ ಮಿಥ್ಯಾತ್ವಮೇವ ಬಾದರಿರಾಚಾರ್ಯೋ ಮನ್ಯತೇ. ತಸ್ಮಾತ್ ಶಿಷ್ಯಬೋಧಾರ್ಥಂ "ಅಧ್ಯಾರೋಪಾಪವಾದಾಭ್ಯಾಂ ನಿಷ್ಪ್ರಪಂಚಂ ಪ್ರಪಂಚತೇ" ಇತಿ ನ್ಯಾಯಾನುಸರಣೇನ ಶ್ರುತಿಯುಕ್ತ್ಯನುಭವಮಾರ್ಗೇಣ ಜಗತ್ಕಲ್ಪನಾದಿಕಸ್ಯ ಉಪದೇಶೇಽಪಿ ವಂಧ್ಯಾಪುತ್ರರಾಜ್ಯವಿಭವವರ್ಣನವತ್ ಮಿಥ್ಯಾತ್ವಮೇವ ನಿಶ್ಚೀಯತ ಇತಿ ಬಾದರೇರ್ಮತಂ.

"ಹೃದಯದ ಎಲ್ಲಾ ಆಶೆಗಳೂ ತೊಲಗಿದರೆ ಮಾನವನು ಅಮೃತನಾಗಿ ಇಲ್ಲಿಯೇ ಬ್ರಹ್ಮಭಾವವನ್ನು ಪಡೆಯುತ್ತಾನೆ. ವಿಷಯವಾಸನೆಯೇ ಬಂಧವೆನಿಸಿದರೆ ವಾಸನಾಕ್ಷಯವೇ ಮೋಕ್ಷವೆನಿಸುತ್ತದೆ. ಎಲ್ಲಾ ಆಶೆಗಳೂ ತೊಲಗಿ ಮನಸ್ಸು ನಿರ್ವಿಷಯವಾಗುವುದೇ ಮೋಕ್ಷವೆನಿಸುವುದು." ಹೀಗೆ ಶ್ರುತಿಗಳಲ್ಲಿ ಮುಕ್ತನಿಗೆ ಎಲ್ಲಾ ಆಶೆಗಳೂ ತೊಲಗಿರುವುವೆಂದು ಹೇಳಿದೆ. "ನಾನು ಏನು ಮಾಡಬೇಕು? ಎಲ್ಲಿಗೆ ಹೋಗಬೇಕು? ನಾನು ಯಾವುದನ್ನು ಪಡೆಯಲಿ? ಯಾವುದನ್ನು ಬಿಡಲಿ? ಪ್ರಳಯಕಾಲದ ಜಲದಂತೆ ನಾನೇ ವಿಶ್ವದಲ್ಲಿ ಎಲ್ಲೆಲ್ಲೂ ವ್ಯಾಪಿಸಿದ್ದೇನೆ." ಹೀಗೆ ಮುಕ್ತನಿಗೆ ತನಗಿಂತ ಬೇರೆ ಸ್ಥಳವೇ ಇಲ್ಲವೆಂದು ತಿಳಿಸಲಾಗಿದೆ. ಹಾಗಾದರೆ "ಅವನು ಅಲ್ಲಿ ಭೋಗ್ಯವಸ್ತುಗಳೊಡನೆ ವಿಹರಿಸುತ್ತಾನೆ" ಎಂದು ಶ್ರುತಿಯಲ್ಲಿ ತಿಳಿಸಿರುವ ಅವನ ವ್ಯವಹಾರವು ಹೇಗೆ ಹೊಂದುತ್ತದೆ? "ಅವನಿಗೆ ಬೇರೊಂದಿಲ್ಲ." "ಅವನಿಗಿಂತ ಬೇರೊಂದು ಇದ್ದರೆ ಅದೇ ದುಃಖವೆನಿಸುತ್ತದೆ. ಇವನಿಗೆ ಎರಡನೆಯದೇ ಇಲ್ಲ" ಈ ಶ್ರುತಿಗಳಲ್ಲಿ ಬ್ರಹ್ಮಕ್ಕಿಂತ ಬೇರೊಂದು ವಸ್ತುವೇ ಇಲ್ಲವೆಂದು ತಿಳಿದುಬರುತ್ತದೆ. ಹಾಗೆಯೇ ಬೇರೆ ಶ್ರುತಿಗಳಲ್ಲಿ ಜೀವಬ್ರಹ್ಮರಿಗೆ ಭೇದವಿರುವುದಾಗಿಯೂ ತಿಳಿದುಬರುತ್ತದೆ. "ಯಾವನು ಆತ್ಮನೊಳಗೆ ಇದ್ದರೂ ಆತ್ಮನಿಗಿಂತ ಬೇರೆಯಾಗಿರುವನೋ ಯಾವನಿಗೆ ಆತ್ಮವೇ ಶರೀರವಾಗಿದ್ದರೂ ಆತ್ಮನು ಯಾವನನ್ನು ತಿಳಿದಿಲ್ಲವೋ, ಆ ಆತ್ಮನನ್ನು ಒಳಗೇ ಯಾವನು ನಿಯಮನಮಾಡುವನೋ ಅವನೇ ನಿನ್ನ ಅಂತರ್ಯಾ-

ಮಿಯು" "ಒಳಗೆ ಪ್ರವೇಶಿಸಿ ಜೀವರನ್ನು ಶಾಸನಮಾಡುವನು" ಹೀಗೆ ಜೀವಬ್ರಹ್ಮರಿಗೆ ಭೇದವನ್ನು ಶ್ರುತಿಗಳು ತಿಳಿಸಿವೆ. "ತತ್ತ್ವಮಸಿ" ಎಂಬಲ್ಲಿ ಭಿನ್ನನಾದ ಜೀವನನ್ನು ಶಿವನೆಂದು ಅಭಿನ್ನನಾಗಿ ಹೇಳಿದ್ದರಿಂದ ವೇದಾಂತಗಳು ನಿಶ್ಚಿತವಾದ ಅರ್ಥವನ್ನೇ ತಿಳಿಸುತ್ತಿಲ್ಲ. ಹೀಗೆ ಅವ್ಯವಸ್ಥೆಯುಂಟಾದ್ದರಿಂದ ಧರ್ಮಜಿಜ್ಞಾಸಾಶಾಸ್ತ್ರವೇ ಅಯುಕ್ತವೆನಿಸುವುದೆಂದು ಆಶಂಕಿಸಿ ಈ ಬಗ್ಗೆ ಇರುವ ಮೂರುಮತಗಳನ್ನು ತೋರಿಸುತ್ತಾನೆ. "ಇದೆಲ್ಲವೂ ಮೊದಲು ಸದ್ರೂಪವೇ ಆಗಿತ್ತು" "ಎಲ್ಲಿ ಏನೊಂದನ್ನು ಕಾಣುವುದಿಲ್ಲವೋ ಕೇಳುವುದಿಲ್ಲವೋ ಅದೇ ದೊಡ್ಡದು" "ಇಲ್ಲಿ ಏನೊಂದು ಭೇದವೂ ಇಲ್ಲ" ಈ ಶ್ರುತಿಗಳಲ್ಲಿ ಮೂರುಕಾಲಗಳಲ್ಲೂ ಭೇದವನ್ನು ನಿಷೇಧಿಸಲಾಗಿದೆ. ರಜ್ಜುವಿನಲ್ಲಿ ಸರ್ಪದಂತೆ ವ್ಯವಹಾರಕಾಲದಲ್ಲಿ ಜಗತ್ತು ತೋರುತ್ತಿದ್ದರೂ ಜಗತ್ತು ಜೀವ, ಈಶ್ವರ ಇವರೆಲ್ಲರೂ ಮೊಲದ ಕೊಂಬಿನಂತೆ ಯಥಾರ್ಥವಾಗಿ ಇಲ್ಲದಿರುವುದರಿಂದ ಸುಳ್ಳೆಂದು ಬಾದರಿಯು ಹೇಳುತ್ತಾನೆ. "ಶಿಷ್ಯನಿಗೆ ಬೋಧಿಸಲಿಕ್ಕಾಗಿ ಆರೋಪ ಮತ್ತು ಅಪವಾದಗಳಿಂದ ಪ್ರಪಂಚವಿಲ್ಲವೆಂದು ತಿಳಿಸಲಾಗಿದೆ" ಎಂಬ ನ್ಯಾಯದಂತೆಯೂ ಶ್ರುತಿ ಯುಕ್ತಿ ಅನುಭವಗಳ ಮೂಲಕವೂ ಜಗತ್ತನ್ನು ಕಲ್ಪಿಸಿದರೂ ಬಂಜೆಯ ಮಗನಂತೆಯೂ ರಾಜ್ಯವೈಭವದ ವರ್ಣನೆಯಂತೆಯೂ ಎಲ್ಲವೂ ಸುಳ್ಳೆಂದು ನಿಶ್ಚಯಿಸಲಾಗಿದೆ ಎಂಬುದು ಬಾದರಿಯ ಮತ.

ಏವಂ ಶ್ರುತ್ಯಾಭಾಸಪ್ರಾಧಾನ್ಯಶ್ರುತ್ಯೇಕದೇಶಪ್ರಾಮಾಣ್ಯಜಗನ್ಮಿಥ್ಯಾತ್ಮಕಕೇವಲಾದ್ವೈತಬಾದರಿಮತಮುಪನ್ಯಸ್ಯ ತನ್ಮತನಿರಾಕರಣಾರ್ಥಮಾಚಾರ್ಯಾಂತರಂ ದರ್ಶಯತಿ. ಭಾವಂ ಜೈಮಿನಿರ್ವಿಕಲ್ಪಾಮಾನನಾತ್ ॥ ೧೧ ॥ "ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ", "ಭೂತಿಕಾಮೋ ವಾಯವ್ಯಂ ಶ್ವೇತಮಾಲಭೇತ", "ಪಾಪೇನಾಂಧೋ ಮೂಕೋ ಬಧಿರೋ ಶ್ವಾನೋ ಭವತಿ, ಪುಣ್ಯೇನ ಕುಲವಾನ್ ವಿದ್ಯಾವಾನ್ ಧನವಾನ್ ಭೋಗವಾನ್ ಭವತಿ" ಇತ್ಯಾದಿಶ್ರುತಿಷು ಭಗವದಾಜ್ಞಾರೂಪಪುಣ್ಯಕರ್ಮನಿರಾಕರಣಪೂರ್ವಕಬ್ರಹ್ಮಹತ್ಯಸುರಾಪಾನಾದಿದುರಿತಕರ್ಮಾನುಷ್ಠಾನೇನ ಸ್ವರ್ಗಾದಿಲೋಕಸುಖಾನುಭವಸ್ಯ ಚ ಶ್ರುತಾವಸಂದಿಗ್ಧತ್ವೇನ ದರ್ಶನಾತ್, "ಯಜ್ಞೇನ ದಾನೇನ" ಇತ್ಯಾದಿಶ್ರುತಿಷು ನಿಷ್ಕಾಮಾನುಷ್ಠಾನಪರಮೇಶ್ವರಾರ್ಪಿತಜ್ಯೋತಿಷ್ಟೋಮಾದೀನಾಂ ಜೀವಾಂತಃಕರಣಸಿದ್ಧಪಾಪಪಂಕನಿವೃತ್ತಿದ್ವಾರಾ ಬ್ರಹ್ಮಜ್ಞಾನಸಾಧಕತ್ವಾವಗಮಾಚ್ಚ ಜೀವೇಶ್ವರನಿಗಮಾಗಮಾದಿಪ್ರಪಂಚಸ್ಯ ಭಾವಂ ಸತ್ಯತ್ವಂ ಜೈಮಿನಿರಾಚಾರ್ಯೋ ಮನ್ಯತೇ. ಕುತಃ? ವಿಕಲ್ಪಾಮನನಾತ್. ವಿವಿಧಃ ಕಲ್ಪೋ ವಿಕಲ್ಪಃ. ಅಸಮಂತಾನ್ಮನನಂ ವಿಚಾರ ಆಮನನಂ, ವಿಕಲ್ಪಸ್ಯಾಮನನಂ ವಿಕಲ್ಪಾಮನನಂ ತಸ್ಮಾದ್ವಿಕಲ್ಪಾಮನನಾತ್ ಜಗತೋ ಮಿಥ್ಯಾತ್ವೇ ಬೌದ್ಧಾದಿವತ್

**ಜ್ಯೋತಿಷ್ಟೋಮಾದಿನಾ ಸ್ವರ್ಗಾದಿಫಲಭೋಗತ್ವಂ ಬ್ರಹ್ಮಹತ್ಯಾದಿನಾ ನಿರಯವತ್ತ್ವಂ ಚ ನ ಸ್ಯಾತ್. ಅತಃ ಕೃತನಾಶಾಕೃತಾಭ್ಯಾಗಮದೋಷಃ ಸಂಭವೇತ್. ತಥಾ ಚೇತ್ "ಸ ಏಕಧಾ ಭವತಿ ತ್ರಿಧಾ ಭವತಿ ಪಂಚಧಾ ಸಪ್ತಧಾ" ಇತ್ಯಾದಿಶ್ರುತಿವಿರುದ್ಧಪ್ರಸಂಗಾತ್ ಸರ್ವದಾ ಜೀವೇಶ್ವರಾದಿ ಪ್ರಪಂಚಸ್ಯ ನಿತ್ಯತ್ವಂ ಜೀವೇಶ್ವರಯೋಃ ಪರಸ್ಪರಭೇದತ್ವಂ ಚ ವಿದುಷಾ ಮಂಗೀಕರ್ತವ್ಯಮಿತಿ ಭೇದವಾದಿನೋ ಜೈಮಿನೇರ್ಮತಂ.**

ಹೀಗೆ ಆಭಾಸಶ್ರುತಿಯನ್ನು ಅವಲಂಬಿಸಿ ಜಗತ್ತನ್ನು ಸುಳ್ಳೆಂದೂ ಬ್ರಹ್ಮವನ್ನು ಕೇವಲಾದ್ವೈತವೆಂದೂ ವಾದಿಸುವ ಬಾದರಿಮತವನ್ನು ತಿಳಿಸಿ ಅದನ್ನು ನಿರಾಕರಿಸಲು ಬೇರೊಬ್ಬ ಆಚಾರ್ಯನ ಮತವನ್ನು ತಿಳಿಸುತ್ತಾನೆ. "ಸ್ವರ್ಗಾಪೇಕ್ಷಿಯು ಜ್ಯೋತಿಷ್ಟೋಮವನ್ನಾಚರಿಸಬೇಕು." "ಭೂತಿಕಾಮನು ವಾಯುಪ್ರೀತಿಗಾಗಿ ಬಿಳಿಯ ಪಶುವನ್ನು ಹೋಮಮಾಡಬೇಕು" "ಪಾಪದಿಂದ ಕುರುಡನೂ ಮೂಕನೂ ನಾಯಿಯೂ ಆಗುತ್ತಾನೆ. ಪುಣ್ಯದಿಂದ ಸತ್ಕುಲಪ್ರಸೂತನೂ ವಿದ್ಯಾವಂತನೂ ಧನವಂತನೂ ಭೋಗಿಯೂ ಆಗುತ್ತಾನೆ" ಈ ಬಗೆಯ ಶ್ರುತಿಗಳಲ್ಲಿ ಭಗವದಾಜ್ಞೆ ಎನಿಸಿದ ಪುಣ್ಯಕರ್ಮಗಳನ್ನು ನಿರಾಕರಿಸಿ ಬ್ರಹ್ಮಹತ್ಯೆ ಮೊದಲಾದ ದುಷ್ಕರ್ಮಗಳನ್ನಾಚರಿಸುವವರಿಗೆ ನರಕವೂ, ಸತ್ಕರ್ಮಗಳನ್ನಾಚರಿಸುವವರಿಗೆ ಸ್ವರ್ಗಸುಖವೂ ದೊರಕುತ್ತವೆ ಎಂದು ಶ್ರುತಿಯಲ್ಲಿ ಸ್ಪಷ್ಟವಾಗಿ ತಿಳಿಸಿದೆ. "ಬಲವತ್ತರವಾದ ಯಜ್ಞ, ದಾನ ಮತ್ತು ತಪಸ್ಸುಗಳಿಂದ ಪಾಪವು ತೊಲಗಿ ಜೀವನು ನಿರ್ಮಲನಾಗುತ್ತಾನೆ" ಎಂಬ ಶ್ರುತಿಗಳಲ್ಲಿ ನಿಷ್ಕಾಮಭಾವನೆಯಿಂದಲೂ ಈಶ್ವರಾರ್ಪಣದೃಷ್ಟಿಯಿಂದಲೂ ಜ್ಯೋತಿಷ್ಟೋಮಾದಿ ಕರ್ಮಗಳನ್ನಾಚರಿಸಿದರೆ ಅಂತಃಕರಣದಲ್ಲಿದ್ದ ಪಾಪದ ಕೊಳೆಯು ತೊಲಗಿ ಬ್ರಹ್ಮಜ್ಞಾನವು ಸಿದ್ಧಿಸುವುದಾಗಿ ತಿಳಿದುಬರುತ್ತದೆ. ಆದ್ದರಿಂದ ಜೀವ-ಈಶ್ವರ-ನಿಗಮಾಗಮಗಳು ಪ್ರಪಂಚ ಇವೆಲ್ಲವೂ ಸತ್ಯವೆಂದು ಭೇದವಾದಿ ಜೈಮಿನಿಯು ಹೇಳುತ್ತಾನೆ. ಜಗತ್ತಿನಲ್ಲಿರುವ ಅನೇಕಬಗೆಯಾದ ಮತಗಳನ್ನು ಹಿಂದೆಯೇ ವಿಚಾರಮಾಡಿದ್ದರಿಂದ ಈ ಜಗತ್ತನ್ನು ಸುಳ್ಳೆಂದು ಹೇಳಲಿಕ್ಕೆ ಯಾರಿಗೂ ಶಕ್ಯವಿಲ್ಲ. ಆದರೆ ಬೌದ್ಧರು ಹೇಳುವಂತೆ ಜಗತ್ತು ಸುಳ್ಳಾದರೆ ಜ್ಯೋತಿಷ್ಟೋಮದಿಂದ ಸ್ವರ್ಗದ ಭೋಗವನ್ನು ಜೀವನು ಪಡೆಯುವಿಕೆ ಮತ್ತೆ ಬ್ರಹ್ಮಹತ್ಯಾದಿಪಾಪಗಳಿಂದ ನರಕಕ್ಕೆ ಹೋಗುವಿಕೆ ಇವೆಲ್ಲವೂ ಇಲ್ಲದಂತಾಗುವುದು. ಇದರಿಂದ ಸಿದ್ಧವಾದದ್ದನ್ನು ನಾಶಪಡಿಸಿದಂತೆಯೂ ನಷ್ಟವಾದ್ದನ್ನು ಒಪ್ಪಿದಂತೆಯೂ ಆದೀತು! ಹಾಗೆಯೇ ಆದರೆ, "ಅವನು ಅನೇಕ ಬಗೆಯಾಗುತ್ತಾನೆ" ಎಂದು ಮುಂತಾದ ಶ್ರುತಿಗಳೇ ವಿರುದ್ಧವಾದೀತು. ಆದ್ದರಿಂದ ಜೀವ-ಈಶ್ವರ-ಶಾಸ್ತ್ರ-ಪ್ರಪಂಚ ಇವೆಲ್ಲವನ್ನೂ ನಿತ್ಯವೆಂದೂ, ಜೀವೇಶ್ವರರು ಪರಸ್ಪರ ಭಿನ್ನರೆಂದೂ ವಿದ್ವಾಂಸರು ಒಪ್ಪಲೇಬೇಕೆಂಬುದು ಜೈಮಿನಿಯ ಮತ.

**ಏವಂ ಶ್ರುತ್ಯೇಕದೇಶಪ್ರಾಮಾಣ್ಯಮತದ್ವಯೋಃ ಪರಸ್ಪರಾಪ್ರಾಮಾಣ್ಯಸ್ಯ ಪ್ರಸಜ್ಜಿತತ್ವೇನ ತದುಭಯಮತವಿರೋಧನಿರಾಕರಣಾರ್ಥಂ ಸರ್ವ**

ವೇದವೇದಾಂತಾಗಮಸಿದ್ಧದ್ವೈತಾದ್ವೈತಾತ್ಮಕಸ್ವಮತಮಸಂಕೋಚೇ ನಾಹ. ದ್ವಾದಶಾಹವದುಭಯವಿಧಂ ಬಾದರಾಯಣೋಽತಃ ॥ ೧೨ ॥

ಯತಃ ಕಾರಣಾತ್ ಶ್ರುತ್ಯೇಕದೇಶಭೂತಜ್ಞಾನಮಾತ್ರಪ್ರಾಧಾನ್ಯಕೇವಲಾದ್ವೈತಮತಸ್ಯ ಕರ್ಮಭಕ್ತಿಯೋಗಮಾತ್ರಸಾಧಕದ್ವೈತಮತಸ್ಯ ಚ ಪರಸ್ಪರವಿರೋಧಃ. ಅತೋ ಹೇತೋಃ ಸರ್ವವೇದವೇದಾಂತಮುಖ್ಯಾಭಿಪ್ರೇತಂ " ಯಥಾ ನದ್ಯಃ " ಇತ್ಯಾದಿಶ್ರುತಿಸಿದ್ಧಂ ಜ್ಞಾನಕರ್ಮೋಭಯಾತ್ಮಕಮುಭಯವಿಧಂ ದ್ವೈತಾದ್ವೈತಮತಂ ಬಾದರಾಯಣೋ ಮನ್ಯತೇ. ಉಭಯವಿಧಂ ನಾಮ ಸಂಸಾರದಶಾಯಾಂ ಜೀವಬ್ರಹ್ಮಣೋರುಪಾಸ್ಯೋಪಾಸಕಯೋಃ ಪಾರಮಾರ್ಥಿಕಸತ್ಯತ್ವಂ, ಮೋಕ್ಷದಶಾಯಾಂ ನದೀಸಮುದ್ರವತ್ ಭ್ರಮರಕೀಟನ್ಯಾಯವತ್ ಸ್ವಾಭಾವಿಕಜೀವಭಾವನಿವೃತ್ತಿಪೂರ್ವಕವ್ಯಾಪಕಾಖಂಡಪರಮಾಕಾಶರೂಪಸಚ್ಚಿದಾನಂದಲಕ್ಷಣಸರ್ವಜ್ಞತ್ವಾದ್ಯಸಾಧಾರಣಗುಣಾಕರಪರಶಿವಬ್ರಹ್ಮಶಂಕರರುದ್ರೇಶ್ವರೇಶಾನಮಹಾದೇವಾದಿಶಬ್ದವಾಚ್ಯಪರತತ್ತ್ವಪ್ರಾಪ್ತಿತ್ವಂ ಚ ಜೀವಸ್ಯೇತಿ ನಿರ್ಣೀಯತೇ. ದ್ವಾದಶಾಹವತ್ " ಯಥಾ ದ್ವಾದಶಾಹಂ ಋದ್ಧಿಕಾಮಾ ಉಪೇಯುಃ ", " ದ್ವಾದಶಾಹೇನ ಪ್ರಜಾಕಾಮಂ ಯಾಜಯೇತ್ " ಇತ್ಯುಪೈತಿಯಜತಿಚೋದನಾಭ್ಯಾಂ ಸಂಕಲ್ಪಭೇದೇನ ಸತ್ರತ್ವಮಹೀನತ್ವಂ ಚ ಪ್ರಯೋಗಭೇದೇನ ಪ್ರಮಾಣದ್ವಯಬಲಾದಂಗೀಕ್ರಿಯತೇ. ತಥಾ " ದ್ವಾ ಸುಪರ್ಣಾ " ಇತ್ಯಾದಿಮಂತ್ರೇಷು ಜೀವಬ್ರಹ್ಮಣೋಃ ಪರಸ್ಪರವೈಲಕ್ಷಣ್ಯಂ. ತತ್ತ್ವಮಸ್ಯಾದಿವಾಕ್ಯೇಷು ತಯೋರೇಕತ್ವಸ್ಯ ಚ ವ್ಯವಸ್ಥಾಪನಾತ್ ಜೀವಬ್ರಹ್ಮಣೋಃ ಪಾರಮಾರ್ಥಿಕಭೇದಾಭೇದೋ ಹ್ಯಂಗೀಕರ್ತವ್ಯಃ. " ಶ್ರುತಿಸ್ಸತಾಸ್ಸರ್ಥವಾದಿನೀ " ಇತಿ ಬಹುಶ್ರುತಿಪುರಾಣಪೂರ್ವಾಚಾರ್ಯವಾಕ್ಯೇಷು ದರ್ಶನಾತ್ ಶ್ರುತಿಸಂಕೋಚೇ ಮಾನಾಭಾವಾತ್ ವೈದಿಕೇತರತ್ವಪ್ರಸಂಗಾಚ್ಚ ಪೂರ್ವತ್ರ " ಅಧಿಕಂ ತು ಭೇದನಿರ್ದೇಶಾತ್ " ಇತ್ಯಾದೌ ಜೀವಬ್ರಹ್ಮಣೋಃ ಪರಸ್ಪರಭೇದವ್ಯವಸ್ಥಾಪನೇನ ದ್ವೈತಸ್ಯ ಸತ್ಯತ್ವಂ. " ತದನನ್ಯತ್ವಂ " ಇತ್ಯತ್ರ ತಥಾ ಅದ್ವೈತಸ್ಯ ಸತ್ಯತ್ವಂ ಚ ಸೂಚಿತಂ. ತಸ್ಮಾತ್ " ಲೋಕವತ್ತು ಲೀಲಾಕೈವಲ್ಯಂ " ಇತ್ಯತ್ರ ಪರಮೇಶ್ವರಸ್ಯ ಲೀಲಾವ್ಯಪದೇಶೇನ ಭೇದತ್ವಂ ದ್ವೈತಶ್ರುತೀನಾಂ ಸರ್ವಾಸಾಂ ತತ್ಕಾಲಪರತ್ವಂ ಚಾಭಿಹಿತಂ. ಕೈವಲ್ಯಪದೇನ ತಸ್ಯ ಕೇವಲಾವಸ್ಥಾವ್ಯಪದೇಶಾತ್ " ನೇಹ ನಾನಾಸ್ತಿ ಕಿಂಚನ " ಇತ್ಯಾದ್ಯಭೇದಶ್ರುತೀನಾಂ ತತ್ಪರಿಶೇಷಾವಸ್ಥಾಪರತ್ವಮಿತಿ ಸ್ಪಷ್ಟಮುಪದಿಷ್ಟಂ. ವ್ಯಾಪಕಸ್ಯ ಸರ್ವಜ್ಞಸ್ಯ ಶಿವಸ್ಯ ಪರಬ್ರಹ್ಮಣಃ ಮೂರ್ತತ್ವೇನ ಕಿಂ ಕಾರ್ಯಮಿತಿ ಚೇತ್

ಜೀವಬ್ರಹ್ಮಣೋರ್ಭೇದಾಭೇದತ್ವಮೇವ ಸ್ವಮತಮಿತಿ ಸಾಧಿತಂ. ಏತೇನ ಸಾವಯವಬ್ರಹ್ಮೋಪಾಸನಸ್ಯ ವಿದುಷಾಂ ಸರ್ವಕಾಮಾವಾಪ್ತಿದ್ವಾರಾ ನಿರವಯಬ್ರಹ್ಮಪ್ರಾಪಕತ್ವಂ ಸೂಚಿತಂ. "ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ", "ಶಿವೋಽದ್ವೈತಃ" ಇತ್ಯಾದಿಶ್ರುತಿಷ್ವದ್ವಿತೀಯಸ್ಯ ಪರಬ್ರಹ್ಮಣಃ ಸತ್ಯಸಂಕಲ್ಪತ್ವಾದಿಸತ್ತ್ವೇಽಪಿ "ಏತತ್ತತೋ ಭವತಿ", "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ" ಇತ್ಯಾದಿಶ್ರುತಿಷು ತಸ್ಯ ಭಾವೇ ಗುಣತ್ರಯಾತ್ಮಕಾಽಚಿಚ್ಛಕ್ತ್ಯಭಿಧಾನಪ್ರಧಾನಭಾವಕಾಲೇ ಲೀಲಾಯಾಂ ಭೂತಭೌತಿಕಜಗಜ್ಜಾಲಸೃಷ್ಟಿಃ ತಚ್ಛಕ್ತಿಸಂಕೋಚಕಾಲೇ ಸ್ವಯಂ ಸತ್ಯಸಂಕಲ್ಪೇನಾಪಿ ಶಿವೇನ ತಸ್ಯ ಸ್ವಸ್ಮಿನ್ನೇವ ವಿಲಯಶ್ಚಾಭಿಹಿತಃ. ತಸ್ಮಾತ್ ಅದ್ವಿತೀಯಸದ್ವಿತೀಯಬ್ರಹ್ಮಪ್ರಧಾನಸಮಾವೇಶೇನ ಜಗತ್ಸೃಷ್ಟಿರವಿರುದ್ಧಾ. ಕುತಃ? ಸಂಧ್ಯವದುಪಪತ್ತೇಃ. ಪ್ರಬೋಧಸುಪ್ತಿಸಾಮ್ಯಾವಸ್ಥಾರೂಪಸ್ವಪ್ನಾವಸ್ಥಾಯಾಮಿವ ಉಪಪತ್ತೇಃ ಜಗತ್ಕಾರಣತ್ವೋಪಪತ್ತೇಃ. ಯಥಾ ಸ್ವಪ್ನೇ "ಅಥ ರಥಾನ್ ರಥಯೋಗಾನ್ ಪೃಥಕ್ ಸೃಜತೇ" ಇತ್ಯಾರಭ್ಯ "ಅಥ ವೇಶಂತಾನ್ ಪುಷ್ಕರಿಣ್ಯಃ ಸಂಪ್ರತಿ ಸೃಜತೇ ಸಹಿ ಕರ್ತಾ" ಇತಿ "ಯೇಷು ಸುಪ್ತೇಷು ಜಾಗರ್ತಿ ಕಾಮಂ ಕಾಮಂ ನಿರ್ಮಿಮಾಣಃ । ತದೇವ ಶುಕ್ಲಂ ತದ್ಬ್ರಹ್ಮ ತದೇವಾಮೃತಮುಚ್ಯತೇ । ತಸ್ಮಿನ್ ಲೋಕಾಃ ಶ್ರಿತಾಸ್ಸರ್ವೇ ತದು ನಾತ್ಯೇತಿ ಕಶ್ಚನ ॥" ಇತಿ ಶ್ರುತೌ ಚ ಜೀವಾದೃಷ್ಟಸಹಾಯೇನ ಸ್ವಪ್ನೇಽಪಿ ಪರಮೇಶ್ವರಸ್ಯ ಪೃಥಿವ್ಯಾದಿಸೃಷ್ಟಿರುಪದಿಶ್ಯತೇ. ಅತಃ ಕಾಲಭೇದೇನ ಯಥಾ ನ ವಿರುದ್ಧಃ ತದ್ವದೇಕಕಾಲೇಽಪಿ ಭೇದಾಭೇದಯೋರವಿರುದ್ಧತ್ವಮುಪದಿಷ್ಟಂ. ಏತದುಪದೇಶೇನ ಮುಕ್ತಸ್ಯಾಪಿ ಪ್ರಾರಬ್ಧವಾಸನಾವಾಸಿತಪ್ರಕೃತಿರೇವಾಸ್ತಿ. ಯದಾ ಶಿವಲೋಕೇ ನಿರತಿಶಯಾನಂದಾನುಭವತ್ವಂ ಯದಾ ಸರ್ವವಾಸನಾನಿರ್ಮುಕ್ತಿಸ್ತದಾ ಕೇವಲಶಿವೈಕ್ಯಕೈವಲ್ಯಾನುಭವೋ ಭವತೀತಿ ದರ್ಶಿತಂ. ಅತ್ರ ಅದ್ವಿತೀಯಸ್ಯ ಶಿವಸ್ಯ ಪರಬ್ರಹ್ಮಣಃ ಸಚ್ಚಿದಾನಂದಾತ್ಮಕಸ್ಯ, ಜಡಸ್ಯ ಸದ್ವಿತೀಯಸ್ಯ ಪ್ರಧಾನಸ್ಯ ಚ ಜಗತ್ಸೃಷ್ಟೌ ಸಮಾವೇಶಸ್ಸಂಭವತಿ ನವೇತಿ ಸಂದಿಹ್ಯತೇ. ಪ್ರಧಾನಶಿವಯೋಶ್ಚೇತನಾಚೇತನಯೋಸ್ತಮಃಪ್ರಕಾಶವತ್ ಪರಸ್ಪರವಿರುದ್ಧಸ್ವಭಾವತ್ವೇನಾಽದ್ವಿತೀಯಸ್ಯ ಶಿವಸ್ಯ ಸದ್ವಿತೀಯ ಪ್ರಧಾನಸಾಪೇಕ್ಷಾ ಅಸ್ತ್ಯೇವ. ಮುಕ್ತಸ್ಯಾಪ್ಯೇವಮುಪಲಕ್ಷಣಂ. ಏವಂ ಸಾಪೇಕ್ಷತ್ವೇ "ಸತ್ಯಕಾಮಸ್ಸತ್ಯಸಂಕಲ್ಪಃ" ಇತ್ಯಾದಿಶ್ರುತಿಸಿದ್ಧಸತ್ಯಕಾಮತ್ವಾದಿಪ್ರಾಪ್ತಸ್ವಾತಂತ್ರ್ಯಭಂಗಪ್ರಸಂಗಃ. "ಅಪಾಣಿಪಾದೋ ಜವನೋ

ಗೃಹೀತಾ ” ಇತ್ಯಾದಿಶ್ರುತಿಷು ಸ್ವತಂತ್ರಸ್ಯ ತಸ್ಯ ಸಾಧನಾಂತರನಿರಪೇಕ್ಷ ತಯಾ ಸ್ವಮಹಿಮಾತಿಶಯೇನ ಸರ್ವಕರ್ತೃತ್ವಂ ದರ್ಶಿತಂ. ಅತ ಶ್ಶಿವಸ್ಯ ತದುಪಾಸಕಸ್ಯ ಮುಕ್ತಸ್ಯ ಚ ಕದಾಚಿತ್ ಪ್ರಕೃತಿಸಾಪೇಕ್ಷಾ ಸನ್ನಿ ಹಿತೈವ ಇತಿ ಪ್ರಾಪ್ತೇ ತತ್ರೋಚ್ಯತೇ. ಅದ್ವಿತೀಯಸದ್ವಿತೀಯಯೋಶ್ಶಿವ ಪ್ರಧಾನಯೋಃ ಸ ತಮಃಪ್ರಕಾಶಯೋರಿವ ಪರಸ್ಪರವಿರೋಧಃ. “ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಸ್ಸಂಭೂತಃ” ಇತ್ಯತ್ರ ತಸ್ಮಾ ತ್ಪ್ರಧಾನಾತ್ ಏತಸ್ಮಾತ್ಪರಮಾತ್ಮನಃ ಆಕಾಶಾದಿಭೂತಭೌತಿಕಸೃಷ್ಟ್ಯುಪ ನ್ಯಾಸಾತ್. ಅತ್ರ ವಾಶಬ್ದೇನ ಸಮುಚ್ಚಯಾರ್ಥಕತ್ವಂ. “ಮಾಯಾಂ ತು ಪ್ರಕೃತಿಂ ವಿಂದ್ಯಾನ್ಮಾಯಿನಂ ತು ಮಹೇಶ್ವರಂ । ತಸ್ಯಾವಯವ ಭೂತೋತ್ಥಂ ವ್ಯಾಪ್ತಂ ಸರ್ವಮಿದಂ ಜಗತ್ ॥ ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ” ಇತ್ಯಾದಿಶ್ರುತಿಷು ಮಾಯಾಯಾಶ್ಶಿವಾಧೀನತ್ವಸ್ಯ ತಯೈವ ಜಗತ್ಕಾರಣತ್ವಸ್ಯ ತಸ್ಯಾಃ ಶಕ್ತೇಃ ಸ್ವಾಭಾವಿಕತ್ವಸ್ಯ ಚೋಪದೇಶಾತ್ ತಸ್ಯ ಭಾವೇ ಶಿವಾಧೀನ ಪ್ರಧಾನವಿಕಾಸಸದ್ಭಾವೇ ಸಂಧ್ಯವದಿತ್ಯತ್ರ ಸಂಧ್ಯಶಬ್ದೇನ ತನುತ್ರಯ ಮಧ್ಯಾವಗತಲಿಂಗಶರೀರಂ ಸ್ವಪ್ನಾವಸ್ಥಾ ಚ ವ್ಯವಹ್ರಿಯತೇ. ಯಥಾ ಮೂಢಮುಮುಕ್ಷುಮುಕ್ತದಶಾಸು ಮುಮುಕ್ಷುದಶಾ ಹಿ ಸರ್ವ ವೇದವೇದಾಂತವಿಚಾರೋಪಾಸನಾಹೇತುಃ, ಸಂಶಯಸ್ತು ಪೂರ್ವಪಕ್ಷ ಸಿದ್ಧಾಂತಯೋರ್ಬೀಜಂ ತಥಾ ಲಿಂಗಶರೀರಮೇವ ಸ್ಥೂಲಶರೀರ ವ್ಯಾಪಾರಸ್ಯ ಕಾರಣಶರೀರಾವಿದ್ಯಾವಿಚ್ಛೇದಕಶಿವಜ್ಞಾನಸ್ಯ ಚ ಹೇತುಃ. ತಸ್ಮಾತ್ ತದ್ದೃಷ್ಟಾಂತೇನ ಶಿವಸ್ಯ ಪರಬ್ರಹ್ಮಣೋ ಜಗತ್ಸೃಷ್ಟಿರಭಿ ಹಿತಾ, ಕಿಂಚ ಜೀವನ್ಮುಕ್ತದಶಾವಿಶೇಷಸಮಾಧಿಕಾಲೇ ಬಾಹ್ಯೇಂದ್ರಿ ಯಾದಿನಿರಪೇಕ್ಷಯಾ ಕೇವಲಬುದ್ಧ್ಯಾ ಶಿವಾನಂದಃ ಶಿವಯೋಗಿಭಿರನು ಭೂಯತೇ. “ಆತ್ಮಾಕ್ರೀಡ ಆತ್ಮಾರತಿರಾತ್ಮಾನಂದಸ್ಸ ಸ್ವರಾಡ್ಭವತಿ । ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತೇತಿ ॥” ಇತ್ಯಾದೌ ತದ್ವದುಪದಿಷ್ಟಂ. ಏತೇನ ಕಾರಣಕೈಲಾಸಪ್ರಾಪ್ತಿಸಾರೂಪ್ಯ ಧಾರಣಮಪ್ಯುಪಲಕ್ಷಣಂ. “ಏತತ್ತತೋ ಭವತಿ । ಆಕಾಶಶರೀರಂ ಬ್ರಹ್ಮ । ಸತ್ಯಾತ್ಮ ಪ್ರಾಣಾರಾಮಂ ಮನಆನಂದಂ ॥” ಇತ್ಯತ್ರ ಮಹಾ ಕೈಲಾಸವಾಸಸದಾಶಿವಸ್ಯಾಪಿ ಬಾಹ್ಯೇಂದ್ರಿಯನಿರಪೇಕ್ಷತಯಾ ಪರಮಾ ನಂದಾನುಭವಃ, ಮನಆನಂದಂ ಇತ್ಯತ್ರ ಮನಸಿ ಆನಂದೋ ಯಸ್ಯ ಸಃ ಮನಆನಂದಃ, ಪ್ರಾಣೇಷು ಆಸಮಂತಾದ್ರಮತ ಇತಿ ಪ್ರಾಣಾ ರಾಮಂ ಇತಿ ವ್ಯುತ್ಪತ್ತ್ಯಾ ನಿಶ್ಚೀಯತೇ. “ಶಾಂತಿಸಮೃದ್ಧಮಮೃತಂ” ಇತ್ಯಾದಿನಾ ತಚ್ಛರೀರಸ್ಯ ಸತ್ಯತ್ವಂ ಶಾಂತಿಕರತ್ವಂ ಅಮೃತತ್ವಂ ಚೋಪ

ದಿಷ್ಟಂ. ಅತ್ರಾಪಿ ತದುಪಾಸಕಸ್ಯಾಪ್ಯೇವಂ ಲಕ್ಷಣಮುಪದಿಷ್ಟಂ.

ಭೇದಾಭೇದಮತದಲ್ಲಿ ಎಲ್ಲಾ ಶ್ರುತಿಗಳಿಗೂ ಸಮನ್ವಯವಿದ್ದರೂ ತಮಸ್ಸು ಮತ್ತು ಪ್ರಕಾಶಗಳಂತೆ ಭೇದ ಮತ್ತು ಅಭೇದಗಳೇ ಪರಸ್ಪರವಿರುದ್ಧವಾದ್ದರಿಂದ ಯುಕ್ತಿಯಿಂದ ಬಾಧೆಯು ಸಂಭವಿಸುವುದೆಂದಾಶಂಕಿಸಿ ಭೇದಾಭೇದಗಳಿಗೆ ದೃಷ್ಟಾಂತ ವನ್ನು ತಿಳಿಸಿ ಜಗತ್ಕಾರಣತ್ವವನ್ನು ಇಲ್ಲಿ ತಿಳಿಸಲಾಗುವುದು. ಸಮನ್ವಯಾಧಿಕರಣದಲ್ಲಿ ಎಲ್ಲಾ ವೇದಾಂತಗಳೂ ಬ್ರಹ್ಮವನ್ನೇ ಪ್ರತಿಪಾದಿಸುತ್ತ ಬ್ರಹ್ಮಜ್ಞಾನವನ್ನೇ ವಿಧಿಸು ತ್ತವೆ ಎಂದು ಹೇಳಿದೆ. ಹಾಗೆಯೇ ದ್ವಾದಶಾಹಯಜ್ಞದ ದೃಷ್ಟಾಂತದಿಂದ "ಎರ ಡನ್ನೂ ವಿಧಿಸಿರುವುದರಿಂದ ಎರಡೂ ಸಿದ್ಧಿಸುತ್ತವೆ" ಎಂಬ ನ್ಯಾಯದಂತೆ ಎಲ್ಲಾ ವೇದಾಂತಗಳೂ "ಶ್ರುತಿಯು ಸತ್ಯವನ್ನೇ ತಿಳಿಸುತ್ತದೆ" ಎಂಬ ನ್ಯಾಯವನ್ನು ಅನು ಸರಿಸಿ ಜೀವಬ್ರಹ್ಮರಿಗೆ ಭೇದಾಭೇದವನ್ನೇ ಸಾಧಿಸುತ್ತವೆ. ಇದರಿಂದ ಸಾಕಾರಬ್ರಹ್ಮ ವನ್ನು ಉಪಾಸನಮಾಡಿದರೆ ಜ್ಞಾನಿಗಳು ತಮ್ಮ ಎಲ್ಲಾ ಇಚ್ಛೆಗಳನ್ನು ಪಡೆದು ಅನು ಭವಿಸಿ ಕೊನೆಗೆ ನಿರಾಕಾರಬ್ರಹ್ಮವನ್ನು ಹೊಂದುವರೆಂದೂ ತಿಳಿದುಬರುತ್ತದೆ. "ಅವನು ಸತ್ಯಕಾಮನು ಮತ್ತು ಸತ್ಯಸಂಕಲ್ಪನು" "ಪ್ರಪಂಚಕ್ಕೆ ಆಶ್ರಯನಾದ ಶಿವನೇ ತ್ರಿಮೂರ್ತ್ಯತೀತನಾದ ಪರಮಾತ್ಮನು ಮತ್ತು ಅದ್ವೈತನು " ಈ ಶ್ರುತಿಗಳಲ್ಲಿ ಅದ್ವಿ ತೀಯನಾದ ಪರಮಾತ್ಮನಿಗೆ ಸತ್ಯಸಂಕಲ್ಪ ಮೊದಲಾದ ಗುಣಗಳಿದ್ದರೂ "ಈ ಪ್ರಪಂಚವು ಅವನಿಂದಲೇ ಹುಟ್ಟುತ್ತದೆ" "ಈ ಆತ್ಮನಿಂದ ಆಕಾಶವು ಹುಟ್ಟಿತು" ಎಂದು ಮುಂತಾದ ಶ್ರುತಿಗಳಂತೆ ಶಿವನ ತ್ರಿಗುಣಾತ್ಮಕವೂ ಅಚಿದ್ರೂಪವೂ ಆದ ಮಾಯಾಶಕ್ತಿಗೆ ಪ್ರಾಧಾನ್ಯವಿದ್ದಾಗಲೇ ಲೀಲೆಯಿಂದ ಸಮಸ್ತ ಜಗತ್ತು ಹುಟ್ಟುತ್ತದೆ. ಶಿವನು ಸತ್ಯಸಂಕಲ್ಪನಾದರೂ ಆ ಶಕ್ತಿಯ ವಿಕಾಸಕಾಲದಲ್ಲಿಯೇ ಜಗತ್ತನ್ನು ಸೃಷ್ಟಿಸುತ್ತಾನೆ. ಆದ್ದರಿಂದ ಎಚ್ಚರ ಮತ್ತು ಗಾಢನಿದ್ರೆಗಳೆರಡಕ್ಕೂ ಮಧ್ಯದಲ್ಲಿ ಇರುವ ಸ್ವಪ್ನಾವಸ್ಥೆಯಂತೆ ಶಿವನ ಲೀಲಾವಸ್ಥೆ ಮಧ್ಯಾವಸ್ಥೆ ಎನಿಸಿ ಜಗತ್ತಿಗೆ ಕಾರಣ ವೆನಿಸುತ್ತದೆ. ಸ್ವಪ್ನದಲ್ಲಿ ಪರಮಾತ್ಮನು ರಥಗಳನ್ನೂ ರಥಸಂಬಂಧಗಳನ್ನೂ, ಉದ್ಯಾನ ಗಳನ್ನೂ ಸರೋವರಗಳನ್ನೂ ಸೃಷ್ಟಿಸುತ್ತಾನೆ. ಇವಕ್ಕೆಲ್ಲಾ ಅವನೇ ಕರ್ತನೆನಿಸುತ್ತಾನೆ. "ಎಲ್ಲಾ ಇಂದ್ರಿಯಗಳೂ ಮಲಗಿರುವಾಗ ಪರಮೇಶ್ವರನು ಯಥೇಚ್ಛವಾಗಿ ನಿರ್ಮಿಸ ಲಿಚ್ಛಿಸುತ್ತಾನೆ. ಅವನೇ ಶುಕ್ಲ ಅಮೃತ ಮತ್ತು ಬ್ರಹ್ಮಎನಿಸಿದ್ದಾನೆ. ಅವನನ್ನೇ ಎಲ್ಲ ಲೋಕಗಳೂ ಆಶ್ರಯಿವೆ. ಯಾರೊಬ್ಬರೂ ಅವನನ್ನು ಅತಿಕ್ರಮಿಸಲಾರರು" ಎಂಬ ಶ್ರುತಿಯಲ್ಲೂ ಜೀವ ಮತ್ತು ಅದೃಷ್ಟಗಳ ಸಹಾಯದಿಂದ ಸ್ವಪ್ನದಲ್ಲಿಯೂ ಪರಮೇಶ್ವ ರನೇ ರಥಗಳನ್ನು ಸೃಷ್ಟಿಸುತ್ತಾನೆಂದು ತಿಳಿದುಬರುತ್ತದೆ. ಹೀಗೆ ಕಾಲಭೇದದಿಂದ ಇದೆ ಲ್ಲಕ್ಕೂ ಹೇಗೆ ವಿರೋಧವಿಲ್ಲವೋ ಹಾಗೆಯೇ ಭೇದಾಭೇದಗಳೆರಡಕ್ಕೂ ಏಕಕಾಲದ ಲ್ಲಿಯೇ ಅನ್ವಯವಾಗಲಿಕ್ಕೆ ಯಾವ ವಿರೋಧವೂ ಇಲ್ಲವೆಂದು ಹಿಂದೆ ತಿಳಿಸಿದೆ. ಆದ್ದರಿಂದ ಮುಕ್ತನಿಗೂ ಪ್ರಾರಬ್ಧವಾಸನೆಯಿಂದ ಕೂಡಿದ ಪ್ರಕೃತಿಯ ಸಂಬಂಧವಿದ್ದೇ ಇರುತ್ತದೆ. ಶಿವಲೋಕದಲ್ಲಿ ನಿರತಿಶಯಾನಂದವನ್ನು ಅನುಭವಿಸುತ್ತ ಎಲ್ಲಾ ವಾಸನ

ಗಳ ಬಿಡುಗಡೆ ಯಾವಾಗ ಆಗುವುದೋ ಆಗಲೇ ಅಲ್ಲಿಯೇ ಅವನಿಗೆ ಶಿವೈಕ್ಯಭಾವ ದಿಂದ ಕೈವಲ್ಯದ ಅನುಭವವಾಗುತ್ತದೆ ಎಂದೂ ಹಿಂದೆ ಹೇಳಿದೆ. ಆದರೆ ಇಲ್ಲಿ ಒಂದು ಸಂದೇಹ ಬರುತ್ತದೆ. ಜಗತ್ಸೃಷ್ಟಿಯಲ್ಲಿ ಸಚ್ಚಿದಾನಂದಸ್ವರೂಪನಾದ ಶಿವನಿಗೆ ಜಡವಾದ ಪ್ರಧಾನದ ಅಪೇಕ್ಷೆ ಉಂಟೇ ಇಲ್ಲವೇ ಎಂಬುದೇ ಈ ಸಂದೇಹ. ಚೇತನ ಶಿವನಿಗೂ ಜಡವಾದ ಪ್ರಧಾನಕ್ಕೂ ಕತ್ತಲೆ ಬೆಳಕುಗಳಂತೆ ಪರಸ್ಪರ ವಿರುದ್ಧಸ್ವಭಾವ ವಿರುವುದರಿಂದ ಅದ್ವಿತೀಯನಾದ ಶಿವನಿಗೆ ಪ್ರಧಾನದ ಅಪೇಕ್ಷೆ ಇದ್ದೇ ಇರುವುದು. ಮುಕ್ತನಿಗೂ ಇದೇ ಗುರುತೆಂದು ತಿಳಿಯಬೇಕು. ಮುಕ್ತನು ಹೀಗೆ ಅಪೇಕ್ಷಿಸು ವುದಾದರೆ "ಅವನು ಸತ್ಯಕಾಮನು ಮತ್ತು ಸತ್ಯಸಂಕಲ್ಪನು." ಎಂಬಲ್ಲಿ ಹೇಳಿದ ಸತ್ಯ ಕಾಮ ಮೊದಲಾದ ಗುಣಗಳಿಂದ ದೊರಕುವ ಸ್ವಾತಂತ್ರ್ಯಕ್ಕೆ ಭಂಗವುಂಟಾಗುವುದು. "ಕೈಕಾಲುಗಳಿಲ್ಲದಿದ್ದರೂ ವ್ಯವಹರಿಸುವನು" ಈ ಬಗೆಯ ಶ್ರುತಿಗಳಲ್ಲಿ ಸ್ವತಂತ್ರ ನಾದ ಶಿವನಿಗೆ ಬೇರೊಂದು ಸಾಧನದ ಅಪೇಕ್ಷೆಯಿಲ್ಲದ್ದರಿಂದ ತನ್ನ ಮಹಿಮಾತಿ ಶಯದಿಂದಲೇ ಅವನು ಎಲ್ಲಕ್ಕೂ ಕರ್ತೃವಾಗಿರುವುದಾಗಿಯೂ ಹೇಳಿದೆ. ಆದ್ದರಿಂದ ಶಿವನಿಗೂ ಮುಕ್ತನಿಗೂ ಕೆಲವುವೇಳೆ ಪ್ರಕೃತಿಯ ಅಪೇಕ್ಷೆ ಇರುವುದೆಂದರೆ ಅದಕ್ಕೆ ಸಮಾಧಾನ ಹೀಗಿದೆ. ಅದ್ವಿತೀಯನಾದ ಶಿವನಿಗೂ ಸದ್ವಿತೀಯವಾದ ಪ್ರಕೃತಿಗೂ ಕತ್ತಲು ಬೆಳಕುಗಳಂತೆ ಪರಸ್ಪರ ವಿರೋಧವಿಲ್ಲ, "ಈ ಆತ್ಮನಿಂದ ಆಕಾಶಹುಟ್ಟಿತು" ಎಂಬಲ್ಲಿ ಎಲ್ಲಕ್ಕೂ ಪ್ರಧಾನನಾದ ಆ ಈ ಪರಮಾತ್ಮನಿಂದ ಆಕಾಶ ಮೊದಲಾದ ಭೂತಭೌತಿಕ ಸೃಷ್ಟಿಯಾಯಿತೆಂದು ಹೇಳಲಾಗಿದೆ. "ತಸ್ಮಾದ್ವಾ" ಎಂಬ ಶ್ರುತಿಯಲ್ಲಿ ವಾ ಶಬ್ದವು ಸಮುಚ್ಚಯವನ್ನು ತಿಳಿಸುತ್ತದೆ. "ಮಾಯಾಂ ತು ಪ್ರಕೃತಿಂ ವಿಂದ್ಯಾತ್" "ಪರಾಽಸ್ಯ ಶಕ್ತಿರ್ವಿವಿಧೈವ." ಎಂಬಲ್ಲಿ ಮಾಯೆಯು ಶಿವನಿಗೆ ಅಧೀನ ವೆಂದೂ, ಅದರಿಂದ ಜಗತ್ತಿನ ವಿಶಿಷ್ಟವಾದ ರಚನೆಯಾಗುವುದೆಂದೂ, ಅದು ಅವನ ಸ್ವಭಾವಿಕಶಕ್ತಿ ಎಂದೂ ಹೇಳಲಾಗಿದೆ. ಪ್ರಧಾನವೆನಿಸಿದ ಶಕ್ತಿಯ ವಿಕಾಸಭಾವವು ಸಂಧ್ಯೆಯಂತೆ ಶಿವನಿಗಧೀನವಾಗಿರುವುದೆಂಬಲ್ಲಿ ಸಂಧ್ಯಾಶಬ್ದವು ಮೂರು ಬಗೆಯ ಶರೀ ರದ ಮಧ್ಯದಲ್ಲಿರುವ ಲಿಂಗಶರೀರವನ್ನೂ ಸ್ವಪ್ನಾವಸ್ಥೆಯನ್ನೂ ತಿಳಿಸುತ್ತದೆ. ಮೂಢ ಮುಮುಕ್ಷು, ಮುಕ್ತದಶೆಗಳಲ್ಲಿ ಮುಮುಕ್ಷುದಶೆಯೇ ವೇದಾಂತವಿಚಾರಕ್ಕೂ ಮತ್ತು ಉಪಾಸನೆಗೂ ಕಾರಣವೆನಿಸಿವೆ. ಸಂಶಯವು ಪೂರ್ವಪಕ್ಷಕ್ಕೂ ಸಿದ್ಧಾಂತಕ್ಕೂ ಕಾರಣ ವೆನಿಸಿದಂತೆ ಲಿಂಗಶರೀರವೇ ಸ್ಥೂಲಶರೀರದ ವ್ಯಾಪಾರಕ್ಕೂ ಕಾರಣಶರೀರದಲ್ಲಿರುವ ಅವಿದ್ಯೆಯನ್ನು ತೊಲಗಿಸುವ ಶಿವಜ್ಞಾನಕ್ಕೂ ಹೇತುವೆನಿಸಿದೆ. ಹೀಗೆ ಈ ದೃಷ್ಟಾಂತ ದಿಂದ ಶಿವನಿಗೆ ಜಗತ್ಸೃಷ್ಟಿಯನ್ನು ಹೇಳಲಾಗಿದೆ. ಇದೂ ಅಲ್ಲದೆ, ಜೀವನ್ಮುಕ್ತಾವಸ್ಥೆ ಎನಿಸಿದ ಸಮಾಧಿಕಾಲದಲ್ಲಿ ಬಾಹ್ಯೇಂದ್ರಿಯಗಳ ಅಪೇಕ್ಷೆಯಿಲ್ಲದೆಯೇ ಕೇವಲ ಬುದ್ಧಿಯಿಂದಲೇ ಶಿವಯೋಗಿಗಳು ಶಿವಾನಂದವನ್ನು ಅನುಭವಿಸುತ್ತಾರೆ. "ಆತ್ಮನಲ್ಲಿಯೇ ಕ್ರೀಡಿಸುತ್ತ ರಮಿಸುತ್ತ ಆತ್ಮಾನಂದವನ್ನು ಅನುಭವಿಸುತ್ತಾನೆ" "ಅವನು ಜ್ಞಾನಸ್ವರೂಪವಾದ ಬ್ರಹ್ಮದೊಡನೆ ಸಕಲೇಷ್ಟಗಳನ್ನು ಪಡೆಯುತ್ತಾನೆ"

ಎಂಬಲ್ಲಿಯೂ ಹಾಗೆಯೇ ಹೇಳಿದೆ. ಇದರಿಂದ ಮಹಾ ಕೈಲಾಸದಲ್ಲಿ ದೊರಕುವ ಸಾರೂಪ್ಯವನ್ನು ಇಲ್ಲಿಯೇ ಪಡೆದಂತಾಯಿತು. "ಇದೆಲ್ಲವೂ ಅವನಿಂದಲೇ ಹುಟ್ಟಿದೆ." "ಬ್ರಹ್ಮಕ್ಕೆ ಆಕಾಶವೇ ಶರೀರ, ಸತ್ಯವೇ ಆತ್ಮ, ಮನಸ್ಸು ಮತ್ತು ಪ್ರಾಣಗಳೇ ವಿನೋದಸ್ಥಾನಗಳು" ಎಂಬಲ್ಲಿ ಮಹಾಕೈಲಾಸದಲ್ಲಿ ನೆಲಸಿರುವ ಸದಾ ಶಿವನೂ ಸಹ ಬಾಹ್ಯೇಂದ್ರಿಯಗಳ ಅಪೇಕ್ಷೆಇಲ್ಲದೆಯೇ ಪರಮಾನಂದವನ್ನು ಅನುಭ ಸುತ್ತಾನೆಂದು ತಿಳಿದುಬರುತ್ತದೆ. ಮನಸ್ಸಿನಲ್ಲಿ ಆನಂದವುಳ್ಳವನಾದ್ದರಿಂದ ಅವನು ಮನಆನಂದನೂ ಮತ್ತು ಪ್ರಾಣಗಳಲ್ಲಿ ಎಲ್ಲಾ ಕಡೆಯಲ್ಲೂ ರಮಿಸುತ್ತಾನೆಯಾದ್ದ ರಿಂದ ಪ್ರಾಣಾರಾಮನೂ ಆಗಿದ್ದಾನೆಂದು ನಿಶ್ಚಯಿಸಲಾಗಿದೆ. "ಆತ್ಮವು ಶಾಂತಿ ಯಿಂದ ಸಮೃದ್ಧವೂ ಅಮೃತವೂ ಆಗಿದೆ" ಎಂಬಲ್ಲಿ ಬ್ರಹ್ಮದ ಶರೀರವು ಸತ್ಯವೂ ಶಾಂತಿಕರವೂ ಅಮೃತವೂ ಆಗಿರುವುದೆಂದು ಹೇಳಲಾಗಿದೆ. ಮುಕ್ತನೂ ಹಾಗೆಯೇ ಇರುವನೆಂಬುದು ಇದರಿಂದ ಸ್ಪಷ್ಟವಾಗುತ್ತದೆ.

**ಅಸ್ಮಿನ್ನರ್ಥೇ ಹೇತ್ವಂತರಮಾಹ. ಭಾವೇ ಜಾಗ್ರದ್ವತ್ ॥ ೧೪ ॥**
**ಭಾವೇ ಯಥಾ ಸ್ಥೂಲಶರೀರಸ್ಯ ಸೂಕ್ಷ್ಮಶರೀರವದ್ಭಾವಕಾಲೇ ಪುಣ್ಯಾ ಪುಣ್ಯಹೇತುಕಜಾಗ್ರದವಸ್ಥಾ ಜಾಯತೇ. ತದ್ವಚ್ಛಿವಸ್ಯ ಪರಬ್ರಹ್ಮಣಃ ಸ್ವಶಕ್ತಿಪ್ರಕೃತಿವಿಕಾಸಸದ್ಭಾವೇ ಜಗತ್ಸೃಷ್ಟಿಸ್ಥಿತಿಲಯತಿರೋಧಾನಾನು ಗ್ರಹಪಂಚಕೃತ್ಯಹೇತುತ್ವಂ ದರ್ಶಿತಂ. ಏತೇನ ಪಾಶಮುಕ್ತಸ್ಯಾಪಿ ಇಹಲೋಕಪರಲೋಕೇಷು ಲಿಂಗಶರೀರಸದ್ಭಾವೇ ತತ್ತಲ್ಲೋಕೋಚಿತ ಫಲಾನುಭೂತಿಸ್ತದಭಾವೇ ಸರ್ವಕಾಮಾವಾಪ್ತಿರ್ನ ಸಂಭವತಿ ಇತಿ ಫಲಾರ್ಥಃ ಸೂಚಿತಃ, ಫಲಾರ್ಥಂ ಪರಮಪುರುಷೋ ಮಹಾದೇವೋಽಪಿ ವ್ಯಾಘ್ರಾಸುರಗಜಾಸುರತ್ರಿಪುರಾಸುರಾದಿಸಂಹಾರಂ ವಿಷಾಪಹರಣಂ ಮಾರ್ಕಂಡೇಯಾದಿಭಕ್ತರಕ್ಷಣಾದಿಕಂ ಚ ಕೃತವಾನ್. "ಅತ್ರ ಬ್ರಹ್ಮ ಸಮಶ್ನುತೇ" ಇತ್ಯಾದಿವಾಕ್ಯಾನಾಂ ನಿರವಯವವ್ಯಾಪಕಶಿವತತ್ತ್ವ ನಿಷ್ಠಾಗರಿಷ್ಠದೃಢವೈರಾಗ್ಯಯುಕ್ತವಿದ್ವದ್ವಿಷಯಮಿತಿ ವೇದಿತವ್ಯಂ.**

ಈ ಬಗ್ಗೆ ಬೇರೊಂದು ಕಾರಣವನ್ನು ಹೇಳುತ್ತಾನೆ. ಸ್ಥೂಲಶರೀರವು ಸೂಕ್ಷ್ಮ ಶರೀರದಂತೆ ಇರುವಾಗ ಪುಣ್ಯ ಪಾಪಗಳಿಗೆ ಕಾರಣವಾದ ಜಾಗ್ರದವಸ್ಥೆಯು ಹೇಗೆ ಹುಟ್ಟುವುದೋ ಹಾಗೆ ಪರಶಿವಬ್ರಹ್ಮವು ತನ್ನ ಪ್ರಕೃತಿಶಕ್ತಿಯ ವಿಕಾಸಕಾಲದಲ್ಲಿ ಜಗತ್ತಿನ ಸೃಷ್ಟಿ ಸ್ಥಿತಿ ಲಯ ತಿರೋಧಾನ ಅನುಗ್ರಹವೆಂಬ ಐದು ವ್ಯಾಪಾರಗಳಿಗೆ ಕಾರಣವಾಗುವುದು. ಹೀಗೆಯೇ ಪಾಶದಿಂದ ಬಿಡುಗಡೆಹೊಂದಿದವನಿಗೂ ಇಲ್ಲಿಯೂ ಮುಂದೆಯೂ ಲಿಂಗಶರೀರವಿದ್ದರೆಯೇ ಆಯಾಲೋಕಗಳ ಫಲಾನುಭವವೂ ಸಂಭವಿಸು ತ್ತದೆ. ಲಿಂಗಶರೀರವಿಲ್ಲದಿದ್ದರೆ ಅವನು ಹೇಗೆ ತನ್ನ ಇಷ್ಟಾರ್ಥಗಳನ್ನು ಪಡೆಯ ಬಲ್ಲನು? ಈರೀತಿಯಲ್ಲಿ ಫಲಾನುಭವಕ್ಕಾಗಿ ಈಶ್ವರನು ಶರೀರಗಳನ್ನು ಪಡೆಯುವನು. ಹೀಗೆ ಭಕ್ತರಿಗೆ ಫಲವನ್ನು ಕೊಡಲಿಕ್ಕಾಗಿಯೇ ಪರಮಪುರುಷನೆನಿಸಿದ ಮಹಾದೇವನೂ

ಸಹ ವ್ಯಾಘ್ರಾಸುರ, ಗಜಾಸುರ ತ್ರಿಪುರಾಸುರ ಮೊದಲಾದವರ ಸಂಹಾರವನ್ನೂ ವಿಷಪಾನವನ್ನೂ ಮಾಡಿದನು. "ಅತ್ರ ಬ್ರಹ್ಮ ಸಮಶ್ನುತೇ" ಎಂಬ ವಾಕ್ಯಗಳು ನಿರವಯವನೂ ವ್ಯಾಪಕನೂ ಆದ ಪರಶಿವನಲ್ಲಿ ನಿಷ್ಠೆಯಿಂದ ನೆಲಸಿ ದೃಢವೈರಾಗ್ಯ ದಿಂದ ಕೂಡಿದ ವಿದ್ವಾಂಸರಿಗೆ ಸಂಬಂಧಿಸಿವೆ ಎಂದು ತಿಳಿಯಬೇಕು.

ನನು "ಮುಕ್ತಶ್ಶಿವಸಮೋ ಭವೇತ್" ಇತಿ. "ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ" ಇತ್ಯಾದೌ ಮೂರ್ತ ಶಿವೋಪಾಸಕಸ್ಯ ಶಿವಸಾಮ್ಯತ್ವಸ್ಯ ಸಮಾನಭೋಗತ್ವಸ್ಯ ಚೋಪ ದೇಶೇಽಪಿ ಮಹೇಶ್ವರವದೇಕಕಾಲೇ ಯುಗಪದನೇಕಶರೀರೇಷು ದೇಶೇಷು ಚ ಗಮನಂ ನ ಸಂಭವತಿ ಆಗಂತುಕಶಿವಶರೀರಸದ್ಭಾವಾತ್ ಇತ್ಯಾಶಂಕಾಯಾಮಾಹ. ಪ್ರದೀಪವದಾವೇಶಸ್ತಥಾಹಿ ದರ್ಶಯತಿ ॥ ೧೫ ॥ ಯಥಾ ಪ್ರದೀಪಸ್ಯೈಕಸ್ಮಿನ್ ದೇಶೇ ವರ್ತಮಾನಸ್ಯ ಸ್ವಪ್ರ ಭಯಾ ದೇಶಾಂತರಾವೇಶಸ್ತಥಾತ್ಮನೋಽಪ್ಯೇಕದೇಹಸ್ಥಿತಸ್ಯೈವ ಸ್ವಪ್ರ ಭಾರೂಪೇಣ ಚೈತನ್ಯೇನ ಸರ್ವಶರೀರಾವೇಶೋ ನಾನುಪಪನ್ನಃ. ಯಥಾ ಚೈಕಸ್ಮಿನ್ನಪಿ ದೇಹೇ ಹೃದಯಾದ್ಯೇಕದೇಶವರ್ತಿನೋಽಪಿ ಚೈತನ್ಯವ್ಯಾಪ್ತ್ಯಾ ಸರ್ವಸ್ಮಿನ್ ದೇಹೇ ಆತ್ಮಾಭಿಮಾನಃ ತದ್ವತ್. ಇಯಾ ನತ್ರ ವಿಶೇಷಃ. ಅಮುಕ್ತಸ್ಯ ಕರ್ಮಣಾ ಸಂಕುಚಿತಜ್ಞಾನಸ್ಯ ದೇಹಾಂತ ರೇಷ್ವಾತ್ಮಾನುಗುಣಾ ವ್ಯಾಪ್ತಿರ್ನ ಸಂಭವತಿ. ಮುಕ್ತಸ್ಯ ತ್ವಸಂಕುಚಿತ ಜ್ಞಾನಸ್ಯ ಯಥಾಸಂಕಲ್ಪಮಾತ್ಮಾಭಿಮಾನಾನುಗುಣಾ ವ್ಯಾಪ್ತಿಃ. ಇದ ಮಿತಿ ಗ್ರಹಣಾನುಗುಣಾ ಚ ಅನುಪಪತ್ತಿಃ. ತಥಾಹಿ ದರ್ಶಯತಿ. "ವಾಲಾಗ್ರಶತಭಾಗಸ್ಯ ಶತಧಾ ಕಲ್ಪಿತಸ್ಯ ಚ । ಭಾಗೋ ಜೀವಸ್ಸ ವಿಜ್ಞೇಯಃ ಸ ಚಾನಂತ್ಯಾಯ ಕಲ್ಪತೇ ॥" ಇತಿ. ಅಮುಕ್ತಸ್ಯ ಕರ್ಮ ನಿಯಾಮಕತ್ವಂ ಸೂಕ್ಷ್ಮತ್ವಂ ಚ, ಮುಕ್ತಸ್ಯ ತು ಪರಮೇಶ್ವರವತ್ ಸ್ವೇಚ್ಛಯಾ ಬ್ರಹ್ಮಲೋಕಶರೀರಾದಿನಿರ್ಮಾಣಕರ್ತೃತ್ವಂ ಅನೇಕಶರೀ ರೇಷು ಯುಗಪದೇವ ಪ್ರವೇಶಶ್ಚ ಸಂಭವತಿ. "ಸ ಏಕಧಾ ಭವತಿ ದ್ವಿಧಾ ಭವತಿ ತ್ರಿಧಾ ಭವತಿ ಸಹಸ್ರಧಾ ಭವತಿ" ಇತ್ಯಾದಿಶ್ರುತಿಷು ಪರಮೇಶ್ವರೋಪಾಸಕಾನಾಂ ತದುಪಾಸನಮಹಿಮ್ನಾ ಸಂಕಲ್ಪಮಾತ್ರೇ ಣೈವಾನೇಕಶರೀರನಿರ್ಮಾಣತ್ವದರ್ಶನಾತ್ ಜೀವಾಣುತ್ವಾದಿವಿಧಾಯಕ ಶಾಸ್ತ್ರಂ ಬದ್ಧಜೀವವಿಷಯಮಿತಿ ನಿಶ್ಚೀಯತೇ. ನನು ಮುಕ್ತಸ್ಯ ಸಂಸಾರಿವತ್ ಶರೀರೇಂದ್ರಿಯಾದಿಸಿದ್ಧೇಃ ಪ್ರಪಂಚದರ್ಶನಸ್ಯ ಚ ವ್ಯಪದೇಶೇ ಬದ್ಧಮುಕ್ತಯೋರ್ನ ವೈಷಮ್ಯಮಿತಿ ಚೇನ್ನ ಮುಕ್ತಸ್ಯಾ ಪುರುಷಾರ್ಥರೂಪೇಣ ಪ್ರಪಂಚದರ್ಶನಾಭಾವಾತ್ ಮುಕ್ತಸ್ಯ ಬ್ರಹ್ಮ ಕಾರ್ಯರೂಪಸ್ಯ ಪ್ರಪಂಚಸ್ಯ ಬ್ರಹ್ಮತ್ವೇನ ಭಾಸಮಾನತ್ವಾಚ್ಚ "ಯತ್ರ

ನಾನ್ಯತ್ಪಶ್ಯತಿ ನಾನ್ಯತ್ ಶೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ" ಇತ್ಯಾದಿಶ್ರುತೌ ಮುಕ್ತಾನುಭವ ಉಪದಿಷ್ಟಃ. ಕಿಂಚ "ಏತತ್ತತೋ ಭವತಿ", "ಶಾಂತಿಸಮೃದ್ಧಮಮೃತಂ" ಇತಿ, ಪೂರ್ವತ್ರ "ಆಪ್ನೋತಿ ಮನಸಸ್ಪತಿಂ" ಇತಿ ಸ್ವಾರಾಜ್ಯಸುಖೈಕರಸಂ ಶಿವಸ್ಯ ಪರಬ್ರಹ್ಮಣಃ ಪದಂ ಮನಸಸ್ಪತಿಂ ಅಧಿಷ್ಠಾನಭೂತಮಾಪ್ನೋತಿ ಯೋಗೀತ್ಯುಕ್ತಂ. ತಥಾಸತಿ ಕಿಂ ಪರಿಶಿಷ್ಯತ ಇತ್ಯಾಕಾಂಕ್ಷಾಯಾಂ "ವಾಕ್ಪತಿಶ್ಚಕ್ಷುಷ್ಪತಿಃ ಶ್ರೋತ್ರಪತಿರ್ವಿಜ್ಞಾನಪತಿಃ" ಇತಿ ವಾಗಾದೀನಾಂ ಸ್ವೇಚ್ಛಾಧೀನತ್ವೇನ ತದಾಧಿಪತ್ಯಮುಕ್ತಂ. ಏವಂವಿಧಸ್ಯ ಮಹಾಕೈಲಾಸಾಭಿಧಾನಶಿವಪದಾರೂಢಸ್ಯ ಸ್ವೇಚ್ಛಾಧೀನವಿಶುದ್ಧರಾಗಾದ್ಯಂತಃಕರಣಸ್ಯ ತತ್ತತ್ಪದಪ್ರಾಪ್ತ್ಯಾ ಅನಂತಮೇತದ್ವಿಶ್ವಜಾಲಂ ಭವತಿ. ಕಿಂ ಭವತಿ? ಆಕಾಶಶರೀರಂ ಬ್ರಹ್ಮೈವ. ಪರಪ್ರಕೃತಿರೂಪಪರಮಸತ್ತಾಪ್ರಕಾಶಕಾನಂದಸಮರಸ ಪರಮಶಕ್ತಿರ್ಹಿ ಪರಬ್ರಹ್ಮಶರೀರತಯಾ ಪರಮಾಕಾಶಮುಚ್ಯತೇ. ಯಾ ಮುಕ್ತಾನಾಂ ಶಿವಸ್ಯ ಚ ಸಾಕ್ಷಾದರ್ಥಕ್ರಿಯಾಹೇತುಃ ಸಾ ಪರಂ ಪರಯಾ ತದ್ಭಿನ್ನಾನಾಂ. ತಥಾಹಿ "ಕೋ ಹ್ಯೇವಾನ್ಯಾತ್ಕಃ ಪ್ರಾಣ್ಯಾತ್ ಯದೇಶ ಆಕಾಶ ಆನಂದೋ ನ ಸ್ಯಾತ್ ಏಷ ಹ್ಯೇವಾನಂದಯಾತಿ", "ರಸೋ ವೈ ಸಃ ರಸಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ" ಇತಿ ಸರ್ವಾನುಭವವಿಷಯತ್ವಮಸ್ಯಾಃ ಶ್ರೂಯತೇ. ತದಾಹ "ಸ ಏಕೋ ಮಾನುಷ ಆನಂದಃ" ಇತ್ಯಾರಭ್ಯ "ಸ ಏಕೋ ಬ್ರಹ್ಮಣ ಆನಂದಃ" ಇತಿ ಬ್ರಹ್ಮಪರ್ಯಂತಂ ಉಪಾಧಿತಿರೋಧಾನಾತ್ ಆನಂದಾವಿರ್ಭಾವಸ್ತಾರತಮ್ಯೇನ ಶ್ರೂಯತೇ. ನಿರುಪಾಧಿಕತಯಾ ಬ್ರಹ್ಮಣಿ ಮುಕ್ತೇ ಚ ಪರಿಪೂರ್ಣೋ ವರ್ತತೇ. "ಸ ಏಕೋ ಬ್ರಹ್ಮಣ ಆನಂದಃ ಶ್ರೋತ್ರಿಯಸ್ಯ ಚಾಕಾಮಹತಸ್ಯ" ಇತಿ ಮಂತ್ರವರ್ಣಾತ್ ಬ್ರಹ್ಮಬುದ್ಧ್ಯಾ ನಿಷ್ಕಮಾನುಷ್ಠಿತಾಗ್ನಿಹೋತ್ರಾದಿಕರ್ಮಾ ಪರವಿದ್ಯಾವಾನ್ ಅಕಾಮಹತಃ ಶ್ರೋತ್ರೀಯಃ, ತಸ್ಯ ಜೀವತ ಏವ ಮುಕ್ತಸ್ಯ ಬ್ರಹ್ಮಣಶ್ಚ ತುಲ್ಯ ಏವಾನಂದಃ. ತಸ್ಯ ಯೋಗಾತಿಶಯೇನ ತತ್ತದ್ಭೂಮ್ಯಾರೂಢಸ್ಯ ಪೂರ್ವತ್ರ ಭೂಮಾಭ್ಯಾಸಃ ಸ್ವಲ್ಪಃ. ಏತದನುಸಾರೇಣ ತತ್ತದ್ಭೂಮೌ ತದೀಯಾನಂದಾವಿರ್ಭಾವಸ್ಯ ಮಾನುಷಾದ್ಯಾನಂದಸಾಮ್ಯಶ್ರುತಿರಿತಿ ನ ವಿರೋಧಃ. ಅತೋಽಯಮೇವ ಪರಮಾನಂದಃ ಪರಾಪ್ರಕೃತಿಃ "ಪರಾ ಚೇದಾನಂದೋ ಬ್ರಹ್ಮೇತಿ ವ್ಯಜಾನಾತ್" ಇತಿ ಬ್ರಹ್ಮತ್ವೇನ ಜಗತ್ಕಾರಣತ್ವೇನ ಚ ಶ್ರೂಯತೇ. ತಸ್ಯಾಭಿವ್ಯಕ್ತಿಃ "ಸೈಷಾ ಭಾರ್ಗವೀ ವಾರುಣೀ ವಿದ್ಯಾ ಪರಮೇ ವ್ಯೋಮನ್ ಪ್ರತಿಷ್ಠಿತಾ" ಇತಿ. ಅರ್ಥಾತ್ತು ಮುಕ್ತಾನಾಂ ಪರಮಾನಂದರೂಪಪರಮಾಕಾಶರೂಪ

ಶರೀರಂ ಬ್ರಹ್ಮ ಜಗದ್ಭವತಿ. ಏತೇನ ಪರಮಾನಂದಪ್ರವಿಷ್ಟಾನಾಮೇಷಾಂ ಬ್ರಹ್ಮಣ ಇವ ದುಃಖಾನುಷಂಗಾಭಾವೋ ದರ್ಶಿತಃ.

"ಮುಕ್ತನು ಶಿವನಿಗೆ ಸಮನಾಗುವನು" ಅವನು ಬ್ರಹ್ಮದೊಡನೆ ಎಲ್ಲಾ ಫಲಗಳನ್ನೂ ಪಡೆಯುತ್ತಾನೆ" ಎಂಬಲ್ಲಿ ಮೂರ್ತಶಿವೋಪಾಸಕನಿಗೆ ಶಿವಸಾಮ್ಯವನ್ನೂ ಶಿವನೊಡನೆ ಸಮಾನವಾದ ಭೋಗವನ್ನೂ ಹೇಳಿದ್ದರೂ ಸಹ ಅವನಿಗೆ ಆಗಂತುಕವಾಗಿ ಶಿವನ ಶರೀರವು ಬಂದಿರುವುದರಿಂದ ಅವನು ಮಹೇಶ್ವರನಂತೆ ಅನೇಕ ಶರೀರಗಳಲ್ಲಿ ಅನೇಕಕಡೆಗಳಲ್ಲಿ ಒಂದೆಕಾಲದಲ್ಲಿ ಒಟ್ಟಿಗೆ ಹೋಗಲಿಕ್ಕೆ ಸಾಧ್ಯವಾಗುವುದಿಲ್ಲವೆಂದಾಶಂಕಿಸಿ ಸಮಾಧಾನಮಾಡುತ್ತಾನೆ. ಒಂದೇ ಸ್ಥಳದಲ್ಲಿ ಇರುವ ದೀಪವು ತನ್ನ ಪ್ರಭೆಯಿಂದ ಬೇರೆಕಡೆಗಳಿಗೂ ವ್ಯಾಪಿಸುವಂತೆ ಆತ್ಮನು ಒಂದೇ ದೇಹದಲ್ಲಿದ್ದರೂ ತನ್ನ ಪ್ರಭೆಎಂಬ ಚೈತನ್ಯದಿಂದ ಎಲ್ಲಾ ಶರೀರಗಳನ್ನೂ ಪ್ರವೇಶಿಸುವನೆಂಬುದು ಯುಕ್ತವೇ ಆಗಿದೆ. ಒಂದೇ ದೇಹದಲ್ಲಿ ಆತ್ಮನು ಹೃದಯದಲ್ಲಿ ಇದ್ದರೂ ಸಹ ಚೈತನ್ಯದ ವ್ಯಾಪ್ತಿಯಿಂದ ದೇಹದ ಎಲ್ಲಾಭಾಗದಲ್ಲೂ ಆತ್ಮನೆಂಬ ಅಭಿಮಾನವುಂಟಾಗುತ್ತದೆ. ಹಾಗೆಯೇ ಮುಕ್ತನು ಶಿವಭಾವದಲ್ಲಿ ನಿಂತು ಎಲ್ಲರಲ್ಲೂ ಶಿವನನ್ನೇ ಕಾಣುತ್ತಾನೆ. ಜ್ಞಾನವು ಕರ್ಮದಿಂದ ಸಂಕೋಚಗೊಂಡಿರುವುದರಿಂದ ಕರ್ಮಿಯು ಇತರದೇಹಗಳಲ್ಲಿ ಆತ್ಮನ ವ್ಯಾಪ್ತಿಯನ್ನು ಅನುಭವಿಸುವುದಿಲ್ಲ. ಮುಕ್ತನಿಗಾದರೋ ಜ್ಞಾನವು ವಿಶಾಲವಾಗಿರುವುದರಿಂದ ಅವನ ಸಂಕಲ್ಪದಂತೆ ಅಭಿಮಾನಾನುಗುಣವಾದ ವ್ಯಾಪ್ತಿಯು ಎಲ್ಲವನ್ನೂ ಅನುಭವಿಸುವುದಕ್ಕೆ ತಕ್ಕಂತೆ ಸಂಭವಿಸುತ್ತದೆ. ಶ್ರುತಿಯು ಇದನ್ನೇ ತಿಳಿಸುತ್ತದೆ. ಬಾಲದತುದಿಯ ನೂರನೆ ಒಂದುಭಾಗದ ಮೂರನೆಯ ಭಾಗದಷ್ಟೇ ಜೀವನಗಾತ್ರವಿರುವುದು. ಆದರೂ ಅವನು ಅನಂತನೆನಿಸಿರುವನು" ಹೀಗೆ ಶ್ರುತಿಯು ತಿಳಿಸಿದೆ. ಮುಕ್ತನಲ್ಲದವನು ಇಷ್ಟು ಸೂಕ್ಷ್ಮವಾಗಿರುವುದರಿಂದ ಅವನಿಗೆ ಕರ್ಮವೇ ನಿಯಾಮಕವಾಗಿರುತ್ತದೆ. ಮುಕ್ತನಾದರೋ ಪರಮೇಶ್ವರನಂತೆ ಸ್ವೇಚ್ಛೆಯಿಂದ ಅನೇಕ ಲೋಕಗಳನ್ನೂ ಶರೀರಗಳನ್ನೂ ನಿರ್ಮಿಸಬಲ್ಲನು, ಅನೇಕ ಶರೀರಗಳಲ್ಲಿ ಏಕಕಾಲದಲ್ಲಿ ಪ್ರವೇಶಿಸಬಲ್ಲನು. "ಅವನು ಒಂದು, ಎರಡು, ಮೂರುಬಗೆಗಳಲ್ಲೂ ಸಾವಿರಾರು ಬಗೆಗಳಲ್ಲೂ ಇರುತ್ತಾನೆ" ಎಂಬ ಶ್ರುತಿಯಲ್ಲಿ ಶಿವಭಕ್ತನು ಉಪಾಸನದ ಮಹಿಮೆಯಿಂದ ಸ್ವಸಂಕಲ್ಪದಿಂದಲೇ ಅನೇಕ ಶರೀರಗಳನ್ನು ನಿರ್ಮಿಸಬಲ್ಲನು. ಇದರಿಂದ ಜೀವನನ್ನು ಅಣುವೆಂದು ತಿಳಿಸುವ ಶಾಸ್ತ್ರವು ಬದ್ಧಜೀವನಿಗೆ ಅನ್ವಯಿಸುವುದೆಂದು ನಿಶ್ಚಯಿಸಲಾಗಿದೆ. ಮುಕ್ತನಿಗೆ ಸಂಸಾರಿಯಂತೆಯೇ ಶರೀರ ಮತ್ತು ಇಂದ್ರಿಯಗಳು ಇರುತ್ತವೆ. ಅವನು ಪ್ರಪಂಚವನ್ನು ನೋಡುತ್ತಾನೆ. ಹೀಗೆಂದು ಹೇಳಿದ್ದರಿಂದ ಬದ್ಧನಿಗೂ ಮುಕ್ತನಿಗೂ ಭೇದವೇನೆಂದು ಆಕ್ಷೇಪಿಸಿದರೆ ಅದಕ್ಕೆ ಸಮಾಧಾನವನ್ನು ಹೇಳಲಾಗಿದೆ. ಮುಕ್ತನು ಪ್ರಪಂಚವನ್ನು ದುಃಖಮಯವಾಗಿ ಕಾಣುವುದಿಲ್ಲ. ಬ್ರಹ್ಮಕಾರ್ಯವಾದ ಪ್ರಪಂಚವು ಮುಕ್ತನಿಗೆ ಬ್ರಹ್ಮವಾಗಿಯೇ ಕಾಣುತ್ತದೆ. "ಎಲ್ಲಿ ಏನೊಂದನ್ನೂ ಕಾಣಲಾಗುವುದಿಲ್ಲವೋ

ಏನೊಂದನ್ನೂ ಕೇಳಲಾಗುವುದಿಲ್ಲವೋ ತಿಳಿಯಲಾಗುವುದಿಲ್ಲವೋ ಅದೇ ಭೂಮಾ ಎನಿಸಿದೆ" ಎಂಬಲ್ಲಿ ಮುಕ್ತನ ಅನುಭವವನ್ನು ತಿಳಿಸಲಾಗಿದೆ. "ಆಕಾಶಶರೀರಂ ಬ್ರಹ್ಮ" ಎಂಬಲ್ಲೂ, "ಸ್ವಾತಂತ್ರ್ಯವನ್ನು ಪಡೆಯುತ್ತಾನೆ." "ಮನಸ್ಸಿನಮೇಲೆ ಅಧಿಕಾರವನ್ನು ಪಡೆಯುತ್ತಾನೆ" ಎಂಬಲ್ಲೂ ಸ್ವಾತಂತ್ರ್ಯಸುಖವೇ ಪ್ರಧಾನವೆನಿಸಿದ ಪರಶಿವಬ್ರಹ್ಮದ ಸ್ಥಾನವೆಂದೂ, ಯೋಗಿಯು ಜ್ಞಾನಕಾರಣವಾದ ಮನಸ್ಸಿನಮೇಲೆ ಅಧಿಕಾರವನ್ನು ಪಡೆಯುತ್ತಾನೆಂದೂ ಹೇಳಿದೆ. ಹೀಗಾದಮೇಲೆ ಏನು ಉಳಿಯಿತೆಂದಾಶಂಕಿಸಿ ವಾಗಾದಿಗಳು ತನಗಧೀನವಾದ್ದರಿಂದ ಮುಕ್ತನು ಅವುಗಳಮೇಲೂ ಅಧಿಕಾರವನ್ನು ಪಡೆದು "ವಾಕ್ಕಿಗೂ ನೇತ್ರಗಳಿಗೂ-ಕಿವಿಗಳಿಗೂ ಬುದ್ಧಿಗೂ ಅಧಿಪತಿಯಾಗುತ್ತಾನೆ" ಎಂಬಲ್ಲಿ ಯುಕ್ತನೆಂಡು ಹೇಳಲಾಗಿದೆ. ಈ ಬಗೆಯು ಮಹಾಕೈಲಾಸವೆಂಬ ಶಿವಪದವನ್ನು ಹೊಂದಿ ಶುದ್ಧವಾದ ಅಂತಃಕರಣವನ್ನು ತನ್ನ ಇಚ್ಛೆಗೊಳಪಡಿಸಿಗೂಂಡಿರುವವನಿಗೆ ವಿಶ್ವವೆಲ್ಲವೂ ಆಕಾಶವೇ ಶರೀರವಾಗಿರುವ ಬ್ರಹ್ಮವೇ ಆಗುತ್ತದೆ. ಪರಾಪ್ರಕೃತಿಯೂ ಸಚ್ಚಿದಾನಂದೆಯೂ ಎನಿಸಿದ ಪರಾಶಕ್ತಿಯೇ ಪರಮಾತ್ಮನ ಶರೀರವಾದರಿಂದ ಪರಮಾಕಾಶವೆನಿಸುತ್ತದೆ. ಈ ಪರಮಾಕಾಶವೇ ಶಿವನಿಗೂ ಮುಕ್ತರಿಗೂ ಸಮಸ್ತಕಾರ್ಯಗಳನ್ನು ನಿರ್ವಹಿಸುವ ಪರಾಶಕ್ತಿ. ಅದೆಯೇ ಪರಂಪರೆಯಿಂದ ಇತರ ಜೀವರಿಗೂ ಸಹಾಯಕವಾಗುತ್ತದೆ. "ಈ ಆಕಾಶವು ಆನಂದವಾಗಿರದಿದ್ದರೆ ಯಾರುತಾನೆ ಉಸಿರಾಡುತ್ತಿದ್ದರು ?" "ಇವನೇ ಎಲ್ಲರನ್ನೂ ಆನಂದಪಡಿಸುತ್ತಾನೆ. ಇವನೇ ರಸಸ್ವರೂಪನು. ರಸಸ್ವರೂಪನಾದ ಇವನನ್ನು ಕಂಡೇ ಎಲ್ಲರೂ ಆನಂದಪಡುತ್ತಾರೆ." ಇದು ಎಲ್ಲರಿಗೂ ಅನುಭವವಿಷಯವೇ ಆಗಿದೆ. "ಇದು ಒಂದೇ ಮಾನುಷ ಆನಂದ" ಎಂದು ಆರಂಭಿಸಿ "ಇದು ಒಂದೇ ಬ್ರಹ್ಮದ ಆನಂದ" ಎಂದು ಹೇಳುವವರೆಗೂ ಆನಂದಕ್ಕೆ ಉಪಾಧಿಗಳ ತಡೆಇರುವುದರಿಂದ ಅದರ ಅನುಭವದಲ್ಲೂ ತಾರತಮ್ಯವಿರುವುದಾಗಿ ಕಂಡುಬಂದಿದೆ. ಆದರೂ ಶಿವನಲ್ಲೂ ಮುಕ್ತನಲ್ಲೂ ಪರಿಪೂರ್ಣತೆಯು ನಿರುಪಾಧಿಕವಾಗಿದೆ. ಫಲವನ್ನು ಬಯಸದೆ ಅಗ್ನಿಹೋತ್ರಾದಿಕರ್ಮಗಳನ್ನು ಬ್ರಹ್ಮಭಾವದಿಂದ ಮಾಡುತ್ತಲೇ ಬ್ರಹ್ಮವಿದ್ಯೆಯಲ್ಲಾಸಕ್ತನಾದವನು ಯಾವ ಆಶೆಗೂ ವಶನಾಗದೆ ವೈದಿಕನೆನಿಸುತ್ತಾನೆ. ಅವನು ಬದುಕ್ಕಿದ್ದಾಗಲೇ ಮುಕ್ತನಾಗಿರುವನು. ಅವನಿಗೂ ಶಿವನಿಗೂ ಆನಂದವು ಸಮಾನವಾಗಿರುವುದು. ಅವನ ಯೋಗಾಭ್ಯಾಸವು ಆಯಾಯ ಸ್ಥಿತಿಗಳನ್ನು ಮುಟ್ಟುತ್ತ ಆರಂಭದಲ್ಲಿ ಕಡಮೆಯಾಗಿದ್ದು ಮುಂದುಮುಂದಕ್ಕೆ ಹೆಚ್ಚುತ್ತಹೋಗುವುದು. ಇದಕ್ಕನುಸಾರವಾಗಿ ಆಯಾಯಸ್ಥಾನಗಳಲ್ಲಿ ಉಂಟಾಗುವ ಆನಂದಕ್ಕೆ ಮಾನುಷಾದ್ಯಾನಂದವನ್ನು ಶ್ರುತಿಯಲ್ಲಿ ಹೋಲಿಸಲಾಗಿದೆಯಾದ್ದರಿಂದ ಇದಕ್ಕೆಲ್ಲ ಏನೂ ವಿರೋಧವಿಲ್ಲ. ಹೀಗೆ ಪರಾಪ್ರಕೃತಿಯೇ ಪರಮಾನಂದವೆನಿಸಿದೆ. "ಪರಾಶಕ್ತಿಯೇ ಆನಂದವಾದರೆ ಅದನ್ನೇ ಬ್ರಹ್ಮವೆಂದು ತಿಳಿಯಬೇಕು" ಎಂಬಲ್ಲಿ ಪರಾಶಕ್ತಿಯೇ ಬ್ರಹ್ಮವೆಂದೂ ಜಗತ್ಕಾರಣವೆಂದೂ ಹೇಳಲಾಗಿದೆ. ಆ "ಈ ವಿದ್ಯೆಯು ಪರಮಾಕಾಶಸ್ವರೂಪ

ನಾದ ಪರಮಾತ್ಮನಲ್ಲಿ ನೆಲೆಸಿದೆ" ಎಂಬಲ್ಲಿ ಆನಂದವು ಪ್ರಕಾಶಸ್ಥಿತಿಯಲ್ಲಿ ಪ್ರಕಟವಾಗುತ್ತದೆ. ಪರಮಾನಂದರೂಪವಾದ ಪರಮಾಕಾಶವೇ ಶರೀರವಾಗಿರುವ ಬ್ರಹ್ಮವೇ ಜಗತ್ತೆನಿಸಿದ ಇಂತಹ ಪರಮಾನಂದವನ್ನು ಪ್ರವೇಶಿಸಿದ ಮುಕ್ತರಿಗೆ ಬ್ರಹ್ಮದಂತೆಯೇ ದುಃಖದ ಸಂಪರ್ಕವೇ ಇಲ್ಲವೆಂಬುದು ಸ್ಪಷ್ಟವಾಗುತ್ತದೆ.

ನನು ಪರಶಿವಬ್ರಹ್ಮಸಾರೂಪ್ಯಪ್ರಾಪ್ತ್ಯನಂತರಂ ಬಾಹ್ಯಜ್ಞಾನಲೋಪಂ ದರ್ಶಯತಿ ಪ್ರಾಜ್ಞೇನಾತ್ಮನೇತಿ ಶ್ರುತಿರಿತಿ ಕಥಂ ಮುಕ್ತಸ್ಯ ಸಾರ್ವಜ್ಞ್ಯತ್ವಮುಚ್ಯತೇ? ತತ್ರೋತ್ತರಂ. ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಮಾವಿಷ್ಕೃತಂ ಹಿ ॥ ೧೬ ॥ ನೇದಂ ವಚನಂ ಮುಕ್ತವಿಷಯಂ; ಅಪಿತು ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಂ. ಸ್ವಾಪ್ಯಯಃ ಸುಷುಪ್ತಿರಿತ್ಯುಕ್ತಂ. ಸಂಪತ್ತಿಶ್ಚ ಮರಣಂ. "ವಾಙ್ಮನಸಿ ಸಂಪದ್ಯತ" ಇತ್ಯಾರಭ್ಯ "ತೇಜಃ ಪರಸ್ಯಾಂ ದೇವತಾಯಾಂ" ಇತಿ ವಚನಾತ್ತಯೋಶ್ಚಾವಸ್ಥಯೋಃ ಪ್ರಾಜ್ಞಪ್ರಾಪ್ತಿರ್ನಿಸ್ಸಂಬೋಧತ್ವಂ ಚ ವಿದ್ಯತೇ. ಅತಸ್ತಯೋರನ್ಯತರಾಪೇಕ್ಷಮಿದಂ ವಚನಂ. ಸುಪ್ತಿಮರಣಯೋರ್ನಿಸ್ಸಂಬೋಧತ್ವಂ ಮುಕ್ತಸ್ಯ ಚ ಸರ್ವಜ್ಞತ್ವಮಾವಿಷ್ಕೃತಂ ಹಿ ಶ್ರುತ್ಯಾ. "ನಾಹಂ ಖಲ್ವಯಮೇವಂ ಸಂಪ್ರತ್ಯಾತ್ಮಾನಂ ಜಾನಾತ್ಯಯಮಹಮಸ್ಮೀತಿ", "ನೋ ಏವೇಮಾನಿ ಭೂತಾನಿ ವಿನಾಶಮೇವಾಪೀತೋ ಭವತಿ", "ನಾಹಮತ್ರ ಭೋಗ್ಯಂ ಪಶ್ಯಾಮಿ" ಇತಿ ಸುಪ್ತಿವೇಳಾಯಾಂ ನಿಸ್ಸಂಬೋಧತ್ವಮುಕ್ತ್ವಾ ತಸ್ಮಿನ್ನೇವ ವಾಕ್ಯೇ ಮುಕ್ತಮಧಿಕೃತ್ಯ "ಸ ಏವ ದಿವ್ಯೇನ ಚಕ್ಷುಷಾ ಮನಸೈತಾನ್ ಕಾಮಾನ್ ಪಶ್ಯನ್ ರಮತೇ ಯ ಏತೇ ಬ್ರಹ್ಮಲೋಕೇ" ಇತಿ ಸರ್ವಜ್ಞತ್ವಮುಚ್ಯತೇ. ತಥಾ "ಸರ್ವಂ ಹ್ಯಪಶ್ಯಃ ಪಶ್ಯತಿ ಸರ್ವಮಾಪ್ನೋತಿ ಸರ್ವಜ್ಞಃ" ಇತಿ ಚ ಸ್ಪಷ್ಟಮೇವ ಸರ್ವಜ್ಞತ್ವಮುಚ್ಯತೇ. ತಥಾ ಮರಣೇ ಚ ನಿಸ್ಸಂಬೋಧತ್ವಂ. "ಏತೇಭ್ಯೋ ಭೂತೇಭ್ಯಸ್ಸಮುತ್ಥಾಯ ತಾನ್ಯೇವಾನುವಿನಾಶ್ಯತಿ" ಇತ್ಯುಕ್ತಂ. ನ ಪಶ್ಯತೀತ್ಯರ್ಥಃ. ತಸ್ಮಾತ್ "ಪ್ರಾಜ್ಞೇನಾತ್ಮನಾ" ಇತಿ ವಚನಂ ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷಂ. ನನು "ಸರ್ವೇಷು ಲೋಕೇಷು ಕಾಮಾಚಾರೋ ಭವತಿ", "ಇಮಾನ್ ಲೋಕಾನ್ ಕಾಮಾನ್ ಕಾಮರೂಪ್ಯನುಸಂಚರನ್" ಇತ್ಯಾದಿಶ್ರುತಿಷು ಮೂರ್ತಪರಶಿವಬ್ರಹ್ಮೋಪಾಸಕಸ್ಯ ಪರಿಚ್ಛಿನ್ನತ್ವೇನ ಸರ್ವಲೋಕಸಂಚಾರಾವಗಮಾತ್ ನ ವ್ಯಾಪಕತ್ವಂ. ತಸ್ಮಾನ್ನಾನಾಶರೀರಸಮಾವೇಶಸಂಕ್ರಮೋಶ್ಚೈವ ಪರಮೇಶ್ವರವನ್ನ ಯುಗಪದಿತಿ ಚೇನ್ನ "ಸ ನೋ ಬಂಧುರ್ಜನಿತಾ ಸ ವಿಧಾತಾ ಧಾಮಾನಿ ವೇದ ಭುವನಾನಿ ವಿಶ್ವಾ ಯತ್ರ ದೇವಾ ಅಮೃತಮಾನಶುಸ್ತೃತೀಯೇ ಧಾಮಾನ್ಯಭ್ಯೈರಯಂತ। ಪರಿ ದ್ಯಾವಾ

ಪೃಥಿವೀ ಯಂತಿ ಸದ್ಯಃ । ಪರಿಲೋಕಾನ್ ಪರಿದಿಶಃ ಪರಿಸುವಃ । ಋತಸ್ಯ ತಂತುಂ ವಿತತಂ ವಿವೃತ್ಯ ತದಪಶ್ಯತ್ತದಭವತ್ಪ್ರಜಾಸು" ಇತಿ ಶ್ರುತೌ ಅವಿದ್ಯಾಪಾಶಮೋಚನೇ ತದುಪಾಸಕಸ್ಯ ತದ್ವದ್ವಿಶ್ವವ್ಯಾವೃತ್ತೇರಾವೇಶೋ ಭವತೀತಿ ದರ್ಶಿತಂ. ತತ್ಪ್ರಕರಣಂ "ಏಷ ಹಿ ದೇವಃ" ಇತಿ ಜಗತ್ಕರ್ತುರ್ವಿಶ್ವರೂಪಸ್ಯ ಮಹಾದೇವಸ್ಯ. ಸ ಮಹಾದೇವಃ ಅಸ್ಮಾಕಂ ಬಂಧುರ್ಜನಿತಾ ಪಿತಾ. ಸ ವಿಧಾತಾ ಸಕಲಶ್ರೇಯಸಾಂ ಕರ್ತಾ. ಧಾಮಾನಿ ತೇಜೋರೂಪಾಣ್ಯಪ್ರಕೃತಾನಿ ಭುವನಾನಿ ವಿಶ್ವಾನ್ಯಾಪಿ ಜನಿತಾ, ತತ್ರ ಬಂಧುತ್ವಾದಿಯೋಗಸ್ಯ ಧಾಮಾ ವಿಶ್ವಸ್ಯ ಚ ಪ್ರಯೋಜನಮುಚ್ಯತೇ. ಯತ್ರ ಯಸ್ಮಿನ್ನಿಹ ದೇವೇ ಅಮೃತಂ ಕೈವಲ್ಯಲಕ್ಷ್ಮೀಂ ಆನಶುಃ ಪ್ರಾಪ್ಯಾನುಭವಂತಃ ದೇವಾಃ ತದ್ಭಾವಾತ್ ವೇದನಶೀಲಾಃ ತೃತೀಯೇ ತು ಸಂಜ್ಞಿಕೇ ತತ್ಪದೇ ಮಾಯಾತತೇ ಧಾಮಾನಿ ನಿಜತೇಜಃಪ್ರಧಾನಾನಿ ಸ್ವಾಭಿಮತಾನಿ ಅಭ್ಯೈರಯಂತ ಸ್ವೀಕೃತವಂತಃ. ಏವಮುಕ್ತಂ ಭವತಿ. ಬಂಧುವಜ್ಜನವತ್ ಸಕಲಹಿತಕಾರಿಣಾ ಪರಬ್ರಹ್ಮಣಾ ಮುಕ್ತಾಃ ತೃತೀಯೇ ಪರಮವ್ಯೋಮಲಕ್ಷಣೇ ಸ್ವಪದೇ ಕಲ್ಪಿತಾನಿ ಧಾಮಾನಿ ಪದಾನಿ ಪ್ರಾಪ್ತವಂತ ಇತಿ ನಿರೂಪ್ಯತೇ. ತಸ್ಮಾತ್ಪರಮೇಷಾಂ ಪ್ರಾಪ್ತಿರುಚ್ಯತೇ. ಪರಿದ್ಯಾವಾಪೃಥಿವೀ ಯಂತಿ ಮುಕ್ತಾತ್ಮಾನಃ ಸ್ವಶಕ್ತಿಮರೀಚಿಭಿಃ ದ್ಯಾವಾಪೃಥಿವೀ ಪರಿಯಂತಿ ಪ್ರಾಪ್ನುವಂತಿ ಪರಿಲೋಕಾನ್ ಹಿರಣ್ಯಗರ್ಭಾದಿಲೋಕಾನಪಿ ಪ್ರಾಪ್ನುವಂತಿ, ದಿಶಶ್ಚ ಸ್ವರ್ಗಪರ್ಯಂತಂ ವ್ಯಾಪ್ನುವಂತಿ. ಏವಂ ಸಕಲಜಗದ್ವ್ಯಾಪಿನೋ ವರ್ತಂತೇ. ತಥಾಹಿ ತೇನ ಸರ್ವಜ್ಞಾತ್ಸತ್ಕರ್ಮಣೋ ವಿಸ್ತೀರ್ಣಂ ಭೋಗಂ ತಂತುಂ ವಿವೃತ್ಯ ಭಿತ್ವಾ, ಪುಣ್ಯಪಾಪವಿನಿರ್ಮುಕ್ತಾಃ ಸಂತಃ ಸರ್ವಪ್ರಾಣೇಷು ತದೇವ ಮಹಾದೇವಾಖ್ಯಂ ವಸ್ತು ಅಪಶ್ಯನ್ ಸರ್ವಾತ್ಮಕತಯಾ ತದಭವನ್ ತತ್ಸ್ವಭಾವಾಶ್ಚಾಭವನ್. ತಸ್ಮಾನ್ಮುಕ್ತಾನಾಂ ಶಿವೈಕರಸಾನಾಂ ವ್ಯಾಪಕತ್ವಮಸ್ತ್ಯೇವ. ಏತೇ ಮಹಾದೇವಸದ್ಧರ್ಮಣೋ ಮುಕ್ತಜೀವಾಃ ದೇವಶಬ್ದವಾಚ್ಯಾಃ ದ್ಯುಪ್ರಭೃತಿವ್ಯಾಪಿನೋ ದೇವವ್ರತಾಖ್ಯಾನೇನ ಶ್ರೂಯಂತೇ "ಯೇ ದೇವಾ ದಿವಿಷದಃ" ಇತ್ಯಾದಿನಾ. ಪುರಾಣೇ ಚ "ತೇ ಹಿ ಸಾಕ್ಷಾದ್ದಿವಿಷದಸ್ತ್ವಂತರಿಕ್ಷಸದಸ್ತದಾ । ಪೃಥಿವೀಷದ ಇತ್ಯಂತೇ ದೇವಾ ದೇವವ್ರತಾಸ್ತು ತೇ ॥" ಇತಿ. ಪೃಥಿವೀತಿ ಬ್ರಹ್ಮಾಂಡರೂಪಂ. ಪ್ರಾಕೃತಪದಮಂತರಿಕ್ಷಮಿತಿ ದ್ವಿತೀಯಂ ಮಾಯಾಪದಂ. ತೃತೀಯಂ ಪದಂ ಆಕಾಶಪರ್ಯಾಯಂ ಶುದ್ಧಶಕ್ತಿರೂಪಂ ಶಿವಪದಮುಚ್ಯತೇ. ಅತೋ ಮುಕ್ತಾನಾಂ ವಿಭುತ್ವಮವಿರೋಧಂ. ಕಿಂಚ

**"ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾಂತರಂ" ಇತಿ ಶ್ರುತೌ ಮುಕ್ತಾನಾಂ ಶಿವೇತರಜಗದಜ್ಞಾನಾದಿಶಕ್ತಿ ಸಂಕೋಚತ್ವಮಿತಿ ಯದುಕ್ತಂ ತನ್ನ ಇದಂ ತು ಬದ್ಧಜೀವಸುಪ್ತ್ಯಾದಿ ವಿಷಯಂ. ಅಥವಾ ಮುಕ್ತಾನಾಂ ಶಿವೇತರಜಗದ್ಜ್ಞಾನಾದಿನಿಷೇಧ ಪರಂ ವಾ ಸ್ಯಾತ್.**

ಪರಶಿವಬ್ರಹ್ಮದ ಸಾರೂಪ್ಯವುಂಟಾದ ಮೇಲೆ ಬಾಹ್ಯಜ್ಞಾನವೇ ಇರುವುದಿಲ್ಲ ವೆಂಬುದನ್ನು ಶ್ರುತಿಯೇ ತಿಳಿಸಿದೆ. "ಪ್ರಾಜ್ಞನಾದ ಆತ್ಮನೊಡನೆ ಬೆರೆತವನಿಗೆ ಒಳ ಗಿನ ಹೊರಗಿನ ಜ್ಞಾನವೇ ಇರುವುದಿಲ್ಲ" ಹೀಗೆ ಶ್ರುತಿಯೇ ತಿಳಿಸಿದ್ದರಿಂದ ಮುಕ್ತನು ಹೇಗೆ ಸರ್ವಜ್ಞನಾದನು? ಎಂಬುದಕ್ಕೆ ಉತ್ತರವನ್ನು ತಿಳಿಸುತ್ತಾನೆ. ಶ್ರುತಿಯು ಮುಕ್ತನಿಗೆ ಅನ್ವಯಿಸುವುದಿಲ್ಲ; ಆದರೆ ಸುಷುಪ್ತಿಗೆ ಅನ್ವಯಿಸುತ್ತದೆ. ಇಲ್ಲಿ ಸ್ವಾಪ್ಯಯ ವೆಂದರೆ ಸುಷುಪ್ತಿ, ಸಂಪತ್ತಿ ಎಂದರೆ ಮರಣ. ಎರಡು ಅವಸ್ಥೆಗಳಲ್ಲೂ ಜೀವನು ಪ್ರಾಜ್ಞನೊಡನೆ ಬೆರೆತು ಹೊರಗಿನ ಜ್ಞಾನವಿಲ್ಲದವನಾಗುತ್ತಾನೆ. ಆದ್ದರಿಂದಲೇ ಸುಷುಪ್ತಿಮರಣಗಳಲ್ಲಿ ಜೀವನಿಗೆ ಜ್ಞಾನವಿರುವುದಿಲ್ಲ. ಮುಕ್ತನಿಗಾದರೋ ಸರ್ವಜ್ಞತ್ವವಿರುವುದೆಂದು ಶ್ರುತಿಯೇ ತಿಳಿಸಿದೆ. "ಈಗ ನಾನು ಇಂತವನು, ಅವನು ಅಂತವನು ಎಂಬುದನ್ನು ತಿಳಿಯಲಾರೆನು. ಉಳಿದ ಭೂತಗಳನ್ನೂ ತಿಳಿಯ ಲಾರೆನು." ಈ ರೀತಿಯಲ್ಲಿ ಜೀವನು ಆಗ ಲಯವನ್ನು ಹೊಂದುತ್ತಾನೆ. "ನಾನು ಇಲ್ಲಿ ಭೋಗ್ಯವಸ್ತುವನ್ನು ನೋಡುವುದಿಲ್ಲ" ಎಂದು ಸುಷುಪ್ತಿಕಾಲದಲ್ಲಿ ಜೀವನಿಗೆ ಜ್ಞಾನವೇ ಇರುವುದಿಲ್ಲವೆಂದು ಹೇಳಿ ಅದೇ ವಾಕ್ಯದಲ್ಲಿ ಮುಕ್ತನನ್ನು ತಿಳಿಸಿ "ಆ ಇವನು ದಿವ್ಯದೃಷ್ಟಿಯಿಂದಲೂ ಮನಸ್ಸಿನಿಂದಲೂ ಈ ಆಶೆಗಳನ್ನು ಕಂಡು ಭೋಗಿಸು ತ್ತಾನೆ." ಎಂಬಲ್ಲಿ ಅವನನ್ನು ಸರ್ವಜ್ಞನೆಂದು ಹೇಳಿದೆ. "ಜ್ಞಾನಿಯು ನೋಡ ದಿದ್ದರೂ ಎಲ್ಲವನ್ನೂ ಕಾಣುತ್ತಾನೆ, ಎಲ್ಲವನ್ನೂ ಹೊಂದುತ್ತಾನೆ" ಎಂಬಲ್ಲಿ ಮುಕ್ತ ನನ್ನು ಸರ್ವಜ್ಞನೆಂದು ಸ್ಪಷ್ಟವಾಗಿ ಹೇಳಿದೆ. "ಮರಣದಲ್ಲಂತೂ ಎಚ್ಚರಿಕೆಇರು ವುದೇ ಇಲ್ಲ. "ಈ ಐದುಭೂತಗಳಿಂದ ಹೊರಟು ಜೀವನು ಅವುಗಳೊಡನೆಯೇ ನಶಿ ಸುತ್ತಾನೆ" ಎಂಬಲ್ಲಿ·ಅವನು ಯಾವುದನ್ನೂ ಕಾಣುವುದಿಲ್ಲವೆಂದೇ ಅರ್ಥವಾಗುತ್ತದೆ. ಆದ್ದರಿಂದ "ಪ್ರಾಜ್ಞೇನಾತ್ಮನಾ" ಎಂಬ ಶ್ರುತಿಯು ಸುಷುಪ್ತಿಮರಣಗಳಲ್ಲೊಂ ದಕ್ಕೇ ಅನ್ವಯಿಸುತ್ತದೆ. "ಎಲ್ಲಾ ಲೋಕಗಳಲ್ಲೂ ಸ್ವತಂತ್ರನಾಗಿ ಸಂಚರಿಸುತ್ತಾನೆ" "ಭೋಗರೂಪವಾದ ಈ ಲೋಕಗಳನ್ನು ಸೇರಿ ಅವನು ಸ್ವೇಚ್ಛಾರೂಪದಿಂದ ಸಂಚರಿ ಸುತ್ತಾನೆ" ಈ ಶ್ರುತಿಗಳಲ್ಲಿ ಮೂರ್ತಶಿವನನ್ನು ಉಪಾಸನಮಾಡಿದವನಿಗೆ ಪರಿಮಿತ ವಾದ ವ್ಯಾಪ್ತಿಇರುವುದರಿಂದ ಎಲ್ಲಾ ಲೋಕಗಳಿಗೂ ಹೋಗಲಿಕ್ಕಾಗುವುದಿಲ್ಲವಾದ್ದ ರಿಂದ ಅವನು ವ್ಯಾಪಕನಾಗಲಾರನು. ಆದ್ದರಿಂದ ಅವನು ಪರಮೇಶ್ವರನಂತೆ ಒಂದೇ ಕಾಲದಲ್ಲಿ ಅನೇಕ ಶರೀರಗಳನ್ನು ಪ್ರವೇಶಿಸದೆ ಬೇರೆಬೇರೆ ಕಾಲಗಳಲ್ಲಿ ಪ್ರವೇಶಿಸಬೇಕಾಗುವುದು ಎಂದು ಹೇಳುವುದು ಯುಕ್ತವಲ್ಲ. "ಅವನೇ ನಮಗೆ

ಬಂಧು, ಅವನೇ ಹುಟ್ಟಿಸುವವನು, ಅವನೇ ಪ್ರಪಂಚದ ಎಲ್ಲಾ ಸ್ಥಾನಗಳನ್ನು ತಿಳಿದಿರುವವನು" ಯಾವ ದೇವತೆಗಳು, ಕೈಲಾಸವನ್ನು ಹೊಂದಿ ಅಮೃತವನ್ನು ಅನುಭವಿಸುತ್ತಾರೆಯೋ" "ದ್ಯಾವಾಭೂಮಿಗಳನ್ನು ದಿಕ್ಕುಗಳನ್ನು ಲೋಕಗಳನ್ನು ಸ್ವರ್ಗವನ್ನು ನೆನೆಸಿದಾಕ್ಷಣದಲ್ಲಿಯೇ ಮುಕ್ತರು ಹೊಂದುತ್ತಾರೆ" "ವಿಸ್ತಾರವಾಗಿರುವ ಬ್ರಹ್ಮದ ಪರಂಪರೆಯು ಪ್ರೇಕ್ಷಕರಲ್ಲಿ ಬೆಳೆದುಬಂದಿರುವುದನ್ನು ಅವರು ಕಂಡರು" ಈ ಶ್ರುತಿಗಳಲ್ಲಿ ಶಿವೋಪಾಸಕರಿಗೆ ಪಾಶವು ತೊಲಗಿದೊಡನೆ ಅವನು ವಿಶ್ವವನ್ನಾವರಿಸುತ್ತಾನೆಂದು ಹೇಳಲಾಗಿದೆ. "ಜಗತ್ಕರ್ತನೂ ವಿಶ್ವರೂಪನೂ ಆದ ಮಹಾದೇವನೇ ನಮಗೆ ಆಪ್ತಹಿತೈಷಿಯೂ, ತಂದೆಯೂ, ಮತ್ತು ಶ್ರೇಯಸ್ಕರನೂ ಆಗಿದ್ದಾನೆ. ಅವನೇ ತೇಜೋಮಯವಾದ ಸಕಲಭುವನಗಳ ಕರ್ತನೂ ಬಂಧುವೆನಿಸಲರ್ಹನೂ ವಿಶ್ವಕ್ಕೆ ಪ್ರಯೋಜನನೂ ಆಗಿದ್ದಾನೆ. ದೇವತೆಗಳು ಬೇರೆಕಡೆ ಅಮೃತವನ್ನು ಹೊಂದದೆ ಈ ದೇವನಲ್ಲಿಯೇ ಕೈವಲ್ಯಾನಂದವನ್ನು ಅನುಭವಿಸುತ್ತಾರೆ. ಮಾಯೆಯಿಂದ ವ್ಯಾಪ್ತವಾದ ಮೂರನೆಯ ಸ್ಥಾನದಲ್ಲಿ ತಮಗಭಿಮತವಾದ ತೇಜೋಮಯವಾದ ರೂಪಗಳನ್ನು ಅವರು ಸ್ವೀಕರಿಸುತ್ತಾರೆ" ಇದೇ ಈ ಮಂತ್ರದ ಸಾರಾಂಶ. ಬಂಧುವಿನಂತೆ ಸರ್ವರಿಗೂ ಹಿತವನ್ನು ಆಚರಿಸುವ ಮಹಾದೇವನ ಪ್ರಸಾದದಿಂದ ಪಾಶಬಂಧವನ್ನು ಕಳೆದುಕೊಂಡವರು ಅಮೃತರಾಗುತ್ತಾರೆ. ಹೀಗೆ ಮುಕ್ತರು ಪರಮಾಕಾಶವೆಂಬ ಮಹಾಕೈಲಾಸದಲ್ಲಿ ಇರುವ ವೈಭವಗಳನ್ನು ಹೊಂದುತ್ತಾರೆ ಎಂದು ಇಲ್ಲಿ ತಿಳಿಸಲಾಗಿದೆ. ಅಲ್ಲಿಂದಮುಂದೆ ಅವರಿಗೆ ನಿಷ್ಕಲಶಿವನಲ್ಲಿ ಸಾಮರಸ್ಯವು ದೊರಕುತ್ತದೆ. ಮುಕ್ತರು ತಮ್ಮ ಶಕ್ತಿಪ್ರಕಾಶಗಳಿಂದ ಭೂಮಿ ಆಕಾಶಗಳನ್ನು ಅಂದರೆ ಸ್ವರ್ಗಾದಿಲೋಕಗಳೆಲ್ಲವನ್ನೂ ವ್ಯಾಪಿಸಿರುತ್ತಾರೆ. ಹೀಗೆ ಅವರು ಸಕಲಜಗತ್ತನ್ನೂ ವ್ಯಾಪಿಸಿ ಸರ್ವಜ್ಞತೆ ಮತ್ತು ಸರ್ವಶಕ್ತತೆಗಳಿಂದ ಕೂಡಿ ವಿಸ್ತಾರವಾದ ಅಪ್ರಾಕೃತ ಭೋಗವನ್ನೂ ದಾಟಿ ಪುಣ್ಯಪಾಪಗಳನ್ನು ತೊರೆದು ಎಲ್ಲಾ ಪ್ರಾಣಿಗಳಲ್ಲೂ ಮಹಾದೇವನೊಬ್ಬನನ್ನೇ ಕಾಣುತ್ತ ಸರ್ವಾತ್ಮಭಾವದಿಂದ ಶಿವನೇ ಆಗಿರುತ್ತಾರೆ. ಶಿವನ ಸ್ವಭಾವವನ್ನು ಹೊಂದಿ ಅವರು ಅಲ್ಲಿಯೇ ಇರುತ್ತಾರೆ. ಆದ್ದರಿಂದ ಮುಕ್ತರು ಶಿವನೊಬ್ಬನಲ್ಲಿಯೇ ರಮಿಸುತ್ತ ಸರ್ವವ್ಯಾಪಕರಾಗಿರುತ್ತಾರೆ. ಮಹಾದೇವನ ಧರ್ಮವೇ ಅವರಲ್ಲೂ ಇರುವುದರಿಂದ ಅವರನ್ನು ದೇವನೆಂದು ಕರೆಯಲಾಗಿದೆ. ಅವರೇ ದ್ಯುಲೋಕದವರೆಗೂ ವ್ಯಾಪಿಸಿ ದೇವವ್ರತರೆನಿಸುತ್ತಾರೆ. ಪುರಾಣದಲ್ಲಿಯೂ ಅವರನ್ನು ಸ್ವರ್ಗವಾಸಿಗಳು ಅಂತರಿಕ್ಷನಿವಾಸಿಗಳು ಎಂದು ಅನೇಕಬಗೆಯಾಗಿ ವ್ಯವಹರಿಸಿದೆ. ಇವರೇ ಬ್ರಹ್ಮಾಂಡವೆನಿಸಿದ ಪೃಥಿವಿಯಲ್ಲೂ ಪ್ರಾಕೃತವೆನಿಸಿದ ಅಂತರಿಕ್ಷದಲ್ಲೂ ನೆಲಸಿದ್ದಾರೆ. ಇದೇ ಅವರ ಪ್ರಥಮಪದವೆನಿಸುತ್ತದೆ. ಮಾಯಾಶಕ್ತಿರೂಪವಾದದ್ದೇ ಎರಡನೆಯದು. ಶುದ್ಧಶಕ್ತಿಮಯವಾದದ್ದೇ ಮೂರನೆಯ ಸ್ಥಾನ. ಮುಕ್ತರು ಇವೆಲ್ಲವನ್ನು ಆವರಿಸಿರುತ್ತಾರೆ. ಮೂರನೆಯ ಸ್ಥಾನವನ್ನೇ ಪರಮಾಕಾಶವೆನಿಸಿದ ಶಿವಪದವೆಂದು ಕರೆಯಲಾಗಿದೆ. ಆದ್ದರಿಂದ ಮುಕ್ತರ ವಿಭುತ್ವಕ್ಕೆ ಯಾವ

ವಿರೋಧವೂ ಇಲ್ಲ. "ಪ್ರಜ್ಞಾತ್ಮನೊಡಗೂಡಿದವನು ಒಳ ಹೊರ ವಿಷಯವನ್ನು ತಿಳಿಯ ಲಾರನು" ಎಂಬ ಶ್ರುತಿಯಲ್ಲಿ ಮುಕ್ತರಿಗೆ ಶಿವನಲ್ಲದೆ ಬೇರೆ ಜಗತ್ತಿನ ಅಜ್ಞಾನ ವೊದ ಲಾದ ಶಕ್ತಿಸಂಕೋಚವುಂಟೆಂದು ಹೇಳಿದ್ದು ಸರಿಯಲ್ಲ; ಯಾಕೆಂದರೆ ಈ ಶ್ರುತಿಯು ಬದ್ಧಜೀವನ ಸುಷುಪ್ತಿಗನ್ವಯಿಸುತ್ತದೆಯೇ ಹೊರತು ಮುಕ್ತನಿಗೆ ಅನ್ವಯಿಸುವು ದಿಲ್ಲ. ಅಥವಾ ಮುಕ್ತರಿಗೆ ಶಿವನಲ್ಲದೆ ಬೇರೆ ಜಗತ್ತಿನ ಜ್ಞಾನವನ್ನು ನಿಷೇಧಿಸಲಿಕ್ಕಾ ದರೂ ಅನ್ವಯಿಸುವುದೆಂದು ತಿಳಿಯಬೇಕು.

ನನು ಪರಶಿವಬ್ರಹ್ಮೋಪಾಸಕಾನಾಂ ತದ್ವತ್ಸತ್ಯಸಂಕಲ್ಪತ್ವವ್ಯಾಪ ಕತ್ವಸರ್ವಜ್ಞತ್ವಾದಿಧರ್ಮಾಂಗೀಕಾರೇ ತದ್ವದ್ದೇವಮನುಷ್ಯಾದಿಜಗಜ್ಜ ನ್ಮಾದಿಕಾರಣತ್ವಂ ಸ್ಯಾದಿತ್ಯಾಶಂಕಾಯಾಂ ಮುಕ್ತಜೀವಪರಮೇಶ್ವರ ಯೋರ್ವೈಲಕ್ಷಣ್ಯಮಧಿಕರಣಾಂತರೇಣಾಹ. ಜಗದ್ವ್ಯಾಪಾರಾಧಿಕರಣಂ ॥ ೫ ॥ ಜಗದ್ವ್ಯಾಪಾರವರ್ಜಂ ಪ್ರಕರಣಾದಸನ್ನಿಹಿತತ್ವಾಚ್ಚ ॥ ೧೭ ॥ ಪೂರ್ವತ್ರ ನಿರವಯವಸ್ಯ ಪರಬ್ರಹ್ಮಣಃ ಶಿವಸ್ಯೈವಾಕಾಶಾದಿವತ್ಪೂ ರ್ಣತ್ವಂ ವ್ಯಾಪಕತ್ವಂ ತದುಪಾಸಕಾನಾಂ ತತ್ಪ್ರಾಪ್ತಿತ್ವಂ, ಮೂರ್ತ ಬ್ರಹ್ಮಣಃ ದೀಪಾದಿವದ್ವ್ಯಾಪಕತ್ವಂ ತದುಪಾಸಕಾನಾಂ ತದ್ವತ್ಸ್ವ ತಂತ್ರತ್ವಂ ಸರ್ವಲೋಕಸಂಚಾರತ್ವಂ ಸರ್ವಕಾಮಾವಾಪ್ತಿತ್ವಾದಿಕಂ ಚೋಪದಿಶ್ಯ ಇದಾನೀಂ ಉಪಾಸ್ಯೋಪಾಸಕಾನಾಂ ವೈಲಕ್ಷಣ್ಯಂ ದರ್ಶ ಯತಿ. ದೇವಗಂಧರ್ವಮನುಷ್ಯಾದಿಭೂತಭೌತಿಕಸೃಷ್ಟಿವ್ಯಾಪಾರಂ ವರ್ಜಯಿತ್ವಾ ಸ್ವಭೋಗಸಾಧನೀಭೂತಕಾಯವ್ಯೂಹಾದಿನಿರ್ಧಾರಣ ಸಾಮರ್ಥ್ಯಮಾತ್ರಮೇವ ಉಪಾಸಕಾನಾಂ. ದೇವಗಂಧರ್ವಾದಿಸೃಷ್ಟಿ ವ್ಯಾಪಾರಸ್ತು ಶಿವಸ್ಯೈವ. ಕುತಃ? ಪ್ರಕರಣಾತ್, "ತಸ್ಮಾದ್ವಾ ಏತ ಸ್ಮಾದಾತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋ ರಗ್ನಿಃ । ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಂ । ಅನ್ನಾತ್ಪುರುಷಃ ॥", "ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ಪ್ರಯಂತ್ಯ ಭಿಸಂವಿಶಂತಿ । ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ ॥", "ಬ್ರಹ್ಮವಿಷ್ಣು ರುದ್ರೇಂದ್ರಾಸ್ತೇ ಸಂಪ್ರಸೂಯಂತೇ" ಇತ್ಯಾದಿನಾ ಚೇತನಾಚೇತನ ದೇವಾದಿಶರೀರಸ್ರಷ್ಟೃತ್ವಪ್ರತಿಪಾದನಾತ್ ತದುಪಾಸಕಾನಾಂ ಸ್ವಶರೀ ರಾತಿರಿಕ್ತದೇವಾದಿಸರ್ವಶರೀರಸ್ರಷ್ಟೃತ್ವಸ್ಯ ಶ್ರುತಿಸ್ಮೃತಿಪುರಾಣೇಷ್ವ ದರ್ಶನಾಚ್ಚ. ಕಿಂಚ ಅಸನ್ನಿಹಿತತ್ವಾಚ್ಚ "ವಿಶ್ವಾಧಿಕೋ ರುದ್ರೋ ಮಹರ್ಷಿ", "ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ । ಯೋ ವೈ ವೇದಾಂಶ್ಚ ಪ್ರಹಿಣೋತಿ ತಸ್ಮೈ ॥" ಇತ್ಯಾದೌ ದೇವಗಂಧರ್ವಾದಿಸಕಲ ಜೀವಪ್ರಾಗವಸ್ಥಾಯಾಂ ಹಿರಣ್ಯಗರ್ಭಸ್ಯ ಸಾಕ್ಷಾತ್ಪರಶಿವಬ್ರಹ್ಮಜನ್ಯತ್ವ

ಪ್ರತಿಪಾದನೇನ ಪರಶಿವಂ ಪ್ರತಿ ಸನ್ನಿಹಿತತ್ವಾತ್ ಅಂತರಂಗತ್ವಾತ್ ತತ್ಕಾಲೇ ತದ್ವ್ಯತಿರಿಕ್ತಜೀವಸ್ಯ ಸೃಷ್ಟ್ಯಭಾವೇನ ಮುಕ್ತಜೀವಾನಾಂ ಅಸನ್ನಿಹಿತತ್ವಾಚ್ಚ ತೇಷಾಂ ಪರಮೇಶ್ವರವಜ್ಜಗಜ್ಜನ್ಮಾದಿಕಾರಣತ್ವಂ ನ ಸಂಭವತೀತಿ "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಇತ್ಯಾದಿಶ್ರುತಿನಿರ್ದಿಷ್ಟಜಗಜ್ಜನ್ಮಾದಿಹೇತುತ್ವಂ ಉಪಾಸ್ಯೋಪಾಸಕಯೋಃ ಶಿವಜೀವಯೋಃ ಸಂಭವತಿ? ಉತ ಶಿವಸ್ಯೈವ ಸಂಭವತಿ? ಇತಿ ಸಂಶಯಃ. "ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ-ಪರಮಂ ಸಾಮ್ಯಮುಪೈತಿ" ಇತ್ಯಾದೌ ಪರಮಪುರುಷೇಣ ಶಿವೇನ ಮುಕ್ತಾನಾಂ ಸಾಮ್ಯಾಪತ್ತಿಶ್ರವಣಾತ್ "ಯ ಆತ್ಮಾ ಅಪಹತಪಾಪ್ಮಾ" ಇತ್ಯಾದಿನಾ ಮುಕ್ತಸ್ಯ ಪರಮೇಶ್ವರವತ್ಸತ್ಯಸಂಕಲ್ಪತ್ವಾದಿಧರ್ಮೋಪದೇಶಾತ್, "ಸ ಯದಿ ಪಿತೃಲೋಕಕಾಮೋ ಭವತಿ" ಇತ್ಯಾದಿಷು ಸಂಕಲ್ಪಮಾತ್ರಾತ್ ಪಿತೃಲೋಕಾದಿಸೃಷ್ಟಿಸಾಮರ್ಥ್ಯಶ್ರವಣಾತ್ "ಇಮಾನ್ ಲೋಕಾನ್ ಕಾಮಾನ್" ನೀಕಾಮರೂಪ್ಯನುಸಂಚರನ್" ಇತಿ ಸರ್ವತ್ರ ವ್ಯಾಪಾರದ್ಯೋತನಾತ್, ಪರಮೇಶ್ವರಾಸಾಮ್ಯೇ ಸತ್ಯಸಂಕಲ್ಪಾಯೋಗಾಚ್ಚ ಮುಕ್ತಸ್ಯಾಪಿ ಪರಮೇಶ್ವರವತ್ ಜಗಜ್ಜನ್ಮಾದಿಕಾರಣತ್ವಂ ಸಂಭವತೀತಿ ಪ್ರಾಪ್ತೇ ಪ್ರಚಕ್ಷ್ಮಹೇ ಜಗದ್ವ್ಯಾಪಾರವರ್ಜಮಿತಿ. ಜಗದ್ವ್ಯಾಪಾರಃ ನಿಖಿಲಚೇತನಾಚೇತನಸ್ವರೂಪಸ್ಥಿತಿಪ್ರವೃತ್ತಿಭೇದನಿಯಮನಂ. ತದ್ವರ್ಜಂ ನಿರಸ್ತನಿಖಿಲತಿರೋಧಾನಸ್ಯ ನಿರ್ವ್ಯಾಜಬ್ರಹ್ಮಾನುಭವರೂಪಂ ಮುಕ್ತಸ್ಯೈಶ್ವರ್ಯಂ. ಕುತಃ? ಪ್ರಕರಣಾತ್. ನಿಖಿಲಜಗನ್ನಿಯಮನಂ ಹಿ ಪರಶಿವಬ್ರಹ್ಮಪ್ರಕೃತಿರಿತ್ಯಾಮ್ನಾಯತೇ. "ಯತೋ ವಾ ಇಮಾನಿ ಭೂತಾನಿ ಜಾಯಂತೇ" "ದ್ಯಾವಾಪೃಥಿವೀ ಜನಯನ್ದೇವ ಏಕಃ" "ಸೋಮಃ ಪವತೇ ಜನಿತಾ ಮತೀನಾಂ" ಇತ್ಯಾದಿಶ್ರುತಿನಿರ್ದಿಷ್ಟಜಗಜ್ಜನ್ಮಾದಿಕಾರಣತ್ವಸ್ಯ ಮುಕ್ತನಾಂ ಸಾಧಾರಣ್ಯೇ ಬ್ರಹ್ಮಲಕ್ಷಣಂ ನ ಸಂಗಚ್ಛತೇ. ಅಸಾಧಾರಣಧರ್ಮಸ್ಯೈವ ಹಿ ಲಕ್ಷಣತ್ವಂ. ತಥಾ "ಸದೇವ ಸೌಮ್ಯೇದಮಗ್ರ ಆಸೀತ್" "ತದಕ್ಷರಂ ತತ್ಸವಿತುರ್ವರೇಣ್ಯಂ" "ತದೇಕಂ ಸನ್ನವ್ಯಭವತ್" "ತಚ್ಛ್ರೇಯೋರೂಪಮತ್ಯಸೃಜತ ಕ್ಷತ್ರಂ ಯಾನ್ಯೇತಾನಿ ದೇವನಕ್ಷತ್ರಾಣಿ ಇಂದ್ರೋ ವರುಣಸ್ಸೋಮೋ ರುದ್ರಃ ಪರ್ಜನ್ಯೋ ಯಮೋ ಮೃತ್ಯುರೀಶಾನಃ" "ನಾನ್ಯತ್ಕಿಂಚನ ಮಿಷತ್" ಇತ್ಯಾದಿಷು ಶಿವಸ್ಯ ಪರಬ್ರಹ್ಮಣಃ ನಿಖಿಲಜಗದ್ವಿಲಕ್ಷಣತ್ವಂ ನಿಖಿಲಜಗನ್ನಿಯಮನಾದಿಪ್ರಸಂಗೇಷು ಮುಕ್ತಸ್ಯಾಸನ್ನಿಧಾನಮಸ್ತಿ ಯೇನ ಜಗದ್ವ್ಯಾಪಾರಸ್ತಸ್ಯಾಪಿ ಸ್ಯಾತ್.

ಪರಶಿವಬ್ರಹ್ಮವನ್ನು ಉಪಾಸನಮಾಡಿ ಮುಕ್ತರಾದವರಿಗೆ ಶಿವನಂತೆಯೇ

ಸತ್ಯಸಂಕಲ್ಪತ್ವ ವ್ಯಾಪಕತ್ವ ಸರ್ವಜ್ಞತ್ವ ಮೊದಲಾದ ಧರ್ಮಗಳನ್ನು ಒಪ್ಪಿದರೆ ಅದ ರಂತೆಯೇ ದೇವಮನುಷ್ಯ ಮೊದಲಾದ ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳಿಗೂ ಮುಕ್ತರು ಕರ್ತೃವಾಗಲೆಂದಾಶಂಕಿಸಿ ಈ ಅಂಶದಲ್ಲಿ ಮುಕ್ತರಿಗೂ ಪರಮೇಶ್ವರನಿಗೂ ಭೇದವುಂಟೆಂದು ತಿಳಿಸುತ್ತಾನೆ. ನಿರವಯವಪರಶಿವಬ್ರಹ್ಮವು ಆಕಾಶದಂತೆ ಪೂರ್ಣವೂ ವ್ಯಾಪಕವೂ ಆಗಿರುವುದೆಂದೂ, ಅದನ್ನು ಉಪಾಸನಮಾಡಿದವರು ಅಂತಹ ಬ್ರಹ್ಮವೇ ಆಗುವರೆಂದೂ ಹಿಂದೆ ಹೇಳಿದೆ. ಮೂರ್ತಬ್ರಹ್ಮವೂ ದೀಪದಂತೆ ವ್ಯಾಪಕವೆಂದೂ ಅದರ ಉಪಾಸಕರಿಗೂ ಹಾಗೆಯೇ ಸ್ವಾತಂತ್ರ್ಯವೂ ಸರ್ವ ಲೋಕ ಸಂಚಾರವೂ ಸರ್ವಫಲಪ್ರಾಪ್ತಿಯೂ ಉಂಟೆಂದೂ ಹಿಂದೆ ಉಪದೇಶಿಸಿ ಈಗ ಮುಕ್ತ ನಿಗೂ ಶಿವನಿಗೂ ವೈಲಕ್ಷಣ್ಯವನ್ನು ತಿಳಿಸುತ್ತಾನೆ. ದೇವ ಗಂಧರ್ವ ಮನುಷ್ಯ ಮೊದಲಾದ ಭೂತಭೌತಿಕ ಸೃಷ್ಟಿಯನ್ನು ಬಿಟ್ಟು ತಮ್ಮ ಭೋಗಸಾಧನವಾದ ದಿವ್ಯ ದೇಹೇಂದ್ರಿಯಗಳನ್ನು ನಿರ್ಮಿಸುವ ಸಾಮರ್ಥ್ಯ ಒಂದೇ ಮುಕ್ತರಿಗೆ ಇರುತ್ತದೆ. ದೇವ ಗಂಧರ್ವಾದಿಗಳನ್ನು ಸೃಷ್ಟಿಸುವ ಕೆಲಸವೆಲ್ಲವೂ ಶಿವನೊಬ್ಬನಿಗೇ ಮೀಸಲಾಗಿ ರುತ್ತದೆ. ಹೀಗೆಂದು ಪ್ರಕರಣದಿಂದ ತಿಳಿದುಬರುತ್ತದೆ. "ಈ ಆ ಆತ್ಮನಿಂದ ಆಕಾಶ ಹುಟ್ಟಿತು. ಆಕಾಶದಿಂದ ವಾಯು, ವಾಯುವಿನಿಂದ ಅಗ್ನಿ, ಅಗ್ನಿಯಿಂದ ನೀರು, ನೀರಿ ನಿಂದ ಪೃಥಿವಿ, ಪೃಥಿವಿಯಿಂದ ಔಷಧಿ ಲತೆಗಳೂ, ಅವುಗಳಿಂದ ಭೋಜ್ಯವಸ್ತು, ಅದ ರಿಂದ ಪುರುಷನು" ಹೀಗೆ ಸೃಷ್ಟಿಯಾಯಿತು. "ಯಾವನಿಂದ ಈ ಜೀವರು ಹುಟ್ಟಿ ದರೋ ಹುಟ್ಟಿದವರು ಯಾವನಿಂದ ಜೀವಿಸುವರೋ ಮತ್ತು ಯಾವನಲ್ಲಿ ಪ್ರವೇಶಿಸು ತ್ತಾರೋ ಅದನ್ನು ಬ್ರಹ್ಮವೆಂದು ತಿಳಿ." "ಧ್ಯೇಯನಾದ ಈಶ್ವರನನ್ನು ಧ್ಯಾನಿಸು. ಇದೆಲ್ಲವೂ ಬ್ರಹ್ಮವಿಷ್ಣು ರುದ್ರೇಂದ್ರರೊಡನೆ ಅವನಿಂದಲೇ ಹುಟ್ಟಿದ್ದಾರೆ" ಎಂಬಲ್ಲಿ ಶಿವನೇ ಚೇತನಅಚೇತನದೇವಾದಿಶರೀರಗಳನ್ನು ಸೃಷ್ಟಿಸುವನೆಂದು ಹೇಳಿದೆ. ಮುಕ್ತ ರಿಗೆ ಭೋಗಾನುಗುಣವಾದ ತಮ್ಮ ಶರೀರವನ್ನಲ್ಲದೆ ದೇವತೆಗಳೇ ಮೊದಲಾದ ಬೇರೆ ಯವರ ಶರೀರಗಳನ್ನು ಸೃಷ್ಟಿಸುವ ಶಕ್ತಿಯುಂಟೆಂದು ಶ್ರುತಿಸ್ಮೃತಿಪುರಾಣಗಳಲ್ಲಿ ಎಲ್ಲೂ ಹೇಳಿಲ್ಲ. ಯಾವನು ಬ್ರಹ್ಮನನ್ನು ಸೃಷ್ಟಿಸಿ ಅವನಿಗೆ ವೇದಗಳನ್ನು ಉಪದೇಶಿಸಿ ದನೋ ಅಂತಹ ದೇವನಿಗೆ ಆತ್ಮಬುದ್ಧಿವಿಕಾಸಕ್ಕಾಗಿ ಶರಣಾಗುತ್ತೇನೆ" ಎಂಬಲ್ಲಿ ದೇವತೆಗಳು ಗಂಧರ್ವರು ಮೊದಲಾದ ಎಲ್ಲಾ ಜೀವರು ಹುಟ್ಟಲಿಕ್ಕೂ ಮೊದಲಿಗೆ ಹಿರಣ್ಯಗರ್ಭನು ಪರಶಿವಬ್ರಹ್ಮದಿಂದಲೇ ನೇರವಾಗಿ ಹುಟ್ಟಿದನೆಂದು ಹೇಳಿದ್ದರಿಂದಲೂ ಆ ಪ್ರಕರಣಕ್ಕೆ ಸಂಬಂಧಿಸಿರುವುದರಿಂದಲೂ ಪರಮಾತ್ಮನನ್ನು ಬಿಟ್ಟು ಉಳಿದವರಿಂದ ಸೃಷ್ಟಿ ಆಗದಿರುವುದರಿಂದಲೂ, ಎಲ್ಲಕ್ಕೂ ಮೊದಲು ಜೀವನೇ ಇರಲಿಲ್ಲವಾದ್ದರಿಂದಲೂ ಮುಕ್ತಜೀವರಿಗೂ ಸಹ ಪರಮೇಶ್ವರನಂತೆ ಜಗತ್ಕಾರಣತ್ವವು ಸಂಭವಿಸುವುದಿಲ್ಲ. "ಯಾವನಿಂದ ಈ ಜೀವರು ಹುಟ್ಟಿದರೋ" ಎಂಬ ಶ್ರುತಿಯಲ್ಲಿ ಹೇಳಿದಂತೆ ಜಗ ತ್ಕಾರಣತ್ವವು ಉಪಾಸ್ಯೋಪಾಸಕರಾದ ಜೀವೇಶ್ವರರಿಗೆ ಸಂಭವಿಸುತ್ತದೆಯೆ? ಅಥವಾ ಶಿವನೊಬ್ಬನಿಗೇ ಸಂಭವಿಸುತ್ತದೆಯೆ? ಎಂದು ಸಂಶಯಬರುತ್ತದೆ.

"ಜೀವನು ಹಿರಣ್ಯವರ್ಣದ ಪರಮೇಶ್ವರನನ್ನು ಕಂಡೊಡನೆ ಪುಣ್ಯ ಪಾಪಗಳನ್ನು ಕಳೆದುಕೊಂಡು ನಿರಂಜನನಾಗಿ ಪರಮೇಶ್ವರನಿಗೆ ಸದೃಶನಾಗುತ್ತಾನೆ" ಎಂಬಲ್ಲಿ ಪರಮಪುರುಷನಾದ ಶಿವನೊಡನೆ ಮುಕ್ತರಿಗೆ ಸಾಮ್ಯವನ್ನು ಹೇಳಲಾಗಿದೆ. "ಈ ಆತ್ಮನು ಪಾಪರಹಿತನು" ಎಂಬಲ್ಲಿ ಮುಕ್ತನಿಗೆ ಪರಮೇಶ್ವರನಂತೆ ಸತ್ಯಸಂಕಲ್ಪ ಮೊದಲಾದ ಧರ್ಮಗಳನ್ನು ಹೇಳಿದೆ. "ಅವನು ಪಿತೃಲೋಕಗಳನ್ನು ಬಯಸಿದರೆ ಪಿತೃಗಳನ್ನು ಕಾಣುತ್ತಾನೆ" ಎಂಬಲ್ಲಿ ಮುಕ್ತರಿಗೆ ಸಂಕಲ್ಪಮಾತ್ರದಿಂದ ಪಿತೃಲೋಕಗಳನ್ನು ಸೃಷ್ಟಿಸುವ ಸಾಮರ್ಥ್ಯವನ್ನು ಹೇಳಲಾಗಿದೆ. "ಅವನು ಸ್ವೇಚ್ಛೆಯಿಂದ ಎಲ್ಲಾ ಲೋಕಗಳಲ್ಲೂ ಸಂಚರಿಸುತ್ತ ಎಲ್ಲಾ ಭೋಗಗಳನ್ನು ಅನುಭವಿಸುತ್ತಿರುವನು" ಎಂಬ ಶ್ರುತಿಯಂತೆ ಎಲ್ಲಾಕಡೆಯೂ ಮುಕ್ತರ ವ್ಯಾಪಾರವಿರುವುದಾಗಿ ತಿಳಿದುಬರುತ್ತದೆ. ಮುಕ್ತನು ಪರಮೇಶ್ವರನಿಗೆ ಸಮಾನನೆನಿಸದಿದ್ದರೆ ಅವನಿಗೆ ಹೀಗೆ ಭೋಗದ ಸಂಕಲ್ಪವು ಹೊಂದದೇಇರುವುದರಿಂದ ಪರಮೇಶ್ವರನಂತೆಯೇ ಅವನಿಗೂ ಜಗತ್ಕಾರಣತ್ವವು ಸಂಭವಿಸುತ್ತದೆ ಎಂದು ಆಕ್ಷೇಪವು ಬರುತ್ತದೆ. ಅದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. ಸಮಸ್ತಜಗತ್ತಿನ ಚೇತನರ ಮತ್ತು ಅಚೇತನವಸ್ತುಗಳ ಸ್ವರೂಪ, ಸ್ಥಿತಿ, ಪ್ರವೃತ್ತಿಗಳಲ್ಲಿರುವ ವೈಲಕ್ಷಣ್ಯವನ್ನು ನಿಯಮನ ಮಾಡುವ ಅಧಿಕಾರ ಜಗದ್ವ್ಯಾಪಾರವೆನಿಸುತ್ತದೆ. ಇದೂ ಯಾವಾಗಲೂ ಶಿವನಿಗೇ ಮೀಸಲಾಗಿರುವುದು. ಇದನ್ನು ಬಿಟ್ಟು ಬ್ರಹ್ಮದ ಪರಿಪೂರ್ಣ ಶುದ್ಧ ಆನಂದದ ಅನುಭವವಷ್ಟೇ ಮುಕ್ತನ ಪಾಲಿಗೆ ಬಂದ ಪಂಚಾಮೃತವೆನಿಸಿದೆ. ಹೀಗೆಂದು ಪ್ರಕರಣದಿಂದಲೇ ಸ್ಪಷ್ಟಪಡುತ್ತದೆ. ಜಗತ್ತಿನ ನಿಯಮನವು ಮಾತ್ರ ಶಿವನಿಗೇ ಇರುವುದೆಂದು "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಮೊದಲಾದ ಶ್ರುತಿಗಳು ತಿಳಿಸಿವೆ. ಈ ಶ್ರುತಿಗಳಲ್ಲಿ ಹೇಳಿರುವ ಜಗಜ್ಜನ್ಮಾದಿಕಾರಣತ್ವವು ಮುಕ್ತರಿಗೂ ಅನ್ವಯಿಸುವುದೆಂದರೆ ಅದು ಬ್ರಹ್ಮದ ಲಕ್ಷಣವಾಗದೇಹೋಗುತ್ತದೆ. ಅಸಾಧಾರಣ ಧರ್ಮವೇ ಲಕ್ಷಣವೆನಿಸುತ್ತದ. "ಸದೇವ ಸೌಮ್ಯ" "ಏಕಮೇವಾದ್ವಿತೀಯಂ ಬ್ರಹ್ಮ" "ಇಂದ್ರ ವರುಣ ಮೊದಲಾದವರನ್ನೂ ನಕ್ಷತ್ರಗಳನ್ನೂ ಅವನೇ ಸೃಷ್ಟಿಸಿದನು" "ಅವನಲ್ಲದೆ ಬೇರೆ ಏನೂ ಇಲ್ಲ" ಹೀಗೆ ಪಂಚಭೂತಗಳಲ್ಲೂ ಜೀವನಲ್ಲೂ ಒಳಗೂ ಹೊರಗೂ ಶಿವನೇ ಇರುವನೆಂದು ಹೇಳಿ ಅವನೇ ಜಗದ್ವಿಲಕ್ಷಣನೆಂದೂ ತಿಳಿಸಲಾಗಿದೆ. ಈ ರೀತಿಯಲ್ಲಿ ಜಗತ್ಸೃಷ್ಟ್ಯಾದಿಪ್ರಕರಣದಲ್ಲಿ ಮುಕ್ತನಿಗೆ ಪ್ರಸಕ್ತಿಇಲ್ಲದ್ದರಿಂದ ಅವನಿಗೆ ಜಗತ್ತನ್ನು ಸೃಷ್ಟಿಸುವ ಅಧಿಕಾರ ಸಂಭವಿಸುವುದಿಲ್ಲ.

**ನನು "ಹಿರಣ್ಯಗರ್ಭಸ್ಸಮವರ್ತತಾಗ್ರೇ ಧಾತಾ ಯಥಾಪೂರ್ವಮಕಲ್ಪಯತ್", "ನಾರಾಯಣಾದ್ಬ್ರಹ್ಮಾ ಜಾಯತೇ । ನಾರಾಯಣಾದ್ರುದ್ರೋ ಜಾಯತೇ ॥" ಇತ್ಯಾದಿಷು ಹಿರಣ್ಯಗರ್ಭನಾರಾಯಣಾದೀನಾಂ ಪ್ರಾತ್ಯಕ್ಷಿಕಶ್ರುತಿಷು ಜಗತ್ಕಾರಣತ್ವಾವಗಮಾತ್ ಕಥಮೇಕಸ್ಯೈವ ಶಿವಸ್ಯ ಪರಬ್ರಹ್ಮಣಃ ಜಗಜ್ಜನ್ಮಾದಿಕಾರಣತ್ವಂ ಸಂಭವತಿ. ತಸ್ಮಾ**

ನ್ಮುಕ್ತಾನಾಮಪಿ ಜಗತ್ಕಾರಣತ್ವಮವಿರೋಧಮಿತ್ಯಾಶಂಕಾಯಾಮಾಹ.
ಪ್ರತ್ಯಕ್ಷೋಪದೇಶಾನ್ನೇತಿ ಚೇನ್ನಾಧಿಕಾರಿಕಮಂಡಲಸ್ಥೋಕ್ತೇಃ ||೧೮||
ಪ್ರತ್ಯಕ್ಷೋಪದೇಶಾತ್ "ಹಿರಣ್ಯಗರ್ಭಸ್ಸಮವರ್ತತಾಗ್ರೇ" ಇತ್ಯಾದಿ ಪ್ರಾತ್ಯಕ್ಷಿಕಶ್ರುತಿಷು ಹಿರಣ್ಯಗರ್ಭಾದೀನಾಂ ಜಗತ್ಕಾರಣತ್ವೋಪದೇಶಾತ್ ಪರಬ್ರಹ್ಮಣಶ್ಶಿವಸ್ಯೈವ ಜಗತ್ಕಾರಣತ್ವಂ ನ ಸಂಭವತೀತಿ ಚೇತ್ "ಬ್ರಹ್ಮವಿಷ್ಣುರುದ್ರೇಂದ್ರಾಸ್ತೇ ಸಂಪ್ರಸೂಯಂತೇ" ಇತ್ಯಾದಿಬಹುಶ್ರುತಿಷು ಶಿವವದ್ಧಿರಣ್ಯಗರ್ಭನಾರಾಯಣಾದೀನಾಂ ಕಾರಣಕಾರಣತ್ವಾಯೋಗಾತ್ ತೇಷಾಂ ತತ್ತುಲ್ಯತ್ವಂ ನ ಸಂಭವತಿ. ಕುತಃ? ಆಧಿಕಾರಿಕಮಂಡಲಸ್ಥೋಕ್ತೇಃ. ಆಧಿಕಾರಿಕಮಂಡಲೇಷು ಶಿವಾನುಗ್ರಹದತ್ತೇಷು ಪರಿಚ್ಛಿನ್ನೇಷು ಸತ್ಯವೈಕುಂಠಾದಿಲೋಕೇಷು ಇಂದ್ರಹಿರಣ್ಯಗರ್ಭಾದೀನಾಂ ಚೋಕ್ತೇಃ ಸ್ಥಿತ್ಯುಪದೇಶಾತ್. "ತೇನ ದೇವಾ ಅಯಜಂತ ಸಾಧ್ಯಾ ಋಷಯಶ್ಚ ಯೇ" ಇತ್ಯಾದಿಶ್ರುತಿಷು ಪರಶಿವಸ್ಯೈವ ದೇವಾದಿಸಕಲಸ್ರಷ್ಟೃತ್ವಸ್ಯ ಸಾಕ್ಷಾದುಪದಿಷ್ಟತ್ವಾತ್ ಅವಾಂತರಸೃಷ್ಟೌ ಹಿರಣ್ಯಗರ್ಭಾದೀನಾಂ ಜಗತ್ಕಾರಣತ್ವಾವಗಮೇಽಪಿ ತದಂತರ್ಯಾಮಿತಯಾ ತತ್ಕಾರಣತ್ವಂ ಪರಮೇಶ್ವರಸ್ಯೈವ ಸಿದ್ಧಂ. ನನು "ಸಃ ಸ್ವರಾಡ್ಭವತಿ", "ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ", ಇತ್ಯಾದಿ ಶ್ರುತಿಷು ಪರಮೇಶ್ವರವನ್ಮುಕ್ತಸ್ಯಾಪಿ ಜಗದ್ವ್ಯಾಪಾರ ಉಪದಿಶ್ಯತೇ, ಇತಿಚೇನ್ನ ಅಕರ್ಮಪ್ರತಿಹತಜ್ಞಾನೋ ಮುಕ್ತಃ ವಿಕೃತಲೋಕಾನ್ ಬ್ರಹ್ಮಣಶ್ಶಿವಸ್ಯ ವಿಭೂತಿಭೂತಾನನುಭೂಯ ಯಥಾಕಾಮಂ ತೃಪ್ಯತೀತ್ಯುಪದೇಶಾತ್ ಸ್ವೇಚ್ಛಾಧೀನದಿವ್ಯಶರೀರೈಸ್ಸಹ ಬ್ರಹ್ಮೇಂದ್ರಾದಿಭೋಗಾನ್ ತಲ್ಲೋಕಾಂಶ್ಚ ಯಥಾಕಾಮಂ ಪ್ರಾಪ್ನುವಂತೀತ್ಯುಪದಿಶ್ಯತೇ. ತಸ್ಮಾನ್ನಜ್ಜಗದ್ವ್ಯಾಪಾರಃ.

"ಎಲ್ಲಾ ಜೀವರಿಗೂ ಮೊದಲೇ ಹಿರಣ್ಯಗರ್ಭನು ಹುಟ್ಟಿ ಪತಿ ಎನಿಸಿದನು" ಸೂರ್ಯ ಚಂದ್ರರನ್ನು ಬ್ರಹ್ಮನು ಹಿಂದಿನ ಮಾದರಿಯಲ್ಲಿಯೇ ಸೃಷ್ಟಿಸಿದನು." "ನಾರಾಯಣನೊಬ್ಬನೇ ಇದ್ದನು. ಅವನಿಂದಲೇ ಬ್ರಹ್ಮರುದ್ರರು ಹುಟ್ಟಿದರು. ಆಗ ಬ್ರಹ್ಮನಾಗಲೀ ರುದ್ರನಾಗಲೀ ಇರಲಿಲ್ಲ. ನಾರಾಯಣ ಮೊದಲಾದವರೇ ಜಗತ್ತಿಗೆ ಕರ್ತರೆಂದು ಹೇಳಿದ್ದರಿಂದ ಒಬ್ಬ ಜೀವನೇ ಹೇಗೆ ಜಗತ್ಕಾರಣನಾಗಬಲ್ಲನು? ಆದ್ದರಿಂದ ಮುಕ್ತರೂ ಜಗತ್ತಿಗೆ ಕಾರಣರೆಂಬಲ್ಲಿ ವಿರೋಧವಿಲ್ಲವೆಂದು ಆಶಂಕಿಸಿ ಸಮಾಧಾನಮಾಡುತ್ತಾನೆ. "ಹಿರಣ್ಯಗರ್ಭನು ಎಲ್ಲಕ್ಕೂ ಮೊದಲು ಇದ್ದನು" ಎಂಬ ಶ್ರುತಿಗಳಲ್ಲಿ ಹಿರಣ್ಯಗರ್ಭ ಮೊದಲಾದವರನ್ನು ಜಗತ್ಕರ್ತರೆಂದು ಹೇಳಿರುವುದರಿಂದ ಪರಶಿವಬ್ರಹ್ಮವೇ ಜಗತ್ಕಾರಣವೆಂಬುದು ಸಂಭವಿಸುವುದಿಲ್ಲ. ಈಶ್ವರನೇ ಧ್ಯಾನಾರ್ಹನು. "ಬ್ರಹ್ಮ, ವಿಷ್ಣು, ರುದ್ರ, ಇಂದ್ರ ಎಲ್ಲರೂ ಅವನಿಂದಲೇ ಹುಟ್ಟಿದ್ದಾರೆ" ಎಂಬ ಅನೇಕ ಶ್ರುತಿಗಳಲ್ಲಿ ಶಿವನಂತೆ

ಹಿರಣ್ಯಗರ್ಭ ನಾರಾಯಣ ಮೊದಲಾದವರನ್ನೂ ಸೃಷ್ಟಿಸ್ಥಿತಿಲಯಗಳಿಗೆ ಕಾರಣರಾದ ತ್ರಿಮೂರ್ತಿಗಳಿಗೂ ಕಾರಣನಾದ ಪರಮಕಾರಣನೆಂದು ಹೇಳಿಲ್ಲ. ಆದ್ದರಿಂದ ಅವರೆಲ್ಲರೂ ಅವನಿಗೆ ಸದೃಶರಾಗಲಾರರು ; ಯಾಕೆಂದರೆ ಶಿವನ ಅನುಗ್ರಹದಿಂದ ದೊರೆತ ಮಿತವಾದ ಶಕ್ತಿಯುಳ್ಳ ವೈಕುಂಠ ಸ್ವರ್ಗ ಕೈಲಾಸ ಮೊದಲಾದ ಲೋಕಗಳಲ್ಲಿಯೇ ನಾರಾಯಣ ಬ್ರಹ್ಮರುದ್ರ ಇಂದ್ರ ಮೊದಲಾದವರು ಇರುವರೆಂದು ಶ್ರುತಿಯಲ್ಲಿ ಹೇಳಿದೆ. "ತೇನ ದೇವಾ ಅಯಜಂತ" ಎಂಬಲ್ಲಿ ಪರಶಿವಬ್ರಹ್ಮವೇ ಸಮಸ್ತ ದೇವತೆಗಳನ್ನೂ ಸೃಷ್ಟಿಸುವನೆಂದು ಸ್ಪಷ್ಟವಾಗಿ ಹೇಳಿದೆ. ಆದರೆ ಅವಾಂತರಸೃಷ್ಟಿಯಲ್ಲಿ ಹಿರಣ್ಯಗರ್ಭ ಮೊದಲಾದವರು ಜಗತ್ತಿಗೆ ಕರ್ತರಾದರೂ ಅವರೊಳಗೆ ಅಂತರ್ಯಾಮಿಯಾದ್ದರಿಂದ ಪರಮೇಶ್ವರನೇ ಜಗತ್ಕರ್ತನೆಂದು ಸಿದ್ಧವಾಯಿತು. ಅವನು ಸ್ವತಂತ್ರನಾಗುತ್ತಾನೆ" "ಅವನಿಗೆ ಎಲ್ಲಾ ಲೋಕಗಳಲ್ಲೂ ಸ್ವೇಚ್ಛಾಪ್ರವೃತ್ತಿಯುಂಟಾಗುತ್ತದೆ" ಈ ಶ್ರುತಿಗಳಲ್ಲಿ ಪರಮೇಶ್ವರನಂತೆ ಮುಕ್ತನಿಗೂ ಜಗದ್ವ್ಯಾಪಾರವುಂಟೆಂದು ಹೇಳುವುದಾದರೆ ಅದೂ ಹೊಂದುವುದಿಲ್ಲ; ಯಾಕೆಂದರೆ ಮುಕ್ತನು ಲೋಕದಲ್ಲಿ ಭೋಗ್ಯವಸ್ತುಗಳನ್ನು ಶಿವನ ಪ್ರಸಾದಗಳೆಂದು ಅನುಭವಿಸಿ ತೃಪ್ತನಾಗುತ್ತಾನೆಂದು ಹೇಳಿರುವುದರಿಂದ ತನ್ನ ಇಚ್ಛೆಗಧೀನವಾದ ದಿವ್ಯಶರೀರಗಳಿಂದ ಬ್ರಹ್ಮ ಇಂದ್ರ ವಿಷ್ಣು ಇವರ ಲೋಕಗಳನ್ನೂ ಅಲ್ಲಿನ ಭೋಗಗಳನ್ನೂ ತೃಪ್ತಿಯಾಗುವವರೆಗೂ ಅನುಭವಿಸುತ್ತಾನೆಂದು ತಿಳಿಯುವರು. ಆದ್ದರಿಂದ ಅವನಿಗೆ ಜಗದ್ವ್ಯಾಪಾರವಿರುವುದಿಲ್ಲ.

**ಯದಿ ಸಂಸಾರಿವನ್ಮುಕ್ತೋಽಪಿ ವಿಕಾರಾಂತರ್ವರ್ತಿನೋ ಭೋಗಾನ್ ಭುಂಕ್ತೇ ತರ್ಹಿ ಬದ್ಧಸ್ಯೇವ ಮುಕ್ತಸ್ಯಾಪಿ ಅಂತವದೇವ ಭೋಗ್ಯಜಾತಂ ಅಲ್ಪಂ ಚ ಸ್ಯಾದಿತ್ಯಾಶಂಕ್ಯ ತತ್ರಾಹ. ವಿಕಾರವರ್ತಿ ಚ ತಥಾಹಿ ಸ್ಥಿತಿಮಾಹ ॥ ೧೯ ॥ ವಿಕಾರೋ ಜನ್ಮಾದಿಕೋ ನ ವರ್ತತ ಇತಿ ವಿಕಾರಾವರ್ತಿ ನಿರ್ಧೂತನಿಖಿಲವಿಕಾರಂ ನಿಖಿಲಹೇಯಪ್ರತ್ಯನೀಕ ಕಲ್ಯಾಣೈಕತಾನಂತನಿರತಿಶಯಾನಂದಂ ಪರಶಿವಬ್ರಹ್ಮ ಸವಿಭೂತಿಕಂ ಸಕಲಕಲ್ಯಾಣಗುಣಂ ಅನುಭವತಿ ಮುಕ್ತಃ. ತದ್ವಿಭೂತ್ಯಂತರ್ಗತತ್ವೇನ ವಿಕಾರಾವರ್ತಿನಾಂ ಲೋಕಾನಾಮಪಿ ಭುಕ್ತಭೋಗ್ಯತ್ವಂ. ತಥಾಹಿ ಪರಸ್ಮಿನ್ ಬ್ರಹ್ಮಣಿ ನಿರ್ವಿಕಾರೇ ಅನವಧಿಕಾತಿಶಯಾನಂದೇ ಮುಕ್ತಸ್ಯಾನುಭವಿತತ್ವೇನ ಸ್ಥಿತಿಮಾಹ ಶ್ರುತಿಃ. "ಯದಾ ಹ್ಯೇವೈಷ ಏತಸ್ಮಿನ್ನದೃಶ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽಭಯಂ ಪ್ರತಿಷ್ಠಾಂ ವಿಂದತೇ । ಅಥ ಸೋಽಭಯಂ ಗತೋ ಭವತಿ ॥" ಇತ್ಯಾದಿಕೇ ತದ್ವಿಭೂತಿಭೂತಂ ಜಗತ್ತತ್ರೈವ ವರ್ತತೇ. "ತಸ್ಮಿನ್ಲ್ಲೋಕಾಃ ಶ್ರಿತಾಸ್ಸರ್ವೇ ತದು ನಾತ್ಯೇತಿ ಕಶ್ಚನ" ಇತಿ ಶ್ರುತೇಃ. ಅತಸ್ಸವಿಭೂತಿಕಬ್ರಹ್ಮಾನುಭವಾಂತರ್ವರ್ತಿನಃ ಅಧಿಕಾರಿಮಂಡಲಸ್ಥಾನಪಿ ಭೋಗಾನ್ ಭುಂಕ್ತೇ**

ಇತಿ "ಸರ್ವೇಷು ಲೋಕೇಷು ಕಾಮಾಚಾರಃ" ಇತ್ಯಾದಿನೋಚ್ಯತೇ. ಕಿಂಚ ಕೈಲಾಸವಾಸಿನಾಂ ನಿತ್ಯಮುಕ್ತಾನಾಂ ಸೂರಿಣಾಂ ಸ್ವೇಚ್ಛಯಾ ಸಂಚರತಾಂ ದೇವಮನುಷ್ಯಾದಿಶರೀರಾಭಿಮಾನರಹಿತೇಚ್ಛಾಶಕ್ತಿ ಕ್ರಿಯಾಶಕ್ತಿಜ್ಞಾನಶಕ್ತಿವ್ಯಾಪಾರಾಣಾಂ ನಿತ್ಯವೈಭವಪರಮಾನಂದಕಂದ ಸ್ವಪ್ರಕಾಶವಿಭೂತಿಮಯಶಿವಸಾಮರಸ್ಯಸಾರೂಪ್ಯರಸೈಕಪ್ರಪಂಚಾವ ಗಾಹಿನಾಂ ಪರಿಪೂರ್ಣಸರ್ವಶಿವಾತ್ಮಕಭಾವಪ್ರಕಟನಂ ಶ್ರುತಿರ್ದರ್ಶ ಯತಿ "ಅಹಮನ್ನಮಹಮನ್ನಮಹಮನ್ನಂ", "ಅಹಮನ್ನಾ ದೋಽಹಮನ್ನಾದೋಽಹಮನ್ನಾದಃ" ಇತ್ಯಾದಿನಾ. ತಥಾ ಶ್ರುತ್ಯಂತ ರೇಽಪಿ ಮುಕ್ತಾನುಭವಃ ಸ್ಪಷ್ಟಮುಪದಿಷ್ಟಃ "ತ್ರಿಷು ಧಾಮಸು ಯದ್ಭೋಜ್ಯಂ ಭೋಕ್ತಾ ಭೋಗಶ್ಚ ಯದ್ಭವೇತ್। ತೇಭ್ಯೋ ವಿಲಕ್ಷಣ ಸ್ಸಾಕ್ಷೀ ಚಿನ್ಮಾತ್ರೋಽಹಂ ಸದಾಶಿವಃ॥", "ಮಯ್ಯೇವ ಸಕಲಂ ಜಾತಂ ಮಯಿ ಸರ್ವಂ ಪ್ರತಿಷ್ಠಿತಂ। ಮಯಿ ಸರ್ವಂ ಲಯಂ ಯಾತಿ ತದ್ಬ್ರಹ್ಮಾದ್ವಯಮಸ್ಮ್ಯಹಂ॥", "ಅಣೋರಣೀಯಾನಹಮೇವ ತದ್ವನ್ಮಹಾನಹಂ ವಿಶ್ವಮಿದಂ ವಿಚಿತ್ರಂ। ಪುರಾತನೋಽಹಂ ಪುರು ಷೋಽಹಮೀಶೋ ಹಿರಣ್ಮಯೋಽಹಂ ಶಿವರೂಪಮಸ್ಮಿ॥" ಇತ್ಯಾ ದಿನಾ. ಇಯಂ ಶ್ರುತಿಃ ಆಕಾಶವತ್ಸರ್ವವ್ಯಾಪಕಶಿವಾನಂದಾನುಭವ ಶಿವಯೋಗಸಮಾಧಿನಿಷ್ಠಾನಾಂ ಜೀವನ್ಮುಕ್ತಾನಾಂ ಶಿವಜ್ಞಾನಿನಾಂ ವಾಮದೇವಾದಿವದುಪಲಕ್ಷಣಂ. ಶಿವಸಾರೂಪ್ಯಧಾರಿಣಾಂ ಜೀವನ್ಮು ಕ್ತಾನಾಮಪಿ ದೃಢಶಿವೈಕಜ್ಞಾನನಿಷ್ಠಾಸತ್ತ್ವೇಽಪಿ ಶಿವವತ್ತೇಷಾಂ ನ ಜಗಜ್ಜನ್ಮಾದಿಹೇತುತ್ವಂ. ಅತ್ರ ಮುಕ್ತಸ್ಯಾಹಂಕಾರೋ ನ ಸಾಂಸಾರಿಕಃ. ದೇವಮನುಷ್ಯಾದಿವರ್ಣಾಶ್ರಮಾವಚ್ಛಿನ್ನಪರಿಚ್ಛಿನ್ನಸಾಂಸಾರಿಕಾಹಂಕಾ ರಾದ್ವಿಲಕ್ಷಣತ್ವಾತ್ ಸಕಲಚಿದಚಿತ್ಪ್ರಪಂಚಾವಗಾಹಿತ್ವೇನ ಪರಿಪೂರ್ಣ ತ್ವಾಚ್ಚ ಅತ್ರ ಅಹಂಪದೇನ ಶಿವ ಏವಾಭಿಧೀಯತೇ.

ಸಂಸಾರಿಯಂತೆ ಮುಕ್ತನೂ ವಿಕಾರದೊಳಗೆ ಸಿಲುಕಿರುವ ಭೋಗಗಳನ್ನು ಅನುಭವಿಸುವುದಾದರೆ ಬದ್ಧನಂತೆಯೇ ಮುಕ್ತನಿಗೂ ಭೋಗವು ಅಲ್ಪವೂ ಕ್ಷಣಿಕವೂ ಆಗಬೇಕಾದೀತೆಂದಾಶಂಕಿಸಿ ಸಮಾಧಾನಮಾಡುತ್ತಾನೆ. ಜನ್ಮಾದಿವಿಕಾರಗಳಿ ಲ್ಲದೆ ನಿರತಿಶಯಾನಂದವೆನಿಸಿದ ಪರಶಿವನ ವಿಭೂತಿಗಳೆಂಬ ಕಲ್ಯಾಣಗುಣಗಳನ್ನು ಮುಕ್ತನು ಅನುಭವಿಸುತ್ತಾನೆ. ಶಿವನ ವಿಭೂತಿಯೊಳಗೆ ಸೇರಿದ್ದರಿಂದಲೇ ವಿಕಾರ ವಿಲ್ಲದ ವಸ್ತುಗಳೆಲ್ಲವೂ ಅವನು ಭೋಗಿಸಿಬಿಟ್ಟ ಪ್ರಸಾದಗಳೆನಿಸಿವೆ. ಪರಶಿವನು ನಿರ್ವಿಕಾರನಾಗಿ ನಿರತಿಶಯವಾದ ಆನಂದವುಳ್ಳವನಾದ್ದರಿಂದಲೇ "ಅದೃಶ್ಯನೂ ನಿರಾ ಶ್ರಯನೂ ಅನಿರ್ವಚನೀಯನೂ ಆದ ಆ ಪರಶಿವನಲ್ಲಿ ಇವನು ಯಾವಾಗ ನಿರ್ಭಯ ನಾಗಿ ನೆಲಸುತ್ತಾನೋ ಆಗಲೇ ಇವನಿಗೆ ಭಯ ಶೋಕಮೋಹಗಳು ತೊಲಗುತ್ತವೆ."

"ರಸಸ್ವರೂಪನಾದ ಶಿವನನ್ನು ತಿಳಿದು ಆನಂದಪಡುತ್ತಾನೆ" ಈ ಬಗೆಯ ಶ್ರುತಿಗಳಲ್ಲಿ ಮುಕ್ತನು ಆನಂದವನ್ನು ಅನುಭವಿಸುತ್ತ ಪರಶಿವನಲ್ಲಿಯೇ ಇರುವನೆಂದು ತಿಳಿಸಲಾಗಿದೆ. "ಅವನಲ್ಲಿಯೇ ಲೋಕಗಳೆಲ್ಲವೂ ನೆಲಸಿವೆ. ಯಾರೊಬ್ಬರೂ ಅವನನ್ನು ಅತಿಕ್ರಮಿಸಲಾರರು"ಎಂದು ಶ್ರುತಿಯೂ ತಿಳಿಸಿದೆ. ಆದ್ದರಿಂದ ವೈಭವದೊಡಗೂಡಿದ ಬ್ರಹ್ಮಾನುಭವದೊಳಗೆ ಬ್ರಹ್ಮ ಇಂದ್ರಾದಿಲೋಕಗಳ ಭೋಗಗಳೂ ಸೇರಿರುವುದರಿಂದ ಅವುಗಳನ್ನೂ ಸಹ ಮುಕ್ತನು ಅನುಭವಿಸುತ್ತಾನೆ. ಇದೂ ಅಲ್ಲದೆ ಕೈಲಾಸದಲ್ಲಿರುವ ನಿತ್ಯಮುಕ್ತರು ಸ್ವೇಚ್ಛೆಯಿಂದ ಸಂಚರಿಸುತ್ತಲೇ ಶರೀರಾಭಿಮಾನವಿಲ್ಲದವರಾಗಿ ಇಚ್ಛಾಶಕ್ತಿ ಕ್ರಿಯಾಶಕ್ತಿ ಜ್ಞಾನಶಕ್ತಿಗಳಿಂದ ಕೂಡಿ ನಿತ್ಯವೈಭವದಿಂದಲೂ ಜ್ಞಾನಾನಂದಗಳಿಂದಲೂ ಬೆಳಗುವ ವಿಭೂತಿಮಯವಾದ ಶಿವಸಾಮರಸ್ಯವನ್ನು ಅನುಭವಿಸುತ್ತ ಎಲ್ಲವೂ ಶಿವನೆಂಬ ಪರಿಪೂರ್ಣಭಾವವನ್ನು ಹೊಂದಿರುವರೆಂದು ಶ್ರುತಿಯು ತಿಳಿಸಿದೆ." "ನಾನೇ ಭೋಗ್ಯವಸ್ತುವೂ ಅದನ್ನು ಭೋಗಿಸುವವನೂ ಆಗಿರುವೆನು" ಎಂಬ ಶ್ರುತಿಯಲ್ಲೂ, ಹಾಗೆಯೇ ಬೇರೆ ಶ್ರುತಿಗಳಲ್ಲೂ ಮುಕ್ತರ ಅನುಭವವನ್ನು ಸ್ಪಷ್ಟವಾಗಿ ಹೇಳಿದೆ. "ಭೋಜ್ಯ-ಭೋಕ್ತೃ-ಭೋಗ ಇವು ಮೂರಕ್ಕೂ ಬೇರೆಯಾಗಿ ಎಲ್ಲಕ್ಕೂ ಸಾಕ್ಷಿಯಾದ ಚೈತನ್ಯವೇ ನಾನು. ಆದ್ದರಿಂದಲೇ ನಾನು ಸದಾಶಿವನೆನಿಸಿದ್ದೇನೆ. ನನ್ನಲ್ಲಿಯೇ ಎಲ್ಲವೂ ಹುಟ್ಟಿ ನೆಲಸಿದೆ. ಮತ್ತು ನನ್ನಲ್ಲಿಯೇ ಎಲ್ಲವೂ ಲಯವಾಗುತ್ತದೆ. ನಾನು ಅಂತಹ ಅದ್ವಿತೀಯ ಶಿವನಿರುತ್ತೇನೆ." "ಸಣ್ಣದಕ್ಕಿಂತ ಸಣ್ಣದೂ ಹಾಗೆಯೇ ದೊಡ್ಡದೂ ಆಗಿ ನಾನೇ ಈ ವಿಚಿತ್ರವಾದ ವಿಶ್ವವಾಗಿದ್ದೇನೆ." "ನಾನೇ ಪ್ರಾಚೀನನೂ ಪುರುಷನೂ ಈಶ್ವರನೂ ಆಗಿದ್ದೇನೆ" ಈ ಬಗೆಯ ಶ್ರುತಿಗಳು ಆಕಾಶದಂತೆ ಸರ್ವವ್ಯಾಪಕನಾದ ಶಿವನ ಆನಂದವನ್ನು ಅನುಭವಿಸುತ್ತ ಶಿವಯೋಗಸಮಾಧಿನಿಷ್ಠೆಯಿಂದ ನೆಲಸಿದ ವಾಮದೇವನಂತಹ ಜೀವನ್ಮುಕ್ತರಾದ ಶಿವಾನುಭವಿಗಳಿಗೆ ಅನ್ವಯಿಸುತ್ತವೆ. ಹೀಗೆಯೇ ಶಿವಸಾರೂಪ್ಯವನ್ನು ಹೊಂದಿದ ಜೀವನ್ಮುಕ್ತರಿಗಾದರೋ ದೃಢವಾದ ಶಿವೈಕಜ್ಞಾನವಿದ್ದರೂ ಶಿವನಂತೆ ಜಗತ್ಕರ್ತೃತ್ವವಿಲ್ಲ. ಇಲ್ಲಿ ಮುಕ್ತನಿಗೆ ಅಹಂಕಾರವು ಪ್ರಕೃತಿಸಂಬಂಧವಾದದ್ದಲ್ಲ. ದೇವಮನುಷ್ಯಾದಿಭೇದದಿಂದ ವರ್ಣಾಶ್ರಮಗಳಿಂದಲೂ ಕೂಡಿ ಪರಿಮಿತವಾದ ಸಾಂಸಾರಿಕ ಅಹಂಕಾರಕ್ಕಿಂತಲೂ ಇದು ಬೇರೆ ರೀತಿಯದು. ವಿಶ್ವವನ್ನಾವರಿಸಿದ್ದರಿಂದ ಇದು ಪರಿಪೂರ್ಣವಾದದು. ಇಲ್ಲಿ ಅಹಂ ಎಂದರೆ ಸಾಕ್ಷಾತ್ ಶಿವನೆಂದೇ ಭಾವಿಸಲಾಗಿದೆ.

**ಅಸ್ಮಿನ್ನರ್ಥೇ ಹೇತ್ವಂತರಮಾಹ. ದರ್ಶಯತಶ್ಚೈವಂ ಪ್ರತ್ಯಕ್ಷಾನುಮಾನೇ ॥ ೨೦ ॥ ಅಸ್ಯ ಪ್ರತ್ಯಗಾತ್ಮನೋ ಮುಕ್ತಸ್ಯ ನಿಯಮ್ಯಭೂತಸ್ಯ ನಿಯಂತೃಭೂತಪರಮಪುರುಷಪರಶಿವಾಸಾಧಾರಣಲಕ್ಷಣಂ ಜಗದ್ವ್ಯಾಪಾರರೂಪಂ ನಿಯಮನಂ ನ ಸಂಭವತೀತ್ಯುಕ್ತಂ. ನಿಖಿಲಜಗನ್ನಿಯಮನರೂಪೋ ವ್ಯಾಪಾರಃ. ಪರಮಪುರುಷಪರಶಿವಾಸಾಧಾರಣಲಕ್ಷಣಮಿತಿ ದರ್ಶಯತಃ ಶ್ರುತಿಸ್ಮೃತೀ. "ಭೀಷಾಸ್ಮಾದ್ವಾತಃ ಪವತೇ**

ಭೀಷೋದೇತಿ ಸೂರ್ಯಃ” “ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚಂದ್ರಮಸೌ ವಿಧೃತೌ ತಿಷ್ಠತಃ”, “ಏಷ ಸರ್ವೇಶ್ವರಃ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತುರ್ವಿಧರಣ ಏಷ ಲೋಕಾನಾಮಸಂಭೇದಾಯ” ಇತ್ಯಾದಿಶ್ರುತೌ, “ಅಪ ಏವ ಸಸರ್ಜಾದೌ ತಾಸು ವೀರ್ಯಮವಾಸೃಜತ್” ಇತಿ ಮನುಸ್ಮೃತೌ, “ಶಿವೇನೋತ್ಪಾದಿತಂ ಸರ್ವಂ ಶಿವೇನ ಪರಿರಕ್ಷ್ಯತೇ। ಪುನಶ್ಶಿವೇ ಮಹಾದೇವೇ ಲೀಯತೇ ಸಚರಾಚರಂ॥” ಇತಿ ಶಾತಾತಪೇ ಚ ಶಿವಸ್ಯೈಕಸ್ಯೈವ ಜಗಜ್ಜನ್ಮಾದಿಹೇತುತ್ವೋಪದೇಶಾತ್, “ನಿರಂಜನಃ ಪರಮಂ ಸಾಮ್ಯಮುಪೈತಿ”, “ಮುಕ್ತಃ ಶಿವಸಮೋ ಭವೇತ್” ಇತ್ಯಾದಿಷು ಮುಕ್ತಸ್ಯ ಶಿವಸಾಮ್ಯಮಾತ್ರೋಪದೇಶೇಽಪಿ ಜಗತ್ಕಾರಣತ್ವಾದರ್ಶನಾತ್ ಶಿವವತ್ತೇಷಾಂ ಜಗದ್ವ್ಯಾಪಾರವರ್ಜಂ ಯುಕ್ತಮೇವ. “ಏಕೋ ವಿಷ್ಣುರ್ಮಹದ್ಭೂತಂ” ಇತಿ ಶ್ರವಣಾತ್ “ಪಾದೋಽಸ್ಯ ವಿಶ್ವಾ ಭೂತಾನಿ” ಇತ್ಯತ್ರ ವಿಶ್ವಾ ಭೂತಾನೀತಿ ವಿಶ್ವಪದೇನ ಅನಂತಕೋಟಿಬ್ರಹ್ಮಾಂಡಾನಿ. ಭೂತಶಬ್ದೇನ ಬ್ರಹ್ಮನಾರಾಯಣಾದಿಜೀವಾಃ. ಭೂತಪತೇಶ್ಶಿವಸ್ಯೈಕಪಾದತ್ವಂ. “ತ್ರಿಪಾದಸ್ಯಾಮೃತಂ ದಿವಿ” ಇತಿ ಸಚ್ಚಿದಾನಂದಲಕ್ಷಣಲಕ್ಷಿತತ್ರಿಪಾದಾತ್ಮಕಶಿವಪದಸ್ಯಾಮೃತತ್ವನಿರ್ದೇಶಾತ್ ಮೂರ್ತಿತ್ರಯಾತೀತಪರಮಶಿವಾಭಿಧಮಿತಿ ನಿಶ್ಚೀಯತೇ. ತಸ್ಮಾತ್ “ಶಿವಮದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ” ಇತಿ ಮಾಂಡೂಕ್ಯೇ, “ಯಃ ಪರಸ್ಸ ಮಹೇಶ್ವರಃ” ಇತಿ ತೈತ್ತಿರೀಯೇ ಜೀವನ್ಮುಕ್ತಾನಾಂ ಅಕಾರೋಕಾರಮಕಾರಾತ್ಮಕಬ್ರಹ್ಮವಿಷ್ಣುಕಾಲರುದ್ರೇಭ್ಯಃ ಪರತ್ವಸ್ಯ ಮಹೇಶ್ವರಸಾಮ್ಯತ್ವಸ್ಯ ಚ ಸತ್ತ್ವೇಽಪಿ ಜಗದ್ವ್ಯಾಪಾರವರ್ಜಮವಿರೋಧಂ.

ಈ ಬಗ್ಗೆ ಬೇರೊಂದು ಹೇತುವನ್ನು ತಿಳಿಸುತ್ತಾನೆ. ಪರಮಾತ್ಮನ ನಿಯಮನಕ್ಕೆ ಒಳಪಟ್ಟಿರುವ ಮುಕ್ತಾತ್ಮನಿಗೆ ನಿಯಂತೃವಾದ ಪರಮೇಶ್ವರನ ಅಸಾಧಾರಣ ಲಕ್ಷಣವೆನಿಸಿದ ಜಗದ್ವ್ಯಾಪಾರನಿರ್ವಾಹವು ಸಂಭವಿಸುವುದಿಲ್ಲವೆಂದು ಹಿಂದೆಯೇ ಹೇಳಿದೆ. ಸಮಸ್ತಜಗತ್ತನ್ನು ಸುವ್ಯವಸ್ಥೆಯಿಂದ ಇರಿಸಿ ನಿಯಮನಮಾಡುವುದೇ ಪರಮೇಶ್ವರನ ಅಸಾಧಾರಣಲಕ್ಷಣವೆಂದು ಶ್ರುತಿಸ್ಮೃತಿಗಳು ತಿಳಿಸಿವೆ. “ಇವನ ಭಯದಿಂದ ವಾಯು ಸೂರ್ಯ ಅಗ್ನಿ ಇಂದ್ರ ಯಮ ಎಲ್ಲರೂ ತಮ್ಮತಮ್ಮ ಕೆಲಸಗಳನ್ನು ನಡೆಸುತ್ತಿದ್ದಾರೆ” “ಅಕ್ಷರನೆನಿಸಿದ ಇವನ ಶಾಸನದಿಂದಲೇ ಸೂರ್ಯಚಂದ್ರರು ಕಾರ್ಯನಿರತರಾಗಿದ್ದಾರೆ” “ಇವನೇ ಸರ್ವೇಶ್ವರನು, ಭೂತಪತಿಯು, ಭೂತಪಾಲಕನು ಮತ್ತು ಇವನೇ ಜನರಲ್ಲಿ ಭೇದಭಾವನೆ ಹುಟ್ಟದಂತೆ ಎಲ್ಲರನ್ನೂ ತಡೆದು ಹಿಡಿದಿರುವ ಸೇತುವೆಯಾಗಿದ್ದಾನೆ” ಎಂದು ಶ್ರುತಿಯಲ್ಲೂ, “ನೀರನ್ನು ಮೊದಲು ಸೃಷ್ಟಿಸಿ ಅದರಲ್ಲಿ ವೀರ್ಯವನ್ನು ಬಿಟ್ಟನು” ಎಂದು ಮನುಸ್ಮೃತಿಯಲ್ಲೂ,

ಇದೆಲ್ಲವೂ ಶಿವನಿಂದಲೇ ಸೃಷ್ಟವಾಗಿ ರಕ್ಷಿತವಾಗುತ್ತದೆ ಮತ್ತು ಅವನಲ್ಲಿಯೇ ಮತ್ತೆ ಲಯವಾಗುತ್ತದೆ" ಎಂದು ಶಾತಾತಪದಲ್ಲೂ ಶಿವನೊಬ್ಬನೇ ಜಗತ್ಕಾರಣವೆಂದು ಹೇಳಿದೆ. ಆದರೆ "ಮುಕ್ತನು ಶಿವನಿಗೆ ಸಮನಾಗಿದ್ದಾನೆ" "ನಿರಂಜನನಾದವನು ಪರಮೇಶ್ವರನಿಗೆ ಸಮನಾಗುತ್ತಾನೆ" ಎಂಬಲ್ಲಿ ಮುಕ್ತರಿಗೆ ಶಿವಸಾಮ್ಯವನ್ನು ಹೇಳಿದ್ದರೂ ಜಗತ್ಕಾರಣತ್ವವನ್ನು ಹೇಳಿಲ್ಲವಾದ್ದರಿಂದ ಮುಕ್ತರಿಗೆ ಶಿವನಂತೆ ಜಗದ್ವ್ಯಾಪಾರನಿರ್ವಾಹವು ಹೊಂದುವುದಿಲ್ಲ. 'ವಿಷ್ಣುವೇ ಮಹದ್ಭೂತನು ಅಂದರೆ ಹಿರಿಯ ಜೀವನು; ಉಳಿದವರು ಸಾಮಾನ್ಯಜೀವರು' ಎಂಬಲ್ಲಿ "ಪಾದೋಽಸ್ಯ ವಿಶ್ವಾ ಭೂತಾನಿ" ಎಂಬಂತೆ ಭೂತವೆಂದರೆ ವಿಶ್ವದ ಸಕಲ ಜೀವರೆಂದೂ, ನಾರಾಯಣ ಬ್ರಹ್ಮ ಇಂದ್ರ ಇವರೆಲ್ಲರೂ ಜೀವರೆಂದೂ, ಇವರೆಲ್ಲರೂ ಅವನ ಒಂದು ಪಾದವೆಂದೂ, ಇವರಿಗೆ ಪತಿಯಾದ್ದರಿಂದ ಶಿವನು ಭೂತಪತಿಎಂದೂ ಹೇಳಲಾಗಿದೆ. "ತ್ರಿಪಾದಸ್ಯಾಮೃತಂ ದಿವಿ" ಎಂಬಲ್ಲಿ ತ್ರಿಪಾದ್ವಿಭೂತಿ ಎನಿಸಿದ ಶಿವಪದವನ್ನೇ ಅಮೃತವೆಂದು ಹೇಳಿರುವುದರಿಂದ ತ್ರಿಮೂರ್ತಿಗಳಿಗಿಂತ ಬೇರೆಯಾದ ಪರಶಿವನನ್ನು ತಿಳಿಸಿರುವುದಾಗಿ ನಿಶ್ಚಯಿಸಲಾಗಿದೆ. ಹೀಗೆ ಶಿವನು ತ್ರಿಮೂರ್ತ್ಯತೀತನಾದ್ದರಿಂದ ಅವನನ್ನು ಚತುರ್ಥನೆಂದೂ, ಅವನೇ ಆತ್ಮನೆಂದೂ ಮಾಂಡೂಕ್ಯಶ್ರುತಿಯಲ್ಲಿ ತಿಳಿಸಲಾಗಿದೆ. ತೈತ್ತಿರೀಯದಲ್ಲಿ ಅವನನ್ನು ಪ್ರಣವದಿಂದಾಚಿನ ಮಹೇಶ್ವರನೆಂದು ಹೇಳಿದೆ. ಜೀವನ್ಮುಕ್ತರು ಅಕಾರ ಉಕಾರ ಮಕಾರವೆಂಬ ಬ್ರಹ್ಮವಿಷ್ಣು ಕಾಲರುದ್ರರಿಗಿಂತಲೂ ಹೆಚ್ಚಿನವರೆಂದೂ, ಪರಮೇಶ್ವರನಿಗೆ ಸಮಾನರೆಂದೂ ಶ್ರುತಿಯಲ್ಲಿ ಹೇಳಿರುವುದರಿಂದ ಅವರಿಗೆ ಸತ್ಯಸಂಕಲ್ಪವೂ ಮಹೇಶ್ವರನ ಸಾಮ್ಯವೂ ಇದ್ದು ಜಗದ್ವ್ಯಾಪಾರ ನಿರ್ವಾಹ ಒಂದಿಲ್ಲದಿದ್ದರೂ ಯಾವ ವಿರೋಧವೂ ಇಲ್ಲ.

**ನನು ಮುಕ್ತಾನಾಂ ಪರಮೇಶ್ವರವಜ್ಜಗಜ್ಜನ್ಮಾದಿಕಾರಣತ್ವಾಯೋಗೇ "ನಿರಂಜನಃ ಪರಮಂ ಸಾಮ್ಯಮುಪೈತಿ" ಇತ್ಯಾದಿಶ್ರುತಿನಿರ್ದಿಷ್ಟಪರಮಸಾಮ್ಯತ್ವವಿರೋಧೋ ದುರ್ನಿವಾರ ಇತ್ಯಾಶಂಕ್ಯ ತತ್ರಾಹ. ಭೋಗಮಾತ್ರಸಾಮ್ಯಲಿಂಗಾಚ್ಚ ॥ ೨೧ ॥ ಮೂರ್ತಪರಶಿವಬ್ರಹ್ಮಣಃ ಯಥಾ ಆತ್ಮಾನುಭವರೂಪಭೋಗಮಾತ್ರೇ ಮುಕ್ತಸ್ಯ ಬ್ರಹ್ಮಸಾಮ್ಯಪ್ರತಿಪಾದನಾತ್, ಲಿಂಗಾಚ್ಚ ಸರ್ವಜಗತ್ಕಾರಣಪರಮೇಶ್ವರಾದನ್ಯಸ್ಯ ಜಗದ್ವ್ಯಾಪಾರರಾಹಿತ್ಯಲಿಂಗದರ್ಶನಾಚ್ಚ ಮುಕ್ತಾನಾಂ ಜಗದ್ವ್ಯಾಪಾರವರ್ಜಲಿಂಗಮವಿರೋಧಂ. "ಸೋಽಶ್ನುತೇ ಸರ್ವಾನ್ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ" ಇತ್ಯಾದೌ ಮುಕ್ತಸ್ಯ ಪರಶಿವಭೋಗಸಾಮ್ಯಂ ದರ್ಶಿತಂ. ಅತ್ರ ಕೇಚಿತ್ ಲಿಂಗಾತ್ ಜಗಜ್ಜನ್ಮಾದಿಕಾರಣಭೂತಪರಿಪೂರ್ಣನಿರವಯವಶಿವತತ್ತ್ವಾತ್ ಮೂರ್ತಪರಮಶಿವಸ್ಯ ತದುಪಾಸಕಮುಕ್ತಸ್ಯ ಚ ಭೋಗಮಾತ್ರಸಾಮ್ಯತ್ವಂ ಯತ ಉಪದಿಷ್ಟಂ ಅತಃ ನಿತ್ಯಮುಕ್ತಮೂರ್ತಪರಮಶಿವವದವಾಂತರಮುಕ್ತಜೀವಾನಾಂ ಜಗತ್ಕಾರ**

ಣತ್ವಂ ದೇವಮನುಷ್ಯಾದಿನಾನಾಶರೀರಕಲ್ಪನತ್ವಂ ಚ ನ ಸಂಭವತಿ. "ಏಷ ಹ್ಯೇವಾನಂದಯತಿ" ಇತ್ಯಾದೌ ಉಪಾಸ್ಯೋಪಾಸಕಯೋಃ ಪ್ರಾಪ್ಯತ್ವಪ್ರಾಪಕತ್ವಾದಿತಾರತಮ್ಯದರ್ಶನಾಚ್ಚೇತಿ ವದಂತಿ. ತದಪ್ಯವಿರುದ್ಧಂ. ತಥಾ ಸ್ಕಾಂದೇ ಶ್ರೂಯಂತೇ "ಯದ್ಯಪಿ ಭೇದಾಪಗಮೇ ಸಾಂಬ ತವಾಹಂ ನ ಮಾಮಕೀನಸ್ತ್ವಂ । ಸಾಮುದ್ರೋ ಹಿ ತರಂಗಃ ಕ್ವಚನ ಸಮುದ್ರೋ ನ ತಾರಂಗಃ ॥" ಇತ್ಯಾದೌ ನಿರವಯವಶಿವತತ್ತ್ವೋಪಾಸಕಜ್ಞಾನನಿಷ್ಠಾನಾಂ ಸರ್ವಕಾಮನಿರ್ಮುಕ್ತತಯಾ ಲಿಂಗಶರೀರವಿಲಯಪೂರ್ವಕಶಿವತತ್ತ್ವಪ್ರಾಪ್ತ್ಯುಪದೇಶಾತ್ "ನ ಚ ಪುನರಾವರ್ತತೇ" ಇತ್ಯಾದಿಶ್ರುತಿನಿರ್ದಿಷ್ಟಃ ಮುಕ್ತಪುನರಾವೃತ್ತಿನಿಷೇಧಃ ತತ್ಪರ ಏವೇತಿ ನಿರ್ದಿಶ್ಯತೇ.

ಮುಕ್ತರಿಗೆ ಪರಮೇಶ್ವರನಂತೆ ಜಗದ್ವ್ಯಾಪಾರವಿಲ್ಲದಿದ್ದರೂ "ನಿರಂಜನನು ಪರಮೇಶ್ವರನಿಗೆ ಸಮನಾಗುತ್ತಾನೆ" ಎಂದು ಮುಂತಾದ ಶ್ರುತಿಗಳಲ್ಲಿ ಮುಕ್ತರಿಗೆ ಪರಮೇಶ್ವರನ ಸಾಮ್ಯವನ್ನು ಹೇಳಿದ್ದರೂ ಜಗತ್ಕಾರಣತ್ವವನ್ನು ಹೇಳದಿರುವುದರಿಂದ ಶಿವನಂತೆ ಅವರಿಗೂ ಜಗದ್ವ್ಯಾಪಾರಗಳು ಸಂಭವಿಸುವುದಿಲ್ಲವೆಂಬುದೇ ಯುಕ್ತವಾಗುತ್ತದೆ. ಮೂರ್ತಶಿವನ ಸಚ್ಚಿದಾನಂದಾನುಭಾವರೂಪವಾದ ಭೋಗಬಂದರಲ್ಲಿಯೇ ಮುಕ್ತನಿಗೆ ಶಿವನೊಡನೆ ಸಾಮ್ಯವನ್ನು ಶ್ರುತಿಯಲ್ಲಿ ಹೇಳಿರುವುದರಿಂದಲೂ, ಬೇರೆ ಯಾರಿಗೂ ಜಗದ್ವ್ಯಾಪಾರವಿಲ್ಲವೆಂಬ ಹೇತುವಿರುವುದರಿಂದಲೂ ಮುಕ್ತರಿಗೆ ಜಗದ್ವ್ಯಾಪಾರ ಹೊಂದುವುದಿಲ್ಲವೆಂಬಲ್ಲಿ ವಿರೋಧವಿಲ್ಲ. "ಅವನು ಬ್ರಹ್ಮದೊಡನೆ ಎಲ್ಲಾ ಭೋಗಗಳನ್ನು ಅನುಭವಿಸುತ್ತಾನೆ" ಎಂಬಲ್ಲಿ ಮುಕ್ತನಿಗೆ ಶಿವನೊಡನೆ ಭೋಗಸಾಮ್ಯವನ್ನು ಮಾತ್ರವೇ ಹೇಳಲಾಗಿದೆ. ಇಲ್ಲಿ ಕೆಲವರು "ಜಗತ್ಕಾರಣನೂ ಪರಿಪೂರ್ಣನೂ ಆದ ನಿರವಯವಶಿವತತ್ತ್ವದಿಂದ ಹುಟ್ಟಿರುವ ಮೂರ್ತಪರಶಿವನಿಗೂ ಮತ್ತು ಅದರ ಉಪಾಸಕನಾದ ಮುಕ್ತನಿಗೂ ಭೋಗದಲ್ಲಿಮಾತ್ರವೇ ಸಾಮ್ಯವನ್ನು ಹೇಳಿರುವುದರಿಂದ ಹೊಸದಾಗಿ ಮುಕ್ತಿಯನ್ನು ಪಡೆದವರಿಗೆ ನಿತ್ಯಮುಕ್ತನಾದ ಮೂರ್ತಪರಶಿವನಂತೆ ಜಗತ್ಕಾರಣತ್ವವೂ ದೇವ ಮನುಷ್ಯ ಮೊದಲಾದ ಅನೇಕ ಶರೀರಗಳನ್ನು ಸೃಷ್ಟಿಸುವ ಶಕ್ತಿಯೂ ಸಂಭವಿಸುವಂತಿಲ್ಲ. "ಇವನೇ ಎಲ್ಲರನ್ನೂ ಆನಂದಪಡಿಸುತ್ತಾನೆ" ಎಂಬಲ್ಲಿ ಉಪಾಸ್ಯಉಪಾಸಕ, ಪ್ರಾಪ್ಯಪ್ರಾಪಕ ಎಂಬ ತಾರತಮ್ಯವಿರುವುದರಿಂದಲೂ ಮುಕ್ತರಿಗೆ ಜಗದ್ವ್ಯಾಪಾರವು ಬರುವಂತಿಲ್ಲ" ವೆಂದು ಹೇಳುತ್ತಾರೆ. ಇದರಲ್ಲಿಯೂ ವಿರೋಧವೇನೂ ಇಲ್ಲ. ಹಾಗೆಯೇ ಸ್ಕಾಂದದಲ್ಲಿ "ಪರಮೇಶ್ವರನೇ, ನಿನಗೂ ನನಗೂ ಭೇದವು ತೊಲಗಿದರೂ ನಾನು ನಿನ್ನವನಾಗುವನೇ ಹೊರತು ನೀನು ನನ್ನವನಾಗುವುದಿಲ್ಲ. ಸಮುದ್ರದಲ್ಲಿರುವ ತರಂಗವು ಸಮುದ್ರಕ್ಕೆ ಸಂಬಂಧಿಸುವುದೇ ಹೊರತು ಸಮುದ್ರವು ಎಂದಿಗೂ ತರಂಗಕ್ಕೆ ಸಂಬಂಧಿಸುವುದಿಲ್ಲ" "ಹೃದಯದ ಎಲ್ಲಾ ಆಶೆಗಳೂ ತೊಲಗಿದೊಡನೆ ಮಾನವನು

ಅನುಸರಿಸುತ್ತಾನೆ. ಆಗ ಅವನು ಇಲ್ಲಿಯೇ ಬ್ರಹ್ಮಭಾವವನ್ನು ಹೊಂದುತ್ತಾನೆ" "ಅಲ್ಲಿಗೆ ಪ್ರಾಣಗಳು ಹೋಗದೆ ಇಲ್ಲಿಯೇ ಲಯವಾಗುತ್ತವೆ." ಎಂಬಲ್ಲಿ ನಿರವಯವ ಶಿವತತ್ತ್ವವನ್ನು ಉಪಾಸನಮಾಡಿದ ಜ್ಞಾನಿಗಳು ಎಲ್ಲಾ ಆಶೆಗಳನ್ನೂ ತೊರೆದು ಲಿಂಗಶರೀರವನ್ನು ಕಳೆದುಕೊಂಡು ಶಿವಭಾವವನ್ನು ಹೊಂದುವರೆಂದು ಹೇಳಿರುವುದರಿಂದ "ಅವನು ಹಿಂತಿರುಗುವುದಿಲ್ಲ" ವೆಂಬ ಶ್ರುತಿಯಲ್ಲಿ ಹೇಳಿದ "ಹಿಂತಿರುಗದಿರುವಿಕೆ" ಎಂಬುದು ಮುಕ್ತರಿಗೇ ಮಾತ್ರವೇ ಅನ್ವಯಿಸುವುದೆಂದು ನಿಶ್ಚಯಿಸಲಾಗಿದೆ.

ವ್ಯಾಪಕಸ್ಯ ಬ್ರಹ್ಮಣೋ ಮೂರ್ತತ್ವಸ್ಯ ಉಪಾಸನಾರ್ಥಂ ರಜ್ಜುಸರ್ಪವತ್ಕಲ್ಪಿತತ್ವೇನ ಮಿಥ್ಯಾತ್ವಾತ್, ಮಿಥ್ಯಾಭೂತಸ್ಯ ವಸ್ತುನ ಉಪಾಸನೇನ ಮುಕ್ತ್ಯಯೋಗಾತ್, ಶ್ರುತಿಪ್ರಮಾಣಸಿದ್ಧ್ಯರ್ಥಂ ಮೂರ್ತಬ್ರಹ್ಮೋಪಾಸಕಾನಾಂ ಪುನರಾವೃತ್ತಿದ್ವಾರಾ ನಿರ್ಗುಣ ನಿರ್ವಿಶೇಷಪರಶಿವಬ್ರಹ್ಮಜ್ಞಾನೇನೈವ ಇಹೈವ ಮುಕ್ತಿಃ. ಕಿಂಚ ಬದ್ಧ ಜೀವವತ್ ಸಾಲೋಕ್ಯಾದಿಪದಪ್ರಾಪ್ತಾನಾಂ ಉಪಾಸಕಾನಾಂ ಸರ್ವ ಕಾಮಾವಾಪ್ತಿದರ್ಶನಾತ್ ತೇಷಾಂ ಪುನರಾವೃತಿರಹಿತತ್ವಮಸಂಗತ ಮಿತ್ಯಾ ಶಂಕಾಯಾಂ ಸರ್ವವೇದಾಂತಸಿದ್ಧಾಂತಸ್ವಾಭಿಪ್ರೇತಂ ಅಸಂಕುಚಿತತತ್ವೇನ ಶಾಸ್ತ್ರಾಂತೇ ದರ್ಶಯತಿ. ಅನಾವೃತ್ತ್ಯಧಿಕರಣಂ || ೬ ||

ಅನಾವೃತಿಶ್ಶಬ್ದಾದನಾವೃತ್ತಿಶ್ಶಬ್ದಾತ್ ||೨೨|| ಪೂರ್ವತ್ರ ನಿಖಿಲಕಲ್ಯಾಣ ಗುಣಾಕರನಿತ್ಯತೃಪ್ತನಿರತಿಶಯಾನಂದಸ್ವಭಾವನಿಸ್ಸಮಾನಸರ್ವಜ್ಞಸತ್ಯ ಸಂಕಲ್ಪಸಕಲಚೇತನಾಚೇತನಪ್ರಪಂಚಾಧಿಕಭಕ್ತಪರಾಧೀನಪರಮಕಾರುಣಿಕಸ್ಯೋಮಾಪತೇಃ ಪರಶಿವಬ್ರಹ್ಮಣಃ ಸಾಮ್ಯಸರ್ವಕಾಮಾವಾಪ್ತಿ ಸಾಲೋಕ್ಯಾದಿಪದಪ್ರಾಪ್ತಭಕ್ತಾನಾಂ ವ್ಯವಸ್ಥಾಪನೇಽಪಿ ತೇಷಾಂ ಜಗತ್ಕಾರಣತ್ವಾದದ್ಯನನ್ಯಸಾಧಾರಣಧರ್ಮಸಂಕುಚಿತತ್ವಮುಪದಿಷ್ಟಂ. ಇಹ ತು "ಬ್ರಹ್ಮವಿದ್ಬ್ರಹ್ಮೈವ ಭವತಿ" ಇತಿ ಶ್ರುತೌ ನಿರವಯವಬ್ರಹ್ಮೋಪಾಸಕಾನಾಂ ಬ್ರಹ್ಮಾತ್ಮಕತ್ವವ್ಯಪದೇಶಾತ್ ಲೋಹರಸಾದಿನ್ಯಾಯವತ್ ತದುಪಾಸನಮಹಿಮ್ನಾ ಸ್ವಾಭಾವಿಕಜೀವಭಾವನಿವೃತ್ತಿಪೂರ್ವಕ ಶಿವತತ್ತ್ವಪ್ರಾಪ್ತಿಸಂಭವಾತ್ ಪಾಶಬದ್ಧಜೀವವನ್ನ ಪುನರಾವೃತ್ತಿಃ ಇತ್ಯಭಿಧೀಯತೇ. ಶ್ರುತೌ ಮೂರ್ತಶಿವೋಪಾಸಕಾನಾಂ ವಿದುಷಾಂ ತಮಶ್ಶಬ್ದವಾಚ್ಯಗುಣತ್ರಯಸಾಮ್ಯಾವಸ್ಥಾರೂಪಪ್ರಕೃತಿ ವಿಲಕ್ಷಣಶಿವಪ್ರಾಪಕತ್ವವ್ಯಪದೇಶಾತ್ "ಸ ಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ ನ ಚ ಪುನರಾವರ್ತತೇ" ಇತ್ಯಾದಿಶ್ರುತಿಷು ಮೂರ್ತೋಪಾಸಕಾನಾಂ ತಲ್ಲೋಕೇ ಶಿವೇನ ಸಹ ಸರ್ವಕಾಮಾನ್ ಅವಾಪ್ಯ ತದನಂತರಂ ತಲ್ಲೋಕಾದೇವ ಶಿವಜ್ಞಾನಪೂರ್ಣಭಾವೇನ ಸರ್ವಪರಿಪೂರ್ಣಶಿವಸಾಯುಜ್ಯಸಿದ್ಧಿದರ್ಶ-

ನಾಚ್ಚ ಮೂರ್ತೋಪಾಸಕಾನಾಮಪಿ ಬದ್ಧಜೀವವತ್ ಪುನರಾವೃತ್ತಿರ್ನ ಸಂಭವತಿ. "ಉಮಾಸಹಾಯಂ ಪ್ರಭುಂ" ಇತ್ಯಾದೌ ಮೂರ್ತೋಪಾಸಕಾನಾಂ ಶಿವಪ್ರಾಪ್ತ್ಯುಪದೇಶಾತ್ "ತರತಿ ಶೋಕಮಾತ್ಮವಿತ್" ಇತ್ಯಾದೌ ಅಮೂರ್ತೋಪಾಸಕಾನಾಂ ಜನನಮರಣಪ್ರವಾಹಾತ್ಮಕ ಸಂಸಾರದುಃಖನಿವೃತ್ತ್ಯವಗಮಾಚ್ಚ ಮೂರ್ತೋಪಾಸಕಾನಾಂ ಅಮೂರ್ತೋಪಾಸಕಾನಾಂ ವಾ ಪುನರಾವೃತ್ತಿರಹಿತತ್ವಮಿತಿ ಸಂದಿಹ್ಯತೇ. "ಸೋಽಶ್ನುತೇ ಸರ್ವಾನ್ ಕಾಮಾನ್" ಇತ್ಯಾದೌ ಮೂರ್ತೋಪಾಸಕಾನಾಂ ಬದ್ಧಜೀವವತ್ಕಾಮಾವಾಪ್ತಿಶ್ರವಣಾತ್ "ಆತ್ಮಾನಂ ಚೇದ್ವಿಜಾನೀಯಾದಹಮಸ್ಮೀತಿ ಪುರುಷಃ । ಕಿಮಿಚ್ಛನ್ಕಸ್ಯ ಕಾಮಾಯ ಶರೀರಮನುಸಂಚರೇತ್ ॥" ಇತ್ಯಾದೌ ಬ್ರಹ್ಮವಿದಾಂ ಸರ್ವಕಾಮನಿವೃತ್ತಿನಿರ್ದೇಶಾಚ್ಚ ಮೂರ್ತಬ್ರಹ್ಮೋಪಾಸಕಾನಾಂ ಪುನರಾವೃತ್ತಿರ್ನ ಸಂಭವತಿ. ಕಿಂಚ ಮೂರ್ತೋಪಾಸಕಾನಾಂ ಸ್ವೇಚ್ಛಾಕಲ್ಪಿತನಾನಾಶರೀರಪ್ರವೇಶಾವಗಮಾತ್ ಸರ್ವಭೋಗದರ್ಶನಾಚ್ಚ ಪುಣ್ಯಾಪುಣ್ಯಕರ್ತೃತ್ವಮರ್ಥಾತ್ಸಿದ್ಧ್ಯತಿ. "ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ" ಇತಿ ಪುಣ್ಯಫಲಪ್ರಾಪ್ತಸ್ವರ್ಗಾದಿಪದನಿಷ್ಠಾನಾಂ ಪುನರಾವೃತ್ತಿವ್ಯಪದೇಶವತ್ ಶಿವಪದಮಹಾಕೈಲಾಸಪದಾರೂಢಭಕ್ತಾನಾಮಪಿ ಪುನರಾವೃತ್ತಿರನಿವಾರ್ಯಾ ಕರ್ಮಸಾಧ್ಯತ್ವಾತ್ ಸ್ವಕರ್ತೃತ್ವಹೇತುತ್ವಾಚ್ಚ. "ನಾಸ್ತ್ಯಕೃತಃ ಕೃತೇನ" ಇತ್ಯತ್ರ ಕೃತಕರ್ಮಣಾಂ ಮುಮುಕ್ಷೂಣಾಂ ಅಕೃತಮೋಕ್ಷನಿರಾಸದರ್ಶನಾತ್. ಉತ "ತೇ ಬ್ರಹ್ಮಲೋಕೇ ತು ಪರಾಂತಕಾಲೇ" ಇತ್ಯಾದೌ ಬ್ರಹ್ಮಶಬ್ದಸ್ಯ ಚತುರ್ಮುಖೇ ರೂಢತ್ವಾತ್ ತದುಪಾಸಕಸ್ಯ ತಲ್ಲೋಕಪ್ರಾಪ್ತಿರಭಿಹಿತಾ. "ನಾರಾಯಣಪರಂ ಬ್ರಹ್ಮ" ಇತ್ಯಾದೌ ನಾರಾಯಣಸ್ಯ ಪರಬ್ರಹ್ಮತ್ವವ್ಯವಸ್ಥಾಪನಾತ್, ಭಗವಚ್ಛಬ್ದಸ್ಯ ತತ್ರೈವ ರೂಢತ್ವಾತ್ ಬ್ರಹ್ಮನಾರಾಯಣಯೋಃ ಕಾರ್ಯಕಾರಣತ್ವೇನಾನನ್ಯತ್ವಸ್ಯ ಸಮುಚಿತತ್ವೇನ ಬ್ರಹ್ಮಶಬ್ದವಾಚ್ಯತ್ವಂ ತಸ್ಯೈವ ಯುಕ್ತಂ. ತಚ್ಛ್ರುತಿಮಾರ್ಗನಿರ್ವಾಹಾರ್ಥಂ ಮೂರ್ತಚತುರ್ಮುಖನಾರಾಯಣಾದ್ಯುಪಾಸಕಾನಾಂ ಬಹುಜನ್ಮಸಿದ್ಧಾನಾಂ ಸರ್ವಪಾಪಪಂಕನಿವೃತ್ತಿಪೂರ್ವಕಚಿತ್ತಶುದ್ಧಿದ್ವಾರಾ ನಿತ್ಯನಿರವಯವನಿಷ್ಪ್ರಪಂಚಸ್ವಸ್ವರೂಪಜ್ಞಾನೇನ ಅಪುನರಾವೃತ್ತಿಸ್ಸಿದ್ಧಾ. ರಜ್ಜುಸರ್ಪವತ್ಕಲ್ಪಿತಾನಾಂ ಮೂರ್ತಾನಾಮನಿತ್ಯತ್ವೇನ ತದುಪಾಸಕಾನಾಂ ಸರ್ವಥಾ ನಿತ್ಯಮುಕ್ತಿರ್ನ ಸಂಭವತೀತಿ ಪ್ರಾಪ್ತೇ ಪ್ರಚಕ್ಷ್ಮಹೇ. "ದ್ವೇ ವಾವ ಬ್ರಹ್ಮಣೋ ರೂಪೇ" ಇತ್ಯಾದಿಶ್ರುತಿಷು ಶಿವಸ್ಯ ಪರಬ್ರಹ್ಮಣಃ ನಿರವಯವತ್ವಂ ಸಾವಯವತ್ವಂ ಚ ಯುಭಯೋಪಪನ್ನಂ ತಥಾ "ವಿರೂಪೇಭ್ಯೋ

ವಿಶ್ವರೂಪೇಭ್ಯಶ್ಚ ವೋ ನಮೋ ನಮಃ” ಇತ್ಯಾದಿನಾ ಶತರುದ್ರೀಯೇ ಭಕ್ತಾನಾಮುಭಯವಿಧತ್ವದರ್ಶನಾತ್ ಮೂರ್ತೋಪಾಸಕಾನಾಂ ಚ ಅನಾವೃತ್ತಿಶಬ್ದಾತ್ ವೇದಾತ್ “ಧ್ಯಾತ್ವಾ ಮುನಿರ್ಗಚ್ಛತಿ ಭೂತಯೋನಿಂ” ಇತ್ಯಾದಿನಾ ಅಮೂರ್ತೋಪಾಸಕಾನಾಂ “ಯಥಾ ನದ್ಯಃ”, “ಏಷ ಸಂಪ್ರಸಾದಃ” ಇತ್ಯಾದಿಶಬ್ದಾತ್ ಅನಾವೃತ್ತಿರಪುನರಾವೃತ್ತಿರ್ನಿಶ್ಚೀಯತೇ. “ಸೋಽಶ್ನುತೇ” ಇತ್ಯತ್ರ ಬ್ರಹ್ಮಣಾ ಸಹ ಸರ್ವಕಾಮಾವಾಪ್ತಿಶ್ರವಣಾತ್ ಬದ್ಧಜೀವವೈಲಕ್ಷಣ್ಯಂ ದರ್ಶಿತಂ. “ಆಪ್ತಕಾಮಃ ಪೂರ್ಣಕಾಮೋ ನಿಷ್ಕಾಮೋ ಜೀರ್ಣಕಾಮೋ ಭವತಿ” ಇತ್ಯಾದಿಷು ಮುಕ್ತಾತ್ಮನಾಂ ಬ್ರಹ್ಮವತ್ಸ್ವಾಧೀನಸಕಲಕಾಮತ್ವಂ ಬ್ರಹ್ಮಲಕ್ಷಣಮುಪದಿಷ್ಟಂ. ವಿದುಷಾಂ ಕಾಮನಾಮಾತ್ರೇಣ ಬದ್ಧತ್ವಾಂಗೀಕಾರೇ “ಸೋಽಕಾಮಯತ” ಇತ್ಯಾದಿಷು ಬ್ರಹ್ಮಣೋಽಪಿ ಕಾಮನಾಶ್ರವಣಾದತಿವ್ಯಾಪ್ತಿಃ. “ಯದಾ ಸರ್ವೇ ಪ್ರಮುಚ್ಯಂತೇ ಕಾಮಾಃ” ಇತಿ ನಿಷ್ಕಾಮಶ್ರುತೀನಾಂ ವಿದುಷಾಂ ಪ್ರಾರಬ್ಧಾವಸಾನೇ ನಿರಸ್ತಲಿಂಗಶರೀರಪೂರ್ವಕಪರಶಿವಪ್ರಾಪ್ತಿಕಾಲಪರತ್ವಾತ್, ನೋ ಚೇದ್ವಾಮದೇವಪ್ರಮುಖಾನಾಂ ಜೀವನ್ಮುಕ್ತಾನಾಂ ಹಿರಣ್ಯಗರ್ಭಾದೀನಾಂ ಚ ಕಾಮಾವಾಪ್ತಿರ್ನ ಸ್ಯಾತ್. “ಕಾಮಾನ್ನೀ ಕಾಮರೂಪೀ” ಇತ್ಯಾದಿವಾಕ್ಯಾನಾಂ ಲಿಂಗಶರೀರಗತಶಿವಸಾಲೋಕ್ಯಾದಿನಿತ್ಯನಿರತಿಶಯವೈಭವಕಲ್ಯಾಣಮುಕ್ತಿಪರತ್ವೇನ ಸ್ವೀಕೃತತ್ವಾತ್ ಬ್ರಹ್ಮಪ್ರಕರಣಪಠಿತಪರಶಿವಭಕ್ತಿಧ್ಯಾನಧಾರಣಪೂಜಾನಮಸ್ಕಾರಶ್ರವಣಾದೀನಾಂ ಸಾಕ್ಷಾತ್ಪರಶಿವಪ್ರಾಪ್ತ್ಯುಪದೇಶಾತ್ ಧರ್ಮಪ್ರಕರಣಪಠಿತಜ್ಯೋತಿಷ್ಟೋಮಾದಿಕರ್ಮಣಾಮೇವ ಪುನರಾವೃತ್ತಿರಭಿಹಿತಾ. “ಬ್ರಹ್ಮಲೋಕಮಭಿಸಂಪದ್ಯತೇ” ಇತ್ಯಾದೌ ಬ್ರಹ್ಮಲೋಕಶಬ್ದಸ್ಯ ಚತುರ್ಮುಖಪರತಯಾ ಲೋಕೇ ಶ್ರುತಿಪುರಾಣಾದಿಷು ಚತುರ್ಮುಖೋಪಾಸನವಚನಾಚಾರಾದರ್ಶನಾತ್ ತದುಪಾಸನಂ ವಿನಾ ತಲ್ಲೋಕಸಿದ್ಧ್ಯಭಾವಾಚ್ಚ “ಬ್ರಾಹ್ಮಣಾನಾಂ ಶಿವೋ ದೇವಃ ಕ್ಷತ್ರಿಯಾಣಾಂ ತು ಮಾಧವಃ” ಇತ್ಯಾದಿಸ್ಮೃತಿಷು ವಿಷ್ಣೋಃ ಕ್ಷತ್ರಿಯದೇವತಾಕತ್ವವ್ಯಪದೇಶಾತ್ ಕಾರಣಕಾರಣತ್ವಮೂರ್ತಿತ್ರಯಾತೀತತ್ವಾದಿಪರಬ್ರಹ್ಮಧರ್ಮಾಣಾಂ ಅದರ್ಶನಾಚ್ಚ ನಾರಾಯಣಸ್ಯ ಪರಬ್ರಹ್ಮತ್ವಂ ನ ಯುಕ್ತಂ. “ನಾರಾಯಣಪರಂ ಬ್ರಹ್ಮ” ಇತ್ಯಾದೌ ನಾರಾಯಣಸ್ಯ ಯಃ ಪರಃ ಶಿವಃ ಸ ಏವ ಬ್ರಹ್ಮೇತಿ ನಿಶ್ಚೀಯತೇ. ತದುತ್ತರತ್ರ “ಬ್ರಹ್ಮಾ ಶಿವೋ ಮೇ ಅಸ್ತು” ಇತ್ಯಾದಿಷು ಶಿವಬ್ರಹ್ಮಶಬ್ದಯೋಃ ಘಟಕಲಶಾದಿವತ್ ಪರ್ಯಾಯತ್ವಂ ಸ್ಪಷ್ಟಮುಪದಿಷ್ಟಂ. “ಶಿವಮದ್ವೈತಂ ಚತುರ್ಥಂ ಮನ್ಯಂತೇ

ಸ ಆತ್ಮಾ ” ಇತಿ ಮಾಂಡೂಕ್ಯೇ “ ಸ ಬ್ರಹ್ಮ ಸ ಶಿವಸ್ಸ ಹರಿಸ್ಸೇಂದ್ರ ಸ್ಸೋಽಕ್ಷರಃ ಪರಮಸ್ಸ್ವರಾಟ್ ” ಇತಿ ಕೈವಲ್ಯೇ ಶಿವಸ್ಯೈವ ಮೂರ್ತಿ ತ್ರಯಾತೀತತ್ವೋಪದೇಶಾತ್, ತಥೈವಾಥರ್ವಶಿರಸಿ “ ಶಿವ ಏಕೋ ಧ್ಯೇಯಃ ” ಇತಿ ಮುಮುಕ್ಷೂಣಾಂ ಶಿವೇತರದೇವತೋಪಾಸನನಿಷೇ ಧಾವಗಮಾತ್ ಶಿವಂ ಕರೋತೀತಿ ಶಿವಂಕರಃ ಇತಿ ವ್ಯುತ್ಪತ್ತ್ಯಾ ಭಕ್ತಾನಾಂ ಸ್ವಸ್ವರೂಪಪ್ರದಾಯಕತ್ವಂ ದರ್ಶಿತಂ. ಭಗವಚ್ಛಬ್ದಸ್ಯ ಇಂದ್ರಾದಿಷು ಲೌಕಿಕಪ್ರಯೋಗದರ್ಶನೇಽಪಿ ಪಿತೃಮೇಧೇ “ ಈಶಾನಃ ಪಿತೃರೂಪೇಣ ಮಹಾದೇವೋ ಮಹೇಶ್ವರಃ । ಪ್ರಿಯತಾಂ ಭಗವಾನೀಶಃ ಪರಮಾತ್ಮಾ ಸದಾಶಿವಃ ॥ ” ಇತಿ, ಬ್ರಹ್ಮಕಾಂಡೇ ಶ್ವೇತಾಶ್ವತರೇ “ ಸರ್ವ ವ್ಯಾಪೀ ಚ ಭಗವಾನ್ ತಸ್ಮಾತ್ಸರ್ವಗತಶ್ಶಿವಃ ” ಇತಿ, ಅಥರ್ವಶಿರಸಿ “ ಯೋ ವೈ ರುದ್ರಸ್ಸ ಭಗವಾನ್ ಯಶ್ಚ ಬ್ರಹ್ಮಾ ಯಶ್ಚ ವಿಷ್ಣುಃ ” ಇತ್ಯಾದಿನಾ ಭೂಯೋಭೂಯಃ ಭಗವಚ್ಛಬ್ದಃ ಶಿವೇ ಬಹುಧಾ ಪ್ರಪಂಚಿತಃ. ಶತರುದ್ರೀಯೇ “ ನಮಸ್ತೇ ಅಸ್ತು ಭಗವನ್ ವಿಶ್ವೇಶ್ವ ರಾಯ ಮಹಾದೇವಾಯ ” ಇತಿ ತದ್ವದುಪದಿಷ್ಟಂ. ಲೌಕಿಕಪ್ರಯೋ ಗಾತ್ ಶ್ರೌತವಿಧೇರ್ಬಲೀಯಸ್ತ್ವಾತ್ ಭಗವಚ್ಛಬ್ದೋ ನೇತರಸ್ಯ ತುಲ್ಯಃ. “ ಅಥಾತೋ ಧರ್ಮಜಿಜ್ಞಾಸಾ ” ಇತಿ ಶಾಸ್ತ್ರಾರಂಭೇ ಬ್ರಹ್ಮಣಃ ಮುಮುಕ್ಷುಜಿಜ್ಞಾಸ್ಯತ್ವೋಪದೇಶಾತ್ ನಿರ್ವಿಶೇಶಬ್ರಹ್ಮವಾದಸ್ತತ್ರೈವ ನಿರಸ್ತಃ. “ ಲಕ್ಷಣಪ್ರಮಾಣಾಧೀನಾ ಹಿ ವಸ್ತುಸಿದ್ಧಿಃ ” ಇತಿ ನ್ಯಾಯೇನ ಬ್ರಹ್ಮಾತ್ಮಕವಸ್ತುಸಿದ್ಧೌ “ ಜನ್ಮಾದ್ಯಸ್ಯ ಯತಃ ”, “ ಶಾಸ್ತ್ರಯೋನಿ ತ್ವಾತ್ ” ಇತಿ ಲಕ್ಷಣಪ್ರಮಾಣವಿಧಾಯಕಸೂತ್ರೇಷು ತದರ್ಥಪ್ರಕಾಶ ಕೇಷು “ ಯತೋ ವಾ ಇಮಾನಿ ” ಇತ್ಯಾದಿಷು ಬ್ರಹ್ಮಪ್ರಪಂಚಯೋಃ ಕಾರ್ಯಕಾರಣತ್ವಾದಿಧರ್ಮವ್ಯವಸ್ಥಾಪನೇನ ನಿರ್ವಿಶೇಷವಾದೋ ಜಗದಸತ್ತ್ವವಾದಶ್ಚ ನಿರಸ್ತಃ. ಅಸತ್ಪದಾರ್ಥಸ್ಯ ಶಶಶೃಂಗಾದೇಃ ಉತ್ಪತ್ತ್ಯಸಂಭವಾತ್ ಸತ್ಪದಾರ್ಥಸ್ಯೈವೋತ್ಪತ್ತಿನಿರ್ದಿಷ್ಟಾ. “ ಅಸದಿತಿ ಚೇನ್ನ ”, “ ಪಟವಚ್ಚ ” ಇತ್ಯಾದಿಷು ಪ್ರಪಂಚಸ್ಯ ಪ್ರಳಯೇಽಪಿ ಬೀಜಾಂಕುರನ್ಯಾಯೇನ ಪಟಸಂಕೋಚವತ್ ಸೂಕ್ಷ್ಮರೂಪೇಣಾವ ಸ್ಥಾನಂ ಸೃಷ್ಟಿಕಾಲೇ ಪಟವಿಸ್ತಾರವತ್ ಪ್ರಪಂಚವಿಜೃಂಭಿತತ್ವಂ ಪ್ರಪಂ ಚಿತಂ. ತಸ್ಮಾತ್ ಸತ್ಪದಾರ್ಥಸ್ಯ ಪ್ರಪಂಚಸ್ಯ ಪ್ರಳಯೇ ಕಾರಣರೂಪೇಣ ಅವಸ್ಥಾನಂ ಜೀವಾನಾಂ ಚೇತನತ್ವೇನ ಸ್ವರೂಪತೋ ನಿತ್ಯತ್ವಂ ಚ ಪರ ಮಾತ್ಮವದುಪದಿಷ್ಟಂ “ ನಿತ್ಯೋ ನಿತ್ಯಾನಾಂ ” ಇತಿ ಶ್ರುತೌ. ತಥಾ ಸ್ಮೃತ್ಯಂತರೇ “ ಪ್ರವಾಹವತ್ಪ್ರಪಂಚಸ್ಯ ಸತ್ಯತ್ವಮುಪದಿಶ್ಯತೇ । ಸ್ವರೂ ಪತೋ ಹಿ ಸತ್ಯತ್ವಂ ಚೇತನಾನಾಂ ವಿಧೀಯತೇ । ಅತಿರೋಧಾನಸತ್ಯತ್ವಂ

ಸ್ವತಸ್ಸಿದ್ಧಂ ಶಿವಸ್ಯ ಹಿ ॥ ” ಇತಿ ದರ್ಶನಾತ್ ನಿರ್ವಿಶೇಷಚಿನ್ಮಾತ್ರಬ್ರಹ್ಮ
ವಾದೋಽವಿದ್ವದ್ರಮಣೀಯಃ. ರಜ್ಜುಸರ್ಪವದ್ಭಗವಚ್ಛರೀರಸ್ಯ
ಮಿಥ್ಯಾತ್ಮಕತ್ವವ್ಯಪದೇಶೇ “ ಭೀಷಾಸ್ಮಾದ್ವಾತಃ ಪವತೇ ” ಇತಿ ಶ್ರುತಿ
ನಿರ್ದಿಷ್ಟಸೂರ್ಯಾದೀನಾಂ ವಿದುಷಾಂ ಭಯಾವಿಷ್ಟತ್ವಂ ಕಥಮುಪ
ಪದ್ಯತೇ ? “ ಇಂದ್ರೋ ಮಾಯಾಭಿಃ ಪುರುರೂಪ ಉಗ್ರಃ ” ಇತಿ
ಪಾರಮೈಶ್ವರ್ಯವಿಶಿಷ್ಟಶಿವಸ್ಯಾಪಿ ಮಾಯಾಶಕ್ತಿಭಿಃ ನೀಲಕಂಠತ್ವಾದಿ
ಲಕ್ಷಣಬಹುಶರೀರಗ್ರಹಣವಸ್ತುದರ್ಶನೇಽಪಿ “ ಸ್ಥಿರೇಭಿರಂಗೈಃ
ಪುರುರೂಪ ಉಗ್ರಃ ” ಇತಿ ಪರಮೇಶ್ವರಪರಿಗೃಹೀತದಿವ್ಯಮಂಗಳವಿಗ್ರ
ಹಾಣಾಂ ಅಪ್ರಾಕೃತಾನಾಂ ಶುದ್ಧವಿದ್ಯಾಮಯಾನಾಂ ಮಂತ್ರಭಾಗೇಷು
ಸ್ಥಿರತ್ವವ್ಯವಸ್ಥಾಪಕವಾಕ್ಯಾನಾಂ ದತ್ತಾಂಜಲಿಪ್ರಸಂಗಃ ಸ್ಯಾತ್. ಕಿಂಚ
“ ಯದಾ ತಮಃ ” ಇತ್ಯಾದೌ ಶಿವಸ್ಯ ಮಹಾಪ್ರಳಯಸಾಕ್ಷಿತ್ವಂ.
“ ಅಜಾತ ಇತ್ಯೇವಂ ಕಶ್ಚಿದ್ಭೀರುಃ ಪ್ರಪದ್ಯತೇ । ರುದ್ರ ಯತ್ತೇ ದಕ್ಷಿಣಂ
ಮುಖಂ ತೇನ ಮಾಂ ಪಾಹಿ ನಿತ್ಯಂ ॥ ” ಇತ್ಯಾದೌ ಪರಮೇಶ್ವರಸ್ಯ
ಅಜಾತತ್ವಂ. “ ವಿಶ್ವಾಧಿಕೋ ರುದ್ರೋ ಮಹರ್ಷಿಃ ” ಇತ್ಯಾದಿನಾ
ವಿಶ್ವಾಧಾರತ್ವಸರ್ವಶಕ್ತತ್ವಸರ್ವಕಾರಣತ್ವಾದಿಕಂ. “ ಏಕ ಏವ
ರುದ್ರೋ ನ ದ್ವಿತೀಯಾಯ ತಸ್ಥೇ ” ಇತ್ಯಾದೌ ತಸ್ಯ ಅದ್ವಿತೀಯತ್ವಂ.
“ ವಿಶ್ವರೂಪಾಯ ವೈ ನಮಃ ” ಇತ್ಯಾದಿಷು ತಸ್ಯ ಜ್ಯೋತಿರ್ಮಯತ್ವಂ
ಮುಪದಿಶ್ಯತೇ. ಕಥಂ ಹಿರಣ್ಯಶಬ್ದಸ್ಯ ಜ್ಯೋತಿರ್ವಾಚ್ಯತ್ವಮಿತಿ ಚೇತ್
ಶಾಸ್ತ್ರೇಽಪಿ ಹಿರಣ್ಯಸ್ಯ ವಹ್ನ್ಯಾತ್ಮಕತ್ವಂ ಸರ್ವತ್ರ ಪ್ರಸಿದ್ಧಂ. ಜ್ಯೋತಿ
ಶ್ಶಬ್ದೇನ ಹೇಮತ್ವಾಂಗೀಕಾರೇ ಸೂರ್ಯಮಂಡಲಾಂತರ್ವರ್ತಿನೋ
ಹಿರಣ್ಮಯಶಿವಶರೀರಸ್ಯ ವಹ್ನಿಮಧ್ಯಸ್ಥಸುವರ್ಣವತ್ ದ್ರವತ್ವಪ್ರಸಕ್ತ್ಯಾ
ಅಸತ್ಯತ್ವಪ್ರಸಂಗಃ ದುರ್ನಿವಾರಃ. ಅಥರ್ವಶಿರಸಿ ಭಗವದ್ವಚನಂ
“ ಪುಷ್ಕರಮಹಂ ಪವಿತ್ರಮಹಂ ಅಗ್ರ್ಯಂ ಚ ಮಧ್ಯಂ ಚ ಬಹಿಶ್ಚ ಪುರ
ಸ್ತಾತ್ । ಜ್ಯೋತಿರಹಮೇಕಸ್ಸರ್ವೇ ಚಾಹಮೇವ, ಮಾಂ ಯೋ ವೇದ
ಸ ಸರ್ವಾನ್ ವೇದಾನ್ ವೇದ ॥ ” ಇತಿ. ತಥಾ ಶೈವಪುರಾಣೇ “ ದಿನ
ಕೃತ್ಕೋಟಿಸಂಕಾಶಂ ಸ್ಥಾನಮಾದ್ಯಮುಮಾಪತೇಃ । ಸರ್ವಕಾಮಸಮಾ
ಯುಕ್ತಂ ವಿಶುದ್ಧಂ ನಿತ್ಯಮವ್ಯಯಂ । ಸಂಪ್ರಾಪ್ಯ ತತ್ಪದಂ ದಿವ್ಯಂ ಅತಃ
ಕ್ಲೇಶವಿವರ್ಜಿತಾಃ । ಸರ್ವಜ್ಞಾಸ್ಸರ್ವದಾ ಶುದ್ಧಾಃ ಪರಿಪೂರ್ಣಾ ಭವಂತಿ
ಚ । ವಿಶುದ್ಧಕಾರ್ಯಕರಣಾಃ ಪರಮೈಶ್ವರ್ಯಸಂಯುತಾಃ । ಸದೇಹಾಶ್ಚ
ವಿದೇಹಾಶ್ಚ ಭವಂತ್ಯಾತ್ಮೇಚ್ಛಯಾ ಪುನಃ । ಯೇ ಸಂಪ್ರಾಪ್ತಾಃ ಪರ
ಸ್ಥಾನಂ ಜ್ಞಾನಯೋಗರತಾ ನರಾಃ । ನ ತೇಷಾಂ ಪುನರಾವೃತ್ತಿರ್ಘೋರೇ
ಸಂಸಾರಮಂಡಲೇ ॥ ” ಇತ್ಯಾದಿನಾ ಪರಮಶಿವಸ್ಥಾನಸ್ಯ ಮಹಾಕೈಲಾ

ಸಸ್ಯ ದಿನಕೃತ್ಕೋಟಿಸಂಕಾಶತ್ವವ್ಯವಸ್ಥಾಪನಾತ್ ತಸ್ಯ ಜ್ಯೋತಿರ್ಮಯತ್ವೇ ನ ಸಂದೇಹಕಳಂಕಃ. “ಸೋಽಧ್ವನಃ ಪರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ” ಇತ್ಯತ್ರ ವಿಷ್ಣುಪದಸ್ಯಾಪಿ ಪರಮಪದತ್ವಮವಗಮ್ಯತೇ ಇತಿ ಚೇತ್ “ಪರಾತ್ಪರತರಂ ಬ್ರಹ್ಮ ತತ್ಪರಾತ್ಪರತೋ ಹರಿಃ । ಯತ್ಪರಾತ್ಪರತೋಽಧೀಶಸ್ತನ್ಮೇ ಮನಶ್ಶಿವಸಂಕಲ್ಪಮಸ್ತು” ಇತಿ ಬೋಧಾಯನಸೂತ್ರೇ ಶಿವಸಂಕಲ್ಪೇ ಚ ವಿಷ್ಣ್ವಾದ್ಯಧಿಕತ್ವಸ್ಯ ಮಹೇಶ್ವರೇ ಮನನಾತ್ ವಿಷ್ಣೋಃ ಪರಮಂ ನಾರಾಯಣಾದಧಿಕಂ ಶಿವಸ್ಥಾನಂ ತದ್ವಿಧಸ್ಯಾಧ್ವನಃ ಪರಂ ತದತೀತಮುಚ್ಯತೇ. ತಸ್ಮಾತ್ “ಬ್ರಹ್ಮಲೋಕಮಭಿಸಂಪದ್ಯತೇ” ಇತ್ಯತ್ರ ಬ್ರಹ್ಮಲೋಕಶಬ್ದೇನ ಶಿವಪದಮೇವಾಭಿಧೀಯತೇ. “ವಿರೂಪೇಭ್ಯೋ ವಿಶ್ವರೂಪೇಭ್ಯಶ್ಚ ವೋ ನಮಃ” ಇತ್ಯಾದೌ ಶಿವಭಕ್ತಾನಾಂ ನಿರವಯೇಶ್ವರಪ್ರಾಪ್ತಾನಾಂ ವಿಗತರೂಪತ್ವಂ ಮೂರ್ತಪರಶಿವಸ್ವರೂಪೋಪಾಸಕಾನಾಂ ವಿಶ್ವರೂಪಶಬ್ದೇನ ಬಹುರೂಪತ್ವಂ ಚ ದರ್ಶಿತಂ. “ನೀಲಗ್ರೀವಾಶ್ಶಿತಿಕಂಠಾಶ್ಶರ್ವಾ ಅಧಃ ಕ್ಷಮಾಚಾರಾಃ” ಇತ್ಯಾದಿಷು ಭಕ್ತಾನಾಂ ಶರೀರಪರಿಗ್ರಹೇ ಯಾದೃಶ ನೀಲಕಂಠತ್ವಾದಿಲಕ್ಷಣೇಶ್ವರಶರೀರಾಣಿ ತಾದೃಶಾನಿ ತತ್ಸದೃಶಭಕ್ತಾನಾಮುಪಪದ್ಯಂತೇ. ಅನಾವೃತ್ತಿಶ್ಶಬ್ದಾತ್ ಇತ್ಯತ್ರ ಅಧ್ಯಾಯಪರಿಸಮಾಪ್ತಿದ್ಯೋತನಾರ್ಥಂ ದ್ವಿರಾವೃತ್ತಿರಿತಿ ಕೇಚಿದಾಹುಃ. ತದಸಮಂಜಸಂ. “ಉಭಯವ್ಯಪದೇಶಾತ್”, “ಉಭಯಥಾ ಚ ದೋಷಾತ್”, “ಅಧಿಕಂ ತು ಭೇದನಿರ್ದೇಶಾತ್” ಇತ್ಯಾದಿಸೂತ್ರೇಷು ಸರ್ವವೇದಾಂತಾಸಂಕೋಚಂ ಯಥಾತಥಾ ದ್ವೈತಾದ್ವೈತಮತಸ್ಯ ಸ್ವಾಭಿಪ್ರೇತತ್ವೇನ ಸೂಚಿತತ್ವೇಽಪಿ “ಏವಮಪ್ಯುಪನ್ಯಾಸಾತ್ ಪೂರ್ವಭಾವಾದವಿರೋಧಂ ಬಾದರಾಯಣಃ”, “ದ್ವಾದಶಾಹವದುಭಯವಿಧಂ ಬಾದರಾಯಣೋಽತಃ” ಇತಿ ವೇದಮಾರ್ಗನಿಷ್ಠಾನಾಂ ಸ್ವಾಭಿಪ್ರೇತಮುಭಯವಿಧಂ ಜೀವಬ್ರಹ್ಮಣೋಸ್ಸಂಸಾರದಶಾಯಾಂ ಸ್ವಾಭಾವಿಕಭಿನ್ನತ್ವಂ ಮೋಕ್ಷದಶಾಯಾಂ ತದ್ವದಭಿನ್ನತ್ವಂ, ಬ್ರಹ್ಮಣೋ ಮೂರ್ತಾಮೂರ್ತತ್ವಂ ತದುಪಾಸಕಾನಾಂ ಭಕ್ತಾನಾಂ ತದುಭಯವಿಧತ್ವಂ ಚ ಕಂಠೋಕ್ತ್ಯಾ ಉಪನ್ಯಾಸಾತ್ ಯಥಾ ಪೂರ್ವೋಕ್ತಮತ್ರಾಪಿ ಸೂತ್ರೇಷು ಉಪನ್ಯಾಸಾತ್ ಯಥಾ ದ್ವಿರುಕ್ತಿಃ “ಅನಾವೃತ್ತಿಶ್ಶಬ್ದಾದನಾವೃತ್ತಿಶ್ಶಬ್ದಾತ್” ಇತ್ಯತ್ರಾಪಿ ಮೂರ್ತಾಮೂರ್ತೋಭಯವಿಧೋಪಾಸಕಭಕ್ತಪರೈವೇತಿ ನಿಶ್ಚೀಯತೇ. ಅತಸ್ಸೂತ್ರಕಾರಮತಂ ದ್ವೈತಾದ್ವೈತಮೇವೇತಿ ಘಂಟಾಘೋಷಃ.

**ಇತಿ ಶ್ರೀಮದ್ಯತಿವ್ರಜಪರಿವೃಢಶ್ರೀಶ್ರೈಲಪೀಠಾಧ್ಯಕ್ಷ ಶ್ರೀಪತಿಪಂಡಿತಾ ರಾಧ್ಯಭಗವತ್ಪಾದಾಚಾರ್ಯಸ್ವಾಮಿಕೃತೇ ಭೇದಾಭೇದಾತ್ಮಕ ವಿಶೇಷಾದ್ವೈತಸಿದ್ಧಾಂತವ್ಯವಸ್ಥಾಪಕಬ್ರಹ್ಮಮೀಮಾಂಸಾ ಸೂತ್ರಾರ್ಥಪ್ರಕಾಶಕೇ ಶ್ರೀಕರಭಾಷ್ಯೇ ಫಲಾಧ್ಯಾಯ ಸಂಜ್ಞಿಕಃ ಚತುರ್ಥಾಧ್ಯಾಯಃ ಸಮಾಪ್ತಃ ||**

ವ್ಯಾಪಕನಾದ ಶಿವನು ಉಪಾಸನೆಗಾಗಿ ಮೂರ್ತನಾಗಿದ್ದಾನೆ. ಆದರೆ ರಜ್ಜುವಿನಲ್ಲಿ ಸರ್ಪವು ತೋರುವಂತೆ ಮೂರ್ತಶಿವನು ಕಲ್ಪಿತನಾದ್ದರಿಂದ ಸುಳ್ಳೇ ಆಗಿರುವನು. ಹೀಗೆ ಸುಳ್ಳಾದದ್ದನ್ನು ಉಪಾಸನಮಾಡಿದರೆ ಮುಕ್ತಿ ದೊರಕುವುದಿಲ್ಲ. ಆದ್ದರಿಂದ ಶ್ರುತಿಯನ್ನು ಪ್ರಮಾಣವೆಂದು ಒಪ್ಪಲಿಕ್ಕಾಗಿ ಮೂರ್ತೋಪಾಸಕರು ಮತ್ತೆ ಹುಟ್ಟಿ ನಿರ್ಗುಣನಿರ್ವಿಶೇಷಪರಮಾತ್ಮನನ್ನು ತಿಳಿದು ಇಲ್ಲಿಯೇ ಮುಕ್ತರಾಗುತ್ತಾರೆಂದೇ ಹೇಳಬೇಕು. ಆದರೆ "ಅವನು ಬ್ರಹ್ಮದೊಡನೆ ಎಲ್ಲಾ ಫಲಗಳನ್ನು ಪಡೆಯುತ್ತಾನೆ" ಎಂಬಲ್ಲಿ ಬದ್ಧಜೀವನಂತೆ ಸಾಲೋಕ್ಯ ಮೊದಲಾದ ಸ್ಥಿತಿಯನ್ನು ಪಡೆದವರಿಗೂ ಸರ್ವಫಲಪ್ರಾಪ್ತಿಯನ್ನು ಹೇಳಿರುವುದರಿಂದ ಅವರಿಗೆ ಮತ್ತೆ ಹುಟ್ಟದಂತಹ ಸ್ಥಿತಿ ದೊರಕುವುದಿಲ್ಲವೆಂದು ಆಶಂಕಿಸಿ ಸಿದ್ಧಾಂತವನ್ನು ಸ್ಪಷ್ಟಪಡಿಸುತ್ತಾನೆ. ಸಮಸ್ತ ಕಲ್ಯಾಣಗುಣಗಳಿಗಾಕರನಾಗಿ ನಿತ್ಯತೃಪ್ತನೂ ನಿರತಿಶಯಾನಂದಸ್ವರೂಪನೂ ಸರ್ವಜ್ಞನೂ ಸತ್ಯಸಂಕಲ್ಪನೂ ಭಕ್ತಾಧೀನನೂ, ದಯಾಳುವೂ ಉಮಾಶಕ್ತಿವಿಶಿಷ್ಟನೂ ಆದ ಪರಮೇಶ್ವರನಿಂದಲೇ ಮುಕ್ತರಿಗೆ ಸಾಲೋಕ್ಯ ಸಾಮೀಪ್ಯ ಸಾರೂಪ್ಯಗಳೂ ಸರ್ವಫಲಪ್ರಾಪ್ತಿಯೂ ದೊರಕುತ್ತವೆ ಎಂದು ಹೇಳಿದ್ದರೂ ಅವರಲ್ಲಿ ಜಗತ್ಕಾರಣತ್ವವೆಂಬ ಅಸಾಧಾರಣಧರ್ಮಒಂದರ ಕೊರತೆಯುಂಟೆಂದು ಹಿಂದೆ ತಿಳಿಸಲಾಗಿತ್ತು. ಇಲ್ಲಿಯಾದರೋ "ಬ್ರಹ್ಮವನ್ನು ತಿಳಿದವನು ಬ್ರಹ್ಮವೇ ಆಗುತ್ತಾನೆ" ಎಂದು ಮುಂತಾದ ಶ್ರುತಿಗಳಲ್ಲಿ ನಿಷ್ಕಲಶಿವನನ್ನು ಉಪಾಸನಮಾಡಿದವರಿಗೆ ಶಿವಭಾವವನ್ನೇ ಹೇಳಿರುವುದರಿಂದ ಲೋಹರಸನ್ಯಾಯದಿಂದ ಅಂದರೆ ರಸಸಂಪರ್ಕದಿಂದ ಲೋಹವು ಚಿನ್ನವಾದಂತೆ ಶಿವನ ಉಪಾಸಕರಿಗೆ ಉಪಾಸನದ ಮಹಿಮೆಯಿಂದ ಸ್ವಾಭಾವಿಕ ಜೀವಭಾವವು ತೊಲಗಿ ಶಿವಭಾವವು ಬರುವುದೆಂದು ಹೇಳಿರುವುದರಿಂದ ಪಾಶಬದ್ಧರಾದ ಜೀವರಂತೆ ಮುಕ್ತರಿಗೆ ಪುನರ್ಜನ್ಮವಿಲ್ಲವೆಂಬುದು ಸ್ಪಷ್ಟವಾಗಿದೆ. "ಉಮಾಸಹಾಯಂ—ತಮಸಃ ಪರಸ್ತಾತ್" ಎಂಬ ಶ್ರುತಿಯಲ್ಲಿ ಸಾಕರಮೂರ್ತಿಯನ್ನು ಉಪಾಸನಮಾಡಿದವರು ತಮಸ್ಸೆನಿಸಿದ ತ್ರಿಗುಣಗಳ ಸಾಮ್ಯಾವಸ್ಥೆ ಎಂಬ ಪ್ರಕೃತಿಗಿಂತಲೂ ವಿಲಕ್ಷಣವಾದ ನಿಷ್ಕಲಶಿವನಲ್ಲಿ ಸಮರಸವಾಗಿ ಬೆರೆಯುವರೆಂದು ಹೇಳಿದೆ, "ವೇದಾಂತದಿಂದ ವಸ್ತುಸ್ಥಿತಿಯನ್ನು ತಿಳಿದು ಶುದ್ಧರಾದ ಯತಿಗಳು ಬ್ರಹ್ಮಲೋಕದಲ್ಲಿ ಕೊನೆಗೆ ಶಿವಸಾಯುಜ್ಯವನ್ನು ಹೊಂದುತ್ತಾರೆ" "ಅವನು ಹೀಗೆಯೇ ಕೊನೆಯವರೆಗೂ ಇದ್ದು ಬ್ರಹ್ಮಲೋಕಕ್ಕೆ ಹೋಗುತ್ತಾನೆ; ಅಲ್ಲಿಂದ ಮತ್ತೆ ಹಿಂತಿರುಗುವುದಿಲ್ಲ" ಎಂಬ ಶ್ರುತಿಗಳಲ್ಲಿ ಮೂರ್ತೋಪಾಸಕರಿಗೆ ಆ ಲೋಕದಲ್ಲಿ ಅವನೊಡನೆ ಸರ್ವ ಫಲಪ್ರಾಪ್ತಿಯನ್ನು

ತಿಳಿಸಿ ಅನಂತರ ಅಲ್ಲಿಂದಲೆ, ಭ್ರಮರಕೀಟನ್ಯಾಯದಂತೆ ಶಿವಜ್ಞಾನವನ್ನು ಪೂರ್ಣ ಗೊಳಿಸಿಕೊಂಡು ಮುಕ್ತರು ಶಿವಸಾಯುಜ್ಯವನ್ನು ಹೊಂದುವರೆಂದು ಹೇಳಿರುವುದರಿಂದ ಮೂರ್ತೋಪಾಸಕರಿಗೂ ಸಹ ಬದ್ಧಜೀವರಂತೆ ಪುನರ್ಜನ್ಮವಿಲ್ಲ. "ಉಮಾಸಹಾಯಂ" ಎಂಬ ಶ್ರುತಿಯಲ್ಲಿ ಮೂರ್ತೋಪಾಸಕರಿಗೆ ಶಿವಭಾವವನ್ನೇ ಹೇಳಿರುವುದರಿಂದಲೂ" "ಆತ್ಮನನ್ನು ತಿಳಿದವನು ದುಃಖದಿಂದ ಪಾರಾಗುತ್ತಾನೆ" ಎಂಬಲ್ಲಿ 'ಅಮೂರ್ತೋಪಾಸಕರಿಗೆ ಜನನಮರಣಪ್ರವಾಹವೆಂಬ ಸಂಸಾರದುಃಖವು ತೊಲಗುವುದೆಂದು ಹೇಳಿರುವುದರಿಂದಲೂ ಪುನರ್ಜನ್ಮನಿವೃತ್ತಿಯು ಮೂರ್ತೋಪಾಸಕರಿಗೋ ಅಮೂರ್ತೋಪಾಸಕರಿಗೋ ಎಂದು ಸಂದೇಹ ಉಂಟಾಗುತ್ತದೆ "ಅವನು ಬ್ರಹ್ಮದೊಡನೆ ಎಲ್ಲ ಭೋಗಗಳನ್ನು ಪಡೆಯುತ್ತಾನೆ" ಎಂಬಲ್ಲಿ ಮೂರ್ತೋಪಾಸಕರಿಗೆ ಬದ್ಧಜೀವನಂತೆ ಫಲಪ್ರಾಪ್ತಿಯನ್ನು ಹೇಳಿರುವುದರಿಂದಲೂ. "ಆಶೆಗಳೆಲ್ಲವೂ ತೊಲಗಿದರೆ ಒಬ್ಬನು ಇಲ್ಲಿಯೇ ಬ್ರಹ್ಮವಾಗುತ್ತಾನೆ" "ಅವನೇ ತಾನೆಂದು ಒಬ್ಬನು ತನ್ನನ್ನು ತಿಳಿದರೆ ಮತ್ತೆ ಯಾತಕ್ಕಾಗಿ ಅವನು ಈ ಶರೀರಯಾತ್ರೆಯನ್ನು ನಡೆಸಿಯಾನು?" ಎಂಬಲ್ಲಿ ಬ್ರಹ್ಮಜ್ಞಾನಿಗಳೆಲ್ಲರಿಗೂ ಎಲ್ಲಾ ಆಶೆಗಳೂ ತೊಲಗುತ್ತವೆ ಎಂದು ಹೇಳಿರುವುದರಿಂದ ಮೂರ್ತೋಪಾಸಾಕರಿಗೂ ಪುನರ್ಜನ್ಮವಿಲ್ಲ. ಆದರೆ ಶ್ರುತಿಯಲ್ಲಿ ಮೂರ್ತೋಪಾಸಕರಿಗೆ ಸ್ವೇಚ್ಛೆಯಿಂದ ಅನೇಕ ಶರೀರಗಳಲ್ಲಿ ಪ್ರವೇಶವನ್ನೂ ಎಲ್ಲಾ ಭೋಗಾನುಭವಗಳನ್ನೂ ಹೇಳಿರುವುದರಿಂದ ಪುಣ್ಯಪಾಪ ಕರ್ತೃತ್ವವು ಸಂಘಟಿಸುತ್ತದೆ. ಪುಣ್ಯದಿಂದ ಸ್ವರ್ಗಾದಿಫಲಗಳನ್ನು ಪಡೆದವರಿಗೆ ಪುನರ್ಜನ್ಮವನ್ನು ಹೇಳಿರುವುದರಿಂದ ಶಿವಪದವೆಂಬ ಮಹಾಕೈಲಾಸವನ್ನು ಸೇರಿದವರಿಗೂ ಸಹ ಪುನರ್ಜನ್ಮವು ತಪ್ಪುವಂತಿಲ್ಲ. ತಾವು ಮಾಡಿದ ಕರ್ಮಕ್ಕೆ ತಾವೇ ಕರ್ತೃವಾದ್ದರಿಂದ ಕರ್ಮಫಲವನ್ನು ಅವರು ಅನುಭವಿಸಿಯೇತೀರಬೇಕು. ಆದ್ದರಿಂದಲೇ ಮಾಡಿದ ಕ್ಷಣಿಕ ಕರ್ಮಗಳಿಂದ ಸತ್ಯಸಿದ್ಧವಾದ ಮುಕ್ತಿ ದೊರಕುವುದಿಲ್ಲವೆಂಬ ಶ್ರುತಿಯಂತೆ ಕರ್ಮವನ್ನುಮಾಡಿದ ಮುಮುಕ್ಷುಗಳಿಗೆ ಮೋಕ್ಷವನ್ನು ನಿರಾಕರಿಸಲಾಗಿದೆ. ಇದೂ ಅಲ್ಲದೆ "ಅವರು ಬ್ರಹ್ಮಲೋಕದಲ್ಲಿ ಕೊನೆಗೆ ಸಾಯುಜ್ಯವನ್ನು ಪಡೆಯುತ್ತಾರೆ" ಎಂಬಲ್ಲಿ ಬ್ರಹ್ಮಶಬ್ದವು ಚತುರ್ಮುಖನಲ್ಲಿ ರೂಢವಾಗಿರುವುದರಿಂದ ಅವನನ್ನು ಉಪಾಸನಮಾಡಿದವನಿಗೆ ಆ ಲೋಕವು ದೊರಕುವುದೆಂದು ಹೇಳಿದೆ. "ನಾರಾಯಣನೇ ಬ್ರಹ್ಮ" ವೆಂಬಲ್ಲಿ ನಾರಾಯಣನನ್ನು ಸರ್ವವ್ಯಾಪಕಬ್ರಹ್ಮವೆಂದು ಹೇಳಿರುವುದರಿಂದಲೂ,"ಭಗವಾನ್" ಎಂಬ ಶಬ್ದವು ಅವನಲ್ಲಿಯೇ ರೂಢವಾಗಿರುವುದರಿಂದಲೂ, ಕಾರಣವೆನಿಸಿದ ಬ್ರಹ್ಮಕ್ಕೂ ಕಾರ್ಯವೆನಿಸಿದ ನಾರಾಯಣನಿಗೂ ಅಭೇದವಿರುವುದರಿಂದಲೂ ನಾರಾಯಣನೇ ಬ್ರಹ್ಮವೆಂಬುದು ಯುಕ್ತವಾಗುತ್ತದೆ. ಶ್ರುತಿಯಲ್ಲಿ ಹೇಳಿರುವುದನ್ನು ನಿರ್ವಹಿಸಲಿಕ್ಕಾಗಿ ಚತುರ್ಮುಖ ನಾರಾಯಣ ಮೊದಲಾದ ಉಪಾಸಕರು ಅನೇಕ ಜನ್ಮಗಳಲ್ಲಿ ಶುದ್ಧರಾಗಿದ್ದುದರಿಂದ ಎಲ್ಲಾ ಪಾಪಗಳನ್ನೂ ಕಳೆದುಕೊಂಡು ಚಿತ್ತಶುದ್ಧಿಯಮೂಲಕ ನಿತ್ಯವೂ ನಿರವ

ಯವೂ ನಿರ್ವಿಕಾರವೂ ಆದ ತನ್ನ ಸ್ವರೂಪವನ್ನು ತಿಳಿದು ಪುನರ್ಜನ್ಮವನ್ನು ಕಳೆದುಕೊಂಡರೆಂದೇ ಹೇಳಬೇಕು. ಹೀಗೆ ರಜ್ಜುವಿನಲ್ಲಿ ಸರ್ಪದಂತೆ ಕಲ್ಪಿತಗಳಾದ ಮೂರ್ತರೂಪಗಳು ಅನಿತ್ಯವಾದ್ದರಿಂದ ಅವನ್ನು ಉಪಾಸನಮಾಡಿದವರಿಗೆ ಎಂದಿಗೂ ನಿತ್ಯಮುಕ್ತಿಯು ದೊರಕುವುದಿಲ್ಲವೆಂದು ಪೂರ್ವಪಕ್ಷಿಯು ಹೇಳುತ್ತಾನೆ. ಅದಕ್ಕೆ ಸಮಾಧಾನವನ್ನು ಸೂತ್ರವು ತಿಳಿಸುತ್ತದೆ. "ಬ್ರಹ್ಮಕ್ಕೆ ಮೂರ್ತ ಅಮೂರ್ತವೆಂಬ ಎರಡು ರೂಪಗಳಿವೆ" "ಪರಮೇಶ್ವರನು ಆದಿಮಧ್ಯ ಅಂತ್ಯಗಳಿಲ್ಲದೆಯೂ ರೂಪವಿಲ್ಲ ದೆಯೂ ಚಿದಾನಂದಸ್ವರೂಪನಾಗಿದ್ದಾನೆ" ಎಂಬಲ್ಲಿ ಶಿವನ ಅಮೂರ್ತಸ್ಥಿತಿಯನ್ನು ತಿಳಿಸಿದೆ. "ಉಮಾಸಹಾಯಂ" ಎಂಬ ಶ್ರುತಿಯಲ್ಲಿ ಅವನ ಮೂರ್ತ ಮತ್ತು ಅಮೂರ್ತರೂಪಗಳೆರಡನ್ನೂ ತಿಳಿಸಿದೆ. ಹಾಗೆಯೇ ಶತರುದ್ರೀಯದಲ್ಲಿ ರೂಪವಿಲ್ಲ ದಿರುವವರಿಗೂ ಅನಂತರೂಪಧಾರಿಗಳಿಗೂ ನಮಸ್ಕರಿಸುವುದಾಗಿ ಹೇಳಿರುವುದರಿಂದ ಮುಕ್ತರು ಶಿವನಂತೆಯೇ ಎರಡುಬಗೆಯಾಗಿರುವರೆಂದೂ, "ಯಥಾ ನದ್ಯಃ" ಎಂದು ಮುಂತಾದ ಶ್ರುತಿಗಳಲ್ಲಿ ಐಕ್ಯವನ್ನು ಹೇಳಿರುವುದರಿಂದಲೂ ಇಬ್ಬರಿಗೂ ಪುನರ್ಜನ್ಮ ವಿಲ್ಲವೆಂದು ನಿಶ್ಚಯಿಸಲಾಗಿದೆ. "ಅವನು ಬ್ರಹ್ಮದೊಡನೆ ಎಲ್ಲಾ ಫಲಗಳನ್ನೂ ಪಡೆಯುತ್ತಾನೆ" ಎಂಬಲ್ಲಿ ಮುಕ್ತನಿಗೂ ಬದ್ಧನಿಗೂ ವೈಲಕ್ಷಣ್ಯವನ್ನು ಹೇಳಿದೆ. "ಇಷ್ಟಾರ್ಥವನ್ನು ಪಡೆದವನು ಪೂರ್ಣಕಾಮನಾಗಿ ಅಮೇಲೆ ಆಶೆ ಇಲ್ಲದವನಾಗಿ ಜೀರ್ಣಕಾಮನಾಗುತ್ತಾನೆ" ಎಂಬಲ್ಲಿ ಮುಕ್ತರಿಗೆ ಬ್ರಹ್ಮದಂತೆ ಸತ್ಯಸಂಕಲ್ಪನೆಂಬ ಬ್ರಹ್ಮದ ಲಕ್ಷಣವನ್ನು ಹೇಳಲಾಗಿದೆ. ಜ್ಞಾನಿಗಳಿಗೆ ಇಚ್ಛೆಯಿಂದಲೇ ಬಂಧನ ವುಂಟೆಂದು ಹೇಳಿದರೆ ಶಿವನೂ ವಿಸ್ತಾರವಾಗಬೇಕೆಂದು ಇಚ್ಛಿಸಿದ್ದರಿಂದ ಅವನಿಗೂ ಬಂಧನವುಂಟಾಗಬೇಕಾದೀತು. "ಹೃದಯದ ಆಶೆಗಳೆಲ್ಲವೂ ತೊಲಗಿದಮೇಲೆ ಒಬ್ಬನು ಬ್ರಹ್ಮವಾಗುತ್ತಾನೆ" ಎಂದು ಹೇಳುವ ನಿಷ್ಕಾಮಶ್ರುತಿಗಳು ಪ್ರಾರಬ್ಧವು ಮುಗಿದ ಮೇಲೆ ಮುಕ್ತರು ಲಿಂಗಶರೀರವನ್ನು ಕಳೆದುಕೊಂಡು ಶಿವಭಾವವನ್ನು ಹೊಂದುವ ಕಾಲಕ್ಕೆ ಅನ್ವಯಿಸುತ್ತವೆ. ಇಲ್ಲವಾದರೆ ವಾಮದೇವ ಕಶ್ಯಪ ಅಗಸ್ತ್ಯ ದಧೀಚಿ ಮೊದಲಾದ ಜೀವನ್ಮುಕ್ತರಿಗೂ ಇಂದ್ರ ವಿಷ್ಣು ಬ್ರಹ್ಮ ಮೊದಲಾದವರಿಗೂ ಫಲಪ್ರಾಪ್ತಿಯಾಗದೇ ಹೋದೀತು. "ಎಲ್ಲಾ ಲೋಕಗಳಲ್ಲಿಯೂ ಎಲ್ಲಾ ಕರ್ಮ ಗಳನ್ನೂ ಅನುಭವಿಸುತ್ತ ಸಂಚರಿಸುತ್ತಾನೆ" ಎಂಬ ವಾಕ್ಯಗಳು ಈ ಲಿಂಗಶರೀರ ದೊಳಗಡಕವಾಗಿರುವ ಸಾಲೋಕ್ಯ ಮೊದಲಾದ ಸದೇಹಕೈವಲ್ಯಕ್ಕೆ ಸಂಬಂಧಿಸಿದ ನಿತ್ಯವೈಭವದ ಕಲ್ಯಾಣಮುಕ್ತಿಗಳಿಗೆ ಅನ್ವಯಿಸುತ್ತವೆ. ಆದರೆ ಬ್ರಹ್ಮಪ್ರಕರಣದಲ್ಲಿ ಹೇಳಿರುವ ಶಿವನ ಭಕ್ತಿಧ್ಯಾನಧಾರಣ ಪೂಜೆ ನಮಸ್ಕಾರ ಶ್ರವಣ ಮೊದಲಾದ ಸಾಧನ ಗಳು ನೇರವಾಗಿ ಶಿವನನ್ನೇ ದೊರಕಿಸುತ್ತವೆ ಎಂದು ಶ್ರುತಿಯೇ ತಿಳಿಸಿದೆ. ಆದ್ದರಿಂದ ಧರ್ಮಪ್ರಕರಣದಲ್ಲಿ ಹೇಳಿದ ಜ್ಯೋತಿಷ್ಟೋಮಾದಿ ಕರ್ಮಗಳನ್ನು ಆಚರಿಸಿದವರಿಗೆ ಮಾತ್ರವೇ ಪುನರ್ಜನ್ಮವನ್ನು ಹೇಳಿದೆ. "ಆಯಸ್ಸು ಮುಗಿದಮೇಲೆ ಬ್ರಹ್ಮ ಲೋಕಕ್ಕೆ ಹೋಗಿ ಮತ್ತೆ ಹಿಂತಿರುಗುವುದಿಲ್ಲ" ಎಂಬಲ್ಲಿ ಬ್ರಹ್ಮಲೋಕಪದವು ಚತು

ಮುಖ್ಯನಿಗೆ ಅನ್ವಯಿಸುವುದೆಂದು ಲೋಕದಲ್ಲೂ ಶ್ರುತಿ ಪುರಾಣಗಳಲ್ಲೂ ಎಲ್ಲಿಯೂ ರೂಢಿಯುಲ್ಲಿಲ್ಲ. ಆದರೆ ಶಿವನ ಉಪಾಸನವಿಲ್ಲದೆ ಅವನ ಲೋಕವು ದೊರಕುವಂತಿಲ್ಲ. "ನಾನು ದೇವತೆಗಳಿಗೂ ಬ್ರಾಹ್ಮಣರಿಗೂ ಅಧಿಪತಿ, ವಿಷ್ಣುವು ಕ್ಷತ್ರಿಯರಿಗೆ ಅಧಿಪತಿ" ಎಂದು ಶ್ರುತಿಗಳಲ್ಲೂ "ಬ್ರಾಹ್ಮಣರಿಗೆ ಶಿವನೂ ಕ್ಷತ್ರಿಯರಿಗೆ ವಿಷ್ಣುವೂ ದೇವರೆನಿಸಿದ್ದಾರೆ" ಎಂದು ಮನ್ವಾದಿಸ್ಮೃತಿಗಳಲ್ಲೂ ವಿಷ್ಣುವನ್ನು ಕ್ಷತ್ರಿಯರ ದೇವನೆಂದು ಹೇಳಿದೆ. ಆದ್ದರಿಂದ ಜಗತ್ಕಾರಣರಾದ ತ್ರಿಮೂರ್ತಿಗಳಿಗೂ ಕಾರಣವೆನಿಸಿ ಅವರಿಗಿಂತ ವಿಲಕ್ಷಣನಾದ ಪರಶಿವಬ್ರಹ್ಮದ ಧರ್ಮಗಳು ನಾರಾಯಣನಲ್ಲಿ ಇಲ್ಲದ್ದರಿಂದ ಅವನೇ ಬ್ರಹ್ಮವೆಂಬುದು ಯುಕ್ತವಲ್ಲ. "ನಾರಾಯಣಪರಂ ಬ್ರಹ್ಮ" ಎಂಬಲ್ಲಿ ನಾರಾಯಣನಿಗಿಂತ ಶ್ರೇಷ್ಠನಾದ ಯಾವ ಶಿವನಿರುವನೋ ಅವನೇ ಬ್ರಹ್ಮವೆಂದು ನಿಶ್ಚಯಿಸಲಾಗಿದೆ. ಮುಂದೆ "ಬ್ರಹ್ಮನಿಗೆ ಅಧಿಪತಿಯಾದ ಈಶ್ವರನೇ ಬ್ರಹ್ಮ-ಶಿವ-ಸದಾಶಿವನೆನಿಸಿದ್ದಾನೆ" ಎಂಬಲ್ಲಿ ಶಿವಬ್ರಹ್ಮ ಶಬ್ದಗಳನ್ನು ಘಟಕುಂಭಕಲಶಪದಗಳಂತೆ ಪರ್ಯಾಯಗಳೆಂದು ಸ್ಪಷ್ಟವಾಗಿ ಹೇಳಲಾಗಿದೆ. ಮಾಂಡೂಕ್ಯದಲ್ಲಿ ಸರ್ವಾಧಾರನಾದ ಶಿವನನ್ನು ತ್ರಿಮೂರ್ತ್ಯತೀತನೆಂದೂ ಅವನೇ ಸರ್ವವ್ಯಾಪಕನಾದ್ದರಿಂದ ಆತ್ಮನೆಂದೂ ಹೇಳಿದೆ, ಕೈವಲ್ಯದಲ್ಲಿ "ನಾಶರಹಿತನಾದ ಪರಮೇಶ್ವರನೇ ಬ್ರಹ್ಮ, ಹರಿ, ಶಿವ, ಇಂದ್ರ ಎಂಬ ಹೆಸರುಗಳಿಂದ ಸ್ವತಂತ್ರನಾಗಿ ವಿಹಹರಿಸುತ್ತಾನೆ" ಎಂಬಲ್ಲಿ ಶಿವನನ್ನು ತ್ರಿಮೂರ್ತ್ಯತೀತನೆಂದು ಹೇಳಿದೆ. "ಬ್ರಹ್ಮ ವಿಷ್ಣು ರುದ್ರ ಇಂದ್ರರೆಲ್ಲರೂ ಅವನಿಂದಲೇ ಹುಟ್ಟಿದ್ದಾರೆ. ಅವನೇ ಮುಮುಕ್ಷುಗಳಿಗೆ ಧ್ಯೇಯನು" ಎಂಬಲ್ಲಿ ಶಿವೇತರಧ್ಯಾನವನ್ನು ನಿಷೇಧಿಸಲಾಗಿದೆ. ಶಿವಂಕರಃ ಎಂಬಲ್ಲಿ ಶಿವನು ಜೀವರನ್ನು ಶಿವನನ್ನಾಗಿ ಮಾಡುವನೆಂದು ಹೇಳಿದೆ. "ಭಗವಾನ್" ಶಬ್ದವನ್ನು ಇಂದ್ರ ಚಂದ್ರ ವಿಷ್ಣು ಬ್ರಹ್ಮ ಮೊದಲಾದವರಲ್ಲಿ ಲೌಕಿಕವಾಗಿ ಪ್ರಯೋಗ ಮಾಡಿದ್ದರೂ ಪಿತೃಮೇಧದಲ್ಲಿ "ಮಹಾದೇವನಾದ ಮಹೇಶ್ವರನು ಪಿತೃರೂಪದಿಂದ ಬಂದು ಈ ಹವಿಸ್ಸನ್ನು ಸ್ವೀಕರಿಸಿ ಪ್ರೀತನಾಗಲಿ" ಎಂದೂ, ಬ್ರಹ್ಮಕಾಂಡದ ಶ್ವೇತಾಶ್ವರದಲ್ಲಿ "ಶಿವನು ಸರ್ವವ್ಯಾಪಕನಾದರೂ ಎಲ್ಲರ ಮುಖ ಶಿರಸ್ಸು ಕುತ್ತಿಗೆ ಹೃದಯಗಳಲ್ಲಿ ನೆಲಸಿದ್ದಾನೆ" ಎಂದೂ, ಅಥರ್ವಶಿರಸ್ಸಿನಲ್ಲಿ "ಪೂಜ್ಯ ರುದ್ರನೇ ಬ್ರಹ್ಮವು, ರುದ್ರನೇ ವಿಷ್ಣುವು" ಎಂದು ಮತ್ತೆ ಮತ್ತೆ ಭಗವತ್ ಶಬ್ದವನ್ನು ಶಿವನಲ್ಲಿಯೇ ವಿಸ್ತಾರವಾಗಿ ಉಪಯೋಗಿಸಿದೆ. ಶತರುದ್ರೀಯದಲ್ಲಿ "ಪೂಜ್ಯನೂ ವಿಶ್ವೇಶ್ವರನೂ ಆದ ಮಹಾದೇವನಿಗೆ ನಮಸ್ಕರಿಸುತ್ತೇನೆ" ಹೀಗೆ ಪ್ರಯೋಗಿಸಿದೆ. ಲೌಕಿಕ ಪ್ರಯೋಗಕ್ಕಿಂತಲೂ ಶ್ರೌತವಿಧಿಯೇ ಬಲಿಷ್ಠವಾದ್ದರಿಂದ ಭಗವತ್‌ಶಬ್ದವು ಬೇರೆ ಯಾರಿಗೂ ಮುಖ್ಯವಾಗಿ ಅನ್ವಯಿಸುವುದಿಲ್ಲ. "ಅಥಾತೋ ಬ್ರಹ್ಮಜಿಜ್ಞಾಸಾ" ಎಂಬಲ್ಲಿ ಶಾಸ್ತ್ರಾರಂಭದಲ್ಲಿ ಪರಶಿವ ಬ್ರಹ್ಮವನ್ನೇ ಮುಮುಕ್ಷುಗಳಿಗೆ ಜಿಜ್ಞಾಸ್ಯವಸ್ತುವೆಂದು ಹೇಳಿದ್ದರಿಂದ ನಿರ್ವಿಶೇಷಬ್ರಹ್ಮವಾದವು ಅಲ್ಲಿಯೇ ನಿರಾಕೃತವಾಯಿತು. "ಲಕ್ಷಣಪ್ರಮಾಣಗಳಿಗನುಗುಣವಾಗಿ ವಸ್ತುವು ಸಿದ್ಧಿಸುತ್ತದೆ" ಎಂಬ ನ್ಯಾಯದಿಂದ

ಬ್ರಹ್ಮವೆಂಬ ವಸ್ತುವು ಸಿದ್ಧಿಸಲು "ಜನ್ಮಾದ್ಯಸ್ಯ ಯತಃ", "ಶಾಸ್ತ್ರಯೋನಿತ್ವಾತ್" ಎಂಬಲ್ಲಿ ಬ್ರಹ್ಮದ ಲಕ್ಷಣವನ್ನೂ ಅದರಬಗ್ಗೆ ಪ್ರಮಾಣವನ್ನೂ ಹೇಳಿದೆ. "ಯತೋ ವಾ ಇಮಾನಿ ಭೂತಾನಿ ಜಾಯಂತೇ" ಎಂದು ಮುಂತಾದ ಶ್ರುತಿಗಳಲ್ಲಿ ಪಂಚ ಭೂತಗಳು ನಿಗಮಾಗಮಗಳು ಇವೆಲ್ಲವೂ ಬ್ರಹ್ಮದಿಂದಲೇ ಹುಟ್ಟಿದ್ದರಿಂದ ಬ್ರಹ್ಮ ಪ್ರಪಂಚಗಳಿಗೆ ಕಾರ್ಯಕಾರಣಭಾವವನ್ನು ತಿಳಿಸಲಾಗಿದೆ. ಇದರಿಂದ ನಿರ್ವಿಶೇಷ ವಾದವೂ ಜಗತ್ತು ಇಲ್ಲವೆಂಬ ವಾದವೂ ನಿರಸ್ತವಾದವು. ಎಲ್ಲಿಯೂ ಇಲ್ಲದ ಮೊಲದ ಕೊಂಬು ಹುಟ್ಟುವುದೆಂಬುದೇ ಅಸಂಭವ. ಇರುವುದಕ್ಕೆ ಮಾತ್ರವೇ ಉತ್ಪತ್ತಿ ಯುಂಟು. "ಅಸದಿತಿಚೇನ್ನ ಪ್ರತಿಷೇಧಮಾತ್ರತ್ವಾತ್", "ಪಟವಚ್ಚ" ಎಂಬ ಸೂತ್ರಗಳಲ್ಲಿ ಪ್ರಪಂಚವು ಪ್ರಳಯದಲ್ಲೂ ಬೀಜಾಂಕುರನ್ಯಾಯದಂತೆಯೂ ಪಟದ ಸಂಕೋಚಾವಸ್ಥೆಯಂತೆಯೂ ಸೂಕ್ಷ್ಮಸ್ಥಿತಿಯಲ್ಲಿದ್ದು ಸೃಷ್ಟಿಕಾಲದಲ್ಲಿ ವಿಸ್ತಾರವಾಗು ವುದೆಂದು ಹೇಳಿದೆ. ಆದ್ದರಿಂದ ಸದ್ರೂಪವಾದ ಪ್ರಪಂಚವು ಪ್ರಳಯದಲ್ಲಿ ಕಾರಣ ರೂಪದಿಂದ ಇರುವುದೆಂದೂ ಜೀವರು ಚೇತನರಾದ್ದರಿಂದ ಪರಮಾತ್ಮನಂತೆಯೇ ನಿತ್ಯರಾಗಿರುವರೆಂದೂ "ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಂ" ಎಂಬ ಶ್ರುತಿಯು ತಿಳಿಸಿದೆ. ಹಾಗೆಯೇ ಸ್ಮೃತಿಯಲ್ಲೂ ಪ್ರವಾಹದಂತೆ ಪ್ರಪಂಚವನ್ನು ಸತ್ಯವೆಂದು ಹೇಳಲಾಗಿದೆ. "ಚೇತನರು ಸ್ವರೂಪದಿಂದಲೇ ಸತ್ಯರಾಗಿರುತ್ತಾರೆ. ಈಶ್ವರನಂತೂ ಯಾವಾಗಲೂ ಮರೆಯಾಗದಂತಹ ಸತ್ಯತ್ವವನ್ನು ಸ್ವತಃ ಪಡೆದಿರು ವನು" ಎಂದು ಅಲ್ಲಿ ಹೇಳಿರುವುದರಿಂದ ನಿರ್ವಿಶೇಷ ಚೈತನ್ಯವಷ್ಟೇ ಬ್ರಹ್ಮವೆಂಬ ವಾದವು ಪಾಮರರಿಗೆ ಮಾತ್ರವೇ ಪ್ರಿಯವಾಗಿದೆ. ಪರಮಾತ್ಮನ ಶರೀರವಾದ ಜಗ ತ್ತನ್ನು ರಜ್ಜುಸರ್ಪದಂತೆ ಸುಳ್ಳೆಂದು ಹೇಳಿದರೆ "ಇವನ ಆಜ್ಞೆಯಿಂದಲೇ ಇಂದ್ರಾದಿ ದೇವತೆಗಳೆಲ್ಲರೂ ಕರ್ತವ್ಯಗಳನ್ನು ನಿರ್ವಹಿಸುತ್ತಿರುವರು" ಎಂಬಲ್ಲಿ ಹೇಳಿರುವಂತೆ ಆಯಾ ದೇವತೆಗಳಿಗೆ ಭಯಕಂಪಾದಿಗಳು ಹೇಗೆ ಹೊಂದಿಯಾವು? "ಇಂದ್ರನು ಮಾಯಾಶಕ್ತಿಗಳಿಂದ ವಿಸ್ತಾರನಾಗಿ ಈಶ್ವರನಾಗುತ್ತಾನೆ" ಎಂಬಲ್ಲಿ ಇಂದ್ರನೆಂದರೆ ಪಾರಮೈಶ್ವರ್ಯದಿಂದ ಕೂಡಿದ ಶಿವನೆಂದು ಅರ್ಥ. ಇವನು ಮಾಯಾಶಕ್ತಿಗಳಿಂದ ನೀಲಕಂಠ ಮೊದಲಾದ ಅನೇಕ ಶರೀರಗಳನ್ನು ಧರಿಸಿದನೆಂದು ಇಲ್ಲಿ ಹೇಳಲಾಗಿದೆ. "ಸ್ಥಿರವಾದ ಅವಯವಗಳಿಂದ ವಿಸ್ತೃತನಾಗಿ ಶಿವನು ಉಗ್ರನೆನಿಸಿದ್ದಾನೆ" ಎಂಬಲ್ಲಿ ಪರಮೇಶ್ವರನು ಸ್ವೀಕರಿಸಿದ ದಿವ್ಯಮಂಗಳವಿಗ್ರಹಗಳು ಅಪ್ರಾಕೃತವೂ ಶುದ್ಧವಿದ್ಯಾ ಮಯವೂ ಆಗಿದೆ ಎಂದು ಅವುಗಳ ಸ್ಥಿರತ್ವವನ್ನು ತಿಳಿಸುವ ವಾಕ್ಯಗಳಿಗೆ ತಿಲಾಂಜಲಿ ಯನ್ನು ಎರೆಯಬೇಕಾದೀತು. "ಪ್ರಳಯದಲ್ಲಿ ಹಗಲು ರಾತ್ರಿಗಳಿಲ್ಲದೆ ಸದಸದ್ವಿಭಾಗ ವಿಲ್ಲದೆ ಶಿವನೊಬ್ಬನೇ ಕೈವಲ್ಯಾನಂದವನ್ನು ಅನುಭವಿಸುತ್ತಿದ್ದನು" ಎಂಬಲ್ಲಿ ಶಿವನು ಮಹಾಪ್ರಳಯದಲ್ಲೂ ಸಾಕ್ಷಿಎಂದು ಹೇಳಿದೆ. ರುದ್ರನನ್ನು ಅಜಾತನೆಂದೂ ವಿಶ್ವಾಧಿಕ ನೆಂದೂ ಸರ್ವಶಕ್ತಿವಿಶಿಷ್ಟನೆಂದೂ ಸರ್ವಕಾರಣನೆಂದೂ ಅದ್ವಿತೀಯನೆಂದೂ ವಿಶ್ವಾತ್ಮಕನೆಂದೂ "ಪುರುಷೋ ವೈ ರುದ್ರಃ", "ವಿಶ್ವರೂಪಾಯ ವೈ ನಮಃ" ಎಂದು

ಮುಂತಾದ ಶ್ರುತಿಗಳು ತಿಳಿಸಿವೆ. " ನಮೋ ಹಿರಣ್ಯಬಾಹುವೇ " ಎಂಬಲ್ಲಿ ಶಿವನನ್ನು ಜ್ಯೋತಿರ್ಮಯನೆಂದು ಹೇಳಲಾಗಿದೆ. ಹಿರಣ್ಯವೆಂದರೆ ಜ್ಯೋತಿ ಎಂದು ಹೇಗೆ ಅರ್ಥ ವಾಗುತ್ತದೆ? ಅಂದರೆ ಶಾಸ್ತ್ರದಲ್ಲಿಯೂ ಹಿರಣ್ಯವು ಅಗ್ನಿಸ್ವರೂಪವೆಂಬುದು ಪ್ರಸಿದ್ಧ ವಾಗಿದೆ. ಜ್ಯೋತಿಶ್ಶಬ್ದವು ಹಿರಣ್ಯವೆಂಬ ಅರ್ಥವನ್ನು ತಿಳಿಸುವುದರಿಂದಲೇ ಸೂರ್ಯ ಮಂಡಲದಲ್ಲಿರುವ ಹಿರಣ್ಮಯವಾದ ಶಿವಶರೀರವು ಬೆಂಕಿಯ ಮಧ್ಯದಲ್ಲಿರುವ ಸುವರ್ಣದಂತೆ ಕರಗಬೇಕಾಗುವುದರಿಂದ ಅನಿತ್ಯವೆನಿಸಬೇಕಾದೀತು. ಅಥರ್ವ ಶಿರಸ್ಸಿನಲ್ಲಿ " ನಾನೇ ಪರಾಕಾಶಸ್ವರೂಪನು ಮತ್ತು ಪವಿತ್ರನು ; ಎಲ್ಲರ ಆದಿಮಧ್ಯ ಅಂತ್ಯಗಳೂ ನಾನೊಬ್ಬನೇ ಆಗಿರುವೆನು. ನಾನೇ ಎಲ್ಲವೂ ಆಗಿರುವೆನು. ನನ್ನನ್ನು ಅರಿತವರು ಎಲ್ಲವನ್ನೂ ಅರಿಯುತ್ತಾರೆ " ಎಂದು ಪರಮಾತ್ಮನೇ ಹೇಳಿದ್ದಾನೆ. ಶೈವ ಪುರಾಣದಲ್ಲಿ " ಕೋಟಿಸೂರ್ಯಪ್ರಕಾಶಮಾನವಾದ ಶಿವಪದವು ನಿತ್ಯವೂ ಶುದ್ಧವೂ ಪಾವನವೂ ಆಗಿ ಸಕಲೇಷ್ಟಗಳನ್ನೂ ದೊರಕಿಸುತ್ತದೆ. ಅದನ್ನು ಪಡೆದು ಮುಕ್ತರು ಎಲ್ಲ ಕ್ಲೇಶಗಳನ್ನೂ ಕಳೆದುಳಿದು ಶುದ್ಧರೂ ಪರಿಪೂರ್ಣರೂ ಸರ್ವಜ್ಞರೂ ಆಗು ತ್ತಾರೆ. " ಇಂತವರು ದೇಹದಲ್ಲಿದ್ದೂ ಪರಮೈಶ್ವರ್ಯದಿಂದ ಕೂಡಿ ಲೋಕಕಲ್ಯಾಣ ವನ್ನು ಸಾಧಿಸುತ್ತಾರೆ. ದೇಹವನ್ನು ತೊರೆದಮೇಲೆ ಶಿವಪದವನ್ನು ಹೊಂದಿ ಮತ್ತೆ ಸಂಸಾರಕ್ಕೆ ಬರುವುದಿಲ್ಲ " ಹೀಗೆ ಪರಶಿವನ ಸ್ಥಾನವೆನಿಸಿದ ಮಹಾಕೈಲಾಸವನ್ನು ಕೋಟಿಸೂರ್ಯರ ಪ್ರಕಾಶಕ್ಕೆ ಸಮವೆಂದು ಹೇಳಿದ್ದರಿಂದ ಅದು ಜ್ಯೋತಿರ್ಮಯ ವೆಂಬಲ್ಲಿ ಸಂದೇಹವಿಲ್ಲ. "ಹಾಗಾದರೆ ಅವನು ಮಾರ್ಗದ ಕೊನೆಯನ್ನು ಮುಟ್ಟು ತ್ತಾನೆ." " ಅದೇ ವಿಷ್ಣುವಿನ ಪರಮಪದ " ವೆಂಬಲ್ಲಿ ವಿಷ್ಣುಪದವನ್ನು ಪರಮಪದ ವೆಂದು ಹೇಳಿದೆ ಎಂದು ಆಕ್ಷೇಪಿಸಿದರೆ, " ಬ್ರಹ್ಮನು ಎಲ್ಲಕ್ಕೂ ಶ್ರೇಷ್ಠನಾದರೆ ಅವನಿ ಗಿಂತಲೂ ವಿಷ್ಣುವೂ, ಅವನಿಗಿಂತ ಶಿವನೂ ಶ್ರೇಷ್ಠನು; ಅವನಲ್ಲಿ ನನ್ನ ಮನಸ್ಸು ದೃಢವಾಗಿ ನೆಲಸಲಿ " ಎಂದು ಬೋಧಾಯನಸೂತ್ರದಲ್ಲಿಯೂ ಶಿವಸಂಕಲ್ಪದಲ್ಲೂ ಶಿವನು ವಿಷ್ಣ್ವಾದಿಗಳಿಗಿಂತಲೂ ಶ್ರೇಷ್ಠನೆಂದು ಹೇಳಿದೆ. ಆದ್ದರಿಂದ ಶಿವನ ಸ್ಥಾನವು ವಿಷ್ಣುವಿಗಿಂತಲೂ ಶ್ರೇಷ್ಠವಾದದ್ದು. ಅದೇ ಆಧ್ಯಾತ್ಮಮಾರ್ಗದಲ್ಲಿ ಕೊನೆಯದೆನಿ ಸಿದೆ. ಆದ್ದರಿಂದ "ಬ್ರಹ್ಮಲೋಕಕ್ಕೆ ಹೋದವರು ಹಿಂತಿರುಗುವುದಿಲ್ಲ" ವೆಂಬಲ್ಲಿ ಬ್ರಹ್ಮಲೋಕವೆಂಬಲ್ಲಿ ಶಿವಪದವನ್ನೇ ಹೇಳಲಾಗಿದೆ. " ವಿರೂಪೇಭ್ಯೋ ವಿಶ್ವ ರೂಪೇಭ್ಯಶ್ಚ ವೋ ನಮಃ " ಎಂಬಲ್ಲಿ ನಿಷ್ಕಲಶಿವಭಾವವನ್ನು ಹೊಂದಿದ ಸಾಯುಜ್ಯ ಮುಕ್ತರನ್ನು ವಿರೂಪರೆಂದೂ, ಮೂರ್ತಶಿವನನ್ನು ಉಪಾಸನ ಮಾಡಿದ ಇತರ ಮುಕ್ತ ರನ್ನು ವಿಶ್ವರೂಪರೆಂದೂ ಕರೆಯಲಾಗಿದೆ. ಹಾಗೆ ಇವರು ದಿವ್ಯಶರೀರಧಾರಿಗಳಾದ್ದ ರಿಂದಲೇ ಇವರನ್ನು ನೀಲಗ್ರೀವ, ಶಿತಿಕಂಠ, ಶರ್ವ ಎಂದು ಮುಂತಾಗಿ ಶತರುದ್ರೀಯ ದಲ್ಲಿ ಕರೆದಿರುವುದು ಯುಕ್ತವೇ ಆಗಿದೆ. ಅಧ್ಯಾಯದ ಕೊನೆಯನ್ನು ತಿಳಿಸಲಿಕ್ಕಾಗಿ ಸೂತ್ರವನ್ನು ಎರಡುವೇಳೆ ಉಚ್ಚರಿಸಿರುವುದಾಗಿ ಕೆಲವರು ಹೇಳುತ್ತಾರೆ. ಅದು ಯುಕ್ತವಲ್ಲ. ಹಿಂದೆ " ಉಭಯವ್ಯಪದೇಶಾತ್ " ಮೊದಲಾದ ಸೂತ್ರಗಳಲ್ಲಿ ಎಲ್ಲಾ

ವೇದಾಂತಗಳಿಗೂ ಸಮ್ಮತವಾದ ದ್ವೈತಾದ್ವೈತಮತವೇ ತನಗೂ ಸಮ್ಮತವೆಂದು ಸೂತ್ರಕಾರನು ಹಿಂದೆಯೇ ತಿಳಿಸಿದ್ದರೂ "ದ್ವಾದಶಾಹವದುಭಯವಿಧಂ ಬಾದರಾಯಣಃ" ಎಂಬಲ್ಲಿ ಜೀವಬ್ರಹ್ಮರಿಗೆ ಸಂಸಾರದಶೆಯಲ್ಲಿ ಸ್ವಾಭಾವಿಕಭೇದವೂ ಮೋಕ್ಷದಶೆಯಲ್ಲಿ ಹಾಗೆಯೇ ಅಭೇದವೂ ತನಗೆ ಸಮ್ಮತವೆಂದು ಮತ್ತೆ ತಿಳಿಸಲಿಕ್ಕಾಗಿ ತನ್ನ ಹೆಸರನ್ನು ಸ್ಪಷ್ಟವಾಗಿ ಹೇಳಿದ್ದಾನೆ. ಹಾಗೆಯೇ ಬ್ರಹ್ಮವು ಮೂರ್ತವೂ ಅಮೂರ್ತವೂ ಆಗಿರುವಂತೆ ಉಪಾಸಕರೂ ಎರಡು ಬಗೆಯಾಗಿರುವರೆಂದು ಸೂತ್ರಕಾರನು ಕಂಠೋಕ್ತಿಯಿಂದ ಸ್ಪಷ್ಟವಾಗಿ ಹಿಂದಿನ ಸೂತ್ರಗಳಲ್ಲಿ ಹೇಳಿದ್ದರೂ ಇಲ್ಲಿ ಮತ್ತೆ ಈ ಸೂತ್ರದಲ್ಲಿ ಅನಾವೃತ್ತಿಶಬ್ದವನ್ನು ಎರಡುವೇಳೆ ಹೇಳಿರುವುದರಿಂದ ಮೂರ್ತೋಪಾಸಕರು ಅಮೂರ್ತೋಪಾಸಕರು ಇಬ್ಬರೂ ಮತ್ತೆ ಹಿಂತಿರುಗದೆ ನಿತ್ಯಸುಖಿಗಳಾಗುವರೆಂಬ ಅರ್ಥವನ್ನು ತಿಳಿಸಿದ್ದಾನೆ ಅದ್ದರಿಂದ ದ್ವೈತಾದ್ವೈತಮತವೇ ಸೂತ್ರಕಾರನಿಗೆ ಸಮ್ಮತವೆಂಬುದು ಘಂಟಾಘೋಷವೆನಿಸಿದೆ.

ಇಲ್ಲಿಗೆ ಶ್ರೀಶೈಲಪೀಠಾಧ್ಯಕ್ಷ ಶ್ರೀಪತಿಪಂಡಿತಾರಾಧ್ಯಸ್ವಾಮಿವಿರಚಿತವಾಗಿ
ಭೇದಾಭೇದಾತ್ಮಕವಿಶೇಷಾದ್ವೈತಸಿದ್ಧಾಂತವನ್ನು ಪ್ರತಿಪಾದಿಸುತ್ತ
ಬ್ರಹ್ಮಸೂತ್ರಾರ್ಥವನ್ನು ವಿಶದೀಕರಿಸುವ ಶ್ರೀಕರಭಾಷ್ಯದಲ್ಲಿ
ಫಲಾಧ್ಯಾಯವೆಂಬ ಚತುರ್ಥಾಧ್ಯಾಯವು ಮುಗಿಯಿತು.

ಪರಮಪೂಜ್ಯಪಿತೃವರ್ಯರ ವಾರ್ಷಿಕೋತ್ಸವದ ಸ್ಮಾರಕವಾಗಿ ಅವರ ಕೃಪೆಯಿಂದ
ವಿರಚಿತವಾದ ಶ್ರೀಕರಭಾಷ್ಯಾನುವಾದವು ಮುಗಿಯಿತು.



Printed by D. Rajarathnam
Sree Panchacharya Electric Press, Mysore.

# ಅಧಿಕರಣಾನುಕ್ರಮಣಿಕೆ

# ಸೂತ್ರಾನುಕ್ರಮಣಿಕೆ

# ಈ ಗ್ರಂಥಕರ್ತರ ಇತರ ಗ್ರಂಥಗಳು

1) ಶಕ್ತಿವಿಶಿಷ್ಟಾದ್ವೈತದರ್ಶನಂ (ಸಂಸ್ಕೃತ)
(ಮೈಸೂರು ಯುನಿವರ್ಸಿಟಿ ಪಿ.ಎಚ್.ಡಿ. ಸಂಸ್ಕೃತಮಹಾಪ್ರಬಂಧ)
2) ಶ್ರೀಕರಭಾಷ್ಯಂ ಪ್ರಥಮಭಾಗಃ (ಕರ್ನಾಟಕಾನುವಾದ ಸಹಿತಃ)
3) ಶಕ್ತಿವಿಶಿಷ್ಟಾದ್ವೈತದರ್ಶನ
(ಸಂಸ್ಕೃತಮಹಾಪ್ರಬಂಧದ ಕನ್ನಡಾನುವಾದ)
4) ಕ್ರಿಯಾಸಾರಃ (ಶ್ರೀನೀಲಕಂಠಶಿವಾಚಾರ್ಯವಿರಚಿತಃ)
(ಬ್ರಹ್ಮಸೂತ್ರಭಾಷ್ಯಗಳ ನಾಲ್ಕು ಉಪದೇಶಗಳ ಕನ್ನಡ ಅನುವಾದ)

1) ಶಕ್ತಿವಿಶಿಷ್ಟಾದ್ವೈತವೇದಾಂತ
2) ಷಟ್ಸ್ಥಲಸಿದ್ಧಾಂತ
3) ಅಣ್ಣನ ಆದರ್ಶ
4) ಅಲ್ಲಮಪ್ರಭು
5) ಗೀತಾ ಮಾತೆ

} ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಪ್ರಕಟನೆಗಳು

## ಅಚ್ಚಿನಲ್ಲಿರುವ ಗ್ರಂಥಗಳು

1) ಶ್ವೇತಾಶ್ವತರೋಪನಿಷದ್ಭಾಷ್ಯ ಮತ್ತು ಕನ್ನಡ ಅನುವಾದ
2) ಜಗದ್ಗುರು ಶ್ರೀ ರೇಣುಕಪರಂಜ್ಯೋತಿ
3) ಶ್ರೀಕಂಠಭಾಷ್ಯಂ (ಚತುಸ್ಸೂತ್ರೀ)
(ಶಿವಾರ್ಕಮಣಿದೀಪಿಕೆಯ ಕನ್ನಡ ಅನುವಾದ)
4) ಶಿವಗೀತಾಮಹತ್ತ್ವ
5) ಮಾನವ ಮತ್ತು ಪ್ರಕೃತಿ

---

ಗ್ರಂಥ ದೊರೆಯುವ ಸ್ಥಳ:—

1) ಡಾ|| ಟಿ. ಜಿ. ಸಿದ್ಧಪ್ಪಾರಾಧ್ಯ,
ಮಾನಸಗಂಗೋತ್ರಿ, ಮೈಸೂರು-2.
2) ಟಿ. ಜಿ. ಮಹದೇವಯ್ಯ,
372, ಎಸ್. ಬಿ. ರೋಡ್, ವಿಶ್ವೇಶ್ವರಪುರಂ,
ಬೆಂಗಳೂರು-4.